**ತಿಳಿಯಿಡು** (ಕ್ರಿ). ಶುದ್ಧಗೊಳಿಸು; ಹಸನುಗೊಳಿಸು: ಪೂಗೊಳನಂ ತಿಳಿಯಿಟ್ಟು ನೀರ್ವಕ್ಕಿಗಳಂ ಸೆಳೆವರ್ಜಿಸುತ್ತುಂ (ಗಿರಿಕ. ೭-೪೨ ವ).
[ ತಿಳಿ$_2$ + ಇಡು$_1$ ]

**ತಿಳಿಯೆಣ್ಣೆ** (ನಾ). ಅಪ್ಪಟವಾದ ಎಣ್ಣೆ; ಶುದ್ಧವಾದ ಎಣ್ಣೆ: ನೇಜಿಲ ವಣ್ಣಂ ತಿಳಿಯೆಣ್ಣೆಯೊಳ್ ಬಯಸಿ ತೊಯ್ದಂತಪ್ಪ ಸುಣ್ಣಪೂ (ಕಾವ್ಯಾವ. ೫೦೭). [ ತಿಳಿ$_2$ + ಎಣ್ಣೆ ]

**ತಿಳಿರಕುತ** (ನಾ). ಶುದ್ಧವಾದ ರಕ್ತ; ಹೊಸರಕ್ತ: ಎಲೆ ಮರುಳೆ ನಿನ್ನೊಡಲ ಸೀಳಿಯ ತಿಳಿರಕುತದಲಿ ತಾಯ ತುಟಿಬಣ್ಣ ನಾದಿಸುವೆನೆಂದ (ಕುವೆಂಪು.ದ್ರೌ. ೫-೪೪). [ತಿಳಿ$_2$ + ರಕುತ]

**ತಿಳಿರಸ** (ನಾ). ಶುದ್ಧವಾದ ದ್ರವ; ನಿರ್ಮಲವಾದ ರಸ: ಎಳನೀರ್ಗಳ ತನಿಗರ್ಬಿನ ತಿಳಿರಸದ ... ಬಹುವಿಧದ ಪಾನಂಗಳನಲ್ಲಲ್ಲಿಟ್ಟಿವರಾ ಪ್ರಪಾ ಪಾಲಿಕೆಯರ್ (ವೃಷವಿ. ೪-೨೯). [ ತಿಳಿ$_2$ + ರಸ ]

**ತಿಳಿಲು** ' ತಿರುಳ್ ' ನೋ.

**ತಿಳಿಲುಮಾತು** (ನಾ). ಸಾರವತ್ತಾದ ನುಡಿ; ತಿರುಳುನುಡಿ: ತಿಳಿಲು ಮಾತಿಲಿ ಬಳಿಗರದು ... ತಕ್ಕೈಸಿ (ವಿಶ್ವೋತ್ಸು. ೧೯-೫).
[ ತಿಳಿಲು (< ತಿರುಳ್) + ಮಾತು$_1$ ]

**ತಿಳಿವಟ್ಟಲ್** (ನಾ). ಮದ್ಯವನ್ನು ಕುಡಿಯಲು ಬಳಸುವ ಬಟ್ಟಲು; ಪಾನಪಾತ್ರೆ; ಚಷಕ: " ಗರ್ಹಕಃ, ಅನುತರ್ಷಃ, ಚಷಕಃ, ಸರಕಃ—ಈ ೪ ತಿಳಿವಟ್ಟಲ್ " (ಹಲಾಯು. ೫೪-೧೭೨); ಸೊಗಯಿಪ ಘಂಟೆಯಿತ್ತಣಿಗೆ ಯಾರುತಿ...ತಿಳಿವಟ್ಟಲೆಸಪ್ಪ ಚಂದನಂ (ಸೌಇಇ. IV, ೨೬೦-೬೫; 1199); ಕಡುವುಟಿಗಳ್ಗಳನೊಂದು ತಿಳಿವಟ್ಟಲನಿಟ್ಟೆಟೆಯಲ್ಕೆ (ದಶಕು. ೮-೨೦೪).
[ತಿಳಿ$_2$ + ಬಟ್ಟಲ್]

**ತಿಳಿವಡೆ** (ಕ್ರಿ). ಶುಭ್ರತೆಯನ್ನು ಹೊಂದು; ಶುದ್ಧವಾಗು: ಮುಂದೆ, ಲೌಕಿಕರಸದಿಂದತ್ತ ಸರಿದು ಅಲೌಕಿಕವನ್ನಿಸುವ ಮಹಾಬಲನಈ ಸ್ಥಾಯಿಯೇ ಕ್ರಮೇಣ ತಿಳಿವಡೆಯುತ್ತಾ ಹೋಗಿ ಕಡೆಗೆ ತೀರ್ಥಂಕರಭವದಲ್ಲಿ ಅಲೌಕಿಕ ರಸವೆನ್ನಿಸುವುದು (ನಾಡೋಜ. ೩೬೮). [ ತಿಳಿ$_2$ + ಪಡೆ$_1$ ]

**ತಿಳಿವಳಿಕಸ್ತ, ತಿಳುವಳಿಕಸ್ತ** (ನಾ). ವ್ಯವಹಾರಜ್ಞಾನವನ್ನು ಹೊಂದಿರುವ ವನು; ಬುದ್ಧಿವಂತ: ಅವನೇನು ಅಂಥ ತಿಳಿವಳಿಕಸ್ತನಲ್ಲ (ರೂಢಿ). **ತಿಳುವಳಿಕಸ್ತ**: ವೆನೀಸ್‌ನಗರದ ಮರ್ಯಾದಸ್ತರೂ, ತಿಳುವಳಿಕಸ್ತರೂ ಆದ ನಿಕೊಲೊಪೋಲೊ ... ಕಾನಸ್ಟಾಂಟಿನೋಪಲಿಗೆ ಹೋದರು (ಪ್ರವಾಇ. II, ೪): ಓದುಬರಹ ಕಲಿತು ತಿಳುವಳಿಕಸ್ತನಾದರೆ, ನಿನ್ನ ಬಾಳು ಎಷ್ಟು ಚೆನ್ನಾಗಿ ಆಗ್ತದೋ ನೀನೇ ನೋಡುವಂತೆ (ನಮ್ಮಳ್ಳಿ. ೩೫).
[ತಿಳಿವಳಿಕೆ + — ಸ್ತ]

**ತಿಳಿವಳಿಕೆ, ತಿಳುವಳಿಕೆ** (ನಾ). ೧. ಅರಿವು; ಜ್ಞಾನ: ಅಜ್ಞಾತದ = ತಿಳಿ ವಳಿಕೆಯ (ಶಮದ. ೧೯೭ ಟೀಕೆ): ಚಲೋ ತಿಳಿವಳಿಕೆ ಇರಬೇಕು (ಮುಂಬಯಿ. ೪-೭೪); ಎಲ್ಲಿಹುದು ತಿಳಿವಳಿಕೆ ಜೀವನದ ಸಲುವಳಿಕೆ (ನಾದಲೀ. ೬೩-೬). ೨. ವಿವೇಕ; ವಿವೇಚನಾಜ್ಞಾನ: ಆ ತಿಳಿವಳಿಕೆ ಅವರಿಗೆಲ್ಲಿಯದು (ಆಶ್ರಮ. ೫೮). ೩. ತಿಳಿಯಬೇಕಾದುದು; ಸೂಚನೆ: ವಿದ್ಯಾರ್ಥಿಗಳ ತಿಳಿವಳಿಕೆಗಾಗಿ ಇದನ್ನು ಪ್ರಕಟಿಸಲಾಗಿದೆ (ರೂಢಿ). **ತಿಳುವಳಿಕೆ**: ೧. ತಿಳು ವಳಿಕೆಗೆ ಸಹಾದೇವ ಸತ್ಯಕ್ಕೆ ಹರಿಶ್ಚಂದ್ರ ಚೆಲ್ವಿಗೆ ಮನ್ಮಥ (ಮೈಆರಿ. ೧೯೩೫, ೨೮-೭: 1751); ಹಳೆಯ ದೇವಾಲಯಗಳೂ ಶಿಲ್ಪಗಳೂ ... ಅಜ್ಞಜನರ ತಿಳುವಳಿಕೆಯ ಅಭಾವದ ಮೂಲಕವಾಗಿಯೂ ನಾಶವಾಗುತ್ತ ಬಂದಿವೆ (ಮೂರುಲು. ೩ ಮುನ್ನುಡಿ). [ ತಿಳಿ$_2$ + — ವಳಿ$_1$+ — ಕೆ ]

**ತಿಳಿವಳ್ಳಿ** (ನಾ). ಒಂದು ಊರಿನ ಹೆಸರು; P ಧಾರವಾಡ ಜಿಲ್ಲೆಯ ಹಾನಗಲ್ ತಾಲ್ಲೂಕಿನ ಈಗಿನ ತಿಳವಳ್ಳಿ: ಶ್ರೀಮದಗ್ರಹಾರಂ ತಿಳಿ ವಳ್ಳಿಯ ಸಕಲ ಸಾಸಿರ್ವ್ವರ ಬೆಸದಿ...ಪಣವಂ ಬಿಟ್ಟರ್ (ಕಇ. II, ೮-೧೧; 1072): ತಿಳಿವಳ್ಳಿಯುತ್ತಮಸೆಟ್ಟಿ ಕಂಚಯನ ಮಲ್ಲಿಸೆಟ್ಟಿ ... ಇಂತಿನಿಬರುಂ ವಿದ್ದುರ್ ಮೂಲಸ್ಥಾನದೇವರ್ಗ್ಗೆ ಬಿಟ್ಟ ಧರ್ಮ್ಮ (ಕಇ. I, ೧೯-೦೨; 1108).
[ ? + ವಳ್ಳಿ$_1$ ]

**ತಿಳಿವಿಕೆ, ತಿಳುವಿಕೆ** (ನಾ). ಜ್ಞಾನ; ಅರಿವು: ತತ್ತ್ವವಿದ್ಯೆಯ ತಿಳಿವಿಕೆಯು ಹುಸಿಯೆಂದು ಕಂಡಡೆ ಹಾನಿಯೇ ತನಗೆ (ನಿಭಾಗ. ೫-೧-೦೨೯). **ತಿಳುವಿಕೆ**: ತಿಳುವಿಕೆಲ್ಲದೆ ನೆಲೆಯುಯಿಲ್ಲದೆ ತಿರುಗುವವರು (ಜ್ಞಾನಸಿಂ. ೨೨-೬೦).
[ ತಿಳಿವು + — ಇಕೆ]

**ತಿಳಿವಿಗ** (ನಾ). ಅರಿವಿರುವವನು; ತಿಳಿವಳಿಕೆಯುಳ್ಳವನು; ಜ್ಞಾನಿ: ಪಾದರಸ ಕರತಳದಲಿರುತದನಂಟದಂದದಿ ತಿಳಿವಿಗರು ಸಂಸ್ಕೃತಿಯಲಿರೆ ನಿರ್ಲೇಪರು (ಗಗತಾ. ೧೫-೨೫). [ ತಿಳಿವು + — ಇಗ ]

**ತಿಳಿವು, ತಿಳುವು** (ನಾ). ೧. ಸಮಾಧಾನಗೊಳ್ಳುವಿಕೆ; ಸಾಂತ್ವನ ಪಡೆ ಯುವಿಕೆ; ಮುಳಿಸು ತಿಳಿಯುವಿಕೆ; ಕೋಪ ಕಡಿಮೆಯಾಗುವಿಕೆ: " ಪ್ರಣಯಂ ಪ್ರಸಾದವನೆ ತಿಳಿವಕ್ಕು " (ಮುಂಗರಾ. ೧೩೪-೩೩): ಆಕೆಯ ತಿಳಿವಾಕೆಯ ಮುಳಿಸಾಕೆಯ ಕೂಟಮೆ ದಲಿರ್ಪುದರಸನ ಮನದೊಳ್ (ಕಾದಂಬ. ೭೭೨). ೨. ಅರಿವು; ಬುದ್ಧಿ; ಜ್ಞಾನ; ತಿಳಿವಳಿಕೆ: ತಿಳಿವಿಲ್ಲದ ಶಶಿಕಾಂತದ ಕಳಶಮನೇಕಾಂತ ಕಾಂತೆ ನಿನ್ನ ಮುಖೇಂದೂಜ್ವಳ ಕೌಮುದಿಯಿಂದೊಸರ್ದಪುದೀಟಿಳಿವಂದೊರ್ದ ಮುಗ್ಧೆಯಂ ಸಖಿ ನುಡಿ ದಳ್ (ಗಿರಿಕ. ೪-೧೨೪); ಮುಸುಡ ತಿರುಹಿತು ತಿಳಿವು (ಕುಮಾಸ. ೧೩-೪೪); ತಿಳಿವೆ ಶರೀರ ತಿಳಿವೆ ರೂಪು ಬೆಳಗೆ ಮೈಯೊಳಗೆ ತಾನಾಗಿರುತಿಹುದು (ಭರತ. ೧-೧೧೯); ಚೇರೆ ಏತಕು ಮಣಿಯೆ ನಾ ಇಗೊ ಬಂತು ತಿಳಿವಿನ ಗಳಿಗೆ (ಅರಳು. ೧೪-೬): ಜೀವನದಲ್ಲಿ ನಮ್ಮ ತಿಳಿವನ್ನು ಮರೆಯಿಸಿ ಸರಿಯುವ ಗಳಿಗೆಗಳಿಗೂ ಕಡಿಮೆಯಿಲ್ಲ (ಪಾಳ್ಯದ. ೧೨). **ತಿಳುವು**: ೨. "ಮನು — ಅವಬೋಧನೇ, ತಿಳುವಿನೊಳ್" (ಕಾಶಕ್ಕ. ೨೪೧); ದೇವ ಬೆಳಗಿನ ಬೆಳಗೆ ದೇವ ತಿಳುವಿನ ತಿಳುವೆ (ಕಲಿಕಾ. ದೀ. ೨೯೮-೧೮). [ ತಿಳಿ$_1$ + — ವು ]

**ತಿಳಿವುಟ್ಟು** (ಕ್ರಿ). ಅರಿವುಂಟಾಗು; ಬುದ್ಧಿಬರು; ಜ್ಞಾನೋದಯ ವಾಗು: ನಯದಿಂದಂ ತಿಳಿವುಟ್ಟಿರಲ್ಕೆನಗೆ ಪೇಟಲ್ಕೇಳ್ದು ಚಂಡಾಲಜಾತಿ ಯೊಳೀ ವಾಕ್ಯಮುಮಿಾ ವಿವೇಕಮುಮದೆಂತಾದತ್ತೊ ಪೇಟೆಂದು (ಕಾದಂಬ. ೭೫೬). [ ತಿಳಿ$_2$ + ಪುಟ್ಟು$_1$ ]

**ತಿಳಿವೆಳಕು** 'ತಿಳಿವೆಳಗು' ನೋ.

**ತಿಳಿವೆಳಗು, ತಿಳಿಬೆಳಕು, ತಿಳಿಬೆಳಗು, ತಿಳಿವೆಳಕು** (ನಾ). ನಿರ್ಮಲವಾದ ಪ್ರಕಾಶ; ಸ್ವಚ್ಛವಾದ ಹೊಳಪು: ಅಕ್ಕ ನೀನೇಳೇಳು ನೇಸಱ ತಿಳಿವೆಳ ಗುಕ್ಕುತಲಿದೆ ಮೂಡಲಾಗಿ (ಶ್ರೀಪಾಲ. ೨-೨೯): ಎಳೆ ಮಿಂಚಿನಂದದ ಬೊಂಬೆಯೊ ತಿಂಗಳ ತಿಳಿವೆಳಗಿನೊಳಾದ ರೂಪೋ (ಭರತ.೨-೭೭); ತಿಳಿವೆಳ ಗಿನ ತಳ್ವೆಳಗಿನ ... ಬೆಳಸಿನ ಸಿರಿಯೆನೆ ತೊಳತೊಳ ತೊಳಗಿದುದು ಮೂರ್ತಿ ಚಂದ್ರಪ್ರಭನಾ (ಶಬ್ದಾನು. ೧೪೦ ವ್ಯಾಖ್ಯಾ). **ತಿಳಿಬೆಳಕು**: ಅಶಾಂತಿಯೆಲ್ಲಾ ಅಳಿದು ಶಾಂತಿಯ ತಿಳಿಬೆಳಕು ದೇಶವನ್ನೆಲ್ಲಾ ತುಂಬಲಿ (ಅಮಗಾಂ. ೮). **ತಿಳಿಬೆಳಗು**: ತನುವಿನಲ್ಲಿ ಹುಸಿ ತುಂಬಿದ ಕತ್ತಲೆಯ ಕಣ್ಣಿಗೆ ಸತ್ಯದ ತಿಳಿ ಬೆಳಗು ಕಾಣುವುದು ಅಸಾಧ್ಯವೆಂದೇ ಹೇಳಬೇಕು(ಮೋರೆಮಾ. ೦ ಪ್ರಸ್ತಾವನೆ). **ತಿಳಿವೆಳಕು**: ತಿಳಿವೆಳಕು ರೂಪಾನ ಮುಖವದರಿ ಒಂದು ಅಭೂತಪೂರ್ವ ಶೋಭೆಯನ್ನು ತಂದಿದೆ (ಜಯಂತ. ೫೦). [ ತಿಳಿ$_2$ + ಬೆಳಗು$_1$ ]

**ತಿಳಿವೊನಲ್** (ನಾ). ನಿರ್ಮಲವಾದ ಹೊಳೆ: ಅಪ್ ತೇಜಗಳು ಬೆರೆವ ತಿಳಿ ವೊನಲನನುಕರಿಸಿ ನನ್ನೊಳಗು ಬಾಹ್ಯಾಂತರ್ಯಭೇದವಳಿಯೆ (ಮಲೆದೇ. ೨೭-೫). [ ತಿಳಿ$_2$ + ಪೊನಲ್ ]

**ತಿಳಿಸಾರು** (ನಾ). ತೆಳ್ಳಗಿರುವ ಸಾರು: ನಮ್ಮ ಯಜಮಾನ್ರಿಗೆ ಅದೇ ತಿಳಿಸಾರು ಮಾಡಿದ್ರೆ ತುಂಬ ಒಡಿಸುತ್ತೆ (ರೂಪಸಂ. ೧೨).
[ ತಿಳಿ$_2$ + ಸಾರು$_3$ (< ಸಾಱು$_2$) ]

**ತಿಳಿಸು** (ಕ್ರಿ). ಸ್ಪಷ್ಟಪಡಿಸು ; ಅರಿಯುವಂತೆ ಮಾಡು : ಶಿಕ್ಷಕನು ಹುಡುಗರಿಗೆ ಚೆನ್ನಾಗಿ ತಿಳಿಸಿಕೊಡಬೇಕು (ಮುಂಬಯಿ. ೪-೮೪); ದಯವಿಟ್ಟು ತಿಳಿಸೋಣವಾಗಲಿ (ಡಂಗಾಳ್. ೧೪೧).

**ತಿಳಿಸಿಕೊಳ್ಳು** = ಶುದ್ಧಮಾಡಿಕೊಳ್ಳು ; ಹಸನುಮಾಡಿಕೊಳ್ಳು : ಕಟ್ಟೆಣೆಸದಿನ್ನು ಮನವಂ ತಿಳಿಸಿಕೊಳ್ಳಯ್ಯ (ಹಬ್ಬ್ರ. ೨೧-೦೨).

[ ತಿಳಿ$_1$ + – ಇಸು$_3$ ]

**ತಿಳಿಸುಣ್ಣ** (ನಾ). ೧. ಸುಣ್ಣ ಅರಳಿದ ಬಳಿಕ ಅದರ ಮೇಲೆ ನಿಲ್ಲುವ ನೀರು ; ಸುಣ್ಣದ ನೀರು : (ಕ). ೨. ಕೆನೆಸುಣ್ಣ : (ಕ).

[ ತಿಳಿ$_2$ + ಸುಣ್ಣ ]

**ತಿಳಿಹು** 'ತಿಳಿಪು$_1$' ನೋ.

**ತಿಳಿಹೇಳು** (ಕ್ರಿ). ಸ್ಪಷ್ಟವಾಗುವಂತೆ ಹೇಳು; ತಿಳಿಸಿ ಹೇಳು : ಬೇರೆ ಬೇರೆ ವಿಷಯಗಳ ಮೇಲೆಯೂ ವಿವರವಾಗಿ ತಿಳಿಹೇಳಿ ಅವರೆಲ್ಲರಲ್ಲಿಯೂ ಆ ವಿಷಯಗಳನ್ನು ತಿಳಿದುಕೊಳ್ಳುವ ಲವಲವಿಕೆ ಹುಟ್ಟಿಸಿದ್ದರು (ಪ್ರಬಂಧ. ೯೪).

[ ತಿಳಿ$_1$ + ಹೇಳು (<ಪೇೞ್) ]

**ತಿಳಿಹೊಳೆ** (ನಾ). = ತಿಳಿವೊನಲ್ : ಪರಮಶಾಂತಿಯ ಪಡೆದಿಹೆ ; ಪಡೆಯದಿರಲಿಂತೆಂತು ಹರಿವುದು ರಾಗ ತಿಳಿಹೊಳೆಯಂದದೆ? (ಇಂಗೀತ. ೧೪-೦೫). [ ತಿಳಿ$_2$ + ಹೊಳೆ$_4$ (<ಪೊೞೆ$_1$) ]

**ತಿಳುಪು$_1$** 'ತಿಳಿಪು$_1$' ನೋ.

**ತಿಳುಪು$_2$** 'ತಿಳಿಪು$_2$' ನೋ.

**ತಿಳುಪೇಱು** (ಕ್ರಿ). ತೆಳುವಾಗು; ತೆಳ್ಳಗಾಗು; ಕೃಶವಾಗು : ಬಿಳುಪೇಱಿತು ಮೊಗ ತಿಳುಪೇಱಿತು ಕೆನ್ನೆ ಹೊಳಪೇಱಿತು ಕಡಿನೋಟ (ಜೀವಂಸಾಂ. ೪-೭೦). 'ತೆಳುಪೇಱು' ಪರಾ.

[ ತಿಳುಪು$_2$ (<ತಿಳಿಪು$_2$) + ಏಱು$_1$ (<ಏಱ್$_1$) ]

**ತಿಳುವಳಿಕಸ್ತ** 'ತಿಳಿವಳಿಕಸ್ತ' ನೋ.

**ತಿಳುವಳಿಕೆ** 'ತಿಳಿವಳಿಕೆ' ನೋ.

**ತಿಳುವಿಕೆ** 'ತಿಳಿವಿಕೆ' ನೋ.

**ತಿಳುವು** 'ತಿಳಿವು' ನೋ.

**ತಿಳುಹಿಸು** (ಕ್ರಿ). ೧. ಶಮನಗೊಳಿಸು ; ಶಾಂತಗೊಳಿಸು; ಸಾಂತ್ವನಗೊಳಿಸು; ಸಮಾಧಾನಗೊಳಿಸು : ಈ ಗಿಣಿಯು ಸಂಗೀತ ಸಾಹಿತ್ಯವ ಬಲ್ಲುದು . . . ಅಂತಃಪುರಸ್ತ್ರೀಯರುಗಳ ಕೋಪವ ತಿಳುಹಿಸಿ ಅನುಗೊಳಿಸಬಲ್ಲುದು (ವಡಕಾ. ೧). ೨. ತಿಳಿಸು ; ಅರುಹು.

[ ತಿಳುಹು$_1$ (<ತಿಳಿಪು$_1$) + – ಇಸು$_3$ ]

**ತಿಳುಹು$_1$** 'ತಿಳಿಪು$_1$' ನೋ.

**ತಿಳುಹು$_2$** 'ತಿಳಿಪು$_2$' ನೋ.

**ತಿಳ್ಳಿ** (ನಾ). (ಉಕ) ಒಂದು ಬಗೆಯ ಆಟ ; ಉಪ್ಪಾರಪಟ್ಟೆ : ಪ್ರಳಯ ಜಯಃಸಿ ತಾನೀಸಿಯೋ ಬರಲೀ ಆಡುತಿರಲು ತಿಳ್ಳೀ ಇಗೋ ಓಡಿ ಬಂದಿತಿಲ್ಲಿ (ಅರಳು. ೦೫೩-೪) ; ಸಂಜೆಯಲ್ಲಿ ಮಾಡುವ ವ್ಯಾಯಾಮಂದಲ್ಲಿ ತಿಳ್ಳಿ, ಓಡುವುದು, ಖೋಖೋ ಮೊದಲಾದವುಗಳೂ ಬರುತ್ತವೆ (ಬೃಹ್ಮಜೀ. ೨೦೦) ; "ಹುಡುತುತ್ತು" "ತಿಳ್ಳಿ" ಮುಂತಾದ ಆಟಗಳನ್ನು ಆಡುತ್ತಿರುವವರು (ನಿರಾಭ. ೯೫).

**ತಿಳ್ಳಿಯಾಡು** = ಉಪ್ಪಾರಪಟ್ಟೆಯಾಟ ಆಡು : ಅವನ ಅಂತರ್ಯದ ಭೋರ್ಗರೆವ ಕಡಲಿನ ಭಾವನೆಗಳ ಅಲೆಗಳ ಮೇಲೂ ಆಕೆಯ ಮಂಗಲ ಮೂರ್ತಿ 'ತಿಳ್ಳಿ'ಯಾಡುತ್ತಿದೆ (ಬನಸಿ. ೨) ; ಗಾಳಿಯೊಡನೆ ತಿಳ್ಳಿಯಾಡು ತಾಡುತದರ ಓಟಾ (ನಾದಲೀ. ೮೫-೧). ತಿಳ್ಳಿಹಾದಾಡು=ತಿಳ್ಳಿಯಾಡು : ಖೋ ಆಡಲಿಕ್ಕೂ ತಿಳ್ಳಿ ಹಾದಾಡಲಿಕ್ಕೂ ಹೆಚ್ಚು ಮಂದಿ ಬೇಕು (ಮುಂಬಯಿ. ೦-೨೭). [ ? ]

**ತಿಱಿ, ತಿರಿ$_2$** (ಕ್ರಿ). ೧. (ಹೂವು, ಹಣ್ಣು ಮೊದಲಾದುವನ್ನು) ಕೊಯ್ಯು; ಬಿಡಿಸು : ಆರಿಸು ; ಎತ್ತು : "ತಿಱಿದುದೆನಲ್ ತಾಂ ಕೊಯ್ದುದು" (ಶಬ್ದಮಣಿ. ೧೦೬) : ಮುಳಿದು ತನಗರ್ಘ್ಯಮೆತ್ತಿದ ತಳಿಗೆಯೊಳಿಡೆ ತಿಱಿದ ತೆಱದೆ ತಲೆ ಪಱಿದಾಗಳ್ (ಪಂಪಭಾ. ೬-೭೪) ; ಬದರಿಯ ಬನ್ನಿಯ ರಥ ಚಕ್ರದೆಲೆಗಳಂ ತಿಱಿದು ತಲೆಯೊಳಿಟ್ಟಾತಂಗಭ್ಯುದಯಮುಂ...ಸುಖಮುಂ ಕೂಡಿಬಕ್ಕುಮೆಂಬರ್ ಮೂಢರ್ (ಸಮಪ. ೧೨-೬); ಕುಸುಮನಿಕಾಯಮಂ ತಿಱಿವ ಕೈತವದಿಂದೆ (ಉದ್ಭಟ. ೭-೨೨); ಪಣ್ಣಂ ತಿಱಿದಿಚ್ಛೆಯಿಂದೆ ಕುಡುತುಂ (ಕಬ್ಬಿಗಾ. ೧೩೬) : ಕುಸುಮತತಿಯಂ ತಿಱಿದುಕೊಂಡು ತಾಂ ಬರುತ್ತಿರೆ (ಬಸಪು. ೧೦-೯); ಕುಸುಮಾಳಿಯಂ ತಿಱಿದು ತನ್ನಮನೆ (ಪದ್ಮರಾ. ೮-೫೩); ನಳನಳಿಪ ಗಜಪುಷ್ಪಮಾಲಿಕೆಯ ತಿಱಿದು ತುಳಸಿಯ ದಳವನಘಶತಹರವ ನೆಡಗೆಡಗಿಱಿಕೆ ವೈರಿಯ ಧುರವ ಜಱಿಸೆಂದಿಕ್ಕಿದನು ಕೊರಳಲಿ (ತೊರವ. ೪-೪-೨) ; ತಿಱಿದ ಚೆಂದಳಿರ್ಗಳಂತೊಪ್ಪುವಧರಂಗಳಿಂ...ಸುರವನಿತೆಯರ್ ಕಂಗೆಸೆದರ್ (ಚಬಪು. ೧೯-೪೪). 'ಪೂದಿಱಿ' ಪರಾ. ೨. ಎಸೆ ; ಬಿಸಾಡು. 'ತ್ರಿಱಿಕಲ್'ಪರಾ. **ತಿರಿ$_2$** : ೧. ಹಲವಾರು ತೋಟದೊಳಸವಸದೊಳು ಸುಗ್ಗಿ ಹೂಗಳ ತಿರಿದೆನು ಹಿಗ್ಗಿ (ಇಂಚಾಪ. ೮೦-೮೮). ೨. 'ತಿರಿಕಲ್ಲಂ' ಪರಾ.

[ ದೇ. ॥ ತಮಿ. ಮಲ. ತಱಿ ; ತೆಲು. ತೆಗು, ತ್ರೆಗು, ತ್ರೆಯ್ಯು ]

**ತಿಱಿಕಲ್, ತಿರಿಕಲ್ಲಂ, ತಿಱಿಕಲ್ಲು** (ನಾ). (ಆಟವಾಡುವಾಗ) ಮೇಲಕ್ಕೆ ಹಾರಿಸಿ ಕೈಯೊಡ್ಡಿ ಹಿಡಿದುಕೊಳ್ಳುವ ಸಣ್ಣಕಲ್ಲು ; ಅಣ್ಣೆಕಲ್ಲು : "ತಿಱಿಕಲ್ಲೆಂದು ಅಣ್ಣೆಕಲ್" (ಕಶಸಾ. ೨೭-೫೫೨) ; "ತಿಱಿಕಲ್ [ಪಾಠಾಂ. ತಿಱಗಲ್, ತಿಱುಕಲ್] ಎನಲ್ಕೆ ಶಾಸಣ್ಣೆಕಲ್ಲಕ್ಕು" (ಕಬ್ಬಿಕೈ.೫೯); ವಾಮೇತರಾಯತಹಸ್ತಾಗ್ರದೊಳಾಂತು ತಾಳ್ದುದುದಱಿಂ ಬಾಳತ್ವದೊಳ್ ಕೋಟಿ ಕಾಂತಿತವಾ ಕಲ್ ತಿಱಿಕಲ್ ತ್ರಿವೃಷ್ಟಮುಹಿಪಂಗಕ್ಕುಂ ಪೆಱಂಗಕ್ಕುಮೇ (ಶಾಂತಿಪು. ೫-೨೬) : ಮಿಱುಗುವ ನೀಲದ ಬಟ್ಟಂ ತಿಱಿಕಲ್ಗಳನಾಡುವಂತೆ ಕಣ್ಗೆಸೆದಿರ್ದಳ್ (ಕಾದಂಬ. ೨೬); ತದ್ಗೃಹದೇವತಾಜನಂ ಸೊಗಯಿಸುವಿಂದ್ರ ನೀಲಮಣಿಯಿಂ ತಿಱಿಕಲ್ಗಳನಾಡುವಂತೆವೋಲ್ (ಪಂಚಾಮೂ. ೩-೭೭) ; ತಿಱಿಕಲ್ಲಾದುವು ವಿಷ್ಣುಭೂಭುಜಭುಜಶ್ರೀಗಾವಗಂ ಪೆಂಪಿನೊಳ್ನಿಱಿದಾ ಸಹ್ಯನಗೇಂದ್ರ ನೀಳ ××× ಗಳ್ ಪೆಱತೇನಾ ಭುಜಲಕ್ಷ್ಮಿಗೀ ನೆಗಳ್ದ ಪಾನುಂಗಲ್ (ಎಕ. V, ಬೇಲೂರು. ೧೭-೭; 1136). **ತಿರಿಕಲ್ಲು**: 'ತಿರಿಕಲ್ಲಾಟ' ಪರಾ. **ತ್ರಿಱಿಕಲ್ಲು**: ಕುಳಿಲ್ಸೆಂಡು ಬಟ್ಟು ತಿಱಿಕಲ್ಲಟ್ಟುಂಗರೆ ಹೊಣೆಗುಂಡೆಂಬಿವನಾ ಮುರಹರನಲ್ಲಲ್ಲಿಗಾಡುತುಂ ಬರಲಿದಿರೊಳ್ (ಜಗವಿ. ೪-೪೪) : ಸಪ್ತ ಕುಲಪರ್ವತಂಗಳನೊರ್ಮೆ ಬಾಚಿಯಂಗೈಯೊಳಾಂತು ಓರಂತೆ ತಿಱಿಕಲ್ಲ ನಾಡುತ (ವೀಶೈಪು. ೩-೨೦-೪೪) ; ಚಂಡಪ್ರತಾಪಿಯ ಜಯವಧು ತಿಱಿಕಲ್ಲ ಕೊಂಡಾಡುವಂತೆ ಚಿಮ್ಮಿದನು (ಮೋಹತ. ೩೪-೯) ; ಅಖಿಳ ಕುಲಗಿರಿಗಳಂ ತಿಱಿಕಲ್ಲನಾಡಿ ಸಾರಿಪ ವಸುಂಧರೆಯನಾಕಾಶಮಂ ಪಿಡಿದು ತಾಳವ ಪೊಯ್ವ ...ಮಹಾಪ್ರಮಥವರರೊಪ್ಪುತಿರ್ದರು (ಸಿದ್ಧೇಪು. ೦-೩೪). 'ಅಣ್ಣೆಕಲ್$_1$' ಪರಾ. [ತಿಱಿ + ಕಲ್$_3$]

**ತ್ರಿಱಿಕಲ್ಲಾಟ, ತಿರಿಕಲ್ಲಾಟ** (ನಾ). ಕಲ್ಲುಗಳನ್ನು ಎಸೆದು ಹಿಡಿಯುವ ಆಟ ; ಅಣ್ಣೆಕಲ್ಲಾಟ : ಮತ್ತಮವರ ಪಸುಳೆಗಳ್ ಪಕ್ಕಿಯ ಸಿಡಿದಲೆಯೊಳ್ ತಿಱಿಕಲ್ಲಾಟಮಂ . . . ಕಲ್ವರ್ (ಚಕವಂ. ೮-೧೨) : ಪಂದಲೆಯ ತಿಱಿಕಲ್ಲಾಟದಿಂ ಮರುಳ್ಪಡೆಗೆ ನಲವೇರ್ಚಿಸುತುಂ (ರಾಮಾಶ್ವ. ೪೯-೦೯). **ತಿರಿಕಲ್ಲಾಟ**: ಕವಣೆ ತಿರಿಕಲ್ಲಾಟ ಹಗ್ಗಕೆ ಸೆಳೆದರೋ ಹೆಬ್ಬಾವನು (ಕಪಪು. ೭-೦೫೨). [ ತಿಱಿಕಲ್ + ಆಟ ]

**ತ್ರಿಱಿಕಲ್ಲಾಡು** (ಕ್ರಿ). ಕಲ್ಲುಗಳನ್ನು ಮೇಲೆ ಎಸೆದು ಹಿಡಿ ; ಅಣ್ಣೆಕಲ್ಲಾಡು : ತಿಱಿಕಲ್ಲಾಡುವ ಬೊಟ್ಟುವೋರಿಸುವ ಸೆಂಡಂ ಪೊಯ್ವ ... ನಾನಾಕ್ರೀಡೆಯಿಂದಿರ್ಪರುಂ ತಱಿಸಂದು (ಸುಕುಮಾ. ೨-೬) ; ತಿಱಿಕಲ್ಲಾಡುವೆನೋ ಕುಲಾದ್ರಿಚಯಮಂ (ಜಗವಿ. ೭-೩೫): ಕೋಡೆಯೊಳ್ಕೋಡೊತ್ತುತುಂ

ದಂಶಿಗಳನೆ ತಿಱುಕಲ್ಲಾಡುವಂತಂಬರಕ್ಕೀಡಾಡುತ್ತುಂ ತುಂಗಶೈಲಂಗಳನೆ ... ಎಯ್ವುಂದುದು ಪವನಜವಂ ರುಂದ್ರಗಂಧದ್ವಿಪೇಂದ್ರಂ (ಪಾರ್ಶ್ವಪು. ೪-೦೩೬): ಆಲಿವರಲಂ ಪೊಯ್ದುಣ್ಣೆಕಲ್ಲಾಡಲುಂ ತಿಱುಕಲ್ಲಾಡಲದೇಂ ತಗುಳ್ದವೊ ಮನಸ್ಸಂಪ್ರೀತಿಯಿಂ ಚಾತಕಂ (ಅನಂಪು. ೯-೯) ; ತಲೆಗಳ ತಱಿದು ತಿಱುಕಲ್ಲಾಡುತಿರ್ದನು ವೀರವಿಹಗೇಂದ್ರ (ತೊರಾ.೩-೧೦-೦೮): ಗಿರಿಗಳಂ ಕಿತ್ತು ತಿಱುಕಲ್ಲಾಡುವ ಕಾಲಮೇಘದ ಸಿಡಿಲ ತೊಡಿಗೆಯಂ ಸಲೆ ತೊಡುವ ... ಕಾಲರಾಕ್ಷಸರ್ಬೆದಿ ಸಂದಣಿಸಿ ನಿಂದಿರ್ದರ್ (ಜಲಪು. ೨೩-೦೫).

[ ತಿಱುಕಲ್ + ಆಡು$_1$ ]

**ತಿಱುಕಲ್ಲು** 'ತಿಱುಕಲ್' ನೋ.

**ತಿಱುಕುಳಿ** (ನಾ). = ತಿಱುಕೊಱಚ$^3$ : "ತಿಱುಕುಳಿ [ ಪಾಠಾಂ. ತಿಱುಕೊಱಚ$^3$ ] ಯೆನಲ್ಕೆಯಾಯ್ಕುಳಿಯಕ್ಕು" (ಶಬ್ದಮಂ. ೫೪). 'ತಿರಿಕುಳಿ' ಪರಾ.

[ ತಿಱು + – ಕುಳಿ$_3$ ]

**ತಿಱುಕೊಱಚ$^3$** (ನಾ). (ಗದ್ದೆ ಮುಂತಾದ ಕಡೆ ಕಾಳನ್ನು) ಆಯ್ದು ಕೊಂಡು ಜೀವಿಸುವವನು ; ಆಯ್ಕುಳಿ : "ತಿಱುಕೊಱಚ$^3$ = ಆಯ್ಕುಳಿ" (ಶಮದ. ಪರಿ. ೨). [ ತಿಱು + ಕೊಱಚ$_6$ ]

**ತಿಱುಕೊಱಚುಗೊಳ್** (ಕ್ರಿ). ಆಯ್ದು ಕೊಳ್ಳು ; ಆರಿಸಿಕೊಳ್ಳು : ಕೊಲ್ಗುಂ ಕುಱಿಯಂ ಕೊಲ್ವಂತಿರೆ ತಿಱುಕೊಱಚುಗೊಂಡು ಜಗಜ್ಜನಂಗಳಂ ಯಮರಾಜಂ (ಅಜಿಪು. ೧೦-೨೮). [ತಿಱುಕೊಱಚ$^3$ + ಕೊಳ್$^1$]

**ತಿಱುಗದಿರ್** (ನಾ). ಆಯ್ದಕಿರಣ,—ರಶ್ಮಿ : ತಿಱುಗದಿರಂ ಮಱುವಕ್ಕಿಗೆ ನೂಂಕಿ ತನಿಗದಿರನನಿಯಂಗೆ ನೀಡಿ (ಅನಂಪು. ೭-೮೦ ವ). [ತಿಱು+ಕದಿರ್$_2$]

**ತಿಱುಚು** (ಕ್ರಿ). ವಿಭಾಗಿಸು ; ಭಾಗಮಾಡು (?) : ಮೂಱಱುವೊಳ ದಸವಂದದ ಮರ್ಯಾದೆಯಲೂ ಕಟುಗೊಡೆಗೆಯನೂ ತಿಱುಚಿ ಆ ಕಟುಗೊಡಗೆಯು ಗದೆಗೆ ಉತ್ತಮ ಮಧ್ಯಮ ಕನಿಷ್ಠವಾಗಿ ತ್ರಿಸ್ಥಾನದಲೂ ಸಿಲಾಸ್ಥಾಪನವನು ಮಾಡಿಸಿ ಕೊಡುವೆವು (ಎಕ. X, ಮುಳಬಾ. ೧೭೨-೧೦ : 1496). [ ತಿಱು + —ಚು$_1$ ]

**ತಿಱುತರ್**, ತಿರಿತರ್$_2$ (ಕ್ರಿ). (ಹೂವು, ಹಣ್ಣು, ಕಾಯಿ ಮುಂತಾದುವನ್ನು) ಕೊಯ್ದು ತರು ; ಕಿತ್ತು ತರು : ಕಂಪುಳ್ಳ ಸಂಪಗೆಯ ಪೂಗಳಂ ತಿಱುತಂದು ಹಂಪಿನಿಂ ಶಶಿಧರನ ಸಿರಿಮುಡಿಗೆ ಬೇಕೆಂದು (ಬಸರ. ೧-೨೭) ; ತಳಿರ ಕಿಱುತಂದಂದು ಮನೆ ಮಾಡಿದರು ಭೂಸುರತತಿಗೆ (ಕುಮಾವ್ಯಾ. ಆರಿಣ. ೪-೫). **ತಿರಿತರ್$_2$**. 'ತಿರಿತರಿಸು' ಪರಾ. [ ತಿಱು + ತರ್ ]

**ತಿಱುತರಿಸು**, ತಿರಿತರಿಸು (ಕ್ರಿ). ಕೊಯ್ದು ತರಿಸು; ಕಿತ್ತು ತರಿಸು : ಎಳವುಲ್ಗಳಂ ತಿಱುತರಿಸಿ ಮುಂದಿಟ್ಟನು (ಕ್ರಮಿಥಾ. ೨೯-೪೭). **ತಿರಿತರಿಸು** : ತಣ್ಣೆಳಲಿನ ತರುಮೂಲಕ್ಕೆ ತುರಂಗವನ್ನು ನೀರು ಕುಡಿಸಿ ಕಟ್ಟಿ, ಎಳಹುಲ್ಲನ್ನು ತಿರಿತರಿಸಿ ಅದರ ಮುಂದಿಟ್ಟು (ಬಿದುರ. ೧೬೮).

[ ತಿಱುತರ್ + – ಇಸು$_3$ ]

**ತಿಱುಸೇವಗೆ** (ನಾ). ಒಂದು ಬಗೆಯ ಸೇವಗೆ; "ಕತ್ತರಿಸಿ ಚೂರುಮಾಡಿದ ಸೇವಗೆ" (ಸಿದ್ಧರಾ. ಕೋಶ): ಬಳ್ಳಿಯಲ್ಲಿ ತಿಱುಸೇವಗೆಯು ರಾಶಿಗಳ ಮಾಡಿ ಹಳ್ಳಿಕಾರ್ತಿಯರಲ್ಲದರಸುಮಕ್ಕಳು ಮಾಡಿದರು ಪರಡಿ ಸರವಳಿಗೆಯ (ಸಿದ್ಧರಾ. ೮-೫೦). [ ತಿಱು + ಸೇವಗೆ (< ಸೇವಿಗೆ ) ]

**ತಿಱು** (ಕ್ರಿ). ೧. ಕೊಡು ; ನೀಡು : ಮಾನ್ಯಕಾಱುವರ್ಗೂಱು ಶ್ರಾಹಿಗೆ ಪರಿಯರ ಗದ್ಯಾಣವನ್ನಿಱುವರ್ (ಸೌಇಇ. IX – I, ೭೭-೨೯; 992): ಹೊಲಗೇರಿಯ ಪಡುವಣ ಕರುವಗೆಯ್ಕಿಂದಂ ತೆಂಕಲಾಱುಮತ್ತರು ಕೆಯಿಂಗಮುಱಿವಣಮಯ್ದು ಗದ್ಯಾಣವುಂ ತಿಱುವರು (ಸೌಇಇ. XI-i , ೫೦-೨೦ ; 1006). ೨. ಸಲ್ಲಿಸು ; ಸಂದಾಯಮಾಡು : "ತಿಱು – (ದ್ರವ್ಯ) ವಿನಿಮಯೇ" (ಶಮುಧಾ). 'ತೆಱು$_1$' ಪರಾ.

[ ದೇ. ॥ ತಮಿ. ಇಱು ; ಮಲ. ಇಱಿ = ಕಾಣಿಕೆ ]

**ತಿಱುಕೆ** (ನಾ). ಕೊಡುಮಿಕೆ ; ತೆರಂಪಿಕೆ : ಕಿಱುಕೆ, ತಿಱುಕೆ, ಪೊಱುಕೆ (ಶಬ್ದಾನು. ೫೫೭ ಪ್ರಯೋ). [ತಿಱು + – ಕೆ]

**ತಿಱುಗೆ** (ನಾ). ಒಂದು ಬಗೆಯ ತೆರಿಗೆ (?) : ಉಂಬಳವಾಣಿಯ ತಿಱುಗೆಯ ಒರಿಯ ಕೋಲಲು ಪಂನೆರಡು ಮತ್ತರು (ಕಇ. II, ೨೩-೭೪ : 1174) : ಹಾರಣೆದಂಳ ದೋಷದಿಂ ಪಾದ ತಿಱುಗೆಯುಂ ಕೊಂಬುದಿಲ್ಲೆಂದು ಒಂದು ಪೊಂನ ಪಾದಪೂಜೆಯುಂ ಕೊಂಡು (ಕಕುಲ. ೬-೭೪ : 1218).

[ತಿಱು + – ಗೆ]

**ತಿಱುನಂದೀಶ್ವರ** (ನಾ). [ಜೈನ] ಒಂದು ಹಬ್ಬ ; ನಂದೀಶ್ವರದಪ್ಪವಿಂ ; P ಜ್ಯೇಷ್ಠ, ಆಷಾಢ ಮತ್ತು ಫಾಲ್ಗುಣ ಮಾಸಗಳಲ್ಲಿ ಅಷ್ಟಮಿಯಿಂದ ಹುಣ್ಣಿಮೆಯವರೆಗೆ ಎಂಟು ದಿನಗಳು ಜೈನರು ಆಚರಿಸುವ ಒಂದು ವ್ರತ,—ಹಬ್ಬ. ಇದನ್ನು 'ಅಷ್ಟಾಹ್ನಿಕ' ಎಂದೂ ಕರೆಯುತ್ತಾರೆ : ತಿಱುನಂದೀಶ್ವರದಂದು ದಾನವಮಾಡಿಯುಂ ಪೊಯ್ಸಳನ ಗುರುಗಳ್‌ಮುಳ್ಳೂರ ಶ್ರೀಗುಣಸೇನಪಂಡಿತದೇವರ್ಗ್ಗೆ ಧಾರಾಪೂರ್ವಕದಿಂ ಸ್ಥಾನಮಂ ಕೊಟ್ಟರ್ (ಎಕ. VI, ಮೂಡಗೆ. ೦೩-೨೮: 1063). 'ನಂದೀಶ್ವರ' ಪರಾ. [P ಇದು 'ತಿರುನಕ್ಷತ್ರ' 'ತಿರುನಾಮ' ಮುಂತಾದ ಶಬ್ದಗಳಂತೆ, ತಮಿಳು ಪದಗಳ ಪೋಲಿಕೆಯ ಮೇಲೆ ರೂಪಿಸಿಕೊಂಡಿರುವ ಒಂದು ಶಬ್ದವಿರಬಹುದು.]

**ತಿಱುನೀರಿಕ್ಕು** (ಕ್ರಿ). (?) : ಮಂಡಲಮಿನ್ನುಂ ತಿಱುನೀರಿಕ್ಕು [ ಪಾಠಾಂ. ಕಿಱುನೀರುಕ್ಕು ] ವುದೆನಿಸಿದ ತಱುಸಲವಿನ ಚಲದ ಬಲದ ಕಲಿನರಸಿಂಪಂ (ಪಂಪಭಾ. ೧-೩೩) ; "ತರ್ಪಣೋದಕವನ್ನು ಕೊಡು" (ಪಂಪದೀ. ೧೨).

[P ಇಲ್ಲಿ ಪಾಠಾಂತರವೇ ಹೆಚ್ಚು ಗ್ರಾಹ್ಯವೆಂದು ತೋರುತ್ತದೆ]

**ತಿಱುವಂಗಡಿ** (ನಾ). = ತಿರುಮಾಳಿಗೆ : ವಿದ್ಯಾಕೀರ್ತಿತಪೋಧನರಾಹಾರದಾನಕ್ಕಮೆನ್ದು ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಉತ್ತರಮದ ಬಳಕ್ಕೆ ತಿಱುವಂಗಡಿ ೧ ಮತ್ತಮುಂಗಡಿಗಳೊಳ್ಪಣ ೧ . . . ಕೊಟ್ಟರ್ (ಎಇ. V, ೩೪೩-೩೦ ; 1093). [ < ತಿರು$_2$ + ಅಂಗಡಿ (<ಅಂಗಾಡಿ) ]

**ತಿಱುವಂತ** (ನಾ). ಒಬ್ಬಾತನ ಹೆಸರು : ಪತ್ತುಗದ್ಯಾಣ ಪೊನ್ನುಂ ಇಟ್ಟಾಱು ಭತ್ತವುಂ ತಿಱುವನ್ತಗೆ ಕಾದಿಯಣ್ಣಂ ಕೊಟ್ಟಂ (ಎಕ. IX, ಮುಳಬಾ. ೨೦೮-೩೪ : 1000). [ <ತಿರು$_2$ + – ವಂತ ]

**ತಿಱ್ಱಂದಿರಿ** (ಕ್ರಿ). ವೇಗವಾಗಿ ತಿರುಗು ; ಭರದಿಂದ ಸುತ್ತು : ಜಳಧಿಯ ನೀರ್ಸುಳಿಯುಂಕಿದವು ಧಾತ್ರಿ ತಿಱ್ಱಂದಿರಿದತ್ತು ದಿಗ್ಗಜಂ ಮದವೆತ್ತಿ ಕಟ್ಟಿದುದು (ಮಹಾನೇ. ೧೦-೦೨೯). [ < ತಿಱ್ಱನೆ + ತಿರಿ$_1$ ]

**ತಿಱ್ಱಗೆ** (ಅ). ತಿರುಗುವುದನ್ನು ಸೂಚಿಸುವ ಒಂದು ಅನುಕರಣಾವ್ಯಯ : ಅಸುರಂ ಗದೆಯುಂ ತಿಱ್ಱಗೆ ತಿರುಪಿದೊಡೊಡನೆ ತಿರುಗುಗುಂ ಭೂಚಕ್ರಂ (ಜಗವಿ. ೯-೭೩). [ ತಿಱ್$_0$ + – ಅಗೆ$_8$ ]

**ತಿಱ್ಱನೆ**, ತಿರ್ರನೆ (ಅ). ೧. = ತಿಱ್ಱಗೆ : ಬಾಣಗಳ್ಪಂದರಿಗಳನೆತ್ತಿ ತಿಱ್ಱನುಸುದ್ದದೊಳು ತಿರುಗಿಸಿ (ಚಂಪ್ರಸಾಂ. ೮-೫೨). **ತಿರ್ರನೆ** : ೨. ಶೀಘ್ರವಾಗಿ; ವೇಗವಾಗಿ : "ತಿರ್ರನೆನೆ ತಿಬ್ಬಮೆನೆ ಶೀಘ್ರವಾಚಿಯಕ್ಕು" (ಕಶರ. ೪೫).

**ತಿಱ್ಱನೆತಿರಿ**=ಗಿರ್ರನೆ ಸುತ್ತು,—ಅಲೆ: ಆ ಗಾಳಿಯುಂ ಪದಿನಯ್ದು ದಿವಸಂ ಬರೆಗಂ ತನಗೆ ತಾನೆಯಂತರಿಕ್ಷದೊಳ್ ನೆಲನಂ ಮುಟ್ಟದೆ ತಿಱ್ಱನೆ ತಿರಿಯುತ್ತಿರ್ದುದಂ ಕಂಡು (ವಡ್ಡಾರಾ. ೦೪೭-೦೫) ; ತಿರಿಪಿದೊಡದನೆಳೆ ತಿಱ್ಱನೆ ತಿರಿದುದು ತಿರುವಾಯೊಳಿದೆ ಸುರರ್ ಪೊಱುಯಿಟ್ಟರ್ (ಪಂಪಭಾ. ೦೨-೧೯೨) ; ಕುಧರ್ಮೋಪದೇಶದಿಂ ಸಂಸಾರಚಕ್ರದೊಳ್ ತಿಱ್ಱನೆ ತಿರಿದು (ಶಾಪುಂಪು. ೫೦-೨೮) ; ಸಂಸಾರದೊಳಗೆ ತಿಱ್ಱನೆ ತಿರಿವಯ್ (ಅಜಿಪು. ೨-೬೦) ; ಕರುಬದ ಕದಿರಂತೆ ತಿರ್ಯಗ್ಗತಿಯೊಳ್ ತಿಱ್ಱನೆ ತಿರಿದುಂ (ಧರ್ಮಾಮೃ. ೬-೦೭೫) **ತಿಱ್ಱನೆ ತಿರಿಪು**, **ತಿಱ್ಱನೆ ತಿರುಪು** = ಗಿರ್ರನೆ ಸುತ್ತುವಂತೆ ಮಾಡು ; ಅಲೆಯುಂವಂತೆ ಮಾಡು : ಕೌಂತೇಯರಂ ಮುಚ್ಚರದಿಂ ಕಾಂತಾರದೊಳ್ತಿಱ್ಱನೆ

ತಿರಿಪಿದ ಸೊರ್ಕಿನೆಗಳೇನಾದುದು (ಗದಾಯು. ೭-೧೪) ; ತಿಟ್ಟನೆ ತಿರಿಪಿದವಂ ಸುತ್ತಿಪಂ ಮುತ್ತಿಪಂ ಸಂಗರದೊಳ್ (ಎಕ. VIII, ಸಾಗರ. ೧೦೯-೨೫: 1042): ಗಟ್ಟನೆ ಪರಿತಂದು ಮಾಣದಚ್ಚುಳಕೋಲಿಂ ತಿಟ್ಟನೆ ತಿರಿಪಿ ದುರಾತ್ಮರ್ ...ಬಡಿವರ್ (ಧರ್ಮಾಮೃ. ೩-೧೯೧) ; ಸಟ್ಟನೆ ಸೀಳ್ವ ದಿಗ್ಗಜದ ಮಂಡೆಯ ಮೆಟ್ಟಿ ಸುಟ್ಟನೆ ಸುರಿವೆಸೇಳ್ಗಡಲ ತಿಟ್ಟನೆ ತಿರುಹುವೆ ಧರಣಿಯ (ಮೋಹತ. ೧೨-೧೧). ತಿಟ್ಟನೆ ತಿರುಗು, ತಿರ್ರನೆ ತಿರುಗು=ತಿಟ್ಟನೆ ತಿರಿ: ಆನುಂ ತೊಡೆ ಯೊಡೆಯೊಳಿರ್ದೊಡಸಂದು ಸುಟ್ಟುರಿಯ ತಟಗೆಲೆಯಂತೆ ತಿಟ್ಟನೆ ತಿರುಗಿ ಬೀಳ್ವಲ್ಲಿ (ಕಾದಂಪೂ. ೧೮೫) ; ಕರಟದ ಕದಿರಂತೆ ತಿಟ್ಟನೆ ತಿರುಗುತ್ತುಂ (ಧರ್ಮಾಮೃ. ೨-೧೦೨): ಮಿಸುಗುವ ಡಮರುಗ ಢಂ ಢಂ ಡಣಲೆನೆ ಕಿಸುಳದಿ ಹರಿಯುವ ತಾರಂ ತಿಟ್ಟನೆ ತಿರುಗುತ್ತಿರೆ (ಕುಂಬರ. ಹ. ೨೫೮-೭); ಕರಹತಿಗೆ ಧಡಧಡಿಸಿ ತಿಟ್ಟನೆ ತಿರುಗಿ ಬೀಳುತ (ಕುಮಾರವ್ಯಾ. ೬-೫೯) ; ನಭೋಗ್ರದಲಿ ರಥದ ಗಾಲಿ ತಿಟ್ಟನೆ ತಿರುಗುತಿರ್ದವು (ತೊರವೆ. ೩-೬-೧೩) ; ದೈತ್ಯ ಪೀತಾಂಬರನ ಮೊಮ್ಮನನೆಚ್ಚು ಕೆಡಹಿದ ಭೂತಲ ತಿಟ್ಟನೆ ತಿರುಗೆ (ಮೋಹತ. ೩೫-೪೭) ; ಶನಿಗ್ರಹಕ್ಕೆ...ತನ್ನ ಅಕ್ಷದ ಮೇಲೆ ತಾನೊಂದು ಬಾರಿ ತಿರ್ರನೆ ತಿರುಗುವುದಕ್ಕೆ ಕೇವಲ ೧೦ ಗಂಟೆಗಳಾದರೆ ಸಾಕು (ಆಕಾಶ. ೨೪). ತಿಟ್ಟನೆಯ್ತರ್=ವೇಗವಾಗಿ ಬರು : ಚತುರಂಗಂ ಚತುರಂಗಸೈನ್ಯದೊಳಡು [ರ್ತಂ] ತಿಟ್ಟನೆಯ್ತಂದು ತಾಗಿ ತಡಂಮೆಟ್ಟದೆ ಕಾದೆ (ಪಂಪಭಾ. ೧೧-೭) : ಮಿಂಚಂ ತಟ್ಟೆಸಿದ ಕಾರ ಕಾರ್ಮುಗಿಲಂತೆ ತಿಟ್ಟನೆಯ್ತರ್ಪ ದವಿತಾರಿಯಂ ನೋಡಿ (ಶಾಂತಿಪು. ೪-೫೨ವ). [ತಿಟ್$_0$ + – ಅನೆ$_1$]

ತಿಟ್ಗಲೂರ್ (ನಾ). ಒಂದು ಊರಿನ ಹೆಸರು : ಬಿನಯಾದಿತ್ಯರಸರ್ ಕೊಟ್ಟಿಕುನಾಡ್ಕೆ ಮೂನೂಱು ಆಳುತ್ತಿರ್ದ್ದು ತಿಟ್ಗಲೂರ ತಾಯನ್ದಿಯರ ಪೂರ್ವ್ವಜರಾ ಪಡದೊದು ಉತ್ತಮಮೆಣ್ಡೆ ಎಮ್ಮಾ ಕಟನಿ (ಎಕ. XI (ಶ). ಹೊಳಲ್ಕೆ. ೧೯೧-೪ : 800). [ ? + ಊರ್]

ತಿಟ್ತಮ್ಮ (ನಾ). ಒಬ್ಬಾತನ ಹೆಸರು : ಸಡಗರರ ತಿಟ್ತಮ್ಮಂ ವಿಕ್ರಮ ಮೆಂಬ ವರ್ಷದೊ[ಳ್] ಗೋಶಹಶ್ರುಮಿಟ್ಟ್ದ[ಂ] ಪೂದಾರುಂ ಬೆಳೆ ವತ್ತರುಂಗೊಟ್ಟೊ[ನ್] (ಸೌಇಇ. XX, ೦೭-೩ : 930). [ ? + ಅಮ್ಮ$_1$ ]

Δ ತಿಟ್ದು 'ತಿರ್ದು$_1$' ನೋ.

ತೀಂಗಿಡಿಸು (ಕ್ರಿ). ನವೆಯನ್ನು ನಿವಾರಿಸು, – ಕಳೆ : ಕೋಡನಿಟ್ಟು ತೀಂಗಿಡಿವುವ ಕರ್ಣತಾಳದೆಲರಿಂ ಬೆಮರಾಱಿಪ ಕೆಯ್ತಮೊಪ್ಪೆ ಬಲ್ಪಿಡಿಪಡಿದಿರ್ದದಂಗಜನ ಕಯ್ಪಿಡಿಯಂ ಪಿಡಿಯಂ ಮತಂಗಜಂ (ಪುಷ್ಪಶ. ೫-೮೧). [ ತೀನ್ + ಕಿಡಿಸು (<ಕೆಡಿಸು$_1$) ]

ತೀಂಟು, ತೀಟು, ತೀಡು$_1$ (ಕ್ರಿ). ೧. ಮುಟ್ಟು ; ತಾಕು ; ತಗಲು : ಉಚ್ಚಳಚ್ಚೀಕರತತಿ ನಭವಂ ತೀಂಟುವನ್ನಂ . . . ಶೋಭಿಸುವುದು ಮಣಿಮಾಲಾಂಶುಭದ್ರಂ ಸಮುದ್ರಂ (ಕುಸುಮಾ. ೧-೨೨). ತೀಟು : ೧. ಆರು ಮಿಾಟುವರೆನ್ನ ತೋಟಿಯನಿಂತು ಕಾಣದ ಕೈಯಲಿ ? ಆರು ತೀಟುವರೆನ್ನ ಬಾಗಿಲನಿಂತು ಕೇಳದ ಕರೆಯಲಿ ? (ಕವಿಕ. ೮೮-೭). ತೀಡು$_1$ : ೧. ಗಾಡಿ ಒಂದು ಸಾರಿ ಬಲವಾಗಿ 'ಜಟಕ' ಹಾಕಿದಾಗ ನಾಗವೇಣಿಯು ಮೂಗು ಶಂಕರನ ಹೆಗಲಿಗೆ ತೀಡಿತು (ಗರಿಬಾ. ೨೩). ೨. (ಗಾಳಿಯಂತೆ) ಬೀಸು; ಸುಳಿ: "ತೀಡು– ವಾಯು ಸ್ಪರ್ಶನೇ" (ಶಮಧಾ) ; ಹರಿಚಂದನ ಕಾಳಾಗರು ಮಲಯಜ ತುರುಷ್ಕಾದಿಗಳ ಕಂಪು ಬಂದು ತೀಡಿದೊಡೆ (ಪದ್ಮರಾ. ೫೫-೩) ; ನೀಂ ಮೆಲ್ಲಮೆಲ್ಲನೆ ಮಂದಾನಿಳ ತೀಡು ಕೋಗಿಲೆ ಸರಂದೋಱು (ಆದಿಪು. ೧೨-೪೪) ; ಭ್ರಮರರವಂಗಳೊಳ್ ಪೆರ್ [illegible] ತೀಡಿದತ್ತು (ಕಾ[illegible] ೬೩೨) : ತೀಡಿತ್ತು ಬಂದು ಮಂದಸಮಿಾರಂ (ಪಂಪರಾಮಾ. ೦೬-೮೩) : ಲೋಭದ ಗಾಳಿ ತೀಡದು ಮೋಹಕೆ ತೆಱಹಿಲ್ಲ (ಬಸವ. ೮-೫೩) : ತಾವರೆಯ ತನಿ ಪರಿಮಳದ ವಿಸರದ ಹಸರದಲಿ ತೀಡಿದುದು ತಂಗಾಳಿ (ತೊರವೆ. ೨-೭-೩); ಪರಿಪರಿ ಕಜ್ಜಾಯಗಳ ಪರಿಮಳದಿಂಪು ಬೀದಿಯೊಳೆಡೆಯಾಡುತಿಪ್ಪರ ಮುಖಾಬ್ಜಕೆ ತೀಡುತಿಹುದು (ಕಂನವಿ. ೬-೫೦).

[ ದೇ.॥ ತಮಿ. ತೀಣ್ಡು ; ಮಲ. ತೀಣ್ಡು ; ಕೊಡ. ತೀಂಡ್ ]

ತೀಂಟೆ$_1$, ತಿಂತಿ, ತಿಂತೆ, ತೀಂತೆ, ತೀಟ$_2$, ತೀಟೆ (ನಾ). ೧. ನವೆ ; ಕಡಿತ; ತಿಮಿರು; ತುರಿಕೆ : "ಕಂಡೂಃ–ತೀಂಟೆ" (ಕಾಶಕ್ಯ. ೨೫): ಮದಕರಿ ತೀಂಟೆಗೊಲ್ದೊರಸೆ ಭೂರುಹಕಂಧರದೊಳ್ ಜಗಿಲ್ತು ಪತ್ತಿದ ಮದಸೌರಭಕ್ಕೆ ಸುಳಿಗೊಳ್ವಳಿಮಾಲೆ (ಕುಸುಮಾ. ೦೪-೦೨೦): ಸುರಾಸುರಾವಳಿಗಳ ಮಹಾಗರ್ವವೆಂಬ ತೀಂಟೆಯ ತೀರ್ಚುವಾ . . . ಸಿವದೊಳ್ (ವೀಶ್ವಪು. ೨-೩-೫): ಪುಲ್ಲಂ ಮೇಯಲೆಳಸಿ ಬಂದು ಮೆಯ್ಯ ತೀಂಟೆ [ ಪಾಠಾಂ. ತಿಂಟೆ, ತಿಂತಿ ]ಗೆ ಪುಲಿ ಪೊರಳ್ದು ಪೋದ ತಾಣದೊಳ್ ನಿಂದು . . . ಹಮ್ಮದುಚೋದ ಹರಿಣಂಗಳಿಂ (ರಾಜಶೇ. ೫-೫೫ವ). ೨. ಚಾಪಲ್ಯ; ತೀವ್ರವಾದ ಆಸೆ,—ಅಪೇಕ್ಷೆ : ಪುಲಿಯಂ ತೊಟ್ಟನೆ ಕಂಡು . . . ಪಾಯ್ದು ಪೊಯ್ದು ಕೋಡಿಟ್ಟು ಜಲ್ಲಿಸಿ ಬಿಸುಟ್ಟು ನೊಸಲ ತೀಂಟೆ ತೀರದೆ ಕೊಣಕಿಟ್ಟು (ಗಿರಿಕ. ೦-೧೨೮ವ) : ಖಡ್ಗವಾಯ್ದಣಿಯೆ ನಿಜಭುಜದ ತೀಂಟೆ ಹರೆಯೆ ಹಗೆಗಳ ಕೊಂದು (ಹದಕಾ. ೧೧-೧೪). 'ನಾಲಗೆದೀಂಟೆ' ಪರಾ. ತಿಂತಿ: ೧. ಮೆಯ್ಯೊಳೋರಂತವರ್ದ ಕುಷ್ಠಾಮಯದ ತಿಂತಿಯಂ ತುಱಿಸುತ (ಪದ್ಮರಾ. ೪-೬೪). ತಿಂತೆ : ೩. (ಆಲಂ) ನಾಲಗೆಯ ತುರಿಕೆ ; ಬೇರೆಯವರನ್ನು ನಿಂದಿಸಬೇಕೆಂಬ ಲವಲವಿಕೆ, – ಆತುರ : ಜಗಳವ ಹತ್ತಿಸುವೆನೆಂದು ಚಿಂತಿಸುವ ಮನ ಕೊಂಡಯಕ್ಕಳಸಿ ಗದಗದಸಿ ತಿಂತೆ [ಪಾಠಾಂ. ತಿ] ಮಸಗುವ ಬಾಯಿ (ಸೋಮಕ. ೦-೨೯) ; ಬಾಯಿ ತಿಂತೆ [ಪಾಠಾಂ. ತಿ] ಪರೆವಂತೆ ಪೊಗಳುತ ನೇಹದಿಂ ನೋಡು ತಿಪರ್ಗಳ್ (ಪದ್ಮರಾ. ೩-೭೨). ತೀಂತೆ : ೨. 'ನಾಲಗೆತೀಂತೆ' ಪರಾ. ತೀಟ$_2$ : ೧. ಆ ಕುಣಿಕೆಯ ತೀಟದಿಂದೊಮ್ಮೆ ಆಶ್ರಮದ ಪರಿಸರದಲ್ಲಿ ಅಲೆಯುತ್ತಿದ್ದನು (ನಾಡೋಜ. ೪). ತೀಟೆ : ೧. ಮೇಣೊಂದನೊಂದೊದೆದು ಹಿಂದಣ ಖುರಂಗಳಿಂ ಮಾಣದಡಿಗಡಿಗೆ ಕಂಪದ ತೀಟೆಗಳ ತೀಡಿ . . . ಬಿಱುಗೊಂಡವು (ಜೈಮಿಭಾ. ೨೫-೮) : ಪೀಠ ಮೂಢಗೆ ಹೊಲ್ಲ ಕೀಟ ನಿದ್ದೆಗೆ ಹೊಲ್ಲ ತೀಟೆಯದು ಹೊಲ್ಲ ಕಜ್ಜಿಯ (ಸರ್ವಜ್ಞ. ೮೨೦): ಕೂರ್ಮಾವತಾರ ಮಾಡಿದ ಸ್ವಾಮಿಯು ಬೆನ್ನಿನ ತೀಟೆಯ ನಿವಾರಿಸುವನ: (ಕೀಷಧ. ೨೫-೩೨); ಮಂಡೆಯ ತೀಟೆ, ಸೀನು . . . ಇವು ಜ್ವರ ಬಿಡುವವನ ಲಕ್ಷಣ (ವೈದ್ಯಸಾ. I, ೪೯). ೨. ಭಕ್ತರಿಗೆನ್ನ ಕೈಗಳ ತೀಟೆ ಹೋಗಲ್ಕೆ ತೊತ್ತಾಗಲಸಂಗೆಯ್ಯಲನುವಾಯಿತ್ತೆನುತ (ಬಸಪು. ೨೧-೭) : ತೋಳ ತೀಟೆ ಯಾನವನ ನೆತ್ತಿಯ ಮೇಲೆ ಕಳೆವೆನು (ಕುಮಾರವ್ಯಾ. ಭೀ. ೧-೬೦) ; ನಿನ್ನ ಯುದ್ಧದ ತೀಟೆಯನ್ನು ತೀರಿಸಿಬಿಡುತ್ತೇನೆ (ವಚಭಾ. ೩೦೭). ೪. ಬೆದೆ ; ನಸೆ : ಆ ತೀಟೆ ತೀರಿಸಿಕೊಳ್ಳುವ ಅಭಿಲಾಷೆಯಿಂದ ಅವನು ಪಾತರ ಪಾರಿಯನ್ನು ಸಂಧಿಸಬಹುದಾಗಿತ್ತು (ದೇಪಹ. II, ೦೯೨) : ತೀಟೆಗೆ ಮಕ್ಕಳ ಹೆತ್ತು ತಿರುಮಲದೇವರ ಹೆಸರಿಟ್ಟ ಹಾಗೆ (ಗಾದೆ). ೫. ಕೀಟಲೆ ; ಚೇಷ್ಟೆ ; ತಂಟತನ: ನನ್ನ ತಮ್ಮ ತೀಟೆಯವ (ಚಂಗೂರಿ. ೧೪೦). ೬. ಕೋಟಲೆ; ತೊಂದರೆ ; ಪೀಡೆ : ಇನ್ನೊಂದು ವರ್ಷದ ತನಕ ತೀಟೆ . . . ತಪ್ಪಿತು (ನನ್ನೂರು. ೧೪೮). ೭. ಅಗತ್ಯ ; ಆವಶ್ಯಕತೆ : ಅಲ್ಲಿಗೆ ಬರೋಕೆ ನನಗೇನು ತೀಟೇನೆ ? (ಮುನಿಮೂ. ೮೧) : ತೀಟೆಯಾದರೆ ತಾನೇ ಬರುತ್ತಾನೆ (ರೂಢಿ).

[ ದೇ.॥ ತೆಲು. ತೀಟ, ತೀಂಟ ]

ತೀಂಟೆ$_3$ 'ತಿಟ್ಟು$_3$' ನೋ.

ತೀಂಟೆತ್ತು (ಕ್ರಿ). ನವೆಯುಂಟಾಗು ; ತುರಿಕೆಯಾಗು : ಪಿರಿದುಂ ತೀಂಟೆತ್ತಿ ಗಂಡಸ್ಥಳಮನನುದಿನಂ ಕಾಡ ಸೊಕ್ಕಾನೆಗಳ್ಬಂದೊರಸಲ್ (ಕಾದಂಪೂ. ೨೨೨).

[ ತೀಂಟೆ$_1$ + ಎತ್ತು$_1$ ]

ತೀಂತೆ 'ತೀಂಟೆ$_1$' ನೋ.

**ತೀಂತೇರಾ** 'ತೀನತೇರ' ನೋ.

**ತೀಕು** 'ದೇಕು' ನೋ.

**ತೀಕ್ಷ್ಣ** (ಗು). ೧. ಚೂಪಾದ ; ಹರಿತವಾದ : ಸುರಶರಾಸನದಂತೆ ನಿರ್ಗುಣರುಂ ತೀಕ್ಷ್ಣಕೌಕ್ಷೇಯದಂತೆ ನಿಸ್ತ್ರಿಂಶಭಾವರುಂ (ಸುಕುಮಾ. ೨-೫೮); ಉತ್ಖಾತ ತೀಕ್ಷ್ಣಕೌಕ್ಷೇಯಕಸನಾಥಶಯನ ಪಾರ್ಶ್ವಭಿತ್ತಿಭಾಗಮುಂ (ಚಂದ್ರಪ್ರ. ೩-೯೭ ವ). ೨. ಬಿಸಿಯಾದ ; ಉಷ್ಣವಾದ. 'ತೀಕ್ಷ್ಣಾಂಶು' ಪರಾ. ೩. ಕ್ರೂರವಾದ ; ನಿರ್ದಯವಾದ : ಅನ್ನೆಗಮಿತ್ತ ವಿಭೀಷಣಾ ದೇಶದಿಂಬಂದ ತೀಕ್ಷ್ಣಪುರುಷರ್ ಪುರಮಂ ಪೊಕ್ಕು (ಪಂಪರಾಮಾ. ೩-೨೭ವ); ತನ್ನಂ ಕೊಲಲರಸನಟ್ಟಿದ ತೀಕ್ಷ್ಣಪುರುಷಂ ಬಂದು (ಪಂಪರಾಮಾ. ೧೧-೯೩ ವ). ೪. ಕಟುವಾದ ; ಖಾರವಾದ. ೫. ಬಲವುಳ್ಳ ; ಶಕ್ತಿಯುಳ್ಳ. ೬. ತವಕಿಸುವ ; ಆತುರವುಳ್ಳ. (ನಾ). ೭. ಹರಿತವಾದುದು ; ಚುರುಕು : "ತಿಕ್ಕನೆ ತೀಕ್ಷ್ಣಂ" (ಕವಿಕಂ. ೫೪) ; ಅವನ ಕಣ್ಣು ಹದ್ದಿನ ಕಣ್ಣಿನ ಹಾಗೆ ಬಲು ತೀಕ್ಷ್ಣ (ಮುಂಬಯಿ. ೪-೪೩) ; ಅವಳ ಬುದ್ಧಿ ತೀಕ್ಷ್ಣ (ಮಲೆನಾ. ೧೫). ೮. ಉಷ್ಣತೆ ; ಬಿಸಿ : "ತಿಗ್ಮಂ, ತೀಕ್ಷ್ಣಂ, ಖರಂ–ಈ ೩ ಬಿಸಿಯ ಹೆಸರು" (ಸಿದ್ಧಾಂತಿ. ೩೩) ೯. ಕಠಿನವಾದುದು ; ನಿಷ್ಠುರವಾದುದು : "ತೀಕ್ಷ್ಣಂ ಪರುಷಾಹ್ವಯಂ" (ನಾನಾರ. ೧೨೦). ೧೦. ತೀವ್ರತೆ. ೧೧. ಉಗ್ರತೆ. ೧೨. ಆಯುಧ. ೧೩. ವಿಷ ; ನಂಜು : "ಬ್ರಹ್ಮಪುತ್ರಃ ... ತೀಕ್ಷ್ಣಃ–ಈ ೭ ವಿಷಂ" (ಹಲಾಯು. ೧೦೭-೨೪) ; "ರಸಂ ತೀಕ್ಷ್ಣಪ್ರದೀಪನ ಮದೋರಂತೆ ವಿಷಮುಕ್ಕು" (ಮಂಗರಾ. ೦೨೯-೫). ೧೪. ಕಬ್ಬಿಣ ; ಉಕ್ಕು : "ಶಸ್ತ್ರಂ, ತೀಕ್ಷ್ಣಂ, ಅಯಃ, ಪಾರಸವಂ–ಈ ೪ ಉಕ್ಕು" (ಹಲಾಯು. ೨೮-೧೭). ೧೫. ಕಾಳಗ ; ಯುದ್ಧ. [ ಸಂ. ]

**ತೀಕ್ಷ್ಣಗಂಧಕ** (ನಾ). ಒಂದು ಬಗೆಯ ಮರ ; ನುಗ್ಗೆ : "ಶೋಭಾಂಜನಃ, ಶಿಗ್ರುಃ, ತೀಕ್ಷ್ಣಗಂಧಕಃ...ನುಗ್ಗೆಮರದ ಹೆಸರು" (ಸಿದ್ಧಾಂತಿ. ೧೧೫). [ಸಂ.]

**ತೀಕ್ಷ್ಣಗು** (ನಾ). ಬಿಸುಪಾದ ಕಿರಣಗಳುಳ್ಳವನು ; ಸೂರ್ಯ : ಏಟನೆಯ ಗೇಹಂ ಕನ್ನೆಯಾದಂಶು . . . ತೀಕ್ಷ್ಣಗು ಲಗ್ನಸ್ಥಿತನಾಗೆ ಪೆಣ್ಣ ಕತದಿಂ ಸಾಯ್ಗುಂ ನಿಜಾವಾಸದೊಳ್ (ಜಾತತಿ. ೨೩-೮). 'ತೀಕ್ಷ್ಣಗುಜ' ಪರಾ. [ ಸಂ. (ತೀಕ್ಷ್ಣ + ಗೋ + – ) ]

**ತೀಕ್ಷ್ಣಗುಜ** (ನಾ). ಸೂರ್ಯನ ಮಗ ; ಶನಿ : ಪಗಲೊಳ್ ತಂದೆ ದಿವಾಕರಂ ಜನನಿ ಶುಕ್ರಂ ರಾತ್ರಿಯೊಳ್ ತಂದೆ ತೀಕ್ಷ್ಣಗುಜಂ ಮಾತ್ರ ಸುಧಾಮರೀಚಿ (ಜಾತತಿ. ೩-೬). [ ಸಂ.]

**ತೀಕ್ಷ್ಣಗೊಳಿಸು** (ಕ್ರಿ). ಉಜ್ವಲವಾಗುವಂತೆ ಮಾಡಂ ; ಹರಿತಗೊಳಿಸು : ಯಾವುದರ ಮೇಲೆ ಗಮನವಿಡಬೇಕೋ ಅದರ ಹೊಳಪು, ಬಣ್ಣ, ಆಕಾರ, ಶಬ್ದ ಮುಂತಾದ ಗುಣಗಳನ್ನು ತೀಕ್ಷ್ಣಗೊಳಿಸುವುದರಿಂದ ಮಕ್ಕಳ ಅವಧಾನ ಅದರ ಕಡೆ ಚೆನ್ನಾಗಿ ಬೀಳುತ್ತದೆ (ಶಿಕ್ಷದ. ೪೭೮).

[ ತೀಕ್ಷ್ಣ + ಕೊಳ್$_1$ + – ಇಸು$_3$ ]

**ತೀಕ್ಷ್ಣತೆ** (ನಾ). ಚುರುಕು : ಗಮನ ವಿಸ್ತರಿಸುವ ಪರಿಮಾಣಕ್ಕೆ ವಿಲೋಮವಾಗಿ ಅದರ ತೀವ್ರತೆ ತೀಕ್ಷ್ಣತೆಗಳು ಕಡಿಮೆಯಾಗುತ್ತವೆ (ಶಿಕ್ಷದ. ೩೧೪) : ಸಹಜವಾದ ದೃಷ್ಟಿಯ ತೀಕ್ಷ್ಣತೆ ಎಂದರೆ . . . ಓದುವ ಚಾರ್ಟಿನ ಸಾಲನ್ನು ಗುರುತಿಸುವ ಶಕ್ತಿ (ನಿಮ್ಮದೃ. ೭೩). [ಸಂ. ತೀಕ್ಷ್ಣತಾ]

**ತೀಕ್ಷ್ಣಧಾರೆ** (ನಾ). ಹರಿತವಾದ ಅಲಗುಳ್ಳ ಕತ್ತಿ : ಸಾಲದೀವಿಗೆಗಳನು ಶಸ್ತ್ರಜ್ವಾಲೆ ಮಿಕ್ಕವು ತೀಕ್ಷ್ಣಧಾರಾಭೀಳವಿಕ್ರಮವಿಸ್ಫುಲಿಂಗಿತವಾದವಡಿಗಡಿಗೆ (ಕುಮಾವ್ಯಾ. ೮-೭). [ ಸಂ. ತೀಕ್ಷ್ಣಧಾರಾ ]

**ತೀಕ್ಷ್ಣಬುದ್ಧಿ** (ನಾ). ೧. ಚುರುಕಾದ ಬುದ್ಧಿ ; ಹರಿತವಾದ ಬುದ್ಧಿ : ವಿಜ್ಞಾನಿಗಳಲ್ಲಿ ವಿಚಾರಪರತೆ, ತೀಕ್ಷ್ಣಬುದ್ಧಿ . . . ಇಂತಹ ಹಲವು ಉತ್ತಮಗುಣಗಳಿದ್ದರೂ (ಮುಕ್ತಾರ. ೨೭ ಪೀಠಿಕೆ). ೨. ಚುರುಕಾದ ಬುದ್ಧಿಯುಳ್ಳವನು. [ ತೀಕ್ಷ್ಣ + ಬುದ್ಧಿ ]

**ತೀಕ್ಷ್ಣಮತಿ** (ನಾ). ೧. ಚುರುಕಾದ ಬುದ್ಧಿ : [illegible] ನಿನ್ನ ತೀಕ್ಷ್ಣಮತಿಗೆ ಹೊಳೆಯಲಿಲ್ಲವೆ ? (ಕೂ೦). ೨. [illegible] ಬುದ್ಧಿಯನ್ನುಳ್ಳವನು : ನೆಕ್ಲದೋವ್ ತೀಕ್ಷ್ಣಮತಿಯೆಂದು ಗಣ್ಯನಾಗಿದ್ದುದರಿಂದ . . . ಅವಳ ಆಪ್ತವರ್ಗದಲ್ಲೊಬ್ಬನಾಗಿದ್ದನು (ಪುನರು. ೧೨೦) : ಪ್ರತಿಯೊಂದು ಹೊಸಗ್ರಂಥವನ್ನು ತೀಕ್ಷ್ಣಮತಿಯಾಗಿ ತೀವ್ರಗತಿಯಿಂದ ಅವಲೋಕಿಸಬೇಕು (ಗ್ರಂಥಾಲ ೭೯). [ ತೀಕ್ಷ್ಣ + ಮತಿ ]

**ತೀಕ್ಷ್ಣಾಂಶು** (ನಾ). = ತೀಕ್ಷ್ಣಗು : ತೀಕ್ಷ್ಣಾಂಶುವಿಂ ಸೌಮ್ಯನಿಂ ತ್ವರಿತಂ ಶುಕ್ರನೆ ಮಿಕ್ಕು ಪೋಗೆ ಮಳೆಗಳ್ ಕೊಳ್ಗುಂ ಧರಾಚಕ್ರದೊಳ್ (ಜಟ್ಟಮ. ೭-೧೨೪). [ ತೀಕ್ಷ್ಣ + ಅಂಶು ]

**ತೀಕ್ಷ್ಣಾಗ್ನಿ** (ನಾ). ಜಠರಾಗ್ನಿಯ ನಾಲ್ಕು ಸ್ಥಿತಿಗಳಲ್ಲಿ ಒಂದು : ಪಿತ್ತಾಗ್ನಿಯಿಂದ ಉಂಟಾಗುವ ಉಷ್ಣ : ತೀವ್ರವಾದ ಜಠರಾಗ್ನಿ ವಿಷಮಾಗ್ನಿಯಲ್ಲಿ ವಾತಹರ ಚಿಕಿತ್ಸೆಯನ್ನೂ, ತೀಕ್ಷ್ಣಾಗ್ನಿಯಲ್ಲಿ ಪಿತ್ತಶಮನ ಕ್ರಿಯೆಯನ್ನೂ ಮಾಡುವುದು (ಸಕಪ್ರ. ೦೬). [ ತೀಕ್ಷ್ಣ + ಅಗ್ನಿ ]

**ತೀಕ್ಷ್ಣಾಪಾಂಗ** (ನಾ). ಮೊನಚಾದ ಕಟಾಕ್ಷ : ತಿಮಿರಚಿಕುರಂ ತೀಕ್ಷ್ಣಾಪಾಂಗಂ ಘನಂ ಜಘನಸ್ಥಳಂ ಕಮಳಚರಣಂ ಕಣ್ಗೊಪ್ಪಿತಾ ಧರಾಧಿಪಕಾಂತೆಯಾ (ರಾಜಶೇ. ೩-೧೮). [ ತೀಕ್ಷ್ಣ + ಅಪಾಂಗ ]

**ತೀಕ್ಷ್ಣೀಕರಣ** (ನಾ). ಹರಿತಗೊಳಿಸುವಿಕೆ : "ತಿತಿಕ್ಷ—ಶಾತನೇ, ಕ್ರಮಾಯಾಂಚ, ತೀಕ್ಷ್ಣೀಕರಣದೊಳಂ, ತಾಳ್ಮೆಯೊಳಂ, ದೀಪ್ತಿಯೊಳಂ" (ಶಾಶಕ್ರ. ೯೭). [ ಸಂ. ]

**ತೀಕ್ಷ್ಣೀಕರಿಸು** (ಕ್ರಿ). ತೀಕ್ಷ್ಣಗೊಳ್ಳುವಂತೆ ಮಾಡು : "ತಿತಿಕ್ಷತೇ–ತೀಕ್ಷ್ಣೀಕರಿಸಿದಪಂ" (ಶಾಶಕ್ರ. ೯೭). [ತೀಕ್ಷ್ಣೀಕರಣ + – ಇಸು$_3$]

**ತೀಕ್ಷ್ಣೋಪಾಯ** (ನಾ). ಪ್ರಬಲವಾದ ಉಪಾಯ ; ಉಗ್ರವಾದ ಉಪಾಯ ; ಕಟುವಾದ ಉಪಾಯ : (೬).

[ ತೀಕ್ಷ್ಣ + ಉಪಾಯ ]

**ತೀಕ್ಷ್ಣೌಷಧ** (ನಾ). ಕಟುವಾದ ಔಷಧ ; ಕಹಿಯಾದ ಮದ್ದು : ಕೊಲು ತಿರ್ವಯ್ಯಗಳೋದು ಬೇನೆಯುಳಿವಾ ತೀಕ್ಷ್ಣೌಷಧಂ...ಮುಂ ಪಲಕಷ್ಟಂ ಕಡೆಗೊಳ್ಳಿತ್ತೈ (ಸೋಮೇಶ.೯೭). [ತೀಕ್ಷ್ಣ + ಔಷಧ]

**ತೀಗ** 'ತಿಕ' ನೋ.

**ತೀಟ$_1$** (ನಾ). ೧. ಮೃದುವಾದ ಸ್ಪರ್ಶ,—ಸೋಂಕು : ತಳಿಪಲಡಿಗೆಜಗದೋಪನ ತಳಂಗಳಾ ತೀಟದಿಂ ಪದಂಗಳೊಳೊಗೆದಾ ಪುಳಕಚಯಂಗಳ್ ಕಳೆದುವು ಮುಳಿಸಂ ನಲ್ಲಳ್ಗೆ (ಕವಿರಾ. ೩-೧೦೮) : ಅಲರ್ದಲರ್ಗಣ್ಣಳ್ ನೋಟದೆ ಸುಲಲಿತ ತನು ಶಿಶುವ ಮೈಯ್ಯ ತೀಟದೆ ತನಗಗ್ಗಲಿಸಿದಲಂಪಂ ಕುಡೆ (ಆದಿಪು. ೭-೯೭). ೨. (ಗಾಳಿ) ತೀಡುವಿಕೆ ; ಬೀಸುವಿಕೆ : "ತೀಟಮೆಂದುಂ ತೀಡೆಂದುಂ ತೀಡುವುದೆಂದುಂ ಊದುವುದೆಂದುಂ ವಾಯುಸಂಚಾರಂ" (ಕಕಸಾ. ೩೧-೬೩೧); ಒದವಿ ಬಸಂತದೊಳ್ಬಯಸಿದಂದದ ತೆಂಬೆಲರೊಂದು ತೀಟಮಿಲ್ಲದ ಸಹಕಾರವಲ್ಲರಿಯ ತೋರ್ಕೆಗಮೊಪ್ಪುವ ಭೃಂಗಸಂಗಮಿಲ್ಲದ ನವಪದ್ಮಿನೀಮುಕುಳದಿಕ್ಕೆಗಮೆನೆ ಸಹಜಯಾಗಿ ಶೋಭೆವೆತ್ತುದೊ ಪರಿಶೋಭೆವೆತ್ತಿರೆ ವಿಲಾಸದ ವಿಭ್ರಮದೇಟ್ಗೆ ಕನ್ನೆಯಾ (ಸುಕುಮಾ. ೫-೭೦) : ದಿನಕರನ ಹಯಂ ಗಗನಾಧ್ವಖೇದಮಂ ಪಟಯಿಗೆಗಳ ತಣ್ಣೆಲರ ತೀಟದಿಂ ತೊಲಗಿಸುಗುಂ (ಪಂಪರಾಮಾ. ೧-೧೧೭) : ತೆಂಕಣಗಾಳಿಯ ತೀಟವಿ ವನತರುಸಂಕುಳ ಚಿಗುರೇಳುವಂತೆ (ಭರತ. ೫೫-೮೧) : ಮರಗಳ ದಟ್ಟೈಸುವಿಕೆಯಿಂದ ತಂಗಾಳಿಯ ತೀಟಕ್ಕೆ ಅಡಚಣೆಯಾಗಿದ್ದರೂ ಅದರ ಕುಳಿರ್ಪು ಎಲ್ಲ ಕಡೆಯೂ ಪಸರಿಸಿತ್ತು (ಕಾನೂರು. ೯೨). ೩. ಚೇಷ್ಟೆ. ವಿನೋದ : ನಾಟಕಸಖಿಯರಲ್ಲವೆ ನೀನು ತಾನೆಂದು ಚಾಟಾಗಿ ನುಡಿವರೆ ನೃಪಗೆ ತೀಟವೇಳುತಿದೆ ಸುಮ್ಮನೆ ನೋಡುತಿಹವಿಪರೀತವನೆಂದೆಣಿಸಿದರ (ಭರತ. ೦೪-೯೦). [ <ತೀಡು$_1$ ]

ತೀಟ$_2$ 'ತೀಂಟೆ$_1$' ನೋ.

ತೀಟಕಸಂದಿ 'ತೀಟಕಸಿಂಧ' ನೋ.

ತೀಟಕಸಂಧಿ 'ತೀಟಕಸಿಂಧ' ನೋ.

ತೀಟಕಸಿಂಧ, ತೀಟಕಸಂದಿ, ತೀಟಕಸಂಧಿ (ನಾ). ತುರುಚೆಯ ಬಳ್ಳಿ; ನಸುಗುನ್ನಿಗಿಡ: ತೀಟಕಸಿಂಧ ಬೇರಿನ ನಾರು ಒಂದು ಹಿಡಿ...ಕುಡಿಯಲು ಬಹುಮೂತ್ರ ನಿಲ್ಲುವುದು (ಸಕವೈ. ಪರಿ. ೫೦೦). ತೀಟಕಸಂಧಿ : ತೀಟಕ ಸಂದಿಬೇರು, ಬೆಲ್ಲವತ್ತುದ ಬೇರು ಇವುಗಳನ್ನು ಸಮಭಾಗವಾಗಿ ಕಷಾಯವಿಕ್ಕಿ ಕೊಡಲು ಸದ್ಯದಲ್ಲಿ ಬರುವ ಜ್ವರಂ ಗುಣಮಕ್ಕುಂ (ಸಕವೈ. ೧೧೦). ತೀಟಕಸಂಧಿ : "ಯಾಸಃ, ಯಾಪಾಸಃ ...೧೦ ತೀಟಕಸಂಧಿ ಹೆಸರುಗಳು" (ಸಿದ್ಧಾಂತಿ. ೦೧೬) : ತೀಟಕಸಂಧಿಬೇರು, ಕಕ್ಕೇಪಟ್ಟೆ ಇವುಗಳ ಕಷಾಯವನ್ನು ಹಾಕಿ ತೆಗೆದುಕೊಳ್ಳಲು ವಾತಶ್ಲೇಷ್ಮ ಜ್ವರಪರಿಹಾರವಾಗುವುದು (ಸಕವೈ.೯೬).

[ ← ತೆಲು. ತೀಟಕಸಿಂದ ]

ತೀಟಕೋಗಿಲ (ನಾ). = ತೀಟಕಸಿಂಧ : ತೀಟಕೋಗಿಲಬೇರು, ತಳಸಿಂಗ . ಧಾನ್ಯ ಪುಟವಿಟ್ಟು ಪ್ರಾತಃಕಾಲದಲ್ಲಿ ಒಂದು ದುಡ್ಡು ತೂಕ ಸೇವಿಸಿದರೆ (ಸಕವೈ. ಪರಿ. ೪೫೨). [← ತೆಲು. ತೀಟಕೋವಿಲ]

ತೀಟು 'ತೀಂಟು' ನೋ.

ತೀಟೆ 'ತೀಂಟೆ$_1$' ನೋ.

ತೀಟೆಗಾರ (ನಾ). ೧. ಚಾಪಲ್ಯವುಳ್ಳವನು. 'ಬಾಯಿತೀಟೆಗಾರ' ಪರಾ. ೨. ಕುಚೇಷ್ಟೆ ಮಾಡುವವನು ; ಕೀಟಲೆ ಮಾಡುವವನು.

[ತೀಟೆ (< ತೀಂಟೆ$_1$) + - ಗಾರ (< - ಕಾಱ)]

**ತೀಟೆಜಗಳ** (ನಾ). ೧. ಕೀಟಲೆ ಜಗಳ. ೨. ಕೆಲಸಕ್ಕೆ ಬಾರದ ಜಗಳ ; ವ್ಯರ್ಥವಾದ ಜಗಳ : (ಶಿ).

[ತೀಟೆ (< ತೀಂಟೆ$_1$) + ಜಗಳ (< ಜಗಱು)]

ತೀಡಿಸು (ಕ್ರಿ). ಉಜ್ಜಿಸು ; ತಿಕ್ಕಿಸು ; ನೀವಿಸು : ನೋವು ಹೊರಟು ಹೋದ ನಂತರ ಕೈಕಾಲುಗಳನ್ನು ಚಲಿಸಬೇಕು, ಮಾಂಸಖಂಡಗಳನ್ನು ತೀಡಿಸಬೇಕು (ಶರೀರಶಾ. ೪೮). [ತೀಡು$_2$ + -$_4$ಇಸು$_3$]

ತೀಡು$_1$ 'ತೀಂಟು' ನೋ.

ತೀಡು$_2$, ತಿವುಡು$_1$ (ಕ್ರಿ). ೧. ಮಸೆ ; ಉಜ್ಜು ; ತಿಕ್ಕು ; ಹರಿತಮಾಡು : "ಧಾವನಂ ತೀಡುವುದೆನಿಕ್ಕುಂ" (ಮಂಗರಾ. ೧೦೦-೨೫) ; ದಾಡೆಗಳನಱ ಟೊಳಂಬಿಂ ತೀಡುತ್ತುಂ ತೀವ್ರವಾಗೆ ಬಾಡಿಯ ಬರವಂ ನೋಡುತ್ತಿರ್ದಾಗ್ ಬಕನಂ [illegible] ಕಂಡು ಮುಳಿದಂ ಭೀಮಂ (ಪಂಪಭಾ. ೩-೨೮) : ತೀಡುತ್ತೆ ಕಲ್ಗಳಿಂದುರುದಂಷ್ಟ್ರಾಗ್ರಂಗಳಂ ಭೂಮಿಯಂನಿರದೆ ಬೆರಂಟುತ್ತೆ ಮುಂಗಾಲ್ಗಳಿಂದು (ಗಿರಿಕ. ೧-೧೧೫) ; ಕುಸುಮಶರಾಸ್ತ್ರಮಂ ಸಸಿಯ ಸಾಣೆಯೊಳೀ ಮಧುವೆಂಬ ಕಮ್ಮಾಱಂ ಮಸೆಯಲೆವೇಡಿ ತೀಡಿದನೋ (ಪಾರ್ಶ್ವಪು. ೯-೯೮) ; ಮುಪ್ಪೊಸೆಯ ಸೂನಗೆಯ ಹೊಗರುಗಳ ತೀಡಿದರು (ಕುಮಾವ್ಯಾಭೀ. ೪-೯೧) : ಗಂಡ ಹೆಂಡಿರ ಜಗಳಾ ಗಂಧ ತೀಡಿಧಾಂಗ (ಗರತಿ. ೭೬) ; ಚೌಕಟ್ಟಿನ ಮೇಲೆ ನೀರು ಹಚ್ಚಿ ಸಣ್ಣ ಹಲಗೆಯ ತುಂಡಿನಿಂದ ಅದನ್ನು ತೀಡುತ್ತಿದ್ದನು (ಕಪಪ್ರ. ೪-೧೩). ೨. ಅನುಲೇಪನಮಾಡು : ಲೇಪಿಸು ; ಸವರು ; ಬಳಿ : ನಲ್ಲರ ಶಿವೆಗಾಗ ಪೂಮಾಲೆಗಳ ಸುತ್ತಿ ಸೊಜ್ಜೆದೆಗನುಲೇಪನದ ಸೆಳ್ಳುಗುರೊಳು ತೀಡಿ (ಕಂನವಿ. ೨೫-೦೩೫) : ಸವ್ರತೆಯನು ಮೆಲುವ ನಾಲಗೆಗೆ ಸುಣ್ಣವನು ತೀಡಿ (ಕವಿಪ್ರ. ೪೨-೫). ೩. ರೇಖಿಸು; ಬರೆ : ವಿಶಾಲಫಾಲದಲ್ಲಿ ಗೀರುಚಂದನಲೇಪಿ ತೀಡಿಕೊಂಡು (ದೀಪಪ. II, ೮೯). ೪. ನೇವರಿಸು; ನೀವು: ಆತನ ಸರಳ ಸಾರವಂ ನಾಲ್ಕಂಟು ಕೂರಂಬಿನಿಂ ಕಡಿದು ನಾರಿಯಂ ತೀಡುತೆ (ಡಬಪು. ೫೦-೩೪) ; [illegible] ಚಾಪಮಂ ತಾಗಿದಂ (ಜೈಮಿಭಾ. ೧೨-೪೬) ; [illegible] ತೀಡಿ ಕೈಗಳಂ (ಶಾಲಶರ. ೧೭೩-೩೮೭). ೫. ಒತ್ತು; ಅದುಮು : (ಶಿ).

೬. ಹೊಡೆ ; ಬಡಿ ; ಥಳಿಸು : ಕುದುರೆ ಲಗಾಮು ಜಗ್ಗಿಸಿ, ಚಾವಟಿಯಿಂದ ತೀಡಿ ... ಕುಳಿತುಕೊಂಡನು (ಪುನರು. ೫೫೮); ಕೆನ್ನೆಗೆ ತೀಡಿ ಕೊಡದಿದ್ದರೆ ಹೇಗೆ (ಹುಚ್ಚುಹು. ೧೮) : ಅವನಿಗೆ ನಾಲ್ಕು ತೀಡು, ಆಗ ತಾನೇ ದಾರಿಗೆ ಬರುತ್ತಾನೆ (ರೂಢಿ). ೭. ಆರಿಸು ; ನಂದಿಸು : ಅಂತು ನೋಡೆ ನೋಡೆ ಗಾಳಿ ತೀಡಿದ ದೀಪ ರೂಪದಂದದಿಂ ಶಾರದನೀರದಾಕಾರದಂದದಿಂದದೃಶ್ಯಾಕಾರನಾಗಿ(ಸುಕುಮಾ. ೧೦-೮೧) ; ಸಿಡಿಲಂ ದುರ್ಗುವ ಶೇಷನಂ ತುಡುವ ಕಲ್ಪಾಂತಾಗ್ನಿಯಂ ತೀಡಿ ಬೊಟ್ಟಿಡುವ...ಗಣಾಧಿನಾಥರೊಡನೇಳ್ತಂದರ್ (ಶಬಶಂ. ೩-೧೯). ೮. ಉಂಟಾಗು ; ವ್ಯಕ್ತವಾಗು ; ಪ್ರಕಟವಾಗು : ಎಮಗೀ ಕೂಸಂ ಕಾಣಲೊಡಮುತಿಸ್ನೇಹಂ ಮನಕ್ಕೆ ತೀಡಿದಪುದು (ಸುಕುಮಾ. ೬-೪) : ಪದಾರ್ಥನಿಶ್ಚಯಂ ತನ್ನ ಮನಕ್ಕೆ ತೀಡೆ ಖಳಸಂಸರಣಕ್ಕೆ ವಿರಕ್ತೆಯಾಗಿ ... ತಾಳ್ದಿದಳಂದು ದೀಕ್ಷೆಯಂ (ಸುಕುಮಾ. ೮-೪೦). ೯. (ಉಕ) ಬರೆದುದರ ಮೇಲೆ ಬರೆ ; ತಿದ್ದು : ಮರುದಿನದಿಂದರವಾಬಾಯರು ಕಾಗದದ ಮೇಲೆ ಎ.ಬಿ.ಸಿ.ಡಿ. ತೀಡ ಹತ್ತಿದರು (ಸಮಜೀ. ೨೨೪) : ಅ ದಿಂದ ಜ್ಞದ ವರೆಗಿನ ಅಕ್ಷರಗಳನ್ನು ತೀಡ ಹಚ್ಚಿದರು (ಸ್ಮೃತಿಚಿ. ೧೨೦). ೧೦. ಸರಿಪಡಿಸು ; ಪರಿಷ್ಕರಿಸು : ಆಗಾಗ ಇದನ್ನು ತಿದ್ದಿ, ತೀಡಿ ... ಆಶೀರ್ವದಿಸಿದ್ದಾರೆ (ಸಾಂದಸ. ii, ಮೊದಲ ಮಾತು). ೧೧. ಉಂಟುಮಾಡು ; ಉಂಟಾಗಿಸು : ಕೂಡಿ ವಿಟನವ ಬಟ್ಟೆ ಸುಖವನೆ ತೀಡುತಿರಲ್ (ಪ್ರಭುಲಿ. ೧೪-೬) : ಸೂಡುವರ್ ಜಂತ್ರವಂ ನೀರ್ ಸೂಸಲಾಡುವರ್ ತೀಡುವರ್ ನಗಯನಗಜೆಗೆ (ಡಬಪು. ೪೫-೫೯). ೧೨. ಹೊರಹೊಮ್ಮು ; ಹೊರಸೂಸು : ವಿಭೂಷಣಂಗಳೊಳ್ ತೀಡುವ ರಶ್ಮಿಗಳ್ ಮಸುಳ್ದುವು (ಆದಿಪು. ೩-೩).; ಮಣಿಮಯದ ಕಳಶದ ಝಾಡಿವೆಳಗಿನ ಹೇಮರಸದಲಿ ತೀಡಿ ತೊಳಗುವ ಸುಧೆಯ ಸೊಂಪಿನ ಸೂಸಕಂಗಳಲಿ (ಕೊರರಾ. ೫-೨-೨೫) ; ರಸೋಕ್ತಿಗಳನಾಡುತ್ತ ತೀಡುತ್ತ ಬೆಳ್ನಗೆಯ ಬೆಡಗುಗಳನು (ಜೈಮಿಭಾ. ೩೦-೧೮) ; ಕಂಗೊಳಿಸುವ ದಿವ್ಯಕಾಂತಿಯ ತೀಡುತ ಬಂಗಾರಚೌಕಿಯೊಪ್ಪಿದುದು (ಕಂನವಿ. ೭-೩೮). ೧೩. ಇಚ್ಛೈಸು; ಬಯಸು : ಆಡುವರಂ ಕಂಡಾಡುವ ಪಾಡುವರಂ ಕಂಡು ಪಾಡುವಂದಾನಂದಕ್ರೀಡೆಗೆ ಮಘವನ ಬಗೆಯುಂ ತೀಡಿದುದೇಂ ಪಿರಿದೊ ಜಿನನ ಪುಣ್ಯಾತಿಶಯಂ (ಪುಷ್ಪಪು. ೧೨-೨೩). ೧೪. ಘರ್ಷಿಸು ; ತಾಕು : ಒಂದು ನುಡಿ, ಒಂದು ಕಿಡಿ–ಕೊನೆಗೆ ಕಾಟ್ಕಿಚ್ಚು : ಬೀರರಿರ್ವರ್ ತೀಡೆ, ಬದಿರ ಮೆಳೆಗಿಚ್ಚು (ಅಶ್ವತ್ಥಾ. ೪೩-೮೫೫). ತಿವುಡು$_1$: ೪. ಚಿಂದಿಯ ಮುರುಹಿಟ್ಟು ಧೋತ್ರವ ತಿವುಡುತ ಕುಂದು ಪೆಚ್ಚರಿದು ಬಯಿವುತಲಿ ಸಂದ ಜಗಳ ಕಾಳಗದಂತೆ ಕೈಮುಟ್ಟಿ ಕೊಂಡಾಡುವರು ದಿಂಡಿಯರು (ತರ್ಕಕೌ. ೧-೯೭).

ತೀಡಿ ತಿದ್ದು = ರೂಪುಕೊಡು ; ನಯಗೊಳಿಸು: ಸುಳಿಗಾಳಿಯು ಸುಳಿದು ಹೂಗಂಪಿನೊಡನೆ ತೀಡಿ ತಿದ್ದುವುದು (ಕನ್ನಜಾ. ೧೪೦).

[ದೇ. ॥ ತಮಿ. ತೀಟ್ಟು, ತೀಜ್ಜು ; ತುಳು. ತೀಂಟು, ತೀಡು; ತೆಲು. ತೀಡು ; ಸಾಮ್ಯ. ಧೀಟ್]

ತೀಡು$_3$ (ನಾ). = ತೀಂಟೆ$_1$ ೧ : ಎನ್ನ ದೋರ್ದ್ವಯದ ತೀಡಂ ರೂಢಿಪೆಂ ಸಂಗರಾವನಿಯೊಳ್ ಬೇಗದೊಳೀಗಳೆಂದು ಬಗೆದಂ (ಕುಸುಮಾ. ೧೧-೧೩).

[< ತೀಡು$_1$]

[illegible] '[illegible]' ಪರಾ.

[illegible] '[illegible]' ಪರಾ.

[illegible] (ನಾ). ೧. ತಿನಿಸು; ಆಹಾರ : ಈತನಂ ವಾಸುಗಿ ಗರುಡನ ತೀಂಗೊಡ್ಡಿದಂ (ಜಾವ್ಯಾವ. ೮೧೪). ೨. ಕೆರೆತ ; ನವೆ : ಆತುಮಿಾ[illegible]ೋಳ ತೀನ್ ಕರಗಲ್ಯಾತರ್ಪುದಿಲ್ಲ (ಪಂಪಭಾ.೧೨-೧೩೫); ತೀನೆದೊರ್ದುರ್ದ ಕರಟಮುನಾಸೆಗಳೊಳ್ ಉದುಗುವ ಪಾಲ್ ಜಗಿಲ್ತಿರೆ (ಲೀಲಾವ. ೮-೪೫) ; ಸೊರ್ಕಿದಾನೆಯ ಕಟಿಯೊಳ್ ನೆಲೆಸಿದ ತೀನಂ [ವಾಕಾಂ. ತಿಮರಂ]

ತುರಿಸಿಯೆ ತೊಲಗಿಸಿದವು ನಖಮುಖಂಗಳಿಂ ಸಿಂಹಂಗಳ್ (ಪಾರ್ಶ್ವಪು. ೧೩-೯೯). ೩. ನಸೆ ; ಬೆದೆ. 'ತೀನ್ಮಸಗು' ಪರಾ. [< ತಿನ್]

ತೀನತೇರ, ತೀಂತೇರಾ, ತೀನಂತೇರಾ (ನಾ). ಚಲ್ಲಾಪಿಲ್ಲಿ; ದಿಕ್ಕಾಪಾಲು; ಮೂರಾಬಟ್ಟೆ: ಈ ಕಾಲದಲ್ಲಿ ಚೀಣಾರಾಜ್ಯದ ಸ್ಥಿತಿಯು ಬಹಳ ಗಲಭೆಯಾಗಿ ತೀನತೇರವಾಗಿತ್ತು (ಕಾಂಪೂಚ. ೮). ತೀಂತೇರಾ :(೬). ತೀನಂತೇರಾ : ಅಲ್ಲಿ ರೈತರು ಹಲಾಕಾಗಿ ತೀನಂತೇರಾ ಆಗಿಹೋದರು. ಗ್ರಾಮಗಳಲ್ಲಿ ದೀಪ ಉರಿಯಲಿಲ್ಲಾ. ಹಾಳುಬಿದ್ದು ಹೋಯಿತು (ರಾಜೇಂದ್ರ. ೨೨೯). [ ← ಮರಾ. ತೀನ್‌ತೇರಾ ; ಹಿಂ. ತೀನ್‌ತೇರಹ್ ]

ತೀನಾಳಿ 'ತಿನ್ನಾಳಿ' ನೋ.

ತೀನಿ 'ತಿನ್ನಿ$_1$' ನೋ.

ತೀನಿಗ (ನಾ). = ತಿನ್ನಾಳಿ: "ಗ್ರಸಕಃ, ಗ್ರಸಮಾನಃ – ಈ ೨ ತೀನಿಗಂ" (ಕಾಶಕ್ಯ.೧೨೨). [ತೀನಿ (<ತಿನ್ನಿ$_1$) +–ಗ$_2$]

ತೀನು (ನಾ). ಬೇಲಿ ಅಥವಾ ತಡಿಕೆಗೆ ಆಧಾರವಾಗಿ ಕೊಡುವ ಕಂಬ, — ದಸಿ : ಆಳು ಬೇಲಿ ಕಟ್ಟಲು ತೀನು ನೆಡುತ್ತಿದ್ದಾನೆ (ಉ೧). [?]

ತೀನುತೇರಾ 'ತೀನತೇರ' ನೋ.

ತೀನೆ 'ತಿನ್ನಿ$_1$' ನೋ.

ತೀನ್ಮಸಗು (ಕ್ರಿ). ನಸೆ ಹೆಚ್ಚು ; ಕಾಮಾತುರ ಹೆಚ್ಚು : ಮೈ ಮಱ ಮಱಯಾಗಿ ತೀನ್ಮಸಗಿ ಸೋಲಮಾಗುಂದಲೆಯಾಗಿ ಕೂಡುವಟ್ಕಱು ಮಿಗೆ (ಸೂಕ್ತಿಸು. ೦೪-೩೩). [ ತೀನ್ + ಮಸಗು$_1$ ]

ತೀನ್ಮಸೆ, ತೀಮ್ಮಸೆ (ಕ್ರಿ). ನವೆ ಹೆಚ್ಚಾಗು ; ತಂರಿಕೆ ಉಂಟಾಗು : ಮೆಯ್ಯ ತೀನ್ಮಸೆದೊಡೆ ಕೋಡೊಳಿಟ್ಟೊರಸಿ ನೀರ್ಗಳಸಿದೊಡೆ ತಂದು ನೀರನೂಡಿಸಿ (ಚಂದ್ರಪು. ೫-೬೪). ತೀಮ್ಮಸೆ : ತೀಮ್ಮಸೆವ ರಸನೆ ಯೆಸಕಮುದಮ್ಮೊಡನೇಕಿನಿತು ಬಿಡಿಮಿದೇತಱ ಬಿಂಕಂ (ವೃಷವಿ. ೪೦-೪೪). [ ತೀನ್ + ಮಸೆ$_1$ ]

ತೀಬನು (ನಾ). ಒಂದು ಬಗೆಯ ಔಷಧಿದ್ರವ್ಯ : ಅಜವೋದ, ತೀಬನು, ಕೊಡಸಿಗನ ತಿಗಡು...ಇಷ್ಟನ್ನೂ ಸಮಾನವಾಗಿ ಚೂರ್ಣವ ಮಾಡಿ (ವಿವೈವಿ. ೩೩). [?]

ತೀಬು (ನಾ). ಲವಂಗ : "ಲವಿ ಲವಂಗಂ ದೇವಕುಸುಮಮೆನೆ ತೀಬು" (ಮಂಗರಾ. ४३-४०). 'ತಿಬ್ಬು$_2$' ಪರಾ. [ ? ]

ತೀಬ್ರಕರ (ನಾ). ೧. ಅಧಿಕವಾದ ಕಾಂತಿಯುಳ್ಳವನು. ೨. ಸೂರ್ಯ. ೧, ೨ : ಜಿತಪಂಚೇಷುತ್ವದಿಂದೀಶ್ವರನೆನಿಸಿಯುಮುದ್ಯತ್ಸುಧಾಕಾಂತನತ್ಯೂರ್ಜ್ಜಿತತೇಜೋಲಕ್ಷ್ಮಿಯಿಂ ತೀಬ್ರಕರನೆನಿಸಿಯುಂ ದೃಶ್ಯರೂಪಂ (ಎಕ. V, ಹಾಸನ. ೦೩೦-೮ ; 1147). [< ಸಂ. ತೀವ್ರಕರ]

ತೀಬ್ರಕಿರಣ (ನಾ). = ತೀಬ್ರಕರ ೨ : ವಿಜಯಲಕ್ಷ್ಮೀಕಾನ್ತನಹಿತಕೃತಾನ್ತ ರಿಪುಸುದತೀವದನಕುವಳಯ ತೀಬ್ರಕಿರಣಂ (ಎಕ. XI, ಚಿತ್ರದು.೧೩-೧೪ ; 1224?). [< ಸಂ. ತೀವ್ರಕಿರಣ]

ತೀಬ್ರತೇಜ (ನಾ). ಅಧಿಕವಾದ ತೇಜಸ್ಸುಳ್ಳವನು : ಆ ಬ್ರಹ್ಮನೊತ್ತಿನರ್ ಭಸಿತಸಂಪತ್ತಿಗರ್ ತೀಬ್ರತೇಜರ್ (ಚಜಪು.೨೯-೨೧). [<ಸಂ. ತೀವ್ರತೇಜಸ್]

ತೀಬ್ರಪಾತ (ನಾ). ಉಗ್ರವಾದ ದಾಳಿ : ತನ್ನಯ ತೀಬ್ರಪಾತದಿಂದಿ ಟ್ಟೊರಸಲ್ಕೆ ಬರ್ಪನಿನನೆಂಬನಿತುಮ್ಮಳಮಾಗೆ (ಶಾಂತೀಶ್ವ. ೧೧-೯೦). [< ಸಂ. ತೀವ್ರಪಾತ]

ತೀಬ್ರಪ್ರತಾಪ (ನಾ). ಉಗ್ರವಾದ ಪರಾಕ್ರಮಂ ; ಅತಿಯಾದ ಶೌರ್ಯ : ಮೆಯ್ಗಲಿ ಬಲ್ಲಾಳನೃಪಂಗಂ ಅಂಗಜಜಯೋತ್ತುಂಗ ಧ್ವಜಾಕಾರ ಪದ್ಮಲ ಮಾದೇವಿಗಂ ಅಗ್ರಸೂನು ನರಸಿಂಹೋರ್ವ್ವೀಶ್ವರಂ ಪುಟ್ಟಿದಂ ದೆಸೆಯಂ ತಳ್ಪೊಯ್ಯೆ ಕೀರ್ತ್ತಿಪ್ರಸರದೊಡನೆ ಕಾಲ್ಗೂಡಿ ತೀಬ್ರಪ್ರತಾಪಂ (ಎಕ. ४. (ಚನ್ನರಾ. ೨೦೩ ; 1228). [ < ಸಂ. ತೀವ್ರಪ್ರತಾಪ ]

ತೀಬ್ರರುಗ್ಮಂಡಳ (ನಾ). [illegible] ನೆತ್ತಿಯುಬತ್ತಿಪೊಲಾಯ್ತು ತೀಬ್ರರುಗ್ಮಂಡಳಮಂ ದಿಟಂ ಮಿಗುವ [illegible] ದಳ್ಕುರಿ (ಎಕ. V, ಅರಸೀ. ೧೨೭-೨೫ ; 1192). [ < ಸಂ. ತೀವ್ರರುಙ್ಮಂಡಲ ]

ತೀಮ್ಮಸೆ 'ತೀನ್ಮಸೆ' ನೋ.

ತೀಯು (ನಾ). ಬಯಕೆ ; ಬೆದೆ. 'ತೀಯುಕಾರ್ತಿ' ಪರಾ. [ ← ತೆಲು. ತೀಯು ]

ತೀಯುಕಾರ್ತಿ (ನಾ). ತೀಟೆಯುಳ್ಳವಳು ; ಬೆದೆಕಾರ್ತಿ: ತೀಯು [ಪಾಠಾಂ. ಅತಿಯು, ತಿಯು, ತಿಯ್ಯ]ಕಾರ್ತಿಯರ್ತಾಯಿಲ್ಲದ ಕೂಸಿನಂತೆ ಬಾಯುಂ ಬಿಡೆಯುಂ (ಅರ್ಧನೇ. ೫.೨ ವ). [ ತೀಯು + – ಕಾಱ + – ತಿ$_1$ (< – ಇತ್ತಿ ]

ತೀಯಾಟ (ನಾ). ತಿಕ್ಕಾಟ ; ಎಳೆದಾಟ ; ಜಗಳ : ತೀಯಾಟವೂ ಇದ್ದೇ ಇರುವುದು (ಪಾಳಗಾ. ೨೩) ; ಬದಲೋಡೆ ಸರ್ಕಾರಕ್ಕೂ ನಮ್ಮ ಅಂಗಡಿಗೂ ಮೊದಲಿನಿಂದಲೂ ಇರತಕ್ಕ ತೀಯಾಟ ತಿಳಿದೇ ಇದೆಯಷ್ಟೆ (ಅದೂಟ. ೬). [ ತೀಯು$_0$ (←P ತೆಲು. ತೀಯು) + ಆಟ ]

ತೀರ್, ತೀರು$_1$ (ಕ್ರಿ). ತೀದ, ತೀರ್ದ (ಭೂತಕೃ), ತೀದು, ತೀರ್ದು (ಭೂತಸ್ಯೂ). ೧. ಮುಗಿ ; ಪೂರೈಕೆಯಾಗು : ಪರಮ ಜಿನಾಭಿಷೇಕ ವಿಧಿ ತೀರದು ಕೂಪಜಲಂಗಳಿಂ . . . ಇಲ್ಲಿಗೆ ವೇಟ್ಪುದಗಾಧ ದುಗ್ಧ ಸಾಗರಜಲಂ (ಅಜಿಪು. ४-४೫) : ಎನ್ನ ಯುಜ್ಞಂ ತೀರ್ವನ್ನೆಗಂ ಋಷಿಯರೀ ಪೊಱಲೊಳಿರವೇಡಮೆಂದು ಘೋಷಣೆ ನೆಗಬ್ದುದುಂ (ಧರ್ಮಾಮೃ. ೯-೧೫४) : ಚಿತ್ರವನಿತ್ಯನಾಟಕದ ಜೋಹಂ ತೀರ್ದುದಿಂ ಸಾಲದೇ (ಅನಂಪು. ೩-೭೬) : ಹೋದುದೊಂದಪಮೃತ್ಯು ಲೋಕಕೆ ತೀದುದಿಲ್ಲಾಯುಷ್ಯ (ಕುಮಾವ್ಯಭೀ. ೭-४೭). ೨. ನಿಶ್ಶೇಷವಾಗು ; ಉಳಿಯದಂತಾಗು : ಎನಿತು ಭುಜಂಗಳಂ ತಳೆದನಿಂದ್ರನನಿತ್ತು ಘಟಂಗಳಂ ಸಮಂತನಿಮಿಷಕೋಟಿ ನೀಡಿದುದನಿತ್ತಮೃತಾಬ್ಧಿಯ ವಾರಿ ತೀರ್ದುವೆಂದನುಮಿಸಲಾವನುಂ ನೆಱಯನೆಂಬಿನಮುದ್ಭುತವಾದ ಜನ್ಮಮಜ್ಜನದೊಳ್ (ವರ್ಧಪು. ०४-३೫). ಬಂದು ಬಂದು ಮಿಗೆ ಪೀರುತಮಿರ್ಪ ಚಕೋರಪಕ್ಷಿಜಾಲಂಗಳಿನೊಮೆ; ತೀರ್ಗುಮಿರದೀ ಶಶಿಚಂದ್ರಿಕೆಯೆಂದು (ಕುಸುಮಾ. ೦೦-೭) ; ಸಂಚಿತಸಲಿಲಂ ತೀರ್ದುದು (ಉದ್ಭಟ. ४-३೨) : ಮತ್ಕಾವ್ಯರಚನೆ ಸ್ವಾದು ರಸಾಯನ ತವ ಕರ್ಣಯುಗಳಕ್ಕೆ ತೀದರೆ ಮುಗುಳೆ ತುಂಬಿಸದೆ (ಮೋಹತ. ६೦-೨) ; ಆದಡೇನಾ ಸರಳು ಹೋದರೆ ತೀದುದೆ ತನ್ನಧಟು (ಕೋಗಮು. ೦೦-೭೩). ೩. ಕೊರೆಯಾಗು ; ಕ್ಷೀಣವಾಗು ; ಕ್ಷಯಿಸು : "ತೀರ್ದುದು ಬೀತುದು ಸವೆದುದೆನಲ್ ಕ್ಷಯಮನ್ನೆದಿತೆಂದಱಗೆ ಬುಧರ್" (ಧಾರನಿ ४೨) : ವನರುಹಗರ್ಭನೆಂಬವನ ಮುನ್ನಿನ ಗೆಯ್ದ ತಪಂ ತಿಲೋತ್ತಮಾಂಗನೆ ಯಿನದಂತುಟಾದುದೆಸೆ ಮತ್ತಿನ ಬೂತು ತಪಂಗಳೆಮ್ಮ ಪೂರ್ವಿನ ಕಡೆಯೊಂದು ಜರ್ವಿನೊಳೆ ತೀರ್ಪುವು (ಪಂಪಭಾ. ೭-೮೧); ತೀದುದೆಮ್ಮಯ ಸೇನೆ ನಸುಸೊಪ್ಪಾದುದಿಲ್ಲರಿಸೇನೆ (ಕುಮಾವ್ಯಭೀ. ೭-೨೨): ಓದಿದರೆ ವಾಕ್ಯದಪು ಸಾರವನಾದರಿಸೆ ಮತಸಿದ್ಧಿ ಕೇಳಲು ತೀದುದಾತನ ಕರ್ಮಬಂಧನ ತಾವ ಭವಭಯವು (ಕೌಶಿರಾ. ೧-೧೨) : ತೋದುದಂಬರತಳಂ ವಿಷದ ಲೋಳಿ ಗಳಿಂದೆ ತೀದುದಮರರ ಪರುಷ (ಚಬಪು. ४೨-೨೩). ४. ಸಾಯು : ಮರಣವನ್ನು ಹೊಂದು : ದಶರಥನ ಬಳ್ಳಿ ಕೇಳಿ [illegible] ಬಳಿಕ ಭರತಂಗಾದುದೀ ಧರೆ [illegible] (ತೊರರಾ. ೩-೧-೩೭) ; [illegible] ನಿಂದು ಲೀಲೆಯಿಂದಿರಲಾಗಲಲ್ಲಿರ್ಪ ಭಕ್ತಜನಜಾಲವಿಪಾತಂ [illegible] ತೆಗೆಯಲ್ಕೆ (ಚಬಪು. ೭೩-೩೭). ೫. ನಿವಾರಣೆಯಾಗು : ಕಳೆ : [illegible] ನೊಳಾದ ವೇದನೆಯುಂ ಮನದೊಳಾದ ಸಂಕ್ಲೇಶಮುಂ [illegible]

(ಧರ್ಮಾಮೃ. ೧೨-೫೭) ; ಮೋಹಮುಂ ಗರ್ವಮುಂ ತಲ್ಲಣಮುಂ ತೀರ್ಗುಂ (ಪಂಪಾಭ. ೪೫) : ತೀರ್ದುದು ಹೃದಯಶಲ್ಯಂ ಸಾರ್ದುದು ಪುಣ್ಯಾನುಬಂಧಂ (ಅನಂಪು. ೩-೬೪) : ತೀರದುದೆಮಗೆ ವನವ್ರವಾಸದ ಖೇದ (ಕುಮಾವ್ಯಾ. ೧೦-೨೮). ೬. (ಕಾಯಿಲೆ, ಬೇನೆ, ಹುಣ್ಣು ಮೊದಲಾದುವು) ವಾಸಿಯಾಗು ; ಗುಣವಾಗು : ಬೆಜ್ಜವಿಲ್ಲದ ಬೇನೆಯಂತೆ ತೀರಲಱಿಯದು (ಪಂಚತಂ. ೮೭-೨) : ಶುಂಠಿ, ಹಿಪ್ಪಲಿಮೂಲ, ಅಮರದವಳ್ಳಿ ಇವಂ ಕಷಾಯಮಿಟ್ಟು ಕುಡಿಯೆ ವಾತಜ್ವರಂ ತೀರ್ಗುಂ (ಕಕವೈ. ೬೭) : ತೀರದಿಲ್ಲವು ಬೇನೆ (ಜ್ಞಾನಸಿಂ. ೧-೨). ೭. ಸಾಧ್ಯವಾಗು ; ಶಕ್ಯವಾಗು : ಜವಂಗಿಡದೆ ಮುಟ್ಟೆ ಬರ್ಪ ಜವನಂ ಜವಂಗುಂದಿಸಲ್ ಜವಂಗೆ ಜವನಾಗಲಿಂ ಪೆಱರ್ಗೆ ತೀರ್ಗುಮೇ (ಆದಿಪು. ೧೩-೮೮) : ಅಂತವರಾಗಿ ಪುಟ್ಟಲೇನಾಗಿಯುಮೇನೂ ತೀರ್ದಪು [ದೆ] ತೀರದೊಡಂ ಮಾಱುಂಬಿಯಾಗಿ ...ಪುಟ್ಟುವುದು (ಪಂಪಭಾ. ೪-೨೯) : ತ್ರಿದಶನದೀಸುತನಿಂ ತೀರದ ಕಜ್ಜಂ ...ದ್ರೋಣಪುತ್ರನಿಂ ತೀರ್ದಪುದೇ (ಗದಾಯು. ೩-೬೦) : ಅಪ್ರತಿಮಪರಾಕ್ರಮನಪ್ಪ ನಿಮಗೆ ತೀರದ ಕಜ್ಜಮಾವುದಾನುಮಿಲ್ಲ (ಪಂಚತಂ. ೩೪-೧೯) : ಶರ್ವಾಣಿಯ ಸೌಂದರ್ಯಮನೊರ್ವಂ ಬಣ್ಣಿಸುವೆನೆಂಬವಂ ಗಾಂಪಂ ...ಸಾಸಿರ್ವರ್ ಫಣಿರಾಜರಾದೊಡಂ ತೀರ್ದಪುದೇ (ಗಿರಿಕ. ೪-೧೦) : ಜಿನಗುಣಮೆಲ್ಲಮಂ ಕೊಱತೆಯಿಲ್ಲದೆ ಪೇೞ್ವೆನೆಂಬಿದುದ್ಧವಾಗ್ವನಿತೆಗೆ ತೀರದು (ಶಾಂತಿಪು. ೧-೫೪) : ನಿರ್ಮಲ ಶಿವನವನ ನಿರ್ಮಾಲ್ಯ ಮಿಕ್ಕಿಸಲ್...ನಿರ್ಮಲರ್ಗಲ್ಲದುಳಿದರ್ಗೆ ತೀರ್ಗುಮೆ (ಪದ್ಮರಾ. ೧೦-೧೨೮). ೮. ಕೈಗೂಡು ; ಫಲಿಸು ; ಈಡೇರು : ಬಯಕೆ ತೀರದ ಕಾರಣದಿಂ (ಕವಿರಾ. ೧-೧೪೫) : ಪಗೆ ತೀರ್ಗುಂ ಬಗೆ ತೀರ್ಗುಮಾ ಕುರುಕುಳ ಪ್ರಖ್ಯಾತನಂ ಕಾದಿ (ಪಂಪಭಾ. ೮-೦೦೩) ; ತನ್ನ ಬಯಕೆ ತೀರ್ದುದೆಂದು ಪೆರ್ಚಿ (ಧರ್ಮಾಮೃ. ೬-೪೭): ಕಡುಗತ್ತಲೆಯೊಳ್ ... ಪೊಱಮಟ್ಟಡಿಯಿಡಲಣ್ಮದೆ ಮಱುಗುವ ಮಡದಿಗೆ ಬಗೆ ತೀರೆ ಮಿಂಚು ಮಿಂಚಿದುದಾಗಳ್ (ರಸರ. ೧-೯೦). ೯. ಸಾಕಾಗು ; ತೃಪ್ತಿಯಾಗು ; ಸಮಾಧಾನವಾಗು: ನುಡಿಯಲ್ ಬಾರದು ತೀರದು ನುಡಿಯದೊಡೆ (ಅನಂಪು. ೧೧-೩೦). ೧೦. (ಕಾಲದಂತೆ) ಕಳೆದುಹೋಗು ; ಮುಗಿದು ಹೋಗು : ಪೇದವಾರ್ಗದೊಳೊಂದು ದಿನ ಮರಿ ತೀದು ಹೋದುದು (ಸಂಭಪ. ೪-೯). ೧೧. (ಜಗಳ, ವಾಗ್ವಾದ, ಸಮಸ್ಯೆ ಮೊದಲಾದುವುಗಳು) ತೀರ್ಮಾನವಾಗು ; ಬಗೆಹರಿ : ನಿನತೊಂದೊಲೆಗೆ ತೀರ್ವುದೊಂದು ಮನೆವಾರ್ತೆಗಿದೇನರಸ ಬಳಿಯ ನುಡಿದಪೆ (ಆದಿಪು. ೧೪-೩೦) : ನಮ್ಮ ಜಗಳ ತೀರಿತು (ರೂಢಿ). ೧೨. ಹೊಳಪಾಗು ; ನಯಗೊಳ್ಳು (?). 'ತೀರಿಸು' ಪರಾ. ತೀರು$_1$ : ೧. ಸಮಸಪ್ತಕರ ಬಲ ನಿಜಪಾಳೆಯಕೆ ತಿರುಗಿದುದು ತೀರಿತು ತರಣಿಯಾಟೋಪ (ಕುಮಾವ್ಯಾದ್ರೋ. ೮-೧) : ಮಿಂಡಗಾಱಿಕೆಯಲ್ಲಿ ಗಳಿಸಿದ ಸೌಖ್ಯವನುಂಡಲ್ಲದೆ ತೀರದೆಂದ (ಮೋಹತ. ೩೫-೬೮) ; ರಾಜಪುತ್ರಿಗೆ ತನಗೆ ಸರಿ ತೀರುವುದೆಂದು ಎಷ್ಟೋ ಸಂತೋಷವಾದರೂ (ಪಂಜಾವು. ೬) : ಊರು ಸೇರಿದ ಮೇಲೆ ದಾರಿ ತೀರಿತು (ಗಾದೆ). ೨. ತೀರಿತಾತನ ಶಕ್ತಿ (ಕುಮಾವ್ಯಾದ್ರೋ. ೩-೭೩) : ತೀರೆ ಕೈದುಗಳೆಲ್ಲ ಜೊಪ್ಪೆಯು ತೋಱ ಕಡಿಗೊರಳನಲಿ ಕೋಟಿಸಿ ತೇರಿನಗ್ರದ ಬಿಡಿದ, ತಿರುಬಿಟ್ಟುದು ಕಬಂಧಕಪ್ರ (ತೊರರಾ. ೩-೬-೨೫) ; ತೀರಿದ ಅಡಿಗೆ ತಿರುಗಿ ಬಯಸಿದರೆ ಬಂದೀತೇ ? (ಗಾದೆ). ೩. ತೀರಿದುದು ತಮದೊಬ್ಬುಳಿತ ಚಂದ್ರನ ತಾರಕಿಯ ಮೈಮೆಳಗು ಮಸುಳದಷ್ಟು (ತೊರರಾ. ೧-೧೪ ೧). ೪. ಮಾರಮರ ನಿಮಗುಚಿತಮೆ ಮಂತ್ರಾರಿಗಾಱದೆ ಕುಂಟದೇವತೆ ಸೇರಿ ಮನೆಯುಮಗಾಗ ಮನೆನ್ನದೆ ಸೂನು ತೀರಿದಡೆ (ಬಸಪು. ೪೮-೧೮) : ತಂದೆ ತೀರ್ದ ಬಳಿಕ ನೀನೆ ತಂದೆ (ತೊರರಾ. ೨-೬-೨೮). ೫. ಕರ್ಪೂರದಂತೆ ತ್ರಿತಯಪೂಜಿಸುಂ ಭಾವವದು ಪರಿಣ್ಣುಮೆ ನಟ್ಟಡೆ ತೀರಗೆಂತಾ ಮಂತ್ರತಂತ್ರೌಷಧವಿಧಿಗಳಿಂದ (ಬಸಪು. ೪೬-೩೨)

ವಿಶ್ವಾಸವುಳ್ಳೊಡೆ ಸಕಲ ಪಾತಕವು ತೀರುವುದಲೆ (ಸಂಭಪ. ೩-೩೭) ; ತೀರಿತು ಹೃದಯದ ತಾಪ (ಮೋಹತ. ೨೮-೩) : ತನ್ನ ಕೊರಗು ತೀರುವುದು ಕಷ್ಟವೇ ? (ಚಿತಂಬಾ. ೧೬). ೮. ತನ್ನ ಆಕಾಂಕ್ಷೆ ತೀರುವುದಕ್ಕೊಂದು ದಾರಿಯಾದೆ (ಚಿತಂಬಾ. ೩೫). ೧೦. ಆಯುಷ್ಯ ತೀರಿದಲ್ಲದೆ ಮರಣವಿಲ್ಲ (ಬಸವ. ೬೮೯). ೧೧. ಸಂದೇಹ ತೀರಿತು (ಚಿತಂಬಾ. ೩೪). ೧೩. (ಋಣ, ಹಂಗು, ಸಾಲ, ಮುಂತಾದುವು) ಸಂದಾಯವಾಗು ; ಸಲ್ಲು : ಮುಯ್ಯಕ್ಕೆ ಮುಯ್ಯಿ ತೀರಿತು (ಪುರಂದ. ೧-೬೫ ಪಲ್ಲವಿ) : ಅವರ ಹಂಗೂ ತೀರದು (ಮೂರುಉ. ೭, ಮುನ್ನುಡಿ).

ತೀರಿಕೊಳ್ಳು=ಸಾಯು ; ಮರಣವನ್ನು ಹೊಂದು : ಒಬ್ಬ ಬಡ ರೈತ . . . ಅರ್ಬುದರೋಗದಿಂದ ತೀರಿಕೊಂಡ (ಚಿಕಿತ್ಸೆ. ೫೦) ; ಅವರು ತೀರಿಕೊಂಡಾಗಿನಿಂದ ಇಂಥ ಕೆಲಸ-ಕಾರ್ಯಗಳ ಬಗ್ಗೆ ಜನರು ನಿನ್ನನ್ನೇ ಕೇಳುತ್ತಿರುವುದು ತಪ್ಪಲ್ಲ (ಭಾರತಿ.೧).

[ ದೇ.॥ ತಮಿ. ತೀರ್ ; ಮಲ. ತುಳು. ತೆಲು. ತೀರು./ಸಂ. ತೀರ್ ]

ತೀರ$_1$, ತೀರಾ (ಗು). ಬಹಳ ; ತುಂಬ ; ಸಂಪೂರ್ಣ : ಈಗ ಅವನು ಹಾಗೆಲ್ಲ ಮಾಡುವುದಿಲ್ಲ. ಆಗ ತೀರ ಚಿಕ್ಕವನಿದ್ದ (ಭಾರತಿ. ೩) : ಆಂಡಯ್ಯನು ನುತಿಸಿದ ಕವಿಗಳಲ್ಲಿ ಅವನಿಗೆ ತೀರ ಸಮೀಪದವನಾದ ಜನ್ನ (ಸಾಹಿಸ. ೦೫೧) : ಈ ಎರಡು ತರನಾದ ಕಂಪನಗಳ ಸ್ವಭಾವವು ಪರಸ್ಪರ ತೀರ ಭಿನ್ನವಾಗಿರುತ್ತದೆ (ಜೀವಾತ್ಮ. ೦೦೦).ತೀರಾ : ಹೊಸವಿ ಒಳಸವಿ ತೀರಾ ಸವಿ ... ತೀರಾ ಸವಿಯಿಂದ ರುದ್ರಸತ್ತ (ವಚನಾ. II. ೨೫೦) : ಪ್ರಾಚೀನ ಕನ್ನಡ ಗ್ರಂಥಗಳಿಂದ ಆಯ್ದುಕೊಂಡ ಪದ್ಯಗಳು ತೀರಾಕಡಿಮೆ (ಕವಿಚ. I, -ಪೀಠಿಕೆ). [ < ತೀರ್ ]

ತೀರ$_2$ (ಅ). ಬಹಳವಾಗಿ ; ಅತಿಯಾಗಿ ; ಸಂಪೂರ್ಣವಾಗಿ : ಕೊಳುಗುಳದೊಳಗೈನೂಱಕ್ಷೋಹಿಣಿ ಬಲವನೊಬ್ಬನೇ ತೀರ [ಪಾಠಾಂ. ತಿರಿ] ಕೊಂದ (ಕುಠಾಸಾಂ. ೬-೩೩); ತೀರ ಜಗ್ಗಿದರೆ ಅಧಿಕಾರದ ಹಗ್ಗವೇ ಹರಿವುದೆಂದು ಅದಕ್ಕೆ ಗೊತ್ತಿತ್ತು (ಎಡ್ಯಸಾ. ೩೭). [ < ತೀರ$_1$./ತಮಿ. ತೀರ ]

ತೀರ$_3$ (ನಾ). ದಡ ; ದಂಡೆ ; ಕರೆ : "ತೀರವೊಂದು ತಟಂ" (ಕಕಸಾ.೮-೦೪೨): ತಣ್ಪುವೆತ್ತಿರ್ಪ ತೀರ ಜಲಂಗಳೊಳಮೆಡವಿಡದಿಡಿದ ತಮಾಲವೀಧಿಯೊಳೊಗೆವ ಕತ್ತಲೆಯಿಂ (ಶಾದಂಪೂ. ೧೧೬); ತೊಱೆಗಳ ತೀರದೊಳ್ಗರಿಯ ತಪ್ಪಲೊಳಗ್ಗಳಮಪ್ಪ ಕೊಳ್ಪದೊಳ್... ಮಱುಗಿ ತೊೞಲ್ದು (ಧರ್ಮಾಮೃ. ೮-೨೦): ಎಱಗದ ತೀರಭೂರುಹಮನೆಯ್ದೆ ಮೊದಲ್ಗಿಡೆ ಕೀೞ್ವ ಬೆಂಗೆ ಜಿಟ್ಟಿೞಗಿದ ಮಂಜುಳಪ್ರಕರಮಂ ಪರಿವರ್ಧಿಪ ಸಿಂಧುತೋಯದಂತೆ (ಕೃಷ್ಣಪು. ೦೩-೬): ನಗುತನಿಲಶರದಿಂದುೞಿದನು ಜಲನಿಧಿಯ ತೆಂಕಣತೀರಕಾಳಿನ (ತೊರರಾ. ೧-೧೧-೨೧): ತೀರಕ್ಕೆ ಬಂದ ಮೇಲೆ ತೆರೆಯ ಭಯವೆ ? (ಗಾದೆ). [ ಸಂ. ]

ತೀರಂಬಿಡಿ (ಕ್ರಿ). ದಡವನ್ನು ಹೊಂದಿಕೊಳ್ಳು : ತೀರವನ್ನು ಅನುಸರಿಸು : ಅಂತಾ ಪ್ರಭಾಸಾಮರಸಂ ನಿಜವಿಜಯಯಶಃಪ್ರಭಾಸಮೂಹ[illegible] ಪುದಿದು ಸಿಂಧುನದೀತೀರಂಬಿಡಿದು ಬರ್ಪಲ್ಲಿ (ಆದಿಪು. ೧೩-೪೪): [illegible] ಜೀಮೂತನಾದನೆಂಬು ಕೂಪಾರ ತೀರಂಬಿಡಿದು ನಡೆತರ್ಪ ಕಾಳಿಯುಸರ್ಪದರ್ಪದಳನದಿರದಿದಿರೊಳ್ ಕಂಡು (ಜಗವಿ. ೯-೫೩೪).

[ತೀರ$_3$ + ಪಿಡಿ$_1$]

ತೀರದಾಣ (ನಾ). ತಪ್ಪಲು ಪ್ರದೇಶ (?): ಗಿರಿತಲದಾ ನೇಲತಿ xxx [illegible] ತೀರದಾಣದಾ ಕೆಳಗೆ ನೆಲದಿ ಮಾನದಾ ಸದ್ಯಮುದಾಗೇಟ [illegible] (ಎಕ. II, ೨೯-೩; 700). [ತೀರ$_3$ + ತಾಣ]

ತೀರದು (ನಾ). ೧. ತೀರದೆ ಇರುವಿಕೆ : ಅಪೂರ್ಣತೆ ; ಕೊರತೆ : [illegible] ಕವುದ. ೨೧೧ ಪ್ರಯೋ). ೨. (ಪ್ರಯಾಣ [illegible]) [illegible] : ಮುಂದುವರೆಯದಿರುವಿಕೆ : ಆಲೋಚನಾ

ಪವಾತ್ರುದಿಂ ಮಾಱಿದು ಪಾಂಥಶ್ರೇಣಿ ನೀರಟ್ಟಿಯುಂ ಶ್ರಮಮುಂ ತೀರಮೊಯಂ ಪ್ರಪಾಂಗನೆಯರಂ ಕಣ್ಗಾವುದಾ ದೇಶದೊಳ್ (ಶಂರಾಮಾ. ೧-೧೦೩); ಜಾನಪದಾಂಗನಾಜನದ ಗಾಡಿಗೆ ಸೋಲ್ಲಿನೀನಿನಾದಮಂ ಜಾನಿಸಿ ಕೇಳ್ದು . . . ಉದ್ಯಾನದೊಳಾಡೆ ತೀರಮಯುಮುಂ ಪಥಿಕರ್ ಮಾಱಿದಿಲ್ಲೆನಲ್ ಪರಿಮ್ಲಾನತೆ ಸೈತು ಬಟ್ಟೆ ನಡೆಯಲ್ಬಡೆಯಾ ವಿಷಯಾಂತರಾಳದೊಳ್ (ಮಲ್ಲಿಪು. ೨-೨೮): ಬಾಟೆಯಾಳಿಯರನೇಱಿಲ ಮಾವಿನಪಣ್ಗಳಂ ಮನಂ ನಿಲೆ ಸವಿದಲ್ಲಿ ತೀರಮೊಯುಮುಂ ಮಾಱಿದಿರ್ಪುದು ಪಾಂಥಸಂಕುಳಂ (ಪುಷ್ಪಪು. ೨-೪೬). [ತೀರ್ + – ಅವೆ$_2$]

**ತೀರರುಹ** (ಗು). ದಡದಲ್ಲಿ ಬೆಳೆದಿರುವ; ದಂಡೆಯ ಮೇಲಿರುವ: ತೀರರುಹ ಫಲಪುಷ್ಪಸಕಿಸಲಯರಮ್ಯಗುಲ್ಮತರುಪಂಕ್ತಿಮಾಲಾಜಪ್ನು ಜಾತಿಯಂ ದರ್ಶಿಸಿದೊಡನೆ (ಶ್ರೀರಾಮಾ. ೯೭-೫೨೩). [ಸಂ.]

**ತೀರಸ್ಥ** (ಗು). ದಡದಲ್ಲಿರುವ: ತೀರಸ್ಥಲವಂಗಚೂತಲವಲೀಪುಷ್ಪಾಸವಾಸ್ವಾದಿತೋದಯಕೋಮ್ಮದೆಯ . . . ಪೋಲ್ದಿಗಿಲ್ಲ ತೂಱಿಗಳ್ ವಿಶ್ವಂಭರಾಭಾಗದೊಳ್ (ಆದಿಪು. ೧-೫೪). [ಸಂ.]

**ತೀರಾ** 'ತೀರ$_1$' ನೋ.

**ತೀರಿ** (ನಾ). ೧. ಅಂಬು; ಸರಳು, ಬಾಣ: "ತೀರೀ, ತದ್ಪಳ, ದಂಡಾಸನಃ –ಇವು ಮೊದಲಾದುವು ಅಬಿನ ಭೇದಂಗಳ್" (ಹರಾಯು. ೬೬-೭೦೩). ೨. ಒಂದು ಬಗೆಯ ಬಿಲ್ಲು: "ದಂಡಾಸನಂ ತೀರಿ ತದ್ಪಳವೆಂದು ಬಿಲ್ಲಭೇದಂಗಳಕ್ಕು" (ಮಂಗರಾ. ೮೭-೩೩); P ಮಂಗರಾಜನು 'ಬಾಣ' ಎಂಬುದಕ್ಕೆ 'ಬಿಲ್ಲು' ಎಂದು ಹೇಳಿರುವಂತೆ ಕಾಣುತ್ತದೆ. [ಸಂ.]

**ತೀರಿಕೆ** (ನಾ). ತೀರಿಸುವಿಕೆ: "ತೀರಂ, ತೀರಣಂ, ತೀರಣೀಯಂ–ಈ ೩ ತೀರಿಕೆ" (ಕಾಶಸ್ಯ. ೨೮೮). [ತೀರ್ + – ಇಕೆ]

**ತೀರಿಕ್ಕೆ**, ತೀರಿಗೆ (ನಾ). ಒಂದು ಬಗೆಯ ಬಾಣ: ಕ ದುರೆಯ ಮೇಲೆ ಬಿಲ್ಬರಸು ಸೂಲಿಗೆ ತೀರಿಕೆ ಭಿಣ್ಡವಾಳಪೆತ್ರಿದ ಕರವಾಳಿಮಾಟಿಡುವ ಕರ್ಕ್ಕಡೆ . . . ಎಂತು ಲಕ್ಷ್ಮಣನೊಳಾಂತು ಬರ್ದುಂಕುವರನ್ಯಭೂಭುಜರ್ (ಎಕ. VII, ಶಿಕಾರಿ. ೦೩೭-೨೮: 1068). **ತೀರಿಗೆ:** ಕುದುರೆಯ ಮೇಲೆ ಬಲ್ಬರಶು ತೀರಿಗೆ ಸೂಲಿಗೆ ಪಿಂಡಿವಾಳವೆತ್ತಿದ ಕರವಾಳ (ಎಕ. XV, ೩೪೦-೦೨: 1071). [< ತೀರಿ./ಸಂ. ತೀರಿಕಾ]

**ತೀರಿಗೆ** 'ತೀರಿಕ್ಕೆ' ನೋ.

**ತೀರಿಚು** 'ತೀರ್ಚು' ನೋ.

**ತೀರಿತ** (ಗು). ತೀರ್ಮಾನವಾದ; ಮುಗಿದ; ನಿರ್ಣಯಿತವಾದ. [ಸಂ.]

**ತೀರಿಸು** (ಕ್ರಿ). ೧. ಮುಗಿಸು; ಪೂರ್ಣಮಾಡು: ದಣಿ ವ್ಯಾಗ ಸೇಡು ತೀರಿಸಿಕೊಣ್ಣಾಕ ನಿನಗೊಂದು ಅಪರೂಪ ಪರಸಂಗ ಒದಗಿ ಬಂದರ ಹ್ಯಾಗಲೇ (ಮೀದಿವು. ೧೩); ಆರಿ ದೂರಕಿ ಆಲೆದ ಕಡಲಿನ ನೀರೆ ಕಡಲನೆ ಕೂಡಿತು, ಬೇರೆ! ಹಾ! ಹಾ! ಎಂದು ಡೊಂಬನು ತೀರಿಸದೆ ಕಣ್ಮುಚ್ಚಿದ (ಕವಿಪು. ೪೧-೩೬): ತನ್ನ ಕೆಲಸವನ್ನು ಮಾಡಿ ತೀರಿಸಿದ್ದನು(ರೂಢಿ). ೨. ನಾಶಮಾಡು; ಕೊನೆಗಾಣಿಸು: ತೀರಿಸುವನೀ ರಕ್ಕಸರ ರಣ ಹೋರಟೆಯನೆನುತ...ತಿರುಹಿಟ್ಟನು ನಭಸ್ಥಳಕೆ (ತೊರರಾ. ೬-೩೦-೧೭). ೩. ಕೊಲ್ಲು; ಸಾಯಿಸು: ಕೌರವನ ಋಣ ಹಿಂಗೆ ಸುಭಟಕೋಟಿಯನು ತೀರಿಸಿಯೆ ಪತಿಯುಪಸರಕ್ಕೆ ಶರೀರವನು ನೂಕುವೆನು (ಕುಮ್ಯಾಲು. ೧೧-೨೦): ಈಗಲೆ ಇವರನ್ನೂ ನಿನ್ನನ್ನೂ ತೀರಿಸಿಬಿಡುತ್ತೇನೆ (ವಚಥಾ. ೩೦). ೪. ನಿವಾರಿಸು; ಪರಿಹರಿಸು: ತಾರಕನಿಂದೆ ನೊಂದಮರರು ತಮ್ಮ ಸಂಸಾರದುಃಖವ ತನಗುಸುರೆ ತೀರಿಸಲಱಿಯದಾಸ್ನೆತಂದೆ ಶ್ರೀ ವೀರ ನಾರಾಯಣ ಪೊರೆಯೆಂದ (ವೀರಹತ. ೫-೦೫): ಹೆತ್ತ ತಾಯಿಯ ಸಂಕಟವನ್ನು ತೀರಿಸುವವರ್ಯಾರು (ಮನೋನಂ. ೧೪೨). ೫. ಈಡೇರಿಸು; ಕೈಗೂಡಿಸು: ಬಂದು ಕಾದಿಹ ದ್ವಿಜರನುಮತವ ತೀರಿಸದೆ ನಿಜಲೋಭಶತವೆಂಬಂದದಿ ಸಾಲ್ಗಟ್ಟಿ ಕುಜವಿರ್ದುದಾ ಬನಬನದಿ (ವೀರಹತ. ೨೪-೪೮). ೬. ಬಗೆಹರಿಸು; ತೀರ್ಮಾನಮಾಡು: ಅವರಿಬ್ಬರೂ ಬಂದು ನಮ್ಮದಿಷ್ಟು ವ್ಯಾಜ್ಯ ತೀರಿಸು ಎಂದು ನನ್ನ ಬೇಡಿಕೊಂಡರು (ಮುಂಬಯಿ. ೪-೬೮). ೭. (ಋಣ, ಉಪಕಾರ ಮೊದಲಾದುವನ್ನು) ಕೊಟ್ಟು ಮುಟ್ಟಿಸು; ಮರಳಿ ಸಲ್ಲಿಸು; ಸಂದಾಯಮಾಡು: ಉಂಡು ತೀರಿಸಬೇಕು ತಾ ಮುಂಕೊಂಡು ಮಾಡಿದ ಪುಣ್ಯ ಪಾಪದ ತಂಡವನು ತೆರಪರಣವಿಲ್ಲದೆ (ಕುಮ್ಯಾಲು. ೩-೦೨): ಎನ್ನ ಪೀಡಿಸಿ ಪರಮಭಂಡನ ಮಾಡಿ ನಿನ್ನ ಮುಯ್ಯಕೆ ಮುಯ್ಯ ತೀರಿಸಿಕೊಂಡಯ್ಯ (ಪುರಂದ ೦-೬೫-೨). ೮. ದಾಟು; ಕ್ರಮಿಸು: ದೂರೀಕೃತ ಸೂರ್ಗವನಂತರಿಕ್ಷದ ತೀರಿಸಿಯಾಕ್ಷಣದಲ್ಲಿ ದ್ವಾರಕೆ ಬಹಿರ್ಭಾಗದೊಳಿಳಿದಾಗ (ವೀರಹತ. ೩೦-೦೩). ೯. ಮೆರುಗುಕೊಡು; ನಯಗೊಳಿಸು (?): ಕಾರ್ಗ್ಗಲದ ಕುಡುಮಿಂಚಿನ ತಿರುಳಂ ತೀರಿಸಿ ತಿರ್ದಿದ ರೂಪನೆ ಪೊಸಮುತ್ತಿಂ ಕಡೆದಾ ಪರಿಜೆನೆ .... ಕರಮೆಸೆದಂ ಭೂಪತಿ ಪುರಸತಿಯರ ಕಣ್ಗಳ ಕದಿರಿಂದ (ಜಯಕಾ. ೧೧-೫೬). [ತೀರ್ + – ಇಸು$_1$]

**ತೀರು$_1$** 'ತೀರ್' ನೋ.

**ತೀರು$_2$** (ನಾ). ೧. ತೀರ್ಮಾನ; ತೀರ್ಪು: (+). ೨. ಅಂತ್ಯ; ಸಮಾಪ್ತಿ; ಮುಕ್ತಾಯ: ಆ ಮಹಾನಾಟ್ಯದೇರಂ ತೀರಂ . . . ಭಾವಿಸಿ (ಗಡೀಕ. ೨೩-೬೦೦). ೩. ರೀತಿ; ಕ್ರಮ: ಮಾರುತ ಸುತನ ಶರೀರವ ಕಾಣದ ತೀರಿ ಸೊಳಸ್ಸದ ಕೂರಲಗುಗಳಂ ಭೋರನೆ ಸುರಿಯಲು (ಹನುಮು. ೬೨): ನಳ ನಾಳಗಳಿಗೆ ಘೋಷಿಸಿ ಪೇಳ್ದ ತೀರಿನಿಂ ಪಟ್ಟರಣನೀಕ ಜೇಂಕರಿಸುತ್ತೆ ಜಲಜಾತಗಳಗರಗಲು (ನವಮೋ.೧೧-೪೨); ದೊಡ್ಡ ಮಳೆ ಬಂದರೆ ಹಾಗಲ್ಲ; ಅದರ ರೀತಿ ಬೇರೆ ... ಎಷ್ಟಾದರೂ ಅದರದು ದೊಡ್ಡ ತೀರು (ದಾಲಕ್ಷ್ಮಿ. II, ೧೧೬೫). ೪. ಹಿಂತಿರುಗಿಸುವಿಕೆ; ಸಂದಾಯಮಾಡುವಿಕೆ. 'ತೀರುವಳಿ' ಪರಾ. ೫. ಒಪ್ಪ; ಮೆರುಗು: (+). [< ತೀರ್]

**ತೀರು$_3$** (ನಾ). ೧. ಅಂಬು; ಸರಳು; ಬಾಣ: ಸಾಣೆಯೊಳ್ ತೀಡಿದ ಮಾರನ ತೀರಿನಂತಿರುವ ಕೊರೆನೋಟ (ಸಾಗಂಧಿ. ೨೨೪-೬): ಬೆಳ್ಳಿ ಮೇಲೆ ಚಿಂಸದ ಮುಲಾಂ ಕಮಾನು ೧ ತೀರು ೧ (ಎಕ. XIV, ನಂಜನ. ೫೯೨- ಪುಟ. ೦೪೦; 1847). ೨. ತೊಲೆ; ಆನಿಕೆ: ಛಾವಣಿಗೆ ಹಾಕಿರುವುದು ತೆಂಗಿನ ತೀರು (ರೂಢಿ). ೩. ಗುಡಿಸಲು; ಚಪ್ಪರ: ತೀರಿಲ್ಲ ತಿಟುವಟವಿಲ್ಲ ಜಂಭ ಮಾತ್ರತೊಂಬೆಯಷ್ಟು (ಗಾದೆ). [< ಸಂ. ತೀರ]

**ತೀರುಕಣೆ** 'ತೀರ್ಕಣೆ' ನೋ.

**ತೀರುಗಡೆ** 'ತೀರ್ಗಡೆ' ನೋ.

**ತೀರುಗಾಲ** (ನಾ). ಅಂತ್ಯಕಾಲ; ಸಾಯುವ ಹೊತ್ತು; ಕೊನೆಗಾಲ: ಬಲ ಬಿಟ್ಟು ಹೊಡೆದು ಕರ್ಣನನ್ನು ಕೊಲ್ಲು . . . ಅವನಿಗೆ ತೀರುಗಾಲ ಬಂದಿದೆ (ವಚಥಾ. ೨೯೮). [ತೀರು$_1$ (< ತೀರ್) + ಕಾಲ]

**ತೀರುತ**, ತೀಟ್ಟ (ನಾ). ೧. = ತೀರ್ಥ೧: ಅಲ್ಲ ಜಲಮಯಪಿಡುವ ತೀರು [ಪಾಠಾಂ. ೦]ತ (ನಿಘಾಗ. ೧೧-೬೫-೧೪). Δ **ತೀಟ್ಟ**: ೨. = ತೀರ್ಥ ೩: ಸ್ವಸ್ತಿಶ್ರೀ ಜಮ್ಬು ನಾಯ್ಗಿರ್ ತೀಟ್ಟದೊಳ್ನೋನ್ತು ಮುಡಿಪ್ಪಿದರ್ (ಎಕ. II, ೧೪; 700); ಶ್ರೀಮದ್ ಬೆಟ್ಟದ×ಪೊ×ನ ಮಗ್ಗ ವೃಜಬ್ಬೆ [ಕ]ಬ್ಬಪ್ಪು ತೀಟ್ಟದೊಳ ನೊನ್ತು ಸಂನ್ಯಸನಂ (ಎಕ. II, ೬೮-೩; 10ನೆಯ ಶತ ?). [< ಸಂ. ತೀರ್ಥ]

**ತೀರುಪಡಿ** 'ತೀರ್ಪಡಿ' ನೋ.

**ತೀರುವಳಿ** (ನಾ). ೧. ತೀರಿಸುವಿಕೆ; ಸಂದಾಯಮಾಡುವಿಕೆ: ವೇದರೂಪವಾದ ಸಾಲದ ತೀರುವಳಿಯ ಕ್ರಮವು ಹೀಗೆ (ನೀಗಟ್ಟು. ೬೭) ೨. ಇತ್ಯರ್ಥಪಡಿಸುವಿಕೆ: "ತೀರುವಳಿ; ತೀರ್ಪೆ" Settlement (ಪತ್ರಿಸಿ. ೭೪). [ತೀರು$_2$ + – ವಳಿ$_1$]

**ತೀರುವೆ** '[illegible]' ನೋ.

ತೀರೆ (ನಾ). ೧. ಒಂದು ಬಗೆಯ ಹುಳು; ಜಂತುಹುಳು: ಸಾಂಟೊನಿನ್, ಜಠರಕ್ರಿಮಿನಾಶಿನಿ, ತೀರೆಹುಳುವಿನ ಮದ್ದು (ಮೃಜಿಗಿ. ೯-೧೫೫). ೨. ಜಂತು ಹುಳುವಿನಿಂದುಂಟಾಗುವ ಒಂದು ಬಗೆಯ ರೋಗ : (ಕ). [ ? ]

ತೀರ್ಕಡೆ 'ತೀರ್ಗಡೆ' ನೋ.

ತೀರ್ಕಣಿಸು, ತೀರ್ಗಣಿಸು (ಕ್ರಿ). ೧. ಕೊನೆಗೊಳಿಸು ; ನಾಶಗೊಳಿಸು : ಪ್ರಕಟಿತ ರಜಸ್ತಮೋಗುಣ ತೀರ್ಕಣಿಸಿ ಸಾತ್ವಿಕಫಲ ರೂಪಾದುದೆನುತ ಅಕಳಂಕಸಿತಹರ್ಮ್ಯವೆಸೆದುದು (ಮೋಹತ. ೩-೬೭). ೨. ನಿವಾರಿಸು ; ಪರಿಹರಿಸು : ಪಲವು ದಾಯದಲಿ ಬುದ್ಧಿಯ ಪೇಳಿ ಮದನವ್ಯಾಕುಲವ ತೀರ್ಕಣಿಸಿ (ಮೋಹತ.೨೯-೭) ; ತೀರ್ಕಣಿಸು ದುಃಖಮಂ ಶಿವನ ಮರೆಯೊಕ್ಕು (ನವಮೋ. ೭-೩೭). ೩. ದಾಟು ; ಕ್ರಮಿಸು : ಆಕಾಶಪಥವ ತೀರ್ಕಣಿಸಿ ಗೋಕರ್ಣರಿಪು ವೈನತೇಯ ಬಂದನು (ಮೋಹತ. ೪೨-೧೩). ೪. ಇಲ್ಲವಾಗು ; ಅಂತ್ಯವಾಗು ; ನಾಶವಾಗು : ಉಂಟಾದ ಧೈರ್ಯ ತೀರ್ಕಣಿಸಿತು (ಮೋಹತ. ३೮-೧೨) ; ಬೋಧಾರುಹನಾದ ಪರಮೇಶನಿವ್ರ್ಗಳು ಭೇದವಿಲ್ಲೆಂದು ಸೂಚಿಸಲು ರೋದನ ತೀರ್ಕಣಿಸಿತು (ಮೋಹತ. ೪೦-೯೨). ತೀರ್ಗಣಿಸು : ೫. ರಚಿಸು ; ನಿರ್ಮಿಸು : ಸೌರಭಸದ್ಮವೆಂದೆನಿಪ ಕೇಗ್ಗಳಂ ಪುಂಡ್ರೇಕ್ಷುದಂಡದಿ ತೀ [ಪಾಠಾಂ. ಕೇ] ರ್ಗಣಿಸಿ ದೊಳ್ಚಪ್ಪರಂಗಳಿಂದಾರ್ಗೆ ಬಣ್ಣಿಸಲರಿದೆನಿಸಿ ಮೆರೆದಿಹವು ಪ್ರಪಾಶಾಲೆ (ಮದೀಪು. ೨-೧೨). [ತೀರ್ಕಣೆ + – ಇಸು$_3$]

ತೀರ್ಕಣೆ, ತೀರುಕಣೆ (ನಾ). ೧. ಅಂತ್ಯ ; ಪರ್ಯಾಪ್ತಿ ; ಕೊನೆ : ಯಜ್ಞದ ತೀರ್ಕಣೆ ಅವಭೃತಮೆಂಬುದು (ಹಲಾಯು.೬೯-೨೬೩) : ವಿವಾದ ಸಮಾಪ್ತಿಃ = ತೋಟಿಯ ತೀರ್ಕಣೆ (ನೀತಿವಾ. ೨೭-೨೦). ೨. ನೆರವೇರಿಕೆ : ಕಾರ್ಯಸಿದ್ಧಿಶ್ಚೇತಿ = ಕಾರ್ಯದ ತೀರ್ಕಣೆಯು (ನೀತಿವಾ. ೯-೨೫). ೩. ತೀರ್ಮಾನ;ತೀರ್ಪು:ಸುವ್ಯಕ್ತವೂ ಆವಶ್ಯಕವೂ ತಪ್ಪದುದೂ ಸುಲಭವೂ ಎಂದು ಭಾಸವಾಗುವ ತೀರ್ಕಣೆಯುನ್ನು ಬಾಯ್ದುಡುಕಿ (ಮಂತ್ರಶ. ೭೨-೨೨). ತೀರುಕಣೆ : ೩. ನಿಮ್ಮ ಬಗೆಯ ದ್ರೋಹಿ ದುರಾತ್ಮರಿಗೆ ತಕ್ಕುಮೊಗಿಡದ ಒಂದೇ ದಣ್ಡನೆ ಎಂದು ತರಿಸಂದು ತೀರುಕಣ[ಣೆ]ಗೊಟ್ಟಿರುವರು (ಬಟ್ಯಅ. ೨೦೪-೨೩). ೪. ವ್ಯಯ ; ಖರ್ಚು : "ಅರ್ಥದ ತೀರುಕಣ[ಣೆ] ಅರ್ಥಾಪಗಮ, ವ್ಯಯ, ವೆಚ್ಚ" (ನಾಚಿರಾ. ೬). [ತೀರ್ಕೆ + – ಅಣೆ$_4$]

ತೀರ್ಕಣೆಗೆಯ್ (ಕ್ರಿ). (ಆಲಂ) ರಕ್ಷಣೆಮಾಡು; ಕಾಪಾಡು (?): ನಕ್ರಕಂಟಕವನುತ್ತರಿಸಿ ಗಜೇಂದ್ರನ ವಕ್ತ್ರವ ತೀರ್ಕಣೆಗೆಯ್ದ ಚಕ್ರಪಾಣಿಯ ಕೂರ್ತು ಕೃತಿವೇಳು (ಮೋಹತ. ೨೭-೧). [ತೀರ್ಕಣೆ + ಕೆಯ್$_1$]

ತೀರ್ಕೆ (ನಾ). ಇತ್ಯರ್ಥ; ನಿರ್ಣಯ; ತೀರ್ಮಾನ. 'ತೀರ್ಕಣೆ' ಪರಾ. [ ತೀರ್ + – ಕೆ ]

ತೀರ್ಗಡೆ, ತೀರುಗಡೆ, ತೀರ್ಕಡೆ (ನಾ). ೧. ತೀರಿಸುವಿಕೆ ; ಪೂರೈಕೆ : ತನ್ನ ಪ್ರಜೆಗಳ ಕಾರ್ಯಗಳನುರೆ ಮುನ್ನ ತೀರ್ಗಡೆ ಮಾಡಿ (ರಘುವಂ. ೧೫೪-೨೪). ತೀರುಗಡೆ : ೨. ಸಲ್ಲುವಿಕೆ ; ಸಂದಾಯವಾಗುವಿಕೆ : ಆತ್ಮಸಖಿಯೆ ನಿನಗೇನನಿತ್ತೊಡೆ ನಿನ್ನ ಋಣ ತೀರುಗಡೆಯಪ್ಪುದೇ (ನವಮೋ. ೨೭-೫೫). ತೀರ್ಕಡೆ : ೩. ಮುಕ್ತಾಯ ; ಅಂತ್ಯ; ಕೊನೆ : ತೀರ್ಕಡೆಯೊಳ್ ಐಕ್ಯಮಾ ತತ್ವಮಸೀತಿ ವಾಕ್ಯಪದಮಪ್ಪುದು (ಶತಕ. ೧-೪೯). [ತೀರು$_1$ (<ತೀರ್) + ಕಡೆ$_3$]

ತೀರ್ಗಣಿಸು 'ತೀರ್ಕಣಿಸು' ನೋ.

ತೀರ್ಚಿಸು (ಕ್ರಿ). ಮುಗಿಸು: ಕೊಲ್ಲಿಸು; ನಾಶಗೊಳಿಸು : ಷಡಾನನನಿಂ ತಾರಕಾಸುರನಂ ತೀರ್ಚಿಸಿ . . . ಪರಮಂ ಕರುಣಿಸುತಿರ್ದಂ (ಗಿರಿಕ. ೩ ಕಥಾಗರ್ಭ). [ತೀರ್ಚು + – ಇಸು$_3$]

ತೀರ್ಚು, ತೀರಿಚು, ತೀರ್ಚ್ಚು (ಕ್ರಿ). ೧. ಮುಗಿಸು; ಪೂರೈಸು : ತೀರ್ಚಿ ಸಂಧ್ಯಾನಿಯಮಂಗಳನಿರ್ಬ್ಬು ಭಸ್ಮಶಯ್ಯಾತಳದೊಳ್ ಬಿಸುಸುಯ್ [illegible] ನಿಕ್ಕಿದಳಾಗಳ್ (ಕಾದಂಪೂ. ೯೬೯) ; ಮಜ್ಜನ ಭೋಜನಾದಿ ದಿವಸವ್ಯಾಪಾರಮಂ ತೀರ್ಚಿ (ಮಲ್ಲಿಪು. ೪-೯೬ವ). ೨. ಕೊಲ್ಲು; ಸಾಯಿಸು : ಕುರುನಂದನರಂ ಕೊಂದೆಂ ಕುರುಶಾಬಾನುಜನ ನೆತ್ತರಂ ಕುಡಿದೆಂ ಪೂಣ್ದರಡಂ ತೀರ್ಚಿದೆನಿರ್ದಪುವೆರಡುಮವಂ ತೀರ್ಚಿ ತೀರ್ಚದಿರ್ಪೆನೆ ಪಗೆಯಂ (ಗದಾಯು. ೦-೬೯) ; ನೀಂ ಪಂಪೆಗೆ ಬಂದು ಮದ್ಗುರುವಿನುದ್ಯದ್ಯಾಗಮಂ ನುಗ್ರವಾದನುಜಾಧೀಶನನೊಲ್ದು ತೀರ್ಚಿ ಮಖಮಂ ರಕ್ಷಿಪ್ಪುದು(ಉದ್ಭಟ. ೨-೨೭) ; ಶರಭತ್ವದಿಂದಮೆ ತೀರ್ಚಿ ತತ್ ಸಿಂಹಮಂ (ಭಾವಚಿಂ. ೩-೧೪) ; ಸೀಳುವಂ ಪುಲಿಯೊಡಲ ತೀರ್ಚುವಂ ಪಗೆಯಂ (ಕಾಲೂರ. ೮೪-೧೫೯). ೩. ನಾಶಮಾಡಿಸು ; ಕೊಲ್ಲಿಸು : ಸ್ಕಂದನಿಂ ತಾರಕಾಸುರನಂ ತೀರ್ಚಿ ಸಮಸ್ತಲೋಕಜನತಾಸಂತುಷ್ಟಿಯಂ ಮಾಡಿ (ಗಿರಿಕ. ೧೦-೧೦೧). ೪. ಕೊನೆಗಾಣಿಸು ; ಇಲ್ಲದಂತೆ ಮಾಡು : ಲೋಭತ್ವದ ಬೇರಂ ಕಿಳ್ತು ಮಾತ್ಸರ್ಯಮನುಡುಗಿ ಮದಾಲೇಪಮಂ ತೀರ್ಚಿ (ರಕ್ಷಾಶ. ೭೯). ೫. ನಿವಾರಿಸು ; ಪರಿಹರಿಸು ; ಕಳೆ : "ಪರಿಹರಿಪುದಕೆ ತೀರ್ಚಿನಿಕ್ಕುಂ" (ಕಶರ. ೪೬) ; ಉಳ್ಳಿಯಂ ಕಿನ್ನರಯ್ಯಗಾದ ಮುಳಿಸುವಂ ಉಳ್ಳಿಯಿಂದವೆ ತೀರ್ಚಿ ಕಳೆವುದು ನಿರೋಧವಂ (ಬಸರ. ೧೧-೯೪) ; ಅಜ್ಞಾನತಿಮಿರವಮ ತೀರ್ಚಿ (ಭಾವಚಿಂ. ೩-೩೩), ಒಲಿದೆನಗೆ ಕ್ಷುತ್ಪಿಪಾಸೆಗಳ ತೀರ್ಚಿದರಿಲ್ಲ (ವೆಂಕಾರಾ. ೫-೦-೫೫). ೬. (ಖಾಯಿಲೆ, ಬೇನೆ, ಹುಣ್ಣು ಮೊದಲಾದುವು) ವಾಸಿಯಾಗು ; ಗುಣವಾಗು : ಎಕ್ಕೆ ಸಾಸಿವೆ ಹರಿದ್ರಾದ್ವಂದ್ವವಿಾ ಪೇಟ್ಟ ಮರ್ದುಗಳಂ ಪುತ್ತಿನ ಮಣ್ಣುಮಂ ಕದಡಿ ಕಾಸಿಟ್ಟೆಯ್ದೆ ಪೊಯ್ಯಾವ ಬಾವುಗಳುಂ ತೀರ್ಚುಗುಂ (ಲೋಕೋಪ. ೯-೨೪೦). ೭. (ಖಾಯಿಲೆ ಮೊದಲಾದುವನ್ನು) ವಾಸಿಮಾಡು ; ಗುಣಪಡಿಸು : ಗುರುಭಕ್ತಿ ಭೇಷಜನಾಗಿ ರುಜೆಯಂ ತೀರ್ಚುವುದು (ಬಸಪು. ೩೯-೨೪). ೮. ಈಡೇರಿಸು ; ಕೈಗೂಡಿಸು ; ಪೂರ್ಣಗೊಳಿಸು : ನೀನಿದರ್ಕೆ ನುಮಂ ಬಗೆಯಲ್ವೇಡ ನಿನ್ನ ಬಗೆಯಂ ಬಗೆದಂತೆ ತೀರ್ಚುವೆಂ (ಪಂಪಭಾ. ೪-೬೯ವ) ; ನಾಥ ನೀಂ ಕರುಣದಿನೊರ್ಮೆ ಕಣ್ದೆರೆದು ತೀರ್ಚು ಮದೀಯ ಮನೋರಥಂಗಳಂ (ಕಾದಂಪೂ. ೯೨೪) ; ನಿಮ್ಮ ಸ್ವಾರ್ಥಮೆಲ್ಲಮಂ ತೀರ್ಚಿ ಕೊಳ್ಳಿಂ (ಪಂಚತಂ. ೦೦೩-೭) ; ಎನ್ನ ಬಂಧುಗಳ್ಗಕ್ಕೆ ಗಂಡಂಗಕ್ಕೆ ಪೇಟ್ರ್ದಾಡ ಮವರೀ ಬಯಕೆಯಂ ತೀರ್ಚುವರಲ್ಲಂ (ಧರ್ಮಾಮೃ. ೮-೧೨). ೨, ೮ : ಪಗೆಗೊಂಡ ತುಂಬಿಯಂ ನಸುನಗುವಪೊಲುಳ್ಳಲರ್ದು ಪೊಂಗಿ ಕಂಪಾದುದೆನಲ್ ಸೊಗಯಿಸಿ ಕಾಮನ ಪಗೆಯಂ ಬಗೆಯಂ ತೀರ್ಚಿದವು ಸುಗ್ಗಿಯೊಳ್ ಸಂಪಗೆಗಳ್ (ಮಲ್ಲಿಪು. ೫-೧೮). ೯. ಜರುಗಿಸು ; ಮಾಡು; ನಡೆಸು: ಬಂದ ಮರರಿರ್ವರವನತರೆಂದರ್ ಭೂಪೇಂದ್ರ ಬೆಸಸು ಬೆಸಸೆಮ್ಮಂ ನೀನೆಂದುವನೆ ಬಯಸಿ ತೀರ್ಚಲ್ ಬಂದೆವು ಜಾತೋಪಕಾರ ವಿಕ್ರಯಮತಿಯಿಂ (ಶಾಂತಿಪು. ೯-೭೧) ; ತನ್ನರಸಿಯ ಕಯ್ಯೊಳ್ ನಂಬಿಯಣ್ಣನಂ ಕೊಟ್ಟು . . . ಜಾತಕರ್ಮವಂ ನೆನೆದು ತೀರ್ಚಿ [ ಪಾಠಾಂ. ನಿಮಿರ್ಚಿಸಿ ] (ನಂಬಿರ. ೨-೯೬) : ಹರುಷಂಬೊತ್ತು ಲಿಂಗಸ್ಪರುಶನದ ನಿಯಮಂಗಳಂ ತೀರ್ಚಿ (ಬಸಪು. ೬೦-೩೩) : ದೇವಂಗೆ ಸರ್ವಮಂಗಳಕಾರ್ಯಮಂ ತೀರ್ಚಿ (ಅಶಿಚಂ. ೩೬-೪೭). ೧೦. ವ್ಯಯಮಾಡು ; ಕಳೆದುಬಿಡು ; ನೀಗು : ತನ್ನ ಸಹಾಯನಪ್ಪ ವಿಪ್ರನ ಕೈಯೊಳ್ ವಸ್ತುವಂ ಕೊಟ್ಟು ಪೋಪುದುಮಾತನದೆಲ್ಲಮಂ ಸ್ತ್ರೀ ದ್ಯೂತ ವ್ಯಸನದಿಂ ತೀರ್ಚಿ (ಮಹಾನೀ. ೩-೧೪೭ವ). ೧೧. ದಾಟು ; ಕ್ರಮಿಸು : ಆ ತ್ರಿದಿವದಾಯುಂರಬ್ಧಿಯನಾ ತ್ರಿದಶಂ ತೀರ್ಚಿ (ಶಬ್ದಾನು. ೧೨೭ ಪ್ರಯೋ). ೧೨. ನಿರ್ಮಿಸು ; ರಚಿಸು : ಈಕ್ಷಣಾಂಶುಮಂಡಳಿಸಿದುದಿಂದುರಶ್ಮಿಯೊಳೆ ತೀರ್ಚಿ ತೊಡರ್ಚಿದ ಕೀಟ ನೇಣಪೋಲ್ (ಪಂಚಾಮೂ. ೪-೧೧೩). ೧೩. ಕಳಚು : ಬೇರೆಮಾಡು : ತಿಲರಸವಾರಿಯ ಭೇದದಂತೆ ಮಣಿಯೊಳಗಿರ್ದ ಸೂತ್ರದಂತೆ ಅಂಗವ ತೀರ್ಚಿ ಪಾಯಿದು ನಿಂದ ಅಹಿಯ ಅಂಗದಂತೆ (ಸರ್ವವ. ೭೭-೩೬೦). ತೀರಿಚು : ೨. ತೀರದೀತನ

ಕಾರಣರಾದರು (ಭಾರದ. ೫೨೮). ೨. ನಷ್ಟ ಪರಿಹಾರವಾಗು; ಸರಿದೂಗು: ನುಡಿಯಂತೆ ನಡೆಯುದಿದ್ದರೆ ನಡೆಯಂತೆ ನುಡಿಯುದಿದ್ದರೆ ದಿವ್ಯ ಜೀವನದಲ್ಲಿ ಅದೊಂದು ದೊಡ್ಡ ಕುಂದು, ತುಂಬಿಬಾರದ ಕೊರತೆ (ಮೋಳಿಮೂ. ೬ ಪ್ರಸ್ತಾವನೆ); ಅವನ ಕಾಲಿನ ಕುಂಟುತನದ ಊನವು ಅವನ ಪ್ರಸಂಗಾವಧಾನದ ಚತುರತೆಯಲ್ಲಿ ತುಂಬಿ ಬಂದಿತ್ತು (ಕಂಬಹು. ೧೩). ತುಂಬಿರು = ಭರ್ತಿಯಾಗಿರು; ಹರಡಿರು: ವಂದಿತಾಮಳಮಕುಟ ವರ್ಧನರಿಂದ ತುಂಬಿಹುದೆಂಟುಯೋಜನದಂದವದು (ಸಂಭಪ. ೫-೮೬); ಅದಜ್ಜುನಾ ತಟುವಾಯ ಮನೆಯೊಳು ಗದೆ ಶರಾಸನ ಖಡ್ಗ ಮುದ್ಗರವಧಟು ಚಕ್ರ ತ್ರಿಶೂಲ ತುಂಬಿರೆ (ಕುವ್ಯಾಅ. ೭೦೩. ೩೨-೩೨).

[ದೇ. ‖ ತುಳು. ತುಂಬು; ಕೊಡ. ದುಂಬ್]

**ತುಂಬು$_{2}$** (ನಾ). ಸಂಪೂರ್ಣವಾಗಿರುವಿಕೆ; ಪೂರ್ಣತೆ; ಅತಿಶಯಂ; ಬಾಹುಳ್ಯ: ಆವ ತುಂಬಿಹುದಿಲ್ಲಿ ಎರೆವವರಿಗೆರೆವಷ್ಟನೀವ ಮನ ತುಂಬು ವಷ್ಟರಿವ ಎದೆ ತುಂಬುವಷ್ಟೊಲವ ಪಡೆಯೆ ಜೀವ? (ಮಲದೇ. ೩೦-೯).

[ < ತುಂಬು$_{1}$ ]

**ತುಂಬು$_{3}$** 'ತೂಂಬು' ನೋ.

**ತುಂಬು$_{4}$, ತುಂಬೆ$_{3}$** (ನಾ). ೧. ಹಣ್ಣು, ಕಾಯಿ, ಹೂವು ಮೊದಲಾದುವುಗಳ ತೊಟ್ಟು,—ನಾಳ; ವೃಂತ; ತೊಡಂಬೆ: "ತುಂಬು— ಪೂರಣೇ, ವೃಂತ (ಹೂವಿನ ಕಾವು), ಜಲಪ್ರಣಾಲ್ಯೋಃ (ತೂಬು)" (ಶಮದ): "ತೊಟ್ಟು ತುಂಬೆನೆ ವೃಂತನಾಮವೆಂದೇ ತಿಳಿವುದು" (ಶಬ್ದಮಂ. ೨೩); ಉದುರಿಹೋದ ಹೂವಿನ ತುಂಬಿನತ್ತ ಲಲಿತಾ ತದೇಕ ಚಿತ್ತದಿಂದ ನಿಟ್ಟಿಸತೊಡಗಿದಳು (ಕನಸಿ. ೧); ಕಿತ್ತಳೇಹಣ್ಣು ಬುಡದಲ್ಲಿಯೂ ತುಂಬಿನಲ್ಲಿಯೂ ತುಸು ಕುಗ್ಗಿರುವಂತೆ ಪೃಥ್ವಿಯಾದರೂ ಉತ್ತರ ದಕ್ಷಿಣ ಧ್ರುವಗಳೆಡೆಗೆ ಸ್ವಲ್ಪ ಕುಗ್ಗಿಯದೆ (ಮುಂಬಯಿ. ೪-೬೪); ಮೆಣಸಿನಕಾಯಿಯ ತುಂಬು ಮುರಿದು ಅವನ್ನಾದರೂ ತಾಟನ ಬದಿಗಿರಿಸಿದಳು (ರಕ್ತಧ್ವ. ೨೨೦). ೨. ಒಂದು ಬಗೆಯ ಆಭರಣ. 'ಚಳತುಂಬು' ಪರಾ. ತುಂಬೆ$_{3}$: ೧. "ತುಂಬೆಯೆನೆ ತೊಟ್ಟು" (ಕಕರ. ೪೬).

[ ದೇ. ‖ ತಮಿ. ಮಲ. ತುಮ್ಪು = ತುದಿ, ಅಂಚು ]

**ತುಂಬುಕಣ್ಣು** 'ತುಂಬುಗಣ್ಣು' ನೋ.

**ತುಂಬುಗ** (ನಾ). ಭರ್ತಿಮಾಡುವವನು; ತುಂಬುವವನು: "ಪ್ರಾಯುನ್, ಪ್ರಾಪಕಃ, ಪ್ರಾತಾ ಈ ಮೂರು ತುಂಬುಗಂ" (ಕಾಶಕ್ಕ. ೦೬೬).

[ ತುಂಬು$_{2}$ + — ಗ$_{2}$ ]

**ತುಂಬುಗಣ** (ನಾ). (ಧಾನ್ಯಗಳನ್ನು) ರಾಶಿ ಹಾಕಿರುವ ಕಣ: ಇವೊತ್ತು ತುಂಬುಗಣದ ಪೂಜೆ ಇದೆ (ರೂಢಿ). [ ತುಂಬು$_{2}$ + ಕಣ$_{1}$ (< ಕಳ$_{3}$)]

**ತುಂಬುಗಣ್ಣು, ತುಂಬುಕಣ್ಣು** (ನಾ). ೧. ಅಗಲವಾದ ಕಣ್ಣು; ದೊಡ್ಡ ಕಣ್ಣು: ತುಂಬುಗಣ್ಣಲ್ಲಿ ನೋಡಿದಳು (ವೃದ್ಧವಿ. ೦೨೫); ತನ್ನ ತುಂಬುಗಣ್ಣುಗಳನ್ನು ಹೊರಹೊರಳಿಸಿ ನೋಡುತ್ತ ಮೆರವಣಿಗೆಯ ಹಿಂದೆ ಸಾಗಿದಳು (ಫಲಸಂ. ೮೫). **ತುಂಬುಕಣ್ಣು**: ೨. (ಕಣ್ಣೀರು) ತುಂಬಿದ ಕಣ್ಣು: ಪಾಳುರಾಜಧಾನಿಯನ್ನು ತುಂಬುಕಣ್ಣಿನಿಂದ ನೋಡಿ … ನಿಟ್ಟುಸಿರಿಟ್ಟು ಪಂಡಿತನನ್ನು ಹಿಂಬಾಲಿಸಿದ (ಚದೇವ. ೩).

[ ತುಂಬು$_{2}$ + ಕಣ್ಣು (< ಕಣ್) ]

**ತುಂಬುಗಲ್ಲ** (ನಾ). ತುಂಬಿಕೊಂಡಿರುವ ಗಲ್ಲ; ದುಂಡನೆಯ ಕೆನ್ನೆ: ಮೊದಲಿನ ತುಂಬುಗಲ್ಲದ ನಗುಮುಖದ ರಮಾ ಎಲ್ಲಿ, ಒಣಗಿದ ಕೃಶಳಾದ ಅಳುಮುಖದ ನೀನೆಲ್ಲಿ? (ಕುಂಕುಮ. ೫೫). [ ತುಂಬು$_{2}$ + ಗಲ್ಲ$_{1}$ ]

**ತುಂಬುಗಾಂಭೀರ್ಯ** (ನಾ). ಅಧಿಕವಾದ ಹಿರಿಮೆ; ದೊಡ್ಡತನ: ತುಂಬುಗಾಂಭೀರ್ಯದಲಿ ಸತ್ಯವನೆ ಎತ್ತಿ ನಿಲಿಸುವನು ಪ್ರಜೆಯ ತಂದೆ (ಹೊಂಗಳು. ೬-೮). [ ತುಂಬು$_{2}$ + ಗಾಂಭೀರ್ಯ ]

**ತುಂಬುಗಾಯಿ** (ನಾ). ಬದನೆಕಾಯಿ ಮೊದಲಾದ ಇಡಿಕಾಯಿಯೊಳಗೆ ಸಂಭಾರವನ್ನು ತುಂಬಿ ಬೇಯಿಸಿ ಮಾಡಿದ ಪಲ್ಯ: "ತುಂಬುಗಾಯಿ— ಇಡಿಗಾಯಿಪಲ್ಲೆ; ಬದನೇಕಾಯಿಯ ಪಲ್ಲೆ" (ಜಾನಕೋ. ೬೬); ಅವಳು ಬದನೆಯ ತುಂಬುಗಾಯಿ ಮಾಡುವುದರಲ್ಲಿ ಎತ್ತಿದ ಕೈ (ರೂಢಿ).

[ ತುಂಬು$_{2}$ + ಕಾಯಿ$_{4}$ (< ಕಾಯ್$_{4}$) ]

**ತುಂಬುಗುಂಕುಮ** (ನಾ). ಹಣೆಯಲ್ಲಿ ಇಟ್ಟುಕೊಂಡಿರುವ ಅಗಲವಾದ ಕುಂಕುಮ: ಮುಂಬಯಿಸಿ ಕೈಗೈದ ಸೊಬಗಿನ ಕೆಂಬಲರ ಮೈವಟ್ಟೆ ಕೆಂಬಲು ತುಂಬುಗುಂಕುಮ ತಿವಿರಃ ಚೆಂದುಟಿಯುಟ್ಟರುಣವಸನ (ಸಾಳ್ವಭಾ. ೩-೩೪).

[ ತುಂಬು$_{2}$ + ಕುಂಕುಮ ]

**ತುಂಬುಗೂದಲು** (ನಾ.) ದಟ್ಟವಾದ ಕೂದಲು: ಇವನು ತುಂಬುಗೂದಲಿನ ಕುಮಾರನಂತೆ ಕಣ್ಣಿಗೆ ಮುದ್ದಾಗಿ … ಸುಳಿಯುತ್ತಾನೆ (ಭಾರದ. ೨೦).

[ತುಂಬು$_{2}$ + ಕೂದಲು (< ಕೂಂದಲ್)]

**ತುಂಬುಗೆ** (ನಾ). ತುಂಬುವಿಕೆ; ಭರ್ತಿಯಾಗುವಿಕೆ: "ಪೂರ್ತಿಃ, ಪೂರ್ತಂ … ಈ ೧೦ ತುಂಬುಗೆ" (ಕಾಶಕ್ಕ. ೦೬೩). [ತುಂಬು$_{2}$ + –ಗೆ]

**ತುಂಬುಗೆಡು** (ಕ್ರಿ). ತುಂಬದೆ ಇರು; ಪೂರ್ಣತೆಯಿಲ್ಲದಿರು: ತುಂಬುಗೆಟ್ಟ ಅರೆಯಾದ ಬರಿದುಪೋದ ಬಟ್ಟಲ್ಗಳನ್ನು … ಭರಿಸುತ್ತಿರುವರು (ಬಿಟ್ಟಅ. ೮೩-೧೧). [ತುಂಬು$_{2}$ + ಕೆಡು$_{1}$]

**ತುಂಬುಗೆನ್ನೆ** (ನಾ). = ತುಂಬುಗಲ್ಲ: ತುಂಬುಗೆನ್ನೆ; ನೀಳವಾದ ಮಾಟವಾದ ಮೂಗು (ಕಳಹು. ೨). [ತುಂಬು$_{2}$ + ಕೆನ್ನೆ]

**ತುಂಬುಗೆಯ್** (ನಾ). ಪುಷ್ಟವಾದ ತೋಳು, – ಬಾಹು, – ಭುಜ: ತನ್ನುಳ್ಳ ಬಲ್ಪನಿತಟಿೂಳಂ ಮುಂತಣ್ಗೆ ನಿಂತಂ ತುಂಬುಗೆಯ್ಯಿಕ್ಕುವಿನಂ (ಚಕವಂ. ೦೬೪-೧೪). [ತುಂಬು$_{2}$ + ಕೆಯ್$_{2}$]

**ತುಂಬುಗೊಳ್ಳು** (ಕ್ರಿ). ಭರ್ತಿಯಾಗು; ಅಧಿಕಗೊಳ್ಳು; ಅತಿಶಯವಾಗು: ಮಾನುವ ಮನವು ಹರುಷಪಡಲಿ ಎಂಬ ಬಯಕೆ ತುಂಬುಗೊಂಡು ಆಸೆ ಬಲಿತು ಕನಸ ಕಲಿತು (ಮೂರ್ತಿಕಾ. ೦೬-೧೩). [ತುಂಬು$_{2}$ + ಕೊಳ್ಳು$_{1}$ (< ಕೊಳ್$_{1}$)]

**ತುಂಬುಗೋಡಿ** (ನಾ.) ೧. ತುಂಬಿ ಹರಿಯುವ ಕೋಡಿ: ಕೆರೆಯಲ್ಲಿ ತುಂಬುಗೋಡಿ ಹರಿಯುತ್ತಿದೆ (ರೂಢಿ). ೨. (ಆಲಂ) ಅತ್ಯಧಿಕ; ಅತಿಶಯ: ಬೊಕ್ಕಸ ಭಂಡಾರಗಳ ತುಂಬುಗೋಡಿಯ ಮಹಾನಿಧಿಯದನ್ನು ಪರಿಪಾಲಿಸಿಕೊಳ್ಳಬೇಕೆಂಬ ಆ ಬೆಳ್ಪಳಿಯ ಅರಿವು ನಿನಗೆ ನಿಶ್ಚಯವಾಗಿ ಇಲ್ಲ (ಮಂಕ್ರಶ. ೧೦೨-೨೫). [ತುಂಬು$_{2}$ + ಕೋಡಿ$_{1}$]

**ತುಂಬುಚೀಲ** (ನಾ). ತುಂಬಿರುವ ಚೀಲ; ಭರ್ತಿಯಾಗಿರುವ ಚೀಲ: ಎದ್ದುಹೋಗಿ ಪೆಟ್ಟಿಗೆದೆರೆದು ನಾಲ್ಕು ತುಂಬುಚೀಲಗಳನ್ನು ಆವರತ್ತಣ್ಗೆ … ಬಿಸಾಡುವನು (ಬಿಟ್ಟಅ. ೫೪-೧೮). [ತುಂಬು$_{2}$ + ಚೀಲ]

**ತುಂಬುಚ್ಚು** 'ತೂಂಬುಚುರ್' ನೋ.

**ತುಂಬುಜವ್ವನ** (ನಾ). ತುಂಬಿದ ಹರಯ; ಪೂರ್ಣವಾದ ಯೌವನ,– ತಾರುಣ್ಯ: ತುಂಬುಜವ್ವನದ ನಿತಂಬಿನಿಯರ ಕುಂಭಕುಚದಿಟುಂಬಿನೊಳೆಂಬುವಡೆದು (ರಾಜಶೇ. ೨-೮೩); ಅವನು ತುಂಬುಜವ್ವನವನ್ನು ಧರಿಸಿದನು (ಮಚಸ. ೬೪). [ತುಂಬು$_{2}$ + ಜವ್ವನ]

**ತುಂಬುಜವ್ವನೆ** (ನಾ). ೧. ತುಂಬು ಹರೆಯದ ಹೆಂಗಸು; ನವತರುಣಿ; ಯುವತಿ: ನನೆಯಂಬುವಿಡಿದಂಜಸುವ ಬೆಡಗಿನ ತುಂಬುಜವ್ವನೆ ನಾಲ್ಕು ನೀರಸು ಮಿಂದಳೊಲವಿಂದ (ಸಾಳ್ವಭಾ. ೦೩-೩೪). ೨. ತುಂಬಿದ ಎದೆಯುಳ್ಳವಳು. 'ಕಕ್ಕಸಜವ್ವನೆ' ಹೋ. [ತುಂಬುಜವ್ವನ + – ಎ$_{2}$]

**ತುಂಬುಜೀವನ** (ನಾ). ಪರಿಪೂರ್ಣವಾದ ಜೀವನ; ತೃಪ್ತಿಯ ಬಾಳು: ತುಂಬುಜೀವನದ ತುಂಬನುಭಾವದ ಬಿಂಬಾಧರೆ ಶಿವಶಾಂಭವಿಯ ಮಗಳು (ಸಿದ್ಧಪು. ೨-೯೮); ಇದು ತುಂಬುಜೀವನದ ಭಾವಾನುಭಾವಗಳ ಪರಿಪಕ್ವತೆಯ ಫಲ (ಸಾಹಿಸ. ೩೪): ವೇದಕಾಲದ ತುಂಬುಜೀವನದಲ್ಲಿ ಬ್ರಹ್ಮ

ವಾದಿನಿಯರಾದ ಮಹಿಳೆಯರು ತಮ್ಮ ಭಾವನೆಗಳನ್ನು ಸಾಹಿತ್ಯದ ಮೂಲಕ ವ್ಯಕ್ತಗೊಳಿಸಿದರು (ಕರ್ನಾಕ. ೩೯). [ತುಂಬು$_2$ + ಜೀವನ]

**ತುಂಬುಣ್ಣು** (ಕ್ರಿ). ಚೆನ್ನಾಗಿ ಊಟಮಾಡು ; ಹೊಟ್ಟೆತುಂಬ ತಿನ್ನು : ಉಂಬ ಬಾಯ್ ತಾನಾಗಿ ಉಂಡೆಲ್ಲರಂ ತಣಿಪಿ ತುಂಬುಂಡು [ ಪಾಠಾಂ. ಬಲದು] ಪಲವು ಕದಳಿಗಳೆಲ್ಲ ದಣಿದವೆಂದೆಂಬುದಂ ಮಾಡಿ ತೋಱಿದ ಮಹಾಪ್ರಭುವರನ (ಲಶಿಚಂ. ೩೨-೩೩). [ ತುಂಬು$_2$ + ಉಣ್ಣು (<ಉಣ್) ]

**ತುಂಬುದಣ್ಗದಿರ** (ನಾ). ಪೂರ್ಣಚಂದ್ರ; ಹುಣ್ಣಿಮೆಚಂದ್ರ: ನುಣ್ಗುರುಳ ನೀಱಿಗೆ ಬೆಡಂಗಮರ್ದಿಸೆವ ತುಂಬುದಣ್ಗದಿರನಂದದ ಮೊಗದ ಚೆಲ್ವಿಗೆ ... ಪೆಣ್ಗಳರಸಿಗೆ ಗರ್ಭಚಿಹ್ನಮಂಕುರಿಸಿದುದದಂ ಪೊಗಳ್ವ ಕವಿ ಯಾವನೋ (ಪದ್ಮರಾ. ೨-೩೮). [ ತುಂಬು$_2$ + ತಣ್ಗದಿರ ]

**ತುಂಬುದಿಂಗಳು** (ನಾ). =ತುಂಬುದಣ್ಗದಿರ: ತುಂಬುದಿಂಗಳ ಮೊಗ ತುಱು ಗೆಮೆಯಲರ್ಗಣ್ ತುಂಬಿಗುರುಳು (ಶ್ರೀಪಾಲ. ೩-೨೪) : ತುಂಬುದಿಂಗಳು ಮೊಗದ ನಸುನಗೆಯೆಂಬ ಬಾಂದೊಱೆದೆರೆವೊಯದು ... ಅಂಬುಮೆಱೆ ವರು ಪಥಿಕರಿಗೆ (ಸಾಳ್ವಭಾ. ೧-೬೨) : ತುಂಬುದಿಂಗಳ ಕನಕಬಿಂಬಕ್ಕೆ ಪೊನ್ ತನಂ ಬಾಡಿ, ಮೂಡಿದುದು ಬೆಳ್ಪಿಯತನಂ (ಶ್ರೀರಾಮಾ. ೪೮೦-೧೬೩).
[ ತುಂಬು$_2$ + ತಿಂಗಳು (<ತಿಂಗಳ್) ]

**ತುಂಬುದೆರೆ** (ನಾ). ಸಂಪೂರ್ಣವಾಗಿ ಮುಚ್ಚಿರುವ ತೆರೆ, - ಪರದೆ : ಚಂದ್ರಗಾಮಿಯು ಮೇಲ್ಕಟ್ಟನೊಳುವಣ್ಣದ ತುಂಬುದೆರೆಯು... ಮುಂಚದ ಸೆಳೆದಪ್ಪೊ ಮೋಹನರೂಪ (ಕಂಸವಿ. ೯-೧೮೮). [ ತುಂಬು$_2$ + ತೆರೆ$_4$ ]

**ತುಂಬುನಂಬಿಗೆ** (ನಾ). ಪೂರ್ತಿನಂಬಿಕೆ ; ಸಂಪೂರ್ಣವಿಶ್ವಾಸ: ತಂದೆ ಬಂದವಿದೂ ತುಂಬುನಂಬಿಗೆಯು ಹಡಗದಲ್ಲಿ ಕುಳಿತು (ನೆಲಮು. ೩೬-೦೫).
[ ತುಂಬು$_2$ + ನಂಬಿಗೆ (<ನಂಬುಗೆ) ]

**ತುಂಬುನಗೆ** (ನಾ). ಪೂರ್ಣವಾದ ನಗೆ : ಆಗಸದ ಗಂಟುಮೋರೆಯಲಿ ಹೊಂಬಿಸಿಲ ತುಂಬುನಗೆ ಹರಿಸಿ ಹರಿದಿಹುದು ನೀರು (ನೆಲಮು. ೦೫-೦೩) : ಸವಿಹಸಿವೆ ಕಂಬನಿಯು ತುಂಬುನಗೆಯೊಮ್ಮೆ (ಕಾಲೂರ. ೩೧-೨೬).
[ ತುಂಬು$_2$ + ನಗೆ ]

**ತುಂಬುನೀರು** (ನಾ). ಅಣೆಕಟ್ಟು ಮೊದಲಾದ ಜಲಾಶಯಗಳು ಭರ್ತಿಯಾದಾಗ ಇರುವ ನೀರು : ಮುಂದುಗಡೆಯ ಕೊಳದ (Forebay) ತುಂಬುನೀರಿನ ಮಟ್ಟ ೧೬೪೦ ಅಡಿ (ಶಿಲ್ಪನಾ. ೨೪೬).
[ ತುಂಬು$_2$ + ನೀರು$_1$ (<ನೀರ್$_1$) ]

**ತುಂಬುನೊಸಲ್** (ನಾ). ವಿಸ್ತಾರವಾದ ಹಣೆ ; ವಿಶಾಲವಾದ ಹಣೆ : ಸುಱಿಗುರುಳ ತುಂಬುನೊಸಲ ಅಸಿಯ ಬೊಟ್ಟಿನ ನೀಳ್ದ ಪುರ್ಬಿನ ... ವಿದ್ಯಾಧರವಾರನಾರೀಕದಂಬಂ (ಧರ್ಮಾಮೃ. ೮-೧೯೬).
[ ತುಂಬು$_2$ + ನೊಸಲ್ ]

**ತುಂಬುಪಾಂಡಿತ್ಯ** (ನಾ). ಸಂಪೂರ್ಣವಾದ ವಿದ್ವತ್ತು : ತುಂಬುಪಾಂಡಿತ್ಯ, ಕವಿಸಹಜವಾದ ಕೋಮಲಹೃದಯ (ಕನ್ನಪು. I, ೦೨) ; ಉಪನ್ಯಾಸಕರ ತುಂಬುಪಾಂಡಿತ್ಯವು ಕೇಳುವವರನ್ನು ಆಶ್ಚರ್ಯಪಡಿಸಿತು (ರೂಢಿ).
[ ತುಂಬು$_2$ + ಪಾಂಡಿತ್ಯ ]

**ತುಂಬುಪೆರೆ** 'ತುಂಬುಮೆಱೆ' ನೋ.

**ತುಂಬುಬಸಿರ್** (ನಾ). ಹೆರಿಗೆಕಾಲ ಸಮೀಪಿಸಿರುವ ಗರ್ಭ ; ಪೂರ್ಣಗರ್ಭ : ದಶರಥಸತಿಯರಿಂತು ತುಂಬುಬಸಿರಿಂದೆಸೆಯೆ ನಲಿದತ್ತಯೋಧ್ಯೆ (ಶ್ರೀರಾಮಾ. ೦೫-೩೯೨). [ ತುಂಬು$_2$ + ಬಸಿರ್ (<ಬಸಿಱ್) ]

**ತುಂಬುಬಸಿರಿ** (ನಾ). ಹೆರಿಗೆಯ ಕಾಲ ಸಮೀಪಿಸಿರುವ ಗರ್ಭಿಣಿ ; ನವಮಾಸ ತುಂಬಿರುವ ಬಸಿರಿ ; ಪೂರ್ಣಗರ್ಭಿಣಿ : ತುಂಬುಬಸಿರಿಯರು, ಹಾಲುಮಕ್ಕಳು ಸತ್ತ ಲೆಕ್ಕವ ದೇವರೆ ಬಲ್ಲ (ಇಂಗೀತ. ೩೩-೨೦).
[ ತುಂಬುಬಸಿರ್ + -ಇ$_3$ ]

**ತುಂಬುಬಾಳ್** (ನಾ). = ತುಂಬುಜೀವನ : ನೆಗೆಯುತಿದೆ ಮತ್ತೊಮ್ಮೆ ನಮಗದೋ ತುಂಬುಬಾಳ್ ಬೀರಿ ಹರಿಯ ಬೆಳಕೊಂದು ಸಿರಿ ಸಾರಿ (ಹೊಂಗಳು. ೩೩-೧೧). [ತುಂಬು$_2$ + ಬಾಳ್$_2$ (< ಬಾೞ್$_2$)]

**ತುಂಬುಬಿಂಬ** (ನಾ). ಸಂಪೂರ್ಣವಾಗಿರುವ ಮಂಡಲ,-ಆಕಾರ,-ಸ್ವರೂಪ : ತುಂಬುಬಿಂಬಂ ತೋರಿದುದು ಪಾಡಿವದ ಪೆರೆಗೆ (ಶ್ರೀರಾಮಾ. ೬೩೯-೨೬೬). [ತುಂಬು$_2$ + ಬಿಂಬ]

**ತುಂಬುಬೆಳೆ** (ನಾ). ಅಧಿಕವಾದ ಬೆಳೆ ; ಹೆಚ್ಚಾದ ಬೆಳಸು : ಬಯಲಲಿ ಪಚ್ಚೆಯ ಪಯಿರಿನ ತುಂಬುಬೆಳೆ (ಹೊಂಗಳು. ೦೦-೧೧). [ತುಂಬು$_2$ + ಬೆಳೆ$_2$]

**ತುಂಬುಮೊಲೆ** (ನಾ). (ಹಾಲಿನಿಂದ) ತುಂಬಿಕೊಂಡಿರುವ ಕುಚ,-ಸ್ತನ: ತಾಯಿ ಬೊಚ್ಚಲಮಗುವ ನಲ್ಮೆಯಲಿ ಹೆತ್ತು, ತುಂಬುಮೊಲೆಯನು ಕೊಟ್ಟು, ಕೆನ್ನೆಯಲಿ ಮುತ್ತಿಟ್ಟು (ಪಾಂಚಜ. ೨೯-೯). [ತುಂಬು$_2$ + ಮೊಲೆ$_1$]

**ತುಂಬುಯೌವನ** (ನಾ). = ತುಂಬುಜವ್ವನ : ಕೆಲವರು ತುಂಬುಯೌವನದಲ್ಲಿ ಸಾಯುತ್ತಾರೆ (ಪಚಥಾ. ೩೪೩). [ತುಂಬು$_2$ + ಯೌವನ]

**ತುಂಬುರ್**, ತುಂಮುರಿ, ತುಮ್ರಿ$_1$ (ನಾ). = ತುಂಬುರು$_2$ : ಅರಸೇಱಿಲ್ ತಾಱೆ ತುಂಬುರ್ ತದುಕಳಿಲೆ ಲವಂ ನೆಲ್ಲಿ ಬಿಲ್ವಾರ್ಜುನಂ ... ತಱಿಯದಿಂದೊಪ್ಪುತಿರ್ದತ್ತರಣ್ಯಂ (ಗಿರಿಕ. ೧-೬೨). **ತುಮುರಿ** : ತುಮುರಿಯ ಕೊಳ್ಳಿಯಂತೆ ಉರಿವಾತ ಭಕ್ತನೆ (ಸರ್ವವ. ೧೮೫-೮೫೦). **ತುಮ್ರಿ$_1$** : ಕಣ್ತುಮ್ರಿ, ತುಮ್ರಿ (ಮ್ಯಜಿಗಿ. ೩೦-೫೯೮). 'ಕಣ್ತುಮ್ರಿ' ಪರಾ.
[ < ಸಂ. ತುಂಬುರು./ತಮಿ. ತುಮ್ಪ, ತುಮ್ಪಿಲಿ; ತೆಲು. ತುಬಿಕಿ. ತುಮಿಕಿ, ತುಮ್ಮಿಕಿ ; ಕೊಲಾ. ನಾಯ್ಕಿ. ತುಮ್ಕಿ ; ಪರ್ಜಿ. ತುಂಬ್ರಿ ]

**ತುಂಬುರ$_1$**, ತಂಬುರಿ (ನಾ). [ಸಂಗೀತ] ಒಂದು ಬಗೆಯ ವೀಣೆ : ತುಂಬುರವಿಡಿದು ಗಾನಾಮೃತವನು ಕಿವಿಗಿಂಬಾಗಿ ಸವಿದೋಱಿಸುತ (ಕಂಸವಿ: ೮-೩೩) : ಬಾಲಶಾರದೆಗಳೆನಲು ತುಂಬುರವನಾಂತು ಲೋಲಾಕ್ಷಿಯರಿರ್ವರಾಗ ... ಪಾಡಿದರೊಲಿದು (ಕಂಸವಿ. ೮-೬೫). **ತುಂಬುರಿ** : ಸುರಮುನಿಯ ತುಂಬುರಿಯೊ, ನಂದಿಯ ಮೃದಂಗವೊ (ದುಂಬಿನಾ. ೧).
[< ಸಂ. ತುಂಬರೀ]

**ತುಂಬುರ$_2$** (ನಾ). = ತುಂಬುರು$_3$ : ತೌಂಬುರವೀಣೆಯ ತುಂಬುರರಿಂ ಕಿನ್ನರವೀಣೆಯ ಕಿಂಪುರುಷರಿಂದಂ ... ಒಪ್ಪಿದತ್ತು ಮಹಾಲಿಂಗದಾಸ್ಥಾನಂ (ಹಮ್ಮೀರ. ೮-೪೦ವ); ವಿಷ್ಣುದೂತರಾ ತುಂಬುರನಂ ಕಯ್ವಿಡಿದು ಕರದುಯ್ಯೆ (ಅದ್ಭುತ. ೨೦-೦೧). [ ಸಂ. ]

**ತುಂಬುರ$_3$** (ನಾ). = ತುಂಬುರು$_2$: "ತಿಂದುಕಃ, ಸ್ಫೂರ್ಜಕಃ, ಕಾಲಸ್ಕಂಧಃ, ಸಿತಸಾರಕಃ - ಈ ೪ ತುಂಬುರ" (ನಾಚಿರಾ. ೦೦೬) ; ಮಾಳಿಕಬ್ಬರಸಿ ತುಂಬುರ ಬೆಳದ ಬೋಗಿನಲು ಎಡೆಯೂರ ಪೊಲದೊಳ್ ಬಿಟ್ಟ ಮತ್ತ ಪ್ಪನ್ನೆರಡು (ಎಕ. XI, ಮೊಳಕಾ. ೪೦-೬ ; 987) : ತಾಳಫಲಂಗಳೊಂದು ರುಚಿ ತುಂಬುರಪಣ್ಗೊಳಗುಂಟೆ ಲೋಕದೊಳ್ (ಧರ್ಮಾಮೃ. ೪-೦೨೬) : ಬಸುರಿ ಬಿಳುನೆತ್ತಿ ತುಂಬುರ ಬಿಕ್ಕೆ ನೆಲ್ಲ ಚಂದಣವತ್ತಿ ... ಕಣ್ಗೆಸೆದುದು (ಸಿಂಗಿರಾ. ೩೦-೯). [ ಸಂ. ]

**ತುಂಬುರಕಾಯಿ** (ನಾ.) ತುಂಬುರುಮರದ ಕಾಯಿ : "ತಿಂದುಫಲಃ- ತುಂಬುರಕಾಯಿ" (ಒಷಧಿ. ೬೯). [ತುಂಬುರ$_3$ + ಕಾಯಿ$_4$ (<ಕಾಯ್$_4$)]

**ತುಂಬುರಕೊಳ್ಳಿ** 'ತುಂಬುರಗೊಳ್ಳಿ' ನೋ.

**ತುಂಬುರಗುತ್ತಿ** (ನಾ). ತುಂಬುರಗಿಡದ ಪೊದರು,—ಮೆಳೆ : ಹಡಿಲ ಬೆಂಚೆಯ ಮುಂದಣ ಕೆಚೆಯ ತೆವರ ತುಂಬುರಗುತ್ತಿ ಮೇಳೆಗಳೊಳಗಣ ತೆಂಕಣದಿಕ್ಕಿನ ಕಲ್ಲವೊಂದು (ಎಕ. XII, ತುಮಕೂ. ೧೧-೬೨ ; 1426).
[ತುಂಬುರ$_3$ + ಗುತ್ತಿ$_1$]

**ತುಂಬುರಗೊಳ್ಳಿ**, ತುಂಬುರಕೊಳ್ಳಿ (ನಾ). = ತುಂಬುರುಗೊಳ್ಳಿ : ತುಂಬುರಗೊಳ್ಳಿಯಂದದಿ ಛಿಟಛಿಟಲೆಂದು ಕಣ್ಗಳ ಸೋಗೆಯೊಳು ಒಂದಿದ

ಕಂಪಿನಿಂದಾ ಚಕ್ರವರ್ತಿಯಿಂತೆಂದು ಬೆಟ್ಟೆಯನಾಡಿದನು (ನೇಮಿಸಂ. ೨೬-೨೦) : ಪಲ್ಲ ಕಡಿದು ಕಣ್ಣು ಕೆಂಪೇಱಿ ತುಂಬುರಗೊಳ್ಳಿಯಂತುರಿ ಛಿಟಿಛಿಟಿಸಿ (ಭರತ. ೨೪-೯೫). **ತುಂಬುರಕೊಳ್ಳಿ :** ಚರವಚನಮನಾಲಿಸಿ ತುಂಬುರ ಕೊಳ್ಳಿಯ ತೆಱದಿನಂಬರಕ್ಕೆ ಸಿಡಿಲ್ದು (ಪಂಚಾಮೂ. ೪-೩೯) ; ಕೋಪಾಗ್ನಿ ಭೋಂಕನುಣ್ಮೆ ತುಂಬುರಕೊಳ್ಳಿಯ ತೆಱದಿಂದಂಬರವಂ ಮುಟ್ಟೆ (ನೇಮಿಪು. ೧೧-೧೯) : ರಜಕನಂಬರಂಬರಂ ತುಂಬುರಕೊಳ್ಳಿಯಂತೆ ಸಿಡಿದಿಂತಪ್ಪ ಸಿತಗನನೆಲ್ಲಿಯುಂ ಕಾಣೆಂ . . . ಅತ್ತ ಸಾರೆಂದು ಮುಂದೀಡಾಡಿ (ಅರ್ಧನೇ. ೮-೬೬ವ). [ತುಂಬುರ$_3$+ಕೊಳ್ಳಿ$_1$]

**ತುಂಬುರವೀಣೆ** (ನಾ). ಒಂದು ಬಗೆಯ ವೀಣೆ : ರುದ್ರವೀಣೆ ತುಂಬುರ ವೀಣೆ . . . ಮೊದಲಾದ ತಂತಿ ಕಟ್ಟಿ ನುಡಿವ ವಾದ್ಯವನಱುವುದು ಪ್ರಸಾದ ಲಿಂಗದಲ್ಲಿಯ ಗುರುಲಿಂಗ (ಆದವ. ೬-೧೨) : ಕೋಣನಿದಿರಲಿ ವಾಡಿ ತುಂಬುರವೀಣೆಯಂ ಝೇಗ್ಯದ ಪರಿ (ಗಗಶಾ. ೦೨-೮೪); ವಾಸುಗಿಯು ನಾಗಸರವೀಣೆ ತುಂಬುರವೀಣೆಯಾ ಸುನಾರದವೀಣೆ (ನವಮೋ. ೧೬-೪೨).

[ತುಂಬುರ$_2$ + ವೀಣೆ]

**ತುಂಬುರಿ** 'ತುಂಬುರು$_1$' ನೋ.

**ತುಂಬುರು$_1$** (ನಾ). ಒಂದು ಬಗೆಯ ಧಾನ್ಯ ; ಲವಣ ಪಂಚಕಮಿಂಗು ಪಿಪ್ಪಲಿ ಶುಂಠಿ ತುಂಬುರುಧಾನ್ಯಕಂ ಶಿವೆ ದುರಾಲಭೆ ಪಾಠೆ ಚಿತ್ರಕಮೋವ ಮೆಂಬಿವನೆಲ್ಲಮಂ ಸವನೆ ಕೊಂಡು (ಲೋಕೋಪ. ೯-೨೨೯) ; ತುಂಬುರು ಪೆರ್ಚಲ್ ಜೋಳವಳುಂಬಂ (ಜಟ್ಟಿಮು. ೪-೦೨).

[ <ಸಂ. ತುಂಬುರೀ ]

**ತುಂಬುರು$_2$** (ನಾ). ಬಿಗಿಯಾದ ಅಂಟುಳ್ಳ ಹಣ್ಣುಗಳನ್ನೂ ಬೀಡಿ ಕಟ್ಟಲು ಉಪಯೋಗಿಸುವ ಎಲೆಗಳನ್ನೂ ಬಿಡುವ ಮರ ; ತಿಂದುಕ; ☞ ಕೆಲವು ಕೋಶಗಳಲ್ಲಿ ತಿಂದುಕ ಮತ್ತು ತುಂಬುರು ಬೇರೆ ಬೇರೆ ಎಂದು ಹೇಳಿದೆ: "ತುಂಬುರು ತಿಂದುಕಮೆನಿಪ್ಪುದಕ್ಕುಂ ಪೆಸರಿಂ" (ವಸ್ತುಕೋ. ೩೪-೧೦) : ಗುಳವತ್ತಿ ತುಂಬುರು ನಗರೆ ಮುಂತಾದ ಪಣ್ಗಳ ತಂದರಾಳ್ದನ ಬಳಿಗೆ (ಮೋಹತ. ೦೯-೫೬). 'ತುಂಬುರುಗೊಳ್ಳಿ' ಪರಾ.

[ ಸಂ. ]

**ತುಂಬುರು$_3$** (ನಾ). ಒಬ್ಬ ಗಂಧರ್ವನ ಹೆಸರು : ಪುಷ್ಪಕೇತುಪರ್ವತ ದಲ್ಲಿ ನಾರದ ತುಂಬುರು . . . ದೇವಮುನಿಗಳ ದಿವ್ಯಾಲಯಂಗಳುಂ (ವಿವೇಕ. ೨೧೬): ತುಂಬುರು ನಾರದರು ಪಾಡುತಿಹರೋ ದೇವ (ಪುರಂದ. ೨-೬೭-೧).

[ ಸಂ. ]

**ತುಂಬುರುಕೊಳ್ಳಿ** 'ತುಂಬುರುಗೊಳ್ಳಿ' ನೋ.

**ತುಂಬುರುಗೊಳ್ಳಿ, ತುಂಬುರುಕೊಳ್ಳಿ** (ನಾ). ತೊಪರೆಗಿಡದ ಸೌದೆಯಿಂ ದಾದ ಕೊಳ್ಳಿ ; ☞ ತೂಬರದ ಮರ ಚೆನ್ನಾಗಿ ಉರಿಯುವುದಿಲ್ಲ. ಒಲೆಗೆ ಹಾಕಿದರೆ ಸಶಬ್ದವಾಗಿ ಕಿಡಿ ಹಾರುತ್ತದೆ : ಬಲಿ ತನ್ನ ನೀಂದ್ರರ ವಚನಕ್ಕೆ ತುಂಬುರುಗೊಳ್ಳಿಯಂತೆ ಸಿಡಿಲ್ದು (ಧರ್ಮಾಮೃ. ೯-೬೩); ಒಮ್ಮೆ ತುಂಬುರುಗೊಳ್ಳಿಯೆನೆ ಚಿಮ್ಮಿ . . . ಹರಿತಂದುದಾ ಗಾಳಿ (ಶ್ರೀರಾಮಾ. ೨೪೨-೪೦೦). **ತುಂಬುರುಕೊಳ್ಳಿ:** ಹಿಡಿಂಬನಾಡಂಬರಂಗೆಯ್ದು ತುಂಬುರು ಕೊಳ್ಳಿಯಂತಂಬರಂಬರಂ ಸಿಡಿಲ್ದು (ಪಂಪಭಾ. ೩-೧೬ ವ).

[ ತುಂಬುರು$_2$ + ಕೊಳ್ಳಿ$_1$ ]

**ತುಂಬುರುಸು** (ನಾ). ಒಂದು ಬಗೆಯ ಮರ : ಮಲ್ಲಾಳಿ, ಅಬನಾಸಿ, ತುಂಬುರುಸು (ಮೃಜಿಗಿ. ೩೦-೬೦೦). [ ? ]

**ತುಂಬುವರಯ** (ನಾ). = ತುಂಬುಜವ್ವನ : ನಿನ್ನ ತುಂಬುವರಯದ ಗಂಡ ದೋಳ್ಗಳ ತಳ್ತಪ್ಪುಗೆಯಲ್ಲಿ . . . ಕರ್ಕಶಾಹಂಕಾರವನ್ನೊಡೆದು ಮಣ್ಮಳಿ ಗಿಳಿಬಿ ಬಾಗಿಸಿಕೊ ! (ಜಟ್ಟಿಅ. ೮೬-೨).

[ ತುಂಬು$_2$ + ಹರಯ ( < ಪರಯ) ]

**ತುಂಬುವರಿಯಿಸು** (ಕ್ರಿ). ಭರ್ತಿಯಾಗಿ ಹರಿಯುವಂತೆ ಮಾಡು : ಚಂದ್ರ ಕಾಂತದ ನೆಗೆದ ಮುಗಿಲಟ್ಟಣೆಗಳಂ ಮೆಟ್ಟಿ ಬಡಹಮನೊಡರ್ಚಿ ಬಳಸಿದ ಗಟನೊಗುವಿಗೆ ತಿಂಬಿ ತುಂಬುವರಿಯಿಸಿಯುಂ (ಚಂದ್ರಪ್ರ. ೮-೪೩ವ).

[ ತುಂಬು$_2$ + ಪರಿಯಿಸು ]

**ತುಂಬುವಾಳೆಗಾಯ್** (ನಾ). ಬಾಳೆಯಕಾಯಿಯಿಂದ ಮಾಡುವ ಒಂದು ಬಗೆಯ ಪಲ್ಯ : ಪಿರಿದಾಗಿ ಬಲಿದ ಬಾಳೆಯಕಾಯಿಗಳನು ತಂದು . . . ಪೊಗ್ಗರಣೆಮಾಡಿ ಹೂವಿಂದ ಪೊರೆಯಿಟ್ಟು ಮಡಕೆಯೊಳಿರಿಸಲದು ತುಂಬು ವಾಳೆಗಾಯ್ಯೆಸರಾದವು [ ಪಾಠಾಂ. ಬಾಳೆಯಕಾಯಿಪೆಸರಾದುದು ] (ಸೂಪಶಾ. ೪-೬೪). [ತುಂಬು$_2$ + ಬಾಳೆ$_1$ (<ಬಾಟೆ) + ಕಾಯ್$_4$]

**ತುಂಬುವೆರೆ** 'ತುಂಬುವೆಱೆ' ನೋ.

**ತುಂಬುವೆಱೆ, ತುಂಬುಪೆರೆ, ತುಂಬುವೆರೆ, ತುಂಬುಹೆರೆ** (ನಾ). ತುಂಬಿದ ಚಂದ್ರ ; ಪೂರ್ಣಚಂದ್ರ : ಆ ತುಂಬುವೆಱೆಯ ತಿಳಿವೆಳಗು ವಿರಹಿವ್ರಜಕೆ ಮಾತೇನವಸ್ಥೆಯಂ ಮಾಡುತಿರಲು (ಸಮ್ಯಕ್ತ್ವ. ೦-೪೦); ಕಱೆಯೆಂಬ ನುಡಿ ತುಱುಗಾರ್ತಿಯರೊಳು ತುಂಬುವೆಱೆಯೊಳು (ಕುರಾಸಾಂ. ೨-೬೮): ತುಂಬುವೆಱೆಯಂ ಪೊಱಪೊಣ್ಮುವ ಜೊನ್ನದಂತೆ (ರಾಜಶೇ. ೧-೮೪): ಬೆಳ್ವಕ್ಕದ ತುಂಬುವೆಱೆಗಳನೊಟ್ಟಿಸಿ . . . ಸಮೆದುದೆಂಬಂತಿರೆ (ರಾಮಾಶ್ವ. ೫೨-೧೬). **ತುಂಬುಪೆರೆ:** ತುಂಬುಪೆರೆಯನು ಕಂಡು ಕಡಲುಬ್ಬಿ ಹರಿವಂತೆ (ಮಲೆದೇ. ೪೫-೦): ಸುಗ್ಗಿಯಲಿ ತುಂಬುಪೆರೆ ತಂಗಾಳಿ ಹೂಗಣೆಯರೊಡ್ಡಿ ದುರುಳಿಗೆ ಸಿಲುಕಿ ಅಳುಕದೆ ಇಹರು ಉಂಟೇ ? (ಚಂದ್ರಸ. ೮೬-೧೬). **ತುಂಬುವೆರೆ:** ತುಂಬುವೆರೆ ಮೋರೆಯಂ ಮೆಟ್ಟಿ ಬಂದಿಹ ಕೆಚ್ಚು ಕುಂಬಿಡುವುದೆನೆ (ಕಾಲೂರ. ೦೪೯-೩೨೫) : ಕಡಲಾಳವನುಗಿದುಬಂದ ತುಂಬುವೆರೆ ತಾಸು ! (ಚಿಂತನ ೨-೫). **ತುಂಬುಹೆರೆ:** ಎಳೆಯ ಹೆರೆಯೊಳೆ ತೊಳಗಿ ತುಂಬುಹೆರೆಯಾಗಿ . . . ಒಂದು ದಿವ್ಯ ಮಣಿ ಬೆಳಕು, ಮೂಡಿ (ಹೊಂಗಳು. ೩೪-೨೦). [ತುಂಬು$_2$ + ಪೆಱೆ]

**ತುಂಬುವೇಱು** (ನಾ). (ಬಂಡಿಯಲ್ಲಿ) ತುಂಬಿರುವ ಹೇರು,– ಹೊರೆ : ಸಂಬುಕ ಪಡಗು ಜೋಗುಗಳಿಗೆ ಸುಂಕವು ಕೊಂಬ ರಾಜೇಂದ್ರನಿದಿರೊಳು ತುಂಬುವೇಱಿಗೆ ಸುಂಕವ ಕೊಂಬ ನೃಪರಾಡಂಬರ ನೆರೆಯಲಾರ್ತಪುದೆ (ಕುರಾಸಾಂ. ೦೦-೨೦). [ತುಂಬು$_2$ + ಪೇಱು$_3$]

**ತುಂಬುಸಭೆ** (ನಾ). ಜನರಿಂದ ತುಂಬಿರುವ ಸಭೆ : ನಿನ್ನ ಮೇಲೊಂದು ಪದ್ಯವ ಬರೆದು, ಕನ್ನಡಿ ಕಟ್ಟುಹಾಕಿ ತುಂಬುಸಭೆಯೊಳು ಮಾನಪತ್ರ ಸಲಿಸುವೆವು (ನೆಲಮು. ೨೬-೦೯). [ತುಂಬು$_2$ + ಸಭೆ]

**ತುಂಬುಹೆರೆ** 'ತುಂಬುವೆಱೆ' ನೋ.

**ತುಂಬುಳು** (ನಾ). ಒಂದು ಬಗೆಯ ಹುಳು : ಸ್ಪರ್ಶರಸಗಂಧಂಗಳೆಂಬೀ ಮೂಱನಱಿವ . . . ಬೆದೆವುಳು ತುಂಬುಳು ಮೊದಲಾದವಱೊಳಂ (ಪಸಾರ. ೯೫-೦೮). [ತುಂಬು$_0$ + ಪುಳು]

**ತುಂಬೆ$_1$** 'ತುಂಬಿ$_1$' ನೋ.

**ತುಂಬೆ$_2$, ತುಂಬಿ$_2$** (ನಾ). ಬಿಳಿಯ ಸಣ್ಣಹೂವುಗಳನ್ನು ಬಿಡುವ ಒಂದು ಬಗೆಯ ಗಿಡ ಮತ್ತು ಅದರ ಹೂವು: "ಅತಿಚ್ಛತ್ರ = ತುಂಬೆಯ ಗಿಡ" (ಅಕಾನಿ. ೧-೨೬); ತಿಲತೈಲಮಂಬಿಲಂ ತುಂಬೆ ಲೊಕ್ಕಿ ಸೊರೆ ಸುಣ್ಣಮೆರ್ಕೆ ಯೆಲೆ ಸಾಸಿವೆ ತಂಬುಲದೆಲೆಯಿವನಿಕ್ಕುಗೆ ಗೋಕುಲಕ್ಕೆ ರುಜೆ ತೀರ್ಗುಂ (ಲೋಕೋಪ. ೯-೨೦೮) ; ತುಂಬೆ ಲೊಕ್ಕಿ ಸಹ (ಸಾಇಎ. ೦೯೨೯, ಮಂಗಳೂರು. ೪೬೯-೦೬ : 1370) : ಜಾಜಿ ಬಕುಳಂ ತುಂಬೆ . . . ಇವು ಶುಭ್ರಪುಷ್ಪಂಗಳೊಳು ಫಲಾಧಿಕಮಪ್ಪವು (ವೀಶೈಪು. ೭-೧೦-೧೬) : ಭ್ರಮರ ನೆರೆದೊಂದಾಗಿ ತುಂಬೆ [ಪಾಠಾಂ.ಬಿ]ಯ ಹೂವ ನೆಱೆ ಬಿಟ್ಟು ನಿಮಿರ್ದ ಪಾದರಿಪೂಗೆಱಗಿದಂತೆ (ಸಾಳ್ವಭಾ. ೪-೧೮) : ತುಂಬೆ ಹೂವಿನ ಪೂಜೆ (ಮೈಅರಿ. ೦೯೩೯, ೩೩-೧೨ : 1560). **ತುಂಬಿ$_2$:** ಪಲ್ಲವಿಪ ಕಕ್ಕೆ ಬಿಳಿಯೆಕ್ಕೆಗಳ ಮೊತ್ತಮಂ ರುದ್ರ

ಜಟೆಯುಂ ತುಂಬಿ [ಪಾಠಾಂ.ಬೆ] ಯುಂ ಕಂಚವಾಳಮುಂ ಭದ್ರಮುಖಿ ಮೊದಲಾದ ನವಪತ್ರಜಾಲಮುಂ ಕಂಡು (ಪುಷ್ಪರ. ಹ. ೫೨೩-೫) : ಲೋಲತರ ಕಿರುಕಸಾಲೆಯ ಪುಂಡಿ ತುಂಬಿ ಬಸಳೆಯ ಭಂಗಿಸೊಪ್ಪುಗಳನು (ಮಹಾವಿ. ೧೧-೩೫). [ ದೇ.॥ ತಮಿ. ತುಮ್ಪೈ ; ಮಲ. ತುಮ್ಪ ; ತುಳು. ತುಂಬೆ. ತುಂಬಿ ; ತೆಲು. ತುಮ್ಮಿ]

**ತುಂಬೆ$_3$** 'ತುಂಬು$_4$' ನೋ.

**ತುಂಬೆಗಿಡ** (ನಾ). = ತುಂಬೆ$_2$ : "ದ್ರೋಣಃ – ಕರೀಕಾಗಿ, ನಾಗಳ, ತುಂಬೇಗಿಡ" (ಸಿದ್ಧಾಂತಿ. ೩೩೨) ; ಯಾವ ಕೈಗಳ ಸ್ಪರ್ಶದಿಂದ ತುಂಬೆಗಿಡವೂ ತಾಳೆಯಂತೆ ಬಾನಿನೆತ್ತರ ಬೆಳೆಯುಬಹುದೋ (ಅರರೋ.೨).

[ತುಂಬೆ$_2$ + ಗಿಡ ( < ಗಿಡು)]

**ತುಂಬೆದೆ** (ನಾ). ತುಂಬಿದ ಎದೆ : ಹರಿಯುತ್ತಿರುವಳು ಕನ್ನಡತಾಯಿಯ ತುಂಬೆದೆ ಸೂಸಿದ ಸುಕುಮಾರಿ ! (ಅಗ್ನಿಹಂ. ೩೨-೨).

[ ತುಂಬು$_2$ + ಎದೆ ( <ಎರ್ದೆ) ]

**ತುಂಬೆಪಾದಿ** (ನಾ). ಒಂದು ಊರಿನ ಹೆಸರು : ತುಮ್ಬೆಪಾದಿಯೊಳ್ಕಾದಿ ಕಾಳೆಗವಿಮ್ಬುಟಿದೊಡೆ ಆನೆಯೊಳಾನ್ತಿಱಿದು ಸತ್ತೊಡೆ (ಎಕ. IX, ಬೆಂಗಳೂ. ೮೩-೪ : ಸು. 890). 'ತುಂಬೆವಾಡಿ' ಪಠಾ. [ ? ]

**ತುಂಬೆಮರ** (ನಾ). ಒಂದು ಬಗೆಯ ಮರ : ಬಿಳೀಜಾಲಿ, ತೊಪ್ಪಾಲೆ, ಸಾರಾಯಿಬೇಲ, ತುಂಬೆಮರ (ಮೃಚ್ಛಿಗಿ. ೧-೧೬). [ತುಂಬೆ$_0$ + ಮರ$_1$]

**ತುಂಬೆವಾಡಿ** (ನಾ). ಒಂದು ಊರಿನ ಹೆಸರು : ಬಿದಿರೂರಲು ಬೂತುಗನಂ ತುಮ್ಬೆವಾಡಿಯು ಗಡ್ಡಯ್ಯನ ಮಗಂ ಪೊನ್ನಿಗಂ ಕಾದಿ ಸತ್ತು ಸ್ವರ್ಗ್ಗದಲಿಟ್ಟಂ (ಎಕ. XII, ಮಧುಗಿ. ೨೭-೧೮ : ಸು. 950). [ತುಂಬೆ$_0$ + ವಾಡಿ$_1$]

**ತುಂಬೆವಿಂಡು** 'ತುಂಬಿವಿಂಡು' ನೋ.

**ತುಂಬೆಹುಳ** (ನಾ). ಅಳಿ ; ತುಂಬಿ : " ಮಧುವ್ರತಃ ... ರೋಲಂಬಃ, ಬಂಭರಃ ಈ ೧೫ ತುಂಬಿಯ ಹೆಸರುಗಳಂ. ತುಂಬೆಹುಳ" (ಸಿದ್ಧಾಂತಿ. ೦೪೨).

[ತುಂಬೆ$_1$ (<ತುಂಬಿ$_1$) + ಹುಳ ( <ಪುೞು)]

**ತುಂಬೊಲುಮೆ** (ನಾ). ಹೆಚ್ಚಾದ ಪ್ರೀತಿ ; ಅಧಿಕವಾದ ಅಕ್ಕರೆ: ಮರದೊಳೆಂತೋ ಅಂತೆ ತುಂಬೊಲುಮೆ ಸಂತನಡೆ ನಿಶ್ಶಂಕೆಯೊಳು ನೆರೆವ ಹಕ್ಕಿಗಳ ತೆರದಿ (ಮಲೆದೇ. ೪೫-೧). [ತುಂಬು$_2$ + ಒಲುಮೆ ( <ಒಲ್ಮೆ)]

**ತುಕಡಾ** 'ತುಕಡಿ$_2$' ನೋ.

**ತುಕಡಿ$_1$** (ನಾ). (ಕರಾ) ಗೋದಿಯ ಹಿಟ್ಟಿನಿಂದ ಕರಿದು ಮಾಡುವ ಒಂದು ಬಗೆಯ ತಿಂಡಿ ; ಶಂಕರಪೋಳಿ. [← ತುಳು. ತುಕುಡಿ]

**ತುಕಡಿ$_2$**, ತುಕಡಾ, ತುಕ್ಕಡ, ತುಕ್ಕಡಿ (ನಾ). ೧. ತುಂಡು ; ಚೂರು ; ತುಣುಕು : ಅವನ ಮೈಮೇಲಿನ ಅರಿವೆಯ ತುಕಡಿಯನ್ನು ಹರಿದುಕೊಂಡು ಅದರಿಂದ ಅವನ ಮುಖವನ್ನು ಒರೆಸಿದನು (ಬಂಗಾಹಿ. ೬೪) : ಆ ಕೋಳಿಯ ಕೊಂದು ತುಕಡಿಯ ಮಾಡಿ ರುಚಿಯನು ನೋಡಿ (ತುಪದ. ೫೩). ೨. ರೊಟ್ಟಿ. ಚಪಾತಿ : 'ತುಕಡಿಮುರಕ' ಪಠಾ. ೩. ಸೈನ್ಯದ ಒಂದು ಭಾಗ ; ಒಬ್ಬ ಅಧಿಕಾರಿಯ ಹತೋಟಿಗೆ ಒಳಪಟ್ಟ ಸೇನಾವಿಭಾಗ : ಭಾರಿಯಾದ ಒಂದು ದಂಡಿನ ತುಕಡಿಯು ಈ ಊರಲ್ಲಿ ಠಾಣ್ಯ ಹಾಕಿಕೊಂಡು ಇರುತ್ತಿತ್ತು (ಮುಸುಗ. ೯): ನಿಯಾರ್ಕಸನು ಆಲೆಕ್ಸಾಂಡರನ ಒಂದು ತುಕಡಿ ಸೈನ್ಯವನ್ನು ತೆಗೆದುಕೊಂಡು ... ಕಾರ್ಮೇನಿಯ ಮುಟ್ಟಿದನು (ಪ್ರಪಾಇ. I, ೬೩). ೪. ದೇಶದ ಒಂದು ಭಾಗ: ಪ್ರಾಂತ; ಜಿಲ್ಲೆ: ಪ್ರತಿ ತಾಲ್ಲೂಕಿಗೂ ಒಬ್ಬೊಬ್ಬ ಅಮಾಲರನ್ನು ನೇಮಿಸಿದರು. ಅವರೆಲ್ಲಾ ಆಯಾ ತುಕಡಿ (ಡಿಸ್ಟ್ರಿಕ್ಟು) ಸುಬೇದಾರರುಗಳ ಅಧಿಕಾರಕ್ಕೆ ಒಳಪಟ್ಟಿದ್ದರು (ಮಹಾಮಂ. II, ೩೨). **ತುಕಡಾ :** ೧. ಇದ್ದಲಿನ ತುಕಡಾಗಳು, ಒಂದು ಬೆಂಕಿಕಡ್ಡಿಯ ಪೆಟ್ಟಿಗೆ ಎಲ್ಲಾ ಹೊರಗೆ ಬರುತ್ತವೆ (ಸಾಹೇಬ್. ೨೦). **ತುಕ್ಕಡ :** ೧. ಮುಸಲ್ಮಾನರು ರಾಜಧಾನಿಗೆ ಮುತ್ತಿಗೆ ಹಾಕಿ ತಮ್ಮೆಲ್ಲರನ್ನೂ ತುಕ್ಕಡ ಮಾಡಿಬಿಡುವರೆಂದುಕೊಂಡಳು (ಬಂಕಿಮು. ೩೦೪). **ತುಕ್ಕಡಿ :** ೩. ಅದು ಹೆಚ್ಚುಕಡಿಮೆ ಯುದ್ಧಕಾಲದ ತಮ್ಮದೊಂದು ತುಕ್ಕಡಿಯನ್ನೇ ಹೋಲುತ್ತದೆ (ಹೇಮುಕೂ.೧೬): ಕಾಮನಾಯಕ ಎಂಬಾತನು...ಹದಿನಾರು ಮದದ ಆನೆಗಳ ತುಕ್ಕಡಿಗೂ ಅಧಿಪತಿಯಾಗಿದ್ದನು (ಹಾವಿಜ. ೦೫೩). ೫. ಊರಂ, ಪಟ್ಟಣ ಮೊದಲಾದುವುಗಳ ಒಳವಿಭಾಗ ; ಮೊಹಲ್ಲ ; ಹರವು : ಯಾವ ಗ್ರಾಮವನ್ನಾದರೂ ತುಕ್ಕಡಿಗಳನ್ನಾಗಿ ವಿಭಾಗಿಸಿ ಅಂಥ ಪ್ರತಿ ಒಂದು ತುಕ್ಕಡಿಗೂ ಬೇರೆಬೇರೆ ಗ್ರಾಮಕೋರ್ಟನ್ನು ಸ್ಥಾಪಿಸಬಹುದು (ಗ್ರಾಮೂಕ. ೦೫). ೬. ಗುಂಪು ; ವಿಭಾಗ ; ಬಣ : ನಮ್ಮಲ್ಲಿಯ ನಾಲ್ವತ್ತು ಆಳುಗಳು ನಾಲ್ಕು ತುಕ್ಕಡಿಗಳಾಗಿ ಕೆಲವರು ಸಾಮಾನು ಚೊಕ್ಕಟವಾಗಿಸಿದರು (ರಕ್ತಧ್ವ. ೨೬೦).

[← ಮರಾ. ತುಕಡಾ ; ಹಿಂ. ಟುಕಡೀ, ಟುಕಡಾ]

**ತುಕಡಿಮುರಕ** (ನಾ). ೧. ಬರೀ ಚಪಾತಿ ತಿನ್ನುವವನಂ; ಉಂಡಾಡಿ ಭಟ್ಟ. ೨. (ಆಲಂ) ಶಕ್ತಿಹೀನ : ಇವರೇನು ತುಕಡಿಮುರಕ ಹಾರವರೆಂದು ಯುವನರು ತಿಳಿದಿರಬಹುದು (ಮಾಧವ. ೫).

[ ತುಕಡಿ$_2$ + ಮುರಕ ( < ಮುರಿಕ) ]

**ತುಕಲಿ** (ನಾ). ಒಂದು ಬಗೆಯ ಗಿಡ : (+). [ ? ]

**ತುಕ್ಕಡ** ' ತುಕಡಿ$_2$' ನೋ.

**ತುಕ್ಕಡಿ** ' ತುಕಡಿ$_2$' ನೋ.

**ತುಕ್ಕಡಿದಾರ** (ನಾ). ಜಿಲ್ಲೆಯ ಅಧಿಕಾರಿ ; ಜಿಲ್ಲೆಯ ಆಡಳಿತ ನಡಸುವವನು: ತುಕ್ಕಡಿಯಲ್ಲಿ ತುಕ್ಕಡಿದಾರ ಸೇರಿ ತುಕ್ಕಡಿಯೆಲ್ಲ ಸುಡಿಸಿದ (ಗಾದ).

[ ತುಕ್ಕಡಿ ( <ತುಕಡಿ$_2$) + – ದಾರ$_4$ ]

**ತುಕ್ಕಡಿಸು** (ಕ್ರಿ). ತುಂಡರಿಸಂ ; ಚೂರಂಚೂರಂ ಮಾಡಂ ; ಭಾಗ ಮಾಡು : ಅವಜಡಂಗುಗಳ ತುಕ್ಕಡಿಸಿ ಬಗೆಯಱಿದು ಭಾಗೆಯಂ ಮಾಳ್ಪ ದೀವದ ಖಗಮೃಗಾವಳಿಯನು ಹಕ್ಕೆಗೆಯ್ದಿಸುವ...ಬೇಡರ ಬಿಂದಮೊಪ್ಪಿತು (ಸಮ್ಯಕ್ತ್ವ. ೧೦-೨೬). [ ತುಕ್ಕಡಿ ( < ತುಕಡಿ$_2$) + – ಇಸು$_3$ ]

**ತುಕ್ಕಿಡಿ** (ನಾ). ( ? ) : ಎಚ್ಚಡ್ಡಾಯುಧಮಂ ಕಿಬ್ಬೆಚ್ಚರಿಯೆನೆ ನೂಂಕೆ ತುರಗಮಂ ತುಕ್ಕಿಡಿಗಳ್ ಪಚ್ಚವಳದೆಡೆಗಳಂ ಮುನ್ನೆಚ್ಚ ಸರಲ್ ತಾಗೆ ಪಱಿದುವೃಱೆ ಚೆಚ್ಚಱದಿಂ (ಚಂದ್ರಪು. ೦೦-೬೯). [ ? ]

**ತುಕ್ಕಿಸು** (ಕ್ರಿ). ತಿರುಗಿಸು ; ಅಲೆದಾಡಿಸು ; ಅಲೆಯುವಂತೆ ಮಾಡು : ಸರ್ವಜೀವಿಗಳೊಳೇತಕ್ಕೆ ಎನ್ನೊಬ್ಬನ ತುಕ್ಕಿಸುವಿಯೊ ಬಕ್ಕದಾಸನೊ ನಾನು (ವಿದಾಕ್ಕ. ೦೫೬). [ ತುಕ್ಕು$_1$ + – ಇಸು$_3$ ]

**ತುಕ್ಕು$_1$** (ಕ್ರಿ). ೧. ಗುಂಪುಗೂಡು ; ಕಿಕ್ಕಿರಿ ; ಒಟ್ಟುಸೇರಂ : (+). ೨. ಮೇಲೆ ಬೀಳು ; ಆವರಿಸಂ ; ಮುತ್ತು : ಅಕ್ಕಱಿಂದವರ ವರತನು ಪರಿಮಳಂಗಳ್ಗೆ ತುಕ್ಕುವೆಳದುಂಬಿಗಳ ಬಳಗಂಗಳೆಂಬಂತೆ (ಜೈಮಿಭಾ. ೨೮-೪೩) ; ಅಡವಿಗಿಡವ ತುಕ್ಕಿ ಅಗಳೆ ತರುವದಲ್ಲ (ವಿಸೊತ್ತು. ೫೫-೨) ; ಎಕ್ಕಲಗಳಂ ತುಕ್ಕಿ ಮುಕ್ಕುಳಿಸಿ (ಪರಶು. ೩೦-೫). ೩. ಸಂತ್ತು ; ತಿರುಗು ; ಅಲೆದಾಡು ; ಎಡೆತಾಕಂ : ವೃಥಾ ಭವಂಗಳ ತುಕ್ಕುತೆನ್ನ ಮಹತ್ವವೆಲ್ಲವ ಮುಕ್ಕುಗಳದೆನಲಾ (ಸದ್ಗುರು. ೩-೩೦) ; ಅಕ್ಕ ನೀನೆನಗೋಸುಗ ಮೂಜಗವನು ತುಕ್ಕಬೇಹುದು ರಾತ್ರಿಯಲಿ (ಮೋಹತ. ೨೮-೩೪) : ಪಾಂಡವರ ಕಾಣೆ ರಾಜ್ಯಮಂ ತುಕ್ಕಿದೆವು ಭೂಪತಿಯ ಕುರುಹಿಲ್ಲ (ಕುರಂಗ. ೩೬-೪) ; ಲೆಕ್ಕವಿಲ್ಲದೆ ದೇಶ ತುಕ್ಕಿದರೆ ಫಲವೇನು (ಜಗದಾ. ೩೧೫).

**ತುಕ್ಕು$_2$** (ನಾ). ಕಬ್ಬಿಣಕ್ಕೆ ಹತ್ತುವ ಕಿಟ್ಟ ; ಜಂಗು : ಧಾತುಗಳ ಆಮ್ಲಜ ವಿಕಾರಗಳಿಗೆ ಕನ್ನಡದಲ್ಲಿ ಭಸ್ಮ, ಜಂಗು, ಖತಿ, ತುಕ್ಕು ಎಂಬ ಹೆಸರುಗಳನ್ನು ಕೊಡುವರು (ಮುಂಬಯಿ. ೬-೩೨) : ಆಗ ಕಬ್ಬಿಣವಾಗಿ ಉಳಿಯುವ ಬದಲು, ಕಬ್ಬಿಣದ ತುಕ್ಕು ಉಂಟಾಗುವುದು (ದಾಲಪ್ರ. I, ೯೫೩).

[ದೇ. ೫ ತಮಿ. ತುಕ್ಕು, ತುಪ್ಪು ; ಮಲ. ತುರುಮ್ಪು, ತುರುಪ್ಪು ; ತುಳು. ತುರ್ಕ್; ತೆಲು. ತುಪ್ಪು, ತ್ರುಪ್ಪು]

**ತುಕ್ಕುಗೊಳ್** (ಕ್ರಿ). ಜಂಗು ತಿನ್ನು ; ತುಕ್ಕುಹಿಡಿ : ಮಸೆದ ಕೆಯ್ದುಗಳ್ ತುಕ್ಕು(ಳ್ಪು)ಗೊಳ್ವುದಂ (ಜಟ್ಟರು. ೨-೧). [ತುಕ್ಕು$_2$ + ಕೊಳ್$_1$]

**ತುಕ್ಕುಹಿಡಿ** (ಕ್ರಿ). ೧. = ತುಕ್ಕುಗೊಳ್ : ಕಬ್ಬಿಣಕ್ಕೆ ತುಕ್ಕುಹಿಡಿಯುವುದು (ಮುಂಬರು. ೪-೧೪೯) ; ಅಲ್ಯುಮಿನಿಯಮ್ಮಿನ ಪ್ರಯೋಜನಗಳು ಹಲವು. ಅದು ಹಗುರವಾಗಿರುತ್ತದೆ. ತುಕ್ಕುಹಿಡಿಯುವುದಿಲ್ಲ (ಅರುಣಾ. ೪೨) ; ತುಕ್ಕುಹಿಡಿದ ಖಡ್ಗ ಮಿಕ್ಕಿದವನಿಗೂ ಆಗದು (ಗಾದೆ). ೨. (ಅಲಂ) ದೋಷಗ್ರಸ್ತವಾಗಂ ; ಮಂಕಾಗು ; ಹೀನವಾಗು ; ಹಿರಿಯರ ತುಕ್ಕು ಹಿಡಿದ ದೃಷ್ಟಿಗೆ ಕಿರಿಯರ ಪ್ರೇಮವು ಅರ್ಥವಾಗುವುದಿಲ್ಲ (ದೂರಸ. ೧೬೮) ; ಮೇಧಾಶಕ್ತಿಗೆ ತುಕ್ಕುಹಿಡಿಯುವ ಸ್ಥಿತಿ ಒದಗಿತು (ಕಾಮಿಕಾಂ. ೩) ; ಈ ರೀತಿಯಲ್ಲಿ ಮಕ್ಕಳ ಶಿಕ್ಷಣದ ಅಮೂಲ್ಯಸಾಧನವೊಂದು ತುಕ್ಕುಹಿಡಿದು ನಶಿಸಿ ಹೋಗುತ್ತಿರುವುದು (ಸಮಾರೋ. ೧೦೯).

[ತುಕ್ಕು$_2$ + ಹಿಡಿ$_1$ (< ಪಿಡಿ$_1$)]

**ತುಗಚು** (ಕ್ರಿ). ಪೀಡಿಸುವವರನ್ನು ತೊಲಗಿಸಲು, ಇಷ್ಟವಿಲ್ಲದಿದ್ದರೂ ಕೊಡಂ : ಒಂದು ಎಳನೀರು ಬುರುಡೆ, ಒಂದು ಪಾವಲಿ ತುಗಚಿದ (ಅದೂಟ. ೪೪). [ ? ]

**ತುಗಿ** (ನಾ). ಒಂದು ಬಗೆಯ ಮರ : ಸುಜ್ಜಲು . . . ಬೀಳ್ಕಂಬಿ, ತುಗಿ (ಮೃಡಗಿ. ೪-೬೨). [ ? ]

**ತುಗಿಲ** 'ತುಗ್ಗಿಲ್' ನೋ.

**ತುಗ್ಗಲಿ** 'ತುಗ್ಗಿಲ್' ನೋ.

**ತುಗ್ಗಿಲ್, ತಗ್ಗಿಲು, ತುಗಿಲ, ತುಗ್ಗಲಿ, ತುಗ್ಗಿಲು** (ನಾ). ಒಂದು ಬಗೆಯ ಮರ : "ಅಗ್ನಿಯೆನೆ ತುಗ್ಗಿಲಕ್ಕುಂ" (ಮಂಗರಾ. ೩೬-೧೮) ; ಕೊಗ್ಗಿ ವರಲಕ್ಷ್ಮಿ ಪುನರ್ನವಿಯೆಂಬ ಮೂಜುಮಂ ಬೆರಸಿರೆ ಕಲ್ಲೊಳಿಟ್ಟರೆದು ತುಗ್ಗಿಲಣಂಬೆಯುಮಂ . . . ಈಂಟೆ ವಿಷಂ ಕಿಡುಗುಂ (ಜಮದ. ೧೩-೧೮). **ತಗ್ಗಿಲು** : ತಂಡಸ ತಡಸ ತ[ ಪಾಠಾಂ. ತು ]ಗ್ಗಿಲು ತದಿಕು ತವಸಿಗಳ . . . ವನಭೂಜಾಳಿಯಲಿ ಪೂಳಿದರಕಂಪನನಸಮಾರಣರಥವ (ತೊರರಾ. ೬-೧೮-೦೮). **ತುಗಿಲ** : ಮೂಡಲು ತುಗಿಲಮರದ ಮೇಲು ಗಡೆಯ ಬೆಟ್ಟದ ಬಂಡೆ ಮೇರೆ (ಸಾಇಇ. IX – ii, ೫೩೫-೨೯ ; 1531). **ತುಗ್ಗಲಿ** : ಜಾಲೆ ಜಾನೆಯು ಬೋರೆ ತರೆಯು ತುಗ್ಗಲಿಯುಯುಂ ಕೋಲೆಯುಂ (ನವಮೋ. ೮-೯). **ತುಗ್ಗಿಲು** : ಬಡಗಣ ತವರ ಮೇಲಣ ತುಗ್ಗಿಲ ಮರದಲ್ಲಿ ನಟ್ಟ ಕಲ್ಲು (ಮೃಅರಿ. ೧೪೪೦, ೪೮-೧೬೮ ; 1395) ; ಯೀಶಾನ್ಯದಲ್ಲು ಮಾತ್ರವೇ ತುಗ್ಗಿಲು ಹುತ್ತಹಾರೆ ಗ್ರಾಮಕೆ ಮೂಡಲು (ಎಕ. XI, ಹೊಳಲ್ಕೆ. ೯೪-೧೦೬ ; 1511). [ ? ]

**ತುಗ್ಗಿಲು** ' ತುಗ್ಗಿಲ್ ' ನೋ.

**ತುಚ್ಚ** (ಗು). = ತಂಚ್ಚ : ತುಥ್ಥ – ತುಚ್ಚ (ಶಮದ. ೨೫೬ ಪ್ರಯೋ).

[ < ಸಂ. ತುಚ್ಛ]

**ತುಚ್ಚತನ** (ನಾ). ನೀಚತನ ; ಅಲ್ಪತನ : ಎನಗೆ ನಟವೃತ್ತಿ ಕರು ತುಚ್ಚತನವೆನ್ನದಾಡಿದನಚ್ಚರಿಯೆನೆ ವಜ್ರು (ಪುಷ್ಪಪು. ೦೨-೫೨).

[ತುಚ್ಚ + – ತನ]

**ತುಚ್ಚಿಂಗೆಟ್** (ನಾ). ಒಂದು ಊರಿನ ಹೆಸರು : ತುಚ್ಚಿಂಗೆಟಿಯ ಪೊಲ್ಲಿ ಸೆಟ್ಟಿ . . . ಚವ್ವಣ್ಣಯ್ಯಸೆಟ್ಟಿಯಿನ್ನಿನಿಬರುಂ ತಂಬುಲಿಗಸಾಸಿರ್ವರುಂ (ಸಾಇಇ. XI – ii, ೧೪೮-೧೯ ; 1099). [ ? + ಕೆಟ್ ]

**ತುಚ್ಛ** (ಗು). ೧. ಜೊಳ್ಳಾದ ; ಬರಿದಾದ ; ಶೂನ್ಯವಾದ. ೨. ಅಲ್ಪವಾದ ; ಸಣ್ಣ ; ಚಿಕ್ಕ. ೩. ಕೆಳದರ್ಜೆಯ ; ತಿರಸ್ಕಾರಕ್ಕೆ ಯೋಗ್ಯವಾದ ; ನೀಚವಾದ ; ಕ್ಷುಲ್ಲಕವಾದ : ತುಚ್ಛಮಾತು ಆಡುವವನು ಹುಚ್ಚನಿಂದ ಕಡೆ (ಗಾದೆ). (ನಾ). ೪. ಬರಿದಾದುದು ; ಖಾಲಿ ; ಶೂನ್ಯ : ವಂಧ್ಯಾಪುತ್ರ ಶಶವಿಷಾಣಾದಿಗಳೇ ಅಸತ್ತ್ವದ ತುಚ್ಛವೆಂದು ತಿಳಿಯಲಪ್ಪುದು (ವಿವೇಕ. ೨೦) ; ತುಚ್ಛ (ಶೂನ್ಯ) ದಿಂದ ಮುಚ್ಚಿದ ಅದು ತಪಸ್ಸಿನ ಮಹಿಮೆಯಿಂದ ಆವಿರ್ಭಾವವಾಯಿತು (ಭಾರದ. ೨೬). ೫. ಕಡಮೆಯಾದುದು ; ಕೀಳು ; ಹೀನ : ವ್ಯೋಮಯಾನಂ ತುಚ್ಛಮೆನೆಯುಂ ಗ್ರಾಮಯಾನಮತುಚ್ಛಮೆನೆಯುಂ (ಶಾಂತಿಪು. ೧೨-೨೩೮) ; ಒಂದೆ ಲಂಕೆಯ ಸುಟ್ಟ ಕೋಡಗ ಬಂದ ಕಪಿಭಟರೊಳಗೆ ತುಚ್ಛವು (ಕೌಶಿರಾ. ೧೫-೨೮) ; ಎಷ್ಟು ಹೇಳಲಿ ಬಹಳ ತುಚ್ಛವನೆ ಮಾಡುವರು (ಪುರಂದ. ೧-೧೪೮-೩). ೬. ಅಲ್ಪವ್ಯಕ್ತಿ ; ಕೀಳುಮನುಷ್ಯ : ತುಚ್ಛನ ಸಂಗಡ ಬಾಳೋದಕ್ಕಿಂತ ಹುಚ್ಚನ ಸಂಗಡ ಬಾಳೋದು ವಾಸಿ (ಗಾದೆ). [ಸಂ.]

**ತುಚ್ಛಾಜಿ** (ನಾ). ಕೀಳಂವಂಟ್ಟದ ಕಾಳಗ ; ಹುಲುಗಾಳಗ : ತುಚ್ಛಾಜಿ ಲಬ್ಧಾಸ್ಮಿತನಾಂತಂ ಚೋಳಗೌಳಾಸುರಸಮರಜಯಶ್ರೀಸಮಾಲಿಂಗಿತಾಂಗಂ (ಎಕ. V, ಬೇಲೂರು. ೦೬-೪ ; 1136). [ತುಚ್ಛ + ಆಜಿ$_1$]

**ತುಚ್ಛಿಸು** (ಕ್ರಿ). ಕಡೆಗಣಿಸು ; ತಿರಸ್ಕರಿಸಂ : ವಂಶಕೆ ಈತನೊಬ್ಬನಾದರು ನವಗೆ ಶಿಷ್ಯನಾಗಿರಲೆಂದು ಪೇಳೆ ಗಂಗಾದೇವಿ ತುಚ್ಛಿಸಿದ ಮಾತನೆಂದು ವಿಚಾರಿದನು ತಾನುಯಿನ್ನಿಹುದಿಲ್ಲವೆಂದಾಡಿ ಸಾರಿದಳು (ತುರಂಗ. ೯-೩೨).

[ ತುಚ್ಛ + – ಇಸು$_3$ ]

**ತುಚ್ಛೀಕರಿಸು** (ಕ್ರಿ). = ತುಚ್ಛಿಸು : ನೀನು ಚೌಡಪ್ಪನವರನ್ನು ಹಾಗೆ ತುಚ್ಛೀಕರಿಸಬಾರದು (ಹಳ್ಳಿಹಾ. ೧೦೫). [ತುಚ್ಛೀಕರಣ$_0$ + – ಇಸು$_3$]

**ತುಜಾವಂತು** (ನಾ). [ಸಂಗೀತ] ಒಂದು ರಾಗದ ಹೆಸರು : ರಾಗ ತುಜಾವಂತು-ಅಷ್ಟತಾಳ (ದೇವೀಪ್ರ. ೧೮). [ ? ]

**ತುಟಾಗ್ರುತೆ** (ನಾ). ಕೊರತೆ ; ಅಭಾವ : ಕೆಲವು ಹಳ್ಳಿಗಳಲ್ಲಿ ನೀರಿನ ತುಟಾಗ್ರುತೆ ವಿಪರೀತವಾಗುತ್ತಿತ್ತು (ಮಂಕ್ಕಮ. ೧೦೬) ; ಎಲ್ಲೆಲ್ಲಿಯೂ ಕಾಳಿನ ತುಟಾಗ್ರುತೆ (ಗಾಳಿಗು. ೨೨) ; ಅಲ್ಲಿ ನೀರಿನ ತುಟಾಗ್ರುತೆ ಎನಿಸ ತೊಡಗಿತು (ಸ್ವಕೀಚ. ೨೬೮). [ <ತುಟ್ಟಗ್ರು ]

**ತುಟಾಯಿಸು** (ಕ್ರಿ). ಬೇರೆಯಾಗು ; ಭಾಗವಾಗು ; ಪಾಲಾಗು : ಅಲ್ಲಿ ಜೀವನಕ್ಕೆ ಸಾಲದೆ ತುಟಾಯಿಸಿ ಕೋಲಾರಕ್ಕೆ ಬಂದನು (ಮಹಾವಂ. I, ೧೭೬) ; ಕೆಲವು ದಿವಸದ ಮ್ಯಾಲೆ ಯಾ ವಂಶದ ಜನರ ಪೈಕಿ ತುಟಾಯಿಸಿ ಅಲ್ಲಿಂದಾ ಹೊರಟು (ಹೈದರ. ೨೯).

[ ತುಟಾ$_0$ (ℙ ← ಮರಾ. ತುಟಣೇ) + – ಇಸು$_3$ ]

**ತುಟಾರ, ತುಠಾರ** (ನಾ). ೧. ವಿಚಾರಮಾಡದಿರುವಿಕೆ ; ದುಡುಕು ; ಅವಿವೇಕ ; ಉದ್ಧಟತನ : ತುಟಮಿಂದ ಹಲ್ಲು, ತುಟಾರದ ಮಾತು ಸರಿಮಾಡಲಾಗದು (ಗಾದೆ). ೨. ದುಂಡಂಕಿ ಕೆಲಸ ಮಾಡುವವನು ; ಅವಿವೇಕಿ ; ಉದ್ಧಟ : ಆ ತುಟಾರ [ಪಾಠಾಂ. ತುರಾರ, ತವಕಿಗ]ನ ಕಂಡು ನಿಮ್ಮಯ ತಾತ ಸೈರಿಸುವನೆ (ತೊರರಾ. ೩೦-೯). 'ದೊಠಾರ' ಪರಾ. **ತುಠಾರ** : ೧. ಎಲವೊ ರಕ್ಕಸ ನಾವು ರಣಕಠಿಬಲರೊ ದುರ್ಬಲರೋ ತುಠಾರದಿನಿಳಿಕೆಗಂಡೆಯಲಾ ಮೃಗಾಧಮ (ತೊರರಾ. ೬-೨೨-೦೩).

[← ತೆಲು. ತುಟಾರ]

**ತುಟಾರಿಸು, ತುಠಾರಿಸಂ** (ಕ್ರಿ). ದುಡುಕಿ ಮಾತನಾಡು ; ವಿಚಾರ ಮಾಡದೆ ಹರಟು : ಎಲವೊ ಫಡ ಮಾವನ ತುಟಾರಿಸಿ [ಪಾಠಾಂ. ತುಠಾರಿಸಿ, ದೊಠಾರಿಸಿ, ವಿಭಾಡಿಸಿ] ಗಳಹುವೀ ನಾಲಗೆಯ ಕೀಳುವೆ (ಕುಮಾರದೋ. ೧೫-೦೦) ; ಪಾಂಡವರ ತೊಡಕಿನ್ನು ಲೇಸಲ್ಲ ಸಂಧಿಯ ಮಾಡಿಕೊಳಿ ಎಂದರೆನ್ನನು ತುಟಾರಿಸಿದನೈ ಪಾಪಿ (ತುರಂಗ. ೪೮-೬). **ತುಠಾರಿಸು** : ಸಹಜವೇನ್ನುಡಿದಡೆ ತುಠಾರಿಸಿಯಹಿತರಾ ಕೌರವರು ನಿನಗೆ (ಗಿರಿವಿಂ. ೯೯-೦೬). ' ದೊಠಾರಿಸು ' ಪರಾ.

[ತುಟಾರ + – ಇಸು$_3$./ತೆಲು. ತುಟಾರಿಂಚು]

**ತುಟಿ** (ನಾ). ಬಾಯ್ದೆರೆ; ಅಧರ; ಓಷ್ಠ : "ಅಧರಃ, ದಂತಚ್ಛದಃ, ಓಷ್ಠಃ, ದಂತವಾಸಃ—ಈ ೪ ತುಟಿ" (ಹಲಾಯು. ೮೬-೩೭೦) : ಪಶ್ಚಿಮ ಪದ್ಮಾಸನದಲ್ಲಿ ಕುಳಿತು ನೆಟ್ಟೆಲುವ ಮುಱಿದು ತುಟಿ ಮಿಡುಕದೆ ಅಟ್ಟೆಯಾಡಿತ್ತಲ್ಲಾ (ಬಸವ. ೮೦೪) ; ತುಟಿ ವಿದ್ರುಮಮಂ ಸುಧಾಂಶುವಂ ನಿರ್ಮಳವಕ್ತ್ರಬಿಂಬಮಿರದೇಳಿಸೆ (ಉದ್ಭಟ. ೨-೧೦೫) : ಶಶಿಕಳೆಗೆ ಸದರವೆ ರಾಹು ರಚಿಸಿದ ತುಟಿಯ ತೋಟಿಯದು (ಕುವ್ಯಾಸ. ೧೪-೧೧೦) ; ಕೂಡೆ ಕದಪು ತುಟಿ ನಿಟಿಲವ ಚುಂಬಿಸಿ (ಕಂನವಿ. ೯-೧೯೨) : ನಗೆಯು ಚೆಲುವ ತುಟಿಯು ಚಾಟಿ (ಅನಿಕೇ. ೧೮-೨) : ತುಟಿಗೆ ತುಪ್ಪವಿಲ್ಲ, ಕಟಿಗೆ ಪಂಚಾರ್ತಿ ಬಯಸಿದ ಹಾಗೆ (ಗಾದೆ).

ತುಟಿ ಎರಡು ಮಾಡು=ಬಾಯಿಬಿಡು ; ಮಾತನಾಡು : ಧರ್ಮಪತ್ನಿ ತುಟಿ ಎರಡು ಮಾಡದೆ ಪಣತಿಯಲ್ಲಿ ತುಪ್ಪ ಸುರುವಿದಳು (ಹಬ್ಬಿಬ. ೬೬) : ಇನ್ನು ಯಾವ ವಿಷಯದಲ್ಲೂ ತುಟಿ ಎರಡು ಮಾಡುವ ಹಾಗಿಲ್ಲ (ಸುವಸಂ. ೧೫). **ತುಟಿಗಟ್ಟ**= ತುದಿಯವರೆಗೆ : ವಿಷಯ ತುಟಿಗಟ್ಟಕ್ಕೆ ಬಂದು ವಿಷಮಾವಸ್ಥೆಗೆ ಇಳಿಯುವಂತಿದ್ದಾಗ ಹಣವನ್ನು ಹಿಂದಿರುಗಿಸುವುದು ಮೊದಲಾಯಿತು (ರಂಗನಾ. ೨೪). **ತುಟಿಪಿಟಕ್ಕೆನ್ನು**=ತುಟಿ ಎರಡುಮಾಡು : ನೀನು ಇದೆಲ್ಲವನ್ನೂ ಕಣ್ಣಾರ ನೋಡುತ್ತಿದ್ದರೂ ತುಟಿಪಿಟಕ್ಕೆನ್ನದೆ ಕುಳಿತಿದ್ದೀಯೆ? (ವಡಥಾ. ೬೧) ; ಯಾರೂ ತುಟಿಪಿಟಕ್ಕೆನ್ನುವುದಿಲ್ಲ (ಪ್ರವಾಇ. II, ೨೮೩). **ತುಟಿಮೀರಿದ ಹಲ್ಲು, ತುಟಿಮೀಱಿದ್ದಲ್ಲು** = ತುಟಿಯನ್ನು ಮೀರಿ ಮುಂದಕ್ಕೆ ಚಾಚಿಕೊಂಡಿರುವ ಹಲ್ಲು ; ಉಬ್ಬುಹಲ್ಲು : ನುಂಗಲಾಗದ ತುತ್ತೂ ತುಟಿಮೀರಿದ ಹಲ್ಲೂ ಒಂದೇ ಸಮ (ಗಾದೆ) ; ತುಟಿ ಮೀಱಿದ್ದಲ್ಲಿಸಂತ ದೂತ ಎಂದಿಗು ಬೇಡ (ಕನಶ. ೧೯೦-೪). **ತುಟಿಯ ಭಾಷೆ**= (ಮೂಕರಿಗೆ) ತಮ್ಮ ಆಶಯವನ್ನು ತಿಳಿಸುವಾಗ ಮಾಡುವ ತುಟಿಯ ಅಲುಗಾಟದ ಪ್ರಯೋಗ: ''ತುಟಿಗಳ ನಿಶ್ಶಬ್ದ ಚಲನೆಯಿಂದ, ಮೂಕರು ಮಾತನಾಡುವ, ಮೂಕರೊಂದಿಗೆ ಮಾತನಾಡುವ, ಮಾತನಾಡಿದ್ದನ್ನು ಅರ್ಥಮಾಡಿಕೊಳ್ಳುವ ಭಾಷೆ : ತುಟಿಯ ಭಾಷೆ; ಮೂಕರ ಭಾಷೆ'' (Lip_Language. ಇಂಕನಿ). **ತುಟಿಹೊಲಿದುಕೊಳ್ಳು** = ಮಾತನಾಡದೆ ಇರು : ಮಾತಿಗೆ ಬೆಲೆಯಿಲ್ಲವಾದಾಗ ತುಟಿಹೊಲಿದುಕೊಂಡಿರುವುದೇ ವಾಸಿ (ರೂಢಿ).

[ ದೇ.॥ ತಮಿ. ತುಟಿ ; ಮಲ. ಚೊಡಿ ; ತುಳು. ತುಡಿ, ದುಡಿ ; ಗೊಂಡಿ. ಟೊಟಿ ]

**ತುಟಿಕಚ್ಚು** 'ತುಟಿಗಚ್ಚು' ನೋ.

**ತುಟಿಕಡಿ** (ಕ್ರಿ). ೧. ತುಟಿಯನ್ನು ಹಲ್ಲಿನಿಂದ ಕಚ್ಚು. ೨. ತುಟಿಯನ್ನು ಕಚ್ಚಿಕೊಳ್ಳುವುದರ ಮೂಲಕ ದುಃಖ, ನಾಚಿಕೆ ಮೊದಲಾದ ಭಾವವನ್ನು ಸೂಚಿಸು: ತುಟಿಕಡಿದು ಅಧೋಮುಖಿಯಾದಳು (ಜಯಂತ. ೧೨೨).

[ ತುಟಿ + ಕಡಿ$_1$ ]

**ತುಟಿಗಚ್ಚು**, ತುಟಿಕಚ್ಚು (ಕ್ರಿ). = ತುಟಿಕಡಿ ೨ : ''ಏನೂ ಇಲ್ಲ ಸುಮ್ಮನೆ'' ಎಂದು ತುಟಿಗಚ್ಚಿದಳು ಪ್ರಮೀಲ (ಮರಳಿ. ೮೧). ತುಟಿಕಚ್ಚು : ಎವೆ ಬಡಿಸಿ ಕಡವು, ಬಿರಿಗಣ್ಣು ಬ್ಯಾಡ, ತುಟಿಕಚ್ಚಿ ಹಿಡಿಯದಿರು ಬಿಕ್ಕ (ನಾದಲೀ. ೫೮-೨೨) ; ಕಣ್ಮುಚ್ಚಿ ತುಟಿಕಚ್ಚಿ ಶೋಕವನದುಮಿಟ್ಟು ಹೋದೆನು (ಇಂಜಾಪ. ೩೦-೩೮). [ತುಟಿ + ಕಚ್ಚು$_1$ (<ಕರ್ಚು$_1$)]

**ತುಟಿಗೊಂಕು** (ನಾ). ತುಟಿಯನ್ನು ಕೊಂಕಿಸುವುದು : ಆಗಾಗ್ಗ ಒಂದು ಕಣ್ಣಿನ ಮಿಂಚೊ, ಒಂದು ಮುಗುಳುನಗೆಯ ತುಟಿಗೊಂಕಿನ ಹೊಂಚೊ . . . ಇಣಿಕಿ (ಮಲಮ. ೨೫೯). [ ತುಟಿ + ಕೊಂಕು$_2$ ]

**ತುಟಿತ** (ನಾ). [ಜೈನ] ಒಂದು ಬಹು ದೊಡ್ಡ ಕಾಲಪರಿಮಾಣ : ಆತನಿಂ ಬೞಿಯಮನಿತಾನುಂ ಕಾಲದಿಂ . . . ತುಟಿತಾ [ ಪಾಠಾಂ. ರಾ ] ಬ್ದಪ್ರಮಿತಜೀವಿತನುಮಾಗಿ (ಆದಿಪು. ೬-೫೬ ವ). [ <ಸಂ. ತ್ರುಟಿತ ]

**ತುಟಿತೆರೆ** 'ತುಟಿದೆರೆ' ನೋ.

**ತುಟಿದೆರೆ**, ತುಟಿತೆರೆ (ಕ್ರಿ). ೧. ತುಟಿಯನ್ನು [illegible] : [illegible]. ೨. ಮಾತನಾಡು : ಇಬ್ಬರೂ ಮೈಯೆಲ್ಲ ಕಿವಿಯಾಗಿ [illegible] ದೆರೆಯಲಿಲ್ಲ (ಪುನರು. ೩೦೦). **ತುಟಿತೆರೆ** : ೨. [illegible] ದಿದ್ದ ವೀರಣ್ಣ ಈಗ ನಡುವೆ ಬಾಯಿ ಹಾಕಿದ ([illegible]). ಪೂವಮ್ಮನೂ ತುಟಿತೆರೆಯಲಿಲ್ಲ (ನತಡಾ. II, ೧೧೨೮).

[ತುಟಿ + ತೆರೆ$_1$ (<ತೆಱೆ$_1$)]

**ತುಟಿಬಿಚ್ಚು** (ಕ್ರಿ). = ತುಟಿದೆರೆ ೧ : ತುಟಿಬಿಚ್ಚಿ ಹೇಳು ಮೇಲ್ಗಳೆಯ (ಮೋಹತ. ೨೨-೧): ಮಾಸ್ಟ್ರೋವ ತುಟಿಬಿಚ್ಚಲಿಲ್ಲ (ಪುನರು. ೪೦).

[ ತುಟಿ + ಬಿಚ್ಚು$_1$ ]

**ತುಟಿಬೆರಳು** 'ತುಟಿವೆರಳು' ನೋ.

**ತುಟಿಮುತ್ತು**(ನಾ). ೧. ತುಟಿಗೆ ಕೊಡುವ ಮುತ್ತು; ಅಧರಚುಂಬನ. ೨. (ಅಲಂ) ಪ್ರೀತಿಗೆ ಪಾತ್ರ : ನಿರ್ಭಯದ ನಿಃಸೀಮದಲಿ ನೀನಮ್ಮ ತುಟಿಮುತ್ತಾದವ (ಹಾಡುಪಾ. ೫೬-೧೧). [ ತುಟಿ + ಮುತ್ತು$_4$ ]

**ತುಟಿರಂಗು** (ನಾ). ಅಲಂಕಾರಕ್ಕಾಗಿ ತುಟಿಗೆ ಬಳಿದುಕೊಳ್ಳುವ ಬಣ್ಣ : ಕಾಂತಿಯಿಂದ ಚೆನ್ನಾಗಿ ಕಾಣಿಸಲು ಹುಡಿ, ತುಟಿರಂಗು (ಲಿಪ್‌ಸ್ಟಿಕ್), ಕುಸುಂಬೆ (ರೂಜ್), ಉಗುರುಮೆರುಗುಗಳು (ಕವಿಕೋ. I, ೩೩).

[ ತುಟಿ + ರಂಗು ]

**ತುಟಿವೆರಳು**, ತುಟಿಬೆರಳು (ನಾ). ಎಚ್ಚರಿಕೆಯನ್ನು ಸೂಚಿಸಲು ತುಟಿಯ ಮೇಲಿಟ್ಟ ಬೆರಳು ; ಮೌನವಾಗಿರಲು ಸೂಚಿಸುವ ಬೆರಳು : ತೋಳ್ವೊಯ್ಲು ತುಟಿವೆರಳ ಬೊಬ್ಬೆಗಳ . . . ಸಂಭ್ರಮವನಿರದೆ ಪಡೆಯೆರಡೀಕ್ಷಿಸುತ್ತಿರ್ದುವು (ಚಬಪು. ೨೬-೧೬). **ತುಟಿಬೆರಳು** : ಸದ್ದಿರದೆ ತುಟಿಬೆರಳಿನೊಳು ಸುಳಿವ ಮಾರುತದ (ಮಲದೇ. ೩೪-೩).

[ ತುಟಿ + ಬೆರಳು (< ಬೆರಲ್) ]

**ತುಟಿಸನ್ನೆ**(ನಾ). ತುಟಿಯ ಅಲುಗಾಟದಿಂದಲೇ ಇಂಗಿತವನ್ನು ತಿಳಿಯಪಡಿಸುವುದು : ಮನ್ನಗೆ ತುಟಿಸನ್ನೆ ಕಿಪ್ಪಗೆ ಕೈಸನ್ನೆ ಹೆಡ್ಡಗೆ ಬಡಿಗೆಯ ಸನ್ನೆ (ಇಂಜಾಪ. ೯೦-೩೬). [ ತುಟಿ + ಸನ್ನೆ$_2$ ]

**ತುಟಿಸು** (ಕ್ರಿ). ನುಡಿ; ಹೇಳು : ಜಗದೊಳಗೆ ಕೌತುಕ ವಿಚಿತ್ರವೇನೆಂಬೆನುಚಿ ತುಟಿಸಬಾರದು ಸೂಂಟಿಸಲು ಬಾರದಮ್ಮಮ್ಮ (ನಾಚಿರ. ೦೭೬-೦೯).

[ ತುಟಿ + – ಇಸು$_3$ ]

**ತುಟುಕರಿಸು** (ಕ್ರಿ). ೧. ಹಾತೊರೆ ; ಅಪೇಕ್ಷಿಸು ; ಕಾತರಿಸು : ನಟಣೆಯೊಳಗೈದುವರನೀಕ್ಷಿಸಿ ತುಟುಕರಿಸುತಿಹವಕ್ಷಿಯುಗವಮಿಪರಿಗೊಲವಿಂದ (ಜನಥಾ. ೦೯-೨೪). ೨. ತಳಮಳಿಸು ; ಕ್ಷೋಭೆಗೊಳ್ಳು : ಅರುಹನೇ ಗತಿಯೆಂದು ಮನ ತುಟುಕರಿಸುತ್ತೈದಿದರಾ ವಿರಾಟನ ಚರರು (ಜನಥಾ. ೫೮-೨೮). [ <ತುಡಿ + – ಇಸು$_3$ ]

**ತುಟುಕು$_1$** 'ತಟುಕು$_1$' ನೋ.

**ತುಟುಕು$_2$** 'ತಟುಕು$_2$' ನೋ.

**ತುಟುಕುಹನಿ** 'ತಟುಕುಹನಿ' ನೋ.

**ತುಟ್ಟ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹೂವು : ಬಲ್ಲಗಿ, ಬಂದಿಗೆ, (ದೊಡ್ಡ, ಸಣ್ಣ) ತುಟ್ಟ, ದಾಸಾಳ (ನಮ್ಮನು. ೨೬೮).

[ ← ತಮಿ. ತುಟ್ಟಲಿ ]

**ತುಟ್ಟಗ್ರ** (ನಾ). ತೊಂದರೆಯ ಕಾಲ; ದುರ್ಭಿಕ್ಷ : "ತುಟ್ಟಗ್ರ–ಅಡಚಣೆ ಕಾಲ" (ಜಾನಕೋ. ೬೬). 'ತುಟಾಗ್ರುತೆ' ಪರಾ. [ <ತುಟ್ಟಿ$_1$ ]

**ತುಟ್ಟಿ$_1$** (ನಾ). ೧. ಧಾರಣೆ ಹೆಚ್ಚಾಗಿರುವಿಕೆ ; ದುಬಾರಿ : ನೂರಿಪ್ಪತ್ತು ರೂಪಾಯಿಗಳಲ್ಲಿ ಈ ಎಲ್ಲ ಖರ್ಚುಗಳೂ ನಡೆಯಬೇಕು . . . ತುಟ್ಟಿಯ ಕಾಲ. ಕಾಳು. ಕಡ್ಡಿ, ಸೌದೆ, ಹಾಲು. ಬಟ್ಟೆ ಎಲ್ಲವೂ ತುಟ್ಟಿ (ಜನಿಪಾ. ೩);

ಹೂವುಗಳನ್ನು ತುಟ್ಟಿ ಮಾಡಿದ ಹಿಮಂತರುತುವಿಗೆ ದೋಷ ಕೊಡಿರಿ (ಮೋಹಿನೀ. ೨೦). ೨. ಅಭಾವ : ಗೋವಿಂದಭಟ್ಟನ ಉತಾವಳತನ ಅವನಲ್ಲಿ ಔಷಧಕ್ಕೂ ತುಟ್ಟಿ (ದೀಪಹ. II, ೦೬೯). ೩. (?) : ತುಟ್ಟಿಯ ದಿನಮಂ ಪಣದಿಂದೊಟ್ಟಿಜೆಯಿಂದಿಱಿದು ದ್ವಿಗುಣಿಸಿ (ವ್ಯವಹಾ. ಉಪಮಾನ).

ತುಟ್ಟಿಯಾಗು = ೧. (ಮಾರಾಟದ ಸರಕಂ) ಹೆಚ್ಚು ಬೆಲೆಯುಳ್ಳುದಾಗು ; ಅಧಿಕಮೌಲ್ಯವುಳ್ಳುದಾಗು ; ದುಬಾರಿಯಾಗಂ : ದೇಶದೊಳಗೆ ದುರ್ಭಿಕ್ಷ ಬಿದ್ದು ಕಾಳು ಬಹಳ ತುಟ್ಟಿಯಾದವು (ಮುಂಬಯಿ. ೪-೬೫); ಚಹವು ಆಗಿನ್ನೂ ತುಟ್ಟಿಯಾಗಿದ್ದಿತು (ಪತ್ರಿಕಾ. ೦೩). ೨. ಹೀನವಾಗು ; ಬೆಲೆಯಿಲ್ಲವಾಗು : ನಾನಿಂದು ಒಂದು ತುಪ್ಪದ ಬಟ್ಟಲಿನಷ್ಟು ಅನ್ನಕ್ಕೆ ತುಟ್ಟಿಯಾದೆನಲ್ಲವೆ ? (ಸ್ವ.ತಿಚ. ೦೩೦).

**ತುಟ್ಟಿ$_2$** (ನಾ). ತೃಪ್ತಿ ; ಸಂತೋಷ ; ಆನಂದ ; ತಣಿವು : ಶರಣಸಂಗಂ ತನಗೆ ಪರಮತುಟ್ಟಿಯನೀಯೆ (ಚೂಮ್ಮರ. ೦೦೦-೧೨): ತುಟ್ಟಿ ಸಮ್ಮೋಹ ಸಮುದ್ರಕೆ ಹೊಂಬಟ್ಟದೊಟ್ಟು ಸೇತುವೆಗಟ್ಟಿದಂತೆ (ಭರಚ. ೦೩-೪೨). 'ತಂಟ್ಟಿವಡೆ' ಪರಾ. [ < ಪ್ರಾ. ತುಟಿ. /ಸಂ. ತುಷ್ಟಿ ]

**ತುಟ್ಟಿ$_3$** (ನಾ). ಒಂದು ಬಗೆಯ ತರಕಾರಿ ಸೊಪ್ಪು : ಸೊಪ್ಪುಗಳು : ಅಗಸೆ . . . ನಾರೋಬೇಡ, ತುಟ್ಟಿ, ಕೊತ್ತನಗೊರಜಿ, ಕೊತ್ತಂಬರಿ (ನಮ್ಮನು. ೨೩೭). [ ? ]

**ತುಟ್ಟಿಭತ್ತೆ** 'ತುಂಟ್ಟಿಭತ್ಯ' ನೋ.

**ತುಟ್ಟಿಭತ್ಯ, ತಂಟ್ಟಿಭತ್ತೆ** (ನಾ). ಪದಾರ್ಥಗಳ ಬೆಲೆ ಏರಿಕೆಯನ್ನು ಸರಿಗಟ್ಟಲು ನೌಕರರಿಗೆ ಸಂಬಳದ ಮೇಲೆ ಕೊಡುವ ಹೆಚ್ಚಿಗೆ ಮೊಬಲಗು, —ಹಣ : ರೈಲ್ವೆಯಲ್ಲಿ ಹದಿನೈದುರೂಪಾಯಿ ತುಟ್ಟಿ ಭತ್ಯ ಕೊಡುತ್ತಿದ್ದರು (ಸರ್ವಮಂ. ೨೬೮). **ತುಟ್ಟಿಭತ್ತೆ** : ಆ ಕಾರಕೂನರಿಬ್ಬರೂ ತುಟ್ಟಿಭತ್ತೆಯ ಆಸೆಗಾಗಿ ಭೂಲೋಕಕ್ಕೆ ಓಡಿಹೋದರು (ಹನುಮಂದ. ೦೪೩). [ ತುಟ್ಟಿ + ಭತ್ಯ ( < ಭತ್ತ್ಯಾದಾಯ) ]

**ತುಟ್ಟಿವಡೆ** (ಕ್ರಿ). ತೃಪ್ತಿಯನ್ನು ಹೊಂದಂ ; ಸಂತೋಷವನ್ನು ಪಡೆ : ಜಟ್ಟಿಗರ ಡೊಕ್ಕರಂ ಗಳಹತ್ತಂ ಮೊದಲೆನಿಸಿದ ಪಲವುಂ ಪಟ್ಟುಗಳಂ ಕಿರಿದು ಪೊಳ್ತು ನಿಟ್ಟಿಸಿ ತುಟ್ಟಿವಡೆದು (ಮರಾಚ. ೧೧-೪೯ ವ). [ ತುಟ್ಟಿ$_2$ + ಪಡೆ$_1$ ]

**ತುಟ್ಟಿಸು** (ಕ್ರಿ). ೧. ಶಕ್ತಿಗುಂದಂ ; ಬಲಹೀನವಾಗು ; ಕಂಗ್ಗು : "ತುಟ್ಟಿಸು—ಶಕ್ತಿಕ್ಷಯೇ" (ಶಮದಾ): ಪೊಯ್ಯುತುಂ ತುಡುಕಿ ತುಟ್ಟಿಸಿ ಕತ್ತರಿವಾಣಿಯಲ್ಲಿ ಕೆಯ್ದುಡುಕಿದಪೊಲ್ ಬೆರಲ್ಪಱಿದುವು (ಅರ್ಜನೇ. ೮-೧೦೯); ತುಟ್ಟಿಸಿದ ಹರುಷದಲಿ (ತೊರರಾ. ೬-೦೫-೩); ಕಿಸುಕುಳದ ಹುಳುವಾಗಿ ಮತಿ ತುಟ್ಟಿಸಿ ವಿನಿರ್ಗಮನವಾಗಿ . . . ಮೂರ್ಛಿತನಹನು (ನಿಭಾಗ. ೩-೦೪-೨೮): ನಮಗೆ ತ್ರಾಣಗಳ್ ತುಟ್ಟಿಸಿತು ನಾಳೆ ಮಧ್ಯಾಹ್ನಕ್ಕೆ ಜೀವವಂ ಬಿಟ್ಟಪೆನು (ತುರಂಗ. ೭೯-೦೫). ೨. ಕಡಮೆಯಾಗು ; ಕುಂದು : ನಿಜಹರುಷ ತುಟ್ಟಿಸಲ್ಕೆದಿ ನೋಡಿದನಾಗ ಕೆಲಬಲನ (ಮೃರಾಕಾ. ೨-೬೪). ೩. ನಾಶವಾಗು : ತುಟ್ಟಿಸಲಿ ಧನ ಮಾನಗರ್ವದ ಬೆಟ್ಟ ಮುಱಿಯಲಿ (ಕುಮ್ಯಾಸ. ೦೪-೮೫); ಕೆಟ್ಟು ನುಡಿದರೆ ತನ್ನನೇನೆಂದಟ್ಟಿದರು ನಿನ್ನುವನು ತನಿವಿದು ತುಟ್ಟಿಸದ ಮುನ್ನಿದ್ದುದನು ಹೇಳಯ್ಯ ತನಗೆ (ತೊರರಾ. ೨-೫-೪). ೪. ಅವಹೇಳನ ಮಾಡು ; ಕಡೆಗಣಿಸು : ಎಲ್ಲವರು ತುಟ್ಟಿಸುತಲಿಹಿರಿ ನಾವೆಂದುದಂ (ತುರಂಗ. ೪೦-೦೫); ಕುರುನೃಪತಿ ಮಾತೆಯಂ ತುಟ್ಟಿಸಲ್ ಗಾಂಧಾರಿ ತೆರಳಿದಳ್ (ತುರಂಗ. ೪೧-೨೪). ೫. ತಗ್ಗಿಸು ; ಶಾಂತಗೊಳಿಸು; ಸಮಾಧಾನಮಾಡು: ದುಷ್ಟದುರ್ಜನನಿಮಂಗಳಲದಿರಿ ಬಹಳ ಪಾಪಿಷ್ಠ ಗುರುಗೋತ್ರಘಾತಕನೆಂದು ಶೋಕವಂ ತುಟ್ಟಿಸಿಯೆ ಮುಂದಕಂ ತೆರಳಿದರು (ತುರಂಗ. ೯೫-೦೫). ೬. ಸಿಲುಕಂ ; ಬೀಳು : ತೋಹಿನಲಿ ತುಟ್ಟಿಸಿದ ಮೃಗದಪೊಲೂಹೆಯುಳಿದುದು (ಕುಮ್ಯಾಸ. ೦೪-೨೩).

೭. ಬಳುಕು ; ಕಂಪಿಸು : ಮಣಿಮುದ್ರಿಕೆಯ ನೂಪುರದ ತುಟ್ಟಿಸುವ ಬಡನಡುವಿನ ... ದೃಷ್ಟಿಮೋಹನಮೂರ್ತಿಯೆಸೆದಳು ಮೊಸರ ಕಡೆವುತ್ತ (ನಿಭಾಗ. ೧೦-೯-೦೬). ೮. ಬೀಳಂ ; ಕುಸಿ : ದುಷ್ಟನೃಪಕುಲಭಾರದಲಿ ಕಂಗೆಟ್ಟು ಕುಸಿದು ರಸಾತಳಕೆ ಧರೆ ತುಟ್ಟಿಸುತ (ನಿಭಾಗ. ೧೦-೩೧-೦೦). [ ತುಟ್ಟಿ$_1$ ? + – ಇಸು$_3$ ]

**ತುಟ್ಟು** (ಕ್ರಿ). ೧. ನಿರ್ದೇಶಿಸು ; ಗಂರಿಯಿಡು : ಬಟ್ಟಲ್ಲಿ ಬೀಡಬಿಡದ ಬೇಗದೊಳು ತಾವು ತುಟ್ಟಿದ ಪೊಳಲ ಗಡಿಯಲಿ ಬಿಟ್ಟಿರಲಾ ವಾರ್ತೆ ಗಡಿಯ ನಾಯಕರಿಂದ ಮುಟ್ಟಿದುದಾ ನೃಪವರಗೆ (ರಾಮವಿ. ೯-೩೦). ೨. ಪಣತೊಡಂ ; ಪ್ರತಿಜ್ಞೆಮಾಡಂ : ಕಟ್ಟುವೆ ಲಂಕೆಯ ಪಟ್ಟವ ನಿನಗೆಂದು ತುಟ್ಟಿ ನುಡಿದ ಮನಮುಟ್ಟಿ (ರಾಮವಿ. ೦೬-೬೩). [< ತೊಡು$_1$]

**ತುಟ್ಟೈಸು** (ಕ್ರಿ). ತುದಿಗೆ ಬರಂ : ನಿಟ್ಟುಸುಸರ್ಗಸೆ ಕಂಗಳು ಪೈಸರಿಸೆ ಜೀವ ತುಟ್ಟೈಸಿ (ಲಕ್ಷ್ಮಭಾ. ೨೭-೦೪). [ < ತುಟಿ + – ಇಸು$_3$ ]

**ತುಟ್ಯಂಗ** (ನಾ). [ಜೈನ] ಒಂದು ದೊಡ್ಡ ಕಾಲಪರಿಮಾಣ : ಕಮಲಾಂಗಂ ಕಮಲಂ ತುಟ್ಯಂಗಂ ತುಟಿಕಂ ಅಟಟಾಂಗಂ ಅಟಟಂ ಅಮಮಾಂಗಂ ಅಮಮಂ (ಪಸಾರ. ೦೩೮-೫). [< ಸಂ. ತ್ರುಟಿತಾಂಗ]

**ತುತಾರ** 'ತುಟಾರ' ನೋ.

**ತುತಾರಿ** (ನಾ). ದುಡುಕುಸ್ವಭಾವದ ಹೆಂಗಸು : ಘೋರಕರ್ಮಾಚಾರಿ ವಂಶಕುತಾರಿ ಬಹಳ ತುತಾರಿ ದಿವಿಜರ ಮಾರಿ ಜನಿಸಿದಳಾ ಬಳಿಕ ಶೂರ್ಪನಖೀ (ಅನಂರಾ. ೦-೭-೧೨). [ ತುತಾರ ( < ತುಟಾರ) + – ಇ$_2$ ]

**ತುತಾರಿಸು** 'ತುಟಾರಿಸು' ನೋ.

**ತುಡಕೆ** 'ತುಡಿಕೆ' ನೋ.

**ತುಡರು** 'ತೊಡರ್$_1$' ನೋ.

**ತುಡಿ, ದುಡಿ$_2$** (ಕ್ರಿ). ೧. ಮಿಡಿ ; ಸ್ಪಂದಿಸಂ : ಸಾವಿತ್ರಿಗೆ . . . ನಾರದನು ಹೇಳಿದ್ದ ಮಾತೇ ಮನಸ್ಸಿನಲ್ಲಿ ತುಡಿಯುತ್ತಿತ್ತು (ವಧಾ. ೦೭೯): ಯಾವುದೋ ಆಶಂಕೆ ತುಡಿಯುತ್ತಲೇ ಇತ್ತು (ಮಣ್ಣಿಹ. ೦೭೮): ಕನ್ನಡಸಂಸ್ಕೃತಿಯ ಪ್ರತೀಕ ಒಂದೇ ! ಇಲ್ಲಿ ತುಡಿಯುತ್ತಿರುವ ಹೃದಯ ಒಂದೇ ! (ಕರ್ನಾಕ. ೩೫೭). ೨. ತವಕಿಸು ; ಹಾತೊರೆ ; ಆತುರಪಡು : ನಾರಣಪ್ಪನ ಮನಸ್ಸು ಆ ಹತಭಾಗ್ಯಂಗೆ ನೆರವಾಗಲು ಸದಾ ತುಡಿಯುತ್ತಿರುವುದು (ಅನಾಥ. ೩೭): ಇಡೀ ಮಾನವಪ್ರಕೃತಿಯೇ ಸೌಂದರ್ಯದತ್ತ ತುಡಿಯುತ್ತಿದೆ (ಕಾವ್ಯಕು. ೦೩೩). ೩. ನೋಯು ; ವ್ಯಥೆಪಡು ; ತಳಮಳಿಸಂ : ನಿಸರ್ಗದ ಪಶುಪಕ್ಷಿಗಳಿಗೆ ಇರುವ ಸ್ವಾತಂತ್ರ್ಯ ತಮಗೆ ಇಲ್ಲವಲ್ಲಾ ಎಂದು ಮನಸ್ಸು ತುಡಿಯುತ್ತಿತ್ತು (ರಾಜ್ಯೋದ. ೦೭೨): ಮುದವಾರಲು, ಅಳಲೇರಲು, ಭಯ ಮಸಗಲು —ತುಡಿದು, ಮನ ದೇವಗೆ ಮೊರೆಯಿಡುವುದು (ಮೊಂದೀ. ೨೦-೨). ೪. ಅಲ್ಲೋಲಕಲ್ಲೋಲವಾಗು; ಹೊಯ್ದಾಡು ; ಕ್ಷೋಭೆಗೊಳ್ಳು: ಅವ ತವಕದಲೇನೊ ಬಾನಂಚುಗಳ ತಬ್ಬಿ ತುಡಿವೀ ಅಧೀರಜಲ (ನವ್ಯರ್ಥ. ೧-೫). ೫. ಮಿನುಗು ; ಹೊಳೆ : ಶಿವಜಟೆಯ ತುಳುಕಿ ತುಡಿವ ತಾರೆಯ ಬೆಳಕಿಗೀ ಬೆಳಕೆ ಚರಿತಾರ್ಥ (ಮರಿದೀ. ೨೩-೫). **ದುಡಿ$_2$** : ೧. ಇನಿಯಂ ಬಂದು ನಿಂದು ರಾಧೇ ಎನಲೇಪರಿ ದುಮುದುಮು ದುಡಿಯುವ ಹೃದಯವ ತಡೆವೆನೆ (ಗೋಕುನಿ. ೨೩-೪).

ತುಡಿದುಕೊಳ್ಳು = ಆತುರಪಡಂ ; ಕುತೂಹಲಗೊಳ್ಳು : ಅವನೊಂದಿಗೆ ಮಾತನಾಡತೊಡಗಿದಂತೆಲ್ಲ ನನ್ನ ಹೃದಯವು ತುಡಿದುಕೊಳ್ಳ ತೊಡಗಿತು (ಎಳೆಕ. ೮೬): ದೂರದಲ್ಲಿ ಅವನನ್ನು ಕಂಡೊಡನೆಯೇ ಮನಸ್ಸು ತುಡಿದುಕೊಳ್ಳುತ್ತಿತ್ತು (ಅಲಹೂ. ೫೭). [ ದೇ.೫ ತಮಿ. ತುಟಿ ; ಮಲ. ತುಡಿ ]

**ತುಡಿಕಿ** 'ತುಡಿಕೆ' ನೋ.

**ತುಡಿಕೆ, ತುಂಡಕೆ, ತಂಡಿಕಿ, ತುಡುಕೆ, ತೊಡಿಕೆ** (ನಾ). ೧. ತೋಟದ ಒಂದು ಭಾಗ : ದೇವರ್ಗ್ಗೆ ಮಾನ್ಯಂ ತುಡಿಕೆ ೧ (ಸೌಇಇ.IX-i, ೧೫೮-೫೬: 1092); ತೆಂಕಲು ತುಡಿಕೆಯ ಮುನ್ನಣ ಬಟ್ಟೆ ನೀರೊತ್ತಿಂಗೆ ದೇವಣ ಭಟ್ಟರು ಕೊಟ್ಟ ಬೆದ್ದಲೆ (ಎಕ. V, ಹಾಸನ. ೧೧೬-೪೯; 1123) ; ತೋಟ ತುಡಿಕೆ ಮುಂತಾಗಿ ಆಗಾಮಿಯಾಗಿ . . . ಸರ್ವಸ್ವಾಮ್ಯವನು ಆಗುಮಾಡಿ ಕೊಂಡು (ಎಕ. IX, ಬೆಂಗಳೂ. ೧೨೭-೩೨ ; 1431) ; ಅವರ ತೋಟ ತುಡಿಕೆಗಳು ಹಣ್ಣು ಹಂಪಲುಗಳಿಂದ ತುಂಬಿ ತುಳುಕಲಿ (ಹುಟ್ಟುಹ. ೧೬೦). ೨. ಹಣ್ಣುಗಳನ್ನು ಸಂಗ್ರಹಿಸಿ ಇಡುವ ಮನೆ ; ಫಲಸಂಗ್ರಹಾಲಯ : (೬). ೩. ಅಡಕೆಯ ಫಸಲನ್ನು ಸುಲಿದು ಬೇಯಿಸಿ ರೇಷಿ ಮಾಡುವ ಸ್ಥಳ. **ತುಡಕೆ** : ೧. ಗದೆ ಬೆದಲು ತೋಟ ತುಡಕೆ (ಮ್ಯಆರಿ. ೧೯೩೦, ೩೮-೧೩ : 1612). **ತುಡಿಕಿ** : ೧. ಗ್ರಾಮಕ್ಕೆ ಸಲುವ ಗದ್ದೆ ಬೆದ್ದಲು ತೋಟ ತುಡಿಕಿ ಆಡುಮನೆವಣ (ಎಕ. XIV, ಚಾಮರಾ. ೨೬೬-೮ ; ?). **ತುಡುಕೆ** : ೧. ಊರಿಂ ತೆಂಕದೆಸವಂದದ ತುಡುಕೆಯೊಳಗಣ ತುಡುಕೆ ಒಂದು (ಹೈಆಸಿ. ೮-೩೩; 1088) ; ಊರಡೆದಡದ ಬಡಗಣ ಮೂಡಣ ಗೋಟನಲ್ಲಿ ಬ್ರಹ್ಮದೇವಪಟ್ಟವರ್ಧನರು ಕೊಟ್ಟ ತೆಂಕವಾಗಿಲ ತುಡುಕೆಯೊಂದು (ಸೌಇಇ. IX-i, ೩೩೩-೫೨ ; 1225). **ತೊಡಿಕೆ** : ೧. ಅಯ್ಯದೇವಪರವಿಟ್ಟ ತೊಡಿಕೆ ಅಱವಿಟ್ಟೊರ್ (ಮ್ಯಆರಿ. ೧೯೩೪, ೪೨-೫ : 10ನೆಯ ಶತ?). [←ತಮಿ. ತುಟವೈ=ತೋಟ ]

**ತುಡಿಗೆ** 'ತೊಡುಗೆ' ನೋ.

**ತುಡಿತ, ದುಡಿತ$_2$** (ನಾ). ೧. ಮಿಡಿತ; ಸ್ಪಂದನ : ಪ್ರಭುಗಳ ಉಕ್ತಿಯನ್ನು ಕೇಳಿದಾಗ ಚೆಂಗುಮಣಿಯ ಎದೆಯ ತುಡಿತ ನಿಧಾನವಾಯಿತು (ಹುಂಪಾ. ೧೫೯). ೨. ಅತ್ಯಾಸಕ್ತಿ ; ಆತುರ; ಲವಲವಿಕೆ; ತವಕ : ಶ್ರೀವಿರೂಪಾಕ್ಷನ ಪಂಪಾಪುರಕ್ಕೆ ಹೋಗಬೇಕೆಂಬ ತುಡಿತ ದಿನದಿನಕ್ಕೂ ಬಲಿಯುತ್ತಿದೆ (ತುಂಗಭ. ೧೩): ಎದೆಭಾರ ಎಷ್ಟೋ ಇಳಿಯುತ್ತದೆ: ತನ್ನೊಳಗಿನ ತುಡಿತ ಹಿಡಿತಕ್ಕೆ ಬರುತ್ತದೆ (ಬನಸಿ. ೧೮೦) ; ನವೋದಯ ಕವಿಗಳಲ್ಲಿ ನೂತನಚೈತನ್ಯವನ್ನು ತುಂಬಿದುದು ಬಂಧನದಲ್ಲಿ ಸಿಲುಕಿದ ಭರತಮಾತೆಯ ಬಿಡುಗಡೆಯ ತುಡಿತ (ಸೌಂದಕ. ೩೬೩). **ದುಡಿತ$_2$**: ೩. ಬೊಕ್ಕೆಯಿಂದುಂಟಾಗುವ ನೋವು : "ಆಯಾಮ = ನೋವು, ಆಕ್ಷೇಪಕ = ದುಡು [ಡಿ] ತ, ಸ್ತಂಬಾ = ಬಿಗಿಯೂದು" (ಬಾಹಟೀ. ೨-೪).

[ ತುಡಿ + – ತ$_2$ ]

**ತುಡಿಸು** 'ತೊಡಿಸು' ನೋ.

**ತುಡು$_1$** 'ತೊಡು$_1$' ನೋ.

**ತುಡು$_2$** 'ತೊಡಂ$_2$' ನೋ.

**ತುಡು$_3$** (ನಾ). ಒಂದು ಬಗೆಯ ಮರ : ಅರುಟಾಳಂ ಪಾರಿವಾಳಂ ತುಡು ತಡಸೊಡವಂ ಲೊಕ್ಕ (ಗಂಕ. ೧-೬೨). [ ? ]

**ತುಡುಂಕು$_1$** 'ತೊಡಂಕಂ$_1$' ನೋ.

**ತುಡುಂಕು$_2$** 'ತುಡುಕಂ$_3$' ನೋ.

△ **ತುಡುಂಗುಣಿ** 'ತುಡಂಗುಣಿ' ನೋ.

**ತುಡುಕಿಸು** (ಕ್ರಿ). ಧರಿಸುವಂತೆ ಮಾಡು ; ಹಿಡಿಯುವಂತೆ ಮಾಡು: ಹರಿಯ ಚಕ್ರವ ತುಡುಕಿಸುವೆ ವಾನರಪತಾಕನ ರಥವ ಹಿಂದಕೆ ಮುರಿಯಲಿಸುವೆನು (ಕುವ್ಯಾಭೀ. ೧-೪೦).

[ ತುಡುಕು$_1$ (<ತೊಡಂಕು$_1$) + –ಇಸು$_3$ ]

**ತುಡುಕು$_1$** 'ತೊಡಂಕು$_1$' ನೋ.

**ತುಡುಕು$_2$** 'ತೊಡಂಕು$_3$' ನೋ.

**ತುಡುಕು$_3$, ತುಡುಂಕು$_2$** (ನಾ). ವಾದ್ಯವಾದನದಲ್ಲಿ ಒಂದು ಪ್ರಕಾರ: ಜತಿ ಜೋಕೆ ತುಡುಕು . . . ಬೆಡಂಗಿನಿತುಂ ಸಂಗತಿವಡೆಯೆ ವಾದನ ಕಳಾವತಿ ಬಾಜಿಸುತಿರ್ದಳ್ (ಶಾಂತೀಶ್ವ. ೧೩-೨೨೭) : ಆ ಸಮಯದೊಳ್: ಮದ್ದಳೆಗಂ ಮದ್ದಳೆಯುಂ . . . ಚಮತ್ಕಾರ ತುಡುಕು ರಿಗ್ಗವಣೆ ಪಹರಣೆಗಳೆಂಬ ನಾನಾಶಬ್ದಂಗಳಂ ಬಾಜಿಸಿ (ಧರ್ಮಪ. ೨-೨೩ ವ) : ಪಲತೆಱದ ತಾಳಗಳ ಜತಿಗಳನಳವಡಿಸಿ ತುಡುಕ [ ಕು ] ಗಳ ಕತ್ತರಗಳನು ಮೂಡಿಜನಾದ ಲಯದಲಿ ಕುಡುಪಡರೆ ನುಡಿಸೆ (ಸಾಳ್ವಭಾ. ೧೮-೫೭): ತುಡುಕು ಪಹರಣೆ . . . ತೋಱಿ ನುಡಿಸಿದ ಮಾರ್ದಂಗಿಕನು (ಗೋಮದೀ. ೭-೧೭). **ತುಡುಂಕು$_2$** : ಕವುತಂದೆಂಕಾರಂ ಮುಲಪವದೆ ತುಡುಂಕೊತ್ತು ಜೋಕೆಯಂತರಿ ಜತಿ ರಿಗ್ಗವಣೆ ಪಹರಣೆಯೆನಿಪ್ಪೀ ಪ್ರಬಂಧಮಂ (?) ಶ್ರೋತ್ರಬಂಧಮೆನೆ ಬಾಜಿಸಿದರ್ (ಪಾರ್ಶ್ವಪು. ೧೨-೩೦). [Pಭರತಕೋಶದಲ್ಲಿ 'ತುಡುಕಾ' ಎಂಬ ಶಬ್ದಕ್ಕೆ 'ವಾದ್ಯಪ್ರಬಂಧ' ಎಂದು ಹೇಳಿದೆ.]

**ತುಡುಕುಗಾಯ** (ನಾ). ಬಿಗಿಯಾದ ಹಿಡಿತದಿಂದ ಉಂಟಾಗುವ ಗಾಯ : ಜಾಡಿಸುವ ಮಣಿಮಯದ ಗದೆಯಲಿ ತೋಡುಪೊಯ್ಲಿನ ತುಡುಕುಗಾಯದ ನೀಡುಮೊನೆಗಳ ವಿಗಡನಿಕ್ಕಿದನದಟರಕ್ಕಸರ (ಕುವ್ಯಾಅ. ೧೦-೫೨). [ ತುಡುಕು$_1$ (<ತೊಡಂಕು$_1$) + ಗಾಯ ]

**ತುಡುಕುಗುದುರೆ** (ನಾ). ಮುನ್ನುಗ್ಗುವ ಕುದುರೆ : ಕಡಿದು ಬಿಸುಟನು ತಲೆವರಿಗೆಗಳಲಡಿಸಿದಾ ಪಯದಳವನೊಗ್ಗಿನ ತುಡುಕುಗುದುರೆಯ ಖುರವ ತಱಿದನು (ಕುವ್ಯಾಶ. ೨-೪೫). [ತುಡುಕು$_1$ (<ತೊಡಂಕು$_1$) + ಕುದುರೆ]

**ತುಡುಕುವೆಳಗು** (ನಾ). ಬೆರೆತುಕೊಂಡ ಬೆಳಕು ; ಅಧಿಕವಾದ ಪ್ರಕಾಶ : ಜಡಿವ ಕೈದೀವಿಗೆಯ ಸಾಲಿನ ತುಡುಕುವೆಳಗಿನ ವಂದಿಜನದುಗ್ಗಡದ ರಾಜಕುಮಾರಕರು ನಡೆತಂದರೊಲವಿನಲಿ (ಕೊರರಾ. ೧-೧೬-೪೦).

[ ತುಡುಕು$_1$ (<ತೊಡಂಕು$_1$) + ಬೆಳಗು$_2$ ]

**ತುಡುಕೆ** 'ತುಡಿಕೆ' ನೋ.

**ತುಡುಕೆವಟ್ಟು, ತುಳುಂಕೆವಟ್ಟು** (ನಾ). ಒಂದು ಪ್ರದೇಶದ ಹೆಸರು : ದೇವರ ಮೂಡಣದೆಸೆಯಲ್ ಪಳಕೆಯ ಮತ್ತರು ೪ ತುಡುಕೆವಟ್ಟನಲ್ಲಿ ಅಱುವಣದೇ ತುಣ್ಬದು ಮಣಲಕೆಯ ಮತ್ತ ೬ (ಸೌಇಇ. IX-I, ೦೨೦-೧೫ : 1068). **ತುಳುಕೆವಟ್ಟು** : ದುದ್ದಿಮಯ್ಯನ ಮಗಂ ಪದ್ಮನಾಭನೊತ್ತಱೆಯ ಹತ್ತಿರಲೀಶ್ವರಯ್ಯನ ಮರ್ಕ್ಕೆಯಿಂ ಪಡುವಲು ಕೊಟ್ಟ ತುಳುಕೆವಟ್ಟನ ಮರ್ಕ್ಕೆ ಕಮ್ಮ ೪೫ (ಸೌಇಇ. IX-I, ೧೬೫-೫೯: 1099). [ ? ]

**ತುಡುಗ** (ನಾ). ಕಳ್ಳ ; ಚೋರ; ತಸ್ಕರ : ಕೂಗಿಯಾಡುವಾನು ಬರಿದೆ ತುಡುಗನು (ಚಿದಾಬ. ೧೪೮-೯) : ಯಾರಿಗೂ ಕಾಣದಂತೆ ಕಳವು ಮಾಡುವ ಚತುರ ತುಡುಗನಂತೆ (ಗಾಳಿಗು. ೨೭) ; ನಿಮ್ಮ ಹುಡುಗರು ಕೆಲವರು ತುಡುಗರು ಅಷ್ಟೆ (ಬೆಳುಮ. ೨೦೨). [ತುಡುಗು + – ಅ$_7$]

**ತುಡುಗತನ** (ನಾ). ಕಳ್ಳತನ ; ಚೌರ್ಯ : ಆಗ ತುಡುಗತನ ತನ್ನ ತಾನೇ ಹೊರಬೀಳುತ್ತದೆ (ರಂಗರೋ. ೧೨). [ <ತುಡುಗು + – ತನ ]

**ತುಡುಗದನ** (ನಾ). = ತುಡುಗುಣಿದನ : ಬೇಸಿಗೆಯಲ್ಲಿ ತುಡುಗದನಗಳು ತೋಟಕ್ಕೆ ಬಾರದಂತೆ ಮಾಡುವುದೇ ಕಷ್ಟ (ರೂಢಿ).

[ <ತುಡುಗು+ದನ ]

**ತುಡುಗಾಡು** (ಕ್ರಿ).ಕಳ್ಳತನ ಮಾಡು ; ಕದಿ : ತುಡುಗಾಡುವ ಬಸವನಾರಂಬಿಗನ ಕಯ್ಯೊಳ್ . . . ಸಿಕ್ಕುವಂತೆ (ಧರ್ಮಾಮೃ. ೧೩-೧೮೫).

[ ತುಡುಗು + ಆಡು$_1$ ]

**ತುಡುಗಿ** (ನಾ). ಕಳ್ಳಿ : ಅವಳೇನು ಬೀದಿಯ ಮೇಲಿನ ತುಡುಗಿಯೆ (ಸ್ವ..ತಿಚಿ. ೨೯೬). [ ತುಡುಗ + –ಇ$_2$ ]

**ತುಡುಗು** (ನಾ). ಕಳ್ಳತನ ; ಚೌರ್ಯ : ಮೊನ್ನಿನ ದಿನ ನಮ್ಮ [illegible] ಇಂಥದೇ ಒಂದು ತುಡುಗು ಸಂಭವಿಸಿತ್ತು (ರಂಗರೋ. ೧೧) : ತುಡುಗಿನಿಂದ . . . ಕಳ್ಳಗಂಟು ಮಾಡಿಕೊಂಡಿದ್ದಳು (ಹೊಸಕ್ಷಿ. ೧೮೮) ; ವಿಸ್ಮಯಕಾರಕ ತುಡುಗುಗಳಲ್ಲಿ ಪ್ಲುತತ್ವಾನ ಕೈಚಳಕವಿದ್ದೇ ಇದೆ (ದೋರಾಕ. ೧೧).

ತುಡುಗುಮಾಡು = ಕಳವು ಮಾಡು ; ಕದಿ : ತುಡುಗುಮಾಡಬಾರ ದೆಂದು ಸಾಲೆಯ ಅಯ್ಯನವರು ಹೇಳಿದ್ದನ್ನು ಮರೆತೆಯೇ ? (ಮುಂಬಯಿ. ೨-೩೬) : ಅವುಗಳು ಸಿಕ್ಕ ಪದಾರ್ಥಗಳನ್ನು ತಿಂದು ಹಾಕುತ್ತಿದ್ದವು. ತುಡುಗುಮಾಡಿ ಒಯ್ಯುತ್ತಿದ್ದವು (ಮೊಪಾಸಾ. ೨೫) ; ತುಡುಗುಮಾಡಿ ಗಂಡಸು ಕೆಟ್ಟ, ಹಾದರಮಾಡಿ ಹೆಂಗಸು ಕೆಟ್ಟಳು (ಗಾದೆ).

[ದೇ.॥ ತಮಿ. ತಿರುಟು, ತಿರುಟ್ಟು ; ಮಲ. ತಿರಿಡ=ಕಳ್ಳ]

**ತುಡುಗುಗೊಳ್** (ಕ್ರಿ). = ತಂಡುಗಾಡು : ಮ ಹಾ ಮಾ ಯಾ ವಿ ಯ ತುಡುಗುಗೊಂಡ ತೊಟ್ಟಿನಂತೆ (ಧರ್ಮಾಮೃ. ೬-೧೧೫) : ತುಡುಗುಗೊಂಡು ಕುಡಿಯದಿರ್ (ಅದ್ಭುತ. ೩೦-೧೮). [ ತುಡುಗು + ಕೊಳ್$_1$ ]

**ತುಡುಗುಣ್** (ಕ್ರಿ). ಕದ್ದು ತಿನ್ನು : ತುಡುಗುಣ್ಬ ತೊಟ್ಟಿನಂತೆ ಕೊಲ್ಲದ ವ್ರತಕ್ಕಲಸಿ ನಡುಗದೆ (ಧರ್ಮಾಮೃ. ೧೪-೮೪). [ ತುಡುಗು+ಉಣ್ ]

**ತುಡುಗುಣಿ**, ತಡುಂಗುಣಿ (ನಾ) ೧. ಕಳವಿನಿಂದಲೇ ಜೀವಿಸುವ ವ್ಯಕ್ತಿ ; ಕಳ್ಳತನದಿಂದ ಹೊಟ್ಟೆ ಹೊರೆಯುವ ವ್ಯಕ್ತಿ : ತುಡುಗುಣಿ ಗೊರವರ ಮೆಚ್ಚಂ ಪೊಡವಿಗೆ ಶಿವಸಕ್ತಿ ತಾನೆ ಸೃಷ್ಟಿಕಮುಸಿವಾ (ಎಕ. XII, ಚಿಕ್ಕನಾ. ೩೦-೨೯; 1149); ಮನೆಮನೆದಪ್ಪದೆ ತಿರುಗುವ ತುಡುಗುಣಿಯಂತೆ ಕಾಡಲಾಗದು ಭಕ್ತನ (ಅವಡಂ. ೦೦೩-೪೬೮) : ತು ಡು ಗು ಣಿ ಯ ನಿನಗುಂಟು ವೀರ್ಯದ ಕಡುಹು (ನಿಘಾಗ. ೯-೧೦-೪೬): ಊ ರೂ ರು ಗಳ ಪೊಕ್ಕ ತುಡುಗುಣಿ ತುರುಕರ್ಮಾರ್ಬಲವ ಕಡುತವಕದೆ ಮುತ್ತಿಕೊಂಡು (ಕಂನವಿ. ೦೩-೫೨). △ **ತುಡುಂಗುಣಿ:** ಆನೆ ತುಡುಂಗುಣಿಯಾದೊಡೆ ಭೂನಾಥಂ ಜಾರನಾದೊಡಂ... ಏ ನೆಂ ದೆ ನ ಬ ಹು ದು ನೀತಿ ತಾಂ ಭೂತಳದೊಳ್ (ನೀತಿಸಾಂ. ೫೪೯). : ೨. ಕದ್ದು ತಿನ್ನುವ ನಾಯಿ : "ತುಡುಂ ಗುಣಿಯ ಹಾಬ್ಬನೆಯ ಹಾಚನಕ್ಕುಂ" (ಸಂಜೀವ. ೬).

ತುಡುಗುಣಿಯಾಗು= ಕಳ್ಳಬುದ್ಧಿಯಿಂದ ಕೂಡಿರು : ಸಾರಮೇಯ ಶಿಶುವಂ ಕಂಡು ಪ್ರೀತಿವಟ್ಟು ಸಡವುತ್ತಿರ್ಪುದುಮದು ಗ ಂ ಡು ನೆ ರೆ ದು ಕೊಂಡು ತುಡುಗುಣಿಯಾಗಿ ಭಾಂಡಸಂಕರಂಗೆಯ್ಯುತ್ತಿರ್ಪುದುಂ (ಪಂಚತಂ. ೨೬೦-೦೯). [ ತುಡುಗು + -ಉಣಿ ]

**ತುಡುಗುಣಿಕ** (ನಾ). = ತುಡುಗುಣಿ ೧ : ಕೊಡಗೂಸು ತೊತ್ತು ಸಯ್ಯುವಿ ತುಡುಗುಣಿಕ ಕುಪ್ಪಾಂಗಿ ರಂಡೆ (ಶಾಸ್ತ್ರಟೀ. ೫೦-೩೬).

[ ತುಡುಗುಣಿ + -ಕ$_3$ ]

**ತುಡುಗುಣಿಗೆಯ್ತ** (ನಾ). ೧. ಕಳ್ಳತನದ ಕೆಲಸ. ೨. ಕಳ್ಳತನದಲ್ಲಿ ಕೂಡಿಸುವುದು ; ಚೋರಸುರತ : ನಾಣಿಲಿ ಮಾಣಲಾಗದೇ ತುಡು ಗುಣಿಗೆಯ್ಯುಮಂ (ರಸರ. ೩-೦೬೨). [ ತುಡುಗುಣಿ + ಕೆಯ್ತ$_1$ ]

**ತುಡುಗುಣಿತನ** (ನಾ). ೧. ಕಳ್ಳತನ : ಕದ್ದು ತಿಂದರೆ ಕೈಹಿಡಿದೊಮ್ಮೆ ಬಡಿದು ತುಡುಗುಣಿತನವ ಬಿಡಿಸಬ್ಯಾ (ಬಸವ. ೪೩೩). ೨. ಕಪಟವೃತ್ತಿ ; ಮೋಸ ; ವಂಚನೆ : ಎನ್ನ ಸೀಮೆಯುಂ ತುಡುಗುಣಿತನದಿ ಹೊಕ್ಕ ಕುಂಟ ಬಂಟಕೆಯುಮಂ ಜಡಿಸಿದೊಡೆ (ಸಮ್ಯಕ್ತ್ವ. ೨-೭) : ಸಾಂಬಳ್ಳಿಯ ಭೂಪ ತುಡುಗುಣಿತನದಬಾಲಬಾವಿಯ ಕೊಂಡ ಕಡೆಗೆ ರಾಣಿಯವಿಕ್ಕಿದಸು (ಕಂನವಿ. ೦೭-೨೨). [ ತುಡುಗುಣಿ + -ತನ ]

**ತುಡುಗುಣಿತೊಟ್ಟು** (ನಾ). ಕಳ್ಳತನ ಮಾಡುವ ತೊತ್ತು : ಗರ್ದಭ ನೆರ್ದೆಯುಮಂ ಕಿವಿಯುಮಂ ತಿಂದು ತುಡುಗುಣಿತೊಟ್ಟಿನಂತೆ ಬಾಯುಂ ತೊಡೆದುಕೊಂಡು ತಾನಲ್ಲದಂತಿರ್ಪುದುಂ (ಪಂಚತಂ. ೨೮೪-೨೨).

[ ತುಡುಗುಣಿ + ತೊಟ್ಟು ]

**ತುಡುಗುಣಿದನ** (ನಾ). ಹೊಲ, ಗದ್ದೆ, ತೋಟಗಳಿಗೆ ನುಗ್ಗಿ, ಕದ್ದು ಮೇಯುವ ಸ್ವಭಾವವುಳ್ಳ ಪಶು ; ಕಳ್ಳಹಸು ; ಕೊಂಡುದನ : ಹಂದಿ ಹರಿದಾಡುವಂತೆ ತುಡುಗುಣಿದನ ತಿರುಗುವಂತೆ (ಉದ್ಯೋಪ್ರ. ೧೧-೨೯-೦೯). [ತುಡುಗುಣಿ + ದನ ]

**ತುಡುಗುಣಿನಾಯ್**, ತಂಡುಗುಣಿನಾಯಿ (ನಾ). ಕದ್ದು ತಿನ್ನುವ ನಾಯಿ : "ಹಾಬ್ಬನೆಹಾಚಂ=ತುಡುಗುಣಿನಾಯ್" (ಕಮುದ. ಪರಿ. ೧) ; ತುಡುಗುಣಿ ನಾಯ್ ಮನೆಯವರ ಕಯ್ಯೊಳ್ ... ಸಿಕ್ಕುವಂತೆ (ಧರ್ಮಾಮೃ. ೧೩-೧೮೫); ಒಡೆಯರ ಕಣ್ತಪ್ಪುವುದನೆ ತುಡುಗುಣಿನಾಯುಲಿ ನೋಡುವಂತೆ (ಪಾರ್ಶ್ವಪು. ೩-೫೯); ತುಡುಗುಣಿನಾಯನು ಹಿಡಿತಂದು ಸಾಕಿದರೆ ತನ್ನೊಡೆಯಂಗೆ ಬಗುಳುವಂತೆ (ಬಸವ. ೫೬೬). **ತುಡುಗುಣಿನಾಯಿ** : ತುಡುಗುಣಿ ನಾಯಿಗೆ ಮಡಕೇ ಮೇಲೆ ಕಣ್ಣು (ರೂಢಿ). [ ತುಡುಗುಣಿ + ನಾಯ್ ]

**ತುಡುಗುಣಿನಾಯಿ** 'ತುಡುಗುಣಿನಾಯ್ ' ನೋ.

**ತುಡುಗುತಿನ್**, ತುಡಂಗುತಿನ್ನು (ಕ್ರಿ). ಕದ್ದು ತಿನ್ನು : ನನ್ನದೊಂದಾಕಳು ಒಕ್ಕಲಿಗನ ಹೊಲದಲ್ಲಿ ತುಡುಗುತಿಂಬುವದಕ್ಕೆ ಹೋಗಲದ ಮನೆಗೆ ಹೊಡತರುವಲ್ಲಿ (ಧರ್ಮಸೂ. ೦೮೯). **ತುಡುಗುತಿನ್ನು** : ಲಕ್ಷ್ಮೀ ತುಡುಗು ತಿನ್ನುತ್ತಾಳೆ (ಸ್ತ್ರೀತಿ. ೫೯). [ ತುಡುಗು + ತಿನ್ನು (<ತಿನ್) ]

**ತುಡುಗುತಿನ್ನು** 'ತುಡುಗುತಿನ್ ' ನೋ.

**ತುಡುಗುತೀನಿ** (ನಾ). ಕದ್ದು ತಿನಿಸು : ಅಡಕವಿಲ್ಲದ ಹೆಣ್ಣ ನಡತೆ ತಪ್ಪಿದ ಹೆಣ್ಣ ತುಡುಗುತೀನಿಯ ತಿಂಬ ಹೆಣ್ಣ (ಪೂಜ್ಯಕ. ೮-೪೧).

[ ತುಡುಗು + ತೀನಿ (<ತಿನಿ$_1$) ]

**ತುಡುಗುನಾಯ್** (ನಾ). ಕಳ್ಳತನ ಮಾಡುವ ನಾಯಿ : ಒಡೆಯರಿಲ್ಲದ ಮನೆಯ ಹೊಕ್ಕು ತುಡುಗುನಾಯ್ ತುಡುಗೊಳಲು ವೀರವೆ (ಕೌಶಿಕಾ. ೧೦-೬೯). 'ತುಡುಗುಣಿನಾಯ್' ಪರಾ. [ ತುಡುಗು + ನಾಯ್ ]

**ತುಡುಗುಪಶು** (ನಾ). = ತುಡುಗುಣಿದನ : ಸಡಿಲು ಬಿಟ್ಟಡೆ ಮನಂ ಮನುಜನಂ ಮೂಜಗದೆ ತುಡುಗುಪಶುವಿನ ಕೊರಳ ಗುದ್ದಿಯಂತೆಳದಾಡಿ ಕೆಡಿಸುವದು (ಮಲ್ಲದ. ೧೩-೯). [ತುಡುಗು + ಪಶು]

**ತುಡುಗುಮೇಯಿಸು** (ಕ್ರಿ). ಕದ್ದು ಮೇಯಿಸು : ಊರ ತುಂಟ ತರುಣರು ತಮ್ಮ ದನಕರುಗಳನ್ನು ಇನ್ನೊಬ್ಬರ ಬಣವೆಗೆ ನೂಕಿ ತುಡುಗುಮೇಯಿ ಸಲು ಮರೆಯಲಿಲ್ಲ (ಜಯಂತ. ೨೬೩). [ತುಡುಗು + ಮೇಯಿಸು]

**ತುಡುಗುವ್ಯಾಪಾರ** (ನಾ). ಕಳ್ಳವ್ಯಾಪಾರ : ಅರ್ಥದಾಸೆಗಾಗಿ ಬಡ್ಡಿಯ ತೆಗೆದುಕೊಂಡು ಬಡವರ ಬಂಧನಕಿಕ್ಕಿ ತುಡುಗುವ್ಯಾಪಾರವ ಮಾಡಿ (ವಡಸಂ. ೩೨೨-೧೦೦). [ತುಡುಗು + ವ್ಯಾಪಾರ]

**ತುಡುಗೆ** 'ತೊಡುಗೆ' ನೋ.

**ತುಡುಗೊಳ್** (ಕ್ರಿ). ಕಳ್ಳತನ ಮಾಡು : ಒಡೆಯರಿಲ್ಲದ ಮನೆಯ ಹೊಕ್ಕು ತುಡುಗುನಾಯ್ ತುಡುಗೊಳಲು ವೀರವೆ (ಕೌಶಿಕಾ. ೧೦-೬೯).

[ <ತುಡುಗು + ಕೊಳ್$_1$ ]

**ತುಡುಜೊಡರ್** (ನಾ). ಹತ್ತಿಸಿರುವ ಸೊಡರು ; ಉರಿಯುತ್ತಿರುವ ದೀಪ : ತುಡುಜೊಡರಬಗೆಯೆಯಿಬವು ಪಡೆಯುವು ಬಂದುವನುದಿತ ವೃತ್ತಿಯನಾಳ್ದುಂ (ಕಮುದ. ೧೬೧). [ತುಡು$_1$ (<ತೊಡು$_1$) + ಸೊಡರ್]

**ತುಡುತಿನ್** (ಕ್ರಿ). ಕದ್ದು ತಿನ್ನು : ಜಡವೆ ಕಳವಿಂದೆ ಲೋಗರ ಮನೆಗಳಂ ಪೊಕ್ಕು ತುಡು[ಪಾಠಾಂ. ಡಿ] ತಿಂದವನ ಭೋಜನಕ್ಕೆ ಮೃಷ್ಟಾನ್ನವಹಾದೊಡೆ ಕೆಲಬಲಂಗಳಂ ನೋಡುವನೆ (ಜೈಮಿಭಾ. ೬-೫೩); ತುಡುತಿಂದವಳಿವಳೆನುತ ನೂಚಿಕ್ಕುವರು (ಕೃಷ್ಣಗೋ. ೨-೫); ಕೆನೆಕೆನೆಮೊಸರನು ದಿನ ತುಡುತಿಂಬನು (ಪ್ರಸಭಾ. ೦೭-೨೧). [ < ತುಡುಗು + ತಿನ್ ]

**ತುಡುತಿನಿ** (ಗು). ಕದ್ದು ತಿನ್ನುವ : ಯಮನ ಭಟರು ತುಡುತಿನಿ ನಾಯ ಬಡಿವುದಕೆ ಕೋಟಿಮಡಿಯೆನೆ ಬಡಿವರು (ವೀರಶೈಪು. ೭-೦೩-೪೭).

[ <ತುಡುಗು + -ತಿನಿ$_2$ ]

**ತುಡುಪು** (ನಾ). ೧. ದೋಣಿ, ಹಡಗು ಮೊದಲಾದುವನ್ನು ನಡೆಸಲು ಉಪಯೋಗಿಸುವ ಹುಟ್ಟು : (ಕ್ರಿ). ೨. ಮರದ ಸವುಟು : (ಕ್ರಿ).

[ ದೇ.॥ ತಮಿ. ತುಟುಪ್ಪು ; ಮಲ. ತುಡುಪ್ಪು ]

**ತುಡುಬು** 'ತುಡಂಮು' ನೋ.

**ತುಡುಬೆ**, ತಂಡುವೆ (ನಾ). ಒಂದು ಬಗೆಯ ಜೇನುಹುಳು : ನಿನ್ನ ಈ ರೂಪವು ಹೆಜ್ಜೇನು ಕಣ್ಣಿಗೆ ದನಿ ತುಡುಬೆಯ ಜೇನು ಕಿವಿಗೆ (ಚಂದ್ರವೀ. ೧೬೪-೯೫); ಮಲೆನಾಡಿನಲ್ಲಿ ತುಡುಬೇಯ ಜೇನುತುಪ್ಪ ನನಗೆಂದು ತಾಯಿ ಕಳುಹೀದ (ಹಳ್ಳಿಯು. ೯೬). **ತುಡುವೆ** : ಅವಳು ಕಚ್ಚಿಸಿಕೊಂಡೂ ಹೆದರದೆ ಹುತ್ತದಲ್ಲಿದ್ದ ತುಡುವೆ ಜೇನನ್ನು ಕಿತ್ತುಕೊಟ್ಟಿದ್ದಳು (ಮಲಮ. ೧೬೬); ದುಂಬಿ, ಹಸುರುದುಂಬಿ, ತುಡುವೆ, ತೊರಿಗ (ನಮ್ಮನು. ೩೪೦). [ ? ]

**ತುಡುಮು**, ತುಡಂಬು (ನಾ). ಒಂದು ಬಗೆಯ ವಾದ್ಯ : ಗಿಡಿಬಿಡಿ ನುಡಿಯಲೊದಱಿ ಕಾಳೆ ರಣಭೇರಿ ಬಿಡದೆ ಮೊಳಗೆ ತುಡುಮುಗಳ ಗಡಣದ ಗರ್ಜಿತ ಮಸಗೆ ನಿಂದನು ರಾಮ ಪಡೆಗಿದಿರಾಗಿ (ಕುಂದಸಾಂ. ೪೩-೫೯) : ಢಕ್ಕೆ ನಾಟ್ಯಾನಕ ಚಂಪೆ ಕಿಂಕಿಣ ಡೌಡೆ ಕುಕ್ಕುರು ತುಡುಮು ಠಿಂಚೆಯುವ . . . ಕೇಳಿಸಿದರು (ಭರಡ. ೦೨-೪೦) : ಎಲ್ಲಿ ನೋಡಲು ವಾದ್ಯಗಳ ಘಲ್ಲಣೆ ತುಡುಮುಗಳಬ್ಬರ ಮೊಱೆದುವಲ್ಲಲ್ಲಿ (ಕಂನವಿ. ೦೭-೪೩) : ತುಡುಮುಗಳ್ ದುಂದುಭಿಯು ತೂರ್ಯತ್ರಯಂಗಳಿಂದ್ರೈತಂದು (ಪರಶು. ೮-೨೧). **ತುಡುಬು** : ತುಡುಬು ಬಡಿಯದೆ ದನಿಯ ಕೊಡುವುದೇನೊ (ದಾಸಪ. ೬). [ ದೇ.॥ ತಮಿ. ತುಟುಮ್ಬು ; ತೆಲು. ತುಡುಮು ]

**ತುಡುರು** 'ತೊಡರ್$_1$' ನೋ.

**ತುಡುವೆ** 'ತುಡುಂಬೆ' ನೋ.

**ತುಡುವೊಗು** (ಕ್ರಿ). ತುಡಂಗಿನಿಂದ ಹೊಗು; ಕಳ್ಳತನದಿಂದ ಪ್ರವೇಶಿಸು : ಕೊಂಕಣದಂತೆಯಲ್ಲಿ ತುಡುವೊಕ್ಕ ತುರುಂಕರ ನೂಂಕಿ . . . ನೀನಪರಶಂಕರನಂತೆಡೆಗೊಂಡೆ ಮಾಧವಾ (ಗಿರಿವಿಂ. ೫೨-೭).
[ <ತುಡುಗು + ಪೊಗು (<ಪುಗು)]

**ತುಡುಸೆಂಡು** (ನಾ). ಹಿಡಿದುಕೊಳ್ಳುವ ಚೆಂಡು : ತುಡುಸೆಂಡೆಂದು ಮಾರ್ತಂಡಮಂಡಳಕ್ಕೆ ಪುಂಡಾದಂಡಮನೆತ್ತಿ . . . ಆಕಾಶಮಂ ಬೆರಂಟುವುದು (ಪುಣ್ಯಾಸ್ರ. ೭-೫೦ ವ). [ < ತುಡುಂಕು$_1$ + ಸೆಂಡು ]

**ತುಡೆಚುಳ್ಳಿ** (ನಾ). ಒಂದು ಬಗೆಯ ಮರ ; "ರಬ್ಬರವೃಕ್ಷ" (ಪಂಡಿತ. ೨೨೭) : ಹೊಳೆಚುಳ್ಳಿ, ಮುಳ್ಳಿಚುಳ್ಳಿ, ಹರಿಕುಶ, ತುಡೆಚುಳ್ಳಿ (ವೃಜಗಿ. ೨-೨೪). [ತುಡೆ$_0$ + ಚುಳ್ಳಿ$_1$]

**ತುಡೆಮದರಂಗಿ** (ನಾ). ಒಂದು ಬಗೆಯ ಗಿಡ ; "ವರಣ" (ಪಂಡಿತ. ೨೪೪) : ಅದಿರಾಜ . . . ತುಡೆಮದರಂಗಿ, ಹೊಡ್ಡೆಲೆನಗೆ (ವೃಜಗಿ. ೨೫-೪೬೬). [ತುಡೆ$_0$ + ಮದರಂಗಿ]

**ತುಡ್ಡಿಲ** (ನಾ). (?) : ಅಪ್ಪುಗೌಡ ಎಬ್ಬಾರ್ಗಿಲ ಸ್ವಾನೀಕತನ ಮುಖ್ಯವಾಗಿ ನಡ್ಸಿ ತುಡ್ಡಿಲ ಸಮುಟ ತುಪ್ಪಿ ಏನಾದಡೆ ಅಲ್ಲಿ (ಎಕ. XIV, ತಿರುಮ. ೦೪೫-೩ ; 1090). [ ? ]

**ತುಣಗೆಣಸು** (ನಾ). ಒಂದು ಬಗೆಯ ಗೆಣಸು : ತೂನಗೆಣಸು, ಮುಡಿಗೆಣಸು, ನೂರೆಲೆಗೆಣಸು, ತುಣಗೆಣಸು, ದಂಡಾಲು (ವೃಜಗಿ. ೩೦-೫೯೨).
[ ತುಣ$_0$ + ಗೆಣಸು (<ಗೆಟಸು) ]

**ತುಣವ** (ನಾ). ಒಂದು ಬಗೆಯ ವಾದ್ಯ : ಪಟುಪಟಹತುಣವಭಂಭಾಮರ್ದಳೆ ಝಲ್ಲರಿಮುಕುಂದತಾಳಕಾಹಳಶಂಖವಂಶವೀಣಾಸ್ವರಂಗಳೆಸೆಯೆ (ಪದ್ಮರಾ. ೮೩-೨೮). [ < ಪ್ರಾ. ತುಣಯ ]

**ತುಣಿ** (ನಾ). ಒಂದು ಬಗೆಯ ಮರ; ನಂದಿಮರ. [ ಸಂ. ]

**ತುಣುಕು**, ತಂನಕು, ತುನುಕು (ನಾ). ತುಂಡು ; ಚೂರು; ಖಂಡ ; ಶಕಲ : ರೊಟ್ಟಿಯ ತುಣುಕೊಂದು ಕೈಯೊಳಗಿದ್ದರೆ ನಾಯಿಗಳಾರೇಳು ಬಹವು (ಇಂದಾಪ. ೧೯೭-೩೮); ಬೆರಳು ಮೂಡಿಸುವಾಗ ಅಲ್ಲಿ ಒಂದು ದಾರದ ತುಣುಕು ಬಿದ್ದಿರಬೇಕು (ಕೃತಕ್ಕೆ. ೧೭೮) ; ಕನ್ನದ ಕಾಲದಲ್ಲಿ ನಾಯಿಯು ಬೊಗಳಬಾರದೆಂದು ಅದಕ್ಕೊಂದು ರೊಟ್ಟಿಯ ತುಣುಕನ್ನು ಚೆಲ್ಲಿ (ಚುಕ್ಕಪ್ರ. ೩೬). **ತುನಕು** : ಮುನಿಸಿನಿಂ ಪರಶುವಂ ಬೀಸಲ್ಕೆ ಬಾಹುಗಳ್ ತುನಕಾಗಿ ನೆಲಕುದರ್ದವು (ಪರಶು. ೨೮-೪). **ತುನುಕು** : ಕನಕವನು ಪಂಚಾಳಗೆ ಕೊಡೆ ತುನುಕು ತುನುಕನು ಮಾಡಿ ಕಡಿದೇ ಜನಿಸುಜನಿಸಿನ ವಡವೆ ಮಾಡಿದ (ಜ್ಞಾನಸಿಂ. ೭-೮).

**ತುಣುಕುಬಿಣುಕು**= (ಹಾಡಿನಲ್ಲಿ) ಕೆಲವೊಂದು ಭಾಗ: ಭತ್ತಕುಟ್ಟುವಾಗ, ಹೆಣ್ಣುಮಕ್ಕಳು, ಕಲಹುಂಕಾರಸಹಿತವಾಗಿ ಗಮಕದ ತುಣುಕುಬಿಣುಕಿನಿಂದ ಹಿತವಾಗಿ ... ಪದ್ಯ ಹೇಳುತ್ತಿದ್ದರಂತೆ (ಮಸಾಹಿ. ೧೨). **ತುಣಕುಮಿಣಕು** = ಅತ್ಯಲ್ಪ ; ಅಲ್ಪಸ್ವಲ್ಪ : ಅವನ ವಿಷಯವಾಗಿ ಪ್ರಸಿದ್ಧವಾದಿದ ತುಣುಕು ಮಿಣಕು ಮಾಹಿತಿಯಿಂದಲೇ ನಮ್ಮ ದಾಹವನ್ನು ಹಿಂಗಿಸಿಕೊಳ್ಳಬೇಕಾಗುವುದು (ಪ್ರಬಂಧ. ೧೦೧).
[ ದೇ.॥ ತಮಿ. ತುಣುಕ್ಕು, ತುಣುಕ್ಕಲ್, ತುಣಿಕ್ಕೈ ; ತೆಲು. ತುನುಕ, ತುನಕ, ತುನ್ಕ ; ನಾಯ್ಕಿ. ತುನ್ಕ ]

**ತುಣ್ಣಿ** 'ತುಣ್ಣೆ' ನೋ.

**ತುಣ್ಣೆ**, ತುಣ್ಣಿ (ನಾ). ಗಂಡಸಿನ ಜನನೇಂದ್ರಿಯ ; ಶಿಶ್ನ : ಅವನ ಬಾಯಿಗೆ ಸುರಾಪಾನ ಕತ್ತೆ ತುಂಣೆ (ಸೌಇಇ. IX-ii, ೫೧೩-೫೫ ; 1521). **ತುಣ್ಣಿ** : ಕತ್ತೆ ತುಂಣಿಯ ತಾನು ತಂನ ಹೆಂಡತಿಯುಂ ತಾಯಿ ತಂದೆಯು ತಿಂದವರು (ಸೌಇಇ. IX-i, ೩೬೬-೨೩ ; 1225) : ಇದಕೆ ಅಣಿಪಿದವನು ಕತ್ತೆಯ ತುಂಣಿಯನು ಕಲುಪ್ಪನು ತಿಂದ ನಾಯಿಯದರ ಕಸಿಗೆ ಆಸೆ ಮಾಡಿದವ (ಮೈಆರಿ. ೧೯೩೦, ೨೩-೧೩ : 1519).
[ದೇ. ॥ ತಮಿ. ಚುಣ್ಣಿ ; ಮಲ. ಕುಣ್ಣೆ, ಚುಣ್ಣಿ ; ತುಳು. ತುಣ್ಣೆ ; ತೆಲು. ಚುಲ್ಲಿ, ಚುಲ್ಲ]

**ತುಣ್ತುಣಿ** 'ತುಂತುಣಿ' ನೋ.

**ತುತಿ** (ನಾ). ಹೊಗಳಿಕೆ ; ಪ್ರಶಂಸೆ ; ಸ್ತೋತ್ರ : ಸ್ತುತಿ–ತುತಿ (ಶಮದ. ೨೭೨ ಪ್ರಯೋ) : ಪುಷ್ಪಸರನ ರಾಣಿಗೆ ಮೆಯ್ಗೊಡವನುವೊಪ್ಪಿಸಿ ತುತಿಯ ಮಾಡಿದರು (ಮೋಹತ. ೦೭-೪೩) ; ಮುರಹರನ ಸನಿಯದಲಿ ಪಾರ್ಥನು . . . ಉರುತರದ ತುತಿಯಿಂದ ಪೊಗಳುತ (ಕೋಗಯ. ೨೭-೯೦).
[ <ಸಂ. ಸ್ತುತಿ ]

**ತುತಿಗೆಯ್ಯು** (ಕ್ರಿ). = ತುತಿಸಂ : ತ್ರಿಣಯನ ಸಭಾಂಗಣದೊಳು ಭಕ್ತಿರಕ್ತಿಯಿಂ ತುತಿಗೆಯ್ಯುತಳ್ತಿಯಿಂದ (ನಂದಿಮಾ. ೫-೩೭).
[ ತುತಿ + ಗೆಯ್ಯು (<ಕೆಯ್$_1$) ]

**ತುತಿಯಿಸು** 'ತುತಿಸು' ನೋ.

**ತುತಿಸು**, ತಂತಿಯಿಸು (ಕ್ರಿ). ಹೊಗಳು ; ಸ್ತೋತ್ರಮಾಡು : ಪ್ರಶಂಸಿಸು : ತುತಿಸುವ ಪುಣ್ಯಪಾರಕರೊಳೊಪ್ಪುತುಂ (ನಂಬಿರ. ೩-೬೬) : ತ್ರಿಕರಣಂಗಳಿಂ ನಂಬಿ ದೃಢಭಕ್ತಿಯಿಂ ತಾಂ ತುತಿಸುತ (ಪದ್ಮರಾ. ೧೦-೭೪) : ಮುನಿಪನ ಚರಣಗಳನು ತುತಿಸಿದನು (ಚಂಪ್ರಸಾಂ. ೭-೪೭) ; ಬಗೆವಗೆಯೊಳ್ ತುತಿಸುತುಮಡಿಗೆಱಗಿದಂ (ರಾಮಾಶ್ವ. ೭೨-೦೪). **ತುತಿಯಿಸು** : ತುತಿಯಿಸಿ ಪೊಡೆವಟ್ಟು (ಪಂಡಿತಂ. ೨೭೨-೨೨) ; ದುರ್ಜನರಂ ದೂಷಿಸಿ ನೀತಿನಿಪುಣರೆನಿಸುವ ಸಜ್ಜನರಂ ಪ್ರೀತಿ ಮಿಗಲು ತುತಿಯಿಸಿ (ಜಯಚಾ. ೧-೨೩).
[ ತುತಿ + – ಇಸು$_3$ ]

**ತುತೂರಿ** 'ತಿತ್ತಿರಿ$_1$' ನೋ.

**ತುತ್ತ**, ತಂತ್ತ$_2$, ತುತ್ತು$_3$, ತುತ್ತೆ (ನಾ). ಒಂದು ಬಗೆಯ ರಾಸಾಯನಿಕ ವಸ್ತು ; ಮೈಲುತುತ್ತ ; ಗಂಧಕಾಮ್ಲ : "ತುತ್ತಂ–ಪಾಷಾಣಭೇದಂ" (ಕಾಶಕ್ಕ. ೨೦೨) ; "ಮಯೂರಗ್ರೀವಃ–ತುತ್ತ" (ಔಷಧಿ. ೦೨೨) : ತುತ್ತವನ್ನು ಕರಿಹುರಳಿಯ ರಸದಿಂದ ಕುಡಿಯಲು ಗರ್ಭನಾಶ (ವಿವೃವಿ. ೧೦೯). **ತುತ್ತಿ**$_2$ : "ಕೂಪಾರೋದಿತಂ ತುತ್ತಿ [ಪಾಠಾಂ. ತೆ]" (ಮಂಗರಾ ೪೩-೪೨). **ತುತ್ತು**$_3$ : (೬). **ತುತ್ತೆ** : (೬). [ < ಸಂ. ತುತ್ಥ ]

**ತುತ್ತರಾಟು** (ನಾ). ಅಭದ್ರವಾಗಿರುವುದು; ಅಸ್ಥಿರವಾಗಿರುವುದು: ತಾನು ತುತ್ತರಾಟಿನ ಮೇಲೆ ಕೂತಿದ್ದ ಬಂಡೆಯಿಂದ ಉರುಳುವುದನ್ನು ಹೇಗೋ ತಡೆದುಕೊಂಡು (ಮಲಮ. ೨೦೨). [?]

**ತುತ್ತಲ್** (ನಾ). ಪ್ರಾಕಾರ; ಸುತ್ತುಗೋಡೆ: ಬಜಲ್ದ ಮದಿಲಂ ಮಣ್ಗೊಂಡ ತುತ್ತಲ್ಗಳಟ್ಟೆಡೆಯಂ ಬಿಟ್ಟಬಿಡೇಗುಲಂಗಳೆಡೆಯಂ ಕಾದಿರ್ಪ ಪಾಣ್ಬರ್ಕಳುಂ (ಸೂಕ್ತಿಸು. ೮-೦೩೫). [←ತಮಿ. ಚುಟ್ಟು]

**ತುತ್ತಾರಿ** 'ತಿತ್ತಿರಿ$_1$' ನೋ.

**ತುತ್ತಿ$_1$** (ನಾ). ಒಂದು ಬಗೆಯ ಗಿಡ: "ತುತ್ತ–ತುತ್ತಿ, ತುರುವೆ" (ಓಷಧಿ. ೬೦); ಶ್ರೀಮುದ್ರೆಗಿಡ, ತುತ್ತಿ, ಕಿಸಂಗಿ, ತುರುಬೀಗಿಡ, ಗಿಡುತಿಂಗಿ (ಮೃಜಿಗಿ. ೧-೬). [ದೇ.॥ ತಮಿ. ಮಲ. ತೆಲು. ತುತ್ತಿ]

**ತುತ್ತಿ$_2$** 'ತಂತ್ರ' ನೋ.

**ತುತ್ತಿಕ್ಕು** (ಕ್ರಿ). ಆಹಾರವನ್ನು ಕೊಡು; ಅನ್ನ ಹಾಕು: ಜೈನರ ತತಿಯ ನೀರ್ಕೆದುವಾಸರಂ ತುತ್ತಿಕ್ಕದರಿದಿಟಿದೆ (ಮದೀಪು. ೨೫-೬). [ತುತ್ತು$_2$ + ಇಕ್ಕು]

**ತುತ್ತಿಡು** (ಕ್ರಿ). ೧. ತುತ್ತುಮಾಡಿ ನುಂಗು; ಕಬಳಿಸು; ತಿನ್ನು; ಉಣ್ಣು: ತುತ್ತಿಡದ ಮುನ್ನ ಪ್ರಾಣ್ಯಂಗಮಂ ಕಂಡೊಡಾ ಅಶನಮಂ ಬಿಟ್ಟು ಮತ್ತೊಂದಶನಮನುಣ್ಗೆ (ಪಸಾರ. ೩೩೩); ಭವಿಯ ಮನೆಯಲ್ಲಿ ಪೊಕ್ಕು ತುತ್ತಿಡುವ ನರಕಿ ಜೀವಿಗಳಗೊಲಿವನೇ ನಮ್ಮ ಶಂಭುಜಕ್ಕೇಶ್ವರ (ಗಡಥಾ. ೦೬೦-೫). ೨. ತುತ್ತು ನೀಡು; ಉಣಿಸು: ಹರಿಸರಿದು ತು [ಪಾಠಾಂ. ಸು] ತ್ತಿಟ್ಟು ಕುಣಿವುತಿರ್ಪರ್ ಕೆಲರು (ಬಸರ. ೭-೦೬೦); ದಾನಂ ದ್ರವ್ಯವೆಂಬ ಬೀಜವ ನಾತ್ಮಗಂ ತುತ್ತಿಡಲುವಾ ಧರ್ಮವೆಂಬ ಬೆಳೆಯುಂಬುದಕೆ ಸತ್ತು ಮಗುಳ್ದುಂ ದೇಹಮೆತ್ತಿ ಬಂದು (ಪ್ರಭುಪು. ೭-೨೦೪). ೩. (ಆಲಂ) ನಾಶಮಾಡು; ಪರಾಜಯಗೊಳಿಸು; ಅಡಗಿಸು: ಅವಷ್ಟಂಭದಿಂ ತೂಗಿದ ಬಾಳ್...ಉಗ್ಗಡದ ಬಿರುದರಂ ತೂಗಿ ತುತ್ತಿಟ್ಟುದೇಂ (ಎಕ. VI, ತರೀಕೆ. ೪೫-೪೦; 1196). [ತುತ್ತು$_2$ + ಇಡು$_1$]

**ತುತ್ತಿದ** (ನಾ). ಜಾಣ; ಪ್ರೌಢ: "ಬಿತ್ತಗಂ=ತುತ್ತಿದಂ" (ಶಮುದ. ಪರಿ. ೨); "ಬಿತ್ತಗನೆನಲ್ ತುತ್ತಿದಂ ಪ್ರೌಢನುಂ" (ಕಬ್ಬಿಗ. ೮೧). [?]

**ತುತ್ತಿಸು** (ಕ್ರಿ). ೧. ನುಂಗು; ಕಬಳಿಸು: ಬಳಿಕ ತುತ್ತಿಸಿದ ರಾಹು ತೊಲಗಿದ ಶಶಿಪೂರ್ಣಿರ್ದನವನು (ಜೈಮಿಭಾ. ೨೮-೩೪). ೨. ಊಟ ಮಾಡಿಸು; ಉಣಿಸು; ತಿನ್ನಿಸು: ಕಜ್ಜಾಯ ತುಪ್ಪ ಸಕ್ಕರೆಯ ಕೊಜ್ಜೆಯರಿಗೆ ಮೆಲ್ಲಿಸುತ ಮಿಕ್ಕುದ ಬಾಗಿಲಜ್ಜಿಯರಿಗೆ ತುತ್ತಿಸಿದ (ಮೋಹತ. ೧೮-೦೪): ಮಾರೀಚನಂ ಮಾರಿಗೆ ತುತ್ತಿಸಿ (ರಾಮಾಶ್ವ. ೧೨೦-೨). [ತುತ್ತು$_1$ + – ಇಸು$_3$]

**ತುತ್ತು$_1$** (ಕ್ರಿ). ೧. ತಿನ್ನು; ನುಂಗು; ಕಬಳಿಸು: "ತುತ್ತು–ಕಬಲನೇ" (ಶಮುಧಾ); ಅಂತು ತನ್ನ ತಂದ ಬಂಡಿಯ ಕೂಟೆಲ್ಲಮಂ ಪತ್ತೆಂಟು ತುತ್ತಿನೊಳೆ ಸಮೆಯೆ ತುತ್ತುವುದು ಕಂಡು (ಪಂಪಭಾ. ೩-೨೪ವ); ಪಗೆಯ ಬೆನ್ನಂ ಪತ್ತುವೆನೊ ದಿಶಾಗಜಂಗಳಂ ತುತ್ತುವೆನೋ (ಗದಾಯು. ೬-೦೮); ತವೆ ದಿಕ್ಕುಂಡಾಲಮಂ ತುತ್ತುವ ದಶದಿಶೆಯಂ ಸುತ್ತುವಾಕಾಶಮಂ ಮುತ್ತುವ ... ಅಗುರ್ವಂ ತೋಱಿದಪ್ಪಂ (ಜಗವಿ. ೧೩-೩೮): ಕೋಟ ಮುಖದಲಿ ನೀಡಿದಲ್ಲವನು ತುಂಬಿ ತುತ್ತಿದ ಹೊಟ್ಟೆ (ಪ್ರಭುಲೀ. ೨೩-೨೭). ೨. (ಆಲಂ) ನಾಶಮಾಡು: ಅಡಗಿಸು; ಪರಾಜಯಗೊಳಿಸು: ಧಾಳಿಯಿಟ್ಟಂ ಪರಿಯಿಟ್ಟಂ ಮುತ್ತಿದು ತೋಟ್ಟುಳಿದುಳಿದನಡಂಗೊತ್ತಿದಂ ತುತ್ತಿದಂ (ಎಕ. VII, ಶಿಕಾ. ೧೧೦-೧೨; ಕು. 1070); ಧುರದೊಳ್ ಬಂದಿದಿರೊಡ್ಡೆ ಕಂಸಹರನೊಡ್ಡಂ ತುತ್ತುವೆಂ ತುತ್ತುವೆಂ (ಜಗವಿ. ೭-೩೭); ಹತ್ತಿದರಂದು ಕಾಳವರಾ ದುರ್ಗವ ತುತ್ತುವಂತೇನ ಬಣ್ಣಿಪೆನು (ಕುರಾಸಾಂ. ೩೪-೦೫); ಮೃಡಲೋಚನಸಂಗಳಿಂದೊಗೆದ ಹರುಷಾಶ್ರುಜಲಂ...ತು [ಪಾಠಾಂ. ಕು]ತ್ತಿದುದು ಸಕಲಲೋಕಂಗಳಂ ತಿಂಗಳಂ ಪೊತ್ತವಂ ಬೆಜಗಾಗಲು (ಕಬಪು. ೪೭-೨೪); ಸಾವಿನ ನೋವಿಗೆ ಕಲಮಲವೆದ್ದು ನೆಲವನ್ನೆಲ್ಲಾ ತುತ್ತುವೆನೆಂದು ಗದರುತ್ತಿಹುದು (ಗರಿ. ೬೧-೧೧). [ದೇ. ॥ ತಮಿ. ತುಟ್ಟು]

**ತುತ್ತು$_2$** (ನಾ). ೧. ಒಂದು ಸಲಕ್ಕೆ ನುಂಗುವಷ್ಟು ಆಹಾರ; ಕವಳ; ಗ್ರಾಸ: "ಗ್ರಾಸಂ ಕಬಳಂ ತುತ್ತು" (ವಸ್ತುಕೋ. ೯೩-೮); "ಕಬಳಮಾಹುತಿಯೆನಲ್ ತುತ್ತೆನಿಕ್ಕುಂ" (ಮಂಗರಾ. ೬೫-೭); ತನ್ನ ಕೆಯ್ಯ ತುತ್ತನರಸಂ ವಿಷಮಿಶ್ರಮೆಂದಱಿಯದೆ ಕೊಟ್ಟಂ (ವಡ್ಡಾರಾ. ೦೯೦-೨); ಅಂತು ತನ್ನ ತಂದ ಬಂಡಿಯ ಕೂಟೆಲ್ಲಮಂ ಪತ್ತೆಂಟು ತುತ್ತಿನೊಳೆ ಸಮೆಯೆ ತುತ್ತುವುದಂ ಕಂಡು (ಪಂಪಭಾ. ೩-೨೪ ವ); ತುತ್ತಿಗೊಮ್ಮೆ ಶಿವಶರಣೆನುತ್ತಿರಬೇಕು (ಬಸವ. ೭೮೭); ಚಿತ್ರವಲರಿಸಿ ತೋರ ತೋರದ ತುತ್ತುಗಳ ನೊಡನೊಡನೆ ತಾ ಮಾಡುತ್ತ (ಬಸಪು. ೮-೦೫); ಹಾಗೆಯೇ ಮಲಗಬಾರದು...ಎರಡು ತುತ್ತಾದರೂ ಉಂಡು ಬಾ (ತ್ಯಾಗಮ. ೯೦); ಕೈಗೆ ಬಂದ ತುತ್ತು ಬಾಯಿಗಿಲ್ಲ (ಗಾದೆ). ೨. ಆಹಾರ; ಊಟ: ಹೊತ್ತು ಹೋಗದ ಮುನ್ನ ತನುವಿನ ತುತ್ತ ನೀಡುವೆ ಗುರುವಿಗೆ (ಪ್ರಭುಲೀ. ೨೩-೪೭); ಹೊತ್ತಿಹೊಗೆವ ಪರಾಕ್ರಮವಾಗ್ನಿಯ ತುತ್ತು ಪದ್ಮವ್ಯೂಹ (ಅಭಿಮನ್ಯು. ೪-೪೫); ಜನಕ್ಕೆ ದುಡಿಮೆಯೂ ಇದೆ. ಹಾಗೇ ತುತ್ತು, ಅಭಿವೃದ್ಧಿಗೆ ಅವಕಾಶ ಎರಡೂ ಬೇಕಾದಷ್ಟಿದೆ (ಮುನಿಮೂ. ೨೩). ೩. ಸಾಧ್ಯವಾದುದು; ದಕ್ಕುವ ವಸ್ತು: ಆಣಕವಾಡು ಎಲ್ಲರ ತುತ್ತು ಅಲ್ಲ; ಸಾಮಾನ್ಯರ ತುತ್ತೂ ಅಲ್ಲ (ನಿರಾಳ. ೧೨ ಮುನ್ನುಡಿ). ೪. (ಆಲಂ) ಅನುಭವ: ದುಃಖ, ನಿರಾಶೆ, ಸೋಲು, ಕಷ್ಟ–ಇವು ನಮ್ಮ ಬಾಳಿನ ನಿತ್ಯದ ತುತ್ತುಗಳಾದವು (ಮುಂಗಾಮು. ೧೭).

**ತುತ್ತಾಗು** = ೧. ಆಹಾರವಾಗು; ಬಲಿಯಾಗು: ಇಲ್ಲಿ ಕಾಳೋರಗಂಗಳ್ಗೆ ತುತ್ತಾದಂ (ರಾಮಾಶ್ವ. ೧೦೬ ೨೮). ೨. ಈಡಾಗು; ವಶವಾಗು; ಅಧೀನವಾಗು: 'ರಾಮಾನುಜನ್' ಅಲ್ಲಿಯೇ ಕ್ಷಯರೋಗಕ್ಕೆ ತುತ್ತಾದುದರಿಂದ, ಆತನ ಸೇವೆ ... ಸಹನಿಯ ಪಾಲಿಗೆ ಬಿತ್ತು (ಸಸ್ಯಕ. ೧೩೦). **ತುತ್ತಿನ ಚೀಲ**=ಹೊಟ್ಟೆ; ಉದರ: ಸಾಲವನು ಮಾಡುವದು ಪೇಲ ತಾ ಬಳಸುವದು ಕಾಲಿನ ಕೆಳಗೆ ಹಾಕುವುದು ತುತ್ತಿನ ಚೀಲ ನೋಡಯ್ಯ (ಸರ್ವಜ್ಞ. ೧೪೮೨); ಬರಿದೋ ಬರಿದು ಬಡವರ ಬಗ್ಗರ ತುತ್ತಿನ ಚೀಲ (ಗರಿ. ೬೦-೦೭); ತೋಟದಲ್ಲಿ ದುಡಿದು ಸಿಗುವ ಕೂಲಿಯಿಂದ ಈ ದಂಪತಿಗಳು ತಮ್ಮ ತುತ್ತಿನ ಚೀಲಗಳನ್ನು ತುಂಬಿಸಿಕೊಳ್ಳುತ್ತಿದ್ದರು (ನವನೀ. ೨೦). **ತುತ್ತು ಹಾಕು**=೧. ಊಟಕ್ಕೆ ಹಾಕು. ೨. ತುತ್ತು ಮಾಡಿ ಕೈಗೆ ಹಾಕು: ಮದುಮಕ್ಕಳಾಟವೆಂದು ಅಡಿಕೆ ಹಿಡಿಯುವುದು, ತುತ್ತು ಹಾಕುವುದು ಮುಂತಾದ ವಿನೋದ ಪ್ರಸಂಗಗಳು (ಸ್ತ್ರೀಶಿಜ. ೨೫). [<ತುತ್ತು$_1$./ತಮಿ. ತುಟ್ಟು]

**ತುತ್ತು$_3$** 'ತುತ್ತ' ನೋ.

**ತುತ್ತುಗೂಳ್** (ನಾ). ನುಂಗಂಪ ಅನ್ನ; ತಿನ್ನುವ ಆಹಾರ: ನಿನ್ನ ಮೆಯ್ಯಿದನೆಂತು ಪೇಳೆ ಕಾಂತಾರರಾಕ್ಷಸಿಗೆ ತುತ್ತುಗೂಳ್ ಕೊಡಲಿ? (ಶ್ರೀರಾಮಾ. ೭೪-೫೦). [ತುತ್ತು$_1$ + ಕೂಳ್ (<ಕೂಟ್$_1$)]

**ತುತ್ತುಗೆಯ್ಯು** (ಕ್ರಿ). ಊಟ ಮಾಡು; ಆಹಾರವನ್ನು ಸ್ವೀಕರಿಸು; ಭುಂಜಿಸು: ಸವಿಯೂಟಕ್ಕೆ ಮನವಿಟ್ಟು ತುತ್ತುಗೆಯ್ಯುತ್ತಿರ್ದ ಲೋಚನ ನಿಮಿಲನನಾಗಿ (ವೀಶೈಪು. ೩-೪-೨೦). [ತುತ್ತು$_2$ + ಗೆಯ್ಯು (<ಕೆಯ್$_1$)]

**ತುತ್ತುಗೊಳ್, ತುತ್ತುಗೊಳ್ಳು** (ಕ್ರಿ). ೧. =ತುತ್ತುಗೆಯ್ಯು: ತುತ್ತುಗೊಂಬುದೆನುತ್ತ ಕೈವೀಸಿದಳು ಕೆಲಬಲಕೆ (ನಿಘಾಗ. ೫-೬-೩೨); ವಣ್ಣಿಡಿದ ಬಿತ್ತರದ ಪೊಲಗಳನ್ ರೌದ್ರದಂಷ್ಟ್ರಂಗಳಿನ್ ತುತ್ತುಗೊಂಡಬ್ಬಾಡೆ (ಬದ್ರಪ್ರ.೨೦-೪೨೫). ೨. (ಆಲಂ) ನಾಶಮಾಡು; ಧ್ವಂಸಗೊಳಿಸು: ನಾಡವಡೆಯಂ ತುತ್ತುಗೊಂಬ ಲಂಬೋದರಿಯಸುಗೊಳಿದಸುರಿಯರ ಕೃತ್ಯವ ನೋಡಿ (ಜೈಮಿಭಾ. ೦೭-೪೪). **ತುತ್ತುಗೊಳ್ಳು**: ೨. ತುತ್ತಿನ ಚೀಲದಲ್ಲಿ ವಿಶ್ವವನ್ನೇ ತುತ್ತುಗೊಳ್ಳಲು ಹೊಂಚುತ್ತಿರುವ ಬಡಬಗ್ಗರ ಹಸಿವೆಯ ಭೀಷಣ ಗರ್ಜನೆಯಿದೆ (ಸಮಾಲೋ. ೨೮). [ತುತ್ತು$_2$ + ಕೊಳ್$_1$]

ತುರಾಯುದ ಹಕ್ಕಿ = ಒಂದು ಬಗೆಯ ಚುಂಗುಳ್ಳ ಹಕ್ಕಿ; ಕುಕ್ಕುಟಿ : ಭೃಂಗ = ೧. ಗುಂಗೀಹುಳ. ೨. ತುರಾಯುದ ಹಕ್ಕಿ" (ಗಂಗಾಮು. ೨೪೪). [ಅರ. ತುರ್ರಾ = ಜೋಲಾಡುವ ಮುಂಗುರುಳು, ಅಲಕ ; ಮರಾ. ತುರಾ ; ಹಿಂ. ತುರೀ./ತಮಿ. ತುರಾಯ್ ; ಮಲ. ತುರ ; ತುಳು. ತುರಾಯಿ; ತೆಲು. ತುರಾ, ತುರಾಯಿ ]

**ತುರಾಮ್ಮ** (ನಾ). ಒಬ್ಬಾತನ ಹೆಸರು : ಗೋಸಾಸಿಯ ಪೆಣ್ಡತಿ ಪೊನ್ನಬ್ಬೆ ಮಗಂ ತುರಾಅಮ್ಮ ತುರಾಮ್ಮನ ಪೆಣ್ಡತಿ ಪಾಳಕ್ಕ (ಮೈಆರಿ. ೧೯೨೯. ೬೯–೨; ೫೮೪). [ ? + ಅಮ್ಮ$_1$ ]

**ತುರಾಯ** ‘ ತುರಾ ’ ನೋ.

**ತುರಾಯಿ** ‘ ತುರಾ ’ ನೋ.

**ತುರಾಯಿಮರ** (ನಾ). ಒತ್ತಾದ ಎಲೆಗಳನ್ನುಳ್ಳ ಒಂದು ಬಗೆಯ ಮರ : (ಶಿ). [ತುರಾಯಿ (< ತುರಾ) + ಮರ$_1$]

**ತುರಾಷಾಟ್ಖಡ್ಗ** (ನಾ). ಇಂದ್ರನ ಕತ್ತಿ ; ವಜ್ರಾಯುಧ : ತುರಾಷಾಟ್ಖಡ್ಗೋಪಮಮಪ್ಪ ತೀಕ್ಷ್ಣತರಚಕ್ರಂ ಸಾರ್ಗುಮಿನ್ನಾತನಂ (ಚಂದ್ರಪು. ೫-೩೫). [ ಸಂ. (ತುರಾಸಾಹ್ + ಖಡ್ಗ) ]

**ತುರಿ$_1$** ‘ತುರುವು$_1$’ ನೋ.

**ತುರಿ$_2$** ‘ ತುರುವು$_2$’ ನೋ.

**ತುರಿ$_3$** ‘ ತುಱಿ ’ ನೋ.

**ತುರಿ$_4$** (ನಾ). = ತೂರ್ಯ$_2$: (ಶಿ). ‘ ತುರವ ’ ಪರಾ. [< ಪ್ರಾ. ತುರಿಅ./ಸಂ. ತೂರ್ಯ ]

**ತುರಿ$_5$** (ನಾ). ೧. ನೆಯ್ಗೆಯವನ ಮಗ್ಗದ ಕೋಲು ; ನೆಯ್ಗೆಯ ಎಳೆಗಳುಳ್ಳ ಮಗ್ಗದ ಕೋಲು; ಮಗ್ಗದಲ್ಲಿರುವ ಹಾಸುಹೊಕ್ಕುದಾರಗಳ ಸುಕ್ಕುಗಳನ್ನು ಸರಿಪಡಿಸಿ ಪ್ರತ್ಯೇಕಗೊಳಿಸುವ ಒಂದು ತಂತುಮಯ ದಂಡ. ೨. ಲಾಳಿ : “ತುರೀ–ಲಾಳಿಯುಂ. ಕಜ್ಜುಯುಂ” (ಕಾಕಕ್ಕ. ೧೬೮). [ ಸಂ. ತುರೀ ]

**ತುರಿಕಡ್ಡಿ** (ನಾ). ಒಂದು ಬಗೆಯ ಹುಲ್ಲು : ಜೇಸುಕಡ್ಡಿ, ತುರಿಕಡ್ಡಿ (ಮೈಜಿ. ೧೩-೨೩೮). [ ತುರಿ ? + ಕಡ್ಡಿ ]

**ತುರಿಕೆ** ‘ ತುಱಿಕೆ ’ ನೋ.

**ತುರಿಗಜ್ಜಿ** (ನಾ). ತುರಿಕೆಯಿಂದ ಕೂಡಿರುವ ಕಜ್ಜಿ; ನವೆಯುಳ್ಳ ಕಜ್ಜಿ : ಕಣಜದಂತೆ ಮೈಯೆಲ್ಲ ಕೋಪ ಹರಿದು ... ತುರಿಗಜ್ಜಿಯಾಗಿ ಇನ್ನಷ್ಟು ಮತ್ತಷ್ಟು ಕೋಪ (ಹೊಸಕ್ಕಿ. ೨೨೦) ; ಹೆಗ್ಗಡೆ ಇನ್ನು ಕಜ್ಜಿ ತುರಿಸಿ ಮುಗಿಸಿರಲಿಲ್ಲ. ತುರಿಗಜ್ಜಿಯ ಹಣೆಯು ಬರಹವೆ ಹಾಗೆ (ಮುಕಮು. ೩೮೫). [ತುರಿ$_3$ (< ತುಱಿ) + ಕಜ್ಜಿ]

**ತುರಿಗೆ** (ನಾ). ಒಂದು ಬಗೆಯ ಆಟ : ಕವಿಲು ಗಜಲು ಭೈತು ತುರಿಗೆ ಆಂದೋಳಿತ [ ಪಾಠಾಂ. ತುತುರಿ ಅರಭಿ] ಮೊದಲಾದ ಆಟಗಳಿಂ ... ಮೆಚ್ಚಿಸಜ್ಜೊತ್ತಿರ್ದರ್ (ವಿರೂಪಾ. ೯೦). ‘ ತುರಗಾಟ ’ ಪರಾ. [ ? ]

**ತುರಿಚೆ** ‘ತುಱುಚೆ’ ನೋ.

**ತುರಿತ$_1$** (ನಾ). ತುರಿ ; ಕೆರೆತ : ಕಡಿಯುವಿಕೆ ; ನವೆ : ಅಯ್ಯಪ್ಪಾ ಮೈಯೆಲ್ಲಾ ತುರಿತ (ರೂಢಿ). [ ತುರಿ$_3$ ( < ತುಱಿ) + – ತ$_2$ ]

**ತುರಿತ$_2$**, ತುರುತು, ತುರ್ತ$_1$, ತುರ್ತು (ನಾ). ೧. ಜಾಗ್ರತೆ ; ಬೇಗ ; ಶೀಘ್ರತೆ ; ತ್ವರೆ ; ಆತುರ : “ ತು [ಪಾಠಾಂ. ತ್ವ, ದು] ರಿತದಲಿ ದಿಟದಲಿ ಅಂಜಸಾಹ್ನಯುಮೆನಿಕು” (ಮಂಗರಾ. ೧೫೬-೬೩): ತುರಿತದಿನನಂತವೀರ್ಯಂ ಬೆರಸು ನೃಪಾಸನ್ನವರ್ತಿಗಳ್ ಕರ್ಪೂರಾಗುರುಮಳಯರುಹವಿಮಿಶ್ರಿತ ಕರಕಾಂಭಸ್ಸೇಕಪೂರ್ವಕಂ ಬೀಸುವುದುಂ (ಶಾಂತಿಪು. ೨-೨೪) ; ಕಣೆಗಳಂ ತುರಿತದಿಂ ತೆಗೆದೆಸುತ (ತುರಂಗ. ೭೧-೨೭) ; ಬರಲೊಡನೆ ಸುರಭಿಸಮಯಂ ತುರಿತದಿನ್ನೆತರ್ಪವಲ್ತೆ ದಾಂಗುಡಿಗಳ್ ಮಾಮರದೊಳ್ (ಧ್ವನ್ಯಲೋ. ೨೪೫). **ತುರುತು :** ೧. ತನ್ನ ತುರುತನ್ನು ತಾನೇ ತಡೆದುಕೊಂಡಳು (ಕಲ್ಯಾಣಿ. ೨೨೧) ; ಕೆಲಸದ ತುರುತಿನಲ್ಲಿ ಅವಳನ್ನು ಕಂಡು ಮಾತನಾಡಿಸದಾದಾಗ (ಬಣ್ಣಮೂ. ೧೧). ೨. ಅತ್ಯಗತ್ಯವಾದುದು ; ಕೂಡಲೆ ಗಮನ ಕೊಡಬೇಕಾದುದು ; ಜರೂರು : ಈ ತುರುತಿನಲ್ಲಿ ಬೇಕು ಅಂದರೆ ಯಾರು ತಾನೇ ಹಣ ಒದಗಿಸುತ್ತಾರೆ (ಮುಕಿ. ೧೫೦). **ತುರ್ತ$_1$:** ೩. ಸದ್ಯ; ತತ್ಕಾಲ : ತುರ್ತಕ್ಕೆ ನಮ್ಮ ಕಡಿಗೆ ಇರುವ ಆಸಾಮಿಗಳೊಳಗೆ ಯಾರಿಗೆ ನಾವು ಸರಾಫರೆಂದು ಎಣಿಸುತ್ತೇವೆ (ಮುಂಬಯಿ. ೨೨ ಪ್ರಸ್ತಾವನೆ). **ತುರ್ತು :** ೨. ತುರ್ತಾದ ವರ್ತಮಾನ ಬಂದಿದೆ (ಯಶೋಧರ. ೨೦) ; ವ್ಯವಹಾರದೊಳು ಯೋಜಿಸೆರಡನು ಕೂಡಿಡು ತುರ್ತಿಗೆ ನಾಲ್ಕನೆಯದನು (ಇಂಚಾಪ. ೨೦೧-೪೩). (ಗು). ೪. ಕೂಡಲೆ ಗಮನಕೊಡಬೇಕಾದ ; ಅತ್ಯಗತ್ಯವಾದ ; ವಿಳಂಬಕ್ಕೆ ಯೋಗ್ಯವಲ್ಲದ : ಯಾವ ತರಹದ ತುರ್ತು ಕೆಲಸವಿಲ್ಲದಿದ್ದರೆ ಕಾಲುನಡೆಯಿಂದಲೇ ... ನಡೆದು ಮನೆ ಕಾಣುತ್ತಿದ್ದರು (ಕಂಬಹು. ೨೭) : ಕೂಡಲೇ ಹೋಗಿ ಅಧಿಕಾರ ವಹಿಸಿಕೊಳ್ಳಬೇಕೆಂದೂ ತುರ್ತು ಆಜ್ಞೆ ಮಾಡಿದ್ದಾರೆ (ರಂಗಳ. ೯).
[ < ಸಂ. ತ್ವರಿತ. / ತುಳು. ತುರಿತ, ತುರ್ತ, ತುರ್ತು; ತೆಲು. ತುರಿತ, ತುಱುತು ]

**ತುರಿಪ,** ತುರಿಹ (ನಾ). = ತುರಿತ$_2$ ೧. ಇರ್ವರುಮೊಟ್ಟಯಾನೇಱ ತುರಿಪದಿಂ ಕತಿಪಯದಿವಸಗಳಿಂ ವೇಣೂತಟಮನೆಯ್ದೆ (ವಡ್ಡಾರಾ. ೧೩೦-೧೫); ಕೆಂದಳಿರ ಪಾಸುಗಳಿಂ ಕುಳಿರ್ವಾಲಿನೀರ್ಗಳಿಂ ತುರಿಪದೆ ಸೂಸುತುಂ ಕೆಳದಿಯರ್ ಸದಿಪುತ್ತಿರೆ (ಪಂಪಭಾ. ೫-೮) : ಅರೆಗಟ್ಟಿ ತುರಿಪದಿಂ ಪರಿತರೆ... ನೋಡಿದಳ್ ಪೆಱಳೊರ್ವಳ್ (ಶಾಂತಿಪು. ೬-೧೧) ; ತುರಿಪದೆ ನಡೆತಂದಳ್ಕಾಮಯೋಗಿನೀವಿಭ್ರಮದಿಂ (ಕಾದಂಪೂ.೪೮೦); ಬೇಟಿಯರ್ ತುರಿಪದಿಂ ಪ್ರಿಯನಿಂಬರೆ ಕಂಡು (ಶೃಂಗಾರ. ೩-೬೪): ತುರಿಪದೆ ಕಾದಿ ಗೆಲ್ದು ಹಯಮಂ (ರಾಮಾಶ್ವ. ೧೧೧-೧೭). **ತುರಿಹ :** “ತುರಿಹಂ ... ಬೇಗಂ – ಈ ೮ ಶೀಘ್ರಂ” (ಕಕಸಾ. ೧೨-೨೨೯) : “ ತುರಿಹ ಬೇಗಂ ... ಶೀಘ್ರಾರ್ಥಂ ” (ಕವಿಕಂ. ೧೧೧) : ಅತ್ವಕ್ಕುತ್ವಂ — ಅಂಗುಷ್ಠ – ಉಂಗುಟ ; ತ್ವರಿತ–ತುರಿಹ (ಕಮುದ. ೨೬೯ ಪ್ರಯೋ) : ದಗದಂತರಿಯಾಮಿ ಮುಂಗೆಲಸಕ್ಕೆ ತುರಿಹದಿಂದವಳ ಪ್ರೇರಕನಾಗಿ (ಮೋಹಹ. ೨೯-೪೦) ; ವಸ್ತುವಿನ ಘನತೆಯೇನದ ನಾನು ತುರಿಹದಿ ಮುಂದೆ ತಂದನುಬಂಧಿಸುವೆನೆಂದು ನುಡಿದ (ಭರದ. ೩೩-೪೫).
[ < ಸಂ. ತ್ವರಿತ ? ]

**ತುರಿಪಂ** (ಅ). ಬೇಗನೆ ; ಶೀಘ್ರವಾಗಿ : ಪರೆಯದಿನಗ್ಗಳಂ ಪೂದ ಮೇಗಣ ಮೋಹಮಿವಳ್ಗೆ ಬಟ್ಟನಂ ತುರಿಪಮೆಯರ್ಥವಮಂ ಕ್ರಮದಿನಾ ಮದುಪಂಗಡ ಕೊಟ್ಟನೊತ್ತೆಯುಂ (ಸೂಕ್ತಿಸು. ೮-೪೨೨). [ < ತುರಿಪ ]

**ತುರಿಪಂಗೆಯ್** (ಕ್ರಿ). ಆತುರಪಡು ; ತವಕಿಸು : ನೀಮೇಕೆ ತುರಿಪಂಗೆಯ್ವಿರೆಮ್ಮರಸಿಯುಂ ಪ್ರಾರ್ಥಿಸಿ ಪೊಡೆವಟ್ಟು ಬೇಡಿಕೊಂಡು ವಿಧಿಪೂರ್ವಕಂ ಮದುವೆ ನಿಲ್ವುದು (ಪಂರಾಮಾ. ೮-೬೧ ವ) ; ಅನುಷ್ಠಾನಂಗಳ್ಗೆ ಪೇಳ್ದ ಪ್ರಮಾಣದ ಕಡೆಯೊಳು ತುರಿಪಂಗೆಯ್ಯದೆ ನಿಜನಿರಂಜನನಿತ್ಯಾನಂದಾತ್ಮಸ್ವರೂಪಮಂ ಧರ್ಮಶುಕ್ಲಧ್ಯಾನದಿಂ ಭಾವಿಸುವುದು (ಪಸಾರ. ೩೪೧). [ತುರಿಪ+ಕೆಯ್$_1$]

**ತುರಿಪಕಾಱ** (ನಾ). ಆತುರಪಡುವವನು ; ತವಕಿಸುವವನು ; ರಭಸಗೊಳ್ಳುವವನು; ದುಡುಕುವವನು: ಗೆಲ್ಲಕಾಱಂ ಪರವಾದಿವ್ರಾತದೊಳ್ ಬಿತ್ತರಿಪ ತುರಿ[ ಪಾಠಾಂ. ಱ ]ಪಕಾಱಂ ಮಹಾಧರ್ಮದೊಳ್...ನೇಮಿಚಂದ್ರಂ (ಅರ್ಧನೇ. ೧-೩೭) ; ರಾಭಸಿಕಾನಾಂ = ತುರಿಪಕಾಱರ್ಗೆ (ನೀತಿವಾ. ೯-೧೧೭). [ತುರಿಪ + – ಕಾಱ]

**ತುರಿಪವಯಣ** (ನಾ). ಬೇಗನೆ ಮಾಡುವ ಪ್ರಯಾಣ ; ಆತುರದ ಪ್ರಯಾಣ. ‘ತುರಿಪವಯಣವರ್’ ಪರಾ. [ತುರಿಪ + ಪಯಣ$_1$ ]

**ತುರಿಪವಯಣವರ್** (ಕ್ರಿ). ಬೇಗಬೇಗನೆ ಪ್ರಯಾಣ ಮಾಡಿಕೊಂಡು ಬರು : ಅರಿಕುಠಾರದಿಂದ ತಳರ್ದು, ತುರಿಪವಯಣವಂದು (ಮಂತ್ರಕ. ೧೧೧-೧) [ತುರಿಪವಯಣ + ಬರ್$_1$]

**ತುರಿಬೀಳ್ಬಳ್ಳಿ** (ನಾ). ಒಂದು ಬಗೆಯ ಬಳ್ಳಿ : (ವ್ಯಾಜಿಗಿ.೫೫-೧೧೦೩). [? + ಬಳ್ಳಿ]

**ತುರಿಮಣೆ** 'ತುರುವುವುಣೆ' ನೋ.

**ತುರಿಮುಳ್ಳುವಿಮಾನು** (ನಾ). ಒಂದು ಬಗೆಯ ವಿಮಾನು : "ಸಹಸ್ರದಂಷ್ಟ್ರಃ, ಪಾಠೀನಃ – ೨ ಸಾವಿರ ಕೋರೆಗಳುಳ್ಳ ವಿಮಾನಿನ ಹೆಸರುಗಳು. ಅಂದರೆ ತುರಿಮುಳ್ಳುವಿಮಾನು" (ಸಿದ್ಧಾಂತಿ. ೮೦).

[ತುರು$_3$ (<ತುಱು)+ಮುಳ್ಳು (<ಮುಳ್)+ ಮೀನು$_2$ (<ಮೀನ್$_3$)]

**ತುರಿಯ$_1$** (ನಾ). = ತುರಿತ$_2$ ೧ : ವಾಯುಸ್ವರೂಪವನು ನೆನೆದಾಕ್ಷಣಂ ಮುಂದೆ ನಿಲಲು ತುರಿಯದಿಂ ತೂರ್ಯತ್ರಯುವ ನಟಿಸಿ (ಲಶಿಚಂ. ೨೯-೩೮) : ತುರಿಯದೆ ಕೈದ ಕೊಳ್ಳೆನುತಲೀಶ್ವರ ಮುಂದುವರಿದೆಚ್ಚನಾಗ ಬಾಣದಲಿ (ಮೋಹಕ. ೩೯-೨೭) : ತುರಿಯದಿಂದೆಯ್ದಿಯವರಂ ಕೊಂದು ಮುಪ್ಪೊಳಲ ದಹಿಸಿ (ಪಾಸೋಪು. ೧೧-೩೪). 'ತಂರಿತ$_2$' ಪರಾ.

[< ಪ್ರಾ. ತುರಿಅ./ಸಂ. ತ್ವರಿತ]

**ತುರಿಯ$_2$** (ನಾ). = ತುರೀಯ ೪: ನಾನು ತುರಿಯ ತುರಿಯಾತೀತವಪ್ಪ ಸತ್ತುಚಿತ್ತಾನಂದ ನಿತ್ಯಪರಿಪೂರ್ಣವೆ ತನ್ನಿರವೆಂದು ತಿಳಿಯೆ (ವಚಸಂ. ೦೬೭-೧೦೫) : ಏನೇನರಿಯನು ತುರಿಯುಯರಡೆಂಬೊಂದರಿಯ ವಾನವುೂರುತಿ ಆವವರಿಯ (ಚಿದಾವ. ೮೩-೧೩). [< ಸಂ. ತುರೀಯ]

**ತುರಿಯಾತೀತ** (ನಾ). ೧. ಮೋಕ್ಷಕ್ಕೆ ಕಾರಣವಾದ ಏಳು ಭೂಮಿಕೆಗಳಲ್ಲಿ ಕೊನೆಯದು, —ಏಳನೆಯದಂ : ತುದಿಯ ತುರಿಯಾತೀತವೇ ಏಳನೆಯ ಭೂಮಿಕೆಯು (ಅಮೃತ. ೬-೬). ೨. ಪರಮಾತ್ಮ : ತುರಿಯಾತೀತನ ಗುರು ತರಿವರಾರೆಂದ (ಗಗಕಾ. ೦೩-೦). [<ಸಂ. ತುರೀಯಾತೀತ]

**ತುರಿಯಾವಸ್ಥೆ** (ನಾ). ಮೋಕ್ಷವನ್ನು ಪಡೆಯುವ ಸ್ಥಿತಿ ; ಜೀವನ್ಮುಕ್ತಿ : ನಾದಬಿಂದುಕಳೆ ಕಲಾನ್ವಿತ ನಾಲ್ಕಱ ಮಧ್ಯದಲ್ಲಿರ್ಪ ತುರಿಯಾವಸ್ಥೆ (ವಚಸಂ. ೫೬೨-೧೮ ಟೀಕು). [< ಸಂ. ತುರೀಯಾವಸ್ಥಾ]

**ತುರಿಸು** 'ತಂಱಿಸು' ನೋ.

**ತುರಿಹ** 'ತುರಿಪ' ನೋ.

**ತುರೀಯ** (ಗಂ). ೧. ನಾಲ್ಕನೆಯಂ ; ಚತುರ್ಥ : ಗಾಯತ್ರಿಯ ತುರೀಯ (ನಾಲ್ಕನೇ) ಪಾದಪ್ರಶಂಸೆ ಉಪನಿಷತ್ತಿನ ವೈಶಿಷ್ಟ್ಯ (ಪುಣ್ಯಾರ. ೮೫ ಪೀಠಿ). (ನಾ). ೨. ನಾಲ್ಕನೆಯದು. ೩. ನಾಲ್ಕನೆಯಂ ಒಂದು ಭಾಗ. ೪. =ತುರೀಯಾವಸ್ಥೆ ೨ : ತುರೀಯದ ಮೋಹ ಬೆರಸಿದಾಗವೇ ಆ ತುರೀಯ ನಪ್ಪ (ಮೋಳಿಮಾ.೭೨-೨೮೨) : ಎನ್ನ ಕಂಗಳೊಳರೂಹಿಂಗೆ ಅನು ಬೇಟ ಗೊಂಡು ಬಳಲುವಂತೆ ಹಿಡಿದು ನೆರೆಯಲಿಲ್ಲಯ್ಯ ತುರೀಯದ [ಪಾಠಾಂ. ತುರ್ಯದ, ತೂರ್ಯದ] ತವಕವನೇನೆಂಬೆನಯ್ಯ (ಅವಚಂ. ೧೩೨-೭೦೦) : ತುರೀಯುಪರಮಾನಂದನು ... ಕೂಡಲಸಂಗಯ್ಯನು (ಬಸವ. ೯೫೪) : ಜನಕಜಾರಮಣ ಧೀರೋದಾತ್ತವಕ್ಷವಾರ್ಧಿಯ ನೀಲನಾವೆಯೊಳ್ ತೇಲಿ ದನು ಶಾಂತಿಯ ತುರೀಯಕೆ (ಶ್ರೀರಾಮಾ. ೦೬೪-೩೪೭) : ಉಪನಿಷತ್ತುಗಳು ತುರೀಯ ಎಂಬ ನಾಲ್ಕನೆಯ ಅವಸ್ಥೆಯನ್ನು ಜೀವನಿಗೆ ಹೇಳುವುವು (ಭಾತತ್ತ್ವ. ೬೪); ತುರೀಯಾವಸ್ಥೆಯೇ ಮುಕ್ತಾವಸ್ಥೆ. ಅಲ್ಲಿ ತುರೀಯನೆಂಬ ಪರಮಾತ್ಮಪ್ರಾಪ್ತಿಯಾಗುವುದು (ಹಿಂದಸಾ.೨೮೮). ೫. [ಜ್ಯೋತಿ] ಲಗ್ನ ದಲ್ಲಿ ನಾಲ್ಕನೆಯ ಸ್ಥಾನ, – ಚತುರ್ಥ ಕೇಂದ್ರ : ಸಿತನಸ್ತದೊಳಿರೆ ರಜನೀಪತಿ ಪತ್ರಜರೊಳೊಂದಿ ನಿರೆ ಶುಭೇತರರೊಡಗೂಡೆ ತುರೀಯ [ಪಾಠಾಂ. ತೂರ್ಯದೊಳಾ] ಲಗ್ನೋದ್ಗತವಮನುಜಂ ಸ್ವಕುಲನಾಶಕಂ ತಾನೆನಿಕುಂ (ಜಾತಕಿ. ೨೦-೯). ೬. (?) : ನಿಷ್ಠೆಯ ಪರಿದು ಭಕ್ತಿ ಎಂಬ ತುರೀಯದಲ್ಲಿ ಸಿಕ್ಕಿ ಸಾಯಲಿಲ್ಲದ ವಿರಕ್ತಿಯ ಕಟ್ಟಿಕೊಂಡು ವಾಡುವ ಸದಾನಂದನ ಇರವು (ಮೋಳಿಮಾ. ೩೭-೧೫೩). [ಸಂ.]

**ತುರೀಯವರ್ಣ** (ನಾ). [illegible] ; [illegible] ವರ್ಣ ; ಶೂದ್ರಜಾತಿ : (ಶ). [ತುರೀಯ + ವರ್ಣ]

**ತುರೀಯವೃತ್ತಿ** (ನಾ). [ಯೋಗ] [illegible] ಗಳಲ್ಲಿ ಒಂದು : ಪ್ರಾಣಾಯಾಮವು ಬಾಹ್ಯವೃತ್ತಿ, ಅಭ್ಯಂತರವೃತ್ತಿ, ಸ್ತಂಭವೃತ್ತಿ [illegible] ತುರೀಯವೃತ್ತಿ [illegible] ವಾದ ದೇಶವನ್ನೂ ಅಭ್ಯಂತರವಾದ ಹೃದಯಾದ್ಯ [illegible] ಪರ್ಯಾಲೋಚನೆ ಮಾಡುವವನಿಗೆ ತುರೀಯವೃತ್ತಿ ಸಂಭವಿಸುವುದು (ಭಾತತ್ತ್ವ. ೩೩೯). [ತುರೀಯ + ವೃತ್ತಿ$_2$]

**ತುರೀಯಾನುಭವ** (ನಾ). ಬ್ರಹ್ಮಸಾಕ್ಷಾತ್ಕಾರ ; ಅದ್ವೈತಾನುಭವ : ಗುರುಕೃಪೆಯಿಂದ ಪಡೆದ ತುರೀಯಾನುಭವವು [illegible] (ಕನಾಚ. ೩೧೯). [ತುರೀಯ + ಅನುಭವ]

**ತುರೀಯಾವಸ್ಥೆ** (ನಾ). ೧. ನಾಲ್ಕನೆಯ ಅವಸ್ಥೆ : [illegible] ತುರೀಯಾವಸ್ಥೆಯಿಂ ಪರ್ಯಾಕುಲಜೀವಿತೆಯಾಗಿ ಕನ್ನೆ ಮೂರ್ಛಾ ಪ್ರಪನ್ನೆಯಪ್ಪುದುಂ (ಜಗವಿ. ೧೧-೫೩೮). ೨. ಆತ್ಮನ ನಾಲ್ಕನೆಯ ಸ್ಥಿತಿ ; ಮೋಕ್ಷ : ಆದರೆ ಅವರಿಗೆ [illegible] —[illegible] ತುರೀಯಾವಸ್ಥೆ [illegible] ಜಂಗಮ ಲೀಲೆಯ ನಾಂದಿಯೆಂದು ? [illegible] : ತುರೀಯಾವಸ್ಥೆಯೇ ಮುಕ್ತಾವಸ್ಥೆ. ಅಲ್ಲಿ ತುರೀಯನೆಂಬ ಪರಮಾತ್ಮಪ್ರಾಪ್ತಿಯಾಗುವುದು (ಹಿಂದಸಾ. ೨೮೮); ಯೋಗಿಗೆ ತನ್ನ ತುರೀಯಾವಸ್ಥೆಯಲ್ಲಿ ಈ ಸ್ಥಿತಿ ಮತ್ತು ಈ ದರ್ಶನ ಲಭಿಸುತ್ತದೆ (ಈವಕ. ೮). [ತುರೀಯ + ಅವಸ್ಥೆ]

**ತುರೀಯೋಪಾಂತ್ಯ** (ನಾ). ಮೋಕ್ಷದ ಸಾಮೀಪ್ಯ ; ಬ್ರಹ್ಮಾನಂದಕ್ಕೆ ಸನ್ನಿಹಿತವಾದ ಮಟ್ಟ : ತುರೀಯೋಪಾಂತ್ಯದೊಳು ವಿಹರಿಸುತಲಿರುವ ಯಾತ್ರಿಕರ ಕಾಣುತ್ತ (ಮಲೆದೇ. ೪೭-೬) ; ಕವಿ ಪಡೆಯುವ ಈ ಸಾಮರ ಸ್ಯಾನುಭವ ತುರೀಯೋಪಾಂತ್ಯ ಸ್ಥಿತಿ. ತುರೀಯದಲ್ಲಿ ಯೋಗಿಯ ಅನುಭವ ಅಲ್ಲಿ ವಿಷಯ ಆತ್ಮಗಳ ಸಂಪೂರ್ಣ ಸಾಮರಸ್ಯ (ಸೌಂದಸ. ೧೬).

[ತುರೀಯ + ಉಪಾಂತ್ಯ]

**ತುರೀರ** (ನಾ).(?): ಬಿಜ್ಜಯನು ಬಡಿದು ತುರೀರರು ಮೊಟ್ಟೆಯ ಹುಱಿಸಲ್ಕೆ (ಇಎ. ೦೯೪೭, ಹಾನಗಲ್. ೦೯೯-೩೦ ; 1322). [?]

**ತುರು** 'ತುಱು' ನೋ.

**ತುರುಕ, ತುರಃಕ, ತುರಂಕಂ$_2$** (ಗಂ) ೧. ಬೇರೆ ದೇಶದ ; ವಿದೇಶದ. 'ತುರುಕ ಬೇವು' ಪರಾ. (ನಾ). ೨. ಒಂದಂ ದೇಶ ; ತುರ್ಕಿಸ್ತಾನ : ಅರಸುಮಕ್ಕಳು ಪರಮಮಾಗಧೆಯ ಗೌಡ ಗುರ್ಜರ ತುರುಕದೇಶದ ಪ್ರಭೃತಿ ಭೂಪರು ನೆರೆದು ಬಂದಲ್ಲಿ (ಜ್ಞಾನಚಂ.೧-೧೧); ಸಿಂಧುಜನಂ ತುರುಕವನಿಯು ಆಂಧ್ರ...ಮೊದಲಾದ ಚಪ್ಪನ್ನದೇಶಕೆ ದರ್ಪಣವೆಂದೆನಿಸಿಪ್ಪುದು ತ್ರೈಲಿಂಗ ದೇಶ (ಧ್ಯರವೇ.೧-೫೭). ೩. ತುರುಕದೇಶದವನು; ತುರ್ಕಿಸ್ಥಾನದವನು: ತುರುಕ ಬರ್ಬರ ಪಾರಸೀಕರ ತುರಗವೈಸಾವಿರಸಹಿತ ಮೋಹರಿಸಿ ನಿಂದನು ಶಕುನಿ (ಕುವ್ಯಾಗ. ೦-೪). ೪. ಮುಸಲ್ಮಾನ; ಮುಹಮ್ಮದೀಯ: ತುರುಕ ದಂಡಿಗೆ ಕಾಲುವಟ್ಟೆಯಾದದು ಕರ್ಣಾಟ (ಕುರಾಸಾಂ. ೩೬-೬೭); ಒಡೆ ನಿಕ್ಕೇರಿಯ ಸೆಳೆದಾಗ ತುರುಕರ ಪಡೆ ನಡೆಯದು ಕನ್ನಡಕೆ (ಕಂನವಿ. ೧೧ ಸೂಚನೆ) ; ಭಾರತೀಯರು ಇಸ್ಲಾಂಮತಾವಲಂಬಿಗಳನ್ನು ಕುರಿತು ಮಾತ ನಾಡುವಾಗ ಅವರನ್ನು ತುರುಕರು ಎಂದು ಕರೆಯುವುದುಂಟು (ಭಾರದ ೪೦೫) : ತಿರಿತಿರಿಗಿ ಗೋಕರ್ಣಕ್ಕೆ ಹೋಗಿ ತುರುಕನಿಂದ ಪೆಟ್ಟು ತಿಂದ (ಗಾದೆ). ೫. ಒಂದಂ ಬಗೆಯ ಪರಿಮಳದ್ರವ್ಯ ; ಲೋಬಾನ "ಕಪಿಲಃ–ಕಪಿ, ತುರುಕ, ತುಷ್ಕ" (ಚಿವಳಿ. ೨೦). 'ತುರುಸಿ' ಪರಾ.

**ತುರಃಕ** : ೨. ಪಾಂಡ್ಯ, ಲಾಳ ನೇಪಾಳ ತುರಃಕ ಬಬ್ಬರಿಗ . . . ಸಿಂಧು

ವಿಷಯಾಧಿಪರಾಳ್ವೆಸಗೆಯ್ಯೆ (ಕಇ. I. ೩೦-೧೭ ; 1222) ; **ತುರುಕು$_2$** : ೨. ಅಂಗ ವಂಗ ಕಳಿಂಗ ಕಾಶ್ಮೀರ ಗುಜ್ಜರ ತುರುಕು ನೇಪಾಳ (ಜಿನಮು. ೫೦-೭೧). [ < ಪ್ರಾ. ತುರುಕ್ಕ./ಸಂ. ತುರುಷ್ಕ ]

**ತುರುಕಬೇವು** (ನಾ). (ವಿದೇಶೀಯವಾದ) ಒಂದು ಬಗೆಯ ಬೇವಿನ ಮರ ; ಮಹಾನಿಂಬ : ಸಾಸುವೆ . . . ತುರುಕಬೇವಿನ ಬೀಜ ಈ ಔಷಧಿಗಳ ಪ್ರತ್ಯೇಕ ಎರಡು ವರಹ ತೂಕವ ಚೂರ್ಣಿಸಿ (ವೈದ್ಯಸಾ. I. ೩೯೩): ರಾಸ್ನೆ, ತುರುಕಬೇವು, ಚಂಗಲಕೋಷ್ಟ . . . ಪ್ರಾತಃಕಾಲದಲ್ಲಿ ಗ ಳ ತೂಕವಂ ಸೇವಿಸುವುದು (ಸಕವೈ. ೨೦೮).

[ ತುರುಕ + ಬೇವು. / ತಮಿ. ತುರುಕ್ಕವೇಮ್ಬು ]

**ತುರುಕರಾಷ್ಟ್ರಲ** (ನಾ). ಮುಸಲ್ಮಾನ ದೊರೆಯ ಸೈನ್ಯ ; ತುರುಷ್ಕ ಸೇನೆ : ತುರುಕರಾಷ್ಟ್ರಲ ವಾರ್ಧಿಬಾಡಬ ದ್ರಾವಿಡಧರಣೀಶ ತಿಮಿರ ಮಾರ್ತಂಡ (ಕಂನವಿ. ೮.೭೭) [ < ಸಂ. ತುರುಷ್ಕರಾಷ್ಟ್ರಲ ]

**ತುರುಕರು** 'ತುಱುಕಱು' ನೋ.

**ತುರುಕಸಿಂಗಾಡಿ** (ನಾ). ತುರುಕಯೋಧರು ಉಪಯೋಗಿಸುತ್ತಿದ್ದ ಬಿಲ್ಲು : ತುರುಕಸಿಂಗಾಡಿ ಪೇಡೆಯ ಲಾಳಿಕೋಲ ನಿಷ್ಠುರವಾಕ್ಯದಾಳ್ಗಳೊಗ್ಗಿನೊಳು ಚುರುಚುರನೆಯ್ದು ಕೈಮುಗಿದು ಗಡ್ಡದ ದೊಡ್ಡ ತುರುಕರರಸು ತೊಲಗಿದನು (ಭರತ. ೩೨-೩೭). [ ತುರುಕ + ಸಿಂಗಾಡಿ ]

**ತುರುಕಳ್ಳಿ** (ನಾ). (ವಿದೇಶೀಯವಾದ) ಒಂದು ಬಗೆಯ ಕಳ್ಳಿಗಿಡ : ತೋಟದ ಬೇಲೀಲೆಲ್ಲಾ ತುರುಕಳ್ಳಿ ಬೆಳೆದಿದೆ (ರೂಢಿ). [<ತುರುಕ+ಕಳ್ಳಿ$_2$]

**ತುರುಕಾಣಿಕೆ** (ನಾ). ಒಂದು ಬಗಯ ಕಾಣಿಕೆ (?) : ಸಕಲ ಸುವರ್ಣಾದಾಯ ಭತ್ತಾದಾಯ ತುರುಕಾಣಿಕೆ . . . ಯಿವು ಮೊದಲಾದವೆಲ್ಲಾ . . . ಧಾರೆಯನೆರದು ಕೊಟ್ಟ ಅಗ್ರಹಾರ (ಎಕ. X. ಕೋಲಾರ. ೨೧೭-೨೭ ; 1637 ?). [ ತುರು$_2$ ? + ಕಾಣಿಕೆ ( < ಕಾಣ್ಕೆ) ]

**ತುರುಕಾಣ್ಯ** (ನಾ). ತುರುಕರ ದೇಶ ; ಮುಸಲ್ಮಾನರ ದೇಶ : ತುರುಕಾಣ್ಯ ಮೊದಲಾದ ದೇಶದೊಳ್ವೆಹರಿಸಿ ಸುರಿದರಾತ್ಮಾಮೃತರಸವ (ಭರತ. ೮೦-೬೧); ರಾಮಸಮುದ್ರದ ಬಟ ಅಗ್ರಹಾರವಾಗಿ ಕೊಟ್ಟದು ತುರುಕಾಣ್ಯದ ದೊರೆಗಳು (ಎಕ. X. ಕೋಲಾರ. ೧೧೭-೦೩ ; 1558); ತುರುಕಾಣ್ಯದೊಳಗನಾವೃಷ್ಟಿದೋಷಂ ಬಂದು ಪಸರಿಸೆ (ಚಬಪು. ೦-೧೯). ℙ ಸಂಸ್ಕೃತದ 'ಆಜ್ಞಾ' ಶಬ್ದದಿಂದ ಬಹುಶಃ ವ್ಯುತ್ಪನ್ನವಾದ 'ಆಣೆಯ' ಎಂಬ ಶಬ್ದದೊಡಗೂಡಿ ಕನ್ನಡದಲ್ಲಿ ತಿಗುಳಾಣ್ಯ, ತುರುಕಾಣ್ಯ, ತೆಲುಗಾಣೆಯ, ಮುಂತಾದ ಪದಗಳು ರೂಪಗೊಂಡಿರಬಹುದೆ ? [ ತುರುಕ + ಆಣ್ಯ$_0$( ℙ ← ತೆಲು. ಆಣೆ = ದೇಶ)]

**ತುರುಕಾಯ** (ನಾ). ತುರುಕರ ಆಕ್ರಮಣ (?) : ಶ್ರೀ ವೀರಬಲ್ಲಾಳ ದೇವರಸರು ರಾಜ್ಯಂಗೆಯ್ಯುತ್ತಿರ್ದ್ದಲ್ಲಿ ತುರುಕಾಯಾವಾಗಿದಲು (ಮೈಆರಿ. ೧೯೩೭, ೦೦-೨; 1310). [ ತುರುಕ + ? ]

**ತುರುಕಾರ** 'ತುಱುಗಾಱ' ನೋ.

**ತುರುಕಾಳು** (ನಾ). ತುರುಕಸೈನಿಕ,—ಭಟ : ಬಿರಿದಗುರ್ವಿಸಿ ಪುರಿಯನು ಕಾದಿರೆ ಬಂದು ತುರುಕಾಳು ಲಗ್ಗೆ ಮಾಡಿದರು (ಕಂನವಿ. ೦೦-೫೯).

[ ತುರುಕ + ಆಳು$_3$ ( < ಆಳ್$_3$) ]

**ತುರುಕಿತಿ** (ನಾ). ತುರುಕಜಾತಿಯ ಹೆಂಗಸು : "ಯವಾನೀ – ತುರುಕಿತಿ" (ಕಾಶಕ್ಕ. ೧೬೩). [ ತುರುಕ + – ಇತಿ$_1$ ( < – ಇತ್ತಿ) ]

**ತುರುಕಿಸು** (ಕ್ರಿ). ಒತ್ತಿ ಒಳಸೇರಿಸು ; ಗಿಡಿ : ಕರಿಯನು ಮರದ ಚಿಕ್ಕ ಚಕ್ರದೊಂದನ್ನು ಬಿದಿರಿನ ಸೀಳಿನೆಡೆಗೆ ತುರುಕಿಸಿ (ಮುಂಗಾಮು. ೧೧೮) : ಹತ್ತು ರೂಪಾಯಿಯ ಐದು ನೋಟನ್ನು ಒಳ ತುರುಕಿಸುತ್ತಾ ಮಾಸ್ತರು ಮೇರಿಯ ಮನೆಯತ್ತ ಸಾಲುಕಿತ್ತರು (ಕಾವೇರಿ. ೧೭೨).

[ ತುರುಕು$_1$ ( < ತುಱುಕು$_1$) + – ಇಸು$_3$ ]

**ತುರುಕು$_1$** 'ತುಱುಕು$_1$' ನೋ.

**ತುರುಕು$_2$** 'ತುರುಕ' ನೋ.

**ತುರುಕುಡಿ** (ನಾ). ಒಂದು ಬಗೆಯ ಗಿಡ : "ಕಲಾರಂ–ಚೆಂಗಣಿಗಲು, ಬಿಳಿಯ ನೈದಿಲು, ಈಚಲು, ತುರುಕುಡಿ ?" (ಒಷಧಿ. ೨೨). [ ? ]

**ತುರುಕುಮಲ್ಲಿಗೆ** (ನಾ). (ವಿದೇಶೀಯವಾದ) ಒಂದು ಬಗೆಯ ಮಲ್ಲಿಗೆ ಗಿಡ ಮತ್ತು ಅದರ ಹೂವು : ಕೆಂಪುಕಾಸಿಕಣಿಗಲು, ತುರುಕುಮಲ್ಲಿಗೆ, ಗಣೇಶನ ಹೂ (ಮೈಜಿಗಿ. ೭೭-೧೫೯೧).

[ ತುರುಕು$_2$ ( <ತುರುಕ) + ಮಲ್ಲಿಗೆ. ]

**ತುರುಕುಹರಳು** (ನಾ). ಒಂದು ಬಗೆಯ ಹರಳುಗಿಡ ; ಮರ ಔಡಲು; ಕಾಡು ಹರಳುಗಿಡ : ದೊಡ್ಡ ಹರಳು, ಬೆಟ್ಟಹರಳು, ತುರುಕುಹರಳು (ಮೈಜಿಗಿ. ೪೭-೯೪೩).

[ ತುರುಕು$_2$ ( < ತುರುಕ) + ಹರಳು ( < ಪರಲ್) ]

**ತುರುಕುಹೆಸರು** (ನಾ). (ವಿದೇಶೀಯವಾದ) ಒಂದು ಬಗೆಯ ಹೆಸರು ಕಾಳು ; ಕಾಡುಹೆಸರು : ತುರುಕುಹೆಸರು, ಮಡಕಿ (ಮೈಜಿಗಿ. ೬೧-೧೨೨೨).

[ ತುರುಕು$_2$ ( < ತುರುಕ) + ಹೆಸರು$_2$ ( <ಪೆಸಱ್) ]

**ತುರುಗ** (ನಾ). ಕುದುರೆ ; ಅಶ್ವ : ತುರುಗ ಗೋವಾ ಮಹಿಷ ಶುನಕಂಗಳಂ ತಿಂದು ನರಮಾಂಸವಂ ಭಕ್ಷಿಸುತ್ತ (ವೀಶೈಪು. ೨-೭-೪೦) : ಮೆಟ್ಟು ಇಲ್ಲದ ಪಾದ ಅಟ್ಟಲೋದದ ತುರುಗ ಕಟ್ಟೆ ಕೆಡಹದ ಕಲಿತನವು ಚಂದನವ ಸುಟ್ಟು ಬಡಿದಂತೆ (ಸರ್ವಜ್ಞ. ೭೫೫). [ < ಸಂ. ತುರಗ ]

**ತುರುಗಲು** 'ತುಱುಂಗಲ್' ನೋ.

**ತುರುಗಾಡು** 'ತುಱುಗಾಡು' ನೋ.

**ತುರುಗಾಲು** (ನಾ). (ಕರಾ) ಕುಕ್ಕರಗಾಲು : ಅತ್ತೆಯು ಮಣೆಯ ಮೇಲೆ ತುರುಗಾಲಲ್ಲಿ ಕುಳಿತ ಅವನ ಮುಂದಕ್ಕೆ ವೀಳೆಯದ ತಬುಕನ್ನು ತಂದಿರಿಸಿದಳು (ಕುಡಿಕೊ. ೪೭). [ ? + ಕಾಲು$_1$ ( < ಕಾಲ್$_1$)]

**ತುರುಗಾಳಿಗ** (ನಾ). ಗೋವುಗಳ ಸಂರಕ್ಷಣೆಗಾಗಿ ಮಾಡುವ ಕಾಳಗ : ಬಂಕಯ್ಯ ತುರುಗಾಳಿಗದಲ್ಲಿ ವೀರಸ್ವರ್ಗ ಪಡೆದುದರಿಂದ, ನಾಗಪಯ್ಯ... ಮುತ್ತಣ್ಣನನ್ನು ಅರಮನೆಯ ತಳವಾರಿಕೆಯ ಊಳಿಗಕ್ಕೆ ಸೇರಿಸಿಕೊಂಡ (ಜನಜೀ. ೯೧). [ ತುರು ( < ತುಱು) + ಕಾಳಿಗ ]

**ತುರುಗು$_1$** 'ತುಱುಕು$_1$' ನೋ.

**ತುರುಗು$_2$** 'ತುಱುಗು$_2$' ನೋ.

**ತುರುಗುಗೊಂದಲು** 'ತುಱುಗುಗೊಂದಲ್' ನೋ.

**ತುರುಗೆವೆ** 'ತುಱುಗೆವೆ' ನೋ.

**ತುರುಗೋಳು** 'ತುಱುಗೋಳ್' ನೋ.

**ತುರುಚ** 'ತುಱುಚೆ' ನೋ.

**ತುರುಚಿ** 'ತುಱುಚೆ' ನೋ.

**ತುರುಚು** (ಕ್ರಿ). ಚುಚ್ಚು ; ತಿವಿ. 'ತುರುಚುಗಬ್ಬ', 'ತುರುಚುಮಾತು' ಪರಾ. [< ತುಱಿಸು]

**ತುರುಚುಗಬ್ಬ** (ನಾ). (ವಿಡಂಬನೆಯಿಂದ) ಮನಸ್ಸನ್ನು ಚುಚ್ಚುವಂಥ ಕಾವ್ಯ : ಇದೇ ವಿಡಂಬನೆ, 'ತುರುಚುಗಬ್ಬ' (ಗೂಹುಗು. ೪೩).

[ತುರುಚು + ಕಬ್ಬ$_1$]

**ತುರುಚುಮಾತು** (ನಾ). (ವಿಡಂಬನೆಯಿಂದ) ಮನಸ್ಸನ್ನು ಚುಚ್ಚುವ ಮಾತು : ಮಕ್ಕಳನ್ನು ಹುಟ್ಟುಹೆಸರನ್ನು ಬಿಟ್ಟು ಹಿಯ್ಯಾಳಿಕೆಯ ನೀಚ ಹೆಸರುಗಳಿಂದ ಕರೆಯುವುದು, ತುರುಚುಮಾತುಗಳನ್ನಾಡುವುದು (ಶಿಕ್ಷರ. ೭೭೨). [ತುರುಚು + ಮಾತು$_1$]

**ತುರುಚೆ** 'ತುಱುಚೆ' ನೋ.

**ತುರುತು** 'ತುರಿತ$_2$' ನೋ.

**ತುರುತುರನೆ** (ಅ). ಬೇಗಬೇಗನೆ : ವೃತಭುಪ್ಪರನಿಟ್ಟೊರಸುವ ಸುಟ್ಟು ತುರುತುರನೆ ತೂಱುವೆ (ಸರ್ವಪ. ೧೮೭-೮೭೦). [ತುರುತುರು + – ಅನೆ$_1$]

**ತುರುತುರು** (ಅ). ಬೇಗಬೇಗ; ಶೀಘ್ರವಾಗಿ : ತುಂಗಕ್ಕ ಮುಖ್ಯ ರಸ್ತೆಯನ್ನು ಸೇರಿ ತುರುತುರು ನಡೆಯಹತ್ತಿದಳು (ಮೂರುದಾ. ೧೫೭).

**ತುರುತ್ತಿ** (ನಾ). (ಕರಾ) ನಡುಗಡ್ಡೆ ; ಚಿಕ್ಕದ್ವೀಪ.
[ದೇ.॥ ತಮಿ. ಮಲ. ತುರುತ್ತಿ]

**ತುರುಪಟ್ಟಿ** 'ತುಱುಪಟ್ಟಿ' ನೋ.

**ತುರುಪಿಸು** (ಕ್ರಿ). (ಉಕ) ಹೊಲಿ ; ಟಾಕಿ ಹಾಕು : ಅಂಗಿ ಹರಿದು ಹೋಗಿದೆ, ಸ್ವಲ್ಪ ತುರುಪಿಸಿಕೊಂಡು ಬಾ (ರೂಢಿ).
[ತುರುಪು$_3$ (P ← ಮರಾ. ತುರಪ) + – ಇಸು$_3$]

**ತುರುಪು$_1$, ತುರುಫ್** (ನಾ). ೧. ಗುಂಪು ; ಸಮೂಹ. ೨. ದಂಡು ; ಸೈನ್ಯ : ತುರುಪಿನ ಸರದಾರರು . . . ಪಿರಿಯಾಪಟ್ಟಣಕ್ಕೆ ಬಂದು ಇದ್ದರು (ರಾಜೇಂದ್ರ. ೧೦೮) ; ಇತ್ತರದಿ ಸಾಲ್ಗೊಂಡು ತುರುಪಿರಲಿ (ಕೃಷ್ಣವಿ. ೩-೩) : ವೇಗದಿಂ ಘಾಳಿಯಂ ಜೈಸಿರುವ ಕುದುರೆಗಳ ಬೇಗದಿಂ ದೇರಿರುವ ತುರುಪಿನ ಸವಾರರು (ಅರ್ಜುವಿ. ೨೪–೪೮). **ತುರುಫ್** : ೨. 'ತುರುಫ್‌ಸವಾರ' ಪರಾ. [← ಇಂ. Troop]

**ತುರುಪು$_2$, ತುರುಫು, ತುರ್ಫು$_1$** (ನಾ). ಇಸ್ಪೀಟು ಆಟದಲ್ಲಿ ಇತರ ಮೂರು ಬಣ್ಣದ ಎಲೆಗಳಿಗಿಂತ ಸದ್ಯಕ್ಕೆ ಹೆಚ್ಚು ಪ್ರಾಧಾನ್ಯ ಪಡೆದಿರುವ ಎಲೆ ; ಹುಕುಮು : (ಕ). **ತುರುಫು** : ಮೊದಲೇ ತುರುಫು ಆಡಿ ಬಿಟ್ಟರೆ ಆಟ ಕೆಟ್ಟುಹೋಗುತ್ತದೆ (ಕಾಮಿಕಾಂ. ೧೦೨). **ತುರ್ಫು$_1$** : 'ತುರ್ಫುಹೊಡು' ಪರಾ. [← ಇಂ. Trump]

**ತುರುಫ್** 'ತುರುಪು'$_1$ ನೋ.

**ತುರುಫ್‌ಸವಾರ** (ನಾ). ಕುದುರೆ ಸವಾರ ; ಅಶ್ವಾರೋಹಿ : ಒಂದು ಕಾಗದವು ಅಪ್ಪಣೆಯಾಗಿ ತುರುಫ್‌ಸವಾರನ ಕೈಲಿಕೊಟ್ಟು . . . ಕಳುಹಿಸಿ (ಮಹಾವಂ. II, ೦೨೦). [ತುರುಫ್ (<ತುರುಪು$_1$) + ಸವಾರ]

**ತುರುಫು** 'ತುರುಪು$_2$' ನೋ.

**ತುರುಬಿ** 'ತುಱುವೆ' ನೋ.

**ತುರುಬಿಕ್ಕು** 'ತುಱುಬಿಕ್ಕು' ನೋ.

**ತುರುಬು$_1$** 'ತುಱುಂಬು$_1$' ನೋ.

**ತುರುಬು$_2$** 'ತುಱುಂಬು$_2$' ನೋ.

**ತುರುಬುಕಟ್ಟು** (ಕ್ರಿ). ಮುಡಿಯನ್ನು ಹೆಣೆದು ಕಟ್ಟು : ಪಕ್ಕದ ಮನೆಯಾಕೆಗೆ ತುರುಬುಕಟ್ಟಿ ಬರುತ್ತೇನೆಂದು ಹೇಳಿ ಹೊರಡುತ್ತಿರುವುದನ್ನು ಕಂಡು ರಾಯರು . . . ತುರುಬುಕಟ್ಟೋದರಲ್ಲಿ ಇವಳು ಮೊದಲನೆಯವಳಂತೆ ಈ ಊರಿಗೆ ಎಂದು ಪತ್ನಿಯನ್ನು ಪ್ರಶಂಸಿಸಿ (ರಾಜುಕ. ೧೦೯).
[ತುರುಬು$_2$ (< ತುಱುಂಬು$_2$) + ಕಟ್ಟು$_1$]

**ತುರುಬೆ** 'ತುಱುವೆ' ನೋ.

**ತುರುಮಂದೆ** 'ತುಱುಮಂದೆ' ನೋ.

**ತುರುಮುರಿಗಡ್ಡೆ** (ನಾ). ಹಳದಿ ಬಣ್ಣದ ಹೂವುಗಳನ್ನು ಬಿಡುವ ರುಚಿಕರವಾದ ಗಡ್ಡೆಯುಳ್ಳ ಒಂದು ಬಗೆಯ ಗಿಡ : (ಕ). [ತುರುಮುರಿ$_0$ + ಗಡ್ಡೆ]

**ತುರುಮುರಿಯಲಬು** (ನಾ). ಒಂದು ಬಗೆಯ ಗಿಡ : (ಕ).
[ತುರುಮುರಿ$_0$ + ಅಲಬು$_2$]

**ತುರುಮಿಂಡಿ** 'ತುಱುಮಿಂಡಿ' ನೋ.

**ತುರುಮೆ** 'ತುಱುವೆ' ನೋ.

**ತುರುಮೇವು** (ನಾ). ದನಕರುಗಳ ಆಹಾರ ; ಹುಲ್ಲು : ನಡೆವುದು ಪಳ್ಳಿ . . ತುರುಮೇವು ವಿಾಸಲ ಸಿರಿಯ ತಪ್ಪಲಿಗೆ (ಶ್ರೀರಾಮಾ. ೭೦೩-೦೦೩).
[ತುರು (<ತುಱು) + ಮೇವು (< ಮೇಪು)]

**ತುರುವಲು** (ನಾ). = ತುರುವು$_2$ ೧: ತೆಂಗಾಯ ತುರುವಲಂ [ಪಾಠಾಂ: ಕುಸುರುವೆ] ತೆಗೆದು ಮತ್ತಾ ವಿದಳಹುಗ್ಗಿಯಿಂದೊಲಿದು ಪೆಸರಂ ಕಲೆವುದು (ಸೂಪಶಾ. ೩-೪) : ಸಕ್ಕರೆಯನು ಇತ್ತು ತೆಂಗಾಯ ತುರು [ಪಾಠಾಂ. ರಿ] ವಲನಿಕ್ಕಿ ತುಪ್ಪದೊಳುಪೊತ್ತಿ ತಾಳಿಸಿ (ಸೂಪಶಾ. ೪-೮೦).
[ತುರುವು$_2$ + – ಅಲು ( < – ಅಲ್$_2$). / ತಮಿ. ತುರುವಲ್]

**ತುರುವಳ** 'ತುಱುವಾಳ' ನೋ.

**ತುರುವಳ್ತಿ** 'ತುಱುವಳ್ತಿ' ನೋ.

**ತುರುವಿಂಡು** 'ತುಱುವಿಂಡು' ನೋ.

**ತುರುವು$_1$, ತುರಿ$_1$** (ಕ್ರಿ). ೧. ಟೊಳ್ಳುಮಾಡು ; ಕೊರೆದು ತೆಗೆ: ತೂತುಮಾಡು : (ಕ). ೨. (ತೆಂಗಿನಕಾಯಿ ಮೊದಲಾದುವನ್ನು) ಹೆರೆ,–ಕೆರೆ : ತೆಂಗಿನಕಾಯನ್ನು ಚೆನ್ನಾಗಿ ತುರುವಿ ಆಮೇಲೆ ಕರಟವನ್ನು ಬಿಸಾಡು (ರೂಢಿ). 'ತುರುವುಮಣೆ' ಪರಾ. **ತುರಿ$_1$** : ೨. ತುರಿದ ತೆಂಗಿನಕಾಯಿಹಾಲೆಮ್ಮೆವಾಲುಮಂ ಸರಿಗೂಡಿ (ಸೂಪಶಾ. ೪-೭): ಗೆಡ್ಡೆಗಳನ್ನು . . . ತುರಿಮಣೆಯಲ್ಲಿ ತುರಿಯಬೇಕು (ಅಡುಸಾ. ೧೦೨) ; 'ಇನ್ನು ನಮಗೊಬ್ಬ ಮಗನೂ ಆಯಿತಲ್ಲ' ಎಂದರು ಅತ್ತ ಹೆರೆಮಣೆಯಲ್ಲಿ ಕಾಯಿ ತುರಿಯುತ್ತ (ಹೊಸಕ್ಷಿ. ೭೭). ೩. ತುಂಡರಿಸು ; ಕೊಲ್ಲು : ಕರಿಕನಾಡ ಬಿದಿರ್ಕ್ಕಲ್ಲಾಳ್ದ ಕುಕ್ಕರ ಪಾಳಿಕ್ಕಾಱ ನಾಡಿಯುರ್ ತುರಿದು (ಎಕ.IX, ಬೆಂಗಳೂ. ೩೬-೩ ;ಸು.750).
[ದೇ.॥ ತಮಿ. ತುರುವು, ತುರ; ಮಲ ತುರ; ತುಳು. ತುರುವು, ತುರಿ; ತೆಲು. ತುಮ್ರ್ಚು, ತುಱುಮು ; ಕುರುಖ್. ತೂರ್ನಾ ; ಮಾಲ್ತೊ. ತೂರೆ]

**ತುರುವು$_2$, ತುರಿ$_2$, ತುರುವೆ$_1$** (ನಾ). ೧. ತೆಂಗಿನಕಾಯಿ ಮೊದಲಾದುವನ್ನು ಹೆರೆಯುವುದರಿಂದ ಉಂಟಾಗುವ ಸಣ್ಣ ಸಣ್ಣಚೂರು ; ಸೂಸಲು; ಹೆರಕಲು : ಪಲ್ಯಕ್ಕೆ ತುಂಬ ಕಾಯಿ ತುರುವಿಲ್ಲದಿದ್ದರೆ ರುಚಿ ಬರುವುದಿಲ್ಲ (ರೂಢಿ). ೨. ರಂಧ್ರ; ತೂತು : ಕತ್ತಿಯುಲಿ ಗುಣವಿಲ್ಲ ಕತ್ತಿಗೆ ದಯವಿಲ್ಲ ಬತ್ತಿದ ಕೆಱೆಗೆ ತುರುವಿಲ್ಲ (ಸರ್ವಜ್ಞ. ೧೮೭೫). **ತುರಿ$_2$** : ೧. ಬಾಳೆಯಕಾಯಿಗಳನ್ನು ತಂದೆರಡಾಗಿ ಸೀಳಿ... ಆ ಕಾಯತಿರುಳುಮಂ ತೆಗೆದುಕೊಂಡು ತುರಿಯುಮಂ ಮಾಡಿ (ಸೂಪಶಾ. ೪-೭೩): ಕಗ್ಗುಂಬಳದ ತುರಿ ೧ ಹಲ, ಏಲಕ್ಕಿ ಅರೆಹಲ . . . ಇವನ್ನೆಲ್ಲ ಚೂರ್ಣಂ ಮಾಡಿ (ಸಕವ್ಯ. ೨೫೦). **ತುರುವೆ$_1$** : ೧. ಕಡಲೆ ಹೆಸಱುದ್ದು ತೆಂಗಿನ ತುರುವೆ [ಪಾಠಾಂ. ರಿಯು] ಮೆಂತ್ಯನೆಯ ಸೊಜ್ಜಿಗೆಯ ಕೂಳು (ಸೂಪಶಾ. ೪-೨೦).
[< ತುರುವು$_1$./ತಮಿ. ತುರುವು; ಮಲ. ತುರುವು, ತುರ]

**ತುರುವುಮಣೆ, ತುರಿಮಣೆ** (ನಾ). ಕೊಬ್ಬರಿ ಮೊದಲಾದ ಪದಾರ್ಥಗಳನ್ನು ಹೆರೆಯುವುದಕ್ಕೆ ಉಪಯೋಗಿಸುವ ಸಣ್ಣ ಸಣ್ಣ ಹಲ್ಲುಗಳುಳ್ಳ ಸಾಧನ : ತುರುವುಮಣೆ ತಂದುಕೊಡು (ರೂಢಿ). **ತುರಿಮಣೆ** : ಗೆಡ್ಡೆಗಳನ್ನು ತೊಳೆದು, ಸಿಪ್ಪೆ ತೆಗೆದು ತರಕಾರಿ ತುರಿಯುವ ತುರಿಮಣೆಯಲ್ಲಿ ತುರಿಯಬೇಕು (ಅಡುಸಾ. ೧೦೨): ಲಾಂಟಾನಕಡ್ಡಿ ತುರಿಮಣೆಯಂತೆ ಮೈಮೇಲೆ ಸವರಿ ಬಟ್ಟೆ ಹರಿದು (ನಡದಾ, II, ೧೨೩೪).
[ತುರುವು$_1$ + ಮಣೆ]

**ತುರುವೆ$_1$** 'ತುರುವು$_2$' ನೋ.

**ತುರುವೆ$_2$** 'ತುಱುವೆ' ನೋ.

**ತುರುಷ್ಕ** (ನಾ). ೧. = ತುರುಕ ೨ : ವಂಗ ತುರುಷ್ಕ [illegible] (ಸೌಇಇ. XI-ii, ೦೫೦-೮: 1102); ಬರ್ಬರ ಪಾರಸೀಕ ಪಾರಿಯಾತ್ರ ಹವಿಸ್ಮಾರ ಡೊಕ್ಕರ ತುರುಷ್ಕ ಮರುಪ್ರಭೃತಿ ಭೂಪಾಲಕರಿಂ [illegible] ರಸಮುಂ . . . ನೆಗಟುತ್ತುವಿರೆಯುರೆ (ಜಗವಿ. ೨-೩೯ವ) : [illegible] ಸರಸಿಜವನಕುಂಜರ ಪರಾಕು (ಯಾದಜಂ. ೩-೦ವ). ೨. [illegible] ದಲ್ಲಿ ಸಿಕ್ಕುವ ಅಂಮುಕವೆಂಬ ಪೋಣಾದಿಂ [illegible]

ಬಗೆಯ ಸುಗಂಧವಸ್ತು; ಯವನಧೂಪ ; ಪಿಂಡಕ : ಹರಿಚಂದನ ಕಾಳಾಗರು ಮಲಯಜ ತುರುಷ್ಕಾದಿಗಳ ಕಂಪು ಬಂದು ಕೀಡಿದೊಡೆ (ಪದ್ಮರಾ. ೫೫-೩). [ಸಂ.]

**ತುರುಷ್ಕಗೌಳ** (ನಾ). [ಸಂಗೀತ] ಒಂದು ರಾಗದ ಹೆಸರು : ಕರ್ಣಾಟ ಗೌಳ, ದೇಶಗೌಳ, ತುರುಷ್ಕಗೌಳ . . . ಎಂಬೀಳುಂ ಉಪಾಂಗಗೌಳ ರಾಗಂಗಳು (ವಿವೇಕ. ೨೩೪). [< ಸಂ. ತುರುಷ್ಕಗೌಡ]

**ತುರುಷ್ಕತೋಡಿ** (ನಾ). [ಸಂಗೀತ] ಒಂದು ರಾಗದ ಹೆಸರು: ಛಾಯಾತೋಡಿ ತುರುಷ್ಕತೋಡಿಯೆಂಬೆರಡುಂ ಉಪಾಂಗತೋಡಿರಾಗಂ ಗಳು (ವಿವೇಕ. ೨೩೪). [ ಸಂ. ತುರುಷ್ಕತೋಡೀ]

**ತುರುಷ್ಕಬಲ** (ನಾ). ತುರುಕರ ಸೈನ್ಯ : ಈ ಕರಾಳ ಕರವಾಳವನ್ನು ಸ್ವೀಕರಿಸಿ ಶ್ರೀರಂಗವನ್ನಾಕ್ರಮಿಸಿರುವ ತುರುಷ್ಕಬಲ ಮುರಿದು . . . ಜಯಪತಾಕೆಯನ್ನೇರಿಸು (ಅನ್ನಾ.ವ. ೯೦). [ತುರುಷ್ಕ + ಬಲ]

**ತುರುಸಿ** (ನಾ). ಮುಸಲ್ಮಾನ ; ಮಹಮದೀಯ. 'ತುರುಸಿದಳ', 'ತುರುಕ' ಪರಾ. [< ಸಂ. ತುರುಷ್ಕ]

**ತುರುಸಿದಳ** (ನಾ). = ತುರುಷ್ಕಬಲ : ಕಲಣನಾಯಕ ಆ [ತ] (ತ) ನ (ತ)ಂಮಂದಿರು ಭಯುರುನಾಯಕ ತಂಮುಂಣನಾಯಕ ಯಿ ಮೂವರು ತುರುಸಿದಳದ ಕೂಡೆ ಕಾದಿ (ಕಇ.I,೬೨-೧೪ : 1481).

[ತುರುಸಿ + ದಳ$_2$ (= ದಲ)]

**ತುರುಸು** 'ದುರುಸು$_1$' ನೋ.

**ತುರುಹಟ್ಟಿ** 'ತುಱುಪಟ್ಟಿ' ನೋ.

**ತುರುಹರಿ** 'ತುಱುಹರಿ$_1$' ನೋ.

**ತುರ್ಕಿ**, ತುರಕಿ (ನಾ). ೧. ಭಾರತದ ಪಶ್ಚಿಮದಲ್ಲಿರುವ ಏಷ್ಯಾಖಂಡಕ್ಕೆ ಸೇರಿದ ಒಂದು ರಾಷ್ಟ್ರ : ಏಷ್ಯಾದ ದೊಡ್ಡ ಚಕ್ರಾಧಿಪತ್ಯವಾಗಿದ್ದ ತುರ್ಕಿ ಯಲ್ಲಿ . . . ಪುಸ್ತಕಭಂಡಾರಗಳನ್ನು ನೆಲಸಮಮಾಡಿದರು (ಪ್ರವಾಇ. II. ೧). **ತುರಕಿ** : ೨. ತುರ್ಕೀದೇಶಕ್ಕೆ ಸಂಬಂಧಿಸಿದುದು. ೩. ತುರ್ಕೀದೇಶದ ಕುದುರೆ : (೬).

[ ← ಪಾರ. ಮರಾ. ತುರ್ಕ್ ; ಹಿಂ. ತುರಕೀ, ತುರ್ಕೀ. / ಇಂ. Turkey ]

**ತುರ್ಶ**$_1$ 'ತುರಿತ$_2$' ನೋ.

**ತುರ್ಶ**$_2$ (ಅ). ಕೂಡಲೆ ; ತಕ್ಷಣದಲ್ಲಿ : ಇವರಿಗೂ ತುರ್ಶ ಆದೇ ಒಳ್ಳೆ ಮದೆನಿಸಿತು (ಮುಖರುದಾ. ೫) ; ಗಂಗೊಳ್ಳಿಯವರು ತಮ್ಮ ಓಡನು ತುರ್ಶ ನಿಲ್ಲಿಸಿ ಇವರ ಕಡೆ ಲಕ್ಷ್ಯ ಕೊಡಹತ್ತಿದರು (ಅಜೋಳಿ. ೧೫೭).

[ < ತುರಿತ$_2$ ]

**ತುರ್ಶೆ** 'ತುರಿತ$_2$' ನೋ.

**ತುರ್ತುಪರಿಸ್ಥಿತಿ** (ನಾ). ಯುದ್ಧಕಾಲದಲ್ಲಿ ಅಥವಾ ಅದೇ ರೀತಿಯ ಕ್ಷೋಭೆಯ ಕಾಲದಲ್ಲಿ ದೇಶದಲ್ಲಿ ಉಂಟಾಗುವ ವಿಷಮಸನ್ನಿವೇಶ ಗಳಲ್ಲಿ ಸರ್ಕಾರವು ಅಧಿಕಾರಯುತವಾಗಿ ಘೋಷಿಸುವ ವಿಶೇಷ ಪರಿಸ್ಥಿತಿ : ಜರೂರು ಪರಿಸ್ಥಿತಿ. P ತುರ್ತುಪರಿಸ್ಥಿತಿಯನ್ನು ಘೋಷಿಸಿದಾಗ ಸರ್ಕಾರದವರು ರಾಷ್ಟ್ರ ಸಂರಕ್ಷಣೆಗಾಗಿ ಕೆಲವು ವಿಶೇಷ [illegible] ಗಳಬೇಕಾಗುತ್ತದೆ [illegible]

**ತುರ್ಪು**$_2$ (ನಾ). ತೋರಿಕೆ ; ಪ್ರದರ್ಶನ (?) : ಮನದ ತೊಡರ್ಪು ಲೋಚನದಡರ್ಪಲರಂಬಿನ ಕೂರ್ಪು ಸರ್ವಮೋಹನರಸದಿರ್ಪು ಬೇಟದ ಪೊಡರ್ಪಭಿಮಾನದ ನಟ್ಟ ತುರ್ಪು ಕಾಮನ ಕರವಾಳ ಕೂರ್ಪು ವಿರಹಾಹಿಯ ಕೊಳ್ಪ ಪಸುರ್ಪು ಜೀಯ ಭಾವನಿಸಿದುದಂಗಹಾರಕರಣಾಭಿನಯಂಗಳ ನೇರ್ಪು ನೀಜಿಯಾ (ಮಲ್ಲಿಪು. ೮-೫೭).

[ P ಇದು 'ತೋರ್ಪು' ಎಂಬುದರ ಅಪಲಿಖಿತವಿರಬಹುದೆ ? ]

**ತುರ್ಪುಹೂಡು** (ಕ್ರಿ). ೧. ಇಸ್ಪೀಟಾಟದಲ್ಲಿ ತುರುಪು ಎಲೆಯನ್ನು ಒಡ್ಡು. ೨. (ಅಲಂ) ಗೆಲ್ಲುವ ಉಪಾಯವನ್ನು ಮಾಡು : ಜಾತಿ ಜಾತಿಗಳ ತುರ್ಪುಹೂಡಿ ಇಲೆಕ್ಶನ್ ಮುಗಿಯಿತು (ದೇಜೀಸ್ತೋತ್ರ. ೬೦).

[ ತುರ್ಪು$_1$ (< ತುರುಪು$_2$) + ಹೂಡು$_1$ (< ಪೂಡು) ]

**ತುರ್ಯ** (ಗು). ೧. [ವೇದಾಂತ] ಚೈತನ್ಯದ ನಾಲ್ಕನೆಯ ಸ್ಥಿತಿ ಯಲ್ಲಿರುವ ; ಪರಮಾತ್ಮಸ್ವರೂಪನಾದ : ಅಗ್ಗದ ತುರ್ಯಶಿವನನು ಪಾರ್ಥ ಚಿಂತಿಸಿದ (ಕುವ್ಯಾಭಾ.೫-೬). ೨. [ಜ್ಯೋತಿ] ಜನ್ಮಲಗ್ನದಿಂದ ನಾಲ್ಕನೆಯದಾದ : ಗ್ರಹಂ . . . ತುರ್ಯಾಷ್ಟಮಸ್ಥಾನದೊಳ್ ಗ್ರಹದಿಂ ಕೂಡೆ ಪರಸ್ಪರಂ ಸ್ವಗುಣದಿಂದಾಳ್ಗುಂ ಚತುರ್ಥಾಂಶಮಂ (ಜಾತಕ. ೯-೯).

[ಸಂ.]

**ತುರ್ಯಗೆ** (ನಾ). [ತತ್ತ್ವಶಾ] ಶಾಕ್ತಮತದಲ್ಲಿ ಮೋಕ್ಷಸಾಧನವೆಂದು ಹೇಳಿರುವ ಏಳು ಜ್ಞಾನಭೂಮಿಕೆಗಳಲ್ಲಿ ಕೊನೆಯದು : ಅನುಭವ ದಿಂದ ತಿಳಿಯತಕ್ಕ ಭೂಮಿಕೆಗಳು ಜ್ಞಾನಭೂಮಿಕೆಗಳು. ಅವುಗಳು "ವಿವಿದಿಷಾ" . . . "ತುರ್ಯಗಾ" ಎಂದೇಳು (ಭಾರದ. ೩೩೭). 'ಜ್ಞಾನ ಭೂಮಿಕೆ' ಪರಾ. [ ಸಂ. ತುರ್ಯಗಾ ]

**ತುರ್ಯರ್ಕ್ಷ** (ನಾ). [ಜ್ಯೋತಿ] ನಾಲ್ಕನೆಯ ಸ್ಥಾನ, –ಮನೆ : ಲಗ್ನಕ್ಕೆ ತೃತೀಯಂದೊಳ್ ಖಳನಮ ತುರ್ಯರ್ಕ್ಷದೊಳ್ ಪಂಡಿತಂ (ಜಾತಕ.೧೮-೧೧).

[ ತುರ್ಯ + ಋಕ್ಷ ]

**ತುರ್ಯಾತೀತ** (ನಾ). ಜೀವನ್ಮುಕ್ತ ; ಅವಧೂತ : ಇದುವೆ ತುರ್ಯಾತೀತ ಆಶ್ರಮಯಿದುವೆ ಶುದ್ಧಪರಮಹಂಸೆಂಬುದುವೆ ಆಶ್ರಮಯಿದುವೆತಾನ ವಧೂತಆಶ್ರಮವು (ಜ್ಞಾನಸಿಂ. ೪೨-೦೨೫). [ ತುರ್ಯ + ಅತೀತ ]

**ತುರ್ಯಾರೂಢ** (ನಾ). ಪರಬ್ರಹ್ಮಾವಸ್ಥೆಯನ್ನು ಪಡೆದಿರುವವನು ; ಜೀವನ್ಮುಕ್ತ : ಪರಮತತ್ತ್ವರಹಸ್ಯವನು ವಿಸ್ತರಿಸಿ ತುರ್ಯಾರೂಢ ರಾಗಿಯೆ ಚರಿಸುತಿಹ ಗಗನಾರ್ಯರಿಗೆ ನಾ ನಿರುತವಂದಿಸುವೆ (ಗಗಶಾ.೧-೧).

[ ತುರ್ಯ + ಆರೂಢ ]

**ತುರ್ಯಾಶ್ರಮ** (ನಾ). ನಾಲ್ಕನೆಯ ಆಶ್ರಮ ; ಸಂನ್ಯಾಸ : ನೇಮದಿ ತುರ್ಯಾಶ್ರಮ ಬಲಿದೆ (ಪ್ರಸಕೀ. ೩-೧). [ ತುರ್ಯ + ಆಶ್ರಮ ]

**ತುರ್ವ** (ನಾ). ಒಂದು ಪ್ರದೇಶದ ಹೆಸರು (?) : ಪ್ರಿಯಾತ್ಮಜೆ ಯೆಜಗ [illegible] × × [ವ]ಕ್ಷಸ್ಥಳನಿವಾಸಿ ಶ್ರೀರೇವ[ಕ್ಕೆ] × [ಮ್ಮ]ಟಿ ಎಪದೊಜಿ³ [ ತುಜ್ವನಾಳ್ದು ] (ಸೌಇಇ. IX-1, ೭-೧೪ : 837). [ ? ]

[illegible], ತುಳ (ನಾ). ೧. ತಕ್ಕಡಿ ; ತ್ರಾಸು. **ತುಳ** : ೨. ಹೋಲಿಕೆ ; [illegible]ರ್ಶ್ಯ : "ತುಳ (ತೋಲ) – ತುಲ (ಲಾ) = ಸಾಮ್ಯ" (ತದ್ಭಕೋ.೧೮).

[ ಸಂ. ]

[illegible] ೧. ತಕ್ಕಡಿಯಲ್ಲಿ ತೂಗುವುದಂ ; ತೂಕ ಮಾಡುವುದು : [illegible]" (ಶಮುಧಾ). ೨. ತೂಕ : "ತುಲಿಃ, ತುಲುಃ, ತುಲನಂ [illegible] ತೂಕಂ" (ಶಾಶಕ್ಮ. ೧೧೩). ೩. ಮೇಲಕ್ಕೆ ಎತ್ತು [illegible]ದು,–ಏರಿಸುವುದು. ೪. ಹೋಲಿಸುವುದು ; ತಾಳೆನೋಡುವುದು. ತುಲನಮಾಡು = ಹೋಲಿಸು ; ತಾಳೆನೋಡು ; ತಾರತಮ್ಯವನ್ನು [illegible]ಡಿ : ನನ ಯೋಗ್ಯತೆಯೇನು ಅವನ ಯೋಗ್ಯತೆಯೇನು [illegible]ವೇ ತುಲನಮಾಡಿ. (ರೂಢಿ). [ ಸಂ. ]

**ತುಲನಾತ್ಮಕ** (ಗು). ಒಂದಕ್ಕೊಂದನ್ನು ಸರಿದೂಗಿಸಿ ನೋಡುವ, —ಹೋಲಿಸಿ ನೋಡುವ: ತುಲನಾತ್ಮಕ ದೃಷ್ಟಿಯಿಂದ ಸಹ ನೋಡಿದಾಗ ಈ ಪಾತ್ರವರ್ಗದ ಮೇಲೆ ಹೆಚ್ಚಿನ ಬೆಳಕು ಬೀಳಬಹುದು (ಸಮುಜೀ. ೩೦ ಓ೮೦೪); ಹೋಲಿಕೆ ಎಲ್ಲೆಲ್ಲಿ ಕಾಣುವುದೆಂಬ ವಿಷಯವಾಗಿ ತುಲನಾತ್ಮಕ ವಾದ ವ್ಯಾಸಂಗವನ್ನು ನಡೆಸುತ್ತಿದ್ದೇವೆಯಷ್ಟೆ (ಕಮುಪಾ. ೮೮); ಸಮಾ ನಾಂತರವಾದ ಮತ್ತು ಪ್ರತಿಕ್ರಿಯಾವಾದಗಳ ತುಲನಾತ್ಮಕ ವಿವೇಚನೆ ಯಿಂದ ಸಿದ್ಧವಾದ ವಿಷಯಗಳಿಷ್ಟು (ಜೀವಾತ್ಮ. ೧೦೮). [ ಸಂ. ]

**ತುಲನೆ** (ನಾ). ಹೋಲಿಕೆ: ಸ್ವಾಮಿದಾಸರು ಆಕೆಗೆ ರಕ್ಷಾಕವಚವಾಗಿ ನಿಲ್ಲುತ್ತಾರೆ. ಈ ತುಲನೆ ವಿಚಾರಣೀಯವಾಗಿದೆ (ಸಮುಜೀ. ೨೪ ಓ೮೦೪).

**ತುಲನೆ ಮಾಡು**=ಹೋಲಿಸು; ತುಲನಮಾಡು: ಇವರನ್ನು ತುಲನೆ ಮಾಡುವಾಗ ಕೆಲವು ಕ್ಷಣ ಮಾನವಮಟ್ಟಕ್ಕೆ ಇವರನ್ನು ತಂದುಕೊಳ್ಳ ಬೇಕು (ಪಾಂಚಶ್ರೀ. ೩೩); ಚೆಂದುಟಿಗಳನ್ನು ಕಾಮನ ಬಿಲ್ಲಿನೊಂದಿಗೆ ತುಲನೆ ಮಾಡಿದೆ (ಸೀತಾರ. ೮). [ ಸಂ. ತುಲನಾ ]

**ತುಲಸಿ, ತುಳಸಿ** (ನಾ). ಪವಿತ್ರವಾದುದೆಂದು ಪೂಜಿಸುವ, ಒಂದು ಬಗೆಯ ಗಿಡ ಮತ್ತು ಅದರ ದಳ: ತುಲಸಿಯು ಲುಂಗಕಷಾಯುದ ಜಲದೊಳ್ . . . ಕಟಿವೆಯು ಸಮನಿಸು ತಾಂ ಮೊಸರೊಳೆ ಮೇಣ್ ಕಲಸಿದೊಡೆ ಪಲವು ದೆವಸಂ ನಿಲ್ಕುಂ (ಲೋಕೋಪ. ೮-೩); ಖರಮರೀಚಿಯ ಜಳಕೆ ಬಾಡಿದ ತರುಣತುಲಸಿಯ ದಂಡೆಯೊಪ್ಪುವ ಗರುವದೇವನ ಬರವ ಕಂಡನು ಬಾಗಿಲಲಿ ವಿದುರ (ಕುವ್ಯಾಉ. ೮-೭); ಕೊರಳ ತುಲಸಿಯ ದಂಡೆ ಬಾಡದು (ಜೈಮಿಭಾ. ೧೧-೨೨); ತುಲಸೀ ಎಲೆಯನ್ನೂ ಕಕ್ಕೆ ಪತ್ರೆಯನ್ನೂ ಹೊಸಕಿದರೇನೇ ಅವುಗಳ ಸ್ವಭಾವಗುಣವಾದ ವಾಸನೆಯನ್ನು ಹೊರ ಗೆಡಹುತ್ತವೆ (ಕೊನಪ್ಪ. ೪-೭). **ತುಳಸಿ**: “ತುಳಸಿಯದು ಸುರಸಿ ಬಹು ಮಂಜರಿಯನಿಕ್ಕು” (ಮಂಗರಾ. ೩೯-೨೭): ಬಳಸಿ ಪಚ್ಚೆಯ ಕೋಟೆ ಯಂತಿರೆ ತುಳಸಿ ಬೆಳೆದಿರೆ ಮನೆಯ ಚೌಕದಿ (ಕಾಶಿರಾ. ೧೦-೩೮); ಒಲ್ಲನೋ ಹರಿ ಕೊಳ್ಳನೋ ಎಲ್ಲ ಸಾಧನವಿದ್ದು ತುಳಸಿ ಇಲ್ಲದ ಪೂಜೆ (ಪುರಂದ. ೨-೭೯ ಅನುಪಲ್ಲವಿ); ತುಳಸಿ:—ಈ ಎಲೆಯ ರಸ, ಮೆಣಸು ೫, ಬೆಳ್ಳುಳ್ಳಿ ೫ ಸಹ ಅರೆದು ಕುಡಿಯೆ ಛಳಿಜ್ವರ ಮಾಣ್ಗುಂ (ವಿವೈವಿ. ೫): ಪಾರ್ಥನೀಕ್ಷಿಸಿದ ವಿಶ್ವಶರೀರಿಗೆ ಜೋಡೆಲೆ ತುಳಸಿಯನಿತೆ ತೂಲೆಯೆ (೧೯ವಿಂ. ೯೧-೭).

**ತುಳಸಿಯ ಕಟ್ಟೆ** = ತುಳಸಿಕಟ್ಟೆ: ಸಂಪ್ರದಾಯವಂತರು ಮನೆಯಿದಿರು ತುಳಸಿಯ ಕಟ್ಟೆಗಳನ್ನು ರಚಿಸುತ್ತಾರೆ (ಭಾಹಬ್ಬ. ೧೫೭). [ ಸಂ. ತುಲಸೀ ]

**ತುಲಸಿಕಟ್ಟೆ, ತುಳಸಿಕಟ್ಟೆ** (ನಾ). ತುಲಸಿಗಿಡದ ಸುತ್ತಲೂ ಕಟ್ಟಿರುವ ಕಟ್ಟೆ; ಬೃಂದಾವನ: ಕಾರ್ತಿಕಶುದ್ಧದ್ವಾದಶಿಯಂದು ತುಲಸೀ ಕಟ್ಟೆಯ ಮೇಲೆ ಕಬ್ಬಿನ ಹಂದರ ಹಾಕಿ . . . ಸಿಂಗರಿಸುವರು (ಭಾಹಬ್ಬ. ೧೫೭). **ತುಳಸಿಕಟ್ಟೆ**: ಮನೆಯ ಮುಂದೆ ಅಥವಾ ತುಳಸೀಕಟ್ಟೆಯ ನೆರೆಯಲ್ಲಿ ಚೆನ್ನಾಗಿ ನೆಲವನ್ನು ಸಾರಿಸಿ ರಂಗವಲ್ಲಿಯನ್ನು ಹಾಕುತ್ತಾರೆ (ಭಾಹಬ್ಬ. ೧೭೨). [ ತುಲಸಿ + ಕಟ್ಟೆ1 ]

**ತುಲಸಿಪೂಜೆ, ತುಳಸಿಪೂಜೆ** (ನಾ). ೧. ಸಾಮಾನ್ಯವಾಗಿ ಸಂಪ್ರದಾಯಸ್ಥ ಯರಾದ ಹೆಂಗಸರು ಪ್ರತಿನಿತ್ಯವೂ ತುಲಸಿಗಿಡಕ್ಕೆಮಾಡುವ ಪೂಜೆ. ೨. ಉತ್ಥಾನದ್ವಾದಶಿಯಂದು ತುಳಸಿಗಿಡಕ್ಕೆ ಮಾಡುವ ಶಾಸ್ತ್ರೋಕ್ತ ವಾದ ಪೂಜೆ: (೬). **ತುಳಸಿಪೂಜೆ**: ೧. ಪ್ರತಿದಿನ ಅವಳು ತುಳಸಿಪೂಜೆ ಮಾಡುತ್ತಾಳೆ (ರೂ೦). [ ತುಲಸಿ + ಪೂಜೆ ]

**ತುಲಸಿಮಾಲೆ, ತುಳಸಿಮಾಲೆ** (ನಾ). ತುಲಸಿದಳಗಳಿಂದ ಕಟ್ಟಿರುವ ಸರ,—ಹಾರ: ತುಲಸಿಮಾಲೆಯ ಧರಿಸಿದವಗೇಕೆ ಜವ್ವಾಜಿ (ಪುರಂದ. ೧-೧೦೦-೨). **ತುಳಸಿಮಾಲೆ**: ತುಳಸಿಮಾಲೆಯ ಹಾಕುವುದಕ್ಕೆ ಅರಸನಾಗಿ ನಾಚುತಿದ್ದ ಸರಸಿಜಾಕ್ಷ ಪುರಂದರವಿಠಲನು ತುಳಸಿಮಾಲೆ ಹಾಕಿಸಿದನು (ಪುರಂದ. ೧-೯೫-೩). [ ತುಲಸಿ + ಮಾಲೆ ]

**ತುಲಸೀದ್ವಾದಶಿ** (ನಾ). ಕಾರ್ತೀಕ ಮಾಸದ ಶುಕ್ಲಪಕ್ಷದ ಹನ್ನೆರಡನೆಯ ದಿನ ಮತ್ತು ಅಂದು ಆಚರಿಸುವ ಹಬ್ಬ; ಉತ್ಥಾನದ್ವಾದಶಿ. [ ಸಂ. ತುಲಸೀದ್ವಾದಶೀ ]

**ತುಲಸೀಮಣಿ, ತುಳಸೀಮಣಿ** (ನಾ). ತುಳಸಿಯ ಬೇರು ಮತ್ತು ಕಾಂಡಗಳಿಂದ ಮಾಡಿರುವ ಮಣಿ. ೭ ತುಲಸೀಮಣಿಯ ಸರವನ್ನು ವಿಷ್ಣುಭಕ್ತರು ಕೊರಳಲ್ಲಿ ಧರಿಸುವುದುಂಟು: [illegible] ಸ್ಫಟಿಕಮಣಿಮಾಲೆಗಳು (ಸಕವ್ಯ. ೩೯). **ತುಳಸೀಮಣಿ**. ಸಕಲವಾದ ಪಾಪಗಳನ್ನು ಹೋಗಲಾಡಿಸುವ ಆಯುಧವಾಗಿರುವುದೇ ತುಳಸೀಮಣಿಯ ಗುಣ (ಸಕವ್ಯ. ೩೯); ಈ ತುಳಸೀಮಣಿ ಕಂಠಾಭರಣವಾಗುವುದಾದರೆ ? (ಹೇಮುಕೂ. ೨); ತುಳಸೀಮಣಿಗಳು ಪ್ರತ್ಯಕ್ಷವಾದವು (ಸಾಹಿಜೀ. ೬೪). [ ಸಂ. ]

**ತುಲಸೀವಿವಾಹ, ತುಳಸೀವಿವಾಹ** (ನಾ). ವಿಷ್ಣುಭಕ್ತರು ಆಚರಿಸುವ ಒಂದು ಉತ್ಸವ; ಶ್ರೀ ವಿಷ್ಣುವಿಗೂ ತುಲಸಿಗೂ ಪ್ರತಿಮಾ ರೂಪವಾಗಿ ಮಾಡುವ ಮದುವೆಯ ಹಬ್ಬ; ತುಲಸೀಕಲ್ಯಾಣ: ಕಾರ್ತಿಕಶುದ್ಧದ್ವಾದಶಿಯ ತಿಥಿಗೆ ‘ತುಲಸೀವಿವಾಹ’ದ ಪ್ರತಾಚರಣೆ ನಡೆಯುವುದು (ಭಾಹಬ್ಬ. ೧೫೭). **ತುಳಸೀವಿವಾಹ**: ಪುರೋಹಿತರು ವಿವಾಹಮಂತ್ರಗಳನ್ನು ಹೇಳುತ್ತ ತುಳಸೀವಿವಾಹವನ್ನು ನೆರವೇರಿಸುತ್ತಾರೆ (ಭಾಹಬ್ಬ. ೧೫೭). [ ಸಂ. ]

**ತುಲಸೀವೃಂದಾವನ** (ನಾ). = ತುಲಸಿಕಟ್ಟೆ. [ ಸಂ. ]

**ತುಲಾಕೋಟಿ** (ನಾ). ೧. ತಕ್ಕಡಿಯ ಕೋಲಿನ ತುದಿ: ಜನಂ ಕೇವಲ ವಿಪುಲತುಲಾಕೋಟಿಯಿಂ ತೂಗೆ ತನ್ನಂ (ಪಂಪಾಮಾ. ೧-೭೨). ೨. ಕಾಲ್ಕಡಗ; ನೂಪುರ: “ತುಲಾಕೋಟಿ ನೂಪುರಮೆನಿಕ್ಕು” (ಮಂಗರಾ. ೧೦೦-೩೦): “ಪಾದಾಂಗದಂ, ತುಲಾಕೋಟಿಃ, ಮಂಜೀರಃ, ನೂಪುರಃ, ಹಂಸಕಃ, ಪಾದಕಟಕಃ ೬ ಅಂದಿಗೆ” (ಸಿದ್ಧಾಂತಿ. ೦೭೫). ೩. [ಗಣಿತ] ಒಂದು ಸಂಖ್ಯೆ; ಅರ್ಬುದ. [ ಸಂ. ]

**ತುಲಾದಂಡ** (ನಾ). ೧. ತಕ್ಕಡಿಯ ಕೋಲು; ದಂಡಿಗೆ. ೨. ತಕ್ಕಡಿ: ತೂಗಲ್ಕರೆಗೆ ತುಲಾದಂಡಮಲ್ತೆ ಮದ್ಭುಜಂ (ಆದಿಪು. ೦೪-೮೦); ನಮ್ಮ ನಮ್ಮ ಸಾಮರ್ಥ್ಯಗಳ ತೂಕಕ್ಕೆ ನಮ್ಮ ನಮ್ಮ ತೋಳುಗಳೇ ತುಲಾ ದಂಡಗಳಾಗಿ ಹೋಗಲಿ (ಶಕಾರ. ೨೦೬). [ ಸಂ. ]

**ತುಲಾಪುರುಷ, ತುಳಾಪುರುಷ** (ನಾ). ೧. ಷೋಡಶ ಮಹಾದಾನ ಗಳಲ್ಲಿ ಒಂದು: ತನ್ನ ದೇಹವು ತೂಗುವಷ್ಟು ಚಿನ್ನ, ರೂಪ [illegible] ದಾನಮಾಡುವುದು: ಆಗ [illegible] “ತುಲಾಪುರುಷ” ದಾನಗಳನ್ನು, [illegible] “ತುಲಾಭಾರ” ಗಳನ್ನು [illegible] (ಕುಳಾಪ. ೧೫); ಷೋಡಶ ಮಹಾದಾನ ಗಳನ್ನು [illegible] . . . ಎಲ್ಲವನ್ನು ಮಾಡಿದರು. ಅವು ಯಾವುವೆಂದರೆ (೧) ತುಲಾಪುರುಷದಾನ (೨) ಹಿರಣ್ಯಗರ್ಭದಾನ (ಕಾಮುವ. ೯೩). ೨. ತುಲಾಪುರುಷದಾನವನ್ನು ಮಾಡಿದವನು: [illegible] . . . [illegible] **ತುಳಾಪುರುಷ**: ೧. ತುಳಾಪುರುಷಕ್ಕೆಂದು ಹಿರಣ್ಯಗರ್ಭಮಿರಲೆಂದುತ್ತುಂಗ ದೇವಾಲಯೋತ್ತರಮುಂ ಮಾಡಿಸಲೆಂದು ಸಂದ ಪರಂಪ್ಪಗಳ್ (ಎಕ. VI [illegible]). ೨. [illegible] ಪುತ: ಪುರುಷೋತ್ತಮನ ತಂಗೆಯುಂ ತಾನುಂ ತುಳಾಪುರುಷಮನಿರ್ದು ಲೋಕಕ್ಕೆಲ್ಲಂ ಬಿಯಮಂ ಮೆಱೆದು (ಪಂಭಾ. ೧೪-೨೦ ವ); ಶ್ರೀಮತು ಪ್ರತಾಪಚಕ್ರವರ್ತ್ತಿ ಜಗದೇಕಮಲ್ಲದೇವರು ತುಳಾಪುರುಷನುನೇ[illegible] (ಸೌಇಇ. XV, ೩೦-೩೯; 1146). [ ಸಂ. ]

**ತುಲಾಭಾರ** (ನಾ). ೧. = ತುಲಾಪುರುಷ ೧: ಆಗ ರಾಮಭೋಜ ರಾಯನು ಬ್ರಾಹ್ಮಣರಿಗೆ "ತುಲಾಪುರುಷ" ದಾನಗಳನ್ನೂ, ಹಾಗೆಯೇ "ತುಲಾಭಾರ" ಗಳನ್ನೂ ತೂಗಿಸಿ ಕೊಟ್ಟನು (ತುಲುನಾ. ೧೮); ಕಪ್ಪೆಯ ತುಲಾಭಾರ ಕೊಟ್ಟ ಹಾಗೆ (ಗಾದೆ). ೨. ಹಿಂದಕ್ಕೂ ಮುಂದಕ್ಕೂ ಚಲಿಸುವಿಕೆ; ತೂಗುವಿಕೆ: ತಕ್ಕಡಿಯಸೊಮ್ಮೆ ತೆಂಕ ಣ್ಗೊಮ್ಮೆ ಬಡಗಣ್ಗೆ ತೂಗಿದುವೆನಲ್ ತುಲಾಭಾರವಂ, ತೊನೆದುದಯ್ ಬೃಹದ್ ಪೃಥಿವಿ! (ಶ್ರೀರಾಮಾ. ೪೦೪-೪೩). [ಸಂ.]

**ತುಲಾಮಾನವಿಶುದ್ಧಿ, ತುಳಾಮಾನವಿಶುದ್ಧಿ** (ನಾ). ತೂಕ ಮತ್ತು ಅಳತೆ ಗಳನ್ನು ಸರಿಯಾಗಿಟ್ಟಿರುವಿಕೆ: ವರ್ಣಾಶ್ರಮವ್ಯವಸ್ಥೆಗಳಂ ಸ್ವಸ್ಥಂ ಮಾಡಿಯುಂ ತುಲಾ [ಪಾಠಾಂ. ಳಾ] ಮಾನವಿಶುದ್ಧಿಯಂ ವಿಚಾರಿಸಿಯುಂ (ಚಂದ್ರಪು. ೨-೬೦ ವ). ತುಳಾಮಾನವಿಶುದ್ಧಿ: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ.]

**ತುಲಾಮಾಸ** (ನಾ). ಸೂರ್ಯನು ತುಲಾರಾಶಿಯಲ್ಲಿರುವ ತಿಂಗಳು; ಸೌರಮಾನದ ಏಳನೆಯ ತಿಂಗಳು; ℙ ಅಕ್ಟೋಬರ್ ತಿಂಗಳ ಮಧ್ಯದಿಂದ ನವೆಂಬರ್ ತಿಂಗಳ ಮಧ್ಯದವರೆಗಿನ ಭಾಗ: ತುಲಾ ಮಾಸದಲ್ಲಿ ಕಾವೇರೀನದಿಯಲ್ಲಿ ಸ್ನಾನಮಾಡುವುದು ಪುಣ್ಯಪ್ರದವೆಂದು ಹೇಳುತ್ತಾರೆ (ರೂಢಿ). [ಸಂ.]

**ತುಲಾಯನ** (ನಾ). ಸೂರ್ಯನು ತುಲಾರಾಶಿಯನ್ನು ಪ್ರವೇಶ ಮಾಡುವ ಕಾಲ; ತುಲಾಸಂಕ್ರಮಣ; ℙ ಇದು ಅಕ್ಟೋಬರ್ ತಿಂಗಳ ಮಧ್ಯದಲ್ಲಿ ಸಂಭವಿಸುತ್ತದೆ. [ಸಂ.]

**ತುಲಾಯೋಗ** (ನಾ). ಬಿಂಬಾಗಮದ ಹದಿನೈದು ಭೇದಗಳಲ್ಲಿ ಒಂದು: ಚತುರ್ಮುಖತಂತ್ರ . . . ತುಲಾಯೋಗ ಕುಟ್ಟಿಮತಂತ್ರ ಸರ್ವಶೇಖರ ಮಹಾವಿದ್ಯೆ ಮಹಾಸಾರವೆಂದು ಬಿಂಬಾಗಮದ ಹದಿನೈದು ಭೇದಂಗಳು (ವಿವೇಕ. ೭೦). [ಸಂ.]

**ತುಲಾವೃತ್ತ** (ನಾ). ಬಿಂಬಾಗಮದ ಹದಿನೈದು ಭೇದಗಳಲ್ಲಿ ಒಂದು: ತುಲಾವೃತ್ತ ತುಲಾಯೋಗ ಕುಟ್ಟಿಮತಂತ್ರ . . . ಮಹಾಸಾರವೆಂದಿ ಬಿಂಬಾಗಮದ ಹದಿನೈದು ಭೇದಂಗಳು (ವಿವೇಕ. ೭೦). [ಸಂ.]

**ತುಲಾಷ್ಟಿ** (ನಾ). ಮೂವತ್ತು ಮೂರು ತಂತೀವಾದ್ಯಗಳಲ್ಲಿ ಒಂದು: ವಿಪಂಚಿಕೆ . . . ತುಲಾಷ್ಟಿ ಕಾಲಕೀಯೆಂಬ ಮೂವತ್ತಮೂಱು ತಂತ್ರೀ ವಾದ್ಯಂಗಳಲ್ಲಿ (ವಿವೇಕ. ೨೩೬). [?]

**ತುಲಾಸಂಕ್ರಮಣ** (ನಾ). = ತುಲಾಯನ: ತುಲಾಸಂಕ್ರಮಣದಂದು ತಲಕಾವೇರಿಯಲ್ಲಿ ಪುಣ್ಯಸ್ನಾನ ಮಾಡಬೇಕು (ರೂಢಿ). ℙ ತುಲಾ ಸಂಕ್ರಮಣಕಾಲದಲ್ಲಿ ಕಾವೇರೀನದಿಯು ತಲಕಾವೇರಿ ಎಂಬ ಸ್ಥಳ ದಲ್ಲಿ ಉದ್ಭವವಾಗುವುದೆಂಬ ನಂಬಿಕೆಯಿದೆ. [ಸಂ.]

**ತುಲಾಸೂತ್ರ** (ನಾ). ತಕ್ಕಡಿಯನ್ನು ಹಿಡಿದುಕೊಳ್ಳಲು ದಂಡಿಗೆಗೆ ಮಧ್ಯದಲ್ಲಿ ಕಟ್ಟಿರುವ ಹುರಿ, – ದಾರ. [ಸಂ.]

**ತುಲಾಸ್ನಾನ** (ನಾ). ಸೂರ್ಯನು ತುಲಾರಾಶಿಯಲ್ಲಿರುವಾಗ ಪುಣ್ಯ ತೀರ್ಥಗಳಲ್ಲಿ ಮಾಡುವ ಸ್ನಾನ: ಆ ದಿನ ಕೃಷ್ಣವೇಣಿ, ರಂಗಸ್ವಾಮಿ ಯರು ತುಲಾಸ್ನಾನಕ್ಕೆಂದು ಕಾರಿನಲ್ಲಿ ಪಶ್ಚಿಮವಾಹಿನಿಗೆ ಬಂದಿದ್ದರು (ಊರುಕ. ೫೯). [ಸಂ.]

**ತುಲಿತ** (ಗು). ೧. ಹೋಲಿಸಿದ; ತಾಳೆ ನೋಡಿದ. (ನಾ). ೨. ತೂಕ: "ತುಲಿಃ . . . ತುಲಿತಂ, ಈ ೬ ತೂಕಂ" (ಶಾರಕ್ಷ. ೦೦೩). [ಸಂ.]

△ **ತುಲು** 'ತುಳು' ನೋ.

**ತುಲೆ** (ನಾ). ೧. ಪದಾರ್ಥಗಳನ್ನು ತೂಗುವ ಸಾಧನ; ತಕ್ಕಡಿ; ತ್ರಾಸು; ಚಿಂತಾಲು: "ತುಲಾ–ತ್ರಾಸು, ಚಿಂತಾಲು, ತಕ್ಕಡಿ, ತೂಗು ಕೋಲು" (ಸಿದ್ಧಾಂತಿ. ೨೩೬); ಇದು ಮಹಾಜನರ ತುಲೆ, ದೊಡ್ಡವರ ತೂಗುಕಲ್ಲು (ಪಾಂಪಾಕ. ೪೦): ಬೆಲೆಯ ತುಲೆಯ ತಳಿಗೆಯಲ್ಲಿ ಎಡೆ–ಪ್ರಸಾದ ತೂಗುತಿಹುದು (ಮೂರ್ತಿಕಾ. ೨೫-೧೨). ೨. ತಕ್ಕಡಿಯ ಸಹಾಯದಿಂದ ಕಂಡುಹಿಡಿಯುವ ವಸ್ತುವಿನ ತೂಕ. ೩. ಚಿನ್ನ, ಬೆಳ್ಳಿ ಮೊದಲಾದ ಲೋಹಗಳ ತೂಕದಲ್ಲಿ ಒಂದು ಪ್ರಮಾಣ; ನೂರು ಪಲಗಳಷ್ಟು ತೂಕ. ೪. = ತುಲಾಪುರುಷ ೧. ೫. ತೂಕ ಮಾಡುವಿಕೆ; ತೂಗುವಿಕೆ. ೬. ಹೋಲಿಕೆ; ಸಾಮ್ಯ; ಸಾದೃಶ್ಯ. ೭. ತುಲಾದಂಡ; ದಂಡಿಗೆ. ೮. ಒಂದು ರೂಪಾಯಿಯಷ್ಟು ತೂಕ; ಒಂದು ತೊಲ. ೯. ಒಂದು ಬಗೆಯ ಪಾತ್ರೆ. ೧೦. ಮನೆಯ ಚಾವಣಿಗೆ ಹಾಕುವ ತೊಲೆ. ೧೧. ದಿವ್ಯಗಳಲ್ಲಿ ಒಂದು; ℙ ಹಿಂದಿನ ಕಾಲದಲ್ಲಿ ಸಾಕ್ಷಿಗಳಿಲ್ಲದ, ಆದರೆ ಪ್ರಬಲವಾದ ಸಂಶಯಕ್ಕೆ ಒಳಗಾದ ಒಬ್ಬನ ಅಪರಾಧವನ್ನು ಪತ್ತೆಹಚ್ಚಲು ಮಾಡುತ್ತಿದ್ದ ಒಂದು ಪರೀಕ್ಷೆ; ಆರೋಪಿಯನ್ನು ತಕ್ಕಡಿಯಲ್ಲಿ ತೂಗಿ ಮಾಡುವ ಒಂದು ವಿಶೇಷ ರೀತಿಯ ನ್ಯಾಯ ನಿರ್ಣಯ. 'ದಿಬ್ಯ' ಪರಾ. ೧೨. [ಜ್ಯೋತಿ] ಹನ್ನೆರಡು ರಾಶಿಗಳಲ್ಲಿ ಏಳನೆ ಯದು; ತುಲಾರಾಶಿ: "ವಣಿಕ್, ತುಲಾ, ತೌಲೀ, ಜೂಕಃ, ತುಲಾಧಿಪಃ ಈ ೫ ತುಲಾಕೆ ಪೆಸರು" (ಭಾಸ್ಕರ. ೬೬-೬); ಮತ್ತಮಾ ಖಗೋಳದಲ್ಲಿ ಮೇಷ . . . ತುಲೆ ವೃಶ್ಚಿಕ ಧನುಸ್ಸು ಮಕರ ಕುಂಭ ಮೀನವೆಂಬ ಪನ್ನೆರಡು ರಾಶಿಗಳು (ವಿವೇಕ. ೨೫೮). [ಸಂ. ತುಲಾ]

**ತುಲ್ಯ** (ಗು). ಸಮಾನವಾದ; ಸದೃಶವಾದ; ಹೋಲುವ. [ಸಂ.]

**ತುಲ್ಯತೆ** (ನಾ). ಸಮಾನತೆ; ಸಾದೃಶ್ಯ: "ಸಮತ್ವ, ತುಲ್ಯತೆ" (Equality. ಪಾರಿಚಿ. ೩೭). [ಸಂ. ತುಲ್ಯತಾ]

**ತುಲ್ಯಪಾನ** (ನಾ). ಒಟ್ಟಿಗೆ ಸೇರಿ ಕುಡಿಯುವಿಕೆ: "ಸಪೀತಿಃ, ತುಲ್ಯ ಪಾನಂ – ಕೂಡೆ ಪಾನಮಾಡುವಿಕೆ" (ಸಿದ್ಧಾಂತಿ. ೨೪೯).

[ತುಲ್ಯ + ಪಾನ]

**ತುಲ್ಯಯೋಗಿತಾಲಂಕಾರ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು; ಕೇವಲ ವರ್ಣ್ಯ ಮತ್ತು ಕೇವಲ ಅವರ್ಣ್ಯಗಳಿಗೆ ಒಂದು ಸಮಾನಧರ್ಮವಿರುವ ಅಲಂಕಾರ: ಪ್ರಸ್ತುತದಿಂದಾಗಲಿ ಅಥವಾ ಅಪ್ರಸ್ತುತದಿಂದಾಗಲಿ ಗುಣರೂಪವಾದ ಧರ್ಮೈಕ್ಯ ಮತ್ತೆ ಕ್ರಿಯಾ ರೂಪವಾದ ಧರ್ಮೈಕ್ಯ ಪೇಳಲ್ ತುಲ್ಯಯೋಗಿತಾಲಂಕಾರವೆನಿಪುದು (ಕುವಲ. ೩೪): ಮಡದೀ ವರ್ಣ್ಯಂಗಳ್ಗಾದೊಡಮಿತರಂಗಳ್ಗೆಯಾದೊಡಂ ಧರ್ಮೈಕ್ಯಂ ನಿಡಿದುಂ ಸ್ಫುರಿಸಲ್ಕೇಳ್ಕಡುಚೆಡಗಿನ ಕಣ ತುಲ್ಯಯೋಗಿ ತಾಲಂಕಾರಂ (ನರಹ. ೩೭-೭೮). [ಸಂ.]

**ತುಲ್ಲು** (ನಾ). ಹೆಂಗಸಿನ ಗುಹ್ಯೇಂದ್ರಿಯ; ಯೋನಿ.

[< ಪ್ರಾ. ತುಲ್ಲ]

**ತುವಗಾಮುಂಡ** (ನಾ). ಒಬ್ಬಾತನ ಹೆಸರು: ತುವಗಾಮುಣ್ಡ ಸತ್ತ (ಎಕ. IX, ಹೊಸಕೋ. ೦೩-೭: ಸು. ೯೦೦). [ತುವ + ಗಾಮುಂಡ]

**ತುವರ** (ನಾ). ೧. ಆರು ಬಗೆಯ ರಸಗಳಲ್ಲಿ ಒಂದು; ಒಗರು; ಒಗಚು; ಕಷಾಯ: "ತುವರಮೆನಲೊಗರಕ್ಕು" (ಮಂಗರಾ. ೬೫-೫); ತುವರಂ ತಿಕ್ತಂ ಮಧುರಂ ಲವಣಂ ಕಟು ಕಾರಮೆಂದು ರಸಮಾಱು ತೆಱಂ (ವಸ್ತುಕೋ. ೯೪-೧೫). ೨. ಯೌವನಕ್ಕೆ ಬಂದಿದ್ದರೂ ಗಡ್ಡ, ಮೀಸೆ ಬೆಳೆಯದವನು; ಶ್ಮಶ್ರುಹೀನ. [ಸಂ.]

**ತುವರಮಣ್ಣು, ತೊವರಮಣ್ಣು** (ನಾ). ಸುವಾಸನೆಯ ಮಣ್ಣು: "ಕಾಸಮೃತ್ತಿಕಾ—ತುವರಮಣ್ಣು" (ಒಷಧಿ. ೩೨); "ವೃತ್ತಾಳಕಂ-ತುವರ ಮಣ್ಣು" (ಒಷಧಿ. ೧೫೮). ತೊವರಮಣ್ಣು: "ತುವರೀ–ತೊಗರಿ, ತೊವರಮಣ್ಣು, ಕೆಂಬಟಿಕೆ" (ಒಷಧಿ. ೭೦).

[< ತುವರಿ + ಮಣ್ಣು (< ಮಣ್)]

**ತುವರಿ** (ನಾ). ೧. ಒಂದು ಬಗೆಯ ದ್ವಿದಳಧಾನ್ಯ ; ತೊಗರಿ : "ಆಢಕೀ, ತುವರೀ—ಈ ೨ ತೊಗರಿ" (ಹಲಾಯು. ೯೬-೪೩೦): ಒಡೆಯ ನೊರ್ವಂ ಜೂಜನಾಡಿ ರತ್ನಂಗಳಂ ಬಿಡೆ ಮೂಗಳವ ಸೋತನೆಂದು ಬಾಧಿಸುತಿರಲು ನಡುಬೀದಿಯೊಳು ರಾಸಿಯಾದ ತುವರಿಯು ರತ್ನಗಳ ಮಾಡಿಕೊಟ್ಟು ಬಸವಂ ಬಿಡಿಸಿಕೊಂಡಂ (ಗುರುಬಾ. ೮-೨೩). ೨. ಸುವಾಸನೆಯುಳ್ಳ ನೆಲ ; ಸುಗಂಧಯುಕ್ತವಾದ ಮಣ್ಣು. ೩. ಪಟಿಕ.

[ ಸಂ. ತುವರೀ ]

**ತುವರಿಕೆ** (ನಾ).=ತುವರಿ. [ಸಂ. ತುವರಿಕಾ]

**ತುಶಿತ** (ನಾ). ೧. ದೇವತೆಗಳಲ್ಲಿ ಒಂದು ಭೇದ. ೨. ಆ ದೇವತೆಗಳು ವಾಸಿಸುವ ಲೋಕ ; ಸ್ವರ್ಗಲೋಕದ ಒಂದು ಭಾಗ : ಅನಾಥ ಪಿಂಡಿಕನು . . . ತನ್ನ ಕಳೇಬರವನ್ನು ಕಳಚಿ ಹಾಕಿ, ತುಶಿತವೆಂಬ ಸ್ವರ್ಗದಲ್ಲಿ ದೇವತೆಯಾಗಿ ಹುಟ್ಟಿದನು (ಹಕ್ಕುಮು. ೧೬೩). [<ಸಂ. ತುಷಿತ]

**ತುಷ** (ನಾ). ೧. ಬತ್ತ ಮೊದಲಾದ ಧಾನ್ಯಗಳ ಮೇಲಿನ ಸಿಪ್ಪೆ ; ತವುಡು ; ಹೊಟ್ಟು ; ಉಮ್ಮಿ : ತುಷವ ಕಳದು ತಂಡುಲವನಡಬೇಕು (ಏಲೇಶ್.೦೪೮) ; ಅಕ್ಕಿಯಿಲ್ಲದ ತುಷಕ್ಕೆ ಅಗ್ಗವಣಿಯನೆಱೆದಡೆ ಅದೆಂದಿಂಗೆ ಬೆಳೆದು ಫಲವಪ್ಪುದಯ್ಯಾ (ಮಹಾದೇ. ಕ. ೨೪-೬೨) ; ಕುಮಾರಿಲಭಟ್ಟರು . . . ದೇಹಾಂತಪ್ರಾಯಶ್ಚಿತ್ತವನ್ನು ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿ ತುಷದ ಚಿತಿಯನ್ನೇರಿದ್ದರು (ಭಜ್ಯೋತಿ. ೨೪). ೨. ಒಂದು ಬಗೆಯ ಮರ ; ತಾರೆ ; ಕಲಿದ್ರುಮ. ೩. (ಆಲಂ) ಹೊದಿಕೆ ; ಆಚ್ಛಾದನೆ ; ಆವರಣ : ಜಗತ್ತೆಂಬ ಜಂತ್ರದ ಹಾಹೆಗೆ ಅಜ್ಞಾನವೆಂಬ ತುಷವ ತೊಡಿಸಿ ಅಹಂ ಮಮತೆಯೆಂಬ ಸೊಕ್ಕನಿಕ್ಕಿ . . . ವಿನೋದಿಸಿದೆಯಯ್ಯಾ (ಬಸವ. ೪. ೯೬೮). [ ಸಂ. ]

**ತುಷಗಳೆ** (ಕ್ರಿ). ಹೊಟ್ಟನ್ನು ತೆಗೆ ; ತವುಡನ್ನು ತೆಗೆದು ಹಾಕು : ತುಷಗಳೆದಕ್ಕಿಯು ತಳಿಸುವಂತಾತ್ಮನ ವಿಷಯಗಳೆದು ನೋಳ್ಪರೆಲ್ಲ (ಭರತ. ೩೪-೨೦). [ತುಷ+ಕಳೆ$_1$]

**ತುಷಪರ್ಣ** (ನಾ). ಮೊಳಕೆಗೆ ಆವರಣವಾಗಿರುವ ಎಲೆ ; ಮೊಳಕೆಯನ್ನು ಮುಚ್ಚಿಕೊಂಡಿರುವ ಬೀಜದ ಎರಡು ದಳ : ಸಸಿ ಬಲಿದು ಹೊಸಸುಳಿ ತೋಱದಲ್ಲಿಯಲ್ಲದೆ ಆ ತುಷಪರ್ಣ ಬಿಡದು (ವೋಳಿಮಾ. ೦೪೦-೪೪೦). [ತುಷ + ಪರ್ಣ]

**ತುಷಪರ್ಣಿ** (ನಾ). ಒಂದು ಬಗೆಯ ಮರ ; ಕಿರುಗೋಣಿ : "ತುಷಪರ್ಣಿ ಕಿಱುಗೋಣಿ" (ಮಂಗರಾ. ೪೫-೪೬). [ಸಂ. ತುಷಪರ್ಣೀ ]

**ತುಷಮುಷ** (ಗು). ತೂಕವಿಲ್ಲದ ; ಕ್ಷುಲ್ಲಕವಾದ : ತುಷಮುಷಬೋಧಗೇಳ್ದಪ್ಪಾಜಿಯೊಳು ಮನೋಲಷಿತದೀಕ್ಷೆಯನಾಂಪೊಡಾವು ವೃಷಭೇಂದ್ರ ಹಂಸೇಂದ್ರ ಮೊದಲಾದ ಸುತರ ಪೌರುಷವಡೆದವೆಯೆಂದರಳಲಿ (ಭರತ. ೬೪-೫೨) [ತುಷ + ಮುಷ]

**ತುಷಮೇಘ** (ನಾ). ಆವರಣವಾಗಿರುವ ಮೋಡ : ತುಷಮೇಘವುಂ ಮುರಿದು ನಿಂತುರಿವ ಮಾರ್ತಾಂಡನೇಳಿಗೆಯಂತೆ ಜೀವನ್ಮುಕ್ತನೈ (ಗಗಕಾ. ೦೩-೪೨). [ತುಷ + ಮೇಘ]

**ತುಷಾಗ್ನಿ** (ನಾ). ೧. ಬತ್ತದ ಹೊಟ್ಟಿಗೆ ಹತ್ತಿಸಿರುವ ಬೆಂಕಿ. 'ಕುಕೂಲ' ಪರಾ. ೨. ಒಂದು ಬಗೆಯ ಕಠಿನವಾದ ಪ್ರಾಯಶ್ಚಿತ್ತ. ☞ ಮಹತ್ತರವಾದ ಪಾಪವನ್ನು ಮಾಡಿದವರು, ಅದರ ಪರಿಹಾರಕ್ಕಾಗಿ ಹೊಟ್ಟಿನ ರಾಶಿಗೆ ಬೆಂಕಿ ಇಟ್ಟು ಅದರ ಮಧ್ಯೆ ಕುಳಿತುಕೊಂಡು ಮರಣವನ್ನು ಹೊಂದುತ್ತಿದ್ದರು ಎಂಬ ನಂಬಿಕೆಯಿದೆ. ೩. ಒಂದು ನರಕದ ಹೆಸರು: ತುಷಾಗ್ನಿ ಕ್ರಿಮಿಸಂಘ...ದುರ್ಗಂಧವಾಸಗಳೆಂಬೈದು ಮಂತ್ರಿ ನರಕಂಗಳಿಂದೊಡಗೂಡಿ (ವಿವೇಕ. ೦೮೦). [ ತುಷ + ಅಗ್ನಿ ]

**ತುಷಾನಲ** (ನಾ). = ತುಷಾಗ್ನಿ : (೬). [ತುಷ + ಅನಲ ]

**ತುಷಾರ** (ಗು). ೧. ತಂಪಾದ ; ಶೀತಲವಾದ. 'ತುಷಾರಕರ' ಪರಾ. (ನಾ). ೨. ಹಿಮ ; ಮಂಜು. ೩. ಹಿಮದ ತುಂತುರು ; ಮಂಜಿನ ಕಣ ; ಇಬ್ಬನಿ : ಸುರಿವ ತುಷಾರದೊಳ್ಬೆರೆದರಲ್ವ ಸಿತಾಂಬುಜದಿವ್ಯಗಂಧದೊಳ್ ಪೊರೆದು...ಪರೆದೆಸಗಿತ್ತು...ನಿಶಾಸಮೀರಣಂ (ಕಾದಂಪೂ. ೨೮೩): ಆ ನೀರು ಸಾರವ ಕೊಟ್ಟು ದ್ರುಮಕ್ಕೆ ಮತ್ತೆ ತುಷಾರವಾಗಿ ಸಾರವನೆಯ್ದುದಂತೆ (ವೋಳಿಮಾ. ೧೨೦-೪೬೧); ತುಷಾರಕಣಕೋಟಿಯುಂಶಕೆ ಸಾಟಿಯಲ್ಲ ಗಡ ನಿಮ್ಮಳಿವು (ಭಾವಚಿಂ. ೯-೩); ಮೇಣಸುರಾಮರಾಕಾರದಿಂ ಪ್ರವಹಿಸಿತೋ ಶೀಕರತುಷಾರದೋಲೆಂಬಂತೆ ಬಳಿಮಂಜು...ಮುಚ್ಚಿ ಮುಸುಕಿದುದು (ಶ್ರೀರಾಮಾ. ೦೯೯-೦೩೨). ೪. ಮಂಜುಗಡ್ಡೆ ; ಹಿಮದ ಗಡ್ಡೆ. ೫. ತುಂತುರುಹನಿ ; ಶೀಕರ : ಆ ಹಣ್ಣನೊಡದು ನೋಡಲಾಗಿ ರಸವಿಲ್ಲದೆ ತುಷಾರ ಹಾಱಿತ್ತು (ವೋಳಿಮಾ. ೧೮೧-೬೮೦) ; ಧರಣಿ ನೆನೆದುದು ಗಂಧರಸಕತ್ತುರಿಯ ಪನ್ನೀರುಗಳ ಹೊನಲೊಡವೆರಸಿ ದೆಸೆ ಕಂಬಿಟ್ಟುದಂಬುಧಿ ನವತುಷಾರದಲಿ ತರಣಿ ಪರಿಮಳಿಸಿದನು ಪವನಸುರಭಿತನವಚ್ಚರಿಯೆ (ಕುವ್ಯಾವಿ. ೧೦-೮೩). ೬. ಕರ್ಪೂರ. 'ತುಷಾರೋಪಳ' ಪರಾ. [ ಸಂ. ]

**ತುಷಾರಕರ** (ನಾ). ತಂಪಾದ ಕಿರಣವುಳ್ಳವನು ; ಚಂದ್ರ : ತುಷಾರಕರನಿಂದೇಕಾದಶದ್ರುಮ, ಧರ್ಮತನೂಜಾಸ್ತದೊಳಿಂದ್ರುಮಂತ್ರಿ ಶುಭದಂ (ಜಾತಕಿ. ೦೦-೧೧). [ ಸಂ. ]

**ತುಷಾರಪುಂಜ** (ನಾ). ಮಂಜಿನ ಗುಂಪು : ಹಿಮರಾಶಿ : ಪುದಿದ ತುಷಾರಪುಂಜದೊಳಗಿರ್ಪ ಹಿಮಾದ್ರಿಪೊಲ್ ... ಒಪ್ಪಿದನಿಂದ್ರುವಂದಿತಂ (ಪುಷ್ಪಪು. ೧೦-೨೯). [ ತುಷಾರ + ಪುಂಜ$_4$ ]

**ತುಷಾರರುಚಿ** (ನಾ). ಹಿಮಕಿರಣ ; ಚಂದ್ರ : ಮಿತ್ರಕ್ಷೇತ್ರದೊಳುತ್ಪಲಮಿತ್ರಂ ನಿಲೆ ತತ್ತುಷಾರರುಚಿಯುಂ ... ಶತಪತ್ರಸಖಾದಿಗ್ರಹಂಗಳೀಕ್ಷಿಸೆ ಶುಭದಂ (ಜಾತಕಿ. ೨೦-೦೪). [ ತುಷಾರ + ರುಚಿ ]

**ತುಷಾರವರ್ಷ** (ನಾ). ತುಂತುರು ಮಳೆ : ತಣ್ಣಾಳಿಯ ಸೋಂಕಿಂ ವಿರಳಮಾಗಿ ಸೂಸುವ ತುಷಾರವರ್ಷದೊಳಂ (ಮಲ್ಲಿಪು. ೩-೧೧೧).

[ ತುಷಾರ + ವರ್ಷ ]

**ತುಷಾರಸ್ನಾನ** (ನಾ). ಯಂತ್ರಸಹಾಯದಿಂದ (ನೀರಿನ) ಸಣ್ಣ ಸಣ್ಣ ಹನಿಗಳು ಮೈಮೇಲೆ ಬೀಳುವಂತೆ ಅಳವಡಿಸಿ ಮಾಡುವ ಸ್ನಾನ : ನವಂಗಲ್ಲರಿಗೂ ಡಿ.ಡಿ.ಟಿ. ತುಷಾರಸ್ನಾನವಾಯಿತು (ಅಪೂಪ. ೩೦೯).

[ ತುಷಾರ + ಸ್ನಾನ ]

**ತುಷಾರಾಂಶು** (ನಾ). = ತುಷಾರರುಚಿ. 'ತುಷಾರಾಂಶುಜ' ಪರಾ.

[ ತುಷಾರ + ಅಂಶು ]

**ತುಷಾರಾಂಶುಜ** (ನಾ). ಚಂದ್ರನ ಮಗ ; ಬುಧ : ಪತಿ ... ತುಷಾರಾಂಶುಜನಥರ್ವವೇದಕ್ಕಕ್ಕುಂ (ಜಾತಕಿ. ೨-೪). [ ಸಂ. ]

**ತುಷಾರಾದ್ರಿ** (ನಾ). ಹಿಮದಿಂದ ಕೂಡಿದ ಪರ್ವತ ; ಹಿಮಾಲಯ ; ಹಿಮವಂತ. 'ತುಷಾರಾದ್ರಿತನುಜೆ' ಪರಾ. [ ತುಷಾರ + ಅದ್ರಿ ]

**ತುಷಾರಾದ್ರಿತನುಜೆ** (ನಾ). ಹಿಮವಂತನ ಮಗಳು ; ಪಾರ್ವತಿ : (೬).

[ ತುಷಾರಾದ್ರಿ + ತನುಜೆ ]

**ತುಷಾರೋಪಳ** (ನಾ). ಕರ್ಪೂರದ ಹಳುಕು,-ಚೂರು : ತುರುಷ್ಕತುಷಾರೋಪಳಕಿಳಾಗುರುತಕ್ಕೋಳಲವಂಗಪ್ರಮುಖಸುರಭಿಪರಿಕರಯುತಮುಂ (ಪುಷ್ಪಪು. ೧೦-೪೫). [ ತುಷಾರ + ಉಪಳ ( =ಉಪಲ) ]

**ತುಷಿತ** (ನಾ). ೧. ದೇವತೆಗಳಲ್ಲಿ ಒಂದು ಗುಂಪು ; ಒಂದು ದೇವಗಣ : "ಆದಿತ್ಯಾಃ ...ತುಷಿತಾಃ, ಭಾಸ್ವರಾಃ, ಅನಿಲಾಃ...ಗಣದೇವತೆಗಳ [illegible] ಗಳು" (ಸಿದ್ಧಾಂತಿ. ೦೪). ೨. [ಜೈನ] ಲೋಕಾಂತಿಕ ದೇವತೆಗಳ ಎಂಟು ವರ್ಗಗಳಲ್ಲಿ ಒಂದು : ಬ್ರಹ್ಮಕಲ್ಪಾಂತವಾಸಿಗಳುಮಪ್ಪ

ಸಾ ರ ಸ್ವ ತಾ ದಿ ತ್ಯವಹ್ನ್ಯರುಣಗರ್ದತೋಯ ತುಷಿತಾವ್ಯಾಬಾಧಾರಿಷ್ಟರಂ ಬೆಣ್ಬರುಂ ಲೋಕಾಂತಿಕದೇವರ್ ಬಂದು (ಆದಿಪು. ೯-೬೦ವ).

[ ಸಂ. ]

ತುಷೋದಕ (ನಾ). ಅಕ್ಕಿಯನ್ನು ತೊಳೆದ ನೀರು ; ಕಲಗಚ್ಚು : "ಅಭಿಷವಂ, ಅವಂತಿ, ಸೋಮಂ, ತುಷೋದಕಂ, ಶುಕ್ಲಂ — ಈ ೫ ಅಕ್ಕಿಗಚ್ಚು" (ಚರಾಯು. ೫೩-೧೬೩).

[ ತುಷ + ಉದಕ$_2$ ]

ತುಷ್ಟ (ಗು). ೧. ಸಂತೋಷಗೊಂಡ ; ತೃಪ್ತಿಹೊಂದಿದ. (ನಾ). ೨. ಸಂತೋಷಗೊಂಡವನು ; ತೃಪ್ತ : ತುಷ್ಟನಾದಂ ಪರಮಜಿನಮತಾಂ [illegible]ರಾಜಹಂಸಂ (ಸುಕುಮಾ. ೩-೪೮): ತುಷ್ಟನಾದನು ನೃಪತಿಕೃತಪರಿಶಿಷ್ಟಪಾಲನು (ಕುವ್ಯಾವಿ. ೧-೦೦) : ಮಧುರವಾದ ಮುಗುಳ್ನಗೆಯೊಂದಿಗೆ ಅವನನ್ನು ಬಹಳ ತುಷ್ಟನನ್ನಾಗಿ ಮಾಡಿದಳು (ಮೃಜಂ. ೮೬). ೩. = [illegible] : ತಮ್ಮ ವೃತ್ತಾಂತವೆಲ್ಲಮಂ ಪೇಳ್ದು ನಮಗೆ ತುಷ್ಟಮಂ ಮಾಳ್ಪುದು (ಕಗವಿ. ೦೫೧-೯). [ ಸಂ. ]

ತುಷ್ಟಿ (ನಾ). ೧. ಸಂತೋಷ ; ತೃಪ್ತಿ ; ತಣಿವು : ಅಕ್ಕುಂ ಧೃತಿ ತುಷ್ಟಿ ಪುಷ್ಟಿ ವಿಭವಂ ... ಭದ್ರಂ ಶುಭಂ ಮಂಗಳಂ (ಪಂಪಭಾ. ೧೪-೬೫) ; ಪರಿಣಾಮ ಗರ್ಭತುಷ್ಟಿಯಂತೆಯುಂ ... ಮಹತ್ತ್ವಮಂ ಪಡೆದೆಯೆಂದಮರಸಮುದಯಂ ಸ್ತುತಿಗೆಯ್ದು ಪೋಗೆ (ಜಗವಿ. ೨-೯೭ ವ) : ಈ ಸಂಗ್ರಾಮಮುಖದಲಿ ಬಿಲ್ಲ ಹಬ್ಬದ ತುಷ್ಟಿ ನಿನಗೇಕೆಂದನಾ ಕರ್ಣ (ಕುವ್ಯಾದ್ರೋ. ೧೩-೬೩): ತುಷ್ಟಿಯಿಲ್ಲದ ನೃಪ ದರಿದ್ರನು (ನಿಘಾಗ. ೨-೦-೩೭): ವಿಪರ್ಯಯಗಳೈದು, ತುಷ್ಟಿಗಳು ಒಂಬತ್ತು (ಹಿಂದಸಾ. ೫೭). ℗"ಸಾಂಖ್ಯರ ಪ್ರಕಾರ ಒಂಬತ್ತು ಬಗೆಯ ತುಷ್ಟಿಗಳಿವೆ : ಪ್ರಕೃತಾಖ್ಯ ತುಷ್ಟಿ (ಎಂಟು ಬಗೆಯ ಪ್ರಕೃತಿತತ್ತ್ವದಲ್ಲಿ ಮನಸ್ಸನ್ನು ಲಯಗೊಳಿಸಿ ಧ್ಯಾನ ಮಾಡುತ್ತ ತಾನು ವಿಮುಕ್ತನೆಂದು ಸಂತಸಪಡುವಿಕೆ), ಉಪಾದಾನಾಖ್ಯ ತುಷ್ಟಿ (ಸಂನ್ಯಾಸವೇಷಸ್ವೀಕಾರ ಮಾತ್ರದಿಂದಲೇ ಮುಕ್ತನೆಂದು ಭಾವನೆ), ಕಾಲಾಖ್ಯತುಷ್ಟಿ (ಮುಕ್ತಿ ಕೈಗೂಡುವ ಕಾಲ ಬಂದರೆ ತಾನಾಗಿಯೇ ಸಿದ್ಧಿಸುವುದು ; ಧ್ಯಾನಾದಿಗಳಿಂದ ಫಲವೇನೆಂದು ತೂಷ್ಣೀಕತೆಯನ್ನು ವಹಿಸುವಿಕೆ), ಭಾಗಾಖ್ಯತುಷ್ಟಿ (ಪೂರ್ವಜನ್ಮ ಸುಕೃತವಿಶೇಷಗಳು ಫಲಿಸಿ ಅದೃಷ್ಟವಿಶೇಷದಿಂದ ಮುಕ್ತಿ ಲಭಿಸುವುದಾದರೆ ಶ್ರಮವೇಕೆಂಬ ಭಾವನೆ)—ಈ ನಾಲ್ಕೂ ಆಧ್ಯಾತ್ಮಿಕಗಳು. ಸುಕಾರತುಷ್ಟಿ (ದ್ರವ್ಯಾರ್ಜನೆಯಲ್ಲಿ ವಿರಕ್ತನಾಗುವಿಕೆ), ಸುಪಾರತುಷ್ಟಿ (ಸಂಪಾದಿಸಿದ ದ್ರವ್ಯ ಕಾಪಾಡದೆ ಅಸಡ್ಡೆ), ಸುನೇತ್ರ (ದ್ರವ್ಯನಾಶವಾದರೆ ವ್ಯಥೆಪಡದಿರುವಿಕೆ), ಮಾರೀಚಕ ತುಷ್ಟಿ (ಒಮ್ಮೆ ಅನುಭವಿಸಿದ ವಸ್ತುವಿನಲ್ಲಿ ಮರಳಿ ಇಚ್ಛೆಯಿಲ್ಲದಿರುವಿಕೆ), ಉತ್ತಮಾಂಭ ತುಷ್ಟಿ (ಯಾವ ವಸ್ತುವನ್ನಾದರೂ ಅನುಭವಿಸಬೇಕೆಂಬ ಇಚ್ಛೆಯೇ ಆತ್ಯಂತಿಕವಾಗಿ ಹುಟ್ಟದಿರುವಿಕೆ). (ವಿಷ್ಣುಪು-೧-೫-ಪುನಾಜೂ. ೨೬೭)" (ಶ್ರೀವತ್ಸ ನಿಘಂಟು. ೧೮೮). 'ನವತುಷ್ಟಿ' ಪರಾ. ೨. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು: ಅಮೃತ ಮಾನದ ಪೂಷ ತುಷ್ಟಿ ಪುಷ್ಟಿ...ಕಾಮುದಾಯಿನಿಯೆಂಬ ಷೋಡಶಕಲೆಗಳಿಂ ಭರಿತನಾಗಿ (ವಿವೇಶ. ೨೬೭). ೩. ಲಾಭ (?) : ತುಷ್ಟಿಗೈದಿರ್ದ ಹೊನ್ನಂ ತುಷ್ಟಿಯ ನೈದಲ್ ವಿಶ್ರುವರ್ಣದಿ ನೂರ್ತಾನಷ್ಟಿಗೈದಿರ್ದ ಪೊನ್ನಂ ನೆಟ್ಟನೆ ತೆಗೆಯಲ್ಕೆ ಬಕ್ಕು ನಷ್ಟದ ಬಣ್ಣಂ ([illegible]. ೪೭-೨೨). 'ತುಷ್ಟೆ' ಪರಾ. [ ಸಂ. ]

ತುಷ್ಟಿಕರ (ನಾ). ಸಂತೋಷವನ್ನು ಉಂಟುಮಾಡುವುದು : ತೃಪ್ತಿಯನ್ನು ಕೊಡುವುದು : [illegible] ಗೃಹಂ ನಿರೀಕ್ಷಿಸುಪೊಡಲಿಷ್ಟಪರಂ ತುಷ್ಟಿಕರಮಭೀಷ್ಟ[illegible] ದೊಳ್ (ಜಾಶತಿ. ೭-೧೯). [ [illegible] ]

ತುಷ್ಟಿಗೊಳಿಸು (ಕ್ರಿ). ಸಂತೋಷಪಡಿಸು ; ತೃಪ್ತಿಪಡಿಸು : ಹುಟ್ಟಿದ ತಪ್ಪಿಗೆ ...ಎಷ್ಟು ಜನರನ್ನು ತುಷ್ಟಿಗೊಳಿಸಬೇಕು (ಕಲ್ಲೋಲ. ೮-೧೬).

[ ತುಷ್ಟಿ + ಕೊಳ್$_1$ + – ಇಸು$_3$ ]

ತುಷ್ಟಿದಾನ (ನಾ). ಪುತ್ರೋತ್ಸವ, ಯುದ್ಧಜಯ ಮೊದಲಾದ ಸಂತೋಷದ ಸಂಗತಿಗಳನ್ನು ತಿಳಿಸಿದವರಿಗೆ ಕೊಡುವ ಬಹುಮಾನ ; ಪಸಾಯದಾನ; ಪೂರ್ಣ ಪಾತ್ರ : ಆತಂಗೊಸೆದು ತುಷ್ಟಿದಾನಂಗೊಟ್ಟಂ (ವರ್ಧಮಾ. ೧೪೭-೯) ; ಋಷಿನಿವೇದಕಂಗೆ ತುಷ್ಟಿದಾನಂಗೊಟ್ಟು ಭೇರಿಯಂ ಪೊಯ್ಸಿ (ಶಾಂತಿಪು. ೯-೨೪ ವ) ; ಅಂತು ಋಷಿನಿವೇದಕಂಗಂಗಚಿತ್ತವಂ ತುಷ್ಟಿದಾನಮನಿತ್ತು (ಸುಕುಮಾ. ೮-೪೭ ವ). [ ತುಷ್ಟಿ + ದಾನ ]

ತುಷ್ಟಿಬಡಿಸು 'ತುಷ್ಟಿವಡಿಸು' ನೋ.

ತುಷ್ಟಿಬಡು 'ತುಷ್ಟಿವಡು' ನೋ.

ತುಷ್ಟಿವಡಿಸು, ತುಷ್ಟಿಬಡಿಸು (ಕ್ರಿ). ಸಂತೋಷವನ್ನುಂಟುಮಾಡು; ತೃಪ್ತಿಪಡಿಸು : ನದೀಜಳಮಂ ನಿರ್ಮಳಮಂ ಮಾಡಿ ಮೃಗಪಕ್ಷಿಕುಳಮಂ ಮಿಗೆ ತುಷ್ಟಿವಡಿಸುತ್ತುಂ (೧೦ಶ. ೭-೪೨ ವ): ಸನ್ನುತಿಗಳಿಂ ತುಷ್ಟಿವಡಿಸಿಯಾ ಭರ್ತೃಗೆ ತನ್ನ ಭಾಷೆಯನುಸಿರ್ದಂ (ಪದ್ಮರಾ. ೪-೧೮) : ಅಖಿಳವಸ್ತುವ ಕೊಟ್ಟು ಮಿಗೆ ತುಷ್ಟಿವಡಿಸಿ ಸರ್ವರನು ಬೀಳ್ಕೊಟ್ಟನು (ಸೌಂದಪು. ೬-೧೮); ಪತಿಯೊಳು . . . ಕನಲದೆ ತುಷ್ಟಿವಡಿಪುದೊಲವಜಿ೯ತು (ಹದಿಬ. ೩-೧೮). ತುಷ್ಟಿಬಡಿಸು : ಉಡುಗೊರೆಗಳಿಂ ತುಷ್ಟಿಬಡಿಸಿದ ಪೊಡವಿಪಾಲಕ ಋಷಿಗಳಷ್ಟಾಶೀತಿಸಾವಿರವ (ಕುವ್ಯಾಅ. ೧೬-೬); ನಿಗ್ರಹವಡಿಸದೆ ಪ್ರಜೆ ಪರಿವಾರವ ವೆಗ್ಗಳದಿಂ ತುಷ್ಟಿಬಡಿಸು (ಮೋಹತ. ೦೩-೦೧).

[ ತುಷ್ಟಿವಡು + – ಇಸು$_3$ ]

ತುಷ್ಟಿವಡು, ತುಷ್ಟಿಬಡು (ಕ್ರಿ). ತೃಪ್ತಿಹೊಂದು ; ಸಂತೋಷಪಡು : ಮೊದಲ ಕವೀಂದ್ರರೊಲ್ದೊರೆದ ಸತ್ಕೃತಿಸಂಚಯಮಿಾ ಧರಿತ್ರಿಯೊಳ್ ಪುದಿದಿರೆ ನೋಡಿ ತುಷ್ಟಿ [ ಪಾಠಾಂ. ತೃಪ್ತಿ ]ವಡಲೊಲ್ಲದೆ ಕಬ್ಬಿಗರೇಕೆ ಕಬ್ಬಮಂ ಗದಿಪರೊ (ರಾಜಶೇ. ೧-೩೫). ತುಷ್ಟಿಬಡು : ಕಾಂತೆಯುರಿಕ್ಕಲವನು ತುಷ್ಟಿಬಡದಿರೆ ಸಂತಸದಲಿ ಜೀವಂಧರನು ತನ್ನಯ ಹಸ್ತದಿಂದ ಗಲಿನೊಳಿರ್ದ ದಿವ್ಯಾನ್ನವನೀಯಲು (ಜೀವಂಸಾಂ. ೭-೨೫). [ತುಷ್ಟಿ+ವಡು$_1$]

ತುಷ್ಟಿವಡೆ (ಕ್ರಿ). ತೃಪ್ತಿಯನ್ನುಂಟುಮಾಡು : ವಿಘ್ನಕಾರಿದ್ವಿಷದ್ಗಣದಿಂ ಭೂತಗಣಕ್ಕೆ ತುಷ್ಟಿ [ಪಾಠಾಂ. ತೃಪ್ತಿ]ವಡೆದಪ್ಪಂ (ಜಗವಿ. ೦೭-೦೦).

[ ತುಷ್ಟಿ + ಪಡೆ$_1$ ]

ತುಷ್ಟಿಸು (ಕ್ರಿ). = ತುಷ್ಟಿವಡು : ಧರ್ಮಪುತ್ರನ ಘಾತಿಯನು ಘಟ್ಟಿಸಿದರೇ ತುಷ್ಟಿ [ ಪಾಠಾಂ. ಟ್ಟಿ ] ಸಿದನೇ ನೃಪತಿ (ಕುವ್ಯಾಶ. ೨-೩೫): ಕಷ್ಟದನುಭವವಾಹ ನಡತೆಯೊಳಿಷ್ಟವಾಗುವದಾವ ತೆರದೊಳು ತುಷ್ಟಿಸಲು ಮನದೊಳಗೆ ನಿಮ್ಮ ಕ್ಕರವನಾಕ್ಷಣದಿ (ಜಿನಸಾ. ೭). [ ತುಷ್ಟಿ+–ಇಸು$_3$ ]

ತುಷ್ಟೆ (ನಾ). ಲಾಭ (?) : ಹದುರಿಗೆಯಲ್ಲು ನಷ್ಟ ತುಷ್ಟೆಗೆ ಆವರ ಕಾಲದ ××× ಆರು ಹಿಡಿಯ ಸಲ್ಲವೆನ್ದು ಪಾಲಿಸಿ (ಎಕ. VI, ಕೊಪ್ಪ. ४९-೨೫; 1392).

[ <ಸಂ. ತುಷ್ಟಿ ? ]

ತುಸ$_1$ (ನಾ). ತವುಡು ; ಹೊಟ್ಟು ; ಉಮ್ಮಿ : "ತುಸ – ತುಷ = ಧಾನ್ಯದ ಸಿಪ್ಪೆ" (ತದ್ಭಕೋ. ೧೮): ತುಸ [ ಪಾಠಾಂ. ಸು ] ಮೊದಲು ಚತುರಾಸ್ಯ ಪರ್ಯಂತೆಸೆವುದೇ ಭುವನದಲಿ ಜೀವಪ್ರಸರ (ಕುವ್ಯಾಸ. ೧೪-೧೨೮).

[ <ಪ್ರಾ. ತುಸ./ಸಂ.ತುಷ]

ತುಸ$_2$ (ನಾ). = ತುಸ್ತ ೧. 'ಕೋಲ್ದುಸ' ಪರಾ. [ < ತುಸ್ತ ]

ತುಸ$_3$, ತುಸು$_1$ (ಗು). ೧. ಅಲ್ಪವಾದ : ಸ್ವಲ್ಪವಾದ : ಇವರ ನಾವು ಇನ್ನೂ ಆ ಸಂಗನ ದೋಣಿಯಿಂದ ತುಸ ದೂರದಲ್ಲೇ ಹೋಗುತ್ತಿತ್ತು (ಇಂದುಮು. ೬೭). (ನಾ). ೨. ಅಲ್ಪ; ಕೊಂಚ : ದೇವ ನಿಮ್ಮಡಿಯಂಘ್ರಿಕಮಲವನಾವ ನೆನೆದವಂಗೆ ತುಸ [ಪಾಠಾಂ. ಸು]ವಲ್ಲಾ

ವಿರಿಂಚಾದ್ಯಮರವದ (ಉಜ್ಞಾಸ. ೧೧-೧೪). **ತುಸು₁**: ೨. ಹಣ ಬ್ಯಾಂಕಿನಲ್ಲಿಡುವ ಬದಲು ನಾನು ನನ್ನ ಮಕ್ಕಳ ದೇಹದಲ್ಲಿ ತುಸು ರಕ್ತವನ್ನು ತುಂಬುವುದಕ್ಕೆ ಯತ್ನಿಸುತ್ತೇನೆ (ಮಹಾತ್ಮಾ. ३೦): ಅವನು ತುಸು ಆಲೋಚನೆ ಮಾಡಿದ (ಹಾಹುತ್. ೯೭). [ ? ]

**ತುಸ್ಕ** 'ತುಸಂ' ನೋ.

**ತುಸಂ**, ತುಸ್ಕ, ತುಸ್ಕು (ಅ). ಸ್ವಲ್ಪವೇ ; ಕೊಂಚಮಟ್ಟಿಗೆ: ಕಾಲವಕ್ಕಿಗೆ ತುಸಮೆ ಹಾರಲಿದೆ ದಾರಿ (೧೪ವಿಂ. ೧೧೭-೬). **ತುಸ್ಕ** : ಕನ್ನಡಿಯ ಮುಂಗಡ ತುಸ ನಿಲುವ (ಗತಿಕೆ. ೪೯-೪): ತಂದೆ ತುಸ ಸಿಡುಕಾಡೆ ಮಿಡುಕಾಡಿ ... ತಾಯಿ ಬೆಂಬಳಿವಿಡಿದುತ (ಭಾವಜೀ. ೩-೫೭). **ತುಸು₂** : ಅದು ಹೀಗೆ ಏಕೆ ಮತ್ತು ಹೇಗೆ ಮಾನ್ಯವಾಗಬಹುದೆಂಬುದನ್ನು ತುಸು ವಿಸ್ತರಿಸುವೆವು (೧೯ಶಾಸಂ. ೧೪): ಹುಸಿನಗುತ ಬಂದೆವ ನಸುನಗುತ ಬಾಳೋಣ ತುಸು ನಗುತ ತೆರಳೋಣ (ಗರಿ. ೧೦೩-೧೧): ಅವಳ ಕೊರಳು ತುಸು ಕೊಂಕಾಯಿತು (ದಾಅಳ. ೩೩).

**ತುಸಮಾತ್ರ**, ತುಸುಮಾತ್ರ = ಅತ್ಯಲ್ಪ ; ಲೇಶಮಾತ್ರ : ನಾ ಕೊಟ್ಟ ವರದೊಳು ತುಸಮಾತ್ರ ತಪ್ಪದು ಕೇಳಾಯಿತಾಕ್ಷಿ (ಮೋಹತ. ೪-೨೪) : ಕೈದುಡುಕಿ ತುಸು [ ಪಾಠಾಂ. ಸ ] ಮಾತ್ರಮೆನೆ ಫಲುಂಗುಣನ ತುರಗಂಗಳಂ ತಂದು ನಿಮಿಷದೊಳ್ ನಿಲಿಸಿದರ್ (ಜೈಮಿಥಾ. ३೭-೫): [ < ತುಸ್ಕ ]

**ತುಸಪುಸ** (ನಾ). (ಗೊಂದಲ, ಗಡಿಬಿಡಿ, ಬೇಸರಗಳನ್ನು ಸೂಚಿಸುವ) ಒಂದು ಅನುಕರಣ ಶಬ್ದ : ಬೆಳಗ್ಗಿಂದ ಬೆಳಗಿನವರೆಗೂ ಕದನ ಕಾದಾಟ ನೋಡಿ ನೋಡಿ ನನಗೂನೂ ಒಳಗೊಳಗೇ ತುಸಪುಸ ಪ್ರಾರಂಭವಾಯಿತು (ಜೀಗೂಂ. ३೪).

**ತುಸಮುಸ** (ನಾ). (?) : ತುಸಮುಸವೆಂಬೀ ಶಬ್ದವನುಸುರುತ ಶಿವಭೂತಿ ಮುನಿಪನೇಕಾಗ್ರತೆಯಿಂ (ಧನ್ಯಾಮ್ನ. ೩೩). 'ತುಷಮುಷ' ಪರಾ. [?]

**ತುಸವ** (ನಾ). ಒಬ್ಬಾತನ ಹೆಸರು (?) : ಪೂರುಚ ಗೋಸಾಸಿಗರಾ ಮಜು ಧರ್ಮಾ ತುಸವನಿನ್ ಪಡೆದು (ಇಅ. VIII, ३೬೫-೪: 706). [ ? ]

**ತುಸು₁** ' ತುಸ್ಕ ' ನೋ.

**ತುಸು₂** ' ತುಸಂ ' ನೋ.

**ತುಸ್ತ** (ನಾ). ೧. ಸುಟ್ಟ ಅಥವಾ ಹುರಿದ ಮಾಂಸ; ಸುಂಟಗೆ. ೨. ಸುಟ್ಟ ಅಥವಾ ಹುರಿದ ಮಾಂಸದ ಕರಿಕಾದ ಮೇಲ್ಪದರ. ೩. ಹಣ್ಣಿನ ತೊಗಟೆ. ' ಬುಸ್ತ' ಪರಾ. [ < ಸಂ. ಬುಸ್ತ ]

**ತುಹಿನ** (ಗು). ೧. ತಂಪಾದ ; ಶೀತಲವಾದ. ' ತುಹಿನಕಿರಣ ' ಪರಾ. (ನಾ). ೨. ಮಂಜು; ಹಿಮ : ಸರಸಮೃಣಾಳಿಕೆಯಂ ಮೃದುತರ ತುಹಿನಂ ಕೊರಗಿಪಂತೆ ಶಾಂತಿರಸಕ್ಕಾಗರಮೆನಿಪ ತಪಮೆ ನಿನ್ನಂ ಕೊರಗಿಸುತಿರೆ (ಕಾದಂಉ. ೫೫೫). ೩. ಬೆಳುದಿಂಗಳು ; ಚಂದ್ರಿಕೆ : ತುಹಿನ ಸದೃಶಕಾಂತಿಯಿಂದ ಶೋಭಾಯಮಾನವಾದುದಾಗಿ (ಜ್ಯೋತಿರ್ವಿ. ३೦೧). ೪. ಕರ್ಪೂರ : " ಪ್ರಾಲೇಯಮೆನಲು ಘನಸಾರಮೆನೆ ಪಚ್ಚೆ ಹಿಮವಾಳುಕಂ ಚೀನಿ ತುಹಿನಂ ಪನ್ನೆಯುಕ್ಕು" (ಮಂಗರಾ. ೯೯-३३). [ಸಂ.]

**ತುಹಿನಕಣ** (ನಾ). ಮಂಜಿನ ಸಣ್ಣ ಹನಿ ; ಹಿಮಬಿಂದು : ಚಂದ್ರಿಕೆಯುಂ ಸೇವಿಸಿದ ಚಕೋರಕ್ಕೆ ಬಾಚಿಸಿಯೇ ತುಹಿನಕಣಂ (ಪಂಚಾಮಾ. ೧೧-೪೦). [ ತುಹಿನ +ಕಣ₃ ]

**ತುಹಿನಕರ** (ನಾ). = ತುಷಾರಕರ: ದಿಗ್ನಾಯಕಚೂಡಾಮಣಿ ಲಗ್ನೋದಯ ಶಿಖರನೊಪ್ಪಿದಂ ತುಹಿನಕರಂ (ಆಜಿಪು. ೬-೪೧) ; ಇವರೆನ್ನ ಪುಣ್ಯಕೀರ್ತಿ ಪ್ರಭಾವನಧಿವರ್ಧನತುಹಿನಕರರೂಪರು (ಸಿದ್ಧರಾ. ೦-३). [ ಸಂ. ]

**ತುಹಿನಕಿರಣ** (ನಾ). = ತುಷಾರಕರ : ಬೆಳಗುವ ಪಳಿಕಿನ ಸಜೀವೊಂದು ... ತುಹಿನಕಿರಣಮಂಡಲದೊಳಗಣ ಹರಿಣಂಬೊಲೊಪ್ಪಿ ತೋಱಿತ್ತಾಗಳ್ (ಕಾವ್ಯಸಾ. ೧೦೫೦ ಜೊದ್ರಳ). [ ತುಹಿನ + ಕಿರಣ₁ ]

**ತುಹಿನಕ್ಷೋಣೀಧ್ರ** (ನಾ). =ತುಷಾರಾದ್ರಿ: ಎಲೆ ಇದಲ್ತೆ ತುಹಿನಕ್ಷೋಣೀಧ್ರದುತ್ತುಂಗಸಾನುಗಳ್ (ಕಮದ. ೫೭ ಪ್ರಯೋ). [ ತುಹಿನ + ಕ್ಷೋಣೀಧ್ರ ]

**ತುಹಿನಕ್ಷ್ಮಾಧರ** (ನಾ). =ತುಷಾರಾದ್ರಿ : ತುಹಿನಕ್ಷ್ಮಾಧರ ಜಾಲಾಲೋಲೇಕ್ಷಣ ... ಜಯ ಸೂರ್ಯ್ಯಾಕಾರಾ (ಉದ್ಭಟ. ೩-೨). [ ತುಹಿನ + ಕ್ಷ್ಮಾಧರ ]

**ತುಹಿನಗಿರಿ** (ನಾ). = ತುಷಾರಾದ್ರಿ : ಬಳಸಿರ್ದ್ದಭ್ರಾಳಿಯಿಂದಂ ತುಹಿನಗಿರಿ ಶಿಲಾಪಟ್ಟಮೆಂಬಂತೆ ಚೆಲ್ವಾದ ಲತಾಂತಂ (ಕಾದಂಪೂ. ೭೪); ಹೊಳೆಹೊಳೆವ ಕೋಕನದಪಂಕ್ತಿಗಳ ಬಣ್ಣಮುಜ್ಜ್ವಲದಿಂದ್ರಚಾಪದಾಕಾರದಂ ಸಂತತಂ ಪಳವಂತೆ ಕೊಳದೊಳಾರಾಜಿಸಿತು ತುಹಿನಗಿರಿರಾಜನಂದನೆಯು ಕಣ್ಗೆ (ಜೈಮಿಥಾ. ೧೫-೧೧). [ ತುಹಿನ + ಗಿರಿ₁ ]

**ತುಹಿನಗು** (ನಾ). = ತುಷಾರಕರ : ಅತಿಬಳ ತುಹಿನಗು ನಿರ್ಝರತತಿಯೆನಿಸಿದ ಮದ್ಗಿರೀಂದ್ರದಂ ಚಂಡಕರದ್ಯುತಿ ಪುಗದು (ಚಂದ್ರಪು. ೫-೬३). ' ತೀಕ್ಷ್ಣಗು ' ಹೋ. [ಸಂ.]

**ತುಹಿನತೆ** (ನಾ). ತಂಪು ; ಚಳಿ ; ಶೈತ್ಯ : ಅದಱ ಗೌರವದ ಶುದ್ಧತೆದು ತುಹಿನತೆಯ ಸವಿಗಂಪಿನ ಉರವಣೆಯು ಸೊಗಸಿಂಗೆ ಕಣ್ಮನಂ ದಣಿದು (ಸಿದ್ಧರಾ. ೬-೫೭). [ ಸಂ. ತುಹಿನತಾ ]

**ತುಹಿನದೀಧಿತಿ** (ನಾ). = ತುಹಿನಪ್ರದ್ಯೋತ : ಶರತ್ತುಹಿನದೀಧಿತಿಬಿಂಬವಿಡಂಬ ಕೀರ್ತಿ (ಎಕ. V, ಅರಸೀ. ೧೦३-೪ : ಸು. 1100). [ತುಹಿನ + ದೀಧಿತಿ]

**ತುಹಿನಪವನ** (ನಾ). ತಂಪಾದ ಗಾಳಿ ; ತಂಗಾಳಿ : ನಿಜಸ್ವಾಂತೋತ್ಪಲಕೃತ್ಯಧಿಕವಿಕಸನಶ್ರೀಯನಾದೇಯಕಾಯಂ ತನುಜಾತಂ ಸ್ವರ್ಣನಾಭಂ ತುಹಿನಪವನ ಸಂಸ್ಪರ್ಶದಂತೀಯೆ...ಅರಸುಗೆಯ್ಯುತ್ತಿರ್ದನಾ ಪದ್ಮನಾಭಂ (ಚಂದ್ರಪು. ३-೬೭). [ ತುಹಿನ + ಪವನ ]

**ತುಹಿನಪ್ರದ್ಯೋತ** (ನಾ). ತಂಪಾದ ಬೆಳಕನ್ನುಳ್ಳವನು ; ಚಂದ್ರ : ತುಹಿನಪ್ರದ್ಯೋತನುಂ ಶುಕ್ರನುಮೊಡನಿರೆ ಜಾಮಿತ್ರದೊಳ್ ಪುಣ್ಯಕಾಂತಾರಹಿತಂ ಮೇಣ್ ಪುತ್ರಹೀನಂ (ಜಾತಿತಿ. ३೦-೮). [ತುಹಿನ + ಪ್ರದ್ಯೋತ]

**ತುಹಿನಬಿಂದು** (ನಾ). = ತುಹಿನಕಣ : ಹಿಮಸಿಕ್ತಪತ್ರದಿಂ ಬಿಳ್ದುವು ತುಹಿನಬಿಂದು ತೋರಮಳೆಹನಿಗಳೋಲ್ (ಶ್ರೀರಾಮಾ. ३೦೦-೧೭೭). [ತುಹಿನ + ಬಿಂದು]

**ತುಹಿನಭೂಮಿಧ್ರ** (ನಾ). = ತುಷಾರಾದ್ರಿ: ತುಹಿನಭೂಮಿಧ್ರಕ್ಕೆ ಸಾರ್ದಂ ಹರಪ್ರಿಯಂ (ಚಂದ್ರಪು. ೯-೬೭). [ ತುಹಿನ + ಭೂಮಿಧ್ರ ]

**ತುಹಿನಮಹೀಧರ** (ನಾ). = ತುಷಾರಾದ್ರಿ: ಕನಕಶಾಂತಿಕುಮಾರಂ...ಒಂದು ದೆವಸಂ ಕ್ರೀಡಾನಿಮಿತ್ತಂ ತುಹಿನಮಹೀಧರಕ್ಕೆ ಪೋಗಿ (ಶಾಂತಿಪು.೯-೧೭ ವ). [ ತುಹಿನ + ಮಹೀಧರ ]

**ತುಹಿನರ್ತು** (ನಾ). ಹೇಮಂತ ಋತು ; ಚಳಿಗಾಲ : ಹಬ್ಬಿ ತುಂತುರ್ ಮಂಜು, ಮರ್ಬಾಯ್ತು ತುಹಿನರ್ತುಸಂಧ್ಯೆ ! (ಶ್ರೀರಾಮಾ. ३೦೫-३೯೬). [ ತುಹಿನ + ಋತು ]

**ತುಹಿನಶಿಖರಿ** (ನಾ). = ತುಷಾರಾದ್ರಿ : ಮೇಘಾವಳಿ ತಱಿಗುಂ ತುಹಿನಶಿಖರಿಯುಂ [ಪಾಠಾಂ. ಕಿರಣದಿಂ] ಗಂಗೆವರಂ (ಅಭ್ಯದು. ೮-३). [ ತುಹಿನ + ಶಿಖರಿ ]

**ತುಹಿನಾಂಶು** (ನಾ). = ತುಹಿನಕರ. ' ತುಹಿನಾಂಶುಬಿಂಬ ' ಪರಾ. [ ತುಹಿನ + ಅಂಶು ]

**ತುಹಿನಾಂಶುಬಿಂಬ** (ನಾ). = ತುಹಿನಾಂಶುಮಂಡಳ : ಪೊಱಪೊಗೆವ ತಮಂ ತಟಸ್ಥಮೆಂದುಜುಗಲೆನಲ್ಪೂರ್ವದಿಗ್ವಧೂವದನಂ ಕನ್ನಱಿದವೊಲದೇಂ ಬೆರ್ತುದೊ ಕೆಱಿದಡೆ ತುಹಿನಾಂಶುಬಿಂಬಮುದಯಿಪ ಪದದೊಳ್ (ಮಲ್ಲಿಪು. ೬-३೭). [ ತುಹಿನಾಂಶು + ಬಿಂಬ ]

**ತುಹಿನಾಂಶುಮಂಡಳ** (ನಾ). ಚಂದ್ರಮಂಡಲ; ಚಂದ್ರಬಿಂಬ : ನಭೋವಧೂ ಸೂಡಿ ಬಿಸುಟ್ಟ ಮಾಲ್ಯಮಂದಳದವೊಲಿರ್ದುದಸ್ತಗಿರಿಮಸ್ತಕದೊಳ್ ತುಹಿನಾಂಶುಮಂಡಳಂ (ಜಗವಿ. ೧೬-೧೩೫). [ ತುಹಿನಾಂಶು + ಮಂಡಳ ( = ಮಂಡಲ) ]

**ತುಹಿನಾಂಸು** (ನಾ). = ತುಹಿನಕರ : ಗುಣಾರ್ಣ[ವ]ತುಹಿನಾಂಸು ಶೋಭನಸುದಾರದ ತಾಯ್ಮನೆ (ಸೌಇಇ. XX, ೬೬-೨೪ : 1118). [☞ ಇದು 'ತುಹಿನಾಂಶು' ಎಂಬುದರ ಅಪಲಿಖಿತ ]

**ತುಹಿನಾಗಜೆ** (ನಾ). ಹಿಮವಂತನ ಮಗಳು ; ಪಾರ್ವತಿ : ತುಹಿನಾಗಜಾರ್ಧಾಂಗ ... ಎಮ್ಮಯ ಕೃತಿಯು ಭೂಗಗನದಿಗ್ಭರಿತವಾಗಿ ಪಸರಿಸುವಿಸಂ ಸಾಗಿಸುವುದಳ್ಕಜಿಂದೆ (ಧಾವಟಿಂ. ೧-೧). [ ಸಂ. ತುಹಿನಾಗಜಾ ]

**ತುಹಿನಾಚಲ, ತುಹಿನಾಚಳ** (ನಾ). = ತುಷಾರಾದ್ರಿ : ಕನಕನಿಭಪ್ರಭಾಂಘ್ರಿಯುಗನಂ ತುಹಿನಾಚಲವರ್ಣಮಧ್ಯದೇಹನಂ . . . ಕಂಡು (ಪಂಚತಂ. ೦೬೦-೦): ನಿಜಶರೀರಮಂ ಕೆಡಹಿ ತುಹಿನಾಚಲದೊಳು ಸಜ್ಜನರ ಗತಿವಡೆವೆಂ (ತ್ರಿಮಿಭಾ. ೨೪-೬೬). ತುಹಿನಾಚಳ : ಇತ್ತ ಸೇನಾನಿಯುತ್ತರಭರತದ ಪಶ್ಚಿಮಖಂಡಮಂ ಬಾಯ್ಕೇಳಿಸಿ ಬಂದು ವಿಜಯಕಟಕಂ ಬಿಡಿದು ತುಹಿನಾಚಳ ಸಿಂಧೂಪಾಂತದೊಳ್ ಬಿಟ್ಟರೆ (ಶಾಂತಿಪು. ೧೧-೫೬ ವ) : ಸುಂದರ ತುಹಿನಾಚಳ ಸಂಕ್ರಂದನಗಜ ... ಯಶೋಭಾಸುರನೆಂದು ಮಾನಂಗೊಂಡು (ಸುಕುಮಾ. ೧-೫೬). [ತುಹಿನ + ಅಚಲ]

**ತುಹಿನಾಚಳ** 'ತುಹಿನಾಚಲ' ನೋ.

**ತುಹಿನಾದ್ರಿ** (ನಾ). = ತುಷಾರಾದ್ರಿ : ಭದ್ರಾಸನವಂ ಭುಜವಿಜಯದ್ರವಿಣಂಗವನಿಪತಿಗೆ ಕೊಟ್ಟೆಡೆಗೆ ಯಶೋಭದ್ರ್ಯಕತಿರಸ್ಕೃತ ತುಹಿನಾದ್ರಿ ಜಗದ್ಬಂಧುಸಿಂಧುದೇವಿಯುನರಸಂ ಪೋಗವೇಟ್ಟು (ಶಾಂತಿಪು. ೧೧-೫೭). [ ತುಹಿನ + ಅದ್ರಿ ]

**ತುಹಿನಾದ್ರೀಂದ್ರ** (ನಾ). ಶ್ರೇಷ್ಠವಾದ ಹಿಮಾದ್ರಿ: ಬಹುತಾಪಕ್ಕೆ ಬಿಗುರ್ತು ವಿಷ್ಣುಪದೆವಂ ಮತ್ಸ್ಯಾವತಾರಕ್ಕನು ತುಹಿನಾದ್ರೀಂದ್ರುಮನೊತ್ತುಗೊಂಡು ನಡೆವಂ (ಪಂಚಾಮಾ. ೭-೮೯). [ ತುಹಿನ + ಅದ್ರಿ + ಇಂದ್ರ ]

**ತುಹಿನೋದ್ಗತಿ** (ನಾ). ತಂಪಿನ ಏಳಿಗೆ ; ಹೆಚ್ಚು ತಂಪು; ಶೈತ್ಯಾತಿಶಯ : ಸುತರಿಲ್ಲದ ಸಿರಿ ತುಹಿನೋದ್ಗತಿಯಿಲ್ಲದ ವಾರಿ...ಮೆಜಿದಪುದೇ (ಚಂದ್ರಪು. ೩-೪೩). [ ತುಹಿನ + ಉದ್ಗತಿ ]

**ತುಳ** 'ತುಲ' ನೋ.

**ತುಳಕಲು** 'ತುಟಿಕಲ್' ನೋ.

**ತುಳವೇಂದ್ರ** (ನಾ). ತುಳುವದೇಶದ ರಾಜ,–ಒಡೆಯ : ತದ್ವಂಶೇ ದೇವಕೀ ಜಾನಿರ್ದಿದೀಪೇ ತಿಂಮಭೂಪತಿಃ ಯಶಸ್ವೀತುಳವೇಂದ್ರೇಷು ಯದೋಃ ಕೃಷ್ಣ ಇವಾನ್ವಯೇ (ಎಕ. VII, ಶಿವಮೊ. ೦-೦೩ ; 1518). [ತುಳವ$_0$ (< ತುಳು) + ಇಂದ್ರ]

**ತುಳಸಿ** 'ತುಲಸಿ' ನೋ.

**ತುಳಸಿಕಟ್ಟೆ** 'ತುಲಸಿಕಟ್ಟೆ' ನೋ.

**ತುಳಸಿದಳ** (ನಾ). ತುಳಸಿಯ ಕಂಡಿ,– ಎಲೆ : ಪಸೆಯ ಮಗುವನು ವೊನ್ನೆ ಬಂದವರು ನೋಡಿ...ಹಸಿ ತುಳಸಿದಳ ನೀರ ಒಣಬಾಯೊಳೂಡಿ (ಕವಿಪು. ೪೪-೨). [ ತುಳಸಿ ( = ತುಲಸಿ) + ದಳ$_2$ ( = ದಲ) ]

**ತುಳಸಿಪೂಜೆ** 'ತುಲಸಿಪೂಜೆ' ನೋ.

**ತುಳಸಿಮಾಲೆ** 'ತುಲಸಿಮಾಲೆ' ನೋ.

**ತುಳಸೀಪತ್ರ** (ನಾ). ತುಳಸಿಯ ದಳ, - ಎಲೆ: ತುಳಸೀಪತ್ರ ಸಂದೋಹದಿಂ ಮಾಧವಪಾದಾಂಭೋಜಮಂ ಪೂಜಿಸಿ (ಯಾದಚಂ. ೧೫-೨೯); ತುಳಸೀಪತ್ರ- ಧಾರ್ಮಿಕ ದೃಷ್ಟಿಯಿಂದ ಬಹಳ ಮಹತ್ತ್ವವುಳ್ಳುದಾಗಿದೆ (ಧಾಹಲ್ಯ. ೧೫೭). [ ಸಂ. ತುಲಸೀಪತ್ರ ]

**ತುಳಸೀಮಣಿ** 'ತುಲಸೀಮಣಿ' ನೋ.

**ತುಳಸೀಮಾಲೆ** (ನಾ). = ತುಲಸಿಮಾಲೆ : ಸಾಲ ಕೆಂಜೆಡೆ ವೀಣೆ ತುಳಸೀಮಾಲೆಯೊಪ್ಪುವ ಮುನಿವರೇಣ್ಯನು ಶೂಲಿ ಕಳುಹಲು ಬಂದ ನಾರದ (ಕೌಶಿರಾ. ೨೯-೮). [ ಸಂ. ತುಲಸೀಮಾಲಾ ]

**ತುಳಸೀವಿವಾಹ** 'ತುಲಸೀ ವಿವಾಹ' ನೋ.

**ತುಳಾಡಿ** (ನಾ). ಜಟ್ಟಿಕಾಳಗದ ಒಂದು ವರಸೆ:ರಡಕಿ ಕಕ್ಕವಡಂ ಮುಹಡಂ ತುಳಾಡಿ [ಪಾಠಾಂ. ಡ] ಸಂದಸುವಿಡಿವಟ್ಟಸಂ ಗುಣವಳುಂಬುಗೆ ... ಎನಿಪ್ಪ ಜೆಟ್ಟಿಗನ ನಚ್ಚಿನ ಬಿನ್ನಣವೊಪ್ಪೆ ಕಾದಿದರ್ (ಚಂದ್ರಪು. ೫-೭೮) : ಚಡಿಕೆ ತುಳಾಡಿ ಪೊಚ್ಚಮುಡುಹಂ ಮುಹಡಂ ದಣಾವಟ್ಟ ವಟ್ಟಸಂ ಎಂದು ಮಲ್ಲಮಾತಂ ಮಾಡಿ (ಅನಂಪು. ೨-೨೬). [ ? ]

**ತುಳಾಧರ** (ನಾ). ೧. ತಕ್ಕಡಿಯನ್ನು ಹಿಡಿದುಕೊಂಡಿರುವವನು : ಬಂಡಂಗಳ ಬೆಲೆಯಂ ಚಿಂತಿಸುವಂ ತುಳಾಧರಂ ತೌಳಿನಿಳಯದಾದಿತ್ರ್ಯಂಶಂ (ಜಾತತಿ. ೧೯-೧೯). ೨. ವ್ಯಾಪಾರಿ ; ಬಣಜಿಗ. [ ಸಂ. ತುಲಾಧರ ]

**ತುಳಾಪುರುಷ** 'ತುಲಾಪುರುಷ' ನೋ.

**ತುಳಾಮಾನವಿಶುದ್ಧಿ** 'ತುಲಾಮಾನವಿಶುದ್ಧಿ' ನೋ.

**ತುಳಿ$_1$** 'ತುಟಿ$_1$' ನೋ.

**ತುಳಿ$_2$** 'ತುಟಿ$_2$' ನೋ.

**ತುಳಿ$_3$** (ನಾ). ತುಪ್ಪಟ (?) : ಹಂಸೆಯ ತುಳಿಯ ಮೇಲ್ಪಾಸಿನಲಿ ಪವಡಿಸುವೀಕೆ ಇಂದೀಗ ... ಕಲುನೆಲದೊಳೊಜಗಿದಳು (ಕುಮ್ಯಾಅ. ೯-೩೦). [ < ಸಂ. ತೂಲ ?]

**ತುಳಿತ** (ನಾ). ಕಾಲಿನಿಂದ ಮೆಟ್ಟುವಿಕೆ : ಆ ಭಸ್ಮವು ಪರಮೇಶ್ವರನ ಪಾದಗಳ ತುಳಿತದಿಂದ ಎದ್ದು ... ಆ ಪರಶಿವನ ಶರೀರವಂ ವ್ಯಾಪಿಸಿ (ಸೌಗಂಧಿ. ೩೮೧-೧೮). [ ತುಳಿ$_1$ (< ತುಟಿ$_1$) + – ತ$_2$ ]

**ತುಳಿಯಾಳು** (ನಾ). ಶೂರನಾದ ಯೋಧ : ಕಾದುತಲಿಪ ತು [ಪಾಠಾಂ. ಕ[ ಳಿಯಾಳು ದೊರೆಕುಮಾರಕರ ಚಲವನಜಿತು ದಳಪತಿ ನಂಜರಾಜೇಂದ್ರ ಸಲೆ ಮನ್ನೆಯರೊಳೆಂತೆಂದ (ಕಂನವಿ. ೧೮-೧೪೯). [☞ ಇದು 'ತುಳಿಲಾಳು' ಎಂಬುದರ ಅಪಲಿಖಿತವಿರಬಹುದು.]

**ತುಳಿಯಿಸು** 'ತುಟಿಯಿಸು' ನೋ.

**ತುಳಿಲ್$_1$** 'ತುಟಿಲ್$_1$' ನೋ.

**ತುಳಿಲ್$_2$** 'ತುಟಿಲ್$_2$' ನೋ.

**ತುಳಿಲಾಳ್** 'ತುಟಿಲಾಳ್$_2$' ನೋ.

**ತುಳಿಲಾಳು$_1$** 'ತುಟಿಲಾಳ್$_1$' ನೋ.

**ತುಳಿಲಾಳು$_2$** 'ತುಟಿಲಾಳ್$_2$' ನೋ.

**ತುಳಿಲು$_1$** 'ತುಟಿಲ್$_1$' ನೋ.

**ತುಳಿಲು$_2$** 'ತುಟಿಲ್$_2$' ನೋ.

**ತುಳಿಲುಗೆಯ್** 'ತುಟಿಲ್ಗೆಯ್' ನೋ.

**ತುಳಿಲುಗೆಯಿ** 'ತುಟಿಲ್ಗೆಯ್' ನೋ.

**ತುಳಿಲ್ಗಾಣ್ಕೆ** (ನಾ). ಪ್ರಣಾಮಪೂರ್ವಕವಾಗಿ ಒಪ್ಪಿಸುವ ಕಾಣಿಕೆ ; ಭಕ್ತಿಯಿಂದ ಕೊಡುವ ಕಾಣಿಕೆ : ಮರದ ತುದಿಪರೆಯ ಮೇಲಿರ್ದು ಕಿವಿಯಾದನ್, ಕುಟೀರದಿಂ ಪೊಣ್ಮುತಿರ್ದೊಂದೊಂದು ರವಕರೋಮಾಂಚನವೆ ತನ್ನ ಭಕ್ತಿಯ ತುಳಿಲ್ಗಾಣ್ಕೆಯಪ್ಪಂತೆಪೋಲ್ (ಶ್ರೀರಾಮಾ. ೪೭೮-೧೧೨). [ ತುಳಿಲ್$_1$ (< ತುಟಿಲ್$_1$) + ಕಾಣ್ಕೆ ]

**ತುಳಿಲ್ಗುಂದು** (ಕ್ರಿ). ಶಕ್ತಿಗುಂದು; ಬಲಹೀನವಾಗು : ಕಣ್ಗೆಟ್ಟು ಕಾಲ್ಗಣ ದಾದನಾ ಕಾಳ್ಗೆಯ್ತ್ತಕಳ್ಕುತೆ ತುಳಿಲ್ಗುಂದಿ ನಾಲ್ಮೊಗಾ (ಧಾವಟಿಂ. ೩-೨೬). [ ತುಳಿಲ್$_2$ (< ತುಟಿಲ್$_2$) + ಕುಂದು$_1$ ]

**ತುಳಿಲ್ಗೆಯ್** 'ತುಟಿಲ್ಗೆಯ್' ನೋ.

**ತುಳಿಲ್ಗೆ** 'ತುಟಿಲ್ಗೆಯ್' ನೋ.

**ತುಳಿಲ್ಗೊಳ್** 'ತುಟಿಲ್ಗೊಳಂ' ನೋ.

**ತುಳಿವಡೆ** (ನಾ). ಒಂದು ಬಗೆಯ ವಸ್ತ್ರ (?) : ಪಟ್ಟುವಡೆಗಳೊಳೆಲ್ಲಂ ಪಾಸಿ ಕಾರೋಹಣದ ಕಕ್ಕರವಟಿಯಿಗೆಯ ಚಿತ್ರಾವಟಿಯ ಪಳಿವಡೆಯ ತುಳಿವ [ಪಾಠಾಂ. ಲಿ] ಡೆಯ ನೆಳಲಪಾಣೆಯ ಬಣ್ಣದ ಕಣದ ಬಣ್ಣ ವಣ್ಣಿಗೆಯ ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್ (ಆದಿಪು. ೪-೩೪ ವ). [?]

**ತುಳಿಸು** 'ತುಱಯಿಸು' ನೋ.

**ತುಳು, ತುಲು, ತುಳುವ$_1$, ತುಱುವ** (ನಾ). ೧. ಕನ್ನಡನಾಡಿನ ಪಶ್ಚಿಮಕರಾವಳಿಯ ಒಂದು ಪ್ರದೇಶ : ಆಂಧ್ರ ದ್ರಾವಿಡ ಹೈವ ತುಳು ಮಲೆಯ ಕಲರ ಕಲಾಮೂಲ (ಎಕ. VII, ಶಿವಮೊ. ೭೯-೨೦ ; ಸು. 1154 ?). ೨. ತುಳು ದೇಶದ ಭಾಷೆ ; ದ್ರಾವಿಡಭಾಷೆಗಳಲ್ಲಿ ಒಂದು : ತುಳು ಭಾಷೆಯನ್ನು ಆಡುವ ಪ್ರದೇಶ ಮೊದಲು ಮದರಾಸು ಪ್ರಾಂತ್ಯಕ್ಕೆ ಸೇರಿತ್ತು (ದ್ರಾವಿವಿ. ೧೪೧). △ **ತುಲು** : ೩. ತುಳು ದೇಶದವನು : ತೆಲುಗರು ತೆರುವ ಗ ೩೨ ಪ ೫ ತುಲು ಮಳಿಯಾಲರು ತೆರುವ ಗ ೩೨ ಪ ೫ (ಎಕ. XV, ಬೇಲೂರು. ೨೯೮-೭೨ ; 1278). **ತುಳುವ$_1$** : ೧. ದ್ವಾರಾವತೀಪುರವರಾಧೀಸ್ವರಂ ತುಳುವಬಳಜಳಧಿ ಬಡಬಾನಳಂ (ಮೈಆರಿ. ೧೯೨೮, ೯-೨೦ ; 1183) ; ಉಲಿವ ಗೆಜ್ಜೆಯ ಚೆಲ್ಲಣದ ಹೊಂಬಳಿದ ಹರಿಗೆಯ ಹೊಳೆವ ಕಡಿತಲೆಗಳ ವಿಲಾಸದೊಳೆಂದು ಹೊಕ್ಕುದು ತುಳುವಪಡೆ ಕಡುಗಿ (ಕುವ್ಯಾಭೀ. ೪-೩೩) ; ಈ ಗ್ರೀಕ್‌ಪ್ರಹಸನದ ದೃಶ್ಯ ತುಳುವದೇಶದ ಸಮುದ್ರತೀರದ್ದೇ ಇರಬೇಕೆಂದೂ . . . ವಿದ್ವಾಂಸರೂ ಊಹಿಸಿದ್ದಾರೆ (ದ್ರಾವಿವಿ. ೭೮). ೩. "ತುಳುವಂ ತುಳುವನಕ್ಕು" (ಮಂಗರಾ. ೧೦೨-೭) : ಅಯ್ಯಯ್ಯ ಎಂಚ ಪೊರ್ಲಾಂಡೊದು ತುಳುವರು ಮೆಯ್ಯುಬ್ಬಿ ಕೇಳಬೇಕಣ್ಣ (ಭರಜ. ೧-೭). △ **ತುಱುವ** : ೩. ಬಟಿಕೇಶ್ವರನರಸಮುಖರ್ ತುಟಿಲಾಳ್ಗಳ್ ದೊರೆಗಳೆನಿಸಿ ತೊಲಗಿದರೈವರ್ ತುಱುವರ್ (ಚಕವಿ. ೨-೧೪).

[ದೇ.॥ ತಮಿ. ತುಳು. ತುಳು, ತುಳುವ ; ಮಲ. ತೆಲು. ತುಳು]

**ತುಳುಂಕಾಡು, ತುಳುಂಕಾಡು, ತುಳ್ಕಾಡು** (ಕ್ರಿ). ೧. (ನೀರು ಮೊದಲಾದುವು) ಹೊರಹೊಮ್ಮು, – ಉಕ್ಕಿ ಹರಿ, – ಹೊರಸೂಸು : ವಜ್ರವೈಡೂರ್ಯಶಿಲಾಪಟ್ಟಕಂಗಳವಿರಳದೀಧಿತಿಯೆ ಕೊಳಂಗಟ್ಟಿ ತುಳುಂಕಾಡುವಂತೆ ತಿಳಿದೊಪ್ಪುವ ಸರೋವರದ ತಡಿಗಳೊಳ್ (ಜಗವಿ. ೧೬-೩೪ ವ) ; ನೆರೆದ ಪುರಜನದ ಸಂಭ್ರಮಂಗಳಿನಾ ಪುರದ ಕ್ಷೋಭಂ . . . ತೆಕ್ಕನೆ ತೀವಿ ತುಳುಂಕಾಡುತಿರ್ದುದು (ಅನಂಪು. ೯-೫೯ ವ). ೨. ಕದಡು ; ಕ್ಷೋಭೆಗೊಳ್ಳು ; ಅಲ್ಲೋಲಕಲ್ಲೋಲವಾಗು : ಮರುತ್ತರಂಗಿಣಿ ಮಟಿಲ್ತೋಱಲ್ ತುಳುಂಕಾಡೆ (ವಶಕು. ೩-೫). ೩. (ನೀರನ್ನು) ಚಿಮುಕಿಸು, – ಎರಚು : ಅನಂತರಂ ತುಮುಲಕೇಳಿಯಿಂದೋರೊರ್ವರಂ ತುಳುಂಕಾಡುವಾಗಳ್ (ಚಂದ್ರಪು. ೭-೧೪೩ ವ). ೪. ಮುಳುಗಿ ಏಳು ; ಓಲಾಡು : ಕೊಳಂಗಳೊಳ್ ತುಳುಂಕಾಡುವ ಬಾಳೆ . . . ನೋಡುವರಚ್ಚರಿಯನುಂಟು ಮಾಡುಗುಂ (ಶಬ್ದಾನು. ೯೬ ಪ್ರಯೋ). **ತುಳುಕಾಡು** : ೧. ನಿಜ ತುಂಬಿದ ಭಕ್ತಿ ತುಳುಕಾಡದವರ ಸಂಗವೇನು ಬಾತೆ (ಬಸವ. ೬೩೪) ; ದರಹಸಿತ ಸಿತಕಾಂತಿ ಮುಖಪಂಕೇರುಹದೊಳು ತುಳುಕಾಡೆ (ಬಸಪು. ೫೨-೩೯) ; ಕರುಣರಸ ತುಳುಕಾಡೆ ಕಪಿಕುಂಜರನ ಕಂಜದಳಾಯತಾಕ್ಷನು ಬರಸೆಳೆದು ಬಿಗಿಯಪ್ಪಿದನು (ತೊರರಾ. ೪-೭-೪) ; ತುಳುಕಾಡಿತಾ ನಾಡ ಸಿರಿ (ಜೈಮಿಭಾ. ೨೯-೧೨) ; ತುಳುಕ್ಯಾಡತಾವ ತೂಕಡಿಕೆ (ಗಂಗಾತ. ೭೦-೩) ; ಆವೇಶ ತುಳುಕಾಡುತ್ತಿದೆ (ಶಿಸ್ತದ. ೧೧೩). ೨. ಭುಜಭದಾಂತಘಟ ಬಿರಿಯೆ ವನಧಿಗಳು ತುಳುಕಾಡೆ . . . ಬೊಬ್ಬಿಱದುಬ್ಬಿದನು ರಘುಜ (ತೊರರಾ. ೩-೬-೭).

೪. ಯಶೋದೆ - ರಾಗರಸಾಬ್ಧಿಯೊಳ್ತುಳುಕಾಡೆ . . . [illegible] ಗಾಡಿದಂ (ಜಗವಿ. ೩-೫೭). **ತುಳ್ಕಾಡು** : ೨. ಪಾರ್ವತೀಲತಾಸ್ಥಲನಂ ಗೆಯ್ಯೆ . . . ವ್ಯೋಮಗಂಗಾಸಲಿಲಂ ತುಳ್ಕಾಡೆ (ಜಗವಿ. ೮-೫೦). ಬಹು ಚರಣದಾಟಕೆ ನೆಲ ನಡುಗುತಿರೆ ವಾರಿನಿಧಿ ಬೆಂಬಳಿಯಲುಱ ತುಳ್ಕಾಡಿ ತಾಂಡವವಾಡಿದನು ಸುರಪ (ಸಾಳ್ವಭಾ. ೩೩-೧೧೪). ೩. ನವನಾಳಿಕೇರ ರಸಪೂರಮಂ ತುಳ್ಕಾಡಿ . . . ಪೊಟ್ಟುಗಳೆವುದು ನೃಪನ [illegible] (ಪುಷ್ಪಪು. ೨-೪೪). [ತುಳುಂಕು$_1$ + ಆಡು$_1$]

**ತುಳುಂಕು$_1$, ತುಳುಕು, ತುಳ್ಕು** (ಕ್ರಿ). ೧. ತುಂಬಿ ಹೊರಸೂಸು – ಹೊರಹೊಮ್ಮು : ತಮ್ಮಣ್ಣನ ಬಿನ್ನನಾದ ಮೊಗಮುಮಂ ಕಂಡು ಕಣ್ಗಳಿಂ ನೆತ್ತರ್ ತುಳುಂಕೆ (ಪಂಪಭಾ. ೭-೫ ವ) ; ಸ್ಮರರಾಗಾಮೃತಮಂ ತುಳುಂಕೆ (ಅರ್ಧನೇ. ೨-೭೮) ; ದರಹಾಸಂ ಮುಖದಿಂ ತುಳುಂಕುತಿರೆ (ಕುಸುಮಾ. ೧೨-೭೯) ; ಗಾನರಸವಾರ್ಧಿಯನ್ನೆದೆ ತುಳುಂಕುವಾ ಲಸದ್ವೀಣಾ ವಿಂಚರಗಳನೆ ಪೊಣ್ಮಿಪ ಮೋಹನರೂಪದಂಗನಾಶ್ರೇಣಿ ವಿರಾಜಿಕುಂ (ಉದ್ಭಟ. ೧-೭೮) ; ಪೊಣ್ಮುವ ಸುಖಬಾಷ್ಪಂ ತುಳುಂಕೆ ಪೇಳ್ದುದು ಕೃತಿಯಂ (ರಾಜಶೇ. ೧-೫೨). ೨. ಕದಡು ; ಕ್ಷೋಭೆಗೊಳ್ಳು : ಜಳಧಿಯ ನೀರ್ ತುಳುಂಕಿದವು ಧಾತ್ರಿ ತಿಱ್ಱಂದಿಱದತ್ತು (ಮಹಾನೇ. ೧೦-೧೨೯). ೩. ಕ್ಷೋಭೆಗೊಳಿಸು ; ಕದಡುವಂತೆ ಮಾಡು : ಗಂಗೆಯ ನೀರಂ ತೋಳೊಳ್ ತುಳುಂಕಿ ಮಗುಟ್ದು ಬಂದಂಗೆ ವಿಷದ ಲಡ್ಡುಗೆಯನಿಕ್ಕಿಯುಂ (ಪಂಪಭಾ. ೨-೩೩ ವ). ೪. ಚಿಮುಕಿಸು ; ಎರಚು ; ಸಿಂಪಡಿಸು : "ತುಳುಕು, ತುಳುಂಕು – ಸೇಚನೇ" (ಶಮಧಾ) ; ವಾರಸ್ತ್ರೀಜನವಿದಿರೊಳ್ ತುಳುಂಕೆ ನೀರಂ ನೀರಧ್ರುಸ್ತನತಟದೊಳ್ ಕೃತೋಪಹಾರಂ ಹಾರಶ್ರೀಗೆಣೆಯೆನಿಸಿತ್ತು ವಾಃಕಣೌಘಂ (ಕಾವ್ಯಾವ. ೫-೪೮) ; ನಾಡೆ ಮುಳುಂಗಿ ಪಾಱಡಿದರಱುಂಬಿ ತುಳುಂಕಿದರಂಬುವಂ (ಹಮ್ಮೀರ. ೪-೨೭). ೫. ಚೆಲ್ಲು ; ಒಗೆ ; ಬಿಸುಡು ; ಹೊರಹಾಕು : ಮುಗಿಲ ನೀರಂ ನಚ್ಚಿ ದೋಣಿಯ ನೀರಂ ತುಳುಂಕಿದ ಕೋಡಗದಂದಂ ನಿನಗಕ್ಕುಂ (ಪಂಚತಂ. ೬೮-೮). **ತುಳುಕು** : ೧. ಅನುರಾಗರಸಂ ಕಟಾಕ್ಷದಿಂ ತುಳ್ಕೆ ಕುಚಾಗ್ರದಿಂ ತುಳುಕೆ ಹಾರಮರೀಚಿ (ಜಗವಿ. ೧೪-೧೦೩) ; ವೀರಭಕ್ತನ ಪದನಿಹತಿಗೆ ಶಿರೋರುಗಂಗಾವಾರಿ ತುಳುಕಿಯುಪಾರ ಪಾದೋದಕವೆನಿಸಿ (ಬಸಪು. ೧೮-೪೮) ; ಹೃದಯಶಿಖಿಯುಱ ತಳಿತು ಲೋಚನ ವಾರಿ ತುಳುಕಿತು ಪವನಜಾದಿಗಳ (ಕುವ್ಯಾದ್ರೋ. ೭-೮) ; ಸಲೆ ಮೋಹರಸವಧಿಕ ಭಕ್ತಿರಸವೊಡವೆರದು ತುಳುಕಲ್ (ಚಬಪು. ೬-೪) ; ಅಶ್ರು ನಯನದೊಳ್ತುಳುಕೆ (ಜೈಮಿಭಾ ೧೮-೫೨) ; ಲಾಲಾಜಲಂ ತುಳುಕಲ್ ಬರ್ಪತೊದಲ್ ಮಾನಂಗೊಳಿಸಲ್ (ಶಾಕುಂತ. ೧೦೫-೧೮೦) ; ತುಂಬಿದ ಕೊಡ ತುಳುಕುವುದಿಲ್ಲ (ಗಾದೆ). ೨. ಧರೆಯೊಗ್ಗುಡಿಸಲಿ ಶರನಿಧಿ ತುಳುಕಲಿ (ದೀಕ್ಷಾಬೋ. ೯೧-೧೫) ; ವಿಕಲ್ಪಬಿಂದುಗೆ . . . ತುಳುಂಕಿದಂ, ತುಳುಕಿದಂ (ಶಮದ. ೩೭ ಪ್ರಯೋ) : ನೆಳಲು ಸುಳಿಯಲು ದಂತಿಯೊಂದಪ್ಪಳಿಸೆ ವಾಸುಕಿ ನೊಂದನಬುಧಿ ತುಳುಕಿದವು (ಕುವ್ಯಾದ್ರೋ. ೩-೧೪) ; ಜಲಚರ ಗಳಟ್ಟುಳಿಗೆ ತುಳುಕಿ ಮೇಲಕೇಳ್ವ ಬಲುಶೀರ್ಪನಿಗಳ ಮೊತ್ತದಿಂದಂಬುಧಿ ಯುಳಿವಟ್ಟು ಮೆಱದುದಳ್ಳಿಯಲಿ (ಕಂನವಿ. ೪-೨೩). ೪. ಭರದಿಂದಂ ತುಳುಕಿದ ನೀರುರದೊಳ್ ಹಾರಾಂಶುರುಚಿಯನಿರ್ಕುಟಿಗೊಳೆ (ಆದಿಪು. ೧೪-೧೧೮) ; ಕರತಳವಾರಿ ತಳ್ತು . . . ತನೂದರಿಯುರಲಂಪಿನಿಂ ತುಳುಕೆ ಕೃಷ್ಣನ ಮೇಲೆ (ಜಗವಿ. ೧೪-೯೮). ೫. ನಿನ್ನ ರಕುತವ ತುಳುಕುವೆನು ಹಿಂದಿಕ್ಕಿಕೊಂಬನ ತೋಱು ತೋಱಸುತ...ಕೈಮಾಡಿದನು (ಕುವ್ಯಾಕ. ೧೨-೨೪) ; ಮಳೆಯ ಮುಗಿಲ ನೋಡಿ ಮನೆಯೊಳಗಿರ್ದುದಕವ ತುಳುಕುವ ಕಡು ಹೆಡ್ಡರಂತೆ (ನೇಮಿಸಂ. ೩೪-೩೨). ೬. (ಬಾಣ ಮೊದಲಾದ ಆಯುಧಗಳನ್ನು ಎದುರಾಳಿಯ ಮೇಲೆ) ಎಸೆ,—ಪ್ರಯೋಗಿಸು : ಶರಾಳಿಯ ತುಳುಕಿ ಹೊಕ್ಕನು ಸತ್ಯಜಿತು (ಕುವ್ಯಾದ್ರೋ. ೨-೪೩) : ತುಳುಂಕಿ

ದನೂನ ಶರಜಾಲಮಂ ಕರಿತುರಗರಥ ಪದಾತಿಗಳ ಸಂದಣಿ ದಣಿಯಲು (ಜೈಮಿಭಾ. ೪-೪೩): ಬಿಲ್ಗೊಂಡು ದಿವ್ಯಾಸ್ತ್ರಮಂ ತುಳುಕಿದನು ಝೇಂಕರಿಸುತ (ತುರಂಗ. ೮೫-೨೨). ೭. ಸೇರಿಸು ; ಹೂಡು ; ಸಂಧಾನಮಾಡು : ಸೆಳೆದನಿಷುಧಿಯಲಂಬ ತಿರುವಿಗೆ ತುಳುಕಿ ಕೋಲನು ಕೋಡಕೈಯಿಂದಳವಿಗೊಳ್ಳುನೆ ನಿಲುಕಿದನು ನಿಗುರಿದ ಶರೀರದಲಿ (ತೊರವೆ. ೩-೮-೬೯).

**ತುಳ್ಕು** : ೧. "ಸೂಸಿದುದನೆ ತುಳ್ಕಿತೆಂಬುದು" (ರನ್ನಕಂ. ೬) : ಚಾರು ವೀರಭಟಕೋಟಿಗೆ ರಾಗರಸಂ ಪೊದಬ್ದು ತುಳ್ಕುತ್ತಿರೆ ಬಂದು ಮುತ್ತಿ ಮೊಗೆದಂ ವಿಭು ಗೋಕುಲಮಂ ವಿರಾಟನಾ (ಪಂಪಭಾ. ೮-೯೨) ; ತುಳ್ಕೆ ದರಸ್ಮಿತಂ ವದನದಿಂದನುರಾಗರಸಂ ಕಟಾಕ್ಷದಿಂ ತುಳ್ಕೆ (ಜಗವಿ. ೧೪-೧೧೩): ಕಂಗೊಳಿಸಿತ್ತು ತುಂಗಭದ್ರೆ ತುಳ್ಕುತೆ ಸೊಗಸಂ (ಉದ್ಭಟ. ೩-೮೨). ೨. ನೆಲನಂ ನುಂಗಲುಮಂಬುಧಿ ಜಲಮಂ ತವೆ ತುಳ್ಕಲುಂ . . . ಒಡರ್ಚಿದಂ ಚಕ್ರಧರಂ (ಕಾವ್ಯಾವ. ೧೧೮) : ಕಡಲೇಳುಂ ಕದಡೆಳ್ದು ತುಳ್ಕೆ (ರಾಜಶೇ. ೬-೧೧). ೩. ಸವತಿಯ ಮೇಲೆ ಮುಂ ತುಳುಕಿ ತನ್ನಯ ಮೇಲಧಿಪಂ ಬಿಟ್ಟೆ ತುಳ್ಕುವ ವಿಮಲಾಂಬುಗಳ್ ತನಗೆ ಮನ್ಮಥನಂಬುಗಳಂತಿರೆ (ಜಗವಿ. ೧೪-೧೧೧) : ಕೊಳ್ಕೊಳ್ಳೆಂದೊಡನೊಡನೆಯೆ ತುಳ್ಕುವ ಯುವತಿಯರ ಕರಪರಿಚ್ಯುತ ಸಲಿಲಂಗಳ್ಕಳ (ಶಬ್ದ. ೨೩೦ ಪ್ರಯೋ). ೪. ಸರೋವರಾಂಬುವನಿತಂ ತವೆ ತುಳ್ಕೆ ರಸಾತಳಂಬರಂ ಬೆದರೆಯುಮೆಂತು ಮುಪ್ಪಳಿಸಿ ಕೊಂದವಂ (ಪಂಪಭಾ. ೧೩-೮೦) ; ಬೇಸಱೊಳ್ ತುಳ್ಕಿದ ಕೊರ್ಮೆಯ ಕಣ್ಣನೀರ್ಗಳಂ (ಶೃಂಗಾರ. ೩-೫೮) : ತುಳ್ಕುತಿರ್ಪುದಂ ನೆತ್ರ ರೆಲ್ಲರುಂ ಕರೆಗೆ (ಕಾಲೂರ. ೧೬೦-೩೫೫). ೫. ಇಂತಿರದೆ ಮೂದಲಿಸಿ ಸಮ್ಮುಖವಾಗಿ ತುಳ್ಕಿದರ್ ಶರವರುಷಮಂ (ಚಬಪು. ೨೪-೧೬). ೬. ಹುಟ್ಟು ; ಮೂಡು ; ಉಂಟಾಗು : ಮದಕರಿಕುಳವೋವದೆ ಬಳ್ವಾಯ್ದುಗಳ್ ತುಳ್ಕಿದ ಗಿರಿ ಪರಿವಂತೆ ಪರಿದು ಮರವಾಯ್ದುರ್ಕುಂ (ಶಾಂತಿಪು. ೯-೧೪೦) ; ಪಸುಮತಿಗೆ ಕೆನ್ನೀರ್ತುಳ್ಕೆ ತುಳ್ಕಿದಂ ಕೈಗೆಡದೆ ಸಾಯಕ ಸಮುದ್ರಮಂ ಶಾಙ್ರ್ಗಿ ಬಳಿಕ (ಚಬಪು. ೪೯-೪೧).

[ದೇ. ॥ ತಮಿ. ತುಳಜ್ಕು, ತುಳಕ್ಕು, ತುಳುಮ್ಬು ; ಮಲ. ತುಳುಮ್ಬು; ತೆಲು. ತೊಲುಕು, ತೊನಕು ; ಪರ್ಜಿ. ತೊಲ್ಕ್ ]

**ತುಳುಂಕು₂**, ತುಳುಕು₂ (ನಾ). ಹೊರಸೂಸುವಿಕೆ ; ಹೊರಹೊಮ್ಮುವಿಕೆ. 'ತುಳುಂಕಂಗುಟ್ಟು' ಪರಾ. **ತುಳುಕು₂**. 'ದೊಂಬಿದುಳುಂಕು' ಪರಾ.

[ < ತುಳುಂಕು₁. / ತಮಿ. ತುಳಕ್ಕು : ಮಲ. ತುಳಙ್ಙು ]

**ತುಳುಂಕುಗುಟ್ಟು** (ಕ್ರಿ). ಅತಿಶಯವಾಗಿ ತುಳುಕು ; ಹೆಚ್ಚಾಗಿ ಹೊರಸೂಸು : ಆಕೆಗಳಂಗೋಪಾಂಗದೊಳಿಂತು ನಾಟ್ಯರಸಮ ತೀವಿ ತುಳುಂಕುಗುಟ್ಟೆ ... ಅತ್ಯಾಶ್ಚರ್ಯಮಂ ಮಾಡಿದಾಗಳ್ (ಆದಿಪು. ೬-೧೨೫ ವ).

[ ತುಳುಂಕು₂ + ಕುಟ್ಟು₁ ]

**ತುಳುಂಕುದುಂಬು** (ಕ್ರಿ). ಹೊರಚೆಲ್ಲುವಂತೆ ಭರ್ತಿಮಾಡು ; ತುಳುಂಕುವಷ್ಟು ತುಂಬು : ನಿನ್ನ ಬಟ್ಟಲನ್ನು ತುಳುಂಕುದುಂಬಿ ಜನ್ಮ ಸಾರ್ಥಕ ಮಾಡಿಕೊಳ್ಳುವೆನು (ಬಟ್ಟಆ. ೯೮-೧). [ ತುಳುಂಕು₁ + ತುಂಬು₁ ]

**ತುಳುಕಾಡು** 'ತುಳುಂಕಾಡು' ನೋ.

**ತುಳುಕಿಸು** (ಕ್ರಿ). ಹೊರಸೂಸು; ಹೊರಚೆಲ್ಲು : ಮುಗುಳುನಗೆ ತುಳುಕಿಸುತ್ತ ಕುಳಿತಿದ್ದಳು ಜಾಲಿ (ಮುಣ್ಣು.ಹ. ೯೫).

[ ತುಳುಕು₁ ( < ತುಳುಂಕು₁ ) + – ಇಸು₃ ]

**ತುಳುಕು₁** 'ತುಳುಂಕು₁' ನೋ.

**ತುಳುಕು₂** 'ತುಳುಂಕು₂' ನೋ.

**ತುಳುಕುನೀರಾಡು** (ಕ್ರಿ). ನೀರನ್ನು ಚಿಮುಕಿಸಿ ಆಟವಾಡು,–ಕ್ರೀಡಿಸು: ಧೂಮ್ರಳಿಸಿ ತುಳುಕುನೀರಾಡಿದಂ (ಸುಳುಮಾ. ೯-೪೩).

[ ತುಳುಕು₁ ( < ತುಳುಂಕು₁) + ನೀರ್₁ + ಆಡು₁ ]

**ತುಳುಕುವರಿಗೆ** (ನಾ). ಒಂದು ಬಗೆಯ ಗುರಾಣಿ (?) : ತುಳುಕುವರಿಗೆಯ ಗುಳವ ವಜ್ರದ [ದಿ] ನಲಗ ಮುಱಿಯೊದೆಯೆಚ್ಚು ಜೋದರ ತಲೆಗಳನು ತುಂಡಿಸಿದನಿಭವನು ಹೊಕ್ಕು ಬೀದಿಯಲಿ (ಕುಮಾರವ್ಯಾ. ಐರಾ. ಸಂ. ೨೮೯).

[ ತುಳುಕು ? + ವರಿಗೆ₃ ]

**ತುಳುಕೆವಟ್ಟು** 'ತುಡುಕೆವಟ್ಟು' ನೋ.

**ತುಳುಗತ್ತಿ**, ತುಳುವಕತ್ತಿ (ನಾ). ಈಳಿಗೆ ; ಮೆಟ್ಟುಗತ್ತಿ ; "ಈಲಿ, ಕರವಾಲಿಕೆ" (ನಾಚಿರಾ. ೩). **ತುಳುವಕತ್ತಿ** : "ಈಳೀ, ಕರವಾಳಿಕಾ, ೨ ತುಳುವಕತ್ತಿ ... ಈಳಿಗೆಕತ್ತಿ" (ಸಿದ್ಧಾಂತಿ. ೨೨೮). [ ತುಳು ? + ಕತ್ತಿ ]

**ತುಳುನಾಡು** (ನಾ). = ತುಳು ೧ : ತುಳುನಾಡ ಸತ್ತ ಮನೆಯಂತೆ ಪಟಯಿಸುವರ್ ...ಪಾವಿನಂತೆ ಪೊರಳ್ವರ್ (ಧರ್ಮಾಮೃ. ೩-೮೧) : ಈ ತುರವರ ನಾಡೇ ನಮ್ಮ ತುಳುನಾಡೆಂದು ನಿರ್ಧರಿಸಲು ಅನೇಕ ಕಾರಣಗಳುಂಟು (ತುಳುನಾ. ೧೩). [ತುಳು+ನಾಡು]

**ತುಳುವ₁** 'ತುಳು' ನೋ.

**ತುಳುವ₂** (ನಾ). (ಕರಾ) ೧. ಮೃದುವಾದುದು; ಮೆದುವಾದುದು. 'ತುಳುವಗಾಯ್' ಪರಾ. ೨. ಒಂದು ಬಗೆಯ ಹಲಸಿನ ಹಣ್ಣು ; ಬಹಳ ಮೃದುವಾದ ಹಲಸು. [ ← ತುಳು. ತುಳುವ]

**ತುಳುವಕತ್ತಿ** 'ತುಳುಗತ್ತಿ' ನೋ.

**ತುಳುವಗಾಯ್** (ನಾ). (ಹೀರೆಯ ಕಾಯಿಯಿಂದ ಮಾಡುವ) ಒಂದು ಬಗೆಯ ಖಾದ್ಯ : ಕೆಲವ ನವಜಿಹ್ವೆಯ ಸೊದೆಯ ಕೆಲವ ತುಳುವಗಾಯಂ ಕೆಲವ ಶೂಲ್ಯಕವನು ... ಮಾಡಿ ಪಲವು ಚಂದದೊಳು ಹೀರೆಯ ಕಾಯ ಪಾಕಮಂ ಹಿರಿದಾಗಿ ಹಸಮಾಳ್ಪುದು (ಸೂಪಶಾ. ೫-೬).

[ ತುಳುವ₂ + ಕಾಯ್₄ ]

**ತುಳುವಬದನೆಕಾಯ್** (ನಾ). ಬದನೆಕಾಯಿಯಿಂದ ಮಾಡುವ ಒಂದು ಬಗೆಯ ಖಾದ್ಯ : ಹದನಾದ ಬದನೆಯ ಕಾಯ ಹೊದಟಿ ವಗ್ಗರಣೆಯಂ ಮಾಡಿ ಪರಿಮಳವಿಕ್ಕಲದು ತುಳುವಬದನೆಕಾಯ್ಮಸರಾದುದು (ಸೂಪಶಾ. ೪-೬). [ ತುಳುವ₂ + ಬದನೆಕಾಯ್ ]

**ತುಳ್ಕಾಡು** 'ತುಳುಂಕಾಡು' ನೋ.

**ತುಳ್ಕು** 'ತುಳುಂಕು₁' ನೋ.

**ತುಳ್ಕುವೊಳೆ** (ನಾ). ತುಂಬಿ ತುಳುಕಾಡುತ್ತಿರುವ ಹೊಳೆ,–ನದಿ : ಮಸಗಿತು ತುಂಬಿ ತುಳ್ಕುವೊಳೆ ಕಾರ್ವಗಲವ್ವಳಿಪಂತೆ (ಚಿಕವಿ. ೨-೧೧೬).

[ ತುಳ್ಕು ( < ತುಳುಂಕು₁) + ಪೊಳೆ₃ ( < ಪೊಟ್₁) ]

**ತುಳ್ದಿಲ್ದಾಲ್** 'ತುಟಿಲ್ದಾಲ್' ನೋ.

**ತುಳ್ಳಾಡು** (ಕ್ರಿ). ೧. ಹೊರಳಾಡು ; ಉರುಳಾಡು. ೨. ಜಿಗಿದಾಡು ; ನೆಗೆದಾಡು ; ಕುಣಿದಾಡು : ತುಳ್ಳಾಡಿ ತುಳ್ಳಾಡಿ ಮುಳ್ಳಿನ ಮೇಲೆ ಬಿದ್ದ (ಗಾದೆ). [ ತುಳ್ಳು + ಆಡು₁ ]

**ತುಳ್ಳು** (ಕ್ರಿ). ೧. ಉರುಳು ; ಹೊರಳು. ೨. ಜಿಗಿ ; ನೆಗೆ ; ಹಾರು ; ಕುಣಿ. ' ತುಳ್ಳಾಡು ' ಪರಾ.

[ದೇ. ॥ ತಮಿ. ಮಲ. ತುಳು. ತೆಲು. ತುಳ್ಳು ; ಕೊಡ. ತುಳ್ಳ್ ]

**ತುಱಿ**, ತುರಿ₃ (ನಾ). ೧. ಕಡಿತ ; ಕೆರೆತ ; ನವೆ ; ತಿಂಡಿ (ಉಕ). 'ತುಱಿಸು' ಪರಾ. ೨. ಒಂದು ಬಗೆಯ ಚರ್ಮರೋಗ: " ಕಂಡೂಃ, ವಿಚರ್ಚಿಃ, ಕಂಡೂಯಾ ಈ ೩ ತುಱಿ " (ನಾಚಿರಾ. ೧೨೦) ; ಕೆರಕಂ ತುಱಿಯಿಂ ತೀವಿದ ಕರಚರಣಂ ಬೋಟಮಂಡೆ ಕುಗ್ಗಿದ ದೇಹಂ (ಧರ್ಮಾಮೃ. ೬-೨೨೪) ; ತುಱಿಯ ಮೇಲೆ ಉಗುರನಿಕ್ಕಿದರೆ ಹಿತವಾಗಿಹುದು (ಸಿದ್ಧೇಪ. ೪೧-೧೧೨) : ಆ ರೂಪಂ ಪಲ್ಲಟಿಸಿ ಕೆರಕುಂ ತುಱಿಯುಂ... ಗುಂಡವೇಷಂ ತನಗಮರೆ (ಬಂಹರಿ. ೯-೩೦ ವ). ೩. ಕಾಮಾಸಕ್ತಿ ; ವಿಷಯಾಭಿಲಾಷೆ ; ಕಾಮಲಂಪಟತೆ. ' ತುಱಿಪ ' ಪರಾ. **ತುರಿ₃** :

೨. ಮೈಯೆಲ್ಲಾ ತುರಿ, ಕಜ್ಜಿ ತುಂಬಿತ್ತು (ನೀತಿಚಿಂ. I, ೨೮) ; ತುರಿಯಿದ್ದವಗೆ ನಾಚಿಕೆಯಿಲ್ಲ, ಮರೆಯಿದ್ದವಗೆ ಮಂದತ್ವವಿಲ್ಲ (ಗಾದೆ).

[ ದೇ. ‖ ತಮಿ. ತುರುತ್ತೈ, ಚೊಱಿ; ಮಲ. ಚೊಱಿ ; ತೆಲು. ದುರದ]

**ತುಱಿಕೆ, ತುರಿಕೆ** (ನಾ). ೧. = ತುಱಿ ೨ : (೬). **ತುರಿಕೆ :** ೧. ತುರಿಕೆಯಾದವನೆಯೆ ತುರಿಸಿಕೊಳ್ಳುವನಲ್ತೆ ತುರಿಯಿಲ್ಲದವಗೇಕೆ ಚಿಂತೆ (ಇಂಚಾಪ. ೧೮೭-೨೩). ೨. ಒಂದು ಬಗೆಯ ಗಿಡ : ತುರಿಕೆ, ಸುರುಸುರಿಕೆ (ಮೈಜಿಗ. ೩೯-೭೭೦). ‘ ತುಱುಚೆ ’ ಪರಾ. [ ತುಱಿ + –ಕೆ ]

**ತುಱಿಗ** (ನಾ). ತುರಿರೋಗದಿಂದ ಪೀಡಿತನಾದ ವ್ಯಕ್ತಿ : ತುಱಿಗರ ತೊನ್ನರ . . . ಮುಟ್ಟಲಕ್ಕುಮೊ ಸೂಳೆಯರಂ (ಶ್ರಾವಕಾ. ೧೨೨-೫).

[ ತುಱಿ + – ಗ$_2$ ]

**ತುಱಿಚ** ‘ ತುಱುಚೆ ’ ನೋ.

**ತುಱಿಚೆ** ‘ ತುಱುಚೆ ’ ನೋ.

**ತುಱಿಪ** (ನಾ). ಕಾಮಾತುರತೆ ; ಬೆದೆ. ‘ ತುಱಿಪಗಾಱ ’ ಪರಾ.

[ ತುಱಿ + – ಪ$_2$ ]

**ತುಱಿಪಗಾರ್ತಿ** (ನಾ). ಕಾಮಾತುರೆ ; ಕಾಮುಕಿ : ಮಾನವಮದನನಂ ಕಂಡು ಕೈಗಱಿಯೆ ಕಣ್ಸೋಲ್ತು ಕಾಮಕಾತರೆಯಾಗಿ ತುಱಿಪಗಾರ್ತಿ ಕೂರ್ತುರ್ ನಿತ್ತರಿಸಲಾಱದೆ...ಮೇಲ್ವಾಯ್ದು (ಲೀಲಾವ. ೧೪-೧೦೪ ವ).

[ ತುಱಿಪಗಾಱ + – ತಿ$_1$ (< – ಇತ್ತಿ) ]

**ತುಱಿಪಗಾಱ** (ನಾ). ಕಾಮಾಸಕ್ತನಾದವನು ; ವಿಷಯಲಂಪಟ. ‘ ತುಱಿಪಗಾರ್ತಿ ’ ಪರಾ. [ ತುಱಿಪ + –ಕಾಱ ]

**ತುಱಿಸು, ತುರಿಸು** (ಕ್ರಿ). ೧. ಮೈಯಲ್ಲಿ ಕಡಿತ ಹೋಗುವಂತೆ ಕೆರೆ : “ತುಱಿಸು–ಕಂಡೂತಿಕರ್ಷಣೇ ” (ಶಮದ) : ಪಲ್ಲಂ ಸುಲಿವೊಡಂ ಕಿವಿ ಕೀಂಬೊಡೆ ತುಱಿಸುವೊಡಂ ಪುಲ್ಲಿಂದೆನಿತುಂ ಪ್ರಯೋಜನಮುಂಟು (ಪಂಚತಂ. ೩೪-೦೪) : ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುಱಿಸುವಂತೆ (ಬಸವ. ೬೬೦); ಹೆಡತಲೆಯ ತುಱಿಸುವರೆ ಹಾವಿನ ಹೆಡೆಯೊಳಕಟಾ (ಕುವ್ಯಾಸ. ೧೪-೩೬); ಇನಿಸು ತಲೆಯ ತುಱಿಸುವೊಡೆ ಹೊತ್ತಂ ಕನಸಿನಲ್ಲಿ ಕಾಣೆ (ಸಮ್ಯಕೌ. ೫-೧೯). ೨. ತಿವಿ; ಚುಚ್ಚು: ಅಮೋಘಳನರಸಂ ಮಕರಂದನಂ ತುಱಿಸಿ ತೋಱುತ್ತಂ ಪೋಪಾಗಳ್ (ಲೀಲಾವ. ೨-೩೭ ವ). **ತುರಿಸು :** ೧. ಕುಸುಮೆಯನ್ನು ಕಾಣದೆ ತಲೆ ತುರಿಸುತ್ತ ಬಾಗಿಲಲ್ಲಿ ನಿಂತಿದ್ದಾರೆ (ಪಹಾರ.೨೩ ).

**ತುಱಿಸಿಕೊಳು, ತುರಿಸಿಕೊಳ್ಳು** = ಕೆರೆದುಕೊಳ್ಳು: ಇಱಿಸಿಕೊಳುತಂ ತುಱಿಸಿಕೊಳುತ . ಕೊಱೆಯಿಸಿಕೊಳುತೆ...ತೆರಳುತುರುಳುತುಂ (ಸಾನಂದ. ೪-೨೦೦): ತುಱಿಸಿಕೊಳುತಿದ್ದೆಸೆಯ ಬದಿಗಳ ಹೊಱಗನಾಲಿಸುತ...ಇರ್ದನಾ ಹನುಮ (ತೊರರಾ. ೫-೫-೨): ತುರಿಕೆಯಾದವನೆಯೆ ತುರಿಸಿಕೊಳ್ಳುವನಲ್ತೆ ತುರಿಯಿಲ್ಲದವಗೇಕೆ ಚಿಂತೆ (ಇಂಚಾಪ. ೧೮೭-೨೩) : ಕೊಳ್ಳಿಯಿಂದ ತಲೆ ತುರಿಸಿಕೊಂಡ ಹಾಗೆ (ಗಾದೆ). [ತುಱಿ + – ಸು$_1$]

**ತುಱಿಹಿಡಿ** (ಕ್ರಿ). ತುರಿಯುಂಟಾಗು; ತುರಿಯೆಂಬ ಚರ್ಮರೋಗ ಅಂಟು : “ಪ್ರಸರ, ವಿಸರ್ಪಣ—ಚಿಬ್ಬು, ತುಱಿಹಿಡಿವುದು” (ನಾಚಿರಾ. ೬೬.

[ತುಱಿ + ಹಿಡಿ$_1$ (< ಪಿಡಿ$_1$)]

**ತುಱು, ತುರು, ತೊಱು** (ನಾ). ೧. ಹಸು; ದನ; ಆವು; ಗೋವು : “ ತುಱುಗಳೆನಲ್ಕಾಕಳೆಂದು ತಿಳಿಗೆ ” (ಭಾರನಿ. ೪೬). ‘ತುಱುಗಾಱ’ ಪರಾ. ೨. ದನಗಳ ಗುಂಪು ; ದನಗಳ ಮಂದೆ ; ಗೋಸಂಪತ್ತು : “ಗೋಧನಂ ತುಱುವೆನಿಕ್ಕು” (ಮಂಗರಾ. ೫೬-೧೦): ಕೊತ್ತಮಂಙ್ಗಲಮಾನಿಱಿದು ತುಱುವಂ ಕೊಂಡು ಪೋಗುತ್ತಿರೆ (ಎಕ. IV, ಹೆಗ್ಗಡ. ೦೦೩-೭ ; ಸು. 910) ; ಗೋಗ್ರಹಣದೊಳ್ ತನಗಾಗಿ ಕಾದಿ ತುಱುವಂ ಮಗುಟ್ಚಿದುದುಮಂ ನೆನೆದು (ಪಂಪಭಾ. ೦೨-೦೭ ವ); ವಾದಿರಾಜನತಿಕೋಪದಿನ[ನ್ತ]ರ[ದ] ಬೆನತೂರ ತುಱುವಂ [ತಱಿ]ಸಿದನನ್ನಣ್ಣಿಗೆಱಿಗೆ ತ[ಱಿ]ಸಲನಿನ್ನಂ (ಸೌಇಇ. XI-i, ೮೧-೦೦ ; 1049) : ಗೋವರ್ಧನಗಿರಿಯೆತ್ತಿ ತುಱುವ ಕಾದಂತೆ (ಮೋಹತ. ೪೦-೫೦); ಗೋವಳಂ ತುಱುಗಳಂ ಮನೆಯಂ ಪುಗಿಸಿದಂ (ಶಬ್ದಾನು. ೨೦೫ ಪ್ರಯೋ). **ತುರು :** ೧. ಕಟ್ಟಲು ಕರುವನು ನೆಕ್ಕುವ ತುರುವೋ (ಅನಿಕೇ. ೩೦-೦೨) : ಹಟ್ಟಿಯಲ್ಲಿ ತುಂಬಿದ ತುರುಗಳ ಆರೈಕೆಯನ್ನೂ ಅವಳೇ ನೋಡಿಕೊಳ್ಳುತ್ತಿದ್ದಳು (ಹಾಡುಕ್ತ. ೬೬). ೨. ಶತ್ರುಗಳು ಮುರಿದೋಡಿದರು ತುರು ಮರಳಿತು (ಕಸಾಚ. ೭೬). **ತೊಱು :** ೨. ಕೇಸರಿ ತೊಱುವಾಳ್ವನಾ ಮಗನ್ ಆಲಿನ ತೊಱು ಇಕ್ಕಿಸಿ ಬಿಟ್ಟಾನ್ (ಎಕ.X (೮), ಮಾಲೂರು. ೦೫೬-೭; 8ನೆಯ ಶತ): ಶ್ರೀ [ಮಾ]ವಲಿಪಣರಸರ್ × × ಮಗ ಗ × × × ಮುಣ್ಣನು ತೊಱುವ ಕೊಳ್ವ ... ಅಯಿಕುಳ ಗ ಟಾನಿ ಕೊಟ್ಟುದು (ಸೌಇಇ. IX–i, ೦೦-೫: 9ನೆಯ ಶತ); ತೊಱುಗೊಳೆ ತೊಱುವಂ ಪರಿಯಲೀಯದೆ (ಮೈಎಂ. ೧೯೩೨, ೧೯೬-೭: 9ನೆಯ ಶತ).

ತುರುವಿನ ಮಾಳ=ದನಗಳು ಮೇಯುವ ಮೈದಾನ; ಹುಲ್ಲುಗಾವಲು ; ಗೋಮಾಳ: ವಾಯುವ್ಯದಲ್ಲಿ ಒಂದು ಮೈಲಿ ದೂರದಲ್ಲಿ ಗಿರಿಜಾಪುರದ ಕಡೆಗೆ “ತುರುವಿನ ಮಾಳ” ಇದೆ (ಮೊಯ್ಸಾವಾ. ೨೩೪). **ತುಱುಕಱು, ತುರುಕರು**=ದನಕರು : ತುಱುಕಱು ಕಱೆದರೆ ಉಣಬಹುದಣ್ಣ ತುಱುಕಱು ಕಱೆದರೆ ಅತಿ ಪುಣ್ಯವಯ್ಯ (ಪುರಂದ. ೦-೦೭೯ ಪಲ್ಲವಿ): ತುಱುಕಱುವು ಇರದೂರು ನರಕಭಾಜನಮಕ್ಕು ತುಱುಕಱುಂಟಾದರುಣಲುಂಟು ಜಗಕೆಲ್ಲ ತುಱುಕಱುವೆ ದೈವ (ಸರ್ವಜ್ಞ. ೦೩೬೫) ; ಒಯ್ಯನೆ ಹುಲಿಯಂ ಕಂಡು ತುರುಕರುಗಳೋಡುತಿವೆ (ಕಾಂಚರ. ೯೦-೦೭೪). **ತುಱುವನಿಕ್ಕು, ತೊಱುವನಿಕ್ಕು** = ಅಪಹಾರವಾದ ಗೋವುಗಳನ್ನು ಮರಳಿಸು : ಮಟ್ಟಿಯರ ಬೂವಯ್ಯನ ಮಗಂ ಬಿದಿಯಾಯ್ತ ತುಱುವನಿಕ್ಕಿಸಿ ಕಾದಿ ಸತ್ತ (ಎಕ. II, ೩೯೪-೯ : ಸು. 834) : ಕುಸುಮ್ಬಿ ತುಱುವನಿಕ್ಕಿಸಿ ಸತ್ತ (ಎಕ. XVI, ಚಿಕ್ಕನಾ. ೭೨-೫ : ?) : ಅಣೆಲೆಯರ ಮಗ ನೆಲ್ಕಲ್ಲ ಅಣ್ಣಮ್ಮರ್ನಟಿಯ ತೊಱುವನಿಕ್ಕಿಸಿ ಸಗ್ಗಿಯಾದಂ (ಎಕ. IX, ಹೊಸಕೋ. ೧೦೦-೬ ; ಸು. 906). **ತುಱುವನಿಕ್ಕು**=ತುಱುವನಿಕ್ಕಿಸು : ಗೋತ್ರಪವಿತ್ರ ಬವ್ವಿಸೆಟ್ಟಿಯ ಸ × × × ಗೆಱೆಯ ತುಱುವನಿಕ್ಕಿ (ಎಕ. XVI, ಚಿಕ್ಕನಾ. ೭೫-೩೨ ; ?). **ತುಱುವಿಗೆ ಹೋಗು** = ತುಱುವನಿಕ್ಕಿಸು : ರಾಮಗಉಡನ ಮಗ ಬೊಮ್ಮಣ್ಣನು ತುಱುವಿಗೆ ಹೋದಗ (ಎಕ. IX (೮), ಚನ್ನಪ. ೨೯೪-೩ ; 16ನೆಯ ಶತ). **ತುಱುವಿನ ಮಂದೆ** = ದನಗಳ ಹಿಂಡು, — ಗುಂಪು : “ವ್ರಜಃ, ಗೋಕುಲಂ, ಗೋಷ್ಠಂ—ಈ ೩ ತುಱುವಿನ ಮಂದೆ” (ಹಲಾಯು. ೪೪-೦೦೭).

[ದೇ.‖ ತಮಿ. ತುಱು, ತೊಱು ಮಲ: ತುಱು ; ತೆಲು. ತೊರ್ರು]

△ **ತುಱುಂಕು** ‘ತುಱುಕು$_1$’ ನೋ.

**ತುಱುಂಗಲ್, ತುರುಂಗಲು, ತುಱುಗಲ್, ತುಱುಗಲು** (ನಾ). ಗುಂಪು; ಸಂದಣಿ ; ಸಮೂಹ : ಆತಂಗೆ ತುಱುಂಗಲುಂ ಬಂಬಲುಮಾಗೆ ಬೀಸುವ ಚಾಮರದ ಪೊಳಪುಗಳ್ ಪೆಸೆಪೆಸೆಸೆವಂತೆ ಪಸರಿಸಿ (ಆದಿಪು. ೦೧-೫ ವ ); ವಿದ್ಯಾಧರವಧೂಜನದ ಸೋಮುರ್ಡಿಯಿಂ ಸೂಸಿದ ಪೊಂಗೇವಗೆಯ ಕುಸುಮ್ಬಂಗಳೆಯ ತುಱುಂಗಲುಮಂ...ನೋಡುತ್ತ (ಪಂಚಾಮಾ.೨-೦೩ವ); ಪರಾಗಮಂ ಪಸರಿಸುವ ಸರಸೀರುಹದೆಸಳ ತುಱುಂಗಲ ಸಿಂಹಾಸನದೊಳ್ ಸುರತರುಮಂ ಮಲಂಗಿ (ಗಿರಿಕ. ೭-೧೧ ವ) : ಎಳನೀರ್ಗಾಯ ತುಱುಂಗಲಿಂ ತೊನೆವ ತೆಂಗಿಂ ತೋರಮಣ್ಪೊಂಗಲಿಂ ... ಪೂತಿರ್ದ ನಾನಾಲತಾನಿಳಯಾ ನೀಕದಿನಾತನೊಳ್ ಪಡೆದುದತ್ಯಾನಂದಮಂ ನಂದನಂ (ಮಹಾನೇ. ೪-೨೩). **ತುರುಗಲು :** ಒಗೆವುಂಗಿಲ ತುರುಗಲನು ಕಳೆದು ತನ್ನೆಳನಗೆಯ ಮೊಗ ಮಾಡವನು ತೊಡಿಪನಾವ ಭಾನು ? (ಭಾರಂಗ. ೦೨-೫): ಎನ್ನ ಬಗೆ ಮಾಮರದೆಲೆಯ ತುರುಗಲೊಳು ತಂಗುವುದು ತವರ ಕಂಡಂತೆ (ಮಲೆದೇ. ೪೨-೬). **ತುಱುಗಲ್ :** ಗುಡಿಯ ತೋರಣಂಗಳುಮಂ ತುಱುಗಲಂ

ಬಂಬಲುವಾಗೆ ಕಟ್ಟಿಸಿ (ಪಂಪಭಾ. ೪-೫ವ) : ತಂಬೆಲರ ಪೊಯ್ಲಿನಿಂ ತಣ್ಪುವಡೆಯಲೆಂದು ನೆಱೆಪಿದಂತಿರ್ದ ನೀರ್ಗೊಯು ತುಱುಗಲಿಂದೆಱಗಿದ ನಾಳಿಕೇರಭೂರುಹಂಗಳುಂ (ಚಂದ್ರಪ್ರ. ೧-೧೦೫ ವ) ; ಎಱೆಪ ಶರಧರದ ತುಱುಗಲ್ಗೆಱೆವ ಘನೋಪಳಕದಂಬಮುಡುಗಣಮನೆ (ರಾಜಶೇ. ೧-೨೨೦). 'ಎಪೆಂದುಱುಂಗಲ್' ಪಠಾ. **ತುಱುಗಲು :** "ಬಂಬಲ್ ತುಱುಗಲು ವೊತ್ತಂ ಗಡಣವೊಟ್ಟಲೊಟ್ಟಜೆ ... ಸಂದಣಿ ಜಾಳಿಗೆಯುಮೆನೆ ಶ್ರೇಣಿಕಾಬ್ಯಂ" (ಕಬ್ಬಿಕ್ಕ. ೧೬) ; ತರಗಿವಳು ಗಾಂಧಾರಿ ಕಂಬನಿದುಱುಗಲಲಿ (ಕುವ್ಯಾಸ. ೧೨-೫೫) : ಅಱಸಿದೆವಪ್ಪ ಲತಾಮಂಟಪಗಳ ಮಱೆಯೊಳು ನಾಗವಲ್ಲಿಗಳ ತುಱುಗಲೊಳು (ಕುರಾಸಾಂ. ೩೨-೩೩).

[ತುಱುಂಗು (< ತುಱುಕು$_1$) + -ಅಲ್$_2$]

△ **ತುಱುಂಗು** 'ತುಱುಕು$_1$' ನೋ.

**ತುಱುಂಗೊಳ್** 'ತುಱುಗೊಳ್' ನೋ.

**ತುಱುಂದಪೊಟಲ್** (ನಾ). ಒಂದು ಊರಿನ ಹೆಸರು : ಮಾಚಿಗಂ ಗುತ್ತಿಯ ಗಂಗನ ಬೆಸದೊಳ್ ತುಱುನ್ದಪೊಟಲ ಕಾಳೆಗದೊಳ್ ನೊಳಂಬಾಧಿರಾಜ ರಾಜನೊಳ್ ಕಾದಿ ಸತ್ತಂ (ಎಕ. IV, ಹೆಗ್ಗ.ದ. ೧೧೦-೧೨; ಸು. 900).

[ತುಱುಂದ$_0$ + ಪೊಟಲ್$_2$]

**ತುಱುಂಬು$_1$**, ತುರುಂಬು$_1$, ತುಱುಬು$_1$ (ಕ್ರಿ). ೧. ಹೂವನ್ನು ಮುಡಿ,- ಸೂಡು : ರತಿಗೆ ಮುಡಿಯಲ್ಕೆ ಮದನಂಗೆ ತುಱುಂಬಲ್ಕಿರ್ದುದೆಂದು ... ಇರುವಂತಿಯಂತೆ ನೋಂತಲರೊಳವೇ (ಆದಿಪು. ೧೧-೧೧೧) ; ತುಱುಂಬಿದ ನವಮಾಲಿಕಾಕುಸುಮವಿಕ್ಕಿದ ಮುತ್ತಿನ ಲಂಬಣಂ ... ಅಮರಲ್ಕೆಸೆದಂ ನೃಪರೂಪಚಂದ್ರಮಂ (ಕಾದಂಪೂ. ೫೮೨); ಜಾದಿಯ ಪೂವಂ ಬಿಟ್ಟು ಬೇವಿನ ಪೂವಂ ತುಱುಂಬುವಂತೆ (ಧರ್ಮಾಮೃ. ೧೧-೧೬೨) ; ಸಜ್ಜಕಮಂ ತುಱುಂಬಿ ಪೊಲೆಗಳ್ಗೆ ಕರಂಟವನಿಕ್ಕಿ ... ವೃದ್ಧವಾರಯೋಷಿಜ್ಜನವೊಪ್ಪಿತಲ್ಲಿ (ಉದ್ಭಟ. ೧೦-೭೧). ೨. ಮುಡಿಸು : ಸಹಚರಿಯರ್ಬಂದು ಸೇವಂತಿಗೆಯ ಪನಿನೀರಂ ಮಜ್ಜನಕ್ಕೆಱೆದು ಪರಾಗದಂಗರಾಗಮನಮರ್ಚಿ ತಾವರೆಯ ನೂಲ ದುಕೂಲಮನುಡಿಸಿ ಕದಂಬಕುಸುಮಮಂ ಸಿರಿಮುಡಿಯೊಳ್ ತುಱುಂಬಿ (ಗಿರಿಕ. ೫-೬೬ ವ). ೩. ತುಂಬು; ಸಂದಣಿಸು; ಕೂಡು: ಪೊಂಬಾೞೆ ತುಱುಂಬಿದೀಳೆ ಬನದೊಳ್ ಪೆಣ್ದುಂಬಿ ನಿಂದಂಬುಜಂ ... ರಮ್ಯಂ ಪುರೋದ್ಯಾನದೊಳ್ (ಅನಂಪು. ೧-೯೩) : ಕುಂಭಿಣಿ ಬೆಸಲಾದುದೆಂಬಂತೆ ಜನರು ತುಱುಂಬಿತು ಪೊನ್ನಗಸೆಯೊಳು (ಮೋಹತ. ೪೧-೩೮). **ತುರುಬು$_1$**: ೨. ಪ್ರಸೂನಮಂ ತಿರಿತಂದು...ರುಕ್ಮಿಣಿ ಸತ್ಯಭಾಮೆಯರಿಗಂ ಮುಡಿಸಿ ಪೞಿದ ಗೋಪಾಲವಧುಗಳಿಗೆ ಕರೆಕರೆದಿತ್ತು...ಮಸ್ತಕದಿ ತುರುಬಿ (ನವಮೋ. ೧೦-೭೧). **ತುಱುಬು$_1$** : ೧. ನವಪ್ರಸೂನವಂ ಮಗಮಾಗಿ ಪಂದದಿಂ ತುಱುಬಿ ಬಂದಳ್ (ನಳಚಂ. ೬೪೪) ; ಅವಿರಳಾಮೋದ ಜಾತಿಯ ಸಲ್ಲಮಳಿದ ಕುಸುಮವನು ತುಱುಬದ ... ಲತಾಂಗಿಯರು (ಸೌಂದಪು. ೭-೨೬). ೨. ಇರವಂತಿಯುಂ ತಂದು ಸಿರಿಮುಡಿಯೊಳಗೆ ತುಱುಬಿ ಬೆರಸಿ ಮುಪಱೆಡೆಗೆಡೆಗೆ ಸೇವಂತಿಗಳ ತುಱುಬಿ (ಪುಷ್ಪರ.ಹ. ೫೨೬-೧೬): ಪೊಸ ಕುಸುಮಂಗಳಂ ತುಱುಬಿದರು ಸತಿಗಾ ಪ್ರಣ್ಯವನಿತೆಯರು (ಬಸವಪು. ೪-೩೪). ೪. ಮುಡಿಗಟ್ಟು ; ಕೂದಲನ್ನು ಗಂಟುಕಟ್ಟು ; ತುರುಬು ಕಟ್ಟು: ಹೆಳಲು ಕಟ್ಟು : ಮುತ್ತಪೊರ್ವೞಟ್ಟಸದ ಜಗದಿಟ್ಟೆ ಸೋರ್ಮುಡಿಯಂ ತುಱುಬಿ ಕಬಿಲಂ ಕಬಿಲ್ಚಿ ... ನೀರನಿಱಿದಳ್ (ರಾಮಾಶ್ವ. ೧೨೩-೧೬).

[ದೇ.೫ ತಮಿ. ತುಱುಪ್ಪು, ತುಱುವು ; ಮಲ. ತುಱು ; ತೆಲು. ತುಱುಮು. ತುರುಮು]

**ತುಱುಂಬು$_2$**, ತುರುಬು$_2$, ತುಱುಬು$_2$ (ನಾ). ೧. ಕೂದಲಿನ ಮುಡಿ,- ಗಂಟು : ತೋರಮಲ್ಲಿಗೆಯ ತುಱುಂಬು ರಾಹು ತವೆ ನುಂಗಿದ ಚಂದ್ರನ [illegible]ನಂದುಗುಟ್ಟಿಪೊಲೊಪ್ಪಿರಲ್ (ಪಂಪಭಾ. ೬-೮೬) : ಸಱುಗಂಪುಪ್ರೊಱೆದ ಜಾದಿಯ ತುಱುಂಬು ಕಣ್ಗೊಳಿಸೆ ಶೂದ್ರಕಂ ಕರಮೆಸೆದಂ (ಕಾದಂಪೂ. ೩೨); ಭಯದಿಂದೋಡುತ್ತಿರೆ ಕಾಡೊಳೊಂದು ಮರದ ಕೊಂಕುಗೊಂಬಾತನ ತುಱುಂಬಂ ಪಿಡಿದು ತಡೆಯೆ (ಧರ್ಮಾಮೃ. ೨-೫೭) ; ಬಂಬಳಬಾಡಿದ ದೇಹ ಕಟ್ಟಳಿದ ತುಱುಂಬು ಕಂದಿದ ಮೊಗ (ಭರತ. ೭೧-೭೯). ೨. ಗುಂಪು ; ಸಮೂಹ : ಪರ್ವಿ ಪಸರಿಸಿದ ಪೊಂಬಾೞೆಯ ಕಂಬಂಗಳ ತು [ಪಾಠಾಂ. ತ]ಱುಂಬಿನೊಳ್ ಬಳ್ವಳ ಬೆಳೆದ ಮೃದ್ವೀಕಾಲತೆಯ ಕಾಯ ಮಾಸಂ (ಅನಂಪು. ೭-೧೧ವ). **ತುರುಬು$_2$** : ೧. ಹುರುಮಂಜಿಮುತ್ತುಗಳ ತುರುಬಿಂಗೆ ಕೊರಳಿಂಗೆ ಮೆರೆಪ ಹಾರಂಗೈದು (ವೆಂಕಾರಾ. ೫-೬-೦೭) ; ತುರುಬಿನ ಸುತ್ತಲೂ ಮಲ್ಲಿಗೆಯ ದಂಡೆ ಕಟ್ಟಿಕೊಂಡಿದ್ದಳು (ಅಪನಾ. ೨೪೮); ಅತ್ತೆ ತುರುಬು ಮಾವಗೆ ದಾಸ (ಗಾದೆ). **ತುಱುಬು$_2$** : ೧. "ತುಱುಬು ಒಣೆಲು ಪಾಶಂ" (ಮಂಗರಾ. ೯೪.೬): ತಳ್ಪತಳದೊಳ್ ಬಳಿಕಾತನ ತುಱುಬಂ ಕಿರ್ದುತ್ತಂ ಮೊನಸಿದ ಪಳಿತವನೆ ಕಂಡು (ಪುಣ್ಯಾಸ್ರ. ೧೧-೧೦) ; ವಾಮಹಸ್ತವ ತುಱುಬಿನೊಳಿಟ್ಟು (ಮೋಹತ. ೧೬-೩೭) ; ಮುಡಿದ ಪೂವಿನ ತುಱುಬು ಮೃಡಗಂಧಗಜದಿಱುಬು (ಚಬಸ್ಪು. ೩೭-೨೨).

**ತುತ್ತುಱುಂಬು, ತುತ್ತುಱುಬು** (ದ್ವಿರುಕ್ತಿ) : ತುತ್ತುಱುಬಾಗಿಯಂಗಳಿಗೆ ಬಿಳ್ದು ಕೋಟೆಯಂ ಹತ್ತಲೆಂದಂಗವಿಸುವಾ ಪರಿಗೆಯಾಳ್ಗಳ್ (ಸಮ್ಯಕೌ. ೮-೩೭) : ಕಾಳೋರಗನ ಪುತ್ತನೊಳಪೊಕ್ಕ ಮಾಳ್ಕೆಯೊಳ್ಕಳಗತ್ತಲೆ ತುತ್ತುಱುಂಬಾಗಿ ತುಂಬಿದಾಭೀಳಮಪ್ಪಾರಣ್ಯಮಧ್ಯದೊಳ್ದಬ್ಬುದಲೆಗೊಂಡು ದಾರಿಯ ತಪ್ಪಿದ (ಸಮ್ಯಕೌ. ೧೦-೩೭) : ಅಳಿಯಂದಿರಿಂದಾಪ್ತರಿಂದ . . . ತುಳಿಲಾಳ್ಗಳ ತುತ್ತುಱುಬಿಂ ಸಭೆ ಕಣ್ಗೆ ತಳೆದುದು ಗಾಡಿಗಮಕವ (ರಾಮವಿ. ೧೦-೭೭): ಕುತ್ತುಱು ಮೆಳೆವಱೆಗಳೊಳು ತುತ್ತುಱುಬಾಗಿ ನಿಂದರು ಬೆಟ್ಟಬೆಟ್ಟಗಳೊತ್ತಿನೊಳಗೆ ಕಾಲವರು (ಕುರಾಸಾಂ. ೩೯-೮).

[ < ತುಱುಂಬು$_1$. /ತುಳು. ತುರುಟು ]

**ತುಱುಂಬುಗೊಳಿಸು** (ಕ್ರಿ). ತುಂಬುವಂತೆ ಮಾಡು ; ಭರ್ತಿ ಮಾಡು : ಅರಿಬಳಪ್ರಹರಣನಿವಾರಂಗಳಪ್ಪಾಳ್ವಱೆಯ ತುಱುಗಲಂ ತುಱುಂಬುಗೊಳಿಸಿಯುಂ (ಪುಷ್ಪಪು.೭-೩೯ ವ). [ ತುಱುಂಬು$_2$ + ಕೊಳ್$_1$ + -ಇಸು$_3$ ]

**ತುಱುಕಾರ್ತಿ** 'ತುಱುಗಾರ್ತಿ' ನೋ.

**ತುಱುಕಾಱ** 'ತುಱುಗಾಱ' ನೋ.

**ತುಱುಕು$_1$**, ತುರುಕು$_1$, ತುರುಗು$_1$, ತುಱುಂಕಂ, ತುಱುಂಗು. ತುಱುಗು ೧. (ಕ್ರಿ.) ಒತ್ತಿ ತುರುಬು; ಗಿಡಿ; ಅಡಕು; ಬಲವಂತದಿಂದ ಒಳಕ್ಕೆ ಸೇರಿಸು: "ತುಱುಕು-ಗಾಢಪ್ರವೇಶೇ" (ಶಮುದ) ; ಪೊಱಗೊಂದು ಹಡಗೆ ಮಣ್ಣಂ ನೆಱೆ ಶೌಚಂಗೆಯ್ವರೊಳಗೆ ಪಲತೆಱದಡಗಂ ತುಱುಕುವರ್ (ಸಮಪ.೧೪-೧೫೦). **ತುರುಕು$_1$**: ೧. ಕೋಣೆಯಲ್ಲಿ ಬಾಗಿಲ ಸಂದಿನಿಂದ ನನಗೊಂದು ಕಾಗದ ತುರುಕಿತ್ತು (ಅಲಹೂ. ೧೫೨); ಕೆಲವರು ಓದಿದರೂ ಅವುಗಳನ್ನು ಎಲ್ಲಿಯೋ ಪೆಟ್ಟಿಗೆಯಲ್ಲಿ ತುರುಕಿಬಿಡುತ್ತಿದ್ದರು (ರಂಗಳ. ೪೭). **ತುರುಗು$_1$** : ೨. ದಟ್ಟೈಸು ; ಸಂದಣಿಸು; ಇಟ್ಟಣಿಸು : ತಾರಕೆ ಮಿರುಗೆ ಆಗಸ ತುರುಗೆ ಹುಲ್ಲಲ್ಲೊರಗುವಳು (ಹಾಡುಪಾ. ೧೯-೧೭). ೩. ಹೆಚ್ಚಾಗು ; ಅಧಿಕವಾಗು ; ಅತಿಶಯವಾಗು ; ತುಂಬಿರು : ವೃಕೋದರನಿಗೆ ಸಹೋದರನ ಮರಣದಿಂದ ಒಡಲೊಳಗೆ ಅಳಲು ತುರುಗಿತು (ಬಿಮುಕಿ. ೧೧೧). ೪. ಸಂಗ್ರಹಿಸು ; ಒಟ್ಟುಮಾಡು : ತಂದನೊಬ್ಬಂ ಪೇಳ್ದ ಬೆಲೆಗೊಟ್ಟು ನವಿರುಡೆಯನೆಂದಿನಂತುರಲ ಬಡವಂ ತುರುಗಿ ತಂದಂ (ಕಾಲೂರ. ೭೮-೧೪೪). ೫. ಎದುರಿಸು ; ಕಾದು : ಇದಿರಿಸುವ ಗಂಡರುಳ್ಳ ತಾನೊಬ್ಬನೇ ತುರುಗುವೆನೆಂದು ಮುಂಬರಿದು ಬರುವ ವೀರರನ್ನು ... ದಿಂಡುಗೆಡವಿದನು (ಕವೀರ.೩೧). △ **ತುಱುಂಕು** : ೧. ಮಯ್ಯಂ ಕಱಿಕಱಿದಾಗಿ ಕತ್ತರಿಸಿ ಬಾಯೊಳ್ತುಱುಂಕಿಯುಂ (ಧರ್ಮಾಮೃ. ೩-೭೩). △ **ತುಱುಂಗು** : ೨. ಪರಿವ ಕರೆಕರೆವ ಸೂಱಾಯ್ತುರ ಸೂಱುಗಳೊಳ್ತುಱುಂಗಿದಚ್ಚುಳಿ

ಯ್ತಿರ ಕಳಕಳರವದಿಂ ಭೋರ್ಗರೆದುಲಿವಂಬುಧಿಯನಂತದೇಂ ಮಗುೞ್ಸಿತೋ (ಸುಕುಮಾ. ೧೧-೨೫). ೩. ತನಿವಣ್ಗಳ ಸಂತತಿಯಿಂ ತುಱುಂಗಿ ನೆಱೆ ಕಣ್ಗತಿಶಯಮಾಗಿರ್ದುದಲ್ಲಿ ನಾರಂಗಕುಜಂ (ಶಾಂತೀಶ್ವ. ೧೦-೯೮).

**ತುಱುಗು₁ :** ೧. ಕಂಪುಳ್ಳ ಸೇವಂತಿಯುಂ ತಂದು ತುಱುಗೆಂಬ ಜಾದಿಯುಂ ಮೊಲ್ಲೆಯುಂ ಬೆರಸಿ ನೀಡೆಮಗೆಂಬ...ಶರಣರಂ ನೋಡುತಂ (ಬಸವ. ೭-೪೦) : ಮುಱಿದು ಮರನನು ಭೀಮನಹಿತರ ತುಱುಬಿದನು ಪೊಕ್ಕೆಱಗಿದನು ತುಱುಗಿದನು ಭಟರ ಭದ್ರವಿಮಾನದಲಿ (ಕುವ್ಯಾ.ಅ. ೨೨-೨೯): ಕಿಱಿದಿನೊಳಗೆ ನೋಡೆ ನಿಯಮಸಾರಂಬೊಲು ತೆಱಿಗೆ ಪ್ರಾಭೃತದಂತೆ ತುಱುಗಿ ಭೂಪತಿ ಹೇಳಿದಧ್ಯಾತ್ಮಸಾರದ ತೆಱದೊಳಧ್ಯಯನ ಮಾಡಿದರು (ಭರತ. ೧೮-೧೩೬). ೨. ತಾಪಸಕನ್ಯೆಯರ್ ನಡಪಿದೆಳಲತೆಗಳೊಳೆಱಗಿ ತುಱುಗಿ ಸಾಮವೇದಧ್ವನಿಯೊಳ್ ಮೊರೆವ ದುಂಬಿಗಳುಮಂ (ಪಂಪಭಾ. ೧-೧೧೫ ವ): ಆಗಸಂ ಹೂತಂತೆ ಪುಷ್ಪಕಂಗಳು ತುಱುಗೆ (ಇಹರ.ದೇ.೪೬-೧೭); ದಂತಿಘಟೆಗಳು ತುಱುಗಿದವು ... ಚೂಣಿಯ ನೃಪರ ಜೋಕೆಯಲಿ (ಕುವ್ಯಾ.ದ್ರೋ.೧-೪೬): ನಱುಗಂಪ ಸವಿಯಲೆಂದೆಲರ ಬೆಂಬಳಿವಿಡಿದು ತುಱುಗಿ ಬಂಬಲು ಮಾಲೆಗೊಂಡು...ಎಱಪಳಿಗಳೋಲೈಪ ಪರಿವಾರವೆನೆ (ಭಕ್ತಾಚ. ೧-೨೪): ಸಿಂಹಾಸನದ ಸುತ್ತಲುಂ ತುಱುಗಿದ ಸುರವ್ರಜದ ಮಧ್ಯದೊಳ್ ಮೆಱೆವವಂ ಕುಱಿಯೊ...ನೀಂ ಪೇಳೆಂದನು (ಚಬಪು. ೧೬-೫). ೩. ಮೊದಲೊಳ್ ಮಾದುಪಳದ ಕಾಯ್ ತುಱುಗಿರ್ಕುಂ (ಲೋಕೋಪ. ೬-೩೪): ಸುಲಲಿತವಾಗಿ ನೀಳ್ದು ತುಱುಗಿರ್ದಮೊಗಳ್ ತಮಮಂ ಬೆಳರ್ಪ ಕಣ್ಮಲರ್ಗಣ್ಯುಂದಮಂ ನೆಱಿಯೆ ಪೋಲ್ತಿರೆ (ಧರ್ಮಾಮೃ. ೭-೧೯೭): ಅಂತು ನಿಧಾನಕ್ಕೆಱಗುವ ದೀಪವರ್ತಿಯಂತೆಱಗಿ ತುಱುಗಿದರ್ಚನೆಗಳಿಂದರ್ಚಿಸಿ ಗುರುಭಕ್ತಿಪೂರ್ವಕಂ ಬಂದಿಸಿ (ಅರ್ಧನೇ. ೧-೯೧ವ): ತುಱುಗಿದ ಕಾಯಿ ಪಣ್ಗಳ ಸಾಲವೃಕ್ಷವ ಮುಱಿದು (ಮೋಹತ. ೪-೩೭): ಫಲವೃಕ್ಷಂಗಳೆತ್ತಂ ತುಱುಗಿ ಬೆಳೆದಿರೆ (ರಾಮಾಶ್ವ. ೪೩-೧೩). ೬. ತುಂಬಿಕೊಳ್ಳು ; ಅಡಕಿಕೊಳ್ಳು : ಬಾಯೊಳು ತುಱುಗಿದೆಲೆ ಬಾಯೊಳಗೆ ಮಡಿದೆಲೆ ಕೈಯೊಳಂಗನೆಯ ಸ್ಥಿರದೊಳೆವೆಯಿಕ್ಕದೆ ನಿರೀಕ್ಷಿಸುತರಸನೊರ್ವನು ... ಇರ್ದನು ಲಲಿತಭಿತ್ತಿಯ ಚಿತ್ರದಂದದಲಿ (ಜೀವಂಧ. ೮-೫೩). ೭. ಮುಚ್ಚು ; ಕವಿ ; ಆಚ್ಛಾದಿಸು : "ತುಱುಗು-ಸಂಛನ್ನೇ (ಕವಿದುಕೊಳ್ಳು)" (ಶಮಧಾ): ತುಱುಗಿದ ಮುಗಿಲಾ ಮುಗಿಲಿಂದೆಱಗುವ ಮಱಿ (ಆದಿಪು. ೬-೬೨): ಎಱಗುವ ನರೇಂದ್ರನಿಕರದ ಮಿಱುಗುವ ಮಣಿಮೌಳಿ ಮಂಜುಳಪ್ರಭೆ ತನ್ನೊಳೆ ತುಱುಗೆ (ಕಾದಂಪೂ. ೪೬೯) : ತುಱುಗಿರ್ದ ನೀಲಮೇಘದ ತುಱುಗಲ್ ನೆಱೆ ಬಿಂಗಿ ಪೋಗೆ (ಜಗವಿ. ೪-೫೯) : ಕಿಱುಮೊಸೆಯ ಮುಗುಳಂಬುಗಳ ಸೈಗಱೆದನಭಿಮನ್ಯುವಿನ ಮೆಯ್ಯಲಿ ತುಱುಗಿದವು ಮುಱಿದುಂಬಿ ಕೆಂದಾವರೆಗೆ ಕವಿವಂತೆ (ಕುವ್ಯಾ.ದ್ರೋ. ೫-೫೪) : ಧುರದೊಳು ತುಱುಗಿರ್ದ ಕೃತಕಾಂಧಕಾರವಿಸ್ತರವ ನಿರ್ಮೂಲನಗೆಯ್ವುದಕೆ ವರಮೂಡಿಗೆಯಿಂದೆ ತೆಗೆದೆಚ್ಚ ಕೃಷ್ಣ (ಮೋಹತ. ೪೦-೪೩). ೮. ಹರಡು; ವ್ಯಾಪಿಸು : ಪೊಸ ಮಸೆಯಂಬಸದಳಮೊಡನೆಱಗಿ ತುಱುಗಿ ಪಾಯ್ವುದ್ವು ಕೆಲವುಂ (ಶಾಂತಿಪು. ೫-೬೦) : ತುಱುಗಿದ ತನುತಾಪದಿಂದೆ ಪಕ್ಕಿಯ ತಳಿರ್ತಱಗೆಲೆಯಾಗಿ ತೋಱಿಸಲು (ಮೋಹತ. ೨೮-೧೬) : ಮಣಿಕೋಟಿರಾಂಶುವೆತ್ತಂ ತುಱುಗೆ...ಕನಕಲಸತ್ಪೀಠದೊಳ್ ಭೂಪನಿರ್ದಂ (ರಾಜಶೇ. ೫-೧೭). ೯. ಜೋಡಿಸು ; ಹೊಂದಿಸು ; ಕುಂದಣಗೊಳಿಸು : ತರತರದಿಂ ತುಱುಗಿದ ವಿವಿಧ ರತ್ನಮಯಮಪ್ಪ ಪೊನ್ನ ಕುಱಿಪಟ್ಟಗಳಿಂ ನಿರುಪಮ ಕನಕಸರೋಜಾಕರಮಲರ್ದಂತಿರ್ದುದನ್ನಮಾಸವಿಲಾಸಂ (ಸು ಕು ಮಾ. ೧೧-೨೭). ೧೦. ತಾಗು ; ತಗುಲು; ಅಂಟು: ತುರಗದ ವ್ಯಾಧಿನಿದಾನವನಱಿಯದ ವೈದ್ಯನನೆ ಶಿಕ್ಷೆಗೆಯ್ಯದ ನೃಪಗಂ ತುಱುಗುವುದಶ್ವೇತಿಪಾತಕಮಱಿದವನಂ ತಡೆಯುಲಶ್ವಮೇಧದ ಫಲಮುಂ (ಅಶ್ವಶಾ. ೧೦-೫).

ತುಱುತುರುಗು (ದ್ವಿರುಕ್ತಿ) : ನೀನುಳಿವೆ ಎಂದಿನೊಲು ಎಲ್ಲೆಡೆಗೆ ತುರುತುರುಗಿ ಗಾಳಿಯೊಲು ಜನಗಾಗಿ ಜೀವನಕೆ ಉಸಿರಾಗಿ (ಜಾಸಿಗ. ೨೬-೯). [ದೇ. ‖ ತಮಿ. ಮಲ. ತುಱು ; ತೆಲು. ತುರುಗು, ತುಱುಗು]

**ತುಱುಕು₂** (ನಾ). (?) : ಇಱಿದುದಕದಂತೆ ಪಾಲಿನ ನಱುಸೋನೆಯುಲುಂಡ ಬಣ್ಣದರಲ್ಗಳ ಸೊನೆಯಿಂ ತುಱುಕಿನ ಜೋಲುವ ತಿಳಿಗಳ ನೆಱಗಿದರಾ ಜನಮನಳುರೆ ಪೊಸ ರಸವಣಿಗರ್ (?) (ಸೂಕ್ತಿಸು. ೧೩-೧೯).

[ ? ]

**ತುಱುಗಲ್** 'ತುಱುಂಗಲ್' ನೋ.

**ತುಱುಗಲು** 'ತುಱುಂಗಲ್' ನೋ.

**ತುಱುಗಲೂರ್** (ನಾ). ಒಂದು ಊರಿನ ಹೆಸರು : ಈಶ್ವರಶರ್ಮಣಾಧ್ಯಾಯ ತುಱುಗಲೂರ್ ವಸ್ತವ್ಯ (ಮೈಅರಿ. ೧೯೧೪, ೧೦-೮:728).

[ ? + ಊರ್]

**ತುಱುಗಲ್ಗೊನೆ** (ನಾ). ದಟ್ಟವಾಗಿ ಕಾಯಿ ಅಥವಾ ಹಣ್ಣುಗಳನ್ನು ಒಳಗೊಂಡಿರುವ ಗೊನೆ. 'ತುಱುಗಲ್ಗೊನೆವಣ್' ಪರಾ.

[ ತುಱುಗಲ್ ( < ತುಱುಂಗಲ್) + ಕೊನೆ₃ ( < ಗೊಲೆ₂ ) ]

**ತುಱುಗಲ್ಗೊನೆವಣ್** (ಕ್ರಿ). ದಟ್ಟವಾದ ಕಾಯಿ, ಹಣ್ಣುಗಳಿಂದ ತುಂಬಿದ ಗೊನೆಯನ್ನು ಬಿಡು;ಫಲಿಸು : ತೊರೆದುದೊ ಕಾಮಧೇನು ತುಱುಗಲ್ಗೊನೆವಣ್ತುದೊ ಕಲ್ಪವೃಕ್ಷಂ (ಗದಾಯು. ೧೦-೨೨ ಅಡಿಟಿ).

[ ತುಱುಗಲ್ಗೊನೆ + ಪಣ್₂ ]

**ತುಱುಗಲ್ಗೊಳ್** (ಕ್ರಿ). ಗುಂಪುಗೂಡು ; ಒಟ್ಟಾಗು : ಪೊಕ್ಕು ಕೇದಗೆಯ ಪೂಗೊಯ್ಯಲ್ಕೆ ಘರ್ಮಾಂಬುಗಳ್ ತುಱುಗಲ್ಗೊಂಡವು ತಂಗೆ ಬಲ್ಲಿಕೆ ಬಿಸಿಲ್ ಪೂದೋಂಟದೊಳ್ (ಸೂಕ್ತಿಸು. ೧೦-೬೦).

[ ತುಱುಗಲ್ ( < ತುಱುಂಗಲ್ ) + ಕೊಳ್₁ ]

**ತುಱುಗಳವು** (ನಾ). ಹಸುಗಳ ಅಪಹಾರ : ಗೋಗ್ರಹಣ : ತುಱುಗಳವೊ[ ಪಾಠಾ. ಗೊಳೆ]ಳ್ ಪೆಣ್ಬುಯ್ಯಲೊಳ್...ತೆಱಿಸಂದು ಗಂಡುತನಮನೆ ನೆಱಪದಮ ಗಂಡನಲ್ಲನೆಂತುಂ ಷಂಡಂ (ಗದಾಯು.೨-೨೪).

[ತುಱು + ಕಳವು]

**ತುಱುಗಾ, ತುಱುಗಾಯ್** (ಕ್ರಿ). ದನಕರುಗಳನ್ನು ಕಾಯು,— ಮೇಯಿಸು : ತುಱುಗಾವ ಗೋವರಂ ಮತ್ತಱಿಕೆಯ ಕಬ್ಬಿಲರನೆಯ್ದೆ ಬೆಸಗೊಳುತಂ (ಧರ್ಮಾಮೃ.೮-೨೩), ತುಱುಗಾವ ಕಿಱುಕುಳದ ಕೆಳೆಯರುಮಂ ನೋಡುತ್ತುಂ (ಕಬ್ಬಿಗಾ.೨೩೪): ಆರ ಬಸುಱಲಿ ಬಂದು ... ಆರ ಹೆಂಡಿರ ಕೊಂಡು ಕಱು ತುಱುಗಾದು ಕಳವಿನಲಿ ವೀರದೈತ್ಯನ ಸದೆಬಡಿದು ಕುರುವೀರವಂಶದ ರಾಯರೆಮ್ಮೊಳು ವೈರಬಂಧವ ಬಿತ್ತಿ ಕೊಂದವ ಕೃಷ್ಣ ನೀನೆಂದ (ಕುವ್ಯಾ.ಗ.೮-೩೮) ; ತುಱುಗಾವ ಪಳ್ಳಿಯಂ ಬಿಟ್ಟು ಬಳಿಕರವಿಲ್ಲದೆ ಪೊದ್ದಿ ಪಾಂಡವರನು (ಜೈಮಿಭಾ. ೬-೪೭). **ತುಱುಗಾಯ್:** ಮಾಸುದೀಮಗ ಪೊಲದೊಳಗೆ ತುಱುಗಾವುತಿರಲೊಂದು ಬಾಯ ಬಿಡುತಿದಿತಾವ ಕತ್ತೆಯ ಸಾಯ ಬಡಿದನು (ಸಾಳ್ವಭಾ.೨೨-೧೫).

**ತುಱುಗಾವ** = ದನಕಾಯುವವನು ; ದನಗಾಹಿ : ತುಱುಗಳು ತುಱುಗಾವರನು ನೆಱೆದಾಡುವರ್ಭಕರ ಎಱಗಿ ನೋಡುವ ತನ್ನನು ... ಕಾಣುತವೆ ಮೈಮಱೆದಳಂಗನೆ (ನಿಭಾಗ. ೧೦-೮-೫೮). [ತುಱು+ಕಾ₁]

**ತುಱುಗಾಡು, ತುರುಗಾಡು** (ನಾ). ದನಕರುಗಳು ಮೇಯುವ ಕಾಡು ; ಹುಲ್ಲುಗಾವಲು ; ಗೋಮಾಳ : ತುಱುಗಾಡು, ಕುಱುಗಂಟು, ಕುಡುಗೋಲ್ (ಶಬ್ದಾನು. ೮೬ ಪ್ರಯೋ). ತುರುಗಾಡು : "ಅಶಿತಂ [ಗವೀನಂ] – ತುರುಗಾಡು" (ಅಕಾನಿ. ೩-೭). [ತುಱು + ಕಾಡು₂]

**ತುಱುಗಾಯ್** 'ತುಱುಗಾ' ನೋ.

**ತುಱುಗಾಯಿ** 'ತುಱುಗಾಹಿ' ನೋ.

**ತುಱುಗಾರ್ತಿ**, ತಂಱುಕಾರ್ತಿ (ನಾ). ಗೊಲ್ಲರವಳಂ ; ಗೊಲ್ಲಿತಿ ; ಗೋಪಿ : "ತುಱುಗಾರ್ತಿ [ಪಾಠಾಂ. ವಳ್ತಿ] ಯೆಂದು ಗೋಪಿ" (ಶಬಸಾ. ೭-೧೨೭) ; "ತುಱುಗಾರ್ತಿಯರೆನಲು ಗೋಪಿಯರ್" (ಕವಿಕಂ. ೮೫) : ಮನೆ ನಿನಗೆ ನಂದಗೋಪಾಲನ ಮನೆ ತುಱುಗಾರ್ತಿ ನಿನಗೆ ಮನೆವೆಂಡತಿ (ಪಂಪಭಾ. ೭-೫೨) ; ತನ್ನ ಪೆಂಡತಿಯಪ್ಪ ನಂದೆಯೆಂಬ ತುಱುಗಾರ್ತಿಯಂ ಕರೆದು... ಮಗನಂ ಕೊಟ್ಟು (ಧರ್ಮಾಮೃ. ೧೦-೧೫೦) ; ಕಱುವಂ ಬಿಡು... ಮುಱುವಂ ಸುರಿಯೆಂಬ ಸರವು ತುಱುಗಾರ್ತಿಯರೊಳ್ (ಲೀಲಾವ. ೫-೦೨೦) ; ಕಱೆಯೆಂಬ ನುಡಿ ತುಱುಗಾರ್ತಿಯರೊಳು (ಸುರಾಸಾಂ. ೨-೬೮). **ತುಱುಕಾರ್ತಿ** : ತುಱುಕಾರ್ತಿಯರ್ ತಿಱಿದು ತಂದು ಪಾಱುತಸಕ್ಕೆ ಪರಪೆ ಪರೆವು ಕೊರಗಿರ್ದ ಕಱೆಯ ನೆಯ್ದಿಲ್ಗಳಿಂ ... ಮನೋಹರಮಾದ ಮಾಧವೀಮಂಟಪದ ಮೊಗಸಾಲೆಯೊಳ್ ಕುಳ್ಳಿರ್ದು (ಲೀಲಾವ. ೫-೫೯೩).
[ತುಱುಗಾಱ + -ತಿ$_1$ (< -ಇತಿ)]

**ತುಱುಗಾಹಿ**, ತುಱುಗಾಯಿ (ನಾ). ದನಕರುಗಳನ್ನು ಕಾಯುವವನು ; ಗೊಲ್ಲ : ತುಱುಗಾಹಿ ರಾಜನ ಮಣಿಯ ಬಲ್ಲನು ಗಡ (ಕುವ್ಯಾಕ. ೯-೧೪) ; ತುಱುಗಳ ಕಿರುಹಿಕೊಂಡೆಯ್ದುವ ಬೇಡರ ತುಱುಗಾಹಿಗಳು ಕಂಡು ನಡುಗಿ (ಜೀವಂಸಾಂ. ೮-೨೩) : ಈತನೇ ತುಱುಗಾಹಿ ಮಾರಣ್ಣನೆಂಬಾತನು (ಚಬಪು. ೫೭-೬೦) : ಸಲಹುವನೆ ಮನೆಯ ತುಱುಗಾಹಿ ಸ್ತ್ರೀಯರಿಂಗೆ ಒಲಿಯುವನೆ ಯೋಗಿ (ಸರ್ವಜ್ಞ. ೫೦೯). **ತುಱುಗಾಯಿ** : ಇಂದು ತುಱುಗಾಯಿ[ಪಾಠಾಂ. ಹಿ]ಯಂ ಬಂದಿಱಿಯದವನೆನಗೆ ಸಂದ ಪಗೆ (ಜೈಮಿಭಾ. ೭-೩೦). [ತುಱು + ಕಾಹಿ]

**ತುಱುಗಾಱ**, ತುರುಕಾರ, ತುಱುಕಾಱ (ನಾ). ದನಕರಂಗಳನ್ನು ಕಾಯುವವನು : ಗೊಲ್ಲ ; ಗೋಪಾಲ : ಒರ್ವರಿನೊರ್ವರ್ ಮಿಕ್ಕು ಪಾರ್ದು ಸಾರ್ದಿಸೆ ತುಱುಗಾಱರಂದಿನಿಸು ಬಲ್ಲುಲನಾದುವದೆಂದು ರಾಳಿಗರು (ಪಂಪಭಾ. ೮-೯೩): ಆ ಶಿಶುವನೆತ್ತಿಕೊಂಡು ಬಂದು ಗೋವಿಂದನೆಂಬ ತುಱುಗಾಱಂಗೆ ಕುಡುವುದುಂ (ಧರ್ಮಾಮೃ. ೧೦-೦೫೦) : ಪಱಿದರು ಭಂಡಿಗಳನಾ ತುಱುಗಾಱರಾ ಸ್ತ್ರೀಬಾಲವೃದ್ಧರು (ನಿಘಾಗ. ೧೦-೧೧-೧೧). **ತುರುಕಾರ** : ಹಿಂದೆ ಕುಳಿತು ಕೇರಿಸಗು ಎಂದು ಅಪ್ಪಣೆಮಾಡುವವನು ಅಂಬಿಗ, ಯುದ್ಧರಂಗದಲ್ಲಿ ಮುಂದೆ ಸಮಾನನಾಗಿ ಬಂದಿರುವವನು ತುರುಕಾರ (ಛಾಮುಚ. ೨೪). **ತುಱುಕಾಱ** : "ಗೋಮಾನ್, ಗೋಮಿ, ಗೋಸ್ವಾಮಿ—ಈ ೩ ತುಱುಕಾಱರ್" (ಹಲಾಯು. ೪೪-೧೦೭) ; ಪಟ್ಟ ಪಸಿಯ ತುಱುಕಾಱಂಗಗ್ಗಳಿಕೆಯನೆ ಮಾಡಿ ನೀನುಂ ಪಱಿಯುಂ ಕಟ್ಟಿದೆಯೊ ಭೂಪರಿನಿಬರ ಕೊರಲೊಳ್ (ಪಂಪಭಾ. ೭-೪೭). [ತುಱು + -ಕಾಱ]

**ತುಱುಗಾಱಪಳ್ಳಿ** (ನಾ). ಗೋವಳರ ಗ್ರಾಮ ; ಗೊಲ್ಲರ ಹಳ್ಳಿ : ಪಕ್ಕಣಗಳೆ ತುಱುಗಾಱ[ಪಾಠಾಂ. ವ] ಪಳ್ಳಿಯುಲಿ . . . ಅಱಿಸಿದರಾ ನಿಶಾಚರನ (ಕೊರಚಾ. ೪-೧೧-೧೫). [ತುಱುಗಾಱ + ಪಳ್ಳಿ$_1$]

**ತುಱುಗು$_1$** 'ತುಱುಕು$_1$' ನೋ.

**ತುಱುಗು$_2$**, ತುರುಗು$_2$ (ನಾ). ಸಂದಣಿ ; ದಟ್ಟಣೆ : ಸಪ್ತಮುಖದಿಂದೆ ವಿಷೋಷ್ಣತೆಯಿಂದೆ ಭೋಗದೊಳ್ ತುಱುಗಿರವಿಂದೆ ಪೋಲ್ತುದು ಮಹಾನದಿ ರುಂದ್ರಫಣೀಂದ್ರರಾಜನಂ (ಕಾವ್ಯಸಾ. ೭೪೭ ಕೂದ್ರಕ): ಮೆಱೆವ ನೇಹಪ್ರಘಗಳೆ [illegible] ತುಱುಗಿನಲಿ ಒಪ್ಪಿದಂದ್ರತೀ[illegible] ([illegible]). **ತುರುಗು$_2$** : "ತಿಂತಿಣಿ, ಕಿಕ್ಕಿರಿ, ತುರುಗು, ಬಂಬಲು, ಜಂಗುಳಿ, ಹಿಂಡು, ಗುಂಪು...ಮುಂದಿ" (ಕೆಂಸುಡು. ೮೫). [< ತುಱುಕು$_1$. / ಮಲ. ತುಱುಕು]

**ತುಱುಗುಗೂಂದಲ್**, ತುರುಗುಂಗೂದಲು (ನಾ). ದಟ್ಟವಾಗಿರುವ ಕೂದಲು; ತುಂಬುಗೂದಲು : ತುಱುಗುಗೂಂದಲ್ ಕೊಕ್ಕರಿಸೆ ಕೊನೆವಾಲಮಿಸಿಸು ನಿಮಿರ್ದು ಸಂಚಳಿಸೆ (ರಾಮಾಶ್ವ. ೧೩೨-೯). **ತುರುಗುಂಗೂದಲು** : ಇದೀ ಶ್ಮಶ್ರುಸಂಕಟವಾದರೋ, ವಿಪರೀತವಾಗಿ, ಕಂಯ ಚಾಮರದ ಚವುರಿಯ ತುರುಗುಂಗೂದಲಂತೆ...ರೂಕ್ಷತೆಯ ಕಡು ಗಪ್ಪಾಗಿ ಗೋಳಾಡುತ್ತಿರುವುದು (ಮಂತ್ರಕ. ೯೨-೦೮).
[ತುಱುಗು$_1$ (< ತುಱುಕು$_1$) + ಕೂಂದಲ್]

**ತುಱುಗೆವೆ**, ತಂರುಗೆವೆ, ತಂಱುಗೆವೆ (ನಾ). ದಟ್ಟವಾದ ಕೂದಲುಳ್ಳ ರೆಪ್ಪೆ ; ಒತ್ತಾದ ಕೂದಲುಳ್ಳ ರೆಪ್ಪೆ: ತುಱುಗೆವೆ ನೀಳ್ದ ಪುರ್ವು ನಿಡುಗಣ್ (ಪಂಪಭಾ. ೧-೦೦೮) : ಘನಸ್ತನಂ ತುಱುಗೆವೆ ಕೋಮಲಾಂಗವಳವಟ್ಟ ಕುರುಳ್...ರಮಣೀಯಮಾಗೆ (ಧರ್ಮಾಮೃ. ೪-೦೪೨): ತುಱುಗೆವೆಯು ತೆರ್ಕೆಯೊಳ್ ಬಂಬಲಿಪ ಕಣ್ಬನಿಗಳೊಸರೆ (ವರ್ಧಪು. ೪-೬೧೫). **ತುರುಗೆವೆ** : ತುರುಗೆವೆ ನಿಡುಹುಬ್ಬು ಡಾಳಿಪ ಕದಪು...ಅಂಚೆಯ ನಡೆ ನುಡಿಯ ಜಾಣೆಯರು (ಸೌಂದಕಾ. ೩-೭೬). **ತುಱುಗೆವೆ** : ತುಱುಗೆವೆ ನಿಂದು ನೋಡೆ ಕಡೆಗಣ್ಣದಿಗೊರ್ಳ್ವಳಿಪಾಡೆ ಪೊಕ್ಕು ಸ್ಮಿಪೆಱಗಿದಿಗೊರ್ಳ್ವ ಸೋಂಕು. . . ಒಲ್ಲೆಯದಿಗೊಂಡುದು ಕೂಟದ ಕಾಯ್ಪುವೋವರಾ (ಅರ್ಧನೇ. ೨-೩೬): ತುಱುಗೆವೆಯ ನಿಟ್ಟೆಸಳುಗಂಗಳ . . . ನೀಱುಮರ್ರೈದಿ ತೊಗ್ಗಿನಲಿ (ಕುವ್ಯಾಅ. ೧೩-೩೦): ತುಱುಗೆವೆಯ ನಿಡುಗಂಗಳಿನ ಕಡೆಸೆಱಗನ ಮಿರಿಸುತ...ಬಂದಳು ರಾಮನಿದ್ದೆಡೆಗೆ (ತೊರರಾ.೩-೪-೮): ಪಾಮರಿಯರ ಕುಡುಪುರ್ವಿನ ಕೊನೆಮುಟ್ಟದ ತುಱುಗೆವೆಗಳ ನಡುವೆ ಕರಿಯಾಲಿಗಳೆಸೆದುವು (ಜಯುಕಾ. ೧-೪೦). [ತುಱುಗು$_1$ (< ತುಱುಕು$_1$) + ಎವೆ]

**ತುಱುಗೆವೆಗಣ್**, ತುಱುಗೆವೆಗಣ್, ತುಱುಗೆವೆಗಣ್ಣು (ನಾ). ದಟ್ಟವಾದ ಕೂದಲುಳ್ಳ ರೆಪ್ಪೆಯಿಂದ ಕೂಡಿದ ಕಣ್ಣು : ಭವನಾಂತರಮುಂ ನೆಱೆ ಧವಳಿಸುತಿರ್ದಪುದೀ ತುಱುಗೆವೆಗಣ್ಬೆಳಗು ಪುಂಡರೀಕೇಕ್ಷಣನಾ (ಕಾದಂಪೂ. ೪೨೦): ಪುಂಡರೀಕದಳಧವಳವಿಲೋಚನೆಯರಾ . . . ತಮ್ಮ ನಿಡಿಯ ಬೆಳಯ ತುಱುಗೆವೆಗಣ್ಗಳಿಂ ಕಣ್ಬೇಟಂಗೊಳಿಸಿಯುಂ (ಸುಕುಮಾ. ೦೦-೦೨೭೪) ; ನಳಿನದೆಸಱೊಳ್ ಮುಸುಱಿ ಮುತ್ತಿದ ಮತ್ತಮಧುಕರಕುಳಮುಂ ಕೆಲಕ್ಕೆ ತೊಲಗಿಸುವಂತೆ ತಳ್ತ ತುಱುಗೆವೆಗಣ್ಗಳಿಂ ತೆಗೆದು (ಲೀಲಾವ. ೩-೬೫): ಕಾವನ ತೋಳಂ ಬಿಡವಪ್ಪಿದುಮಾದಾಕೆಯ ಕೊಡಕೆವರಂ ನಿಮಿರ್ದು ಪೊಳೆವ ತುಱುಗೆವೆಗಣ್ಗಳ್ (ಕಬ್ಬಿಕಾ. ೩೨೮). **ತುಱುಗೆವೆಗಣ್** : ನಿಡಿಯ ಬಳ್ಳಿಯ ತುಱುಗೆವೆಗಣ್ಗಳಂ ಕೆನ್ನೆಯನೆಯ್ದುವ ಪುರ್ವುಗಳಂ . . . ಪಡೆದ ಕಾಮದೇವತ್ವಮನವಗಯಿಸುವಂತಿರ್ದ ರೂಪಿನ ಬಾಲಕನಂ . . . ಎತ್ತಿಕೊಂಡಿಂದ್ರುನ ದೇವಿ ಬಂದಳ್ (ಶಾಂತಿಪು. ೧೦-೯); ತುಱುಗೆವೆಗಣ್ಣ ಕಾಂತಿ ಮರಗಟ್ಟಲೆಯುಂ ಚೆದಱಿಟ್ಟೆ (ಆಗಪು. ೧೭-೨೫): ತುಱುಗೆವೆಗ [ಪಾಠಾಂ. ನಿಡಿಯಲರ್ಗ]ಣ್ಪೊಣರು . . . ಕಡುಚೆಲ್ವಂ ನೆನೆಯಿಸುತೊಪ್ಪಿದುವು (ಜಯುಕಾ. ೨-೪೩). **ತುಱುಗೆವೆಗಣ್ಣು** : ತುಱುಗೆವೆಗಣ್ಣ ಕಟಾಕ್ಷ ಕಂಬಲ್ಗಳ ಮಿಱುಗುವ ತೊಂಡೆವಣ್ದುಟಿಯ ಚೆಱಗಿಂದೆ ಮಾತನಾಡಿದಳು (ಮೋಹತ. ೧೭-೨೪) ; ತುಱುಗೆವೆಗಣ್ಣ ನೋಟಮೊಸೆದುದು (ಚಬಪು. ೪-೧೧)
[ತುಱುಗೆವೆ+ಕಣ್]

**ತುಱುಗೆವೆ** 'ತುಱುಗೆವೆಂ' ನೋ.

**ತುಱುಗೆವೆಗಣ್** 'ತುಱುಗೆವೆಂಗಣ್' ನೋ.

**ತುಱುಗೆವೆಗಣ್ಣು** 'ತುಱುಗೆವೆಂಗಣ್' ನೋ.

**ತುಱುಗೊಳ್$_1$**, ತೊಱುಗೊಳ್$_1$ (ಕ್ರಿ). ದನಕರುಗಳನ್ನು ಅಪಹರಿಸು; ಹಸುಗಳನ್ನು ಹಿಡಿ; ಗೋಗ್ರಹಣಮಾಡು; ದನಗಳನ್ನು ಅಪಹರಿಸಲು ಯುದ್ಧಮಾಡು : ನೆಲ್ಲಿಗೆಱೆಯ ತುಱುಗೊಣ್ಡಲ್ಲಿ ತುಱುವನಿಕ್ಕಿ ರೊಸಗರಲಯನ್ ಪೊಸಮಣ್ಣ ಸಗಮೋಱಿದನ್ (ಎಕ. IX (8), ಹೊಸಕೋ. ೯-೩; 875): ಚೀ ತುಱುಗೊಳೆ ಬಾಱಿವೆಂದು ತುಱುಗೋಳೊಳ ಸಾವುದು ಸೈಪಿದೆಂದು ಪಾಯ್ದುಱಿಕೆಯ ಗೋವರಣ್ಮ ಬರೆ (ಪಂಪಭಾ. ೮-೯೫): ಮಾರವ್ವರ ಪರಿವರಿವರಿದಿಱಿಯಲಾಱದೆ ಕಳ್ದು

ತುಱುಗೊಣ್ಣು (ಎಕ. IV. ಹುಣಸೂ. ೧೧-೬; 1020?); ಸುಶರ್ಮನೃಪಂ ವೀತಾಂಕುಶಂ ತುಱುಗೊಳಲ್ ಪೊಣರ್ದುಮಟ್ಟಂ (ಕಾವ್ಯಾವ. ೧೨೨); ಪಟಿಯೆ ಧರೆ ತುಱುಗೊಳಲ್ ಬಂದಟಿಪುದೆ ರಣದೊಳ್ ಕನಿಷ್ಠವಿದ ಚೀ ಕಷ್ಟಂ (ನೇಮಿಪು. ೧೦-೧೫೭). **ತೊಱುಗೊಳ್**$_1$: ಸೋವುಣವ್ವೊಂಕ್ಕಮವಿ ಕುಣವ್ವನ್ನು ತೊಱುಗೊಳ್ವಲ್ಲಿ ಪಲರುಮನೋಡಿಸಿ (ಎಕ. X. ಕೋಲಾರ. ೨೬೨-೩; ಸು. 750). [ತುಱು + ಕೊಳ್$_1$]

**ತುಱುಗೊಳ್**$_2$ 'ತಂಱುಗೋಳ್' ನೋ.

**ತುಱುಗೋಳ್**, ತಂರಂಗೋಳಂ, ತಂಱುಂಗೊಳ್, ತಂಱುಂಗೊಳ್$_2$, ತೊಱುಕೊಲ್, ತೊಱುಕೊಳ, ತೊಱುಕ್ಕೊಳ್, ತೊಱುಗೊಳ್$_2$, ತೊಱುಗೊಳ, ತೊಱುಗೊಳ್ಳ, ತೊಱುಗೋಳ್ (ನಾ). ಶತ್ರುಗಳು ದನಗಳನ್ನು ಹಿಡಿದುಕೊಂಡಾಗ ಅವುಗಳ ರಕ್ಷಣಾರ್ಥವಾಗಿ ಮಾಡುವ ಕದನ; ಗೋಗ್ರಹಣಕಾಲದಲ್ಲಿ ಅವುಗಳನ್ನು ರಕ್ಷಿಸಲು ಮಾಡುವ ಯುದ್ಧ: ತುಱುಗೋಳೊಳ ಸಾವುದು ಸೈಪಿದೆಂದು ಪಾಯ್ದಟಿಕೆಯ ಗೋವರಣ್ಣ ಬರ (ಶಂಶಕಾ. ೮-೯೫); ತುಱುಗೋಳಿೊಳ್ ಸತ್ತೊಡೆ ಪುಣ್ಯಮಕ್ಕು (ಚಾವುಂಪು. ೨೭೫). 'ತುಱುವರಿಗಾಳಗ' ಪರಾ. **ತುರುಗೋಳು**: ಈ ವೀರಗಲ್ಲಿನಲ್ಲಿ . . . ಕನ್ನಿಯನು ಕಾತಿಕವಳ್ಳಿಯ ತುರುಗೋಳಿನಲ್ಲಿ ಕಾದಿ ಸತ್ತನೆಂದು ಹೇಳಿದೆ (ನಾಶಮುಂ. ೫೪೨ ಸೂಚನೆ). **ತುಱುಂಗೊಳ್**: ಸಿನ್ದವ್ಮನಾಡ ಬವರದೊಳು ಕಲ್ಲಂಗೆಱೆಯ ತುಱುಂಗೊಳೊಳೆ ××× ಸತ್ತ (ಎಕ. V, ಅರಸೀ. ೯೯-೭; ಸು. 990). **ತುಱುಗೊಳ್**$_2$: ಗಂಗವುಹಾನಾೞಗರಾ ಮಗನ್ಬಾದೆಯುನ್ನಿರಟ್ಟ ತುಱು ಗೊಳೊಳ್ ಕಾದಿ ತುಱುವನಿಕ್ಕಿಸಿ ಸುರಲೋಕದ ಭೋಗಿ ಆದನ್ (ಎಕ. IX, ಹೊಸಕೋ. ೮೪-೩; 720): ಕುಗ್ಗಲ್ಲಗಾವುಣ್ಡ ತಮುತ್ತಿಬ್ಬೊರ್ ತುಱುಗೊಳೋಳ್ಕಾದಿ ಸತ್ತರ್ (ಎಕ. IV, ಹುಣಸೂ. ೯೨-೮: ಸು. 920); ಕಾಡಿಗಾವುಣ್ಡ ತನ್ನೂರ ತುಱುಗೊಳೊಲ್ ತುಱುವ × ಕ್ಷಿಸಿ ಕಾದಿ ಸತ್ತ (ಎಕ. IV. ಗುಂಡ್ಲುಪೇ. ೧೯-೪; 995 ?). **ತೊಱುಕೊಲ್**: ತೊಱು ಕೊಲ್ವಳಿ ಪೆರಿಯವನ್ ಕೋಲ್ಗಳಾಂ[ತು] ಭಿಟ್ಟನ್ (ಸೌಇಇ. IX-i, ೨-೮; 9ನೆಯ ಶಕ). **ತೊಱುಕೊಳ**: ಸ್ವಸ್ತಿಶ್ರೀ ತೊನ್ದೆಗೊಲೆ ಉಕ ×× ತೊಱು ಕೊಳ × ಸತ್ತೋನ್ (ಎಕ. X, ಚಿಂತಾಮ. ೧೦೫-೩; ?). **ತೊಱುಕ್ಕೊಳ್**: ತೊಱುಕ್ಕೊಳ್ಳುಲ್ವಿಟಾನ್ (ಎಕ. X(8), ಮಾಲೂರು. ೧೧೯-೧; 8ನೆಯ ಶಕ). **ತೊಱುಗೊಳ್**$_2$: ಎಱೆಯಮ್ಮಂ[ನಿ]ವುದಿ ತೊಱುಗೊಳೊಳ್ಕಾದಿ ಸತ್ತೋನ್ (ಸೌಇಇ. XI-i, ೧೯-೩; 883); ಮದಲೂರ ಕುಪ್ಪ ನ್ರೊಱುಗೊಳೋಱಿದು ಸತ್ತು ಸಗ್ಗಿಯಾದನ್ (ಎಕ. X, ಕೋಲಾರ. ೧೮೨-೨; 1000 ?). **ತೊಱುಗೊಳ**: ××× ಮೇರು ತೊಱುಗೊಳ ಕಟ್ಟುತ್ತೊಡೆ ಮೆಟ್ಟ ಕಲ್ನಾಡೊಂದಂ ಕೊಟ್ಟಂ (ಸೌಇಇ. IX-ii, ೭೭-೧; ಸು. 8ನೆಯ ಶಕ). **ತೊಱುಗೊಳ್ಳ**: ಸಿಂಗಪ್ಪ ದುಗ್ಗಯ್ಯ ಸಾನ್ತನೊರ ತೊಱು ಗೊಳ್ಳ ಧಾಳಿ ಕಳ್ಳರೊಳ್ತ್ತಿಱಿದು ಅಟ್ಟಿ ಸತ್ತಂ (ಎಕ. IX (8), ಕಾನಕಾ. ೪೮-೦೫; 900). **ತೊಱುಗೋಳ್**: ಶ್ರೀ ಹೆವ್ಮಯನ ಮಗ ಸಾನ್ತಂ ತೊಱುಗೋಳೊ ಕಾದಿ ಸತ್ತು ಸಗ್ಗಿಯದಂ (ಎಕ. IX (8), ಹೊಸಕೋ. ೧೯೫-೪; ಸು. 1000). [ತುಱು + ಕೋಳ್]

**ತುಱುಘಟಿ** (ನಾ). ಒಂದು ಪ್ರದೇಶದ ಹೆಸರು (?): ಆ ದೇವರ ಅಂಗರಂಗಭೋಗಕ್ಕಂ...ನೈವೇದ್ಯಕ್ಕಂ ತಂಮ ಪ್ರವಿಷ್ಟದ ತುಱುಘಟಿಯ ಮೂಡಣ ಬೆಂಚೆ ಯಿಶಾನ್ಯದಲ್ಲಿ ... ಧಾರಾಪೂರ್ಬ್ಬಕಮ್ಮಾಡಿಕೊಟ್ಟ ಮತ್ತರಾಱು (ಸೌಇಇ. IX-I, ೨೯೫-೧೮; 1172). [?]

**ತುಱುಚ**$_1$ 'ತುಱುಚಿ' ನೋ.

**ತುಱುಚ**$_2$ (ನಾ). ತುರಿಯೆಂಬ ಚರ್ಮರೋಗವುಳ್ಳವನಂ: ಸಾವಂ ಬಯಸುವ ತೊನ್ನರುಂ ತುಱುಚರುಂ ಮಹಾರೋಗಾವಿಳರುಂ ಬಂದಾ ಮರನ ಫಲಮಂ ಮೆಲೆ ನಿರೋಗಿಗಳಾಗಿ (ಧರ್ಮಾಮೃ. ೭-೪೭). [ತುಱುಚಿ + -ಅ$_7$]

**ತುಱುಚಿ** 'ತುಱುಚಿ' ನೋ.

**ತುಱುಚಿ**, ಚುಱುಚಿ, ತುರಚಿ, ತುರಚೆ, ತುರಿಚೆ, ತುರಂಚ, ತುರುಂಚಿ, ತುರಂಚೆ, ತುಱುಿಚ, ತಂಱಿಚಿ, ತಂಱುಚ$_1$, ತುಱುಚಿ, ತುಱುಜೆ (ನಾ). ೧. ಶರೀರಕ್ಕೆ ತಗುಲಿದರೆ ನವೆಯುಂಟುಮಾಡುವ ಒಂದು ಬಗೆಯ ಗಿಡ; ತುರಿಕೆಗಿಡ; ಉರಿಸಣಿಕೆ (ಕರಾ): "ದುಸ್ಸರ್ಶಮೆನಿಸೆ ತುಱುಚಿಯಕ್ಕುಂ" (ಮಂಗರಾ. ೪೪-೪೪); ಹೆಗ್ಗುಱುಟಿಗೆಯುಂ ತುಱುಚಿಯು ನೊಗ್ಗಿರೆ ತಾಂ ಕೈಪಸೋರೆಯು ಬೇರ್ಗಳೊಳಿಲ್ಲಂತಗ್ಗಳ ಮೂರ್ಸೊಟ್ಟ ರೆಗಂ ತೆಗ್ಗಿಲ್ಲದೆ ರಚಿಸಿ (ಐಮಪ. ೧೭-೧೪೫); ವನಜವನದಲಿ ತುಱುಚಿ ಕಬ್ಬಸ ಬನದಿ ಕಡಸಿಗೆ ಚೂತವನಯ ಕಾನನದಿ ಬೊಬ್ಬುಲಿ ಭೀಮಸೇನನ ಇರವು ತವೊಳಗೆ (ಕುಮ್ಯಾಭ. ೮-೫): ತೊಳಚಿದೋಂಟದೊಳ್ ತುಱುಚಿ ಪುಟ್ಟುವಂತಿರೆ (ರಾಜಶೇಖ. ೨೭-೭). **ಚುಱುಚಿ**: ೧. ಹಾಳೂರ ಚುಱುಚಿ ನಸುಗುನ್ನಿ ತಿಗುಳರ ಗಾಳಿ ಬೇಡೆಂದ (ಸರ್ವಜ್ಞ. ೧೩೮೫). **ತುರಚಿ**: ೧. 'ತುರಚಿಬಳ್ಳಿ' ಪರಾ. **ತುರಚೆ**: ೧. ತುರಚೆಯ ಜಾತಿಯ ಗಿಡ (Archangel. ಇಂಕನಿ). **ತುರಿಚೆ**: ೧. ಧರಣಿಪತಿಯಹ ನಳನ ಸಭೆ ಯಲಿ ತುರಿಚೆ ಮಕ್ಕಣದಂತೆ ದುರ್ಮತಿ ದುರುಳ ಪುಷ್ಕರನೆಂಬ ದಾಯಿಗ ... ಇರುತಿಹಂ (ಅಂಬಿಕಾ. ೩-೫೯); ಅವನ ಸಹವಾಸ ಅಂದರೆ ತುರಿಚೆ ಮುಟ್ಟಿದ ಹಾಗೆ (ರೂಢಿ). **ತುರುಚ**: ೧. ತುರುಚನ ಬೇರು, ನೀಲಿಬೇರು ಇವು ಪ್ರತ್ಯೇಕ ಹತ್ತು ಹಲಗಳನ್ನಿಡಿದು (ಸಕವೈ. ೭೦). **ತುರುಚಿ**: ೧. ಬಂಜರು ನೆಲದಲ್ಲಿ ಯಥೇಚ್ಛವಾಗಿ ಬೆಳೆಯುವ ಕುಟುಕುಗೂದಲು ಗಳಿಂದ ಕೂಡಿದ, ಕೆಲವು ಜಾತಿಯ ತುರುಚಿಯ, ಚುರುಚುರುಕನ, -ಗಿಡ (Nettle. ಇಂಕನಿ); ತೋಟಕ್ಕೆ ಕರೆದುಕೊಂಡು ಹೋಗುವುದು ಅಲ್ಲಿ ಬೇಕೆಂದು ನೆಪ ತೆಗೆದು ಜಗಳವಾಡಿ ತುರುಚಿ ಮುಟ್ಟಿಸುವುದು (ಕಳಹು. ೧೧). **ತುರುಚಿ**: ೧. ಮಳೆಗಾಲದಲ್ಲಿ ಆ ಪ್ರದೇಶ ಜಿಗಣೆ, ಚಿತ್ತುದ ಬೀಳಲು, ತುರುಚಿಗಿಡಗಳಿಂದ ಪ್ರವೇಶಕ್ಕೆ ಅಸಾಧ್ಯವಾಗುತ್ತಿತ್ತು (ಕುಡಿಕೊ. ೧೦೪); ಆ ನೋಟದಿಂದಾಗಿ ತುರುಚಿಯನ್ನೊರಸಿದಂತಾಯಿತು (ನಾಡೋಜ. ೦೯೭); ರಾಣಿ...ಅಸೂಯೆ ಸಂಶಯವೆಂಬ ತುರುಚಿಯ ಗಿಡಕ್ಕೆ ನೀರೆರೆದು ಪೋಷಿಸಿರಬೇಕು (ಪಾಹುತ್ತ. ೦೯). **ತುಱಿಚ**: ೧. ತಳವಲು ತುಂಬೆ ನೆಲ್ಲಿ ತುಱಿಚ ಕಿಱುನೆಲ್ಲಿ (ಐಮಪ. ೫-೮೯). **ತುಱಿಚಿ**: ೧. "ಮರ್ಕಟಿಯೆನಿಕು ಕಪಿಕಚ್ಛು ದುರಾಲಭೆ ತುಱಿಚಿ" (ವಸ್ತುಕೋ. ೩೭-೨೦). ೨. ಒಂದು ಬಗೆಯ ಚರ್ಮರೋಗ; ತುರಿ ರೋಗ: ಹಱುವಾಯ ತುಱಿ[ಪಾಠಾಂ. ಱು]ಚೆಗಳ ಬತ್ತಲೆಯ ಬಾಳ್ವಿಣಂ ಗಳು ಸುತ್ತ ಮುತ್ತಿರಲು (ಪಾಗೀರ. ದೇ. ೨೫೪-೨೭). **ತುಱುಚ**$_1$: ೧. "ಮರ್ಕಟಃ - ಎಕ್ಕೆ, ತುಱುಚ, ಹಿಪ್ಪಲಿ, ಕೋಡಗ" (ಒಷಧಿ. ೦೦೫); ಮೆಣಸು ... ಅಪಾಥಿ, ಸಹದೇವಿ, ತುಱುಚ, ನೀಲಿ, ರುದ್ರಜಡೆ, ಇವ ಸಮಾನಂ ಗೊಂಡು ಸಹದೇವಿರಸದಲ್ಲಿ ಲೇಪವಂ ಮಾಡಿದುದು ಜ್ವರ ಹರ (ವಿವೈವಿ. ೦೮೩); ಹಂಬಿನ ತುಱುಚನಾ ಬೇರು ಸಸಿಗುಪ್ಪೆ . . . ಹತ್ತಿ ಹರಳ ರಸಮಂ ಪೂರೈಸಿ ಕಾಸಿ (ಸೂಪಶಾ. ೨-೧೯); ತುಱುಚನ ಬೇರು, ಪರ್ವಾಟಕ, ಅಮೃ ದವಳ್ಳಿ, ಶುಂಠಿ ಇವಿಷ್ಟನು ... ಕಷಾಯವ ಕಾಸಿ (ವೈದ್ಯಸಾ. I, ೩೭೬); ತುಱುಚನ ಗಿಡು ಸೋಂಕಿದಂತೆ ಬಿಱುಬುಗೊಂಬಳು ಬೆದಱುವಳು (ಹಪಬ. ೭-೨೭). **ತುಱುಚಿ**: ೧. "ದುರಾಲಭಾ - ತುಱುಚಿ" (ಬಾಪಟೀ. ೨-೨-೮೭); ಹಸಿದಡುಣಬಹುದೇ ನಸುಗುನ್ನಿ ತುಱುಚಿ [ಪಾಠಾಂ. ಱುಚಿ] ಯನು (ಆಪಡಂ. ೭೦-೩೦೫); ಒತ್ತಲ ತುಱುಚಿಯ ತಂದು ಪನ್ನೀರನೆಱದರೆ ಒತ್ತಿದವರ ಹಱಕೊಂಡು ತೀಬೋದು ಬಿಡಬಲ್ಲುದೆ (ಪುರಂದ. ೫-೫೭-೩). **ತುಱುಚಿ**: ೧. "ಕಂಚ್ಛಭಃ -ತು(ಱು)ರುಚಿ" (ಒಷಧಿ. ೨೦); [illegible]

ಬಡಿಗೆಗಳ ಸಸುಗುನ್ನಿದುಱುಚೆ [ಪಾಠಾಂ. ತುಱುಚೆ]ಯ ಪುಡಿಯ ತೀವಿದ ತಿತ್ತಿಗಳ ... ಪರಚಿಸಲೆಸೆದುದಾ ದುರ್ಗ (ಶೂರರಾ. ೬-೭-೧೧).

[<ತುಱು./ತೆಲು. ತುರುಚೆ = ಮುಂಗರವಳ್ಳಿ]

**ತುಱುಚೆ** ' ತುಱುಚೆ ' ನೋ.

**ತುಱುತುಱು** (ನಾ). ಒಂದು ಅನುಕರಣ ಶಬ್ದ. ' ತುಱುತುಱುತಿನ್ ' ಪರಾ.

**ತುಱುತುಱುತಿನ್, ದುಱುದುಱುದಿನ್** (ಕ್ರಿ). ಬಹಳ ನವೆಯುಂಟಾಗು.– ಕಡಿತವುಂಟಾಗು ; " ಚುರುಚುರಂ ಉರಿ " (ಪ್ರಭಶ.) : ಮಿಱುಗುವ ದಾಡೆಯಿಂದಣೆದು ಪೆರ್ದರಿಯಂ ಕರದಿಂದಮೊತ್ತುತುಂ ತುಱುತುಱುತಿಂಬ ಕಂದರಮನೊತ್ತರಗೊಂಡು ಮಹಾಮಹೀಜದೊಳ್ ತಱತಱನಾಗಿ ಮಾಱುರಸುತುಂ ... ಬರುತಿರ್ದುದು ಭೀಕರನೊಂದು ಸೂಕರಂ (ಕಾವ್ಯಸಾ. ೧೧೧೨). **ದುಱುದುಱುದಿನ್** : ಉದಯಿಸುಗುಂ ಶೂಲಂ ವಾತದಿನುರಿಪಂ ಪಿತ್ತದೇಟಿಗೆಯಿಂ ದುಱುದುಱುದಿಂಬುದು ಕಫದಿನಾ ತ್ರಿದೋಷದ ಪುದುವಿಂದಾಮಿಶ್ರವಾಗಿ ತೋರ್ಕುಂ ತಮ್ಮೊಳ್ (ರೋಕೋಪ. ೯-೩). [ತುಱುತುಱು + ತಿನ್]

**ತುಱುನೆಲೆ** (ನಾ). ದನಕರುಗಳನ್ನು ಕಟ್ಟುವ ಅಥವಾ ಕೂಡುವ ಸ್ಥಳ ; ಕೊಟ್ಟಿಗೆ : ಮಾನವಮದನನುಂ ಮಕರಂದನುಮಾ ತುಱುಪಟ್ಟಿಯ ತುಱುನೆಲೆಯೊಳ್ ನಿಂದು ನೋಡುತ್ತುಮಿರೆ (ಲೀಲಾವ. ೫-೧೦೦).

[ ತುಱು + ನೆಲೆ ]

**ತುಱುಪಟ್ಟಿ**, ತುರುಂಪಟ್ಟಿ, ತುರುಹಟ್ಟಿ, ತುಱುಂವಟ್ಟಿ, ತುಱುಹಟ್ಟಿ (ನಾ). ೧. ದನಕರುಗಳ ಹಟ್ಟಿ ; ದನಕರುಗಳನ್ನು ಕಟ್ಟಿಹಾಕುವ ಸ್ಥಳ ; ಕೊಟ್ಟಿಗೆ ; ಗೋಸ್ಥಾನ : "ಗೋಷ್ಠಂ, ಗೋಸ್ಥಾನಕಂ, ಈ ೨ ತುಱುಪಟ್ಟಿಯ ಹೆಸರು" (ನಾಚಿರಾ. ೧೦೩) : ಗೋಟ್ಟೀ–ತುಱುಪಟ್ಟಿ [ಪಾಠಾಂ. ಳ್ಳಿ] ಯೊಳ್ (ವಡ್ಡಾರಾ. ೧೮೦-೫) ; ತುಱುಗಿದ ತುರಗಗಳೆಂದೆಂಬ ಪಶುಗಳ ಮುಱಿದಿಕ್ಕಿ ರಣವೆಂದೆಂಬ ತುಱುಪಟ್ಟಿ[ಪಾಠಾಂ. ಟ್ಟೆ]ಯೊಳು ರಾಮನೆಂದೆಂಬ ಪೆರ್ಬುಲಿ ಬಿಱುವರಿದುದು (ಕುರಾಸಾಂ. ೨೦-೬೫). ೨. ಗೊಲ್ಲರು ವಾಸಿಸುವ ಹಳ್ಳಿ ; ಗೊಲ್ಲರ ದೊಡ್ಡಿ : ತುಱುಗಾರ್ತಿಯಂ ಕರೆದು ಪುತ್ರಲಾಭವಾದುದೆಂದು ಮಗನಂ ಕೊಟ್ಟು ತುಱುಪಟ್ಟಿಯೊಳೊಸಗೆಯಂ ಮಾಡಿ (ಧರ್ಮಾಮೃ. ೧೦-೧೫೦) ; ಅಲ್ಲಿಗೆ ಸಮೀಪದೊಳೊಂದು ತುಱುಪಟ್ಟಿಗೆಲ್ಲಂ ಪ್ರಧಾನ ನಂದಗೋಪನೆಂಬಂ (ಬಂಹರಿ. ೬-೫೩) ; ಗಂಗಾ ತೀರದ ತುಱುಪಟ್ಟೆ[ಟ್ಟಿ]ಯೊಳಗೆ ವೃಷಭಂಗಳಾಗಿ ಸಂಜನಿಸಿ (ನೇಮಿಸಂ. ೬-೨೨) ; ಸಂತತಾಶ್ರಮ ತಪೋವನಗಳು ತುಱುಪಟ್ಟಿ ಮುಂತಾದುವು ಘೋಷಾಕರವು (ಶಾಂತೀಪ. ೮-೬೨); ಸಲೆ ಪೆಂಪೊಗೆದ ಡಂಗುರ ಸಾಱಿಸಲು ತುಱುಪಟ್ಟಿಯಲಿ (ಸಾಳ್ವಭಾ. ೨೨-೨೫). ೩. (ಆಲಂ) ಹಳ್ಳಿಯ ಜನ : ಅನ್ನೆಗಮಾ ತುಱುಪಟ್ಟಿಯುಮಲ್ಲಿಂದೆರ್ದು ನಾಡೆ ಗೆಂಟುಪೋದತ್ತು (ವಡ್ಡಾರಾ. ೧೦೩-೨೩). **ತುರುಂಪಟ್ಟಿ** : ೧. ಅಮೃತಶಿಲೆಯ ಗೋಶಾಲೆ ತಂತುಕಾರಸಹಸ್ರಜಾಲವೈರೂಪ್ಯದಿಂ . . . ಖಿನ್ನಮಿದೆ ಪಾಳೂರ ತುರುಪಟ್ಟಿಯೋಲ್ (ಶ್ರೀರಾಮಾ. ೮೫೦-೧೧). **ತುರುಹಟ್ಟಿ** . ೧. ಒಮ್ಮೆ ನಮ್ಮ ತುರುಹಟ್ಟಿಗೆ ಹುಲಿ ನುಗ್ಗಿತ್ತು (ರೂಢಿ). **ತುಱುವಟ್ಟಿ** : ೧. ಸುರಧೇನುಸಂಚಯುಂ ಸರ್ಪಭೂಷಣನ ತುಱುವಟ್ಟಿಯೆನೆ ಚೆನ್ನಾದುದರಸು ತನಮುಂದೀಶನ (ಚಬಪು. ೨೯-೪೨) : ತುಱುವಟ್ಟಿಯಿಂದ ತೋಪ್ಪಿಂದ ತಣ್ಣೆಳಲಿಂದ ಕೆಱೆ ಕಟ್ಟೆಯಿಂದ (ನಂದಿಮಾ. ೧೫-೧೬). **ತುಱುಹಟ್ಟಿ** : ೧. ಗೋಷ್ಠಾಧ್ಯಕ್ಷ, ಗೋವಿಂದ–ತುಱುಹಟ್ಟಿಯ ಅದ್ದಿಕದವನು(ನಾಚಿರಾ.೩). ೨. ನಾಡೊಳಗೆ ತುಱುಹಟ್ಟಿಯಲಿ ಹೊಲನಾಡಿ ಹೆಚ್ಚಿದ ಗೋಕದಂಬವ ನೋಡುವುದು ನಿವ (ಕುಮ್ಯಾಅ. ೧೬-೨೦). 'ಕಱುಹಟ್ಟಿ' ಪರಾ.

[ ತುಱು + ಪಟ್ಟಿ$_1$ ]

**ತುಱುಪರಿ** 'ತುಱುವರಿ' ನೋ.

**ತುಱುಪರಿಗ** (ನಾ). = ತುಱುಗೋಳ್(?) : ಅಂತಾತನನುಜ ದೇಕರಸ ತುಱುಪರಿಗವೆಂಬ ಪುಯ್ಯಲ ಸೆಱೆಯಾಲಿಸಿ ಕೇಳ್ದು (ಎಕ. XII, ಚಕ್ನಾ. ೧೮-೨೬ ; 1215 ?). [ ☞ ಇದು 'ತುಱುಪರಿಗಾಂ' ಎಂಬುದರ ಅಪಲಿಖಿತ ವಿರಬಹುದು]

**ತುಱುಪಳ್ಳಿ** ' ತುಱುವಳ್ಳಿ ' ನೋ.

**ತುಱುಪಳ್ಳಿಕಾಱ** (ನಾ). ಗೊಲ್ಲರ ಹಳ್ಳಿಯವನು ; ಗೊಲ್ಲ; ಗೋವಳಿಗ : ಧರಣಿಪಾಲರ ಮಧ್ಯದಲಿ ಭಾಸ್ಕರನು ಗಡ ತುಱುವಳ್ಳಿಕಾಱರ ಪುರದ ಭಾಸ್ಕರನೀತನಲ್ಲಾ (ಕುವ್ಯಾಸ. ೮-೧೬).

[ ತುಱುಪಳ್ಳಿ (<ತುಱುವಳ್ಳಿ) + – ಕಾಱ ]

**ತುಱುಬಿಕ್ಕು**, ತುಂರುಬಿಕ್ಕು (ಕ್ರಿ). ತುರುಬನ್ನು ಹಾಕು ; ಕೂದಲನ್ನು ಗಂಟುಕಟ್ಟು : ತುಂಬಿಗುರುಳ ತುಱುಬಿಕ್ಕಿ ದಾದಿಯರು ನಿತಂಬಿನಿಯೊಡನೆ ಪೇಳಿದರು (ಮೋಹತ. ೯-೧೬). **ತುರುಬಿಕ್ಕು** : ಉಳ್ಳಲರ ಹೂವೀಡ ತುರುಬಿಕ್ಕಿ ಮುಡಿಸಿ (ಕಾಲಶರ. ೧೮೩-೪೦೪).

[ ತುಱುಬು$_2$ ( <ತುಱುಂಬು$_2$ ) + ಇಕ್ಕು ]

**ತುಱುಬು$_1$** ' ತುಱುಂಬು$_1$ ' ನೋ.

**ತುಱುಬು$_2$** ' ತುಱುಂಬು$_2$ ' ನೋ.

**ತುಱುಮಂದೆ**, ತುರುಮಂದೆ (ನಾ). ೧. ದನಗಳ ಹಿಂಡು, – ಗುಂಪು : " ತುಱುಮಂದೆಯುಕ್ಕತಿ ಗೋವೃಷಂ " (ಮಂಗರಾ. ೫೬-೧೦) ; " ತುಱುವಿಂಡು ತುಱುಮಂದೆಯುಕ್ಕು ಗೋಸಮುದಾಯವು " (ಶಬ್ದಮಂ. ೩೪) : ನಾನಾರೆಂಬುದ ತಾನಱಿತು ತಿಳಿದಲ್ಲಿ ತುಱುಮಂದೆಯೊಳಗಾಯಿತ್ತು (ತುಱುಗಾ. ೪-೬) ; ಈಗಳೆ ನೀನ್, ನಿನ್ನಯ್ಯನವೆ ತುಱುಮಂದೆಗಳ್ ವೇಣ್ ತುಱುಪಟ್ಟಿಗಳ ಬಱಿಯ ... ಪುಲ್ಗಾವಲೆಡೆಗೊರ್ವಳೇ ಬೆಚ್ಚರಂ ಬೋಗು (ಬದ್ಮಪ್ರ. ೩೪-೭೪೨). ೨. ಗೋವುಗಳಂ ಇರುವ ನೆಲೆ ; ಕೊಟ್ಟಿಗೆ ; ಗೋಸ್ಥಾನ ; ಗೋಕುಲ : (+). **ತುರುಮಂದೆ** : ೧. " ತುರುವಿಂಡೆನಲು ತುರುಮಂದೆಯೆನಲು ಗೋಸಮುದಾಯಮಕ್ಕು " (ಕಶರ. ೪೬) ; ತುರುಮಂದೆಯಲ್ಲಿ ಇರುವ ಪದ್ಧತಿಯಾಗಿದ್ದುದರಿಂದ (ನಮ್ಮೂರ. ೬೬). [ ತುಱು + ಮಂದೆ ]

**ತುಱುಮಿಂಡಿ**, ತರಿಮಿಂಡಿ, ತಱಿಮಿಂಡಿ, ತಱುಮಿಂಡಿ, ತುರುಮಿಂಡಿ (ನಾ). ೧. ಹೊಸಪ್ರಾಯದವಳು ; ಮೈನೆರೆದ ಹೆಣ್ಣು ; ನವಯೌವತಿ : " ತುಱುಮಿಂಡಿಯೆನೆ ನೆಱೆದ ಪೆಣ್ಣಕ್ಕು " (ಶಬ್ದಮಂ. ೭೪) ; ಪಾಡಿದರ್ ತುಱುಮಿಂಡಿಯರಮೃತೋಪಮಾನಗಾನಮನೊಲವಿಂ (ಉದ್ಭಟ. ೨-೦೦೮). ೨. ಮುಟ್ಟಾದವಳು : " ತುಱುಮಿಂಡಿಯಾರಯ್ಯೆ ಪುಷ್ಪವತಿಯಾದವಳ್ " (ಕಬ್ಬಿಕ್ಕ. ೨೬). **ತರಿಮಿಂಡಿ** : ೧. ತರಿಮಿಂಡಿಯರ್ನಡೆದರೊಡಲಳವಿನಿಂ ಮಲೆಯ ಬೆರೆವ ಪೊರೆಯುಂ ಪೊತ್ತು (ಕಾಲಶರ ೧೨೪-೨೬೧). **ತಱಿಮಿಂಡಿ** : ೧. ತುಱುಗಿದಾಭರಣಗಳೋರೆಕೋರೆಯ ತಿದ್ದಿ ತ [ಪಾಠಾಂ. ಸ]ಱಿಮಿಂಡಿಯನುಮಾದಳಾಗ (ಭರಪ. ೦೦-೬೩) : ರಣಕೆ ಪೋಪವಸರದೊಳ್ ತಱಿಮಿಂಡಿಯಪ್ಪ ತನ್ನಯ ಮಡದಿಯನಿಕ್ಷುಮತಿಯಂ ಕಂಡು (ರಾಮಾಶ್ವ. ೧೩೦-೨೬). ೨. " ತಱಿ[ ಪಾಠಾಂ. ತುಱು ]ಮಿಂಡಿಯೆಂದು ಪುಷ್ಪಿತೆಯಾದ ಕಾಂತೆ " (ಕಶಸಾ. ೬೨-೩೭೨) ; " ತಱಿ [ ಪಾಠಾಂ. ತುಱು ]ಮಿಂಡಿಯೆನಲು ಪುಷ್ಪಿತೆ " (ಕವಿಕಂ. ೧೬೪). **ತಱುಮಿಂಡಿ** : ೨ "ತಱುಮಿಂಡಿ–ರಜಸ್ವಲೆ, ಮುಟ್ಟಾದ ಹೆಂಗಸು, ಪುಷ್ಪಿತೆ" (ಪ್ರಭಶ.). ತುರುಮಿಂಡಿ:೧."ತುರುಮಿಂಡಿಯೆಂದೆನಲ್ ಪ್ರಥಮಋತುವಾದ ಕಾಮಿನಿ" (ಕಶರ. ೪೭): "ತಱುಮಿಂಡಿ–ತುರುಮಿಂಡಿ=ಬೆಳೆದ ಹುಡಿಗೆ, ಹೆಣ್ಣಾದವಳು" (ಜಾನಕೋ. ೩೭). 'ಸಱಿಮಿಂಡಿ' ಪರಾ. [<ತುಱುಗು$_1$ + ಮಿಂಡಿ]

**ತುಱುಯ್ಯಲು** 'ತುಱುಹುಯಲು' ನೋ.

**ತುಱುವಟ್ಟೆ** 'ತುಱುಪಟ್ಟಿ' ನೋ.

**ತುಱುವರಿ**, ತುಱುಪರಿ, ತುಱುಹರಿ$_2$ (ನಾ). = ತುಱುಗೋಳ್ : ಮಾದೆಯ ಹರಿಹರಂಗಳು ಸಂಕರಸೆಟ್ಟಿಯ ಹಳ್ಳಿಯ ತುಱುವರಿಯಲು ಹರಿದು ಸ್ವರ್ಗಸ್ಥನಾದನು (ಮ್ಯಆರ್. ೧೯೩೮, ೪-೪; 1291). **ತುಱುಪರಿ** : ಬೆಳ್ಳತ್ತೂರದ ಗಾವುಣ್ಡಂ ತುಱುಪರಿಯಲ್ ಸತ್ತಂ (ಎಕ. XII, ತಿಪಟೂ. ೧೧-೩; ಸು. 930); ಗನಪಳ್ಳಿಯ ಎಱ×ಸಂದಂ ಕಾಸನರ ಭೀಮಂ ಉರಱಿವಿನೊಳ್ ತುಱುಪರಿಯೆ ಮಾಣ್ಚಿ...ಸುರಲೋಕಕ್ಕೆ ಸಂದನ್ (ಎಕ. VIII(s), ಸೊರಬ. ೫೭೫-೩; 981). **ತುಱುಹರಿ$_2$** : ಶ್ರೀಮತ್ಸ್ಯದಂಬರ ಸಾಸ್ತ್ರಯ ದೇವ ಗುಡುಮೆಯನಿಱಿದು ತುಱುಹರಿಯೆ ಕಾದಿಸಿ ತುಱುವಿಂಗಡ್ಡಂ ಬನ್ದು (ಎಕ. VIII, ಸೊರಬ. ೭೦-೧೭; 1032) ; ತುಱುಹರಿಯಲು ಕಾದಿಸಿದವರು ...ಸುರಲೋಕಪ್ರಾಪ್ತರಾದರು (ಎಕ. XVI, ಚಿಕ್ಕನಾ. ೭೦-೩; 1123) ; ಮತ್ತಿಗಟ್ಟದ ಮುದ್ದಗ × × × ಗಜಕ್ಕಗವುಣ್ಡಂಗಂ ಪುಟ್ಟಿ × ಮಾರಗವುಡ ತುಱುಹರಿಯಲು...ಸುರಲೋಕಪ್ರಾಪ್ತನಾದಂ (ಎಕ. XII, ತಿಪಟೂ. ೩೯-೮; 1291). [ ತುಱು + ಪರಿ$_3$ ]

**ತುಱುವರಿಗಾಳಗ** (ನಾ). ಹಸುಗಳನ್ನು ಅಪಹರಿಸುವಾಗ ಮಾಡುವ ಯುದ್ಧ; ಗೋಗ್ರಹಣನಿಮಿತ್ತವಾದ ಕಾಳಗ,-ಯುದ್ಧ : ತುಱುವರಿ [ಪಾಠಾಂ. ಬರೆ, ಹರಿ] ಗಾಳಗದೊಳೊಡೆಮುರಿದು ಗೋವರು ಧೂಳಿಗೋಟೆಯ ಕೊಂಡರಮರರ ರಾಜಧಾನಿಗಳ (ಕುವ್ಯಾವಿ. ೫-೩). 'ತುಱುಗೋಳ್' ಪರಾ. [ ತುಱುವರಿ + ಕಾಳಗ ( <ಕಾಳೆಗ) ]

**ತುಱುವಳ** 'ತುಱುವಾಳ' ನೋ.

**ತುಱುವಳ್ತಿ**, ತುರುವಳ್ತಿ (ನಾ). ಗೊಲ್ಲರ ಹೆಂಗಸು; ಗೊಲ್ಲಿತಿ; ಗೋಪಿ: "ತುಱುವಳ್ತಿಯರು ಗೊಲ್ಲತಿಯರೆನಲ್ ಗೋಪಿಯರು" (ಶಬ್ದಮಂ. ೩೪). **ತುರುವಳ್ತಿ** : "ತುರುವಳ್ತಿಯೆನೆ ಗೋಪತರುಣಿ" (ಕಶರ. ೪೭).
[ ತುಱುವಳ (<ತುಱುವಾಳ) + -ತಿ$_1$ (< - ಇತ್ತಿ) ]

**ತುಱುವಳ್ಳಿ**, ತುಱುಪಳ್ಳಿ (ನಾ). = ತುಱುಪಟ್ಟಿ ೨ : "ಘೋಷ ತುಱುವಳ್ಳಿಯು ತಾಂ" (ಕವಿಕಂ. ೮೫). **ತುಱುಪಳ್ಳಿ**: ತುಱುಪಳ್ಳಿಯ ಗೋವುಳಿಗರೊಳ್ಸೋಟೆಗೆಯ್ದುಱಿದಾಡುವ ಬೀಡಿನೆರ್ಮೆಗಳಂ ಪಿಡಿದಂತರಸ ಗೊರ್ಣಿಪ್ಪಿಸುವುದುಂ (ಸುಕುಮಾ. ೭-೩೫ ವ) : ತುಱುಪಳ್ಳಿಗಳ ನೋಡಿ ವನಾಳಿದಪ್ಪದೆ ಬೇಟೆಯಾಡಿ ಸಮಸ್ತದಳಸಹಿತ ... ನೃಪ ಬಿಡಿಸಿದನು ಪಾಳೆಯವ (ಕುವ್ಯಾಆ. ಒಠಿ೩. ೧೯-೧). [ತುಱು + ಪಳ್ಳಿ$_1$]

**ತುಱುವಟ್ಟಿ** (ನಾ). (?) : ಕರಪುರನ್ ಬನ್ದು ಬಲ್ಲದಾ ತೊಱುಗೊಳೆ ಊರಾ ತೊಱುವಳ್ಳ ಉವಱಿನ್ ತುಱುವಟ್ಟಿ ಇದಿರೆ ನಡದಿಱಿದು ಬಿಟ್ಟ್ಯಾನ್ (ಎಕ. X, ಮುಳಬಾ. ೯೨-೭; ಸು. 780). [ ? ]

**ತುಱುವಾಳ**, ತುರುವಳ, ತುಱುವಳ, ತೊಱುವಳ್ಳ, ತೊಱುವಾಳ (ನಾ). ದನವನ್ನು ಕಾಯುವವನು; ಗೊಲ್ಲ; ಗೋವಳ : "ಗೋಪತಿ ಗೋವಿಂಯೆನಲು ತುಱುವಾಳನಕ್ಕು" (ಮಂಗರಾ. ೫೭-೧೦). **ತುರುವಳ**: "ತುರುವಳರೆನಲ್ಕೆ ಗೋಪರಂ" (ಕಶರ. ೪೭). **ತುಱುವಳ**: "ತುಱುವಳನೆಂದು ಗೋಪಾಳಂ" (ಕಶಸಾ. ೭-೧೨೭) : "ತುಱುವಳರೆನೆ ಗೋವಾಲರ್" (ಕವಿಕಂ. ೮೫) ; ನರಸಿಂಹಸೆಟ್ಟಿ ಕೊಟ್ಟ ಗ ೨ ತುಱುವಳ ಮಾಳಗತಿ ಕೊಟ್ಟ ಗ ೧ (ಎಕ. VI, ತರೀಕೆ. ೮೭-೧೧; 1239) ; ಪಳ್ಳಿಯ ತುಱುವಳನಂತಿರೆ ಪಸುವನೇನೆಂದು ಕಟ್ಟಿದಯ್ (ರಾಮಾಶ್ವ. ೧೫೩-೨೧). **ತೊಱುವಳ್ಳ** : ಕರಪುರನ್ ಬನ್ದು ಬತದಾ ತೊಱುಗೊಳೆ ಊರಾ ತೊಱುವಳ್ಳ ಉವಟಿನ್ ತುಱುವಟ್ಟಿ ಇದಿರ ನಡದಿಱಿದು ಬಿಟ್ಟ್ಯಾನ್ (ಎಕ. X, ಮುಳಬಾ. ೯೨-೭; ಸು. 780). **ತೊಱುವಾಳ್ಳ** : ಸೆಬ್ಬೆಣ್ನಾಡ ಮಾಜನ ಮೂಪತ್ತಿರ್ಚ್ಚರ ಆಳ್ವೊದುಗೆಯನ್ ಕೇಸರಿ ತೊಱುವಾಳ್ಳನಾ ಮಗನ್ ಆಲನ ತೊಱು ಇಕ್ಕಿಸಿ ಜಿಟ್ಟ್ಯಾನ್ (ಎಕ. X (೮), ಮಾಲೂರು. ೧೫೭-೭ ; 8ನೆಯ ಶತ). [ತುಱು + - ವಾಳ$_1$]

**ತುಱುವಿಂಡು**, ತುರುವಿಂಡು (ನಾ). ದನಗಳ ಮಂದೆ; ದನಕರುಗಳ ಸಮೂಹ : ಮೇವ ತುಱುವಿಂಡಿನೊಳು ದಾರಿಯೊಳು ಸುತ್ತಿ ಸುಳಿವಱಿಸಿದಂ ಸಿದ್ಧರಾಮನಾ ಪರ್ವತಾಗ್ರಣಿ ಮಲ್ಲಿಕಾರ್ಜುನನಸು (ಸಿದ್ಧರಾ. ೨-೩೭) ; ತುಱುವಿಂಡನೊತ್ತಟ್ಟಿನೊಳ್ಪಟ್ಟು ... ಐತಂದರ್ (ಶ್ರೀರಾಮ. ೪-೧೪). **ತುರುವಿಂಡು** : "ತುರುವಿಂಡೆನಲು ತುರುಮಂದೆಯೆನಲು ಗೋಸಮುದಾಯಮಕ್ಕು" (ಕಶರ. ೪೭) ; ವರುಣನು ಒಂದು ಹೋರಿಯನ್ನು ಕಳುಹಿಸಿದನು ... ಅದರ ಸಾಧು ಸ್ವಭಾವವನ್ನು ನೋಡಿ ಚಕ್ರವರ್ತಿಯು ಅದನ್ನು ತನ್ನ ತುರುವಿಂಡಿನಲ್ಲಿ ಸೇರಿಸಿಕೊಂಡನು (ಮಕಸ. ೯೫).
[ತುಱು + ಪಿಂಡು$_2$]

**ತುಱುವಿಡು** (ಕ್ರಿ). (ಅಪಹಾರವಾದ) ದನಗಳನ್ನು ಮರಳಿಸು,-ಕಾಪಾಡು (?) : ತುಱುಕೊಳೆ ಪಳ್ಳಿ ಅರಕ್ಕಮನ್ ತುಱುವಿಟ್ಟು ವಿಟ್ಟಂ (ಎಕ. X, ಮುಳಬಾ. ೨೭೫-೨ ; ಸು. 860). [ತುಱು + ಬಿಡು$_1$]

**ತುಱುವೆ**, ತುರುಬಿ, ತುರುಬೆ, ತುರುವೆಂ, ತುರುವೆ$_2$ (ನಾ). ೧. ಒಂದು ಬಗೆಯ ಹೂವಿನ ಗಿಡ : ತುಱುವೆಯ ಬೇರನಿಕ್ಕಿ ... ಘೃತಮಂ ಬೆರಸಿಟ್ಟು (ಲೋಕೋಪ. ೮-೧೦) ; ಪೊಂಗಳನೆ ಗೋಪಿಯರ್ ಕೆದಱಿದಪೋಲ್ ತುಱುವೆಯ ನೆಗ್ಗಿಲ ಪೂಗಳ್ ತುಱುಪಟ್ಟಿಯ ಪೊಱಗೆ ತುಱುಗಿ ಕರಮೆಸೆದಿರ್ಕುಂ (ಲೀಲಾವ. ೫-೧೧೫) : ತುಱುವೆಯ ಕಾಯ್ಗಳುಮಂ ಮಂಗುಱುವಳ್ಳಿಯನಿಡಿದ ಚೂರ್ಣಮಂ ಶರ್ಕರೆಯಿಂ ಸೆಱೆ ತಿಂದು ಬಿಸಿಯ ನೀರಂ ಕೆಱಿದುಗೊಳಲ್ಕಱಿಯದುಱಿಗುಮೋ ಕೆಯ್ಮಸಕಂ (ಐಮದ. ೧೪-೪೨); ತುಱುವೆಯ ಬೇರು ಮಾದಲದ ಕಡ್ಡಿಗಳನು ಇಟ್ಟು ತೊಳಸಿದೊಡೆ (ಸೂಪಶಾ. ೨-೩). ತುಱುವೆ :—ಈ ಬೇರಂ ನರಮೂತ್ರದಿಂದ ಅರೆದು ತೆಗೆದುಕೊಳ್ಳೆ ಬಾಣಂತಿಸನ್ನಿ ಹರ (ವಿವ್ಯವಿ. ೪). ೨. ಒಂದು ಬಗೆಯ ಹಕ್ಕಿ : ಲಾವುಗೆ ಹರಡೆ ಗೌಜು ಟಿಟ್ಟಿಭ ಕುಕಿಲ ತುಱುವೆ ಕಳ [ ಪಾಠಾಂ. ತುರುವೆಗಣ್ಣಂ ] ಹಂಸೆ ಶುಕ ಪಾರಿವದ ದನಿಗಳಿಂದೊದಱಿ ತಾವ್ ಕರೆವುತಿರಲು (ಸೋಮಱ. ಪರಿ. ೨೧೪) ; (ಹವಱಾ. ೫-೪೨ ನೋ). **ತುರುಬಿ** : ೧. ಶ್ರೀಮುದ್ರೆಗಿಡ... ತುರುಬೀಗಿಡ, ಗಿಡುತಿಂಗಿ (ಮ್ಯಜಿಗಿ. ೧-೭). **ತುರುಬೆ** : ೧. ಬೇವಿನ ಸೊಪ್ಪಿನ ಕಿಚ್ಚುಮಾಡಿ ಅದರಲ್ಲಿ ತುರುಬೆ, ತುಂಬೆ, ಗಣಜಲಿ, ಹೆಬ್ಬೇವು ಮೊದಲಾದ ತಪ್ಪಲುಗಳನ್ನು ಚೆಲ್ಲಿ (ಕನ್ನಜಾ. ೧೭೭); ನಮ್ಮ ಹುಡುಗಿ ಮಾಘಗೌರೀಪೂಜೆಗೆ ತುರುಬೆ ಹೂವು ಕೊಯ್ದುಕೊಂಡು ಬರಲು ಹೋಗಿದ್ದಾಳೆ (ರೂಢಿ). **ತುರುವೆಂ** : ೧. "ತುತ್ರ-ತುತ್ತಿ, ತುರುವೆಂ" (ಒಷಧಿ. ೭೦). **ತುರುವೆ$_2$** : ೧. "ಭೂರಿಬಲಾ-ತುರುವೆ" (ಒಷಧಿ. ೧೧೨) : ಮೂಲಿಕಾ ಪ್ರಯೋಗ . . . ತುರುವೆಯ ಬಡಗ ಹರಿದ ಬೇರಂ ತಂದು ಕಿವಿಗೆ ಕಟ್ಟಲು ಛಳಿ ಬಿಡುವುದು (ಸಕವ್ಯ ೭೫).

**ತುಱುಸೆಱೆ** (ನಾ). ಹಸುಗಳನ್ನು ಸೆರೆ ಹಿಡಿಯುವುದು ; ಗೋಗ್ರಹಣ : ಅರಿ ವಿರಾಟನ ಪುರಕೆ ಹಾಯಿದು ತುಱುಸೆಱೆಯ ತೆಗೆಸುವೆವು (ಕುವ್ಯಾವಿ. ೪-೧೯) : ಸಂಗಣ್ಣನು ಮೂಗೂರಿಂಗೆ ಹಳ್ಳಿಹಿರಿಉರ ಸಮಸ್ತ ಪ್ರಜೆಗಳುಡುಗಳ ತುಱುಸೆಱೆಯನಿಱಿದು ಕೊಂಡು ಹೋದಲ್ಲಿ (ಎಕ. XIV, ತಿರುಮ. ೨೨೩-೪ : ?). [ತುಱು+ಸೆಱೆ$_2$]

**ತುಱುಸೆಱೆಗೊಳ್** (ಕ್ರಿ). ಹಸುಗಳನ್ನು ಸೆರೆಹಿಡಿ : ಅರಮನೆಯ ಸೀಮೆಯೊಳ್ ದಾಱಿಟ್ಟು ತುಱುಸೆಱೆಗೊಂಡುದಱಿಂದುದಂದಿಗೆವರ್ಪ ಧನಧಾನ್ಯಂಗಳಡಂಗಿ (ಚಕವಂ. ೪೫-೧೧). [ತುಱುಸೆಱೆ + ಕೊಳ್$_1$]

**ತುಱುಸೆಱೆವಿಡಿ** (ಕ್ರಿ). ಹಸುಗಳನ್ನು ಸೆರೆಹಿಡಿಯುವ ಹಾಗೆ ಗುಂಪುಗುಂಪಾಗಿ ಹಿಡಿ : ಒಱಲ್ದೆಱಗುವ ಪಱಮೆವಱಿಗಳಂ ತುಱುಸೆಱೆವಿಡಿವ ನಱುಗಂಪಿನ ಸೊಂಪುಗಳ್ಗಂಬಾದ ಪೊಂಜಾಱಿಗಳಿಂ ಬಳ್ಳವಡಕೆಯ [illegible]ಳೊಳಂ (ಕಬ್ಬಿಕಾ. ೭೦). [ತುಱುಸೆಱೆ + ಪಿಡಿ$_1$]

**ತುಱುಹಟ್ಟಿ** 'ತುಱುಪಟ್ಟಿ' ನೋ.

**ತುಱುಹತಿ** (ನಾ). = ತುಱುಗೋಳ್(?) : ಕಲೋಜ ಪೆಗಡೆ ಕೇತ್ಯಯ [0] ಗಳು... ತುಱುವ ಕೊಂಡು ಹೋಹಂದು ಆವರ ಕೂಡೆ ಕಾದಿ ತುಱುಹತಿಯ ಸತ್ತು ಸ್ವರ್ಗಬಡದರು (ಕಇ. IV, ೩೫-೭; ?). [P ಇದು 'ತುಱುಪರಿ' ಎಂಬುದರ ಅಪಲಿಖಿತವಿರಬಹುದು]

**ತುಱುಹರಗೋಳು** (ನಾ). = ತುಱುಗೋಳ್ : ಶ್ರೀಮಾದಿ ಅಬಲದಲ ಸ್ಥಲದ ಬೆಕಾನ್ನ ತುಱುಹರಗೋಳುಗಳಲ್ಲಾದಿ ಸತ್ತಂ (ಮ್ಯಆರಿ. ೧೯೩೨, ೫೪-೯ ; 9ನೆಯ ಶತ). [<ತುಱುಹರಿ + ಕೋಳು$_2$ (<ಕೋೞ್)]

**ತುಱುಹರಿ$_1$**, ತುರುಹರಿ (ಕ್ರಿ). ಗೋವುಗಳನ್ನು ಹಿಡಿದುಕೊಂಡು ಹೋಗು : ಖಂಟಿಯ ಕಟಿಯ ತುಱುಹರಿವಲ್ಲಿ ಕಾದಿ ತುಱುವಂ ಮಗುರ್ಚೆ ತಾಂ ಸುರಲೋಕಪ್ರಾಪ್ತನಾದ (ಎಕ. V, ಹಾಸನ. ೧೧೮-೯ ; 1147). **ತುರುಹರಿ**: ರಾಕ್ಷಸರ್ತುರುಹರಿದು ತಮ್ಮ ಹಗೆಯರ ಗುರುವಿನಾ ಮಗನಿಲ್ಲಿ ಗೈತರಲುಬಹುದೇ ದುರುಳನಿವನೆಂದಾತನಂ ಕೊಂದುಹಾಕಿರಲ್ (ತುರಂಗ. ೮-೧೨). [ ತುಱು + ಹರಿ$_2$ (<ಪರಿ$_2$)]

**ತುಱುಹರಿ$_2$** 'ತುಱುಪರಿ' ನೋ.

**ತುಱುಹುಯಲು**, ತುಱುಯ್ಯಲು (ನಾ). ೧ = ತುರುಗಾಳಗ : ರಾಮಯನು ತುಱುಹುಯಲಲಿ ಸುರಲೋಕವ ಸಂದೊಡೆ (ಮ್ಯಆರಿ. ೧೯೨೮, ೧೨-೩ : ?). **ತುಱುಯ್ಯಲು** : ೨. ಹಸುಗಳ ಕೂಗು : ಅವರ ಮಗನ ಮಗಂ ಜಕ್ಕ ಪೆರ್ಗಡೆಯುಟ್ಟುವ ಪುಯ್ಯಲು ತುಱುಯ್ಯಲುವ ಕೇಳ್ದು ತಾಗಿ ಕಾದಿ ... ಸತ್ತಂ (ಎಕ. XII, ಶಿರಾ. ೪೩-೩ : ಸು. 1000).

[ ತುಱು + ಹುಯಲು (<ಪೊಯ್ಲು )]

**ತುೞಿ$_1$**, ತುಳಿ$_1$ (ಕ್ರಿ). ೧. ಕಾಲಿನಿಂದ ಮೆಟ್ಟು,-ಅಮುಕು,-ಘಟ್ಟಿಸು : "ತುೞಿ-ಪಾದಸಂಘಟ್ಟನೇ" (ಶಮುಧಾ) : ತುಱು ಪರಿವಾಗಳೆಮ್ಮ ಪೆಣನಂ ತುೞಿದುಂ ಪರಿಗುಂ ದಲ್ (ಪಂಪಭಾ. ೮-೯೩) : ಈ ಧೂರ್ತನನಾ ಗಜಂ ತುೞಿವುದಕ್ಕೇ ಪಚ್ಚದೇ ಮಂತಣಂ (ಧರ್ಮಾಮೃ. ೧೩-೭೪) ; ಗಂಧಗಜೋತ್ತಮಂ ತುೞಿದು ಕಿಟ್ಟೀಡಾಡುಗಾನಂದಚಂದ್ರವಿರುದ್ಧಸ್ಥಿತಿಯಂ ವಿಶುದ್ಧಜನಧರ್ಮದ್ರೋಹಪಂಕೇಜಮಂ (ಅರ್ಧನೇ. ೦-೮). ೨. ನಾಶ ಮಾಡು ; ಸೋಲಿಸು ; ಹಾಳುಮಾಡು : ರಿಪುಸೇನೆಯಂ ತುೞಿದು ತೊಟ್ಟುೞಿವಾಡುವಂ (ಪಂಪಭಾ. ೧೩-೪೪) : ಬಡವಂ ಬಾಟ್ಟಿಂಗುವೊ ...ಪೆಣ್ಬಡೆಯೆಂಗುವೊ ತುೞಿದು ಪರಿಗುವಂತರಾಜಂ (ಅಜಪು. ೧೦-೨೩) : ಮನಮಂ ಕಟ್ಟಿ ಗುಣಂಗಳಿಂ ತುೞಿದು ಪಂಚಾಚಾರದಿಂ ಪಂಚಬಾಣನ ಬಾಹಾಬಲಮಂ (ಪಂಚಾಮೂ. ೦-೩). ೩. ಹತ್ತಿಕ್ಕು ; ಅದುಮಿಡು ; ತಲೆ ಎತ್ತದಂತೆ ಮಾಡು : ತೊಲಗಿಸಿ ಕಾಮಮಂ ತುೞಿದು ಕೋಪಮಂ...ಎಮ್ಮಸಾಳ್ಗೆ ನಳಿನಾಕ್ಷಚರಿತ್ರದ ಚೈತ್ರಭೇರಿಗಳ್ (ಚಕವಿ. ೦-೯). ೪. ನೋಯಿಸು ; ಪೀಡಿಸು ; ಕಾಡಿಸು : "ತುೞಿದಂ...ಘಾಸಿ ಮಾಡಿದಂ" (ಶಮುದ. ಪರಿ. ೧) ; "ಘಾಸಿಯೊಳ್ ಪದದೆ ಮರ್ದಿಸು ವಲ್ಲಿಯುಂ ತುೞಿವೆಸರ್" (ಸಂಜೀವ. ೧೨) ; ಗಂಡರಳ್ಕೆರ್ದೆಗಳಂ ತುೞಿಪೋಜೆಯನುಂಟುಮಾಡುವಂದದೆ...ಸೂಸಿದುದು ಸೇಸೆಯನಾ ಪುರಾಂಗನಾಜನಂ (ಪಂಪಭಾ. ೪-೩೩). ೫. ಕಿವುಚು ; ಜಜ್ಜು ; ಹಿಂಡು ; ಅರೆ : "ಕಿವುಚುಟ್ಟಿನಲ್ ತುೞಿವುದು" (ಸಂಜೀವ. ೬) : ಗುರುಗುಂಜಿಯೆಲೆಯೊಳಲ್ಲದೊಡರಬಚ್ಚಗೆಯುರಲೊಳೆಳ್ಳುಮಂ ಬೆಲ್ಲಮುಮಂ ಬೆರಸಿ ತುೞಿದಿಟ್ಟದಂ ತಿನೆ ವರಾಂಗಿ ಲತೆಯಂತೆ ಪುಷ್ಪವತಿಯಾಗಿರ್ಕುಂ (ಲೋಕೋಪ. ೯-೧೭೪) ; ತಿಲತೈಲ ಸೈಂಧವಂ ಪಿಪ್ಪಲಿ ಮರಿಚಂ ವಿಶ್ವಮೆಂಬಿವಂ ಸಮನಾಗಲ್ತುೞಿದು ಮೆಲುತ್ತಿರೆ ತೊಲಗುಗುಮಲಸಂದೆಯ ಸೊರ್ಕು (ಖಮುದ. ೨-೦೭೮) : ಒರ್ಪಲಮುಪ್ಪಂ ತ್ರಿಕಟುಕಮೊರ್ಪಲಮುಂ ಬೇವಿನೆಲೆಯುಮಂ...ತುೞಿದು ಸಮರ್ಪಿಸುವುದು (ಅಶ್ವಶಾ. ೭-೩೪). **ತುಳಿ$_1$** : ೧. ಭಾಳಲೋಚನಾಗ್ನಿಯಿಂ ಪಂಚಶರನುರಿದು ನಿಲೆ ಪರಿತಂದು ಪದತಳದಿಂ ತುಳಿದು ಸ್ಮರಭಸ್ಮಾವಯವನಾಗಿ (೧೦೮. ೨ ಕಥಾಗರ್ಭ) : ಕೊಂಡು ಬಂದಾ ದೈತ್ಯಗಣವನು ದಿಂಡುಗೆಡಹಿಯು ತುಳಿಯೆ (ಸಂಭಪ. ೭-೩೮) ; ದಿಕ್ಕರಿ ನಡುಗೆ ಚೌಕದ ಕಳನ ತುಳಿದುದು ಸುಪ್ರತೀಕಗಜ (ಕುಮಾ.ದ್ರೋ. ೩-೧೦); ಮೈಂದನ ಸದೆದ ನೀಲನ ತುಳಿದ . . . ಗದೆಯಲಪ್ಪಳಿಸಿದ ಗವಾಕ್ಷನ (ಕೌಶಿರಾ. ೨೫-೨೨); ಹಾವಿನ ಹೆಡೆಯಂ ತುಳಿವರೇನೆ ಅಂಜಿಕಿಲ್ಲವೆ (ಪುರಂದ. ೨-೭೩-೮); ತ್ರಿವಿಕ್ರಮನು ಬಲಿಯ ತಲೆಯ ಮೇಲೆ ಪಾದವನ್ನಿಟ್ಟು ಅವನನ್ನು ಪಾತಾಳಕ್ಕೆ ತುಳಿದು ಅಲ್ಲಿಯೇ ಆಳಿಕೊಂಡಿರುವಂತೆ ಅಪ್ಪಣೆ ಮಾಡಿದನು (ನೀತಿಚಿಂ. XV, ೨೯). ೨. ಕೌರವಸೇನೆಯಂ ತುಳಿದು ಗೆಲ್ದ ಗಣ್ಡರುಂ . . . ವೀತಮತ್ಸರದಿಂ ಭಾವಿಸುವಾಗಳೀ ಸಮರಕೊಳ್ಗಣ್ಡಂಬರಂ ಗಣ್ಡರೇ (ಸೌಇಇ. XI – i, ೫೨-೦೨; 1008); ಕದನದೊಳಾಂತರಂ ತುಳಿದು ಕೊಲ್ವೆಡೆಯೊಳು ಲಯಕಾಲಕಾಲನೆಂಬುದು (ಎಇ. XVI, ೩೩-೧೭; 1102). ೩. ಆಗ ಇತರರ ಹಕ್ಕುಬಾಧ್ಯತೆಗಳನ್ನು ತುಳಿಯಲೂ ಹಿಂಜರಿಯರು (ಶಿಕ್ಷದ. ೦೧೧). ೪. ಸುಲಿದು ವಿಪ್ರನಿಕಾಯವಾದ:ದ ತುಳಿದು ದೇಶಾಂತರವ ಮಾಡಿಯೆ . . . ಬಂದು ಕಂಡನು ಜಗದ ವಲ್ಲಭನ (ಸಂಭಪ. ೨೬-೬೧). ೫. ಕಗ್ಗಲಿಯ ತೊಪ್ಪಲನು ತುಳಿದು ರಸವ ಹಿಂಡಿಕೊಂಡು ಅದಂ ಮೈಗೆ ತೊಡೆವುದು (ಅಶ್ವಚಿ. ೬೯-೦). ೬. ಹಾದಿಯಲ್ಲಿ ನಡೆ,-ಸಾಗು : ಎಷ್ಟು ತುಳಿದರೂ ದಾರಿ ಮುಗಿಯಲೊಲ್ಲದು (ರೂಢಿ).

**ತುಳಿತುಳಿ** (ದ್ವಿರುಕ್ತಿ) : ಮದವಲರ್ದ ತನುವಂ ಕುಸುರಿದಱಿದುಱಿ ಕಲ್ಲೊರಳೊಳಿಕ್ಕಿ ತುಳಿತುಳಿದು ತಾಂ ಹರಿವ ತೊಱೆಯಲಿ ಕಲಸ ಬಗೆವನು (ಬಸಪು. ೪೫-೨೮): ರಣವ ಶೋಧಿಸಲೆಂದು ಕಳನೊಳು ಪೆಣನ ತುಳಿತುಳಿದಱಸೆ ಕುರುಧಾರುಣಿಯ ಪತಿಯನು ಕಂಡು ನೆಱೆ ಮಱುಗಿದಳು ಗಾಂಧಾರಿ (ಕುಮಾ.ಗ. ೦೨ ಸೂಚನೆ): ಸಲೆ ಸೇರಿಸಿದೇಣಿಗಳ ಮೇಲೆ ಸುಭಟರು . . . ಅಲಗಿನ ಗಾಯವನೆಣಿಸದೆ ಹೆಣಗಳ ತುಳಿತುಳಿದೊಡನೇಱಿದರು (ಕಂನವಿ. ೧೪-೪೭). **ತುಳಿದ ಹಾದಿ**=೧. ಜನರು ನಡೆದಾಡಿರುವ ದಾರಿ; ಸಿದ್ಧವಾದ ಮಾರ್ಗ. ೨. ಸಂಪ್ರದಾಯ; ಪರಿಚಿತವಾದ ಕ್ರಮ; ಪದ್ಧತಿ : ಮಾಡಿರುವ ಪ್ರಯತ್ನವು ಮುಂದೆ ಸತ್ಯಾನ್ವೇಷಣ ಮಾಡುವವರಿಗೆ ತಳಹದಿ ಅಥವಾ ತುಳಿದ ಹಾದಿ ಆಗದೆ? (ಸಂಶೋಧ. IV, ಅರಿಕೆ). **ತುಳಿದಾಡು**=ತುಳಿ; ಮೆಟ್ಟು : ವಿಗಡಕರಿ ತುಳಿದಾಡಿತಿದಿರಿದಿರಾದ ಪಟುಭಟರ (ಕುಮಾ.ದ್ರೋ. ೩-೦೭). **ತುಳಿಮಣ್ಣು**= (ಗೋಡೆ ಮೊದಲಾದುವನ್ನು ಕಟ್ಟಲು) ಚೆನ್ನಾಗಿ ತುಳಿದು ಹದ ಮಾಡಿದ ಮಣ್ಣು : ತುಳಿಮಣ್ಣು ಚೆನ್ನಾಗಿದ್ದಷ್ಟೂ ಗೋಡೆ ಬಿಗಿಯಾಗುತ್ತದೆ (ರೂಢಿ). **ತುೞಿದಿಕ್ಕು** = ಅದುಮು ; ಹತ್ತಿಕ್ಕು : ಸ್ಯೂಸ್ ದೇವನೆಂದುಂ, ಎನ್ನೆರ್ದೆಯ ಬಯಕೆಯಂ ತುೞಿದಿಕ್ಕಲೆಂದು, ತನ್ನಯಾ ಬಲ್ಮೆಯಂ ಒತ್ತದಿರ್ಕೆಂದುಂ (ಬದ್ಧಪ್ರ. ೨೮-೫೯೬).

[ದೇ.॥ ತಮಿ. ತೊೞೈ ; ಮಲ. ತೊೞಿ]

**ತುೞಿ$_2$**, ತುಳಿ$_2$ (ನಾ). ಮೆಟ್ಟುವಿಕೆ ; ತುಳಿತ : ಆ ಖಳನ ತುೞಿಯ [ಪಾಠಾಂ. ವು] ಮಂ ಸೋಂಕುಮನಾರವಧರಿಪರ್ (ಆದಿಪು. ೪-೭೭). **ತುಳಿ$_2$** : ಸುಮಮಕರಂದದಿಂದೆ ಕಪಿ ಕೈದೊಳೆದಾ ದ್ರುಮಪತ್ರಪಾತ್ರೆಯಂ ಸಮೆದದಱಲ್ಲಿ ತುಂಬಿ ತುಳಿವೊಂದದ ಪೂಗಳನೈದೆ ತುಂಬಿಕೊಂಡು. .ಬಂದು ಸಂಯಮಿಗಳ ಮುಂದೆ ನಿಂದೆಱಗಿ ಕಾಣ್ಕೆಯನಿತ್ತುದು (ರಾಜಶೇ.೧-೧೨೭). 'ಕಾಲ್ದುಳಿ$_2$' ಪರಾ. [< ತುೞಿ$_1$]

**ತುೞಿಕಲ್**, ತುಳಕಲು, ತುೞಿಕಲ (ನಾ). ೧. ತುಳಿತಕ್ಕೆ ಸಿಕ್ಕಿದುದು. ೨. ಬಾಡಿದುದು ; ಸೊಪ್ಪಾದುದು ; ರಸಹೀನವಾದುದಂ : "ತುೞಿಕಲ್ (ತೞಿಕಲ್, ತಟಿಕಲ್) = ಸೊಪ್ಪಾದುದು" (ಶಮುದ. ಪರಿ.೧): ತುೞಿಕಲಡುಗೆಗಳೊಳೇಂ ಪಟುಗಟವೆಯ ಕೂೞ್ ತಿಪ್ಪೆಡುಗಳೆದ ತೊವರಿಯ

ತೊವೆ ಕಾಯ್ದುೞಿಪಿದ ತುಪ್ಪಂ ಕೋಡುವ ಕೞಲಿಲ್ಲದೆ ದಿವ್ಯಭೋಜನಂ ಪೞತುಂಟೇ (ಕಾವ್ಯಾವ. ೨೪೦). **ತುಳಕಲು** : ೩. ತುಳಿತ; ಮೆಟ್ಟುವಿಕೆ : ಕುದುರೆ, ಎತ್ತು, ಮನುಷ್ಯರು ಇವರ ತುಳಕಲಿನಿಂದ ತಮಗೆ ತಾವೇ ಬಿದ್ದ ಮಾರ್ಗಗಳಿಂದಲೇ ಯಾವತ್ತು ವ್ಯವಹಾರ ನಡಿಯುತ್ತಿತ್ತು (ಕಥಾಗ. ೨೯೪). **ತುೞಿಕಲ** : ೨. " ತುೞಿಕಲಮನೆ ಸೊಪ್ಪಾದುದು" (ಕರ್ಣಾನಿ. ೮೨).

[ತುೞಿ$_1$ + – ಕಲ್$_4$]

**ತುೞಿಕಲ** 'ತುೞಿಕಲ್' ನೋ.

**ತುೞಿಯಿಸು**, ತುಳಿಯಿಸು, ತುಳಿಸು, ತುೞಿಸು (ಕ್ರಿ). ೧. ಕಾಲಿನಿಂದ ತುಳಿಯುವಂತೆ ಮಾಡು ; ಮೆಟ್ಟಿಸು : ಲೀಲಾಕಮಲಾಕರಾನೀಕರಕ್ತ ಕಮಳಂಗಳನಾಸ್ಯಾನುಶೋಣಿತಶೋಣರಿಪುನೃಪಶಿರಂಗಳಿಂದೆ ತುೞಿಯಿಸಿಯುಂ (ಆದಿಪು. ೮-೪೧ವ). ೨. (ಅರೆದು) ಕೂಡಿಸು ; ಮಿಶ್ರಮಾಡು : ಕ್ರಿಯೆಯುಂ ಬೀಜಂಗಳನಲ್ಲಿಯೇ ಮಣ್ಣೊಳ್ ಬಿತ್ತಿ ತಳಿಗೆ ತುೞಿಯಿಸಿ ಪಾಲ್ ಪಂದಿಯ ನೆಣಗಳುಮಂಬಿವನನುನಯದೆ ಮೊದಲ್ಗೆಱೆಯೆ ಸದ್ಯಫಲದೊಳ್ ನೆಱೆಗುಂ (ಲೋಕೋಪ. ೬-೨೪). **ತುಳಿಯಿಸು** : ೧. ಎತ್ತುಗಳಿಂದ ರಾಗಿಯನ್ನು ತುಳಿಯಿಸಿದರು (ರೂಢಿ). ೩. ನಾಶಪಡಿಸು : ಸಿದ್ಧಪದಮಂ ಕೆಯ್ಕೊಳ್ವುದರ್ಕಡ್ಡಮೊಡ್ಡಣಮೊಡ್ಡಿರ್ದಘ ಸೈನ್ಯಮಂ ತುೞಿಯಿಸಲ್ (ಶಾಂತಿಪು. ೦-೭). **ತುಳಿಸು** : ೧. ಎಲವೊ ಸಂಶಯ ಬೇಡ ಗಜದಲ್ಲಿ ತುಳಿಸು ತಂಗಿಯ ಮಕ್ಕಳನು (ನಿಘಾಗ. ೧೦-೩೧-೩೨): ರಾಗಿ ತುಳಿಸುವುದಕ್ಕೆ ನಿಮ್ಮ ಎತ್ತುಗಳನ್ನೂ ಸ್ವಲ್ಪ ಕೊಟ್ಟಿರಿ (ರೂಢಿ). **ತುೞಿಸು**: ೧. ಸಿಂಧುರದಿಂ ನುಗ್ಗಾಗೆ ಕಾಲ್ಕೆಯ್ ಮುೞಿಯೆ ತುೞಿಸಿ... ದಂಡಿಸುವ ನರಕಜಗರ್ೞೀವೋ ಮಯ್ಯೊಡ್ಡಲಾಱೆಂ (ಧರ್ಮಾಮೃ. ೧೩-೧೫೭).

[ ತುೞಿ$_1$ +– ಇಸು$_3$ ]

**ತುೞಿಲ್$_1$**, ತುಳಿಲ್$_1$, ತುಳಿಲು$_1$ (ನಾ). ೧. ಎರಗುವಿಕೆ ; ಮಣಿಯುವುದು ; ನಮಸ್ಕಾರ; ಪ್ರಣಾಮ : "ತುೞಿಲ್ ಪ್ರಣಾಮದೊಳ್" (ಕರ್ಣಾನಿ. ೩೭): "ತುೞಿಲೆಂದು ಪೊಡೆಮಡುವುದು ಕುಂಬೆಂದು ಮುಱಿಗೆಂದು ಬೞಿಕ ಮಣಿಯೆನೆ ನಮಸ್ಕಾರಕ್ಕೆ ಪೆಸರಕ್ಕುಂ" (ಕಬ್ಬಿಕ. ೩೩) ; ಬ್ರಹ್ಮಋಷಿಯರೆಲ್ಲರುಮಂ ತುೞಿಲ ಪರಕೆಯ ಸಮಾನ ಪ್ರತಿಪತ್ತಿಯಿಂ ಕಿಱಿಯಿರಿಯರಱಿದು ಪೊಡೆವಟ್ಟು (ಪಂಪಭಾ. ೭-೩೩ವ) : ಉಪಾಂಘ್ರಿಗೊಳ್ಪಿನಿಂ ತುೞಿಲನೊಡರ್ಚಲ್ (ವೀರವಿ. ೦-೭೦); ಬೀಗುತ್ತುಂ ಶರಣೆಂದು ಮಾಡ್ಪ ತುೞಿಲೆಂ ಬೇರೋರ್ವರಂ ಸೇರ್ವುದೇ (ಪ್ರಸೂಪು. ೦-೧). ೨. ಆಳುತನ; ದಾಸ್ಯ; ಸೇವೆ. 'ತುೞಿಲ$_1$' ಪರಾ. **ತುಳಿಲ್$_1$** : ೧. "ನತಿಃ—ತುಳಿಲ್" (ಕಾಶಕ್ಯ. ೪೦): ತು [ಹಾಕಾಂ. ತ]ಳಿಲಾಂತು ಬಂದು ನಿರ್ಮಳನದ್ವಿತೀಯನಚಳಪರಂಜ್ಯೋತಿರಾಕಾರ ನ ಳಿ ನ ಜಾ ಂ ಡ ಗಳ ತನ್ನೊಳು ಪೆತ್ತಮೂರ್ತಿ ಕಂಗೊಳಿಪ ಸೋಮೇಶನಾಲಯಕೆ (ಭೈರವೇ. ೪-೦೦) : ನಾಗನಾಥಂಗೆ ಸಲುಗೆಯಿಂ ತುಳಿಲೆಸಗಿ (ಸಿದ್ಧೇಪು. ೭-೪೯) : ಬೆನ್ನ ಬಿಸಿಲೇ ಕಾಣ್ಕೆ ಗೆಯ್ಮೆಯೊಡೆಯನ ತುಳಿಲ್ (ಕಾಲೂರ. ೨೯-೨೧). **ತುಳಿಲು$_1$** : ೧. ಮನೆಯ ಮೂಲೆಮೂಲೆಗೂ ತುಳಿಲೆಂದು, ಮಗಳನ್ನು ಕಾಪಾಡಿರೆಂದು ಕೋರಿ ಪತಿಯೊಡನೆ ತವರಿಗೆ ಹೋಗುತ್ತಾಳೆ (ಶರಜ. ೨೧). ೨. 'ತುಳಿಲಾಳು$_1$' ಪರಾ.

[ದೇ.॥ ತಮಿ. ತೊೞು=ಪೂಜಿಸು ; ಮಲ. ತೊೞು = ನಮಸ್ಕರಿಸು; ತುಳು. ತುರ್ಲಿ; ತೆಲು. ದೋಯಿಲಿ]

**ತುೞಿಲ್$_2$**, ತುಳಿಲ್$_2$, ತುಳಿಲು$_2$ (ನಾ). ಶಕ್ತಿ ; ಸಾಹಸ; ಪರಾಕ್ರಮ: " ತುೞಿಲ್=ಪೊಡವಡಿಕೆ ; ವೀರಂ " (ಕಮುದ. ೫೦. ೧): " ತುೞಿಲೆಂದು ಶೌರ್ಯದೊಳ್" (ಕರ್ಣಾನಿ.೩೭); "ತುೞಿಲೆನಲ್ ಪೊಡವಡಿಕೆಗಂ ವೀರಕಂ ಪೆಸರ್" (ಸಂಜೀವ. ೦೦). 'ತುೞಿಲಾಳ್$_2$' ಪರಾ. **ತುಳಿಲ್$_2$** : ತುಳಿಲಾಂತರಳಿದರುಳಿಯದೆ ಬಳಿಯಂ ನೆಱೆ ಕಾಣದಲ್ಲಿ ದಳದುಳದಿಂದಂ (ಹಮ್ಮಿರ. ೩-೫೩). **ತುಳಿಲು$_2$**: ಕರಚಮತ್ಕಾರಕ್ಕೆ ಚಮತ್ಕಾರಮಾರ್ಬಟೆಗೆ ಯಾರ್ಬಟೆ ತುಳಿಲ್ಗೆ ತುಳಿಲು ... ಸರಿಯಾಗೆ ಸಂದೀಶ ಕುಂಭಾಸುರರ್ ಮಹಾಧುರದೊಳೆಚ್ಚಾಡಿದರ್ (ಚಲಪು. ೨೭-೨೫).

ತುೞಿಲ್ಗೆ ವಸಂತ=ಒಂದಂ ಬಿರುದುಂ: ಮಾನಸೂರರಳಿ ಕಯ್ಪೆ ಮಗಸಸ್ಪ ಭುಕಯ್ಪ ತುೞಿಲ್ಗೆ ವಸನ್ತನ್ ಗಣ್ಡಪದಿಚನ್ದನ್ ... ಕುದುರೆಇನ್ದಿೞಿದು ನಡದಿಱಿದೊಟ್ಟಿಕೆಯ್ದು ಬಿೞ್ದರ್ (ಎಕ. X, ಶ್ರೀನಿಪಾ. ೫-೫; ಪು. 780).

[ದೇ.॥ ತಮಿ. ತುಣಿವು; ಮಲ. ತುಸಿ=ಸಾಹಸಮಾಡು]

**ತುೞಿಲ$_1$** (ನಾ). ೧. ಸೇವೆಯಿಂದ ಜೀವಿಸುವವನು ; ಭೃತ್ಯ ; ದಾಸ : ಅೞಿಪಿ ಕಿಱಿದಕ್ಕೆ ಕಮ್ಮನೆ ಗಳಗಳಸುತ್ತ್ರೀಳಿದರ್ಕಳೊಳ್ ಬಿಡದೆ ತಗುಳ್ದುೞಿಪೞಿಯೂಡುವ[ನೆಂತುಂ] ತುೞಿಯ[ಲ]ಕ್ಕುಂ ತುೞಿಲಸಂದನಕ್ಕುಮೀ ಧರೆಯೊಳ್ (ಬಂಹರಿ. ೦೦-೧೦೫). ೨. ಪಂಚಮವರ್ಗಕ್ಕೆ ಸೇರಿದವನು : ಅಂತ್ಯಜ : "ತುೞಿಲನೆನಲ್ಕೆ ಪಂಚಮನೊಳ್" (ಕರ್ಣಾನಿ. ೮೩).

[ ತುೞಿಲ್$_1$ + – ಅ$_7$ ]

**ತುೞಿಲ$_2$** (ನಾ). ವೀರ; ಶೂರ; ಪರಾಕ್ರಮಶಾಲಿ : "ಕರಮೊಲ್ದನೊಳಂ ಸುವೀರನೊಳ್ ತುೞಿಲನೆನಲ್ಕೆ" (ಕರ್ಣಾನಿ. ೮೩). [ ತುೞಿಲ್$_2$ + – ಅ$_7$ ]

**ತುೞಿಲಸಂದ$_1$** 'ತುೞಿಲ್ಸಲ್$_1$' ಪರಾ.

**ತುೞಿಲಸಂದ$_2$** 'ತುೞಿಲ್ಸಲ್$_2$' ಪರಾ.

**ತುೞಿಲಾಳ್$_1$**, ತುಳಿಲಾಳು$_1$ (ನಾ). ಆಳು; ಸೇವಕ; ದಾಸ : ಆದೊಡೆ ಪೆಣ್ಗಳ್ ಮೇಣ್ ತುೞಿಲಾಳ್ಗಳ್ ಅವನ ಜಸಮಂ ಪಾಡುವೆಡೆಯೊಳ್ ನಿರ್ಬಂಧಮಿಲ್ಲಂ (ಅದ್ಭುತ. ೨೨-೨೨). **ತುಳಿಲಾಳು$_1$** : ದಳಪತಿ ಮನ್ನೆಯ ಮಾಂಡಲಿಕರು ನೆಱೆ ತುಳಿಲಾಳು ರಾಯರಾವುತರು...ಒಪ್ಪಿದರು (ಕಂಸವಿ. ೮-೨೮) : ರಾಷ್ಟ್ರಕೂಟಸಿಂಹಾಸನಕ್ಕೆ ತುಳಿಲಾಳಾಗಿ ಬದ್ದೆಗನು ಚಾಳುಕ್ಯ ಭೀಮನನ್ನು ಗೆದ್ದನೆಂಬುದರಿಂದ (ಸಾಡೋಇ. ೩೨೭). [ತುೞಿಲ್$_1$+ಆಳ್$_3$]

**ತುೞಿಲಾಳ್$_2$**, ತುಳಿಲಾಳ್, ತುಳಿಲಾಳು$_2$ (ನಾ). ಪರಾಕ್ರಮ ಉಳ್ಳವನು ; ಶೂರ ; ವೀರ : "ತುೞಿಲಾಳ್ ಪರಾಕ್ರಮಮುಳ್ಳಂ" (ಕಶಸಾ. ೧೪-೨೭೪); "ತುೞಿಲಾಳೆ ಧೀರನೊಳ್" (ಕರ್ಣಾನಿ.೩೦); ಪದ್ದೆಗನ ಕೋಣೆಯ ಗಂಗನ ಮೊತ್ತಮೆಲ್ಲಮಂ ಬೆದಱುವಿನಂ ತರಳ್ಚಿ ಪಲರುಂ ತುೞಿಲಾಳ್ಗಳನಿಕ್ಕಿ (ಎಕ. II, ೧೩೮-೦೨ ; 940) : ಪಸಾಯ್ತರ ಬೞಿಸಲ್ವ ತುೞಿಲಾಳ್ಗಳಡ್ಡಣದೊಳೆಡ್ಡಮಾಗೆ (ಕಬ್ಬಿಕಾ. ೪೪) : ಕೊಳನಂ ನಿಸ್ಸಾರಮೆಂದು ಪುರುಳ್ಗಿಂದಿದಾಣ್ಮನಂ ತೊಱೆದು ಪೋಪ ತುೞಿಲಾಳ್ಗಳಂತಿರೆ ನೀರ್ವಕ್ಕಿಗಳ್ ದೆಸೆದೆಸೆಗೆ ಪೋದುವು (ರಾಮಾಶ್ವ. ೫೦-೨೩). **ತುಳಿಲಾಳ್**: "ತುಳಿಲಾಳೆನೆ ಪರಾಕ್ರಮಿಗೆ ...ಅಭಿಧಾನವು" (ಕಶರ. ೪೭): ತುಳಿಲಾಳ್ಗಳು ತನ್ನಾ ನೂರ್ವರು ಸುತರೆಳಸಿ ಬಳಸಿ ಬಂದನಾಗ (ನೇಮಿಸಂ. ೨೫-೦೭೪) ; ತಳುವದೆ ಜೀವಿತಗೊಂಬ ತುಳಿಲಾಳ್ಗಳಲ್ಲದೆ ರಾಮನ ಮೆಯ್ಗಾವಲೊಳಗಿಲ್ಲ ಲೆ ಕ್ಕ ದಾ ಳು ಗ ಳು (ಕುಠಾಸಾಂ. ೯-೦೮) ; ಬಿರುದಿನ ಬೆನ್ನ ಝಲ್ಲಿಯ ತುಳಿಲಾಳ್ಗಳ ನೆರವಿ ಮಧ್ಯದೆ ಬಹನಾರೆ (ಕಂಸವಿ. ೨೫-೪೭). **ತುಳಿಲಾಳು$_2$**: ತುಳಿಲಾಳಿಗೆ ಕೈವಶವಾದ ಸುದತಿಯರಳಿವಿಟರಿಗೆ ಮೋಹಿಸುವರೆ (ನೇಮಿಸಂ. ೧೦-೧೪೪) ; ನಳಿನನಾಭನ ಸುತನಂತೆ ತುಳಿಲಾಳಿನಂತೆ ... ಸಲೆ ಭೂಜಮೆಸೆಯೆ (ಭೈರವೇ. ೧-೫೩) : ಹೈದರನು ಮತ್ತೆ ಒಂದು ಲಕ್ಷ ತುಳಿಲಾಳುಗಳನ್ನು ಕೂಡಿಕೊಂಡು ದುರ್ಗದ ಮೇಲೆ ಧಾಳಿಮಾಡಿದನು (ಕವೀರ. ೦೨೫).

[ ತುೞಿಲ್$_2$ + ಆಳ್$_3$ ]

**ತುೞಿಲಾಳಾಯ್ತ** (ನಾ). ವೀರರ ಧರ್ಮ ; ವೀರವೃತ್ತಿ ( ? ) : ಅಂತಃ ಪುೂದಲಿಸದೆ ಇಱಿವುದು ತುೞಿಲಾಳಾಯ್ತಮಲ್ಲೆಂದು ಮುಟ್ಟೆ ಮೂದಲಿಸಿ (ಗದಾಯು. ೮-೨೫ ವ).

[ ? ಇದು 'ತುಳಿಲಾಳ + ಆಯತ' ಎಂದು ಭಿನ್ನಪದವಾಗಿರಬಹುದೆ ? ]

**ತುೞಿಲಾಳ್ತನ** (ನಾ). ಶೌರ್ಯ ; ಪರಾಕ್ರಮಂ : ಪೆಣ್ಣುಡೆಯುಟ್ಟಿರೆ ಪುತ್ತ್ರನೇೞ್ ಕೊಲ್ಲದ ತುೞಿಲಾಳ್ತನಕ್ಕೆ ಸಮನಾವನೊ ಸಾಹಸಭೀಮಭೂಪನೊಳ್ (ಗದಾಯು. ೧-೨೨) ; ಚಾಳುಕ್ಯರಾಜ್ಯಕ್ಕೆ ಕಾರಣಮಾದಳ್ ತುೞಿಲಾಳ್ತನಕ್ಕೆ ನೆೞಿದಾಳ್ (ಎಇ. XV, ೩೪೦-೯ : 1071): ತುೞಿಲಾಳ್ತನಕ್ಕವಂ ನೀರಿೞಿವಂತಳವೞಿದು ಸೂಸೆ ಕಣ್ಣೀರ್ತೀರಿಂದಿೞಿದಂ (ಶಂರಾಮಾ. ೪-೭೦).

[ ತುೞಿಲಾಳ್$_2$ + – ತನ ]

**ತುೞಿಲ್ಗೆಯ್, ತುಳಿಲುಗೆಯ್, ತುಳಿಲುಗೆಯಿಂ, ತುಳಿಲ್ಗೆಯ್, ತುಳಿಲ್ಗೆಲ** (ಕ್ರಿ). ವಂದಿಸು ; ನಮಸ್ಕರಿಸು : "ತುೞಿಲ್ಗೆಯ್ – ನಮಸ್ಕಾರೇ" (ಶಮುಧಾ) : "ಬಾಗೆಜಗು ಪೊೞ್ಗು ತುೞಿಲ್ಗೆಯ್ಯನ್ನಲ್ ಬಿಡದದುಪೆ ವಂದನಾರ್ಥದಿ ತೊಡಗುರ್ಗಂ" (ಕವಿಕಂ. ೧೮೯) ; ತಾಯುಂ ಕಂಡು ತುೞಿಲ್ಗೆಯ್ದು ಪಂಡಿತರಾಗಿ ಬಂದುದಂ ಪೇೞ್ದು (ವಡ್ಡಾರಾ. ೪-೨೨) ; ಜನಕನುಂ ವಿದೇಹಿಯುಂ ದಶರಥಂಗಮಪರಾಜಿತಾಮಹಾದೇವಿಗಂ ತುೞಿಲ್ಗೆಯ್ವುದುಂ (ಪಂರಾಮಾ. ೬-೪೮ವ): ನಂಜುಗೊರಲನ ಗಾಡಿಯಂ ನೋಡಿ ಬಗೆಯೊಳಚ್ಚರಿವಡುತಂ ಬಂದು ತುೞಿಲ್ಗೆಯ್ದು ಕೈಗಳಂ ಮುಗಿದು (ಕಬ್ಬಿಗಕಾ. ೧೬೮) ; ನಿಜರಾಜಮಂದಿರಮಂ ಪೊಕ್ಕು ತಾಯ್ಗೆ ತುೞಿಲ್ಗೆಯ್ದು ತನ್ನ ಬೞಿಯೊಳ್ಬಂದ ವಿದ್ಯಾಧರರ್ಗೆಲ್ಲಮುಡಲುಂ ತೊಡಲುಂ ಕೊಡಿಸಿ (ಪುಣ್ಯಾಸ್ರ. ೧-೮೮ವ): ಎನ್ನ ಬಿನ್ನಪಂ ಪಾಪೆಯಂ ತುೞಿಲ್ಗೆಯ್ದಂತಿರೆ ಪೊೞ್ಚಜದಾಯ್ತು (ರಾಮಾಶ್ವ. ೩೭-೨೮). **ತುಳಿಲುಗೆಯ್** : ಬಳಿಕ ತುಳಿಲುಗೆಯ್ದಂತೆಂದನು (ನೇಮಿಸಂ. ೭-೦೦) ; **ತುಳಿಲುಗೆಯಿ** : ವಸುದೇವ ... ಮುನಿಪಗೆ ತುಳಿಲುಗೆಯಿದೆಯಿ[ಪಾಠಾಂ. ಗೈದೈ]ತಂದು ನಿಜಮಂದಿರದೊಳಿರೆ (ನಾಳ್ವಧಾ. ೧೯-೫೩). **ತುಳಿಲ್ಗೆಯ್** : ಸಗ್ಗಿಗರೆೞಿಯಗೆ ತುಳಿಲ್ಗೆಯ್ವ (ತ್ರಿಭುತಿ. ೨೪-೧); ಬಾಗಿಲ್ಗಾಪಿನ ಪಡಿಯರತಿಯರು ಬಾಗಿ ತುಳಿಲ್ಗೆಯ್ವಾಗ ಒಡತಿಯ ಮುಖವನ್ನು ನೋಡುತ್ತಿದ್ದರು (ಸವತಿ. ೨೦೧). **ತುಳಿಲ್ಗೆಲ** : ಯತಿನಿಶ್ಚಳಾನಂದಮಯನಡಿದಾವರೆಗೆ ತುಳಿಲ್ಗೆಲದು ಕೃಪೆಯಿಂದೆ ಬಿಜಯಂಗೈವುದೆಂದು ಬಿನ್ನವಿಸೆ (ಸಿದ್ಧೇಪು. ೧೭-೩೧) ; ಕಾಲನಂ ಕಂಡು...ತುಳಿಲ್ಗೆಲದನು (ರುಕ್ಮಾಂಗ. ೮-೪). [ತುೞಿಲ್$_1$ + ಕೆಯ್$_1$]

**ತುೞಿಲ್ಗೊಳು, ತುಳಿಲ್ಗೊಳ್** (ಕ್ರಿ). ೧. ನಮಸ್ಕರಿಸು ; ವಂದಿಸು : ಕಾಣ್ಕೆಯನಿಕ್ಕು ಚೋಳ ಮಲೆಯಾಳ ತುೞಿಲ್ಗೊಳು (ಉದ್ಭಟ. ೨-೨೧). **ತುಳಿಲ್ಗೊಳ್** : ೨. ನಮಸ್ಕಾರವನ್ನು ಕೈಗೊಳ್ಳು ; ವಂದನೆಯನ್ನು ಸ್ವೀಕರಿಸಂ : ಪಲಗಣ್ಣಮುಖದಮರ್ದನುಂಬರಿಂ ತುಳಿಲ್ಗೊಂಬ ಗೊಂದಳವಿಗ ಗೊರವನೇ (ನವಮೋ. ೩೨-೦).

[ ತುೞಿಲ್$_1$ + ಕೊಳು ( <ಕೊಳ್$_1$) ]

**ತುೞಿಲ್ವಾಡು** (ನಾ). ಶೌರ್ಯವನ್ನು ಕುರಿತು ಹಾಡುವ ಹಾಡು; ವೀರಗೀತೆ : ಶ್ರೀರಘುಪ್ರವರನಡಿಯ ತುೞಿಲ್ವಾಡಿನ ಬೀಣೆಯ ಜವಳಿ ಮದ್ದಳೆಯ ... ಮೇಳದವರ್ (ರಾಮಾಶ್ವ. ೭೮-೧೮).

[ತುೞಿಲ್$_2$ + ಪಾಡು$_2$ ]

**ತುೞಿಲ್ಸಂದ$_1$** 'ತುೞಿಲ್ಸಲ್$_1$' ಪರಾ.

**ತುೞಿಲ್ಸಂದ$_2$** 'ತುೞಿಲ್ಸಲ್$_2$' ಪರಾ.

**ತುೞಿಲ್ಸಲ್$_1$** (ಕ್ರಿ). ಸೇವೆಗೆ ಸೇರು ; ಊಳಿಗದಲ್ಲಿ ಪ್ರವರ್ತಿಸು ; ದಾಸನಾಗು.

ತುೞಿಲ್ಸಂದ$_1$, ತುೞಿಲಸಂದ$_1$ = ೧. ಸೇವಕ ; ದಾಸ. ೨. ಪಂಚಮವರ್ಗಕ್ಕೆ ಸೇರಿದವನು ; ಅಂತ್ಯಜ. "ತುೞಿಲ್ಸಂದಂ = ... ಪಂಚಮಂ" (ಶಮುದ. ಪರಿ. ೧) : "ತುೞಿಲಸಂದಂ ಪಂಚಮಂಗೆ ..." [ತುೞಿಲ್$_1$ + ಸಲ್$_1$]

**ತುೞಿಲ್ಸಲ್$_2$** (ಕ್ರಿ). ಪರಾಕ್ರಮದಿಂದ ಪ್ರಸಿದ್ಧನಾಗು ; ಬಲದಿಂದ ... ಸಿದನಾಗು ; ಶೂರನೆನಿಸು.

ತುೞಿಲ್ಸಂದ$_2$, ತುೞಿಲಸಂದ$_2$=ಶೂರ; ಪರಾಕ್ರಮಿ; ಶೂರನಾದ ಯೋಧ : "ತುೞಿಲ್ಸಂದಂ = ವೀರಂ ; ಪಂಚಮಂ" (ಶಮುದ. ಪರಿ. ೧) ; ನಿಃಮುಮಿಂತಿನಿತೆರ್ದೆಗಟ್ಟರಿಂ ತುೞಿಲಸಂದರನಾರುಮನೆಂತು ನಂಬುವರ್ (ಪಂಪಭಾ. ೧೦-೧೧೯): ಕೆಲರ್ ತುೞಿಲಸಂದರೞಿಯೆ ನೊಂದರ್ (ಪಂಚತಂ. ೨೦೬-೧೯) ; ಕೆಲಬರಂ ಕಡೆವಾಯೊಳವುಂಕಿ ಕೊಂದುದುಳ್ಕೞಿಯದೆ ನಿಂದರಂ ತುೞಿಲಸಂದರನಾ ವನಕೇಳಿವಾರಣಂ (ಚಂದ್ರಪು. ೧೦-೯೭) ; ಪರಧನಮಂ ಕರವೊಪ್ಪುವ ಪರವನಿತಾಜನಮನಳಿಪಿ ಕಳಲುಂ ಕೊಳಲುಂ ದೊರೆಗಾಗದೆಂಬ ಶೌಚದಭರಮುಂ ತಾಳ್ದಿದನೆ ತುೞಿಲಸಂದಂ ಜಗದೊಳ್ (ಬಂಡರಿ. ೧೧-೧೧೧). ತುೞಿಲ ಸಂದಿಕೆ = ಯುದ್ಧದಲ್ಲಿ ತೋರುವ ಪರಾಕ್ರಮ, – ಶೌರ್ಯ : ನೇಸಱುನೊಳದಂದೆನ್ನಂ ಸಾಸಿಸುವಂ ಸುರಪಸೂನುವಲ್ಲದೊಡೞಿವಂ ಭಾಸುರ ವಸುಪ್ರೊಕ್ಕಂತಿದೆ ಲೇಸೆಂದುೞಿದಿರಲೆ ತುೞಿಲಸಂದಿಕೆಯೞಿಗುಂ (ನೇಮಿಪು. ೧೨-೭೩) ; ಕೆಲರ್ ತುೞಿಲಸಂದಿಕೆಯ ಪಸುಗೆಗಳಂ ಮುನ್ನೞಿಯದೆ ನೆಗೞ್ದು (ಬಂಡರಿ. ೧೧-೮೦ವ). [ ತುೞಿಲ್$_2$ + ಸಲ್$_1$ ]

**ತುೞಿವು** (ನಾ) ತುಳಿತ ; ಮೆಟ್ಟುವಿಕೆ : ಆ ಖಳನ ತುೞಿವು [ಪಾಠಾಂ. ಯು] ಮಂ ಸೋಂಕುಮನಾರಪಧರಿಪರ್ (ಆದಿಪು. ೪-೭೭).

[ತುೞಿ$_1$ + – ವು]

**ತುೞಿಸು** 'ತುೞಿಯಿಸು' ನೋ.

**ತುೞಿಹ** (ನಾ). ಹಿಂಡುವುದು ; ರಸ ತೆಗೆಯುವುದಂ ; ಅರೆಯುವುದು : "ಸುತ್ಯಾ, ಅಭಿಷವಃ, ಸವನಂ–ಯಜ್ಞಾರ್ಥವಾಗಿ ಸೋಮುವ ತುೞಿಹ" (ನಾಚಿರಾ. ೫). [ತುೞಿ$_1$ + – ಹ$_2$]

△ ತುೞುವ 'ತುಳಂ' ನೋ.

**ತುೞ್ವಿಲ್** (ನಾ). ಒಂದಂ ಬಗೆಯ ಮರ ; ಚುಜ್ಜಲುಮಂರ ( ? ) : ತಸ್ಯ ಸೀಮಾನ್ತರಂ ಕೊಳ್ತಿನಿ ತೋಜ್ಪೆ ಪೆರಿಪ್ಪೆ ಪಾಣ್ಡಿರ್ಕು ತುೞ್ವಿಲುಂ ದೇವಸಾಲೆಯುಂ (ಎಕ. XVI, ಗುಬ್ಬಿ. ೭೫-೫೦ : 733) : ದಕ್ಷಿಣಸ್ಯನ್ದಿಶಿ ಪಡುವ ನೋಡಿ ಪೋದ ಪೇೞ್ತೋಜ್ಪೆಯೆ ಅನ್ತೆ ತುೞ್ವಿಲ ಪೇೞ್ತೋಜ್ಪೆಯೆ (ಎಕ. XVI, ತಿಪಟೂ. ೧೪೦-೭೮ ; 900). [ ? ]

**ತುೞ್ವಿಲ್ಗಾಲ್, ತುಳ್ವಿಲ್ಕಾಲ್** (ನಾ). ಒಂದು ಸ್ಥಳದ ಹೆಸರು : ತಸ್ಯ ಸೀಮಾನ್ತರಂ ಪೂರ್ವಸ್ಯಾನ್ದಿಶಿ ತುೞ್ವಿಲ್ಗಾಲೆ ಅನ್ತೆ ಬನ್ದು ಕಳರಾಬಾಯ್ಕಾಲುಳ್ ಕೂಡಿ ... ಅನ್ತೆ ಬನ್ದು ತೋಜ್ಪೆಯುಳ್ ಕೂಡಿತ್ತು ... ಅನ್ತೆ ಬನ್ದು ಬೆಟ್ಟದಾ ಮೂಡಾಯ್ ಪೊರೆವ ಬನ್ದು ತುೞ್ವಿಲ್ಗಾಲೊಳ್ಕೂಡಿತ್ತು (ಮೈಆರಿ. ೧೯೩೬, ೫೩-೨೪ ; 700 ?). **ತುಳ್ವಿಲ್ಕಾಲ್** : ಅರಸರಾನಸುಮತಪ್ಪಡಿಸಿ ಪೊಯ್ದುದು ತುಳ್ವಿಲ್ಕಾಲ್ಕಿಲ್ಲಿಪುಸೂರ್ ...ಡಿಯಕ್ಕ (ಮೈಆರಿ. ೧೯೩೫, ೧೦೬-೨೮ ; ?). [ತುೞ್ವಿಲ್ ? + ಕಾಲ್$_2$]

**ತೂ** (ನಾ). (ಅವಹೇಳನ, ಅಸಹ್ಯಗಳನ್ನು ಸೂಚಿಸುವ) ಒಂದು ಅನುಕರಣ ಶಬ್ದ : ತೂ ನಿನ್ನ ಯೋಗ್ಯತೆಗೆ ಇಷ್ಟು ಬೆಂಕಿ ಹಾಕು (ರೂಢಿ).

ತೂತೂ (ದ್ವಿರುಕ್ತಿ) : ಶಿವನ ತನುವಂ ನೋಡಿ ತೂತೂ ಎಂದು ತೂಪಿೞಿದ ಯುವತಿಯಂ ಕಂಡು (ಬಸಪು. ೧೩-೨೦). 'ಥೂ' ಪರಾ.

**ತೂಂಕಂಗೊಳ್** (ಕ್ರಿ). ತೂಗಿಬೀಳು; ಮೂರ್ಛೆಹೋಗು : ವಿಷವಿಷಮ ಕನತ್ಕಿಂಜಲ್ಕಮನುತ್ಪಲಮೊಂದಂ ಜನಪತಿ ಕಂಪುಗೊಂಡು ತೂಂಕಂಗೊಂಡಂ (ಶಾಂತಿಪು. ೬-೯೨). [< ತೂಂಕು$_2$ + ಕೊಳ್$_1$]

**ತೂಂಕಡ** 'ತೂಂಕಡು' ನೋ.

**ತೂಂಕಡಂಗಾಣ್** (ಕ್ರಿ). ತೂಕಡಿಸು ; ಜೂಗರಿಸು : ಹಂಸೆಗಳಿರಡೆಮೆಯೊಂದಾಗಲೀಯಳ್ ನವಿಲ್ವಾಣತಿಯಂ ಕಣ್ಮುಚ್ಚಲೀಯಳ್ ಗಟಿಪುವಗಿಳಿಯಂ ತೂಂಕಡಂಗಾ [ಪಾಠಾಂ. ಕಾ]ಣ ಲೀಯಳ್ (ಅರ್ಧನೇ. ೩-೦೦೬).

[< ತೂಂಕಡು + ಕಾಣ್]

**ತೂಂಕಡಿಕೆ, ತೂಕಡಿಕೆ, ತೂಗಡಿಕೆ** (ನಾ). = ತೂಂಕಡು ೧ : ಜೃಂಭಮತಿ ಜಡಶ್ವಾಸಂ ದೃವಿಷಾಳನಂ ತೂಂಕಡಿಕೆಯುವನುಭಾವಂಗಳ್ (ರಸರ. ೪-೧೨೮). **ತೂಕಡಿಕೆ :** ಬರಬರ ಭಕ್ತಿಯಾರೆಯಾಯಿತ್ತು, ಕಾಣಿರಣ್ಣಾ ಮೊದಲ ದಿನ ಹಣೆ ಮುಟ್ಟಿ ಮಱುದಿನ ಕೈಯ ಮುಟ್ಟಿ ಮೂಱನೆಂಬ ದಿನಕ್ಕೆ ತೂ[ಪಾಠಾಂ. ಮೂ]ಕಡಿಕೆ ಕಾಣಿರಣ್ಣಾ (ಬಸವ. ೨೨೦) ; ಸೆಜ್ಜೆವನೆಯೊಳಗೆ ಮೃದುವೆನಿಪ ತಳ್ಪದ ಮೇಲೆ ಸಜ್ಜನಂ ನೆಲಸಿ ತೂಕಡಿಕೆ ಮನವಂ ಜೋಲೆ (ಬಸರ. ೯-೧೩೦) : ಕಣ್ಣೆವೆಗಳಲಿ ನಸು ತೂಕಡಿಕೆ ತೋಱೆದೊಡ ವೈಗೆದಱುವನು (ಕುವ್ಯಾಅ. ೯-೮): ತುಳುಕ್ಯಾಡತಾವ ತೂಕಡಿಕಿ (ಗಂಗಾತ. ೭೦-೩) : ತನಗೆ ತೂಕಡಿಕೆ ಬಂದಾಗ ಅಲ್ಲಿ ಕೊಂಚ ಹೊತ್ತು ಕುಳಿತುಕೊಂಡ (ಪಠಾಕ್ಷ. ೧೨೦). **ತೂಗಡಿಕೆ :** "ಜೃಂಭಣಂ–ತೂಗಡಿಕೆ" (ಶಾಶಕ. ೭೭) : ಸುಂದರಿಯರೇ ನಿಮಗೆ ತೂಗಡಿಕೆಯೇ (ಮಲಿನಾ. ೭೦).

[ತೂಂಕಡು + – ಇಕೆ]

**ತೂಂಕಡಿಕೆಗಣ್** (ನಾ). ತೂಕಡಿಸುವ ಕಣ್ಣು ; ನಿದ್ದೆಗಣ್ಣು : ಕಳ್ಳನೆಂದು ತೂಂಕಡಿಕೆಗಣ್ಣಿಂದಾಕೆಯ ಮುಂದಲೆಯನಡಸಿ ಪಿಡಿದು (ಧರ್ಮಾಮೃ. ೨-೪೭).

[ತೂಂಕಡಿಕೆ + ಕಣ್]

**ತೂಂಕಡಿಸು, ತೂಕಡಿಸು** (ಕ್ರಿ). ೧. ನಿದ್ರೆಯಂ ಭಾರದಿಂದ ತಲೆಯನ್ನು ತೂಗಾಡಿಸು ; ನಿದ್ರೆಯಿಂದ ಜೋಲು ; ಜೂಗರಿಸು : ತೂಂಕಡಿಸಿಯುಮಲಸಿಯುಮಿಾಗಳು ಜಡತ್ವಮಾಯ್ತೆಂದು ಮನಮನಱೆಗಬಲೆಯರ(ಂ) (ಮದತಿ. ೧೦-೫೭) : ಬಡವಪ್ಪೊಡೆ ... ತೂಂಕಡಿಪೊಡೆ ಪಶುಗಳ್ಗೆಲ್ಲಂ ಕೊಡುವುದು ಬೇವಿನ ಕಷಾಯಮಂ (ಲೋಕೋಪ. ೯-೨೧೭) ; ತೂಂಕಡಿಪ್ಪವರನೊಪ್ಪುವ ಪಾಸಿನ ಮೇಲೆ ನೂಂಕಿದಂತಾದುದು (ಪಾರ್ಶ್ವಪು. ೩-೧೦೩) : ತನು ಬಡವಪ್ಪ ತೂಂಕಡಿಸುವಾಗುಳಿ ಪುಟ್ಟೆ ... ಪೊಂಗಿ ಬಸಿಱ್ ಬಿಗಿದನ್ಯಗರ್ಭಿಣೀಜನದ ವಿಕಾರಮಾ ಸತಿಯೊಳಾಗವೆ (ಪುಷ್ಪಪು. ೯-೦೧೭) : ನಿದ್ದೆಯ ಬಿಣ್ಪಿಂ ತೂಂಕಡಿಪ ನಿನತೊಂದು ಗುಣಂ ಹೀನಂ (ರಾಮಾಶ್ವ. ೯೩-೧೧). ೨. ನಿದ್ರೆಮಾಡು : ಲೋಕಪಾಲನಿರುಳ್ ತೂಂಕಡಿಸುವಾಗಳ್ (ಚಾವುಂಪು. ೮೫-೬) : ತೂಂಕಡಿಪ ವನ್ಯಮೃಗಂಗಳ ಮಗ್ಗುಲೊಳ್ ತೆಱಂದಿರಿದು ಹಿಮಾಂಶುರಶ್ಮಿಗಳಿನುಜ್ವಳಿಸಿದುಟಜಾಂಗಣಗಳೊಳ್ ಪರೆದೆಸಗಿತ್ತತಿಪ್ರಮದಕಾರಣನಂದು ನಿಶಾಸಮಿಾರಣಂ (ಕಾದಂಪೂ ೨೮೩) ; ಚೇರಮನಲ್ಲಿ ತೂಂಕಡಿಸೆ ಕನಸಿನೊಳಗೆಲ್ಲವಂ ಪುರಹರನೊಡಂಬಡಿಸೆ (ನಂಬಿರ. ೧೭-೧೧) : ಆತನೊಂದು ಲತಾಭವನದೊಳ್ ಮಱೆದು ತೂಂಕಡಿಸೆ (ಪುಣ್ಯಾಸ್ರ. ೧-೯೦ವ). ೩. (ಆಲಂ) ಕಾರ್ಯಗತವಾಗದಿರು ; ಆಚರಣೆಗೆ ಬಾರದಿರು : ನಿಯಮ ನಿಬಂಧನೆಗಳ ಕಟ್ಟುಪಾಡು ನಿಶ್ಚಯವಾಗಿ ತೂಂಕಡಿಸುತ್ತಿರುವುವು (ಬಿಟ್ಯಅ. ೩೪-೧೭). **ತೂಕಡಿಸು :** ೧. ಕೋಕನದಷಂಡತಟದೊಳ್ ತೂಕಡಿಸುವ ಹಂಸನಂತಿರೆ (ದಶಕು. ೦೪-೧೩) : ಕೃತವರ್ಮನೊಲೆದಾಗುಳಿಸಿ ತೂಕಡಿಸಿದನು ತೆಗೆದುದು ನಿದ್ರೆ ತನುಮನವ (ಕುವ್ಯಾಗ. ೯-೩): ಭಂಗಿಯ ತಿಂದಂತೆ ತೂಕಡಿಸುತ ಮತ್ತೆ ಕಂಗಳ ಮುಚ್ಚಿ ತೆಱೆವುತ ಬಿಂಗಿಯಂತಾಡುವ ಕಂಥೆಯ ಜೋಗಿಣಿಯಂಗದಾಟವೆ ನಮ್ಮ ನೃತ್ಯ (ಭರಚ. ೦೪-೫೨); ಕಿರಣಸಿಂಗ ತೂಕಡಿಸುತ್ತಿದ್ದ (ದೇವಸಾ. ೫೦): ತೂಕಡಿಸುತ್ತಿದ್ದವನಿಗೆ ಪಾಸಿಗೆ ಹಾಸಿ ಕೊಟ್ಟಂತೆ (ಗಾದೆ). ೪. (ಆಲಂ) (ಹೂವನ್ನು) ಬಾಡಿಸು ; ಮುಚ್ಚಿಕೊಳ್ಳುವಂತೆ ಮಾಡು: ನಗಿಸಿಯೆ ಕುಮುದಿನಿಯ ತೂಕಡಿಸಿ ಕಮಲಿನಿಯ ... ಸಂಧ್ಯಾಮಡದಿಯೊಪ್ಪಿದಳು (ಜೀವಂಚ. ೪-೦೬). [ತೂಂಕಡು + – ಇಸು$_3$]

**ತೂಂಕಡು, ತೂಂಕಡ, ತೂಕಡು** (ನಾ). ೧. ನಿದ್ರೆಯ ಜೊಂಪು ; ತೂಕಡಿಕೆ; ಮಂಪರಂ : ತುಂಗಭದ್ರನೆಂಬ ಪೋಡುಂಗಾಱಂ ಸೊರ್ಕೆ ತೂಂಕಡಿಂದಿರುಳ್ ಕಟ್ಟಿಂಗಳ್ ಕಡುಗತ್ತಲೆಯೊಳ್ ಬಂದು (ವಡ್ಡಾರಾ. ೧೪೭-೨೨). ೨. ನಿದ್ರೆ: ಆ ತೂಂಕಡಿನೊಳ್ ಪರವಶತೆ ಬೆರಸಿತರಸನೊಳಾಗಳ್ (ಲೀಲಾವ. ೩-೫೩): ಪಡೆದಿರ್ದ ವನವಿಹಂಗಂಗಳಂ ಕೊಂಬುವೆರಸಿ ತೂಗಿ ತೂಂಕಡನೊಡರ್ಚಿಯುಂ (ಚಂದ್ರಪ್ರ. ೮-೪ವ) : ಪತತ್ರಿಗಳೊಳಿರ್ದ ತೂಂಕಡು ನೂಂಕುತುಂ ತಣ್ಣನೆ ತೀಡಿತ್ತೆನಸುಂ ಪ್ರಭಾತಸಮಯಪ್ರೋದ್ಭೂತಶೀತಾನಿಲಂ (ಕುಸುಮಾ. ೧-೫೨). **ತೂಂಕಡ :** ೨. ತೂಂಕಡದ ಮೆಯ್ಯಲಸಿನಿಂದೇಳಲೊಲ್ಲದೆ (ಮಂತ್ರಶ. ೧೨೯-೪). **ತೂಕಡು :** ೨. ಪುರ್ಬಿನ ಕುಡಿವೆರಸು ತೂಕಡನೊಳಕೊಂಡ ಜಾಡ್ಯಮುಂ ಸೊಕ್ಕು ಮುಕ್ಕುಳಿಸಿದುಂತಿರ್ದಿರವುಂ ... ದೊರೆಕೊಳ್ಗುಮೆಂದು ಭಾವಿಸಿ (ಕಾದಂಪೂ. ೭೫೯).

[ದೇ. ॥ ತಮಿ. ತೂಙ್ಕಲ್ ; ಮಲ. ತೂಣ್ಣಲ್ ; ತುಳು. ತೂಗಡಿ]

**ತೂಂಕಡುಗೆಡು** (ಕ್ರಿ). ನಿದ್ರೆ ತಿಳಿ ; ಎಚ್ಚರವಾಗು : ಆಗಳಾತನುಂ ನೇಸರ್ಮೂಡುವಾಗಳ್ ತೂಂಕಡುಗೆಟ್ಟು ದೆಸೆಗಳಂ ನೋಡಿಪ್ಪಂ (ವಡ್ಡಾರಾ. ೫೪-೧೯). [ತೂಂಕಡು + ಕೆಡು$_1$]

**ತೂಂಕಿಡು** (ಕ್ರಿ). ಇಡಿ ; ತುಂಬು ; ತುರುಕು (?) : ಧರೆಗಂ ಪ್ಯೋಮಕ್ಕಮೆಂಟುಂ ದೆಸೆಗಮಡಸಿ ತೂಂಕಿಟ್ಟಪೋಲ್ ಭೂತಸೈನ್ಯಂ ಬರೆ (ಜಗವಿ. ೧೪-೦೯). [P ಇದು 'ತೂಂತಿಡು' ಎಂಬುದರ ಅಪಲಿಖಿತವಿರಬಹುದು]

**ತೂಂಕು$_1$, ಜೂಗು, ತೂಕು$_1$, ತೂಗು$_1$** (ಕ್ರಿ). ತೂಂಪ, ತೂಂಬ, ತೂಪ (ಭವಿಕೃ). ೧. ತಕ್ಕಡಿ ಮೊದಲಾದ ಸಾಧನಗಳಿಂದ ಭಾರವನ್ನು ಕಂಡುಹಿಡಿ, -ತೂಕಮಾಡು, -ತೋಲನಮಾಡು: ತೂಂಕಿ ನೋಡಿದರ್ ದಿಟ್ಟದೊಲೆಯೊಳೊರ್ವರನೊರ್ವರ್ (ಜಗವಿ. ೯-೭೧); ನಿತ್ಯಬಿಂದುಗೆ–ಬೆಡಂಗು, ಕಡಂಗು ... ಕೂಂಕಿದಂ, ತೂಂಕಿದಂ (ಶಮದ. ೩೭ ಪ್ರಯೋ). ೨. ತೂಗಾಡಿಸಂ ; ಅಲ್ಲಾಡಿಸು ; ಅಲುಗಾಡುವಂತೆ ಮಾಡು : ತಮ್ಮ ಗಡೆಗಳನಾಗಳ್ ಕಿಱಿಕಿಱಿದೆ ತಿರುಪಿ ಮಾಣದೆ ಕಿಱಿಕಿಱಿದನೆ ತೂಂಕಿ ತೂಂಕಿ ನೂಂಕಿದರೆನಸುಂ (ಗದಾಯು. ೮-೭): ಅವಷ್ಟಂಭದಿಂ ತೂಗಿದ ಬಾಳಪ್ಪಳ್ಳತ್ತು ಬಾಳ್ವುಗ್ಗಡದ ಬಿರುದರಂ ತೂಗಿ ತುತ್ತಿಟ್ಟುದೇಂ ತಾಳ್ದಿದನೋ ವಿಕ್ರಾಂತಮುಂ ಯಾದವಕುಳತಿಳಕಂ ವೀರಬಲ್ಲಾಳದೇವಂ (ಎಕ. IV, ತರೀಕೆ. ೪೫-೪೦; 1196). ೩. ನೇತಾಡಂ; ಜೋಲು; ಇಳಿಬೀಳು : ಫಲದ ಬಿಣ್ಪಿಂ ತೂಂಬವೋಲ್ ಜೋಲ್ದಿಳಾಂತರಮಂ ತಳ್ತು ವಿರಾಜಿಸಿತ್ತಭಿನತೋದ್ಯನ್ಮಾತುಳುಂಗವ್ರಜಂ (ಕುಸುಮಾ. ೯-೩೧) : ತೂಂ [ಪಾಠಾಂ. ತೂ] ಪೆಳಗಾಯ್ಗಳೆಂಬ ಕುಂಡಲಮುಮಾರ್ಪಡೆ ಸಂದನಮೆ ಸಂದನಮಾದುದು ಚೈತ್ರರಾಜನಾ (ವೃಷವಿ. ೪-೫೭). **ಜೂಗು :** ೪. ತೊನೆ ; ಒಲೆ ; ತೂಗಾಡು : ಬಳಲುತ್ತ ತೊಳಲುತ್ತಿರ್ಪ ಭವರೋಗದಲ್ಲಿ ಜೂಗುತ್ತಿರ್ಪ ಬಂಧನದ ಈ ದಂದುಗವಿನ್ನೆಂದಿಗೆ ಪೋಪುದು (ವಚನ. II, ೦೫೩). **ತೂಕು$_1$:** ೪. ಬೀಳುವಂಬಿನ ಹೊಯ್ಲು ಖಡ್ಗದ ತೂಳುವಾನೆಯ ತೂಕಿ ತಾಗುವ ಶೂಲಿಗೆಯ ... ಧಾಳಾಧೂಳಿ ಮಸಗಿತು (ಕುವ್ಯಾಕ. ೧೦-೯). ೫. ತೂಕವನ್ನು ತೋರು : ಏನದಕೆ ಸುರಪತಿಯ ದಂತಿ ಸಮಾನವೆಂಬರದಷ್ಟದಿಕ್ಕುಗಳಾನೆಗಳ ಪಡಿಕಟ್ಟು ತೂಗಲು ತೂಕುವವು [ಪಾಠಾಂ. ತೂಕಕವು] ಕಿಱಿದು (ತೊರರಾ. ೬-೩೨-೧೪). ೬. ಸಮಾನವಾಗೆಣಿಸು : ಮಂದರಾಚಲದಿಂದ ತೂಕಿಯೆ ವರಪಿನಾಕವ ಕೊಟ್ಟನಾ ಶಿವನು (ಸಂಥಪ. ೨೪-೧೬). **ತೂಗು$_1$ :** ೧. ಧರೆಯುಱೆಯುಲೊಡಂ ತೂಗಲ್ ಧರೆಗೆ ತುಲಾದಂಡಮಲ್ತೆ ಮದ್ಭುಜದಂಡಂ (ಆದಿಪು. ೧೪-೮೧); ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ (ಬಸವ. ೪೪೦) : ದೇವದ್ರುಮುವಂ ಲಕ್ಷ್ಮಾದೇವಿಯುಮಂ ಕಮಳಸಂಭವಂ ತೂಗಿದೊಡಾ ದೇವದ್ರುಮಕ್ಕೆ ಲಕ್ಷ್ಮಾದೇವಿ ದಶಾಫಲದ ಬಿಣ್ಪಿನಿಂ ಘನವಾದಳು (ಸೌಇಇ. IX-1, ೨೭೩-೫೭; 1179) : ಓರಂತೆ ಮರಕಾಲರು ಹಡಗಿನ ವ್ಯವಹಾರದಿ ಗಳಿಸಿದ ಹಣವ ಭಾರಸಂಖ್ಯೆಯಲಿ ತೂಗುವರು (ಮೋಹತ. ೩-೨೯) : ವರುಣಗಿರಿ ಪೂರ್ವಾದ್ರಿಗಳ ಪೆಚ್ಚು ಕುಂದುಮಂ ಸರಸಿಜಭವಂ ನೋಳ್ಪೆನೆಂದು ತೂಗಲ್ (ತಬಪು. ೯-೧೭) : [illegible] ತ್ರಾಸಲೀ ಪುರವ ಸಗ್ಗವನೊಲ್ದು ಬಿಸರುಹಾಸನ [illegible]

(ಕಂಸವಿ. ೫-೪). ೫. ಮೆಯ್ಯಂ ತೂಗುತ್ತುಂ ಉನ್ಮತ್ತ ಚೇಷ್ಟೆಯಿಂದೆರೆಯಂ ತಿಂದ ಮೀನಂತೆ ಪೊಳೆಯುತ್ತುಂ (ಧರ್ಮಾಮೃ. ೫-೦೩೬ವ) ; ನಿಮ್ಮನ್ವಯವ ಸಂಹರಿಸಿದಿರಿ ಸಾಕೆಂದು ಸಂಜಯ ತೂಗಿದನು ಶಿರವ (ಕುಮಾ.ಕ. ೧-೦೫). ೬. "ತೂನೆ, ಒಲೆ, ತೂಗು, ಸೆಡೆವು, ಅಲ್ಲಾಡು, ನಡುಕಂ– ಈ ೬ ಕಂಪನಂ" (ಕಶಸಾ. ೩೧-೬೫೦) ; ತೂಗಿ ಪಣ್ಗೊಲೆಯುಂ ಬಳ್ಳುವ ಕೌಂಗು (ಆದಿಪು. ೧-೬೭) : ತನು ಪುಳಕಾಳಿಭಾರದೊಳೆ ತಾಂ ತೂಗುತ್ತಿರಲ್ (ಕುಸುಮಾ. ೬-೮೮) ; ತಿಂದು ತೇಗಿ ತೂಗಿ ಕೆಲಕೆಲೆದು . . . ನಲಿದಾಡುವ ಭಲ್ಲೂಕ ನಿಕಾಯದಿಂ (ಗಿರಿಕ. ೧-೦೨೮ ವ) : ನಸುಗೆಂಪಿನಿಂ ಬೀಗಿ ಬಾಗಿ ತೂಗುವ ... ತೆನೆಗಳಂ ತಿಟಾತಿಟಾದು ತಂದು ತಂದು (ಸಿದ್ಧರಾ. ೨-೨೯) ; ಚಾರಿಗಳು ಬಲವೆರಡರೊಳಗೊಯ್ಯಾರದಲಿ ತೂಗಿದವು (ಕುಮಾ.ದ್ರೋ. ೧-೫೦) : ಎಡಗೆಯ್ಯ ಮುಷ್ಟಿಯಂ ತಾಣದೊಳಗೆ ಕೆಯ್ಯಡಗಿ ತೂಗುವ ಪಾದದ್ವಯದಿ ಪೊಡವಿ ತಲ್ಲಣಿಪಂತೆ ಖಳರಾಯ ಗರ್ಜಿಸಿ ವ್ಯಾಡತಪಧ್ವಂಸಿಯ ಶಿವಿದ (ಮೋಹತ. ೦೨-೮೬) : ನೆಳಲ ಚಪ್ಪರದಲ್ಲಿ ಹಣ್ಣುಗಳೂ ಅಡಕೆಯ ಗೊಂಚಲುಗಳೂ ತೂಗುತ್ತಿದ್ದುವು (ಕಾಲೂರ. ೦೩ ಕಥಾಸಾರ). ೭. ನೇತುಹಾಕು ; ಇಳಿಬಿಡಂ : ಭಾಳಾಕ್ಷನ ರೂಹು ನಿನಗೇಕೆನುತ ನಾರಿಕೇಳಫಲವ ಕಟ್ಟಿ ತೂಗಿ . . . ಹೋಳ ಮಾಡಿದರು ಜೂದಿನಲಿ (ಮೋಹತ. ೨೦-೨೨). ೮. ತೊಟ್ಟಿಲು, ಉಯ್ಯಾಲೆ ಮೊದಲಾದಂವುಗಳನ್ನು ಆ ಕಡೆಯಿಂದ ಈ ಕಡೆಗೆ ಚಲಿಸಂವಂತೆ ಮಾಡಂ ; ಜೀಕು : ಇದು ಲೀಲಾಂದೋಳ ವಿಂದೋಳದ ದನಿ ನೆಟ್ಟಗೊಳ್ವನ್ನೆಗಂ ಪಾಡಲೆಂದೇಟಾದಳಂ ತೂಗುತ್ತು ವಿರ್ದನ್ನಯ ಪರಿಜು (ಆದಿಪು. ೪-೯): ಉನ್ಮದದಂತಿದಂತಯುಗದೊಳ್ತಂ ನರ್ತ್ತಿಯಿಂ ಕಟ್ಟಿದುಯ್ಯಲನಾನಂದದೊಳೇಟ್ ದಿಗ್ವನಿತೆಯತೂರ್ತ್ಯಗಲ್ಕೆ (ಎಕ. VIII, ಸಾಗರ. ೦೦೯-೪೦; 1042) ; ಪಾಡುತೆ ತೂಗಿದರಖಿಳಪ್ರಪಂಚ ವಾಡಿಪ ಶಿಶುವಂ (ಗಿರಿಕ. ೩-೬೭): ಮಣಿಲೇಖಿ ಸುತವಮಾಲೆಯುರಿಗೆ ಪುಟ್ಟಿದ ಕಂದನ ತೂಪಲ್ಲಿ (ಹೇರಮ. ೮-೨೦) : ತೂಗಿರೆ ರಂಗನ ತೂಗಿರೆ ಕೃಷ್ಣನ ತೂಗಿರೆ ಅಚ್ಯುತಾನಂತನ (ಪುರಂದ. ೨-೧೩೬ ಪಲ್ಲವಿ). ೯. ಉಯ್ಯಾಲಾಡು ; ಜೀಕಿಕೊಳ್ಳು : ಬಾಗಿಲ ಮುಂದಣ ನವಿಲುಯ್ಯಲನೇಟ್ ತೂಗುತಿರ್ಪಳೆ ವೆಣ್ಣುಗಳ ಸೋಗೆಗಣ್ಮಾವಿಮಾನು ಸುಳಿದಾಡುವ ಜನಸಾಗರದೊಳಗೊಪ್ಪುತಿಹುವು (ಕಂಸವಿ. ೭-೯). ೧೦. ಜಗ್ಗು ; ಸೆಳೆ : ತೂಗಿ ಕಿವಿವರೆಗುಗಿದು ಯಂತ್ರವ ತಾಗಿಸಿದನಂಬಿನಲಿ (ಕುಮಾ.ಆ. ೧೫-೨೯) : ಪಾರ್ಥ ಸಾಕಿನ್ನೇಳು ಬಾಣವ ತೂಗು ಮಾತಾಡಿಸು ಮಹಾಧನುವ (ಕುಮಾ.ಭೀ. ೩-೨೪). ೧೧. ಎಸೆ; ಬೀಸಂ; ಹೊಡೆ: ತರಳಾಪಾಂಗಂಗಳೊಳ್ ಮುಚ್ಚರಿಪಲರ್ಗಣೆಯಂ ಕಟ್ಟಿ ತೂಪಂದದಿಂ ಚಾಮರಮಂ ವಕ್ಷೋಜಪೀಠಸ್ಥಿತ ಮದನನೃಪಂಗೆತ್ತುವಂತೆ (ಲೀಲಾಪ ೭-೦೪). ೧೨. ಹೋಲಿಸು ; ತಾಳೆನೋಡು : ಪಾಪಿನ ಸಂಜುಮಾನವರುಮನೋವಿನಿಸಂ ತೂಗಿ ನೋಡೆ (ಧರ್ಮಾಮೃ. ೨-೧೦೬) ; ನಿಮ್ಮಾರುಭಟೆಯನು ನಮ್ಮ ಬಾಹುವಿಕಾರ ಬಲವನು ತೂಗಿಯೆನುತೆಚ್ಚನು ಧನಂಜಯನ (ಕುಮಾ.ಕ. ೨೦-೨೭) : ಭೂಗಗನಪಾತಾಳ ದರವುನೆಗಳಿದಟೊಡನೆ ತೂಗೆ ಸರಿಬಾರವು (ಚಲಪು. ೫-೫೨) ; ರಾಘವಾನುಜಂಗೆ ಕೆಲಬಲನ ವನಂಗಳಂ ತೋಟ್ ಅಂದಿನ ದಂಡಕೆಗೊರೆಯಾಗದೆಂದು ತೂಗಿ ಬಣ್ಣಿಪಳ್ (ರಾಮಾಶ್ವ. ೩೩-೧೨). ೧೩. ಪರೀಕ್ಷಿಸಂ ; ವಿಮರ್ಶಿಸಂ ; ಯೋಗ್ಯತೆಯಂನ್ನು ನಿಷ್ಕರ್ಷಿಸಂ : ಕರದಿಂ ಸರಲಂ ಕಣ್ಣಿಂದ ರಾಶಿಯಂ ತೂಗಿದೂಗಿ (ಶಾಂತಿಪು. ೪-೫) ; ದಂಡುವೇಟ್ಟರಸಿನಂತೆ ತೂಗಿ ಬಿಡುವ ನಾಯಕನಂತೆ ಕಲಹಂ ಮಾಟ್ಟಿ ಕೊಂಡೆಯನಂತೆ ಲೇಸಲ್ಲದ ಸುಖಕ್ಕೆ ಪಾಯಿಸಿ ನೋಯಿಸುವಿಂದ್ರಿಯಂಗಳುಮಂ (ಧರ್ಮಾಮೃ. ೯-೨೩) : ದೂರಕೆ ದಿಟ್ಟಿಯ ಪಸರಿಸಿ ಕೊರಲೆತ್ತಿ ದಾರಿದಾರಿಯ ತೂಗಿ ನೋಳ್ಪ (ಭರತ. ೩-೩೬) : ತೂಗಬೇಕು ಮನದೊಳಗೆ ತೂಕವುಳ್ಳವರ ಮಾತು ಓದಿದು (ನಿಂಡು. ೪೯-೯) : ಗದ್ಯವನ್ನೋ ಪದ್ಯವನ್ನೋ ಓದಿ, ಆನಂದಿಸಿ ಅದರ ಬೆಲೆಯನ್ನು ತೂಗಿದ ಮೇಲೆ ಅದರಲ್ಲಿರುವ ಉದಾತ್ತ ಧ್ಯೇಯಗಳನ್ನೂ ಕೌಶಲ್ಯವನ್ನೂ ಅನುಭವಿಸುವ ಶಕ್ತಿಯುಂಟುಮಾಡುವುದು (ಶಿಕ್ಷದ. ೨೩೯). ೧೪. ಸಾಧ್ಯವಾಗು : ಕಾಳೆಗಂ ತೂಗದಿವರೊಡನೆಮ್ಮ ವರ್ಗೆನುತೆ ನೋಟಕರ್ ನುಡಿವುತಿರೆ (ಜಬಪು. ೪೨-೦೬). ೧೫. ನಿಲುಕಂ ; ಮುಟ್ಟು ; ಹಿಡಿತಕ್ಕೆ ಬರಂ : ನಮ್ಮ ಸಾಮಾನ್ಯ ವ್ಯವಹಾರದಲ್ಲಿಯೇ ಎಷ್ಟೋ ಮಾತು ತಲೆಗೆ ತೂಗದೆ ಹೋಗುವಾಗ, ಶಾಂತಿಯ ನೆಲೆಯು...ಅಳತೆಗೆ ಸಿಕ್ಕದಿರುವುದು ಆಶ್ಚರ್ಯವಲ್ಲ (ಸಾಹಿವಿ. ೦೩೬). ೧೬. ಸಾಟಿಯಾಗು ; ಸಮಾನವಾಗಂ : ರಮಾದಿ ಸಮಸ್ತ ಪ್ರಪಂಚದ ಸುಖವು ಒಟ್ಟುಗೂಡಿದರೂ ಪರಮಾತ್ಮನ ಸುಖಾನಂದದ ಒಂದಂಶಕ್ಕೂ ತೂಗಲಾರದು (ಜಗದಾ. ೨೦೪). ೧೭. ತೇಲಿಸು : ಸಾಗರದ ತೆರೆಗಳಲಿ ಗಿರಿಗಳ ತೂಗಿ ಸೇನೆಯ ನಡೆಸಿ (ಕುಮಾ.ಆ. ೨೨-೫೨).

**ತೂಗ ಕಟ್ಟು**=ನೇತುಹಾಕು : (ಶ). **ತೂಗಿಕೊಳ್**=ನೆಗೆ; ಹಾರು ; ಬೀಳಂ : ತಾಗುವ ತಗರು ಬರಲೋಡಿ ಬಾವಿಯ ತೂಗು [ಗಿ] ಕೊಂಡಂತೆ (ಸರ್ವಜ್ಞ. ೦೦೦೦). **ತೂಗಿ ತೊನೆ**=ತೂಗಾಡಂ ; ಒಲೆ : ಅಂತಾಕೆಗಳ್ ತೂಗಿ ತೊನೆವ ತೊನೆಪಂಗಳುಮುಂ ... ನೋಡಿ (ಪಂಪಭಾ. ೪-೯೦ವ). **ತೂಗಿ ನೋಡು**=೧. ತೂಕಮಾಡಿ ನೋಡು ; ಭಾರ ಕಂಡಂಹಿಡಿ : ಹರಿಯ ಭಕ್ತರ ಕೆರಹನೊಂದೆಸಗಿರಿಸಿವೊಂದೆಸೆಯಲಿ ಮಹೀಸುರವರರ ನೇಟಾಸಿ ತೊಲೆಯನೆಲ್ಲರು ತೂಗಿ ನೋಡಲ್ಕೆ (ಬಸಪು. ೫೫-೫೭). ೨. ವಿಮರ್ಶಿಸು ; ಪರೀಕ್ಷಿಸಂ : ಗೋವಿಂದನ ಮತದಲಿ ತೂಗಿ ನೋಡುವೆನಿದಜ ತೂಕವನೆಂದನಾ ಭೂಪ (ಕುಮಾ.ಸ. ೨-೫). **ತೂಗಿಬಿಡು**=ಸೆಳೆದು ಬಿಡು: ಜಗ್ಗಿಬಿಡು : ಹೂಡಿ ಮಂಡಿಯ ಕಿವಿವರೆಗೆ ಕರಾಂಗುಲಿಗೂಡಿ ಬಾಣವ ತೂಗಿಬಿಡುತ ಕೂಡೆ ವೈರಿಗಳ ಕೆಡಹಿ ಪತಿರುಣವ ನೀಗಾಡಿದರು (ಕಂಸವಿ. ೦೯-೬೫). **ತೂಗುಹಾಕು, ತೂಗಹಾಕು, ತೂಗಂಹಾಕು** = ನೇತುಹಾಕು ; ಇಳಿಬಿಡು : ಮನೆಯ ಗೋಡೆಯ ಮೇಲೆ ದೇವರ ಪಟಗಳನ್ನು ತೂಗುಹಾಕಿದ್ದಾರೆ (ರೂಢಿ); ತೂಗಾಸರೆಯಿಂದ, ಜೋಲಿಯಲ್ಲಿ,–ತೂಗಹಾಕು: ಜೋಲಹಾಕು (Sling. ಇಂಕನಿ) : ತನಿಗಂಪು ಹೂವುಗಳ ಪೊರೆಯೊತ್ತಿ ತಂಗರಗಕನುವಾಗಿ ತುಂಬಿ ತೂಗಂಹಾಕಿ ಬಿಜ್ಜಣಿಗೆಯನಿಲನಿಂ ಬೀಸಿ ಮಾಡಿದುದು ಹಂಸೋದಕಂ (ಸೂಪಶಾ. ೨-೪೦).

[ ದೇ.॥ ತಮಿ. ತೂಜ್ಕು, ತೂಕ್ಕು ; ಮಲ. ತೂಕ್ಕು, ತೂಙ್ಙು ; ಕೊಡ. ತುಂಗ್ ; ತುಳು. ತೂಂಕು, ತೂಂಗು, ತೂಕು, ತೂಗು ; ತೆಲು. ತೂಂಗು, ತೂಗು ; ಕುವಿ. ತೂಂಗಲಿ, ತೂಖಲಿ ]

**ತೂಂಕು$_2$, ತೂಕು$_2$, ತೂಗು$_2$** (ನಾ). ೧. ತೂಗಾಡಂವಿಕೆ ; ಒಲೆದಾಟ ; ತೊನೆತ. 'ತೂಂಕಂಗೊಳ್' ಪರಾ. **ತೂಕು$_2$** : ೨. ತೂಕ ; ಭಾರ : ನಗದ ತೂಕೇರಬೇಕೆಂದು ... ಮೊಟ್ಟತನದಿಂದ ತುಂಬಿದ್ದಾದರೆ ಆವಾಗಲೆ ತಿಳಿದು ಬರುವುದು (ಮುಂಬವಾ. ೪೨). **ತೂಗು$_2$** : ೧. ಶಿರದ ತೂಗಿನ ತಳ್ಳವಾಟಿಸಲಳಲಿದಳು ಕಾಂತೆ (ತೊರರಾ. ೨-೩-೪೦). (ಗು). ೩. ತೂಗಾಡುವ ; ಒಲೆದಾಡುವ. 'ತೂಗುಗುಂಡು' ಪರಾ.

[ <ತೂಂಕು$_1$./ತುಳು. ತೂಂಕು, ತೂಕು ; ತೆಲು. ತೂಕು ]

**ತೂಂತಿಡು$_1$**, ತೂತಿಡು (ಕ್ರಿ). ೧. ತುಂಬು; ತುರುಂಕು; ಇಡಿ; ಗಿಡಿ (?) : ಆತನ ಕೆಲದೊಳ್ ಬಾಳಬಟ್ಟಂ ತೂಂತಿಟ್ಟಂತೆ ಸಂದಣಿಸಿ ನಿಂದ ಗೋಪಕುಮಾರರಣಿಯ ನಡುವೆ...ನಿಂದಾತನೆನ್ನ ತಮ್ಮಂ (ಪಂಪಭಾ. ೧೦-೫೬ವ). ೨. ಉಕ್ಕು ; ತುಂಬಿ ಬರು : ಎನಸುಂ ಭಿನ್ನಘಟಕ್ಕೆ ತೂಂತಿಡುವುವೇ ನದ್ಯಾದಿಗಳ್ (ಅರ್ಥನೀ. ೪-೫೭) ; ತುಂತುಬು ತೆರೆ ನೊರೆ ಘುಳುಘುಳುರವ ತೂಂತಿಟ್ಟು ಹೊಳೆವ ವಾರಿಧಿಯ ಕಾಂತೆಯರೆಲ್ಲರೀಕ್ಷಿಸುತಿರೆ (ಭರತ. ೨೩-೯೭). **ತೂತಿಡು** : ೧. ಕಿವಿಯೊಳ್ ಬೆರಳಂ ತೂತಿಟ್ಟು (ಶ್ರೀವಶಾ. ೦೫೬-೧೫). [ ತೂಂತು$_1$ + ಇಡು$_1$ ]

**ತೂಂತಿಡು$_2$** (ಕ್ರಿ). ಕಂಡಿಮಾಡು ; ರಂಧ್ರಮಾಡು ; ವೇಜ್ಜಮಾಡು ; ಚುಚ್ಚು : ಗಾತ್ರಂ ವಿಯನ್ಮಂಡಲಕೆ ತಡೆಯೆ ತೂಂತಿಟ್ಟನೆಂಬಂತೆ ನಿಂದಂ (ಧರ್ಮಾಮೃ. ೯-೨೩೦) : ಬಾಂಗೆ ತೂಂತಿಟ್ಟವೊಲಪ್ಪ ಮೆಯ್ (ಚಂದ್ರಪು. ೫-೭೦); ವಿದ್ಯಾಧರಬಲಂ ನೆಲಕಮಂಬರಕಂ ತೂಂತಿಟ್ಟಂತೊಡ್ಡಿ ನಿಲ್ವುದುಂ (ವರ್ಧಪು. ೮-೪೧ವ) : ಅಲ್ಲಿ ತೂಂತಿಟ್ಟಂತೆ ನಿರಂತರಂ ಸುೞಿವ ನಾನಾದೇಶ ಪ್ರಸಿದ್ಧರಾಜಪುತ್ರ ವಣಿಗ್ವಲ್ಲಭವಾರನಾರೀಭಾರತಿಕನಿಕರದ ... ಪರಿಮಳ ಪ್ರವಾಹಸಮೂಹದಿಂ (ಅನಂಪು. ೦-೧೦೫ವ). [ ತೂಂತು$_3$ + ಇಡು$_1$ ]

**ತೂಂತಿೞ್** (ಕ್ರಿ).೧. ತುಂತುರುಹನಿಯನ್ನು ಹೊರತಳ್ಳು,-ಹೊರಹಾಕಂ: ಹರಿ ಹಂದದ್ರಿಕುಂಭದಿನೊೞಲ್ದೊಗೆದಿಂದುಮಣಿಪ್ಪಗಸ್ತ್ಯನಚ್ಚರಿ ಮಿಗೆ ನೀಳ್ದ ತನ್ನ ಕರದಿಂ ಮೊಗೆದಂಥತಮಸ್ಸಮುದ್ರಮಂ ತುಱಿವದಿನೀಂಟು ತಾಗಳೆಡೆ ಸಿಲ್ಕಿದ ಮುತ್ತುಗಳಂ ತೆರಳ್ಚಿ ಪುಷ್ಕರದೆಡೆಯಲ್ಲಿ ತೂಂತಿೞಿದ ಪೋಲ್ತುೞುಗಿರ್ದುದು ತಾರಕೋತ್ಕರಂ (ವೃಷವಿ. ೮-೫೦). ೨. ಬಾಯಿಂದ ಗಾಳಿಬಿಡು ; ಊದು : ತಲ್ಲಿಂಗಾಗ್ರದೊಳ್ಪತ್ತಿ ಮೇಣ್ಬರಿತರ್ಪೊಂದು ಸೆಲಂದಿಯಂ ಜವದಿನಾಗಳ್ಕಂಡು ತತ್ಕಾಂತೆ ಬಾಯೆರಲಿಂ ತೂಂತಿೞಿದಳ್ (ವೃಷವಿ. ೯-೫೬) : ಬಾಯುಗುಳ್ಸಡಿಯೆ ತೂಂತಿೞಿದಪ್ಪೆ (ವೃಷವಿ. ೯-೫೭).

[ ತೂಂತು$_4$ + ಇೞ್$_1$ ]

**ತೂಂತು$_1$** (ಕ್ರಿ). ಇಡಿ; ತಂಬು; ಗಿಡಿ ; ತಂರಂಕು; ತೂರಿಸಂ: ಉಗ್ರಗಜೇಂದ್ರಂ ಬೆರಸೋವದಂತಕನ ಬಾಯೊಳ್ ತೂನ್ತಿ (ಎಇ. XIII, ೩೨೯-೪ ; ೨೩೦) ; ಅವನಂ ಮಾರುತಿ ನಿಮಿಪಕ್ಕೆ ತೂಂತಿದಂ ಯಮಮುಖದೊಳ್ (ಪಂರಾಮೂ. ೧೦-೭೦) : ಕರಮಂ ತೂಂತಿ ತದಾಸ್ಯದೊಳ್ ಬಳೆಯಿಸಲ್ (ಜಗವಿ. ೫-೪೬) : ತನ್ನ ಗೋತ್ರಾವಳಿಯುಕ್ತಮಾಗಿ ನೆೞ್ ತೂಂತುವನಂತಕನಾಸ್ಯರಂಧ್ರದೊಳ್ (ಶಾಂತೀಶ್ವ. ೭-೧೧೭); ಅವನ ಮೈಯನು ಕೊೞ್ಕೊೞ್ದು ತೂಂತುವರು ಬಾಯೊಳಗೆ (ವರ್ಧಪ. ೮-೮೯); ಬೀರ್ವಗ್ಗಮಂ ಹಾಯ್ಕಿ ಸೇದಿದರ್ ಮರುಳ್ಗಳ್ಗಳಂ ತೂಂತರು (ಚಬಪು. ೪೨-೩೬); ದೇವಿಯರನೇವೊಟ್ಟುಂ ಸೇವಿಸಿಯುಮಿಂದೀಗಳ್ ಪುಲಿ ಕರಡಿ ಸಿಂಗಂಗಳ ಬಾಯೊಳ್ ತೂಂತಲೆಂದೆ ಕೊಂಡುಯ್ದಪೆಂ (ರಾಮಾಶ್ವ. ೨೯-೦೦). [ ದೇ.॥ ಕುವಿ. ತೂಥಲಿ ]

**ತೂಂತು$_2$** 'ತೂನ್' ಪರಾ.

**ತೂಂತು$_3$**, ತೂತಂ$_1$ (ನಾ). ಕಂಡಿ; ರಂಧ್ರ; ಬಿಲ : ಮಣಿಕುಟ್ಟಿಮಮಪ್ಪ ಬಾವಿಯಂ ಪೊಕ್ಕು... ಛಿದ್ರಕದ್ವಾರದ ತೂಂತನುರ್ಚಿ ನೀರಂ ಕಳೆದಾಗಳ್ (ವದ್ಯಾರಾ. ೨೬-೨೦) : ಪೆಡತಲೆಯು ತೂಂತಿಂದುಬ್ಬುವರಿಕ್ಕುೞಿಸಿ ನಾರಕರ್ ನಾಲಗೆಯುಂ (ಸುಕುಮಾ. ೦೦-೪೪); ಕವಲಂಬಿಂ ಕಡಿವೋದ ಕೂರಲಗಿನಂಬಿಂ ಕೂಡೆ ತೂಂತಾದ ತಾಗುವ ನಾನಾಯುದ್ಧದಿಂದನೇಕವಿಧಂ (ಮಹಾನೇ. ೧೨-೪೫). **ತೂತು$_1$**: ಷಡಾಧಾರ ಬಳಿವಿಡಿದು ನೆತ್ತಿಯಿಂದುತ್ತರಕ್ಕೆ ಉಚ್ಚಳಿಸಿ ಹಾಯ್ದು ನಡುನೆತ್ತಿ ತೂತಾದರೂ ಲಿಂಗಸಾಹಿತ್ಯವಿಲ್ಲ (ಆದವ. ೦೧-೨೦); ಚಲಿಸಿ ಮೂತ್ರಪೊಸರ್ವ ತೂತುಗಳಳಿಪಿದವದಿರು (ಬಸಪು. ೪೦-೭೯); ಎಲ್ಲರ ಮನೆಯ ದೋಸೆಯೂ ತೂತು (ಗಾದೆ); ಮಾತು ಮನೆ ಕೆಡಿಸಿತು ತೂತು ಒಲೆ ಕೆಡಿಸಿತಂ (ಗಾದೆ).

**ತಾತಾತೂತು, ತಾತತೂತು, ತಾತುತೂತು** (ದ್ವಿರುಕ್ತಿ) : ಕಂದರ್ಪ ನೊಡಲು ನಿಶಾಚರನಾಥನ ಕೂರ್ಗಣೆಯಿಂದ ತಾತಾತೂತಾದುದು(ಮೋಹತ. ೩೫-೩೩) : ತಾತಾತೂತಾಗೆ ವಜ್ರಾಂಗಿ (ಕುಮೂಸಾಂ. ೩೪೯) : ಕೂರಂಬು ವನ್ನೆಸೆಯೆ ಸಚಿವನ ಮೈಯು ತಾತತೂತಾಗಲೊಡನೆ (ನವಮೋ. ೨೮-೩೯); ದಾನವನ ವಜ್ರಕವಚವನೊಡೆದು ಸರ್ವಾಂಗ ತಾತುತೂತಂ ಗೈಯಲು (ನವಮೋ. ೦೨-೭೮). **ತೂಂತನಿಡು** = ೧. (ಯಾವುದಾದರೂ ವಸ್ತುವನ್ನು) ಗಿಡಿ,–ತಂರುಕು: ಬಸದಿಯೊಳ್ ಧನ್ವಂತರಿ ವಿಶ್ವಾನುಲೋಮನ ಮುನ್ನಿನ ಸೂರುಳಂ ನೆನೆದು ಕಿವಿಯೊಳ್ ತೂಂತನಿಟ್ಟು ಪಟ್ಟಿರ್ದಂ (ಧರ್ಮಾಮೃ. ೨-೧೭೨). ೨. ರಾಶಿಹಾಕು ; ತುಂಬು : ರೋದೋಂತಂ ಕೂಡೆ ರತ್ನೋಜ್ವಳಗಿರಿಕುಳದಿಂ ತೂಂತನಿಟ್ಟಂತೆ ನೀಲಾಂಭೋದಂಗಳ್ ಕೂಡೆ (ಆದಿಪು. ೧೪-೯೭). **ತೂತಾಗು** = ರಂಧ್ರಬೀಳಂ ; ಕಂಡಿಬೀಳು : "ವ್ರಣಿತಿ = ತೂತಾದವುದು" (ಶಾಕಶ್ವ. ೨೨೦) : ಮಾತಿನಾ ಜೊತ್ತು ತೂತಾದ ಮಡಿಕೆಯು ಪಾತಕನ ನೆರೆಯು ಇವು ಮೂಱು ಲೋಕದೊಳಗೇ ತಕ್ಕು ಬೇಡ (ಸರ್ವಜ್ಞ. ೪೩೦). **ತೂತುಬೀಳು** = ತೂತಾಗು ; ರಂಧ್ರವಾಗಂ : "ವಿದ್ಧ=ತೂತುಬಿದ್ದದ್ದು" (ಗಂಗಾಮ. ೨೯೦); ಮಾತ ತಾನಱಿಯದಧಮಂಗೆ ಮಾಣಿಕವು ತೂತುಬಿದ್ದಂತೆ (ಸರ್ವಜ್ಞ. ೧೩೫೩) : ಒಲೆಗಂ ತಂಡಾಗುವ – ತೂತುಬೀಳುವ ಸಂಭವವುಂಟು (ದ್ರಾವಿವಿ. ೫೯). **ತೂತುಮಾಡು** = ರಂಧ್ರವನ್ನು ಮಾಡಂ,–ಕೊರೆ : ಆಸ್ಫೋಟನೀ = ರತ್ನಗಳನ್ನು ತೂತುಮಾಡುವ ಶಸ್ತ್ರ (ಗಂಗಾಮ. ೩೦) : ಬೆಲೂನಿಗೆ ತೂತು ಮಾಡಿದೆ. ಒಡೆದಂಹೋಯಿತು (ರೂಢಿ).

[ <ತೂಂತಂ$_1$./ ತೆಲು. ತೂಟಂ ; ಮಲ್ಯಾ. ತೂತ್ರು ]

**ತೂಂತು$_4$** (ನಾ). ೧. ಹೊರಸೂಸುವಿಕೆ. ೨. ಊದುವಿಕೆ. 'ತೂಂತಿೞ್' ಪರಾ. [ ? ]

**ತೂಂತುಗೊೞ್$^3$, ತೂತಂಕೊರೆ, ತೂತಂಗೊೞ್$^3$** (ಕ್ರಿ). ತೂತನ್ನು ಕೊರೆ; ತೂತುಮಾಡಂ ; ರಂಧ್ರವನ್ನು ಮಾಡಂ : ಲೋಹದೊಂದು ಭಾರ ಗುಂಡನಿಳಿಯಬಿಟ್ಟು ಮರ್ಮವೆರಡೞ್ೞುಮವೆರಡನೊತ್ತಿ ತೂಂತುಗೊೞ್ದು ಕಯ್ಕೊಳಮರ್ಚಿ (ಸಾನಂಚ. ೭-೧೫೪ ರಗಳೆ). **ತೂತುಕೊರೆ** : ಮುಖದಲ್ಲಿ ಹೇಗೆ ತೂತುಕೊರೆಯಬೇಕೆಂಬುದನ್ನು ಹೆಣ್ಣಲ್ಲದೆ ಇನ್ನಾರು ಹೇಳಬೇಕು ? (ಗಾಳಿಪ. ೦೫೨). **ತೂತುಗೊೞ್$^3$** : ದುಟ್ಟ ಕಡಂದುಱುಗಳಿಂದೆ ತನುವನೆಯ್ದೆ ತೂತುಗೊೞ್ದು ಒಡಲನೆಯ್ದೆ ತೀವ್ರವಂತೆ ಕ್ಷಾರರಸವನೆೞ್ದುವೆೞ್ದು (ಸಾನಂಚ.೭-೯೮ ರಗಳೆ).

[ ತೂಂತು$_2$ + ಕೊೞ್$^3_1$ ]

**ತೂಂತುವೋಗು, ತೂತುವೋಗು** (ಕ್ರಿ). ೧. ತೂತಾಗಂ ; ರಂಧ್ರಬೀಳು: ಧರಣಿಯಂ ಪೊಯ್ವನೋ ತೂಂತುವೋಗಲ್ (ಧರ್ಮಾಮೃ. ೯-೦೮೩) : ಪೊಸಬಸದಿಯಂ ಮಾಡಿ ತೂಂತುವೋದ ಕಳಶಮನಿಡುವಂತೆ (ಧರ್ಮಾಮೃ. ೯-೦೪೭). **ತೂತುವೋಗು** : ೨. ಇಳಿ ; ಕಂಸಿ : ಪೃಥ್ವೀತಳಂ ಪಾತಾಳಕ್ಕೆ ತೂತುವೋಗೆ (ಅರ್ಧನೇ. ೮-೨೨ವ). [ತೂಂತು$_2$ + ಪೋಗು$_1$]

**ತೂಂಪ** 'ತೂಂಕು$_1$' ಪರಾ.

**ತೂಂಬ** 'ತೂಂಕು$_1$' ಪರಾ.

**ತೂಂಬು, ತುಂಬು$_3$, ತೂಪ್ಪ, ತೂಬು** (ನಾ). ೧. ಕಂಡಿ ; ರಂಧ್ರ. ೨. ಕೊಳವೆ; ಕೊಳಾಯಿ; ನಳಿಕೆ. ೩. ಕೆರೆ, ಕಟ್ಟೆ ಮೊದಲಾದ ಜಲಾಶಯಗಳಲ್ಲಿ ನೀರು ಬಿಡಲು ಮಾಡಿರುವ ಕಂಡಿ,–ದ್ವಾರ ; ನೀರುಗಂಡಿ : ಮೊಱಗಲೂರ ಮಟ್ಟಿಯುಳ್ಳಯ್ದಾಬು ಇನ್ತು ತಾಗೆ ಮೂಱಡಿ ತೂಂಬುಂ ದೇವಭೋಗಂ (ಎಕ. X, ಕೋಲಾರ. ೦೦-೯; ಸು. 753); ಜಲಗರಂ ಬಿಡೆ ಪರಿಗುಮಗುವರ್ಗಿ ತೂಂಬನುರ್ಚಿದ ತೆಱದಿಂ (ಲೋಕೋಪ. ೯-೦೧೬):ಈ ಕೆಱೆಯ ನೀರಂ ತೂಂಬನುರ್ಚಿ ಕಳೆದು ಕಿಱಿದಾನುಮುೞಿದ ನೀರಂ ತುಳುಂಕಿ ಕಳೆದೊಡೆ ನಿನ್ನಱಿಸುವುದಂ ಕಾಣಲಕ್ಕುಂ (ಜೀವಸಂ. ೧೬೩-೦೫) : ವಾಪೀಕೂಪದೀರ್ಘಿಕಾಘಟೀಯಂತ್ರಪ್ರವಾಹಂ ಪುಗುವ ಬಚ್ಚಲ್ಗಳ ಪೊಱಮಡುವ ತೂಂಬುಗಳ ಬೆಡಂಗು ... ಮೆಱೆದಿರ್ದುದು (ಅನಂಪು. ೭-೨೪ವ) ; ಇಳೆಯಾಣ್ಮನ ಕರುಣರಸಂ ತೀವಿದ ಲಲಿತತಟಾಕಮವಾಗಲ್ಕರ ಮನೆ ತೊಳಗುವ ಬಾಗಿಲ್ವಾಡಮದೞ ತೂಂಬೆಂಬವೊಲೊಪ್ಪಿದುದು (ಜಯುಕಾ. ೧-೬೫). ೪. ಭೂಮಿಯ ಒಂದು ಆಳತೆ. 'ಆಯ್ದೊಂಬು' ಪರಾ. ೫. ಒಂದು ಊರಿನ ಹೆಸರು : ಕರಿಪೊಡವಿಷಯೇ ತೂಂಬುವರವು ಪೂರ್ವತಟೇ ಮಾರಿಪೊೞ್ ತೂಂಬುನಾಮಗ್ರಾಮಯೋ।

(ಮೈಆರ್. ೧೯೦೯, ೨-೦೯ ; 749). ತುಂಬು$_3$ : ೩. ತುಂಬಿನ ನೀರನುರ್ಚಿದಾಗಳಡ ಪರಿದು (ಪಂಪಭಾ. ೫-೪೬ವ) ; ಹಿರಿಯ ಕೆಱೆಯ ಕೆಳಗೆ ಎರಡು ತುಂಬಿನ ನಡುವೆ ಬಿಟ್ಟ ಗದ್ದೆ (ಎಕ. XII, ಚಿಕ್ಕನಾ. ೧೩-೩೭ : 1181) ; ಮಹಾಜನಂಗಳು ಬಸವಯ್ಯನ ಕೆಱೆಯ ನೀರ ತುಂಬನೆತ್ತಿ ಹರಿಸಿಕೊಳ್ಳದೆ ಅಱುವತ್ತೊಂದು ವೃತ್ತಿಗೆ ನಿಲ್ವರು (ಎಕ. VI, ತರೀಕೆ. ೫೫-೮ : 1291 ?). ೬. ಚಕ್ರದ ಮಧ್ಯಭಾಗ ; ಗುಂಬ ; ಚಕ್ರನಾಭಿ ; ಪಿಂಡಿಕೆ: "ನಾಭಿಃ, ಪಿಂಡಿಕಾ – ಈ ೨ ತುಂಬು" (ಹಲಾಯು. ೭೩-೨೯೩). ತೂಪು : ೪. ಮಂದುಪೂರ ತೂಱುಕೊಳ್ವಲ್ಲಿ ಏಟಿಱ್ದೋರ್ ಪೆರಾಣ್ಕ್ಯೋವರ್ ಅವಂಗೆ ಪದಿ ತೂಪು ಕಟನಿ ನೆತ್ತಪಡಿ (ಎಕ. X, ಶ್ರೀನಿವಾ. ೨೦-೭ ; ಸು. 750). ತೂಬು : ೩. ನೈರುತ್ಯದೊಳ್ ಕಟ್ಟೆಯು ಕಡೆಯು ತೂಬು ಪಶ್ಚಿಮದೊಳಚ್ಚುಷ್ಕರಣಿ (ಎಕ. VIII, ಸಾಗರ. ೧೦೯-೭೦ : 1042) ; ತೂಬಿಲ್ಲದ ಕೆಱೆಯಂ ಕಟ್ಟುವೆನೆಂಬ ಕಾಲಿಲ್ಲದೆ ಪರಿವೆನೆಂಬ ... ಪಚ್ಚಪಸಿಯೆಗ್ಗನಂ ಪೋಲ್ಕುಂ (ಧರ್ಮಾಮೃ. ೧-೬೭) ; ಆರ್ದಿಱಿದು ಕಾಲನ ಬನಕೆ ರಕುತದ ಕೆಱೆಯ ತೂಬೆತ್ತಿದರು ಸೇವಣರಾಯರಾವುತರು (ಕುಮಾ.ಭೀ. ೪-೩೭): ತೂಬು ಉಳ್ಳ ಕೆರೆಯು ತುಳುಕಿದರೆ ಬತ್ತೀತೆ? (ಗಾದೆ). ೬. "ಪಿಂಡಿಕೆ, ನಾಭಿ–ಬಂಡಿಯ ತೂಬು" (ನಾಚಿರಾ.೬). ೭. ಕೊಡಲಿ, ಗುದ್ದಲಿ ಮೊದಲಾದ ಸಾಧನಗಳಲ್ಲಿ, ಕಾವನ್ನು ಒಳಗೆ ಸೇರಿಸಲು ಮಾಡಿರುವ ಕಣ್ಣು,–ತೂತಂ,–ರಂಧ್ರ: (+). ೮. ಕಿವಿಯೋಲೆಯ ಕೊಳವೆ: (+). ೯. (ಆಲಂ) ಹಾಳುಮಾಡುವವನು : ಅಪ್ಪನ ಖಜಾನೆಗೆ ಮಗ ತೂಬಾಗಿದ್ದಾನೆ (ರೂಢಿ).

ತೂಂಬನಿಕ್ಕು=ಕೆರೆ ಮೊದಲಾದುವುಗಳಿಗೆ ತೂಬನ್ನು ಮಾಡಿಸಂ,–ಕಂಡಿಯಂನ್ನು ಇಡು : ಸಿರಿಯಮಯ್ಯನೆರಡು ಕೆಱೆಯಂ ತೂಂಬನಿಕ್ಕಿ... ಮೂಱು ಕೆಱೆಯ ಬಿತ್ತುವಟ್ಟವಂ ಪಡೆದಂ (ಎಕ. IX, ಬೆಂಗಳೂ. ೭೯-೬ : ಸು. 870).

[ ದೇ.॥ ತಮಿ. ತೂಮ್ಪು ; ಮಲ. ತೂಮ್ಬು ; ತುಳು. ತೂಂಬು, ತೂಂಬೆ, ಸೂಂಬು ; ತೆಲು. ತೂಮು ]

**ತೂಂಬುರ್ಚು**, ತುಂಬುಚ್ಚು (ಕ್ರಿ). ತೂಬಿನ ಬಾಗಿಲನ್ನು ಎತ್ತು, —ತೆಗೆ : ಮಿಾಂಬೊಲಸು ನಾರ್ಪ ಮೆಯ್ಗುಮಳುಂಬಂ ತೂಂಬುರ್ಚಿದಂತೆ ಸುರಿವರುಣಜಳಕ್ಕಂ ಬಿಡದೆ ಕಾಗೆಯುಂ ಪರ್ದುಂ ಬಳಸುವವು (ಸುಕುಮಾ. ೪-೫೯) : ಅರದಬಯಂ ... ಪತ್ರಿಚಯಮುದೆತ್ತಂ ಗಗನೋದರಮಂ ತೀವಿದುದಳಕಾಪುರದಿಂ ತೂಂಬುರ್ಚಿದಂತೆ ಕವಿದವಿರಳಿತಂ (ಪರ್ಶ್ವಪು. ೮-೪೦). ತುಂಬುಚ್ಚು : ಒಂಭತ್ತುದ್ವಾರದಿ ಮಲವು ತುಂಬುಚ್ಚಿದಂದದಲಿಳಿವ (ಚಿದಾಕೋ. ೪೦-೫). [ ತೂಂಬು + ಉರ್ಚು ]

**ತೂಕ** (ನಾ). ೧. ತೂಗುವುದು; ತೂಕಮಾಡುವುದು : (+). ೨. ಯಾವುದಾದರೂ ವಸ್ತುವನ್ನು ತಕ್ಕಡಿಯಲ್ಲಿಟ್ಟು ತೂಗುವುದರಿಂದ ಗೊತ್ತಾಗುವ ಪದಾರ್ಥದ ಭಾರ,—ಗುರುತ್ವ: ಅಳತೆಗೆ ತೂಕಕ್ಕೆಣಿಕೆಗವೊಳಗಾದುವು ಸಕಳವಸ್ತುಗಳ್ ಭುವನಜನಕ್ಕಳಿಯಲ್ ತೂಗಲ್ಕೆಣಿಸಲ್ಕಳುಂಬಮೆನಿಸಿದುದು ನಿನ್ನ ಗುಣಗಣಮರ್ಹಾ (ಆದಿಪು. ೧೦-೫೫) : ಬಲ್ಲವರೊಡಗೂಡಿ ಬಣ್ಣದಿಂದೊರೆಯಿಂ ತೂಕದಿಂ ಮರ್ಚಿಯಿಂದಂ ಪೊನ್ನಂ ಕೊಪ್ಪುಗುಂ ... ಅಂತೆ ಸಮ್ಯಕ್ತ್ವದೊಳ್ ಕೂಡಿ...ಶ್ರಾವಕನು ಮೊಪ್ಪುವುದು (ಧರ್ಮಾಮೃ. ೦೩-೫) : ಸೌರಾಷ್ಟ್ರಸೋಮನಾಥಂಗತಿಭಕ್ತಿಯಿಂ ತನ್ನ ತೂಕದ ಧೂಪವಂ ... ಓಹಿಲದೇವನರ್ಪಿಸುತಿರ್ದಂ (ಉದ್ಭಟ. ೧೧-೮೯ ವ): ತಲೆಪೊರೆಯ ತೂಕದಲಿ ಫಣಪತಿ ಬಳುಕತೊಡಗಿದ (ಕುಮಾ.ಉ. ೦೧-೧೫) : ಗುರುಕುಚದಲಘುನಿತಂಬದ ತೂಕದ ಸರಿಮಿಗಿಲು ಪಿಡಿದೆತ್ತಿ ನಿರೀಕ್ಷಿಪರಿಯಿಂ ಪ್ರಾಣೇಶ್ವರಸಂಗ್ಯೆಯುಂ ತನುಮಧ್ಯದೊಳಿಡಲು (ಜಯುಕಾ. ೧೧-೪೪); ತೂಕಕ್ಕೆ ದಯವಿಲ್ಲ ಪಾಕಕ್ಕೆ ಹಸಿಯಿಲ್ಲ (ಗಾದೆ). ೩. ಒಂದು ವರಹದಷ್ಟು ಭಾರ : ಸಿಕ್ಕಸಲ್ಪೇಳಿಯೆರಡುಮನೊಂದು ಪಾಗವುವು ನಾಲ್ಕಾಗೆ ಪಣಮೆನಿಕ್ಕವು ದಶಂ ತೂಕಕ್ಕೆ (ಮಂಗರಾ. ೦೦೪-೧೧) ; ಹೊಸಸುಣ್ಣದ ನೀರನ್ನೂ ಬೆಲ್ಲದ ಪಾಕವನ್ನೂ ಒಲೆ ಮೇಲಿಕ್ಕಿ, ಎರಡು ತೂಕ ಬಿಳೀ ಪಾಷಾಣವನ್ನು ಹಾಕಿ ಕುದಿಸಿ ... ಕೊಡಲು ಛಳಿಜ್ವರಂ ನಿಲ್ಗುಂ (ಸಕವೈ, ೭೪). ೪. ಎರಡು ಕೈಯಲ್ಲಿ ತೂಗಿ ತರುವಷ್ಟು (ನೀರಿನ) ಅಳತೆ : ಎಷ್ಟು ತೂಕ ನೀರು ಹಾಕಿದ್ದೀರಿ ? (ರೂಢಿ). ೫. ಸಮತೋಲ ; ಸಮಚಿತ್ತ : ಕೆಳಗು ಮೇಲಾಗದೊಲು ತೂಕವಿರಲಿ !! (ಉಯ್ಯಾಲೆ. ೭೯-೦೬). ೬. ಸಮಾನವಾದುದು ; ಸದೃಶವಾದುದಂ : ಋಷಿಪ್ರತಿಪನ್ನ ಮಂತ್ರವಮೋಘವದಱಿಂದೆನ್ನ ತೂಕದ ಮಗನಹನು (ಕುಮಾ.ಆ. ೩-೧೯); ಸರೋಜಜಗೆ ಸಂಭವಿಸಿದಗ್ಗದ ತನ್ನ ತೂಕದ ಬವರಿಗರ ತೋಱಿಸಿದನನಿಲಜನು (ತೊರರಾ. ೪-೭-೨೪). ೭. ಗೌರವ ; ಘನತೆ ; ಮಹತ್ವ : ಬರಿಸಿದನು ತೂಕದ ಮಹಾಮಂಡಳಿಕಮನ್ನೆಯರ (ಕುಮಾ.ಉ. ೮-೨೯) : ಏಕೆ ನುಡಿಯನೋ ಇನ್ನೊಮ್ಮೆಯೆಂಬಂತೊಂದು ತೂಕದೊಳೆಸೆದನಾ ರಾಯ (ಭರತ. ೧-೩೮) : ತೂಗಬೇಕು ಮನದೊಳಗೆ ತೂಕವುಳ್ಳವರ ಮಾತು ಹಿಡಿದು (ನಂಮು. ೪೯-೯) ; ತಾನು ಈ ಪ್ರೊಫೆಸರರ ಬಾಲವನ್ನು ಹಿಡಿದು ಹೋದರೆ, ತನ್ನ ತೂಕ ಸ್ವಲ್ಪ ಹೆಚ್ಚೀತು (ಒಂಟಿದ. ೮). ೮. ಒಂದು ಬಗೆಯ ತೆರಿಗೆ : ಕಿಱುಕುಳ ತೂಕ ನೋಟವಣ ಅಭ್ಯಾಗತವಳ . . . ಯೆಲ್ಲವನೂ ಕಾರುಣ್ಯಂಮಾಡಿ ಧಾರಾಪೂರ್ಬ್ಬಕಂ ಮಾಡಿಕೊಟ್ಟರು (ಎಕ. VI, ಕಡೂರು. ೪೯–೪೦ ; 1291). ೯. ಒಲೆತ; ತೂಗುವಿಕೆ ; ತೂಗಾಟ; ತೊನೆದಾಟ : ಗೋಪೀನಟಿ ತೋಱಿದಳ್ ಮಿಸುಗುವೋಲೆಯ ತೂಕಮತೋಱೆ ನೃತ್ಯಮಂ (ಜಗವಿ. ೫-೦೪) : ತೊಟ್ಟಿಲ ತೂಕದೊಳ್ ಪೊಣರೆ ಕಂಕಣರಝಂಕೃತಿ (ಸೂಕ್ತಿಸು. ೭-೬೨). 'ತೂಕವಣೆ' ಪರಾ.

ತೂಕತೂಗು=ಘನತೆಯಂನ್ನು ಹೊಂದಂ ; ಗೌರವವನ್ನು ಗಳಿಸಂ : ಭಾರತದ, ಲೋಕದಾ ಮಕ್ಕಳಿ ಹಿರಿದಾಗಿ ತೂಕತೂಗುವಿರಾ ? (ಹೊಂಗಳು. ೨೧-೨). ತೂಕದ ಕೋಲ ತೊಲೆ = ತಕ್ಕಡಿಯ ಕೋಲಂ ; ತುಲಾದಂಡ : ವನಿತೆ ... ಚಿಂತಿಸುತ ತೂಕದ ಕೋಲ ತೊಲೆಯಾದಳು (ಹದಶಾ. ೧೨-೪೭). ತೂಕದ ಗುಂಡು = ಗೋಡೆಯಂನ್ನು ಕಟ್ಟುವಾಗ ನೇರಸ್ಥಿತಿಯನ್ನು ಕಂಡುಹಿಡಿಯಲು ಬಳಸುವ ಸಾಧನ : ತೂಕದ ಗುಂಡನ್ನು ಹಿಡಿಯದೆ ಗಾರೆ ಬಳಿದರೆ ಗೋಡೆ ಸಮನಾಗುವುದಿಲ್ಲ (ರೂಢಿ). ತೂಕದ ಮಾತು = ಬೆಲೆಯುಳ್ಳ ಮಾತು ; ಗೌರವದ ಮಾತಂ; ನ್ಯಾಯವಾದ ಮಾತು ; ನಿಷ್ಪಕ್ಷಪಾತವಾದ ನುಡಿ: ಅವರದು ಒಳ್ಳೆಯ ತೂಕದ ಮಾತು (ರೂಢಿ). ತೂಕದಾಳ್ = ಘನತೆಯಂನ್ನು ಹೊಂದಿರುವವನು : ಬಾಣಸ್ಥಾಪನಕೆ ಮೆಚ್ಚಿದನು ಮೇಲಣ ತೂಕದಾಳವನು ಈ ಪರಿಯಲೆಂದಱಿಯೆನಹುದೈ ಚಾಪವಿದ್ಯಾಪಾತ್ರವಿಂದ ವನೀಪತಿಯಲಾ ಪೂತು ಮಝು ಎಂದೆಚ್ಚನಾ ಕರ್ಣ (ಕುಮಾ.ಕ. ೧೧-೪೪). ತೂಕಮಾಡು = ೧. ತಕ್ಕಡಿ ಮೊದಲಾದುವುಗಳ ಸಹಾಯದಿಂದ ಭಾರವನ್ನು ಕಂಡುಹಿಡಿ : ಈ ಹುರುಳೀಕಾಯನ್ನು ಬೇಗ ತೂಕಮಾಡು (ರೂಢಿ). ೨. ವಿಮರ್ಶಿಸು ; ಬೆಲೆಕಟ್ಟು : ನಮ್ಮಿಬ್ಬರ ಹೇಳಿಕೆಯನ್ನೂ ತೂಕಮಾಡು. ಯಾವುದು ಸರಿ ಎಂದು ನಿನಗೇ ಗೊತ್ತಾಗುತ್ತದೆ (ರೂಢಿ). ೩. ತೂಕಡಿಸು : ಅವನೆಲ್ಲೋ ತೂಕಮಾಡುತ್ತಾ ಕುಳಿತಿರಬೇಕು (ರೂಢಿ).

[ ದೇ.॥ ತಮಿ. ಮಲ. ತುಳು. ತೆಲು. ತೂಕ ]

**ತೂಕಗಾಣ್** (ಕ್ರಿ). ಗಾಂಭೀರ್ಯವನ್ನು ಗಮನಿಸು ; ಘನತೆಯನ್ನು ತಿಳಿ : ಆಕೆಯಿಬ್ಬರುದೇವಿಯನುಜೆ . . . ತೂಕಗಾಣದೆ ನುಡಿದಳು (ಭರತ. ೫೦-೫೧). [ ತೂಕ + ಕಾಣ್ ]

**ತೂಕಗುಂದು** (ಕ್ರಿ). ವಿವೇಚನೆ ಇಲ್ಲದಾಗು,–ತಪ್ಪು : ತೂಕಗುಂದದ ನೋಟವ ನೋಡುವೆನಯ್ಯ (ಆದವ. ೨೭-೭೭). [ ತೂಕ + ಕುಂದು$_1$ ]

**ತೂಕಡಿಕೆ** 'ತೂಂಕಡಿಕೆ' ನೋ.

**ತೂಕಡಿಸು** 'ತೂಂಕಡಿಸಂ' ನೋ.

**ತೂಕಡು** 'ತೂಂಕಡಂ' ನೋ.

**ತೂಕರಿಸು** (ಕ್ರಿ). ೧. ದೃಷ್ಟಿದೋಷ ಪರಿಹಾರಕ್ಕಾಗಿ ಹಾಗು ರಕ್ಷೆಗಾಗಿ ನೆತ್ತಿಯಂ ಮೇಲೆ ಊದಂ; ತೂಪಿರಿ: ತೂಕರಿಸಿ ಪರಸಲೆಂದು ಶಚೀಕಾಂತೆಯೊಡರ್ಚೆ ನಾಣ್ಚ ತಲೆವಾಗಿ (ಚಂದ್ರಪು. ೧೨-೧೫೮). ೨. ತಿರಸ್ಕರಿಸು ; ಅವಹೇಳನ ಮಾಡು : ನಿಮ್ಮನೆಮ್ಮೆಲುಮೆಂದು ಮೂದಲಿಸಿ ತೂಕರಿಸಿ ದಿವ್ಯಿದಿರಗೊಡುತಲೊಲೆದತ್ತಿತ್ತ (ಜಿನಮು. ೧೩-೬೪).

[ <ತೂತ್ಕಾರ + – ಇಸು$_3$ ]

**ತೂಕವಣೆ** (ನಾ). [ನಾಟ್ಯ] ನೃತ್ಯದಲ್ಲಿ ಒಂದು ಗತಿ, ಚಲನೆ : ಥಾಳದ ಮೇಲೆ ತೂಕವಣೆ ರೇಖೆಯನಾಳ್ದರೆ ಪಾದದೊಳ್ಪಯಂ ಮೇಳಿಸಿ ಝುಂಕೆ ಬಿಂಗದೊಳೊಡಂಬಡೆ ... ಸಿಂಹಸೇನಭೂಪಾಳನ ಚಿತ್ರವಲ್ಲಭೆಗೆ ಸಂದುದು ರಂಭೆಯ ಲಾಸ್ಯವಿಭ್ರಮಂ (ಅನಂಪು. ೪-೯೦) ; ರೂಪು ರೇಖೆ ಧಾವಣೆ ತೂಕವಣೆಯಂಕೆ ಝುಂಕೆ... ಉಲ್ಲಾಸದಚ್ಚರಿವಡೆಯೆ ನರ್ತಿಸುತ್ತು ವಿಂರೆಯುಂ (ಶಾಂತೀಶ. ೦೬-೬೭೮). [ ತೂಕ + – ಅಣೆ$_4$ ]

**ತೂಕು$_1$** 'ತೂಂಕು$_1$' ನೋ.

**ತೂಕು$_2$** 'ತೂಂಕು$_2$' ನೋ.

**ತೂಗಡಿಕೆ** 'ತೂಂಕಡಿಕೆ' ನೋ.

**ತೂಗಾಟ** (ನಾ). ೧. ತೂಗಾಡುವಿಕೆ ; ಒಲೆದಾಡಂವಿಕೆ : ಸಾಲುಝಲ್ಲರಿಗಳ ಪತಾಕಾಜಾಲದಲಿ ಸಬಳದ ಹೊದಱ ಗೋವಳಿಗೋಲ ತೂಗಾಟದಲಿ ಸಮರಕೆ ದ್ರೋಣ ನಡೆತಂದ (ಕುಮಾ ದ್ರೋ. ೯-೧೬). ೨. ಡೋಲಾಯಮಾನವಾದ ಮನಸ್ಸಿನ ಸ್ಥಿತಿ ; ನಿರ್ಣಯಕ್ಕೆ ಬಾರದಿರುವ ಸ್ಥಿತಿ: ಬಾಬಣ್ಣ ತೂಗಾಟದಲ್ಲಿ ಬಿದ್ದ. ಹೆಂಡತಿಯ ಮುಂದೆ ಸಾಲದ ವಿಷಯ ಹೇಳಬೇಕೋ ಬೇಡವೋ ಎಂದು ಯೋಚಿಸತೊಡಗಿದ (ಅಕೋಶ. ೩೩).

[ ತೂಗು$_1$ (<ತೂಂಕು$_1$) + ಆಟ ]

**ತೂಗಾಡಿಸು** (ಕ್ರಿ). ೧. ನೇತುಹಾಕು ; ತೂಗಂಬಿಡು : ಕಪ್ಪು ಮತ್ತು ಭರಣಿಗಳನ್ನು ಕೊಂಡಿಗಳಲ್ಲಿ ತೂಗಾಡಿಸಿದರೆ ವ್ಯವಸ್ಥೆ ಚೆನ್ನಾಗಿ ಕಾಣುವುದು (ಅಡುಶಾ. ೪೫). ೨. ಬಾಗಿಸು ; ಮಣಿಸು : ಯೋಗಕೆ ಮುಖವಿಕ್ಕಿದಾಗ ಮೂಲೋಕವ ತೂಗಾಡಿಸದೆ ಸುಮ್ಮನಿಹನೆ (ಭರತೇ. ೭೭-೫೬).

[ತೂಗಾಡು + – ಇಸು$_3$]

**ತೂಗಾಡು**, ಜೂಗಾಡಂ (ಕ್ರಿ). ೧. ಒಲೆದಾಡಂ ; ತೊನೆ: ಮೇಪಿಂಗೆ ತೂಗಾಡುವ ಯೂಮಾನೇಕಮಂ ವಿಳ್ಳೆಳಿಸಿ ಸೊವಡನಾರಯ್ದುದು (ವರ್ಧಪು. ೮-೩೪) : ತಾಯನಪ್ಪುತ್ತ ಮೊಲೆಗೆ ಲಲ್ಲೈಸಿ ನಿಱಿವಿಡಿದು ಮೊಗವಂ ನೋಡುವ ತೂಗಾಡುವ ಮಗನ ಮುದ್ದುತನಮಂ ಬಸವರಾಜಂ ಕಂಡು (ಬಸರ. ೦೦-೦೨೧) : ಸೆಳೆಗೊಂಬೆಲರಿಂ ತೊನೆದೆಬ್ದು ತಟ್ಗಿ ತೂಗಾಡಿದೊಡಂತದಂ ಒಡಿದುಕೊಂಡಲರಂ ನೆಱೆ ಕೊಯ್ದು ಕಾಂತೆ . . . ಪರ್ಚಿದಳ್ (ಕುಸುಮಾ. ೫-೦೦೧); ತೀಡುವ ತೆಂಬೆಲರ್ಗೆ ಚಲಿಪಚ್ಚತಳಿರ್ಗಳ ಘಾತದಿಂದೆ ತೂಗಾಡುವ ಪಣ್ಗಳೈದೆ ಮಸೆದಂದೊಡೆಯುತ್ತೊಗುತಿರ್ಪಿನಂ ರಸಂ (ಉದ್ಭಟ. ೬-೦೨) : ದೆಳಗಿನ ತುಱುಗಲಲಿ ತೂಗಾಡುತಿದ್ದುದು ಕೈದು ತೊಡವಾಗಿ (ಕುಮಾ ದ್ರೋ. ೩-೬೧) ; ಮುಂದೆ ಸಾಗುವಾಗ ಅವಳ ಎಡತೋಳು . . . ಚುರುಕಾಗಿ ತೂಗಾಡುತ್ತಿತ್ತು (ಪುನರು. ೨೭೫). ೨. ಅಲ್ಲಾಡಿಸು ; ಅಲುಗಂವಂತೆ ಮಾಡಂ : ನೆಳಲುಗಂಡವ್ವಳಿಸುವುದು ಸುಂಡಿಲನು ತೂಗಾಡುವುದು . . . ಒಡಿಹಿಂಗೆ ಲಾಗಿಸುತಿರ್ದುದಾ ದಂತಿ (ಕುಮಾ ದ್ರೋ. ೩-೩೬) : ಮೈಯೆಲ್ಲ ತೂಗಾಡದೊಂದಿನಿಸು ... ಸಲ್ಲಲಿತದೊಳು ಹಾಡಿದರು (ಭರತೇ. ೧-೭೦) ; ಪೂಡಿದಳ್ ಪೊಂದೊಟ್ಟಲಂ ಸಖಿಯರೊಡನೆ ತೂಗಾಡಿದಳ್ (ಚಬಪು. ೪೭-೬). ೩. ತೂಕಡಿಸು : ಈ ಕಾರಣದಿಂದ ಗೌರೀದೇವಿಯು ಮಲಗಿಕೊಳ್ಳುವುದಕ್ಕೆ ಹಾಸಿಗೆಯಾದರೂ ದೊರೆಯದೆ ಒಂದು ಗೋಡೆಯನ್ನೊರಗಿಕೊಂಡು ಹಾಗೆಯೆ ತೂಗಾಡಬೇಕಾಯಿತು (ಕವಿಕ. ೫೩) ೪. ಹೊಯ್ದಾಡುತ್ತ ನಡೆ : (ಕಿ). ೫. ಡೋಲಾಯಮಾನವಾಗು ; ನಿರ್ಣಯಂಕ್ಕೆ ಬಾರದಿರು ; ಅನಿಶ್ಚಿತ ಪರಿಸ್ಥಿತಿಯನ್ನು ಪಡೆ: ಈ ಜಂಜಾಟದಲ್ಲಿ ಶೀನರ್ನಾನವು ತೂಗಾಡುತಿತ್ತು (ಚದೀಪ. ೪೬) : ವಾದವಿವಾದಗಳ ತಕ್ಕಡಿಯಲ್ಲಿ ತೂಗಾಡುವ ಈ ವಿಷಯದ ವಿಮರ್ಶೆ ಮುಂದೆ ಬರುತ್ತದೆ (ದ್ರಾವಿ. ೪೫). ೬. (ಆಲಂ) ಓಲಾಡು ; ನಲಿದಾಡು : ಲಲ್ಲೆಯಿಂ ತೊನೆಯುತ್ತಿರ್ದ ನಿಜಾಂಗದಿಂದಮೊಲೆಯುತ್ತುಂ ತೊಟ್ಟಲಂ ತತ್ಕುಮಾರನಿಳಾಧೀಶನ ಚಿತ್ರಮುತ್ಸವದೊಳಂ ತೂಗಾಡೆ ತೂಗಾಡುವಂ (ಕುಸುಮಾ. ೬-೦೪೬). **ಜೂಗಾಡು** : ೧. "ಜೂಗಾಡು = ತೂಗಾಡು" (ಶಾನಕೋ. ೬೦). [ ತೂಗು$_1$ (<ತೂಂಕು$_1$) + ಆಡು$_1$ ]

**ತೂಗಿಸು** (ಕ್ರಿ). ೧. ತೂಕ ಮಾಡಿಸು : ತೂಗಿಸಿ ತೊಲೆಯೊಳ್ ಬಾಯಂ ಮೂಗುಮನೊಡೆಯೊತ್ತಿ ಕೊಂದ ಕಳ್ಳನ ದೇಹಂ ತೂಗಿದೊಡೆ ಕುಂದದಾತ್ಮವಿಭಾಗಂ ಬೇಱಿಲ್ಲ ಜೀವನೆಂತುಂ ದೇಹಂ (ಯಶೋಚ. ೪-೨೦). ೨. (ಮೆಚ್ಚುಗೆಯಿಂದ ತಲೆಯನ್ನು) ತೂಗುವಂತೆ ಮಾಡು: ಶಿರವ ತೂಗಿಸುವುದೀ ವಚನದ ರಚನೆ (ಬೋಹತ. ೦-೨೫). ೩. ನೇತುಹಾಕಂ ; ಇಳಿಬಿಡಂ: ಲಿಂಗವ ಎದೆಗೆ ಕಟ್ಟಿನ್ನಾಗ ಬಳಿದನು ಭಸಿತ ವದನಕೆಯಂಗಸಂಗದಲಿ ತೂಗಿಸಿದ ರುದ್ರಾಕ್ಷಿಸರಗಳನು (ಬಿಜ್ಜಪು. ೯೧-೨). ೪. ತೊಟ್ಟಿಲನ್ನು ತೂಗಂ : ಹಸರನಿಕ್ಕಿದರನಿರುದ್ಧನೆಂದೆನುತ ತೂಗಿಸಲೊಡರ್ಚಿದರು ಜೋಗುಳವ (ಬೋಹತ. ೧೬-೫೦). ೫. ನಿಭಾಯಿಸು ; ನಿರ್ವಹಿಸಂ ; ಸಂಭಾಳಿಸಂ : ಈ ಕೆಲಸವನ್ನು ನೀನು ತೂಗಿಸಬಲ್ಲೆಯಾ? (ರೂಢಿ).

**ತೂಗಿಸಿಕೊಂಡು ಹೋಗು**=ನಿಭಾಯಿಸು; ಸಾಗಿಸಂ ; ಸಂಭಾಳಿಸು : ಪಾತ್ರರಚನೆಯ ದೃಷ್ಟಿಯಿಂದ ಎಡ್ವಿನ್‌ನ ವ್ಯಕ್ತಿತ್ವದಲ್ಲಿ ಕತೆಯ ಬೌದ್ಧಿಕತೆಯನ್ನು ತೂಗಿಸಿಕೊಂಡು ಹೋಗುವ ನಿರ್ಲಿಪ್ತತೆಯಿಲ್ಲ (ಹೊಸಕ. ೨೯೦) : ಅಷ್ಟು ತಾಪತ್ರಯದಲ್ಲೂ ಅವನು ಹೇಗೋ ಸಂಸಾರವನ್ನು ತೂಗಿಸಿಕೊಂಡು ಹೋಗುತ್ತಿದ್ದಾನೆ (ರೂಢಿ).

[ ತೂಗು$_1$ (<ತೂಂಕು$_1$) + –ಇಸು$_3$ ]

**ತೂಗು$_1$** 'ತೂಂಕಂ$_1$' ನೋ.

**ತೂಗು$_2$** 'ತೂಂಕು$_2$' ನೋ.

**ತೂಗುಂಗೊಂಬು** (ನಾ). ನೇತಾಡುತ್ತಿರುವ ಕೊಂಬೆ : ತುಱುಗಿರ್ದ ಬಲ್ಮಿಡಿಯ ತೂಗುಂಗೊಂಬಿನೊಳ್ಪಯ್ದು ಮುಂಡಳಿಸುತ್ತಿರ್ಪ ಶುಕಾಳಿ (ಆದಿಪು. ೧೧-೯೬). [ ತೂಗು$_1$ (<ತೂಂಕು$_1$) + ಕೊಂಬು$_1$ ]

**ತೂಗುಂಜೊಡರ್**, ತೂಗುಂಜೊಡರು (ನಾ). ನೇತುಹಾಕಿರುವ ದೀಪ ; ತೂಗುದೀಪ : ಜಕಾರಕ್ಕೆ—ತೂಗುಂಜೊಡರ್. ಆಟ್ಬಂಜಗಳಂ (ಶಮುದ. ೧೬೦ಪ್ರಯೋ) : ಮಾಲವವೆಸರ ವಿಷ್ಣುಭಕ್ತಂ ಆ ಕ್ಷೇತ್ರದ ದೇಗುಲದೊಳ್ ತೂಗುಂಜೊಡರನುರಿಯಿಸುವಂ (ಅದ್ಭುತ. ೧೬-೨೪). **ತೂಗುಂಜೊಡರು**: ಹಸಿರ ಬಸಿರೊಳೊಗೆದಲರಿನ ತೂಗುಂಜೊಡರಾಡಿಸುತಿವೆ ಇಲ್ಲಿ ಕೆಂಡಸಂಪಿಗೆ (ಹೂಹಾದಿ. ೯-೫).

[ ತೂಗು$_1$ (< ತೂಂಕು$_1$) + ಸೊಡರ್ ]

**ತೂಗುಂಜೊಡರು** 'ತೂಗುಂಜೊಡರ್' ನೋ.

**ತೂಗುಂದಲೆ** (ನಾ). ೧. ನೇತಾಡುತ್ತಿರುವ ತಲೆ : ಪೊಸ ದೂವೆ ದೂ [ಪಾಠಾಂ. ದಂಬೆತೂ]ಪ ತೂಗುಂದಲೆ ಬಾಬ್ಬಿಣಂ ಪೊಡರೆ ಬಳ್ಕುವ ಸಮ್ಮನ ಸೂಲಮಾಲದೊಳ್ ಸಂದಣಿಯಾಗಿ ನೇಲ್ವ ಪೆಣನೊಂದಿರೆ (ಶಾಪ್ಮಾಪ. ೫೬) ದಕಾರಕ್ಕೆ–ಕಡುಕುಂದಱ ... ಆಡುಂದೊಲೆ, ತೂಗುಂದಲೆ (ಶಮುದ. ೦೬೮ ಪ್ರಯೋ). ೨. (ಒಪ್ಪಿಗೆ, ಮೆಚ್ಚುಗೆ ಮುಂತಾದುವನ್ನು ಸೂಚಿಸುವ

[illegible] (೧) ತೂಗುವ ತಲೆ : (ತೂಗುಂದಲೆಯುಂದ ಪ್ರೋತ್ಸಾಹಿಸಿ ಏರ್ದ [illegible]) (ಬಬ್ರು. ೦೦೩-೯). [ತೂಗು$_1$ (< ತೂಂಕು$_1$) + ತಲೆ$_1$]

**ತೂಗುಂದೆಸೆ** (ನಾ). ಅತ್ತಿಂದಿತ್ತ ಆಡುತ್ತಿರುವ ತೆನೆ,-ಹೊಡೆ : ಅನಿಲಾಯತ್ತೋಟ್ಟಲಟ್ಟಾಳಿಯೊಳವಯುವದಿಂ ಪಾಯ್ದು ಕಾಲ್ ಬಾಟೆ ತೂಗುಂದ ನೆಲಂ ತಟ್ಟ್ಯಸಿ (ಲೀಲಾವ. [illegible]). ತೂಗುಂದೆನೆಯ ಕಳವಾಮುಲ್ಲಲ್ಲಿ ಕಾಸಾರವಲ್ಲಲ್ಲಿ . . . ಮೆಟ್ಟುವುದೆನೆ ಸುಖಾವಾಸವಮಾ ದೇಶವಲ್ತೇ (ವೃಷವಿ. [illegible]). [ತೂಗು$_1$ (< ತೂಂಕು$_1$) + ತೆನೆ$_1$]

**ತೂಗುಂದೊಟ್ಟಿಲ್, ತೂಗುತೊಟ್ಟಿಲು** (ನಾ). ಅತ್ತಿಂದಿತ್ತ ಆಡುತ್ತಿರುವ ತೊಟ್ಟಿಲು ; ಜೀಕುತ್ತಿರುವ ತೊಟ್ಟಿಲು : ಎಸೆವ ತೂಗುಂದೊಟ್ಟಿಲೊಳ್ ಪಟ್ಟ ಪುತ್ರನ ಪಕ್ಕೀಂದುವನಂದನಾಂಕಿತದುಸಾನಿನ್ನೆಂದು ಪೇಟ್ ಆಣ್ಣೆಸೋ (ಶಾಂತಿಪು. ೩೩೩); ದಶಾರಕ್ಕೆ-ಕಡುಕುಂದಟು, ಉಕ್ಕಿಲಂದೊಟ್ಟ್, ತೂಗುಂದೊಟ್ಟಿಲ್, ಆಡುಂದೊಲೆ (ಕಮುದ. ೦೭೦ ಪ್ರಯೋ) ; ತೂಗುಂದೊಟ್ಟಿಲೊಂದು ಪಾಂಗಿನಿಂ ಬಗೆ ಮನವಮುಂಕದ ಗಂಡಗರ್ವದಿರ್ದೆನಮುಂಲೆಗಳೊಳಮುಯ್ಯಲಾಡೆ (ರಾಮಾಶ್ವ. ೯೩-೨೪) **ತೂಗುತೊಟ್ಟಿಲು** : ಮಂಡೋದರಿಯು ಸೊಸೆಯ ಶಿಶು ಕೂಗಿದನು ತೂಗುತೊಟ್ಟಲೊಳಿದ್ದು ಕುಳಿತು (ಶ್ರೀರಾಮಾ. ೯೩೦-೭) ; ತೂಗುತೊಟ್ಟಿಲಿನ 'ಕಿರೀಂ', 'ಕಿರೀಂ' ಸದ್ದು (ಪಾಶ್ಚಿಮ. ೨).

[ತೂಗು$_1$ (< ತೂಂಕು$_1$) + ತೊಟ್ಟಿಲ್$_1$]

**ತೂಗುಂಮಂಚ, ತೂಗುಮಂಚ** (ನಾ). ತೂಗಲು ಅನುಕೂಲವಾಗುವಂತೆ ಕಟ್ಟಿರುವ ಮಂಚ ; ಉಯ್ಯಾಲೆ ಮಂಚ : ತೂಗುಂಮಂಚದೊಳ್ ಶಶಿಪ್ರಭಾಮಹಾದೇವಿಯುಂ ತಾನುಂ ಕುಳ್ಳಿರ್ದು (ಚಂದ್ರಪ್ರ. ೭-೯೫ವ) : ಸೀತೆಯೊರ್ವಳ್... ತೂಗುಂಮಂಚಮನೇಱ ಚೆಲ್ವಿನಿಂ ಕುಳ್ಳಿರ್ದು (ರಾಮಾಶ್ವ. ೧೭-೩೦). **ತೂಗುಮಂಚ** : "ಅಂದೋಳ ಪರಿಯಂಕಮೆನೆ ತೂಗುಮಂಚಮಕ್ಕುಂ" (ಮಂಗರಾ. ೬೦-೦೭); ಮಂಚಕ್ಕೆ—ಕಾಂಚನಮಂಚ. ತೂಗುಮಂಚ, ರತ್ನಮಂಚ (ಕಮುದ. ೨೯೮ ಪ್ರಯೋ) : ಅರಸು ಪವಡಿಪ ತೂಗುಮಂಚದ ಸರಪಳಿಯು ಬಳಿವಿಡಿದು ಪಟುಭೀಕರವಿಷೋರಗವಾಗಳೊಂದು ರವಣಿಸಿ ಹರಿತಂದು (ಬಸವಪು. ೪೬-೨೦) : ತೂಗುಮಂಚದಿ ಹಂಸತೂಲದ ಹಾಸಿಗೆ (ಪುರಂದ. ೩-೦೩೦-೨) : ಆಗಳಾ ದಮಯಂತಿ ಚಿತ್ರದ ಬಾಗಿಲುಪ್ಪರಿಗೆಯಲಿ ರತ್ನದ ತೂಗುಮಂಚದ ಹಾಸಿನಲಿ ಕುಳ್ಳಿರಲು (ನಳಚ. ೩-೨೮) ; ತೂಗುಮಂಚದ ಮೇಲೆ ಪೂಜಗುಮಂಡೆಗೆ ವಾಮಭಾಗಪನಿಟ್ಟು ಕುಳಿತನು (ಭರತೇ. ೪-೦೦೭) : ನಂದಗೋಪನ ಮನೆಯ ತೂಗುಮಂಚದ ಮೇಲೆ ನಿದ್ದೆ ಮೇಲುದುವಾತ್ಮ ಹೊದೆಯಲಿರೆ (ಗೋಕುಲಾ. ೯-೦೯).

[ ತೂಗು$_1$ (< ತೂಂಕು$_1$) + ಮಂಚ ]

**ತೂಗುಕುದುರೆ** (ನಾ). ಹಿಂದಕ್ಕೂ ಮುಂದಕ್ಕೂ ಆಡುವ, ಮಕ್ಕಳ ಆಟದ ಕುದುರೆ : ಮಗು ಸವಾರಿ ಮಾಡುವ ಮರದ ತೂಗುಕುದುರೆ (cock-horse. ಇಂಕನಿ). [ತೂಗು$_1$ (< ತೂಂಕು$_1$) +ಕುದುರೆ]

**ತೂಗುಕೋಲು** (ನಾ). (ವಿಶೇಷವಾಗಿ ಹಳ್ಳಿಗಳಲ್ಲಿ) ಬೆಣ್ಣೆ ಮೊದಲಾದುವನ್ನು ತೂಕಮಾಡಲು ಬಳಸುವ, ಒಂದೇ ಪರಡಿ ಅಥವಾ ತಟ್ಟೆಯಿರುವ ಮರದ ಕೋಲು : ಚಿಂತಾಲು, ತಕ್ಕಡಿ, ತೂಗುಕೋಲು ... [illegible] ದಾಂಗಾದವುಗಳಿಂದಲೂ ಮಾರು ಬಗೆಯಾಗಿದೆ ([illegible]). ತೂಗುಕೋಲು [illegible], ತಕ್ಕಡಿ [illegible] ಎಲ್ಲಿ? ([illegible]).

[ತೂಗು$_1$ (< ತೂಂಕು$_1$) +ಕೋಲು$_1$ (< ಕೋಲ್$_1$)]

**ತೂಗುಗುಂಡು** (ನಾ). (ಗಡಿಯಾರದ) ಲೋಲಕ ; ತೂಗಾಡುವ ಗುಂಡು : ಕವಿಯ ಮನಸ್ಸು . . . ಹೀಗಿಂದ ಹಾಗೆ ಗಡಿಯಾರದ ತೂಗುಗುಂಡಿನಂತೆ ತೋರುತ್ತಿತ್ತು (ಅಲಪೂ. ೦೨೧).

[ ತೂಗು$_1$ (< ತೂಂಕು$_1$) + ಗುಂಡು ]

**ತೂಗುಜೋಕಾಲಿ** (ನಾ). ತೂಗಾಡುವ ಉಯ್ಯಾಲೆ : ಬಾಳುವೆಯು ಹೊಸದೊಂದು ಒಗಟವಾಗಿಹುದು. ನೆಲೆಯುರಿಯದೇ, ತೂಗುಜೋಕಾಲಿಯಾಗಿ ತಲೆತಿರುಗಿಸುವದೊಮ್ಮೆ. ಕೆಳಗೆ ಮೇಲಾಗಿ (ಉಯ್ಯಾಲೆ. ೭೭-೭).

[ತೂಗು$_1$ (< ತೂಂಕು$_1$) + ಜೋಕಾಲಿ]

**ತೂಗುತೊಟ್ಟಲು** 'ತೂಗುಂದೊಟ್ಟಿಲ್' ನೋ.

**ತೂಗುತೊಲೆ** 'ತೂಗುದೊಲೆ' ನೋ.

**ತೂಗುದೀಪ** (ನಾ).=ತೂಗುಂಜೊಡರ್ : ಭವ್ಯವಾದ ದೇವಮಂದಿರ. ಬೆಳ್ಳಿಯ ತೂಗುದೀಪಗಳು (ಶ್ರೀರಾಯು. ೨೯೦).

[ತೂಗು$_1$ (< ತೂಂಕು$_1$) +ದೀಪ$_2$]

**ತೂಗುದೀವಿಗೆ** (ನಾ).=ತೂಗುಂಜೊಡರ್: ಜೋಲುವ ತೂಗುದೀವಿಗೆಯ ಸಾಲುಗಳೊಳು [ಪಾಠಾಂ. ಜೋಲುವ ದೀಪಸಾಲುಗಳೊಳು ಕೀಲಿ] ದೀಪಾಳಿಯ ಹಬ್ಬದಂತಿಹುದು (ಭರತ. ೦೫-೨೩).

[ತೂಗು$_1$ (< ತೂಂಕು$_1$) + ದೀವಿಗೆ]

**ತೂಗುದೊಲೆ, ತೂಗುತೊಲೆ** (ನಾ.) ೧. ಒಂದು ಬಗೆಯ ಯುದ್ಧಸಾಧನ ; ಲಗ್ಗೆಯಲ್ಲಿ ಶತ್ರುಗಳ ಮೇಲೆ ತೂಗಿ ಎಸೆಯುವ ಮರದ ದಿಮ್ಮಿ : ಸಾಲ ಮುಗಿಲಟ್ಟಣೆಯ ಡೆಂಕಣಿಯ ಪಂದಿದಲೆಯೋಳಿಗಳ ಮರುಳ ಕೈಗಳ ತೂಗ[ಗು]ದೊಲೆಯ . . . ವಿಶಾಲಶಾಲಮನಿರದೆ ದಿವಿಜಪತಿ ಕಂಡು (ಕಬಪು. ೪೨-೨೨). **ತೂಗುತೊಲೆ: ೨.** ಇಳಿಬಿಟ್ಟಿರುವ ತೊಲೆ ; ನೇತುಹಾಕಿರುವ ಮರದ ದಿಮ್ಮಿ : ಎಂಥ ಭಾರಕು ಜೋಲಿ ಹೊಡೆಯದಿಹ ತೂಗು-ತೊಲೆ (ನೆಲಮು. ೫೦-೭).

[ತೂಗು$_1$ (< ತೂಂಕು$_1$) + ತೊಲೆ$_3$]

**ತೂಗುನೀರು** (ನಾ). ೧. ಎರಡು ಕೈಗಳಲ್ಲೂ ಕೊಡಗಳನ್ನು ಹಿಡಿದುಕೊಂಡು ಗಿಡ, ಮರ, ಬಳ್ಳಿ ಮೊದಲಾದುವುಗಳಿಗೆ ಒದಗಿಸುವ ನೀರು: ಅರಮನೆಯಲ್ಲಿ ಪ್ರತಿದಿನದಲ್ಲಿಯೂ ನಡೆಯುವಂತೆ ಕಟ್ಟುಮಾಡಿದ ಊಳಿಗಗಳ ವಿವರ... ಕರಗದ ಊಳಿಗ, ತೂಗುನೀರಿನ ಊಳಿಗ (ಚಾಮವಂ. ೪೫). ೨. ನೇತುಹಾಕಿದ ಪಾತ್ರೆಯಲ್ಲಿಟ್ಟ ನೀರು : ತೂಗುನೀರಿನಲ್ಲಿ ಲವಂಗ, ಏಲಕ್ಕಿ, ಸಬ್ಬಸಿಗೆಬೀಜ, ತಾಳೀಶಪತ್ರೆ ಸಹ ಅರೆದು...ಸೇವಿಸೆ ಪೈತ್ಯರೋಗಂ ಗುಣಮಕ್ಕುಂ (ಸಕವೈ. ೦೩೪).

[ತೂಗು$_1$ (< ತೂಂಕು$_1$) + ನೀರು$_1$ (< ನೀರ್$_1$) ]

**ತೂಗುಪಾತ್ರೆ** (ನಾ). ೧. ನೇತುಹಾಕಿರುವ ಪಾತ್ರೆ : ಆಗಾಗ ದೈವಿಕ ಪರಿಮಳದ ತೂಗುಪಾತ್ರೆಗಳು ಗಾಳಿಯಲ್ಲಿ ಓಲಾಡಿದ ಶಬ್ದ ನನಗೆ ಕೇಳುತ್ತಿತ್ತು (ಯೋರಪ. ೪೮). ೨. ನೇತಂಹಾಕಲು ಅನುಕೂಲವಾಗುವಂತೆ ಹಿಡಿ ಇರುವ ಪಾತ್ರೆ. [ತೂಗು$_1$ (< ತೂಂಕು$_1$) + ಪಾತ್ರೆ]

**ತೂಗುಬಿಡು** (ಕ್ರಿ). ಜೋಲಾಡುವಂತೆ ಮಾಡು ; ನೇತುಬಿಡು ; ಇಳಿಬಿಡು : ಅವರ ಖಗೋಳಸಿದ್ಧಾಂತದ ಪ್ರಕಾರ ಭೂಮಿಯು ಗೋಳಾಕಾರವಾಗಿದ್ದು ಅಂತರಿಕ್ಷದಲ್ಲಿ ತೂಗುಬಿಟ್ಟ ಹಾಗಿದೆ (ಶಿಲ್ಪಶಾ. ೯೩).

[ತೂಗು$_1$ (< ತೂಂಕು$_1$) + ಬಿಡು$_1$ ]

**ತೂಗುಮಂಚ** 'ತೂಗುಂಮಂಚ' ನೋ.

**ತೂಗುಮಣಿ** (ನಾ). ಜೋಲಾಡುವಂತೆ ಹರಳನ್ನಿಟ್ಟು ಮಾಡಿರುವ ಒಂದು ಬಗೆಯ ಆಭರಣ : ಕೈಗಡಿಯಾರದ ಜೊತೆಗೆ ಚಿನ್ನದ ಬಳೆಗಳು. ಕಿವಿಗೆ ತೂಗುಮಣಿಗಳನ್ನು ಇಳಿಬಿಟ್ಟು ಹಣೆಗೆ ತಿಲಕವನ್ನಿಟ್ಟಿದ್ದಳು (ದೂರತ. ೮೭). [ತೂಗು$_1$ (< ತೂಂಕು$_1$) + ಮಣಿ$_3$]

**ತೂಗುಮಣೆ** 'ತೂಗುವಣೆ' ನೋ.

**ತೂಗುಮರ** 'ತೂಗುವರ' ನೋ.

**ತೂಗುಯ್ಯಲೆ, ತೂಗುಯ್ಯಾಲೆ** (ನಾ). ೧. ತೂಗಾಡುತ್ತಿರುವ ಉಯ್ಯಾಲೆ : ಲಕ್ಷ್ಮಣಂ ... ಎಂದುಮಗಲದಣ್ಣನ ಕಡೆಗೆ ದೂಳ್ದಾಯ

ದೊಳ್ಪಕ್ತಿ ಪೊರಳ್ವ ಸೀತೆಯ ಕಡೆಗೆ ತೂಗುಯ್ಯಲೆವೊಲಾದನು (ಕೃವಿಭಾ. ೧೯-೨೯): ಕೊಂಬೆಯಂ ತೂಗುಯ್ಯಲೆಯಲಿ ಹಕ್ಕಿ ಸುರಗಾನದ ಹೊಳೆಹರಿಸಿತು ಸೂಕ್ಕಿ (ಪಾಂಚಜ. ೫೬-೫). ೨. (ಆಲಂ) ಡೋಲಾಯಮಾನವಾದ ಸ್ಥಿತಿ; ಸಂದಿಗ್ಧಪರಿಸ್ಥಿತಿ: ಅವಳ ಪ್ರೇಮ ತೂಗುಯ್ಯಲೆಯಾಗಿತ್ತು (ಶುನರು. ೫೩೦). **ತೂಗುಯ್ಯಾಲೆ**: ೨. ಹಳೆಯುದನ್ನು ಬಿಡಬೇಕೋ ಕಟ್ಟಿಕೊಳ್ಳಬೇಕೋ ಎಂಬ ತೂಗುಯ್ಯಾಲೆಯಲ್ಲಿದೆ ನನ್ನೂರು (ನನ್ನೂರು. ೩೦೯).

[ ತೂಗು$_1$ (< ತೂಂಕು$_1$) + ಉಯ್ಯಲೆ (< ಉಯ್ಯಲ್) ]

**ತೂಗುಯ್ಯಾಲೆ** ‘ ತೂಗುಯ್ಯಲೆ ’ ನೋ.

**ತೂಗುವಣೆ**, ತೂಗುವಂಣೆ (ನಾ). ಉಯ್ಯಾಲೆ; ಜೋಕಾಲಿ: ತಳಿರ ತೊಂಗಲ ತೂಗುವಣೆಯಲ್ಲಿ . . . ಸುಳಿದಾಡುವ ಮಂದಮಾರುತ ಮತ್ಕಾಂತನ ಬಳಿಗೆನ್ನ ಸಾರ್ಚೆಂದಳಳುತ (ಮೋಹತ. ೯-೨೮). **ತೂಗುಮಣೆ**: ತೂಗುಮಣೆ ಇರೋದೆ ಮಕ್ಕಳಾಟಕ್ಕೆ, ಆಡಬೇಡ ಅನ್ನಬೇಡ (ಜಾಧ). [ ತೂಗು$_1$ (< ತೂಂಕು$_1$) + ಮಣೆ ]

**ತೂಗುಮರ**, ತೂಗುಮರ (ನಾ). ೧. = ತೂಗುದೊಲೆ ೧: ತಳಿವರ ನೂಲ ಹರಿಗೆ ಕಬ್ಬಿನದ ಬಲ್ಲಲಗೆ ಬದ್ದರ ಸಾರವಾರಿ ತೊಲೆ ತೂಗುಮರ ಬಲೆ ಪಗ್ಗ ಮಕರದಿಬ್ಬಿ ಸಲೆ ಮೆಟ್ಟಿದವು ದುರ್ಗದೊಳಗೆ (ಕುರಾಸಾಂ. ೩೭-೫೬). **ತೂಗುಮರ**: ೨. ನೇಣುಮರ; ಗಲ್ಲುಗಂಬ: ನಾವು ಈಗಲೆ ಹೇಳಿದ್ದೇನೆ. ಇವನು ಒಂದು ದಿನ ತೂಗುಮರ ಏರುತ್ತಾನೆ (ಜಾಧ).

[ ತೂಗು$_1$ (< ತೂಂಕು$_1$) + ಮರ$_1$ ]

**ತೂಗುಮೆರಳು** (ನಾ). (ಮೆಚ್ಚುಗೆಯಿಂದ) ಅಲ್ಲಾಡಿಸುತ್ತಿರುವ ಬೆರಳು: ಮರ್ಝಿ ಪೂತು ಭಾಪೆನುತ ತೂಗುಮೆರಳಿನ ಮಕುಟದೊಲಹಿನೊಳಾಗರುವಘಟರುಲಿಯು (ಕುಮಾರವ್ಯಾ. ೧-೩೬).

[ ತೂಗು$_1$ (< ತೂಂಕು$_1$) + ಬೆರಳು (< ಬೆರಲ್) ]

**ತೂಗುವೊಡಲು** (ನಾ). ಜೋಲುತ್ತಿರುವ ಶರೀರ; ನಿಲ್ಲಲಾರದೆ ತತ್ತರಿಸುತ್ತಿರುವ ದೇಹ: ತೂಗುವೊ[ಪಾಠಾಂ. ಗಿದೊ]ಡಲರೆಮುಚ್ಚುಗಂಗಳ...ಮೂರ್ಛೆಯಲಿ ರವಿಸೂನು ವ್ಯಮಟಿದ (ಕುವ್ಯಾಕ. ೧೦-೩೦).

[ತೂಗು$_1$ (< ತೂಂಕು$_1$) + ಒಡಲು (< ಒಡಲ್)]

**ತೂಗುಸೇತುವೆ** (ನಾ). “ತಳದಲ್ಲಿ ಆಧಾರವಿಲ್ಲದೆ ಎರಡು ಕೊನೆಗಳಲ್ಲೂ ಸ್ತಂಭ, ಮೊ.ಕ್ಕೆ ಬಿಗಿದು ಕಟ್ಟಿ, ಹೊಳೆ, ಮೊ. ಗಳಿಗೆ ಅಡ್ಡವಾಗಿ ತಂತಿ ಹುರಿಜಗಳಿಂದ ಜೋಲ ಹಾಕಿರುವ ಸೇತುವೆ” (Suspension-bridge. ಇಂಕನಿ); ೧೫೫೦ರಲ್ಲಿ ಮೊದಲ ಬಾರಿ ಪೆಲೇಡಿಯೊ ಕಬ್ಬಿಣದ ತೂಗುಸೇತುವೆಯನ್ನು ಕಟ್ಟಿದನು (ಶಿಲ್ಪವಾ. ೧೫೪).

[ತೂಗು$_1$ (< ತೂಂಕು$_1$) + ಸೇತುವೆ]

**ತೂಗುಹಲಗೆ** (ನಾ). (ಅಂಗಡಿ ಮೊದಲಾದುವುಗಳ ಮುಂದೆ ಅದರ ಹೆಸರನ್ನು ಬರೆದು) ತೂಗುಹಾಕಿರುವ ಹಲಗೆ; ನಾಮಫಲಕ: ಆಮೇಲೆ ಬರುವಿ ನೀ ದತ್ತತಾಯಾಗಿ ಕರ್ತವ್ಯಗಳ ತೂಗುಹಲಗೆಯನೆತೂಗಿ (ನವ್ಯಧ್ಯ. ೬-೧೫): ಬಾಂಬೇ ಸೈಕಲ್ ಸ್ಟೋರ್ಸ್ ಎಂಬ ತೂಗುಹಲಗೆ ಅದರ ಮುಂದೆ ನೇತಾಡುತ್ತಿತ್ತು. (ನಿಸುತ. ೧).

[ ತೂಗು$_1$ (< ತೂಂಕು$_1$) + ಹಲಗೆ (< ಪಲಗೆ) ]

**ತೂಗೋಲೆ** (ನಾ). ತೂಗಾಡುತ್ತಿರುವ ಓಲೆ; ಲೋಲಕ: ಕತ್ತಿನಲ್ಲಿ ವಜ್ರದ ಹಾರ. ಕಿವಿಗಳಿಗೆ ವಜ್ರದ ತೂಗೋಲೆ (ಪ್ರಕಾಶ. ೨).

[ತೂಗು$_1$ (< ತೂಂಕು$_1$) + ಓಲೆ]

**ತೂಟಿಸು** (ಕ್ರಿ). ನಾಶಮಾಡು; ಪರಾಭವಗೊಳಿಸು: ನಿನ್ನಿನ ರಣವನ್ನೆಯ ತಾ ತೂಟಿಸಿದುದೇನಾಯ್ಕೆನುತ್ತ ಹೆಂಗಳ ನೋಟದಿಂದುತ್ತರಂ ನುಡಿದನು (ತುರಂಗ. ೩೬-೨೬). ‘ತುಟ್ಟಿಸು’ ಪರಾ.

[ < ತುಟ್ಟಿಸು ]

**ತೂಟೆದಾರ** (ನಾ). (ಕರಾ) ಉತ್ಸವಾದಿಗಳಲ್ಲಿ ತೆಂಗಿನ ಗರಿಗಳ ಕೊಳ್ಳಿಗಳನ್ನು ಹಿಡಿದು ಮಾಡುವ ಒಂದು ಬಗೆಯ ಹುಸಿಕಾಳಗ: ತೂಟೆದಾರ . . . ಬೋಂಟೆ (Hunting) ಇತ್ಯಾದಿಗಳು ತುಳುವರ ಧೈರ್ಯ, ಸ್ಥೈರ್ಯ, ವೀರತ್ವದ ಕುರುಹುಗಳೆಂಬುದಾಗಿ ಸೂಚಿಸಿದ್ದಾರೆ (ತುಳುಸಾ. ೨೦). [ ← ತುಳು. ತೂಟೆದರ ]

**ತೂಡಿಲ್** (ನಾ). ಒಂದು ಸ್ಥಳದ ಹೆಸರು: ಅಸ್ಯ ಸೀಮಾನ್ತರಂ ಪೆರ್ವ್ವಟ್ಟಿಯೂರ ಸೀಮೆ ಮೂಡಯ್ತೂಡಿಲ ಪೆರ್ವ್ವಳ್ಳಮೋ . . . ಬಡಗಾಯ್ ಪೆರ್ವ್ವಳ್ಳಮ ಸೀಮೆ (ಎಕ. IV, ಹೆಗ್ಗಡ. ೪-೨೫; ಕು. 750). [ ? ]

**ತೂಣ$_1$** ‘ ತೂಳ$_1$ ’ ನೋ.

**ತೂಣ$_2$**, ತೂನ (ನಾ). ಕಂಭ; ಸ್ತಂಭ: “ ತೂಣ(ನ) – ಸ್ಥೂಣ = ಗೂಟ, ಕಂಬ ” (ಕತ್ಯಕೋ. ೧೮): ಮುದದಿಯು ನುಣ್ಗೊಡೆಗಳನ್ನು ಕಡೆಗೆ ಬಣ್ಣಿಸಲಾನಟಿಯು ಮೋಹಪವೆಂಬ ಗುಡಿಗಟ್ಟಿ ತೂಣದಂತಿಹುದು (ಅಂಚಚ. ೫-೧೨೪); ಸುರರ ಸುದಣ ಭರದಿಂದ ವರನಾಕವಿಳಿದು ಕೂಡ ದೊಲಜ ತೂಣವನಿರಿಸಿದಂತಿಹುದಲ್ಲಿ ಮೇರು (ವರ್ಧಚ. ೦-೪೮). **ತೂನ್**: (ಕ). ‘ ತೂನಗೆಣಸು ’ ಪರಾ. [ < ಸಂ. ಸ್ಥೂಣಾ ]

**ತೂಣ$_3$** (ನಾ). = ತೂಣೀರ: ಕಾಮುಬಾಣಂಗಳ ತೂಣವೆಂದೆನಿಸಿ ರಂಜಿಸಿತೊಂದು ಮನೋಜ್ಞಮಂಟಪಂ (ಉದ್ಯಟ. ೫-೦೬); ತೂಣದಿಾ ಸರಳ್ಗಳ ನರ್ಚೆ ತೊಟ್ಟು ಶಿರುವಂ ತೆಗೆದೆಚ್ಚಂ (ತ್ರಿಪುವಿ. ೨೪-೩೫೨). [ ಸಂ. ]

**ತೂಣ$_4$** (ನಾ). ಯಮ: ತೂಣನ ಕೋಳಂ ತುಂಡಿಸಿ ಪೂಷನ ಕೋಣೆಯ ಹಲ್ಲೆಲ್ಲ ಘಲ್ಲಿಸಿ . . . ಶಿರಂಗಿದನಧ್ವರದೆಡೆಗೆ (ವೀರೇಚ. ೨-೪೩): ಓಹೋ ಹೋಯೆನ್ನಸುವಿಂಗ ತೂಣನ ಕೋಹಿಗೆ ಸಿಲ್ಕದು (ಉದ್ಯದೀ. ೩-೪೩): ತೂಣನಂ ತುಳಿದ ಪೆಬ್ಬಾವಿನೆಂಜಲುಂಡಾ ... ಕಟಿಗೊರಲ ಶಿವ ರಕ್ಷಿಸೈ ನಿಶ್ಚಲದೊಳು (ಸಂದಿನೂ. ೨೦-೫೫). ‘ತೂಣಕೋಡು’, ‘ತೂಣಕೋಣ’ ಪರಾ. [ ? ]

**ತೂಣಕೋಡು** (ನಾ). ಯಮನ ವಾಹನದ ಕೋಡು: ಮನುಜಪತಿಜವಹರಂಬುಗುವವನನುತುಂ ಬಿನ್ನೈಸುತಿರ್ಪ ಸಮಯದೊಳಗೆ ಪಡಿಹಾರಿಯೊರ್ವನೆಯ್ತಂದು ತಚ್ಛೋಳನೆಡೆವಿಡದಡರಿದಂ ತೂಣಕೋಡುಗಳನೆನು ತೊಡನೆ ಬಿನ್ನೈಸಿದಂ ತದ್ವೃತ್ತಸಂದೋಹಕಣಿಯರಂ ಮುಂದದೊಳು (ಅರಾಚ. ೪-೭೪). [ ತೂಣ$_4$ + ಕೋಡು$_4$ ]

**ತೂಣಕೋಣ** (ನಾ). ಯಮನ ವಾಹನವಾದ ಕೋಣ,– ಮಹಿಷ: ಸುರಪಕರಿದಂತಮಂ ತೂಣಕೋಣನ ಕೊಂಬನಿರದೆ ಕಿಳ್ತಿರದನುಟಿ ಓಡಿದು ತಾಳಂಗುಟ್ಟುತ (ಅರಾಚ. ೦೬-೮). [ ತೂಣ$_4$ + ಕೋಣ$_1$ ]

**ತೂಣಗೊಳ್ಳು** (ಕ್ರಿ). ಪರವಶವಾಗು; ಆವೇಶ ಹೊಂದು: ವನದೇವಿಯೋಲಗದೊಳುತ್ಸವದಿಂದಮಡಿಗಡಿಗೆ ತೂಣಗೊಂಡವನಂತೆಸೆವ ಮಂದಮಾರುತನ ಸೋಡೆಂದನು (ಕೃಮಿಭಾ. ೩-೭೨): ನವಿಲ ನಾಟ್ಯವನ್ನು ನೋಡಿ ನೆನಸಿ ನೆನಸಿ ತೂಣಗೊಂಡೆ (ಪಯುಣ. ೬೭-೭): ತೂಣಗೊಂಡಿಹೆನಿಂತು ಮಹಾದ್ಭುತಪವಾಡಸಂದರ್ಶನಕ್ಕೆ (ಅನಿಕೇ. ೩೯-೯).

[ ತೂಣ$_1$ (< ತೂಳ$_1$) + ಕೊಳ್ಳು$_1$ (< ಕೊಳ್$_1$) ]

**ತೂಣಮನ** (ನಾ). (ಕಂಬದಂತೆ) ಸ್ಥಿರವಾಗಿರುವ ಮನಸ್ಸು: ತೂಣಮನಗೈದಡವಿಯುಂ ಸಾದೊರ್ಡಂ (ಶ್ರೀರಾಮ. ೪-೩೬).

[ ತೂಣ$_2$ + ಮನ$_1$ ]

**ತೂಣೆ** (ನಾ). = ತೂಣೀರ: “ಮೂಡಿಗೆ, ತೂಣೆ; ಬತ್ತಳಿಕೆ – ಈ ೩ ಬೆನ್ನ ಹೊದ” (ಕಕಸಾ. ೫೨-೧೦೬); ನಮಿಸಿ ಮುನಿಗಳಿಗಾಗ ಧನುವನು ಬಹು ತೂಣೆಗಳಂ ಸಮರಜಯಾಕಾಂಕ್ಷೆಯಲಿ ಧರಿಸುತ (ಉತ್ತರಾ. ೩೨-೭೦): ಪತಿಭಕ್ತಿಜಾಣೆಯುಂ ಸುಲಭಪ್ರವೀಣೆಯುಂ ಚತುಃಕಾಣತೂಣೆಯುಂ ಪಶುಪತಿಯ ರಾಣಿಯುಂ ಎಂಗೆ ಪೊಗಳುವೆ (ಗುಭರ. ೦-೭). [ ಸಂ. ]

**ತೂಣಿಕಾರ** (ನಾ). ಬತ್ತಳಿಕೆಯನ್ನು ಹಿಡಿದಿರುವ ವೀರ (?) : ಕಾಣಿಸಿ ೪ ದೇವಕೂಟದ ತೂಣಿಕಾರ × × × ದ್ದಲ್ಲಿ (ಕಇ. I, ೪೭-೧೧; 1425). [ ತೂಣಿ + - ಕಾರ$_1$ ( < - ಕಾಜ ) ]

**ತೂಣೀರ** (ನಾ). ಬಾಣವನ್ನು ತುಂಬುವ ಚರ್ಮದ ಚೀಲ; ಬತ್ತಳಿಕೆ : "ತೂಣೀರಂ . . . ಕಳಾಪಃ-ಈ ೮ ಮೂಡಿಗೆ" (ಹಲಾಯು. ೭೬-೩೧೧) : ಸನ್ನಹತೂಣೀರಚಾಪಕಂಬಳಸಹಿತಂ ರನ್ನದ ಚಿತ್ರಿತ ಘಟಮಂ ತನ್ನಯ ಭುಜದ ತಳೆವಂ .ಮೃಗಾಂತ್ಯತ್ರ್ಯಕ್ಷಂ (ಜಾತತಿ. ೧೯-೩೦); ಕವಚಂದೊಟ್ಟು ರರಾಸನಂಬಿಡಿದು. ತೂಣೀರಂಗಳಂ ತಾಳ್ದಿ (ಪಂಪಾಭಾ. ೯-೪೭) : ತೂಣೀರದೊಳ್ ಶರಂ ಪೋಗುವಂತೆ ತಲೆಯೊಳಗೆ ಬಾಣದ ಪೋಗಲು ಮೂರ್ಛೆಯೊಳಾಳ್ದು ಬೀಳೆ (ಚತುಪು. ೩-೮.೯೪): ಪಾರ್ಥಕಂಗೆಯ್ ನನ್ನ ಕೊಟ್ಟು ಧನುರ್ಬಾಣಮಂ ದಿವ್ಯತೂಣೀರಮಂ (ಶ್ರೀರಾಪ. ೧೯೩-೪೬೯) [ ಸಂ. ]

**ತೂತ** (ನಾ). ೧. ಹುರುಳಿಲ್ಲದವನು; ಪೊಳ್ಳಾದವನು: ಆಶೆಗೆ ಸಿಲುಕಿ ಸಾವ ತೂತರಿಗೆಲ್ಲಿಯದೋ ಲಿಂಗ (ಮೋಳಿಪಾ. ೪೮-೨೦೦) : ನಾಡಿ ಸೂತ್ರಗಳ ಭೇದವನರಿದವೆಂದು ದೀಪನ ಪಚನ ವೃತ್ಯಕ್ಕೆ ಶ್ಲೇಷ್ಮವಿದೆಯೆಂದು ಆತ್ಮನ ಹಿತವನರಿಯದ ತೂತ ವೈದ್ಯನಲ್ಲ (ಸರ್ವಾವ. ೨೨-೧೦೭). (ಗು). ೨. ಹುರುಳಿಲ್ಲದ; ಪೊಳ್ಳಾದ. 'ತೂತಜ್ಞಾನಿ' ಪರಾ. [ ತೂತು$_1$ ( < ತೂಂತು$_3$ ) + - ಅ$_7$ ]

**ತೂತಜ್ಞಾನಿ** (ನಾ). ಪೊಳ್ಳುಜ್ಞಾನಿ ; ಅಜ್ಞಾನಿ : ಮಾತಿನ ಮಾಲೆಯ ಕಲಿತು ಸಂತೆಯೊ ಹೋಕಿನಂತೆ ಹೋರುವ ತೂತಜ್ಞಾನಿಗಳಿಗಿನ್ನೆಂತಜ ವಿರಕ್ತಿಯೋ (ಮೋಳಿಪಾ. ೧೭೦-೬೩೫): ಮಾತಿನ ಮಾಲೆಯ ಬೋಧೆ ತೂತ ಜ್ಞಾನಿಗಳ ಸಂಸರ್ಗ (ಅವರೀ. ೪೭). [ ತೂತ + ಜ್ಞಾನಿ ]

**ತೂತಪಪ್ಪಟ್ಟ** (ನಾ). ೧. ಮಧ್ಯೆ ತೂತು ಮಾಡಿರುವ ರೊಟ್ಟಿ ಮೊದಲಾದ ತಿನಿಸು ; ತಪ್ಪಲೆರೊಟ್ಟಿ ಇತ್ಯಾದಿ. ೨. ಸ್ತ್ರೀಯ ಗುಹ್ಯಾಂಗ ; ಯೋನಿ : (ಸ). [ ತೂತು$_1$ ( < ತೂಂತು$_3$ ) + ಅಪ್ಪಟ್ಟ ]

**ತೂತಾಲಂಬ** (ನಾ). ತಪ್ಪನ್ನೇ ಹಿಡಿದು ಹೋರಾಡುವವನು ; ದೋಷಗ್ರಾಹಿ (?) : ಮಾತಿಗೆ ಮಾತ ಗಂಟನಿಕ್ಕಿ ನಿಹಿತವರ್ತನವಿಲ್ಲದ ಸರ್ವ ತೂತಾಲಂಬರ ಮಾತು ಸಾಕಂತಿರಲಿ (ಅವರೀ. ೮೦). [ ತೂತು$_1$ ( < ತೂಂತು$_3$ ) + ಆಲಂಬ ]

**ತೂತಿದು** 'ತೂಂತಿದು$_1$' ನೋ.

**ತೂತು$_1$** 'ತೂಂತು$_3$' ನೋ.

**ತೂತು$_2$** (ನಾ). ಒಂದು ಬಗೆಯ ವಿಮಾನು : ತೂತು ತೆಂತಲು ಸಿಸಿಲು . . . ಆನೆವೊಗನೆಂಬ ಪರಿಪರಿಯ ವಿಮಾನ್ಗಳಂ ಗುದಿಗೆಯ್ದುರು (ಹಡಕಾ. ೫-೪೫). [ ? ]

**ತೂತುಕೆಡವು** (ಕ್ರಿ). ರಂಧ್ರವನ್ನುಂಟುಮಾಡು : ತೂತಂಮಾಡು : "ಅವಿಧ ತೂತುಕೆಡವತಕ್ಕದು" (ಗಂಗಾಮು. ೨೮). [ ತೂತು$_1$ ( < ತೂಂತು$_3$ ) + ಕೆಡವು ( < ಕೆಡಪು ) ]

**ತೂತುಕೊರೆ** 'ತೂಂತುಗೊರೆ' ನೋ.

**ತೂತುಗೆಯ್** (ಕ್ರಿ). = ತೂತಂಕೆಡವು : ಕಪೋತನೊಂದು ಶಾಂ ಠಕ್ಕಿಸಿ ಕಲ್ಲಿಯಂ ಕಡಿದು ಕನ್ನದೊಳೋಡಿದುದಂತೆ ಕಲ್ಲಿಯುಂ ಚಿಕ್ಕನೆ ತೂತುಗೆಯ್ದು ಗಿಳಿಗಳ್ ಕರೆತಂದವು ತಮ್ಮ ಪೋತವಂ (ಹರಿಶ್ಚಂ. ೯-೬೨). [ ತೂತು$_1$ ( < ತೂಂತು$_3$ ) + ಕೆಯ್$_1$ ]

**ತೂತುಗೊಚಿ** 'ತೂಂತುಗೊಚಿ' ನೋ.

**ತೂತುತೆಗೆ** (ಕ್ರಿ). = ತೂಂತುಗೊಚಿ : ಗೋಡೆಯಲ್ಲಿ ಮೊದಲು ತೂತು ತೆಗೆದು ಆಮೇಲೆ ಮೊಳೆ ಹೊಡೆ (ರೂಢಿ). [ ತೂತು$_1$ ( < ತೂಂತು$_3$ ) + ತೆಗೆ$_1$ ]

**ತೂತುಬಾಯ್, ತೂತುಬಾಯಿ** (ನಾ). ಯಾವ ವಿಷಯವನ್ನಾದರೂ ಗುಟ್ಟಾಗಿಡದೆ ಬಹಿರಂಗ ಪಡಿಸುವ ಬಾಯಿ ; ಒಡಕುಬಾಯಿ : ಮರ್ತ್ಯದ ಮನುಜರು ಸತ್ತರೆನುತ್ತ ಕತ್ತಲೆಯೊಳು ಮುಳುಗಿ ಈ ಮಾತು ಕಲಿತುಕೊಂಡು ತೂತುಬಾಯೊಳಗೆ ನುಡಿದು ... ಹುಚ್ಚುಗೊಂಡು ತಿರುಗುವ ಕತ್ತೆಮನುಜರ ಮೆಚ್ಚರು ನಮ್ಮ ಅಪ್ಪಣ್ಣಪ್ರಿಯಚೆನ್ನಬಸವಣ್ಣ (ಲಿಂಗವ. ೬೭-೫೯). **ತೂತುಬಾಯಿ** : ಅವಳದು ತೂತುಬಾಯಿ, ಯಾವುದೂ ಗುಟ್ಟಾಗಿ ಉಳಿಯುವುದಿಲ್ಲ (ರೂಢಿ). [ ತೂತು$_1$ ( < ತೂಂತು$_3$ ) + ಬಾಯ್ ]

**ತೂತುಬಾಯಿ** 'ತೂತುಬಾಯ್' ನೋ.

**ತೂತುವೋಗು** 'ತೂಂತುವೋಗು' ನೋ.

**ತೂತೇಳು** (ಕ್ರಿ). ರಂಧ್ರವುಂಟಾಗು : ಮಾತುಗಾಜಿಕೆ ಬೇಡ ಒಡಿಯೆಂದು ಭಾಳದ ತೂತೇಳಲೆಚ್ಚು ಬೊಬ್ಬಿರಿದ (ಮೋಹತ. ೧೨-೫೯). [ ತೂತು$_1$ ( < ತೂಂತು$_3$ ) + ಏಳು$_1$ ( < ಎೞ್$_1$ ) ]

**ತೂತ್ಕಾರ** (ನಾ). ಒಂದು ಅನುಕರಣ ಶಬ್ದ : ಗೋವಳರೊತ್ತುವ ತಿತ್ತಿರಿಗಾಳೆಯ ತೂತ್ಕಾರಮುಮಂ (ಆರ್ಥನೇ. ೮-೬೫೮).

**ತೂದ** (ನಾ). ಒಂದು ಬಗೆಯ ಮರ ; ಹೂವರಸಿ ; ಬ್ರಹ್ಮದಾರು : ತೂದಃ, ಪೂಗಃ, ಯೂಪಃ . . . ತೂಲಂ-೬ ಹುವ್ವರಿಸಿ ಗಿಡ . . . ಕಾಡಡಿಕೇಮರವೆಂದು ಕೆಲವರನ್ನುವರು (ಸಿದ್ಧಾಂತಿ. ೧೨೧). [ ಸಂ. ]

**ತೂದು** 'ತುಯ್$_2$' ಪರಾ.

**ತೂನ್, ತೂನು** (ಕ್ರಿ). ತೂಂತು$_2$ (ಭೂತನಿಷ್ಠ). ೧. ಜಗ್ಗು ; ಮುಂದಕ್ಕೆ ಎಳೆ : ಬಳ್ಳು ಎತ್ತಿನುವರದಿಂ ಪೊಜವಟ್ಟು ಓಡುವುದುಂ ಶ್ವಾನಂಗಳ್ ಕಂಡು ತೂನುತ್ತಿರಲ್ (ಶಂಪತಾ. ೨೦-೬) ; ಆ ಧನುವನು ತೂನಲ್ಕಾಜದೆಯುಂಗಾಧೀಶ ತಿರುಗೆ ಲಜ್ಜೆಯೊಳು (ನೇಮಿಸಂ. ೨೩-೨೬೬) ; ಕೆಲರಲ್ಲಿ ತಲೆಗೂಡಲಂ ಕಟ್ಟಿ ಬಿಡದೆ ಆಲಿದು ತೂನುತ್ತೊಯ್ದರು (ವೀರಶೈಪು. ೪-೧೨-೨೭); ಸಸಿ ಸಾಣೆಯನು ತೆಂಕಣೆಲರ್ವರ್ಗದೊಳು ತೂಂತು ಮಸೆದು (ನಾಗಕು. ೩೦-೨೭). **ತೂನು** : ೨. ಕಿತ್ತುಕೊಳ್ಳು ; ಸೆಳೆದುಕೊಳ್ಳು ; ವಸೂಲುಮಾಡು : ಇಂದು ಗೌರಿಯ ಹಬ್ಬವೆಂದು ದೀಪಾವಳಿ ಇಂದು ಕೇತಾರನ ದಿನವೂ ಇಂದು ಯುಗಾದಿ ಮತ್ತೊಂದು ಸಂಕ್ರಾಂತಿಯೆಂದೆಂದು ಧನವ ತೂನುತಿಹರು (ಅಂಜಿಚ. ೫-೧೨೪).

**ತೂನ** 'ತೂಣ$_2$' ನೋ.

**ತೂನಗೆಣಸು** (ನಾ). ಒಂದು ಬಗೆಯ ಗೆಣಸು : ಮರಗೆಣಸು : ತೂನ ಗೆಣಸು, ಮುಡಿಗೆಣಸು, ನೂರಲೆಗೆಣಸು, ತುಣಗೆಣಸು, ದಂಡಾಲು (ಮೃಜಿಗಿ. ೩೧-೫೯೨). [ ತೂನ ( < ತೂಣ$_2$) + ಗೆಣಸು ( < ಗೆಣಸು) ]

**ತೂನಿಹುಳ** (ನಾ). ಒಂದು ಬಗೆಯ ಹುಳು : ತೂನಿಹುಳ, ಗದ್ದಲು (ನಮ್ಮನು. ೨೪೦). [ ತೂನಿ$_3$ + ಹುಳ ( < ಪುೞು) ]

**ತೂನು** 'ತೂನ್' ನೋ.

**ತೂಪ** 'ತೂಂಕು$_1$' ಪರಾ.

**ತೂಪರ, ತುಪರ, ತೂಪರೆ$_2$, ತೂಪುರ, ತೂಪ್ರ, ತೂಬರ$_1$, ತೂಬರೆ** (ನಾ). = ತುಂಬುರು$_2$ : ಮಾತ್ಗಂಟ ಮಂಗಳಲ್ಲ ತಾಟ್ಗಿತ್ತಿ ಸೊಸೆಯಲ್ಲ ತೂಪರದ ಚಕ್ಕೆ ಒಲೆಗಲ್ಲ (ಹಳ್ಳಿಪಾ. ೮೭). **ತುಪರ** : ಮರಗಳು : — ಹೆಸವ ... ಹಸರಗಣ್ಣೆ, ತುಪರ (ನಮ್ಮನು. ೨೩೬). **ತೂಪರೆ$_2$** : (ಸ). **ತೂಪುರ** : ತೂಪುರದ ಕೊಳ್ಳಿಯೋಪಾದಿಯಲ್ಲಿ ಛಿಟಛಿಟಗುಟ್ಟುವಂಥ ಕಟ್ಟುಗ್ರದ ಕಡುಗೋಪವೇ ರೋಷವು (ವಚನ. II, ೧೧೫). **ತೂಪ್ರು** : ಕಂಬಳಕರೀಮರ, ಬೀಡಿಎಲೆಮರ, ತೂಪ್ರು, ತೂಬರೆ (ಮೃಜಿಗಿ. ೩೧-೭೦೪). **ತೂಬರ$_1$** : ತೂಬರದ ಬೀಜ, ಕೊಡಸಿಗನ ಬೀಜ...ಇವಜ

ಕಷಾಯುವ ಜೇನುತುಪ್ಪವೆರಸಿ ಸೇವಿಸಲು ರಕ್ತಪಿತ್ತಾತಿಸಾರ ಪರಿಹರ (ವೈದ್ಯಸಾ. I, ೨೧೧) : ಇಂಗು, ತೂಬರದ ಬೇರು, ಶುಂಠಿ ಈ ಮೂಱನು ಸಾಸುವೆಯ ಎಣ್ಣೆಯಲ್ಲಿ ಕಾಸಿ ಕಿವಿ ತುಂಬ ಬಿಡಲು ಕರ್ಣಶೂಲೆ, ಕರ್ಣ ದೋಷಗಳು ಶಮನವಹವು (ವೈದ್ಯಸಾ. II, ೯೬). ತೂಬರೆ : "ತಿಂದುಕಃ, ಸ್ಫೂರ್ಜಕಃ, ಕಾಲಸ್ಕಂಧಃ, ಶಿತಸಾರಕಃ – ೪ ತುಂಬರಗಿಡ, ತೂಬರೇಗಿಡ" (ಸಿದ್ಧಾಂತಿ. ೧೧೬). [ < ಸಂ. ತುಂಬುರು ]

**ತೂಪರಿಡು** (ಕ್ರಿ). = ತೂಪಿಱು ೨ (?): ಕಟ್ಟೆ ಮೀಸಲ ತೂಪರಿಟ್ಟು ಸೆಟುಕನು ಮುರಿವಳು (ಜಿನಮು. ೪೨-೬). [ < ತೂಪಿಡು ]

**ತೂಪರು, ಜುಬ್ಬರ$_1$, ಜೂಪರ, ತೂಪರೆ$_1$, ದೂಮರ** (ನಾ). ತುಂತುರು ಹನಿಗಳಿಂದ ಕೂಡಿದ ಮಳೆ ; ಜಿನುಗುಮಳೆ : ಈ ತೂಪರು ಸಾಕಾಗಿ ಹೋಗಿದೆಯಪ್ಪ (ರೂಢಿ). **ಜುಬ್ಬರ$_1$** : ಇಷ್ಟೇ ಜುಬ್ಬರ ಬಂದು ನಿಂತೀ ತೆಂಬುವ ಹಾಗಿಲ್ಲ. ಇದಕ್ಕೂ ದೊಡ್ಡಮಳೆ ಬರುವ ಹಾಗೆ ಕಾಣುತ್ತದ (ಮುಂಬಯಿ. ೫-೫೦). **ಜೂಪರ** : "ಜೂಪರ = ಜಿನಗುಡುವ ಮಳೆ, ಜುಬರುಮಳೆ" (ಜಾನಕೋ. ೬೧). **ತೂಪರೆ$_1$** : "ತೂಪರೆ = ಜಿಟಜಿಟಿ, ಸಣ್ಣ : (ತೂಪರೆಮಳೆ ; ತೂಪರೆ ಕಾಳು)" (ಜಾನಕೋ. ೬೭). **ದೂಮರ** : "ದೂಮರ = ಜಿಟಜಿಟ ಮಳೆ" (ಜಾನಕೋ. ೭).

[ ದೇ.॥ ತಮಿ. ತೂವಲ್, ತುವಲೈ : ಮಲ. ತೂವಲ್ ; ತೆಲು. ತುಪ್ಪರ, ತುಂಪರ, ತುವ್ವರ ]

**ತೂಪರೆ$_1$** 'ತೂಪರು' ನೋ.

**ತೂಪರೆ$_2$** 'ತೂಪರ' ನೋ.

**ತೂಪಿಡು** (ಕ್ರಿ). = ತೂಪಿಱು ೨ : ಭಸಿತದ ತಿಲಕಮನಿಟ್ಟು...ಪ್ರಸಾದದ ತುಂತುಱಿಂ ತೂಪಿಟ್ಟು (ಬಸರ. ೧೦-೧೧೦) : ರಾಕಾಚಂದ್ರಮುಃನಂದಮಂ ಶರಧಿ ಕಂಠಿ ಮರ್ತ್ಯರಿಂ ದೃಷ್ಟಿದೋಷಾಕೌಟಲ್ಯತೆಯಕ್ಕುಮೆಂದಿರದೆ ... ತೂಪಿಟ್ಟಂತೆವೋಲ್ ತೋರ್ಕುಂ (ಕಮಮಾ. ೨-೨೮). [ < ತುಪ್ಪು + ಇಡು$_1$ ]

**ತೂಪಿರಿ** 'ತೂಪಿಱು' ನೋ.

**ತೂಪಿಱು, ತೂಪಿರಿ** (ಕ್ರಿ). ೧. ಬಾಯಿಯಿಂದ ಉರುಬು,– ಊದು : ಶಿವನ ತನುವಂ ನೋಡಿ ತೂತೂ ಎಂದು ತೂಪಿಱಿದ ಯುವತಿಯಂ ಕಂಡು (ಬಸವು. ೧೩-೩೦) : ಲಿಂಗದೆಡದಂಗದೊಳ್ ಸಲದಿ ತತ್ತ್ರಿಯನಿಕ್ಕೆ... ಪಿಂಗದದ ತೂಪಿಱಿಯೆ (ಲಶಿಚಂ. ೩೫-೨೬) : ಜೇಡವುಳು ತಾಂ ಪರಿಯೆ ಲಿಂಗದಗ್ರದೊಳು ತೂಪಿಱಿದ ಸತಿಯಂ ಪಾಪಿಯೆಂದಟ್ಟೆ (ರಾಘಡ. ೬-೨೪). ೨. (ಮಕ್ಕಳಿಗೆ) ದೃಷ್ಟಿದೋಷ ಪರಿಹಾರಕ್ಕಾಗಿ ಹಾಗು ರಕ್ಷೆಗಾಗಿ ನೆತ್ತಿಯಂ ಮೇಲೆ ಊದು : ನಿಱಿಯ ಸೆಱಂಗನೋಸರಿಸಿ ಕೆಂದಳದಿಂದಮ ಕರ್ಚಿಕೊಂಡು ತೂಪಿಱಿದೊಗೆದಟ್ಟಿಱಿಂದ...ಕಣ್ದಿಱಿಯದ ಕಂದನೆಂದೆನಗೆ ಕಣ್ದಿಱಿಯಿಪ್ಪನೊ ಮಂದಹಾಸಮಂ (ಅರ್ಧನೇ. ೦-೧೦೦); ಸೊಡರ್ವಕ್ಕಿನ ಬೊಟ್ಟನಿಟ್ಟು ತೂಪಿಱಿದು ಪಲವುರ್ಯಯುಂ ಪರಸಿ (ಚಂದ್ರಪು. ೩-೪೫) : ಪರಾಗದ ತಿಲಕಮನಿಕ್ಕಿ ಸೌರಭದ ತುಂತುಱಿಂ ತೂಪಿಱಿದು (ಗಿರಿಜಾ. ೨-೭೧ವ) : ತನ್ನ ಮಗಳಿಗೆ ಸಮವಹ ರೂಪಜೀವೆಯರಿಲ್ಲೆಂದು ಚಾಪಳಿ ... ಪೇಱಿ ತೂಪಿಱಿದುಪ್ಪ ಸೂಸುವಳು (ಅಂಜಬ. ೩-೧೪೫) ; ತರಳಂಗೆ ಕಣ್ಣಿಂಜಲೆಂದು ತೂಪಿಱಿದು (ಮೋಹತ. ೧೬-೬೩); ಕನ್ನೆಗೆ ಕಣ್ಣೀರಾದು ದಕ್ಕಟಯೆಂದು ಚಿನ್ನಿಯರತ್ತಿ ತೂಪಿಱಿದು . . . ಬೀಸಿದರಾಲವಟ್ಟದಿಂ (ನಾಗಕು. ೨೫-೬೩). ೩. ಎಸೆ ; ಚೆಲ್ಲು : ಸಭೆಯಲಿ ಸುಲಿದು ಬಿಸುಡುವ ಸೀರೆಗಳ ತೂಪಿಱಿದು ಸುಳಿವುಪ್ಪಾರತಿಯ ತನಿಹರಕೆ ತಳಿತುದು ತಾಯ ಸೇಮದಲಿ (ಕುಮ್ಯಾಆ. ೭-೩೦). ೪. ಹೊರಹೊಮ್ಮು : ಧಾರಾವಿಭಿನ್ನ ಘ್ರಾಣಮುಖಿ ಬಳಿಕ ಹಾಯಿದಳು ಹೊಱವಡುವ ನೆತ್ತರ ಬಾಯ ತೂಪಿಱಿ ವಶ್ರುಜಲಪೂರಾಯುದಭಿಮಾನಚ್ಯುತಿಯ ರೋದನನಿನಾದದಲಿ (ತೊರಟಾ. ೩೫-೧) : ಉಱುಬಿನುಸುರಳ್ಳೆಗಳ ಮಿಗೆ ತೂಪಿಱಿವ ರಕುತದ ರಣದ ನಾಟಕದಜಕೆಕಾಱರು ಠಾವುರಿಯಲೊದಗಿದರು ಸರಿಸದಲಿ (ತೊರಟಾ. ೬-೧೪-೨೨). ೫. ಉಗಿ ; ಉಗುಳು ; ತುಪ್ಪು : ಬಾಸಿಮುಯ್ಯಂ ಮುದದಿ ತೂಪಿಱಿಯಲೆಂ[ವಾತಾಂ. ವೀಳ್ಯೆಯಮವನಾಗುಳ್ವೆನೆಂ]ದು ಕಲಸಂ ನೋಡೆ (ಶಂಕರಡ. ೧೪-೭೦). ೬. ಶಾಂತಪಡಿಸು ; ಸಮಾಧಾನಮಾಡು : ಅನುವುಳ್ಳ ಬುದ್ಧಿಯಂ ಕಂಡೆನೆಂದತಿ ಮೆಚ್ಚಿ ತನಗೆ ತಾ ತೂಪಿಱಿದುಕೊಂಡು (ಹದಶಾ. ೩-೧೨); ಅಂಜದಿರೆನುತ ತೂಪಿಱಿದು ಹರಸಿದರ್ಮೈದೆಯಾಗೆಂದವನಿ ನಂದನೆಯ (ತೊರಟಾ. ೬-೦೨-೩೮). **ತೂಪಿರಿ** : ೨. ಚಂಡಭುಜಬಲನೆಂದು ಶಾರದೆ ಗಂಡನುಪಚರಿಸಿದಳು ತೂಪಿರಿವಧಿಕಪರುಷದಲಿ (ಅಂಬಿಕಾ. ೩೬-೯೦): ನಾಲ್ದೆಸೆಯ ಸುತನಿಗುಂ ಕ್ರಮದಿ ತೂಪಿರಿಯಲುದುರಿದ ಕಣಂಗಳ ತೆರದಿ ನಕ್ಷತ್ರಗಣಮೆಸೆದುವು (ವೆಂಕಾಟಾ. ೫-೬-೦೬): ತಾಯಿಯ ದೃಷ್ಟಿ ನಾಯಿಯ ದೃಷ್ಟಿ ಎಂದು ತೂಪಿರಿಯುತ್ತ (ಸಂಚಿತ್ರ. ೦೬). ೫. ಗೊಳ್ಳನೆ ನಕ್ಕು ಮೂದಲಿಸಿ, ಮೊಗದ ತೂಪಿರಿದು (ಗೊಲ್ಲಭಾ. ೯-೨೪೭). ೭. (ಆಲಂ) ಧ್ವನಿಮಾಡು; ಮೊಳಗು : ಸಮ್ಮಿನಿಂ ಕಹಳೆಗಳ್ ತೂಪಿರಿಯೆ ನಿಸ್ಸಾಳ ಬಿಮ್ಮಗಂ ಒದಗಿದುವು (ತುರಂಗ. ೬೨-೨೦). [ < ತುಪ್ಪು ? + ಇಱು$_1$ ]

**ತೂಪು** 'ತೂಂಬು' ನೋ.

**ತೂಪುರ** 'ತೂಪರ' ನೋ.

**ತೂಪುರಗೊಳ್ಳಿ** (ನಾ). = ತುಂಬುರುಗೊಳ್ಳಿ : ತೂಪುರಗೊಳ್ಳಿಯಂದದಿ ಛಿಟಛಿಟಲೆಂದು ಕೋಪವ ಮನಕೆ ತಾ ತಂದು (ಜ್ಞಾನಪ. ೫-೮೫).

[ ತೂವುರ ( < ತೂಪರ) + ಕೊಳ್ಳಿ$_1$ ]

**ತೂಪ್ರು** 'ತೂಪರ' ನೋ.

**ತೂಫಾನು** 'ತುಫಾನು' ನೋ.

**ತೂಬರ$_1$** 'ತೂಪರ' ನೋ.

**ತೂಬರ$_2$** (ನಾ). ೧. ಗಡ್ಡ, ಮೀಸೆ ಹುಟ್ಟದಿರುವ ಪುರುಷ. ೨. ನಪುಂಸಕ ; ಷಂಡ : ಭೀಮಸೇನನನ್ನು ನೋಡಿ–ಗಡ್ಡ ಮೀಸೆಗಳಿಲ್ಲದ ತೂಬರ, ತೂಬರ ಎಂದು ಬಾರಿಬಾರಿಗೆ ಹಂಗಿಸಿ (ಕೃಪಾಉ. ೨೫೨). ೩. ಕೊಂಬಿಲ್ಲದ ಪಶು : "ಕೊಂಬಿಲ್ಲದುವು ತೂಬರಾಖ್ಯಂ" (ಮಂಗರಾ. ೫೫-೯) : "ಕೊಂಬಿಲ್ಲದ ಪಶುವುಮಂ; ಗಡ್ಡ ಮೀಸೆಯಿಲ್ಲದ ಗಂಡಗೂಸುಮಂ ತೂಬರಮೆಂಬುದು" (ಹಲಾಯು. ४೬-೦೨೫). [ ಸಂ. ]

**ತೂಬರಕ** (ನಾ). ಷಂಡ ; ನಪುಂಸಕ : ನಿಜಾಂಗನೆಯನನ್ಯರಿಗೆ ಕೊಟ್ಟವನ ಹನು ತೂಬರಕ (ನಿಘಾಗ. ೫-೦೨-೧೦). [ ಸಂ. ]

**ತೂಬರೆ** 'ತೂಪರ' ನೋ.

**ತೂಬಾಕ** (ನಾ). (?) : ಸುಣ್ಣದ ಬೊಟ್ಟನಿಟ್ಟಂತೆ ಕಿಱುಗಣ್ಣಲಿ ತೂಬಾಕ ನೊಣ ನೋಡಿದಂತೆ ನಿಸ್ಸೊಳಾ ಮಲಕ್ಷನಂತೆ ತೇಜನಂತಾಗೆ ಬೆಳಗೋದು ಬರಿಸುಕ್ಕದಂತೆ (ಚಪಾಕೋ. ೫೬-೫). [ ? ]

**ತೂಬು** 'ತೂಂಬು' ನೋ.

**ತೂಯ್** 'ತುಯ್$_2$' ನೋ.

**ತೂರಣಗೆ** (ನಾ). "ತೂರುವ ಸಾಧನ: ತೂರಣಗೆ" (Fanner. ೩೬೯೭).

[ ತೂರು$_1$ ( < ತೂಱು$_1$) + – ಅಣಗೆ ]

**ತೂರಲ್** 'ತೂಱಲ್' ನೋ.

**ತೂರಲು** (ನಾ). ತುಂತುರುಮಳೆ : ಬೆಳಗ್ಗೆಯಿಂದ ಹಿಡಿದಿರುವ ಈ ತೂರಲಿನಿಂದ ಎಲ್ಲಿಗೂ ಹೋಗಲಾಗಲಿಲ್ಲ (ರೂಢಿ).

[ < ತೂಱು$_2$ + – ಅಲ್./ತಮಿ. ತೂಱಲ್, ತೂಱ್ಱಲ್: ಮಲ. ತೂಱ್ಱಲ್; ತೆಲು. ತೂರ ]

**ತೂರಲ್ಗೊಂಬು** 'ತೂಱಲ್ಗೊಂಬು' ನೋ.

**ತೂರಾಡು** (ಕ್ರಿ). ೧. ತೂಗಾಡು; ಜೋಲಾಡು : ನೀನು ಕಮರಿಯ ತುದಿಯಲ್ಲಿ ತೂರಾಡುತ್ತಿರುವುದು ತಿಳಿಯುತ್ತಿಲ್ಲವಲ್ಲ ! (ವವರಾ. ೯೬೯)

೨. ಹೊಯ್ದಾಡು; ಜೂಗಾಡು : ಆಗ ಒಂದು ವರ್ಷದ ಮಗು ತೂರಾಡುತ್ತ, ಹೆಜ್ಜೆ ಇಕ್ಕುತ್ತ ... ಗಟ್ಟಿಯಾಗಿ ನಕ್ಕಿತು (ಬಂಕಿಮ. ೧೦೫). ೩. ಚೆಲ್ಲಾಡು; ಸೂಸು : ತನ್ನ ಹರೆಯದ ರೂಪಿನ ಚೆರಗ ತೂರಾಡಬಾರದೆಂದು ಬಸವಂತಿ ಜಪ್ಪಿಸುತ್ತಿದ್ದಳು (ದೀಪಹ. II, ೧೪೧).

[ ತೂರು₁ (< ತೂಱು₁) + ಆಡು₁ ]

**ತೂರಾಯ** 'ತುರಾ' ನೋ.

**ತೂರಾಯಿ** 'ತುರಾ' ನೋ.

**ತೂರಿಸು₁** 'ತೂಱಿಸು' ನೋ.

**ತೂರಿಸು₂** (ಕ್ರಿ). ೧. ಒಳಹೊಗಿಸು; ತುರುಕು; ಒಳಗೆ ಹೋಗುವಂತೆ ಮಾಡು : ಜಾನುಮಧ್ಯದಲ್ಲಿ ಶಿರ ಗೋಣು ತೂರಿಸಿಕೊಂಡು (ವಿದಾಕ್ಷ. ೫೬-೩): ಅವನ ಪೆಟ್ಟಿಗೆಯೊಳಕ್ಕೆ ತಲೆ ತೂರಿಸಿ ಕಣ್ಣುಬಿಟ್ಟರೆ ಅದರ ಅಚ್ಚುಕಟ್ಟನ್ನು ನೋಡಿ ನಮಗೆ ಅಚ್ಚರಿಯಾಗುವುದು (ಚಂಗೂಲಿ. ೧). ೨. ಚುಚ್ಚು; ಇರಿ : ವಾರಿಜಾಕ್ಷನು ಶುಕ್ರದೇವರ ಕಣ್ಣ ದರ್ಭೆಯಲಿ ತೂರಿಸಲು ಕಣ್ಣೊಡೆದು ಹೋಯಿತು (ಸಂಭಪ. ೧೦-೨೪). [ ತೂರು₂ + -ಇಸು₃ ]

**ತೂರು₁** 'ತೂಱು₁' ನೋ.

**ತೂರು₂, ದೂರು₂** (ಕ್ರಿ). ೧. ಒಳಸೇರು; ಒಳನುಗ್ಗು : ಹಾರಿ ಸ್ವರ್ಗವ ತೂರಿ ನರಕವ ಸೇರಿ ಧರಣಿಯ ಸುಕೃತದುಷ್ಕೃತ ಕಾರಿಯದ ಸುಖದುಃಖದೊಳಗೋಲಾಡುತಿಹರು (ಅಮೃತ. ೨-೫): ಕೃಷ್ಣಮೇಘಸದೃಶವೇಣಿ ತೂರಿ ಬೀರಿ ಬರುವಳು! (ಖಾಂಡಜ. ೧೧-೪): ಗಾಡಿಯೊಳಕ್ಕೆ ತೂರುವುದು ಬಹಳ ಕಷ್ಟವಾಯಿತು (ರಾಮಾನ. ೧೦೦): ಭೂಮಿಯು ಒಣಗಿ ಹೋಗಿದ್ದರೆ ನೇಗಿಲು ಭೂಮಿಯಲ್ಲಿ ತೂರುವುದೇ ಕಷ್ಟ (ವ್ಯವಮ. ೦೪): ಬಾವೆ ಕೆಳಗೆ ಒಬ್ಬ ತೂರಿದರೆ ಇನ್ನೊಬ್ಬ ರಂಗೋಲೆಯ ಕೆಳಗೆ ತೂರಿದ (ಗಾದೆ). ೨. ಹೊರಕ್ಕೆ ಚಾಚು; ನೀಡು: ಹೆಬ್ಬುಲಿಯು...ಕೆಂಡಗಣ್ಣಿಂದೊಳರಿ ಹಲ್ಲುಗುರ್ಗಳ ತೂರಿ ಹೊಂಡದಿಂ ತೋರ್ದುಗವಿ ಬಾಯ ಮೇಲ್ವಾಯೆ (ಕಾಲೂರ. ೯೫-೧೮೮), ೩. ದಾಟು; ಹಾದುಹೋಗು : ಈ ಸಂಪ್ರದಾಯದ ಕಣ್ಣ ಕವಾಟವನ್ನು ತೂರಿಯೂ ಪ್ರತಿಭಾವಂತ ಕವಿಗಳ ಕಣ್ಣು ಸೌಂದರ್ಯದ ನೂರು ಪರಿಗಳನ್ನು ಕಂಡದ್ದುಂಟು (ಸೌಂದಶ. ೧೬೯). ದೂರು₂ : ಆ ದ್ವಾರದ ದೂರಿ ಸುಲಭವಾಗಿ ನಾನು ಗುಡಿಯೊಳಕ್ಕೆ ದೇಕಿಕೊಂಡು ಬರಬಹುದಾಗಿತ್ತು (ಗಲಿಪ್ರ. ೧೬).

**ತೂರಿಕೊಳ್ಳು** = ಸೇರಿಕೊಳ್ಳು; ನುಸುಳು : ಈ ಕಡೆ ಬಾಲಿ ಇರುವ ಮನೆಗೆ ಒಬ್ಬಳು ತುಂಗಿ ಬಂದು ತೂರಿಕೊಂಡರೆ (ನಡದಾ. I. ೫೦೪).

**ತೂರಿಬರು** = ದಾಟಿಬರು; ಹಾದುಬರು : ತಾಂ ತೂರಿ ಬರುತಿರುವ ಮನಮನದ ಮಾಧ್ಯಮದ ಚಿತ್ರ ಚಿತ್ರಾಕೃತಿಯ ತಳೆದಿಸವ ಬೆಳಕೋ (ಮಲದೇ. ೨೪-೧); ಪಕ್ಕದ ಕೋಣೆಯಿಂದ ಅಧಿಕಾರಿಗಳ ಮಾತಿನ ಸದ್ದು ತೂರಿಬರುತ್ತಿತ್ತು (ಪುನರು. ೫೩೮). [ ದೇ.॥ ತಮಿ. ತೂರ್ ]

**ತೂರುಗಂಡಿ** (ನಾ). (ಗೋಡೆ, ಬೇಲಿ ಮುಂತಾದುವುಗಳಲ್ಲಿ) ನುಸಿದುಕೊಂಡು ಹೋಗಲು ಅವಕಾಶವಿರುವಂತೆ ಇರುವ ಕಂಡಿ; ತೂತು; ರಂಧ್ರ : "(ನೋರುವ, ಒಳತೂರುವ) ಒಡಕು, ಬಿರುಕು, ತೂತು; ನೋರುಗಂಡಿ; ತೂರುಗಂಡಿ" (Leak. ಇಂಕನಿ). [ ತೂರು₂ + ಕಂಡಿ₁ ]

**ತೂರುಗಾಳಿ** (ನಾ). ಒತ್ತಿ ಬೀಸುವ ಗಾಳಿ; ಬಿರುಗಾಳಿ : ತೂರುಗಾಳಿಗೆ ಕಡಲು ಕುದಿಯಿತು (ಅಂಗೀತ. ೬೬-೧).

[ ತೂರು₁ (< ತೂಱು₁) + ಗಾಳಿ₁ ]

**ತೂರುನೊರೆ** (ನಾ). ಚಿಮ್ಮುತ್ತಿರುವ ನೊರೆ; ಹಾರುತ್ತಿರುವ ನೊರೆ : ನೀರ್ ಬೀಳು ಬೆಳ್ಪು! ಕಡೆದ ನೊರೆ, ಚಿಗಿವ ನೊರೆ, ತೂರುನೊರೆ, ಕುದಿವ ನೊರೆ, ಬೆಳ್ಪಿನೊಳ್ ಬೆಳ್ಪು! (ಜೋಂಗಳು. ೦೬-೬).

[ ತೂರು₁ (< ತೂಱು₁) + ನೊರೆ₂ ]

**ತೂರೆಣ್ಣೆ** (ನಾ). ಕೊಬ್ಬರಿಯೆಣ್ಣೆ; ತೆಂಗಿನೆಣ್ಣೆ (?): ಆರೆಣ್ಣೆ ತೂರೆಣ್ಣೆ ಆರ್ವಾನದೊಳ್ಳೆಣ್ಣೆ ... ಒತ್ತೀರಿ ರಾಜ್ಯವಾಳೋರ ಮಗನೀಗೆ (ಹಳ್ಳಿಯ. ೬೩). [ತೂರು? + ಎಣ್ಣೆ. / ತಮಿ. ತೂರ್ = ಎಳೆಯ ತೆಂಗು]

**ತೂರ್ಣ** (ಗು). ೧. ವೇಗವಾದ; ಚುರುಕಾದ. 'ತೂರ್ಣಗತಿ' ಪರಾ. (ನಾ). ೨. ಚುರುಕು; ವೇಗ; ತ್ವರೆ : "ತೂರ್ಣಂ, ತ್ವರಿತಂ" (ವಸ್ತುಕೋ. ೧೦೫-೪೨): "ತ್ವರಿತಂ ದ್ರುತಂ ... ತೂರ್ಣಮಹ್ನಂ ಶೀಘ್ರಮಕ್ಕು" (ಮಂಗರಾ. ೧೨೭-೬); ವೀರರಸಾರ್ಣವದಂತೆ ಚಾತುರ್ದಂತಬಳಂ ಬೆರಸು ತೂರ್ಣದಿನೊಡ್ಡಿ ನಿಂದೊಡೆ (ನೇಮಿಪು. ೫-೮೩ ವ): ಸ್ವರ್ಣದೀಧರನಂ ಯಾಜಿಸೆ ದಲಾ ಯಕ್ಷಂಗೆ ತೂರ್ಣದೆ ವರದನಾಗಿ ಗಣಪತಿತ್ವವನಕ್ಷಿಕರ್ಣಾಭರಣನಿತ್ತನೆಂದು ಶೈವದ ಧರ್ಮಸಂಹಿತೆಯ ಮತ್ತಮುಲಿಗುಂ (ಪದ್ಮರಾ. ೦೧-೧೪೪). ೩. ಚುರುಕಾಗಿರುವವನು : "ತೂರ್ಣನೆಂದರೆ ಚಿಟ್ಟರಿಗನಕ್ಕು" (ಮಂಗರಾ. ೬೯-೧೨). [ ಸಂ. ]

**ತೂರ್ಣಗತಿ** (ನಾ). ಚುರುಕಾದ ನಡಗೆ; ತೀವ್ರಗತಿ : ಕುರಂಗದ ಪೊಲ್ತೂರ್ಣಗತಿಪ್ರಯುಕ್ತಂ...ಆ ರಾಜವಾಜಿದ್ವಯಂ (ರಾಜಶೇ. ೧೨-೧೦೨).

[ ತೂರ್ಣ + ಗತಿ ]

**ತೂರ್ಪನಿ** (ನಾ). ಸಿಡಿಯುತ್ತಿರುವ ಹನಿ; ಹಾರುತ್ತಿರುವ ಜಲಬಿಂದು; ಸೀರ್ಪನಿ : ಎಲರಲೆವದಿನೊಗೆದ ತೆರೆಗೂನೆಯ ತೂರ್ಪನಿಯ ತುಂತುರುಗಳಿಂ ಮುಸಗುವ ಮಂಜಿನೊಳಂ ಅಂಜದೆ ಪೊಕ್ಕು (ಕಾದಂಪೂ. ೧೧೬).

[ ತೂಱ್ (< ತೂಱು₁) + ಪನಿ₁ ]

**ತೂರ್ಪಿಡು** (ಕ್ರಿ). (?) : ರಾಯರಘುಳಪ್ಪವಲ್ಲಭನ ನಟ್ಟನ ಬಿಲ್ಕರಚಕ್ರಮುಗ್ರಖಡ್ಗಾಯುಧವಾದ್ದಾಗಂತ ತೂರ್ಪ್ಪಿಡುವ ತಕ್ಕಟಿಯೆಂಬ ಪೊಲಿರ್ದಪರ್ (ಸೌಇಇ. IX-', ೨೨೦-೮೭; ?).

[ P ಇದು 'ತೂಱಿಡು' ಎಂಬುದರ ಅಪಲಿಖಿತವಿರಬಹುದು ]

**ತೂರ್ಯ₁** (ನಾ). ೧. ನಾಲ್ಕನೆಯದು; ಚತುರ್ಥ. ೨. [ಜ್ಯೋತಿ] ನಾಲ್ಕನೆಯ ಸ್ಥಾನ : ದನುಜೇಜ್ಯಂ ... ಚಂದ್ರನಿನಾದ್ಯಾಂತ್ಯಪ್ಪಮೈಕಾದಶನವ ಧನ ಪುತ್ರ ತ್ರಿ ತೂರ್ಯಂಗಳೊಳ್ ... ಲೇಸೆನಿಕ್ಕುಂ (ಜಾತತಿ. ೧೦-೧೨). ೩. [ವೇದಾಂತ] ತ್ರಿಮೂರ್ತಿಗಳಿಗೂ ಮೂಲವೆನಿಸಿರುವವನು; ಪರಮಾತ್ಮ: ತ್ರಿಮೂರ್ತಿಗಳ ಮಧ್ಯದಲ್ಲಿ ತೂರ್ಯನಾದ ... ಮಹೇಶ್ವರನೊಪ್ಪುತ್ತಿರಲಾಗಿ (ಭೈರಸೂ. ೧೭). ೪. ಮೋಕ್ಷಕ್ಕೆ ಯೋಗ್ಯವಾದ ಸ್ಥಿತಿ: ದಾಸರೆನಿಸಿ ಧರ್ಮ ಹಿಡಿದು ಆಸೆ ಕಡಿದು ತೂರ್ಯದಲ್ಲಿ ಕಾಸು ಕವಡಿ ಕಾಲಿಲೊದ್ದು ಈಶನೊಲಿಸಿಕೊಂಬುವಂಥಾ–ದಾಸರೂ ಹರಿದಾಸರೂ (ಕಲಿಶ. ೪೫-೧). [ < ಸಂ. ತುರ್ಯ ]

**ತೂರ್ಯ₂** (ನಾ). ಒಂದು ಬಗೆಯ ವಾದ್ಯ : ತ್ರಿದಶಶರಾಸನಂ ತಳಿರ ತೋರಣಮಾಗಿರೆ ... ಘನಧ್ವನಿ ತೂರ್ಯಮಾಗೆ ರಾಗದಿನಿನರಶ್ಮಿಯೆಂಬ ಕಸಮಂ ಕಟಿದಂಬರಮೆಂಬ ಪಾಟನೇಱುದುದಸಿತಾಂಬುವಾಹಕುಲಮೆಂಬ ಕುಟುಂಬಕದಂಬಕೋತ್ಕರಂ (ಆದಿಪು. ೬-೬೧): ಶುಭಾಕ್ಷತಂ ಪೊಂಬಳೆ ತೂರ್ಯಂ ತೋರಣಂ ... ಸ್ವಸ್ತಿಕಂ ಸುಲ್ಪಮೆಂಬೀ ಮಂಗಳ ರಚನೆಯಿನಂದೇಂ ಮನಂಗೊಂಡುದೋ . . . ಧನ್ಯಕನ್ಯಾಕದಂಬಂ (ಸುಕುಮಾ. ೫-೬೧): ಡವರುಗತೂರ್ಯನಿರ್ಘೋಷಣಾ (ಸೌಇಇ. XX, ೧೪೪-೧೫; 1168); ಭೋರೆನೆ ತೂರ್ಯವಂಜೆಯನಜಂ ಗಜಮಂ ಬಳಪ್ವೆರಿ ... ವೃಷಭನಂ ಹರನೇಱೆ ಸಭಕ್ಕೆ ಸಲ್ವುದುಂ (ಜಗವಿ. ೦-೩೬); ಪಿರಿದ ತೂರ್ಯ ಮೊಳಗುತಿಹುದು (ಹೂಂದಲ. ೯-೧೩). [ ಸಂ. ]

**ತೂರ್ಯಕ್ಷ್ಮಾಜ** (ನಾ). [ಜೈನ] ದಿವ್ಯವಾದ್ಯಗಳನ್ನು ಒದಗಿಸುವ ಒಂದು ಕಲ್ಪವೃಕ್ಷ : ಅತಿಮೃದುರವವಾಯಿಗಳಂ...ಓಲಗಿಪುದೊ ದಂಪತಿಗೆಂದುಮುವಾರ್ಯವೀರ್ಯ ತೂರ್ಯಕ್ಷ್ಮಾಜಂ (ಆದಿಪು. ೫-೩೫). 'ತೂರ್ಯಾಂಗ' ಪರಾ. [ತೂರ್ಯ₂ + ಕ್ಷ್ಮಾಜ ]

**ತೂರ್ಯತ್ರಯ** (ನಾ). ನೃತ್ಯ, ಗೀತ, ವಾದ್ಯ–ಈ ಮೂರರ ಮೇಳ: ಅಲ್ಲಿಯ ಮಾಹೇಶ್ವರರೆಲ್ಲರ್ಗೆ ಬೆಸಸೆ ಮಂಗಳಮೃದಂಗತೂರ್ಯತ್ರಯ ಪ್ರವೀಣ ನಾನಾವಿಳಾಸಿನೀನಿಕರದಿಂದಿದಿರ್ಗೊಳಲು (ನಂಬಿರ. ೮-೭೦): ನುಡಿಗಡಣ ತತ್ವವಿಚಾರ ಭಾಷೆಗಳುಲಿವು ತೂರ್ಯತ್ರಯದ ಘೋಷಣವು (ಬಸವು. ೪-೩೪): ಏನನೆಂಬೆನು ಜೀಯ ಶಕ್ರಾಸ್ಥಾನವರಲ್ಲಾ ದಿವ್ಯವಾದ್ಯ ಸುಗಾನನರ್ತನವಿಮಳತೂರ್ಯತ್ರಯದ ಮೇಳವದ ಆ ನಿತಂಬಿನಿಯರ ... ಭಾವಭಂಗಿಗಳ (ಕುಮ್ಮಾಆ. ೮-೯೨): ಗಾನವಾದ್ಯಂ ನೃತ್ಯಗೂಡಿ ತೂರ್ಯತ್ರಯದಿ ಮೇನಕಾಜಾನಾಥನಂಘ್ರಿಯುಂ ಭಜಿಸುವವನೇನೆಂಬೆ (ಗುರುಚಾ. ೭-೭೫). [ ತೂರ್ಯ$_2$ + ತ್ರಯ ]

**ತೂರ್ಯತ್ರಿಕ** (ನಾ). = ತೂರ್ಯತ್ರಯ: ಚಿತ್ರೋದ್ಭವನಿನೆಸೆಯೆ ತೂರ್ಯತ್ರಿಕಂ ಹಾಸಪುಷ್ಪಾಂಜಳಿಯಿಂ ತತ್ಕಾಂತೆ ದೇಪದ್ಯುತಿ ಜವನಿಕೆಯಿಂ ನಾಟ್ಯರಂಗಂಬೊಲಿರ್ಪಳ್ (ಅಜಿಪು. ೨-೪೧). [ ತೂರ್ಯ$_2$ + ತ್ರಿಕ ]

**ತೂರ್ಯತ್ರಿತಯ** (ನಾ). = ತೂರ್ಯತ್ರಯ: ತೂರ್ಯತ್ರಿತಯದ ನಿಜ ಚಾತುರ್ಯಮನಂತಲ್ಲಿ ಮೆಚ್ಚಿದು (ಚಂದ್ರಪು. ೧೩-೭೮).
[ ತೂರ್ಯ$_2$ + ತ್ರಿತಯ ]

**ತೂರ್ಯನಾದ** (ನಾ). = ತೂರ್ಯನಿನದ: ಸೀಮಂತಿನೀಪ್ರಸರಂ ಮಂಗಳ ತೂರ್ಯನಾದಮೆಸೆಯುತ್ತಿರ್ಪನ್ನೆಗಂ ಚಕ್ರಿ ರಾಗಿಸಿ ಕೈ ನೀ ರೆ ಱೆ ದಂ (ಶಂಪರಾ. ೩-೨೫): ಅಂಬರ ಬಿರಿವ ತೂರ್ಯನಾದ ಪೊಟ್ಟನೂರಿಗರ ಕರ್ಣಗಹ್ವರವನ್ನು ಗಡಚಿಕ್ಕಿತು (ಅಳಾಕ. ೪೧). [ ತೂರ್ಯ$_2$ + ನಾದ$_1$ ]

**ತೂರ್ಯನಿನದ** (ನಾ). ತೂರ್ಯವೆಂಬ ವಾದ್ಯದ ಧ್ವನಿ: ವಸರಿವ ಪೂಮುಟ್ಟೆಯೊಡನೊಡನೆಸೆವುತ್ಸವತೂರ್ಯನಿನದಂ . . . ಎಸೆದುದು (ಪುಷ್ಪಪು. ೧೧-೯). [ ತೂರ್ಯ$_2$ + ನಿನದ ]

**ತೂರ್ಯರವ** (ನಾ). = ತೂರ್ಯನಿನದ: ಉಣ್ಮಿದತ್ತು ಭೋರನೆ ದಿವಿಜೇಂದ್ರತೂರ್ಯರವಂ (ಜಗವಿ. ೩-೩): ಒಟ್ಟಿದುವಸಂಖ್ಯತೂರ್ಯ ರವಂಗಳ್ (ಪುಷ್ಪಪು. ೧೧-೧೧). [ ತೂರ್ಯ$_2$ + ರವ ]

**ತೂರ್ಯಸ್ಥಿತಿ** (ನಾ).=ತುರಿಯಾವಸ್ಥೆ: ಧ್ಯಾನನಿಷ್ಠಸಮಯದಲ್ಲಿ ತೂರ್ಯ ಸ್ಥಿತಿಯಲ್ಲಿ ಇವರ ಸಮೀಪಕ್ಕೆ ಯಾರೂ ಹೋಗುತ್ತಿರಲಿಲ್ಲ (ಶರೀಫ. ೬೧ ಕವಿಕಾವ್ಯಪರಿಚಯ). [ < ಸಂ. ತುರ್ಯಸ್ಥಿತಿ ]

**ತೂರ್ಯಸ್ವನ** (ನಾ). = ತೂರ್ಯನಿನದ: ಅರಿಭೂಪಾಲರನಿಕ್ಕಿ ಗೆಲ್ದೊಸಗೆಯಿಂ ತೂರ್ಯಸ್ವನಂ ಪೊಣ್ಮೆ (ಗದಾಯು. ೩-೭೫): ಸುಜೀತವಸನಂ ಬಂದಾಸ್ಯದೊಳ್ ಪೊಕ್ಕುದು ಮೃಗಲಕ್ಷ್ಮನನೆ ಕಂಡಳುಣ್ಮೆ ಪಭದೊಳ್ ದೇವೇಂದ್ರತೂರ್ಯಸ್ವನಂ (ಜಗವಿ. ೨-೭೭). [ ತೂರ್ಯ$_2$ + ಸ್ವನ ]

**ತೂರ್ಯಸ್ವರ** (ನಾ). = ತೂರ್ಯನಿನದ: ತೂರ್ಯಸ್ವರದೊಳ್ ತಳ್ತೊಯ್ದುದೇಂ ಶೋಭಿಸಿದುದೊ ಪಿರಿದುಂ ಯಔವರಾಜ್ಯಾಭಿಷೇಕಂ (ಚಂದ್ರಪು. ೨-೭೮). [ ತೂರ್ಯ$_2$ + ಸ್ವರ ]

**ತೂರ್ಯಾಂಗ** (ನಾ). [ಜೈನ] ದಶವಿಧ ಕಲ್ಪವೃಕ್ಷಗಳಲ್ಲಿ ಒಂದು; ವಾದ್ಯಗಳನ್ನು ಕೊಡುವ ಕಲ್ಪವೃಕ್ಷ: ತೂರ್ಯಕ್ಷ್ಮಾಜ: ವಿಚಿತ್ರಭೇದನಿನಾದಂ ಜನಯಿಸೆ ತೂರ್ಯಾಂಗಂ ಕನದನೋಕಹಂ ಪಲವು ತೆಱದ ಪಱೆಗಳನೀಗುಂ (ಶಾಂತಿಪು. ೬-೧೦೩): ತೂರ್ಯಾಂಗವೆಂಬುದು ಪಣವಮದ್ದಳಕಾಹಳ ಭೇರೀ ಶಂಖ ಮೃ ದಂ ಗಾ ದಿ ವಿವಿಧ ತೂರ್ಯವಿಶೇಷಂಗಳನೀವುದು (ಚಾವುಂಪು. ೯). 'ದೀಪಾಂಗ' ಪರಾ. [ ಸಂ. ]

**ತೂರ್ಯಾರಾವ** (ನಾ). = ತೂರ್ಯನಿನದ: ಪೊಣ್ಮಿದುದು ಗಭೀರಂ ತತ್ತ್ರಿಯಾಮತೂರ್ಯಾರಾವಂ (ಚಂದ್ರಪು. ೮-೯೩).
[ ತೂರ್ಯ$_2$ + ಆರಾವ ]

**ತೂರ್ಯಾವಸ್ಥೆ** (ನಾ). ಮೋಕ್ಷವನ್ನು ಪಡೆಯುವ ಸ್ಥಿತಿ; ತುರೀಯಾವಸ್ಥೆ: ತೂರ್ಯಾವಸ್ಥೆಯ ಚಿಂತನೆಯಿಂದು ಮುಳುಗಿದ ನಿಷ್ಕೈಕನು ಆ ನಿಜ ವಸ್ತು ಭಾವದೊಳಿರುತ್ತಿಹನೆಂಬುದರ್ಥ (ಪಡಗೊ. ೯೨-೨): ಆತ್ಮನ ಅಹಂಕಾರವಿಭ್ರಾಂತಿಯ ತೂರ್ಯಾವಸ್ಥೆಯಲ್ಲಿ ಜೀವರುಕನುದಯಿಸಿ ಸಂಸಾರ ಪ್ರಪಂಚದಲ್ಲಿ ನೆಲಸಿದನು (ಅವಧಂ. ೩೮೬-೦೫-ಭಾವಾನುವಾದ).
[ < ತುರ್ಯ + ಅವಸ್ಥೆ ]

**ತೂರ್ಯೋದ್ಧಾರ** (ನಾ). ತೂರ್ಯವೆಂಬ ವಾದ್ಯವನ್ನು ಬಾರಿಸುವಿಕೆ,–ನುಡಿಸುವಿಕೆ: ಆದಾರು ಹೊಱಕಡೆಯಲ್ಲಿ ತೂರ್ಯೋದ್ಧಾರವನು ಮಾಡುವರೆನುತ ಕೇಳಿದಳು ಕೆಳದಿಯರ (ಪ್ರಭುಲೀ. ೫-೧೧). [ ತೂರ್ಯ$_2$+ಉದ್ಧಾರ ]

**ತೂಲ, ತೂಳ$_3$** (ನಾ). ೧. ಹತ್ತಿ; ಅರಳೆ; ಕಾರ್ಪಾಸ: ಕುರು ಭೂಭೃದ್ಬಲಕೂಲತೂಲಪವನಂ ಕೌರವ್ಯಗಂಧೇಭಕೇಸರಿ ... ಎಂದಭಿವರ್ಣಿಪಂ ರಣಯಶಶ್ರೀರಾಮನಂ ಭೀಮನಂ (ಗದಾಯು. ೧-೩೨): ಚತುರ್ಗತಿಗಳೊಳ್ ಸುಟ್ಟಿಗಾಳಿಯ ತೂಲದಂತೆ...ತೊಟಲ್ದುರುತುಮಿರ್ದುದು ಸಾಲದೆ ಕರ್ಮಯೋಗದಿಂ (ಚಂದ್ರಪು. ೧೩-೯೦): ಮೂಲೋಕವನೊರ್ಮೆ ಕಿಱುವೆರಲಿಂದೆರ್ದ ತೂಲವೆತ್ತುವೊಲೆತ್ತುವನ (ಚಂಪ್ರಣಾ. ೨೪-೧೯೩): ವೀರಯ್ಯಂಗೆ ತೂಲವಮಂ ತೂಗಿ ಹಾಯ್ಕಲ್ಕೊಲ್ಲವೆನೆ ಬಲಾತ್ಕಾರದಿಂ ಹಾಯ್ಕಿ ಪೋಗೆ (ಗುರುಚಾ.೧೪-೪): ತೂಲಮೃದುವೆನಲುಜ್ಜಿದಳ್ ಪತಿ ಲಲಾಟಮಂ (ಶ್ರೀರಾಮಾ. ೬೩೦-೨೬೦). ೨. ಹಕ್ಕಿಯ ತುಪ್ಪಳು. 'ಹಂಸತೂಲ' ಪರಾ. ೩. ಅರಳಿ ಜಾತಿಗೆ ಸೇರಿದ ಒಂದು ಬಗೆಯ ಮರ; ಹೂವರಸಿ: "ತೂದಃ, ಯೂಪಃ, ಪೂಗಃ, ಕ್ರಮುಕಃ . . . ತೂಲಂ–೭ ಹುವ್ವರಿಸೆಗಿಡ ... ಕಾಡಡಿಕೇಮರವೆಂದು ಕೆಲವರೆನ್ನುವರು" (ಸಿದ್ಧಾಂತಿ. ೧೨೦). ೪. ಒಂದು ಬಗೆಯ ಗಿಡ ಮತ್ತು ಅದರ ಹಣ್ಣು; ಉಪ್ಪುನೇರಿಳೆ. **ತೂಳ$_3$**: ೧. ಅಮರರ್ಕಳೇಱಿದ ವಿಮಾನಮಂ ಗಾಳಿಯು ತೂಳದಂತಿರೆ (ಅನಂಪು. ೫-೬೪): ಸಂಸಾರತೂಳದವಶಿಖಿಯೆನಿಪ ಕೇಶಮಂ ಪಿಡಿದು (ಭಾವಚಿಂ. ೯-೩೦). 'ಹಂಸತೂಳ' ಪರಾ. [ ಸಂ. ]

**ತೂಲಕ, ತೂಳಕ** (ನಾ). = ತೂಲ ೧: "ಅರಳೆ ಪಿಚು ತೂಲ[ತಾಕಾಂ. ಳ]ಕಾಬ್ಬಂ" (ಮಂಗರಾ. ೩೮-೨೩). **ತೂಳಕ**: ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ. [ ಸಂ. ]

**ತೂಲತಲ್ಪ, ತೂಲತಳ್ಪ, ತೂಳತಲ್ಪ** (ನಾ). ಅರಳೆಯಿಂದ ಅಥವಾ ಹಂಸ ಮೊದಲಾದ ಹಕ್ಕಿಗಳ ತುಪ್ಪಳದಿಂದ ಮಾಡಿದ ಹಾಸುಗೆ,–ಸುಪ್ಪತ್ತಿಗೆ: ಮಲಗಿಸಿದರಾ ... ವಸುಧೇಶನಂ ಹಂಸಪ್ರದಯದ ತೂಲ ತಲ್ಪದಲಿ (ಶ್ರೀರಾಮಾ. ೦೦೦-೨೮). **ತೂಲತಳ್ಪ**: ಸೆಜ್ಜೆವನೆಯೊಳುಪಧಾನ ವಿರಾಜಮಾನಹಂಸತೂಲತಳ್ಪದೊಳ್ ವಿಶ್ರಮಿಸಿ (ಶಂರಾಮಾ. ೫-೩೦೪). **ತೂಳತಲ್ಪ**: ಕಂದರ್ಪರೂಪ ಹಂಸೆಯ ತೂಳತಲ್ಪದೊಳಂದು ಮಂಡಿಸಿದ ನರ್ತಿಯಲಿ (ಕಂನವಿ. ೨೩-೨೩). [ ತೂಲ + ತಲ್ಪ ]

**ತೂಲತಳ್ಪ** 'ತೂಲತಲ್ಪ' ನೋ.

**ತೂಲರಾಶಿ** (ನಾ). ಅರಳೆಯ ರಾಶಿ: ಅಳಿಕನೇತ್ರನ ಕೂಡೆ ಸರಸಮೆ ತೂಲರಾಶಿಯು ಸಿಖಿಯ ಕೆಣಕಿದಂತೆ (ನವಮೋ. ೫-೨೨). [ ತೂಲ+ರಾಶಿ ]

**ತೂಲಿ$_1$** (ನಾ). ಹತ್ತಿ; ಅರಳೆ. [ ಸಂ. ತೂಲೀ ]

**ತೂಲಿ$_2$** (ನಾ). ತೂಲವುಳ್ಳುದು; ತೂಲತಲ್ಪ: ತೂಲಿಯೊಳತನು ವ್ಯಾಕುಲದಲ್ಲಿ ಕುಳಿತಿರ್ದತುಳಕರ್ಣನ ಕರೆಯಲಿಲ್ಲಾ ರಾಯ ಮೌನದಲಿ (ಜಿನಭಾ. ೩೫-೬). [ ಸಂ. ]

**ತೂಲಿಕಾತಲ್ಪ** (ನಾ). = ತೂಲತಲ್ಪ: ಆ ಕೊಟಡಿಯಲ್ಲಿ ಎರಡು ದಪ್ಪನೆಯ ದಿಂಬುಗಳೂ ತೂಲಿಕಾತಲ್ಪವೊಂದೂ ಎತ್ತರವಾದ ಮಂಚದ ಮೇಲೆ ಅಣಿಗೊಂಡಿದ್ದುವು (ಪುನರು. ೨೯೬). [ ಸಂ. ]

**ತೂಲಿಕೆ, ತೂಳಿಕ್ಕೆ** (ನಾ). ೧. ಚಿತ್ರವನ್ನು ಬರೆಯುವ ಕುಂಚ; ಚಿತ್ರಗಾರನ ಕುಂಚ: ಸಂಕಲ್ಪತೂಲಿಕಾಭಿತ್ತಿಯೊಳೀ ಭುವನತ್ರಯಮಂ ಚಿತ್ರಿಸುವ ವಿರಿಂಚನ ವಿದ್ಯೆಗಧಿಪ ನೀಂ ಗುರುವಲ್ತೇ (ಜಗವಿ. ೯-೪೯)

೨. ನೆಯ್ಗೆಯವನು ಬಟ್ಟೆ ನೇಯುವಾಗ ಉಪಯೋಗಿಸುವ ಒಂದು ಬಗೆಯ ಉಪಕರಣ ; ನೆಯ್ಗೆಯವನ ಕುಂಚ. ‘ತಂರ್ಬಿ’ ಪರಾ. ೩. ಚಿನ್ನ, ಬೆಳ್ಳಿ ಮೊದಲಾದುವನ್ನು ಕರಗಿಸುವ ಮೂಸೆ. ೪. “ಅಕ್ಕಸಾಲೆಯರ ಸಲಾಕೆ” (ಗಂಗಾಮ. ೧೫೬). ೫. ದೇವರ ದೀಪ ಮೊದಲಾದುವಕ್ಕೆ ಉಪಯೋಗಿಸುವ, ಅರಳೆಯಿಂದ ಮಾಡಿದ ಬತ್ತಿ. ೬. ಅರಳೆ ಅಥವಾ ತುಪ್ಪುಳ ಮತ್ತು ಅವುಗಳಿಂದ ಮಾಡಿದ ಹಾಸುಗೆ. ೭. ಹಾಸುಗೆಗೆ ಹಾಕಿರುವ ಅರಳೆ ಅಥವಾ ತುಪ್ಪುಳ. ‘ತ್ರೂಲಿಕಾತಲ್ಪ’ ಪರಾ. **ತೂಳಿಕೆ$_2$**: ೧. ಚಿತ್ರಿಪೊಡೆ ತೂಳಿಕೆಯುಂ ತರಿಸುವಂ (ಶಮದ. ೨೫೦ ಪ್ರಯೋ). ೬. ಅದಟಿನವಿರಳವಾ ತೂಳಿಕಾ ಭ್ರಮಣಪರಿಗತತೂಳಿಕಾತಳಮಪ್ಪ ಮನಕ್ಕೆ...ಪರಿಣಮಿಸಿದ ಸುಸ್ಥತೆಯುಂ ವ್ಯರ್ಥಂ ಮಾಡದೆ (ಚಂದ್ರಪು. ೪-೧೮). [ ಸಂ. ತೂಲಿಕಾ ]

**ತೂವರ** (ನಾ). = ತೂಬರ$_2$. [ ಸಂ. ]

**ತೂಷ್ಣಿ** (ನಾ). ೧. ಮಾತನಾಡದಿರುವಿಕೆ ; ಮೌನ : ರೋಷವಂ ತಾಳ್ದೊಡೆಯುನಿರೆ ತೂಷ್ಣಿಯಿಂದ ವಿಶ್ವಾಸಿಯುಂ ನುಡಿಸಲೇಕಿವನೆಂದು ಸಲಿಗೆಯುಂ ಬೇಸರೇಕೆಂದು ದೇವರಿಗೆಂದು ಶಬರಪತಿ ಬೆಸಗೊಂಡನಾ ಭೀಮನ (ತುರಂಗ. ೭೪-೩೫). ೨. (ಕರಾ) ಸಂಕ್ಷೇಪ ; ಸಂಗ್ರಹ : ನೀನು ಹೇಳಬೇಕಾದ್ದನ್ನು ತೂಷ್ಣಿಯಲ್ಲಿ ಹೇಳಿಬಿಡು (ರೂಢಿ).

[ < ಸಂ. ತೂಷ್ಣೀಂ ]

**ತೂಷ್ಣಿಭಾವ** ‘ತೂಷ್ಣೀಭಾವ’ ನೋ.

**ತೂಷ್ಣೀಂಭಾವ** (ನಾ). = ತೂಷ್ಣಿ ೧: ಆ ಬುಭೂಕ್ಷೆ ಒಳಮಾಡಿಕೆಗಳಲಿ ತು[ತೂ]ಷ್ಣೀಂಭಾವವಾಗಿ ದೇವರಾಯುಸವು ಆಗಿ ಇಹುದು (ಅರಳು. ೧೮೮-೭). [ ಸಂ. ]

**ತೂಷ್ಣೀಂಭೂತ** (ಗು). ಮೌನವಾಗಿರುವ ; ಮಾತನಾಡದಿರುವ : ಸುಷುಪ್ತ್ಯವಸ್ಥೆ, ತೂಷ್ಣೀಂಭೂತಾವಸ್ಥೆ, ಸಮಾಧ್ಯವಸ್ಥೆಗಳಲ್ಲಿ ರಾಗದ್ವೇಷಗಳಿಲ್ಲವಾಗಿ ಕರ್ಮವೂ ಇಲ್ಲ (ವೇಸಾರ. ೭). [ ಸಂ. ]

**ತೂಷ್ಣೀಂಶೀಲ** (ನಾ). = ತೂಷ್ಣೀಕ ೧. [ ಸಂ. ]

**ತೂಷ್ಣೀಕ** (ನಾ). ೧. ಮೌನಸ್ವಭಾವದವನು ; ಮಾತನಾಡದೆ ಸುಮ್ಮನಿರುವ ಸ್ವಭಾವದವನು. ೨. [ಜೈನ] ದೇವಗಣದಲ್ಲಿ ಒಂದು ಬಗೆ : ರಾಕ್ಷಸರುಂ ಯಕ್ಷರುಂ . . . ತೂಷ್ಣೀಕರುಂ ಪವನರುಂ ಎಂದು ಪಿಶಾಚರ್ ಚತುರ್ದಶವಿಧಂ (ತತ್ತ್ವಪ್ರ. ೧೯೩). [ ಸಂ. ]

**ತೂಷ್ಣೀಕರಣ** (ನಾ). ಮಾತನಾಡದಿರುವಿಕೆ ; ಮೌನ. ‘ತೂಷ್ಣೀಕರಿಸು’ ಪರಾ. [ < ಸಂ. ತೂಷ್ಣೀಂಕರಣ ]

**ತೂಷ್ಣೀಕರಿಸು** (ಕ್ರಿ). ೧. ಮಾತನಾಡದಂತೆ ಮಾಡು ; ಬಾಯಿ ಮುಚ್ಚಿಸು : ಗಹಗಹಿಕೆಯಲಿ ತೂಷ್ಣೀಕರಿಸಿ ಸೌಮಿತ್ರಿ ಮಾಱಾಂತ (ತೊರರಾ. ೭-೩೪-೫೫). ೨. ಸುಮ್ಮನಿರು ; ಮೌನವಾಗಿರು : ಜಿಷ್ಣು ರಕ್ಷಕ ಜಿತೇಂದ್ರಿಯ ಜೀವನಾಧಾರ ತೂಷ್ಣೀಕರಿಸದಱಿಯೆನ್ನ (ಶತಸಾಂ. ೬೨-೭).

[ ತೂಷ್ಣೀಕರಣ + - ಇಸು$_3$ ]

**ತೂಷ್ಣೀಭಾವ**, ತೂಷ್ಣಿಭಾವ (ನಾ). = ತೂಷ್ಣಿ ೧ : ಈ ತೆರದಲ್ಲಿ ದುರ್ಯೋಧನನಿಗೆ ಬುದ್ಧಿಹೇಳಿ ಭೀಷ್ಮನು ತೂಷ್ಣೀಭಾವವನ್ನು ಅವಲಂಬಿಸಿದನು (ಭೀಷ್ಮಚ. ೮೭). **ತೂಷ್ಣಿಭಾವ** : ತೂಷ್ಣಿಭಾವದಲ್ಲಿ ಸುಮ್ಮನೆಯಿರುವ ಧರ್ಮರಾಯನ ಮನೋಭೀಷ್ಟವನ್ನು ತಿಳಿದು (ಶೀಷಧ. ೩-೪).

[ < ಸಂ. ತೂಷ್ಣೀಂಭಾವ ]

**ತೂಳ್**, ತೂಳು$_1$ (ಕ್ರಿ). ತೂಳ್ತು, ತೂಳ್ದು$_2$ (ಭೂತನ್ಯೂ). ೧. ಬೆನ್ನಟ್ಟು ; ಅರೆಯಟ್ಟು : “ಎಟ್ಟಟ್ಟೆಂದುಂ, ತೂಳೆಂದುಂ ಅಱೆಯಟ್ಟುವುದೆಂದುಂ ಬೆನ್ನಟ್ಟುವುದು” (ಶಶಾ. ೨೮-೫೮೮); “ಎಟ್ಟಟ್ಟೆಱೆ ... ತೂಳೆನುತ್ತುಂ ಸಲೆ ಬೆನ್ನಟ್ಟೆನಲು” (ಕವಿಕಂ. ೨೩೧) : ಮಸಗಿ ಬಳಾಕಾವರ್ತರ ಬೆಸದಿಂದಂ ಬಂದ ಮೇಘಮುಖರಂ ತೂಳ್ದೋಡಿಸೆ(ಆದಿಪು. ೧೪-೫೪) ; ಬಳಯುತರಂ ಬಟಲ್ಚುವ ಲತಾಂತಶರಂಗಿದಿರಾಗಿ ತಾಗಿ ಸಂಚಳಿಸೆ ಪಳಂಚಿ ತೂಳ್ದವನನೋಡಿಸಿ (ಎಕ. II, ೧೧೭-೮೫ ; 1123) : ಮತ್ತಮಾತಂಗವಿಟ್ಟಳಿಸಿದ ಜನಂಗಳಂ ತೂಳ್ದು ಸೀಳ್ದ್ಗದಿ ವಿಸಟಂಬರಿದು ಬರುತಿರ್ದುದು (ಸೌಂದಪು. ೩-೧೪) : ಕೆಡಪಿದುದೀಳ್ದು ಸೀಳ್ದುದುಱ ತೂಳ್ದುದು ಪೋಳ್ದುದು ನೀಳ್ದ ಹಸ್ತದಿಂ ಪಡಿಬಲಮಂ ಮಹಾರಣವಿದಾರಣದಾರುಣ ಮತ್ತವಾರಣಂ (ರಾಜಶೇ. ೬-೯೩). ೨. ಓಡಿಸು ; ಸೋಲಿಸು ; ಹಿಮ್ಮೆಟ್ಟಿಸು : ವೈರಿರಜನೀಸಂಘಾತಮಂ ತೂಳ್ವ ಭಾಸುರಸೂರ್ಯಾಂಶುವೆನಲ್ಕೆ ಸಾಸಿರದ ಮೂನೂರ್ವ್ವರು ಯಶೋಮೂರ್ತ್ತಿಗಳು (ಎಕ. VII, ಶಿಕಾರಿ. ೧೮-೨೧ : 1158) ; ಜ್ಯಾತತರುತಿ ಮಿಗೆ ಬಳಧೂಳೀತತಿಯಂ ಗಱಿಯ ಗಾಳಿ ತೂಳ್ವನವಿಮಸಂಘಾತದಿನಿಸುತುಂ ಕೃಷ್ಣನರಾತಿಯ ಬಗೆಗಟ್ಟಿ ತಿಂಬ ಜವನಂತಿರ್ದಂ (ಜಗವಿ. ೯-೨೯) : ಅಸುರಂ ... ಬಾಟಿಯ ಬನದೊಳ್ಮದಶುಂಡಾಳಂ ಪೊಕ್ಕಂತೆ ಪೊಕ್ಕು ಸಬಳಿಗರಣಿಯುಂ ತೂಳೆ (ಉದ್ಭಟ. ೪-೭೪) : ಸೀಳ್ವನಿಳೆಯುಂ ಕೀಳ್ವನದ್ರಿಗಳನರ್ಕನಂ ತೂಳ್ವಂ (ಚಬಪು. ೩೧-೧೧) : ಆ ಪೊಟ್ಟಿಂಗೆ ಮಾಱಾಂತರಿರಾಯಗುವರನಂ ತೂಳ್ದು . . . ಪ್ರತಾಪಾಗ್ರ್ಯಂ ಮಾರ್ಮಲೆದು ದಮನನಂ ತಡೆದೊಡ್ಡಿ ನಿಲ್ಪಂ (ರಾಮಾಶ್ವ. ೯೦-೨೦). ೩. ಹಿಂದಕ್ಕೆ ಸರಿ ; ಹಿಮ್ಮೆಟ್ಟು : “ತೂಳ್—ಅವಸರ್ಪಣೇ (ಹಿಂತಿರುಗಿ ಓಡು)” (ಶಮಧಾ); ಅಲಿಘನಿತಂಬದ ಪೊಯ್ಲೊಳ್ ನೆಲೆಮೊಲೆಯಳ್ಳೆಱೆನೊಳ್ ತರಂಗಂಗಳ್ ತೂಳ್ದಲಱುಗುಮಪಱಳ್ಳೆಱೆನೊಳಲಱುಗುಮೆರ್ದ ತೆರೆಗಳಳಱ ತೂಳ್ವುದು ಪಿರಿದೇ (ಆದಿಪು. ೧೧-೧೪೭) : ಕಡಲ ಪೊದಟ್ದಿ ಪೆರ್ದೆರೆಗಳೆಯ್ದೆ ಕುಲಾದ್ರಿಗಳೊಳ್ ಪಳಂಚಿ ತೂಳ್ದೊಡನೆ ಮರಲ್ದ ಪೋಲ್ ಕಡೆಯೆ ಪಾಯಿಸಿದುಗ್ರರಥಂಗಳ್ (ಪಂಪಭಾ. ೮-೯೦): ಅರ್ಕನಳುರ್ಕೆಗೆಟ್ಟು ನಭದಿಂ ತೂಳ್ದಂ (ಪಂಪಭಾ. ೧೦-೨೭) ; ದಿನಕರನೋದಯದೊಳ್ ತಮಮನಿತುಂ ತೂಳ್ದೋಡುವಂತೆ ಮಿಥ್ಯಾತ್ವತಮಂ ದಿನಕರನುದಿ(ದ)ಯಿಸೆ ನಿಜಕುಳವನದಿಂ ತೂಳ್ದೋಡಿ ಕೆಡುವುದೇಂ ವಿಸ್ಮಯಮೋ(ಎಇ. XVI, ೭೧-೩೫ ; 1081). ೪. ಅಡಗಿಸು ; ಪರಿಹರಿಸು ; ನಿವಾರಿಸು : ಕೇಳ್ದು ನೃಪನಾಗಳೊದವಿದ ಮಹಾಚಿಂತೆಯುಂ ತೂಳ್ದು ತನ್ನಾಪ್ತರಂ ಕರೆದು ... ಎನೆ (ಪದ್ಮರಾ. ೪-೫) ; ಪರಶಿವಂ ನೀನೆ ಕಾರುಣ್ಯದಿಂದಂ ಗುರುರೂಪಂ ತಾಳ್ದು ತೂಳ್ದ್ಗ ಭವಮಂ (ವೃಷವಿ. ೨೭-೧೧); ನೋವೆಲ್ಲಮಂ ತೂಳ್ವ ನಿನ್ನ ಸದ್ಧರ್ಮಮನೆ ಮೆಚ್ಚುವೆಂ (ಸೌನಂದ. ೦೨-೧೭). ೫. ಸೆಳೆ ; ತೂಗು : ನನೆಯಂಬಂ ತೊಟ್ಟು ಕಾಮಂ ಮುಳಿದು ನರಪನಂ ನೋಡಿ ... ಕಾಮಿನಿಯುಂ ಶ್ಯಾಮಾಂಗಿಯುಂ ಮತ್ತೆನಿಸದೆ ಮಱಗೊಂಡಿರ್ದ ತೂಳ್ದಿಟ್ಟನಾಗಳ್ (ಧರ್ಮಾಮೃ. ೧೦-೨೯); ಕೂರಲಗಿಂ ಗಿಜ್ಜನೆ ತೂಳ್ದು ಬೇಗಮಿಱದಪಂ (ಧರ್ಮಾಮೃ. ೦೩-೧೦೮). ೬. ಹರಡು ; ಹೊರಹೊಮ್ಮು : ತಂಗದಿರ್ವಟ್ಟನಿಂಗದಿರ್ದೊಂಗಲಂ ಪಿಂಗದೆ ಕಡಿದು ಕಂಡರಿಸಿ ಕರುವಿಟ್ಟು ಪೊಂಗಿ ತೂಳ್ವ ಬೆಳ್ವೆಳಗನುಗುಟ್ವಳೆಮುತ್ತಿನ ಮೂಡುವೆಟ್ಟುಗಳಿಂ (ಉದ್ಭಟ. ೯-೩೧ವ). **ತೂಳು$_1$**: ೧. ತೈಲ ಮರ ಕಲುಗುಂಡ ಸುರಿವುತ ತೂಳಿದರು ಕಪಿಭಟರು . . . ಕುಂಭಕರ್ಣನು ತೂಳಿದನು ಪಡೆಯ (ಕೌಶಿರಾ. ೨೫-೧೦). ೨. ತುಳಿಸಿದನು ತೂಳಿದನು ಹಿಡಿದನು . . . ರಕ್ಕಸ ಹಿಳುಕಹಿಳುಕನು ಹಳಚುತಿರ್ದನು (ಕೌಶಿರಾ. ೩೧-೧೪) : ಕೈ ಮಾ ಡು ವ ನಿ ಶಾ ಚ ರ ರ ತೂಳಿದನು (ತೊರರಾ. ೭-೩೩-೨೪) : ಆಸ್ಥಾಯಿಕೆಯೊಳಱಿದವರೆಂದರಾತನ ಸತ್ವಸಾಹಸದಂದಮನು ... ಖಚರೇಂದ್ರವಿಂಧ್ಯಾವೃಷಭವನು ತೂಳಿದ ಪರಾಕ್ರಮದ (ಸಾಳ್ವಭಾ. ೨೨-೨೭) ; ಬಲಖಳನಾಗ ಖಚರರ ತೂಳಿ ಪೊಕ್ಕನು (ಅಂಬಿಕಾ. ೧೪-೧) : ಆಳು ಮತ್ಸರದಿಂದ ತೂಳಿದರು ಹೂಳಿದರು ಸೀಳಿದರು ರಿಪುಬಲವನು (ತುರಂಗ. ೪೭-೨೯). ೪. ಮಾನಸದಂಧಕಾರವ ನೆಱೆ ತೂಳುವ ಭಾನುಮುನಿಗೆ ನಮಿಸುವೆನು

(ಅಂಜಿದ. ೧-೬೫) : ಈ ಲೋಕಾವಳಿಯೊಳ್ಲ ಮಾಡಿದ ಮಹತ್ಪುಣ್ಯಂಗಳೊ ಗರ್ಗಡಿಯುಂ ತೂಳಲ್ಕಾಱದ ಪಾತಕಕ್ಕೆ ನೆಲೆಯಪ್ಪೆನ್ನಂ ಸಮುತ್ತಾರಿಸಲ್ (ವಸ್ತುಪಂ. ೨-೦೨). ೫. ವೀರರು ತೂಳಿದರು ಕಣೆಯ (ಕುವ್ಯಾಭೀ. ೪-೧೩) : ಅಮರಗಿರಿ ತಱತಱಿಸೆ ತೂಳಿದರಸ್ತ್ರಶಸ್ತ್ರದ ಹೊಱಿಗೆಯಲಿ (ತೊರರಾ. ೩-೬-೮); ತೂಳುವ ಗುಂಡುಗಲ್ಗಳ ರಾಶಿ ಪಟ್ಟಣದಾಳುವೇರಿಯ ತುಂಬಿಹುವು (ಕಂನವಿ. ೬-೨೧). ೬. ಏಳುತತ್ತ್ರಿದನುಗ್ರ ವಿಕೃತ ಕರಾಳಶಕ್ತಿಯನುರಿ ಚಡಾಳಿಸಿ ತೂಳಿತಂಬರತಳವ (ತೊರರಾ. ೬-೨೭-೫೧); ತೂಳಿದೀ ಸಂಶಯವಿಪರ್ಯಾಸವನು ನೆಱೆ ಕೆಡಿಸಿ (ಅಮೃತ. ೧೦-೬೫) : ತೂಳುತಿರೆ ಭೇರಿಗಳ ಧ್ವನಿಯು ದಿಗ್ಪಾಲಮಂ (ದುರಪು. ೧೫-೪). ೭. ಉಬ್ಬು ; ಉಕ್ಕು : ದುರ್ಮುಖಿ ಸುಮುಖರೆಂಬುವರು ತೂಳುವಬುಧಿಯ ಸಬುದದವೊಲುಬ್ಬೇಳುವಗ್ಗದ ಗಾಢಿಕೆಯ ಕಟ್ಟಾಳುತನವನು ಮೆಱೆದರಿದಿರಲಿ ರಾಘವೇಶ್ವರನ (ತೊರರಾ. ೬-೪-೯). ೮. ತಳ್ಳು; ದಬ್ಬು; ನೂಕು: ತುಡುಕಿ ತೂಳುವ ಸೂತ್ರಯಂತ್ರದ ಗಡಣದಲಿ ಗತಿಗೊಂಡು ಬೇಡಿತ ಕೊಡುವ ಮಣಿಪುತ್ರಿಕೆಗಳೆಸೆದವು (ತೊರರಾ. ೧-೦೩-೧೦) : ದಳಪತಿಯಾಗ ಮೇಳೈಸಿ ಬಲವ ಕಗ್ಗೊಲೆಯ ಕಾಳಗಕಂದು ತೂಳಿದನೇನ ಬಣ್ಣಿಸುವೆ (ಕಂನವಿ. ೧೬-೭೯). ೯. ಒತ್ತರಿಸಿ ಬರು ; ನುಗ್ಗು : ಆಳು ಹೊಕ್ಕುದು ದಂತಿಘಟೆಗಳು ತೂಳಿದವು (ಕುವ್ಯಾಭೀ. ೯-೦೫); ತುಱುಗಿ ತೂಳುವ ಮತ್ತವಾರಣದುಱುಬೆಗಾಱದೆ ವೀರಹನುಮನ ಮುಱಿಯ ಹೊಕ್ಕುದು ಭೂರಿವಾನರಸೇನೆ (ತೊರರಾ. ೬-೩೨-೯); ಮದಕರಿಗಳ ಸಾಲ ಪಟಗಳಿನಪ್ರಭೆಯ ತೂಳಗೊಡದೆ ಮುಸುಕಲು ರಾಹು ಪರ್ವದೊಲ್ ಮೇಳೈಸಿತು ತಮ ಜಗಕೆ (ಕಂನವಿ. ೦೯-೪೪) : ತೂಳುತಿಹ ದಶವಾಯು ಬಂಧದಿ ಮೇಳವಿಸಿ ಪೊಱವಡಿಸುತಿಹ ನವನಾಳಮಂ...ತಾಳಿ (ಶಂಕರಾ. ೩-೮೦). ೧೦. ಅಲ್ಲಾಡು ; ಚಲಿಸು : ತುಱುಗಿ ತೂಳುವ ಸಿಂಧ ಸೆಳೆ ಮಡಲಿಱಿವ ಝಲ್ಲರಿ (ಕುವ್ಯಾಕ. ೩-೧೩) : ತೋಳ ಗಾಳಿಗೆ ತೂಳಿದವು ಸೌಧಾಳಿ (ತೊರರಾ. ೩-೧೦-೨೬). ೧೧. ಹೆಚ್ಚಿಸು ; ಬೆಳೆಸು ; ವೃದ್ಧಿಪಡಿಸು : ಕೋಪವನು ಕೊನರಿಸುವ ನೃಪರನುತಾಪವನು ತೂಳುವ ಕುಬುದ್ಧಿವ್ಯಾಪಕನ ನೀ ವೈರಿಯಲ್ಲದೆ ಭೀಮನಲ್ಲೆಂದ (ಕುವ್ಯಾಗ. ೮-೪೦). ೧೨. ಹೆಚ್ಚು ; ವೃದ್ಧಿಹೊಂದು : ಕೇಳಿ ತಲೆದೂಗಿದನು ಮೂಗಿನ ಮೇಲುವೆರಳಿನ ಹೊತ್ತ ದುಗುಡದ ತೂಳಿದುಬ್ಬೆಯ ಸಟ್ಟ ನೋಟದ... ಹುದಿದ ಭಾವದಲಾಲಿಸಿದನಸುರಾರಿ ದೂತವ್ರಜದ ಬಿನ್ನಪವ (ಕುವ್ಯಾಅ. ೨-೨); ಎಳೆನೇಸಱಿನವೊಲು ರಂಜಿಸುವ ರತ್ನಪ ತುಱುಗಿ ತೂಳುವ ಹರುಷ ಪುಳಕದಿನಿತ್ತನನುಜಂಗೆ (ತೊರರಾ. ೫-೯-೩೦). ೧೩. ಆವರಿಸು : ತೂಳುವಂತಸ್ತಾಪ ತಗ್ಗಿದುದು (ನಿಭಾಗ. ೧೦-೫೪-೧೦).

[ ದೇ.೫ ತಮಿ. ತುವಳ್=ನಡುಗು; ತೆಲು. ತೂಲು; ಕೊಲಾ. ಪರ್ಜ. ತೂಲ್; ನಾಯ್ಕಿ. ತೂಳ್ ]

**ತೂಳ$_1$, ತೂಣ$_1$, ತೂಳು$_2$** (ನಾ). ೧. ಪರವಶತೆ ; ಆವೇಶ; ಉನ್ಮಾದ : ತೂಳ ಬರೆ ಕುಣಿದುದು ಕಬಂಧದ ಜಾಲದೊಡನೆ ಪಿಶಾಚಗಣ (ಕುವ್ಯಾಭೀ. ೫-೩೫) : ಕಾಳೆಗದೊಳು ಬೊಮ್ಮ ಜಟ್ಟಿಗ ಬೀರ ಭೇತಾಳ ಶಾಕಿನಿ ಡಾಕಿನಿಯರ ತೂಳದೆ ಹೊಯ್ದಾಡಿ ಜೃಂಭಿಸಿ ಗಗನಾಂತರಾಳದಿ ಬೊಬ್ಬಿಕ್ಕುತಿಹರು (ಮೋಹತ. ೨೯-೧೦) : ತಾಳಿ ಸುರರೆಂದು ದುಪ್ಪಾಳಿಸುತ ವಂದಿರವದೋಳಿ ಸುತ್ತಲ್ ಮುಸುಕೆ ತೂಳದಿಂ ಹರಿ ನಡೆದನು (ಚಬಪು. ೩೦-೫೫) : ತೂಳದ ಭಕ್ತಿಯು ಪುತವು ಶೀಲಂಗಳ ಮೇಳೈಸುತ ಮನದೊಳಗೆ (ಅಮುಸಾಂ. ೪-೧೧೬). ೨. ದೆವ್ವ, ಭೂತ ಮೊದಲಾದುವು ಮೈಮೇಲೆ ಬರುವುದು; ಭೂತಾವೇಶ: ನಟ್ಟಲಗಂ ಪಿಡಿದು ಬಿಟ್ಟ ತಲೆವೆರಸು ತೂಳಂ ಬಂದಂತೆ ಬೊಬ್ಬಿಱಿದು ಪರಿವಬ್ಬರಗಲಿಗಳುಮಂ (ರೀಲಾವ. ೫-೧೩೪) : ಇದು ಮೋಹನದೇವತೆಯಾವೇಶದೊಳೊದವಿದ ತೂಳವೊ...ಎನಲೊಪ್ಪಿದುದಾ ಸುದತಿಗೆ ಸುಕುಮಾರನ ಕುವರನ ಮೊಗಮುಂ ಕಾಣುತವೆ (ಜಯಜಾ. ೪-೧೯). ೩. ಅತ್ಯಾಸಕ್ತಿ; ಉತ್ಕಂಠೆ: ಇಷ್ಟಲಿಂಗ ತೂಳದಿಂದ ಎಷ್ಟು ದೋಷ ದುರಿತಗಳನು ಬಿಟ್ಟು ಓಡಿಸುವೆನು (ಶಿವಗೀ. ೧೫೬-೭೯೫): ಬಾಲೆ ಕಾಂತನ ಕಿವಿದೆಱಪಿಗೆ ಪುಳಕಕೆ ತೂಳವೆತ್ತಿದಳು (ಪರ್ಧಿಜ. ೫-೮೯) : ತೂಳವೇತಕೆ ರಮಣಿ ನಿನಗದ ಕೇಳಿದಲ್ಲದೆಯುಶನವಿಳಿಯದೆ (ಶಂಕರಾ. ೭-೫೯). ೪. ಉತ್ಸಾಹ : ಹಸ್ತದೊಳಗೆ ಪೂಜಿಸು ನಮ್ಮನುಯೆಂದು ವಿಸ್ತರಿಸಿದನು ತೂಳದಲಿ (ಮಾದೀಸಾಂ. ೨-೪೦). **ತೂಣ$_1$**: ೧. ಏಕಶಾಸನಮಾಂತೊರೆಯ ತೂಣಾ ಬಿರಿದೆನ್ನ ತುಟವರಿಯೆ ತಿರೆಯದುಂ ಕೇಳಿ (ಗೀವಿಂ. ೯-೧೨೩). **ತೂಳು$_2$**: ೧. ರಣದೊಳುಭಯವೀರರ್...ಕೂರಲಗಿನಿಂ ತೂಳು ವೆದ್ದಿಱಿದಾಡುತಿರ್ದರತಿ ಖಾತಿಯಿಂ (ಚಬಪು. ೨೬-೧೪).

**ತೂಳದವರು** = ಉನ್ಮಾದಸ್ವಭಾವದವರು ; ಆವೇಶವುಳ್ಳವರು : ತೂಳದವರ ಮಾತ ಕೇಳಿ ಖೂಳರೆಲ್ಲರು ಕೂಡಿಕೊಂಡು ಹಾಳುಮಾಡಿ ಕೈಯಲಿದ್ದ ಹೊನ್ನು ಹಣಗಳ (ಕನಕ. ೧೪೨-೩). [ ←ತುಳು. ತೂಳ ]

**ತೂಳ$_2$** (ನಾ). ದಪ್ಪ ; ತೋರ : "ತೂಳ-ಸ್ಥೂಲ=ದಪ್ಪ, ತೋರ" (ತದ್ಭಕೋ. ೦೮); ಸಕಾರದೊಡನೆ ಕೂಡಿದ ಥಕಾರಕ್ಕೆ ತಕಾರು . . . ಸ್ಥೂಲ-ತೂಳ (ಶಮದ. ೨೫೬ ಪ್ರಯೋ). [< ಸಂ. ಸ್ಥೂಲ]

**ತೂಳ$_3$** 'ತೂಲ' ನೋ.

**ತೂಳಕ** 'ತೂಲಕ' ನೋ.

**ತೂಳಗ, ತೂಳಿಗ** (ನಾ.) ೧. ಆವೇಶ ; ಉನ್ಮಾದ : ಶ್ರೀಕಾಂತನ ತೂಳಗವಂ ಲೋಕದೊಳಾರಾದಡಱಿದು ನಿಲ್ಲಿಸಿದೊಡೆ . . . ಆ ಕಾರಣ ಪುರುಷನಡಿಗೆ ಮಣಿದಪೆಂ (ಹಮ್ಮೀರ. ೭-೬). ೨. = ತೂಳ$_1$ ೨: ತೂಳಗ ಬಂದವನಂತೆ ಭೂತ ಸೋಂಕಿದವನಂತೆ . . . ಮನ್ಮಥನ ಪರವಶನಾಗಿರುವ ಬಗೆಯನು ಕಂಡು (ವಚಕಾ. ೨೭). **ತೂಳಿಗ**: ೩. ದಂಬಾಚಾರ ; ಸೋಗು ; ಬೂಟಾಟಿಕೆ : ಜಾಳುಮನುಜರು ಒಡಲ ಪೊಱೆವರು ತೂಳಿಗವ ಮಾಡಿ (ಕಾಲಸಂ. ೩೪-೦೯). ೪. ಆವೇಶ ಬಂದಂತೆ ನಡೆಯುವವನು ; ಮನಸ್ಸು ಬಂದಂತೆ ವರ್ತಿಸುವವನು : ನರಸಿಂಹ ನಾಮದ ಅರಸು ನರಬೇಂಟೆ ಹೋದ ಧರೆಯೊಳು ತೂಳಿಗರು ಹಿರಿದು ಹೆಚ್ಚುವರು (ಕರರೀ. ೫೦೦-೧೩). [ < ತೂಳ$_1$ ]

**ತೂಳತಲ್ಪ** 'ತೂಲತಲ್ಪ' ನೋ.

**ತೂಳವೇಳಿಸು** (ಕ್ರಿ). ಮೈಮರೆಯುವಂತೆ ಮಾಡು ; ಪರವಶತೆಯನ್ನುಂಟುಮಾಡು : ಸಕ್ಕರೆವೆರಸಿದ ಚಲಿಪಾಲಿನಂತೆ ವರಕವಿ ಗೌರನ ವಚನ ಕೇಳುವ ರಸಿಕರ ತೂಳವೇಳಿಸುತಿಹುದು (ಮೋಳಿಪು. ೨-೨).

[ ತೂಳವೇಳು + – ಇಸು$_3$ ]

**ತೂಳವೇಳು** (ಕ್ರಿ). ೧. ಆವೇಶಗೊಳ್ಳು ; ಮೈಮರೆ : ತೂಳವೆದ್ದಲ್ಲಲ್ಲಿ ಜನಗಳು ಕುಣಿವುದ ಹೇಳಲಳವೆ (ಭರಚ. ೪೦-೧೧೧) : ಲೀಲೆಯಿಂದುಸುರ್ದ ಪುರಾಣ ರಾಯಗೆ ತೂಳವೇಳುವಂತೆಂದು ಮೇಲ್ಗತೆಯ (ಮೋಳಿಪು. ೨-೦೧೬). ೨. ದೆವ್ವಹಿಡಿ; ಪಿಶಾಚಿ ಹಿಡಿ: ಒಬ್ಬ ತೂಳವೆದ್ದಂತಾಡುತಿರ್ದ (ಭರಚ. ೫೩-೪೩). [ ತೂಳ$_1$ + ಏಳು$_1$ (< ಎೞ್$_1$) ]

**ತೂಳಿಕೆ$_1$** (ನಾ). ಎಸೆತ ; ಹೊಡೆತ ; ಬಡಿತ : ಕಾಳರಕ್ಕಸನುಗ್ರಪರಿಘದ ತೂಳಿಕೆಯ ತೋಟಿಗಳ ಧಾಳಾಧೂಳಿ ತುಂಬಿತು ಕಡೆಗೆ ಕಮಲಭವಾಂಡ ಮಂಡಲವ (ತೊರರಾ. ೬-೧೬-೩೫) ; ನಿಶಿತಕೋಪಜ್ವಾಲೆಯಲಿ ತಜ್ಜ್ವಲಿಸುತ ನಿಂದನು ಸುದರ್ಶನದ ತೂಳಿಕೆಯ ಸರಿಸದಲಿ (ತೊರರಾ. ೬-೩೨-೩೩).

[ ತೂಳ್ + – ಇಕೆ ]

**ತೂಳಿಕೆ$_2$** 'ತೂಲಿಕೆ' ನೋ.

**ತೂಳಿಗ** 'ತೂಳಗ' ನೋ.

**ತೂಳಿಸು** (ಕ್ರಿ). ೧. ಓಡಿಸು ; ಹಿಮ್ಮೆಟ್ಟಿಸು : ಬಾಣದ ಹೊಗೆಯಲಿ ಲಿಷ್ಟಗಳ [illegible] . ಮಾಣದಿಱಿದ ರಿಪು

ಬಲವ (ಕಂನವಿ. ೩-೭೪) : ತೂಳಿಸಿದ ದಶಲಕ್ಷವನು . . . ದೈತ್ಯನು (ಕೋಗಸು. ೨-೬೫). ೨. ಮುಂದಕ್ಕೆ ನುಗ್ಗಿಸು,— ಹಾಯಿಸು : ಜೋದರಾನೆಯ ತೂಳಿಸಲಿ ಸಮರಥರು ಸರಳಿಸಿ ಎಂದನಾ ಭೂಪ (ಕುವ್ಯಾಗ. ೫-೪೨); ತೂಳಿಸಿದರಾನೆಯಂ ಜೋದರುರವಣಿಸಿ (ಕೃಮಿಛಾ. ೨೨-೭) : ರಾಯರಾವುತರು ತೂಳಿಸಿ ಕುದುರೆಗಳನು ಭೋಯೆಂದು ಬೊಬ್ಬಿಱಿದೇಱಿ . . . ಸಾಯಲಿಱಿದರು (ಕಂನವಿ. ೧೭-೫೨). ೩. ಮುಂದಾಗು ; ತಾನಾಗಿ ಮುಂದೆ ಬರು : ತೂಳಿಸಿ ಮೋಹವ ಕಾಣಿಸುವುದು ಪ್ರೌಢಲೋಲಾಕ್ಷಿಯರ ಮತವಲ್ಲ (ಕಂನವಿ. ೯-೧೫೬). ೪. ಪ್ರಯೋಗಿಸು ; ಹೊಡೆ : ತೂಳಿಸುವ ಬೆಂಗೊಡತಿಗಳ ಸಿಟ್ಟೇಳಿಸುವ ನಿಶಿತಾಂಕುಶದ ವಿಕರಾಳ ಮದಕರಿ ಮೆಱೆವುತಿರ್ದುದು ರಣದ ಸೊಬಗಿನಲಿ (ತೊರರಾ. ೬-೨೯-೨೦) : ತೂಳಿಸು ಪೆಟಲ ಗುಂಡುಗಳ ಸೆಂಬಸುರರ ಕೋಲಾಹಳವೊಪ್ಪಿತು (ಕಂನವಿ. ೧೪-೫). ೫. ಉದ್ದೀಪಿಸು; ಹೆಚ್ಚಿಸು; ಅಧಿಕಗೊಳಿಸು : ಮೇಲೆ ಮಾತಿನ್ನೇಕೆ ವಂಶವಿಶಾಲವೈಭವವೆನ್ನದೈಸಲೆ ತೂಳಿಸಗ್ನಿಯನೊಟ್ಟಲಿಂಧನವೆಂದಳಿದುದುಮುಖಿ (ತೊರರಾ. ೬-೫೩-೮೫).

[ ತೂಳ್ + – ಇಸು$_3$ ]

**ತೂಳು$_1$** ‘ ತೂಳ್ ’ ನೋ.

**ತೂಳು$_2$** ‘ತೂಳ್$_1$’ ನೋ.

**ತೂಳುಕಾರ** (ನಾ). (ಯುದ್ಧದಲ್ಲಿ) ಆಕ್ರಮಣ ಮಾಡುವವನು,– ಮುನ್ನುಗ್ಗುವವನು : ಹೇಳಲೇನದನಾ ಕ್ಷಣಾರ್ಧದಿ ಬೀಳುಕೊಟ್ಟನು ಕಾಲನಗ್ಗದ ಕಾಳದೇಹದ ತೂಳುಕಾರರ ಘೋರವಿಗ್ರಹರ (ಅಂಬಿಕಾ. ೪-೩೦). [ ತೂಳು$_1$ (< ತೂಳ್) + – ಕಾರ$_1$ (< – ಕಾಱ) ]

**ತೂಳುವಱೆ** (ನಾ). (ಯುದ್ಧಕಾಲದಲ್ಲಿ) ಆಕ್ರಮಣದ ಸೂಚನೆಯನ್ನು ನೀಡುವ ಒಂದು ಬಗೆಯ ವಾದ್ಯ ; ರಣವಾದ್ಯ : ತೂಳುವಱೆಗಳು ಗಜಱಿದವು ತಂಬಟದ ಲಗ್ಗೆಯಲಿ (ಕುವ್ಯಾದ್ರೋ. ೩-೭); ತಳುವದವರ ಮೇಲೆ ನಡೆದನು ಮಗ ಹೊಯ್ಸಳ ತೂಳುವಱೆ ಮೊಳಗುತಿರೆ (ಕುರಾಸಾಂ. ೧೩-೩೭): ತೂಳುವಱೆಗಳ ರವಂ ತುಂಬಿತಾಶೆಗಳಂ (ಚಬಪು. ೩೮-೨೨).

[ ತೂಳು$_1$ (< ತೂಳ್) + ಪಱೆ$_1$ ]

**ತೂಳೆ** (ನಾ). ಅರಳೆ : ನವಮಣಿಮಂಚದಿಂದೆ ಮಿಸುಪಂಚೆಯ ತುಪ್ಪುಟ ತೂಳೆಯಿಂದೆ ... ಎಸೆದಿರ್ದ ಸೆಜ್ಜೆಯೊಳ್ ಪವಡಿಸಿ (ಪುಷ್ಪಪು. ೯-೯೭).

[ ಸಂ. ತೂಲ ]

**ತೂಳ್ತರು** (ಕ್ರಿ). ಆವೇಶದಿಂದ ಬರು ; ಮುನ್ನುಗ್ಗು : (ಓಡಿಹೋಗಿ, ಬಾಗಿಲ ಹೊರಗೆ ಪರೀಕ್ಷಿಸಿ, ತೂಳ್ತಂದು, ತವಕಿಗತನದಿಂದ ಆ ಬೀಲಗಳನ್ನೆತ್ತಿ ತೂಗಿ ತೂಗಿ ನೋಡಿ ಬಾಯ್ಮುಟ್ಟನ ದಾರಗಳನ್ನೆಳೆಯುತ್ತಿರುವರು) (ಬಿಟ್ಯಅ. ೫೪-೨೦). [ತೂಳ್ + ತರು$_1$ (<ತರ್) ]

**ತೂಳ್ತು** ‘ತೂಳ್’ ಪರಾ.

**ತೂಳ್ದು$_1$** (ಕ್ರಿ). ೧. ಅಟ್ಟು ; ಓಡಿಸು ; ಬೆನ್ನಟ್ಟು : ತಾಪಸರಂ ಬೆರ್ಚಿಸಿ ತೂಳ್ದಿ ಬೇ[ಳ್ವ]ರಣಿಯಂ ಕೊಂಡಾಶ್ರುಮಕ್ಕಿಂತು ಬೇವಸಮಂ ಮಾಡುವುದಾಯ್ತುದೊಂದು ವಿಭವಂ ಮತ್ತೇಭವಿಕ್ರೀಡಿತಂ (ಪಂಪಭಾ. ೮-೩೭) : ಸದೋಷನಿಮಂ ದಲಸ್ಮದಾರಾಧನವಿಘ್ನಕಾರಿರಿವೆಂದಸಿಪೇಟಹಸ್ತ ತೂಳ್ದಿದಳ್ (ಶಾಂತಿಪು. ೯-೬) ; ಆರ್ಮೆಯ್ದೋರ್ವರಾರ್ಮೆಲೆವರಾರ್ ಪೂಣರ್ವರಾರ್ ತೂಳ್ದುವರಾರವಂ ಜವನೆ ದಲ್ ತಾನೆಂದು (ಕಮುದ. ೧೫೦ ಪ್ರಯೋ). ೨. ಓಡು ; ಹಿಂದಕ್ಕೆ ಸರಿ ; ಹಿಮ್ಮೆಟ್ಟು ; ಪಲಾಯನ ಮಾಡು : ಭೀತಿಯಿಂ ಮಱುಗಿ ತೆರಳ್ದು ತೂಳ್ದಿ ಸುಟಿಗೊಂಡುದು ಪಾಂಡವಸೈನ್ಯಸಾಗರಂ (ಪಂಪಭಾ. ೧೨-೩೦) ; ಹುತವಹ ಬಾಣದಿಂದಮಿಸೆ [illegible]ದು ವಾನರಸೇನೆ (ಗದಾಯು. ೦-೨೪). ೩. ನಿವಾರಿಸು ; ಪರಿಹರಿಸು : ಪಸರಿಸಿದ ಕುತೀರ್ಥಧ್ವಾಂತಮಂ ತೂಳ್ದಿ . . . ಅರ್ಕಂಬೊಲು ದ್ಯೋತಿಸುಗೆ ಸಕಲಧಾತ್ರೀಚಕ್ರದೊಳ್ ಧರ್ಮಚಕ್ರಂ (ಅಜಿಪು. ೧-೧೬) : ಮೇಣ್ವಾರುಣಾಗ್ನೇಯಮಂಡಲವೇಳಾಕ್ರಮವೊಂದಿ ಸಂಭವಿಸಿದುತ್ಪಾತಂಗಳಂ ತೂಳ್ದುಗುಂ (ಲೋಕೋಪ. ೪-೮೭) : ಖೇದಮಂ ಕ್ಷಣದೊಳೆ ತೂಳ್ದಿ ತಾಳ್ದುವುದು ಪಿಂಗದೆ ಪುತ್ರ ಸಮಸ್ತಧಾತ್ರಿಯಂ (ಚಂದ್ರಪು. ೪-೧೯) ; ಮುನಿನಾಥಾ ಭವದೀಯ ದಿವ್ಯವಚನಂ ತೂಳ್ದಿತ್ತು ಸರ್ವಾರ್ಥಸಂಜನಿತಭ್ರಾಂತಿಯಂ (ಮಹಾನೇ. ೨-೪೫). ೪. (ಪರಮತವನ್ನು) ಖಂಡಿಸು : ಅಭಿನವಗಣಧರರೆನೆ ದಿವ್ಯಭಾಷೆಯಂ ತಾಳ್ದಿ ಕುಮತಮಂ ತೂಳ್ದಿದರಂ ಶುಭಕೀರ್ತಿದೇವರಂ ... ಪೂಜ್ಯಪಾದರೆನ್ನದರೊಳರೇ (ಶಂಚಾಮೂ. ೧-೨೦). ೫. ತೀರಿಸು ; ಮುಗಿಸು : ತೂಳ್ದಿ ಪಿತೃಗಳ ಋಣಮಂ...ಪಾರ್ವರಂ ಮನ್ನಿಸಿದಂ (ಚಿಕವಿ.೪-೮೨) ೬. ನಂದಿಸು ; ಆರಿಸು ; ತವಿಸು : ಶಂಭುಜೂಟದೊಳಾಂತಂ...ತತ್ಸಿಂಧುಬಂಧದ ನೀರೆಲ್ಲಮನೊಂದು ಮುಕ್ಕಳೊಳಿತಂದಾ ವಹ್ನಿಯಂ ತೂಳ್ದಿದಂ (ಜಗವಿ. ೧೮-೫). ೭. ತಡೆಯಿಲ್ಲದೆ ಸಂಚರಿಸು ; ಮುನ್ನುಗ್ಗು : ಕನಕಾಂಭೋಜರಜಂ ನಿಜಾಂಗರುಚಿಯಂ ಕನ್ನೆಯ್ದಿಲಿಂದು ಕಟಿಲ್ದಿನಿಸಂ ತೂಳ್ದಿ ತೆರಳ್ದಿಸಬ್ಬಯನಮಂ ಕಂಪು ಕೊಳಲ್ಬರ್ಪ ಭೃಂಗನಿಕಾಯಂ ನಿಜಕೇಶಪಾಶರುಚಿಯಂ ಕೈಕೊಳ್ವಿನಂ ಮೆಲ್ಲಮೆಲ್ಲನೆ ನೋಟಕ್ಕೆ ಸದೇಹಮಾಗಿ ಸುಟಿಯುತ್ತಿರ್ಕುಂ ವಿದೇಹಾನಿಲಂ (ಆದಿಪು. ೧-೬೨): ಪಟ್ಟಕ್ಕರ್ಕವೀಧಿಗಳೊಳ್ ತೂಳ್ದತು ಗೋಪಣನ್ದಿದಿಗಿಭ ಪ್ರೋದ್ಭಾಸಿ ಗಂಧದ್ವಿಪಂ (ಎಕ. II, ೭೯-೪೭ ; 1100). ೮. ಹೆಚ್ಚುಮಾಡು ; ಅಧಿಕಗೊಳಿಸು : ತಾಳ್ದಿದ ವಿರಹದೊಳೀಕೆಗೆ ಬೆಳ್ದಿಂಗಳ್ ಬಿಳಿಯ ಕಿರ್ಚು ಸಬಿಸಿ ಕಾಮಂ ತೂಳ್ದುವ ದಾಮಂ (ಗಿರಿಕ. ೪-೧೧೭). [ <ತೂಳ್ ]

**ತೂಳ್ದು$_2$** ‘ ತೂಳ್ ’ ಪರಾ.

**ತೂಱ್** ‘ತೂಱು’ ನೋ.

**ತೂಱಲ್**, **ತೂರಲ್**, **ತೂಱಲು** (ನಾ). ೧. ದೂರ ಹರಡಿರುವುದು; ಚೆದರಿಕೊಂಡಿರುವುದು : “ತೂಱಲ್—ದೂರ ಪೋದುದು” (ದತುನಿ. ಶಿ. I, ೭೭). ೨. ತುದಿ ; ಅಗ್ರ : ನಿಸ್ಸೊಡವರಲ್ ರೌದ್ರಾದಿದುರ್ಗಂ ಜಲಾಶ್ರುಯಮಾ ಬೆಟ್ಟದ ತೂಱಲಸ್ಕವಿಷಯಂ ಪಾತಾಳಮೆಂಬೀ ಮಹಾಭಯಸಂದೋಹಮಿಮೆಂತುಮೆಸ್ನ ಮನಮಂ ಪೇಱಂಜಿಸಲ್ಕಾರ್ಪವೇ (ಶೃಂಗಾರ. ೧-೫೫); ತೂಱಲ ಸೆಳ್ಳಗೊಂಬುವರಂ ನನೆ ಪೇಱಿದ ಮಾವು (ಅನಂಪು. ೧-೭೮). **ತೂರಲ್** : ೧. ದೂರದ ಕವಿತೆಯ ಝುಳಂಬದಾ ತೂರಲ ಕಿಳ್ಸರಗಂ ಮಿಳಿರ್ಚಿ ಬಂದೇರುವ ಮೆಲ್ಲಲರ ಶಕ್ತಿಯಂ ನೇರರಿಪಲ್ ಪ್ರತಿಭಾನಮೆಂದವರ್ (ಸಂಸಪ. ೪೯-೯೭). **ತೂಱಲು** : ೧. ‘ತೂಱಲಂಗೊಂಬು’ ಪರಾ.

**ತೂಱಂತುದಿವಟ್ಟೆ** = ಅತ್ಯಂತ ಎತ್ತರದಲ್ಲಿರುವ ಮಾರ್ಗ,–ಹಾದಿ : ನಟ್ಟಿರುಳೊಳ್ ತೂಱಂತುದಿವಟ್ಟೆಯೊಳೆಡೆಯಾಡುತಿರ್ಪನೆಂದತಿಭಯದಿಂದಿಟ್ಟಳೊ ರೋಹಿಣಿ ರಕ್ಷೆಯ ಬೊಟ್ಟಂ ಕಾಡಿಗೆಯೊಳೆಂದುಮೆನಿಸಿತ್ತಂಕಂ (ಮಹಾನೇ. ೧೪-೫೪). **ತೂಱತುದಿಗೊಂಬೆ** = ತೂಱಲ್ಗೊಂಬು ೧ : ತೂಱತುದಿಗೊಂಬೆಯನು ಏಱಿಪ್ಪ ಶಿವಯೋಗಿ ಬೇಱೊಂದು ಬಯಸಿ ಪುರಿದರ ಬೆಳಗಾಗಿ ಸೂಱೆ ಹೋದಂತೆ (ಸರ್ವಜ್ಞ. ೪೪೯). **ತೂಱಲ ತುದಿ** = ಅತ್ಯಂತ ಕೊನೆ ; ತಂಟ್ಟತುದಿ : ಖಚರರನಡರ್ದೇಱಿಸುವನೊ ಮೇರುಗಿರಿಯ ತೂಱಲ ತುದಿಯಂ (ಗದಾಯು. ೬-೧೭) : ನೀನೇಱಿ ಜರಾಸಂಧಭಯದೆ ಗಿರಿದುರ್ಗಮನಾ ತೂಱಲ ತುದಿಯೊಳ್ಕೇಪಗೆಯೇಱಿದ ಕೋಡಗದೊಲಿರ್ದ ತೆಱನಂ ಮಱೆದೈ (ಜಗವಿ. ೧೭-೪೫). [ತೂಱು$_1$+ –ಅಲ್$_2$]

**ತೂಱಲು** ‘ತೂಱಲ್’ ನೋ.

**ತೂಱಲುಗೊಂಬು** ‘ತೂಱಲ್ಗೊಂಬು’ ನೋ.

**ತೂಱಲ್ಗೊಂಬು**, **ತೂರಲ್ಗೊಂಬು**, **ತೂಱಲುಗೊಂಬು** (ನಾ). ೧. ಬಹುದೂರಕ್ಕೆ ಚಾಚಿಕೊಂಡಿರುವ ಕೊಂಬೆ,–ಶಾಖೆ : ತಾರಾಪಥ

ಮಂಡಲಮಂ ನೆಱೆ ಪಂದರಿಸಿ ಬೆಳೆದ ನವತರುಗಳ ತುಱುಗಿದ ತೂಱಿಲ್ಗೊಂಬಿನ ಕೆಲವು ಕವಲ್ಗೊಂಬೊಪ್ಪಿದುವು (ಜಯನೃ. ೧೫-೨೫); ಖಗಂಗಳ್ ನಿಡುಮರಂಗಳ ತೂಱಿಲ್ಗೊಂಬನಡರ್ದು ಮೋನಮಿರ್ದುವು (ರಾಮಾಶ್ವ. ೩೦-೨೩). ೨. ತಂತ್ರತುದಿಯಂ ಕೊಂಬೆ: ಶಾಖಾಚರಂ ... ಮರದ ತುದಿಗೊಂಬಿಂಗೆ ಪಾಯ್ದು ತೂಱಿಲ್ಗೊಂಬನೇಱೆ (ಪಂಚತಂ. ೨೮೦-೯); ಬಾಲವಿಹಂಗಂಗಳನೆಱಂಕೆಯೊಳಿಱುಂಕಿಕೊಂಡು ಪಾಱಲನುವಾಗಿ ತೂಱಿಲ್ಗೊಂಬಿನೊಳಿರ್ಪ ವಿಹಂಗಸಂಕುಳದಿಂ (ಗಿರಿಕ. ೧-೧೨೮ವ); ಕೇದಗೆಯ ತೂಱಿಲ್ಗೊಂಬ[ಪಾಠಾಂ. ತೂಳಿಲ್ಗೊಂಬ]ನೇಱಿರ್ದ ಮರ್ಕಟನೆಂತಂತೆ . . . ದುಷ್ಕವಿಯದೇ ಹಾಸ್ಯಕ್ಕೆ ಪಕ್ಕಾದನೋ (ಧರ್ಮನಾ. ೦-೫೩).
**ತೂರಲ್ಗೊಂಬು**: ೧. ಹಿರಿಯಾಲದ ಮರದ ತೂರಲ್ಗೊಂಬಿನ ಇರುಂಬಿನೊಳಗೆ ಚುಂಚನ ಶವವು ಗೋಣಿಂದ ನೇಲುತ್ತಿದೆ (ಬಟ್ಟಿಆ. ೧೬೨-೦೦).
**ತೂಱಿಲುಗೊಂಬು**: ೧. ಎಲೆಗಳಿಱುಂಬಿನೊಳ್ ಮರದ ತೂಱಿಲುಗೊಂಬಿನ ನೀಡನೀಡದೊಳ್ ತೊಲಗದೆ ನಿಂದು (ಕುಸುಮಾ. ೬-೩೬); ವಿಹಂಗಸಂಕುಲಂ...ಮರಂಗಳ ತೂಱಿಲುಗೊಂಬುಗೊಂಬಿನೊಳ್ ಸುಂಟಗೆಗೋದ ಮಾಟ್ಕೆಯವೊಲಿರ್ದುವು[ಡುಂ]ಗಿ ನಿದಾಘಕಾಲದೊಳ್ (ಸೂಕ್ತಿಸು. ೦೦-೧೦೯). [ ತೂಱಿಲ್ + ಕೊಂಬು₁ ]

**ತೂಱಾನೆ** (ನಾ). ಮದೋದ್ರೇಕದಿಂದ ಸಿಕ್ಕಿದವರನ್ನು ಸೊಂಡಿಲಿನಿಂದ ಹಿಡಿದಂ ಎಸೆಯುಂವ ಆನೆ (?) : ಈ ಹದನನೆನಗಱಿಯಬಂದುದು ದ್ರೋಹಿಯನು ತೂ[ಪಾಠಾಂ. ಕೂ]ಱಾನೆಗಿಕ್ಕಲೆಬೇಹುದಾದೊಡೆ ರಾಯ ಚಿತ್ತ್ಯಸನ್ನ ಭಾಷೆಯನು (ಸಾಳ್ವಭಾ. ೨೨-೫೦). [ ತೂಱು₁ + ಆನೆ₁ ]

**ತೂಱಿಸು**, ತೂರಿಸಂ₁ (ಕ್ರಿ). ೧. ಕಾಳಂಕಡ್ಡಿಗಳನ್ನು ತೂರಂವಂತೆ ಮಾಡಂ. ೨. ನಂಗ್ಗಿಸು ; ತಳ್ಳು : ಕೇಱಿಸುತೆ ಕೆದಱಿಸುತೆ ವೀರರಂ ನೋಡುತಂ ತೂಱಿಸುತೆ ಕಾಳಗಕೆ ಮಸಗಿ ಹಲು ಮೊಱೆವುತಂ ... ವೀರನೊರ್ವಂ ನಗರಿಯೊಳು ನಡೆದು ಬರುತಮಿರೆ (ಐಡಾರ. ದೇ. ೦೦೭-೬). ೩. ಹಾರಿಸಂ ; ಚಿಮ್ಮಿಸು : ಛತ್ರಚಾಮರಪತಾಕಾಳಿಯುಂ ಕೆಂಗಱಿಯ ಗಾಳಿಯಿಂದೆ ತೂಱಿಸಿತು...ಬಭ್ರುವಾಹನನ ಶರಸಂಕುಲಂ (ಜೈಮಿಭಾ. ೨೩-೩೯). **ತೂರಿಸು₁** : ೧. ಭತ್ತ ತೂರಿಸಬೇಕು. ಆಳುಗಳೇ ಸಿಕ್ಕಲಿಲ್ಲ (ರೂಢಿ). [ ತೂಱು₁ + – ಇಸು₃ ]

**ತೂಱು₁**, ತೂರಂ₁, ತೂಱ್ (ಕ್ರಿ). ೧. ಭತ್ತ ಮೊದಲಾದ ಧಾನ್ಯಗಳ ಹೊಟ್ಟನ್ನು ಗಾಳಿಯಂ ಸಹಾಯದಿಂದ ಹಾರಿಸಂ, – ಹೊಟ್ಟು ಬೇರ್ಪಡುವಂತೆ ಮಾಡಂ: "ತೂಱು–ಉದ್ಧೂತೌ (ಧಾನ್ಯವನ್ನು ತೂರು)" (ಶಮಧಾ) : ಕಳದೊಳ್ತೂಱಿದ ಭತ್ತಮನಳೆಯದೆ ನಿಂದಂದು ದನುಜನಾ ಧಾನ್ಯಮನಾಗಳೆ ಕೊಳ್ವರೆಂಬರ್ (ಸಮುಪ. ೦೨-೪೭) : ತೂಱಿದರೆ ತನಿಹೊಟ್ಟು ಗಾಳಿಗೆ ಹಾಱುವುದು (ಕುಮಾರದ್ರೋ. ೦೬-೪೪) ; ನೊಱುಕಂಡುಗ ಹೊಟ್ಟ ತೂಱಿದರೆ ಫಲವೇನು (ಸರ್ವಜ್ಞ. ೩೪೧). ೨. ಎರಚು; ಬಿಸಂಡಂ; ಎಸೆ: ನೇಹಮಂ ಮೆಱೆದು ಹೊಳ್ಳಿಸಿಬಿಟ್ಟಪನೆಂಬ ಡಾಳಿಯಂ ಸುಡುವುದು ಸುಟ್ಟು ತೂಱುವುದು ತೂಱಿದ ಬೂದಿಯ ಓಟ್ಟುಗಟ್ಟ ಬೊಟ್ಟಿಡುವುದು (ಅನಂಪು. ೮-೫೬): ನೂಱು ಹಣ ಸಿಗುವನಕ ವಿಾಱಿ ವಿನಯದಲಿಪ್ಪ ನೂಱೊಳ್ಗಾಱಿ ಕೇಳಿದರೆ ಸಾಲಿಗನು ತೂಱುವನು ಮಣ್ಣ (ಸರ್ವಜ್ಞ. ೧೩೯೪). ೩. ದೂರೀಕರಿಸಂ ; ತಿರಸ್ಕರಿಸಂ : ತಂದೆ ತಾಯ್ಗಳ ಮಿಾಱಿ ಬಂಧುಗಳನು ತೂಱಿ ... ಅಂಗನೆಯರ್ಗೆ ಸೋಲ್ವೆನ್ನ ಮುಂದಮತಿಯ ರಂಗ ಬಿಡಿಸು (ಶತಸಾಂ. ೯-೪೯). ೪. ಚೆದರಿಸು; ಓಡಿಸಂ: ಮೂಱುಗೊಂಡರು ಮನುಜರುಗಿನುಜರುಗಳ ತೂಱಿಯಾಡಿಸಿ ಕಾಣೆನೆಸಲು (ತ್ರಿಪುಸಾಂ. ೮-೯೨) ; ಮೊಳ ಫಡಫಡ ಜಾಱದಿರು ತೋಱಿಸಳ ತೂಱಿದ ಡೊಂಬು ಬೇಡ (ಕುಮಾರ. ೧೪-೨೯); ಮೂದಲಿಸಿ ಮುತ್ತಿದ ರಿಪುಗುನ್ನಿಗಳನು ತೂಱಿದರು (ಕಂಸವಿ. ೧೪-೮೪). ೫. ಚಿಮ್ಮು ; ಹಾರಂ; ಸಿಡಿ: ನೀರಾನೆಯ ಕೈಯೇಱಿಂ ತೂಱುವ ಮಣಿಗಣಮುಯಾಱುದೊಳ್ ಕಣ್ಗೆಸೆಗುಂ ಶಿವಿುಂಗಿಳಗಿಳಂಗಳಿಂದ ಸಮುದ್ರಂ (ಪುಣ್ಯಾಸ್ರ. ೧೨-೧೩); ಕಣ್ಣವೆ ಜಾಱಿ ಜಾಱಿದುವಶ್ವಚಯು ಪವಮಾನವೇಗದಲಿ ತೂಱಿ ಬಿದ್ದುದು ಮಕುಟ (ಕೊರರಾ. ೩-೨-೨೧). ೬. ನಿವಾರಿಸಂ ; ತಪ್ಪಿಸಂ ; ಪರಿಹರಿಸಂ : ಎಡಬಲದಲೌಕುವ ಭಟಾಳಿಯ ತೊಡಕ ತೂಱುತ ವಿಾಱಿ ಮಿಸುಕುವ ಕಡುಹು ಕಾಱರ ಕಾಲನೂರಿಗೆ ಕಳುಹುತ (ತೊರರಾ. ೪-೬-೨೦); ಅತಿಶಯಾರ್ಥಂಗಳ ತೋಱಿ ಜಾಡ್ಯವ ತೂಱಿ ಮತಿಗೆ ಮಂಗಲವನಿತ್ತೆನ್ನ ಕೃತಿಗೆ ನಿರ್ವಿಘ್ನದಾಯಕಿಯಾಗು (ನಾಗಕು. ೦-೨೦). ೭. ಹೊಯ್ದಾಡಂ ; ಒಲೆದಾಡು : ಕಿವಿಗಳೆಳ(ಟ)ಲ್ದು ತೂಱುವೊಡೆ ಮೆಯ್ ಬಿಗಿದಪ್ಪೊಡೆ ದಿಟ್ಟ ನೆತ್ತಿಗೇಱುವೊಡೆ...ಎಚ್ಚುಗೆ ಪಟ್ಟಸೂ[ತ್ರಭಸ್ರ]ಮಂ (ಲೋಕೋಪ. ೯-೩೦೯). ೮. ಚೆಲ್ಲು ; ಸೂಸು : ಮದವೇಱಿ ಪೂಸಗಂಪನೀವ ಮಕರಂದರಸಮಂ ತೂಱಿ . . . ತೀಡಿದುದು ಸುಪ್ರಭಾತಾನಿಲಂ (ಉದ್ಭಟ. ೦೦-೦೨೯) : ಸೌರಭಕ್ಕೆ ಕವ್ವರೆಗೊಂಡು ಬೆಂಬಿಡದೆ ತೂಱುವ ತುಂಬಿಯ ತುಱುಗಲಂಬರದೊಳುಟಾದು ಬಂಬಲ್ಗೊಳ್ವಂತೆಯುಂ (ಅನಂಪು. ೮-೪೮). ೯. ದೂರಕ್ಕೆ ತಳ್ಳು,–ದಬ್ಬು,–ನೂಕು : ಹಾಱಲೂದಿ ಸುಶರ್ಮನವದಿರ ತೂಱಿ ತಿರುಗಿದ ಬಳಿಕ ಕೈ ಮೈ ತೋಱಿದನೆ ಕಲಿಕರ್ಣ (ಕುಮಾರ. ೦೬-೦೩); ಶಿರದ ಗಂಗೆಯ ತೂಱಿ . . . ಹಣೆಗಣ್ಣುರಿಯನೆಬ್ಬಿಸಿ ತನುವನೊಡ್ಡಿದನಭವ ನಡುಕದಲಿ (ತೊರರಾ. ೩-೨-೩) ; ಸಾರಂಗಧರ ಬಂದು ಸುರತಕೆನ್ನಂ ಓಡಿದೊಡಂಬಡಿಸಲೊಲ್ಲದಿರಲು ತೂಱಿ ಮುಂದಲೆವಿಡಿದು...ಧಾರಣಿಗೆ ಕೆಡಹಿ ಮಾನಭಂಗಮಂ ಮಾಡಿ ಕ್ರೂರನೀಗಂ ಪೋದಂ (ಗುರುಚಾ. ೦೩-೪೩): ಏನೈ ಮೈದುನ, ಜೀವಿತೇಶನೆನ್ನೊಂದು ಬಸ್ನಪಮಂ ತೂಱದೆ ನಲ್ಮೆ ಮಿಗೆ ಪೊರೆದನೆ ! (ರಾಮಾಶ್ವ. ೨೭-೨೩). ೧೦. ಓಡಿಹೋಗು ; ಕಂಬಿಕೀಳಂ : (ಶ). ೧೧. ಬೀಳಿಸು ; ಸಿಡಿಸು : ನಾರಾಚಂ ತೂಱುವ ಸರಲ್ (ಶಮದ. ೧೭೦ ಪ್ರಯೋ): ಅಸ್ತ್ರತತಿಗಳು ತೂಱಿದವು ತಲೆಗಳನು (ನಿಭಾಗ. ೬-೦೧-೭): ಜಾನಕಿಯ ಸುತನ ಬಾಣಾವಳಿಯು ಹಾವಳಿಯನೇನೆಂಬೆನಹಿತರಂ...ತೂಱಿದುವು ಕೊಂದುವು (ಜೈಮಿಭಾ. ೨೦-೪೭). **ತೂರು₁** : ೧. ನೂರುಮತದ ಹೊಟ್ಟ ತೂರಿ, ಎಲ್ಲ ತತ್ತ್ವದೆಲ್ಲೆ ಮಿಾರಿ ... ಆಗು ನೀ ಅನಿಕೇತನ! (ಅನಿಕೇ. ೬೦-೮); ಆ ದಿನ ಮಾತ್ರ ಜಳ್ಳನ್ನು ತೂರಿ ಕಾಳು ಆರಿಸಲ್ಪಡುತ್ತದೆ (ತತ್ತ್ವಪ್ರಾ. ೩೩೬) : ತೂರುವಾಗ ಹಾರಿದ್ದೆಲ್ಲ ಮೂರಿ ಪಾಲು (ಗಾದೆ). ೨. ಎರಡು ತಂಡದವರೂ ಕಲ್ಲುಗಳನ್ನು ತೂರಿದರು (ರೂಢಿ). ೬. ಅಖಿಲಲಯ ಕಾರಕನು ಮೆರೆವಹಂಕಾರಗಳ ಮುರಿದು ತೂರುವನು (ವಿಶೀಗೀ. ೬೦-೦೦). ೮. ಟಾರ್ಚಿನ ಬೆಳಕನ್ನು ತೂರಿದ (ಮೂರುದಾ. ೦೨೩). ೯. ಮೂಡು ಕೆಂಪಿನಿಂದ ಕಂಗೊಳಿಸಿತು. ಅರುಣವನ್ನು ತೂರಿ ಕಿರಣವೂ ಹಾದುಬಂತು (ನಾಗಕಾ. ೩೭). ೧೨. (ಹಣದ ವಿಷಯದಲ್ಲಿ) ಪೋಲುಮಾಡಂ ; ಹಿಡಿತವಿಲ್ಲದೆ ಖರ್ಚುಮಾಡಂ : ಓಟು ಗಿಟ್ಟಿಸುವುದಕ್ಕಾಗಿ ಹಣ ತೂರಿದ್ದಾರೆ (ರೂಢಿ). ೧೩. (ಕರಾ) ಭೇದಿಯಾಗು: ಅವನು ಕಾರುತ್ತಾನೆ, ತೂರುತ್ತಾನೆ (ರೂಢಿ). **ತೂಱ್** : 'ತೂರ್ಪನಿ' ಪರಾ.

**ತೂಱಿಕೊಳ್**, **ತೂಱಿಕೊಳ್ಳು** = ತೂಱು₁ ೧ : ಅಂತು ಪೊಕ್ಕು ವಿರೋಧಿಸೈನ್ಯಮಂ ಮಾರಿ ಪೊಕ್ಕಂತೆ ಪೆಣಮಯಂ ಮಾಡಿ ತೂಱಿಕೊಂಡ ಜೋಳದಂತಿರೆ ಪಡಲ್ವಡಿಸಿದಾಗಳ್ (ಪಂಪಭಾ. ೦೦-೯೩ವ) ; ಗಾಳಿ ಬಂದ ಕೈಯಲ್ಲಿ ತೂಱಿಕೊಳ್ಳಿರೋ (ಪುರಂದ. ೨-೨೦ ಪಲ್ಲವಿ). **ತೂರಿಬಿಡು** = ಕೈಬಿಡು ; ಬಿಟ್ಟುಬಿಡಂ ; ಹೋಗಬಿಡಂ : ಆದರ್ಶವನ್ನು ತೂರಿಬಿಡಬೇಕೋ (ರಂಗರೋ. ೦೯೭) : ಜಗತ್ಸಿಂಹನು ಬಾಗಾಲಿ ಹುಡುಗೆಯನ್ನು ಮದುವೆಯಾಗಿ ಎಲ್ಲವನ್ನೂ ತೂರಿಬಿಟ್ಟನು (ಕುರಿಹಿಂ. ೨೭).
[ ದೇ.॥ ತಮಿ. ಮಲ. ತೂಱ್ಟು ; ತುಳು. ತೂಪು ; ತೆಲು. ತೂರು ; ಗೊಂಡಿ. ತೂರಾನಾ ]

**ತೂಱು₂** (ಕ್ರಿ). ೧. ಸಣ್ಣ ಸಣ್ಣ ಹನಿಯಾಗಿ ಬೀಳಂ; ತುಂತುರು ತುಂತುರಾಗಿ ಬೀಳಂ,—ಉದುರಂ: ಖಿನ್ನಗೃಹಿಣೀನಿಶ್ವಾಸದಿಂ ಕೂಡೆ ತೂಱಿದುವು...ಮಾರ್ಬಿಂದುಗಳ್ (ಚಂದ್ರಪ್ರ. ೪-೪೦):ಕಟ್ಟಳ್ಕಱಿಂ ತೂಪಿಱಿದಪಳಿನೆ ತುಱುಂಗಿ ತೂಱಿ ಸಿಡಿವ ಸೀರ್ವನಿ ಕಡುಬೆಡಂಗುವಡೆಯೆ (ರಾಜಶೇ.೨-೮೪). ೨. ಹನಿ ಹನಿಯಾಗಿ ಬೀಳಿಸಂ,-ಉದುರಿಸಂ : ಸಿಂಪಡಿಸಂ: ಸಾಗರಮಂ ಕೂಡೆ ತೆರಳ್ಚಿದಂ ತೊಱಸಿದಂ ತುಳ್ಕಾಡಿದಂ ತೂಱಿದಂ ... ದೇವಕೀನಂದನಂ (ಜಗವಿ. ೭-೧೮) : ಪುಷ್ಪರಸಮಂ ತೆಗೆದೀಂಟಿ ತುಳುಂಕಿ ತೂಱಿ ತೇಂಕಾಡಿ ... ಮಗಮಗಿಸಿತ್ತೊಂದು ಮಧುಕರಂ ಮಲ್ಲಿಗೆಯೊಳ್ (ಗಿರಿಕ. ೨-೬೩); ತೂಱಿ ಕಂಗಳ್ ಕಿಡಿಗಳಂ ಸೂಸೆ ಮೈಬೆಮರ್ ತಾಱಿ ಬೇಗದೊಳೀಶನೆಡೆಗೆ ಬಂದು (ಚಬಪು.೨೦-೨೫): ವಸಂತಮಂಟಪದ ಮಧ್ಯದ ಮಕರಂದರಸದ ತುಂತುಱು ತೂಱುವ ಪಜ್ಜಳಿಪ ಗೊಜ್ಜಗೆಯಾರಲಜಂತ್ರದ ಬೆಳ್ಳುಗಿಲ ಕೆಳಗೆ ... ತಳಿರಲಮಾರ್ಗಸಿನೊಳಱಸಿಮೆರಸಿ ಕುಳ್ಳಿರ್ದು (ರಾಜಶೇ. ೧೦-೩೧೪). [ದೇ.॥ ತಮಿ. ಮಲ. ತೂಱು; ತೆಲು. ತೂರು]

**ತೂಱುಗಲ್ಲು** (ನಾ). ತೂರುತ್ತಿರುವ ಕಲ್ಲು; ಎಸೆಯುತ್ತಿರುವ ಕಲ್ಲು: ತೋಡುಗವಣೆಯ ತೂಱುಗಲ್ಲಿನ ಝೂಡಿ ಝುಮ್ಮಿಡಿಸಿದವು ಗಗನವನು (ತೊರರಾ. ೬-೧೧-೩). [ತೂಱು$_1$ + ಕಲ್ಲು (<ಕಲ್$_3$)]

**ತೂಱುಂಗಿಡಿ** (ನಾ). ಸಿಡಿಯುತ್ತಿರುವ ಕಿಡಿ; ಹಾರುತ್ತಿರುವ ಕಿಡಿ,—ಅಗ್ನಿಕಣ: ತುಡುಕಿದನುಗ್ರಧಾರೆಯ ತೂಱುಗಿಡಿಗಳ ತುಱುಗಿದುರಿಯ ಮಹಾಸ್ತ್ರವನು ಕರ್ಣ (ಕುಮಾ.ದ್ರೋ. ೧೬-೫೦); ಮಂಡಳಿಸಿ ಮುರಿದೇಳ್ವ ವಹ್ನಿಯ . . . ತುಂಡುಗಿಡಿಗಳ ತೂಱುಗಿಡಿಗಳ ಗುಂಡುಗಿಡಿಗಳ ಘಾಡಣೆಯ ಕಿಡಿ ಚಂಡಿಯಾಯ್ತು (ತೊರರಾ. ೫-೮-೮೨); ಮಿಕ್ಕು ಸೂಸುವ ತೂಱುಗಿಡಿಗಳ ಕಣಾಳಿಗಳ . . . ಪೆರ್ಗಿಚ್ಚುಗಳ ಮಂಕೆ ಮೇಲಿಕ್ಕಿದುದು (ಜೈಮಿಭಾ. ೦೩-೧೨). [ತೂಱು$_1$ + ಕಿಡಿ]

**ತೃಟಿ** (ನಾ). ಒಂದು ಕಾಲಮಾನ; ಅತ್ಯಲ್ಪಕಾಲ; ಬಹಳಸೂಕ್ಷ್ಮವಾದ ಕಾಲ: ಕಾಲಮದು ನಿರ್ಗುಣಮಚೇತನದೊಳೊಂದಿ ತೃಟಿ ಲವ ಮುಖ್ಯಕಾಲಂಗಳಿಂದೆ (ಆರಾಧ. ೪-೭): ಒಮ್ಮೆ ಕಣ್ಣೆವೆಯನಿಕ್ಕುವನಿತಱ ನಾಲ್ಕುಭಾಗದೊಳಗೊಂದು ಭಾಗವೇ ತೃಟಿಯೆನಿಸುವುದು (ವಿವೇಕ. ೩೦೯): ಒಂದು ನಿಮಿಷದ ನಾಲ್ಕನೆಯ ಭಾಗವು ತೃಟಿಯೆನಿಸಿಕೊಂಬುದು (ದಶಟೀ. ೬೨-೧). [ ಸಂ. ]

**ತೃಟನೀಲಕರ** (ನಾ). [ಶೈವ] ಹದಿನೈದಂ ಬಿಂಬಾಗಮಂಭೇದಗಳಲ್ಲಿ ಒಂದು: ಚತುರ್ಮುಖತಂತ್ರ ಮಲಯತಂತ್ರ . . . ತೃಟ [ಪಾಠಾಂ. ತುಟ, ಕುಟ]ನೀಲಕರ ತುಲಾವೃತ್ತ ತುಲಾಯೋಗ ಕುಟ್ಟಮತಂತ್ರ ಸರ್ವಶೇಖರ ಮಹಾವಿದ್ಯೆ ಮಹಾಸಾರಮೆಂದು ಬಿಂಬಾಗಮದ ಹದಿನೈದು ಭೇದಂಗಳು (ವಿವೇಕ. ೭೦). [ ? ]

**ತೃಡ್ಬಾಧೆ** (ನಾ). ನೀರಡಿಕೆಯ ತೊಂದರೆ; ಬಾಯಾರಿಕೆಯಿಂದುಂಟಾಗುವ ಕ್ಲೇಶ: ಜಲಜಾತಪ್ರಿಯನೆಂಟಱೊಳ್ ನಿಲೆ ಮನುಷ್ಯಂ ಕಿಚ್ಚಿನಿಂ . . . ಭಾರ್ಗವಂ ನಿಲೆ[ತೃಡ್ಬಾಧೆಯಿನರ್ಕಜಂ] ನಿಲೆ ಮಹಾಕ್ಷುದ್ವ್ಯಾಧಿಯಿಂ ಪೊಂದುಗುಂ (ಜಾತಕ. ೨೩-೨). [ಸಂ. ತೃಡ್ಬಾಧಾ]

**ತೃಣ** (ನಾ). ೧. ಹುಲ್ಲು: "ವಾರಿಯೊಳು ಬಾಣದೊಳು ತೃಣದೊಳು ಶರಾಖ್ಯವಕ್ಕು" (ಮಂಗರಾ. ೦೪೯-೪೫): ಗುಣಮಿದು ದೋಷಮಿದೆಂಬೀ ಗಣಿದಮನೆತ್ತಱಿಗುಮಶ್ರುತ ಪ್ರಕೃತಿಜನಂ ತೃಣಸಸ್ಯಘಾಸವಿಷಯಪ್ರಣಯಂ ಸಮವೃತ್ತಿಯಪ್ಪಪೊಲ್ಲಗಣದೊಳ್ (ಕವಿರಾ.೧-೮); ನೃಪಂಗೆ ಮನದೊಳ್ ತೃಣಪಲ್ಲಘುವಾದುದಾವಗಂ ಸ್ತ್ರೈಣಸುಖಂ (ಕಾದಂಪೂ. ೦೯): ಗೋಸಮುದಾಯಕ್ಕೆ ಬಹುಪ್ರಕಾರತೃಣಮುಂ ಸುಚ್ಛಾಯೆಯುಂ ತಮ್ಮೊಳ್ ಪ್ರಮಿತಂ ಕೇಳಿಸುಖಪ್ರದೇಶಮೆಸೆಗುಂ ವೃಂದಾವನಂ (ಜಗವಿ. ೩-೬೫): ಕಾಲೋಚಿತಕ್ಕಿದಿದಾ ತೃಣಮೇ ಪರ್ವತಮಲ್ಲವೇ(ಸೋಮೇಶ. ೦೭): ತೃಣಮುಂ ತನಮೋದ ಬಱಿಕ್ಕೊಣಗುವುದದಱಿಂದೆ ನರರ ಬಾಳ್ ಲಘುಕಾಲಂ (ಅನಂಪು. ೩-೭೧): ಮರರ ಮಸ್ತುವ ತೃಣಕೆ ಸರಿಯೆಂಬ ಭಾಷೆಯಿದು ರಾಘವಾಂಕಗೆ ಸಂದುದು (ಹರಿಶ್ಚ. ೧-೦೬) : ಕ್ಷಣವೊಂದು ಯುಗವಾಗಿ ತೃಣಕ್ಕಿಂತ ಕಡೆಯಾಗಿ ಎಣಿಸಲಾಱದ ಭವದಿ ನೊಂದೆ ನಾನು (ಪುರಂದ. ೧-೯೩-೨); ತೃಣಕೆ ಹಸುರೆಲ್ಲಿಯದು? ಬೇರಿಸದೆ? ಮಣ್ಣಿಸದೆ? (ಮಂಕುತಿ. ೫೩). ೨. (ಆಲಂ) ಅಲ್ಪವಾದುದು; ಕನಿಷ್ಠವಾದುದು: ಚತುರಾಹವದ ಕೋವಿದ ದೇವದಲ್ಲಣನು ಅಣುವ ಮೊದಲಾದವರ ತೃಣಮೆಂದೆಣಿಸಿ ಬಗೆಯದೆ ಬಂದ ... ಖಳಮಲ್ಲ (ಕೌಶಿರಾ. ೩೭-೦೩).

**ತೃಣಕೆ ಕೊಳ್** = ಕೀಳಾಗಿ ಕಾಣು: ತೃಣಕೆ ಕೊಂಬೆನೆ ಫಲುಗುಣನ ಕಣೆಗಿಣೆಯನು (ಕುಮಾ.ಕ. ೫-೮). [ ಸಂ. ]

**ತೃಣಕಣ** (ನಾ). ಹುಲ್ಲಿನ ಚೂರು: ಮೆಱ್ಣ್ಪರ್ವಳೊಲಿದಳಂ ರಕ್ಷಿಪ್ಪುದೇಂ ಕರಿಗೆ ತೃಣಕಣದ ಭಾರಕಣೆಯಲ್ತೆ (ಶ್ರೀರಾಮಾ. ೮೮-೨೬೭).

[ ತೃಣ + ಕಣ$_3$ ]

**ತೃಣಕಬಳ** (ನಾ). ಹುಲ್ಲಿನ ತುತ್ತು: ತೃಣಕಬಳಂ ಜಗುಳೆ ಬಾಯಿನರಿಯದು ಹರಿಣಗಣಂ (ಶಾಕುಂತ. ೫೪-೯೦). [ತೃಣ+ಕಬಳ$_2$ (=ಕಬಲ)]

**ತೃಣಕಲ್ಪ** (ನಾ). (ಆಲಂ) ಹುಲ್ಲಿಗೆ ಸಮಾನವಾದುದು; ಅಲ್ಪವಾದುದು; ಕೀಳಾದುದು: ರಾವಣನ ರೂಪು ಸೀತಾದೇವಿಗೆ ತೃಣಕಲ್ಪವಾಯ್ತು (ಕಂರಾಮಾ. ೧೪-೦೦೮). [ ಸಂ. ]

**ತೃಣಕುಂಕುಮ** (ನಾ). ಒಂದು ಬಗೆಯ ಸುಗಂಧ ಸಸ್ಯ: "ಲೋಹಿತಂ- ಹರಿಚಂದನ, ತೃಣಕುಂಕುಮ, ಚಿಂಬು" (ಒಷಧಿ. ೦೪೩). [ ಸಂ. ]

**ತೃಣಕುಟಿ** (ನಾ). ಹುಲ್ಲಿನ ಗುಡಿಸಲು; ಜೋಪಡಿ: "ತೃಣಕುಟಿ ಪುಲ್ಗುಡಿ" (ವಸ್ತುಕೋ. ೪೭-೯) : ಜರೆ ಬಿಱುಗಾಳಿ . . . ಮದೀಯ ಕಾಯತೃಣಕುಟಿಯಂ ಜರ್ಝರಿತಂ ಮಾಡದ ಮುನ್ನಮೆ ಪರಮತಪೋಭರಮನಾಂಪ ಬಗೆಯಂ ಬಗೆದೆಂ (ಚಂದ್ರಪ್ರ. ೪-೧೬) ; ತೃಣಕುಟಿಯೊಳ್ ಮಣಿಭವನಂ ತೃಣಕಲ್ಪಿತ ಪುತ್ರಿಕಾಳಿಯೊಳ್ ಯುವತಿಗಣಂ .... ಎನುತ್ತ ವಿಂದರ್ನುದಾತ್ತಂ (ಪಾರ್ಶ್ವಪು. ೭-೭) : ಪೊಕ್ಕಳಾ ತ್ರಿಜಟೆ ತೃಣಕುಟಿಗೆ (ಶ್ರೀರಾಮಾ. ೪೯೯-೩೪೭). [ ತೃಣ + ಕುಟಿ$_2$ ]

**ತೃಣಕುಟೀರ** (ನಾ). = ತೃಣಕುಟಿ: ಎಮ್ಮನೆಡಗೊಳ್ವ ಕಾವಲಿನ ಬಟ್ಟೆಯೆಡೆ ಇರ್ಪುದಾಕೆಯ ಸೆರೆಯ ತೃಣಕುಟೀರಂ (ಶ್ರೀರಾಮಾ. ೪೭೭-೮೪).

[ ತೃಣ + ಕುಟೀರ ]

**ತೃಣಗ್ರಾಹಿ** (ನಾ). ನೀಲಿಬಣ್ಣದ ರತ್ನ; ನೀಲರತ್ನ: ಹಿಮೋಪಳ ಮೊಸರ್ವೊಲಿಂದುಕರಾವಳಿಗೆ ತೃಣಗ್ರಾಹಿ ನೀಳಮಣಿಯೊಸರ್ವುದೇ (ಚಂದ್ರಪ್ರ. ೧-೩೯). 'ತೃಣಮಣಿ' ಪಾಠಾ. [ ಸಂ. ತೃಣಗ್ರಾಹಿನ್ ]

**ತೃಣಚೂರ್ಣ** (ನಾ). ಹುಲ್ಲಿನ ಚೂರು: ಪಿಡಿದ ತೃಣಚೂರ್ಣಮಂ ರಾವಣ ಪ್ರತಿಗೆತ್ತು ಮೊಗಮೆತ್ತದೆಯೆ ಸಂಬೋಧಿಸಿದಳವನಿಜಾತೆ (ಶ್ರೀರಾಮಾ. ೩೩೩-೭೦). [ ತೃಣ + ಚೂರ್ಣ$_2$ ]

**ತೃಣಜ್ಯೋತಿ** (ನಾ). ಒಂದು ಬಗೆಯ ಗಿಡಮೂಲಿಕೆ; ಕಂಗೊಂಗೆ; ಜ್ಯೋತಿಷ್ಮತೀಲತೆ: "ತೃಣಜ್ಯೋತಿಃ— ತೃಣಜ್ಯೋತಿ" (ಒಷಧಿ. ೬೨).

[ಸಂ. ತೃಣಜ್ಯೋತಿಸ್ ]

**ತೃಣದರ್ಭೆ** (ನಾ). ದರ್ಭೆಯಲ್ಲಿ ಒಂದು ಬಗೆ: "ಕುಶಂ . . . ಪವಿತ್ರಂ – ೪ ದರ್ಭೆಹುಲ್ಲಿನ ಹೆಸರುಗಳು. ವಿಶ್ವಾಮಿತ್ರದರ್ಭೆ, ಬ್ರಹ್ಮದರ್ಭೆ, ವಸಿಷ್ಠದರ್ಭೆ, ತೃಣದರ್ಭೆ" (ಸಿದ್ಧಾಂತಿ. ೦೬೨).

[ ತೃಣ + ದರ್ಭೆ ]

**ತೃಣದ್ರುಮ** (ನಾ). ತಾಳೆಜಾತಿಗೆ ಸೇರಿದ ಮರ: "ಹಿಂತಾಲಸಹಿತಾಃ– ಕಿರುತಾಳೀಗಿಡದೊಂದಿಗೆ ಸೇರಿದ ತಾಳ, ನಾರಿಕೇಳ, ಕ್ರಮುಕಗಳು, ಖರ್ಜೂರಃ – ಖರ್ಜೂರಹಣ್ಣಿನ ಗಿಡ, ಕೇತಕಿ – ಕೇದಗಿ ಹುವ್ವಿನ ತಾಳೆ

ಗಿಡವು. ತಾಳೀ. ಶ್ರೀತಾಳವಾಲೇಗಿಡವೂ. ಖಿರ್ಜೂರೀ–ಈಚಲುಮರ–ರ ತೃಣದ್ರುಮ" (ಸಿದ್ಧಾಂಶಿ. ೧೫೩). [ತೃಣ + ದ್ರುಮ]

ತೃಣಧಾನ್ಯ (ನಾ). ಸಜ್ಜೆ, ನವಣೆ ಮೊದಲಾದ ಬಿತ್ತನೆಯಿಲ್ಲದೆ ತಾನಾಗಿ ಬೆಳೆಯುವ ಧಾನ್ಯ; ಕಾಡುನವಣೆ: "ತೃಣಧಾನ್ಯಂ, ನೀವಾರಃ – ಈ ೨ ಹೊಡೆಹುಲ್" (ಹಲಾಯು. ೯೬-೪೩೦); ತೃಣಧಾನ್ಯದ ಆರನೆಯ ಭಾಗವನ್ನು ನಮಗೆ ಕೊಡಬೇಕು (ಶಾಕುಂತ. ೨೬-೧೧). [ತೃಣ + ಧಾನ್ಯ]

ತೃಣಧ್ವಜ (ನಾ). ೧. ಬಿದಿರು; ವೇಣು: "ವಂಶಃ, ತ್ವಕ್ಸಾರಃ, ಕರ್ಮಾರಃ, ತ್ವಚಿಸಾರಃ, ತೃಣಧ್ವಜಃ ...ತೇಜನಃ– ೧೦ ಬಿದುರು ಹೆಸರು" (ಸಿದ್ಧಾಂಶಿ. ೧೩೦). ೨. ತಾಳೆಮರ. [ಸಂ.]

ತೃಣಪುರುಷ (ನಾ). ೧. ಹೊಲ, ಹೊಸ ಕಟ್ಟಡ ಮುಂತಾದ ಕಡೆಗಳಲ್ಲಿ ನಿಲ್ಲಿಸುವ ಹುಲ್ಲು ತುಂಬಿದ ಬೊಂಬೆ; ಬೆರ್ಚು; ಬೆದರುಗೊಂಬೆ: "ಬೆರ್ಚು–ಸಂತ್ರಾಸೇ(ಭಯಪಡು),ತೃಣಪುರುಷೇ ಚ (ದೃಷ್ಟಿಪರಿಹಾರಾರ್ಥವಾಗಿ ಮಾಡಿರುವ ಬೊಂಬೆ)" (ಶಮಧಾ). ೨. ತೃಣಪ್ರಾಯನಾದ ಮನುಷ್ಯ; ಅಲ್ಪವ್ಯಕ್ತಿ: ತೃಣಪುರುಷನಾಗಿ ಕಲ್ಪಿಸಿ ರಣರಭಸಮನಪ್ಪುಕೆಯ್ಯುವಂ ಬಗೆಯದೆ ರಾವಣನುಮಂ...ರಘುರಾಮಂ (ಪಂರಾಮಾ. ೨೧-೬). [ತೃಣ + ಪುರುಷ]

ತೃಣಪೂರ (ನಾ). ಹುಲ್ಲಿನ ಕಂತೆ,— ಹೊರೆ: "ತೃಣಪೂರ ಪುಷ್ಪಧಾರಣಗಳೊಳು ಸೂಡು" (ಶಬ್ದಮಂ. ೯೩). [ತೃಣ + ಪೂರ$_1$]

ತೃಣಪ್ರತಿ (ನಾ). ಹುಲ್ಲುಕಡ್ಡಿಗೆ ಸಮವಾದುದು; ಅಲ್ಪವಾದುದು: ಮನುಜದನುಜಾಮರಮಹೋರಗಜನ ತೃಣಪ್ರತಿಯಾಯ್ತು (ತೊರರಾ. ೧-೮-೩೦). [ತೃಣ + ಪ್ರತಿ]

ತೃಣಪ್ರಾಯ (ಗು). ಹುಲ್ಲಿಗೆ ಸಮಾನವಾದ; ನಿಕೃಷ್ಟ; ನಿಷ್ಪ್ರಯೋಜಕ: "ತೃಣಪ್ರಾಯ_ಹುಲ್ಲುಕಡ್ಡಿಯ ಸಮಾನ" (ಗಂಗಾಮ. ೧೫೬); ರಾವಣನನ್ನು ರಾಮನು ತೃಣಪ್ರಾಯವಾಗಿ ಕಂಡನು (ರೂಢಿ). [ಸಂ.]

ತೃಣಮಣಿ (ನಾ). =ತೃಣಗ್ರಾಹಿ: ಕಾರೂಬಾಮಣಿ; ಶಿಲಾರಾಳ; ತೃಣಮಣಿ; ತೈಲಸ್ಫಟಿಕ; ಅಂಬರ್ (Amber. ಇಂಗ್ಲಿ). [ಸಂ.]

ತೃಣಮನುಜ (ನಾ). ಅಲ್ಪಮನುಷ್ಯ; ಹುಲುಮಾನವ; ಕೆಲಸಕ್ಕೆ ಬಾರದವನು: ತೃಣಮನುಜರು ಕೈಮುಗಿದು ವಂದನೆ ಮಾಡೆ ಅನುಮಾನವಿಲ್ಲದಲೆ ಪಾಟಿಸುವ ಕರ್ಣ (ತೀರ್ಥಮ. ೧೬೧). [ತೃಣ + ಮನುಜ]

ತೃಣಮಾತ್ರ (ನಾ). ಅಲ್ಪವಾದುದು; ಸ್ವಲ್ಪವಾದುದು: ನಿಜವಾದ ಸಂನ್ಯಾಸಿಗಳು ಐಶ್ವರ್ಯವನ್ನು ತೃಣಮಾತ್ರದಂತೆ ಕಾಣುತ್ತಾರೆ (ರೂಢಿ).

[ಸಂ. ತೃಣಮಾತ್ರಂ]

ತೃಣರಾಜ (ನಾ). ೧. ತಾಳೆಮರ; ತಾಳವೃಕ್ಷ: "ತೃಣರಾಜಃ, ತಲಃ ತಾಲಃ – ಈ ೩ ತಾಟಿ" (ಹಲಾಯು. ೩೨-೩೯). ೨. ತೆಂಗಿನ ಮರ. ೩. ಬಿದಿರು. ೪. ಕಬ್ಬು. [ಸಂ.]

ತೃಣರಾಶಿ (ನಾ). ಹುಲ್ಲಿನ ಹೊರೆ,—ಮೆದೆ: "ತೃಣರಾಶಿ ಹೆಡ್ಡತ್ವಗಳೊಳೆಸೆಗು ಮೆದೆ" (ಶಬ್ದಮಂ. ೧೦೦). [ತೃಣ + ರಾಶಿ]

ತೃಣವಿಡಿ (ಕ್ರಿ). ಹುಲ್ಲನ್ನು ಹಿಡಿ: ಸುಬುದ್ಧಿಯರುಹಿದ ಬಸವ ಕೆಡಬ್ಯಾಡೆಂದು ತೃಣವಿಡಿದು (ಬಜ್ಜಪು. ೬೧-೫೨).

ತೃಣವಿಡಿದು ಹೇಳು=ನಿರ್ಧಾರವಾಗಿ ಹೇಳು; ಸ್ಪಷ್ಟವಾಗಿ ಹೇಳು; ಕಡ್ಡಿಮುರಿದು ಹೇಳು. [ತೃಣ + ಪಿಡಿ$_1$]

ತೃಣಶಯ್ಯೆ (ನಾ). ಹುಲ್ಲಿನ ಹಾಸಿಗೆ: ರಘುಜರ್ ನದೀತಟದ ತೃಣಶಯ್ಯೆಯೊಳ್ ಮಲಗಿ (ಶ್ರೀರಾಮಾ. ೩೧-೯೨). [ತೃಣ + ಶಯ್ಯೆ]

ತೃಣಶಿಖರ (ನಾ). ಹುಲ್ಲಿನ ತುದಿ: ತೃಣಶಿಖರಾಧ್ಯುಷಿತಾಂಭಃಕಣಸಂಚಳಮಮರಚಾಪಚಪಳಂ ವಿದ್ಯುತ್‌ಕ್ಷಣಿಕಂ . . . ಯೌವನರೂಪವಿಭವಭೋಗಾಭೋಗಂ (ಆದಿಪು. ೪-೭೫). [ತೃಣ + ಶಿಖರ]

ತೃಣಶೂನ್ಯ (ನಾ). ಒಂದು ಬಗೆಯ ಮಲ್ಲಿಗೆ: "ತೃಣಶೂನ್ಯಾ, ಮಲ್ಲಿಕಾ. ಭೂಪದೀ, ಶೀತಭೀರುಃ—೪ ಮಲ್ಲಿಗೇಗಿಡದ ಹೆಸರುಗಳು" (ಸಿದ್ಧಾಂಶಿ. ೧೧೨). [ಸಂ.]

ತೃಣಾಗ್ರ (ನಾ). ಹುಲ್ಲಿನ ತುದಿ: ತೃಣಾಗ್ರಗತವಾಃಕಣಿಕಾಗಣದಂತೆ ಸಂದ ಜೀವನಂ (ಪಂಚತಂ. ೫೯-೧೫). [ತೃಣ + ಅಗ್ರ$_1$]

ತೃಣಾಸನ (ನಾ). ಹುಲ್ಲಿನ ಪೀಠ; ಹುಲ್ಲಿನ ಚಾಪೆ: ದಾರುಕಾಸನ ಭಾಗ್ಯ ಹಾನಿ ಏರಲು ತೃಣಾಸನವಶೋಕವು (ಗಗತಾ. ೪-೨೨). [ತೃಣ + ಆಸನ]

ತೃಣೀಕರಿಸು (ಕ್ರಿ). ಹುಲ್ಲಿಗೆ ಸಮವೆಂದು ಭಾವಿಸು; ಅಲ್ಪವಾಗಿ ಎಣಿಸು; ಕ್ಷುಲ್ಲಕವಾಗಿ ಕಾಣು; ತುಚ್ಛೀಕರಿಸು: ಆ ಮಾಯಾಜನಿತ ವಸ್ತುಗಳಲ್ಲಿ ಬೇಕು ಬೇಡೆಂಬುದನಳಿದು ನಿಂದ ವಿಮಲವಿರಕ್ತಿಯಿಂದವು ತೃಣೀಕೃತ ಜಗತ್ರಯಂ ತೃಣೀಕರಿಸಲ್ಪಟ್ಟ ಮೂರು ಲೋಕವುಳ್ಳಂಥಾ ಸದ್ಗುರುಂ ಶ್ರೀ ಗುರುವನು (ಶಿವಪ್ರ. ೪೦-೧೧): ನೂರಾರು ಸಾವಿರಾರು ಮಂದಿಯ ಸಂಕಟವನ್ನು ತೃಣೀಕರಿಸಿ ಒಬ್ಬಿಬ್ಬರ ಸಂಕಟದ ಪರಿಹಾರಕ್ಕಾಗಿ ಅವನು ಸಮಾಜದ ಯಾವ ಘಾತಕರ ವಿರುದ್ಧವಾಗಿ ಸಿಡಿದಿದ್ದನೊ ಅಂಥವರನ್ನೆ ಈಗ ಆಶ್ರಯಿಸಬೇಕಾಯಿತು (ಪುನರು. ೩೩೫).

[ತೃಣೀಕರಣ$_0$ + – ಇಸು$_3$]

ತೃಣೀಕೃತ (ಗು). ಹುಲ್ಲಿಗೆ ಸಮಾನವಾಗಿ ಎಣಿಕೆಯಾದ: ಅಭಿನವಯೌವನಾವಷ್ಟಂಭಪ್ರಾಗಲ್ಭ್ಯದೃಷ್ಟಿಪಾತ ತೃಣೀಕೃತತ್ರಿಭುವನಸುಮಪ್ಪ ನೂರ್ವರುಂ ರಾಜಕುಮಾರರುಂ (ಆದಿಪು. ೩-೯೦ವ); ಲೋಕಸನ್ನುತಗುಣತೃಣೀಕೃತಲೋಕನವಿರಳಶೀಲ...ಸಂಸಾರಮಾಯಾರಿ (ಬಸಪು. ೨೯-೨). [ಸಂ.]

ತೃಣ್ಯೆ (ನಾ).=ತೃಣರಾಶಿ: "ತೃಣ್ಯೆ=ಹುಲ್ಲಿನ ಸಮುದಾಯ" (ಗಂಗಾಮ. ೧೫೭). [ಸಂ. ತೃಣ್ಯಾ]

ತೃತಿಯ (ಗು). ೧. ಮೂರನೆಯ. (ನಾ). ೨. ಮೂರನೆಯದು: ಪ್ರಥಮದಲಿ ಹುಲಿಯಂತೆ ದ್ವಿತಿಯದಲಿ ಇಲಿಯಂತೆ ತೃತಿಯದಲಿ ತಾನು ಕಪಿಯಂತೆ ಕವಿಗಳಲಿ ಮತಿವಂತರಬುಹಿ (ಸರ್ವಜ್ಞ. ೨೧೦೦).

[<ಸಂ. ತೃತೀಯ]

ತೃತೀಯ (ಗು). ೧. ಮೂರನೆಯ: ಸಮವಸರಣಮಂ ಪೊಕ್ಕು ಪ್ರಥಮ ದ್ವಿತೀಯ ತೃತೀಯ ಪೀಠಂಗಳುಮನನುಕ್ರಮದಿನರ್ಚಿಸಿ (ಶಾಂತಿಪು. ೯-೩೯ವ). (ನಾ). ೨. ತಾಂಬೂಲಕ್ಕೆ ಬಳಸುವ ವಸ್ತುಗಳಲ್ಲಿ ಮೂರನೆಯ ಘಟಕ; ಸುಣ್ಣ: (ಕ). [ಸಂ.]

ತೃತೀಯಕಲ್ಯಾಣ (ನಾ). [ಜೈನ] ಪಂಚಕಲ್ಯಾಣಗಳಲ್ಲಿ ಮೂರನೆಯದು; ಸಂಸಾರದಿಂದ ಮುಕ್ತನಾದ ತೀರ್ಥಂಕರನಿಗೆ ಸಲ್ಲುವ ಪರಿನಿಷ್ಕ್ರಮಣಕಲ್ಯಾಣ: ಅನ್ನೆಗಂ ಸೌಧರ್ಮೇಂದ್ರಸಮೇತಂ ಚತುರ್ವಿಧವಿಬುಧನಿಕಾಯಂ ತೃತೀಯಕಲ್ಯಾಣಕರಣೋತ್ಸುಕತ್ವದಿಂ ಬಂದು ಭಗವತ್ಪಾದಪಯೋರುಹಕ್ಕೆಜಗೆ (ಶಾಂತಿಪು. ೮-೧೧೯ವ). [ತೃತೀಯ + ಕಲ್ಯಾಣ]

ತೃತೀಯತೆ (ನಾ). [ವ್ಯಾಕ] ವರ್ಗದ ಮೂರನೆಯ ಅಕ್ಷರ: ಪೂರ್ವೋಕ್ತ ಸೂತ್ರದಿಂ ಪರದ ಕತಪಕ್ಕೆ ತೃತೀಯತೆಯುಕ್ಕುಂ; ಪೂರ್ವಪದಾಂತ್ಯಕ್ಕೆ ದೀರ್ಘಮುಮುತ್ತರಪದದಾದಿಗೆ ಲೋಪಮುಮುಕ್ಕುಂ (ಶಮದ. ೨೯೩ ವೃತ್ತಿ). [ಸಂ. ತೃತೀಯತಾ]

ತೃತೀಯತ್ವ (ನಾ).=ತೃತೀಯತೆ: ತಕಾರದ ತೃತೀಯತ್ವಕ್ಕೆ-ಕಣ್ದೆಱವು: ಮೇಲ್ದುಡುಗೆ (ಶಮದ. ೬೫ ಪ್ರಯೋ). [ಸಂ.]

ತೃತೀಯದ್ವೀಪ (ನಾ). [ಜೈನ] ಜೈನಗ್ರಂಥಗಳಲ್ಲಿ ಹೇಳಿರುವ ಮುಖ್ಯವಾದ ಎಂಟುದ್ವೀಪಗಳಾದ ಜಂಬೂದ್ವೀಪ, ಧಾತಕೀದ್ವೀಪ, ಪುಷ್ಕರವರದ್ವೀಪ, ವಾರುಣೀವರ, ಕ್ಷೀರವರ, ಘೃತವರ, [illegible] ವರ ಮತ್ತು ನಂದೀಶ್ವರ ಎಂಬುವುಗಳಲ್ಲಿ ಮೂರನೆಯ[illegible] ಪುಷ್ಕರದ್ವೀಪ: P ಪುಷ್ಕರವರಸಮುದ್ರದಿಂದ [illegible]

೧೬,೦೦,೦೦೦ ಯೋಜನ ವಿಸ್ತಾರವಾದ ಈ ಪುಷ್ಕರದ್ವೀಪದ ಮಧ್ಯದಲ್ಲಿ ಕುಂಡಲಾಕಾರವಾದ ಮಾನುಷೋತ್ತರವೆಂಬ ಪರ್ವತ ವಿದೆ. ಇದರಿಂದಾಗಿ ಈ ದ್ವೀಪವು ಇಬ್ಭಾಗವಾಗಿದೆ. ಇದರ ಒಳ ಭಾಗದಲ್ಲಿ ಮನುಷ್ಯರು ವಾಸಮಾಡುತ್ತಾರೆ. ಹೊರಭಾಗವು ಮನುಷ್ಯವಾಸಕ್ಕೆ ಯೋಗ್ಯವಾಗಿಲ್ಲ: ತೃತೀಯದ್ವೀಪದಂತೆ ನಿವಿಷ್ಟೇಷ್ವಾ [ಷ್ವಾ] ಕಾರಮಾನುಷೋತ್ಕ [ತ್ತ] ರಮುಂ . . . ಅಷ್ಟ ಸಂಗ್ರಾಮ ಭೂಮಿಯುಂ ಪೊಱಮಟ್ಟು (ಚಂದ್ರಪು. ೧೦-೧೦೫ವ). 'ಜಂಬೂದ್ವೀಪ' ಪರಾ. [ತೃತೀಯ + ದ್ವೀಪ]

**ತೃತೀಯಪೀಠ** (ನಾ). ೧. ಮೂರನೆಯ ಆಸನ. ೨. [ಜೈನ] ಜಿನನು ಸಮವಸರಣದಲ್ಲಿ ಮಂಡಿಸುವ ಮೂರು ಪೀಠಗಳನ್ನೊಳಗೊಂಡ ಆಸನದಲ್ಲಿ ಮೂರನೆಯದು,-ಮೇಲಿನದು: ಸಮವಸರಣಮಂ ಪೊಕ್ಕು ಪ್ರಥಮ ದ್ವಿತೀಯ ತೃತೀಯಪೀಠಂಗಳುಮನನುಕ್ರಮದಿನರ್ಚಿಸಿ (ಶಾಂತಿಪು. ೯-೬೯ ವ). 'ದ್ವಿತೀಯಪೀಠ' ಪರಾ. [ತೃತೀಯ+ಪೀಠ]

**ತೃತೀಯವೃತ್ತಿ** (ನಾ). [ವ್ಯಾಕ] ವರ್ಗದ ಮೂರನೆಯ ಅಕ್ಷರ ಆದೇಶವಾಗಿ ಬರುವುದು: ಒಂದೆರಡರ್ಕೆ ಱಕಾರಕ್ಕಂದಾದೇಶ ರೇಫೆಗು ಡತ್ವಕ್ಕಂ ಬಂದಾದೇಶ ಱಟಕ್ಕಂ ಸಂಧಿಸಲು ತೃತೀಯವೃತ್ತಿ ಕತಪಕ್ಕೆಂದುಂ (ಶಮದ. ೬೬). [ತೃತೀಯ + ವೃತ್ತಿ$_{2}$]

**ತೃತೀಯಾಕೃತ** (ನಾ). ಮೂರು ಸಾರಿ ಉತ್ತ ಭೂಮಿ; ಮೂರು ಉಕ್ಕೆ ಆದುದು: "ತ್ರಿಗುಣಾಕೃತಂ, ತೃತೀಯಾಕೃತಂ, ತ್ರಿಹಲ್ಯಂ, ತ್ರಿಸೀತ್ಯಂ –೪ ಮೂರುಸಾಲು ಉತ್ತ ಭೂಮಿ" (ಸಿದ್ಧಾಂತಿ. ೨೩೭). [ಸಂ.]

**ತೃತೀಯಾಕ್ಷರ** (ನಾ). [ವ್ಯಾಕ] ವರ್ಗದ ಮೂರನೆಯ ಅಕ್ಷರ; ಗ, ಜ, ಡ, ದ, ಬ ಎಂಬ ಅಕ್ಷರಗಳು: ಪದವಿಧಿಯಿಂ ನೆರೆದುತ್ತರ ಪದದಾದಿಯೊಳೊಂದಿ ನಿಂದ ವರ್ಗಪ್ರಥಮಕ್ಕದಱ ತೃತೀಯಾಕ್ಷರಮಪ್ಪ ದದಕ್ಕುಂ ಬಹುಳಮುಱಿಯೆ ಚಟವರ್ಗಂಗಳ್ (ಶಾಬ್ದಪ. ೫೪); ಇರೆ ವರ್ಗಪ್ರಥಮಂಗಳ್ ಪರದೊಳ್ ಚಟವರ್ಗಮುಱಿಯೆ ತಮ್ಮ ತೃತೀಯಾ ಕ್ಷರಮಕ್ಕುಂ ಪದವಿಧಿಯೊಳ್ ಪರಿಹರಿಸಲ್ಬಾರದಲ್ಲಿ ಬಹುಳಸ್ಥಿತಿಯುಂ (ಶಮದ. ೬೫). [ತೃತೀಯ + ಅಕ್ಷರ]

**ತೃತೀಯಾಪ್ರಕೃತಿ** (ನಾ). ಷಂಡ; ನಪುಂಸಕ: "ತೃತೀಯಾಪ್ರಕೃತಿಃ, ಷಂಡಃ, ಕ್ಲೀಬಃ, ಷಂಡೋ, ನಪುಂಸಕಂ – ೫ ನಪುಂಸಕನ ಪೆಸರುಗಳು" (ಸಿದ್ಧಾಂತಿ. ೦೫೫). [ಸಂ.]

**ತೃತೀಯಾವಿಭಕ್ತಿ** (ನಾ). [ವ್ಯಾಕ] ನಾಮವಿಭಕ್ತಿಗಳಲ್ಲಿ ಮೂರನೆ ಯದು; P ಇದು ಕರಣವನ್ನು ಕಾರಣವನ್ನು ತಿಳಿಸುವ ಶಬ್ದಗಳ ಮೇಲೆಯೂ ಕರ್ಮಣಿಪ್ರಯೋಗದಲ್ಲಿ ಕರ್ತೃಪದದ ಮೇಲೆಯೂ ಬರುವುದು: ತೃತೀಯೆಯುಂ – ತೃತೀಯಾವಿಭಕ್ತಿಯ ರೂಪಂ (ಶಮದ. ೦೦೬ ಟೀಕೆ). [ಸಂ.]

**ತೃತೀಯೆ** (ನಾ). ೧. ಮೂರನೆಯವಳು: ಈತಂ ನಿಸರ್ಗಭಿನ್ನನಿ ಕೇತನಮಂ ಶ್ರೀಸರಸ್ವತೀದ್ವಯಮುಮಂ ತಂದೋತೊಂದೆ ಮೆಯ್ಯೊಳಿರಿಸಿದನೇ ತಡವವರೊಳ್ ತೃತೀಯೆಯಾಗಿರು ನಿರುತಂ (ಶಾಂತಿಪು. ೫-೦೧೫). ೨. ಪಕ್ಷದ ಮೂರನೆಯ ದಿನ; ತದಿಗೆ. ೩. [ವ್ಯಾಕ] ತೃತೀಯಾವಿಭಕ್ತಿ: ಪತ್ರಿಸುವರ್ ಮೂದೆಱನಂ ವತ್ತ ತೃತೀಯೆಯನೆಕಾರಮಂ ಪರಿಹರಿಪರ್ (ಶಮದ. ೧೧೬). [ಸಂ. ತೃತೀಯಾ]

**ತೃಪತಿ** 'ತೃಪ್ರತಿ' ನೋ.

**ತೃಪತಿಪಡು** (ಕ್ರಿ). = ತೃಪ್ತಿಗೊಳ್ಳು: ದೇವತಾದಿಗಳೆಲ್ಲ . . . ನಿಮ್ಮ ಪದನುತಿಯಿಂ ಕೃತಾರ್ಥರಾಗಿ ತೃಪತಿಪಟ್ಟರ್ಪರ್ (ವೀರಶೈಪು. ೧-೭-೧೩). [ತೃಪತಿ (< ತೃಪ್ರತಿ) + ಪಡು$_{1}$]

**ತೃಪುತ** (ನಾ). ತೃಪ್ತನಾದವನು; ಸಂತುಷ್ಟ: ನಿಜಸುಖತೃಪುತನಿರ್ದನು ಜಡ ಬಧಿರ ಮೂಕಾಂಧರಂದದಲಿ (ನಿಘಾಗ. ೫-೬-೪). [< ಸಂ. ತೃಪ್ತ]

**ತೃಪುತಿ, ತೃಪತಿ** (ನಾ). ತೃಪ್ತಿ; ಸಂತುಷ್ಟಿ: ಅಪರಿಮಿತ ಸಕ್ಕರೆಯ ಮೇಲೋಗರಂಗಳು ತೃಪುತಿಯನುಳಿದು ತಣಿಯದಾರೋಗಿಸುತ್ತಿರ್ದ ಕಪಿಲಸಿದ್ಧೇಂದ್ರಮಲ್ಲಯ್ಯಲಿಂಗಂ ಜಂಗಮದ ಮುಖದೊಳ್ (ಸಿದ್ಧರಾ. ೮-೮೪). **ತೃಪತಿ**: ನಿಪುಣಮತಿ ಮಾಡುವುದು ಸುರಚಿತ್ತತೃಪತಿಯನು ಸುಶ್ರಾದ್ಧಮುಖದಲಿ (ನಿಘಾಗ. ೭-೧೪-೩೪). [< ಸಂ. ತೃಪ್ತಿ]

**ತೃಪ್ತ** (ಗು). ೧. ತೃಪ್ತಿಹೊಂದಿದ; ತಣಿದ; ಸಂತೃಪ್ತಿಗೊಂಡ. (ನಾ). ೨. ಸಂತೃಪ್ತಿಹೊಂದಿದವನು; ಸಂತುಷ್ಟನಾದವನು: ಷೋಡಶತೀರ್ಥಕರಪರಮೇಶ್ವರಂ ಪರಮಪದಪ್ರಾಪ್ತನುಮನಂತ ಸುಖಾಮೃತತೃಪ್ತನುಮಾಗಿರೆ (ಶಾಂತಿಪು. ೦೨-೫೦ ವ): ತೃಪ್ತಂಗೆ ಕ್ಷುಧ್ಭಯವೆ (ಗಗಕಾ. ೦೬-೪೪); ತೃಪ್ತನಿಗಾದರೂ ಮೃತ್ಯು ತಪ್ಪದು (ಗಾದ). [ಸಂ.]

**ತೃಪ್ತಿ** (ನಾ). ತಣಿವು; ಸಮಾಧಾನ; ತುಷ್ಟಿ: "ಪರ್ಯಾಪ್ತಂ, ಉಪ ಸಂಪನ್ನಂ, ತೃಪ್ತಿಃ, ಸೌಹಿತ್ಯಂ–ಈ ೪ ತ(ಣಿ)ಣುವು" (ಹಲಾಯು. ೫೪-೧೭೦); ನಿಮ್ಮ ಶರಣಂಗೆ ಆಪ್ಯಾಯನವಾದಡೆ ಎನಗೆ ತೃಪ್ತಿಯಾ ಯಿತ್ತು (ಬಸವ. ೮೨೭): ಘನತೃಷ್ಣಾತುರತೆ ಬೀಳುಕೊಂಡುದು ತೃಪ್ತಿ ನನಗಾಯ್ತು (ಕುಮಾವ್ಯಾಭೀ. ೦೦-೨೮); ಕೃಷ್ಣದೇವಂಗೆ ತಂದು ದ್ರೌಪದಿ ಇತ್ತ ಶಾಖವ ತಿಂದ ಮಾತ್ರದಲಖಿಳ ಮುನಿಜನರೊಂದೆ ತೃಪ್ತಿಯನನ್ಯರಾದರೆ ತೃಪ್ತಿಯೆಂತಹುದು (ಗಗಕಾ. ೧೩-೪೮); ತೃಪ್ತಿಯ ತಣಿದು ತೇಗಿದುದೆನಲ್ಕೆ ನಲಿದುದು ಜನಂ (ಶ್ರೀರಾಮಾ. ೧೧-೨೮೨). [ಸಂ.]

**ತೃಪ್ತಿಕರ** (ಗು). ೧. ಸಮಾಧಾನ ಉಂಟುಮಾಡುವ; ತೃಪ್ತಿಗೊಳಿಸುವ. (ನಾ). ೨. ಸಮಾಧಾನ ಉಂಟುಮಾಡುವಂಥದು; ತೃಪ್ತಿಗೊಳಿಸು ವಂಥದು: ಅವರ ಸದ್ಯದ ವರ್ತನೆ ತೃಪ್ತಿಕರವೆಂದೇ ಹೇಳಬಹುದು (ಪುನರು. ೩೨೦). [ಸಂ.]

**ತೃಪ್ತಿಗೊಳಿಸು** (ಕ್ರಿ). ಸಂತುಷ್ಟಿಯನ್ನುಂಟುಮಾಡು; ಮೋದ ಗೊಳಿಸು; ತಣಿಸು: ಮೇಘಗಳು ಭೂಮಿಯನ್ನು ತೃಪ್ತಿಗೊಳಿಸುತ್ತವೆ (ಮುಕ್ಕಾರ. ೨೯೩). [ತೃಪ್ತಿ + ಕೊಳ್$_{1}$ + –ಇಸು$_{3}$]

**ತೃಪ್ತಿಗೊಳ್ಳು** (ಕ್ರಿ). ತಣಿ; ಸಮಾಧಾನ ಹೊಂದು: ಅವಳು ಆ ವೃತ್ತಿ ಯಿಂದ ತೃಪ್ತಿಗೊಂಡಿದ್ದಂತೆ ಮಾತ್ರವಲ್ಲ, ಹೆಮ್ಮೆಪಡುತ್ತಿದ್ದಂತೆ ಕಂಡಳು (ಪುನರು. ೧೯೭). [ತೃಪ್ತಿ + ಕೊಳ್ಳು$_{1}$ (< ಕೊಳ್$_{1}$)]

**ತೃಪ್ತಿಪಡಿಸು** 'ತೃಪ್ತಿವಡಿಸು' ನೋ.

**ತೃಪ್ತಿಪಡು** 'ತೃಪ್ತಿವಡು' ನೋ.

**ತೃಪ್ತಿಲಿಂಗ** (ನಾ). [ವೀಶೈ] ಲಿಂಗತ್ರಯಂಗಳಲ್ಲಿ ಒಂದು; ಭಾವಲಿಂಗ: ಬಳಿಕ ಇಷ್ಟಲಿಂಗ ಪ್ರಾಣಲಿಂಗ ತೃಪ್ತಿಲಿಂಗವೆಂದು ಶಿವಲಿಂಗತ್ರಯ ಭೇದಂಗಳವುಗಳಲ್ಲಿ . . . ಸಕಲಾವಸ್ಥೆಗಳಲ್ಲಿಯೂ ಶಿವಲಿಂಗದೊಡನನನ್ಯ ಭಾವನೆಯೇ ತೃಪ್ತಿಲಿಂಗಮಕ್ಕುಂ (ವಿವೇಕ. ೧೨೩). [ಸಂ.]

**ತೃಪ್ತಿವಡಿಸು, ತೃಪ್ತಿಪಡಿಸು** (ಕ್ರಿ). ತಣಿಸು; ಸಂತುಷ್ಟಿಗೊಳಿಸು: ಸಕ್ರಿಯಾಸಮ್ಮೇಳನದೊಳತಿತೃಪ್ತಿವಡಿಸಿ ದಯಾಳುವಂ ಬಿಜಯಂಗೆಯಿಸಿ ತಂದೊಳಗೆ ಕುಳ್ಳಿರಿಸಿ (ಬಸವು. ೫೨-೪); ಸುಡಿಸಿದ ಕೆಲರ ನೋಡಿದ ವಿನಯದಿ ತೃಪ್ತಿವಡಿಸಿದ ವೆಣ್ಮನೋವ್ಯಥೆಯ ಬಿಡಿಸಿದ ಬೆಮರ್ವನಿ ಗಳನೆಲ್ಲರಿಗೋತು ಕೊಡಿಸಿದ ಸಕಲಸನ್ನಹವ (ಮೋಹತ. ೦೬-೧೩), ಮಱೆಯ ಮಾತೇಕೀ ಕುವರನ ಸವಿಕೂಟಕೆಱಗಿದ ಮನದ ದೀವನವ ನೆಱೆಯಾತನ ಸುರತದೆ ತೃಪ್ತಿವಡಿಸು (ಕಂಸವಿ. ೯-೧೨೭). **ತೃಪ್ತಿಪಡಿಸು**: ಜನರ ಬಯಕೆಯನ್ನು ತೃಪ್ತಿಪಡಿಸುವ ಅಥವಾ ನಿರಾಕರಿಸುವ ಅಧಿಕಾರ ಅವಳದು (ಪುನರು. ೧೯೮). [ತೃಪ್ತಿವಡು + – ಇಸು$_{3}$]

**ತೃಪ್ತಿವಡು, ತೃಪ್ತಿಪಡು** (ಕ್ರಿ). ತಣಿ; ತುಷ್ಟಿಹೊಂದು: "ಪೂರಯತಿ= ತೃಪ್ತಿವಟ್ಟಪುದು" (ಕಾಶಕ. ೨೮೦). 'ತೃಪ್ತಿವಡಿಸು' ಪರಾ. **ತೃಪ್ತಿಪಡು.** 'ತೃಪ್ತಿಪಡಿಸು' ಪರಾ. [ತೃಪ್ತಿ + ಪಡು$_1$]

**ತೃಷಾಪರ** (ಗು). ೧. ಬಾಯಾರಿದ; ದಾಹದಿಂದ ಪೀಡಿತವಾದ; ನೀರಡಸಿದ. (ನಾ). ೨. ಬಾಯಾರಿದವನು; ನೀರಡಸಿದವನು: ಬಂದೀಯಂಧಕೂಪದೊಳ್ ಬಿಟ್ಟು ತೃಷಾಪರನೆ ರಸವಂ ನೀರೆ ಗೆತ್ತು ಮೊಗೆಯಲ್ (ನೇಮಿಪು. ೪-೯೦ ವ). [ಸಂ.]

**ತೃಷಾರ್ತ** (ಗು). ೧. ಬಾಯಾರಿಕೆಯಿಂದ ಪೀಡೆಹೊಂದಿದ. (ನಾ). ೨. ನೀರಡಸಿದುದು: ಚಂಚು ಬೇಯೆ ತಲೆ ಬಿದಿರ್ದಸುಪರೆಸಾದುದೊ ತೃಷಾರ್ತನೊಂದು ಮಯೂರಂ (ಚಂದ್ರಪ. ೯-೭೩). ೩. ಬಲವಾದ ಅಪೇಕ್ಷೆಯಿಂದ ತಳಮಳಗೊಳ್ಳುವುದು: ನನ್ನ ಮನಸ್ಸೀ ತೃಷಾರ್ತವಾಗಿತ್ತು (ಇಷ್ಟಕ ೪೪೮). [ಸಂ.]

**ತೃಷಾವಿಷಾದ** (ನಾ). ಬಾಯಾರಿಕೆಯಿಂದಾಗುವ ಖೇದ: ಆತಪ ತಾಪಮಂ ತಳಿರ ಸತ್ತಿಗೆಯಿಂದೆ ತೃಷಾವಿಷಾದಮಂ ಶೀತಲ ತೋಯದಿಂದೆ ... ಪಥಶ್ರಮಾಂಬುವಂ ಶೀತಗೆ ತೂಳ್ದಿದಂ ಕದಳಿಕಾದಳವೀಜನದಿಂದೆ ರಾಘವಂ (ಕುಂರಾಮಾ. ೭-೨೩). [ಸಂ.]

**ತೃಷಾವಿಷಾದನ** (ನಾ).=ತೃಷಾವಿಷಾದ: ವಾಃಕಣಸಂತತಿ ಸೋರೆ ಸೋರ್ದುಡಂಗಿದುದೆಳಗಾರೊಳಾ ಸಕಳಚಾತಕಪೋತತೃಷಾವಿಷಾದನಂ (ಚಂದ್ರಪ. ೪-೪೭). [ಸಂ.]

**ತೃಷಿತ** (ಗು). ೧. ಬಾಯಾರಿದ; ನೀರಡಸಿದ. ೨. ಆಸೆಯಿಂದ ಕೂಡಿರುವ; ಹಂಬಲಿಸುವ: ತೃಷಿತದೃಷ್ಟಿಯನಟ್ಟಿ, ನಿಸ್ಸೀಮಘಾಸಶೀಮಾರ್ಣವದ ವಿಸ್ತೀರ್ಣದೊಳ್ ಮನಂ ಲಯವಾಗೆ ನೋಡಿ (ಶ್ರೀರಾಮಾ. ೨೭೭-೧೦೩); ತನ್ನ ತೃಷಿತ ಬಾಲಭಾವನೆಗೆ ನೀರೆರದು ಚಿಗುರಿಸುತ್ತಲೂ ಬಂದಿದ್ದಳು (ಜಯಂತ. ೫೭). (ನಾ). ೩. ಬಾಯಾರಿಕೆ. ೪. ಆಸೆ; ಅಪೇಕ್ಷೆ; ಬಯಕೆ. ೫. ಬಾಯಾರಿದವನು; ನೀರಡಸಿದವನು: "ತೃಷಿತಃ, ತರ್ಷಿತಃ, ಪಿಪಾ(ಸುಃ), ಪಿಪಾಸಿತಃ—ಈ ೪ ನೀರಡಿಸಿದಾತಂ" (ಹಲಾಯು. ೫೯-೨೦೭): ಅತಿ ತೃ [ಪಾಠಾಂ. ಕೃ] ಷಿತನುಂ ಬುಭುಕ್ಷಾನ್ವಿತನುಮೆನಲ್ ಬೀಜ್ವಿ ಕುಂಭಮುಂ ಪಿಡಿದಂ ... ತುಳಾರ್ಕ್ಷಮಧ್ಯತ್ರ್ಯಂಶಂ (ಜಾತಕಿ. ೦೯-೨೦). [ಸಂ.]

**ತೃಷಿತನೇತ್ರ** (ನಾ). ಆಸೆ ತುಂಬಿದ ಕಣ್ಣು; ಬಯಕೆಯ ಕಣ್ಣು: ತನ್ನಂತಹ ನತದೃಷ್ಟನ ಮುಂದೆ ಲೋಲಾನಂತಹ ಲಾವಣ್ಯವತಿಯು ತೃಷಿತನೇತ್ರದಿಂದ ಕುಳಿತು ಯಾಚಿಸುವುದು ದೈವವಿಡಂಬನೆಯೆಂದು ಕೊಂಡನು (ಜಯಂತ. ೦೭೩). [ತೃಷಿತ + ನೇತ್ರ]

**ತೃಷೆ** (ನಾ). ೧. ನೀರಡಿಕೆ; ಬಾಯಾರಿಕೆ: ಹಸಿವಾದರೆ ಊರೊಳಗೆ ಭಿಕ್ಷಾನ್ನಂಗಳುಂಟು ತೃಷೆಯಾದರೆ ಕೆಱೆ ಭಾವಿ ಹಳ್ಳಂಗಳುಂಟು (ಮಹಾದೇ. ಬ. ೭೯-೧೯೯): ಬಿಸಿಲ ಬಿಸಿಗೆ ಹಸಿವಿಂಗೆ ತೃಷೆಯುಬ್ಬರದ ಡಗೆಗೆ ಸೈರಿಸಲಾಜದನುಗಟ್ಟು ನಡೆಗೆಡಲು ತೊಡಗಿದರು (ಹಡಕಾ. ೯-೨೭): ನಂಬಿಯಣ್ಣನನಗಲ್ದ ದಿನಂ ಮೊದಲಾಗಿ ... ಹಸಿವು ತೃಷೆಯುಂ ಒಡನೊಡನಗಲ್ದ ವಿರಹವಿಪ್ಪಳಿಗೆ . . . ಕೊಳರ್ವಕ್ಕಿಗಳ ಕಳರವಂ ಶಿವದೂಷಕರ ನುಡಿಗೇಳ್ದ ಸದ್ಭಕ್ತನಂತೆ ಕೇವಿಯೇಱು (ನಂಬಿರ. ೧೭-೮): ತೃಷೆಯಿಲ್ಲದೊಡುದಕಮೊಳ್ಳಿತೆನೆ ಕುಡಿದಪರೇ (ಪಾರ್ಶ್ವಪು. ೧೫-೭೭): ನಳಸಂವತ್ಸರದೊಳ್ ಪುಂ ಘಟಿಲೆನೆ ಮನುಜರ್ಗಮಧಿಕ ತೃಷೆ ತಾನಕ್ಕುಂ (ಅಟ್ಟಮ. ೭-೨೩); ಎತ್ತ ಪೋದುದೊ ಹಸಿವು ತೃಷೆ ಹೊಗದುತ್ತಮದ ಮಹಿಮಾತಿಶಯ ಹಸಿದತ್ತು ಪೊಲೆವಾಲಿಂಗೆ ಪೊಗಸುವಡಿದು ವಿಚಿತ್ರವಲ (ತೊರರಾ. ೧-೮-೭೪). ೨. ಆಸೆ; ಅಪೇಕ್ಷೆ: ತೃಷೆ ಇಲ್ಲದವ ಋಷಿಗೆ ಸಮಾನ (ಗಾದೆ). [ಸಂ. ತೃಷಾ]

**ತೃಷ್ಣಕ** (ನಾ). ೧. ಬಾಯಾರಿದವನು; ದಾಹವುಳ್ಳವನು. ೨. ಅತಿ ಆಸೆಯುಳ್ಳವನು; ಆಸೆಬುರುಕ: "ಅಲುಬ್ಧನಭಿಲಾಷುಕಂ ಗೃಧ್ನು ತೃಷ್ಣಕಂ ಮೇಲೆ ಬಯಸುವನಕ್ಕು" (ಮಂಗರಾ. ೭೯-೧೧). [<ಸಂ. ತೃಷ್ಣಜ್]

**ತೃಷ್ಣಾಕರೆ** (ನಾ). ೧. ಬಾಯಾರಿಕೆಯನ್ನುಂಟುಮಾಡುವವಳು. ೨. ತೀವ್ರವಾದ ಅಪೇಕ್ಷೆಯನ್ನುಂಟುಮಾಡುವವಳು. ೧, ೨: ಮತ್ತಂ ಪಯೋರಾಶಿಯೊಳ್ಪುಟ್ಟಿಯುಂ ತೃಷ್ಣಾಕರೆಯುಂ ... ಪುರುಷೋತ್ತಮ ರತೆಯಾಗಿಯುಂ ದುರ್ಜನಪ್ರಿಯೆಯುಮೆನಿಸಿ ಪರಸ್ಪರವಿರೋಧಿಯಪ್ಪ ನಿಜಚರಿತ್ರಮಂ ಇಂದ್ರಜಾಲಮಂ ತೋರ್ಪಂತೆ ಮೆಱೆಯುತ್ತಿರ್ಪಳ್ (ಕಾದಂಪೂ. ೫೫೦). [ಸಂ. ತೃಷ್ಣಾಕರಾ]

**ತೃಷ್ಣಾಕುಲತೆ** (ನಾ). ನೀರಡಿಕೆಯ ಬಾಧೆ; ದಾಹದ ಪೀಡೆ: ನನ್ನನು ಸಾಕಿಕೊಂಡೈ ಪಾರ್ಥ ಘನ ತೃಷ್ಣಾಕುಲತೆ ಬೀಳ್ಕೊಂಡುದತಿಶಯ ತೃಪ್ತಿನನಗಾಯ್ತು (ಕುಮಾಭೀ. ೧೦-೨೮). [ಸಂ. ತೃಷ್ಣಾಕುಲತಾ]

**ತೃಷ್ಣಾತುರ** (ಗು). ೧. ನೀರಡಿಕೆಯಿಂದ ತಪಿಸುವ; ನೀರಡಿಕೆಯ ಬಾಧೆಗೊಳಗಾದ: ಮಾತಂಗಿಯುಂ . . . ತೃಷ್ಣಾತುರಗದ್ಗದಕಂಠೆಯುಮಾ ತಾಪಸನಾಗಳವಳನಿದಿರೊಳೆ ಕಂಡಂ (ಸುಕುಮಾ. ೪-೫೭). (ನಾ). ೨. ಅತ್ಯಾಸೆಯುಳ್ಳವನು: ಮುಱುಗುವ ತೃಷ್ಣಾತುರರಂ ಮುಱುಗಿಸುವರ್ ನೆಱೆಯೆ ಮುಱುಗಿ ಕುದಿವೆಣ್ಣುಗಳೊಳ್ (ಸುಕುಮಾ. ೧೦-೪೭). [ಸಂ.]

**ತೃಷ್ಣಾಪರ** (ನಾ). ಆಸೆಯುಳ್ಳವನು: ಅತಿ ತೃಷ್ಣಾಪರನಾಗಿ ಮುನ್ನೆ ತೊಡರ್ದಿರ್ದಾ ಗಾಂಪೆ ಸಾಲ್ಗುಂ (ಆದಿಪು. ೧-೮೧). [ಸಂ.]

**ತೃಷ್ಣಾಭಂಗ** (ನಾ). ಆಸೆಯನ್ನು ತ್ಯಜಿಸುವಿಕೆ; ಆಸೆಯನ್ನು ಬಿಡುವಿಕೆ: ಸಾಂಗವೇದಾಧ್ಯಯನ ಸಜ್ಜನಸಂಗಶಾಸ್ತ್ರಶ್ರವಣ ತೃಷ್ಣಾಭಂಗ ಯಜನಾಧ್ಯಾನ ಮೌನ ವ್ರತ ಸದಾಚಾರ ... ಇವು ಸದ್ಗತಿಗಳೆಂದ (ಕುಮಾಆ. ೧೫-೧೫). [ಸಂ.]

**ತೃಷ್ಣಾಭಿಭೂತ** (ನಾ). ನೀರಡಿಕೆಯಿಂದ ಪೀಡಿತನಾದವನು; ದಾಹದಿಂದ ತೊಂದರೆಗೊಂಡವನು: ಮಧ್ಯಂದಿನ ಸಮಯದೊಳ್ ಲಲಾಟಂತಪಮಾದ ತಪನತಾಪದಿಂ ತೃಷ್ಣಾಭಿಭೂತರಾಗಿ ಸಕಲಜನಾಪ್ಯಾಯನಕಾರಿಯಪ್ಪ ವೈಶಂಪಾಯನ ಸರೋವರಕ್ಕೆ ನೀರ್ಗುಡಿಯೆ ಪೋಗಿ (ಗದಾಯು. ೬-೩೭ ವ). [ಸಂ.]

**ತೃಷ್ಣೆ** (ನಾ). ೧. ನೀರಡಿಕೆ; ಬಾಯಾರಿಕೆ: "ಉದನ್ಯಾ, ತರ್ಷಃ, ತೃಟ್, ತೃಷ್ಣಾ, ಪಿಪಾಸಾ—ಈ ೫ ನೀರಟ್ಟಿ" (ಹಲಾಯು. ೬೦-೨೦೮). ೨. ಬಯಕೆ; ಅಪೇಕ್ಷೆ: "ತೃಷ್ಣಾ, ಅಭಿಲಾಷಾ, ಲಿಪ್ಸಾ, ಆಶಾ, ಧನಾಯಾ, ಗರ್ಧನಾ—ಈ ೬ ಕಾಂಕ್ಷೆ" (ಹಲಾಯು. ೬೦-೨೦೯): ಅತಿಕಷ್ಟಮಪ್ಪವಸ್ಥಾತತಿಯುಂ ಪುಱೆಯಿಸಿ ಜಳಾಭಿಲಾಷೆಯನೀ ಜೀವಿತತೃಷ್ಣೆ ಮಾಡಿತು (ಕಾದಂಪೂ. ೧೯೪); ಘನಂ ಕರಗೆ ಕಂಡು ಕಂಡಕನಿವೇಗವಿದ್ಯಾಧರಂ ಘನೋಪಲದ ಮಾಟಿಕ್ಕೆಯಿಂ ಕರಗೆ ತೃಷ್ಣೆ ಸಾಮ್ರಾಜ್ಯದೊಳ್ ಮನಸ್ಸಿ ನಿಲವೇಟ್ಟು ತನ್ನ ಸುತನಂ ಸಹಸ್ರಾರನಂ ಜಿನೇಂದ್ರಮುನಿರೂಪಮಂ ತಳೆದನಸ್ತಸಂತಾಪಮಂ (ಪಂರಾಮಾ. ೧೦-೧೩೭): ಇಹಪರಂಗಳ ತೃಷ್ಣೆ ಭವರೋಗಂಗಳ ಬಂಧನ...ಇಂತಪ್ಪ ಸಕಲ ಪ್ರಪಂಚಿನೊಳು ಸಿಲುಕದ..ಮಹಾಶರಣರ ತೋಱೆ ಬದುಕಿಸಾ ಎನ್ನ (ಆದಪ. ೨೦-೪೯): ವಾರಿಧಿಯೊಳಡಗಿ ನಿದ್ರಿಪ ಬಾಡವವೊ ತೃಷ್ಣೆ ಆರದನು ಕೆರಳಿಪರೊ (ಮುಂಕುಕ. ೨೭೭). ೧. ೨: ಮದನರಸಪ್ಲವಂ ಕವಿಯೆ ತಣ್ಣಸನಾಗದೆ ತೃಷ್ಣೆಗಿಂಬುಕೆಯ್ಯುದ ವಗೆಗೊಂಡು ಪೋಪುದು (ಶಾಂತಿಪು. ೮-೯೭): ಮಧುರದ ಮೆಲುನುಡಿಯ ಸುಧೆಯಿಂದ ತೃಷ್ಣೆಯನಕಟ ಪರಿಹರಿಸು (ಕುಮಾವಿ. ೭-೨೩). [ಸಂ. ತೃಷ್ಣಾ]

**ತೃಷ್ಣೆಗೊಳ್** (ಕ್ರಿ). ನೀರಡಿಸು; ಬಾಯಾರು: ವಿಷಯಂಗಳ ಬಿಸುಸುಯ್ಲು ಪೊರೆಮುಡನೆ ಬನಗಾಳಿ ಬೆಚ್ಚನೆ ತೀಡಿದುದು ಲೋಗರ್ ತೃಷ್ಣೆಗೊ... (ರಾಮಾಶ್ವ. ೫೨-೧೨). [ತೃಷ್ಣೆ + ಕೊಳ್$_1$]

**ತೆ₁** (ಅ). ಛೀ, ತೆಗೆ, ಬಿಡು ಎಂಬ ಅರ್ಥದ ಧಿಕ್ಕಾರಸೂಚಕವಾದ ಪದ : ಮುಳಿದು ಶಿಶುಪಾಲನಾ ಸಭೆಯೊಳಗೆ ... ಉಚ್ಚಳಿಸಿ ನುಡಿದಂ ತೆ ಕಳೆಕಳೆ ಪರಿಗೆತ್ತಿದನರ್ಘ್ಯದರ್ಘ್ಯಮಂ ಧರ್ಮಸುತಾ (ಪಂಪಭಾ. ೬-೪೨) ; ಏಜಿಸಿದೊಡ್ಡಮಂ ಬಿಡದೆ ಗಲ್ವ ಕರಳ್ವ ತೆ ಲೆಕ್ಕ ದಾಯುವಂ ತೋ ೞಿ ದ ರೆಂ ಬ ... ಬಿನ್ನಣಂಬಡೆದುದಂತವರಿರ್ವರೊಳಕ್ಷಖೇಳನಂ (ನಳಚಂ. ೭೫೮). [< ತೆಗೆ₁]

**-ತೆ₂** (ಪ್ರ). ಒಂದು ಭಾವವಾಚಕಕೃದಂತಪ್ರತ್ಯಯು : ತೆಕಾರಕ್ಕೆ– ಅಗಲ್ತೆ, ಪೊಗಲ್ತೆ, ನೆಗಲ್ತೆ, ಪುಗುತೆ (ಶಮದ. ೨೧೦ ಪ್ರಯೋ); ನೆಗಲ್ತೆ, ಪೊಗಲ್ತೆ (ಕ್ರಿಬಿ. ೧೬).

**-ತೆ₃** (ಪ್ರ). ಒಂದು ತದ್ಧಿತಭಾವನಾಮಪ್ರತ್ಯಯು. 'ಜಡಾಳತೆ', 'ಚಾಕಚಕ್ಯತೆ' ಪರಾ.

**ತೆಂ** (ನಾ). ತೆಂಕು ಎಂಬ ಶಬ್ದಕ್ಕೆ ಸಮಾಸದಲ್ಲಿ ಆದೇಶವಾಗಿ ಬರುವ ರೂಪ. 'ತೆಂಗಾಳಿ', 'ತೆಂಬೆಲರ್' ಪರಾ.

**ತೆಂಪಡುವಲು** = ದಕ್ಷಿಣ ಹಾಗು ಪಶ್ಚಿಮದಿಕ್ಕುಗಳ ನಡುವಣ ಭಾಗ; ನೈಋತ್ಯ: ಶಾಸನಗಳು ಆತನ ರಾಜ್ಯದ ಬಡಗಲಲ್ಲಿ ದೊರೆಯದೆ ತೆಂಪಡುವಲಲ್ಲಿ ಮಾತ್ರ ಕೆಲವೇನೋ ದೊರೆಯುವುದರಿಂದ (ಮೂರುಉ. ೭೧). **ತೆಂಬಡಗಣ**=ದಕ್ಷಿಣೋತ್ತರವಾದ: ತೆಂಬಡಗಣ ತವರಿಂ ಮೂಡಲ್ಕೆ ವತ್ತೆರಡು ಗೇಣಗಳೆಯಲು (ಎಕ. VIII, ಸಾಗರ. ೧೦೯-೬೩; 1042). **ತೆಂಬಡಗಲು**=ದಕ್ಷಿಣೋತ್ತರ: ಅದರಲ್ಲಿ ತೆಂಬಡಗಲಾಗಿ ಕೂಪಕ ... ಪರ ಕೊಂಕಣ ಎಂದು ಏಳು ದೇಶಗಳಿವೆ (ತುಳುನಾ. ೭೦). **ತೆಮ್ಮೂಡಲು** = ದಕ್ಷಿಣ ಹಾಗಂ ಪೂರ್ವ ದಿಕ್ಕುಗಳ ನಡುವಣ ದಿಕ್ಕು; ಆಗ್ನೇಯಂ ದಿಕ್ಕು: ಆಗ್ನೇಯ ಮಾರುತ: ತೆಮ್ಮೂಡಲ ಗಾಳಿ (South Easter. ಇಂಕನಿ). **ತೆಮ್ಮೂಡು**=ತೆಮ್ಮೂಡಲು: ಈ ಸಾರಸ್ವತರ ಒಂದು ಶಾಖೆಯು ತ್ರಿಹೋತ್ರ (ತಿರ್ಹತ) ದೇಶಕ್ಕೆ ತೆಮ್ಮೂಡಾಗಿ ಪ್ರವಾಸ ಮಾಡಿತ್ತೆಂದೂ ... ತಿಳಿಸುತ್ತಾರೆ (ತುಳುನಾ. ೧೬೦).

[<ತೆಂಕು./ತಮಿ. ಮಲ. ತೆನ್ ; ತುಳು. ತೆಣ್]

**ತೆಂಕ** 'ತೆಂಕು' ನೋ.

**ತೆಂಕಂಡ** (ನಾ). ದಕ್ಷಿಣದಿಕ್ಕಿನ ಭಾಗ,–ತುಣುಕು (?): ವಾಣಿಗತೋಟ್ಟಂ ತೆನ್ನಣ್ಣಮುಂ ವಡಕಣ್ಣಮುಂ ವಿನಿತೇಶ್ವರರ್ಕ್ಕಂ ಪೊಯ್ದಾರ್ (ಎಕ. IV, ಚಾಮರಾ. ೬೩-೭ ; ಸು. 750). [ತೆಂ + ಕಂಡ₁]

**ತೆಂಕಕಡೆ** (ನಾ). ದಕ್ಷಿಣದಿಕ್ಕಿನ ಕಡೆ,–ಪಕ್ಕ: ಕೞಿಯ ತೆಂಕಕಡೆ ಪಡುವ ಪೋಗಿ ಕದಪಿ ಪಡಿಕಲ್ತಿಗೆಱೆ ಕಡೆ ಕೊಳಂ (ಮ್ಯಆರಿ. ೦೯೩೪, ೩೮-೦೪ ; 11ನೆಯ ಶತ). [ತೆಂಕ (<ತೆಂಕು) + ಕಡೆ₃]

**ತೆಂಕಣ್** 'ತೆಂಕು' ಪರಾ.

**ತೆಂಕಣ** 'ತೆಂಕು' ಪರಾ.

**ತೆಂಕಣವಳ್ಳಿ** (ನಾ). ಒಂದು ಊರಿನ ಹೆಸರು : ತೆಂಕಣವಳ್ಳಿಯ ಗುಡ್ಡಂ ಪುಬ್ಬಾಮಿ ಗಂಗಮಾಳಿಜ್ಗಿಗಾಮಿತ್ತಿಯಾಂಗೆ ಪುಟ್ಟಿದ ಶ್ರೀಮಾರಂ (ಎಕ. VII, ಶಿಕಾರಿ. ೨೮೩-೪; 830). [ತೆಂಕಣ + ಪಳ್ಳಿ₁]

**ತೆಂಕದೆಸೆ, ಟೆಂಕದೆಸೆ** (ನಾ). ದಕ್ಷಿಣದಿಕ್ಕು: ತೆಂಕದೆಸೆ[ಪಾಠಾಂ. ತೆಂಕಣದಿಶೆ] ಯೋಳಕಾಲದೊಳ್ ಮುಗಿಲಿಲ್ಲದೆ ಮಿಂಚು ಕಂಡಡಂ ಸೀರೊಳಗಿಂದ್ರ ಧನುವಂ ಕಂಡೊಡು ನಾಲ್ಕು ತಿಂಗಳಾಯು (ಪಸಾರ. ೩೫೫); ಕೋಳೊಡವೆ ಮುಂತಾಗಿ ತಿರುಗಿದಂ ಫಲುಗುಣಂ ಮೇಲೆ ನಡೆದುದು ಕುದುರೆ ತೆಂಕ ದೆಸೆಗೊಡನೆ (ಜೈಮಿಭಾ. ೧೬-೪೬) ; ಅಸಮವಿಗ್ರಹವೀರರ ತೆಂಕದೆಸೆಯೊಳ ಗೆಸಗಿದನೆರಡುಸಾಸಿರವ (ಕೇಸವಿ. ೧೯-೫೭). **ಟೆಂಕದೆಸೆ**: ಆ ಕೞಿಯ ಟೆಂಕ[ದೆ]ಸೆಯ ಕೋಡಿಯ ಪಡುವಸೆ ದಿಕ್ಕಿನಲು ಕೊಟ್ಟ ಯೆರೆಯ ಬೀಜವರಿ (ಸೌಇಇ. IX-II, ೫೦೧-೯; 1516). [ತೆಂಕ (<ತೆಂಕು) + ದೆಸೆ₂]

**ತೆಂಕನಾಡು** (ನಾ). ದಕ್ಷಿಣದೇಶ,–ನಾಡು; ದಕ್ಷಿಣದಿಕ್ಕಿನಲ್ಲಿರುವ ನಾಡು: ತೆಂಕನಾಡ ಕಿಷ್ಕಿಂಧಮೆಂಬ ಪರ್ವತಮನೆಯ್ದಿ (ವಡ್ಡಾರಾ. ೧೧೬-೨೮); ತೆಂಕನಾಡ ಮುೞಿಯಲ್ಕಿನ್ನೇಂ ಮುಸಂ ಬರ್ಕುಮೇ (ಪಂಪಭಾ. ೪-೩೦); ಉನ್ನತಿವೆತ್ತ ತೆಂಕನಾಡಿಂ ಬಂದಂ (ಧರ್ಮಾಮೃ. ೧-೯೭).

[ತೆಂಕ (< ತೆಂಕು) + ನಾಡು]

**ತೆಂಕಬಟ್ಟ** (ನಾ) ದಕ್ಷಿಣದಿಕ್ಕಿನ ಬಯಲು ಭೂಮಿ (?) : ಶ್ರೀಪ್ರರುಪ ನಾಯಿಗಗೆ ಪಟ್ಟಂಗಟ್ಟಿ ಕೊಟ್ಟ ಕಬಿನಿ ಅಮುಟ್ರಿಯಿಂತೆಂಕಬಟ್ಟಂ ಮೂವತ್ತು ಗುಳ ಅಯ್ಗುಳ ಪಾಳುಂ (ಎಕ. IX, ಹೊಸಕೋ. ೮೬-೯ ; ಸು. 720). [ತೆಂಕ (< ತೆಂಕು) + ಬಟ್ಟ₁]

**ತೆಂಕಮುಖ** (ನಾ). ೧. ದಕ್ಷಿಣದ ಕಡೆ ; ದಕ್ಷಿಣದಿಕ್ಕು : ಸತಿಯನುೞದ ತಿದಿಗಂಬರನಾಗಿ ಮುಕ್ತಕೇಶಿತನಾಗಿ ನರಕಪಾಲದೊಳು ಸುರೆಯೆಱೆದು ಕುಡಿಯುತ ತೆಂಕಮುಖವಾಗಿ ಹೋಹೆಂ (ಹದಶಾ. ೨-೨೨); ರಘುನಂದನನ ಕೀರ್ತಿಸ್ತಂಭಡಂಬರವೆನಿಪ ಸೇತುವ ಕಂಡು ನಡೆದನು ತೆಂಕಮುಖವಾಗಿ (ಕುವ್ಯಾಸ. ೫-೨೪). ದಕ್ಷಿಣಾಭಿಮುಖನಾದವನು ; ದಕ್ಷಿಣದಿಕ್ಕಿಗೆದುರಾದವನು : ತೆಂಕಮುಖನಾಗಿ ಮರುಜ್ಜವದಿಂ ಚಂಪಾಪುರಕ್ಕೆ ಬಂದು (ಧರ್ಮಾಮೃ. ೩-೩೯): ಪೊಸವಿಮಾನವನೇಱಿ ಬಂದು ತೆಂಕಮುಖನಾಗಿ (ಜ್ಞಾನಚಂ. ೨-೨೪). [ತೆಂಕ (< ತೆಂಕು) + ಮುಖ]

**ತೆಂಕಮೊಗ** (ನಾ). = ತೆಂಕಮುಖ ೧: ತೆಂಕಮೊಗದೆ ಬಂದು ವೃಷಭಾಚಳಮಂ ಕಂಡಂ (ಆದಿಪು. ೧೩-೬೯ವ) ; ಪಾಂಡವರ್ ಸುರಂಗದಿಂ ಪೊಱಮಟ್ಟು . . . ತೆಂಕಮೊಗದೆ ಪಯಣಂಬೋಗಿ (ಪಂಪಭಾ. ೩-೮ವ): ತೆಂಕಮೊಗದೆ ಬಂದು . . . ವೃಷಭಾಚಲಮಂ ಕಂಡು (ಅಜಿಪು. ೯-೩೪ವ): ತೆಂಕಮೊಗದ ಗಾವುಣ್ಡರ ಪಡುವಣ ಒರಿಯ ತೋಣ್ಬದ ತೆಂಕಣ ಸೀಮೆಯಿಂ (ಸೌಇಇ. IX-1, ೭೮-೫೫; 1045).

[ತೆಂಕ (< ತೆಂಕು) + ಮೊಗ]

**ತೆಂಕಲ್** 'ತೆಂಕು' ಪರಾ.

**ತೆಂಕಲು** 'ತೆಂಕು' ಪರಾ.

**ತೆಂಕಲ್ಲೆ** 'ತೆಂಗಲೆ' ನೋ.

**ತೆಂಕವಂಕ** 'ತೆಂಕವಕ್ಕ' ನೋ.

**ತೆಂಕವಕ್ಕ, ತೆಂಕವಂಕ** (ನಾ). ದಕ್ಷಿಣ ದಿಶೆ,–ದಿಕ್ಕು : ತೆಂಕವಕ್ಕ [ಪಾಠಾಂ. ವಂಕ] ದೊಳಸಂಖ್ಯಬಲಂ . . . ತುಱುಗೊಳಲ್ ಪೊಱಮಟ್ಟಂ (ಕಾವ್ಯಾವ. ೧೨೨). **ತೆಂಕವಂಕ**: ಆ ಪುರದ ತೆಂಕವಂಕದೊಳ್ . . . ಚಂಡಮಾರಿ ದೇವತೆಯಿರ್ಪಳ್ (ಯಶೋಚ. ೧-೭) ; ತೆಂಕವಂಕಮಂ ಪರಿಪಾಲಿಪಂ (ಅರಾಜ. ೧-೩೦). [ತೆಂಕ (< ತೆಂಕು) + ವಕ್ಕ]

**ತೆಂಕವಟ್ಟೆ** (ನಾ). ದಕ್ಷಿಣದಿಕ್ಕಿನ ಮಾರ್ಗ, - ದಾರಿ: ಕೆಳೆಯರಿರ, ಇನ್ನೆಮಗೆ ತೆಂಕವಟ್ಟೆ (ಅಶ್ವತ್ಥಾ. ೪೦-೬೯೦); ಇಲ್ಲಿ ತಾರೆಗಳ ನೆರೆಯ ನಿಡಿಯ ಗಿರಿಮುಡಿಯ ಮೇಲೆ ಪೆಣಗಾಡಿ ತಳ್ವಿ, ತೆಂಕವಟ್ಟೆ ತಿರುಗ ಪೇೞ್ಕುಂ (ಬದ್ಧಪ್ರ. ೩೮-೮೨೭). [ತೆಂಕ (<ತೆಂಕು) + ಬಟ್ಟೆ₂]

**ತೆಂಕಪೊಲ** (ನಾ). ದಕ್ಷಿಣಕ್ಕೆ ಇರುವ ಹೊಲ,—ಪ್ರದೇಶ: [ತೆ]ಂಕ ಪೊಲದಲು ಪ್ರಭುಗಳ ಮಾನ್ಯದಿಂ ಮೂಡಲು ಹದಿಮೂಱು ಗೇಣ ಬೆಂಕೊಳ್ವನ ಕೋಲ ಮತ್ತರು ನೂಱು (ಎಇ. XXVII, ೧೫-೪೫ ; 1114).

[ತೆಂಕ (<ತೆಂಕು) + ಪೊಲ]

**ತೆಂಕಪೋಗು** (ಕ್ರಿ). ದಕ್ಷಿಣದಿಕ್ಕಿನ ಕಡೆಗೆ ಚಲಿಸು, — ಹೋಗು ; ತೆಂಕಮುಖವಾಗಿ ಹೊರಡು : ತಲೆಕೆದಱಿ ತೆಂಕಪೋಗಿರೆ ... ತಾನೆ ಕನಸಿನೊಳಶುಭಂ (ಕಲ್ಯಾಕಾ. ೨-೨೩). [ತೆಂಕ (<ತೆಂಕು) + ಪೋಗು₁]

**ತೆಂಕಾಯ್, ತೆಂಕೈ** (ಗು). ದಕ್ಷಿಣದಿಕ್ಕಿನ : ಸೀಯಮಂಗಲದ ಪೊಲ ಮೇರೆ ಇಸಾನದ ದೆಸೆ ನಡುಗಲ್ಲೆ ಅಮ್ಬಲ ತಿಣ್ಣೆಯಿನ್ತೆಂಕಾಯ್ ಪೇರೊಟ್ಟಿಯೆ

(ಎಕ. x (೬), ಚಿಕ್ಕಬ. ೧೦೭-೬೭: 850); ಮೂಡಾಯ್ತ್ತಿಜ಼ಿ ತೆಂಕಾಯ್ಯಾಟಾರನ ಮಾಡವೆ ... ಸನ್ದು ಪೆರ್ಗೊರ್ಲ್ಲಿಯುಳ್ಳುಡಿತ್ತು (ಎಕ. IV, ಎಡತೊ. ೬೦-೭೩: ಸು. 890). ತೆಂಕ್ಕೆ : ಪ್ರಥಮುಂ ದುಗ್ಗನ್ಯಜಿ ... ಕೆಜಿಯು ನ್ರಂಕ್ಯ ನಟ್ಟ ಕಲ್ಲ (ಎಕ. x (೬), ಚಿಕ್ಕಬ. ೭೭-೧೭ : ಸು. 850).

[ತೆಂಕು + - ಆಯ್/ತುಳು. ತೆಂಕಾಯಿ, ತೆನ್ಕಾಯಿ]

**ತೆಂಕು, ಟೆಂಕ$_1$, ತೆಂಕ** (ನಾ). ದಕ್ಷಿಣದಿಕ್ಕು, — ದೆಸೆ : ತೆಂಕು, ಬಡಗು, ಪಡುದಿಕ್ಕುಗಳಲ್ಲಿಯೂ ಬೆಳಕು ಹರಡುವುದನ್ನು ಕಂಡಿದ್ದೇವೆ (ನಿಬಂಧ. I, ೪೯೪) ; ಗಿರಿಜ ಸತ್ತು ಪ್ರೇತವಾಗಿ ಸರೋವರದ ತೆಂಕಿನ ಹೊನ್ನೆಮರವನ್ನು ಆಶ್ರಯಿಸಿದ್ದಾಳೆ (ಪದ್ಮಸ. ೧೧). **ಟೆಂಕ$_1$** : ಕನಕಶೈಲಕೆ ಟೆಂ[ಪಾಠಾಂ. ತೆಂ]ಕವೆನಿಸಿ ರಾರಾಜಿಪುದು...ಅಯೋಧ್ಯಾಭಿಧಾನ ಪಟ್ಟಣಂ (ವೆಂಕಶಾರಾ. ೧-೪-೧). 'ಟೆಂಕದೆಸೆ' ಪರಾ. **ತೆಂಕ** : ತೆಂಕ ಪೇರೂರ ಪಳ್ಳಂ (ಎಕ. X, ಮುಳಬಾ. ೨೭-೬ ; 962) : ತೆಂಕ ಪಾಲ್ವಳ್ಳಂ ... ಮೂಡಲೆರಡು ಪಳ್ಳದ ಕೂಡಲೆ ಮೇರೆಯಾಗೆ (ಸೌಇಇ. XI-i, ೫೨-೫೭; 1007): ಸುರರೆಲ್ಲಂ ಬಡಗಲು ನೆರೆದಿರೆಯಾ ದೆಸೆ ಕುಸಿದು ತೆಂಕ ನೆಗೆದೊಡೆ (ಸಮುಪ. ೧೦-೧೧೪): ಅದಱಿಂದೆ ತೆಂಕ ಕಿಂಪುರುಷವದರ್ಕೆ ತೆಂಕ ಹರಿವರ್ಷ (ಕಇ. IV, ೦-೧೩; 120೩): ತೆಂಕ ಮುಂತಾಗಿ ನಡೆದನವನಿಪ ಸಮರಾಂಕಣಕಂದು ಲೀಲೆಯೊಳು (ಕುರಾಸಾಂ. ೧೧-೮೧).

**ತೆಂಕಣ್** = ದಕ್ಷಿಣದಿಕ್ಕು : ಮಂದಾನಿಲಂ ತೆಂಕಣಂ ಬರೆ ಚೈತ್ರಂ ಕುಡುವಪ್ಪರ್ಲಾಜತತಿಯೋ (ಕಾದಂಪೂ. ೭೪೦) : ಮೇರು ಪಡುವಣ್ಗೆ ಸೀತಾತೀರಂ ತೆಂಕಣ್ಗೆ . . . ತನಗೆ ಸೀಮೆಯೆನಿಕ್ಕುಂ (ಮಲ್ಲಿಪು. ೨-೧೨) : ತೆಂಕಣ್ಗಾ ನಿರುಪಮ ದಿವ್ಯವಾಜಿ ನಡೆದತ್ತಾಗಳ್ (ಕುಸುಮಾ. ೧೦-೧೩೪) : ಕಂಪಿನೊಳೊಂದಿ ತೆಂಕಣಂ ಗಾಳಿ ಮೆಲ್ಲನೆ ಕೀಡುಕಿದೆ (ಕಬ್ಬಿಕಾ. ೬೩). **ತೆಂಕಣ, ಟೆಂಕಣ, ತೆಂಕಳ** = ೧. ದಕ್ಷಿಣ ದಿಕ್ಕಿನ ; ದಕ್ಷಿಣಕ್ಕೆ ಇರುವ : ಪುಲಿಪದಿಯ ತೆಙ್ಕಣ ಪೇರೊಟ್ಟಿಯೆ ಪೇರ್ಬಳಿಕೆ ಎಟಗಲ ಕಱಣ್ಡಲೋ ಮುಕೂಡಲ್ (ಇಆ. XII, ೧೬-೧೭: 735) ; ಮೂಡಣ ದೆಸೆಯು ವ[ರಾಹ] ಕೆಱಿಯಂ ಮೂಡಣ ಪಳ್ಳ ಅದಱ ತೆಙ್ಕಣ ದೆಸೆ [ಮಣ್ಣಗೆಱಿ] (ಸೌಇಇ. XI-i, ೯-೨೮: 862): ತೆಂಕಣೆಲರಲೆಪದಿಂದಂಕುರಿಸಿದ ಚೂತದಂತೆ ರೋಮಾಂಚಕಂಚುಕಿತಶರೀರನಾಗಿ (ಆದಿಪು. ೪-೨೦ ವ) ; ತೆಂಕಣ ಗಾಳಿ ಸೋಂಕಿದೊಡಂ . . . ನೆನೆವುದೆನ್ನ ಮನಂ ವನವಾಸಿದೇಶಮಂ (ಪಂಪಭಾ. ೪-೩೧): ತೆಂಕಣ ಭೂಪಾಲಕರಂ ಭೋಂಕನೆ ಪರಿದೆಯ್ದಿ ದರ್ಪಮಂ ಕಿಡಿಸಿ (ಧರ್ಮಾಮೃ. ೧-೧೧೨೨); ಅಸಿಲಶರದಿಂದಊದಿದನು ಜಲನಿಧಿಯ ತೆಂಕಣ ತೀರಕಾ ಖಳನ (ತೊರರಾ. ೧-೧೧-೨೦): ಗಣನೆಯಿಲ್ಲದ ಕಪಿಗಳಂ ಕೂಡಿ ಕೊಂಡು ತೆಂಕಣ ಕಡಲ ತೀರದೊಳ್ಬಿಟ್ಟು ಬಂದೊಡೆ (ಜೈಮಿಭಾ. ೧೮-೭): ತೆಂಕಣ ಗಾಳಿಯು ಕೊಂಕಣ ಸೀಮೆಗೆ ಬಂತೈ ! (ಶಿವಪು. ೨೯-೬): ಪೂಗೊಳನ ತೆಂಕಳ ಗಾಳಿ ಸಂಚರಿಸಿತುಱಿ ಬನದೊಳು (ಐಕೂಪು. ೩-೮೦). ೨. ದಕ್ಷಿಣ ದಿಕ್ಕು: ಕರೆನಾಡು ಎಂಬುದು ... ತೆಂಕಣದ ಸೀಮೆಯನ್ನು ನಿರ್ದೇಶಿಸುವ ಹೆಸರು (ದ್ರಾವಿವಿ. ೮೨); ಬರುತ ಕರ್ನಾಟಕವನು ಕಳಿದುತ್ತರದಿಶಾಮುಖ ದಿಂದ ಟೆಂಕಣದೆಸೆಯ ಕೊಂಕಣಕೆ ಪರಮಪಾವನಮೂರ್ತಿ ಬಂದನು (ನಿಭಾಗ. ೫-೪ -೩೯): ವಿಜಯಾದ್ರಿ ಟೆಂಕಣ ಶ್ರೇಣಿಯೊಳು ... ಪದ್ಮ ವರೂಥಖಚರವಿನೋದದೊಳು ತೆರಳಿದನು ದೇಶಭ್ರಮಣೆಗೆ (ಜಿನಭಾ. ೫೦-೧೮). **ತೆಂಕಣಂ**=ದಕ್ಷಿಣದೇಶಕ್ಕೆ ಸೇರಿದವನಂ: ಅಕಾರಕ್ಕೆ-ಮೂಡಣಂ, ತೆಂಕಣಂ, ಬಡಗಣಂ (ಶಮದ. ೧೧೧ ಪ್ರಯೋ); ತೆಂಕಲ್ ಪುಟ್ಟಿದಂ, ತೆಂಕಣಂ (ಶಬ್ದಾನು. ೨೯೨ ಪ್ರಯೋ). **ತೆಂಕಣರ್**=ಪಿತೃದೇವತೆಗಳು : ತೆಂಕಣರ್ ದೈವಂ ಬಿದೊರ್ಕ್ಕಲ್ ಪಾನೆಂಬಿವ್ವೆದೆಡೆ ನಿಱಿಯೋವುದು ತಲೆ (ಕುಱಳ್ ೧-೫-೩). **ತೆಂಕಣರಾಯ**=ದಕ್ಷಿಣದೇಶದ ಅಧಿಪತಿ : ರಣದೊಳ್ ತೆಂಕಣ ರಾಯನಂಕದ ಚತುಃಸೈನ್ಯೋತ್ಕರಂ ದಂಡೆಯುದ್ಧಣವೀತಂ (ಎಕ. XI, ದಾವಣ. ೨೫-೫೭ : 1224): ಹಣೆದಂಬೊಯ್ಯುಲ್ ಜವಂ ರಾಯುರನೆ ಬಯಿ ಬರ್ಪಂತೆ ಸೋಮೇಶ್ವರಂ ತೆಂಕಣರಾಯುಂ ಬಂದು (ಸೂಕ್ತಿಸು. ೦-೨೧). **ತೆಂಕಣಾದಿತ್ಯ** = ಹೊಯ್ಸಳರಾಜನಾದ ವಿಷ್ಣುವರ್ಧನನ ಒಂದು ಬಿರುದು: ವಿಷ್ಣುವರ್ಧನ ತೆಂಕಣಾದಿತ್ಯ ತೆಂಕಣಚಕ್ರವರ್ತ್ತಿ (ಎಕ. VII, ಶಿವಮೊ. ೬೯-೯ : 1320). **ತೆಂಕಣಾಸೀಮೆ** = ದಕ್ಷಿಣದ ಸೀಮೆ : ಪಡುವಣ್ಣಾ ಸೀಮೆ ತಣ್ಣಳ್ಳಿಗಾರ ಪಾಱಿ ತೆಙ್ಕಣ್ಣಾಸೀಮೆ ನೆಯ್ದಾರ್ಗೆಱಿ (ಎಇ. XXI, ೧೭೮-೧೨೦ : 8ನೆಯ ಶತ). **ತೆಂಕಲ್, ತೆಂಕಲು**=ದಕ್ಷಿಣದಿಕ್ಕು: "ಅವಾಚೀನಂ, ಅಪಾಕ್—ಈ ೨ ತೆಂಕಲಾದುದಱ ಪೆಸರ್" (ಹಲಾಯು. ೧೬-೧೨೩) ; ತೆಂಕಲಾವುದೆನುತಂ ನೋಡುತ್ತಮಿಂ ಪೋಗವೇಟ್ಟುದಿದು ತಲ್ಲದೆ ಬೇಱುಪಾಯಮುಣಮಿಲ್ಲ (ಕಾದಂಪೂ. ೬೨೮) : ತದ್ದವಾಡಿಗೆ ತೆಂಕಲ್ ತೊಱಗಲೆಗೆ ಬಡಗಲಿರ್ದುದು ನೆಱಿಯ ಸುಪೋದ್ಧೀಪಮೆನಿಸಿ ಬೆಳುಗಲಿ ದೇಶಂ (ಅಜಿಪು. ೧೨-೪೪) ; ಆ ಕನಕಾದ್ರಿಯ ತೆಂಕಲ್ ಭೂಕಾಂತಾ ಕುಂತಳೋಪಮಂ ಕುಂತಳಮಂತಾ ಕಾಂತವಿಷಯುರಕ್ಷಕರೀ ಕಲಿಯುಗ ದಲ್ಲಿ ಪುಟ್ಟಿದಚ್ಚಾಲುಕ್ಯರ್ (ಎಇ. XX, ೧೨-೫ ; 1167) : ಉದ್ಭಟ ಭೂಮಿಪನುತ್ತರದಿಂ ಕೂರ್ತು ತೆಂಕಲಭಿಮುಖನಾದಂ (ಉದ್ಭಟ. ೨-೩೩) ; ಆದಱಿಂತೊಪ್ಪುವ ತೆಂಕಲ್ ಪೆರ್ಚಿದ ಹಿಮವಾನ್ ಹೇಮಕೂಟನಿಷಧಂ ಬಡಗಲ್ ಸದಮಳನೀಲಶ್ವೇತಂ ಪದೆಪಿಂ ಶೃಂಗಿಗಳೆನಲ್ಕೆ ವರ್ಷಗಿರೀಂದ್ರಂ (ದಶಕು. ೭-೧೧) ; ಮೇರುಗೆ ತೆಂಕಲು ಸದಮಲ ಭರತಾವನಿ (ಇಆ. IX, ೯೭-೭ : 1169) : ಅತ್ತಲಿಹುದಾ ವರುಷ ಕಿಂಪುರುಷೋತ್ತಮ ಮದಱಿಂದ ತೆಂಕಲು ವರ ಹಿಮಾಚಲವು (ಸಂಭಪ. ೦೧-೩೦) : ಮರಳಿ ಬಂದವರು ತೆಂಕಲು ಪಡುವಲು ಮೇವ ತುಱುವಿಂಡನು ಕೊಂಡು ಪೋಗಿ . . . ಒಪ್ಪಿಸಲು (ಜೀವಂಸಾಂ. ೮-೨೨).

[ದೇ.೫ ತಮಿ. ತೆಱ್ಕು, ತೆಕ್ಕು; ಮಲ. ತೆಕ್ಕು. ತೆಕ್ಕನ್: ಕೊಡ. ತೆಕ್ಕಿ. ತೆಕ್ಕ್]

**ತೆಂಕುದಿಕ್ಕು** (ನಾ). ದಕ್ಷಿಣದಿಕ್ಕು : ತೆಂಕುದಿಕ್ಕಿನಲ್ಲಿರುವ ಐದಂಕಣದ ಮನೆಯನ್ನು ಅವರಿಗೆ ಕೊಟ್ಟು ತಾವು ಮಲೆನಾಡಿಗೆ ಹೊರಟು ಹೋಗಿದ್ದರು (ದೇವಹಿಂ. ೩೦). [ತೆಂಕು + ದಿಕ್ಕು]

**ತೆಂಕ್ಕೆ** 'ತೆಂಕಾಯ್' ನೋ.

**ತೆಂಗಡೆ** (ನಾ). = ತೆಂಕಕಡೆ: ತೆಂಗಡೆಯಿಂ ಸುಳಿವ ಸುರಭಿವಾಯುವ ತಾಟನದಿಂ ತಳುವದೊಲೆವ ಲತೆಯಂತೆ (ಜಯುಕಾ. ೮-೫೯) ; ನಡೆತಂದಾ ಬಿಜ್ಜಾಧರ ಪೊಳಲ ತೆಂಗಡೆಯ ಶಬಾಲಯಕಾಗಿ ಕಡುನೀರರಕಿ ಮುದದಿಂ ಪೋಗುತಿರೆ (ಶ್ರೀಪಾಲ. ೭-೧೫೨). [ತೆಂ + ಕಡೆ$_3$]

**ತೆಂಗಲೆ, ತೆಂಕಲೈ** (ನಾ). [ವಿಶಿಷ್ಟಾ] ವಿಶಿಷ್ಟಾದ್ವೈತಿಗಳಲ್ಲಿ ಹಣೆಯು ನಾಮದ ಕೆಳಗೆ ಪೀಠವನ್ನು ಹಚ್ಚುವ ಪಂಗಡ ; ರಾಮಾನುಜ ಭಕ್ತರ ಒಂದು ಪಂಥ : (೬). 'ಬಡಗಲೆ' ಪರಾ. **ತೆಂಕಲೈ**: ಶ್ರೀವೈಷ್ಣವಮತದ ಈ ಶತ್ವ ಕ್ರಮೇಣ ಬಡಗಲೈ ತೆಂಕಲೈ (ಉತ್ತರ ದಕ್ಷಿಣ) ಭಾಗಗಳಾಗಿ ಒಡೆದವು (ಭಾರದ. ೨೯೭). [ ← ತಮಿ. ತೆನ್ಕಲೈ]

**ತೆಂಗಾಯ್, ತೆಂಗಾಯಿ, ತೆಂಗುಗಾಯ್, ತೇಂಗಾಯ್** (ನಾ). ತೆಂಗಿನ ಕಾಯಿ ; ತೆಂಗು ; ನಾರಿಕೇಳ : ತೆಂಗಾಯ ಪಾಸಟಿಯ ಕರ್ಕಶಕುಚಂಗಳ್ (ಸೌಂದಪು. ೭-೫೩) : ತೆಂಗಾಯನು ಪೆರೆದದರ ಮೇಲಿಕ್ಕಿ (ಸೂಪಶಾ. ೩-೯) ; ಒಟ್ಟಿದ ಕಬ್ಬು ತೆಂಗಾಯಿಂದ ಮೆಱಿವುತ್ತಿದ್ದುದು ಖಡ್ಗಪೂಜೆ (ಧರಪ. ೨೦-೦೨೯) ;ತಟ್ಟೆಯ ತೆಂಗಾಯನು ಒಡೆದಲ್ಲಿಡು ಕೊಡು ಹಣ್ಣಳನಿಲ್ಲಿ (ಕೋಗಿಲೆ. ೮೦-೩೭). 'ಚೆಂದೆಂಗಾಯ್', 'ತೆಂಗಾಯ್ಗೊನೆ' ಪರಾ. **ತೆಂಗಾಯಿ** : ಸಣ್ಣಸಿದ ತೆಂಗಾಯಿ ತನಿವಾಲುಗಳ ಬೆರಸಿ . . . ಗಾರಿಗೆಯುಡುವುದು (ಸೂಪಶಾ. ೧-೨೪): ತೆಂಗಾಯಿ ಪಲಸು ... ಬಹುಫಲಾದಿಗಳ ತೋಟಿಗರು ಸಾರಂಗಪಾಣಿಗೆ ಸಾರ್ಚಿದರು (ಮೋಹತ. ೪-೬೨) : ತೆಂಗಾಯಿ

ಯೊಳಗೆ ಪರಿಪೂರ್ಣಜಲ ಬಲಿದು ಓಂಗಿದಪ್ಪಂದ (ಸರ್ವಜ್ಞ. ೧೬೪). ತೆಂಗುಗಾಯ್ : ಮುಡಿವು ಕಟ್ಟುವರವರೆ ತೆಂಗುಗಾಯ್ ಬಾಳೆಗಾಯ್ . . . ನೈವೇದ್ಯನಿವಹಂಗಳಂ (ಶ್ರೀಧಾಪು. ೭೧೩-೧೨೮). ತೇಂಗಾಯ್ : ಹೊಂಗೊಡದೊಳು ನೀರ ಪೊತ್ತ ಧೂರ್ಜಟಿಯಂತೆ ತೇಂಗಾಯ್‌ಮರಗಳೊಪ್ಪಿದುವು (ಮೋಹತ. ೨೪-೧೨) : ಅವಲುಂ ಪುರಿಗಡಲೆಯು ಮುದ್ದಣಂಗೆ ; ಕಬ್ಬು ಕಬ್ಬಿಗಂಗೆ ; ತೇಂಗಾಯೆನಗ್ಯೆಸೆ (ರಾಮಾಶ್ವ. ೮೯-೩).

[ ತೆಂಗು$_3$ + ಕಾಯ್$_4$. ತಮಿ. ತೇಙ್ಕಾಯ್ ; ಮಲ. ತೆನ್ನನ್ ಕಾಯಿ ; ತೆಲು. ತೆಂಕಾಯ, ಟೆಂಕಾಯ ]

ತೆಂಗಾಯಿ 'ತೆಂಗಾಯ್' ನೋ.

ತೆಂಗಾಯ್ಗೊನೆ (ನಾ). ತೆಂಗಿನ ಕಾಯಿಂಗಳ ಗೊನೆ,–ಗೊಂಚಲು: ಕಕ್ಕಸದೆ ಬೆಳೆದ ತೆಂಗಾಯ್ಗೊನೆಗಳಂ ... ವನಪಾಲಕಂ ಪೂಜಿಸಿಕೊಂಡ್ಯೆತಂದನು (ಚಬಪು. ೪೩-೨೯). [ ತೆಂಗಾಯ್ + ಗೊನೆ$_3$ (<ಗೊಲೆ$_2$) ]

ತೆಂಗಾಯ್ಮೊಲೆ, ತೇಂಗಾಯ್ಮೊಲೆ (ನಾ). ತೆಂಗಿನಕಾಯಿಯಂತಹ ಮೊಲೆ: ತೆಂಗಾಯ್ಮೊಲೆಯ ನುಣ್ಮೊಲೆಯ...ಮಹಾಪ್ರೌಢವನಿತೆಯರ್ ಕಣ್ಗೆಸೆವರಲ್ಲಿಗಲ್ಲಿ (ಚಬಪು. ೦೦-೨೧). ತೇಂಗಾಯ್ಮೊಲೆ: ನವೀನಲತಾಂಗದ ತೇಂಗಾಯ್ಮೊಲೆಯ...ತರಳಾಕ್ಷಿಯರೆಯ್ದೆಂದೀಕ್ಷಿಸಿದರ್ ನೃಪನ (ಜಯುಕಾ. ೧೦-೪೯). [ ತೆಂಗಾಯ್ + ಮೊಲೆ$_1$ ]

ತೆಂಗಾಳಿ, ತೆಙ್ಗಾಳಿ (ನಾ). ದಕ್ಷಿಣ ದಿಕ್ಕಿನಿಂದ ಬೀಸುವ ಗಾಳಿ : ಮದನೇಭಕ್ಕಾವುದೊಂದಂಬುಜವೆರಡು ಕೊಳಂ ಮೂಱು ತೆಂಗಾಳಿ ನಾಲ್ಕು . . . ಆಳಿ ಪದಿಮೂಱಲ್ತೆ ಮತ್ತೋವಚಾರಂ (ರಾಂತಿಪು. ೯-೮೯) : ತೆಂ[ಪಾಠಾಂ. ತಂ]ಗಾಳಿ ಪೇಱುಂ ಒರಿದೊಂದುತ್ಸವವಾಯ್ತು (ಕಾದಂಪೂ. ೯೦೦) : ತನುಲತೆಯನ್ಯೆದೆ ತೆಂಗಾಳಿಗೊಡ್ಡುವ ಕೋಮಲಾಂಗಿಯರು (ಹಡಕಾ. ೪-೩೯) ; ಈ ತೆಂಗಾಳಿ ತನ್ನಿಚ್ಚೆಯಿಂ ನಡೆತಂದಪ್ಪುದು (ಕಬ್ಬಿಗಕಾ. ೫೫) : ಆಗರದೊಳು ರಸದಾಳಿ ತೆಂಗಾಳಿಯಿಂ ತಾಗಲೊಂದಱೊಳೊಂದು ಹಳಚಿ ಮೇಗೋಲ್ಗಳೊಡೆದಿನಿರಸದ ಪರಿಯೊಳಿಕ್ಷುಸಾಗರ ತುಂಬಿದಂತಾಯ್ತು (ಮೋಹತ. ೨-೪೮). ತೆಙ್ಗಾಳಿ: ತೆಙ್ಗಾಳಿಯುಲೆಪದಿಂದೊಲೆದು ಪ್ರಣ್ಯಪಣ್ಯಾರ್ಥಿಭವ್ಯಸಾರ್ಥಮನಿತ್ತಲೆಟ್ಟಿರ್ಪುದೆಂದು ಕೈಸನ್ನೆಯಿಂ ಕರೆವಂತೆ ಕರಮೆ ಸೊಗಯಿಸುವ ತಳಿರ್ಗೊಂಬುಗಳುಂ (ಚಂದ್ರಪು. ೨-೧೧೫).

[ ತೆಂ + ಗಾಳಿ$_1$ ]

ತೆಂಗು$_1$ 'ತೇಂಗು$_2$' ನೋ.

ತೆಂಗು$_2$ (ಕ್ರಿ). (?) : ಕರಂ ಬಿಂಕಂ ತೆಂಗುವ ಗೂಢಜತ್ರು ಸುದೃಢಾಯ ದ್ವಾಹುಕಾಂಡಂ (ಚಕವಿ. ೩-೨೦). [ ? ]

ತೆಂಗು$_3$, ಟೆಂಗು (ನಾ). ಒಂದು ಬಗೆಯ ಮರ ಮತ್ತು ಅದರ ಕಾಯಿ; ನಾರಿಕೇಳ : "ನಾಳಿಕೇರಃ, ಲಾಂಗಲೀ, ಈ ೨ ತೆಂಗು" (ನಾಚಿರಾ. ೧೧೩): "ನಾರಿಯಳಿ ನಾಳಿಕೇರಂ ತೆಂಗೆನಿಕ್ಕು" (ಮಂಗರಾ. ೩೪-೦೦) : ಎಲೆಯುದಕಯುಮಂ ತೆಂಗಿನೆಳನೀರುಮಂ ಕೊಳಲಿಂಬಪ್ಪಂತಿರೆ ಮಾಡಿ ನಟ್ಟ ಕೌಂಗಿನ ತೆಂಗಿನ ಮರಂಗಳುಮಂ (ಪಂಪಭಾ. ೫-೪೭ ವ): ಶೀತಳಮಪ್ಪ ತೆಂಗಿನೆಳನೀರೊಳ್ . . . ಪುಂಡ್ರೇಕ್ಷು ಪಾನೀಯದೊಳ್ ಬೆಳೆದೋರಂತೊಱಗಿದರ್ತೋರ್ಪ ವಿಲಸತ್ಕರ್ಪೂರಶಾಳೀವನಾವಳಿಯಿಂದಂ ಕ ರ ಮೊ ಪ್ಪಿ ತೋರ್ಪುದು ಬನಂ (ಸುಕುಮಾ. ೧೦-೭೦) : ತೆಂಗಿನ ಪೊಸನೇಣಿಂದಱದಿಂಗಳ್ವರಮುಡಿಸಿ ಕಂಬಿಯಿಂ ಕಟ್ಟಿದೊಡಂ ತಾಂ ಗಡ ಬಿಟ್ಟೊಡೆ ಮತ್ತಂ ಓಂಗಮ ಡೊಂಕೆಂಬ ನಾಯ ಬಾಲದ ತೆಱದಿಂ (ಧರ್ಮಾಮೃ. ೨-೯೨) : ನಾಯ್ಗೆ ತೆಂಗೇವುದೊ ಕಾಗೆಗೇವುದೊ ರಸಾಯನಯುಕ್ತದ ಸಾರಭೋಜನಂ (ರೀಲಾವ. ೨-೧೧೧) ; ಗಂಜಿಯನಾಗಳ್ ತೆಂಗಿನ ತಿಳಿವಟ್ಟಲೊಳಾತರೆಗೆಱೆದಳ್ (ದಶಕು. ೧೨-೧೨೫) ; ತೆಂಗಿಗೆ ನೀರನೆಱೆದರೆ ಅಂಗ್ಯೆಯಲ್ಲಿ ಫಲವು ಕಾಣುವಂತೆ (ಅಬಂದೀ. ೭೦-೧೧) ; ತೆಂಗನು ಲಾಗಿಸಿ, ಅಡಕೆಯ ಬಾಗಿಸಿ . . . ಬಂತೈ ! ಬಂತೈ ! (ಕಏಪು. ೨೮-೫) : ಸಿಂಹಲದ್ವೀಪದಲ್ಲಿ . . . ತೆಂಗು ಮೊದಲಾದ ಫಲಗಳೂ ಬಹಳ ಆಗುತ್ತವೆ (ಮುಂಲಯ. ೪-೨೦೧); ತಲೆದೂಗೆ ತೆಂಗುಗಳ್ ಮೆರೆವ ಕಾಲೂರು (ಕಾಊರ. ೪೭-೭೭). ಟೆಂಗು : ಟೆಂಗು ಬಾಳೆಹಣ್ಣು ... ದ್ರಾಕ್ಷೆ ತಂದಿಹರು (ಸಿದ್ಧಪು. ೧೯-೮) ; ದೂರದ ದ್ವೀಪದ ಮೇಲಿನ ಟೆಂಗಿನಗಿಡಗಳು ... ಗೊಂಬೆಗಳಂತೆ ನಿಂತಿದ್ದವು (ಭೂಮಿತಾ. ೮೧).

ತೆಂಗಿನಕಾಯ್, ಟೆಂಗಿನಕಾಯಿ, ತೆಂಗಿನಕಾಯಿ = ತೆಂಗಾಯ್ : ತೆಂಗಿನಕಾಯುದೊಂದು ಕಠಿನತ್ವಮನೊರ್ಮೆಯೆ ಕಂಡು ಪೊಲ್ಲದೆಂದೇಂ ಗಳ ಬೆಚ್ಚಿ ಭೀರುತನದಿಂ ಬಿಡದೊಯ್ಯನೆ ಮೂಸಿ ನೋಡಿ ನಾಯ್ಪೊಂಗಿದುದು (ಧರ್ಮಾಮೃ. ೧೧-೪೩) : ಅಕ್ಕಿಯುದಕೆ ಓಲೆ ತೆಂಗಿನಕಾಯಿ ಕಂಡೆ (ಮಹಾದೇ. ಬ. ೪೦-೮೭) : ಈಚೆಗೆ ಟೆಂಗಿನಕಾಯಿ ಬಹಳ ತುಟ್ಟಿ ಆಗಿವೆ (ರೂಢಿ) : ತೆಂಗಿನ ಕಾಯಿ ಹೋಳ ಮಾಡಿದರು ಜೂದಿನಲಿ (ಮೋಹತ. ೨೦-೨೨) ; ಅಡಿ ಬಾ ಎನ ಕಂದ ಅಂಗಾಲ ತೊಳದೇನ ತೆಂಗೀನ ಕಾಯಿ ತಿಳಿನೀರ ತಕ್ಕೊಂಡು ಭಂಗಾರ ಮಾರಿ ತೊಳದೇನ (ಗರತಿ. ೮೭) : ಉಪ್ಪಿನವ ಕೆಟ್ಟೆನೆಂದರೆ ತೆಂಗಿನಕಾಯುವ ಹೊರಳಿ ಹೊರಳಿ ಅತ್ತ (ಗಾದೆ). ತೆಂಗಿನ ತಿರುಳೋಲೆ = ತೆಂಗಿನ ಎಳೆಯ ಗರಿಯಿಂದ ಮಾಡಿದ ಓಲೆ : ಮಂಗಳ ಪ್ರಸಾಧನವೆಸೆದತ್ತು ಕಪ್ಪುರದ ಕಂಠಿಕೆ ಬಣ್ಣದ ಸಣ್ಣ ಮಾಲೆ ತೆಂಗಿನ ತಿರುಳೋಲೆ ತಾವರೆಯ ನೂಲುಡೆನೂಲ್ (ಪಂಪಾಮಾ. ೩-೧೦೭) ; ಪೂವಿನ ಕಂಕಣ ತೆಂಗಿನ ತಿರುಳೋಲೆ ತಾವರೆನೂಲುಡೆನೂಲು ... ಭೂಷಾವಳಿಯಾದುದವಳಿಗೆ (ಕುಠಾಸಾಂ. ೮-೫೪). ತೆಂಗಿನ ಮರ = ಒಂದು ಬಗೆಯ ಮರ : ತೆಂಗು : ಎಲೆಯುದಕೆಯುಮಂ ತೆಂಗಿನೆಳನೀರುಮಂ ಕೊಳಲಿಂಬಪ್ಪಂತಿರೆ ಮಾಡಿ ನಟ್ಟ ಕೌಂಗಿನ ತೆಂಗಿನ ಮರಂಗಳುಮಂ (ಪಂಪಭಾ. ೫-೪೭ ವ) ; ತೆಂಗಿನ ಮರ ಯಾಕೆ ಹತ್ತುತ್ತಿ ಎಂದರೆ ಬೆಕ್ಕಿಗೆ ಹುಲ್ಲು ಕುಯ್ಯೋದಕ್ಕೆ ಅಂದ (ಗಾದೆ) ; ತೆಂಗಿನ ಮರಕ್ಕೂ ಅಡಿಕೆ ಮರಕ್ಕೂ ಒಂದೇ ತಳಿಯೇ ? (ಗಾದೆ). ತೆಂಗಿನ ಹಣ್ಣು = ಬಲಿತ ತೆಂಗಿನಕಾಯಿ ; ತಳಲು : ಅಕ್ಕ ಕರಿಯವ್ವ ತಂಗೀಯು ಭದ್ರಕಾಳಿ ತೆಂಗಿನ ಹಣ್ಣಾ ಒಲೆ ಹೂಡಿ ಅಟ್ಟಲ್ಲೊ ... ಅಡಿಗೇಯಾ (ಹುಟ್ಟಿಹ. ೪೫). ತೆಂಗಿನೋಲೆ = ತೆಂಗಿನ ತಿರುಳೋಲೆ : ಮುಡಿದ ಪಾದರಿ ತೊಟ್ಟೆಳಮುತ್ತು ಸುತ್ತಿನೊಳ್ ಮಾಸದ ತೆಂಗಿನೋಲೆ ... ಸಂದ ಭೋಗಿಗೆ ವಿಲಾಸದ ದೇಸೆಯನುಂಟುಮಾಡುಗುಂ (ಸೂಕ್ತಿಸು. ೦೦-೦೩೯).

[ ದೇ.೫ ತಮಿ. ತೆಙ್ಕು, ತೆಙ್ಕ ; ಮಲ. ತೆಙ್ಙು; ತುಳು. ತೆಂಗ್ ; ಕೊಡ. ತೆಂಗೆ ]

ತೆಂಗುಗಱಿ (ನಾ.) ತೆಂಗಿನ ಗರಿ, – ಸೋಗೆ ತೆಂಗುಗಱಿ ಕೊಡೆಯಿರ್ದ ಕಡಲುಲಿಯ ಮನೆಯೇ (ಅಶ್ವಶಾ. ೩೫-೭೭೦). [ ತೆಂಗು$_3$ + ಗಱಿ ]

ತೆಂಗುಗಾಯ್ 'ತೆಂಗಾಯ್' ನೋ.

ತೆಂಗುದಿ (ನಾ). ಕೆಂಪು ಬಣ್ಣದ ಪ್ರಾಣಿ : ಹರಿಣ–ಎರಳೆ, ಶಶ–ಮೊಲ, ಲೋಹಿತ–ತೆಂಗುದಿ (ಬಾಹಟೀ. ೨-೨-೬೨ ವ).

[ ? ಇದು 'ಕೆಂಗುಱಿ' ಇರಬಹುದೆ ? ]

ತೆಂಗುಹ 'ತೇಂಗುಹ' ನೋ.

ತೆಂಟು, ತೆವಟು (ಕ್ರಿ). ಮೊರದಿಂದ ಕೇರು : '' ತೆಂಟು–ಶೂರ್ಪಕರಣೀ (ಕೇರು) '' (ಶಮಧಾ). ತೆವಟು : (ಶ).

[ ದೇ.೫ ತಮಿ. ಮಲ. ತೆಳ್ಳು ; ಕುರುಖ್. ತೆಲ್ನಾ ; ಮಾಲ್ತೊ. ತೇಲೆ ]

ತೆಂಟೆ (ನಾ). ಜೂಜುಕಟ್ಟೆ: ಕಂಡನವಂ ತೆಂ[ಪಾಠಾಂ. ತೇಂ, ದೀಂ] ಟೆಯೊಳಿಂದು ಜೂಜಾಡುವನಂ (ಪಾರ್ಶ್ವಪು. ೪-೨೦). 'ತಿಂಟೆ' ಪರಾ.

[ < ಪ್ರಾ. ಟೆಂಟಾ ]

ತೆಂಡೆ 'ತೆಟ್ಟೆ' ನೋ.

**ತೆಂಡೆಸುತ್ತು** (ಕ್ರಿ). ಬೆಳೆಯುತ್ತಿರುವ ಕಬ್ಬಿನ ಜಲ್ಲೆಗಳು ಕೆಳಗೆ ಬೀಳದಂತೆ ಗರಿಗಳಿಂದ ಸುತ್ತಿಕಟ್ಟು : (ಕಿ).

[ ತೆಂಡೆ (< ತೆಟ್ಟೆ) + ಸುತ್ತು$_1$ ]

**ತೆಂದೆಸೆ** (ನಾ). = ತೆಂಕದೆಸೆ: ಬಲಿತನವನು ಜಡವಾಗಲ್ ಸಲೆ ತನ್ನಯು ನೆಳಲು ತೆಂದೆಸೆಗೆ ಪೋಗುವದಂ ಛಳಿಲನೆ ಕಾಣಲ್ ಪ್ರಾಣಂ ಅಳಿವುದು ತಾ ಸತ್ಯವೈದುದಿನದೊಳಗೆ (ಪಂಚತ. ೪೮-೩೨). [ ತೆಂ + ದೆಸೆ ]

**ತೆಂಪು** (ನಾ). ಶೌರ್ಯ ; ಸಾಹಸ : ತೆಂಪಿನಿಂದ್ಯತರ:ವಕಂಪನನ ಧರಕೆ ಭೂಕಂಪವವಾಗಲ್ಬವನತನಯು ಕೋಪದಲಾ ನಿಲಿಂಪತತಿ ಸಂತಸಂಗೊಳುವಂತೆ ದೈತ್ಯನಂ ಸಂಹರಿಸಿದಂ ರಣದೊಳು (ವೆಂಕಾರಾ.. ೬-೨೦ ಸೂಚನೆ). [ ದೇ.॥ ತಮಿ. ತೆವ್ವು ; ತೆಲು. ತೆಂಪು ]

**ತೆಂಪುಗಾರ** (ನಾ). ದುಂದುಗಾರ (?): ಅಂಥ ತೆಂಪುಗಾರನಾದ ನೀನು ನಮ್ಮ ಸಾಲವನ್ನು ಹೇಗೆ ತೀರಿಸುವಿ (ಕಥಾಮಂ. IV, ೪).

[ ತೆಂಪು? + – ಗಾರ (< – ಕಾರ) ]

**ತೆಂಬ** (ನಾ). ತಿಟ್ಟು ; ದಿಣ್ಣೆ ; ತೆವರು : ಬೆಟ್ಟಕ್ಕಿಂತಲೂ ಚಿಕ್ಕದಾದರೆ ಗುಡ್ಡ, ದಿಣ್ಣೆ, ಬೋರೆ, ತೆಂಬ, ತೆವರು ಎಂಬ ಹೆಸರುಗಳು ಬರುತ್ತವೆ (ಭೂಗೋಳ. ೧೧) ; ಇಬು ಮಾಡ್ಯಾರ ಆನೆಗೇರಿ ತೆಂಬೊಳ್ಳೇದೆಂದೂ ಇಳಿದಾರ (ಕಜಾಗೀ. ೪೯) ; ಆ ಎತ್ತುಗಳು . . . ತಿಪಟೂರು ಕುಣಿಗಲು ಗಳಿಗೆ ಕಾಯಿ ಕೊಬರಿ ಬೆಲ್ಲ ತುಂಬಿದರೆ ಎಂಥ ತೆಂಬದಲ್ಲಿಯಾದರೂ ಸಲೀಸಾಗಿ ಎಳೆಯುತ್ತಿದ್ದುವು (ವನ್ಯಾರು. ೩೫). [ ? ]

**ತೆಂಬಾಲ** (ನಾ). ಒಂದು ಪ್ರದೇಶದ ಹೆಸರು (?): ಬಸದಿಯ ಪೂಜಗಣ ಪಿತ್ತಿಲೋದ್ದಣ್ಣವುಮುಂ ತೆಂಬಾಲದೊಳು . . . ಕೊಟ್ಟ ಮಣ್ಣು (ಎಕ. X. ಕೋಲಾರ. ೯೦-೯೦ ; 903). [ ? ]

**ತೆಂಬುಬ್** (ನಾ). (?) : ತೆಂಬುಬ್ [ ಪಾಠಾಂ. ಪೆಂಪುಳಿ ] ಯೋಪಗ್ಗದನೇಕ ಭಂಗಿಯ ನವೀನಸ್ವಾದುವೆತ್ತುರ್ಪುಗಾಯ್ಗುಳನಾಳೋಕಿಸಿ ತಂದು ಬಡ್ಡಿಸಿದರ್ (ಶಾಂತೀಶ್ವ. ೧೫-೭೦). [ ? ]

**ತೆಂಬೆರಲ್** ' ತೆಂಬೆಲರ್ ' ನೋ.

**ತೆಂಬೆಲತ್ತುಪಳ್ಳ** (ನಾ). ಒಂದು ಪ್ರದೇಶದ ಹೆಸರು (?) : ಕೆಱೆಯ ಕೆಟಗೆ ತೆಂಬೆಲತ್ತುಪಳ್ಳ ಕಟನಿ ಮೂಗಣ್ಣುಗವಡೆ (ಎಕ. X ಕೋಲಾರ. ೯೦-೮೮ ; 903). [ ? + ಪಳ್ಳ ]

**ತೆಂಬೆಲರ್, ತೆಂಬೆರಲ್, ತೆಂಬೆಲರು** (ನಾ). = ತೆಂಗಾಳಿ : ಊದುವ ತೆಂಬೆಲರಿಂ ಬೆಡಂಗುವೆತ್ತು (ಎಕ. XIII, ೩೩೦-೨೮ ; 929) ; ಬೀಸಿದುದು ತೆಂಬೆಲರಪ್ಪಿಕೊಳ್ವಪೊಲ್ (ಆದಿಪು. ೨-೬೫) : ತೆಂಬೆಲರಲೆಪದ ಪೂಲತೆ ಯೆಂಬಿನಮುಂಕುರಿಸೆ ಪುಳಕಮೊರ್ಮೊದಲೊಳೆ ಬಿಲ್ಲುಂಬೆಜಗುಮಾಗಿ ಸತಿ ಚೋದ್ಯಂಬಟ್ಟಳ್ (ಶಾಂತಿಪು. ೧೦-೭) : ಮೆಲ್ಲಗೆ ನಡೆದಪ್ಪುದು . . . ತೆಂಬೆಲರ್ (ವರ್ಧಪು. ೧-೬೬) ; ಪೂಗಳ ಪೊಸಗಂಪಿನೊಳ್ ಪೊರೆದು ಕೀಡುವ ತೆಂಬೆಲರಂತೆ . . . ಸೋಲಿಸದೆ ಕಾವನ ಕಬ್ಬುಮದಾರನಾದೊಡಂ (ಕಬ್ಬಿಗಕಾ. ೦೪): ತೆಂಬೆಲರ್ ತೀಡೆ ತುಂಬಿಗಳಾಡೆ (ಶ್ರೀರಾಮಾ. ೪೯೬-೨೯೭) **ತೆಂಬೆರಲ್** : ಬಂದಾಡುವ ತೊಂಡುವೆಣ್ಬುರುಳಿ ಕೀಡುವ ತೆಂಬೆರಲ್ (ಪಂಪಭಾ. ೩-೩೭) ; ತೆಂಬೆರಲ್ ಪೊರೆಪೊರೆಯ ಸಡಿಲ್ವೆ ಸಡು ಪೊಂಗಿರೆ ಮಲ್ಲಿಗೆಗಳ್ ಬಸಂತದೊಳ್ ಬಿರಿದೊಡೆ (ಪಂಪಭಾ. ೫-೩೩) ; ಪಾರದೆ ವಸಂತಮುಂ ಕೈವಾರದೆ ತೆಂಬೆರಲ[ ಪಾಠಾಂ. ತೆಂಬೆಲರ]ನಾ ಮುನೀಶನ ಬರವಿಂ ಪಾರ್ಶ್ವಸಿದಂದದಿಂ ಸಹಕಾರಂ ಪಾಳ್ದಿತ್ತು ಪುಳಕಮೆನೆ ಕಳಿಕೆಗಳಂ (ಚಂದ್ರಪು. ೨-೯೦). **ತೆಂಬೆಲರು** : ತೆಂಬೆಲರೊಯ್ಯನೆ ತೀಡೆ ನಿದ್ರಾಂಗನೆ ಗಿಂಬುಗೆಯ್ದನು ತನ್ನೊಡಲ (ಕರ್ಣವೃ. ೪-೫). [ತೆಂ + ಎಲರ್]

**ತೆಂಬೆಲರು** 'ತೆಂಬೆಲರ್' ನೋ.

**ತೆಕಿಮುಕ್ಕಿ** 'ತಕ್ಕೆಮುಕ್ಕೆ' ನೋ.

**ತೆಕಿಮುಕ್ಕಿಬೀಳು** 'ತೆಕ್ಕೆಮುಕ್ಕಿಬೀಳು' ನೋ.

**ತೆಕ್ಕನೆ** (ಅ). ೧. ತಕ್ಷಣ; ಕೂಡಲೆ; ಒಡನೆ: ಆತನ ಭಾವ ಭಣಿತೆಯನಾಜೀವ ಪೊಲು ನಾನೊಂದುಪಾಯವನು ತೀವಿ ತೆಕ್ಕನೆ ಸಿಕ್ಕಿಸುವೆನು (ಪ್ರಭುಲೀ. ೨೦-೪) ; ಅಸುರರ ಸಂತತಿಯುಂ ಮುಂ ತೀವಿದ ಕೃತಕಧ್ವಾಂತಮುಮಾ ಜಯಭೂಪತಿ ದಿನಕರಶರಮುಂ ಬಿಡಲೊಡನೆ ತಾಂ ತೆಕ್ಕನೆ ಪರೆದತ್ತು (ಜಯನೃಕಾ. ೭-೩೩): ಏನು ತೆಕ್ಕನೆ ಚಿಂತಾಗ್ರಸ್ತರಾದಿರಿ? (ಚಂದ್ರಸ. ೧೨): ದಾಳಿಂಬೆಹಣ್ಣನು ತಿನ್ನುವ ಕವಿ ಅದನ್ನು ತಿನ್ನುತ್ತಾ ತೆಕ್ಕನೆಯೇ ಆ ಸವಿಯ ಮೂಲಕ್ಕೆ ಹೊರಟಿರುವುದು ಇದರ ವಿಶೇಷ (ಸೌಂದಸ. ೩೩). ೨. ಹೆಚ್ಚಾಗಿ; ಅತಿಶಯವಾಗಿ; ಅಧಿಕವಾಗಿ; ಬಹಳವಾಗಿ: ಆ ಶಿಶುವಿನಟ್ಟೆ ತೆಕ್ಕನೆ ತೀವಿತ್ತನಿತುಂ ದಿಕ್ತಟಮುಂ (ಜಗವಿ. ೩-೧೨); ಜನನಿಯ ಶರೀರದೊಳ್ ತೆಕ್ಕ[ಪಾಠಾಂ. ಕ್ಕೆ]ನೆ ತೀವಿದ ರಾಗರಸದೊಳೋಲಾಡಿಯೆ . . . ಬಳೆವಂತೆ (ಚಂದ್ರಪು. ೩-೯೯): ಆ ರವದುಗ್ಗ್ರಸಿಯಲ್ಲಮುಂ ತೆಕ್ಕನೊತ್ತರಿಸಿ ತೀವಿರೆ (ಧರ್ಮಪ. ೩-೩).

**ತೆಕ್ಕತೆಕ್ಕನೆ** (ದ್ವಿರುಕ್ತಿ) : ಕಾಳೋರಗನಿಶ್ವಾಸಾನಿಳನಿಂ ಜಗುನೆಯ ಮಡು ತೆಕ್ಕತೆಕ್ಕನುಕ್ಕುತಿರ್ಕುಂ (ಅರ್ಧನೇ. ೮-೪೧) ; ಕಮಂಡಲಜಲಂ ತೆಕ್ಕತೆಕ್ಕನೆ ಕುದಿಯೆ (ಹರಿಕಾ. ೨-೩೬) ; ಪದಪದಾರ್ಥಂಗಳು ಪಠನಕಾಲದೊಳೊಡನೊಡನೆ ತೆಕ್ಕ[ಪಾಠಾಂ. ಕ್ಕು]ತೆಕ್ಕನೆ ಕುದಿಯೆ (ಬಸವು. ೩೭-೪೭): ಜಲಕ್ಕನಾದಾನಂದರಸಭರಿತನೇತ್ರದಿಂ ತೆಕ್ಕತೆಕ್ಕನೆ ಸೆಗೆವುತಿರ್ಪ ಬೆಮರ್ವನಿಗಳಿಂದಿರದೆ ಸೆರೆ ಬಿಗಿವ ಕೊರಲಿಂ...ಮೆಯ್ಯಿಕ್ಕಿ (ಪದ್ಮರಾ. ೫-೨೫). **ತೆಕ್ಕನೆ** ತೀವು=ಜಡಿದು ತುಂಬು; ಅಂಚು ಮುಟ್ಟ ತುಂಬು: ಕರಿಯ ಕರಗಮುಂ ತೆಕ್ಕನೆ ತೀವಿ (ವರ್ಧಮಾರಾ. ೧೦೩-೨೭); ತೆಕ್ಕನೆ ತೀವಿದ ಕಣ್ಣ ನೀರೊಳ್ ದೆಸೆಗಾಣದೆ ನಿಂದಿರ್ದ ಸುಯೋಧನನಂ ಸಂಜಯನಿಂತೆಂದಂ (ಪಂಪಭಾ. ೧೩-೩೭ ವ); ಮನದೊಳ್ ತೆಕ್ಕನೆ ತೀವಿದೊಂದು ಪರಮಸ್ನೇಹಾಮೃತಂ ಕಣ್ಗಳಿಂದೆನಸುಂ ಪೊಣ್ಮಿದುದೆಂಬಿನಂ ಸುರಿವಿನಂ ಹರ್ಷಾಶ್ರು (ಜಗವಿ. ೬-೮೫); ಹೊಕ್ಕಳು ಗುಣ್ಣುಗೆಟ್ಟುದು ಪೊಡಲೊಳು ಶಿಶು ತೆಕ್ಕನೆ ತೀವಿ ಜೀವಿಸಲು (ಮೋಹತ. ೧೭-೭). [ ? + – ಅನೆ$_1$]

**ತೆಕ್ಕನೆವೋಗು** (ಕ್ರಿ). ೧. ವಿಸ್ಮಯಪಡು; ಆಶ್ಚರ್ಯಗೊಳ್ಳು : ಆ ಭವದೊಳ್ ನೀಂ ವನಚರನೆ ಎನಲೊಡಂ ತೆಕ್ಕನೆವೋದಂ ಜನ್ಮನಾಟಕಕ್ಕವನೀಶಂ (ಅರ್ಧನೇ. ೪-೫). ೨. ಗಾಬರಿಯಾಗು : ಇತ್ತ ಲೀಲಾವತಿ ನಿಜವಲ್ಲಭಂ ಮಲ್ಲಿಕಾಮುಂಡಪದೊಳಿಲ್ಲದುದಂ ಕಂಡು ತೆಕ್ಕನೆವೋಗಿ (ಲೀಲಾವ. ೦೪-೦೧೭ ವ). [ <ತೆಕ್ಕು$_2$ + ಪೋಗು$_1$ ]

**ತೆಕ್ಕಾಡು** 'ತೇಂಕಾಡು' ನೋ.

**ತೆಕ್ಕಾಮುಕ್ಕಿ** 'ತಕ್ಕೆಮುಕ್ಕೆ' ನೋ.

**ತೆಕ್ಕಾಮುಕ್ಕಿಬೀಳು** 'ತೆಕ್ಕಿಮುಕ್ಕಿ ಬೀಳು' ನೋ.

**ತೆಕ್ಕಿಮುಕ್ಕಿ** 'ತಕ್ಕೆಮುಕ್ಕೆ' ನೋ.

**ತೆಕ್ಕಿಮುಕ್ಕಿಬೀಳು, ತೆಕಿಮುಕ್ಕಿಬೀಳು, ತೆಕ್ಕಾಮುಕ್ಕಿಬೀಳು** (ಕ್ರಿ). ೧. ಬಲವಾಗಿ ತಬ್ಬು; ಗಟ್ಟಿಯಾಗಿ ಅಪ್ಪಿಕೊಳ್ಳು: ನಿಮ್ಮ ತಾಯಿ ಪುನರ್ಜನ್ಮವನ್ನು ಹೊಂದಿದ್ದಾಳೆ ಬಹಳ ಹೊತ್ತು ತೆಕ್ಕಿಮುಕ್ಕಿಬೀಳಬನ್ನಿರಿ (ಉರಾಣ. ೦೩೦) : ಮುಳುಗುವವನು ಬೆಂಡಿಗೆ ತೆಕ್ಕಿಮುಕ್ಕಿಬಿದ್ದಂತೆ ಏನನ್ನಾದರೂ ಹಿಡಿಯ ಹೋಗುವನು (ಬಾಳಬ. ೨೬). ೨. (ಅಲಂ) ಕೂಡಿಕೊಂಡು ಬರು ; ಜೊತೆಯಲ್ಲಿ ಬರು : ಇತ್ತೀಚಿನ ಆರು ವರ್ಷಗಳಲ್ಲಿ ಮತ್ತೆ ಸುಖ ದುಃಖ ತೆಕ್ಕಿಮುಕ್ಕಿಬಿದ್ದು ಬಂದಿವೆ (ಕಂನಾಸಾ. ೦೦೮). **ತೆಕಿಮುಕ್ಕಿಬೀಳು** : ೧. ಮುಳುಗುವವ ಬೆಂಡಿಗೆ ತೆಕಿಮುಕ್ಕಿಬಿದ್ದಾಂಗ (ಗರಿ. ೦೦೦-೪). **ತೆಕ್ಕಾಮುಕ್ಕಿಬೀಳು** : ೧. ಪಂಕಣ್ಣವಾಸ್ತರರನ್ನು ಮತ್ತ ಕುಂತಿ ಗಾಂಧಾರಿಯರು ತೆಕ್ಕಾಮುಕ್ಕಿ ಬಿದ್ದಿದ್ದರು (ದೀಪಹ. I, ೪೯).

[ತೆಕ್ಕಿಮುಕ್ಕಿ ( <ತಕ್ಕೆಮುಕ್ಕೆ) + ಬೀಳು$_1$ (< ಬೀೞ್$_1$)]

**ತೆಕ್ಕಿಸು** 'ತೆಟ್ಟಿಸಂ' ನೋ.

**ತೆಕ್ಕು₁** 'ತೇಗು₁' ನೋ.

**ತೆಕ್ಕು₂** (ಕ್ರಿ). ೧. ಅಂಜಂ; ಹೆದರು; ಭಯಂಪಡು : ಮುನಿದೊಡಂ ಮುಟ್ಟಿ ನೋಯಿಸಿದಡಂ ತೆಕ್ಕನೀತನನೆಂತು ಹುಸಿಯ ನುಡಿಸುವೆನೆಂದು ಚಿಂತಿಸುತ (ಹರಿಶಾ. ೮-೪೩); ಕಾಡುವಂ ಶಿವನಂತರ್ದೆ ತೆಕ್ಕದ ಭಕ್ತ ರಾಡಿದುಕ್ತಿಯನೆ ಮನ್ನಿಸುತ (ಪದ್ಮರಾ. ೩-೯); ಮನೋಜನ ಸಡಗರಕ್ಕೆ ತೆಕ್ಕೆದಳು...ಬೆಚ್ಚಿದಳಂಗಜಾಸ್ತ್ರದಲಿ (ಕುಮಾ.ಅ. ೮-೨೦); ತೆರಳದ ತೆಕ್ಕದ ತೆಜಿಹುಗೊಡದ ರಾಮನಿರೆ ಮುಚ್ಚಿದರು ದೇವತೆಗಳು (ಕುಂರಾಸಾಂ. ೨೦-೨೪). ೨. ಹಿಮ್ಮೆಟ್ಟು; ಸೋಲಂ: ಎಂತಪ್ಪ ವಿದ್ವಾಂಸರುಂ ತನಗೆ ತೆಕ್ಕುವರ್ (ಸಾಮರ.ಹ. ೨೩೮-೧); ಹಿಡಿ ಗುದಿಗಾಲ್ಗಳಂ ಕಟ್ಟಿ ಗೋತವಮಂ ತೆಗೆ ತೆಕ್ಕದೊಡೆ ಕುತ್ತಿ ಕೆಡಹು (ಸಿಂಗಿರಾ. ೩-೧೮); ಸಿಡಿಲ ಪೊಡರ್ಪು ತೆಕ್ಕುವಂತು ಗುಡುಗುಡಿಸಿ ಗುಡುಗಿ ಬೊಬ್ಬಿಜಿದಂ ಕಲಿಯುಣಾಮಂ (ರಾ ಪಾ ಶ. ೧೩೦-೩೦). ೩. (?): ನಿಜು ತೆಕ್ಕದ[ದ]ರಳೆ ತೆರೆಗಳ್ ಪೊಜವಾಜಂ ಭೋಂಕನಪ್ಪ ಘನನಾಣ್ಗೊಡೆಯುಂ ನಿಜು ಸೋಂಕಿ ಸೋಂಕಿ ಕೊಳನಂ ತುಜುಗೆವೆಗಳ್ ತುಜುಗೆ ಪೊಕ್ಕುದಬಲಾನೀಕಂ (ಸೂಕ್ತಿಸು. ೧೨-೨೩).

**ತೆಕ್ಕು₃** (ಕ್ರಿ). (ಪ್ರಾಣಿಗಳಂತೆ) ನವೆಗೆ ಮೈ ನೆಕ್ಕಿಕೊಳ್ಳು: "ತೆಕ್ಕು-ತಿರ್ಯಕ್ಕಂಡೂತಿ ಲೇಹನೇ (ನವೆಗೆ ನೆಕ್ಕು)" (ಶಮದಾ).

[P ಇದು 'ತಿಕ್ಕು' ಎಂಬುದರ ಅಪಲಿಪಿತವಿರಬಹುದು]

**ತೆಕ್ಕೆ₁** 'ತಟ್ಕೆ' ನೋ.

**ತೆಕ್ಕೆ₂** 'ತೆಕ್ಕು₃' ನೋ.

**ತೆಕ್ಕೆಗಟ್ಟು, ತಕ್ಕೆಗಟ್ಟು₁** (ಕ್ರಿ). ೧. ಸಂರುಳಿಗಟ್ಟು; ಸುರುಳಿ ಸುತ್ತು; ಸಿಂಬೆ ಸುತ್ತು: ಕುಂಡಲೀ, ಜಹ್ಮಗಃ—ಈ ೨ ತೆಕ್ಕೆಗಟ್ಟಿದ ಹಾವು (ಹಲಾಯು. ೦೦೫-೦೯); ತಲೆಸುತ್ತ ತೆಗೆದೊಡನೀಡಾಡಲಾ ಕೇಶ ನೆಲದೊಳಿರ್ದುದು ತೆಕ್ಕೆಗಟ್ಟಿ (ಭರತ. ೭೦-೯೨). ೨. ರಾಶಿಯಾಗು; ದಟ್ಟೈಸಂ; ಸಂದಣಿಸು : ಪರಿಪೆಯ ತೆರೆಪೊಯ್ಲಿಂದಂ ತೆರಳ್ದು ತಡಿವಿಡಿದು ತೆಕ್ಕೆಗಟ್ಟಿದ ಪೊಂದಾವರೆಯು ರಜದಂತೆ (ಮಲ್ಲಿಪು. ೨-೬೪) : ಹೊಡಕರಿಸಿ ಹೊದಜಿದ್ದು ಮುಂದಕ್ಕೆ ನಡನಡೆದು ಕೈ ಮಾಡಿ ಕಾಯದ ತೊಡಕನೊಲ್ಲದೆ ತೆಕ್ಕೆಗ[ಪಾಠಂ. ಗೆ]ಟ್ಟಿತು ಭಟರು ನಾಕದಲಿ (ಕುಮಾ.ಭೀ. ೯-೧೮). ೩. ಒಂದ ರೊಡನೊಂದಂ ಬೆರೆ; ಕೂಡಂ; ತೊಡಕಂಹಾಕಿಕೊಂಡಿರು : ತೆಕ್ಕೆಗಟ್ಟಿರ್ದ ಫಣಿಪತಿಯ ಭಾವದಿಂದೆಸೆವ ಬಜ್ಜರವರಲ ಬಾಹುಪೂರಕ (ಸೌಂದಪು. ೭-೨೭). **ತಕ್ಕೆಗಟ್ಟು₁** : ೪. ಒಟ್ಟಿಗೆ ಸೇರಿಸಿ ಕಟ್ಟು; ಪಿಂಡಿ ಮಾಡು : ಆ ಹುಲ್ಲಿಲ್ಲವನ್ನೂ ತಕ್ಕೆಗಟ್ಟು (ರೂಢಿ).

[ತೆಕ್ಕೆ₁ (<ತಟ್ಕೆ) + ಕಟ್ಟು₁]

**ತೆಕ್ಕೆಗೆಡಿಸು** (ಕ್ರಿ). ಗುಂಪುಗೆಡಿಸು; ಚೆದರಿಸು : ಕಕ್ಕಸದೊಳಕ್ಕತುಳಕ್ಕೆತಂದ ವೀರರಂ ಮುಕ್ಕುರಿಕಿ ತೆಕ್ಕೆಗೆಡಿಸಿದಂ (ಜೈಮಿಭಾ. ೧೪-೬).

[ತೆಕ್ಕೆ₁ (<ತಟ್ಕೆ) + ಕೆಡಿಸು₁]

**ತೆಕ್ಕೆಗೆಡೆ** (ಕ್ರಿ). ಗುಂಪಾಗಿ ಬೀಳು; ರಾಶಿಯಾಗಿ ಬೀಳಂ : ವಿಕ್ಕು ನೂಕುವ ಕುದುರೆಕಾಜಿರು ತೆಕ್ಕೆಗೆಡೆದರು ಸಂದಣಿಸಿ ಕೈಯಿಕ್ಕಿದಾನೆಯ ನೇನನೆಂಬೆನು ಕಾಡೆನಳವಿಯಲಿ (ಕುಮಾ.ದ್ರೋ. ೫-೩).

[ತೆಕ್ಕೆ₁ (<ತಟ್ಕೆ) + ಕೆಡೆ₁]

**ತೆಕ್ಕೆಗೆಯ್** 'ತಟ್ಕೆಗೆಯ್' ನೋ.

**ತೆಕ್ಕೆಗೈ** 'ತಟ್ಕೆಗೆಯ್' ನೋ.

**ತೆಕ್ಕೆಗೈಸು** (ಕ್ರಿ). ಅಪ್ಪುವಂತೆ ಮಾಡು; ತಬ್ಬಿಸು: ನಿನ್ನ ಉರಿವ ಗಾಜಿನ ಕಂಭಕೆ ತೆಕ್ಕೆಗೈಸಿ ಪರಿಭವದೊಳು ಬಳಲುವಾಗ ಹರಿಪುರುಷೋತ್ತಮನ ನಾಮ ನೆನೆಗೊಡದಲೆ ಮನ (ಪುರಂದ. ೧-೧೪೨-೬).

[ತೆಕ್ಕೆಗೈ (< ತಟ್ಕೆಗೆಯ್) + – ಸು₁]

**ತೆಕ್ಕೆಗೊಳ್** 'ತಟ್ಕೆಗೊಳ್' ನೋ.

**ತೆಕ್ಕೆಗೊಳ್ಳು** 'ತಟ್ಕೆಗೊಳ್' ನೋ.

**ತೆಕ್ಕೆಗೋಲ್** (ನಾ). ಗುಂಪಾಗಿ ಬರುವ ಬಾಣ : ಹೊಕ್ಕವಾನೆಗಳೆರಡು ಸೇನೆಯೊಳೊಕ್ಕಲಿಕ್ಕಿದವೆಸುವ ಜೋದರ ತೆಕ್ಕೆಗೋಲಿನ ಮಾಲೆ ಮುಕ್ಕುಳಿಸಿ ದವು ದಿಗುತಟವ (ಕುಮಾ.ಭೀ. ೪-೭೫). [ತೆಕ್ಕೆ₁ (<ತಟ್ಕೆ) + ಕೋಲ್₁]

**ತೆಕ್ಕೆತುರುಬು** 'ತೆಕ್ಕೆದುಱುಂಬು' ನೋ.

**ತೆಕ್ಕೆದುಱುಂಬು, ತೆಕ್ಕೆತುರುಬು, ತೆಕ್ಕೆದುಱುಬು** (ನಾ). ಸುರುಳಿ ಸುತ್ತಿ ಕಟ್ಟಿದ ಮುಡಿ: ತೆಕ್ಕೆದುಱುಂಬಿನ ತೊಂಡಿಲು ಮಣಿಬಲ ಚೊಕ್ಕ ಬೊಟ್ಟಿಕ್ಕಿದ ರವಕೆ ಇಕ್ಕಿ ಲೆಕ್ಕಿಸಿ ತಿದ್ದಿ ನಿಜುವಿಡಿದುಡಿಸಿದ ಸುಕ್ಕಿನಂಬರದೊಳೆಸೆದರು (ಭರತ. ೩೦-೯೦). **ತೆಕ್ಕೆತುರುಬು** : ಅದ್ದ ಮುಡಿ, ಸೋರುಮುಡಿ, ದೊಡ್ಡಮುಡಿ, ತೆಕ್ಕೆತುರುಬು ಮುಂತಾದ ಶೃಂಗಾರದ ತುರುಬುಗಳನ್ನು ತೋರದೆ ಬೇಸರುಮುಡಿಗಟ್ಟಿ ಬಂದರು (ಮಾಮಲ್ಲಿ. ೧೨೫). **ತೆಕ್ಕೆದುಱುಬು** : ಅದ್ದಮುಡಿಯು ಸೋರುಮುಡಿಯು ಸೊನ್ನಾರದ ದೊಡ್ಡಮುಡಿಯು ತೆಕ್ಕೆದುಱುಬು ಒದ್ದುದೋಜದೆ ಬಿಟ್ಟು ಬೇಸಱುಮುಡಿಗಟ್ಟಿ...ಐತಂದರು (ಭರತ. ೦೬-೨೪).

[ತೆಕ್ಕೆ₁ (<ತಟ್ಕೆ) + ತುಱುಂಬು₂]

**ತೆಕ್ಕೆದುಱುಬು** 'ತೆಕ್ಕೆದುಱುಂಬು' ನೋ.

**ತೆಕ್ಕೆಬಡಿ** (ಕ್ರಿ). ಗುಂಪಾಗಿ ಬೀಳಿಸಂ; ರಾಶಿಯಾಗಿ ಕೆಡವು : ಅದ್ದ ಮಳೆ, ಸದ್ದು ಹೊಡೆಯುವ ಸಿಡಿಲು, ಸಿಕ್ಕುದನು ತೆಕ್ಕೆಬಡಿಯುವ ಗಾಳಿ (ನೆಲಮು. ೭೦-೧೧). [ತೆಕ್ಕೆ₁ (<ತಟ್ಕೆ) + ಬಡಿ₁]

**ತೆಕ್ಕೆಬೀಳು** 'ತೆಕ್ಕೆಬೀಳಂ' ನೋ.

**ತೆಕ್ಕೆಯಾಡು** (ಕ್ರಿ). ಗುಂಪುಗುಂಪಾಗಿ ಚೆಲ್ಲಾಪಿಲ್ಲಿಮಾಡು; ಗುಂಪು ಗುಂಪಾಗಿ ನಾಶಗೊಳಿಸು,–ಚೆದರಿಸಂ : ಮಿಕ್ಕುಟಿದ ನಿಮ್ಮ ಸೊರ್ಕು ಜವ್ವನಿಗರಂ ತಿಕ್ಕಿ ತೆಕ್ಕೆಯಾಡುವೆನಿಂತಿದು ದಿಟ್ಟಮೆಂದಂ (ರಾಮಾಶ್ವ. ೧೪೨-೨೮). [ತೆಕ್ಕೆ₁ (<ತಟ್ಕೆ) + ಆಡು₁]

**ತೆಕ್ಕೆಯಿಸು** 'ತಟ್ಕೈಸು' ನೋ.

**ತೆಕ್ಕೆಯ್ಸು** 'ತಟ್ಕೈಸಂ' ನೋ.

**ತೆಕ್ಕೆವರಿ** (ಕ್ರಿ). ರಾಶಿಯಾಗಂ; ಗುಂಪಾಗಂ : ತೆಕ್ಕೆವರಿದೆಲ್ಲ ಕರ್ಬೊಗೆಯ ಹೊರಳಿಗಳ ದಶದಿಕ್ಕುಗಳನವ್ವಳಿಪ ಕೇಸುರಿಯ ಚೂಣಿಗಳ . . . ಪೆರ್ಗಿಚ್ಚುಗಳ ವಂಕಿ ಮೇಲಿಕ್ಕಿದುದು ಹಂಸಧ್ವಜನ ಸೇನೆ ಬೆಂದು ಬೇಗುದಿಗೊಂಡುದು (ಜೈಮಿಭಾ. ೧೩-೦೨) : ಫಣಿನಿಕರ ಫೂಳೆಂದು ತೆಕ್ಕೆವರಿ ದಿಂಗಳದ ಮೇಲ್ಬಿದ್ದು ಸುಡುತಿರಲ್ (ತುರಂಗ. ೩-೩೫).

[ತೆಕ್ಕೆ₁ (<ತಟ್ಕೆ) + ಪರಿ₂]

**ತೆಕ್ಕೆವರಿಗೆ** (ನಾ). ಒಂದಂ ಬಗೆಯ ಗುರಾಣಿ (?); ಗುರಾಣಿಗಳ ಸಾಲು (?): ನಡೆಗೋಟೆಯನೆ ಮಂಡಳಿಸಿ ಬಲಿದರು ತೆಕ್ಕೆವರಿಗೆಗಳ (ಕುಮಾ.ಭೀ. ೪-೨೫); ಬಲುವಾನಿಸದ ಬಂಡಿಗಳನೊಡ್ಡಿದರಾ ನಿರಂತರ ಶರವ ತಡೆದರು ತೆಕ್ಕೆವರಿಗೆಯಲಿ (ಕುಮಾ.ಕ. ೧೧-೩೦) : ಲಗ್ಗೆವರಿಗೆ ತೆ[ಪಾಠಂ. ತ]ಕ್ಕೆವರಿಗೆಗಳಂ ಬಂದು ಮುಗ್ಗಿ ಕವಿದು (ಕುಂರಾಸಾಂ. ೧೧-೩೨) : ಸಾಲು ಕೆಂಪಿನ ತೆಕ್ಕೆವರಿಗೆಯೊಳರಿಕುಲಕಾಲಾಂತಕಬಲಬಲನು ಶೂಲಧರನು ಖಗರಾಜಗೆ ಪಕ್ಷದವೋಲೆಸೆದಳು ಜೀವದೊಡತಿ (ಪರ್ವತ. ೬-೭೭).

[ತೆಕ್ಕೆ₁ (<ತಟ್ಕೆ) + ಪರಿಗೆ₃]

**ತೆಕ್ಕೆವೆಳಗು** (ನಾ). ಅಧಿಕವಾದ ಬೆಳಕಂ; ಹೆಚ್ಚಾದ ಕಾಂತಿ : ಹತ್ತು ಸಾವಿರ ಕೈಪ್ರಮಾಣದ ಸುತ್ತುವಳಯದ ಮಣಿಯ ಶಿಲೆಗಳ ತತ್ತ್ವವಣೆಗಳ ತೆಕ್ಕೆವೆಳಗಿನ . . . ವೈಡೂರ್ಯ ಶಿಲೆಗಳ ಮತ್ತವಾರಣ ವರವಿಧಾನ ದಲೆಸೆದುದಾಸ್ಥಾನ (ಕುಮಾ.ಸ. ೦-೧೪).

[ತೆಕ್ಕೆ₁ (<ತಟ್ಕೆ) + ಬೆಳಗು₂ (<ಬೆಳಕು₂)]

**ತೆಕ್ಕೆವೆಱು** (ಕ್ರಿ). ರಾಶಿಯಾಗು : ದಟ್ಟೈಸು : ಸಂದಣಿಗೊಳ್ಳು : ತದೀಯಾತನೂವಂ [illegible] ತೆಕ್ಕೆವೆತ್ತರಲೆ ಪೋಲ್ ಪತ್ತಿರ್ದನಂ ನಿಂದನಶ್ರಮದಿಂದಂ ತಟನೀತಟಾಕತಟದೊಳ್ ಯೋಗೀಂದ್ರಂ (ನೇಮಿಪು. ೨-೬೪) : ತನಯಂ ಬಂದಾ ವಾರ್ತೆಗೆ ತನುಪುಳಕದ ತೆಕ್ಕೆವೆತ್ತು ಶಿಶಿರದ ಸೋಂಕಿಂ ನನೆವೆತ್ತೊಪ್ಪುವ ಮಾಲತಿ ಯುನೆ ವಿಜಯಾವತಿ ಸಮಂತು ಪೋಲ್ತೆಸೆದಿರ್ದಳ್ (ಕುಸುಮಾ. ೧೫-೯೮).

[ ತೆಕ್ಕೆ$_1$ (<ತೞ್ಕೆ) + ಪೆಱು$_1$ ]

**ತೆಕ್ಕೆಹಾಯ್**, ತೆಕ್ಕೆಹಾಯು (ಕ್ರಿ). ೧. ಅಪ್ಪಿಕೊಳ್ಳು ; ತಬ್ಬು : ಕಮಲೆಯು ಅಳುತ್ತ ... ಅವನಿಗೆ ತೆಕ್ಕೆಹಾಯ್ದಳು (ರಕ್ತರ. ೧೫೭). **ತೆಕ್ಕೆಹಾಯು** : ೨. = ತೆಕ್ಕೆಬಡಿ : ದಿಕ್ಕುಟಿಕ್ಕಿಗೆ ಹೋಡಿ ಪಕ್ಕ ಬೀಸು ವುದು. ಎದುರು ಬಂದುದನವಱಿ ತೆಕ್ಕೆಹಾಯುವುದು ! (ನಲಮು. ೧೫-೨೩).

[ ತೆಕ್ಕೆ$_1$ (<ತೞ್ಕೆ) + ಹಾಯ್$_1$ (<ಪಾಯ್$_1$) ]

**ತೆಕ್ಕೆಹಾಯು** 'ತೆಕ್ಕೆಹಾಯ್' ನೋ.

**ತೆಗಪು**, ತೆಗೆಪು$_1$ (ಕ್ರಿ). ೧. ಹೋಗುವಂತೆ ಮಾಡು; ಹೊರಡಿಸು; ತೆರಳಿಸು. ೨. ಕಂದಿಸು ; ಬೇಯಿಸಂ : ಕುದಿವ ಕರ್ಪೂರ ನ್ನ ಕಾಯ್ಗೊಂಡೆಣ್ಣೆಯೊಳ್ ಬಳಲೆ ತೆಗಪು[ಪಾಠಾಂ. ತೆಗೆ]ವರುಂ(ಆದಿಪು. ೫-೧೫೭): ಕುದಿಯಿಸುಗೆ ಸುಣ್ಣದಿಂ ಕಚ್ಚೊಡೆಯುಂ ಕೋಕಿಲಾಕ್ಷಿವೆರಸು ಸಿತೇ ರಂಡದ ತೊಟ್ಟುಯಿಲೆಗಳಂ ಪಡಲದ ಕಾಯಂ ತೆಗಪುಗೆದಱ ಕೈಪೆಗಳಟಿಗುಂ (ಲೋಕೋಪ. ೮-೩೦) : ತಳಿರ್ಗಳ್ ಮೆಯ್ವೆಂಕೆಯಿಂದಂ ತೆಗಪಿದ ತಳಿರಂತಾದುವಾದಂ ಮೃಣಾಳೀವಳಯಂ ಕೆಯ್ವೆಂಕೆಯಿಂದಂ ಕರಿಯ ಬಳೆಗಳಂತಾದುವು (ಲೀಲಾವ. ೧೧-೪೪) : ತುಲಸಿಯ ಸುಗ್ಗಿಯ ತಗ್ಗಿಯ . . . ಪತ್ರಂಗಳನೊಡನೆ ತೆಗಪಿಕೊಂಡದಱೊಳೆ ಸೇಕಂಗೆಯ್ಯೆ (ಅಶ್ವಶಾ. ೧೦-೨೧). **ತೆಗೆಪು$_1$** : ೧. ಜಲನಿಧಿಯುಂ ಪೀರ್ದಲ್ಲಿಯ ಜಲಚರಮುಂ ಕೂಡೆ ತೆಗೆಪಿದಂ ತೆಗಪುವೆನು ಸ್ಥಲಚರಮಂದು ಪಡಬಾನಲನೇಟ್ಟವೊಲೊಗೆ ದುದರ್ಕಮಂಡಳಂ (ಕಾದಂಬ. ೪೬೩). ೨. ತೆಗೆಪಿ ಕುದಿಯಿಸುಗೆ ಶಿವೆ ಕಳವಿಗೆ ಬಾಳಂ ... ಎಂಬಿನಿತುಮಂ (ಲೋಕೋಪ. ೯-೧೮).

[ ತೆಗೆ$_1$ + – ಪು$_1$ ]

**ತೆಗಲಮುಗು** (ನಾ). ಒಂದು ಬಗೆಯ ಸಸ್ಯ : (ವೃಕ್ಷಾ. ೪೨-೬೩೦). [ ? ]

**ತೆಗಲೆ** (ನಾ). ೧. ಎದೆ ; ವಕ್ಷಸ್ಥಳ : ಪುಲಿ ಬಂದು ಪಾಯ್ದು ಬಱಿಱ ಪೋಟ್ದು ನೆತ್ತರಂ ಕುಡಿದು ತೆಗಲೆಯಂ ಪೋಟ್ದು ತಿಂಬಾಗಳ್ (ವಡ್ಡಾರಾ. ೪೮-೧೯); ಅಡಿ ತೊಡೆ ಪೊರ್ಕುಳುಂ ತೆಗಲೆ ಕೈ ಕಣಕಾಲ್ ಕೊರಲೆಂಬಿವುಂ . . . ಸೀಟ್ದುವು ಪಾರ್ಥನಂಬುಗಳ್ (ಪಂಪಭಾ. ೧೧-೧೩೬); "ಹೆಕ್ಕತ್ತು ; ಹೆಗಲು" (ಪಂಪಭಾ. ಶಬ್ದ); ದೇಸಿಯಾದ ತೆಗಲೆ ಪದಕ್ಕೆ ವಕ್ಷಸ್ಥಳದ ಮೇಲ್ಗಡೆ ಎಂಬ ಅರ್ಥ ಮಾತ್ರವಲ್ಲದೆ ಒಳಗಡೆ ಎಂಬರ್ಥವಿಲ್ಲ (ಪಾಠಶೋಜ ೨೪೬) ; ತೆಗಲೆ ಎಂಬುದು ಉದ್ಯಾನಗಳಿಕ್ಕೆ ನಮ್ಮಾ ಕನ್ನಡನಾಡಿನಲ್ಲಿ ಮಾತ್ರ ರೂಢವಾದ ಹೆಸರು . . . 'ತಗಲೆ' ಎಂದರೆ ತೆಗಲೆಯ ಮೇಲೆ ಬಗಿದು ಕಟ್ಟುವ ಬಟ್ಟಲಿನಾಕಾರದ ಒಂದು ಪದಾರ್ಥ (ಪಾತೀಸು. ೪೭). ೨. ಹೆಗಲು : ಭುಜ : "ತೆಗಲ[ಪಾಠಾಂ. ಳ್]ಯೊಂದು ಪೆಸರ್" (ಶಮದ ನ. ೩೪೩ ಪ್ರಯೋ). ೩. (ಕರಾ) ಸೊಕ್ಕು ; ಮದ ; ಅಹಂಕಾರ : ಯಾವ ಇನ್ಸ್‌ಪೆಕ್ಟರರೇ ಬರಲಿ ಪರದಿಪುಸ್ತಕದಲ್ಲಿ 'ಆಯಿತು' ಎಂದು ಬರೆದು ಹೋಗುತ್ತಾರೆ. ಅದರಿಂದ ಇವರಿಗೆಲ್ಲ ತಿಂದ ತೆಗಲೆ (ಸ್ವಪ್ನಪು. ೩೪).

[ದೇ.॥ ತಮಿ. ಚಖಲ್, ಚಕಿಲ್ ; ತುಳು. ತಿಗಲೆ]

**ತೆಗವು**, ತೆಗುವು (ನಾ). ೧. ಭಾರವಾದುದಂ; ಜಡವಾದುದು. ೨. ಕಠಿನ ವಾದುದು ; ಕಷ್ಟಕರವಾದ್ದಂದು : ಅವನ್ನ ಹೊರಗೆ ಹಾಕೂದಂದ್ರ ಓಟು ತೆಗವ ಹರೀತೇತಿ (ಗ್ರಾಮಾಯ. ೪೮). **ತೆಗುವು$_2$** : ೨. ಅವಳಿಗೆ ಅಡುಗೆ ಮಾಡುವುದು ತೆಗುವೆನಿಸಹತ್ತಿತು (ಜವಿಶಾಸ್ತ್ರ.೭೩). [ ? ]

**ತೆಗಸು** 'ತೆಗೆಯಿಸು' ನೋ.

**ತೆಗಹು** (ನಾ). ೧. ಒಂದಕ್ಕೆ ತೆಗೆದಿರುವಿಕೆ, ಎಳೆದಿರುವಿಕೆ ; [illegible] ವಿಕೆ : ಆಳು ಮಿಂಗೆ ಕುರುಭೂಪಾಲಕನ ಒಂದಿಕ್ಕೆ ಕಿವಿಗಡಿಗೋಲ ತೆಗಹಿ ನೊಳೊದಗಿವರು ದುಶ್ಶಾಸನಾದಿಗಳು (ಕುಮಾ.ದಶ. ೨-೭೪) : ಭರಿತ ವಿಷ ದಹಿವರನ ತೆಗಹಿನ ತೆರಳಿಕೆಯುಲುದಿಸಿದ ತಮೋನಿರ್ಭರಶರೀರದ ಸುಭಟರದೆ ನರನಾಥ ನೋಡೆಂದ (ತೊರಲ. ೭-೨೧-೭೪). ೨. ಹಿಂದೆಗೆ ಯುವಿಕೆ; ನಿರ್ಗಮನ. 'ಬಿಸಿಲುದೆಗಹು' ಪರಾ. ೩. ತೆರವು ; [illegible] ; ಅವಕಾಶ : [illegible] ತೆಗಹಿಲ್ಲ ಮುಂದೆ ಹೆಚ್ಚುತಿದೆ (ಭರತ. ೩೪-೭೨). ೪. ದೃಢತೆ ; ಕೆಚ್ಚು ; ಸತ್ವ : [illegible] ತೆಗಹು [illegible] ಹೊಕ್ಕು ತಿವಿದಾಡಿದರು ಬೇಸಱದೆ (ಕುಮಾ.ಸ. ೨-೦೦೦) : ಕ್ಷತ್ರಧರ್ಮದ ತೆ[ಪಾಠಾಂ. ತ]ಗಹು ಸಾಯದು ನಿನಗೆನುತ ಗಹಗಹಿಸಿದನು ಶಕುನಿ (ಕುಮಾ.ಸ. ೧೪-೨). [ ತೆಗೆ$_1$ + – ಹು$_2$ ]

**ತೆಗಳ್$_1$** 'ತೆಗಟ್$_1$' ನೋ.

**ತೆಗಳ್$_2$** 'ತೆಗಟ್$_2$' ನೋ.

**ತೆಗಳಿ$_1$** 'ತೇಮಳು' ನೋ.

**ತೆಗಳಿ$_2$** (ನಾ). = ತೆಗಳಿಕೆ$_2$. 'ತೆಗಳಿಗೊಳ್', 'ಸೆಗಳಿ' ಪರಾ. [ ? ]

**ತೆಗಳಿಕೆ$_1$** (ನಾ). = ತೆಗಟಿಕೆ೧ : ಪೊಗಳಿಕೆಗೆ ಹಿಗ್ಗಲೊಲ್ಲದೆ, ತೆಗಳಿಕೆಗೆ ಕುಗ್ಗಲಾರದೆ, ಲತೆ ಫಲಕೆ ಸಿಗ್ಗಲೇಕೆ ? (೧೯೪೦. ೧೦೪-೪೪) : ಹೊಗಳಿಕೆ ತೆಗಳಿಕೆಗಳ ಕಡೆಗೆ ಲಕ್ಷ್ಯಕೊಡಬಾರದು (ಗೀತಾಸಂ. ೨೬).

[ ತೆಗಳ್$_1$ (<ತೆಗಟ್$_1$) + – ಇಕೆ ]

**ತೆಗಳಿಕೆ$_2$** (ನಾ). ಹೆಕ್ಕಳ; ಪದರ : ಸುರಿತಂದಶ್ರುಪ್ರವಾಹಂ ಬಱತೊಣಗಿದ ಬಾಸುಟಿಗ್ಗೊಗಂ ಪೂಸೆಯುಂ ಕಾಯ್ದಿರದೆಯ್ದಿ ಚಂದನಾಲೇಪದ ತೆಗಳಿಕೆ ಗಳ್ . . . ಬೆಸಲರ್ವಸೆಯೊಳ್ ಕಾಂತೆಯಂತಿರ್ದಳ್ (ಕುಸುಮಾ. ೧೬-೭೯). 'ಸೆಗಳಿಕೆ' ಪರಾ. [ ತೆಗಳಿ$_2$ + – ಕೆ ]

**ತೆಗಳಿಗೆ** (ನಾ). ಪದರ ; ಹೆಕ್ಕಳ ; ನಿರಿಗೆ: ಮುಗಿಲ ತೆಗಳಿಗೆಯ ನೆಗೆದ ಪೊರೆಗಳೊಳದೃಶ್ಯನಾದಂ ನಭದೊಳ್ (ಶಾಂತಿಪು. ೯-೯೪) : ಮುಗಿಲ ತೆಗಳಿಗೆಯ ಪೊರೆಯೊಳಗೊಗೆವ ಶಶಾಂಕಬಿಂಬದ್ರುಸಂದದಿಂದುದಯಿಸಿದಂ (ವರ್ಧಮಾ. ೬-೩೬) : ಶರದದ ಮುಗಿಲ ತೆಗಳಿಗೆಯಿಂದೆನಿಪ ಪೊಲ್ಕುಟ್ಟಿನ ಬೆಳ್ಪಂಬಟ್ಟೆಯುಂ (ಚಂದ್ರಪು. ೦೨-೧೦೪). 'ಸೆಗಳಿಗೆ' ಪರಾ.

[ತೆಗಳಿ$_2$ + – ಗೆ]

**ತೆಗಳಿಗೆಬೀೞ್** 'ತೆಗಳಿಗೆವೀೞ್' ನೋ.

**ತೆಗಳಿಗೆವೀೞ್**, ತೆಗಳಿಗೆಬೀೞ್ (ಕ್ರಿ). ಹೆಕ್ಕಳ ಉಂಟಾಗು ; ಪದರ ವಾಗು : ತೆಗಳಿಗೆವಿರ್ದೊ[ಪಾಠಾಂ. ಟ್ಟೊ]ಡಲುಂ ನಾಲಗೆಗಿತ್ತರೆ ಬಱತ ಬಾಯುಂ ... ತಾಱುವ ತಾಳ್ಗಳುಂ[illegible] ನಾಡ ಕೋಣನಯ್ದು ದುದಟಿಲಂ (ಜಗವಿ. ೧೭-೬೬). **ತೆಗಳಿಗೆಬೀೞ್** : ಮೃಗಕುಲಂ ... ಬೆಂದೊಡಲ್ ತೆಗಳಿಗೆಬೀೞೆ ಬಾಯ್ಗೆ ಕರಿಸಂ ಬರೆ ನಾಲಗೆಗಿಟ್ಟು ನಟ್ಟ ದಿಟ್ಟಿಗಳೊಡನಳ್ಳೆ ಪೊಯ್ಯೆ ನಡೆಗೆಟ್ಟುವು ತೃಷ್ಣೆಯಿಂ (ಹಂಪಾಮಾ. ೭-೯೩).

[ತೆಗಳಿಗೆ + ಬೀೞ್$_1$]

**ತೆಗಳಿಗೊಳ್** (ಕ್ರಿ). ಸುಕ್ಕಾಗು ; ಪದರವಾಗು : ಅಂಗಜತಾಪದಿಂ ಕೊಱಗಿದಬ್ಬಮುಮಂ ಪರಿವಾರ ಸುಷ್ಕರಲ್ [illegible] ತೆಗಳಿಗೊಂಡ ಲಸನ್ಮಳಯೋದ್ಯಮ ... ರಂಜಿಸಿರ್ಪಂಗನೆ ಕಾಮದೇವ ನೆಡೆಯಾಡಿಪ ಪುತ್ರಿಕೆಯಂತಿರೆಯ್ದಿದಳ್ (ದಶಕು. ೬-೧೫೯).

[ತೆಗಳಿ$_2$ + ಕೊಳ್$_1$]

**ತೆಗಳಿಸು** 'ತೆಗಟಿಸು' ನೋ.

**ತೆಗಳು$_1$** 'ತೆಗಟ್$_1$' ನೋ.

**ತೆಗಳು$_2$** (ಕ್ರಿ). ತಳ್ಳು: ನೂಕು: ಬಂಗಾರ ಅಳದೀರ ಬಾಯ್ಮೇಲೆ ಪೊಯ್ದೋರ ಬಾಗ್ಲಿಂದಾಚೆಗೆ ತೆಗಳೀರ ಅಪ್ಪಾಜಿ ಹುಟ್ಟಿದಾ ಮನೆ ತಿರು ವೀರಾ (ಹಳ್ಳಿಹಾ. ೨೩). [ ? ]

**ತೆಗಳು$_3$** 'ತೆಗಳ್$_2$' ನೋ.

**ತೆಗಳುಗಾರ** (ನಾ). ತೆಗಳುವವನು; ನಿಂದಿಸುವವನು; ಅವಹೇಳನ ಮಾಡುವವನು: ಕನ್ನಡಕದ ತೆಗಳುಗಾರ ನಡುವೆ ಮಾತು ಹಾಕಿದ (ಯೋಧಪು. ೫೭). [ತೆಗಳು$_1$ (<ತೆಗಳ್$_1$)+–ಗಾರ (< – ಕಾಜ)]

**ತೆಗಳುನಗೆ** (ನಾ). ತಿರಸ್ಕಾರದಿಂದ ಕೂಡಿದ ನಗೆ: ಸುಲೋಚನ ಧರಿಸಿದ್ದವನು ತನ್ನ ಮುಖದ ಮೇಲೆ ನೆಲಸಿದ್ದ ತೆಗಳುನಗೆಯನ್ನು ಎಲ್ಲರ ಮೇಲೆಯೂ ಚೆಲ್ಲಿ ಹೇಳಿದನು (ಯೋಧಪು. ೫೭).

[ತೆಗಳು$_3$ (<ತೆಗಳ್$_2$) + ನಗೆ]

**ತೆಗಳ್ಪು** (ನಾ). ತೆಗಳಿಕೆ; ನಿಂದೆ: ಇಲಿಗಂ ಮರಕುಟಗವಕ್ಕಿಗಮುಳಸದೆ ಕಮರ್ಕುತ್ತೆ ಕಡಿಯುತಿರ್ಪುದೆ ಸಹಜಂ ಸಲೆ ಚಪಲಂಗಂ ಕುಕವಿಗಮುಳಸದೆ ತೆಗಳ್ಪುದುಮೆ ಸಹಜಮುಮಜಂತೆ ಕರಂ (ಧರ್ಮಾಮೃ. ೧-೪೭).

[ತೆಗಳ್$_1$ (<ತೆಗಳ್$_1$) + – ಪು$_2$]

**ತೆಗಳ್$_1$**. ತೆಗಳ್$_1$, ತೆಗಳು$_1$ (ಕ್ರಿ). ೧. ಹೀಯಾಳಿಸು; ನಿಂದಿಸು; ಅವಹೇಳನ ಮಾಡು: ತಿರಸ್ಕರಿಸು: "ತೆಗಳ್=ನಿಂದಾಯಾಂ" (ಶಮಧಾ); ಕಂಜನಾಭನ ಸಮಂಜಸಿಕೆಯೊಳ್ತನ್ನಂ ತೆಗಳ್ದು ನುಡಿದು ವರ್ತೀವೈಸಿ (ಗದಾಯು. ೭-೪೫ವ); ಅಂತಾ ದುರಾತ್ಮಂ ... ಜಗಂ ತೆಗಳ್ ಜೀವಿಸುತ್ತುಂ (ವರ್ಧಪು. ೩-೧೨ವ). ೨. ವಿನೋದಮಾಡು: ಹಾಸ್ಯ ಮಾಡು: ನೀಂ ಮಹಾದೇವಿಯು ಮಂಚಮಂಜದೇಜ್ ಆಕೆಯೊಡನೆ ನಗುತ್ತುಂ ತೆಗಳುತ್ತುಮಿರೆಂದು ಕಲ್ಪಿಸಿದಂ (ವಡ್ಡಾರಾ. ೧೭೭-೧೯); ಇಚ್ಚೆ ಯುಜದು ತೆಗಳ್ವ ತೆಗಳ್ಕೆಗಂ ಪದನಜದು ಪತ್ತುವ ಪತ್ತುಗೆಗಂ ... ಮನಂಬೆಚ್ಚು ಪತ್ತೆ ಪೊಯ್ದಂತಾಗಿರೆ (ಶಾಂತಿಪು. ೩-೫೯ವ). **ತೆಗಳ್$_1$**: ೧. ಭಗವತಿಯೀಜು ಶೌಚಗುಣಮತ್ತಿಯ ಪಣ್ಣೆನಿಪೇಳಪುಣ್ಣರಂ ತೆಗಳ್ವುದುದಾರ ಚಾರುಚರಿತಪ್ರಭೆಯಿಂ ಪಡೆವಳ್ವತ್ತೈಲನ (ಶಾಶಾ. XI-i, ೫೨-೩೪; 1007 ?): ಉರಗ ನರ ಕಿಂಪುರುಷ ಕಿನ್ನರತರುಣಿಯರ ವ್ರತಗೆಡಿಸಿ ಭೋಗಿಸಿ ನರಳಿಸುವ ರೈದಿದರೆ ಕೊಲುವರು ತೆಗಳ್ದು ಪಲ್ಲಭರ (ಅಂಬಿಕಾ. ೩೪-೩೭). **ತೆಗಳು$_1$**: ೧. ಅಗಿದು ವ್ಯೆದೆಗೆದು ಸಿಗ್ಗಾಗಿ ತವ್ಕಿಂ ತಾವೆ ತೆಗಳಿ ಬೈಬೈದು ಬಾಯುಳಿದು ಶೋಕಿಸಿ ತಾವೆ (ಸಾನಂಚ. ೪-೨೫೭ರಗಳೆ); ರಗಳೆಯು ಕವಿಯೆಂದು ತೆಗಳಿ ವಾದಿಗಳೆಲ್ಲ ಹರಿಯಣ್ಣನ ಪದಯುಗಳಕೆಜಗುವೆನಲ್ಲಿಯೊಳು (ಕುರಾಸಾಂ. ೧-೩೫): ಕಂಡವರ ತೆಗಳುವನ ... ಕಂಡಿಹರೆ ತೊಲಗು (ಸರ್ವಜ್ಞ. ೧೫೭೩); ಪೊಡವಿಯೊಳಗಡಗಿರುವ ತಳಹದಿಯ ತೆಗಳುವರೆ ? (ಶಾಂಚಜ. ೫-೧೮).

[ದೇ.೫ ತುಳು. ತೆಗು; ತೆಲು. ತೆಗಡು, ತೆವಡು]

**ತೆಗಳ್$_2$**, ತೆಗಳ್$_2$, ತೆಗಳು$_3$ (ನಾ). ೧. ನಿಂದೆ: ತಿರಸ್ಕಾರ: ಅವ ಹೇಳನ: "ತೆಗಳ್ ... ಅಣತಂ–ಈ ೭ ನಿಂದೆ" (ಕಶಸಾ. ೧೩-೨೫೭); "ತೆಗಳ್ನ್ನಲದು ತಾಂ...ನಿಂದಾಖ್ಯಂ" (ಕವಿಕಂ. ೧೭೨); ತಮ್ಮೊಡನಾಡಿ ಗಳಪ್ಪ ಮೇಳದ ಸಬ್ಬವದ ನಗೆಯ ತೆಗಳ್ನವರನೆಮ್ಮ ಬಜಿಯಟ್ಟಿದಂದು ಬನ್ನಿಮೆಂದು ಪ್ರಿಯಂ ನುಡಿದಿರಿಸಿ (ಪಂಪಭಾ. ೨-೯೫ವ). ೨. ಕುಂದು; ಕಳಂಕ; ದೋಷ: ಮಾಷಮುಖದಂತೆ ದೋಷಗವೇಷಣರಪ್ಪರಂ ದೊಡದು ತೆಗಳ್ತೆ (ಆದಿಪು. ೧-೨೦): ಅರೋಚಿಗಳದಂ ತೆಗಳ್ದಂದಾ ಗದ್ಯ ಪದ್ಯ ಕಾವ್ಯದೊಳಿಕ್ಕರ್ (ಶಮದ. ೬೦). ೩. ವಿನೋದ: ಚೆಲ್ಲಾಟ: ರಮಿಯಿಪ್ಪದಮರಿಯರೊಳ್ ತೆಗಳಮರಿಯರೊಳ್ ತವದ ಮೇಳಮ ಮರಿಯರೊಳ್ (ಶಾಂತಿಪು. ೭-೭೭); ನಗೆ ತೆಗಳ್ ಪಾಟಂ ಬಿಯಂ ಜವ್ವನಂ ... ಇಂತಿವಂ ಬೇಟಕಾವ್ಯಗರಮೆಂಬೆಂ (ಕಾವ್ಯಾವ. ೭೩೩). **ತೆಗಳ್$_2$**: ೧. ವಿಕ್ರಮನಾಥಿತ ನೃಪಂ ಜ್ಯಾಯಂ ತನಗೆನೆ ಜಗದೊಳಗಾ ಯುವತಿಯ ಸತ್ಕುಲೀನತೆಗೆ ತೆಗಳುಂಟೇ (ಎಕ. XI, ದಾವಣ. ४೧-४೯; 1148). **ತೆಗಳು$_3$**: ೧. "ತೆಗಳು ನಿಂದೆಗೆ" (ಕರಂ. ४೮): ದಕ್ಷನಾತ್ಮಜೆ ಗೌರಿ ಮಿಗೆ ತನ್ನ ಜನಕನೀಶ್ವರನನೇಳಿಸೆ ಬಹಳ ತೆಗಳನಾಲಿಸಿ ತನ್ನ ದೇಹಮಂ ಜ್ವಾನಾಗ್ನಿ ಯೊಳ್ದಹಿಸಿ (ಪಾಸೋಪು. ೮-೨೨): ಇದು ಹೊಗಳೋ ತೆಗಳೋ ? (ಶಾಂತಲಾ. ೫४). [<ತೆಗಳ್$_1$]

**ತೆಗಳಿಸು**, ತೆಗಳಿಸು (ಕ್ರಿ). ೧. ತೆಗಳುವಂತೆ ಮಾಡು; ನಿಂದಿಸುವಂತೆ ಮಾಡು: "ತೆಗಳ್ಸು–ನಿಂದಾಯಾಂ (ನಿಂದಿಸುವಂತೆ ಮಾಡು)" (ಶಮಧಾ). **ತೆಗಳಿಸು**: ೧. ಮಜದುಂ ಪುಸಿದು ನುಡಿವ ಹುಸಿ ಸಿರಿಯುಂ ಮಜಪಡಿವುದು ಸಂತಾನಂ ಕೆಡಿಸುವುದಜನಂ ತೆಗಳಿಸುವುದು ಪಳಿಯುಂ ಪುಟ್ಟಿಸುವುದು (ಜಯುಕಾ. ೧೧-೧೨). ೨. ಮಿಗಾರು; ಸೋಲಿಸು: ಹೊಳವ ಹಸುಳೆಲತೆಯುಂ ಸಲೆ ತೆಗಳಿವ ನಳಿತೋಳ್ಗಳ ಸಿಂಗದ ಶಿರುವಂ ತಾನೀಳಿಕೆಯ್ವೊಳ್ಪಡುವಿನ ನೃಪತನುಜೆಯ ತರುಣಿಮಮೊಪ್ಪಿದುದು (ಜಯುಕಾ. ३-२२).

[ತೆಗಳ್$_1$ + – ಇಸು$_3$]

**ತೆಗಳ್ಕೆ** (ನಾ). ೧. ನಿಂದೆ; ಅವಹೇಳನ. ೨. ವಿನೋದ; ಹಾಸ್ಯ: ಇಚ್ಚೆಯುಜದು ತೆಗಳ್ವ ತೆಗಳ್ಕೆಗಂ ಪದನಜದು ಪತ್ತುವ ಪತ್ತುಗೆಗಂ ... ಮನಂಬೆಚ್ಚು ಪತ್ತೆಪೊಯ್ದಂತಾಗಿರೆ (ಶಾಂತಿಪು. ३-५९ವ).

[ತೆಗಳ್$_1$ + – ಕೆ]

**ತೆಗಳ್ತೆ** (ನಾ). ವಿನೋದ; ಸರಸ; ಲಲ್ಲೆ (?): ಲಾಲಿಸುವ ಲಲ್ಲೆ ಮರಲ್ಚುವ ಮಾತು ಚಿತ್ತಮಂ ತೆಗೆವ ತೆಗಳ್ತೆ (ಚಂದ್ರಪು. ४-೭೧).

[ ತೆಗಳ್$_1$ + – ತೆ$_2$ ]

**ತೆಗಿಸು** 'ತೆಗೆಯಿಸು' ನೋ.

**ತೆಗುವು** 'ತೆಗವು' ನೋ.

**ತೆಗೆ$_1$** (ಕ್ರಿ). ೧. ಈಚೆಗೆ ತರು; ಹೊರ ತರು; ಬೇರೆ ಮಾಡು: ಸಿಂಧುರಾಜನ ಬಸಿಜಂ ಪೋಟ್ದಿನ್ನ ಮಗನನಾಂ ತೆಗೆಯದಿರೆಂ (ಪಂಪಭಾ. ೧೦-೧೨೦): ಕೋಮಳಶುಕಶಾಬಕಪ್ರಕರಮಂ ತೆಗೆದಂ ದಯೆಗೆಟ್ಟು ಲುಬ್ಧಕಂ (ಕಾದಂಪೂ. ೧೭೮): ದೊಣೆಯಿಂದಂ ತೆಗೆವಾಗಳೊಂದು ತುಡು ವಾಗಳ್ಪತ್ತು ಬಾಣಂ (ಗದಾಯು. ३-३): ಬೆಳ್ಮುಗಿಲ ತೆಳ್ದೆರೆಯ ನಿಂದ್ರಚಾಪರೇಖೆಯಂ ತೆಗೆವ ಶರಲ್ಲಕ್ಷ್ಮಿಯುಂ ಪೋಲ್ತು ನಿಜೋತ್ತರೀಯ ಪಲ್ಲವದ ಪೊಸೆಯಿಂ ತೆಗೆದು ... ಮಣಿಮೊಡವನೊರ್ವಕಂಗನೆಗಿತ್ತಳ್ (ಮಲ್ಲಿಪು. ४-೭೧): ನವ್ಯದುಕೂಲಮಂ ತೆಗೆದುಟ್ಟು ದಿವ್ಯವಸ್ತ್ರಮಂ ಪೊದೆದು (ಬಸರ. ೨-४३): ಅಂಬಿಲದೊಳಗೆ ಹೊಸ ಬೆಣ್ಣೆಯಂ ತೆಗೆಯಲು (ಬಸಪು. ४२-೨): ಹೊಟ್ಟುಗರ ತೆಗೆ ಪೋಗಪೇಳೆಂದೆಚ್ಚನತಿರಥರ (ಕುಮ್ಯಾದ್ರೋ. ३-೭೧); ತೆಗೆ ಹಯ ತೇರುಗಳ ತಳ್ಳಂಕ ಬೇಡೆಂಬಾರುಭಟೆ ಬಲುಹಾಯ್ತು (ತೊರರಾ. ೫-೮-೭३): ಇದ್ದವಳು ತೆಗೆದು ಉಟ್ಟರೆ ಇಲ್ಲದವಳು ಕೊಡವಿ ಉಟ್ಟಳು (ಗಾದೆ). ೨. ಎತ್ತಿಕೊಳ್ಳು; ತೆಗೆದು ಕೊಳ್ಳು: ತಾರಗೆಯುಂ ವಿದ್ಯಾಧರಿಯರ್ ಮುತ್ತೆಂದು ತೆಗೆದು ತುಡಲ ಪ್ಪಳಿಪರ್ (ಗಿರಿಕ. ೧-೫४); ಕೆಲಬಲದ ಮಾಮರದೊಳಿಪ್ಪ ನಿರ್ಯಾಸಮಂ ತೆಗೆದು ಕಿಜುವೆರಳುಗುರ್ಗೊನೆಯಿಂದೆ ತಿದ್ದಿ ಬರೆದು (ಜೈಮಿಭಾ. ६೦-೨೯); ಅನರ್ಘ್ಯಮಣಿಯುಂ ಬಾಲದಿನಮಣಿಯುಂ ತುಡುಂಕುವ ರಾಹುವೆನಿಸಿ ನಿಜ ಕರಮುಸೆಯೆ ತುಡುಂಕಿ ತೆಗೆದು ತತ್ಪಾದಪೀಠದೊಳಿಳಿಪಿದಾಗಳ್ (ರಾಜಶೇ. ೫-೨೫ವ). ३. ಏಳುವಂತೆ ಮಾಡು; ಎಬ್ಬಿಸು; ಮೇಲಕ್ಕೆತ್ತು: ಅಲ್ಲಿರ್ಪುದೊಂದು ಕಪಿ ಬೇಗವಿದಿರಂ ಬಂದು ಅಂಜದಿರೆಂದು ಕೈಯಂಪಿಡಿದು ತೆಗೆವುದುಂ (ಪಂಚತಂ. ೧೧೭-೨೨): ಸುರಿವ ರಕುತದ ಸರಿಯ ಸೆಜಗಿನೊಳೊ ರಸಿ ರಥದಚ್ಚುಗಳನೊದೆದನು ತಿರುಹಿ ಗಾಲಿಯ ತೆಗೆದು ಮುಂಗೈ ಗೊಂಡು ನಡೆನಡೆದು ಅರಿಬಲವನಿಡ (ಕುಮ್ಯಾದ್ರೋ. ೭-೫೫). ४. ಉದ್ಧಾರ ಮಾಡು; ಉದ್ಧರಿಸು: ಧಗಧಗಿಸಿದಜುವತ್ತುಸಾವಿರ ಸಗರರನು

ಸಂಸ್ಕಾರಮುಖದಲಿ ತೆಗೆಯಲೋಸುಗ ತಪದಲಿದ್ದನು ಕಮಲಗರ್ಭಂಗೆ (ತೊರಠಾ. ೧-೧೨-೧೩). ೫. ಆಕರ್ಷಿಸು ; ಎಳೆ ; ಜಗ್ಗು ; ಎಳೆದು ಕೊಳ್ಳು : "ತೆಗೆ-ಆಕರ್ಷಣೇ" (ಶಮಧಾ) : ಕೃಷ್ಣೆಯ ಕಚಪ್ರಾರಂಭಮಂ ಬಾಹುವಿಕ್ರಮಿ ದುಶ್ಶಾಸನ ಮುಂದೆ ತೆಗೆವಂದೆಲ್ಲಿರ್ದ (ಗದಾಯು. ೭-೪೨) : ಪೊಸನನೆಯ ಬಿರಿಮುಗುಳ ಕುಸುಮ ಬಾಣಂಗಳಂ ... ಕಿವಿವರಂ ತೆಗೆದು ನೇರನಱಿದೆಸೆವುದುಂ (ಧರ್ಮಾಮೃ. ೧೦-೩೦) : ಧರಾಧೀಶ್ವರನಾಶೀರ್ವಾರ್ಕ್ಸಮೇತಂ ತೆಗೆದು ಬಿಗಿದು ತಕ್ಕೈಸಿದು (ವರ್ಧಪು. ೧-೪೧) : ಶರಣ ಇನ್ನೇಳೇಳೆನುತ...ಕರಕಮಲದಿಂ ತೆಗೆದು ಬಿಗಿಯಪ್ಪಿ (ಬಸಪು. ೨೦-೬) : ಅತಿಶಯಪ್ರೀತಿಯಿಂ ತೆಗೆದು ಬಿಗಿಯಪ್ಪಿ (ಜೈಮಿಭಾ. ೪-೭೦). ೬. (ಗಾಳಿಯನ್ನು) ಎಳೆದುಕೊಳ್ಳು : ಆತ್ಮನಂ ಭೇದಿಸಿ ಪ್ರಾಣವಾಯು ನಾಡಿಗಳನಱಿತು ಹಿಡಿವ ಭೇದಮಂ ತಿಳಿದು ತೆಗೆವ ಬಿಗಿವ ಸಂಚಮಂ ಕಂಡು (ಆದವ. ೨೯-೮೭). ೭. ಬಿಲ್ಲಿನ ಹೆದೆಯನ್ನು ಸೆಳೆ ; ಶರಸಂಧಾನ ಮಾಡಂ : ತೆಗೆದೆಚ್ಚನರ್ಜುನನಂಬು ತೀವೆ ತುದಿಯಿಂ ಬಾಲಂಬರಂ ಪಂದಿ ಸೌಳಗೆವೋಪಂತಿರೆ (ಪಂಪಭಾ. ೮-೦೬) : ಮುಂದಿರ್ದ ಪಾವೇಭಕಂಠೀರವನುಮಂ ಬಗೆದು ತೆಗೆದಿಸುವುದುಂ (ಶಾಂತಿಪು. ೪-೧೧೨) : ಬಗೆಯದ ವಿರಹಿಗಳಂ ಮಿಗೆ ತೆಗೆದೆಚ್ಚು ಬಟಲ್ದ ಮಧುಸಖನ ಸುಯ್ಯೆಲರ್ವೋರ್ಲಲ್ ... ತಣ್ಣೆಲರದಿನಿಸು ತೀಡಿತ್ತಾಗಳ್ (ಕಾದಂಉ. ೧೬೫) : ತೆಗೆದೆಚ್ಚನಾ ಪಾರ್ಥ (ಕುಮಾರದ್ರೋ. ೩-೪೯). ೮. ಕೀಳಂ ; ಕಿತ್ತು ಹಾಕು : ನಡುವಂ ಕೊಱೆ ಕುತ್ತಿ ಕರುಳ್ಗಳಂ ತೆಗೆ ಮೊಗಮಂ ಸುಡು (ವಡ್ಡಾರಾ. ೦೨೭-೦೦) : ಮಾದೆಗನಂತೆ ಬಾರೆತ್ತುವರ್ ನಾಯಂತೆ ಕಚ್ಚಿ ತೆಗೆವರ್ (ಧರ್ಮಾಮೃ. ೩-೭೩) : ಆಸೆಯಾಮಿಷ...ಕ್ರೋಧ ಕ್ಷುದ್ರ ಮಿಥ್ಯೆ ಇವನೆನ್ನ ನಾಲಗೆಯ ಮೇಲಿಂದತ್ತ ತೆಗೆದು ಕಳೆಯಯ್ಯಾ (ಬಸವ. ೪೬) : ಪಂದಿಯ ಬಳಿಯೊಳ್ ನೊಪ್ಪ ನೆಗೆದುರ್ಬಿ ಪಾಯುತೆ ಚಪ್ಪರಿಸುತ್ತಾಗಿದು ಬಗಿದು ತೆಗೆದುವು ನಾಯ್ಗಳ್ (ಗಿರಿಕ. ೧-೧೦೩) : ನಿನ್ನ ಕಣ್ಣಂಗೆನ್ನ ಕಣ್ಣೇ ಮದ್ದೆನುತ ಚಿತ್ರಂ ನಲಿದು ತನ್ನೇತ್ರವಂ ತನ್ನಂಬಿನಲಿ ತೆಗೆದು (ಬಸಪು. ೧೮-೭೦) : ಅಗೆವೊಯ್ವ ಕಳೆಗೀಳ್ವ...ಸಸಿಯ ತೆಗೆವ ನಡುವ ನಗೆಮೊಗದ ಪಾಮರಿಯರ ಬಗೆ ಬೆಡಗಾಗಿಹುದಲ್ಲಿ (ಕುರಾಸಾಂ. ೨-೩೫). ೯. ಕಿತ್ತು ಕೊಳ್ಳು ; ದೋಚು ; ಕಸಿದುಕೊಳ್ಳು : ಮ್ಲೇಚ್ಛವರ್ಗವ ತಱಿದು ಶೋಧಿಸಿ ತೆಗೆದನಲ್ಲಿಯ ಸಾರವಸ್ತುಗಳ (ಕುಮಾಸ. ೪-೧೨) : ಕುಳಿಂದನಂ ದಂಡಿಸಿದನಾ ದುಷ್ಟಬುದ್ಧಿ...ಹಿಂಡಿ ಹಿಳಿದರ್ಥಮಂ ತೆಗೆದಂ ಸೆಱೆಮನೆಗಿಕ್ಕಿ ನಿಗಳಮಂ ಕಾಲ್ಗೆ ಮಾಡಿ (ಜೈಮಿಭಾ. ೨೧-೨೬) : ಮುದ್ದುಮಾತಿನಲಿ ಮೋಹಪ ಬೀಱಿಯವನೊಳಗಿದ್ದ ಹಣವ ತೆಗೆ ಮಗಳೆ (ಕಂನವಿ. ೬-೧೫೦). ೧೦. ಕದಿ ; ಕಳವು ಮಾಡು ; ಅಪಹರಿಸಂ : "ಅಪಹಾರ, ಅಪಚಯ = ಬಹಳದ ಒಳ್ಪುಮಂ ತೆಗೆವುದು" (ನಾಚಿರಾ. ೬) : ಅಜ್ಞಾನಿಗಳಿರಾ ಕಣ್ಣ ಕಾಣರೆ ಈ ನುಡಿಗಳೇಕಿಂತು ತೆಗೆದೆವೆ ನಿಮ್ಮ ಸಾಮ್ಯವನು (ಬಸಪು. ೫೮-೩೩) : ಧೇನುವನು ತೆಗೆಯಲಿಕೆ ತನ್ನಯ ಸೇನೆಯಧಿಪನ ಕಳುಹಿ (ಸಂಭಪ. ೨೬-೨೦) : ಕರುಣದೊಳಾತ ಕೊಟ್ಟ ಸೌಭಾಗ್ಯವ ತೆಗೆಯಲೋರ್ವರಿಗಳವಲ್ಲ (ಮೋಹತ. ೩೦-೦೬). ೧೧. ಕಳಚು ; ಬಿಚ್ಚು ; ತೆರೆ : ಬಲ್ಲಿದನ ಹಗೆಯ ತೆಗೆವನ್ನಬರ ಬಡವನ ಹರಣ ಹೋದ ತೆಱನಂತಾಯಿತ್ತು (ಮಹಾದೇ. ಬ. ೩೩-೭೦) : ಉತ್ತರದ್ವಾರದ ಬಾಗಿಲ ಬಿಯಗವ ತೆಗೆದಲ್ಲಿ ನಾದವಾರೂರುಕಿ ಯಪ್ಪ ಪ್ರಸಾದವ ಕಂಡೆ (ಆದವ. ೨೪-೭೯) : ಕಾಲ ಕೆರಹುಗಳಂ ತೆಗೆಯದಿಂತಿರ್ದಡೆಲೊ ನಿನ್ನ ಬೀಳ ಹೊಡೆವೆನು (ಬಸಪು. ೪೬-೧೦) : ಕೆತ್ತ ಕದ ತೆಗೆಯದು (ಕುಮಾಅ. ೧೨-೭) : ಅರುಣಾಬ್ಜನಿಳಯಕವಾಟ ಕೌಸ್ತುಭಮಣಿ ಕಿರಣದಿಂ ತೆಗೆದೊಳಪೊಕ್ಕು (ಮೋಹತ. ೧-೬). ೧೨. ಪ್ರಕಟವಾಗು : ಕಾಣಿಸಿಕೊಳ್ಳು ; ತೋರು ; ಹೊಳೆ : ರತ್ನಾಭರಣಂಗಳ ರುಚಿ ... ತೆಱಂ ಬೆಳಗಿಮುಲ್ಕಿಂದ್ರಾಯುಧಮೇಂ ಪೊಳೆದುದೋ ನೃಪಸುತನ ಮುಂದೆ ತೆಗೆದು ಬರುತ್ತುಂ (ಕಾದಂಪೂ. ೫೯೮) : ತೆಗೆಯಬಹುದೆ ಕಡವರವ ದರಿದ್ರಂಗೆ (ಬಸವ. ೨೬೭) : ಧರ್ಮಮುಖವರಳ್ವಂತೆ ಮುಕ್ತಿಯ ಸಜ್ಜೆ ತೆ[ ಪಾಠಾಂ. ದೆ ]ಗೆವಂತೆ ವೃಷಭನಮುಖಂ ವಿಕಾಸಮನೆಯ್ದಿ (ಬಸರ. ೪-೮೦). ೧೩. ತೋರ್ಪಡಿಸು ; ಕಾಣುವಂತೆ ಮಾಡು : ತೆಗೆದಯ್ ಮೋಕ್ಷದ ಬಟ್ಟೆಯಂ (ಶಮದ. ೨೧೭ ಪ್ರಯೋ). ೧೪. ಹೊರಬರಂ ; ಹೊರಸೂಸು : ಮೆಯ್ಯ ನೀರ್ತೆಗೆವನ್ನಂ ಜವಜವಜವನಂಜಿಸಿದುವು ಜವನಾಳ್ಗಳ ತೆಱದಿನೆನ್ನ ಕೆನ್ನೆಯ ನರೆಗಳ್ (ಅಜಿಪು. ೨-೭೯). ೧೫. ಸಂಹರಿಸು ; ನಾಶಮಾಡು ; ಧ್ವಂಸಮಾಡು : ನಿನ್ನ ಧೈರ್ಯಾವಲೇಪಮಂ ಪ್ರಾಣಂಬೆರಸು ತೆಗೆಯದೆ ಮಾಣೆನೆಂದು ಮನೋಭವನಿಂ ನಿರ್ಭರ್ತ್ಸಿತೆಯಾದಂತೆಯುಂ (ಕಾದಂಉ. ೮೩) : ಈ ಪ್ರಸಿವನಂ ಕುಸಿಯೆತ್ತಿ ಬಟ್ಟೆಯೊಳ್ ಪಟ್ಟಮೆಟ್ಟಿದು ಬಳಸಿದ ದಸಿಯೊಳ್ತೆಗೆಯಿಮೆಂದು . . . ಪೇೞ್ (ಸುಕುಮಾ. ೭-೫೫) : ನೈಷಧಭೂಮಿಪನ ಕೈಹಿಡಿದು ಬಾಳುವ ನೇಮವನು ತೆಗೆದ [ ಪಾಠಾಂ. ಬಿಸುಟ ] ಡವಿಗಟ್ಟಿತೆ ಕಠಿನವಹ ವಿಧಿಯು (ನಳಚ. ೭-೧೩). ೧೬. ನಾಶವಾಗು ; ಹಾಳಾಗು : ಒಬ್ಬ ಜಂಗಮದಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು (ಬಸವ. ೬೨೬). ೧೭. ಆಕ್ರಮಿಸು ; ಆವರಿಸಂ ; ಮೇಲೆ ಬೀಳು : ಕಾಳಿಯೆಂಬ ಜಲದೇವತೆ ಪೂರ್ವಭವಬದ್ಧವೈರದೊಳು ಗ್ರಗ್ರಾಹಾಕಾರದಿಂ ತೆಗೆಯೆ (ದಾವುಂಪು. ೫೭) : ಮಹಾರಣ್ಯದೊಳಗೆ ಬರ್ಪನನೊರ್ವ ಬೊಮ್ಮರಕ್ಕಸಂ ಕಂಡು ಪಿಡಿದು ತಿನಲೆಂದು ತೆಗೆವುದುಂ (ಪಂಚತಂ. ೧೫೨-೯) ; ತಾರೆಗಳು ನೆಣಗೊಬ್ಬಿನಲಿ ರಾಹುವ ತೆಗೆದು ಬದುಕಲು ಬಲ್ಲವೇ (ಕುಮಾರದ್ರೋ. ೫-೭೩). ೧೮. ತಡೆ ; ಅಡ್ಡಿಪಡಿಸು : ಪೋಗದಿರೀಶ್ವರನಾಣೆಯೆಂದು ಪುಲ್ಮರುಳಿನಿಸಾನುಮಂ ತೆಗೆದು ಕಾಡಿದುದಲ್ಲಿ ಫಣೇಂದ್ರಕೇತುವಂ (ಪಂಪಭಾ. ೧೩-೫೫) : ಕಾಲಮೇಲೆ ಮುಟ್ಟಿಗದ ವಿನಯಾಭರಾಮನಂ ತೆಗೆದು ತಟ್ಕೈಸಿ (ಕಾದಂಉ. ೨೭೫) ; ಇಂದು ಪೋಗಲಾಗೆನ್ನನವಜ್ಞೆಗೆಯ್ದು ಬಿಸಿಲಾದುದು ನಿಮ್ಮಡಿ ನಾಳೆ ಪೋಪುದೆಂದುನ್ನತಶೀಲರಂ ತೆಗೆವುದುಂ (ಧರ್ಮಾಮೃ. ೦೨-೬೬) : ದಂಡಾಗ್ರದೊಳ್ ರಂಜಿಪ ಬಿರುದ ಪಟವ್ರಾತಮೋರಂದದಿಂ ವಾಯುಗವ ವ್ಯಾಪಾರಮಂ ನೆಟ್ಟಗೆ ತೆಗೆಯೆ ... ಬರುತುಮಿರ್ದಂ ಪುರಕ್ಕುರ್ವರೇಶಂ (ಕುಸುಮಾ. ೪-೧೧೪). ೧೯. ನಿವಾರಿಸು ; ಹೋಗಲಾಡಿಸು ; ಕಳೆ : ಬಯ್ವ ಜನರು ಜರಿವ ಜನರು ಅವರಿಗೇನು, ಬಾಯಿ ಕೊಬ್ಬು ನೋವು ತೆಗೆವರೆ ? (ಕವಿಸೋ. ೭೦-೨೧) : ಪಿಸುರು ತೆಗೆದರೂ ಪಿಶಾಚ ಬಿಡುವುದಿಲ್ಲ (ಗಾದೆ). ೨೦. ತೊಡಗು ; ಉಪಕ್ರಮಿಸು ; ಆರಂಭಿಸು : ಮೆಲ್ಲನೆ ಮಾತ ತೆಗೆದನು (ಕುಮಾಕ. ೫-೫) ; ಸಿಂಹಳಕ್ಕಾಳ್ದನ ಬಂಟರುರ್ವಿ ಮಿಗೆ ಕಾಳೆಗಮಂ ತೆಗೆದರ್ (ರಾಜಶೇ. ೫-೦೨೪). ೨೧. ಉಂಟುಮಾಡು ; ಆಗಿಸು : ಬಗಸೆಗಣ್ ಕುಡಿನೋಟವಮುವು ಪೊಸ ಗಾಡಿಯಂ ತೆಗೆಯೆ ... ದಿಟ್ಟಗೇನೆಸೆದಳೋ (ಪದ್ಮರಾ. ೩-೩೦) : ಸುಮನ ಸುಗಂಧ ಕದಂಬದ ಕಂಪನು ತಿಮಿರಿ ತೆಗೆಯಲಾಗಿ (ಭರಚ. ೦-೩೬). ೨೨. ಮಾಡು ; ರಚಿಸಂ ; ನಿರ್ಮಿಸು : ಕಡೆದರೊ ಶಂಖದಿಂ ತೆಗೆದರೋ ನವ ಮೌಕ್ತಿಕದಿಂ ... ಪೇೞ್ನಲ್ಕರಮೆ ಕಣ್ಗೆಸೆದಿರ್ದುದು ರೂಪು ಕಾಂತೆಯಾ (ಕಾದಂಪೂ. ೬೭೭) ; ಗಗನಗಂಗಾನದಿಯ ಕಾಲುವೆ ತೆಗೆದರೆನೆ ಠಕ್ಕಯದ ಪಲ್ಲವ ಪಗಿಯೆ ಮೆಱೆದುದು ಬಿಗಿದ ಮೊಗರಂಬದ ವಿಳಾಸದಲಿ (ಕುಮಾರದ್ರೋ. ೩-೪) ; ತೆಗೆದ ತೊಱೆ ಕಾಲುವೆಗಳುದ್ಯಾನಗಳ . . . ಈಕ್ಷಿಸುತರಸ ನೈತಂದ (ತೊರಠಾ. ೦-೭-೦೦). ೨೩. ಬರೆ ; ರೇಖಿಸಂ ; ಚಿತ್ರಿಸು : ಎರಡು ಬರೆಯಂ ತೆಗೆದು[ಪಾಠಾಂ. ತೇಪು]ದನರಸಂ ಕಂಡು ಕಡು ಮುಳಿದು (ವಡ್ಡಾರಾ. ೧೦೮-೨೮) ; ಗಾಡಿವೆತ್ತಡರ್ದ ಕತ್ತುರಿಯೊಳ್ ಮದ ಪಟ್ಟೆಯಂ ವಿಳಾಸದೆ ತೆಗೆದಂತೆ ಕಣ್ಗೆಸೆವು ತೋಱಿದುವಾ ಕದನತ್ರಿಣೇತ್ರನಾ (ಪಂಪಭಾ. ೩-೭೬) ; ತೊಗರುಮೊಗಕೆ ಕಣ್ಗಳ ದಿಟ್ಟ ತಾಕದೊಲ್ತೆಗೆದ

ಕತ್ತುರಿರೇಖೆಯಂತೆ (ಶಂಸವಿ. ೯-೧೧೪) ; ಖಲೀಲ ಜಿಬ್ರಾನನು ಮಹಾಕವಿಯೂ, ತತ್ವಜ್ಞಾನಿಯೂ, ಹಾಗು ಚಿತ್ರಕಾರನೂ ಆಗಿದ್ದನು ... ಅವನು ತೆಗೆದ ಚಿತ್ರಗಳು ಪಾಶ್ಚಾತ್ಯದೇಶದೊಳಗಿನ ಬಹುಶಃ ಎಲ್ಲಾ ಪ್ರಮುಖಪಟ್ಟಣಗಳಲ್ಲಿಯೂ ಪ್ರದರ್ಶಿತವಾಗಿವೆ (ಪ್ರಬಂಧ. ೧೦೩). **೨೪.** ಸರಿಸು ; ತಳ್ಳು : ಅಡಿಯಿಂ ಮೇಗಣ್ಗೆತ್ತುವ ಕಡುಗಾಳಿಯು ಪೊಯ್ಯೊಳೆದಱ ನೀರೊಗೆದುದಾರ್ದಡಿಗೆ ಬರೆ ತೆಗೆವ ಗಾಳಿಯಿನಡಿಗಿೞಿದ ಪುದಿದಱ ನೀರಿದೊಂದಚ್ಚರಿಯೇ (ಆದಿಪು. ೧೩-೫೨) : ಎಲೆಎಲೆ ಹಿಡಿ ಭೀಮನನು ತೆಗೆ ಕಲಿಕೆ ದುರ್ಯೋಧನನ (ಕುಮಾ.ಭ. ೬-೩೬) : ಪಾಂಡವರ ಮಾತ ತೆಗೆಯಾಡದಿರಿ (ತುರಂಗ. ೪೬-೧೨). **೨೫.** ಓರೆಯಾಗು ; ಅರುಗಾಗು ; ಪಕ್ಕಕ್ಕೆ ಸರಿ: ಒತ್ತೊತ್ತಿನಿಂ ನಿತ್ತರಿಸಲ್ಕಾಱದೇನೊಂದೆಡೆಗೆ ತೆಗೆದುದೋ ವಿಶ್ವದಿಕ್ಚಕ್ರಂ (ಕಾದಂಉ. ೪೩೨) ; ಇದು ಹರಿಯ ಸಮರಲಕ್ಷ್ಮಿಯ ಮದುವೆಯೊಳೆಡೆವಿಡಿದ ಕಾಂಡಪಟಮೆನಿಸಿದ ಕೌಮುದಿ ತೆಗೆವಿನಂ ಮಗುಬ್ದೆದನಿಸಿದತ್ತು ಮುನ್ನೀರೊಳಿಂದುಘಟಿಕಾಪಾತ್ರಂ (ಪರ್ಶಪು. ೮-೩೫). **೨೬.** ಒಯ್ಯು; ಸಾಗಿಸು : ಕೀರಂಗೆ ಕುಟುಕನಿಕ್ಕೆಂಬ ಚಕೋರಿಗಳಂ ಚಂದ್ರಕಾಂತದ ನೆಳಲ್ಗೆ ತೆಗೆಯೆಂಬ ... ಕೆಲಸದ ನೆವದಿ (ನಂಬಿರ. ೧೪-೩೬). **೨೭.** ತೆರಳಿಸು; ಹಿಂತಿರುಗಿಸು : ಇಚ್ಛೆಯಣಮಿಲ್ಲದೊಡಂ ತೆಗೆದರ್ ಕರಂ ಮನಂ ಕಿಡೆ ಪೊಸತಪ್ಪುದೊಂದು ಪಿಡಿಗಂಕುಶಮಿಟ್ಟು ಮರಳ್ಚುವಂದದಿಂ (ಕಾದಂಪೂ. ೬೬೨); ಪಡೆಯು ತೆಗೆ ತರುವಲಿಯು ಕೊಲ್ಲದೆ ಹಿಡಿ (ಕುಮಾ.ದ್ರೋ. ೬-೬); ಬಗೆವೆತ್ತ ಬಾಗಿಲ ಕದ ವಜ್ರಲಾಳವಿಂಡಿಗೆಗಳ ಬಂಧನಗೊಳಿಸಿ ಮಿಗೆ ವಿಶ್ವಾಸಿ ಕಠೋರ ರಾಕ್ಷಸಿಯರ ತೆಗೆಯದೆ ಕಾಪನಿಕ್ಕಿದಳು (ಮೋಹತ. ೩೩-೩೬). **೨೮.** ಹಿಂತೆಗೆದುಕೊಳ್ಳು : ವಾಪಸ್ಸು ತೆಗೆದುಕೊಳ್ಳು : ಪದಪಿಂ ನಟ್ಟರೆ ದಿಟ್ಟಿಯಂ ತೆಗೆದನೆಂತೆಂತಾನುಮುದ್ವೇಗದಿಂ (ಕಾದಂಪೂ. ೬೬೪): ಹಗೆಯರಿಗೆ ವರವೀವರಿಬ್ಬರು ತೆಗೆಯಲಱಿಯರು ಕೊಟ್ಟ ವರಗಳ (ಹರಿಶ್ಚ. ೨೮). **೨೯.** ಹೋಗು; ತೆರಳು : ಇತ್ತಲೀ ಪ್ರಾಣೇಶನಿದ್ದ ನಿಮಿತ್ತದಲಿ ಪಶುಗಳು ಬೆಳೆದ ಹೊಲಬತ್ತ ತೆಗೆಯಲು (ಬಸಪು. ೬೦-೨೩). **೩೦.** ಹಿಮ್ಮೆಟ್ಟು; ಹಿಂದೆಗೆ : ಆಹವಧರೆಯೊಳ್ ಪತಿತಂ ಪ್ರಸ್ಕನ್ನಂ ಕಾದಿ ತಟ್ಟುಗಿದು (ರಣದೆ) ತೆಗೆದನಕ್ಕುಂ ನಷ್ಟಂ (ವಚು.ಕೋ. ೮೨-೫): ಕೈಕೊಳ್ಳದಗ್ಗದ ಬೀರರ್ ತೆಗೆದೋಡೆ (ಶಬ್ದಶಾ. ೩೦೪): ತೆಗೆಯೆ ರಿಪುಬಲ ಕೊಲುತ ಬಂದುದು ದಿಗಿಭವು (ಕುಮಾ.ದ್ರೋ. ೩-೪೨) ; ಹಗಲು ಸವೆದುದು ಹೊಂಬಿಸಿಲು ನೆಱೆ ತೆಗೆದುದತಿ ವೇಗದಲಿ (ನಳಚ. ೫-೪೩). **೩೧.** ಮುಚ್ಚು ; ರದ್ದುಪಡಿಸು : ಬಜವಾದ ಅಂಗಡಿಯು ಈಗ ತೆಗೆದು ಇರುತ್ತೇವೆ (ಮುಂಬವಾ. ೨೩ ಪ್ರಸ್ತಾವನ). **೩೨.** ಹಿಡಿದುಕೊಳ್ಳು; ಹಿಡಿ: ಚೀಟ್ ಚಿಕ್ಕದೆಂದಟ್ಟುಱಿಂ ತೆಗೆಯಲ್ ಕಚ್ಚದೆ (ಸೋಮೇಶ. ೪೧). **೩೩.** ಆಯ್ದುಡು; ಆರಿಸಿಡು; ಮೀಸಲಿಡು: ಸರ್ವಸ್ವಮುಮಂ ಕುಡದಿರಲುರ್ವೀಪತಿ ಬಂದೊಡಾಗದೆಂದತಿಭಕ್ತರ್ ಖರ್ವಡನಿವಾಸಿಗಳ್ ಕೆಲರುರ್ವೀಶರ್ ತೆಗೆದರಾನೆಯಂ ಕುದುರೆಯುಮಂ (ಆದಿಪು. ೯-೧೨೮). **೩೪.** ಬಳಸು; ಉಪಯೋಗಿಸು : ನಿತ್ಯವು ತೆಗೆಯುತಲಿರಬೇಕು ಹುಟ್ಟಿಸು ತಾನೆಯೆ ತೊರೆಯೊಳಂಬಿಗನು (ಇಂಚಾಪ. ೨೦೦-೩೬). **೩೫.** ಕ್ರಯ ಕೊಟ್ಟು ಪಡೆ; ಕೊಂಡುಕೊಳ್ಳು: ಇದನ್ನು ಎಷ್ಟು ದುಡ್ಡು ಕೊಟ್ಟು ತೆಗೆದಿರಿ ?(ರೂಢಿ). **೩೬.** ಉಚ್ಚರಿಸು; ಹೇಳು: ಮಾತು ಕೇಳದ ಮಕ್ಕಳ ಹೆಸರು ತೆಗೆಯಬಾರದು (ಪುರಂದ. ೨-೫೮-೧). **೩೭.** ತೋರಿಬಿಡು : ತೆಗೆಯೆ ಬೀರರವ [ದೆ] ಮೇಲೆ ಪರಿವ ಮದಗಜಂಗಳಿಂ ಚಳತ್ತುರಂಗಮಂಗಳಿಂ (ಪಂಪಭಾ. ೧-೫೮ ರಗಳೆ). **೩೮.** ನಿಲ್ಲಿಸು; ಸುಮ್ಮನಿರು : ಪಿಂತುಂ ತೆಗೆ ಮೇಘನಾದ ಸಹಿತಂ ತತ್ಪಾದಪದ್ಮೋಪಜೀವಿಗಳಾಗಿರ್ದ ಮಕ್ಕಳಿಲ್ಲಮಿದೆ ನಮ್ಮಂ ಕಾಣಲೆಂದೀಗಳಿಲ್ಲಿಗೆ ಮಂತ್ರೀ ಬರುತಿರ್ಪರ್ (ಕಾದಂಉ. ೬೬೪): ಧರೆಯೊಳಗೆ ತಾರಕಂಗೆನಗರಿಮೇಘ ಮಹಾಬಲಂಗೆ ಸಮರಾಂಗಣದೊಳ್ . . . ಸುರಪತಿಗಿರಪತಿಯಜಂಗಿಜಂ ತೆಗೆ ಸರಿಯೇ (ಗಿರಿಕ. ೬-೩೮); ಫಡ ಫಡುರವಣೆ ಬೇಡ ತೆಗೆ ಬಾಯ್ಬಡಿಕತನವಿದು (ಕುಮಾ.ದ್ರೋ. ೨-೩೯). **೩೯.** ಸುಡು; ಮರಳಿಸು: ಕುದಿಸು: ನೇಱಿಲ ಬೀಜಂ ಕಡಸಿಗೆಯುನ ಬೇರಂ ಸುಣ್ಣಂ ಜಲಮಿಮಱಿಂ ತೆಗೆಯಲ್ ವಿಷಮಱಿಗುಂ (ಲೋಕೋಪ. ೮-೨೩). 'ತೆಗೆಪು$_1$' ಪರಾ. **೪೦.** ತೇಯು; ಅರೆ : (ಕ). **೪೧.** [ಗಣಿತ] ಭಾಗಿಸು: "ತೆಗೆಯೆನಲು ಭಾಗಿಸುಹಮಕ್ಕು" (ಮಂಗರಾ. ೧೦೪-೧೦೨).

**ತಕ್ಕೊ, ತಗೊ, ತಕ್ಕೊ**=ತೆಗೆದುಕೊಳ್ಳು; ಸ್ವೀಕರಿಸು : ತಕ್ಕೋ ಗಂಟ ನಿನ್ನಾಟವ ತಿಳಿಸುವೆ (ವಿದಾಕ್ಷ. ೩೫ ಪಲ್ಲವಿ); ನಿನ್ನ ಹಣವನ್ನು ನೀನೇ ತಗೋ (ರೂಢಿ); ತಕ್ಕೋ ನೀ ಮುನ್ನ ಕೊಟ್ಟ ಹೊನ್ನ (ಶರಲೀ. ೩೫೯-೪). **ತೆಗೆದಿಕ್ಕು** = ಧರಿಸು: ಕಾಸೆಯನುಟ್ಟು ಜನ್ನವಿರಮಂ ಪೆಗಲೊಳ್ ತೆಗೆದಿಕ್ಕಿ ವೇದದಭ್ಯಾಸಮನುಂಟುಮಾಡಿ ಪೊಲಸಂ ಪಸುತಿರ್ಪ ನಿಶಾಚರರ್ಕಳಂ ಗ್ರಾಸಮನುಣ್ಬುದೆಂದೊಡೆ (ಕಾವ್ಯಸಾ. ೫೩೫). **ತೆಗೆದಿಡು** = ಜೋಪಾನ ಮಾಡು; ಎತ್ತಿಡು: ಹೊಸಬಟ್ಟೆಯನ್ನು ಪೆಟ್ಟಿಗೆಯಲ್ಲಿ ತೆಗೆದಿಡು (ರೂಢಿ). **ತೆಗೆದಿರಿಸು** = ಬೇರೆಯಾಗಿರಿಸು ; ಮೀಸಲಾಗಿರಿಸು : ಸಕಲ ದೇವಾನ್ನವ ಒಡೆಯರಿಂದಲೂ ಮಿಗಿಲಾಗಿಕ್ಕಲು ತೆಗೆದಿರಿಸಿದೆನು (ಬಸವ. ೪೩೯) ; ನೊಣವನೆ ಬೇಯಿಸಿ ಬಡಿಸುವುದಾದರು ರಕ್ಕೆಯನೊಂದನು ಅಡುಗೆಯ ಭಟ್ಟರು ತಮಗಾಗಿ ತೆಗೆದಿರಿಸುವರು (ಇಂಚಾಪ. ೨೨೦-೯೪). **ತೆಗೆದುಕೊಳ್, ತಕೊಳ್, ತಕ್ಕೊಳ್, ತಕ್ಕೊಳ್ಳು, ತೆಕೊಳ್, ತೆಕ್ಕೊಳ್, ತೆಕ್ಕೊಳ್ಳು, ತೆಗಕೊಳ್, ತೆಗೆಕೊಳ್** = ೧. ಸ್ವೀಕರಿಸು: ಸಮ್ಯಗ್ವ್ರತಂಗಳುಮಂ ತೆಗೆದುಕೊಳ್ವಂತೆ ವಿಚಿತ್ರವಸ್ತ್ರಂಗಳಂ ತೆಗೆದುಕೊಂಡು ... ಬನಮಂ ಪೊಕ್ಕು (ಸುಕುಮಾ. ೧೧-೮೩ ವ); ಆ ವಿಭೂತಿಯಂ ಸುಕೃತದಿಂ ತೆಗೆದುಕೊಂಡು . . . ಧರಿಸಿ ಲಿಂಗಾರ್ಚನೆಯ ಮಾಡುವ ಶರಣನಾತನೆ ವೇದವಿತ್ತು (ಆದವ. ೧೮-೪೩) ; ಆ ಜಂಗಮವೇ ಸಾಕ್ಷಿಯಾಗಿರ್ದು ವಿಭೂತಿ ವೀಳೆಯವ ತಕ್ಕೊಂಡು (ಚನ್ನವ. ೦೨-೯) ; ಲಿಂಗ ಕೆಲದೊಳಿರೆ ಕರದಲ್ಲಿ ತಕ್ಕೊಂಡು (ಗುರುಬಾ. ೫-೬೪) : ಬೆಣ್ಣೆ ತಕ್ಕೊಂಡ ಬಳಿಕ ಉಳಿಯುವುದೇನು ಮಜ್ಜಿಗೆ (ಮುಂಬಯಿ. ೦-೨೫) ; ತೋಟ ಮಠ ಕೆರೆಯ ಅಪಹರಿಸಿ ತಕೊಂಡಂಥಾ ಪಾಪಿಗಳು ದೇವಲೋಕ ಮರ್ತ್ಯಲೋಕಕೆ ಹೊರಗು (ಎಕ. XVI, ಚಳ್ಳ. ೦-೦೯ : 1622) ; ತಾಮ್ರ ಶಾಸನ ಸಹವಾಗಿ ಕ್ರಯವನೂ ತಕ್ಕೊಂಡು (ಸೌಇಇ. IX-II, ೫೦೬-೨೪: 1638) ; ಖಂಡಪರಶುವಿನ ಕೈಯಿಂದಲಾ ಹೊನ್ನ ತಕ್ಕೊಂಡು (ಬಬಪು. ೬೨-೬೨) : ದುಡ್ಡುಗಳನ್ನೆಲ್ಲಾ ತಕ್ಕೊಂಡು ಪೇಟೆಗೆ ಹೋಗಿ (ಕಥಾಮಂ. IV, ೧೪) ; ವಿವಿಧವಾದಕರೊಳಗದೊರ್ವನ ಹೆಗಲ ಹಱೆವೊಂದ ತವಕಿಸದೆ ತೆಗಕೊಂಡು ತನ್ನೊಪ್ಪುವ ಹೆಗಲಿನೊಳು ಕೋದು (ಸಾಳ್ವಭಾ. ೦೮-೫೫) ; ಪೂವಸೆಗೆಲದೊಳವ ಮುನ್ನಿರಿಸಿ ದಸಿ ಪೀಡಯಮಿರಲು ತೆಗೆಕೊಂಡು ನೋಡುತಿರೆ (ಸಾಳ್ವಭಾ. ೧೬-೦೫). ೨. ಪಡೆ ; ಹೊಂದು : ತಮ್ಮ ಆಪ್ತರು ಇಷ್ಟರು ಸ್ನೇಹಿತರು ಮುಂತಾದವರ ಭೆಟ್ಟಿಯನ್ನು ತಕೊಳ್ಳಬೇಕು (ಮುಂಬಯಿ. ೪-೩೪). ೩. ವಹಿಸು : ಇನ್ನು ಮುಂದೆ ಹೆಚ್ಚು ಶ್ರಮ ತಕ್ಕೊಂಡು ಕಲಿಯಬೇಕಾಗುವುದು (ಮುಂಬಯಿ. ೪-೧). ೪. ದೋಚು; ಕಸಿ; ಕೀಳು : ಬಿಕ್ಕು ಬಿಕ್ಕನೆ ತೋಱೆ ಇಕ್ಕುವಳು ಕಣ್ಣೀರ ಸಿಕ್ಕಿದಳು ಸೂಳೆಯೆನಬೇಡ ಅದು ರೊಕ್ಕ ತಕ್ಕೊಂಬುವುದಕೆ (ಸರ್ವಜ್ಞ. ೧೯೨೪). **ತೆಗೆದುನೋಡು**=ನೋಡಿಯೂ ನೋಡದ ಹಾಗೆ ಈಕ್ಷಿಸು,— ನೋಡು : ಪರೆದ ಕುರುಳಲುಗೆ ಘಟ್ಟಿಯನರೆಯುತ್ತುಂ ನಾಣ್ಚಿ ತೆಗೆದು ನೋಟ್ಟುದುಮೆನ್ನಂ (ಪಂಪಭಾ. ೮-೬೫). **ತೆಗೆದು ಹಾಕು** = ೧. ಹೊಡೆದು ಹಾಕು : ಇಲ್ಲಿ ಬಂದಿರುವ ಅನಾವಶ್ಯಕ ವಾಕ್ಯವನ್ನು ತೆಗೆದುಹಾಕಬಹುದೆ ? (ರೂಢಿ). ೨. ವಜಾಮಾಡು : ಅವನನ್ನು ಕೆಲಸದಿಂದ ತೆಗೆದು

ಹಾಕಿದರು (ರೂಢಿ). ೩. ನಿರಾಕರಿಸು ; ಅಲ್ಲಗಳೆ : ಆ ಮಾತನ್ನು ತೆಗೆದುಹಾಕುವಂತಿಲ್ಲ (ರೂಢಿ). **ತೆಗೆದು ಹೋಗು** = ಕೃಶವಾಗು ; ದುರ್ಬಲವಾಗು : ದಿನೇ ದಿನೇ ಮೊದಲಿಗಿಂತ ಹೆಚ್ಚಾಗಿ ತೆಗೆದು ಹೋಗುತ್ತಾ ಬಂದರು (ಚಿಕ್ಕದೇ. ೨೭೯) : ನೀವು ಬಹಳ ತೆಗೆದು ಹೋಗಿದ್ದೀರಿ (ಮುರುಳಿ. ೯೯). **ತೆಗೆಬೀಯ** = ಕೊಡುಗೈಯವನು ; ಮುಕ್ತಹಸ್ತ ; ಉದಾರಿ ; ಒಂದು ಬಿರುದು (?) : ಅನ್ವಾತನ ಕಾಳೆಯ ಬಿರುದೆನ್ತುಂಡಡೆ ಆಳಿಂ ಮುಂನಿಱುವಂ ಸಿತಗರ ಗಂಡಂ ತೆಗೆಬೀಯ ಚಲದಂಕರಾಮನ ಗಂಧವಾರಣಂ ಮಾಲೆವರ ಮಾರಿ (ಸೌಇಇ. XX, ೧೨೫-೮ ; 1185). ☞ ಈ ಧಾತು ಅನೇಕ ಶಬ್ದಗಳ ಮುಂದೆ ಸೇರಿ ಸಂಯುಕ್ತ ಧಾತುವಾಗಿ ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾ:—ಕಾಲ್ತೆಗೆ, ಚಿತ್ರತೆಗೆ, ಪ್ರಾಣತೆಗೆ, ಬಾವಿತೆಗೆ, ಮೈದೆಗೆ, ಹೊರತೆಗೆ ಇತ್ಯಾದಿ.

[ ದೇ.॥ ತಮಿ. ತೆಕ್ಕು ; ತೆವ್ವು ; ತುಳು. ದೆಪ್ಪು ; ತೆಲು. ತಿಗಿಯು. ತಿಗುಚು ; ತಿಗುವು, ತಿವ್ವು ; ಕೊಲಾ. ತಿರ್, ತಿವ್ ; ನಾಯ್ಕಿ. ತಿರ್ಕ್, ತಿವ್ಡ್]

**ತೆಗೆ$_2$** (ನಾ). ೧. ತೆಗೆದುಕೊಳ್ಳುವಿಕೆ : (?). ೨. ಆಕರ್ಷಣೆ ; ಸೆಳೆತ : "ಆಕರ್ಷಣ ಪಲಾಯನಗಳೊಳ್ ತೆಗೆ" (ಶಬ್ದಮಂ. ೮೦). ೩. ಹಿಮ್ಮೆಟ್ಟುವಿಕೆ ; ಹಿಂದೆಗೆಯುವಿಕೆ ; ಪಲಾಯನ : ಅಮರ್ಚುವ ನಿಲ್ವೆಡೆಯುಂ ಬಗೆಯುಂ ತೆಗೆಯನಲ್ಲಾಟವುಂ ಕಾಟಮುಂ ನೋವುದುಂ ಸಾವುದನೆಲ್ಲಂದದಿಂ ಬಗೆದಾಗಳ್ (ಪಂಪಭಾ. ೫-೪೩). ೪. ಇಳಿತ ; ಇಳಿಯುವಿಕೆ : ತೆರೆ ನೊರೆ ಬುದ್ಬುದಂ ಸುೞಿಜಲಂ ತೆಗೆ ಪೆರ್ಚುಗೆ ಗುಣ್ಪು ಘೋಷಣಂ ವರುಣ ನಗಂ ವಧೂಟಜನನಂ . . . ನೀರ್ಮೊಗೆ ವಭ್ರಮುರ್ವರಾಪರಿವೃತಿ ನಾಗರಿಕ್ಕೆ ಬಗೆದಾದೊಡೆ ಸೈತು ಸಮುದ್ರವರ್ಣನಂ (ಸೂಕ್ತಿಸು. ೨-೧). [ <ತೆಗೆ$_1$ ]

**ತೆಗೆತ** (ನಾ). ತೆಗೆದುಕೊಡುವಿಕೆ ; ದಾನ : "ದಯ—ದಾನ, ಗತಿ ಹಿಂಸಾದಾನೇಷು ಈವಿಯೊಳಂ, ನಡೆಯೊಳಂ, ಝುಂಕಣೆಯೊಳಂ, ತೆಗೆತದೊಳಂ" (ಕಾಶಕ್ಕ. ೧೧೦). [ತೆಗೆ$_1$ + – ತ$_2$]

**ತೆಗೆತರ್** (ಕ್ರಿ) ೧. ತೆಗೆದುಕೊಂಡು ಬರು. 'ತೆಗೆತರಿಸು' ಪರಾ. ೨. ಸೆಳೆದುಕೊಂಡು ಬರು : ಹೆಣ್ಣಾಳ್ಗಳೆನ್ನದೆ ತಱಿದಿಕ್ಕಿ ತೆಗೆತಂದು ಚಿಣ್ಣನನೆಮಗೊಪ್ಪಿಸೆಂದ (ಮೋಹತ. ೩೩-೩೦). [ತೆಗೆ$_1$ + ತರ್]

**ತೆಗೆತರಿಸು** (ಕ್ರಿ). ತೆಗೆದುಕೊಂಡು ಬರುವಂತೆ ಮಾಡು : ಪೆಟ್ಟಿಗೆಗಳಂ ತೆಗೆ [ಪಾಠಾಂ. ಗ] ತರಿಸಿ ಮುಂದಿಟ್ಟು (ಬಸಪು. ೧೧-೧೫). [ತೆಗೆತರ್+–ಇಸು$_3$]

**ತೆಗೆನೆಱ್** (ಕ್ರಿ). (ಬಾಣ ಬಿಡಲು ಸಿದ್ಧವಾಗಿ) ಪೂರ್ತಿಬಾಣವನ್ನು ಎಳೆ : "ತೆಗೆನೆಱ್ – ಆಕರ್ಣಾಂತೇ (ಪೂರಾ ಎಳೆ)" (ಕಮುಧಾ) ; ಗಱಿ ಸನ್ನೆಗೆಯ್ದು ತೆಗೆನೆಱಿದೆಱಗಿ ಪರಂಕಲಿಸಿ ಪರ್ವಿ ಕೂಕಿಱಿದಿಸೆ (ಪಂಪಭಾ. ೧೦-೭೩) : ಆಗಳಂಬರಚರಬಲದ ಧನುರ್ವಲಂ ತೆಗೆನೆಱಿದು ಪೊಕ್ಕು (ಶಾಂತಿಪು. ೪-೮೪); ಕಡೆಗಣ್ಣಿಂ ಕಯ್ಯುಮಿಂಬಾಗಿರೆ ತೆಗೆನೆಱಿದವ್ಯಗ್ರನೇಕಾಗ್ರಚಿತ್ತಂಬಡೆದಿರ್ದಂ (ಪಂರಾಮಾ. ೧೪-೧೭೭); ತೆಗೆನೆಱಿದಬ್ಜನಾಭನಿಸೆ (ಜಗವಿ. ೭-೮೩); ಸಂಚಳಿಸದ ಶಂಕರನ ಮನಂ ಚಳಿಯಿಪ್ಪುದುಂ ಸಾರ್ದು ಪಾರ್ದು ತೆಗೆನೆಱಿದಿರ್ದಂ (ಗಿರಿಕ. ೮-೪೪); ಓಸರಿಸದೆ ತೊಡರ್ಚಿ ಸಾರ್ಚಿ ತೆಗೆನೆಱಿದು ನಿಂದು (ರಾಜಶೇ. ೭-೯೭೪). [ತೆಗೆ$_1$ + ನೆಱ್$_1$]

**ತೆಗೆನೇಣು** (ನಾ). ಎಳೆಯುವ ಹಗ್ಗ ; ಕಡೆಗೋಲಿನ ಹಗ್ಗ : ಮಂದರದ ಕಡೆಗೋಲ ಮೇಳವಿಸಿ ವಾಸುಗಿಯ ತೆಗೆನೇಣನಿಂದಸುರರೋಳಿಯುಂ ನೀವು ಸಹಿತೆರಡು ಕಡೆಯುಂ ಪಿಡಿದು ಮಥಿಸಲು (ಲಕಿಜಂ. ೧೨-೫) : ನಳನಳಿಪ ತೋಳುಗಳ ನಿಜಕರತಳದ ತೆಗೆನೇಣುಗಳ ಮುಖದಲಿ ಹೊಳೆವ ಹೊನ್ನೋಲೆಗಳ . . . ಮೋಹನಗಾತ್ರೆಯೆಸೆದಳು ಮೊಸರ ಕಡೆವುತ್ತ (ನಿಭಾಗ. ೧೦-೯-೧೫) : ಹರಿಗೆ ತಲ್ಪವಾಗಿರ್ದನು ಸಮುದ್ರಮಥನದಲ್ಲಿ ತೆಗೆನೇಣಾಗಿ ನೊಂದನು (ಭೃರಸೂ. ೨೧). [ತೆಗೆ$_1$ + ನೇಣು (<ನೇಣ್$_1$) ]

**ತೆಗೆಪು$_1$** 'ತೆಗಪು' ನೋ.

**ತೆಗೆಪು$_2$** (ನಾ). ನೆನೆಸುವಿಕೆ : ಅಳಿಯೊಳ್ ತೆಗೆಪಾದರಳಿಯ ತಳಿರು ಮಾರುಡದ ಪತ್ರಿಯೆಳಗಾಯುಮನಾ ಜಳದೊಳ್ ಗೋಕ್ಷೀರಾನ್ವಿತಮಾಮಳಕಾಮ್ರಫಳಂಗಳಾವಗಂ ಮೃದುವಕ್ಕುಂ (ಲೋಕೋಪ. ೮-೨೦). [?]

**ತೆಗೆಬಗೆ, ತೆಗೆಬಿಗಿ** (ನಾ). ೧. ತೊಂದರೆ ; ಕಷ್ಟ : ಭೂಪತಿ ಹಿಗಡುಗೊಳುತ್ತೈತಂದು ಕೇಳಲು ತೆಗೆಬಗೆಯುಲುಸುರುತ್ತ ತಂದೆಯ ನೆಲೆಯ ತಿಳುಹಿದನು (ಕೌಶಿರಾ. ೦-೩೦); ಮುಸೆದು ಕರಗಳನೊರ್ವರೊರ್ವರು ಮುಸಗಿದರು ಮುಷ್ಟಿಪ್ರಹಾರದಲುಸಿರ ತೆಗೆಬೆ[ಬ]ಗೆಯಿಂದ ಮುಂಡಿಯ ನೊಡ್ಡಿ ಸಮವಾಗಿ (ಕೋಗಯ. ೨೪-೦೯). ೨. ಪ್ರಾಣ ಹೋಗುವ ಸ್ಥಿತಿ; ಉತ್ಕಟಾವಸ್ಥೆ : ಬಾಯ ಮಿಡುಕಿನ ಬಳಲುಗಂಗಳಿನಾಯುವಿನ ತೆಗೆಬಗೆಯ ರಕ್ಕಸರಾಯನನು ಕೊಂಡೊಯ್ದು ಬೀಸಿದರಾಲವಟ್ಟದಲಿ (ತೊರರಾ. ೧-೧೫-೨೭). ೩. ಅತಿಶಯ; ಆಧಿಕ್ಯ; ಹೆಚ್ಚಳ: ವಿಕ್ರಮದ ತೆಗೆಬಗೆಯಿಂದಲರಿನೃಪರುಗಳ ಬಗೆಗೆಡಿಸುತ ನಡೆದಳು (ಕುರಾಸಾಂ. ೪೦-೮೪). 'ತಗೆಬಗೆ' ಪರಾ. **ತೆಗೆಬಿಗಿ** : ೧. ಸೊಗಸಿ ಬೆಳೆಯೆ ಕೊಯ್ದು ಪೊಱುವ ಜನಕೆ ತೆಗೆಬಿಗಿಯಿಲ್ಲವಾವ ಕಾಲದೊಳು (ರಾಮವಿ. ೨-೫೭). ೪.ಬಿಂಕ ; ಬಿಗುಮಾನ : ಸೊಗಯಿಪ ಸತ್ಕಾರದಿಂದ ತೆಗೆಬಿಗಿಯಿಲ್ಲದ ಸಮರತಿಯಿಂದವಳಗಣಿತಸುಖವಿತ್ತಳವಗೆ (ನೇಮಿಶಂ. ೧೦-೯೧): ಮೊಗವ ಕಾಣುತ ನಮ್ಮೊತ್ತಿಗೆ ಬಹನಲ್ಲದೆ ತೆಗೆಬಿಗಿಯುವನಲ್ಲ ನಿಮ್ಮ ಮಗ (ಕುರಾಸಾಂ. ೩೬-೧೨೪). 'ತಗಿಬಗಿ' ಪರಾ.

**ತೆಗೆಬಗೆಮಾಡು** = ತೊಂದರೆಯನ್ನುಂಟುಮಾಡು; ಇಕ್ಕಟ್ಟನ್ನುಂಟು ಮಾಡು : ಶಿಶುವೆ ನೋಡಭಿಮನ್ಯು ಸುಭಟಪ್ರಸರದಿನಿಬರ ನೊಂದು ಘಾಯದೊಳುಸಿರ ತೆಗೆಬಗೆ ಮಾಡಿದನು (ಕುವ್ಯಾದ್ರೋ. ೫-೨೫). **ತೆಗೆಬಗೆಯಾಗು** = ೧. ಹೊಯ್ದಾಡು ; ಅನಿಶ್ಚಯವಾಗು : ಮುಗಿದ ಸರೋಜಮಾಲೆಗಮರಲ್ವಸಿತೋತ್ಪಲಮಾಲೆಗಂ ಮನಂ ತೆಗೆಬಗೆಯಾಗಿ ಸೈರಿಸದೆ ಷಟ್ಪದಸಂತತಿ ... ಎಡೆಯಾಡಿದುವಂಬುರುಹಾಕರಂಗಳೊಳ್ (ಅನಂಪು. ೭-೭೯). ೨. ಸಂಕಟವಾಗು ; ಕಷ್ಟವಾಗು : ಉಸುರು ತಗೆಬಗೆಯಾಯ್ತು ಜೀವರಿಗೆ (ಕೌಶಿರಾ. ೨೭-೫೪); ಇಳೆಯ ಭಾರಕರುಸುರು ತೆಗೆಬಗೆಯಾಗೆ ತೆರಳಿತು ಸೇನೆ ಪಶ್ಚಿಮಕೆ (ತೊರರಾ. ೪-೯-೧).

[ತೆಗೆ$_1$ + ಬಗೆ$_3$]

**ತೆಗೆಬಿಗಿ** 'ತೆಗೆಬಗೆ' ನೋ.

**ತೆಗೆಮಿಳಿ** (ನಾ). ಪ್ರಾಣ ತೆಗೆಯುವ ಹಗ್ಗ ; ನೇಣು (?) : ಚಕೋರಿಗಳ್ ನಲಿಯೆ ಪಾಣ್ಬರಿಯರ್ಕಳ ಚಿತ್ತದಲ್ಲಿ ಪೆಂಪೊಗೆಯೆ ವಿಯೋಗಿಗಳ್ ಮುನಿಯೆ ಕತ್ತಲೆಮತ್ತಲೆಯಾಗಿ ಸಂಜೆಯೊಳ್ ತೆಗೆಮಿಳಿಯಾಡೆ [ಪಾಠಾಂ. ತೆಗೆಯೆ ಮುಳಿಯಾಡೆ] ಸೂರ್ಯನಪರಾಬ್ಧಿಯೊಳೊಯ್ಯನೆ ಮುಯ್ಯನಿಕ್ಕಿದಂ (ಪುಣ್ಯಾಸ್ರ. ೩-೩೮). [ತೆಗೆ$_1$ + ಮಿಳಿ$_2$ ]

**ತೆಗೆಮೆಟ್ಟು** (ನಾ). (ಕಾಳಗದಲ್ಲಿ ಮುನ್ನುಗ್ಗಲು) ಹಿಂದಕ್ಕೆ ತೆಗೆದು ಇಟ್ಟ ಹೆಜ್ಜೆ : ಬೆದಱುಗಾಗೆಯ ನೋಟ ಸಾಳುವನೊದವು ಮೀಂಗಳ ಝುಳಕ ಕೇಸರಿಯಥಟು ಶಾಬಾಮೃಗದ ಲಂಘನ ತಗರ ತೆಗೆಮೆಟ್ಟು . . . ಸೊಕ್ಕಿದ ರದನಿಗಳ ಥೂಳಾಟ ಒಪ್ಪಿದವವರ ಯುದ್ಧದಲಿ (ಸಾಳ್ವಭಾ. ೨೨-೭೦).

[ತೆಗೆ$_1$ + ಮೆಟ್ಟು$_2$ ]

**ತೆಗೆಯಾಳ್** (ನಾ). ಆಕ್ರಮಿಸುವ ಯೋಧ ; ಧಾಳಿಯಿಡುವ ವೀರ : ದಿವ್ಯವಾಗ್ವಿದಿತ ಸುಧರ್ಮಮಾ ಸಭೆಯೊಳಿಂದು ವಿರಕ್ತನೃಪಾಳಜಾಳಮಿದರ್ದುದು ತೆಗೆಯಾಳನಾಯ್ದು ತೆಗೆದಂತೆ [illegible] (ಅನಂಪು. ೯-೪೯). [ ತೆಗೆ$_1$ + ಆಳ್$_3$ ]

**ತೆಗೆಯಿಸು, ತೆಗಸು, ತೆಗಿಸು, ತೆಗೆಸು** (ಕ್ರಿ). ೧. ಹೊರಕ್ಕೆ ತರು ; ಹೊರ ಬರುವಂತೆ ಮಾಡು : ಸುಬಂಧುವಂ ನೆಲಮನೆಯಿಂ ತೆಗೆಯಿಸಿ ಸನ್ಮಾನ ದಾನಂಗಳಿಂದಾತನಂ ಸತ್ಕರಿಸಿ (ವಡ್ಡಾರಾ. ೧೮೨-೨೩) ; ಎಲ್ವಂ ನಟ್ಟುಡಿದ ಬಾಳ ಕಕ್ಕಡೆಯುಡಿಗಳುಮನಯಸ್ಕಾಂತಮಂ ತೋಱ ತೆಗೆಯಿಸುತ್ತುಂ (ಪಂಪಭಾ. ೧೦-೨೪) : ನಾನಿಂದಧರ್ಮದೊಳಿದ್ದರೆ ತೆಗೆಯಿಸು ಅಲ್ಲಿಯು ನೆಲನಿಲ್ಲದಂತೆ (ಇಂದಾಪ. ೧೧೬-೬೯). ೨. ಬರುವಂತೆ ಮಾಡಂ ; ಆಕರ್ಷಿಸು : ಆ ಸ್ಥಿರಪ್ರಕೃತಿಯು ಸತ್ಯ ಪ್ರಕೃತಿಯೆ ತೆಗೆಯಿಸಿದಪುದಾ ದಕ್ಷಿಣಹೃದಯೆಯು ದಕ್ಷಿಣತ್ವಮೆ ಗಮಿಯಿಸಿದಪುದಾ . . . ಮ ಹೋ ದಾ ರ ಯು ದಾ ರ ತೆ ಯೆ ಮನಂಗೊಳಿಸಿದಪ್ಪುದು (ಕಾದಂಉ. ೪೦೪). ೩. ಇಳಿಸಂ ; ಕೆಳಕ್ಕೆ ತರಿಸು : ಅಡವಿಯೊಳ್ ನಿಡಿಯ ಮರದ ತುತ್ತತುದಿಯೊಳಿರ್ದಟಲ್ವ ಗುಂಡಿಗೆಯುಂ ಕಂಡು ತೆಗೆಯಿಸಿ ಕೊಂಡು ಪೋಗಿ (ವಡ್ಡಾರಾ. ೯೦-೧೬). ೪. ಸಾಗಿಸು ; ಕಳುಹಿಸು : ಕನಕರತ್ನಾಭರಣವಾಳಮನೊಪ್ಪುಗೊಂಡು ಭಂಡಾರಕ್ಕೆ ತೆಗೆಯಿಸುತ್ತುಂ (ಬಸರ. ೬-೩೩). ೫. ಹೊರ ಹಾಕು ; ಬಹಿಷ್ಕರಿಸು : ನಾಳೆ ಒಬ್ಬನನ್ನು ಜಾತಿಯಿಂದ ತೆಗೆಯಿಸುವ ವಿಷಯ . . . ಅಲ್ಲಿ ಬರುತ್ತದೆ (ಕುಡಿಕೂ. ೧೩೬). ೬. ಕೊಂಡುಕೊಳ್ಳು ; ಕ್ರಯಕೊಟ್ಟು ಪಡೆ : ಗದನೂರಿನಲ್ಲಿ ಏನಾದರೂ ತಿಂಡಿ ತೆಗೆಯಿಸಿಕೊಂಡು ತಿನ್ನೋಣವೆಂದಂದು ಕೊಂಡೆ (ಹಂಗಾಳ್ಯ. ೪೯). ೭. ಬಿಡು ; ತೊರೆ ; ತ್ಯಜಿಸು : ಕುಮ್ಮಟವನು ತೆಗೆಯಿಸಿದರೆ ಕಾರ್ಯವನುಗೆಡುವುದು . . . ಆದಱಂದದ ಬಿಡುವುದು ಮನುಜೇಶ್ವರ ನೀತಿಯಲ್ಲ (ಕುಂರಾಸಾಂ. ೩೭-೪೮). ೮. ಕಳಚುವಂತೆ ಮಾಡು ; ಬಿಚ್ಚುವಂತೆ ಮಾಡು : ವೇಷವನ್ನು ತೆಗೆಯಿಸಿ, ಬಣ್ಣವನ್ನು ತೊಳಸಿ ಕಳಿಸಿದಾಗ ಬೆಳಗಾಗಿತ್ತು (ರೂಢಿ). ೯. ಕೊಲ್ಲಿಸಂ ; ಸಂಹರಿಸಂ ವಂತೆ ಮಾಡು : ಬಂಟರಂ ಕೊಂಡಾಡುವರ ಗಂಟಲೊಳ್ ನೇಣನಿಕ್ಕಿ ತೆಗೆಯಿಸುವಂ (ಧರ್ಮಾಮೃ. ೨-೭೭). **ತೆಗಸು** : ೪. ಹಿರಿಯ ಕಣಜದ ದವಸವೇನುವನಿರಿಸದೀಗಳ್ ತೆಗ[ ಪಾಠಾಂ. ಗೆ ]ಸು (ಬಸಪು. ೫೩-೧೮); ತೆಗ[ಪಾಠಾಂ. ಗೆ]ಸಿದನು ಬಳಿಕುತ್ತಮದ ತೊಡವುಗಳ ದಿವ್ಯದುಕೂಲರತ್ನಾಳಿ ಗಳಿನನುಪಮ ಗಜಹಯಾದಿ ಸಮಸ್ತವಸ್ತುಗಳ (ತೊರರಾ. ೧-೭-೨). ೯. ಲೋಹಶೂಲದೊಳಿನಿಬರಂ ತೆಗ[ಪಾಠಾಂ. ಗೆ]ಸುವೆನು ತಲೆಕೆಳಕಾಗಿ ನಿಮ್ಮು ವನು (ಬಸಪು. ೫೦-೫೦). ೧೦. ಹೊಳು, ಕಸ ಮೊದಲಾದಂವನ್ನು ಹೊರಗೆ ಹಾಕು, – ಎತ್ತಿಹಾಕು: ಪ್ರತಿ ವರುಷಉ ಕೆಱಯ ತೆಗಸುವ ಹಾಗೆ ಕೊಟ್ಟ ಸ್ವಾಸ್ತಿ (ಎಕ. VII(8), ಶಿಕಾರಿ. ೨೩೪-೧೦; 1526). ೧೧. ಕೀಳುಂವಂತೆ ಮಾಡು ; ಕೀಳಿಸಂ : ಅವರಂ ಕರೆಸಿ ಕಣ್ಣಂ ತೆಗ[ಪಾಠಾಂ. ಗೆ]ಸಿದನು (ಬಸಪು. ೬೦-೪). ೧೨. ನಿವಾರಿಸಂ ; ಹೋಗಲಾಡಿಸು : ಒಱಲುವಮರರ ಬಾಯ ಕೈಗಳ ಮೊರೆಯ ತೆಗಸಿ ಮಹಾಗಣಂಗಳೊಳಿರುವ ನಂದೀಶ್ವರನು ಹೊಕ್ಕನು ಹೊಯ್ದು ದಾನವರ (ಕುವ್ಯಾಕ. ೭-೨೯). ೧೩. ಹಿಂದಕ್ಕೆ ತೆಗೆದುಕೊಳ್ಳು ; ವಾಪಸ್ಸು ತೆಗೆದುಕೊಳ್ಳು : ಬಲುಕಾಳೆಗವನೊಯ್ಯಾರಿಸುತ ರಾಯರು ತೆಗಸಿದರು ಸೇನೆಯನು (ಕುವ್ಯಾಭೀ. ೪-೧೦). ೧೪. ಹಿಂದಕ್ಕೆಬರುವಂತೆ ಮಾಡು; ಹಿಮ್ಮೆಟ್ಟಿಸು: ತೆಗಸಿದನು ಸಾತ್ಯಕಿಯನೀತನ ಬಿಗಿದನಂಬಿನಲವನ ಬಾಣಾಳಿಗಳ ಕಡಿದನು ಘಾಸಿಮಾಡಿದನವನ ರ ಥ ಹ ಯ ವ (ಕುವ್ಯಾಕ. ೪-೩) : ಪ್ರವೀರನಂ ತೆಗ[ಪಾಠಾಂ. ಗೆ]ಸಿದರ್ಜುನ್ನಲೆಗೆ (ಜೈಮಿಭಾ. ೮-೩೧). ೧೫. ತೆರೆಯುಂವಂತೆ ಮಾಡಂ ; ತೆರೆಯಿಸು : ಬಂದನಿತಱಂದಿಂದುಶೇಖರನಿಂದೆ ಕದಹುಗಳಂ ತೆಗ[ಪಾಠಾಂ. ಗೆ]ಸಿ (ಬಸಪು. ೪೪-೧೮). **ತೆಗಿಸು** : ೧೦. ಎಂಜಲ ತೆಗಿ[ಪಾಠಾಂ. ಗೆ]ಸಿ ಸಾರಿಸಿದನು (ಕುವ್ಯಾಸ. ೭-೧೬) . ೧೫. ಸೌರಾಷ್ಟ್ರೇಶ ಸೋಮೇಶ ನೀಂ ತೆಗಿಸೀ ಬಾಗಿಲ ಪ್ರಾಂಗದಂಗಳನೆನುತ್ತುಂ (ಉದ್ಭಟ. ೧೧-೭೦). **ತೆಗೆಸು** : ೧. ಫಲುಗುಣ ಹೊಕ್ಕನಾಯುಧಶಾಲೆಯನು ತೆಗೆಸಿದನು ಧನು ಮೊದಲಾದ ಕೈದುಗಳ (ಕುವ್ಯಾದ್ರೋ. ೯-೦) ; ತೆಗೆಸಿದನು ಬಳಿಕಿನಕುಲದ ಪೀಳಿಗೆಯು ನೃಪರಾರ್ಜಿಸಿದ . . . ಅಖಿಳ ವಸ್ತುಗಳ (ತೊರರಾ. ೦-೭-೪). ೭. ಹೊಸಮಲೆಯನು ಬಲಿಯಿಸು ಕುಮ್ಮಟವನಸವಸದಿಂದ ತೆಗೆಸು (ಕುಂರಾಸಾಂ. ೩೭-೪೭). ೮. ಬ್ರಾಹ್ಮಣ ನಿಯೋಗಿಗಳು ಪರಶ್ರೇಷ್ಠರಾಗಿ ಬಂದರಮನೆವಾಗಿಲ ಕದಬೀಯಗವ ತೆಗೆಸಿದರು (ಮೋಹತ. ೧೯-೪). ೧೪. ಸೂಳವಿಸಿದವು ಸನ್ನೆಯಲಿ ನಿಸ್ಸಾಳ ಸೇನೆಯ ತೆಗೆಸಿದವು ಹೆಗ್ಗಾಳೆ ಮೊಳಗಿದವಾನೆವಱ ಗಜಱದವು ಡೌಡೆಗಳು (ಕುವ್ಯಾಭೀ. ೫-೨೮). ೧೫. ಬಾಗಿಲ ತೆಗೆಸೆಂಬನಿಷ್ಠುರದ ವಾಕ್ಯಗಳ ಮುಂಬರಿತಂದೊರ್ವಳುಸಿರಲ್ಕೆ (ಮೋಹತ. ೩೪-೩). ೧೬. ನಿಲ್ಲಿಸು ; ಸ್ಥಗಿತಗೊಳಿಸು ; ಅಡ್ಡಗಟ್ಟು : ಸಮಸಪ್ತಕರ ಬಲ ನಿಜಪಾಳಯಕೆ ತಿರುಗಿದುದು ಕೀರಿತು ತರಣಿಯಾಟೋಪ ಕಾಳೆಗವ ತೆಗೆಸಿದರು ಕೌರವರು (ಕುವ್ಯಾದ್ರೋ. ೮-೧). ೧೭. ತೋಡಿಸು ; ಅಗೆಯುವಂತೆ ಮಾಡು : ಅವನು ಬಾವಿ ತೆಗೆಸಲು ಸಾಲ ಮಾಡಿದ್ದಾನೆ (ರೂಢಿ). ೧೮. ಕುಂದಿಸು ; ಬೇಯಿಸು : ಗರಗಸದಿಂದಂ ಮಿಗೆ ನಿಷ್ಕರುಣೆಗಳೊಡನಿಕ್ಕಿ ನೆತ್ತಿಯಿಂದಂ ಪಾದಂಬರೆಗಂ ಸೀಳ್ದಾ ಭಾಗಮನುರಿವೆಣ್ಣೆಯೊಳಿಕ್ಕಿ ತೆಗೆಸುವರ್ಪಱುಗುವಿನಂ (ಧರ್ಮಾಮೃ. ೩-೭೦). [ ತೆಗೆ$_1$ + – ಇಸು$_3$ ]

**ತೆಗೆಸು** 'ತೆಗೆಯಿಸು' ನೋ.

**ತೆಗೆಹ** (ನಾ). ತೆಗೆಯುವಿಕೆ ; ಬೇರ್ಪಡಿಸುವಿಕೆ : ಉಪ್ಪು ಮಿಗಿಲಾದವಱ ಉಪ್ಪು ತೆಗೆ(ಹ)ಯೋಣ. ಕಹಿ ಮಿಗಿಲಾದವಱ ಕಹಿ ತೆಗೆ(ಹ)ಯೋಣ (ಭೀಮಸೂ. ೨). [ ತೆಗೆ$_1$ + – ಹ$_2$ ]

**ತೆಗ್ಗು$_1$** 'ತಟ್ಗು' ನೋ.

**ತೆಗ್ಗು$_2$** 'ತಗ್ಗು$_2$' ನೋ.

**ತೆಗ್ಗುಬೀಳು** 'ತಗ್ಗುಬೀಳು' ನೋ.

**ತೆಜಿಸು** (ಕ್ರಿ). ಬಿಟ್ಟುಬಿಡು ; ತೊರೆ ; ತ್ಯಜಿಸು : ತೆಜಿಸಿದಂ ಮಗುಳೆತ್ತಲೆಸೆ ವಂಗದೇಶಮಂ ಪೊಕ್ಕೊಡನೆ ಬಾಚಿದಂ ಬಹುನಾಣ್ಯಮಾ (ಪರಕು. ೧೦-೨೩); ನಿನ್ನ ಸುತನನೀಕ್ಷಣ ತೆ[ಪಾಠಾಂ. ತ್ಯ]ಜಿಸೆ ರಾಮಗಂ ಪಟ್ಟಗಟ್ಟೆ . . . ಸು ಖ ಮಿ ರ್ಪೆ ನು (ವಂಕಾರಾ. ೨-೭-೧೫) : ಭೂರಿದಾರಿದ್ರ್ಯದಲಿಯಾ ಸಂಸಾರವನು ಮಾಡುವುದಕಿಂತಲೂ . . : ಈ ಶರೀರವನೆ ತೆಜಿಸುವುದು ಲೇಸು (ಸುದಾಮ. ೫-೮). [ < ತ್ಯಜಿಸು ]

**ತೆಟ್ಟಂದೆಟ$^3$** 'ತೆಟ$^3$$_1$' ಪರಾ.

**ತೆಟ್ಟುಂತೆಟ$^3$** 'ತೆಟ$^3$$_1$' ಪರಾ.

**ತೆಟ್ಟುಂದೆಟ$^3$** 'ತೆಟ$^3$$_1$' ಪರಾ.

**ತೆಟ್ಟೆ, ತೆಂಡೆ, ತೆಮಟೆ, ತೆವಡೆ** (ನಾ). ೧. ಗುಂಪು ; ಸಮೂಹ ; ಸಂದಣಿ. **ತೆಂಡೆ** : ೨. (ಹುಲ್ಲು ಮುಂತಾದುವುಗಳ) ಕಟ್ಟು ; ಪಿಂಡಿ ; ಕಂತೆ : ಈ ನಾರಿಯನ್ನು ಮೆಯ್ಯೊಳಗೆ ಹುಲ್ಲು ತೆಂಡೆಯಿಂ ನೀನಿಂತು ಬಿಗಿಸಿದೊಡಿಸೆ ಮಾಳ್ಪ ಪಾಪವೇನಯ್ಯಾ (ಸಾನಂಗ. ೪೩). ೩. ಮರ ಗಿಡಗಳ ಬುಡ ; ಬೇರುಗಳು ಹೊರಡುವ ಭಾಗ : ತೆಂಗಿನ ತೆಂಡ ಮುರಿದು ತಳಕೆಳಕಾಗಿ ಗಂಗಾಧರನ ಪೂಜಕನ ಹಿಂಗದೆ ನೆನೆಯೆ ರಾಯಗೆ ಮಣಿದೊರತಾ ಅಂಗೈಗಳಲಾಂತ ಬಸವ (ಬಸಪ. ೨-೩೪). ೪. ಮೂಲ ; ವಂಶ ; ಬುಡಕಟ್ಟು : ಉಳಿದವರೆಲ್ಲ ಅಣ್ಣತಮ್ಮದಿರಾಗಿ ಒಂದೇ ತೆಂಡೆಗೆ ಸೇರಿದವರು (ನನ್ನೂರು. ೨೧೯) : ಒಬ್ಬ ಪ್ರಸಿದ್ಧ ಪುರುಷನಿಂದ ಅವರ ಮಕ್ಕಳು ಮೊಮ್ಮಕ್ಕಳುಗಳನ್ನು ಇಂತಹವರ ತೆಂಡೆ, ವಟಾರ, ಪಟ್ಟಡ್ಡೆ ಎಂಬುದಾಗಿ ಕರೆಯುವ ವಾಡಿಕೆ (ಹುಟ್ಟಿಹ. ೧೮). ೫. ತೊಡರಿಕೊಂಡಿರು ವಿಕೆ ; ಸುತ್ತಿಕೊಂಡಿರುವಿಕೆ : (ಕ). **ತೆಮಟೆ** : ೬. ಹೊಲ ಉಳುವಾಗ ಕುಂಟೆಯ ಕುಳಕ್ಕೆ ತೆಕ್ಕೆತೆಕ್ಕೆಯಾಗಿ ಸುತ್ತಿಕೊಳ್ಳುವ ಮಣ್ಣು, – ಕೆಸರು : ಎರಡು ಸಾರಿ ಕುಂಟೆಯನ್ನು ಎತ್ತಿ ಕುಡಕ್ಕೆ ಸುತ್ತಿಕೊಂಡಿದ್ದ

ತೆವಂಟೆಯನ್ನು ಕುರುಬಿಗೆಯಿಂದ ತೆಗೆಯುವುದಕ್ಕೇ ಇವನ ರಟ್ಟೆ ಬಿದ್ದು ಹೋಗಿದ್ದುವು (ಬೆಳುವ. ೨೬೯). **ತೆವಡೆ:** ೭. ಹೊಲ, ಗದ್ದೆಗಳಲ್ಲಿ ಪಾತಿ ಅಥವಾ ಮಡಿಗಳ ಮಧ್ಯೆ ಕಟ್ಟುವ ಸಣ್ಣ ಬದು : (ಕ).

**ತೆಟ್ಟೆತೆಟ್ಟೆ** (ದ್ವಿರುಕ್ತಿ) : ತಟ್ಟೆತಟ್ಟೆಯೊಳೋಡುವ ಕುರುಸೈನಿಕ ಕಟ್ಟುದ ನೋಡಿ ಗೊಳ್ಳೆಂದು ದಿಟ್ಟರವರು ನಗುತವೆ ತುಱುಗಳನು ಹಿಮ್ಮೆಟ್ಟಿಸಿದರು (ನೇಮಿಸಂ. ೨೫-೧೫೩): ಬಟ್ಟಜವ್ವನೆಯುರಾರತಿವಿಡಿದವನಿಗೆ ತೆಟ್ಟೆತೆಟ್ಟೆಯೊಳೆತ್ತಿದರು (ರಾಮವಿ. ೧೯-೮೦) : ಬೆರೆಯದೆ ತೆಟ್ಟೆತೆಟ್ಟೆಯೊಳು ಸಂಗ್ರಾಮಕೆಂದೆರಡು ಪಡೆಗಳೊಪ್ಪಿದವು (ಚಂಪ್ರಸಾಂ. ೨೦-೧೨೦) : ಕಟ್ಟೆತೋ ಪಲವಣ್ಣ ಮೇಘ ಬಾನದೊಳೆನೆ ತಟ್ಟೆತಟ್ಟೆಯೊಳು ತೋಱಿ ದುದು (ಜ್ಞಾನಜ. ೦೪-೭೦). **ತೆಂಡೆತೇಲು** = ೧. ಮರದ ಬೇರಿನ ಭಾಗ ಮೇಲೆ ಬರು ; ಮರ ಒಣಗತೊಡಗು. ೨. ವಂಶವು ನಿರ್ನಾಮ ವಾಗು ; ವಂಶದಲ್ಲಿ ಯಾರೂ ಇಲ್ಲದಂತಾಗು : ಆ ದೊಡ್ಡ ಬರದಲ್ಲಿ ತೆಂಡೆತೇಲದೇ ಇದ್ದದ್ದೇ ಹೆಚ್ಚು (ಊಧ). [ದೇ.॥ ತೆಲು. ತೆಟ್ಟ, ತೆಟ್ಟು]

**ತೆಡಾಯು** (ನಾ). ಒಂದಂ ಬಗೆಯ ಆಯುಧ (?) : ಕತ್ತಿ ತೆಡಾಯು ಖಡಲ್ಲಿ ತೆಯುಲ್ಲಿ ಬಿಲ್ಲು ನಾರಾಚ ಗದೆ ಸೂಲ್ಲಿ ... ಮೊದಲಾದಾ ಬತ್ತೀಶಾಯುಧಾ ಶಕ್ತ ಸಮರ್ಥಕರಾದಾ (ಎಕ. XVI, ಗುಬ್ಬಿ. ೭೪-೨೧ ; 1776).

[ ☞ ಇದು 'ಖಡೆಯು' ಎಂಬುದರ ಅಪಲಿಖಿತವಿರಬಹುದೇ ? ]

**ತೆಣರು** 'ತೆಣಱು' ನೋ.

**ತೆಣಱು, ತೆಣರು, ತೆಳಱು** (ಕ್ರಿ). ಭಾರದಿಂದ ಉಸಿರು ಕಟ್ಟು,-ತಿಣುಕು,-ನರಳು : ನೆಲನಂ ಪೊತ್ತ ಫಣಿ ತೆಣಱು [ಪಾಠಾಂ. ಪೊಱಲು] ತಿರೆ ನಡೆದತ್ತಾಗಳ್ ಸಗರ ಚಕ್ರವರ್ತಿಯ ಕಟಕಂ (ಅಜಿಪು. ೯-೦೬) : ಕ್ಷಿತಿ ಚಕ್ರಂ ನಿಜಭಾರದಿಂ ತೆಣಱಿದತ್ತೆಂಬನ್ನೆಗಂ (ಪಂಚಾಮೂ. ೦೩-೭೭). **ತೆಣರು :** ಕುದಿಪೊಡಲ ಮದುಮಗಳ್ ತೆಣರುತಿಹಳೆಲ್ಲಿ ? (ಕಾಲೂರ. ೦೫೩-೩೩೬). **ತೆಳಱು :** ನಾಗರಾಜಂ ತೆಳಱಿ ಪೆಳಱಿ ದಿಗುದನ್ತಿಗಳು (ಬೊಂಕರಾ. ೧೯೨೯, ನವಿಲುಗುಂದ. ೨೦೭-೦೦ ; 1184). 'ತಿಣಂಱು' ಪರಾ. [ದೇ. ॥ ತಮಿ. ತಿಣಱು]

**ತೆಣೆ** 'ದಿಣ್ಣೆ' ನೋ.

**ತೆಣ್ಗಾಳಿ** 'ತೆಂಗಾಳಿ' ನೋ.

**ತೆಶಾವು** (ನಾ). ಒಂದು ಪ್ರದೇಶದ ಹೆಸರು (?) : ಮೂಡಾಯ್ಕೋಡಿ ನೀರಿಟಿವೆ ತಾಱಿ ಎ ತೆಶಾವಿನ್ಕೊಲ್ಲಿ ಎ ಪೋಗಿ ಕುಣ್ಣ ಸೋಮೆ ಎ ಕರ್ಗಲ್ಲಾಟಿದ ಆನೆಗಲ್ಲ ಕಮ್ಮಾರ್ ಕೊಟ್ಟಲೆಯ ಮುದುವುಣಸೆ ಮಾಳ್ದಿ ಯುಳ್ ಕೂಡಿತ್ತು ಸೀಮೆ (ಎಕ. XVI, ಗುಬ್ಬಿ. ೭೫-೫೨ ; 733). [ ? ]

**ತೆತ್ತ₁** 'ತೆಱು₁' ಪರಾ.

**ತೆತ್ತ₂** (ನಾ). ಮಾಲುಗಣ್ಣುಳ್ಳವನು ; ಮೆಳ್ಳೆಗಣ್ಣಿರುವವನು : ಅವನನ್ನು ತೆತ್ತಪನುಮ ಎಂದೇ ನಮ್ಮ ಹುಡುಗರು ಹಾಸ್ಯಮಾಡುತ್ತಾರೆ (ಗರುಡಾ. ೦೪೭). [ ತೆತ್ತು₁ + – ಅ₇ ]

**ತೆತ್ತಕಣ್ಣು** 'ತೆತ್ತಗಣ್ಣು' ನೋ.

**ತೆತ್ತಗಣ್ಣು, ತೆತ್ತಕಣ್ಣು** (ನಾ). ಮಾಲುಗಣ್ಣು ; ಮೆಳ್ಳೆಗಣ್ಣು ; ಓರೆ ಗಣ್ಣು : ಇನ್ನುಮೇಲೆ ನಿನ್ನ ತೆತ್ತಗಣ್ಣಿನ ಹಂಗೇ ನನಗೆ ಬೇಡ (ಗರುಡಾ. ೦೪೯). **ತೆತ್ತಕಣ್ಣು :** ನಮ್ಮೂರ ಕ್ಷೌರಿಕ ಹನುಮನಿಗೆ ಸ್ವಲ್ಪ ತೆತ್ತಕಣ್ಣು. ಎಡಗಡೆ ಅವನು ನೋಡಬೇಕಾದರೆ ಬಲಗಡೆ ನೋಡುವಂತೆ ತೋರುತ್ತದೆ (ಗರುಡಾ. ೦೪೭). [ <ತೆತ್ತು₁ + ಕಣ್ಣು (< ಕಣ್) ]

**ತೆತ್ತವಣೆ** (ನಾ). ಜೋಡಣೆ (?) : ಇತ್ತಲೀ ಮಹದೇವಿ ಮಿಗೆ ಜಳಿವುತ್ತ ಲಿದ್ದಳು . . . ಉತ್ತಮದ ಮೈಲುಳಿಯ ಕಾಂತಿಯ ಮತ್ತಗಜಗಮನದ ವಿಳಾಸದ ತೆತ್ತವಣೆಯ ನವೀನರೀತಿಯ ಜಾತಿಭಾವದಲಿ (ಪ್ರಭುಲಿ. ೧೦-೨). [ ತೆತ್ತಿಸು₁ + – ಅಣೆ₄ ]

**ತೆತ್ತಿಗ** (ನಾ). ೧. ಬಂಧು ; ನಂಟ : ಪಂತ್ರಮಲ್ಲಿ [illegible] ತೆತ್ತಿಗನುಂ ಮೊತ್ತಮೊದಲಿಗನುಮಪ್ಪನೋರ್ವಂ [illegible] (ಶಾಂತಿಪು. ೮-೯೪ವ) ; ಸ್ವಬಂಧುನಿಕಾಯಕ್ಕುಪಕಾರಿ [illegible] ತೌಟಿಗೇಪೋದ್ಭವಂ (ಜಾತಕ. ೧೭-೭) : ಗುರುವೆ ತೆತ್ತಿಗನಾದ ಲಿಂಗವೆ ಮದವಳಿಗನಾದ (ಮಹಾದೇ. ಬ. ೧೧೩-೨೫೮) : ಪನ್ನಗಾಭರಣಾನತನ ಭಕ್ತಿಯೋಗವುಂ ತಾಂ ನೋಡಿ ತಲೆದೂಗಿ ಮುಂಡಾಡಿಯೆನ್ನಣ್ಣ [illegible] ತೆತ್ತಿಗಯೆನ್ನ ಭದ್ರಗಜವೇ . . . ಎಂದೊರೆದು (ಪದ್ಮರಾ. ೭-೪೩) ; ತಾವರೆಯ ತೆತ್ತಿಗನ ಕುಮುದದ ಜೀವಿಗನ ಮಿಗೆ ಮೇಲುನೋಟದೊಳಾ ವಿಗಡರುಗಳಡಸಿ ಕಿವಿದಾಡಿದರು (ಕುಮ್ಯಾಸ. ೨-೧೦೯) : ಬಾಗಿಲ ಬೀಗ ಮುದ್ರೆಯ ಮಾಡಿಸಿಕೊಂಡು ಪೋಗಿ ತೆತ್ತಿಗರ ಬೀಳ್ಕೊಂಡು (ಮೋಹಕ. ೧೮-೯೮) ; ಮೃತ್ಯು ಬೆನ್ನಿನೊಳಿಹುದು ತಾವಿನ್ನತ್ತ ಮಾಡುವುದೇನು ಪೂರ್ವದ ತೆತ್ತಿಗನು ನೀನೀಗ ರಕ್ಷಿಸು (ಹರಿಶಾ. ೯೨). ೨. ಸೇವಕ ; ಆಳು : ನಿಮ್ಮ ತೆತ್ತಿಗನು ಬೊಮ್ಮಯ್ಯನ ಕೀರ್ತಿ ಮಹತ್ತು ಘನವಂದೊಮ್ಮೆ ರಾಗಂಬೆತ್ತು ಕೈಲಾಸಕ್ಕೆ ಹೋಗಿ ಮರಳ್ದುದನುಮಾಯ್ತು (ಬಸಪು. ೨೯-೨೯) ; ತಿಲಕವನು ತೆತ್ತಿಗರಲಂಕರಿಸಿದರು ಪೊಳಹಿನ ಹೊಗರ ಹೊಸ ಜವ್ವನದ ಜೋಡಿಯ ಜಾಡಿಯಿಮ್ಮಡಿಸೆ (ಕುಮ್ಯಾಅ. ೮-೩) : ಹನುಮ ನೀನು ನರನ ತೆತ್ತಿಗನಾಗಿ ಸಾಯದಿರು (ಕೌಶಿರಾ. ೦೯-೧೩) : ಬೆಂಬತ್ತಿ ಬಾರದೆ ಮಾಣರಭವನ ತೆತ್ತಿಗರು (ನಿಭಾಗ. ೪-೩-೨) ; ತನ್ನ ತೆತ್ತಿಗರಪ ನಂದೀಶ್ವರಾದಿ ಪ್ರಮಥರ ಕಳುಹು (ಪ್ರಭುಪು. ೪-೧೧). ೩. ಹೊಣೆಗಾರ ; ರಕ್ಷಕ : ಗುತ್ತಿಯ ಗಂಗಮಹೀಪ × × × ರಾಜ್ಯಕ್ಕೀತಂ ತೆತ್ತಿಗಂ (ಎಕ. IV, ನಾಗಮಂ. ೫೦-೧೪ ; 972) : ಅಂಕ ಓಡಿದರ ತೆತ್ತಿಗಂಗೆ ಭಂಗವಯ್ಯಾ ಕಾದಿ ಗೆಲಿಸಯ್ಯಾ ಎನ್ನನು (ಬಸವ. ೨೯೯) ; ಸೂನಗೆಯನೆತ್ತಿ ಪರಿವ ತೆತ್ತಿಗ ವೀರರುಮಂ (ಲೀಲಾವ. ೫-೧೩೪) ; ಈ ಖಳ್ಗವನೊಲವಿಂ ಸಾಧಿಸುತಿರ್ದ ಖೇಚರತನುಜನ ಮಾತಾಪಿತೃವಾಕೆಯ ತೆತ್ತಿಗರಾಗಲ್ವೇಳ್ಕುಂ (ಕುಮುರಾ. ೮-೩೮) ; ನಿಮ್ಮ ವಿಪತ್ತು ತನ್ನದು ನಿಜಪದಾಶ್ರಿತ ಭಕ್ತರಸುಗಳಿಗೆ ತೆತ್ತಿ ಗನಲಾ ತಾನು (ನಿಭಾಗ. ೭-೯-೩೩) ; ನೀಂ ಪಸುಳೆ ನಿನಗೆ ತೆತ್ತಿಗರದಾರಕಟ (ಹೈಮಿಧಾ. ೨೦-೧೪) : ಚಿತ್ತೈಸಲೆ ಸ್ವಾಮಿ ಭೃತ್ಯನ ಬಿನ್ನಪ ತೆತ್ತಿಗರಾರು ನಿನ್ನಿಂದ (ಕೋಡಜ. ೧-೪೩). [ ತೆತ್ತು₁ + – ಇಗ ]

**ತೆತ್ತಿಸು₁** (ಕ್ರಿ). ೧. ಹೊಂದಿಸು ; ಜೋಡಿಸು ; ಅಳವಡಿಸು; ಹೂಡು: ಹರನೊಳೆ ಪತ್ತಿ ತೆತ್ತಿಸಿದ ಚಿತ್ರಮನಿರ್ಜಗಿಯಾಗೆ ಮೋಹಮೊತ್ತರಿಸೆ . . ಅತ್ತಣ ಪಂಬಲ ಬಂಬಲೊಳ್ ತೆಱಂದಿರಿದುದು ಚಿತ್ತಂ (ಪಂಪಭಾ. ೦೩-೭೩): ತೋರಣಸ್ತಂಭಂಗಳೊಳ್ ತೆತ್ತಿಸಿದ ಜಂತ್ರದ ಹಂಸ ಕೀರ ಮಯೂರ ಪಾರಾವತ ವಾರಣಂಗಳಿಂ (ಗಿರಿಕ. ೦೦-೭೪ ವ) : ತೆತ್ತಿಸಿದ ಪುತ್ತಳಿಗಳಾ ಭರಣಕಿರಣದಿಂ ಸೇಸೆಯಂ ಸೂಸುವಂತೆ ದೇಸವಡೆದೆಸೆವ ಸಿವಿಗೆಯಂ (ಪುಷ್ಪಪು. ೦೩-೮೪ ವ) ; ಪಿರಿದುಂ ಬಿನ್ನಣದಿಂದೆ ನಿರ್ಮಿಸಿದ ನಾನಾ ಚಿತ್ರ ಸತ್ಪುತ್ರಿಕೋತ್ಕರಮಂ ತೆತ್ತಿಸಿ ಸುತ್ತಲುಂ (ದಾಧಪು. ೪-೩೩) ; ಶರವನು ತೂಗಿ ಬಿಲ್ಲಿಗೆ ತೆತ್ತಿಸಿದನು (ಕುಮ್ಯಾದ್ರೋ. ೦೯-೩೨) : ಸುತ್ತಿನುಂಗುರ ಮುದ್ದುಮಣಿಯಂತ್ರಗಳ ತಂದು ತೆತ್ತಿಸಿದರು ಕಾಲ್ದೆಸೆಯ (ಮೋಹಕ, ೦೭-೦೩) : ಜಲಕಾಂತ ಶಿಲೆಯಿಂದ ನಿರ್ಮಿಸಿದ ತೊಟ್ಟಿಲಿಕ್ಕೆಲದಲ್ಲಿ ತೆತ್ತಿಸಿದ ವಿವಿಧಮಣಿದೀಪ್ತಿಯಿಂ (ಜ್ಞಾನಜಂ. ೧-೪೭). ೨. ತೊಡಿಸು ; ಧರಿಸು ವಂತೆ ಮಾಡು : ಎತ್ತಲುಂ ಕೇಳ್ದಱಿಯೆವೀ ರುದ್ರಾಕ್ಷಿ ಮೂಗಿನಲಿ ತೆತ್ತಿ ಸುವುದಾವುದು ವಿಶೇಷವೊ (ಬಸಪು. ೧೨-೨೧): ಪೆಱನೇಸಱ ಮುಂಗುರುಳ ಮೇಲೆ ತೆತ್ತಿಸಿ (ಸೌಂದಪು. ೭-೨೪) : ಕಾಯುವಿರಹಿತನೆಂದು ಧರೆಗಱುವುವಂತೆ ಮಾಗಾಯನಾ ಕರ್ಣಯುಗಳದೊಳಂದು ತೆತ್ತಿಸಿದರು (ಲಕಿಬಂ. ೫೦-೩೩). ೩. ಮುಂಡಿಯುವಂತೆ ಮಾಡು ; ಮಂಡಿಸು : ಸೋಮುರ್ಡಿಯೊಳಿನ ಗೆಡೆಗೆ ಭಾವಕಿಯುರರೆವಿರಿದ ಮಲ್ಲಿಗೆ ಜಾಜಿಯುರಲ ತೆತ್ತಿಸಿದರತಿಸೊಬಗಿ

ನಿಂದ (ಸೌಂದಪು. ೭-೨೩) ; ಪುಂಡ್ರೇಕ್ಷುದಂಡಗಳನವುರ್ಚಿ ಬಾಳವೇರ್ಗಳಿಂ ಜಗಿದಪೆದೆದೆಯೊಳ್ ಸಂಪಗೆಯ ಬಿರಿಮುಗುಳ್ಗಳಂ ತೆತ್ತಿಸೆ (ರಾಜಶೇ. ೧೦-೩೦ ವ). ೪. ಒಳಹೊಗು ; ನಾಟಿಕೊಳ್ಳು : ಚುಚ್ಚಿಕೊಳ್ಳು : ಬಾಳಂ ಕೊಂಡೆತ್ತಿ ಪೊಯ್ಯುವುದುಮಾ ಬಾಳ್ ನಾಗವೇದಿಕೆಯುಂ ತಾಂಗಿ ತೆತ್ತಿಸೆ [ಪಾಠಾಂ. ಕೀಲಿಸೆ] ಮೇಗಂ ನೋಡಿ (ಪಂಪಭಾ. ೧೯೩-೦೦) : ಶರಾಳಿ ವಳಿಯೆಜಗಿದವು ತುಱುಗಿದವು ತೆತ್ತಿಸಿದವು ರಥಾಂಗದಲಿ (ಕುಮಾ.ಕ. ೧೧-೪೬) : ತೆತ್ತಿಸಿದುವುಭಯವೀರರ ಮೆಯ್ಯೊಳಂಬುಗಳ್ (ಜೈಮಿಭಾ. ೨೩-೪೦). ೫. ಚುಚ್ಚು ; ತಿವಿ ; ತುರುಕು : ರಿಪುವರ್ಗ್ಗದ ಬಾಯ ಬಾಗಿಲೊಳು ತೆತ್ತಿಸಿದಂ ಪಲಬ್ಬೆಗದಱ ಕೂರಲಗಂ (ಎಕ. VIII, ಸೊರಬ. ೩೪೩-೩೪ : 1171) : ಕಕ್ಷದೊಳ್ ಬಿಂಯೊಳ್ ನೇತ್ರದೊಳೆಯ್ದೆ ತೆತ್ತಿಸಿದ ನತ್ಯಾಭೀಳಬಾಣಂಗಳಂ (ಜಗವಿ. ೧೮-೧೦೩) : ತೆತ್ತಿಸಿದಂಬಿನ ಗಱಿ ವಿಱುಗುತ್ತಿರೆ (ವರ್ಧಪು. ೮-೫೩) ; ಪರೆವ ಕಣ್ಗಳೊಳಾಲಿಪ ಕರ್ಣಗಳೊಳ್ತ ಗುಳ್ದು ರಿಪುವಯಶ್ಶಲಾಕೆಯನೆ ತೆತ್ತಿಸುವರ್ ಪರವೆಣ್ಗೆ ಕೂರ್ಪರಂ (ಅನಂಪು. ೯-೩೭) : ಒತ್ತಿನಂಗಡಿಯ ಕಜ್ಜಾಯುಮುಂ ಬಲ್ಲೆಹದಿ ತೆತ್ತಿಸುತ ಬಸವ ಕೋಯೆನಲ್ (ಅಶಿಚಂ. ೩೨-೨೩) : ಗಜವ ಒತ್ತಿ ಕಿವಿಗಳನೊದೆದು ಶಿರದಲಿ ತೆತ್ತಿಸಿದರಂಕುಶವನು (ಕುಮಾ.ದ್ರೋ. ೩-೬) : ನರನವನ ರೋಮ ರೋಮಂಗಳಂ ಭೇದಿಪವೊಲು ತೆತ್ತಿಸಿದನಂಬುಗಳನು (ಜೈಮಿಭಾ. ೨೫-೪೭). ೬. ಕೊರೆಯಿಸು ; ಕೆತ್ತಿಸು ; ಕಂಡರಿಸು : ದಿಙ್ಮುಖ ದಂತಿದಂತದೊಳ್ ತೆತ್ತಿಸಿದಂ ನಿಜಾಂಕ ಮಹಿಮಾಕ್ಷರಮಾಳಿಕೆಯುಂ (ಶಾಪಮಂ. ೩೪೦) ; ಕಂಬಳ ಬಿತ್ತಿನಂದದಿ ಕೊಱೆಕೊಱೆದು ತೆತ್ತಿಸಿದಂತೆ (ಭರತ. ೬-೫೩). ೭. (ಹರಳಿನಂತೆ) ಕೂಡಿಸು ; ಕುಂದಣಿಸು ; ಮೆಟ್ಟು : ಮುತ್ತು ಮಾಣಿಕ ನವರತ್ನ ತೆತ್ತಿಸಿದಂತಿಹ ಉಪ್ಪರಿಗೆ ಮೇಗಳ ಶಿವಾಲಯವ ಕಂಡು (ಲಿಂಗವ. ೭೭-೮೦) ; ಸುತ್ತುವಳೆಯುವ ತೊಳಗಿ ಬೆಳಗುವ ಮುತ್ತು ವಜ್ರದ ನಡುವೆ ಮಾಣಿಕ ತೆತ್ತಿಸಿದ ಬೊಟ್ಟೊಂದು (ಪ್ರಭುಲೀ. ೪-೧೬) : ತೆತ್ತಿಸಿದ ನವರತುನದಿಂದಲಿ ಮುತ್ತಿನುಂಡೆಯ ಜೂಳೆಯುಂಗಳ ಪತ್ತಿ ಪಟ್ಟೆಯ ಹಲಗೆ ಪವಳದ ಕಡೆದ ಬೋದಿಗೆಯ . . . ರಥ ಕಳಶ ಮೇಲೆಸೆಯೆ (ಕುಮಾ.ದ್ರೋ. ೬ರಿಇ. ಪರಿ. ೨೭೮) : ಅಮಲವಜ್ರಂಗಳ ತೀವಿ ತೆತ್ತಿಸಿದ ಪೊನ್ನುಡೆ ನೂಲ್ಗಳಂ ತಳೆದು (ಸೌಂದಪು. ೧೦-೨೩) : ಅಗಣಿತ ಕನಕದಂಡದ ಪಲ್ಲವಛತ್ರ ನೆಗಹಿರೆ ರತ್ನ ತೆತ್ತಿಸಿದ ಸೊಗಯಿಪ ಮಣಿ ಸೊಡರ್ವೆಳಗಿನೊಳ್ ಮೆಱೆದುವು (ಮೋಹತ. ೦೫-೩೦) : ಬಳಸಿರೆ ಕಟ್ಟಿ ಬಿಟ್ಟ ಪೊಸಮಲ್ಲಿಗೆಮಾಲೆ . . . ಮೌಕ್ತಿಕ ಪ್ರಸರಮುಂ ಹರಿನೀಲಮಣಿ ಪ್ರತಾನದೊಳ್ಕೆಳೆಗೊಳಿಸುತ್ತೆ ತೆತ್ತಿಸಿದಪೋಲ್ಮೆಱೆದಿರ್ದುದು ಮಂಟಪಾಗ್ರದೊಳ್ (ರಾಜಶೇ. ೮-೩). ೮. ಹೊಂದು ; ಸೇರು ; ಅಂಟು : ಬಸಿಱತ್ತಿ ಕಟ್ಟಿ ಮೆಯ್ ಕೀಲಿಸಿದಂತಿರೆ . . . ಕಿವಿ ತೆತ್ತಿಸಿದಂತಿರೆ . . . ಹರಿಣ ರೋಗಂ ತಡೆಯದೆ ಮಡಿಗುಂ (ಅಶ್ವಶಾ. ೦೩-೪೧) ; ಹತ್ತೆ ಬಂದಿರೆ ಸೂಜಿಗಲ್ಲನು ಹತ್ತಿ ಮೋಹಿಪ ಸೂಜಿಯಂತಿರೆ ತೆತ್ತಿಸಿದುದಾ ಸಚ್ಚಿದಾನಂದ ಸ್ವರೂಪೆನಿಪ ನಿತ್ಯಮಲ್ಲಮನಂಶವಾದ ನಿಮಿತ್ತಮಾಕ್ಷಣ ಕಾಣುತವೆ ಮೈಯೆತ್ತಿತೂಯ್ಯನೆಯನಿಮಿಷಯ್ಯನ ಕೈಯ ಶಿವಲಿಂಗ (ಪ್ರಭುಲೀ. ೧೦-೨೭). ೯. ನಿರ್ಮಿಸು ; ರಚಿಸು : ಅಸುರನ ಗದೆ ಭೂತ ಪಿಶಾಚ ಸಮಿತಿಗೆಱೆಯಿಸುವ ಸೆತ್ತರಜವಟ್ಟಿಗೆ ತೆತ್ತಿಸಿದೆಲ್ವಿನ ಸೊದೆವನೆ (ಜಗವಿ. ೯-೬೦) ; ವಸುಧಾಮಂಡಳಮೆಯ್ದೆ ತೆತ್ತಿಸುವ ಚೈತ್ಯಂಗಳ್ಗೆ ದಾನಕ್ಕೆ ಪಾತ್ರ ಸಮೂಹಂ ದಿಟಮೆಯ್ದೆದೆಯ್ದದು ದಿಶಾಚಕ್ರಂ (ಅನಂಪು. ೯-೨) : ಉರಿಯ ಜಾಳಿಗೆ ತೆತ್ತಿಸಿತು ಪರಿದಶ್ವಶತವನು (ಕುಮಾ.ದ್ರೋ. ೧೯-೩೨). ೧೦. ಬಳಿ ; ಹಚ್ಚು ; ಲೇಪಿಸು : ಚಿತ್ರಜಂಗೆತ್ತಿದ ತಳಿರ್ಗಳ ಸತ್ತಿಗೆಯೊ ದಿವಿಜೇಭಕುಂಭದಿ ತೆತ್ತಿಸಿದ ಸಿಂದೂರವೋ . . . ಎನಲೆಸೆಯಿತ್ತು ರಾಗದಲಿಂದುಮಂಡಲ (ಜೀವಂಧ. ೧೭-೨೩). [ ತೆತ್ತು$_1$ + – ಇಸು$_3$ ]

ತೆತ್ತಿಸು$_2$ (ಕ್ರಿ). ಕೊಡುವಂತೆ ಮಾಡು ; ಕೊಡಿಸು ; ತೆರಿಸು : ದಾಪಿತಃ – ಸಾಧಿತಃ – ೨ ತೆರಿಗೆ ತೆತ್ತಿಸಲ್ಪಟ್ಟವನು, ಕೊಡಿಸಲ್ಪಟ್ಟವನು, ಕೊಡುವ ಹಾಗೆ ಮಾಡಲ್ಪಟ್ಟವನು (ಸಿದ್ಧಾಂತಿ. ೨೮೮). [ ತೆತ್ತು$_2$ + – ಇಸು$_3$ ]

ತೆತ್ತೀಸ, ತೆತ್ತೀಸು (ನಾ). ಒಂದು ಸಂಖ್ಯಾವಾಚಕ ; ಮೂವತ್ಮೂರು : ಹರಿಬ್ರಹ್ಮಾದಿಗಳು ಮೊದಲಾದ ತೆತ್ತೀಸಾದಿ ದೇವರ್ಕಳಂ ಉಘೆ ಉಘೆ ಎನುತಿರಲು (ಬಸವ. ೮೪೪) ; ಖಳಪಳದ ಕಟ್ಟಲುಹು ಮೂರ್ಭಾಕುಳ ವನಿತ್ಯವು ತರುಣ ಕೇಳ್ ತೆತ್ತೀಸ ದೇವರಿಗೆ (ತೊರವೆರಾ. ೬-೫೦-೬) ; ತೆತ್ತೀಸವೆಂದೆನಿಪ ಸ್ಥಲವಿವು (ಸಿದ್ಧೇಪು. ೨೪-೩೩). ತೆತ್ತೀಸು.

ತೆತ್ತೀಸಕೋಟಿ, ತೆತ್ತೀಸುಕೋಟಿ = ಮೂವತ್ಮೂರು ಕೋಟಿ : ಮಱೆಯಲಾಗದು ತೆತ್ತೀಸಕೋಟಿ ದೇವರ್ಕಳ (ಬಸವ. ೫೫೧) : ದಕ್ಷನೊಬ್ಬ ಯಾಗವನಿಕ್ಕಲು ತೆತ್ತೀಸಕೋಟಿ ದೇವರ್ಕಳೆಲ್ಲಾ ತೊತ್ತಳದುಳಿಸಿಕೊಂಡು ನುಚ್ಚುನುಱಿಯಾಗಿ ಹೋದರು (ಸರ್ಪವ. ೯೦-೫೦೨) ; ನರ್ತಿಪ ನವಿಲ ನಾಟ್ಯಕೆ ಮೆಚ್ಚಿ ಪುರುಹೂತ ತೆತ್ತೀಸಕೋಟಿ ನಿರ್ಜರರು ಮುತ್ತಿನ ತ್ಯಾಗವ ಕೊಟ್ಟಂತೆಯಾಲಿಕಲ್ ಬಿತ್ತಿಕ್ಕಿ ಬಿದ್ದುದುರ್ವಿಯಲಿ (ಮೋಹತ. ೪-೩೮) : ಉರಿನಾಲಿಗೆಯ ಗರವೊಟ್ಟೆಗೆಯ ತೊಳಲಿಕೆ ತೆರಳಿಚಿತು ತೆತ್ತೀಸುಕೋಟಿಗಳ (ಕುಮಾ.ಆ. ೨೦-೫೬). [ <ಪ್ರಾ. ತೇತೀಸ, ತೇತ್ತೀಸ./ಹಿಂ. ತೈಂತಿಸ್, ತೈಂತೀಸ್, ತೇತೀಸ್ ; ಮರಾ. ತೇತೀಸ್. / ಸಂ. ತ್ರಯಸ್ತ್ರಿಂಶತ್ ]

ತೆತ್ತೀಸು 'ತೆತ್ತೀಸ' ನೋ.

ತೆತ್ತು$_1$ (ಕ್ರಿ). ೧. ಸಂಬಂಧಿಸಿರು ; ಹೊಂದಿಕೊಂಡಿರು : ಚಿತ್ರಜಂ ಕತ್ತಿಯುಂ ಕಿತ್ತುಕೊಂಡೆತ್ತಿ ಹೊಯ್ಯುತ್ತೆ ಬರಲುತ್ತುಂಗವೃತ್ತಕುಚೆಯರ್ತ ಮಗೆ ತೆತ್ತಿರ್ದ ತೆತ್ತಿಗರನೊತ್ತಿಗರ ಸುತ್ತಿರ್ದರಾಗಳನುರಾಗದಿಂದೆ (ಜೈಮಿಭಾ. ೨೬-೬). 'ತೆತ್ತಿಗ' ಪರಾ. ೨. ಹೆಣೆದುಕೊಂಡಿರು ; ತೊಡಕಿಕೊಂಡಿರು: (೬). ೩. ತಿರಿಚು ; ಸುತ್ತು. 'ತೆತ್ತಗಣ್ಣು' ಪರಾ. ೪. ಒಳಸೇರು ; ಅಡಗು : ಕಿರಣ ತೆತ್ತಿದವಭ್ರದಲಿ ತಾರಕೆಯ ತೇರುಗಳು ಹರಿವ ಮಂಜಿನ ನದಿಯ ಹೂಳ್ದವು (ಕುಮಾ.ದ್ರೋ. ೪-೧೨). ೫. ಕೇವಣಿಸು; ಕುಂದಣಿಸು; ಮೆಂಟು ; ಕೂಡಿಸು : ಮುತ್ತಿನ ಸೇಸೆಯೊಳೆಸೆವ ರತ್ನಂಗಳ ತೆತ್ತಿರ್ದ ಹಸೆಯ ವಿಷ್ಟರದಿ ಹತ್ತಿದ ದಂಪತಿಗಳ ವಿಗ್ರಹಂಗಳು ತೆತ್ತಿಸಿದಂತೆ ಶೋಭಿಸಿತು (ಮೋಹತ. ೧೩-೭೨). [ ದೇ॥. ತಮಿ. ತೆತ್ತು, ತೆಱು ]

ತೆತ್ತು$_2$ (ಕ್ರಿ). ತೆರು ; ಕೊಡು : ಶಚಿಪತಿಯು . . . ಕೃತ್ತಿವಾಸನ ತೋತ್ತರವ ಮಾಡುತ್ತ ಮಹಾನವ ತೆತ್ತಿ ಮಸ್ತಕವನ್ನು ಪಾದಕೆ ಸತತ ಮಣಿಯುವನು (ಪಾರ್ವಪ. ೨೧-೮೧) ; ಕೈತುಂಬ ವರದಕ್ಷಿಣೆ ತೆತ್ತಬೇಕು (ಸುಂದರಿ. ೦೦೩) : ಹಲ ಜನುಮ ಕಳೆದರೂ ನೀ ತೆತ್ತಲಾರೆ ಬರಿ ಅಂಚೆ ವೆಚ್ಚ (ಉಯ್ಯಾಲೆ. ೪೧-೪) : ಆತ ವಿಧಿಸಿದ ದಂಡವನ್ನೂ ತೆತ್ತಲು ಸಿದ್ಧರಿದ್ದರು (ಸಮುಜೀ. ೫೧೭). 'ಕಿತ್ತು$_1$' ಪರಾ. [ <ತೆಱು$_1$ ]

ತೆತ್ತು$_3$ 'ತೆಱು$_1$' ಪರಾ.

ತೆತ್ತು$_4$ (ನಾ). ಮೋಸ ; ವಂಚನೆ. 'ತೆತ್ತುತನ' ಪರಾ.

[ ದೇ.॥ ತಮಿ. ತೆತ್ತು ]

ತೆತ್ತುತನ (ನಾ). ಮೋಸಮಾಡುವಿಕೆ; ವಂಚನೆ ಮಾಡುವಿಕೆ: ತೆತ್ತುತನಕ್ಕೆ ತೆತ್ತುತನಮುಂ ಪುಸಿನಲ್ಮೆಗೆ ಮೋಡಿ ನಲ್ಮೆಯುಂ ಜತ್ತುಕಱಿಂಗೆ ಜತ್ತುಕಜ ನಾಸೆಗಮಾಸೆಯನಾದಲಂಪಿನಿಂ ಪತ್ತಿದ ಮೆಯ್ಗೆ ಪತ್ತುಗೆಯನುಕ್ಕವ ಕುಕ್ಕವಗೆಯ್ತುಮುಂ ಪೊಣರ್ಚುತ್ತುಮುಪಾಯದಿಂ ಕಳಿಯೆ ಕೂಡುವನಂ ವಿಭು ಕಂಡು ಮೆಚ್ಚಿದಂ (ಕಾವ್ಯಸಾ. ೯೮೫ ಶೂದ್ರಕ).

[ ತೆತ್ತು$_4$ + – ತನ ]

ತೆನಂದಾಕ 'ತೆನ್ನಂದಾರ್ಕ' ನೋ.

ತೆನಂದಾಕಕೆಱೆ, ತೇನಂದಾಕಗೆಱೆ (ನಾ). ಒಂದು ಕೆರೆಯ ಹೆಸರು : ತೆನನ್ದಾಕಕೆಱೆ ಎ ಪೆಂಮುರ್ಗಗೆಱೆ ಎ ವಡಗಾಯ್ ಸನ್ದು ಕಿಱುಮಾಮಿ

ಪಂಳ್ಳವೆಂ (ಎಕ. IV, ಎದತೊ. ೬೦-೭೪ ; ಸು. 890); ತೇನಂದಾಕಗೆಜ$^3$ : ತೇನನ್ದಾಕಗೆಜ$^3$ ದಕ್ಷಿಣಾನ್ತ ಭಾಗತತಃ (ಮ್ಯಆರಿ. ೧೯೪೨, ೭೫-೧೧೭ ; 816).
[ ತೆನಂದಾಕ (<ತೆನ್ನಂದಾರ್ಕ) + ಕೆಜ$^3$ ]

**ತೆನುಂಗು** 'ತೆಲುಂಗು' ನೋ.

**ತೆನುಗು** 'ತೆಲುಂಗು' ನೋ.

**ತೆನೆ$_1$** (ನಾ). ೧. ಧಾನ್ಯದ ಹೊಡೆ ; ಕಾಳಿನ ಕದಿರು : "ಕಣಿಶಂ, ಧಾನ್ಯಶೀರ್ಷಕಂ — ಈ ೨ ತೆನೆ "•(ಹಲಾಯು. ೯೫-೪೨೫) ; "ತೆನೆಯೊಳು ಕದಿರು" (ಶಬ್ದಮಂ. ೧೧೭) ; ಪ್ರಬಳ ಫಳಭಾರದಿಂ ಕೂಡಿ ಬಳ್ಕಿ ತೆನೆ ನೆಲನನಲೆಯೆ ಪವನಹತಿಯಿಂದೆ (ಸುಕುಮಾ. ೯-೫೨) ; ಪಿಂಗಳವಾದ ನೆಲ್ಲ ತೆನೆಯಂ ನಸುಗರ್ಚಿದ ರಕ್ತಚಂಚು ಪಕ್ಷಂಗಳ ಶಾದ್ವಲಚ್ಛವಿ ಮನಂಗೊಳೆ ಪಾಱುವ ಕೀರಮಾಲೆ (ಜಗವಿ. ೪-೬೬) ; ಪೊಸಕಮ್ಮಂಗಳವೆಯು ತೆನೆಯ ತುದಿಯ ತನಿಗಂಪಂ ಭುಂಜಿಸಲ್ (ಜಯುಕಾ. ೦-೩೯); ದನಗಳ ಜೋಳದ ತೆನೆಯನ್ನು ಬಿಡಿಸಿದರೆ ಹೇಗೆ ? (ಮಹಾಶ್ವಾ. ೬). ೨. ಕೋಟೆಯ ಗೋಡೆಯ ಮೇಲ್ಭಾಗದ ರಚನೆ; ಕೋಟೆಯ ಪ್ರಾಕಾರದ ತುದಿಯ ಗಾಲಿ ಯಾಕಾರದ ರಚನೆ: "ಕೋಟೆಯ ತೆನೆಯಲ್ಲಿಯುಂ ಕಪಿಶೀರ್ಷವೆಂಬುದು" (ಹಲಾಯು. ೦೩೦-೨) ; ನಿರಾಳದಲ್ಲಿ ನೀರಕೋಟೆಯನಿಕ್ಕಿ ಬಯಲ ಅಗಳ ತೆಗೆದು ವಾಯುವ ತೆನೆ ಹೂಡಿ (ಅಚಿಮಾ. ೧೩೬-೫೧೯) ; ರಥಾಂಗವೆ ಗೆತ್ತರುಣಂ ತೆನೆಯನೆತ್ತಿ ನಗಿಸುವನಿನನಂ (ಅನಂಪು. ೦-೧೦೦) ; ತುಱುಗಿತ ಮರರು ಖಳನ ದುರ್ಗದ ತುದಿಯ ತೆನೆಗಳಲಿ (ಕುವ್ಯಾಆ. ೦೨-೩೩) : ಕೆಡಹಿದರು ಕೋಟೆಗಳ ತೆನೆಗಳನೊಡೆಬಡಿದರಟ್ಟಳೆಗಳನು (ತೊ ರ ರಾ. ೬-೧೭-೬) : ಕೋಟೆಯ ನೂತನ ತೆನೆಗಳೊಪ್ಪಿದುವು (ಕಂಸವಿ. ೨-೬೦). 'ಕೋಟೆದೆನೆ' ಪರಾ. [ ದೇ. ೫ ತಮಿ. ತಿನ್ನೆ ; ಮಲ. ತಿನ ]

**ತೆನೆ$_2$** 'ತನೆ' ನೋ.

**ತೆನೆಂದಕ** 'ತೆನ್ನಂದಾರ್ಕ ನೋ.

**ತೆನೆಂಧಕ** 'ತೆನ್ನಂದಾರ್ಕ' ನೋ.

**ತೆನೆಗಟ್ಟು** (ಕ್ರಿ). ತೆನೆ ಬಿಡು ; ಕಾಳಿನ ಹೊಡೆ ಕಟ್ಟು ; ಕಾಳಾಗು : ಆದ ಕಾಣ್ ಅದೂ, ಈ ನಾಡಿನ ನಡೆಜಾಡಿನ ಹಿರಿಜಾಣಿನ ತೆನೆಗಟ್ಟಿದ ಬೆಳಸು (ದ್ರಾಕ್ಷದಾ. ೨-೨೦). [ ತೆನೆ$_1$ + ಕಟ್ಟು$_1$ ]

**ತೆನೆಗರ್ಚು** (ಕ್ರಿ). ಧಾನ್ಯದ ಗೊಂಚಲನ್ನು ಕಚ್ಚು,-ಕಡಿ : ತಮ್ಮ ಕೆಯ್ಪುಜಿಗೆ ಬೆರ್ಚಿ ಶುಕಂ ತೆನೆಗರ್ಚಿ ಬೇಗದಿಂ ಪಾಱೆ . . . ಪಾಮರಿಯ ರೀಕ್ಷಿಪರಾದುರ್ ನಭೋವಿಭಾಗವುಂ (ಧರ್ಮನಾ. ೨-೨೮).
[ ತೆನೆ$_1$ + ಕರ್ಚು$_1$ ]

**ತೆನೆಗಾಯಿ** (ನಾ). ವರ್ಷದ ಮೊದಲ ಫಲ : ಗೌರೀ ಹಬ್ಬಕ್ಕೆ ಸರಿಯಾಗಿ ತೆನಗಾಯಿ (ರೂಢಿ). [ ತೆನೆ$_2$ (<ತನೆ) + ಕಾಯಿ$_4$ (< ಕಾಯ್$_4$) ]

**ತೆನೆಗೊನೆ** (ನಾ). ಕೋಟೆಯ ಬುರುಜಿನ ತುದಿ : ತಾರಗೆಗಳ್ ತೆನೆಗೊನೆಗಳೊಳೋರಂದದೆ ಬೆಳವ ಸೊಡರ್ಗಳಂತಿರ (ಚಂದ್ರಪು. ೦-೧೧೯) ; ಹೊಂಗೋಂಟೆದೆನೆಗೊನೆಗಳಿಂದೇಳ್ವ ದೂಳಲ್ಲಿಗಲ್ಲಿಗೆ ಸ್ಥೂಲದಂಡಾಕೃತಿಯ ನಾಂತಪೋಲ್ . . . ಡೆಂಕಣಿಯ ಕೈಗಳಾಲಿಗಚ್ಚರಿಯಾಗಿ ತೋಱುತಿವೆ (ಜೈಮಿಥಾ. ೩-೨೦). [ ತೆನೆ$_1$ + ಕೊನೆ$_2$ ]

**ತೆನೆಗೊಳ್** (ಕ್ರಿ). ೧. = ತೆನೆಗಟ್ಟು. 'ತೆನೆಗೊಳಿಸು' ಪರಾ. ೨. ಕೋಟೆಯ ತುದಿಗೆ ತಾಗು : ಮುತ್ತಿನೋಳಿ ತೆನೆಗೊಂಡು ಪಱಿದ ಮುಗಿಲಿಂ ಸುರಿಗುಂ (ಮಲ್ಲಿಪು. ೨-೫೩). [ ತೆನೆ$_1$ + ಕೊಳ್$_1$ ]

**ತೆನೆಗೊಳಿಸು** (ಕ್ರಿ). ಹೊಡೆ ಮೂಡುವಂತೆ ಮಾಡು ; ತೆನೆಯಾಗುವಂತೆ ಮಾಡು : ಬಿತ್ತಿ ಬೆಳೆಯಿಸಿ ಪರಾಂಬರಿಸುವುದು ಒಕ್ಕಲಿಗನಾದರೆ, ಕೈಯನ್ನು ತೆನೆಗೊಳಿಸಿ ಮಾಗಿಸುವುದು ಕಾಲದ ಕೈವಾಡ (ವೀರಬಂ. ೪೮).
[ ತೆನೆಗೊಳ್ + -ಇಸು$_3$ ]

**ತೆನೆ[ಕೀವು]** (ಕ್ರಿ). ಬಸಿರು ತುಂಬು : ಅಲ್ಲಿಯೆ [illegible] ಪೆರ್ಚಿ ತೆನೆಕೀವಿ ಸಂಟಿಸಿಯೆ (ಯಶೋದ. ೩-೫೫)
[ ತೆನೆ$_2$ (< ತನೆ) + ಕೀವು$_1$ ]

**ತೆನೆತುಂಬು$_1$** (ಕ್ರಿ). = ತೆನೆಗಟ್ಟು : ಕನ್ನಡ ನುಡಿ ಪಯಿರ್ ಮುನ್ನಡೆ ತೆನೆ ತುಂಬಿ ಪೊನ್ನಡಕಿಲ್ಲಂ ಪೊನ್ನಕ್ಕೆ (ಹೊಂಗಳು. ೪೭ ಪಾರ್ಶ್ವ).
[ ತೆನೆ$_1$ + ತುಂಬು$_1$ ]

**ತೆನೆತುಂಬು$_2$** 'ತನೆತುಂಬು' ನೋ.

**ತೆನೆದರ್ಭೆ** (ನಾ). ತೆನೆ ಬಿಡುವ ಒಂದು ಬಗೆಯ ದರ್ಭೆ : "ಚಾಮರ ಪುಷ್ಪಃ — ತೆನೆದರ್ಭೆ " (ಒಷಧಿ. ೫೭). [ ತೆನೆ$_1$ + ದರ್ಭೆ ]

**ತೆನೆದುಱುಗಲ್** (ನಾ) ಕಾಳಿನ ಗೊಂಚಲಿನ ಗುಂಪು; ಕಣಿಶಗಳ ಸಮೂಹ: ಅನಿಳಾಹತಿಯಿಂ ಕಟವೆಯು ತೆನೆದುಱುಗಲೊಳೊಱಿತುಪರಿವ ಪಾಲಂ ಕಳ ಹಂಸ ನಿಕಾಯಮಿಾಂಟಿ ಪಾಳಿಯನನವರತಂ ಬಿಡದು ಪಾಳಿಯುಂ ಪಾಳಿಪ ಪೋಲ್ (ಶಾಂತೀಶ್ವ. ೦-೯೪). [ ತೆನೆ$_1$ + ತುಱುಗಲ್ (< ತುಱುಂಗಲ್) ]

**ತೆನೆನಿಲ್ಲು** 'ತನೆನಿಲ್' ನೋ.

**ತೆನೆಬಲಿ** 'ತನೆಬಲಿ' ನೋ.

**ತೆನೆಬಿಡು** (ಕ್ರಿ). ಕಾಳಿನ ಗೊಂಚಲನ್ನು ಬಿಡು ; ಹೊಡೆಯಾಗು : ಹೊಲದಲ್ಲಿ ಜೋಳ ತೆನೆಬಿಟ್ಟಿದೆ (ರೂಢಿ). [ ತೆನೆ$_1$ + ಬಿಡು$_1$ ]

**ತೆನೆಬಿದಿರು** (ನಾ). ಪೊದರಾಗಿ ಬೆಳೆಯುವ ಒಂದು ಬಗೆಯ ಬಿದಿರು : (ಮೈಜಿಗಿ. ೫೯-೧೧೮೦) [ ತೆನೆ$_1$ + ಬಿದಿರು$_2$ (< ಬಿದಿರ್$_2$) ]

**ತೆನೆಮುಗುಚು** (ಕ್ರಿ). ಗರ್ಭಸ್ರಾವವಾಗು; ವ್ಯಾಳಿ: "ತೆನೆಮುಗುಚ್ಚುದು ವೇಹತ್ತು" (ವಸ್ತುಕೋ. ೯೦-೮). [ ತೆನೆ$_2$ (< ತನೆ) + ಮುಗುಚ್ ]

**ತೆನೆಯಾವು** 'ತನೆಯಾವು' ನೋ.

**ತೆನೆವಳಿ** (ನಾ). ಕೋಟೆಯ ತುದಿ; ದುರ್ಗದ ಉನ್ನತಭಾಗ: ಕಲುವಳಿಯ ಕೋಲಾಹಲಕ್ಕಿವರಳುಕದಿಱಿದರು ಸುರಗಿಯಲಿ ತೆನೆವಳಿಯ ಹಿಡಿದರು ಹೊಯ್ದು ಕೇಶಾಕೇಶಿಯುದ್ಧದಲಿ (ಕುವ್ಯಾಸ. ೩-೫೦).
[ ತೆನೆ$_1$ + ಬಳಿ$_3$ ]

**ತೆನೆವಾಲ್, ತೆನೆಹಾಲು** (ನಾ). ಹೊಡೆಯಲ್ಲಿ ಕಾಳು ಗಟ್ಟಿಯಾಗುವುದಕ್ಕೆ ಮುಂಚಿನ ಹಾಲು ; ಎಳೆಯ ತೆನೆಯೊಳಗಿನ ರಸ : ಫಳರಸದಿ ಬೆಳವ ನವಶಾಳೀವನಂಗಳಿಂ ತೆನೆ[ಪಾಠಾಂ. ತನಿ]ವಾಲನುಂಡು ಬಳಿವರಗಿಳಿ ಗಳಂಕರ್ತಿನಿಂ (ತಿರುರ. ದೇ. ೨-೧೧) : ತೆನೆವಾಲನುಂಡು ಬಳೆದುವು ಗಿಳಿಗಳು (ನಂಬಿರ. ೯-೧೭). **ತೆನೆಹಾಲು** : ತೆನೆಹಾಲು ದಕ್ಕಲಿ ಕಕ್ಕಿಸಬೇಡದನು ನಿನ್ನ ನಂಜಿನ ಸೆರಗ ಬೀಸಾಡಿ (ಗರಿ. ೦೦೭-೧೭) ; ಜನಕೆ ನಿನ್ನೀ ಹಾಡು ಕನೆಹಾಲು ಇದ್ದಂತೆ ತೆನೆಹಾಲು ನಿನಗೆ ಒಕ್ಕಲಿಗ ಇಂಪಾಗಿ ಮನಸೋತು ಮಲಗೆ ಶಿವಲೋಕ (ಕನ್ನಜಾ. ೨೦೭). [ ತೆನೆ$_1$ + ಪಾಲ್$^1$ ]

**ತೆನೆವೆರಸು** (ಕ್ರಿ). ತೆನೆಗಳಿಂದ ಕೂಡಿರು: ತನೆವೆರಸಿದಿಕ್ಕುಗಳ ಪೊರೆಗಳಗೊನೆ ವೆರಸಿ ಶೋಭಿಸುವ ಕದಳಿಯ (ನಿಘಾಗ. ೪-೮-೫೪). [ ತೆನೆ$_1$ + ಬೆರಸು$_1$ ]

**ತೆನೆವೊಱು** (ಕ್ರಿ). ಕಾಳಿನ ಗೊಂಚಲನ್ನು ಹೊತ್ತುಕೊಳ್ಳು ; ಹೊಡೆ ಯಾಗು: ತಿಳಿದ ತಡಿವಿಡಿದ ಮಡಿಗಳ ಜಳದೊಳ್ ರಂಜಿಸುವ ಧಾನ್ಯ ಮಂಜರಿಯ ನೆಟಲ್ ಪೊಳೆಯೆ ತೆನೆವೊತ್ತು[ಪಾಠಾಂ. ವೋದು]ವಿವು ಬೇರ್ಗಳೆನಿಪುದು ಬೆಳೆದ ಕಟವೆ ಭೂಸಾರತೆಯಿಂ (ಚಂದ್ರಪು. ೦-೯೨) : (ಕಾವ್ಯಸಾ. ೦೦೦ ನೋ). [ ತೆನೆ$_1$ + ಪೊಱು ]

**ತೆನೆವೋಗು** (ಕ್ರಿ). ೧.= ತೆನೆಬಿಡು: ತೃಣಮುಂ ತೆನೆವೋದ ಬಱಿಕ್ಕೊಣಗು ವುದು (ಅನಂಪು. ೩-೬೦). ೨. (ಕೋಟೆಯ) ತೆನೆಯಾಕಾರವಾಗು. ೧, ೨: ವಸುಧೆಯ ಮಿಸುನಿ ಬೆಳೆದು ತೆನೆವೋದುದೆಂಬೆಸಕವನೀಕ್ಷಿಸುವಂಗೆ ಪೊಸಯಿಸುತಾ ಪುರವರದ ಪೊಂಗೋಂಟೆ ಕಣ್ಗೆಸೆದುದು (ಕುದಾಸಾ. ೩-೬೩). [ ತೆನೆ$_1$ + ಪೋಗು$_1$ ]

**ತೆನೆಹಾಲು** 'ತೆನೆವಾಲ್' ನೋ.

**ತೆನೆಹುಲ್ಲು** (ನಾ). ೧. ತೆನೆಬಿಡುವ ಹುಲ್ಲು: ಕೈತೋಟದಲ್ಲೆಲ್ಲಾ ತೆನೆಹುಲ್ಲು ಬೆಳೆದಿದೆ (ಊಹ). ೨. ತೆನೆಸಹಿತವಾದ ಹುಲ್ಲು.

[ ತೆನೆ$_1$ + ಹುಲ್ಲು (< ಪುಲ್) ]

**ತೆನ್ನಂದಾರ್ಕ, ತೆನಂದಾಕ, ತೆನೆಂದಕ, ತೆನೆಂಧಕ** (ನಾ). ಒಂದು ವಂಶದ ಹೆಸರು ಮತ್ತು ಆ ವಂಶಕ್ಕೆ ಸೇರಿದವನು (?) : ವಾಣಿಗ ತೋಟ್ಟಮ್ ತೆನ್ಕಣ್ಣಮುಂ ವಡಕಣ್ಣಮುಂ ವಿನೀತೇಶ್ವರಕ್ಕಮ್ ಪೊಯ್ದರ್ ಮಾನ್ದ ತೆಂನನ್ದಾರ್ಕರುಂ ಮಾರಾಟ್ಟ ತೆಂನನ್ದಾರ್ಕರುಂ ಅವರ ಕುಂಬು ಪೊಯ್ದಾರ್ (ಎಕ. IV, ಚಾಮರಾ. ೬೩-೮ ; ಸು. 750). **ತೆನಂದಾಕ** : ಪೆರ್ವ್ವಯಲ ಕಟರುಂ ತೆನನ್ದಾಕರುಂ ಕೊಳನೆಲ್ಲೂರ ಸಾಲತ್ತರುಂ ವಾರ ದರುಂ ಎನೆವ್ವರುಂ ನರಸಾಕ್ಷಿ (ಎಕ. IV, ಎಡತೊ. ೬೦-೬೨ ; ಸು. 890) ; ತೆನಂದಾಕಗಾದೆಯುಂ ಕಣ್ಣಮಂಗಲದೊಳ್ಬಸದಿ ಮಾಡಿಸಿ ಆ ಬಸದಿಗೆ ಕೊಟ್ಟ ಮಣ್ಣು (ಎಕ. X, ಕೋಲಾರ. ೯೦-೮೫ ; 903). **ತೆನೆಂದಕ** : ನೊಕ್ಕಿ ಊರೊಳೆ ಆಗ್ಗಡಿ ಕಳೊಸ ಕೊಟ್ಟ ನೆಲ ತೆನೆನ್ದಕ ಕಾಡೆಯುಕು ಸಾಕ್ಷಿ (ಮೈಆರಿ. ೧೯೧೬, ೧೩-೮ ; 726). **ತೆನೆಂಧಕ** : ಕೊಟ್ಟ ನೆಲ ತೆನೆನ್ದಕ ಕಾಳೆಯುಕು ಸಾಕ್ಷಿ (ಎಕ. III, ಮೈಸೂರು. ೨೫-೨ ; 750). [ ? ]

**ತೆನ್ನಮರ** (ನಾ). ೧. ತೆಂಗಿನ ಮರ. ೨. ತೆಂಗಿನ ಮರದ ಮೇಲೆ ಹಾಕುವ ಒಂದು ಬಗೆಯ ತೆರಿಗೆ: ತೆನ್ನಮಾರಂ (ಎಇ. XVIII, ೧೭೨-೭೮ ; 1434). [ ← ತಮಿ. ತೆನ್ನಮರ ]

**ತೆನ್ನೆಲೆಹುಳಿಗ** (ನಾ). ಒಂದು ಬಗೆಯ ಮೂಲಿಕೆ ; ಅಗಳುಶುಂಠಿ : "ಅರಣ್ಯವಾಸಿನಿ – ತೆನ್ನೆಲೆಹುಳಿಗ" (ಒಷಧಿ. ೯): "ವಲ್ಲೀಕಾ–ತೆನ್ನೆಲೆಹುಳಿಗ, ಹಿಡಿಹಿಡಿಕೆ, ಶ್ರೀವಲ್ಲಿ, ಅಗಳುಶುಂಠಿ" (ಒಷಧಿ. ೧೭೫). 'ತನ್ನೆಲೆಹುಳಿಗ' ಪರಾ. [ ? ]

**ತೆನ್ನೊಟಿ$^3$ಬ** (ನಾ). ದಕ್ಷಿಣಕ್ಕಿರುವ ಬೇಲಿ : ದಕ್ಷಿಣಸ್ಯಾನ್ದಿಸಿ(ಶಿ) ಕ (?) ಟು ಪೊಟಿ$^3$ಕ್ಕಾಲ್ ತೆನ್ನೆ(ನ್ನೊ)ಟಿ$^3$ಬ . . . ಎಕಟುವ ದಿಕ್ಕಾಲ್ ತೆನ್ನೊಟಿ$^3$ಬ ಎಕುಟ್ಟದಕ್ಕಾಲ್ ತೆನ್ನೊಟಿ$^3$ಬ (ಇಆ. XVIII, ೩೩೭-೨೩ ; 8ನೆಯ ಶತ).

[ತೆಂ + ಒಟಿ$^3$ಬ (<ಒಟಿ$^3$ಪ)]

**ತೆಪರ** (ನಾ). ಬುದ್ಧಿಯಿಲ್ಲದವನು ; ದಡ್ಡ : ಸೈಕೋಲ್ ಕೊಟ್ಟು ಬುಡೋ ವಪ್ಪು ತೆಪರಾ ಅಂತ ತಿಳಕೊಂಡಿಯೇನೋ ? (ಇಡನೋ. ೨೨). [ ? ]

**ತೆಪ್ಪ, ತೆಪ್ಪೆ** (ನಾ). ೧. ನದಿ ಅಥವಾ ಹೊಳೆಯನ್ನು ದಾಟಲು ಬಳಸುವ ಸಾಧನ ; ಹರಿಗೋಲು ; ನಾವೆ : "ತಳ್ಪಂ, ಉಡುಪಃ, ಪ್ಲವಃ – ಈ ೩ ತೆಪ್ಪಂ" (ನಂಜಯು. ೧೧೧-೭೯) : "ಉಡುಪ ಪ್ಲವ ಕೋಲ" (ನಾಚಿರಾ. ೬) ; ಪರಿದರ್ಜ ಪರ್ಬಳ್ಳದೊಳ್ ಪಿರಿದಪ್ಪ ತೆಪ್ಪದ ಮೇಲೆ ತೇಂಕುತ್ತುಂ (ಪಂಚತಂ. ೨೯೬-೦೮) : ತೊಟಿ$^3$ಯೊಳ್ ಪೋಪನಂಗೆ ತೆಪ್ಪವನಿಕ್ಕಿದಂತೆ (ಧರ್ಮಾಮೃ. ೧-೧೭೮) : ಬಾಲಮರಾಳಂಗಳಂ ಪದ್ಮಪತ್ರದಿನೊಪ್ಪುವ ತೆಪ್ಪದೊಳಿಟ್ಟು ದಾಂಟಿಸುತಿರ್ಪ ರಾಜಹಂಸರಾಜಿಗಳಿಂ (ಗಿರಿಕ. ೨-೬೧ ವ) : ತೆರೆಯ ಮೇಲಣ ತೆಪ್ಪದಂತಿರೆ ಧರಣಿಯೊಲೆದುದು ಗಾಲಿಗಳ ಹಾವರದ ಭಾರಿಗೆ (ಕುಮಾವ್ಯಾಸ. ೬.೦೩. ೬-೫೯) : ಉರುಳುತಿರ್ದಪು ರಣದೊಳಗೆ ಹೆಣಸೆರಡು ಸೇನೆಯುಲರುಣಜಲವುಬ್ಬರಿಸುತಿರ್ದುದು ನೆಗಹಿ ನಾಲುಕು ಬಲದ ತೆಪ್ಪಗಳ (ಕೊರಠಾ. ೬-೦೩-೮೧) : ನದಿಯ ದಂಡೆಯಲ್ಲಿ ಒಂದು ತೆಪ್ಪವು ಕಟ್ಟ ಹಾಕಲ್ಪಟ್ಟಿದ್ದಿತು (ಶ್ರೀರಾಮು. ೧). ೨. ಬಿದಿರು, ಹಲಗೆಗಳಿಂದ ನಿರ್ಮಿ ಸಿದ ಚಪ್ಪಟೆಯಾದ ತೇಲುಸಾಧನ. 'ತೆಪ್ಪೋತ್ಸವ' ಪರಾ. **ತೆಪ್ಪೆ** : ೧. ಉದಕದಲ್ಲಿ ತೇಲಾಡುವ ತೆಪ್ಪೆಯ ವಿಧದಿಂದ ಮಹಾತ್ಮರು ಲೋಕ ಸಮುದ್ರದಲ್ಲಿ ಮುಳುಗದೆ ದಡವನ್ನು ಸೇರುವರು (ಮುಡಿಕ್ಯಾ. I. ೨೨೦) [ ದೇ.ಪ ತಮಿ. ತೆಪ್ಪ, ತೆಪ್ಪಲ್, ತೇಪ್ಪೈ; ತುಳು. ತೆಪ್ಪ, ಚೆಪ್ಪೊ, ತೆಪ್ಪೊ; ತೆಲು. ತೆಪ್ಪ, ತೇಪ./ಅರ. ತಾಇಫಾ ; ಮರಾ. ತಾಪಾ,ತಾಫಾ ]

**ತೆಪ್ಪಗೆ** (ಅ). ೧. ಸುಮ್ಮನೆ ; ನಿಶ್ಚಲವಾಗಿ ; ಮೌನವಾಗಿ : ಮೊಳೆವ ದೊಮ್ಮೊಮ್ಮೆ ಚಿತ್ತದೊಳು ವಿಕಲ್ಪ ಕೂಡಳಿವುದೆಂತೆನೆ ಘಾಳಿಯಿಂದ ಜಲ ದಲ್ಲಿ ತರೆಯೇಳುವಂತೆ ಮತ್ತಾ ಘಾಳಿ ನಿಲೆ ಜಲ ತೆಪ್ಪಗಿಹಂತೆ (ಭರಹ. ೧೮-೭೯): ಆಜ್ಞೆ ಕೊಡಲಾರದೆ ತೆಪ್ಪಗೆ ನಿಂತುಕೊಂಡರು (ನಾಪೋಲಿ. ೮೦) : ತೆಪ್ಪಗೆ ಕುಳಿತುಕೋ (ರಂಗಕ. ೧೦೯). ೨. ಪೆಚ್ಚಾಗಿ ; ಬೆಪ್ಪಾಗಿ : ನಾನೂ ತೆಪ್ಪಗೆ ಅವನ ಮುಖವನ್ನೇ ನೋಡುತ್ತಾ ನಿಂತಿದ್ದೆ (ಆಲಹೂ. ೭೯). ೩. ಆರಾಮವಾಗಿ ; ಸುಖವಾಗಿ ; ಹಾಯಾಗಿ : ತೆಪ್ಪಗೆ ಮದುವೆ ಯಾಗಿ ಸಂಸಾರಿಯಾಗು (ವಿದ್ಯಾರಿ. ೩೬).

**ತೆಪ್ಪಗಾಗು** = ಸುಮ್ಮನಾಗು ; ಮಾತನಾಡದಿರು ; ಮೌನವಾಗಿರು : ಪೈದಿಗಳೆಲ್ಲ ಸದ್ದು ನಿಲ್ಲಿಸಿ ತೆಪ್ಪಗಾದರು (ಪುನರು. ೫೩೮); ಈ ಮಾತುಗಳನ್ನು ಕೇಳಿ ಕುಡುಕನು ತೆಪ್ಪಗಾದನು (ಹಬ್ಬಲ. ೨೦೦) : ಇಬ್ಬರೂ ತೆಪ್ಪಗಾದರು (ಮುರುಕು. ೬). **ತೆಪ್ಪಗಿರು**=೧. ಸುಮ್ಮನೆ ಇರು; ಮೌನದಿಂದಿರು: ಟಪ್ಪು ತನ್ನ ಹಗೆತನವನ್ನೂ ಹಿರಿಯಾಸೆಯನ್ನೂ ತೊರೆದು ತೆಪ್ಪಗಿರಲಿಲ್ಲ (ಭಾರದ. ೭೨೫) ; ಅವನು ಹೆದರಿ ತೆಪ್ಪಗಿದ್ದರೆ ಅವನ ಸಹೋದ್ಯೋಗಿಗಳು ಹೇಡಿ ಯೆಂದು ಭಂಗಿಸಿ, ಅವನನ್ನು ಸೈನ್ಯದಿಂದ ಹೊರಹಾಕುತ್ತಿದ್ದರೆಂದೂ ವಾದಿಸಿದನು (ಪುನರು. ೩೭೪). ೨. ಹಾಯಾಗಿರು; ನೆಮ್ಮದಿಯಿಂದಿರು: ನಾನೆ ಪೋಪೆನಮ್ಮಾಜಿ ತೆಪ್ಪಗಿರಿ ನೀವೆಂದ (ಭರಡ. ೩೭-೫೫) ; ಕೆಲವರು ರಾಜಕಾರಣವನ್ನು ಬಿಟ್ಟು ತೆಪ್ಪಗಿರಬೇಕೆಂದು ಯೋಚಿಸುತ್ತಿದ್ದರು (ಪಂಜಪಂ. ೧೮೧). 'ಸಪ್ಪಗೆ' ಪರಾ.

**ತೆಪ್ಪತೇರು** (ನಾ). ತೆಪ್ಪೋತ್ಸವದ ತೇರು ; ತೆಪ್ಪದ ರಥ : ಅವನ ತೆಪ್ಪ ತೇರಿನ ಮೇಲೆ . . . ನವಿಲುಹಿಂಡು ಕುಳಿತುಕೊಂಡು ಕಳಸಕ್ಕೆ ಕಪ್ಪು ತುಂಬುತ್ತವೆ (ಹಳ್ಳಿಜಾ. ೧೭). [ ತೆಪ್ಪ + ತೇರು$_2$ (<ತೇರ್$_2$) ]

**ತೆಪ್ಪತ್ತ** 'ತೆಪ್ಪಟು' ಪರಾ.

**ತೆಪ್ಪತ್ತು** 'ತೆಪ್ಪಟು' ಪರಾ.

**ತೆಪ್ಪನೆ** (ಅ). ೧. ಸುಮ್ಮನೆ ; ತೆಪ್ಪಗೆ : ಎಲೆ ಮರುಳೆ ! ನೀಂ ಭಯಂಬಡ ಬೇಡ, ತೆಪ್ಪನೆ ನಡೆ (ಮಿತ್ರಗೋ. ೨೩) ; ಇಬ್ಬರೂ ತೆಪ್ಪನೆ ನಡೆದು ಬರು ತ್ತಿದ್ದೆವು (ಮಗಪೂಂ. ೩೯). ೨. ಒಮ್ಮೆಲೆ ; ಇದ್ದಕ್ಕಿದ್ದಂತೆ ; ನಿಷ್ಕಾ ರಣವಾಗಿ : ಮುಪ್ಪಾಗ ಜೆಣ್ಣೆಯನ್ನು ತಪ್ಪದೆ ನಾ ಹಾಕಿ ಸಾಕಿದ ಒಪ್ಪ ದಿಂದ ಗಿಳಿಯು ಈಗ ತೆಪ್ಪನೆ ಹಾರಿ ಹೋಯಿತಯ್ಯೊ (ಪುರಂದ. ೧-೧೧೨-೪). ೩. ಹಾಯಾಗಿ; ಸುಖವಾಗಿ : ತೆಪ್ಪನೆ ಬೀಣೆವಾಡದೊಳಗಾಡುವ ವಾಣಿಯ ನೂಪುರಸ್ವರಂ (ಚಕವಿ. ೪-೧೧೪).

**ತೆಪ್ಪತೆಪ್ಪನೆ** (ದ್ವಿರುಕ್ತಿ) : ಅಪ್ಪಯ ಪದಾಂತ ಲೋಪಕ್ಕೆ . . . ತೊಪ್ಪ ತೊಪ್ಪನೆ, ತೆಪ್ಪತೆಪ್ಪನೆ ಪುರುಳ್ (ಶಮಧ. ೧೯೩ ಪ್ರಯೋ). **ತೆಪ್ಪನಾಗು** = ತೆಪ್ಪಗಾಗು ; ಸುಮ್ಮನಾಗು : ಸುಮ್ಮನಿರುವುದರಲ್ಲಿ ಪುರುಷಾರ್ಥ ವಿದೆಯೆಂದು ಭಾವಿಸಿ ಬಸಗೋಂಡ ತೆಪ್ಪನಾಗುತ್ತಿದ್ದ (ದೀಪಹ. II, ೧೭೩). **ತೆಪ್ಪನಿರು** = ತೆಪ್ಪಗಿರು ; ಸುಮ್ಮನಿರು : ಹುಟ್ಟುಗುಣಗಳ ಮನಶ್ಶಕ್ತಿ . . . ಗುಪ್ತಮನಸ್ಸಿನಲ್ಲಿ ಅಡಗಿಬಿಡುತ್ತದೆ. ಅಡಗಿದರೆ ಅಡಗಿರಲಿ, ಎಂದು ತೆಪ್ಪನಿರುವಂತಿಲ್ಲ (ಶಿಕ್ಷದ. ೬೭೯).

**ತೆಪ್ಪರಿಗೆ** (ನಾ). (ಕರಾ) ತೆಂಗಿನ ಗರಿಯ ಬುಡದಲ್ಲಿರುವ ಎಳೆಎಳೆ ಯಾದ ಹೊದಿಕೆ ; ತೆಂಗಿನ ಸೀರೆ ; ಸೀಬಿ : ನಾವು ಗವಿಯೊಳಗೆ ಹೋಗುವಾಗ ತೆಂಗಿನ ಗಿಡದ 'ತೆಪ್ಪರಿಗೆ'ಯ ಸೂಟೆಗಳನ್ನು ಬೆಳಕಿಗೆಂದು ಒಯ್ದಿದ್ದೆವು (ಗಂಗಾವ. ೬೫). [←ತುಳು. ತೆಪ್ಪರಂಗೆ, ಚೆಪ್ಪರಂಗೆ ]

**ತೆಪ್ಪರಿಸು** (ಕ್ರಿ). ಚೇತರಿಸು ; ಎಚ್ಚೆತ್ತುಕೊಳ್ಳು : ಶ್ರೀರಾಜ ಒಡೆಯ ಮಹಾಸ್ವಾಮಿಯವರು ಆ ಮಹಾಸಭೆಯ ವಿಕಾರ ವಿಲಾಸಗಳ ಉಮ್ಮಹವದನ್ನು ತಲೆಗಿಡಿಸಿ ತೆಪ್ಪರಿಸಿ ನೇರ್ಪಡಿಸಿಕೊಂಡರು (ಮುಂತ್ರಿಶ. ೧೫೫-೨೨). [ತೆಪ್ಪರು (< ತೆಪ್ಪಟು ) + – ಇಸು$_3$ ]

**ತೆಪ್ಪರು** 'ತೆಪ್ಪಱು' ನೋ.

**ತೆಪ್ಪಸ** (ನಾ). = ತೆಪ್ಪ ೧ : ನರರ ತುರಂಗಂಗಳ . . . ಶರಹತಿಯಿನಾದ ಪಲ್ಲಟಿಗಡಿಗಳ್ ಪರಿವರುಣಜಲದ ತೊಱೆಯೊಳ್ ತರಳ್ದು ತೆಪ್ಪಸದ ತೆಱದ ಪರಿದವು ಧುರದೊಳ್ (ಮಹಾನೇ. ೫-೪೮). [< ತೆಪ್ಪ]

**ತೆಪ್ಪಹಾಂಸೆ** (ನಾ). ನೀರಿರುವ ಪ್ರದೇಶದಲ್ಲಿ, ಬೇರು ಆಳಕ್ಕಿಳಿಯದೆ ನೀರಿನ ಮೇಲೆ ತೇಲಿ ಬೆಳೆಯುವ ಒಂದು ಬಗೆಯ ಸಸ್ಯ ; ಅಂತರ ಗಂಗೆ : ಅಂತರಗಂಗೆ ಅಥವಾ ತೆಪ್ಪಹಾಂಸೆ (ಮುಂಬಯಿ. ೬-೨೬೫).
[ತೆಪ್ಪ + ಹಾಂಸೆ (<ಪಾವಸೆ)]

**ತೆಪ್ಪಱು, ತೆಪ್ಪರು, ತೆರ್ಪಱು** (ಕ್ರಿ). ತೆಪ್ಪತ್ತ (ಭೂತಕೃ), ತೆಪ್ಪತ್ತು, ತೆರ್ಪತ್ತು (ಭೂತಸ್ತ್ಯಾ). ಎಚ್ಚರಗೊಳ್ಳು ; ಚೇತರಿಸಿಕೊಳ್ಳು : "ತೆಪ್ಪಱು—ಚೇತನಕರಣೇ" (ಶಮಧಾ) ; ಆಗಳ್ ತೆ[ಪ್ಪ]ತ್ತುಮೆಲ್ಲಿದನೆತ್ತಣ ನೆಂದು ಕರ್ಣನ ಕಳೇವರಮಂ ನೋಡಿ ನೋಡಲಾಱದೆ ಕಣ್ಗಳಂ ಮುಚ್ಚಿ (ಪಂಪಭಾ. ೧೩-೫೮ ವ) ; ಕೂಸಂ ಕಾಣದೆ ಬೆರ್ಚಿ . . . ಪೊಡರ್ಪುಗೆಟ್ಟು ಮರವಟ್ಟಂತಂತೆ ತೆಪ್ಪತ್ತು . . . ಕಾಂತೆ ಪುಯ್ಯಲ್ಚಿದಳ್ (ಬಂಹರಿ. ೮-೫); ಮೂರ್ಛೆಗೆ ಸಂದ ರಾಯಂ . . . ಶೈತ್ಯೋಪಚಾರದತ್ತಣಿಂ ತೆಪ್ಪತ್ತನಾಗೆ (ರಾಮಾಶ್ವ. ೧೩-೨೨). **ತೆಪ್ಪರು** : ಕರೆಕರೆಯಿಾಂಪಳೊರ್ಮೆ ನಿಜದೈವಮು ನೊರ್ಮೆ ಕಡಂಗಿ ಬಯ್ದು ತೆಪ್ಪರುವಳದೊರ್ಮೆ ಚಿಂತೆ ತಲೆದೋರೆ ಪಲುಂಬುವಳೊರ್ಮೆ (ಚಂದ್ರಪ್ರಭ. ೬-೨೭). △ **ತೆರ್ಪಱು**: "ತೆರ್ಪತ್ತಂ—ಮೂರ್ಛಿತೀತಿದಂ" (ಶಮದ. ಪರಿ. ೨) ; ತೆರ್ಪತ್ತು ಬಿಬ್ದು ನಮೆಯು ತ್ತಿರ್ಪರ್ ನಾರಕರ್ (ಶಾಂತಿಪು. ೭-೯೯) ; ಎಚ್ಚಂಬೆರ್ದೆಯಿಂದುರ್ಚಲ್ . . . ತೆರ್ಪತ್ತಾಗಳ್ (ವೀರವಿ. ೧೨-೩೭).

**ತೆಪ್ಪತ್ತುಕೊಳ್ಳು**=ಚೇತರಿಸಿಕೊಳ್ಳು; ಎಚ್ಚತ್ತುಗೊಳ್ಳು : ಸ್ವಲ್ಪಕಾಲ ದಲ್ಲಿಯೇ ಮೊಗಲನು ತೆಪ್ಪತ್ತುಕೊಂಡು . . . ರಂಗಸ್ಥಳದಿಂದ ಹೊರಕ್ಕೆ ಹೋದನು (ಭಾರವೀ. ೧೨೩); ಅಂದಿನಿಂದ ಅವರು ಸ್ವಲ್ಪ ತೆಪ್ಪತ್ತುಕೊಂಡು ಎದ್ದು ಊಟ ಮಾಡಲೂ ಅಲ್ಲಲ್ಲಿ ತಿರುಗಲೂ ಅನುವಾದರು (ನಗಗ. ೭೭).
[ದೇ.॥ ತೆಲು. ತೆಪ್ಪಱು, ತೆಪ್ಪರು, ತೆಪ್ಪಿರು, ತೆಪ್ಪಿಱಿಲು, ತೆಪ್ಪಿಱು]

**ತೆಪ್ಪೆ** 'ತೆಪ್ಪ' ನೋ.

**ತೆಪ್ಪೋತ್ಸವ** (ನಾ). ತೆಪ್ಪದಲ್ಲಿ ದೇವರನ್ನು ಕೂರಿಸಿ ಮಾಡುವ ಉತ್ಸವ,—ಮೆರವಣಿಗೆ: ನಮ್ಮ ದೇವಾಲಯಗಳ ಲಕ್ಷದೀಪ ತೆಪ್ಪೋತ್ಸವ, ದೀಪಾರಾಧನೆಗಳಲ್ಲಿ ಅಸಂಖ್ಯಾತ ದೀಪಗಳನ್ನು ಹಣತೆಯಲ್ಲಿ ಉರಿಸುತ್ತೇವೆ (ಬಾಲಪ್ರ. III, ೦೩೭೯). ℙ ಈ ರೂಪ ವ್ಯಾಕರಣ ಶುದ್ಧವಲ್ಲ.

**ತೆಬ್ಬಱಿಸು** (ಕ್ರಿ). ೧. ಹಾರು ; ನೆಗೆ ; ಚಿಮ್ಮು ; ಪುಟನೆಗೆ : ಎತ್ತಂ ತೆಬ್ಬಱಿಸಿಯಾಡುವಟ್ಟೆಗಳುಬ್ಬರದಿಂದೊಱೆದು ಪರಿವ ರುಧಿರಸ್ರೋತಂ (ನೇಮಿಪು ೧೧-೧೮೪). 'ಟೆಪ್ಪರಿಸು' ಪಠಾ. ೨. ಉತ್ಸಾಹಗೊಳ್ಳು ; ಹುರುಪನ್ನು ಪಡೆ : ಇರ್ವರುಂ ಪರಸಿ ತಡವರಿಸಿಯುಂ ತೆಬ್ಬಱಿಸಿ ಯುಯುಮಟ್ಟಿಱಿಯೊಳಟ್ಟಿಕೊಂಡು (ಪಂಪಭಾ. ೧೩-೮ ವ) ; ಆನಂದಿತಚಿತ್ತರಾಗಿ ತಡವರಿಸಿಯುಂ ತೆಬ್ಬಱಿಸಿಯುಂ ತೆಗೆವಪ್ಪಿಯುಂ (ಗದಾಯು. ೩-೮೪ವ) : "ಚೇತರಿಸಿಕೊಳ್ಳುವಂತೆ ಮಾಡು" (ಗದಾಸಂ. ಟಿಪ್ಪಣಿ) ;ಕರವಾಳ ಘಾತದಿಂ ಪರಿದುರುಳ್ವ ತಲೆಗಳನವುಂಕಿ ಪಿಡಿದರೆಬರ್ ತೆ[ಪಾಠಾಂ. ಟೆ]ಬ್ಬಱಿಸಿ ಮಗುಟ್ಟಿಟ್ಟೆಯೊಳ್ ಬಿತ್ತರದಿಂ ಬೀರಕ್ಕೆ ಕಳಶವಿಡುವಂತಿಟ್ಟರ್ (ಚಂದ್ರಪು. ೧೦-೭೩). [<ತೆಬ್ಬು$_1$ + – ಇಸು$_3$]

**ತೆಬ್ಬು$_1$** 'ತುಬ್ಬು$_1$' ನೋ.

**ತೆಬ್ಬು$_2$** 'ತಿರುವು$_3$' ನೋ.

**ತೆಮಟೆ** 'ತಟ್ಟೆ' ನೋ.

**ತೆಮರ್$_1$, ತೆಮರು$_1$, ತೆಮಱು, ತೆವರು$_1$** (ಕ್ರಿ). ೧. ಅಟ್ಟು; ಓಡಿಸು; ನಿವಾರಿಸು : ತಿಮಿರಭ್ರಮರವ್ರಜವಾಕ್ರಮಿಸಿರೆ ಭಗಣಪ್ರಸೂನಕುಲಕೇಂದ್ರ ದಿಶಾರಮಣಿ ತೆಮರಲ್ಕೆ ಚಂಪಕಸುಮುಕಂತುಕಮಿಟ್ಟಳಿನಿಕಾಯಾ ವಿಧು ಬಿಂಬಂ (ರಾಜಶೇ. ೧೧-೪೭) ; ಪರಿತಂದು ತಿಮಿರ ಮಧುಪೋತ್ಕರಮುದು ಸುಮುಚಯಕೆ ಬಳಸಿ[ಸೆ] ತೆಮರಲ್ ಭರದಿಂ ಹರಿದಿಗ್ವಧುವಿಟ್ಟತಿಭಾಸುರ ಚಂಪಕದಿಂಡೆಯೆನೆ ನಿಶಾಕರನೆಸೆಗುಂ (ವಿಷ್ಣುಪು. ೫-೩-೧೧೧) ; [illegible] ವಿಳಾಘವುಂ ತೆಮರ್ವ ಕಣ್ಗಳಿಂ (ಶಬರ. ೫-೪೦) ; ಐದು ಕೋಶಗಳ ಪೊಕ್ಕೈದು ಯೋಗಗಳ ಮಿಕ್ಕೈದು ಲಕ್ಷಣವ ತೆಮರ್ದೈದು ವಿಷಯಗಳ ನೆಮರ್ದು (ಕೈಶವ. ೧-೨೧-೩). ೨. ಹೆದರು ; ಬೆದರು ; ಹಿಮ್ಮೆಟ್ಟು : ಸೆಡೆದನೆಂದುಂ, ನಡುಕಂಗೊಂಡನೆಂದುಂ . . . ತೆಮರ್ತನೆಂದುಂ – ಈ ೮ ಭಯಂಗೊಂಡವಂ (ಕ ಶ ಸಾ. ೧೨-೨೨೫) ; ಜನ್ಮಾರ್ಜಿತಾಘ[illegible] ತೆಮುಗುರ್ಗ (ಕಮುಸೂ. ೩-೩೯೭). ೩. ಹೀಯಾಳಿಸು ; ತಿರಸ್ಕರಿಸು : ಎಮೆದುಱುಗಲ್ಕಪಲ್ಮ ಕಡಿಗೊಂಡಪೊಲಾಗಿರೆ [illegible] ತೆಮರ್ವಪೊಲೊಪ್ಪೆ ಸೋರ್ದುವಿ . . . ಕಂಗೆಸೆದುದಗ್ಗದ ಪೂರ್ವವಿಳಾಸಿನೀಜನಂ (ರಾಜಶೇ. ೧೨-೫೫) **ತೆಮರು$_1$** : ೧. ವಿಭ್ರಮ ಮಱಿದಿರ್ಪುಗುಂದಿ ಬಿಸಿಱಂ ಪೊಸದೇಱತ್ತಿನೊಳೊಂದಿ ನಿಂದರಂ ತೆಮರಿ ತೆರಳ್ಕೆ ಕಾರ್ಯಮಣಮಿಲ್ಲದೆ ಬಣ್ಣಱೆದೊರ್ವಳೊಪ್ಪಿದಳ್ (ರಶರ. ಪರಿ. ೧೦೯). △ **ತೆಮಱು** : ೧. ನಡೆದುಚ್ಚಂಗಿಗೆ ಬಂದ ರಾಯದಳಮಂ ಕಯಿ ಕೊಳ್ಳದೊಂದಂಗದಿಂ ಬಿಡದಟ್ಟಾಡಿ ಸರಂಗಳಿಂ ತೆಮಱಿಯಂತಾ ಸೇನೆ ಪಿಂಗಲ್ಕೆ ತಾಂ ಪಡೆದಂ ವೀರದ ಪೆರ್ಮೆಯಂ (ಎಕ. V, ಅರಸೀ.೦೦೮–೨೧ ; 1255). **ತೆವರು$_1$** : ೧. ತುಂಬಿ ತುಂಬಿಯನಟ್ಟುವಂತಳಕವಳಕವರಲಂಬಬು ತೆವ[ಪಾಠಾಂ. ಮ]ರುವಂತೆ . . . ಚಿಟ್ಟುನುರಿಯಾಡುತಿರ್ದರು ಸತಿಯರು (ಹಡಕಾ. ४-೧೦) ; ಮಕ್ಕಳನು ತಱಿದಿವರ ತೆವರಿಯೆ ರಾಜ್ಯಮಾಡುತಲಿ (ಕುವ್ಯಾಅ. ಒರಿಇ. ೨೭-೧೧೫) ; ಭವಾಂತರದೋಷತಮವ ತೆವರುವ ನೇಸಱೆಂದೆನಿಪುದು (ಸಾಂಡವು. ೬-೪೫) ; ಗಿಳಿಗಳಂ ತೆವರುವ ಪಾಮರ ಸ್ತ್ರೀಯರ್ (ರೇವಣ. ೨೩-೯) ; ವಿಷಮನಮೃತಂ ಪುಣ್ಯಮಾ ಪಾಪವ ನಲೆ ತೆವರುವಂತೆ ಪರವಾದಮಂ ಗೆಲ್ದು (ಚಬಪು. ೩-೨೮) ; ಅಪ್ಪಳಿಸಿ ಪೊಯ್ದೊ ಳಿದು ಸದೆದಿಟ್ಟೊರಸಿ ಮೆಟ್ಟಿ ಸೊಪ್ಪಿಸಿ ಪೊರಳ್ದರೆದು ತೆವರಿ ಪರಿದರಯಿಟ್ಟ ಚಿಪ್ಪುಚೀರಾಗಿಸಿತು ಸಕಲ ಪರಿವಾರಮಂ (ಜೈಮಿಭಾ. ೧೩-೫೦). ೨. ಇವನ ಕಾಣುತ ಸಕಲಸುರಮುನಿನಿವಹವಾಚರಿಸಿತು ದೆಸೆದೆಸೆಗವಯವದ ಭೀತಿ ಯೊಳಗೋಡಿತು ಬ್ರಹ್ಮವಟುನಿವಹ ತೆವರುತಿರ್ದವು ಖಗ ಮೃಗಾವಳಿ (ಅಂಬಿಕಾ. ೭-೪೪). ೩. ಅರೆನಗೆಯು ಬಿಱುನಗೆಯು ನಗೆಗಳ ಪೊರಳಿಗಳ ಲಡಬಿದ್ದು ಕೈದಾವರೆಯು ಕಮಲಂಗಳಲಿ ತೆವರಿದರಿಟ್ಟು ಭೂಭುಜರ (ತೊರರಾ ೧-೧೫-೮).

**ತೆಮರ್$_2$, ತೆಮರು$_2$, ತೆವರ್, ತೆವರ, ತೆವರಿ, ತೆವರು$_2$** (ನಾ). ೧. ದಿಣ್ಣೆ ; ಬೋರೆ ; ದಿಬ್ಬ ; ತಿಟ್ಟು : ಅಡವಿ ಬಯಲಾಗೆ ನದ ಮೊಟ್ಟುಡುಗೆ ತೆಮರ್ಸರಿಸಮಾಗೆ (ಕಾವ್ಯಾವ. ೨೯೪) ; ತೆಮರೆಲ್ಲಂ ಜೈನ ರಾಜಾಯತನಮೆ ಕುಱಿಯೆಲ್ಲಂ ನವಂಭೋಜಿನೀಷಂಡಮೆ ಪೌರೋದ್ಯಾನ ಮೆಲ್ಲಂ ಸುರಕುಜಮೆ (ಅನಂಪು. ೩-೭) ; ಮುಂಡಿಗೆಯ ತುದಿಗಳಂ ಕುಱ ತೆಮರಂ ಪಸರಿಸಿ ತೆಳ್ಗಲ್ಲೊಳ್ ಘಟಿಯಿಸುವುದು ಸುಸ್ಥಾನಶಯನಪ್ಪಂತೆ ನೆಲಂ (ಅಶ್ವಶಾ. ೭-೫). **ತೆಮರು$_2$** : ೧. ಪಳ್ಳದ ಬಡಗಣ ತೆಮರು (ಮೈಆರಿ. ೧೯೩೯, ೩೮-೯; ೧ ನೆಯ ಶತ). **ತೆವರ್**: ೧."ದ್ವೀಪಃ. ಅಂತರೀಪಂ ಈ ೨ ನೀರ ನಡುವಣ ಕುರುವದ ಪೆಸರು. ಉದಕದ ತೆವರೆಂಬ ಎಂಬರು" (ನಾಚಿರಾ. ೯೯) ; "ತೆವರಾರಯಲುದ್ವನೆಲಂ" (ಚತುನಿ. ೩೫) ; ಮಾಗಿಲಿಂದೆ ಜಗುವ ಮಱಿ ಕದಡಿ ಬರ್ಪ ತೊಱೆ ಬೆಟ್ಟು ತೆವರ್ ಮೊದಲಾದ ಜಲಧಿಗಳೆನ (ಆದಿಪು. ೭-೬೨) ; ತೆವರೆಲ್ಲಂ ದೇವತಾಮಂದಿರನಿವಹವೆ (ಎಕ. XVI, ೩೮-೩೪ : [illegible]
(ಹಿಂದೂರ.ಪ. ೫೦೦-೭) ; ಕುಱಿಯುಂ ತೆವರುಂ ಸಮನಾಯ್ತು ಪೆತ್ತಲುಂ

(ಪುಷ್ಪಪು. ೫-೪೬) : ಭೂಮಿಯ ಕುೞಿ ತೆವರ್ವೊದಲಾದುದಂ ನೋಡಿ (ಶ್ರಾವಕಾ. ೯೩-೨೨) ; ತೊಱಗಳಿಗುಪ್ಪೆ ಮಜ್ಜಿಗೆಯ ತೆವರ್ ಸುಂಟಗೆಯ ಸಾಲ್ (ಚಬಪು. ೪೮-೫೬). **ತೆವರ** : ೧. ಆ ತೆವರದ ಶಿಲೆಯ ಕಂಬ (ಎಕ. XII, ಕುಮಾಕೊ. ೩-೧೨ ; 1516) ; ತಿಟ್ಟೆಯೊಳು ತೆವರದೊಳು ಹುಟ್ಟಿಪನೆ ಪರಶಿವನು ಹುಟ್ಟು ಸಾವುಗಳು ಅವಗಿಲ್ಲ ಜಗವನ್ನು ಬಿಟ್ಟಿಹನು ನೋಡ (ಸರ್ವಜ್ಞ. ೩೩೩). **ತೆವರಿ** : ೧. ತೆನೆ ತಿಂದ ಎತ್ತು ತೆವರಿಯನ್ನು ಏರಿತು (ಗಾದ). ೨. ಹೊಲ ಗದೆ ಮೊದಲಾದುವುಗಳ ಬದು,–ಏರಿ,–ಅಂಚು : ಗದ್ದೆಯ ತೆವರಿಯಲ್ಲಿ ಬರುತ್ತಿದ್ದ ದೊಡ್ಡನನ್ನು ದೂರದಿಂದಲೇ ಬೆಳ್ಳಿ ನೋಡಿದಳು (ಕಾಲೂರ. ೪ ಕಥಾಸಾರ). **ತೆವರು₂** : ೧. ತೆಙ್ಕಣ ತೆವರು ಪಡುವ ಪಳ ಮೇರೆ (ಎಕ. V, ಅರಕ ೨೪-೧೩ ; ಸು. 900) ; ಉಗುಳ ನುಂಗಿ ಹಸಿವ ಕಳೆದು ತೆವರ ಮಲಗಿ ನಿದ್ರೆಗೆಯ್ದನಲ್ಲಾ (ಅವಚಂ. ೮೨-೩೬೮) ; ಕಡೆಯ ಹೊಲದ ತೆವರಿನಲ್ಲಿ ಮರ ತಾಗಿ ನೇಗಿಲು ಮುಱಿಯಿತ್ತು (ಮೋಳಿಮಾ. ೧೩೮-೩೧); ಗುರುಸೇವೆ ಕೈಕೊಂಡು ಹಿರಿದಾಗಿ ಮಾಡದಲೆ ಹರಿದೇಱಿ ಮುಕ್ತಿ ಪಡೆಯುವಡೆ ಅದು ತಾನು ಹಿರಿದಾದ ತೆವರೆ (ಸರ್ವಜ್ಞ. ೫೬) ; ಸಂದಿಗೊಂದಿಯೊಳೆ ಹಿಡಿಸದೆ ತುಂಬಿದೆ ತಗ್ಗಿಲ್ಲ ತೆವರಿಲ್ಲ (ಸಹೀಗೀ. ೨೪-೪೧೯) ೨. ಗದ್ದೆಗೆ ತೆವರು ಗಟ್ಟಿಯಿರಬೇಕು (ಸಂಸ್ಕಾರ. ೨೬) ; ನಮ್ಮ ಎರೆಹೊಲದ ತೆವರಿನಲ್ಲಿ ಒಂದು ಒಳ್ಳೆ ಹಲಸಿನ ಮರವಿದೆ (ಬೆಂಗಾಳ್ಯ. ೩೫). [ ? ]

**ತೆಮರು₁** 'ತೆಮರ್₁' ನೋ.

**ತೆಮರು₂** 'ತೆಮರ್₂' ನೋ.

**ತೆಮಲಿಸು** (ಕ್ರಿ). ನೂಕು; ತಳ್ಳು; ಕದಲಿಸು : ಪಱಿಯುಂದದಿ ನಿಂದಿಹನ ಮತ್ಸರು ತೆಮಲಿಪರೆಂದು ಬಳಲಿಕೆ ಸಾರಿದರು ಮೊದಲಿಂದ ಸೆಣಸಿದ ಖಚರಸಂತತಿಯೂ (ಜಿನಭಾ. ೫೨-೩೬).

[ತೆಮಲು (<ತೆಮೞ್) + – ಇಸು₃]

**ತೆಮಲು** 'ತೆಮೞ್' ನೋ.

**ತೆಮಳ್** 'ತೆಮೞ್' ನೋ.

**ತೆಮಳು** 'ತೆಮೞ್' ನೋ.

**ತೆಮಳ್ಚು, ತೆವರ್ಚು** (ಕ್ರಿ). = ತೆಮಲಿಸು : ಮೇಲುದಂ ತೆಮಳ್ಚಿ ಕುಚಮಂಡಳಂ ಕಣಿಯೆ . . . ಘಟ್ಟಿವಳ್ತಿಯರದೇಂ ಮನಂಗೊಂಡರೋ (ಧರ್ಮನಾ. ೨-೮೪). **ತೆವರ್ಚು** : ಮೇಲುದಂ ತೆವರ್ಚುತ ಸುಯ್ಯುದ್ದ ಬಿನ್ನಣದಿಂ ಬೇಟಮಂ ಬೀರಿ ಮುಂಬರಿವವಳ (ರುಕ್ಮಾಂಗ. ೬-೬೧).

[ತೆಮಳ್ (<ತೆಮೞ್) + – ಚು₁]

**ತೆಮಳ್ದು** 'ತೆಮೞ್ದು' ನೋ.

△**ತೆಮಱು** 'ತೆಮರ್₁' ನೋ.

**ತೆಮೞ್, ತೆಮಲು, ತೆಮಳ್, ತೆವಂಳಂ, ತೆವಳ್, ತೆವಳು** (ಕ್ರಿ). ೧. ಸೇರು ; ಕೂಡು ; ಬೆಂಬಲಿಸು : ಅಮಳರುಮಾ ಬೇಳ್ವೆಯ ಮಾತಂ ತೆಮೞೆ [ಪಾಠಾಂ. ತಮಗೆ] ನುಡಿದೊಡೆಮ್ಮ ಗಂಡವಾತುಮಳುಂಬಾ ಭೃತಮಕ್ಕುಮೆಂದು (ಪಂಪಭಾ. ೬-೨೬ ವ). ೨. ತಿರುಗು ; ಹೊರಳು : ತೆಮೞ್ವನ್ನೆಗಂ ನುಣ್ಪಂ ಕಿಣ್ಪುಮನೊಳಕೊಂಡು (ಶಾಂತಿಪು. ೯-೧೪೩ ವ). ೩. ಹೊಟ್ಟೆ ಮೇಲೆ ಭಾರ ಹಾಕಿ ಮುಂದೆ ಸರಿ ; ದೇಕು : ಏೞು ದಿವಸದೊಳ್ ತೆಮೞ್ದು ಪೆಱವೇೞುದಿವಸಕ್ಕೆ ತಳರ್ನಡೆ ನಡೆದುಂ (ಆದಿಪು. ೫-೪೦ ವ) ; ತಡೆಯದೆ ಕುಳ್ಳಿರಲ್ ತುರಿಪದಿಂ ತೆಮೞಲ್ ತದನಂತರಂ ತಳರ್ನಡೆ ನಡೆಯಲ್ (ಶಾಂತಿಪು. ೬-೧೦೬). ೪. ಮಾಸು : ಮಂಕಾಗು; ಮಸುಳು: ಮುಟ್ಟೆ ಮಾಡೆ ಸುಕರತ್ವಂ ತೆಮೞ್ವುದೆಂದು ಮನೋಜಾತನನಂಗನಾಗಿ ಮನದಿಂದಂ ಮಾಡಿದಂ ಪೆಣ್ಣ ವಿದ್ದಮಂ (ಅನಂಪು. ೨-೧೩). ೫. ಸಮನಾಗಿರು: ಮಟ್ಟಸವಾಗಿರು: ತೆಮೞ್ದೆ ಕುಱಿಯಿಲ್ಲದೆಯುಂ ಸುಮನೋಹರಮಪ್ಪ ಕಕ್ಷಮತಿಶುಭದಂಗಳ್ (ಲೋಕೋಪ. ೧೧-೦೦). **ತೆಮಲು** : ೬. ಅಲುಗು; ಕದಲು; ಜರುಗಂ: ಜೈನರು ಬಸದಿಗಂ ಪೋಗಿ ಪೇಮಗದಗಳ ಬೀಗಮಂ ತೆಗೆದು ನೂಂಕಲುದ್ಯಾಮದಿಂ ತೆಮಲದಿರಲವರು ವಾದಯ್ಯನಿಂದಾದ ವಿಘ್ನವಿದೆನ್ನಲು (ಪ್ರಭುಪು. ೮-೫೦) **ತೆಮಳ್** : ೩. ಮರಳಿ ಕೆಲಬರ್ ಕಾಲ್ಗಳೊಡೆದು ಮುಂದಣ್ಗಡಿಯನಿರದಿಡಲ್ಕಾಱದಂಬಳ್ಗಳಿಂ ತೆಮಳ್ದು ಭರದೆ ಬರ್ಪರ್ ಕೆಲರ್ (ಅರಾಜ. ೪-೩೩). ಶ್ಲಿ 'ತೆಮಳ್ಚು' ಪರಾ. ೭. ಹಿಮ್ಮೆಟ್ಟು ; ದೂರವಾಗು : ಮದಂಭ್ರಿಯುಂ ಸಮರ್ಚಿಪುದದಱಿಂ ತೆಮಳ್ಗುಂ ದ್ವಿಜಘ್ನದೋಷಂ (ಹಸ್ತಿಮ. ೯-೨೪) **ತೆಮಳು** : ೮. ನಡೆಸು ; ಚಲಿಸುವಂತೆ ಮಾಡು : ಸುಮತಿಸಾಗರ ಮುಂದೆ ಭರದಿ ವಿಮಾನವ ತೆಮಳಿಕೊಂಡೆಯ್ದಿ ವಾರ್ತೆಯನು ನಮಿರಾಜಗಱುಹೆ (ಭರಚ. ೩೮-೮). **ತೆವಳ್** : ೩. ಕೋಲ್ಗಳಂ ತೊಡೆಗಳಂ ಕತ್ತರಿಸೆ ನಾದಿದುವು ದೂಳ್ಗಳರುಣಾಂಬುವಿಂದೆದೆಯೊಳ್ತೆವಳ್ದ ಹಿಯುಪೋಲ್ಗಂಡುಗಲಿ ಧನಂಜಯನ ಸಮ್ಮುಖಕೆ ಮೇಲ್ವಾಯ್ದನು (ಜೈಮಿಭಾ. ೧೪-೦೬) : ಗಱಿಗೆಯನಿತು ತೆವಳಲಿರ್ಪ ಉಸಿರಿಗಳಾ ಸಾಹಸಮ್ (ಬದ್ಧಪ್ರ. ೨೯-೬೧೯). **ತೆವಳು** : ೩. ಕರಯುಗದೊಳೆರಡು ಕೈಮಣೆವಿಡಿದುಕೊಂಡು ಪುರವರದ ಬೀದಿಯೊಳೊರ್ವ ಕುಂಭಕಾರಂ ತೆವ[ಪಾಠಾಂ. ಮ]ಳಿ ಬರುತಿರಲ್ಕೆ (ಸಮ್ಯಕಾ. ೨-೪೨) ; ಮೆಲ್ಲನೆ ತೆವಳಿ ಆಡುವ ಕಿಱುವರೆಯದಂದಂಗಳದೊಳಾಡುತಲು ಪರಿಯಿರಲು (ಸಾಳ್ವಭಾ. ೨೧-೪೩) ; ಕಾಲೊಡೆದು ಕೆಲವು ದೂರ ತೆವಳುತ್ತ ಪೊರಳುತ್ತ ರಕ್ತಂ ಸುರಿವುತಾ ರಮಣಿ ಬರುತ್ತಿರಲ್ (ಪಾಸೋಪು. ೪-೧೪೮) : ಇರದಮೃತ ಕಾಂತೆಯುರಿ ಕೈವೀಸಿ ಕರೆವಂತೆ ಕರವ ಮುಂದಿಟ್ಟಲ್ಲಿ ತೆವಳುವಳು ಬಳಲುವಳು (ಸಿದ್ಧಕಾ. ೫-೩೦); ಕೊನೆಯ ನಾಲ್ಕೈದು ಮೈಲಿಗಳನ್ನಂತೂ ತೆವಳಿಕೊಂಡು ಬಂದ ಹಾಗೇ ಬಂದಿದ್ದ (ಅನಾಥ. ೨೬೩) ; ಉತ್ತು ಬರುವ ಮಗ ತೆವಳಿ ಬಂದರೆ ಹೆತ್ತ ತಾಯಿಯ ಪುಣ್ಯ (ಗಾದ). ೯. ನಿಧಾನವಾಗು; ಮಂದಗತಿಯಾಗು : ದೈಹಿಕ ಶಿಕ್ಷಣಕ್ಕೆ ನೆರವಾಗುವ ಚಟುವಟಿಕೆ ತೆವಳುವುದು (ಶಿಕ್ಷದ. ೭೮).

[ದೇ.॥ ತಮಿ. ತವೞ್, ತಿವಳ್; ಮಲ. ತವಿೞು; ತೆಲು. ತೆಮಲು]

**ತೆಮೞ್ದು, ತೆಮಳ್ದು** (ಕ್ರಿ). ೧. ಒಟ್ಟುಮಾಡು ; ಒಂದುಗೂಡಿಸು ; ಕೂಡಿಸು ; ಸಂಗ್ರಹಿಸು : ತುಮುಳಯುದ್ಧದೊಳಿಂತ ನಿರಂತರಂ ತೆಮೞ್ದು ಕಾದಲೆ ನಮ್ಮಯ ಸತ್ಪರಾಕ್ರಮಮನೆಂತಱಿಗುಂ ಜಗಮಂತಱಿಂ ಕ್ರಮದಿನೊರ್ವರೊಳೊರ್ವರೆ ಕಾದುವಂ (ನೇಮಿಪು. ೧೨-೨); ವಿರಹಾನಲನಾಳಿಯರೊಂದಹರ್ನಿಶಂ ತಳಿಯೆ ತೆಮೞ್ದು [ಪಾಠಾಂ. ದುರ್] ಪೀರ್ದ ಪಱನೀರ್ಗಳನಟ್ಟಸಲಾಱದೆಯ್ದೆ ಕಂಟಳಿಸಿ ಮುಗುಳ್ಚಿದಪ್ಪುದೆನಲುಮ್ಮನೆ ಕಾಮಿನಿಯೇಂ ಬೆಮರ್ತಳೋ (ಲೀಲಾವ. ೧೨-೩೮) : ಮೂಲೋಕಮುಮಂ ತನ್ನೊಂದು ಜೋಗದ ಜಾಣ್ಮೆಯ ಮೈಮೆಯ ಬಲ್ಮೆಯಿನೊರ್ವೊದಲೊಳೆ ತೆಮೞ್ದು ಬಿಚ್ಚಱಿಸಿ ನೋಡಲ್ (ರಾಮಾಶ್ವ. ೬೯-೧೬). ೨. ಬಳಿದುಕೊಳ್ಳು ; ಪೂಸು ; ಹಚ್ಚಿಕೊಳ್ಳು : ಕುಮುದದ ಕೇಸರರಜಮಂ ತೆಮಳ್ದು ತಱಿಕೈಸಿ (ಲೀಲಾವ. ೫-೮೫). **ತೆಮಳ್ದು** : ೧. "ತೆಮಳ್ದು – ಚಯನೇ (ಕೂಡಿ ಹಾಕು) (ಶಮುಧಾ)". ೩. ಒಟ್ಟಾಗು ; ಒಂದುಗೂಡು : ತಾಳ್ದಸುರಾರಿ ಭೀತಿಯನೆಳ್ದೋಡಿದನಿಂದ್ರನಖಿಳದೇವ ಪ್ರತತಿ ತೆಮಳ್ದುದು (ವೀರವಿ. ೧೦-೮).

**ತೆಮೞ್ದುಕೊಳ್** = ೧. ಒಟ್ಟುಮಾಡು ; ಒಂದುಗೂಡಿಸು : ಜಾತರೂಪಧರನಾಗಿ ತನ್ನ ಪಱಿದು ಬಿಸುಟ ಸಹಸ್ರಕುಂತಳಂಗಳಂ ತನ್ನ ತಳದೊಳ್ ತೆಮೞ್ದುಕೊಂಡು ತುಂಬಿಯ ಬಂಬಲ್ಗಳಂ ಕೆಂದಾವರೆಯರಲ್ಗಳೊಳ್ ಪುದಿದುಯ್ವಂತುಯ್ದು (ಆದಿಪು. ೨-೩೯ ವ) ; ತಾನುಗುಱುತ್ತು ವಿರ್ಪ ಪೊಸಗಂಪುಮನಿತ್ತ ತೆಮೞ್ದುಕೊಂಡು ಮಂದಾನಿಳನುಯ್ಯುತಿರ್ಪ

ತನಿಗಂಪುವುನಿತ್ತ . . . ಗಡಂ ಪ್ರಫುಲ್ಲಮಲ್ಲೀನವಪುಷ್ಪಮೋಗರದ ಕಂಪು ಗಳಾಗರಮಾಯ್ತು ಸುಗ್ಗಿಯೊಳ್ (ಚಂದ್ರಪ್ರ. ೭-೪೯). ೨. ಬಳಿದು ಕೊಳ್ಳು; ಪೂಸು; ಲೇಪಿಸಿಕೊಳ್ಳು : ಕದಡುತ್ತುಂ ಮಣಲಂ ತೆಮಟ್ಟಿ ಕೊಳುತುಂ ಭೂರೇಣುವಂ . . . ಪೊಕ್ಕುದು ಬೀಡುಂ ಲಯಕಾಲಕಾಲ ವಿಚಲದ್ವೀಮಾರುತಂ ಮಾರುತಂ (ಕಾವ್ಯಾವ. ೪೦೯). [ <ತೆಮಟ್ ]

**ತೆಮ್ಮ** 'ತೊಂಬೆ$_1$' ನೋ.

**ತೆಮ್ಮಲ್, ತೆಮ್ಮಲು** (ನಾ). ಗುಂಪು; ಸಮೂಹ: "ಬಂಬಲ್, ತುಱುಗಲ್ . . . ತೆಮ್ಮಲ್, ಗುಮ್ಮಿ, ಗೊಂದಣ (ಉಂಡಲ್) ಈ ೪೦ ಸಮೂಹಂ" (ಕಶಸಾ. ೫೯-೨೨೨); "ತಂಡಂ ತೆರಳ್ಕೆ . . . ತೆಮ್ಮಲ್ . . . ಮಂಡಿತರಿಂ ಗಡಣ ಮಂಗಡಂ ಕಿಕ್ಕಿಂದಂ" (ಕವಿಕಂ. ೧೦೬). **ತೆಮ್ಮಲು**: ತೆಮ್ಮಲಿನ ತಿಂಡಿಗಳ್ ಹಸುರಲೆಯು ತಟ್ಟೆ (ಕಾಲೂರ. ೬೩-೦೦೯). "ಸಂಗ್ರಹ" (ಕಾಲೂರ. ಕೋಶ). [ ತೆಮ್ಮ (<ತೊಂಬೆ$_1$) + –ಅಲ್$_2$ ]

**ತೆಮ್ಮಲು** 'ತೆಮ್ಮಲ್' ನೋ.

**ತೆಮ್ಮೂಡಲು** 'ತೆಂ' ಪರಾ.

**ತೆಮ್ಮೂಡು** 'ತೆಂ' ಪರಾ.

**ತೆಮ್ಮೆ** 'ತೊಂಬೆ$_1$' ನೋ.

**ತೆಮ್ವೊಲ** (ನಾ). ದಕ್ಷಿಣ ದಿಕ್ಕಿನಲ್ಲಿರುವ ಹೊಲ : ಬಸದಿಗೆ ಪಡುವಣ ತೆಜ್ಜತೋಣ್ಬವುಂ ತೆಮ್ವೊಲದೊಳ್ನಾಲ್ಗೊಳಿವೆಡೆ ಪಳ್ಳ ಕಳನಿ (ಎಕ, X, ಕೋಲಾರ. ೯೦-೯೩ : 903). 'ತೆಂಬಾಲ' ಪರಾ. [ ತೆಂ + ಪೊಲ ]

**ತೆಯ್** 'ತೇ$_1$' ನೋ.

**ತೆಯಲಯ್ಯಜೂಬು** (ನಾ). ಒಬ್ಬಾತನ ಹೆಸರು : ತೆಯಲಯ್ಯಜೂಬು ಕಾಲಂ ಕಟ್ಟು . . . ಎಱೆಯ[ರ]ಸಂಗೆ ಬಿಟ್ಟಗ್ರಹಾರ (ಎಕ. I, ೯೦-೧ ; 10ನೆಯ ಶಕ). . [ ? ]

**ತೆಯಲ್ಲಿ** (ನಾ). ಒಂದು ಬಗೆಯ ಆಯುಧ (?) : ಖಡಲ್ಲಿ ತೆಯಲ್ಲಿ ಬಿಲ್ಲು ನಾರಾಚ ಗದೆ . . . ಚಿಲುತಲಿ ಮೊದಲಾದ ಬತ್ತೀಶಾಯುಧಾ ಶಕ್ತಿಸಮರ್ಥಕರಾದಾ (ಎಕ. XVI, ಗುಬ್ಬಿ. ೭೪-೨೦ ; 1776). [ ? ]

**ತೆರ$_1$** 'ತೆಱ$_1$' ನೋ.

**ತೆರ$_2$** 'ತೆಱೆ$_3$' ನೋ.

**ತೆರಂ** 'ತೆಱಂ' ನೋ.

**ತೆರಂಗುಣಿ** (ಕ್ರಿ). ಚೆನ್ನಾಗಿ ಕುಣಿ ; ಅತಿಶಯವಾಗಿ ನರ್ತಿಸು : ಎನಗಿದಿ ಎಂತೆ ಮೆಯ್ಯುಡುಕಪೋಪೊ ನವಿಗುರ್ಡಿಗಟ್ಟುಹಂ ಚಿಳಿಲ್ಲನೆ ಬೆಮರಶ್ರು ಮಾಲೆ ಬಗೆದೇಂಕು ತೆರಂಗುಣಿವಾಸೆ ಪೊಂಕಮೇಕೆನಿತೊ (ಸಂಸಪ. ೨೦-೩೩). [ ತೆರಂ (<ತೆಱಂ) + ಕುಣಿ$_1$ ]

**ತೆರಂಟು, ತೆರಟು$_1$** (ಕ್ರಿ). ವಧೂವರರಿಗೆ ಉಡುಗೊರೆಯನ್ನು ಕೊಡು; ಮುಯ್ಯಿಕೊಡು: "ತೆರಂಟುನಿವಸನೋದ್ವಹನೇ (ಮುಯ್ಯ ಸೀರೆ ಕೊಡು) (ಶಮುಧಾ); ನಿತ್ಯ ಬಿಂದುಗೆ–ಚೆಡಂಗು ... ತೆರಂಟು, ಸೀಂಟು (ಶಮುದ. ೩೬ ಪ್ರಯೋ). **ತೆರಟು$_1$**: "ತೆರಟು–ನಿವಸನೋದ್ವಹನೇ" (ಶಮುಧಾ. ನ). 'ತೆಲ್ಲಂಟ' ಪರಾ. [ <ತೆಱು$_1$ ]

**ತೆರಂಬಿಡು** (ಕ್ರಿ) ತೆರವಾಗಿ ಬಿಡು ; ಖಾಲಿ ಮಾಡು: ಅವು ಮುನ್ನ ತಮಗಿರ್ದ ಗೌರವಕ್ಕೆಳ್ಳು ನೀರ್ ಕೊಟ್ಟು ದಿಕ್ಕುಗೆಟ್ಟೋಡುವುವು, ಬಾಳ್ ಭೂಮಿ ಸರ್ವಮುಂ ವೈರಿಗೆ ತೆರಂಬಿಟ್ಟು (ಶ್ರೀರಾಮಾ. ೬೪೩-೧೪೪). [ ತೆರ$_2$ (<ತೆಱೆ$_3$) + ಬಿಡು$_1$ ]

**ತೆರಕೊಡು** 'ತೆಱಕೊಡು' ನೋ.

**ತೆರಗಾಲ** (ನಾ). ಒಂದು ಪ್ರದೇಶದ ಹೆಸರು (?): ಪೆರ್ಮ್ಮಾಡಿಗಾವುಣ್ಡನ ಪೆಣ್ಣಾತಿ ಚಾವುಣ್ಡಬ್ಬೆ ಇ ದೇಗುಲವ ಮಾಡಿಸಿ ತೆರಗಾಲಂ ದೇವಟ್ಟ ಬಿಟ್ಟಳ್ (ಮೈಆರಿ. ೧೯೩೦, ೦೪-೯ : ಸು. 870). [ ? ]

**ತೆರಟು$_1$** 'ತೆರಂಟು' ನೋ.

**ತೆರಟು$_2$** (ಕ್ರಿ). ೧. ದುಂಡಗೆ ಮಾಡು ; ಸಂತ್ಸು ; ಸಂರುಳಿ ಮಾಡು. ೨. ಸೇರಿಸು : ಕೂಡಿಸು ; ಹೊಂದಿಸು : (೬). [ ದೇ.॥ ತಮಿ. ಮಲ. ತಿರಟ್ಟು ]

**ತೆರಟು$_3$** (ನಾ). ಹಿಂದಕ್ಕೆ ಬೀಳುವಿಕೆ ; ಹಿಂದಿರುಗುವಿಕೆ ; ಕೆಳಗೆ ಬೀಳುವಿಕೆ (?) : ಮುಗ್ಗಿಗಳ ಮಿಗೆ ಕೂಡಿ ಕಳೆದರೆ ಸಗ್ಗವಹುದೇ ಮುಂದೆ ಭಾಗಿಸಿಯುಗ್ಗಡದ ಘನವರ್ಗಮೂಲವನಱಿದೊಡೀ ಭವದ ಹಗ್ಗ ಹರಿದೇಱುವನೆ ಮುಕ್ತಿಯ ದುಗ್ಗವನು ಕೇಳಯ್ಯ ತೆರಟನ ಬುಗ್ಗಿಯುಲ್ಲದ ಬರೆದೊಡಂತ್ಯದೊಳಿಲ್ಲ ಸುಖವೆಂದ (ಪ್ರಹ್ಲಾದ. ೭-೧೯) ; "ಕಷ್ಟ" (ಪ್ರಹ್ಲಾದ. ಕೋಶ). [ ? ]

**ತೆರಟುವಾಲ್** (ನಾ). ಕುದಿಸಿ ಗಟ್ಟಿಗೊಳಿಸಿದ ಹಾಲು : ಬಟ್ಟವಾಲ್ ತೆರಟು[ಪಾಠಾಂ. ಡು]ವಾಲ್ ಚಿಲುವಾಲುವೆಸರನದಕಿಟ್ಟು ಪಸಮಾಡು ವುದು (ಸೂಪಶಾ. ೨-೩). [ ←ತಮಿ. ತಿರಟ್ಟುಪ್ಪಾಲ್ ]

**ತೆರಣ$_1$** 'ತೆರಳಿ' ನೋ.

**ತೆರಣ$_2$** 'ತೆರಳ್ಕೆ' ನೋ.

**ತೆರಣ$_3$** (ನಾ). ಒಂದು ಬಗೆಯ ಸಸ್ಯ : ಪತ್ರರಾಣಿಕೆ. ನಲ್ಲ, ಹದ್ದರಣೆ, ಬಿಳಚಿ, ತೆರಣ, ಕಕೋರ್ಲ (ಮೃಚಿಗಿ. ೬೩-೦೨೬೯). [ ? ]

**ತೆರಣಗಟ್ಟು** (ಕ್ರಿ). ಒಟ್ಟುಗೂಡಿಸಿ ಕಟ್ಟು ; ಉಂಡೆಗಟ್ಟು : ಕಂಚಿನ ಕರಡಗೆಯೊಳಗೆ ಕಂಬಿಯ ತೆರಣಗಟ್ಟಿ ನಿಂತಾಳು (ಅವಕಂ. ೨೯೭-೦೩೦೦). [ ತೆರಣ$_2$ (< ತೆರಳ್ಕೆ) + ಕಟ್ಟು$_1$ ]

**ತೆರಣೆ** 'ತೆರಳಿ' ನೋ.

**ತೆರತವಳಿ** (ನಾ). ಒಂದು ಬಗೆಯ ಸೀರೆ : ಕುಂಬಳಗಂಟಿ ತೆರತ [ಪಾಠಾಂ. ಥ] ವಳಿ ತಳುಗಾವಿಯುಂ ಬಿಳಿದಿನ ಸೀರೆ ಬರಹ ನಿಂಬೆಯ ಕಾಯ ಪೊಪ್ಪಳಿ ಕರ್ಕವಾಡಗಳೆಂಬ ಸೀರೆಗಳೊಪ್ಪಿ ಮೆಱೆಯೆ (ಅಮುಸಾಂ. ೪-೦೯). [ ? + ಪಳಿ$_6$ (< ಪಟ್ಟಿ) ]

**ತೆರಪಿಚು** (ಕ್ರಿ). ತೆರವುಮಾಡು (?) : [ ಕೊ ] ದಕುಣೆಯ ಸ್ಥಳದ ಸೇನ ಬೋವನೂ ಕರಸಿ ಆತನ ಮಹಪ್ರಮಾಣಿನಲೂ ನೇಮಿಚಂದ್ರದೇವರೂ ಮಾಡಿಕೊಂಡ ಬಾಳ ತೆರಪಿಚಿ ಪಾಲಿಸಿದ ವಿವರ (ಕಇ. III, ೧೧-೦೮ : 1542). [ ತೆರಪು (<ತೆಱಪು) + –ಚು$_1$ ]

**ತೆರಪು** 'ತೆಱಪು' ನೋ.

**ತೆರಪುಕೊಡು** 'ತೆಱಪುಗೊಡು' ನೋ.

**ತೆರಪುಗಾಣಿಸು** 'ತೆಱಪುಗಾಣಿಸು' ನೋ.

**ತೆರಪುಗೆಯ್** (ಕ್ರಿ). ಹೋಗಲಾಡಿಸು ; ಕಳೆ ; ನಿವಾರಿಸು : ಭಾಸ್ಕರ ಬಾಣಮುಂ ತೆಗೆದು ಪೂಡಚ್ಚು ಖಳನ ಕೃತತಿಮಿರಮುಂ ತೆರಪುಗೆಯ್ದು ಹರಿದುದು ಕತ್ತಲೆಯು (ನವಮೋ. ೩೨-೨೦). [ ತೆರಪು ( < ತೆಱಪು ) + ಕೆಯ್$_1$ ]

**ತೆರಪುಗೊಡು** 'ತೆಱಪುಗೊಡು' ನೋ.

**ತೆರಪುಮೊಳೆ** (ನಾ). ಅಕ್ಷರದ ಮೊಳೆಗಳನ್ನು ಜೋಡಿಸುವಾಗ ಬಿಡುವಿ ನಲ್ಲಿ ಸೇರಿಸುವ ತಗ್ಗು ಮೊಳೆ : ಸೂಚೀ ಚಿಹ್ನೆಗಳು . . . ತೆರಪು ಮೊಳೆ ಗಳು . . . ಮತ್ತು ಸಂಯುಕ್ತಾಕ್ಷರಗಳೂ ಇರುತ್ತವೆ (ಮುದ್ರಕ. ೧೯). [ ತೆರಪು ( <ತೆಱಪು ) + ಮೊಳೆ$_2$ ]

**ತೆರವು$_1$** 'ತೆಱವು$_1$' ನೋ.

**ತೆರವು$_2$** 'ತೆಱವು$_2$' ನೋ.

**ತೆರವೆ** 'ತೆಱವೆ' ನೋ.

**ತೆರಸ** 'ತೇರಸ' ನೋ.

**ತೆರಸಿ** 'ತೇರಸಿ' ನೋ.

**ತೆರಸು** (ನಾ). ತೆರೆಯುವಿಕೆ ; ವಿಕಾಸ : ಕಣ್ದೆರೆಯು, ನಿನ್ನ ಕಣ್ಣಂದುವಿನಿ ವೆರಸಂ ಮರಸಡೆಸ್ನಲಿ ಎನ್ನು ! (ಗೀವಿಂ. ೫೦-೧೩).

[ ತೆರ$_1$ (< ತೆಜಿ$^3_1$) + – ಸು$_2$ ]

**ತೆರಹು$_1$** (ಕ್ರಿ). ಬಿಚ್ಚು ; ತೆರೆ : ಸರಸಿಗೆ ತೆರಹಿ ತೋರುವದು ಜಗವು ಹೃದಯುವ (ಉದ್ಯ್ಮಾರ. ೩೩-೬). [ ತೆರೆ$_1$ (< ತೆಜಿ$^3_1$ ) + – ಹು$_1$ ]

**ತೆರಹು$_2$** 'ತೆಱಪು' ನೋ.

**ತೆರಹು$_3$** (ನಾ). ಕಾಣಿಕೆ ; ಕಪ್ಪ ; ತೆರಿಗೆ : ತೆರಹುಗಳ ತತ್ತು ವರಪದ ಭಂಡಾರ ...ಂತು (ಎಕ. IX(S), ಕಾನಕಾ. ೬೩-೬ ; 17ನೆಯ ಶತ).

[ ತೆರ$_2$ (<ತೆಜಿ$^3_3$) + – ಹು$_2$ ]

**ತೆರಹುಗುಡು** 'ತೆಜಿಪುಗೊಡು' ನೋ.

**ತೆರಳ್**, ತೆರಳು (ಕ್ರಿ). ೧. ಹೋಗು ; ಚಲಿಸು ; ಸರಿ ; ನಡೆ : ದಿಗ್ಗಜಂ ದೆಸೆಯಿನತ್ತ ತೆರಳ್ದುವು (ಪಂಪಭಾ. ೧೧-೭೧) : ಎಸೆವ ನಭಸ್ಸರೋವರ ದೊಳುಣ್ಮೆ ಕೆಲಕ್ಕೆ ತೆರಳ್ದ ನೀಲಿಕಾಪ್ರಸರಮೊ . . . ಎಂದೆನಿಸಿತಂದು ಪುರಂದರಚಾಪವಿಭ್ರಮಂ (ಚಂದ್ರಪು. ೪-೫೦) : ಮಹಾಸಂಗರದೊಳೊಬ್ಬರ ನೊಬ್ಬರೊಪ್ಪಿಸಿ ತೆರಳಲಾಗದು (ಕುವ್ಯಾ.ದ್ರೋ. ೩-೭) : ಹಸಿವು ನೀರಡಿಕೆ ಸಂತಾಪವ ನೆಜಿ$^3$ ವಾರಿಸಿಕೊಂಡು ಬಲಗೂಡಿ ತೆರಳ್ದು (ಮೋಹತ. ೧೯-೬೦): ತೆರಳು, ತೆರಳುವೊಡಿನಿಯು ; ಪಥದಲಿ ನಿನಗೆ ಮಂಗಳವೊದಗಲಿ (ಭಾರವಿಂ. ೩೯೧). ೨. ಹರಿ ; ಪ್ರವಹಿಸು : ಕಡಲ್ ಕಡಲಂ ಮುಟ್ಟೆ ತೆರಳ್ವ ನೆತ್ತರ ಪೊನಲ್ ಕಣ್ಗೊಂಡುದುಗ್ರಾಜಿಯೊಳ್ (ಪಂಪಭಾ. ೧೦-೯೧) ; ಕುರವದಿಂ ಕೂಡೆ ನೆತ್ತರ್ತೆರಳ್ದಣ್ಮುವಿನಂ ಮೆಯ್ಯೆಲ್ಲಮಂ ಜರ್ಜರಿಸಿ(ಸುಕುಮಾ. ೭-೩೫); ನೆಲಸನಿತುಂ ತೆರಳ್ದಡಸಿ ಬಿಟ್ಟೊಣೆಯಿಂ ತವದೊಂದ ಮಾಟ್ಕೆಯಿಂ ನೆಲೆ ನೆಲೆವೆರ್ಚೆ ಮುಂಪರಿವ ಪೆರ್ದೊಜಿ$^3$ಗಳ್ (ಕಾವ್ಯಸಾ. ೪೬೩). ೩. ವ್ಯಾಪಿಸು; ಆವರಿಸು : ದಿನಕರಕರನಿಕರಂಗಳ್ ಘನವಿವರಪ್ರಸರಮಾಗಿಯುಂ ತಮ್ಮಂ ಕಂಡನಿತಜಿ$^3$ೊಳೆ ತೆರಳ್ದಿನ್ನ ಮನೋಗತಧ್ವಾಂತಬಂಧಮುಳಜಿತ್ತೆಲ್ಲಂ (ಕವಿರಾ ೨-೬೭); ಸಟ್ಟೆಕೋಲ ಬಜಿ$^3$ವಿಡಿದೆತ್ತಂ ಸುರಿದುವವಂದಿರ ಮುಳಿಸಿನ ತೆರಳ್ದ ದಳ್ಳುರಿಯನಿಜಿ$^3$ಸಿ ನವರುಧಿರಂಗಳ್ (ಪಂಪಭಾ. ೧೩-೧೪೮). ೪. ಎಬ್ಬಿಸು ; ಹೊಮ್ಮಿಸು : ತೆರಳ್ದ ಸುರಭೂರುಹಪ್ರಸವಧೂಳಿಯುಂ ...ನಯದಿನಾಡಿಸಿತ್ತಾಗಳಪ್ಸರಃಪ್ರಕರದೊಳ್ಗುರುಳ್ಗಳನದೊಂದು ಮಂದಾನಿಳಂ (ಆದಿಪು. ೭-೬೬). ೫. ಮೇಲೇಳು; ಚಿಮ್ಮು ; ನೆಗೆ: ಕರಿಕರಶೀಕರಮದ ಜಳತುರಂಗಲಾಲಾಂಬುಸೇಕದಿಂದಜಿ$^3$ದುಜಿ$^3$ದಿರ್ದ ರಜಂ ನರೇಂದ್ರಚಾಮರ ಮರುದಭಿಹತಿಯಿಂ ತೆರಳ್ದು ತೂಳ್ದತ್ತಾಗಳ್ (ಆದಿಪು. ೧೧-೩೮). ೬. ಒಟ್ಟುಗೂಡು ; ಒಂದಾಗು : ಅಡಿಯೊಳ್ ಪಾಸಿದ ಚರ್ಮರತ್ನಪಟಮುಂ ತಚ್ಛತ್ರರತ್ನಂ ಬೆಡಂಗಿಡಿದೋರಂತಿರೆ ಮುಟ್ಟೆ ಪೊಲ್ದ ತೆಜಿದಿಂದಿಂಬಾಗೆ ತನ್ಮಧ್ಯದೊಳ್ಸೊಡರಿರ್ಪಂತಿರೆ ಚಕ್ರರತ್ನಮದಜಿ$^3$ೊಳ್ನಿರ್ಬಾಧಮಿರ್ದತ್ತು ಪೆರ್ವಡೆ ಪಾರಾಶಿಯೊಳಿರ್ದ ಭೈತ್ರದೊಳಗಂದೆತ್ತಂ ತೆರಳ್ದಿರ್ದಪೊಲ್ (ಆದಿಪು. ೧೩-೬೦): ತಳೆದರ್ದ ಕುಳಾಯದಿಂ ಬಿದಿರ್ದಜಿ$^3$ಂಕೆಯ ನೀರ್ವನಿಯುಂ ತೆರಳ್ದ ತುಪ್ಪುೞನೊನೆದಂಟಿ ಚಂಚುಪುಟದಿಂ . . . ಪಕ್ಕಿಗಳ್ ಮರಂಗಳ ತುದಿಗೋಡ ಮೇಲೆ ದನಿಗೆಯ್ಯುತುಮಿರ್ದುವು (ಜಗವಿ. ೧೪-೧೦). ೭. ಅಲುಗು ; ಅಲ್ಲಾಡು : ಮಲಯಾನಿಲನೂದೆ ತೆರಳ್ವ ಚೂತಪಲ್ಲವದ ತೆರಳ್ಕೆ (ಪಂಪಭಾ. ೩-೧೪). ೮. ಹಿಮ್ಮೆಟ್ಟು ; ಹಿಂಜರಿ ; ಹೆದರು : ಬಿಸಿಲಂ ಬೆಳ್ದಿಂಗಳುಮಂ ಪಸರಿಸೆ ಕಟ್ಟಲೆ ತೆರಳ್ದು ತೂಳ್ದೊಡೆ (ಆದಿಪು. ೧೩-೫೦) : ಸಂತಾಪಭೀತಿಯಿಂ ತನುಕಾಂತಿ ತೆರಳ್ದೋಡಿದಪುದೆನಲ್ (ಕಾದಂಬ. ೨೩೫) : ನಿದಾಘದ ದೀಪ್ತಿವರ್ತಿಯೊಳ್ ಕಾಸೆ ತೆರಳ್ದ ಪಿಂಜರಿಯ ಪೋಲ್ ಕಿಸುಸಂಜೆ ತೆರಳ್ದಿನಂ ಪಟಂಗಾಸಿನ ಪೊನ್ನಗಂಟೆಯುಪೊಲೊಪ್ಪಿ [illegible]ಂಡಲುಂ (ಅಜಿಪು. ೬-೭೦) ; ಕರಿ ಕೆಡೆಯೆ ಕಾಲಿನಲಿ ಜೋಂದರು ತೆರಳದೆಚ್ಚಾಡಿದರು (ಕುವ್ಯಾ.ಕ. ೧೫-೨೮). ೯. ಮುರಂಟಂ ; ಸಂಕುಗಟ್ಟು : ಮುಸು ಮುತ್ತಂತೆ ತೆರಳ್ದ ತನ್ನ ಮೊಗಮುಂ ಕಂಡಳ್ಕನೋ ಕೂಡೆ ಜೋಲ್ದು ಸಡಿಲ್ದಿರ್ದೊಡಲಳ್ಳೆಜೊಳ್ಳೆತನಮುಂ ಮೇಣಾಕ್ಕಣನೋ (ಆದಿಪು. ೨-೪೫) : ಭೀಮಸೇನನ ಗದಾಘಾತದೊಳೂರು ಭಂಗಮುಂ ಪದಘಾತದೊಳ್ ಮಕುಟಭಂಗಮುಮಾಗೆ ಸುರುಳ್ದು ತೆರಳ್ದು ಸುಯೋಧನನಿರೆ (ಗದಾಯು. ೯-೧೬ ವ). **ತೆರಳು** : ೧. ಹೈಮವತಿ ಕೈಲಾಸ ಗಿರಿಗೆ ತೆರಳಿದಳು (ಸಿದ್ಧರಾ. ೧-೬೦) ; ಸರ್ವಾಭಿಸಾರ, ಸರ್ವೌಘ, ಸರ್ವ ಸನ್ನಹನ–ಎಲ್ಲಾ ಸೇನೆಯು ತೆರಳುವುದು (ನಾಚಿರಾ. ೬); ತೆರಳಿ ಮುಂದಕೆ ಹೋಗಬಾರದು ಮರಳಿ ಹಿಂದಕೆ ಬರಲು ಬಾರದು (ಬಸವು. ೪೦-೮) ; ಧನಂಜಯು ತೆರಳಿದನು ಪಾಳೆಯದ ಪಥವಿಡಿದು (ಕುವ್ಯಾ.ಕ. ೧೪-೩೨) ; ಸರಸಿಜಗಂಧಿಯು ದಿವ್ಯಾಂಗ ಲಾವಣ್ಯಶರಧಿಯೊಳ್ನಿರವಿಗರಕ್ಷಿ ವರ ಮೀನುಗಳು ನೆಜಿ$^3$ ಪೊರಳುತ ತೆರಳುತ ಮರಳಿ ಮುಳುಗುತೊಪ್ಪಿದುವು (ಕಂನವಿ. ೯-೯೫). ೨. ಕಣ್ಗಳಿಂ ಶೋಕಜಲಬಿಂದು ತೆರಳೆ . . . ಗದುಗದಿಸಿ ಬಿಕ್ಕುತೆ ಬಿದ್ದು (ಬಸರ. ೫-೧೯). ೮. ಅರಸನಂ ಕಡಿಸಿ ಹುಸಿ ತೋಜಿ$^3$ದಡೆನಗವಂ ತೆರಳುವವನೇ (ಹವಕಾ. ೯-೧೭) : ರವಿಯ ಕೈ ಕತ್ತಲೆಯ ಹೊರಳಿಯ ತಿವಿಗುಳಿಗೆ ತೆರಳುವುದೆ (ಕುವ್ಯಾ.ಕ. ೧೦-೪೬). ೯. ಒಳಗೆ ಮಂಚದ ಮೇಲೆ ನಡುಗುವ ತಲೆಯ ತೆರಳಿದ ಮೈಯ . . . ಚಲಿತ ವಚನದ ವೃದ್ಧರನು ತೋಜಿ$^3$ದನು (ಕುವ್ಯಾ.ಆ. ೧೫-೧೦). ೧೦. ಅಳಿಸಿ ಹೋಗು; ಇಲ್ಲವಾಗು: ಪೂರೆದ ದುಕೂಲವೊಂದಿನಿಸು ಮಾಸಿದೆ ಭಾಳದೊಳಿಟ್ಟ ಚಂದನಂ ತೆರಳಿದೆ (ದಶಕು. ೧೧-೨೧). ೧೧. ತೆಗೆ; ಕಳೆ; ಬಿಡಿಸು: ಹಿರಿದು ಪೊರೆಗಳನೊಂದನೊಂದಂ ತೆರಳಿ ಸುಲಿಯಲು ಬಾಳೆಯದು ತಾನೊರೆಯಲಿಲ್ಲದೆ ಮುನ್ನಿನಾಕೃತಿಯಿಲ್ಲದಿಪ್ಪವೊಲು (ಬಸವು. ೩೫-೩೮).

[ ದೇ. ‖ ತಮಿ. ತಿರಳ್ ; ತೆಲು. ತೆರಲು, ತೆಲ್ರ್ ]

**ತೆರಳಿ**, ತಿರುಳಿ$_2$, ತೆರಣಿ$_1$, ತೆರಣೆ, ತೆರಳೆ$_1$ (ನಾ). ೧. ಮಣ್ಣು, ಮಲ ಮೊದಲಾದುವುಗಳನ್ನು ಉಂಡೆಗಟ್ಟಿ ಸಾಗಿಸುವ ಒಂದು ಬಗೆಯ ಹುಳು : ಸ್ಪರ್ಶ ರಸ ಗಂಧ ರೂಪುಗಳೆಂಬೀ ನಾಲ್ಕುಮನಜೀವ . . . ಮಿಡುತ ತೆರಳಿ ಕೊಟ್ಟಾರಿಗಂ ಯೆಡೆವುಜಿಯೆಂದಿತ್ಯೇವಮಾದಿಗಳೊಳಂ (ಪಸಾರ. ೪೯). ೨. ತನ್ನ ಶ್ಲೇಷ್ಮದಿಂದ ತನ್ನ ಸುತ್ತಲೂ ಎಳೆಯನ್ನು ನೆಯ್ದು ಸುತ್ತಿಕೊಳ್ಳುವ ಒಂದು ಬಗೆಯ ಹುಳು ; ರೇಷ್ಮೆಹುಳು : ನಿಷ್ಕಾರಣಂ ತೆರಳಿಯ ಪುಜಿವಿನಂತೆ ನಿನ್ನಂ ನೀನೆ ದುಷ್ಪರಿಣಾಮದಿಂ ಸುತ್ತಿಕೊಂಡು (ಧರ್ಮಾಮೃ. ೧೪-೮೪); ತೆರಳಿ[ಪಾಠಾಂ. ತೆರಣೆ, ತೋರಣೆ]ಯ ಪುಜಿವಂ ತನಗೆ ಮನೆ ಮಾಜಿ$^3$ನೆಂದು ತನ್ನೊಳ್ ಪುಟ್ಟಿದ ನೂಲಿಂ ತನ್ನನೆ ಸುತ್ತಿಕೊಂಡು ಪೊಜಮಡಲಜಿ$^3$ಯದೆ ಸಾವಂತೆ (ಜೀವಸಂ. ೧೪೦-೧೦ ವ) ; ಹಲವು ಮಾಯಾಮೋಹಪಾಶದ ಬಲೆಯೊಳಗೆ ನೆಜಿ$^3$ ಸಿಲುಕಿ ತೆರಳಿಯ ಹುಳುವಿನಂತೊಳಗಿರ್ದು ತಾಪತ್ರಯದ ದುಃಖದಲಿ (ನಿಭಾಗ. ೭-೬-೧೩). **ತಿರುಳಿ$_2$** : ೨. ಹಲವು ಮಾಯಾಮೋಹಪಾಶದ ಬಲೆಯೊಳಗೆ ತನು ಸಿಲುಕಿ ತಿರುಳಿಯ ಹುಳುವಿನಂತಳವಳಿದು ತಾಪತ್ರಯದ ಬೇಗೆಯಲಿ (ನಿಭಾಗ. ೩-೧೪-೪). **ತೆರಣಿ$_1$** : ೨. ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ ತನ್ನ ನೂಲು ತನ್ನನೇ ಸುತ್ತಿ ಸುತ್ತಿ ಸಾವ ತೆಜಸಂತೆ (ಮಹಾದೇ. ಬ. ೧೫-೧೭). **ತೆರಣೆ** : ೨. ಮೇಲಿನ 'ತೆರಳಿ' ಉಲ್ಲೇಖದ 'ಜೀವಸಂ' ಪ್ರಯೋಗದ ಪಾಠಾಂತರವನ್ನು ನೋಡಿ. **ತೆರಳೆ$_1$** : ೨. ಕೌಶೇಯ–ತೆರಳೆಯ ಪುಜು ಮುಕುಲಾಕಾರದಿಂದ ಮಾಡಿದುವ ಬಿಡಿಸಿ ನೆಯ್ದ ಸೀರೆ (ನಾಚಿರಾ. ೬) : ಪರಿಪರಿಯ ಸಂಸಾರವಿಷಯದಿ ಹಿರಿದು ಬಿಗಿವಡೆದಿರ್ಪ ಮನುಜಗೆ ದೊರಕುವುದೆ ಪರತತ್ವ ತೆರಳೆಯ ಹುಳುವಿನಂತಿಹಗೆ (ಅಮೃತ. ೧-೩೭). [ <ತೆರಳ್ ]

**ತೆರಳಿಕೆ** 'ತೆರಳ್ಕೆ' ನೋ.

**ತೆರಳಿಚು** 'ತೆರಳ್ಚು' ನೋ.

**ತೆರಳಿಸು** (ಕ್ರಿ). ೧. ಹೋಗುವಂತೆ ಮಾಡು; ಹೊರಡಿಸು; ಕಳುಹಿಸು: ಬೆಸವೇಳ್ದು ತೆರಳಿಸಿದನನುಜನನು (ತೊರರಾ. ೪-೫-೨೭) : ಆತನನಲ್ಲಿಂದ ತೆರಳಿಸಿ ಬಿಟ್ಟಳು (ಕಂನವಿ. ೬-೧೬೪). ೨. ಹೊಗಿಸು ; ಪ್ರವೇಶ ಮಾಡಿಸು : ಇಂತು ಸಿಂಗರವಾದ ಸ್ವಯಂವರಮಂಟಪಕಂ ತೆರಳಿಸಲು ಸುಮತಿಯು ಮಂತಣದಿಂದ ಸಿಂಗರಿಸಿದರಾ ದೇವಕಾಂತೆಯ ಶೃಂಗಾರ ದಂತೆ (ಶಾಂತೀಪ. ೩-೬೫). ೩. ಕೆದರು ; ಚೆಲ್ಲಾಪಿಲ್ಲಿ ಮಾಡು : ತೆರಳಿಸಿತು ಬಿಱುಗಾಳಿ ತಾರೆಯ ನೆರವಿಯನು (ಸಾಳ್ವಭಾ. ೧೬-೩೪).
[ ತರಳ್ + – ಇಸು$_3$ ]

**ತೆರಳು** ‘ತರಳ್’ ನೋ.

**ತೆರಳಿ$_1$** ‘ತೆರಳಿ’ ನೋ.

**ತೆರಳಿ$_2$, ತೆರಣಿ$_2$** (ನಾ). ತುತ್ತು; ಮುದ್ದೆ ; ಉಂಡೆ : ತೆರಳಿ ಕೈಯೊಳಗಿದೆ ಬಾಯೆಮ್ಮ ತಂದೆ ಕುಳ್ಳಿರುಯೆಂದು ಕರೆದರಚ್ಯುತನಾ (ಕೃಷ್ಣಗೋ. ೨-೮೨) ; ಭಕ್ತನು ಒಂದು ಹೊತ್ತು ಅಡಿಗೆ ಮಾಡಿಕೊಟ್ಟ ಊಟದ ತೆರಳಿಯನ್ನು ಮಧ್ಯಾಹ್ನ ದೇವರೆದುರಿಗೆ ಭಿಕ್ಷವಾಗಿ ಸ್ವೀಕರಿಸಿ ಉಂಡು (ಸಜ್ಜ.ಶ. VI, ೨೬). **ತೆರಣಿ$_2$** : ‘ತೆರಣಿಗಟ್ಟು’ ಪರಾ.
[ ದೇ.॥ ತಮಿ. ತಿರಳ್ಳೈ, ತಿರಣ್ಣೈ ; ತೆಲು. ತೆರಲ ]

**ತೆರಳ್ಕೆ, ತೆರಳಿಕೆ** (ನಾ). ೧. ಚಲನೆ ; ಅಲುಗಾಟ ; ಸ್ಪಂದನ : ಮಲಯಾನಿಲನಿಱಿಪೆ ತೆರಳ್ವ ಚೂತಪಲ್ಲವದ ತೆರಳ್ಕೆ ತದ್ವನವಿಳಾಸಿನಿಯುಟ್ಟ ದುಕೂಲದೊಂದು ಪಲ್ಲವದ ತೆರಳ್ಕೆಯಂತೆಸೆಯೆ (ಪಂಪಭಾ. ೨-೧೪); ಕಲಶಮನೆತ್ತಿ ನೀರೆಱೆವ ಕಾಂತೆಯ ತೋಳ ತೆರಳ್ಕೆ ಮೇಲುದಂ ತೂಲಗಿಸೆ (ಚಂದ್ರಪು. ೧-೯೮) ; ಚರಣನ್ಯಾಸದ ತುಱುಗಲ ತೆರಳ್ಕೆಯಭಿನಯದೊಳಭಿನವಂಬೆತ್ತು ಮನೋಹರವಾಗೆ (ಮಹಾನೀ. ೯-೧೦) ; ಉರಿಯುಂ ಮೋಡ್ ಕಣ್ಗಳ ತೆರಳ್ಕೆಯುಂ ಪೋಲ್ವ ರಶ್ಮಿ ತುರಗಂ ಕಿಳಿಱುತ್ತಿರೆ (ಅಕ್ಕಶಾಂ ೪-೭೨). ೨. ಓಡುವಿಕೆ ; ಓಟ : ಪೂಡಿದ ವಾರುವಂಗಳ ತೆರಳ್ಕೆಗೆ ನೇಸಱ ತೇರ ತೇಜಿಗಳಂ ಪಾಡಟಿರ್ದಿರ್ಪನಂ . . . ಪರಿತಂದುವು ತೋರ್ಕೆಯ ತೇರ್ಗಳೋಳಿಯಿಂ (ಕಬ್ಬಿಗಕಾ. ೨೦೫). ೩. ವ್ಯಾಪಿಸುವಿಕೆ ; ಹರಡುವಿಕೆ : ರಾಜ್ಯಸಂಪದದ ಪೊದಳ್ಕೆ ತೇಜದ ತೆರಳ್ಕೆ ವಿರೋಧಿಯ ಬಾಳ್ಕೆ ತನ್ನದೆಂಬುದನೆನೆ ಪೆರ್ಮೆಯಿಂ ತಳೆದನೋ ನೃಪರೊಳು ನೃಪಕ್ಕಲಶಾನ್ತರಂ (ಎಕ. VIII, ಸಾಗರ. ೧೫೯-೧೩ : 1159). ೪. ಹೆಚ್ಚಳ ; ಆಧಿಕ್ಯ ; ಅತಿಶಯ : ಸೋರ್ವ ಕಂಬನಿಯ ತೆರಳ್ಕೆ ಗದ್ಗದಿಕೆಗೊಳ್ವ ಸರಂ (ಆದಿಪು. ೯-೭೬): ಸಿರಿಯ ತೆರಳ್ಕೆ ಜವ್ವನದ ಪೆರ್ಚುಗೆ ರೂಪವಿಳಾಸದೇಳ್ಗೆ . . . ಮೂರ್ತಿವೆತ್ತುದು (ವರ್ಧಪು. ೨-೩೪). ೫. ಸಮೂಹ ; ಗುಂಪು ; ನೆರವಿ : “ತಂಡಂ ತೆರಳ್ಕೆ . . . ಪಂಡಿತರಿಂ ಗಡಣವಂಗಡಂ ಕಿಕ್ಕೇದಂ” (ಕವಿಕಂ. ೧೦೬) ; ಈಳೆಯಿಟ್ಟೆಡೆಯುಂ ತಿಲಕದ ತೆರಳ್ಕೆಯುಂ ಅಸುಗೆಯ ಕುತ್ತುಱುಂ . . . ಎನಿಸಿದ ದೇವರಮಣೋದ್ಯಾನಮಂ . . . ಪುಗುತರ್ಪಾಗಳ್ (ಶಾಂತೀಶ್ವ. ೧೦-೭೮ ವ) : ಸುವಿಲಾಸದಿಂದಪ್ಪವಸುಗಳ ತೆರಳ್ಕೆ ಘನಜವದಿಂದೆ ಸಪ್ತ ಋಷಿಗಳ ನೆರವಿ . . . ಓಲಗಕೆ ಬಂದುದು (ಚಬಪು. ೨-೧೬) : ಸುಯ್ವಿಟ್ಟ ಪೊರೆಗಳಂ ಬಿಟ್ಟು ಪೈಗರೆದು . . . ಪೆಣ್ ತೆರಳ್ಕೆಯು ತೆರಳೆ (ಕಾಲೂರ. ೧೩೧೦-೨೭೯). ೬. ಮಡಿಕೆ ; ನಿರಿಗೆ. ‘ತೆರಳ್ಕೆವೆಱು’ ಪರಾ. ೭. ಠೀವಿ ; ಒಯ್ಯಾರ; ಬೆಡಗು: ಸ್ಮರಶರಮುಂ ತದೀಯಮೃದುಗೇಯಮುಮುರ್ಚಿದ ಪುಣ್ಣನೊಕ್ಕ ಸತ್ತ್ವರನಱಸಲ್ಕೆವೇಡ . . . ಬರ್ಬರಿಯ ಕಿರಾತೆಯೊಟ್ಟಜೆಗೆ ಕಿನ್ನರರೊಟ್ಟಜೆಯುಂ ತೆರಳ್ಕೆಯುಂ (ಶಾಂತಿಪು. ೨-೨೨) : ಮಾತಿನ ತೆರಳ್ಕೆಗಳಿಂ ರಸಗೇಯದಂತಿರೀ ಕೃತಿ ಪೊಸದೇಸಿಯಿಂದಸೆದು ಸೋಲಿಪುದಚ್ಚರಿಯೇ ರಸಜ್ಞರಂ (ಲೀಲಾವ. ೪-೭೩) : ಧರೆಗೆಸೆದತ್ತು ತಾರಕನಾಜ್ಞೆ ತಾರಕಾಸುರನ ತೆರಳ್ಕೆ ತಾರಕನ ತೀವ್ರತೆ ತಾರಕನುರ್ಬು (ಗಿರಿಕ. ೬-೧೧) ; ವಳಿಯ ತೆರಳ್ಕೆಯುಂ ವಹಣಿ ಯೊಟ್ಟಜೆಯುಂ ಪಸರಂಗಳಿಂಪನುಜ್ಜಳಿಸುವ ಪಾಳಮುಂ . . . ಅಱಿವನ್ನರಾರ್ (ಅನಂಪು. ೪-೮೪). **ತೆರಳಿಕೆ** : ೫. ನೆರೆದರಬಲೆಯ ರಂಗವಟ್ಟದ ಪರಿವುಳದ ಮುತ್ತಿನಗೆಯ ತುಂಬಿಯ ತೆರಳಿಕೆಯ ಕತ್ತಲೆಯ ಕದಡಿವ ಕಣ್ಣ ಬೆಳಗುಗಳ (ಕುಮ್ಯಾಅ. ೮-೬) ; ತೇರುಗಳ ತೇಜಿಗಳ ಬಲುಮದವಾರಣಂಗಳ ತೆರಳಿಕೆಯು ರಣಚೋರಗಂಡಿಯ . . . ವೀರ ವಜಿಗಳ ರಭಸದಲಿ ರಂಜಿಸಿದುದಾ ದುರ್ಗ (ತೊರರಾ. ೬-೭-೧೫) : ಶಿಬಿರಿದಶನದ್ಯುತಿಯ ಬೆಳ್ಗೆಯ ಸೂಸಲೆನೆ ನಖರುಚಿಯ ತೆರಳಿಕೆಯ ಹೊರಳಿಯೆನೆ . . . ತಿಳಿನೀರ ತುಂತುರ್ವನಿಗಳೆಸೆದಿರ್ದುವು (ಜೈಮಿಭಾ. ೩೦-೧೧). ೮. ತೆರಳಿಸುವಿಕೆ ; ಸಾಗಿಸುವಿಕೆ : ಪುರವರವನಲ್ಲಿಂದ ಮೌಲ್ಯದ ತೆರಳಿಕೆಯ ಮಾಡಿದನು ಮೂಡಲು ಹರಿದು ಮುರಿದು ಸಮುದ್ರಸೇನನ ಸರ್ವಗವತೆಯುಲಿ ತೆರಳಿಯಲ್ಲಿಂದಿಂದ್ರಸೇನನನೊರೆಸಿ ಭಂಡಾರವನು ಹೇರಿಸಿ ಮರಳಿ ಮಾಗನನಪ್ಪಳಿಸಿದನು (ಕುಮ್ಯಾಸ. ೪-೯). ೯. ಆಕ್ರಮಣ ; ಮುನ್ನುಗ್ಗುವಿಕೆ ; ರಭಸ : ಸರಳ ತೆರಳಿಕೆಗೆ ಮರಳಿತು ಕರುಳ ಸುರುಳಿಯೊಳು ಹೊರಳುತ್ತ ಬೀಳುತ್ತಲು . . . ಹಂದಿ ಮರಳಿ ಕಾನನಕೆಯ್ದಿತು (ಹಚಕಾ. ೬-೩೦) ; ಇಂದಿನೀ ಬಲವೀ ಸಮರಜಯದಂದವೀ ಸೌರಂಭವೀ ಸರಳಂದವೀ ತೆರಳಿಕೆಯದಾವಂಗೆಂದನವನೀಶ (ಕುಮ್ಯಾದ್ರೋ. ೫-೧೭).
[ ತೆರಳ್ + – ಕೆ ]

**ತೆರಳ್ಕೆಯಿಡು** (ಕ್ರಿ). ಅಧಿಕಗೊಳಿಸು ; ಒತ್ತುಗೊಳಿಸು : ಇತ್ತಲೆಳ್ದು ಮಳೆಯ ರಾಜನುತ್ಸವಕ್ಕೆ ಪೆಚ್ಚುಗೊಟ್ಟು ಚಿತ್ರದೊಳ್ವಮುಸ್ಪಸಂತಸಂಗಳಂ ತೆರಳ್ಕೆಯಿಟ್ಟು ರಂಗಮಂಟಪಕ್ಕೆ ಬಂದು (ಮಳರ.ಹ. ೨೩೦-೧೦).
[ ತೆರಳ್ಕೆ + ಇಡು$_1$ ]

**ತೆರಳ್ಕೆವೆಱು** (ಕ್ರಿ). ಪದರವಾಗು ; ನಿರಿಗೆಯಾಗು : ಕರಿವೆರಸಿದ ಪೊಸ ದುಗುಲವ ತೆರಳ್ಕೆವೆತ್ತುಡೆ ಪಟತ್ಕಟೀಸೂತ್ರಪರಿಸ್ಫುರಿತದೊಳಂ . . . ಜನಮನೇಂ ಮನಂಗೊಳಿಸಿದುದೊ (ಆದಿಪು. ೪-೩೬).
[ ತೆರಳ್ಕೆ + ಪೆಱು$_1$ ]

**ತೆರಳ್ಚು, ತೆರಳಿಚು** (ಕ್ರಿ). ೧. ಚಲಿಸುವಂತೆ ಮಾಡು; ಚಲನಗೊಳಿಸು : ಸರಿಸು ; ತಳ್ಳು : “ತೆರಳ್ಚು–ಚಲನೇ, ಚಯನೇ ಚ” (ಶಮಧಾ) ; ಅಂತೀತನ ಕಟಕಕ್ಕೆ ನಿತ್ಯಕ್ಷಯಮ್ಯಯಪುತ್ಯವಾಯಂಗಳಂ ಮಾಡಿ ಬೇಸಱಿಸಿ ನೆಲದಿಂ ತೆರಳ್ಚುವಂ (ಆದಿಪು. ೧೩-೫೮ ವ) : ಉಪವನದ ತರುಲತಾಗುಲ್ಮಜಾಲಮಂ ಸೋಂಕಿ ಬಂದು ತಿಳಿಗೊಳಂಗಳೊಳ್ ತೆರೆಯ ನೆರವಿಯಂ ತೆರಳ್ಚಿ . . . ಸಾಯಂತನಸಮಯ ಸಮೀರಣಂ ಸೌಖ್ಯಸಾರ ಸರ್ವಸ್ವಮೆನಿಸಿದಾಗಳ್ (ಚಂದ್ರಪು. ೮-೪ ವ) ; ವಾಯುವು (ನನ್ನ) ಹಟ್ಟಿಯ ಬಾಗಿಲ ರಜಗಳಂ ತೆರಳ್ಚುವನು (ಶುಕಸ. ೧೪೪). ೨. ಅಲುಗಾಡಿಸು ; ಕಲಕು ; ಕ್ಷೋಭೆಗೊಳಿಸು ; ಕದಲಿಸು : ಮಿಡಿಯಂ ತೆರಳ್ಚಿ ತಗೆದೋವದೆ ಕಾಯದೆ ಕೂರಕರ್ಮದಿಂ ಸೊನೆ ಸುರಿವನ್ನೆಗಂ ಪಱಿದು ನೋಯಿಸಿ ಕಾಡಿದೆವು (ಆದಿಪು. ೧೧-೧೩೨) ; ಆನುಂ ಕುಲಗಿರಿಗಳ ನಪ್ಪೊಡೆಂತುಂ ತೆರಳ್ಚಲಾಱೆನದಱಿಂದೆನಗಂ ನಗಂಗಳ್ ಪಿರಿಯವೆನೆ (ಪಂಚತಂ ೨೫೯-೬) : ಸಾಗರಮಂ ಕೂಡೆ ತೆರಳ್ಚಿದಂ ತೊಱಿಸಿದಂ ತುಳ್ಕಾಡಿದಂ (ಜಗವಿ. ೭-೧೮) : ತೆರಳ್ಚಿ ತರಂಗನೀವಿಯುಂ . . . ಭುಜಂಗನಪ್ಪೋಲ್ ಸುಳಿಗುಂ ಸಮೀರಣಂ (ಶಬಶಂ. ೨-೭೦). ೩. ಅಲುಗಾಡು ; ಕದಲು : ಇಡು ಮೊಲನಂ ತೆರಳ್ಚದಿಸು ಪುಲ್ಲೆಗಳಂ (ಗಿರಿಕ. ೧-೮೩). ೪. ಕಳುಹಿಸು ; ಸಾಗಿಸು: ಗೋವ್ರಜಂಗಳುಮನಿಂದ್ರಪ್ರಸ್ಥಕ್ಕೆ ತೆರಳ್ಚಿ (ಪಂಪಭಾ. ೬-೩೩ ವ). ೫. ಸುತ್ತಿಸು ; ತಿರುಗಿಸು : ವಿರಹಿಗಳಂ ತೆರಳ್ಚಿ ತುಱುವಲ್ಲಿಗೆ ನೀಂ ನೆರ ಮುಯ್ಯೊಳಕ್ಕ (ಆದಿಪು. ೧೧-೧೦೦ ಅಡಿಟ.) ; ಇರದೊಯ್ಯುದು ತನ್ನಿಚ್ಛೆಗೆ ವರ ಯುವ್ವನದಂದು ಪುರುಷನಂ ಪ್ರಕೃತಿರಜಂಬೊರೆದು ತಿರುಪುತ್ತೆ ಸುಟ್ಟುಱಿ ತೆರಳ್ಚಿ ತಜಗೆಲೆಯುನುಯ್ಯು ತೆಜದಿಂದತ್ತಂ (ಶಾಂಡಂಪು. ೫೩೫) : ಕೆಂವಲದಿಂ ಸಣ್ಣಗೆಯುಂ ತೆರಳ್ಚಿ ತಿರುಪತ್ತುಂ (ಸುಕುಮಾ. ೨-೧೦೬). ೬. ಒಂದಾ

ಗೂಡಿಸಂ; ಸೇರಿಸು; ಕೂಡಿಸು: ಮೂಱುಲೋಕದ ಚೆಲ್ವೆಲ್ಲಮಂ ವಿಧಾತ್ರನೊಂದೆಡೆಗೆ ತೆರಳ್ಚಿದಂತೆ (ಪಂಪಭಾ. ೧-೫೮ ವ): ಮಾಂಸ ವ್ರಾತಮಂ ಪೊತ್ತು ಕೇಸರಿಚಮರೀವಾಲಂಗಳಂ ತಾಳ್ದು ಬಂದರನೇಕರ್ (ಕಾದಂಪೂ. ೧೬೯); ತಂತಮ್ಮ ಭಂಟರರ್ಥಮಂ ತೆರಳ್ಚಿ ಕಟ್ಟಿಕೊಂಡು ಪೊಱಲ್ಗೆವಂದು (ಧರ್ಮಾಮೃ. ೨-೧೯೩). ೭. ಹರಡು; ಪಸರಿಸು: ಪುಷ್ಪಕೇಸರಂ ತರಳೆ ತೆರಳ್ಚಿ ಬೀಸಿದುದು ತಂಬೆಲರ್ (ಆದಿಪು. ೨-೬೫); ಒಡೆಯರ್ ತೊಡೆದಂಗಾನುಲೇಪನದ ಸೌರಭ್ಯಮಂ ತೆರಳ್ಚಿ ವಿಟಜನ ಘ್ರಾಣಕೆ ಪಾರಣೆಯನೊಡರ್ಚಿಯುಂ (ಕುಸುಮಾ. ೪-೨೯ ವ): ಇಂಬುವೆತ್ತ ತಣ್ಪುಱಲೊಳಗೊಲ್ದು ಕೂಡುವಿನಿಯರ್ಗೆ ತೆರಳ್ಚಿದ ಕಂಪು ತಣ್ಪು ಪೊಂಪುಳಿಯನಲರ್ಚೆ ತೀಡುವುದು ತತ್ಪುರಬಾಹಿರ ಮಂದಮಾರುತಂ (ಅನಂಪು. ೩-೧೬); ಸರ್ಬದಳವಂ ತಗುಳ್ದುವು ಬೇಸಗೆಯು ಬಿಱುವೆಲರ್ಬೀಸಿ ರಜಮಂ ತೆರಳ್ಚುವಂತಾಗ ವೀರರ್ಬಿಂಕದಿಂದಾಂತು ನಿಂದರ್ (ತ್ರಿಮಿಧಾ. ೨೫-೨೬). ೮. ಅಧಿಕಮಾಗಿಸು; ಅತಿಶಯವಾಗಿಸು: ಗುರುಗಳುಮಂ ಸುತರಂ ಸೋದರರಂ ಕೊಲಲಾಱೆನೆಂದ ಪಾರ್ಥನನಾಗಳ್ ಹರಿ ರಥಮಂ ಹರಿಯಿಸುತುಂ ತೆರಳ್ಚಿ ತತ್ವಮನೆ ಪೇಳ್ದು ಗಡ ಕಾದಿಸಿದಂ (ಸಮುಪ. ೦೦-೧೬೨). ೯. ಉಂಟುಮಾಡು; ಹೊಂದಿಸು: ಕಳೆಯುಂ ಪತ್ತಿಸಿ ರಾಗಮಂ ನಿಲಿಸಿ ಸುಣ್ಣಂ ನಣ್ಪುಗೆಯ್ದಂಪನಿಕರ್ಗಳಿಗೊಂಡು . . . ತೆರಳ್ಚಿ ಜತಿಯುಂ ಸೈತೋಜೆಯುಂ ತಾಳ್ದಿ ಗೋವಳರಾಯಂ ಕೊಱಲೂದಿದಂ ನೆಗೞ್ವಿನಂ ಮಾಧುರ್ಯ ತೂರ್ಯಸ್ವನಂ (ಜಗವಿ. ೫-೨); ಕವಿಕಂದರ್ಪನ ಬಾಳಚಂದ್ರನ ಲಸದ್ಬಾಣೋತ್ಕರಂ ಕೂರ್ತವಂದವರ್ಗಂ ನೆಟ್ಟನೆ ಕೂರ್ತು ಕೂಡಿದವರ್ಗಂ ರಾಗಾದಿ ಕಲ್ಲೋಲಮಂ ಕಿವಿಯಂ ತಾಗಲೊಡಂ ತೆರಳ್ಚುವುದು (ಅನಂಪು. ೧-೩೩). ೧೦. ಹಿಮ್ಮೆಟ್ಟಿಸು; ಓಡಿಸು; ಅಟ್ಟು: ಪ್ರುಱಾನುಪುಂಖಮಿಸುತ್ತಿರ್ಪಡೆಯೊಳ್ ತೆರಳ್ಚಿದುವಗುರ್ವಿಂ ಪರ್ವಿ ಬಾದಿರ್ದ ಮೇಘಮುಮಾಹೀಂದ್ರರ ಪೊಂಕಮುಂ ಜಯಕುಮಾರೋನ್ಮುಕ್ತ ಬಾಣಾಳಿಗಳ್ (ಆದಿಪು. ೧೩-೬೧); ಗಂಗನ ಮೊತ್ತಮೆಲ್ಲಮಂ ಬೆದಱುವಿನಂ ತೆರಳ್ಚಿ ಮಲರುಂ ತುಱಿಲಾಳ್ಗಳನಿಕ್ಕಿ (ಎಕ. II, ೧೩೮-೧೨: ಸು. 940). ೧೧. ಹೋಗಲಾಡಿಸು; ನಿವಾರಿಸು; ಕಳೆ: ಭುಜಕಂಡುಮಂ ತೆರಳ್ಚುವುದರ್ಕಿದುವೆ ಪದನೆಂದು ಕದನೋದ್ಯುಕ್ತನಾಗಿ (ಜಗವಿ. ೭-೭೦ ವ).

**ತೆರೞ್ಚು**: ೪. ಅಲ್ಲಿಗಲ್ಲಿಗೆ ನಡೆದು ಸಾಧಿಸಿ ಕೆಲ್ಲ ಕುಹರದ ಕೋಣೆ ಬಾಗುಗಳೆಲ್ಲವನು ಸೊಕ್ಕಱಿಸಿ ತೆರೞ್ಚಿದನು ಮಹಾಧನವ (ಕುಮಾ.ಸ. ೩-೪೭); ಸುಧಾಮನ ವರಶತಾನಂದನನ ತೆರೞ್ಚಿ[ಪಾಠಾಂ. ಸಿ]ದನು ಮಹೀಪಾಲ (ತೊರರಾ. ೦-೧೬-೧). ೭. ಅಲಿಗಳನರೞ್ಚುತ ನಗೆಗಳ ಮಾಲೆಗಳ ತೆ[ಪಾಠಾಂ., ಕೆ]ರೞ್ಚುತ ಕರೆ ಕಟ್ಟೂಳಿಗದ ಕಾತರರನೆಂದನು ಹರಿ ಸುಪರ್ಣಂಗೆ (ತೊರರಾ. ೦-೮-೫೪). ೧೦. ಕರ್ಣನ ತೆರೞ್ಚಿದನೈನೂಱು ಹಜ್ಜೆಯಲಿಂದ್ರಸುತಸೂನು (ಕುಮಾ.ದತ್ರೀ. ೬-೫೧); ನೀನಿಂದು ಮುರವೈರಿಯುಂ ತೆರೞ್ಚಿದೆ . . . ಕರ್ಣಜನೆ ನಿಲ್ಲೆನುತೆ ತೆಗೆದೆಚ್ಚು ಬೊಬ್ಬಿಱಿದನು (ತ್ರಿಮಿಧಾ. ೭-೫೮). ೧೧. ಶಂಕರನ ಪರಮಮೂರ್ತಿಯು ಹೃದಯಕಮಲದೊಳಿರಿಸಿ ಸಂಧಾನದಲಿ ಜೀವನ ತೆರೞ್ಚಿದನು (ತೊರರಾ. ೨-೫-೧೯). ೧೨. ಅಧಿಕವಾಗು; ಹೆಚ್ಚಾಗು: ಕರಿಯ ಬರಿಕೈಗೆಣೆಯೆನಿಪ ನಿಷ್ಠುರದ ಧಾರಾಸಾರ ತೆರೞ್ಚಿ ಸುರಿದುದು (ಕುಮಾ.ಆ. ೨೦-೩೩). [ ತೆರಳ್ + – ಚು$_1$ ]

**ತೆರಾಣೆ** (ನಾ). ಕೊಡುವ ಹಣ; ಸುಂಕ; ತೆರಿಗೆ: ಸರಕಾರಕ್ಕೆ ತೆರ[illegible] ? ಹೊರಗಿನ ತೆರಾಣೆ ಎಷ್ಟು ? . . . ನೇರವಾಗಿ ತೆರುವ [illegible] ಸಿಬ್ಬಂದಿಗಳ ರೂಪದಲ್ಲಿ ತೆರುವ ತೆರಾಣೆ ಎಷ್ಟು ? (ಹಣಪ್ರ. ೨೬೩). [ ತೆರು$_1$ (< ತೆಱು$_1$) + ಆಣೆ$_5$ ]

**ತೆರಿಗಲು** (ನಾ). ಗಡಿಯ ಗುರುತಿಗಾಗಿ ನೆಟ್ಟ ಕಲ್ಲು: ಅಲಿಂದಂ ಪಡುವ ನಡುದು ನಟ ಗುಡುಕಲು ಅಲಿಂದಂ ಪಡವ ನಡದು ನಟ ತೆರಿಗಲು ಅಲಿಂದಂ ಪಡುವ ನಡದು ನಟ ಹಲಗೆಗಲು (ಎಕ. XII, ತಿಪಟೂ. ೧೩೯-೬೮ ; ?). P ಇದು 'ಕರಿಗಲ್ಲು' ಇರಬಹುದೇ ?

[ ತೆರಿ? + ಕಲು$_1$ (< ಕಲ್$_3$) ]

**ತೆರಿಗೆ** 'ತೆಱಿಗೆ' ನೋ.

**ತೆರಿಗೆದಾರ** (ನಾ). ತೆರಿಗೆಯನ್ನು ಕೊಡುವವನು: (Rate payer. ಪತ್ರಿನಿ. ೬೭). [ ತೆರಿಗೆ (< ತೆಱಿಗೆ) + – ದಾರ$_4$ ]

**ತೆರಿಮೊದ್ದು** (ನಾ). ಒಂದು ಬಗೆಯ ಸಸ್ಯ: (ಕಿ). [ ? ]

**ತೆರಿವಿಳಾಸ** (ನಾ). ಒಂದು ಬಿರುದು: ಮಹಾರಾಜಾಧಿರಾಜಪರಮೇಶ್ವರ ನೆಲ್ಲರ ಮರುಳಂ ತೆರಿವಿಳಾಸಂ ಮದಗಜಮಲ್ಲ . . . ಮಾಡಿದ ಮರ್ಯ್ಯಾದೆ (ಸೌಇಇ. IX-1, ೭೬-೫ ; 991). [ ತೆರಿ? + ವಿಳಾಸ ( = ವಿಲಾಸ) ]

**ತೆರಿಸು** 'ತೆಱಿಸು' ನೋ.

**ತೆರು$_1$** 'ತೆಱು$_1$' ನೋ.

**ತೆರು$_2$** 'ತೆಱ$^3_3$' ನೋ.

**ತೆರುಗಡೆ** 'ತೆಱುಗಡೆ' ನೋ.

**ತೆರುವಣ** (ನಾ). ಸುಂಕ; ತೆರಿಗೆ: ಶಾಸನಗಳಲ್ಲಿ ಬರುವ ತೆರುವಣಗಳು :– ತೆರು, ಮುಡಗಡಿ, ಅರುಗಡಿ (ತುಳುನಾ. ೨೭೦).

[ತೆರು$_2$ (< ತೆಱ$^3_3$) + ಪಣ$_3$ ]

**ತೆರೆ$_1$** 'ತೆಱ$^3_1$' ನೋ.

**ತೆರೆ$_2$** 'ತೆಱ$^3_2$' ನೋ.

**ತೆರೆ$_3$** 'ತೆಱ$^3_3$' ನೋ.

**ತೆರೆ$_4$** (ನಾ). ೧. ಅಲೆ; ತರಂಗ: "ವೀಚೀ, ಭಂಗಃ. ತರಂಗಃ – ಈ ೩ ತೆರೆ" (ಹಲಾಯು. ೧೦೮-೩೧); ಪಾಲ್ಗಡಲ ತೆರೆಯ ನೊರೆಯ ದೊರೆಯ ದುಕೂಲಾಂಬರಮನುಟ್ಟು (ಆದಿಪು. ೪-೪೦ ವ); ಗಂಗಾದೇವಿಯುಮಾಕೂಸಂ ಮುಟುಗಲೀಯದೆ ತನ್ನ ತೆರೆಗಳೆಂಬ ನಳಿತೋಳ್ಗಳನೊಯ್ಯನೊಯ್ಯನೆ ತಱೆಸ್ಕೈಸಿ ತರೆ (ಪಂಪಭಾ. ೦-೯೫ ವ); ಕುಳಿರ್ವಚ್ಯೋವದ ತೆರೆಯೆಲರೊಳೆ ಪುಳಕಂ ಪೊಣ್ಮಿದಂತೆ ತಣ್ಗದಿರ್ಗಳ್ ಕಣ್ಗೊಳಿಸಿರೆ ಶಶಿಕಾಂತ ಶಿಲಾತಳಮೊಂದುಜ್ವಳಿಸಿತಾ ಲತಾಮಂಟಪದೊಳ್ (ಕಾದಂಉ. ೪೪೨); ಸಮುದ್ರದ ತಡಿಯಲೊಂದು ಮನೆಯ ಮಾಡಿ ನೊರೆ ತೆರೆಗಳಿಗಂಜಿದೊಡೆಂತಯ್ಯ (ಮಹಾದೇ. ಕ. ೫೧-೦೩೪); ತುಂತುಱಿಂ ತೆರೆಯಿಂ ಪೆರ್ದೆರೆಯಿಂ . . . ಒಪ್ಪಿತ್ತು ನೀರಾಕರಂ (ಗಿರಿಕ. ೧-೪೭); ವಾರ್ಧಿಯೊಗ್ಗಿನ ತೆರೆಯಂತೆ ಗಾಳಿಗಿದಿರೊಡ್ಡಿದ ಕೆಂಜೊಡರಂತೆ (ದಶಕು. ೦೪-೨೬); ತೆರೆಯ ಮೇಲಣ ತೆಪ್ಪದಂತಿರೆ ಧರಣಿಯೊಲೆದುದು (ಕುಮಾವಿ. ಒಂಗ. ೬-೫೯): ತೇಜಿಯ ಸಾಲೋ ಶರಧಿಯ ತೆರೆಗಳ ರಾಜಿಯೊ . . . ಎನೆ ತಿರುಮಲರಾಜನೈತಂದನುಬ್ಬಿನಲಿ (ಕಂನವಿ. ೩-೩೩): ತೀರಕ್ಕೆ ಬಂದ ಮೇಲೆ ತೆರೆಯ ಭಯವೇನು ? (ಗಾದೆ). ೨. ಸುಕ್ಕು; ವಂಡಿಕೆ: ಜರೆಯಿಂದಂ ಪ್ರಬಳ್ದ ಜೋಲಲ್ತೆರೆ ತರತರದಿಂದುಣ್ಮಿ ಪೊಣ್ಮಲ್ಕೆ (ಕಾದಂಪೂ. ೧೬೫): ನೆರೆ ಕೆನ್ನೆಗೆ ತೆರೆ ಗಲ್ಲಕೆ ಶರೀರ ಗೂಡುವೋಗದ ಮುನ್ನ . . . ಪೂಜಿಸು ನಮ್ಮ ಕೂಡಲಸಂಗಮದೇವನ (ಬಸವ. ೧೬೧): ಕಯ್ಯ ಕೊಡೆಯಿಂ ಮಯ್ಯ ತೆರೆಯಿಂ ಜೋಲ್ದ ಪುರ್ವಿಂ . . . ಮೆಲ್ಲಮೆಲ್ಲನೆ ಚಪ್ಪರದ ಬಾಗಿಲ್ಗೆ ಬಂದೊಡೆ (ನಂಬಿರ. ೬-೨೩); ನರೆ ತೆರೆಗಳಿಡಿದಡರಿ ತನು ಜರ್ಜರಿತವಾಗಿಯನೇಕ ದಿನದಲಿ ಹಿರಿಯರೆಂದೆನಿಸಿದರೆ ಹಿರಿಯರೆ (ಪ್ರಭುಲೀ. ೧೭-೧೮). ೩. ಪರದೆ; ಜವನಿಕೆ; ಮುಸುಕು: "ಅಪಟೀ, ಕಾಂಡಪಟಃ, ಪ್ರತಿಸೀರಾ. ಯವನಿಕಾ, ತಿರಸ್ಕರಿಣೀ – ಈ (೫) ತೆರೆ" (ಹಲಾಯು. ೫೨-೧೫೪): ಕೆಮ್ಮುಗಿಲ ತೆರೆಯ ಪೊರೆಯೊಳ್ ಸೆಗೆದು ಪೊಱಮಡುವ ವಿದ್ಯಾಧರಿಯಂತೆ . . . ಚೌಪಳಿಗೆಯ ಬಾಗಿಲೊಳ್ ನಿಂದು (ಪಂಪಭಾ. ೪-೩೯ ವ): ಅಸುರೇಂದ್ರಂ . . . ಅಂಬರದ ನಿಱಿಮುಗಿಲ ತೆರೆಗಳ ಪೊರೆಯೊಳಗಣ ನಿಜ

ವಿಮಾನದೊಳಗಂ ಪೊಕ್ಕಂ (ಶಾಂತಿಪು. ೮-೫೩) : ರವಿ ಬಂದನಸ್ತಾಚಲಕ್ಕು ದಯಶಾಲಕ್ಕೆ ಸುತ್ತಿದ ಕರಿಯ ತೆರೆಯೊ ಎನಿಸಿ (ಸಿದ್ಧರಾ. ೧-೫೪) : ಗುರು ಕಾರುಣ್ಯಮುಹೂರ್ತಕ್ಕೆ ಜನನಮರಣಂಗಳೆಂಬ ತೆರೆಯಾರ್ ಒಡಿದ ಸಂಸಾರದ ತೆರೆ ಸರಿಯೆ (ಬಸರ. ೪-೧೦೩) ; ತೆರೆಯ ಹಿಡಿದುದು ಮಱೆವೆ ಸಮ್ಯಜ್ಞಾನ ದೀಧಿತಿಗೆ (ಕುವ್ಯಾದಶ್ರೀ. ೧೮-೭೧) ; ತೆರೆಯ ಹಿಂದೆ ನಾನು ಅವಳ ಅಪೂರ್ವ ನೃತ್ಯವನ್ನು ನೋಡುತ್ತಿದ್ದೆ (ಬಾಣಅ. ೮೯); ಅತಿಪ್ರಚ್ಛನ್ನ ಪಟ ದೇಹ ಸುಕರ್ಜ ತೆರೆಯು (ಶಬ್ದಮಂ. ೧೦೬). 'ತೆರೆವಿಡಿ' ಪರಾ. ೪. (ಪ್ರಕಾಶಗ್ರಾಹಿಯಾದ) ಕಣ್ಣಿನ ಪೊರೆ ; ದೃಷ್ಟಿಪಟಲ : ತೆರೆಯ ಮೇಲೆ ಬಿಂಬವು ಬೀಳಲು, ಆ ಅನುಭವವನ್ನು ಅಲ್ಲಿರುವ ಸೂಕ್ಷ್ಮ ನರಗಳು ಮಿದುಳಿಗೆ ತಿಳಿಸುವುವು (ಬಾಲಪ್ರ. I, ೪೮೪). ೫. ಒಂದು ಬಗೆಯ ಕಣ್ಣಿನ ರೋಗ ; ಕಣ್ಣಿನ ಪೊರೆ : ಪೂವರಸೆ ತೆರೆಯೆಂಬ ಪಲ ವಕ್ಷಿರೋಗವುಂ ಕಳೆಗುಂ (ಅಶ್ವಶಾ. ೧೫-೧೫) ೬. ಬೇಟೆಗಾರರು ಉಪಯೋಗಿಸುವ ಒಂದು ಬಗೆಯ ಸಾಧನ ; ಮುಸುಕಿನ ಆಕಾರದಲ್ಲಿ ಮಾಡಿರುವ ಬಲೆ : "ಪಟಿಪಂ = ಬೇಂಟೆಯ ತೆರೆ" (ಶಮದ. ಪರಿ. ೧): ತೆರೆಯ ಸರಳಿಸುವೆರಳೆ ಬಲುನಾಯ ಬಾಯಿಂದ ಮುರುಚಿಕೊಂಡೋಡುವ ಮೊಲಂ (ಸೋಮಚ. ೩-೭) : ತೆರೆಯ ತೋಹಿನ ಮೋಹಿನ ನೀರ ಬೇಂಟೆಯುಮರ್ಱೆಗಳನೀಕ್ಷಿಸುತವರು (ಆನಂದ. ೦೭-೦೫). 'ತೆರೆವೇಂಟೆ' ಪರಾ. ೭. ಛಾಯಾಚಿತ್ರಪ್ರದರ್ಶನಕ್ಕಾಗಿ ಬಳಸುವ ಬಿಳಿಯ ಪರದೆ ; ಸಿನಿಮಾದಲ್ಲಿ ಚಿತ್ರವನ್ನು ಮೂಡಿಸುವ ಪಟ ; ರಜತಪರದೆ : ಹೆಚ್ಚು ಮಂದಿ ನಟನಟಿಯರನ್ನು ಏಕಕಾಲದಲ್ಲಿ ತೆರೆಯ ಮೇಲೆ ಅವರಿಗೆ ತರುವುದು ಸಾಧ್ಯವೇ ಇಲ್ಲ (ನಾಡಿಗೀ. ೬೦).

**ತೆರೆಯ ಊಳಿಗ** = ಪರದೆಯನ್ನು ಹಿಡಿಯುವ ಸೇವೆ : ಅರಮನೆಯಲ್ಲಿ ಪ್ರತಿದಿನದಲ್ಲಿಯೂ ನಡೆಯುವಂತೆ ಕಟ್ಟು ಮಾಡಿದ ಊಳಿಗಗಳ ವಿವರ . . . ಬೀಸಣಿಗೆಯ ಊಳಿಗ, ತೆರೆಯ ಊಳಿಗ . . . ಚಾವಡಿ ಕಾವಲು ಊಳಿಗ (ಚಾಮುವಂ. ೪೫). **ತೆರೆಯ ಸೀರೆ** = ಅಂತಃಪಟ : ತೆರೆಯ ಸೀರೆ ಚನ್ನೆಯರೊಲಿದು ಕಟ್ಟಿದರು (ಅಂಜನ. ೪-೪೦) : ವೇದಿಕಾಗ್ರದೊಳ್ ತೆರೆಯ ಸೀರೆಯುಂ ಪಿಡಿದು ವರನಂ ಕನ್ನಿಕೆಯುಂ ಇಕ್ಕೆಲದೊಳಿರಿಸಿ (ಧರ್ಮಪ ೭-೫ ವ). 'ತೆರೆಸೀರೆ' ಪರಾ.

[ ದೇ.॥ ತಮಿ. ತಿರೈ ; ಮಲ. ತಿರ ; ತುಳು. ಸೆರೆ ; ತೆಲು. ತೆರ ]

**ತೆರೆಗಟ್ಟು** (ಕ್ರಿ). ನಿರಿಗೆಗಳಿಂದ ಕೂಡಿರು ; ಪದರ ಪದರವಾಗಿರು : ಮಿಱುಮಿಱನಾದ ಮೈ ಹೊಳಹಿಂದ ತೆರೆಗಟ್ಟಿ ನಿಱಿದೇಳ್ವ ಹೊಂಗಾಸೆಯಿಂದ . . . ಬಯಲ್ಪೊಱೆ ಪೊಳೆವಂತೆ ಪೊಳೆವರು (ಭರತ. ೧೩-೧೦೧).

[ ತೆರೆ$_4$ + ಕಟ್ಟು$_1$ ]

**ತೆರೆಗಣ್ಣು** (ನಾ). ಬಿಟ್ಟಿರುವ ಕಣ್ಣು ; ಬಿಡುಗಣ್ಣು : ತೆರೆಗಣ್ಣಾಗಿ ನೋಡುತಿರೆ, ಗುರುತಿಸಿದನಯ್ ಪಿತನನು (ಶ್ರೀರಾಮಾ. ೧೦೪-೧೦೭) : ಅವನೆಲ್ಲ ತೆರೆಗಣ್ಣಿನಿಂದ ನೋಡಲು ಕಲಿತಿದ್ದಾನೆ (ಸ್ವಪ್ನಹೊ. ೨೧೨).

[ ತೆರೆ$_1$ (< ತೆಱೆ$^3_1$) + ಕಣ್ಣು (< ಕಣ್) ]

**ತೆರೆಗಯ್** 'ತೆಱೆಗಯ್' ನೋ.

**ತೆರೆಗೂಡು$_1$** (ಕ್ರಿ). ಅಲೆಗಳಿಂದ ಕೂಡಿರು,–ತುಂಬಿರು : ದೇವಗಂಗಾನದಿ ಗಗನಗಾಮಿನಿಯಾದ ಭಾವವ ನೋಡಬೇಕೆನುತ ಭಾವಿಸಿ ತೆರೆಗೂಡಿ ಕಾವೇರಿ ನೆಱೆ ಗಗನಾವಲಂಬಿತೆಯಾಗಿಹಳು (ಕಂನವಿ. ೫-೪೪).

[ ತೆರೆ$_4$ + ಕೂಡು$_1$ ]

**ತೆರೆಗೂಡು$_2$** (ನಾ). ಒಳಗಿರುವುದು ಕಾಣುವಂತಿರುವ ಗೂಡು,–ಕೋಶ : ದಿಂಡುಗಳು ಆವರಿಸಿದ್ದರೆ ಆವರಣಗಳು (Closed Cells) ; ಗೂಡು ರೆಕ್ಕೆ ಅಂಚಿನವರೆಗೂ ಇದ್ದರೆ ತೆರೆಗೂಡುಗಳು (Open Cells) (ಕೀಟಜೆ. ೧೯). [ ತೆರೆ$_1$ (< ತೆಱೆ$^3_1$) + ಗೂಡು ]

**ತೆರೆಗೆಯ್ಸು** (ಕ್ರಿ). ಪರದೆಯನ್ನು ಹಾಕಿಸು ; ಮಱೆಮಾಡಿಸು : ವೃಷಭೇಂದ್ರನಂ ಕರೆಯಲ್ಕೆಂದಡೆಳಸಿ ತೆರೆಗೆಯ್ಸಿ ಬಸವಂ . . . ಅದಱ ಮಱೆಯೊಳಗಿರ್ದಂ (ವೃಷವಿ. ೪೧-೫). [ ತೆರೆ$_4$ + ಕೆಯ್ಸು ]

**ತೆರೆಗೈ** 'ತೆಱೆಗಯ್' ನೋ.

**ತೆರೆಗೊನೆ** (ನಾ). ಅಲೆಯಮೇಲ್ಭಾಗ,-ನೆತ್ತಿ,–ತುದಿ: ಎಲರಲೆಪದಿನೊಗೆದ ತೆರೆಗೊನೆ[ಪಾಠಾಂ. ಮೊಗೊನೆ]ಯ ತೂರ್ಪನಿಯ ತುಂತುಱುಗಳಿಂ ಮುಸಗುವ ಮುಂಜಿನೊಳಂ ಅಂಜದೆ ಪೊಕ್ಕು (ಕಾದಂಪೂ. ೧೧೭) ; ನೀರ್ವಾನಸು ಪೆರ್ಬು ಜಿಸುಡೆ ಪಸರಿಸುವ ತೆರೆಗೊನೆವೊಳ್ ತೇಂಕಿ ಬರ್ಪ ಜಳಮ್ಯಣಾಳನಾಳಮುಂ ಜಳವ್ಯಾಳಮೆಂದು ಕೆಲದ ಬಿಲದಿಂ ಒಡಿಯಲೆಂದು ಧೀಂಕಿಡುವ ವಿಷಾಪಹಾರಶಾಲೂರಜಾಲಂಗಳ್ (ಚಂದ್ರಪು. ೫-೪೦ ವ) ; ತೆರೆಗೊನೆಯೊಳ್ ತೆರಳ್ದು ನಿಱಿಗಟ್ಟಿದ ಕತ್ತುರಿಯೊಳ್ಗಸಱ್ . . ಮನಕ್ಕೆ ಬಂದಿರೆ (ವರ್ಧಪು. ೪-೭೩). [ ತೆರೆ$_4$ + ಕೊನೆ$_2$ ]

**ತೆರೆಗೊರಳು** (ನಾ). ತೆರೆದ ಕೊರಳು ; ಮುಕ್ತಕಂಠ: ಈ ಗೀತಪದ್ಧತಿ ರಕ್ತಿಯುತವಾದದ್ದು, ಹಾಗೆಯೇ ಗಟ್ಟಿಯಾಗಿ ... ತೆರೆಗೊರಳಿನಿಂದ ಹಾಡಬೇಕಾದುದು (ಯಕ್ಷಬ. ೭೭). [ತೆರೆ$_1$ (< ತೆಱೆ$^3_1$)+ಕೊರಳು (< ಕೊರಲ್)]

**ತೆರೆಗೊಳ್** (ಕ್ರಿ). ೧. ತರಂಗಗಳಿಂದ ಕೂಡಿರು ; ಅಲೆಅಲೆಯಾಗು : ಪರಿಕಲಿಸಿ ಕಲಸಿ ಕಪ್ಪುರದ ರಜಂ ಕುಂಕುಮದ ರಜಂ ಮೃಗೋದ್ಭವರಜಮೇಂ ತೆರೆಗೊಂಡುವೊ ಸಿತಚಾಮರಮರುದಭಿಹತಿಯಿಂದಮಾ ಸಭಾಕುಟ್ಟಿಮದೊಳ್ (ಜಗವಿ. ೧೦-೬೫). ೨. ಮಡಿಕೆಯಾಗು; ನಿರಿಗೆಗಟ್ಟು; ಸುಕ್ಕುಗಟ್ಟು : ತೆರೆಗೊಂಡ ಮೊಗಂ ನಡುಗುತ್ತುಮಿರ್ಪ ಕೈ . . . ನರೆಗೊಂಡ ಕಾಲ್ಗಳಿಂ ಮನಕೆ ವಿರಕ್ತಿಯುಂ ಪಡೆವ ಮುಪ್ಪಿನ ಪಾರ್ವನ ದೊರ್ಬನೊಪ್ಪಿದಂ (ಪುಣ್ಯಾಸ ೩-೮೧) ; ನೆರೆದಲೆಗೆ ಮುಸಿದೊಡೆದು ತೆರೆಗೊಂಡೊಡಲನು ಕತ್ತಲೆಯ ಮಱೆಗೆಯ್ದು (ಜಬಪು. ೧೦-೭೬).

[ ತೆರೆ$_4$ + ಕೊಳ್$_1$ ]

**ತೆರೆಚಿಮ್ಮಿಸು** (ಕ್ರಿ). ಅಲೆಯನ್ನು ಹೊಮ್ಮಿಸು,–ಉಂಟುಮಾಡು : ಈಗ ಚಕಾರ ಎತ್ತದ ಈ 'ಮಹಾಪ್ರಾಣಿ' ಆಮೇಲೆ ಒಂಟಿಯಾಗಿ ತೆರೆಚಿಮ್ಮಿಸುವ ಆಳಲ ಮೊರೆ (ಬದ್ಧಪ್ರ. IV, ೩೬೮೩). [ ತೆರೆ$_4$ + ಚಿಮ್ಮಿಸು ]

**ತೆರೆದುಱುಗಲ್** (ನಾ). ಅಲೆಗಳ ಸಮೂಹ,–ಗುಂಪು : ಜಲಚರಂಗಳ ಪೊಳಪಿನೆಸಕದಿಂ ಮುಸಗಿ ಮೊಱೆವ ತೆರೆದುಱುಗಲ್ (ಕಾದಂಪೂ. ೧೧೭) ; ಮಿಥ್ಯಾತ್ವವಿಷಜಳಧಿಯ ತೆರೆದುಱುಗಲೆನಿಸಿ ಪೊಱಪೊಣ್ಮದಸಂಖ್ಯಾತ ಲೋಕಮಾತ್ರ ದುಃಪರಿಣಾಮಂಗಳುಂ (ವರ್ಧಪು. ೧೦-೫೯ ವ) ; ಪೊಳೆಪುವಡೆದ ಪಾಲ್ಗಡಲ ತೆರೆದುಱುಗಲೊಳ್ ಪವಡಿಸುವ ಸಿರಿಯುಂ ಪೋಲ್ತಿರ್ಪಳ್ (ಕಬ್ಬಿಕಾ. ೩೦೫). [ ತೆರೆ$_4$ + ತುಱುಗಲ್ ( < ತುಱುಂಗಲ್) ]

**ತೆರೆದೆಗೆ** (ಕ್ರಿ). ೧. ಪರದೆಯನ್ನು ಓಸರಿಸು,–ಸರಿಸು : ನಾಂದಿಯನೋದಿ ಸೂತ್ರಧಾರಕಂ ಭೋಂಕನೆ ತೆರೆದೆಗೆಯೆ (ರಾಜಶೇ. ೫-೦೯ ವ) ; ತೆರೆದೆಗೆಯ ಲಲರಿಚಂ ಬೇಡೆಂಬ ಬಗೆಗೆ ಪೊರೆಯಲ್ಲಿ ? (ಕಾಲೂರ. ೧೮೮-೪೨೮). ೨. ಅಂತಃಪಟವನ್ನು ಎತ್ತು : ಅಂತು ತೆರೆದೆಗೆಯಲೊರ್ಬರೊರ್ಬರ ಮೊಗಮುಂ ನೋಟ್ಟಿ ಸಮಯದೊಳ್ ಹೇಮದತ್ತಂ ಕೈನೀರೆಱೆಯೆ (ದಶಕು. ೪-೧೨೪ ವ). [ ತೆರೆ$_4$ + ತೆಗೆ$_1$ ]

**ತೆರೆದೆಗಸು** (ಕ್ರಿ). ೧. ಪರದೆಯನ್ನು ಓಸರಿಸು,–ಸರಿಸು: ೨.=ತೆರೆದೆಗೆ ೨ ಸುಮುಹೂರ್ತಮಂ ಕೇಳ್ದು ತೆರೆದೆಗಸಿ ಭೂದಿವಿಜರ ಸಲ್ವರಕೆವೆತ್ತು ಧಾರೆಯನೆಱೆದನು (ಜೈಮಿಭಾ. ೩೧-೧೬).

[ ತೆರೆ$_4$ + ತೆಗಸು ( < ತೆಗೆಯಿಸು ) ]

**ತೆರೆದೊಂಗಲ್** (ನಾ). = ತೆರೆದುಱುಗಲ್ : ತೆರೆದೊಂಗಲ್ತೊರೆದಿರ್ಪ ತಣ್ಣೆಲರ್ಗಳಿಂ . . . ಮೆಲ್ಲುಣ್ಬರಂಗೆಯ್ವ ಹಂಸ ರಥಾಂಗಂಗಳಿಂ (ಕಾದಂಪೂ ೩೫೭). [ ತೆರೆ$_4$ + ತೊಂಗಲ್ ]

**ತೆರೆದೊಗಲು** (ನಾ). ಸುಕ್ಕುಗಟ್ಟಿದ ಚರ್ಮ,–ತೊಗಲು: ಬಟ್ಟಹೊಟ್ಟೆಯು ತೆರೆದೊಗಲ ಜೀರ್ಣಾಂಗದ ಗಡವ ಗರುಡಿಯು ನಿನ್ನ ಜಗಜಟ್ಟಿತನವನ್ನು ಏಕ್ಕತುಳದಿಂದ ಸವಿಗೊಳ್ಳಬೇಕೆಂಬ ರಣರಣಿಕೆಯು ನನ್ನನ್ನೀ ವೀರತಾಣ್ಡವ ದಿಂನಾಡಿಸುತ್ತಿದೆ (ಮಂತ್ರಶ. ೬೩-೧೨).

[ ತೆರೆ₁ + ತೊಗಲು (<ತೋಲ್₁) ]

**ತೆರೆದೋಱು** (ಕ್ರಿ). ಅಲೆಗಳನ್ನು ಕಾಣಿಸು,–ತೋರು; ಚಂಚಲವಾಗು: ಕಲೆ ಇಲ್ಲದ ಮೌಕ್ತಿಕದಂತೆ ಜರವಿಲ್ಲದ ರತ್ನದಂತೆ ತೆರೆದೋಱದ ಅಂಬುಧಿ ಯಂತೆ ಐದಲಿಕದವಂಗೆ ನಿಜ ಆಱುದವಂಗೆ . . . ಬೇಱೊಂದೆಡೆ ಇಲ್ಲ (ಮೋಕ್ಷಮಾ. ೧೧೧-೪೩೮). [ ತೆರೆ₁ + ತೋಱು ]

**ತೆರೆಪೊಡೆ** (ನಾ). ಮಡಿಲು; ಉಡಿ: "ತೆರೆಪೊಡೆಯೆಂದುಂ ಸೋಂಗಿಲೆಂದುಂ ಮಡಿಲ್" (ಕಶಸಾ. ೬೩-೩೯೬): "ತೆರೆಪೊಡೆಯೆನೆ ಮಡಿಲ್" (ಕಬ್ಬಿಕ್ಕೆ. ೭೫).

[ ತೆರೆ₁ + ಪೊಡೆ₃ ]

**ತೆರೆಬಟ್ಟೆ** (ನಾ). ಜವನಿಕೆ; ಪರದೆ: "ಪ್ರತಿಸೀರಾ, ಯವನಿಕಾ, ತಿರಸ್ಕರಣೀ–ಇ ತೆರೆಬಟ್ಟೆ, ಪರದೆ" (ಸಿದ್ಧಾಂತಿ. ೧೭೮).

[ ತೆರೆ₁ + ಬಟ್ಟೆ₂ ]

**ತೆರೆಬಾಯಿ** 'ತೆಱವಾಯ್' ನೋ.

**ತೆರೆಬೀಳು** (ಕ್ರಿ). ೧. ಪರದೆ ಕೆಳಕ್ಕೆ ಬರು: ದೃಶ್ಯ ಮುಗಿಯುವ ಮೊದಲೇ ತೆರೆಬಿತ್ತು (ರೂಢಿ). ೨. (ಆಲಂ) ಮುಗಿ; ಪೂರೈಸು: ಅಲ್ಲಿಗೆ ಆ ಕೆಲಸಕ್ಕೆ ತೆರೆಬಿದ್ದ ಹಾಗೆಯೇ (ರೂಢಿ).

[ ತೆರೆ₁ + ಬೀಳು₁ (<ಬೀೞ್₁) ]

**ತೆರೆಮಗುಳ್ಚು** (ಕ್ರಿ). ಅಲೆಯನ್ನು ಹೊಮ್ಮಿಸು,–ಅಪ್ಪಳಿಸು: ಕಾಳಜಲ ಶರಧಿ, ಮೆಯ್ಯಂ ಮುರಿಯುವ ತೆರದಿ ತೆರೆಮಗುಳ್ಚುತೆ, ಭರದಿ ಮುಲೆತುದು, ಮಹೇಂದ್ರ ಶಿಖರಂಗಳುಂ ನಾಣ್ಚದರಿ ಗೋಣ್ತಾಳ್ಗುಪೋಲ್ (ಶ್ರೀರಾಮಾ. ೫೮೬-೬೫). [ ತೆರೆ₁ + ಮಗುಳ್ಚು (<ಮಗುಟ್ಚು) ]

**ತೆರೆಮರೆ** 'ತೆರೆಮಱೆ' ನೋ.

**ತೆರೆಮಸಗು** (ಕ್ರಿ). ೧. ಅಲೆಯು ಉಂಟಾಗು,–ಏಳು,–ಉಕ್ಕೇರು: ಎಸೆ ಪುದು ವಳಿತ್ರಯಂಗಳೆನಿಸವಸಿಯುಳ ತೆಕ್ಕಸಿಱ್ . . . ತೆರೆಮಸಗಿದ ಲಾವಣ್ಯ ರಸದ ಪೊನಲೆಂಬಿನೆಗಂ (ಮಲ್ಲಿಪು. ೩-೬೬); ಕವಲಿಱದ ಕುಂತಳಂ ಗಂಗಾ ಧರನೊಳ್ ಪುರುಡಿಸಿ ತೆರೆಮಸಗಿದ ಕಾಳಿಂದೀನದಿಯುಂ ಶಿ[ರೋ]ಗ್ರು ಮೊಳ್ ಧರಿಸಿದುತಿರ್ಪುದು (ನಂಬಿರ. ೪-೨೪); ಸಾಂದ್ರಚಂದ್ರಿಕೆಯಿಂದಾ ನಂದಸುಧಾಬ್ಧಿ ತೆರೆಮಸಗಿದಂತೆ ಪಲ್ವೆಳಗು ಪಸರಿಸೆ (ರಾಜಶೇ. ೩-೮೦ ವ). ೨. (ಆಲಂ) ಹೆಚ್ಚಾಗು; ಅಧಿಕವಾಗು; ಅತಿಶಯವಾಗು: ಆತ್ಮಜ ಮುಖಸರೋಜಮುಂ ಮೋಹರಸಂ ತೆರೆಮಸಗೆ ನೋಟ್ಟ ಜನನಿಯು ಕರಿಯಾಲಿಗಳೆಂಬ ತುಂಬಿಗಳ್ ಧನ್ಯಂಗಳ್ (ಮಲ್ಲಿಪು. ೩-೧೨೦); ತೆರೆಮಸಗೆ ಕಾಂತಿ ನಾಭೀಸರೋಜಮಲ್ಲಾದೆ (ಗಿರಿಕ. ೩-೪೪): ದಳ್ಳುರಿದುಱುಗಲನು ತನಿಬಗಿದು ಭೀಮನ ರಥದ ಸುತ್ತಲು ಸೂಸಿ ತೆರೆಮಸಗೆ . . . ಉರವಣೆ ಸಿತಮಳಾಸ್ತ್ರ (ಕುವ್ಯಾದ್ರೋ. ೧೯-೪೭); ಸಿರಿವೆತ್ತ ಮೊಲ್ಲಡಿಯ ಚೆಲ್ವಿಕೆಗೆ [illegible] ತೆರೆಮಸಗುವುಗುರ ಕಾಂತಿಗೆ ಮಂಗಳಂ (ಗೀತಗೋ. ೩೪-೪); [illegible] ಧೂಪಂದೋಱುತಾ ಮನಃಕ್ಷೋಭಂ ತೆರೆಮಸಗೆ ಉಡಿದನ್ ([illegible]). [ ತೆರೆ₁ + ಮಸಗು₁ ]

**ತೆರೆಮಱೆ, ತೆರೆಮರೆ** (ನಾ). ೧. [illegible] ವಂ ನುಡಿಯೆ ಹಾಡೆಗಳುಲಿದೊಲಱಿಸುವುದು ಜಗದೊಳು (ನಂದಿಮಾ. ೧-೧೮). ೨. ಮುಚ್ಚುಮರೆ; ಗುಟ್ಟು; ರಹಸ್ಯ: ಪ್ರಾಣಕ್ಕೆ ಪ್ರಾಣ ಸಮದರುಶನವಾಗಿದ್ದವರಲ್ಲಿ ತೆರೆಮಱೆ ಎಂಬುದಿಲ್ಲ ನೋಡಯ್ಯ (ಶೂನ್ಯಸಂ. ೯೩-೩). **ತೆರೆಮರೆ**: ೧. ಅಮುಖಾಂಗೆ ತೆರೆಮರೆಯಲ್ಲಿ ತಾಂ ಕುಳಿತು (ಸೌಗಂಧಿ. [illegible]). 'ಕಱೆಮಱೆ' ಪರಾ.

**ತೆರೆಮರೆಯ ಪದ್ಧತಿ** = ಬುರಕಿಯನ್ನು ಧರಿಸುವ ಪದ್ಧತಿ; ಘೋಷಾ ಪದ್ಧತಿ: ಈ ಕಾಲದಲ್ಲಿ ತೆರೆಮರೆಯ ಪದ್ಧತಿ ಪ್ರಚಾರದಲ್ಲಿ ಬರುತ್ತಿತ್ತೆಂಬುದು . . . ತಿಳಿದು ಬರುತ್ತದೆ (ಕರ್ನಾಕ. ೧೩).

[ ತೆರೆ₄ + ಮಱೆ₂ ]

**ತೆರೆಮಾಲೆ** (ನಾ). ಅಲೆಗಳ ಮಾಲೆ,–ಸಾಲು: ಕೂಡೆ ಮಸಗಿತು ರಿಪುಚತುರ್ಬಲ ಜೋಡು ಮಾಡಿತು ಕಡಹದವರರು ಹೂಡಿದದ್ರಿಯು ನಂಬುಧಿಯ ತೆರೆಮಾಲೆ ಕವಿದಂತೆ (ಕುವ್ಯಾದ್ರೋ. ೧೦-೩೯); ಪರಧಿಯ ತೆರೆಮಾಲೆಗಳಂತೆ ಬಾನರ ತುರಗದ ಫೌಜೇಱಿದುದು (ಕುರಾಸಾಂ. ೨೦-೨೪). [ ತೆರೆ₄ + ಮಾಲೆ ]

**ತೆರೆಮುಗಿಲ್, ತೆರೆಮುಗಿಲು** (ನಾ). ಅಲೆಅಲೆಯಾದ ಮೋಡ: ತೆರೆ ಮುಗಿಲ ಮಱೆಗೆ ನಲ್ಲಂ ಬರೆ ತೆಗೆದೆಳಸುವುದುಮೊಗೆವ ಸುಯ್ಯೆಲರ್ಗಳಿನಾ ನೆರೆದ ಮುಗಿಲ್ ಕರಗೆ ವಿಯಚ್ಚರಿಗೇಂ ಕಲಿಸಿದುದೊ ಲಜ್ಜೆಯೊಳ್ ಕರಗುವುದಂ (ವರ್ಧಪು. ೫-೨೭); ತೆರೆಮುಗಿಲ ಬಱಿವಿಡಿದು ಭಾಸ್ಕರರಥ ಪಂಪರಿವ ತೆಜದ (ಪಾರ್ಶ್ವಪು. ೧೦-೧೦೨); ತೆರೆಮುಗಿಲನಡರ್ವ ವಿದ್ಯಾಧರಿ (ಯಶೋಚ. ೪-೯). **ತೆರೆಮುಗಿಲು**: ದೊರೆಮುಗಿಲು ತೆರೆಮುಗಿಲು ನಿಡುಮೋಹರದ ಮುಗಿಲು (ತೊರಚ. ೪-೬-೫). [ ತೆರೆ₄ + ಮುಗಿಲ್ ]

**ತೆರೆಮುಗಿಲು** 'ತೆರೆಮುಗಿಲ್' ನೋ.

**ತೆರೆಮುೞುಗು** (ಕ್ರಿ). ಅಲೆಯಲ್ಲಿ ಮುಳುಗು ನೆತ್ತಿಯುಮಿದುಳೊಡೆ ದುಣ್ಮುವ ನೆತ್ತರ ಧಾರೆಗಳ ತೀವೆ ತನ್ನಯ ಮುಖದೊಳ್ನೆತ್ತರನೆ ಕಾಱೆ ಕುರುಪತಿ ನೆತ್ತರ ಕಡಲೊಳಗೆ ತೇಂಕಿ ತೆರೆಮುೞುಗಿರ್ದಂ (ಗದಾಯು. ೯-೧೭). [ ತೆರೆ₄ + ಮುೞುಗು₁ (< ಮುೞುಂಗು) ]

**ತೆರೆಯ** (ನಾ). ಪರದೆಯನ್ನು ಹಿಡಿಯುವವನು: ಜನನ ಮರಣಂಗಳೆಂಬ ತೆರೆಯರ್ ಪಿಡಿದ ಸಂಸಾರದ ತೆರೆ ಸರಿಯೆ (ಬಸರ. ೪-೧೦೨).

[ ತೆರೆ₄ + –ಅ₇ ]

**ತೆರೆಯಾಡು** (ಕ್ರಿ). ಅಲೆಗಳ ಚಲನೆಯನ್ನು ಹೊಂದು: ಇರವಿನಲ್ಲಿ ಆ ತೆರಪು ತುಂಬಿ ತೆರೆಯಾಡುವಂತೆ ಕಡಲು ಅರಿವಿನೊಂದು ಪೊಸಬರವಿಗಾಗಿ ಹಾತೊರೆಯುತಿಹುದು ಒಡಲು (ನಲಮು. ೩೬-೩). [ ತೆರೆ₄ + ಆಡು₁ ]

**ತೆರೆಯಿಸು** 'ತೆಱೆಯಿಸು' ನೋ.

**ತೆರೆಯುಲಿಪು** (ನಾ). ಅಲೆಗಳ ಧ್ವನಿ,–ಮೊರೆತ: ಪಲತೆಱದ ಪಱಿಯ ದನಿ ತೆರೆಯುಲಿಪೆನೆ ಪೊಕ್ಕತ್ತು ಕಟಕಮಂ ನೋಟ್ಟರ ಕಣ್ಣಲಸೆ ವಿಭೀಷಣ ವಾಹಿನಿ ಜಲನಿಧಿಯಂ ಬಂದು ಪುಗುವ ಕುಲವಾಹಿನಿವೋಲ್ (ಪಂಪರಾಮಾ. ೧೨-೮೦). [ ತೆರೆ₄ + ಉಲಿಪು ]

**ತೆರೆಯೋಱ್** (ಕ್ರಿ). ಅಲೆಯೇಳು; ಉಬ್ಬರ ಹೊಂದು: ಸಾಗರಮಂ ಕೂಡೆ ತೆರೆಕ್ಕಿದಂ ತೊಟಸಿದಂ . . . ತೆರೆಯೋಱಲ್ ಕಡಲ್ ಕೆಸರ್ಮಸಗ ಗಲಂತಾ ದೇವಕೀನಂದನಂ (ಜಗವಿ. ೬-೧೮). [ ತೆರೆ₄ + ಏಱ್₁ ]

**ತೆರೆಯೊಟ್ಟಿಲ್** (ನಾ).=ತೆರೆದುಱುಗಲ್: ತರುಣಿಯರಂಬುಕೇಳಿಗೆ ಲಸಚ್ಛ ಳವಂ ಪುಗುವಾಗಳೊರ್ಬರೊರ್ಬರ ನೆಬಲೊಂದನೇಕವಿಧದಿಂ ತೆರೆಯೊಟ್ಟ ಲೊಳೆಯ್ದೆ ತೋಱಲ್ (ದಶಕು. ೧೧-೮೬). [ ತೆರೆ₄ + ಒಟ್ಟಿಲ್ ]

**ತೆರೆವಂಕು** (ನಾ). ಅಲೆಯ ಡೊಂಕು,–ವಕ್ರತೆ: ಆಗಸದ ಬಾಗು, ಚಂದ್ರಮನ ಗುಂಡಿನ ನುಣ್ಪು, ಸಾಗರದ ತೆರೆವಂಕು ... ಈ ಸೃಷ್ಟಿಯಿಂ ನಮ್ಮೊಳಾಗಿಹುದು ರೂಪರುಚಿ (ಮಂಕುತ. ೨೧೭). [ ತೆರೆ₄ + ವಂಕು₂ ]

**ತೆರೆವಳಿಗೆ** (ನಾ). ಗೌಸು; ಅವಕುಂಠನ: ಆ ಸಮರಸಂಭ್ರಮದೊಳ್ ಪೊರಜೆಯೊಳ್ ಕಾಲ್ಗೋದು ನಿಂದ ಮಂದರಾಚಲಧರನಗಲದೆಗದ ಮೊಗದ ಹರಿಗೆಯಿಂ ಮುಗಿಲ ತೆರೆವಳಿಗೆದೆ [ಪಾಠಾಂ. ತೆರವಳಿಗೆದೆ, ತೆರೆಯೊಳೊ]ಗೆದ ಬಱಸಿಡಿಲಂತೆಯುಂ (ಅನಂಪು. ೧೪-೬ ವ).

[ ತೆರೆ₄ + ವಳಿಗೆ₂ ]

**ತೆರೆವಾಯ್** 'ತೆಱೆವಾಯ್' ನೋ.

**ತೆರೆವಾಯಿ** 'ತೆಱೆವಾಯ್' ನೋ.

**ತೆರೆವಿಡಿ** (ಕ್ರಿ). ೧. ಅಲೆಗಳನ್ನು ಅನುಸರಿಸು,_ಹಿಂಬಾಲಿಸು : ಕಲುಷರ ಹಿತಂಗಳಿನಿಸುವ ಕೊಳದೊಳಗೆ . . . ಕಣ್ಗೊಳಿಪುವು ತೆರೆವಿಡಿದು ಪೊಳೆವ ರವಿಬಿಂಬಂಗಳ್ (ಕಾದಂಪೂ. ೨೦೯) ; ನಡುನೀರೊಳೊಗೆದ ನಳಿನಮಂ ಮುಂಚಿಯುಲೆಳಸಿ ಮುಗುಳ್ದು ತೆರೆವಿಡಿದೀಸುವೆಳೆವೇಡಿತಿ (ರಾಜಶೇ. ೬-೨೪ ವ). ೨. ಅಂತಃಪಟವನ್ನು ಹಿಡಿ : ಜೋಯಿಸರ್ . . . ಅಚ್ಚದುಗುಲ ದಿಂದೆರೆವಿಡಿದರ್ (ಉದ್ಭಟ. ೮-೫೬) ; ಮೃದುಶುಭ್ರತೆಯಿಂ ಮೆಱೆದಿರ್ಪ ಸೀರೆಯುಂ ತೆರೆವಿಡಿದರ್ (ದಶಕು. ೪-೧೨೩) ; ನೆಟ್ಟನೆ ತೆರೆವಿಡಿದರು ಕ್ಷತ್ರ ವಿಧಿಯಿಂದೆ ಮೆಟ್ಟಕ್ಕಿಯ ಮೇಲೆ ನಿಲಿಸಿ (ಮೋಹತ. ೧೩-೬೮). ೩. ಮರೆ ಮಾಡು ; ಮುಚ್ಚು : ನಾರಿಯರು ಕಂಡರು ಸುಲಜ್ಜಾಭಾರದಲಿ ತಡಿಗಡಿಗೆ ಪಾಯಿದು ಸೀರೆಗಳ ತೆರೆವಿಡಿದರಂಗೋಪಾಂಗಲತೆಗಳಿಗೆ (ಕುಮ್ಮಾಅ.೧೧-೩೦). [ ತೆರೆ$_4$ + ಪಿಡಿ$_1$ ]

**ತೆರೆವಿಡು** (ಕ್ರಿ). ಪರದೆಯನ್ನು ಬಿಡು : ವೆಳಗೆ ತೆರೆವಿಡಲ್ದೋಮುದರೆ ಯಕ್ಕುಂ (ಮಂಗರಾ. ೬೧-೧೭). [ ತೆರೆ$_4$ + ಬಿಡು$_1$ ]

**ತೆರೆವೇಂಟೆ** (ನಾ). ಮುಸುಕಿನ ಆಕಾರದ ಬಲೆಯನ್ನು ಹಾಕಿ ಬೇಟೆ ಯಾಡುವಿಕೆ : ಕಂತು ವಸಂತರ್ ತೆರೆವೇಂಟೆಗಿಟ್ಟದುಗುಲಂ ಪರ್ವಿತ್ತು ಚಂದ್ರಾತಪಂ (ಅನಂಪು. ೭-೮೭). 'ಪಟವೇಂಟೆ' ಪರಾ. [ ತೆರೆ$_4$ + ಬೇಂಟೆ ]

**ತೆರೆವೊಯ್ಲು, ತೆರೆಹೊಯ್ಲು** (ನಾ). ಅಲೆಗಳ ಹೊಡೆತ : ಪರಿಖೆಯ ತೆರೆವೊಯ್ಲಿಂದಂ ತೆರಳ್ದು ತಡಿವಿಡಿದು ತಕ್ಕೆಗಟ್ಟಿದ ಪೊಂದಾವರೆಯ ರಜದಂತೆ (ಮಲ್ಲಿಪು. ೨-೬೪); ತೆರೆವೊಯ್ಲಿಂದಾದ ತುಂತುರ್ವನಿ ನಿಜತನುವಂ ತೀವೆ ನಿದ್ರಾಂಗನಾನಿರ್ಭರ ಸಂಭೋಗಾಂತ್ಯದೊಳ್ಪೊಣ್ಮಿದ ಬೆಮರ್ವನಿಯುಂ ಪೋಲೆ (ಜಗವಿ. ೧-೫೩) ; ಮರದುಜುಂಗಲ್ಗಿರದೆಜಗಿ ಮುಂಚಿದ ಕರಿಕರಕಂಜ ನೀರ್ವೊಕ್ಕು ನಡುಗುವಂತೆ ತೆರೆವೊಯ್ಲಿಂ ಕಂಪಿಪದಜ ಪಡಿನೆಳಲ್ ಪರಿರಂಜಿಸೆಯುಂ (ರಾಜಶೇ. ೬-೨೪ ವ) ; ಲಾಲಾಜಲದಿಂ ತೀವಿದ ಬಾಲೆಯ ಬೆಳರ್ಗೆಂಪನಾಂತ ಬಾಯ್ ಕಂಗೊಳಿಸಿತ್ತಾಲೋಕಿಸೆ ತೆರೆವೊಯ್ಲೊಳಕಾಣ್ಬೆ ಬಾಯ್ದೆರೆದ ಸಜಲ ಶುಕ್ತಿಪುಟಂಬೊಲ್ (ದಮಸ್ಕ. ೧-೪೨). **ತೆರೆಹೊಯ್ಲು** : ಲವಣಾಬ್ಧಿ . . . ಬಡವರಿಗೆ ಬದುಕಿಲ್ಲವೆಂದಳ್ಳಿ ಹೊಯ್ವಂತೆ ತೆರೆಹೊಯ್ಲಿನಿಂ ಮೆರೆದುದು (ನವಮೋ. ೨-೯). [ ತೆರೆ$_4$ + ಪೊಯ್ಲು ]

**ತೆರೆಸೀರೆ** (ನಾ). ೧. ಪರದೆಯಾಗಿ ಉಪಯೋಗಿಸುವ ವಸ್ತ್ರ ; ಕಾಂಡಪಟ ; ಜವನಿಕೆ : "ಕಂಡವಡಂ ತೆರೆಸೀರೆ" (ಕರ್ಣಾನಿ. ೪) ; ಅರುಣ ಮಣಿಭೂಷಣಂಗಳ ಕಿರಣಂಗಳ್ ಪಸರಿಸಲ್ಕೆ ಮಣಿಭಿತ್ತಿಗಳಾಧರಿಸು ತ್ತಿರ್ದುವು ಕೆಂಪಿನ ತೆರೆಸೀರೆಗಳೆಂಬ ಶಂಕೆಯುಂ ಭರದಿಂದಂ (ಬಾಹುಪು. ೫-೯೫); ಪೊಂಬಳಿಯ ತೆರೆಸೀರೆಗಳ . . . ಸುವರ್ಣಾವಳಿಯ ದಿಂಡುಗಳೊಟ್ಟಿದವು ಬಂಡಿಗಳ ಜವ ಜಡಿಯ (ಕುಮ್ಮಾಗ. ೪-೦೪) ; ಸುತ್ತುವಳಸಿನ ತೆರೆಸೀರೆ ಕಣ್ಗೆ ರಂಜಿಸಿತು (ಮೋಹತ. ೩೬-೬೯) ; ಪೊಳೆವ ದೀಪಂ ಸೋಂಕಿ ತೆರೆಸೀರೆ ಬೇವುತಿರಲು (ಚಬಪು. ೬೨-೫೩); "ತೆರೆ" ಯಾಗಿ ಉಪಯೋಗಿಸುವ ಸೀರೆ (= ವಸ್ತ್ರ) ಇದು. ಬಯಲಾಟಗಳಲ್ಲಿ ವೇಷವು ಮೊದಲ ಬಾರಿ ರಂಗಸ್ಥಳಕ್ಕೆ ಬರುವಾಗ ಕೆಲವು ವೇಷಗಳಿಗೆ "ತೆರೆಸೀರೆ" ಹಿಡಿವ ಕ್ರಮವಿದೆ (ಸಂಶೋಧ. ೧೭೮). ೨. ಬೇಟೆಯಲ್ಲಿ ಪ್ರಾಣಿಗಳನ್ನು ಹಿಡಿಯಲು ಉಪಯೋಗಿಸುವ ಒಂದು ಬಗೆಯ ಬಟ್ಟೆ : ಪೆಬ್ಬಲೆ ತೆರೆಸೀರೆ ಕಾಲ್ಗಣ್ಣಿ ಪೆಳ್ಳಾರ ಹಬ್ಬುಗೆವಲೆಗಳ . . . ಹೊತ್ತು ನಡೆದರಂದಬ್ಬರ ಮುಸಗೆ ಶಬರರು (ಕುರಾಸಾಂ. ೨೭-೪೩). [ ತೆರೆ$_4$ + ಸೀರೆ$_2$ ]

**ತೆರೆಸು** 'ತೆಱೆಯಿಸು' ನೋ.

**ತೆರೆಸುತ್ತು$_1$** (ಕ್ರಿ). ಪರದೆಯಂತೆ ಸುತ್ತುಗಟ್ಟು : ಕೇಸಡಿಯ ಕೆಂಪಿನೊಳುಜ್ಜ್ವಲಚಿತ್ರಭಿತ್ತಿನಿಸ್ಸುಳ ನಿಜವಕ್ತ್ರೈಕಾಭರಣ ದೀಧಿತಿಯಿಂ ತೆರೆಸುತ್ತಿದಂತೆ ಕಣ್ಗೊಳಿಸೆ (ಮಲ್ಲಿಪು. ೩-೯೭) ; ತುರ ಗಾವಳಿಯುಂ ತೆರೆಸುತ್ತಿದಂತೆ ಕಾಯ್ದಾರದ ಬೀಸಿದಂತೆ (ಎಕ. XI, ಚಿಕ್ಕದು ೧-೨೨ ; 1319). [ ತೆರೆ$_4$ + ಸುತ್ತು$_1$ ]

**ತೆರೆಸುತ್ತು$_2$** (ನಾ). ಅಲೆ ಅಲೆಯಾಗಿ ಸುತ್ತಿಕೊಂಡಿರುವುದು : ಎಳವಾಟೆಯ ತಿರುಳೆಲೆಯ ತೆರೆಸುತ್ತಿನೊಳಮೆಸೆವ ಪಸುರ್ವಣ್ಣದರೊಳಗೆ (ಲೀಲಾವ. ೧೧-೫೦ ವ) ; ಅದಿಮುರ್ಗುತ್ತೆಯ ಸುತ್ತುಗಳೆ ತೆರೆಸುತ್ತುಗಳಾಗೆ ಯುಂ (ಚಂದ್ರಪು. ೬-೮೭ ವ). [ ತೆರೆ$_4$ + ಸುತ್ತು$_2$ ]

**ತೆರೆಸೇಲೆ** (ನಾ). = ತೆರೆಸೀರೆ ೧ : ತೆರೆಸೇಲೆ ಮುಱೆಯೊಳಾ ತೆಱೆದ ಗವಾಕ್ಷ ದೊಳೊರೆದು ನೋಡುತ ಬಾಹ್ಯಜನವ ಅರಸಿಯರಿದ್ದರು . . . ಸಾಲಾಗಿ (ಭರತ. ೧೨-೩೨). [ ತೆರೆ$_4$ + ಸೇಲೆ ]

**ತೆರೆಹೊಯ್ಲು** 'ತೆರೆವೊಯ್ಲು' ನೋ.

**ತೆರ್ಕಯ್ಸು** 'ತಱಿಕ್ಕೈಸು' ನೋ.

**ತೆರ್ಕೆ** 'ತಱಿಕ್ಕೆ' ನೋ.

**ತೆರ್ಕೆಗಡಲ್** (ನಾ). ಇನ್ನೊಂದು ಸಮುದ್ರದೊಡನೆ ಸೇರಿದ ಸಮುದ್ರ ; ಒಟ್ಟುಗೂಡಿದ ಬೇರೆಬೇರೆ ಕಡಲುಗಳು : ಅದಱ ಕರ್ಣಜಮರದ ಝಲ್ಲಿಯಂತೆ ಜಲ್ಲೆನೊಳ್ಕಿ ಧಾರೆಗೆದಱಿ ಪೇರ್ಕೈಸಿ ಸೂಸುವುಭಯಕಟತಟದ ಸೊರ್ಕುಕದಡಿನ ತೆರ್ಕೆಗಡಲ್ಗಳೊಕ್ಕೈಸಿ ಜಗಮನಿಕ್ಕಲೆಂದು ಮುಹಾವೃತಮು ನೆತ್ತಿಕೊಂಡ ಕಲ್ಪಾಂತಕಾಳನ ಕೂರ್ಚಜಾಳಂ ಪರ್ಚಿಕ್ಕಿ ಬೇಱಿ ಬೆರ್ಚಿ ದಂತಿರ್ದಪುದು (ಅನಂಪು. ೧೩-೨೦ ವ). [ ತೆರ್ಕೆ (<ತಱಿಕ್ಕೆ) + ಕಡಲ್$_2$ ]

**ತೆರ್ಕೆಗೊಳ್** 'ತಱಿಕ್ಕೆಗೊಳ್' ನೋ.

**ತೆರ್ಪಂಬಡೆ** 'ತೆಱಪುವಡೆ' ನೋ.

**ತೆರ್ಪತ್ತು** 'ತೆಪ್ಪಱು' ಪರಾ.

△ **ತೆರ್ಪಱು** 'ತೆಪ್ಪಱು' ನೋ.

**ತೆರ್ಪು** 'ತೆಱಪು' ನೋ.

**ತೆರ್ಪುಱು** (ಕ್ರಿ). ಅವಕಾಶವನ್ನು ಹೊಂದು : ಇನಿತಂ ಕೋಪಾವಳೇಪ ಭ್ರುಕುಟಿನಿಟಿಲದೊಳ್ ಪುಟ್ಟೆ ತೆರ್ಪುತ್ತಿಮಂ ತೊಪ್ಪನೆ ಮಾರ್ಪ್ಪರ್ಯ್ಯುಂ ದಿಶಾಧೀಶರನಿದರ ದಿಶಾಧೀಶರೊಳ್ ತಾಗಿಕುಂ (ಎಕ. VI, ಚಿಕ್ಕಮ ೦೬೦-೨೦ ; 1103 ?). [ ತೆರ್ಪು (<ತೆಱಪು) + ಉಱು ]

**ತೆರ್ಬು** 'ತಿರುವು$_3$' ನೋ.

**ತೆಲಂಬಯು** (ನಾ). ಒಬ್ಬಾತನ ಹೆಸರು : ಇವಕ್ಕೆ ಸಾಕ್ಷಿ ಅಮುಚ್ಚಾರ್ ತೆಲಮ್ಬಯರ್ ಕರಾಸರ್ (ಎಕ. IV, ಗುಂಡ್ಲುಪೇ. ೮೭-೫ ; ಸು. 750). [ ? + ಆಯ$_1$ (<ಅಯ್ಯ$_1$) ]

**ತೆಲವಿ** 'ತೆಲಿವಿ' ನೋ.

**ತೆಲಸಂಗ** (ನಾ). ಒಂದು ಊರಿನ ಹೆಸರು ; ℗ ಈಗಿನ ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನಲ್ಲಿರುವ ಊರು: ಆಯುರ್ವ್ವಿದ್ಯಾ ಕುಶಳಧರಾಮರರಿಂ ಲೋಕೋತ್ತರಮೆಸೆವುದಸದಳಂ ತೆಲಸಂಗ (ಕಇ. II, ೦೪-೧೧ ; ?). [ ? ]

**ತೆಲಿಗ** 'ತೆಲ್ಲಿಗ' ನೋ.

**ತೆಲಿಗೆ, ತೆಲುಗೆ** (ನಾ). ಒಂದು ಬಗೆಯ ಮರ ; ತಿಲಕವೃಕ್ಷ : "ತಿಲಕಃ = ತೆಲಿಗೆಯ ಮರಂ" (ಕಾಶಕ್ಕ. ೪೭). ತೆಲುಗೆ : "ತಿಲಕಃ_ ತೆಲುಗೆಯ ಮರನುಂ, ಹಣೆಯ ಬೊಟ್ಟುಂ" (ಕಾಶಕ್ಕ. ೨೨೬). [ <ಸಂ. ತಿಲಕ ]

**ತೆಲಿವಿ, ತೆಲವಿ, ತೆಲುಮೆ, ತೆಲ್ಮೆ** (ನಾ). ಜಾಣತನ ; ಬುದ್ಧಿವಂತಿಕೆ ; ತಿಳಿವು : ತೆಲಿವಿಯ ತಪ್ಪಿಸಿ ಬಲವನ್ನು ಹೋಗಾಡಿ ಅಲಿಯುಪಡಿಸಿದನಾಗ ಚಲದೊಳು ಶನಿಯು (ಮುನಿಶ. ೮೭). ತೆಲವಿ : ತೆಲವಿಗೆ ನಾನು

ತಲವಿಯಾಗಿಯುಂ ಯಿಾ ಭೇದಭಾವಗಳನ್ನೆಲ್ಲ ಗುರು ಅನುಗ್ರಹದಿಂದ ತಿಳಿದು (ತತ್ವಚಿಂ. ೨೮-೨). **ತೆಲುಮೆ** : ವಿಶೇಷವಾಗಿ ತೆಲುಮೆಯುಳ್ಳ ಮಹಾಪುರುಷರು ತಮ್ಮ ತರುವಾಯ ಹೆಸರು ನಿಲ್ಲುವ ಹಾಗೆ ಮಾಡಿಕೊಳ್ಳಬೇಕು (ಕಾಂಪೂಚ. ೫೩). **ತೆಲ್ಮೆ** : ಯುಂಕ್ತಿಗಳೊಳ್ ತೆಲ್ಮೆಯುಂ (ಸೌಗಂಧಿ. ೨೨೦-೪). 'ತಿಳ್ವಿ$_2$' ಪರಾ.

[ ದೇ.॥ ತಮಿ. ಮಲ. ತೆಳಿವು. ತುಳು. ತೆರಿವು ; ತೆಲು. ತೆಲಿವಿ ]

**ತೆಲುಂಗ, ತೆಲುಗ, ತೇಲುಂಗ, ತೈಲಂಗ** (ನಾ). ೧. ತೆಲುಗು ಭಾಷೆಯನ್ನಾಡುವ ಜನರ ದೇಶ ; ಆಂಧ್ರ : ಕೊಂಗು ಕಳಿಂಗ ಸಿಂಗಳ ಸುಲಾಟ ವರಾಟ ತೆಲುಂಗ ಮಾಗಧೋತ್ತುಂಗ ನೃಪಾಳರಾರುಮಿದಿರಾಂಪವರಿಲ್ಲೆನಗೆ (ಎಕ. VI, ಕಡೂರು. ೧೪೬-೪ : ಸು. 1180) ; ಪಾಂಚಾಳ ಚೋಳ ತೆಲುಂಗ ಭೂಭುಜರವನೆಸುಗೆಯ ತಾಳಲಾಜದೆ ತೊಲಗಿದರು (ನೇಮಿಸಂ. ೧೨-೮೩). ೨. ಆಂಧ್ರ ದೇಶಕ್ಕೆ ಸೇರಿದವನು : ಕಿಕ್ಕಿಜಿಗಿಜಿದು ಕುಳ್ಳಿರ್ದ ಲಾಳ ಗೌಳ . . . ತೆಲುಂಗ ಗುರ್ಜರ ಹಮ್ಮೀರ ನೇಪಾಳವರ್ಮೊದಲಾದ ರಾಜಪುತ್ರರ ಪಂಜಿನ್ಗಳೊಳಂ (೧೦ಕ. ೨-೧೦೫ ವ). **ತೆಲುಗ** ; ೨. "ತೆಲುಗನಾಂಧ್ರನೆನಿಕ್ಕು" (ಮಂಗರಾ. ೧೧೨-೬) ; ನಡುಭವಗಾ[ವು]ಣ್ಡಂಗೆ ತೆಲುಗರ ಮಾರಿಗಾವುಣ್ಡನೊಳ್ಪಟಿಜ್ಜಟ (ಎಕ. IV, ಹೆಗ್ಗಡ. ೧೨೪-೧೮ ; 1037) ; ತೆಲುಗರ ಮಾಗೆಯು ಕ್ರಮಿತರ ಮನೆ (ಎಇ. XIII, ೪೮-೭೯ ; 1112) ; ಇವನು ತೆಲುಗನಿವ ಮಗಧ ಇವನು ಕನ್ನಡಿಗ (ನೇಮಿಸಂ. ೨೩-೨೫೬) ; ಅಯ್ಯಯ್ಯ ಚೆನ್ನಾದುದೆನೆ ಕನ್ನಡಿಗರು ರಯ್ಯಾ ಮಂಚಿದಿಯನೆ ತೆಲುಗ ಅಯ್ಯಯ್ಯ ಎಂಚಪೊರ್ಲಾಂಡೆಂದು ತುಳುವರು ಮೆಯ್ಯುಬ್ಬ ಕೇಳಬೇಕಣ್ಣ (ಭರಜ. ೧-೭). **ತೇಲುಂಗ**: ೧. ದೊರೆಕೊಳ್ಗೆ ಬಲುಹಿಂತವಲ್ಲದಡೆಯಾ ತೇಲುಂಗ ರಾಜ್ಯಂಗಳಂ ಪುರ ಮೂಜಿಕ್ಕೆಣೆಯಾಗಿ ಮಾಡಿ ಕಳದಾ ತೇಜೋಗ್ರಮೆಂತಾದುದೋ (ಎಕ. XI, ದಾವಣ. ೫೯-೨೮; 1280). **ತೈಲಂಗ** : ೨. ತಲಗು ಬ್ರಾಹ್ಮಣರು (ತೈಲಂಗರು) (ಕಥಾಗ. ೮೩).

**ತೆಲ್ಗರ ಮಾರಿ** = ಒಂದು ಬಿರುದು : ಆಚರಸನ ಪುತ್ರಂ ಸರ್ವ್ವಾರ್ಥಿಕಾರಿ ತೆಲ್ಗರಮಾರಿ ಪತಿಕಾರ್ಯದುರಂಧರಂ (ಎಇ. XIV, ೨೭೨-೩೪ ; 1103). **ತೆಲ್ಲಂಗರಾಯಸ್ಥಾಪನಾಚಾರ್ಯ** = ಒಂದು ಬಿರುದು : ತೆಲ್ಲಂಗರಾಯಸ್ಥಾಪನಾಚಾರ್ಯ . . . ಕರ್ನಾಟರಾಯ ದಿಸಾಪಟ್ಟಃ ದ್ವಾರಾವತೀಪುರವರಾಧೀಶ್ವರ ವಿಷ್ಣುವಂಸೋದ್ಭವ (ಕೊಲ್ಲಾಪ್ತಾ. ೧೯-೩ ; 1261).

[ ತೆಲುಂಗು + – ಅ$_7$ ]

**ತೆಲುಂಗಿತಿ, ತೆಲುಗಿತಿ** (ನಾ). ತೆಲುಗು ಭಾಷೆಯನ್ನಾಡುವವಳು ; ತೆಲುಗಿನವಳು ; ಆಂಧ್ರಸ್ತ್ರೀ : ಕುಜುಂಬಿತಿ, ತೆಲುಂಗಿತಿ, ತೆಲ್ಲಿಗಿತಿ (ಶಮುದ. ೨೦೮ ಪ್ರಯೋ). **ತೆಲುಗಿತಿ** : (೬).

[ ತೆಲಂಗ + – ಇತಿ$_1$ (< – ಇತ್ತಿ) ]

**ತೆಲುಂಗು, ತೆನುಂಗು, ತೆನಂಗು, ತೆಲುಗು** (ನಾ). ೧. ದ್ರಾವಿಡ ಭಾಷಾವರ್ಗಕ್ಕೆ ಸೇರಿದ ಒಂದು ಭಾಷೆ; ಆಂಧ್ರಭಾಷೆ. 'ತೆಲುಂಗ' ಪರಾ. **ತೆನುಂಗು** : ೧. ತೆಲುಂಗು, ತೆನುಗು, ತೆನುಂಗು ಎಂಬುದಾಗಿ ತೆಲುಗು ಭಾಷೆಗೆ ರೂಪಗಳನ್ನು ಕೊಡುವುದು (ನೀತಿಸಾ. ೬ ಟೀಕೆ). **ತೆನುಗು** : ೧. ಮೇಲಿನ 'ನೀತಿಸಾ' ಪ್ರಯೋಗವನ್ನು ನೋಡಿ. **ತೆಲುಗು** ; ೨. ತೆಲುಗುದೇಶ ; ಆಂಧ್ರ : ಒಡೆಯಗೆ ಕೈಮುಗಿದೊಯ್ಯನೆ ತೆಲುಗು ನಾಡೊಡೆಯ ಸಾಗಿದನೊಂದು ಬಳಿಗೆ (ಭರಜ. ೨೨-೨೦); ಭುಜಬಲಾನ್ವಿತರಾದ ತೆಲುಗು ಭೂಪಾಲರ ತ್ರಿಜಗ ಮೆಚ್ಚಲು ಗೆದ್ದು ತಂದ ಗಜಘಟೆಗಳ ಶಾಲೆಗಳೊಪ್ಪಿದುವಾಗ (ಕಂನವಿ. ೬-೩೧).

[ ದೇ.॥ ತಮಿ. ತೆಲುಂಕು, ತೆಲುಙ್ಕು ; ಮಲ. ತೆಲುಙ್ಗು ; ತುಳು. ತೆಲುಂಗು, ತೆಲುಗು : ತೆಲು. ತೆಲುಂಗು. ತೆನುಂಗು ]

**ತೆಲುಗಕಾಂಬೋದಿ** (ನಾ). [ಸಂಗೀತ] ಒಂದು ರಾಗದ ಹೆಸರು: ಗುಮ್ಮಕಾಂಬೋದಿ ತೆಲುಗಕಾಂಬೋದಿ ಎಂಬಿವೇ ಕಾಂಬೋದಿಯ ಮಿಶ್ರರಾಗಂಗಳು (ವಿವೇಕ. ೨೩೫). [ ತೆಲುಗ (<ತೆಲುಂಗ) + ಕಾಂಬೋದಿ ]

**ತೆಲುಗಾಣೆಯ** (ನಾ). ಆಂಧ್ರ ಪ್ರದೇಶ : ತೆಲುಗಾಣೆ [ಪಾಠಾ. ತಿಗುಳಾಣ]ಯ ತೇರಬೀದಿ ತಿಗುಳನಾಡು ತಿಳಿದೆಡೆಯಾಡುವ ದಾರಿ (ಕುರಾಸಾಂ. ೫-೪೭). 'ತುರುಕಾಣ್ಯ' ಪರಾ.

[ ತೆಲುಗು + ಆಣ್ಯಂ (P ← ತೆಲು. ಆಣೆ = ದೇಶ) ]

**ತೆಲುಗಿತಿ** 'ತೆಲುಂಗಿತಿ' ನೋ.

**ತೆಲುಗು** 'ತೆಲುಂಗು' ನೋ.

**ತೆಲುಗೆ** 'ತೆಲಿಗೆ' ನೋ.

**ತೆಲುಮೆ** 'ತೆಲಿವಿ' ನೋ.

**ತೆಲ್ಮೆ** 'ತೆಲಿವಿ' ನೋ.

**ತೆಲ್ಲ$_1$** (ನಾ). ಶುಭ್ರವಾದುದು ; ಹೊಳಪುಳ್ಳುದು. 'ತೆಲ್ಲವಣ್ಣ' ಪರಾ.

[ ←ತೆಲು. ತೆಲ್ಲ ]

**ತೆಲ್ಲ$_2$** (ನಾ). ಎಳ್ಳೆಣ್ಣೆ : ತೈಲ . 'ತೆಲ್ಲಿಗ' ಪರಾ.

[ ←ಪ್ರಾ. ತೇಲ್ಲ. / ಸಂ. ತೈಲ ]

**ತೆಲ್ಲಂಟಿ, ತೆಲ್ಲಂಟೆ, ತೆಲ್ಲಟಿ, ತೆಲ್ಲಟೆ, ತೆಲ್ಲಟ್ಟಿ, ತೆಲ್ಲಟ್ಟು** (ನಾ). ೧. ಉಡುಗೊರೆ ; ಬಹುಮಾನ : ಏನಗೆನ್ನೋಪನ ಬಂದುದರ್ಕೆದುವೆ ದಲಾ ತೆಲ್ಲಂಟಿ (ಆದಿಪು. ೧೨-೪೪) ; ಈಶ್ವರಂ ಕೊಟ್ಟುದರ್ಕೆ ತೆಲ್ಲಂಟಿಯೆಂದು ಗೌರಿದೇವಿಯುಮಂಜಲಿಕಾಸ್ತ್ರಮೆಂಬಮೋಘಾಸ್ತ್ರಮಂ ವಿಕ್ರಮಾರ್ಜುನಂಗೆ ಕುಡೆ (ಪಂಪಭಾ. ೮-೨೬ ವ) ; ಲೆಕ್ಕವಿಲ್ಲದ ತೆಲ್ಲಂಟಿಯುನಾತ್ರ್ತ ಕೊಟ್ಟು ನೆಗಳ್ದಂ (ಎಇ. XIII, ೩೦೩-೨೪ ; 1125) ; ಅದಂ ಕಂದರ್ಪದ್ವಾಸದೇವಂ ಕಾಮದೇವಂಗೆ ಪಟ್ಟಂಗಟ್ಟಿ ಕೊಟ್ಟ ರಾಗರಾಜ್ಯಕ್ಕೆ ತೆಲ್ಲಂಟಿಯಾಗಿ (ಅರ್ಧನೇ. ೨-೩೮ ವ) ; ನಾನು ಹೋಗಿದ್ದೆ ಪಾಪಿ. ನನ್ನ ಸಿರಿಗೌರಿಗೆ ತೇರು ಹಬ್ಬದ ತೆಲ್ಲಂಟಿ ತರಲೆಂದು (ಕುಂಗಧ. ೫೩). ೨. ಮದುವೆಯ ಕಾಲಕ್ಕೆ ವಧೂವರರಿಗೆ ಕೊಡುವ ಬಳುವಳಿ ; ಮಯ್ಯಿ : "ತೆಲ್ಲಂಟಿ – ನಿಬ್ಬಣಂ" (ಶಮುದ. ಪರಿ. ೨) ; ಕರಮೊಸೆದಾ ದ್ರುಪದಜೆಯೊಳ್ ನೆರೆದೊಸಗೆಗೆ ತಮ್ಮ ಬೀರಮುಂ ಬಿಂಕಮುಮಂ ತೆಜವುಂ ತೆಲ್ಲಂಟಿಯುಂ ಪುಂಡರಿಕೇಸರಿಗಾಗಳೀವ ಪೋಲ್ ಬೆನ್ನಿತ್ತರ್ (ಪಂಪಭಾ. ೩-೭೨). **ತೆಲ್ಲಂಟೆ** : ೨. ಪ್ರಣತೇಂದ್ರಂ ವರನಂದು ಬಂದೆಸೆವ ಸೌಧರ್ಮಾದಿಗಳ್ ಬಂದ ನಿಬ್ಬಣಿಗರ್ ಕಲ್ಪದನಲ್ಪವಸ್ತುನಿವಹಂ ತೆಲ್ಲಂಟೆ (ಪುಷ್ಪಪು. ೧೨-೧೦೯). **ತೆಲ್ಲಟಿ** : ೧. ತೆಲ್ಲಟಿಯೆಂದು ಗಿರಿಜೆಯ ಮೆಚ್ಚಿ ಕೊಟ್ಟ ನಿಶಿತಾಸ್ತ್ರಮಂ . . . ಕೊಂಡು (ಪಂಪಭಾ. ೧೨-೨೦೧ ವ) ; ಮುಡಿಗೆ ಜೋಳಿಯ ತೆಲ್ಲಟಿಯೆಂಬ ನಾಟ್ಟುಡಿಯಂತೆ (ಧರ್ಮಾಮೃ. ೬-೧೭೫) ; ಈ ಧರ್ಮಕ್ಕೆ ತೆಲ್ಲಟಿಯಾಗೆ . . . ಕರಂಬಂ ಮತ್ತರು ಹತ್ತುಮನಿತ್ತ (ಕಇಅ. ೮೨-೬೮-೮೮ ; 1117) ; ಚಲ್ಲಿದವು ರಥ ಗಾಲಿ ಮುಜಿದವು . . . ಎಲ್ಲಿಯವು ರಥವಾಜಿ ವಾಜಿಗೆ ತೆಲ್ಲಟಿಯಲೇ ರಥಿಕ ಸೂತರು (ಕುವ್ಯಾಗ. ೧-೫೦) ; ಮೆಲ್ಗೆಲ್ಲ ಕುಳಿರ ತೆರೆ ಚೆಲ್ಲಾಡುತ್ತಿರಲು ತೆಲ್ಲಟಿಯ ನಗೆನುಡಿಯ ದೊಡ್ಡನೇದಂ ಪೋಪೆ (ಕಾಲೂರ. ೭೧-೧೨೮). **ತೆಲ್ಲಟೆ** : ೨. "ತೆಲ್ಲಟೆ[ಪಾಠಾಂ. ಟ್ಟು]ಯೆನಲ್ಕೆ ಮುಯ್ಯ್" (ಚತುನಿ. ೭೦) . **ತೆಲ್ಲಟ್ಟಿ** : ೧. ರಸದಂಬುಲದಿನಿಗುಟಿಕಿಂದೆಸೆದರ್ಪಮ್ಮೆರ್ದೆಯೊಳೊಪ್ಪುವನುರಾಗವನೇ ರಸನೆಯೊಳುಜ್ ತೆಲ್ಲಟ್ಟಿಯನೊಸೆದೊರ್ವಗೊರ್ವರೀವವೋಲ್ (ವೀರವಿ. ೬-೭೫). **ತೆಲ್ಲಟ್ಟು** : ೨. 'ತೆಲ್ಲಟೆ' ಪ್ರಯೋಗದ ಪಾಠಾಂತರವನ್ನು ನೋಡಿ.

[ ←ತೆಲು. ತೆಲ್ಲಂಟಿ, ತೆಲ್ಲಟಿ ]

**ತೆಲ್ಲಂಟಿಗೆ, ತೆಲ್ಲಟಿಗೆ** (ನಾ). ೧. ಬಹುಮಾನ ; ಉಡುಗೊರೆ. ೨. ಬಳುವಳಿ; ಮುಯ್ಯಿ: 'ತೆಲ್ಲಂಟಿಗೆಗೊಡು' ಪರಾ. **ತೆಲ್ಲಟಿಗೆ** : ೧. "ತೆಲ್ಲಟಿಗೆ

ಯೆನಲ್ ಮರ್ಯಾದೆಯಕ್ಕು" (ಕಶರ. ೪೮) ; ಮತ್ತಮಿಾ ಧರ್ಮಕ್ಕೆ ತೆಲ್ಲಟಿಗೆಯಾಗೆ (ಎಇ. IX, ೨೬೪-೮೮ ; 1117). ೨. "ತೆಲ್ಲಟಿಗೆವೆಸರು ಮುಯ್ಯೆಂದಕ್ಕು" (ಶಬ್ದಮಂ. ೬೩). P ಇಲ್ಲಿ 'ತೆಲ್ಲಟಿ' ಎಂಬ ಶಬ್ದದ ಚತುರ್ಥೀವಿಭಕ್ತಿಯ ರೂಪವಾದ 'ತೆಲ್ಲಟಿಗೆ' ಎಂಬುದನ್ನು ಸ್ವತಂತ್ರ ರೂಪವನ್ನಾಗಿ ಕೆಲವರು ಸ್ವೀಕರಿಸಿರಂವಂತಿದೆ. [ <ತೆಲ್ಲಂಟಿ ]

**ತೆಲ್ಲಂಟಿಗೆಗೊಡು,** ತೆಲ್ಲಟಿಗೆಗುಡು (ಕ್ರಿ). ೧. = ತೆಲ್ಲಂಟಿಗೊಡು: ಪುರವೆಂಬ ನಲ್ಲನೊಡನೆ ಸಿರಿ ಕೂಡಲು ಶರಧಿ ತನ್ನಯ ವಸ್ತುಗಳನೂ ತರಿಸಿ ತೆಲ್ಲಂಟಿಗೆಗೊಟ್ಟವೊಲ್ (ವರ್ಧಪ. ೧-೧೧೯). **ತೆಲ್ಲಟಿಗೆಗುಡು:** ೨. ಉಡುಗೊರೆಯಾಗಿ ಕೊಡು: ತನ್ನಸುವಂ ತೆಲ್ಲಟಿಗೆಗುಡುವ ತೆಜದೊಳ್ಕೊಟ್ಟಂ (ಗದಾಯು. ೨-೧೫). [ ತೆಲ್ಲಂಟಿಗೆ + ಕೊಡು₁ ]

**ತೆಲ್ಲಂಟಿಗೊಡು** (ಕ್ರಿ). ಬಳುವಳಿ ಕೊಡು: ವಸ್ತುವಾಹನಸಂದೋಹಮಂ ತೆಲ್ಲಂಟಿಗೊಟ್ಟು ವಧೂವರರಂ ತದೀಯಾಗಾರಕ್ಕೆ ಕಳಿಪಿ (ನೇಮಿಪು. ೧-೬೬ ವ). [ ತೆಲ್ಲಂಟಿ + ಕೊಡು₁ ]

**ತೆಲ್ಲಂಟಿದರ್,** ತೆಲ್ಲಟಿದರ್ (ಕ್ರಿ). ಕಾಣಿಕೆಯನ್ನು ತರು: ಉಡುಗೊರೆಯನ್ನು ತರು: ತೆಲ್ಲಂಟಿದರ್ಪ ಸಾಮಂತಸಂದೋಹದಿಂ . . . ಕರಮೆ ಕಣ್ಗೆಸೆದುದು ನರೇಂದ್ರಭವನಾಂಗಣಂ (ಅಜಪು. ೪-೭ ರಗಳೆ). **ತೆಲ್ಲಟಿದರ್:** ಜಿಲ್ಲಾದರಾ ಕಾಮನುತ್ಸವದಿಂ ತೆಲ್ಲಟಿದಂದ ಮಾಧವಪುರ ಶ್ರೀಲೀಲೆಯಂ ಬಾಲೆಯರ್ (ಶಾಂತಿಪು. ೮-೧೫). [ ತೆಲ್ಲಂಟಿ + ತರ್ ]

**ತೆಲ್ಲಂಟೆ** 'ತೆಲ್ಲಂಟಿ' ನೋ.

**ತೆಲ್ಲಕಾಕಮುಷ್ಟಿ** (ನಾ). ಒಂದು ಬಗೆಯ ಸಸ್ಯ: ಬಿಳೀಕಾಕಮುಷ್ಟಿ, ಪೆಲ್ಲ, ತೆಲ್ಲಕಾಕಮುಷ್ಟಿ (ಮೃಜಿಗಿ. ೦೯-೩೩೪). [ ? ]

**ತೆಲ್ಲಟ** 'ತೆಲ್ಲಂಟಿ' ನೋ.

**ತೆಲ್ಲಟಗ** (ಗು). ಹೊಳಪುಳ್ಳ; ಪ್ರಕಾಶಮಾನವಾದ: ಅಲ್ಲಿ ರಜಿಪ[ ಪ ] . . . ಪಲ್ಲವಿತವಾದ ಮರಕತ ನೀಲವಜ್ರದಿಂ ತೆಲ್ಲಟಗ ಮಣಿಗಳಿಂದ (ಲಿಂಗಪು. ೩-೨೭). [ <ತೆಲ್ಲ₁ ]

**ತೆಲ್ಲಟಗೆ** 'ತೆಲ್ಲಂಟಿಗೆ' ನೋ.

**ತೆಲ್ಲಟಗೆಗುಡು** 'ತೆಲ್ಲಂಟಿಗೆಗೊಡು' ನೋ.

**ತೆಲ್ಲಟಿಗೊಳ್** (ಕ್ರಿ). ೧. ಬಹುಮಾನವಾಗಿ ಪಡೆ. ೨. ಬಳುವಳಿಯನ್ನು ಸೆಳೆ; ಮುಯ್ಯಿಯನ್ನು ತೆಗೆದುಕೊಳ್ಳು: ಅವನಿಪ ಕಂತುವೆಚ್ಚ ಭವಬಾಣಮದೋವದೆ ಕೊಂಡು ಚಂಡವಿಕ್ರಮನ ಶಿರಕ್ಕೆ ತನ್ನ ಶಿರಮಂ ತವೆ ತೆಲ್ಲಟಿ [ಪಾಠಾಂ. ತಲೆ]ಗೊಳ್ಗುಮೆಂದು . . . ಓಡಿದಂ ನಿಜಪುರಕ್ಕೆ (ಕುಸುಮಾ. ೦೦-೮೮). [ ತೆಲ್ಲಟಿ (<ತೆಲ್ಲಂಟಿ) + ಕೊಳ್₁ ]

**ತೆಲ್ಲಟಿದರ್** 'ತೆಲ್ಲಂಟಿದರ್' ನೋ.

**ತೆಲ್ಲಟೆ** 'ತೆಲ್ಲಂಟಿ' ನೋ.

**ತೆಲ್ಲಟ್ಟೆ** 'ತೆಲ್ಲಂಟಿ' ನೋ.

**ತೆಲ್ಲಟ್ಟು** 'ತೆಲ್ಲಂಟಿ' ನೋ.

**ತೆಲ್ಲಪುನಿ** (ನಾ). ಒಂದು ಬಗೆಯ ಸಸ್ಯ; ಬಿಳಿಯ ತಾಳೆ: ಬಿಳಿಪೊಳಿಕು . . . ಬಿಳಿತಾಳೆ, ತೆಲ್ಲಪುನಿ (ಮೃಜಿಗಿ. ೩೯-೭೭೩). [ ? ]

**ತೆಲ್ಲಯಿಸು,** ತೆಲ್ಲಯ್ಸು, ತೆಲ್ಲೈಸು (ಕ್ರಿ). ೧. ದಪ್ಪವಾಗು; ವಂದವಾಗು: (ಕಿ). ೨. ಗಟ್ಟಿಯಾಗು; ಬಲಗೊಳ್ಳು; ಶಕ್ತಿಯುಂತವಾಗು: (ಕಿ). ೩. ಹೆಚ್ಚಾಗು; ಅಧಿಕವಾಗು: (ಕಿ). ೪. ಒಟ್ಟಾಗು; ಗುಂಪಾಗು: ಕಲ್ಲದಾಡುವ ತೆಲ್ಲಯಿಸಿದ ಮಲ್ಲಗಿಳಿಯ ಸವಿನುಡಿಗೆ . . . ತಲ್ಲಣಂಗೊಂಡು (ರಾಮಾಶ್ವ. ೭೩-೪). ೫. ಜಿಡ್ಡಿನಿಂದ ಕೂಡಿರು; ಸ್ನಿಗ್ಧವಾಗು; ಅಂಟಂಟಾಗು: (ಕಿ). ೬. ಬೆಳಗಿಸು; ಪ್ರಜ್ವಲಗೊಳಿಸು: ತೆಲ್ಲಯಿಸಿ ಮಂಗಳಾರತಿಯ ವನಿತೆಯರೆಲ್ಲ ಘಲ್ಲಯಿಸಿ ಹಾಡಿ ಪರಸುವ ಪೊತ್ತು (ಸಿದ್ಧರಾ. ೮-೮೮); ತೆಲ್ಲಯಿಸಿದಂ ಮೇಳಯಿಸಿದಂ (ಶಮಪ. ೫೪ ವ್ರಚನ) ; [illegible] ತಮಗೆ ತಮಗೆ ಪುದುವಲ್ಲದೊಡಂ ನಿಲ್ಲದೆ ಜಗದೊಳಪ್ಪಳ್ವರೆ ಸಲ್ಲಲಿತರ್ (ಚಂದ್ರಪ್ರಭು. ೧೨-೨೭). **ತೆಲ್ಲಯ್ಸು:** ೬. ಅಲ್ಲಲ್ಲಿ ಕೈದೀವಿಗೆಗಳು ತೆಲ್ಲಯ್ಸಿ [ಪಾಠಾಂ. ತೆತ್ತೈಸೆ, ಬೆಳಗೆ]ಪಲ್ಲವಿಸೆ ಪಲ್ಲವಸತ್ತಿಗೆ ಮೇಲ್ಮಸಗೆ (ನಂಬಿರ. ೧೦-೪೯). **ತೆಲ್ಲೈಸು:** ೧. "ತೆಲ್ಲೈಸಿತೆಂದು ಮಂದೈಸಿದಕ್ಕೆ ನಾಮವದು" (ಶಬ್ದಮಂ. ೫೦) ; "ತೆಲ್ಲೈಸಿತೆನೆ ಬುಧರಿನದು ಮಂದೈಸಿಯು ನಿಂದರ್ಥಮಪ್ಪುದು" (ಕವಿಕಂ. ೨೦೨). ೩. ತಂಪಿನಿಂ ತೆಲ್ಲೈಸಿ ಕೋಡುಗುಟ್ಟುವ ಗಾಳಿ (ಕಾಲೂರ. ೭೫-೧೩೮). ೬. ಭರದಿಂ ತೆಲ್ಲೈಸಿದ ಬಹು ಕರದೀಪಿಕೆಗಳ ಮರೀಚಿಮಾರ್ಗಮನಂತಾ ಪುರಲಕ್ಷ್ಮಿಯ ಸೀಮಂತದ ಸುರುಚಿರಕುಂಕುಮದ ರೇಖೆಯೆನಿಸಿತ್ತಾಗಳ್ (ಮಹಾನೇ. ೦೪-೪೭). ೭. ಅಳವಡಿಸು (?): ಅಂತು ದೇವತೆ ಕೊಟ್ಟ ಗದಾದಂಡಮನುರ್ಜಿದಮರಿಯಂ ನಿಮಿರ್ಜಿ ಪುಲ್ಲಿಯಂ ತೆಲ್ಲೈಸಿ ಗೊಂಡೆಯಮಂ ದಂಡೆಗೊಳಿಸಿ ಚಾರಣಾಕೃತಿಯಂ ಪಿಡಿದಾಗಳ್ (ದಶಕು. ೨-೨೫ ವ). [ ತೆಲ್ಲ? + -ಇಸು₃ ]

**ತೆಲ್ಲಯ್ಸು** 'ತೆಲ್ಲಯಿಸು' ನೋ.

**ತೆಲ್ಲವಣ್ಣ** (ನಾ). ಶುಭ್ರವಾದ ಬಣ್ಣ: ನುಣುಪಾಗಿ ಹೊಳೆಯುವ ಬಣ್ಣ: ಚೊಲ್ಲಣಿಗೆವಡೆದ ಚಿಂತಾರತ್ನಕಳಶದಿಂ ತೆಲ್ಲವಣ್ಣದ ಬಾಗಿಲಿಂ ಕನಕವಲಗೆಯಿಂ (ಲಿಂಗಪು. ೩-೨೧) ; ಪಲ್ಲವಿತಮಾದ ಹಲಸವರೆ ಪರ್ಕರೆಯವರೆ ತಲ್ಲಣಿಪ ಸವಿಗೊಡುವ ಸಾಲವರೆ ಸರಳವರೆ . . . ತೆಲ್ಲವಣ್ಣದ ಸೊಂಪಿನವರೆ (ಲಿಂಗಪು. ೮-೪೫). [ ತೆಲ್ಲ₁ + ಬಣ್ಣ₂ ]

**ತೆಲ್ಲಿಗ,** ತೆಲಿಗ, ತೇಲಿಗ₂ (ನಾ). ಎಣ್ಣೆಯನ್ನು ತೆಗೆದು ಮಾರಿ ಜೀವಿಸುವವನು; ಗಾಣಿಗ: "ತೆಲ್ಲಿಗ=ತೈಲಿಕ=ಎಣ್ಣೆವ್ಯಾಪಾರಿ" (ತದ್ಭಕೋ. ೦೯); ತೆಲ್ಲಿಗ ಸೇಣಿಗ ಮನೆವೀಡಿಲ್ಲಾದದು ತೆಜೆಯುಂ (ಎಇ. XIV, ೧೯೦-೨೯; 725); ಅಲ್ಲಿಯ ತೆಲ್ಲಿಗರು ಬಿಟ್ಟ ಧರ್ಮವೆಂತೆಂದಡೆ . . . ಸೋಟಿಗೆಯೆಣ್ಣೆಯಂ ಬಿಟ್ಟರು (ಎಕ. VII (S), ಶಿಕಾರಿ. ೩೩೪-೨೭; ಸು. 1100); ಹಿಂಡಿಯುಂ ನಂಬಿಯೆಣ್ಣೆಯನುಗುವ ತೆಲ್ಲಿಗನುಮಂ (ಧರ್ಮಾಮೃ. ೮-೫೦); ಪಡವಂದಿಗಂ, ಪತ್ತಳಿಗಂ, ತೆಲ್ಲಿಗಂ (ಭಾಷಾಭೂ. ೧೭೩ ಪ್ರಯೋ) ; ಹೇಜೆಬಂದೆಳ್ಳ ರಾಶಿಗಳ ತೆಲ್ಲಿಗರೊಯ್ದು ಗಾಣವಾಡೊಳ್ಳಿತೆನಿಸಿದ ತೈಲಕುಂಭಕೋಟಿಗಳ ತಂದರು (ಸಿದ್ಧರಾ. ೮-೫೦) ; ಖಿಲಪ್ರವರ್ತನಂ ತೆಲ್ಲಿಗರೊಳ್ . . . ಅಲ್ಲದೆ ತನ್ನೊಳಿಲ್ಲೆನಿಸಿರ್ಪುದು (ದಶಕು. ೧-೨೨ ವ) ; ತೆಲ್ಲಿಗಂಗೆಳ್ಳ ನುದಿನಂ ಬೆಳೆದುಂದವಾಯ್ತು (ಬಸವು. ೪೩-೭೦). **ತೆಲಿಗ:** ತೆಲಿಗರು ಸೇಡೆಯಂ ಬಿಟ್ಟರು ನಖರ ಸೇಡೆಯಂ ಬಿಟ್ಟರು (ಎಕ. V, ಬೇಲೂರು. ೧೭೭-೨೮ ; 1162). **ತೇಲಿಗ₂:** ಪಟ್ಟಣಸಾಮಿ ಸೋಮಿಸೆಟ್ಟಿಯರು ಮುಖ್ಯವಾದ ಸಮಸ್ತ ನಗರಂಗಳುಂ ತೇಲಿಗರುಮಿರ್ದ್ದು ಬಿಟ್ಟ ದತ್ತಿ (ಎಕ. VIII, ಸೊರಬ.೦೪೦-೮೫ ; 1193); ದೂಸಿಗರುಂ ಮುಖ್ಯವಾಗುಳ್ಳ ಪರದರುಂ ತೇಲಿಗರುಂ (ಎಇ. XIII, ೨೦-೫೦ ; 1204) ; ತೇಲಿಗರ ಗಾಣವೊಳಗಾಗಿ ಅರಮನೆಯ ನ್ಯಾಯವನ್ಯಾಯ ಮಳ ಬ್ರಯ ಏನು ಬಂದಡಂ ಆ ಸ್ಥಳದಾಚಾರ್ಯ್ಯರು ತಾವೇ ತೆತ್ತು ನಿರ್ನ್ನಯಿಸುವರು (ಎಕ. II, ೩೩೩-೧೭ ; 1206 ?) ; ತೇಲಿಗ ಹಿರಿಯ ತಂಮನ ಮಗ ರಾಮಗೆ ಪೊಂದು ಗ ೧ (ಎಕ. III, ತಿರುಮ. ೨-೭; 1367). [ ತೆಲ್ಲ₂ + -ಇಗ./ಸಂ. ತೈಲಿಕ ]

**ತೆಲ್ಲಿಗಗೆಱೆ**[3] (ನಾ). ಒಂದು ಕೆರೆಯ ಹೆಸರು: ಪಿರಿಯ ಕೆಱೆಯ ಕೆಳಗೆ ಗದ್ದೆ ಮ ೧ ತೆಲ್ಲಿಗಗೆಱೆಯ ಕೆಳಗೆ ಗದ್ದೆ ಮತ್ತರ್ ೧ ಕ ೬೫೦ (ಎಕ. XI, ದಾವಣ. ೨೦-೧೯ ; 1045). [ ತೆಲ್ಲಿಗ + ಕೆಱೆ[3] ]

**ತೆಲ್ಲಿಗಗೇರಿ** (ನಾ). ಗಾಣಿಗರ ಬೀದಿ.-ಕೇರಿ: ಮಂತ್ರವಾದಿಯುಂ ಕಂಡಗ್ರುಹದಂತೆ ತೆಲ್ಲಿಗರ್ ತಲ್ಲಣಿಸೆ ತೆಲ್ಲಿಗಗೇರಿಯುಂ ಪೊಕ್ಕು (ಧರ್ಮಾಮೃ. ೨-೨೦) [ ತೆಲ್ಲಿಗ + ಕೇರಿ ]

**ತೆಲ್ಲಿಗವನೆ** (ನಾ). ಗಾಣಿಗನ ಮನೆ: ಮೂಡಣ ತ[ಳ]ದ ಮೂಱು ಹ[ತ್ತಿ]ಯು ತೆಲ್ಲಿಗವನೆಯುಂಮನಾ ಶತದೊಳಗೆ . . . ಸರ್ವ್ವಬಾಧಾಪರಿಹಾರವಾಗಿ ಬಿಟ್ಟರು (ಕಇ. II, ೧೦-೩೦ ; 1080) ; ದೇವರ ಸಂದಾದೀ[ವಿ]ಗೆಗೆ ಬಿಟ್ಟ ××× ತೆಲ್ಲಿಗವನೆ (ಸೌಇಇ. XI-ii, ೧೨೯-೩೯ ; 1083).
[ ತೆಲ್ಲಿಗ + ಮನೆ ]

**ತೆಲ್ಲಿಗಿತಿ** (ನಾ). ಗಾಣಿಗರ ಹೆಂಗಸು ; ಗಾಣಿಗಿತ್ತಿ : ತೆಲುಗಿತಿ, ತೆಲ್ಲಿಗಿತಿ, ಚಿಪ್ಪಿಗಿತಿ (ಶಮದ. ೨೦೮ ಪ್ರಯೋ). [ ತೆಲ್ಲಿಗ + – ಇತಿ$_1$ (< – ಇತ್ತಿ) ]

**ತೆಲ್ಲೈಸು** 'ತೆಲ್ಲಯಿಸು' ನೋ.

**ತೆವಟಿಗೆ** 'ತಿವದಿಗೆ' ನೋ.

**ತೆವಟಿಗೆಬುಲ್ಲು** 'ತಿವಟಿಗೆ ಬುಲ್ಲು' ನೋ.

**ತೆವಟು** 'ತೆಂಟು' ನೋ.

**ತೆವಡೆ** 'ತೆಟ್ಟೆ' ನೋ.

**ತೆವಡೆಗಟ್ಟು** (ಕ್ರಿ). ಕಂತೆಕಟ್ಟು ; ಸಿವುಡುಗಟ್ಟು : ಹೊಲದಲ್ಲಿ ಆಳುಗಳು ಜೋಳದ ತೆನೆಗಳನ್ನು ತೆವಡೆಗಟ್ಟುತ್ತಿದ್ದಾರೆ (ರೂಢಿ).
[ ತೆವಡೆ (< ತೆಟ್ಟೆ) + ಕಟ್ಟು$_1$ ]

**ತೆವರ್** 'ತೆಮರ್$_2$' ನೋ.

**ತೆವರ** 'ತೆಮರ್$_2$' ನೋ.

**ತೆವರಿ** 'ತೆಮರ್$_2$' ನೋ.

**ತೆವರಿಕೆ** (ನಾ). ಹೀಯಾಳಿಕೆ : ಆಗವೋಡಲ್ಕವರು ಓಡಿತೆಂದು ನಮ್ಮ ತೆವರಿಕೆ ಗುಮ್ಮಟಲಿಲ್ಲಲೆ ಈಗ ದಂಡಂ ಮಣಿಯೆನುತ್ತ ಬಗ್ಗಿಸಿ ಕೆಡಹೆ (ಚತುಪು. ೭-೩-೩೭). [ ತೆವರು$_1$ (< ತೆಮರ್$_1$) + – ಇಕೆ ]

**ತೆವರಿಸು** (ಕ್ರಿ). ೧. ಅಟ್ಟು ; ಓಡಿಸು : ಇಲ್ಲಿಗಾತಂ ಬರಲು ಕದಹುದೆಱೆಯದೆ ಕಟಕಿಗಳನಾಡಿಸಿ ಕೆಳದಿಯರ ಕಯ್ಯಿಂದ ತೆವರಿಪುದೆನುತೆ ಬುದ್ಧಿಗಲಿಸಿ (ಸೌಂದಪು. ೧೫-೨೦) ; ತವಕದಲಿ ತತ್ಕ್ಷಣದಿನಭೂಕೆ ಸ ವ ರು ಧಿ ರ ಮುಬ್ಬೆದ್ದು ಸುರಸೈನ್ಯವನು ತೆವ[ಪಾಠಾಂ. ಬೆದ]ರಿಸಿತೇನನೆಂಬೆನು ಸಮರ ಸಂಭ್ರಮವ (ತೊರರಾ. ೬-೩೩-೪) ; ಬ ವ ರ ಕ್ಕೆ ದು ವ ಸಿದ್ಧಸಾಧ್ಯರ ತೆವರಿಸುತೆ ರಣವಿಜಯ ರಭಸದ ರವಳಿಯಿಂ ಸಂಚರಿಪ ಸಾಲ್ವನ ಕಂಡ ವಿಹಗೇಂದ್ರ (ಅಂಬಿಕಾ. ೨೩-೧೪). ೨. ಧ್ವಂಸ ಮಾಡು; ನಾಶಗೊಳಿಸು: ತೆವರಿಸಿದನನಿಬರ. [ ಪಾಠಾಂ. ಸವರಿದನು ಮತ್ತಾ ] ಚತುರ್ಬಲನಿವಹವನು ನಿಮಿಷಾರ್ಧದಲಿ (ಕುವ್ಯಾಗ. ೨-೩೨). ೩. ಕಳೆ ; ನಿವಾರಿಸು ; ಪರಿಹರಿಸು : ಲಿಂಗವಿದು ತಾಪತ್ರಯಂಗಳಂ ತೆ ವ ರಿ ಪು ದು (ಸಿದ್ಧೇಪು. ೨೨-೧೦೬) ; ತಂದೆ ಪಂಚಾಕ್ಷರಿಯ ಮಂತ್ರಲಸದುಪದೇಶಮಂ ದಯದೊಳಿತ್ತೆನ್ನ ಪಾ ಪ ಕು ಲ ಮ ೦ ತೆವರಿಸು (ರಾಘಚ. ೧೦-೧೯). ೪. ಜರೆ ; ಹೀಯಾಳಿಸು : ಇರುಳರಸನಂ ಜಱೆವ ವದನವನಜದಯೆಸಳ ತೆಜನಂ ತೆವರಿಸುತಿರದೆ ತೊಳಗುವ ನಯನವಳಹರಿಯಿರವ ನೆಱೆ ನಗುವ ನಡು . . . ನೆಲವರೆಗಿಳಿದ ನಿಡುಜಡೆಯ ತರುಣಿಯರು (ನಂದಿಮಾ. ೯-೩೪).
[ ತೆವರು$_1$ (< ತೆಮರ್$_1$) + – ಇಸು$_3$ ]

**ತೆವರು$_1$** 'ತೆಮರ್$_1$' ನೋ.

**ತೆವರು$_2$** 'ತೆಮರ್$_2$' ನೋ.

**ತೆವರೇರು** 'ತೆವರೇಱು' ನೋ.

**ತೆವರೇಱು, ತೆವರೇರು** (ಕ್ರಿ). ದಿಣ್ಣೆಯನ್ನು ಹತ್ತು ; ಗುಡ್ಡವನ್ನು ಏರು: ಕಾಲುವೆಯುಗಳು ಕುಳಿತೆವರೇಱಲರಿದೆನಲು ಗಾಲಿವೊಗೆದುವು ಕೀಲು [illegible] ಗೋಳುಗುಟ್ಟಿತು ಪುರಜನಂಗಳು (ಶಾಶಿರಾ. ೧೧-೪೪) ; ತೆವರೇರು : ತವರುಮನೆಯಾ ದೀಪ ತೆವರೇರಿ ನೋಡೇನು (ಹಳ್ಳಿಯ. [illegible]). [ ತೆವರು$_2$ (< ತೆಮರ್$_2$) + ಏಱು$_1$ (< ಏಱ್$_1$) ]

**ತೆವಱು** [illegible] ನೋ.

**ತೆವಲು, ತೆವುಲಂ** (ನಾ). ೧. ಉತ್ಕಟವಾದ ಇಚ್ಛೆ ; ಗೀಳಂ; ಚಟ : ಈ ಮಾತುಗಳಿಂದ ಮಾಸ್ತೀವಳಿಗೆ ಹೆಂಡದ ತೆವಲು ಹತ್ತಿತು (ಪುನರು. ೧೪೬) ; ಆ ಕೂಟಕ್ಕೆ ಹೊಗೇಸೊಪ್ಪು ಎಲೆ ಅಡಿಕೆ ನಶ್ಯ ಸುಣ್ಣ ಮುಂತಾದ ತೆವಲು ಸಾಮಾನುಗಳನ್ನೊದಗಿಸಿ (ಹುಟ್ಟಿಹ. ೨೦). ೨. ಬೇನೆ ; ವ್ಯಾಧಿ : ನಿನಗೇನು ಬಂತು ತೆವಲು (ನಮ್ಮನು. ೧೧೨) ; ಸುಳ್ಳು ಹೇಳಲಿಕ್ಕೆ ನನಗೆ ಏನು ತೆವಲು (ಮಲಮ. ೫೯೨). **ತೆವುಲು** : ೧. ಅವಳಿಗೆ ಅಡಕಲೆ ತೆವುಲು ಜಾಸ್ತಿ (ರೂಢಿ). ೩. ತೀಟೆ ; ಬೆದೆ ; ನವೆ : ತೆವುಲು ತೀರಿದ ಮೇಲೆ ಲೌಡಿಯ ಸಂಗವೇಕೆ ? (ಗಾದೆ).
[ದೇ.॥ ತುಳು. ತೆವರ್ ; ತೆಲು. ತೆವುಲು, ತೆಗುಲು ]

**ತೆವಲುಗಾರ** (ನಾ). ಗೀಳಂ ಹಿಡಿದವನು ; ಚಟವುಳ್ಳವನು :(ಕ).
[ ತೆವಲು + – ಗಾರ (< – ಕಾಱ) ]

**ತೆವಳ್** 'ತೆಮುಱ್' ನೋ.

**ತೆವಳಾಟ** (ನಾ). ತೆವಳುವಿಕೆ ; ದೇಕುವಿಕೆ : ಎಳೆಯ ಮಕ್ಕಳ ತೆವಳಾಟವೂ ಹಾವಿನ ಹರಿದಾಟವೂ ಒಂದು ದೃಷ್ಟಿಯಲ್ಲಿ ಇದೇ ರೀತಿಯದು (ಮನೋನಂ. ೧೬೭). [ ತೆವಳು (< ತೆಮುಱ್) + ಆಟ ]

**ತೆವಳು** 'ತೆಮುಱ್' ನೋ.

**ತೆವಳೆ** (ನಾ). ಅಲಕ್ಷ್ಯ ; ಉದಾಸೀನ. 'ತೆವಳೆಗಾಣ್' ಪರಾ. [ ? ]

**ತೆವಳೆಗಾಣ್** (ಕ್ರಿ). ಉದಾಸೀನವಮಾಡು; ಕಡೆಗಣಿಸು: ಸತಿ ಪ್ರಯ್ಯಳ್ಬಿದ ಪಳ್ ರಘೂದ್ವಹ ಕುಲಸ್ತ್ರೀ ಸೀತೆ ಪೆಣ್ಬುಯ್ಯಲಂ ಶ್ರುತಿ ಕಯ್ಕೊಂಡುದು ಕೇಳ್ದಿದಂ ತೆವಳೆಗಂಡಂದೆನ್ನ ವಿಖ್ಯಾತಿ ದೂಷಿತಮಕ್ಕುಂ (ಪಂರಾಮಾ. ೯-೧೪೪). [ ತೆವಳೆ + ಕಾಣ್ ]

**ತೆವುಲು** 'ತೆವಲು' ನೋ.

**ತೆಳ್, ತೆಳಂ** (ಗು). ತೆಳ್ಳಿತು, ತೆಳ್ಳಿತ್ತು ಎಂಬುದಕ್ಕೆ ಸಮಾಸದ ಪೂರ್ವಪದವಾಗಿದ್ದಾಗ ಬರುವ ಆದೇಶ ರೂಪ. 'ತೆಳ್ಗನ್ನಡ', 'ತೆಳ್ನಡು', 'ತೆಳ್ವರಿಜು' ಪರಾ. ತೆಳು. 'ತೆಳುಂಗದಪು', 'ತೆಳುವಸಿಱ್' ಪರಾ. 'ತಿಳಿ$_2$' ಹೋ.

**ತೆಳ್ಪನೆಯ** = ತೆಳ್ಳಗಿರುವ : ತೆಳ್ಪನೆಯ ಕೋಟು ಧರಿಸಿದುದರಿಂದ ನೆಕ್ಲದೋವನ ಮೈಯಲ್ಲಿ ನಡುಕ ತಲೆದೋರಿತ್ತು (ಪುನರು. ೩೦೯); ದೃಷ್ಟಿ ಪಾಟವುಳ್ಳವರ ಬರಿಯ ಕಣ್ಣುಗಳಿಗೆ, ಮಬ್ಬಿನಲ್ಲಾಗಲಿ ತೆಳ್ಪನೆಯ ಮೋಡ ಮುಚ್ಚಿಕೊಂಡಿರುವಾಗಾಗಲಿ, ಶುಕ್ರನ ಕಲೆಗಳು ಅನೇಕ ವೇಳೆ ಕಾಣುವುದುಂಟು (ಜ್ಯೋತಿರ್ವಿ. ೧೧೬). [ < ತೆಳ್ಳಿತು ]

**ತೆಳಗು** (ನಾ). ಕೆಳಭಾಗ; ಅಡಿಭಾಗ: ಆ ಪುಸ್ತಕ ಪೆಟ್ಟಿಗೆಯ ತೆಳಗಿದೆ (ರೂಢಿ).

**ತೆಳಗಣ** = ಕೆಳಗಿರುವ ; ತಳದ : ನಾಲು ಆಳುವ ರಾಜ್ಯಘಟ್ಟದ ಮೇಲಿಣ ಠಾಣೆಯ ಘಟ್ಟತ್ತೆಳಗಣ ಠಾಣೆಯುಗಳಲ್ಲಿ (ಮೈಆರಿ. ೧೯೪೩, ೩೭-೧೭ ; 1642). [ < ಕೆಱಗು ]

**ತೆಳಗೆ** (ಅ). ಕೆಳಗೆ ; ಅಡಿಯಲ್ಲಿ : ಇದೂ ತಗ್ಗು, ಅದೂ ಗುಡ್ಡ, ಅಗೊ ಮಲೆಯ ಬೆಟ್ಟ ನೆಲ ತೆಳಗೆ ಬಿಟ್ಟ (ಗಂಗಾತ. ೪೦-೦೨). [ < ಕೆಱಗೆ ]

**ತೆಳಜು** 'ತೆಣಜು' ನೋ.

**ತೆಳು** 'ತೆಳ್' ನೋ.

△ **ತೆಳುಂಪು** 'ತೆಳ್ಪು' ನೋ.

**ತೆಳುಕಾಗದ** (ನಾ). ದಪ್ಪವಲ್ಲದ ಕಾಗದ : ತೆಳುಕಾಗದದ ಮೇಲೆ ಊರಿ ಬರೆಯಬಾರದು (ರೂಢಿ). [ತೆಳು (< ತೆಳ್) + ಕಾಗದ]

**ತೆಳುಗದಪು** 'ತೆಳ್ಗದಂಪು' ನೋ.

**ತೆಳುಗನ್ನಡ** 'ತೆಳ್ಗನ್ನಡ' ನೋ.

**ತೆಳುಗಲ್ಲ** 'ತೆಳ್ಗಲ್ಲ' ನೋ.

**ತೆಳುಂಗಟಿ** 'ತೆಳ್ಗಟಿ' ನೋ.

**ತೆಳುಗಾವಿ** (ನಾ). ತಿಳಿಯಾದ ಕಾವಿಬಣ್ಣದ ಸೀರೆ: ಸಾರಂಗವಟ್ಟೆ ಪಳಿ ಸಂಧ್ಯಾರಾಗಂ ತ್ರಿವಳಿ ಮಂಚಟಿಗೆ ಪಲ್ಲಕಿ ನಲ್ಲೂರ ತೆಳು[ಪಾಠಾಂ. ಳ] ಗಾವಿಯೆಂಬಾ ಸೀರೆಗಳಂ ಸತಿಯರೊಲಿಯೊಳುಡುಪಿದರಾಗಳ್ (ತ್ರಿಪುವಿ. ೧೦-೨೮) ; ಕುಂಬಳಗಂಟಿ ತೆರತವಳಿ ತೆಳುಗಾವಿಯುಂ ಬಿಳಿದಿನ ಸೀರೆ (ಅಮುಸಾಂ. ೪-೧೯). [ ತೆಳು ( < ತೆಳ್) + ಕಾವಿ ]

**ತೆಳುಗಾಳಿ** (ನಾ). ಮೆಲ್ಲನೆ ಬೀಸುವ ಗಾಳಿ ; ಮೆಲುಂಗಾಳಿ ; ಮಂದ ಮಾರುತ: ತೆಳುಗಾಳಿಯುಂ ಬಯಸಿ ಭದ್ರದೊಳು ಚರಿಸುವ ರತಾಂತ ಸತಿಯರ ಕಂಡನು (ಹಹಕಾ. ೪-೬೩); ಬಳಲಿಕೆಯಿಲ್ಲಮುಗಣ್ಣಾಜಿನಿನ್ನಯ ನಿಳಯಕ್ಕಿನ್ನೆಯ್ದೆ ಬಹಾಗ ತೆಳುಗಾಳಿಯಲ್ಲದ ಬಿಱುಗಾಳಿಯಿಲ್ಲ (ಭೀಜ. ೬೯-೧೮) ; ತೆಳುಗಾಳಿಗೊಯ್ಯನೆಯೆ ನಿರಿನಿರಿ ವಿಕಂಪಿಸುವ ವಟಿಕನಿರ್ಮಲ ನದಿಯ ಪುಳಕಿತಮುಕುರದಲ್ಲಿ ಮಜ್ಜನಕ್ಕುಜ್ಜುಗಿಸಿ (ಶ್ರೀರಾಮಾ. ೧-೯). [ ತೆಳು( < ತೆಳ್) + ಗಾಳಿ$_1$ ]

**ತೆಳುಗೊರಳು** (ನಾ). ತೆಳ್ಳನೆಯ ಕೊರಳು : ನೀಳವಾದ ತೆಳುಗೊರಳಿನ . . . ಎಂಟು ವರ್ಷದ ಹುಡುಗನೊಬ್ಬ . . . ನಾವಿಕ ಟೋಪಿಯನ್ನು ಧರಿಸಿಕೊಂಡಿದ್ದನು (ಪುನರು. ೪೪೦). [ ತೆಳು ( < ತೆಳ್) + ಕೊರಳು ( < ಕೊರಲ್) ]

**ತೆಳುತೆರೆ** 'ತೆಳ್ದೆರೆ' ನೋ.

**ತೆಳುದಗಡು** (ನಾ). ತೆಳುವಾದ ಲೋಹದ ಹಲಗೆ,-ಫಲಕ : ಝುಗ ಝುಗಿಪ ಬೆಳುದಿಂಗಳಿನ ತೆಳುದಗಡಿನಲು ತೊಳಗುವ ದುಕೂಲವ ಬಗಿದು (ಕುಮ್ಯಾಗ. ೫-೪೧). [ ತೆಳು ( < ತೆಳ್) + ತಗಡು ]

**ತೆಳುದುಗುಲ** (ನಾ). ಶುಭ್ರವಾದ ಬಟ್ಟೆ: ಮಳಯಜದ ಮಲ್ಲಿಗೆಯ ಮುತ್ತಿನ ತೆಳುದುಗುಲ ಸುಲಿಪಲ್ಲ ನಿಡುಗಂಗಳ ಜಗಗು ದೆಸೆ ಮುಸುಕು ತಿರೆ (ಸಾಳ್ವಭಾ. ೩-೩೫). [ ತೆಳು ( < ತೆಳ್) + ದುಗುಲ ]

**ತೆಳುದೊಗಲು** (ನಾ). ಸೂಕ್ಷ್ಮವಾದ ಚರ್ಮ : ನವುರಾದ ಚರ್ಮ : ತೆಳುದೊಗಲ ನಿಡುಸೋಗೆಯುಡುಗೆಯುನೆಳಗರುಳ ಸಿಂಗಾರದುಱುಬಿನ... ಕಾಳಿಜದಟ್ಟುಂಗುಳಿಗಳ ಕೆಳಗಳೊಳು ಕೊಡಗೂಸು ಪ್ರಾತನಿಕರವೊಪ್ಪಿದವು (ಕುಮ್ಯಾಭೀ. ೫-೩೪). [ ತೆಳು (< ತೆಳ್) + ತೊಗಲ್ (< ತೋಲ್$_1$) ]

**ತೆಳುನಿದ್ರೆ** (ನಾ). ಸಣ್ಣ ನಿದ್ರೆ ; ಮಂಪರು : ಸಿರಿಮುಂಚವುಂ ಸುತ್ತಿ ಮುತ್ತಿ ಕುಳ್ಳಿರ್ದ ಸತಿಯರು ಕೂಡೆ ಮಾತಾಡುತಿರುತಿರಲು ತೆಳುನಿದ್ರೆ ಕವಿದುದೇಂ ವರ್ಣಿಸುವೆನು (ಸೋಮುಚ. ೧-೮೪). [ತೆಳು (<ತೆಳ್)+ನಿದ್ರೆ ]

**ತೆಳುನೀರು** (ನಾ). ತಿಳಿಯಾದ ನೀರಂ ; ಶುಭ್ರವಾದ ನೀರು : (೬). [ ತೆಳು (<ತೆಳ್) + ನೀರು$_1$ (<ನೀರ್$_1$) ]

**ತೆಳುನೋಟ** (ನಾ). ಸ್ವಚ್ಛವಾದ ನೋಟ ; ನಿರ್ಮಲವಾದ ನೋಟ : ಸನ್ನೆಯ ನೋಟ ಸನ್ಮಾನದ ಸವಿನೋಟ . . . ಭಿನ್ನದೋಱದ ತೆಳು ನೋಟದ ಲಲಿತಾಂಗಿ [ಪಾಠಾಂ. ಬಿನ್ನಣದ ತೆಲ್ಪ ನೋಟವ ನೋಡುತಲಾಗ] ಚೆನ್ನೆಯರಿರ್ದರೊಂದೆಸೆಯ (ಅಬ್ಬಲೂ. ೩-೦೦೭). [ತೆಳು (< ತೆಳ್) + ನೋಟ ]

**ತೆಳುಪು** 'ತೆಳ್ಪು' ನೋ.

**ತೆಳುಬಣ್ಣ** 'ತೆಳ್ವಣ್ಣ' ನೋ.

**ತೆಳುಮಜ್ಜಿಗೆ** (ನಾ). ತಿಳಿಯಾದ ಮಜ್ಜಿಗೆ ; ನೀರುಮಜ್ಜಿಗೆ : ಪಾನಕ ವ್ವಾವು ಕಜ್ಜುರದ ಪಣ್ಗಳ ರಸಾಯನಮನೀಂಟಿ ತೆಳುಮಜ್ಜಿಗೆಯ ಕೊಂಡು ನೀರ್ಗುಡಿದು ಹೊಟ್ಟೆಯ ತಡಹುತೆಳ್ದು ಕಯ್ದೊಳೆದರು (ಸಮ್ಯಕ್ತ್ವ. ೭-೨೮). [ ತೆಳು (<ತೆಳ್) + ಮಜ್ಜಿಗೆ ]

**ತೆಳುಮೆಯ್, ತೆಳುಮೈ** (ನಾ). ಸ್ಥೂಲವಲ್ಲದ ದೇಹ : ಕೃಶ ಶರೀರ : ಕಚ್ಚುಕನ್ನಡಕದ ತೆಳುಮೆಯ್ಯ ಬಾಲೆಯೊಬ್ಬಳು ಆ ಭಾಷಣವನ್ನು . . . ತರ್ಜುಮೆ ಮಾಡುತ್ತಿದ್ದಳು (ಪುನರು. ೩೪೫). **ತೆಳುಮೈ** : ಅತ್ತಿಂದಿತ್ತ ತಿರುಗಾಡುತ್ತಿದ್ದ ತೆಳುಮೈಯ ಗುಜ್ಜಾರಿಯನ್ನು ಕಂಡು ಅವನು ಜು ಸಾರಿದನು (ಪುನರು. ೧೮೭). [ತೆಳು (< ತೆಳ್) + ಮೆಯ್ ]

**ತೆಳುಮೈ** 'ತೆಳುಮೆಯ್' ನೋ.

**ತೆಳುಮೊಗ** (ನಾ). ತೆಳುವಾದ ಮುಖ ; ಕೃಶವಾದ ಮುಖ : ಅವರಲ್ಲೊಬ್ಬಳ ವಯಸ್ಸು ಸುಮಾರು ನಲವತ್ತು. ಅವಳ ತೆಳುಮೊ ಬಿಳಿಚಿಕೊಂಡಿತ್ತು (ಪುನರು. ೧೪೧). [ ತೆಳು (< ತೆಳ್) + ಮೊಗ ]

**ತೆಳುವಸಿಱು** 'ತೆಳ್ವಸಿಱ್' ನೋ.

**ತೆಳುವಸಿಱು** 'ತೆಳ್ವಸಿಱ್' ನೋ.

**ತೆಳುವಸುಱು** 'ತೆಳ್ವಸಿಱ್' ನೋ.

**ತೆಳುವಳಿಕು** 'ತೆಳ್ವಳಿಕು' ನೋ.

**ತೆಳುವಾಸೆ** 'ತೆಳ್ವಾಸೆ' ನೋ.

**ತೆಳುವು** 'ತೆಳ್ವು' ನೋ.

**ತೆಳುವುಡಿ** (ನಾ). ಸಣ್ಣ ಪುಡಿ ; [illegible] : [illegible] ಮಳಲಿಡಿಯಲಿತ್ತಡಿಯ ತಳಗಡಿಯ ಪೊಳೆ ನೆಱೆಯಲುಱೆ . . . ಸಲೆ ಕಣ್ಗೆಸೆದಳಂದು ದಿವಿಜಸಿಂಧು (ಜೈಮಿಭಾ. ೯-೨೪). [ ತೆಳು (<ತೆಳ್) + ಪುಡಿ$_2$ ]

**ತೆಳುವೆಣ್ಣು** (ನಾ). ತೆಳುವಾದ ಶರೀರವನ್ನುಳ್ಳ ಹೆಣ್ಣು ; ಕೋಮಲೆ : "ತೆಳುವೆಣ್ಣು, ಲತಾಂಗಿ" (Sylph. ೩೦೩೧). [ ತೆಳು (<ತೆಳ್) + ಪೆಣ್ಣು (<ಪೆಣ್) ]

**ತೆಳುವೆಲರ್** 'ತೆಳ್ವೆಲರು' ನೋ.

**ತೆಳುವೆಳಗು** 'ತೆಳ್ವೆಳಗು' ನೋ.

**ತೆಳ್ಗದಂಪು, ತೆಳುಗದಪು, ತೆಳ್ಗದಪು** (ನಾ). [illegible] ಕೆನ್ನೆ : ನುಣುಪಾದ ಕೆನ್ನೆ; ಕೋಮಲವಾದ ಕಪೋಲ: ದೇವಿಯ ತಾಂಬೂಲ ಚ್ಛಾಯಾವಿಷ್ಕೃತವಾದ ತೆಳ್ಗದಂಪುಗಳೆಸೆಗುಂ [illegible] : [illegible] ಧಾರೆಯಕ್ಕೆ – ತೆಳ್ಗದಂಪು, ಬಳ್ಗನ್ನಡಂ (ಶಮದ. ೧೬೪ ಪ್ರಯೋ); [illegible] ತೆಳ್ಗದಂಪುಗಳ್ [illegible] . . . ಪೆಣ್ಗಳಿರ್ದರು (ಚಬಸು. ೭-೧೨). **ತೆಳುಗದಪು** : ಅವನ ಕುಳ್ಳಿರಿಸಿ ತೆಳುಗದಪಮಾಳಾಧರವ ಚುಂಬಿಸಿ ಸುಖದಳೆದಳು (ಕಂನವಿ. ೧೦-೩೦). **ತೆಳ್ಗದಪು** : [illegible] (ಸೂಕ್ತಿಸು. ೧೦-೨೭೧) ; ಪಸರಿಪೆಳನಗೆಯ ತೆಳ್ಗದಪಿನಿಂ . . . ಕಾಂತೆ ಕಣ್ಗೆಸೆದಿರ್ದಳು (ಜೈಮಿಭಾ. ೧೮-೩೯) ; ಮೆಲ್ಲಡಿ, ಬಳ್ವಾಳ್, ತೆಳ್ಗದಪು (ಶಬ್ದಾನು. ೬೦ ಪ್ರಯೋ) ; ಪೆರೆನೊಸಲ ಚೆಂದುಟಿಯ ನುಣ್ದನಿಯ ತೆಳ್ಗದಪಿನ . . . ಮುಗ್ಧೆ (ವೆಂಕಾರಾ. ೫-೭-೫೮). [ ತೆಳ್ + ಕದಂಪು ]

**ತೆಳ್ಗದಪು** 'ತೆಳ್ಗದಂಪು' ನೋ.

**ತೆಳ್ಗನ್ನಡ, ತೆಳುಗನ್ನಡ** (ನಾ). [illegible] ಕನ್ನಡ : [illegible] ಕನ್ನಡ : (೬). **ತೆಳುಗನ್ನಡ** : ಒಳುಗನ್ನಡವಚ್ಚಗನ್ನಡಂ ಪೊಸತೆಂಬುದು ತೆಳುಗನ್ನಡ ವಿಪ್ರದಿನಿವನಿಳೆಯೊಳ್ ಸತ್ಪುರುಷರೋದಿ ಕೇಳ್ವುದು ಸತತಂ (ಕವಿಚ. III, ೧೪೯. ರಾಜಾವಳೀ ಕಥೆ). [ ತೆಳ್ + ಕನ್ನಡ$_1$ ]

**ತೆಳ್ಗಪ್ಪುರ** (ನಾ). ಶುಭ್ರವಾದ ಕರ್ಪೂರ : ನೋಡಿದ ಕಣ್ಗಳಿಟ್ಟ ತೆಳ್ ಪ್ಪುರದ [illegible] ತೀವಿದ ತನಿಗೆನೆವಾಲಂತೆ ನೇರ್ಪಟ್ಟ ನಿಸ್ಸಗ್ಗದ ದೇಹಚಾಯೆಯಿಂ ತಣ್ಣನೆ ತಣಿಯದೆ ಲೋಕತ್ರಯಂ ಚಂದ್ರನಾಥ (ಧರ್ಮನಾ. ೫-೭೩) [ ತೆಳ್ + ಕಪ್ಪುರ ]

**ತೆಳ್ಗಲ್** (ನಾ). [illegible] ತೆಳ್ಗಲ್ಲೊಳ್ ಘಟಿಯಿಸುವುದು ಸುಸ್ಥಾನಶಯನನ [ ಮ ] ಷ್ಟಂತೆ [illegible] (ಅಶ್ವಶಾ. ೭-೫). [ ತೆಳ್ + ಕಲ್$_3$ ]

**ತೆಳ್ಗಲ್ಲ**, ತೆಳಂಗಲ್ಲ (ನಾ). = ತೆಳ್ಗದಂಪು : ಗಲ್ಲಕ್ಕೆ – ಗಲ್ಲಗಿವಿ . . . ಗಲ್ಲ [illegible]ಂ, ತೆಳ್ಗಲ್ಲ (ಶಮದ. ೨೯೮ ಪ್ರಯೋ) ; ತೆಳ್ಗಲ್ಲ ಪೂಸರನ ತೋಳ್ಗೆಲ್ಲ ವಟ್ಟಡಿಗಳೊಳ್ಗಾಡಿ ಜೋಗಿಗಳ ಬಾಳ್ಗೇಡಿ ನಳಿಸುಳಿಗುರುಳ್ಗರ್ಬಿನೊಳ್ಪಿನೊಂದೇಳ್ಗೆ ವಿಟರೆರ್ದೆವಾವುಗಳ್ಗಿಟ್ಟ ಪೇಳ್ಗೆ (ಉದ್ಭದೇ. ೫-೨೦). **ತೆಳುಗಲ್ಲ** : ತನುರುಚಿ ನಗುವುದು ರನ್ನದ ತೊಡವ ಮಿಗೆ ಪಚ್ಚೆಗೆಂಪ ಲತಗೆಯು ಹುರುಡಿಪುದು ತೆಳುಗಲ್ಲವಾ ಸ್ವಯಂಪ್ರಭೆಗೆ (ವರ್ಧಚ. ೪-೮೦).
[ ತೆಳ್ + ಗಲ್ಲ$_1$ ]

**ತೆಳ್ಗಱಿ**, ತೆಳಂಗಱಿ (ನಾ). ತಿಳಿಯಾದ ಗಂಜಿ,_ಅಂಬಲಿ : ಎರಡುಂ ಬಾಳಕ ಪದ್ಮಕಮೆರಡುಂ ಚಂದನಮೆನಿಪ್ಪುವಂ ತೆಳ್ಗಱಿಯಿಂದರೆದು ನಡುನೆತ್ತಿಯೊಳ್ ಪೂಸೆ ರುಜಾರ್ತನ ತೃಷೆಯ ದಾಹದೊದವಂ ಕಳೆಗುಂ (ಲೋಕೋಪ. ೯_೨೮). **ತೆಳುಗಱಿ** : "ಗಂಜಿ . . . ಕಾಂಜಿಕಮೆನೆ ತೆಳುಗಱಿ" (ವಸ್ತುಕೋ. ೯೩-೪). [ ತೆಳ್ + ಕಱಿ$_4$ (<ಕಳಿ$_5$) ]

**ತೆಳ್ಗೂದಲು** (ನಾ). ನವುರಾದ ಕೂದಲು ; ತೆಳ್ಳಗಿರುವ ಕೂದಲು : ನೀಟಾಗಿ ಬಾಚಿಕೊಂಡಿದ್ದ ತೆಳ್ಗೂದಲಿನ ಬಿಳಿಚುಮೋರೆಯ ತರುಣ ಕಲಾವಿದ (ಪುನರು. ೩೫೩). [ ತೆಳ್ + ಕೂದಲು (< ಕೂಂದಲ್) ]

**ತೆಳ್ದುಟಿ** (ನಾ). ತೆಳುವಾದ ತುಟಿ ; ತೆಳ್ಳಗಿರುವ ತುಟಿ : ಕೆದರ್ದ ತಲೆ ನವಿರರಮೆ ಮುಗಿದ ಕಣ್ಗಳ್ ಜೋಲ್ದ ವದನದಿಂ ಭುಜದೊಳೊಱಗಿದ ಕೊರಲ್ ತೆಳ್ದುಟಿಯ ತುದಿ (ಚಬಪು. ೧೦-೬೩). [ ತೆಳ್ + ತುಟಿ$_2$ ]

**ತೆಳ್ದೆರೆ**, ತೆಳಂತೆರೆ (ನಾ). ೧. ಸಣ್ಣ ಅಲೆ,_ತರಂಗ : ಶರದೊಳ್ಮುಳುಂಗಿ ನೆಗೞದ ಕರಿಕುಂಭಂ ಫೇನ ಪಿಹಿತಮೆಂಬಾದುದು ತೆಳ್ದೆರೆ ಮೇಲುದಱಿಂ ಪೊಣ್ಮಿದ ಸರಸಿಯ ಮಲಯಜ ವಿಲಿಪ್ತ ಕುಚಕುಂಭದವೋಲ್ (ಶಬಶಂ. ೨-೫೬). **ತೆಳುತೆರೆ** : ೧. ತೆಳುತೆರೆಯಿಲ್ಲದಿಂಗಡಲೊಳು ತೇಲುವ ಪೊಳೆವ ಚಂದಿರನೊಲು . . . ಬೆಳ್ಳಿಯ ಘಳಿಗೆವಟ್ಟಲು ರಂಜಿಸಿದುದು (ವರ್ಧಚ. ೫-೪೮). ೨. ತೆಳುವಾದ ಮುಸುಕು,_ಪರದೆ : ತೆಳುತೆರೆಯ ಮರೆಯಲ್ಲಿ ಅವಳ ಸುಂದರವಾದ ಮುಖ ಕಾಣಿಸುತ್ತಿತ್ತು (ರೂಢಿ). [ ತೆಳ್+ತೆರೆ$_4$ ]

**ತೆಳ್ದೇಹ** (ನಾ). = ತೆಳಂಮೆಯ್ : ಇಂತಪ್ಪ ಶೂರೆಯುರೆನುತಿರ್ದು ತೆಳ್ದೇಹಮಂ ತಾಳ್ದಿರೇಕೆಂದಳವಳು (ಮೋಹತ. ೪-೬೪).
[ ತೆಳ್ + ದೇಹ ]

**ತೆಳ್ನಡು** (ನಾ). ಕೃಶವಾಗಿರುವ ಸೊಂಟ; ಸಣ್ಣ ನಡು : ಬಂದರ್ ಗಡಣದೆ ತೆಳ್ನಡುವಿನ ಸೆಳೆನಡುವಿನ ಬಡನಡುವಿನಸಿಯುನಡುವಿನ ಸತಿಯರ್ (ಜಗವಿ. ೪-೦೨೦) ; ತೆಳ್ನಡು ಬಳ್ಕೆ ಸವೀಕದಂಬಕಂ ನಲಿದೊಡನೇಱೆ ನೀಱೆ ಬಿಡದೇಱಿದಳೊಯ್ಯನೆ ರಮ್ಯಹರ್ಮ್ಯಮಂ (ರಾಜಶೇ. ೭-೦೭).
[ ತೆಳ್ + ನಡು$_2$ ]

**ತೆಳ್ಪಱಿ** (ಕ್ರಿ). ಕೃಶತೆ ಅಳಿದಂಹೋಗು ; ದಪ್ಪವಾಗು : ಪೆತ್ತುಂ ತೆಳ್ಪಱಿಯದ ನಡು . . . ಮುನಿದುಂ ಜೆಲ್ವೊತ್ತಿರಿಪ ನಗೆಮೊಗಂ ಮೆಯ್ವೆತ್ತಿರೆ ಕರಮೊಪ್ಪಿದಪ್ಪರಲ್ಲಿಯ ಪೆಂಡಿರ್ (ಕಾವ್ಯಾವ. ೭೪೪).
[ ತೆಳ್ಪು + ಅಱಿ$_1$ ]

**ತೆಳ್ಪು**, ತೆಳಂಪು, ತೆಳಂಪು (ನಾ). ೧. ಪರಿಶುದ್ಧತೆ ; ನಿರ್ಮಲತೆ ; ಶುಭ್ರತೆ : ನೀರ ತೆಳ್ಪು ದುಗ್ಧಾಬ್ಧಿಗೆ ದೊರೆ ಸರಿ ಪೋಲ್ವೆಯೆಂಬೆನಱಿಯೆಂ ಪೊಗೞಲ್ (ಶಾಂತಿಪು. ೩-೫); ದಯೆಯಿಂದೊಳ್ಪಿನ ತೆಳ್ಪಿನ ಗುಣಗಣಾಳಂಕಾರದಿಂ ಮಾರ್ಗ್ಗನಿರ್ಣ್ಣಯದಿಂ ತತ್ವವಿಚಾರದಿಂ . . . ಅಧಿಕನೆಂದು (ಸೌಇಇ. XX, ೧೮-೧೯ ; 980) ; ಕಲಿಕಾಲದೇಳ್ಗೆಯುಂ ದೆಸೆಗಿಡೆ ತೂಳ್ದು ತಾಳ್ದಿ ಕೃತಲಕ್ಷ್ಮಿಯುನೊಳ್ಪಿನ ತೆಳ್ಪುಗಳ್ ಜಗಕ್ಕೆಸೆದಿರೆ (ಎಕ. VII, ಶಿಕಾರಿ. ೧೨೫-೦೫ ; 1019) : ಪೂತ ಪೂಗೊಳಗಳ ತೆಳ್ಪು [ಪಾಠಾಂ. ತಣ್ಪು] ತೆಂಕಣೆಲರೊಳ್ಪು ಲತಾಳಿಯ ತಳ್ಪು (ಬಂಹರಿ. ೩-೫) ; ನಿಳ್ಪುಂ ಬೆಳ್ಪುಂ ತೆಳ್ಪುಂ ತಳ್ಪೊಯ್ದಿರೆ . ಒಳ್ಪಂ ಗೆಡೆಗೊಂಡು ಸೊಗಯಿಸುವ ಮಂಡಗೆಯುಂ . . . ಇಟ್ಟರ್ (ಪಾರ್ಶ್ವಪು. ೮-೫೧) : ಶೋಭಿಸಿ ತೆಳ್ಪಂ ತಾಳ್ದ ಚಂದ್ರೋಪಳಮುಮಳ ಶರತ್ಪೂರ್ಣ ಶುಭ್ರಾಂಶುವಂ (ಪುಷ್ಪಪು. ೩-೭೬). 'ಕಡುದೆಳ್ಪು' ಪರಾ. ೨. ತೆಳುವಾಗಿರುವುದು ; ಸಣ್ಣಗಿರುವುದು : ಕೃಶವಾಗಿರುವುದು : ನುಣ್ಪುಸಿಱಿನೊಳ್ ತೆಳ್ಪು ಬಾಳೆದೊಡೆಯೊಳ್ ನುಂಪು ನುಡಿಯೊಳ್ ಸೊಗಸಿನಿಂಪು ಸಂಜನಿಸಿ ಮೆಱೆಯೆ (ಚಬಪು. ೩೪-೬). △ **ತೆಳುಂಪು** : ೨. ಬಸಿಱ ತೆಳುಂಪು ಕುಂದದೆ . . . ನುತ ತ್ರಿವಳಿ ಕೆಟ್ಟರದೆ (ನೇಮಿಪು. ೮-೦೦೩). **ತೆಳುಪು** : ೨. "ತೆಳುಪಾದುದು–ಪೇಲವ, ವಿರಲತನು" (ನಾಚಿರಾ. ೬); ಲೋಲಲೋಚನಂಗಳ ಪೊಳೆಪುಮಂ ತೆಳ್ವಸಿಱ ತೆಳುಪುಮಂ (ಮಹಾನೇ. ೧೪-೬೧ ವ).
[ ತೆಳ್ + – ಪು$_2$./ತಮಿ. ತೆಳಿಪು ; ತೆಲು. ತೆಲ್ಪು, ತೆಲುಪು ]

**ತೆಳ್ಪುಗೆಡು** (ಕ್ರಿ). ಶುಭ್ರತೆಯನ್ನು ಕಳೆದುಕೊಳ್ಳು ; ಮಲಿನವಾಗು: ಮದವದ್ದಂತಿ ವರೂಥವಾಜಿಭಟ ಸಂಘಾತಂಗಳ್ . . . ತೆಳ್ಪುರ್ವಿ ಪರ್ವಿದೊಡಾ ಮುನ್ನಿನ ತೆಳ್ಪುಗೆಟ್ಟು ಕೆಸಱಾಯ್ತಾಕಾಶಗಂಗಾಜಲಂ (ಪಂಪಭಾ. ೦೦-೨೯).
[ ತೆಳ್ಪು + ಕೆಡು$_1$ ]

**ತೆಳ್ಪುವೆಱು** (ಕ್ರಿ). ಶೋಭೆಯನ್ನು ಪಡೆ,_ಹೊಂದು ; ಶೋಭಿಸು : ಶರೀರಮುಬ್ಜಜನ್ಮನೆ ಸಮೆದಿಂದುಕಾಂತವನಕಾಂತೆಪೊಲೇಂ ತನೆ ತೆಳ್ಪುವೆತ್ತುದೋ (ಶಾಂತಿಪು. ೯-೦೯೮). [ ತೆಳ್ಪು + ಪೆಱು$_1$ ]

**ತೆಳ್ವಡೆ** 'ತ್ರಳ್ವಡೆ' ನೋ.

**ತೆಳ್ವರೆ** 'ತ್ರಳ್ವರೆ' ನೋ.

**ತೆಳ್ವೊಟಲ್** (ನಾ). ಕಿರಿದಾದ ಪೊಟರೆ,_ಡೊಗರು : ಪೆರ್ಮರನ ಪಾಱುಗೊಂಬಿನೊಳ್ ಪೊಡೆಯ ತೆಳ್ವೊಟಲೊಳೊತ್ತುಗಟ್ಟಿದ ಕಿಱುನೊಱಿನ ಸವಿಜೇನ ಸಜ್ಜೆನಿಂಬನಿಯುನೆಱೆದು (ರಾಮಾಶ್ವ. ೧೦೦-೨೯).
[ ತೆಳ್ + ಪೊಟಲ್$_1$ (< ಪೋಟಲ್) ]

**ತೆಳ್ಮಡಿ** (ನಾ). ಶುಭ್ರವಾದ ವಸ್ತ್ರ ; ಸ್ವಚ್ಛವಾದ ಬಟ್ಟೆ : ಬೆಳ್ದೆರೆಯ ಮುಗಿಲ ಹತ್ತಿಯ ತೆಳ್ಮಡಿಯನುಟ್ಟು ಪೂರ್ಣಮಾರಜನಿಯಂತೆಸೆದಳಾ ಕೌಸಲ್ಯೆ (ಶ್ರೀರಾಮಾ. ೧೪-೩೮೦). [ ತೆಳ್ + ಮಡಿ$_5$ ]

**ತೆಳ್ವಣ್ಣ**, ತ್ರಳಂಬಣ್ಣ (ನಾ). ೧. ತಿಳಿಯಾಗಿ ಬಳಿಯುವ ಬಣ್ಣ : ತೊಡವ ಬೆರಸುವ ತೆರಳ್ದುವಿಡುವರ್ಣದ ತೆಳ್ವಣ್ಣ[ಪಾಠಾಂ. ರ್ಣ]ದಧೌರ್ದಕದ ಬಹುವಿಧದ ವರ್ಣಕ್ರಮುಮುಂ (ವರ್ಧಪು. ೭-೩ ವ). **ತೆಳುಬಣ್ಣ** : ೨. ತಿಳಿಯಾದ ಬಣ್ಣ : ಗಂಡ ಮಾಟವಾಗಿ ಪೊಲಿದ ತೆಳುಬಣ್ಣದ ದೊಳು ಕೋಟನ್ನೂ ದೋರೆಟೋಪಿಯನ್ನು ಧರಿಸಿದ್ದನು (ಪುನರು. ೪೩೯).
[ ತೆಳ್ + ಬಣ್ಣ$_2$ ]

**ತೆಳ್ವದ** (ನಾ). ಮನ್ಮಥದ್ರವ : ಕಾಮರಸ : ತುಳ್ಕಿದವು ತೆಳ್ವದದಂತೆ ನವದ್ರವಾಂಬುಗಳ್ (ಲೀಲಾವ. ೨-೪) ; ಪೊಜಪಾಱೊಳುಚ್ಚಳಿಪ ತೆಳ್ವದಮಿರ್ವರೊಳೊಪ್ಪೆ (ಕಬ್ಬಿಕಾ. ೬೩೨) : ತಳ್ವಿಲ್ಲದೆ ತೆಳ್ವದಂ ಸುರಿಯೆ (ಸೂಕ್ತಿಸು. ೧೪-೫೭) ; ಮಾನಿತ ವರಾಂಗದೊಳ್ ತೆಳ್ವದಂ ಸೂಸೆ (ಚಬಪು. ೨೦-೨೦).
[ ತೆಳ್ + ಪದ$_1$ ]

**ತೆಳ್ವರಿಜು** (ನಾ). ನವುರಾದ ಉಡುಪು,–ಉಡುಗೆ : ತೊಟಲ್ವ ಕಣ್ಮಲರು ಮನಾಕುಳಂ ತಳೆದ ತೆಳ್ವರಿಜುಂ . . . ಅಪೂರ್ವಭಾವಮುಂ ಲಲನೆಗೆ ತಂದುವಂದನುದಿನಂ ಬಳೆಯುತ್ತಿರೆ ಗರ್ಭದರ್ಭಕಂ (ಪುಷ್ಪಪು. ೪-೧೫).
[ ತೆಳ್ + ಪರಿಜು ]

**ತೆಳ್ವಸಿರು** 'ತೆಳ್ವಸಿಱ್' ನೋ.

**ತೆಳ್ವಸಿಱ್**, ತೆಳಂವಸಿಱ್, ತೆಳಂವಸಿಱು, ತೆಳುವಸುಱು, ತೆಳ್ವಸಿರು, ತ್ರೆಳ್ವಸಿಱು, ತೆಳ್ವಸುರು, ತೆಳ್ವಸುಱು (ನಾ). ಕೃಶವಾದ ಹೊಟ್ಟೆ,–ಉದರ : ತನುರೇಖೆಗೊಂಡ ಕೊರಲೊಡ್ಡಿದ ಪೆರ್ಮೊಲೆ ತೆಳ್ವಸಿಱ್ (ಪಂಪಭಾ. ೧-೧೦೮) : ಸುದತಿಯ ತೆಳ್ವಸಿರ್ಱೆ ಪೊದಟ್ದುದು ವಕ್ಷ

ಸರೋರುಹಂ ಬೆಳರ್ತುದು (ಸುಕುಮಾ. ೧೦-೧೪) ; ಎಸೆವುದು ವಳಿತ್ರಯುಂ ಗಳಿನೆಸೆವಸಿಯುಳ ತೆಳ್ವಸಿಜು್ (ಮಲ್ಲಿಪು. ೩-೭೬) ; ಅವಳ ತೆಳ್ವಸಿಜು್ಸೆಗುಂ (ಜಗವಿ. ೧೦-೨೬) ; ತೆಳ್ವಸಿಜುೊಳಿಸೆವ ಸೊಂಪಿನಿಂ ತಾನುಂ ನೆಗೆತರ (ಕುಸುಮಾ. ೫-೮). **ತೆಳುವಸಿಜು್** : ಸಿದ್ಧರಾಮನಿಂಪಿಡ್ವರ್ಗಮಂ ಗೆಲಲು ನಡೆವಡಜನಿಟ್ಟ ಗೂಡಾರವಮಾ ಕಂಗೊಳಿಸಿತೆನೆ ತೆಳುವಸಿಜು್ ಪೆರ್ಚಿತು (ಸಿದ್ಧರಾ. ೧-೪೪). **ತೆಳುವಸಿಜು** : ಹೊಳೆವ ಕಂಗಳ ದೀರ್ಘ ಕೇಶದ ತೆಳುವಸಿಟಿ . . . ಶಂಕಿನಿಯರ ನೃಪಾಲನೀಕ್ಷಿಸಿದ (ಜೀವಂಧ. ೧೬-೪೨). **ತೆಳುವಸುಜು** : ತೆಳುವಸುಜಿ ಬಿಜುಪೊಯ್ವ . . . ಹಾಹಾರವದ ಕಾಯುದಲಿ ಲಲನೆ ಬರೆ (ಕುಮಾರವ್ಯಾ. ೭-೧೨) ; ಸೂಳುಪೊಯ್ವಿನ ತೆಳುವಸುಜಿ ಕರತಾಳದಲಿ ಹಾಹಾವಿರಾವದ ಮೇಳವದ ಗೀತದಲಿ ಬಂದಳು ದ್ರೌಪದೀದೇವಿ (ಕುಮಾ.ಗ. ೧೦-೧೪) ; ತ್ರಿದಶರ ಹೊಟ್ಟೆ ತೆಳುವ ಸುಜುಾಯ್ತು ಬೀತುದು ದೈವಗುರುಭೀತಿ (ನಿಘಾಗ. ೪-೦೦-೦೬). **ತೆಳ್ವಸಿರು** : ಸುಳಿಗುರುಳು ತೆಳ್ವಸಿರು ಬಡನಡುವು ನಡುಗೆ (ವಂಕಾರಾ. ೫-೬-೩೯). **ತೆಳ್ವಸಿಜು** : ಕಂಪಿಸುವ ನುಣ್ದೊಡೆಗಳ ಬಿದಿರುವ ಜಘನ ತೆಳ್ವಸಿಟಿ (ಮೋಹತ. ೦೯-೬೫). **ತೆಳ್ವಸುರು** : ಅಡಿ ಜಘನ ನಡು ತೆಳ್ವಸುರು . . . ಮುಡಿಗಡಣದಿ ಸಲೆ ಸೊಗಸುತಿರ್ಪ್ಪು (ನವಮೋ. ೨೪-೦೯). **ತೆಳ್ವಸುಜು** : ನಗೆಮೊಗದಲರ್ಗಣ್ಣ ಬಡಬಾಸೆ ತೆಳ್ವಸುಜಿ ತೊಂಗಲ್ಗುರುಳ ವಿಮಲ ಪದ್ಮಾವತಿಯು ನಿಟ್ಟಿಸಿದನು (ರಾಘಚ. ೧೩-೨೪).

[ ತೆಳ್ + ಬಸಿಜು್ ]

**ತೆಳ್ವಸಿಜು** 'ತೆಳ್ವಸಿಜು್' ನೋ.

**ತೆಳ್ವಸುರು** 'ತೆಳ್ವಸಿಜು್' ನೋ.

**ತೆಳ್ವಸುಜು** 'ತೆಳ್ವಸಿಜು್' ನೋ.

**ತೆಳ್ವಳಿಕು, ತೆಳುವಳಂಕು** (ನಾ). ಶುಭ್ರವಾದ ಸ್ಫಟಿಕ ; ನಿರ್ಮಲವಾದ ಪಟಿಕ : ಪಗಲನುದಂಶುವಿಂದುಗುಟ್ಟು ದೀವಿಗೆ ತೆಳ್ವಳಿಕಿಂದವಾದ ನುಣ್ಣಗಲಿಯೊಳ್ . . . ಸಜ್ಜೆಯೋವರಿಯಿದೋವರಿ ಮಾಡಿತು ಕಂತುಗೆಮ್ಮುಮಂ (ಚಂದ್ರಪು. ೮-೭೦). **ತೆಳುವಳುಕು** : ಕಡೆಗಣ್ಣ್ವಳಗೆಸೆದುವು ತತ್ಕಳಮೊಗೆಜಿಗಲೆನುತಾಗಸದೊಳ್ನಿಂದ ಗಿಳಿಯುಂ ಸೆಳೆಯಲೆನುತ್ತವರತ್ತಿದ ತೆಳುವಳುಕಿನ ಸೆಳೆಯೋ ಪಸುರ್ವಟ್ಟೆಯ ತೊಳಗುವ ಗಾಳಿಪಟಕೆ ಕಟ್ಟಿದ ರಜ್ಜುವಿದೋ ಎಂಬಂತೆ (ಜಯುಕಾ. ೧-೪೧) ; ತೆಳುವಳುಕಿನ ಬಟ್ಟಬಟ್ಟಲೊಳಗೆ ಕಣ್ಗೊಳಿಸುವ ಕಸ್ತುರಿಗೆಸಜು ಎಳಸಿದುದಿಂದುವುಂಡಲದ ನಡುವೆ ನಳನಳಿಪ ಕಳಂಕವಿದೆನಲು (ಕುರಾಸಾಂ. ೮-೧೩). [ತೆಳ್ + ಪಳಿಕು$_2$ (<ಪಟಿಕ$_1$)]

**ತೆಳ್ವಳ್ಳಿ** (ನಾ). ತೆಳ್ಳಗಿರುವ ಅಳ್ಳಿ ; ತೆಳುವಾದ ಪಕ್ಕೆ : ಆಜಿದ ಬೆಮರ್ ನಿಟ್ಟುಸುರ್ಗಳಿಂ ಪೊಯ್ವು ತೆಳ್ವಳ್ಳಿ[ಪಾಠಾಂ. ತೆಳ್ವಳಿಯು]ಬಳಲ್ದ ಕೈ ಮ್ಮೆಯ ಪೊಸಗಂಪು ಕೆದಜಿದ ನಿಜಿಯ ಸುರತಾಂತೆಯರ್ ದೇವಕಾಂತೆಯರ್ ಬರುತಿರ್ದರು (ಚಿಬಪು. ೦೯-೨೫). [ ತೆಳ್ವು + ಅಳ್ಳಿ$_1$ ]

**ತೆಳ್ವಾಸೆ, ತೆಳಂವಾಸೆ** (ನಾ). ನವುರಾದ ಬಾಸೆ: ಸಣ್ಣನಡು ಬಳಯಿ ತಿವಳಿಗಳತಗೆ ತೆಳ್ವಾ[ಪಾಠಾ. ಳುವಾ]ಸೆ ನುಣ್ಣನೆ ಪೊಗರ್ವಡೆಯೆ (ಜೈಮಿಭಾ. ೧೮-೩೪). **ತೆಳುವಾಸೆ** : ಮೇಲಿನ ಪ್ರಯೋಗದ ಪಾಠಾಂತರವನು ನೋಡಿ. [ ತೆಳ್ + ಬಾಸೆ$_1$ ]

**ತೆಳ್ವು, ತೆಳುವು** (ನಾ). ೧. = ತೆಳ್ಪು ೨ : ನಿಜಿಯ ಸಿಂಗರದುಡೆ ತೆಳ್ವುದಸಿಯ ಪೊದೆಯ . . . ಸೌಂದರಿಯುದರಸಿ (ಜೈಮಿಭಾ. ೧೦-೯).**ತೆಳುವು** : ೨=ತೆಳ್ಪು ೧ : "ಸ್ಫುಟಃ – ತೆಳುವುಂ, ವಿಕಾಸವುಂ" (ಶಾಕಶ. ೨೧). ೩. ಅಸ್ಥಿರವಾದುದು ; ಬೇಗ ಮರೆತುಹೋಗುವಂತಹುದು : ಜನತೆಯು ನೆನಪು ತೆಳುವಾದುದು ; ತಾತ್ಕಾಲಿ ಪ್ರಮೇಯ ಪ್ರಸಂಗಗಳಲ್ಲಿ ಅದಕ್ಕೆ ಹೆಚ್ಚು ಆದರ (ಚದೀವ. ೦೫೭). [ ತೆಳ್ + – ವು ]

**ತೆಳ್ವುಸುರು** 'ತೆಳ್ವಸುರು' ನೋ.

**ತೆಳ್ವಿಮರ್** (ನಾ). ಕಿರಿಂಬೆವರು ; ಸಣ್ಣನೆಯ ಬೆವರುಹನಿ: ವಿಭೂಷಣಾಂಶುಲತೆ ತಂದಲ ಬಿಂದುಪೊಲುಣ್ಪ ತೆಳ್ವಿಮರ್ಗಳಿಯಿಸ ಮೇಘಮಾಳಿಪೊಲದೇನೆಸೆದತ್ತೊ ನಭಃಪ್ರಯಾಣದೊಳ್ . . . ಖಚರಾಂಗನಾಜನಂ (ವರ್ಧಪು. ೫-೨೭). [ ತೆಳ್ + ಬೆಮರ್$_2$ ]

**ತೆಳ್ವೆಳಗ** (ನಾ). ಶುಭ್ರವಾದ ಬೆಳಕನ್ನುಳ್ಳವನು ; ಚಂದ್ರ : ಮಿಂಗಲ ಜ್ಞಣಂ ತೆಳ್ವೆ[ಪಾಠಾಂ. ತಣ್ಪೆ]ಳಗನಮರ್ದುಂಕಳೆವೆಳಗ . . . ಶಶಿಯ ನಾದುಂ (ಕಬ್ಬಿಗ. ೪೩). [ ತೆಳ್ವೆಳಗು + – ಅ$_7$ ]

**ತೆಳ್ವೆಳಗು, ತೆಳಂವೆಳಗು** (ನಾ). ಬೆಳ್ಳನೆಯ ಬೆಳಕು ; ಶುಭ್ರವಾದ ಬೆಳಕಂ : ತಿಳಿವೆಳಗಿನ ತೆಳ್ವೆಳಗಿನ ಬೆಳವೆಳಗಿನ ಬಳ್ಳಿವೆಳಗಿನೊಳ್ವೆಳಗಿನ ಬೆಳ್ವೆಳಗಿನ ಬೆಳಸಿನ ಸಿರಿಯೆನೆ ತೊಳತೊಳ ತೊಳಗಿದುದು ಮೂರ್ತಿ ಚಂದ್ರಪ್ರಭನಾ (ಶಬ್ದಾನು. ೧೪೦ ವ್ಯಾಖ್ಯಾ). **ತೆಳುವೆಳಗು** : ಪಳಿಕಿನ ಕಲಶದ ತೆಳುವೆಳಗಿನೆಳಕದಿನೆಳನೀರ ಪೊನಲೊಳ್ ಮುಬುಗಿಸುವಂತೆಯುಂ (ಅನಂಪು. ೭-೭೦ ವ). [ ತೆಳ್ + ಬೆಳಗು$_2$ ]

**ತೆಳ್ವೆಟ**[3] (ನಾ). ಗೆರೆಯಾಗಿರುವ ಚಂದ್ರ ; ಬಾಲಚಂದ್ರ : ಜಡೆಗಳ ಬುಬಲೇ ತಲೆದಳಿರ್ ಫಣಿ ಸುತ್ತಿದ ಬಳ್ಳಿ ತಾಳ್ದ ಬಾನ್ಗಡಲದು ಪುಷ್ಪವಾಲೆ ಗಜಿವೂ ಗಜಿ ತೆಳ್ವೆಜಿ (ಶಬಶಂ. ೭-೩). [ ತೆಳ್ + ಪೆಟಿ ]

**ತೆಳ್ವೊಗೆ** (ನಾ). (ಹಿತವಾದ ಪರಿಮಳದ) ತೆಳುವಾದ ಹೊಗೆ,–ಧೂಪ: ಚೌಮೂಲೆಗಳಲ್ಲಿಯೂ ಸೋಂಬಿನಿಂದ ಪಲವಾಕೃತಿಗಳಿಂದ ತೆಳ್ವೊಗೆಯ ಸಂಪದವನ್ನೊಯ್ಯನೆ ಏರಿಸಿ ಕುಡುತ್ತಿರುವ ಅಗುರು (ಬಟ್ಟಆ. ೮೨-೧೮).

[ ತೆಳ್ + ಪೊಗೆ$_2$ ]

**ತೆಳ್ವೊಡೆ, ತೆಳ್ಪೊಡೆ** (ನಾ). = ತೆಳ್ವಸಿಜು್ : ತೆಳ್ವೊಡೆ ಕಡುಚೆಲ್ವಡೆದುದು (ಅನಂಪು. ೬-೫). **ತೆಳ್ಪೊಡೆ** : ಕಡು ಬಿಣ್ಪುವೆತ್ತ ಪೊಜಜನ್ನರ್ಗಳುಗಿರ್ದವೆ ಸಣ್ಣ ಪುರ್ಬು ತೆಳ್ಪೊಡೆ ಸುಲಿವಲ್ಗಳಿಂದದ ಕದಂಬಿರದೊಪ್ಪಿನೆ ಕಣ್ಗೆ ತೋಜಿದಳ್ (ರಾಜಶೇ. ೧೧-೦೫). [ ತೆಳ್ + ಪೊಡೆ$_3$ ]

**ತೆಳ್ವೊರೆ, ತೆಳ್ಪೊರೆ** (ನಾ). ನವುರಾದ ಪೊರೆ,–ಪದರ: ಬೆಳ್ಮುಗಿಲ ತೆಳ್ವೊರೆಯಿನಿಂದ್ರಚಾಪಲೇಖೆಯುಂ ತೆಗೆವ ಶರಲ್ಲಕ್ಷ್ಮಿಯುಂ ಪೋಲ್ತು ನಿಜೋತ್ತರೀಯ ಪಲ್ಲವದ ಪೊರೆಯಿಂ ತೆಗೆದು . . . ಮಣಿದೊಡವನೊರ್ವಳಂಗ ನೆಗಿತ್ತಳ್ (ಮಲ್ಲಿಪು. ೪-೭೦ ವ) ; ಕೆಮ್ಮುಗಿಲ ತೆಳ್ವೊರೆಯ ಮುಜಿಯೊಳ್ ವಿಜುವ ಸಂಜೆವೆಟಿಯ ಮುಂಜುಕಮಂ ಮೆಜಿದುಂ (ವರ್ಧಪು. ೧೦-೫ ವ). **ತೆಳ್ಪೊರೆ** : ಕರಗಿಸೆ ಬೆಳ್ಳಿಯುಪ್ಪುಡಿದು ತೆಳ್ಪೊರೆಯೆತ್ತ ದುಕೂಲವಪ್ಪ ಕಂಡರಿಸೆ ಮರಾಳವಪ್ಪ . . . ಅಗುರ್ವನೊಳಕೊಂಡುದು ಚಂದ್ರಿಕೆ ಸಾಂದ್ರಭಾವದಿಂ (ಜಗವಿ. ೦೬-೦೦೯) ; ಪಿಡಿದ ಜವನಿಕೆಯ ಮುಜಿಯೊಳ್ ಕುಡುಮಿಂಚಿನ ಬಳ್ಳಿ ಮುಗಿಲ ತೆಳ್ಪೊರೆ[ಪಾಠಾಂ. ತೆಳ್ವೊರೆ]ಯೊಳ್ ಕಣ್ಗೆ ಸರಂ ಪೊಲದರೆ ತೋರ್ದುವು ತೊಡವಿನ ಬಿಡುವುಂ ಬಿಡೌಜನಂಗನ್ವೇಯುಂ (ಅನಂಪು. ೫-೯೪). [ ತೆಳ್ + ಪೊರೆ$_6$ ]

**ತೆಳ್ಸರಿ** (ನಾ). ಸಣ್ಣನೆಯ ಮಳೆ ; ಹನಿಮಳೆ : ಮೆಲ್ಸರಿ ಸೂಳ್ಸರಿ ದುಂಗಿಲೊಳ್ಗಲ್ಸರಿ ತೆಳ್ಸರಿ ಕರಂ ಪೊನಲ್ಸರಿಯಿಪ ಬಂಬಲ್ಸರಿ (ರಾಜಶೇ. ೮-೧೦೦) ; ಮೆಲ್ಸರಿ ತೆಳ್ಸರಿ ಸಾಲ್ಸರಿ ಸೂಳ್ಸರಿ ಕಾಲ್ಸರಿ ಸುರಿದವು ಉಧೋ ಉಧೋ (ಕ್ರಾಂಚರ್ಯ. ೫೨-೨೧). [ ತೆಳ್ + ಸರಿ$_6$ ]

**ತೆಳ್ಳ** (ನಾ). ೧. ಒಬ್ಬಾತನ ಹೆಸರು : ತೊರೆ ಕಾವಗದನುಂ ಬೀವಗವನುಂ ವಾರಬದಿಗದಾಲನುಂ ತೆಳ್ಳನುಂ ತಾಬಲಿಯನುಂ (ಎಕ. III, ನಂಜನ. ೦೩೯-೬; 915 ?). ೨. ಒಂದು ಕುಲದ ಹೆಸರು: [illegible] ಹಳ್ಳಿ ಹಾಡಿಲವಾಗಿಲ ಭೂಮಿಗೌರಂ ತೆಳ್ಳರ ಕುಲದ ನಜಿಯಂಗ ಗಾಉಂಡನ ಮಗಂ (ಎಕ. III, ಮಳವ. ೪೮-೧೦ ; 1699). [ ? ]

**ತೆಳ್ಳಗೆ** (ಅ). ೧. ಸ್ಪಷ್ಟವಾಗಿ ; ನಿಷ್ಪೃಷ್ಟವಾಗಿ ; ತಿಳಿಯುವಂತೆ : ಉಳ್ಳೊಂದುಗಳೊಳಗೆನಿತಜಿವುಳ್ಳರ್ಗಂ ತಿಳಿವಲಜಿಯದೆನಿಪಪದಗಳುವಂ

ತೆಳ್ಳಗಿರೆ ತಿಳಿಪುಗುಂ (ಪಂಪಭಾ. ೨-೩೫). ೨. ತಿಳಿಯಾಗಿ ; ನೀರಾಗಿ ; ಅಳ್ಳಕವಾಗಿ : ಒತ್ತರಿಸಿಯುದನು ತೆಳ್ಳಗೆ [ಪಾಠಾಂ. ನೆ]ಮಾಡಿ (ಸೂಪಶಾ. ೧-೨೫) ; ಜೀರಿಗೆ, ಮೆಂತ್ಯ, ನುಚ್ಚು ಈ ಮೂರನ್ನೂ ಮಜ್ಜಿಗೆಯೊಡನೆ ಅರೆದು ತೆಳ್ಳಗೆ ಕಲಸಿ . . . ಕೊಡಲು ಮತ್ತೊಂದು ಸಲ ವಾಂತಿಯಾಗುವುದು (ಸಕವೈ. ಪು. ೪೮೮). ೩. ತೆಳುವಾಗಿ; ಸಪುರವಾಗಿ: ಕೃಶವಾಗಿ: ಒಂಟೆಯ ಶರೀರವು ತೆಳ್ಳಗೆ ಇರುತ್ತದೆ (ಮುಂಬಯಿ. ೩-೬೪); ಗೆಡ್ಡೆಗಳನ್ನು ತೊಳೆದು ಸಿಪ್ಪೆ ತೆಗೆದು, ತೆಳ್ಳಗೆ ಕೊಯಿದು . . . ನೀರಿನಲ್ಲಿ ಬೇಯಿಸಬೇಕು (ಆಯುಸಾ. ೧೧೩).

ತೆಳ್ಳಗಾಗು = ೧. ನೀರಾಗು : ಅಂಬಲಿ ತೀರ ತೆಳ್ಳಗಾಗಿದೆ (ರೂಢಿ). ೨. ತೆಳುವಾಗು ; ವಿರಳವಾಗು ; ಹಗುರವಾಗು : ಹವೆಯು . . . ಮೇಲಕ್ಕೆ ಹೋದ ಹಾಗೆ ತೆಳ್ಳಗಾಗಿರುತ್ತದೆ (ಮುಂಬಯಿ. ೪-೬೧). ೩. ಸಣ್ಣಗಾಗು ; ಸೊರಗು : ಪ್ರೇಮಿಯಾದವನು ಯೋಚಿಸಿ ಯೋಚಿಸಿ ಸಣ್ಣಗಾಗಬೇಕು, ತೆಳ್ಳಗಾಗಬೇಕು (ಅಲಹೂ. ೩೩). [ತೆಳ್ + – ಆಗ್$_3$]

ತೆಳ್ಳನೆ (ಅ). ೧. ಸ್ಪಷ್ಟವಾಗಿ ; ಚೆನ್ನಾಗಿ : ಮುನಿವಚನದೊಳಂ ನಂದನರೊಳವಾಗಳ್ ಯಶೋಮತಿ ಕ್ಷಿತಿಪಂ ತೆಳ್ಳನೆ ತಿಳಿದು (ಯಶೋಚ. ೪-೬೨); ಬಂದ ಕಾರ್ಯವ ನೀವು ತೆಳ್ಳನೆ ತಿಳಿವೊಲು ಪೇಳಿ (ವರ್ಧಚ. ೬-೧೪). ೨. ತೆಳುವಾಗಿ : ಕಳ್ಳಿಯುಮೆಕ್ಕೆಯುಮಂ ಸುಟ್ಟೆಳ್ಳಂ ಮಸಿಯಾಗಿ ಪುರಿದು ಚೂರ್ಣಸಮೇತಂ ತೆಳ್ಳನೆ ಪೂಸುಗೆ (ಅಶ್ವಶಾ. ೧೩-೨೦).

ತೆಳ್ಳತೆಳ್ಳನೆ, ತೆಳ್ದೆಳ್ಳನೆ (ದ್ವಿರುಕ್ತಿ) : ಅದಂ ಚಾರಿಸಲು ತೆಳ್ಳತೆಳ್ಳನೆ ಮಡಕೆಯುಡಿಯೊಳಗೆ ಬಿಳ್ದು ಪಳೆಪುಂತೆ ಹಾಲಪುದು (ಸೂಪಶಾ. ೨-೫) : ತೆಳ್ದೆಳ್ಳನಾ[ಪಾಠಾಂ. ತೆಳ್ದೆಳ್ಳವಾ]ದ ಪಾಲ್ಗಡಲಲ್ದೆರೆಯೊಳ್ ಮಸುಳ ಮಸುಳನೆಸೆದುವು ಮಣಿಗಳ್ (ಅನಂಪು. ೫-೬೩) ; ತೆಳ್ದೆಳ್ಳನಾದ ಪಾಲ್ಗಡಲೊಳು ತಳತಳಿಸುವ ಮಣಿನಿಚಯ (ಅನಂಚ. ೭-೧೨೬). [ತೆಳ್ + –ಅನೆ$_1$]

ತೆಳ್ಳಿತು, ತೆಳ್ಳಿತ್ತು (ಗು). ೧. ತೆಳ್ಳಗಿರುವ; ಕೃಶವಾದ ; ತೆಳುವಾದ : ಬೆಟ್ಟಿತು ತೆಳ್ಳಿತು . . . ನಿಡಿದಿನಿದೆಂಬಂತುಳ್ಳುವು ತುದುಕಡೆಯೊನೆ ಕೈಕೊಳ್ಳಿಂ ಗುಣವಾಚಿ ಪೋಣ್ ತುಕಾರಂ ದ್ವಿತ್ವಂ (ಶಮದ. ೭೭ ಪ್ರಯೋ). ‘ತೆಳ್ಗೂದಲು’ ಪರಾ. ೨. ಸುಂದರವಾದ ; ಕೋಮಲವಾದ. ‘ತೆಳ್ಗದಂಪು’ ಪರಾ. ೩. ಶುಭ್ರವಾದ ; ಬೆಳ್ಳಗಿರುವ. ‘ತೆಳುದುಗುಲ’, ‘ತೆಳ್ಮಡಿ’ ಪರಾ. ತೆಳ್ಳಿತ್ತು : ೧. " ಕೃಷ್ಣಂ, ಕೃಷ್ಟಃ ... ಕರ್ಶಿತಮ್ಮಂ– ಈ ೭ ತೆಳ್ಳಿತ್ತು " (ಕಾಶಕ್ಯ. ೧೯೪) ; ತೆಳ್ಳಿತ್ತು ಕೆಂಪಸಿದೆನಿಪ್ಪ ನಾಲಗೆ ಲೇಸು ಕಕ್ಕು ಕವಲಾಗೆ ಪೊಲ್ಲಂ (ಮಂಗರಾ. ೮೨-೧೬).

ತೆಳ್ಳಿದ = ತೆಳ್ಳಗಿರುವವನಂ ; ಸಣ್ಣಗಿರುವವನು : "ಕೃಶಾನುಃ – ಬೆಂಕಿಯುಂ, ತೆಳ್ಳಿದನುಂ " (ಕಾಶಕ್ಯ. ೧೯೪) : ದಕಾರಾದೇಶಕ್ಕೆ – ಒಳ್ಳಿದಂ, ತೆಳ್ಳಿದಂ, ಮೆಲ್ಲಿದಂ (ಶಮದ. ೧೫೨ ಪ್ರಯೋ). ತೆಳ್ಳಿದುವು (ಬಹುವ): ನಡೆ ನೋಟ್ಪೊಡಮಿಂತುಮಿಂತು ಮೂಜಿಸಿಯುವು ಮೂಜು ದೊಡ್ಡಿದುವು ಪುಱ್ಱಿದೆ ತೆಳ್ಳಿದುವಂಬುಜಾಕ್ಷಿಯಾ (ಪಂಪಭಾ. ೪-೬೨) ; ಒಳ್ಳಿದುವು ಮೆಲ್ಲಿದುವು, ತೆಳ್ಳಿದುವು (ಶಬ್ದಾನು. ೨೩೭ ಪ್ರಯೋ).

[ದೇ॥ ತಮಿ. ಮಲ. ತೆಳಿ, ತೆಳಿವು; ತುಳು. ತೆಳಿ, ತೆಲಿ, ಸೆಲಿ]

ತೆಳ್ಳಿತ್ತು ‘ತೆಳ್ಳಿತಂ’ ನೋ.

ತೆಳ್ಳುಸುರು, ತೆಳ್ಳುಸುರಂ (ನಾ). ನಿಧಾನವಾದ ಉಸಿರು : ಮಂದ [illegible] : ಸಂಭೋಗಿಸುವಾಗ ಬೊಟ್ಟು ಕಲಕಿ ತುಱುಬಳಿದು ತೆಳ್ಳುಸುರುಬ್ಬಿ ಪುಟ್ಟದಿಪುದೆ ಮೆಯ್ಗೆ ಬೆಮರು (ಭರಚ. ೧೫-೬೪). ತೆಳ್ಳುಸುರು: [illegible] ದಸಗೆ ತೆಳ್ಳುಸುರಿಗೆ ಸರಿಯಿಲ್ಲವೆಂದು ಜಱೆವರೆಮ್ಮನೆಂದು ಅಂದು ಪೇಳಿಯು ಕಂಡು ಕೊಂದರಾ ಕಳಕಂಠ ಮಂದ ಮಾರುತರು [illegible]ಱಿಯುರ (ಭರಚ. ೪೮-೮೨). [ತೆಳ್ + ಉಸುರು$_2$ ( <ಉಸಿರ್$_2$)]

ತೆಳ್ಳೆ (ನಾ). ೧. (ಕೆಸರು) ನೀರಾಗಿರುವಂತೆ ಮಾಡಿರುವುದು : ಎರಡು ಸಾಲಾಗಿದ್ದ ಗದ್ದೆಗಳನ್ನು ‘ತೆಳ್ಳೆ’ ಮಾಡಿ ಸಸಿಹಾಕಿ, ಹೆಂಗಸರು ಬರುವ ನಿರೀಕ್ಷಣೆಯಲ್ಲಿ . . . ಕಾದರು (ಗಂಗಾಳ. ೧೩೨). ೨. ಆಳವಿಲ್ಲದ ನೀರಿನ ಜಾಗ,_ಸ್ಥಳ : ದಡದೆಡೆಯ ತೆಳ್ಳೆಯೊಳಿಳಿದು ಕೆಲಕೆಲರ್ ಮಿಂದರೆದೆಯಾಳದಾ ನೀರೊಳಗೆ (ಶ್ರೀರಾಮಾ. ೫೪೪-೧೨೦). ೩. (ಆಲಂ) ಹಗುರ; ಲಘು : ಅವರದಲ್ಲ ಅದೇ ಚಾಳಿಯಲ್ಲವೆ ? ನಾನಂತು ಪೊಳ್ಳಾಗಬಾರದು; ತೆಳ್ಳೆಯಾಗಬಾರದು ; ಹಾಗಾಗುವುದಾದರೆ ನನ್ನ ಗತಿ ಮುಗಿದಂತೆಯೆ (ಪುನರು. ೧೬೮). [ <ತೆಳ್ಳಿತು ]

ತೆಳ್ಳೆಗಂಪು (ನಾ). ತೆಳುವಾದ ಕಂಪು ; ಹಿತವಾದ ಸುವಾಸನೆ : [illegible] ಪಾಲೇಱಿದ ನಾಲಿಗಂಪುಗಡಲೊಳ್ ಮುಳುಗ್ಗಾಡಿ ಮುಳುಗ್ಗಾಡಿ [illegible] ಪೊಂಬಾಟೆಯ ನಟ್ಟಗಂಪುಗಡಲೊಳ್ ಜುಳ್ಕಾಡಿ ಜುಳ್ಕಾಡಿ ಮಾವಿನ ರಲ್ಗೊಂಚಲ ತೆಳ್ಳೆಗಂಪುಗಡಲೊಳ್ ತೇಂಕಾಡಿ ತೇಂಕಾಡಿ ಪದ್ಮಿನಿಯೊಳ್ ತುಂಬಿ ಮಲಂಗಿ ಸೇದೆಗಟೆಗುಂ ಕಾಸಾರತೀರಂಗಳೊಳ್ (ಅನಂಪು. ೩-೧೧).

[ತೆಳ್ಳೆ + ಕಂಪು]

ತೆಳ್ಳೆನೀರು (ನಾ). ಆಳವಿಲ್ಲದ ನೀರು; ದಡದಲ್ಲಿರುವ ನೀರು : ಧರ್ಮ ಹೊಳೆಯ ಅಂಚಿನ ತೆಳ್ಳೆನೀರಿಗಿಳಿದನು (ಮಲಮ. ೫೦೫).

[ತೆಳ್ಳೆ + ನೀರು$_1$ ( <ನೀರ್$_1$)]

ತೆಳ್ಳೆಲರು, ತೆಳುವೆಲರ್ (ನಾ). ತೆಳುವಾಗಿ ಬೀಸುವ ಗಾಳಿ; ಸುಳಿಗಾಳಿ; ಮಂದ ಮಾರುತ : ಸಕ್ಕರೆ ತೀವಿದ ತನಿವಾಲೂದುವ ತೆಂಕಣ ತೆಳ್ಳೆಲರು (ಜಯಕಾ. ೧-೨೪). ತೆಳುವೆಲರ್ : ನವ್ಯಪರಿಮಳದಿಂದೆ ಸೊಗಸು ತೀಡುವ ತೆಳುವೆಲರ್ಗೆ ಮೈಯೊಡ್ಡಿ ಮಾರ್ಗಶ್ರಮವನು ಕಳೆದರು (ಜೈಮಿಭಾ. ೮-೫). [ತೆಳ್ + ಎಲರು ( <ಎಲರ್)]

ತೆಱ$_1$, ತಱ, ತೆರ$_1$ (ನಾ). ೧. ರೀತಿ ; ಕ್ರಮ; ಬಗೆ: ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱವೋಲ್ಪಂಜ.ಪೋಲ್ತೋಱೆ ಬೇಗಂ ಪಱಿಗುಂ ಶ್ರೀರೂಪ ಲೀಲಾಧನವಿಭವಮು ಪಾರಾಶಿಗಳ್ನಿಲ್ಲವಾಗ್ಗಂ (ಎಕ. II, ೮೮-೧ ; ಸು. 700) ; ಮುನಿ ವೀತರಾಗನೆಂದುಂ ಬಸಮಂ ಸಾರ್ತಕ್ಕುಮಾವ ತೆಱದಿಂ ಪೋಪಂ (ಕವಿರಾ. ೧-೭೮) ; ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ ನಾನಾಪ್ರಕಾರದ ಪಾನಂಗಳುಮಂ ಭಟ್ಟಾರರ್ಗೆ . . . ಬಡ್ಡಿಸಿದೊಡೆ (ವಡ್ಡಾರಾ. ೭೮-೧೭) ; ಪುಂಡ್ರೇಕ್ಷುದುಡಂಗಳಂ ಕಡಿಕಡಿದು ಯಂತ್ರ ಪೀಡನೆಯಿಂ ರಸಂಗೊಳ್ವ ತೆಱನುಮಱೆಯೆ ಪೇಟ್ದು (ಆದಿಪು. ೬-೭೭ ವ); ಮುನಿವಧದೋಷಮಾವ ತೆಱದಿಂ ಕಳೆಗುಂ (ಕಾದಂಪೂ. ೮೭೭) : ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ ತನ್ನ ನೂಲು ತನ್ನನೇ ಸುತ್ತಿ ಸುತ್ತಿ ಸಾವ ತೆಱನಂತೆ (ಮಹಾದೇ. ಬ. ೧೫-೧೭) ; ತೆಱನಂ ಕಾಣದ ತಾಣದಲ್ಲಿ ಕಪಟಂಗಳ್ ಮಾಟ್ಪುರಿರ್ಪಲ್ಲಿ . . . ಇರ್ದೊಡೆ ಹಾನಿಯ್ಯೆ (ಸೋಮೇಶ. ೨೫) ; ಸುಮುಹೂರ್ತವೇ ಗಂಡುರೂಪಾದ ತೆಱನಾಗೆ ಅಮಮ ಕಾರಣಿಕ ಶಿಶು ಜನಿಯಿಸಿದನನುವಾಗೆ (ಬಸರ. ೧-೧೩೧) : ತೆಱನಱಿದೀವ ಕಾರ್ಯ ವಱಿದಂಜುವ . . . ಊರ್ಜಿತ ಬುದ್ಧಿಯಲ್ಲದಿಂಬಱಿಯುದ ಗಾವಿಲಂಗೆ ದೊರೆಕೊಳ್ವರೆ ಸೂಳೆಯರೆಂಬ ಡಾಳೆಯರ್ (ಸೂಕ್ತಿಸು. ೮-೪೦೨) ; ಭರತ ಸಂತತಿ ಫಲಿತ ಕದಳಿಯ ತೆಱದೊಳಾಯಿತಲಾ (ಕುಮ್ಮಾಆ. ೨-೨೧); ದೂಱು ಬರುವ ತೆಱ ನಂಬಿಕೆ ಕೊಟ್ಟರೆ ದುರ್ಜನ ಬರುವುದು ತಪ್ಪೀತೆ (ಪುರಂದ. ೧-೧೫೭-೧). ೨. ಅಂದ; ಮನೋಹರತೆ: ತಂನನೆ ಜಗಂ ಸಂಪ್ರೀತಿಯಿಂ ಬಣ್ಣಿಸಿತ್ತೆನೆ ತಾನುಂ ತೆಱದಿಂ ಜಸಕ್ಕೆ ನೆಲೆಯಾದಂ ನಾಚಿವಣ್ಣಾಧಿಪಂ (ಎಇ. XXVIII, ೫-೨೬ ; 1082). ೩. ಸಂಗತಿ ; ವಿಷಯ : ಪೆಱರಂ ದೂಱುವರೊಳ್ ತೆಱನಱಿಯದೆ ನುಡಿವವರೊಳ್ . . . ಬಱುದಲೆಯೆಂದೆಳಸಿ ಕೇಳಲಾಗದು ಪುರುಷಂ (ಧರ್ಮಾಮೃ. ೬-೨೧೩) ; ಅಱಿವಿನೊಳಗಣ ಅಱಿವ ತೆಱದೊಳಗಣ ತೆಱವ ಕುಱುಹಿಟ್ಟು ಕುಱುಹ ಕುಱುಹು

ಆವಗವಿಸಿ ಭಿನ್ನವಿಲ್ಲದೆ ನಿರ್ವಾಹ ನಿರ್ಲೇಪವಾದುದು (ಮದೇವ. ೨೬೪-೧೬) ; ಆ ನೃಪ ಸುವ್ರತಾಖ್ಯಮುನಿ ಬರಲೆಱಗಿ ತನಗುದಯಿಸಿದ ಪುತ್ರರು ನಿರಾಯುಷರೇಕೆ ತನಗೀ ತೆಱನ ಹೇಳೆನೆ ಕರ್ಮವಶ ತಾನೆಂದನಾ ಮುನಿಪ (ಜೀವಂಧ. ೫-೩೫). ೪. ಮಾರ್ಗ : ಹಾದಿ ; ಉಪಾಯ : ಚಿಂತಿಸಿದಳೊಂದು ತೆಱನಂ ಶಿವಂ ಮೆಚ್ಚುತಿರೆ . . . ಪನ್ನಗಾಭರಣನ ಪರಿವನಾಱಿಸುವೆನೆಂದು (ಇಳಿ. ದೇ. ೫೩-೭೦). ೫. ಸ್ಪಷ್ಟವಾದಂದು: ವ್ಯಕ್ತವಾದಂದು. 'ತೆಱದರುಶನ' ಪರಾ. ತಱ : ೧. ನಿಜಪರಿಭವವ ನೆಲ್ಲವನು ಹರಿಪದಸರಸಿಜಕೆ ತಱವಾಗಿ ಬಿನ್ನಹ ಮಾಡಿದನು (ನಿಭಾಗ. ೧೦-೬೯-೨). ತೆರ$_1$ : ೧. ಶ್ರುತಿಯೊಳಗಾಡುವ ಹಾಡಿನ ತೆರದಿ ಸ್ವತಂತ್ರ ನೀನೀ ಪಾರತಂತ್ರ್ಯದಿ (ಗಡೀಶ. ೪-೮೩) ; ಶುದ್ಧನೀಲಿ ಬಣ್ಣಕ್ಕೂ ಶುದ್ಧಬಿಳಿಯ ಬಣ್ಣಕ್ಕೂ ಮಧ್ಯೆ ಒಂದು ತೆರನಾದ ಬಣ್ಣವಿರುತ್ತದೆ (ಜೀಪಾಶ್ಯ. ೧೫೩) ; ಭಕ್ತಿಯಲ್ಲಿ ನಾನಾ ತರ (ಜಗದಾ. ೧೮).

ತೆಱತೆಱ, ತಱಂತಱ, ತಱತಱ (ದ್ವಿರುಕ್ತಿ) : ದಿವಕ್ಕೆ ಪೋಪ ಬಟ್ಟೆಗೆ ಸೋಪಾನಂಗಟ್ಟಿದಂತೆ ತೆಱತೆಱದಿಂ ನೆಗೆದೊಗೆದ ಪೊಗೆಯುಂ ಕಂಡು (ಪಂಚತಂ. ೧೧೬-೬) ; ತಱತೆಱದ ಕಲ್ಲೋಲಮಾಲೆಗಳ ಲೀಲೆಗಳ ಬೆರೆಬೆರೆವ ರಾಜಹಂಸಾಳಿಗಳ ಕೇಳಿಗಳ . . . ಮುನಿಜನಂ ಸೇವಿಸುವ ಭಾವಿಸುವ ಗಂಗೆಗವನಿಜೆ ಬಂದಳು (ಜೈಮಿಭಾ. ೧೯-೫) ; ತಱಂತಱದಿಂ ಶಿರೋಜಮಂ ನೆಗವುವ ಭಂಗಿ (ಜಗವಿ. ೧೦-೯೯) ; ತಱತಱ ಮೆಟ್ಟಿ ರಾಗದೊಡಗೂಡಿ ಬೆಡಂಗು ಪರಿಶ್ರಮಂಗಳೊಳ್ ನೆಱೆದಿರೆ . . . ನರ್ತಿಸಿದಾಕೆಯರೊಪ್ಪಿ ತೋಱಿದರ್ (?) (ಸೂಕ್ತಿಸು. ೧೩-೧೮). ತೆಱತ್ತು = ಹೀಗೆ ; ಈ ರೀತಿ ಯಲ್ಲಿ: ನೀತಿನಿರಂತರಾನುಗತವೃತ್ತಿವಿಕಲ್ಪಿತಮಂ ತದೀಯ ನಿರ್ಣೀತಿಯನೀ ತೆಱತ್ತು ತಱಿಸಲ್ಗೆ ಬುಧೋತ್ತಮರುಕ್ತಿಪೂರ್ವಕಂ (ಕವಿರಾ.೨-೧೦೧). [ ದೇ.॥ ತಮಿ. ತಿಱ; ಮಲ. ತಿಱ, ತಿಱವು; ತೆಲು. ತೆಱಂಗು, ತೆಱವು ]

ತೆಱ$_3$ 'ತೆಱ$^3_3$' ನೋ.

ತೆಱಂ, ತೆರಂ (ಅ). ಚೆನ್ನಾಗಿ; ಅಧಿಕವಾಗಿ. 'ತೆಱಂಬೊಳೆ' ಪರಾ. ತೆರಂ. 'ತೆರಂಗುಣಿ' ಪರಾ. [ <ತೆಱ$_1$ ]

ತೆಱಂದಿರಿ (ಕ್ರಿ). ೧. ಬಹುವಾಗಿ ಅಲೆದಾಡು,_ಸುತ್ತು : ಅದೇಂ ತೆಱಂದಿರಿದು ಪಾಯ್ದುಪೋ ಕೇತಕಿಯೊಳ್ ಮದಾಳಿಗಳ್ (ಆದಿಪು. ೧೦-೧೨೦) : ಅತ್ತಣ ಪಂಬಲ ಬಂಬಲೊಳ್ ತೆಱಂದಿರಿದುದು ಚಿತ್ತಮಾ ದೊರೆಯ ಯೋಗಿಗಮಿಂತುಟೆ ಮೋಹಮಾಗದೇ (ಪಂಪಭಾ. ೧೩-೬೩) ; ಅಲರ್ವಂಡನುಂಡು ತನಿಸೋರ್ಕಿಂ ಸೊರ್ಕಿ ತೆಱಂದಿರಿದು ಪಾಱುವ ಪೆರ್ದುಂಬಿಗಳ ಬಳಗಮನೊಳಕೊಂಡ ಲತಾಮಂಟಪಂಗಳೊಳಂ (ಕಾದಂಉ. ೫೨೬). ೨. ಒಮ್ಮೆಲೇ ಹೊರಳು ; ರಭಸದಿಂದ ತಿರುಗು : ಮೆಯ್ಮುಸವೊಂದೆ ಪೂವಿನೊಳೆ ಪೋಗಿ ತೆಱಂದಿರಿದಳ್ಳಿಗೆ ಓಂಬಿನೊಳ್ ಪಾಯ್ವುದುಂ (ಶಾಂತಿಪು. ೧-೬೩) : ತೆಱಂದಿರಿದಾಂತ ಮೆಯ್ವೆಸಂ ಸುತ್ತುವ ಬಲ್ಲು . . . ತವ್ವೊಳೆಯ್ದೆ ಮೆಯ್ವೆತ್ತಿರೆ ಬಿಚ್ಚತಂ ಪೊಣರ್ದುಪಂದೆರಡುಂ ಬಲದುಂಕದಾನೆಗಳ್ (ಚಂದ್ರಪು. ೧೦-೮೪) : ಬಿದಿರ್ಚಿ ದಳಂಗಳಂ ತೆಱಂದಿರಿದುದು ಜಕ್ಕವಕ್ಕಿ (ಅನಂಪು. ೭-೭೧) : ಭರದಿ ತೆಱಂದಿರಿವಾ ತಿಹುರಿಯ ಮೇಲೆ ಇರದಿಟ್ಟು ಕುಂಬಱಗೋಲಾ ಪರಿಯೆನೆ ಗಜಪಡೆಯಾದಶ್ವನ ಮೇಲೆ ಬಿರಿದೊಟ್ಟಿದನು ವಾಹಕನು (ಶ್ರೀಪಾಲ. ೪-೧೨). ೩. ಮನೋಹರವಾಗಿ ತಿರುಗು ; ಸುಂದರವಾಗಿ ಸುತ್ತು : ಬಲವಿನೊಳಾದ ಕಾಯ್ಪು ಮಿಗೆ ಕಾದಲನಂ ಬಿಸುಟಂತೆ ಪೋಪ ಕಾದಲಳಟುತುಂ ತೆಱಂದಿರಿದು ನೋಡಿದ ನೋಟದೊಳ್ (ಪಂಪಭಾ. ೪-೧೦೮). [ ತೆಱ$_1$ + ತಿರಿ$_1$ ]

ತೆಱಂದಿರಿಪು (ಕ್ರಿ). ಬಗೆ ಬಗೆಯಾಗಿ ತಿರುವು. – ಹೊರಳಿಸು : ಬಿಡದೊಯ್ಯನೆ ನೀವಿಯುಂ ತೆಱಂದಿರಿಪುತುಮಲ್ಲಿ ತೀಡುವುದು ಕಾಮುಕ ನಂದದೆ ಸಾರವಾರುತಂ (ಕುಸುಮಾ. ೨-೧೧೧). [ ತೆಱ$_1$ + ತಿರಿಪು$_1$ ]

△ ತೆಱಂಪು 'ತೆಱಪು' ನೋ.

ತೆಱಂಬಾಯ್ (ಕ್ರಿ). ಚೆನ್ನಾಗಿ ಓಡಾಡು : ಪೊರೆವನ್ಯತ್ರಪಥಾಬ್ಜಜಂ ಸುಟಾವ ಕಾದಂ[ಬಂ] ತೆಱಂಬೊ[ಬಾ]ಯ್ದು ಭೋರ್ಗರೆದೆತ್ತಂ ಪುಗಲೆಂಬ ಕೋಕಿಲೆ (ಸುಕುಮಾ. ೧-೭೩). [ ತೆಱಂ + ಪಾಯ್$_1$ ]

△ ತೆಱಂಬು 'ತೆಱಪು' ನೋ.

ತೆಱಂಬೊಯ್ (ಕ್ರಿ). ಚೆನ್ನಾಗಿ ಹೊಡೆ : ಕಾಲ್ಗಾಳ್ಗಳಿಂ ಬಿಡಿದೀಡಾಡಿ ಯುಮರ್ದಿಯುಂ ತಿರಿಪಿಯುಂ ತೀದುಂ ತೆಱಂಬೊಯ್ದುಮಾ ದದಿಗಂ ದಾನವನಂದದಿಂ ಕೆಡಪಿದಂ ಸಂಗ್ರಾಮರಂಗಾಗ್ರದೊಳ್ (ಮಹಾನೀ. ೧೫ ೨೦೪). [ ತೆಱಂ + ಪೊಯ್$_1$ ]

ತೆಱಂಬೊಳೆ (ಕ್ರಿ). ಚೆನ್ನಾಗಿ ಪ್ರಕಾಶಿಸು ; ಅಧಿಕವಾಗಿ ಹೊಳೆ : " ತೆಱಂಬೊಳೆದುದೆಂದು ತೋರ್ಕೆವಡೆದ ಕಾಂತಿ" (ಕಕಸಾ. ೫೬-೨೦೬) : ಪೊಱಪೊಣ್ಮುವ ಕಣ್ಣ ಬಿಳ್ಪುವೋಪರ ಮನದೊಳ್ ತೆಱಂಬೊಳೆವ ಬಾಳೆಗಳುಂತಿರೆ (ಆದಿಪು. ೧೧-೪೬) : ತೆಱಂಬೊಳೆವ ಮಿಾಂಗಳನುಳ್ಳುವ ಕೈದುಗಳ್ ನಿರಾಕರಿಸಿರೆ ಮೀರೆದಪ್ಪಿ ಕವಿದತ್ತು ನರಾಧಿಪ ಸೈನ್ಯಸಾಗರಂ (ಪಂಪಭಾ. ೩-೬೮) : ಪುಷ್ಪಶರಪುನ್ನಾಗಘಟೆಯ ಕಟದಿನು ತ್ಕಟವಾದ ಮದವೃಷ್ಟಿಯಿಂ ತೆಱಂಬೊಳೆವ ಮಱಿದುಂಬಿಯ ಬಂಬಲಿಂ . . . ಅತಿ ರಮಣೀಯವಾಗಿ (ಮಲ್ಲಿಪು. ೨-೩೩) : ಒಪ್ಪಂಬಡಿಸಿದ ಪೋಲ್ ತೆಱಂಬೊಳೆವ ಕೊಂಕುಂ (ಕಬ್ಬಿಕಾ. ೫) : ಕೆಂಬಟ್ಟೆಯ ಮೃದುತಲ್ಪದೊಳೊಱಗಿ ತೆಱಂಬೊಳೆದೊಪ್ಪುವ ರತಿಯೆನೆ (ಜಯುಕಾ. ೩-೮). [ ತೆಱಂ + ಪೊಳೆ$_1$ ]

ತೆಱಂಬೊಳೆಯಿಸು (ಕ್ರಿ). ಚೆನ್ನಾಗಿ ಪ್ರಕಾಶಿಸುವಂತೆ ಮಾಡು ; ಹೆಚ್ಚು ಶೋಭೆಯುಂಟಾಗುವಂತೆ ಮಾಡು : ವನಮಧ್ಯಮದೇಂ ದೇವನ ವನಮಾಲೆಯುಂ ತೆಱಂಬೊಳೆಯಿಸಿತೋ (ಜಗವಿ. ೧೦-೫೬).

[ ತೆಱಂಬೊಳೆ + – ಇಸು$_3$ ]

ತೆಱಕಾಱ (ನಾ). ತೆರಿಗೆಯನ್ನು ವಸೂಲು ಮಾಡುವವನು : ನೀನಿತ್ತಪಧಿಕಿಱಿದೀವರಿಲ್ಲ ಧನವಂ ಗಳಿಸಿ ತಂದೀವೆನೆನಲು ದಿನವಿಲ್ಲೊಬ್ಬ ತೆಱಕಾಱನಂ ಕೊಟ್ಟೊಡಾತಂಗೆ ನಿರ್ಣಯಿಸಿ ಕೊಡುವೆನೆನಲು (ಹದಕಾ. ೮-೫೬) : ಸುರಿದನರ್ಥವನು ಕೌಶಿಕಮುನಿಯ ತೆಱಕಾಱ ತಲೆದೂಗಲು (ಹದಕಾ. ೧೧-೨೬). [ ತೆಱ$_2$ (<ತೆಱ$^3_3$) + – ಕಾಱ ]

ತೆಱಕೈ (ನಾ). (ಹಣವನ್ನು) ಸೆಳೆದುಕೊಳ್ಳುವ ಕೈ: (ಸಿರಿಯನ್ನು) ದೋಚುವ ಕೈ: ಕೌಳಿಕಾಱತನ ತೆಱಕೈ ಬಱುಬೇಸರಣೆ ಹೇವ ಹಳವು ಬೆಳ್ಳುಕ್ಕ ಬೆಳ್ಮನಿಸು ಕೈತವಮಂ ಕನಸಿನೊಳ್ ನೆನೆಯದೆ ಮದನಾಗಮವೆಂಬ ಮಹಾನಾಟಕಮನಭಿನೈಸುತೆ (ವಿರೂಪಾ. ೬೮).

[ ತೆಱ$_2$ (<ತೆಱ$^3_3$) + ಕೈ$_3$ (<ಕೆಯ್$_2$) ]

ತೆಱಕೊಡು, ತೆರಕೊಡು (ಕ್ರಿ). ೧. ತೆರಿಗೆಯನ್ನು ತೆರು,–ಕೊಡು : ಬಾಳ ಬಡವರು ತೆಱಕೊಟ್ಟು ಬಾಹರು (ಶಇ. I, ೫೧-೨೮ : 1432?). ತೆರಕೊಡು : ೨. ತಪ್ಪುಕಾಣಿಕೆಯನ್ನು ಕೊಡು ; ದಂಡ ತೆರು : ಬಿಡುಗಡೆಯಾಗಬೇಕಾದರೆ ತೆರಕೊಡಬೇಕು (ಉಡುಗಿ೩. ೬). ೩. ಕನ್ಯಾ ಶುಲ್ಕವನ್ನು ಕೊಡು,_ತೆರು : ಬಿಟ್ಟಿಯೇ ಸಿಕ್ಕುವುದಾದರೆ ಹೆಣ್ಣೊಂದು ನನಗೊಂದು ನಮ್ಮಪ್ಪಗೊಂದು ತೆರಕೊಟ್ಟು ತರುವ ಹಾಗಿದ್ದರೆ ಮುದುಕನು ನಮ್ಮಪ್ಪ, ಹುಡುಗನು ನಾನು (ಇಂಪಾಪ. ೧೦೦-೮೭).

[ ತೆಱ$_2$ (<ತೆಱ$^3_3$) + ಕೊಡು$_1$ ]

ತೆಱಗೊಳ್ (ಕ್ರಿ). ಸುಂಕವನ್ನು ಕೊಳ್ಳು ; ತೆರಿಗೆಯನ್ನು ವಸೂಲು ಮಾಡು : ಘೋಷಾಕರಸಂಗ್ರಾಮಕರ ಗೋವ್ರಜಂಗಳುಮಂ ಅವನಾಳ್ದ ತೆಱ[ಪಾಠಂ. ಱ$^3$]ಗೊಳ್ವ ಬಿಟ್ಟಬೆಸಕೆಯಿಸಿಕೊಳ್ವ ಭೋಗಿಪ ನಿಯೋಗಂಗಳುಮಂ ಮಾಡಿದಂ (ಆದಿಪು. ೮-೬೩ ವ). [ತೆಱ$_2$ (<ತೆಱ$^3_3$) + ಕೊಳ್$_1$]

ತೆಱತ್ತು 'ತೆಱ$_1$' ಪರಾ.

**ತೆಱದರುಶನ** (ನಾ). ಸ್ಪಷ್ಟವಾದ ನೋಟ, ಕಾಣ್ಕೆ : ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯನೆಂಬ ಷಟ್ಸ್ಥಲವನಱಿಯಬೇಕೆಂಬಿರಿ ಅಱಿವುದಕ್ಕೆ ಕುಱುಹು ತೆಱದರುಶನವ ಕಾಣರಣ್ಣಾ (ಬೋಳಮಾ. ೦೫೧-೫೭೩). [ ತೆಱ₁ + ದರುಶನ ]

**ತೆಱದರ್ಶನ** (ನಾ). = ತೆಱದರುಶನ : ಕುಱು ಹಿಂಗೂ ಅಱುವಿಂಗೂ ತೆಱದರ್ಶನವಿಲ್ಲವಾಗಿ ಸೊಪ್ಪನೊಳಕೊಂಡ ಬಿತ್ತಿನಂತೆ (ಬೋಳಮಾ. ೮೪-೩೩೧). [ ತೆಱ₁ + ದರ್ಶನ ]

**ತೆಱಪಱ್** (ಕ್ರಿ). ೧. ಅವಕಾಶವನ್ನು ತಿಳಿ : ಬರವಂ ಪಡಿಯಱರ್ಗಱಿಪಿ ತೆಱಪಱಿದೋಲಗದೆಡೆಯಂ ಪುಗಲು (ಶಬ್ದಸಾ. ೧೬೦). ೨. ಎಡೆಯನ್ನು ತಿಳಿ ; ಸ್ಥಳವನ್ನು ಅರಿ : ಕೆಲಬಲದೊಳಲ್ಲಲ್ಲಿ ತೆಱಪಱಿದು ಕುಳ್ಳಿರಲು ನಲಿನಲಿದು ತುಂಬುರಂ ಬಲವಂಕದೊಳಗಿರಲು (ನಂಬಿರ. ೫-೯೯). ೩. ಗುರುತನ್ನು ತಿಳಿ: ತೆಱಪಱಿದಾ ಋತುಪರ್ಣಂಗಱಿಪದೆ ವಾರಾಂಗನಾ ನಿವೇದಿತನಾಗಲ್ ಪೊಱಮಟ್ಟು ಬಂದನೆಲ್ಲರ್ಗಱಿಗಾಗಲ್ ಸತಿಯ ಮನೆಗೆ ಬಾಹುಕಂ (ನಳಚಂ. ೭೨೨). [ ತೆಱಪು + ಅಱ್ ]

**ತೆಱಪೀ** (ಕ್ರಿ). ಅವಕಾಶವನ್ನು ಕೊಡು : ನೆಗಟ್ದ ಚತುರ್ದಶರತ್ನದೆ ಸೊಗಯಿಪೆನಾನನ್ಯವಾಹಿನಿಗೆ ತನ್ನ ಪೊಲಾನಗಿದು ತೆಱಪೀಯೆನೆನುತಂ ನಗುವುದು ವಿಜಯಾರ್ಧಕಟಕಕ್ಕೆ ವಿಭುಕಟಕಂ (ಪಾರ್ಶ್ವಪು. ೧೦-೦೯) : ಬಾಯನೊಡೆ ಬಡಿ ಮಿಾಸೆಗೀಳ್ ಕುರುಳ್ಗೊಯ್ ಪುಗಲ್ ತಾಯೊಡಲ್ ತೆಱಪೀವುದೇ ನಿಮಗೆ ಪೊಯ್ದಾಡಿ ಸಾಯಲೂಣೆಯವಹುದೆ ಸುಡು ನಿಮ್ಮ ಬಾಳ್ಕೆಗಳನೆನುತೆ ಜಱಿದಮರಕುಲಮಂ (ಚಜಪು. ೪೯-೪೯).

[ ತೆಱಪು + ಈ₂ ]

**ತೆಱಪು,** ತೆರಪು, ತೆರಹು₂, ತೆರ್ಪು, ತೆಱಂಪು, ತೆಱಂಬು, ತೆಱಹು, ತೆಱಿಪು (ನಾ). ೧. ತೆರೆದ ಸ್ಥಿತಿ ; ಮರೆಯಿಲ್ಲದಿರುವುದು ; ಬಯಲು : ಮಱಸಿರ್ದಂಬರಮೊಯ್ಯನೆ ನಾಂದ ತನುವಂ ಪತ್ತಿರ್ದ ಕಣ್ಗಲ್ಲಿಯುಂ ತೆಱಪಂ ಮಾಡಿ (ಆದಿಪು. ೧೧-೧೫೩) : ಬಾಲೆಯುರುರದೊಳ್ ಕಿಱುಮೊಲೆ ಮೇಲುದು ನಸುದೊಲಗೆ ತೋರ್ಪ ತೆಱದಿಂ ಸರಸೀಮಾಲೆಯೊಳೆಸೆದುವು ನವಪತ್ರಾಲಿಯ ತೆಱಪಿಂದೆ ತೋರ್ಪ ಕಮಲದ ಮುಗುಳ್ಗಳ್ (ಜಗವಿ. ೪-೬೩) : ಮೇಲುದಿನ ತೆಱಪಿನೊಳು ಮೊಲೆಗಳಲುಗಲು (ಹದಶಾ. ೪-೧೩). ೨. ಎಡೆ ; ಸ್ಥಳ ; ಜಾಗ : ದಿಗ್ಭಿತ್ತಿಗಳನೊಡೆದು ತೆಱಪಂ ಮಾಡಲ್ ಪರಿವಂತೆ ದುಂದುಭಿಧ್ವನಿ ಪರಿವಿನೆಗಂ ದಿಗ್ಜಯಕೆ ಹರಿ ಪೊಱಮಟ್ಟಂ (ನರ್ಮಪು. ೮-೬೬): ಮಾಣಿಕವರಿಗೆಯ ತೆಱಪುಗಳೊಳ್ ಪೊಳೆವ ಬಾಳ ಬೆಳ್ವೆಳಗಂದೇಂ ಮೆಱೆದುವೊ (ಕಬ್ಬಿಗ ಕಾ. ೨೫೯) : ತುಱುಗಿದ ತೊಱಲ್ಗೊಂಬಿನ ತೆಱಪುಗಳೊಳ್ ಕೂಡಿ ನುಸುಳಲಾಱದೆ ಸಿಲ್ಕಿಂ ಪಱಿದಿರ್ದ ಬೆಳ್ಮುಗಿಲ್ಗಳ ಮುಱಿಗಳೆವನಿಸಿದುವು ಶಾಲ್ಮಲೀಫಳತೂಳಂ (ಪುಷ್ಪಪು. ೫-೮೫) : ಅನುದ್ದಂಡತ್ವದಿಂದಾಕ್ರಮಿಸಿದೊಡಮದು ಸ್ವೈರಿಸಿರ್ದಂ ನಭಶ್ರೀ ತಾನೀಗಳ್ ಕೊಟ್ಟಳಾದಂ ತೆಱಪುಮನೆವಗಿಂತೆಂದು (ಬಾಧಪು. ೧-೧೦೪) : ತಿಂತಿಣಿಯ ರಘುವರಚರಿತೆಯಲಿ ಕಾಲಿಡಲು ತೆಱಪಿಲ್ಲ (ಕುವ್ಯಾಆ. ೦-೧೬). ೩. ಅವಕಾಶ ; ಸಮಯ ; ಸಂದರ್ಭ ; ಬಿಡುವು : ತೆಱಪನೆ ಪಾರ್ದಿರ್ಪಂ ಮಾಯ್ದಱಗುಳಿ ಜವನದಱಿನಿನಿಸು ಪೊಱ್ದಂ ತನ್ನಂ ಮಱಿದಿರಲಿಕ್ಕುಮೆ ತಳರದೆ ತಱಿಸಲದಿನ್ನೆಱಿದುಮಱಿದುಮಿರ್ಪುದೇ ಚಮರಂ (ಆದಿಪು. ೪-೭೬) : ನೆಱನೀತಂಗೂರುಯುಗ್ಮಂ ನೆಱನನಱಿಯದಾ ನಿನ್ನೆಗಂ ಮಾಣ್ದನಿಂ ಪೋ ತೆಱಪಂ ಪಾರ್ದಿರ್ಪಂ (ಪಂಪಭಾ. ೧೩-೯೬) : ತೆಱಪಂ ನಿಟ್ಟಿಸಿ ಕುರುಪತಿ ಬಱಸಿಡಿಲೆಱಗುವವೊಲೆಱಗಿ ಪೊಯ್ಯಲ್ (ಗದಾಯು. ೮-೨೬) : ತೆಱಪಂ ಪಾರ್ದು ಸುಗ್ರೀವನಂ ಮಾಯಾಸುಗ್ರೀವಂ ಗದಾದಂಡದಿನಡಸಿ ಸಿಡಿಲ್ ಪೊಯ್ವವೋಲ್ ಕಾಯ್ದು ಪೊಯ್ದಂ (ಪಂರಾಮಾ. [illegible]) [illegible] ತೆಱಪಂ ಪಾರ್ದಿರದೆ ತಡೆಯದೊರ್ಮೆಯೆ ಮುನಿವಂ (ಧರ್ಮಾಮೃ. ೪-೧೬೨). ೪. ವಿಸ್ತಾರ ; ಹರಹು : ಭರದಿಂ ಭೂದೇವಿ ಭೂಪಾಳಿಗೆ ಬಯಸಿ ಕೊಳಲ್ ನೀಡಿದಳ್ ಕೈಗಳಂ ನೀಟ್ದರು ತಾರಾಮಾಲೆಗೆಂಬಂತಿರೆ ತುಱುಗಿದ ಶಾಖಾಳಿಯಿಂ ಚುಂಬಿಸುತ್ತಂಬರವಂ ತಾನಿರ್ದುದಾ ಶಾಖೆಗಳ ತೆಱಪುಗಳ್ (ಕುಸುಮಾ. ೦-೧೧೦) ; ತೆಱಪಿನೆದೆಯ ಹೊನ್ನ ಜನ್ನಿವಾರದ ರೇಖೆ ಮೆಱೆಯೆ ರಾಜೇಂದ್ರ ಮೆಱೆದನು (ಭರದ ೧-೩೩). ೫. ಸ್ಪಷ್ಟತೆ : ನೀಂ ಪಲವುಂ ರಾಯಭಾರಿಗಳೊಳಂ ಮೆಲ್ಪುಂ ಬಲ್ಪುಂ ತೆಱಪುಂ ಮಱಪುಂ ಅನುವುಂ ಮೊನೆಯುಮಾಗಿ ನುಡಿದು ನಿನ್ನ ಬಿನ್ನಣಮುಂ ಬಿತ್ತರಿಪಂತಾನು ಮಿಮಳ್ದರಂತರಮುಂ ತಿಳಿದು ನುಡಿವೆಂ (ಚಕವಿ. ೬-೦೩೩ ವ). ೬. ಗುರುತು; ಚಿಹ್ನೆ: ತೃಣ ತ್ರಿಣಯನ ಹೆಡಗೈಯ ಕಟ್ಟಿತ್ತು ಭವಕಾಲನ ಸಂಕೋಲೆಯ ಸಿಕ್ಕಿತ್ತು ಕುಱುಹು ಅಱಿವವರ ಕೈಯಲ್ಲಿ ನೆಱೆ ನಂಬಿ ಎಂದು ತೆಱಪ ಪೇಳಿತ್ತು (ಬೋಳಮಾ. ೨೩೨-೭೮೦). ೭. ರೀತಿ; ಬಗೆ: ಸೆಱಗ ಹಿಡಿದೆಳದಪ್ಪಿ ಮುದ್ದಿಸಿ ತುಱುಬ ಪಲ್ಲಟಗೈದ ಮದನನ ತೆಱಪನೆಲ್ಲವ ಪೇಳು ತಿಳಿಪಿದನತಿ ವಿನಯದಿಂದ (ಸಾಳ್ವಭಾ. ೩೧-೫). **ತೆರಪು** : ೩. ದಾರಿಗಾಣದ ಮನಸ್ಸಿಗೆ ಈ ಸಂದರ್ಭವೇ ಒಂದು ತೆರಪನ್ನೊದಗಿಸಿತು (ನಾದೂಜ. ೩೬೯); ತೆರಪನರಿಯದೆ ಪರಿವ ಕಾಲಪ್ರವಾಹದಲಿ ಪುರುಷರಚಿತಗಳೆನಿತೊ ತೇಲಿಹೋಗಿಹವು (ಮಂಕುಕ. ೪೧೧); ಹಗಲುರಾತ್ರಿ ತೆರಪಿಲ್ಲದೆ ಮಳೆ ಹತ್ತಿದ್ದರಿಂದ ಇದ್ದ ಉರುವಲು ಒದ್ದೆಯಾಗುವುದು ಸಹಜವೇ (ಚಟ್ನಹೂ. ೪೩) : ತೆರಪಿಲ್ಲವೆಂತ ತರಿಗೆ ಇಟ್ಟುಕೊಂಡು, ಚರಿಗೆ ತಪಲೆ ಮಾರಿಸಿಕೊಂಡ (ಗಾದ). ೮. ಬರಿದಾದ ಸ್ಥಳ,-ಎಡೆ ; ಖಾಲಿಜಾಗ : ಈಗ ಇರುವ ಸಂಸ್ಕೃತ ಸಾಹಿತ್ಯದಲ್ಲಿ ಭಾರಿ ತೆರಪು ಅಥವಾ ಖಾಲಿಜಾಗಗಳಿವೆ (ತತ್ವಪ್ರಾ. ೪೮೨). **ತೆರಹು₂** : ೪. ಇಳೆಯ, ಗಾಳಿಯ ತೆರಹನೆಲ್ಲವ ಕಳೆವ ನಿಸ್ಸುಲಿ ತುಂಬಿತು (ಇಂಗೀತ. ೧೨-೬). ೮. ಈ ಗುಡಿಯ ಶೂನ್ಯತೆಗೆ ಪೂರ್ಣತೆಯ ತಾ ನೀರ ತೆರಹಿಗೊಲವಿನ ಅಚ್ಚುಕುರುಹಾಗಿ ಬಾ ! (ಮಾನಸ. ೪೬-೧೦). **ತೆರ್ಪು** : ೨. "ಅಡಂಕು=ತೆರ್ಪಿಲ್ಲದೆ ಇಡು : ಬಿಡತೆ ಇಲ್ಲದೆ ಇಡು" (ಗಂಗಾಮ. ೫). 'ತೆರ್ಪಂಬಡೆ' ಪರಾ. △ **ತೆಱಂಪು** : ೨. ತಂಪಿನೊಳಗೆ ನಡೆಸುವನು ಸೇನೆಯನು ತೆಱಂಪನಱಿದು ಬಿಡಿಸುವನು (ಭರತ. ೨೬-೯). △ **ತೆಱಂಬು:** ೧. ನೆಱೆದಾಯುಷ್ಯಮ ವಿಟ್ಟುವನಱಸುವ ತೆಱದಿಂದಮವರ ಪೋಬಱಿಯನೆ ಬಂದಱಿಸಿ ನಭಸ್ಥಳದೊಳವಿದ ತ[ತೆ]ಱಂಬು ಕಳನಾಗಿ ಕಾದಲೆಂದಿರ್ದಪರಂ (ಶಾಂತಿಪು. ೩-೭೪); ತದ್ದಿವ್ಯರಥಮನಾ ಫಣಾಧರನೆ ಸಾರಥಿಯಾಗೇಱೆ ಗಗನಕ್ಕೆ ನೆಗೆದಂಬರದ ತೆಱಂಬ ಕಳನಾಗಳುಂಬಮಾಗೊಡ್ಡಿ ನಿಂದ ವಿದ್ಯಾಧರವರೂಥಿನಿಯಂ ನೋಡಿ (ಚಂದ್ರಪು. ೬-೨೭ ವ); "ಸ್ಥಾನ, ಪ್ರದೇಶ" (ಪ್ರಭು). ೨. ತನುವಿನೊಳಾದ ಜಲ್ಲಮಲಮಾಭರಣಂ ಪುಲಿಯಿರ್ಪುದೊಂದು ಕಾನನದ ಗುಹಾಂತರಂ ಮನೆ ಮರಲ್ಗಳ ಸುಳ್ಳ ತ[ತೆ]ಱಂಬು ಪಾಸು (ಜೀವಸಂ. ೫೦-೨೨) : "ನೊರಜಾಕಲ್ಲಿನ ನೆಲ" (ಜೀವಸಂ. ಕೋಶ) : ಪೌರೋದ್ಯಾನಮಲ್ಲಂ ಸುರಕುಜಮ ತ[ತೆ]ಱಂಬೆಲ್ಲಮುತ್ಕೀರ್ಣಕೇದಾರಮ (ಅಸಂಪು. ೩-೬). ೩. ಇಡಿದಿರೆ ರೋಮಕೂಪದೊಳಗುರ್ಚಿದ [ ಸಾಲ ] ಸರಲ್ಗಳಿಂ ತೆಱಂಬಿಡಿದಿರೆ ಬೆಟ್ಟುವೋ] ಗುರ್ಡಿಸಿದಂತೆ ನೆಱಲ್ದಿರೆ . . . ಬಿಟ್ಟದೇನೆಸೆದನೋ ಶರಶಯ್ಯೆಯೊಳಂದು ಸಿಂಧುಜಂ (ಪಂಪಭಾ. ೦೩-೬೨). "ತೆಱಂಬಿಡಿದರೆ-ನಾನಾತರನಾಗಿ" (ಪಂಪದೀ. ೫೩೪). **ತೆಱಹು** : ೨. ಹರಿಯಂತರ ವಿಶಾಲ ಮಹಾಸಭಾ ವಿಸ್ತರಣವದಱಲಿ ತೆಱಹ ಕಾಣೆನು (ಕುವ್ಯಾಸ. ೧೩-೩೨). ೩. ಬೆರಣೆಯನಾಯಲಲ್ಲದೆ ಅಟ್ಟುಣ್ಣ ತೆಱಹಿಲ್ಲವೆನಗೆ (ಬಸವ. ೨೭೦) : ಅತ್ತಲಾ ಕೋಳಾಹಳದಲಿರಲಿತ್ತಲಾದುದು ಜೂಜು ನಿಮ್ಮ ವಿಪತ್ತು ಕಂಡುದು ತೆಱಹ ತಪ್ಪಿಸಿ ನಮ್ಮ ಸುಳಿವುಗಳ (ಕುವ್ಯಾಆ. ೨೨-೨೬) : ತೆಱಹಿಲ್ಲ ತೆಱಹಿಲ್ಲವಯ್ಯಾ ನುಡಿಗಡಣಕ್ಕೆ (ಅಱಂದೀ. ೩೩೮-೫೦). ೪. ಉರುಪ

ಭಂಡಾರದ ಮಹಾರ್ಘದ ನೆಱವಣಿಗೆ ಗಾಢಿಸಿತು ಬೀದಿಯ ತೆಱಹು ಕೆತ್ತವು ಪೊತ್ತ ಸರಕಿನ ಬಹಳ ಬಂಡಿಗಳ (ಕುವ್ಯಾಗ. ೪-೧೭). ೮. ಕಾಣಬಾರದ ಘನವ ಹೇಳಬಾರದಾಗಿ ಹೇಳುವುದಕ್ಕೆ ನುಡಿಯಿಲ್ಲ ನೋಡುವುದಕ್ಕೆ ರೂಪಿನ ತೆಱಹಿಲ್ಲ (ಲಿಂಗವ. ೬೧-೪೭). ೯. ಭೇದ ; ವ್ಯತ್ಯಾಸ ; ಅಂತರ : ತೆಱಹಿಲ್ಲದ ನಡೆ ತೆಱಹಿಲ್ಲದ ನುಡಿ ತೆಱಹಿಲ್ಲದ ಸಂಭಾಷಣೆಯು ಸುಖವು (ಬಸವ. ೯೧೦): ಎನಗೆ ತನಗೆ ತೆಱಹಿಲ್ಲದಂತೆ ಮಾಡಿ ತೋಱಿದನು (ಮಹಾದೇ. ಬ.೨೨-೪೧) : ಪರಶಿವನೇ ಲಿಂಗವಾ ಪರಮಾತ್ಮನೇಯಂಗವೆರಡಱೊಳ್ ತೆಱಹಿಲ್ಲದಿರ್ಪುದೇ ಸಂಯೋಗ (ಚಬಪು. ೬೧-೭೭). ೧೦. ಶಕ್ಯತೆ ; ಸಾಧ್ಯತೆ (?): ಮಹಾದೇವಿಯಕ್ಕನ ನಿಲವ ಕೊಂಡಾಡುವುದಕ್ಕೆ ತೆಱಹಿಲ್ಲ ಕಾಣಾ (ಅವಚಂ. ೨೪೩-೧೧೧೮). ತೆಱ³ಪು: ೧. ಹರಿತರಯಂತ್ರಾಂಬು ಧಾರಾವಳೀಸ್ಪರ್ಶನಸೌಖ್ಯಾಪೇಕ್ಷೆಯಿಂ ಭೋಂಕನೆ ಪೊಲೆದೆಱೆವಂ ಪೆತ್ರ ಪೋಲ್ ಶೋಭೆವೆತ್ತಳ್ (ಜಗವಿ. ೧೪-೧೦೫).

**ತೆಱಪಾಗು, ತೆರಪಾಗು**= ೧. ತೆರೆ ; ಬಿಚ್ಚು ; ಬಯಲಾಗಂ : ಅಱುವು ಮಱವೆ ಎರಡ ನೂಂಕಿ ನಿಂದರೆ ಮುಂದೆ ಕಣ್ಣು ತೆಱಪಾಗಿ ತೋಱುವ ಬಯಲೇ ಲಿಂಗದ ಬೆಳಗು (ವಚಸಂ. ೫೨೩-೧೧೭); ಇನಿಯನನೆಯ್ದೆ ಸಮ್ಮುಖದೊಳೀಕ್ಷಿಸಲಣ್ಮದೆ ಮುಗ್ಧೆ ಪಾರ್ಶ್ವಯಾಯಿನಿ ತೆಱಪಾಗೆ ನೋಟ್ಟ ನಯನೇಂದ್ರಿಯದೊಳ್ ಸಕಲೇಂದ್ರಿಯಂಗಳಂ . . . ಸಲಿಪ್ಪನಿತುವರಂ ಕಡಂಗಿ ಕರೆಗಣ್ಮದಳುಣ್ಮದ ಘರ್ಮವಾರಿಯಿಂ (ಆಸಂಪು. ೬-೬೦). ೨. ವಿಸ್ತಾರವಾಗು ; ವಿಶಾಲವಾಗಂ : ಪಂಚಾಗ್ನಿದೀಕ್ಷಿತರೂ ಕೋಡಿಯನೂ ತೆಱಪಾಗಿ ತೆಗಿಸಿ (ಎಕ. IX, ಮಾಗಡಿ. ೫೭-೫ ; 1389 ?) : ಶ್ಲೇಷ್ಮಪ್ರಕೃತಿಯುಳ್ಳ ಪುರುಷನು...ತೆಱಪಾದ ಹಣೆಯುಳ್ಳವನಾಗಿ ಹೊದಱಾಗಿ ಕಪ್ಪಾದ ಕೇಶಪಾಶವುಳ್ಳವನಾಗಿಹನು (ವೃದ್ಧಸಾ. I, ೧೭). ೩. ಖಾಲಿಯಾಗು ; ಬರಿದಾಗು : ಕಲವು ಸದಸ್ಯರ ಸ್ಥಾನಗಳು ತೆರಪಾಗಿ ಹೊಸ ಚುನಾವಣೆಗಳಾದುವು (ದಿಲ್ಲಿಪ. ೧೨೨). **ತೆಱಪು ಮಾಡಿಸು** = ಖಾಲಿ ಮಾಡಿಸಂ ; ಬರಿದಂ ಮಾಡಿಸಂ ; ದೂರ ಕಳಂಹಿಸು : ಎಲ್ಲರ ತೆಱಪು ಮಾಡಿಸಿ ಎಂದಳೇನೆಂದುಸುರಬಹುದೀ ಬೆಂದ ಬಯಕೆಯ ನಿನ್ನೆದೆಯನಲಗಿಂದಿಱಿಯೆ ಹರಿದು ಬಂದ ನೆತ್ತರನೀಂಟಬೇಕೆಂಬೊಂದು ಬಯಕೆಯುಂ ಪುಟ್ಟಿತೆನಗೆ ... ಎಂದಳು ಭೂಪರನ ರಾಣಿ (ಸಾಳ್ವಭಾ. ೧೯-೪೫). **ತೆಱಪುಮಾಡು, ತೆಱಹು ಮಾಡು** = ೧. ತೆರೆ ; ಬಿಚ್ಚು : ದಕ್ಷಿಣದಿಶಾಂತದೊಳಗೆಲರು ತಣ್ಣನೆ ಕೀಡ ಕೋಕಿಲಂಗಳ್ ಕೊರಲ್ತೆಱಪು ಮಾಡೆ (ಧಾವಚಂ. ೪-೧೭) : ಉದಯಕಾಲದಲಪ್ಪದಳಮಂಟಪವ ತೆಱಹುಮಾಡೆಯಮ್ಮ (ಶಿವಗೀ. ೧೫೫-೭೯೨ ವ). ೨. ಎಡೆಮಾಡು ; ಜಾಗಮಾಡು : ಮುಱಿದು ಕೋಟೆಯನೊಂದು ಕಡೆಯಲಿ ತೆಱಹುಮಾಡಿ ಮಹಾರಥರು ಜನವಱಿಯದವೊಲೊಳಹೊಕ್ಕು (ಕುವ್ಯಾಗ. ೯-೧೪). **ತೆರಪಿನ ಶಿಕ್ಷಣ**= ಅವಕಾಶ ಸಿಕ್ಕಾಗ ವಿದ್ಯೆ ಕಲಿಯುವ ವಿಶೇಷ ಶಿಕ್ಷಣವ್ಯವಸ್ಥೆ : ಇತ್ತೀಚೆಗೆ ವಿಶ್ವವಿದ್ಯಾಲಯಗಳು ತೆರಪಿನ ಶಿಕ್ಷಣಕ್ಕೆ ಅವಕಾಶವನ್ನು ನೀಡುತ್ತಿವೆ (ರೂಢಿ).

[ ತೆಱ³₁ + – ಪು₂./ತಮಿ. ತಿಱಪ್ಪು ; ಮಲ. ತುಱಪ್ಪು ; ತುಳು. ತೆರಪು ; ತೆಲು. ತೆಱವ, ತೆಱಪಿ ]

**ತೆಱಪುಗಣ್, ತೆಱಪುಗಣ್ಣು** (ನಾ). ವಿಶಾಲವಾದ ಕಣ್ಣು ; ಅಗಲವಾದ ಕಣ್ಣು : ತೆಱಪುಗಂಗಳ ತೆಳುವಸಿಱ ತರುಣಿ ನಿಸ್ಸೈಱಕವನಿರದುಸುರುವೆನು (ನೇಮಿಸಂ. ೨೦-೬೧). **ತೆಱಪುಗಣ್ಣು** : ಎವೆಪೊಯ್ಯದೆ ತೆಱೆದ ತೆಱಪುಗಣ್ಣು ಬಳಲುವಂದದಿ ನೆಱೆ³ ನೋೞ (ನೇಮಿಸಂ. ೩೨-೧೨೧).

[ ತೆಱಪು + ಕಣ್ ]

**ತೆಱಪುಗಣ್ಣು** 'ತೆಱಪುಗಣ್' ನೋ.

**ತೆಱಪುಗಾಣ್, ತೆಱಹುಗಾಣ್** (ಕ್ರಿ). ೧. ಅವಕಾಶವನ್ನು ಕಾಣು ; ಅನುಕೂಲವನ್ನು ಕಾಣು : ತಮ್ಮ ಮಯ್ಯೊಪ್ಪರೆದ ರವಿಕಿರಣಕವಚ ಪೊಮರ್ಗದಲ ತೊಲಗೆ ತೆಱಪುಗಂಡು ತೂಳ್ದು ಸುತ್ತಿ ಮುಱಿಯುಟ್ಟುವಾಗ ಭವನಾಱಡಿಗೆ ಬೆಗಡುಗೊಂಡು ತಲ್ಲಣಿಸಿದಂತೆ ನಲ್ಲಳಂ ಬಿಸುಟು ದೆಸೆಗೆಟ್ಟು ಚಕ್ರವಾಕಂ ಕೋಕನದಸದನದಿನೆಟ್ಟು ಪೋಗೆಯುಂ (ವರ್ಧಪು. ೬-೨೩ ವ) ; ಆ ಕುಟಿಲನಾಕೆಯೊಳ್ ತೆಱಪುಗಾಣದೆ ಮುಳಿದು (ಅಸಂಪು. ೦೧-೯೪ ವ). ೨. ಬಿಡುವನ್ನು ಕಾಣು ; ಕೊನೆಗಾಣು : ಸಂಸಾರಾನುಯಾತ್ರೆಗೆ ತೆಱಪುಗಾಣನುಪದ್ರವದ ಬಹುವಿಧ ಪರಾಭವಕೆ (ನಿಭಾಗ. ೪-೧೮-೨೫). **ತೆಱಹುಗಾಣ್** : ೩. ಮಾರ್ಗವನ್ನು ತಿಳಿ, –ಅರಿ: [illegible] ಗುಂದಿ ಮಱಹುಗೊಂಡೆನೆನ್ನ ಗುರುವೆ (ಹಂಪಿರ. ಹ. ೫೧೧-೧೨).

[ ತೆಱಪು + ಕಾಣ್ ]

**ತೆಱಪುಗಾಣಿಸು, ತೆರಪುಗಾಣಿಸಂ** (ಕ್ರಿ). ಬಿಡುವು ಕಾಣಿಸು ; ಎಡೆ ಬಿಡು: ಭೂ ದಿವಗಳ ಕಟ್ಟಪಂದದ ಕಂದೂಳ ಹಾದಿಯ ತೆಱಪುಗಾಣಿಸದೆ ವೇದೋಜಿಯು ಬಲುಗುದುರೆ ಸಹಿತ ನೆಱೆ³ ಕಾದುಪೊಡ್ಯತಂದನಾಗ (ಕಂನವಿ. ೧೮-೮೦). **ತೆರಪುಗಾಣಿಸು**: ಆರು ಜೀವಪನಿಂತು ಸೆಳೆವರು ದಿವ್ಯಶಾಂತಿಯ ಧಾಮಕೆ ? ತೀರದಾಸೆಗೆ ತೆರಪುಗಾಣಿಸಿ ವಿಶ್ವತತ್ತ್ವವಿರಾಮಕೆ ? (ಕವಿಕಾ. ೮೮-೧೪). [ ತೆಱಪುಗಾಣ್ + – ಇಸು₃ ]

**ತೆಱಪುಗುಡು** 'ತೆಱಪುಗೊಡಂ' ನೋ.

**ತೆಱಪುಗೊಡು, ತೆರಪುಕೊಡಂ, ತೆರಪುಗೊಡಂ, ತೆರಹಂಗಂಡಂ, ತೆಱಪುಗಂಡು, ತೆಱಹಂಕೊಡಂ, ತೆಱಹುಗುಡಂ, ತೆಱಹುಂಗೊಡಂ** (ಕ್ರಿ). ೧. ಸ್ಥಳ ಕೊಡಂ ; ಎಡೆ ಕೊಡಂ : ಪುದಿದಿರ್ಪ ಸಕಲಸಾಮ್ರಾಜ್ಯದ ಪಟ್ಟಸ್ಥಿತಿಗೆ ಪದೆಪಿನಿಂ ಮುನ್ನಮೆ ತಾನದು ತೆಱಪುಗೊಟ್ಟುದೆನಲೆಸೆದುದು ಬಾಲನ ಭಾಳಮಾ ವಿಶಾಲತೆಯಿಂದಂ (ಕುಸುಮಾ. ೬-೧೨೧). ೨. ಅವಕಾಶ ಕೊಡಂ ; ಸಮಯ ಕೊಡು : ಬೆಱಗಿದೇನ್ಯೆ ಮೊದಲು ಬಂದಬ್ಬರದ ರಕ್ಕಸನಂತೆ ನೋಟಕೆ ತೆ ಱ ಪು ಗೊ ಡು ತಿ ದೆ ಚಿ ತ್ತ ವಿ ಪ ನ ಪ ನ ಲ್ಲ ಪ ಲೆ ನೋಡು (ತೂರಪಾ. ೬-೨೮-೧೧). **ತೆರಪುಕೊಡು** : ೧. ದೂರದೂರ ಇಡು; ತೆರಪುಕೊಡು; ಅಂತರ ಬಿಟ್ಟು ಇಡು (Space. ಪತ್ರಿನಿ. ೭೭). **ತೆರಪುಗೊಡು** : ೨. ಇಂಧನವನಟ್ಟಗ್ನಿಯಾರಿಪನಂದ ಸಂಸಾರದೊಳುಯಿನಿತೊಂದುಯಚ್ಚುತಲ್ಯೆದೆ ಪರಿಗ್ರಹ ತೆರಪುಗೊಡದಂತೆ (ಜಿನಸಾ. ೭೯). **ತೆರಹುಗುಡು** : ೨. ಅಂತರಿಕ್ಷದ ತೆರದೊಳಾ ಶರಣರಿಪ್ಪೈಗಂ ತೆರಹುಗುಡುವಂ ಶಿವನೊಲು ಸಂತತಂ (ಬಸೋಪು. ೭-೪೭). **ತೆಱಪುಗುಡು** : ೧. ಪೂಣರ್ವಕ್ಕೆ ವಿಳಾಸಮನೆನಿಸಂ ತಳೆದ ಘನಕುಚಂ . . . ಹಾರವಾಣಿಗೆ ನುಸುಳಲ್ಕೆ ತೆಱಪುಗುಡದನವರತಂ (ಜಗವಿ. ೧೦-೩೦) : ವಿಕಾಸಲಕ್ಷ್ಮಿಯ ಬರವಿಂಗೆ ತೆಱಪುಗುಡುತಲಿರ್ದು ಕುವಲಯಂಗಳ ಕಿಱಿಸ ಟ್ಟಿಳೊಳ್ ಪೊಕ್ಕು . . . ಸಾಯಂತನಸಮಯ.ಸವಿಾರಣಾ ತೀಡುತ್ತು ವಿಪಾರ್ಗಳ್ (ಕುಸುಮಾ. ೪-೨೯ ವ): ಬೆಂಗದಿರ್ಗಂ ತಣ್ಗದಿರ್ಗಂ ತೆಱಪುಗುಡದ ಮರದುಱುಗಲ ಕಟ್ಟಲೆಯುಂ ಕಾರಿರುಳ್ಗೆತ್ತು ಸುಱಿಯುಲನುಗೆಯ್ವ ಗೂಗೆಗಳುಮಂ (ಕಬ್ಬಿಕಾ. ೨೩೪). ೨. ಇರುಳುಂ ಪಗಲುಂ ಜೀರೆನುತುಂ ತೆಱಪುಗುಡದೆ ಕಱಿದುವು ಮಳೆಗಳ್ (ಗಿರಿಕ. ೯-೪೯) : ಓದಿ ಕೇಳಿಸುತ್ತಾ ಭ್ರಮರಿಕೆ ಪರಿಮಳೆಗೆ ತೆಱಪುಗುಡಲೊಡಂ (ಅನಂಪು. ೬-೮೦ ವ). **ತೆಱಹುಕೊಡು** : ೨. ತೆಱಹುಕೊಡದಿರಿ ನೋತ ಕರ್ಣನ ಹಿಂಬವೆಮ್ಮದು ನೂಕುನೂಕೆಂದು ರವಣಿಸಿದರು ಪುತ್ತ್ರ ಕೌರವನನುಜರವಗಡಿಸಿ (ಕುವ್ಯಾದ್ರೋ. ೧೩-[illegible]) **ತೆಱಹುಗುಡು** : ೧. ತನುವಿನೊಳಗೆ [illegible] ನಿಲ್ಲು ಹಂಪೆಯರಸ (ಹಂಪಿರ. ಹ. ೫೧೨-೨೩). ೨. ಎನ್ನಲ್ಲಿ ನಾನಱಿದ [illegible] ಅಱಿವಿಂಗೆ ತೆಱಹುಗುಡದೆ (ಶಿವಗೀ. ೧೩೦-೩೪೮) : [illegible] ಮ್ನಾಯ ನಿಕರಕೆ ತೆಱಹುಗುಡದ ಪರ[illegible] ಕರಣದುಪಹತಿಗೆ ತೆಱಹುಗುಡದನುಭವಿಸು (ಅನುಸಾ. ೮-೨-೯) : ತೆಱಹುಗುಡದೊರ್ವರೊರ್ವರ ಮೇಲೆ ಮುಳಿದು [illegible]

(ಜ್ಞಾನಿಧಾ. ೧೨-೨೦). **ತೆಱಹುಗೊಡು** : ೧. ಗೌಳ ತೆಱಪುಗೊಡು ಲಾಳ ವ್ವೆಯಿಕ್ಕು ಗುರ್ಜರ ಬಿನ್ನವಿಸು (ಬಸರ. ೬-೨೭); ತರಣಿಗುಂಟೇ ಸಮಯ ವನಿಲಗೆ ತೆಱಹುಗೊಡುವವರಾರು (ಕುಮಾ.ಅ. ೧೨-೩); ಒಱಲಿ ಫಲವೇನರಸ ಬಟ್ಟೆಯು ತೆಱಹುಗೊಡಿರ್ದೆ ಹೋಗಲೀ ನೃಪರು (ತೊರರಾ. ೪-೩-೨೪) : ಕಿಱುಬಿದಿರುಗಳ ಕಂಟಕಗಳು . . . ಧರಣಿಯೊಳ್ಪಸರಿಸಿಕೊಂಡು ಪಟ್ಟೆಗಳಿಗೆ ತೆಱಹುಗೊಡದೆ ಮುಸುಕಿಹುವು (ಕೆಂನವಿ. ೧೮-೪೫). ೨. ಮಱೆದಪನೆಂದು ಭಾವಿಸಹೋದರೆ ತೆಱಹುಗೊ [ಪಾಠಾಂ. ಗು]ಡದು (ಅಪತು. ೯೮-೪೪೨) : ಬಾಯಿಬಡಿಕರು ನಾವು ನೀ ಗರುವಾಯಿಕಾಱನು ಬಯ್ವ ಬಿರುದಿನ ಬಾಯು ನೋಡಾಯೆನುತ ತೋಟಿಗೆ ತೆಱಹುಗೊಡದೆಸಲು (ಕುಮಾ.ಕ. ೪-೪).

[ ತೆಱಪು + ಕೊಡು$_1$ ]

**ತೆಱಪುಗೊಳ್**, ತೆಱಹುಂಗೊಳ್ (ಕ್ರಿ). ೧. ಎಡೆಯನ್ನು ಪಡೆ; ವ್ಯಾಪಿಸು; ಸ್ಥಳವನ್ನಾಕ್ರಮಿಸು: ಅಚ್ಚಸೊಗದ ಮೊಳೆ ಬೆಳೆಯುತ್ತುಂ ತೆಱಪುಗೊಳುತ್ತಿರೆ ಮೇನೆಯ ಪೊಱಗೊಗೆದುದು ಗರ್ಭಸೂಚನಾ ಸೌಂದರ್ಯಂ (ಗಿರಿಕ. ೩-೩೬). ೨. ತೆರೆ; ಬಿಚ್ಚು; ತೆರವಾಗು: ಕೋಗಿಲೆಯ ಕೊರಲೂ ತೆಱಪುಗೊಂಡಿತು (ತಿಮ್ಮಅ. ೫-೨). **ತೆಱಹು ಗೊಳ್** : ೧. ಎನ್ನ ಮನವ ತನ್ನತ್ತ ಸೆಳೆದು ಮಱಹ ಮಾಣಿಸಿ ಕುಱುಹಳಿದ ತೆಱಹುಗೊಂಡ ಸೌರಾಷ್ಟ್ರ ಸೋಮೇಶ್ವರಲಿಂಗವ ಬಲ್ಲರೆ ಬಲ್ಲೆ (ಆದವ. ೨೨-೬೦). [ ತೆಱಪು + ಕೊಳ್$_1$ ]

**ತೆಱಪುವಡೆ, ತೆರ್ಪಂಬಡೆ** (ಕ್ರಿ). ೧. ಸ್ಥಳವನ್ನು ಪಡೆ,–ಹೊಂದು: ಮುಂದೆ ತೆಱಪುವಡೆಯದೆ ಸುತ್ತುಂ ಪರಿವಡೆದುದು ಪುರಜನಂ (ವರ್ಧಪು. ೫-೫೦). ೨. ಅವಕಾಶವನ್ನು ಪಡೆ,–ಹೊಂದು: ತೆಱಪುವಡೆದಂಗಜಂ ಕೆಯ್ಸೆಱೆಗೊಳೆ ನೋಟಕರ ಮನಮನಾಗಳ್ (ಪಂಪಭಾ. ೫-೭೭) : ತೆಱಪು ವಡೆವಡೆ ರುಜೆ ಮೆಯ್ಯೊಱುಗುವಿನಮುಪ್ಪಂಕೆ ಸೋಂಕೆ ನಿಃಕರುಣತೆಯಿಂ (ಸುಕುಮಾ. ೨-೧೧); ಅಂತು ಪಾಯದಟಿಮೆಲ್ಲಮೆಚ್ಚು ಮುಱಿದುಂ ಕುಱಿ ದಱೆಯಾಗೆ ತೆಱಪುವಡೆದಿದಿರೊಡ್ಡಿನ ತೇರೊಡ್ಡುಗಳ್ ಶೂರಸಾರಥಿ ಪ್ರೇರಣದಿನೋರೊಂದಂ ಪತ್ತಿಸಾರ್ಚಿದಾಗಳ್ (ಚಂದ್ರಪು. ೧೦-೭೪ ವ). **ತೆರ್ಪಂಬಡೆ** : ೩. ತೆರವಾಗು; ಖಾಲಿಯಾಗು; ಬರಿದಾಗು: ಕಸಱು ಬರ್ಚಿರ್ಪೆಟಿ ನೀರ್ಬೊರ್ಬ್ಬುಳಿಸೆ...ತೆ[ಪಾಠಾಂ. ನೆ]ರ್ಪಂಬಡೆದಱುಗೆಱೆಗಳ್ ಬೀಡೆವೋಗಿರ್ದ ತಣ್ಣೀರೊಸರ್ದಾಣಂ ಬಾವಿಯಾದತ್ತು (ಜಗವಿ. ೧೭-೬೨). ☞ ಇದಂ ಛಂದಸ್ಸಿಗಾಗಿ ಮಾಡಿಕೊಂಡ ರೂಪ. [ ತೆಱಪು + ಪಡೆ$_1$ ]

**ತೆಱಪುವಾರ್** (ಕ್ರಿ). ಅವಕಾಶವನ್ನು ನೋಡು,–ನಿರೀಕ್ಷಿಸು; ಸಮಯಂ ಕಾಯು: ಬಂದಿಕಾಱನಂತೆ ತೆಱಪುವಾರ್ದು ಒಡಿವ ಶಾಕಿನಿಯರಿಂ (ಕಾವ್ಯಸಾ. ೫೨೯ ಕನ್ದ್ರ್ಯ); ತೆಱಪುವಾರ್ದು ನನೆವಿಲ್ಲ ಬಲ್ಲಹನಂ ಕಂಡು (ಕಬ್ಬಿಗ. ೧೮೮). [ ತೆಱಪು + ಪಾರ್$_1$ ]

**ತೆಱಪುವೆಱು** (ಕ್ರಿ). = ತೆಱಪುವಡೆ ೨: ತೆಱಪುವೆತ್ತು ಪಾಪೇಭಕಂಠೀರವ ನೆಟ್ಟೊಂದಪೂರ್ವಸಾಯಕಂ ಚಿತ್ರಾನೀಕನಂ ನೆರೆಗೊಳ್ವುದುಂ (ಶಾಂತಿಪು. ೪-೨೩ ವ); ಅಂತೆಚ್ಚಮುನಿಕರಮನೋರಾತಿರೆ ತಱಿತಱಿದು ಕಾದೆ ಪಾಂಚಾಳನ ವಿಕ್ರಾಂತತೆಗೆ ವಿಳಯಕಾಲಕೃತಾಂತನ ತೆಱದಿಂದೆ ತೆಱಪುವೆತ್ತಾ ಕ್ಷಣದೊಳ್ (ನೇಮಿಪು. ೧೨-೧೩೦). [ ತೆಱಪು + ಪೆಱು$_1$ ]

**ತೆಱಯುಪ್ಪೈ**(?) (ನಾ). (?) : ಶ್ರೀಪ್ರಭುಮಾಣಿ ಪರಮಸುಭಗನ್ ಪಗೆವರ ಗನ್ಧಹಸ್ತಿ ಪಾರ್ವ್ವರ ಇಚ್ಚೆನತ × × × ಪೂರ್ವಾಚಾರದಾ ಈ ತೆಱಯುಪ್ಪೈ ಈಯೆಮೆನ್ದೊಡೆ ಪೊನ್ನೆರನುಂ ಚೋಲಮಹಾರಾಜನುಂ ಮೂವದಿವ್ಬಪ್ರ್ವರಾನ್ಸೊನಾ (ಎಕ. XVI, ಮದ್ಗಿ. ೧೦೮-೩ : 8ನೆಯ ಶತ). [ ? ]

**ತೆಱವಲಿತನ** (ನಾ). ಬಾಲಿಶಭಾವ; ದಡ್ಡತನ; ಅವಿವೇಕ: ಬಱು ವಲಿಯರ ಮಾತುಂ ಕೇಳ್ದಱಿಯದೆ ದೆಸೆಗೆಟ್ಟು ಜೀವಮುಂ ಗತಿಯುಂ ಕೇಳಱನುಂ ತಾಪ್ರೊಳಮೆಂಬೀ ತೆಱವಲಿತನವೇಕೆ ನಿನಗೆ ಭುವನಾಧಿಪತೀ (ಧರ್ಮಾಮೃ. ೯-೪೧).

[ ☞ ಇದು 'ತರುವಲಿತನ' ಎಂಬುದರ ಅಪಲಿಪಿತವಿರಬಹುದು ]

**ತೆಱವಾಳಿಕೆ** (ನಾ). ಒಂದು ಬಗೆಯ ತೆರಿಗೆ: ಆ ಸೀಮೆಯ ದೇವರ ಸ್ಥಾನಿಕದಲು ಸ್ಥಾನಿಕರ ಮನೆ ಮೊದಲಾದ ಮುದವಳಿಕೆ ಸಲು × × ರಾಯ ಕಾಣಿಕೆ ಸುಂಕ ತೆಱವಾಳಿಕೆ ಸಹ ಸರ್ವ ಮಾ × × (ಎಕ. X, ಕೋಲಾರ. ೯೪-೧೭ ; 1406). [ <ತೆಱು$_2$ ? ]

**ತೆಱವಿ** (ನಾ). = ತೆಱಪು ೧. 'ಕಣ್ದೆಱವಿ' ಪರಾ.

[ ತೆಱೆ$^3_1$ + – ವಿ ]

**ತೆಱವಿಡು** (ಕ್ರಿ). ಪಣವಾಗಿ ಇರಿಸು; ಶುಲ್ಕವನ್ನಾಗಿ ಇಡು: ಆಯುಧಕೆ ತೆಱವಿಟ್ಟೆನ್ನೆ ನಿನ್ನಾಳುವವ ಹಿಂದಿಕ್ಕಿಕೊಂಬನ ತಾಯೆನುತ ಬೊಬ್ಬಿಱಿದು (ಕುಮಾದ್ರೋ. ೧೬-೫೨). [ ತೆಱು$_2$ (<ತೆಱೆ$^3_3$) + ಇಡು$_1$ ]

**ತೆಱವು**$_1$, ತೆರವು$_1$ (ನಾ). ೧. ಎಡೆ; ಸ್ಥಳ; ಜಾಗ: ತೆಱವಿಂ ನೀಳ್ಕ ಗವಾಕ್ಷಮುಂ ತೆಱೆವ ನೀರಂ ಮುತ್ತುಳೊಳ್ ತೀವಿಕೊಂಡೆಱೆವ . . . ಓಪರಬ್ಬಿಱಲಂಪಂಗನೆಯರ್ಗೆ ರಾಗಮನದೇಂ ಮಾಡಿತ್ತೊ ರತ್ಯಂತದೊಳ್ (ವರ್ಧಪು. ೬-೫೨) : ಉತ್ತಂಸವಲಯದೊಳಡ್ಡಂಗೆಡೆವ ಸಾರ್ದ್ರ ಕಬರೀ ಭಾರಮುಂ ತೆಱವಿನೊಳ್ ಪೊಱಮುಯ್ಯಂಗಣೆದು ನೂಂಕುತ್ತುಂ (ಅನಂಪು. ೭-೫೦ ವ). **ತೆರವು**$_1$ : ೧. ಉರುವಲು ತುಂಬಲು ಎದುರಿನಲ್ಲಿ ತೆರವು ಇದೆ (ಆಡುಸಾ. ೩೩). ೨. ಅವಕಾಶ; ಬಿಡುವು: ಪ್ರೇರಣೆಯಾದಾಗೆಲ್ಲ ಕಾವ್ಯವು ಮನದಲ್ಲಿ ರಚಿತವಾಗಿ ತೆರವು ದೊರೆತಾಗ ಅದನ್ನು ಕಾಗದದ ಮೇಲೆ ಬರೆಯುವವರೆಗೂ ಅದು ಸಮಗ್ರವಾಗಿ ಸ್ಮರಣೆಯಲ್ಲಿ ಉಳಿಯುತ್ತಿತ್ತು (ಮುಹಾಯೋ. ೧೮೩). ೩. ಖಾಲಿಯಾದುದು; ಬರಿದಾದುದು: ಬರಿದೋ ಬರಿದು ತೆರವೋ ತೆರವೂ ಬಡವರ ಬಗ್ಗರ ತುತ್ತಿನ ಚೀಲಾ (ಗರಿ. ೬೦-೧೮) : ಭೋಜನಶಾಲೆಯನ್ನು ಪ್ರವೇಶಿಸಿ ಎಡಬಲಕ್ಕೆ ನೋಡವೆ ತೆರವಿದ್ದ ಒಂದು ಎಲೆ ಹಿಡಿದು ಕುಳಿತು (ಚಲುನಿ. ೧೧) : ಎರಡನೆಯ ನಂಬರ ಶಾಲೆಯಲ್ಲಿ ಒಂದು ಸ್ಥಳವು ತೆರವಿರುವದು (ಸ್ಕೂಲಮಿ. ೫) ; ಇರವಿನಲ್ಲಿ ಆ ತೆರವು ತುಂಬಿ ಕೆರೆಯಾಡುವಂತೆ ಕಡಲು ಅರಿವಿನೊಂದು ಹೊಸ ಬರವಿಗಾಗಿ ಹಾತೊರೆಯುತಿಹುದು ಒಡಲು (ನಲವು. ೩೬-೩).

**ತೆಱವುಮಾಡು**, **ತೆರವುಮಾಡು** = ೧. ಬರಿದು ಮಾಡು; ಖಾಲಿ ಮಾಡು: ಮೆಱೆವ ಮಣಿಭವನವನು ರವಿಜಗೆ ತೆಱವುಮಾಡಿದ (ಜೈಮಿ. ೪೪-೫೦) : ಹಿತ್ತಲಲ್ಲಿಯ ಒಂದು ಕೋಣೆಯನ್ನು ತೆರವುಮಾಡಿ ನೀಲಾಂ ಬರಿಯು ಇರುವಂತೆ ವ್ಯವಸ್ಥೆಮಾಡಲಾಗಿದ್ದಿತು (ಜಯಂತ. ೪೨೬). ೨. ಅವಕಾಶ ಮಾಡಿಕೊಡು: ಆ ಗಡಿಯಾರ . . . ತಡವಾಗಿ ಶಾಲೆಗೆ ಬಂದರೂ ಬೇಗನೇ ಮನೆಗೆ ತೆರಳಲು ತೆರವುಮಾಡಿಕೊಡಲು ಪೂರ್ಣ ಸಹಕರಿಸುತ್ತಿದ್ದಿತು (ರೂಪಸಂ. ೬೦). **ತೆರವಾಗು** = ೧. ಬಿಡುವಾಗು; ಪುರುಸೊತ್ತು ಹೊಂದು: ಈಗ ಸಾಹೇಬರು ತೆರವಾಗಿದ್ದಾರೆ. ನೀವು ಸುದ್ದಿ ಮುಟ್ಟಿಸಿರಿ (ಜಮೀನ್ದಾ. ೧೫೨). ೨. ಖಾಲಿಯಾಗು: ಆ ಮನೆ ತೆರವಾಗಿದೆ (ರೂಢಿ).

[ ತೆಱೆ$^3_1$ + – ವು. /ತಮಿ. ತೆಱವು ; ಮಲ. ತುಱವು ]

**ತೆಱವು**$_2$, ತೆರವು$_2$ (ನಾ). ೧. ಕಾಣಿಕೆ; ಕಪ್ಪ: ತಮ್ಮ ಬೀರಮುಂ ಬಿಂಕಮುಮು ತೆಱವುಂ ತೆಲ್ಲಂಟಿಯುಮೆಂದರಿಕೇಸರಿಗಾಗಳೀವಪೋಲ್ ಬೆನ್ನಿತ್ತರ್ (ಪಂಪಭಾ. ೩-೭೨). ೨. ತಪ್ಪುಕಾಣಿಕೆ. **ತೆರವು**$_2$ : ೩. ಕನ್ಯಾ ಶುಲ್ಕ; ತೆರ: ತೆರವಿನ ಹಣ ಪಡೆದು ಸಾಲ ತೀರಿಸಿ ಗದ್ದೆ ಜಮೀನು ಉಳಿಸಿಕೊಳ್ಳಬಾರದೇಕೆ? (ಮುನಿಚ. ೧೬೧); ಹೆಣ್ಣಿನ ತಂದೆಗೆ ಒಂಬತ್ತುನೂರು ರೂಪಾಯಿ ತೆರವು ಎಣಿಸಿ, ಒಂಬತ್ತುವರುಷದ ಎಳೆಹುಡುಗಿಯನ್ನು ಅವನು ಮದುವೆಯಾಗಿದ್ದ (ಎರಕ. ೪). ೪. ಸಾಲ; ಕಡ: ಉಪದೇಶ,

ವ್ಯವಹಾರಜ್ಞಾನಗಳು ಕಾವ್ಯದಲ್ಲಿ ಸೇರಬೇಕಾದರೆ ಕಾಂತೆಯರ ನಾಲಿಗೆಯನ್ನು ತೆರವು ತರಬೇಕು (ಸಾಹಿವಿ. ೯೪). 'ತೆಱ$^{3}_{3}$' ಪರಾ.

[ ತೆಱು$_1$ + – ವು ]

**ತೆಱವೆ, ತೆರವೆ** (ನಾ). ೧. ತೆರೆಯುವಿಕೆ : ತೆಱವೆ, ಪಳವೆ, ಎಳವೆ (ಶಮಂದ. ೨೦೦ ಪ್ರಯೋ). 'ಕಂದೆಱವೆ' ಪರಾ. ೨. ಕಾಣಿಸಿಕೊಳ್ಳುವಿಕೆ ; ಉಂಟಾಗುವಿಕೆ : ತೆಱವೆಯಾದುದು ಭೀತಿ ಬಲು ಬೊಬ್ಬಱಿತಕಸುರನ ಧೈರ್ಯ ಕಾಲನ ಮಱಿಯ ಹೊಕ್ಕುದು (ತೊರರಾ. ೩-೬-೫೧). **ತೆರವೆ** : ೨. ಹೊಳೆದವು ರಥಗಳಾನೆಯ ಮೇಲೆ ಜೊಂಪಾಡಿ ತಲೆಮುಟ್ಟಿ ನಿಂದವಾಳುಗಳೂ ಹಲವೇನು ತೆರವೇನು ತೆರವೆ ಮರವೆಯಿಲ್ಲ (ಸೌಂದಕಾ. ೧೧-೧೯). [ ತೆಱ$^{3}_{1}$ + – ವೆ ]

**ತೆಱವೊನ್** 'ತೆಱ$^{3}$ವೊನ್' ನೋ.

**ತೆಱಸಲಿಕೆ** (ನಾ). ಕಂದಾಯವನ್ನು ಸಲ್ಲಿಸುವಿಕೆ ; ಸುಂಕವನ್ನು ತೆರುವಿಕೆ: ಮಲ್ಲಿಗ್ರಾಮದವರು ಅರಮನೆಗೆ ತೆಱುವ ಕುಳದ ಹೊಂನಿನ ವೊಳಗೆ ತೆಱಸಲಿಕೆಯು ಹಂನೆರಡು ಹೊಂನನೂ (ಕಇ. I, ೫೮-೧೬ : 1446).

[ ತೆಱ$_2$ (<ತೆಱ$^{3}_{3}$) + ಸಲಿಕೆ$_1$ ]

**ತೆಱಸು** 'ತೆಱ$^{3}$ಯಿಂಸು' ನೋ.

**ತೆಱಹಾರ** (ನಾ). (?): ಮೊಱಹಾರ ನೀಡಿದರೆ ತೆಱಹಾರ ಕೈಕೊಳ್ಳುತ್ತೈದಾನೆ ಅಹುದಹುದು ದೇವರ ಹಸಿವು ನಮಗೆ ಹೊಸತು ದೆಸೆದಿಕ್ಕಿಲ್ಲ ವಿಶ್ವತೋಮುಖದ ಕೂಡಲಸಂಗಮದೇವಂಗೆ ದೆಸೆದೆಸೆಯಲ್ಲಿ ನೀಡಿ (ಬಸವ. ೧೦೮-೩೨೫) : "ತೆರವಿಲ್ಲದೆ" (ಬಸವ. ಶ. ಕೋಶ). [ ? ]

**ತೆಱಹು** 'ತೆಱಪು' ನೋ.

**ತೆಱಹುಕೊಡು** 'ತೆಱಪುಗೊಡು' ನೋ.

**ತೆಱಹುಗಾಣ್** 'ತೆಱಪುಗಾಣ್' ನೋ.

**ತೆಱಹುಗುಡು** 'ತೆಱಪುಗೊಡಂ' ನೋ.

**ತೆಱಹುಗೊಡು** 'ತೆಱಪುಗೊಡು' ನೋ.

**ತೆಱಹುಗೊಳ್** 'ತೆಱಪುಗೊಳ್' ನೋ.

**ತೆಱಹುದೋಱು** (ಕ್ರಿ). ಅವಕಾಶವನ್ನು ಕೊಡು ; ಎಡೆಮಾಡಿಕೊಡು : ಅಱಸದಿರಿ ಬೇಱಿತ್ತಲಿತ್ತಲು ತೆಱಹು [ಪಾಠಾಂ. ಪು]ದೋಱುವೆ ನೋಡಿ ಸಮರವ ಮೆಱಿವುದುಳ್ಳಡೆ ಮೈಗುಡುವುದಗ್ಗಳಿಕೆ ನಿಮಗೆನುತ (ತೊರರಾ. ೫-೯-೨). [ ತೆಱಹು (<ತೆಱಪು) + ತೋಱು ]

**ತೆಱಹುಮಱಹು** (ನಾ). ೧. ಮೈಮರೆವು ; ತಲ್ಲೀನತೆ: ಇಂತು ಬಸವರಾಜದೇವರು ಲಿಂಗಾರ್ಚನೆಯಂ ಮಾಡುತ್ತಾ ತೆಱಹುಮಱಹಾಗಿರ್ದ ವೃತ್ತಾಂತಮಂ ಪ್ರಭುದೇವರು ಎಚ್ಚಱಿಸಿ (ಶೂನ್ಯಸಂ. ೧೦೩-೪೦). ೨. ಉದಾಸೀನತೆ ; ಉಪೇಕ್ಷೆ ; ಅಸಡ್ಡೆ : ಒಡೆಯರು ಮನೆಗೆ ಬಂದುದ ಕಂಡು ತೆಱಹುಮಱಹಾಗಿಪ್ಪನೆ ಭಕ್ತನು (ಚನ್ನವ. ಶ. ೧೨೧-೨೬೬).

[ ತೆಱಹು (<ತೆಱಪು) + ಮಱಹು./ತೆಲು. ತೆಱಪುಮಱಪು ]

**ತೆಱಿಗೆ, ತೆರಿಗೆ, ತೆಱುಗೆ, ತೆಱಿಗೆ** (ನಾ). ೧. ಸುಂಕ ; ಕರ : ನಿಮಗೆ ತೆಱಗೆ ಕಾಣಿಕೆ ಬೇಡಿಗೆ ಬಿರಾಡಯೇನುಂಟಾದದನೂ ನಾಉ ನಿಮಗೆ ಬಿಟೆಉ (ಮೈಆರಿ. ೧೯೪೬, ೨-೮ : ಸು. 1554) : ಹಾಗದ ತೆಱಗೆ ಬೇಕೆಂದು ನಾ ನಿನ್ನೂರ ಬಾಗಿಲ್ಗೆ ಭಟರನಟ್ಟಿದೆನೆ (ಭರದ. ೫೧-೭೨). ೨. ಕಾಣಿಕೆ : ಕಿರೀಟಿಯು ತಲೆಯು ತೆಱಗೆಗೆ ತಾವೆ ಹೊಣೆಯೆಂದುದು ಭಟಸ್ತೋಮ (ಕುಮಾ.ಕ. ೨೨-೨೩). **ತೆರಿಗೆ** : ೧. ಯಿಪಾ ತೆರಿಗೆ ಹಣವಿ ×× (ಎಕ. VII, ಶಿಮೊ. ೨೦-೧೨ : ?) ; ಜನರಕ್ಷಣೆಯುಗರೆಯುದೆ ತೆರಿಗೆ ದಂಡಗಳಾಸೆಗೈಪರೆ (ಬಿಜ್ಜ.ಶು. ೭೨-೩೨): ಪ್ರಜೆಗಳಿಂದ ಹೆಚ್ಚು ತೆರಿಗೆ ವಸೂಲು ಮಾಡಬೇಕೆಂಬುದು ನನ್ನ ಸಲಹೆ (ಪ್ರತಾಪ. ೯೧) : ವೃತ್ತಿಗಳಿಲ್ಲದರ ಮೇಲೂ ತೆರಿಗೆಗಳು ಕ್ಲುಪ್ತವಾಗಿದ್ದುವು (ಭಾರದ. ೩೫೮). **ತೆಱುಗೆ**: ೨. ಕ್ರತುವಿನಲಿ ತೆಱುಗೆಯು ತೆಱುವರೆಮಗೆ ಮನ್ನಿಸುವರೆಂತಾದರೂ (ನಿಘಾಗ. ೧೧-೮-೨೪). **ತೆಱಿಗೆ** ಹದಿನಱಿಯು ಹಣವಿನ ತೆಱಗೆಯು ಭೂಮಿ (ಎಕ. VIII, ತೀರ್ಥಹ. ೧೪೮-೨೧ : 1417) ; ಸಮಸ್ತ ತೆಱಗೆ ಹೊಱಗೆ ವಿಲ್ಲವನು ಕುಳವ ಕಡಿದು ಬಿಟ್ಟು ಸರ್ವಮಾನ್ಯದ ಅಗ್ರಾರವಾಗಿ ಚಿಕ್ಕರಾಯಪುರವೆಂಬ ಹೆಸರ[illegible] ಯಿಟ್ಟು (ಎಕ. IV, ಗುಂಡ್ಲುಪೇ. ೬೬-೪೬ : 1505).

[ ದೇ.॥ ತುಳು. ತರಿಗೆ ]

**ತೆಱಿಗೆದೆಱು** (ಕ್ರಿ). ೧. ಸುಂಕವನ್ನು ಕೊಡು. ೨. (ಆಲಂ) ಒಡ್ಡು ; ನೀಡು: ಮಲಯಪವನಗೆ ತೆಱಗೆದೆತ್ತರು ಮಯ್ಯ ಮನುಜರು (ತಿಮ್ಮಲ. ೫-೨). [ ತೆಱಿಗೆ + ತೆಱು$_1$ ]

**ತೆಱಿದಾರ** (ನಾ). ಒಬ್ಬಾತನ ಹೆಸರು (?) : ಕಡುಕಲ್ಲ ಪುಲ್ಲಮಜ್ಜಲ ತೆಱದಾರ ಪುಸ್ಸಾಡನಾಳ (ಎಕ. IX, ದೇವನ. ೪೩-೩; ಸು. 900 ?). [ ? ]

**ತೆಱಿಸು, ತೆರಿಸು** (ಕ್ರಿ). ೧. ಕೊಡುವಂತೆ ಮಾಡು : ಅವರ್ ಘೊಳ್ಳನೆ ನಕ್ಕು ಕ್ರಮದಿಂ ತಿಳುಪಿ ಕನ್ನಡಿಯ ಬೆಲೆಯಂ ತೆಱಸಿದರ್ (ಧರ್ಮಾಮೃ. ೬-೧೩). ೨. ತಪ್ಪುಕಾಣಿಕೆ ಕೊಡಿಸು; ದಂಡ ಕೊಡುವಂತೆ ಮಾಡು: ಭೂಧವ ತೆಗೆ ನಿನ್ನ ಮುಸುಕನಿವಳೊಳಪರಾಧವ ತೆಱಸಿಕೊಡುವೆವು (ಭರದ. ೧೪-೧೨೯). **ತೆರಿಸು** : ೧. ಹತ್ತುರೂಪಾಯಿ ತೆರಿಸಿದರು (ರೂಢಿ).

[ ತೆಱು$_1$ + – ಇಸು$_3$ ]

**ತೆಱು$_1$, ತೆರು$_1$** (ಕ್ರಿ). ತೆತ್ತ$_1$ (ಭೂತಕೃ), ತೆತ್ತು$_3$ (ಭೂತನ್ಯೂ). ಕೊಡು ; ನೀಡು: ಅವರಾ ಪಡೆಯುಂ ಪೆರ್ಬಟ್ಟಿಯೂರುಮ್ಮ ತೆಱ$^{3}$ ಪೆರ್ಗನ್ದಿ ಎರಡು ತೆಱುವುದು (ಎಕ. IV, ಹೆಗ್ಗಡ. ೪-೨೨; ಸು. 750) : ಪರಮಂಡಳವ್ಯಸನಮನಾರಯ್ದುಮಪ್ಪೊಡಿತ್ತುಂ ತೆತ್ತುಂ ಬಾಳ್ವ ಮಂಡಲಮಲ್ಲದೆ ಕೀಱಯುಂ ವಿಪಾಱಿಯುಂ ನೆಗಟ್ದ ಮಂಡಲಮಿಲ್ಲ (ಪಂಪಭಾ. ೬-೬೬ ವ) ; ಮಧುಕರಂ ಮಧುಕರಮಂ ತೆಱಲಾರದೆ ಮಲ್ಲಿಗೆಯೊಳ್ ಸೆಱಗೆಯ್ದಂತಿರ್ದುದೊಂದು ಪರಿಮಳಫಲಮಂ (ಅಜಿತ. ೬-೧೮): ಇರುಳು ರಾಯನ ಮನೆಗೆ ಕಪ್ಪವ ತೆಱುವುದೋ ಹಗಲು (ಕುಮಾ.ದ್ರೋ. ೫-೫೪) : ತೆಱುವರೀತಗೆ ಕಪ್ಪವನು ಸಾಗರಪರೀತಸಮಸ್ತಪೃಥ್ವೀಶ್ವರರು (ತೊರರಾ. ೧-೩-೨೨). **ತೆರು$_1$**: ಹಣವನ್ನು ತೆತ್ತು ನೀ ಹೊತ್ತನು ಕೊಳಲಾರೆ ಹೊತ್ತಿಗೆ ಬೆಲೆ ಹೆಚ್ಚು ಗೊತ್ತೆ (ಇಂಚಾಪ. ೧೫೪-೫೬) : ಕನ್ನಡಿಯ ಮೇಲಣ ನಸ್ಮೆಯಿಂದ ಕೆಲವರಾದರೂ ತಪ್ಪನ್ನು ಊದಿ ಓದಿದರೆ ಬರೆಪಕ್ಕ ಕೀಳ್ಪಟ್ಟದ ಬೆಲೆಯನ್ನಾದರೂ ತೆತ್ತಂತಾಗುವುದು (ಕಾಲೂರ. ೫ ಮುನ್ನುಡಿ); ಎಲ್ಲವನ್ನು ತೆರಲು ಅವರು ಹಿಂಜರಿಯುವುದಿಲ್ಲ (ಮುನಿಮಾ. ೨೮). 'ತಿಱು' ಪರಾ.

[ ದೇ.॥ ಕೊಡ. ತೆರ್=ದಂಡ ಕೊಡು; ಕುಇ. ತೆಪ್ಪ=ಹಿಂದಿರುಗಿಸು ]

**ತೆಱು$_2$** 'ತೆಱ$^{3}_{3}$' ನೋ.

**ತೆಱುಗಡೆ, ತೆರಂಗಡೆ** (ನಾ). = ತೆಱಿಗೆ ೧: ಆ ಖಂಡಿಕದ ವ್ರಿತ್ತಿಗೆ ತೆಱುಗಡೆ ಹೊಱುಗಡೆ ನಿಮಿತ್ತವಾಗಿ ಆ ಮಹಾಜನಂಗಳು ಕೊಟ್ಟ ನಾಗಂಡುಗ ಗದ್ದೆ (ಎಕ. XII, ಚಿಕ್ಕನಾ. ೨-೨೦; 1261). **ತೆರುಗಡೆ** : ಶ್ರೀವಿಶ್ವನಾಥ ದೀಕ್ಷಿತೈಯ್ಯನವರಿಗೆ ದಂಡಾಯಕ ಸಿಂಗಮಗುಮಂಣ್ಣಂಗಳು ಕೆರೆಯ ಕಟ್ಟಿಸಿದದ ಕೊಡಗೆಯಾಗಿ ಯಾವ ತೆರುಗಡೆಯುಂಯಿಲ್ಲದೆ ಸರ್ವಮಾನ್ಯವಾಗಿ ಬೀಜವರಿಯಲಿ ಕೊಟ್ಟರು (ಮೈಆರಿ. ೧೯೩೦, ೮-೬: ?).

[ ತೆಱು$_1$+ಕಡೆ ? ]

**ತೆಱುಗೆ** 'ತೆಱಿಗೆ' ನೋ.

**ತೆಱುಮಾನ್ಯ** (ನಾ). ತೆರಿಗೆಯಿಲ್ಲದುದು ; ತೆರಿಗೆಯ ವಿನಾಯಿತಿ : ಬೇಣ ಬಿಳರು ಭಟು ಚಿಟಿ ಸೀಮೆ ಸಾಮ್ಯ ಮುಂತಾದ ಉ[illegible] ತೆಱುಮಾನ್ಯವಾಗಿ . . . ಪಾಲಿಸಿಕೊಂಡು (ಕಇ. III-1, ೯-೩೫ : [illegible])

[ ತೆಱು$_2$ (<ತೆಱ$^{3}_{3}$) + ಮಾನ್ಯ ]

**ತೆಱುವಮಾರು** (ನಾ). (?) : ಪ್ರಥಮಸ್ಥಳಸಂಜಾತವಾದ ಹಳಿಕಾಱ ಹರವಾಗಿ ಗೌಡುಂಕೆಯಾಗಿ ಅರಮನೆ ತೆಱುಮಾರುಗಳನೂ ಉಂಡಿಗೆಯು ಕಿರುಕೊಳ ಸಲ್ಲ (ಸೌಇಇ. IX-II, ೪೩೩-೫೭; 1408). [ ? ]

**ತೆಱುವಟ್ಟಲ್** (ನಾ). ಒಂದು ಬಗೆಯ ಪಾತ್ರೆ (?) : ತಳಿಗೆ ಕನ್ನಡಿ ಸಿಪ್ಪು ಕಂಚಿನ ಸಟ್ಟುಗಂ ತೆಱುವಟ್ಟಲಗ್ಗಳದ ಕೈಮಳೆ ತಾಳವೊಪ್ಪುವ ಗಿಣ್ಣಲೆಂಬಿವನಾವಗಂ ಕಳೆದುಕೊಂಡೊಡನಿರ್ದ ಧೂರ್ತಜನಕ್ಕೆ ಜೀವಿತ ಮೆಂದು ತನ್ನೊಳೆ ವಿಚಾರಿಸಿ ನಿಚ್ಚಲುಂ ಕುಡುವಂ ಸ್ವಪಾತ್ರಜನರ್ತಿಯಿಂ (ಧರ್ಮಾಮೃ. ೨-೨೬). [ ℙ ಇದು 'ಕಿಱುವಟ್ಟಲ್' ಇರಬಹುದೇ ? ]

**ತೆಱುವಾಳು** (ನಾ). (?) : ತೋಳು ಸಾವಿರವಮರಪತಿ ತೆಱು [ಪಾಠಾಂ. ಱೆ]ವಾಳಿನೊಕ್ಕಲು ಕಂತುಕದ ಪೈಹಾಳಿ ಪಾಠಾಳದಲಿ ಸಪ್ತದ್ವೀಪ ಮನೆ ತನಗೆ (ಕುಮಾ.ಸ. ೯-೭೦). "ಜೀತಗಾರ : ದಂಡ ಕೊಡುವವನು" (ಪ್ರಥ.). [ ℙ 'ಇದು ತೆಱು + ಬಾಳು' ಇರಬಹುದೇ ? ]

**ತೆಱುವೆ** (ನಾ). = ತೆಱೆಗೆ ೧ : ಗುತ್ತಿಗೆ ಭೂಮಿ ೩೩೦ಕ್ಕೆ ಸಿದ್ಧಾಯುಗ ೨೦ ಪಸು ತೆಱುವೆ ಬಿಟ್ಟು ಕೊಟ್ಟ (ಪ್ರಶಿ. ೧೯೨೮, ೩೭-೧೭ : 1501). [ ತೆಱು$_2$ (< ತೆಱೆ$_3$) + – ವೆ ]

**ತೆಱೆ$_1$, ತೆರೆ$_1$** (ಕ್ರಿ). ೧. (ಮುಸುಕು, ಬಾಗಿಲು ಮುಂತಾದುವನ್ನು) ತೆಗೆ,–ಬಿಚ್ಚು : "ತೆಱೆ – ಅನಾವರಣೋದ್ಘಾಟನಯೋಃ . ಕರೇ ಚ (ಕಪ್ಪ, ಕಾಣಿಕೆ)" (ಶಮಧಾ) : ತೆಱೆಯದೆ ಮುನ್ನ ಕೆತ್ತ ಪಡಿಗಳ್ ನವಸೌರಭಮುಣ್ಮೆ ಪೊಕ್ಕಳಂ ತೆಱೆದುವು (ಆದಿಪು. ೨-೬೩) : ಕರಮಂ ಪೇಱೆ ರದಂಗಳೊಳ್ ತೆಱೆದು ಕರ್ಣದ್ವಂದ್ವಮಂ ತಾಮ್ರಭೀಕರಮಂ ಬಿಚ್ಚನೆ ಬಿಟ್ಟು ಕಣ್ಣನೆರಡುಂ . . . ವನದಂತಿ ಪೋರ್ವುದು (ಶಾಂತಿಪು. ೨-೧೧೧) : ಮುಗಳ ತೆಱೆ ನೀಂ ಕಣ್ಣಂ (ಕಾದಂಬ. ೬೮೧) ; ಅರೆಮುಗಿದ ಱೆಪ್ಪೆಗಳ ಬೆಳ್ಪಿನ ತಿರುಗದಿಹ ಕಣ್ಣಾಲಿಗಳ ನಸುಮುರಿದ ಕೊರಳ್ಗಳ ಬಿಗಿದ ಸರಗಳ ತೆಱೆದ ನೊರೆವಾಯ (ಬಸವು. ೪೬-೫೬) : ಲಲಾಟನೇತ್ರವ ತೆಱೆದರೆ ನೀನು ಬೆಂದುಹೋದಪೆ (ಮೋಹತ. ೭-೨೬). ೨. ಸೀಳು ; ಬಿರಿ : ತೆಱೆದಿರ್ದ ಪುಣ್ಗಳೆಸೆವಕ್ಕರದಂತಿರೆ (ಪಂಪಭಾ. ೧೧-೪೬) ; ಸುತಶೋಕದಿಂದಾವಗೆಯುಂತೊಳಗುರಿಯೆ ಭೋಂಕನೆರ್ದೆ ತೆಱೆಯಲ್ (ಪಂಪಭಾ. ೧೨-೨೮) : ಕೇಳ್ದರೆರ್ದೆ ತೆಱೆವಿನಮೊಳಱೆ ಪೊಟೆಯು ಪೊಟ್ಟೆಯುಂ ಕರ್ಚೆ ಸೆಳೆಯೆ (ಅರ್ಧನೇ. ೭-೯೧ ವ). ೩. ಸ್ಪಷ್ಟಪಡಿಸಂ ; ಸ್ಪಷ್ಟಗೊಳಿಸು : ಕುಱೆತಂತು ಪೆಱರ ಬಗೆಯುಂ ತೆಱೆದಿರೆ ಪೆಱೆರ್ಗಱೆಪಲಾಪಮಂ ಮಾತಱೆಪಂ (ಕವಿರಾ. ೧-೧೮) : ಗಂಭೀರೋದಾರ ಸಾರ ಭಿನ್ನನಯ ಸಂತತಿ ಸಮನ್ವಿತಮನಱೆಯೆ ತೆಱೆಯೆ ನೆಱೆಯೆ ನುಡಿದು (ಶಾಂತಿಪು. ೩-೮೯ ವ). **ತೆರೆ$_1$** : ೧. ತಟ್ಟದೊಡನೆಯೆ ತೆರೆವ ಕದವದಲ್ಲ (ಅನಿಕೇ. ೨-೧೦) : ದಿನಸಿಯ ಜವಳಿಯ ಅಂಗಡಿ ತೆರೆಯಿತು (ಇಂಜಾಪ. ೭-೨೪). ೪. ಆರಂಭಮಾಡು : ಪ್ರಾರಂಭಿಸು : ೧೭೮೧ರಲ್ಲಿ ಒಂದು ಶಾಲೆಯನ್ನು ತೆರೆದರು (ಭಾರದ. ೪೨೬).

**ತೆಟ್ಟಂದೆಱೆ**, **ತೆಟ್ಟಂತೆಱೆ**, **ತೆಟ್ಟಂದೆಱೆ** = ಪೂರ್ಣವಾಗಿ ತೆರೆ ; ತಡೆಯಿಲ್ಲದಂತೆ ತೆರೆ : ತನ್ನ ಹೃದಯಕವಾಟಮಂ ತೆಟ್ಟಂದೆಱೆದತ್ತಳಗ ಮಾಮುತ್ತುಂಡಮೇಟಮಂ ಬಯಲೊಳಿಕ್ಕಿ ಬಾಯಟೆದ ನಿಜಪತಿಯ ನುಡಿಗೆ ಸುದರ್ಶನನೆಂದಂ (ಅನಂಪು. ೧೧-೩೨ ವ) : ನೆಟ್ಟನೆ ತನ್ನಯ ಮನಮಂ ತೆಟ್ಟಂತೆಱೆದುಸಿರ್ದ ನೃಪಮನೋಜನ ಮಾತಂ ತೊಟ್ಟನೆ ತಾಂ ಕೇಳ್ದು (ಕುಸುಮಾ. ೧೦-೧೭೪) ; ಕೇಱೆಗ್ಗಂಬಿನೊಳತ್ತಂ ಮೆಟ್ಟಿ ತೆಟ್ಟಂದೆಱೆಯೆ ಗಳಱೆದತ್ತಿಪ್ಪ ಮುದ್ರದೊಳ್ ತಾಮ್ರತುಂಡಂ (ಚಂದ್ರಪು. ೭-೮೭). **ತೆರೆದ ಹೃದಯ** = ಬಿಚ್ಚುಮನಸ್ಸು : ನಿಷ್ಕಪಟತೆ : ಮುಚ್ಚುಮರೆಯಿಲ್ಲದಿರುವುದು; ತೆರೆದ ಹೃದಯ ; ನಿಷ್ಕಪಟ್ಯ ; ಸಂಶಯರಾಹಿತ್ಯ ; ದಯಾಪರತೆ ; ಔದಾರ್ಯ (Open-Heart. ಇಂಕನಿ). **ತೆಱೆದ ಹಸ್ತ, ತೆರೆದ ಹಸ್ತ** = ಕೊಡುಗೈ ; ಮುಂಕ್ತಹಸ್ತ ; ಔದಾರ್ಯ : ತೆಱೆದ ಹಸ್ತವು ಲೇಸು . . . ಸರ್ವಕು ಶಿವನಿಂಗೆ ಶರಣವೇ ಲೇಸು (ಸರ್ವಜ್ಞ. ೨೪೦); ದಾನ ಮಾಡುವುದರಲ್ಲಿ ಅವರದು ತೆರದ ಹಸ್ತ (ರೂಢಿ). **ತೆಱೆಯೆ ನುಡಿ** = ಸ್ಪಷ್ಟವಾಗಿ ಹೇಳಂ : ನೇರವಾಗಿ ನುಡಿ : ತೆಱೆಯೆ ನುಡಿದುದರ್ಕೆ ಕಡುಮುಳಿದು (ಪಂಚಾಪು. ೯-೯೩ ವ). **ತೆಱೆಯೆ ಬಣ್ಣಿಸು** = ಚೆನ್ನಾಗಿ ತಿಳಿಯುಂವಂತೆ ವರ್ಣಿಸು : ಸಂಗತಜಿನಧರ್ಮಮತಿಗೆ ನಾಂಗಳ್ ನಿಸಗಱೆಯೆ ತೆಱೆಯೆ ಬಣ್ಣಿಸೆಮಾದಿತ್ಯಂಗೆ ಸೊಡರೆತ್ತುವೀ ಗಾಂಪಿಗಾಗರದಾಗಿ ತೊಱೆಗೆ ನೀರಮುಕುವವೋಲ್ (ಅಜಿಪು. ೬-೭೯). **ತೆಱೆಯೆ ಮೆಱೆ** = ಅಧಿಕವಾಗಿ ಮೆರೆ : ರಾಜಪಯತನಕ್ಕೆ ನೊಸಲ ಕಣ್ಣೆನಿಸಿ ತೇಜಮಂ ತೆಱೆಯೆ ಮೆಱೆವಾ ಪೂರ್ವದ್ವಾರಂ (ವರ್ಧಪು. ೧-೧೩).

[ ದೇ.॥ ತಮಿ. ತಿಱ ; ಮಲ. ತುಱ ; ತೆಲು. ತೆಱಚು, ತೆರಚು ]

**ತೆಱೆ$_2$, ತೆರೆ$_2$** (ನಾ). ತೆರೆಯುವಿಕೆ ; ತೆರದಿರುವ ಸ್ಥಿತಿ. 'ಬಾಯ್ದೆಱೆ$_2$' ಪರಾ. **ತೆರೆ$_2$** : 'ಕಣ್ದೆರೆ', 'ಬಾಯ್ದೆರೆ$_2$' ಪರಾ. [ <ತೆಱೆ$_1$ ]

**ತೆಱೆ$_3$, ತೆರ$_2$, ತೆರು$_2$. ತೆರೆ$_3$, ತೆಱ$_2$, ತೆಱು$_2$** (ನಾ). ೧. ಕಾಣಿಕೆ: ದೇವರ ನನ್ದಾದೀವಿಗೆಗೆ ಬಿಟ್ಟ ಗಾಣ ಮೂಱು ದೇವರಂಗಭೋಗಕ್ಕೆ ಅವರ ತೆಱೆಯೊಳಗಾಗಿ ಬಿಟ್ಟ ಸೊಳೆಯರ ೧೨ (ಎಕ. XI, ದಾವಣ. ೧೧-೨೬) : 1060). ೨. ಕರ; ಸುಂಕ; ತೆರಿಗೆ: "ತೆಱೆ–ಅನಾವರಣೋದ್ಘಾಟನಯೋಃ ಕರೇ ಚ (ಕಪ್ಪ, ಕಾಣಿಕೆ) " (ಶಮಧಾ) ; ದೇಶಾಧಿಪತಿಗಳಪ್ಪೊರ್ಗೆ ಕುಡುವ ತೆಱೆ (ಎಇ. XIV, ೧೯೦-೦೩ : 725); ಪೆಱಗಣ ಮುಂತಣ ರಿತುಗಳ ತೆಱೆಯುಂ ನಿಶ್ಚಯಿಸಿ ಮಧುಕರಂ ಮಧುಕರಮಂ ತೆಱಲಾಱದೆ ಮಲ್ಲಿಗೆಯೊಳ್ ನೆಱೆಗೆಯ್ದಂತಿರ್ದುದೊಂದು ಪರಿಮಳಫಲಮಂ (ಅಜಿಪು. ೬-೧೮); ಭೂಪರ್ ತೆಱೆಯೊಳ್ ಮಗಂ ಮುಪ್ಪಿನೊಳ್ ಪೆಂಡತಿ ಕುತ್ತದೊಳ್ ಫಲಮಂ ತೋರ್ಪಂತೆ (ಧರ್ಮಾಮೃ. ೧೨-೩೮) ; ಪೂಜೆಗೆ ಬಿಟ್ಟ ಧರ್ಮ್ಮವಂ ಮಂನಿಸಿ ಕಾಪ್ಪದಲ್ಲದಿನಿಸಂ ತೆಱೆ ಕಾಣಿಕೆ ಸೇಸೆಯೂಸೆಗಳ ಮಂನೆಯ ಮಾಯಿದಾಯಮಿಂವು ಸಲ್ಲವು (ಎಇ. XXVII, ೦೫-೦೭ ; 1114) ; ಬಿಟ್ಟಬೀಡಾರಂ ಪೊಱೆಗೆ ತೆಱೆ ಕೊಟ್ಟಣಂ ಕಾಣಿಕೆಯುಂ (ಬಸವು. ೨೭-೫೨). **ತೆರ$_2$** : ೨. ತೆರದ ರೂಪದಲ್ಲಿ ಸಂಬಳ, ಕಂದಾಯ, ಬಡ್ಡಿ ಮುಂತಾದ ಸಲುವಳಿಗಳ ರೂಪದಲ್ಲಿ ಹಣವು ಬಳಕೆಯಲ್ಲಿ ಬರುವುದು (ಮಾವಾದ. ೧೦೭); ಬನ್ನಿ, ನೋಳ್ಪಂ! ನಿಮ್ಮುಲ್ಲಸಮೆ ತೆರಂ! ಕಾಣ್ಬವಿಸಾ ಕುಂಭಕರ್ಣನ ಕರಡಿಯಾಟಮಂ ! (ಶ್ರೀರಾಮಾ. ೭೮೯-೩೦೪). ೩. (ಮದುವೆಯ ಕಾಲಕ್ಕೆ) ವಧುವಿಗೆ ಕೊಡಬೇಕಾದ ಶುಲ್ಕ : ಕನ್ಯಾಶುಲ್ಕ : ನಾನೂ ಆ ಕುದುರೆಗಳನ್ನು ತೆರವಾಗಿ ಕೊಟ್ಟು ಈಕೆಯಲ್ಲಿ ಒಬ್ಬ ಪುತ್ರನನ್ನು ಪಡೆಯುವೆನು (ಕ್ಮವಾಉ. ೧೮೭) : ನೀರಿಗೆ ಹೋಗೋಳೆ ನೀಲದುಂಗುರದವಳೆ . . . ವೈಯ್ಯಾರ ಬಿಟ್ಟು ತೆರ ಹೇಳೆ (ಹಳ್ಳಿಯ. ೫೪): ಮದುಮೆಯ ಖರ್ಚಿಗಾಗಲೀ, ಮದುಮಗಳ ತೆರಕ್ಕಾಗಲೀ ಸಿದ್ದಣ್ಣ ಸಾಲ ಮಾಡಬೇಕಾದ ಪ್ರಮೇಯವಿರಲಿಲ್ಲ (ಪಂಜಪಂ. ೫೪) : ಮದುವೆ ಮಾಡಿಕೊಳ್ಳಬೇಕಾದರೆ . . . ತೆರ ಕಟ್ಟಬೇಕು (ಹಳ್ಳಿಬಿ. ೨೦) ; ಮದುವೆಯ ಕಾಲಕ್ಕೆ ಕೊಡಬೇಕಾಗಿದ್ದ. 'ತೆರ'ದ ಹಣದಲ್ಲಿ ಅರ್ಧಭಾಗವನ್ನು ಆತನಿನ್ನೂ ತಂದು ಕೊಟ್ಟಿರಲಿಲ್ಲ (ಬೀದಿಬಿ. ೨೪). ೪. ದಂಡ ; ತಪ್ಪುಕಾಣಿಕೆ. 'ತೆರಕೊಡು' ಪರಾ. **ತೆರು$_2$** : ೨. ಮೂವರಿಂದ ಸಲುವ ಕಾಶವರ್ಗದ ತೆರು ಯಾ ಆರುಮಂದಿಗೂ ಹರುಗೋಲತ್ತೆರು ಸಹಾ ಬಿಟಿಧೇವೆ (ಎಕ. VII, ಶಿವಮೊ. ೩-೨೮ ; 1671) : ತೆರುವಿಂ ಮಂದಿ ನೋಯಿಸಂ (ಸೌನಂದ. ೨-೨೭) : ಶಾಸನಗಳಲ್ಲಿ ಬರುವ ತೆರುವಣಗಳು : – ತೆರು, ಮುಂಡಗಡಿ, ಅರುಗಡಿ (ಕುಳುನಾ. ೨೭೧). **ತೆರೆ$_3$** : ೨. ಕಯ್ಗೊಳ್ಳಂ ರಾಷ್ಟ್ರದಿಂದೆಂದುಂ ತೆರೆಯಿಂ ಪೆರತೇನನುಂ (ಸೌನಂದ. ೨-೩೩). **ತೆಱ$_2$** : ೨. ನಾಲ್ಕುಱ ಮೇಲೆ × × ಬಹ ತೆಱನೂ ದನಿಯರು ತಮ್ಮ ಬದ್ದ ಭೋಜನ ನಡವಂತಾಗಿಯಿಕ್ಕಿ

ಕೊಂಡು (ಸೌಇಇ. IX-ii, ೪೦೯-೨೬ ; 1365). **ತೆಱು$_2$** : ೨. ಅರಸಂಗೆ ತಪ್ಪು ಕಾ ಗ [೨]೦೦೦ ಹೊಂನ ತಱು ಅಡಕು ಅರಸು (ಸೌಇಎ. ೧೯೨೯, ಮಂಗಳೂರು. ೪೬೦-೩೦ ; 1297) ; ತೆಱವ ತೆಱು ಕಟಿಗ ೪ರ೨ ಹೊಂನ ಬಳಿಯು ಭತ ನಾಗಂಡುಗದಲು ಮೂಡೆ ೪ (ಸೌಇಇ. IX-ii, ೪೩೪-೪೦; 1401) ; ಮಲ್ಲಪ್ಪನಾಯಕನ ಮಕ್ಕ ೮ ಗದೆಗೆ ತೆಱು ದೇವರಿಗೆ ವರುಷ ೧ಕ್ಕೆ ಬೆಳ್ಳಿ ಗ ೧ (ಕಇ. I, ೫೦-೨೬ ; 1432).

[ ದೇ.II ತಮಿ. ತಿಱೈ ; ಮಲ. ತಿಱ ]

**ತೆಱೆ$^3$ಕುಱುಪು** (ನಾ). ತೆರೆಯಲು ಮಾಡಿದ ಗುರುತು ; ತೆಗೆಯುವ ಸ್ಥಳದ ಕುರುಹು : ಅಂಬುಜೋದ್ಭವನತಿಪ್ರೀತಿಯಿಂ ಪೊಂಗಳಸವೆರಡಱಲ್ಲಿ ಪಿರಿದು ಸುಧೆಯುಂ ನಿಱದೆ ತುಂಬಿ ಜತುಮುದ್ರೆಯುಂ ತೆಱೆ$^3$ಕುಱುಪುಗೆಯ್ದು ನೋಯೆನಲೆಸಕದಿಂ ಪಯೋಧರದ ಚೂಚುಕವೆಯ್ದೆ ಕಪ್ಪನಾಂತಿರ್ದುವು (ಪಾಕೋಪು. ೨-೩೩). [ ತೆಱೆ$^3_1$ + ಕುಱುಪು (< ಕುಱುಪು) ]

**ತೆಱೆ$^3$ಗಯ್**, **ತೆರೆಗಯ್**, **ತೆರೆಗೈ** (ನಾ). ಬಿಚ್ಚಿದ ಕೈ ; ಚಾಚಿದ ಕೈ : ಎನ್ನ ಕಡುಪಗೆಯಿದಿರ್ ಸೆಱಗೊಡ್ಡಿ ಮೊಱೆ$^3$ಯಿಟ್ಟು ತೆಱೆ$^3$ಗಯ್ಯನೆತ್ತುವೆನ್ (ಬದ್ಯಪ್ರ. ೫೩-೧೧೬೦). **ತೆರೆಗಯ್** : ಕಡುಪಗೆಯು ಎದುರಿನಲ್ಲಿ ಬಿಡುಗಡೆಗಾಗಿ . . . ತೆರೆಗಯ್ಯನ್ನು ಎತ್ತುವ ಕ್ಷುದ್ರತರ ದೈನ್ಯ ತನ್ನಲ್ಲಿ ಇಲ್ಲ ಎನ್ನುತ್ತಾನೆ (ಬದ್ಯಪ್ರ. XXII, ೬೬೩೪). **ತೆರೆಗೈ** : ಅವ್ವಾ ನೋಡಿರೆ! ಭೂವೈಕುಂಠನಿವಾಸಿ ವೆಂಕಟರಮಣನ. ತೆರೆಗೈ ತಿರುಕನ (ಉಯ್ಯಾಲೆ. ೯೩-೧೬) ; ಸತ್ಯವನ್ನು ಮೊದಲು ಯಾರು ತೆರೆಗೈಗಳಿಂದ ತಬ್ಬಿಕೊಂಡಿಲ್ಲ (ಪಾಬಲಿ. ೮೩). [ ತೆಱೆ$^3_1$ + ಕಯ್$_2$ (< ಕೆಯ್$_2$) ]

**ತೆಱೆ$^3$ಗೆ** 'ತೆಱಗೆ' ನೋ.

**ತೆಱೆ$^3$ಗೊಳ್** (ಕ್ರಿ). ಸುಂಕವನ್ನು ತೆಗೆದುಕೊಳ್ಳು, -ಪಡೆ ; ಕಂದಾಯಂ ಏತ್ತು : ಸ್ವಾತಿತ್ರಯದೊಳ್ ಗಮನೋದ್ಯೋತಾಸ್ತಮಯಿಪ್ಪ ಶುಕ್ರನಿಂ ಶಕುಗೆ ಭಯಂ ಪಾತೇಂ ತೆಱೆ$^3$ಗೊಳ್ವರ್ ಸಂಪ್ರೀತಿಯು ನೃಪಸಮಿತಿ ಮುಳಿದು ತಮ್ಮೊಳಗಿಱುವರ್ (ಅಟ್ಟಮ. ೬-೧೩೬).

[ ತೆಱೆ$^3_3$ + ಕೊಳ್$_1$ ]

**ತೆಱೆ$^3$ದೆಱು** (ಕ್ರಿ). ತೆರಿಗೆಯನ್ನು ಕೊಡು, -ಸಲ್ಲಿಸು : ಕ್ರಿಯಾಸಮಾಸಕ್ಕೆ . . . ತೆಱೆ$^3$[ಪಾಠಾಂ. ಱ]ದೆತ್ತಂ, ಮುಱೆ$^3$ಪೊಕ್ಕಂ (ಶಮದ. ೧೬೬ ಪ್ರಯೋ).

[ ತೆಱೆ$^3_3$ + ತೆಱು$_1$ ]

**ತೆಱೆ$^3$ಪಡು** (ಕ್ರಿ). ಸುಂಕವನ್ನು ಕೊಡಬೇಕಾಗಿ ಬರು (?) : ದೇವರ್ಗೆ ದೇವಪೂವಿನ ಮುದನೆವಯ್ಯ ತೆಱೆ$^3$ಪಟ್ಟ ಪಾಳಿಯು ಪೊನ್ನರ ಕೊಟ್ಟು ಮಣ್ಣರ ಕೊಣ್ಡು ಬಿಡಿಸಿದಡೆ ಶ್ರೋತ್ರಿಯೂರ ಮಾರಯ್ಯಸೆಟ್ಟಿಯು ಮಗಂ ದೊರೆಯ್ಯಸೆಟ್ಟಿ (ಮೈಆರಿ. ೧೯೪೬, ೨೮-೩೦ ; 1032).

[ ತೆಱೆ$^3_3$ + ಪಡು$_1$ ]

**ತೆಱೆ$^3$ಪು** 'ತೆಱಪು' ನೋ.

**ತೆಱೆ$^3$ಪೊನ್**, **ತೆಱಪೊನ್** (ನಾ). ತೆರಿಗೆಯಾಗಿ ಕೊಡುವ ಧನ, -ಹಣ : ಅನೆಸ್ತು ಸಲೆ ಬಾಣರಾಜರ ವಿಷಯದ ಅಗ್ರಹಾರಂಗಳನ್ನೆಱೆ$^3$ಪೊನ್ನೇಡಿ ಕೊಣ್ಡು (ಸೌಇಇ. IX-i, ೪೬-೬; ಸು. 8ನೆಯ ಶತ). **ತೆಱಪೊನ್** : ತೆಱವಿನ ಪೊನ್, ತೆಱಪೊನ್ (ಶಬ್ದಾನು. ೩೩೨ ಪ್ರಯೋ). [ ತೆಱೆ$^3_3$ + ಪೊನ್ ]

**ತೆಱೆ$^3$ಯಿಸು**, **ತೆರೆಯಿಸು**, **ತೆರೆಸು**, **ತೆಱಸು** (ಕ್ರಿ). ತೆಗೆಯುವಂತೆ ಮಾಡು; ಬಿಚ್ಚಿಸು: ಕದವಂ ತೆಱೆ$^3$ಯಿಸಿರೆ ಎಲೇ ಅಪ್ಸರೇ (ವಾಗೀಶ. ದೇ. ೨೭೬-೦). **ತೆರೆಯಿಸು** : ತೆಗದ ಬಾಗಿಲ್ಗಳಿಂ ದಾರಿ ತೆರೆಯಿಸಿತು (ರಾಬೂರ. ೪೪-೫೮); ಆಸ್ಯದಲ್ಲುಂಟಾದ ಮಹಾಪರಿವರ್ತನೆ ಭುಡಮಾಳಿಶಾಹಿ ಜನಾಂಗಗಳ ಕಣ್ಣು ತೆರೆಯಿಸುತ್ತದೆ (ಕಾಲಯಾ. ೩೬). **ತೆರೆಸು** : ಅನೇಕ ದಿನಗಳಿಂದ ಬೀಗ ಹಾಕಿದ ಬಾಗಿಲನ್ನು ತೆರೆಸಿದರು (ಉದಿ). **ತೆಱಸು** : 'ಬಾಯ್ದೆಱಸು' ನೋ. [ ತೆಱೆ$^3_1$ + -ಇಸು$_3$ ]

**ತೆಱೆ$^3$ವಾಯ್**, **ತೆರೆಬಾಯಿ**, **ತೆರೆವಾಯ್**, **ತೆರೆವಾಯಿ** (ನಾ). ೧. ತೆರೆದ ಬಾಯಿ ; ಅಗಲಿಸಿದ ಬಾಯಿ ; ಬಿಟ್ಟ ಬಾಯಿ : ಮಿಂಗವಲ್ಲ ಮಾನಸ ರೂಪಲ್ಲ ಕೇಸರಿಮೊಗ ತೆಱೆ$^3$ವಾಯ ಪಲ್ಗಿಱಿದು ನಖದಿಂದಲಪಿತನ ಗೆಂಡಿಕೊಂಡಱಿಪಿದ ಪ್ರಕಟಿತ ಬಲುಹ ತೋಱೆ$^3$ನಗೆ (ಪೋಚಕ. ೪೦-೨೨). **ತೆರೆಬಾಯಿ** : ೧. ನನ್ನ ಭಾಷಣಕ್ಕಾಗಿ ನಿಮ್ಮ ತೆರೆಬಾಯಿ ನೀರೊಡೆದಿರಬಹುದು (ಹುಚ್ಚುಹು. ೦೦೩). ೨. ಪಕ್ಕನೆ ಬಾಯಿ ಬಿಡುವ ಸ್ವಭಾವ ; ಒಡಕುಬಾಯಿ : ನೋಡು ನೀನು ತೆರೆಬಾಯಿ ಮನುಷ್ಯ; ಪಿಸಕ್ಕನೆ ನಕ್ಕುಬಿಡುವಿ (ಕುರಿಹಿಂ. ೧೬). **ತೆರೆವಾಯ್** : ೧. ಮರಿಯು ತೆರೆವಾಯ್ಗಿಡುತೆ ತನ್ನ ಕೊಕ್ಕಂ ಕುಟುಕು ಕೊಡುತಿರ್ದ ತಾಯ್ವಕ್ಕಿಯುಂ ಕಂಡು (ಶ್ರೀರಾಮಾ. ೮-೧೯೫). **ತೆರೆವಾಯಿ** : ೧. ಈ ಗುಚ್ಛಗಳು ಅನೇಕ ವೇಳೆ ಕಿರೀಟಗಳಂತೆಯೂ . . . ತೆರೆವಾಯಿಗಳಂತೆಯೂ . . . ಮೆರೆಯುತ್ತಿರುವುವು (ಜ್ಯೋತಿವಿ. ೬೪). [ ತೆಱೆ$^3_1$ + ಬಾಯ್ ]

**ತೇ$_1$**, **ತೆಯ್**, **ತೇಯ್**, **ತೇಯು** (ಕ್ರಿ). ತೆಯ್ದು, ತೇದು, ತೇಯಿದು, ತೇಯ್ದು (ಭೂತಕೃ). ೧. ಅರೆ ; ಉಜ್ಜು ; ನುಣ್ಣಗೆ ಮಾಡು : ಇಱೆಯದೆ ಕೆಮ್ಮನುಂತೆ ಭುವನಂಗಳನುಂಗೊಳೆ ತಕ್ಕುದೆಂದೊಡೇಮಱುಕಮನೆಂಬುದೇಮಿರಿದಿದೆನ್ನ ಭುಜಾಸಿಗೆ ತೇದು ಪೂಸಲುಂ ನೆಱೆ$^3$ಯದು (ಕಾವ್ಯಸಾ. ೪೧೧ ಶೂದ್ರಕ) : ಆದ ಮುಳಿಸಿಂದಮೆಲ್ಲಂ ತೇದುಂ ಕುಡಿಯಲ್ಕೆ ತಕ್ಕ ಪಗೆವನ ರುಧಿರಾಚ್ಛೋದಮನೆ ಕುಡಿದು ಮಾಣ್ದ ವೃಕೋದರನೇನಾವ ತೆಱದೊಳಂ ದೂಪಿಗನೇ (ಪಂಪಭಾ. ೧೨-೦೫೯) : ಚಂದನವ ಕಡಿದು ಕೊಱೆ$^3$ದು ತೇದೊಡೆ ನೊಂದೆನೆಂದು ಕಂಪ ಬಿಟ್ಟಿತ್ತೆ (ಮಹಾದೇ. ಬ. ೨೮-೫೮) ; ಒರೆಯೆ ಸುವರ್ಣಂ ತೇಯೆ ಮಳಯುಜಂ . . . ಪರಿಮರ್ದಿಸೆ ಹಿಮುಕುಂಕುಮಮೃಗಮದಮೊರಸೆ ಕರಂ ಸಾದಿನ ಪುಣುಗಿನ ಘನಪರಿಮಳಮೆನೆ ಮತ್ಕೃತಿ ಮಾಡುವುದು ಚಮತ್ಕೃತಿಯುಂ ಸಂಘರ್ಷಿಸಲು (ಕುಮುರಾ. ೬೬೦ಕಾಸಂಧಿ ೪೩): ಮುಸುಡನಮರಾದ್ರಿಯಲಿ ತೇವೆನು ದೇವಸಂತತಿಯು (ಕುಮ್ಯಾವಿ. ೩-೬೮); ಕರದ ಕಂಕಣ ಝಣಝಣರೆನಲು ಗಂಧವ ತೇವ ತರುಣಿಯರೊಪ್ಪಿದರು (ಕಂಸವಿ. ೬-೮೯) : ಗಂಧವನು ತೇವಲ್ಲಿ ಒಂದು ನೊಣವನು ಕಾಣೆ (ಸರ್ವಜ್ಞ. ೮೧೮). ೨. ಸವೆ; ಕ್ಷಯಿಸು : ನೆಲನೆಲ್ಲ ಜವುಗಾಯ್ತು ಮೊದಲು ಮತ್ತುಱೆ$^3$ ತೇದು ತೊಳೆದುಹೋದುವು ಬಡಬೆಟ್ಟ (ಭರತ. ೩೪-೬೦). ೩. ಸವೆಯಿಸು ; ಸವೆಯುವಂತೆ ಮಾಡು ; ಕೃಶವಾಗಿಸು : ಋಷ್ಯಾಶ್ರಮದೊಳೆ ತನುವಂ ಮುಪ್ಪಿನೊಳ್ತೇದು ಮೋಕ್ಷಾಸ್ಪದಮಂ ಕೈಕೊಳ್ವೆಂ (ಕಾದಂಬ. ೩೮೬); ಮಾಱದೆ ಗಾಣದಂತಿರಟ್ಟುಂಬರಿಗೊಂಡು ತೇದಪುದು ಬೇಟಮಿದೆನ್ನಯ ಪಾಪಮಲ್ಲದೇ (ಲೀಲಾವ. ೨-೧೧೬) ; ಮುತ್ತಜ್ಜಿಯು ತಂದೆ ತಾತಂದಿರ ಕಾಲದಿಂದಲೂ ಅದುಮನೆಯ ಸೇವೆಯಲ್ಲಿ ಶರೀರವನ್ನು ತೇದಿದ್ದ ರಾಜಭಕ್ತನಾಗಿದ್ದನು (ಶ್ರೀರಾಜು. ೧೨೮). ೪. ಹಿಮ್ಮೆಟ್ಟು ; ಮರಳಿಹೋಗು : "ತೇ-ಅಪಸರಣೇ (ಹೊರಟುಹೋಗು)" (ಶಮುಧಾ). **ತೆಯ್** : ೧. ಮಲಯರುಹಕ್ಕುದ್ವರ್ತಿಯಿಂ ಸಾಪಮನಿತ್ತೊಡೆ ಚತುರಾಸ್ಯಂ ತೆಯ್ದು ಬೊಟ್ಟನಿಡುವರ್ದಲರುಂ (ಧರ್ಮಾಮೃ. ೩-೧೭೦). ೩. ತನುವಂ ತೆಯ್ದುಪ್ಪಳಕ್ಕಂ ಬ್ರತದೊಳ್ (ಕಾದಂಬ. ೭೯). **ತೇಯ್** : ೧. ಶ್ರೀಗಂಧಮಂ ತೇ[ಪಾಠಾಂ. ತೆ]ಯ್ದಂಗದಲಿ ಪೂಸಿ (ಬಸಪು. ೪೩-೬೦). ೩. ಕೊಳೆಯ ತೊಳೆಯಬೇಹುದಿಲ್ಲ ಒಡಲ ತೇಯಬೇಹುದಿಲ್ಲ (ವಿಠಗೀ. ೮೨-೨) : ಅಖಂಡ ಆಯುಷ್ಯವನ್ನು ಅವಳ ಸೇವೆಯಲ್ಲಿ ತೇಯ್ದ ರಘು (ದೀಪಹ. II, ೪೧೬). **ತೇಯು** : ೧. ಕಾಲುಗಳಿಂದ ತೇಯುವುದೂ (ಕೃಪಾಶ. ೦೦೯). ೩. [illegible] ತಾನು ಪಿರಿಪಿರಿ ತಿರುಗಿ ದೇಶದುದ್ದಾರಕ್ಕೆ ದೇಹವನು ತೇಯಬಲ್ಲ (ನಲಮು. ೨೮-೨೬).

[ ದೇ.II ತಮಿ. ತೇಯ್ ; ಮಲ. ತೆಲು. ತೇಯು ; ಕೊಡ. ತೇಯ್ ]

**ತೇ₂** 'ಟೇ' ನೋ.

**ತೇಂಕಾಡಿಸು, ತೇಕಾಡಿಸು** (ಕ್ರಿ). ತೇಲುವಂತೆ ಮಾಡು ; ತೇಲಾಡಿಸು ; ತೇಲಿಸು : ಅಂಗಪ್ರಭೆಯೊಳಖಿಲಕಾಂತಾರಮುಂ ಕೂಡೆ ತೇಂಕಾಡಿಸುತಂ . . . ಬಂದನೆ ಇರ್ವರಂ ಕುಮಾರಂ (ಶಾದಂಉ. ೫೪೭): ಕೂಡೆ ಮೂಜಗಮಂ ಮುಸುಕಿ ತೇಂಕಾಡಿಸುವ ಗಂಗೆಯುಮುಮೋಶನು ಸೂಡಿದನಲಾ ಮಲ್ಲಿಕಾ ವಳದಂತೆ ಮೌಳಿಯಲಿ (ಬಸಪು. ೫೪-೫೫) : ನೀಜಿಯುತ ಮಂಕು ಮಾಡುವ ಮತಿದೋಷುವ ಸುಖವಲ್ಲಿ ತೇಂಕಾಡಿಸುವನೇನೆಂಬೆ (ಭರಚ. ೬-೮೫). **ತೇಕಾಡಿಸು :** ಪಗೆವಡೆಯು ನೆತ್ತರ ಪೊನಲಿನಲಿ ತೇಕಾಡಿಸಲು (ಸಾಳ್ವಭಾ. ೨೩-೩೯). [ ತೇಂಕಾಡು + – ಇಸು₃ ]

**ತೇಂಕಾಡು, ತೆಕ್ಕಾಡು, ತೇಕಾಡು, ತೇಗಾಡು** (ಕ್ರಿ). ೧. ತೇಲು : ತೇಲಾಡು : ಇಳೆ ಜಲದ ಮೇಲೆ ತೇಂಕಾಡುತ್ತಿದೆಂಬಂತೆ ಬಾದ ಮಳೆಯಿಂ ಕವಿದ ಕತ್ತಲೆ ಕರಂ ಪೆರ್ಚಿ (ಇರರ. ದೀ. ೫೧-೨೬); ಜನನಾಥಂ ಜನಿತಾನುರಾಗರಸದೊಳ್ ತೇಂಕಾಡುತಿರ್ದರ್ಗಳ್ (ಕುಸುಮಾ. ೮-೩೩) : ವಲ್ಮೀಕನಗರಿ ಬಲ್ದೆರೆ ತಪ್ಪುವಾಗ ತೇಂಕಾಡಿ ತೊಳತೊಳಗಿ ಬೆಳಗುತ್ತ ಬರಬರಲು (ಸೌಂದಪು. ೫-೮೬) : ನಿವ್ವ ಎಚ್ಚರಗಳಲಿ ಬಂದೆ ಬಾಳಿನ ಬಿಂಬ ತೇಂಕಾಡುವದು (ಉಯಶ್ರೀರ. ೩-೧೨). ೨. ತುಂಬಿ ತುಳುಕು : ಅಮೃತಾ ಸಾರದಿನಾ ಪುದೇಶಮನಿತುಂ ತೇಂಕಾಡಲ್ (ಶಾ ದಂ ಉ. ೬೦೨). ೩. ಮುಳುಗಿ ಏಳು : ಅಖಿಳ ಕಾಮುಕನಿಕಾಯಮುವಿರಳಸುಖಾವಗಾಹ ದೊಳ್ ನಾಡೆ ತೇಂಕಾಡಿ ತಣಿವಿನಂ (ವರ್ಧಪು. ೩-೫೨ ವ) ; ಕೊಳಯೊಳ್ ತೇಂಕಾಡಿ ವಿಣ್ಯಾತ್ರುದೊಳ್ ಪುಗಿದೇತಕ್ಕ ಬಟೆಕ್ಕೆ ಬೇಟ್ಕರದಜಿಂ ಮರ್ತ್ಯಂ ಜಂಗುಪ್ಸಾಕರಂ (ಅನಂಪು. ೩-೬೫); ಸುರತಾಂಭೋನಿಧಿಯೊಳ ಗೊಗುವಿಂಗ ತೇಂಕಾಡಿದನರಸಂ ಮದನಾಗ್ನಿ ತವಿಪ ತಜದಿ (ಜಯುಕಾ. ೮-೫೪). **ತೆಕ್ಕಾಡು :** ೩. ನೀರಿದೆ ಕೊಳ್ಳಿಯೊಂದು ಕಮಂಡಲವ ಮರುಗೆ ತೊಜಿವಮುದುದದು ಬಾಲವೃದ್ಧರು ಪೊಜಿಯಿಡುತ ತೆಕ್ಕಾ[ಪಾಠಾಂ. ತೇಕಾ]ಡುತಿರ್ದರು (ಸಾಳ್ವಭಾ. ೩೦-೩೬). **ತೇಕಾಡು :** ೧. ವಹಣಯು ತೆರೆಯೊಳ್ ತೇ[ಪಾಠಾಂ. ತೇಂ]ಕಾಡುತ್ತಿರೆ (ಭೃಂಗೀರ. ಹ. ೪೬೬-೧೫) ; ಸಟೆಯು ಸಾಗರದೊಳಗೆ ತೇಕಾಡುತಿರ್ದರು ಕೆಲವರು (ಗಣಭಾ. ೧೬೮-೨) ; ತಾಕಾಡುವಾಗ ಇತ್ತ ತೇಕಾಡುತಾವ ಚಿತ್ತ (ಗಂಗಾಪ. ೧೯-೪). ೩. ಭಯ ಜಲಧಿಯಲಿ ತೇಕಾಡಿದರು ಕೌರವಜನಪರು (ಕುಮಾಭೀ. ೧೦-೧೩). **ತೇಗಾಡು:** ೧. ಗಣಿಕಾಜನಗಳು ಭೋಗಸಾಗರಮಧ್ಯದೊಳಗೆ ತೇಗಾಡುತ ವಿಟಜನಗಳ ಚಿತ್ತಮನಾಕರ್ಷಣಮಾಡುತಿಹರು (ಅಂಜಚ. ೩-೩೦೯).

[ ತೇಂಕು ₁ + ಆಡು ₁ ]

**ತೇಂಕಿಸು₁** (ಕ್ರಿ). ತೇಲಾಡಿಸು; ತೂಗಾಡಿಸು: ಸುಣ್ಣವಡದ ಸಳತೋಳ್ಗ ಳೆಂಬ ಸೆಳೆಗೊಂಬುಗಳ್ ಕಾವನೆಂಬ ಗಾಡುಗೋಗಿಲೆಯುಂ ತೇಂಕಿಸೆಯುಂ (ಕಬ್ಬಿಕಾ. ೧೨೩) : ಲಾವಣ್ಯಾರಸದ ಪೊನಲ್ ಜನಲೋಚನ ಪಾಠೀನಮುಂ ತೇಂಕಿಸೆಯುಂ (ಪುಷ್ಪಪು.೫-೩೪ ವ). [ ತೇಂಕು ₁ + – ಇಸು ₃ ]

**ತೇಂಕಿಸು₂** (ಕ್ರಿ). ಬಳಲಿಸು; ದಣಿಸು; ಆಯಾಸಗೊಳಿಸು : ವಜ್ರ ಬಾಣನಾದು ತೇಂಕಿಸಿ ರಾಜಪುತ್ರಬಾಣನನಂಕದೆ ಗೆಲ್ದಿಸಿದ ಮುನಿಲಬಾಣನ ಮುಜಿದಿಂ (ಕಲ್ನಾ. ೩-೧೩). [ ತೇಂಕು₂ (< ತೇಗು₁) + – ಇಸು₃ ]

**ತೇಂಕು₁, ತೇಂಗು₁, ತೇಕು₁** (ಕ್ರಿ). ೧. ತೇಲು : "ತೇಂಕಂದು ತೇಲ್ವುದು" (ಕಶಸಾ. ೩೦-೬೩೫) ; ಜನಸವನಾಂಬುಧಿನೊಳ್ ಭೋಂಕನೆ ಚಂದ್ರಂ ತೇಂಕಿ (ಆದಿಪು. ೬-೯೯) ; ಅಬ್ಧಿಯಿಲ್ಲಿಳೆ ತೇಂಕಿರ್ದುದು ಭಾರದಿಂ ಬಡಗ ನಬ್ ಪೊಪಾರ್ಗಗಸ್ತ್ಯಂಬರಂ (ಪಂಪಭಾ. ೪-೨೦) ; ಪೂಗೊಳಂಗಳೊ ಳ್ತೇಂಕಿ ಪಾಜುವ ಪಕ್ಕಿಗಳ್ (ಶಾದಂಉ. ೫೨೬) ; ನೆತ್ತರನೆ ಕಾಜಿ ಕುರುಪತಿ ನೆತ್ತರ ಕಡಲೊಳಗೆ ತೇಂಕಿ ತೆರೆಮುಂಬುಗಿರ್ದಂ (ಗದಾಯು. ೯-೧೭) ; ತೆರೆಯಂತೆ ನೂಂಕದೆ ಬೆಂಡಿನಂತೆ ತೇಂಕದೆ . . . ಶುಭಧ್ಯಾನಾರೂಢ ನಾಗಿರ್ಪುದುಂ (ಧರ್ಮಾಮೃ. ೬-೧೦೫) ; ತೀವಿದ ತಿಂಗಳ ಬೆಳಗಿನೊಳಗ ತೇಂಕುವ ರಾಕಾಶಶಾಂಕನಂತೆ ಶಾಂತನುಂ ನಿರ್ವಿಕಾರನುಂ ನಿರೀಹಿತನುಂ ನಿರ್ಮಲನುಮಾಗಿ (ಅನಂಪು. ೬-೩೨ ವ) ; ಬೆಳ್ದಿಂಗಳ ಬೆಳ್ಳದೊಳಗೆ ಬಿನದದಿ ತೇಂಕುವ ಕುಸುಮಾಯುಧನೊ . . . ಎನಲಂಗನೆಯರ ಕಣ್ಬೆಳಗಿನ ಕಾಳ್ಪುರದೊಳಾ ವಿಭು ನಡೆದಂ (ಜಯುಕಾ. ೧೦-೬೨ ವ). ೨. ತೇಲಿದಂತಾಗು ; ತಲೆ ಸುತ್ತು ; ಬವಳಿ ಬರು : ಅರಸಂ ನಿಟಿಲದ ಗಾಯಕ್ಕೆ ತೇಂಕಿ ಮೈಮರೆದಂ (ವಡಕಾ. ೨-೩೦). ೩. ಪರವಶತೆಗೆ ಒಳಗಾಗು ; ಮೈಮರೆ ; ಪರವಶಗೊಳ್ಳು : ಸೂಡಿದ ಪಾಂಜಿಜಾತ ಪರಿಗಾಂಪಿಂ ತೇಂಕೆ ವೈಮಾನಿಕಂ ( ಅನಂಪು. ೪-೭೦). ೪. ತುಂಬಿ ತುಳುಕು: ತೇಂಕಣದೆಸೆಯೊಳ್ ಮೆಜಿಗುಂ ಸಂಕರ್ಷಣರಾಜಧಾನಿ ನಿರರುತಿದೆಸೆ ಯೊಳ್ ತೇಂಕುವುದವನರಸಿಯು ತನಿಬಿಂಕದ ಸರಸತಿಯು ರಾಣಿವಾಸಂ ಲೇಸು (ಚಳವಿ. ೫-೧೭೯). **ತೇಂಗು₁ :** ೧. ಮೃಗೋದ್ಭವಕಲ್ಕಂ ಘನಸಾರ ರೇಣುಪಟಲಂ ಶ್ರೀಖಂಡಜಂ ಬಾಳೆಯೆಂಬಿವಜಿಂ ತೇಂಗೆ ತರಂಗಮಾಲೆ ರಸಿಕಂದರ್ಪಂಗೆ ತೀವಿಟ್ಟ ಬಣ್ಣವುರಂ ತಾನೆನೆ ಕಣ್ಗೆ ಮಾಡಿದುದು ಕಾಸಾರಂ (ಅನಂಪು. ೭-೫೨). **ತೇಕು₁ :** ೧. ಸಾತ್ತೋರ್ವಾರ್ಣವದೊಳು ಮೂಜಿ ಮುಳುಗಿ ತೇಕುತಿರ್ದಾ (ಗೃಹಮೃತ. ೬-೫೧). [ ದೇ.॥ ತಮಿ. ತೇಙ್ಕು ]

**ತೇಂಕು₂** 'ತೇಗು₁' ನೋ.

**ತೇಂಕು₃** 'ತೇಗು₃' ನೋ.

**ತೇಂಕುದಾಣ** (ನಾ). ನಾಡಿ ಮಿಡಿಯುವ ಸ್ಥಳ, ಉಸಿರಾಡುವ ಜಾಗ ಮುಂತಾದುವು : ತೇಂಕುದಾಣಂಗಳನಂಟಾಂಟಲ್ಲಿಯುಂ ಕಾಣದೆ ಹರಣ ಮನತ್ಯುಷ್ಣದಿಂ ಸುಯ್ಯೆ (ಲೀಲಾವ. ೯-೩೦) ; ಜೀವವಿಕ್ಕೆಂಬಾಸಯಿಂ ತೇಂಕುದಾಣಂಗಳಂ ಬಗೆದಳು (ಹಡಕಾ. ೧೨-೨೫); ಎಳದು ಬಾಯ್ ನಸುನಗುತ್ತಿದೆ ತೇಂಕುದಾಣಂಗಳಲುಗುವಂಗಂಗಳತಿ ಬಿಸಿವತ್ತಿವೆ (ಸಿದ್ಧರಾ. ೨-೫). [ ತೇಂಕು₂ (<ತೇಗು₁) + ತಾಣ ]

**ತೇಂಕುಮುಗಿಲ್** (ನಾ). ತೇಲುವ ಮೋಡ,–ಮುಗಿಲು : ತೇಂಕು ಮುಗಿಲ್ಗೆ ಕಾಲ್ಮೊಳೆತಂತೆ ಕನಸಿನೊಳ್ ಚರಯಿಪಂಬೊಲ್ ಪೋಗುತಿರ್ದನ್ (ಸಂಸಪ. ೩೨-೧೮೭). [ ತೇಂಕು₁ + ಮುಗಿಲ್ ]

**ತೇಂಗಾಯ್** 'ತೆಂಗಾಯ್' ನೋ.

**ತೇಂಗಾಯ್ಮೊಲೆ** 'ತೆಂಗಾಯ್ಮೊಲೆ' ನೋ.

**ತೇಂಗು₁** 'ತೇಂಕು₁' ನೋ.

**ತೇಂಗು₂, ತೆಂಗು₁, ತೇಗು₂** (ಕ್ರಿ). ೧. ನಲಿಸು : ಜವದಿಂದಾಗಸದೊಳ್ ಪಾಜುವ ಪಕ್ಕಿಯುಮುಂತುಗಾಣಲಣಮಾಜದೆ ತೇಂಗುವುದು ಪತಾಕಾಗ್ರ ದೊಳ್ (ಚಂದ್ರಪು. ೧೦-೨೫). **ತೆಂಗು₁ :** ೨. (ಹಕ್ಕಿಯಂತೆ) ಎರಗು : (?). 'ತೆಂಗುಹ' ಪರಾ. **ತೇಗು₂ :** ೧. ಸಕಳಾವನಿ ರಾಗಿಸಿ ಬೀಗೆ ಕೀರ್ತಿ ದಿಕ್ತತಿಗಳ ಮೇಗೆ ತೇಗೆ ತಳೆದಂ ಭುವನಪ್ರಭು ರಾಜ್ಯಲಕ್ಷ್ಮಿಯಂ (ಪುಷ್ಪಪು. ೧೩-೨). [ ? ]

**ತೇಂಗು₃** (ನಾ). ಹೋಲಿಕೆ : ಎಣೆ; ಸಾದೃಶ್ಯ : "ಸದೃಶಾರ್ಥತೆಗೆ ತೇಂ[ಪಾಠಾಂ. ತೆಂ]ಗು" (ಕಬ್ಬಿಕೈ. ೩೦). 'ಪಾಂಗು' ಪಠಾ. [ ? ]

**ತೇಂಗುಹ, ತೆಂಗುಹ** (ನಾ). ೧. ಹಕ್ಕಿಯು ಎರಗುವಿಕೆ: "ತೇಂಗುಹಮೆಂದು ಪಕ್ಕಿಯೆಱಗುಹಂ" (ಕಶಸಾ. ೫೧-೧೦೪). ೨. ಹಕ್ಕಿಯಂತೆ ಎರಗುವಿಕೆ : ರಾಯಗದ್ದುಗೆಯ ಸಜ್ಜೆಗೆ ಮುಟ್ಟಲು ತೇಂಗುಹದ ಪವಣು ಒಂದೆರಡು ಅಂಗುಲಗಳಷ್ಟು ಸಾಲದೆ . . . ಬಿದ್ದು (ಚಿಬ್ಬಿಅ. ೧೦೯-೧೬). **ತೆಂಗುಹ:** ೧. "ತೆಂಗುಹಂ–ಹಕ್ಕಿಯೆಱಗುಹಂ" (ಶಮದ. ಪರಿ. ೨); "ತೆಂ[ಪಾಠಾಂ. ತೇಂ] ಗುಹವೆಂಬ ನುಡಿ ಹಕ್ಕಿಯೆಱಗುವುದಕ್ಕು" (ಕಬ್ಬಿಕೈ. ೮೫) : "ತೆಂಗುಹ ಮೆನಲ್ ಪಕ್ಕಿಯೆಱಗುವುದಕ್ಕುದು" (ಶಬ್ದಮಂ. ೩೦).

[ ತೇಂಗು₂ + – ಹ₂ ]

**ತೇಂಗೊಳಲು** (ನಾ). ಅಕ್ಕಿಹಿಟ್ಟು ಮತ್ತು ಉದ್ದಿನ ಹಿಟ್ಟು ಮುಂತಾ ದುವುಗಳನ್ನು ಕೂಡಿಸಿ, ಎಣ್ಣೆಯಲ್ಲಿ ಕರಿದು ಮಾಡುವ ಒಂದು ಬಗೆಯ ತಿಂಡಿ : ಕೈಗಾವಲು ತಿಂಡಿ ಇರಲೆಂದು ಮಾಡಿಕೊಟ್ಟಿದ್ದ ತೇಂಗೊಳಲು, ಚಕ್ಕುಲಿ ಮತ್ತು ಬೇಸಿನ್‌ಲಾಡುಗಳು ಅದರಲ್ಲಿದ್ದುವು (ರಂಗಕ. ೬೧) : ಎದುರಿಗೆ ತಟ್ಟೆಯಲ್ಲಿ ಗರಿಗರಿಯು ಚಕ್ಕುಲಿ, ಖಾರವಾದ ತೇಂಗೊಳಲು . . . ಹೊಳೆಯುತ್ತಿದ್ದುವು (ವೃದ್ಧವಿ. ೧೦೯) ; ತೇಂಗೊಳಲನ್ನು ಮೆಣಸಿನಲ್ಲಿ ಮುರಿಮುರಿದು ಮುಕ್ಕಿದ ಹಾಗೆ (ರಾಮರಾ. ೬೮) ; ರಾಮಾನುಜರು ಕಂಡ ವೈಕುಂಠ ಕನಸು ಆಹಾ ಸಮಗಾಗುತಿದೆ ತೇಂಗೊಳಲ ನನಸು (ಗದೀಕ. ೬೦-೨೬).

[ ದೇ.॥ ತಮಿ. ತೇಙ್ಕುಟಲ್ ; ತೆಲು. ತೇನೆತೊಲ, ತೇನೆತೊನ ]

**ತೇಕರೆ** (ನಾ). ಕಮರುತೇಗು ; ಅಜೀರ್ಣದ ತೇಗು : ಲೋಕರಕ್ಷಕ ಮಂತ್ರಕಾರಣ ನಾಕಜಾಧಿಪ ಮುಖ್ಯಸುರರಿಗೆ ತೇಕರೆಯು ಮಾಡಿದರು ನುಂಗುವ ಮೃತ್ಯು ಕೇಳಿನಲು (ಸಂಭಪು. ೮-೮೪). 'ಕಟ್ಟುಜಿತ' ಪರಾ.

[ ತೇಕು$_3$ (<ತೇಗು$_3$) + ಅರೆ$_5$ ]

**ತೇಕಲ್** (ನಾ). ಒಂದು ಊರಿನ ಹೆಸರು ; ೫ ಮಾಲೂರು ತಾಲ್ಲೂಕಿನ ಈಗಿನ ಟೇಕಲ್ : ಅವಜಿ ಮೇಗೆ ಬಾಣರಾಜಸರ್ ತೇಕಲ್ಲ ಟಿ × × × ದಯೊನ್ ಅಗ್ಗಳಾ ಅರಸರ್ ಬೆಸಸಿದೊಡೆ (ಎಕ. X (S), ಬಾಗೇಪ. ೯೬-೬ : ಸು. 820) : ನಾಯಕತನಕ್ಕೆ ಪಾಲಿಸಿದ ತೇಕಲಸೀಮೆಯೊಳಗಣ ಉಳ್ಳಿಯುರ ಹಳ್ಳಿ (ಎಕ. X, ಮಾಲೂರು. ೩೫-೪ : 1525). [ ? ]

**ತೇಕಾಡಿಸು** 'ತೇಂಕಾಡಿಸು' ನೋ.

**ತೇಕಾಡು** 'ತೇಂಕಾಡು' ನೋ.

**ತೇಕು$_1$** 'ತೇಂಕು$_1$' ನೋ.

**ತೇಕು$_2$** 'ತೇಗು$_1$' ನೋ.

**ತೇಕು$_3$** 'ತೇಗು$_3$' ನೋ.

**ತೇಕೆ** (ನಾ). ಅಳತೆಯಲ್ಲಿ ಧಾನ್ಯವನ್ನು ತಲೆಸವರಿ ಅಳೆಯುವಿಕೆ.

[ <ತೇಂಕು$_1$ ]

**ತೇಗ$_1$**, 'ತೇಗು$_4$' ನೋ.

**ತೇಗ$_2$**, ತೇಹ (ನಾ). ಒಂದು ಬಗೆಯ ಬಾಗಿರುವ ಕತ್ತಿ : ಕತ್ತಿ, ಕಠಾರಿ, ಕೈಚೂರಿ, ಪತಾತ, ಪಿಸ್ತೂಲ, ಕರುಳಿ, ತೇಗ (ಪಾಶ್ಯಾವಿ. ೫೧೩). **ತೇಹ** : ಸುರಾಯು, ಚಾಕು, ಕಠಾರಿ, ತೆ[ತೇ]ಹ ಮೊದಲಾದ ಆಯು- ಗಳನ್ನು ತಂದು . . . ಆತನ ಸಮಯವನ್ನು ನೋಡುತ್ತಿದ್ದರು (ಕೃಪಾಸ. ೧೧೮).

[ ←ಪಾರ. ಅರ. ಹಿಂ. ತೇಗ್ ; ಮರಾ. ತೇಗಾ, ತೇಘಾ ]

**ತೇಗಟ್ಟೂರ್** (ನಾ). ಒಂದು ಊರಿನ ಹೆಸರು : ತೇಗಟ್ಟೂರ್ವಿಷಯೇ ಬಾರದೂರ್ನ್ನಾಮಗ್ರಾಮ (ಮೈಆರಿ. ೧೯೪೪, ೧೫೩೩ ; 725).

[ ? + ಊರ್ ]

**ತೇಗಳಿ** 'ತೇವಂಳಂ' ನೋ.

**ತೇಗಾಡು** 'ತೇಂಕಾಡು' ನೋ.

**ತೇಗು$_1$**, ಡೇಗು$_1$, ತೆಕ್ಕು$_1$, ತೇಂಕು$_2$, ತೇಕು$_2$ (ಕ್ರಿ). ೧. (ತೃಪ್ತಿಯಿಂದ) ಢರಕೆಹೊಡೆ ; ಉದಾನವಾಯು ಬಿಡು : "ತೇಗು– ಉದಾನವಾಯೌ, ವೃಕ್ಷ ಭೇದೇ ಚ" (ಶಮದ): ಕೆನ್ನೆತ್ತರೊಳೋರ್ವ ರೊರ್ವರಂ ತಳ್ಕಿಜಿದುಂ ಬೊಬ್ಬಿಟಿದುಂ ತ್ರಿಪುಂಡ್ರಮಿಟ್ಟುಂ ಕೂಕಿಜಿದುಂ ತೇಗಿಯುಂ . . . ಆಡುವಾಗಳ್ (ಪಂಪಭಾ. ೧೨-೧೫೮ ವ) ; ಗಜಿಸ್ಸಿಂದೋವದೆ ತೇಗಿಯುಂ ಮಿಡಿಗಳಂ ಕುಂಟಾಗೆ ಕೊಯ್ದುಂ ಖಳರ್ (ಧರ್ಮಾಮೃ. ೬-೧೮೯) ; ಭಕ್ತಿ ಯಿಂದವೆ ತಣಿದು ತೇಗಿ ತೂಗಾಡುತಂ (ಕದ್ವರ. ದೇ. ೧೩೦-೨೨) : ತೇಗಿ ದನು ದಜ್ಜನೆ . . . ಬಿಳನಧಿಕತೃಪ್ತಿಯಲಿ (ತೊರರಾ. ೬-೨೬-೫೯) : ಉಂಡವ ತೇಗುವಂತಾತ್ಮನ ಭಾವಿಸಿ ಕಂಡು ಕಂಡವ ಪೇಳಬೇಕು (ಭರತ. ೨-೯೬) : ಕುರುಡ ಕುಂಟ ಪೆಳವರಲ್ಲಿ ಮರುಕಗೊಂಡು ಬೋಸವಿಕ್ಕು ಹರನು ಮೆಚ್ಚಿ ತೇಗಿ ತಾನು ಹರಸಿ ಪೊರೆವನಂ (ಶಪಿಸೂ. ೪೪-೩). ೨. ಏಗು ; ಕಷ್ಟಪಡು ; ಆಯಾಸಪಡು : ಬೆವರುತಂ ಬಿಕ್ಕುತಂ ತೇಗುತಂ ತೂಗುತಂ ಕ್ರಮವಳಿದು ಸುಳಿದು ಸುಯಿ ಲಾಗುತಂ (ಬಸರ. ೩-೧೦೬). ೩. (ಆಲಂ) ತಿಂದಂ ಪಾಂಗಿಸು : ಕದನ ದಲಿ ದುಶ್ಯಾಸನನ ತೇಗಿದನಲಾ ಬಕವೈರಿ (ಕುವ್ಯಾಗ. ೩-೨೯). **ಡೇಗು$_1$** : ೧. ಬಿರಿಮಂತಾಯಿತುದರವೆಂದಂಜಿ ಬಿಟ್ಟನೋ ಎಂಬವೊಲ್ ಡೇಗಿ ಭೋಜನವ ಮುಗಿಸಿ (ಮಲ್ಲಚ. ೫-೧೫) : ಜನನಿ ತುಪ್ಪನಾದೆನು ಸಾಕು . . . ಎಂದಾತನುರೆ ಡೇಗಲು (ಮಲ್ಲಚ. ೮-೪೪). **ತೆಕ್ಕು$_1$** : ೨. ತೆಕ್ಕು ವಳ್ಳಿಯು ಬಿಟ್ಟ ಮಂಡೆಯು ಉಕ್ಕಿ ಸೋರೆಗಟ್ಟಿಳಿವ ರಕ್ತದ ಲಕ್ಕೆ ಬಾಯೊತ್ತಿ ದುದು (ಶಾಶಿರಾ. ೫-೨೦) ; ತೆಕ್ಕುತಿಹ ಕಿಬ್ಬದಿಯು ಬಸುಜಿಂಗೊಲಿವ . . . ಚಿಂತಾಹೃದಯು ನೋಡುತ ಮಜಿಯು ಪೊಕ್ಕನು ದೈತ್ಯ ದಲಪತಿಯು (ಶಾಶಿರಾ. ೩೯-೨೮). **ತೇಂಕು$_2$** : ೧. ಆರೋಗಣೆಯುನಾ ಹೊಟ್ಟೆಯೊಡೆವ ಮಾರ್ಯಾದೆಯೊಳಗುಂಡು ತೇಂಕು [ವಾತಾಂ. ಗು]ತ್ತಿರ್ದರು (ಸಮ್ಯಕ್ತಾ. ೭-೨೬). ೨. ತಪೋವನಮಂ ಶಶಿಮೌಳಿ ಪೊಕ್ಕು ಮೆಲ್ಲನೆ ಬರುತುಂ ಪಥ ಶ್ರಮವನಾಂತು ಬಳಲ್ದವೊಲಾಗಿ ತೇಂಕುತುಂ (ಗಿರಿಕ. ೯-೮೯): ಹಣೆಯಿಂದ ಬೆಮರುಗೆ ಸೆತ್ತಿ ಪೊತ್ತಿ ತೇಂಕುತ್ತ ಹರಿತಪ್ಪಾಗಳ್ (ಪದಕಾ. ೧೨-೭) ; ಕೆಮ್ಮುಗುಂ ತೇಂಕುಗುಂ (ಪಾಲಚಿ. ೧೨೭-೪). **ತೇಕು$_2$** : ೨. ಮೊಗ ಬೆಮರೆ ತೇಕುತಂ ಪರಿತಂದು (ಬಸರ. ೯-೯೬) ; ತೇಕಿ ತಲೆಕೆಳಕಾದನೀ ಯುವಿ ವೇಕಸಾಗರನೆಲೆ ನೃಪತಿ ಜಗದೇಕವೀರನು ಕರ್ಣ ತಾನಿರೆ ಸಂಧಿಯೇಕೆಂದ (ಕುವ್ಯಾಉ. ೫-೧೩) ; ಮುನಿಮನಂಗಳು ತೇಕಿ ತಲೆಕೆಳಗಾದುವೈ ಕಾಣಸದೆ ನಿಜಪದವ (ನಿಭಾಗ. ೩-೭-೨೨) ; ಕೌರವಂ ನೋಡಿ ಪಸುಮಕ್ಕಳಂ ಬರಿದೆ ನೀಂ ಕೊಂದೆಯಾಯೆಂದು ಪ್ರಾಣೋತ್ಕಟಂಗಳಿಂ ತೇಕುತಿರೆ (ತುರಂಗ. ೬೬-೫೭); ಆದಾಗ ಏದುತ್ತ ತೇಕುತ್ತ ಅಲ್ಲಿ ಬಂದು ತಲುಪಿದ ಸುರೇಶ (ಅದೋಲೀ. ೯೬) ; ಬಾಗಿಲು ಕಾಯುವವನು ತೇಕುತ್ತಾ ಬಂದ (ಜಮಿನ್ನಾ. ೯).

ತೇಗಿ ತೊನೆ = ತೃಪ್ತಿಪಡು : ಗಣಪತಿಯು ಶಿವನ ಮುಂದೆ ಜಗತ್ತಿನಲ್ಲಿ ಎಲ್ಲಿ ನೋಡಿದರೂ ಸುಖವೇ ಉಂಟೆಂದೂ ಆ ಸುಖವನ್ನುಂಡು ತೇಗಿ ತೊನೆದು ಉಬ್ಬಿ ಬಂದನೆಂದೂ ಮುಂಚಿತವಾಗಿ ಹೇಳಿರಲು (ಕನ್ನಜಾ. ೧೫೬). [ ದೇ.॥ ತಮಿ. ಮಲ. ತೇಕ್ಕು ; ತುಳು. ತೇಗು, ತೇಂಕ್, ಸೇಂಕ್; ತೆಲು. ತೇನು, ತೇಪು, ತ್ರೇಪು ]

**ತೇಗು$_2$** 'ತೇಂಗು$_8$' ನೋ.

**ತೇಗು$_3$**, ಡೇಗು$_2$, ತೇಂಕು$_3$, ತೇಕು$_3$ (ನಾ). ೧. ತೇಗುವಿಕೆ ; ಢರಕೆ : ಆಗುಳಿಕೆ ತೇಗು ಸೀನಿದನಾಗಿಸಾಗುಂ (ಕಲ್ಯಾಕಾ. ೨-೧೭): ಮಹೇಶ್ವರಾಲಯು ದಂತೆ ಗೂರವು . . . ತಣಿಯುಂಡನಂತೆ ತೇಗು (ಬಂಹರಿ. ೨-೩೮ ವ) ; ಎರಡಳ್ಳೆ ಪಿಟ್ಗಿ ತೇಗುಬ್ಬರಿಸಲ್ ಕುಳಿರ್ವಮಳಜಲಮನೀಂಟಿದೆಂ (ದಶಕು. ೪-೩೪) : ವರಸಮಾಧಾನದಲಿ ಕೈದೊಳೆದುರವಣಿಪ ತೇಗಿನ ತರಂಗದ ಪರ ಬಲಾಂತಕನೆದ್ದು ನಿಂದನು (ಕುವ್ಯಾಅ. ೧೦-೩೪). **ಡೇಗು$_2$** : ೧. 'ಅಬ್' ಎಂದು ಡೇಗುಹಾಕುತ್ತಾ ಮಧ್ಯಮದ ವಯಸ್ಸಿನ ಸಮಾಪಿಸಿದ ಆ ಪಟೇಲರು . . . ಕುಳಿತಿದ್ದರು (ಬರಹಾ. ೬೩). **ತೇಂಕು$_3$** : ೨. ಏದು ಸಿರು ; ಮೇಲುಸಿರು : ಪಿಪ್ಪಲಿಯುಂ ತ್ರಿಫಳೆಯುಮನರೆದು . ತಿನೆ ನೆಗಡಿ ತೇಂಕರೆತಲೆಬೇನೆ ಜ್ವರಂಗಳಂಬಿಮಿನಿತುಂ ಕಿಡುಗುಂ (ಲೋಕೋಪ. ೯-೯೨). **ತೇಕು$_3$** : ೨. ಬಾಯುಂ ಬಿಡುತುಂ ತೇಕುಣ್ಣೆ ಜಿಹ್ವಾಲತೆಯೆಟಲೆ ಜವಂಗುಂದುತುಂ ಬಂದು (ಶಾಂತೀಶ್ವ. ೧೨-೩೬) : ಓಡಿ ಓಡಿ ಬಂದುದರಿಂದ ಅವನಿಗೆ ತೇಕು ಹೆಚ್ಚಾಗಿತ್ತು (ಜನಸಿ. ೬೬)

[ <ತೇಗು$_1$./ತಮಿ. ತೇಕ್ಕು : ತುಳು. ತೇಗ್, ತೇಂಕೆ ]

**ತೇಗು₄, ಚೇಗು₁, ತೇಗ₁** (ನಾ). ಒಂದು ಬಗೆಯ ಮರ ; ಸಾಗುವಾನಿ: "ತೇಗಿನ ಮರನದೆ ಸಾಕಂ" (ವಸ್ತುಕೋ. ೩೫-೧೬) : "ತೇಗು –ಉದಾನವಾಯೌ, ವೃಕ್ಷ ಭೇದೇ ಚ" (ಶಮುಧ) ; "ತೇಗುಮುರಿವೋಷವಕ್ಕು" (ಮುಂಗರಾ. ೩೬-೧೮) ; ಸಿರಿಸಂ ಸೀರೆ ಬೆಳಲ್ಲವಂಗಮೆಲವಂ ಬಳ್ವಾಲೆರಂ ಬಿಕ್ಕೆ ತೇಗು (ಕಾವ್ಯಸಾ. ೦೦೪೦ ಉದ್ಧೃತ) ; ಮೊಗವಂ ತೂಳಿವಂತೆ ಬಾಗಿ ಮಾತಙ್ಕಾಯುದಳಂತೆ ಮೂಗಿ ಮಿಗಿಲುಂಡವರಂತಿರೆ ತೇಗು ... ಕರೆವಂತ ಪಾಲೆ ಶಂಕರಸಬಿಸಂತೆ ಹೊನ್ನೆಯುಳಯುಂತೆರದಂತಿರಣ್ಮವೊಪ್ಪುಗುಂ (ಮಲ್ಲಿಕಾ. ೩-೧೩೬) ; ತೇಗಾಲದ ನೇಱಿಲ . . . ಹೊನ್ನೆಯ ತರುಗಳ್... ಮೆಱೆಗುಂ (ಹಮ್ಮಿರ. ೪-೬೯) ; ತೇಗರುಟಾಳ ಚಿಲ್ಲ ಸೆಲ್ಲಿಯು ಪೊಂಗೆ ನೇಱಿಲು . . . ಸೂರಮಾರ್ಗವ ತಡೆದಿಹುವು (ಕಂನವಿ. ೧೮-೩೬) ; ಎಕ್ಕೆಯುಂಬಟೆ ತೇಗು ಮತ್ತಿಯು . . . ಕಿಕ್ಕಿಱಿದು ಬೆಳೆದಿರ್ದುವು (ಪ್ರಹ್ಲಾದ. ೪-೧೧) ; ಭಸಿತಧಾರೆ ಪೊಣ್ಮುವ ರಂಧ್ರವುಂ ಭೋಂಕನೊಂದು ತೇಗಿನೆಳೆದಳಿಂ ಕಟ್ಟಿ ಬಂಧಿಸುತ (ವೃಷವಿ. ೨೯-೧೩೫ ವ) : ತೇಗಿಗಿಂತ ಗಟ್ಟಿಯಿಲ್ಲ ಜೋಗಿಗಿಂತ ಕುಂಬು ಇಲ್ಲ (ಗಾದ). **ಚೇಗು₁** : ಚೆನ್ನಾಗಿ ಬಲಿತ ಚೇಗಿನ ಮರ : ಒಂದಕ್ಕೊಂದು ತಟ್ಟದಿರೆ ಒನೆಯೆಗಾಟ್ಟು ಮಾಡಿರುತ್ತಾನೆ (ನಾಪದ. ೪ ಪರಿಚಯ). **ತೇಗ₁** : ನಿಗುರ್ದ ಪೆತ್ತೇಗದಿಂ ತೇಗದಿಂ ಕಾಸನಂ ಕಣ್ಗೆಸೆದುದು (ರಾಘಚ. ೧೬-೫೪) : ಬಿದಿರುಮೆಳೆ ಮತ್ತು ತೇಗದ ಮರಗಳ ಭೀಕರ ಕಾಡಿನ ಮಧ್ಯೆ ಹತ್ತು ಮನೆ (ಹೊಸಕ್ಷಿ. ೧೨೩) : ತೇಗದ ಮರ, ಸಾಗವಾನಿ (ಮೃಚಿಗಿ. ೬೩-೧೫೦೫).

[ ದೇ.೫ ತಮಿ. ಮಲ. ತೇಕ್ಕು ; ತೆಲು. ತೇಕು ; ಟೇಕು ; ಕೊಲಾ. ಟೆಕ್ ; ಪರ್ಜಿ. ಟೇಕ್ ; ಗೊಂಡಿ ; ತೇಕಾ./ಇಂ. Teak ]

**ತೇಗುರು** (ನಾ). ಒಂದು ಊರಿನ ಹೆಸರು : ಯಿದಕ್ಕೆ ಸಾಕ್ಷಿ ಮುಗುಳಿ ಚಣ್ಣಯೂರ ಪಲ್ಮಾಡಿ ಅಮ್ಮಾಳೆ ಕಿರಿಯ ಮುಗುಳಿ ಮುಱಿವಳ್ಳಿ ನಲ್ಲೂರು ಮಾಗುಣ್ಡ ತೇಗುರು ಆರಮಣ್ಣಂ ಬಿಟ್ಟ ಮಂಗಳಂ (ಎಕ. VI, ಚಿಕ್ಕಮ. ೪೨-೨೨ ; 959).

[ ಇದು 'ತೇಗೂರು' ಎಂಬುದರ ಅಪಲಿಖಿತವಿರಬಹುದು ]

**ತೇಜ₁** (ನಾ). ೧. ಹೊಳಪು ; ದೀಪ್ತಿ ; ಪ್ರಕಾಶ : ಕಾಂತಿ : ತೇಜದ ನ್ನೊಳ್ ಸೆಣಸುವನೀ ಜನಪತಿಯೆಂದು ಕಾಯ್ದು ತೆಱವಳಿರ್ದಂ ನೀರೇಜಸಖಂ (ಲೀಲಾವ. ೬-೪೫) ; ರತಿಪತಿಗೆ ಮೂರ್ತಿಯಂ ಕಮಲಸುವ ರೂಪು ಸರಿತ್ಪತಿಗೆ ಗಂಭೀರತೆಯುಮಂ ಸ್ವಾಹಾಪತಿಗೆ ತೇಜಮುಂ ಕೊಟ್ಟ ಗುರು ಮೂರ್ತಿ (ಹಚಕಾ. ೧-೧) : ಪೃಥ್ವೀಪಾಲರಿದ್ದರು ತರಣಿಕಿರಣವನೇಳಿಸುವ ಮಣಿಭೂಷಣಂಗಳ ಬಹಳ ತೇಜದಲಿ (ತೊರರಾ. ೧-೧೪-೬). ೨. ಕದಿರು; ರಶ್ಮಿ ; ಕಿರಣ : ತೇಜಂ ಪುದುವಿಲ್ಲೆನಿಸಿ ವಿರಾಜಿಸೆ ಪರರಾಜಮಂಡಲಂ ತನ್ನಿಂ ನಿಸ್ತೇಜಂಚಿತ್ರರ ಬೆಳಗಿದಪೀ ಜಗಮಂ ಭಾನುಮಂಡನಂ ಭಾನುರದಂ (ಪಂರಾಮಾ. ೨-೬೬). ೩. (ಪಂಚಭೂತಗಳಲ್ಲಿ ಒಂದಾದ) ಬೆಂಕಿ ; ಅಗ್ನಿ : ಈ ಅವಸ್ಥೆಗಳಲ್ಲಿರುವ ಬ್ರಹ್ಮನೇ ಪೃಥಿವ್ಯಪ್ತೇಜೋವಾಯ್ವಾಕಾಶ ವೆನ್ನಲ್ಪಡುವನು (ಹಿಂದಸಾ. ೨೩೩). ೪. ಸೂರ್ಯ ; ರವಿ. ೫. ಹರಿತವಾಗಿರುವಿಕೆ; ತೀಕ್ಷ್ಣತೆ. ೬. ಶಕ್ತಿ ; ಸಾಮರ್ಥ್ಯ ; ಪರಾಕ್ರಮ, ಪೌರುಷ : "ಪೌರುಷಂ ತೇಜಂ ಪ್ರತಾಪಂ ಪರಾಕ್ರಮುಂ ವೀರಕ್ಕೆ ಪೆಸರು" (ಮುಂಗರಾ. ೧೩೦-೧೬) ; ಆರಾಸುಂ ತೇಜದವರ್ ಪಲ್ಲೆಯೆಂದು ಸುಟ್ಟಿಸಿ ತೋಱಿರ್ ಸಲ್ಲದು (ಎಇ. XII, ೨೮೪-೨೫೬ : 1077) ; ಶತ್ರುಸಂತತಿ ತಲೆವಾಗೆ ಶಿಷ್ಟಜನದಾಚಿಡಿ ನಾಟ್ಕಡೆಪೋಗೆ ತೇಜಮುದ್ದತರನೆ ಕೊಂದು ಕೂಗೆ (ಪುಷ್ಪಪು. ೧೩-೨) ; ತೇಜ ಇದ್ದವನೇ ಪೂಜ್ಯ (ಗಾದ). ೭. ಹೆಚ್ಚಳ ; ಗೌರವ ; ಮಹತ್ವ ; ಘನತೆ : ವಿಶ್ವಾಮಿತ್ರಮುನಿಸುತೆಯುರಂ . . . ಪರಿಶ್ಟಂದ್ರರಾಯುಂ ತಂದನೆಂಬೊಂದು ತೇಜಮುಂ ಕೊಡಬೇಹುದೆನಗೆ (ಹಚಕಾ. ೮-೩೦) : ಸುಮ್ಮನಾಕೆಗೆ ತೇಜವಿತ್ತು ತಂದಾಳ್ದರೆ ಹೆಮ್ಮೆಕ್ಕಳೀನ ಮಾಡುವೆವು (ಭರಚ. ೩೭-೧೦೬) ; ಒಡೆಯನ ತೇಜವ ಕೆಡಿಸಿಯಾಡದವನ ತಡೆಯದೆ ಕಾರ್ಯ ಮಾಳ್ಪವನ . . . ನೀಂ ಪೂರೆವೆ (ಶತಸಾಂ. ೪೮-೪೦); ಅನವರತವಗಲದಲೆ ಜನಪತಿಯನೋಲಯಿಸು ಧನವುಕ್ಕು ತೇಜ ಹಿರಿದಕ್ಕು (ಸರ್ವಜ್ಞ. ೭೩೩). ೮. ತನು ; ದೇಹ ; ಶರೀರ. ೯. ಮನೆ ; ಗೃಹ. ೧೦. ಹೊನ್ನು ; ಸಿರಿ ; ಚಿನ್ನ : "ಕಿರಣಂದ್ಯುತಿ ರುಗ್ದೀಧಿತಿ . . . ದೀಪ್ತಿ . . . ಅಂಶು ಭಾ ಭಾನು ರಶ್ಮಿ ಘೃಣಿವಸು ಗಭಸ್ತಿ ಪಾದಂ ತೇಜಂ" (ವಸ್ತುಕೋ. ೧೨-೬೫) ; "ತನು ಭವನಾ ನಲಾರ್ಕಕಿರಣಂಗಳು ತೇಜಸವಾಹ್ವಯಂ" (ನಾನಾರ. ೫೨). ೧೧. (ಬಹುವ್ರೀಹಿ ಸಮಾಸದಲ್ಲಿ) ಕಾಂತಿಯುಳ್ಳವನು ; ತೇಜಸ್ಸಿನಿಂದ ಕೂಡಿದವನು : ಅತುಳತರ ತೇಜಂ ಮುಲಪರೊಳ್ಗಂಡಪ್ರಚಂಡನಸಹಾಯಶೂರನೇಕಾಂಗವೀರಂ . . . ಸುಕಸಂಕಥಾವಿನೋದದಿಂ ಪೃಥ್ವೀರಾಜ್ಯಂಗೆಯುತ್ತಮಿರೆ (ಎಕ. VI, ತರೀಕೆ. ೪೫-೫೦ ; 1196). ೧೨. [ಛಂದ] ಒಂದು ಅಕ್ಷರ ಗಣ ; ರಗಣ(–∪–): ತೇಜಮುರ್ಕನೀಕನಿಂದೋಜೆವೆತ್ತು ಬಂದೊಡಂ ಭೋಜನೇತ್ರೆ ಕೇಳ ನೀನೀ ಜಗದ್ವಿಭೂತಿಯುಂ (ಛಂದೋಂಬು. ೨-೮೫).

ತೇಜಮಾರ್ತಂಡ = ತೇಜಸ್ಸಿನಲ್ಲಿ ಸೂರ್ಯನಂತಿರುವವನು ; ಒಂದು ಬಿರುದು : ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಸಾಮನ್ತಂ ತೇಜಮಾರ್ತಣ್ಡಂ (ಸೌಇಇ. XX, ೧೯-೨೯ ; 1015).

[ ಸಂ. ತೇಜಸ್ ]

**ತೇಜ₂, ತೇಜಿ₂** (ನಾ). (ವ್ಯಾಪಾರದಲ್ಲಿ) ಬೆಲೆಯೇರಿಕೆ,_ ಉತ್ಕರ್ಷ : ವ್ಯಾಪಾರಕ್ಕೆ ಬಹಳ ತೇಜ ಬಂದದರಿಂದ ಅವನಿಗೆ ಬಹಳ ಲಾಭವಾಗುತ್ತಿತ್ತು (ಮುಂಬಯಿ. ೫-೨೮೧). **ತೇಜಿ₂** : ಹೊರದೇಶದ ವ್ಯಾಪಾರ ಬಹಳ ತೇಜಿಯಲ್ಲಿದೆ (ಹೇಮುಕೂ. ೧೫) ; ಎಲ್ಲಾ ಮಾಲುಗಳಿಗೂ ಒಳ್ಳೆಯ ತೇಜಿಯ ಸಮಯ ಬರುತ್ತದೆ (ಜಾರುದಾ. ೧೪೫) ; ಆ ಕಾಲಕ್ಕೆ ದರಗಳ ವ್ಯಾಪಾರವೇ ತೇಜಿಯಲ್ಲಿತ್ತು (ತೊಳಮು. ೧೯೦). 'ಮಂದಿ₂' ಪರಾ.

ತೇಜಮಾಡು = ಬೆಲೆಯನ್ನು ಹೆಚ್ಚುಮಾಡು,–ಏರಿಸಂ : ಆ ಲೇಖಿಯು ಊರಿನವರು ಬೆಲೆಯು ಹೆಚ್ಚು ಬೇಕನುತ್ತಾನೆ. ಅಂದರೆ ತೇಜಿ ಮಾಡುತ್ತಾನೆ (ಮುಂಬವ್ಯಾ. ೬೬). [ ←ಪಾರ. ಹಿಂ. ಮರಾ. ತೇಜೀ ]

**ತೇಜಂಗಿಡಿಸು** (ಕ್ರಿ). ೧. ಕಾಂತಿಹೀನಗೊಳಿಸು. ೨. ಪರಾಕ್ರಮವನ್ನು ಕುಗ್ಗಿಸು ; ಶಕ್ತಿಗುಂದಿಸು. ೧, ೨: ಜಾಂಬವನು ಹಂಬಿಗರಾದಿತ್ಯನಂತೆ ತೇಜಂಗಿಡಿಸಿ ಹನುಮನನುಮಾನಂ ಮಾಡದೆ ನೆಲಕಿಕ್ಕಿ (ಧರ್ಮಾಪು. ೬--೯೫). [ ತೇಜಂಗಿಡು (<ತೇಜಂಗೆಡು) + – ಇಸು₃ ]

**ತೇಜಂಗಿಡು** 'ತೇಜಂಗೆಡು' ನೋ.

**ತೇಜಂಗುಂದು** (ಕ್ರಿ). = ತೇಜಂಗೆಡು : ತಾರಗೆಗಳ್ತೇಜಂಗುಂದೆ ಕೊರಗೆ ಚಾರುಚಕೋರಂಗಳ್ (ಉದ್ಭಟ. ೧೦-೬). [ ತೇಜ₁ + ಕುಂದು₁ ]

**ತೇಜಂಗೆಡು, ತೇಜಂಗಿಡು** (ಕ್ರಿ). ೧. ಕಾಂತಿಗುಂದು ; ಕಾಂತಿಹೀನವಾಗು : ಪಗಲ ಚಂದ್ರನಂತೆ ತೇಜಂಗೆಟ್ಟು (ಧರ್ಮಾಪು. ೧-೦೬೮) ; ತರಣಿ ತೇಜಂಗಿಡುವಂತೆ ಬಿಸುಪಾಱಿದುದು (ಹರಿಶ್ಚ. ೨-೩೧). **ತೇಜಂಗಿಡು** : ೨. ಪರಾಕ್ರಮಂ ಕುಂದು,-ಕುಗ್ಗು. 'ತೇಜಂಗಿಡಿಸಂ' ಪರಾ.

[ ತೇಜ₁ + ಕೆಡು₁ ]

**ತೇಜಂಬೊಂದಿಸು** (ಕ್ರಿ). ಕಾಂತಿಯನ್ನು ಹೊಂದುವಂತೆ ಮಾಡು,–ಪೊಂದಿಸಂ : ಆರ್ಗಂದೆಡಕೊಳಲ್ಲದೆ ತೇಜಂಬೊಂದಿಪರ್ಗಲ್ಲದದೆಂತುಂ (ಎಕ. VII, ಶಿವಮೊ. ೯೭-೪೧ ; 1113). [ ತೇಜ₁ + ಪೊಂದಿಸು ]

**ತೇಜಃಕಣ** (ನಾ). ಬೆಂಕಿಯ ಕಣ,–ಅಂಶ : ಧಾರಾವಿಸರಧೂತಪರಿಸ್ಫುಲಿಂಗಪ್ರಸರತೇಜಃಕಣಪರಿಷ್ಕೃತನವ್ಯಕತಭಾನು (ಉವ್ಯಾ, ಸ. ೧೦-೭೭).

[ ಸಂ. ]

**ತೇಜಃಕ್ಷಯ** (ನಾ). ಕಾಂತಿಯ ಅಳಿವು ; ತೇಜೋಹೀನತೆ : ಕಾಲವಶದಿಂ ತೇಜಃಕ್ಷಯಂ ಭಾನುಗೆಂದಗಿದಾರ್ತಂಬಡುವಂತೆ (ಪುಷ್ಪಪು. ೩-೪೦). [ ಸಂ. ]

**ತೇಜಃಪಿಂಡ** (ನಾ). ಅಗ್ನಿಯ ರಾಶಿ : ರಘೂದ್ವಹಂಗೆ ಪರಿತಾಪಂ ಲಕ್ಷ್ಮಣಂಗಾಗಳುಬ್ಬರವಾದತ್ತು ಲತಾಂಗಿ ಸೀತೆ ಪುಗೆ ತೇಜಃಪಿಂಡಮುಂ ತುಂಡಮುಂ (ಪಂರಾಮ. ೧೬-೨೭). [ ಸಂ. ]

**ತೇಜಃಪುಂಜ** (ಗು). ೧. ಪ್ರಕಾಶದಿಂದ ಕೂಡಿದ ; ಕಾಂತಿಯುತವಾದ : ಮರೆಯಾದುದಾ ದೇವ ತೇಜಃಪುಂಜ ಮುಖಮೂರ್ತಿಯಗ್ನಿ ಮೆಯ್ ಜ್ವಾಲಾನಿಮಗ್ನಮೆನಲ್ (ಶ್ರೀರಾಮ. ೧೪-೩೬೫); ತೇಜಃಪುಂಜ ಮುಖದ ಅಧಿಕಾರಿಯೊಬ್ಬನನ್ನು ನೋಡಿದನು (ಪುನರು. ೩೧೧). (ನಾ). ೨. ಕಾಂತಿಯ ಸಮೂಹ : ಮಿಱುಪ ತೇಜಃಪುಂಜವುಕ್ಕಿತು ಪೊದಱ ಪೊಳಹಿನಲಿ (ಕುಮಾ.ಸ. ೧೧-೭೮) ; ಧೂಮಕೇತು. . . ಪ್ರಕಾಶಮಾನವಾಗಿ ಇರುತ್ತದೆ. ಬಾಲ ಬಹಳ ಉದ್ದವಾಗಿ ತೇಜಃಪುಂಜವಾಗಿ ಇರುತ್ತದೆ (ಆಕಾಶ. ೩೬). ೩. ಸೂರ್ಯ : ಅಂತು ಬಾಹುಬಲಿ ತೇಜಃಪುಂಜಮೆ [ ಪಾಠಾಂ. ತೇಜಸ್ಫುರಿತಮೆ ] ಕಣ್ಗೊಳಿಸುವಂತೆ ಸೈರಿಸದೆಮೆಯಿಕ್ಕಿ ದೃಷ್ಟಿಯುದ್ಧದೊಳ್ ಸೋಲೆ (ಆದಿಪು. ೧೪-೧೦೫ ವ). [ ಸಂ. ]

**ತೇಜಃಪ್ರಸರ** (ನಾ). ಕಾಂತಿಯ ವಿಸ್ತಾರ,–ಹರಹು : ಎಸೆವ ಕಿಸುಗಲ್ಲ ತೇಜಃಪ್ರಸರಂ ದಾವಾಗ್ನಿಶಂಕೆಯುಂ ಮನದೊಳ್ ಪುಟ್ಟಿಸಿ (ಶಾಂತಿಪು. ೨೯-೯೬) ; ಕರಣಗಣದ ತೇಜಃಪ್ರಸರದೊಡನೆ ಬಿಸಿಲ ಬಿಸುಪಸದಳವಾಗೆಯುಂ (ಚಂದ್ರಪು. ೭-೬೦ ವ). [ ಸಂ. ]

**ತೇಜನಕ** (ನಾ). ಒಂದು ಬಗೆಯ ಹುಲ್ಲು ; ಕಾಗೆಬಿದಿರು : "ಗುಂದ್ರಃ, ತೇಜನಕಃ, ಶರಃ – ಈ ೩ ಕಾಕಬ್ಬು" (ನಾಚಿಂ. ೧೧೨) ; "ಗುಂದ್ರಃ, ತೇಜನಕಃ, ಶರಃ – ೩ ಕಾಗೆ ಬಿದಿರು" (ಸಿದ್ಧಾಂತಿ. ೧೩೧). [ ಸಂ. ]

**ತೇಜನಿ** (ನಾ). ೧. ಕುರುಂಟಗೆಯ ಗಿಡ. ೨. ಜ್ಯೋತಿಷ್ಮತೀಲತೆ. ೩. ತೃಣ ; ಹುಲ್ಲು. [ ಸಂ. ತೇಜನೀ ]

**ತೇಜಪುಂಜ** (ನಾ). ಕಾಂತಿಯ ಸಮೂಹ : ನೀ ತೇಜಪುಂಜ, ನಾನೊಂದು ಚುಕ್ಕಿ (ಹೃದಸ. ೨೨-೧೩). [ < ತೇಜಃಪುಂಜ ]

**ತೇಜಫಲ** (ನಾ). ಒಂದು ಬಗೆಯ ಹಣ್ಣಿನ ಮರ : "ಶಾಲ್ಮಲೀಫಲಃ– ತೇಜಫಲ" (ಒಷಧಿ. ೧೬೩) ; ತೇಜಫಲ, ಜಿಮ್ಮಿ, ತುಂಬುರು (ಮೈಜಿಗಿ. ೭-೦೬೨೦). [ <ಸಂ. ತೇಜಃಫಲ ]

**ತೇಜಮಾನ್ಯ** (ನಾ). ಅಪ್ಪಭೋಗಗಳಿಂದ ಕೂಡಿರುವಂತೆ ಕೊಟ್ಟ ಮಾನ್ಯದ ಭೂಮಿ (?) : ನೀವೆಲ್ಲರೂ ತೆತ್ತು ನಿಂ × × × ತೇಜಮಾನ್ಯ ಸಂಕ (ಸೌಇಇ. ೧೯೩೨, ಉಡುಟಿ. ೩೦೩-೧೧ ; 1397). [ ತೇಜ$_1$ + ಮಾನ್ಯ ]

**ತೇಜವಂತ** (ನಾ). ಕಾಂತಿಯುಳ್ಳವನು ; ತೇಜಸ್ವಿ : ರವಿಯ ತೆರದಿ ತೇಜವಂತನಾದ ಕವಿಯೆ (ಪಱುಣ. ೬-೧೯). [ ತೇಜ$_1$ + –ವಂತ ]

**ತೇಜಶ್ಚಕ್ರ** (ನಾ). ಕಾಂತಿಯಿಂದ ಕೂಡಿದ ಚಕ್ರ ; ತೇಜೋಮಂಡಲ : ಉಗ್ರಪ್ರತಾಪೋರ್ಜಿತ ತೇಜಶ್ಚಕ್ರಮಿಂದ್ರರ್ತ್ತೊಳಪೊಗದೆ ಪುರೋಪಾಂತದೊಳ್ ಚಕ್ರರತ್ನಂ (ಆದಿಪು. ೧೪-೩); ತೇಜಶ್ಚಕ್ರಧರಂ ರಿಪುರಾಜ್ಯಾಪಹಾರಿ ತನ್ನವೊಲುರ್ವೀಧರ ವಿಭ್ರಾಜಿತಕರನುದಯಿಪಂ ತನೂಜಂ (ಪಾರ್ಶ್ವಪು. ೭-೩೭). [ ಸಂ. ]

**ತೇಜಸಾಮ್ಯ** (ನಾ). = ತೇಜಸ್ವಾಮ್ಯ : ಹಳ್ಳದಿಂ ಮೂಡಣ ತ್ರಿಭೋಗ ಸುಂಕ ತೇಜಸಾಮ್ಯ ದೇವರ್ಗೆ ಸರ್ವಬಾಧಾಪರಿಹಾರವಾಗಿ ಕೊಟ್ಟರು (ಸೌಇಇ. XX, ೨೩-೨೭ ; 1029) ; ಕೊಳ್ಳಂಪೂರ ಸಗರವಕೆಯಿಮುನ ತೇಜಸಾಮ್ಯವೆಲ್ಲಿಮಂ ಮಲ್ಲಿಮಯ್ಯಂಗಮರ್ಕ್ಕಳಂಗವೊಬ್ಬಸಿತಾವ್ವ ವಿತ್ತಿಗಂ ಜೊತಗಂದೊಜಂಗಾಗಿ ಪೊದರವರನಾ ಕೈಕೊಣ್ಡಾಡ ಸದಾಚರಿಸಿದೊಡೆ (ಕಇಅ. ೧೨೪-೩೩-೭ ; 1085) ; ಆ ಪೆಜಾಗ್ಗಳು ಪನ್ನೆರಡಱ ಬಳಿಯ ಬಾಡ ಬಡಗನೂ ಯಪ್ಪಭೋಗ ತೇಜಸಾಮ್ಯವಂ ಯಾ ಬಾಳ ಸೋವರಸಂಗಳ ಕ್ರಯಮುಂ ಕೊಂಡು ತಮ್ಮ ದೇವರ್ಗ್ಗೆ ಬಿಟ್ಟರು (ಕೊಲ್ಹಾ. ೧೪-೪೫; 1176). [ <ತೇಜಸ್ವಾಮ್ಯ ]

**ತೇಜಸ್ಕಾಯ** (ನಾ). [ಜೈನ] ಐದು ವಿಧವಾದ ಸ್ಥಾವರವಸ್ತುಗಳಲ್ಲೊಂದು ; ಅಗ್ನಿ : ಪೃಥ್ವೀಕಾಯ, ಅಪ್‌ಕಾಯ, ತೇಜಸ್ಕಾಯ, ವಾಯುಕಾಯ, ವನಸ್ಪತಿಕಾಯ ಎಂದು ಸ್ಥಾವರಗಳಲ್ಲಿ ಐದು ಪ್ರಕಾರಗಳು (ಜೈನಧ. ೩೦). [ ಸಂ. ]

**ತೇಜಸ್ತತ್ವ** (ನಾ). [ಜ್ಯೋತಿ] ದಿನದ ಕಾಲಮಾನದ ಒಂದು ಭಾಗ : ದಿನದ ಕಾಲಮಾನವನ್ನು ಪಂಚತತ್ವಗಳನ್ನಾಗಿ ವಿಂಗಡಿಸುವಾಗ ತೇಜಸ್ಸಿನ ಭಾಗಕ್ಕೆ ಬರುವ ಕಾಲ : ದೂರಪ್ರಯಾಣಕ್ಕೆ ಚಂದ್ರಸ್ವರ ಸಮೀಪಪ್ರಯಾಣಕ್ಕೆ ಸೂರ್ಯಸ್ವರ ಚಿರಕಾಲಪ್ರಯಾಣಕ್ಕೆ ಅಪ್ತತ್ವ ಕ್ಷಿಪ್ರಪ್ರಯಾಣಕ್ಕೆ ತೇಜಸ್ತತ್ವವಿರಬೇಕೆಂಬುದು ಮೊದಲಾದುವುಗಳಂ ತಿಳಿದು (ವಿವೇಕ. ೧೪೩). [ ಸಂ. ]

**ತೇಜಸ್ಪತಿ** (ನಾ). ತೇಜಸ್ಸಿನ ಒಡೆಯ; ಸೂರ್ಯ : ರಾಜಪ್ರತಾಪನುಪಮಿತ ತೇಜಸ್ಪತಿ ಖಚರರಾಜಂ (ಶಾಂತಿಪು. ೩-೩೩). [ ಸಂ. ]

**ತೇಜಸ್ವಾಮ್ಯ** (ನಾ). ಅಪ್ಪಭೋಗಗಳೊಂದಿಗೆ ಕೂಡಿದ ಭೂಮಿಯ ಒಡೆತನ,–ಸಂಪೂರ್ಣ ಒಡೆತನ : ಅಪ್ಪಭೋಗ ತೇಜಸ್ವಾಮ್ಯವನೂ ಸುಖದಿಂ ಬೋಗಿಸಿ ಬಹಿರಿ (ಮೈಆರಿ. ೧೯೪೦, ೨೮-೨೫ ; 1509) ; ಈ ಭೂಮಿಯೊಳಲ್ಲಿಯಾದೊಡಂ ಸುಂಕಂ ದಂಡಂ ತೇಜಸ್ವಾಮ್ಯಂ ಮೊದಲಾಗೆ ಮತ್ತಂ ತೇಜಮೆನಿಸಿದವೆಲ್ಲಂ ದೇವರ ಸೊಮ್ಮಾಗೆ ಸರ್ವ್ವಬಾಧಾಪರಿಹಾರಂ ಮಾಡಿದೊರ್ (ಎಇ XII, ೨೮೪--೨೫೫ ; 1877). 'ಅಪ್ಪಭೋಗ' ನೋಡಿ. [ <ಸಂ. ತೇಜಸ್ಸ್ವಾಮ್ಯ ]

**ತೇಜಸ್ವಿ** (ನಾ). ೧. ಕಾಂತಿಯುಳ್ಳವನು : ಅಂಜದರಾರ್ ಮುಟ್ಟುವಲ್ಲಿ ತೇಜಸ್ವಿಗಳಂ (ಪುಷ್ಪಪು. ೧೧-೧೮) ; ವಾಲ್ಮೀಕಿ ತಾಂ ನಡೆತಂದನ್ . . ತೇಜಸ್ವಿ, ತರುಣಂ, ತಪೋವಲ್ಕಲವಸ್ತ್ರಶೋಭಿ (ಶ್ರೀರಾಮ. ೦-೫). ೨. ಪ್ರಭಾವಶಾಲಿ ; ಸಮರ್ಥ : ರಾಜಪತಿಯುಕ್ಕುಮಲ್ಲದೆ ರಾಜನ್ವತಿಯಾಗದಲ್ತೆ ಧರೆ ಮತ್ತೂರ್ವ್ವಂ ತೇಜಸ್ವಿ ಪೊಡರ್ಪೊಡದಱಿಂ ರಾಜನ್ವತಿ ಮಾಡು ಧರಣಿಯಂ (ಆದಿಪು. ೧೪-೨೦) ; ಎನ್ನ ಪಕ್ಕದೆ ತೇಜಸ್ವಿಯುಸಂತಾಡಿದನಾ ಕಳಶಯೋನಿ (ಗದಾಯು. ೨-೧೯). ೩. ಒಂದು ಬಗೆಯ ಸಸ್ಯ ; ತುರಂಪೆಗಿಡ; ಕಾಸಂಳಿ : "ತುಱುಪೆ ತೇಜಸ್ವಿ ಕಾಸುಳಿಯುಕ್ಕು" (ಮಂಗರಾ ೩೯-೨೭). [ ಸಂ. ತೇಜಸ್ವಿನ್ ]

**ತೇಜಸ್ಸು** (ನಾ). ೧. ಹೊಳಪು ; ಪ್ರಕಾಶ ; ಕಾಂತಿ : ವಿಕಲ್ಪಾರ್ಥದಿಂ ಸಕಾರಾಂತದಲ್ಲಿ–ಯಶ, ಯಶಸ್ಸು; ತೇಜ, ತೇಜಸ್ಸು (ಶಮದ. ೮೬ ಪ್ರಯೋ); ತೇಜಸ್ಸಮುಗ್ರ ನೀನು (ವೀರಪು. ೩-೧೯-೨೬) ; ಮೂರ್ತಿ ಸಣ್ಣದಾದರೂ ನಿಂತ ಆ ನಿಲುವಿನಲ್ಲಿ ಒಂದು ತೇಜಸ್ಸಿತ್ತು (ಹೊಸಕ್ಕಿ. ೩೩). ೨. ಬೆಂಕಿ : ಅಗ್ನಿ : ಮತ್ತಂ ತೇಜೋಂಶಮರ್ಧಮುಂ ಮಿಕ್ಕ ನಾಲ್ಕುಂ ಭೂತಂಗಳಷ್ಟಮಾಂಶಂಗಳ್ ನಾಲ್ಕುಂ ಕೂಡಿ ತೇಜಸ್ಸೆನಿಕ್ಕುಂ (ಚಕಬಿ. ೨೬); ಪೃಥ್ವಿ ಜಲ ತೇಜಸ್ಸು ವಾಯು ಮನಸ್ಸು ಎಂಬ ಐದು ದ್ರವ್ಯಗಳು ಪುದ್ಗಲದಲ್ಲಿ ಸೇರಿದವು (ಹಿಂದಸಾ. ೮೦) ; ಪ್ರಪಂಚವು ಪೃಥಿವೀ, ಉದಕ, ತೇಜಸ್ಸು ಮತ್ತು ವಾಯುಗಳೆಂಬ ನಾಲ್ಕು ತತ್ವಗಳನ್ನು ಉಳ್ಳದು (ಧಾಶತ್ರ. ೧೮೫). ೩. ಪರಾಕ್ರಮ ; ಶೌರ್ಯ : ಕೌರವರಲ್ಲಿ ತೇಜಸ್ಸನ್ನು ತೋರಿಸುವುದಕ್ಕೆ ಕಾಲವೆಂದು ನಾನು ತಿಳಿದಿದ್ದೇನೆ (ವಚಭಾ. ೧೧೯). ೪. ಗೌರವ : ಮರ್ಯಾದೆ. 'ತೇಜೋಭಂಗ', 'ತೇಜೋವಧೆ' ನೋಡಿ.

ತೇಜಸ್ಸಿನ ಸ್ವರ = ಪಂಚಭೂತಗಳಲ್ಲಿ ಒಂದಾದ ತೇಜಸ್ಸಿಗೆ [illegible] ನಾಳದಿಂದ ಹೊರಡುವ ಸ್ವರ : ಪಂಚಸ್ವರಸಂಜ್ಞೆಗಳ

**ತೊಂಗಿಸು** (ಕ್ರಿ). ಒದಗಿಸು ; ಒಡ್ಡು : ಅಂಗಜ ಹೆಂಗಳ ಸಿಂಗರ ವನದೊಳು ತೊಂಗಿಸಿ ಮುನಿಮೃಗಾವಳಿಯು ಜಂಗುಳಿಗೊಡ್ಡಿದ ಬೆಳ್ಳಾರ ವಲೆಯೆನೆ ಕಂಗೊಳಿಸಿತು ಸೂಳೆಗೇರಿ (ಕಂಸವಿ. ೬-೯೦).

[ ತೊಂಗು$_1$ + – ಇಸು$_3$ ]

**ತೊಂಗು$_1$** (ಕ್ರಿ). ೧. ತೂಗಾಡು ; ಜೋಲಾಡು ; ತೂನೆದಾಡು : ತೊಂಗುವ ಫಲಾವಳಿಯ ಭಾರಂಗಳಾವಗಂ ಪಿಂಗವು (ಜ್ಞಮಿಥಾ. ೦೯-೬) : ಕಮ್ಮಲಜೋಂಪವೆ ಜಲ್ಲರಿಯಾಗೆ ಪಣ್ತು ತೊಂಗುವ ಪಣ್ ಫಲಾವಳಿಯಾಗೆ (ರಾಮೂಕ್ಟ. ೫೬-೩೬). ೨. ಬಾಗು ; ಬಗ್ಗು : ತೊಲಗು ಚಿಂತೆಯ ವಿಕಟಗುಹೆಯೊಂದು ನಿನಗಿರಲಿ . . . ತೊಂಗಿದರೆಗಲ್ಲುಗಳ ಮರೆಗೆ ಬೇಗನೆ ಹಾರು (ಭಾವಗೀ. ೨೩೬). ೩. ಹೊರಟುಹೋಗು; ಸರಿ : ಅವಳ ಪೊತ್ತ ಮನದ ತಲೆಗೆ ನೋವು ತೊಂಗದಾ ನೋಟಕಜನದ (ಕುಂದಾಸಾಂ. ೨೦-೬೨) ; ತೊಂಗಿದ ಹಲ್ಲು ಬಹವೆ (ಭರತ. ೩೯-೯೦). ೪. ಒದಗು ; ಉಂಟಾಗು ; ದೊರಕು : ಅಲಘುರುಜೆಗಳೊಂಗೆ ನಾರುಬೇರ್ವಣಿ ಮಂತ್ರಗಳನೊಲ್ಲದಿಹುದು ಮೂವತ್ತೆಂಟನೆಯ ಶೀಲ (ಪಾಸೋಪು. ೨-೬೭); ಲಿಂಗದ ಹಾರ ಜಂಗಮದರ್ಥದಾಗರ ತೊಂಗುವ ಭವಕೆ ನೀ ದೂರ (ಅಮುಸಾಂ. ೫-೯೩); ವೈಭವಂ ಪಿಂಗಿ ತೊಂಗಿದ ದರಿದ್ರದುಃಖದೊಳಾರ್ಯ ಚೂಡಾಮಣಿಯು ಬಳಿಗೆ ಬಂದು (ಕೊಟ್ಟೂಬ. ೦೩-೩೪). ೫. ಬಯಸು ; ಆಸೆಪಡು : ಪೊಂಗುವ ಮನ ಶಿವಪೂಜೆಗೆ ತೊಂಗುವ ಮನ (ಕಂಕಕಂ. ೨೬). [ ದೇ.॥ ತಮಿ. ಮಲ. ತೂಙ್ಙು ; ತೆಲು. ತೊಂಗು ]

**ತೊಂಗು$_2$** (ನಾ). ೧. ಜೋಲು ಬಿದ್ದಿರುವುದು ; ನೇತಾಡುವಿಕೆ : (+). ೨. ಆಧಾರವಿಲ್ಲದಿರುವಿಕೆ : ಹಂಗು ಹರಿದ ಮೇಲೆ ತೊಂಗೇನು ತೊಡರೇನು? (ಗಾದೆ).

**ತೊಂಗುತೊಸಗು** = ತಪ್ಪನ್ನು ಹುಡುಕುವಾಗ ಆಡುವ ಮಾತು : ಎಂಥ ಪದಾರ್ಥವನ್ನು ತಂದುಕೊಟ್ಟರೂ ತೊಂಗುತೊಸಗು ಎಂದು ಹೇಳುತ್ತೀರಿ (ಪಂಯೂಕ್ತ. ೫೫). [ <ತೊಂಗು$_1$ ]

**ತೊಂಗೆ, ಜೊಂಗೆ** (ನಾ). ೧. ಗೊಂಚಲು ; ಗುಚ್ಛ : "ತೊಂಗಲ್ ತೊಂಬೆ . . . ತೊಂಗೆ ಗುಚ್ಛಮೆಂದಿರದೊಪ್ಪಿ ಪದೆದ ನಾಮಂ" (ಕದ್ಯಕ್ಕ. ೦೯) : "ತೊಡಬೆ . . . ಗುಚ್ಛಂ ಸೊಗಯಿಪ ತೊಂಗೆಯೆ ತೊಂಗಲ್ ಬಗೆಯಲ್ ಬುಧರಿಂದ ಗುಚ್ಛಕಕ್ಕಂ ನಾಮಂ" (ಕವಿಕಂ. ೬೮). ೨. ಹೂವಿನ ಗೊಂಚಲು : "ತೊಡಂಬೆ, ತೊಡಬೆ, ತೊಂಗೆ . . . ಗುಚ್ಛಂ–ಈ ೭ ಪುಷ್ಪಮಂಜರಿ" (ಕಕಸಾ. ೫೫-೧೯೬). **ಜೊಂಗೆ** : ೧. ತ್ರಿಕೂಟವೆಂದೆಂಬ ತ್ರಿವಿಧಮೂಲೆಯ ಜೊಂಗೆ (ಚದಾವ. ೫೮-೬).

[ ದೇ.॥ ತುಳು. ತೊಂಗೆ, ಜೊಂಕೆ, ದೊಂಕೆ ]

**ತೊಂಚವಂಚ, ತಂಚಾವಂಚ, ತೊಂಚಾವಂಚ** (ನಾ). ಹಿಂದು ಮುಂದು ನೋಡುವಿಕೆ ; ಅನುಮಾನ ; ವಿಮಾನಾಮೇಷ : ಎಣಿಸುವುದು : ಏನು ಹೇಳಬೇಕೋ ತಿಳಿಯದೆ ತೊಂಚವಂಚಪಡುತ್ತ ಇದ್ದ ಆನಂದ (ಮರಳಿ. ೩೬). **ತಂಚಾವಂಚ** : ಈ ತಂಚಾವಂಚದಲ್ಲಿಯೇ ಕಾಲ ಕಳೆದು ಹೋಗಿತ್ತು (ರೂಪಸ. ೧೬). **ತೊಂಚಾವಂಚ** : ವಿಷಯವನ್ನೇ ಆಯ್ಕೆ ಮಾಡಿ ಎಂದರೆ ಕೊಂಚ ತೊಂಚಾವಂಚ (ಮನೋನಂ. ೦೪೪). [?]

**ತೊಂಚಾವಂಚ** 'ತೊಂಚವಂಚ' ನೋ.

**ತೊಂಟತನ** (ನಾ). ತೊಂಡುತನ (?) : ಏಳನೆ ಗುಣ ಜಱಿದು ಎಂಟನೆ ಗುಣದ ತೊಂಟತನವ ಬಂಧಿಸಿ ತೋಱುವದಕ್ಕೆ ಮುನ್ನವೇಮನ ಜಾಱಿ ನಿಂದ ಮತ್ತೆ ಮಾಜಲಿಲ್ಲವಾಗಿ (ಮೋಳಿಮೂ. ೦೯೩-೬೩೬).

[ ತೊಂಟ$_0$ + – ತನ ]

**ತೊಂಡ$_1$, ತಂಡು$_3$** (ನಾ). ೧. ಸೇವಕ ; ಗುಲಾಮ : ತೊತ್ತು ತೊಂಡರ ಕಾಲ ತೊಳೆದು ಸೇವೆಯ ಮಾಡಿ ಬದುಕುವನ ಪಡಿದೊತ್ತಿನ ಮಕ್ಕಳೆಂದು ಎಂಬರಲ್ಲದೆ ರಾಜಕುಮಾರನೆಂದೆನ್ನರು (ಜನ್ನವ. ೪. ೦೮೫-೪೦೫) ; ಮುಱಿ ತೊಂಡನೆನುತ್ತ ನೀರೆಱೆಯುದಿರೆ ಕೈಯು ಕಡಿದು ಪಾಯ್ಕೆಯ ಮುಱಿದ ಕಲಿಕಂಬರು (ಲಶಿಜಂ. ೩೫-೪೩) : ತೊತ್ತುಗೈವುದು ಲೋಕವೀತಗೆ ಮೃತ್ಯುಗಿತ್ಯಗಳಿವನ ತೊಂಡರು (ಕಾಶಿರಾ. ೨೫-೭) : ಚಾಮುಂಡಿಯುನೊಲಿಸಿ ಕೊಂಡವನ ತೊಂಡನ ಮಾಡಿಕೊಡುವೆನು ನಿನಗೆ (ಕುಂದಾಸಾಂ. ೨೪-೩೬). ೨. ಭಕ್ತ; ಆರಾಧಕ: ಮಾಡುವವರೆಲ್ಲರೂ ಮಹಾಲಕ್ಷ್ಮಿಯು ತೊಂಡಂದಿರು (ಸರ್ವವ. ೬೩-೩೩೯) : ಪುರಂದರವಿಠಲನು ತೊಂಡರಿಗೆ ತೊಂಡನಾಗಿ ಸಂಚರಿಸುತಿಹನು (ಪುರಂದ. ೦-೦೪೬-೩) : ತಿರುಕುರುಂಬೆಯ ತೊಂಡರಂದು ಕಂಥೆಯನೊಗೆದು . . . ಕೈಲಾಸವಂ ಪೊಕ್ಕರು (ಚಬಪು. ೫೫-೩೬). ೩.ಮುದುಕ ; ವಯಸ್ಸಾದವನು ; ವೃದ್ಧ. 'ತೊಂಡಜ್ಜ' ಪರಾ. **ತಂಡು$_3$** : ೧. ನೀನಾಡಿಸಿದಂತೆ ನಾನಾಡುತ್ತಿದ್ದೆ ಸಂಜ್ಞೆಯನಱಿದ ತಂಡಿನಂತೆ ವೇದಿಸಿದುದ ನಾ ಸಾಗಿಸಿದೆ (ಸಗಬೂ. ೮೫).

**ತೊಂಡಮಂಡಳಿಕ** = ಮಲೆತ ಸಾಮಂತ ; ಸೊಕ್ಕಿದ ಮಾಂಡಳಿಕ: ಅಹಿತಮಂಡಳಿಕ ಕಾಳಾನಳ ತೊಂಡಮಂಡಳಿಕ ಮಂಡಳಪ್ರಚಂಡ ದೌವ್ವಾರ್ಗನಳ (ಎಕ. II, ೦೪೩-೨೩ : 1131): ತೊಣ್ಡಮಣ್ಡಳಿಕ ಕುಳಾಚಳ ವಜ್ರದಣ್ಡ ಬಿರುದ ಭೇರುಂಡ್ಡ ಕಂದುಕಾಚಾರ್ಯ್ಯಂ (ಮ್ಯಆರಿ. ೦೯೩೦, ೬೯-೫ : 1191). **ತೊಂಡರ ತೊಂಡ** = ಸೇವಕರ ಸೇವಕ ; ತೊತ್ತಿನ ತೊತ್ತು; ದಾಸಾನುದಾಸ : ನಮ್ಮ ನೀಲವರ್ಣ ತೊಂಡರ ತೊಂಡ (ವಾದಿಕೀ. ೦೨೬-೧೪). [ ದೇ.॥ ತಮಿ. ತೊಣ್ಡ ; ಮಲ. ತೊಣ್ಡ ]

**ತೊಂಡ$_2$, ತುಂಡ$_1$** (ನಾ). ೧. ಮಲೆತವನು ; ತಂಟ ; ಸ್ವೇಚ್ಛಾವೃತ್ತಿಯವನು ; ಉದ್ಧಟ : ತೊಂಡ ಬೇಡನು ಇಂತು ಮಾಡುವನೆ (ಕಡ್ಕರ. ದೇ. ೦೪೫-೪): ತೊಡರ್ದರನೊತ್ತಿ ತೊಂಡರನವುಂಕಿ ಕಡಂಗುವರಂ ಕಳಲ್ಚಿ (ಎಕ. VII, ಸಾಗರ. ೦೫-೩೨ ; 1218) : ದಯಾವಿಹೀನನಧರ್ಮಂ ತೊಂಡನತಿಕಲುಷಿತಪಾಪದ ಪಿಂಡನೆನಿಪ್ಪವನೆ ಕೃಷ್ಣಲೇಶ್ಯೆಯ ಜೀವಂ (ಧ್ಯಾಸಕಾ. ೬೧-೯): ತೊಂಡ ಕೇಳ್ಳೆ ನಿನಗೆ ಸತಿಯರು ಹೆಂಡಿರಾಗಿಯು ಮಕ್ಕಳಾಗಿಯು ಹಿಂಡು ಗೋಧನವಿದ್ದು ನೀವೇ ಮತ್ತ ಬೇಱಿಲ್ಲ (ಕಾಶಿರಾ. ೩೩-೨೬) : ಪಡಿಮಾತೇನಾ ಪಾತಕ ತೊಂಡನ ಕೆಡಹಿ ಕೊರಲ ಕೊಯಿಸುವೆನು (ಕುಂದಾಸಾಂ. ೩೪-೧೫೬): ಬಡಿ ಬಡಿ ತೊಂಡರ ಬಾಯಸೆಂದನು ಚಕ್ರಿ (ಭರತ. ೩೬-೮೮). ೨. ಕಳವು ಮಾಡುವವನು; ಕಳ್ಳ; ಚೋರ : (+). **ತುಂಡ$_1$**: ೧. ದ್ರವ್ಯಾಪಹಾರರಿಗೆ ತುಂಡರಿಗೆ . . . ಇದು ತಾ ಯೋಗ್ಯವಲ್ಲೆಂದ (ಜ್ಞಾಸಿಂ. ೩೧-೪೬) : ಜಗಳಗಂಟರೂ ತುಂಡರೂ ಅಪ್ರಮಾಣಿಕರೂ ಇರುತ್ತಾರೆ (ಕಥಾಗ. ೨೨೮). ೩. ನಿಷ್ಕರುಣೆ; ಕಠೋರಮನಸ್ಸಿನವನು: ತುಂಡನಾದ ಯಮನು ಬಂದು ಮಂಡೆ ಮೇಲೆ ಹೊಯ್ಯುವಾಗ ಹೆಂಡಿರು ಮಕ್ಕಳು . . . ಬಿಡಿಸೋದಿಲ್ಲ (ಪುರಂದ. ೩-೮೦-೫). 'ತುಂಟ' ಪರಾ.

**ತೊಂಡರ ಗಂಡ** = ದುಷ್ಟರನ್ನು ನಾಶಮಾಡುವವನು ; ಒಂದು ಬಿರುದು : ತೊಣ್ಡರ ಗಂಡನುದ್ಧತರ ಗಂಡನೋಜಂಟರ ಗಂಡನುಕ್ಕಿ ದುದ್ದಂಡರ ಗಂಡನೀ ಬೇಡರ ಗಂಡ (ಸೌಇಇ. IX-i, ೨೫೬-೨೦ : 1150).

[ ತೊಂಡು$_1$ + – ಅ$_7$./ಮಲ. ತೊಣ್ಡ ]

**ತೊಂಡ$_3$** (ನಾ). ೧. ಬಾಯಿ; ಮುಖ: ನೀಳ್ದ ನಿಡುಗಣ್ ಬೆಳಗೆ ತೊಂಡಂ ಬೆಳಗೆ ತೊಂಡರದ [ಪಾಠಾಂ. ಚೆಂಬುದರ]ಮಾಟ್ಕೆ[ಯಿನೊಡಂಬಡುತ ಲಾಡಿದಳು ಬೆಂಬಱಿಯ ಸಂಭ್ರಮದಲೂರ್ವಶಿ] (ಸೂಕ್ತಿಸು. ೧೬-೦೦). ೨. ಕೊಕ್ಕು; ಚಂಚು: ಮಂಡಲಿವೃತ ವಿಹಗರಾಜ ತೊಂಡದಿಂದಲಿ ತುಂಡಿಸಲ್ಕೆ (ದೇವೀಪ್ರ. ೬೬). ೩. (ಆನೆಯ) ಸೊಂಡಿಲು : ಬಂಧುಜನರೆಲ್ಲರನ್ನೂ ಖಡ್ಗಪ್ರಹಾರದಿಂದ . . . ಗಜತೊಂಡಕ್ಕೆ ಸಿಕ್ಕಿದ ಬಾಳೆಯ ಗಿಡದಂತೆ ಛಿನ್ನಭಿನ್ನವಾಗಿ ಖಂಡಿಸಿದರು (ಘರಾವಿ. ೬೫)

[ <ಸಂ. ತುಂಡ ]

**ತೊಂಡ್ರ** (ನಾ). ಒಬ್ಬಾತನ ಹೆಸರು: ಆತನಿಂ ಬಳಿಕಂ ಗಾವುಣ್ಡಗೆ ನಿನ್ದನಾಹವಶೌಣ್ಡಂ ತೊಣ್ಡಂ (ಸೌಇಇ. XI-1, ೪೫-೦೩ : 980). [ ? ]

**ತೊಂಡಂಗಿ**, ಜೊಂಡಿಂಗ, ಜೊಂಡಿಗ, ತುಂಡಂಗಿ₂, ತೊಣ್ಣಂಗಿ (ನಾ). ಒಂದು ಬಗೆಯ ಹುಳು ; ಜಿರಲೆ: "ಮುಖಲೋಮಿ ತೊಂ [ ಪಾಠಾಂ. ತುಂ]ಡಂಗಿಯುಕ್ಕುಂ" (ಮಂಗರಾ. ೪೯-೧೩). **ಜೊಂಡಿಂಗ** : ಸಣ್ಣ ಸಣ್ಣ ಇಲಿಗಳೂ ಜೊಂಡಿಂಗಗಳೂ ಪರಸ್ಪರ ಅಹಿಂಸಾಭಾವದಿಂದ ಸ್ವಚ್ಛಂದವಾಗಿ ಅತ್ತಿತ್ತ ಓಡಾಡುತ್ತಿವೆ (ಕುರಿಹಿಂ. ೧೪೮). **ಜೊಂಡಿಗ** : ರಾಜ್ಯದ ಹೆಗ್ಗಣಗಳ ತಾನೊಕ್ಕಿ ಜೊಂಡಿಗದಾ ಹುಲುಗಡಣವ ಮುಕ್ಕಿ . . . ಬೆಕ್ಕು ಹಾರುತಿದೆ ನೋಡಿದಿರಾ (ಗಿರಿ. ೮೩-೧೭) ; ಬಡಪಾಯಿ ಜೊಂಡಿಗದ ಜೀವ ತಕ್ಕೊಳ್ಳುವದು ನನ್ನ ಬೆಕ್ಕು (ಸ್ವಪ್ನ. ೪೮೯). **ತುಂಡಂಗಿ₂** : ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ. **ತೊಣ್ಣಂಗಿ** : ತೇವವಿರುವ ಜಾಗದಲ್ಲಿ ತೊಣ್ಣಂಗಿಗಳು ಬಹಳವಾಗಿ ಇರುತ್ತವೆ (ರೂಢಿ).

**ತೊಂಡಜ್ಜ** (ನಾ). (ಕರಾ) ಅಜ್ಜನ ತಂದೆ ; ಮುತ್ತಾತ.
[ ತೊಂಡ₁ + ಅಜ್ಜ₂ ]

**ತೊಂಡತನ**, ತುಂಡತನ (ನಾ). ಔದ್ಧತ್ಯ; ಉದ್ಧಟತನ : ವೀರವಳಿದುದು ತೊಂಡತನಗಳು ಹೋಗಿ ಕೈಕಾಲೊಡೆದು ನಾಚುತ್ತ . . . ತೆರಳಿದ (ಕೌಶಿರಾ. ೦೯-೩೩). **ತುಂಡತನ** : ತಂಡತಂಡವಾಗಿ ತಿರುಗುವ ನಾರಿಯರ ತುಂಡತನವನು ನೋಡು (ಕಾಲಸಂ. ೩೩) : ಚಂಡವಿಕ್ರಮಭೀಮನಡಿಗೆಬಗಿ ಕೀಚಕನ ತುಂಡತನವಂ ಪೇಳ್ದಳು ಭಾವೆ (ಪಾಂಡಪ. ೩೭-೨).
[ ತೊಂಡ₂ + – ತನ ]

**ತೊಂಡನೂರ್** (ನಾ). ಒಂದು ಊರಿನ ಹೆಸರು : ತೊಣ್ಡನೂರ್ ಬೋಯಸ್ಯ ಕೌಶಿಕಗೋತ್ರ ರೇವಶರ್ಮ್ಮಣ (ಇಆ. VII, ೪೨-೩೭ ; 668).
[ ? + ಊರ್ ]

**ತೊಂಡಬಡಿಗೆ** (ನಾ). ಒಂದು ಬಗೆಯ ಆಯುಧ: ಬೇಟಿವೇಟಿತ್ತಿ ತತ್ತ್ರಿಸಿದ ತೋಮರದ ತೋರದೊಂಗಲ ತೊಂಡಬಡಿಗೆಯು ಗಂಡರ ದಾವಣಿಯು ... ಸುಭಟಪೇಟಕಂ . . . ಅಜಾಂಡವೊಡೆಯೆ ಗಜಟ ಗರ್ಜಿಸುತ್ತುಂ (ಮಹಾನೀ. ೦೨-೧೯ ವ). [ ತೊಂಡ₀ + ಬಡಿಗೆ ]

**ತೊಂಡಬ್ಬೆ** (ನಾ). ಒಬ್ಬಾಕೆಯ ಹೆಸರು : ನಾಗತ್ತರನ ಮಗಳ್ತೊಂಡಬ್ಬೆಯು (ಎಕ. IX, ಬೆಂಗಳೂ. ೮೮-೨; ಸು. ೦೦). [ ತೊಂಡ₁ + ಅಬ್ಬೆ₁ ]

**ತೊಂಡಮಂಡಲ** (ನಾ). ಚೋಳಮಂಡಲ; ಪ್ರಾಚೀನ ತಮಿಳುರಾಜ್ಯದ ಒಂದು ಭಾಗ ; ಕಾಂಚಿಯನ್ನು ರಾಜಧಾನಿಯಾಗಿ ಹೊಂದಿದ್ದ ಆರ್ಕಾಟು, ಚೆಂಗಲ್ಪಟ್ಟು ಮತ್ತು ನೆಲ್ಲೂರುಗಳನ್ನೊಳಗೊಂಡ ಭಾಗ : ತೊಂಡಮಂಡಲದಲ್ಲಿ ಶೋಭಿಪ ಶಕ್ಕರಣ್ಯಮೆನಿಪ್ಪ ನಿಖ್ಖಂಡಿ ತೋತ್ಸವವೊಂದು ಪಟ್ಟಣಮಿರ್ಪುದು (ಉದ್ಭಟ. ೦೨-೮೯).
[ ←ತಮಿ. ತೊಣ್ಡೈಮಣ್ಡಲ ]

**ತೊಂಡಲ್**, ತೊಂಡಲ, ತೊಂಡಲು₁, ತೊಂಡಿಲ್, ತೊಂಡಿಲು₁ (ನಾ). ೧. ತಲೆಯಲ್ಲಿ ಧರಿಸುವ ಒಂದು ಬಗೆಯ ಮುತ್ತಿನ ಆಭರಣ,– ಶಿರೋಭೂಷಣ : ದಂಡೆಯುಂ ತೊಂಡ[ ಪಾಠಾಂ. ಡಿ ]ಲುಂ ನೂಂಕುತಂ ಛಂದದಿಂ ಚೆಂಡಿಕೆವಿಡಿದು ಮುಗಳನುದ್ಧರಿಸುವಂದದಿಂ (ಮಾಪರ. ದೇ. ೦೬೯-೩); ಪಾಂಡ್ಯಸತಿಯರ ತೊಂಡಲ್ದೀವಿದ ಘನರತ್ನಂಗಳ್ ಪಾವುಗೆಗಳ ಬಳಸು ದೊಂಗಲೆಡೆಯೊಳ್ ತೋರ್ಕುಂ (ಚಕವಿ. ೩-೩೬) ; ತೊಂಡಲವು ಶಿವಗಣಕೆ ಗುಂಡದುಮ್ಮು ಸೀನಾದಿ (ಕನ್ನಜಾ. ೩೦೭). ೨. ಸಾಲು ; ಶ್ರೇಣಿ : ಅಲ್ಲಲ್ಲಿಗೆ ಪರಿಯುತಿರ್ಪಿಜುಂಪೆಯು ತೊಂಡಲ್ (ಧರ್ಮಾವ್ಯ. ೩-೭೪). ೩. ಹೂವಿನ ಹಾರ, – ದಿಂಡು, – ದಂಡೆ : ರೂಢಿಸಿತ್ತು ಕಂಪಿಡಿದ ಬೆಡಂಗಿನಿಂದಮ ವಿಳಾಸದಿಂ ಮುಡಿದ ಮಹೇಂದ್ರದಿಗ್ವಧುವ ಬಣ್ಣದ ತೊಂಡಲ ಬಂದುಮಂಡಲಂ (ಲೀಲಾವ. ೨-೬) : ತೊಂಡ[ ಪಾಠಾಂ. ಡಿ ]ಲ ಮುಡಿದು ಕೊಂಡು ತಮ್ಮ ತಮ್ಮ ಗಂಡರ ಹಿಂದುಗೊಂಡು ನಾಡುವಿಂಡರ ನೋಡುತ್ತಲಿ ಇಂದು ನಮ್ಮ ಹುಲಿ ಹೋಯಿತ್ತು (ಬಸಪ. ೬೦-೦೬೭) : ವಿಯಚ್ಚರಿಯರ ವೇಣಿಯಿಂ ಜಗುಲ್ದ ತೊಂಡಲ ದಂಡೆಯೊ (ದಶಕು. ೯-೪೦) : ಪೊಸತೊರಳೆಗಳ ದಂಡೆದೊಂಡಲ್ಗಳಂ ಮುಡಿದುಮೆಲ್ಗಳ ತೊಡಂಗಳನೆ ತೊಟ್ಟು . . . ಮರುಳ ಮದವರ್ಕಳೆಸೆಯಲ್ (ಚಬಪು. ೩೨-೨೦) ; ಪರಿಪರಿಯ ಚಂಡು ತೊಂಡಲ ಮಾಲೆಗಳ ಕೊಂಡು ತೆರಳ್ದು ಸೊಗಸಿಂ ಸೂಳೆಗೇರಿಗ್ಯೆತರಲು (ನವಮೋ. ೦೭-೬೩). **ತೊಂಡಲ** : ೧. ದಂಡ್ಯಾಗ ಒರಗಿರುವ ಮಂಡಲದ ಗಿಣಿರಾಮ ತೊಂಡಲವು ತೂಗಿದಳವಲ್ಲಿ (ರೋಣಗೀ. ೪೦). ೩. ಖಂಡೆಯಕೆ ಪೊಂದಿರ್ದ ತೊಂಡಲವ ಕೂಡೆ ತೆಗೆದುಕೊಂಡು ಮುದದಿಂದ ಬರೆ (ಪ್ರಾಥರಾ. ೦೩-೨೭). **ತೊಂಡಲು₁** : ೧. ದುಂಡುಮುತ್ತಿನ ರತ್ನ ಕೇವಣಿಸಿದ ಹೊನ್ನ ತೊಂಡಲ ಸೂಡಿದು ಮುದದಿ (ಮೋಹತ. ೦೩-೬೫) ; ಕರುಳ ತೊಂಡಲು ಖಂಡದ ಬಣ್ಣಬಾಸಿಗ ನರದ ಹಂಜರ ಚಪ್ಪರದಲಿ ನೆರೆದು (ಕಂನವಿ. ೧೫-೬೩) ; ೩. ಅಂಗಜ ವಿಭಂಗನವರಡಿದಾವರೆಗಳುತ್ತಮಾಂಗಕಮರಿದ ದಂಡೆ ತೊಂಡಲುಗಳನ್ನೇಕ (ಮದೀಪು. ೨೩-೫) ; ಕಾಂತೆಯರುಯತಿಕುಶಲದಿಂ ಮಾಲೆ ಕಂಕಣಂ ಚೆಂಡು ತೊಂಡಲುಗಳಿರದೇ ಸಾತಿಶಯದಿಂ ಕಟ್ಟಿ (ನವಮೋ. ೦೦-೬೦) ; ತೊಂಡಲ ಮೇಗಡ್ಡೆ ಸೆರಗನ್ನೆಳೆದುಕೊಳ್ಳುತ್ತ ಕೊರಲ್ಸಾಗಿ ಹೊರಡುವಳು (ಬಿರುಗಂ. ೨೮-೦೨). **ತೊಂಡಿಲ್** : ೧. ದಂಡೆ ತೊಂಡಿಲ ಮುಡಿಸಿ ಶುಂಡಾಲ ಗಾಮಿನಿಯ ಮಂಡೆಯೊಳು (ಜ್ಞಾನಸಂ. ೭-೨೪); ನರಮೌಕ್ತಿಕದ ತೊಂಡಿಲನು ಸಿರಿಮುಡಿಯೊಳಗಳವಡಿಸಿ (ಜ್ಞಾನಪ. ೩೭-೯೨) ; ಇಳೆಯೊಳ್ಪೆಂಡಿರ ತೊಂಡಿ ಲೊಳ್ಮಣಿಯನೀ ಚಂದ್ರಾಸ್ಯೆಯುಂ ಸೃಷ್ಟಿಗೈದು(ಮಿತ್ರಗೋ. ೫೦). ೩. ನಿರಾಳ ಬೋಳಂಗೆ ತೊಂಡಿಲ ಮುಡಿಸುವಂತೆ (ಅಪಹಂ. ೦೩೩-೬೦೭). ೪. ಮದುವೆಯಲ್ಲಿ ಹೆಣ್ಣಿನ ತಲೆಗೆ ತೊಡಿಸುವ ಬಾಸಿಗ: ಶರಣರ ಪಾದಂಗಳೇ ತೊಂಡಿಲ ಬಾಸಿಗವೆನಗೆ (ಮಹಾದೇ. ಬ. ೩೭-೭೮). **ತೊಂಡಿಲು₁** : ೧. "ಕೊಂಡಿಲು ಶಿರೋಗ್ರಂಥಿಯೆನಿಸಿಕ್ಕು" (ಮಂಗರಾ. ೯೯-೨೦); ಮುಡಿಗೆ ಮಂಗಳಮಪ್ಪ ಮಣಿದೊಂಡಿಲಿಟ್ಟು (ಚೇರಮ. ೫-೪೧) ; ತೊಂಡಿಲುಂಗುರ ತಾಳಿ ಬಂದಿ ಭೂಷಣದ ಕರಂಡಗೆಗೊಟ್ಟು ಕಳುಹಿದ (ಭರತ. ೩೭-೦೨೭); ಮಣಿವ್ರಜಮಂಡಿತಮೊಂದಿ ತೊಂಡಿಲಾ ಸೋಮರ್ಮುಡಿಯಲ್ಲಿ . . . ಇಟ್ಟು ಸಿಂಗರಿಸಿ (ರಾಜಶೇ. ೮-೩೮): ಮೆರೆವ ತೊಂಡಿಲ ಧರಿಸಿ (ಹುನಳ. ೩೪). ೩. ಮಲ್ಲಿಗೆಯಲರ್ಗಳಂ ಸಮೆದ ತೊಂಡಿಲಿನಿಂದ ಮೊಲ್ಲೆಯು ದಂಡೆಗಳಿಂದ (ಚಂಪ್ರಸಾಂ. ೦೨-೦೦೩). ೪. ತೊಂಡಿಲು ಬಾಸಿಗವನು ಸೂಡಿದರು ಚಂದ್ರ ಮಂಡಲ ರತಿಮನ್ಮಥರ್ಗೆ (ಮೋಹತ. ೧೫-೨೩).

**ತೊಂಡಲ** 'ತೊಂಡಲ್' ನೋ.

**ತೊಂಡಲಿಪಿ** (ನಾ). ಉದ್ಧತರ ಬರವಣಿಗೆ ; ಉದ್ಧತರಾಜರ ಶಾಸನ : ತೊಡೆ ತೊಂಡಲಿಪಿಯನೆಂದನು ಧೂಳಿಲಿಪಿಗಳ ತೊಡೆವಂತೆ ತೊಡೆದನಾ ಭೃತ್ಯ (ಭರತ. ೩೭-೯೮). [ ತೊಂಡ₂ + ಲಿಪಿ ]

**ತೊಂಡಲು₁** 'ತೊಂಡಲ್' ನೋ.

**ತೊಂಡಲು₂** (ನಾ). ಒಂದು ಬಗೆಯ ಹಕ್ಕಿ : ಗರುಡ ಕೊಣಕನು ಮೇಣು ಟೀವನು ಗರಗೆ ತೊಂಡಲು ಗಜಗ . . . ಪೆರುವರ್ಗವಟಿಳೊಪ್ಪಿದವು (ಸಾಳ್ವಭಾ. ೫-೨೩). [ ? ]

**ತೊಂಡಲ್ವಚ್ಚ** (ನಾ). ತಲೆಯಲ್ಲಿ ಧರಿಸುವ ಒಂದು ಬಗೆಯ ಆಭರಣ ; ಬೈತಲೆಮಣಿ : ಬೆಳ್ಗಿಗರಡಿಗೆಯೊಳ್ ತಳತಳಿಪ ಪಟನುಡಿಮೆಂಡಿರ ಪಚ್ಚೆಯ ತೊಂಡಲ್ವಚ್ಚದಂತೆಯುಂ (ಚಕವಂ. ೮೭-೭೦). [ ತೊಂಡಲ್ + ಪಚ್ಚ₂ ]

**ತೊಂಡಲ್ಪೂವು** (ನಾ). ಗೊಂಚಲಾಗಿರುವ ಹೂವು : ತೊಂಡಲ್ಪೂವಿನ ಗಾಲಿ ನನೆಯು ನಿಡುದಂಡೆ ಮನೋಹರಮಾದಚ್ಚು (ಜಯಕಾ. ೫-೩).
[ ತೊಂಡಲ್ + ಪೂವು (<ಪೂ) ]

**ತೊಂಡವಾಡಿ** (ನಾ). ಒಂದು ಸ್ಥಳದ ಹೆಸರು: ತೊಣ್ಡವಾಡಿಯ ಪಳ್ಳಿಯ ಮಳೆಬುತ್ತಯ್ಯನ ಮಗ ಅಯ್ಯಪಯ್ಯ (ಎಕ. IV, ಗುಂಡ್ಲುಪೇ. ೦-೯೩; 976). [ ತೊಂಡ + ವಾಡಿ₂ ]

**ತೊಂಡಾಣೆ** (ನಾ). ಭಕ್ತನ ಆಣೆ: ಕೇಳಿನ್ನು ನಿನ್ನಾಣೆ ತೊಂಡಾಣೆ ಹೋಗೆಂದು ಕರುಣೆ ಕಳುಪಲ್ಕೆ (ಸಿದ್ಧರಾ. ೬-೩೦). [ ತೊಂಡ₁ + ಆಣೆ₃ ]

**ತೊಂಡಾಲ** (ನಾ). ಒಂದು ಸ್ಥಳದ ಹೆಸರು: ಅಲ್ಲಿಂದ ತೆಂಕ ಪಡುವಲು ಉತ್ತನೂರ ತೊಂಡಾಲದ ಮುಕ್ಕೂಟಲ ಮಣ್ಣೊಡಿಡಿ (ಮ್ಯಆರಿ. ೦೯೨೫, ೧೦೫-೯೩; 934). [ ? ]

**ತೊಂಡಿ₁** (ನಾ). ದಾಸಿ; ಸೇವಕಿ: ಬಸುರಿಳಿಯೆ ... ಮಾಂಸದ ಚೀಲದಿಂ ಬೀಳೆಯೊಡನೆ ಗಾಂಧಾರಿಯುಂ ಮುಳಿಸಿಯದನೂ ಕಂಡಿದರ್ಕ್ಕಾಗಿ ತಾನೆರಡುವರುಷಂ ಧರಿಸಿಕೊಂಡೆನೆ ಗರ್ಭಮಂ ಬಿಸುಡು ಬಿಸುಡೆಂದಾಗ ತೊಂಡಿಯರಿಗುಸುರುತಿರಲು (ಲಕ್ಷ್ಮೀಭಾ. ೨೫-೩೬). [ ತೊಂಡ₁ + – ಇ₃ ]

**ತೊಂಡಿ₂** 'ತೊಂಡೆ₃' ನೋ.

**ತೊಂಡಿಕೆ** (ನಾ). ತುಂಟತನ; ತುಂಟಾಟ: ಕರುಮಾಡದ ಪೂಜಗನೆ ಪೋಪಳಂ ವಸುದೇವಂ ಕಂಡವಳ ಕೈಯಿಂದವಾ ಕರಂಡಕಮಂ ಕೊಂಡೊಡ ವಳಿಂತೆಂಬಳ್ ತೊಂಡಿಕೆಯನೊಪ್ಪೆ ನಿನ್ನೊಳ್ ಕಂಡುದಜಿನುಪಾಯದಿಂ ವನಾಂತರದೊಳ್ ಭೂಮಂಡಳಪತಿ ಸೆಜೆಯಿಟ್ಟುಂ ಕೊಂಡಾಟದೊಳಿರ್ದೆ ನೆಂದು ಬಗೆಯುದೆ ಕಂಡಾ (ಬಂಹರಿ. ೨-೬). 'ತೊಂಡಿಕೆಗೆಯ್' ಪರಾ. [ ತೊಂಡು₁ + – ಇಕೆ ]

**ತೊಂಡಿಕೆಗೆಯ್** (ಕ್ರಿ). ತುಂಟಾಟವಾಡು: ನಿಚ್ಚನಿಚ್ಚಂ ತೊಂಡಿಕೆಗೆಯ್ದು ಪುಯ್ಯಲ ಮಾಡುತ್ತಿರೆ (ಬಂಹರಿ. ೫-೩೦ ವ). [ ತೊಂಡಿಕೆ + ಕೆಯ್₁ ]

**ತೊಂಡಿಗ₁** (ನಾ). ಒಂದು ಬಗೆಯ ಪಕ್ಷಿ: ಶಕುನಿ ಕಂಕಂ ತೊಂಡಿಗಂ ... ರತ್ನಖಗಮಿರ್ಕುಂ ತದ್ವನಾಗೌಘದೊಳ್ (ರಾಜಶೇ. ೫-೫೯); "ರಣಹದ್ದು" (ರಾಜಶೇ. ಕೋಶ); ಟಟ್ಟಭಂ ತೊಂಡಿಗನುರುಳಿಗನಿರ್ಬಾಯನುಂ ಚಾತಕಂ ... ಶಿಖಿ ಶುಕಂ ತದ್ವನಾಂತಸ್ಥಮಿರ್ಕುಂ (ಕಲಶಂ. ೩-೩೩). [ ? ]

**ತೊಂಡಿಗ₂** (ನಾ). ಒಬ್ಬಾತನ ಹೆಸರು: ಪಿರಿಯ ಮಗಂ ಕಾಳಿಧುರಂಧರ ನಾತಂ ತೊಣ್ಡಗ[೦]ಗೆ ಮೆಚ್ಚಿಸಿದೋಂ (ಸಾಇಇ. XI-1, ೪೫-೦೪; 980). [ ? ]

**ತೊಂಡಿಲ್** 'ತೊಂಡಲ್' ನೋ.

**ತೊಂಡಿಲು₁** 'ತೊಂಡಲ್' ನೋ.

**ತೊಂಡಿಲು₂** (ನಾ). =ತೊಂಡೆ₁: ಯಾಕವ್ವಾ ತೆರೆದು ತೊಂಡಿಲ ಬಾಯಿ ಸಾಕವ್ವಾ ಮನವು ಮಾವಿನಕಾಯಿ (ಸಬೀಗೀ. ೯೦-೧೭); ಸಂಜೆ ಬಂಜೆತನವ ಹರಿಸಿ ಮೆರೆಯೆ ತುಟಿಯು ತೊಂಡಿಲ (ಸೂರ್ಯಪಾ. ೧೦೮-೪). [ <ತೊಂಡೆ₁ ]

**ತೊಂಡು₁**, ತುಂಡು₂ (ನಾ). ೧. ಉದ್ಧಟತನ; ದಂಪ್ಪತನ; ಸ್ವೇಚ್ಛಾವೃತ್ತಿ; ಪುಂಡಾಟ: ತೊಂಡಿನೊಳುರ್ಕಿ ಕಟ್ಟ ದಶಕಂಠನನಕ್ಕಟ ಕೊಂಡ ವೆರ್ಮರುಳ್ ಕೊಂಡುದೆ ತನ್ನುಮಂ (ಪಂಪಭಾ. ೬-೩೩); ತೊಂಡಿನೊಳೆಮ್ಮ ಪೇರಡವಿಯುಂ ಪುಗುತಂದಪರೆಂದು ಲುಬ್ಧಕರ್ ತಂಡದೆ ಸುತ್ತಿಮುತ್ತೆ (ಪಂಪಾಮಾ. ೭-೧೦೫); ಕೊಂಡು ಕಮಂಡಳಜಳದೊಳ್ ದಂಡಿತಂಪ್ರ ತೀವೆ ಕಂಡು ಗುಂಡುಲಿಯೆ ಕರಂ ತೊಂಡಿಂದಾ ಪುರವರದೊಳ್ ಗುಂಡಿಗೆಯುಂ ನೆಗಪಿ ಸುರಿಯೆ ಪರಿದುದು ನದಿಪೋಲ್ (ನೇಮಿಪು. ೭-೦೮೨); ತೊಂಡಿನ ಕೊಬ್ಬಿರ್ ಪಾಪದ ಪಿಂಡಮೆನಿಪ್ಪಂಗನಾಜನಂ ಬೆರಸಲ್ (ಖಮುದ. ೦೪-೩೨): ತೊಂಡಿನ ತವರುಮನೆ ಬಾಹಿರರಿಗಾಶ್ರಯಭವನ ವಿಳರಥಿದೇವ ಭೀಷ್ಮನ ಕೊಲುವರಿಲ್ಲೆಂದ (ಕುಭಾಸ. ೦೨-೦೨). ೨. ಸೊಕ್ಕಿನ ನಂಡಿ; ಉದ್ಧಟತನದ ಮಾತಂ: ಕಂಡುಕಿಡಡುಂಡದಲ್ಲದೆ ತೊಂಡಂ ನುಡಿದೆಡಜಾ ತೊಡರ್ವರುರವಣೆಯುಂ ಕಂಡಿದಿರಲೆಟ್ಟು ಮುಳಿಸಿಂ ಖಂಡಿಪನೆನೆ ಹಬ್ಬಣಂಗಿದಿರ್ಚುವನಾವಂ (ಮುಂಬರಾ. ೨೪೩-೨೯; 1219). ೩. ಉದ್ಧಟ ವ್ಯಕ್ತಿ; ಸ್ವೇಚ್ಛಾಚಾರಿ: ತೊಂಡನಿಸಿ ಬದುಕಿದವ ಪೆಣ ಸಂತೆ ನಿಪ್ಫಲವು (ನಿಭಾಗ. ೦೧-೨೮-೦೭). ೪. ವಾಕ್ಪಟುತ್ವ: ಜನ್ನನ ದೇಸೆ ಪಂಪನ ಗುಣಂ ಗುಣನಂದಿಯ ತೊಂಡು ಪೊನ್ನನೊಳ್ ಸನ್ನಿದವಾದ ಜಾಣ್ನುಡಿ ... ನೆಲಸಿರ್ಪುವೀ ಸುಕವಿಮಲ್ಲನ ಕಾವ್ಯವಿಳಾಸಗೇಹದೊಳ್ (ಸೂಕ್ತಿಸು. ೦-೨೬). ೫. ಪರಾಕ್ರಮ; ಶೌರ್ಯ: ಪೇಟೀಪುದೂ ರುಚಿಯುಲ್ಲದವನ ಗಂಡುಂ ತೊಂಡುಂ (ಶಂಪಭಾ. ೮-೮೨); ಗಂಡಿನ ತೊಂಡಿನಂಕದಧಟಲ್ ಪೊಂಕಾಳ್ತನಂ (ಹ್ಯಆಸಿ. ೦೩-೬-೭೩; 1090): ತೊಂಡಿನೊಳೆ ಮಲೆಮಹೀಪರ ಮಂಡಳಮಂ ಸೂರೆಗೊಂಡು (ಎಕ. V, ಅರಸೀ. ೦೦೨-೬೫; 1100 ?); ಭೇರುಂಡಪರಾಕ್ರಮಂಗೆ ಸಹದೇವ ಚಮೂಪತಿಗೆಂತು ಗಂಡಿನೊಳು ತೊಂಡನಿದಿರ್ಚಿ ಬಾಳ್ವದಟನಾಗ್ಗಳ ಮೈಳುಗಿಯಂಕ[ಕಾ]ರನೊಳು (ಸಾಇಇ. XV, ೦೫೫-೨೫; 1206); ಬಲಂಗೊಂಡಂ ತೊಂಡಂ ಬಿಡದೆ ಗಜಕರ್ಣಾವನಿಭುಜಂ (ಧುಪ್ರಪು. ೬-೮೦): ತೋಜಿಸಿದ ನೀ ತೊಂಡಿನೋಲೆಯಕಾಜತನವನು (ಕುಭಾಕ. ೦೭-೦೩). ೬. ಮಂದ; ಸೊಕ್ಕು: ಬಲವಂ ನಚ್ಚಿ ವಿರೋಧಮಂ ಪಡೆವುದೇ ತೊಂಡಿಂದೆ ಸಾಮಂತರಂ ಕಲಹಂ ಬೇಡನೆ (ಎಕ. VI, ಕಡೂರು. ೩೫-೫೨; 1136); ಕೂರ್ತನಂ ತೊಂಡಿನಿಂ ಕುಂಟಣಿ ಮಾಬ್ಬಿಳ್ಳೀಣದಿಂ ನಾಣೊಡೆಮ ನನೆಡೆಯೊಳ್ಪೊರ್ದನಂ ಮಾಬ್ಬಳ್ (೦೬ಲಾವ. ೨-೯೭); ಬಾದೊರ್ವ ಭುವಿಯೆನಿಪ ವಿಪ್ರಂಗೆ ತೊತ್ತಾಗಿ ... ಅರಮನೆಯ ಕೆಲಸಮಂ ಮಾಡುತುಂ ತೊಂಡು ಮಿಕ್ಕುದು (ನಿಂಬರ. ೧೨೫-೦೬); ಜನಪನಾಜಿಡಿಯನಾನೆಯ ದೂಂದು ತೊಂಡ ಗುರುವಿನ ದುರಾಚಾರವಂ ಮಾಣಿಸಲ್ಬಲ್ಲರೇ (ಸಮ್ಯಕೌ. ೨-೬೫). 'ತೊಂಡುಗೆಡೆ₁' ಪರಾ. ತುಂಡು₂: ೩. ಬಂದು ಹೆಂಡತಿಯಾಗಿ ತುಂಡೊಬ್ಬ ಸೊಸೆಯಾಗಿ ಕಂಡಲ್ಲಿ ಹರಿವ ಮಗನಾದರಾ ಮನೆಗೆ ದಂಡ ತಪ್ಪುವದೆ (ಸರ್ವಜ್ಞ. ೦೭೫೫).

**ತೊಂಡನಿಕ್ಕು** = ದಂಪ್ಪತನದಿಂದ ವರ್ತಿಸು: ತೊಂಡನಿಕ್ಕಿ ಠವಾಳತನದಲ್ಲಿ ಭಂಡುಗೆಲೆವುತ ಮಲುಹಣಿಯ ತಾಯ್ ಮಿಂಡನಂ ಹೊಜವಡಿಸಿ ತಾ ತನ್ನಾತ್ಮಜೆಯನೊಬ್ಬ ಮಂಡಳೇಶನ ಪೊರೆಗೆ ಕಳುಹಲು (ಬಸವು. ೪೨-೦೧). **ತೊಂಡಿನ ದನ** = ತೊಂಡುದನ: ಮನಕ್ಕೆ ಲಿಂಗ ಬಾಪಾಗ ತೊಂಡಿನ ದನವೇ (ಪ್ರಭುದೇ. ೧೦೯-೪೬೭).

**ತೊಂಡು₂** (ನಾ). ಅಂಕೆ; ಹತೋಟಿ: ಮದವೆದ್ದಾನೆಗೆಲ್ಲಿಯ ತೊಂಡು (ಆನಂರಾ. ೬-೨೩-೨೭). [ ದೇ.೫ ತಮಿ. ತೊಣ್ಣು ]

**ತೊಂಡು₃** (ನಾ). ಗುಂಪು; ಸಮೂಹ: ಇಡೀ ಜಗತ್ತೆಲ್ಲ ಮೋಹವಿಭ್ರಾಂತರಾದ ಜನರ ತೊಂಡಿನಂತೆಯೂ ... ಆವಳಿಗೆ ಕಂಡಿತು (ಕುನರು. ೧೯೮). [ < ತಂಡ ]

**ತೊಂಡು₄** (ನಾ). (ಕರಾ) ಮುಸುರೆಯನ್ನು ಹಾಕುವ ಬಾನಿ.– ಕೂನಿ. [ ? ]

**ತೊಂಡುಗಿಳಿ** (ನಾ). ಧ್ವನಿಮಾಡುವ ಗಿಳಿ; ಗಳಪುವ ಗಿಳಿ: ಗಂಡುಗೋಗಿಲೆಯು ತಂಡಮುಂ ತೊಂಡುಗಿಳಿಯು ಒಂಡುಂ ಮುಂ ಪಯಣಮಾಗೆ (ರಾಂಕಿಪು. ೭-೦೨೯ ವ); ಪರಿವಿಡಿಗೆಯ್ಯೆ ತೊಂಡುಗಿಳಿ ತಂದೆಯ ತಾಯ ಸವಿಪಾಪದೊಳ್ (ರಶರ. ೪-೦೭೭). [ ತೊಂಡು₁ + ಗಿಳಿ ]

**ತೊಂಡುಗೂಳಿ** (ನಾ). ಸ್ವೇಚ್ಛೆಯಾದ ಬಸವ; ದೇವರಿಗೆ ಬಿಟ್ಟ ಗೂಳಿ; ಪುಂಡುಗೂಳಿ: ತೊಂಡುಗೂಳಿ ಬೆಳೆದ ಹಾಗೆ ಬೆಳೆದಿದ್ದ (ಸಂಧ್ಯಾರಾ. ೧೨). [ ತೊಂಡು₁ + ಗೂಳಿ₁ ]

**ತೊಂಡುಗೆಡೆ$_1$** (ಕ್ರಿ). ೧. (ಗಿಳಿಯು) ಧ್ವನಿಮಾಡಂ,-ಗಳಹಂ: "ತೊಂಡುಗೆಡೆವುದೆಂದು ಶುಕವಿಲಾಸಂ" (ಕರಸಾ. ೫೫-೨೦೭): "ತೊಂಡುಗೆಡೆದುದೆನೆ ಗಿಳಿಯುವಾತು" (ಕಬ್ಬಿಕ. ೨೩): ತೊಂಡುಗೆಡೆದು ವಸಂತರಾಜನ ಪಡಿಯುಱರಂತೆ ವಿರಹಿಗಳಂ ಚಪ್ಪರಿಪ ರಾಜಕೀರಂಗಳ್ (ಗಿರಿಕ. ೩-೦೦೩ ವ); ಕಂಗೊಳಿಸಿದುದಂದು ತೊಂಡುಗೆಡೆಯುತ್ತುಮತೀವ ವಿಲಾಸದಿಂ ಶುಕಾವಳಿ (ಉದ್ಭಟ. ೧೦-೯); ತೊಂಡುಗೆಡೆಯಿತ್ತುಪದೇಶಿಕನಂತೆ ಕಾಮತಂತ್ರದ ತಿರುಳಂ ಕನತ್ಕನಕಪಂಜರಪಿಂಜರಿತಾಂಶುಕಂ ಶುಕಂ (ಸೂಕ್ತಿಸು. ೧೭-೩); ಗಿಳಿಗಳೆಮ್ಮನ ಕಂಡು ಮೂಗ ಕಿಚ್ಚನೆ ಮಾಡಿ ತೊಂಡುಗೆಡೆದವವೆಂದಳೊರ್ವ ವನಿತೆ (ಭಾವಚಿಂ. ೬-೨೬): ಬಗ್ಗಿಪ ಕಳಕಂಠಂ ತೊಂಡುಗೆಡವ ಗಿಳಿ ಪೂತಸೆದಿರ್ಪಲರ್ಜೊಂಪಂ (ರಾಜಶೇ. ೨-೩೮). ೨. (ಸ್ವಚ್ಛಂದವಾಗಿ) ಕೂಗು,-ಕಂಕಿಲಂ: ತೊಂಡುಗೆಡೆಯುತ್ತೆ ಪಿಕಾಳಿ ಶುಕಾಳಿಯೊಪ್ಪುಗುಂ (ಗಿರಿಕ. ೨-೩೬): ಪುಗಲ್ ಪುಗಲೆಂದು ಬಂಡಳಿಸಿ ತೊಂಡುಗೆಡವ ಗಂಡುಗೋಗಿಲೆಗಳುಂ (ಪುಷ್ಪಪು. ೨-೩೯ ವ): ಶುಕಪಿಕಂ ತೊಂಡುಗೆಡೆದುಱಿ ಕೂಗಲ್ (ಧಾವಚಿಂ. ೭-೦೬). ೩. (ಅಲಂ) ಕೂಗಾಡು; ಜರುಚು: ಬಾಣದ ಮೊನೆಯೊಳು ಲೇಪಯಿಂ ಕಟ್ಟಿ ತೊಟ್ಟನೆಸವುದದಂ ಮಾಗಧಂ ಕಂಡು ತೊಂಡುಗೆ[ಪಾಠಾಂ. ಕೆ]ಡೆವುದುಂ ಮಂತ್ರಿಗಳು ಮಾಣಿಸಲ್ (ಪುಣ್ಯಾಸ್ರ. ೧೦-೨೮ ವ); ಭಂಡ ನೀ ಬಾಯ್ಬಡಿಕತನದಲಿ ತೊಂಡುಗೆಡೆವರೆ (ಕೌಶಿರಾ. ೨೦-೫೦): ಅಲ್ಲಿಗೆ ಪೋಗಿ ತೊಂಡುಗೆಡೆದು ನಿಂದಿಸಿ ನಮ್ಮ ಕಾಡಿದ ದಿಂಡೆಯದೇನ ಮಾಡುವೆನೆಂದ (ತ್ರಿಭುತಿ. ೯-೭೨).

[ ತೊಂಡು$_1$ + ಕೆಡೆ$_2$ ]

**ತೊಂಡುಗೆಡೆ$_2$** (ಕ್ರಿ). ರಾಶಿಯಾಗಿ ಬೀಳಂ; ಗುಂಪಾಗಿ ಕೆಡೆ: ಕರಚಂಡಘಾತದೊಳ್ ತೊಂಡುಗೆಡೆದ ತುರಗದಳಂಗಳುಂ (ಅನಂಪು. ೦೭-೬ ವ) ತಡಿದು ಖಗಚಯ ತೊಂಡುಗೆಡೆದ ಕಾಯಿಪಣ್ಗಳೊಳು (ನವಮೋ. ೨೭-೫೬). [ ತೊಂಡು$_3$ + ಕೆಡೆ$_1$ ]

**ತೊಂಡುಗೆಡೆತ** (ನಾ). ಮಧುರವಾದ ಧ್ವನಿ,-ಕೂಗಂ: ಇಂದಿನ ಕನ್ನಡ ಕಾವ್ಯಪ್ರಪಂಚವು ಈ ಗಿಳಿವಿಂಡಿನ ತೊಂಡುಗೆಡೆತಕ್ಕೆ ಕಿವಿಗೊಟ್ಟೀತೆ? (ಗಿಳಿವಿಂ. XI, ಮುನ್ನುಡಿ). [ ತೊಂಡುಗೆಡೆ$_1$ + – ತ$_2$ ]

**ತೊಂಡುಗೆಡೆಪ** (ನಾ). ಮಧುರವಾಗಿ ಮಾತನಾಡುವುದಂ: ತಂಬೆಲರ ತನಿಸೋಂಕು ನಾಂ ಪುಗಲ್ಪುಗಲಂತೆ ತೊಣ್ಡುಗೆಡೆಪಂ ಪುಷ್ಪವಿಕಸನವ ಮುದ್ದಿಪಲರ್ವಕ್ಕಿಯಾಮೋದಮುಂ (ಸಂಸಜ. ೩೦-೧೬೨).

[ ತೊಂಡುಗೆಡೆ$_1$ + – ಪ$_2$ ]

**ತೊಂಡುಗೆಯ್** (ಕ್ರಿ). (ಗಿಳಿಯು) ಧ್ವನಿಮಾಡು,- ಗಳಹು: ಇನಿವಣ್ಣುಂಡು ಗಿಳಿವಿಂಡು ತೊಂಡುಗೆಯಲೆಳಸಿತು (ಚಬಪು. ೭೫-೦೦).

[ ತೊಂಡು$_1$ + ಕೆಯ್$_1$ ]

**ತೊಂಡುಗೇಡು** (ನಾ). ಸೊಕ್ಕು ಇಳಿಯುವಿಕೆ; ಅಹಂಕಾರದ ಕೇಡಂ: ಗಂಡುಗುಂದಿನ ಬೀತ ಬಿರುದಿನ ತೊಂಡುಗೇಡಿನ ಜಯದ ಜಾಱಿನ ಖಂಡಶೌರ್ಯದ ಧೀರರಿದ್ದುದು ನೃಪನ ಬಳಸಿನಲಿ (ಶುಪ್ರಾಕ. ೧೩-೭೬).

[ ತೊಂಡು$_1$ + ಕೇಡು ]

**ತೊಂಡುಗೊಳ್** (ಕ್ರಿ). ಸ್ವೇಚ್ಛೆಯಾಗಿ ಓಡಾಡಂ: ಭಂಡಿಯುಂ ನಲವಿಂದ ನೂಂಕೆ ತಮುಲ್ಲಸತ್ಪುರವೀಥಿಯೊಳ್ ತೊಂಡುಗೊಂಡಿರಲೊಂದು ತರ್ಣಕಂ . . . ಬಿರ್ದಬಿಯುಱ್ (ಉದ್ಭಟ. ೧೨-೬೬). [ ತೊಂಡು$_1$ + ಕೊಳ್$_1$ ]

**ತೊಂಡುತನ**, ತಂಡುತನ (ನಾ). ೧. ಸ್ವೇಚ್ಛಾವೃತ್ತಿ: (ಕಿ). ತುಂಡುತನ: ೨. ತುಂಟತನ: (ಕಿ). [ ತೊಂಡು$_1$ + – ತನ ]

**ತೊಂಡುತೆರೆ** (ನಾ). ಪ್ರಕ್ಷುಬ್ಧವಾದ ಅಲೆ: ತೊಂಡುತೆರೆಗಳ ಮುಸುಕಿನಲ್ಲಿ ತಂದು ಮಗಳ ಕರಗಿಹೋದ (ಇಂಗೀತ. ೬೬-೨೧).

[ ತೊಂಡು$_1$ + ತೆರೆ$_4$ ]

**ತೊಂಡುತೊಳಸು$_1$** (ಕ್ರಿ). ಮನಬಂದಂತೆ ಸುತ್ತು,-ತಿರುಗು: ತೊಂಡು ತೊಳಸುವ ದೋಣಿಯನ್ನು ನಂಬಿ ಬಂದನೆ? (ಗಿಳಿವಿಂ. ೫೫-೨೭).

[ ತೊಂಡು$_1$ + ತೊಳಸು$_2$ (<ತೊಟಸು$_1$) ]

**ತೊಂಡುತೊಳಸು$_2$** (ನಾ). ಸ್ವೇಚ್ಛಾವೃತ್ತಿ; ಉದ್ಧಟತನ: ತೊಂಡು ತೊಳಸೆಕ್ಕಸಿಕ್ಕ ವಂಚನೆ ಕುಹಕ ಜೂದು ಕುತ್ಸಿತ ಲಂಡು ಭಂಡು ದುರ್ಜನಮೆಂಬಿವೆಲ್ಲ ದುಷ್ಪಸ್ವಭಾವಂ (ಸದ್ಯುಕಾ. ೬-೩೩): ಈ ನರದೇಹ ಕ್ರಿಮಿಗಳ ಮೊತ್ತದಾಗರ . . . ಇದು ಮುರಾರಿಯು ಶಕ್ತಿಯನಿಸುವ ಮಾಯೆ ಮಾಡುವ ತೊಂಡುತೊಳಸೆಂದ (ನಿಭಾಗ. ೧೦-೩೨-೨೦): ಉದ್ದಾಲಕಂ ಸಂತಸಗೊಂಡು . . . ಸಂಪ್ರೀತಿಯಿಂ ವಿಪರೀತದ ತೊಂಡು ತೊಳಸಂ ಮಱೆದು (ಜೈಮಿಭಾ. ೧೦-೩೦); ಕಂಡಿರಾ ಗುರುಗಳರ ತನಯನ ತೊಂಡುತೊಳಸಿನ ಮಾತ (ಪ್ರಹ್ಲಾದ. ೬-೩೬).

[ ತೊಂಡು$_2$ + ತೊಳಸು$_4$ ( < ತೊಟಸು$_2$) ]

**ತೊಂಡುತೊಳಸುಗ** (ನಾ). ಮನಬಂದಂತೆ ವರ್ತಿಸುವವನು; ತೊಂಡು ತೊಳಸುಗರನವನಿಯೊಳಂಡಲೆದಗಲಕ್ಕೆ ಪರಿದು (ಧರ್ಮನಾ. ೫-೯೧).

[ ತೊಂಡುತೊಳಸು$_1$ + – ಗ$_2$ ]

**ತೊಂಡುದನ** (ನಾ). ಅಗಡುದನ; ಸ್ವೇಚ್ಛೆಯಾಗಿ ಅಲೆಯುವ ದನ; ತುಡುಗುದನ: ಕಂಡವರ ಹೊಲಕಿಳಿವ ತೊಂಡುದನವಲ್ಲು (ಕಾರೂಕ. ೫೧-೦೫೨); ನಾಲ್ಕುದಿಕ್ಕುಗಳಿಂದಲೂ ತೊಂಡುದನಗಳು ನುಗ್ಗಿ, ಮೇದು ತುಳಿದು ಹಾಳುಮಾಡಿದ ತೋಟವಾಯಿತು (ಕನ್ನಸು. II, ೫); ಜಗತ್ತಿಗೆ ಶಾಂತಿ ಸಂತೋಷಗಳನ್ನು ಕೊಡುವ ಹೂವೇ ಧನ್ಯ, ಮಾನ್ಯ. ಮುಳ್ಳು ಉಪಯೋಗಕ್ಕೆ ಬಂದರೆ ತೊಂಡುದನಗಳಿಗೆ ಅಡ್ಡಿಯಾಗುವಂತೆ ಬೇಲಿಹಾಕುವುದಕ್ಕೆ (ಬಂಕಿಮು. ೧೬೧). [ ತೊಂಡು$_1$ + ದನ ]

**ತೊಂಡುನಗೆ** (ನಾ). ತುಂಟನಗೆ; ಚೇಷ್ಟೆಯ ನಗೆ: ತೊಂಡುನಗೆಯ ತೊಂಡೆಬಾಯ ಕಂಡು ಕಂಡು ಮುತ್ತನಿಟ್ಟು (ನಾದಲೀ. ೬೬-೦೯).

[ ತೊಂಡು$_1$ + ನಗೆ ]

**ತೊಂಡುನಡೆ** (ನಾ). ಸ್ವೇಚ್ಛಾವೃತ್ತಿ; ಉದ್ಧಟತನ: ವಿರಸವನು ಬಿತ್ತುತ್ತ ತೊಂಡುನಡೆ ನಡೆದು ಕೊಲೆಗೆ ಕೊಲೆ ಸಂತತಿಯನಿಡುವವರ ಬೇಡದಿಂ (ಅಮೃತಂ. ೨೩-೯). [ ತೊಂಡು$_1$ + ನಡೆ$_2$ ]

**ತೊಂಡುನುಡಿ** (ನಾ). ಚೇಷ್ಟೆಯ ಮಾತಂ; ತುಂಟತನದ ನುಡಿ: ನಗೆವೆರಸಿರ್ದ ತೊಂಡುನುಡಿಯಿಂ ತಗುಳ್ವಳ್ ಸಲೆ ಧೀರೆ (ರಸರ. ೩-೯೦ ಸೂತ್ರ). [ ತೊಂಡು$_1$ + ನುಡಿ$_2$ ]

**ತೊಂಡುಪಾಳೆಯಗಾರ** (ನಾ). ಉದ್ಧಟನಾದ ಪಾಳೆಯಗಾರ; ಸೊಕ್ಕಿದ ಪಾಳೆಯಗಾರ: ಚಿನ್ನರಾಜನು ಇದಿರುಬಿದ್ದು, ಉದ್ದುರುಟುತನದಿಂದ ತೊಣ್ಡುಪಾಳೆಯಗಾರರೊಡನೆ ಸೇರಿಕೊಂಡು . . . ಸ್ವತನ್ತ್ರನಾಗಲು ಸಾಹಸಪಡುತ್ತಿರುವನು (ಚಿಟ್ಟಿಅ. ೭೭-೦೬).

[ ತೊಂಡು$_1$ + ಪಾಳೆಯಗಾರ ]

**ತೊಂಡುಬಂಡು** (ನಾ). (ಗಿಳಿಯು) ಧ್ವನಿಮಾಡುವ ಸದ್ದು,-ಗಳಹುವ ಕೋಲಾಹಲ: ತುಂಬಿಗಳ ಪಲ್ಮೊರೆಪದಿಂ ಗಿಳಿಯ ತೊಂಡುಬಂಡಿಂ ಬೆಟ್ಟಿತಾದ ನುಡಿಯಿಂ . . . ಮೆಱೆದುದಾ ವನಂ (ಪದ್ಮರಾ. ೮-೨೫).

[ ತೊಂಡು$_1$ + ಬಂಡು$_3$ ]

**ತೊಂಡುಬೀಳು** (ಕ್ರಿ). ಸ್ವೇಚ್ಛಾವೃತ್ತಿಗೆ ಬೀಳು; ತುಂಟಾಗು: ಸಾಧು ಕುದುರೆಯಾಗಿ ಮನೆಗೆ ಬಂದರಂತೂ ಸರಿಹೋಯಿತು; ಇಲ್ಲದೆ, ತೊಂಡುಬಿದ್ದರೆ? (ಬಂಕಿಮು. ೬೯). [ತೊಂಡು$_1$+ಬೀಳು$_1$ (<ಬೀೞ್$_1$]

**ತೊಂಡುಮರುಳ್** (ನಾ). ದುಷ್ಟಪಿಶಾಚಿ: ಸುಭಟರಟ್ಟೆಗಳನೆಬ್ಬಿಟ್ಟಿ ಕುಟ್ಟುವ ತೊಂಡುಮರುಳ್ಗಳುಂ (ಪಂಪಭಾ. ೧೦-೧೧೬ ವ).

[ ತೊಂಡು$_1$ + ಮರುಳ್$_3$ ]

**ತೊಂಡುಮೇ, ತೊಂಡುಮೇಯು** (ಕ್ರಿ). ಸ್ವೇಚ್ಛೆಯಾಗಿ ತಿನ್ನು,- ಮೇಯು ; ತುಡುಗುಮೇಯು : ತೊಂಡುಮೇವ ಪಸುವಿಂಡಿನ ತಪ್ಪೋ ಕಂಡು ಕಾಯುದ ತುಱುಗಾವನ ತಪ್ಪೋ (ಗೀಶಗೂ. ೬೦). **ತೊಂಡುಮೇಯು** : ಅಲ್ಲಿ ಯಾವ ಕಾಲದಲ್ಲಾದರೂ ಬರುವ ಮೂರು ವರ್ಷದ ಕೋಣಗಳು ತೊಂಡುಮೇಯುತ್ತಿರುತ್ತವೆ (ಸಣ್ಣಕ. VI, ೩) ; ಹಳ್ಳ ಅಡಗಿ ಪರಿದಲ್ಲಿ, ತುಡುಗುದನ ತೊಂಡುಮೇಯುವಲ್ಲಿ ದಿಕ್ಕು ತಪ್ಪತಾರ ತಟ್ಟಿ ಹೊಕ್ಕರ ಕಕ್ಕಾವಿಕ್ಕಿಯಾಗಿ (ಗಂಗಾಕ. ೮೬-೨).

[ ತೊಂಡು$_1$ + ಮೇ ]

**ತೊಂಡುಮೇಯು** 'ತೊಂಡುಮೇ' ನೋ.

**ತೊಂಡುವಾಡೆ** (ನಾ). ಪುಂಡುದನಗಳನ್ನು ಹಿಡಿದು ಹಾಕುವ ಸ್ಥಳ ; ದೊಡ್ಡಿ ; ಪೌಂಡಿಮನೆ ; ಕೊಂಡವಾಡೆ : ಯಾವ ರಾಸುಗಳಾಗಲಿ . . . ಮೇಯುತ್ತಿರುವ ಕಾಲದಲ್ಲ ಹಿಡಿದು ಅಥವ ಹಿಡಿಸಿ ಸಾವಕಾಶ ಮಾಡದೆ ಸಮೀಪವಾದ ತೊಂಡುವಾಡೆ ದೊಡ್ಡಿಗೆ ದಾಖಲ್ಮಾಡಬೇಕು (ಗ್ರಾಮೂಕ. ೦೦೬). 'ಕೊಂಡವಾಡೆ' ಪರಾ. [ ತೊಂಡು$_1$ + ವಾಡೆ$_3$ ]

**ತೊಂಡುವೆಣ್** (ನಾ). ಸ್ವೈರಿಣಿಯಾದ ಹೆಣ್ಣು; ಜಾರೆ: ತೊಂಡುವೆಣ್ಗಳ ನೇಹದೊಡಕಿಗೆ ಸಿಲುಕದೆ . . . . ನಲ್ವೆಂಡಿರೊಡನೆ ಬೆರಸುವುದು (ಹದಿಬ. ೮-೪೬). [ ತೊಂಡು$_1$ + ಪೆಣ್ ]

**ತೊಂಡುವೆಣ್ಬುರುಳಿ** (ನಾ). ಗಳಹುವ ಹೆಣ್ಣುಗಿಳಿ ; ಹರಟುವ ಹೆಣ್ಣು ಗಿಳಿ: ನಡಪಾಡುವ ರಾಜಹಂಸೆ ಬಂದಾಡುವ ತೊಂಡುವೆಣ್ಬುರುಳಿ (ಪಂಪಭಾ. ೩-೩೬). [ ತೊಂಡು$_1$ + ಪೆಣ್ಬುರುಳಿ ]

**ತೊಂಡುವೆಸರ್** (ನಾ). ಹೆಮ್ಮೆಗಾಗಿ ಪಡೆದ ಬಿರುದು: ನೀಚಂಗೆ . . . ಗಾವಿಲನೊರ್ವಂ ಕುಡೆ ಕೊಂಡ ತೊಂ[ಪಾಠಾಂ. ಕೊಂ]ಡುವೆಸರಿಂದೇಂ ಸಲ್ವುದೇ ನಿಲ್ವುದೇ (ಧರ್ಮನಾ. ೦-೪೯). [ ತೊಂಡು$_1$ + ಪೆಸರ್ ]

**ತೊಂಡುಸಲಗ** (ನಾ). ಮಂದಿಸಿದ ಸಲಗ ; ಮದ್ದಾನೆ : ತೊಂಡುಸಲಗನನ್ನು ಹಳ್ಳಕ್ಕೆ ಕೆಡವಿದ ಬೇಟೆಗಾರನ ಹೆಮ್ಮೆಯಿತ್ತು ಆ ಧ್ವನಿಯಲ್ಲಿ (ರಾಗಿಕ. ೬). [ ತೊಂಡು$_1$ + ಸಲಗ ]

**ತೊಂಡುಹೋಗು** (ಕ್ರಿ). ಸ್ವೇಚ್ಛೆಯಾಗಿ ತಿರುಗು: ಎಮ್ಮೆ ಕೋಣ ಕುಲವ ನಾ ಕಾಯಲಿಲ್ಲ ಅವು ಎನ್ನ ತುಱುವಿಗೆ ಹೊಱಗು ತೊಂಡುಹೋಗದಂತೆ ಕಾದೊಪ್ಪಿಸುವೆ (ತುಱುಗಾ. ೦) : ಹಸುವಿಂಗೆ ಒಂದು ಕಟ್ಟು . . . ಕಱುವಿಂಗೆ ಮೂಱು ಕಟ್ಟು ಇಂತಿವ ನೋಡಿ ಮೇಯಿಸಿಕೊಂಡು ತೊಂಡು ಹೋಗದಂತೆ ನಾ ಕಾದೊಪ್ಪಿಸಬೇಕು (ತುಱುಗಾ. ೨).

[ ತೊಂಡು$_1$ + ಹೋಗು$_1$ (< ಪೋಗು$_1$) ]

**ತೊಂಡುಱಿಸು** (ಕ್ರಿ). (?) : ಹರಿಣನಾ ಹಿಂಡ ಸವಱುತಲೆಸುತ ಖಂಡಿಸುತ ಶಬರಕುಳ ತೊಂಡುಱಿಸಿ ಬೇಂಟೆಯಿಂ ಮೆಚ್ಚುತಿರಲು (ಲಿಂಗಪು. ೬-೨೫) : ಸುರುಚಿರಾಭರಣದಿಂ ಖಂಡಶಶಿನೊಸಲ್ಗಳಿಂದಾ ತೊಂಡುಱಿಸಿ ವಿಟರ ಮೇಲ್ವಾಯ್ದು ಹಿಡಿದಪ್ಪುತಂ (ಲಿಂಗಪು. ೨೫-೪೬). [ ? ]

**ತೊಂಡೂರ್** (ನಾ). ಒಂದು ಊರಿನ ಹೆಸರು: ಮದರಿಕಲ್ಲೂ ತೊಣ್ಡೂರು ಮಲ್ಲಪ್ಪರ್ನನ್ನೆರಡು ಅಮ್ಮವಳ್ಳಿ ಪನ್ನೆರಡು (ಎಕ. XI, ಹಳ್ಳಿ. ೩೪-೦೬ : ಪು. ೨೧೬). [ ? + ಊರ್ ]

**ತೊಂಡೆ$_1$** (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಹಣ್ಣು : "ಓಷ್ಠೀ, ಬಿಂಬೀ, ತುಂಡಿಕಾ–ಈ ೩ ತೊಂಡೆ" (ಹಲಾಯು. ೩೪-೫೦): "ತುಂಡಿಕೇರೀ, ರಕ್ತಫಲಾ, ಬಿಂಬಿಕಾ, ಪೀಲುಪರ್ಣೀ ಈ ೪ ತೊಂಡೆ" (ನಾಚಿರಾ. ೧೧೦) : ಗಾಣರ್ಗೆ ಬುಧರ್ಗೆ ಕವಿಶ್ರೇಣಿಗೆ ಪಗೆಯಾದವೆಂದು ತೊಂಡೆಯ ಪಣ್ಗಳ್ ನಾಣುಂ ಬೆಳತುರ್ತೆ ತೋರ್ಪವೊಲೇಣಾಕ್ಷಿಯರಧರಮಂದು ಬೆಳ್ಪ ಮರ್ದಿಸೆಗುಂ (ಉದ್ಭಟ. ೯-೦೨೬) : ಮದಕರಿ ಮತ್ತ್ರ ಮೆಟ್ಟಿದ ಹಿರಿಯ ತೊಂಡೆಯ ಹಣ್ಣನಂದದಿ ಕರುಳನೋಕರಿಸಿದನು (ಕೌರಿರಾ. ೨೨-೨೨) : ಚಿಲುಪಾಲುಮೆಸರನದಕಿಟ್ಟು . . . ಪಸಿಯ ತೊಂಡೆಯ ಬೇರ ... ತೊಳಸಿದೊಡೆ ಬಿಳುಪಹುದು (ಸೂಪಶಾ. ೨-೩) : ತರುಣಿಯೋರ... ತುಟಿಯು ತೊಂಡೆಯ ಪಣ್ಣಿಂದರಗಿಣಿಯೊಱಗಲು (ಕಂಪವಿ. ೫-೦೦೬).

[ ದೇ.॥ ತಮಿ. ತೊಣ್ಟೈ ; ಮಲ. ತೊಣ್ಡ ; ತೆಲು. ದೊಂಡ ]

**ತೊಂಡೆ$_2$, ಡೊಣ್ಣೆ$_2$, ದೊಣ್ಣೆ$_2$** (ನಾ). ಓತಿಕೇತ ; ಗೋಸುಂಬೆ ; ಊಸರವಳ್ಳಿ : "ಸರಟಃ, ಕೃಕಲಾಸಃ–೨ ತೊಂಡೆ ಹೆಸರು" (ಸಿದ್ಧಾಂತ ೦೩೬). 'ತೊಂಡೆಕೇತ' ಪರಾ. **ಡೊಣ್ಣೆ$_2$** : 'ಡೊಣ್ಣೆಕೇತ' ಪರಾ **ದೊಣ್ಣೆ$_2$** : 'ದೊಣ್ಣೆಕಾಟ' ಪರಾ. [← ತೆಲು. ತೊಂಡ ]

**ತೊಂಡೆ$_3$, ತೊಂಡಿ$_2$, ದೊಂಡೆ$_2$** (ನಾ). ೧. [ಸಂಗೀತ] ಒಂದು ರಾಗದ ಹೆಸರು : ಆ ವಧು ಲಾಗು ಬಾಗು ಮೋಹ ಜಾಳಿಯುಂ ನೆಱೆ ಮಾಡಿ ತೊಂಡೆ ವೇಳಾವಳಿ ದೇಶಿ ಗುಜ್ಜರಿ ವರಾಳಿಗಳಿಂದಮ ನಾಡೆ ಪಾಡುತಂ (ಧರ್ಮಾಪ. ೩-೯೦). **ತೊಂಡಿ$_2$** : ೨. ಮಧುರವಾದ ಸ್ವರ ; ಇಂಪಾದ ಧ್ವನಿ : ಶರೀರದ ಲಾಗು ಲಾಗಿನೊಳ್ ನೆಲಸಿದ ರೂಪು ರೂಪಿನೊಳ ಗುರ್ವಿಸುವುನ್ನತ ದೇಸಿ ದೇಸಿಯೊಳ್ ನೆಲಸಿದ ಗಾಡಿ ಗಾಡಿಯೊಳನಾರತ ಮೊಪ್ಪುವ ತೊಂಡಿ ತೊಂಡಿನೊಳ್ಗಲ ಬಳಸಿರ್ಪ ಭಾವವಳವಟ್ಟಿರೆ ನರ್ತಕಿ ನಾಡೆ ರಂಜಿಪಳ್ (ಧರ್ಮಾಪ. ೨-೨೪). **ದೊಂಡೆ$_2$** : ೩. ಗಂಟಲು ; ಕಂಠ : "ಅಯ್ಯೊ" ಎಂದು ಕಂಪಿತ ಚೀರ್ದನಿ ಮುನಿಯನ ದೊಂಡೆಯಿಂದ ಹೊರಟಿತು (ಕಾಬಯ್ಯಾ. ೬೭).

[ ದೇ.॥ ತಮಿ. ತೊಣ್ಟೈ ; ಮಲ. ತೊಣ್ಡ; ತುಳು. ದೊಂಡೆ : ಕೊಡ. ತೊಂಡೆ ]

**ತೊಂಡೆ$_4$** 'ದೊಂಡೆ$_1$' ನೋ.

**ತೊಂಡೆ$_5$** (ನಾ). ಕಬ್ಬಿನ ಜಲ್ಲೆಯ ನಿಸ್ಸಾರವಾದ ಮೇಲುಭಾಗ : ಕಬ್ಬಿನ ಸೋಗೆ : ತೊಂಡೆ ಹೊಯ್ದು ಒಂದೇ ಅಳತೆಗೆ ಕಬ್ಬುಗಳನ್ನು ಕತ್ತರಿಸಿ ರಾಶಿ ಹಾಕಬೇಕು (ನನ್ನೂರು. ೨೮೫). [ ? ]

**ತೊಂಡೆಕಾಯಿ** (ನಾ). ತರಕಾರಿಯಾಗಿ ಬಳಸುವ ಒಂದು ಬಗೆಯ ಕಾಯಿ : ತೊಂಡೆಕಾಯಿ, ನೆಲ್ಲಿಕಾಯಿ . . . ಬೆಣ್ಣೆ, ದ್ರಾಕ್ಷೆಹಣ್ಣು, ಇವಿಷ್ಟು ಪಾಂಡುರೋಗ, ಕಾಮಿಲೆ, ಹಲೀಮಕಂಗಳಲ್ಲಿ ಪಥ್ಯವರ್ಗಂಗಳು (ವೈದ್ಯಸಾ. I, ೩೪೯) : ಕಾಗೆದೊಂಡೆ, ಸಿಹಿತೊಂಡೆ, ತೊಂಡೆಕಾಯಿ (ಮೈಜಿಗ. ೨೩-೪೨೩). [ ತೊಂಡೆ$_1$ + ಕಾಯಿ$_4$ (< ಕಾಯ್$_4$) ]

**ತೊಂಡೆಕೇತ, ಡೊಣ್ಣೆಕಾಟ, ಡೊಣ್ಣೆಕೇತ, ದೊಣ್ಣೆಕಾಟ** (ನಾ). ಹಲ್ಲಿಯ ಜಾತಿಗೆ ಸೇರಿದ ಒಂದು ಬಗೆಯ ಪ್ರಾಣಿ ; ಹೆಂಟೆಗೊದ್ದ : ಗಿಡದ ಮೇಲಿದ್ದ ತೊಂಡೆಕೇತವನ್ನು ನೋಡಿ ಮಗು ಹೆದರಿಕೊಂಡಿತು (ರೂಢಿ). **ಡೊಣ್ಣೆಕಾಟ** : ಅವುಗಳಿಗೆ ಸರ್ಪಜಾತಿಗಳಿಂದರೂ ಸರಟ (ಡೊಣ್ಣೇಕಾಟ) ಜಾತಿಗಳಿಂದರೂ ಸಲ್ಲುವುದು (ಮುಂಬಯಿ. ೬-೨೫೯). **ಡೊಣ್ಣೆಕೇತ** : ಡೊಣ್ಣೆಕೇತವನ್ನು ಕಂಡರೆ ಮಕ್ಕಳು ಅದರ ಮೇಲೆ ಕಲ್ಲೆಸೆಯುತ್ತಾರೆ (ರೂಢಿ). **ದೊಣ್ಣೆಕಾಟ** : ವೆಂಕಟನ ಮೊಗ ತಮ್ಮನ ಕಲ್ಲಿನೇಟಿಗೆ ಬಿದ್ದ ಆ 'ದೊಣ್ಣೆಕಾಟ'ದ ಮೃತಶರೀರವನ್ನು ನೋಡುತ್ತಿರುವಂತೆ ವಿವರ್ಣವಾಯಿತು (ಬನಸಿ. ೦೧೪). [ ತೊಂಡೆ$_2$ + ಕೇತ$_2$ ]

**ತೊಂಡೆಗರುಳು** 'ದೊಂಡೆಗರುಳ್' ನೋ.

**ತೊಂಡೆದಾಳಿದ** (ನಾ). ತೊಂಡೆಕಾಯಿಯಿಂದ ಮಾಡಿದ ಪಲ್ಯ : ತೊಂಡೆದಾಳಿದ ಪಟಲದಾಳಿದವ ಸವಿವೃತಂ (ಲಿಂಗಪು. ೧೬-೧೬).

[ ತೊಂಡೆ$_1$ + ತಾಳಿದ ]

**ತೊಂಡೆಬಾಯ್** 'ತೊಂಡೆವಾಯ್' ನೋ.

**ತೊಂಡೆವಣ್, ತೊಂಡೆವಣ್ಣು, ತೊಂಡೆಹಣ್ಣು** (ನಾ). ತೊಂಡೆಯ ಬಳ್ಳಿಯಲ್ಲಿ ಬಿಡುವ ಹಣ್ಣು ; ಬಿಂಬಫಲ : ಅವಳ ಚೆಂದುಟಿಯುಂ ... ತೊಂಡೆವಣ್ಣದೊಂದಚ್ಚರಿಯಲ್ಲಿ ಪುಟ್ಟಿತೆನುತಟ್ಟಿಯುನೊಲ್ದು ಕರ್ನ...

(ಉದ್ಭಟ. ೬-೭೪) ; ತಳಿರಡಿಗೆ ತೊಂಡೆವಣ್ತುಟಿಗೆ ತಾವರೆ ಮೊಗಕೆ . . . ಕೋಗಿಲೆ ಗಿಳಿಗಳಿಂಚರಕೆ ಸೋಲ್ದವಯವಂಗಳೊಳ್ನಲಸಿದುವು (ಜೈಮಿಭಾ. ೩೦-೪). **ತೊಂಡೆವಣ್ಣು** : ಮುದದಿಂದ ಗಿಳಿ ತೊಂಡೆವಣ್ಣಿನ ರಸವನು ಕರ್ದುಕಿ ಪೀರ್ವಂತೆ (ಕಂಪವಿ. ೯-೧೨೦) : ನಾರಿಯರಧರಂಗಳಂ ಕಂಡು ತೊಂಡೆವಣ್ಣುಗಳೆಂದು ತಿಳಿದು ಎಳೆಗಿಣಿಗಳೆಲ್ಲ ಒಟ್ಟುಗೂಡಿ ಬರುತ (ಸೌಗಂಧಿ. ೪೬೪-೬). **ತೊಂಡೆಹಣ್ಣು** : ಬಿಂಬ, ಬಿಂಬಿಕೆ – ತೊಂಡೆಹಣ್ಣು (ನಾಚಿರಾ. ೬. ೭೯) ; ತೊಂಡಹಣ್ಣು ಮಣಿಯೆ ನಾಚಿ ನಗೆಯ ಚೆಲುವ ತುಟಿಯು ಬಾಚಿ (ಅನಿಕೇ. ೧೮-೦). [ ತೊಂಡೆ$_1$ + ವಣ್$_3$ ]

**ತೊಂಡೆವಣ್ಣು** 'ತೊಂಡೆವಣ್' ನೋ.

**ತೊಂಡೆವಣ್ಣುಟಿ** (ನಾ). ಬಿಂಬಫಲದಂತಿರುವ ತುಟಿ ; ಬಿಂಬಾಧರ : ಬಂದುಗೆದುಟಿ ತೊಂಡೆವಣ್ದುಟಿಯವರು ಮಂದಗಮನೆಯೊಳ್ಳಿದಿದರು (ಜೀವಂಸಾಂ. ೧೦-೪೬) : ತುಱುಗೆವೆಗಣ್ಣ ಕಟಾಕ್ಷ ಕಂಬಲ್ಗಳ ಮಿಱುಗುವ ತೊಂಡೆವಣ್ದುಟಿಯ ಬೆಡಗಿಂದೆ ಮಾತನಾಡಿದಳು (ಶೋಡಕ. ೦೬-೨೪) ; ಕಣ್ದೆಱೆದಾಕ್ಷಣ ಬರೆಸಳದಾ ತೊಂಡವಣ್ದುಟಿಯುಬಲೆಯನಪ್ಪಿ . . . ತೋಱಿದನು ಸ್ವರ್ಗಸುಖವ (ಭರತ. ೦೫-೬೨).

[ ತೊಂಡೆವಣ್ + ತುಟಿ ]

**ತೊಂಡೆವಾಯ್, ತೊಂಡೆಬಾಯ್, ತೊಂಡೆವಾಯಿ** (ನಾ). ತೊಂಡೆಯ ಹಣ್ಣಿನಂತೆ ಕೆಂಪಾಗಿರುವ ಬಾಯಿ,–ತುಟಿ : ಬಂದರ್ ಪವಳವಾಯ ತಳಿರ್ವಾಯ ತೊಂಡೆವಾಯೊಳ್ಪಂಡಿರ್ (ಜಗವಿ. ೪-೦೨೨) : ನಿಡುಸುಯ್ಯುತ್ತುಂ ತನ್ನನೊತ್ತಂಬರಿಸೆ ನಿಲುವುತುಂ ನೀಳ್ದ ನಲ್ಕೇಶದಿಂದಂ ತೊಡೆಯುತ್ತುಂ ತೊಂಡೆವಾಯಂ ಶ್ರಮಜಲಕಣಮಂ ಮೇಲುದಿಂ ವಾರಿಸುತ್ತುಂ . . . ಬಂದು ನಿಂದಳ್ (ಸೂಕ್ತಿಸು. ೮-೧೬೬) ; ಎಸಗುಳಿದ ಗಂಡುಗಳೆಲ್ಲ ಸಹೋದರರೆಂದೀ ತೊಂಡವಾಯಬಲೆ ನುಡಿದಳು (ಶ್ರೀಪಾಂ. ೫-೮೬) : ರಾಯ ಪರಾಕೆಂದು ಕೈವಾರಿಪ ತೊಂಡವಾಯ ಪಾಠಕಿಯರೊಪ್ಪಿದರು (ಮೋಹತ. ೪-೬). **ತೊಂಡೆಬಾಯ್** : ತೊಂಡುನಗೆಯ ತೊಂಡೆಬಾಯ ಕಂಡು ಕಂಡು ಮುತ್ತನಿಟ್ಟು (ನಾದರೀ. ೬೬-೧೯). **ತೊಂಡೆವಾಯಿ** : ತುಱುಗೆವೆಯಲರ್ಗಣ್ಣು ತುಂಬಿಗುರುಳ ತೊಂಡೆವಾಯಿ . . . ಇಂಬಾದವಾ ಬಾಲಕಿಗೆ (ಶ್ರೀಪಾಂ. ೩-೨೪). [ ತೊಂಡೆ$_1$ + ಬಾಯ್ ]

**ತೊಂಡೆವಾಯಿ** 'ತೊಂಡೆವಾಯ್' ನೋ.

**ತೊಂಡೆವಾಯ್ದೆರೆ** 'ತೊಂಡೆವಾಯ್ದೆಱೆ' ನೋ.

**ತೊಂಡೆವಾಯ್ದೆಱೆ, ತೊಂಡವಾಯ್ದೆರೆ** (ನಾ). = ತೊಂಡೆವಣ್ದುಟಿ : ತುಱುಗೆವೆಗಣ್ಣ ಕಾಂತೆ ಮಂಗಣ್ಣುರೆದಾಂ ಪವಣಿಪ್ಪ ತೊಂಡೆ ವಾಯ್ದೆಱೆ ಕಾಮಿನಿಯರ್ (ಜಗವಿ. ೦೬-೨೫). ಸಕ್ಕರೆಸವಿಯ ತೊಂಡೆ ವಾಯ್ದೆಱೆಯ ಸೊಗಸನುಗುಳ್ವಕ್ಕಜದ ಮುದ್ದು ಮಾತಿನ . . . ಪೆಣ್ಮಕ್ಕಳ್ ಪ್ಪೊಂದಿರೊಸೆದು (ಪದ್ಮರಾ. ೬-೬೬) ; ತೊಂಡೆವಾಯ್ದೆಱೆಯ ಕಂಬು ಕಂಠದ . . . ನಿತಂಬಿನಿಗೆಣೆಯಾದರುಂಟೆ (ಜೀವಂಸಾಂ. ೦೦-೨೩) ; ಬೇರ್ವಣ್ಣಿಪೆನ ನಳಿನ ತೊಂಡೆವಾಯ್ದೆಱೆಯ ಕೆಂದೋರೆಪುರ್ದ ನಡು ಗಣ್ಣ . . . ಎಳವೆಣ್ಣು (ಉದ್ಭರೀ. ೪-೩೪). **ತೊಂಡೆವಾಯ್ದೆರೆ** : ತೊಳಗುವ ತೊಂಡೆವಾಯ್ದ್ರೆಯ ಮುದ್ದು (ಯಾದಶಂ. ೨-೬೦).

[ ತೊಂಡೆ$_1$ + ಬಾಯ್ದೆಱೆ$_2$ ]

**ತೊಂಡೆಹಣ್ಣು** 'ತೊಂಡವಣ್' ನೋ.

**ತೊಂಡೇಳ್** (ಕ್ರಿ). = ತೊಂಡುಬೀಳು : ತೊಂಡೆದ್ದ ದಿಂಡಿಗತನದ ಪುಂಡ ಹೆಣ್ಣು (ಮುಂತ್ರಶ. ೨೪-೧೬). [ ತೊಂಡು$_1$ + ಏಳು$_1$ (< ಏೞ್$_1$) ]

**ತೊಂತಗವಿತೆ** (ನಾ). ವ್ಯರ್ಥಪದಪೂರಿತವಾದ ಕವಿತೆ ; ಹುರುಳಿಲ್ಲದ ಕಾವ್ಯ : ಮುಂತೆ ಸರಿಯಿಲ್ಲೆಂದು ಪೊಗಳ್ದವರು ಪೂಜಿಮುಟ್ಟ ಬಿಂತವನ ಕವಿತೆಯೇನೆಂದು ನಿಂದಿಸಿ ತಮ್ಮ ತೊಂತ[ಪಾಠಾಂ. ಕೊಂತ, ತೂಂತ]ಗವಿತೆಯ ತೊಂಬನುರ್ಚಿ (ಹರಿಶ. ೧-೨೯) ; (ಸೋಮಶ. ೦-೦೬ ಸೂ) ; ತೊಂತಗವಿತೆಯ ಗುಣ್ಪೇಂ . . . ಸುಪ್ರಬಂಧದೊಳ್ಪಿಂಗಣೆಯೇ (ಹಮ್ಮಿರ. ೧-೨೫).

[ ☞ ಇದು 'ತೂಂತಗವಿತೆ (< ತೂಂತು$_2$ + ಕವಿತೆ)' ಎಂದೇ ಇರಬಹುದು]

**ತೊಂತು$_1$** (ಕ್ರಿ). ೧. ಮೇಲೇರು ; ಆಕ್ರಮಿಂಸಂ ; ಮುತ್ತು : ಮನ್ಮಥ ಕುಮಾರಕ ತನ್ನ ತೊಂತಿದ ಖಳರನುತ್ತರಿಸಿ ಹಂತಿಯೊಳ್ ಕೆಡಹಲ್ಕೆ (ಮೋಹತ. ೩೪-೩೬) ; ಮಂತ್ರೀಶ್ವರನ ಮೆಯ್ಯಾಗಿವಲ ರಥರಾಜಿ ದಂತಿಗಳಾ ಹವದೊಳಗೆ ತಿಂತಿಣಿ ಭರವಸದಿಂದಾಗ ಮರಿತಂದು ತೊಂತಿತು ನೀಲಾಂಬರನ (ಮೋಹತ. ೪೦-೬೩). ೨. ಸಂತ್ಯಹಾಕು ; ಬಳಸು : ನೀನೀತನ ವರೂಥಮಂ ತೊಂತಿ ವಾಲಾಗ್ರದಿಂ ಗಗನದೊಳ್ತಿರಿಪಿಡು (ಜೈಮಿಭಾ. ೨೬-೪೩); ಕಾಲು ತೊಂತಿದ ಹಾವು ಕಚ್ಚದೆ ಬಿಡದು(ಗಾದೆ). ೩. ಪ್ರೇರಣೆ ಮಾಡಂ ; ಎತ್ತಿಕಟ್ಟು ; ಪ್ರಚೋದಿಸಂ : (ಶ).

**ತೊಂತಿಕೊಳ್** = ೧. ಸಂತ್ಯಗಟ್ಟು : ಬಸವಣ್ಣನ ತೊಂತಿಕೊಂಡು ಬಸವಣ್ಣನ ಧರಿಸಿಕೊಂಡು ... ನಾನು ಬಸವ ಬಸವಾ ಎನುತಿರ್ದೆನಯ್ಯಾ (ಅಱಂದೇ. ೩೦೪-೮೩). ೨. ಹಬ್ಬು ; ವ್ಯಾಪಿಸಂ ; ತುಂಬಿಕೊಂಡಿರಂ : ಮೂವತ್ತಾರುತತ್ತ್ವದೊಳನಂತ ಜನ ದೇವ ದಾನವರಾದಿಯಾಗಿಹರು ತೊಂತಿಕೊಂಡಿಹರು (ಲಕ್ಕಣ್ಣಾ. ೩-೧೯-೬೨): ಈ ಮದನಕಾಂತೆ ಮನದೊಳ ಹೊರಗೆ ತೊಂತಿಕೊಂಡಿರ್ದತುಳಚಿಂತಾಗ್ನಿ ಶಾಂತರಸದೋಳ್ನುಳುಗಲು (ನವಮೋ. ೯-೪೬). ೩. ಸಿಕ್ಕಿಕೊಳ್ಳು : ತೊಂತಿಕೊಂಡಿರೆ ಶೋಕಸಾಗರದಿ ತೊಳಲುತಿರೆ ಪ್ರಾಣಂಗಳುಳಿಯವೆನಗೆ (ಪಂಕಾದಾ. ೨-೨೨-೩೬).

[ ← ತಮಿ. ತೊತ್ತು ]

**ತೊಂತು$_2$** (ನಾ). ದಟ್ಟಣೆ ; ನಿಬಿಡತೆ : ಅಂತರಾತ್ಮಕನೈದುವವ ನಿಶ್ಚಿಂತನೈ ಸಂಸಾರಸಾಗರ ತೊಂತಿನಿಂ ಕಡೆದಿಹರು ನೃಪ ನಿಶ್ಚಿಂತರಲ್ಲೆಂದ (ಅಂಬಿಕಾ. ೩೬-೨೩) ; ಮರಗಳ ತೊಂತು ಬಹಳ ಜಾಸ್ತಿಯಾದ್ದರಿಂದಲೂ . . . ಕತ್ತಲೆಯಾದ ಮೇಲೆ ಜನರು ಆ ದಾರಿಯನ್ನು ಉಪಯೋಗಿಸುತ್ತಿರಲಿಲ್ಲ (ಪಂಗಾಳ್ಕ. ೪೩೩). [ < ತೊಂತು$_1$./ತಮಿ. ತೊತ್ತು ]

**ತೊಂತುಳಿ** (ನಾ). ಅಜಗಿಜಯಾದ ಸ್ಥಿತಿ ; ಅಸ್ತವ್ಯಸ್ತವಾದ ಸ್ಥಿತಿ: ನೆಲೆ ಪೊಲಮುಚ್ಚು ತಮ್ಮ ಮನದೊಳ್ ಸಲೆ ಕಬ್ಬಸು ಪರ್ವಿದುರ್ವಿಯೊಳ್ ಚಲದಿಱಿದಾಂತು ಬಿಟ್ಟ ಭಟರಂತ್ರದ ತೊಂತುಳಿಯೊಳ್ ಸಿಲುಂಕಿ (ನೇಮಿಪು. ೧೦-೦೫೩).

[ ☞ ಇದು 'ತೊಟ್ಟುೞ್' ಶಬ್ದದ ಅಪಲಿಖಿತವಿರಬಹುದು ]

**ತೊಂದರೆ** (ನಾ). ೧. ಕಷ್ಟ : ಪೇಚಾಟ : ಇಲ್ಲದ ಸಲ್ಲದ ಹಟ್ಟಿನ ತೊಂದರೆಗಳೂ,ಕಾರ್ಯಭಾರವೂ . . . ಸಹನಿಗೆ ಬಂದೊದಗಿತು (ಹಸ್ತಿಕ. ೦೩೦) : ಮನೆಮನೆಗಳಲ್ಲಿಯ ಜನಗಳಲ್ಲಿ ಒಮ್ಮನಸಿಲ್ಲದಾಗಿ, ತೊಂದರೆಗಳು ತಾಂಡವ ಮಾಡುತ್ತವೆ (ಗಾಂಗು. ೫೦). ೨. ತೊಡಕು ; ತಡೆ ; ಅಡ್ಡಿ ; ಅನನುಕೂಲ : ಮುಂದಡಿಯಿಡಬೇಕೆನ್ನುವವರಿಗೆ ಇನ್ನೂ ಕೆಲವು ತೊಂದರೆಗಳಿವೆ (ಯುಗಪ್ರ. ೧೮೨) : ಅವನ ಈ ಒಡನಾಟದಿಂದ ನನಗಾದ ಒಂದು ತೊಂದರೆಯೆಂದರೆ ಸಂಜೆ ಯಮುನಾ, ಲಲಿತೆಯರನ್ನು ನೋಡಲು ಸಮಯ ಸಿಗದುದು ! (ಅಲಹೂ. ೬೬). ೩. ಕಿರುಕುಳ ; ಕಾಟ ; ಹಿಂಸೆ : ರಾಮಪ್ಪನವರು ಒಂದು ಬಿಳಿಗೂ ಯಾವ ತೊಂದರೆಯನ್ನೂ ಕೊಡಲಿಲ್ಲ (ಕಂಬಹು. ೦೨೦).

[ ದೇ.॥ ತಮಿ. ತೊನ್ತರವು, ತೊನ್ತರ್ವು ; ಮಲ. ತೊನ್ದರ; ತುಳು. ತೊಂದರೆ ; ತೆಲು. ತೊಂದರ ]

**ತೊಂದರೆಗೊಳಿಸು** (ಕ್ರಿ). ಅಡ್ಡಿಪಡಿಸು ; ತೊಡಕಿಗೆ ಈಡುಮಾಡಂ : ಇತರರನ್ನು ಕಾರಣವಿಲ್ಲದೆ ತೊಂದರೆಗೊಳಿಸುವುದೇ ಕೆಲವರ ಸ್ವಭಾವ (ರೂಢಿ). [ ತೊಂದರೆ + ಕೊಳ್$_1$ + – ಇಸು$_3$ ]

**ತೊಂದರೆಪಡು** (ಕ್ರಿ). ಕಷ್ಟಪಡು: ಕುಡಿವಿಾಶ . . . ಇಲ್ಲದಿದ್ದಾಗ ಅನೇಕ ಕೀಟಗಳು ನಿಸ್ಸಹಾಯ, ತೊಂದರೆಪಡುತ್ತವೆ (ಕೀಟಶ. ೧೪): ನನಗೋಸ್ಕರ ನೀನು ತೊಂದರೆಪಟ್ಟುಕೋಬೇಡ (ರೂಢಿ). [ ತೊಂದರೆ + ಪಡು$_1$ ]

**ತೊಂದಿರ** (ನಾ). (?) : ನಾಲುವಿರುದ್ರವು ಮುಖ್ಯಧಿದಾವ ಕೊದಲುಂ ತೊನ್ದಿರರುವ್ವೆ ನೂವ್ವರ್ರು ವಿದ್ದರ್ ವಿಟ್ಟ ಧರ್ಮ್ಮವೆನ್ತೆಂಪಡೆ (ಇಷ. XI, ೨೭೪-೨೭ : 1158). [ ? ]

**ತೊಂಪೆ** 'ತೊಂಬೆ$_1$' ನೋ.

**ತೊಂಬತು** 'ತೊಂಬತ್ತು' ನೋ.

**ತೊಂಬತ್ತು**, ತೊಂಬತಂ, ತೊಂಭತಂ, ತೊಂಭತ್ತು (ನಾ). ಒಂದು ಸಂಖ್ಯಾವಾಚಕ ; ಒಂಬತ್ತನ್ನು ಹತ್ತರಿಂದ ಗುಣಿಸಿದರೆ ಬರುವ ಗುಣಲಬ್ಧ; ಹತ್ತು ಕಡಮೆನೂರು: ಅರಕೆಸಿಗಳವಣತ್ತಿ ಆಗಪಳ್ಳಿಟ್ಟಿಟ್ಟು ಪ್ರಸಾದಂಗೆಯ್ದಾರಿದರ್ಕ್ಕೆ ತೊಂಬತ್ತಱುಸಾಸಿರದಾ ಪ್ರಕೃತಿಗಳೆಲ್ಲೋರುಂ (ಎಇ. III, ತಿರುಮ. ೧-೯ : 726): ತೊಂಬತ್ತೊಂಬಯ್‌ಸಾಸಿರದ ಇನ್ನೂಱೆಣ್ಬತ್ತು ನಾಲ್ಕು ವ್ಯಾಧಿಗಳುಂ (ವಡ್ಡಾರಾ. ೯೯-೪) : ಮುಂದೆ ಲಕ್ಷದ ಮೇಲೆ ತೊಂಬತ್ತಾಱುಸಾವಿರ ಶಿವಾಲಯಂಗಳಂ ಮಾಡುತಿಪ್ಪರಂ ಕಂಡು (ಚೂನ್ನಸಂ. ೩೫-೩). **ತೊಂಬತು**: ಲಕ್ಷದ ಮೇಲೆ ತೊಂಬತಾಸರ್ಸಿರ ಮಹಾಜಂಗಮಕ್ಕೆ ಮೃಷ್ಟಾನ್ನಮಂ ದಾಸೋಹಮಂ ಮಾಡುತ (ಚಬಖ. ೩-೬೨). **ತೊಂಭತು**: ಬರಿಸಮಾಱಾಗೆ ಮತ್ತಂ ಶಕಾಬ್ದಂ ವಿಸ್ತಾರಂ ತೊಂಭತೇೞೆಂಭತುಮೆನೆ (ಎಇ. VI, ೨೦೫-೭ : 1057); ತೊಂಭತೊಂಬತ್ತು [ ಪಾಠಾಂ. ತೊಂಬತ್ತೊಂಬತ್ತು ] ಸಹಸ್ರಯೋಜನಗಳಿಂದಂಬರವನು ಮುಟ್ಟುತ್ತ . . . ಮೇರುವಿಂಬಾಗೆ ಲಕ್ಷಯೋಜನದಿ (ಜೀವಂಧಾಂ. ೧-೨೪). **ತೊಂಭತ್ತು** : ಪ್ರಿಥುವೀರಾಜ್ಯಕೆಯೆ ಕಂಭರಸರ್ ತೊಂಭತ್ತಱುಸಾಯಿ × × × (ಎಇ. IV, ಚಗ್ಗಡ. ೯೬-೩; ಸು. 780); ತೊಮ್ಬತ್ತಱುಸಾಸಿವ್ವರ್ರು ಮಯ್ಯಾಮನ್ತರು ... ಇದಕ್ಕೆ ಸಾಕ್ಷಿ (ಎಇ. I, ೨-೯: 887); ತನ್ನೊಡನಾಡಿಗಳಪ್ಪ ತೊಂಭ[ ಪಾಠಾಂ. ಬ]ತ್ತಾಱು ಸಾಸಿರ ಗೋಪಕುಮಾರರೊಡನೆ ಕೂಡಿ (ಚಂಪಧಾ. ೯-೦೨ ವ); ಎಳೆಯೊಳಟ್ಟುದು ಸಾಸಿರಯೋಜನಂ ಗಗನಕ್ಕೆ ತೊಂಭತ್ತೊಂಭಯ್ಸಾಸಿರಂ ಬಳೆದುದು . . . ಮೇರುಮಹೀಧರೇಂದ್ರಂ (ಶಾಂತಿಪು. ೧೦-೬೬): ಅಂತು ತೊಂಭತ್ತ[ ಪಾಠಾಂ. ತ್ತಾ ]ಱುಸಾಸಿರವಂತಃಪುರಂಗಳಿಂ . . . ನೆಱೆದ ಸಾಮ್ರಾಜ್ಯಲಕ್ಷ್ಮೀಗಧಿಪತಿಯಾಗಿ (ಅಜಿಪು. ೧೧-೧ ವ).

**ತೊಂಬದಿಂಬರ್** = ತೊಂಬತ್ತು ಮಂದಿ ; ತೊಂಬತ್ತು ಜನ: ಸಿಂಹಸೇನಂ ಮೊದಲಾಗೆ ತೊಂಬದಿಂಬರ್ ಗಣಧರರುಂ (ಅಜಿಪು. ೮-೨೫ ವ). **ತೊಂಬಯ್ಸಾಸಿರ** = ತೊಂಬತ್ತುಸಾವಿರ : ತೊಂ[ ಪಾಠಾಂ. ಒಂ, ಎಂ] ಬಯ್ಸಾಸಿರ್ವರ್ ನಿಮ್ಮಂಬಿನ ಬಂಬಲೊಳಿ ಮಕುಟಬದ್ಧರ್ ಮಡಿದರ್ (ಚಂಪಧಾ. ೦೦-೨೯); ೞ ಕೇಶಿರಾಜನ ಮೇರೆಗೆ 'ಒಂಬತ್ತು + ಪತ್ತು' ಎನ್ನುವುದಂ ಈ ಶಬ್ದದ ವ್ಯುತ್ಪತ್ತಿ.

[ ದೇ.॥ ತಮಿ. ಮಲ. ತೊಣ್ಣೂಱು ; ಕೊಡ. ತೊಂಬದೀ ; ತೆಲು. ತೊಂಬದಿ, ತೊಂಭೈ ]

**ತೊಂಬರೆ** (ನಾ). ಒಂದೆಡೆ ನಿಲ್ಲದವನು; ಅಲೆದಾಡುವವನು; ಅಲೆಮಾರಿ: ಅಂಬಲಿಯಲ್ಲದೆ ಉಂಬರೆ ಕೂಳಿಲ್ಲ ಕಂಬಳಿಗಳ ಪೊದ್ದಿಹೆವು ... ತೊಂಬರೆ ಬದುಕು ಕೇಳ್ ನಮಗೆ (ಕವಿಚ. II, ೩೮೯ ಪ್ರಸಾದಸಾಂಗತ್ಯ).

[ ದೇ.॥ ತಮಿ. ತೊಮ್ಬರ್ಯ ]

**ತೊಂಬಲ$_1$** 'ತಂಬುಲ' ನೋ.

**ತೊಂಬಲ$_2$** (ನಾ). (ಉಕ) ತೇವ: ಮಳೆಗಾಲದಲ್ಲಿ ಹವೆಯು ತೊಂಬಲವಾಗಿರುತ್ತಿದ್ದರೂ ನೆಲದ ಮೇಲಿನ ನೀರು ಸ್ವಲ್ಪ ಸ್ವಲ್ಪ ಬಾಷ್ಪವಾಗಿ ಹೋಗುತ್ತಿರುತ್ತದೆ (ಮುಂಬಯಿ. ೫-೧೩೮). [ <ತಂಬಲ ]

**ತೊಂಬಲು** 'ತಂಬುಲ' ನೋ.

**ತೊಂಬಾರ$_1$**, ತೊಂಭಾರ (ನಾ). ೧. (ಧಾನ್ಯದ) ರಾಶಿ, -ಗುಂಪು, -ಸಮೂಹ: (?). ೨. ಗುಂಪಿನ ಜನರಿಗಾಗಿ ಮಾಡಿದ ಅಡುಗೆ ; ಸಾಮೂಹಿಕ ಭೋಜನ : ತಂಡದ ಊಟ : ಅವುದೊಂದು ಸಿರಿಗರ ಹೊಡೆದಲ್ಲಿ ಪಾಕಭೇದವಾಗಿ ತೊಂಬಾ[ ಪಾಠಾಂ. ಬ]ರಕ್ಕೆ ಬೇಱೆ ಮಾಡಿದುದು ರಾಜಾನ್ನವು (ಬಸಪು. ೧೧೮-೩೫೫) : ತನ್ನ ಜೊತೆಯಲ್ಲಿಯೇ ಕೂತ ಉಳಿದವರಿಗೆ ತೊಂಬಾರದ ಅಡಿಗೆಯನ್ನು ಮಾಡಿಸಿ ಹಾಕಿಸುತ್ತಿದ್ದನು (ಸೀತಿಚಂ. X, ೦೫) ; ಗುಂಪಿನ ಅಡಿಗೆ, ಅಷ್ಟೇನೂ ಅಚ್ಚುಕಟ್ಟಲ್ಲದ್ದು . . . ತೊಂಬಮಾರ, ತೊಂಬಾರ (ಸಮ್ಮನು. ೧೦೮). **ತೊಂಭಾರ** : ೩. ಆಧಿಕ್ಯ ; ಅತಿಶಯ : ಬಸವೇಶ್ವರದೇವರು . . . ಸರ್ವಾಲಂಕಾರಶೃಂಗಾರದ ತೊಂಭಾರದಿಂದಲಂಕಾರಂಗೊಂಡು (ಯುಚಸೋರ. ೩೦).

[ ದೇ.॥ ತಮಿ. ತೊಮ್ಬರ, ತೊಪ್ಪರ ; ತುಳು. ತೊಂಬರ : ತೆಲು. ತೊಮ್ಮರ ]

**ತೊಂಬಾರ$_2$** (ನಾ). ಭವನ ; ಸೌಧ : ಅಪ್ಪಾಜಯ್ಯನು ತನ್ನ ಸಂಗಡ ಚನ್ನವೀರನನ್ನು ಕರೆದುಕೊಂಡು, ಹಿತ್ತಲ ಬಾಗಿಲಿಗಾಗಿ, ತೊಂಬಾರದ ಹಿಂದುಟ್ಟಿಗಾಗಿ . . . ಕೆರೆಬಾಗಿಲಿಗಾಗಿ ನುಗ್ಗಿ (ರಾಜೇಂದ್ರ. ೨೬೬).

[ ← ತಮಿ. ತೊಮ್ಬಾರ, ತೊಮ್ಬರ, ತೊಪ್ಪಾರ ]

**ತೊಂಬುಪ್ಪೋಯ** (ನಾ). ಒಬ್ಬಾತನ ಹೆಸರು : ತೊಂಬುಪ್ಪೋಯನ ಮಕ್ಕಳ್ ನಾಗಯ್ಯನು ಕೊಣ್ಡಯ್ಯನು (ಎಇ. X, ಕೋಲಾರ. ೯-೪ : ಸು. 925). [ ? ]

**ತೊಂಬೆ$_1$**, ತೆಮ್ಮೆ, ತೆಮ್ಮೆ, ತೊಂಪೆ, ತೊಮ್ಮೆ$_2$, ತೋಮೆ (ನಾ). ೧. ಗೊಂಚಲು ; ಗುಚ್ಛ : "ಮಂಜರಿಯೊಳ್ತೊಂಬೆ ತೊಡಂಬೆ ಜೊಂಪ ಗೊಂಚಲ್ ತಿಳಿಗುಂ" (ಕರ್ಣನಿ. ೦೨) : "ಜೊಂಪಮೆನಲ್ ತೊಂಬೆ" (ಚಕುನಿ. ೯) : ತಳ್ತ ಬಣ್ಣವಣ್ಣದ ಗುಡಿ ತೊಂ[ ಪಾಠಾಂ. ಕೊಂ]ಬೆ ಗೊಂಚ[ಲೆಲೆ]ಯಿಕ್ಕಿದ ಕಾವಣಮಲ್ಲಿಯುಂ ಪೊದೞ್ದವಿರೆ (ಚಂಪಧಾ. ೩-೩೮); ತಳಿರ ತೊಂಬೆಯು ನಲ್ಲಾಡಿ ಹೂಗೊಂಚಲೊಳ್ ಸುಱಿದು (ಅಂಜದ. ೨-೫೦) : ನನೆಗಳಿಂ . . . ತೊಂಬೆಗಳ ಕಾಯ್ಗಳಿಂ (ಜ್ಞಾನಪಂ. ೧-೬೩) : ಹೀರಖಚಿತದ ಬೊಂಬೆ ಚಾರು ಪೂವಿನ ತೊಂಬೆ ತೋರಮುಡಿಯ ವಧೂಟಿ (ಪಂಕರಾ. ೫-೬-೫೭). ೨. ಗುಂಪು : ಸಮೂಹ ; ಸಂದಣಿ ; "ಬಂಬಲ್" (ಚಕುನಿ. ೬. I, ೨೫) : "ದೊಂದಣಿ ತೆರಳ್ಕೆ ನಾಲೊಬ್ಬುಳಿ . . . ಗಡಣಂ ಜಾಳಿಗೆಯುಂ ತೊಂಬೆಯೆನೆ ಶ್ರೇಣಿಕಾಖ್ಯಂ" (ಕಬ್ಬಮುಂ. ೫೫). ೩. ಸಾಲು; ಶ್ರೇಣಿ; ಪಂಕ್ತಿ: "ತೊಂಬೆಯೆನಲಕ್ಕದು ಶ್ರೇಣಿಗೆ" (ಕಕರ. ೪೯). **ತೆಮ್ಮೆ**: ೪. ಹೆಚ್ಚಳ ; ಆಧಿಕ್ಯ ; ಮೇಲ್ಮೆ. "ತೆಮ್ಮಂ ಶ್ರೇಣಿಯೊಳ್ ಪೆರ್ಚುಗೆಯೊಳಪ್ಪುದು" (ಕಕರ. ೪೮). **ತೆಮ್ಮೆ** ; ೨. ತೆಮ್ಮೆ ತೆಮ್ಮೆಯೊಳಿದ್ದು ಸರ್ವರು ಮಾಡಿದ ಸಮ್ಮತಾರ್ಥವನೊಪ್ಪುಗೊಂಡು (ಭರತ. ೬೦-೬೪). **ತೊಂಪೆ**: ೧. ಎದೆಯ ಮೇಲೆ ಬಹುಮಾನಗಳ ತೊಂಪೆಯನ್ನು ನೇತುಹಾಕಿಕೊಂಡಿದ್ದ ವಿಶಾಸೆ ಪೋಲೀಸಿನವನ ಕಡೆಗೆ ತಿರುಗಿ . . . ಆಜ್ಞಾಪಿಸಿದನು (ಪುನರು. ೦೮೮). **ತೊಮ್ಮೆ$_2$** : ೪. 'ತೊಮ್ಮೆವಡೆ' ಪರಾ. **ತೋಮೆ** : ೨. ಮಂದಿಯ ಗೊಂದಳದಂತೆಯುಂ ಅಮ್ಮಾವಿನ ತೋಮೆಯಂತೆಯುಂ . . . ಎತ್ತಲುಂ ಮಿಡುಂಕಲ್ಪಡೆಯದೆ ಸಿಡಿಮಿಡಿಗೊಂಡು (ಪುಷ್ಪಪು. ೩-೧೨೭ ವ).

[ ದೇ.॥ ತಮಿ. ತುಮ್ಪು ; ತೆಲು. ತೊಂಬ, ತೊಪ್ಪ ]

**ತೊಂಬೆ$_2$**, [illegible] (ನಾ). ೧. ಧಾನ್ಯಗಳನ್ನು [illegible] ಬಿದಿರಿನಿಂದ ಹೆಣೆದ ದೊಡ್ಡ ಬುಟ್ಟಿ, -ಗೂಡೆ; ಗಳಗೆ : "[illegible] ಗಳಿಗೆ ತೊಂಬೆಯೆನಿಕ್ಕು" (ಕಬ್ಬಮುಂ. ೧೨೨) : ಸೀರೆಯನ್ನು [illegible]

ತೆಗೆದು ಹತ್ತಿರದಲ್ಲಿದ್ದ ಆರೆ ತುಂಬಿದ ಭತ್ತದ ತೊಂಬೆಯೊಳಕ್ಕೆ ಹಾಕಿದ (ನಿಶಲು. ೨೬೪) ; ತೀರಿಲ್ಲ ತಿಟುವಟವಿಲ್ಲ ಜಂಭ ಮಾತ್ರ ತೊಂಬೇ, ಅಷ್ಟು (ಗಾದ). ೨. ಹೊಟ್ಟೆ ; ಉದರ : ತೋಕಿನ ನಳಿಗೆಯಿಂದ ಹಾರಿದ ಬಿಡಿ ಕಿರುಬನ ಪಕ್ಕೆಗೆ ತಗಲಿ ಅದರ ತೊಂಬೆಯನ್ನು ಸೀಳಿತು (ಹುಲಿಹಾ. ೧೦೦). 'ತೊಪ್ಪೆ$_1$' ಪರಾ. ಟೊಮ್ಮೆ: ೧. ಮಿಟ್ಟಮಿಟ್ಟನೆ ಮಿಡುಕೆ ಟೊಮ್ಮೆಯ ಪೊಟ್ಟು ತವುದಂ ಕರ್ಚಿ (ಮದೇಪು. ೫-೩೪). ತುಪ್ಪೆ : ೩. ಧಾನ್ಯದ ರಾಶಿ,-ಸಂಗ್ರಹ : ಕಾಳಿನ ಗುಡ್ಡೆ : ನೂರು ಮುಡಿ ಭತ್ತ ಆ ಬಾಕಿ ಮಾರಿನಿಂದ ಪ್ರತಿವರುಷ ಭಟ್ಟರ ಮನೆಯ 'ತುಪ್ಪೆ'ಯಲ್ಲಿ ಬಿದ್ದೇ ತೀರುತ್ತದೆಂದರೆ ಅಚ್ಚರಿಪಡಬೇಕಾಗಿಲ್ಲ (ದಂಬನಾ. ೧೨).

[ ದೇ. ತಮಿ. ತೊಪ್ಪೈ, ತೊಪ್ಪೈ : ತುಳು. ತುಪ್ಪೆ ]

**ತೊಂಬೆಗಡುಕು** (ನಾ). ಗೊಂಚಲಿನಂತಿರುವ, ಕಿವಿಯಲ್ಲಿ ಧರಿಸುವ ಒಂದು ಬಗೆಯ ಆಭರಣ: ಹಸ್ತಕಡಗದ ನೀಲಮುತ್ತಿನ ತೊಂಬೆಗಡುಕಿನ ಕೊರಳ ದಾರಗಳ...ಧರಿಸಿ (ಬಸಪು. ೬೧-೨೭) : ಒಡನೆ ಕಿವಿಯೊಳೊಪ್ಪುವ ತೊಂಬೆಗಡುಕಿನ ಕಡುಚೆಲ್ವ . . . ಕೊಡಗಿತಿಯರು ರಾಜಿಸಿದರು (ಕಂಸವಿ. ೨೦-೮೬). [ ತೊಂಬೆ$_1$ + ಕಡುಕು$_3$ ]

**ತೊಂಭತು** 'ತೊಂಬತ್ತು' ನೋ.

**ತೊಂಭತ್ತು** 'ತೊಂಬತ್ತು' ನೋ.

**ತೊಂಭಾರ** 'ತೊಂಬಾರ$_1$' ನೋ.

**ತೊಕಡಕನ ಮರ** (ನಾ). ಒಂದು ಬಗೆಯ ಮರ : ಪೇನಾರಿಮರ, ಪೀನಾರಿ, ಪಾತಾಳಮರ, ಭೇತಾಳ, ತೊಕಡಕನ ಮರ, ಭಾಕಾಳ (ವ್ಯುಜಿಗ. ೬೨-೧೪೬೨). [ ? + ಮರ$_1$ ]

**ತೊಕ್ಕಡ** (ನಾ). (?) : ಚೊಕ್ಕವಲ್ಲಿಗಳು ದಟ್ಟ ಸಣ್ಣವು ವುಕ್ಕ ನವರಸ ಲಗ್ಗೆಯೆಂಬುದು ತೊಕ್ಕಡವು ತಾನಾದ ದಂತವು ಕ್ಷತಕೆ ಅದು ಹಿತವು (ಕಕೋಶ. ೧೦-೧೭). [ ? ]

**ತೊಕ್ಕಲು** (ನಾ). ಒಂದು ಬಗೆಯ ವ್ಯಂಜನಪದಾರ್ಥ : ಅವನಿಗೆ ಮಜ್ಜಿಗಂಬರ . . . ಮಸೊಪ್ಪು, ತೊಕ್ಕಲು, ಒಂದೆಸರು – ಇವು ಸುತರಾಂ ಬೇಕಿಲ್ಲ (ನನ್ನೂರು. ೫೭). [ < ತೊಕ್ಕು$_1$ ]

**ತೊಕ್ಕಸ** (ನಾ). ಮಲ್ಲಯುದ್ಧದ ಒಂದು ವರಸೆ (?) : ಸಂದ ತೊ[ಪಾಠಾಂ. ಕೊ]ಕ್ಕಸ ಗುಂಡು ಗೋಣಿಯ ಮಿಂದೆಪಟ್ಟಸು ಚೇಣಪಟ್ಟಸುವೆಂದೆನಿಪ ಮಿಂದಾಣದಲಿ ಕಾದಿದರು ಜಟ್ಟಿಗಳು (ಸಾಳ್ವಭಾ. ೨೨-೬೨).

[ ? ]

**ತೊಕ್ಕು$_1$** (ನಾ). ಹುಣಿಸೆಕಾಯಿ, ನೆಲ್ಲಿಕಾಯಿ, ಮಾವಿನಕಾಯಿ ಮೊದಲಾದುವುಗಳು ಬಲಿತ ಮೇಲೆ ಹದಗೊಳಿಸಿ ಮಾಡುವ (ಚಟ್ನಿಯಂಥ) ಒಂದು ಬಗೆಯ ವ್ಯಂಜನಪದಾರ್ಥ : ಹುಣಿಸೆಕಾಯಿ ತೊಕ್ಕು ರುಚಿಯಾಗಿರುತ್ತದೆ (ರೂಢಿ). [ ದೇ. ತಮಿ. ತೆಲು. ತೊಕ್ಕು ]

**ತೊಕ್ಕು$_2$** (ನಾ). ೧. ತೊಗಲು ; ಚರ್ಮ : "ತೊಕ್ಕು (ತೊಗೆ)–ತ್ವಕ್ (–ಚ್)" (ತದ್ಭಕೋ. ೧೮): ನಯನ ಕರ್ಣ ನಾಸಾ ರಸನೆ ತೊಕ್ಕು ಮನವೆಂಬ ಕರಗಳೊಳು ಬಿಡದರ್ಪಿಪಂ (ಸಿದ್ಧೇಪು. ೨೩-೫೦): ತ್ವಕ್ಕಿಂಗೆ ತೊಕ್ಕು ನೇತ್ರಕೆ ನೇತ್ರವು . . . ಆಗಿಹುದು ಲಿಂಗಮುಖವು (ಚಬಪು. ೬೧-೪೫) : ಪ್ರತಿನಿತ್ಯವೂ ಮೈ ತಿಕ್ಕಿಸಿ ಅಥವಾ ಒಸಿಕಿಸಿಕೊಂಡಲ್ಲಿ . . . ತೊಕ್ಕು ಬಲಿತು, ಸಂದುಗಳಲ್ಲಿ ತ್ರಾಣವು ಹುಟ್ಟಿ (ಸಕವ್ಯ. ೩೦). ೨. ತೊಗಟೆ ; ಸಿಪ್ಪೆ : ನೀರುಳ್ಳಿ ಹಸಿಯಲ್ಲಮಂ ತೊಕ್ಕ ತೆಗೆದಗುಳ ತೋರದೊಳು ಕತ್ತರಿಸಿ (ಸೂಪಶಾ. ೩-೨೫) : ಪರಿಶುದ್ಧಮಾಗಿರ್ಪ ಪಾಲ್ಮರಗಳ ತೊಕ್ಕನಿರದೆತ್ತಿ ಕಾಸಿದ ಜಲವ (ಚಂಪ್ರಸಾಂ. ೧೪-೪೨) ; ಅಂಬಟೆಯ ತೊಕ್ಕು . . . ಹುಣಿಸೇಮೂಲದ ತೊಕ್ಕು . . . ಇವರ ಕಷಾಯ ಶ್ಲೇಷ್ಮಾತಿಸಾರ ಮೊದಲಾದ ಹೊಟ್ಟೆಯ ಬೇನೆಯ ಪರಿಹರಿಸುವುದು (ವೃದ್ಯಸಾ. I, ೨೧೨). ೩. ಚೆಕ್ಕೆ : ಗಂಧ ಲವಂಗದ ತೊಕ್ಕು (ಅಕಾನಿ. ೮-೬). ೪. ಚರ್ಮದ ಹೊದಿಕೆ : ಇಕ್ಕಿದ ಪಕ್ಕರಕ್ಕೆ ನಿಡುರ್ಝುಲ್ಲಿ . . . ದಿಟ್ಟಸರ ಪೊಂಬಲೆಗಳ್ ಮೊಗರಂಬಮೊಂದು ಪೊಂಬಕ್ಕಿಯ ತೊಕ್ಕು ಮಯ್ಗರೆಯೆ ಬಾಸಿಗದಿಂ ಮೆಱೆದತ್ತು ಸಪ್ತಿಗಳ್ (ಚಕವಿ. ೨-೯೬). ೫. ಸೋಂಕು ; ಸಂಸರ್ಗ : ಮೂತ್ರ ಮಲ ಮಾಂಸ ರಕ್ತಂಗಳೊಳಗಿಕ್ಕುಮೇ ಶಿವಮೂರ್ತಿಯೆನ್ನುದರದೊಳಗವಱ ತೊಕ್ಕಿಲ್ಲಮೆನೆ (ಚಬಪು. ೪-೨೭). 'ತ್ವಕ್ಕು' ಪರಾ.

[ ಸಂ. ತ್ವಚ್ ]

**ತೊಗಟು**, ತೊಗಟೆ, ತೊಗಡಂ, ತೊಪ್ಪಟೆ, ತೊಪ್ಪಡೆ, ತೊಬಟೆ, ತೊವಟೆ, ತೊವಡು, ತೋಟೆ$_1$ (ನಾ). ಹಣ್ಣು, ಕಾಯಿ, ದ್ವಿದಳ ಧಾನ್ಯ ಇತ್ಯಾದಿಗಳ ಗಟ್ಟಿಯಾದ ಮೇಲುಹೊದಿಕೆ,–ಸಿಪ್ಪೆ : ತೊಗಟ ನೊಳಗಣ ಬೀಜ ಬೀಜದೊಳಗಣ ಅಂಕುರ (ಸರ್ವವ. ೦೦೯-೫೮೪) : ತಱಿದರೆಯು ಪರ್ಣಗಳ ಕಾಷ್ಟಕೆ ಮುಱಿದರಾ ಶಾಖೆಗಳ ರೋಗಕೆ ಕೊಱೆದರೆಯು ಬೇರುಗಳ ನಾರಿಗೆ ಸುಗಿದರೆಯು ತೊಗಟ ತರು ತನುವ ತೆಱುವಂತೆ (ನಿಭಾಗ. ೧೦-೦೩-೨೪) ; ಹಣ್ಣಿನ ಒಳಗೆ ನಾಲ್ಕು ರಸವು ಐದು ದೊಡ್ಡಹರೆ ಕಾಣಪ್ಪ ಆಱು ಬಗೆಯ ಸ್ವರೂಪ ಕೇಳು ಏಳು ಬಗೆಯ ತೊಗಟುಂಟಣ್ಣ (ಪುರಂದ. ೧-೧೮೦-೫). **ತೊಗಟೆ:** ಕಮಲಮುಖಿ ನಾರಿನಾ ತೊಗಟೆಯನು ಕೊಳ್ಳೆ (ಶರಲೀ. ೨೦೮-೧೪) : ಮಾವಾಳದ ತೊಗಟೆ (ಟ)ಯು ಕಹಿ, ಒಗರು (ಅಷ್ಟಾಂಗ. ೧೪೮) ; ತೊಗಲುಬಾವಲಿ ಮರದ ಜೋಲು ತೊಗಟೆ (ನವ್ಯಧ್ಯ. ೮೬-೩). **ತೊಗಡು :** ತೊಗಡುಗಳೆದೆಳ್ಳುಗಳ ಕೇದಗೆಯಿಂ ವಾಸಿಸಿ (ಲೋಕೋಪ. ೬-೨೩). **ತೊಪ್ಪಟೆ :** ಅವರೆಬೇರಿನ ತೊಪ್ಪಟೆಯನು ೧ ಮೊರದಷ್ಟು ಪರವಿಯಲ್ಲಿ ಹಾಕಿ ನೀರ ಹೊಯ್ದು . . . ಇರಿಸಿಕೊಂಡಿರಲು ಆ ನೀರು ಮಂದವಾಗುವುದು (ಸಕವ್ಯ. ೩೮೩). **ತೊಪ್ಪಡೆ :** ಉಲಗನ ಬೇರಿನ ತೊಪ್ಪಡೆ, ಬೇವಿನ ಬೇರಿನ ತೊಪ್ಪಡೆ ... ಮೊಳಗದ ಬೇರಿನ ತಿಗಡು ಇವಂ ಸಮಾನಂಗೊಂಡು ಚೂರ್ಣಮಂ ಮಾಡಿ (ವಿಷ್ಯವಿ. ೯೯). **ತೊಬಟೆ :** ಸುಟ್ಟ ಬಾಳೆಯ ಕಾಯ ಸೀದ ತೊಬಟೆಯ ತೆಗೆದು ಒಳಗಣ ತಿರುಳ ತೆಗೆದು (ಭೀಮಸೂ. ೪೨). **ತೊವಟೆ :** ಚೆಕ್ಕು = ತೊವಟೆ (ಕಾಶಕ್ಕ. ೯೦). **ತೊವಡು :** ಗಿಡುಕಳ್ಳಿಯ ತೊವಡು ಕಟ್ಟೆ ನಿರ್ವಿಷಮುಕ್ಕುಂ (ಖಮದ. ೧೬-೬೯). **ತೋಟೆ$_1$ :** ಬಾಳೆಯ ಹಣ್ಣಿನ ತೋಟೆಯ ಸುಲಿದು ನೋಡಿದರೆಯೂ ಮೃದುವಾಗಿ ತೋಱುವುದಲ್ಲದೆ ಕಠಿಣವಾಗಿ ತೋಱದೆಂಬ ಹಾಗೆ (ವಚಶಾ. I, ೧೯೩) : ಕೆಲವು ಗಿಡಗಳ ತೋಟೆಗಳಿಂದ ಸಹ ಕಾಗದ ಮಾಡುವುದುಂಟು (ಮುಂಬಯಿ. ೧-೨೪). 'ತಿಗಂಡಂ$_1$' ಪರಾ.

**ತೊಗಟೆ** 'ತೊಗಟು' ನೋ.

**ತೊಗಡು** 'ತೊಗಟು' ನೋ.

**ತೊಗರ್** 'ತೊವರ್$_2$' ನೋ.

**ತೊಗರ$_1$** (ನಾ). ಕೆಂಬಣ್ಣದ ಒಂದು ಬಗೆಯ ಬೇಟೆಯ ನಾಯಿ : ಪಣಕುಲಕ್ಕೆ ಚಂಚುವಾಲಂ ದಣಿದಿರ್ದ ಕೊಂಡಗುಱಿಗೀ ತೊಗರಂ ರುರು ಸಂಕುಳಕ್ಕೆ ಜೂಗಂ ದಿಟಮಲ್ತು ಮಾರಿ (ದಶಕು. ೨-೦೦೯) : ತರಪೇಟ್ ಸಾಳುವವೇಗನಂ ತೊಗರನಂ ಪೆಗ್ಗಾಳನಂ ಜೂಗನಂ (ನೇಚಂ. ೬೬).

[ ತೊಗರು$_1$ + – ಅ$_7$ ]

**ತೊಗರ$_2$** (ನಾ). ಒಂದು ವಂಶದ ಹೆಸರು (?) : ಮಣಿಗಾಱ ನಾಗಿಸೆಟ್ಟಿಯುಂ ತೊಗರ ಮಾಚಿಸೆಟ್ಟಿಯುಂ ಮಿಂದಗುದ್ದಲಿ ನಾಮಿಸೆಟ್ಟಿಯುಂ ... ಕೊಟ್ಟ ಕೆಯಿ ಕಂಮ್ಮವಯ್ವತ್ತು (ಎಕ. VII, ಶಿಕಾರಿ. ೧೦೬-೩೭ :1098).

[ ? ]

**ತೊಗರತ್ತಿ** (ನಾ). ಒಂದು ಬಗೆಯ ಸಸ್ಯ: ತೊಗರತ್ತಿ, ಸಿಡಿಸಾಲೆ (ವ್ಯುಜಿಗ. ೫-೬೪). [ ? ]

**ತೊಗರಿ$_1$** 'ತೊವರಿ' ನೋ.

**ತೊಗರಿ$_2$** 'ತೊವರ್$_2$' ನೋ.

**ತೊಗರು$_1$, ಚೊಗರು$_2$** (ನಾ). ೧. ಕೆಂಪುಬಣ್ಣ ; ಅರುಣವರ್ಣ: ತೊಗರು ವಿಗಿಲಪ್ಪ ಬಣ್ಣವುಂ ಸಮನಿಪ ಗಂಧವಸ್ತುಗಳನಾದರದಿಂ ಒಡಿದು (ಅಟ್ಟಮ. ೬-೪೦). **ಚೊಗರು$_2$:** ೨. ಹಸಿಅಡಕೆಯನ್ನು ಬೇಯಿಸಿದಾಗ ಅದಕ್ಕೆ ಬಣ್ಣ ಬರಲು ಬೆರೆಸುವ ಒಂದು ಬಗೆಯ ಕೆಂಪುದ್ರವ; P ಇದನ್ನು ನೇರಿಲೆಚಕ್ಕೆ, ರತ್ನಹೊನ್ನೆಗಿಡದ ಚಕ್ಕೆ ಮುಂತಾದುವುಗಳಿಂದ ತಯಾರಿಸುತ್ತಾರೆ: ನಾನೇ ತ್ವಾಟದಾಗೆ ಕದರಡಿಕೆ ಹೆರಕಿ, ಸುಲಿದು, ಚೊಗರು ಹಾಕಿ ಬೇಯಿಸಿ ಮಾಡಿದ್ದು (ಮರಿನು. ೪೩೮). 'ತೊಗರು ಕಷಾಯಂ' ಪರಾ. [ ದೇ.॥ ತೆಲು. ತೊಗರು, ತೊವರು ]

**ತೊಗರು$_2$** 'ತೊವರ್$_2$' ನೋ.

**ತೊಗರುಕಷಾಯ** (ನಾ). ಹಸಿ ಅಡಕೆಯನ್ನು ಬೇಯಿಸಿದಾಗ ಅದಕ್ಕೆ ಬಣ್ಣ ಬರಲು ಬೆರೆಸುವ ಒಂದು ಬಗೆಯ ಕೆಂಪುದ್ರವ,-ಕಷಾಯ: ಮೊದಲೇ ಸಿದ್ಧಮಾಡಿ ಇಟ್ಟುಕೊಂಡಿದ್ದ ಅಡಿಕೆ ತೊಗರುಕಷಾಯವನ್ನು ಸೀಸೆಯಲ್ಲಿ ತುಂಬಿಕೊಂಡು ನಡೆದುಕೊಂಡೇ ಹೋದರು (ಕೊನಪ್ಪ. ೧೧೬). [ ತೊಗರು$_1$ + ಕಷಾಯ ]

**ತೊಗರೆಳೆ** (ನಾ). ಕೆಂಪುಬಣ್ಣದ ಎಳೆ: ಕಾಂತೆಯುಟ್ಟುದು ಬಿಳಿದು ತೊಗರೆಳೆಯದು (ವೀರಶೃ. ೪-೨೧-೫). [ತೊಗರು$_1$+ಎಳೆ$_2$ (<ಎಟು$^3_2$)]

**ತೊಗಲ್** 'ತೋಲ್$_1$' ನೋ.

**ತೊಗಲು** 'ತೋಲ್$_1$' ನೋ.

**ತೊಗಲುಗೊಂಬೆ** (ನಾ). ಚರ್ಮದಿಂದ ಮಾಡಿದ ಬೊಂಬೆ ; ಚಕ್ಕಳ ಗೊಂಬೆ: ಈ ಅವಧಿಯಲ್ಲಿ ಯಕ್ಷಗಾನ ಆಟಕ್ಕೆ ಸಂಬಂಧಿಸಿದ ಬೊಂಬೆ, ತೊಗಲುಗೊಂಬೆಗಳ ಚಿತ್ರವೂ ಬೇಕೆನಿಸಿತು (ಯಕ್ಷಬ. IV, ಮುನ್ನುಡಿ) ; ನೆರೆಕೆರೆಯ ಕೇರಳ, ಆಂಧ್ರದೇಶಗಳಲ್ಲೂ ಇದೇ ಬಗೆಯಲ್ಲಿ ತೊಗಲು ಗೊಂಬೆ ಆಡಿಸುವವರಿದ್ದಾರೆ (ಯಕ್ಷಬ. ೧೫೦).

**ತೊಗಲುಗೊಂಬೆ ಆಟ** = ಚರ್ಮದಿಂದ ಮಾಡಿದ ಬೊಂಬೆಗಳ ಸಹಾಯದಿಂದ ತೋರಿಸುವ ಆಟ,-ಮನರಂಜನೆ: ಜಾನಪದಕಲಾ ಮೇಳದಲ್ಲಿ ತೊಗಲುಗೊಂಬೆ ಆಟ ಬಹಳ ಆಕರ್ಷಕವಾಗಿತ್ತು (ರೂಢಿ).
[ ತೊಗಲು (<ತೋಲ್$_1$) + ಗೊಂಬೆ$_1$ ]

**ತೊಗಲುಡೆ** 'ತೋಲುಡೆ' ನೋ.

**ತೊಗಲುಪಟ್ಟೆ** (ನಾ). ಚರ್ಮದ ಪಟ್ಟೆ: ನಾಯಿಯ ಕೊರಳಿಗೆ ತೊಗಲು ಪಟ್ಟೆ ಕಟ್ಟಿದ್ದಾರೆ (ರೂಢಿ). [ ತೊಗಲು (<ತೋಲ್$_1$) + ಪಟ್ಟೆ$_2$ ]

**ತೊಗಲುಪೆಟ್ಟಿಗೆ** (ನಾ). ಚರ್ಮದಿಂದ ತಯಾರಿಸಿದ ಪೆಟ್ಟಿಗೆ: ಕನ್ನಡಿ ಯಿದ್ದ ಮೇಜಿನ ಮೇಲೆ ತೆರೆದಿದ್ದ ತೊಗಲುಪೆಟ್ಟಿಗೆಯಿತ್ತು (ಪುನರು. ೨೬೬). [ ತೊಗಲು (<ತೋಲ್$_1$) + ಪೆಟ್ಟಿಗೆ ]

**ತೊಗಲುಬಾವಲಿ** 'ತೋಲ್ವಾವಲ್' ನೋ.

**ತೊಗಲುಬೊಂಬೆ** (ನಾ). = ತೊಗಲುಗೊಂಬೆ: ತೊಗಲುಬೊಂಬೆಗಳಂತೆ ನಾಲುಕುಬಗೆಯ ನಿರ್ಮಾಣದಲಿ . . . ಬಗೆಬಗೆಯ ನಾಮಾಂಕಿತದ ಜೀವಿ ಗಳಿವೆಲ್ಲವು ನಿನ್ನ ನಾಮದಿ ಜಗಕೆ ತೋಱುತ್ತಿಹುದು (ಹರಿಸಾ. ೮೪).
[ ತೊಗಲು (<ತೋಲ್$_1$) + ಬೊಂಬೆ ]

**ತೊಗಲುಹಕ್ಕಿ** (ನಾ). ಒಂದು ಬಗೆಯ ಪಕ್ಷಿ ; ತೊಗಲುಬಾವಲಿ: ಲಿಂಗ ಯೋನಿಗಳ ತಂಡ, ತೊಗಲುಹಕ್ಕಿಗಳ ಹಿಂಡದಿನ್ನು, ಸುತ್ತುಗಟ್ಟಿರಲು (ಚಿಂತನ. ೫೪-೨೨). [ ತೊಗಲು (<ತೋಲ್$_1$) + ಹಕ್ಕಿ$_1$ (<ಪಕ್ಕಿ$_1$) ]

**ತೊಗಲ್ವೇಱು** (ನಾ). ಚರ್ಮದ ಚೀಲ: ತಿತ್ತಿ ಸಿದ್ಧಿಗೆ ತೊಗ [ಪಾಠಾಂ. ವ]ಲ್ವೇಱುನೊಳಗೆ ಬಂದತ್ತು ಗಂಗಾಸಾಗರವು (ಭರಾಸಾಂ. ೧೯-೧೧). [ ತೊಗಲ್ (< ತೋಲ್$_1$) + ವೇಱು$_3$ ]

**ತೊಗೆ$_1$** 'ತೊವ್ವೆ' ನೋ.

**ತೊಗೆ$_2$**(ನಾ). (?): ಸ್ವಯಂಬುವದೇವರ್ಗ್ಗೆ ದತ್ತಿದೆಗಾಗಂಡ ಪಡುಪಕ್ಕೆ ಬಿತೊಗೆ (ಮೈಆರಿ. ೧೯೪೬, ೧೦-೧೫ ; ಸು. 15 ನೆಯ ಶ೩). [ ? ]

**ತೊಟ್** (ನಾ). ಒಂದು ಅನುಕರಣಶಬ್ದ: ಖಲನಾಕಾಶಕ್ಕೆ ತೊಟ್ಟೆಂದೊ ಗೆದಂ (ಜಗವಿ. ೧೫-೨).

**ತೊಟ್ಟೆನಲ್** = ಇದ್ದಕ್ಕಿದಂತೆ ; ತಟ್ಟನೆ: ಈ ಮಹಾತ್ಮನಂ ತೊಟ್ಟೆನ ಲಿಂತು ದೇವ ಯುವರಾಜನನೀ ತೆಱದಿ ಪೆಸರ್ವುದೇ (ಕಾದಂಬ. ೪೭೯) ; ವಸುಧಾರಮಣೇರಮಣಂಗೆ ತೊಟ್ಟೆನಲ್ ಪುಟ್ಟಿಸಿದತ್ತು ಮೆಯ್ಯ ವಿರ್ಗಳಂ ರಘುವೀರವಚಸ್ಸುಧಾರಸಂ (ಪಂರಾಮಾ. ೭-೭೦).

**ತೊಟ** (ನಾ). ಒಂದು ಅನುಕರಣ ಶಬ್ದ. 'ತೊಟಗುಟ್ಟು' ಪರಾ.

**ತೊಟಕಿಕ್ಕು** (ಕ್ರಿ). ಹನಿಹನಿಯಾಗಿ ಬೀಳು ; ಒಸರು ; ತೊಟ್ಟಿಕ್ಕು: ಕಾವ್ಯಸುಧೆಯು ತೊಟಕಿಕ್ಕುತಿಹುದು ರಸಪಾನಕಾಗಿ ರಸಿಕ (ಚಂದ್ರಮಾ. ೧೬-೧೩). [ ತೊಟಕು$_1$ ( < ತಟಕು$_1$) + ಇಕ್ಕು ]

**ತೊಟಕು$_1$** 'ತಟಕು$_1$' ನೋ.

**ತೊಟಕು$_2$** 'ತಟಕು$_2$' ನೋ.

**ತೊಟಕುಹನಿ** 'ತಟಕುಹನಿ' ನೋ.

**ತೊಟಗುಟ್ಟು** (ಕ್ರಿ). ಹನಿಹನಿಯಾಗಿಬೀಳು ; ತೊಟ್ಟಿಕ್ಕು: ಎದ್ದವರು ಗೆದ್ದವರು ಬಾಂದುಂಬ ಕಾಣುವರು ಚುಕ್ಕಿ ತೊಟಗುಟ್ಟುತಿಹ ಬೆಳಕು, ಜೇನು (ಸೂರ್ಯಪಾ. ೨೬-೮). [ ತೊಟ + ಕುಟ್ಟು$_1$ ]

**ತೊಟ್ಟ** 'ತೊಡು$_1$' ಪರಾ.

**ತೊಟ್ಟಗೆ** (ಅ). ೧. ಕೂಡಲೆ ; ಬೇಗನೆ ; ತಟ್ಟನೆ ; ಶೀಘ್ರವಾಗಿ: ಕುರುಕುಳಪ್ರಖ್ಯಾತನಂ ಕಾದಿ ತೊಟ್ಟಗೆ ಗೋವ್ರಂದಮನಾಂ ಮಗುಟ್ಚಿ ದಪೆಂ (ಪಂಪಭಾ. ೮-೧೦೩) ; ಮಚ್ಚಿ ಮತ್ಪರಿಚಯಕ್ಕಾದಂ ಮಹಾಶ್ವೇತೆ ತೊಟ್ಟಗೆ ತನ್ನಂ ತನುವಿಂದೆ ಪತ್ತುವಿಡಲಲ್ತೇ ಪಿಂದೆ (ಕಾದಂಬ. ೩೭೮) ; ತೊಟ್ಟಗೆ ಕೊಳೆ ಮೇಲೆವಾಯ್ದು ಮಹಿಷಾಸುರನಂ ತವೆ ಕೊಂದಳ್ (ಛಂದೋಂಬು. ೧-೪) : ತನ್ನಯ ಸೂಚಿಯಾನೆ ತೊಟ್ಟಗೆ ಸಮರಾಗ್ರದೊ ಳ್ಪರಿಯೆ (ಗದಾಯು. ೧-೧೬); ತೊಟ್ಟಗೆ ತದ್ಗ್ರಾ [ಪಾಠಾಂ. ದ್ವಾ] ಹಮುಮಂ ಗಜೇಂದ್ರಮುಮನೋರ್ತ್ತಂಬಿನಂ ತುತ್ತಿ . . . ಪಾಱಿ ಸುರ ರಾಜಾವಾಸಮಂ ಮುಟ್ಟಿದಂ (ಕಾವ್ಯಾವ. ೫೯). ೨. ಒಮ್ಮಿಂದೊಮ್ಮೆ ; ಇದ್ದಕ್ಕಿದ್ದಂತೆ; ಹಠಾತ್ತಾಗಿ: ಸಿಂಧುದೇಶಾಧೀಶ್ವರಂ . . . ಮೃಗಯಾ ಕ್ರೀಡೆಗೆ ಪಾಂಡುರಾಜತನಯರ್ ಪೋಪನ್ನೆಗಂ ಬಂದು ತೊಟ್ಟಗೆ ಪಾಂಚಾಳಿಯನೆತ್ತಿ ತನ್ನ ರಥದೊಳ್ ತಂದಿಟ್ಟುಕೊಂಡುಯ್ದಂ (ಪಂಪಭಾ. ೭-೩೧) : ಒರ್ವ ವನಚರಂ ಮಹಾವನದೊಳ್ ವನದಂತಿಯಂ ಕಂಡ ನಿಮಿತ್ತಂ ಕೊಂದು ನಿಂದಿರ್ಪನಮೊಂದು ಮಹಾಹಿ ತೊಟ್ಟಗೆ ಬರೆ (ಪಂಚತಂ. ೩೦೧-೧೯) ; ಜನಪದದೊಳ್ ತೊಟ್ಟಗೆ ಕಿರ್ಚು ನಂದೆ ಮೇಣ್ ಪುಳ್ಳಿಯಿಲ್ಲ ದಾರಿಯಾತ್ತಿರೆ. . . ದೇಶಂ ಕಿಡುಗುಂ (ಲೋಕೋಪ. ೪-೯೪) ; ನಾಯ್ಸುಗ ದೆಡೆಯಲ್ಲಮಂ ಪುಗಿಸಿ ಬಯ್ಕದ ಭಾಜನಮಾಗೆ ಮಾಡಿ ತೊಟ್ಟಗೆ ವಿಘು ಸಾಯೆ (ಸುಕುಮಾ. ೨-೬೩). [ ತೊಟ್ + - ಅಗೆ$_3$ ]

**ತೊಟ್ಟನೆ** (ಅ). ೧. ಕೂಡಲೇ ; ಬೇಗನೆ: ತೊಟ್ಟನೆ ಸರ್ವಾಂಗಮಲಧಾರಿ ಗಳೊಂದು ಶಿಲಾತಳದ ಮೇಗಿರ್ದು . . . ಸ್ವಾಧ್ಯಾಯದೊಳ್ ತಗುಳ್ದಿ ರ್ದೊರಂ . . . ಕಂಡು (ವಡ್ಡಾರಾ. ೯೬-೨) : ಭವಪ್ರತ್ಯಯಜ್ಞಾನ ತೊಟ್ಟನೆ ಪುಟ್ಟೆ (ಆದಿಪು. ೨-೬೬) ; ಶಿವಭೂತಿಗೆ ತೊಟ್ಟನೆ ಬಗೆದನಹಿತಮಂ ತದ್ವನಚರಂ (ಪಂಚತಂ. ೧೧೨-೧೦) : ಭವಸ್ಮರಣೆ ತೊಟ್ಟನೆ ಪುಟ್ಟೆ (ಮಲ್ಲಿಪು. ೪-೨೩) : ನೆಗಳ್ದ ನೇತ್ರಜ್ವಾಲೆಯಿಂ ತೊಟ್ಟನೋವದೆ ಸುಟ್ಟಂ ಮದನಾರಿ (ಪಂಪಾಶ. ೪೦). ೨. ಇದ್ದಕ್ಕಿದ್ದಂತೆ ; ಹಠಾತ್ತಾಗಿ: ಆ ನರಕಾಂತಕ ನೀಕೆಗಂಡು ತೊಟ್ಟನೆ ನಿಜಲಕ್ಷ್ಮಿಯಂ ಮಱೆದಂ (ಪಂಪಭಾ. ೪-೮೫) :

ರಸೆಯಿಂ ಕಾಲಾಗ್ನಿರುದ್ರಂ ಪೂಜಿಸುತ್ತುವವೊಲಂತಾ ಸರೋವರಮಧ್ಯದಿಂ ಸಾಹಸಗರ್ವಾಲಂಕೃತಂ ತೊಟ್ಟನೆ ಕೊಳೆ ಪೊಱವಂಟ್ಟು (ಗದಾಯು. ೭-೩೦); ಮರಣಭ್ರಾಂತಿಯುಂ ಚಿಂತಿಸಿ ಬರುತ್ತುಂ ತೊಟ್ಟನೆ ಮುಂದಿರ್ದ ಪುರಾಣ ಕೂಪಮುಂ ಕಂಡು (ಪಂಚತಂ. ೮೮-೨೦) : ಒಂದು ದಿವಸಂ ವಿಶ್ವಂಧರ ಮಹಾರಾಜಂ . . . ಪೊನ್ನುಯ್ಯಲನಾಡುವ ಸುಬಂಧುಶ್ರೀಯುಂ ತೊಟ್ಟನೆ ಕಾಣ್ಬುದುಂ (ಧರ್ಮಾಮೃ. ೧೦-೨೮) ; ತೊಟ್ಟನೆ ಸಾವುದೊಳ್ಳಿತು ತೊಡಂಕದೆ ಕಾಮನ ಡಾಮರಂಗಳೊಳ್ (ಚಂದ್ರಪು. ೮-೬೬) : ತೊಟ್ಟನೆ ಸಿಂತು ಕಣ್ ನೋಡದದೆ ಹುಣ್ಣ ನೋಡದದೆ ಪೋಗೆಂಬರೆ (ಬಸರ. ೪-೨೮); ಒಟ್ಟೆ ಲುಲಾಯ ಗರ್ದಭ ರಥಂಗಳನೇಱಿದವಂ . . . ನಟ್ಟ ವಿಲೋಚನಂ ಗಳೊಳೆ ಮೇಗನೆ ನೋಡುತುಮಿರ್ಪ ಮಾನಿಸಂ ತೊಟ್ಟನೆ ಬಂದು ಪೇಟಲ ಶುಭಂ (ಖಮುದ. ೩-೩೬). ೩. ಸುಮ್ಮನೆ ; ವ್ಯರ್ಥವಾಗಿ : ನಿನಗೆ ಪತಿ ಪಾಶುಪತಿ ಇರೆ ತೊಟ್ಟನೆ ಪಶುಗಳಂ ಕೊಲುವ ಮೆಲುವ ಕುಮನದ ಪಶುಕರ್ಮಿಗಳ ದುಃಕರ್ಮಂಗಳೊಳಗಿರಲು(ಬಸಪು. ೭೦-೪೦) ; ರಾಜಬೀದಿ ಯೊಳಗಟ್ಟಪಾಸದ ಬಟ್ಟಬಯಲ ತೊಟ್ಟನೆ ನಿಟ್ಟಿಪಂ (ಕೊಟ್ಟೂ,ಬ. ೭-೩೬).

**ತೊಟ್ಟನೆ ತೊಳಲು** = ಸುಮ್ಮನೆ ಅ ಲೆ ದಾ ಡಂ,-ಸಂತ್ರಾಡಂ,-ತಿರಂಗಾಡು : ಸದ್ಭಕ್ತರಿಗೆ ಉಳ್ಳುದೆಲ್ಲವ ಕೊಟ್ಟು ಐದರೇ ಎಂದು ಮಱು ಗುವ ಏಕೋಗ್ರಾಹಿ ಶರಣನ ತೊಟ್ಟನೆ ತೊಳಲಿ ಅಱಸಿ ಕಾಣೆನು (ಸಮಾಪ. ೬-೨೦) : ಅಱುವತ್ತುದಿವ್ಯಸಹಸ್ರಾಬ್ದಂಬರಮಿಾ ತೆ ಜ ದಿ ೦ ತೊಟ್ಟನೆ ತೊಳಲ್ದು (ಸಾನಂಕ. ಕಥಾಗರ್ಭಸಂಧಿ ೨೭ ವ) : ಬೆಟ್ಟಂಗೆ ಬೆಟ್ಟಿತ್ತ್ರನೆಸಗೆ ಪೃಥುಲಶ್ರೋಣಿ ತೊಟ್ಟನೆ ತೊಳಲ್ವಂತೆ ಮಾಡೆ (ಪದ್ಮರಾ. ೩-೨೮) ; ಕಾನನದೊಳಗೆ ತೊಟ್ಟನೆ ತೊಳಲಿ ಹದಿಮೂಱಬುದ ಬಂದಾವತ್ತನನು ಭವಿಸಿ (ಕುಮಾ,ಭೀ. ೩-೩೮). [ ತೊಟ್ + – ಅನೆ$_1$ ]

**ತೊಟ್ಟಲ್** (ನಾ). ಒಂದು ಸ್ಥಳದ ಹೆಸರು : ಸ್ವಸ್ತಿಶ್ರೀವಲ್ಲಭ ಪೃಥವೀ ರಾಜ್ಯಂಕೆಯೆ . . . ಗುಣ್ಣಗೆವಾಟಕ್ಕ ತೊಟ್ಟಲಾಳುತ್ತುಮ್ ಕಾಡವಟ್ಟಿ ಬೋಳದುಳ್ಳೆ ಪೆಬ್ಬೀಳನಲ್ಲಕ್ಕಳ್ ಎಱಿದುವಿಟ್ಟಾರ್ (ಎಕ. XVI, ತುಮುಕೂ. ೯೬-೧ ; 780 ?). 'ತೊಟ್ಟಿಲ್$_1$' ಪರಾ. [ ? ]

**ತೊಟ್ಟಲ** 'ತೊಟ್ಟಿಲ್$_1$' ನೋ.

**ತೊಟ್ಟಲಿ** 'ತೊಟ್ಟಿಲ್$_2$' ನೋ.

**ತೊಟ್ಟಲು** 'ತೊಟ್ಟಿಲ್$_1$' ನೋ.

**ತೊಟ್ಟಲ್ಲ** 'ತೊಟ್ಟಿಲ್$_2$' ನೋ.

**ತೊಟ್ಟಿ$_1$, ದೊಡ್ಡಿ$_1$** (ನಾ). ೧. ಮನೆಯ ಹಜಾರದ ಮಧ್ಯದಲ್ಲಿರುವ ಚಾವಣಿಯಿಲ್ಲದ ಚಚ್ಚೌಕವಾದ ಸ್ಥಳ : "ಗೃಹಭೇದ ಲತೆಯೊಳು ತೊಟ್ಟಿ" (ಶಬ್ದಮಂ. ೯೦) ; ತೊಟ್ಟಿಯ ಸುತ್ತುವೆತ್ತ [ಪಾಠಾಂ. ಕಟ್ಟಿಯೆ ಸುಟ್ಟುವೆತ್ತ, ತಟ್ಟಿಯ ಸುತ್ತುವೆತ್ತ] ಪಸುರ್ಪಂದಲ ಮುತ್ತಿನ ಮಂಟಪಂ ಗಳೊಳ್ ಕಟ್ಟಿದ ಪಚ್ಚೆದೋರಣದ ಬಾಜಿಪ ತೂರ್ಯದ ಸಂಭ್ರಮಂ ಗಳಿಂ . . . ನೇ ರ್ಪ ಡಟ್ಟು ದು ನೋಟಕರ್ಗೊಸಗೆಯುಬ್ಬಣಮಪ್ಪಿನಮಾ ವಿವಾಹದೊಳ್ (ಸೂಕ್ತಿಸು. ೬-೨೨); ತೊಟ್ಟಿಗಳುಪ್ಪರಿಕೆ ಹೊಂಗಳಸ ಗಳು ಮಱೆವ ಮೇಲುಕಟ್ಟಿನ ಚಿತ್ರಗಳ . . . ತಾಯ್ಪನೆಯಿದಂಬಂತಸೆದು ದೊಗ್ಗಿನಲಿ (ಪ್ರಭುಲಿ. ೪-೬೨) ; ರಂಗುವಡದ ನವರಂಗದ ತೊಟ್ಟಿಯ ಸಾಲು (ಸೌಂದಕಾ. ೪-೩೨) ; ಊರಿನ ಗಂಡಸರೆಲ್ಲಾ ಆಗಲೇ ಆ ತೊಟ್ಟಿ ಯಲ್ಲಿ ಸೇರಿದ್ದರು (ಕಳಪು. ೯) ;ಹಟ್ಟಿ ಗುಡಿಸೀರಿ ತೊಟ್ಟೀಯ ಗುಡಿಸೀರಿ ಪುಟ್ಟ ಮಲ್ಲಿಗೆಯ ಹರಡೀರಿ (ನಮ್ಮೂರು. ೪೮). ೨. ಅಂತಃಪುರ ; ರಾಣೀ ವಾಸ : ತದ್ವರಣೇಸತಿಯ ಕಾಂತಿರಸಭರಿತನಾಭಿಯೋ ಎನೆ ತೊಟ್ಟಿ ಕಣ್ಗೆಸೆದುದು (ಪದ್ಮರಾ. ೬ ೭೨) ; ದಿಟ್ಟಿಗೆ ನೂತನವಾದವರಂಜಿಯ ಕಟ್ಟಿ ರಕದ ಭಿತ್ತಿಯಿಂದ ಸೃಷ್ಟೀಶನ ರಾಣಿಯರ ನವರತ್ನದ ತೊಟ್ಟಿಗಳಿಹುವರ್ತಿ ಯಲಿ (ಕಂಸವಿ. ೭-೪೨) ; ಚಾಮರಾಜನಗರದಲ್ಲಿ ಮದನವಿಲಾಸತೊಟ್ಟೀ ಪುಟ್ಟಸ್ವಾಮಿಯಾಯುವರ ಹೆಸರಿನಿಂದ ಪ್ರತಿಷ್ಠಿತರಾದ . . . ದೇವಸ್ಥಾನಕ್ಕೆ . . . ಪಟ್ಟಿಸಿದ ನಿಲುವಿನ ಸೇವಾರ್ಥ (ಎಕ. XIV, ಚಾಮುರಾ. ೨೧೮-೧ ; 1868) ; ಆ ರಾಜಕುಮಾರರಿಬ್ಬರನ್ನೂ ತಮ್ಮ ಅರಮನೆಯಲ್ಲಿ ಪೂರ್ವದಲ್ಲಿ ಇಳಿದಿದ್ದ ತೊಟ್ಟಿಯಲ್ಲಿಯೇ ಇರುವಂತೆ ನಿಯಮಿಸಿದಳು (ಚಾಮವಂ. ೦೫) : ಶಾಂತಲಾದೇವಿ ತೊಟ್ಟಿಯಿಂದ ಹೊರಟಳು (ಸವತಿ. ೩೦) ; ದೊರೆ ಇವಳ ತೊಟ್ಟಿಗೆ ಕೊಡುತಾ ಇದ್ದ ಖಾಸಾ ಸೋಬಸ್ಕರವನ್ನು ದಿನಕ್ರಮೇಣ ಕಡಿಮೆ ಮಾಡುತ್ತಾ ಕಡೆಗೆ ಕಗ್ಗಲ ರಾಗಿ ಮುಗ್ಗಲ ಹುರುಳಿಗೆ ಇಳಿಸಿದನು (ಪೀಟಿಖಾ. ೦೬). ೩. ದರ್ಬಾರು ನಡೆಯುವ ಸ್ಥಳ ; ಓಲಗಶಾಲೆ; ಆಸ್ಥಾನಮಂಟಪ : ಶ್ರೀರಂಗಪಟ್ಟಣದ ಅರಮನೆಯಲ್ಲಿ ಸಂಜೆಯ ಸನ್ನಿಧಾನದ ತೊಟ್ಟಿ (ಸಂಸಕ. ೧೨೦). ೪. ಹಸು, ಕುದುರೆ ಮೊದಲಾದುವ ವನ್ನು ಕೂಡುವ ಸ್ಥಳ ; ಕೊಟ್ಟಿಗೆ : ಕುರಿಗಳೆಲ್ಲಾ ರೊಪ್ಪದಲ್ಲಿ, ದನಗಳೆಲ್ಲಾ ತೊಟ್ಟಿಯಲ್ಲಿ, ಜನಗಳೆಲ್ಲಾ ಪಟ್ಟಿಯಲ್ಲಿ ಬಳಲಿ ಕೆಡದರು ತಪ್ಪಗೆ (ಇಂಗೀತ. ೫೨-೧). **ದೊಡ್ಡಿ$_1$** : ೪. ಗುಡ್ಡ ಬೆರಳೊಳಿತ್ತಿ ದೊಡ್ಡಿ ಗೋವ್ಗಳ ಕಾಯ್ದು ಒಡ್ಡಿ ಜಗನ್ನಾಥ ಗಿಡ್ಡಾಗಿದ್ದನೆ (ಪುರಂದ. ೨-೩೨-೩) ; ಸರವಶುಗಳಿಹ ದೊಡ್ಡಿ ನರಕದ ದಿಡ್ಡಿ ಸಕಲರಿಂಗಿಕ್ಕಿದಡ್ಡಿ (ಪತಿಲ. ೨-೬೧) ; ಅಲ್ಲಲ್ಲಿ ದೊಡ್ಡಿಗಳಲ್ಲಿರುವ ಸಂತೋಷಕರಗಳಾದ ಗೋವುಗಳ ಹಿಂಡುಗಳನ್ನೂ ನೋಡುತ್ತ (ಕ್ಷಾಉ.೦೪೨); ಗಿರಿಗಳೆಡೆಯೊಳು ಅಡವಿ ಮಧ್ಯದಿ ತುರುವ ದೊಡ್ಡಿಯ ಮಾಡಿಕೊಂಡು ಇರುವ ಕಾಳಿಂಗ ನೆಂಬ ಗೊಲ್ಲನ ಪರಿಯ ನಾನೆಂತು ಪೇಳ್ವೆನು (ಗೋಪಾಡು. ೨೦) ; ಆ ಎರಡು ತರಗತಿಯೂ ದೊಡ್ಡಿಯುಂತಾಗಿದೆ (ಕಾಳೀಂ. ೯೬). ೫. ಜನರು ವಾಸಿಸುವ ಸ್ಥಳ; ಹಟ್ಟಿ: ಅವನು ತನ್ನ ದೊಡ್ಡಿಯನ್ನು ತಲುಪಿ ಕಾರ್ಯ ನಿರತನಾದ ನಂತರ ಮನಸ್ಸಿನ ಮುರುಸು ಬೇಸರಗಳೆಲ್ಲ ಮಾಯವಾದುವು (ಪುನರು. ೨೬೪). ೬. ಕೆಲವುಹಳ್ಳಿಗಳ ಹೆಸರಿನ ಕೊನೆಯಲ್ಲಿ ಸೇರುವ ಶಬ್ದ. ೭. ಪೌಂಡಿಮನೆ; ಕೊಂಡವಾಡ(ಉಕ). ೮. ಕಾಡಾನೆ ಗಳನ್ನು ಪಳಗಿಸುವ ಸ್ಥಳ ; ಖೆಡ್ಡಾ : (೬).

[ ದೇ.॥ ತಮಿ. ತೊಟ್ಟಿ ; ಮಲ. ದೊಟ್ಟಿ ; ತೆಲು. ದೊಡ್ಡಿ ]

**ತೊಟ್ಟಿ$_2$** (ನಾ). ೧. ನೀರು ತುಂಬುವುದಕ್ಕಾಗಿ ಕಲ್ಲು, ಮಣ್ಣು, ಸಿಮೆಂಟು ಮತ್ತು ಮರ ಮೊದಲಾದುವುಗಳಿಂದ ಮಾಡಿದ ಬಾನೆ; ಹೌದು ; ಟ್ಯಾಂಕು : ತೊಟ್ಟಿಯು ನೀರು ಕಾಲುವೆಯಲ್ಲಿ ಹರಿಯುತ್ತಿತ್ತು (ಕಪಪು. ೩-೦೫). ೨. ವಾಯುಪುಹಡಗಿನ ತಳಕ್ಕೆ ಕಟ್ಟಿರುವ ಒಂದು ಬಗೆಯ ತೂಗುದೊಟ್ಟಿಲು,-ದೋಣಿ : ಇದರ ಕೆಳಮುಗ್ಗುಲಲ್ಲಿ ಒಂದು ತೊಟ್ಟಿಯನ್ನು (Gondala) ನಿರ್ಮಿಸುವರು. ಈ ತೊಟ್ಟಿಯಲ್ಲಿ ಜನರು ಕುಳಿತುಕೊಳ್ಳುವ ಅನುಕೂಲತೆಯಿದೆ (ಚಾಲಪ್ರ. II, ೧೧೨೬). ೩. ಕಸ, ಕುಪ್ಪೆಗಳನ್ನು ಹಾಕುವ ಗುಂಡಿ : ಕಸವನ್ನು ತೊಟ್ಟಿಗೆ ಹಾಕು (ಲೂಧಿ). ೪. (ಆಲಂ)ವ್ಯಭಿಚಾರಿಣಿ ; ವೇಶ್ಯೆ ; ಜಾರೆ.

[ ದೇ.॥ ತಮಿ. ಮಲ. ತುಳು. ತೆಲು. ತೊಟ್ಟಿ ]

**ತೊಟ್ಟಿ$_3$** 'ತೋಟ್ಟಿ' ನೋ.

**ತೊಟ್ಟಿ$_4$** (ನಾ). ಒಂದು ಬಗೆಯ ಬಳ್ಳಿ : "ತೊಟ್ಟಿ[ಪಾಠಾಂ. ಟ್ಟ] ತುಷ್ಟ ಯಕ್ಕುಂ" (ಮಂಗರಾ. ೪೨-೩೭) : "ಗೃಹಭೇದ ಲತೆಯೊಳು ತೊಟ್ಟಿ" (ಶಬ್ದಮಂ. ೯೦) : ಕುದಿಯಿಸುಗೆ ಸುಣ್ಣದಿಂ ಕೈವೆದೊಂದಯಂ ಕೋಕಿಲಾಕ್ಷಿ ವೆರಸು ಸಿತೇರಂಡದ ತೊಟ್ಟಿಯೆಲೆಗಳಿಂ ಪಡಲದ ಕಾಯಂ ತೆಗಪುಗವಱ ಕೈವೆಗಳೞಿಗುಂ (ಲೋಕೋಪ. ೮-೩೦); ತೊಟ್ಟಿಯೆಲೆಯ ಕಷಾಯಮಟ್ಟಿಮೆ ಯುಂ ಕಳೆವುದು (ಧರ್ಮಾಮೃ. ೯-೧೦೮) ; ಬಸವೇಶ್ವರದೇವರ ಬಲದ ಕರ್ಣದಲ್ಲಿ ತೊಟ್ಟಿಗಿಡ ಹುಟ್ಟುವುದೇ ಕುಱುಹು (ಕಾಲಸಂ. ೮೪-೪) ; ನೆಲದಾಳ್ ದಾಗುಡಿ ಹೇರೀಚಲು ವಾಳಂ ತರಣಿ ತೊಟ್ಟಿ... ಸತಕ್ರಪಾಸಂ ವಿಷಪಂ (ಖಮುದ. ೫-೯೬): ಸೀಗೆ ಗದುಂಗು ಕೀಚಕ ತೊ[ಪಾಠಾಂ. ದೊ]ಟ್ಟಿ

. . . ಗಡಣದಿಂದಾ ಕಾಡು ಕಡುಗುರ್ವುವಡೆದು ರಾಜಿಪುದು (ರಾಘುವಿ. ೧೫-೬೦); ತೊಂಡೆ ತೊಟ್ಟೆಯು ಸೊಂಡೆಗಿಡ ಭೂಮಂಡಲಾದೊಳು ಬೆಳವ ತೊಳಸಿಯು . . . ತಂಡತಂಡದಿ ಮೆರೆದುವು (ಗಿರೀಹಾಡು. ೬).

[ ದೇ.॥ ತಮಿ. ತೊಟ್ಟ ]

**ತೊಟ್ಟೈಕ್ಕು** (ಕ್ರಿ). ಹನಿಹನಿಯಾಗಿ ಬೀಳು : ಕದಡಿ ತೊಟ್ಟೈಕ್ಕುವ ವಿಭೂತಿಗಳ ಬೆಮರಿನಿಂ (ಕಬಪು. ೩೫-೧೫) ; ತೊಟ್ಟೈಕ್ಕೆ ಕಂಬನಿಯು ಜೇನೆದೆಯು ಹೂವಿಂದ (ಕಾಲೂರ. ೧೬೫-೩೩೬): ಸುಮತಿಯು ಕಂಗಳಲ್ಲಿ ಕಂಬನಿ ತುಂಬಿಕೊಂಡು, ಮುತ್ತುದುರಿದಂತೆ ಅವಳ ಗಲ್ಲಗಳ ಮೇಲೆ ತೊಟ್ಟೈಕ್ಕುತ್ತಿದೆ (ಕೀಮೋದ. ೬೫) : ಎಲೆ, ಕೊಂಬೆ ಮತ್ತು ಹುಲ್ಲುಗಳಿಂದ ನೀರು ತೊಟ್ಟೈಕ್ಕುತ್ತಿತ್ತು (ಪುನರು. ೨೬೮). [ ತೊಟ್ಟು₂ + ಇಕ್ಕು ]

**ತೊಟ್ಟೈಗ** (ನಾ). (?) : ಅಘಹರನು ಕಾವನ ತಗೆದಚ್ಚ ಬಾಣದ ಮಗನ ಹಿಡಿದು ತೊಟ್ಟೈಗರು ಪಗೆಗೆ ಮಾರಲ್ಕಂಜಿ ಬಿಗಿದು ಪರ್ವರ ಕಂಡು ಸುಗಿದು ಸೊರಗಿದವೆಂಬ ಪಸರಾ (ಕೋದತ. ೧-೬೧). [ ? ]

**ತೊಟ್ಟೈಗಾಲ್** (ನಾ). ಒಂದು ಕಾಲುವೆಯ ಹೆಸರು : ಅನ್ತೆ ಬನ್ದು ತೊಟ್ಟೈಗಾಲ ತಜ್ಜಣವೇರೊಟ್ಟೆಯಿಂ ಅನ್ತೆ ಬನ್ದು ಬಾಣಗಗೆಱೆಯ ಏರಿಯ ಮೇಗಣಂ (ಎಕ. III, ನಂಜನ. ೧೩೯-೨೧: 915 ?).

[ ತೊಟ್ಟು ? + ಕಾಲ್₂ ]

**ತೊಟ್ಟೈಡು** (ಕ್ರಿ). = ತೊಟ್ಟೈಕ್ಕು : ಸಡಿಲಿದ ಮುಡಿ ಬೆಮರ್ವನಿಗಳು ತೀವಿ ತೊಟ್ಟೈಡುವಾಸ್ಯದ . . . ಹೆಂಗಳಡಸಿದಂಗಡಿಗಳೊಪ್ಪಿದವು (ಮೋಹತ. ೩-೧೭) : ತನಿಸುಧೆಯೊಸರ್ದು ತೊಟ್ಟೈಡುವ ಬಿಂದುಗಳ ಸಾಲಿದೆನಲು . . . ಮುತ್ತುಗಳ ಮಣಿಗಳೆಡೆವಿಡದೆ ಸೂಸುತಿರೆ (ಜೈಮಿಭಾ. ೦೦-೦೬): ತೊಟ್ಟೈಡುವ ಬೆವರುಗಳ ಮಸ್ತಕದಿ ರೋಷದಿಂದೊಗುವಾ (ದೇವೀಮ. ೩-೭೯); ನಿರ್ಮಳಾಂತಃಕರಣದಾನಂದಾಶ್ರುಗಳು ಕಂಗಳಲಿ ತೊಟ್ಟೈಡಲು (ಅನಂರಾ. ೧-೨-೩೦): ಮುಖದಲ್ಲಿ ಬೆವರು ತೊಟ್ಟೈಡುತ್ತಿದ್ದಿತು (ನಿರಾತ. ೨೧). [ ತೊಟ್ಟು₂ + ಇಡು₁ ]

**ತೊಟ್ಟೈಮನೆ** (ನಾ). ಹಜಾರದ ಮಧ್ಯದಲ್ಲಿ ಚಾವಣಿಯಿಲ್ಲದ ಚಚ್ಚೌಕವಾದ ಸ್ಥಳವನ್ನುಳ್ಳ ಮನೆ: ಇದ್ದಿರಬಹುದು ನಮ್ಮೂರಲ್ಲೂ ಕೋಟೆ, ಪೇಟೆ, ಅರಮನೆ . . . ಹನ್ನೆರಡು ಕಂಬದ ತೊಟ್ಟೈಮನೆ (ಹಂಗೂಲಿ. ೮) : ನಾನು ಈಗಲೇ ಹೋಗಿ ತೊಟ್ಟೇಮನೆ ಕೃಷ್ಣಪ್ಪನೋರನ್ನು ಕಾಣುತ್ತೇನೆ (ಮೂಂಗಲ್ಲ. ೯). [ ತೊಟ್ಟು₁ + ಮನೆ ]

**ತೊಟ್ಟಿಲ್₁**, ತೊಟ್ಟಿಲ, ತೊಟ್ಟಿಲು, ತೊಟ್ಟಿಲಂ₁ (ನಾ). ೧. ಮಗುವನ್ನು ಮಲಗಿಸಿ ತೂಗಲು ಮರ, ಬೆತ್ತ ಅಥವಾ ಲೋಹದಿಂದ ಮಾಡಿದ ಒಂದು ಬಗೆಯ ಸಾಧನ; ತೂಗುಹಾಸಿಗೆ : "ಶೈಶವಿ ಬಾಲಶಯ್ಯೆಯನೆ ತೊಟ್ಟಿಲಕ್ಕುಂ" (ಮಂಗರಾ. ೬೦-೧೬) : ನಿನ್ನ ತಂದೆವಿರ್ ಸಿದ್ಧಾರ್ಥರೆಂಬೊರ್ ನೀನ್ ತೊಟ್ಟಿಲೊಳಿರ್ದಂತೆ ನಿನಗೆ ಪಟ್ಟವಟ್ಟಂಗಟ್ಟಿ . . . ತಪಂಬಟ್ಟು (ವರ್ಧ್ರಮಾ. ೭೬-೨೬): ಮದದಂತಿದಂತದೊಳ್ ಕಟ್ಟಿದ ತೊಟ್ಟಿಲಂ ನಯದಿಂದಮೇಱಿ[ಸಿ] ಬಾಳಕಾಲದೊಳೆ ತೊಟ್ಟಿಲಿಗಂ ಗಜಪ್ರಿಯನಪ್ಪುದಂ ಸಲೆ ತೋಱಿದಂ (ಶಂಪಥಾ. ೧-೭೩) ; ದೇಹಿವರ್ಗದ ಕೃತಪಾಪಪುಣ್ಯಫಲಮಂ ಸಲೆ ತೂಗುವ ಕರ್ಮಸಾಕ್ಷಿಯಂ ಪದುಳದೆ ತೊಟ್ಟಿಲೊಳ್ ಪಡಿಸಿ ತೂಗಿದರ್ (ಜಗವಿ. ೩-೨೮) ; ಕೂಸಂ ಬಿಪ್ಪಂಟುವ್ವೆ ತೊಟ್ಟಿಲಂ ತೂಗುವ್ವೆ (ನಂಬಿರ. ೧೫-೧೭೧) ; ಎಳನೇಸಱ ತೊಟ್ಟಿಲಾದಗ್ರದಾನವರೆಱೆವಟ್ಟು ಲಕ್ಷ್ಮಿಯು ತಪರ್ಮನೆ . . . ಮಹಾರ್ಣವಂ (ಸೂಕ್ತಿಸು. ೨-೩೮). ೨. ಒಂದು ಊರಿನ ಹೆಸರು : ಪಚಯ್ಯನುಂ ತೊಟ್ಟಿಲ ಪುಟ್ಟಗಾವುಣ್ಡನುಂ ಏಱೆಯಣ್ಣ ಪೆರ್ಮ್ಮಾಡಿ ಕೆಱೆಯ ಕಟ್ಟ ಕಲ್ಲ ತುಂಬನಿಕಿಸಿದ (ಮೈಅರಿ. ೧೯೩೨, ೧೧-೭ ; 886 ?). 'ತೊಟ್ಟಿಲ್' ಪರಾ. **ತೊಟ್ಟಿಲ** : ೧. ತನುವೆಂಬ ತೊಟ್ಟಿಲಕೆ ಮನವ ಸರಪಳಿ ಮಾಡಿ (ಅಜಂದಃ. ೩೭೯-೧೩). **ತೊಟ್ಟಿಲು** : ೧. ಭಕ್ತನ ಹಸ್ತವೆ ತೊಟ್ಟ[ಪಾಠಾಂ. ಟ್ಟಿ]ಲು ತನಗಂ ಭಕ್ತ್ಯಮೃತಂ ಪೊಲೆವಾಲದು ತನಗಂ (ದೀಕ್ಷಾಬೋ. ೬೭-೫) : ಅಲ್ಲಿನ ಮಕ್ಕಳು ತಮ್ಮ ತೊಟ್ಟಿಲುಗಳಲ್ಲಿ ಸುಖವಾಗಿ ಮಲಗಿ ನಿದ್ರಿಸಲಿ (ಮುಟ್ಟದ. ೦೯೦). **ತೊಟ್ಟಿಲು₁** : ೧. ತೊಟ್ಟ ೧ ಶಿಶುವಿಂಗೆ ಜೋಗುಳವಲ್ಲದೆ ಹೊಟ್ಟೆಯು ಶಿಶುವಿಂಗೆ ಜೋಗುಳವುಂಟೇ (ವಪಸಂ. ೭೦೬-೫೯) : ಶರಣರ ಚರಣದ ತೊಟ್ಟಿಲೊಳು ಪಟ್ಟರಿಸಿ ಪುರಾತನರ ಗೀತದಿಂ ಜೋಗುಳಂಬಾಡಿ (ಬಸರ. ೧೦-೧೧೧) : ಭೀಷ್ಮನ ತೋಳ ತೊಟ್ಟಿಲಿನೊಳಗೆ ಬೆಳೆದವು (ಕುಮಾರ್ದೀ. ೬-೨೮) ; ಅಂಗದನ ತೊಟ್ಟಿಲಲಿ ವೀರೋತ್ತುಂಗ ದಶಕಂಧರನ ಕಟ್ಟಿದ ತುಂಗವಿಕ್ರಮವೆತ್ತ ಸರಿದುದು (ತೊರರಾ. ೭-೫-೯) ; ಬೆಟ್ಟಬೆಟ್ಟಕೆ ಕಟ್ಟಿ ಜೋಗುಳದ ತೊಟ್ಟಿಲನು ತೂಗಿದತ್ತು! (ಅನಿಕೇ. ೫೩-೫) ; ತೊಟ್ಟಿಲ ಹೊತ್ತುಕೊಂಡು ತೌರುಬಣ್ಣ ಉಟ್ಟುಕೊಂಡು . . . ತೌರೂರ ಕಿಟ್ಕಿ ತಿರುಗಿ ನೋಡ್ಯಾಳು (ಜಗೀತ. ೩೦). ೩. ಬಂಡಿಯಲ್ಲಿ ಜನ ಕೂರಲು ಅಥವಾ ಸಾಮಾನು ತುಂಬಲು ಇರುವ ಜಾಗ,-ಸ್ಥಳ.

**ತೊಟ್ಟಿಲುಗಾಯಿ** = ಒಡೆದಾಗ ಉದ್ದುದ್ದವಾಗಿ ವಿಭಾಗವಾಗುವ ತೆಂಗಿನಕಾಯಿ : ತೊಟ್ಟಿಲುಗಾಯಿ ಒಡೆದರೆ ಮನೆಯಲ್ಲಿ ಮಗುವಾಗುವ ಸೂಚನೆಯೆಂದು ನಂಬಿಕೆಯಿದೆ (ರೂಢಿ). **ತೊಟ್ಟಿಲ ಕಾರ್ಯ** = ಮಗುವನ್ನು ಮೊದಲ ಬಾರಿ ತೊಟ್ಟಿಲಿಗೆ ಹಾಕುವ ಶಾಸ್ತ್ರ,-ಸಮಾರಂಭ : ಪರಮಹರುಷದಿಂದ ಪುರಜನರೆಲ್ಲರು ನೆರೆದು ತೊಟ್ಟೀಲ ಕಾರ್ಯಕ್ಕೆ (ಸಿದ್ಧಪು. ೩-೨೫). **ತೊಟ್ಟಿಲ ಕೂಸು** = ಚಿಕ್ಕಮಗು ; ಎಳಗೂಸು : ಎರಡು ಸಪ್ತಕ ಜಗವ ಮಾಡಿದ ಸರಸಿರುಹಸಂಭವನೆ ನಾಭಿಯು ನಿರುತ ತೊಟ್ಟಿಲ ಕೂಸು (ಸಂಭಪ. ೬-೨). **ತೊಟ್ಟಿಲ ಚಪ್ಪರ** = ಅಂಬಾರಿ: ಆನೆಯ ಮೇಲೆ ತೊಟ್ಟಿಲ ಚಪ್ಪರದಲಿ . . . ಬರುವ ವಾನರುಗಳು (ಕಂಪವಿ. ೦೧-೩೧). **ತೊಟ್ಟಿಲ ಜೀಕ, ತೊಟ್ಟಿಲು ಜೀಕ** = ತೊಟ್ಟಿಲನ್ನೊಳಗೊಂಡ ತಿರುಗುಯಂತ್ರ ; ರಾಟಣದುಯ್ಯಾಲೆ : ತೊಟ್ಟಿಲಜೀಕವ ತೂಗಿ ಕೈಬಿಟ್ಟರೆ ಗಾಳಿಯ ರಾಟಾಳದೊಳು ಪ್ರಾಣವು (ಸಜೀಗೀ. ೩೦-೦೦) ; 'ರಾಟಣದುಯ್ಯಾಲೆ' ಎಂದರೆ ನಮ್ಮಲ್ಲಿ ಈಗಲೂ ಪ್ರಚಾರದಲ್ಲಿದ್ದ ತೊಟ್ಟಿಲು ಜೀಕ (ಕರ್ನಾಜ. ೮೩). **ತೊಟ್ಟಿಲನಿಕ್ಕು** = ಮಗುವನ್ನು ಮೊದಲ ಬಾರಿ ತೊಟ್ಟಿಲಿಗೆ ಹಾಕುವ ಶಾಸ್ತ್ರ ಮಾಡಂ ; ತೊಟ್ಟಿಲಿಡಂ : ಕುಮಾರನಿಗೆ ತೊಟ್ಟಿಲನಿಕ್ಕುವ ಉತ್ಸವವಂ ಬೆಳೆಯಿಸಬೇಕು (ಸೌಗಂಧಿ. ೭೨-೮). **ತೊಟ್ಟಿಲ ಮಗ** = ತೊಟ್ಟಿಲ ಕೂಸು : ತೊಟ್ಟಿಲ ಮಗಂಗೆ ಪಟ್ಟಂಗಟ್ಟಿ . . . ಜಿನದೀಕ್ಷೆಗೊಂಡಂ (ಶಂರಾಮೂ. ೨-೩೬). **ತೊಟ್ಟಿಲ ಹಬ್ಬ** = ತೊಟ್ಟಿಲ ಕಾರ್ಯ : ಕುಸುಮಾಸ್ತ್ರನಂಗನೆಯು ಪಡೆದ ಶಿಶುವಂ ನೋಡಿ . . . ಸಸಿನೆ ತೊಟ್ಟಿಲ ಹಬ್ಬ ರಚಿಸುತ್ತ ನಾಮಕರಣಂಗೈಯೆ (ನಪಮೋ. ೦೫ ಸೂಚನ). **ತೊಟ್ಟಿಲಿಗೆ ಹಾಕು** = ತೊಟ್ಟಿಲಿಕ್ಕು : ಎಂತಿದ್ದರೂ ಅಕ್ಕಯ್ಯನ ಬಾಲೆ ತೊಟ್ಟಿಲಿಗೆ ಹಾಕೋ ಮನೆಗೆ ನಾನು ಬಂದೇ ಬರ್ತೀನಲ್ಲಾ? (ಮರಪು. ೨೨೬). **ತೊಟ್ಟಿಲು ಗಾಡಿ** = ಕಮಾನಿಲ್ಲದ ಎತ್ತಿನ ಗಾಡಿ. **ತೊಟ್ಟಿಲು ಮುಂದಾಗಿ ಬರು** = ಬಾಣಂತನವನ್ನು ಪೂರೈಸಿಕೊಂಡು ಗಂಡನ ಮನೆಗೆ ಮಗುವಿನೊಡನೆ ಬರು.

[ ದೇ.॥ ತಮಿ. ಮಲ. ತುಳು. ತೊಟ್ಟಿಲ್; ತೆಲು. ತೊಟ್ಟಿಲ. ತೊಟ್ಲ, ತೊಟ್ಲಿಯ, ತೊಟ್ಲಿ ]

**ತೊಟ್ಟಿಲ್₂**, ತೊಟ್ಟಲಿ, ತೊಟ್ಟಲ್ಲಿ, ತೊಟ್ಟಿಲ, ತೊಟ್ಟಿಲು₂, ತ್ರೊಟ್ಟಲೆ (ನಾ). (ಮುಳ್ಳುಗಳುಳ್ಳ) ಒಂದು ಬಗೆಯ ಸಸ್ಯ : ತಗರಂ ಕೊಳ್ಳ್ಕೆ ಸುಗಿ ಕಗ್ಗೂಱಲೆ ತೊಟ್ಟಿಲ್ ಸೂರಣಂ . . . ಪುತ್ತಿನ ಮಣ್ಣುಮಂ ಕದಡಿ ಕಾಸಿಟ್ಟೆಯ್ದೆ ಪೊಯ್ಯುವ ಪಾಪ್ಪಗಳುಂ ತೀರ್ಚುಗುಂ (ಲೋಕೋಪ. ೯-೨೭೦). **ತೊಟ್ಟಲಿ**: ಕಾಯಿಗಳು: ಅಗಸೆ, ಹಲಸು, ತೊಂಡೆ, ತೊಟ್ಟಲಿ (ನಮ್ಮನು. ೨೩೬). **ತೊಟ್ಟಲ್ಲಿ**: ರಪ್ಪ, ತೊಟ್ಟಲ್ಲಿ (ಮೃದಿಗಿ. ೧೬-೩೦೫).

ತೊಟ್ಟಿಲ: ತೊಟ್ಟಿಲ (ವಾಭಾಂಟಿ).–ಮುಳ್ಳುಗಳುಳ್ಳ ಬಹು ಸಾಧಾರಣವಾದ ಬಳ್ಳಿಯು (ಕಥಾಗ. ೪೦). ತೊಟ್ಟಿಲು$_2$: ಕಂಪ್ರನೊಳ, ತೊಟ್ಟಿಲು, ಪ್ರಿಯಂಗು (ಮೃಚ್ಛ. ೪-೫೬). ತೊಟ್ಟಿಲೆ: ಪೊಟ್ಟನೊಳ, ತೊಟ್ಟಿಲೆ (ಮೃಚ್ಛ. ೬-೯೯). [ ದೇ.॥ ತೆಲು. ತೊಟ್ಲ ]

**ತೊಟ್ಟಿಲ** 'ತೊಟ್ಟಿಲ್$_2$' ನೋ.

**ತೊಟ್ಟಿಲಿಕ್ಕು** (ಕ್ರಿ). ಮಗುವನ್ನು ಮೊದಲ ಬಾರಿ ತೊಟ್ಟಿಲಿಗೆ ಹಾಕುವ ಶಾಸ್ತ್ರವನ್ನು ಮಾಡು: ತೊಟ್ಟಿಲಿಕ್ಕುವವೆಂದು ಹನ್ನೆರಡಿರುಳಿಂಗೆ ನಟ್ಟನೆ ಕೈಕೊಂಡರೊಲಿದು (ಮೋದಕ. ೧೬-೪೦).

[ ತೊಟ್ಟಿಲು$_1$ (<ತೊಟ್ಟಿಲ್$_1$) + ಇಕ್ಕು ]

**ತೊಟ್ಟಿಲಿಗ** (ನಾ). ತೊಟ್ಟಿಲ ಮಗಂ; ಎಳಗೂಸು: ಬಾಳಕಾಲದೊಳ್ ತೊಟ್ಟಿಲಿಗಂ ಗಜಪ್ರಿಯನಪ್ಪುದಂ ಸಲೆ ತೋಱಿದಂ (ಪಂಪಭಾ. ೧-೪೩).

[ ತೊಟ್ಟಿಲ್$_1$ + – ಇಗ ]

**ತೊಟ್ಟಿಲಿಡು** (ಕ್ರಿ). = ತೊಟ್ಟಿಲಿಕ್ಕು: ತೊಟ್ಟಿಲಿಡುವ ದಿವಸ ಎಲ್ಲಿದ್ದರೂ ಬಂದೇವು (ಸವತಿ. ೨೬). [ ತೊಟ್ಟಿಲು$_1$ (< ತೊಟ್ಟಿಲ್$_1$) + ಇಡು$_1$ ]

**ತೊಟ್ಟಿಲು$_1$** 'ತೊಟ್ಟಿಲ್$_1$' ನೋ.

**ತೊಟ್ಟಿಲು$_2$** 'ತೊಟ್ಟಿಲ್$_2$' ನೋ.

**ತೊಟ್ಟಿಲುಹಬ್ಬ** (ನಾ). ಮಗುವನ್ನು ಮೊದಲ ಸಲ ತೊಟ್ಟಿಲಿಗೆ ಹಾಕುವ ಉತ್ಸವ,–ಸಮಾರಂಭ; ತೊಟ್ಟಿಲ ಕಾರ್ಯ: ಗೌಡರ ಮೊಮ್ಮಗನ ತೊಟ್ಟಿಲುಹಬ್ಬ ನಿನ್ನೆ (ಪ್ರಣಸ. ೦೦).

[ ತೊಟ್ಟಿಲು$_1$ (< ತೊಟ್ಟಿಲ್$_1$) + ಹಬ್ಬ (< ಪರ್ವ) ]

**ತೊಟ್ಟಿಲೆ** 'ತೊಟ್ಟಿಲ್$_2$' ನೋ.

**ತೊಟ್ಟಿಲ್ದುಂಬಿಸು** (ಕ್ರಿ). = ತೊಟ್ಟಿಲಿಕ್ಕು: ಧಾರಿಣಿ ಪೊಗಳ್ವಂತೆ ಪೊಲಂಕ್ವಾಹದಿ ತೊಟ್ಟಿಲ್ದುಂಬಿಸಿದಂ (ಜಯಸಾ. ೨-೬೦).

[ ತೊಟ್ಟಿಲ್$_1$ + ತುಂಬಿಸು ]

**ತೊಟ್ಟಿಸು** (ಕ್ರಿ). ಹನಿಸು; ಚಿಮುಕಿಸು: ಒಕ್ಕಲಿಗರ ಮನೆಯು ಸುಣ್ಣದ ಮೇಲೆ, ಮಜ್ಜಿಗೆಯನ್ನು ತೊಟ್ಟಿಸಿದರೆ . . . ಆದರ ದೋಷನಿವಾರಣೆಯಾಯಿತೆಂದು ಹೇಳಿ ಉಪಯೋಗಿಸುತ್ತಿದ್ದರಲ್ಲಾ ? (ಬೃಸರ್ವ. ೧೨೨).

[ ತೊಟ್ಟು$_2$ + – ಇಸು$_3$ ]

**ತೊಟ್ಟು$_1$** 'ತೊಡು$_1$' ಪರಾ.

**ತೊಟ್ಟು$_2$** (ಕ್ರಿ). ತೊಟ್ಟಿಡು; ಹನಿಹನಿಯಾಗಿ ಬೀಳು: ಮೋಟಾರ್ ವಾಹನಗಳಿಂದ ತೊಟ್ಟಿದ ಎಣ್ಣೆಯು ತೆಳುವಾಗಿ ಹರಡಿ ಎಣ್ಣೆಯ ಪೊರೆಯು ಉಂಟಾಗಿರುತ್ತದೆ (ಭೌತವಿ. ೨೦೬); ಅವಳ ಕಣ್ಣಿನಿಂದ ಒಂದೆರಡು ಬೊಟ್ಟು ನೀರು ತೊಟ್ಟಿತು (ದೇವೀಡಾ. ೧೬೬).

[ ದೇ.॥ ತಮಿ. ಚೊಟ್ಟು; ತೆಲು. ತೊಟ್ಟು ]

**ತೊಟ್ಟು$_3$** (ನಾ). ೧. ಹನಿ; ಬಿಂದು: "ಪೃಷಂತಿ, ಬಿಂದುಃ, ಪೃಷತಃ, ವಿಪ್ರುಷಃ, ೪ ಜಲಬಿಂದುಗಳ ಹೆಸರುಗಳು ಅಂದರೆ ನೀರಿನ ತುಂತುರುಗಳು; ಉದಕ ತೊಟ್ಟುಗಳು" (ಸಿದ್ಧಾಂತಿ. ೩೯): ತೊಟ್ಟು ಕೂಡ ಬಿಡದಂತೆ ಸವರಿ ಓಗ್ಗನ್ನು ಹುಡುಕಿ ಕುಡಿವೆ (ಅರಳು. ೨೧೪-೦೩). 'ತೊಟ್ಟಿಡು' ಪರಾ. ೨. ಕೊಂಚ; ಸ್ವಲ್ಪ: ನೀವು ಇನ್ನೂ ಚಿಕ್ಕವರು . . . ಇಲ್ಲವಾದರೆ ಒಂದುತೊಟ್ಟು ಬೈದು ಮುಂದೆ ಸಾಗುತ್ತಿದ್ದೆ (ಬಾಬಲ. ೬೯).

[ < ತೊಟ್ಟು$_2$./ತಮಿ. ಚೊಟ್ಟು ]

**ತೊಟ್ಟು$_4$** (ನಾ). ೧. ಹಣ್ಣು, ಹೂವು, ಎಲೆ ಮೊದಲಾದುವುಗಳ ತೊಂಬು,–ಕಾವು; ದೇಟು: "ವೃಂತಂ, ಪ್ರಸವಬಂಧನಂ ಈ ೨ ಪುಷ್ಪ ಪತ್ರಂಗಳ ತೊಟ್ಟು" (ನಾಚಿರಾ. ೦೦೬); "ತೊಟ್ಟು ತುಂಬೆನೆ ವೃಂತನಾಮ ವೆಂದೇ ತಿಳಿವುದು" (ಕಬ್ಬಸುಂ. ೨೩); ತೊಟ್ಟ ಬಿಟ್ಟ ಹಣ್ಣು ಮತ್ತೆ ಹತ್ತುವುದೇ (ಸರ್ವಜ್ಞ. ೨೬-೧೨೦); ತೊಟ್ಟು ಪಿಂಡಿಗೆಯಾಗೆ ಫಲಮು ಲಿಂಗಮುದಾಗೆ (ಬಸರ. ೯-೫೭): ಫಲದಲ್ಲಿ ತೊಟ್ಟುವೊಣಗದ ವೇಳೆಯಲ್ಲಿ ವಿರಿಟ್ಟು ಹಣ್ಣನು [ಪಾಠಾಂ. ಫಲವನು ತೊಟ್ಟ ಸರಿಸಕೆ ಕಾಲದಲ್ಲಿ ತಂದಿರಿಸಿ] ನಿಮ್ಮನುಕೂಲಧರ್ಮಂಗಳನು ಬೇಗದಿ ಪೇಳಿ (ಕುಮ್ಮಾಅ. ೩-೨೪); ಕೀಟಕವು ಕದುಕಿ ಕಡಿಯದ ತೊಟ್ಟುಗಳು ಪತ್ತಿದ ಸುಪುಷ್ಪವ . . . ಶಿವಲಿಂಗಕರ್ಪಿಸಿದಂ (ಶಂಕರಾ. ೫-೫೧): ತೊಟ್ಟ ಕಳಚಿದ ತೆರದಿ ಜೀವವ ಬಿಟ್ಟನೈ (ದೇವೀಮ. ೪-೨೦). ೨. ಮೊಲೆಯ ತಂದಿ; ಚೂಚುಕ: "ತೊಟ್ಟು ಚೂಚಕಮೆನಿಕ್ಕುಂ" (ಮಂಗರಾ. ೯೫-೭): ಬಟ್ಟದುವಪ್ಪ ಮೊಲೆಗಳ ತೊಟ್ಟು ಕರಂಗುವುದುಮೊಡನೆ ಸರ್ವಸ್ವಮುಮಂ ಕೊಟ್ಟು ಕರಂಗಿದರಹಿತರ್ ಕಟ್ಟುವು ವಳಿಯೊಡನೆ ವೈರಿವಂಶಾವಳಿಗಳ್ (ಪಂಚಾಪೂ. ೩-೯೭); ಬಟ್ಟಮೊಲೆಗಳ ತೊಟ್ಟೊಳು ಕಪ್ಪು ರಂಜಿಸಿತು (ಅಂಜಿದ. ೯-೭): ತೊಟ್ಟು ಹಿಡಿದು ಎನ್ನ ತೊಟ್ಟ ಕುಪ್ಪಸಗಂಟು ಬಿಟ್ಟು ಬೇಗ ಮುದ್ದಿಟ್ಟು . . . ನೆಟ್ಟನೆ ನಡೆದ ಶ್ರೀಕೃಷ್ಣನೆಂಬವನು (ಪುರಂದ. ೧-೬೫-೧).

**ತೊಟ್ಟಿಡೆ** = ದೇಟಿನ ಭಾಗ: ನೆಟ್ಟನೆ ಬಳೆದು ನೆಗಟ್ಟು ತೊಟ್ಟಿಡೆಯೋರೆವಟ್ಟಲದರ್ಾವರೆಯಂತೆ ಬಟ್ಟಮೊಗವನೋರೆಗೊಳಿಸಿಯುವನ ಮೊಗ ಎಟ್ಟ ದಿಟ್ಟಿಯೊಳು ನಟ್ಟಿಪುದು (ಚಿಕವಿ. ೬-೦೫೬ ಸಾಂಗತ್ಯ).

[ ದೇ.॥ ಮಲ. ತೊತ್ತು; ತುಳು. ತೊಟ್ಟು ]

**ತೊಟ್ಟು$_5$** (ನಾ). (ಕರಾ) ತೆಕ್ಕೆ; ಕಂತೆ: ಈ ಹುಲ್ಲು ಎರಡು ತೊಟ್ಟು ಆಗುತ್ತದೆ (ರೂಢಿ).

[ ದೇ.॥ ತುಳು. ತೊಟ್ಟು = ತೆಕ್ಕೆಯಲ್ಲಿ ಹಿಡಿ, ತಬ್ಬು ]

**ತೊಟ್ಟು$_6$** (ಅ). ಮೊದಲಾಗಿ; ಹಿಡಿದು; ಆರಂಭವಾಗಿ: ಪುಟ್ಟಿದಂದಿತೊಟ್ಟಂತಪ್ಪುಣಿಸಂ ಕನಸಿನೊಳಪ್ಪೊಡಂ ಕಂಡಱಿಯದವಗಂ ಚೋದ್ಯಂಬಟ್ಟು . . . ಆಕಂಠಪ್ರಮಾಣಂ ಬರೆಗಂ ತಣಿಯುಂಡು (ವಡ್ಡಾರಾ. ೬೮-೨೦); ಕೊರಲೊಳ್ ಕಟ್ಟಿದ ದೇವಿಯಂತಿರುರದೊಳ್ ಶ್ರೀ ತೊಟ್ಟಿಲೊಳ್ ತೊಟ್ಟನಂತರಮೆನ್ನೊಳ್ ನೆಲಸಿತ್ತು (ಪಂಪಭಾ. ೧೦-೯): ಬಾಲಕಾಲದಿಂ ತೊಟ್ಟು . . . ಖಲಜನಸಂಗತನುಮಾಗಿಯುಂ ನಡೆಯುತ್ತುಮಿರೆ (ಪಂಚತಂ. ೨೭-೨೦): ಆ ಬಾಲಕರ್ ಬಾಲ್ಯದಿಂ ತೊಟ್ಟು ಗೋಳಾಂಗೂಳರಂತೆ ಸಹಜಚಾಪಲ್ಯರುಂ . . . ಎನಿಸಿ (ಸುಕುಮಾ. ೨-೫ ವ); ಅಂಗುಷ್ಠ ತೊಟ್ಟು ಪಾಣಾಗ್ರ ಪರಿಯಂತರದಲ್ಲಿ ಸ್ನಾನವ ಮುಟ್ಟ ನೋಡಿ (ಸರ್ವಜ್ಞ. ೨೨-೧೦೧): ಕಱೆಯಂ ಕಟ್ಟಿಸು ಭಾವಿಯಂ ಸವಸು . . . ಶಿಷ್ಟರಂ ಪೊರೆಯೆನುತ್ತಿಂತೆಲ್ಲವಂ ಪಿಂದೆ ತಾಂ ಯೆಱದಲ್ಪಾರೆಱವಂದು ತೊಟ್ಟು ಕಿವಿಯೊಳ್ (ಸೌಇಇ. IV, ೨೬೭-೪೫; ಸು. 1411): ನೀವು ಆ ಊರಿಗೆ ಹೋದಾಗಿನ ತೊಟ್ಟು ಎಷ್ಟು ಸುಧಾರಿಸೀರಿ (ಸುಳಪು. ೪೨).

[ <ತೊಡು$_1$./ತಮಿ. ತೊಟ್ಟು ]

**ತೊಟ್ಟುಕಳಚು** (ಕ್ರಿ). = ತೊಟ್ಟುಬಿಡು: ಮರದಲ್ಲಿದ್ದ ಹಣ್ಣು ತೊಟ್ಟು ಕಳಚಿ ಉದುರಿದೆ (ರೂಢಿ). [ ತೊಟ್ಟು$_4$ + ಕಳಚು (<ಕಟಲ್ಚು$_1$) ]

**ತೊಟ್ಟುಕಟಲ್** (ಕ್ರಿ). = ತೊಟ್ಟುಬಿಡು: ನಿಂದು ಕೀಲಿಸಿದೊಡುರ್ವರೆಯೊಗುರ್ಡಿಸಿತ್ತು ಸಾಗರಂ ವೇಳೆಯಿನುರ್ಕಿ ಸೂಸಿದುದು ತೊಟ್ಟುಕಟಲ್ದುವು ತಾರಕಾಳಿಗಳ್ (ಅನಂಪು. ೧೧-೫೮). [ ತೊಟ್ಟು$_4$ + ಕಟಲ್$_1$ ]

**ತೊಟ್ಟುಬಿಡು** (ಕ್ರಿ). ತೊಟ್ಟಿನಿಂದ ಕಳಚಿಕೊಳ್ಳು,–ಬೇರೆಯಾಗು: ತೊಟ್ಟು ಬಿಡದನ್ನಕ್ಕರ ಮುತ್ತಾ ಬುಡದಾಸೆ ಬೇಕು (ಕೂಸ್ಯಸಂ. ೨೨೪-೮): ತೊಟ್ಟು ಬಿಟ್ಟ ಹಣ್ಣನಂತೆ ದ್ರುವ ತಟ್ಟಾಱದ ಫಲದಂತೆ (ಮೋಳಿಮೂ. ೧೨-೪೨). [ ತೊಟ್ಟು$_4$ + ಬಿಡು$_1$ ]

**ತೊಟ್ಟುವಾಯ್** 'ತೊಡು$_1$' ಪರಾ.

**ತೊಟ್ಟುಳಿಕೆ** 'ತೊಟ್ಟುಟಿಕೆ' ನೋ.

**ತೊಟ್ಟುಟಿಕೆ, ತೊಟ್ಟುಳಿಕೆ** (ನಾ). ರುಂಡ ಮುಂಡಗಳಂ ಒಟ್ಟು ಸೇರಿರುವ ಭಾಗ; ಕಂಠ; ಕೊರಳು: ತುಡುಂಕಲಮ್ವಳಿಸುವ ಚಂಚು

ಘಾತಿಯಿಟಿದಾರ್ದೊಡೆ ವಾರಿ ವಿಡುಂಕುತಿರ್ಪ ತೊಟ್ಟುಟಿಕೆ (ದಶಕು. ೧೧-೫೦). **ತೊಟ್ಟುಳಿಕೆ:** ಇಟ್ಟಣೆಸುವೀ ರಣವುದಾಂಧನ ತೊಟ್ಟುಳಿಕೆಯನು ಕೀಳ್ವ ರಾಯಘರಟ್ಟಸಿಲ್ಲ (ಕುವ್ಯಾಕ. ೨೦-೨) : ರಾಮನನೊಟ್ಟೆವಿಸಿ ಮುಂಬರಿದು ಮುನಿಪನ ತೊಟ್ಟು [ಪಾಠಾಂ. ತುಟ್ಟ, ತೊಟ್ಟ]ಳಿಕೆಯಲಿ ಬಾಚಿದಳು ಬಾಪಳಚಪೇಟಕವ (ತೊರರಾ. ೧-೧೧-೧೨) : ಆರುಭಟಗಂಬುಗಳಳಿದವು ಮೇರೆಯನು ಸುರನಿಕರದಸುಗಳು ಸೇರಿದವು ತೊಟ್ಟುಳಿಕೆಗಿಟ್ಟಣಿಸಿತ್ತು ಸಂಗ್ರಾಮ (ನಿಘಾಗ. ೬-೭-೪೪). [ <ತೊಟ್ಟು$_4$ + ? ]

**ತೊಟ್ಟೂರಮ್ಮಳಿ** (ನಾ). ಒಂದಂ ಊರಿನ ಹೆಸರು : ಶ್ರೀ ಶಿವಮಾರ ಭಟಾರರ್ ಜಗವೆಲ್ಲವನ್ ಆಳುತ್ತಿರೆ ತೊಟ್ಟೂರಮ್ಮಳಿಯುಳ್ ಇಱಿದು ಪಿಡಿವಲ್ಲಿ (ಮೈಆರಿ. ೧೯೨೪, ೪೭-೧ : ?). [ ? ]

**ತೊಟ್ಟೆ** (ನಾ). ೧. (ಕರಾ) ತೆಂಗಿನ ಗರಿಗಳಿಂದ ಮಾಡಿದ ಕುಕ್ಕೆ,-ಬುಟ್ಟಿ : ತೊಟ್ಟೆ ಕಟ್ಟಿಕೊಂಡು ಪೊಟ್ಟೆ ಪೊತ್ತ (ಗಾದೆ). ೨. ಪೊಟ್ಟಣ : ಸಾವುಕಾರ ಕಾಗದದ ತೊಟ್ಟೆ ಮಾಡಿ ಒಂದೊಂದಾಗಿ ಎಣಿಸಿ ಲೆಕ್ಕ ಗುಣಿಸಿದ (ಬಾಳಿ. ೫೦). 'ಚೊಟ್ಟೆ$_3$' ಪರಾ. [ ←ತುಳು. ತೊಟ್ಟೆ ]

**ತೊಟ್ಯಾನದಿ** (ನಾ). ಒಂದಂ ನದಿಯ ಹೆಸರು : ತೊಟ್ಯಾನದೀ ಪಶ್ಚಿಮತೋ ಪೇರೂರಾತ್ಪೂರ್ವ್ವಸ್ಥಿತಮ್ (ಮೈಆರಿ. ೧೯೫೦, ೮೮-೧೨ ; ಸು. 475). [ ತೊಟ್ಯಾ$_0$ + ನದಿ ]

**ತೊಡ** (ನಾ). ೧. ಆಭರಣ; ಒಡವೆ : "ಪಸದನಂ, ಪಚ್ಚಂ, ತೊಡಂ – ಈ ೩ ಆಭರಣಂ" (ಕಶಸಾ. ೬೩-೪೧೯) : "ಪಚ್ಚಂ ತೊಡಂ ಪಸದನಮೆನಲ್ ತೊಡಿಗೆಯೆಂದಿಳಿಗೆ ನಾಮಮುಕ್ಕುಂ" (ಕಬ್ಬಿಕ್ಕೆ. ೨೫) ; ವಿನುತ ಮುತ್ತಿನ ತೊಡಗಳಂ ತೊಟ್ಟು (ಚಬಪು. ೧೦-೩೫) : ಮೋಕ್ಷವೇ ವಣಿಯಾದ ವರ ರುದ್ರಾಕ್ಷದೊಡಗಳ ತೊಡಿಸಿ (ಶಂಕರಾ. ೪-೮). ೨. ಉಡಂಪು ; ವಸ್ತ್ರ : (?). [ ತೊಡು$_1$ + – ಅ$_6$ ]

**ತೊಡಂಕಿಕ್ಕು** (ಕ್ರಿ). ಕಷ್ಟಕ್ಕೆ ಗುರಿಮಾಡಂ ; ತೊಂದರೆಗೀಡುಮಾಡಂ : ನೀಮಾರ್ಗಲ ನಿಮ್ಮನಾವಱಿಯೆಮುಂದೆಮ್ಮಂ ತೊಡಂಕಿಕ್ಕುವಂದಿನ . . . ಸೊರ್ಕಕ್ಕಟ ಮುಕ್ಕುವೋಗಿ (ಸುಕುಮಾ. ೪-೨೬). [ ತೊಡಂಕು$_3$ + ಇಕ್ಕು ]

**ತೊಡಂಕು$_1$, ತಡಂಕು$_1$, ತುಡಂಕು$_1$, ತೊಡಕು$_1$, ತೊಡಗು$_1$** (ಕ್ರಿ). ೧. ಸಿಲಂಕಿಕೊಳ್ಳು ; ಸಿಕ್ಕಿಕೊಳ್ಳು : ಅದಟರ ಚೆನ್ನಪೊಂಗರ ಸಬಂಗಳ ತೊಟ್ಟುಟಿಯೊಳ್ ತೊಡಂಕಿ ನಿಲ್ಲದ ಪೊ[ಜವಟ್ಟ] ತಮ್ಮ ಮನದೊಳ್ ಮಿಗೆ ಬೆಚ್ಚಿಸಿದಂತೆ ತೋಱುವ . . . ಕರ್ಬಸುಗಳ್ ಪರಿಗೊಂಡುವಾಜಿಯೊಳ್ (ಪಂಪಭಾ. ೮-೧೦೪) ; ತೊಟ್ಟನೆ ಸಾವುದೊಳ್ಳಿತು ತೊಡಂಕದೆ ಕಾಮನ ದಾಮರಂಗಳೊಳ್ (ಚಂದ್ರಪು. ೮-೬೬) : ನೇಣ್ಬಲೆಯು ತೊಡರೊಳ್ ತೊಡಂಕಿ ನಡುಗುವ ಕುರಂಗಿಯೊಳ್ದೊರೆಯಪ್ಪುಳ್ (ವರ್ಧಪು. ೪-೫೦ ವ) ; ದಿಟ್ಟಿ ತೊಡಂಕೆ ರೂಪಿನ ಬೆಡಂಗಿನೊಳ್ (ಬಂಹರಿ. ೮-೫೩) ; ಆರುಮುಸತ್ಯದೊಳ್ . . . ಪರಸ್ತ್ರೀರತಿಯೊಳ್ ತೊಡಂಕದಿರಲೆಂಬುದು ನಿನ್ನ ಮತಂ (ಪುಷ್ಪಪು. ೭-೧೨) ; ಮೃದುಮೃಣಾಳನಾಳ ತಂತುಜಾಲಕದೋಳ್ಳೊಯ್ಯನೊಯ್ಯನೆರಯ್ಯಮೆಸೆ ನಡೆವಡೆಯೊಳಡಿ ತೊಡಂಕಿ ತಡೆಗೆಡವ ತರುಣ ಮರಾಳಂಗಳಂ ಕಂಡು (ರಾಜಶೇ. ೬-೨೪ ವ). ೨. ಸಿಕ್ಕಾಗು ; ಗೋಜಾಗು ; ಗಂಟುಗಂಟಾಗಂ ; ಹೆಣೆದುಕೊಳ್ಳು ; ತಿರಂಚಿಕೊಳ್ಳು : ತೊಡಂಕಿ ಪೀಱಿದ ಕುರುಳ್ಗಳಿ ಚಿತ್ರದೊಳಾದ ಬೇಸಜಂ ನುಡಿವವೊಲಾಗೆ (ಪಂಪಭಾ. ೧೩-೯೯) : ಪೊರೆದು ಸರೋಜರೇಣುಗಳಿನೊಂದಱಿಯೊಳೊಂದು ತೊಡಂಕಿ ವಾಃಕಣೋತ್ಕರದೊಡಗೂಡಿ ಕಣ್ಗೆ ಕವಿತರ್ಪ ಜಟಾಳಿ (ಕಾದಂಬ. ೬೦೬); ಬಿಡದ ತೊಡಂಕಿ ತೋರ್ಪ ಜಡೆ (ಉಮಾಶ. ೦೪). ೩. ಅನುಮಾನದಿಂದ ಹಿಂದುಮುಂದು ನೋಡಂ ; ತಡವರಿಸು : ಇವನಱಿವರೆ ಕನ್ನಡಗಬ್ಬದೊಳ್ ತೊಡಂಕದೆ ಸಲ್ವರ್ (ಶಮದ. ೪೮). ೪. ಹೋರಾಡು ; ಸೆಣಸು : ಜಯದ್ರಥನನಿಕ್ಕುಟಿದಿರಾರೊಳವಿಂ ತೊಡಂಕವೇಡೆನುತುಂ (ಪಂಪಭಾ. ೧೧-೧೪೫) : ಎಮ್ಮದಿ ಮಣಿಯಿಸುತ್ತಿರದಿಯ್ಯ ತೊಡಂಕಿ . . . ಕಾಳಿಗವಂ ತೆಗೆದರ್ (ರಾಜಶೇ. ೫-೧೨೪). ೫. ಅಡ್ಡಿಮಾಡು ; ಅಡಚಣೆಯೊಡ್ಡು ; ನಿರೋಧಿಸು : "ತೊಡಕು (ತೊಡಂಕು) – ವಿಪರ್ಯಾಸೇ (ಅಡ್ಡಿಮಾಡು)" (ಶಮಧಾ). ೬. ತೊಡರು ; ತೊಡರಿಕೊಳ್ಳು : ಕರುಳ ಪಿಣಿಲು ಕಾಲಂ ತೊಡಂಕೆಯು ಮುಂದೆಗರುಳ್ಗಳಿಂದೆ ದಾಡೆ × × ಯುಂ . . . ಕೊಂಗೆಯ ಸಾಹಣಿ ಸುರಲೋಕಪ್ರಾಪ್ತನಾದ (ಎಕ. VIII, ಸೊರಬ. ೧೩೯-೧೪ : 1173). ೭. ಕೂಡು ; ಸೇರು : ತೊಡೆ ತೊಡಂಕಿದ ಸುಣ್ದೊಡೆಯಿಂ ಮನಂ ನಿರಂತರ ಸುರತಪ್ರಪಂಚಸುಖದಿಂ ಪೆಱಪಿಂಗದೆ (ಚಂದ್ರಪು. ೪-೭೦). **ತುಡುಂಕು$_1$** : ೮. ಮಂಟ್ಟು ; ತಾಗು ; ಸೋಂಕು : ಇಂತು ಭೂಮಿ ಆಕಾಶಮಂಡಲಮಂ ತುಡುಂಕುತುಂ (ಕುಸ್ಮಸಂ. ೩೯-೨೦) ; ಇರ್ದುದೊಂದು ಕುಧರಂ ಗಗನಸ್ಥಳಮಂ ತುಡುಂಕುತುಂ (ದಶಕು. ೧೧-೬೨) : ನಿರುಪಮಮಪ್ಪ ರತ್ನಶಿಖರಂಗಳಿನಾಗಸಮಂ ತುಡುಂಕುತಿರ್ದ . . . ಪೊನ್ನಕೋಂಟೆಯುಂ ತರಣಿಪಯಂಗಳೀಕ್ಷಿಸಿ (ಬಾಧಪು. ೧-೧೧೯). ೯. ಬೇಗನೆ ಹಿಡಿ ; ಚುರುಕಾಗಿ ಹಿಡಿ ; ಥಟ್ಟನೆ ಹಿಡಿ : "ತುಡುಕು, ತುಡುಂಕು – ಸತ್ವರ ಗ್ರಹಣೇ (ಥಟ್ಟನೆ ಹಿಡಿ)" (ಶಮಧಾ) : ತಾಳವಟ್ಟಮಂ ಸೆಳೆದು ತುಡುಂಕಿ (ಚಂದ್ರಪು. ೫-೬೫) ; ಪರಿವ ಪಾವುಗಳಂ ತುಡುಂಕಿ (ಕುಸುಮಾ. ೦೪-೨೯ ವ) : ನವಿರದ್ಯುತಿಯುಂ ಮಲ್ಲಿಕೆಕುಟ್ಮಲಮೆಂದಾ ನಲ್ಲಳ್ಪಯಲಂ ತುಡುಂಕಿ ಕೌತುಕಮಾಂತಳ್ (ಉದ್ಯಟಿ. ೯-೬೩) ; ಆ ನೃಪಂ . . . ದಿವ್ಯಗದಾಯುಧಮಂ ತುಡುಂಕಿದಂ (ದಶಕು. ೨-೨೫) : ಅಳಿಕುಳಮಂ ಹರಿನೀಲಮೆಂದು ತಿಟಿಯಲ್ ಸುರತರುಣಿ ತುಡುಂಕಿ ಸಖಿಯನೇಂ ನಗಿಸಿದಳೋ (ರಾಜಶೇ. ೩-೩೮) ; ಕಂಡರಿಸಿದ ಶುಕಕೋಲ್ಕೆಸಿ ತುಡುಂಕೆ ನೋಡಿ ಯಾರುಂ ನಗುವರ್ (ಮೈಸೂಮ. ೫-೨೦). ೧೦. (ಲಾಕ್ಷಣಿಕವಾಗಿ; ಅವಮಾನಂಕರದಿಂದ) ಆಕ್ರಮಣ ಮಾಡಂ : ಮದುವೆಯಾದ ಮೂಱುದಿವಸವೊದವಿ ಮುಟ್ಟಲಾಗದ ವಳನದಱ ಮೇಲೆ ಬಲ್ಮೆಯಿಂ ತುಡುಂಕಲಾಗದು (ಜನವ. ೧೦-೫೦) : ನೇಹಂದಳೆದು ಮೇಲ್ವರಿದು ಬರೆ ತುಡುಂಕುವ ಬರ್ದಿನಿನಿಯುನ ವಿಲಾಸದಂತೆ (ಭಾವಚಿಂ. ೭-೧೭). ೧೧. ಹರಡು ; ವಿಸ್ತರಿಸು : ಸೋಗೆಯಂ ನೆಗಪಿ ತುಡುಂಕಿ ಮೆಟ್ಟುವ ನವಿಲ್ . . . ನಗುವ ಶುಕಾಳಿ (ಸೂಕ್ತಿಸು. ೧೦-೭೪). **ತುಡುಕು$_1$** : ೪. ಘನಸಂಗರದೊಳಗೆ ನನ್ನೊಡನೆ ತುಡುಕಿದಡಱಿಯಬಹುದು (ಕುವ್ಯಾದ್ರೋ. ೪-೪೩) ; ತುಡುಕಲಮ್ಮುವರಿಲ್ಲ ಬಲದಲಿ ಮಿಡುಕಲಮ್ಮುವರಿಲ್ಲ (ಕುವ್ಯಾದ್ರೋ. ೭-೪೮) ; ಎರಡೂ ಮಹಾಸೈನ್ಯಗಳು ಒಂದನ್ನೊಂದು ತುಡುಕಿ, ಕಡಂಗಿ ಕಾದಿದವು (ಕರತ್ನ. ೫೮). ೮. ಪೊನ್ನಕೋಂಟೆ ಮುಗಿಲಂ ತುಡುಕುತ್ತಿರೆ (ಪಂರಾಮಾ. ೩-೩೫) ; ವಿಷದ ಕೊಡನ ತುಡುಕಲೆ ಬಾರದು (ಚನ್ನವ. ೫. ೩೩-೭೨) ; ತೆರೆಗೈಯಿಂ ತುಡುಕುತ್ತು ಮೊಳ್ಳೊಡೆಯನಾದಂ . . . ಕಾಮುಕನವೊಲ್ ನೀರೇಱುತಿರ್ದತ್ತು . . ಪದ್ಮಾಕರಂ (ಚಂದ್ರಪು. ೭-೧೨೬) ; ತುಡುಕಿದ ಜಲಂ ಸಿದ್ಧಾಂಬು ನುಡಿದ ನುಡಿಗಳು ಮೂಲಮಂತ್ರವು (ಸಿದ್ಧರಾ. ೨-೨೦) : ಪ್ರಸಾದವ ಬೆಕ್ಕು ತುಡುಕುತಿಪ್ಪ ದಾಯುಮಂ ಪೇಳ್ವಂದು (ವೀಶ್ವಪು. ೮-೦-೫೨) : ಕಡಗ ಕಂಕಣ ಬಳೆಗೈ ಝಣರೆನೆ ನಾರಿ ಬಿಡದಾಗ ಕಲೆಯ ತಾಣಗಳ ತುಡುಕಿ ತಾಡನಗೈದು (ಕೊನವಿ. ೧೦-೪೫). ೯. ಕರಿಪೋತಂ . . . ಕೇಸರಿಣಿಯ ಕೆಚ್ಚಲಂ ತುಡುಕುತುಂ ಪರಿವತ್ತು (ಪಂಪಭಾ. ೭-೮೦) : ಘಟಸರ್ಪನ ತುಡುಕಿ (ಬಸವ. ೬೨೫) ; ಮಿಱುಗುವ ಬೆಳದಿಂಗಳಗೊಲ್ಲಣರೊಱತೆಯ ಜಲದೊಳಗೆ ಪೊಳೆಯೆ . . . ಎಳವಿನ್ನಳ್ಗೆತ್ತೀಂ ಕಿಱುವೇಡಿತಿ ತುಡುಕಿ ಶಬರನಂ ನಗಿಸಿದಳೊ (ಲೀಲಾವ. ೭-೪೩) : ಒಡನೆ ಧಾರೆಯುನಿಕ್ಕಿ ಶುಕ್ರನ ತುಡುಕಿ ತೇಜವ ಕೊಂಡು (ತೊರರಾ. ೦-೮-೩೪) ; ಸೆಱಗುವಿಡಿದೆ ಸಾರ್ಸರಂಬ ಕರವನು ಭರದೆ ತುಡುಕಲೊಡೆಮುರಿವ . . . ತರಳೆಯೊಮ್ಮು

ಗಳೊಪ್ಪಿದರು (ಕಂನವಿ. ೬-೧೭೫) : ಮುತ್ತುಗಳ್ . . . ಪಾರೆ ಪನಿಗೆತ್ತು ನವಿಲ್ ತುಡುಕೆ (ರಾಜಶೇ. ೫-೪೦) : ಕೊಡನ ಮುಱಿಯು ಪಡೆಯಂ ತುಡುಕುವೆಗ್ಗನಂತೆ (ರಾಮಾಶ್ವ. ೬೪-೨೭) ; ಯುವಕನೆ 'ತುಡುಕು ಕಠಾರಿ ಯನು ! (ಪಾಂಡಜ. ೧೪-೧೪). ೧೦. ಮಹದೇವಿಯನು ಕಂಡರಸನೇಕಾಂತ ದಲಿ ತುಡುಕಿದೊಡೆ (ಪ್ರಭುಲೀ. ೦೦-೨೧) : ಕಾಮಾತುರದಿ . . . ಬಂದವ ಭರದಿ ತುಡುಕಲು ಪುಷ್ಪವತಿ ತಾನೆಂದಳೆದೆ ಬೆದರಿ (ಅಂಬಿಕಾ. ೮-೩೦) : ದ್ರೌಪದಿಯನ್ನು ಕೀಚಕನು ಬಲಾತ್ಕಾರದಿಂದ ತುಡುಕಿದನು (ನೀಗಟ್ಟು. ೧೩೭). ೧೨. ಎರಗು ; ಮುತ್ತು : ಪುಷ್ಪದೊಳು ಗ ಂ ಧ ವಿ ರ ಲಾ ಅ ಡಿ ತುಡುಕುವುದೆಂದು ನೆಲದೆ ನಿಡುಬೇರಿನೊಳ್ ಪರಿಮಳವೆತ್ತು ರಂಜಿಪ ಮುಡಿವಾಳ (ಮೋಹತ. ೩-೧೭): ಕಮ್ಮಲಿರ್ಗಂಧಗಂಧಿಯರು ತಮ್ಮ ನಾಳುವ ಕೃಷ್ಣರಾಯನ ತುಡುಕಿದ ಪೆರ್ಮೆಯನೇನ ಬಣ್ಣಿಪೆನು (ಮೋಹತ. ೦೪-೬೮). ೧೩. ಮುನ್ನುಗ್ಗು ; ಆಕ್ರಮಿಸು : ತುಡುಕಿದವು ತೇಜಿಗಳು ವಾಘೆಯ ಗಡಣದಲಿ (ಕುಮಾರವ್ಯಾ.ದ್ರೋ. ೩-೩೯). ತುಡುಕುವಾನೆಯನೀಸಿನಲಿ ಖುರವಿಡುವ ಕುದುರೆಯನೊತ್ತಿಹಾಯ್ವುವ (ಕುಮಾರವ್ಯಾ.ಶ. ೧೫-೨೩) . ೧೪. ಆವರಿಸು ; ತುಂಬು ; ವ್ಯಾಪಿಸು : ತುಡುಕಿದವು ತಂಬಟದ ದನಿ ಜಗದಡಕಿಲನು (ಕುಮಾರವ್ಯಾ.ದ್ರೋ. ೧-೪೭) : ಪಿಡಿವ ಕಾಳೆಗಳ ಬಾಜಿಪ ಡಕ್ಕೆಗಳ ದನಿ ತುಡುಕಿತಜಾಂಡಮಂಡಲವ (ವರ್ಧಮಾ. ೬-೮೪). ೧೫. ತೆಗೆದುಂ ಕೊಳ್ಳು ; ಹಿಡಿ ; ಎತ್ತಿಕೊಳ್ಳು : ಪರವಧುವ ನೆರೆಯದೆ ಪರಧನವ ತುಡುಕದೆ (ದೇವಾವ. ೩೩ ೬೦) : ನಾರಿಯುಂ ತುಡುಕಿ ಕರ್ಣದ ಕಡೆಗೆ ಸೆಳೆಯೆ (ಹದಕಾ. ೬-೩೭): ತುಡುಕುವಂಕುಶದಿಂದ ಮುನ್ನಿಳೆಯೊಡೆಯ ಗಜ ಗಾಢಿಸಿದವು (ಕುಮಾರವ್ಯಾ.ಭೀ. ೨-೨); ತು ಡು ಕಿ ದ ರೆ ಕೈ ಬೇವುದು (ಕುಮಾರವ್ಯಾ.ದ್ರೋ. ೪-೬೦) ; ತುಡುಕಿ ತೂಗುವ ಸೂತ್ರಯಂತ್ರದ ಗಡಣದಲಿ ಗತಿಗೊಂಡು ಬೇಡಿತ ಕೊಡುವ ಮಣಿಪುತ್ರಿಕೆಗಳೆಸೆದವು ವಿವಿಧ ರಚನೆಯಲಿ (ತೊರರಾ. ೧-೧೩-೦೦) ; ರಾಹು ತುಡುಕಿದ ಚಂದ್ರಮಂಡಲವೋ (ಜೈಮಿಭಾ. ೪-೧೩). ೧೬. ಧರಿಸು ; ಹೊಂದು ; ತಳೆ : ಬಿಸಿಲಂ ಕಳೆದು ಬೆಳು ದಿಂಗಳಂ ತುಡುಕುವ ಗಗನಲಕ್ಷ್ಮಿಯಂತೆ ಕೆಂಪಿನ ಪ ಸ ದ ನ ಮು ಂ ಕಳೆದು . . . ಬೆ ಳ್ಪ ಸ ದ ನ ಂ ಗೈ ದು (ಅರ್ಜನೀ. ೨-೧೩ ವ)

ತೊಡಕು$_1$ : ೧. ಕಡುಭವದ ಬಾಧೆಗೆ ತೊಡಕಿ ಮೊಱೆಯಿಡುವ ಭವಿಗಳ ನಾಲಿಸುವವೊಲು (ಬಸವು. ೩-೩೮); ಮಿಡುಕುವುದು ಬಾಯ್ ಚಿತ್ತವವಳಲಿ ತೊಡಕಿಹುದು (ಕುಮಾರವ್ಯಾ.ಆ. ೦೯-೩೭) ; ಮಡದಿ ಮದನನ ಬಲೆಯ ಬಾಯಲಿ ತೊಡಕಿ ಬಿರ್ದುದನಱಿದರಾಗಳೆ (ಪ್ರಭುಲೀ. ೫-೨೩) ;ಒಡನೆನ್ನ ನಿಟ್ಟಿಸಿದರಾ ಮೋಹವಲೆಯೊಳು ತೊಡಕದರಿಲ್ಲ ನಿನ್ನಾಣೆ (ಕಂನವಿ. ೧೦-೩೪) : ಕಾಮುಕರ . . . ಕಡೆಗಂಗಳ ಸರಳಿಯೊಳು ತೊಡಕಿ ಹಮ್ಮ ಯಿಸುವರು (ಕೊಲ್ಲಾಪದ. ೨೯). ೨. ತೊಡಕಿದ ಗಳದ ಹಾರದ ಕೆಂಪು ಗದಡಿದಧರದ . . . ಕೋಮಲೆಯರು (ಜೈಮಿಭಾ. ೦೦-೫೦). ೩. ಬೆದಱು ಗಂಗಳ ಬಿಟ್ಟ ಮಂಡೆಯ ಹುದಿದ ಹಾಹಾರವದ ತೊಡಕಿದ ಪದಯುಗದ ವರಸುದತಿ ಬಂದಳು ರಾಜಸಭೆಗೆ (ಕುಮಾರವ್ಯಾ.ಸ. ೧೪-೬೧). ೪. ಮುನ್ನ ತೊಡಕಿ ತನಗಾದ ಭಂಗಂಗಳಂ ಪೇಳನೇ ನಿನಗೆ ಕಮಲಜಕಂದನು (ಹದಕಾ. ೮-೧೫) : ತೊಡಕಲಱಿಯದವಂ ತೊಡಕಿ ದವನಂ ತೊಡಕುವವನು (ಬಸವು. ೫೧-೪೮) : ಅಧಿಕರೊಳಿರದೆ ತೊಡಕುವು ದಾಗದೆಂಬುದನಱಿಯೆಯಾ ನೀನು (ಕುಮಾರವ್ಯಾ.ಉ. ೭ರಿಇ. ೯-೫೩) ; ಕಡಗಿದಡೆ ಕೋದಂಡರುದ್ರನ ತೊಡಕಿ ಬದುಕುವವರಾರು (ಕುಮಾರವ್ಯಾ.ದ್ರೋ. ೧-೫೭) ; ತೊಡಕಿದವರ ಗಂಡನೆಂದೆಂಬೆಪದ ಕಾಲ ತೊಡರೆಸೆದುದು ರಾಮನಿಗೆ (ಕುಶಾಸಾಂ. ೦೯-೩೦) : ವಿಚಾರಿಸೆ ನೀನೆನ್ನೊಳೋರಂತೆ ತೊ ಡ ಕಿ ದೆ ಮಹಾರಣಾಂಕಣದೊಳು (ಚಬಪು. ೫೦-೩೪): ಫಣಿಲೋಕಮಂ ಸುಡುವೆನು ಕಂಜಜ ಕಪರ್ದಿಗಳನ್ನೊಡಕಿದೊಡೊರಲ್ಚುವೆಂ (ಜೈಮಿಭಾ. ೨೪-೩).

೫."ತೊಡಕು (ತೊಡಂಕು)-ವಿಪರ್ಯಾಸೇ (ಅಡ್ಡಿಮಾಡು) " (ಶಮುಧಾ). ೭. ಬುದ್ಧಿಗೆ ಸಂಶಯಾಳಾಪ ತೊಡಕಿಕೊಂಡುದು (ತೊರರಾ. ೩-೯-೪). ೮. ನುಡಿಸಿಯಱಿಯೆವು ಕಂಡು ಕೇಳ್ದುಂ ತೊಡಕಲಱಿಯೆವು ನಿನ್ನನೆಂದುಂ ಗಡಬಡಿಸಿ ನೀನೆನ್ನುವಂ ಝುಂಕಿಸಲಿಹಗೆ ಬಹುದು (ಬಸವು. ೪೦-೩೮). ೧೭. ಅಡಗಿರು ; ಮರೆಯಾಗಿರು : ತಳ್ತ ಕಲ್ಪಭೂಮಿರುಹನಿಕುಂಜಮಂಜರಿ ಗಳೊಳ್ ತೊಡಕಿರ್ಪನೋ (ವರ್ಧಪು. ೧೦-೫೭). ತೊಡಗು$_1$ : ೪. ಇತ್ತಲಿ ನ್ನಯ ಪಸಿವು ಪೆಚ್ಚಿದೆ ತುತ್ತು ಪೊಗದೊಳಗಿವನ ತೊಡಗಲದೆತ್ತಲಕಟಾ ವಿಧಿಯೆನುತ ಮುರಿದೆದ್ದನಮರಾರಿ (ಕುಮಾರವ್ಯಾ.ಆ. ೧೦ ೩೨).

ತೊಡಂಕುಸೊನ್ನೆನೂಲ್ = ಹೆಣಿಗೆಗೊಂಡ ಬಂಗಾರದ ಉಡಿದಾರ: ಬಜ್ಜರಮಂಕಿ ತೊಡಂಕುಸೊನ್ನೆನೂಲ್ ತಳತಳೆನಿಪ್ಪ ಸಣ್ಣ ಪೊಸಪೊನ್ನುಡೆ (ಚಿಕವಿ. ೩-೯೦).

[ ದೇ.೧ ತವಿ. ತೊಟಕ್ಕು, ತುಟಕ್ಕು ; ತೆಲು. ತೊಡಗು, ತೊಡುಗು ]

ತೊಡಂಕು$_2$, ತೊಡಂಗು, ತೊಡಕು$_2$. ತೊಡಗು$_2$ (ಕ್ರಿ). ೧. ಪ್ರಾರಂಭಿಸು ; ಮೊದಲುಮಾಡು ; (ಕೆಲಸದಲ್ಲಿ)ಪ್ರವರ್ತಿಸು : ಸರ್ವಜ್ಞ ಭೂಪನೋಲಗದೊಳ್ಳಿಂದಿರೆ ದಂಡಾಧೀಶಂ ಕುಳ್ಳಿರೆ ಮಂತ್ರಿ ತೊಡಂಕೆ ಕವಿ ಜನಾರ್ದನದೇವಂ (ಅನಂಪು. ೧-೫೭). ತೊಡಂಗು: ೧. ಮತ್ತಮೆಂಟು ದಿವಸಂ ಮಹಾಮಹಿಮೆಯಂ ಮಾಡಲ್ ತೊಡಂಗಿದೊಡೆ (ವಡ್ಡಾರಾ. ೧೦೭-೧೫) : ಚಿರಕಾಲಂ ತೊ ಡ ಂ ಗಿ ಪರಿಗೃಹೀತಬ್ರಹ್ಮಚರ್ಯವ್ರತ ಪರಿಣತನಾದಂ (ಗದಾಯು. ೫-೪೪ ವ). ತೊಡಕು$_2$ : ೧. ಅವನಿಜೆಯ ಕಾಬೆಣಿಕೆ ಕಡೆಗೆ ನಿಲಲಱಿಯದು ನಿರರ್ಥಕೆ ತೊಡಕಬಹುದೆ (ತೊರರಾ. ೪-೧೨-೩೧); ವೀರಚಿಕದೇವಂ . . . ಸೀಸಂ ಕರಂ ಕೊಂಕಸಂ ಮುಗುಬ್ಬಿಂತೀ ಗತಿಭೇದದಿಂ ತೊಡಕಿ ತೋರ್ಕುಂ ಸಾಧಕಪ್ರೌಢಿಯಂ (ಚಿಕವಿ. ೪-೧೪೭) : ಮೇಲಱಿಯದಧಿಕರೊಳು ಕಾಳಗವ ತೊಡಕಿ[ಪಾಠಾಂ. ಗಿ]ದರೆ ಬಾಳುವೆಯು ಕೆಟ್ಟು ಬಡವಕ್ಕು (ಸರ್ವಜ್ಞ. ೭೪೧). ೨. ಪ್ರಾಪ್ತವಾಗು ; ಒದಗು ; ಉಂಟಾಗು : ಒಡಲ ಜಡಿದವು ರೋಮರೋಮದೊಳಡಸಿದಂಬುಗಳಂಗ ವೇದನೆ ತೊಡಕಿತು (ಕುಮಾರವ್ಯಾ.ಭೀ. ೧೦-೨೪). ತೊಡಗು$_2$ : ೧. "ತೊಡಗು – ಪ್ರಾರಂಭೇ" (ಶಮುಧಾ) : ಸುರಿವುದು ತಡೆಯದಯೋಧ್ಯಾಪುರದೊಳ್ ನೀನಿಂದೆ ತೊಡಗಿ ವಸುಧಾರೆಯನಾವರದಿನೆನೆ (ಆದಿಪು. ೭-೩) ; ಕರಂ ಸಂಪ್ರೀತಿಯಿಂ ನೂತನಂ ತಾನಿಂತೆಂದು ನಿವೇದಿಸಲ್ತೊಡಗಿದಂ (ವರ್ಧಪು. ೩-೫೭) ; ಸುರಪತಿಯು ಕೆಟ್ಟ ಸಂಪದಮಂ ತರಲ್ಕೆಂದು ಉರವಣಿಸಿ ತೊಡ ಗಿದರು ಕಡಲ ಕಡೆಯಲ್ಕೆಂದು (ನಂಬಿರ. ೧-೪): ಹೊಸ ತವಸಿ ತೊಡಗಿದನು ಬಲುತಪವ (ಕುಮಾರವ್ಯಾ.ಆ. ೪-೪೩) ; ಯಜ್ಞಮಂ ತೊಡಗೆ ದಕ್ಷಂ (ಭಾವಚಿಂ. ೩-೦೩). ೨. ಇದು ದಲ್ ವಿಸ್ಮಯಮಾಗಿ ತೋಱಿದಪುದೇನಿಂತೀಗ ಳೆಂದಮಾದುದೋ ಮೇಣಲ್ಲದೊಡಾಳ್ವನಿಂ ತೊಡಗಿತೋ (ಸುಕುಮಾ. ೨-೩೧) ; ತೊಡಗಿತ್ತು ಕಿರಾತಭೀಕರಧ್ವನಿ ವನದೊಳ್ (ಗಿರಿಕ. ೧-೮೧) ; ನಾರಿ ತೊಡಗಿದ ಕೋಟಿದುಃಖದಿಂ ನುಡಿವ ನುಡಿ ಕೂರಂಬಿನಂದದಿಂ ಹೃದಯಮಂ ತಟ್ಟುಗಿಯಲು (ಭಾವಚಿಂ. ೮-೩೩) : ಮಕ್ಕಳಿರ ನಿಮಗೆ ರಘು ವರನ ಸೇನೆಯೊಳಾಯ್ತು ಗಡ ಕಲಹಮೇಕೆ ತೊಡಗಿತು (ಜೈಮಿಭಾ. ೨೧-೪೪) : ಅರಸುಗಳಿಗಾದರೋ ಇಷ್ಟಾರ್ಥಸಿದ್ಧಿಯು ಸಂಗಡಲೇ ದುಃಖ ತೊಡಗಿರುವುದು (ರಾಕುಂತ. ೬೨-೨೪).

ತೊಡಗಿ = ಮೊದಲುಮಾಡಿ ; ಆರಂಭಿಸಿ ; ಮೊದಲ್ಗೊಂಡು : ಅಲ್ಲಿಂ ತೊಡಗಿ ದಕ್ಷಿಣಾಪಥದೊಳದು ತೀರ್ಥಮಾಯ್ತು (ವಡ್ಡಾರಾ. ೧೦೭-೫) ; ಉಡೆವಣಿ [ಪ]ಱಿಯದ ಮುನ್ನಮೆ ತೊಡಗಿ ಚಲಂ ನೆಗೞೆ[3] (ಪಂಪಭಾ. ೧-೪೭) : ಮಗನಂ ಕಿಱಿಯಂದಿಂ ತೊಡಗಿ ಶಿಕ್ಷಿಸದಿರ್ದುದಱಿ ನಿಂತಾಯ್ತು (ಧರ್ಮಾಮೃ. ೨-೮೩) ; ಪಲವು ಕಾಲಂ ತೊಡಗಿಯಾಲದ ನೆಲೆಯೊಳಿದ್ದೆನ್ನಿರವಳಿದು ನಿಃಫಲವೆನಿಸಿತಲ್ಲಾ (ಬಸವು. ೫೭-೧೫) :

ಹಿಮಗಿರಿ ತೊಡಗಿ ಸಾಗರ ವೇಲೆ ಪರಿಯಂತಖಿಳನಗರಗ್ರಾಮಪುರವರದ . . . ಸಮಸ್ತಭೂಜನಜಾಲ ಹಸ್ತಿನಪುರಿಗೆ ಬಂದುದು (ಕುವ್ಯಾಗ. ೧೩-೧) : ಕೃತಿಯು ಪಲ್ಲವಿ ತೊಡಗಿ ಪೂರ್ಣಮಪ್ಪನ್ನವಿಾ ಕೃತಿಯೊಳುತ್ಪ್ರೇಕ್ಷೆಯಿಲ್ಲದುದೊಂದು ಪದವಿಲ್ಲ (ಭಾವಚಿಂ. ೧-೧೭).

[ ದೇ.॥ ತಮಿ. ತೊಟಙ್ಕು, ತುಟಙ್ಕು ; ಮಲ. ತುಡಙ್ಙು ; ತುಳು. ತೊಡಗು ; ತೆಲು. ತೊಡಂಗು ]

**ತೊಡಂಕು$_3$**, ತಂಡುಕು$_2$, ತೊಡಕು$_3$, ತೊಡಗು$_3$, (ನಾ). ೧. ಸಿಕ್ಕು ; ಗೋಜು ; ಗೊಂದಲ : ಮದಿರಾಮದದೊಳಮಳವಿಗಟ್ಟಿಯೆ ಸೊರ್ಕೆ . . . ಕೂಕಿಡುವ ಕುಕಿಲ್ವ ಬಿಕ್ಕುಳಿಪ ತೇಗುವ ತನ್ನ ತೊಡಂಕದೆಯ್ದೆ ನೂರ್ಮಡಿ ಮನದೊಳ್ ಪಳಂಚಲೆಯೆ ದಕ್ಕೆಯೊಳಟ್ಟುಜವಾಗೆಯಾಡಿದಳ್ (ಪಂಪಭಾ. ೪-೯೦) : ಕರುಳ ತೊಡಂಕಂ ಬಿಡಿಸಿ ನಡೆ ನೋಟ್ಪೆನೊಳಗೆಲುವಡಗಿರ್ಪುದು ಜೀವನಿರ್ಪೂಡಲ್ಲಿಗೆಪೋದಂ (ಯಶೋಚ. ೪-೦೯) : ಜಡಿವ ಹಾರವಲಯಗಳ ತೊಡಂಕ ತಪ್ಪಿಸದೆ . . . ತಲ್ಲಣಿಸಿ ಸೊಪ್ಪಡಸಿ ಕೆಡೆಯಲು (ನವಮೋ. ೭-೬). ೨. ತೊಡಕಿಕೊಳ್ಳುವಿಕೆ ; ಸಿಕ್ಕಿಹಾಕಿಕೊಳ್ಳುವಿಕೆ; ಕೂಟ: ನಳಿತೋಳದಿಗೊರ್ಳ್ವ ತೊಡಂಕಿನಪ್ಪು ಬಾಯ್ದೆಱೆಯಿದಿಗೊರ್ಳ್ವ ಚುಂಬನಂ (ಅರ್ಜನೀ. ೨-೩೬) ; ಸೋಂಕು ಯುವತಿಯರೊಳಲ್ಲದೆ ಪಿಡದ ತೊಡಂಕುಂ ಬೇಟದ ತೋಟಿಯೊಳಲ್ಲದೆ ಕೋಟಲೆಗಳು [ತಾಂ] ಬೇಱಿಲ್ಲ (ಕುಮುರಾ. ಬೀರಿಕಾಸಂಧಿ. ೫೯) : ಸೋಂಕಿ ಚೆಂದುಟಿಗಚ್ಚಿದಿನಿಯಗೆ ಮುಗ್ಧೆ ತೊಡಂಕು ಸಾಕೆಂದು ಕೈದೊದರ್ವ ಕಂಕಣದುಲುಹೊಯೆಂಬಂತೆ (ಭರಚ. ೧೧-೧೭). ೩. ಅಡ್ಡಿ ; ಅಡಚಣೆ : ಉಡಿಗೆ ತೊಡಿಗೆಯ ತೊಡಂಕಿಲ್ಲ[ಪಾಠಾಂ. ತೊಡಕಿಲ್ಲ, ಹಂಗಿಲ್ಲ]ದೆ ರನ್ನಗನ್ನಡಿಯೆ ಜಿನೇಂದ್ರನಾದಂತೆ (ಭರಚ. ೭೭-೩೭) : ಕಾರ್ಯಸಿದ್ಧಿಗೆ ತೊಡಂಕು ತೋರ್ಪುದೆ (ರಾಜಶೇ. ೦೪-೪೪). ೪. ಕಷ್ಟ ; ತೊಂದರೆ ; ಕ್ಲೇಶ : ಪಟುನುಡಿಯ ತೊಡಂಕನಡಿಗಡಿಗೆಡವದಂತಿರೆಡೆವಿಡದೆ ಬಿಚ್ಚಟಿಸಿ ಶಿಷ್ಯರ್ಗೆ ನಿರವಿಪ ಕುಲಪತಿಯ (ರಾಮಾಶ್ವ. ೧೩೭-೨೯). **ತುಡುಕು$_2$** : ೫. ಬೇಗನೆ ಹಿಡಿಯುವುದಂ ; ಸತ್ವರಗ್ರಹಣ. ‘ಕೈದುಡುಕು$_2$’ ಪರಾ. **ತೊಡಕು$_3$** : ೧. ನಿನ್ನಂ ನುಡಿಯ ತೊಡಕಿನ ಬೆಡಂಗಿನಿಂ ಸೋಲಿಸಿ . . . ತಗುಳ್ವುದಿದು ದೈವಿಕಂ (ಹಡಕಾ. ೦೦-೦೩). ೩. ವಿಶ್ವಾಮಿತ್ರಮುನಿಯೆನಗೆ ಮತ್ತೆ ಮಾಡಿದ ತೊಡಕಿದಾಗದಿರದು (ಹಡಕಾ. ೦೨-೪೦); ನಿನ್ನವೃತ್ತಾಂತವ ಖಳರಾಯಗಱುಹಿ ಮುಂದಾವ ತೊಡಕಿಲ್ಲದಂತೆ ಮಾಡುವೆ (ಮೋಹತ. ೧೦-೩೨); ಬಾಳ್ಕೆಯಲಿ ನೂರೆಂಟು ತೊಡಕು ತಿಣುಕುಗಳುಂಟು (ಮಂಕುತ. ೬೪೩); ನಮ್ಮ ಹಾದಿಯಲ್ಲಿ ತೊಡಕುಗಳು ವಿಪರೀತ (ಮುರುಕು. ೧೮). ೪. ಬಿಡಿಸಿದಿರೆನ್ನಿಂ ರಾಜ್ಯದ ತೊಡಕಾ [ಪಾಠಾಂ. ರಂ] ಕೈಕೊಂಡು ನೀಮೆ (ವರ್ಧಪು. ೯-೧೧) : ಕೌರವ ಜೀವಿಸಲಿ ಮೋಣಳಯಲೆಮಗಿನ್ನಾ ತೊಡಕಿಲ್ಲ (ಕುವ್ಯಾಶ. ೧-೦೨) ; ಕಕುಸ್ಥಜನೊಪ್ಪದಿರ್ದಡೆ ತೊಡಕು ನಿನಗಹುದು (ತೊರರಾ. ೪-೯-೩೪). ೧, ೪ : ನದಿಯೊಳ್ಚಕ್ರಗತಿ ಕೇಶತತಿಯೊಳ್ ತೊಡಕಬ್ಬದೊಳಾಬಿಡಿ ವರಕುಚಯುಗ್ಮದೊಳಲ್ಲದೆ ಕಠಿಣವೃತ್ತಿಯಿಲ್ಲಾನಾಡೊಳ್ (ಧನ್ಯಕು. ೦-೩೮). ೬. ಸಂಬಂಧ ; ಸಹವಾಸ ; ಕಾಯುದ ತೊಡಕನೊಲ್ಲದೆ ತಕ್ಕಿಗಟ್ಟಿತು ಭಟರು ನಾಕದಲಿ (ಕುವ್ಯಾಭೀ. ೯-೦೮) : ಮೋಳದೊಳು ತೊಡಕ ಬಿಡದವನ ಜಪವದುವೆ ಹಾಳುಮನೆಯಂತೆ (ಸರ್ವಜ್ಞ. ೧೭೩) : ಕೋಪಭಾವದಿಂ ತೊಡವುಗಳ ತೊಡಕುಗಳನುಳಿದು ರಾಜೀವಾಕ್ಷಿ ತಿರೆಯೊಳೊರಗಿರ್ಪಳು (ವಂಕಾರಾ. ೨-೬-೫) : ತನುಕಾಂತಿ ಮೋಹವಿಕೃತಿಗಳುಮಾ ತೊಡಕಿನವು ಕೊನೆಯಿರದ ಬಲೆಯೊ ಅವು (ಮಂಕುತ. ೧೭೮) : ಒಲವು ಹಾಕಿದ ತೊಡಕನೆಂತು ಬಿಡಿಸಲು ಬಹುದು (ಸ್ವದರ್ಶಿ. ೬). ೭. ಗೊಡವೆ ; ಉಸಾಬರಿ : ತರಣಿಯೋಲಗಕೆ ಸೊಡರಂ ಪಿಡಿವ ತೊಡಕೇಕೆ (ಸಿದ್ಧರಾ. ೦-೪) ; ಒಡೆಯ ಚಿತ್ತೈಸಭಿಮಾತಂಗಳತೊಡಕವೇತಕೆ ನಿಧಿಯಿದಿರೊಳಿರೆ ಕಡೆಗೆ ಜಲಗಂ ತೊಳೆಯ ಹೋದಪೆವೆಂಬ ಮರುಳುಂಟೆ (ಬಸಪು. ೫೭-೬೨) ; ನಮಗಿದೇಕರವಿಂದವದನೆಯ ತೊಡಕು (ಕುವ್ಯಾಆ. ೧೫-೩) : ಗೊಡವೆ ತಪ್ಪಿತು ಹೋಗಲೆನ್ನೆನಗದಜ ತೊಡಕೇಕೆ (ಕೌಶಿರಾ. ೧೯-೬). ೮. ಜಟಿಲವಾದಂದು ; ಇಕ್ಕಟ್ಟು : ಸಾಂಖ್ಯದರ್ಶನದಲ್ಲಿರುವ ಬಹುದೊಡ್ಡ ತೊಡಕೆಂದರೆ : ಪ್ರಕೃತಿ ಪುರುಷರ ಸಂಬಂಧದ ಸಾಧ್ಯತೆ (ತತ್ವಜ್ಞಾ. ೨೬೬). ೯. ಸಂಶಯ ; ಅನುಮಾನ : ಎಂತುಟು ಮೋಘನಾದ ತೊಡಕಿಲ್ಲದೆ ಪೇೞ್ ಮಗನಿರ್ದದೊಂದು ವೃತ್ತಾಂತಮುಂ (ಕಾದಂಬ. ೬೩೮). ೧೦. ಸಂದಿಗ್ಧಪ್ರಶ್ನೆ ; ಸಮಸ್ಯೆ ; ಒಗಟು : ರಾಯರಾಜಗುರು ಜಗದ ಬಿನ್ನಾಣಿಯ ತೊಡಕ ಬಿಡಿಸಬಾರದು (ಬಸವ. ೬೨೪) ; ಕೊಡುವಡಿದು ಪರವಲ್ಲದಿದ್ದರೆ ನುಡಿಗೆ ಮೊಳೆ ಹೊಮ್ಮುವರೆ ನಿಮ್ಮಯ ತೊಡಕನೊಲ್ಲುವವನಲ್ಲ (ಕುವ್ಯಾದ್ರೋ. ೧-೪೧) ; ಅಜಗಣ್ಣನು . . . ಕಡೆಯಲೀ ಪರಿ ಕಾಣಬಾರದ ತೊಡಕನೊಡ್ಡಿದನು (ಪ್ರಭುಲೀ. ೦೨-೮). ೧೧. ಜಗಳ ; ಕದನ : ಎನ್ನ ನೀ ಮೊದಲು ನೂಂಕಿದ ಕಾರಣದಿಂದೆ ನಿನ್ನ ನಾ ನೂಂಕಿದೆನ್ನೆಸೆ ಇನ್ನಾವ ತೊಡಕು ಬೇಡ (ಮೋಹತ. ೧೪-೮೦) : ಅವನೊಳು ತೊಡಕು ಸಲ್ಲದು ನಿಮಗೆಂದ (ಶಂನವಿ. ೧೩-೭). **ತೊಡಗು$_3$** : ೩. ‘ಇಡುಗುತೊಡಗಂ’ ಪರಾ.

**ತೊಡಕುಬೀಳು** = ಗೋಜಾಗು ; ಸಿಕ್ಕಾಗಂ : ಭೂಮಿಯನ್ನು ಅಳೆಯುವುದಕ್ಕೆ ಮೊದಲಿಟ್ಟ ಮೇಲೆ ಸರಪಣಿಯು ತೊಡಕುಬಿದ್ದಿರುವುದನ್ನು ನೋಡಬೇಕು (ಭೂಮಿಅ. ೪). [ < ತೊಡಂಕು$_1$ ]

**ತೊಡಂಕುವಲೆ, ತೊಡಕುವಲೆ** (ನಾ). (ಕಾಲಿಗೆ) ತೊಡರಂವ ಒಂದು ಬಗೆಯ ಬಲೆ : ಮಿಳಿರ್ವ ಬಂಬಲ್ಗುರುಳ್ಗಳೆಂಬ ತೊಡಂಕುವಲೆ ಬಸಂತನ ಕೆಳೆಯನೆಂಬೆರಲೆಯುಂ ಸಿಲ್ಕಿಸೆಯುಂ (ಕಬ್ಬಿಕಾ. ೦೨೩) : ಪೆರ್ವಲೆ ತೊಡಂಕುವಲೆ ಕೊಲ್ವಲೆ. . . ಬಿಡುವಲೆಗಳನಿಪ್ಪುವೆಸೆದ.ವಾ ಬೇಂಟೆಗರೊಳ್ (ಶಬಶಂ. ೩-೨೪). **ತೊಡಕುವಲೆ** : ಬಳ್ಳಿವಲೆ ತೊಡಕುವಲೆ . . . ಮಡಿಕೆವಲೆ ಮಂದಸಿನವಲೆಯ ಹೊಱೆಗಳ ಬೇಡವಡೆ ನೆರೆದುದು (ದದಕಾ. ೫-೮) : ದಂಡಿವಲೆಗಳ ತೊಡಕುವಲೆಗಳ . . . ಕಿರಾತರು ಕೆದಱಿತಗಲದಲಿ (ಕುವ್ಯಾಅ. ೧೩-೨೩) ; ಪುತ್ರಮೋಹದ ತೊಡಕುವಲೆಯಲಿ ತಂದೆ ನೀ ಕಾಲಿಡದಿರು (ನಿಭಾಗ. ೩-೧-೭) : ತಡಿಕೆವಲೆ ತಟ್ಟೆವಲೆ ಸಾಲುವಲೆ ಕೋಲುವಲೆ ತೊಡಕುವಲೆ . . . ಮರೆವಲೆಗಳಿರ್ದುವಾ ಶಬರರಲ್ಲಿ (ಸಿದ್ಧೇಪು. ೮-೬) ; ಉರುಲುವಲೆ ತೊಡಕುವಲೆ ಸಿಕ್ಕುವಲೆ ಸಿಡಿಲುವಲೆ . . . ಮೊದಲಾದ ಪರಿಪರಿಯ ವಲೆ ಸಮೂಹವ ನೋಡುತ (ನವಮೋ. ೧೬-೨೦). [ ತೊಡಂಕು$_3$ + ಬಲೆ$_1$ ]

**ತೊಡಂಗ** (ನಾ). ಒಂದು ಬಗೆಯ ಆಯುಧ : ಆ ಬೀರೆಗೌಡನ ಕೈಲಿದ್ದ ಚಿನ್ನದ ಬಳೆ ಎರಡು, ತೊಡಂಗದ ಸರಪಣಿ, ಬೆಳ್ಳಿಕಟ್ಟದ ಚೂರಿ, ಮರೆಚೂರಿ, ಇದನ್ನು ಅವನ ಮೈಯಿಂದಾ ತೆಗೆದು . . . ಮುಚ್ಚಿ ಮಡಗಿ ಬಂದರು (ರಾಜೇಂದ್ರ. ೨೭೬). [ ? ]

**ತೊಡಂಗಟ್ಟು** (ಕ್ರಿ). ಅಲಂಕಾರಮಾಡು: ಅಬ್ಜಮುಂ ಮಣ್ಣುದುತ್ತುರದ ಕುಸುಮದ ತೊಡಂ[ಪಾಠಾಂ. ತೊಡವು]ಗಟ್ಟವಂತೆ ಉತ್ತಮವಿದೆಂದು ಕೃಷ್ಣಾರ್ಜುನರ ಬಿಟ್ಟು ತಂದಿತ್ತ ತುರಂಗಂಗಳಂ (ಜೈಮಿಭಾ. ೨೫-೬೧). [ ತೊಡ + ಕಟ್ಟು$_{ಬ1}$ ]

**ತೊಡಂಗು** ‘ತೊಡಂಕು$_2$’ ನೋ.

**ತೊಡಂದುಡಿಸು** (ಕ್ರಿ). ಒಡವೆಯ[illegible] ಹಾಕು ; ಆಭರಣವನ್ನು ತೊಡಿಸು : ಅಡಿಪಾಡುವ ಮುಡಿ[illegible]ಕ್ಕುವ ತಿಲಕವಿಡುವ ತೊಡಂದುಡಿಸುವ ನಿಱಿವಿಡಿದು ನೀಡುವ [illegible]ಲನನಗ್ಗಡಿಸುವ ಮುಕುರಮಂ ತೋಱುವ ಮಕರಿಕಾಪತ್ರಮಂ ಚಿತ್ರಿಸುವ . . . ನಿಖಿಳಪರಿಚಾರಿಕಾಜನಂ (ಕುಸುಮಾ. ೭-೬ ವ). [ [illegible] + ತುಡಿಸು (<ತೊಡಿಸು) ]

**ತೊಡಂದೊಡು** (ಕ್ರಿ). ಆಭರಣವನ್ನು ತೊಡು,-ಧರಿಸು: ಒಡನಂಟ್ಟೊಡನೆ ತೊಡಂದೊಟ್ಟೊಡನಿರದಾಡಿಯೊಡನೆ ಹೊಸ ಹರೆಯುಂಬಡೆದ ಕೆಳೆಯರಿಂ . . . ಸುಕುಮಾರಂ ಸಡಗರದಿಂ ಸಲೆ ಸಂಪದದೊಳ್ ದಿನಮುಂ ನೂಂಕುತ್ತಿಹನು (ಜಯಕಾ. ೨-೬೬). [ ತೊಡ + ತೊಡು$_1$ ]

**ತೊಡಂಬೆ$_1$**, ತೊಡಬೆ$_1$ (ನಾ). ೧. (ಹಣ್ಣು, ಹೂವು, ಕಾಯಿ ಮೊದಲಾದುವುಗಳ) ತೊಟ್ಟು; ತುಂಬು: "ಪ್ರತಾನವುಳಪಂ ತೊಡಂಬೆಯಂತದು ವೃಂತಂ" (ವಸ್ತುಕೋ. ೩೧-೮): "ವೃಂತಂ ಪ್ರಸವಬಂಧನಂ ಈ ೨ ಹೂವಿನ ತೊಡಂಬೆ" (ಹಲಾಯು. ೩೧-೩೧): ಲತಾಳಿಯ ತಳ್ಪುಬಿರ್ಚದಂತೆಲೆಯ ತೊಡಂಬೆಗಳ್ ಪಱಿಯಿದಂತು . . . ಎಲರೊಲವುಣ್ಮೆ ತೀಡಿದುದು (ಚಂದ್ರಪು. ೨-೧೦೦); ಅಗ್ಗದ ಗಾಳಿಯಿಂದೊಡನೊಡನೆ ಬೀತು ತೊಡಂಬೆಗಳು ಕಡು ಸಡಲಿ ತಮತಮಗವನಿಯಲಿ ಬಿದ್ದರಳುಗಳನುಳಿದು (ಬಸವು. ೨೨-೮); ಬಿಟ್ಟ ತೊಡಂಬೆಯನೆಂದು ಮುಟ್ಟವು ಪಣ್ (ಪರಮಾ. ೨೮-೮೩). ೨. ಮೂಲ; ಬುಡ: ನೋಟದ ನೋಲಂ . . . ಸುಯ್ಯ ಕಂಪಾಟಿಸಲಲ್ಲೆ ಮೆಯ್ಬುಟಲೆ ಸಂದಪುವೆ ಮಲರ್ದಯ್ದುಮಿಂದ್ರಿಯುಂ ಬೇಟದ ಗೊಂಚಲಂತೆ ಮನಮೆಂಬ ತೊಡಂಬೆಯೊಳೊಮ್ಮೊದಲ್ ಸುಖಾಸ್ಫೋಟಮನೀಯುವೆನ್ನವು ಮನಃಪ್ರವಿಚಾರದ ಕಾಮಕೇಳಿಗಳ್ (ಅನಂಪು. ೮-೪೬). **ತೊಡಬೆ$_1$**: ೨. ಉಲುಕಿದರೆ ನಾಲಗೆಯ ತೊಡಬೆಯು ಕಳಚುವೆನು (ಕುವ್ಯಾಕ. ೧೧-೨೫).

[ ದೇ.॥ ತೆಲು. ತೊಡಿಮೆ, ತೊಡಿಮ ]

**ತೊಡಂಬೆ$_2$**, **ತೊಡಬೆ$_2$** (ನಾ). ೧. ಗೊಂಚಲು; ಗುಚ್ಛ: "ತೊಡಂಬೆ ಸುಣ್ಣೊದೆದ ಜೊಂಪಂ ತೊಂಗೆ ಗುಚ್ಛಮೆಂದಿರದೊಪ್ಪಿ ಪದೆದ ನಾಮಂ" (ಕಬ್ಬಿಕೈ. ೦೯); ಮುಂಗುಳ ತೊಡಂಬೆ ಗಂಟೊಡೆಯೆ ಮೊಲ್ಲೆಗೆ ಬೆಳ್ಪುಟಿಪುಟ್ಟೆ . . . ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಲಂ (ಪಂರಾಮಾ. ೭-೧೩೯); ತಳಿರ ತೊಡಂಬೆಯುಂ ತಳೆದ ಮಾಮರಂ (ದಶಕು. ೧-೨೬); ಮಲ್ಲಿಗೆಯಲರ ತೊಡಂಬೆಯ ಮಧ್ಯದೊಳುಲ್ಲಸದಿಂದೆ ಕುಳಿತ ಮಧುಕರನಂ . . ಗೆಲ್ಲಂಗೊಂಡೆಸೆದುದು ಚಿಹ್ನಂ ಸಂಪೂರ್ಣ ಸುಧಾಕರನ (ಜಯಕಾ. ೧೪-೦೩); ಒಳಪೊಱಗಾಗಿರ್ದ ಗದುಗಿನ ಕಾಯಂತೆ ಕೆಳಮೊಗವಾದ ಯೋನಿಗಳು ಬಿಲದಗ್ರದ ಕಟು ಗಳೊಳಗಿರ್ಪವವು ಪಾ ಪ ಫ ಲ ದ ತೊಡಂಬೆಗಳಂತೆ (ವರ್ಧಚ. ೮-೭೬). ೨. ಹೂವಿನ ಗೊಂಚಲು: "ತೊಡಂಬೆ, ತೊಡಬೆ . . . ಗುಚ್ಛ – ಈ ೭ ಪುಷ್ಪಮಂಜರಿ" (ಕಶಸಾ. ೫೫-೧೯೬): ಬಿಟ್ಟುಳಿಯ ಕಕ್ಕುಂಬ ತೊಡಂಬೆಯ ಮೂಡಿಗೆಯ ಕದಳಿಕೆಯ ಕಂಡಪಟಂಗಳುಮಂ (ಪಂಪಭಾ. ೫-೪೭ ವ); ತೊ[ಡಂಬೆ]ಯಂತಪ್ಪಳಿಸುವ ಪೆಣ್ದುಂಬಿಗಳಂತೆ ಲಲಾಟರಂಗದೊಳುಂಗುರಿಸಿ ಕುಣಿವ ನೀಳಾಳಕಂಗಳ . . . ಸೌಂದರಿಯದಿಂ ದೇಸೆವಡೆದ ಪದಿನಾಱಱ ಹರೆಯದ ಹರಂ (ಬಸರ. ೦೨-೮೦); ಬಂದುಣಿವಿಂದುಗಳುಂಡಾಡಲೇಗಳುಮೊಡೆದ ತೊಡಂಬೆಗಳಿಂದೆ ನದಿಯ ದಡಂಗಳಲಸುಗೆಯ ಮರಗಳು ಬೋಳಾದುವಹ ಕಾಲವಶದೆ (ಗಾಥಾಸ. ೦೦೬-೨೨). ೩. ಗುಂಪು; ರಾಶಿ; ಸಮೂಹ: ಅಂಬರದೊಳು ಬಹುವರ್ಣದ ಮುಗಿಲ ತೊಡಂಬೆಗಳೆಡೆಯಾಡುವಂತ (ಭರತ. ೦೮-೩೯). **ತೊಡಬೆ$_2$**: ೧."ತೊಡಬೆ, ತೊಡಂಬೆ . . . ಗುಚ್ಛಕಕ್ಕುಂ ನಾಮಂ" (ಕವಿಕಂ. ೭೮); ಕಳಿತ ಹೂವಿನ ತೊಡಬೆಗಳೊ ರಿಪುಬಲವೊ ಬಿಱುಗಾಳಿಯೊ ವೃಕೋದರನಳವ ಜಲ್ಪವನಃಪನ್ಯೆ (ಕುವ್ಯಾದ್ರೋ. ೨-೮೧). ೨. "ತೊಡಂಬೆ, ತೊಡಬೆ, ತೊಂಗೆ, ತೊಂಗಲ್, ಜೊಂಪಂ, ಗೊಂಚಲ್ ಗುಚ್ಛಂ–ಈ ೭ ಪುಷ್ಪಮಂಜರಿ" (ಕಶಸಾ. ೫೫ ೧೯೬). ೩. ಸೀಗುರಿಸುಪುರಿ ವಿಷದ ಲೋಳೆಯ ಲಾಗಿಸುವ ನಾಲಗೆಯ ಸುಯ್ಲಿನ ಬೇಗುದಿಯ ತೊಡಬೆಗಳ ಹಾವ್ ತುಡುಕಿದವು ಥಟ್ಟನಲಿ (ಕುವ್ಯಾಕ. ೨೩-೩೯).

[ ದೇ.॥ ತುಳು. ತೊಡುಂಬೆ, ತೊಲುಂಬೆ ]

**ತೊಡಂಬೆಪಱ** (ಕ್ರಿ). ತೊಟ್ಟು ಕತ್ತರಿಸಿಹೋಗು: ಬಡಿ ಕೋಳೆ ಕಾಯುಂ ಪಣ್ಣುಂ ತೊಡಂಬೆಪಱದುದಿರ್ವ ಮಾಟ್ಕೆಯಿಂ ಕಱವಿರಿಯರ್ ಮಡಿವರ್ (ಪಂರಾಮಾ. ೧-೮೩). [ ತೊಡಂಬೆ$_1$ + ಪಱ$_1$ ]

**ತೊಡಂಬೆವಿಡು** (ಕ್ರಿ). ತೊಟ್ಟನ್ನು ಕಳಚಿಕೊಳ್ಳು,-ಬಿಡು: ತನಿತು ತೊಡಂಬೆವಿಟ್ಟುದಿರ್ದ ಪಣ್ಗಳನಟ್ಟಿಯೆ ಮೆಲ್ದು ಸೋರ್ವ ತಂಗಿನ ತಿಳಿನೀರನೀಂಟಿ . . . ಪೌರನಂದನದೊಳಗಿಂತಯತ್ನಸುಖಮಂ ಪಥಿಕರ್ ಪಡೆವರ್ (ಚಂದ್ರಪು. ೩-೧೫). [ ತೊಡಂಬೆ$_1$ + ಬಿಡು$_1$ ]

**ತೊಡಕಂಬು** (ನಾ). ಒಂದು ಬಗೆಯ ಬಾಣ,-ಸರಳು: ಸಿಲುಕಂಬು ತುದಿಮೊನೆಯ ಬೋಳೆ ತೊಡಕಂಬು . . . ದಡಿಮುಖ್ಯವಾದ ಕೈದುಗಳ ಪಿಡಿದು (ಸೌಂದಪು. ೧೮-೩೭). [ತೊಡಕು$_3$ (<ತೊಡಂಕು$_3$)+ಅಂಬು$_2$]

**ತೊಡಕಾಲು** 'ತೊಡಕುಗಾಲು' ನೋ.

**ತೊಡಕಿಸು** 'ತೊಡಗಿಸು$_1$' ನೋ.

**ತೊಡಕು$_1$** 'ತೊಡಂಕು$_1$' ನೋ.

**ತೊಡಕು$_2$** 'ತೊಡಂಕು$_2$' ನೋ.

**ತೊಡಕು$_3$** 'ತೊಡಂಕು$_3$' ನೋ.

**ತೊಡಕುಗಾಲು**, ತೊಡಕಾಲು (ನಾ). ೧.=ತೊಡರುಗಾಲು. ೨. (ಆಲಂ) ಅಡಚಣೆ; ಅಡ್ಡಿ: ಪೂಜ್ಯ ಪೂಜಕ ಸಂಬಂಧದಲ್ಲಿ ವ್ಯತ್ಯಾಸವಾಗಿ . . . ಈ ಅಹಿಂಸಾಮತಗಳು ವೈದಿಕಪದ್ಧತಿಗೆ ತೊಡಕುಗಾಲಾಗಿ ನಿಂತಿತು (ಭಾರದ. ೨೮೪). **ತೊಡಕಾಲು**: ೨. ಆ ವೇದವ್ಯಾಸಾಚಾರಿ ಹಾಕಿದ್ದ ತೊಡಕಾಲು (ಪರಿಅ. ೨೬).

[ ತೊಡಕು$_3$ (<ತೊಡಂಕು$_3$) + ಕಾಲು$_1$ (<ಕಾಲ್$_1$) ]

**ತೊಡಕುನೇಣು** (ನಾ). (ಕಡೆಗೋಲಿಗೆ) ಸುತ್ತುವ ಹಗ್ಗ; ಕಡೆಯುವ ಹಗ್ಗ: ಕಡಲನು ಕಡೆವುದಾ ಮಂದರಮಹಾದ್ರಿಯನಿಟ್ಟು ವಾಸುಗಿಯ ತೊಡಕುನೇಣಲಿ ಕಡದೊಡಮೃತವ ಪಡೆವಿರಹಿತರು ಬಱದೆ ದುಃಖಂಬಡುವರು (ನಿಭಾಗ. ೮-೬-೦೫).

[ ತೊಡಕು$_3$ (<ತೊಡಂಕು$_3$) + ನೇಣು (<ನೇಣ್$_1$) ]

**ತೊಡಕುಬೇರು** (ನಾ). ಹೆಣೆದುಕೊಂಡ ಬೇರು; ಜಡೆಗಟ್ಟಿದ ಬೇರು: ಕಾಂಡದ ಕೆಳಭಾಗದಿಂದ ಹೊಸಹೊಸ ಬೇರುಗಳು ಬೆಳೆಯುತ್ತವೆ. ಈ ಬೇರುಗಳು ಭೂಮಿಯ ಮೇಲ್ಪದರುಗಳಲ್ಲಿಯೇ ಪಸರಿಸುತ್ತವೆ. ಇವುಗಳ ಗಾತ್ರ ಒಂದೇ. ಇಂತಹ ಬೇರುಗಳಿಗೆ ತೊಡಕುಬೇರಿನ ಸಮೂಹವೆಂದು ಹೆಸರು (ಸಸ್ಯಶಾ. ೦೩).

[ ತೊಡಕು$_3$ (<ತೊಡಂಕು$_3$) + ಬೇರು (<ಬೇರ್) ]

**ತೊಡಕುಮೆಳೆ** (ನಾ). ದಟ್ಟವಾಗಿ ಹೆಣೆದುಕೊಂಡಿರುವ ಪೊದೆ,-ಪೊದರು: ಕುಹರದ ತೊಡಕುಮೆಳೆಗಳಲದ್ರಿಕೂಟದಲೆಡಬಲದ ತಪ್ಪಲಲಿ . . . ಅಡಗಿ ತೋಱುತ (ಕೂರರಾ. ೩-೮-೪೭).

[ ತೊಡಕು$_3$ (<ತೊಡಂಕು$_3$) + ಮೆಳೆ ]

**ತೊಡಕುವಲೆ** 'ತೊಡಂಕುವಲೆ' ನೋ.

**ತೊಡಕುವಳೆ** (ನಾ). ಸರಪಳಿಯ ಆಕಾರದ ಬಳೆ: ಕೊಡಲಿ ಮರಗತ್ತಿ ಬಲ್ಲೆಯಂ ಚಕ್ರ ಗಿರುಗಟೆ ತೊಡಕುವಳೆ ವಂಕಿ ಕಲ್ಲಮಣಿ ಪದ್ಮಮಣಿ ಪುತ್ರಜೀವಿಯು ಹುಲ್ಲುಮಣಿ ಪಟಿಕಮಣಿಭೂಷಣಂ (ಗುರುಬಾ. ೩-೫೦).

[ ತೊಡಕು$_3$ (<ತೊಡಂಕು$_3$) + ಬಳೆ$_3$ ]

**ತೊಡಕುವೀಥಿ** (ನಾ). ಅಡ್ಡಲಾಗಿ ಹಾಯುವ ಬೀದಿ; ಅಡ್ಡಬೀದಿ: ಸಿಡಿದು ನೋಡಿದ ನಿಳಯನಿಳಯಂಗಳಲಿ ನಿಮಿಷದಲಿ ತೊಡಕುವೀಥಿಯ ಕೇರಿಕೇರಿಗಳೆಡೆಯೆಡೆಯ ಮನೆಮನೆಯ . . . ಕೋಟೆಯ ಸುತ್ತುವಳಯದಲಿ (ಕೂರರಾ. ೫-೨-೦೫).

[ ತೊಡಕು$_3$ (<ತೊಡಂಕು$_3$) + ವೀಥಿ ]

**ತೊಡಕೆ** (ನಾ). ಗಾಡಿಯಂ ತೊಟ್ಟಿಲಂ; ಬಂಡಿಯು ಒಳಗಿನ ಖಾಲಿಜಾಗ: ಎಲವೋ ಕುನ್ನಿ ಕೂಳಿದೆ ತಿನ್ನು ಬಾಯೆನುತ ತೊಡಕೆಯಲಿ ಕಲು ಮುಳ್ಳು ತುಂಬಿಯೆ ಬಿಡದ ಬುತ್ತಿಯನೊಂದು ಕೈಯಲಿ ಹಿಡಿದು ಬಂದನು ದೈತ್ಯನಲ್ಲಿಗೆ ಭೀಮ ಬೇಗದಲಿ (ಕುವ್ಯಾಆ. ೬೦೪. ೨೩-೬೬). [ ? ]

**ತೊಡಗಿಸು$_1$**, ತೊಡಕಿಸು (ಕ್ರಿ). ೧. ತಗುಲಿಸು; ಸಿಕ್ಕಿಸು: ತಮ್ಮ ಜೀರ್ಣ ವಿಚಾರದ ಶೃಂಖಲೆಯನ್ನು ಅವರ ಕಾಲುಗಳಲ್ಲಿ ತೊಡಗಿಸುವ ಪಾಪವನ್ನು ಮಾಡಕೂಡದು (ಶೃಬಂಧ. ೧೧೬). ೨. ಹೂಡು; ಬಳಸು; ವಿನಿಯೋಗಿಸು: ನನ್ನ ಹತ್ತಿರ ಹೇರಳವಾಗಿ ಹಣವಿದೆ. ಅದನ್ನು ಯಾವ ಕಾರ್ಯದಲ್ಲಿಯೂ ತೊಡಗಿಸಿಲ್ಲ (ಪರಿಚೇ. ೩೦): ಒಮ್ಮೆ ಕರಗತವಾದ ಧನವನ್ನು ಸಂರಕ್ಷಿಸಿ, ವೃದ್ಧಿಗೊಳಿಸಿ, ಉದ್ದಿಮೆಯಲ್ಲಿ ತೊಡಗಿಸತಕ್ಕದ್ದು (ಮಿತವ್ಯ. ೧೦): ಇಷ್ಟೊಂದು ಹಣವನ್ನು ಇಂಥ ರತ್ನದಲ್ಲಿ ತೊಡಗಿಸುವುದು ರಾಯರಿಗೇನೂ ಕಷ್ಟದ ಕೆಲಸವಲ್ಲ (ರತ್ನಗೋ. ೨೮). **ತೊಡಕಿಸು**: ೧. ಆ ಕಂಬಗಳಿಗೆ ನಾಲ್ಕು ಬಂಗಾರದ ಸರ್ಪಳಿಗಳನ್ನು ತೊಡಕಿಸಿ ... ಜೋಲಿ ಬಿಟ್ಟಿದ್ದರು (ಮುಂಬಯಿ. ೫-೨೯೯): ರೈತನು ಆ ಹಲಿಗೆಯನ್ನು ಆ ದನದ ಕಣ್ಣಿಯಲ್ಲಿ ತೊಡಕಿಸದರಾಯಿತು, ಆ ದನ ಇದ್ದಲ್ಲಿಂದ ಓಡಿ ಬರುತ್ತಿತ್ತು (ಹಳ್ಳಿಲ. ೨೪). ೩. ಪ್ರತಿಭಟಿಸುವಂತೆ ಮಾಡು: ಮುಱಿವೆನೇ ಮುನಿದಿವರು ನೂರ್ವರು ತೊಱಿವರೆನ್ನನು ತೊಡಕಿಸುವೆನೇ ತಱಿದು ಬಿಸುಡುವರವರು ಕೌರವಶತಕವನು (ಕುವ್ಯಾಸ. ೦೨-೬೯).

[ ತೊಡಗು$_1$ (< ತೊಡಂಕು$_1$) + – ಇಸು$_3$ ]

**ತೊಡಗಿಸು$_2$** (ಕ್ರಿ). ೧. ಆರಂಭಿಸು; ಮೊದಲುಮಾಡು: ಒಳ್ಳಿತಪ್ಪ ದಿವಸವಾರನಕ್ಷತ್ರಮುಹೂರ್ತದೊಳ್ ಸಿದ್ಧಾಂತಮಂ ತೊಡಗಿಸೆ (ವಡ್ಡಾರಾ. ೬-೧೫): ಸಕಲವಿದ್ಯಾಬೀಜಪುಂಜಂಗಳಂ ಮೊದಲ್ ತೊಡಗಿಸಿ ನಿರ್ಬಂಧದಿಂದಮೋದಿಸುತ್ತುಂ (ಸುಕುಮಾ. ೨-೫೬ ವ); ಕುಮಾರರ್ಗೆ ಮುನಿಪತಿ ಚೌಲಕರ್ಮಂಗಳಂ ಮಾಡಿಸಿ ತೊಡಗಿಸಿದನಕ್ಷರಾಭ್ಯಾಸಮಂ (ಜೈಮಿಭಾ. ೦೯-೫೦). ೨. ಉಂಟುಮಾಡು; ಆಗಿಸು: ಕಿಡುಕು ತೊಡಗಿಸಲಿಳೆಯನುಡುಗಿಸಲಡಗಿ ನಡುಗಿಸಿ ನಗುವೆನು (ಕಏಪು. ೨೯-೮).

[ ತೊಡಗು$_2$ (< ತೊಡಂಕು$_2$) + – ಇಸು$_3$ ]

**ತೊಡಗು$_1$** 'ತೊಡಂಕು$_1$' ನೋ.

**ತೊಡಗು$_2$** 'ತೊಡಂಕು$_2$' ನೋ.

**ತೊಡಗು$_3$** 'ತೊಡಂಕು$_3$' ನೋ.

**ತೊಡಗುಹ** (ನಾ). ಆರಂಭ; ಕೈಕೊಳ್ಳುವಿಕೆ: "ಪ್ರಕ್ರಮಂ, ಆರಂಭ" (ನಾಚಿರಾ. ೪). [ ತೊಡಗು$_2$ (<ತೊಡಂಕು$_2$) + – ಹ$_2$ ]

**ತೊಡಚು** 'ತೊಡರ್ಚು' ನೋ.

**ತೊಡಪ** (ನಾ). ಪೊರಕೆ; ಕಸಬರಿಗೆ: "ತೇವವಾದ ಹಡಗಿನ ಅಟ್ಟವನ್ನು ಅಥವಾ ಬೀದಿಯನ್ನು ಗುಡಿಸಲು ಉಪಯೋಗಿಸುವ, ರಬ್ಬರಿನ ಅಲಗನ್ನು ಉದ್ದವಾದ ಹಿಡಿಗೆ ಅಳವಡಿಸಿ ಮಾಡಿದ ಸಲಕರಣೆ: ರಬ್ಬರು-ಪೊರಕೆ, ತೊಡಪ" (Squeegee. ಇಂಕನಿ). 'ತೊಡೆಪ' ಪರಾ.

[ ದೇ.೫ ತಮಿ. ತುಟಪ್ಪ, ತುಟ್ಟೈಪ್ಪ; ಮಲ. ತುಡೆಪ್ಪ ]

**ತೊಡಪು$_1$**, ತೊಡಹು$_1$ (ಕ್ರಿ). ೧. ನಿವಾರಿಸು; ಕಳೆ: ಮೊಗದೊಳ್ ಮೊಗವಿಟ್ಟೊಡನೌಂಕಿ ಶಂಕೆಯಂ ತೊಡಪಿ (ಚಿಕವಿ. ೬-೨೧೨). **ತೊಡಹು$_1$**: ೨. ಹಚ್ಚಿಕೊಳ್ಳು; ಅಂಟಿಕೊಳ್ಳು: ಇವ ಸಂಸಾರಧರ್ಮವ ತೊಡಹಿದವನಲ್ಲ (ಪೋಲೀಮಾ. ೧೮೮-೬೦೮). [ ತೊಡೆ$_1$ + – ಪು$_1$ ]

**ತೊಡಪು$_2$**, ತಡಪು$_3$, ತಡುಪು, ತೊಡಹು$_2$, ತೊಡುಪು (ನಾ). ೧. ಆಭರಣ; ತೊಡಿಗೆ: ತೊಡಪಿನ ಸವಗ ಬಟ್ಟಲ ಠೌಳಿ ಮೈಜೋಡು ಹಿಡಿದ ಖಂಡೆಯ . . . ರಂಜಿಸೆ ಬಂದರೊಡನೊಡ್ಡಿಯ ರಾವುತರು (ಕುರಾಶಾಂ. ೧೧-೨೩): ಭರದಾ ಉಡಿಗೆ ತೊಡಪು ವುಲಿವಾ ಬಾವಲಿ ಧೀರಾ ಪುರುಷಹರಾಕ್ರಮನ ಕಂಡೆ (ತೀರ್ಥಮ. ೨೨೦-೩): ಯುಧಿಷ್ಠಿರನು ಮೊದಲಾದ ಕೌರವಕುಮಾರಕರು . . . ಕೈಗಳಿಗೆ ತೊಡಪುಗಳನ್ನು ತೊಟ್ಟು (ಕೃಪಾಳ. ೨೫೦). ೨. ಒಂದು ಬಗೆಯ ಆಯುಧ: ದುಷ್ಟವಾದ ಮೃಗಗಳನ್ನು ಕೆಣಕಿ ಬೇಟೆಯಾಡುತ . . . ತೊಡಪು, ಕಬ್ಬಿಣದೊಣ್ಣೆ, ಪಟ್ಟಾಕತ್ತಿ, ಒನಿಕೆ, ಭರಜಿ ಮೊದಲಾದ ನಾನಾವಿಧ ಆಯುಧಗಳಿಂದ . . . ಕೊಲ್ಲುತ (ಕೃಪಾಳ. ೦೫೦). **ತಡಪು$_3$**: ೩. ದಟ್ಟಿ; ಲುಂಗಿ: ತ[ಪಾಠಾಂ. ಉ]ಡ[ಪಾಠಾಂ. ಡು]ಪನೊಂದಂ ನೆಯಿದುಕೊಟ್ಟಪುದಡೆ ಮೃಡನ ಕೈಯಿಂದಲಿನ್ನುಂ ಪಡೆಯದೇಂ ದವಸವನು (ಬಸಪು. ೨೩-೩೬): ನಡೆದನಲ್ಲಿಂ ವಿಪ್ರ ಹೆಗಲಿನ ಹಡಪ ಸುತ್ತಿದ ತಡಪು ನೊಸಲಲಿ ಬಿಡಿದ ಮಟ್ಟೆಯ (ಯೂದವ. ೦೦-೨೦). **ತಡುಪು**: ೨. ತಡುಪು ದೊಂಕಣಿ ಭಿಂಡಿವಾಳುಗ್ಗಡದ ಭೋಜಪು ಚಕ್ರ ನಾನಾಘದಬಡೆಯು ಕೈದುಗಳ ತಳಪಳಪೆಸದುದಗಲದಲಿ (ಅಂಬಿಕಾ. ೦೯-೪೮). ೩. ತಲೆಗೆ ಬಟ್ಟೆ ಕಟ್ಟಿಕೊಂಡಿದ್ದ ಬಟ್ಟೆಯು ತರಹದ್ದೇ ಒಂದು ತಡುಪು ಸುತ್ತಿದ್ದ (ಹಂಗಾಳ್ವ. ೩೫೩). **ತೊಡಹು$_2$**: ೧. ಆತನ ಕರುಳವನಾಱೆಬು ಎಡದ ಕೈಯಲಿ ಹಿಡಿದು ಕಂಠಕೆ ತೊಡಹು ಮಾಡ್ದ ನೃಸಿಂಹ (ಗಗಜಾ. ೦೯-೨೮). **ತೊಡುಪು**: ೨. ಜಯಬಾಡಿ ಶ್ರುಂಗಾರ ತೊಡುಪೂ ಸಂಣ ಚಂದ್ರಾಯುಧಾ ಚಿಲುತಲಿ ಮೊದಲಾದಾ ಬತ್ತೀಶಾಯುಧಾ ಶಕ್ತಸಮರ್ತಕರಾದಾ (ಎಕ. XVI, ಗುಬ್ಬಿ: ೬೪-೨೦; ಸು. 1672). ೪. (?): ಬಿಲ್ಲ ಹೆದೆ ಹಱಿದು ಬಿಲ್ಲಿನ ಹೆದೆಯಕೊಪ್ಪು ಅಲ್ಲಲ್ಲಿಗೆ ತೊಡುಪು ಮೆಲ್ಲಗೆ ಇರಿಸಿದಡೆ ಅದಱಲ್ಲಿಯೆ ಸಿಕ್ಕಿತ್ತು (ಪೋಲೀಮಾ. ೦೮೬-೬೯೯).

[ < ತೊಡು$_1$ + – ಪು$_2$./ತೆಲು. ತೊಡುವು ]

**ತೊಡಪು$_3$** 'ತೊಡರ್ಪು' ನೋ.

**ತೊಡಬೆ$_1$** 'ತೊಡಂಬೆ$_1$' ನೋ.

**ತೊಡಬೆ$_2$** 'ತೊಡಂಬೆ$_2$' ನೋ.

**ತೊಡಬೆಗಳಚು** (ಕ್ರಿ). ೧. ತೊಟ್ಟನ್ನು ಕತ್ತರಿಸು,–ಬೇರೆಮಾಡು: ನುಡಿಗೆ ಮುಂಚುವ ಬಾಣ ಮಾರುತನಡಸಿ ಬೀಸುವ ಲಾಗ ತಲೆಗಳ ತೊಡಬೆಗಳಚುವ ಬೇಗವನು ಬಣ್ಣಿಸುವರೆನ್ನಳವೆ (ಕುವ್ಯಾದ್ರೋ. ೦೮-೦೯). ೨. (ಆಲಂ) ಸಾಯು; ದೇಹತ್ಯಾಗ ಮಾಡು: ಛಾಯವಡೆದನು ಭೀಷ್ಮ ಬಳಿಕಿನೊಳಾಯುಧದ ಗುರು ತೊಡಬೆಗಳಚಿದನೀಯವಸ್ಥೆಗೆ ನಮ್ಮ ತಂದನು ಭಾನುನಂದನನು (ಕುವ್ಯಾಕ. ೧-೦೩).

[ ತೊಡಬೆ$_1$ (< ತೊಡಂಬೆ$_1$) ಕಳಚು (< ಕಟಲ್ಚು$_1$) ]

**ತೊಡಮೆ** 'ತಡಮೆ' ನೋ.

**ತೊಡರ್$_1$**, ತುಡರು, ತಂಡಂರು, ತೊಡರು$_1$ (ಕ್ರಿ). ೧. ಸಿಲುಕು; ಸಿಕ್ಕಿಕೊಳ್ಳು; ತೊಡಕಿಕೊಳ್ಳು: ವಿಕಟಾಕ್ಷರಂಗಳೊಳ್ ತೊಡರದೆ ಸಕ್ಕದಂಗಳ ಪದಂ ಪವಣಾಗಿರ . . . ಪೇಟ್ವುದು ನೀತಿ ನಿರಂತರ ಕ್ರಮಂ (ಕವಿರಾ. ೦-೧೪೯): ತೊಡರ್ದೀ ಪುತ್ರಕಲತ್ರಮೋಹದೊಳದೇಂ ಕಟ್ಟಿರ್ದಪೈ (ಆದಿಪು. ೦-೬೯): ಉಡೆನೂಲ್ ಸಡಿಲ್ದು ಮೇಗಾಲ್ದುಡಿಗೆಯ ಕುಸುರಿಯೊಳೆ ತೊಡರೆ (ಕಾದಂಬ. ೦೩೪); ನರಿ ತೊಡರ್ವಂತಿರಲೇಂ ಕೇಸರಿ ತೊಡರ್ಗುಮೆ ಬಲೆಯೊಳ್ (ಗದಾಪ. ೧೨-೪೨): ತೊಡರ್ವಿ ಗಾಣದ ಗೂಳಿಯಂತೆ ತಿರಿಯುತ್ತಿಂತಿರ್ಪರೇ (ಅರ್ಧನೇ. ೩-೫): ತೊಡರ್ವ ನಿನ್ನಾವನರಿಷಡ್ವರ್ಗತತಿಗೆ (ಸಿದ್ಧಶಾ. ೨-೪೦). ೨. ಸಿಕ್ಕಿಬೀಳುವಂತೆ ಮಾಡು; ಸಿಕ್ಕಿಸು; ತೊಡಕಿಸು: ನಾಗರಖಂಡಗಳನಾ ನಾಗರ ಖಂಡದೊಳೆ ತೊಡರೆ ಸರನಿಸುವುದುಂ (ಪಂಪಭಾ. ೫-೦೯): ಹಿಡಿದು ವಧಿ[illegible] ಕೊಡುತ ಪುಷ್ಕರಣಕೆ ತಳುವನು ತೊಡರ್ದು ನಿಗ್ಗವದೆಡೆಯಲಂಘ್ರಿಗಳೆಡೆಯುತೆಲರಂತೆ ಒಡಲೆಡೆಯು ಬೊಳೆದಾಡೆ (ಸಾಳ್ವಭಾ. ೦೬-೧೪). ೩. ಹೊಂದಿಕೊಳ್ಳು: ಕೂಡಿ

ಕೊಳ್ಳು ; ಸೇರು : ತಂಕಣಗಾಳಿಯೊಳಾದ ಸೊಂಕಿನೊಳ್ ನಡುಗುವ ಶೋಕವಲ್ಲರಿಯ ಪಲ್ಲವದೊಳ್ ನವಚೂತಪಲ್ಲವಂ ತೊಡರ್ದವೊಲಾಗೆ (ಪಂಪಭಾ. ೩-೬೫) : ನುಡಿಯಂ ಕೇಳ್ದಾಯುತ್ತರದೊಳೊಡಂಬಡದು ನುಡಿವ ಪೊಳ್ನುಡಿಯ ಯೆರ್ದೆಯೊಳ್ ಮಾರ್ನುಡಿವ ನುಡಿಗಳೊಳಮೊಂತುಂ ತೊಡರ್ದುತ್ತರಿಸಿದ ನುಡಿಯ ಕರಂ ಬಲವಂತಂ (ರಾಜಶೇವಿ. ೦೨-೫೬) : ಸಿರಿಸದ ಮಾಲೆಯೊಳ್ ತೊಡರ್ದ ನೆಯ್ದಿಲ ಮಾಲೆಯೊ (ಮಲ್ಲಿಪು. ೮-೧೦೬); ಮನದಿಂ ಜಾಣ್ನ ಡಗೊಳೆ ತೊಡರ್ದರಿನಿಯಕೂಟದೊಳಿನಿಯರ್ (ಚಂದ್ರಪ್ರ. ೮-೬೯) ; ಘನಪಾಂಸುಪಟಲದೊಳ್ ತೊಡರ್ದ ನಿಲಂ ಸುಟಿವಂತೆ (ಉದ್ಭಟ. ೧೦-೮೭); ಸರ್ವಾರ್ಥದ ಸಿದ್ಧಿಯೊಳ್ ತೊಡರ್ದು ಬೋಧಂ ಭವ್ಯಸಂಸೇವ್ಯಮಾಯ್ತು (ಪುಷ್ಪಪು. ೧-೨೪) : ಕೋಪಾಟೋಪದಿ ನಿಂತಂದನೆನಗೆ ತೊಡರ್ದ ಕನ್ಯಾರತ್ನಮನೊಯ್ದು ಮನುಜಂ ಧರಿತ್ರಿಯೊಳಿಲ್ಲಿರ್ದಪನೆಂದು (ಕಾಮಕ. ೧-೪೪ ವ). ೪. ಅಂಟಿಕೊಳ್ಳು ; ಹತ್ತಿಕೊಳ್ಳು : ತೊಡರ್ದುವು ಸಮುದ್ರದಿಂ ಪೊಱಮಡುವವಸರದಲ್ಲಿ ಮೌಕ್ತಿಕಪ್ರಕರ ಮೆನಲ್ ಕಡುಪಿಂದೆ ರೋಮರೋಮದೆ ಬಿಡದೆಸೆದುವು ಹಂಗೆ ಬೆಮರ ಬಿಂದುಗಳಾಗಳ್ (ಕಾದಂಪೂ. ೪೫೫) ; ತದುಕಿನ ಮರದ ಮುಱಿಗಣ್ಗೊಳೊಗೆದ ಪಗಿನೊಳಗ್ಗವೆಗಡಿಂ ಕಾಲ್ತೊಡರ್ದು ಮಿಡುಕಿ ಕಳವಳಿಪ ಕಳವಿಂಕಸಂಕುಳಂಗಳುಂ (ಚಂದ್ರಪು. ೫-೬೫ ವ). ೫. ಸುತ್ತಿಕೊಳ್ಳು ; ಬಳಸು : ನಿಗಳಂಬೋಲ್ ತೊಡರ್ದುದು (ಭಾಷಾಭೂ. ೧೬೫ ಉದಾ); ಕುಡಿದೊಡೆ ಪೊಟ್ಟೆಯಿಂದೆ ಬಱನೀರ್ ಪೊಱಪಾಯ್ದುವೆ ಸುತ್ತಿ ಕಾಲನೇಂ ತೊಡರ್ವುವೆ ದಾಂಟುವಲ್ಲಿ ನಿಱಿ (ಚಂದ್ರಪು. ೮-೬೦) : ಬೆಳ್ಪಡೆವಿಡಿದಿರ್ಪ ರೂಪ್ಯಮಯಶೃಂಖಲೆ ರಾಜಕುಮಾರನಂಘ್ರಿಯೊಳ್ ತೊಡರ್ದಿರೆ (ದಶಕು. ೭-೩೬) ; ತೊಡರ್ದಡರ್ದಲವರ್ಲ್ಗಳ ಮಂಟಪಂಗಳಿಂ . . . ತದ್ರಾಜಕೇಳೀವನಂ ಕಣ್ಗೆಸೆದುದು (ಕೃಮಿಭಾ. ೨೯-೪೫). ೬. ಬಂಧಿಸು ; ಕಟ್ಟು : "ತೊಡರ್-ಬಂಧನೇ" (ಶಮದ) : ತನಯವಿಮೋಹಮೆಂಬ ನಿಗಳಂ ತೊಡರ್ದಿರ್ದಪುದು (ಸುಕುಮಾ. ೧೦-೩೨) : ತದೀಯ ಶುಕದಿರವನು . . . ನೋಡಿ ತೊಡರ್ದ ಬಲೆಯಂ ಕಟಲ್ಚಿ ಕಡೆಗೆದೆಗೆದು ಮೆಲ್ಲನೆತ್ತಿ ತಂದು (ಉದ್ಭಟ. ೪-೧೨೬ ವ) ; ತಮ್ಮನಿಯರ ತೊಡರ್ದ ತೆಕ್ಕೆಯನೊದ್ದು ನೂಂಕುತ (ಚಬಸು. ೧೯-೮). ೭. ಹೋರಾಡಲು ಬಿಡು ; ಕಾದಾಡಲು ತೊಡಗಿಸು ; ಎದುರಿಸುವಂತೆ ಮಾಡು : ತೊಡರ್ದು ಬಿಡಿಂ ಸುಯೋಧನನೆನ್ನುಮಂ (ಪಂಪಭಾ. ೦೩-೯೧) : ಇವರಂ ಕೌರವರ್ಗೆ ತೊಡರ್ದು ಬಿಡು (ಪಂಚತಂ. ೨೧೯-೧೬). ೮. ಎದುರಿಸು; ಪ್ರತಿಭಟಿಸು: "ತಳ್ಪೊಯ್, ತಡಂಬರೆ. ಪೋರ್ಕುಳಿ. ತೊಡರ್ದುದು . . . ತಡಂಬೊಯ್-ಈ ೨೫ ಪ್ರತಿಹತಕ್ಕೆ ಪೆಸರ್" (ಶಶಸಾ. ೫೯-೨೯೬) : ತೊಡರದೆ ನೀಮುಮಾ ನೆಗಲ್ದ ಪಾಂಡುವುಮೊಂದಿಯೆ ಬಟ್ದಿರೊಂದೊಡಂಬಡು ನಿಮಗಿಲ್ಲ (ಪಂಪಭಾ. ೦೩-೦೮) ; ತಮ್ಮ ತರ್ಕದ ಮೂಱುಂ ತರ್ಕ್ಕಗಳುಮನದರಿಯುಂ ತೊಡರಿಯುಂ ನುಡಿದಂತೆ ತಂತಮ್ಮಾನೆಯೊಳ್ನನಮುಮಂ ಬಿನ್ನಣಮುಮಂ ಮೆಱೆದು (ಶಾಂತಿಪು. ೩-೨೬ ವ) : ಅರಸುಗೆಯ್ವಾತಂ ಪರಣೆಸೆ ಕಾಪ್ರದು ಬೇಡಿದೊಡಿರದೀವುದು ತೊಡರೆ ಸದೆಯದಿಱಿವುದು (ಪಂಚತಂ. ೨೫೪-೨) ; ಮೃಗಲಕ್ಷ್ಮನದೇನೆಂದೀ ನಗೆಮೊಗದೊಳ್ತೊಡರ್ವನೆಂದು ಹಾರಾಂಶುಗಳಿಂ ನಗುವಂತೆ (ಮಲ್ಲಿಪು. ೩-೬೭) ; ತೊಡರ್ದರಿಯಂ ಕೇಸರಿಯೊಳ್ ತೊಡರ್ದಿಭಮೆಂತಂತೆ ಮಾಡುವಂ ಭುಜಬಳದಿಂ (ಅರ್ಧನೇ. ೪-೧೦೧) : ತೊಡರ್ದ ರಾಯರನೊರಸಿದಪೆನೆಂದು ನುಡಿನುಡಿದು (ಹರಿಶ. ೧-೪೫) : ಈರೇಳು ಲೋಕದಲಿ ತೊಡರ್ವರಾರ್ ನಿಮ್ಮಡಿಗಳೊಳು (ಬಸಪು. ೨೨-೪೦); ಹರಿಯ ಬಳಗಂ ತೊಡರೆ ಗರುಡನರದೋಡುವನೆ (ಚಬಸು. ೫೩-೪೭). ೯. ಅಡ್ಡಿ ಹೊಂದು; ನಿಲ್ಲು; ತಡೆ ಹೊಂದು: ರಜತಗಿರಿಗುಹಾದ್ವಯದೆಡೆಯೊಳ್ ಪೋಪಂದುಮಣಮೆ ತೊಡರದುದೀ ಪುರಗೋಪುರದೊಳೇಕೆ ತೊಡರ್ದುದೋ ಚಕ್ರಂ (ಆದಿಪು. ೦೪-೮). ೧೦. ಮುಟ್ಟು ; ಹಿಡಿ : ಗಾಳಿ ಸೋಂಕಿದತ್ತು ಪಿಶಾಚಂ ತೊಡರ್ದುದು ಭೂತಂ ಬನ್ನಂಬಡಿಸಿದುದೆನೆ ಸಿರಿಯೊಳರಸುಗಳ್ಮೆಯ್ಯಱಿಯರ್ (ಕಾದಂಪೂ. ೫೬೩). ೧೧. ಆವರಿಸು ; ವ್ಯಾಪಿಸು : ನೀಂ ತಡೆಯೆ ತೊಡರೆ ಮನದೊಳ್ ಚಿಂತೆ ಸಮಂತಿಂತು ಬಂದವೆನೆ (ನೇಮಿಪು. ೪-೧೦೨); ಕಾಲ್ ತಡತಡವರೆ ತೊಡರ್ದಳಿಪಿಂದೆಳಸಿ ನೋೞ್ಪ ಮೃಗಲೋಚನೆಯಂ (ಕಾವ್ಯಾವ. ೬೨) : ಚಿಂತಾತುರಂ ತೊಡರ್ದಿರ್ಪಾ ವಿಜಯಾವತೀಸತಿಯ ದೀನವಮ್ಲಾನವಕ್ತ್ರಾಬ್ಜಮಂ ಪೊಡವೀಶಂ ಪುಗುತಂ ನಿರೀಕ್ಷಿಸಿ (ಕುಸುಮಾ. ೩-೩೬). ೧೨. ತೊಡಗು ; ನಿರತವಾಗು : ಮನಮನದೆ ಬಹುಪರಿಗ್ರಹವಿನೋದದೊಳ್ ತೊಡರ್ದ ಜಡರ್ಗೆ ಸಯ್ತಿರ್ದಪುದೆ (ಅಜಿಪು. ೨-೮೯) ; ಈ ಕಜ್ಜದೊಳ್ ನೀಂ ತೊಡರ್ದು ಮರುಳೆ ಬೆಂಡಾಗದಿರ್ಪೋಗು (ಗದಾಯು. ೯-೦೫) : ಬಿಡ ಮಾಡುವನಿತು ಪೊತ್ತುಂ ತೊಡರ್ದು ವಿಭಾವದೊಳೆ ಬಸನಿ ತನ್ನುಮ ನಱಿಯಂ (ಸಮಜ. ೬-೫೨) ; ನೀನಾದಿಕೂರ್ಮನಾದಂದಾನಱಿದೊಡ ಪಿಡಿದು ತಂದದಂ ಮತ್ಕ್ರೀಡೋದ್ಯಾನಸರೋವರಸಲಿಲಸ್ಥಾನದೊಳಿರಿಸುವ ವಿನೋದದೊಳ್ ತೊಡರ್ದಿರನೇ (ಜಗವಿ. ೦೬-೩೫). ೧೩. ಉಂಟಾಗು ; ಪ್ರಾಪ್ತವಾಗು : ನೀನೆನ್ನಂ ಕಾಡವೇಡಾಂ ತೊಡರ್ದವಸರದೊಳ್ ಪ್ರತ್ಯಯಂಗೆಯ್ದನೊರ್ವಂಗೇನುಂ ತಳ್ವಿಲ್ಲದಾನೀಗಳೆ ಚಟುಲತೆಯಿಂ ನಿನ್ನನೆಯ್ತರ್ಪೆಂ (ಸುಕುಮಾ. ೭-೨೧) : ಮರಣದ ದಂದುಗಂ ತೊಡರದನ್ನೆಗಮರ್ಚಿಪುದರ್ಥಿಯಿಂ ಜಿನೇಶ್ವರನಂ (ಸಮಜ. ೧-೧೦೫) : ಅಸ್ತ್ರಮಂ ತಿರಿಪಿದನುಗ್ರವೈರಿಗೆ ಭಯಂ ತೊಡರ್ವನ್ನವರಂ (ಜಗವಿ. ೦೨-೩೨) : ಇನಿತನುಮಱಿಪಿದಳ್ ತೊಟ್ಟನೆ ಕುಸುಮಾವಳಿಗೆ ತೊಡರ್ದ ಮೂರ್ಛೆಯ ತೆಱನಂ (ಕುಸುಮಾ. ೦೨-೧೧೬) ; ಶಿವನಿಂ ಕಲಾಯೋಗಭೋಗ ತೊಡರ್ದ ಕರ್ಮಕ್ಷಯಂ ಮಲದ ಪರಿಪಾಕಮಂ ಪಡೆದು (ಪಾಸೋಪು. ೧೦-೧೪೦). ೧೪. ತತ್ತರಿಸು ; ತಡವರಿಸು : ನಡುಗಲ್ಕೆರ್ದೆ ಬೆಮರಲ್ ತನು ತೊಡರಲ್ ನಾಲಗೆ ತಗುಳ್ದುದಾ ಮಾರ್ಗಣದಿಂ (ಪಂಪಭಾ. ೧೨-೬೨) ; ತೊಡರೆ ಕೊರಳ್ ಪೊದಟ್ದು ತುದಿನಾಲಗೆಯೊಳ್ . . . ತಡತಡಮೆಟ್ಟಿ ಪಾಡಿ ಪೊಸ ಕಳ್ಗಳನೀಂಟಿದುದಂಗನಾಜನಂ (ಸೂಕ್ತಿಸು. ೧೩-೭). ೧೫. ತಾಕು ; ಗೀರು ; ಗೀಚು : ಉಗುರ್ ತೊಡರ್ದಾಯೆಡೆ ರೇಖೆ ಪತ್ತಿ ಚೆಲ್ವಂ ತಳೆದಿರ್ಪುದು (ಚಂದ್ರಪು. ೮-೬೧). ೧೬. ತಂಗು ; ನಿಲ್ಲು : ಗಗನಗತಿಶ್ರಮಮಂ ನೆಟ್ಟಗೆ ಕಳೆವರ್ ಖಚರರದಱ[ರನ್ನದ]ನೆಗಳೋಗಗಳೊಳ್ ತೊಡರ್ದಿರ್ದು (ಕುಸುಮಾ. ೨-೭೭). ೧೭. ವಾದಿಸು; ವಿವಾದ ಮಾಡು: ವೇದಾಂತ ಸಿದ್ಧಾಂತ ಪ್ರಮಾಣ ಶಾಸ್ತ್ರಂಗಳನೋದಿ ತರ್ಕಿಸುವ ಪಂಡಿತರ್ಕಳೊಡನೆ ತೊಡರ್ದು ನುಡಿದು ಸದುತ್ತರಂಗುಡುತಿರ್ಪ ಶುಕ ಶಾರಿಕಾನಿಕಾಯಂಗಳುಮಂ (ಪಂಚತಂ. ೧೦೮-೭). **ತುದರು :** ೧೮. ಆಕ್ಷೇಪಿಸು ; ತರಾಟೆಗೆ ತೆಗೆದುಕೊಳ್ಳು; ಜರಿ : ಅಣ್ಣ ಗಂಗಾಧರನನ್ನು ತುದರಿ ಇದರ ಇತ್ಯರ್ಥವಾಡಿಕೊಳ್ಳಬೇಕೆಂದು ಹಂಬಲಿಸಿದಳು(ಚಪರಿ.೦೪೨): ನಾನು ಯಾವ ದೃಷ್ಟಿಯಿಂದ ಕಡಿಮೆಯೆಂದು ಈ ಅನಾಚಾರಕ್ಕೆದಿರಿ ಎಂದು ತುದರುತ್ತೇನೆ (ಮುಕ್ತ್ಯ.ದ. ೨೭). **ತುದುರು :** ೧೮. ಈಗೀಗ ಅವನು ಅವರನ್ನು ಒಮ್ಮೊಮ್ಮೆ ತುದುರುತ್ತಿದ್ದನು (ಶವಲು. ೩೭): 'ದೇವರ ಗುಡಿಗಪ್ಪೇನು ಕಾಯಿಪಲ್ಲಾ ಕೊಡು ಹಾಂಗಿಲ್ಲೇನು' ಅಂತ ತುದುರಿದೆ (ಮಿಂಚಹು. ೯೧): ಅವರನ್ನೆಲ್ಲ ತುದುರಿ, ಅಸ್ತವ್ಯಸ್ತವಾಗಿ ಬಿದ್ದ ಸಾಮಾನುಗಳೆಲ್ಲವನ್ನು ಜೋಕೆಯಿಂದ ಒಳಗೆ ಇಡಿಸಿದನು (ಗ್ರಾಮಾಯ. ೩೦೭).

**ತೊಡರು₁ :** ೧. ಕರ್ಮವೆಂಬ ಅಂಕಮೊಡನೆ ತೊಡರಿದೆ (ಬಸವ. ೬೯೯) : ಆ ತೆಲುಗ ಬೊಮ್ಮಯನ ಶರನಿರ್ಘಾತಪಾತಕೆ ತೊಡರ್ದು ಮಡಿಯಲು (ಬಸಪು. ೩೪-೨೫) : ತೇಜಿಯ ದಾಂಟಿಸಿದನಾಹ ತೊಡರರಭವನ ಶರಣರಾ ಚತುರ್ವಿಧ ಪದಕ್ಕೆಂಬಂದದಿಂ ತಪ್ಪಕೆ (ಭಾವಚಿಂ. ೮-೧೮) : ನರದೊಳ್

ತೂಡರಿ ರಕ್ತದೊಳ್ ನನೆದು ಪೇರೆಲುಗಳುಮನೊದೆದು . . . ದೈತ್ಯಸೇನಾಭಟರ್ ತಲೆದಡವುತೋಡಿದರ್ (ಚಬಪು.೪೪-೪೪). ೨.ಕೈದುಗಳೊಳಿಱಿದೊಡೀಯೆತ್ತು ಗಡಣೆಗೊಳ್ಳದು ಬಹಳ ಪಾಶಂಗಳ ಬೀಸಿ ತೊಡರಿ ಕೆಡಪಲ್ ವೇಳ್ಕುಂ (ಚಬಪು. ೪೪-೧೫) : ಭುಜಯುಗ್ಮಮಂ ತೊಡರಿಕೊಂಡುಪ್ಪರಿಸಿ ನರಕೃಷ್ಣರಿರ್ವರಂ ಮಿಡುಕಲೀಯದೆ ಬಿಗಿದು (ಜೈಮಿಭಾ. ೩೫-೫೪). ೩. ಮಱಾರಿಯ ಸ್ಥಿರಪರದೈವದೊಳ್ ತೊಡರದಿಂತು ಬರ್ದುಂಕಿದೆನ್ಪೆ(ಪಂಪಾಶ. ೨೩). ೫. ಬಿಡದೆಯುಱಿಸುವ ಬಳ್ಳಿ ಕಾಲನು ತೊಡರಿತು (ಪ್ರಭುಲಿಂ. ೧೦-೨೪) ; ಪಲ್ಲವಿಸಿದ ನಿರ್ಜರವೃಕ್ಷವ ಕಲ್ಪವಲ್ಲಿಯು ತೊಡರಿಕೊಂಬಂತೆ (ಮೋಹತ. ೦೪-೮೩) : ಬಿಡದಱಿಸಿ ತೊಳಲುತಿಹ ಬಳ್ಳಿ ತಾನೇ ಕಾಲ್ಗೆ ತೊಡರಲೇನೊಳ್ಳಿತಲ್ಲವೆ (ಚಬಪು. ೪೩-೧೪). ೬. ಕೊಡಹುವಂ ನರಮೃಗಶರೀರಿ ಚರಣಂಗಳಿಂ ತೊಡರುವಂ ಶರಭಾವತಾರಿ (ಚಬಪು. ೩೩-೨೧). ೮. ಐಯುವೊಳೆಯ ಪುರಪರಮೇಶ್ವರರ್ ಕಲಹ ಸಂಪುಂನರಾಚಾರಗಲಿಗಳ್ ತೊಡರೆ ಬಲುಗಂಡರ್(ಕಇ. IV, ೫೫-೯; 1000?) ;ಕಣನೊಳಗೆ ತೊಡರಿದವರಿಗೆ ಬೆಂಗೊಡುವನಲ್ಲೆಂದುದುಗ್ಗಡವ ಕೇಳ್ಳ (ತ್ರಿಪುಸಾಂ. ೧೬೩) : ರಾವುತರು ರಾವುತರನ್ನೂ ಕಾಲ್ಬಂದಿಯು ಕಾಲ್ಬಂದಿಯನ್ನೂ ತೊಡರಿಕೊಂಡು ...ಯುದ್ಧವನ್ನು ಮಾಡಿದರು (ಕೃರಾವಿ. ೫೭). ೯. ತೊಡರಿಯುದ್ಧಂಪಾರ್ವಜೀವಿಗಳೆಡೆಗುಪದ್ರವದಹುದೊ ತಾ ಪೋಪೆಡೆಯೊಳೆನುತಂ ಕೈಗಳಂ ತಪೆ ಬೀಸದಿಹನಂತೆ (ಬಸಪು. ೩೮-೯) . ೧೧. ಹರಿಪದದಿಂದೊಗೆದ ರಜಂ [ಹರಿ] ಪದಮಂ ತೊಡರೆ ನಡೆದುದಾ ನೃಪಸೈನ್ಯಂ (ಕುಸುಮಾ. ೦೫-೮೫) : ಗುಹೆಯೊಳ್ ಪ್ರತಿಧ್ವನಿಗುಡುತ್ತುಂ ನಿಮ್ನಗಾಸ್ಥಾನದೊಳ್ ತೊಡರುತ್ತುಂ . . . ಕೀಡಿದುದೊಂದು ಘೋರಪವನಂ (ದಶಕು. ೭-೬೧); ಮಿಡಿವ ಮರುತನ ತಂಪು ತೊಡರುವಳಿಗಳ ಪೆಂಪು (ವೆಂಕಾರಾ. ೨-೧೮-೧೧). ೧೨. ನಿಂದೆಯೊಳ್ ತೊಡರದೆ ಸರ್ವರುಂ ತನಗೆ ಕೆಯ್ಮುಗಿದಿರ್ಪತಿಭಾಗ್ಯದೊಳ್ಪುಮಂ ಪಡೆದವಳಾವಳೀಕೆಯುಮೊಲ್ (ದಶಕು. ೦೨-೮೫); ರಾಜ್ಯಕಾರ್ಯಗಳಲ್ಲಿ ತೊಡರುವುದರಿಂದ ಧರ್ಮವನ್ನು ಮಾತ್ರವೇ ಅಲ್ಲ ಅಧರ್ಮವನ್ನು ಕೂಡ ಮಾಡಬೇಕಾಗುವುದು (ಭೀಷ್ಮಚ. ೨೨೭). ೧೩. ಮನಕೆ ಲವಾಲಸಂತೊಡರದಂತೆ ವಿಚಿತ್ರವಿನೋದಕೋಟಿಯುಂ ವಿನಯದಿನೊರ್ಮೆಯಿಂ ನೆಗಬುತುಂ (ಕುಸುಮಾ. ೬-೫) : ಅನುಲೇಪನಂಗುಡುವ ವೀಳೆಯುಮಂ ತೆಗೆದೀವ ದಂದುಗಂ ತೊಡರೆ ಮನಂಗೊಳಲ್ ನೆರೆದರಿಂದ್ರಲತಾಂಗಿಯರನ್ನವಾಸದೊಳ್ (ಪುಷ್ಪಪು. ೯-೮೭); ಎನಗೆ ಮತ್ತೀ ರೂಪು ತೊಡರಿದುದು ದೈವಯೋಗಾನುಗತಿಯಿಂದಕಟ (ವೆಂಕಾರಾ. ೧-೦೮-೦೩). ೧೯. ಹಾಕಿಕೊಳ್ಳು; ಧರಿಸು ; ತೊಡು : ಬಿಡದುಟ್ಟ ಪಟ್ಟೆಯ ದಟ್ಟ ಕುಂಕುಮ ಗಾಸೆ ತೊಡರಿದ ದಿವ್ಯಭೂಷಣದ . . . ಸುಭಟರ ಗಡಣವೈತಂದುದರ್ತಿಯಲಿ (ಕಂನವಿ. ೨೩-೮೩).

**ತೊಡಂತೊಡರ್** = ಒಟ್ಟುಗೂಡು; ಸೇರು : ನಡುಕಮುಮುಟ್ಕಱಿಂ ಬೆರಸಗಲ್ಕೆಯೊಳಿಂದಿನಿತಂಬಪೊರ್ದೊಡಂ[ಪಾಠಾಂ. ಲ್ದಿರಂ]ತೊಡರೆ (ಆದಿಪು. ೧೨-೨೭). **ತೊಡರ್ದರ ಗಾಣ, ತೊಡರ್ದರ ಗಾಳ** = ಪ್ರತಿಭಟಿಸುವವರಿಗೆ ಗಂಟಲ ಗಾಳದಂತಿರುವವನು; ಒಂದು ಬಿರುದು : ತೊಡರ್ದರ ಗಾಣ ಮಱಿಹೊಕ್ಕರೆ ಕಾವ ಕೂಟದ ನಾಯಕರ ಗಂಡ ಕಾಡನೂರ ಮಡಯ ನಾಯಕನ ಮಗ (ಎಕ. XII, ಗುಬ್ಬಿ. ೧೮-೩ : 1366) : ಕೊಡಗರ ಕೇತಂ ಪಡವಳರೆರೆಯಮ್ಮಂ ಮಿಕ್ಕದಾನಿ ಗಡಿಯರ ಸಿಂಗಂ ತೊಡರ್ದರ ಗಾಳಂ ಕೆಂಚಂ (ಸೌಇಇ. XI-ii, ೦೩೩-೩೮ ; 1087). **ತೊಡರ್ದರ ಜವ** = ಪ್ರತಿಭಟಿಸುವವರ ಪಾಲಿಗೆ ಯಮನಂತಿರುವವನು ; ಎದುರಿಸಿದವರನ್ನು ನಾಶಮಾಡುವವನು ; ಒಂದು ಬಿರುದು : ಗಡಿಯಂಕಮಲ್ಲನೆನಿಪ್ಪ ತೊಡರ್ದರ ಜವನೆನಿಪರಾಶ್ರಿತಬರ್ಪೇಡಿದಡಂ ಕುಡುವತ್ಯಾಗಂಪರೆನೆ ಪೆಸರ್ವಡೆದರ್ (ಕಇ. I, ೨೪-೦೨ : 1149). **ತೊಡರ್ದರ ದೊಂಕಿ**, **ತೊಡರ್ದರ ದೊಂಕಿ** = ಪ್ರತಿಭಟಿಸುವವರಿಗೆ ದೊಂಕಿಯಂತಿರುವವನು; ಒಂದು ಬಿರುದು : ಮಾನ್ಯಖೇಡಪುರವರಾಧೀಶ್ವರಂ ಚತುರ್ಮುಖದಾಯಿಗಗೊಂಡಳಂ ಬಡಿವಂ ತೊಡರ್ದರ ದೊಂಕಿಯುದಳರಾದಿತ್ಯಂ (ಎಕ. XII, ತುಮಕೂ. ೯-೧೦ ; 1161) ; ಮಾದಿರಾಜವಿಭು ತೊಡರ್ದರ ದೊಂಕಿಯೆನಿಪ್ಪ ಬಿರುದನಿರದೆತ್ತಿಸಿದಂ (ಮುಂಬರಾ. X, ೨೬೪-೨೭ ; 1229).

[ ದೇ.॥ ತಮಿ. ತೊಟರ್, ತುಟರ್; ಮಲ. ತುಡರು; ತೆಲು. ತೊಡರು ]

**ತೊಡರ್₂**, ತೊಡರು₂ (ನಾ). ೧. ಹೊಂದಿಕೆ ; ಸಂಬಂಧ ; ಸೇರುವುದು : (೬). ೨. ಕಟ್ಟು ; ಬಂಧನ : ಮೊದಲೊಳ್ಪಱಿದ್ದೆ ಸಂಸಾರದ ತೊಡರಂ ನಿಂದೆ ಮುಕ್ತಿಪದದೊಳ್ (ಕಾದಂಬ. ೭೦೯) ; ತೊಡರ್ದಿರ್ದ ಮೋಹಪಾಶದ ತೊಡರಂ ಪಱಿಪಡಿಸಿ ಬಿಡಿಸಿ (ಸುಕುಮಾ. ೮-೫೨): ತೀರ್ಥಕರರ್ ನಿಷ್ಕ್ರಮಕಾಳಮೊಲ್ಲರ್ ಮೋಹೋದ್ರೇಕವಿಹೀನರ್ಕಳಿಲ್ಲಿ ರಾಜ್ಯದ ತೊಡರಂ (ನೇಮಿಪು. ೧೩-೪೭); ಮುಂಗಡೆಯೊಳ್ ಪೊರಳ್ವ ಪೆಂಡಿರ ಕುರುಳೋಳಿಯೆಂಬ ತೊಡರೊಳ್ ತಡವಾಗದೆ . . . ಸಂತತಂ ವನಾಂತರಮನೆ ಗೊತ್ತುಮಾಡಿ ಭರದಿಂ ತಳರ್ದತ್ತಧಿರಾಜಕುಂಜರಂ (ಅನಂಪು. ೩-೧೦೪) : ತೊಡರದಿರು ಮೋಹಪಾಶದ ತೊಡರಂ (ಜೀವಸಂ. ೨೭-೫೦). ೩. ಬೇಡಿ ; ಸಂಕೋಲೆ : ತೊಡರಂ ಪೊಸೆದು ಪಱಿವ ಮದಕರಿಯಂತೆ (ಶಾಂತಿಪು. ೮-೫೦ ವ): ತೊಡರ್ಪಱಿವ ವನ್ಯವಾರಣದ ಮಾಟಿಕ್ಕೆಯಿಂ (ಪಂಪಾಮಾ. ೨-೩೦); ಪಡೆಯೆ ನವೀನಯೌವನಮನಾ ಸತಿ ತಾಳ್ದಳ್ ಚಿತ್ರಜಾತನುಂ ತೊಡರನತರ್ಕ್ಯನೀ ಜಗತಿಗಿಕ್ಕಿದನಾಕೆಯ ರೂಪಿನೇಟಿಗಂ ಗಂಡೆಡರಿದನುರ್ಕಿನಿಂ ಹರಿಹರಾಂಬುಜವಿಷ್ಟರರ್ಗೆಂಬಿನಂ ಕರಂ ಗೆಡೆಗೊಳ್ ರೂಪು ತನ್ನ ಸುತೆಗೆ (ನೇಮಿಪು. ೯-೭೦) : ತೊಡರ ಬಿಗಿ ಮದನಂಗೆ ಮದವನು ತೊಡೆ ವಸಂತನ ಮಾರುತಗೆ ಮಱುವಿಡಿಯನಿಕ್ಕ (ತೊರರಾ. ೩-೪-೧೮) : ಆವ ಕೆಯ್ಯುಂ ಬಿಡಿಸಲ್ಕೆ ಬಾರದ ಬಿಱುಬೆಸೆದ ತೊಡರಿಂದೆ . . . ಬಿಗಿದವೆನ್ ನಿನ್ನನ್ (ಬದ್ಧಪು. ೨-೨). ೪. ತೊಡಕು; ಗೊಂದಲ: ಗೋಜು : ಮನದೊಳ್ತೊಡರಿಲ್ಲದಾಗಳುಂ ಪರಮಜಿನೇಂದ್ರಪಾದದೊಳೆ ಕಾಂಕ್ಷಿತನಪ್ಪುದು(ಧರ್ಮಾಮೃ. ೩-೨೮೦):ದುಗುಗದ ತೊಡರಟ್ಟುವ ಮನವನು ತಂದು ವೈರಾಗ್ಯದೊಳು ಶ್ರೀಜಿನಮಂದಿರದೊಳು (ಆದಿಪ. ೪೧-೧). ೫. ಕಟ್ಟುವ ಸಾಧನ; ಹಗ್ಗ, ಸರಪಳಿ ಮುಂತಾದುವು: ವಸಂತಗೃಹಮಂಪೊಕ್ಕು ನಡುವಣೆಳಗೌಂಗಿನ ಬಾಳ್ಗಂಬದೊಳ್ ತೊಡರ್ಚಿದ ಲತೆಯ ತೊಡರ ತೂಗುಂಮಂಚದೊಳ್ . . . ಕುಳ್ಳಿರ್ದು (ದಂದ್ರಪು. ೭-೯೫ ವ): ತಳಸಂಕಲೆಯ ತೊಡರಂಕಣಿಯ ಕೊಂಡೆಯ . . . ಬಲುಪೊರಜೆಗಳ ಬಾರಸಂಕಲೆಗಳನು ಬಿಗಿದರು ಜೋಡಿಸಿದರುಬ್ಬರದ ಮದಗಜವ (ಕುವ್ಯಾದಶ್ರೀ. ೩-೨). ೬. ಸ್ಪರ್ಧೆ; ಹುರುಡು; ಸವಾಲು ಹಾಕುವುದು: ಆತಿಕಾಮಿ ಚನ್ನಮಲ್ಲಿಕಾರ್ಜುನಯ್ಯಂಗೆ ತೊಡರನಿಕ್ಕಿ ಎರಡಱಿಯದೆ ಕೂಡಿದನು (ಮಹಾದೇ. ಬ. ೬೦-೧೭೪). ೭. ಒಡವೆ ; ಆಭರಣ ; ಭೂಷಣ : ಸುರಯಿಯ ಚೊಲ್ಲೆಯುಮುಂ . . . ಪೊಂಬಾದರಿಯ ಕಿಱುಮುಗುಳ ತೊಡರುಂ ಪರಿವಡೆದಿರೆ ಬಂದನಟ್ಟಿಯಿಂದೆ ಬಸಂತಂ (ಕಬ್ಬಿಕಾ. ೩೨೫). ೮. ಬಿರುದಿನ ಸಂಕೇತವಾಗಿ ಧರಿಸುವ ಕಾಲ ಬಳೆ : ಬಿರುದಿನ ಪೆಂಡೆಯ : "ತೊಡರ್_ಬಂಧನೇ, ಬಿರುದ ಶೃಂಖಲಾಯಾಂಚ (ಬಿರುದಿನ ಸರಪಣಿ) " (ಶಮುಧಾ): "ತೊಡರೆಂದೊಡಕ್ಕು ಬಿರಿದಿನ ಪಾಪೆ" (ಕಬ್ಬಿಕೈ. ೬೭) : ಬಿರುದಿನ ಅಂಕಮಾಲೆ ತೊಡರಿಕ್ಕಿದ ಕಾಲಲು ಗಂಡಪೆಂಡರಂ (ಸೌಇಇ. IX-i, ೨೭೭-೩೨ ; 1183) : ಪೊಳೆಪೊಳೆವುತಿಪ್ಪ ಪೊಂಬಟ್ಟೆಯುಂ ಬಿಗಿದುಟ್ಟು ಘುಳುಘುಳಿಪ ಹೊಸ ತೊಡರನೆಡಗಾಲೊಳಿಟ್ಟ ಲಿದಿಟ್ಟು (ಇಹರ. ದೇ. ೪೦-೧೧): ಬಾವುಲಿಯ ಕಾಲ ತೊಡರ [illegible] ವೀರರ್ ಚೂಣಿ ಬವರಮಂ ಕೆಣಕಲ್ (ದಶಕು. ೨-೧೬) : [illegible] ನೂರ್ವರ ಬಣಗುಗಳಿಗೆಡಗಾಲ ತೊಡರಿದೆ ಬನ್ನಿ [illegible]

(ಕುವ್ಯಾಅ. ೬-೪); ಕಡುಸಡಗರಂ ಮಿಕ್ಕು . . . ಬಿರುದಿನ ತೊಡರ್ ಝಣ ಝಣಿಸಲೇಳ್ದು (ರಾಜಶೇ. ೬-೧೧ ವ). 'ಕಾಲ್ದೊಡರ್' ಪರಾ. ೯. ಅಡ್ಡಿ ; ಅಡಚಣೆ ; ತೊಂದರೆ : "ಪ್ರತಿಬಂಧದೊಳು ತೊಡರೆನಿಕ್ಕು" (ಶಶರ. ೧೨೪) ; ಜಯಕೇಶಿದೇವಮ[ಹಿ]ಪಂ ತಳದಂ ಮಾ[ನ]ನಿಧಿ ಸಕಳ ಧಾತ್ರಿಯುನೇನುಂ ತೊಡರಿಲ್ಲ ತಂನ ದಕ್ಷಿಣಭುಜದೊಳು (ಕಇ. V, ೩೨-೦೦; 1215) ; ಈ ಮಖವನ್ನೆದೆ ನಡೆಸುವುದನ್ವಯಕ್ಕೆ ತೊಡರಪ್ಪುದು ವಿಚಾರದೊಳ್ಕೈಕೊಂಬುದು (ಜೈಮಿಭಾ. ೨-೬೨) ; ತೊಡರ್ಗಳನೆಲ್ಲ ಮುಂದೆ ಸರಿಗಯ್ವುದದು (ಶಾಲೂರ. ೧೬೮-೩೬೬). ೧೦. ವ್ಯಾಜ್ಯ ; ವಿವಾದ : ಸೀಮಾವಿವಾದದಿಂ ತದ್ದ್ವಿಜರೋರೊರ್ವರಂ ಪಳಂಚಲೆವೆಡೆಯೊಳ್ ಸೀಮೆಗಳ ತೊಡರನುಡುಗಿಸಿ ಸೀಮಂಕರನೆಂಬುದೊಂದು ಪೆಸರಂ ಪಡೆದಂ (ಆದಿಪು. ೩-೫೬). ೧೧. ಯುದ್ಧ ; ಜಗಳ ; ಕದನ : "ತೊಡರೆಂದೊಡೆ ತೋಟಿಯುಕ್ಕುಂ" (ಭಾರನಿ. ೨೨). ೧೨. ವ್ಯವಹಾರ ; ಕೆಲಸ ; ಉದ್ಯೋಗ : ಅರ್ಥಿಸಂತತಿಗೀಯಲ್ ಬಿಡುವೊನ್ನುಮನಾಳ್ಗಟ್ಟುವ ತೊಡರೊಳ್ ತೊಡರ್ದಿರ್ದರರಸುಮಕ್ಕಳ್ಕೆಲಬರ್ (ಶಂಪಥಾ. ೧೦-೩೮). ತೊಡರು$_2$: ೩. ಪಟ್ಟಮಾಧಿಯುನೊಂದಿರಲಿ ವಾಚಿಸಲಿ . . . ಕರ್ಮದ ತೊಡರ ಬಿಡಿಸುವುದು (ಗಗಶಾ. ೧೬-೫೩) : ಎಳೆಹರೆಯದಲ್ಲೇ ಸಂಸಾರದ ತೊಡರನ್ನು ಪರಿದು . . . ಹೊರಟ ಈ ತೇಜಸ್ವಿನಿಯ ಏಕನಿಷ್ಠ ಹಿರಿಯ ಅನುಭಾವಿಗಳನ್ನೇ ಬೆರಗುಗೊಳಿಸಿತು (ಕಾವ್ಯಸ. ೧೦೩). ೪. ಭೀಮಫಲು ಗುಣರಿಟ್ಟ ತೊಡರಿನೊಳಾರು ಸಿಲುಕರು ದಿವಿಜದನುಜರಲಿ (ಕುವ್ಯಾದ್ರೋ. ೧೮-೨೮); ೫. ಪ್ರದಕ್ಷಿಣಂಗೈದು ತೊಡರು ಕಾಡಣೆಯುಂ ತೆಗೆಸಿ ಇಮ್ಮಡಿ ಘಂಟೇಂದ್ರ ನರೇಂದ್ರುಂ ಹನುಮಗತಿಯಿಂದೇರಿದನು (ಬೀಳಪಂ. ೦-೪೫ವ). 'ಕಾಡಣೆ' ಪರಾ. ೬. ಅ ಸು ಪ ಮ ಪ್ರ ಣ ಪ ಮಂ ದು ಗೆ ದಯೆಯ ತೊಡರು . . . ಚಿತ್ರಿನ ನೊಸಲುಗನ್ನಡಿಯೊಳೆಸೆದನು (ಸಿದ್ಧರಾ. ೩-೪೬); ಸಿರಿಯ ಸಡಗರದ ತೊಡರ ಝಣಝಣರವದ ಮೆಲ್ಲಡಿಯಿಡುವ ಗಮನದ ಭರದಿ ಕಿಱುಬೆಮರಿಡುತ ಬಂದಳು (ನಳಚ. ೩-೫೬); ಚಾಮಿಾಕರದ ತೊಡರಿ ನೊಳ್ಮೆಳಗು ಪೊಂಬಿಸಿಲೆಸಕವಾಗೆ (ನಂದಿಮಾ. ೯-೪). ೮. ಕಲಿಯ ಕಾಲ ತೊಡರು ಛಲದಾಳಿಗಲ್ಲದೆ ಇಕ್ಕಬಾರದು (ಬಸವ. ೬೬೫) : ಬಾವುಲಿಯ ತೊಡರುಗಳ ವೀರಗಣಾವತಾರದ ವೀರಭಕ್ತರು (ಬಸಪು. ೫-೪೦) : ತೊಡರ ತೆಗೆದರು ಕೈಯುಡಾಯ್ದುವ ಜಡಿಯುಲಮ್ಮರು...ಕೈದೀವಿಗೆಯ ಮಱೆಯುಲಿ ಮಿಡುಕದಿರ್ದುದು ರಾಯನೋಲಗದೊಳಗೆ ಪರಿವಾರ (ಕುವ್ಯಾಕ. ೧-೦೮); ತೊಡರ ಝಣಝಣರವದ ಸುರರುಘ್ಮಡಣದ ಬಿರುದಿನ ಬಾವುಲಿಯ . . . ರಾಯರಕ್ಕಸನೈದಿದನು ಧನುವ (ತೊರರಾ. ೧-೫೫-೧೦) : ಸೀಸಕದ ಪುಸ್ತಂಗ ತೊಡರಗಾವಳಿಯಿಂದ ಭೂಪೋತ್ತಮ ನಡೆದನುಬ್ಬಿನಲಿ (ಕಂನವಿ. ೧೫-೦೨). ೯. ಪಾಶ್ಚಾತ್ಯ ದರ್ಶನಕಾರರೂ ಎಷ್ಟೋ ತೊಡರು ಗಳಿಗೆ ಗುರಿಯಾಗಿರುತ್ತಾರೆ (ಜೀವಾತ್ಮ. ೪೫). ೧೪. ಹೊಡೆತ ; ಪೆಟ್ಟು (?) : ಬಾಳ ಹೊಯ್ಲೋ ಸಿಡಿಲ ತೊಡರಿನ ಸೂಳುಗಳೋ ಸಿಡಿದಲೆಯ ಗಿರಿಗಳ ಬೀಳುಗಳೊ (ಕುವ್ಯಾಸ. ೨-೦೦೪).

ತೊಡರ ಬಾವುಲಿ = ಬಿರುದಿನ ಪೆಂಡೆಯ: ತೊಡರ ಬಾವುಲಿಯೊಳಗೆ ಜವಿ ಹಲವು ದಂಡೆಯಿಂ ಗುರುಗಂಜಿಯುಂ ಸಮೆದ ದಂಡೆ ಮಂಡೆ ಯೊಳೊಪ್ಪೆ (ಬಸರ. ೯-೯೮).

[ <ತೊಡರ್$_1$./ತಮಿ. ತೊಟರ್, ತುಟರ್ ; ಮಲ. ತುಡರ್ ; ತುಳು. ತೊಡರ್, ತೊಡರು ]

ತೊಡರಿಕ್ಕು (ಕ್ರಿ). ೧. ತೊಡಕಿಸು ; ತೊಂದರೆಯನ್ನುಂಟುಮಾಡಂ : ಏನಿತಾನುಮುಪದ್ರವಂಗಳೊಳ್ ತೊಡರಿಕ್ಕಿಯುಂ ಗೆಲಲಾಱದೆ (ಶಂಪಥಾ. ೨-೬೨ವ) : ಅನ್ಯಮಂತ್ರಿನಿಕರಕ್ಕಡಟಿಂ ತೊಡರಿಕ್ಕಿದಂ (ಎಕ. VIII, ಸೊರಬ. ೧೪೦-೫೪ : 1193). ೨. ಹುರುಡಿಸು ; ಸವಾಲು ಹಾಕು : ಸ್ಪರ್ಧಿಸು : ಸಾಯಿಸುವ ಸಾವಂಜಿತನಗೆ ಚಿರಾಯು ತೊಡರಿಕ್ಕಿದನು ಮಾರ್ಕಂಡೇಯಮುನಿಗೆಂದರಸ ದೊಪ್ಪನೆ ಕೆಡೆದನವನಿಯಲಿ (ಕುವ್ಯಾಶ. ೦-೩). ೩. ಸಂಕೋಲೆ ಹಾಕು ; ಬಂಧಿಸು. [ ತೊಡರ್$_2$ + ಇಕ್ಕು ]

ತೊಡರಿಚು 'ತೊಡರ್ಚು' ನೋ.

ತೊಡರಿಸು (ಕ್ರಿ). ೧. ಸಿಕ್ಕಿಸು ; ತೊಡಕಿಸು : ಬಲದ ಕಡೆಯ ಮಿಣಿವಲೆ ಯನೊಡ್ಡಿ ತೊಡರಿಸಿ ಹಿಂದಣ ಬೇಟೆಯ ನಾಯ್ಗಳ ಕಡಹುವ ಮುಂದಣ ಬೇಡನು (ಶಿವಗೀ. ೬೫೩) ; ಕೂಟದ ತೋಟಿಯೊಳ್ ತೊಡರಿಸಿಯುಂ ಅಗಲ್ದ ಮನಮಂ ಮಣಿಯಿಸಿಯುಂ . . . ಸುಪ್ರಭಾತ ಸಮಿಾರಣಂ ತೀಡುತ್ತಿರೆ (ಲೀಲಾವ. ೩-೨೧) ; ಕಡೆಗಣ್ಣ ಪಾಶಮಂ ತೊಡರಿಸುತ (ವಂಕಾರಾ. ೫-೬-೫೨). ೨. ಕೂಡಿಕೊಳ್ಳು ; ಸೇರು : ತೊಡರಿಸುತ ಕೊಡಹಿ ಕಳುಹುವ ಸೂಳೆಯನು ಬೊಡಚುವವನೆಗ್ಗ (ಸರ್ವಜ್ಞ. ೦೯೩೬). ೩. ಸೇರಿಸು ; ಕೂಡಿಸಂ : ತೊಡರ್ಪಂ ತೊಡರಿಸುವ ನರಕಗತಿಯೊಳ್ ತೊಡರ್ವುದೆ (ಅಜಿಪು. ೨-೭೦) : ನಿನಗೆ ಅಪಯಶಸ್ಸಿನ ಮೇಲೆ ಆಸೆಯಿದ್ದರೆ ನಮ್ಮ ಹೆಸರನ್ನೇಕೆ ಇದರಲ್ಲಿ ತೊಡರಿಸಿದೆ(ಮಧ್ಯಮ. ೨೦೦). ೪. ನಿಯಮಿಸಂ; ನಿಯೋಜಿಸಂ : ಅತಿ ಭಟರಂ ತೊಡರಿಸಲವರತಿವೇಗದೆ ನಡೆತಂದಾ ಕಡಬ ದುಗ್ರವನಮಂ ಪೊಕ್ಕರ್ (ಹಾಲಾಸ್ಯ. ೧-೪-೬೩). ೫. ಪ್ರವರ್ತಿಸು ; ಉದ್ಯೋಗಿಸು : ಬಿಡದೆ ಸೋಂಕುವ ಕೈಗಳಾದಡೆ ತೊಡರಿಸು [ಪಾಕಾಂ. ಚು]ವ ಸತ್ಕ್ರಿಯೆಗಳೊಡನೊಡನುಡುಗ ಗದ್ಗದಕಂಠಸಂಗತಿಯಿಂದೆ ದನಿ ಗೊಡುವ (ಬಸಪು. ೩೫-೫). ೬. ಬಾಧಿಸು ; ಕಟ್ಟು.

[ ತೊಡರ್$_1$ + – ಇಸು$_3$ ]

ತೊಡರು$_1$ 'ತೊಡರ್$_1$' ನೋ.

ತೊಡರು$_2$ 'ತೊಡರ್$_2$' ನೋ.

ತೊಡರು$_3$, ತೊಡುರು (ನಾ). ಒಂದು ಬಗೆಯ ತೆರಿಗೆ : ಆನೆಯ ಸೇಸೆ ಗ ೨ ಪ ೬ ತೊಡರು ಹಾ ೧ ಖಾಣ ನಿಬಂಧ ಮಾ೯ (ಎಕ. VI, ಕಡೂರು. ೬೮-೩೫ ; ?). ತೊಡುರು: ಕಲುಕು ಹಾ ೨ ತೊಡುರು ಗ ೪ ಆನೆಯ ಸೆ ಗ ೬ ಅ ೧ ಪ ೨ (ಎಕ. V, ಹಾಸನ. ೮೪-೬೪ ; ಸು. 1230). [ ? ]

ತೊಡರುಗಟ್ಟು (ಕ್ರಿ). ಹುರಂಡಿಸು ; ಸ್ಪರ್ಧಿಸು : ತೊಡರುಗಟ್ಟುವ ಬೈವ ಭಟ್ಟರ ಬಿಡುವ ಕಾದುವ ವೀರಭಟರಿಂದಿಡಿದುದಮರಾವತಿಯ ಸೊಂಪಿನ ಸೂಳೆಗೇರಿಗಳು (ಕುವ್ಯಾಭೀ. ೫-೨೧).[ತೊಡರು$_2$(<ತೊಡರ್$_2$) + ಕಟ್ಟು$_1$ ]

ತೊಡರುಗಾಲು (ನಾ). ೧. ಅಡ್ಡಲಾಗಿ ಒಡ್ಡುವ ಕಾಲು ; ಅಡ್ಡಗಾಲು: ಅವರು ನೂರೊಂದು ಜನವಿದ್ದರೂ ಅವನೊಬ್ಬನೇ ಎಲ್ಲರನ್ನೂ ಮರ್ದನ ಮಾಡಿಬಿಡುವನು. ತೊಡರುಗಾಲು ಕೊಟ್ಟು ಬೀಳಿಸುವನು (ವಡಭಾ. ೧೬). ೨. ನಡೆಯುವಾಗ ಹರಡುಗಳು ಪರಸ್ಪರ ತಗುಲುವ ಕಾಲಂ. ೩. (ಆಲಂ) ಅಡ್ಡಿ ; ಅಡಚಣೆ. 'ತೊಡಕುಗಾಲು' ಪರಾ.

[ ತೊಡರು$_1$ (< ತೊಡರ್$_1$) + ಕಾಲು$_1$ (< ಕಾಲ್$_1$) ]

ತೊಡರುಗೊಳ್ಳು (ಕ್ರಿ). ಬಿಗಿಯಾಗು ; ಬಿಗಿದುಕೊಳ್ಳು : ಅವಯವದ ಸಂದುಗಳೆಲ್ಲವೂ ತೊಡರುಗೊಂಡು . . . ಮಧ್ಯಮವಾದ ಜ್ವರವೇಗ ವುಂಟಾಗಿರುವುದೇ ವಾತಶ್ಲೇಷ್ಮಜ್ವರವೆನಿಸಿಕೊಳ್ಳುವುದು (ಸಕವ್ಯ. ೯೫).

[ ತೊಡರು$_2$ (< ತೊಡರ್$_2$) + ಕೊಳ್ಳು$_1$ (< ಕೊಳ್$_1$) ]

ತೊಡರುಮುಳ್ಳು (ನಾ). ತೊಡಕಿ ಹಿಡಿದಂ ಕೊಳ್ಳುವ ಕೊಕ್ಕೆ ಯುಂತಿರುವ ಮುಳ್ಳು : ತೊಡರುಮುಳ್ಳಿಗೆ ತಗುಲಿ ಬಟ್ಟೆಯೆಲ್ಲಾ ಹರಿದುಹೋಯಿತು (ರೂಢಿ).

[ ತೊಡರು$_1$ (< ತೊಡರ್$_1$) + ಮುಳ್ಳು (< ಮುಳ್) ]

ತೊಡರುಲಿ (ನಾ). ಆಭರಣದ ಧ್ವನಿ ; ಒಡವೆಯ ಸದ್ದು : ಮಾತಯ ಬಳಿಗೆ ಪರಿದೈದಿ ತೊಡರುಲಿಯೊಳು ಮಾಡುತ್ತ ಮುದ್ದು (ನವಮೋ. ೧೫-೩೮). [ ತೊಡರು$_2$ (<ತೊಡರ್$_2$) + ಉಲಿ$_2$ ]

**ತೊಡರ್ಚು, ತೊಡಚು, ತೊಡರಿಚು** (ಕ್ರಿ). ೧. ಕಟ್ಟು ; ಬಂಧಿಸು : "ತೊಡರ್ಚು – ಬಂಧನೇ" (ಶಮದ) ; ತನ್ನ ನಿರ್ಭರಪ್ರಣಯಿನಿಗಳ ಮೊಳೆ ತೊಡರ್ಚಿ ತಾಗಿದಳ್ (ಆದಿಪು. ೧೨-೪೬ ವ) : ದಾಮೋದರನಾಂ ಮತ್ತ್ರಿಯನೀ ಮುಱಿದಪೆನೆಂದದೊಂದು ಕುಜಮಂ ಕಾಂಚೀದಾಮದೆ ತೊಡರ್ಚಿ . . . ಮುಱಿದಳ್ (ಜಗವಿ. ೫-೨೧) ; ತೊಡರ್ಚಿದ ತೊಡಕ ಬಿಡಿಸ ಪೋಗಿ ಕಪ್ಪಿನೊಳ್ಕೆಡದೊಲಾಯ್ತು (ಸೊಬಸೊ. ೨೦-೬೯) ; ಪಿಂಗಾಲ್ಗೆ ತೊಡರ್ಚಿದಗ್ಗರಣೆಯುಂ ಘಟಘಟನೆ ಕೀಳ್ತು (ರಾಜಶೇ. ೬-೧೧ ವ). ೨. ಸಿಕ್ಕಿಸು ; ತೊಡಕಿಸು : ದೇವರೆನ್ನಂ ಧರಾಭರದೊಳ್ ತಂದು ತೊಡರ್ಚಿ ಪೂಣ್ದು ತಲೆಗೋದಿದರ್ (ಆದಿಪು. ೪-೮೧) : ನಿಜಿಯ ಸೆಱಂಗನೆತ್ತಿ ನಿಜನೀವಿಯೊಳುಯ್ದು ತೊಡರ್ಚಿ (ಕುಸುಮಾ. ೬-೭೮). ೩. ಸೇರಿಸು ; ಹೊಂದಿಸು ; ಕೂಡಿಸು ; ಜೋಡಿಸು : ತದವಧಿಸಿ ಯತಿ ಯನಿಂತಿರೆ ತೊಡರ್ಚಿ ಕಿಡೆವೇಟ್ಟೊಡಕ್ಕುಮದು ಯತಿಭಂಗಂ (ಕವಿರಾ. ೧-೭೩) : ತಡೆಯದೆ ಭವ್ಯರನಱದೊಳ್ ತೊಡರ್ಚಿ ಕಯ್ಗೊಳಿಪ ಸರ್ವ ಯಶರಂ ನೀಂ ಕಂಡು (ಶಾಂತಿಪು. ೪-೩೭) : ಮಾಂಗಾಯ ಫಲಾವಳಿ ಗಳೊಳಂ ತೊಡರ್ಚಿದ ಪುನ್ನಾಗದ ಸೂಸಕಂಗಳೊಳಂ . . . ಪೊಂಬಾ ಳೆಯ ಚಾಮರಂಗಳೊಳಮೆಸೆವ ಮಂಟಪಂಗಳ್ (ಕಾದಂಉ. ೭೮೩) ; ದೇವಾಂಗವಿತಾನಮಂ ತೊಡರ್ಚುವ ನವಮುಕ್ತಾವಳಿಯಂ ಕಟ್ಟುವ ದಿಗ್ದೇವಿಯರೇಂ ರಾಗರಸದೊಳೋಲಾಡಿದರೋ (ಮಲ್ಲಿಪು. ೧೪-೨೩೦) ; ತದೀಯ ಪಾಣಿಪಲ್ಲವಮನನುರೂಪ ಕನ್ಯಾಕರಕಿಸಲಯದೊಳ್ ತೊಡರ್ಚಲ್ ಬಗೆದು (ಅರ್ಥನೇ. ೨-೩೪ ವ). ೪. ಧರಿಸುವಂತೆ ಮಾಡು ; ತೊಡಿಸು : ಬೇಡವೇಡನೆಯುಂ ಕಿವಿಯೊಳ್ತೊಡರ್ಚಿ ಪೋದಳೀ ಕುಸುಮ ಮಂಜರಿಯಂ (ಕಾದಂಪೂ. ೭೬೮) : ಒಲವಿಂ ಮಣಿನೂಪುರಮಂ ತೊಡರ್ಚಿದಳ್ (ಉದ್ಭಟ. ೮-೪೯) ; ಮೆಚ್ಚಿ ವಸುದೇವನ ಕೊರಳ್ಗೆ ತೊಡರ್ಚಿದಳು ನವರತ್ನಮಾಲೆಯು (ಸಾಳ್ವಭಾ. ೧೮-೩೬) : ಫುಲ್ಲಶರನ ಪಲ್ಲವಶರಕ್ಕೆ ಕೆಂಗಱಿಗಟ್ಟಿದಂತೆ ಕೆಂಬೆಳಗಂ ಕಱೆವ ಕೆಂಬೆರಲುಂಗುರಮುಮಂ ಗುಲಿಯೊಳ್ತೊಡರ್ಚಿಯುಂ (ರಾಜಶೇ. ೦೩-೫೯ ವ). ೫. ಮುಡಿಯುವಂತೆ ಮಾಡು; ಮುಡಿಸು: ಲಳನೆಯ ಕೇಶದಲ್ಲಿಯುಲರುಂ ತಳಿರುಂ ಪೊಳೆವಂದ ದಿಂದೆ . . . ದೇಸೆಯ ಪೂಮುಡಿಯುಂ ತೊಡರ್ಚಿದರ್ (ಚಂದ್ರಪು. ೬-೩೪). ೬. ಪೋಣಿಸು ; ಸರಕಟ್ಟು : ಧಾತ್ರೀಶನ ಸಾಂದ್ರಮನಸ್ಸೂತ್ರ ದೊಳಾ ಸತಿಯ ಗುಣಗಣೋದ್ಗಮತತಿಯುಂ ಚಿತ್ರವಿಧದಿಂ ತೊಡರ್ಚಿದ ಧಾತ್ರಂ ಮುಂ ಮಾಲೆಗಾಱರೊಡನಾಡಿದನೋ (ಚಂದ್ರಪು. ೩-೨೮) : ನಳಿನಗುಣದೊಳ್ ತೊಡರ್ಚುತುಂ ಮೆಲ್ಲಮೆಲ್ಲನಿರವಂತಿಯ ಪೂದೊಡಗೆ ಗಳಂ ವಿರಚಿಸಿದಳ್ (ಗಿರಿಕ. ೫-೭೨) ; ಮಲ್ಲಿಗೆ ಮುಗುಳ ಸೂಸಕಂಗಳಂ ತೊಡರ್ಚಿ ನಿರ್ಮಿಚಿದ ಚೂತಪಲ್ಲವದ ಚುಂಚುಲೋವೆಯುಂ (ರಾಜಶೇ. ೧೦-೩೧ ವ). ೭. ತೊಡಗಿಸು ; ನಿಯೋಜಿಸು : ಕರ್ಣನಂ ದ್ವಂದ್ವ ಕಲಹದಿಂ ದೇವಾಂಗನಾ ರತಿಕಲಹದೊಳ್ ತೊಡರ್ಚಿ (ಜಗವಿ. ೧೫-೫ ವ). ೮. ಉಂಟುಮಾಡು ; ಆಗಿಸು : ಅಳೀಕ ಲಜ್ಜೆಯಿನೇಂ ನಿನಗೆ ಗಮನಾಯಾಸ ಮನೆ ತೊಡರ್ಚಿದಪ್ಪೆಂ (ಕಾದಂಉ. ೩೯೯): ಮತಿ ಸಮ್ಮೋಹಮನಿದಿರವರ್ಗೆ ತೊಡರ್ಚಲ್ಕೇಟ್ಟೊಡಲ್ಲಿಗಲ್ಲದು ದೋಷಂ (ಕಾವ್ಯಾವ. ೪೫೩) : ವಿರಹಾತುಳಾಗ್ನಿ ತಾಪವನಿದನೆಂತು ನಂದಿಸುವೆನೇನನೊಡರ್ಚುವೆನಾವುದಂ ತೊಡರ್ಚುವೆಂ (ಕುಸುಮಾ. ೧೦-೨೩). ೯. ಆರಂಭಿಸು ; ತೊಡಗು ; ಪ್ರಾರಂಭಮಾಡು : ಮಯ್ಗಲಿತನದಿಂ ತೊಡರ್ಚಿದವು ಕಾಳೆಗಮಂ ಕಡುಕೆಯ್ದು ಕೋಟೆಗಳ್ (ದಶಕು. ೦೧-೫೦) ; ಕಳಲೆನಾಡೊಳೊಡರ್ಚಿ ತೊಡರ್ಚಿ ತೋಟಿಯಂ . . . ಬಂದ ಮಲೆನಾಡಿನ ಸಿಂಗಳರಾಯ (ಚಿಕವಿ. ೨-೬೮). ೧೦. (ಬಿಲ್ಲಿಗೆ ಬಾಣವನ್ನು) ಹೂಡಂ,–ಸಂಧಾನ ಮಾಡು.–ತೊಡು: ಮೆಲ್ಲನೆ ಬಿಲ್ಲೊಳಂಬಂ ತೊಡರ್ಚಿ (ನೇಮಿಪು. ೧-೭೫ವ): ಬಿಲ್ಗೀಸುವ ಬಾಣಮುಂ ತಿರುಪಿ ತಿರ್ದುವ ಮಾರ್ಗಿರುಪು ತೊಡರ್ಚಿ ನೋಟ್ಟಾ ಸಹಜ ಕ್ರಿಯಾವನ ವನೇಚರರಿಂ ಬಗೆಗೊಂಡುದಾ ವನಂ (ಜಗವಿ. ೧೬-೦೬) : ಪೊಸಮಸೆಯ ಬಾಣಂಗಳಂ ತೊಡರ್ಚಿ ಪೆಱದ[illegible] ಜನನೆಚ್ಚು ಮರಳೆಚ್ಚು ಬೊಬ್ಬಿಱಿದು ಕೈಯೊಡನೆಸೆಯೆ (ಚಲಪು. ೪೦-೦೨). **ತೊಡಚು** : ೧. ಸಿದ್ಧಪತಿಯೊಂದು ದಿನ . . . ಪದ್ಮಾಸನಂಗೆಯ್ದು ಶಶಿರವಿಗಳಂ ಬಲಿದು ಕರಣಂಗಳ ತೊಡಚಿ ಕುಂಡಲಿಗೊತ್ತಿ (ಸಿದ್ಧರಾ. ೪-೨೭) : ರಖಾಡಿಸುವ ತೆಗೆವ ತೊಡಚುವ ಪಿಡಿವ . . . ವಿರೋಧಿ ಯಿಂಗಿತಮಱಿವ ಭಿನ್ನಣಂ ಹರನರರೊಳೆಸೆದಿರ್ದುದು (ಚಲಪು. ೫೩-೫೦). ೨. ಬಲಿದಂತಃಕುಂಡಲಿಯೊಳ್ ಪ್ರಾಣವ ತೊಡಚಿ . . . ನೆಗೆದಳ್ ಗಗನಾಂಗಣಕೆ (ವೀರೇಚ. ೦-೬೮); ವರಮಂದಿರದ ಮೇಲ್ಸಾಲಗೆಯ ಕೊಂಡಿಗೆ ಸರಪಳಿಯನು ತೊಡಚಿದರು (ಮೋಹತ. ೧೭-೪೯). ೩. ಕಡಿಗಳ ಪದಿನೆಂಟನೊಡಗೂಡಿ ಸಂಧಿಸಿ ತೊಡಚಿ ಕಟ್ಟಿದೆ ನರರ ಬಂಧನದಲ್ಲಿ (ದೇದಾವ. ೩೭-೭೨) : ನೇಹದ ನಲ್ಲರ ತೋಳೊಳ್ ತೊಡಚಿದ ಬಾಹು ಲತಿಕೆದೆಗೆದೊಯ್ಯನೆ ಕುಲಟಾವ್ಯೂಹಂ ನಡೆತಂದುದು (ಜಯುಕಾ. ೧೪-೨). ೬. ಮಾಲೆ ತೊಡಚುವ ಕಜ್ಜಮಂ ಮಱೆದು ನಿಬ್ಬೆಱಗುವಡೆದು ಲೆಪ್ಪದ ಪೆಣ್ಣನಂತಿರ್ದಳು (ಸೌಂದಪು. ೧೨-೪೦). ೯. ಖಗರಾಜನೊಳು ಹಿಂದೆ ಕಾದಿ ನುಗ್ಗಿದ್ದವರ್ ಜಗಳವ ತೊಡಚಲುಬಹುದೆ (ಮೋಹತ. ೩೯-೨೦). ೧೦. ಕಡೆಗಾಗಳೆನಿಪ ಬಾಣವನು ಭೂಚಾಪದಿಂ ತೊಡಚಿ ಎಸುವುದು (ಅಂಜಚ. ೩-೧೫೫) ; ಒಂದನಲ್ಲದೆ ನಿನ್ನ ತಲೆಗೆರಡಂಬ ತೊಡಚಿವರೆ ಇಂದು ನಿನ್ನಯ ಬಾಯ ತಂಬುಲ ತಿಂದವನು ನೋಡು (ಕುಮಾರದ್ರೋ. ೧೭-೩೮) : ಎಚ್ಚ ಬಾಣವ ತಱಿದು ತೊಡಚಿವನುಚ್ಚ ತೋಮರದಂಬನು (ತೊರರಾ. ೩-೬-೫೫) : ಸದ್ಭಾವವೆಂಬ ಬಿಲ್ಲಿಂಗೆ ಸುಮನವೆಂಬ ನಾರಿಯ ಹೂಡಿ ಸುಜ್ಞಾನವೆಂಬ ಅಂಬ ತೊಡಚಿ (ಮೋಲಿಮಾ. ೨೪೫-೭೯೬ ಟೀಕ). ೧೧. ಸೇರು ; ಕೂಡು ; ಹೊಂದು : ನಿಮ್ಮ ಗರ್ಭದೊಳು ತೊಡಚಿ ಏಳೇ ತಿಂಗಳಿಗೆ . . . ಉದಯಿಸುವನು (ಸಾಳ್ವಭಾ. ೨೦-೯೩) ; ತೊಡರಿಸುತ ಕೊಡಹಿ ಕಳುಹುವ ಸೂಳೆಯನು ತೊಡಚುವವನೆಗ್ಗ (ಸರ್ವಜ್ಞ. ೦೯೩೭). ೧೨. ಎದುರಿಸಂ ; ವಿರೋಧಿಸು : ಕರ್ಣನ ನಾವು ತೊಡಚುವರಲ್ಲ ತೆರಳಿಚು ಪಾಳಯಕೆ ರಥವ (ಕುಮಾರ. ೧೪-೩೭) ತೊಡಚಬೇಡ ಕುರುವಂಶದ ಹೊದಜನು ಕಡಿವ ಕಠೋರವಿಕ್ರಮನ ಒಡನಳಿಗಲಿಗಳೆನುತ ಕೌಂತೇಯರ ಕಡೆಯ ಕಾಳಿಗಳೊದಱಿದುವು (ನೇಮಿಸಂ. ೨೯-೪೪). ೧೩. ಪ್ರಾಪ್ತವಾಗು ; ಉಂಟಾಗು : ಆಗಲೀ ವೈಷ್ಣವಕೆ ನಮ್ಮಯ ತಾಗುಥಟ್ಟಿನ ರಕ್ಷೆ ತೊಡಚಿದುದಾಗಳಿದ್ದುದು ಪಾಶುಪತ ಶರವದಱ ಬಳಿವಿಡಿದು (ಕುಮಾಅ. ೧೪-೧೦). **ತೊಡರಿಚು** : ೧೨. ಒಡನೆ ಬೊಬ್ಬಿಡುವನು ಮಹಾಹವ ತೊಡರಿಚುವರಿಲ್ಲಾ ಎನಂತ (ಕುಮಾವಿ. ೬೦೩. ೪-೧೧).

**ತೊಡರ್ಚಿಕೊಳ್, ತೊಡಚಿಕೊಳ್** = ೧. ಕಟ್ಟಿಕೊಳ್ಳು ; ಬಂಧಿಸಿ ಕೊಳ್ಳು : ಆ ಕುನ್ನಿಗಳಂ ತಮ್ಮ ಶ್ರೋತ್ರನಾಳದೊಳ್ ತೊಡರ್ಚಿ ಕೊಂಬುದುಂ (ಪಂಚತಂ. ೨೦-೫). ೨. ಸಿಲುಕಿಸಿಕೊಳ್ಳು ; ಸಿಕ್ಕಿಸಿಕೊಳ್ಳು : ಮಾಯಾ ಮೋಹನಂಗಳಲಿ ತೊಡಚಿಕೊಂಬ ಸಮಸ್ತವಸ್ತುವನದಕಿಕೊಂಬ ವಿದಗ್ಧಮುಗ್ಧೆಯರು . . . ಎಸೆದರು (ತೊರರಾ. ೦-೫-೩೦). ೩. ಧರಿಸಿ ಕೊಳ್ಳು ; ತೊಟ್ಟುಕೊಳ್ಳು : ಮನಿಯ ವೇಷವ ತೊಡಚಿಕೊಂಡಿಪ ಕಾಲನೇಮಿಷ್ಟಂತ ರಂಜಿಸಿದ (ತೊರರಾ. ೬-೩೩-೭೮).

[ ತೊಡರ್$_1$ + –ಚು$_1$ ]

**ತೊಡರ್ಚುವಲೆ** (ನಾ). ಒಂದು ಬಗೆಯ ಬಲೆ : ತೊಡರ್ಚುವಲೆ ತೋಳು ವಲೆ ಮರೆವಲೆ ಸಗಾಥವಲೆಗಳ ಹೊರೆಗಳೊಳೆಯುಂ ಪೊತ್ತು ನಡೆತಂದುದು . . . ಭೂತಗಣಂಗಳು (ಸೌಂದಪು. ೧೮-೩೯). [ ತೊಡರ್ಚು + ಬಲೆ$_1$ ]

**ತೊಡರ್ಪು, ತೊಡಪ್ಪು$_3$** (ನಾ). ೧. ಕಟ್ಟು ; ಬಂಧನ : ಕಿಡುಗುಮೆ ರಾಜ್ಯಂ ರಾಜ್ಯದ ತೊಡರ್ಪದೇವಾಟಿ³ (ಪಂಪಭಾ. ೧-೮೨) ; ದಯಿತಾಸಂಬಂಧ ಬಂಧಂ ಭವಪರಿಣತಿ ತನ್ಮೂಲವಿಸಾ ಬೇವಸಂ ನಿಶ್ಚಯಮೆಂದಾತಂ ತೊಡರ್ಪಂ ಬಿಡಿಸಿ ಕಿಡಿಸಿ ದುರ್ಮೋಹಮಂ (ಶಾಂತಿಪು. ೯-೧೪) ; ಪರಿಜನಕ್ಕಿಡಱಾದೊಡೆ ಪೊರೆವುದುಂ ಪಡೆದುದಂ ಪಚ್ಚುಕುಡುವುದುಂ ತೊಡರ್ಪಾಗೆ ಬಿಡಿಸುವುದುಂ . . . ಉತ್ತಮಗುಣಂಗಳೊಳವು (ಪಂಚತಂ. ೨೯೪-೨) ; ಸುಕುಮಾರನ ಮೋಹಬಂಧದ ಬಳ್ಳಿವಳ್ಳಿಯ ತೊಡರ್ಪಂ ಪಱಿವಡೆ ಬಿಡಿಸುವಂತೆ (ಸುಕುಮಾ. ೧೧-೩೮ ವ) ; ಮನದೊಳ್ಮನ್ನಮ ರಾಜ್ಯವಲ್ಲಿಯ ತೊಡರ್ಪಂ ನಾಡೆಯುಂ ಬಿಟ್ಟು (ಶಾಂತೀಶ್ವ. ೧೩-೭೯). ೨. ಗೋಜು ; ತೊಡಕು ; ಗೊಂದಲ; ಸಿಕ್ಕು : ಮೋಹಬನ್ಧನದ ತೊಡರ್ಪಿನೊಳ್ತೊದಟ್ಟು ಮೋಹಿಸಿ (ಎಕ. VII, ಶಿಕಾರಿ. ೨೧೨-೨೪ ; 919) ; ಗಾಂಗೇಯಂ ದಾಶರಾಜನಲ್ಲಿಗೆ ಮದಾತನ ಮನದ ತೊಡರ್ಪಂ ಪಿಂಗೆ ನುಡಿದು (ಪಂಪಭಾ. ೧-೭೨ ವ); ಪಾಪ ಬಂಧನದ ತೊಡರ್ಪಿದೆಂತು ಪಱಿಗುಂ ದಯೆಯಿಂ ಬೆಸಸಿಂ (ವರ್ಧಪು. ೧೨-೪). ೩. ಸಂಬಂಧ ; ಹೊಂದಿಕೆ : ಒಡಹುಟ್ಟಿಯುಮೊಡವಳೆದುಂ ಕಡೆಯೊಳ್ ನೀನೆನ್ನನಿಂತು ಕಂಡುಂ ಬಂದಿರ್ದೊಡೆಯುಂಡಿದೀ ನಮ್ಮಿರ್ವರ ತೊಡರ್ಪಿಂದಂ ನೀಂ ಪುನರ್ನವಂ ಮಾಡಿನ್ನುಂ (ಶಾಂತಿಪು. ೭-೧೦೪) ; ಇಂತು ಚಿಂತಿಸುವಂಗೆ ಬಾಹ್ಯವಸ್ತುಗಳೊಳ್ ತೊಡರ್ಪಿಲ್ಲ (ತತ್ತ್ವಪ. ೩೨೭). ೪. ಅಡ್ಡಿ ; ವಿರೋಧ : ಅರಸುಮಕ್ಕಳೆಲ್ಲರ್ ಬರೆ ನೀಂ ನಡುವೆಸೆದು ಬಾರದಾವುದು ತೊಡರ್ಪಿನಿಂ ಪೆಱಗೆ ನಿಂದೆಯೊರ್ವನೆ ಕಂದಾ (ಶಾದಂಉ. ೭೭೭) ; ತೂಳ್ದಿನ್ನ ತೊಡರ್ಪುದೋಱದಿನಿಸಂ ಮುನಿಸಂ ಮುನಿಸಾನದಂತೆ ಬಿಟ್ಟನ್ನಿರೆ ಕೀರ್ತಿಲಕ್ಷ್ಮಿ ಬಿಡುಗುಂ ಕಿಡುಗುಂ ಕಡುಪೆಂಪಿನೆಟ್ಟರಂ (ಪುಷ್ಪಪು. ೭-೭೮). ೫. ಆಭರಣ ; ತೊಡವು : ತೋಳ ತೊಡರ್ಪು ಕಣ್ಗೆಸೆಯೆ . . . ಬಾಜಿಸಿದಳ್ ಸುವಿಲಾಸೆ ವೀಣೆಯಂ (ಸೂಕ್ತಿಸು. ೫-೧೯); ಅಲಸುವ ಮೆಯ್ಯುಂ . . . ಬಿಗು [ಬಿಗು] ರೇಱುತಿರ್ಪ ಮೇಖಳೆಯ ತೊಡರ್ಪು ಕಣ್ಗೊಳಿಪ ಯಾನದ ಮೆಲ್ಪುಮಪೂರ್ವಭಾವಮಂ ಲಲನೆಗೆ ತಂದುವಂದನುದಿನಂ ಬಳೆಯುತ್ತಿರೆ ಗರ್ಭದರ್ಭಕಂ (ಪುಷ್ಪಪು. ೪-೧೫). ೬. (ಆಲಂ) ಅಪ್ಪುಗೆ; ಆಲಿಂಗನ : ಅಡಿಮುಡಿ ಸಂಚು ವಂಚನೆ ವಿಡಾಯಮುಡರ್ಪು ತೊಡರ್ಪು ತೋಟ . . . ನುಸುಳ್ ಗಣಿಕಾಂಗನೆಯರ್ಗೆ ಶಾಶ್ವತಂ (ವೃಷವಿ. ೨೮-೭೩). **ತೊಡಪ್ಪು$_3$** : ೩. ಆ ಮರದ ಶಾಖೆಯು ತೊಡಪಿಂದ ಆ ಮರದ ಫಲವ ಕೈಗೆ ತಾಹಂತೆ (ತುಱುಗಾ. ೩೭).

[ ತೊಡರ್$_1$ + – ಪು$_2$./ತಮಿ. ತೊಟರ್ಪು ]

**ತೊಡವ** 'ತೋಡ$_2$' ನೋ.

**ತೊಡವಣಿಕ** (ನಾ). (ಕರಾ) ಚೊಚ್ಚಲು ಕರುವನ್ನು ಈದ ಎಮ್ಮೆ,–ಹಸು : ತೊಡವಣಿಕ=ಮೊದಲ ಬಾರಿ ಕರು ಹಾಕಿರುವ ಹಸು ಅಥವಾ ಎಮ್ಮೆ (ಸಂಶೋಧ. ೧೭೮). [<ತೊಡಂಕು$_1$ + ಮಣಿಕ (<ಮಣಿಕ) ]

**ತೊಡವು** (ನಾ). ೧. ಆಭರಣ ; ತೊಡಿಗೆ : "ಪ್ರತಿಕರ್ಮಂ ನೇಪಥ್ಯಂ ... ವಿಭೂಷಾಪ್ರಸಾಧನಮಾಭರಣಮೆಂಬವವು ತೊಡವಕ್ಕುಂ" (ವಸ್ತುಕೋ. ೭೫-೧) ; "ಪಚ್ಚಂ ತೊಡವುಂ ಪಸದನಮೆನಲಾಭರಣಂ" (ಕವಿಕಂ. ೧೭೮); ಈ ತೊಡವೇವುದೊ ರೂಪೆ ಸಾಲದೇ (ಪಂಪಭಾ. ೭-೪೭) ; ತೊಡವಿಂಗೆ ತೊಡವು ನಿರತಂ ತೊಡವೇಂ ಪೆಱತುಂಟೆ ಜನನ ತೊಡವನೆ ಮತ್ತಾ ತೊಡವೆಡ್ಡಮಪ್ಪ ರೂಪಿನ ಬೆಡಂಗು ಭೂಷಣವಿಶೇಷಮಂ ಬಾರಿಸದೇ (ಶಾಂತಿಪು. ೧೦-೫೭); ಕುಂತಳ ಭೂತಳಕ್ಕೆ ತೊಡವಾದುದು ತಾಂ ವನವಾಸಿ ದೇಶಂ (ಎಕ. VIII, ಸೊರಬ. ೨೭೨-೪ ; 1077) ; ಪೊಸಸುಗ್ಗಿಯ ತೊಡವು ಪೆಱತೆ ಮಲ್ಲಿಗೆಯೆ ಪೊಲಂ (ಮಲ್ಲಿಪು. ೫-೧೫) ; [ಉ]ಡೆವಣೆಯ ತೊಡವು ಫಲಫಲಿಸುವಂದುಗೆ (ಬಸರ. ೧-೧೫೫) ; ಚಂದ್ರಾನನೆ ತೊಡವಿನ ಪೆಟ್ಟಿಯನಾನಂದದಿನೀಯಲು (ದಶಕು. ೮-೯೮); ತೊಡವುಗಳ ತೊಡಕಿಲ್ಲದವಯವಂ (ಜೈಮಿಭಾ. ೧೮-೨೫). ೨. ಅಲಂಕಾರಪ್ರಾಯನಾದವನಂ; ಶ್ರೇಷ್ಠನಾದವನಂ: ಎಲೆ ಭೂಪಾಲ ವಂಶದ ತೊಡವೆ ಮೆಚ್ಚಿದೆ ನಾನು (ನಿಘಾಗ. ೪-೯-೪೧). ೩. ಉಡುಪು : (ಕ).

**ತೊಡವುಮಾಡು** = ಆಭರಣವನ್ನಾಗಿ ಮಾಡು ; ಒಡವೆಯಾಗಿಸು: ಜವ್ವನಿಗಿನಿಯನಿತ್ತ ನಖರದಕ್ಷತಂಗಳನೆ ತೊಡವುಮಾಡಿ ಮೆಱೆವುದನವಳೊಡನಾಡಿ ನೋಡಿ (ಚಂದ್ರಪು. ೮-೫೫ ವ).

[ ತೊಡು$_1$ + – ವು./ತೆಲು. ತೊಡವು ]

**ತೊಡವುಲಿ** (ನಾ). ಆಭರಣಗಳಿಂದ ಉಂಟಾಗುವ ಧ್ವನಿ; ಒಡವೆಗಳ ಶಬ್ದ : ಕಡೆಗಣ್ಗಳ ಪೊಳಪಿನ ಬಳ್ಳಿಮಿಂಚಿನ ತೊಡವುಲಿಗಳ ಘನರವದ ಮುಡಿಯ ಮುಂಗಾರ ಮೇಘದೆ ಸೋಗೆನವಿಲಾಟದಡವ ತೋಱಿದ ರಂಗನೆಯರು (ಕಂಪವಿ. ೮-೭೫). [ ತೊಡ + ಉಲಿ$_2$ ]

**ತೊಡವೆ** (ನಾ). ಹೊಂದಿಕೊಂಡಿರುವವಳು ; ಸಹಚರಿ : ನಂಬಿದ ತೊಡವೆಯು ತಿಂಬರ್ಗೆ ನಡುವಪ್ಪಂ ಬಡಿಯೊಳಗಟ್ಟೊವವಗೆ ಇಂಬಿನ ನಂಟನ ಸತಿಗಳುಪಿರ್ದಗೆ ಕುಂಭಿನಿನರಕವಾದಪುದು (ತರ್ಕಕಾ. ೧೭-೫೭).

[ ← ತಮಿ. ತೊಟುವೈ ]

**ತೊಡವೆಳಗು** (ನಾ). ಆಭರಣದ ಕಾಂತಿ,–ಬೆಳಗು : ತೊಳಪ ಮಾಣಿಕದ ಮುತ್ತಿನ ನೀಲದ ತೊಡವೆಳಗೆಸಲೊಪ್ಪಿದವಾಗ (ಶ್ರೀಪಾಲ. ೪-೧೨೫) ; ಕತ್ತಿವೆಳಗು ತೊಡವೆಳಗುಗಳ್ ಮಾಡೆ ಬೆಳಗಂ (ಜಬಪು. ೫೦-೨೩) ; ತೊಡವೆಳಗಿಂದ್ರಚಾಪಲತೆ ಸೋರ್ಮುಡಿ ಕಾರ್ಮುಗಿಲು (ರಾಜಶೇ.೧೩-೯೩).

[ ತೊಡ + ಬೆಳಗು$_2$ ]

**ತೊಡಹ$_1$** 'ತೊಡೆಪ' ನೋ.

**ತೊಡಹ$_2$** (ನಾ). ೧. ತೊಡುವಿಕೆ ; ಧರಿಸುವಿಕೆ. ೨. ಉಡುಪು ; ಉಡುಗೆ : ಧೂರ್ತವೇಷದ ತೊಡಹವನು ತೊಟ್ಟಲ್ಲಮಪ್ರಭು ಬಂದು ನಿಂದಿರ್ದ (ಪ್ರಭುಲಿ. ೫-೭). ೩. ವೇಷ : ತೊಡು ಮಹಾಸ್ತ್ರವನಿವಗೆ ಕಪಟದ ತೊಡಹದವನಿಪ ವಿಪ್ರನಲ್ಲಿವ (ತೊರರಾ. ೧-೧೧-೨೦).

[ ತೊಡು$_1$ + – ' $_2$ ]

**ತೊಡಹುಗಾಱಿಕೆ** (ನಾ). ನಯಗಾರಿಕೆ : ತೊಡಹುಗಾಱಿಕೆಯೊಳಾ ಮಂತ್ರಿ ಯಾಡಿದ ಮಾತಿಗೊಡನಹುದಹುದೆಂದ ನಗುತ (ಭರತ. ೨೦-೧೨೩).

[ ತೊಡಹ$_1$ (<ತೊಡೆವ) + – ಕಾಱ + – ಇಕೆ ]

**ತೊಡಹತರ್** (ಕ್ರಿ). ಸಮಾಧಾನಗೊಳ್ಳು ; ಅಂಕೆಯಲ್ಲಿಟ್ಟುಕೊಳ್ಳು : ತನ್ನೊಳು ತಾನೆ ತೊಡಹತಂದುಕೊಂಡನು ಮನವ (ತೊರರಾ. ೭-೨೭-೧೩).

[ ತೊಡಹ$_1$ (<ತೊಡವ) + ತರ್ ]

**ತೊಡಹು$_1$** 'ತೊಡಪ್ಪು$_1$' ನೋ.

**ತೊಡಹು$_2$** 'ತೊಡಪ್ಪು$_2$' ನೋ.

**ತೊಡಹು$_3$** (ನಾ). ಲೇಪನ : ಪ್ರಪಿತಾಮಹಪೂಜೆಗಾ ಸತಿ ಒಡಿಹಿಸಲಿ ಮನವರಳಿ ಮುದ್ರೆಯ ತೊಡಹು ಪೊಜಗೊಳಗಿಂದುಮುಖಿಯರ ನ್ಯಾಸ ಮುದ್ರೆಯಲಿ (ಕುಮಾವ್ಯಾ. ಆದಿ. ೩೭-೮೪). [ <ತೊಡಪ್ಪು$_1$ ]

**ತೊಡಾಯ** (ನಾ). (?) : ಚಿಕದೇವರಾಜ ಒಡೆಯರು ತಮ್ಮ ಸಾಮಾಜಿಕರೊಡನೆ ಆಲೋಚನೆಮಾಡಿ ೧೮ ಕಛೇರಿ ಎಂಬುದಾಗಿ ನಿಬಂಧನೆ ಮಾಡಿದರು ಯಾವವೆಂದರೆ ೧. ನಿರೂಪದ ಚಾವಡಿ . . . ೯. ತೊಡಾಯದ ಚಾವಡಿ (ದಾಮುವಂ. ೧೪೦) ; ತೊಡಾಯದ ಚಾವಡಿ–ಇದರಲ್ಲಿ ಪೊಮ್ಮಿನ ಐವಜಿನಲ್ಲಿ ಶ್ರೀರಂಗಪಟ್ಟಣದಲ್ಲಿ ಮಾತ್ರ ಅರ್ಧ ಐವಜು ತೆಗೆದುಕೊಳ್ಳುವಂತೆ ಕಟ್ಟು ಮಾಡಿದರು (ಮುಹಾವಂ. I, ೧೪೮). [ ? ]

**ತೊಡಿ** (ನಾ). ಕೈತೋಟ ; ಮನೆಯ ಮುಂದಿನ ಅಥವಾ ಹಿಂದಿನ ತೋಟ : ತಾಯಿ ಮತ್ತು ಮಗ ಅಸ್ಕರ ಗದ್ದೆ ಮತ್ತು ತೊಡಿಗಳಲ್ಲಿ

ಗೇಯಬೇಕಾಯಿತು (ಹುಲಿಹಾ. ೪) ; ಅಂದಿನಿಂದ ಕೊಳುಂಬನು ಪಾಪನ ತೊಡಿಯಲ್ಲಿ ಕೆಲಸ ಮಾಡಲು ಬರಲಿಲ್ಲ (ಧೂಮಮ. ೪೦).

[ ದ್ರಾ. ತಮಿ. ತೊಟು ; ಮಲ. ತೊಟ್ಟ ; ಕೊಡ. ತೊಡಿಯ ]

**ತೊಡಿಕೆ** 'ತುಡಿಕೆ' ನೋ.

**ತೊಡಿಗೆ** 'ತೊಡುಗೆ' ನೋ.

**ತೊಡಿಲಿ.** (?). (?) : ನಾವದಕ್ಕರಲ್ಲಿ ಅಳ ಆಳ ತೊಡಿಲಿ ಮು[ೞ]ಅಲ್ಲಳದ ಬೆಟಲಿ (ಸೌಇಅ. ೧೯೩೦, ಉಡುಬಿ. ೫೭೫-೨೭ ; ?). [ ? ]

**ತೊಡಿಸು, ತುಡಿಸು** (ಕ್ರಿ). ೧. (ಆಭರಣ, ವಸ್ತ್ರ ಮೊದಲಾದಂವನ್ನು) ಧರಿಸುವಂತೆ ಮಾಡು,–ಇಕ್ಕು : ತೊಡಿಸಿದನಾವನೀ ಕುಸುಮಮಂಜರಿಯಂ ನಿನಗೆ (ಕಾದಂಪೂ. ೭೯೩); ತರಿಸಿ ಬೊಂಬೆಯನೊಂದಂ . . . ಪೊನ್ನೋಲೆಯಂ ತೊಡಿಸಿ ಚೆಲ್ವನಪ್ಪ ಪೂಮಾಲೆಯಂ ಮುಡಿಯಿಸುತ್ತುಮಿರ್ಪಿಯಂ (ಧರ್ಮಾಮೃ. ೩-೯) ; ಸೌಂದರಿಗೆ . . . ತೊಡವಂ ತತ್ತರುಣೀಮಣಿಯರೊಲ್ದು ತೊಡಿಸಿದರೊಲವಿಂ (ಉದ್ಭಟ. ೮-೬೫); ಶೋಭನಾರ್ಥಕ್ಕುದಡಂ ಕೆಲವಾಭರಣಮಂ ತೊಡಿಸವೇಳ್ಕು ಮದೇಭಗಮನೆಗೆನುತ್ತ (ಬಸವು. ೪-೩೩) ; ಸುರೇಶ್ವರನಿತ್ತ ಭೂಷಣವ . . . ಸಕುಟಾದಿಗಳ ಮೈಯಲಿ ತೊಡಿಸಿದನು ಕೈಯಾರೆ ಕಲಿಪಾರ್ಥ (ಕುಮ್ಮಾಅ. ೧೧-೩೪) ; ಚೈತ್ರದ ಚೆಂಗದಿರನು ಚೆಂಬಿಸಿಲ ಚೆಂದುಡುಗೆಯನು ವಿಂಧ್ಯಯ ಗಿರಿಶಿಖರಗಳಿಗೆ ತೊಡಿಸುತ್ತಿದ್ದಾನೆ (ಮಚಸ. ೧). ೨. ಅಳವಡಿಸು; ಜೋಡಿಸು : ಬಿಲ್ಲನು ಕೊಂಡು ಶಿರುವನು ತೊಡಿಸಿ ತಳೆದನು ಒಲಿದು ಮಂಡಿಯಲಿ (ಸಂಥಶ. ೧೯-೩೦) ; ಪಾವಕಮಹಾಬಾಣಮಂ ತಿರುವಿನೊಳ್ತೊ [ಪಾಠಾಂ. ಳ್ತು]ಡಿಸಿ ಕಿವಿವರೆಗೆ ತೆಗೆದೆಚ್ಚೊಡೆ (ಜೈಮಿಭಾ. ೪-೩೬) ; ತುಡುಕಿ ಚಾಪವ ನೆಗಪಿ ಬಾಗಿಸಿ ತೊಡಿಸಿ ನಾರಿಯ ಠಂಕರಿಸಿ ಮುರಿದಿಡಲು (ಅನಂರಾ. ೧-೨೩-೩೨). ೩. ಹದಿ ; ಹೊಂದಿಸು ; ಕೂಡಿಸು : ಗಿಳಿ ಸೋಂಕದ ಮಾವಿನ ಪಣ್ಣನಂತೆ ಪೊನ್ ತೊಡಿಸದ ರತ್ನದಂತೆ (ಮಲ್ಲಕಾ. ೬-೭೦) ; ಒಡಲು . . . ತೊಗಲನು ತೊಡಿಸಿದೆಲುವಿನ ಜಂತ್ರ (ನಿಭಾಗ. ೭-೯-೪೪). ೪. ತೊಡಕಿಸು ; ತಗಲುಹಾಕು : ಕಡುಗಿ ಕೊರಳಲದಾರೊ ಪಾಶವ ತೊಡಿಸಿ ಕೆಳಯಿಂಕೆಳದ ದಾಡೆಯುದಡಿಗರಾರೋ ಮರಳೆಬಿಡಿಸಿದ ಪುಣ್ಯತರರ್ (ನಿಭಾಗ. ೬-೨-೨೭) ; ಕೊರಳಿಗೆ ಕೋಳವನು ಬಲವಾಗಿ ತೊಡಿಸುವ ಪೋಲು (ಅಮೃತ. ೦-೩೫). **ತುಡಿಸು** : ೧. ತುಡಿಸಿದನೆನಗಱಿಕೆಯುಪ್ಪ ಮಣಿಭೂಷಣಮಂ (ಕವಿರಾ. ೩-೨೩೪) ; ಸುರಾಸುರೇಂದ್ರವಂದಿತಪಾದಂಗೆ ಮೃದುಪದಂಗಳೊಳ್ ಕಳರವರಣಿತ ನೂಪುರಂಗಳಂ ತುಡಿಸಿ (ಆದಿಪು. ೭-೧೦೫ ವ) ; ಆ ಲಾವಣ್ಯವತಿಯು ಪದನಖಮಯೂಖಂಗಳಂ ಜಲಧಾರೆಗೆತ್ತುತ್ತುಕಂಠಂಗಳಾದ ಸೋಗೆಗಳ ಕೇಗುಗಳ್ಗಿದವಱ ಕೊರಲಂ ಬಿಗಿವಂತೆ ಕಯ್ಯಿಂದಮುರ್ಚುವ ಮಣಿಕಂಕಣಂಗಳಂ ತುಡಿಸುತ್ತಂ (ಕಾದಂಉ. ೩೦೨); ಕಡಗ ಕಂಕಣ ಹಾರ ನೂಪುರಮಾದಿ ಭೂಷಣರಾಜಿಯಂ ತುಡಿಸಿ (ಧರ್ಮಾಮೃ. ೮-೧೩೪); ತುಡಿಸಿದ ಬೇಗದೊಳಾ ಪೂದೊಡವನಿತುಂ ಕೊರಗಿ ಕಾಡೆಯುಂ ಶಿಖಿಮುಖಮಂ ತೊಡರ್ದಂತಾಯ್ತು (ಕುಸುಮಾ. ೧೦-೨೭) ; ಜನ್ಮಾಭಿಷೇಕಂ ಮಾಡಿ ತದನಂತರಮನೇಕ ಬಾಲದುಡಿಗೆಗಳಂ ತುಡಿಸಿ (ಪುಣ್ಯಾಸ್ರ. ೦೦-೧೭ ವ) ; ರನ್ನದಾಭರಣಮಂ ತುಡಿಸಿ (ಸೌಂದಪು. ೩-೪೯). ೨. ಕೂರ್ಗಣೆಗಳಾಱಂ ಮತ್ತೆ ವಕ್ಷದೊಳ್ತುಡಿಸಿದಂ (ಜೈಮಿಭಾ. ೨೦-೩೦).

[ ತೊಡು$_1$ + –ಇಸು$_3$ ]

**ತೊಡು$_1$, ತುಡು$_1$** (ಕ್ರಿ). ತೊಟ್ಟ (ಭೂತಕೃ). ತೊಟ್ಟು$_1$ (ಭೂತನ್ಯೂ). ೧. (ಆಭರಣ, ವಸ್ತ್ರ ಮೊದಲಾದಂವನ್ನು) ಧರಿಸು,–ಹಾಕಿಕೊಳ್ಳು : ಶೀತಕ್ಕಱದಳ್ಕಿ ತೊಟ್ಟಿರ್ದ ಧರಾತಳಮೆಂಬ ಪೆಣ್ಣ ಪೊಸ ಕಂಚುಳಿಕೆಯ ಸೀಮರ್ತಿನಂದಮಾದುವು ಪನಿಗಳ್ (ಕಾವ್ಯಸಾ. ೭೯೪ ಶೂದ್ರಕ) : ಪಿಂಡುಗಂಕಣಮಂ ತೊಟ್ಟ ಕೈಯಿಂದಂ ಪೊನ್ನ ಸಟ್ಟುಗಮಂ ತೀವಿ (ವಡ್ಡಾರಾ. ೮೯-೭) ; ತೊಟ್ಟೈರ್ಕ್ಯವಡಂ . . . ತೊಟ್ಟಂಗಿಗೆ ತನ್ನೊಳಮುರೆ ಪೇಂಟೆಯನೊರ್ವಂ ಬಂದು (ಪಂಪಭಾ. ೫-೩೬) ; ಜವ್ವನಿಗ ತಪಸಿ ತೊಟ್ಟಿರ್ಪ ಕರ್ಣಾವತಂಸಂ ಪೊಸತೀ ಲೋಕಕ್ಕೆ (ಕಾದಂಪೂ. ೭೬೦) ; ತೊಟ್ಟು ಶೀಪ ಬಳೆಯುಂ ನಿಡುದೋಳ್ಗಳೊಳ್ (ಕಾವ್ಯಾವ. ೩೭೩) ; ನೀರ ಬೊಂಬೆಯ ಚೋಹವ ತೊಟ್ಟು ಅಗ್ನಿಯ ಬಣ್ಣದ ಪೊದಿಕೆಯ ಹೊದ್ದು (ಅಪದಂ. ೨೦೭-೯೩೧) ; ಪೊಸ ಮುತ್ತಂ ತೊಟ್ಟಪೋಲ್ ಪೊಣ್ಮುವ ಬೆಮರ್ವನಿಯಿಂ (ಲೀಲಾವ. ೧೦-೪೭) ; ತೊಡುವಲ್ಲಿ ಪೊದೆವಲ್ಲಿ ಸಂಗ ಶರಣೆಂದೆನುತೆ (ಬಸರ. ೩-೧೩೭) ; ಇಟ್ಟರೆ ತೊಟ್ಟರೆ ಪುಟ್ಟಕ್ಕ ಚಂದ (ಗಾದೆ). ೨. ಪಡೆ ; ಹೊಂದು ; ತಳೆ : ಕಾಮದ ಕಳವಳದಲ್ಲಿ ಹುಟ್ಟಿ ಸಂಸಾರದ ತೊಟ್ಟು ಲಿಂಗಮುಖ ಭವನಱಿಯದವರೆಲ್ಲರು ಅಂತಿರಲಂತಿರಲಿ (ಸಮೂವ. ೫-೧೭); ಕಿಳುಹಿ ಹೋದರು ಮುನಿಗಳೀತನ ಕಿಳಿವು ತೊಟ್ಟುದು ಮಱವೆಯನು (ಕುಮ್ಮಾದ್ರೋ. ೧೮-೬೪) ; ಕೊಂದೆನು ನಿನ್ನ ತಮ್ಮನ ದಹಿಸಿ ಲಂಕೆಯ ಬಳಿಕ ಮೌನವ ತೊಟ್ಟೆ ತಾನೆಂದ (ತೊರರಾ. ೨೮-೬೦) ; ತೆಗೆದ ಚಿತ್ರದ ನಟ್ಟ ನೋಟದ ಮೊಗದ ಭಾವದ ಭಕ್ತಿಯಂಗವ ತೊಟ್ಟನಲ್ಲಮನ (ಪ್ರಭುಲೀ. ೧೧-೩೪) ; ಮುಟ್ಟಿಪ್ಪುದಾಸೆಯನು ಕಟ್ಟಿಪ್ಪುದಿಂದ್ರಿಯವ ತೊಟ್ಟಿಪ್ಪುದುಳ್ಳ ಸಮತೆಯನು (ಸರ್ವಜ್ಞ. ೩೦೭) ; ದೀಕ್ಷೆ ತೊಟ್ಟೆ ; ತಪದ ಕಣಿಕದೆಯ ಕೊಟ್ಟೆ (ಅನಿಕೇ. ೧೭-೧೯). ೩. ಮೊದಲಾಗು ; ಆರಂಭವಾಗು : ಪೂರ್ವಭವದೊಳ್ತೊಟ್ಟೊಂದು ವೃತ್ತಾಂತಮಂ ನೆಱೆಯಱಿದು (ಆದಿಪು. ೨-೬೬) ; ಎಮ್ಮೊಳಾದ ಕಲಹಕ್ಕಂತಾದೊಡಂ ಕೇಳ ನೂರ್ವರೆ ದಲ್ ಕೌರವರಾಮುಮಯ್ವರೆ ಪಲಂ ಮತ್ತೊರ್ವರೊಳ್ ತೊಟ್ಟ ಸಂಗರರಂಗಕ್ಕೆ ಜಸಕ್ಕೆ ಕೂಡುವೆಡೆಯೊಳ್ ನೂಱಯ್ವರಾವಲ್ಲವೇ (ಪಂಪಭಾ. ೭-೩೬). ೪. ಮೊದಲು ಮಾಡು ; ಆರಂಭಿಸು : ಕ್ರಮಗಣನೆಗೆ ತಾನುಂ ಮಧ್ಯಮಪಾಂಡವನಾದನಹಿತನೊಳ್ತೊಟ್ಟ ಮಹಾಸಮರಕ್ಕೆ ನರಾಗ್ರಜನಗ್ರಿಮಪಾಂಡವನಲ್ತೆ ಪಗೆಗೆ ಮೊದಲಪ್ಪುದಱಿಂ (ಗದಾಯು. ೭-೬೩) ; ಬಿಲ್ಲ ಪಡೆ ತಾಗಿದುದು ಬೇಗದಿ ಚೆಲ್ಲಿದೊಡೆ ತನ್ನಡ್ಡಣಾಯ್ತುರು ಕಾಳಗವ ತೊಡಲು (ಸಾಳ್ವಭಾ. ೧೯-೧೩). ೫. ಬಿಲ್ಲಿಗೆ ಬಾಣವನ್ನು ಹೂಡು ; ಶರಸಂಧಾನ ಮಾಡು : "ಕಣೆಯ ಸಂಧಾನದೊಳ್ ಪಚ್ಚದೊಳ್ ತೊಡು [ಪಾಠಾಂ. ತುಡು]ವದು" (ಶಬ್ದಮಂ. ೯೩) ; ಮುಂ ತೊಟ್ಟಂಬನದನುಗಿದು ಕುಂದಿಸಿದಂ ಭಯದಿಂ ಕರ್ಣನೆಂದು ಲೋಕಂ ನಗದೇ (ಪಂಪಭಾ. ೧೨-೧೯೯); "ತೊಟ್ಟಗುರಿಯಿಟ್ಟು ಹೊಡಿದ" (ಪಂಪದೀ. ೫೦೧) ; ತೊ [ಪಾಠಾಂ. ತು]ಡುವಾಗಳೊಂದು ಬಿಲ್ಲಿಂ ಬಿಡುವಾಗಳ್ ಲಕ್ಕ ವೈರಿಸೇನೆಯ ಮೆಯ್ಯೊಳ್ ನಡುವಾಗಳ್ ಕೋಟಿಯಪ್ಪುದು ಗಡ ಪಾರ್ಥನ ಬಾಣಂ (ಸಮಪ. ೧೦-೧೭೬) ; ತೊಟ್ಟನಿದಂ ನಿಟ್ಟಿಸಿದಂ ಬಿಟ್ಟನಿದೆಂಬೊಂದು ಬಿಲ್ಲ ಬಲ್ಮೆಯನಾರ್ಗಂ ದಿಟ್ಟಿಸುವುದರಿದು (ಕಬ್ಬಿಗಕಾ. ೧೭೧); ತೊಡು ಕೋಲಂ ಹರಿಣಂಗೆ ಹಾಸು ಬಲೆಯಂ ಕೋಕಂಗೆ (ಮಲ್ಲಕಾ. ೩-೨೭೩) ; ಆದೊಡ್ಡವರ ಮಕ್ಕಳನು ತಲೆಗಾಯ್ದು ತೋಱು ಕಂದ . . . ಹೋದ ಬಾಣವ ಮರಳಿ ತೊಡದಿರು (ಕುಮ್ಮಾಉ. ೦೦-೩೫) ; ತೊಡು ಮಹಾಸ್ತ್ರವನಿವಗೆ (ತೊರರಾ. ೦-೧೧-೨೦). ೬. ಉಂಟಾಗು ; ಹುಟ್ಟು : ನಿನ್ನೊಳ್ ತೊಟ್ಟೊಂದು ಭಕ್ತಿಯನಾದರಂಬೆರಸು ಪೆಱತೊಂದೇಮುಟ್ಟಿಪೊಲ್ಲಂ (ಶಾಂತಿಪು. ೧೦-೨೦) ; ಬಗೆಯೊಳ್ಪೇಟದ ಬೀಜಮಂ ತಳಿದು ನೀರ್ಪೊಯ್ವಂದದಿಂ . . . ನೀರ್ಪೊಯ್ವುದುಂ ಪಾಂಥರಾಕೆಗಳೊಳ್ತೊಟ್ಟೊಲವಿಂಗಲ್ತೆ ಬಱಿನೀರೆಂಬಂದದಿಂದೀಂಟಿ ದಿಟ್ಟಿಗಳಿಂದೀಂಟುವರಾ ಪ್ರಪಾಪ್ರಣಯಿನೀಲಾವಣ್ಯನೀರಂಗಳಂ (ಮಲ್ಲಿಪು. ೨-೨೯) ; ಪೊದಱಿನಲಿ ಮಿಗೆ ತೊಟ್ಟ ಕಬ್ಬೊಗೆ ಝುಗೆಯ ಪೊರಳೆಯ ಕಿಡಿಯ ಗಡಣದಲಿ ಹುಟ್ಟಿದುರಿ ಹೆಮ್ಮರನ ಸುತ್ತಲು ಕಟ್ಟಿತು (ಕುಮ್ಮಾಆ. ೨೦-೫೫). ೭. ಪಡೆ ; ಹೊಂದು : ಈತನೊಳ್ ತೊಟ ಕಿಂಚಿ

ಭಾವಂ ನಮಗಕ್ಕಿಗೊಟ್ಟು ಮಡಗೂಬುಣ್ಬಂದಮಂ ಪೋ ೯ ಲ ದೇ ೯ (ಆದಿಪು. ೧೪-೩೨) ; ೮. ಸೇರು ; ಕೂಡು : ನಿಟ್ಟೆಯ್ದಿಯಾಗು ಪತಿಯೊಳ್ ತೊಟ್ಟನುವಶೆಯಾಗು ಶೀಲವತಿಯಾಗು ಚಿರಂ ನಿಟ್ಟಾಯುಮಾಗು ನೀ ನೆಂ ದಿ ಟ್ಟ ರ್ ಸೇಸೆಯಂ (ಕಾವ್ಯಾವ. ೨೨೩). **ತುಡು₁ :** ೧. "ತುಡು – ಶರಸಂಧಾನೇ, ಭೂಷಣಾವರಣೇಚ (ಒ ಡ ವೆ ಯ ನ್ನು ಇಟ್ಟುಕೊ)" (ಶಮಧಾ) ; ಅನರ್ಘ್ಯಮಪ್ಪ ಮಾಣಿಕ್ಯದುಂಗುರಮಂ ಕಳೆದು ತನಗೆ ತುಡಲ್ಕೆಂದು ಕೊಟ್ಟೊಡೆ (ಪದ್ಮರಾ. ೫-೨) ; ಇವು ರತ್ನಕುಂಡಲಂ ಜಿತರವಿಮಂಡಳಮಿವು ತುಡಲ್ಕೆ ಯೋಗ್ಯಮೆ ನಿನಗೆ (ಆದಿಪು. ೧೨-೧೧೮) ; ತುಡನೆ ಕವಚಮಂ ರಾಧೇಯಂ (ಪಂಪಭಾ. ೧೨-೧೦೯) ; ನಿಮ್ಮ ತುಡುವಾಭರಣಂಗಳಂ ಪಲವಮೂಲ್ಯ ವಸ್ತುಗಳಂ ತಂದು (ಪಂಚತಂ. ೧೦೨-೧೪) ; ಉಟ್ಟ ನವಾಂಬರಕ್ಕಮರೆ ಪೂದೊಡವಂ ತುಡುವೊಂದು ಕೌತುಕಂ ಪುಟ್ಟೆ (ಜಗವಿ. ೬-೧೨) ; ತಾರಗೆಯಂ ವಿದ್ಯಾಧರಿಯರ್ ಮುತ್ತೆಂದು ತೆಗೆದು ತುಡಲವ್ವಳಿಪರ್ (ಗಿರಿಜ. ೧-೫೪). ೪. "ತುಡು–ಶರಸಂಧಾನೇ, ಭೂಷಣಾವರಣೇಚ (ಒಡವೆಯನ್ನು ಇಟ್ಟುಕೊ)" (ಶಮಧಾ) ; ಮತ್ತಮೈಂದ್ರ ವಾರುಣ ವಾಯವ್ಯಾಗ್ನೇಯ ಪಾರ್ವತಾದಿ ಬಾಣಂಗಳಂ ತುಡೆ (ಪಂಪಭಾ. ೨-೬೬ ವ) ; ಸೀಳ್ನಾಯ್ಗಳಂ ಬಿಡು ಕೋಲಂ ತುಡು (ಕಾದಂಪೂ. ೧೫೯) ; ದೊಣೆಯಿಂದಂ ತೆಗೆವಾಗಳೊಂದು ತುಡುವಾಗಳ್ಪತ್ತುಬಾಣಂ (ಗದಾಯು. ೩-೩) ; ನೆನೆದು ನಿಜಜನನಿಗಿತ್ತುದನನುವರದೊಳ್ ದಿವ್ಯಬಾಣಮಂ ತುಡದುದನಾ ದಿನಪಸುತಂ ತುಡನೆ ಅವಂ (ನೇಮಿಪು. ೧೨-೧೬೨) ; ಕರುಣಿಸಲೆ ಶಬರ ತುಡದಿರು ಸರಲಂ ನೀಂ (ಕುಸುಮಾ. ೦೪-೪೨); ಬತ್ತಳಿಕೆಯಿಂದುಗಿವ ಸಮಯದೊಳಗೊಂದು ತುಡೆ ಪತ್ತು (ಜಬಪು. ೪೩-೧೬) ; ಪಿಡಿವಾಗಳೊಂದು; ಪಿಡಿಯಿಂ ತುಡುವಾಗಳೆರಡು . . . ಪಂಚಾಯುಧನ ಪೊಸಮಸೆಯ ವಿಶಿಖಂಗಳ್ (ರಾಮಾಶ್ವ. ೫೮-೨೭).

**ತೊಟ್ಟುವಾಯ್** = ಗುರಿಯಿಟ್ಟು ಮೇಲೆ ಬೀಳು : ಸ್ಫುರಿತ ಕೃಪಾಣಪಾಣಿಗಿದಿರಂ ನಡೆದಳ್ಕುಟಿ³ ತೊಟ್ಟುವಾಯ್ದು . . . ನೆಲಕಿಕ್ಕಿ ಪತ್ತಿ (ಪಂಪಭಾ. ೧೧-೧೦೪).

[ ದೇ.॥ ತಮಿ. ತೊಟು ; ಮಲ. ತೊಡು ; ತೆಲು. ತೊಡು, ತೊಡುಗು ]

**ತೊಡು₂**, ತಂಡು₂ (ನಾ). ಬಾಯಿಚಪಲ : ಮಗುವಿಗೆ ಮಳೆಗಾಲಕ್ಕೆ ತೊಡುವಿಗೇನಾದರೂ ಮಾಡು (ಪುರಪು. ೩೪೯) ; ಸಂಜೆ ಮಕ್ಕಳಿಗೆ ತೊಡುವಾಗಿಯೇ ಆಗುತ್ತದೆ (ಸ್ವಪ್ನಹೊ. ೧೦೩) ; ದೋಸೆ ತಿನ್ನುವ ಆಸೆಯಿಂದ ಇದ್ದ ಸೊಸೆಗೆ ದ್ರೋಹಮಾಡಿದ ಪಾಪ ನನ್ನದು . . . ಎಷ್ಟು ತೊಡುವಾಗಿತ್ತೋ ಅವಳಿಗೆ (ಪದ್ಮಸ. ೬೧). **ತುಡು₂ :** ತುಡುವಾಗತ್ತೆ ಎಂದರೆ 'ತುಡುವಾಗತ್ತೆ, ತುಡುವಾಗತ್ತೆ ತುಳಸಿನಾರಾಯಣ' ಎಂದು . . . ಕೋಡುಬಳೆ ರವೆವುಂಡೆಯನ್ನು . . . ಕೊಟ್ಟು ಕಳಿಸುತ್ತಿದ್ದಳು (ಪ್ರಶ್ನೆ. ೯೩) ; ಬೇಕು ಬೇಕಾದಾಗ, ತುಡು ಬಂದ ಕೂಡಲೆ, ಸಿಹಿ ತರಿಸಿ (ಚಂದ್ರಸ. ೪). [ ದೇ.॥ ತಮಿ. ತೊಟು = ತಿನ್ನು ; ತುಳು. ತೊಡು ]

**ತೊಡುಗೆ**, ತುಡಿಗೆ, ತುಡುಗೆ. ತೊಡಿಗೆ (ನಾ). ೧. ಒಡವೆ ; ಆಭರಣ ; ಅಲಂಕಾರ : "ನೇಪಥ್ಯಮಾ ಭೂಷಣಮಲಂಕಾರಮಾಭರಣಮೆಂದೆನಲು ತೊಡು [ಪಾಠಾಂ. ಡಿ]'ಗೆಗಭಿಧಾನಮಕ್ಕುಂ" (ಮಂಗರಾ. ೯೮-೧೦) ; "ಮಂಡನಂ, ಮಂಡನೀಯಂ, ಈ ೨ ತೊಡುಗೆ" (ಶಾಶಕ್ಯ. ೨೬೯). ೨. ಉಡುಪು : (ಕ). 'ಉಡುಗೆ' ಪರಾ. **ತುಡಿಗೆ :** ೧. ಪೊಸಮುತ್ತಿನ ತುಡಿಗೆ ಪೊದಟ್ಟಿಸೆಯೆ (ಪಂಪಭಾ. ೨-೬೮) ; ಬಳೆ ತುಡಿಗೆಯಾಗಿಯುಂ ಸರಿಗೆಯುಲ್ಲದಂತೆ . . . ದೂರಭವ್ಯರುಮಭವ್ಯರುಂ ಶ್ರಾವಕರಾಗಿಯುಂ . . . ಮೋಕ್ಷಗಾಮಿಗಳಲ್ಲರ್ (ಧರ್ಮಾಮೃ. ೧೧-೦೮೬); ವಾಸಂತಋತುಕಾಲ ಸಮಯ ಕುಸುಮವನಾ ವಿಳಾಸಿನೀಜನ ತು [ಪಾಠಾಂ. ತೊ]ಡಿಗೆಯಂ ಮಾಡಿ ತಂದೊಲ್ದು ಭೂಸುದತಿವಲ್ಲಭಂಗೀಯಲು (ಹದಶೀ. ೩-೪೮) ; ತುಡಿ [ಪಾಠಾಂ. ಡ, ಡು] ಗೆಯುಂ ತೊಟ್ಟಂ ; ಪೂವಂ ಮುಡಿದಂ (ಶಮದ. ೧೩೭ ಪ್ರಯೋ). 'ಕಿವಿದುಡಿಗೆ' ಪರಾ. **ತುಡುಗೆ :** ೧. "ಭೂಷಣಃ, ಅಳಂಕಾರಃ, ನೇಪಥ್ಯಂ, ಆಭರಣಂ–ಈ ೪ ತುಡುಗೆ" (ಹಲಾಯು. ೮೯-೩೮೫) ; ಅನರ್ಘ್ಯಮಪ್ಪ ತುಡುಗೆಗಳುಮಂ ಬಟಿವಟಿಗೊಟ್ಟು (ಪದ್ಮರಾ. ೧೫೦-೨) ; ತುಡಲ್ಕೆ ತುಡುಗೆಯನುಡಲ್ಕೆ ದಿವ್ಯಾಂಬರಮಂ . . . ಕುಡುವಮರಿ ಕಲ್ಪಲತೆಯನೆ ಪೋಲ್ತಳ್ (ಆದಿಪು. ೬-೧೧); ರತ್ನದ ತುಡು [ಪಾಠಾಂ. ತೊಡಿ] ಗೆಯನಿತ್ತುಂ ಯತ್ನದೆ ರಕ್ಷಿಸುವನೆಂಬ ನುತ್ತಮಾಜ್ಞೆನಂ (ಸಮಪ. ೫-೧೫೦) : ಪೊದಲ ಯುಗಳದೊಳೆ ಸುದತಿಯರುದಯಿಪರ್ . . . ಮಹಿಗೆ ತುಡುಗೆಯೆನಿಸುವ ತೆಱದಿಂ (ಪಾರ್ಶ್ವಪು. ೫-೮೧) : ತುಡು [ಪಾಠಾಂ. ಡಿ] ಗೆಯ ತೊಟ್ಟು ಪಟ್ಟಾವಳಿಯ ಮುಂಜೆಱಗುಟ್ಟು ಕುಳಿತಿರೆ (ಕೌಶಿರಾ. ೨೪-೧೫). ೨. ತೊಡರ್ವಮರ್ದ ಬಾಳವಣ್ಣದ ತುಡುಗೆ ಪಳಂಚಲೆವ ಪಂಚಜಡೆ . . . ಚೆಲ್ವಿಡಿದಿರ್ದುದು (ಪಂಪಭಾ. ೨-೪)

**ತೊಡಿಗೆ :** ೧. "ತೊಡಿಗೆ_ಅಲಂಕಾರ, ಆಭರಣ, ಪರಿಷ್ಕಾರ, ವಿಭೂಷಣ, ಮಂಡನ" (ನಾಚರಾ. ೬) ; ಮುತ್ತಿನ ತೊಡಿಗೆಗಳಂ ತೊಟ್ಟು ದರ್ಭಶಯನದೊಳಿರ್ದು (ಪಂಪಭಾ. ೦-೧೦೮ ವ) ; ತನ್ನ ತೊಟ್ಟ ತೊಡಿಗೆಗಳೆಲ್ಲವುಮನಗಂಗಚಿತ್ರಮನಿತ್ತೆಂತಾನುಂ ಬೀಟ್ಕೊಳಿಸಿ ಕಟಿ³ಪಿ (ಕಾದಂಋ. ೩೨೪) : ಅಂತು ತೊಡಿಗೆಗಳಂ ಪುಲಿಯಿಂ ಪಡೆದು (ಪಂಚತಂ. ೧೧೦-೧೦) ; ನಿಮ್ಮ ಶರಣರ ಪಾದಕ್ಕೆ ತೊಡಿಗೆಯು ಮಾಡಿ ಸಲಹು (ಬಸವ. ೨೫೧) ; ಹಳದಿಯ ಉಡುಗೆ ಸವೆಯದೂದುವ ಕೊಳಲು ಮೈಯ ತವರದ ತೊಡಿಗೆ ಎಸೆವುತಿರ (ಬಸರ. ೯-೧೧೨) ; ಕಂಡದ ತೊಡಿಗೆಗೆ ಮನವಿಟ್ಟರಗಿನ ಪುತ್ಥಳಿಯೆಂತಂತೆ (ವೀರೇಚ. ೧-೨೦) ; ತೊಡಿಗೆಗಳೆಲ್ಲವಂ ತೊಡುವಳ್ (ಸೂಕ್ತಿಸು. ೧೫-೨೯) ; ತೊಡಿಗೆಗಳು ಥಳಥಳಿಸೆ ಕಡೆಗಂಗಳ ಬೆಳಗು ಹೊಳೆಯೆ (ಬಸಪು. ೫-೨೮).

[ ತೊಡು₁ + –ಗೆ ]

**ತೊಡುಗೊರೆ** (ನಾ). ಉಡುಗೊರೆ; ಬಳುವಳಿ: (ಕ). ℙ ಸಾಮಾನ್ಯವಾಗಿ ಈ ಪದ 'ಉಡುಗೊರೆ, ಎಂಬ ಪದದೊಡನೆ ಬರುತ್ತದೆ.

[ ತೊಡು₁ + ಕೊರೆ₇ ( < ಕೊಟಿ³ ]

**ತೊಡುಪು** 'ತೊಡಪು₂' ನೋ.

**ತೊಡುವಡ್ಡಿ** (ನಾ). ೧. ಹಣವನ್ನು ತೊಡಗಿಸುವುದರಿಂದ ಬರುವ ಬಡ್ಡಿ. ೨. ಚಕ್ರಬಡ್ಡಿ : ಧನುಮಾಸದ ತಿಂಗಳಪೊಂದರ ನಿತ್ಯೋಚ್ಛವದ ರಂಗಪೂಜೆ ಬೀಜವೊಂನ ತೊಡುವಡ್ಡಿಇಂದ ನಡಮಂತಾಗಿ (ಎಕ. XV, ಬೇಲೂರು. ೨೪೮-೪ ; 1297).

[<ತೊಡಗು₁ + ಬಡ್ಡಿ₂. / ತಮಿ. ತೊಟರ್ವಟ್ಟಿ]

**ತೊಡುವಿಲ್**(ನಾ). ಒಂದು ಬಗೆಯ ಬಿಲ್ಲು: ತೊಡುವಿ[ಪಾಠಾಂ. ತೊಡುಬಿ, ತೋಡುವಿ]ಲ್ಲಂಬು ತರಕಸ ಬಲ್ಲೆಯ ಜೋಡಬೇಡೆಯ ಸವಗ ಸೀಸಕದ ಗಾಡಿ ಕೈಮಿಗೆ ಪೊ ಱ ಮ ಂ ಟ ರು ರಾವುತರಃ (ಕುರಾಸಾ. ೧೧-೧೬).

[ ತೊಡು₁ + ಬಿಲ್₂ ]

**ತೊಡೆ₁** (ಕ್ರಿ). ೧. ಲೇಪಿಸು ; ಬಳಿ ; ಪೂಸು ; ಸವರು ; ಹಚ್ಚು : ಮನ್ಮಥೋತ್ಸವಾಭಿಮುಖ ಮುಖಚಂದ್ರನಂ ಚಂದ್ರಕವಳದಿಂ ತೊಡೆದು (ಆದಿಪು. ೪-೪೧ ವ) ; ಕುಡಿ ಮುಱಿದಿರ್ದೊಡಂ . . . ಆಯೆಡೆಯೊಳ್ ಬಿಸಿಯುಪ್ಪ ತುಪ್ಪಮಂ ತೊಡೆದು (ಲೋಕೋಪ. ೬-೧೩) ; ಒಪ್ಪವ ನುಡಿವರಯ್ಯಾ ತುಪ್ಪವ ತೊಡೆದಂತೆ (ಬಸವ. ೭೭೫) ; ತೊಡೆದ ಭಸಿತಂ ಧೂಮವಿಡೆ ಮೈಯ ರೋಮ ಕೌಱಿಡೆ . . . ಕೌಶಿಕಂ ಮುನಿದನು ವಸಿಷ್ಠಮುನಿಗೆ (ಹಚಶಾ. ೨-೩೩); ಮಂತ್ರಿಸಿದ ಸುರುಚಿರಭಸಿತವಂ ತಳಿದು ತಾಂ ತೊಡೆಯಲ್ಕೆ (ಬಸಪು. ೪೯-೨೯) ; ಆದ ಮೈಗಂಡಿಯೊಳು ರಕುತವ ಶೋಧಿಸುತ ಹಳದುಪ್ಪವನು ತೊಡೆದಾದರಿಸಿದುದು ವೈದ್ಯಸಂತತಿ ವೀರ ಭಟರುಗಳ (ಕುವ್ಯಾಭೀ. ೫-೪೦); ಕಡುಮೂರ್ಖನಾದರೇನು ದುಷ್ಕರ್ಮದಿಂ

ತೊಡೆದಾತನಾದರೇನು (ಪುರಂದ. ೦-೧೪೩-೧). ೨. ತೀಡಂ; ಸೋಕು: ಪರಿತಂದಾಗಳ್ ಚಂಚುವಿಂ ತೊಡೆದು ಮೊಟ್ಟುಂ (ಕುಸುಮಾ. ೧-೫೩); ಪುಗಿಲುಪುಗಿಲೆಂದುಡೆಯ ತೊಡೆಯುತಿರೆ ತಂಗಾಳಿ (ಕಾಲೂರ. ೬೦-೯೯). ೩. ಒರಸು: ತದೀಯಪಾದಪಲ್ಲವಂಗಳನಾನಂದಾಶ್ರುಮಿಶ್ರಿತಜಳಂಗಳೊಳ್ ತೊಳೆದುಂ ನಿಜೋತ್ತರೀಯ ಪಲ್ಲವಂಗಳೊಳ್ ತೊಡೆದುಂ (ಆದಿಪು. ೫-೪೬ ವ); ಜಳದಿಂದೆ ಕರ್ಚಿ ಪಲ್ಯಾಂಚಲದಿಂ ನಿಜವದನಬಿಂಬಮುಂ ಸತಿ ತೊಡೆದಳ್ (ಕಾದಂಪೂ. ೬೦೩); ಅರಿಚರಣಪಾಂಸು ಪತ್ತಿರೆ ಶರೀರಮಂ ತೊಡೆದು ಕಳೆದೆ ವಸ್ತ್ರಾಂಚಲದಿಂ (ಗದಾಯು. ೯-೨೭); ಸನೆಯುಂಬಂ ತಾವರೆಪೂವಿನ ಕೈಪೊಡೆಯಿಂ ಮನೋಭವಂ ತೊಡೆವವೊಲಾ ವನಿತೆಯ ಸಬಾಷ್ಪಲೋಚನಮನವನಿಪತಿ ಶೋಣಪಾಣಿತಳದಿಂ ತೊಡೆದಂ (ಮಲ್ಲಿಪು. ೪-೧೬); ಕಣ್ಬನಿಯುಂ ತನ್ನ ಕರಾಗ್ರದಿಂದೆ ತೊಡೆದಂ ವಿಶ್ವಂಭರೋರ್ವೀಶ್ವರಂ (ಕುಸುಮಾ. ೩-೪೯); ಬಾಷ್ಪೋದಕಬಿಂದುಸಂದೋಹಮಂ ತೊಡೆದು ನಿನ್ನ ದುಃಖಕ್ಕೆ ಕಾರಣವೇನೆನುತ್ತ ಮತ್ತಿಂತೆಂದಂ (ಪುಣ್ಯಾಸ್ರ. ೧-೬೨ ವ); ದುರ್ವ್ರಣವ ತೊಡೆದು ಕಟ್ಟುವ ಹಸ್ತಿವೈದ್ಯರ ಗಡಣ (ಕುಮಾ.ಭೀ. ೫-೪೦). 'ಕಂಬನಿದೊಡೆ' ಪರಾ. ೪. ಅಳಿಸಂ; ಉಜ್ಜಿತೆಗೆ: ಮನಸಿಜನ ತಲೆಯ ಬರೆಹವ ತೊಡೆದನು (ಪ್ರಭುದೇ. ಬ. ೬೧-೦೬೫); ತೊಡೆವೆಂ ಶಕ್ರನ ನಾಮಮಂ ತುಡುಕಿ ನೀರೊಳ್ ಮೆಟ್ಟುವೆಂ ವಹ್ನಿಯಂ (ಜಗವಿ. ೩-೨೧); ತೆಕ್ಕನೆ ತೀವಿರೆ ತಾಪಕ್ಕಿಕ್ಕಿದ ಸಿರಿಗಂಪು ಪಣೆಯೊಳೆಸೆದುದು ಕೋಪಂ ವಿಕೃತನು ಬೆಸಸಿದೊಡೆ ನೊಸಲಕ್ಕರಮಂ ತೊಡೆಯಲೆಂದು ಬಂದಿಂದುವವೋಲ್ (ಚಂದ್ರಪು. ೮-೮೬); ಎಡಱಿದನೋ ಅವನ ನೊಸಲಕ್ಕರವಂ ತೊಡೆದುದಕ್ಕುಂ(ಶಮದ.೫೬ ಪ್ರಯೋ); ಸರಸಿಜಾಸನನಂದು ನೊಸಲಲಿ ಬರೆದ ಲಿಪಿ ಹೆಡತಲೆಗೆ ಹೋಹುದೆ . . . ಮರಳಿ ತೊಡೆಯಲು ಕಾಯಲುಂ ಪಂಕರುಹಗರ್ಭಂಗಾಗದು (ಬಸಪು. ೪೬-೧೩); ತೊಡೆದನಾಗಳೆ ನೊಸಲ ಕಣ್ಣಿನ ಕಿಡಿಯನೆಲ್ಲರನುಳುಹಿದನು (ಪ್ರಭುಲೀ. ೧೩-೬೨); ಲೀಲೆಯಿಂದೀ ಭೀಮ ದೈತ್ಯರ ಭಾಳಲಿಪಿಯನು ತೊಡೆದ (ಕುಮಾ.ವ್ಯಾ. ಅ. ಉದ್ಯೋ. ೧೫-೧೪); ಶರದ ಘನರಾಜೇಂದ್ರಪದವಿಯ ಬರಹ ತೊಡದುದು (ತೊರರಾ. ೩-೨-೨); ಬರೆಬರೆದಂತದಂ ತೊಡದು ತೊಟ್ಟನೆ ನಿಟ್ಟಿಸಿ . . . ತೋರ್ಪ ದುಷ್ಕವಿ ಮಹಾಕವಿಮಧ್ಯದೊಳೊಪ್ಪಲಾರ್ಪನೇ (ರಾಜಶೇ. ೧-೨೩); ತೊಡೆಯಲಪ್ಪುದೆ ನೊಸಲ ಬರೆಹಗಳ ಕುಂದಂ (ಕಾಲೂರ. ೧೧೧-೨೨೮). ೫. ಗುಡಿಸು; ಉಡುಗು: "ತೊಡೆ-ಸಂಮಾರ್ಜನೇ, ಆಂಗೇಚ" (ಶಮಧಾ); ಉತ್ಪಲಿಕೆಯಂ ಕದಳೀಗೃಹಮರಕತವೇದಿಯಂ ಕಮಲದಳಂಗಳಿಂ ತೊಡೆಯಲುಂ . . . ಪೆಸರ್ವೆಸರೊಳೆ ಕರೆದು ಪೇಟ್ದ (ಕಾದಂಪೂ. ೧೦೦೬); ಊರ ಚೌಪಟ್ಟದೊಳಂ ತೊಡೆದು ಬರೆದಲ್ಲಿ ರಂಗಮನಡುಗೆಗಳಂ ಸುರಿದು ಸೂಸಿ ಕೆಡುಪಮೂರ್ಘರ್ (ಸಮಖ. ೯-೧೩೦); ಕಡುಸೊಗಯಿಪ ಮಣಿಮನೆಯಂಗಣಮಂ ತೊಡೆವ . . . ಮಡದಿಯರ ಮೊತ್ತಂ ಕಣ್ಗೊಪ್ಪಿದುದು (ಜಯುಕಾ. ೧೨-೧೩). ೬. ಶುದ್ಧಿಮಾಡು; ಶುಭ್ರಮಾಡು: ವರಮುಕುರಮಂ ತೊಡವ[ಪಾಠಾಂ. ಬೆಳಪ]ರಾರ್ (ಹಡಕಾ. ೧-೨೨). ೭. ನಿರ್ಮೂಲಮಾಡು; ನಾಶಮಾಡು: ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೇ (ಪ್ರಭುದೇ. ಬ. ೩೩-೪೩); ಜಿನಬುದ್ಧಸಮಯವಿದೆಂದುಲಿವ ಪೆಸರಿಲ್ಲದಂತಾತನು ತೊಡೆದು ಕಳೆದು (ಬಸಪು. ೫೦-೫೦); ಜಯವಿಜಯರಾ ದೈತ್ಯಜನ್ಮವನು ಈತ ತೊಡೆದನು (ಕುಮಾ.ವ್ಯಾ. ಉದ್ಯೋ. ೧೦-೨೪); ಮೇಘಪ್ರಸರಕೊಳಗಹನೊಮ್ಮೆ ರವಿ ತೋಱುವನು ಮತ್ತೊಮ್ಮೆ ಅಸಮಸಮರದೊಳೀತನಾ ಪರಿ ಮಸುಳುವನು ತೋಱುವನು ತೊಡೆವನು ದಸೆಗೆಡಿಸುವನು ಬಳಿಕ ಮುಳಿಸಿನೊಳಾ ಮಹಾರಥರ (ಕುಮಾ.ಕ. ೧೧-೩೭) ೮. ನಾಶವಾಗು; ಇಲ್ಲವಾಗು: ತಪ್ಪಿತ ತೊಡೆಯಿತ್ತು ಭವಬಾಧನ ಹಿಂಗಿತ್ತು (ಪದಗೋ. ೨); ಪಾಂಡವರೂ, ಕುಂತಿಯೂ ಬದುಕಿಕೊಂಡು, ದ್ರೌಪದಿಯನ್ನು ಪಡೆದಿದ್ದಾರೆ . . . ದುಃಖ ತೊಡೆದಿದೆ! (ಪದಭಾ. ೬೬); [illegible] ಕದನ ಸುಳಿದರೆ . . . ಹೇಗೋ ತೊಡೆದು ಬಿಡುತ್ತಿತ್ತು (ಬೆಟ್ಟಹೊ. ೪). ೯. ಪರಿಹರಿಸು; ನಿವಾರಿಸು: ಸಯ್ತಡವಡಿಕೆಗಳಂ ತೊಡೆದತ್ತಡವಱಿಯದೆ ಪೊಳೆವ ಮಿಂಚು (ಕವಿರಾ. ೩-೧೨೫); ಕೋಪಮಂಗಜರಸಪೂರದೊಳ್ ತೊಡೆದವೋಲ್ ತಳರ್ದತ್ತು (ಶಾಂತಿಪು. ೮-೧೧೧); ಎನ್ನ ಕಾಯದ ಕರ್ಮವ ತೊಡೆದು . . . ಕಾರುಣ್ಯವ ಮಾಡು (ಅಪಡಂ. ೧೬೭-೬೫೩).

**ತೊಡೆದುಕೊಳ್, ತೊಡೆದುಕೊಳ್ಳು** = ೧. ಲೇಪಿಸಿಕೊಳ್ಳು; ಬಳಿದುಕೊಳ್ಳು: ಎದುರಿಗೇ ಇದ್ದ ತಮ್ಮ ದೃಷ್ಟಿಯ ಸುಪ್ರಭೆಯನ್ನು ತೊಡೆದುಕೊಂಡಿದ್ದೆ (ಸುವಸಂ. ೧೬). ೨. ಒರೆಸಿಕೊಳ್ಳು: ತುಡುಗಣೆ ತೊಟ್ಟಿಸಂತೆ ಬಾಯುಂ ತೊಡೆದುಕೊಂಡು (ಪಂಚತಂ. ೨೮೪-೨೩). **ತೊಡೆದುಹಾಕು** = ೧. ಅಳಿಸಿಹಾಕಂ; ಅಳಿಸು: ನಿನ್ನ ಹಣೆಯ ಬರಹವನ್ನು ತೊಡೆದುಹಾಕುತ್ತೇನೆ (ರಾಜಸೂ. ೨೧). ೨. ನಾಶಮಾಡು; ನಿರ್ಮೂಲಮಾಡಂ: ರಾಜರ ದುಷ್ಟಸಹವಾಸಗುಣ ಅವರ ವಿವೇಕವನ್ನು ತೊಡೆದುಹಾಕಿತ್ತು (ಮರಳಿ. ೧೬೩); ಗ್ರಹಗಳು ರೂಪುಗೊಳ್ಳುವ ಕ್ರಿಯೆ ಅತ್ಯಂತ ಅಪೂರ್ವ ಸಂಭವವಾದುದು ಎಂಬುದು-ಮತಾಭಿಪ್ರಾಯವನ್ನು ತೊಡೆದುಹಾಕಲು ಇಚ್ಛಿಸದಿದ್ದ ಜನಸಾಮಾನ್ಯರ ದೃಷ್ಟಿಯಲ್ಲಿ ಒಂದು ಪ್ರಧಾನಗುಣವಾಗಿ ಪರಿಣಮಿಸಿತು (ಭೂಹುಟ್ಟು. ೨೯). **ತೊಡೆದು ಹೋಗು** = ಇಲ್ಲವಾಗು: ಅವರಿಗೆ ಉಂಟಾದ ಅಂತಹ ವಿಷಮವಿಪತ್ತಿನಲ್ಲಿ ಸಮಯಸ್ಫೂರ್ತಿಯು ತೊಡೆದುಹೋಯಿತು (ರಾವಿಜ. ೨೩).

[ದೇ. ■ ತಮಿ. ತೊಟ್ಟೈ, ತುಟ್ಟೈ; ಮಲ. ತುಡ; ತುಳು. ತೊಡೆ, ತುಡೆ; ತೆಲು. ತೊಡೆಯು, ತುಡ್ಚು]

**ತೊಡೆ₂** (ನಾ). ಸೊಂಟದಿಂದ ಮಂಡಿಯವರೆಗಿನ ಭಾಗ; ಊರು: "ಪ್ರಸೃತಾಷ್ಠೆ ಜಂಘೆ ತೊಡೆಯೂರು" (ವಸ್ತುಕೋ. ೬೬-೩); ವೀರಶ್ರೀ ಮಹಾದೇವಿಯರಸನ ತಲೆಯಂ ತನ್ನ ತೊಡೆಯ ಮೇಲಿಟ್ಟು (ಪಂಪಭಾ. ೧೧೭-೧೦); ವದನಂ ತೋಳ್ ತೊಡೆ ಪಾದಮೆಂಬವನಿವಂ ಶುಶ್ರೂಷೆಗೆಯ್ಯಲ್ಕೆ (ಆದಿಪು. ೮-೭೩); ಕುರುರಾಜನತೊಡೆಯನುಡಿವೆನೆಂದಂ ಭೀಮಂ (ಗದಾಯು. ೨-೨೮); ತೊಡೆಯ ಮೇಲಿದರ್ದೊಡಂ ಸ್ತ್ರೀಯನಾರ್ಯ್ದುಕೊಂಡಿರಬೇಕು (ಪಂಚತಂ. ೧೩೩-೧೭); ಸುರಪತಿಯ ಬೇಳಂಬವನು ವಿಸ್ತರಿಸಲೇತಕೆ ವಜ್ರಕೀಟೋತ್ಕರವ ಕಳುಹಿದರೆನ್ನ ತೊಡೆಗಳನುಗಿದವವು ಬಳಿಕ (ಕುಮಾ.ಕ. ೯-೩೧).

[ದೇ.■ ತಮಿ. ತೊಟ್ಟೈ, ತುಟ್ಟೈ; ಮಲ. ತುಡ; ತುಳು. ತೊಡೆ, ತುಡೆ; ಕೊಡ. ತೊಡೆ; ತೆಲು. ತೊಡ]

**ತೊಡೆಗಟ್ಟ** (ನಾ). ಒಂದು ಬಗೆಯ ಸಸ್ಯ: ಬೀಟೆ, ತೊಡಗಟ್ಟ, ಕರೇವ್ಯಾಡಿ (ಮೃಜಿಗಿ. ೨೮-೫೪೮). [?]

**ತೊಡೆಚಲ್ಲಣ** (ನಾ). ಒಂದು ಬಗೆಯ ಚಲ್ಲಣ; ಮೊಳಕಾಲಿನವರೆಗೆ ಬರುವ ಉಡುಪು; ಅರ್ಧೋರುಕ: ತೊಡೆಚಲ್ಲಣ ತೊಟ್ಟು ಜೋಡು ಬಿಡದ ಮಱಿಯು ಬಿಲ್ಲವರು ನಡೆತಂದರು (ಕುರಾಸಾಂ. ೧೧-೩೫); ಹಜ್ಜೆಹಜ್ಜೆಗೆ ತೊಡೆಚಲ್ಲಣವಡಸಿರ್ದ ಗೆಜ್ಜೆಯು ಗಲಿರೆಂಬ ರವದಿ. . . ಬಂದನು (ಮೋಹತ. ೧೨-೪೯). [ತೊಡೆ₂ + ಚಲ್ಲಣ]

**ತೊಡೆಚಾಟುಗೊಳ್** (ಕ್ರಿ). ತೊಡೆಗೆ ಮರೆಮಾಡಿಕೊಳ್ಳು, -ರಕ್ಷಣೆಯಾಗಿಟ್ಟುಕೊಳ್ಳು: ಬೆಳ್ಳಿಪೊಂಗುಬ್ಬಿಪಗೆಯಂ ತೊಡೆಚಾಟುಗೊಳುತ್ತೊಡನೆ ಖಡ್ಗಂಗಳ ರಭಳಿಪಿಸುತೆ . . . ಪೊಯ್ದಾಡುತಿರ್ದರಾ ಹರಿಗೆಯವರು (ಚಲಪು. ೪೮-೫೦); ಕಾಳೆಯಿಂದೆ ಬೆದಱದಿರಿ ನೇಜಯಂಗಳನೂದು ಹರಿಗೆಯುಂ ಕದಲಿಸು ವರೂಥಮಂ ತೊಡೆಚಾಟುಗೊಳ್ಳೆನುತ್ತೆ ಕವಿಸ ವಿಕ್ರಮರೆಲ್ಲರುಂ ಬೆದಱಿ ಕಂಡ ಕಡೆಗೋಡಿದರು (ಚಲಪು. ೫೦-೧೬).

[ತೊಡೆ₂ + ಚಾಟು₂ + ಕೊಳ್₁]

**ತೊಡೆತ** (ನಾ). ೧. ಲೇಪನ ; ಬಳಿಯುವಿಕೆ : "ಲೇಪನಂ ತೊಡೆತಂ" (ದಾಪಟೀ. ೨-೧-೮೭) ; (ಬಣ್ಣ, ಸುಣ್ಣ ಬಳಿಯುವುದರಲ್ಲಿ) ಮೊದಲನೆಯ ತೊಡೆತ (First Coat. ಇಂಕನಿ.). ೨. ನಾಶ: ಗಡ್ಡೆ ಇರ್ಪುದು, ಕಿರಿದು. ಸಲಮಿಸಿನ ಮುಂದುಗಡೆ, ನಾವೆಗಳ ತೊಡೆತ (ಪಾರಶು. ೧೭-೩೯೩). [ ತೊಡೆ$_1$ + – ತ$_2$ ]

**ತೊಡೆತಟ್ಟು** 'ತೊಡೆದಟ್ಟು' ನೋ.

**ತೊಡೆದಟ್ಟು, ತೊಡೆತಟ್ಟು** (ಕ್ರಿ). ೧. ಚುಕ್ಕುತಟ್ಟು : ಚಂಡವಿಕ್ರಮ ನೊಳಗಿದನು ನಾರಿಯರ್ ನಿಖಿಲೋಪಚಾರವ ಮಾಡಿ ಕೈವಾರಿಸಿ ತೊಡೆ ದಟ್ಟಲೊಡನೆ ಪಾರಿಯ ವಾದ್ಯ ಘೋಷಣೆಸಲ್ಕೆ ದಿವ್ಯವಿಭೇರಿಯ ಹೊಡೆದರೂರೊಳಗೆ (ಮೋಹತ. ೧೮-೧೦೦). **ತೊಡೆತಟ್ಟು** : ೨. ಮಲ್ಲ ಯುದ್ಧಕ್ಕೆ ಸಿದ್ಧವಾಗು ; ಸಡ್ಡುಹೊಡೆ : ಜಟ್ಟಿಗಳು ತೊಡೆತಟ್ಟ ಮಲ್ಲಯುದ್ಧಕ್ಕೆ ಸಿದ್ಧವಾದರು (ರೂಢಿ). [ ತೊಡೆ$_2$ + ತಟ್ಟು$_1$ ]

**ತೊಡೆಪ, ತೊಡಹ$_1$, ತೊಡೆಹ** (ನಾ). ೧. ಬಳಿಯುವಿಕೆ ; ಲೇಪನ : ತೊಡೆಪಂ, ನಡೆಪಂ, ಮೊಗೆವಂ (ಶಬ್ದಾನು. ೫೭೧ ಪ್ರಯೋ). **ತೊಡಹ$_1$** : ೧. ಜಡೆದಲೆಯ ತೊಡಹದ ವಿಭೂತಿಯ ಮಡಿವರಳ ಜಪಸರದ . . . ಮುನಿಯ ವೇಷವ ತೊಡಟಿಕೊಂಡಿಹ ಕಾಲನೇಮಿಪ್ಪಂತೆ ರಂಜಿಸಿದ (ತೊರರಾ. ೬-೩೭-೬೮) ; ಹೇಮದ ತೊಡಹದುರುನಿಸ್ಸಾಳತತಿಯಲಿ ನುಡಿ ವಡಚ್ಚರಿಯೆನಲು ಮಿಗೆ ಸಂಭ್ರಮಿಸಿತಾ ನಗರ (ತೊರರಾ. ೬-೫೩-೧೭). ೨. ಗಿಲೀಟು ; ಲೇಪ : ತೊಡಹದ ಕೆಲಸದ ಬಣ್ಣದಂತೆ ಕಡಿಹಕ್ಕೆ ಒರೆಗೆ ಬಾರದು ನೋಡಾ (ಬಸವ. ೨೮೯) ; ಚಿಗಿವ ಚಲನೆಯ ಚಂಗುಪಾಟಿನ ಮೃಗ . . . ತರುಕದಂಬದಲಿ ಅಡಗಿ ತೋಱುತ ನಿಲುತ ನಿಗುರುತ ತೊಡಹದಳಿಮನದಧಮಪುರುಷನ ನುಡಿಯವೊಲು ಪಂಟಿಸುತ ಹಾಯ್ದುದು ವಿಪಿನದಲಿ ನೃಪನ (ತೊರರಾ. ೩-೮-೪೭). ೩. ಕಪಟ ; ಠಕ್ಕು ; ನಟನೆ : ಕಡಿಗಳ ಹದಿನೆಂಟನೊಡಗೂಡಿ ಸಂದಿಸಿ ತೊಡಟಿ ಕಟ್ಟಿದೆ ನರರ ಬಂಧನದಲ್ಲಿ ಈ ತೊಡಹದ ನಾಯ ನಿಚ್ಚ ನೀನಿಕ್ಕಿ ಕೆಡಿಸಿದೆಯಯ್ಯ (ದೇದಾವ. ೩೭-೭೨) ; ತೊಡಹದಧಟನೆ ತಳೆದು ಯುದ್ಧಕೆ ತಡಹಾಸಿ ಸಮಸತ್ತ್ವದಲಿ ಫಣಿಶಯನು ಕಾದಿದನು (ಸಾಳ್ವಭಾ. ೨೨-೬೮). **ತೊಡೆಹ** : ೨. ಕನಕದ ತೊಡೆಹದೊಳಾ ಸರಪಣಿಯಂತೆ ಜನಪನಿನ್ನೊಬ್ಬ ಮಾಡುವನೆ (ಭರತ. ೪೯-೧೪೦) ; ಹೊಸ ಹೊನ್ನ ತೊಡೆಹದಂತಸೆವ ಮೈಬಣ್ಣ (ಭರತ. ೭೭-೧೯). ೪. ತೋರಿಕೆ: ವೀರ ರೆಂದೆನಿಸುವರು ತೊಡೆಹದ ಶೌರಿಯುದ ಸಿರಿವಂತರರಸುಕುಮಾರಕರು ನಿನ್ನವರು (ಕುಮಾರ್ದ್ರೋ. ೧೩-೪೭) : ಪೊಳೆಪೊಳೆದು ತಂಬುಲದ ರಸದಲಿ ಮುಳುಗಿ ಮೂಡುವ ಥಗೆಯ ತೊಡೆಹದ ಮಲುನಗೆಯ . . . ಭೂಪಾಲನಿರವನು ಕಂಡು (ಕುಮಾರ್ದ್ರೋ. ೧೮-೯). [ ತೊಡೆ$_1$ + – ಪ$_2$ ]

**ತೊಡೆಮಡ** (ನಾ). ೧. ಆನೆ ಅಥವಾ ಕುದುರೆಯನ್ನು ಏರುವ ಒಂದು ಬಗೆಯ ವಿದ್ಯೆ,–ವರಸೆ : ಸರಸನ್ನೆ ತೊಡೆ[ಪಾಠಾಂ. ಡ]ಮಡಂ ಕಸೆಕಬ್ಬಿ ಕಡಿಯಾಣ ಸರಸಮಂ ಸೈರಿಸದ ಚಳಬಳಿಕೆಗಳ ಚಾರು ತುರಗಕುಲ (ಸೋಮಚ. ೫-೨೮) : ಬಳಿಕೆಯೊಳು ತೊಡೆಮಡ ಕಿಸಿ[ ಕಸೆ ]ಕಂಬಿಯ ಸರಸನ್ನೆಗಳಾಟದ ತೊಡಕಂ ಪೊದ್ದದೆ (ವೀರೇಚ. ೨-೩೯) ; ತೊಡೆಮಡ ದನಿ ಚಮ್ಮಟಗೆಗಳನೊಯ್ಯನೊಯ್ಯನೆ ಮೈಪಳಿಗೆ ತಂದೊಡಂಬಡಿಸಿ (ರಾಜಶೇ. ೬-೧೧ ವ). ೨. ಸವಾರಿ: ಎನ್ನ ತೊಡೆಮಡದ ಮದಕರಿಯೆ ಭಕ್ತರ ಸಿರಿಯೆ ದುರಿತಗಜ ಹರಿಯೆ ಸಾಮರ್ಥ್ಯಗಿರಿಯೆ (ಸಿದ್ಧರಾ. ೮-೪೨); ೩. ಸವಾರಿಯ ಒಂದು ಕ್ರಮ : ಥಾಪನೆ ಬಯ್ಸಿಕೆ ತೊಡೆಮಡಕಯ್ದುನಿ ಬೆಂಬ ಚಡಾಯುತಿಕೆಗಾಯತಿಕೆವಡೆದಾರೂಢ ವಿದ್ಯಾವಿಳಾಸ (ಸೌಇಇ IX-i, ೭೪೩-೨೦ ; 1226). ೪. (ಅಲಂ) ಸಲಿಗೆ; ಆತ್ಮೀಯತೆ: ಪೊಱಮಡಿಸಿದಂ ಪುರಹರನ ತೊಡೆಮಡದ ಸುಕುಮಾರನು (ಸೋಮಚ. ೫-೨೨). [ ತೊಡೆ$_2$ + ಮಡ$_1$ ]

**ತೊಡೆಯಿಸು** (ಕ್ರಿ). ೧. ಬಳಿಯುವಂತೆ ಮಾಡು ; ಲೇಪಿಸು : "ತೊಡೆಯಿಸು – ಲೇಪ್ಯಕರಣೇ" (ಶಮುಧಾ). ೨. ಅಳಿಸು ; ಉಜ್ಜಿ ತೆಗೆ ; ಇಲ್ಲದಂತೆ ಮಾಡು : ಪುರಾತನ ಚಕ್ರವರ್ತಿಗಳ ದಿಗ್ವಿಜಯ ಕೀರ್ತಿಗಳಂ . . . ದಂಡರತ್ನದಿಂ ತೊಡೆಯಿಸಿ ಕಳೆದು (ಆಜಿಪು. ೯-೩೪ ವ); ಆಂ ಬಂದು ಪೋದ ಪಜ್ಜೆಯನಂಬುಜಮುಖಿ ಪೆಱಸದೊರ್ಬನಱಿಯದ ತೆಱದಿಂ . . . ತೊಡೆಯಿಸುವುದೆನುತುಮಾಂ ಪೊಱಮಟ್ಟೆಂ (ದಶಕು. ೧೦-೯೦); ತನ್ನರೇಂದ್ರನ ನೊಸಲ ಬರೆಪವ ಮುನ್ನೊರೆಸಿ ಬಿಜ್ಜಳನ ಸಾಮ್ರಾಜ್ಯೋನ್ನತಿಯನೀಶನ ಕವಳಿಗೆಯೊಳಂತು ತೊಡೆ[ಪಾಠಾಂ. ಡ] ಯಿಸುತ (ಬಸಪು. ೬೧-೭). [ ತೊಡೆ$_1$ + – ಇಸು$_3$ ]

**ತೊಡೆಯೇಱಿಸು** (ಕ್ರಿ). ತೊಡೆಯ ಮೇಲೆ ಕೂರಿಸಿಕೊಳ್ಳು : ಬಯಸಿ ಪಡೆದು ತೊಡೆಯೇಱಿಸಿ ಮುದ್ದನೊಱಲ್ದು ನೋಡಿ ನಡೆಪಿದ ಜನನೀ ಜನಕರ್ಗದೆನಿತಱಲ್ ಜನಿಯಿಕುಮೋ (ಕಾದಂಉ. ೪೭೫) ; ಅರಸನೆಂಬ ಪಾತಕನೆನ್ನಂ ತೊಡೆಯೇಱಿಸಿ ಕೇಳಿಕೆಯಾದೊಡೆ ನೋಡುತಿರ್ದೆಂ (ಯಶೋಚ. ೨-೫೧). [ ತೊಡೆ$_2$ + ಏಱಿಸು ]

**ತೊಡೆವಾಳ** 'ತೊಡೆವಾಳೆ' ನೋ.

**ತೊಡೆವಾಳೆ, ತೊಡೆವಾಳ** (ನಾ). ತೊಡೆಯ ಸಂದಿಯಲ್ಲಿ ಬಾಳೆಯ ಕಾಯಂತೆ ಏಳುವ ಬಾವು ; ಉಡುಚು ; ಒಂದು ಬಗೆಯ ಗುಹ್ಯ ರೋಗ : "ಜುಂಗಃ = ತೊಡೆವಾಳೆ" (ಶಾಶಕ. ೧೧); ರಕ್ತಧಾತು, ಮಾಂಸ ಧಾತು ... ಇವಱಿಂದ ತೊಡೆಗಳ ಸಂದಿನಲ್ಲಿ ಆ ಗ್ರಂಥಿ ಉಂಟಾಗುವುದು. ಆದನ್ನೇ ತೊಡೆವಾಳೆ ಎಂದುಂಬರು (ವೃದ್ಧಸಾ. II, ೧೭೪). **ತೊಡೆವಾಳ** : ಈ ಬೇರಂ ನಿಂಬೇಹುಳಿಯಲ್ಲಿ ತೇದು ತೊಡೆಯಲು ೩ ದಿನಕ್ಕೆ ತೊಡೆವಾಳ ಗುಣ (ವಿವೈವಿ. ೪) : ದೇಹದ ಗ್ರಂಥಿಗಳಿರುವ ಪ್ರದೇಶದಲ್ಲಿ (ಮು. ಕಂಕುಳಲ್ಲಿಯೂ ತೊಡೆಯ ಸಂದಿಯಲ್ಲಿಯೂ) ಏಳುವ ಗೆಡ್ಡೆ; ತೊಡೆವಾಳ; ಉಡುಚು (Bubo. ಇಂಕನಿ.).

[ ತೊಡೆ$_2$ + ಬಾಳೆ$_1$ (< ಬಾಟಿ).⁄ತಮಿ. ತೊಟ್ಟೈವಾಟಿ, ತುಟ್ಟೈವಾಟ್ಟಿ; ಮಲ. ತುಡವಾಟ್ಟಿ; ತುಳು. ತೊಡೆವಾಳ್, ತೊಡೆವಾಳೊ ]

**ತೊಡೆವೇನೆ** (ನಾ). ತೊಡೆಯ ನೋವು,–ವೇದನೆ : ಕುರುರಾಜಂ ತೊಡೆ ವೇನೆಗೆ ನರಳಿನೆ (ಗದಾಯು. ೯-೧೯). [ ತೊಡೆ$_2$ + ಬೇನೆ ]

**ತೊಡೆವೊಯ್** (ಕ್ರಿ). ತೊಡೆಯನ್ನು ಮೃದುವಾಗಿ ಬಡಿ,–ಮೆಲ್ಲನೆ ತಟ್ಟು : ಹೊತ್ತು ಹೋಯಿತ್ತೇಳಿರೇ ಶಿವಾರ್ಚನೆಗೆಂದು ತೊಡೆವೊಯ್ದು ಮೆಲ್ಲನೆಬ್ಬಿಸೆ (ಬಸರ. ೯-೧೪೯). [ ತೊಡೆ$_2$ + ಪೊಯ್$_1$ ]

**ತೊಡೆಸಂಕಲೆ** (ನಾ). ೧. ತೊಡೆಗೆ ಹಾಕುವ ಸಂಕೋಲೆ,–ಸರಪಣಿ : ತೊಡೆಸಂಕಲೆಯಿಕ್ಕಿದವೊಲ್ಕುಡಿಯಳ್ಳೆಗಳಿಂದೆ ಸುರಿದುಮಿರ್ಕೆಲಕೆ ಕರುಳ್ (ಶಮದ. ೧೧೭ ಪ್ರಯೋ). ೨. ಬಿರುದಿನ ಬಳೆ : ಮೊಕ್ಕಳಮನೆ ಬಸಿಱಿ ಱಿಂದೊಕ್ಕ ಕರುಳ್ ತೊಡೆಯೊಳಾವಗಂ ತೊಡರ್ದನಸುಂ ಮಿಕ್ಕುವ ಬಿರುದರ ಬಿರುದಿಂಗಿಕ್ಕಿದ ನುಣ್ಪಸದ ಮಿಸುಪ ತೊಡೆಸಂಕಲೆಯಂ (ಚಂದ್ರಪು. ೧೦-೭೪). ೩. (?) : ಬಿರುದಿನುಬ್ಬಟೆಯ ತಳಪಟದೊಳೌಕಿದರು ತೊಡೆಸಂಕಲೆಯ ತೊಬಗದ ಕಂಭದಪ್ರತಿಬಲರು ಹಾಣಾಹಾಣಿಯಲಿ ಹೊಯ್ದಾಡಿದರು ಕಡುಗಿ (ಕುಮಾಭೀ. ೪-೨೭). [ ತೊಡೆ$_2$ + ಸಂಕಲೆ ]

**ತೊಡೆಸಕ್ಕಿ, ತೊಡೆಸಕ್ಕೆ** (ನಾ). ೧. ಪ್ರತ್ಯಕ್ಷ ಸಾಕ್ಷಿ : ವಿಕ್ರಮಾಕ್ರಾಂತದಿಂ ದಿಗಧೀಶರ್ತೊಡೆಸಕ್ಕಿಯಾಗೆ ಧರೆಯಂ ನಿಃಕಂಟಕಂ ಮಾಡಿದಂ (ಸೌಇಇ. IX-i, ೧೫೩-೧೩ : 1083); ನನೆಯಂಬುಗಳಂ ತೊಡೆಸಕ್ಕಿ ಮಾಡಿ ಕಾಂತೆಯ ತೊಡೆ ತೊಡೆದವು ಕನಕಕದಳಿಕಾವಿಲಸನಮಂ (ಮಲ್ಲಿಪು. ೩-೬೦) ; ಈವ ಗುಣಕ್ಕೆ ತಂನ ತೊಡೆಸಕ್ಕಿ ನಿಜಾಶ್ರಿತ ಪಂಡಿತರ್ಕ್ಕಳೊಳ್ ತೀವಿದುದಗ್ರ ಲಕ್ಷ್ಮಿ ನಿಜದೋರ್ಬ್ಬಳದೇಳ್ಗೆಗೆ ಸಕ್ಕಿ (ಎಕ. VII, ಶಿಕಾರಿ. ೧೨೩-೧೫ ; 1149). ೨. ತೊಡೆ ತಟ್ಟಿ ಮಾಡುವ ಪ್ರತಿಜ್ಞೆ (?) : ವಜ್ರವೇದಿಕೆಯಂ

ತಂ ತೊಡೆಸಕ್ಕಿ[ಪಾಠಾಂ. ಸಾಕ್ಷಿ]ವೊಯ್ವುವೋಲ್ ಪೊಯ್ದೊಡನೊಡನುಚ್ಚಳಿ ಪುವಿದಟಿ ತುಂಗತರಂಗಂ (ಆದಿಪು. ೧೨-೧೨೪). **ತೊಡೆಸಕ್ಕೆ:** ೧. ತೊಡೆಗಳ ನುಡಿಯುಲ್ಲುರುಗಳ್ ತೊಡೆಸಕ್ಕೆಗಳಾಗೆ (ಗದಾಯು. ೧-೬೮);"ಪ್ರತಿಬಾಧಕ" (ಪ್ರಯೋ.) : ಪರ್ಚುಗ ಬಿರ್ದ ಪೆರ್ದೊಡೆ ತೊಡೆಸೆ[ಸ]ಕ್ಕೆಯಾಗಗಿದು ಕೆತ್ತುವ ಪುಣ್ಗಳ ಬಾಯ್ಗಳೀಟಿನುಪ್ಪುಡಿಸುವ ಬಾಯ್ಗಳಾಗಿರೆ ಕಟುತ್ತಿಟಿವಂ ನೃಪ ಸೈನ್ಯಮಂ (ಶೃಂಗಾರ. ೧-೮೩) ; ನಖಂ ಮುಡುಪನವುಂಕೆ ಕಂಡು ಸತಿ ಕಂಟಿಸಿ ಕಾಡುವಳೆಂದು ತನ್ನೊಡನೆಯ ಬೇಂಟೆಕಾಟಿವಡೆಯುಂ ತೊಡೆಸಕ್ಕೆಯನುಂಟುಮಾಡಿದಂ (ಸೂಕ್ತಿಸು. ೩-೧೪೦); ತೊಡೆಯ ಸ[ಪಾಠಾಂ. ಸೆ]ಕ್ಕೆ= ತೊಡೆಸ[ಪಾಠಾಂ. ಸ]ಕ್ಕೆ (ಶಮದ. ೧೬೨ ಪ್ರಯೋ).

[ ತೊಡೆ$_2$ + ಸಕ್ಕೆ ]

**ತೊಡೆಸಕ್ಕೆ** 'ತೊಡೆಸಕ್ಕೆ' ನೋ.

**ತೊಡೆಸನ್ನೆ** (ನಾ). (ಕಂದುರೆಸವಾರಿ ಮಾಡುವಾಗ) ತೊಡೆಯ ಅವುಕುವಿಕೆಯಿಂದ ಮಾಡುವ ಸನ್ನೆ,-ಸೂಚನೆ : ಆನೆಗೆ ಅಡಿಸನ್ನೆ ಕುದುರೆಗೆ ತೊಡೆಸನ್ನೆ ಹೆಣ್ಣಿಗೆ ಕಣ್ಣಿನ ಸನ್ನೆ (ಇಂಬಾಪ. ೯೦-೩೬).

[ ತೊಡೆ$_2$ + ಸನ್ನೆ$_2$ ]

**ತೊಡೆಸೋಂಕು** (ನಾ). ೧. ತೊಡೆಯು ಸ್ಪರ್ಶವಾಗುವಷ್ಟು ಹತ್ತಿರ,- ಸನಿಹ: ವಾಸವನ ತೊಡೆಸೋಂಕಿನಲಿ ಕುಳ್ಳಿಹರೀ ಮಹೇಶ್ವರರು (ಕುಪ್ಯಾಸ. ೮-೧೮). ೨. (ಆಲಂ) ಸಲಿಗೆ ; ಆತ್ಮೀಯತೆ : ಎನಗೆ ನಿಮ್ಮಡಿಗಳಲಿ ಸಮಸೇವನೆಯೆ ದೇವ ಮುರಾರಿಯುಂಜಾವೆನೆನಲು ತೊಡೆಸೋಂಕಿನಲಿ ಸಾರಿದು ಶೌರಿಯಿಂತೆಂದ (ಕುಪ್ಯಾಉ. ೧೦-೨). [ ತೊಡೆ$_2$ + ಸೋಂಕು$_2$ ]

**ತೊಡೆಹ** 'ತೊಡೆಪ' ನೋ.

**ತೊಣಚಿ** 'ತೊನಸೆ' ನೋ.

**ತೊಣಚೆ** 'ತೊನಸೆ' ನೋ.

**ತೊಣಸಿ** 'ತೊನಸೆ' ನೋ.

**ತೊಣಸೆ$_1$** 'ತೊನಸೆ' ನೋ.

**ತೊಣಸೆ$_2$** (ನಾ). ಒಂದು ಬಗೆಯ ಸಸ್ಯ,-ಸೊಪ್ಪು : (ಕ).

[ ? ]

**ತೊಣೆ$_1$**, ತೊನೆ$_2$ (ನಾ). ೧. ಸರಿ ; ಸಮಾನ ; ಎಣೆ ; ಸಾಟಿ : "ಸರಿ ದೊರೆ . . . ಎಣೆ ತೊಣೆ . . . ಸಂಗಡಂ-ಈ ೧೮ ಸಮಾನಕೆ ಪೆಸರ್" (ಕಶಸಾ. ೧೫-೨೯೧) ; ಕರ್ಣನೆಣೆಗಂ ತೊಣೆಗಂ ನೃಪರಾರುಮಿಲ್ಲ (ಪಂಪಭಾ. ೧೨-೧೦೦) : ಶಶಭೃತ್ಕಾಂತಿಗೆ ಮಿಂಚುಂಬುಟು ಸಮನೆಂತಕ್ಕುಮೊ ದೊರೆಗಮೊರೆಗಮೆಣೆಗಂ ತೊಣೆಗಂ (ಶಾಂತಿಪು. ೧೨-೬೭) ; ವಿದ್ಯಾವಿಭವವಂಶಸಂಪತ್ತಿಯೊಳೆಂದೀ ವರನೀಕೆಗೆ ತೊಣೆಯೆನೆ (ವರ್ಧಪು. ೯-೪೩) ; ತೊಣೆಯಾಂಡಿಗಳೆಯೊಳಾತರ್ೊಣೆ (ಭೈರವೇ. ೧-೨೨೮) ; ಸಹದೇವಂಗೆ ಸತ್ಯವಂತಂ ತೊಣೆ (ರಾಮೂಕ್ಕ. ೧೪೪-೨). ೨. ಜೊತೆ ; ಒಡನಾಟ; ಸಹವಾಸ: ಅವಳ ತೊಣೆ ಪೂವಿಗೂ ಹರ್ಷವನ್ನೊದಗಿಸುತ್ತಿದೆ (ಹುರಿಹಾ. ೩೭೬). ೩. ಸಂಗಡಿಗ ; ಒಡನಾಡಿ : ರಕ್ಷಿಸು ನಮಃಶಿವಾಯ ನೀನೆ ತೊಣೆ ನೀನೆ ಹೊಣೆ ಎಂದು ಕಟಿಗೊರಲಂಗೆ ಮೊಟಿಯಿಡೆ (ಶಾಗೀರ. ದೀ. ೭೨೬-೯). 'ಎಣೆತೊಣೆ' ಪರಾ. **ತೊನೆ$_2$** : ೧. ನಿರುಪಮ ಧರ್ಮ್ಮಕಾರ್ಯ್ಯದೆಡೆಯೊಳು(ಳ್)ಸಲೆ ಶೋಭನಸಟ್ಟಯೊಳು(ಳ್) ದಿಟಂ ಸರಿ ದೊರೆ ಪಾಟಿ ಪಾಸಟಿ ಸಮಂ ತೊನೆಯೆಂದಡೆ ದೋಸಮಾಗದೇ (ಕಇ IV, ೧೦-೪೯; 1121).

**ತೊಣೆ ನಡೆಯುರ್**=ಜೊತೆಗೂಡಿ ನಡೆಯುವವರಂ; ಒಡನಾಡಿಗಳು: ಬರ್ಪಮಾಮ್ ತೊಣೆನಡೆಯುರ್ : ಇರ್ವರುಮ್ ನೋಡುತ್ತುಮೊರ್ವನಾ ಕಣ್ಗಳಿನ್ (ಅಂತಿಗೊ. ೪೬-೯೦೨).

[ ದೇ.॥ ತಮಿ. ತುಣ್ಯ ; ಮಲ. ತುಣ ; ಕೊಡ. ತೊಣೆ ]

**ತೊಣೆ$_2$**, ಡೊಣೆ$_3$, ದೊಣೆ$_2$ (ನಾ). ಬಾಣದ ಕೋಶ ; ಬತ್ತಳಿಕೆ : ತೂಣೀರ : "ಮಾಡಿಗೆ ತೊಣೆ ಬತ್ತಳಿಕೆಯು" (ಕವಿಕಂ. ೮೧) ; ನಿಸ್ಸರಕೊಂದ ವಾಹನಕಮೆರಡು ಆವರ್ಗಕೆ ಮಾರ್ಬಿಗ್ಗೆ ನಾಲ್ಕು ತೊ[ಪಾಠಾಂ. ಡೊ]ಣೆಗೈದನಂತೆ ಕೂರ್ಮೆನೆಯ ಸರಳ್ಗಳಿಂದೆಸೆಯುಲ್ಕೆ (ಜಬಪು. ೪೩-೧೯). **ಡೊಣೆ$_3$** : "ತೂಣೀರಮುಪಾಸಂಗಂ ಬಾಣಧಿ ಬಾಣಾಶ್ರಯಂ ನಿಷಂಗಂ ಡೊಣೆಗಳ್" (ಪಸ್ತುಕೋ. ೮೫-೧೯); ಅಂತುಮಾರೂಪನೆ ಚಿಂತಿಸಿ ಚಿಂತಿಸಿ ಕಾಂತೆಯುರ್ ಪತಿಗೆ ರತಿ ಸೋಲ್ತ ಕಂದಳಿರಂತಲರ್ಗಣೆಗೆ ಡೊಣೆಯಾದರ್ (ಶಾಂತಿಪು. ೧೦-೯೨) ; ಮಸೆವೆತ್ತ ಕೂರ್ಗಣೆಗಳಂ ಡೊಣೆಗಳಿಂದುಗಿದುಗಿದು ತೆಗೆದೆಸೆಯುಲು (ಜಬಪು. ೩೯-೧೯); ಡೊಣೆಯಿಂ ಕಣೆಯಂ ತೆಗೆದಾರ್ದು ಬಿಲ್ಗದಂ ಪೂಡಿ (ಶಬಶಂ. ೩-೫೨). **ದೊಣೆ$_2$** : ತನುತ್ರವಿಾ ಭಯಂಕರಧನು ಖಟ್ಗಮತ್ತಪರಮಿಂತೆರಡುಂ ದೊಣೆ ತೀವಿದಂಬುಮೊಂದಿರವು ತಪಕ್ಕಿದೆಂತುಟೊ (ಪಂಪಭಾ. ೮-೧೭) ; ದೊಣೆಯಿಂದಂ ತೆಗೆವಾಗಳೊಂದು ತುಡುವಾಗಳ್ಪತ್ತು ಬಾಣಂ (ಗದಾಯು. ೩-೩) ; ಕಾಮನ ದೊಣೆಗೆ ತೊಣೆಯೆನಿಪ್ಪ ಕಿಬುದೊಡೆ (ಕಾರಿರ.ದೀ. ೨೮೯-೭); ಇಂತೀ ನುಡಿಗೆ ಪುಷ್ಕಲಾ ಕರಂ ಕನಲ್ದು ದೊಣೆಯಿಂ ನಂಜನುಗುಟ್ವ ಕವಲಂಬುಗಳನುರ್ಚಿ ಮೊಗೆದಿಸುತಮಿರೆಯಿರೆ (ರಾಮೂಕ್ಕ. ೯೩-೩) ; ಗುರಿ ಸಿಕ್ಕಿತನುವಾಗ ದೊಣೆ ಬರಿದಾಗಿತ್ತು (ಚಂದ್ರವೀ. ೪೦-೬೦).

[ <ಪ್ರಾ. ತೋಣ./ಸಂ. ತೂಣ ]

**ತೊಣೆಗಾಣು** (ಕ್ರಿ). ಸಮಾನತೆಯನ್ನು ಕಾಣು : ಭೂಚಕ್ರದೊಳಗೀತಂಗೆ ತೊಣೆಗಾಣೆವೆಂದು ಸಜ್ಜನಸಮಿತಿ ಪೊಗಳುತಿರಲು (ಗುರುಚಾ. ೧೨-೩೨).

[ ತೊಣೆ$_1$ + ಕಾಣು (<ಕಾಣ್) ]

**ತೊಣೆವಕ್ಕಿ** (ನಾ). ಜೊತೆಯಾಗಿರುವ ಪಕ್ಷಿ ; ಅಮಳ್ವಕ್ಕಿ ; ಚಕ್ರವಾಕ: "ಕೋಕಮೆನಲ್ ತೊಣೆವಕ್ಕಿ [ಪಾಠಾಂ. ಪೊಣರ್ವಕ್ಕಿ]" (ಚತುನಿ. ೧೧೮) ; ಪಾರಿವವಂಚೆ ಕೊಂಚೆ ಗಿಳಿ ಸೋಗೆ ಕುಕಿಲ್ ತೊಣೆವಕ್ಕಿ . . . ದನಿಗೆಯ್ದಪುವು (ಸೂಕ್ತಿಸು. ೧೪-೫೦) ; ಪಾಡುತಿಹಾಟಿಡಿ ನೆಟಿ ಹೆಟಿಸಾರುವ ತೊಣೆವಕ್ಕಿ (ಉದ್ಯದೀ. ೪-೧೦). 'ಎಣೆವಕ್ಕಿ' ಪರಾ.

[ ತೊಣೆ$_1$ + ಪಕ್ಕಿ$_1$ ]

**ತೊಣೆವರ್** (ಕ್ರಿ). ಜೊತೆಯಲ್ಲಿ ಬರು : ಸೋಮಂ ಸೌಮ್ಯದೆ ಸಾನ್ರನುಂ ತೊಣೆವರಲ್ . . . ಜ್ಞಾನಕ್ಕೆ ಮೇಣ್ಪೊಬ್ದನುಂ ತಾಮಾರರ್ಗಡಮೆಂದು ತೋರ್ಪ ನಲವಿಂ ಗೆಲ್ಲಾಂಪನಾ ಗುಮ್ಮಟಂ (ಪ್ರುಸೂಮ. ೨-೭೮).

[ ತೊಣೆ$_1$ + ಬರ್ ]

**ತೊಣೆವೆಟು** (ಕ್ರಿ). ಜೊತೆಯಾಗು ; ಸರಿಸಾಟಿಯಾಗು ; ಸರಿಸಮಾನತೆಯನ್ನು ಹೊಂದು : ಪೊಣರ್ದೊಡಮನುವರಮಿವನೊಳ್ [ತೊಣೆ] [ಪಾಠಾಂ. ದೊರೆ]ವೆತ್ತಪುದೆನಗೆ ನರನೊಳ್ (ಪಂಪಭಾ. ೧೨-೧೬೪).

[ ತೊಣೆ$_1$ + ಪೆಟು$_1$ ]

**ತೊಣೆಹೋಗು** (ಕ್ರಿ). ಜೊತೆಯಲ್ಲಿ ಹೋಗು : ಚೆಲುವೈಯನು ಹೊಂಗನೂರಿಂಗೆ ಚಿಕ್ಕಕೇತಯ್ಯ ದಣ್ಣಾಯ್ಕರು ತೊಣೆಹೋಪುತವಿದ್ದಲ್ಲಿ (ಎಕ. IX, ದಸ್ಕಪ. ೧೩-೬ ; 1338).

[ ತೊಣೆ$_1$ + ಹೋಗು$_1$ (<ಪೋಗು$_1$) ]

**ತೊಣ್ಣಂಗಿ** 'ತೊಂಡಂಗಿ' ನೋ.

**ತೊಣ್ಣಂದ** (ನಾ). ಒಬ್ಬಾತನ ಹೆಸರು : ಬಿನುವಿಕಿಅಟ್ಟೆ ಬೂರಾಳ ಮುದುಗಾರ ತೊಣ್ಣಸ್ದರ ಮಗನುಂ ಪೊರಿಗೊಣ್ಣಂದ್ದಮ್ಮಗನುಂ ಶ್ರೀಯುಮ್ಮನೆ[ಮ್ಬೊ] × × ಯ್ವಸರ್ ಅರಿಧೀರನೆ[ಮ್ಬೋ]ದ × × × (ಸೌಇಇ. XX, ೧೦-೨ ; ?). 'ಕೊಣ್ಣಂದ' ಪರಾ. [ ? ]

**ತೊಣ್ಮೆ** (ನಾ). ಪ್ರಾಚೀನ ; ಮೂಲ (?) : ಭೂತಿಗೆ ಕುಟೀಪೆಂಬ ಕಿಂಕರರ ತೊಣ್ಮೆಯಿದೆಂಬ ವಿಲಾಸಮೆಂಬ ದೇಸಗೆ ದಶಲಕ್ಷಲೆಕ್ಕದಸಿಪೇಟಕ

ಕೋಟಿಯ ಮಿಂಚುಬಳ್ಳಿದೀವಿಗೆಯುನಲರ್ಚ ದೇವಸಭೆಯೊಳ್ ಮೆಱೆವರ್ ವಿಬಿಜಾಂಗರಕ್ಷಕರ್ (ಅನಂಪು. ೪-೫೨). [ ←ತಮಿ. ತೊಣ್ಡ್ಯ ? ]

ತೊತ್ತಳ 'ತೊಟ್ಟುಟಿ' ನೋ.

ತೊತ್ತಳಂತುಳಿ 'ತೊಟ್ಟುಟಿದುಟಿ' ನೋ.

ತೊತ್ತಳಂದುಳಿ 'ತೊಟ್ಟುಟಿದುಟಿ' ನೋ.

ತೊತ್ತಳಂದುಳಿಯಿಸು (ಕ್ರಿ). ಅಜಿಗಿಜಿಯಾಗುವಂತೆ ತುಳಿಸು ; ನುಗ್ಗು ನುರಿಯಾಗುವಂತೆ ತುಳಿಯಿಸು : ಆನೆಗಳಿಂ ತೊತ್ತಳಂದುಳಿಯಿಸಲು ಬಗೆದು (ವಾಗೀರ. ದೀ. ೨೭೭-೧).

[ ತೊತ್ತಳಂದುಳಿ (<ತೊಟ್ಟುಟಿದುಟಿ) + – ಇಸು₃ ]

ತೊತ್ತಳತುಳಿ 'ತೊಟ್ಟುಟಿದುಟಿ' ನೋ.

ತೊತ್ತಳದುಳಿ 'ತೊಟ್ಟುಟಿದುಟಿ' ನೋ.

ತೊತ್ತಳದುಳಿತ, ತೊತ್ತಳಿದುಳಿತ (ನಾ). ನುಗ್ಗುನುರಿ ಮಾಡುವಿಕೆ ; ಉಗ್ರವಾದ ಆಕ್ರಮಣ : ಅವರ ತೊತ್ತಳದುಳಿತದಿಂದ ತಮ್ಮ ಕಾವಲ ಪುರಿಗಡಲೆಯ ರಾಶಿಯನ್ನೂ ಚೀಲಗಳನ್ನೂ ರಕ್ಷಿಸಿಕೊಳ್ಳುತ್ತಿರುವರು (ಬಿರುಗು. ೧೩-೧೨) ; ಉಲ್ಲೋಲ ಕಲ್ಲೋಲ ಜೀವನಾಂಭೋನಿಧಿಯ ರುದ್ರತಾಂಡವದ ತೊತ್ತಳ ದುಳಿತಕಾಳಾಗಿ (ನಟಬಂ. ೫೨-೭) : ಪರಕೀಯರ ತೊತ್ತಳದುಳಿತವನ್ನು ಆಮಂತ್ರಿಸಿದ ಭಾರತೀಯರಿದ್ದಾರೆ (ಕರ್ನಾಟ. XV ಮುನ್ನುಡಿ). ತೊತ್ತಳಿದುಳಿತ: ಈ ಭೈರವಿಯ ತೊತ್ತಳಿದುಳಿತಕ್ಕೆ ಪರಕೀಯ ಸೊತ್ತಿನ ನೊಗ ಜಬ್ಬೆಜಬ್ಬೆಯಾಯಿತು (ಸುವರ್ಣ. ೨೨೬).

[ ತೊತ್ತಳ (<ತೊಟ್ಟುಟಿ) + ತುಳಿತ ]

ತೊತ್ತಳಿ 'ತೊಟ್ಟುಟಿ' ನೋ.

ತೊತ್ತಳಿಗೊಳ್ (ಕ್ರಿ). ನಜ್ಜುಗುಜ್ಜಾಗು ; ಅಜಿಗಿಜಿಯಾಗಂ : ಹಿಂಬರಿಕೆ ಯುಡಿಯಲ್ಲಿ ಸಿಕ್ಕು ತೊತ್ತಳಿಗೊಂಡು ಸಾವವರ ನರಳಿಕೆಯ ಕಿವುಡುಗೇಳಿ, ಇಲ್ಲಿಯೂ ಅಲ್ಲಿಯೂ ಕೊನೆಗಾಣದಾಸೆಗಳ ಅಂತರ ಪಿಶಾಚಿಯೇ ! (ಉಯ್ಯಾರಿ. ೪೫-೩). [ ತೊತ್ತಳಿ (<ತೊಟ್ಟುಟಿ) + ಕೊಳ್₁ ]

ತೊತ್ತಳಿದುಳಿತ 'ತೊತ್ತಳದುಳಿತ' ನೋ.

ತೊತ್ತಟ 'ತೊಟ್ಟುಟಿ' ನೋ.

ತೊತ್ತಟಂದುಟಿ 'ತೊಟ್ಟುಟಿದುಟಿ' ನೋ.

ತೊತ್ತಟದುಟಿ 'ತೊಟ್ಟುಟಿದುಟಿ' ನೋ.

ತೊತ್ತಿ (ನಾ). ಊಳಿಗದವಳು ; ದಾಸಿ: ಮತ್ತೊಂದು ಕಾರ್ಯಮೇನುಂ ಬಿತ್ತರಿಪೊಡಮಿಲ್ಲ ನಿನ್ನ ವಲ್ಲಭೆಗೆ ಕರಂ ತೊತ್ತಿಯರಾಗಿಯೆ ಪೆಸನಂ ಸೆತ್ತಿಯೊಳಾಂತೆಯ್ದೆ ಮಾಳ್ಪುದಲ್ಲದೆ ನಮಗಂ (ಬಾಧಪು. ೬-೪೦) ; ರಾಮ ನಿನ್ನೀ ಪತ್ತುತಲೆಗಳ ಕಡಿಯ ಬಳಿಕವರೆನ್ನ ತೊತ್ತಿಯರು (ತಾಶಿರಾ. ೧೧-೭೦) ; ಇವರು ತೊತ್ತಿಯರಂದದಿಂದೀ ದಿವಿಜಲೋಕದ ನಾರಿಯರು ನಾವಿವರ ನೋಡುವರಲ್ಲವೆನೆ (ನಿಭಾಗ. ೧೧-೮-೩೩).

[ ತೊತ್ತು (<ತೊಟ್ಟು) + – ಇ₂ ]

ತೊತ್ತಿಗ (ನಾ). ಊಳಿಗದವನು ; ಸೇವಕ : ಬಿನುಗು ಕೋಡಗಿಗಳಿರ ನೀವೀತನಿಗೆ ತೊತ್ತಿಗರಾಗಿ ಸಾಯದಿರೆಂದು ಬೊಬ್ಬಿಟ್ಟಿದ (ತಾಶಿರಾ. ೧೯-೪೧) ; ಸಾಲವಿರುವವನು ತೊತ್ತಿಗನು ಲೋಕದೊಳ್ ಸಾಲವೇ ಶೂಲ (ನೀತಿಚಿಂ. XI, ೧೯). 'ಗಂಡುತೊತ್ತಿಗ' ಪರಾ.

[ ತೊತ್ತು (< ತೊಟ್ಟು) + – ಇಗ ]

ತೊತ್ತು 'ತೊಟ್ಟು' ನೋ.

ತೊತ್ತುಗೆಯ್ಸು, ತೊತ್ತುಗೈಸು (ಕ್ರಿ). ಊಳಿಗವನ್ನು ಮಾಡಿಸು: ಸುರರ ಸೆಜೆ ಗೋಳುಂಡೆಗೋಳಿಸಿದೆ ತೊತ್ತುಗೆಯ್ಸಿದೆ ಸೆರೆದ ಮರ್ಕಟರ (ತಾಶಿರಾ. ೨೦-೫೨). ತೊತ್ತುಗೈಸು : ಎನ್ನಯ ಹೆಂಡಿರೆಲ್ಲರನು ತೊತ್ತುಗೈಸುವೆ (ತಾಶಿರಾ. ೧೧-೭೦). [ ತೊತ್ತು (< ತೊಟ್ಟು) + ಕೆಯ್ಸು ]

ತೊತ್ತುಗೆಲಸ 'ತೊಟ್ಟುಗೆಲಸ' ನೋ.

ತೊತ್ತುಗೆಲಸಂಗೆಯ್ (ಕ್ರಿ). ಆಳಿನ ಕೆಲಸವನ್ನು ಮಾಡು ; ಊಳಿಗವನ್ನು ಮಾಡು ; ಸೇವೆಯನ್ನು ಸಲ್ಲಿಸಂ : ತೊತ್ತುಗೆಲಸಂಗೆಯ್ಯವೇಳ್ಟು[ಪಾಠಾಂ. ಲಿತ್ತು]ದ್ದರಿಸು (ಬಸಪು. ೨೩-೨೯).

[ ತೊತ್ತುಗೆಲಸ (<ತೊಟ್ಟುಗೆಲಸ) + ಕೆಯ್₁ ]

ತೊತ್ತುಗೈ 'ತೊಳ್ತುಗೆಯ್' ನೋ.

ತೊತ್ತುಗೈಸು 'ತೊತ್ತುಗೆಯ್ಸು' ನೋ.

ತೊತ್ತುಗೊಡು 'ತೊಟ್ಟುಗೊಡಂ' ನೋ.

ತೊತ್ತುಗೊಳ್ 'ತೊಟ್ಟುಗೊಳ್' ನೋ.

ತೊತ್ತುತನ 'ತೊಟ್ಟುತನ' ನೋ.

ತೊತ್ತುಬಡಕ 'ತೊತ್ತುಬಡಿಕ' ನೋ.

ತೊತ್ತುಬಡಿಕ, ತೊತ್ತುಬಡಕ (ನಾ). ಜಾರ; ವಿಷಯಲಂಪಟ: ತೊತ್ತು ಬಡಿಕಂಗೇಕೆ ತತ್ತ್ವವಿಚಾರ (ಅಮೃತ. ೧-೪೩). ತೊತ್ತುಬಡಕ: ತೊತ್ತು ಬಡಕನಿಗೆ ಪರತತ್ತ್ವದ ವಿಚಾರವೇಕೆ (ಪುರಂದ. ೧-೩೧-೧); ತೊತ್ತುಬಡಕರಿಗೆ ತತ್ತ್ವ ಉಸುರದಿರು (ವಿಶಾಸು. ೭೮-೩) : ತೊತ್ತುಬಡಕಗೆ ಬಹು ತತ್ತ್ವ ವಿಚಾರವ್ಯಾತಕೆ (ಪ್ರಸಕೀ. ೫೨-೧). [ ತೊತ್ತು (<ತೊಟ್ಟು) + – ಬಡಿಕ ]

ತೊತ್ತುಬುದ್ಧಿ (ನಾ). ವೇಶ್ಯಾಬುದ್ಧಿ : ಉಪರತಿಗೆ ಪರಪುರುಷನ ಬಯಸುವ ತೊತ್ತುಬುದ್ಧಿಯನೆಲ್ಲ ಬಿಡು ಕಂಡ್ಯ ಮನವೆ (ವಿದಾಕ್ಷ. ೫೦-೩).

[ ತೊತ್ತು (< ತೊಟ್ಟು) + ಬುದ್ಧಿ ]

ತೊತ್ತುಮಗ 'ತೊತ್ತುವಗ' ನೋ.

ತೊತ್ತುವಗ, ತೊತ್ತುಮಗ (ನಾ). ತೊತ್ತಿನ ಮಗ ; ದಾಸೀಪುತ್ರ : "ದಾಸಂ ತೊತ್ತುವಗನಕ್ಕು" (ಮಂಗರಾ. ೭೧-೧೭). ತೊತ್ತುಮಗ : (ಕ).

[ ತೊತ್ತು (< ತೊಟ್ಟು) + ಮಗ ]

ತೊತ್ತುವೆಗ್ಗಡೆ (ನಾ). ರಾಣೀವಾಸದ ಮೇಲ್ವಿಚಾರಕ ; ಅಂತಃಪುರದ ಅಧಿಕಾರಿ : "ತೊತ್ತುವೆಗ್ಗಡೆಗಳಂತರ್ವಂಶಿಕರಕ್ಕು" (ಮಂಗರಾ. ೭೯-೭). 'ಅಂತರ್ವಂಶಿಕ' ಪರಾ.

[ ತೊತ್ತು (< ತೊಟ್ಟು) + ವೆಗ್ಗಡೆ (< ಪೆರ್ಗಡೆ₁) ]

ತೊತ್ತುವೆಸ 'ತೊಟ್ಟುವೆಸ' ನೋ.

ತೊತ್ತುವೇಟ (ನಾ). ವೇಶ್ಯೆಯ ಪ್ರಣಯಂ: ಕಡಿದರೋ ಸುರತರುವನೆಲವದ ಮಿಡಿಯ ಬಯಕೆಗೆ ತೊತ್ತುವೇಟಕೆ ಪಡೆದ ತಾಯನು ತೊಜಿಸಿದರೋ (ತೊರರಾ. ೪-೫-೧೧).

[ ತೊತ್ತು (< ತೊಟ್ಟು) + ಬೇಟ (< ಬೇಂಟ) ]

ತೊತ್ತುವೊಗು (ಕ್ರಿ). ಕಿಂಕರನಾಗು ; ದಾಸನಾಗು : ಲಿಂಗಜಂಗಮಕ್ಕೆ ತೊತ್ತುವೊಕ್ಕು ಲಿಂಗಜಂಗಮವುಪ್ರಸಾದಿಯಾದ (ಚನ್ನವ. ಕ. ೭೮೮-೮೨೧) : ತೊತ್ತುವೊಕ್ಕಿಂ ಮಹೇಶ್ವರ ನೀಂ ರಕ್ಷಿಪುದೆನ್ನನು (ಶಂಕಶ. X, ಪೀಠಿಕೆ).

[ ತೊತ್ತು (< ತೊಟ್ಟು) + ಪೊಗು (< ಪುಗು) ]

ತೊತ್ತುವೋಗು (ಕ್ರಿ). ದಾಸಿಯಾಗಂ ; ಸೇವಕಿಯಾಗು: ಜೀಯ ತೊತ್ತು ವೋದಳು ನಮಗೆ ಜಯವನಿತೆ (ಶ್ರೀರಾಮಾ. ೭೫೫-೩೪೮).

[ ತೊತ್ತು ( < ತೊಟ್ಟು) + ಪೋಗು₁ (<ಪೋಗು₁) ]

ತೊತ್ತುಳಿ (ಕ್ರಿ). ಅಜಿಗಿಜಿಯಾಗುವಂತೆ ತುಳಿ ; ಧ್ವಂಸಮಾಡು : ತೊತ್ತುಳಿದರೂನೂ ಥಳ್ಥಳಿಸಿ ಹೊಳೆವೆ ಸಂಜೀವಭ್ರಮರನಂತೆ (ಆರಳು. ೨೧೫-೮) ; ಈ ದಿಬ್ಬವು . . . ಪುಣೆಯನ್ನೆಲ್ಲ ಒಂದು ದಿನ ತೊತ್ತುಳಿದು ಹಾಳುಮಾಡುವಂತ ಇದು ನನ್ನನ್ನು ಅಂಜಿಸಿದೆ (ಸಮುಜೀ. ೧೧೯).

[< ತೊಟ್ಟುಟಿದುಟಿ ]

ತೊತ್ತುಟಿ 'ತೊಟ್ಟುಟಿ' ನೋ.

ತೊದ 'ತೋಡ್ಕ₂' ನೋ.

**ತೊದನಾಡು** (ನಾ). ತೊದವರ ನಾಡು: ಹದಿನಾಡ ಹಲಸೀನ ತೊದನಾಡ ಬಾಳೇಯು . . . ನನಗೆಂದು ತಂದ ಅಣ್ಣಯ್ಯ (ಜಗೀಶ. ೫೮).

[ತೊದ (< ತೋಡ$_2$) + ನಾಡು]

**ತೊದಭಾಷೆ** (ನಾ). ನೀಲಗಿರಿಯ ತೋಡಜನಾಂಗದವರು ಆಡುವ ಭಾಷೆ: ೧೯೬೧ರ ಜನಗಣತಿಯಲ್ಲಿ ೭೬೫ ಜನ ತೊದಭಾಷೆಯನ್ನು ಆಡುವವರಿದ್ದಾರೆಂದು ಹೇಳಿದೆ (ದ್ರಾವಿವಿ. ೧೫೫).

[ತೊದ (< ತೋಡ$_2$) + ಭಾಷೆ]

**ತೊದಲ್$_1$** 'ತೊದಳ್$_1$' ನೋ.

**ತೊದಲ್$_2$** 'ತೊದಳ್$_2$' ನೋ.

**ತೊದಲ** 'ತೊದಳ' ನೋ.

**ತೊದಲಾಟ** (ನಾ). ಮಕ್ಕಳ ಅಸ್ಪಷ್ಟವಾದ ಮಾತು: ತಪ್ಪಡಿ ತಪ್ಪೀಸಿ ತೊದಲಾಟ ಬಿಟ್ಟೊ (ಮುಕ್ತಿಶಾ. ೪೧-೫).

[ತೊದಲು$_2$ (< ತೊದಳ್$_2$) + ಆಟ]

**ತೊದಲಿಸು** 'ತೊದಳಿಸು' ನೋ.

**ತೊದಲು$_1$** 'ತೊದಳ್$_1$' ನೋ.

**ತೊದಲು$_2$** 'ತೊದಳ್$_2$' ನೋ.

**ತೊದಲುನಾಲಗೆ** (ನಾ). ತಡವರಿಸುವ ಜಿಹ್ವೆ; ತೊದಲುವ ನಾಲಗೆ: ಮೊದಲು ಭಜಿಸಿದನು ಈಶನನು ಸ್ತುತಿಗೈದು ತೊದಲುನಾಲಗೆಯಲ್ಲಿ ತಾಯ್ನುಡಿಯ ಹಿಡಿದು (ಕವಿಪು. ೧೦-೬).

[ತೊದಲು$_2$ (< ತೊದಳ್$_2$) + ನಾಲಗೆ]

**ತೊದಲುನುಡಿ** 'ತೊದಳ್ನುಡಿ$_2$' ನೋ.

**ತೊದಲುಮಾಡು** 'ತೊದಳ್ಮಾಡು' ನೋ.

**ತೊದಲುಮಾತು** 'ತೊದಳ್ವಾತು' ನೋ.

**ತೊದಲುಲಿ$_1$** (ಕ್ರಿ). ತೊದಲುಮಾತನಾಡು: ಮಗು ತೊದಲುಲಿವೊಲು ತಾಯನು ಕರೆಯೆ, ಉಲಿವೆನು ಮುಗುಳ್ದುಲಿವೆನು ಶ್ರೀಹರಿಯೆ ನಿನ್ನ ನಾಮವನು (ಗೀವಿಂ. ೨೬-೭). [ತೊದಲ್$_2$ (<ತೊದಳ್$_2$) + ಉಲಿ$_1$]

**ತೊದಲುಲಿ$_2$** 'ತೊದಳುಲಿ' ನೋ.

**ತೊದಲ್ನುಡಿ$_1$** 'ತೊದಳ್ನುಡಿ$_1$' ನೋ.

**ತೊದಲ್ನುಡಿ$_2$** 'ತೊದಳ್ನುಡಿ$_2$' ನೋ.

**ತೊದಲ್ವಾತು** 'ತೊದಳ್ವಾತು' ನೋ.

**ತೊದಲ್ಸೊಲ್ಲಿಸು** (ಕ್ರಿ). =ತೊದಲುಲಿ$_1$: ತಲ್ಲಣಸುತ್ಕೈದಿಯವ್ವಬ್ಬೆಬೇಯೆಂಬ ತೊದಲ್ಸೊಲ್ಲಿಸುತೆ . . . ಬಂದು ತೊಡೆಯುಡರೆ (ನವಮೋ. ೧೫-೫೪).

[ತೊದಲ್$_2$ (< ತೊದಳ್$_2$) + ಸೊಲ್ಲಿಸು]

**ತೊದಳ್$_1$, ತೊದಲ್$_1$, ತೊದಲು$_1$, ತೊದಱ್** (ಕ್ರಿ). ೧. ಮಾತಿನಲ್ಲಿ ತಡವರಿಸು: ನಿಮ್ಮನರ್ಚಿಪಾ ಬಾಯ್ಗೆ ನಮೋನಮೋ ತೊದಳದುನ್ನತ[ಪಾಠಾಂ. ದುಣ್ಮುತ]ಭಕ್ತಿಯೊಳಿಯ್ದು ಪಾಡುವಾ (ಶಂಪಾಶ. ೧೯). ೨. ಎದುರಿಸು; ಪ್ರತಿಭಟಿಸು: ಮಯುಚಯುನ್ ತುರಗಗೊಳ್ಳಾಗಿ ದುಗ. ದರಸನುಂ ತೊದಳ್ದು ಮೇಳೆಯುಮನಾಳು × ಪಱುಯುತ್ತಂ ಬವ್ವದ ನನ್ನಗನ್ನಾದೆ (ಸೌಇಇ. IX-1, ೨೨-೫; 923); ಸಂಗರಾಗ್ರದೊಳು ತೊದಳ್ದ ಪರಾರುದಾತ್ತಕಲಿತೇಜಬಮೂಪನೊಱುಗ್ರಕೋಪನೊಳು (ಎಕ. XI, ದಾವಣ. ೪೪-೪೬: ಸು. 1180). ℗ಇದು ಬಹುಶಃ 'ತೊಡರ್' ಎಂಬುದರ ಅಪಲಿಖಿತವಿರಬಹುದು. **ತೊದಲ್$_1$**: ೩. ಮಕ್ಕಳು ಮುದ್ದಾಗಿ ಮಾತನಾಡು: ಸುರಿವ ಸುರಯಿಯುರಲ ಮುಗುಳ್ಗೆ ಮೊಗಸಿದಳಿಕುಳಂಗಳಿಂ ತೊದ[ಲ್ವ][ಪಾಠಾಂ. ಳ್ವ] ಶಿಶುಶುಕಂಗಳಿಂ(ಶಂಪಭಾ. ೧-೫೮). **ತೊದಲು$_1$**: ೧. ಅವಳ ಮಾತ ಕಲಿಯುಲೆಂದು ತೊದಲುತಿಹುದು ಬಾಯಿಯು (ಅರಳು. ೪೯೪-೨೭); ನನಗೆ ಭಯವಾಗಿತ್ತು, ಎಂದು ತೊದಲಿದ ಕೋಪವ್ವ (ಶಾರಮ. ೧೭೦). ೩. ತೊದಲುತ ಮುದ್ದುಮುದ್ದಾಗಿ ರಸಪೊಗಲು ಮಾತಾಡಿ (ಅನಂಶಾ. ೧-೧೮-೧೦). △**ತೊದಱ್**: ೨. ನುಡಿದಡೆ ಕರ್ಣ್ನಾಹವದೊಳಿನ್ದ್ರಸುತಂ ಪಗೆಗೊಣ್ದು ದರ್ಪ್ಪ[ದಿಂ] ತೊದಱ್ವನಾಱಂಗೆ ವಾಯುತನಯಂ (ಸೌಇಇ. XX. ೩೧-೧೪: 1044). ೪. ಸುಳ್ಳು ಹೇಳು: ಮೋಹಬನ್ದನದ ತೊಡಱ್ಪ್ಪನೊಳೊತ್ತದಱ್ದು ಮೋಹಿಸಿ (ಎಕ. VII, ಶಿಕಾರಿ. ೨೧೯-೨೪; 918); ಪರನಾರೀಪುತ್ರಕ ನಣ್ಬರ ತೊಱು . . . ತೊದಱ್ದರ ಬೀವ (ಎಕ. II, ೩೧೭; ಸು. 950); ಖಿಣ್ಣಳಿ ವಾಸುದೇವ ಮೂಳ ಭದ್ರೋದ್ಧವನ್ನುಡಿದು ಪುಸಿಯತರ್ಪ್ಪದಱ್ದು ಕುಸಿಯುಂ (ಎಕ. IV, ಹೆಗ್ಗ.ಡ. ೧೭-೧೨: 1083). 'ತೊದಲು$_1$' ಪರಾ.

[ದೇ. ॥ ಪರ್ಜ. ತೊತ್ರ್; ಕುವಿ. ತೊಥಲಿ./ ಹಿಂ. ತುತಲಾನಾ; ಪಂಜಾ. ತೊತ್ಲಾವುಣಾ; ಒರಿ. ತೊತಳಾ, ತೊತಲಾ; ಗುಜ. ತೊತ್ರೂ, ತೊತ್ಲೂ, ತೊತ್ರೂ]

**ತೊದಳ್$_2$, ತೊದಲ್$_2$, ತೊದಲು$_2$, ತೊದಳು** (ನಾ). ೧. ತಡವರಿಸುತ್ತ ಮಾತನಾಡುವಿಕೆ: ಉಣ್ಮದ ಬೆಮರೋಳವಟ್ಟ ನಿಡುಸುಯ್ ತೊದಳಿಂಗೆಡೆಗೊಂಡ ಮಾತು (ಶಂಪಭಾ. ೪-೬೦); ರಸನಾಗ್ರದೊಳ್ ತೊದಳ್ವೆರಸಿದ ಮಾತಿನಿಂದೆಸೆದರಂಗನೆಯರ್ ಮಧುಪಾನಕೇಳಿಯೊಳ್ (ಕುಸುಮಾ. ೧೧-೧೬೦); ತೊದಳಂ ಮಾಱ್ಪ ಕೊ [ದಳ್] ವಿಕಾರವಶಮುಂ ಕೈಕೊಂಡ ಮೆಯ್ (ಬಂಹರಿ. ೩-೫೭). ತೊದಳಿನಿತಿಲ್ಲದೊಳ್ಪಸವ ವಾಣಿಯ ದಾಣ್ನುಡಿ ಕೇಳಲಾಯ್ತು (ದಶಕು. ೧೨-೫). ೨. ಮಕ್ಕಳ ತೊದಲು ಮಾತು, – ಅಸ್ಪಷ್ಟವಾದ ಮಾತು: "ತೊದಳ್ ಶಿಶುವಚಂ" (ಕರ್ಣನಿ. ೪೯); ಕಿವಿಗಿಂಪಂ ತೊ[ಪಾಠಾಂ. ಕೊ]ದಳೊಳ್ ಪೊದಱ್ದ ನುಡಿಗಳ್ ಕಣ್ಗಾಟ್ಕಱಂ ರಾಗದಾಡುವ ಕೂಸಾಟದ ಚೆಲ್ವುಗಳ್ ಕುಡೆ . . . ಬಾಲನಿಂತೊದವಿದಂ(ಆದಿಪು. ೭-೧೨೮); ಕಿಱುನಗೆ ಲೋಳೆವಾಯ್ ತೊದಳೊಂದಿದ ನಾಲಗೆ . . . ನೆಱೆ ತನಗೊಪ್ಪುವರ್ಭಕನನೊರ್ವನನಾಂ ಪಡೆವಂದ ಮಾವುದೋ (ಸುಕುಮಾ. ೯-೯೯); ತೊದಳಿಸದ ತೊದಳ್ ಕೊಂಕಿಲ್ಲದ ದಟ್ಟಡಿ . . . ಭಾಲಭಾವಮುಚ್ಚರಿ ಜಿನನಾ (ಅನಂಪು. ೬-೮); ತೊದಳಿಂ[ಪಾಠಾಂ. ಲಿಂ]ದೆ ನುಡಿಯೆ ಶಿಶುವದಱಲ್ಲಿ ತಪ್ಪನಾ ಚದುರನಾರ್ಯೆಯು ದಂತೆ (ಅನುಸಾ. ೧-೨೧೩). ೩. ಸುಳ್ಳು; ಹುಸಿ: "ತೊದಳ್=ಪುಸಿ" (ಶಮದ. ೫ರಿ. ೨): "ತೊದಳೆಂದುಂ ಸುಳ್ಳೆಂದುಂ ಅನೃತಂ" (ಕಶಸಾ. ೨೬-೫೫೧); ಪರ್ವುವುದು ಕೀರ್ತಿ ಪುರಾಕೃತಪುಣ್ಯದಿಂದೆ ಸಂಗಳಿಸುವುವೆಂದೊಡೀ ಮುಖದೊಳೇಂ ತೊದಳುಂಟೆ (ಶಂಪಭಾ. ೬-೧೯): ಮನ್ನಿಸಿ ಪಿರಿದೀವಂ ತೊದಳಂನ್ನುಡಿಯನ್ನೊಡರ್ದು ಮಾಣನ್ (ಎಕ. II, ೧೩೩-೫೮; 982); ಇಱುವಬೆಡಂಗನ ಕೊರಲೊಳ್ಗೊಂಕುಂಟೆ ನುಡಿಯೊಳೇಂ ತೊದಳುಂಟೆ (ಗದಾಯು. ೨-೬): ತನ್ಮುನಿ ಪೇೞ್ದಣುವ್ರತಮನಾನೀಗಳ್ ಬಿಸುಟೆಪ್ಪೆಗಳೇಂ ತೊದಳಿಲ್ಲಂ ನುಡಿವಂದವಿಂತೆ (ಸುಕುಮಾ. ೬-೫೦): ತೊದಳಲ್ತು ನಾರದಂ ಪೇೞ್ದುದು (ಜಗವಿ. ೨-೪೬). ೪. ಅನುಮಾನ; ಸಂಶಯ; ಶಂಕೆ: ಮೊದಲೊಳ್ ಸಮಾಸಪದಮುಮನೊದವಿಸಿ ಪೇೞ್ದದಱ ತುದಿಯೊಳಸಮಾಸಪದಾಸ್ಪದಮಾಗಿ ನಿಱಿಸೆ ಕಬ್ಬಿನ ತುದಿಯುಂತಿರೆ ವಿರಸಮಕ್ಕುಮದು ತೊದಳುಂಟೇ (ಕವಿರಾ. ೨-೮೬): ಧರಣಿತಳಂ ಕೀರ್ತಿಸೆ ಕೇಳ್ದು ರಾಗಿಸುತ್ತಿರ್ಪವಿನ್ನುಮೇಂ ತೊದಳುಂಟೇ (ಆದಿಪು. ೦೪-೪೯): ಇಂತಾದ ಗಣದ ಮಾತ್ರಾಸಂಕಕಿ ನಾಲ್ಕಕ್ಕು ಮಂತವಕೆರ್ಟೀರೆಂದರ್ಕಂತಯ್ದುಗಣಂಗಳ್ ಬರ್ಕುಂ ತೊದಳೇಂ ಸ್ಕಂಧ ಜಾತಿಯೊಳ್ (ಛಂದೋಂಬು. ೪-೨೨೯); ಎನ್ನ ಚಿತ್ತದೊಳೊಂದುಂ ತೊದಳಿಲ್ಲ[ಪಾಠಾ. ತಡವಿಲ್ಲ]ವೆನ್ನ ಸುಗುಣಕ್ಕುತ್ಕ್ರಾಂತಿಯುಂ ಮಾಡುವಂ (ಗದಾಯು. ೯-೨೯); ಪರಮಜಿನಚರಣಯುಗಮಂ ಸ್ಮರಿಯಿಸಿ ತೊದಳಿಲ್ಲದೆರಡುಗೇಳದೆ ಮನದೊಳ್ ಜಱಿಯದೆ (ಧರ್ಮಾಮೃ. ೦೩-೭೨); ಚಂದ್ರ

ಸೂರ್ಯರೆ ಮನುಷ್ಯಕುಮಾರಕರಾಗಿ ಬಂದರೇನುಂ ತೊದಳಲ್ತು (ಜಗವಿ. ೭-೧೩). ೫. ವಂಚನೆ ; ಮೋಸ ; ಕಪಟ : ಏನಭಿಮತಮವರ್ಗ ವರ್ಗದನೇನುಂ ತೊದಳಿಲ್ಲದಿತ್ತು ಮನ್ನಿಸಿದಂ ಸನ್ಮಾನಪುರಸ್ಸರಂ (ಆದಿಪು. ೧೫-೧೨) ; ಮನದೊಳ್ ತೊದಳಿಲ್ಲದ ನಲ್ಮೆ (ಪಂಪಭಾ. ೪-೧೦೨) : ನೀನುಂ ಪಾಂಡುತನೂಜರುಮೇನುಂ ತೊದಳಿಲ್ಲದೊಂದಿ ನಡೆವುದು ಮಗನೆ (ನೇಮಿಪು. ೧೦-೩) ; ದೂಷ್ಯರುಗಳ ವಸ್ತುಗ್ರಹಣ ನಿಂದಿತರ್ಗನ್ನದಾನಂ ಬಳಿಕ್ಕ ಬಗೆಯ ತೊದಳಂ ಮಾಳ್ಪ ಬೆವಹಾರ ದೀಕ್ಷೆಯಾದು (ಪಾರ್ಶ್ವಪು. ೩-೭೩). **ತೊದಲ್$_2$:** ೨. ವಶ್ಯಮಂತ್ರಾಕ್ಷರದಂತೆಪೊಲೆಲ್ಲರುಮಂ ಸೋಲಿಸಿದವು ತೊದಲಂ ನುಡಿವ[ಪಾಠಾಂ. ತೊದಳೊಳ್ಪುದಿದ] ರಾಮಚಂದ್ರನ ನುಡಿಗಳ್ (ಪಂಪರಾಮಾ. ೩-೧೩೭); ಕಂದನಾಡುವ ಬಾಲಲೀಲೆಯಂ ನೋಡಿ ತೊದಲೊಂದಿದಿನಿವಾತನುಜ್ ಕೇಳ್ದು (ಜೈಮಿಭಾ. ೧೮-೨೦) ; ಲಾಲಾಜಲಂ ತುಳುಕಲ್ ಬರ್ಪ ತೊದಲ್ ಮನಂಗೊಳಿಸಲ್ (ಶಾಕುಂತ. ೧೦೫-೧೮೦). ೩. "ತೊದಲ್[ಪಾಠಾಂ. ತೊದಳ್, ತೊವಲ್] ನೂಳೆಂದು ನೆಜ್ ಪುಸಿಯೆನಲ್ಕನೃತಮಕ್ಕು" (ಶಬ್ದಕೌ. ೫೯) : ದೊರೆಯ ಸಹವಾಸಮದರಿಂ ದೊರೆವುದು ಗುಣವೆರಡುಮೆಂದು ನುಡಿವುದು ತೊದಲೇಂ (ನರಪ. ೮೭-೨೩೦) ; ಕಳ್ಳರಿರ್ಕೆಗಳಂ ಬಿಗಿಸಿ ತೊದಲಂ ನುಡಿಸಿ ಸುಳ್ಳು ನಾಲಗೆಯ ನಡುಗಿಸುತರವನೆರೆಗುಂ (ಶಾಬೂರ. ೭೭-೧೪೧). **ತೊದಲು$_2$:** ೧. ವಿಷಮರಣಭೀತಿಯಲಿ ಕಂದಿದ ಮುಸುಡ ತೊದಲಿನ ನುಡಿಯ ಮರಣದ ದೆಸೆಯ ಕೈಸನ್ನೆಗಳ ಕಾತರರೈದಿದರು ಪುರವ (ಕುಮಾವ್ಯ. ೪-೩೮). ೨. ಮೊವಲೆಮೆಗಳನು ಮುಕುಳಿಸಿವ್ವ ಸಿರಿಯೇ ತೊದಲನ್ನು ನಿಲ್ಲಿಸೆನ್ನಯ ಹೊಸ್ನ ಮರಿಯೇ (ಕಎಪು. ೨೪-೨) : ಮೊಳೆವಲ್ಲು, ಉಗುವ ಜೊಲ್ಲು, ದಟ್ಟತಡಿ, ತೊದಲ ನುಡಿ (ಚಂದ್ರಸ. ೧೭-೧೯). ೩. ಬದಲು ಮಾತಾಡಿದರೂ ತೊದಲು ಹೋಗಲಿಲ್ಲ (ಗಾದ). **ತೊದಳು:** ೧. ಪೊಳೆವ ನಿಡಿಯಲರ್ಗಣ್ಗಳ್ಗ ಮಳಮಳಿಪ ನೋಟಮುಮನುಂತೆ ತೊದಳಿಸುವ ನುಡಿವ ನುಡಿಗಳ್ಗ ತೊದಳುಮನೆಕ್ಕೆಯುಂ ತಳೆಯೆ (ಪಂಪಭಾ. ೭-೮೧ ವ); ತೊದಳಿನಿಂದೊರ್ಮೆ ಗದುಗದುಕೆಯಿಂದೊಮ್ಮೊಮ್ಮೆ . . . ಬೊಬ್ಬಿಡುತೆ (ಶಿರುರ. ದೇ. ೫-೩). ೩. "ತೊದಳು,ಸುಳ್ಳು... ಸಟೆ, ತಗಲು" (ಕಂನುಹು. ೮೭). ೬. ಗದ್ಗದ : ನೋಡಿ ಪರಮಾನಂದ ಮೂಡಿ ಸಂತಸದೊಳೋಲಾಡಿ ಪುಳಕ ಸ್ವೇದ ತೊದಳು ಕಂಪನ ಮಜಿವೆಗೂಡಿ (ಪಪಕಾ. ೫-೮೨). 'ಕೊದಲು$_2$' ಪರಾ.

**ತೊದಲುತೊದಲು** (ದ್ವಿರ-ಕ್ತಿ) : ಮಕ್ಕಳಕ್ಕರೆಯಿಂದೆ ತೊದಲು ತೊದಲಕ್ಕರಂ ನುಡಿದು ಕೈಮುಗಿದು ಕಂಬನಿಗರೆವನಂ ನೋಡಿ (ಶ್ರೀರಾಮಾ. ೩೦-೬೭) ; ನಾವು ಮಾತನಾಡಲು ಪ್ರಾರಂಭಿಸಿದಂದಿನಿಂದ ಈ ನಾನು, ನನ್ನ ಎಂಬ ಪದಗಳನ್ನು ತೊದಲುತೊದಲಾಗಿ ಉಚ್ಚರಿಸುತ್ತೇವೆ (ಜೀವಾತ್ಮ. ೯). **ತೊದಳಾಗು, ತೊದಲಾಗು** = ೧. ಸುಳ್ಳಾಗು ; ಹುಸಿಯಾಗು : ಪಾವಕನುರ್ಕುಗೆಟ್ಟದಂತುವೊ ತೊದಳಾಯ್ತು ದಾನಂ (ಪಂಪಭಾ. ೫-೯೭) ; ತೊದಳಾಯ್ತೆನ್ನಯ ಪೂಣ್ದ ಪೂಣ್ಕೆ (ಗದಾಯು. ೬-೧೭) ; ನುಡಿ ತೊದಳಾದೊಡೊಂದು . . . ಅಧಿಪಂಗೆ ತಪ್ಪಿ ಬರ್ದ್ದಡೆ ಗಡಿವೇಳುವೇಳು ನರಕಂಗಳವೆಂದವನಲ್ತ ಗಂಗಣಂ (ಎಕ, V. ಬೇಲೂರು. ೧೨೪-೪೨; 1133); ತೊದಳಾಗದಾನೆಂದ ನುಡಿ, ದಿಟಂ ! (ನಡದಾ. I, ೪೫೦); ನಿನ್ನ ಶಾಪವು ತೊದಲಾಗದು (ನಡದಾ. I, ೫೫೧). ೨. ಏರುಪೇರಾಗು : ತೋಹಿನಲಿ ತೊದಳಾಗಿ ಗೋರಿಯು ಗಾಹಿನಲಿ ಗುಜಿ ಗಡಬಡಿಸೆ ಬಲು ಸಾಹಸಕಂಜುವೆವೆ (ಕುಮಾವ್ಯಅ. ೧೩-೧೭).

[ <ತೊದಳ್$_1$./ತುಳು. ತೊವಳೆ./ಹಿಂ. ತುತಲೀ, ತುತಲಾ ; ನೇಪಾ. ತೊತೆ ; ಬಂಗಾಲಿ. ತೊತ್ಲಾ ]

**ತೊದಳ, ತೊವಲ** (ನಾ). ತೊದಲು ಮಾತನಾಡುವವನು ; ಉಗ್ಗ ; ಗುಕ್ಕ (ಉಕ): ವೃಷಭದೊಳ್ ಚಂದ್ರನೊಂದಿ ನಿರೆ ಮೂಗನೆನಿಕ್ಕುವನಂತಾ ಶಶಿಯಂ ನೋಡುವೊಡೆ ಶುಭಪ್ರಕರಮಾತನೆನಿಕುಂ ತೊದಳಂ (ಜಾತತಿ. ೪-೩೯). **ತೊದಲ** : ರಾಶಿಯ ಕೊನೆಯಲ್ಲಿ ಪಾಪಗ್ರಹಗಳಿದ್ದು . . . ಆ ಚಂದ್ರನನ್ನು ಶುಭಗ್ರಹಗಳು ನೋಡಿದರೆ ಆತ ತೊದಲನಾಗುತ್ತಾನೆ (ಜಾತತಿ. ೪-೩೯ ಟೀಕೆ).

[ ತೊದಳ್$_1$ + – ಅ$_7$./ತುಳು. ತೊದಲೆ./ಹಿಂ. ತೋತಲಾ; ಮರಾ. ತೋಂತ್ಯಾ, ತೋತ್ರಾ, ತೋಂತ್ರಾ ]

**ತೊದಳಿಲಿ** (ನಾ). ೧. ಸುಳ್ಳಿಲ್ಲದುದು;ನಿಜವಾದಂದು. (ಗು). ೨. ಸುಳ್ಳಿನಿಂದ ಕೂಡಿರದ ; ನಿಜವಾದ: ತಾಂ ಪದಸರಿದು ಲೋಕಕ್ಕೆ ಪುಟವಹ ಬಾಯ್ಗಿನಿದಪ್ಪವು ತೊದಳಿಲಿ ನಾಣ್ನುಡಿಗಳಂ ಕಲ್ಪಿಪ್ಪನನಿತ್ತ ದಲ್ (ಸಂಸಪ. ೩೮-೩). [ ತೊದಳ್$_2$+ – ಇಲಿ$_3$ ]

**ತೊದಳಿಸು, ತೊದಲಿಸು** (ಕ್ರಿ). ೧. ಮಾತಿನಲ್ಲಿ ತಡವರಿಸು : ಉಂತೆ ಪೊಳೆವ ನಿಡಿಯಲರ್ಗಣ್ಗಳ್ಗ ಮಳಮಳಿಪ ನೋಟಮುಮನುಂತೆ ತೊದಳಿಸುವ ನುಡಿವ ನುಡಿಗಳ್ಗ ತೊದಳುಮನೆಕ್ಕೆಯುಂ ತಳೆಯೆ (ಪಂಪಭಾ. ೭-೮೧ ವ) : ಸುಯ್ಯು ಬಹಳದ ಭಟರು ತೊದಳಿಸುತಿಾಯ್ಯನೆಂದರು (ಕುಮಾವ್ಯಅ. ೧೯-೭). ೨. ಮಕ್ಕಳಂತೆ ತೊದಲು ಮಾತನಾಡು: ತೊದಳಿಸದ ತೊದಳ್ ಕೊಂಕಿಲ್ಲದ ದಟ್ಟಡಿ . . . ಮುಳಿಸಿಲ್ಲದ ಕಾಟಂ ಬಾಲಭಾವಮಚ್ಚರಿ ಜನಕ್ಕಾ (ಅನಂಪು. ೬-೮) ; ನಸುನಗೆಯ ತೋಜಿದನು ಮಿಗೆ ತೊದಳಿಸಿದನಿಂತುಟನೇಕ ಬಾಲ್ಯವಿನೋದವನು ತೋಜಿ (ಸಾಳ್ವಭಾ. ೩೦-೪೭) ; ತೊದಳಿಸಿ ನುಡಿವ ದಟ್ಟಡಿಯಿಡುವ . . . ಕುಣಿವ ಲೀಲೆಯಂ ನೆಟ್ಟನೆ ಕುಮಾರಕತರ್ಳೆಜಿದರ್ಜನಕಿಗೆ (ಜೈಮಿಭಾ. ೧೯-೫೦). **ತೊದಲಿಸು** : ೧. ನಾನು . . . ತೊದಲಿಸಹತ್ತಿದೆ (ಚಂದುಟ. ೧೦೮) : ಈ ಮಾತುಗಳನ್ನಾಡುವಾಗ ಅವರ ನಾಲಿಗೆಯು ಸ್ವಲ್ಪ ತೊದಲಿಸಿತು (ಚಂಗಾಳ್ಮ. ೧೭೭). ೨. ಮನದಲ್ಲಿ ಕೇಳ್ವನು ನಸು ತೊದಲಿಸುವ ಸೊಲ್ಲುಗಳ ನೋರಂತೆ ಪಂಚಾಕ್ಷರಿಯನೋದಿಸುವ (ಬಸಪು. ೪೭-೩೨).

[ ತೊದಳ್$_1$ + – ಇಸು$_3$ ]

**ತೊದಳು** 'ತೊದಳ್$_2$' ನೋ.

**ತೊದಳುನುಡಿ** 'ತೊದಳ್ನುಡಿ$_2$' ನೋ.

**ತೊದಳುಲಿ. ತೊದಲುಲಿ$_2$** (ನಾ). ಮಕ್ಕಳ ತೊದಲುಮಾತು: ಹಕ್ಕಿಯಿಂಚರದಲ್ಲಿ ಮಗುವ ತೊದಳುಲಿಯಲ್ಲಿ . . . ನಲಿವ ಮೂರುತಿಯೆ (ವಿಸೀಗೀ. ೪೫-೨). **ತೊದಲುಲಿ** : ತೊದಲುಲಿಯ ಚುರುಕಿಂದ ಚಪ್ಪರಿಸಿ ಚೇರಿ, ಕುದುರೆ ಆಟವ ಗೈದ ನೆನಪು (ಕಎಪು. ೨೫-೨); ಪುಟ್ಟ ಕಂದಮ್ಮನ ...ತೊದಲುಲಿ ಕೇಳಿತು ಮೆಟ್ಟಿತು ಕೊಳಲಿನ ಸವಿಯ (ಇಂಚಾಪ. ೪೧-೯೫).

[ ತೊದಳ್$_1$ + ಉಲಿ$_2$ ]

**ತೊದಳ್ನುಡಿ$_1$, ತೊದಲ್ನುಡಿ$_1$** (ಕ್ರಿ). ೧. ಅಸ್ಪಷ್ಟವಾಗಿ ಮಾತನಾಡು ; ಮಾತಿನಲ್ಲಿ ತಡವರಿಸು : ಲೋಹಲಃ, ಅಸ್ಫುಟವಾಕ್ = ತೊದಳ್ನುಡಿವವನು (ನಾಚಂಾ. ೬). ೨. ಮಕ್ಕಳಂತೆ ತೊದಲುಮಾತನಾಡು: ಚಿಂಬಾಯಿಂದಿನಿರಸದಂತೆ ನಸುಜೊಲ್ಲು ಸುರಿಯೆ ತೊದಳ್ನುಡಿವ ಸೊಗಸಂ (ಚಕವಿ. ೪-೮೯). ೩. ಸುಳ್ಳು ಹೇಳಂ ; ಸುಳ್ಳಾಡು : ತೊದಳ್ನುಡಿಯದೆ ಪೋಗು (ಪಂಪಭಾ. ೮-೨೯) ; ನೆರೆದತ್ಥಿರ್ಗರ್ತ್ಥಮಂ ಕುಡುವ ಚಲಂ ತೊದಳ್ನುಡಿಯದಿರ್ಪ್ಪ ಚಲು (ಎಕ. II, ೧೩೩-೨೨; 982) ; ಆ ಧರ್ಮಪುತ್ರಂ ದಯಾಪರನೆಂದೆಲ್ಲರ ಪೇಟ್ದ ಮಾತು ಪುಸಿಯಾಯ್ತು ಕಾರ್ಮುಕಾಚಾರ್ಯನಂ ಗುರುವಂ ಬ್ರಾಹ್ಮಣನಂ ತೊದಳ್ನುಡಿದು ಕೊಂದಾಗಳ್ (ಗದಾಯು. ೩-೨೩). **ತೊದಲ್ನುಡಿ$_1$** : (೬). [ ತೊದಳ್$_2$ + ನುಡಿ$_1$ ]

**ತೊದಳ್ನುಡಿ$_2$, ತೊದಲುನಂಡಿ, ತೊದಲ್ನುಡಿ$_2$, ತೊದಳಂನಂಡಿ** (ನಾ). ೧. ಮಕ್ಕಳ ತೊದಲುಮಾತು : ಮುಖಸರಸಿಜದೊಳ್ ದರಹಸಿತಂ ನೆಗಟ್ಟಿನಂ ತೊದಳ್ನುಡಿ ನುಡಿದು (ಆದಿಪು. ೮-೩); ಜನೋಕ್ತಿ ಮೊದಲಲ್ಲು

?

ಮದಂಗದೊಳೆಂಬವೊಲ್ ತೊದಳ್ನುಡಿ ನುಡಿ ಪು. ೧೦-೮೨) : ನುಡಿಗಲ್ವಂತೆ ತೊದಳ್ನುಡಿ ನುಡಿಯುಸಿದಂ ತನಗೆ ಪೋಲ್ತ ವಾಕ್ಯನ್ನಿಕಯಂ (ಅರ್ಧನೇ. ೨-೩೧) : ಇಡಿದ ಲಾಲಾಜಳಂ ಶಿವಪ್ರಸಾದಂ ತೊದಳ್ನುಡಿಯೆಲ್ಲ ಶಿವಕೀರ್ತನೆಯು (ಸೌಂದಪು. ೩-೧೦) ; ಜೊಲ್ಲು ಸುರಿವ ಮುದ್ದು ಮೊಗದಲ್ಲಿ ನಗೆಯಾಂತು ಸೊಲ್ಲಿಸುವನು ತೊದಳ್ನುಡಿಯ (ಮೋಹತ. ೧೭-೬೯). ೨. ಸುಳ್ಳುಮಾತು : ಮನುಕುಲದೊಳ್ ತೊದಳ್ನುಡಿ ಪೊದಟ್ಟುಮೆ (ಪಂರಾಮಾ. ೬-೯೫). ೩. ಮೆಲುದನಿಯಲ್ಲಿ ಆಡುವ ಗಂಭೀರವಾದ ಮಾತು : ನೆಗಟ್ದಮರಾಂಗನಾಜನದ ರೂಪುಗಳೆಲ್ಲಮದೀಕೆಯೊಂದು ದೇಸೆಗೆ...ನೆಗೆಟ್ಟೊಂದು ಮೆಲ್ಪಿನ ತೊದಳ್ನುಡಿಗಪ್ಪುಡಮೆಯ್ದೆ ವಾರವೇಂ (ಆದಿಪು. ೨-೭೫) ; ಆಕೆಯ ಮುದ್ದುವೆರಸಿದ ತೊದಳ್ನುಡಿಗಂ ಪೂಮಾಲೆವೆರಸಿದ ಬಟಲ್ನುಡಿಗಮಲಂಪುವೆರಸಿದ ನೋಟಕ್ಕಂ . . . ನಾಣ್ವೆರಸಿದ ಭಾವಕ್ಕಮೊಲ್ದುಮೊಟಲ್ದುಮಿರೆಯಿರೆ (ಪಂಪಭಾ. ೪-೧೭ ವ) ; ತೊದಳ್ನುಡಿಗಳೊಪ್ಪಿ ಪುಷ್ಪಚಯಮಂ ಸುಗಂಧಂಗಳಂ . . . ಎದಗ್ದೆ ಮಡಗಿಟ್ಟು ತಂದು ತನಗೀವೊಡೆ (ಮದಶಿ.೧೧- ೫೦). ೪. ಇಂಪಾದ ಧ್ವನಿ.–ಕುಕಿಲು : ಒಲವಿಂದೋಲಗಿಸುವೆನೀ ನೆಲದೆಟೆಯನನೆಂದು ಬರ್ಪವೋಲ್ ಬಗ್ಗಿಪ ಕೋಗಿಲೆಯ ತೊದಳ್ನುಡಿ ಬಿರಯಿಯನಲೆಯುತ್ತಿರೆ ಬಿಡದೆ ಬಂದು ನಂದು ಬಸಂತಂ (ಕಬ್ಬಿಕಾ. ೫೨). **ತೊದಲುನುಡಿ** : ೧. ತೊದಲುನುಡಿಗಲಿತು ಮುದ್ದಾಗಿ ಬಾಳ್ವವನಯ್ಯೋ ಪದೆದು ದಟ್ಟಡಿಯಿಟ್ಟು ನಡೆದು ಬಾಳ್ವವನಯ್ಯೋ (ಶಾನಂಜ. ೪-೯೧ ರಗಳೆ) : ಪರಮತತ್ವಾಮೃತವೆ ಮೊಲೆವಾಲ್ . . . ಮೃದುಸೂಕ್ತಿಗಳೆ ತೊದಲುನುಡಿ (ಬಸಪು. ೨-೧೧) ; ತೊದಲುನುಡಿಗಳಂಬೆಗಾಲು ದಟ್ಟಡಿ ಮುದವೊದವಿದ ಧೂಳಾಟದಿಂದ... ಕುಮಾರರೊಪ್ಪಿದರು (ಕಂನವಿ ೪-೮೧). ೨. ಶಿಪ್ಪಂಗೆ [ಪಾಠಾಂ. ಸೆಟ್ಟಿಗೆ] ತೊದಲುನುಡಿಯೇಕೆ (ಸರ್ವಜ್ಞ. ೧೪೬೪). **ತೊದಲ್ನುಡಿ₂** : ೧. ನುಡಿಗಲಿಸಿದಂ ತೊದಲ್ನುಡಿ ಪಡೆವಿನೆಗಂ ಪಿತೃಯುಗಕ್ಕೆ ಕರ್ಣಾಮೃತಮಂ (ಪಂರಾಮಾ. ೧-೭೯) : ತೊದಲ್ನು [ಪಾಠಾಂ. ಳ್ನು]ಡಿಗೇಳ್ವಲಂಪಿನಿಂ . . . ಸಲೆ ನುಡಿಸುತ್ತುಮಿರ್ಪ ಸೆವದಿಂ ನುಡಿಗಲ್ತನಿಳೇಶನಂದನಂ (ಕುಸುಮಾ. ೬-೧೫೧) : ಪರಮಶಿವಭಕ್ತತತಿ ತಮ್ಮ ಕಂದನ ತೊದಲ್ನುಡಿಗಳೆಂದು ಮೆಯ್ಯುಬ್ಬಿ ಪುಳಕಂದಾಳ್ದು ಲಾಲಿಸುತಿರೆ (ಪದ್ಮರಾ. ೧-೩೩) ; ಪಾಡುವಿಂಚರಕೆ ಕೋಗಿಲೆ ತೊದಲ್ನುಡಿಯ ಮಾತಾಡುವುದಕೆ ರಾಜಕೀರ . . . ಜೋಡಿಸಿಕೊಟ್ಟರುತ್ಸವದಿ (ಮೋಹತ. ೧೯-೭೭). ೨. ಪಿತರಂ ಪುತ್ರನಂ ತೊದಲ್ನುಡಿಯಂ ನುಡಿಸಿದಂ[ಪಾಠಾಂ. ತೊದಲ್ನುಡಿಯನನಿಸಿದಂ] (ಶಬ್ದಾನು. ೨೦೫ ಪ್ರಯೋ). ೩. ಆ ಹುಡುಗನು ತೊದಲ್ನುಡಿಯಲ್ಲಿ . . . ತಮ್ಮ ಬಳಿ ವಿದ್ಯಾದಾನವನ್ನಪೇಕ್ಷಿಸಿ ಬಂದಿರುವೆನು ಎಂದು ಹೇಳಿ (ಮುಚಸ. ೬೦). **ತೊದಳುನುಡಿ** : ೧. ಬಾಲರ ತೊದಳುನುಡಿಯ ತಂದೆತಾಯಿಗಳಾಲಿಸಿ ಕೇಳ್ದು ತಪ್ಪಿರಲು ಆಳೋಕಿಸರಂತೆ ಕೃತಿದೋಷವಿರೆ ತಿದ್ದಿ ಬಾಲನಹೆಸು ನಾ ನಿಮಗೆ (ಅಂಜಚ. ೧-೧೧೪). ೩. ನಡೆತಂದರ್ ಚೆಲ್ವಿಂದೊಳ್ನುಡಿಯ ತಡಂನುಡಿಯ ತೊದಳು[ಪಾಠಾಂ. ಳ]ನುಡಿಯೊಳ್ವೆಂಡಿರ್ (ಜಗವಿ. ೪-೧೨೭) ; ಗದುಗದಗಂಠದಿಂ ತೊದಳುನುಡಿಗಳಿಂದ ಹೃದಯ ಸಖನೊಳಿಂತೆಂದು . . . ಕೇಳಿದೆನು (ಅಂಜಚ. ೫-೧೦೧) ; ರಂಜಿಸುವ ಯಮರಾಜನೋಲಗ ಕಂಜನಾಭಮುಕುಂದಗಾಯ್ತು ... ಎಂಬೀ ತೊದಳು ನುಡಿಗೇಳ್ದು (ನಿಘಾಗ. ೬-೩-೪). [ ತೊದಳ್₂ + ನುಡಿ₂ ]

**ತೊದಳ್ಮಾಡು**, ತೊದಲುಮಾಡು (ಕ್ರಿ). ೧. ತಡವರಿಸುವಂತೆ ಮಾಡು: ಬಾದಿನೊಳಮೋದಿನೊಳಂ ವಿಬುಧರ್ಕಳಂ ತೊದಳ್ಮಾಡುವ ರಾಜಕೀರತತಿ (ಸೌಇಇ. IX-1, ೨೭೭-೨೩ : 1160). **ತೊದಲುಮಾಡು** : ೨. ಹುಸಿಯಾಗುವಂತೆ ಮಾಡಂ : ಒಮ್ಮೆ ಆಡಿದ ಮಾತನ್ನು ತೊದಲುಮಾಡುವುದಕ್ಕೆ ಬಲಿಯು ಒಪ್ಪಲಿಲ್ಲ (ನೀಗಟ್ಟು. ೦೭೮). [ ತೊದಳ್₃ + ಮಾಡು₁ ]

**ತೊದಳ್ಮಾತು**, ತೊದಲುಮಾತಂ, ತೊದಲ್ಮಾತು (ನಾ). ೧. ಮಕ್ಕ ತೊದಲುನುಡಿ : ತೊದಳ್ಮಾತ ಮಾತನಾಡುವ ಮುದ್ದುಗೆಯ್ವ ಭೂತಳದೊಳಗಂಬೆಗಾಲಿಟ್ಟು ನಡೆವಂತೆ ಚೇತನವಾದುದಂಗಜಗೆ (ಮೋಹತ. ೧೧-೩೯) : ಶಿಪ್ಯೋಕ್ತಿಗಳಂ ತಾಂ ಪೇಳ್ದು ಪೇಳ್ವಂತಿರೆ ಕಲಿಸಿ ತೊದಳ್ಮಾತು ಚೆಲ್ವಾಗೆ ಪಾಮಾಕ್ಷಿಗೆ ಪುರ್ಬಿಂ ಜರ್ಬಿನಿಂ ನೋದೆನುತಜೂಬಿ ನೃಪಂ (ರಾಜಶೇ. ೪-೭೦). ೨. ವ್ಯರ್ಥವಾದ ಮಾತು: ತೊದಳ್ಮಾತಿನೊಳೇನೋ ಪಾಂಡವರ ಕೈಯೊಳೆ ನಿನ್ನ ನಿಸೇಕವಾಗದೇ (ಪಂಪಭಾ. ೯-೪೯). **ತೊದಲುಮಾತು** : ೩. ಅಸ್ಪಷ್ಟವಾದ ಮಾತು: ಕೆಲಂಬರು ತೊದಲುಮಾತುಗಳನಾಡುತ ಕಣ್ಣುಗಳಂ ಮುಚ್ಚಿ ಕೈಸನ್ನೆಗಳಂ ಮಾಡುವರು (ಸೌಗಂಧಿ. ೧೪೨-೧೧): ಲೋಹಲಃ , ಅಸ್ಫುಟವಾಕ್-ಎ ವ್ಯಕ್ತವಾಗದೆ ತೊದಲುಮಾತನಾಡುವವನ ಹೆಸರುಗಳು (ಸಿದ್ಧಾಂಶಿ. ೨೮೭). **ತೊದಲ್ಮಾತು** : ೧. ಪಸುಳೆತನದೊಳ್ ಪ್ರಣವಮಂ ಶರಣಗಣಕೆ ಬೋಧಿಸುವನೀ ಕುವರನೆಂಬೊಲ್ ತೊದಲ್ಮಾತು ರಂಜಿಸಿದುವು (ಚಬಪು. ೫-೪೧). ೪. ಮುದ್ದು ಮಾತು : ಮಾತೆಯ ಪಕ್ಷಪುಟವ ಸೇರುವ ತೊದಲ್ಮಾತ ನುಡಿದು ಬಿನದಿಸುವ . . . ಗಿಳಿವಟಿಗಳ ರೀತಿಯ ಕಂಡಳಾ ಸೀತೆ (ಕಂನವಿ. ೪-೪೭). [ ತೊದಳ್₂ + ಮಾತು₁ ]

**ತೊದಳ್ಳಿ** (ನಾ). ಒಂದು ಸ್ಥಳದ ಹೆಸರು: ಬನವಸೆಯ ಚಟ್ಟ ನಾಗರಕಣ್ಡಕ್ಕೆ ಮುನಿದು ಪರಿಯುನಟ್ಟದಡೆ ತೊದಳ್ಳಿಯನಿಱಿದು (ಎಕ. VIII, ಸೊರಬ. ೨೩೪-೮ : 999). [ ? ]

△ **ತೊದಟ್** 'ತೊದಳ್₁' ನೋ.

**ತೊದಟ್ಚು** (ಕ್ರಿ). ಎದುರಿಸು; ಪ್ರತಿಭಟಿಸು : ಕುಲದೀಪತಿಲಕ ಗೋಪಾಲರಾಜ . . . ಅಟ್ಟಿ ಪೊಯ್ದು ನುಗುಟ್ಚುಟ್ಚಿ ತೊದಟ್ಚಿ ಮಲ್ಲಮಾಟ ಯೊನ್ನಾಸುರಮಂಪ್ಪನಂ ಪೆಣೆದು ಕಟ್ಟಿದಂ (ಎಕ. VI, ಚಿಕ್ಕಮ. ೭೬-೨೦ : ಸು. 1060 ?). [ ತೊದಟ್ (<ತೊದಳ್₁) + –ಚು₁ ]

**ತೊದುರು** 'ತೊಡರು₃' ನೋ.

**ತೊನಗು** 'ತೊಲಗು' ನೋ.

**ತೊನಚ** 'ತೊನಸೆ' ನೋ.

**ತೊನಚೆ** 'ತೊನಸೆ' ನೋ.

**ತೊನಪೆ** (ನಾ). ಒಂದು ಬಗೆಯ ಮರ ; ಹೊಂಗೆ : " ಗುಚ್ಛಕರಂಜಃ–ತೊನಪೆ, ಹೊಂಗೆಮರ " (ಒಷಧಿ. ೫೦). [ ? ]

**ತೊನಸಿ** 'ತೊನಸೆ' ನೋ.

**ತೊನಸೆ**, ತೊಣಚಿ, ತೊಣಚೆ, ತೊಣಸಿ, ತೊಣಸೆ₁, ತೊನಚಿ, ತೊನಚೆ, ತೊನಸಿ (ನಾ). (ನಾಯಿ, ಕುದುರೆ ಮುಂತಾದುವುಗಳ ಮೈಯಲ್ಲಿ ಸೇರಿಕೊಳ್ಳುವ) ಒಂದು ಬಗೆಯ ನೊಣ : ಪಶುವಿನೊಳಲ್ಲಿರಲೀಂ ತಾನೆಂತೊ ತೊನಸೆಯೋ ನೊಣವುಗಳೋ (ಸಮಪ. ೯-೬೧) : ಅಗಸೆಯ ಮರಕ್ಕೆ ತೊನಸೆ ಮಱಿದುಂಬಿಯೆಂಬಂತೆ (ಧರ್ಮಾಮೃ. ೭-೨೨೯); ತುಂಬಿ ಪತಂಗ ನೊಣ . . . ತೊನಸೆ ಮೊದಲಾದುವಕ್ಕೆ ಸ್ಪರ್ಶನ ರಸನ ಘ್ರಾಣಮುಕ್ಕು (ಶಾಸ್ತ್ರಟೀ. ೧೧೭-೬); ನೀನು ತೊನಸೆಯ ಕೊಲೆಯ ಮಾಡಿದ ಮುಳ್ಳುಮೊನೆಯಲಿ (ಸಂಭಪ. ೧೪-೧೭). **ತೊಣಚಿ**: ತೊಣಚಿ; ಗೋಮಕ್ಷಿಕ (Breeze. ಇಂಕನಿ). **ತೊಣಚೆ** : (+). **ತೊಣಸಿ**: ಹಾಲುಗೆಚ್ಚಲು ಬಳಿಯ ತೊಣಸಿ ಹತ್ತಿಕೊಂಡು ಕಾಲವನು ಕಳೆವ ಬಗೆ ಬಲ್ಲಿರಲ್ಲ ವೇಳವೇಳಗೆ ಹಸುವ ಕರೆದುಂಬ ನರಸಂತೆ ಕೀಳು ತೊಣಸಿಯು ಉಂಡು ಪರುಷ ಪದ ಬಲ್ಲುದೆ (ವಿದಾಕ್ಕ. ೧೮-೨). **ತೊಣಸೆ₁** : ಬೆನ್ನಟ್ಟುವ ಘೋರರೂಪಿ ಆರ್ಗಸ್, ಕಡಿದು ರೂಪುಗೆಡಿಸಲೆಂದು ಎಡೆವಿಡದೆ ಹಾಯ್ದು ಬರುವ ತೊಣಸೆ . . . ಅವಳ ಪಾಲಿಗೆ ಬೆನ್ನಟ್ಟಿದ ಬೇತಾಳಗಳು (ಬದ್ಧಪ್ರ. LI. ನಾಟಕದ ಸಮಸ್ಯ). **ತೊನಚಿ** : ತೊನಚಿಯಂ ಕೊಂದ ಪಾಪಸಮಂತೆ

ಳಿಯೊಳು (ತ್ರಿಮಿಘಾ. ೨-೯) ; ತೊಱೆ$^{3}$ಗೂಡಿದ ನದಿ ನದಿಯು ಕಾಲುವೆಗಳು . . . ರಂಜಿಸುತಿಹ ಪುರವಿಹುವಾ ದೇಶದೊಳಗೆ (ಕಂಸವಿ. ೨-೧೧). ತೊರೆ$_{3}$ : ೧. "ಹೊಳೆಗೆ ತೊರೆಯೆಂದಕ್ಕು" (ಕಶಿರ. ೪೯) ; ಏಱ$^{3}$ ತೊರೆ ಕಳವೃತ್ತಿ ಕಟಿ$^{3}$ಪೊನ್ಪಣ್ಟು ಮಹಾಪಾತಕನಕ್ಕುಮ್ (ಎಕ. XVI, ತುಮಕೂ. ೧೦೨-೩ ; 730) ; ನಿತ್ಯವು ತೆಗೆಯುತಲಿರಬೇಕು ಹುಟ್ಟನು ತಾನೆಯು ತೊರೆಯೊಳಂಬಿಗನು (ಇಂಜಾಪ. ೨೦೦-೩೯) ; ಕುದಿವ್ರದು ಮೋಡವು ಕೊಟ್ಟಡದಿದೆ ಮಳೆ ಬತ್ತಿತು ಹಳ್ಳವು ಅತ್ತಿತು ತೊರೆ ಹೊಳೆ (ಉದ್ಯಾಕ. ೬೪-೪) ; ಬಾಳ ಗುಬ್ಬಿಗೆ ಗುಟುಕಿವಾಗಲಿ ಬಾಳ ತೊರೆಯಲಿ ಹರಿಯಲಿ (ಕಲ್ಲೊ೯ಲ. ೧-೧೨).

ತೊಱೆ$^{3}$ತೊಱೆ$^{3}$, ತೊರೆತೊರೆ (ದ್ವಿರುಕ್ತಿ) : ನಡುಗಿತಿಳೆ . . . ಹೆಮ್ಮರ ನುಡಿದು ಬಿದ್ದವು ಸಲಿಲವುಕ್ಕಿತು ಕೂಡೆ ತೊಱೆ$^{3}$ತೊಱೆ$^{3}$ [ಪಾಠಾಂ. ಕೆಱೆ$^{3}$ ತೊಱೆ$^{3}$]ಯು(ಕುಮ್ಯಾಸ.೧೫-೪೩); ತೊರೆತೊರೆಯಾಗಿ ಹೊಳೆಬಸಿಯುಂತಿಹುದು (ಇಂಗೀತ. ೬೧-೧೧). ತೊರೆ ಬಸಿ = ಪ್ರವಾಹದಂತೆ ಉಕ್ಕಿ ಹರಿ :ಕಣ್ಣೀರು ತೊರೆಬಸಿವರಡು ತೋಳ್ಗಳಂ ಮುನ್‌ಚಾಚಿ (ಶ್ರೀರಾಮಾ. ೬೯೬-೪೮೯). ತೊಱೆ$^{3}$ಗಳಾಣ್ಮ = ನದಿಗಳ ಒಡೆಯ,-ಅಧಿಪತಿ ; ಸಮುದ್ರ : "ತೊಱೆ$^{3}$ಗಳಾಣ್ಮಂ ಮುನ್ನೀರ್, ನೀರೊಟ್ಟಿಲ್ (ಕಡಲ್) – ಈ ೪ ಸಮುದ್ರಂ" (ಕಶಸಾ. ೮-೧೪೧) ; "ಮುನ್ನೀರ್ ನೀರೊಟ್ಟಿಲುಮೆಂದೆನ್ನುತ್ತುಂ ತೊಱೆಗಳಾಣ್ಮ ಕಡಲೆನೆಯುಂ ತಾಂ . . . ಸಾಗರಮೆನಿಕುಂ" (ಕವಿಕಂ. ೮೯). ತೊಱೆ$^{3}$ದಾಳ್ದ = ಗಂಗೆಯನ್ನು ಧರಿಸಿದವನಂ ; ಶಿವ; ತೊಱೆ$^{3}$ದಾಳ್ದನ ಕಾರ್ಮುಕವ ಸಿಂಜನಿಯಿಂದ ನೆಱೆ ಬಾಗಿಸಿದರೆಂಬಂತ (ಪೋಹಕ. ೨-೬೬). [ದೇ.॥ ತಮಿ. ತುಱೆ$^{3}$ ; ಮಲ. ತುಱ; ತುಳು. ತುದೆ]

ತೊಱೆ$^{3}$ಕದವ (ನಾ). ನದಿಯ ತೀರದಲ್ಲಿ ಬೆಳೆಯುವ ಕದವ ವೃಕ್ಷ "ನದೀಕದಂಬಃ – ತೊಱೆ$^{3}$ಕದವ" (ಒಷಧಿ. ೮೪).

[ ತೊಱೆ$^{3}_{2}$ + ಕದವ$_{1}$ (<ಕದಂಬ) ]

ತೊಱೆ$^{3}$ಕಾರಾಟ್ಟ 'ತೊಱೆ$^{3}$ಕ್ಕಾರಾಟ್ಟ' ನೋ.

ತೊಱೆ$^{3}$ಕ್ಕಾರಾಟ್ಟ, ತೊಱೆ$^{3}$ಕಾರಾಟ್ಟ (ನಾ). ಒಂದು ಸ್ಥಳದ ಹೆಸರು : ತೊಱೆ$^{3}$ಕ್ಕಾರಾಟ್ಟಲು ಪೆಕ್ಕ ವಿಯಮುಪ್ಪೊಲ್ಗೊಗೆಯು ಕೂಡಲೂರು (ಎಕ. IV, ಗುಂಡ್ಲುಪೇ. ೮೮-೪ ; ಸು. 750). ತೊಱೆ$^{3}$ಕಾರಾಟ್ಟ : ಶ್ರೀಮತು ತೊಱೆ$^{3}$ಕಾರಾಟ್ಟಯ ಅಚಯ್ಯನ ಮಗಂ ಕೇಸವಭಟ್ಟಂ ದೇಗುಲವಂ ಮಾಡಿಸಿ . . . ಕೊಟ್ಟ ಭೂಮಿ (ಎಕ. IV, ಗುಂಡ್ಲುಪೇ. ೯೩-೨೦; 1040).

[ ℙ ಇದು 'ತೊಱೆ$^{3}$ಕಾರರ ಹಟ್ಟ ಇರಬಹುದೆ' ? ]

ತೊಱೆ$^{3}$ಗಟ್ಟು (ಕ್ರಿ). ಪ್ರವಾಹವಾಗಂ ; ಪ್ರವಹಿಸು : ಕಾಳಮೇಘವೆಂಬ ಭೂಮಿಯಲ್ಲಿ ಕಾಳರಾತ್ರಿಯೆಂಬ ಏರಿಗಟ್ಟ ಮಂಜಿನ ನೀರು ತೊಱೆ$^{3}$ಗಟ್ಟ ಹಾಯ್ದು ತುಂಬಿತ್ತು (ವಚಸಂ. ೫೪೬-೧). [ ತೊಱೆ$^{3}_{2}$ + ಕಟ್ಟು$_{1}$ ]

ತೊಱೆ$^{3}$ಗಣಗಿಲೆ, ತೊಱೆ$^{3}$ಗಣಗಿಲು, ತೊಱೆ$^{3}$ಗಣಗಿಲೆ (ನಾ). (ತೇವದ ನೆಲದಲ್ಲಿ ಬೆಳೆಯುವ) ಒಂದು ಬಗೆಯ ಕಣಗಿಲೆ. "ನಿಚುಲ, ಅಂಬುಜ, ಹಿಜ್ಜಲ = ತೊಱೆ$^{3}$ಗಣಗಿಲೆ" (ನಾಚಿರಾ. ೬) ; "ತೊಱೆ$^{3}$ಗಣ [ಪಾಠಾಂ. ಣೆ]ಗಿಲಾ ಲೋಮಕಂ ಬಿಚುಳಮದು" (ಮಂಗರಾ. ೩೪-೧೧). ತೊಱೆ$^{3}$ಗಣಗಿಲು : "ರಕ್ತಕಾರ್ಮುಕಃ – ತೊಱೆ$^{3}$ಗಣಗಿಲು" (ಒಷಧಿ. ೧೩೫); ತೊಱೆ$^{3}$ಗಣಗಿಲ ಕತ್ತರಿಯೆಸೆವ ಮೂಲವುಂ ಕತಕಕುಜಾವಳಿಯ ಪರಿಪಕ್ವ ಫಲರಸ ಜಳದಿಂದರೆದು (ಖಮದ. ೭-೨೦). ತೊಱೆ$^{3}$ಗಣಗಿಲೆ : "ನಿಚುಲಃ, ಹಿಜ್ಜಲಃ, ಅಂಬುಜಃ ಈ ೩ ತೊಱೆ$^{3}$ಗಣಗಿಲೆ ಹೆಸರು" (ನಾಚಿರಾ. ೧೦೮).

[ ತೊಱೆ$^{3}_{2}$ + ಕಣಗಿಲೆ$_{1}$ ]

ತೊಱೆ$^{3}$ಗಣಜಿಲು, ತೊಱೆ$^{3}$ಗಣಜಿಲಂ, ತೊಱೆ$^{3}$ಗಣಜಿಲೆ (ನಾ). (ತೇವದ ನೆಲದಲ್ಲಿ ಬೆಳೆಯುವ) ಒಂದು ಬಗೆಯ ಸಸ್ಯ : "ದೀರ್ಘಪತ್ರಃ – ಕಮ್ಮತ್ತಿ, ತೊಱೆ$^{3}$ಗಣಜಿಲು, ನೀರಿಪ್ಪೆ, ಹಬ್ಬೆಯ ಭೇದ" (ಒಷಧಿ. ೭೭). ತೊಱೆ$^{3}$ಗಣಜಿಲು: ನೆಱೆ$^{3}$ ಕು(ದಿ)ಸಿ ಕಟ್ಟುಗಿಂ ತೊಱೆ$^{3}$ಗಣಜಿ[ಪಾಠಾಂ. ಗಿ]ಲ ದಳಮನಾದೊಡು ಬಾತ ವಿಷಕ್ಕುಱೆ$^{3}$ಸಲ್ಪುಪನಾಹದ ಕೊಱೆ$^{3}$ಯುಬಾಗುಂ (ಖಮದ. ೧೬-೭೨). ತೊಱೆ$^{3}$ಗಣಜಿಲೆ: ನಱುವಲ್ ಮಂಗ್ಗಾರೆಯು ಕಾಯ್ ತೊಱೆ$^{3}$ಗಣ(ಜ)ಗಿಲೆ ದೇವದಾಳಿ . . . ಇವನರೆಯಲ್ ಜಲದಿಂದ ಘಣಿಯ ವಿಷನಿರ್ಹರಣಂ (ಖಮದ. ೫-೧೦೪).

[ ತೊಱೆ$^{3}_{2}$ + ಗಣಜಿಲು (< ಗಣಜಿಲೆ$_{1}$)

ತೊಱೆ$^{3}$ಗಣಗಿಲು 'ತೊಱೆ$^{3}$ಗಣಗಿಲೆ' ನೋ.

ತೊಱೆ$^{3}$ಗಣಗಿಲೆ 'ತೊಱೆ$^{3}$ಗಣಗಿಲೆ' ನೋ.

ತೊಱೆ$^{3}$ಗಣಜಿಲು 'ತೊಱೆ$^{3}$ಗಣಜಿಲು' ನೋ.

ತೊಱೆ$^{3}$ಗಣಜಿಲೆ 'ತೊಱೆ$^{3}$ಗಣಜಿಲು' ನೋ.

ತೊಱೆ$^{3}$ಗರೆ$_{1}$, ತೊರೆಕರೆ (ನಾ). ಹೊಳೆಯ ತಡಿ ; ನದೀತೀರ : ಕಡಲ ಕಡೆಯಲ್ಲಿ ಸಾರ್ಚಿಪ್ಪುದೋ ಆತರ್ ಪೋಡಸದ ಕೊಱೆ$^{3}$ಗರೆಯ ಕಮಿಸಿರದೆ ಎಂದಾನುಮೊರ್ಮೆ ಮನೆ ಮಾಟ್ಟರನ್ (ಬದ್ಧಪ್ರ. ೩೮-೮೩೨). ತೊರೆಕರೆ : ಗೋವತ್ಸಲೀಲೆ ತೊರೆಕರೆಯ ಮೇಲೆ ವನವಾಟ ಸಿದ್ಧಸಾಲೆ (ಸೂರ್ಯಪಾ. ೩೫-೧). [ ತೊಱೆ$^{3}_{2}$ + ಕರೆ$_{4}$ ]

ತೊಱೆ$^{3}$ಗರೆ$_{2}$ (ನಾ). ಒಂದು ಸ್ಥಳದ ಹೆಸರು : ಲೋಕಾಪುರಂ ಪನ್ನೆರಡು ತೊಱೆ$^{3}$ಗರೆಯುಱುವತ್ತು ಇನ್ನು ಮೂವತ್ತೊಬ್ಬರ್ಯಸಿರದ ನೂಱೆ$^{3}$ರಡು ಬಾಡಮುಂ ಲೋಕಟೆಯರಾಳೆ (ಎಕ. VII, (S), ಶಿಕಾರಿ. ೩೭೮-೭ ; 902). 'ತೊಱೆಗಲ ಪರಾ'. [ ? ]

ತೊಱೆ$^{3}$ದಡಿ (ನಾ). = ತೊಱೆ$^{3}$ಗರೆ$_{1}$ : ಬಲ್ಲವಳ್ಳಿಗಳೆಲ್ಲಂ ತೊಱೆ$^{3}$ದುವು ತೊಱೆ$^{3}$ದಡಿಗಳನಾರ್ ತೊಱೆ$^{3}$ಯದರನುಕೂಲವೃತ್ತಿಗೆಟ್ಟಿಸಗುವರು (ಜಗವಿ. ೪-೧೦) ; ಆಂದು ಸಮ್ಮನು ರಜತವಾಳುಕಿಯೆಂದೆನಿಪ ತೊಱೆ$^{3}$ದಡಿಯೊಳೀತನು ಬಂದು ಬಂಧುವೆಯಾಗಿ ರಕ್ಷಿಸಿದನು (ಸಾಳ್ವಭಾ. ೧೭-೯೦).

[ ತೊಱೆ$^{3}_{2}$ + ತಡಿ$_{2}$ ]

ತೊಱೆ$^{3}$ದಲೆಯ (ನಾ). ತಲೆಯಲ್ಲಿ ನದಿಯನ್ನು ಧರಿಸಿದವನು ; ಗಂಗಾಧರ ; ಶಿವ : ತೊಱೆ$^{3}$ದಲೆಯನ ಮುಂದಲೆಗೆ ಸೀಸಕವನಳವಡಿಸಿ, ಫಣಿ ಕುಂಡಲನ ಕರ್ಣಕ್ಕೆ ಮಕರಕುಂಡಲಮನಿಟ್ಟು (ರಾಜಶೇಖ. ೧೩೦-೯೦).

[ ತೊಱೆ$^{3}_{2}$ + ತಲೆ$_{1}$ + – ಅ$_{7}$ ]

ತೊಱೆ$^{3}$ದವನ, ತೊರೆದವನ (ನಾ). ನೀರಿರುವ ಜಾಗದಲ್ಲಿ ಬೆಳೆಯುವ ಒಂದು ಬಗೆಯ ದವನ : "ತಪೋಧನಃ – ಬೋಟತಲ, ತೊಱೆ$^{3}$ದವನ" (ಒಷಧಿ. ೭೭) ; ಗಿಣಿಮೂಗನ ಬೇರ್ ತೊಱೆ$^{3}$ದವನ ಕೊಟ್ಟ ಮುಸ್ತೆಯ ನುಱೆ$^{3}$ ಚೂರ್ಣಪ್ರದು (ಖಮದ. ೫-೯೪). ತೊರೆದವನ : "ವಣಾದೀ – ದವನ, ತೊರೆದವನ" (ಒಷಧಿ. ೧೪೯). [ ತೊಱೆ$^{3}_{2}$ + ದವನ ]

ತೊಱೆ$^{3}$ನಾಡು (ನಾ). ಒಂದು ಪ್ರದೇಶದ ಹೆಸರು : ವಿದಿಯರಸರ್ ತೊಱೆ$^{3}$ನಾಡಯ್ನೂಱುಂ . . . ಆಳೆ (ಎಕ. IV, ಹೆಗ್ಗಡ. ೯೩-೩ ; ಸು. 740) ; ಎಱೆ$^{3}$ಗಜ್ಜ ನಾಮಧೇಯಃ ತೊಱೆ$^{3}$ನಾಡು ಆಯಿನೂಱು[ಂ] . . ಆಳೆ (ಇಆ. XIV, ೨೬೨-೪೯ ; ಸು. 9ನೆಯ ಶತ).

[ ತೊಱೆ$^{3}$ ? + ನಾಡು ]

ತೊಱೆ$^{3}$ನಾಯ್ (ನಾ). ನೀರುನಾಯಿ: ತೊಱೆ$^{3}$ನಾಯ್ ಸತ್ತೆಡೆಯ ಮಣ್ ಶುಕಾಸ್ಯಂ ಮದ್ಯಂ ಮುಱೆ$^{3}$ದೊಂಡೆಯೆಬಿವಂ ಪೆಸರಱೆ$^{3}$ಯದ ಬಾಹುಗಳೊಳೊರಸೆ ಪೂಜಿಸಿ(ಸು)ಗೆ ಪೋಕುಂ (ಲೋಕೋಪ. ೯-೨೦೩).

[ ತೊಱೆ$^{3}_{2}$ + ನಾಯ್ ]

ತೊಱೆ$^{3}$ಮತ್ತಿ (ನಾ). ೧. ನದಿಯ ತೀರದಲ್ಲಿ ಬೆಳೆಯುವ ಒಂದು ಬಗೆಯ ಮತ್ತಿಗಿಡ : "ನದೀಸರ್ಜಃ, ವೀರತರುಃ ಈ ೨ ತೊಱೆ$^{3}$ಮತ್ತಿ" (ನಾಚಿರಾ. ೧೦೭) ; "ತೊಱೆ$^{3}$ಮತ್ತಿ ನೀತಿ ಕಕುಭಾಖ್ಯಾನಂ" (ನಾಸಾರ. ೧೨೯) ; "ನದೀಸರ್ಜಃ – ಮತ್ತಿ, ತೊಱೆ$^{3}$ಮತ್ತಿ" (ಒಷಧಿ. ೮೩).

೨. ಒಂದು ಬಗೆಯ ಸಸ್ಯ: "ಮುರುಕಿಲಾ ತೊಱೆಮತ್ತಿ ಸಿಂಧುಕಿ ಯೆನಿಸ್ಕು" (ಮಂಗರಾ. ೩೩-೧೪). [ ತೊಱೆ$_2$ + ಮತ್ತಿ$_3$ ]

**ತೊಱೆಮಲ್ಲಿಗೆ** (ನಾ). ನದಿಯ ತೀರದಲ್ಲಿ ಬೆಳೆಯುವ ಒಂದು ಬಗೆಯ ಮಲ್ಲಿಗೆ: ತೊಱೆಮಲ್ಲಿಗೆಯುಂ ಪ್ರವಿಲೇಪನಮುಂ ಮಾಡುತ್ತವಿರಲ್ಕಚ್ಚರಿಯಿ ದೆಂಬಿನಂ ಕ್ರಿಮಿ ಕಿಡುಗುಂ (ಲೋಕೋಪ. ೯-೧೧೩); ತೊಱೆಮಲ್ಲಿಗೆ ಪುನ್ನಾಗಂ... ತೊಟ್ಟ ಮುಸ್ತೆಯನುಱೆ ಚೂರ್ಣವುದು (ಖಮದ. ೫-೯೪). [ ತೊಱೆ$_2$ + ಮಲ್ಲಿಗೆ ]

**ತೊಱೆಮಾವು, ತೊರೆಮಾವು** (ನಾ). ನದಿಯ ತೀರದಲ್ಲಿ ಬೆಳೆಯುವ ಒಂದು ಬಗೆಯ ಮಾವಿನ ಮರ: ತೊಱೆಯ ಮಾವು = ತೊಱೆಮಾವು (ಶಮದ. ೧೬೨ ಪ್ರಯೋ); ಹಲಸು ಕೊಡಸಿಗ ಮಾವು ಕೊ[ಪಾಠಾಂ. ತೋ] ಱೆಮಾವುಲಿಯ ಕಣಗಿಲು ....ಹಾದರಿಯುಮಾರ ಮೊದಲಾದುವುರ್ವಿಹವು (ಸಾಳ್ವಭಾ. ೫-೩). **ತೊರೆಮಾವು**: "ಅಮ್ರಪತಾಕಾ – ತೊರೆಮಾವು" (ಓಫಿ. ೧೨). [ ತೊಱೆ$_2$ + ಮಾವು ]

**ತೊಱೆಯ, ತೊರೆಯ** (ನಾ). ೧. ಮೀನಂ ಹಿಡಿಯುವವನು; ಮೀನು ಗಾರ; ಬೆಸ್ತ: ಅರ್ಥವುಂಟೆಂದಹಂಕರಿಸಿ ಮಾಡುವನ ಭಕ್ತಿ ತೊತ್ತಿನ ಕೂಟ ತೊಱೆಯನ ಮೇಳದಂತೆ [ಪಾಠಾಂ. ತೊತ್ತಿನ ಕೂಟದ ತೂರ್ಯರ ಮೇಳದಂತೆ](ದೇದಾವ೩೦-೫೩).ಕಾದತುಱುಕಾಜನೋ ಮೀನ್ ಬಡಿವ ತೊಱೆ ಯನೊ(ಅಶ್ವಶಾ. ೩೬-೩೮೮). **ತೊರೆಯ**:೧."ಬಿಸ್ತ್ರಃ=ತೊರೆಯಂ"(ಕಾಶಕ್ಕ. ೨೭೦); ಇಲ್ಲಿಯ ಬೆಸಮಕ್ಕಳಾರೆನ್ನೊಡೆ ಕಾಱಗೊಡೆಯನುಂ . . . ತೊರೆಯರಾಳ ಪಡಿಯನುಂ (ಎಕ. III, ನಂಜನ. ೧೩೯-೯ ; 916 ?); ಸ್ವಸ್ತಿ ಶ್ರೀಮತ್ ಪಱಮೆಯರ ಕುಲದ ತೊರೆಯರ ಮಾರಣ್ಣಗಂ ಅನ್ನವ್ವೆಯಕ್ಕಂಗಂ ಪುಟ್ಟಿದ ವರ ತಾತಣ್ಣ (ಎಕ. IV, ಗುಂಡ್ಲುಪೇ. ೮೪-೨; 1000 ?); ೨. ದೋಣಿ ನಡೆಸುವವನು; ಅಂಬಿಗ: ಪಡುವ ದಿಬ್ಬದ ಗೌಡನೊಬ್ಬನು ಬಿಡದೆ ತೊರೆಯನ ಕೂಗಿಕೊಂಡನು (ಇಂಗೀಶ. ೬೭-೨); ತೊರೆಯರರಿಯಾ ಏಕೆ ನಿನ್ನ ಹೊತ್ತಿಗಲ್ಲದೆ ಬಾರೆ ಮುನ್ನ? (೧೯ವಿಂ. ೫೫-೩೩). [ ತೊಱೆ$_2$ + – ಅ$_7$. /ತಮಿ. ತುಱೈಯ ]

**ತೊಱೆಯಣುಗ** (ನಾ). ನದಿಯ ಮಗ; ಗಾಂಗೇಯ; ಭೀಷ್ಮ: ತೊಱೆಯಣುಗನು ಪರಿತಂದು ಅಱಗುಲಿ ಕೌರವನಾಡುವ ಜೂದಿನ ತೆಱನನು ಧೃತರಾಷ್ಟ್ರಗುಸುರೆ (ನೇಮಿಷಂ. ೨೪-೩೬). [ ತೊಱೆ$_2$ + ಅಣುಗ (<ಅಣುಂಗ) ]

**ತೊಱೆಯಿಂಗುಳ, ತೊರೆಇಂಗುಳ** (ನಾ). ನದಿಯ ತೀರದಲ್ಲಿ ಬೆಳೆಯುವ ಒಂದು ಬಗೆಯ ಇಂಗುಳದ ಗಿಡ: "ತೊಱೆಯಿಂಗುಳಂ ದುರಾಲಂಬ ಮೆನಿಸಿಕ್ಕು" (ಮಂಗರಾ. ೩೬-೧೬). **ತೊರೆಇಂಗುಳ**: ನೆಲಗುಳ್ಳ ತೊರೆ ಇಂಗ[ಗು]ಳ .. .. ಕಷಾಯ ಕಾಯಿಸಿ ಹಿಪ್ಪಲಿ ಪ್ರತಿವಾಕವಿಕ್ಕಿ ಸೇವಿಸೆ ಶ್ಲೇಷ್ಮಜ್ವರ ನಾಶವಾಗುವುದು (ಸಕವ್ಯ. ೮೯). [ ತೊಱೆ$_2$ + ಇಂಗುಳ ]

**ತೊಱೆಯಿಸು, ತೊರಸು, ತೊಱಸು, ತೊಱಿಸು** (ಕ್ರಿ). ೧. ತ್ಯಜಿಸು ವಂತೆ ಮಾಡು: ತವರೂರ ಮಱೆಯಿಸಿ ನಿದ್ರೆಯ ತೊಱೆಯಿಸಿ ಸವಿಗಳ ನಱೆಯಿಸಿ . . . ಸುಖದೊಳೋಲಾಡಿಸುವವಗಡ ಯಾತಱಿಂದಾಯ್ತು (ಭರೇಶ. ೬-೭೯). ೨. ವೈರಾಗ್ಯವನ್ನು ಹೊಂದುವಂತೆ ಮಾಡು; ವೈರಾಗ್ಯದೀಕ್ಷೆಯನ್ನು ಕೊಡು: ಪರಮಾಯುಷ್ಯಾಂತಂಬರಂ ನಿರಾಕುಳ ಮಾಗಿರ್ಪಾ ಯಿರವಿನ ಚೈನಾಭಿಪ್ರಾಯಂ ಪ್ರಾಯೋಪಗಮನದಿಂ ತೊಱೆ ಯಿಸಿದುದು (ಆದಿಪು. ೨-೫೩). **ತೊರಸು**: ೧. ಶರೀರದಭಿಲಾಷೆಯುಂ ಕಿಡಿಸುವರೆ ನೆರೆ ಸ್ವಬಂಧುವನೆಲ್ಲ ಮರಸುವಡೆ ತೊರಸುವಡೆ ತಿರುತಿರುಗಿ (ತಿರುಶ. ೧-೬೮). **ತೊಱಸು**: ೧. ತೊತ್ತುವೇಟಕೆ ಹಡದ ತಾಯನು ತೊಱಸಿದರೋ![ಪಾಠಾಂ. ತೋಱದರು] (ತೊರರಾ. ೪-೫-೧೧). **ತೊಱಿಸು**: ೧. ಅವನ ಮಾತಾಪಿತರ ತೊಱಿಸಿ[ಪಾಠಾಂ. ತೊಲಗಿಸಿ] ಪ್ರೀತಿಪಡಿಸಿ ಹಣವ ಸೆಳೆದು ರೀತಿಗೆಡಿಸಿ (ಪುರಂದ. ೨-೧೬-೨). ೩. ಕುಗ್ಗಿಸು; ಕಡಿಮೆಮಾಡು: ಕರ್ಪೂರಕ್ಕುಳ್ಳ ಗುಣಂಗಳಂ ತೊಱಿಸಿ ಮಲ್ಲಿಗೆಯೊಳ್ ಸಮನಾಗಿ ತೋರ್ಪ ನೀರುಳ್ಳಿಯ ಗಡ್ಡೆಯಂ . . . ಮಲ್ಲದ ಮಾನವನೇನ ಬಲ್ಲವಂ (ಸೂಕ್ತಿಸು. ೧೦-೯೩). [ ತೊಱೆ$_1$ + – ಇಸು$_3$ ]

**ತೊಱೆಯೊಡೆಯ** (ನಾ). ನದಿಯ ಒಡೆಯ,– ಪ್ರಭು; ಸಮುದ್ರ: "ಪಾರಾವಾರ ಶಬ್ದಂ ತೊಱೆಯೊಡೆಯನೆನಲ್" (ಶಬ್ದಾನಿ. ४೦); ಎಱಗಿದ ನಿಱಿಮುಗಿಲೊಳ್ಳಿಱಿ ಮಿಱುಗುವ ಮಿಂಚುಗಳನುಱಿದು ಪಿಡಿದನೊ ಕಡುಪಿಂ ತೊಱೆಯೊಡೆಯಂ ತೆರೆಗೈಗಳಿನುಱಿದೆನೆ ಕವಿಮ್ಮಾನ್ಸಳೇಂ ಮನಂ ಗೊಳಿಸಿದಪೋ (ರಾಜಶೇ. ೧-೯೯). [ ತೊಱೆ$_2$ + ಒಡೆಯ ]

**ತೊಱೆವನಿ** (ನಾ). ಪ್ರವಾಹವಾಗಿ ಹರಿಯುವ ಹನಿ: ಒಱೆವನಿಗಳೆಂದಿರ್ದನಿ ಮುಸ್ತಕವನಿ ತೊಱೆವನಿಗಳನಾಂತು ಬಿಡದೆ ನೆಱೆ ವಿಶ್ವರೂಪಾದಂತೆ ಸಂತತಧಾರೆ ಸುರಿದುದೀಗಳೆಯುಳಿಯೊಳಗೆ (ಮೋಹತ. ४-೩೯). [ ತೊಱೆ$_2$ + ಪನಿ$_2$ ]

**ತೊಱೆವರಿ** (ಕ್ರಿ). ತೊರೆಯಾಗಿ ಹರಿ; ನದಿಯಾಗಿ ಪ್ರವಹಿಸು: ಕಱೆಯು ಬಱಗೆಱೆಯಾಗಲೀಕ್ಷಿಸಿ . . . ನೀರಿದೆ ಕೊಳ್ಳಿಯೆಂದು ಕಮಂಡಲವ ಮರುಗಿ ತೊಱೆವರಿದುದು (ಸಾಳ್ವಭಾ. ೩೦-೩೬). [ ತೊಱೆ$_2$ + ಪರಿ$_2$ ]

**ತೊಱೆವಳಿ, ತೊರೆವಳ್ಳಿ** (ನಾ). ಒಂದು ಊರಿನ ಹೆಸರು: ತೊಱೆವಳಿಯ × × × ಗಟಿದ್ದಿ (ಎಕ. VI, ಚಿಕ್ಕಮ. ೬೦-೨೦ ; 1058 ?). **ತೊರೆವಳ್ಳಿ**: ಪಡುವಣ ತೊರೆವಳ್ಳಿಯ ಬಾಸಂಬಾಳ್ಯಿಯೂರ ಮುಂದಣ ಕೆಱೆಯೊಳ್ (ಎಕ. IV,ದ್ಯುಸೂರು. ೩೬-೧೫; ಸು. 990?); (ಮೈಆರಿ. ೧೯೧೬, ೨-೧೫ ಸೋ). [ ? ]

**ತೊಱೆವಾಯ್** (ಕ್ರಿ). ನದಿಯನ್ನು ದಾಟು: ನಗುತ ತೊಱೆವಾಯ್ವಂಬಿ ಗರ ಗಂಡನೆಂಬ ಕೀಳ್ಪಗೆ ನಿಮಗೆ ನೈಜ (ಸಿಂಗಿರಾ. ४४-೧೧). [ ತೊಱೆ$_2$ + ಪಾಯ್$_1$ ]

**ತೊಱೆವು** (ನಾ). ಇಲ್ಲವಾಗುವಿಕೆ; ಬಿಟ್ಟುಹೋಗುವಿಕೆ: ವೀರನೆನಿಪಗ್ಗದ ಮಾತದು ದೂರವಾಯ್ತು ನಿಷ್ಠುರನಿವನೆಂಬ ಮಾತು ತೊಱೆವಾದುದು ಪೆಂಪಿನ ಮಾತು ಕೆಟ್ಟುದು (ಧರ್ಮಾಮೃ. ೧೩-೧೧೧). [ ತೊಱೆ$_1$ + – ವು. /ತಮಿ. ತುಱವು ]

**ತೊಱೆವೇಂಟೆ** (ನಾ). ನೀರಿನಲ್ಲಿ ಆಡುವ ಬೇಟೆ; ಮೀನು ಹಿಡಿಯುವಿಕೆ: ಇಂತು ವನ್ನತಿಕೆಯುಂ ಪಲವೇಂಟೆಯಾಡಿ ಕಾಡೊಡೆಯಂ ತೋಡಿಲ್ಲದ ತೊಱೆವೇಂಟೆಯಾಡಲು . . . ಪರ್ದೋಱೆಗೆಯ್ದು ಸಾರ್ದು (ರಾಜಶೇ. ೫-೧೧೪ ವ). [ ತೊಱೆ$_2$ + ಬೇಂಟೆ ]

**ತೊಱೆಹ, ತೊರೆಹ** (ನಾ). ತ್ಯಜಿಸುವುದು; ಬಿಡುವಿಕೆ; ತ್ಯಾಗ: ಸಂಕಾ ಕುಳಂ ಪುಲ್ಲೆಯೊಳ್ ತೊಱೆ[ಪಾಠಾಂ. ಟ]ಹಂ ಕ್ಷೀಣಮದಂಗಳೊಳ್ ಬಡತನಂ ಸ್ತ್ರೀಮಧ್ಯದೊಳ್ . . . ಅಲ್ಲದಿಲ್ಲ ಪೆಱತೇನಾರಯ್ವೊಡಾ ದೇಶದೊಳ್ (ಪುಣ್ಯಾಸ್ರ. ೧-೧೧೬). **ತೊರೆಹ**: ತೊರೆಹ; (ಅಧಿಕಾರ, ಹಕ್ಕು, ಬಾಧ್ಯತೆ, ಮೊ.ಗಳ) ವಿಧಿಗನುಸಾರವಾದ ಪರಿತ್ಯಾಗ (Abdication. ಇಂಕನಿ). [ ತೊಱೆ$_1$ + – ಹ$_2$ ]

**ತೊಱೊಗಂಗ** (ನಾ). (?) : ಸಂಸೆ ತೊಱೊಗಂಗಗೆ ಕಟ್ಟಿದ × ಡಿಯ . . . [ಯ]ದು (ಸಾಇಇ. XX, ೨೯-೨೨ ; 1044). [ ? ]

**ತೊಱ್ಱುಳಿದುಳಿ** 'ತೊಟ್ಟುಬಿದಂಬಿ' ನೋ.

**ತೊಟಕಲ್** (ನಾ). ತಿರುಗುವಿಕೆ; ಸುತ್ತುವಿಕೆ: "ತೊಟಕಲ್ ತೊಟಲ್ದುದು" (ಶಮದ. ಶಾ. ೧). [<ತೊಟಲ್$_1$ + – ಕಲ್$_4$ ]

**ತೊಟಲ್$_1$, ತೊಳಲ್$_1$, ತೊಳಲು$_1$, ತೊಟಲು** (ಕ್ರಿ). ೧. ತಿರುಗಾಡು; ಸಂಚರಿಸು; ಅಲೆದಾಡು: ಚರಿಗೆಪೊಕ್ಕಡವಿಯಂ ತೊಟಲ್ದಲ್ಲಿಯೊಂದು ಮರದ ಪೊಟಲೊಳಿರ್ದು (ವಡ್ಡಾರಾ. ೬೯-೬); ಅಂತು ಭರತೇಶ್ವರಂ

ಸಕಳಾಂತಃಪುರಸಹಿತಮಲ್ಲಿ ವಿಶ್ರಮಿಸಿ ವನಾಭ್ಯಂತರಮಂ ತೊಟಲೆ (ಆದಿಪು. ೧೧-೮೩); ಒಂದು ದಿವಸಂ ಯುವರಾಜನಿಂದಾಪ್ರಯುಧಮನೇಱಿ ಬೇಂಟೆಯ ವಿನೋದದಿಂ ತೊಟಲುತ್ತುಮಿರೆಯಿರೆ (ಕಾದಂಪೂ. ೬೧೭); ಈ ಕಾಂತಾರದೊಳ್ ವ್ಯಾಧರಾಗಡೆಯತ್ಯಾಗ್ರಹದಿಂ ತೊಟಲ್ವರ್ (ಪಂಚತಂ. ೯೭-೧೮); ಶಾಸ್ತ್ರದಪೇಕ್ಷೆಯಿಂದೆ ತೊಟಲುತಿರ್ದಂ ಧರಾಮಧ್ಯದೊಳ್ (ನೇಮಿಪು. ೩-೧೭೨); ನೀಂ ತೊಟಲದ ಪಟ್ಟಣಂ ಪುಗದ ನಂದನಂ . . . ಆವುದು (ಜಗವಿ. ೧೭-೧೨೩); ಗಗನದೊಳೊರ್ವರ್ಯುಂ ತೊಟಲುತಿರ್ಪ ವಿಯಚ್ಚರಸಂಕುಲಕ್ಕೆ . . . ಫಲಸಾರಮನಿತ್ತು (ಕುಸುಮಾ. ೯-೨೭). ೨. (ಸಂಸಾರಚಕ್ರದಲ್ಲಿ) ತಿರುಗು; ಸುತ್ತಿ ಬರು; ಭ್ರಮಣೆ ಹೊಂದು: "ತೊಟಲ್-ಭ್ರಮಣೇ" (ಶಮುಧಾ); ಬಗೆದೀಡಾಡೆ ದುರಂತ ದುಃಖತತಿಗಳ್ . . . ಇನ್ನೆಗಮೋರಂತೆ ತೊಟಲ್ದನಿಂ ತಿರಿಯಲಾಱೆಂ ಭವಾಂಭೋಧಿಯೊಳ್ (ಆದಿಪು. ೯-೬೦); ಅರ್ಧಚಕ್ರವರ್ತಿಯಾಗಿ ಭೋಗಂಗಳನುಂಡು ಮತ್ತಂ ಸಂಸಾರಚಕ್ರದೊಳ್ ತೊಟಲ್ದು ಕಡೆಯ ತೀರ್ಥಕರನಕ್ಕುಂ (ಚಾವುಂಪು. ೫೧); ಗಾಣದೆತ್ತಿನಂತೆ ನಿಯಮಂಗೆಟ್ಟು ತೊಟಲುತ್ತಿರದೆ ಆಲದ ಬಿಟಲಂತೆ ನೆಲಕ್ಕೆಱಗದೆ (ಧರ್ಮಾಮೃ. ೫-೯೯). ೩. ಸುಳಿದಾಡು; ಸಂಚಲಿಸು; ಹೊಳೆ: ಸುಭದ್ರೆಯ ರೂಪು ಕಣ್ಣಾಪಾವೆಯಂತೆ ಕಣ್ಣೊಳೆ ತೊಟಲೆ (ಪಂಪಭಾ. ೪-೬೯ ವ); ಕಣ್ಣೊಳ್ ತೊಟಲ್ವಂದದಿಂದಾ ನಿದ್ರಾಂಗನೆ ಸೂಱೆಗ್ಗೊಂಡಳಿರುಳೊಳ್ ತತ್ಖೇಚರಾಧೀಶನಾ (ಶಾಂತಿಪು. ೫-೮೧); ಪ್ರಿಯೆಯ ಭಂಗಿ ತೊಟಲ್ವುದೆನ್ನ ಚಿತ್ತದೊಳ್ (ಶೃಂಗಾರ. ೩-೩೮); ಎನ್ನ ಚಿತ್ತಮಂ ನೋಯಿಸೆ ಕಣ್ಗಳೊಳ್ ತೊಟಲುತಿರ್ದಪನಂಗಜಂ (ಲಂಹರಿ. ೮-೫೫); ೭ಲಸುವ ಮೆಯ್ಯುಮಾಗುಳಿಸು ವಾನನಮುಂ ನಯದಿಂ ತೊಟಲ್ವ ಕಣ್ಮಲರುಂ (ಪುಷ್ಪಪು. ೪-೧೫). ಪೆಣ್ಣಾ ಕಣ್ಣೊಳ್ ತೊಟಲೆ ಧೈರ್ಯಂಗೆಟ್ಟು ಬಾಯ್ಬಿಟ್ಟು ಕನ್ಯಾರತ್ನಂ ತನಗೆಂತು ಸಾಧ್ಯಮಪ್ಪುದೆಂದು ವಿಚಾರಿಸಿ (ಪುಣ್ಯಾಸ್ರ. ೩-೪೨ ವ); ೪. ಗಸ್ತು ತಿರುಗು; ಪಹರೆ ಮಾಡು: "ಗರವಟಿಗೆವಂದಂಗೆ ಮತಿಗೆಟ್ಟವಂಗಂ ತೊಟಲ್ದುದೆಂದೆಂಬ ನಾಮಂ" (ಸಂಜೀವ. ೧೪); ರವಿಕಿರಣನಿಕರದ ತೆಱದಿಂ ತೊಟಲುತ್ತುಮಿರ್ಪ ದಂಡಕನೆಂಬಾ ತಳಾಱಂ ಕಂಡು (ಧರ್ಮಾಮೃ. ೨-೧೨೭). ೫. ಹೋಗು; ಗಮಿಸು; ನಡೆ: ಇಡುವಂತೆ ಪುಯ್ಯಲಂ ತಮ್ಮ ಕರಾಗ್ರದೊಳ್ ತೊವಲನಾಂತು ನೆಟಲ್ಗೆ ತೊಟಲ್ದುವಾನೆಗಳ್ (ಬಾಧಪು. ೪-೮೨). ೬. ಸುತ್ತಾಡಿ ಪ್ರಚಾರ ಮಾಡು: ಆತಂಗೆಯಾತನ ಬೇಡುವುದೆಲ್ಲಮಂ ಕುಡುವೆನೆಂದು ತೊಟಲ್ದ ಗೋಸಣೆಯುಂ . . . ಅರಸು ಕೇಳ್ದು (ವಡ್ಡಾರಾ. ೫೦-೨೨). ೭. ಹುಡುಕು; ಶೋಧಿಸು: ಕುರುಡರ್ಕರ್ಬುಡರ ಬಟ್ಟೆಯುಂ ಪರಿಪರಿದುಂ ತೊಟಲ್ದುತೆಱದೆ (ಸಮುಪ.೧೦-೧೮೪); ಎಣ್ಬಟ್ಟೆಗಳೊಳ್ ನೃಪನಂ ಕಾಣ್ಬನ್ನಂ ತೊಟಲಿಮೆಂದು ... ಒಂದೊಂದು ದೆಸೆಗೆ ಪೊಱಮಟ್ಟಾಗಳ್ (ದಶಕು. ೪-೧೯). ೮. ಕಷ್ಟಪಡು; ಹಿಂಸೆಪಡು; ಸಂಕಟಗೊಳ್ಳು: ಮನದೊಳ್ ತೊಟಲುತ್ತಂ ತಾಂ ಮನಪೊಲ್ಲದೆ ತನಗೆ ಸೇವಮೆಂದನು ತೊರೆದಲ್ (ಕಾದಂಉ. ೫೦); ಮೂಱುಂ ಭುವನದೊಳಂ ತೊಟಲುತಿರ್ಪ ಜೀವಾವಳಿಯುಂ ಭುವನಾಗ್ರಕ್ಕೆಯ್ದುಸುವರ್ತಪತವಗೆ ಪಿರಿಯರಾ ಮಹಾತ್ಮರೆ ಜೈನರ್ (ಸಮುಪ. ೪-೯೫); ಚೊಚ್ಚಲ್ ಪೆಱುವಳಂತೆ ತೊಟಲುತ್ತುಂ (ಧರ್ಮಾಮೃ. ೧-೧೬೦); ಮೃಗಾವಳಿ ತೃಷೆಯಿಂ ತೊಟಲ್ದು ಪರಿತಾಪಮನ್ಯೆದೆ ವನಾಂತರಾಳಮಂ ಬಳಸಿ ದವಾನಳಂ ಬಳಸಿತುಹ ಮರೀಚಿಮರೀಚಿಸಂಚಯಮುಂ (ಉದ್ಭಟ. ೯-೮೪): ಎರೆವರ್ ತಮ್ಮಯ ಬಡತನದಿರವಿಂಗೆ ತೊಟಲ್ವರ್ (ದಶಕು. ೬-೧೧೫); ಈ ಪರಿಯ ತೊಟಲುತ್ತುಮುವಸರದೊಳಿಾನ್ ತಳ್ವಿ ಬಿಡುವಾಗಿ ಪರಿದೆನ್ (ಅಂತಿಗೂ. ೧೧-೨೦೩). **ತೊಳಲ್$_1$**: ೧. ಅಱಿಸಿ ತೊಳಲಿದರಿಲ್ಲ . . . ತಪಸ್ಸ ಮಾಡಿದರಿಲ್ಲ ಅದು ತನ್ನ ತಾನಹ ಕಾಲಕ್ಕಲ್ಲದೆ ಸಾಧ್ಯವಾಗದು (ಮುಹಾದೇ. ಬ. ೬೪-೧೫೭); ಕೂಡ ಪಡೆಯದೆ ತೊಳಲ್ವ ನವಿಲ ತಂಡಂಗಳಂ . . . ನೋಡುತುಂ ಕೊಂಡಾಡುತಿರ್ದನಾ ವನದೊಳಗೆ (ನಂಬಿರ. [illegible]); ಸತತಮುಂ ಕಾಲು ನಿಲ್ಲದೆ ತೊಳಲ್ವ ಸೂರ್ಯನು ದೈವ[illegible] (ಬಸಪು. ೫೪-೧೨); ಬನದೊಳು ಬೇರು ಬಿಕ್ಕೆಯನಱಸಿ ತೊಳಲ್ವು[illegible] ಸಾಲದೇ (ಕುಮಾವ್ಯಾ. ೯-೪೦); ಅಱಿಸಿ ಕಾಲ್ಗೆಱಗುವೆನೆನುತದ್ದು ತ[illegible] ತರಹರಿಸುತ ತೊಳಲ್ದಳಾಲಯವ (ಮೋಹತ. ೨೭-೪೯). ೨. ತ್ರೇತೆಯುಲಿ ರಘುರಾಮನಾಮದಿ ಸೀತೆಯಂ ಹೋಗಾಡಿ ದಶಶಿರದಾತನಿಂ ಬ್ರಹ್ಮತಿಗೆ ಸಿಕ್ಕಿ ತೊಳಲ್ದಱಸುತಿರನೇ (ಬಸಪು. ೫೪-೩೯); ಶಿವಪದವನಱಿಯದ ತೊರ್ಳಲ್ವರಿಂತು ಭವಾರ್ಣವದೊಳ್ (ಪದ್ಮರಾ. ೧೧-೧೭೭). ೫. ನೆಳಲ ನುಂಗಿದ ಮಾತ್ರದಿಂದ ಬಾನೆಡೆಯೊಳಂ ತೊಳಲಲಱದುದು ಪದಂ (ವರಿಶಾ. ೫-೧-೫೭). **ತೊಳಲು$_1$**: ೧. ಬೆಳುದಿಂಗಳು ಬಿಸಿಲಾಯಿತ್ತು ಕೆಳದಿ ಹೊಳಲ ಸುಂಕಿಗನಂತೆ ತೊಳಲುತ್ತಿದ್ದೆನವ್ವ (ಮುಹಾದೇ. ಬ. ೪೩-೧೦೦); ಆಗಮಂಗಳ ಹಿಂದೆ ತೊಳಲದಿರು ತೊಳಲದಿರು (ಅದವ. ೨೧-೫೫); ತೊಳಲಿದನು ಮಧ್ಯಾಹ್ನ ಮೊದಲಾಗಿ ಕಡೆಹಗಲ ತನಕ (ಹಠಶಾ. ೧೧-೧೪); ವನಿತೆ ನಿಮ್ಮೊಡನೆಂತು ತೊಳಲುವಳನವರತ (ಕುಮಾವ್ಯಾ. ೧೭-೬೨); ನಿಮ್ಮಾಜ್ಞೆಯೊಳು ಲೋಕಂಗಳ ತೊಳಲಿದೆಂ (ಚಬಪು. ೩-೭); ಬಹುದೇಶಂಗಳ ತೊಳಲಿ . . . ಮಣಿಪುರಕೆ ನಡೆತಂದನು (ಜೈಮಿಭಾ. ೧೭ ಸೂಚನೆ). ೨. ತಮ್ಮ ಮಾನಸಿಕ ಪಾಪದ ಫಲವಾಗಿ ಅವರಿಬ್ಬರೂ ತಿರ್ಯಗ್ಯೋನಿಯಲ್ಲಿ ಆರಾರು ಸಲ ತೊಳಲಬೇಕಾಗುವುದು (ಕಾವ್ಯಸ. ೬೩); ಆ ಮಿಾನ ನುಂಗಿದುದು ಬಳಿಕೊಂದು ಮಿಾನದಂ ಮತ್ತೊಂದು ಮಿಾನನ್ನುಂಗಿತಾ ಮಿಾನ ನುಂಗಿತೊಂದು ತೊಳಲುತೊಂದೊಂದನೊಂದಿಂತು ನುಂಗಲ್ (ಜೈಮಿಭಾ. ೬-೮); ಯುವಮುಖಸರಸಿಜದೊಳ್ ನೃಪನ ಕಣ್ಗಳೇಂ ತೊಳಲಿ [ಪಾಠಾಂ. ಗ]ದವೋ (ರಾಜಶೇ. ೪-೧೧೫). ೭. ಅವನನಱಸಿದ ನಿರುತ ಮಾರುತತನಯ ಕಾಣದೆ ಪಳ್ಳವನು ತೊಳಲಿ (ಸಂಭಪ. ೨೩-೭೭); ಮದುಮುಗಂ ಕಾಣದಿರಲು . . . ಕೆರೆ ಕುಂಟೆಗಳನೆಲ್ಲ ತೊಳಲಿ ಪೊನ್ನಂಗೆ ದೊರಕಿದುದಳಲ ಪಾಲು(ಕಾಲೂರ. ೧೭೯-೪೦೫). ೮. ಹಿರಿದಾಗಿ ಮನದಲಿ ತೊಳಲಿದಿರಿ (ನಳಚ. ೨-೪೭); ಕಾಲುಗಂಜೆಗಳಲಿ ತೊಳಲಿ ಕೂಲಿ ಮಾಡಿ ಉಂಬ ಹೆಣ್ಣು . . . ಬಂದಳು (ಕವಿಸೋ. ೪೧-೯); ಹಲವು ಯೋಜನೆಗಳ ಸುಳಿಯಲ್ಲಿ ಸಿಕ್ಕಿ ಅವಳು ತೊಳಲುತ್ತಿದ್ದಳು (ತ್ಯಾಗಮು. ೧೬೪); ಹೇಗಾದರೂ ಆಸೆ ಫಲಿಸೀತೋ ಏನೋ ಎಂಬ ಕನಸಿನಲ್ಲೇ ತೊಳಲುವರು (ಶಿಕ್ಷದ. ೬೬೭). **ತೊಟಲು**: ೨. ತ್ರಿಪಿಷ್ಟನರೇಂದ್ರಂ ಭವವನಾಳಿಯೊಳ್ ತೊಟಲಿಯುಂ ತಾನಂತ್ಯತೀರ್ಥೇಶನಪ್ಪನುಮೆಂದಾ ಭರತಂಗೆ ಪೇಟ್ದನೊಲವಿಂ (ಶಾಂತೀಶ್ವ. ೨-೬೫).

[ದೇ. ॥ ತಮಿ. ಚುಟಲ್; ಮಲ. ಚುಟಲು; ತುಳು. ತುಲಿಪು, ತುಲಿಯು, ಸುಲಿಪು; ತೆಲು. ಸುಡಿಯು]

**ತೊಟಲ್$_2$**, **ತೊಳಲ್$_2$** (ನಾ). ೧. ಸುತ್ತಾಟ; ತಿರುಗುವಿಕೆ: (+). ೨. ದಿಗ್ಭ್ರಮೆಗೊಳ್ಳುವಿಕೆ; ತಬ್ಬಿಬ್ಬಾಗುವುದು: (+). **ತೊಳಲ್$_2$**: ೨. 'ಕಣ್ದೊಳಲ್$_2$' ಪರಾ. ೩. ಬವಣೆ; ದುಃಖ; ಚಿಂತೆ: ಕಣ್ಣನೆನ್ನ ಕಣ್ಣಲಿ ನೆಟ್ಟು . . . ತೋಡಿದಳು ತೊಳಲ (ಹೊಂಗನು. ೧೭-೧೭). [< ತೊಟಲ್$_1$]

**ತೊಟಲಿ** (ನಾ). ೧. ಸುತ್ತಲೂ ತಿರುಗುವಿಕೆ, 'ಕಣ್ಣಂದೊಟಲಿ' ಪರಾ. ೨. = ತೊಟಲಿಕಲ್ ೧.: ಕಾಯ್ದು ಶೃಂಖಲೆಗಳಿಂದಾಳಿಸಿಯುಂ ತೊಟಲಿಯೊಳ್ಬೀಸಿಯುಂ ಎಣ್ಣೆಯೊಳ್ಪಾಕಿಸಿಯುಂ ಇಂತನೇಕ ಪ್ರಕಾರಂಗಳಿಂ ಪೀಡಿಸಿ (ಪಶಾರ. ೧೪೯). [ತೊಟಲ್$_1$ + – ಇ$_3$]

**ತೊಟಲಿಕಲ್**, **ತೊಳಲಿಕಲ್ಲು**, **ತೊಟಲಿಕಲ್ಲು** (ನಾ). ೧. ಮರ ಅಥವಾ ಕಲ್ಲಿನಿಂದ ಮಾಡಿದ ಬತ್ತ ಒಡೆಯುವ ಕಲ್ಲು; ಬತ್ತ ಬೀಸುವ ಕಲ್ಲು;

ಒಡೆಗಲ್ಲು : "ತೊಟಲಿಕಲ್ಲಿನಲ್ ಸಂಘಟಗೆ ನಾವುಮುಕ್ಕುಂ" (ಸಂಜೀವ. ೫) ; ಪಟಯಿಗೆ, ತೊಟಲಿಕಲ್ [ಪಾಠಾಂ. ತೊಟರಿಕಲ್] (ಶಬ್ದಾನು. ೧೪೦ ವ್ಯಾಖ್ಯಾ). ೨. "ತಿರುವುವ ಗುಂಡು" (ಶ್ರೀಭ). ತೊಳಲಿಕಲ್ಲು : "ತೊಳಲಿಕಲ್ಲು = ಭತ್ತ ಒಡೆಯುವ ಕಟ್ಟಿಗೆ ಕಲ್ಲು" (ಜಾನಕೋ. ೬೮). ತೊಟಲಿಕಲ್ಲು : ೧. ಕೊಡಲಿ ಕತ್ತಿ . . . ತೊಟಲಿಕಲ್ಲ ಅಸುವೆಕಲ್ಲು ಕಲ್ಪೊರಳು ಕಲ್ಪೊನಕೆಯೆಂದಿವು ಮೊದಲಾಗೊಡೆಯುವಂ ಮೊದಲನೆಯ ಅನರ್ಥದಂಡಮುಕ್ಕುಂ (ಪಸಾರ. ೩೧೩). [ ತೊಟಲಿ$_1$ + ಕಲ್$_3$ ]

ತೊಟಲಿಕಲ್ಲು 'ತೊಟಲಿಕಲ್' ನೋ.

ತೊಟಲು 'ತೊಟಲ್$_1$' ನೋ.

ತೊಟಲ್ಕೆ, ತೊಳಲಿಕೆ, ತೊಳಲ್ಕೆ (ನಾ). ೧. ಅಲೆದಾಡುವಿಕೆ ; ಸುತ್ತಾಟ : ಚತುರ್ಗತಿಭ್ರಮಣರೂಪದಿನನೇಕಕ್ಲೇಶಂಬಡುವ ಜೀವರಾಶಿಯ ತೊಳ[ಟ]ಲ್ಕೆಯುಂ ಸಂಸಾರಮೆಂಬುದು (ಪಸಾರ. ೫೩೭). ತೊಳಲಿಕೆ : ೧. ತಳಗೊಳಿಸ ತಂಪಗಿವ ತೆಕ್ಕೆಯು ತೊಳಲಿಕೆಯು ತಾವರೆಯ ತನಿವರಿಮಳದ ವಿಸರದ ಹಸರದಲಿ ತೀಡಿದುದು ತಂಗಾಳಿ (ತೊರರಾ. ೨-೭-೩). ೨. ಗಸ್ತು ತಿರುಗುವಿಕೆ ; ಪಹರೆ : ಗರವೊಟ್ಟಿಗೆಯ ತೊಳಲಿಕೆ ತೆರಳಚಿತು ತೆಕ್ಕೀಸು ಕೋಟೆಗಳ (ಕುಮ್ಯಾಆ. ೨೦-೫೬) ; ಪಾಳಯುವ ಗಜಬಜಿಸ ತೊಳಲಿಕೆಯಾಳು ನೆರೆದುದು (ಕುಮ್ಯಾದ್ರೋ. ೮-೪೪). ೩. ತೊಳಲಾಟ; ಬವಣೆ: ಮುಳುಗಿದನಂದಿನಿರುಳಲಿ ಕರುಳುಗಳ ತೊಳಲಿಕೆಯ ತಾಪದಲಿ (ತೊರರಾ. ೭-೨೯-೩). ತೊಳಲ್ಕೆ: ಪುರಿ ಮಣಲೆ ಭರವಸಮುಂ ತೊಳಲ್ಕೆಯುಂ ಬಳಲ್ಕೆಯುಂ ಕಾಳಗದೊಳಗಮುಂ ಕನಸಿನೊಳಮಿಲ್ಲೆನಿಸಿ (ಎಕ. XI, ದೊಳಕಾ. ೨೦-೪೨; 1278 ?). [ತೊಟಲ್$_1$ + – ಕೆ]

ತೊಟಲ್ಚು, ತೊಳಲಿಚು (ಕ್ರಿ). ೧. ತಿರುಗುವಂತೆ ಮಾಡು ; ಸುತ್ತಾಡಿಸು ; ಅಂಗನೆ . . . ಎಟ್ಟಿರುತ್ತಿರೆ ಜನಂ ಕಂಡೆಯ್ದೆ ವಿಭ್ರಾಂತಿಗೊಂಡಿರಲಂತಂತ ತೊಟಲ್ಚಿ ವಿದ್ಯೆಗಳನಂಗಾಗಾರದತ್ತೊಯ್ಯೆ (ನೇಮಿಪು. ೮-೫೮) ; ವೇದೋದಯಮಘಕೃತಮುಂದೇದೊರೆಯನುಮಂ ತೊಟಲ್ಚುಗುಂ ಸಂಸ್ಕೃತಿಯೊಳ್(ವರ್ಧಪು. ೧೩-೨೦); ಅವಿತಶ್ರಮದಲ್ಲಿಯಳ್ಳಾಡೆ ತೊಟಲ್ಚಿ ತೂಳ್ದು ಕಡುಬಂ ಕೆದಱೆಟ್ಟ ಮಹಾಂಧಕಾರಮಂ ಕೂಡೆ ಗುಹಾಳಿಯಂ ಪುಗಿಸುತಿರ್ದುದು ಚಂದ್ರಿಕೆ (ಕುಸುಮಾ. ೧೦-೧೩). ೨. ಪ್ರಕಟಿಸು ; ಸಾರಂ : ಪೊಟಲೊಳಗೆಲ್ಲಂ ಗೋಸನೆಯಂ ತೊಟಲ್ಚಿ [ಪಾಠಾಂ. ತಗುಳ್ಚಿ]ದೊಡೆ (ವದ್ಯಾರಾ. ೭೮-೪). ತೊಳಲಿಚು : ೧. ಅಳಿಯನನು ಕಾಣದ ವಿದರ್ಭನು ತೊಳಲಿಚಿದನನುಚರರ ನಾನಾ ಹಳುವದಲಿ ಹಳ್ಳಿಯುಲಿ (ತೊರರಾ. ೩-೨-೧೭). [ ತೊಟಲ್$_1$ + – ಚು$_1$ ]

ತೊಟಲ್ತರ್ (ಕ್ರಿ). ಸುತ್ತಾಡಿ ಬರು ; ಅಡ್ಡಾಡು : ಮೃಗಯಾವ್ಯಾಜದಿನೊರ್ವ ಶಂತನು ತೊಟಲ್ತರ್ಪಂ ಪಳಂಚಲ್ಕೆ ತನ್ಮೃಗಶಾಬಾಕ್ಷಿಯ ಕಂಪು ತಟ್ಟಿ ಮಧುಪಂಬೋಲ್ ಸೋಲ್ತು (ಪಂಪಭಾ. ೧-೭೦) ; ಕುಂದದ ಮುಗುಳ್ಗಳುಮಸುಗೆಯ ಕೆಂದಳಿರ್ಗಳುಮಬ್ಜದಲರ್ಗಳುಂ ಬೆರಸು ತೊಟಲ್ತಂದಪುವು ತಮಾಳಲತೆಗಳೆಂದಮರರ್ ನೋಡೆ ಚರಿಯಿಪರ್ ವನಚರಿಯರ್ (ವರ್ಧಪು. ೧೦-೧೯). [ ತೊಟಲ್$_1$ + ತರ್ ]

ತೊಟಸು$_1$, ತೊಳಸು$_3$ (ಕ್ರಿ). ೧. (ನೀರನ್ನು) ಕದಡು ; ಅಲ್ಲಾಡಿಸು ; ಕಲಕು : ಆಟೋಪದಿಂ ಪೊಕ್ಕು ಸಾಗರಮಂ ಕೂಡೆ ತೆರಳ್ಚಿದಂ ತೊಟಸಿದಂ ತುಳ್ಕಾಡಿದಂ (ಜಗವಿ. ೭-೧೮). ೨. (ಸೌಟಿನಿಂದ ಸಾರು ಮೊದಲಾದುವುಗಳನ್ನು) ತಿರುಗಿಸು ; ತಿರುವು ; ಗೊಟಾಯಿಸು : ಬ್ರಹ್ಮಾಂಡಮೆಂಬ ಕೊಪ್ಪರಿಕೆಯ ಮಧ್ಯದಲ್ಲಿ . . . ಮಾಸಋತುಗಳೆಂಬ ಸಟ್ಟುಗದಿಂ ತೊಟಸುತ್ತುಂ ಭೂತಂಗಳಂ ಪಚನದುತಿರ್ದನಿಂತೆಂಬುದೆ ವಾರ್ತೆ (ಪಂಚತಂ. ೭೫-೫) ; ಮಸಣದ ಕಿಚ್ಚಿನಿಂ ನರಕಪಾಲದ ಭಾಂಡಮನಿಟ್ಟು ಮಜ್ಜೆಯ ರಸವೆಸರಾಗೆ ಕೀಲಿಗನ ಪೆಂಡತಿ ತಾಂ ತೊಟಸುತ್ತ ಮೂಳೆಯೊಳ್ (ಧರ್ಮಾಮೃ. ೧೧-೧೮೨) ; ಆತಕ್ಕಿಯುಂ ಪೊಯ್ದು ತೊಟಸಿ ಕುದಿ ಬರಲೊಯ್ಕನೆ ಮೇಲುರ್ಬಿದ ನೊರೆಯುಂ ತೆಗೆದು ಬಿಸುಟು (ದಶಕು. ೧೨-೧೨೧ ವ). ೩. ಹೊಟ್ಟೆ ಕಲಕು; ಓಕರಿಕೆ ಬರುವಂತಾಗು : (ಕ). ೪. ಕ್ಷೋಭೆಗೊಳ್ಳು ; ಕ್ಷೋಭೆಯುಂಟಾಗು : ಅಂಗನೆಯಂ ಪಿಡಿದೊಯ್ದರೆಂದು . . . ಪುಯ್ಯಲ ಗಾವಳಿ ಕಯ್ಯನಿಟ್ಟುದೀ ತೊಟಸಿದ ಪಾಂಗೆ ಕಟ್ಟಲೆ ಕಟಂದಲೆಯಾದುದು ಕೂಡೆ ಪಟ್ಟಣಂ (ಅನಂಪು. ೧೧-೭೩). ೫. ಹುಟ್ಟುಹಾಕು; ದೋಣಿ ನಡೆಸು: ನೆತ್ತರ ತೊಱೆಯುಂ ಮರುಳ್ತೊಳಸಿ ಪಾಯಿಸುತಿರ್ದುವು (ಪಂರಾಮಾ. ೧೩-೭೭). ತೊಳಸು$_2$ : ೨. ಎಲ್ಲರ ಹೆಂಡಿರೂ ತೊಳಸಿಕ್ಕುವರು ಎನ್ನ ಗಂಡಂಗೆ ತೊಳಸುವುದಿಲ್ಲ (ಸರ್ವವ. ೭೪-೩೪೨) ; ಅಲಗನೊಡಲೊಳು ತೊಳಸಿದಂತಿರೆ ಬಳಲಿದನು ಭೂಪಾಲ (ಕುಮ್ಯಾದ್ರೋ. ೭೦೩. ಪ೦. ೨೮೨) ; ಕುದಿ ಬಂದಾಗ ಒವಸ್ನಾನ ಹಾಲ ಹುಯಿದದನು ಸಟ್ಟುಗದಿ ತೊಳಸಿ (ಸೂಪಶಾ. ೧-೪೦) ; ೩. ವಾಂತಿ ಬರೋ ಹಾಗೆ ಆಗುಲು. ಹೊಟ್ಟೆ ತೊಳಸುತ್ತೆ (ಮನೋಸಾ. ೫೮); ಅವನಿಗೆ ಹೊಟ್ಟೆ ತೊಳಸಿ ಬಂತು (ದಾದಾನ. ೭೨). ೬. ಸುತ್ತಾಡು; ಅಲೆ : ತೊಳಸದಿರು ಬ್ರಾಹ್ಮ್ಯವನು ಭಕ್ತಿಸ್ಥಳವ ಬೇಱೆಯ ಮಾರ್ಗವಹುದಿದು ತಿಳಿದು ನೋಡಾ ದರ್ಶನಂಗಳೆನಲ್ಕೆ (ಬಸಪು. ೩-೭೧); ಆ ನೃಪ ತಿಳಕನ ವಾಗ್ವೈಭವಕ್ಕೆ ಮೂಱುಂ ಜಗಮುಂ ತೊಳಸಿದೊಡೊರ್ವನೆ ಸಮನಾಗುಳಿದುದಱಿಂ ಶೇಷನೆನಿಪನಿನ್ನುಂ ಶೇಷಂ (ಧರ್ಮನಾ. ೩-೨೮). ೭. ಬಳಸು ಮಾತಾಡು; ಸುತ್ತು ಮಾತಾಡು : ತೊಳಸಲೇನೊರ್ವನಿಗೆ ಜನಿಸಿದ ಅಲಘುಮುನಿ ಮಾತಂಗನೆಂಬಗ್ಗಳಿಯನುದ್ಭವಿಸಿದನರಾ ಮಾತಂಗಿಯುದರದಲಿ (ಬಸಪು. ೫೭-೭೨). ೮. ಕಾದಾಡಂ; ಎದುರಿಸು: ಅಱಿದೆನಱಿದೆನೆಂದು ಮಱವೆಯ ತೋಟಿಯ ತೊಳಸುತ್ತ (ಮೋಳಿಮಾ. ೧೭೫-೭೭೦). ೯. ಕೀಳು ; ಕಳಚು (?) : ಕಾಳುಗೆಡೆದರೆಯುಗ್ನಿಯಾದರು ಕೀಳುವರು ನಾಲಿಗೆಯ ಕೃತಕವ ಮೇಳಯಿಸಿದರೆ ಸುರಪನಾದರು ಕಣ್ಣತೊಳಸುವರು (ಶಂಕದಾ. ೯-೭೪) : "ಕುಟ್ಟು" (ಶಂಕದಾ. ಕೋಶ).

[ ದೇ.॥ ತಮಿ. ತುಬ, ತುಟ್ಟು, ತುಬಾವು, ಚುಲವು ;
ಮಲ. ತುಟಯು ; ತುಳು. ತುಳಾವು, ಸುಲಾವು ]

ತೊಟಸು$_2$, ತೊಳಸು$_4$ (ನಾ). ೧. ಸುತ್ತಲೂ ತಿರುಗುವಿಕೆ ; ಪರಿಭ್ರಮಣ : (ಕ). ೨. (ಮನಸ್ಸಿನ) ಅಲೆದಾಟ ; ಚಂಚಲತೆ : (ಕ). ತೊಳಸು$_4$ : ೩. (ಕಣ್ಣು) ಹೊರಳುವುದು : ಮುಚ್ಚಿರ್ದ ಕಣ್ಗಳಂ ತೆರೆದು ತೊಳಸಿನ ಬೆಳ್ಪು ಚುಚ್ಚೆ (ಕಾಲೂರ. ೧೭೩-೩೮೮). ೪. ಘರ್ಷಣೆ; ತಿಕ್ಕಾಟ : ಅಱಿಯದುದನಱಿದಲ್ಲಿ ಮಱೆದು ಮಱದುದನಱಿದಲ್ಲಿ ಕಂಡು ಉಭಯದ ತೋಟಿಯ ತೊಳಸು ನಿಂದಲ್ಲಿ ನಿಃಕಳಂಕ ಮಲ್ಲಿಕಾರ್ಜುನಲಿಂಗದ ಅಂಗ ಕರತಳಾಮಳಕವಾಯಿತ್ತು (ಮೋಳಿಮಾ. ೯೩-೩೭೯) ; ಬಳಿಕಮುಗೆ ಬಲವದ್ವಿರೋಧದ ತೊಳಸು ಬಿದ್ದುದು ತೋಟಿಗಾಱದೆ ಜಲಧಿಮಧ್ಯದಲೂರ ಕಟ್ಟಿದೆವು (ಕುಮ್ಯಾಸ. ೨-೧೮). ೫. ತೊಡಕು ; ಸಿಲುಕಿಕೊಳ್ಳುವಿಕೆ ; 'ತೊಳಸುಗೊಳ್ಳು' ಪರಾ.

ತೊಳಸಾಗು = ಗೊಂದಲಗೊಳ್ಳು ; ಕೆಡು : ಯುಮನಂದನನ ನುಡಿ ಸಂಧಾನದಲಿ ಸಂಜನಿಸಿತಾದೊಡೆ ಕಾಣನವನಿಯ ಹೊರೆಗೆ ಹರಿವುಗಳ ಮನದೊಳನುಸಂಧಾನವಂತಕತನುಜನಲಿ ತೊಳಸಾಯ್ತು ತೋಟಿಯ ನೆನಹು (ಕುಮ್ಯಾಉ. ೬-೭). ತೊಳಸುಮೊಳಸು = ಗೋಜು ; ಸಿಕ್ಕು : ತಿಳಿಯ ಬಾರದು ಖಳರ ಕುಟಿಲದ ತೊಳಸುಮೊಳಸು (ಅಂಬಿಕಾ. ೨೦-೧೭).

[ <ತೊಟಸು$_1$ ]

ತೊಟ್ಟುಕತ್ತು (ನಾ). (?) : ಒಕ್ಕಲುಳಿದುಣ್ಣು ಕಾದುಪೊಂಗಿದು ಕಣ್ಗಟ್ಟು ತೊಟ್ಟುಕತ್ತುವೆ [ಕೈ] (ಮ್ಯಆರಿ. ೧೯೩೦, ೩೭-೧೦ ; ಸು. 800).
[ ಇದು 'ತೋಳ್ಕುತ್ತು' ಎಂಬುದರ ಅಪಲಿಖಿತವಿರ ಹುದೆ ? ]

**ತೊಟ್ಟಾಳ್, ತೊಳ್ತಾಳ್** (ಕ್ರಿ). ತೊತ್ತು ಮಾಡಿ ಆಳು ; ಪ್ರಭುತ್ವ ನಡೆಸು: ಸಿರಿಯುಂ ನೀನುಯ್ದು ತೊಟ್ಟಾಳ್ವುದು [ಪಾಠಾಂ. ಳು] ರಾಗದಿನೆನ್ನೊಳ್ ಸುಕವಿರ್ಪುದು (ಪಂಪಭಾ. ೮-೭೭). **ತೊಳ್ತಾಳ್**: ನೀನೆ ಆಳ್ಕಾಡಿಕೊಳಲಲ್ಲೆನಲ್ ಬಪ್ಪುದೇ ನೀನೆ ತೊಳ್ತಾಳ್ವ [ಪಾಠಾಂ. ತ್ತಾಳ್ವ, ತ್ತಾಳ್ದ]ಡಿನ್ನಲ್ಲೆನಲ್ ಬಪ್ಪುದೇ (ನಂಬಿರ. ೭-೧೫೦).

[ ತೊಟ್ಟು + ಆಳ್$_1$ ]

**ತೊಟ್ಟು, ತೊತ್ತು, ತೊರ್ತು, ತೊಳ್ತು** (ನಾ). ೧. ದಾಸಿ ; ಸೇವಕಿ: "ಪೋಟಾ, ಚೇಟಾ, ಚೇಟೀ, ದಾಸೀ, ಕುಟಹಾರಿಕಾ – ಈ ೫ ತೊಟ್ಟು" (ಹಲಾಯು. ೮೧-೩೩೫); ತೊಟ್ಟಿನುಟಿದಂತುಟಿದ ಮಹಾಪುರುಷರಜೀಯ ಮುಟಿದರೆ ಸಿರಿಯುಂ (ಕವಿರಾ. ೩-೧೭೫) : ಧರೆಯುಂ ಪಟ್ಟಿಕೆಯ್ದು ತೊಟ್ಟಿನುಟಿವಂತುಟಿದಂ ಸಾಮ್ರಾಜ್ಯಲಕ್ಷ್ಮಿಯುಂ ಚಕ್ರಧರಂ (ಆದಿಪು. ೪-೮೭) ; ನಿನ್ನ ತೊಟ್ಟಿರೊಳಿನಿತೇಕೆ ಭಕ್ತಜನವತ್ಸಲ ನಿರ್ದಯನಾದ (ಕಾದಂಪೂ. ೯೩೪) ; ಪೊಲೆಯರಾಡಿನ ಪೆಸರ್ ಮಾಣಿಕದೇವಿಯೆಂಬಂತೆ ತೊಟ್ಟಿನ ಪೆಸರ್ ಸಿರಿಯು ದೇವಿಯೆಂಬಂತೆ (ಧರ್ಮಾಮೃ. ೮-೧೭೭). ೨. ದಾಸ ; ಸೇವಕ : ತೊಟ್ಟೆಂದು ದಾಸನುಂ ದಾಸಿಯುಮುಕ್ಕುಂ (ಶಮದ. ಸ. ೩೩ ಪ್ರಯೋ). ೩. ಹಾದರಗಿತ್ತಿ ; ಜಾರೆ: ಮತ್ತಮೊಂದಡೆಯೊಳೊರ್ವರ ತೊಟ್ಟು ಲಲಿತಾಂಗು ಬಂದನಿನ್ನಾವಾತನ ತೋಟಿ ಪಿಂಗುವಿನಂ ನೆರೆವನೆಯೊಳಿರ್ದು ಬರ್ಪಮೇಟಿಮೆಂದು ತನ್ನಾಳ್ದಿಟ್ಟೆಯ ರಪ್ಪ ಬಧಿರಯರ್ಗಂ ಮೆಲ್ಲನೆ ಪೇಟ್ಟುದುಂ (ಧರ್ಮಾಮೃ. ೨-೯೪). **ತೊತ್ತು**: ೧."ಕುಟಹಾರಿ ಚೈಟಂ ಚೇಟಿ ದಾಸಿಯೆನೆ ತೊತ್ತಕ್ಕು" (ಮಂಗರಾ. ೯೦-೪); ಎಲೆ ತೊತ್ತೆ ನಿನಗಿನಿತು ಸಾಮರ್ಥ್ಯವನಾರ್ಮಾಡಿದರ್ (ಪಂಡಿತಂ. ೧೫೫-೩) ; ಪ್ರಭುದೇವರ ತೊತ್ತಿನ ತೊತ್ತಿನ ಮಱುದೊತ್ತಿನ ಮಗಳು (ಮಹಾದೇ. ಬ. ೭೯-೧೯೮) ; ಹೆತ್ತ ತಾಯಂ ಮಾಱಿ ತೊತ್ತ ಕೊಂಬರೆ (ಹದಕಾ. ೮-೭೭). ೩. ತೊತ್ತೇರಿಗುಂಟು ತಾಟಕಿಗುಂಟು ಹೆತ್ತ ತಾಯಿಗಿಲ್ಲವೀ ಕಾಲ (ಪುರಂದ. ೧-೧೩೦-೩). 'ತೊತ್ತುಬಡಿಕ', 'ತೊತ್ತುಬುದ್ಧಿ' ಪರಾ. **ತೊರ್ತು** : ೧. ಆ ದೇವರ ತೊರ್ತ್ತು (ಎಇ. XIII, ೩೨೦-೩೦ ; 1126). **ತೊಳ್ತು** : ೧. ವ್ಯಡ ತಾಂ ಭಿಕ್ಷವ ಬೇಡನೇ ಮಱಿಚೆ ತಾಂ ತೊಳ್ತುಗಳೆ . . . ನರರ್ ಪೂರ್ವದೊಳ್ ಪಡೆದಪ್ಪುಣ್ಣದೆ ಪೋಪರೇ (ಸೋಮೇಶ. ೩೨) ; ತೊಳ್ತಿಗೆ ಚಮ್ಮವಟ್ಟಿಗೆವಿಡಿದಂತೊಡ್ಡಿದೊಡ್ಡಣದ ಕಡುಗಲಿಗಳನು ಕೈದೆತ್ತದಂದದಿ ಹುಯ್ಯದೊಡೆ ಪಂಥವೆಲ್ಲಿಯದೆಮಗೆ (ನೇಮಿಸಂ. ೨೯-೭) ; ವರವಿಳ್ತು ನಿಮಗೆ ತೊಳ್ತುವೆ ಬಿಡಿ ಮರುಳ್ಗನಂ (ಮಹಾವಿ. ೬-೩೭). ೨. 'ಗಂಡುದೊಳ್ತು' ಪರಾ.

**ತೊತ್ತಿನ ಕೂಸು** = ದಾಸಿಯ ಪುತ್ರ; ಸೂಳೆಯ ಮಗ : ಪುಷ್ಪಾಸವವನ್ನು ಕಳುವ ತೊತ್ತಿನ ಕೂಸಾದ ಈ ದುರುದುಂಬಿ ತುಂಬಿಯು ಪೂಜ್ಯಳಾದ ಈಕೆಯ ಮುಖಕ್ಕೆ ಎರಗುವುದು (ಶಾಕುಂತ. ೯೦-೧೭). **ತೊತ್ತಿನ ತೊತ್ತು** = ಸೇವಕನ ಸೇವಕ : ನಿಮ್ಮ ತೊತ್ತಿನ ತೊತ್ತು ನಾನು (ಚನ್ನವ. ಶ. ೨೭-೬೦). **ತೊತ್ತಿನ ಮಗಳು** = ದಾಸಿಯ ಪುತ್ರಿ ; ಕೀಳು ಸೇವಕಿ : ಮನೆಯ ತೊತ್ತಿನ ಮಗಳ ಮ ಕ್ಕ ಳಿ ಗಿ ನಿ ತು ವು ೦ ಸರಿಯಾಗದೆನ್ನನವನಿಯೊಳುತ್ತಮ ಭಕ್ತ ನಾನೆಂದಾತ್ಮದೊಳು ನೆನೆದು (ಬಸವು. ೪೮-೨೭) ; ತೊಲಗು ತೊತ್ತಿನ ಮಗಳೆ ಮುಟ್ಟದಿರೆಳೆಯ (ತೊರರಾ. ೧-೧೧-೧೩). **ತೊತ್ತು ತೊಡಿಕೆ** = ಸೇವಕಿಯಂತೆ ಹೊಂದಿಕೊಂಡಿರುವವಳು : ಹೆತ್ತಯ್ಯನ ಮನೆಯಾ ತೆತ್ತಿಗಳು ನಾನಲ್ಲ ತುತ್ತಿನಾಸೆಗೆ ಬಂದಾ ತೊತ್ತು ತೊಡಿಕೆಯಲ್ಲಾ (ಶ್ರೀಕೃಪಾ. ೩೫). **ತೊಟ್ಟಿನ ಮಗ, ತೊತ್ತಿನ ಮಗ** = ದಾಸಿಯ ಮಗ : "ಗೋಪ್ಯಕ ೯ , ದಾಸೀಸುತ ೬–ಈ ೨ ತೊಟ್ಟಿನ ಮಗಂ" (ಹಲಾಯು. ೮೨-೩೪೭) ; ತೊಟ್ಟಿನ ಮಗನಧ್ಯಯನಮೆ ಬಾಟಿಸ್ತೆ ಮದಾತ್ಮಜರ ಬುದ್ಧಿಯುಮಂ ವೃದ್ಧಿಯುಮೇಂ ಬಾಟಿಸ್ತೆ ನಿನಗೆಂದಟಿಬುದ್ಧಿಲ್ (ಕಾಂತಿಪು. ೬-೬೪); ಗ್ರಾಸಕಿಲ್ಲದೆ ತೊತ್ತಿನ ಮಗನ ಮನೆಲುಂಡ (ಪುರಂದ. ೨-೧೧-೧). **ತೊಟ್ಟಿರ್, ತೊತ್ತಿರು** (ಬಹುವ) : ಎನ್ನ ಪರಿವಾರಮೆನ್ನ ತೊಟ್ಟಿರೆನ್ನ ಮಾಣಿಕಭಂಡಾರಂ . . . ಎಂದಿವ ಱೊಳ್ ಮೋಹಿಸಿದ ಬುದ್ಧಿಯನೊಡೆಯನಾಗಿಯಾರ್ತಧ್ಯಾನದಿಂ ಸತ್ತು (ಪದ್ಮಾರಾ. ೧೪೦-೨೧) ; ಸಗ್ಗಂಗಳೊಳಿರ್ಪ ದೇವಡಿತಿ ತೊಟ್ಟಿರೊಳಟ್ಟಿಯನಾಗಲೀವೆನೇ (ಪಂಪಭಾ. ೧೧-೪೫) ; ಶಾದಿದ್ದರಯ್ಯ ಷಡುವರ್ಗವೆಂಬ ತೊತ್ತಿರು ಮುಟ್ಟದಂತೆ (ಅಷಡಂ. ೨೭೭-೧೨೮೦) ; ನಾವಿನ್ನು ನಿಮ್ಮ ಶ್ರೀಪದಾಂಬುಜನಿತ್ಯಸೇವೆಯೊಳೋವ ತೊತ್ತಿರ ತೊತ್ತಿರಾಗಿರಲು (ಬಸವು. ೩೨-೪೭) ; ರಂಭೆಯೂರ್ವಶಿ . . . ಮೊದಲಾದ ಸುರಸತಿಯರೆನ್ನರಮನೆಯ ತೊತ್ತಿರುಗಳಾದರು (ಕುಮಾರ. ೧೩-೬೫).

**ತೊಟ್ಟುಮಾಡು** = ಸೇವಕನನ್ನಾಗಿಸು : ಎನ್ನಾನೆಯಿಂದೆ ಪಗೆಗಳ ಬೆನ್ನೆಲ್ವಂ ಮೆಟ್ಟಿ ಮುಱಿ ಸಪ್ತಾಂಗದ ಸೊಂಪನ್ನಿನಗೆ ತಂದು ಕುಡದೊಡೆ ನಿನ್ನಹಿತನ ಮನೆಗೆ ತೊಟ್ಟುಮಾಡುವುದೆನ್ನಂ (ದಶಕು. ೭-೫೦)

[ ದೇ.II ತಮಿ. ತೊಟುತ್ತೈ, ತೊಳ್ತು; ಮಲ. ತೊಳಿಲ್ = ಕೆಲಸ ; ತುಳು. ತೊಳಿಲ್ = ಕೆಲಸ, ಉದ್ಯೋಗ ; ತೆಲು. ತೊತ್ತು ]

**ತೊಟ್ಟುಗೆಲಸ, ತೊತ್ತುಗೆಲಸ, ತೊಳ್ತುಗೆಲಸ** (ನಾ). ಸೇವೆ ; ಊಳಿಗ : ಓರ್ವ ಸೋರ್ಕಿದ ತೊಟ್ಟು ತೊಟ್ಟುಗೆಲಸಕ್ಕರಮನೆಯಂ ಪುಗುವ ಪೂಜಮಡುವ ಸೂಟಿಯೊಳ್ (ಪಂಡಿತಾ. ೧೭೯-೪). **ತೊತ್ತುಗೆಲಸ** : ತೊತ್ತಿಂಗೆ ತೊತ್ತುಗೆಲಸವಲ್ಲದೆ ಅರಸರ ಸುದ್ದಿ ಎನಗೇಕಯ್ಯಾ (ಬಸವ. ೪೦೧) ; ಎಂಬತ್ತು ವರುಷಂಗಳು ಶಿವೈಕ್ಯರ ತೊತ್ತುಗೆಲಸಂ ಮಾಡಲು (ಬಸವು. ೨೭-೬೨) ; ಅರಸುಮಗಳನಾ ತೊತ್ತುಗೆಲಸಕ್ಕೆ ಪರುಠವಿಸಿದಿರೆ (ಕುಮಾರ. ೧೯-೩೩) ; ಹೊತ್ತು ಮೂಡಿ ಮುಳುಗುವನ್ನೆವರ ತೊತ್ತುಗೆಲಸವನೆ ತುಬ್ಬಿ (ಸಮ್ಯಕ್ತ್ವ. ೫-೨೨). **ತೊಳ್ತುಗೆಲಸ** : ಲೋಕವನಗಿವ ಕಾಲನೆಂಬ ದರ್ವೀಕರನ ದಾಡೆಯಂ ಕಿಳ್ತವಧಿವಿಧಿಗಳ್ ವರ್ಗೆ ತೊಳ್ತು [ಪಾಠಾಂ. ತ್ತು] ಗೆಲಸವನಿತ್ತು (ಪದ್ಮರಾ. ೨-೧೭ .)

[ ತೊಟ್ಟು + ಕೆಲಸ ]

**ತೊಟ್ಟುಗೊಡು, ತೊತ್ತುಗೊಡು, ತೊಳ್ತುಗೊಡು** (ಕ್ರಿ). ಪರಿಚಾರಕನನ್ನಾಗಿಸು; ಸೇವೆಗೆ ತೊಡಗಿಸು,–ಇಡು: ರಾಗೋದಯಮೆನ್ನನೋವದೆಟಿದೊಯ್ದೇಂ ತೊಟ್ಟುಗೊಟ್ಟತ್ತೊ (ಕಾದಂ. ೮೦). **ತೊತ್ತುಗೊಡು** : ತನುವನೀಶ್ವರಂಗೆ ಹಿಂಗದೊಪ್ಪಿಸುತ್ತ ತೊತ್ತುಗೊಟ್ಟು (ನಮಿನ. ದೇ. ೧೯೭-೧೨). **ತೊಳ್ತುಗೊಡು** : ಪುರಹರ ನಿಮಗೆನ್ನಂ ಸದಾ ತೊಳ್ತುಗೊಟ್ಟೆಂ (ರಕ್ಷಾಶ. ೭೮). [ ತೊಟ್ಟು + ಕೊಡು$_1$ ]

**ತೊಟ್ಟುಗೊಳ್, ತೊತ್ತುಗೊಳ್, ತೊಳ್ತುಗೊಳ್** (ಕ್ರಿ). ಊಳಿಗಕ್ಕೆ ಇಟ್ಟುಕೊಳ್ಳು ; ಸೇವಕನನ್ನಾಗಿ ಮಾಡಿಕೊಳ್ಳು : ದೆಸೆವೆಂಡಿರ್ಗೆ ಪಸದನಂಗೈದು ಬರ್ದಿಲವೆಣ್ಗಳಂ ತೊಟ್ಟುಗೊಂಡರ್ (ರಾಮಾಶ್ವ. ೧೪-೨೭). **ತೊತ್ತುಗೊಳ್**: ನಿನ್ನ ಕರುಣದ ಬಲವುಂಟೆನಗೆಂದು ಸಾಯಿದೇವನ್ನಂ ಬಲು ಸಲೆ ತೊತ್ತುಗೊಣ್ಣ ದಯಕೇಂ ಸಲೆವುಂಟೆ (ಸೌಇಇ.IX-i, ೨೯೭-೬೦; 1177) ; ದೇವ ಸಂಸಾರಂ ನೆಱೆ ಪುಗದ ಮುನ್ನ ನೀನೆಂದು ಬಂದೆನ್ನಂ ತೊತ್ತು[ಪಾಠಾಂ.ಳ್ತು]ಗೊಂಬೆಯೆಂಬುಮ್ಮಳಿಕೆಯಿಂದಳುವಂದದಿಂ (ನಂಬಿರ. ೨-೧೧). **ತೊಳ್ತುಗೊಳ್** : ಕೃಪೆಯೊಳೆನ್ನಂ ತೊಳ್ತುಗೊಂಡಾಳ್ದನಂ . . . ಕಂಡೆಂ ವಿರೂಪಾಕ್ಷನಂ (ಪಂಪಾಶ. ೩೭). [ ತೊಟ್ಟು + ಕೊಳ್$_1$ ]

**ತೊಟ್ಟುತನ, ತೊತ್ತುತನ** (ನಾ). ಸೇವೆ ; ಊಳಿಗ ; ಪರಿಚರ್ಯೆ : ನಿಜಜೀವಿತವುಮುಂ ತನ್ನುಮನಿರದಿತ್ತು ತೊಟ್ಟುತನಮುಂ ತಾಂ ಕೊಂಡುಂ (ಕಾದಂಬ. ೧೧೪). **ತೊತ್ತುತನ**: ಬೆಚ್ಚದೆ ಬೆದಱದೆ ತೊತ್ತುತನವ ಮಾಡಲು ತನ್ನನೀವ ಕೂಡಲಸಂಗಮದೇವ (ಬಸವ. ೧೪೪) ; ಕಂದ ನೀವಿರಲೆನಗೆ ಸವತಿಯ ತೊತ್ತುತನವಾಯ್ತು (ಸಂಭವ. ೫-೪೬). [ ತೊಟ್ಟು + –ತನ ]

**ತೊಟ್ಟುತೊಡರ್** (ನಾ). ಗುಲಾಮಗಿರಿಯ ಬಂಧನ; ದಾಸ್ಯಶೃಂಖಲೆ : ತೊಟ್ಟುತೊಡರನಿಱುಕಿಯೆನ್ನನಿಱುಯುತಿರ್ಪವನ್ (ಬದ್ಧಪ್ರ. ೧೧-೨೦೬). [ ತೊಟ್ಟು + ತೊಡರ್₂ ]

**ತೊಟ್ಟುವೆಸ, ತೊತ್ತುವೆಸ, ತೊರ್ತುವೆಸ** (ನಾ). ಊಳಿಗ ಸೇವೆ : ನೀಮಸಗಡೆಮಡಗದ ಬೆಸವ ತೊಟ್ಟುವೆಸನಂ ಬೆಸಸಿಂ (ಪಂಪಭಾ. ೯-೮೧); ಲವಣಾರ್ಣವದ ನಿಖಿಳ ವಸ್ತುಗಳಂ ಕಸ್ತೂರಿ(ಸಿ) ವಿಸ್ತಾರಿಸಿ ಪೆಸರ್ವೆ ಸರಿಖಳ ಪೇಟ್ಟವಟಯ್ಸ ವರಶನು ತೊಟ್ಟುವೆಸನಂ ಪೂಣ್ದಾಳಾದಂ (ಶಾಂತಿಪು. ೧೧-೧೦೫); ಇನ್ನನ ಸುಸತ್ವಗುಣಸಂಪನ್ನನ ಸತಿಗೆನಗೆ ತಗದು ತೊಟ್ಟುವೆಸಂ (ನೇಮಿಪು. ೧೬-೩೮); ನನ್ನ ಈ ಕದುಕಪ್ಪಂಗಳನ್ ನಿನ್ನ ಈ ತೊಟ್ಟುವೆಸಕಾಗಿ ಮಾಱುವೆಡೆ ನಾನ್ (ಬದ್ಧಪ್ರ. ೫೦-೧೧೧೩). **ತೊತ್ತುವೆಸ:** ಆಂ ತೊತ್ತುವೆಸದೊಳಿಪ್ಪೆಂ (ಬಂಪರಿ. ೯-೨). **ತೊರ್ತುವೆಸ.** 'ತೊರ್ತುವೆಸಗೆಯ್' ಪರಾ. [ ತೊಟ್ಟು + ಬೆಸ₁ ]

**ತೊಟ್ಟುವೆಸಗೆಯ್, ತೊರ್ತುವೆಸಗೆಯ್** (ಕ್ರಿ). ತೊತ್ತಿನ ಕೆಲಸವನ್ನು ಮಾಡು : ಊಳಿಗವಮಾಡು : ತೊಟ್ಟಿ ತೊಟ್ಟುವೆಸಗೆ[ಪಾಠಾಂ. ಕೆ]ಯ್ ಪೋ ಪೋಗು ನೀನೆಂದು ಬಯ್ವು (ಪಂಪಭಾ. ೭-೫). **ತೊರ್ತುವೆಸಗೆಯ್:** ತೊರ್ತುವೆಸಗೆಯ್ವುದ ಮಂಡಲನಾಥರಿಲ್ಲ (ಎಇ. XIII, ೮೮-೩೦; 1112). [ ತೊಟ್ಟುವೆಸ + ಕೆಯ್₁ ]

**ತೊಟ್ಟುಟ್, ತೊತ್ತಳ, ತೊತ್ತಳಿ, ತೊತ್ತಟ, ತೊತ್ತುಟ್, ತೊಳ್ತಳ** (ನಾ). ೧. ನುಗ್ಗುನುರಿ ; ಅಜಗಿಜಿ ; ಅಸ್ತವ್ಯಸ್ತವಾದ ಸ್ಥಿತಿ : "ತೊಟ್ಟುಟ್ (ತೊಳ್ಟುಟ್) = ಸೊಪ್ಪಾದುದು" (ಶಮ ದ. ಪರಿ. ೧); "ಸೊಪ್ಪಾದುದು ತೊಟ್ಟುಟ್" (ಕರ್ಣಾನಿ. ೭೮). ೨. ತಂಳಿತ; ತುಳಿಯುವಿಕೆ : ಅದಟರ ಚೆನ್ನಪೊಂಗರ ಸಬಂಗಳ ತೊಟ್ಟು[ಪಾಠಾಂ. ತ್ತು]ಟಿಯೊಳ್ ತೊಡಂಕಿ ನಿಲ್ಲದೆ (ಪಂಪಭಾ. ೮-೧೦೪); ಪರ್ವಿದಾ ಪಡೆಯ ತೊಟ್ಟುಟಿಯಿಂ ಗಿಡು ಬಳ್ಳಿ ಭೂರುಹಾವಳಿ ಪೊದಱುಳ್ಳ ಬಲ್ಲಡವಿ ಪೆರ್ವಯಲಾಯ್ತು (ಪುಷ್ಪಪು. ೫-೯೭). ೩. (ಆಲಂ) ಸ್ವಾಧೀನಪಡಿಸಿಕೊಳ್ಳುವಿಕೆ ; ಆಕರ್ಷಿಸುವಿಕೆ : ತೊಟ್ಟುಟಿಯುಮುಂಗಿಯುಂ ಬಗಿಯುಂ ಮಾಡಿ ಮನಮನುಱ ಸೆಱೆವಿಡಿದ ಸೀಯನಪ್ಪ ಗೇಯರಸಾಬ್ಧಿಪೂರದೊಳ್ ಮೂಡಿ ಮುಱುಗಾಡುತ್ತುಂ (ಶಾಂತಿಪು ೨-೨೨ ವ). **ತೊತ್ತಳ :** ೧. 'ತೊತ್ತಳತಂಳಿ' ಪರಾ. ೪. ರಭಸ; ವೇಗ : ಬಿರುಗಾಳಿಯ ತೊತ್ತಳದೊಳು ಬಂದೆ ಬಂಡೆ ಬಡಿ ಬಡಿಯುಲು (ನಡಬಂ. ೭೮-೭). **ತೊತ್ತಳಿ :** ೧. 'ತೊತ್ತಳಿಗೊಳ್' ಪರಾ. **ತೊತ್ತಟ:** ೧. 'ತೊತ್ತಟಿದುಟಿ' ಪರಾ. **ತೊತ್ತುಟಿ :** ೨. ನೋಡಿರೆ ಕರ್ಣನಿತ್ತ ಕನಕೋತ್ಕರರಾಶಿಯನಂದು ವಂದಿಗಳ್ ನಾಡೆಯುಮುಯ್ದು ಪೊತ್ತಡಕಲಾಱದೆ ಮಿಕ್ಕೊಡೆ ರಾಶಿಗೆಯ್ದಿರಲ್ ಕೂಡೆ ಮದೇಭರಾಜಿಘಟಕೋಟಿಯ ತೊತ್ತುಟಿಪೊಲ್ಲದಲ್ಲಿ ಬಟ್ಟೋಡೆ ನೆಲಂ ಸುವರ್ಣಮಯಮಾದುದು ತಚ್ಚಿಬಿರಾಂತರಾಳದೊಳ್ (ನೇಮಿಪು. ೧೧-೧೧೫). ೫. ಬಿಗಿತ : ಸವಿ ತಲೆಗಾದುದೀಯಧರದಿಂ ಪುಳಕಾಂಕುರ ದಾಱುಮಾಯ್ತು ಮೆಯ್ಗವಳ ಕುಚಕ್ಕೆ ಕರ್ಕಶತೆ ಜೀವನಮಾಯ್ತುಟಿ ದಂತಿರನ್ನ ಬಾಯ್ದುವರದೊಳೆನ್ನ ತೋಳ್ಗೊಣರ ತೊತ್ತುಟಿಯೊಳ್ ಕಡಿಕೆಯ್ದುದೆಂತು ಬಟ್ಟುವೆ ಪೊಣರ್ವೆನ್ನುರೋಪಟಿಯೊಳೆಂಬಪೊಲೀಕ್ಷಿಸುತಿರ್ದ ನಲ್ಲನಾ (ಲೀಲಾವ. ೧೬-೩೦). **ತೊಳ್ತಳ :** ೧. 'ತೊಳ್ತಳಂದುಳಿ' ಪರಾ.

**ತೊಟ್ಟುಟಿಮಾಡು** = ನುಗ್ಗುನುರಿ ಮಾಡು ; ಅಸ್ತವ್ಯಸ್ತಗೊಳ್ಳುವಂತೆ ಮಾಡು : ರಿಪುಸೇನೆಯುಂ ತುಟಿದು ತೊಟ್ಟುಟಿಮಾಡುವಂ (ಪಂಪಭಾ. ೧೩-೪೪); ಜನರಾಜಂ ವನವಾರಿಕೇಳಿ ವಿಭವಂ . . . ಶ್ರೀಯುಂ ಮದೀಯ ಕ್ರಿಯಾಬ್ಧಿನಿಯುಂ ತೊಟ್ಟುಟಿ ಮಾಡಿ ಕೀಟ್ಟಡಿಸಿದು (ಅನಂಪು. ೭-೫೭). [ <ತುಟಿ₁ ]

**ತೊಟ್ಟುಟಿದುಟಿ, ತತ್ತಟಿದುಟಿ, ತೊತ್ತಳಂತುಳಿ, ತೊತ್ತಳಂದುಳಿ, ತೊತ್ತಳತುಳಿ, ತೊತ್ತಳದುಳಿ, ತೊತ್ತಟಿಂದುಟಿ, ತೊತ್ತಟದುಟಿ, ತೊಳ್ತಳಂದುಳಿ, ತೊಱ್ತುಳಿದುಳಿ, ತೊರ್ತಳದುಳಿ** (ಕ್ರಿ). ಪುಡಿಯಾಗುವಂತೆ ತುಳಿ ; ನುಗ್ಗುನುರಿಯಾಗುವಂತೆ ತುಳಿ ; ಸೊಪ್ಪಾಗುವಂತೆ ಮಾಡು; ಮುದ್ದೆಯಾಗುವಂತೆ ಮಾಡು: ಸುಪ್ರತೀಕ[ಂ]ಕೆಯ್ಯಕಾಲ ಕೋಡೇಱನೊಳ್ ಬಲಮನೆಲ್ಲಂ ಜವನೆ ಜಿವುಟಿದುಟಿವಂತೆ ತೊಟ್ಟುಟಿದುಟಿದು (ಪಂಪಭಾ. ೧೧-೭೨ ವ); ರಾಗರಸದಾಗರಮಪ್ಪ ವಲ್ಲಭನ ಮನಮನಾಗಳಾಗಳೆ ತೊಟ್ಟುಟಿದುಟಿದು ಬಂದಳೆನಿಸಿ (ವರ್ಧಪು. ೭-೯ ವ). **ತತ್ತಟದುಟಿ :** ನಾಡಂ ದಾಟಟ್ಟು ಒಳ್ಪಿದರಂ ಪೊರೆದು ಕೂಟರಂ ತತ್ತಟದುಟಿದುಂ, ಬರ್ಕುಮಾತನಡಿಯಾಣತಿಯೊಳ ಸೇನೆ (ರಾಮಾಶ್ವ. ೧೨೦-೭). **ತೊತ್ತಳಂತುಳಿ:** ಒತ್ತಿದ ಜಗಳಕ್ಕೆ ಸುತ್ತ ಮುತ್ತಿಗೆಯಾಗಿ ತೊತ್ತಳಂತುಳಿದು ಕೊಲುವಾಗ ಉಳುವೆಯ ಕರ್ತ ಬಂದಾನು (ಸರ್ವಜ್ಞ. ೧೧೫೩). **ತೊತ್ತಳಂದುಳಿ :** ಮುಂದಲೆವಿಡಿದು ಕೆಡಹಿ ಪಾದಂಗಳಿಂ ತೊತ್ತಳಂದುಳಿದು ತಾಂಡವರೂಪಮಂ ಧರಿಸಿ ಕುಣಿವುತಿರೆ (ಚಲಪು. ೩೦-೬೨); ಧರೆಯೊಳಗುಳ್ಳ ಬಲ್ದೊರೆಗಳೆಲ್ಲ . . . ಪರಿತರೆ ತೊತ್ತಳಂದುಳಿದನಪ್ರತಿಮಂ (ಅಪ್ರತಿ. ೨೬-೨೦). **ತೊತ್ತಳತುಳಿ:** ಬುಧಜನಾಧಾರಂ ತೊತ್ತಳತುಳಿವಂ (ಬಿಜಾಕೆಶಾ. ೧೯೩೪, ಬಂಕಾಪುರ. ೩-೧೨; 934); ಅಧ್ಯೆರ್ಯ, ಭಯ, ಹೆದರಿಕೆ ತೊತ್ತಳತುಳಿದವು (ಕಕಂದ. ೧೩೮). **ತೊತ್ತಳದುಳಿ :** ಮಲೆವಶತ್ರುದ್ವಿಷತ್ಪುರಂ ತೊತ್ತಳದುಳಿದು ನಿಜ ಪ್ರಾಜ್ಯ ಸಾಮ್ರಾಜ್ಯಮಂ ತೋಳ್ವಲದಿಂ ನಿಷ್ಕಂಟಕಂ ಮಾಡಿದನಧಿಕಬಲಂ (ಎಕ. II, ೧೬೨-೨೨; 1123); ಗೂಳಿಯಾಗಿ ಹೋಗಿ ಎಲ್ಲರ ತೊತ್ತಳದುಳಿದು ಒಕ್ಕಲಿಕ್ಕಿ (ಕೂಸ್ವಸಂ. ೧೩೦-೨೧); ತೊತ್ತಳದುಳಿದನರಿಸೇನೆಸವನಮಂ ಬಸವ ಕುಂಜರನು (ಬಸಪು. ೫೯-೫೪); ಕದಳಿಯಾಸು ಮದಕರಿಯು ತೊತ್ತಳದುಳಿದಪೊಲು (ಕುವ್ಯಾಭೀ. ೪-೭೩); ವರ ಜತೇಂದ್ರಿಯರ ತೊತ್ತಳದುಳಿದ ಧೀರೋದಾತ್ತ ಜಯಯೆಂದು ಚಿತ್ತಜನನು ಹೊಗಳಿದರು (ಪ್ರೋಡಕ. ೧೭-೮). **ತೊತ್ತಟಿಂದುಟಿ :** ಕೋಪಾಟೋಪದಿಂ ಕೊತ್ತಟಿಂದುಟಿಯಲ್ಕೆಟ್ಟರೆ ರಾಸಭಾಕೃತಿಯಿನಾಗಳ್ ರೌದ್ರಮಂ ಬೀಱುತಂ (ಮಹಾನೀ ೬-೧೯); ಪಾರ್ವನಂ ತೊತ್ತಟಿಂದುಟಿದರ್ (ಚಕವಿ. ೬-೧೧೯); ತುಱುಗೆಱೆಯುವನಂ ತೊತ್ತಟಿಂದುಟಿದು ಬೆಂಗಳೂರವನಂ ಭಂಗಂಬಡಿಸಿ (ಚಿಕವಂ. ೫೭-೧೨). **ತೊತ್ತಟದುಟಿ :** ಹೀನಬಲನನಧಿಕಬಲಂ ತೊತ್ತಟದುಟಿದನೆಂಬ ಲೋಕದ ಪಟಿ ಪೊರ್ದದೆ ಮಾಣೆ ಧರ್ಮಯುದ್ಧದೊಳೆಸಗಿಂ (ಆದಿಪು. ೧೪-೧೦೨); ಕೊತ್ತಾಗಾಲಮಂ ತೊತ್ತಟದುಟಿದು (ಚಕವಿ. ೨-೨೯); ದುಱುದುಂಬಿಗುದುರೆ . . . ಪೊಕ್ಕು ಪೊಱದೋಂಟಮಂ ತೊತ್ತಟದುಟಿದು ಪಾಟ್ಗಿಡಿಕುಂ (ರಾಮಾಶ್ವ. ೧೫೨-೧೩). **ತೊಳ್ತಳಂದುಳಿ:** ಅಖಿಳ ಜೀವರಂ ತೊಳ್ತಳಂದುಳಿದುಬ್ಬುತ ವಾರಾಹನಿಂತು ಕೋಲಾಹಲಂ ಮಾಡಿ (ವೀಶೈಪು. ೩-೧೧-೧೭). **ತೊಱ್ತುಳಿದುಳಿ:** ಕಲಿ ತೊಱ್ತುಳಿದುಳಿದಿಕ್ಕೆ ಪರೆಯ ಭಾನೂದಯದೊಳ್ಕರ್ತ್ರಲೆಯನ್ನಿರೆ ರಿಪುಗಳ್ಕರ್ತ್ರಲೆವೆಸರಾದು ದಾತನೊಕ್ಕಲ್ವೆಸರುಂ (ಸಾಇಇ. XI-1, ೪೫-೫; 980). **ತೊರ್ತಳದುಳಿ:** ಕಾಲ್ದುಳಿಯೊಳೆಱಗೆ ತ್ರೋರ್ತ್ರಳದುಳಿವಂ ರಣರಂಗಭೈರವಂ ಗೋವಿನ್ದ (ಸಾಇಇ. XX, ೮೭-೨೮; ?). [ ತೊಟ್ಟುಟ್ + ತುಟಿ₁ ]

**ತೊಟ್ಟುಟ್ಟಿ, ತೊಳ್ಪುಟ್ಟಿ** (ನಾ). ದಾಸಿಯ ಪುತ್ರ; ತೊತ್ತಿನ ಮಗ : ಎಟ್ಟೋಗು ದೂತನಪ್ಪನ ಬೆಟ್ಟನ ನುಡಿಗೇಳ್ದುಮುಳಿಯಲಾಗದು ನೀನುಂ ಮೆಟ್ಟಟ್ಟು ವಿದುರನೆಂಬೀ ತೊಟ್ಟುಟ್ಟಿಯ ಮನೆಯ ಕೂಟ ನುಡಿಯಿಸೆ ನುಡಿದ್ಯೆ (ಪಂಪಭಾ. ೯-೫೮). **ತೊಳ್ಪುಟ್ಟಿ :** ಮೂರು ತಲೆ ತೊಳ್ಪುಟ್ಟಿ ತಾಯ ಮಗನೆಂದು (ಮೂರುನಾ. ೧೩೩-೧೧೧೬).

[ <ತೊಟ್ಟು + ಪುಟ್ಟು₁ + – ಇ₃ ]

**ತೊಟ್ಬುಟ್ಟು** (ನಾ). = ತೊಬ್ಬುಟ್ಟು: ನಾಲ್ಕುಂ ಗ್ರಹಂ ನೀಚ ಶತ್ರು ನಿವಾಸಂಗಳೊಳಕ್ಕ ನವಾಂಶಕದೊಳೊಂದಿರ್ದಂದು ತೊಟ್ಬು[ಪಾಠಾಂ. ಪ್ಪು]ಟ್ಟು (ಜಾತಕ. ೨೧-೨೧). [ <ತೊಟ್ಟು + ಪುಟ್ಟು$_2$ ]

**ತೋ, ತೊಯ್, ತೊಯ್ಯು, ತೋಯು** (ಕ್ರಿ). ತೋದ$_1$ (ಭೂತಕೃ) ತೊಯ್ದು, ತೋದು, ತೋಯ್ದು (ಭೂತನ್ಯೂ). ೧. ತೇವವಾಗು; ನೆನೆ ; ಹಸಿಯಾಗು : ಏಸೆಂಬೆಂ ಬಾಲ್ಯದೊಳ್ ಮೇಲಱಿಯದ ಮಲದಿಂ ಮೂತ್ರದಿಂ ಶ್ಲೇಷ್ಮದಿಂ ತೋದಾ [ಪಾಠಾಂ. ತೊಯ್ದಾ] ಸಾರೆಂದೇನುಮಂ ಭಾವಿಸದೆ(ರಕ್ಷಾಶ. ೪) ; ತೋದುದು ತೇರು ರಕ್ತದಲಿ (ಕುಮಾ್ಯದ್ರೋ. ೫-೫೫) ; ತೋದುದಂಬರತಳಂ ವಿಷದ ಲೋಳೆಗಳಿಂದೆ ತೀದುದಮರರ ಹರುಷವು (ಜೈಪು. ೪೩-೨೩) ; ಮಳೆಗಱೆದುದಿದೇತರ್ಕೆವಳ್ ತೋದೊಡೇ ಕುದ್ಯವಿಸಿತ್ತೋ ಪ್ರೀತಿ (ದಿವ್ಯಕ. ೭-೪೯) ; ಪಾದಪಗಳಡಿಗೆರೆಯ ಸಲಿಲವು ತೋದು ಕೊಂಬೆಗಳುಬ್ಬಿ ಪುಷ್ಪ ಸ್ವಾದುಫಲವೀವಂದದಲಿ (ಹಸಾರ. ೩-೧೩). ೨. ನೆನೆಯಿಸು ; ಒದ್ದೆಮಾಡು : “ತೋ–ಆರ್ದ್ರಕರಣೇ (ನೆನೆಯಿಸು) ” (ಶಮಧಾ) ; ಅರಗಿನರಮನೆಗುರಿಯಬಿಟ್ಟಂತರಚಿ ದಾನವ ವನಚರಂಗಳ ಸರಳ ಮಳೆಯಲಿ ತೋದನದ್ದಿದನವಮ ಮುಳುಗಿಸಿದ (ಕೌಶಿರಾ. ೩೨-೩೭). **ತೊಯ್** : ೧. “ತೊಯ್ (ತುಯ್)=ಸಾರ್ದ್ರತ್ವೇ” (ಶಮಧಾ) ; ಹಾಯ್ದ ಕರುಳಿನ ಮಿದುಳ ಜೋರಿನ ತೊಯ್ದ ರಕ್ತಾಂಬರದಿ ತಾನಿರಲ್ಕೆದಿ (ಕುಮಾ್ಯಕ. ೮-೪೧). ೨. ಪಳಮುಖನುಂ ಬೇಟೆಯುನೆಣ್ಣೆ ಯೊಳ್ ತೊಯ್ದು [ಪಾಠಾಂ. ತೋದು]ನವಾಗ್ರದಿಂ ತೊಟ್ಬು ನೆತ್ತಿವರೆಗಂ ಬಳಸಿಯುಂ . . . ಕಿಚ್ಚಂ ತಗುಳ್ಚಿ (ಪಮ್ಪರಾ. ೧೫೪-೭); ಕನಲ್ದ ಕೆಂಡದ ಮೇಲೆ ಪಱಿಯ ಬೇವಿನೆಣ್ಣೆಯೊಳ್ ತೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ (ಶಂಪಥಾ. ೩-೭೧ ಪ) ; ನೀಲಿಯ ರಸದೊಳ್ ಕರಡಿಯ ತೋಲಂ ತೊಯ್ದುಟ್ಟಿದ್ದ ಮಸಿಯೊಳದಱೊಳ್ ಪುದಿದತ್ತೀ ಲೋಕಮಕ್ಕುಮೆನಿಸಿತ್ತಾ . . . ತಮಸಂ (ಕಾವ್ಯಾವ. ೭೩೩) ; ಪೊಸ ಮುತ್ತಿನಾಯ್ದುಮರ್ದಿನೊಳ್ತೊಯ್ದಂತೆ ನೇರ್ಪಟ್ಟ ನಿರ್ಮಲದಂತಚ್ಛವಿ ಬೇಡಿದರ್ಗೆ ವರವೀವಂತಿರ್ಪವು (ಅನಂಪು. ೨-೧೪). **ತೊಯ್ಯು** : ೧. “ನೆನೆ = ತೊಯ್ಯು” (ಗಂಗಾಮ. ೧೯೦). **ತೋಯು** : ೧. ಬಿಸಜಾಕ್ಷಿಯರು ತೋಯ್ದು ಪೊಱಮಟ್ಟು ಬಂದಾಗ . . . ದೇಹಲಾವಣ್ಯಪರಿಪೂರ್ಣರಸ ಸುರಿವಂತಾದುದು (ಮೋಹತ. ೧೪-೫೭) ; ನೀನು ನೋಯೆ ಕಣ್ಣು ತೋಯೆ ರುದ್ರಭೂಮಿ ಈ ಜಗ (ಮಾನಸ. ೦೪-೧೫) ; ನೆಲವೆಲ್ಲಾ ಕಣ್ಣೀರಿನಿಂದ ತೋಯ್ದು ಹೋಗಿದೆ (ಮುಹಾಲ. ೧೦೪).

[ ದೇ. ‖ ತಮಿ. ತೋಯ್ ; ಮಲ. ತೋಯು ; ತೆಲು. ತೋಗು ]

**ತೋಂಟ, ತೋಟ$_1$** (ನಾ). ಹೂವು, ಹಣ್ಣು, ಕಾಯಿಪಲ್ಯೆಗಳು ಅಥವಾ ತೆಂಗು, ಅಡಿಕೆ ಮಾವು ಮೊದಲಾದುವುಗಳು ಬೆಳೆಯುವ ಭೂಮಿ ; ಬಾಗಾಯತ ಭೂಮಿ : ಶ್ರೀಪುರದಾ ದಣ್ಡಗಾಮುಣ್ಡರಾ ತೋಣ್ಟದಾ ಪಡುವಾಯೊನ್ದು ತೋಣ್ಟ (ಎಕ. IV, ನಾಗಮಂ. ೮೫-೭೭ ; 776) ; ಕಬನಿ ಮತ್ತಂ ಮಣ್ಣಿಯೊಲರ ಕಱಿಯ ಕಬಗಣ ತೋಣ್ಟಮುಂ (ಎಕ. IX, ನೆಲಮಂ. ೬೦-೧೨೫ ; 797); ಕಳ್ಳಿಯುಂ ನಂಬಿ ಕೌಂಗಿನ ತೋಂಟಮಂ ಕಡಿವ ತೋಂಟಿಗನುಮಂ (ಧರ್ಮಾಮೃ. ೮-೫೧) ; ಕುಱಿವಿಂಡು ಕಬ್ಬಿನ ಉಳಿವ ತೋಂಟ [ಪಾಠಾಂ. ಹೊಲ]ವ ಹೊಕ್ಕು ತಱಿನನಱಿಯದೆ . . . ಮೇದುವು (ಬಸವ. ೫೯೮) ; ಎಲವೊಯ್ಲಿಂದೆಸೆವಿಕ್ಷುಕಾಂಡರಸದಿಂ ತೋಂಟ [ಪಾಠಾಂ. ನಾಂದಿ]ಕ್ಕೆ ತಮ್ಮೊಳ್ ಪಳಂಚಲೆಪೊಳ್ಗೊಂಚಲ ಕಾಯೊಳುರ್ಕವೆಳನೀರಿಂದಂ ಬನಂಗಳ್ಗಗುಂದಲೆ ನೀರೂಟಮಿದೇಕೆ (ವರ್ಧಪು. ೧-೪೩) ; ಕಂಡವರ್ ಕಾಮಿಸೆ ಮಾಲೆಗಾಱರೊಸೆದೋವಿದ ಪೂವಿನ ತೋಂಟಮೊಪ್ಪುಗುಂ (ಗಿರಿಕ. ೨-೬೦). **ತೋಟ$_1$** : ಗಳೆಯ ಮಂತ್ರರ್ ೩ ಬೆದ್ದಲೆ ಮತ್ತರ್ ೫ ಅಡಕೆಯ ತೋಟದಲು ವರ್ಷಕ್ಕೆ ಮರದಲೊಂದಡಕೆ ಎಲೆಯ ಸುಂಕ (ಎಕ. VII, ಶಿಕಾರಿ. ೨೦-೧೭ ; 1032) ; ನಾಡಿಲ್ಲದರಸುಂ ಫಲಮಿಲ್ಲದ ತೋಟಮುಂ . . . ಒಪ್ಪಲಾರ್ಪವು (ಧರ್ಮಾಮೃ. ೦-೭೫) ; ತನುವ ತೋಟವ ಮಾಡಿ ಮನವ ಗುದ್ದಲಿ ಮಾಡಿ ಅಗೆದು ಕಳೆದೆನಯ್ಯ ಭ್ರಾಂತಿನ ಬೇರೊಡೆದು(ಅವಚಂ.೧೮೦-೮೧೨);ಮುಳಿದು ಕಬ್ಬಿನ ತೋಟದಲಿ ನರಿ ಹುಲಿಯಪೋಲ್ ಗರ್ಜಿಸಿತು (ಕುಮಾ್ಯಕ. ೧೩-೪೪); ಬನ್ನಿ ಓ ಬಾನಲೆವರೆ, ನಮ್ಮ ತೋಟಕೆ (ಅನಿಕೇ. ೨೦-೧) ; ತೋಟ ಮೂರು ಮೊಳ ಕಾಯಿ ಆರು ಮೊಳ (ಗಾದೆ).

[ ದೇ. ‖ ತಮಿ. ಮಲ. ತೋಟ್ಟ ; ತುಳು. ತೋಟ, ತೋಟೊ ; ಕೊಡ. ತೆಲು. ತೋಟ ; ಗಡಬ. ತೋಂಟ ]

**ತೋಂಟಕಂಡ** (ನಾ). ತೋಟದ ಭಾಗ,–ತುಣುಕು : ಪೊಳಪಡೆ ಪದಿಕೊರ್ಳಂ ಆರಾತೋಣ್ಟದಿಂ ಮೂಡಣ ತೋಣ್ಟಕಣ್ಡಮುಂ ಮಾರಿ ಬೆಱತಿಯಿಂ ಬಡಗಣ ಮಣ್ಣು (ಎಕ. IV, ಎಳಂದೂ. ೨೫-೭; ಸು. 925 ?).

[ ತೋಂಟ + ಕಂಡ$_1$ ]

**ತೋಂಟಖಂಡ** (ನಾ). = ತೋಂಟಕಂಡ : ಶ್ರೀ ದೇಕಬ್ಬೆ ಮಹಾದೇವರ್ಗೆ ಬಿಟ್ಟ ಪೊಂಬೊಲಂ ತೋಂಟಖಂಡಮುಮಂ (ಎಕ. IV, ಹೆಗ್ಗಡ. ೧೮-೩೩ ; 1067). [ ತೋಂಟ + ಖಂಡ ]

**ತೋಂಟವಾಳ, ತೋಟವಳ, ತೋಟವಾಳ** (ನಾ). ತೋಟದಲ್ಲಿ ಕೆಲಸ ಮಾಡುವವನು ; ತೋಟಗಾರ. ‘ತೋಂಟವಾಳತಿ’ ಪರಾ. **ತೋಟವಳ** : ಬಿನ್ನಪಂಗೆಯ್ದ ತೋಟವ [ಪಾಠಾಂ. ವಾ]ಳಂಗೆ ಪಸಾಯಿತ ಮನಿತ್ತು (ರಾಜಶೇ. ೧೦-೫ ಪ). **ತೋಟವಾಳ** : ಮೇಲಿನ ‘ರಾಜಶೇ’ ಪ್ರಯೋಗದ ಪಾಠಾಂತರವನ್ನು ನೋಡಿ. [ ತೋಂಟ + – ವಾಳ$_1$ ]

**ತೋಂಟವಾಳತಿ** (ನಾ). ತೋಟದಲ್ಲಿ ಕೆಲಸ ಮಾಡುವವಳು ; ತೋಟಗಾರ್ತಿ : ಇತ್ತಳರಸಗೊರ್ವ ತೋಂಟವಾಳತಿ ಹೊಂಗೇದಗೆ ಹೂವ (ಸೊಬಸೂ. ೩-೪೩). [ ತೋಂಟವಾಳ + – ತಿ$_1$ (<– ಇತ್ತಿ) ]

**ತೋಂಟವಾಳಿಗ, ತೋಟವಾಳಿಗ** (ನಾ). = ತೋಂಟವಾಳ : ಪುರವ ಪೊಗದ ಮುನ್ನ ತೋಂಟವಾಳಿಗನದನೊರೆಯಲು ಯುವರಾಜ ಮುಳಿದು (ವರ್ಧಚ. ೩-೬೩).**ತೋಟವಾಳಿಗ** : ತೋಟವಾಳಿಗ ಪೇಳಲಂದಾ ಬಿಸವಂದವನೇ ನೋಳ್ಪೆನೆಂದು . . . ಪೊಱಮಟ್ಟ (ಶ್ರೀಪಾಲ. ೩-೧೭).

[ ತೋಂಟವಾಳ + – ಇಗ ]

**ತೋಂಟವೆಸ** (ನಾ). ತೋಟದ ಕೆಲಸ,–ಕಾರ್ಯ. ‘ತೋಂಟವೆಸಂಗೆಯ್’ ಪರಾ. [ ತೋಂಟ + ಬೆಸ$_1$ ]

**ತೋಂಟವೆಸಂಗೆಯ್** (ಕ್ರಿ). ತೋಟದ ಗಿಡ, ಮರಗಳಿಗೆ ಆರೈಕೆ ಮಾಡು ; ತೋಟವನ್ನು ಕೃಷಿಮಾಡು : ಮಂದಾನಿಲಂ ತೋಂಟ ವೆ ಸ ಂ ಗೆ ಯ್ದ ಟ್ಟ ಱ ಂ ಪೆರ್ಚಿಸಿದ ವಿಚಕಿಳಂ ರಯ್ಯಮಲ್ಲಲ್ಲಿಗೆಲ್ಲಂ (ಚಂದ್ರಪು. ೧-೮೭). [ ತೋಂಟವೆಸ + ಕೆಯ್$_1$ ]

**ತೋಂಟ$_1$** ‘ತೋಟ$_1$’ ನೋ.

**ತೋಂಟ$_2$** ‘ತೋಟ$_2$’ ನೋ.

**ತೋಂಟಿಗ, ತೋಟಿಗ** (ನಾ). ತೋಟದ ಕೆಲಸ ಮಾಡುವವನು : ಅಂತಃಪುರಕಾಂತಾಸಂತತಿಲತಾಪ್ರತಾನಮಂ ಜಲಧರ ಧಾರಾಂತಾಭಿಷೇಕದಿಂ ತಳೆದಂ ತೋಂಟಿಗನಂತೆ ಸಂತತಂ ಯುವರಾಜಂ (ಶಾಂತಿಪು. ೮-೩೭) ; ಮದನಂ ಗಡ ಯೌವನವನಕ್ಕೆ ತೋಂಟಿಗನಾದಂ (ಅಜಿಪು. ೨-೩೧) ; ಕಳ್ಳಿಯುಂ ನಂಬಿ ಕೌಂಗಿನ ತೋಂಟಮಂ ಕಡಿವ ತೋಂಟಿಗನುಮಂ (ಧರ್ಮಾಮೃ. ೮-೫೧) ; ಸೊಂಪಿನಿಂ ಬೆಳ್ಪುವೆತ್ತಿರ್ದಿಂಗೋಲಂ ಪಣ್ತ ದಾಳಿಂಬಗಳನೊಲವಿನಿಂ ತೋಂಟಿಗಂ ಕೊಟ್ಟನೋರ್ವಂ (ಕಬ್ಬಿಗಾ. ೮೮) ; ಲೋಗರ ಕಣ್ಣಂಜಲ್ ತಾಗದಂತು ಬೆರ್ಚನಿಟ್ಟು ಪಕ್ಕಿಗಳಂ ಬೆದರ್ಚಲೊಡರ್ಚಿದ ತೋಂಟಿಗನೊಂದಾಯತಿಯುಂ ಕಂಡನಕ್ಕುಂ (ನಾಮಾರ್ಕ. ೮೫-೨೮).

ತೋಟಿಗ : ಸಮಸ್ತ ತೋಟಿಗರುಂ ಕೂಸೆಕಾಜರು ವೃಳಿಯ ಮೂನೂರ್ವರುಮಿರ್ದ್ದು . . . ಬಿಟ್ಟ ಧರ್ಮವಪ್ಪುದು (ಸೌಇಇ. IX-1, ೧೪೦-೩೩; 1136) ; ಬಾಳೆವಣ್ಣೂನೆಯ ಕಾಣಿಕೆಯಿತ್ತು ಭೂವರಗೊರ್ವ ತೋಟಿಗನೆಂದ (ಸೂಬಸೋ. ೩-೧೦) ; ಬಳಿಕಲಾ ತೋಟಿಗನ ಬುದ್ಧಿಗೆ ತಿಳಿವ ತೀಡುವೆನೆನುತ ಮಿಗೆ ಕಂಗಳಿಗೆ ಕಟ್ಟದಿರಾಗುತಲಿ ಶರಣಾರ್ಥಿಯೆಂದೆನಲು (ಪ್ರಭುಲೀ. ೧೧-೭) ; ತೋಟ ತೋಟಿಗಗಾಸೆ ಕೋಟೆ ಮನ್ನೆಯಗಾಸೆ (ಸರ್ವಜ್ಞ. ೧೯೦೬) ; ಅಗೆದು ಗೊಬ್ಬರವಿಕ್ಕಿ ನೀರೆರೆದು ತೋಟಿಗನು ಜಗಿವ ಮುಳ್ಳಿರಿತಗಳ ಸೈರಿಸೆ ಗುಲಾಬಿ ನಗುವುದೊಂದರೆನಿಮಿಷ (ಮಂಕುಕ. ೪೭೮). [ ತೋಂಟ + – ಇಗ ]

ತೋಂಟಿಗವೆಸ (ನಾ). ತೋಟಗಾರನ ಕೆಲಸ,–ಕಾರ್ಯ. 'ತೋಂಟಿಗವೆಸಂಗೆಯ್' ಪರಾ. [ ತೋಂಟಿಗ + ಬೆಸ$_1$]

ತೋಂಟಿಗವೆಸಂಗೆಯ್ (ಕ್ರಿ). ತೋಟಗಾರನ ಕೆಲಸ ಮಾಡು : ನನೆಯುಂಬುಂ ನನೆವಾಡಿ ಚಾಪಲತೆಯುಂ ನೀಳೇಕ್ಷಣಗಳ್ಗಿತ್ತು ಕೇತನಮುಂ ಖ್ಯಾತಿಯೊಳಿಕ್ಕಿ ತೋಂಟಿಗವೆಸಂಗೆಯ್ದಂಗಜಂ ತಿರ್ದ (ಅನಂಪು. ೧೦-೨೩).

[ ತೋಂಟಿಗವೆಸ + ಕೆಯ್$_1$ ]

ತೋಂಟಿಗಸಮಯ (ನಾ). ತೋಟ ಮಾಡುವವನನ್ನು ನೇಮಿಸುವುದು,–ಕರಾರು ಮಾಡಿಕೊಳ್ಳುವುದು : ಮೂಱು ಮತ್ತರ ತೋಂಟವೊಂದದಂ ಜೈನಪ್ರತಿಪಾಳಿಸುವರಾ ತೋಂಟಕ್ಕೆ ತೋಂಟಿಗಸಮಯಮಿಲ್ಲದನಾರೋರ್ವ್ವರ್ಮ್ಮಾರ್ಪ್ಪರವರ್ಬ್ಬಸದಿಗೆ ಸಮಭಾಗಮಿಕ್ಕಿಯುಣ್ಬರ್ (ಸೌಇಇ. XI-1, ೫೩-೭೩ ; 1007).

[ ತೋಂಟಿಗ + ಸಮಯ ]

ತೋಂಟಿಗೊಳ್ (ಕ್ರಿ). ಯುದ್ಧಕ್ಕೆ ತೊಡಗು : ರಾಜನೃಪನೊಳ್ ತೋಂಟಿಗೊಳಲೆಂದು ಎಡದೊಱೆಯೆಂಬ ಗಡಿಗೋಂಟೆಯೊಳ್ ಕಟ್ಟಿರ್ದ ಮೇಘಪುಷ್ಪಮೆಂಬ ಕೇಜಯುಂ ಕಳವಿನಿಂದ ಕೊಂಡೊಯ್ವುದುಂ (ಚಕವಂ. ೫೦).

[ ತೋಂಟ$_1$ (<ತೋಟ$_1$) + ಕೊಳ್$_1$ ]

ತೋಂಡಿಗೆಱೆ (ನಾ). ಒಂದು ಸ್ಥಳದ ಹೆಸರು : ಪಶ್ಚಿಮಾನ್ತ ಭಾಗ ತತಃ ತೋಣ್ಡಗೆಱೆ ದಕ್ಷಿಣಾನ್ತ ಭಾಗಃ (ಮೈಆರಿ. ೧೯೪೩, ೭೫-೧೧೫ ; 813). [ ತೋಂಡಿ ? + ಕೆಱೆ ]

ತೋಂಡಿ ಪರೀಕ್ಷೆ (ನಾ). ಮೌಖಿಕ ಪರೀಕ್ಷೆ : ಮೌಖಿಕ ಪರೀಕ್ಷೆಗೆ ತೋಂಡಿ ಪರೀಕ್ಷೆ ಎಂದೂ ಹೆಸರಿದೆ (ರೂಢಿ).

[ತೋಂಡಿ$_0$ ( P ←ಮರಾ. ತೋಂಡೀ) + ಪರೀಕ್ಷೆ ]

ತೋಕ (ನಾ). ಮಗ ಅಥವಾ ಮಗಳು; ಸಂತಾನ : "ಸೂನುಃ, ಸಂತತಿಃ . . . ತೋಕಂ, ತನಯಃ, ಸ್ತನಂಧಯಃ, ಅಪತ್ಯಂ – ಈ ೧೨ ಮಗವು" (ಹಲಾಯು. ೮೩-೩೪೩) ; ಬಿಜ್ಜಲೋರ್ವ್ವೀಶನ ತೋಕಂ ಸೋವಿದೇವಂ (ಸೌಇಇ. XV, ೧೪೨-೯ ; ?) ; ಘನಸಂಸಾರಸುಖಕ್ಕೆ ಸಾರಮಿದು . . . ಸುತಶಿರೋಜಾಘ್ರಾಣನಂ ಸೂನುಲೋಚನರೋಚಿಪ್ಪುರಿಚರ್ಚೆ ತೋಕತನುಲಿವ್ಯಕ್ತೋದ ಸಂದರ್ಶನಂ (ಕುಸುಮಾ. ೩-೫೮) ; 'ಜೀವತ್ತೋಕೆ' ಪರಾ. [ ಸಂ. ]

ತೋಕಿಸು (ಕ್ರಿ). ೧. ಹೊಡೆ ; ಪ್ರಯೋಗಿಸು ; ಬಿಡು : ಸಂಗರಕೆ ಬಿಲ್ಗೊಂಡು ಸರಳುಗಳ್ತೋಕಿಸುತಮತಿರಥರು ಪೊಕ್ಕು ಸೇನಾಜಲಧಿಯನ್ನೊರಸಿ (ತುರಂಗ. ೪೯-೪೧). ೨. ಬಾರಿಸು ; ಮೊಳಗು ; ಶಬ್ದವಾಗು : ವಿಕಶಂಖಧ್ವನಿ ಛಡಾಳಿಸಲ್ಬರುತಮಣೆಯಿಾ ಕ್ರತುವು ಮುಗಿದ ಪರಿಯುಂತರಮ್ಮೀಳುದಿನ ತೋಕಿಸಿತು ಪಗಲಿರುಳು (ತುರಂಗ. ೨೨-೪೬).

[ ತೋಕು$_1$ + – ಇಸು$_3$ ]

ತೋಕು$_1$ (ಕ್ರಿ). ೧. ಹೊಡೆ ; ಪ್ರಹಾರ ಮಾಡು ; ಪ್ರಯೋಗಿಸು : ತೋಕುವಂಬಿನ ಜೋದರೊಗ್ಗಿನೊಳೌಕಿದುವು ಸಾವಿರಮದೇಭಾನೀಕ ಬೊಬ್ಬೆಯ ಲಳಿಯ ತಾಕಿತು ಲಕ್ಕ ಪಾಯದಳ (ಕುವ್ಯಾಗ. ೧-೨೮) ; ಒದನೆ ನೂಕಿತು ತೋಕುವಂಬಿನ ತಡೆವ ಶೂಲದ ಪೊಯ್ವ ಖಡ್ಗದ ಬಿಡುವ ಚಕ್ರದ ಬೀಸುಗವಣೆಯ ಬಹಳ ಭಟನಿಕರ (ತೊರರಾ. ೫-೬-೧೧); ತೋಕುತಂಬನು ರಥದಿ ಕಲಿಬಲನಾಕರಸಿ ಮುಂದುಬ್ಬಿ ಬೊಬ್ಬಿಡೆ (ಅಂಬಿಕಾ. ೧೪-೪೩) ; ಪದ್ರಥರು ಸೊಕ್ಕಿ ಕೋಪಾಗ್ನಿಯಿಂ ತೋಕಿದರು ತನಿಸರಳ (ತುರಂಗ. ೫೩-೨೬). ೨. ಸುರಿಸು ; ವರ್ಷಿಸು : ತೋಕಿದವು ನಾರಾಚ ದೆಸೆದೆಸೆಯೊಳೆಕರಿಸಿದವೊ ಸರಳನೆನೆ (ಕುವ್ಯಾಆ. ೧೯-೧೩) ; ಮಾನವಸೂರ್ಯ ಭಾಪೆನುತ ತೋಕಿ ಪುಷ್ಪಾಂಜಲಿಯಲಮರಾನೀಕ ಕೈವಾರಿಸಲು (ನಿಘಾಗ. ೪-೧೦-೩೯) ; ಮರದ ಬುಡಕ್ಕೆ ನೀರು ತೋಕುತ್ತಿದ್ದ ರಾಮನಾಥನನ್ನು ಕರೆದು . . . ಗುಡುಗಿದನು (ಮೂರುದಾ. ೩೩). ೩. ಹೊರಹಾಕು ; ಚೆಲ್ಲು ; ತುಳುಕು : ನೆಱೆ ತೋಕಿದನು ಗಂಧರ್ವ ಜಲಧಿಯನೊಂದು ನಿಮಿಷದಲಿ (ಕುವ್ಯಾಆ. ೧೯-೧೬) ; ಹೊದಱಿ ಹರೆಗಡಿದೌಕಿದನು ತೋಕಿದನು ಸುಭಟರ ಜೀವವನು (ಕುವ್ಯಾದ್ರೋ. ೧೬-೨೫) ; ಕುಹಕದಲಿ ಮಲೆತರೆ ತೋಕುವೆನು ತನಿಗರುಳ ರುಧಿರವ ಶಾಕಿನಿಯರಿಗೆ (ನಿಘಾಗ. ೩-೬-೪೧). ೪. ಅಲ್ಲಾಡು ; ಬೀಸು : ತೋಕಿದವು ಸೀಗುರಿಗಳೆಡಬಲದಾಕೆಯಲಿ (ಕುವ್ಯಾಸ. ೧೫-೬೬). ೫. ಓಡು ; ಚೆದರು : ಬಲಜಲಧಿ ತೋಕಿದುದು ದೆಸೆದೆಸೆಗೆ ರಿಪುಬಲದ ಸುಭಟರಂ ನಾಕಮಂ ಕಾಣಿಸಿತು (ತುರಂಗ. ೪೯-೩೮).

[ ದೇ.II ತಮಿ. ತುಕ್ಕೈ, ತುವ್ವೈ ; ತುಳು. ತೊಯಿಪ್ಪ ; ಕುಯಿ. ತೋಗ ; ಕುರುಖ್. ತೋಕ್‌ನಾ ]

ತೋಕು$_2$ (ನಾ). ಕೋವಿ ; ಬಂದೂಕು : ಮಾದಪ್ಪ ಹಗಲ ಮೇಲೆ ತೋಕನ್ನು ಏರಿಸಿ ಸೊಂಟಕ್ಕೆ ವಡಿಕತ್ತಿಯನ್ನು ಸೆಕ್ಕಿಸಿ . . . ನರಿಬೇಟೆಗೆ ಹೊರಟ (ಹುಲಿವಾ. ೧೭). 'ತುಪಾಕಿ' ಪರಾ.

[ದೇ.II ತಮಿ. ಮಲ. ತೋಕ್ಕು ]

ತೋಕು$_3$ (ನಾ). ಉತ್ಸಾಹ (?) : ಜಂಝಾನಿಲ ಸುಳಿದೇಳ್ವ ರಭಸಮೋಯೆನೆ ಕಾದಿದರ್ಕಲಿಗಳಿಗೆ ಪೊಸತೆನಲು ಹಾಣಾಹಣಿಯಿಂದಲುಚ್ಚಳಿಸಿದರ್ . . . ಗಜಗಳಿಂ ತುಳಿಸಿದರ್ ತೋಕಿನಿಂದ (ಲಕ್ಷ್ಮೀಭಾ. ೬-೩-೩೩).

[ ←ಮರಾ. ತೋಕ್, ತೋಪ್ ; ಹಿಂ. ತೋಪ್ ; ಅರ. ತೌಕ್./ಸಂ. ತೋಪ ]

ತೋಕುಳಿ (ನಾ). ೧. ನೆನೆಸುವಿಕೆ ; ಅದ್ದುವಿಕೆ : (ಕ). ೨. ತೊಗಲು ಹದ ಮಾಡುವುದಕ್ಕಾಗಿ ನೆನೆಯಿಡುವ ಗುಳಿ : ಪರಳಯ್ಯಗಳ ತೋಕುಳಿಯ ನೀರ ತಂದು . . . ತಂಬುಗೆಗಳೊಳು ಮೊಗೆದು ಹರುಷದಿ ಮಧುವರಸಗೆಱೆಯಲು (ಪ್ರಭುಪು. ೯-೧೦೩) ; ಪೊಲೆಯರ ತೋಕುಳಿಯ ಕೊಳದೊಳಂಬುಜಮಂ ನೀನಲಸದೆ ಪುಟ್ಟಿಸಿದಂತೆ (ವೃಷವಿ. ೩೪-೧೦೮).

[ ತೋ + ಕುಳಿ$_2$ (<ಕುೞಿ$_2$) ]

ತೋಕೆ 'ಸೋಗೆ' ನೋ.

ತೋಕೆಗೋಧಿ (ನಾ). ಉದ್ದವಾಗಿರುವ ಒಂದು ಬಗೆಯ ಗೋಧಿ : ಓಟ್ಸ್, ತೋಕೆಗೋಧಿ (ವ್ಯಜಿಗಿ. ೧೦-೧೮೧) ; ತೋಕೆಗೋಧಿ, ಜವೆ ಗೋಧಿ, ರೈ ಎಂಬ ಚಿಕ್ಕ ಗೋಧಿ . . . ಇವು ಸಮಶೀತೋಷ್ಣ ವಲಯದ ಇತರ ಮುಖ್ಯ ಬೆಳೆಗಳು (ಭೂವಿವ. ೧೮೬).

[ ತೋಕೆ (<ಸೋಗೆ) + ಗೋಧಿ$_1$ (<ಗೋದುವೆ) ]

ತೋಚಿಕೆ (ನಾ). ತೋರುವಿಕೆ ; ಗೋಚರವಾಗುವಿಕೆ; ಹೊಳೆಯುವಿಕೆ; ಭಾಸವಾಗುವಿಕೆ : ಆ ಕತೆ . . . ರಂಜನೀಯವಾಗಬಹುದೆಂದು ಮನಸ್ಸಿಗೆ ತೋಚಿತು, ಆ ತೋಚಿಕೆಯ ಫಲವೇ 'ಕಡುಗಲಿ ಕುಮಾರರಾಮ' ಗ್ರಂಥದ ಪ್ರಕಟಣೆ (ನಂಜುಂಡ. III, ಪ್ರಸ್ತಾವನೆ).

[ ತೋಚು + – ಇಕೆ ]

(ಕಾವ್ಯಸಾ. ೫೫೧ ಪೂರ್ವಕ) ; ಅದಱಿಂ ನಿನಗಿದಟ ತೋಟಿ ಬೇಡ (ಪಂಪಶಂ. ೨೪೩-೨೩) ; ಬೇಟದ ಪದನೆಂದು ಕೂಟದ ಮುದವೆಂದು ನೋಟ ದೊಳ್ಗಂಡರಱಿವೊಡೆ ಪಡಿಪಿನ ತೋಟಿಯೇಕೆಲಗೆ ಬೆಲೆವೆಣ್ಣೆ (ಲೀಲಾವ. ೨-೩೪) ; ಕಾಮದೇವನ ತೋಟಿ ಬೇಡೆಂದು ಬರುವತ್ತಿ ಕರೆವ ಕಂದರ್ಪನ ಕಹಳೆಗಳೆಂಬಂತೆ ತಂಡ ತಂಡದಿಂ ಕೂಗುವ ಗಂಡುಗೋಗಿಲೆಗಳಂ (ಗಿರಿಕ. ೩-೧೦೩ ವ) ; ಅಸುರಕುವರನ ತೋಟಿ ಬೇಡ (ಕೌಶಿಶಾ. ೩೫-೧೮) ; ಈ ಕೊಡಲಿಕಾಜನ ತೋಟಿ ಬೇಡೆಂದ (ಕುಮಾ್ಯಸ. ೯-೪೮). ೫. ಸಾಮರ್ಥ್ಯ; ಪರಾಕ್ರಮ : ನಾನಾವ ಮಂತ್ರದ ತಂತ್ರ ತೊಡಕಿನ ತೋಟಿಯುಳ್ಳವಳು (ಕುಮಾ್ಯಅ. ೧೫-೨೩) ; ತೋಟಿಯಿಂದೊಳಪೊಕ್ಕು ಪುರಗಳೊಳಗೆ ಬಲು ಬೇಟೆಯ ನಾಯ ಹಿಡಿವರು (ಕುಂಠಾಸಾಂ. ೦೦-೩). ತೋಂಟಿ$_1$ : ೧. 'ತೋಂಟಿಗೊಳ್' ಪರಾ. ೬. ಮಾತ್ಸರ್ಯ ; ಹೊಟ್ಟೆಕಿಚ್ಚು : ಕವಿಶಿವನಸದು ತೋಂಟಿಯನುಳಿದ ಕವೀಶರ್ಗುಂಟೆನಿಸುತೆ ದಿವ್ಯ ಬೋಧೆಯಂ ದಕ್ಷಿಣೆಯಿಂ (ಹಾಲಾಸ್ಯ. ೪-೩-೬೧).

ತೋಟಿ$_2$, ತೊಟ್ಟಿ$_3$, ತೋಂಟಿ$_2$ (ನಾ). ೧. ಗ್ರಾಮಸೇವಕರಲ್ಲಿ ಒಬ್ಬ ; ಕಸಗುಡಿಸುವವನು; ಜಾಡಮಾಲಿ: ತೋಟಿ–ತಳವಾರ, ವೆಟ್ಟಿ, ಬಾರೀಕ ಅಥವಾ ಕೋಲುಕಾರನೆಂದು ಹೆಸರುಂಟು (ಗ್ರಾಮಾಕ. ೧) ; ತೋಟಿ (Scavengers)ಗಳೇ ಅವಶ್ಯವಿಲ್ಲದ, ಬಾವಿ-ಪಾಯಖಾನೆ (Bore-hole Latrines)ಗಳನ್ನು ಯಾರೂ ಮಾಡಬಹುದು (ಬಾಲಪ್ರ. I, ೨೯೬) ; ಇವನ ಹಣವೂ ತೋಟಿಗ ಪಾಲಾಗಬೇಕೋ ಏನೋ (ದೀಪದ. ೫೧). ೨. (ಅಲಂ) ಕೀಳಾದವನು ; ಅಲ್ಪ ; ಕ್ಷುದ್ರ : ಭಂಡರ್ಗೆ . . . ತೋಟಿ ತೊನ್ನರಿಗೆ ಕೊಂಡಯರ್ಗೆಲೆ ರಂಗ ನಿನ್ನಯ ಪದಪದ್ಮಗಂಡಲ್ಲಿ ಮೋಕ್ಷ ಸಿದ್ಧಾಂತ (ನೀತಿಸಾಂ. ೪೭-೩೩). ತೊಟ್ಟಿ$_3$ : ೨. ಇವನೆಂತಹ ತೊಟ್ಟಿ (ರೂಢಿ).ತೋಂಟಿ$_2$: ೩. ಸೇವಕ; ಪರಿಚಾರಕ: ಬಾಪ್ಪಣ್ಣಯ್ಯಙ್ಗೆ ನಾಲ್ಕು ಮತ್ತತೋರ್ಣ್ಟಿಗಳ್ಗೆ ನಾಲ್ಕು ಮತ್ತನೈವೇದ್ಯಕ್ಕೆ ನೆಲ್ಲ ಮಡಿ ಎರಡು (ಸೌಇಇ. IX-i, ೬೦-೧೫ ; 931). ⓟ 'ತೋಂಟಿ' ಎಂಬುದೇ ಮೂಲ ರೂಪವಾಗಿರಬಹುದೇ ?

[ ದೇ. ॥ ತಮಿ. ಮಲ. ತೋಟ್ಟಿ ; ತುಳು. ತೆಲು. ತೋಟಿ ]

ತೋಟಿ$_3$ (ನಾ). ೧. ಪಕ್ಷಿಯ ಚುಂಚು,–ಕೊಕ್ಕು. ೨. ಬಾಯಿ: ಇತ್ತಲು ಭೀಮ ಬಲುದುತ್ತುಗಳ ತೋಟಿಯಲಿ ಮರನ ಮುಱಿದಱಿಗಿದರೆ ಪುನರಪಿ ಮುಱಿದು ನೋಡಿದು ಬಹನು ನಿಲ್ಲೆನುತರೆಗೆಲಸ ಪೂರ್ೈಸಲೆಂದನು (ಕುಮಾ್ಯಅ. ೧೦-೩೩). ೩. ಪಾತ್ರೆ ಮುಂತಾದುವುಗಳ ಮೂತಿ : ನೀರು . . ಪಾತ್ರೆಗೆ ಹಚ್ಚಿದ ತೋಟಿಯೊಳಗಿಂದ ಹೊರಗೆ ಬೀಳುತ್ತದೆ (ಮುಂಬಯಿ. ೫-೮೨). [ <ಸಂ. ತ್ರೋಟೀ./ಮರಾ. ತೋಟೀ ]

ತೋಟಿಕಾಱ 'ತೋಟಿಗಾಱ' ನೋ.

ತೋಟಿಗ 'ತೋಂಟಿಗ' ನೋ.

ತೋಟಿಗಾಱ, ತೋಟಿಕಾಱ (ನಾ). ಯುದ್ಧಾಸಕ್ತ ; ಯುದ್ಧ ಮಾಡುವವನು : ಬಲು ತೋಟಿಗಾಱರು ತೊಡಗಿದರು ರಣವ (ನಿಘಾಗ. ೪-೯-೧೨). ತೋಟಿಕಾಱ : ನೋಟದವರರ ನಯನಗಳಿಗಲ್ಲಾಟವನೆ ಪರಿಚಿತ್ರ ಗತಿಗಳ ತೋಟಿಕಾಱರು ಹೊಕ್ಕು ತಾಗಿದರುಭಯಸೇನೆಯಲಿ (ಕುಮಾ್ಯಭೀ. ೪-೨೫) ; ಜಯದ ತವಕದ ತನಿಮನದ ಕಡುತೋಟಿಕಾಱರು ಕಾದಿದರು ಕಡುಗಿ (ಕುಮಾ್ಯಗ. ೬-೨೯) ; ಶ್ರೀಮಂನಾಡಪ್ರಭು ಗಡಿಯಂಕ ಭೀಮಂಕಟಕ ತೋಟಿಕಾಱ (ಎಕ. XI, ಹೊಳಲ್ಕೆ. ೧೦೨-೩ ; 1681 ?).

[ ತೋಟಿ$_1$ + – ಗಾಱ (< – ಕಾಱ) ]

ತೋಟಿಗಿತಿ (ನಾ). ತೋಟದ ಕೆಲಸದವಳು : ಸುಂಕಿಗಿತಿ. ತೋಟಿಗಿತಿ (ಶಬ್ದಾನು. ೧೯೦ ಪ್ರಯೋ).

[ ತೋಟಿಗ$_1$ (<ತೋಂಟಿಗ) + – ಇತಿ$_1$(< – ಇತ್ತಿ) ]

ತೋಟಿಗೈ (ಕ್ರಿ). ಯುದ್ಧಮಾಡು ; ಕದನಮಾಡು : ಪೊಯ್ವ ತೊಡಂಕುವ ತೋಟಿಗೈವ ಕೂಂಕುವ ನೆಱೆ ನೂಂಕಂವೇಳ್ಗಿಯ ಬಲಂ ಬಗೆಗೊಂಡುದು (ರಾಜಶೇ. ೧೩-೮೪). [ತೋಟಿ$_1$ + ಗೈ (<ಕೆಯ್$_1$) ]

ತೋಟಿಗೊಳು (ಕ್ರಿ). ಜಗಳವಾಡು ; ಕಲಹ ಮಾಡು : ತೋಟಿಗೊಳುವ ದುಷ್ಟ ದಂಪತಿಗಳು ಬೂತಾಟಗಳಿಂದನುಗೆಟ್ಟು ಊಟ ನಿದ್ದೆಗಳೊಂದಱೊಳು ಸುಖವಿಲ್ಲದೆ ಕೋಟಲೆಗೊಂಡು ಕುಗ್ಗುವರು (ಹರಿಬ. ೬-೭).

[ ತೋಟಿ$_1$ + ಕೊಳು (<ಕೊಳ್$_1$) ]

ತೋಟಿಯ (ನಾ). ಶೂರ; ಪರಾಕ್ರಮಿ (:) ತೋಟಿಯರ್ ತಱಿದಿಕ್ಕಿದ ರಾಂಪದ್ವೈತ್ಯಪಥೂಟಿಯ ಕರೆದು ತನ್ನೊಡನೆ ಸೂಟಿಯೊಳ್ ಸಾವಂತೆ ಕೆಯ್ಯ ಖಡ್ಗವನಿಕ್ಕಿ ದಾಟಿಸಿಕೊಂಡಳೆಲ್ಲರನು (ಮೋಹತ. ೩೩-೩೮).

[ ತೋಟಿ$_1$ + – ಅ$_7$ ]

ತೋಟೆ 'ತೊಗಟು' ನೋ.

ತೋಟೆ$_2$ 'ತೋಟಾ$_1$' ನೋ.

ತೋಟೆ$_3$ (ನಾ). ಒಂದು ಬಗೆಯ ಔಷಧಿ ಮೂಲಿಕೆ : ತೋಟೆಯ ಬಡಗ ಹರಿದ ಬೇರು ನೀರಲ್ಲಿ ಅರೆದು ಯೋನಿಯಿಂದಿಳಿಯ ಪೂಸಲು ಪ್ರಸವ ಮಾಗುವುದು (ವಿವ್ಯವಿ. ೧೦೭). [ ? ]

ತೋಟ್ಟಪಟ್ಟು (ನಾ). ತೋಟದ ಭೂಮಿ,–ಪ್ರದೇಶ: ಪುತ್ತೂರತ್ತಾಣಗೆ ಅಯ್ಯೂಂಬು ಕಟನಿಯುಂ ಅಯ್ಯೂಂಬು ತೋಟ್ಟಪಟ್ಟುಂ ಕೊಟ್ಟರ್ (ಎಕ. X, ಕೋಲಾರ ೨೨೪-೫; ಸು. 750); ಅಯ್ಯೂಂಬು ಮೊದಕಟನಿಯು ಎಟ್ಟೂಮ್ಬು ಬಾಳೆ ತೋಟ್ಟಪಟ್ಟು ಬ್ರಹ್ಮದೇಯಂ ಕೊಟ್ಟೋದು (ಎಕ. X, ಕೋಲಾರ. ೨೩೧-೫ ; ಸು. 800 ?). 'ತೋಟಪಟ್ಟೆ' ಪರಾ.

[ ತೋಟ$_1$ (<ತೋಂಟ) + ಪಟ್ಟು$_3$ (<ಪಟ್ಟೆ$_3$) ]

ತೋಡ$_1$ (ನಾ). ಬೆಳೆಯನ್ನು ನಾಶಪಡಿಸುವ ಬಿಳಿಯ ಇಲಿ : ಸುಂಡನ್ಗೆ ಶೂಲದ ಕತ್ತಿ ತೋಡನ್ಗೆ ಬಿರ್ ಬಾಣ, ಮುಂದೋಗೋ ಹೆಣ್ಣಾನ್ಗೆ ನಾಗಸ್ವರದ ಕೊಳಲು (ಹುಟ್ಟಿಹ. ೧೪೫) ; ತೋಡ, ಹೆಗ್ಗಣ, ಗೋಲಂದಿ (ನಮ್ಮನು. ೨೩೯) ; ದೇವಸ್ಥಾನದ ಪ್ರಾಕಾರದ ಗೋಡೆಯ ಕೆಳಗೆ ಒಂದು ತೋಡ (ಬಿಳಿ ಇಲಿ) ಮನೆ ಮಾಡಿಕೊಂಡು ಸಂಸಾರ ಮಾಡಿಕೊಂಡಿದೆ (ಗರುಡಾ. ೧೮೧). [ <ತೋಡು$_1$ ]

ತೋಡ$_2$, ತೊಡವ, ತೊದ (ನಾ). ಒಂದು ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದವನು; ನೀಲಗಿರಿಯ ಆದಿವಾಸಿ: ನೀಲಗಿರಿಯ ತೋಡರು ಹೊರಗಿನ ಜನರೊಡನೆ ಈಗೀಗ ಬೆರೆಯತೊಡಗಿರುವರು (ಬಾಲಪ್ರ. I, ೪೯೯); ತೋಡರು ಹಾಲು, ಮೊಸರು, ಮಜ್ಜಿಗೆ ಮಾಡುವರು (ದ್ರಾವಿವಿ. ೧೫೭). ತೊಡವ : ತುಳುವರು ತೊಡವರು ಬಡಗರು (ಅರಳು. ೩೦೪-೭). ತೊದ : (೫). [ ದೇ.॥ ತಮಿ. ತೋಟ, ತುಟವ ]

ತೋಡ$_3$ 'ತೋಡಾ' ನೋ.

ತೋಡರ (ನಾ). (?) : ನಂದಿಧ್ವಜನ ಚರಣಪಂಕೇಜಗಳು ಶೋಭಿಸಿದವಾಗ ದೃಕ್ಕರಣ ತೋಡರಗಳಿಂದ (ಮಲ್ಲಾರಿ. ೫-೧೨). 'ತೋಡಾ' ಪರಾ. ⓟ ಇದು 'ತೊಡರು' ಎಂಬುದರ ಅಪಲಿಖಿತವಿರಬಹುದು.

ತೋಡಾ, ತೋಟಾ$_2$, ತೋಡ$_3$, ತೋಡೆ$_1$ (ನಾ). ೧. ಮುಂಗೈಗೆ ತೊಡುವ ಒಂದು ಬಗೆಯ ಆಭರಣ ; ಹಸ್ತಾಭರಣಗಳಲ್ಲಿ ಒಂದು; ಕಂಕಣ ; ಕಡಗ : ತನಗೆ ಮಹಾರಾಜರು ಬಹುಮಾನವಾಗಿ ಕೊಟ್ಟ ತೋಡಾ, ಮಕರಕಂಠಿ ಮುಂತಾದ ಒಡವೆಗಳಿಂದ ಆತನನ್ನು ಅಲಂಕರಿಸಿ (ಗಾನಕ. ೬೮) ; ಮಹಾರಾಜರು ಅವರ ಎರಡು ಕೈಗಳಿಗೂ ರತ್ನಖಚಿತ ಚಿನ್ನದ ತೋಡಾ (ಬಳೆಗಳನ್ನು) ಹಾಕಿ ಬಹುಮಾನಿಸಿದರು (ಸಂಗೀಕ. ೨೭). ⓟ ರಾಜ, ಮಹಾರಾಜರು ಕಲಾವಿದರು ಅಥವಾ ವಿದ್ವಾಂಸರಿಗೆ ಬಿರಂದಿನೊಡನೆ ಬಹುಮಾನರೂಪವಾಗಿ ಕೊಡುವ ಅಲಂಕಾರ

ಸಾಧನ. ತೋಟಾ₂: ೨. ಹಣದ ಚೀಲ; ಥೈಲಿ. ೩. ನಳಿಗೆಯಾಕಾರದಲ್ಲಿ ನಾಣ್ಯಗಳನ್ನು ಸುತ್ತಿದ್ದು; ಒಂದೇ ಸಮನಾಗಿ ಜೋಡಿಸಿದ ನಾಣ್ಯಗಳ ಕಟ್ಟು: ಕಚೇರಿಯಾದ ಮೇಲೆ ಒಂದು ಬೆಳ್ಳಿಯ ತಟ್ಟೆಯಲ್ಲಿ ತಾಂಬೂಲಸಮೇತವಾಗಿ ಎರಡು ಹಣದ ತೋಟಾಗಳನ್ನಿಟ್ಟು ಕೃಷ್ಣಪ್ಪನವರಿಗೆ ಕೊಟ್ಟರು (ನಾಕಲಾ. ೫೮). **ತೋಡ₃:** ೧. ಸಜ್ಜುಕ ಸರ ತೋಡ ಮುಕುರ ಬಾಚಣಿಗೆಯು ಕಜ್ಜದರೊಳಗಿರ್ದರು ಸುತ್ತ (ಸೌಬಸೋ. ೨೩-೨೬). ೪. (ಬಿರುದಿನ ಸಂಕೇತವಾಗಿ) ಕಾಲಿಗೆ ಹಾಕಿಕೊಳ್ಳುವ ಕಡಗ; ಪೆಂಡೆಯಂ: ಪ್ರಭುಗಳು, ಮುತ್ತಿನ ಜೊಂಪೆಗಳಿಂದ ಕೂಡಿದ, ನವರತ್ನಖಚಿತವಾದ ಗಂಡಪೆಂಡೇರವೆಂಬ ಚಿನ್ನದ ತೋಡವನ್ನು ಕುವರನ ಬಲಗಾಲಿಗೆ ಬಹುಮಾನಿಸಿದರು (ಕಾಂತಲಾ. ೨೦೬). **ತೋಡೆ₁:** ೧. ಜಡೆಯ ಮಾದರಿ, ತೋಡೆಯ ಮಾದರಿ ಇತ್ಯಾದಿ ಕೆಲವು ಮಾದರಿಯ ಮಾಲೆಗಳನ್ನು ಹೆಣ್ಣುಮಕ್ಕಳು ಕಟ್ಟುತ್ತಾರೆ (ಹ್ಯಾಪುತಾ. ೨೦). ೫. ಒಂದು ಬಗೆಯ ಆಭರಣ; ಕಾಲ್ಗಡಗ: ಶ್ರೀಕೃಷ್ಣವಿಲಾಸದ ಲಿಂಗಾಜಂಮ್ಮಣ್ಣೀಯವರು ಮಳ್ಳಿಸಿದ ಬೆಳ್ಳಿ ಬಸವನ ಆಭರಣದ ಲಿಷ್ಟಾ . . . ೧. ಕಾಲಿಗೆ ತೋಡೆ, ೨. ಮುಂಗಾಲಿಗೆ ಹೂವು (ಎಕ. XIV, ನಂಜನ. ೨೮೯-೨ನೇ ಕಾಲಂ; 1840).

[ ←ಹಿಂ. ಮರಾ. ತೋಡಾ ]

**ತೋಡಿ** (ನಾ). [ಸಂಗೀತ] ಒಂದು ರಾಗದ ಹೆಸರು: ಮಲಹರಿ ಮೇಘರಂಜಿ ಘಳಮಂಜರಿ ತೋಡಿ ವಸಂತಮೆಂಬ ಮಂಜುಳತರ ರಾಗ ರಂಜನದೆ . . . ಪಾಡಿ ಮುದಂ ಮಿಗೆ ಮೆಚ್ಚಿಸುತ್ತುಂ (ಬಾಥಪು. ೬-೧೪); ಮಲಹರಿ ದೇಸಿ ತೋಡಿಯೆನೆ ಪಾಡಿ ಮೊಸರ್ ಕಡೆದರ್ ಲತಾಂಗಿಯರ್ (ಮುಲ್ಲಕಾ. ೪-೫೫) ತೋಡಿ ಮಕರಂದಿ ವಸಂತರಾಗಂ ಇತ್ಯಾದಿಯಾದ ರಾಗಂಗಳಂ ಪಾಡುತ್ತಿರೆ (ಹಮ್ಮೀರ. ೨-೯೦); ಆಹಿರಿಯಲ್ಲಿ ತೋಡಿಯೊಳು . . . ರಾಗಿಸಿ ಸಭೆಗೆ ಸಮ್ಮೋಹನರಸವ ಸೂಸಿದರು (ಭರತ. ೧೨-೪೩); ತೋಡಿ-೮ನೇ ಮೇಳಕರ್ತ ಹನುಮತೋಡಿಯು ರಾಗಾಂಗ ರಾಗ . . . ಈ ರಾಗ ಶುದ್ಧಕರ್ನಾಟಕವೆಂದೂ ಔತ್ತರೇಯವೆಂದೂ ಮತಭೇದವುಂಟು. ಸಾಯಂಕಾಲದಲ್ಲಿ ಹಾಡಬೇಕಾದ ರಾಗ. ಕರುಣಾರಸ ಪ್ರಧಾನರಾಗ (ಸಂಗೀತಂ. ೧೪೫). [ ಸಂ. ತೋಡೀ./ಮರಾ. ತೋಡೀ ]

**ತೋಡಿಟ್ಟ** (ನಾ). ಎರಡಂ ತುದಿಗಳುಳ್ಳ ಒಂದು ವಿಧವಾದ ಈಟಿ: ಬಿಲು ಸರಳು ತೋಡಿಟ್ಟ ಮುದ್ಗರ ಓಡಿವಾಳಚಯ (ಕುಮ್ಯಾಭೀ. ೩-೨೦); ಬಡಿಗೋಲ್ವೊಕ್ಕಿನ ಮರ್ದು ಕೂಳಿ ಪದವಿಲ್ ತೋ[ ಪಾಠಾ. ಕೋ ]ಡಿಟ್ಟ ಕೈಗಲ್ಲುರುಳ್ ವಿಡಿಬಿಲ್ಸಬ್ಬಲೆ ... ಖಡ್ಗಂ ಗಾಳಮಿಂಬಾಗೆ ಕೊಂಡೊಡನಾ ಲುಬ್ಧಕಸಂಚಯಂ ನಡೆದುದಾಗಳ್ (ಯಾದಪಂ. ೪-೫೧).

[ ತೋಡು₃ + ಇಟ್ಟಿ₂ ]

**ತೋಡಿಸು₁** (ಕ್ರಿ). ಅಗೆಯಿಸು; ಹಳ್ಳ ತೆಗೆಸು; ಗುಣಿ ಮಾಡು: ಕೊಂಡವ ತೋಡಿಸಬೇಡ ಶುಷ್ಕವ ಸುಟ್ಟು ಕೆಂಡವ ಮಾಡಿಸಬೇಡ ಖಂಡೇಂದುಶೇಖರ ಕಣ್ಗಟ್ಟಿ ನಿಂದೆನ್ನ ಗಂಡನನುರುಪಿದಂತುರುಹು (ದೋಹಕ. ೮-೩೬); ಒಂದು ಬಾವಿಯನ್ನು ತೋಡಿಸಯ್ಯಾ (ಪ್ರಮುಡ. ೪೬).

[ ತೋಡು₁ + - ಇಸು₃ ]

**ತೋಡಿಸು₂** (ಕ್ರಿ). ಸರಿಗಟ್ಟು; ಸಮಂಪೆಂದಂ ಎಣಿಸು: ಪಾಳ್ವ ದುಷ್ಕರ ಲಂಕಾಪುರಮಂ ನಭೋಗಪುರಮಂ ಕ್ರೌಂಚಾದ್ರಿಯಂ ದ್ವಾರಕೀಪುರಮಂ . . . ಸುಸ್ಥಿರ ಹಮ್ಮೀರಪುರಕ್ಕೆ ತೋಡಿಸಲೊಡಂ ಮಿಥ್ಯೋಕ್ತಿ ಮಂಪಲೋಕದೊಳ್ (ಹಮ್ಮೀರ. ೧-೭೪). [ ತೋಡು₁ + - ಇಸು₃ ]

**ತೋಡು₁** (ಕ್ರಿ). ೧. ಆಗೆ; ಬಗಿ; ಹಳ್ಳವನ್ನು ಮಾಡು; ಕೊರೆ: ತೋಡುವೆನೆಂಬುದಲ್ಲದಿಡಲಾಗದು ನಿಕ್ಕುವ ತೋಟಿಪ್ಪೆನೆಂಬುದಂ (ಕವಿರಾ. ೨-೧೦೧); ಕಾಯೋತ್ಸರ್ಗದಿಂ ನಿಂದೊಡಂ ಗೃಧ್ರ,ವಾಯಸಾದಿಗಳ್ ಪುಣ್ಣಂ ತೋಡಿ ತಿನೆ ಮೇರುಪರ್ವತಂಬೊಲಚಳಿತಧೈರ್ಯನಾಗೊಂದು ತಿಂಗಳ್ವರೆಗಂ ಸೈರಿಸಿ (ವಡ್ಡಾರಾ. ೬೫-೧); ಪಥಿಕರಜಲಿಸ್ಗೆಂದು ತೋಡಿದಜಾಬ ನೀರ ಬಗರಗೆಗಳುಮನೊಳಕೆಯ್ದು ಬತ್ತಿದ ಪಳ್ಳಂಗಳೊಳಮತಿರೌದ್ರಮಾದ ಪೇರಡವಿಯೊಳಗೆ ಬರ್ಪಾಗಳ್ (ಕಾದಂಬ. ೩೬೬); ಇಲಿಗಳ್ ಮನೆಯೊಳ್ ಪುಟ್ಟಿಯುಮುಲಸದೆ ತವೆ ತೋಡಿ ಮನೆಗಳಂ ಕಿಡಿಸುವ ಪೊಲ್ (ಪಂಚತಂ. ೧೦೬-೧೮); ತಪರಾಜದ ನೊರೆ ತೆರೆಯಂತೆ ಆದ್ಯರ ವಚನವಿರಲು ಬೇಚಿ ಬಾವಿಯ ತೋಡಿ ಉಪ್ಪ ನೀರನುಂಬವನ ವಿಧಿಯಂತೆ ಆಯಿತೆನ್ನ ಮತಿ (ಬಸವ. ೫೯೦); ಗೋಡೆಗನ್ನಮಂ ತೋಡಿ ಮನೆಯೊಳಪೊಕ್ಕು ಪರಿಕಿಸಿ ನೋಡುವಲ್ಲಿ (ಬಸಪು. ೩೧-೬); ಬೇಡುವುದು ಗದೆ ನಿಮ್ಮ ವಕ್ಷವ ತೋಡಿ ನೆತ್ತರುಗೊಳದಲೋಕುಳಿಯಾಡುವುದನು (ಕುಮ್ಯಾಅ. ೧೦-೪೯); ಮಾಡಿದ ಪುಣ್ಯಕ್ಕೆ ಫಲವೇ ಸಾಕ್ಷಿ ತೋಡಿದ ಬಾವಿಗೆ ಜಲವೇ ಸಾಕ್ಷಿ (ಗಾದೆ). ೨. ಚುಚ್ಚು; ತಿವಿ: ಐದುಬಾಣದೊಳುರವ ತೋಡಿದನು(ಕುಮ್ಯಾದ್ರೋ. ೫-೩೨); ದೈತ್ಯನ ಮೆಯ್ಯ ತೋಡಿದನೈದಂಬಿನಲಿ (ದೋಹಕ. ೩೪-೧೪); ತೋಡಿದು ಮೂವತ್ತು ಬಾಣದಿಂ ತಾಪಮಂಕುರಿಸುವಂತಪನೊಡಲೊಳು (ಜೈಮಿಭಾ. ೧೨-೪೬); ೩. ಹೊರ ತೆಗೆ; ಹಿರಿ; ಹಿರಿದುಕೊಳ್ಳು: ಧುರದೊಳು ಬಂದೊಡ್ಡಿ ವೈರಿಪ್ರಕರವಿರಲವಷ್ಟಂಭದಿಂ ಬಿಟ್ಟದೇವಂ ಕರವಾಳಂ ತೋಡಿ ಕೊಂಡಿಂ ಬಳಿಕ (ಎಕ. IV, ನಾಗಮಂ. ೨೮-೧೩; ಸು. 1125); ಕರವಾಳಂ ತೋಡಿಕೊಂಡು (ಕವಿಜ. I, ೧೧೪). ೪. (ಅಡಿಗೆ, ನೀರು ಮುಂತಾದುವನ್ನು ಒಂದು ಪಾತ್ರೆಯಿಂದ ಮತ್ತೊಂದಕ್ಕೆ) ಮೊಗೆದು ಹಾಕು: ಎಡಗೈಯೊಳೆ ತೋಡಿ ಬೆಣ್ಣೆಯಂ ತಿನುತಿರೆ (ಜಗವಿ. ೩-೫೧); ತೋಡಿ ಬಡಿಸುವೆ ಕಿವಿ ಗರೋಚಕ ವಾಯ್ತು ತೆಗೆಯೆಂದ (ಕುಮ್ಯಾಸ. ೧೦-೨೦); ನೀರು ತೋಡಿ ಇಟ್ಟಿದ್ದೇನೆ ಜಳಕ ಮಾಡಿರಿ (ಮುಕ್ತ್ಯರ. ೨೩೦). ೫. ಹೊರಕ್ಕೆ ಹೋಗು; ಆಚೆ ಹೋಗು: "ತೋಡು – ನಿಷ್ಕ್ರಮಣೇ (ಹೊರಟು ಹೋಗು). ಯುಗ್ಮೇ ಚ (ಜತೆ)" (ಶಮುಧಾ);" ನಿಷ್ಕ್ರಮಣಯುಗಸಾಮ್ಯಂಗಳೊಳ್ ತೋಡಲಾ" (ಶಬ್ದಮಂ. ೯೨). ೬. (ಮನಸ್ಸನ್ನು ತೆರೆದು) ವ್ಯಕ್ತಪಡಿಸು; ತಿಳಿಸು; ಹೇಳಿಕೊಳ್ಳು: ದುಃಖಮಂ ತೋಡುವೆನಾರ ಕೂಡೆ (ಕಾವ್ಯಸಾ. ೫೭೬); ಈ ಭವದ ಯೋಗಗಳ, ಭೋಗಗಳ, ರೋಗಗಳ ತೋಡ ಬಾ, ಹಾಡ ಬಾ (ನವ್ಯಧ್ಯ. ೩-೬). ೭. ಎಳೆಯನ್ನು ಬಿಚ್ಚಿ ಹಾಕು, –ತೆಗೆದುಹಾಕು: ನಾರಸಿಂಹನ ರೂಪಿಂ . . . ಪಟ್ಟಗಾಜನೆ ಪಾಸಂ ತವೆ ತೋಡುವಂತೆ ಕರುಳಂ ನೀಂ ತೋಡಿದೈ ದೈತ್ಯನಾ (ಕಾದ್ಯಾಪ. ೩೫೫); ಅವ್ವ ರೇಶಿಮೆ ತೋಡುವ ಕೆಲಸ ನಿಲ್ಲಿಸಿ ಅಡುಗೆಗೆ ತೊಡಗುತ್ತಿದ್ದಳು (ಪಾತರ. ೩೮).

**ತೋಡಿಕೊಳ್ಳು** = ಮನಸ್ಸಿನ ಅಳಲನ್ನು ಹೇಳಿಕೊಳ್ಳು: ಕಂಡವರೆದುರೊಳು ನಿನ್ನೆದೆಯೊಳಗನು ತೋಡಿಕೊಂಡಳಲಾಗ ನೋಡ (ಗಾಜಾಪ. ೨೩೦-೩೬).

[ ದೇ.ಗ ತಮಿ. ತೋಣ್ಟು; ಮಲ. ತೋಣ್ಡು; ತುಳು. ತೆಲು. ತೋಡು; ಕೊಡ. ಪರ್ಜಿ. ತೋಡ್ ]

**ತೋಡು₂** (ನಾ). ೧. ಅಗೆದಿರುವ ಸ್ಥಳ; ಗುಂಡಿ; ಹಳ್ಳ, ಕಾಲುವೆ ಮೊದಲಾದುವು: ಉಂಡ ಪಾಳೆಗಳನ್ನು ಮಡಿಸಿ . . . ತೋಡಿಗೆ ಎಸೆದು ಕೈ ತೊಳೆದು ಬಂದಳು (ನಂಬಿನಾ. ೨೦೯); ಅಂಗಳದ ಕೆಳಗಿನಿಂದ ಒಂದು ನೀರಿನ ತೋಡು ಸದಾ ಹರಿಯುತ್ತದೆ (ಕಂಬಮ. ೭೮): ೨ ಇಳಿಜಾರಾದ ಮಾರ್ಗ,–ಜಾಡು: ಈ ತೋಡು ಕಣಾಂತರದಲ್ಲಿರುವ ಬಾಯಿ ಮೂಲಕ ಗಂಟಲನ್ನು ಪ್ರವೇಶಿಸುತ್ತದೆ (ಪ್ರಾಣಿಪ. ೫೬). ೩. ಝರಿ; ಅಬ್ಬಿ; ಪ್ರವಾಹ: ಬೆಟ್ಟದ ಗುಣ ತೋಡಿನಿಂದರಿಯಿತ್ತು, ಸಾಗರದ ಗುಣ ಕೋಡಿಯಿಂದರಿಯಿತ್ತು (ಮೋಹಮೂ. ೧೦೩-೪೦೦): ಗಣಸಲೆ ನೀರ ತೋಡಿನಿಂದ ಪಡುವಲು (ದೊಂಕಣ. ೧೯೩೦, ಮುಂಗಳೂರು.

ಈಶಾನ್ಯ ಪೊಳೆ (೫೨೬-೨೯ ; 1376) ;ತೋಡಿಗೆ ತೆಂಕ ಒತ್ತು ಬಿದರು ತಾಳೆ ತೋಡಿ ತೆವರಿನ ಮಲಪಡುವ ಮುಖವಾಗಿ ನೆಟ್ಟ ಕಲ್ಲು(ಎಕ. III, ತಿರುಮ. ೬೩-೨೬೯ ; 1748); ಅಲ್ಲಲ್ಲಿ ತಡೆತಡೆವ ಕಾಡುಗಳ ತೋಡುಗಳ ಕಲ್ಲ ಚೆಲ್ಲಿದ ಪಸಲೆಗಳ ನೊಸಲ ತುಳಿದಂ (ಕಾಲೂರ. ೧೦೮-೨೨೨); ಆ ದಾನವರಾದ ನಮ್ಮ ವರು, ಎಂಬವರ ಸ್ವಭಾವ ವರ್ತನೆಗಳು ಆ 'ಕಾಡ ಸೊಪ್ಪು ತೋಡ ನೀರಿನ' ಬಡಮುನಿಗಳ ಮೇಲೆ ಹೇಗೆ ಹೇಗೆ ತಾಂಡವವನ್ನಾಡಿದ್ದುವು? (ಪಾರ್ತಿಸು. ೩೮) ; 'ಕಾಡ ಸೊಪ್ಪ'ನ್ನು 'ತೋಡ ನೀರಿ'ನಲ್ಲರೆದು ಕುಡಿಸಿ ಗುಣ ಗೊಳಿಸುವ ಎಷ್ಟೋ ಮಂದಿ ಹಳ್ಳಿಗರೀಗಲೂ ಇದ್ದಾರೆ (ನಾಡತೋಜ ೨೩೧). [ <ತೋಡು$_{1}$./ಮಲ. ತುಳು. ತೋಡು; ಕೊಡ. ತೊಡಿ]

**ತೋಡು$_{3}$** (ನಾ). ೧. ಜೊತೆ ; ಯಂಗಳ : "ತೋಡು – ನಿಷ್ಕ್ರಮಣೇ (ಹೊರಟು ಹೋಗು), ಯುಗ್ಮೇ ಚ (ಜತೆ)" (ಶಮಧಾ) ; "ತೋಡು ಜೋಡಿಯು" (ಶಬ್ದಮಂ. ೫೬) ; ಬಿಸುಸುಯ್ದುತ್ತುಗಲ್ದಿರ್ದ ನೀರ್ವಕ್ಕಿ ಗಳಾಗಳ್ ಕೂಡಿ ತೋಡಾದುವು (ಆದಿಪು. ೧೨-೯) ; ನೀರ್ವಕ್ಕಿಗಳ್ ಕೂಡಿ ತೋಡಾಗೆ ದಿಗಂತಂಗಳ್ ನಿತಾಂತಂ ತೊಳಗಿ ಬೆಳಗೆ . . . ಉದಯಂ ಗೆಯ್ದುತ್ತು ಶೋಭಾರುಣಕಿರಣಗಣಾಳಂಬಮಾದಿತ್ಯಬಿಂಬಂ (ಸುಕುಮಾ. ೧೨-೧೬) ; ತವಕದಿನಪ್ಪಿ ತಲ್ಲಣದೆ ಚುಂಬಿಸಿ ನಿಲ್ಲದೆ ಕೂಡಿ ತೋಡಗಲ್ಚುವ ದಿವಸಾವಸಾನಸಮಯಕ್ಕೆ . . . ಅಗಲಲಾಱದಗಲ್ದುವು ಜಕ್ಕವಕ್ಕಿಗಳ್ ಕನಲ್ದು (ಅನಂಪು. ೭-೭೦) ; ಓಲೆಯ ತೋಡುಳಿಯಲ್ ಪೊಕ್ಕಳಬಲೆ ಜನಕಾಲಯಮಂ (ನಳಚಂ. ೫೭೮); ಬಿನ್ನಣದಿಂದ ಸಮೆದ ದಂಡೆ ತೊಂಡಿಲು ಪೊನ್ನೋಲೆಯ ತೋಡುಗಳನು (ಚಂಪ್ರಸಾಂ. ೧೨-೨೪೪). ೨. ಸಮಾನ ; ಸಾಟಿ: "ಸರಿ, ದೊರೆ, ಪಡಿ...ತೋಡು, ಓರಗೆ, ಜೋಳಿ, ಪೊಯ್ಕೆಯ್ ಹೋಟಿ, ಸಂಗಡಂ – ಈ ೧೮ ಸಮಾನಕ್ಕೆ ಪೆಸರ್" (ಕಕಸಾ. ೧೫-೨೯೧) ; ಪಾರ್ವತಿಗೆ ತೋಡು . . . ಪಾಸಪಾಂಗನೆಗೆ ಪಾಸಟಿ ಚಾಗಲ ದೇವಿ ಧಾತ್ರಿಯೊಳ್ (ಎಕ. VIII, ನಗರ. ೪೭-೦೧೩ ; 1062) ; ಕರಿವರಮಸ್ತಕ ದೊಳ್ ತೋಡಿಲ್ಲದೆ ಬಗೆಬಗೆದುತ್ಸುಕದೊಳ್ . . . ಖರಿದುತ್ಸುಪದಿಂ ದೇಳ್ವಂದಾಗಳ್ (ರಾಜಶೇ. ೯-೪೧ ರಗಳೆ) ; ಇನ್ನೆಬರಂ ತಮಗೆ ಜಗಂ ತೋಡಾಗದೆಂದು ಸೊರ್ಕಿನುರ್ಕಿಂ ಬಱುಗೊಂದೆ ಪಂದೆ ರಾಯರಂ ಕಾಡಿ ಬೇಡಿ ಕೂಡಿದ ಜಾಳಿಗೆಪೊನ್ನಂ ಕೋಳುಗೊಂಬೆಂ (ರಾಮಾಶ್ವ. ೧೨೭-೨೮) ; ನಾನಾ ಜಾತಿಯ ರಾಯರೊಕ್ಕು ಬನಮಂ ಮೈಸೂರ ಕಾಡೊಳ್ಗಿನೊಳ್ ಮಾನಾತೀತಮನೋವಿಕಾಸವಡೆಯಲ್ಕೀ ಕಾಡ ತೋಡಾವುದೋ (ಮೈಸೂಮ. ೧-೩೫) ; ಅವನ್ಗಿವಳ್ಗೆ ಬೆಳೆದ ಪತ್ತುಗೆಗೆ ತೋಡಿಲ್ಲಮ್ (ಅಂತಿಗೊ. ೨೭-೫೪೭). ೩. ಸಂದಣಿ; ಗುಂಪು: ಹೂಡಿದಂಬಿನ ಹೊದೆಯ ಬಂಡಿಯ ತೋಡ ಕಡಿದನು ಛತ್ರ ಚಮರದ ಝಾಡಿಗಳ ತಱಿದೊಟ್ಟಿದನು ಕಲಿಪಾರ್ಥ (ಕುಮ್ಯಾಕ. ೨೭-೯). [ ದೇಃ. ತಮಿ. ತೆಲು. ತೋಡು ]

**ತೋಡು$_{4}$** (ನಾ). ಬಾಣವನ್ನು ತೊಡುವಿಕೆ ; ಶರಸಂಧಾನ : ತೋಡು ಬೀಡಂ ಕಾಣ್ಬುದು ನಾಡೆಯುಮರಿದೆನಿಸಿ ಕೃಷ್ಣನಾರ್ದಿಸೆ (ಪಂರಾಮಾ. ೯-೬೩);ತೋಡುಡುಗದೆಸುತಮಿರೆ ಮಾರ್ಪಡೆಯ[ರುಮುವ]ರವಯವಂಗಳೆ ನಿತೆನಿತಱೊಳಂ ಕೂಡೆ ನಡೆ ಮೆಯ್ಗಳಂಬಿನ ಮೂಡಿಗೆಯೆನೆ ಪೋಲ್ತು ಕೆದೆದರುಗ್ರಾಹವದೊಳ್ (ಬಂಹರಿ. ೧೧-೧೧೦); ತೋಡು[ಮಂ]ಬಿಡುವಂದ ಲೀಕ್ಷಿಸಿ ನೋಡಿಯಱಿಯಲು ಬಾರದಂಬಿನ ಕೂಡೆ ಬಿಳ್ದಿಭ ತುರಗ ರಥ ಕಾಲಾಳ್ಗಳಿಂದಱಿಯೆ (ಕುಮುರಾ. ೨-೫೩).

**ತೋಡುಂ ಬೀಡುಂ, ತೋಡು ಬೀಡು**=(ಬಾಣವನ್ನು) ತೊಡುವುದುಂ ಮತ್ತು ಬಿಡುವುದುಂ: ಎರಡುಂ ಕೆಯ್ಯೊಳ್ ತೋಡುಂ ಬೀಡುಂ ಕಾಣಲಾಗ ದಂತಿಸೆ (ಪಂಪಭಾ. ೫-೯೬ ವ); ತೋಡುಂ ಬೀಡುಮಿಲ್ಲೆಚ್ಚುತೆ ಪೆಣಮಾಯ ಮಾದಪ್ಪುದೋ...ಎಂಬಂತಿರೆಚ್ಚಂ (ಅನಂಪು.೧೪-೧೭);ಕೃತವರ್ಮನೆಸುಗೆಯ ತೋಡುಬೀಡಿನ ಭರವ ಬಲ್ಲವನಾರು (ಕುಮ್ಯಾಗ. ೨-೭). [<ತೊಡು$_{1}$]

**ತೋಡು$_{5}$** (ನಾ). ೧. ಉಪಾಯ ; ಹಂಚಿಕೆ ; ತಂತ್ರ ; ಯುಕ್ತಿ : ಶ್ರಮವನ್ನೂ ತೊಡಕುಗಳನ್ನೂ ತಕ್ಕ ತೋಡುಗಳಿಂದ ನಿವಾರಣಮಾಡಿ ಕೆಲಸವನ್ನು ಕೊನೆಗಾಣಿಸಿ ತೋರಿಸುವ ವಿವೇಕವೇ ಜ್ಞಾನಾಂಜನವೆನ್ನಿಸಿ ಕೊಳ್ಳುವುದು (ಕಾಂಬೂಚ. ೩೯) ; ಇದು ಬಿಕ್ಕಟ್ಟಿನ ಪ್ರಶ್ನವು. ಇದಕ್ಕೆ ಏನಾದರೊಂದು ತೋಡು (ಉಪಾಯ) ತೆಗೆಯಲುಬೇಕು (ಬೀರಬ. ೧೪೧). ೨. ಕಟ್ಟು ; ಪ್ರತಿಬಂಧಕ ಉಪಾಯ ಆದರ ತೋಡು ತಿಳಿದವರು ಮೂರುದಿನಗಳೊಳಗಾಗಿ ಬದುಕಿಸಿಕೊಳ್ಳಬಹುದು (ಚಡೀವ. ೧೨೭) ; ನಾವು ಒಬ್ಬ ಮಾಂತ್ರಿಕನ ಕೈಯಲ್ಲಿ 'ತೋಡು' ಮಾಡಿಸಿದರೂ ? (ಕಣ್ಮು. ೭೮).

[ ತಮಿ. ತೋತು ; ಕೋತ. ತೋದ್./ಮರಾ. ತೋಡ್ ]

**ತೋಡುಂಗಿಱು** (ಕ್ರಿ). ಜೊತೆಯಾಗಿ ಎಣಿಸು; ಸಮಾನವೆಂದು ಭಾವಿಸು: ಆರಂ ತೋಡುಂಗಿಱದೆ ತನ್ನೊಂದು ಗರಗರಿಕೆಯು ಸೊಮ್ಮಿನಭ್ಯುದಯದ ಪದುಳಮರಸಾಳ್ವ ಬಸಂತರಾಯನುರ್ಕಿಂ ಸೊರ್ಕಿಂ ಸೋರ್ದು ಬಯ ಲಪ್ಪಿನೆಗಂ ದಾಟೆಗೆಯ್ದು (ರಾಮಾಶ್ವ. ೫೧-೧೮).

[ ತೋಡು$_{3}$ + ಗಿಱು ]

**ತೋಡುಕೈ** 'ತೂಡಂಗೈ' ನೋ.

**ತೋಡುಗವಣೆ** (ನಾ) ಜೋಡಿ ಕವಣೆ : ತೋಡುಗವಣೆಯ ತೂಱುಗಲ್ಲಿನ ಝಾಡಿ ಝುಮ್ಮಿಡಿಸಿದವು ಗಗನವ (ತೊರಱಾ. ೬-೧೧-೩).

[ ತೋಡು$_{3}$ + ಕವಣೆ$_{1}$ ]

**ತೋಡುಗಾಲುವೆ** (ನಾ). (ಅಗೆದು ಮಾಡಿದ) ಸಣ್ಣ ಕಾಲುವೆ : ದೊಡ್ಡ ನಾಲೆಯಿಂದ ಕಬ್ಬಿನ ಗದ್ದೆಗೆ ತೋಡುಗಾಲುವೆ ಅಗೆಯಬೇಕು (ರೂಢಿ).

[ ತೋಡು$_{2}$ + ಕಾಲುವೆ (<ಕಾಲ್ವಾಯ್) ]

**ತೋಡುಗೆಲಸ** (ನಾ). (ಭೂಮಿಯನ್ನು) ಅಗೆಯುವ ಕಾರ್ಯ ; ಅಗೆತ : ನಾಲೆಯನ್ನು ಅಗೆಯಲು ೫೬ ಮೈಲಿಯ ಸಲೆ ಅಡಿ ತೋಡು ಗೆಲಸವನ್ನು ೧೦೦೦ ಸಲೆ ಅಡಿಗೆ ೨೫ ರೂಪಾಯಿನ ದರದಲ್ಲಿ ಮಾಡ ಲಾಯಿತು (ಶಿಲ್ಪನಾ. ೨೪೭). [ ತೋಡು$_{2}$ + ಕೆಲಸ ]

**ತೋಡುಗೈ, ತೋಡುಕೈ** (ನಾ). ೧. ಬಗಿಯುತ್ತಿರುವ ಕೈ : ತೋಡು ಗೈಗಳ ಮಿದುಳ ಬಾಯ್ಗಳ ಬಾಡುಗರುಳಿನ ಚೀತ್ಕೃತಿಯ ತಲೆಯೋಡುಗಳ ತನಿರಕುತಪಾನದ ಶಾಕಿನೀಜನವ . . . ಕಂಡೋಸರಿಸುವನದೊಂದು ದೆಸೆಗಾಗಿ (ಕುಮ್ಯಾಗ. ೩-೧೧). **ತೋಡುಕೈ**: ೨. ಮೊಗೆಯಲು ಉಪ ಯೋಗಿಸುವ, ಚಿಕ್ಕ ಹಿಡಿಯುಳ್ಳ ಕೈಯ ಆಕಾರದ ಒಂದು ಬಗೆಯ ಸಲಕರಣೆ: (ಧಾನ್ಯ, ಸಕ್ಕರೆ, ಇದ್ದಿಲು, ಮೊ.ನ್ನು ತೋಡಿ ಮತ್ತೊಂದಕ್ಕೆ ಹಾಕಿಕೊಳ್ಳಲು ಅನುಕೂಲಿಸುವ, ಮೋಟುಹಿಡಿಯ, ಆಳವಾದ ಪಾತ್ರವುಳ್ಳ) ತೋಡುಕೈ, ಗೋರಿಗೆ. ಉದ್ದ ಹಿಡಿಯ, ಸೌಟನಾಕಾರದ, ಅದ್ದುಪಾತ್ರೆ (Scoop. ಇಂಕನಿ.). 'ಮಗುಚುಕೈ' ಪರಾ.

[ ತೋಡು$_{1}$ + ಕೈ$_{2}$ (<ಕೆಯ್$_{2}$) ]

**ತೋಡುದಾರಿ** (ನಾ). ದಿಣ್ಣೆಯನ್ನು ಅಗೆದು ಮಾಡಿದ ಹಾದಿ,–ಮಾರ್ಗ : ತೋಡುದಾರಿಯ ಪಕ್ಕದಲ್ಲಿ . . . ನೆಲಗಟ್ಟಿನ ಕಡೆಗೆ ನೆಕ್ಲದೋವನ ದೃಷ್ಟಿ ಹರಿಯಿತು (ಪುನರು. ೪೭೭).

[ ತೋಡು$_{1}$ + ದಾರಿ ]

**ತೋಡುದೋಣಿ** (ನಾ). ೧. ಮರದ ದಿಮ್ಮಿಯನ್ನು ಕೊರೆದು ಮಾಡಿದ ದೋಣಿ: ತೋಡುದೋಣಿಯಿಂದ ಹಿಡಿದು ಸಮುದ್ರಯಾನದಲ್ಲಿ ಹಡಗಿನ ನಿರ್ಮಾಣದ ಹಾಗೆ ಆಕಾಶಯಾನದ ಬೆಳವಣಿಗೆಯೂ ವೈಜ್ಞಾನಿಕ ಸಾಧನೆ ಯಾಗಿರಲಿಲ್ಲ (ಶಿಲ್ಪನಾ. ೧೪೪). ೨. ದನಕರುಗಳು ಕುಡಿಯಲು ನೀರನ್ನು ತುಂಬಿಡುವ ಕಲ್ಲಿನ ಅಥವಾ ಮರದ ದೋಣಿ,–ತೊಟ್ಟಿ.

[ ತೋಡು$_{1}$ + ದೋಣಿ$_{3}$ ]

**ತೋಡುವಡಿ** (ನಾ). ಸಮಾನವಾದ ಅಳತೆ,-ಪ್ರಮಾಣ : ತಿಂಗಳಿಗೆ ಸಲ್ವ ಮೂಜುವೀಸ ದೋಷಾದಿಯ ಬಡ್ಡಿಯಲು ತೋಡುವಡಿಯಾಗಿ ವರ್ಷಂ ಪ್ರತಿ ಬಂದ ಬಡ್ಡಿ ಇಂದ ಆ ಇಂದ್ರಧರ್ಮ್ಮ ನಡವಂತಾಗಿ (ಎಕ. V. ಬೇಲೂರು. ೨೪೭-೭ ; 1298). [ ತೋಡು$_3$ + ವಡಿ$_1$ ]

**ತೋಡುವೊಯ್ಲು** (ನಾ). (ದೇಹದಲ್ಲಿ ರಕ್ತವನ್ನು ಚಿಮ್ಮಿಸುವ) ಹೊಡೆತ ; ಗಾಯಂ ಕೊರೆಯುಂವ ಹೊಡೆತ: ಜಾಡಿಸುವ ಮಣಿಮಯದ ಗದೆಯಲಿ ತೋಡುವೊಯ್ಲಿನ ತುಡುಕುಗಾಯದ ನೀಡುಮೊನೆಗಳ ವಿಗಡನಿಕ್ಕಿದನದಟರಕ್ಕಸರ (ಕುಮ್ಮಾಭ. ೧೦-೫೨). [ ತೋಡು$_1$ + ಪೊಯ್ಲು ]

**ತೋಡುಹಾವುಗೆ** (ನಾ). "ಒಂದೇ ಮರದ ತುಂಡನ್ನು ಕೆತ್ತಿ ಮಾಡಿದ ಪಾದರಕ್ಷೆ ; ಮರದ ಅರೆಜೋಡಂ ; ಪಾವುಕೊರಡಂ ; ತೋಡು ಹಾವುಗೆ ; ಮರದ ಅಟ್ಟೆಯಂ ಪಾದರಕ್ಷೆ" (Sabot. ಇಂಕನಿ).

[ ತೋಡು$_1$ + ಪಾವುಗೆ ]

**ತೋಡೆ$_1$**, 'ತೋಡಾ' ನೋ.

**ತೋಡೆ$_2$, ಥೋಡೆ,** (ನಾ). ಸ್ವಲ್ಪ ; ಕಿಂಚಿತ್ತು ; ಅಲ್ಪ : ನಂಗೆ ಒಂದು ಹಂಚಿಕೆ ಹೊಳೀತಯ್ತು. ಮನೋಗ ಹೇಳು : ಧನೇರ ಕಡೇನೇ ಹೋಗಿ ಕೈಕಾಲು ಬೀಳ್ರಿ. ಅಲ್ಲೆ ನಾನೂ ತೋಡೆ ಹೇಳ್ತನು (ಪ್ರೇಮೂಶ್ರ. ೧೩). **ಥೋಡೆ:** ಏನೋ ಥೋಡೇ ತುಸಾ ಯಾರರೆ ಧಾಂದಲೆ ಹಾಕತಾರ. ಆದನ್ನೆಲ್ಲ ಥಮ್ಮಣ ಮಾಡತೀವಿ (ಧನಂಜ. ೩೧).

[ ←ಹಿಂ. ಮರಾ. ಥೋಡಾ ]

**ತೋತಾಪುರಿ** (ನಾ). ಒಂದು ಬಗೆಯ ಮಾವಿನ ಮರ ಮತ್ತು ಅದರ ಕಾಯಿ ; ಗಿಣಿಮೂತಿಮಾವು : ನಮ್ಮ ತೋಟದಲ್ಲಿ ತೋತಾಪುರಿ ಮರ ಇದೆ (ಲೂಫ). [ ←ಹಿಂ. ಮರಾ. ತೋತಾ = ಗಿಣಿ ]

**ತೋತಾಯ** (ನಾ). ೧. ಕೃತ್ರಿಮ ದಾಖಲೆ ಮೊದಲಾದುವನ್ನು ಹುಟ್ಟಿಸುವಿಕೆ. ೨. ಮೋಸಗಾರ ; ಡಾಂಭಿಕ. ೩. ಖೋಟಾ ವಾರಸುದಾರ : (೬). [ ←ಮರಾ. ತೋತಯಾ. / ಹಿಂ. ತೋತ ]

**ತೋತ್ತರ** (ನಾ). ಸ್ತೋತ್ರ ; ಸ್ತುತಿಸುವಿಕೆ : ಶಚಿಪತಿಯು ಎತ್ತು ಹತ್ತುವ ಕೃತ್ತಿವಾಸನ ತೋತ್ತರವ ಮಾಡುತ್ತ ಮಾನವ ತೆತ್ತಿ ಮಸ್ತಕವನ್ನು ಪಾದಕೆ ಸತತ ಮಣಿಸುವನು (ಪಾರ್ವಪ. ೨-೮೧).

[ <ಸಂ. ಸ್ತೋತ್ರ. /ತಮಿ. ತೋತ್ತಿರ ; ತುಳು. ತೋತ್ರ ]

**ತೋತ್ರ** (ನಾ). ಆನೆ, ಕುದುರೆ, ಎತ್ತು ಮೊದಲಾದ ಪ್ರಾಣಿಗಳನ್ನು ನಡೆಸಲು ತಿವಿಯುಂವ ಸಾಧನ ; ತಿವಿಗೋಲಂ : "ಪ್ರತೋದ, ಪ್ರಾಜನಂ, ತೋತ್ರಂ-೩ ಮುಳುಹುಗೋಲ್" (ಚಲಾಯು. ೯೪-೪೨೨) ; "ತೋತ್ರಂ, ವೈಣುಕಂ—ಆನೆಯನ್ನು ತಿವಿದು ಶಿಕ್ಷಿಸುವ ಬಿದುರಿನ ಕೋಲಿನ ಹೆಸರು" (ಸಿದ್ಧಾಂತಿ. ೨೧೩) ; ಧೈರ್ಯದ್ಯೈರಾವತಂ ಹೋರಾಡುತಿರ್ಪುದಂ ಕಾಣುತ ಗುರು ವಸಿಷ್ಠನಾಡಿದನ್ ಮಾವುತಂ ತೋತ್ರದಿ ತಿವಿಯುವಂತೆ (ಶ್ರೀರಾಮಾ. ೧೭೦-೪೮೭). [ ಸಂ. ]

**ತೋದ$_1$** 'ತೋ' ಪರಾ.

**ತೋದ$_2$** (ನಾ). ೧. ದನ, ಕರು, ಕುದುರೆ ಮುಂತಾದುವುಗಳನ್ನು ಹೊಡೆದಂ ಕೊಂಡು ಹೋಗಂವಿಕೆ,-ನಡೆಸಿಕೊಂಡು ಹೋಗಂವಿಕೆ. ೨. ನೋವು ; ಯಾತನೆ : ಅಂಬುಧಿಸಂಗಸಂಜನಿತಶಂಬರನಿರ್ಭರಗರ್ಭೆ ಬಂದು ಕಾದಂಬಿನಿ ತತ್ಪ್ರಸೂತಿಸಮಯಂ ಬರೆ...ನರಲ್ವ ರಾವದಂತೇಂ ಬಗೆಗೊಂಡುದೋ ಗುಡುಗು ಸೂತಿಮರುತ್ಕೃತತೋದದೇಳ್ಗೆಯಿಂ (ರಾಜಶೇ. ೮-೧೦೩). [ ಸಂ. ]

**ತೋದನ** (ನಾ). ೧. ಹೊಡೆತ ; ಬಡಿತ : (೬). ೨. = ತೋತ್ರ : "ಪ್ರಾಜನಂ, ತೋದನಂ, ತೋತ್ರಂ-೩ ತಿವಿಗೋಲಂ" (ಸಿದ್ಧಾಂತಿ. ೨೩೮). ೩. ತೀವ್ರವಾದ ನೋವು,-ಯಾತನೆ,-ವೇದನೆ. [ಸಂ.]

**ತೋದೆ** (ನಾ). ತ್ರೋರಿಕೆಯ ನೆಪ ; ಕುಂಟುನೆಪ : ಅಮ್ಮನ್ನಾ — ಹೇಳಿದುದಕ್ಕೆಲ್ಲ ಅವನು ಒಂದು ತೋದೆ (ಕುಂಟುನೆಪ) ಹಾಕುತ್ತಿದ್ದನು (ಗರುಡಾ. ೧೦೭). [ ←ತಮಿ. ತೋತು ]

**ತೋದ್ಯ** (ನಾ). (ಹೊಡೆಯಬಹುದಾದ ಅಥವಾ ಬಾರಿಸಬಹುದಾದ) ಒಂದಂ ವಾದ್ಯವಿಶೇಷ : ಸುದತಿ ಘನತೋದ್ಯದಳಗೀತದ ವಾದ್ಯದ ಹೃದ್ಯದುಚಿತ ಪತ್ರದ ರಸಚಿತ್ರದ ಮಾಳಾಕರ್ಮದ ನರ್ಮದ ಸಪಿಯರ ಬನದದಿಂದವಲಸಿಕೆಗಳೆವಳ್ (ಪುಷ್ಪಪು. ೪-೧೭). 'ಆತೋದ್ಯ' ಪರಾ.

[ ಸಂ. ]

**ತೋಪಡ$_1$, ತೋಪರ, ತೋಬಡ** (ನಾ). ೧. ಮರ ಅಥವಾ ಲೋಹವನ್ನು ಸಮಂಗೊಳಿಸಲು ಬಳಸುವ ಸಾಧನ ; ಉಜ್ಜುಗೊರಡು : ಹತ್ತರಿ : ತೋಪಡ ಹೊಡೆಯಬೇಕಾದ ಲೋಹವನ್ನು ಒಂದು ಮೇಜಿನ ಮೇಲಿಟ್ಟು ಮೇಜೇ ಹಿಂದಕ್ಕೂ ಮುಂದಕ್ಕೂ ವಿದ್ಯುತ್ತಿನ ಬಲದಿಂದ ಓಡಾಡುವ ಹಾಗೆ ಮಾಡುತ್ತಾರೆ (ಶಿಲ್ಪಸಾ. ೧೯೩). ೨. (ಆಲಂ) ಅನುತ್ತೀರ್ಣತೆ; ಸೋಲು : ಡ್ರಾಯಿಂಗ್ ಪರೀಕ್ಷೇಲಿ ನನಗೆ ತೋಪಡ ಆದರೆ ನಿಮಗೆ ತುಂಬಾ ಸಂತೋಷವೇನೋ (ಸ್ವಾಮಿಸ್ನೇ. ೩೧). **ತೋಪರ :** ೧. ಅವರು ತೋಪರ ಹಾಕಿ ಮರಗಳನ್ನು ನಯಮಾಡಿದರು (ಗಂಪ್ರ. ೯೯). **ತೋಬಡ:** ೧. ಬೈರಿಗೆಯ ಅಲಗು; ತೋಬಡದ ಉಳಿಯಲಗು; ಪಟಕಾರು, ಮೊ.ಗಳ ಕೊನೆಗತ್ತರಿ. ಕಡಿವಾಣ (Bit. ಇಂಕನಿ).

[ ←ತೆಲು. ತೋಪಡ, ತ್ರೋಪು ]

**ತೋಪಡ$_2$** 'ತೋಬರಿ' ನೋ.

**ತೋಪರ** 'ತೋಪಡ$_1$' ನೋ.

**ತೋಪಿ** 'ಟೋಪಿ' ನೋ.

**ತೋಪು$_1$, ತೋಹು$_1$** (ನಾ). ಮರಗಳ ಗುಂಪು,-ಸಮೂಹ : ಇಂತು ಮನಂಗೊಳಿಪ ಮಾವಿನ ತೋಪಂ ಕಂಡು ಪೊಂಗಿ ಪೊಚ್ಚಯೋಜು ಮೆಲ್ಲನೆಟ್ಟಂದಾ ವನಮುನಾಶ್ರಯಿಸಿಕೊಂಡಾನನಂತಕಾಲವಿರಲ್ (ಉದ್ಭಟ. ೬-೧೩ ವ) ; ಗಂಧರ್ವಸುಭಟರಿಂಗೆ ಕುರುಪತಿಯ ಸುಭಟರಿಂಗೆ **ತೊಡಕಿತು** ತೋಟ ತೋಪಿನಲಿ (ಜುಮ್ಮಾಭ. ೧೮-೨೯) ; ತಾಪವನು ಹಿಂಗಿಸುವಶೋಕೆಯ ತೋಪಿನಲಿ ಸರಮೆ ತ್ರಿಜಟೆಯರ ಕಾಪಿನಿಂದಿರಿಸಿದನು ತೊರವೆಯ ರಾಯನಂಗನೆಯ (ತೊರರಾ. ೩-೧೦-೪೪) ; ನರಸರಾಜನೂ ಶ್ರೀ ಪರಮೇಶ್ವರ ಪ್ರೀತಿಯಾಗಿ . . . ಬಾವಿಯನೂ ಆಗುಸಿ ಮಾವಿನ ತೋಪನು ಯಿಕ್ಕಿಸ್ತನು (ಸೌಇಇ. IX-II, ೪೭೭-೨೩ ; 1509) : ಆ ಪತಿವ್ರತೆಯಪ್ಪ ಬಗಿಯೂ ತೋಪಿನಲಿ ಪತಿಯೊಡನೆ ಸಂಗಿಸಿ . . . ಗರ್ಭ ಧರಿಸಿ (ನಿಘಾಗ. ೧೫-೧೩-೫೪) ; ಇಂದ್ರನ ತೋಳ್ಗಳಂದೊಪ್ಪಿದವೃಯೆಳನೀರ್ಪೊತ್ತ ತೆಂಗಿನ ತೋಪುಗಳ ತೆಱದಿ (ಸಾಳ್ವಧಾ. ೩೩-೭೦) ; ಮಾವಿನ ಮರಗಳಂ ಪಾಕಿ ತೋಪು ಮಾಡಿ ಯಾವ ಪುರುಷನು ಸಲಹುವನೊ ಆ ಪುರುಷನು . . . ಸದ್ಗತಿಯನ್ನೈದಿ ಸಂತೋಷಪಡುವನು (ಸೌಗಂಧಿ. ೪೨೪-೧೫) ; ಖಗಗಳುಲಿವ ವಿವಿಧ ಸ್ವನದ ಮೇಳ ತೋಪ ತುಂಬಿದೆ (ಮಾಂದಳ. ೯-೧೭). **ತೋಹು$_1$ :** ಮನೆ ನೆರೆಯೋಳವೆ ತೋಹುಗಳು ವಿವಿಧವೃಕ್ಷಗಳು ಸ್ಥಿರ ಜೀವನಕೆ ಹಸುರುಗುಡಿಯನೆತ್ತಿ (ಧಾರಂಗ. ೬೩).

[ ದೇ. ॥ ತಮಿ. ಮಲ. ತೋಪ್ಪು ; ತುಳು. ತೆಲು. ತೋಪು ]

**ತೋಪು$_2$** 'ತೋರ್ಪು' ನೋ.

**ತೋಪು$_3$, ಟೋಪು$_1$, ತೋಫು** (ನಾ). ೧. ಗುಂಡಂ ಇಟ್ಟು ಹೊಡೆಯುವ ಸಾಧನ : ಫಿರಂಗಿ : ಕರವೆಸೆವ ಕಾವಿ ಮಂಜಟಿಗೆ ತೋಪುಗಳಿಂದೆ ಭರದಿ ಬಾಸಣಿಸೆಸೆವ ಬಲ್ಲಾಳದಟ್ಟಯೊಳಗುರುವೋವದಿಂ ಬರ್ಪವರ್ ಕೆಲರ್ (ಅರಾಪ. ೪-೨೩) ; ತೋಪು ತುಪಾಕಿಗಳು ಇಲ್ಲವಾಗ ಕಾಳಗದಲ್ಲಿ ಆನೆಗಳನ್ನು ಉಪಯೋಗಿಸುತ್ತಿದ್ದರು (ಮುಂಬಯಿ. ೪-೨೩) :

ತೋಪು ತುಪಾಕಿ, ಕುರುಳಿ ಪಿಸ್ತೂಲಬಾರ ಸಹಿತ ನಡುವಿನಾಗ (ಕನ್ನಡಾ. ೮೮). ಟೋಪು$_1$: ೧. ಸಮ್ಮೋಹದಿಂದೊಪ್ಪಿಸುತೆ ಗುರುಪಾದಕಂ ಜನಪನಾಗಳ್ ಟೋಪುಗಳನುಡಾಯಿಸಿದ ಬಳಿಕನುನಯಂ ಚ ರ ಗ ಣ ದ ಕಿಂಥಿಣಗೆ (ಮಹಾವಿ. ೨೨-೮೩). ತೋಪು: ೧. ಕೆಲವು ಜಹಜಿನಲ್ಲಿ ಎಪ್ಪತ್ತೆರಡು ತೋಪು ಇತ್ತು (ರಾಜೇಂದ್ರ. ೧೧೫) : ನಾಡ ಸಂರಕ್ಷಣೆಗೆ ತೋಪು ಇರದಿರಲು ನಾಡಿಗೊಂದಿರಬೇಕು ಬಯ್ಯುವಾ ಮುದುಕಿ (ನಿರಾಥ. ೧೭೯-೨). ೨. ಗೌರವಕ್ಕೋಸ್ಕರವಾಗಿ ಫಿರಂಗಿಯನ್ನು ಹೊಡೆಯುವುದು,-ಹಾರಿಸುವುದಂ; ಫಿರಂಗಿ ಮರ್ಯಾದೆ : ಖಾವಂದರಿಗೆ ಕ್ರಮವಾಗಿ-ತೋಪು ಮುಂತಾದ ಮರ್ಯಾದೆಗಳು ನಡೆದುವು (ಮಹಾವಂ. II, ४४).
[ ←ಹಿಂ. ತೋಪ್ ; ತುರ್ಕೀ, ಮರಾ. ತೋಫ್ ]

ತೋಪುಖಾನಿ 'ತೋಫಖಾನೆ' ನೋ.

ತೋಪೊಳೆ (ಕ್ರಿ). ಚೆನ್ನಾಗಿ ಹೊಳೆ,-ಮಿರುಗು (?) : ತಾರಾಪತಿಯು [ದು]ಸುತೆಯು ತನ್ನಣುಗಂಗೆ ಶ್ರೀಫಲಪಯೋಧರಂಗಳನು ಪಾನಂಗೈಸಿ ತೈಲವಂ ಪೂಸಿಯೆರೆದು ತೋಪೊಳೆವ ಪೊಂದೊಟ್ಟಿಲೊಳಗಿಟ್ಟು . . . ಪಲಹುತಿರ್ದಳು (ನವಮೋ. ೦೫-೪೭). [ <ತೋಱು + ಪೊಳೆ$_1$ ]

ತೋಫಖಾನೆ, ತೋಪುಖಾನಿ (ನಾ). ಮದ್ದು ಗುಂಡುಗಳ ಸಂಗ್ರಹಾಲಯ,-ಗೋದಾಮು : ಜಪಾನಿಗಳಿಂದ ತೋಫಖಾನೆಯ ಗುಂಡುಗಳು ಹಾರಹತ್ತಿದ್ದುವು (ಪ್ರಣಸ. ೭४). ತೋಪುಖಾನಿ: ತೋಪುಖಾನಿ ಸನ್ನಾಹತಂತ್ರ ಪ್ರಯೋಗಮುಖದಿಂ ಫೌಜಂ ಮದೆಗೆಡಿಹಿ (ಕಳನ್ನ ೮-೧೦).
[ ←ಮರಾ. ತೋಫ್ ಖಾನಾ ; ಹಿಂ. ತೋಪ್‌ಖಾನಾ ; ಪಾರ. ತೋಪ್‌ಖಾನಹ್ ]

ತೋಫು 'ತೋಪು$_3$' ನೋ.

ತೋಬಡ 'ತೋಪಡ$_1$' ನೋ.

ತೋಬರ 'ತೋಬರಿ' ನೋ.

ತೋಬರಿ, ತೋಪಡ$_2$, ತೋಬರ (ನಾ). ಕುದುರೆಯ ಬಾಯಿಗೆ ಕಟ್ಟುವ ಕಡಲೆಯ ಅಥವಾ ಹುರುಳಿಯ ಚೀಲ ; ಮುಖ ಚೀಲ : ಡೋರರು . . . ತೊಗಲಿನ ಬುದ್ದಲಿ, ಕುದುರೆಯ ತೋಬರಿ, ಲಗಾಮು, ಜೀನು ಮುಂತಾದ ತೊಗಲಿನ ಸಾಮಾನುಗಳನ್ನು ಮಾಡುವರು (ಕಥಾಗ. ೨೧೯) ; ತೋಬರಿಯಲ್ಲಿ ಕಡಲೆಯನ್ನು ಹಾಕಿ ಆ ತೋಬರಿಯನ್ನು ಕುದುರೆಗೆ ತೋರಿಸಿ . . . ಅದನ್ನು ಹಿಡಕೊಂಡದ್ದು ಅವನಿಗೆ ನೆನಪಾಯಿತು (ಮುಂಬಯಿ. ४-೮೦). ತೋಪಡ$_2$ : ಕೂಸಪ್ಪ... ಹುರುಳಿ ಇಸುಗೊಂಡ. ತೋಪಡದ ಚೀಲಕ್ಕೆ ತುಂಬಿ ಇಟ್ಟುಗೊಂಡ (ದಿನಾರಿ. ೩೭). ತೋಬರ :(೬).
[ ←ಪಾರ. ತೋಬರಾ, ತುಬರಾ; ಹಿಂ. ತೋಬಡಾ; ಮರಾ. ತೋಬ್ರಾ, ತೋಬರಾ ]

ತೋಮ (ನಾ). ಗುಂಪು ; ಸಮೂಹ ; ನೆರವಿ: "ಸ್ತೋಮ – ತೋಮ" (ಶಮದ. ೨೭೨ ಪ್ರಯೋ) ; "ಬಂಬಲ್, ತುಱುಗಲ್ . . . ತೋಮಂ, ತೆಮ್ಮಲ್, ಗುಮ್ಮಿ, ಗೊಂದಣ (ಉಂದಲ್) – ಈ ४೦ ಸಮೂಹಂ" (ಕಶಸಾ. ೫೭-೨೨೨). [ <ಸಂ. ಸ್ತೋಮ ]

ತೋಮರ (ನಾ). ೧. ತುದಿಯಲ್ಲಿ ಮೊನಚಾಗಿರುವ ಈಟಿಯಂತಹ ಒಂದು ಬಗೆಯ ಆಯುಧ : "ತೋಮರ ಪಿಂಡಿವಾಳ ಪಟ್ಟಿಶ . . . ಕೈದುಗಳ ಭೇದಮಕ್ಕುಂ" (ಮಂಗರಾ. ೮೮-೩೮); ಶಕ್ತಿ ತೋಮರ ಮುಸಲ . . . ವಿವಿಧಾಯುಧಂಗಳೊಳಮತಿಪ್ರವೀಣನುಂ (ಪಂಪಭಾ. ೨-೩४ ವ): ನಾಳಿಯ ಕೋಲ್ ಜವನಾಳಿಪೆಂಬಿನಂ ಕವಿದುವು ತೋಮರಂ ಜವನ ದಾಮರವಾದುವು (ಪಂಪಾಮಾ. ೧೩-೭೧) ; ಶಶಿಕಾಂತದ ಶಿಲಾತಳದೊಳ್ ಪೊರಳುತಿರ್ಪ ಪರವೆಗೆ ಅಶೋಕೆ ಸಶೋಕೆ ಮಾಮರಂ ತೋಮರಂ ಬೆಳ್ದಿಂಗಳು ಬಿಳಿಯಿಂಗಳಂ (ನಂಬಿರ. ೧೬-೨೩) ; ಆ ಮಹಾಸಂಗ್ರಾಮ ಮುಖದಲಿ ತೋಮರದ ಕಾಣಿಕೆಗಳಲಿ ಸುಪ್ರೇಮವನು ಬೆಸಸುವುದು ದುರಿಯೋಧನನ ಮತವೆಂದ (ಕುಮ್ಯಾ ಉ. ೧೧-४) ; ಆ ಮರುತ್ತನ ಯಜ್ಞಕೈತಂದಾ ಮರುದ್ಗಣ ಮುನಿಗಣಂಗಳ ತೋಮರದ ತೋಟಿಯಲಿ ಕೆದಱಿತು ಕದನಕೇಳಿಯಲಿ (ತೊರರಾ. ೧-೮-೩೮); ಕುಂತ ತೋಮರ ಖಡ್ಗ ಸುರಗಿ ಭಲ್ಲೆಹಗಳ ಕಾಂತಿ ಮುಸುಕೆ ಚೌದೆಸೆಯ (ಕಂನವಿ. ೦೫-೨೧) ; ಹೆರರ ಕೊಲ್ಲಲು ಕತ್ತಿ ಪರಶು ತೋಮರ ಬೇಕು (ಪಾಂಡಜ. ४೧-೫). ೨. ತುದಿಯಲ್ಲಿ ಅರ್ಧಚಂದ್ರಾಕೃತಿಯಲ್ಲಿರುವ ಒಂದು ಬಗೆಯ ಬಾಣ: ಕಿರಣತೋಮರದಕ್ಷಿಣೋರುಸ್ಫುರಣ ತಿಮಿರ ಮೃಗೀಕದಂಬಕ ತರಣ ನೂಕಿದನುದಯಶೈಲಕೆ ರತುನಮಯ ರಥವ (ಕುಮ್ಯಾಕ. ೮-೧೫) ; ಮೂದಲಿಸಿ ಖಳನಿಟ್ಟನಿಪ್ಪತ್ತೈದು ತೋಮರಗಳಲಿ ಜೀವವಕಾಯ್ದುಕೊಳ್ಳೆನುತ (ನಿಭಾಗ. ೧೦-೭೯-೩೮). ೩. ಲೋಹದ ಗದೆ. P ಈ ಆಯುಧದ ಆಕಾರವಿಷಯದಲ್ಲಿ ಭಿನ್ನಾಭಿಪ್ರಾಯವಿದೆ ४. [ಛಂದ] ಒಂದು ವಿಧವಾದ ರಗಳೆ: ವೃತ್ತಜಾತಿ ಸಮುಚ್ಚಯದಲ್ಲಿ ಅಸಿ, ಅಶನಿ, ತೋಮರ . . . ಕ್ಷುರಪ್ರ ಇತ್ಯಾದಿ ಆಯುಧಗಳ ಹೆಸರುಗಳು ಪಂಚಮಾತ್ರಾಗಣ ನಿರ್ದೇಶಕ್ಕಾಗಿ ಪ್ರಯೋಗವಾಗಿವೆ . . . ಆದ್ದರಿಂದ 'ತೋಮರ' ಎಂದರೆ ಪಂಚ ಮಾತ್ರಾಗಣವೆಂದು ಸ್ಪಷ್ಟ (ಛಂದೋವಿ. ಪುಟ. ೨). 'ತೋಮರರಗಳೆ' ಪರಾ. [ ಸಂ. ]

ತೋಮರರಗಳೆ (ನಾ). [ಛಂದ] ರಗಳೆಯ ಭೇದಗಳಲ್ಲಿ ಒಂದು; ಲಲಿತ ಬರಗಳೆ ಪ್ರತಿಪಾದದಲ್ಲಿಯೂ ಐದು ಮಾತ್ರೆಯ ನಾಲ್ಕು ಗಣಗಳು ಇರುವ ರಗಳೆ:ತೋಮರರಗಳೆ-ಶ್ರೀ ಮದರುಹಚ್ಚರಣ ಸರಸಿರುಹಭೃಂಗನಂ ಭೂಮಿ ಕೀರ್ತಿಸೆ ನೆಗಳ್ದ ಗುಣಗಣೋತ್ತುಂಗನಂ (ಸೌಇಇ. IX-ii, ೧೧೭-೧೬ ; 1055) ; ತೋಮರರಗಳೆಯೆಂದರೆ ಪಂಚಕಲದ ಗಣಗಳಿಂದ ರಚಿತವಾದ ರಗಳೆಯೆಂದು ಅರ್ಥ . . . ಇಂದ್ರಕೀರ್ತಿಯನ್ನು ವರ್ಣಿಸುವ ಪದ್ಯಗಳು ಲಲಿತರಗಳೆಯಲ್ಲಿದ್ದು ಅಲ್ಲಿ ಅವುಗಳನ್ನು 'ತೋಮರರಗಳೆ' ಎಂದು ಹೆಸರಿಸಲಾಗಿದೆ (ಛಂದೋವಿ. ಪುಟ. ೨). [ ತೋಮರ + ರಗಳೆ ]

ತೋಮಾಲೆ (ನಾ). ದೊಡ್ಡ ಹಾರ : ಆಜ್ಞಾಧಾರಕರಾಗಿರುವ ಮಠದ ಬ್ರಾಂಹ್ಮರುಗೆ ಮೊದಲು ತೀರ್ಥ ತೋಮಾಲೆ ಮೊದಲಾದ ಸಕಲ ಮರಿಯಾದೆಗಳನ್ನು ನಡಸುವದು (ಮ್ಯಆ. ೧೯೩೮, ೦೯-೧೧ ; 1811) ; ಪಂಡಿತ ಪೆರುಮಲೆಯವರು ಅನಂತರ ಮಗಳ ಕೈಗೆ ನವಮಲ್ಲಿಕಾ ತೋಮಾಲೆಯನ್ನು ಕೊಟ್ಟರು (ಶಾಂತಲಾ. ೧೦೯). [ <ತೋರ + ಮಾಲೆ ]

ತೋಮೆ 'ತೊಂಬೆ$_1$' ನೋ.

ತೋಯ$_1$ 'ತೊಪ್ಪೆ' ನೋ.

ತೋಯ$_2$ (ನಾ). ೧. ನೀರು ; ಉದಕ ; ಜಲ : "ಸಲಿಲಂ ಜೀವನಮಂಬು ತೋಯಮುದಕಂ" (ವಸ್ತುಕೋ. ೨೨-೧); ಎನ್ನ ಮಾತಿಂಗೆಲೆ ಕೌಂತೇಯ ಮಱುಮಾತನಿತ್ತು ಮದೀಯ ಸರೋವರದ ತೋಯಮಂ ಕುಡಿ (ಪಂಪಭಾ. ೮-೩೦) ; ಚತುಃಕೋಣಕಳಶಭರಿತತೋಯದಿನಭಿಷೇಕಂಗೆಯ್ದು (ಆದಿಪು. ४-೭೦ ವ) ; ಕಾಶಿಯ ನದೀತೋಯಂಗಳಂ ಮಂಗಳೋತ್ಸವದಿಂ ಭೂವರ ವೃಂದಮಂ ನಿಲಿಸಿ ಸಾಲ್ಗೊಂಬಂತುಟೋರೋರ್ವಱಾದವನಂದ್ಯೆದಿಸಿದಂ ಸುವರ್ಣಘಟದಿಂ (ರಾಜಶೇ. ೩-೩೧) : ಶೀತಲಸುಗಂಧಮಯ . . . ವಿಮಲತೋಯಮಿದು (ಶ್ರೀರಾಮಾ. ೧೭೭-४೨೨). ೨. [ಛಂದ] ಒಂದು ಅಕ್ಷರಗಣ ; ಯಗಣ (ಲ - -) : ಗುರು ಮೂಱಾಗಿರೆ ಧಾತ್ರಿ ಮುಂತೆರಡು ಬಣ್ಣಂ ತೋಯಂ (ಛಂದೋಂಬು. ೧-೩೮). [ ಸಂ. ]

ತೋಯಕುಂಭ (ನಾ). ನೀರಿನ ಕೊಡ,-ಕಳಶ : ದೇವಮಹೀರುಹವ್ರಜದೊಳಂ ದೇವಾಪಗಾತೋಯಕುಂಭದೊಳಂ ದೇವವರಂ ಸ್ರವಂಗೆಯೆ (ಜಗವಿ. ೩-೧೭). [ ತೋಯ$_2$ + ಕುಂಭ ]

**ತೋಯಜ** (ಗು). ೧. ನೀರಿನಲ್ಲಿ ಹುಟ್ಟಿದ. (ನಾ). ೨. ಕಮಲ : ತಾವರೆ : ಸುಭಟರ ಚರಣತೋಯಜದ ಘಾತದಿಂ ಕೆಂಧೂಳಿ ಮಸಗೆ (ಧಾವಚಂ. ೫-೧೮) ; ತೋಯಜವೆಂಬ ಪುಷ್ಪದ ಪೆಸರವರೊಳು ಇರಿಸು ಕಂಡ್ಯ ಎನ್ನನು (ಶನಕ. ೧೫೦-೨). [ ಸಂ. ]

**ತೋಯಜಗರ್ಭ** (ನಾ). ೧. ಕಮಲದ ಒಳಭಾಗ : ಎಲೆ ಮಧುವ್ರತ ನೀನದ ಸೋಂಕೆ ನಿನ್ನ ಕೇಳ್ ತೋಯಜಗರ್ಭವೆಂದೆನಿಪ ಬಂಧನವುಂದಿರ ಕಿಂದು ಸೇರಿಪೆಂ (ರಾಕುಂತ.೯೧-೧೫೦). ೨. ಕಮಲದಲ್ಲಿ ಜನ್ಮತಾಳಿದವನು; ಬ್ರಹ್ಮ : ತೋಯಜಗರ್ಭನಾದಿಮುನಿಮುಖ್ಯಮತಪ್ರಕಟೀಕೃತಾಖಿಳಾ ಮ್ನಾಯಂ . . . ಒಲ್ದು ದೀರ್ಘಾಯುಮನೀಗೆ (ಪಂಚತಂ. ೧-೯).
[ ತೋಯಜ + ಗರ್ಭ ]

**ತೋಯಜನಾಭ** (ನಾ). ಹೊಕ್ಕುಳಲ್ಲಿ ತಾವರೆಯನ್ನುಳ್ಳವನು; ವಿಷ್ಣು: ತೋಯಜನಾಭನನಂತಸಹಾಯಂ ನಲಿದಿಂತು ವತ್ಸಕುಲಮಂ ಕಾದಂ (ಜಗವಿ. ೩-೭೮). [ ಸಂ. (ತೋಯಜ + ನಾಭಿ + -) ]

**ತೋಯಜಪ್ರಭವ** (ನಾ). = ತೋಯಜಗರ್ಭ೨ : ಅಂಬುಜಾಂಬಕ ತೋಯಜಪ್ರಭವರು ಸುಧಾಶನನಾಯಕಾದಿ ದಿಶಾಧಿಪರು . . . ಬಂದರೀಶ ನನೋಲೈಸಲೆಂದು (ಬಸಪು. ೧-೪೧). [ ತೋಯಜ + ಪ್ರಭವ ]

**ತೋಯಜಭವ** (ನಾ). = ತೋಯಜಗರ್ಭ ೨. [ ಸಂ. ]

**ತೋಯಜಮಿತ್ರ** (ನಾ). ತಾವರೆಯ ಸ್ನೇಹಿತ ; ಸೂರ್ಯ : ಮತ್ತಮಾ ಗ್ರೀಷ್ಮಕಾಲದೊಳ್ ತೋಯಜಮಿತ್ರನೇಟ್ಗಿವಡೆದೊಪ್ಪಿರೆ (ಉದ್ಭಟ. ೯-೭೭). [ ತೋಯಜ + ಮಿತ್ರ ]

**ತೋಯಜಷಂಡ** (ನಾ). ೧. ತಾವರೆಗಳ ಸಮೂಹ. ೨. ತಾವರೆಗಳ ಗುಂಪನ್ನುಳ್ಳುದು;ಸರೋವರ: ತೋಯಜಷಂಡಮನಿದನಾನಾಯುತಿಯಿಂ ಕಾವೆನೆನ್ನ ಮಾತಿಂಗೆಲೆ ಕೌಂತೇಯ ಮಬುಮಾತನಿತ್ತು ಮದೀಯ ಸರೋ ವರದ ತೋಯಮಂ ಕುಡಿ (ಪಂಪಭಾ. ೮-೩೯). [ ತೋಯಜ + ಷಂಡ ]

**ತೋಯಜಾಕರ** (ನಾ). ಕಮಲಗಳಿರುವ ಸರೋವರ ; ಕಮಲಾಕರ : ತೋಯಜಾಕರದಂತೆ ಪದ್ಮಾಲಯಂ ಶಿವನ ಕಾಯದಂದದೆ ಸರ್ವಮಂಗಳಾ ಲಂಕೃತಂ ರಾಯಜನ ಹಿತಸಂತನಂತಮಣಿರಂಜಿತದೊಳರಮನೆ ವಿರಾಜಿ ಸಿದುದು (ಚಬಪು. ೫-೫೩). [ ತೋಯಜ + ಆಕರ$_3$ ]

**ತೋಯಜಾಕ್ಷ** (ನಾ). ಕಮಲದಂತೆ ಕಣ್ಣುಳ್ಳವನು : ವಿಷ್ಣು ; ಅಂತಪುರ ಮಾವಳ್ಗೆ ವನಮಾಲಿಕಾಲಂಕೃತಂ ತೋಯಜಾಕ್ಷವಕ್ಷಸ್ಥಲಂ . . . ಆ ಲಕ್ಷ್ಮೀದೇವಿ ಸಂತತಮುಮೆನ್ನೊಳ್ಸುಧಾದೃಷ್ಟಿಯಿಂತಿಹ ಕಟಾಕ್ಷವೃಷ್ಟಿಯ ಸುರಿಸಲಿ (ಲೀಪರಾ. ೧-೪). [ ಸಂ. (ತೋಯಜ + ಅಕ್ಷಿ + -) ]

**ತೋಯಜಾನನೆ** (ನಾ). ಕಮಲದಂತೆ ಮುಖವುಳ್ಳವಳು; ಕಮಲಮುಖಿ: ಜೀಯ ನಿಮಗಂ ನಿನ್ನ ನಮಿಸಿದ ತೋಯಜಾನನೆ ಇಂದು ಮರಣಂಗಯ್ವಳ್ (ಬಸಪು. ೩೨-೪೨). [ ಸಂ. ತೋಯಜಾನನಾ (ತೋಯಜ+ಆನನ + -)]

**ತೋಯಜಾರಿ** (ನಾ). ಕಮಲಕ್ಕೆ ಶತ್ರುವಾದವನು ; ಚಂದ್ರ.
[ ತೋಯಜ + ಅರಿ$_4$ ]

**ತೋಯದ** (ನಾ). ನೀರನ್ನು ನೀಡುವುದು; ಮೋಡ ; ಮುಗಿಲು : ನಡೆದನಾ ದೈತ್ಯೇಶ್ವರಂ, ದಿವಂಗತ ಸುತನ ಸತಿಯ ಶೋಕಾಗ್ನಿಯಿಂ ತವಿಪ ಪೆರ್ಮಳೆಗಳಂ ಕರೆಯುವ ಮನೋನಿಶ್ಚಯದ ತೋಯದಂಗಳಂ ಪೊತ್ತುಯ್ವ ಕಾರ್ಗಾಳಿಯೋಲ್ (ಶ್ರೀರಾಮಪಟ್ಟಾ. ೭೩೯-೧೫೦). [ ಸಂ. ]

**ತೋಯಧಿ** (ನಾ). ಕಡಲು; ಸಮುದ್ರ: "ರತ್ನಾಕರಃ . . . ತೋಯಧಿಃ . . . ಸಮುದ್ರಃ – ಈ ೧೨ ಸಮುದ್ರಂ" (ಹಲಾಯು. ೧೦೭-೩೦) ; ಆಯುಮಂ ಶ್ರೀಯುಮಂ . . . ನೃಪತಿ ನಿನಗೆ ನಿಜಸಂತತಿಯುಂ ನ್ಯಾಯದ ವೆರ್ಚುವುದಕ್ಕೀ ತೋಯಧಿ ಧರ[ಣೀಧ]ರಾಧರ ಸ್ಥಿತಿವರೆಗಂ (ಕವಿರಾ. ೩-೨೦೭) ; ಶ್ರೀಯನರಾತಿಬಲಾಸ್ಯಕ್ತೋಯಧಿಯೊಳ್ ಪಡೆವ ವೀರನು ಜವರೆಗಳನಾತ್ಮೀಯಾಮವದಸ್ಫುರಿತನಯಿಚ್ಛಾಯಃಗಳೊಳ್ ... ಗಂಡಂ ಹರಿಗಂ (ಪಂಪಭಾ. ೬-೧); ... ಯೊಳ್ ತಾಳ್ದು (ಅಟ್ಟಮ. ೧-೧). [ ಸಂ. ]

**ತೋಯನಿಧಾನ** (ನಾ). = ತೋಯಧಿ : ತೋಯನಿಧಾನಫೇನ... ತ್ರಮುವಸ್ತ್ರಮನುಟ್ಟು ಪುಷ್ಪಮಾಲಾಯುತಮಾಗಿ . . . (ಪಂಚತಂ. ೭೪-೫). [ ತೋಯ$_2$ + ನಿಧಾನ ]

**ತೋಯನಿಧಿ** (ನಾ). = ತೋಯಧಿ : ಶ್ರೀಯ ಚಾಮರದ (ಸುಟಿಗಳಂ)– ತಿಳಿಗೊಳಂಗಳಂ ತೋಯನಿಧಿಯ (ಪೆರ್ಗಡೆಯ)–ಪಿರಿಯ ಸುಟಿಗಳಂ . . . ಪೋಲ್ತೆಯಪ್ಪ ಮುಗಿಲಿಂದೆ ಮುಟೆ . . . ಕಡೆಗಾಂ (ಅಟ್ಟಮ. ೮-೧೨). [ ತೋಯ$_2$ + ನಿಧಿ ]

**ತೋಯಪಾನ** (ನಾ). ನೀರನ್ನು ಕುಡಿಯುವಿಕೆ ; ಜಲಪಾನ : ಬಾಯ ಗೇಳಿಸುತಿರ್ದ ನಾವ್ ತತ್ತೋಯಪಾನಕೆ ತಿರುಗಿ ಕಂಡೆವು ರಾಯನಂಘ್ರಿ ಗಳಾಣೆಯೆಂದರು ಶಬರರನಿಬರುಗೆ (ಕುಮ್ಮಾರ. ೪-೫೨).
[ ತೋಯ$_2$ + ಪಾನ$_2$ ]

**ತೋಯಪಿಪ್ಪಲಿ** (ನಾ). ನೀರು ಹಿಪ್ಪಲಿ [ ತೋಯ$_2$ + ಪಿಪ್ಪಲಿ ]

**ತೋಯಭೃತ್ತು** (ನಾ). ನೀರನ್ನು ಧರಿಸಿರುವುದು ; ಮೋಡ : ಅಪೂರ್ವ ತೋಯಭೃದ್ವಿಸರದೆ ವಾಃಕಣಂಗಳುಗುತಂದಪುವೆಂದೆ ಪೊಡರ್ಪುಗೆಯ್ದು ಪೂರಿಸುವಳಿಪಿಂದೆ ಪುಷ್ಕರಮನೆತ್ತಿದುದುಂದು ನಭಕ್ಕದೊಂದಿಭಂ (ಚಂದ್ರಪು. ೯-೭೩). [ ಸಂ. ತೋಯಭೃತ್ ]

**ತೋಯರಾಶಿ** (ನಾ). ಜಲರಾಶಿ ; ಸಮುದ್ರ : ಮಂತ್ರಿವರ್ಗದುಜ್ವಲ ನವರತ್ನಭೂಷಣಕಿರೀಟಪಟದ್ಯುತಿಯಿಂದದೇಂ ಪಳಂಚಲೆದುದೊ ರಾಜ ರಾಜಸಭೆ ಕುಂಭಜನೀಂಟಿದ ತೋಯರಾಶಿಯಂ (ಪಂರಾಮಾ. ೬-೭೪).
[ ತೋಯ$_2$ + ರಾಶಿ ]

**ತೋಯರುಹ** (ನಾ). = ತೋಯಜ ೨. 'ತೋಯರುಹನಾಭ' ಪದಾ.
[ ಸಂ. ]

**ತೋಯರುಹನಾಭ** (ನಾ). = ತೋಯಜನಾಭ : ತೋಯರುಹನಾಭ ನ್ಯೆಂದ್ರಾಗ್ನೇಯಾಂತಕಕೌಣಪಾನ್ನತತಿಯಿಂದಿಸೆ (ಜಗವಿ. ೦೩-೪೧).
[ ಸಂ. (ತೋಯರುಹ + ನಾಭಿ + - ) ]

**ತೋಯಾಕರ** (ನಾ). ನೀರಿಗೆ ಆವಾಸಸ್ಥಾನವಾದುದು; ಜಲಾಶಯ : ಸರೋವರ : ಪರಮಶ್ರೀಸಂತತಾವಾಸದೊಳಖಿಲಸುವಿಸ್ತೃತಸಂಪನ್ನ ತೋಯಾಕರದೊಳ್ . . . ಸೌಂದರಕೇಲೀಹಂಸನಾದಂ (ಆದಿಪು. ೧೭-೭೫).
[ ತೋಯ$_2$ + ಆಕರ$_3$ ]

**ತೋಯಾಧೀಶ** (ನಾ). ನೀರಿಗೆ ಒಡೆಯನಾದವನು ; ಜಲಾಧಿಪತಿ : ವರುಣ : ಪವಮಾನಂ ದಹನಂ ವಾಸವ ತೋಯಾಧೀಶರೆಂಬಿವರ್ ಸಲೆ ರಾತ್ರಿಂದಿವಗಳೊಳೊಂದೊಂ(ದರೆ ?)ದುಂ ಜಾವವನಾಳ್ವರ್ (ಲೋಕೋಪ. ೪-೭೮). [ ತೋಯ$_2$ + ಅಧೀಶ ]

**ತೋಯಾಶಯ** (ನಾ). ನೀರಿಗೆ ಆಶ್ರಯವಾದುದು ; ಜಲಾಶಯ : ಕೆರೆ : "ಪ್ರದಿಃ, ತೋಯಾಶಯಃ – ಈ ೨ ಮಡು" (ಹಲಾಯು. ೧೧೧-೪೮); ಮಾರ್ಗಾನೇಕ ತೋಯಾಶಯಮನುರುರಜಂ ಪೀರೆ ದಾನಪ್ಲವಂ ಪೂರಿಸೆ ತೋಟಿತ್ರೆತ್ರಮಾದಂ ಹರಣಭರಣಚಾತುರ್ಯಮಂ ಚಾತು ರಂಗಂ (ಚಂದ್ರಪು. ೧೦-೩೦). [ ತೋಯ$_2$ + ಆಶಯ ]

ತೋಯಿ 'ತೊಪ್ಪೆ' ನೋ.

**ತೋಯಿಲ** (ನಾ). ಹೊಲಸುನೀರು : ನಾಯುಡುಗು ನರಕನಿಳಯಂ ಮಾಯೆಯ ಕಣೆ ಬಿಡದ ಜಿಗುಟು ಪಾಪದ ಪುಂಜಂ ತೋಯಿಲಕುಟಿ ಪೊಲಗೆಡೆಯೆಂದಾಯತಿಯಿಂ ಬಗೆವರುಚಿಮರಾ ಸೂಳೆಯುಮಂ (ಪಕಾಂ. ೨೯೯). 'ತೋಕುಳಿ' ಪದಾ. [ ? ]

**ತೋಯಿಸು**, ತೊಯಿಸು, ತೊಯ್ಯಿಸು, ತೊಯ್ಸು (ಕ್ರಿ). ನೆನಸು ; ಒದ್ದೆಮಾಡು ; ತೇವವಾಗಿಸು : ರಸವಿಶೇಷದೊಳತಿವಿಮಲಸಿತವಸನ ತೋಯಿಸಿ ಅಗ್ನಿಯೊಳಗಿಡೆ ಪಸರಿಸುವುದು ಪ್ರಕಾಶ ನಸುಗುಂದದಲೆ ಸರ್ವತ್ರ (ಜಗದಾ. ೩೩೪) ; ಒಂದೇ ಉಸುರಿನಲ್ಲಿ ಮಕ್ಕಳಂತೆ ಅಳುತ್ತಾ ಕಣ್ಣೀರಿನಿಂದ ನನ್ನ ಕಾಲು ತೋಯಿಸಿದ (ಪತಂಗ. ೧೮) ; ಅವನನ್ನು (ಆತ್ಮನನ್ನು) ಶಸ್ತ್ರಗಳು ಕತ್ತರಿಸಲಾಗುವುದಿಲ್ಲ . . . ಜಲವು ತೋಯಿಸಲಾಗುವುದಿಲ್ಲ (ಅನಾಸ. ೬) ; ಸಾರಕವೆಂದು ಈ ತೌಡು ಉಪಯೋಗಿಸುವ ದಾದಲ್ಲಿ, ತೋಯಿಸಿ ಹಾಕಬೇಕು (ಗೋಗ್ರಾಸ. ೬೮). **ತೊಯಿಸು :** ಪಿಕಾಳಿಯು ನೀರನುಣ್ ಸೂಸುವ ಕೋವಿದಜನವುಂ ಸೂತ್ರಕಲಾಕೋವಿದೆಯುತೊರ್ಯಿಸಿದರವರ್ದ ಪರಿಮಳಜಲದಿಂ (ಉದ್ಭಟ. ೮-೬೩) ; **ಜೊಲ್ಲು** ಆಹಾರವನ್ನು ತೊಯಿಸುತ್ತದೆ (ಮುಂಬಯು. ೪-೮೫). **ತೊಯ್ಯಿಸು :** ಮೇಘಜಲ ತೊಯ್ಯಿಸಿರೆ ತಳಿರುಗಳ (ಧ್ವನ್ಯಾಲೋ. ೬೭). **ತೊಯ್ಸು :** ಹರಿದು ಬಂದು ನನ್ನ ಮೈ ತೊಯ್ಸಲೆಂದೇ ನೀನಲ್ಲಿರುವೆ! (ಕಲ್ಲೋಲ. ೧೪-೮). [ ತೋ + – ಇಸು₃ ]

**ತೋಯು** 'ತೋ' ನೋ.

**ತೋಯೆ** 'ತೊಪ್ಪೆ' ನೋ.

**ತೋಯೇಜ** (ನಾ). = ತೋಯಜ ೨. 'ತೋಯೇಜಾಸನ' ಪರಾ. [ ಸಂ. ]

**ತೋಯೇಜಾಸನ** (ನಾ). ಕಮಲವನ್ನು ಪೀಠವಾಗಿ ಉಳ್ಳವನು ; ಬ್ರಹ್ಮ : ತೋಯೇಜಾಸನನಿಂದ್ರ ರುದ್ರ ಧನಧರ್ ಮುಂತಪ್ಪ ದೇವೇಶರುಂ ಶ್ರೀಯುಂ ಬೀರುವ ನಿನ್ನ ಪಾದರಜಮುಂ ಶೀರ್ಷಾಗ್ರದೊಳ್ಪೊತ್ತು (ಮ್ರುಸೂಮ. ೨-೫೮). [ತೋಯೇಜ + ಆಸನ ]

**ತೋಯೋದ್ದೇಶ** (ನಾ). = ತೋಯಾಶಯ : ಅಪ್ಪದಿಜ್ನಾಗರಾಜಗೆ ಮಯ್ಗರ್ಚೆ ಕೊಳಲ್ಕಜಂ ಸಮೆದ ತೋಯೋದ್ದೇಶವೋ ಸಂದಯಂ ಬಗೆಗಾದತ್ತೆನಿಸಿರ್ದುದೇಂ ಪಿರಿದೊ ವೈಶಂಪಾಯನಾಬ್ಜಾಕರಂ (ಗದಾಯು. ೬-೧೧). [ ತೋಯ₂ + ಉದ್ದೇಶ ]

**ತೋಯೋದ್ಭವ** (ನಾ). ನೀರಿನಲ್ಲಿ ಹುಟ್ಟಿದುದು : ಮುತ್ತು, ರತ್ನ ಮೊದಲಾದುವು : ಬುಧಂ . . . ಶಶಿಗೇಹದೊಳ್ ನೆಲಸೆ ಬಂಧುದ್ವೇಷಿ ತೋಯೋದ್ಭವದ್ರವಿಣಂ (ಜಾತಕ. ೧೭-೩೪). [ ತೋಯ₂ + ಉದ್ಭವ ]

**ತೋಯೌಕಸ** (ನಾ). ನೀರಿನಲ್ಲಿ ಬದುಕುವ ಪ್ರಾಣಿ ; ಜಲಚರ : ಭೇಕ ಶುಕ್ತಿಕೆ . . . ಕಮಠ ಕಂಬು ಪ್ರಮುಖ ತೋಯೌಕಸಾಪ್ತ್ವಯದಿಂದೆ ರಾಜಿಸುತಿರ್ಪುದಂಬುನಿಧಿ (ಶಂಕದಾ. ೧-೩೦). [ಸಂ. ತೋಯೌಕಸ್]

**ತೋರ, ಥೋರ** (ನಾ). ೧. ಗಾತ್ರವಾದುದು ; ದಪ್ಪವಾದುದು ; ಸ್ಥೂಲವಾದುದು : ಕಾಯ್ದ ಕಬ್ಬಿಣ್ಣ ನಿಡಿಯವುಂ ತೋರಮುಮಪ್ಪ ಕೀಲ್ಗಳಿಂದಂ ಮೆಯ್ಯೆಲ್ಲಮುಂ ನಿರಂತರಮುರ್ಚೆ ಪೋಗಿ ನೆಲನಂ ತಾಪಿನಂ ಕೀಲಿಜಿಯೆಪಟ್ಟ ಮೆಯ್ಯನೊಡೆಯನಾಗಿಯುಂ (ವಡ್ಡಾರಾ. ೫೦-೬) ; ಮಾನದ ತೋರಿಹ ಆವಿಂಗೆ ಕೊಳಗದ ತೋರಿಹ ಕಟ್ಟಲು (ಅಪದಂ. ೧೨-೪೮) ; ತೆಂಗಿನ ಕಾಯು ತೋರದ ಮೊಲೆಪೊತ್ತ ಲತಾಂಗಿಯ . . . ಚೆಂದುಟಿಯುನಿದೆನೆಮೋಹತರಂಗಿಣಿವೇಳ್ವೆ (ಮೋಹತ. ೧-೩೭ ; ತೋರವಾಗಿರುತಿಹುದು ಪರ್ವತ ಧಾರುಣಿಯನದು ಹರಹಿಕೊಂಡೇ ದೂರದೀದಲಿ ನೋಡಿದಡೆ ಅಣುವಾಗಿ ಕಾಣಿಪುದು (ಜ್ಞಾನಸಿಂ. ೬-೨೦). ೨. ಗಾತ್ರ ; ಆಕಾರ : ತೋರದಲಿ ಕುಲಗಿರಿಯು ಸತ್ವದ ಸಾರದಲಿ ವಜ್ರವನು ದನಿಯಲಿ ಕಾರ ಬಜಸಿಡಿಲಂದವಿದನುಗಿದೊಂದು ಮಾಡಿದನು (ಕುಮಾರಭೀ. ೩-೧೮) ; ಕಣಕವನು ನಿಂಬೆಯು ಹಣ್ಣ ತೋರದುಂಡೆಯ ಮಾಡಿ (ಸೂಪಶಾ. ೧-೨೫); ಪಿರಿದಪ್ಪ ಕುಂಬಳಕಾಯು ತೋರದ ಮುತ್ತಿನಿರವಾಂತು ಮೆಱೆವ ಕಾವ್ಯಗಳು ಇರಲು ನಾ ಪೇಳ್ವ ನೆಲ್ಲಿಯಕಾಯು ತೋರದ ಪರಮುತ್ತಿನಂತೀ ಕೃತಿಯು (ನಾಗಕು. ಬೀಪಿಕಾಸಂಧಿ. ೫೯); ೩. ಹೆಚ್ಚಳ ; ಆಧಿಕ್ಯ : ಮುರಿದೆಲರತ್ತೆ ಮೆಯ್ದುರಿದು ತೋರಮನಾಳ್ದು ಪೊದಟ್ದು ನೀಳ್ದ ಪಂಕರುಹ ಪರಾಗಮುಂ ಜವದೆ ಮಂದರಮಾಗೆ ಸರೋವರಾಬ್ಧಿಯುಂ ಸ್ಮರಸುರವಲ್ಲಭಂ ಪೊಸೆದು ಪುಟ್ಟಿಸುವಿಂದುಗಳಂದದಿಂ (ಲೀಲಾವ. ೧೩-೧೨೩); (ಗುಂ). ೪. ದಪ್ಪವಾದ ; ಸ್ಥೂಲವಾದ ; ಗಾತ್ರವಾದ : ಹೊಯ್ಸಳ ಸಮರದೊಳ್ಮುರಾರಿ ಮಾರನಾಗಿ . . . ರಾಣಿ ವಾಸಭಣ್ಡಾರಮಂ ಪಿಡಿದು ತೋರ ಪಳಯಿಗೆ ಭಾಗಿತ್ತಿ ತೊಱೆಬಡಗರೆನಾಡು ವಿಷಯ ಅಪ್ಪೊಗಾಲಿನ್ನಮುಗ್ರಾಮ ಸರ್ವ್ವಬಾದುಪರಿಹಾರವಂಟ್ಟುಟ್ಟಗೊಟ್ಟಂ (ಎಕ. III, ನಂಜನ ೧೨೨-೧೬; 266 ?); ಓವನಂ ಮಿಡುಕಲೀಯದೆ ಕಾಲ್ವಿಡಿದಟ್ಟುತ್ತ ತೋರ ಕಣ್ಬನಿಗಳನಿಕ್ಕಿದಳ್ ತರಳಲೋಚನೆ ಸಂಕಲೆಯಿಕ್ಕಿದಂತೆವೋಲ್ (ಪಂಪಭಾ. ೪-೯೭); ಅನುಭವಿಸಿದ ಕೋಟಲೆಗಳನಿನಿಸಂದೆಣಿಸಲ್ಕೆ ಮೌಕ್ತಿಕಾಕ್ಷಾವಳಿಯುಂ ಪನಜದಳನಯನೆ ಸಮೆದಪಳೆನೆ ಸುರಿದುವು ತಱಿದೆ ತೋರ ಕಣ್ಬನಿದುಱುಗಲ್ (ಕಾದಂಬ. ೨೬೨). ೫. ದೊಡ್ಡದಾದ ; ಬೃಹತ್ತಾದ. 'ತೋರಗದ', 'ತೋರಗಲಂ' ಪರಾ. ೬. ಅತಿಶಯವಾದ ; ಹೆಚ್ಚಾದ : ನೀರಧಿಯು ಪೀರುವಪೊಲೃತಪ್ಪ ಮಾರುತಿಯು ನಿಟ್ಟಿಸುತ ನಕ್ರ ಕೂರ್ಮಂಗಳೆಲ್ಲ ತೋರಭಯದಿಂದೊಂದನೊಂದೊರಸಿ ವಿತಳಮಂ ಸಾರುತಿರಲು (ಪಂಪರಾ. ೫-೧-೨೭). 'ತೋರತೋಟಿ' ಪರಾ. **ಥೋರ :** ೧.ನೂಲೆಳೆಯು ಗಾತ್ರದ ಮರದಲ್ಲಿ ಬೆಟ್ಟದ ಥೋರದ ಕಾಯಿ ಫಲವಾಯಿತು (ಮೋಹಮ. ೧೯೨-೭೨೨). ೫. ಥೋರ ಕುಲಗಿರಿನಿಚಯಕಂ ಕುಲಿಶ ಕವಿವವೋಲ್ (ತುರಂಗ. ೬೪-೨೪).

[ <ಪ್ರಾ. ಥೋರ./ಮರಾ. ಥೋರ./ತುಳು. ತೋರ, ತೋರೋ : ತೆಲು. ತೋರ./ಸಂ. ಸ್ಥೂಲ ]

**ತೋರಂಜಿ** 'ತುರಂಜಿ' ನೋ.

**ತೋರಂಬಟೆ** (ನಾ). ಒಂದು ಬಗೆಯ ದಪ್ಪವಾದ ಅಪಂಟೆಕಾಯಿ : ಹರುಷದಿಂದಿಟ್ಟು ತೋರಂಬಟೆಕಾಯನು ಜಱೆವ ಮೌಕ್ತಿಕದ ಬಾವುಲಿಯ (ಜ್ಞಾನಚ. ೪-೭). [ ತೋರ + ಅಂಬಟೆ ]

**ತೋರಕಬರಿ** (ನಾ). ದಪ್ಪವಾಗಿರುವ ತುರುಬು ; ತೋರಮುಡಿ : ತೋರಕಬರಿಯ ಕುಡಿತೆಗಂಗಳ ... ಭೂರಿಭೂಷಣದಮರಿಯರು ಮೆಱೆದಿರ್ದರೊಂದೆಸೆಯ (ತೊರರಾ. ೫-೨-೭೧). [ ತೋರ + ಕಬರಿ ]

**ತೋರಕಿಡಿ** 'ತೋರಗಿಡಿ' ನೋ.

**ತೋರಕಿವಿ** 'ತೋರಗಿವಿ' ನೋ.

**ತೋರಕುಚ, ಥೋರಕುಚ** (ನಾ). ದೊಡ್ಡಗಾತ್ರದ ಮೊಲೆ : ಬಿಗಿದಡರಿದ ತೋರಕುಚ ಸಣ್ಣ ನಡುವಿನ ಸೊಗಸಲಿ ಮೆಱೆವ ತಳ್ವಸಿಱ ... ಶುಭಿನಿಯರು ಮಿಗೆ ರಾಜಿಸಿದರು (ಕಂನವಿ. ೨೧-೭೯). **ಥೋರಕುಚ :** ಥೋರಕುಚದ ಮೇಲೆ ಚಾರುಗಂಧವ ಪೂಸಿ (ಪಾದಿಕೀ. ೪೭-೧೨). [ ತೋರ + ಕುಚ ]

**ತೋರಗಂಬ** 'ತೋರಗಂಭ' ನೋ.

**ತೋರಗಂಭ, ತೋರಗಂಬ** (ನಾ). (ಮಾಳಿಗೆ ಅಥವಾ ಚಪ್ಪರಕ್ಕೆ ಆಧಾರವಾಗಿ ನಿಲ್ಲಿಸುವ) ದಪ್ಪವಾದ ಕಂಬ : ಲೋಹದ ತೋರಗಂಭಂಗಳೊಳಗೆ ಮುರಿಗೇಶದಿನೆಸೆವ ಶಬರರ ತಲೆಗಳೋಳಿಯಂತೆ ರಕ್ತಚಾಮರಂಗಳನ್ನೊಳಕೆಯ್ದ ಕಬ್ಬಿಣ್ಣ ಕನ್ನಡಿಯ ತೋರಣಂಗಳೊಳಂ (ಕಾದಂಬ. ೨೭೯). **ತೋರಗಂಬ :** ಸರಸೀಪರಿಸರದೊಳ್ ನಟ್ಟು ಮುಗಿಲಂ ಮುಟ್ಟುವಂತೆ ಮುಂದಿರ್ದ ಕಲ್ಲ ತೋರಗಂಬಮಂ . . . ಕಿಟ್ತು (ವರ್ಧಪು. ೨-೪೮ ವ) ; ಬೆಳೆದೆಳವಳ್ಳಿಯೊಳ್ ಪುದಿದು ತೋಱುವ ಮಾವಿನ ತೋರಗಂಬದಿಂ . . . ಸೊಗಯಿಪೋಲಗಸಾಲೆಯೊಳಿರ್ದರ್ (ಕಬ್ಬಿಕಾ. ೧೨೭). [ ತೋರ + ಕಂಭ ]

**ತೋರಗಣು** (ನಾ). ದೊಡ್ಡಕಣ್ಣು : ಕಾರೊಡಲು ದಾಡೆ ಮಣಿಮಕುಟ ಫಣಿಕುಂಡಲು ತೋರಗಣು ಕೆಮ್ಮೀಸೆ . . . ಎಸೆವ ಬಾವುಲಿ ತೊಡರಿನ ವೀರಭದ್ರಂ (ಸಿದ್ಧರಾ. ೪-೬). [ ತೋರ + ಕಣು (<ಕಣ್) ]

**ತೋರಗದ** (ನಾ). ದೊಡ್ಡ ಬಾಗಿಲು: ತ್ರಿಭುವನದಗ್ರದಲ್ಲಿ ಮೂವತ್ತಾಱು ಲೋಕ ಅದರ ಮಧ್ಯದಲ್ಲಿ ಇಪ್ಪತ್ತೈದು ಮಹಾಮೇರುವೆ ಹದಿನಾಱು ವರ್ತನದ ಕೊಂಡಿ ಗುರು ಲಘುವೆಂಬ ತೋರಗದ (ಮೋಗಿವಾ. ೨೩೩-೭೮೪). [ ತೋರ + ಕದ (<ಕದವು$_1$) ]

**ತೋರಗರುಳು** (ನಾ). ದೊಡ್ಡ ಕರುಳು,-ಅಂತ್ರ : ಸಾರು ನೀ ಸಾರೆಲವೊ ಭೀಮನ ತೋರಗರುಳಿನ ದಂಡೆಯನು ಕೈಯಾರೆ ಮಾರಿಗೆ ಮುಡಿಸುವೆನು (ಕುವ್ಯಾ.ಕ. ೩-೧೮). [ ತೋರ + ಕರುಳು (<ಕರುಳ್) ]

**ತೋರಗಲು** (ನಾ). ದೊಡ್ಡ ಶಿಲೆ,- ಬಂಡೆ : ಅಱ ಸಱ ತೋರಗಲು ಕವಣೆಗಲು ಕಣೆ ಭಂಡಿಯು ಗಾಲಿ ಕೆಲ್ಲೆ ಹೆಗ್ಗೊಬಿದುದಿಱಿಯೆ[ಣ್ಣೆ] ಕಾಯ್ದು ಮಣಲಗ್ಗದ ಫೇಂಕಣೆ (ಸೌಇಇ. XX, ೧೩೬-೩ ; 1186). [ ತೋರ + ಕಲು$_1$ (<ಕಲ್$_3$) ]

**ತೋರಗಾಯ್** (ನಾ). ದಪ್ಪವಾದ ಕಾಯಿ; ದೊಡ್ಡ ಕಾಯಿ : ಭಾರದಿಂ ತೂಗಿ ನೆಲನಂ ತಾಗುವ ತೋರಗಾಯ್ಗಳಿಂ ಜನನಿಯಪ್ಪವನಿಯುಂ ಮುದ್ದಿಂ ಮುಂಡಾಡುವಂತಿರ್ದ ಮಾತುಲುಂಗಸಂಘಾತಂಗಳುಂ (ಚಂದ್ರಪು. ೧-೧೧೫ ವ); ತೋರಗಾಯ್ಗಳ ಬಹುಭಾರಮಂ ತಳೆದು ಸಾರ್ವ ವಿಹಂಗಚಯಕ್ಕೆ ಬೇಸಱಂ ಬಳೆಯಿಪುದೆಂದು ತಾಳತರುವಂ ನಗುವಂತೆ ಪೊಱಾದ ಬೀಡೆವಣ್ಗಳೆನೆಸೆದಿರ್ಪ ದಾಡಿಮತರುವ್ರಜಮಾ ಬನದೊಳ್ ವಿರಾಜಿಕುಂ (ಕುಸುಮಾ. ೧-೯೦) ; ಸಾರವಿಲ್ಲದ ಚಂದ್ರಕಳೆಯಂನು ಸೇವಿಪ ಭೂರಿ ನಿರ್ಜರರು ಗುಂಪರಿಗೆ ತೋರಗಾಯ್ಗಳ ರಸದೋಱಲೆನಿಸಿ ನಾಳಿಕೇರ ಮಾಂಬರವ ಚುಂಬಿಪವು (ವರ್ಧಪ. ೧-೭೦). [ ತೋರ + ಕಾಯ್$_4$ ]

**ತೋರಗಿಡಿ, ತೋರಕಿಡಿ** (ನಾ). ದಪ್ಪವಾದ ಕಿಡಿ; ದೊಡ್ಡ ಕೆಂಡದ ಚೂರಂ: ಎಟ್ಟೊಡಂಬಂಬನಟ್ಟ ಪಳಂಚುತೆ ಸಿಡಿಲ್ದ ತೋರಗಿಡಿಯಿಂದೊಂದೊಂದಜಿಕೊಳ್ ಬೇವುದುಂ ತ್ರಿಪುರಂಬೊತ್ತಿಸಿದಂತೆ ಪೊತ್ತಿ ಪೊಗೆದತ್ತೆತ್ತಂ ವಿಯನ್ಮಂಡಳಂ (ಪಂಪಭಾ. ೧೧-೧೭) ; ಘಟಿಯೊಳ್ ಘಟಿ ಜೋಡಿಸಿ ದಂತ ಜಾಲದೊಳ್ ಭೋಂಕನೆ ಪೊಣ್ಮೆ ತೋರಗಿ[ಪಾಠಾಂ. ಕಿ]ಡಿ ಸೂಸೆ ಕಱುತ್ತುಱ ತಾಗಿತಾಜಿಯೊಳ್ (ಗಿರಿಕ. ೬-೭೩) ; ತೋರಗಿಡಿಯೆನೆ ತೊಳಗಿದುವ ರುಣಾಂಶುರುಚಿರತಾರಾನಿಕರಂ (ಪಾರ್ಶ್ವಪು. ೧೦-೨೩). **ತೋರಕಿಡಿ :** ಪೊಣ್ಮಿದ ಮುನಿಸಿಂ ಭುಗಿಲಸುರಿದೆಟ್ಟನಾ ದಿಟ್ಟಿಗಳೊರ್ಮೆಯೆ ತೋರ ಕಿಡಿಗಳಂ ಕೆದಱುವಿನಂ (ಕಬ್ಬಿಕಾ. ೧೫೦) ; ಹೊಸ ಮುಸೆಯ ಧಾರೆಯ ತೋರಕಿಡಿಯಲಿ ಮುಸುಕಿತರಸನ ತೇರು (ಕುವ್ಯಾದ್ರೋ. ೫-೨೧). [ ತೋರ + ಕಿಡಿ ]

**ತೋರಗಿರಿ** (ನಾ). ದೊಡ್ಡ ಬೆಟ್ಟ ; ಮಹಾಪರ್ವತ : ತೋರಗಿರಿಗಳ ಮೆರೆಸಿದಿಳೆ ತಾ ನೀರೊಳದ್ದುವದೆಂದು ಸಲೆ ಮದವಾರಣಂಗಳು ಧರಿಸಿ ಕೊಂಡಿಹವೆಂಟುದಿಕ್ಕಿನಲಿ (ಕುವ್ಯಾ.ಆ. ೭-೩೭). [ ತೋರ + ಗಿರಿ$_1$ ]

**ತೋರಗಿವಿ, ತೋರಕಿವಿ** (ನಾ). ದೊಡ್ಡ ಕಿವಿ ; ಅಗಲವಾದ ಕಿವಿ : ತೋರಗಿವಿ ಕೆಂಗಣ್ಣು ಬಿಡುವಾಯಿ ನಿಡುದಾಡೆ ನಿಡಿಯ ಕಾಳರಕ್ಕಸಿ (ಸಿದ್ಧರಾ. ೬-೧). **ತೋರಕಿವಿ:** ವಾರಿಧಿಯ ನೀರೊಳಗೆ . . . ವಾರಿಕರಿಗಳು ಧುಮುಕೆಯುವುಗಳ ತೋರಕಿವಿಗಳಿಗಂಟ ಫೇನವು ಚಾರುಚಮರಗಳಂತೆ ಯಿರ್ಭಾಗಿಗಾಗಿ ತೋರುವದು (ರಘುವಂ. ೧೪೦-೧೧). [ ತೋರ + ಕಿವಿ$_3$ ]

**ತೋರಗುಂಡು** (ನಾ). = ತೋರಗಲು : ಒತ್ತಿ ಕಾಲಿಡಲೊಡನೆ ಗಿರಿ ತಲೆಗುತ್ತುತಿರ್ದುದು . . . ನೆತ್ತಿಯಗ್ರದ ತೋರಗುಂಡುರುಳುತ್ತಲಿರ್ದಪವು (ತೊರರಾ. ४-೧೨-೨೪). [ ತೋರ + ಗುಂಡು ]

**ತೋರಗುರುಳ್** (ನಾ). ಅಧಿಕವಾದ ಕೂದಲು,- ಮುಂಗುರುಳು : ಪೆಱೆಸೊಸಲಂ ಮುಟ್ಟಿ ನಿಮಿರ್ದ ತೋರಗುರುಳ ಕೊಂಗಲೆವೆಱೆಯುನಂಥ ಕಾರವಹಾವರಿಸಿದಂತೆ ತೋಱೆಯುಂ (ಪಂಚಾಮನ. ೬-೧೬೩ ವ); ಮಾಮಣಿ ವಿತತಿ ಮಾರ್ಪೂರ್ಳವೀಕ್ಷಣದಿಂ ನಿಜಾಸ್ಯ[ಮಂ] ತೋರಗುರುಳ್ಗಳಿಂ ಪದೆಪ ದೊಪ್ಪದುಮನಲ್ಲಿಗೆ ಮುನ್ನಿನಂದದಿಂ (ವರ್ಧಪು. ೧-೯೦). [ ತೋರ + ಕುರುಳ್$_1$ ]

**ತೋರಗೆಂಡ** (ನಾ). ದಪ್ಪವಾದ ಕೆಂಡ : ಒದಱ ಉಕಿಲ್ದು ಬೆಟ್ಟುಗಳ ಕೆಯ್ದುಗಳುರ್ವಿದ ನೀರ ತೋರಗೆಂಡದ ಸರಿಯುಂ ಸಮಂತು ಸುರಿದು . . . ಬಾಧಿಸಿದತ್ತು ತದ್ಬಳಂ (ವರ್ಧಪು. ೧೫-೩೯). [ ತೋರ + ಕೆಂಡ ]

**ತೋರಗೊಂಡೆಯು** (ನಾ). ದೊಡ್ಡದಾದ ಕೊಂಡೆ,-ಕುಚ್ಚು : ಇಕ್ಕಿದ ಪಕ್ಕರಕ್ಕೆ ನಿಡುರಘಲ್ಲಿ ತೊಡಂಕುವ ತೋರಗೊಂಡೆಯುಂ ಸೆಕ್ಕಿದ ಮಿಂಡೆಯುಂ ಬಿಗಿದ ಬಿಲ್ (ಚಿಕವಿ. ೨-೯೬). [ ತೋರ + ಗೊಂಡೆಯ ]

**ತೋರಗೊಂಬು** (ನಾ). ದೊಡ್ಡದಾದ ರೆಂಬೆ ; ದೊಡ್ಡ ಕೊಂಬು : ನನೆಯುಂ ಪೇಱದ ತೋರಗೊಂಬು ನನೆಯುಂ ಪೂಗೊಂಚಲಂ ಪೊತ್ತು ನೆಟ್ಟನೆ ಬಣ್ಣಿಪೇಱದ ಬಳ್ಳಿಗೊಂಬು (ಕಬ್ಬಿಕಾ. ೬೨). [ ತೋರ + ಕೊಂಬು$_1$ ]

**ತೋರಗೊನೆ** (ನಾ). ದಪ್ಪವಾಗಿರುವ ಗೊಂಚಲು; ಗಾತ್ರವಾದ ಗೊನೆ: ತೋರಗೊನೆವೇಱದ ಕಂಚಳವಾಱ ತೋರವಣ್ಪೇಱದ ಬಳ್ಳಿ (ಅನಂಪು. ೧-೭೪). [ ತೋರ + ಗೊನೆ$_3$ (<ಗೊಲೆ$_2$ ]

**ತೋರಡವು** (ನಾ). ತೋರಿಕೆಗಾಗಿ ಹಾಕುವ ಒತ್ತೆ; ನಂಬಿಕೆಗಾಗಿ ಇಡುವ ಒತ್ತೆ : "ತೋರಡವು–ಒತ್ತೆಹಾಕುವುದು" (ಜಾನಕೋ. ೬೮). [ ತೋರು (<ತೋಱು) + ಅಡವು$_2$ (<ಅಡರ್ಪು$_2$) ]

**ತೋರಣ** (ನಾ). ೧. ಹೆಬ್ಬಾಗಿಲಂ ; ಹೊರಬಾಗಿಲು : ತೋರಣಃ ಬಹಿರ್ದ್ವಾರಂ – ಪುಷ್ಪಮಾಲಿಕೆ ತಳಿರು ಕೋರಣ ಮಾವಿನ ಸೊಪ್ಪು ಮುಂತಾದವುಗಳನ್ನು ಕಟ್ಟುವದಕ್ಕೋಸ್ಕರ ಬಾಗಿಲ ಹೊರಗಡೆ ಕಾಣುವಂಥ ಕಂಭಗಳಿಂದ ಕಟ್ಟಲ್ಪಟ್ಟ ದ್ವಾರಬಂಧನದ ಚೌಕಟ್ಟು. ಮನೆಯ ಹೊರ ಬಾಗಿಲು, ತೋರಣಬಾಗಿಲು (ಸಿದ್ಧಾಂಶ. ೯೨). 'ತೋರಣದ್ವಾರ' ಪರಾ. ೨. ಹಬ್ಬ, ಹರಿದಿನ ಇತ್ಯಾದಿ ವಿಶೇಷ ಸಂದರ್ಭಗಳಲ್ಲಿ ಅಲಂಕಾರ ಕ್ಕಾಗಿ ಬಾಗಿಲು, ಬೀದಿ ಮುಂತಾದೆಡೆಗಳಲ್ಲಿ ಕಟ್ಟುವ ತಳಿರು, ಹೂ, ಬಟ್ಟೆ ಮುಂತಾದುವುಗಳ ಮಾಲೆ,-ದಂಡೆ; ವಂದನಮಾಲೆ: "ದ್ವಾರದ ಮುಂದೆ ಸಂಧಿಸಿರೆ ಕಟ್ಟಿದ ವಂದನಮಾಲೆ ತೋರಣಂ" (ವಸ್ತುಕೋ. ४೮-೧೬) ; "ವಂದನಮಾಲಾ, ತೋರಣಂ- ಈ ೨ ತೋರಣಂ" (ಹಲಾಯು. ೫೦-೧೪೬) ; ಪೊಟಲೊಳಗೊಪ್ಪೆ ಕನ್ನಡಿಯ ಕಂಚಿನ ತೋರಣದೋಳಿಗಳ್ (ಪಂಪಭಾ. ೩-೭೪) ; ಊರುಯುಗಸ್ತಂಭೋದ್ಗತ ತೋರಣಮೆಂಬಂತೆ ಮಿಸುಗುವುಡಿನೂಲ್ (ಕಾದಂಪೂ. ೩೩೪) ; ಪೊನ್ನ ತೋರಣದಿಂ ದುಕೂಲದ ಸೂಸಕಂಗಳೆನೊಪ್ಪುವೆತ್ತುನ್ನತಧ್ವಜದೋಳಿಯುಂ . . . ಪಿರಿಮುನ್ನಪಿಕ್ಕೆಯನಿರ್ದಾದೀ ಜನಮಂದಿರಂ (ಧರ್ಮಾಮೃ. ೬-೪೮) ; ಹಬ್ಬಕ್ಕೆ ತಂದ ಹರಕೆಯ ಕುಱ ತೋರಣಕ್ಕೆ ತಂದ ತಳಿರ ಮೇಯಿತ್ತು (ಬಸವ. ೧೩೯); ಕಾರಿರುಳ ಪಟ್ಟಣಕೆ ಚಂದ್ರನ ತೋರಣವ ಬಿಗಿದಂತೆ (ಕುವ್ಯಾ.ಉ. ೧೧-೨೫) ; ಬೆಂದ ಮನೆ ಬಾಗಲಿಗೆ ಮುಂದೆ ತೋರಣವೇಕೆ (ಸರ್ವಜ್ಞ. ೯೧೯). [ ಸಂ. ]

**ತೋರಣಂಗಟ್ಟಿಸು, ತೋರಣಗಟ್ಟಿಸು** (ಕ್ರಿ). (ಚಿಗುರು ಮುಂತಾದುವು ಗಳ) ಮಾಲೆಯನ್ನು ಬಿಗಿಸು : ಮಣಿಭದ್ರಮಪ್ಪ ಹೇಮ ಮುಕ್ತಾಹಾರಂಗಳಿಂ ತೋರಣಂಗಟ್ಟಿಸಿಯರಸರ ಬರವಂ ಹಾರುತ್ತಿರೆ (ವದ್ಯಾರಾ. ೨೭-೩) ; ಇನಿಯುನನೀ ಪಾಸೊಳ್ ತಂದೆಳದೇಳಿಂದೆ ತೋರಣಂ ಗಟ್ಟಿಸುವಂ (ಚಂದ್ರಪು. ೮-೯೦). **ತೋರಣಗಟ್ಟಿಸು :** ನೀರಜಭವನ ಮಾನಸಪುತ್ರ ನೀನಲ್ಲದಾರಾದೊಡೀ ಮಾತುಗಳ ಭಾರಾಂಕನಾಗಿಯೆನೀ..

ಚಳಿ ಪೇಳ್ವುದೆ ಸೀಳಿ ತೋರಣಗಟ್ಟಿಪೆನೆಂದ (ವೀರಪತ. ೧೨-೩೦).
[ ತೋರಣಂಗಟ್ಟು + -ಇಸು₃ ]

**ತೋರಣಂಗಟ್ಟು, ತೋರಣಗಟ್ಟು** (ಕ್ರಿ). (ಚಿಗುರಂ ಮುಂತಾದುವು ಗಳ) ಮಾಲೆಯನ್ನು ಕಟ್ಟು,-ಬಿಗಿ: ಆಗಳಾ ಬಸಂತರಾಜನ . ಬರವಿಂಗೆ ತೋರಣಂಗಟ್ಟಿದಂತೆ ಬಂದ ಮಾಮರಂಗಳನಡರ್ದ . . . ಮಾಧವೀಲತೆಗಳುಂ (ಪಂಪಭಾ. ೨-೧೨ ವ) : ಪುರದ್ವಾರಮನವನಡಗಿಂ ಬುತ್ತಿಯಿಟ್ಟು . . . ಕರುಳಿನಿಂ ತೋರಣಂಗಟ್ಟಿ ಕೋಲಾಹಲನಾದಂ ಪೆರ್ಚಿ ಪೊಕ್ಕಂ ದನುಜನ ಪೊಟಬಂ ಸಾಗ್ರಜನ್ಮಂ ಮುಕುಂದಂ (ಜಗವಿ. ೬-೧೦). **ತೋರಣಗಟ್ಟು** : ರಾವುತ ತಲೆಯಂ ಸಂ x x x ತೋರಣಗಟ್ಟುತ್ತಂ ಬೆಲ್ದಂ ಸುರಲೋಕಮೆಯ್ದಿದಂ (ಸೌಇಇ. XX, ೧೬೯-೧೦ ; 1183).
[ ತೋರಣ + ಕಟ್ಟು₁ ]

**ತೋರಣಗಂಬ** 'ತೋರಣಗಂಭ' ನೋ.

**ತೋರಣಗಂಭ, ತೋರಣಗಂಬ** (ನಾ). (ತಳಿರು ಮುಂತಾದವುಗಳ) ಮಾಲೆಯನ್ನು ಕಟ್ಟುವ ಕಂಭ; ತೋರಣವನ್ನು ಕಟ್ಟುವ ಕಂಭ: ತೋರಣಗಂಭದಲ್ಲಿ ಒಬ್ಬ ಭೈರವ ಜೋಗಿ ಶೂಲದಲ್ಲಿರುವನು (ಬಸ್ತೀಪು. ೧೨೩). **ತೋರಣಗಂಬ** : ಸೊಬಗಿಂಗೆತ್ತಿದ ತೋರಣಗಂಬಂಬೊಲಿರ್ದುವಾಕೆಯ ತೊಡೆಗಳ್ (ಕಬ್ಬಿಕಾ. ೭೫). [ ತೋರಣ + ಕಂಭ ]

**ತೋರಣಗಟ್ಟಿಸು** 'ತೋರಣಂಗಟ್ಟಿಸು' ನೋ.

**ತೋರಣಗಟ್ಟು** 'ತೋರಣಂಗಟ್ಟು' ನೋ.

**ತೋರಣಗಲ್ಲು** (ನಾ). ತೋರಣವನ್ನು ಕಟ್ಟುವ ಕಲ್ಲಿನ ಕಂಬ : ಬಸ್ತಿಂದ ಪಡುವಲು ಪೂರ್ವದಲು ನಡವ ಉಭಯಮಾರ್ಗದ ಹಾದಿಗೆ ಯಿಕ್ಕಿದ ತೋರಣಗಲ್ಲಿನೊಳಗಣ ಪ್ರಮಾಣನಲಿ . . . ಮೂಡಕಡೆಯಲು ಮೂಡಣ ತೋರಣಗಲ್ಲಿಂ ಪಡುವಲು (ಸೌಇಇ. IX-II, ೪೫೭-೨೬ ; 1455).
[ ತೋರಣ + ಕಲ್ಲು (<ಕಲ್₃) ]

**ತೋರಣಗ್ರಥನ** (ನಾ). ತೋರಣವನ್ನು ಕಟ್ಟುವುದು ; ತೋರಣದ ರಚನೆ, ಬಂಧ: ತೋರಣಗ್ರಥನ ಮುಕ್ತಾಮಾಳಿಕಾಳಂಬನವ್ಯಸನ ವ್ಯಗ್ರಕರಂ ಕರಂ ಸೊಗಯಿಸಿತ್ತಂತಲ್ಲಿ ಕಾಂತಾಜನಂ (ಚಂದ್ರಪು. ೬-೫೫).
[ ತೋರಣ + ಗ್ರಥನ ]

**ತೋರಣದರ್ಪಣ** (ನಾ). ತೋರಣದಲ್ಲಿರುವ ಕನ್ನಡಿ : ತೋರಣ ದರ್ಪಣದೊಳ್ ಚಮರೀರುಹಮಂ ನೃಪತಿಗಿಕ್ಕುವಬಲೆಯರ ನೆಟಿಲ್ ರಾ ರಾ ಜಿ ಸಿ ದು ಪು ರಿಪ್ರಾಜ್ಯರಾಜ್ಯಶ್ರೀಸಮೂಹಮಿದಿರ್ವಂದಿರವಂ (ಚಂದ್ರಪು. ೧೧-೧೭). [ ತೋರಣ + ದರ್ಪಣ ]

**ತೋರಣದ್ವಾರ** (ನಾ). ಹೆಬ್ಬಾಗಿಲು ; ಮಹಾದ್ವಾರ : ಅಂತು ಸೊಗಯಿಸುವ ವನವೇದಿಕೆಯ ನಾನಾಮಣಿಮಯೂಖಮಾಲಾ ವಿರಾಜಿತೋತ್ತುಂಗ ತೋರಣದ್ವಾರದಿಂದಂ ನುಗುಳ್ದು ವನವೀಥಿವಿಡಿದು ಬಂದು (ಆದಿಪು. ೧೩-೧೧ ವ). [ ತೋರಣ + ದ್ವಾರ ]

**ತೋರಣವಿಡು** (ಕ್ರಿ). = ತೋರಣಂಗಟ್ಟು : ಆ ಸದ್ದಿಲ್ಲದ ಕತ್ತಲೆಯ ನುಸುಕಿನಲ್ಲಿ, ಕಣ್ಣೀರ ಹಾರ ಕೋದು ತೋರಣವಿಟ್ಟ ಒಂದು ಗುಪ್ತ ಶೋಕಮಂದಿರವನ್ನು ನಿರ್ಮಿಸಿ ನಿಲ್ಲಿಸಿಕೊಂಡಳು (ಇಷ್ಟಕ. ೨೮೪).
[ ತೋರಣ + ಇಡು₁ ]

**ತೋರತಕ್ಕು** (ನಾ). ಪೆಚ್ಚಿನ ಯೋಗ್ಯತೆ ; ಹಿರಿಯ ಯೋಗ್ಯತೆ : ಇಕ್ಕಿದ ಸೀಸಕಂ ಪಱಿದು . . . ಬೆನ್ನೊಳಮರ್ಚಿದ ಪೊನ್ನ ಪಲ್ಲಣಂ ಪಕ್ಕರೆ ತೇಜಿವಾರು ಕಟಾದಿರ್ಕಡಿಯಾದುವು ಬಾಳ ಬಾಯೊಳಿಂತಕ್ಕುಮ ತೋರತಕ್ಕಿದೆನೆ ಗೋಟಯಿಲರ್ ಕೆಲರಲ್ಲಿ ಕಾದಿದರ್ (ಕಬ್ಬಿಕಾ. ೨೮೦).
[ ತೋರ + ತಕ್ಕು₂ ]

**ತೋರತೋಟಿ** 'ತೋರದೋಟಿ' ನೋ.

**ತೋರತ್ತಿ, ತೊರತಿ, ತೊರತ್ತಿ** (ನಾ). ದೊಡ್ಡ ಜಾತಿಯ ಉದುಂಬರ ; ದೊಡ್ಡ ಅತ್ತಿಯ ಮರ : ತೋರತ್ತಿ (ಕಾಸ್ತ್ರಲ). ಸುಂದರವಾದ ಉನ್ನತವೃಕ್ಷ. ಕಟ್ಟಿಗೆ ಇಮಾರತಿಗೆ ಬರುತ್ತದೆ. ಬೀಜದಿಂದ ದೀಪದ ಯೆಣ್ಣೆ ಪೊರಡುತ್ತದೆ (ಕಭಾಗ. ೪೧). **ತೊರತಿ** : ಸಣ್ಣ ಸೊಳ್ಳೆ. ತೊರತಿ, ಮರ ತುತ್ತಿ (ಮ್ಯಾಡಿಗಿ. ೪೫-೮೮೦). **ತೊರತ್ತಿ** : ತೊರತ್ತಿ, ಸುರಟೆ . . . ಎಣ್ಣೆ ಮರ, ಹಾಲವೆ (ಮ್ಯಾಡಿಗಿ. ೪೫-೮೮೨). [ ತೋರ + ಅತ್ತಿ₁ ]

**ತೋರದಿಟ್ಟಿ** (ನಾ). ದೊಡ್ಡ ಕಣ್ಣು ; ಅಗಲವಾದ ಕಣ್ಣು ; ಬೊಗಸೆಗಣ್ಣು : ತೋರದಿಟ್ಟಿಯ ತುದಿಯೊಳು ತೊರೆದುದಕವ ಕುರುಗುರಿಂ ಮಿಡಿಮಿಡಿದು ಮಾರಿಜಮುಖಿ ನುಡಿಯುಲು (ಶ್ರೀಪಾಲ. ೨-೩೮).
[ ತೋರ + ದಿಟ್ಟಿ ]

**ತೋರದುಟಿ** (ನಾ). ದಪ್ಪವಾದ ತುಟಿ : ತೋರಕುಚದ ತೋರದುಟಿ ತೋರದುಱುಬಿನ ತೋರಿದ ಮುಲ್ಲುವಿರುಗಳ ಮಾರಕೇಳಿಗೆ ಮನದಣಿಯದ ಚಿತ್ರಿನಿನಾರಿಯರೆಸೆದರಶ್ವಿಯಲಿ (ಕಂಸವಿ. ೨೧-೮೧).
[ ತೋರ + ತುಟಿ₂ ]

**ತೋರದುತ್ತು** (ನಾ). ದೊಡ್ಡ ತಂತ್ತು : ಸಿತರಾಜಾನ್ನ ಸದ್ಘೃತ ತೊವ್ವೆಗೂಡಿ ನಿರ್ಮಿತವಾದ ತೋರದುತ್ತುಗಳ ಜತನದಪ್ಪದೆ ಕೈಕೊಂಡರು (ಮಹಾಪತ. ೩-೫೫). [ ತೋರ + ತುತ್ತು₂ ]

**ತೋರದುರುಬು** 'ತೋರದುಱುಂಬು' ನೋ.

**ತೋರದುಱುಂಬು, ತೋರದುರುಬಂ, ತೋರದಂಱುಬಂ** (ನಾ). ದೊಡ್ಡದಾದ ಕಬರಿ ; ದೊಡ್ಡ ತುರುಬು : ತೋರದುಱುಂಬಿನೊಳ್ ತೆಱುಂಬೊಳಿವಲಗೊರ್ಂಚಲೊಪ್ಪೆ (ಲೀಲಾವ. ೮-೨೮). **ತೋರದುರುಬು** : ಇಟ್ಟ ಕಸ್ತುರಿಬಟ್ಟು . . . ತೋರದುರುಬನು ಉಟ್ಟ ದೇವಾಂಗದ ನಿರಿಯ ಮೇಗಳಪಟ್ಟ ಹೊನ್ನುಡಿದಾರದಿಂದ (ಸೌಂದಕಾ. ೩-೮೨). **ತೋರದುಱುಬು** : ಕಾರಗತ್ತಲೆಯೊಳು ಧಳಧಳಿಸುತಲಿಹ ತಾರಗೆಗಳೊಯೆಂಬಂತೆ ತೋರದುಱುಬಿನೊಳು ಕಮ್ಮಲಗ್ಗಳ ತಂದಾ ರಮಣಿಗೆ ಮುಡಿಸಿದರು (ಜೀವಂಸಾಂ. ೧೦-೯). ತೋರದುಱುಬು ದುಂಬಿಗುರುಳರನೇಱಿಲ ದೋರೆವಣ್ದುಟಿ ಪೆಱೆನೊಸಲ . . . ವಾರಾಂಗನೆಯರೊಪ್ಪಿದರು (ಶ್ರೀಬಾಂ. ೯-೧೦);
[ ತೋರ + ತುಱುಂಬು₂ ]

**ತೋರದುಱುಬು** 'ತೋರದುಱುಂಬು' ನೋ.

**ತೋರದೆರೆ** (ನಾ). ದೊಡ್ಡ ಅಲೆ,-ತರಂಗ : ಪೊಂಸತಲ್ಪತಳದೊಳ್ ಪಾಲ್ಗಡಲ ತೋರದೆರೆಯ ಮೇಲೆ ಲೀಲೆಯಿನವತರಿಸುವ ಸಿರಿಯನನುಕರಿಸಿರ್ದು ನಿಜಮನೋವಲ್ಲಭನೊಡನೆ ಸುಖಸುಪ್ತಿಯಂ ತಳೆದು (ನೇಮಿಪು. ೬-೬೫ ವ); ತೋರದೆರೆ ಮುಱಿಯೆ ಮೂಡುವ ವಾರಣಮಂ ಪೋಲ್ತುದು (ಅರ್ಧನೇ. ೫-೧೧೩). [ ತೋರ + ತೆರೆ₄ ]

**ತೋರದೊಡೆ** (ನಾ). ದಪ್ಪವಾದ ತೊಡೆ : ಆತನಯ ತೋರದೊಡೆಗಳಿವಾತನ ನಿಡುದೋಳ ನಡೆಯುವಾತನ ನಡ (ಜಾಪ್ಯಾವ. ೪೩) ; ನಿಜನಳಿಯ ತೋರದೊಡೆಗಳ ಮೇಲೆ ಲಲಿತಮಣಿಮಕುಟಮಂಡಿತಮಸ್ತಕವನಿಳುಹಿ ಮಗ್ಗುಲಿಕ್ಕಿದನಾಗಳು (ಹದಕಾ. ೭-೫೦) ; ಕೆಂಡಗಣ್ಣು ಪೆಮ್ಮಾರಿಮೊಗಗಳ ಬಿಗಿದ ಹುಬ್ಬುಗಳ ಬಲ್ಗೋರೆದಾಡೆಗಳ ಸಲೆ ಕೊಬ್ಬಿದ ತೋರದೊಡೆಗಳ . . ದಡಿಗರಕ್ಕಸರ್ ಕೋಟಾನುಕೋಟಿಗಳದೇನೆಂಬೆನು (ಜಬಪು. ೪೭-೧೪). [ ತೋರ + ತೊಡೆ₂ ]

**ತೋರದೊಣ್ಣೆ** (ನಾ). ದೊಡ್ಡ ಗುದಿಗೆ,-ದೊಣ್ಣೆ : ಕೂರಲಗುವಿಡಿದವನ ಕೂಪತಿವೀರರಾಗಿದ್ದವರು ಕಾದಲು ತೋರದೊಣ್ಣೆಯ ಪೊಯಿಲನಂಗೈಸುವರದಾರುಂಟು (ಶಾಶಿಂಾ. ೨೦-೩೩). [ ತೋರ + ದೊಣ್ಣೆ₁ ]

**ತೋರದೋಟಿ, ತೋರತೋಟಿ** (ನಾ). ಭಾರಿಯಾದ ಕಾಳಗ ; ರಭಸದ ಯುದ್ಧ. 'ತೋರದೋಟಿಗ' ಪರಾ. **ತೋರತೋಟಿ** :

ಮೂಡುವವು ತಲೆ ಪಟಿದ ಗಜ ಹೊಜಜೀಡ ಬಿಡುವವು ಸುಭಟರಿಬ್ಬರ ರ್ಥುಾಡಣೆಯು ಬಿಂಡೆಯುದ ತುಂಡದ ತೋರತೋಟಿಯುಲಿ [ಪಾಠಾಂ. ತಾಣಕೋಟಿಗಳ] (ಕೊರಠಾ. ೩-೧೦-೩೦).

[ ತೋರ + ತೋಟಿ$_1$ ]

**ತೋರದೋಟಿಗ** (ನಾ.) ಭಾರಿಯಾದ ಕಾಳಗ ಮಾಡುವವನು; ಮಹಾವೀರ : ಕಡು ಸಡಗರದ ಬಡಿವಾರದ ತೋರದೋಟಿಗ (ರಾಜಶ್ರೀ. ೧೪೪-೨೦). [ ತೋರದೋಟಿ + – ಗ$_6$ ]

**ತೋರಪಿಲ್ಲಿ** (ನಾ). ದೊಡ್ಡ ಪಿಲ್ಲಿ: ವೀರಮುದ್ರಿಕೆ ಕಾಲುಂಗುರ ಮೆಂಟಕೆ ತೋರಪಿಲ್ಲಿ ಕಿಱಪಿಲ್ಲಿ ಭೂರಿರುಚಿಗಳಿಂದ ಮೆಱೆದವು (ಅನಂಚ. ೭-೧೦೮).

[ ತೋರ + ಪಿಲ್ಲಿ$_1$ ]

**ತೋರಬಾಷ್ಪ** (ನಾ). ಅತಿಶಯವಾದ ಕಣ್ಣೀರು; ಅಧಿಕವಾದ ಕಣ್ಣೀರು: ಪುದಿದ ಮನೋಗತಾರ್ಥಮನದಂ ನೆಱೆ ಜಿಹ್ವೆಗೆ ತಂದು ಪೇಟಲೀಯದೆ ಮೊಗಕಡ್ಡವಿರ್ಪ ಕಡುನಾಣ್ಚಕೆಯುಂ ತೊಳೆವಂತೆ ತೋರಬಾಷ್ಪದ ಪನಿದಂದಲಂ ಸುರಿಯುತುಂ (ಕುಸುಮಾ. ೧೩-೧೪೪).

[ ತೋರ + ಬಾಷ್ಪ ]

**ತೋರಬೆರಳು** 'ತೋರುಬೆರಳು' ನೋ.

**ತೋರಮರ** (ನಾ). ದೊಡ್ಡ ಮರ; ಹೆಮ್ಮರ: ಒತ್ತಿ ಕಾಲಿಡಲೊಡನೆ ಗರಿ ತರಗುತ್ತುತಿರ್ದುದು ತೋರಮರಗಳು ಕಿತ್ತು ಪಾರುತಲಿರ್ದವಂಬರ ಮಣಿಯುನಣೆದಣೆದು (ತೊರರಾ. ೪-೧೩-೩೪). [ ತೋರ + ಮರ$_1$ ]

**ತೋರಮಲ್ಲಿ, ತೋರ್ಮಲ್ಲಿ** (ನಾ). ಒಂದು ಬಗೆಯು ಹರಳು,–ರತ್ನ; ಗಂಧರ್ವಮಣಿ: "ಪ್ರಶಸ್ತಶಿಲೆಯಾಗಿ ಉಪಯೋಗಿಸುವ, ಬಲವಾದ ವಿದ್ಯುದ್ಗುಣಗಳನ್ನುಳ್ಳ, ಬೇರೆ ಬೇರೆ ಬಣ್ಣಗಳ ಖನಿಜ ವಸ್ತು : ತೋರ ಮಲ್ಲಿ" (Tourmalin (e). ಇಂಕನಿ). **ತೋರ್ಮಲ್ಲಿ**: ತೋರ್ಮಲ್ಲಿಗಳು ಒಳಗಡೆಯಲ್ಲಿ ಯುರೋಪದಿಂದ ಮುಂಬಯಿಗೆ ಮಾರಾಟಕ್ಕೆ ಬರುತ್ತವೆ. ಈ ಹರಳುಗಳು ಕಡಿಮೇ ಜಾತಿಯ ರತ್ನಗಳೆಂದು ಎಣಿಸಲ್ಪಡುತ್ತವೆ (ಮುಂಬಯಿ. ೬-೪೭).

[ ದೇ.ಶ ತಮಿ. ತೋರಮಲ್ಲಿ, ತೋರಾಮಲ್ಲಿ ; ತೆಲು. ತೋರಮಲ್ಲಿ, ತೋರಮಲ್ಲೆ./ಮರಾ. ತೋರಮಲೀ, ತೋರಮಲ್ಲೀ./ಇಂ. Tourmaline. ಸಿಂಹಳೀ. ತೋರಮೊಲ್ಲಿ]

**ತೋರಮಲ್ಲಿಗೆ** (ನಾ). ದೊಡ್ಡ ಮಲ್ಲಿಗೆ : ಬಿಳಿಯ ತಾವರೆಯೆಳಗಾವಿನಸುಯ ನೂರೊಳ್ ಕೋದ ತೋರಮಲ್ಲಿಗೆಯ ಬಿರಿಮುಗುಳ ಸರಿಗೆಯುಮಂ (ವಂಶಛಾ. ೫-೬ ವ); ಒದವಿದ ತೋರಮಲ್ಲಿಗೆಯ ಹಾರದ ಸೂಸಕದಿಂದ ಸಿಂಧುವಾರದ ಚಮರೀಜದಿಂದೆ ... ಚೆಲ್ಲುವೆತ್ತುದು ಕದಳೀದ್ರುಮಗ್ರಥಿತ ಸುಂದರ ವಂದನಮಾಲಿಕಾವೃತಂ (ಕಾದಂಉ. ೨೦೬); ಕೊಸಗಿನೆಸಟಿ ಕೇಸರಮುಂ ತೊಡರ್ಚಿದ ತೋರಮಲ್ಲಿಗೆಯ ಮುಗುಳ್ಗಳರಂಗಳುಮಂ (ಜಗವಿ. ೬-೧೭ ವ). 'ತೋರಮೊಲ್ಲೆ' ಪರಾ [ ತೋರ + ಮಲ್ಲಿಗೆ ]

**ತೋರಮಾಣಿಕ** (ನಾ). ದೊಡ್ಡ ಮಾಣಿಕ್ಯ,–ರತ್ನ: ತೋರಮಾಣಿಕವೆಂದು ಪಿಡಿದರೆ ಭೂರಿಕೆಂಡವಿದಾಯ್ತು (ನಳಚ. ೬-೧೫). [ ತೋರ + ಮಾಣಿಕ ]

**ತೋರಮುಡಿ** (ನಾ). = ತೋರದಂಱುಂಬು : ತೋರಮುಡಿವಿಡಿದು ಕುಡಿಯುಂ ನಾರಂ ಸದೆವಂತೆ ತದೆದು (ಯಶೋಚ. ೨-೫೦); ತೋರಮುಡಿ ಬಿಟ್ಟಿಪ್ಪುದಾರುಣಿಯೊಳಗ್ರ ಕಚಂ (ಸೂಕ್ತಿಸು. ೧೩-೯); ತೋರಮುಡಿಯು ಕೆಂಜೆಡೆಯು ರತ್ನದ ಕರ್ಣಪೂರದ ಫಣಿಕುಂಡಲಗಳ ಚಾರುಕುಂಕುಮಗಂಧ ಭಸಿತಲೇಪನದರ್ಧನಾರೀಶ ಜಯ (ತ್ರಿಪುಕಿ. ೨೩-೧); ಕಡುತೋರಮುಡಿ ಮುಗಿಲಸಧರಮತಿಸಂಚಯುಂ [ಪಾಠಾಂ. ಮಧುವೃಷ್ಟಿಯುಂ] ತನುಮಧ್ಯ ಮದು ಪುಸಿಯನು ಬಿಡದೆ ವಿಕ್ಕುಂ ಮಹಾಚಂಚಲಮ ರೂಪಾದ ಮುದಿಯುರ . . . ನಂಬುವಂ ಮೂಢಂ (ಜಜಪು. ೧೧-೫೭); ದೇವೇಂದ್ರ

ಸಿಂಹಾಸನದಿಂದಮ ತೋರಮುಡಿಯು ಕಿಲೀಕೃತೆಯು [illegible] ಪಿಡಿದುಕೊಂಡು ಉದ್ಯಾನದಲ್ಲಿದ್ದ ನಮೇರುವೃಕ್ಷದಡಿಯುಂ [illegible] [illegible] [ ತೋರ + ಮುಡಿ ]

**ತೋರಮುಡುಹು** [illegible] ದೊಡ್ಡ [illegible] ಕರದ ಬಿಂಡೆಯುರದಪಟ್ಟೆಯಿದೆರಾನೆ ಕುದುರೆಯುಲಿ (ಕುಮಾ. [illegible]) ತೋರಮುಡುಹು ನಿಡುಗಯ್ಯತಿದೀರ್ಘಶರೀರ ವೀರ [illegible] ಚಾರುಬಾಹುಯುಗವೆಸೆಯೆ ಬಾಹುರನಂದು ಸಾರಿದನಾ ರಾ[illegible] (ಕುಂರಾಸಾಂ. ೧೮-೭೬). 'ತೋರಮುಯ್ಯು' ಪರಾ.

[ ತೋರ + ಮುಡುಹು$_5$ (<ಮುಡುಪು$_4$) ]

**ತೋರಮುತ್ತು** (ನಾ). ದಪ್ಪವಾದ ಮುತ್ತು; ಗಾತ್ರವಾಗಿರುವ ಮೌಕ್ತಿಕ : ತೋರಮುತ್ತಿನ ಹಾರಂಗಳುರಸ್ಥಳಂಗಳೊಳ್ಪೊಳೆವುದುಂ (ಕಾದಂಪೂ. ೭೭); ನೊಸಲೆಡೆಯಲ್ಲಿ ನೀಳ್ದ ಕುರುಳೋಳಿಗಳುಯ್ಯಲನಾಡೆ ದಾಳಮುಂ ಪಸರಿಪ ತೋರಮುತ್ತಿನ ಸರಂ ಮೊಲೆಯೊಳ್ ತಳೆಯೊಪ್ಪೆ . . . ಪೊಸರನ್ನದಾರತಿಯುನೆತ್ತಿದರಗ್ಗದ ಗಾಡಿಕಾರ್ತಿಯರ್ (ಕಬ್ಬಿಗಾ. ೩೪೩); ಕೊರಳೊಳಿಕ್ಕಿರ್ದಾ ತೋರಮುತ್ತುಗಳೆಲ್ಲ ತಿಳಿಗೊಳದೊಳು ತೋರ್ಪ ತಾರಾಳಿಯಂತೆ ತೋಱಿದುವು (ಧರಿಚ. ೧-೪೩); ಈಕೆಯ ಕೊರಳಿನ ಕಾಂತಿಯ ಹೊಳೆಯೊಳು ಮುಳುಗಿವೆ ತೋರಮುತ್ತುಗಳು (ಇಂಚಾಪ. ೮೫-೧೩). [ ತೋರ + ಮುತ್ತು$_5$ ]

**ತೋರಮುಯ್ಯು** (ನಾ). = ತೋರಮುಡುಹು : ತೋರಮುಯ್ಯು ಗಳೊಳೆಸೆವ ಕುಂಕುಮಂಗಳ ಬಂಬಲ ಸೋಂಕಿನೊಳ್ ರಜಂ ನೆಗೆದು ದೆಸೆಗಳ್ಪೊಂಬಣ್ಣಮಾಗೆಸೆಯೆಯುಂ (ಕಾದಂಪೂ. ೭೭).

[ ತೋರ + ಮುಯ್ಯು$_1$ ]

**ತೋರಮೂಗುತಿ** (ನಾ). ದೊಡ್ಡಗಾತ್ರದ ಮೂಗುತಿ; ದೊಡ್ಡ ಮೂಗು ಬೊಟ್ಟು : ತೋರಮೂಗುತಿ[ಪಾಠಾಂ. ಮುತ್ತಿನ]ಬೊಟ್ಟು ತುಟಿಯಿನ ಬಲಿವಣಿ ಸೇರಿ ಕಣ್ಗೆಸೆದುವವಗೆ (ಕುರಾಸಾಂ. ೫೭-೧೫೭).

[ ತೋರ + ಮೂಗುತಿ ]

**ತೋರಮೊಗ** (ನಾ). ಅಗಲವಾದ ಮುಖ; ವಿಸ್ತಾರವಾದ ಮುಖ: ತೋರಮೊಗಂ ಸಮುನ್ನತಗಳಂ ಸಮಗೊಂಪಡರ್ದಕ್ಷಿ . . . ಕರ್ಣಕದೇಪ ಮತೀವಭೀಷಣಾಕಾರಮನಪ್ಪುಕೈಯು (ದಕಕು. ೯-೧೫).

[ ತೋರ + ಮೊಗ ]

**ತೋರಮೊಲೆ** (ನಾ). = ತೋರಕುಚ : ತೋರಮೊಲೆಗಳ ಮೊಗಂಗಳ್ ರಾರಾಜಿಸಿ ಕರ್ಪುವೆತ್ತು ಮೋಹನಘಟಮೋದ್ಧಾರಿಗಳಂ ಕಾಂಚನಘಟಂಗಾ[illegible] [illegible] ವು (ಪಂರಾವಿ. ೩-೯೫); ಮೊರೆಯುವ ತುಂಬಿಯುಂ [illegible] ಸಂದಣೆ ಸೋಲಿಸೆ ಪಕ್ಕಪಕ್ಕಿಯುಂ ಪರಿಪಡೆವಿರ್ದ ತೋರಮೊಲೆ [illegible] (ಕಬ್ಬಿಗಾ. ೧೧೩); ಮುತ್ತ ತೋರಮೊಲೆಯು ಭಾರಗಳಿಂದಲುಂಗುರ[illegible] ಬಳುಕುವಂತಿಹರು (ಮೋಹತ. ೨-೪೩); ನೀರೆಱೆವ[illegible] ಮೊಲೆಗಳಿಗೆಱಗಿದ ಹಾಂಘರ ಬಿಟ್ಟ ತೋಱಿದುದನು[illegible] (ಮು[illegible] ೨-೫೪). [ ತೋರ + ಮೊಲೆ$_1$ ]

**ತೋರಮೊಲ್ಲೆ** (ನಾ). ದೊಡ್ಡ ಜಾತಿಯ ಮೊಲ್ಲೆ : ಭೃಂಗ [illegible] ಸೌರಭ್ಯವಾಂತ ಪುಷ್ಪಂಗಳ ತೋರಮೊಲ್ಲೆಗಳ . . . ನಂದಿತ್ತು (ಪ[illegible] ೪-೫೦). [ ತೋರ + ಮೊಲ್ಲೆ ]

**ತೋರಮೆಚ್ಚೆ** (ನಾ). ದೊಡ್ಡ ಮೆಚ್ಚೆ : ಅಗಲವಾದ ಪಾದ: [illegible] ಮೊಲ್ಲ ಸಲ್ಲಕೀಪಲ್ಲವಂಗಳಲ್ಲಿಲ್ಲಿಗೂಡಿಯಿದು ಬಿಟ್ಟಿತ್ತಿರೆ [illegible] [illegible]

[illegible]

**ತೋರವಣ್** (ನಾ). ದೊಡ್ಡದಾಗಿರುವ ಹಣ್ಣು: ಅವುದ ತೋರ ವಣ್ಗಳೊಂದಱ ರಸದಂತುಗಾಣದೆ ದಲೊಂದು ಶುಕಂ ಮಧುಸಮ್ಮ ದೋತ್ಸುಕಂ (ಚಂದ್ರಪು. ೭-೪೭); ಕಾಯ್ಪೇಱಿದ ತೆಂಗು ತೋರಗೊನೆ ವೇಱಿದ ಕಂಚಳವಾಟ್ ತೋರವಣ್ಪೇಱಿದ ಬಕ್ಕೆ (ಅನಂಪು. ೧-೭೮). [ ತೋರ + ಪಣ್$_3$ ]

**ತೋರವಣ್ಗೊನೆ** (ನಾ). ದೊಡ್ಡ ಹಣ್ಣುಳ್ಳ ಕೊಂಬೆ: ಎಳವಲಸು ನಿಜಸ್ಕಂಧಾವಳಂಬಿಯೆನಿಸಿರ್ದ ತೋರವಣ್ಗೊನೆಯಿಂ ಕಣ್ಗೊಳಿಸಿತ್ತು (ಚಂದ್ರಪು. ೭-೮೫). [ ತೋರವಣ್ + ಗೊನೆ$_2$ (<ಕೊನೆ$_2$) ]

**ತೋರವನಿ, ತೋರಹನಿ** (ನಾ). ದಪ್ಪವಾಗಿರುವ ಹನಿ,-ಬಿಂದು: ಸುರಿದಪುದು ಮುಗಿಲ ಮುತ್ತಿನ ಸರಿ ಗಗನದಿನೆನಿಸಿ ಪೊಳವುವೆಳವಿಸಿಲೊಳ್ ಬೆಳ್ಸರಿ ತೋರವನಿಯು ಪುದುವಿನೊಳರಲ್ದ ತಿಳಿಗೊಳನೆ ನಭದೊಳಟ್ ದಂತಿರ್ದಂ (ಆದಿಪು. ೧೧-೮); ಅಲ್ಲಲ್ಲಿಗೆ ಮುತ್ತಿನ ಪುಡಿಯು ಸುಣ್ಮಳಲ್ಗಳಾಲ ವಾಲಂಗಳಿಂ ಕೂಡಿರ್ದಡೆವಿಡದೆ ಸುರಿವ ತೋರವನಿಗಳಿಂ (ಕಾದಂಬ. ೨೧೭); ಕಾರ ತೋರವನಿ ಚಾದಗೆಗೆ ಧಾರಮೆ ಶಿವನ ಕರುಣಮೆನಗಿದಿರ್ವರೆ ವಿಚಾರಮೆ (ಗಿರಿಕ. ೧೦-೩೭ ವ). **ತೋರಹನಿ:** ಕಣ್ಣೀರ ಕೋಡಿ ಹರಿಯಿತು. ತಟ್ಟೆಯಲ್ಲಿ ಅನ್ನದಲ್ಲಿ ಬಿದ್ದವು ಆ ಕಣ್ಣೀರ ತೋರಹನಿಗಳು (ಸುವಸಂ. ೧೯). [ ತೋರ + ಪನಿ$_2$ ]

**ತೋರವೆಟ್ಟು** (ನಾ). = ತೋರಗಿರಿ: ಎಸೆವಲಗೊರ್ಂಚಲಂ ತಳೆದ ಮಲ್ಲಿಗೆ ಪೂವಿನ ಸಂತ ಕೊಂಬಿನಿಂ ಮಿಸುಗುವ ಮಾಮರಂ ಪೆಸರ ಮಾಳಿಗೆ ಮಾಡಿದ ತೋರವೆಟ್ಟುಗಳ್ (ಕಬ್ಬಿಕಾ. ೦೦೧). [ ತೋರ + ಬೆಟ್ಟು$_2$ ]

**ತೋರವೆಣ** (ನಾ). ದೊಡ್ಡ ಹೆಣ; ಗಾತ್ರವಾದ ಶವ: ತೋರವೆಣಂಗಳಂ ತಳೆದು ಭೂತಗಣಂ ಕುಣಿದಾಡುವಂತಿರಲ್ . . . ಸುತ್ತಲುಂ ವಾರಿಧಿ ಪೋರೆದಪ್ಪಿ ಕವಿವಂತು ಬಿಗುರ್ವಿಸಿದಂ ದಶಾನನಂ (ಪಂರಾಮಾ. ೯-೧೮೯). [ ತೋರ + ಪೆಣ ]

**ತೋರಶಿವೆ** (ನಾ). ದಪ್ಪಗಾತ್ರದ ಜುಟ್ಟು (?): ದುಗುಲದಿಂದ ಜೀಗಿ ತೋರಶಿವೆಯನು ಧರಿಸಿ (ಚಳಸ. ೧೭). [ ತೋರ + ಶಿವೆ ]

**ತೋರಹತ್ತ** (ನಾ). ೧. ದೊಡ್ಡ ಸೊಂಡಿಲು: ಆ ವಾರಣದ ತೋರಹತ್ತ ಮಾನುಪೂರ್ವಿ ಸ್ಥೂಳಮುಮಾಭೀಳಮುಮತಿಪ್ರಲಂಬಮುಮಾಗೆ (ಅನಂಪು. ೧೩-೩೦ ವ); ಸೆಲ್ಲಿಯ ಕಾಮ್ಗಳಂ ಬಡಿಗೆಕೊಂಡಪೊಲೆತ್ತಿದ ತೋರಹತ್ತದಿಂ ಜಲ್ಲನೆ ತುಂಬಿಗಳ್ ಕೆದಱೆ ಬಂದುವು ಬಿಂಕದಿನಂಕದಾನೆಗಳ್ (ಕಬ್ಬಿಕಾ. ೨೦೩); ಹೇಱಿದ ಹೇರಂಬುಗಳನಿಕ್ಕಡಿ ಮಾಡಿ ತೋಱದ ತೋರಹತ್ತದಲಿ (ಪ್ರಭುಲಿ. ೩೮-೪೭). ೨. (ಶಕ್ತಿಯುತವಾದ) ಕೈಗಳುಳ್ಳವನು; ಶೂರ: "ತೋರಹತ್ತನೆನೆ ತಾಂ ರಣಧೀರಂ" (ಭಾರನಿ. ೩೪); ಭುಜಬಳದಳವಿಂ ಭೀಮನಿಂ ತೋರಹತ್ತಂ ಬಳಸಿಂದಂ ತೋರಹತ್ತಂ (ಎಕ. V, ಅರಸೀ. ೯-೫ : 1280); ಜೆಳದಪೊ ಕೈಕಾಲು ನೀಲಾಚಲಕೆ ಪೇಳಿನೆ ಮುಗಿಲ ತುಡುಕುವ ತಳೆಯು ಜೋಕೆಯು ತೋರ ಹತ್ತನ ಕಂಡು ಕುರುಸೇನೆ (ಕುವ್ಯಾದ್ರೋ. ೧೫-೫೧); ಬೈದು ಬೆರಸುವ ತೋರಹತ್ತರ ಕೈದುಗಳ ಹೊಳೆಹೊಳೆವ ಧಾರೆಯು ಮೈದಡಿಗೆ . . ಪಾರುಶದ ಮುಖ್ಯರು ಸಾದರಿದಿರಾಗಿ (ನಿಭಾಗ. ೮-೧೭-೨೭). ೩. ಶೌರ್ಯ; ಸಾಹಸ: ನೀರೊಳು ಪೊಕ್ಕ ರಕ್ಕಸನ ಘೋರಾಕೃತಿವೆತ್ತು ದಿವಾನಾಗಿ ಮುಮುಹಿದ ತೋರಹತ್ತವ ತೋಱಿಸ್ಸಿಡನೆ (ಮೋಹತ. ೪೦-೧೯). ೪. ಮಲ್ಲಯುದ್ಧದಲ್ಲಿ ಒಂದು ವರಸೆ: ಮಿಕ್ಕುದು ವಜ್ರ ಪಾತಮುಮನೆಂಬಿನಮುಬ್ಬಸವಾದ ಕೋರಹತ್ತಕ್ಕೆ ತಗುಳ್ದು ಪತ್ತಿಸುವ ಮಾನಸಗೋಳಮನಿಪ್ಪ ಡೊಕ್ಕರಕ್ಕಿಕ್ಕಿದ ವಜ್ರಲೇಪಮೆನೆ ಪತ್ತುವ ಲಗ್ಗೆಗ ಮಾರಿಯೊಳ್ ಮೊಗಂಬೊಕ್ಕವೊಲಾಗ ಬೆರ್ಚಿದನವಂ (ಚಂದ್ರಪು. ೫-೮೦); ಬರಾವರ್ತಂ ಮಲ್ಲನೇಪದೊಳದಿರಾದೊಡಂ ತೋರಹತ್ತದೊಳಂ ತಿವಿದು ತಿರಿಪುವ . . . ಮಲ್ಲರ ನೆರವಿಗಳೊಳು (ಗಿರಿಕ. ೨-೧೦೫ ವ); ಇರ್ವರ ಚಮತ್ಕಾರಕಿರ್ವರೇ ಸಾಟಿಯೆನಲು ವರಶಿರೋವಲಯದಿಂ ಸಿಲ್ಕಿಪರ್ ತೋರಹತ್ತದೆ ನವಕದಿಂ ಪಿಡಿವರು (ಚಬಪು. ೨೫-೩೪); ತಳಹತ್ತಂ ದಣುವಟ್ಟೆ ಪೊಪ್ಪರಮುರೋಬಂಧಂ ... ಭುಜಗಬಂಧಂ ತೋರಹತ್ತಂ ಶಿರೋವಳಯಂ ಬಾಹುತಳಂ ಚಮತ್ಕರಿಸೆ ನಾನಾ ಕೌಶಲಂದೋಱಿದರ್ (ರಬಶಂ. ೪-೭೩). 'ತಳಹತ್ತ' ಪರಾ. [ ತೋರ + ಹತ್ತ$_4$./ತೆಲು. ತೋರಹತ್ತ ]

**ತೋರಹನಿ** 'ತೋರವನಿ' ನೋ.

**ತೋರಹಾರ** (ನಾ). ದೊಡ್ಡದಾದ ಮಾಲೆ; ದೊಡ್ಡ ಗಾತ್ರದ ಸರ: ಪಸರಿಸಿದ ತೋರಹಾರದ ಪೊಸವೆಳ್ದಿಂಗಳುಮನಮರ್ದ ಪೆರ್ದೊಡುಗೆ ಗಳೊಳ್ ಮಿಸುಗುವ ಪೊಸ ಮಾಣಿಕದೆಳವಿಸಿಲುಮನೊಡಗಾಣಲಾದುದಾ ಸ್ಥಾಯಿಕೆಯೊಳ್ (ಆದಿಪು. ೯-೫); ಪ್ರಮದದೊಳೆನ್ನ ಕಂಧರದೊಳು ದಿರುಳಿಕ್ಕಿದ ತೋರಹಾರಮುಂ ಓಮುಗೃಹ ಪ್ರವೃತ್ತಕಮುಂ . . . ಆ ರಮಣಿಯುದೊಂದು ಭಾವಗತಮುಂ ನೆಱೆಸೂಚಿಸೆ (ಕಾದಂಬ. ೭೪೭); ಸುತ್ತದೆ ನೆಲೆಗೊಂಡು ಪರಿವೃತ್ತೋನ್ನತ ಚಂದ್ರನಗಜೆಯಾಸ್ಯದೊಳೆಂದು ನೃತ್ತತೆಯೊಳ್ ತಾರಗೆಗಳ್ ಸುತ್ತಿದುವೆನೆ ತೋರಹಾರಮುಂ ರಂಜಿಸಿದರ್ (ಗಿರಿಕ. ೧೦-೩೭). [ ತೋರ + ಹಾರ$_1$ ]

**ತೋರಜಿಕೆ** (ನಾ). ಹೆಚ್ಚಿನ ಪ್ರಸಿದ್ಧಿ; ಅತಿಶಯವಾದ ಕೀರ್ತಿ: ಅಗ್ಗದ ಬೀರರ್ ತೆಗೆದೋಡೆ ತೋರಜಿಕೆಯಾಳ್ಗಳ್ ಬಳ್ಕಿ ಬೆಂಬೀೞ್ (ಕಬ್ಬಿಕಾ. ೩೦೪). [ ತೋರ + ಆಜಿಕೆ ]

**ತೋರಾಟೆ** (ನಾ). ಒಂದು ಬಗೆಯ ಮರ: ತೋರಾಟೆ (ಕೌಟಿಲ) . . . ಇದರ ಎಣ್ಣೆ ಔಷಧಕ್ಕೂ ದೀಪಕ್ಕೂ ಬರುತ್ತದೆ (ಕಭಾಗ. ೪೧). 'ತೋರತ್ತಿ' ಪರಾ. [ ? ]

**ತೋರಾಯ** (ನಾ). ಬಹಳ ಸಾಮರ್ಥ್ಯ; ಅತಿ ಪರಾಕ್ರಮ: ನಾರಾಯಣಂ ಮಹಾರೋಷದಿಂದೆಸುತಿರ್ಪ ತೋರಾಯದೆಸುಗೆಯಿಂ ತರಹರಿಸದಾಕ್ಷಣಂ ಪೂರಾಯ ಗಾಯದಿಂ ಬಲಮಳಿಯೆ ಕಂಡು ಸಂಹಾರಾ ವತಾರನಾಗಿ (ಚಬಪು. ೩೩-೮). [ ತೋರ + ಆಯ$_3$ ]

**ತೋರಿ** (ನಾ). (ಕರಾ). ಒಂದು ಬಗೆಯ ವಿಮಾನಂ. [ ? ]

**ತೋರಿಕೆ** 'ತೋಱಿಕೆ' ನೋ.

**ತೋರಿತು, ತೋರಿತ್ತು, ತೋರಿದಂ** (ನಾ). ೧. ದೊಡ್ಡದಾಗಿರುವುದು; ತೋರವಾದುದು: (೬). **ತೋರಿತ್ತು:** ೧. ತುಕಾರಾಂತಕ್ಕೆ ವಿಕಲ್ಪದಿಂ ದ್ವಿತ್ವಮುಂಟು . . . ತೋರಿತ್ತು; ಸೇರಿತ್ತು . . . ಬಲ್ಲಿತ್ತು ಎಂಬಂತೆ ನೋಡಿಕೊಳ್ವುದು (ಶಮದ. ೭೭ ಪ್ರಯೋ). ೨. ಅಗಲವಾದುದು; ವಿಶಾಲವಾಗಿರುವುದು: ಪೊಂಗೋಂಟೆಯುಂ ತೋರಿತ್ತಾದಗಳೆಯ್ದೆ ಸುತ್ತಿ ಮೆಱೆಗುಂ (ಜಾಧಪು. ೪-೩೭). **ತೋರಿದು:** ೧.ಪಾದರಿ ಪೂತುವು ತೋರಿದುವಾದುವು ಮಲ್ಲಿಗೆಗಳೆಯ್ದೆ ಪಣ್ತುವು ಮಾವು (ಆದಿಪು. ೧೧-೮೭); ತೋರಿದುವಾದ ಮಲ್ಲಿಗೆಯ ಮೊಗ್ಗೆಗಳೊಳ್ ಮೊಗವೂಱೆ ಬಿರ್ದು ಘೋಘೋರ್ಗರೆನೆ ಪಾಯ್ದು ಬಂಡಿನೊಳ್ ಬೆಂಡೊಗೆದು . . . ಕಾಱೆ ಕಡಲಿಟ್ಟುವು ಮತ್ತಮಧುವ್ರತಾಳಿಗಳ್ (ಲೀಲಾವ. ೯-೧೧೭); ನಾರಿಯ . . . ತೋರಿದುವಾದ ನಿತಂಬಂ ತೊಡೆಯುಡಿಗಳು ಕಡುಸೊಗಸಿದುವು (ಜಯಕಾ. ೨-೭).

ತೋರಿದಂ = ತೋರವಾದವನು: ಒಳ್ಳಿದಂ, ತೆಳ್ಳಿದಂ, ಮೆಲ್ಲಿದಂ, ಬೆಟ್ಟಿದಂ, ತೋರಿದಂ (ಶಮದ. ೧೫೨ ಪ್ರಯೋ). [ <ತೋರ ]

**ತೋರಿತ್ತು** 'ತೋರಿತು' ನೋ.

**ತೋರಿದು** 'ತೋರಿತು' ನೋ.

**ತೋರಿಸು** 'ತೋಱಿಸು' ನೋ.

**ತೋರು** 'ತೋಱು' ನೋ.

**ತೋರುಗಣ್ಣು** (ನಾ). ಸನ್ನೆ ಮಾಡುವ ಕಣ್ಣು ; ಸೂಚಿಸುವ ಕಣ್ಣು : ಕುಳಿಂದಕನು ಚಂದ್ರಹಾಸನ ಕಡೆಗೆ ತೋರುಗಣ್ಣಾಗುತ್ತಾನೆ (ಚಂದ್ರಸ. ೬೬).

[ ತೋರು (<ತೋಱು) + ಕಣ್ಣು (<ಕಣ್) ]

**ತೋರುಗದ್ದಿಗೆ** (ನಾ). [ವೀಶೈ] ಶರಣರ ಹೆಸರಿನಲ್ಲಿ ನಿರ್ಮಿಸಿದ ನಾಮಮಾತ್ರ ಗದ್ದುಗೆ ; ತೋರಿಕೆಗಾಗಿ ಕಟ್ಟಿಸಿದ ಗದ್ದುಗೆ : ತೋರು ಗದ್ದಿಗೆ = ಶರಣರ ಹೆಸರಿನಲ್ಲಿ ನಿರ್ಮಿಸಿದ ನಾಮಮಾತ್ರ ಗದ್ದಿಗೆಗಳು (ನಿಜವಾದ ಗದ್ದಿಗೆಗಳಿಗೆ ಭಿನ್ನವಾದುವು) (ವೀಶೈಪಾ. ೨೯೭).

[ ತೋರು (<ತೋಱು) + ಗದ್ದಿಗೆ (<ಗದ್ದುಗೆ$_2$) ]

**ತೋರುಗಪ್ಪುಕ** (ನಾ). (?) : "ತೋರುಗಪ್ಪುಕಮೆನಲ್ ಮೃಗಹಿಂಸೆಗೆ" (ಕಕರ. ೧೦). 'ಕಪ್ಪು$_3$' ಪರಾ. [ ? ]

**ತೋರುಗಾಣಿಕೆ** (ನಾ). ತೋರಿಕೆ ; ನಟನೆ : ಎಲ್ಲ ಎಷ್ಟು ಸುಳ್ಳು–ಕೆಲವು ಸಾರಿ ತೋರುಗಾಣಿಕೆ ಬೇರೆ (ಪ್ರಕೃ. ೫೩).

[ ತೋರು (<ತೋಱು) + ಕಾಣಿಕೆ (<ಕಾಣ್ಕೆ) ]

**ತೋರುಬೆರಳು, ತೋರಬೆರಳಂ** (ನಾ). ಹೆಬ್ಬೆರಳಿನ ಪಕ್ಕದ ಬೆರಳು ; ನಿರ್ದೇಶಿಸಲು ಬಳಸುವ ಬೆರಳು ; ತರ್ಜನಿ : ಎಡಗೈ ತೋರು ಬೆರಳನ್ನು ತುಟಿಯ ಮೇಲಿರಿಸಿ . . . ಬಾಲಿ ಅಣಕವಾಡಿದಳು (ಮಣ್ಣುಹ. ೮೯) ; ಆದರೆ ಅದು ನಿಂತಿರುವುದು ಆ ಪರಮಪ್ರಕಾಶದೆಡೆ ತೋರು ಬೆರಳಾಗಿ ಮಾತ್ರ (ಸೌಂದಸ. ೯೪). **ತೋರಬೆರಳು** : ತನ್ನ ಕೊರಳಿಗೆ ಅಡ್ಡವಾಗಿ ತೋರಬೆರಳನ್ನೆಳೆದುಕೊಳ್ಳುತ್ತ (ವೀರಯೋ. ೫೪) ; ರಾಜನ ಬಲಗೈಯಿನ ತೋರಬೆರಳು (ಋಣರಾಹ. ೯೪).

[ ತೋರು (<ತೋಱು) + ಬೆರಳು (<ಬೆರಲ್) ]

**ತೋರುಮನೆ** (ನಾ). ಪ್ರದರ್ಶನಾಲಯ : ವಸ್ತುಸಂಗ್ರಹಾಲಯ : ಗೋಡೆ ಗೋಡೆಗಳಲ್ಲಿ ಕಣ್ಣರಿವ ಕಡೆಗಳಲಿ, ಸುತ್ತಣೆಲ್ಲೆಡೆಗಳಲಿ ಮೆರೆದುವಾ ಕುಂಭಕರ್ಣನ ಬಿನದವೇಂಟೆಯ ಕವರ್ತೆಗಳ್, ತೋರು ಮನೆಯಲ್ಲಿ ! (ಶ್ರೀರಾಮಾ. ೪೫೫–೨೭೯). [ತೋರು (<ತೋಱು) + ಮನೆ]

**ತೋರುಮರ** (ನಾ). ದಾರಿ ತೋರಿಸುವ ಮರ; ಕೈಮರ: ಒಳದಾರಿಗಳ ಕತ್ತರಿ, ಚೌಕಗಳಲ್ಲಿ ತೋರುಮರಗಳಿಲ್ಲದಿದ್ದರೆ ಪ್ರಯಾಣ ಕಷ್ಟವಾಗುತ್ತದೆ (ರೂಢಿ) [ ತೋರು (<ತೋಱು) + ಮರ$_1$ ]

**ತೋರುವಳಿ** (ನಾ). ಹೊರಕ್ಕೆ ಕಾಣಿಸುವ ರೀತಿ ; ತೋರಿಕೆ : ತಿಕ್ಕುವ ದಕ್ಕೆ ಸುರಿಯಲು, ಚಿಮುಕಿಸಲು, ಚೊಕ್ಕಗೊಳಿಸಲೋ, ಕಾಂತಿ ಹೆಚ್ಚಿಸಲೋ, ಗಮನ ಸೆಳೆವಂತೆ ಮಾಡಲೋ ತೋರುವಳಿಯನ್ನು ಬದಲಾಯಿಸಲೋ . . . ಬಳಸುವ ಆದರೆ ಸಾಬೂನಲ್ಲದ ವಸ್ತುಗಳಿಗೆ ಅಂಗರಾಗವದಾರ್ಥಗಳೆಂದು ಹೆಸರು (ಕವಿಕೋ. I, ೩೩).

[ ತೋರು (<ತೋಱು) + – ವಳಿ$_1$ ]

**ತೋರುಪೊತ್ತೆ** 'ತೋರೊತ್ತೆ' ನೋ.

**ತೋರೈಸು** (ಕ್ರಿ). ದೊಡ್ಡದಾಗು ; ವಿಸ್ತಾರವಾಗು : ಬಡತನದಿ ನವೆದವರು ಸುರುಚಿರ ಸುಭೋಜನವನುಣಲು ಹರೆ ಹೆಚ್ಚುಪೊಲು ಬಡನಡುವು ತೋರೈಸಲು (ನವಮೋ. ೧೫೮–೮). [ ತೋರ + – ಇಸು$_3$]

**ತೋರೊತ್ತೆ, ತೋರುಪೊತ್ತೆ** (ನಾ). = ತೋರಡವು : ಅವನು ಮನೆಯನ್ನು ತೋರೊತ್ತೆ ಇಟ್ಟಿದ್ದಾನೆ (ರೂಢಿ). **ತೋರುಪೊತ್ತೆ** : ಅವರು ಹೊಲವನ್ನು ತೋರುಪೊತ್ತೆ ಹಾಕಿ ಸಾವಿರರೂಪಾಯಿ ತಂದಿದ್ದಾರೆ (ರೂಢಿ). [ ತೋರು (<ತೋಱು) + ಒತ್ತೆ$_1$ ]

**ತೋರ್ಕೆ** (ನಾ). ೧. ಕಾಣಿಸುವಿಕೆ ; ತೋರುವಿಕೆ : "ಉಱೆ ತೋರ್ಪು ತೋರ್ಕೆಯೊಂದುಂ" (ಕವಿಕಂ. ೨೦೫); ಯಕ್ಷರೂಪಿನಿಂ ತೋರ್ಕೆಗೊಳಗಾಗಿ (ರೇವಣ. ೮–೨೧) ; ಕೀಟಗಳ ಮೊಟ್ಟೆಗಳು ಅವನ್ನಿಟ್ಟ ಕೀಟಗಳಷ್ಟು ಗಾತ್ರ, ಆಕಾರ, ತೋರ್ಕೆಗಳಲ್ಲಿ ವ್ಯತ್ಯಾಸವಾಗಿಲ್ಲ (ಕೀಟಜ. ೯೬). ೨. ಪ್ರದರ್ಶನ ; ದೃಷ್ಟಾಂತ ಪಡಿಸುವಿಕೆ : ಇದು ನಿನ್ನರ್ಚಿಸುವಿ[illegible] [illegible] ದೊಳ್ ತೋರ್ಕೆಗೆತ್ತಿದ ಚೈತ್ರಧ್ವಜಂ (ಆದಿಪು. ೧೧–೧೭) ; ಚಿಗದ ತೋರ್ಕೆಗಂ ನೆಗಟ್ವಿ ಬೀರದಳುರ್ಕೆಗದೊಳ್ಪನಪ್ಪಿದುದ್ಯೋಗದಮರ್ಕೆಗಂ ಸಿರಿಯ ಸಾರ್ಕೆಗಂ . . . ಸ್ವಚಿಂತಸಾಗರನಾಗರಮಾಗದಿರ್ಕುಮೆ (ಶಾಂತಿಪು. ೧–೭೮). ೩. ಆಕಾರ ; ರೂಪು ; ಗಾತ್ರ : ಕುದುರೆಯ ಬಣ್ಣ [illegible] ರಥದ ತೋರ್ಕೆಯನೆತ್ತಿದ ಚಿತ್ರಕೇತುವೃಂದದ ಕುಱುಪಿಂದ ಒರ್ವರೊರ್ವರನೆ ಮಚ್ಚರದಿಂ ಗಱಿಸನ್ನೆಗೆಯ್ದು (ಪಂಪಭಾ. ೧೧–೮೭) ; ಬೆಡಂಗಿನ ತೋರ್ಕೆಗೆ ನೋಡ ನಾಡ ಸೌಂದರಿಯರೊಳಾವಗಂ ಸೆಣಸುವಳ್ ಸಲೆ ಗಾಡಿಗಮುನ್ನತಿಕ್ಕೆಗಂ (ಧರ್ಮಾಮೃ. ೮–೧೬೬); ಘನಪುಣ್ಯನಿರ್ದ ತಾಣಂ ಘನಮಾಗಲ್ವೇಳ್ಕುಮೆಂಬ ಬಗೆಯಿಂದೆಂಬಂತೆನಿಯಳ ತನೂದರಂ ತಾಂ ಘನಮಾಗಿಯೆ ಬಳೆದು ತೋರ್ಕೆಯುಂ ತಳೆದಿರ್ಕುಂ (ಚಾಧಪು. ೪–೩೭). ೪. ಹೋಲಿಕೆ ; ಸಾದೃಶ್ಯ : ಪರಶಬ್ದಾಲಂಕಾರದ ವಿರಚನೆಗಳ್ಗೋಜೆಯ್ದೊಡೊಂದೆ ತೋರ್ಕೆಗಳಿಂತುಂ ಪೊರೆದಿರಲು (ಕವಿರಾ. ೩–೪೮) ; ೫. ಆಡಂಬರ; ಡಂಬ; ನಟನೆ : ಕೆಳಗಣದೊಂದು ತಾಣದೊಳಗಿರ್ದಮಳ್ದಾವರೆಯಂತೆ ತೋರ್ಕೆಯುರ್ಬಳೆಯದೆ ತಳ್ತ ಪಮ್ಮಾಲೆಗಳೊಳ್ (ಕಾವ್ಯಸಾ. ೭೧೧) ; ತಳೆಗುಂ ತೋರ್ಕೆಯ ಬತ್ತರಂಬಡೆದು ಬತ್ತಿತೆಂಬಪೋಲಿರ್ದ ಪೆರ್ಬೊರ್ಕೆ (ಶಾಕುಂತ. ೧೧೧–೧೭೧) ; ದಶಾನನಂ ನಿನ್ನನೆಮ್ಮಂ ವಂಚಿಸಲ್ಕೆಂದೆ ತೋರ್ಕೆಯಂತಃಕಲಹಮಂ ರಚಿಸಿ . . . ನಿರಸನಂ ಗೆಯ್ದಪನೇಂ ಲಂಕೆಯಿಂ ? (ಶ್ರೀರಾಮಾ. ೬೧೩–೫೪). ೬. ಅರ್ಪಣೆ; ದಾನ. 'ತೋರ್ಕೆಗೊಡು' ಪರಾ. [ ತೋಱ್ (<ತೋಱು) + – ಕೆ ]

**ತೋರ್ಕೆಗಿಡು** (ಕ್ರಿ). ಕಾಣದಾಗು ; ಅಸ್ತವಾಗು : ರೂಪುಗೆಟ್ಟುದು ದೆಸೆ ತೋರ್ಕೆಗೆಟ್ಟುದಿನಮಂಡಲಂ (ಜಗವಿ. ೭–೮೦).

[ ತೋರ್ಕೆ + ಕಿಡು (< ಕೆಡು$_1$) ]

**ತೋರ್ಕೆಗುಡು** 'ತೋರ್ಕೆಗೊಡು' ನೋ.

**ತೋರ್ಕೆಗೊಡು, ತೋರ್ಕೆಗುಡು** (ಕ್ರಿ). ತೋರಿಸಿ ಕೊಡು ; ಒಪ್ಪಿಸಿ ಕೊಡು ; ಅರ್ಪಿಸು ; ದಾನವಾಗಿ ಕೊಡು: ಅರ್ಕಕೀರ್ತಿಗೆ ರಾಜ್ಯವಿರಲೆಂದು ಪುತ್ರಿಗೆ ತೋರ್ಕೆಗೊಟ್ಟೆಯ್ದಿದೊ ತಪಕೆ (ಧರ್ಮ ೫೩–೧೧೪). **ತೋರ್ಕೆಗುಡು** : ನಿನಗನ್ನಂ ಬಿಡಮುನ್ನ [illegible] ನೀರಾಗಿರಲ್ತೋರ್ಕೆಗೊಟ್ಟನನಗಂ (ಕಾದಂಬ. ೫೯).

[ ತೋರ್ಕೆ + ಕೊಡು$_1$ ]

**ತೋರ್ಕೆಗೊಳ್** (ಕ್ರಿ). ಕಾಣು ; ರೂಪತಾಳು : ವಿಶ್ವರೂಪದೊಳಜಾಂಡದ ಮಂಡಲಿ ತೋರ್ಕೆಗೊಂಡುದು (ಚಕವಿ. ೬–೫೩).

[ ತೋರ್ಕೆ + ಕೊಳ್$_1$ ]

**ತೋರ್ಕೆವಡೆ** (ಕ್ರಿ). ೧. ಕಾಣು ; ಪ್ರಕಟವಾಗು ; ಸ್ಪಷ್ಟವಾಗು : "ಏಗೆ ತಱಂಬೋಳಿದುದೆಂದನೆ ತೋರ್ಕೆವಡೆದ ಕಾಂತಿಗೆ ನಾಮಂ" (ಕವ್ಯಕೈ. ೩೪) ; ಸೊರ್ಕೆಗೆದಬ್ಧಿಯ ಮಧ್ಯದೊಳಿರ್ಕುದ ಸಿಂಹಳನ ಮುಕುಟದ ಮಣಿಕಂ ತೋರ್ಕೆವಡೆದೆಸೆವ ಬಾಳು ಪೊಣರ್ಕೆಗೆ ಪೊಡೆಯುವುದು ಭೇರಿಯುಂ ಭರದಿಂದುಂ (ರಾಜಶೇ. ೫–೧೩೮). ೨. ಪ್ರಸಿದ್ಧಿಯನ್ನು ಪಡೆ, –ಹೊಂದು : ಬೆಳ್ಳಕ್ಕಿಗರ ಕಲ್ಪಿ ತೋರ್ಕೆವಡೆಯುದು (ನೀತಿಮಂ. I, ೨೧).

[ ತೋರ್ಕೆ + ಪಡೆ$_1$ ]

**ತೋರ್ಕೆವರ್** (ಕ್ರಿ). ಸ್ಪಷ್ಟವಾಗು; ಕಾಣುವಂತಾಗು : ಪದೆಪಟ್ಟಿಱುರ್ಕೆ ತೋರ್ಕೆ[ಪಾಠಾಂ. ತೋಳ್ಗೆ]ವಂದೊದವಿರೆ ನಾಣನೊಕ್ಕೆರ್ದೆ ವಿಚಿತ್ರವಿಕಾರ ರಸಾಂತರಂಗದೊಳ್ ಪುದಿದಿರೆ ಮಾಣದಾಡಿಸಿದನಾತನನಂಗಜನೆಂಟ ನಟ್ಟುವಂ (ಆದಿಪು. ೪–೧೫). [ ತೋರ್ಕೆ + ಬರ್$_1$ ]

**ತೋರ್ಕೆವೆಱು** (ಕ್ರಿ). = ತೋರ್ಕೆಗೊಳ್: ಶರ್ಕರೆಯಾನು ಪಿಡಿವಾಗಳಂಗೈಯ ಸಂಪರ್ಕದಿ ಸಿಂಧೂರದಂತೆ ತೋರ್ಕೆವೆತ್ತುದು (ಧರ್ಮ. ೧೧-೩೬).

[ ತೋರ್ಕೆ + ವೆಱು$_1$ ]

**ತೋರ್ಕೊಳಿಸು** (ಕ್ರಿ). ತೋರಿಸು; ಕಾಣಿಸು; ಪ್ರಕಾಶಪಡಿಸು: ಭೋಗಿಗಂ ಜೋಗಿಗಂ ಕರುಣಿಪನನುಭವವಿಂತಿವೆಂದೆನಗೆ ನಿಖಿಲಮುಮನೊಡನೆ ತೋರ್ಕೊಳಿಸುತ್ತೆ (ಸಂಸಪ. ೨೯-೯).

[ <ತೋಱು + ಕೊಳ್$_1$ + – ಇಸು$_3$ ]

**ತೋರ್ತಳದುಳಿ** 'ತೊಟ್ಟುಟಿದುಂಬಿ' ನೋ.

**ತೋರ್ಪಡಿಸು** (ಕ್ರಿ). ೧. ತೋರಿಸು : ವ್ಯಕ್ತಗೊಳಿಸು ; ಪ್ರಕಟಿಸು : ಯೋಗದೊಳಾತ್ಮತತ್ತ್ವವೆ ಕಡೆ ದಶವಿಧಭೋಗಕಂಗನೆ ಕಡೆಯೆಂದು ಯೋಗಶಾಸ್ತ್ರವ ಭೋಗಶಾಸ್ತ್ರವನೆರಡನು ತೂಗಿ ತೋರ್ಪಡಿಸಿ ಪಾಡಿದಳು (ಭರತ. ೧೧-೩೬). ೨. ತೋರು; ಪ್ರಕಟವಾಗು : ಸುಸ್ಮೇರಭವದ್ವದನದಾವಿಂಚೆಂತಿದೆ ನಿವ್ಯಾಜದಿ ಮನಕದೇಂ ಸಂಶಯಂ ತೋರ್ಪಡಿಸಿತೆನೆ (ಪರಶು. ೧೯-೩೦).

ತೋರ್ಪಡಿಸಿಕೊಳ್ಳು = ೧. ವ್ಯಕ್ತವಾಗು ; ಪ್ರಕಟವಾಗು : ತಾನು ಎಂಬುದು ಎರಡು ಸ್ವರೂಪಗಳಲ್ಲಿ ತೋರ್ಪಡಿಸಿಕೊಳ್ಳಬಹುದು (ಇಶ್ವಾಂಸಂ. ೨೪೨). ೨. ತೋರಿಸು ; ವ್ಯಕ್ತಪಡಿಸು : ಅವರು ತಮ್ಮ ಅಂತ್ಯಕಾಲ ಸಮೀಪಿಸಿದೆಯೆಂದು ನಿರ್ಧರಿಸಿದ್ದ ಹಾಗೆ ಕಂಡರೂ ನನಗೆ ಬುದ್ಧಿವಾದವನ್ನು ಹೇಳುವಾಗ ಅದನ್ನು ತೋರ್ಪಡಿಸಿಕೊಳ್ಳಲಿಲ್ಲ (ಚಂಗಾಳ್ಮ. ೧೫೫). [ ತೋರ್ಪಡು + – ಇಸು$_3$ ]

**ತೋರ್ಪಡು** (ಕ್ರಿ). ೧. ಸ್ಪಷ್ಟವಾಗಿ ಕಾಣು; ತೋರು: ಗೋಚರಿಸು: ಮರಾಳಾವಳಿ ನಗದ ಬಿಲದ್ವಾರದಿಂದೇಳ್ದುದಾಶಾವಳಯುಂ ತೋರ್ಪಟ್ಟುದಬ್ಜಂ ಪಳಚನಲದ್ರ್ದಬ್ಜಾರಿಬಿಂಬಂ ಕಳಂಕಂ ಕಳದತ್ತೆಂಬಂತೆ ನೀಡುಂ ತೊಳಗಿತು ತಿಳಿದತ್ತಾಪಗಾವಾರಿಪೂರಂ (ರಾಜಶೇ. ೬-೨); ಸೊಂಟದಲ್ಲಿ ಧೋತ್ರ ಅಥವಾ ಇತರ ಬಟ್ಟೆಯಿದ್ದಂತೆ ತೋರ್ಪಡಲಿಲ್ಲ (ಕವಾಕುಂ. ೧೪). ೨. ಮೇಲಾಗು ; ಪ್ರಸಿದ್ಧವಾಗು ; ಶ್ರೇಷ್ಠವಾಗು : ಶರಣಾ ಹೊಕ್ಕುದು ಬಂದು ಮಕುಟದ ಗರುವರವನೀಪಾಲಕರು ಮೋಹರಕೆ ತೋರ್ಪಟ್ಟವರು ಭಾರಿಯ ಬಿರುದಿನತಿಬಲರು (ಕುವ್ಯಾದ್ರೋ. ೧೬-೨೦).

[ ತೋಱ್ (<ತೋಱು) + ಪಡು$_1$ ]

**ತೋರ್ಪು**, **ತೋಪ್ಪು$_2$**, **ತೋವು**. **ತೋಹು$_2$**, **ತೋಹೆ** (ನಾ). ೧. ಕಾಣಿಸುವಿಕೆ ; ತೋರುವಿಕೆ ; ಪ್ರದರ್ಶನ : "ತೋರ್ಪಿನೆ ಕಾಣ್ಕೆ" (ರನ್ನಕಂ. ೧೨) ; "ತೋರ್ಪು ತೋರ್ಕೆಯೊಳಂ ಮಿಗೆ ತೋರ್ಕುಂ" (ಕಡಾನಿ. ೭);ದೀನನೇತ್ರಂ ತುಷಲಘುತರಮಾತ್ರಂ ಕರಂ ಪೊರ್ದಿ ತೋರ್ಪಿಂ ಜನಮುಂ ಬೇಳ್ಪಾಸೆಯಿಂ ಸಾವಿನ ಪರಿಯೆನಿಪೀ ದೈನ್ಯಮಂ ಬಿಟ್ಟು ನಿಮ್ಮಂ ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷಂ ರಕ್ಷಿಪ್ಪುದೆನ್ನಂ (ರಕ್ಶಾಶ. ೨೧); ತೆರ್ಪೆಂದು ತೋರ್ಕೆ (ತೋರ್ಪೆ) (ಶಮದ. ೧೧೫). ೨. ಆಕಾರ; ಸ್ವರೂಪ. 'ತೋರ್ಪುಗೆಡು' ಪರಾ. **ತೋಪ್ಪು$_2$**:. ೧. ವ್ಯಾಪಿಸಿಯೆ ನೀವ್ ಮಲ್ಲವಿದ್ಯೆಯ ತೋಪ ಮೆಱೆವುದು ಭೀಮನಿದ್ದರೆ ಆ ಪುರದೊಳೊತ್ತೊತ್ತಿ ಹೊಗಳಿಸಿ ನಿಮ್ಮ ಬಿರುದುಗಳ (ಕುವ್ಯಾವಿ. ೬ರಿಇ. ೪-೧೪). ೩. (ಬೇಟೆಯಲ್ಲಿ ಒಡ್ಡುವ) ಆಕರ್ಷಣೆ ; ಆಮಿಷ ; ಆಕರ್ಷಕ ವಸ್ತು ಧರಣೀಪತಿ ಚಂಡಶಾಸನಂಬೆರಸು ವನಾಂತದೊಳ್ ತೆರೆಯ ತೋಪಿನ ಸೋಪಿನ ನೀರ ಬೇಂಟೆಯುವರ್ಗರೆಗಳನೀಕ್ಷಿಸುತ್ತೆ ಬರೆ (ಅನಂಪು. ೧೧-೪೦) ; ಸೋಪಿನ ತೋಪಿನ ಪಳಹದ ಕೋಪಿನ ಪಾಳವದ ಗೋರಿವೇಂಟೆಗೆ ಮತ್ತಂ ಚಾಪ ಪ್ರವೀಣರುದ್ಗತಕೋಪರ್ ನಡೆತಂದರಲ್ಲಿ ಮುಂದೆ ಪುಳಿಂದರ್ (ಸೂಕ್ತಿಸು. ೩-೧೦೪). **ತೋವು** : 'ತೋವಿಕ್ಕು' ಪರಾ. **ತೋಹು$_2$**: ೩. ತೋಪಿನಶಬರನಂತೆ ಬಾಗಿನ ವ್ಯಾಘ್ರದಂತೆ ಆಡುವ ವಿಧಾನದಂತೆ ಇಂತೀ ವೇಷ ಸಹಜ (ಮೋಳಿಮಾ. ೩೪-೧೪೧) ; ಜಾಳವಣಿಗಳ ಬಲೆಯ ರಕ್ಕಿನ ರೌಳಿಗಳ ತೋಹುಗಳ ನಗೆಗಳ ಮೇಲುಮುದ್ದಿನ ಪೇಟೆಕಾತಿಯರ್ಮೈದಿದರು ವನವ (ತೊರರಾ. ೧-೫-೩೯). ೪. ಬೇಟೆಯ ಸ್ಥಳ ; (ದೀವದ ನೆರವಿನಿಂದ)ಬೇಟೆಯಾಡಲು ವನ್ಯಮೃಗಗಳನ್ನು ಆಕರ್ಷಿಸುವ ತಾಣ: ನಿಂದು ಬೇಡರ ತೋಹು ಸೋಹುಗಳ ಸಂದಿಯೊಳು (ಕಣ್ವರ. ದೀ. ೧೨೭-೩೦) ; ಬೆಳ್ಳಾರ ಬಿಗಿ ತೋಹಿನೊಳು ನಿಲ್ಲು ತಿಱಿಯುಂಬ ಬಡು (ಪಡಕಾ. ೫-೨೪) ; ಪುಳಿಂದರು ಬಳಸಿ ಬೇಂಟೆಯನೆಯ್ದಿ ಬನದೊಳು ತೋಹಿನಲ್ಲಿರ್ದು (ಬಸಪು. ೧೮-೨) ; ಸಿಂಪಳದ್ವೀಪದಿಂದೆಮ್ಮ ತೋಹಿಂಗೊಂದು ಸಿಂಹಮಾಟೋಪದಿಂ ಬರಲ್ (ಭಾವಚಿಂ. ೫-೧೨); ಪೋಯೆಸ್ನಸು ಮಿಗ ತೂಣನ ತೋಹಿಗೆ ಸಿಲ್ಕದೆನುತ್ತುಂ ನಿಷ್ಕೆಯ ನೇಹದ ಸಾಹಸಿಗಂ ಶಂಕರನಳ್ಕಱ ಪೂಜೆಗೆ ಸಲ್ವಂ (ಉದ್ಭದೇ. ೩-೪೩); ಉದಕಮಂ ಕೊಳಬಂದ ಮೃಗಗಳ ಬೆದರದಂತೆಸೆಯಲ್ಕೆ ತೋಹಿನ ಹೊದರಿನೊಳು ಕಾದಿರ್ದ ಚಾಪಾಸ್ತ್ರಗಳ ಕೈಕೊಂಡು (ಅನಂರಾ. ೨-೩-೭). ೫. ಕಪಟ ; ಮೋಸ: ಯುಧಿಷ್ಠಿರಾನಾಳ್ವ ದೇಶದೊಳ್ಗಳವು ಕೋಲೆ ಪಾದರಂ ಪುಸಿ ನುಸುಳು ವೈರಮುಟ್ಟುಳಿ ತೋಹು ಬೆದಱು ಬೆಪ್ಪರ . . . ಅಲಸಿಕ ಕರ್ಕಶಂಗಳವು ಮೊಳೆದೋಱವು (ಜೈಮಿಭಾ. ೨-೫). ೬. ಗುಱಿಯಿಡುವಿಕೆ ; ಸಂಧಾನ ಮಾಡುವುದು : ಬಳಿಕ ನೂಱು ನಿರಂತರಸ್ಥಾಪಳವಿಘಾತಿಗೆ ನೂಱು ಲೆಕ್ಕವ ಕಳೆದವಿನ್ನೂಱಾನೆ ಪಾರ್ಥನ ಕೋಲ ತೋಹಿನಲಿ (ಕುವ್ಯಾಗ. ೧-೧೦) ; ಚೂರಿಸುವ ಮೊಗಸೂನಿಗೆಯ ಕೊಲ್ಲಾರಿಗಳ ಶರಬಂಡಿಗಳ ಹೊಂದೇರು ಕವಿದುವು ಕೋಲ ಕೋಲಾಹಲದ ತೋಹಿನಲಿ (ಕುವ್ಯಾಶ. ೨-೪೪); ಬಿಲ್ಲ ತಿರುವಿನ ಕೋಲ ತೋಹಿನ ರಾಮನಿದ್ದನು ನೋಡುಸಾಹವವ (ತೊರರಾ. ೪-೩-೧೫) ; ಪತ್ತು ರಥಂಗಳಾ ವೆಸರ ಭೂಪನು ಭಾವಿಗೆ ತೋಹನಿಕ್ಕಿ ನೋಡುತ್ತಿರೆ (ಪಂಚಶ. ೭೧-೪೧). ೭. ನೇತೃತ್ವ : ಮುಂದಾಳುತನ ; ಮಾರ್ಗದರ್ಶನ : ಮನುಮುನಿಯತಿಪ್ರತಿಗಳೆಲ್ಲರು ನಿಮ್ಮ ತೋಹಿನೊಳಗಿದ್ದರು (ಚನ್ನವ. ಶ. ೩೯೩-೮೩೪); ಘನ ರೌದ್ರಮಯ ದುಗ್ಗಡದ ರಕ್ಕಸಸೇನೆ ನಿಂದುದು ಖಳನ ತೋಹಿನಲಿ (ತೊರರಾ. ೬-೧೯-೧೬).**ತೋಹೆ**: ೩. ಕರೆಸಿದಡವರು ನಿಲ್ಲರು ತೋಹೆ[ಪಾಠಾಂ. ಗೋರಿ] ಯಲಿ ಬಳಿಸಂದ ಮೃಗದಂತೆ (ಕುವ್ಯಾಸ. ೧೨-೬೮).

ತೋಪಿನ ಬೇಟೆ = ತೋಹುವೇಂಟೆ : ಪಾಂಡುರಾಜನಧಿಕತೇಜನುಂ . ಒಂದು ದಿವಸಂ ತೋಪಿನ ಬೇಂಟೆಯನಾಡಲಟ್ಟಿಯ ಪೂಣಿ (ಪಂಪಭಾ. ೧-೧೧೧ ವ). [ ತೋಱ್ (<ತೋಱು) + – ಪು$_2$ ]

**ತೋರ್ಪುಗೆಡು** (ಕ್ರಿ). ಗಾತ್ರ ಕಳೆದುಕೊಳ್ಳು ; ಕುಗ್ಗು : ತನ್ನ ಪಕ್ಷಂ ಸತ್ತೊಡಂ ಮಾತು ಸಾಯದೆ ತೋರ್ಪುಗೆಟ್ಟೊಡು ಕೂರ್ಪುಗಿಡದೆ ತೇಜಂ ತೊಲಗೆಯುಮಾಯು ತೊಲಗದೆ (ಶಾಂತಿಪು. ೪-೩೨ ವ).

[ ತೋರ್ಪು + ಕೆಡು$_1$ ]

**ತೋರ್ಮಲ್ಲಿ** 'ತೋರಮಲ್ಲಿ' ನೋ.

**ತೋಲ್$_1$**, **ತೊಗಲ್**, **ತೊಗಲು**, **ತೊವಲ್$_3$**, **ತೊವಲು**, **ತೋಲು$_1$**, **ತೋವಲ್** (ನಾ). ೧. ಚರ್ಮ; ಚಕ್ಕಳ; ತ್ವಕ್ಕು: "ತ್ವಚಮಜಿನಾಸೃಗ್ಧರಿ ಕೃತ್ತಿ ಚರ್ಮಮೆನೆ ತೋಲ್ ತ್ವಗಾಪ್ವಯಂ" (ವಸ್ತುಕೋ. ೭೨-೨೮) ; ಸಿಡಿಲಂತೊರ್ಮೆಯ ಪೊಯ್ಕೆ ಪೊಯ್ದ ಭರದಿಂದೊಂದಾನೆ ತೋಲ್ ನೆತ್ತರಲ್ಪಡಗೊಂದೊಂದಱುಳೊಂದುಮೊಂದಟೆ ಗದಾನಿರ್ಘಾತದಿಂ ಪಾಯುಮಾದೊಡೆ (ಪಂಪಭಾ. ೧೦-೧೦೫) ; ಕರಡಿಯ ತೋಲಂ ಕಜ್ಜಲ ಪರಾಗದಿಂ ಪೊರೆದು ಪಿರಿದು ಜೇನೆಯ್ಗೊಳ್ ತಂದಿರಿಸಿದಪೊಲ್ (ಶಾಂತಿಪು. ೮-೧೨೭) ; ಗಜಂ ಹತಪಾದುದಿಂದು . . . ಅದಱ ತೋಲೊಳ್ ಮೆಲ್ಪಿನೊಳಪ್ಪುದಿಲ್ಲ ತತಪ್ಪರಥನಂ (ಜಗವಿ. ೬-೬೧) ; ತೋಲಂ ಕಚ್ಚಿತೆ ನಲಿವ ಸೊಣಗಂ (ನೀತಿವಂ. I, ೩೦೫). **ತೊಗಲ್** : ೧. "ಚರ್ಮ ತ್ವಚಂ

**ದಂತಾಂಶು** (ನಾ). = ದಂತಕಾಂತಿ : ಕಾರುಣ್ಯದ ರಸದ ಪೊನಲ್ಪರ್ವು ತಿರ್ದತ್ತಿದೆಂಬೀ ತೆಱದಿಂ ದಂತಾಂಶುಜಾಳಂ ಪಸರಿಸೆ (ಕಾದಂಪೂ. ೩೩೭) ; ದಂತಾಂಶುಕೋದ್ಯನ್ಮಣಿಯುಂ ದಂತಾಂಶು ತೀವ್ರತ್ತಸೆಯೆ (ರಾಜಶೇ. ೫-೧೭). [ ದಂತ$_1$ + ಅಂಶು ]

**ದಂತಾಂಶುಕ** (ನಾ). = ದಂತವಾಸ : ದಂತಾಂಶುಕೋದ್ಯನ್ಮಣಿಯುಂ ದಂತಾಂಶು ತೀವ್ರತ್ತಸೆಯೆ (ರಾಜಶೇ. ೫-೧೭). [ ದಂತ$_1$ + ಅಂಶುಕ ]

**ದಂತಾಗ್ರ** (ನಾ). ಹಲ್ಲಿನ ಅಗ್ರ ; ತುದಿಹಲ್ಲು : ಶ್ರೀ ಬಾಳಾಪೋಲಿಖ್ಯ ಮೇಲೆ ಸರ್ಪ್ಪದ ಮಹಾದನ್ತಾಗ್ರದುಳ್ಳಲ್ಲವೋಲ್ (ಎಕ. II, ೨೨-೧ ; ಸು. 700). [ ದಂತ$_1$ + ಅಗ್ರ ]

**ದಂತಾದಂತಿ** (ನಾ). ಹಲ್ಲಿನಿಂದ ಒಬ್ಬರಿಗೊಬ್ಬರು ಕಚ್ಚಾಡುವ ಜಗಳ : ಕೆಡಹಿ ಮೆಟ್ಟುತ್ತ ಕೇಶಾಕೇಶಿ ಬಳಿಕ ದಂತಾದಂತಿಯೆಂದೆನಿಪ್ಪ ಬೆಡಗಿನಿಂದೆಸೆವ ಮುಪ್ಪಾಮುಷ್ಟಿಯಿಂ ಪೋರೆ (ವೀಶೈಪು. ೩-೮-೧೫) ; ನಮಾನಬಿಪ್ರಬಳ ದಂತಾದಂತಿಯಿಂ ಕಾದಿದರ್ (ಹಮ್ಮಿ‌ರ. ೨-೮೭). 'ಕೇಶಾಕೇಶಿ' ಪರಾ. [ ಸಂ. ]

**ದಂತಾಧಿಕ** (ನಾ). ಸಾಮಾನ್ಯವಾಗಿ ಇರಬೇಕಾದ ಹಲ್ಲಿಗಿಂತಲೂ ಹೆಚ್ಚಾದ ಹಲ್ಲಿರುವುದು: "ಕೆಳಗಾಜು ಮೇಲಾಜು ಹಲ್ಲಿರಲು ಜಯಮಕ್ಕು ಹೆಚ್ಚುಕುಂದಾಗೆ ದಂತಾಧಿಕಂ ದಂತಹೀನಂ" (ಮಂಗರಾ. ೮೨-೧೭). [ ದಂತ$_1$ + ಅಧಿಕ ]

**ದಂತಾಬಲ** (ನಾ). = ದಂತಾವಲ. [ ಸಂ. ]

**ದಂತಾಮಯ** (ನಾ). ಹಲ್ಲಿನ ರೋಗ. [ ದಂತ$_1$ + ಆಮಯ ]

**ದಂತಾರ್ಬುದ** (ನಾ). ಒಂದು ಬಗೆಯ ಹಲ್ಲುಬೇನೆ : ದಂತಾರ್ಬುದಕ್ಕೆ ಗುಳ್ಳ, ಬದನೆಯ ಬೇರು, ಕಕ್ಕೆತಿಗಡು ಇವಂ ಎಣ್ಣೆಯಲ್ಲಿ ಅರೆದು ಪೂಸಲು ದಂತಾರ್ಬುದ ಮಾಣ್ಗುಂ (ವಿದ್ಯಾವಿ. ೧೩೭). [ ದಂತ$_1$ + ಅರ್ಬುದ$_2$ ]

**ದಂತಾವರಣ** (ನಾ).=ದಂತವಾಸ : ಆರಯೆ ದಂತಾವರಣಂ ಪ್ರವಾಳರುಚಿರಚ್ಛಾಯಾರುಣಾಕ್ಷೇಪಿ . . . ಸುರೂಪಾಶ್ಚರ್ಯಮಾ ಕನ್ನೆಯಾ (ಸುಕುಮಾ. ೫-೫೩). [ ದಂತ$_1$ + ಆವರಣ ]

**ದಂತಾವಲ, ದಂತಾವಳ** (ನಾ). ೧. ಆನೆ ; ಗಜ ; ದಂತಿ : ಲಲನೆಯರ ನಡೆ ಎನುತ ದಂತಾವಲ ಘಟೆಯು ಸಾರೆನುತೆ . . . ನೆಲದೊಡೆಯು ಜಯಸಿಂಹ ಕಟ್ಟಿಗೆವಿಡಿದು ನಡೆತಂದ (ಶಂಕದಾ. ೯-೨೧). **ದಂತಾವಳ:** ಸರದೊಳ್ ಲೀಲಾಸರಂ ಪುಟ್ಟಿದತ್ತೆನೆ ಮೂಡಿತ್ತವಗಾಹಮಿರ್ದು ಕೊಳದಿಂ ಕಾಯ್ದೊಂದು ದಂತಾವಳಂ (ಅರ್ಧನೇ. ೫-೧೧೨) ; ಶ್ರಾವಕರು ನೆಱೆದಾತನಂ ದಂತಾವಳಕೆ ನೂಕೆ (ಬಸಪು. ೪೯-೩೮) ; ತಳವಜರ ಸುಂಕಿಗರ ದಂತಾವಳ ರಥಾಶ್ವಾರೋಹಕರ . . . ನಿವಾಸಂಗಳಲಿ ವಾಸವ ಮಾಡಿಸಿದನೊಲಿದನಿಲಬಾಂಧವನ (ತೊರರಾ. ೫-೮-೫೪) ; ಹರಿ ದಂತಾವಳ ಕೋಳ ಸೈರಿಭ ಮಹಾಶಾರ್ದೂಳ ಸಂದೋಹದಾಸುರದಾ ಬೇಂಟೆಯನಾಡಿ (ಹಮ್ಮಿ‌ರ. ೭-೭೭). ೨. ಗಜಾಸುರ. 'ದಂತಾವಳಾರಿ' ಪರಾ. [ ಸಂ. ]

**ದಂತಾವಳ** 'ದಂತಾವಲ' ನೋ.

**ದಂತಾವಳಾರಿ** (ನಾ). ೧. ಆನೆಯ ಶತ್ರು ; ಸಿಂಹ. ೨. ಗಜಾಸುರನ ಶತ್ರು ; ಶಿವ : ಓವಿ ಮದದಂತಾವಳಂ ತಿರುವಾಕರೀಶನನೆಂಟದಿರೆ ದಂತಾವಳಾರಿಯ ಕಿಂಕರನನೇಗೆಯ್ವುದಾ ದಂತಿ (ಬಸಪು. ೪೯-೩೮).

[ ದಂತಾವಳ (= ದಂತಾವಲ) + ಅರಿ$_6$ ]

**ದಂತಾಹತಿ** (ನಾ). ಆನೆಯ ದಂತದ ಪೆಟ್ಟು,- ಹೊಡೆತ : ಮಾದ್ಯದ್ವಿರದನೀಂದ್ರಸ್ಥೂಳ ದಂತಾಹತಿವಿದಳಿತ ಗೋಶೀರ್ಷಸಾರದ್ರುಮಾಮೋದದಿನೆತ್ತಂ ಗಂಧವಾಹಂ ಮಗಮಗಿಸೆ (ಆದಿಪು. ೧೩-೭೮). [ ದಂತ$_1$ + ಆಹತಿ ]

**ದಂತಿ** (ನಾ). ೧. ಆನೆ ; ಗಜ : "ದ್ವಿರದಂ ದಂತಿ ಮತಂಗಜಂ . . . ಸಿಂಧುರಮೆಂದಿಂತಿವು ಸಾಮಜಾಖ್ಯೆಯೊಳಭಿನ್ನಾರ್ಥಂಗಳಕ್ಕುಂ" (ವಸ್ತುಕೋ. ೮೭-೩೧) ; ಏಱಿದಂ ತ್ರಿಜಗದ್ಭೀಷಣ ದಂತಿಯಂ ರಿಪುಚಮೂವಿದ್ರಾವಣಂ ರಾವಣಂ (ಪಂರಾಮಾ. ೧೦-೨೦೯); ಬೇಂಟೆಗುಜ್ಜುಗಿಸಿ ವಿಪಿನಕೆ ನಡೆವೆನಲ್ಲಿ ಶರತತಿಯ ಕಱೆವೆಂ ದಂತಿಗಳ ತಲೆಯ ಮುತ್ತುಗಳುದುರೆ ಸೀಳ್ವೆಂ (ಭಾವಚಿಂ. ೬-೫) ; ಕಾಮರೂಪದ ಅರಸನು ವಿಂಧ್ಯಗಿರಿಗಳಂತಿದ್ದ ಹತ್ತು ದಂತಿಗಳನ್ನು ಕಳಿಸಿದ್ದನು (ಣಂತಲಾ. ೧೧೪). ೨. ಒಂದು ಬಗೆಯ ಗಿಡ ; ಜಾಪಾಳದ ಗಿಡ. ೩. ಕರಿಯ ಉಮ್ಮತ್ತಿ ಗಿಡ : "ಮುಕೂಲಕಃ, ನಿಕುಂಭಃ, ದಂತಿಕಾ, ಪ್ರತ್ಯಕ್ಶ್ರೇಣೀ, ಉದುಂಬರಪರ್ಣೀ – ಈ ೫ ದಂತಿಯ ಗಿಡು" (ನಾಚಿರಾ. ೧೧) ; ಕ್ರಿಯೆಯಿಂ ನೆಲ್ಲಿಯುಮುಂ ದಂತಿಯುಮುಂ ರಜನಿಯುಮನರೆದು ಕುಡಿದೊಡೆ . . . ಭಗಂದರಂ ಪ್ರಶಮಿಸುಗುಂ (ಲೋಕೋಪ. ೯-೧೫೯) ; ತಿಗಡೆ ಸೈಂಧವಂ ದಂತಿಯನುಷ್ಣಜಲಮಿಶ್ರಿತದಿಂ ಮಾಡೆ ಜಯಂಗೆಯ್ಗುಂ ಸಮಸ್ತಶೂಲಾ(ಲ)ವ್ಯಥೆಯಂ (ಅಶ್ವಶಾ. ೧೧-೧೧) ; ಬೆಲ್ಲ, ದಂತಿ, ಚೆಂಗಣಿಗಿಲ ಕೋಷ್ಠ, ಸೀಸ, ರಕ್ತಚಂದನ ಇಷ್ಟನೂ ಎಕ್ಕದ ಹಾಲಿನಲ್ಲಿ ಅರೆದು ಕರ್ಣಕಗ್ರಂಥಿಯ ಲೇಪಿಸಲು ಗ್ರಂಥಿಶಮನವಹುದು (ವೈದ್ಯಸಾ. I, ೮೦). ℙ ಆಯುರ್ವೇದ ನಿಘಂಟುಕಾರರು ಒಂದು ಪದದ ಅರ್ಥವನ್ನು, ಆ ಪದದ ಪರ್ಯಾಯ ಶಬ್ದಗಳಿಗೆಲ್ಲಾ ಅನ್ವಯಿಸುತ್ತಾರೆ. ೪. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : ಅಷ್ಟ, ವಸು, ದಂತಿ . . . ದಿಗ್ದಂತಿ ಇಂತಿನಿತುಂ ೮ಕ್ಕೆ ಪೆಸರು (ವ್ಯವಹಾ. ೧೦-೩೦); ಶತಮುಖೇಂದು ದಿನಪತ್ರ್ಯತಯಾಗ್ರದೊಳಾವಗಂ ಜತಮನೋಭವಗಣಂ ಬರೆ ದಂತಿಯೊಳೊಪ್ಪ ಪದ್ಧತಿಯೊಳಲ್ಲಿ ಯತಿ ತಾಂ ನಿಲೆ ಮಂಗಳಂ (ಛಂದೋಂಬು. ೭-೧೫೯).

[ ಸಂ. ದಂತಿನ್ ]

**ದಂತಿಕಪೋಲ** (ನಾ). ಆನೆಯ ಕೆನ್ನೆ,- ಗಂಡಸ್ಥಲ : "ದಂತಿಕಪೋಲ ಭೇಕಬಲಿಜೀವನಭಂ ಕರಟಾಹ್ವಯಂ" (ನಾನಾರ. ೮೮). [ ದಂತಿ + ಕಪೋಲ ]

**ದಂತಿಗ** (ನಾ). ೧. ಆನೆಯ ಮೇಲೆ ಕುಳಿತು ಯುದ್ಧಮಾಡುವ ಸೈನಿಕ,-ಭಟ : ಮಂತ್ರೀಶಗೇಡಿ ಮನ್ಮಥಕುಮಾರಕ ತನ್ನ ತೊಂತಿದ ಖಳರನುತ್ತರಿಸಿ ಹಂತಿಯೊಳ್ ಕೆಡಹಲ್ಕೆ ಕುಂಭಾಂಡನ ಕೊಂದು ದಂತಿಗರಡ್ಡಯಿಸಿದರು (ಮೋಹತ. ೩೪-೩೭). ೨. ಒಬ್ಬಾತನ ಹೆಸರು : ಕಂಚೆಯನಾಳ್ವ ದಂಡಿಗನ ಮೇಗೆಟ್ಟು (ಎಇ. XXXIII, ೩೩೦-೭ ; 804) ; ಅವರಿಂ ಬಟಱಿಯಂ ಶ್ರೀದಯಿತಂ ದನ್ತಿಗನುದಿತೋದಿತಂ (ಎಕ. XI, ಚಿತ್ರದು. ೪೯-೩೭ ; ೨೪೭). [ ದಂತಿ + –ಗ$_2$ ]

**ದಂತಿಗಮನೆ** (ನಾ). ಆನೆಯಂತೆ ನಡಗೆಯುಳ್ಳವಳು ; ಗಜಗಮನೆ : ದಂತಿಗಮನೆಯುಳ ವೈಗಂಧ ಪೊರಸೂಸಲು (ನವಮೋ. ೪-೪೨).

[ ಸಂ. ದಂತಿಗಮನಾ (ದಂತಿ + ಗಮನ + –) ]

**ದಂತಿಘಟೆ** (ನಾ). ಆನೆಯ ಹಿಂಡು,-ಸೈನ್ಯ ; ದಂತಿಘಟೆ ದಂತಿಘಟೆಯೊಳಾಂತು ಪೊಗಮಿಕ್ಕೆಯುಂ ಜೋದರ್ ಜೋದರೊಳೇಸಾಡೆಯುಂ (ಪಂರಾಮಾ. ೧೩-೭೭ ವ) ; ದಿಂಡುಗೆಡೆದವು ದಂತಿಘಟೆ ಶತಖಂಡವಾದವು ತುರಗದಳ (ಕುಮಾವ್ಯಾ. ೪-೪೯). 'ಕರಿಘಟೆ' ಪರಾ. [ ದಂತಿ + ಘಟೆ ]

**ದಂತಿಚರ್ಮ** (ನಾ). ಆನೆಯ ತೊಗಲು,- ಚರ್ಮ : ಪೊಳೆಪೊಳೆವ ಕೆಂಜಡೆಯನಹಿಪತಿಯುಳುಕೆ ಬಿಗಿದನು ದಂತಿಚರ್ಮವ ನೆಲಕೆ ಮುಂಜೆಱಗೆಳೆಯಲುಟ್ಟನು ದೇಸಿಪರಿ ಮೆಱೆಯೆ (ಕುಮಾವ್ಯಾ. ೭-೧೧).

[ ದಂತಿ + ಚರ್ಮ ]

**ದಂತಿನಿ** (ನಾ). ಹೆಣ್ಣು ಆನೆ ; ಪಿಡಿ : ದಂತಿನಿ ಪೊಲೆಯೂಡೆ ನಿಂದು ನಿಜಪೋತಮಂ (ಶಾಂತಿಪು. ೨-೧೦೫) ; ದಂತಿನಿ ದಂತಿಯಂ ವನದೊಳಬ್ಬಿಸಿಯೊಳ್ ಕಳಹಂಸಿ ಹಂಸನಂ ಕಂತುವನಾ ರತಿಪ್ರಮದೆ ನಂದನದೊಳ್ ನೆಱೆ ಕಾಣದಂತತಿಭ್ರಾಂತಿಯನಪ್ಪುಕೆಯ್ವ ತೆಱದಿಂ (ನೇಮಿಪು. ೪-೯೪).

[ ಸಂ. ದಂತಿನೀ ]

**ದಂತಿಪ** (ನಾ). ಆನೆಯನ್ನು ಕಾಪಾಡುವವನು; ಮಾವಟಿಗ: ಪಾಡುತಿರೆ ತದ್ದಂತಿಪನತಿನೂತ್ನಗೀತಪಾತನ ವಿಕಲಸ್ವಾಂತಗೆ ನೋಡುವ ಕೂಡುವ ಚಿಂತೆ ಕಡಲ್ವರಿದುದು (ಯಶೋಧ. ೭-೩೨). [ಸಂ.]

**ದಂತಿಪುರ** (ನಾ). ಕೌರವರ ರಾಜಧಾನಿ; ಹಸ್ತಿನಾಪುರ: ನಿಜಸೇನೆ ಬರಲು ದಂತಿಪುರಕಲ್ಲಿಯು ಸಮಸ್ತವಸ್ತುಗಳೈದುವಂತೆ ನೇಮಿಸಿ ಮಯೂರ ಧ್ವಜಂ ಸಹಿತ ನಡೆದಂ (ಜೈಮಿಭಾ. ೨೬-೭೭). [ದಂತಿ + ಪುರ$_2$]

**ದಂತಿಮುಳ್ಳು** (ನಾ). ದಂತಿಗಿಡದ ಮುಳ್ಳು: ದಂತಿಮುಳ್ಳನು ಹೋಳಿಗೆ ೩ ಚುಚ್ಚುವದು ಕೆಂಪಿನ ಕಣಗಲು ಹೂ ೧೧ ಅರಿಶಿನ ಕೆಂಪು ಅಕ್ಷತೆ ಮನೇಬಾಗಿಲಲ್ಲಿ ಹೂಳುವದು (ಕೌತುಚಿಂ. ೨-೩).
[ದಂತಿ + ಮುಳ್ಳು (< ಮುಳ್$_2$)]

**ದಂತಿರಾಜ** (ನಾ). ಶ್ರೇಷ್ಠವಾದ ಆನೆ; ಗಜರಾಜ: ದಂತಿರಾಜನಂ ತೊಡರ್ಚಿ ಪಿಡಿದೊಯ್ಯನೊಯ್ಯನೆ ಪೊಱಮಟ್ಟು (ಅನಂಪು. ೭-೯೪ ವ).
[ದಂತಿ + ರಾಜ]

**ದಂತಿವೃಂದ** (ನಾ). = ದಂತಿಘಟೆ: "ದಂತಿವೃಂದಂ ಘಟೆಯೆನಿಕ್ಕು" (ಮಂಗರಾ. ೪೭-೩). [ದಂತಿ + ವೃಂದ]

**ದಂತಿವ್ರಜ** (ನಾ). = ದಂತಿಘಟೆ: ದಂತಿವ್ರಜದಿಂದಂ ದ್ವಿಜಸಂತತಿಯಿಂ . . . ತುಂಬಿರ್ಪುದು ತನ್ಮಹಿಕಾಂತನ ಬಂಧುಗಳ ವೈರಿವರ್ಗದ ದುರ್ಗಂ (ಬಾಧಪು. ೨-೧೮). [ದಂತಿ + ವ್ರಜ]

**ದಂತಿವ್ರಾತ** (ನಾ). = ದಂತಿಘಟೆ: ತುರಗನರರಥವಿಟ್ಟಣಿಸೆ ಸಮೆದವು ದಂತಿವ್ರಾತವುಭಯದೊಳು (ಕುವ್ಯಾಭೀ. ೪-೭೮). [ದಂತಿ + ವ್ರಾತ]

**ದಂತಿಶಿಶು** (ನಾ). ಆನೆಯ ಮರಿ; ಕಲಭ: ಹಯಗ್ರೀವಂ ಆ ತ್ರಿಪೃಷ್ಠಂಗಿದಿರ್ಚಿ ವನನಾಗಾರಿಯನಾಂತ ದಂತಿಶಿಶುವೊಲ್ . . . ನೀಡಿಲ್ಲ ದಳ್ಳಾಡುಗುಂ (ಶಾಂತಿಪು. ೫-೨೭). [ದಂತಿ + ಶಿಶು]

**ದಂತಿಸಂತಾನ** (ನಾ). = ದಂತಿಘಟೆ: ದಂತಿಸಂತಾನಮಂ ಕಿಶೋರ ಕೇಸರಿಯುಳಱಿಸಲ್ ನೆಱೆವುದು (ನೇಮಿಪು. ೯-೨೭ ವ).
[ದಂತಿ + ಸಂತಾನ]

**ದಂತುರ** (ಗು). ೧. ಎತ್ತರವಾದ ಹಲ್ಲುಗಳುಳ್ಳ; ಮೇಲಕ್ಕೆ ಉಬ್ಬಿದ ಹಲ್ಲುಗಳುಳ್ಳ. ೨. ಸಮತಳವಲ್ಲದ; ಹಳ್ಳತಿಟ್ಟಾದ; ವಿಷಮತಳವಾದ: ದಂತುರ ದಿಗಂತ ಚುಂಬಿತ ಉದಯಮೇಣಸ್ತುರವಿದರ್ಶನಂ (ಶ್ರೀರಾಮಾ. ೪೦೫-೫೩). ೩. ಹರಡಿರುವ; ವ್ಯಾಪ್ತವಾದ: ತುಪ್ಪಟ ತತಿಯಿಂ ದಂತುರವಾದನ್ನಂಗಮನಂತರಿಸದೆ ಕರದಿನೆಟವಿದಂ ಮನದಟಲಂ (ಕಾದಂಲು. ೭೩೦). [ಸಂ.]

**ದಂತುರಚಕ್ರ** (ನಾ). ಹಲ್ಲುಗಳನ್ನು ಹೊಂದಿರುವ ಚಕ್ರ: ದಂತುರಚಕ್ರ, ಅಂದರೆ ಹಲ್ಲುಗಳುಳ್ಳಂಥ ಚಕ್ರ . . . ಮುಳ್ಳುಗಳುಳ್ಳಂಥ ಚಕ್ರವೆಂತಲೂ ಅನ್ನಬಹುದು (ಮುಂಬಯಿ. ೫-೧೯೧ ಅಡಿಟಿ). [ದಂತುರ + ಚಕ್ರ$_1$]

**ದಂತುರಿತ** (ಗು). ೧. ಹರಡಿರುವ; ವ್ಯಾಪ್ತವಾದ: ಮಹಾ ಪ್ರವಾಹಿನೀ ಸಲಿಲ ಸಂಮಿಶ್ರ ಕರ್ಪೂರದಳ ಬಹುಳಕಾಂತಿ ದಂತುರಿತ ಚಂದ್ರಕಾಂತ ಕಲಶಂಗಳಿಂ (ಪಂರಾಮಾ. ೧೩-೨ ವ). ೨. ತುಂಬಿರುವ: ಮೌಕ್ತಿಕಮಂಡಪದ ನಡುವಣ ಮರಕತಪರ್ಯಂಕದೊಳವಿರಳಾಶ್ರುಬಿಂದುಸಂದೋಹ ದಂತುರಿತಪಕ್ಷ್ಮಮಾಲಾಲುಳಿತನೇತ್ರಿಯುಂ (ಚಂದ್ರಪು. ೩-೫೦ ವ). (ನಾ). ೩. ನೆಗ್ಗಿದುದು; ಹಳ್ಳಬಿದ್ದಿರುವುದು: ವಿವಿಧಾಯುಧ ದಂತುರಿತಂಗಳೆಂದುಮಾ ಸಂಗರಜಳನಿಧಿಯೊಳ್ ವರೂಥಕರಿನಿಕರಂಗಳ್ (ಪಂಪಭಾ. ೧೩-೩೫). [ಸಂ.]

**ದಂತೋಷ್ಠ್ಯ** (ನಾ). [ವ್ಯಾಕ] ಹಲ್ಲು ಮತ್ತು ತುಟಿಗಳ ಸಹಾಯದಿಂದ ಹುಟ್ಟುವ ವರ್ಣ,-ಸ್ವನ; ವಕಾರ: ದಂತೋಷ್ಠ್ಯ-ವ (ಕೈಬಿಡಿ. ೫).
[ಸಂ.]

**ದಂತ್ಯ** (ನಾ). [ವ್ಯಾಕ] ದಂತಪ್ರದೇಶದಿಂದ ಹುಟ್ಟುವ ಅಕ್ಷರ: ದಂತದ ಸಹಾಯದಿಂದ ಉಚ್ಚರಿಸಲ್ಪಡುವ ಅಕ್ಷರ: ತಥದಧನ ಎಂಬ ಲ, ಸ ವರ್ಣಗಳು: ದಂತ್ಯ ತವರ್ಗ, ಲ, ಸ, (ಕೈಬಿಡಿ. ೫): ಕರ್ನಾಟಕ ಎಂಬ ದಂತ್ಯವರ್ಣದ ರೂಪ ಸರಿಯೆ? (ದ್ರಾವಿವಿ. ೮೫). [ಸಂ.]

**ದಂತ್ಯಾವಳಿ** (ನಾ). = ದಂತಿಘಟೆ: ಆ ವಿಗಡಪರಿವಾರದಲಿ ರಥ ಸಾವಿರವ ಮೇಳೈಸಿದರು ದಂತ್ಯಾವಳಿಯ ಬೇಱೆಣಿಸಿ ನಿಲಿಸಿದರೈದುಸಾವಿರವ (ಕುವ್ಯಾಕ. ೧೯-೩). [ದಂತಿ + ಆವಳಿ$_1$ (= ಆವಲಿ)]

**ದಂದಣ** 'ದಣದಣ' ನೋ.

**ದಂದರಹಾಳ** (ನಾ). ವ್ಯರ್ಥವಾಗಿ ಖರ್ಚುಮಾಡುವವನು; ದುಂದುಗಾರ: "ಹಣವನ್ನು ಲಕ್ಷ್ಯವಿಲ್ಲದೆ ಖರ್ಚುಮಾಡುವವನು,-ಪೋಲುಮಾಡುವವನು; ದುಂದುಗಾರ, ದಂದರಹಾಳ" (Spendthrift. ಇಂಕಿನಿ).
[< ದುಂದು + ಹಾಳು (< ಪಾೞ್) + -ಅ$_7$]

**ದಂದರಹಾಳಿ** (ನಾ). ವ್ಯರ್ಥವಾಗಿ ಖರ್ಚುಮಾಡುವವಳು; ದುಂದುಗಾತಿ: ಅಕ್ಕಿಯನ್ನು ನಿಮ್ಮಪ್ಪನ ಮನೆಯಿಂದ ತಂದಿದ್ದೆಯೇನೆ ದಂದರಹಾಳಿ? (ಮಾಮರಾ. ೧೦೦); ಬೀರಕ್ಕನು ದಂದರಹಾಳಿ, ವಿಪರೀತ ವೆಚ್ಚವನ್ನು ಮಾಡತಕ್ಕವಳು (ನೀತಿಚಿಂ. IX, ೨).
[ದಂದರಹಾಳ + -ಇ$_2$]

**ದಂದವಡೆ** (ಕ್ರಿ). ಬೇರೆಯಾಗು; ವಿಯೋಗವನ್ನು ಹೊಂದು (?): ದಂದವಡೆದೊಡಗೂಡಲಿಲ್ಲದತಿಶಯಚಿಂತೆ. ಸಂದಣಿಸಿದುದು ಚಿತ್ತದೊಳು (ಸೌಂದಪು. ೧೩-೩೩): "ಮೋಹ ತಾಳು" (ಪ್ರಠಣ).
[< ದ್ವಂದ್ವ + ಪಡೆ$_1$]

**ದಂದವೊಡೆ** (ಕ್ರಿ). ವೈಷಮ್ಯವನ್ನು ಪರಿಹರಿಸು; ವಿರೋಧವನ್ನು ನೀಗು (?): ದೂರ್ವಾಸ ಮುನಿ ನುಡಿದಂತೆ ಕೃಷ್ಣಂಗೆ ಸಂದೆಗಮಣಂ ದೋರದಾಟಿಯದನಿಂದ ಸಲೆ ಸಂದ ಮರಣಂ ಸಾದುರ್ದರಿನೀಶಪ್ರಸಾದಿಗಳ ಮಹಿಮೆಯನಾವನು ದಂದವೊಡೆವಂತೆ ಬಣ್ಣಿಪನದಾತಿರ್ಕೆ ಮನದಂದು ಮಾತ್ರಂ ಕೇಳಿರೆಲೆ ವಿಪ್ರದುಷ್ಟರಿರ ಮುಂದಿನ್ನೆ ಪೇಳ್ವೆಂ ಸುಕೇಶಪುಂಗವನ ಕಥೆಯನದನಾಲಿಸುವುದು (ಅರಾಜ. ೭-೨೪).
[ಈ ಇದು 'ಅಂದವಡೆ' ಎಂಬುದರ ಅಪಲಿಖಿತವಿರಬಹುದು]

**ದಂದಶೂಕ** (ನಾ). ಹಾವು; ಸರ್ಪ: "ವಿಷಧರಃ, ದಂದಶೂಕಃ . . . ಭುಜಂಗಮಃ - ಈ ೨೫ ಪಾವಿನ ಪೆಸರ್" (ಹಲಾಯು. ೦೦೫-೧೮): ಕುಟಿತಾನೇಕಪದಂದಶೂಕದವ . . . ಜರಾತಂಕಾದಿಭೇದಂಗಳಪ್ಪುವ ಸರ್ಗಂಗ[ಳಿ]ಂ (ಆದಿಪು. ೧೬-೯); ದುರ್ಜನರಿಗಂಜುವುದು ಲೋಕವು ಸಜ್ಜನರ ಲೆಕ್ಕಿಸದು ತಾರ್ಕ್ಷ್ಯನ ಸೆಜ್ಜೆಯೊಳಗಿಹ ದಂದಶೂಕ ನನರ್ಚಿಸು ವರೊಲಿದು (ಕುವ್ಯಾಉ. ೪-೨೦). [ಸಂ.]

**ದಂದಶೂಕಪತಾಕ** (ನಾ). ಬಾವುಟದಲ್ಲಿ ಸರ್ಪದ ಗುರುತುಳ್ಳವನು ಉರಗಪತಾಕ; ದುರ್ಯೋಧನ: ದಂದಶೂಕಪತಾಕನ ಸೆಱಗಿಲ್ಲದ ಮೆಚ್ಚುಗಲಿತನಕ್ಕೆ ಮೆಚ್ಚಿ (ಗದಾಯು. ೭-೩೦ ವ).
[ಸಂ. ದಂದಶೂಕ + ಪತಾಕಾ + -]

**ದಂದಶೂಕಪತಿ** (ನಾ). ಹಾವುಗಳ ಒಡೆಯ: ಸರ್ಪಶ್ರೇಷ್ಠ: ಆದಿಶೇಷ: ಭಾಳವಿಲೋಚನಂ ದಂದಶೂಕಪತಿಹಾರಮುದಾರಸ್ಮೇರಮುಖಂ ನಿಜರೂಪಂ ತೋಱಿದಂ (ರಾಜಶೇ. ೦೪-೮೭). [ದಂದಶೂಕ + ಪತಿ$_2$]

**ದಂದಶೂಕಪ್ರಮಾಥಿ** (ನಾ). ಹಾವುಗಳನ್ನು ಮರ್ದಿಸುವವನು,-ಕೊಲ್ಲುವವನು; ಗರುಡ: ಮುಂದೆ ನಿಂದಿರ್ದ ದಂದಶೂಕಪ್ರಮಾಥಿಯಂ ಯಥೋಚಿತ ಸ್ನಿಗ್ಧಮಧುರಾಳಾಪದಿಂ ಸಂಭಾಷಿಸಿ ದೇವಕೀನಂದನಂ ಸ್ಯಂದನಮಂ ಕಿಱಿದು ನಡೆಯಿಸೆ (ಜಗವಿ. ೮-೮೦ ವ).
[ಸಂ. ದಂದಶೂಕಪ್ರಮಾಥಿನ್]

**ದಂದಶೂಕಭಯ** (ನಾ). ಹಾವಿನ ದೆಸೆಯಿಂದ ಉಂಟಾಗುವ ಹೆದರಿಕೆ ; ಸರ್ಪಭೀತಿ : ಅವದ್ಯಮಾದ್ಯದ್ದಂದಶೂಕಭಯಜಾಗರೂಕರ ವನಿಪಾಶ್ರಮಂಗಳರಸುಗೆಯ್ಯುತ್ತುಮಿರೆ (ಶಾಂತಿಪು. ೭-೦೨೩ ವ).
[ ದಂದಶೂಕ + ಭಯ ]

**ದಂದಶೂಕವನಿತೆ** (ನಾ). ಹೆಣ್ಣುಹಾವು ; ಭುಜಂಗಿ : ದಂದಶೂಕವನಿತಾ ಜನಮುಭಿಷ್ಟುತಿಗೆಯ್ದು ಬಿನ್ನವಿಸೆ (ಜಗವಿ. ೩-೧೦೩ ವ).
[ ದಂದಶೂಕ + ವನಿತೆ ]

**ದಂದಶೂಕವಿಭೂಷ** (ನಾ). ಹಾವುಗಳೇ ಒಡವೆಯಾಗಿರುವವನು ; ನಾಗಭೂಷಣ ; ಶಿವ : ಜಯಜಯ ದಂದಶೂಕವಿಭೂಷ (ತ್ರಿಭುತಿ. ೧೨-೬). [ ಸಂ. ]

**ದಂದಶೂಕೇಶ್ವರ** (ನಾ). ಸರ್ಪರಾಜ ; ಆದಿಶೇಷ : ಸಂಜೀವಕದ ರತ್ನಮಂ ದಂದಶೂಕೇಶ್ವರಂ ಕುಡುವನೆಂಬಾಸೆಯಿಂ ಪಂಬಲಿಸುತಿರು ತಿರ್ದರು (ಜೈಮಿಥಾ. ೨೪-೨೬). [ ದಂದಶೂಕ + ಈಶ್ವರ ]

**ದಂದಹಗೊಳಿಸು** (ಕ್ರಿ). ಸುಡು; ದಹಿಸು; ಸಂತಾಪವನ್ನುಂಟುಮಾಡು; ಹಿಂಸಿಸು : ಸಾಹಸಿಯಾಕೆಯರಸನು ಅವನ ಅಗ್ರಜನು ಬಲಯುತನು ಮೂಲೋಕ ದಂದಹಗೊಳಿಪನು (ಜಿನಭಾ. ೫೦-೨೮).
[ ದಂದಹ ? + ಕೊಳ್$_1$ + – ಇಸು$_3$ ]

**ದಂದಹ್ಯಮಾನ** (ಗು). ಹೆಚ್ಚಾಗಿ ಸುಡುವ ; ಅತಿಶಯವಾಗಿ ಸುಡುವ : ಧರೆಯಾಗಸವ ದಂದಹ್ಯಮಾನವ ಮಾಳ್ಪ ಉರಿವ ಬಾಣವ ಮಂತ್ರಿಸಿಡಲು (ಜ್ಞಾನಿಪ. ೫-೮೧).'ದಂದಹ್ಯಮಾನಗಾತ್ರೆ' ಪರಾ. [ ಸಂ. ]

**ದಂದಹ್ಯಮಾನಗಾತ್ರೆ** (ನಾ). ಬಹಳವಾಗಿ ಸುಡುತ್ತಿರುವ ಶರೀರವುಳ್ಳವಳು ; ಬಹಳ ಸಂತಾಪವನ್ನು ಅನುಭವಿಸುತ್ತಿರುವವಳು ; ತುಂಬ ವ್ಯಥಿತಳಾದವಳು: ಅಸಹ್ಯಪರಿಭವಾನಲ ದಂದಹ್ಯಮಾನಗಾತ್ರೆಯುಮಾಗಿ . . . ವಾಚಾಲರಾಜತನೂಜೆ ಪವಮಾನತನೂಜನಲ್ಲಿಗವಂದಂ (ಗದಾಯು. ೧-೫೫ ವ). [ ಸಂ.ದಂದಹ್ಯಮಾನಗಾತ್ರಾ (ದಂದಹ್ಯಮಾನ+ಗಾತ್ರ+–)]

**ದಂದಹ್ಯಮಾನಮಾನಸ** (ನಾ). ಬಹಳ ಸಂತಾಪಪಡುತ್ತಿರುವ ಮನಸ್ಸುಳ್ಳವನು ; ಅತ್ಯಧಿಕವಾದ ಮನೋವ್ಯಥೆಯನ್ನು ಅನುಭವಿಸುತ್ತಿರುವವನು : ಕುಲಾಪವಾದ ಪರಾಭವದ ದಾವಾನಳದಿಂ ದ[ಂ]ದಹ್ಯಮಾನ ಮಾನಸನುಮಸಹ್ಯಮಾನ ಚಿಂತಾಂತರಂಗನುಮಾಗಿ (ಸುಕುಮಾ. ೨-೧೦ ವ): ಸಲಿಲಸಂಘಾತದಿನಪವ್ಯುತ್ಯು ಪುಟ್ಟೆ ಮಾನಸರಸಹ್ಯ ಶೋಕಾನಲ ದಂದಹ್ಯ ಮಾನಮಾನಸರಾಗೆ (ಪಂಚಾಮಾ. ೦-೮೦ ವ).
[ ದಂದಹ್ಯಮಾನ + ಮಾನಸ$_2$ ]

**ದಂದಳ** 'ದಣದಣ' ನೋ.

**ದಂದುಗ** (ನಾ). ೧. ತೊಡಕು ; ಗೋಂದಲ ; ಸಿಕ್ಕು : ಪುರವುರಂಧ್ರಿಯರ ಸಂದಣಿಸಿ ಬಳೆದ ಮೊಲೆಯೆಡೆಯನಿಟಿದೆಂದುಮಿಲ್ಲದ ಮುತ್ತಿನಾರದಿಂದ ಸಂದುದೆಂಬ ಸಂದೆಗದ ದಂದುಗಮನವರೊಡನಾಡಿಗಳ ಚಿತ್ತದೊಳ್ ಬಿತ್ತಿಯುಂ (ಚಂದ್ರಪ್ರ. ೮-೪೩ ವ): ಇಂದಿನವರಂದಿನವರ್ ಕೆಲರೆಂದು ಪಿರ್ದುವೀ ದಂದುಗದಿಂದಮೇನೆಮಗನಿಂದ್ಯ ಕವೀಂದ್ರರೆ ವಂದ್ಯರಾಪಗಂ (ಧರ್ಮನಾ. ೧-೪೨). ೨. ವ್ಯಥೆ; ದುಃಖ ; ಶ್ರಮ ; ಕ್ಲೇಶ : ಎಂದೋ ಸಂಸಾರದ ದಂದುಗ ಹಿಂಗುವುದು (ಬಸವ.೨೨); ತನ್ನ ಕೇಳೀವನಮಂ ವರೇತ ವನಮೆಂದವನೀಶನವು ಸಮಂತು ಸಂಭಾವಿಸಿದಂದು ಭಾವಿಸದನೊಂದನೆ ದಂದುಗದಿಂದಗಲ್ದುದಂ (ಚಂದ್ರಪ್ರ. ೯-೧೭) : ಕವಿತೆಯನು ಬಱಿದೆ ದಂದುಗಕ್ಕೊಳಗಾಗಿ ಪೇಳ್ದನೆಂದೆನ್ನ ನಗುವಂದವಂ ಮಾಡದೆನಗೊಲಿದಿತ್ತನ ಮಲಮತಿಯಂ ದೇವಪುರದ ಲಕ್ಷ್ಮೀರಮಣನು (ಜೈಮಿಥಾ. ೧-೬). ೩. ಕಷ್ಟ ; ತೊಂದರೆ: ಇಂದು ಸುಧಾಂಶು ರಾಜನತಿ ಶೀತಳಶೀಲನನೂನ ಮಾನಿಯೋಳ್ಪಂದೊಡೆ ಪಂಕಜಕೆ ಚಕ್ರಯುಗಕ್ಕಸತೀಕುಲಕ್ಕೆ ಪೋ ದಂದುಗ ಮಾಯ್ತು (ಗಿರಿಶ.೪-೧೧೪) : ಮನುಜರೆಲ್ಲರುಂ ಸಾವ ಪುಟ್ಟುವ ದಂದುಗ ಕ್ಕೊಲ್ದು ಬಱಿದೆ ಕಿಡುತಿರ್ಪರದನಂತಿರಲಳವೆ (ಚಿಲಕ. ೩-೦೫) ; ಪಲವುಂ ಪಂಬಲೊಂದು ದಂದುಗಂ ಬೆಟ್ಟಿತಾಗೆ ಬೀಟ್ಕೊಂಡಂ (ರಾಮಾಶ್ವ. ೩೯-೦೩). ೪. ಗೋಜು ; ಗೊಡವೆ : ವಿಷಾಹಿಗಣಮನೇಕರೌದ್ರ ಮೃಗಜಾತಿಗಳಾಳೆಳರಸೆಂಬುದೊಂದು ದಂದುಗಂ . . . ಪೊಱಗೆಂದೊಡಿಂ ಸುಖ ಮನೇವೊಗಟ್ಟುವುದೊ ಭೋಗಭೂಮಿಯಾ (ಆದಿಪು. ೫-೩೦) ; ನಿಮ್ಮನಱಿದ ಶರಣಂಗೆ ಶಿವಪೂಜೆಯ ಮಾಡುವ ದಂದುಗವೇಕೋ (ಚೆನ್ನಸಂ. ೦೮೫-೪) ; ಎಮಗೆ ತಪಸ್ವಿಗಳ್ಗೆ ನೃಪವಾರ್ತೆಯ ದಂದುಗವೇವುದೆಂದು ನಿರ್ಮಮತೆಯನಿರ್ಪೊಡೆ (ಶಬ್ದಾನು. ೪೬೮ ವ್ಯಾಖ್ಯಾ). ೫. ಕೆಟ್ಟ ಕೆಲಸ ; ದುಷ್ಕರ್ಮ ; ಪಾಪಕೃತ್ಯ : ಹಿಂದೆ ಮಾಡಿದ ಭವಭವಂಗಳ ದಂದುಗವು ಜೀವರನು ನಾನಾಛಂದದಲಿ ಬೇಸಱಿಸಿ ಕಾಡುವದು (ಅಕ್ರೂರ. ೩-೩೦). ೬. ಹವ್ಯಾಸ ; ಚಟ : ಕಬ್ಬದ ದಂದುಗವಿಲ್ಲದೂನನಟ್ಟು ಕಳಿವರೆ ನಾಡಿಂ (ಬಂಹಱ. ೧-೦೫): ವ್ಯಾಪಾರ, ನೌಕರಿ ಮೊದಲಾದ ದಂದುಗಗಳ ಒತ್ತಾಯಕ್ಕಾಗಿ ತಾಯಿಯು ತೊಟ್ಟಿಲಿನ ದಾರವನ್ನು ಆಳಿನ ಕೈಯಲ್ಲಿ ಕೊಡುವ ರೂಢಿಯು ಹೆಚ್ಚಾದರೆ (ಯುಕ್ತಶ್ರ. ೦೫೪). ೭. ಒಡನಾಟ ; ಸಹವಾಸ : ಸದ್ಬ್ರಾಹ್ಮಣನ ಕನ್ನೆಯನಂ ಅಂದವಾಗಿರಲಗ್ನಿಸಾಕ್ಷಿಕದಿಂದ ಪರಿಸುವೆನೀಗ ನಿನ್ನಯ ದಂದುಗಕ್ಕೊಳಗಾಗೆನೆಂದನು (ತಿಮ್ಮಿಆ. ೫-೦೩) ; ಹಿಂದೊಬ್ಬ ಋಷಿಪುತ್ರನಂದು ದಾಸಿಯ ಕೂಡೆ ಸಂದೇಹವಿಲ್ಲದೆ ಹಲವು ಕಾಲ ದಂದುಗದೊಳಂ ಸಿಲುಕಿ ನಿಂದು (ಪುರಂದ. ೧-೦೭೨-೨) ; ಬಂಧನವ ಮಾಡಿದರು ಸಂದ ಜ್ಞಾನಿಯ ಲೇಸು ಹೊಂದಿ ಸಾಸಿರವ ಕೊಟ್ಟರೂ ಕರ್ವಿಯ ದಂದುಗವೆ ಬೇಡ (ಸರ್ವಜ್ಞ. ೪೩೦). ೮. ಕೆಲಸ ; ಉದ್ಯೋಗ ; ಕಾರ್ಯ : ಅತ್ತಲಿತ್ತಲೆಡೆಯಾಡುವ ದಂದುಗದಾಗಳೀಂ ಪೊದಟ್ಟಿಸೆದುದೊ ಚಾರುದೇವಗಣಿಕಾಮಣಿನೂಪುರ ಮಂಜುಸಿಂಜಿತಂ (ಆದಿಪು. ೬-೨೨): ನಿನ್ನನಿನ್ನಾನುಮಂಗಲ್ವೇನೇ ಕೆಳೆಯ ಬೆನ್ನನೆ ಬಂದಪೆನಾಂತರಂ ಯಮಸ್ಥಾನ ಮನೆಯ್ದುಸುತ್ತಿರ್ದುವ ದಂದುಗಂ (ಪಂಪಭಾ. ೦೩-೩) ; ಜನಪದಸೇವೆಯ ದಂದುಗದೊಳ್ ತೊಡರ್ದನೇಂ ಮಹಾತ್ಮನೊ ದಿವಿಜಂ (ಸುಕುಮಾ. ೧೧-೬); ಮಾಟ್ಕೆ ಸಂಹರಿಪ ದಂದುಗಮಂ ಪೊಱಗಿಕ್ಕಿ ತೆಂಬ ಮೆಯ್ಸಿರಿ ಸಹಜಾತಮಾಗೆ (ಪರ್ಶಪು. ೧-೮೯). ೯. ದುಷ್ಕರ್ಮಿ ; ಪಾತಕಿ ; ಪಾಪಿಷ್ಠ : ಬೆಂದ ಸಂಸಾರದಲಿ ತೊಳಲುವ ದಂದುಗರು ಪರಿಭಕ್ತಿಶೂನ್ಯರು ನಿಂದಕರು ಹೊಱಪಡಲಿ ಬಣ್ಣಿಪೆ ಪರಿಕಥಾಮೃತವ (ಕಾಶಿರಾ. ೪-೨).

**ದಂದುಗಂಬಡಿಸು** (ಕ್ರಿ). ಕಷ್ಟಪಡಿಸು ; ನೋವನ್ನುಂಟುಮಾಡು ; ಪೀಡಿಸು : ಮಂದಮತಿಯುಮನಱಿದು ದಂದುಗಂಬಡಿಸುವುದಿಂದು ಶೇಖರವರಾದ್ವೈತವಱಿಯಾ (ಸಾನಂಪ. ೧-೦೯) ; ದಂದುಗಂಬಡಿಸಿದಡೆ ಭೂತದ ವೃಂದವನು ಕೊಲಿಸುವರು ಮಾಣದೆ ದಂದಶೂಕಾಖ್ಯದಲಿ (ನಿಭಾಗ. ೫-೧೧-೩೯). [ ದಂದುಗಂಬಡು + – ಇಸು$_3$ ]

**ದಂದುಗಂಬಡು, ದಂದುಂಗಬಡು** (ಕ್ರಿ). ಕಷ್ಟವನ್ನು ಅನುಭವಿಸು ; ಕೋಟಲೆಗೊಳ್ಳು : ಸಮ್ಯಗ್ಜ್ಞಾನದುದಯದ ನೆಲೆಯ ಕಾಣಸದೆ ದಂದುಗಂಬಡುತಿಹುದು . . . ಜಗವೆಂದ (ಕುಮ್ಯಾಲ. ೯-೦೭). **ದಂದುಗಬಡು** : ಕಾದಿ ದಂದುಗಬಡದ ಮುನ್ನವೇ ತನ್ನಳವಿಗೈದಿದಂಕದ ಭಟರ ತೇರ್ಗಳಂ ತೆಗೆದಿಳಿಗೆ ಮೋದಿದಂ (ಜೈಮಿಥಾ. ೭-೪೭). [ ದಂದುಗ + ಪಡು$_1$]

**ದಂದುಗಂಬೊಱು** (ಕ್ರಿ). ತೊಡಕಿಗೆ ಸಿಕ್ಕಿಕೊಳ್ಳು : ಇಂದು ಗತಿಗಟ್ಟುವುಂ ಪೊಱವೆನೆಂಬೊಂದು ದಂದುಗಂಬೊತ್ತು ವಿಧವಾವಿತ್ತಮಂ ಕಳ್ದು ತಂದಿತ್ತಂ (ಪದ್ಮರಾ. ೦೩-೯). [ ದಂದುಗ + ಪೊಱು ]

**ದಂದುಗಗೊಳ್** (ಕ್ರಿ). ೧. ದುಃಖಪಡು ; ವ್ಯಥೆಯನ್ನು ಹೊಂದು : ದೇವದ್ರೋಹ ಪೋಗದಾಂ ಭಾರವಲ್ಲದೆ ಧರೆಗೆ ಹಿತನಾಗೆನೆನುತುಮಾನಂದಿ ದಂದುಗಗೊಂಡನು (ಸಂದಿಮಾ. ೯-೫೨). ೨. ತೊಂದರೆಯನ್ನು

ಹೊಂದು ; ಕಷ್ಟವನ್ನು ಪಡೆ : ತಾಗಿ ದಂದುಗಗೊಂಡನನುಸಾಲ್ವನಂಗೈಸಿ ಬೀಗಿದಂ ಕರ್ಣಜಂ (ಜೈಮಿಭಾ. ೨೨-೪೧). [ ದಂದುಗ + ಕೊಳ್$_1$ ]

ದಂದುಗಬಡು 'ದಂದಗಂಬಡು' ನೋ.

ದಂದೂರಿ (ನಾ). ವ್ಯರ್ಥವಾಗಿ ಖರ್ಚುಮಾಡುವವಳು ; ದಂಂದಂಗಾತಿ : ತೆಂದರೆ ತಾ ಹೋಗ ದಂದೂರಿ ಅತ್ತೆವ್ವಾ ಬಳಕೂತ ಬಳಕೂತ ದುಂಡ ಗೊಡ ಹೊತ್ತೊ . . . ಬಳಕು ಹೆಣ್ಣಿನ ಮ್ಯಾಗ ಬರುತಾಳ ಬರುತಾಳ ಮತ್ತೊಬ್ಬಳ್ಯಾಂಗ (ಕಜಾಗೀ. ೨). 'ದಂದರಹಾಳಿ' ಪರಾ. [ ? ]

ದಂಧತೆ (ನಾ). ದಂರಾಸೆ; ಲೋಭ (?) : ವಂಂದರೆಯು ವದನದೊಳ್ ನೆಲೆಗೈದು ವಕ್ರತರ ಬಂಧುರದ ನುಡಿಗಳಿಂದಶ್ವಪತಿಯಾತ್ಮಜೆಗೆ ದಂಧತೆಯ ಬೋಧಿಸಿ ವಿಕಾರವಮಂ ಪುಟ್ಟಿಸುತಲ್ (ವೆಂಕಾರಾ. ೨-೩-೨೯).

[ < ದಂಧನ ? ]

ದಂಧನ, ದಂಧನೆ (ನಾ). ೧. ಮೋಸ ; ವಂಚನೆ ; ಕುತಂತ್ರ : ಇಂದು ಮುಖಿಯೆ ನೀ ಬಡಿಸೆಂದು ಕೊಟ್ಟರೆ ದಂಧನಗಳ ಮಾಡಿ ದೈತ್ಯರ ವಂಚಿಸಿದ (ಪುರಂದ. ೧-೧೩೦-೦). ದಂಧನೆ : ೨. ಭ್ರಮೆ; ಭ್ರಾಂತಿ ; ಮೋಹ : ಮನೆಯುಂಬೊದೆ ಸುಮ್ಮನೆ ಮಕ್ಕಳೆಂಬೊದೆ ದಂಧನೆ (ವಾದಿಕೀ. ೩೨-೦).

[ ದೇ. ‖ ತೆಲು. ದಂದನ ]

ದಂಧನಂಗೆಯ್ (ಕ್ರಿ). ಮೋಸವಮಾಡಂ ; ವಂಚಿಸಂ : ಬೆದಱಿಸಿ ನುಡಿದುಂ ದಂಧನಂಗೆಯ್ದುಂ ಕಾಲವಮಂ ಕಳೆವೆವು (ಚಕವಂ. ೧೭೬-೪).

[ ದಂಧನ + ಕೆಯ್$_1$ ]

ದಂಧನೆ 'ದಂಧನ' ನೋ.

ದಂಧೆ 'ಧಂದೆ' ನೋ.

ದಂಪತಿ (ನಾ). ೧. ಗಂಡಹೆಂಡಿರು ; ಸತಿಪತಿಗಳುಂ : "ಮಿಥುನಂ ದಂಪತಿಗಳೆನಲು ಜಂಪತಿಗಳೆನೆ ಗಂಡಹೆಂಡಿರ್ಗೆ ಪೆಸರೆನಿಕ್ಕುಂ" (ಮಂಗರಾ. ೮-೨೪) ; ಮನ್ಮಥಕ್ರೀಡೆಗೆ ನೋಡೆ ನಾಡೆ ಗುಱಿಯಪ್ಪುವು ದಂಪತಿ ಭೋಗಭೂಮಿಯೊಳ್ (ಆದಿಪು. ೫-೪೧) ; ಅಗಲದೆ ನಲಿಯುತಿರ್ದರಾ ದಂಪತಿಗಳ್ (ಆಗವಿ. ೨-೫೨) ; ಯಾರೊಬ್ಬರಿಗೂ ತಿಳಿಸದೆ ದಂಪತಿಗಳು ಮನೆ ಬಿಟ್ಟದ್ದರು (ಶಾಂತಲಾ. ೯೦). ೨. ಜೊತೆ ; ಜೋಡಂ. 'ದಂಪತಿವಕ್ಕಿ' ಪರಾ. ೩. = ದಂಪತಿಕ್ಷೇತ್ರ : ವನಜಾತಾಹಿತಸೂನು ದಂಪತಿ ನವಾಂಶಸ್ಥಾಯಿ . . . ಅಖಿಳಗ್ರಹ ವಿಲಗ್ನ ಕ್ಷೇತ್ರಮಂ ವೀಕ್ಷಿಸಲ್ ಜನಿಯಿಕ್ಕುಂ ಪುರುಷತ್ರಯಂ (ಜಾತಕ. ೩-೦೪). [ ಸಂ. ದಂಪತೀ ]

ದಂಪತಿಕ್ಷೇತ್ರ (ನಾ). [ಜ್ಯೋತಿ] ಮಿಥುನರಾಶಿ : ಧನುಜ್ಯೇಜಂ ಕುಜಗೇಹದೊಳ್ ನಿಲೆ ಪರಸ್ತ್ರೀಲೋಲಂ . . . ದಂಪತಿಕ್ಷೇತ್ರದೊಳ್ ಧನವಂತಂ ಧರಣೀಶಕಾರ್ಯಭರಧುರ್ಯರ್ಗಂ ಸತ್ಕಳಾಕೋವಿದಂ (ಜಾತಕ. ೧೭-೨೯).

[ ದಂಪತಿ + ಕ್ಷೇತ್ರ ]

ದಂಪತಿಗೆಯ್ (ಕ್ರಿ). ಜೋಡಿಮಾಡಂ ; ಜೊತೆಗೂಡಿಸಂ ; ಗಂಡಹೆಂಡಿರಾಗುವಂತೆ ಮಾಡು : ಭುವನಜಂತುಗಳ ದಂಪತಿಗೆಯ್ವ ಕರ್ತುನಿನ್ನವರ ವಿವಾಹಕ್ಕೆ ಹೊಱತೆ (ಪೋಹಸ. ೪೧-೪೯). [ದಂಪತಿ+ಕೆಯ್$_1$]

ದಂಪತಿಜನ (ನಾ).=ದಂಪತಿ ೧ : ವೇಳೆವಿಸಿರ್ದ ದಂಪತಿಜನಂ ನಲಿದಾಡುವ ರಮ್ಯಹರ್ಮ್ಯದಿಂ . . . ಎಸೆದಿರ್ಪುದಾ ಪುರಂ (ಆಗವಿ. ೨-೩೪).

[ ದಂಪತಿ + ಜನ ]

ದಂಪತಿಪೂಜೆ (ನಾ). ಮದುವೆ, ಮುಂಜಿ ಮೊದಲಾದ ಶುಭಕಾರ್ಯಗಳಲ್ಲಿ ಹಿರಿಯರಾದ ಸತಿಪತಿಯರಿಗೆ ಮಾಡುವ ಪೂಜೆ : ದೊರೆಗಳವರು ಪ್ರತಿದಿನದ ನಿತ್ಯದಾನ, ಗೋದಾನ, ದಂಪತಿಪೂಜೆ, ಗೋಪೂಜೆ . . . ಮುಂತಾದ ಅನೇಕ ವ್ರತದಾನ ಧರ್ಮಗಳನ್ನು ಮಾಡಿ (ಮಹಾವಂ. I, ೦೫೦) ; ಕನ್ಯಾದಾನಕ್ಕೆ ಮುಂಚೆ ನಂಟರಲ್ಲಿ ಮುಖ್ಯರಾದವರಿಗೆಲ್ಲಾ ದಂಪತಿಪೂಜೆ ಮಾಡಲಾಯಿತು (ರೂಧಿ). [ ದಂಪತಿ + ಪೂಜೆ$_2$ ]

ದಂಪತಿವಕ್ಕಿ (ನಾ). [illegible] ಯಾವಾಗಲೂ ಜೊತೆಯಲ್ಲೇ ಇರುವುದೆಂದು [illegible] ಒಂದು [illegible] ಹಕ್ಕಿ ; [illegible] ಎಣೆವಕ್ಕಿ : ಒಸರ್ವ ಮಕರಂದದ ತುಷಾರದ ಕೆಸಱೊಳದ್ದುವು ಕೊಂಚೆಗಳು ಹಗಲೆಸೆವ ದಂಪತಿವಕ್ಕಿ ಸಾರಸ ರಾಜಹಂಸಗಳು (ಕುಮಾ.ಅ. ೫-೯).

[ ದಂಪತಿ + ಹಕ್ಕಿ$_1$ (<ಪಕ್ಕಿ$_1$) ]

ದಂಪತ್ತಿ, ದಂಪತ್ತು (ನಾ). = ದಂಪತಿ ೧ : ಧರೆಯ ಪಾಲನ ಮಾತುಗಳನಾ ಕುರುಡ ದಂಪತ್ತಿಗಳು ಕೇಳಲು (ರಘುವಂ. ೯೯-೭೮). ದಂಪತ್ತು : ಕಥೆಯ ದೃಷ್ಟಿಯಿಂದ ಇಲ್ಲಿ ಪ್ರಧಾನತೆ ಬರುವುದು ಮೂರು ದಂಪತ್ತುಗಳಿಗೆ (ಸಮಜೀ. ೧೭ ೬೬೦೪) ; ಒಂದು ಕಿಟಕಿಯ ಮಗ್ಗುಲಲ್ಲಿ ಒಂದು ದಂಪತ್ತು ಕೂತಿರುತ್ತದೆ (ವ್ಯನಿ. ೧) ; ಒಂದು ದಂಪತ್ತು ಪಕ್ಕದ ಕೊಠಡಿಯಲ್ಲಿದೆ, ಅವರ ಮಗುವೊಂದು ನಕ್ಕು ಕೆಲೆದು ಆಟವಾಡುತ್ತಿದೆ (ಪಪಾರ. ೩೫).

[ <ಸಂ. ದಂಪತೀ ]

ದಂಪತ್ತು 'ದಂಪತ್ತಿ' ನೋ.

ದಂಬ, ಜಂಬ$_1$, ಜಂಭ$_1$, ಡಂಬ$_1$, ಡಂಬು, ಡಂಭ, ಡಬ್ಬು$_4$, ಡೊಂಬ$_2$, ಡೊಂಬಿ$_2$, ಡೊಂಬ್ಯು, ದಂಬು (ನಾ). ೧. ಮೋಸ ; ವಂಚನೆ ; ಅಸತ್ಯದ ನಡೆನುಡಿ; ಠಕ್ಕು: "ಶಾಂಬರಿ ದಂಬವಿರ್ಪ್ಪ ಕುಸೃತಿ ಮಾಯೆ" (ಮಂಗರಾ. ೧೩೩-೨೮). ಜಂಬ$_1$ : ೨. ತೋರಿಕೆಯ ಆಚಾರ ವಿಚಾರ ; ಸೋಗು ; ಬೂಟಾಟಿಕೆ ; ಆಡಂಬರ : ಎಳೆಯ ಕರುವಿಗೆ ಮೊಳೆವ ಕೊಂಬುಗಳ ಕಡಿತ ಅಂತೆಮ್ಮ ದೊರೆಸಾಮಿಗೂ ಕಲಿತ ನುಡಿತ. ಇದರ ನಪೆ ಕೀರಿಸಲು ನನ್ನರಿವೆ ಮೋಟುಕಂಬ ಏತಕ್ಕೋ ಸಗ್ಗದಿಹ ಮೊದ್ದುಮನ ವೆನ್ನ ಜಂಬ (ಗಡೀಶ. ೭೧-೨೪). ೩. ಹೆಮ್ಮೆ ; ಬಿಂಕ ; ಸೊಕ್ಕು : ತುಂಬಿ ಜಗ ಬೆಳಗಿದನು, ಜಂಬದಲಿ ದಿನಮಣಿಯು (ಕನ್ನಜಾ. ೨೦೦) : ಕಲಿತವನೆಂಬ ಜಂಬ ಅವನಿಗೆ (ನಾಪೂಂ೦. ೦೮೪) ; ಜಂಬ ; ಬಡಾಯಿ ; ಹೆಮ್ಮೆ ; ಗರ್ವ ಅಥವಾ ಅಹಂಕಾರದ ಮಾತು ; ಆತ್ಮಸ್ತುತಿ (Boast. ಇಂಕನಿ). ಜಂಭ$_1$ : ೩. ಬೆನ್ನೊಟ್ಟೋಡುವ ಗಾಳಿಗೆ ನೀನು ಜಂಭವ ಬಿಡು ಇದಂ ಕಂಡಿಹೆ ನಾನು (ಅರಳು. ೧೫೯-೦೯). ಡಂಬ$_1$ : ೧. ಸತ್ತನೆ ಮತ್ತೆ ಪುಟ್ಟುವಂ ಗಡ ಪುಸಿ ಕಾಣ ಡಂಬಮಿದು ಬೇಚರ ನೀನಿದನೆಂತು ನಂಬಿದೋ (ಆದಿಪು. ೨-೮) ; ಹಿಡಿಂಬೆ ಡಂಬಮಿಲ್ಲದೆ ಭೀಮಸೇನನೊಳಪ್ಪುಡಂಬಡಂ ನುಡಿಯ (ಪಂಪಭಾ. ೩-೦೮ ವ) ; ದುರ್ಜನನು ನಂಜೆ ನುಡಿದು ಡಂಬವಮಂ ವಿಜೃಂಭಿಸಿ (ನೇಮಿಪು. ೧೪-೩ ವ). ೨. ಹಿರಿಯ ಮರಗಳನಾಳ್ವ ಯತಿವರರು ಕೆಲರುಂಟು ಡಂಬದಲಿ ಮೆರೆವರುಂಟು (ಕವಿಶೋ. ೧೭-೬). ೪. ತೋರಿಕೆಯ ವೇಷದವನು ; ಬೂಟಾಟಿಕೆಯವನು ; ಆಡಂಬರದವನು : ನೋಡೆ ವೇದಾದೀಕ್ಷಯಾದಾ ಡಂಬರಿಗೆ ನೋಡೆ ಬಸವನ ಕರುಣವೊದಗಿತ್ತು, ಮೂರ್ಖರಿಗೆ (ಬಸರ. ೯-೫೯) ; ಶಿವಭಕ್ತ[ಪಾಠಾಂ. ಕ್ರಿ]ಡಂಬನೆಂದೆನಿಸಲಾಱೆಂ (ತಿರುರ. ದೀ. ೨೦-೦೭) ; ಬಱಿದೆ ಪೇಳದಿರಿಂದನು ಡಂಬಗೆ ಜಱಿವವಗೆ (ನಿಭಾಗ. ೦೦-೩೫-೨೦). ಡಂಬು : ೧. ಪ್ರಪಂಚಿನ ಡಂಬಿನಲ್ಲಿ ಎನ್ನದೊಂದು ರೂಪುಮಾಡಿ ನೀವಿರಿಸಿದಿರಿ (ಬಸವ. ೨೯) ; ಡಂಬು ಮಾತ್ಸರ್ಯಕ್ಕೆ ಇಂಬುಗೊಡದೆ ಇರಬಲ್ಲರೆ ಶರಣ (ಸಿದ್ಧೇವ. ೯೪-೨೦೭). ೨. ಇವರು ಮೂವರ ಡಂಬಿನ ಭಕ್ತಿಗೆ ಹೊಱಗಣ ಮೊಲೆಯನೇ ಸಾಕ್ಷಿ (ಸರ್ವವ. ೧೮೩-೮೩೭) ; ಮಬ್ಬುದೋಱುವ ಮದವ ಡಂಬಿನ ಹಬ್ಬುಗೆಯಲಿಹ ಗುರು ನಿರೂಪದಲುಬ್ಬುವಮಾಡುವ ವ್ರತ ನಿಷ್ಫಲವೆಂದಳಾ ವಿಮಳೆ (ಪ್ರಭುಲೀ. ೭-೭) ; ಸುಜನರರ್ಧವನಪಹರಿಸುತಕ್ಕಜದ [illegible] ಯಜ್ಞಗಳ ಮಾಡುತ್ತಲಿಹರು (ನಿಭಾಗ. ೦೦-೯-೦೦). ಡಂಭ : ೧. ಆಂ ಭರದಿಂದ ನಿನ್ನಯ ಭುಜಾಬಲದೆಚ್ಚರಮಂ ಪರೀಕ್ಷಿಸಲ್ ಡಂಭದಿನೊಂದು ರೂಪುದಳೆದಿನ್ನೆವರಂ ಪೊಣರ್ದಿರ್ಕುವಟ್ಟು ಕಂಡೆಂ ಭವದೀಯ ಸಾಹಸಮಂ (ಚಂದ್ರಪು ೫-೮೨). ೨. ಪರಮನಿಷ್ಠ ಮೌನಿಯಂತೆ ಧರೆಯ ಮೇಲೆ ಡಂಭ

ತೋಜು (ಪುರಂದ. ೧-೧೮೦-೮) ; ಬಿಡು ಬಾಹ್ಯದೊಳು ಡಂಭವ ಮಾನಸದೊಳಗೆಡವಿಡದಿರು ಶಂಭುವ (ಕೃಕವ. ೩-೭ ಪಲ್ಲವಿ). ಡಬ್ಬು₄ : ೨. ಚಿತ್ರದುತೆ ಕಣ್ಣಿಗೆ ಡಬ್ಬಾಗಿ ಕಾಣುವಂತ ಕಾವ್ಯ ಚಿತ್ರಕಾವ್ಯ (ರ್ಕನ್ನಾರೋ. ೨೨೭) ; ಇದೆಲ್ಲಾ ಶ್ರೀಮಂತಿಕೆಯು ಡಬ್ಬು ಎಂದು ತಿಳಿದುಕೊ (ಬರಡಾ. ೭೭). 'ಡಬ್ಬುಗಾಣ್', 'ಡಬ್ಬುಗಾತಿ' ಪರಾ. ಡೊಂಬ₂ : ೫. ಮೋಸಗಾರ ; ವಂಚಕ ; ಕಪಟಿ : ಟಕ್ಕನ ವಚನಮಂ ನಂಬಿ ನೆರೆಯೂರ್ಗೆ ಪೋಪನುಂ ಡೊಂಬನ ಮಾತಂ ನಂಬಿ ಕೂಸುಗುಡುವನುಂ . . . ದುಃಖಕ್ಕಂ ದುರ್ಯಶಕ್ಕಂ ಭಾಜನನಕ್ಕುಂ (ಧರ್ಮಾಮೃ. ೧೧-೮೦) ; ಚಂದ್ರಹಾಸದಿ ಡೊಂಬರಾವಣ ಹೊಡೆಯಲೀ ವಿಧಿಯಾಯ್ತು ತನಗೆಂದ (ಕಾಶಿರಾ. ೬-೩೮). ೬. ಯಕ್ಷಿಣೀವಿದ್ಯೆಯನ್ನು ಬಲ್ಲವನು ; ಐಂದ್ರಜಾಲಿಕ : ಪರಮಜಿನೋದಿತಮಲ್ಲದ ದರವುರವಿದ್ಯೆಗಳನಱಿವವಂ ತೋಱಿದೊಡಚ್ಚರಿಯೆನ್ನದಿವೆಲ್ಲಂ ಡೊಂಬರ ವಿದ್ಯೆಗಳೆಂದ ಬಗೆವನುತ್ತಮಜೈನಂ (ಸಮಪ. ೦೨-೪೩) ; ಕಂದರ್ಪನೆಂಬ ಡೊಂಬನ ಚಂದದ ಪೊಂಬೊಂಬೆವಿಂದು ನೆರೆ ದತ್ತಾಗಳ್ (ಹಮ್ಮಿರ. ೨-೭೦) ; ಕಳ್ಳರಿಗೆ ಸುಳ್ಳರಿಗೆ ಡೊಳ್ಳರಿಗೆ ಡೊಂಬರಿಗೆ ಸುಳ್ಳುಗೊರವರಿಗೆ ಕೊಡುವವರು ಧರ್ಮಕ್ಕೆ ಎಳ್ಳಷ್ಟು ಕೊಡರು (ಸರ್ವಜ್ಞ. ೭೭೩). 'ಡೊಂಬವಿದ್ದೆ' ಪರಾ. ೭. ಹಾವನ್ನು ಆಡಿಸುವವನು ; ಹಾವಾಡಿಗ : ಉರಗನಂ ಒಡಿದೊಂದು ಕರಡಿಗೆಯ ನಡುವಿರಿಸಿ ಬಿರಿದೊಂದು ಬಿಂಬದಿಂ ಡೊಂಬನಾಗಿ (ಜ್ಞಾನಜಂ. ೪-೧೧೪). ಡೊಂಬಿ₂ : ೧. ಡೊಂಬಿಯಲ್ಲಿದು ನೋಡೆ ಬಯಲಾಡಂಬರವು ತಾನಲ್ಲ . . . ಎಂದು ರಾವಣ ಹಗೆಯ ಹೊಗಳಿದನು (ಕಾಶಿರಾ. ೧೭-೩೭) ; ಕಲಹವ ತೆಗೆದು ಡೊಂಬಿಯಲಿ ಬಾದುರನನು ಕೊಲಬೇಕು (ಕುರಾಸಾಂ. ೧೮-೧೦೫) ; ವಿಕೃತರೂಪಿನ ಡೊಂಬಿಯೇಕಿದು ಸಕಲಧರ್ಮ ವಿಚಾರವಂತರಿಗೆ (ನಳಚ. ೮-೫೭). ಡೊಂಬು₂ : ೧. ಸೊಬಗಂ ಕೊಂಡಾಡುವೀ ಡೊಂಬುವೇಡ (ಮಲ್ಲಿಪು. ೫-೭) ; ಶರೀರಂ ಬಡವಾದಪುದೆನ್ನದೆ ಡೊಂಬಿಲ್ಲದೆ ಶುದ್ಧವೃತ್ತಿಯೊಳ್ ನೆಱೆ ನೆಗಟ್ದರ್ (ಧರ್ಮಾಮೃ. ೧೧-೧೦೭) ; ಪಾರ್ಥ ನಿನಗೀ ಡೊಂಬಿದೇಕೈ ಹುಲುಬ್ರಹನ್ನಳೆತನದ ಬಹುರೂಪು (ಕುವ್ಯಾವಿ. ೬-೪೭) ; ಹುಲುಮಾನಿಸರು ಡೊಂಬಿನ ಗಾವಿಲರು ನಿನಗತಿಥಿಪೂಜೆಯನೀವವರೆ (ಅಕ್ರೂಚ. ೮-೩೮). ೨. ನಡೆನಡೆ ಡೊಂಬುವೇಡ ನಿನಗೇಕೆ ತಪಸ್ಸಿನ ಕುತ್ತಮೆಂದು ನೇರ್ಪಡೆ ಜಡಿದಟ್ಟ (ಧರ್ಮಾಮೃ. ೮-೮೮) ; ಮುಳಿಸಿಂದಂ ಕಂಬದಿಂ ಮೂಡಿದನೆನಿಸಿದ ಡೊಂಬಿಂಗೆ ಹೇವಯ್ಸಿ ತಾಂ ಬಿಜ್ಜಲದೇವಿರಾಣಿಗಂ ಹೊಯ್ಸಳಕುಳತಿಳಕಂ ಸೋಯಿದೇವಂಗವುರ್ಬೀಪಾಳಯುಂ ಬಪ್ಪೆ...ನಂ ಪುಟ್ಟಿದನ್ (ಎಕ. XV, ಬೇಲೂರು. ೩೪೨-೨೦ ; 1265) ; ಕೊಂಬಿನೇ ಧರ್ಮಜನ ಧರ್ಮದ ಡೊಂಬನು (ಕುವ್ಯಾಸ. ೧೫-೩೫) ; ಮೇಗಡೆ ಮೆಱೆವವರು ನಾವಲ್ಲ ನುಡಿಯಾ ಬಯಲಡೊಂಬೇಕೆ (ಕುವ್ಯಾಕ. ೫-೧೮) ; ಡೊಂಬಿನ ಮಲಿನ ಮಾನಸನೆತ್ತ ಫಣಿಪತಿಶಯನ ತಾನೆತ್ತ (ಅಕ್ರೂಚ. ೫-೪೨) ; ಡೊಂಬಿನ ಚತುರ್ಬಲವಿದೇಕೆ ಭೂಪಾಲರಾಡಂಬರದ ಛತ್ರಚಮರಂಗಳೇತಕೆ (ಜೈಮಿಭಾ. ೧೭-೫೪) ; ಡಂಬಕದ ಮಾತೇಕೆ ಯಿಂಬರಿಯಬೇಕು ತಮ್ಮ ಡೊಂಬಿನ ಮಹಾಶೌರ್ಯ ಕೊಂಬುದೇ ಕತ್ತಲೆಗೆ (ಲಕ್ಷ್ಮಿಭಾ. ೨೩-೫೭). ೫. ಕೆಲರು ಕರ್ಮದಿನೆಂಬರಕ್ಕಟ ಕೆಲರು ಬೊಮ್ಮದಿನೆಂಬರಯ್ಯೋ ಕೆಲರು ಭೋಗಾದೇವ ಮೋಕ್ಷವದೆಂಬ ಡೊಂಬುಗಳು (ಸಾನಂದ. ೮-೭೨). ೮. ಶಕ್ತಿ ; ಮಹಿಮೆ ; ಸಾಮರ್ಥ್ಯ : ಕಾಲನ ಡೊಂಬಿದಾರಿಗೆ ಸಾಧ್ಯ ನಾವೇನೆಂಬುದಿದಕೆಂದಳಲಿದರು ಭೀಷ್ಮಾದಿ ಸಜ್ಜನರು (ಕುವ್ಯಾಸ. ೧೭-೨೭). ೯. ಠೀವಿ ; ದರ್ಪ : ಅನುಜೆ ತಳುವಿದಳೆಂದು ರೋಷಪಸ್ತನಿತಗಲ್ದ ದಕಂಠನೊದದೆದ್ದನು ಮಹೀಮಂಡಲವ ನುಗ್ಗಾಂಬಕನ ಡೊಂಬಿನಲಿ (ಕುವ್ಯಾಆ. ೯-೧೮). ದಂಬು : ೧. ಸೋಮಧರ ತಾಪತ್ರಯದ ಬೇಗೆ ಪಿರಿದಲ್ಲಿ ಪುಸಿ ದಂ[ಪಾಠಾಂ. ಡಂ]ಬು ಹಿಂಸೆ ಮೂರ್ಖತೆಯುಂಟು ಧರೆಯೊಳಗೆ (ಬಸರ. ೧-೭೧).

ಜಂಬದ ಕೋಳಿ = ಒಣಹೆಮ್ಮೆಯ ಅಥವಾ ಆಡಂಬರದ ವ್ಯಕ್ತಿ : ಕಛೇರಿಯಲ್ಲಿ ಅವನ ಫೋಟೋ ಇಟ್ಟ ದಿನವಂತೂ ಜಂಬದ ಕೋಳಿಯ ಹಾಗೆ ಕುಣಿದದ್ದೂ ಕುಣಿದದ್ದೇ (ಯೋಧಪು. ೬). [<ಸಂ. ದಂಭ]

ದಂಬಡಿ 'ದಮ್ಮಡಿ₂' ನೋ.

ದಂಬಿಸು, ಡಂಬಿಸು (ಕ್ರಿ). ೧. ಆಡಂಬರವನ್ನು ತೋರಿಸು; ವಿಜೃಂಭಿಸು: ಅಂಬುಜೋದ್ಭವ ಸೃಷ್ಟಿ ಜಗದೊಳು ತುಂಬಿಹವು ಕಾಲೆಣಿಕೆ ಕಟ್ಟಳೆ ದಂಬಿಸಿವೆ ಮೂರು ಲೋಕದೊಳು ನಾನಾಪ್ರಕಾರದಲಿ (ಕಕ್ಕೋಚ. ೩-೧೧). ಡಂಬಿಸು : ೨. ಮೋಸಗೊಳಿಸು ; ವಂಚಿಸು : ಚಿತ್ರಕಥೆಗಳಂ ಪಟದೊಳ್ [ಬ] ರೆದು ತೋಱು ಪೇಟ್ದು ಲೋಗರಂ ಡಂಬಿಸಿ ಮಾಱಿಕೊಳ್ವ ಬತ್ತಮುಂ ಕಳ್ವೊನ್ (ವಡ್ಡಾರಾ. ೧೨-೮); ನಂಬಿಪರೆನ್ನರಪ್ಪರುಮನೇತೆಱದಿಂ ಸಲೆ ನಂಬೆ ಪಾಣ್ಬೆಯರ್ ಡಂಬಿಪ [ಪಾಠಾಂ. ನಂಬಿಪ]ರಿಂತನೇಕ ವಿಧದಿಂದೆ (ಪಂಪಶಂ. ೭೮-೭) ; ಧನಮುಳ್ಳನಂ ಕರಂ ದಂ [ಪಾಠಾಂ. ಡಂ] ಬಿಸಿ ಪಿಂಬರಿಲ್ಲದೊಡ ಪೊರ್ದದ ನಂಟರಂ ಪಾಂಗಿದೇ ಕರಂ ನಂಬಿಸಲಾಪವೇ (ಜೀವಸಂ. ೭೯-೧೪). [ ದಂಬ + - ಇಸು₃ ]

ದಂಬು 'ದಂಬ' ನೋ.

ದಂಬೆ 'ದಬ್ಬೆ₁' ನೋ.

ದಂಭ (ನಾ). ೧. ಮೋಸ; ಠಕ್ಕು; ವಂಚನೆ: ದಂಭದಧಿಕಾರಿಗಳ ಮಾತನು ನಂಬುತವರುಂತಿರ್ಪ ನೃಪತಿಯ ರಾಜ್ಯಮುಳಿಯುವುದೇ (ರಾಮಾಸಂ. ೩-೩-೬). ೨. ಆಡಂಬರ ; ಆಟಾಟೋಪ ; ಡೌಲು : ಷೋಡಶ ವಿಕಾರ-ರಾಗದ್ವೇಷ . . . ದಂಭ, ದರ್ಪ, ಅಹಂಕಾರ, ಇಚ್ಛೆ, ಭಕ್ತಿ, ಶ್ರದ್ಧೆ ಈ ಹದಿನಾರು (ಅಮೃತ. ೬-೨೭ ಅಡಿಟಿ) ; ಜಂಭಾರಿಯಿತ್ತ ಶರಚಾಪಗಳ ರಘುವರಗೆ ದಂಭದಿಂದೊಪ್ಪಿಸುತ ಕೃತಿಯಾದನಾ ಕುಂಭಸಂಭವ (ವೆಂಕಾರಾ. ೩-೫ ಸೂಚನೆ) ; ದಂಭವಿದ್ದವನಿಗೆ ಇಂಬು ಸಿಕ್ಕುವುದು (ಗಾದೆ). ೩. ಜಂಬ ; ಸೊಕ್ಕು ; ಹೆಮ್ಮೆ ; ಗರ್ವ : ಇತ್ತೀಚೆಗೆ ಅವನಲ್ಲಿ ತನ ಶೌರ್ಯದ ವಿಷಯವಾಗಿರುವ ಅಭಿಮಾನ ಬೆಳೆದು ದಂಭವಾಗಿ ರೂಪುಗೊಳ್ಳುತ್ತಿತ್ತು (ನೂರಜ. ೪೯); ಒಂದು ವೇಳೆ ತಾನು ಪಿರಿಯರಸಿಯಾಗಿದ್ದುಕೊಂಡು ಕಿರಿಯ ರಾಣಿಯ ಈ ಒಂದು ದಂಭವನ್ನು ದಮನವಾಡಬಲ್ಲವಳೇ ಆದರೆ (ಸವತಿ. ೨೦೨). [ ಸಂ. ]

ದಂಭಕ (ನಾ). ಹೆಮ್ಮೆಯುಳ್ಳವನು ; ಜಂಭದವನು. [ ಸಂ. ]

ದಂಭತ್ವ (ನಾ). ಆಡಂಬರ : ಕುಂಭಪೊಂದಱೊಳು ಜಲಮಂ ತುಂಬಿ . . . ದಂಭತ್ವದಿಂದಲಂಕರಿಸಲ್ (ವೀಕ್ಕೃಪು. ೪-೨೦-೫೭). [ ಸಂ. ]

ದಂಭವೈರಿ (ನಾ). ಮೋಸಕ್ಕೆ ವಿರೋಧಿಯಾದವನು : ಭಕ್ತಸುರತರು ಜಿತಾಕ್ಷಂ ಸಿದ್ದಿದಂ ದಂಭವೈರಿ ಮಾದರಸರೊಪ್ಪಿದರ್ (ಪದ್ಮರಾ. ೨-೦೭).

[ ದಂಭ + ವೈರಿ ]

ದಂಭಾಚಾರ (ನಾ). ಬೂಟಾಟಿಕೆಯ ನಡವಳಿಕೆ; ಆಡಂಬರ ; ಸೋಗು; ಡಂಭಾಚಾರ : ಕಂಡುದನ್ನು ಕಂಡಂತೆ ಹೇಳುವ ಕೆಚ್ಚು, ದಂಭಾಚಾರವನ್ನು ಕಂಡರೆ ಸಾತ್ವಿಕವಾದ ರೊಚ್ಚು-ಇದು ಅವನ ವ್ಯಕ್ತಿತ್ವದ ಪಡಿಯಚ್ಚು (ಕರಡ. ೪೭೨). [ ದಂಭ + ಆಚಾರ ]

ದಂಭೋಲಿ, ದಂಭೋಳಿ (ನಾ). ೧. ಇಂದ್ರನ ವಜ್ರಾಯುಧ ; ಪವಿ. ದಂಭೋಳಿ : ೧. "ಪವಿಃ . . . ದಂಭೋಳಿಃ . . . ಶಂಬಃ – ಈ ೧೨ ಇಂದ್ರನ ವಜ್ರಾಯುಧದ ಪೆಸರ್" (ಹಲಾಯು. ೧೧-೫೩); ಸಕಲಕಪಿಸಮಿತಿ ವೆರಸಹಿತಕುಲಾಚಲಚಕ್ರಚಾರ ದಂಭೋಳಿ ಜಗತ್ಪ್ರಕಟೋದ್ಯನ್ಮಹಿಮನೆನಿಸುವ ಕಕುದ್ಬಲಿಯೆನಿಪ ಪೆಸರ ಬಲಿಮುಖನಿರ್ವ೦ (ಶಂಧತಂ. ೨೭೭-೫); ಅರಿಸಾಮಂತ ಕುಳಾಕುಳಾಚಳದಳದ್ದಂಭೋಳಿ ದಂಭೋಳಿ . . . ಎನಿಪಂ ಸಾವನ್ತ ನಾಗಾರ್ಜುನನಂ (ಎಕ. VI, ತರೀಕೆ. ೪೨-೩೮ ; 1206) ; ದಂಭೋಳಿಯಂ ಸೆಳೆದುಕೊ ಜವದಿ ಬಲವೆರಸು (ಲಿಂಗಪು. ೧೯-೧೮).

೨. ಸಿಡಿಲು: ಲೋಕೈಕಭೀಕರಮಾಟಂದುದು ನೀಲಮೇಘ ನಿಕಟ ಪ್ರಸ್ಫಾರ ದಂಭೋಳಿವೋಲ್ (ಶಂರಾಮಾ. ೧೪-೧೭೪); ಬ್ರಹ್ಮಕಂದುಕದಿ ಶಂಪಾತರಂಗ ಪದರೊಳು ತುಂಬಿ ಪರಿಯುತಿದೆ ದಂಭೋಳಿ ನೀನಾಗು (ಮಂಕುಕ. ೧೩೫). [ ಸಂ. ]

ದಂಭೋಳಿ 'ದಂಭೋಲಿ' ನೋ.

ದಂಭೋಳಿಹಸ್ತ (ನಾ). ವಜ್ರಾಯುಧವನ್ನು ಕೈಯಲ್ಲಿ ಹೊಂದಿರುವವನು; ದೇವೇಂದ್ರ: ಜೃಂಭದ್ದಂಭೋಳಿಹಸ್ತಾಹತಚಕಿತಗತಕ್ಷ್ಮಾಧ್ರವಿಸ್ಫಾರವಿದ್ಯುತ್ಸಂಭಿನ್ನಂ . . . ಶುಂಭದ್ಗಂಭೀರಿವಂ ರಂಜಿಸಿದುದವಮದತ್ತೇಂದ್ರಭದ್ರಂ ಸಮುದ್ರಂ (ರಾಜಶೇ. ೧-೯೦).

[ ದಂಭೋಳಿ ( = ದಂಭೋಲಿ) + ಹಸ್ತ ]

ದಂರೋಟ್, ದಂರೋಟು (ನಾ). ಒಂದು ಬಗೆಯ ಸಿಹಿ ಭಕ್ಷ್ಯ; ಬೂದುಗುಂಬಳಕಾಯಿ ಮೊದಲಾದವುಗಳಿಂದ ಮಾಡಿದ ಹಲ್ವ: ಏನು ಕೊಡಲಿ ಸಾರ್. ಜಾಮೂನ್, ಜಿಲೇಬಿ, ದಂರೋಟ್ (ಮಹಾಲ. ೪೭). ದಂರೋಟು: ದಂರೋಟೆಂದರೆ ನನಗೆ ಬಹಳ ಇಷ್ಟ (ರೂಢಿ).

[ ? ]

ದಂರೋಟು 'ದಂರೋಟ್' ನೋ.

ದಂಶ (ನಾ). ೧. ಕಚ್ಚುವುದು; ಕಡಿತ: ಪಿರಿದಪ್ಪ ನಂಜುಪುಗುಳರ್ಬಿದವಂಗಳಿತಾಹಿದಂಶವಾದುದು (ಕಾದಂಪೂ. ೮೮೩); ಅಲ್ಪದಶನ ದಂಶಮಾತ್ರ ಖಂಡನೀಯ ಕರಂಗಳೆನಿಸಿದ ಮಂಡಕಂಗಳುಮಂ . . . ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್ (ಸುಕುಮಾ. ೧೦-೩೯ ವ). ೨. ಕಾಡುನೊಣ; ವನಮಕ್ಷಿಕ: "ವಾನೇಯ ಮಕ್ಷಿಕಾಭಿಖ್ಯಾನಂ ದಂಶಂ" (ವಸ್ತುಕೋ. ೪೪-೨೪); ಬಿಸಿಲ್ಕೆಕಿಲ್ ಪಸಿವುಗ್ರದಂಶಮಶಕ ವ್ಯಾಬಾಧೆ . . . ಎಂಬೀ ಬಾಧೆಯೊಳ್ ಮೆಯ್ಯನೊಡ್ಡಿಸೆ (ಆದಿಪು. ೬-೩೪); ಆಮಿಯ ದಂಶ ಮಸಕ ಶೀತೋಷ್ಣ ಕದಂಬಕ ಬಾಧಾರಹಿತನೆನಿಸಿ ಸುಕುಮಾರಂ ಸುರಕುಮಾರ [ರಂ] ಮಸುಳಿಸಿದಂ (ಸುಕುಮಾ. ೧೦-೧೦೫); ದಂಶ ಮಶಕ ಮಕ್ಷಿಕಾಭ್ರಮರ ಪತಂಗಾದಿ ಚತುರಿಂದ್ರಿಯಂಗಳ್ ಸ್ಪರ್ಶನ ರಸನ ಘ್ರಾಣ ಚಕ್ಷುರಿಂದ್ರಿಯ ಪರಿಚ್ಛಿತ್ತ್ಯುಪೇತಂಗಳಪ್ಪುವು(ತತ್ತ್ವಪ್ರ. ೯೮): ತರಕ್ಷು ದಂಶಶತ ಸಂವೃತ ಮಿರ್ದುದದೊಂದು ತಾಣದೊಳ್ (ರಾಜಶೇ. ೫-೯೨). ೩. ಹಲ್ಲಿನ ಗಾಯ. ೪. ಹಲ್ಲು; ದಂತ. [ ಸಂ. ]

ದಂಶಕ (ಗು). ೧. ಕಚ್ಚುವ; ಕಡಿಯುವ. (ನಾ). ೨. ಕಚ್ಚುವ ಪ್ರಾಣಿ; ಕಡಿಯುವ ಪ್ರಾಣಿ. ೩. ನೊಣ. ೪. ಹಲ್ಲಿನಿಂದ ಕಚ್ಚಿ ತಿನ್ನುವ ಉಪ್ಪಿನಕಾಯಿ ಮೊದಲಾದ ವ್ಯಂಜನ: ಸಂವರಿಸು ಬಂಡಿಯ ನಡೆಸು ಭಕ್ಷ್ಯದ ಸೂಪದಂಶಕವ ತರಿಸು (ಉಭಯಾಂ. ೧೦-೧೭). [ ಸಂ. ]

ದಂಶನ (ನಾ). ೧. ಹಲ್ಲಿನಿಂದ ಕಚ್ಚುವುದು; ಕಡಿತ. ೨. ಕವಚ; ಜೋಡು. ೩. ಆನೆಯ ಪಕ್ಕರಕ್ಕೆ; ಹಕ್ಕರಿಕೆ: "ದಂಶನಂ ಹಕ್ಕರಿಕೆ" (ಮಂಗರಾ. ೮೭-೩೦). [ ಸಂ. ]

ದಂಶಿ (ನಾ). = ದಂಶ ೨: ದಂಶೀ . . . ಚಿಕ್ಕಕಾಡುನೊಣ, ಕಾಡುಸೊಳ್ಳೆ (ಸಿದ್ಧಾಂತಿ. ೧೪೧). [ ಸಂ. ದಂಶೀ ]

ದಂಶಿತ (ಗು). ೧. ಕಚ್ಚಿದ. ೨. ಅಂಗಿತೊಟ್ಟಿರುವ; ಕವಚವನ್ನು ತೊಟ್ಟ. [ ಸಂ. ]

ದಂಷ್ಟ್ರ (ನಾ). ಆನೆ, ಹುಲಿ, ಸಿಂಹ, ಹಂದಿ ಮೊದಲಾದುವುಗಳ ಉದ್ದವಾದ, ಹೊರಹಾಯ್ದಿರುವ ಹಲ್ಲು; ಕೋರೆಹಲ್ಲು; ದಾಡೆ: ಪೊಳೆಯುತ್ತಿರ್ಪ ಮಹಾವರಾಹಾವದನೋದ್ಯದ್ದಂಷ್ಟ್ರಮುಂ ನಿಮ್ನಸಿಂದಳೋಭೂಕಾಂತೆಯೆನಲ್ಕೆ (ಕಾದಂಪೂ. ೧೧೦೩). [ ಸಂ. ದಂಷ್ಟ್ರಾ ]

ದಂಷ್ಟ್ರಕ (ನಾ). = ದಂಷ್ಟ್ರ: ಆಕಾರಾಂ ಆಕಾರವಮಾದುದರ್ಕೆ-ಕಂಧರಾ, ಉಪತ್ಯಕಾ, ದಂಷ್ಟ್ರಕಾ, ಪಾಲುಕಾ-ಎಂಬವು ಮೊದಲಾದುವು ಕಂಧರ, ಉಪತ್ಯಕ, ಕರುಣ-ಎಂದು ಆಕಾರಾಂತವಮಂ ಪಡೆಯಲೆಂಡ [illegible] ವಿಭಕ್ತಿ ಪತ್ತುಗುಂ (ಶಮದ. ೮೨ ಪ್ರಯೋ). [ <ಸಂ. ದಂಷ್ಟ್ರಿಕಾ ]

ದಂಷ್ಟ್ರಾಂಕುರ (ನಾ). ಹೊರಬರುತ್ತಿರುವ ಕೋರೆದಾಡೆ; ಮೊಳೆಯುತ್ತಿರುವ ಕೋರೆಹಲ್ಲು; ಮೊಳೆಹಲ್ಲು: ಬಲದೇವ ವಾಸುದೇವರ್ . . . ಪವಿತ್ರಕ್ಷತ್ರಧರ್ಮ ಕಂಠೀರವ ದಂಷ್ಟ್ರಾಂಕುರಯುಗ್ಮಮುಂ . . . ಗುಣಗಣ ಮಣಿಗಣಕೋಶಗೃಹದಂತೆಯುಮಾಗಿ ಮಾತಾಪಿತೃಗಳನುರಾಗದೊಡನೊಡನೆ ಪ್ರಮೋದಪ್ರವರ್ಧವಾಗೆ (ಶಾಂತಿಪು. ೧-೮೦ ವ): ರಾತ್ರಿಂಚರಪತಿಸಿತದಂಷ್ಟ್ರಾಂಕುರಂ . . . ಬಳೆದು ಬಳಸಿದಂತಾಯ್ತು ಬೆಳ್ದಿಂಗಳೆತ್ತಂ (ರಾಜಶೇ. ೦೩-೪೨). [ ಸಂ. ]

ದಂಷ್ಟ್ರಾಕಿರಣ (ನಾ). ಕೋರೆಹಲ್ಲುಗಳ ಕಾಂತಿ.-ಪ್ರಕಾಶ: ರಾಕ್ಷಸರಾಜಂ . . . ದಂಷ್ಟ್ರಾಕಿರಣಧವಳಿತಾಸ್ಥಾನನಿಂತೆಂದನಾಗಳ್ (ಜಗವಿ. ೨-೪೫).

[ ಸಂ. ]

ದಂಷ್ಟ್ರಾಗ್ರ (ನಾ). ಕೋರೆಹಲ್ಲಿನ ತುದಿ; ~ಂತಾಗ್ರ: ಆದಿವರಾಹರೂಪದೊಳೆ ನೀನಂದೆತ್ತಿದ್ದೆ ಗೋಮಿನೀಧವ ದಂಷ್ಟ್ರಾಗ್ರದ ನೀಲಜಾಲಮಣಿಯೆಂಬಂತಾಗೆ ಭೂಗೋಳಮಂ (ಜಗವಿ. ೧-೩೭); ದಾನವಹೃತ ಮೇದಿನಿಯಂ ದಂಷ್ಟ್ರಾಗ್ರದೊಳಿರಿಸಿ (ಮೂಂದಳಿ. ೪೨-೨). [ ಸಂ. ]

ದಂಷ್ಟ್ರಾಯುಧ (ನಾ). ೧. ಕೋರೆಹಲ್ಲೇ ಆಯುಧವಾಗಿ ಉಳ್ಳುದು; ಕಾಡುಹಂದಿ. ೨. ಕಪಿ: (೬). [ ಸಂ. ]

ದಂಷ್ಟ್ರಿ (ನಾ). ೧. ದಾಡೆಗಳುಳ್ಳುದು; ಕಾಡಂಹಂದಿ. ೨. ಹಂದಿ: "ಕೋಳಃ, . . . ದಂಷ್ಟ್ರೀ, ಘೃಷ್ಟಿಃ, ಕಿರಿಃ-ಈ ೮ ಹಂದಿ" (ಹಲಾಯು. ೩೮-೭೩). ೩. ನೆಗ್ಗಿಲ ಮುಳ್ಳು: "ದಂಷ್ಟ್ರಿಯೆನೆ ನೆಗ್ಗಿಲಕ್ಕು" (ಮಂಗರಾ. ೩೭-೨೨). [ ಸಂ. ದಂಷ್ಟ್ರಿನ್ ]

ದಂಷ್ಟ್ರೆ (ನಾ). = ದಂಷ್ಟ್ರ: ಅಣಲ್ಗಳ ದಾಡೆಯ ಪಲ್ಲಿಂ ಗಣಿಸುಗೆ ತಾಂ ದಂಷ್ಟ್ರೆಯೆಂಬ ಪೆಸರೆ ನಿದಾನಂ (ಅಶ್ವಶಾ. ೯-೭). [ ಸಂ. ದಂಷ್ಟ್ರಾ ]

ದಂಸ$_1$ (ನಾ). = ದಂಶ: ವಿದ್ಯುಚ್ಚೋರ ಭಟಾರರ್ ಪ್ರತಿಮಾಯೋಗುನಿಂದೊಡ ದೇವತೆ ಮುಳಿದು ಪೂಜಿಸುಗಳನಿವಿರಿಯವು ದಂಸಮಸಕಂಗಳಂ ವಿಗುರ್ವಿಸೆ (ವಡ್ಡಾರಾ. ೧೩೪-೧೮). [ <ಸಂ. ದಂಶ ]

ದಂಸ$_2$ (ನಾ). (?): ಘಳಿಸಿದ ದಂಸು ಸೇವರು (ದೊಂಕಣಿ. ೧೯೩೩, ಹಾವೇರಿ. ೯೫-೪; ?). [ ? ]

ದಕ (ನಾ). ನೀರು; ಉದಕ. [ ಸಂ. ]

ದಕನ್ 'ದಖನ್' ನೋ.

ದಕುಪ್ಪಟ್ಟಿ 'ಧಕಲಪಟ್ಟಿ' ನೋ.

ದಕಾರ (ನಾ). ದ ಎಂಬ ಅಕ್ಷರ: "ತಾವರೆ" ಎಂಬ ಪದದ ಆದಿಯ "ತ" ಕಾರಕ್ಕೆ ಪ್ರತಿಯಾಗಿ "ದ" ಕಾರವೂ ಬಂದಿದೆ (ಮಧ್ಯಮ. ೨೦). [ ಸಂ. ]

ದಕಿದು (ನಾ). ಮೃದಂಗವನ್ನು ಬಾರಿಸುವುದರಲ್ಲಿ ಒಂದು ವರಸೆ: ರಿಪ್ಪವಣೆ ಸಹರಣೆ ತುಡುಕು ದಕಿದು ಪತ್ಕಿರಿ ಜತಿ ಜೋಕೆಯೆಂಬ ದೇಸೆಯ ಶಬ್ದಂಗಳೆಸೆಯೆ ಬಾಜಿಸುತ್ತಿರೆಯುಂ (ಶಾಂತೀಶ್ವ. ೧೭-೭೭ ವ). [ ? ]

ದಕೋದರ (ನಾ).=ಜಲೋದರ. [ ಸಂ. ]

ದಕ್ಕಡ 'ಧಕ್ಕಡ' ನೋ.

ದಕ್ಕಡತನ 'ಧಕ್ಕಡತನ' ನೋ.

ದಕ್ಕಡತಿ (ನಾ). ದಿಟ್ಟೆ; ಗಡುಸುಗಾತಿ; ಸಮರ್ಥೆ: ಕರ್ಗಸಿಯುರತಿವಕ್ಕಸೊಕ್ಕಿಯುರನಾರತಂ ದಕ್ಕಡತಿಯುರು ಕಾಮದಿಕ್ಕೆಯುರ್ (ಪಚಿಲ. ೨-೭೦).

[ ದಕ್ಕಡ ( <ಧಕ್ಕಡ) + -ತಿ$_1$ ( <-ಇತ್ತಿ) ]

ದಕ್ಕಡಿಗ 'ಧಕ್ಕಡಿಗ' ನೋ.

ದಕ್ಕಡೆ 'ಧಕ್ಕಡ' ನೋ.

ದಕ್ಕಡೆಯು 'ಧಕ್ಕಡೆಯಂ' ನೋ.

**ದಕ್ಕಡೆಯುತನ** 'ಧಕ್ಕಡೆಯುತನ' ನೋ.

**ದಕ್ಕಣ** (ನಾ). ದರ್ಶನೀಯವಾದುದು: ಚೈತ್ರರಥದುನ್ನತಿಯಂ ಸಮಕಟ್ಟಿಕೊಂಡು ಸಾಧಿಸುವತಿದಕ್ಕಣಂ ಸರಿಗೆವಾಳಮೆನಿಪ್ಪ ನೆಗರ್ತೆ ಕೂಡೆ ಮಾಡಿಸಿ ವನದೊಂದು ನಂದನಮುಂ (ವರ್ಧಮಾ. ೭-೧೩). [ <ಪ್ರಾ. ದಖ್ಖಣ ]

**ದಕ್ಕಣಿಸು** (ಕ್ರಿ). ಜಬರಿಸು: ಗದರಿಸಂ: ಗುರುಭೀಷ್ಮರು ಮಕ್ಕಳಾಟಿಕೆ ಬೇಡ ನಡೆ . . . ಸಂತೈಸೆನುತ ದಕ್ಕಣಿಸಿ ವಿದುರ ಗೌತಮರು ಧೃತರಾಷ್ಟ್ರಗಂ ತಿಳುಪಲ್ಕೆ ನಡೆತಂದನು (ತುರಂಗ. ೨೫-೧೭).

[ ದಕ್ಕಣಂ ( <ಧಕ್ಕಡ) + – ಇಸು$_3$ ]

**ದಕ್ಕಲು, ಧಕ್ಕಲು** (ನಾ). ಮಾದಿಗರಲ್ಲಿ ಒಂದು ಒಳ ಪಂಗಡ : ಅವನು ಧಕ್ಕಲದವನು (ಎಸಮ್ಮ. XVII, ೬). **ಧಕ್ಕಲು** : ಈ ಊರಿಗೆ ಬಹಳ ಮಂದಿ ಧಕ್ಕಲುಗಳು ವಲಸೆ ಬಂದಿದ್ದಾರೆ (ರೂಢಿ). [ ? ]

**ದಕ್ಕಳ** 'ಧಕ್ಕಡ' ನೋ.

**ದಕ್ಕಾಯ್ತಯ್ಯ** (ನಾ). ಒಬ್ಬಾತನ ಹೆಸರಂ: ದಕ್ಕಾಯ್ತಯ್ಯಂ ಊರಂ ಆಳುತ್ತಂ ಇರೆ (ಎಕ. X, ಮುಳಬಾ. ೨೨೯-೩ ; 909). [ ? + ಅಯ್ಯ$_1$ ]

**ದಕ್ಕಾಲಿ** (ನಾ). ಅಲುಗಾಡದ ಕಣ್ಣುಗುಡ್ಡೆ ; ನೋಡುವ ಸಾಮರ್ಥ್ಯವಿಲ್ಲದ ಕಣ್ಣುಗುಡ್ಡೆ : ಭರದಿಂ ಸುಜ್ಜನೆ ಸುಯ್ಯೆ ಸೂಗುಜಿಸೆ ಕಣ್ದಕ್ಕಾಲಿಗಳ್ ಬೀಟ (ಲೋಕೋಪ. ೯-೨೦೬); ಶಿವಲಿಂಗಮುಂ ಮುಸುಕಿ ಬೆಳೆದುತ್ತಮಾಂಗವನು ಬಾವೆಂದು ದಿಟ್ಟಿಸಿ ನೋಡದೆವೆಯಿಕ್ಕದಿಹ ಕಣ್ಣ ದಕ್ಕಾಲಿಯೆಂದು . . . ಶಂಕಿಸಿ (ಸಿದ್ಧರಾ. ೨-೪) ; ಪೋಲಿಸೆ ತಮ್ಮ ಕಣ್ಣ[ಣ್ದ]ಕ್ಕಾಲಿಗಳಾಗಿರ್ದು ಬರ್ದವಲ್ಲದೆ ದಿಟವಮಾಗಾಲಿಸಿ ಕಂಡೊಡೆ ನಾಣ್ಚದ ಮೋಲಿಯ ಗಜಯಿವಳ ಜಡಿವ ಮುಡಿಯ ಬೆಡಂಗಂ (ಧರ್ಮನಾ. ೩-೯೪).

[ ದಕ್ಕು$_3$ + ಆಲಿ$_2$ ]

**ದಕ್ಕಾಲಿಬೀಳು** 'ದಕ್ಕಾಲಿವೀಟು' ನೋ.

**ದಕ್ಕಾಲಿಬೀಟ್** 'ದಕ್ಕಾಲಿವೀಟು' ನೋ.

**ದಕ್ಕಾಲಿವೀಟ್, ದಕ್ಕಾಲಿಬೀಳು, ದಕ್ಕಾಲಿಬೀಟು** (ಕ್ರಿ). ಚಲಿಸದ ಕಣ್ಣುಗುಡ್ಡೆ ಉಂಟಾಗು: ಕಣ್ಮುಚ್ಚಿರೆ ದಕ್ಕಾಲಿವೀಟ ಬಾಬದು ತುರಗಂ (ಅಶ್ವಶಾ. ೬-೬೨). **ದಕ್ಕಾಲಿಬೀಳು** : ದಕ್ಕಾಲಿಬಿದ್ದ ಕಣ್ಣನಂತೆ ಜಂಗಮದ ಮೇಲೆ ಹರುಷವಿಲ್ಲದ ನೋಟ (ಬಸವ. ೫೭-೧೫೪). **ದಕ್ಕಾಲಿಬೀಟ್** : ಕಣ್ಗಳ್ ದಕ್ಕಾಲಿಬಿರ್ದು (ಬಂಹರಿ. ೧೪-೪೭ ವ).

[ ದಕ್ಕಾಲಿ + ಬೀಳು$_1$ ]

**ದಕ್ಕಿಣ** (ನಾ).=ದಕ್ಷಿಣ : "ದಕ್ಕಿಣ – ದಕ್ಷಿಣ" (ಶಬ್ದಕೋ. ೧೮).

[ <ಸಂ. ದಕ್ಷಿಣ ]

**ದಕ್ಕಿಸು** (ಕ್ರಿ). ೧. ದಕ್ಕುವಂತೆ ಮಾಡು ; ತನ್ನ ಸ್ವಾಧೀನಕ್ಕೆ ಬರುವಂತೆ ಮಾಡಿಕೊಳ್ಳು ; ತನ್ನದಾಗಿಸಿಕೊಳ್ಳು : ಬಹುಧನವ ದಕ್ಕಿಸಿಯೆ ಹೂತಿಕೊಂಡಿಹರು (ತುರಂಗ. ೩೦-೭೭). ೨. ಜೀರ್ಣಿಸಿಕೊಳ್ಳು : ಅರಗಿಸಿಕೊಳ್ಳು : ದಕ್ಕಿಸಲಾಜದೆಯಾ ಮುನಿದಾ ಕೂಳ ಕಕ್ಕಲು . . . ಮನದೊಳು ಮಜುಗಿ (ನೇಮಿಸಂ. ೭೦-೩೪): ವಿಷಯ ವಿಷವನುಂಡು ದಕ್ಕಿಸಬಲ್ಲ ನಿರ್ವಿಷಸಿದ್ಧ ನೀನಪನೀಶ (ಭರತ. ೨-೬೧).

**ದಕ್ಕಿಸಿಕೊಳ್ಳು** = ೧. ದೊರಕಿಸಿಕೊಳ್ಳು ; ಗಿಟ್ಟಿಸಂ: ಚಿಕ್ಕವನ ಓರಿಯನ್ನ ನೂಡಿ ಪ್ರಣ್ಣವ ದಕ್ಕಿಸಿಕೊಂಡೆ (ವಿದಾಕ್ಷ. ೧೫೫-೩); ಮೈಸೂರಿನವರು ಕೊಳ್ಳೆಯನ್ನು ದಕ್ಕಿಸಿಕೊಂಡು ಹಿಂತಿರುಗಿವರು (ಒಡಕ. ೩೧). ೨. ಜೀರ್ಣಿಸಿಕೊಳ್ಳು; ಅರಗಿಸಿಕೊಳ್ಳು: ವಿಷವ ಪದಾರ್ಥವೆಂದು ಕೊಡಲು ಉಂಡು ದಕ್ಕಿಸಿಕೊಂಡರು (ಘಸವ. ೨೫) : ಪಳಿ ಎಚ್ಚರಿ, ಬೆಂಕಿ ಪಚ್ಚರಿ ತಿಂದು ದಕ್ಕಿಸಿಕೊಳ್ಳಲಿ (ನಲಮು ೪೭-೧೨). [ ದಕ್ಕು$_1$ + – ಇಸು$_3$ ]

**ದಕ್ಕು$_1$** (ಕ್ರಿ). ೧. ದೊರಕು ; ಸಿಕ್ಕು ; ಪ್ರಾಪ್ತವಾಗು; ಲಭಿಸಂ; ಗಿಟ್ಟು: ಮ್ಯಾಸರುಜಿಗು ದಕ್ಕದೆ . . . ಜಗದೊಳಗೆ (ಸಾನಂದ. ೯-೧೨೨); ಮನವಿಕ್ಕಿದನಮರಾವತಿಯು ಸೊಕ್ಕಿದ ಸೂಳೆಯರಿಗೆ ತನ್ನನವರಿಗೆ ದಕ್ಕಲೀಯೆವು ನಿಮ್ಮಾಣೆ (ಕುರಾಸಾಂ. ೩೬-೧೨೨) ; ದಕ್ಕಿದುದು ಕಿಟಿಯೆನುತೆ . . . ಪಿಡಿದನು (ಚಬಪು. ೫೩-೩೯) ; ಸುತ್ತೇಳು ಬೀದಿಯ ಸುತ್ತುವ ಹೆಣ್ಣಿಗೆ ದಕ್ಕೀತು ಪೋಕಿಯ ಗಂಡು (ಇಂಡಾಪ. ೧೯೮-೭೭) ; ಅರ್ಜುನನು ಪ್ರಾಣಸಹಿತನಾಗಿರಲು, ಪಾಂಡವರ ರಾಜ್ಯಧನಗಳು ತನಗೆ ದಕ್ಕುವದೆ ? (ಕೃವಾಉ. ೩೩). ೨. ತನ್ನಲ್ಲೇ ಉಳಿ ; ಸ್ವಾಧೀನಕ್ಕೆ ಬರು ; ಹಿಡಿತಕ್ಕೆ ಸಿಕ್ಕು ; ಸಾಧ್ಯವಾಗು : ಮಂದಭಾಗ್ಯಂಗಣಾಗ ದಕ್ಕುವನಲ್ಲ ಎನಗೆಂದ (ಕುವ್ಯಾದ್ರೋ. ೮-೨೧) ; ನವಲಕ್ಕ ತೆಲುಗರ ಗಂಡನೆಂದೆಂಬೀ ಬವರದ ಬಲು ಬಿರುದಿನ್ನು ರವಿಕಶಿಯುಳ್ಳನ್ನವರ ದಕ್ಕಿತೆಮಗೆಂದು ತವೆ ನಲಿದನು ನರನಾಥ (ಕುರಾಸಾಂ. ೮-೯೩) ; ಸೋಮೆಯನದಾವ ತೆಜದಿಂ ಮದುವೆ ನಿಲ್ವೆನೆಂಬಾ ಮಾತು ದಕ್ಕಿತಲ್ಲಾ ಮೆಚ್ಚಬೇಡವೆ ನೀಮೆನ್ನ ಚದುರತನಕೆ (ಸಮ್ಮಕಾ. ೬-೨೯) ; ಚಿಪ್ಪಂಟುತುಗುರಿಂದಿರಿವಂ ಬಲ್ಗೊಡಲಿಯಾಂತೊಡಂ ದಕ್ಕುಗುಮೇ (ಚಂದ್ರಪ್ರ. ೭-೨೭) ; ಭೂದೇವಿಗೂ ದಕ್ಕೋ ಮನುಸ್ಯಾನೀ ಅಲ್ಲೋ, ಮಗನ, ನಸಿ ಗೊತ್ತದ (ಕಮ್ಮಟ. ೧೮) ; ಅವನೆಂದೂ ಅವರಿಗೆ ದಕ್ಕುವುದಿಲ್ಲ (ಪುನರು. ೭೦೯) ; ಹೆತ್ತ ಮಕ್ಕಳು ಕೈಗೆ ದಕ್ಕದ ದುಃಖದಿಂದ ಇನ್ನರ್ಧ ಬಸವಳಿದು ಹೋಗಿದ್ದಳು (ನಡದಾ. II, ೯೫೫) ; ಶತ್ರುನಾಶವಾಗಿ ರಾಜ್ಯ ತನಗೇ ದಕ್ಕುವುದು ಎಂದು ದುರ್ಯೋಧನನು ಯೋಚಿಸಿದನು (ನೀತಿಚಂ. I, ೯). ೩. ಅರಗು ; ಜೀರ್ಣವಾಗು ; ಪಚನವಾಗು ; ಮೈಗೂಡು : ಎಲ್ಲ ಜಗವ ನುಂಗಿ ದಕ್ಕಿಸಿಕೊಂಡವಗೆ ಸಲ್ಲದು ರೋಗರುಜನವು (ಲಕ್ಷ್ಮೀಶೋ. ೩೮) ; ಉಂಡ ಅನ್ನ ದಕ್ಕದ ಲಕ್ಷಣವೆ ವಾತಪ್ರಕೋಪ (ಸಕವ್ಯ. ೧೩೧) : ಇನ್ನೊಂದು ಬಟ್ಟಲು ಬಂದಿತು; ಅದನ್ನೂ ಕುಡಿದು ಮುಗಿಸಿದಳು; ಅದೂ ದಕ್ಕಲಿಲ್ಲ (ಕಗದ್ಯ. II, ೨೮). ೪. (ತಪ್ಪು ಮಾಡಿದರೂ) ಸರಿಯಾಗು; ವಿರುದ್ಧ ಪರಿಣಾಮವಾಗದಿರು: ದಕ್ಕೀತು ಎಂದು ತಕ್ಕದ್ದಲ್ಲದ್ದು ಮಾಡಬಾರದು (ಗಾದೆ). ೫. ಕುಸಿ (?): ಧನುವಂ ಕೊಂಡೊತ್ತಿ ತನ್ಮೌರ್ವಿಯನಟನಿಗೆ ಪಸ್ರಾಗ್ರದಿಂದೆತ್ತಿ ಕಂದರ್ಪನ್ಯಪಾಲಂ ಕಾಯ್ಬಿನಿಂದೇಜಿಸುವ ಸರಭಸಕ್ಕುರ್ವಿ ತರ್ಗಿತ್ತು ನಾಗೇಂದ್ರನ ಭೋಗಂ ಬಳ್ಕಿ ಸುಯ್ಲ್ಲಿಕ್ಕಿದುದು , . . . ಪರಿಹತಕ್ಕುದ್ಧಘಾತಕ್ಕೆ ಬೆನ್ನೊಡ್ಡಿನ ಪೊಂಗಳ್ ದಕ್ಕಿ ಕೂರ್ಮಂ ಕುಸುರಿನೊಳರೆಮುಬ್ಗಿರ್ದುದಬ್ಲೋದ್ಭವಾಂಡಂ (ಕುಸುಮಾ. ೧೧-೪೫). ☞ ಈ ಪದ್ಯಕ್ಕೆ ಪಾಠಾಂತರವೊಂದಿದೆ. (ಶಾಂತೀಶ್ವ. ೩-೯೫ ನೋ).

**ದಕ್ಕಹಿಡಿ** = ದಕ್ಕುವಂತೆ ಹಿಡಿ ; ಗ್ರಹಣಮಾಡು ; ಸೆರೆಹಿಡಿ : ದಕ್ಕ ಹಿಡಿವರು ಪಶುಗಳ ಮನೆಯ ಕನ್ನವಿಕ್ಕುವರಿರದೆ ಪುರಗಳ ಹೊಕ್ಕುಜಿವರು (ಕುರಾಸಾಂ. ೧೦-೫). **ದಕ್ಕಿ ಹೋಗು**= ವಶವಾಗು; ಸೇರು: ಅದರಾ ಅಗ್ರಹಾರವು ಮೈಸೂರಿನಲ್ಲಿ ಕಟ್ಟಲ್ಪಟ್ಟು ಇನ್ನಾರಿಗೋ ದಕ್ಕಿ ಹೋಯಿತು (ಹುಬ್ಬಹ. ೪) ; ಅವರಿಗೆ ದೊರೆತ ಹಣವೆಲ್ಲ ದಕ್ಕಿ ಹೋಯಿತು (ರೂಢಿ). **ದಕ್ಕು ಹಾಕಿಕೊಳ್ಳು** = ಸ್ವಾಧೀನ ಮಾಡಿಕೊಳ್ಳು: ವಶಪಡಿಸಿಕೊಳ್ಳು ; ತನ್ನದನ್ನಾಗಿ : ಆಭರಣಗಳಲ್ಲಿ ಬಹುಭಾಗ ಅಡವು ಇಟ್ಟುಕೊಂಡು ದಕ್ಕು ಹಾಕಿಕೊಂಡ ಅಂಶ ಮಗನಿಗೆ ತಿಳಿದಿತ್ತು (ವಂಶವೃ. ೧೯೫) : ಗುರುರಾಜಂಬಯರ ಹಣಕ್ಕೆ ಮೋಸವಾಗಿದೆ. ಕೆಲವರೆಲ್ಲಾ ದಕ್ಕುಹಾಕಿಕೊಂಡಿದಾರೆ (ಮುರಳಿ. ೧೮೨).

[ ದೇ.೫ ತಮಿ. ಮಲ. ತಕ್ಕು; ತುಳು. ದಕ್ಕು; ತೆಲು. ದಕ್ಕು, ಡಕ್ಕು, ತಕ್ಕು ; ಕೊಲಾ. ನಾಯ್ಕಿ. ತಕ್ ; ಗೊಂಡಿ. ತಗ್ಗಾನಾ ]

**ದಕ್ಕು$_2$** 'ದರ್ಕು$_1$' ನೋ.

**ದಕ್ಕು$_3$** (ನಾ). ಸ್ವಾಧೀನ ; ವಶ : ಅವರವರಿಗೆ ದಕ್ಕಾಗಬೇಕೆಂದು ಪಂಚರ ನಿರ್ಣಯ (ಗ್ರಾಮಾಯ. ೯) : ಆಸ್ತಿಯೆಲ್ಲ ಯಾರಿಗೋ ದಕ್ಕಾಗಿ ಹೋಗಬಹುದಿತ್ತು (ಗ್ರಾಮಾಯ. ೩೫೩). [ <ದಕ್ಕು$_1$ ]

**ದಕ್ಕು₄** 'ದರ್ಕು₂' ನೋ.

**ದಕ್ಕುಂತಲೆ** (ನಾ). ದಕ್ಕುವ ತಲೆ; ಉಳಿಯುವ ತಲೆ: ಮೇಣುಂ ವೈಗರೆ ವಕ್ಕಿನ ತಲೆ ದಕ್ಕುಂತಲೆಯೋ ? ಇರ್ಕೆ (ರಾವಣಾಶ್ವ. ೯೨-೬೦)
[ ದಕ್ಕು₁ (< ದರ್ಕುಂದಲೆ₁) + ತಲೆ₁ ]

**ದಕ್ಕುಂದಲೆ₁** 'ದರ್ಕುಂದಲೆ'₁ ನೋ.

**ದಕ್ಕುಂದಲೆ₂** 'ದರ್ಕುಂದಲೆ'₂ ನೋ.

**ದಕ್ಕುಂದಲೆವರಿ** (ಕ್ರಿ). ಸೊಕ್ಕಿನಿಂದ ಮುನ್ನುಗ್ಗು; ಗರ್ವದಿಂದ ಹಾಯು: ಉರ್ಕಿಂ ಸೊಕ್ಕಿ ದಕ್ಕುಂದಲೆವರಿದುರಿದಪ್ಪರ್ಕರಂ ನಂದಿದಪ್ಪರ್ (ಅನಂಪು. ೦೩-೧೭). [ ದಕ್ಕುಂದಲೆ₁ (<ದರ್ಕುಂದಲೆ₁) + ಪರಿ₁ ]

**ದಕ್ಕುಂದಲೆವಾಯ್** 'ದರ್ಕುಂದಲೆವಾಯ್' ನೋ.

**ದಕ್ಕುಕೊಡು** (ಕ್ರಿ). ಅಧೀನಕ್ಕೆ ಕೊಡು; ಸ್ವಾಧೀನಮಾಡು: ಈ ಮೊಹರುಗಳನ್ನು ದಕ್ಕುಕೊಟ್ಟಿಲ್ಲ. ಕೈಗಡದಂತೆ ನೀವು ತಿಳುಕೊಳ್ಳಬೇಕು (ಮುಂಬಯಿ. ೩-೯೦). [ ದಕ್ಕು₃ + ಕೊಡು₁ ]

**ದಕ್ಕುಗೊಳ್** (ಕ್ರಿ). ವಶಪಡಿಸಿಕೊಳ್ಳು; ತನ್ನದನ್ನಾಗಿ ಮಾಡಿಕೊಳ್ಳು: ತನ್ನ ಪೆಣ್ಗಳಂ ಮರುಳ್ಗೊಳಿಸಿ ದಕ್ಕುಗೊಂಡ ಶ್ರೀಕೃಷ್ಣನಂ ದೂಱುವ ವೃದ್ಧಗೋಪಿಯರ ವಚನವ್ಯಾಜದಿಂ ವಿವರಿಸುವರ್ (ಗೀತಗೋ. ೬೩-೦ ವ): ಇರ್ಕೇಱಿಯನೊಕ್ಕಲಿಕ್ಕಿ ದಕ್ಕುಗೊಳಲೊಡವಾ ತುರುಕ ಪಡೆವಳಂ . . . ಮುಂತಣ್ಗೆ ನಡೆದು (ಚಿಕದೇವ. ೩೭-೯). [ ದಕ್ಕು₃ + ಕೊಳ್₁ ]

**ದಕ್ಕುಗೊಳಿಸು** (ಕ್ರಿ). ವಶಪಡಿಸಿಕೊಳ್ಳು; ಸ್ವಾಧೀನಮಾಡಿಕೊಳ್ಳು: ಏನು ನೇಮದೊಳಿರ್ದುದೊ ಪೊಂಗೊಳಲೇನೋಂತುದೊ ಕೆಳದಿ ತುಱುನೊಲಿ ದಿನಿಯನ ದಕ್ಕುಗೊಳಿಸುತಿದೆ (ಗೀತಗೋ. ೧೪-೨೭ ಪಲ್ಲವಿ).
[ ದಕ್ಕುಗೊಳ್ + – ಇಸು₃ ]

**ದಕ್ಕುಪಾರಿ** (ನಾ). ದಕ್ಕಿದ ಸೂಳೆ; ವಶಳಾದ ಜಾರೆ: ಚಿಕ್ಕಪ್ರಾಯದಿ ನಿನ್ನ ರೂಪಿಗೆ ಸಿಕ್ಕಿ ದಕ್ಕಿದ ನಾರಿಯಾ ತಕ್ಕಿಯೊಳಗಿಂದಗಲಿ ಹೋಹರೆ ದಕ್ಕುಪಾರಿಯು ನೀರೆಯಾ ಅಕ್ಕರಿಂದಲಿ ಕರೆದು ಮನ್ನಿಸೊ (ಜುದಿಕ್ಕಾ. V, ೦೨೩೫ ಗಂಗಾಧರನ ಅಷ್ಟಕ). [ ದಕ್ಕು₃ + ಪಾರಿ₂ (<ಪಾಱಿ₁) ]

**ದಕ್ಕುಬೀಳು** (ಕ್ರಿ). ವಶವಾಗು; ಅಧೀನವಾಗು: ಈಗ ಬಗೆಗಡದಿನ ವೇಗಕ್ಕೆ ಸಂಚಲಿಸಿ ಸನ್ಯಾಸದ ಕಾಲಾಟಕ್ಕೆ ಸಿಲ್ಕಿ, ದಿಕ್ಕುಗೇಡಿಗೆ ದಕ್ಕುಬಿದ್ದು . . . ನಾವು ಮುಳುಗಿಹೋಗಿ ಉಸಿರಳಿಯಬಾರದು (ಮಂತ್ರಿಕ. ೬೨-೨೦).
[ ದಕ್ಕು₃ + ಬೀಳು₁ (<ಬೀೞ್₁) ]

**ದಕ್ಕೆ₁** 'ಡಕ್ಕೆ' ನೋ.

**ದಕ್ಕೆ₂** 'ಧಕ್ಕೆ₂' ನೋ.

**ದಕ್ಕೆಬಲಿ** 'ಡಕ್ಕೆಬಲಿ' ನೋ.

**ದಕ್ಷ** (ನಾ). ೧. ಚತುರನಾದವನು; ಜಾಣ; ಸಮರ್ಥ: "ಚತುರಃ . . . ದಕ್ಷಃ, ಕುಶಲಃ . . . ಪ್ರವೀಣಃ—ಈ ೧೧ ಬಲ್ಲವಂ" (ಚಲಾಯು. ೩೫-೧೮೦): "ಚತುರಂ ಪ್ರವೀಣಂ ಕುಶಲನಭಿಜ್ಞಂ ಸುಶಿಕ್ಷಿತನೆನಲ್ ದಕ್ಷನೆನೆ . . . ಬಲ್ಲವಗೆ ನಾಮಂ" (ಮಂಗರಾ. ೬೭-೩): ಶ್ರೀರಮಣೀ ರಮಣಂಗರಿನಾರೀವೃಥವ್ಯದಿವ್ಯದೀಕ್ಷಾದಕ್ಷಂಗಾರಣೆ (ಶಂಶಥಾ. ೭-೧): ಉನ್ನತನ ರೂಪಾಧಿಕನ ಸಂಪೂರ್ಣ ದಕ್ಷನನನ್ಯರೆನ್ನವರೆನ್ನದನ ವರರಿಂಗಿ ತಾಕಾರವ್ರಭೇದಕನ . . . ಪರಿಹಾರಕನ ಮಾಡುವುದು (ಕುಮ್ಮಾಉ. ೩-೯೪): ದೇವರಾಜನು ಸ್ವತಃ ಶೂರನೂ ರಾಜ್ಯಕಾರ್ಯಭಾರದಲ್ಲಿ ದಕ್ಷನೂ ಚತುರನೂ ಇದ್ದನು (ಮುಂಬಯಿ. ೪-೮). ೨. ಬ್ರಹ್ಮನ ಮಗನಾದ ದಕ್ಷ: ದಕ್ಷ ಯಾಗವ ಮಾಡಿ (ಬಸವ. ೩೮೩): ಗಿಲಿಕೆ ಘಲಿಲೆಂದುಲಿಯೆ ದಕ್ಷನ ತಲೆಯ ಕೋಡಿನ ತೆಱದಿ ತಗರಿನ ಬಲಿದ ಕೊಂಬಂ ತನ್ನೆಡದ ಕೈಯಲಿ ಪಿಡಿದುಕೊಂಡು (ಬಸಪು. ೨೯-೪); ನೀರೇಜಾಸನಸೂನು ದಕ್ಷನುಱೆ ಸದ್ದಾಕ್ಷಾಯಣೀದೇವಿಯುಂ . . . ಪಡೆದಂ (ಹಮ್ಮೀರ. ೨-೬): ಮಾರವಮಾರಣದಕ್ಷ ದಕ್ಷಮದಾಪಹಾಂಕ ವಿರಾಜಿತೇ ಧೀರ ಧೀರತಿಪಾಲಪಾಲನಶೀಲ ಪಾಲಿಪುವಂಬಿಕೇ (ರಾಜಶೇ. ೬-೧೧೪). ೩. ಮುನಿ; ತಪಸ್ವಿ. ೪. ಹನ್ನೆರಡು ಮಂದಿ ಪ್ರಾಚೀನ ಋಷಿಗಳಲ್ಲಿ ಒಬ್ಬ: ಪುಲಸ್ತ್ಯ ಪುಲಹ . . . ದಕ್ಷ ಕ್ರತು ಜಮದಗ್ನಿ ಕೌಶಿಕರೆಂಬೀ ದ್ವಾದಶಋಷಿಗಳೀ ಕ್ರಮದಿಂದವರವರಂ ಕೀರ್ತಿಸುವರು (ವಿವೇಕ. ೨೬೭). ೫. ಗಂಡುಕೋಳಿ; ಹುಂಜ: "ಮುನಿಯೊಳು ಕೋೞಿಯೊಳು ದಕ್ಷವೆಂಬುದು" (ಮಂಗರಾ. ೧೪೨-೦೮). ೬. ಸಾಮರ್ಥ್ಯ; ಶಕ್ತಿ; ಅಣ್ಮು. ೭. ವೇಗ; ಶೀಘ್ರತೆ: "ದಕ್ಷ-ವೃದ್ಧೌ, ಶೀಘ್ರೇಚ, ಪೆರ್ಚುಗೆಯೊಳಂ ವೇಗದೊಳಂ" (ಕಾಶಕ್ಸ. ೧೧೭). ೮. ಕೊಲೆ; ಹತ್ಯೆ. ೯. ಬಲಗಡೆ: "ದಕ್ಷಂ = ಬಲಗಡ" (ಕಾಶಕ್ಸ. ೧೧೭). [ ಸಂ. ]

**ದಕ್ಷಕನ್ಯೆ** (ನಾ). ದಕ್ಷನ ಮಗಳು; ದಾಕ್ಷಾಯಣಿ; ಪಾರ್ವತಿ.
[ ದಕ್ಷ + ಕನ್ಯೆ ]

**ದಕ್ಷತೆ** (ನಾ). ೧. ಚಾತುರ್ಯ; ಜಾಣತನ. ೨. ಸಾಮರ್ಥ್ಯ; ಶಕ್ತಿ; ಸತ್ವ; ಬಲ: ಪ್ರವಚನ ಪರಿಪಠನಕ್ಷಮತೆ ವಾಣಿಯಂ ತೀರ್ಥಯಾನ ದಕ್ಷತೆ ಪದಮಂ ಕಿವಿಯಂ ಜಿನವರ ಚರಿತ ಶ್ರವಣಪಟುತೆ ಪಿಂಗದನ್ನ ಮಾರ್ಜಿಪೆನಜಿನಂ (ಚಂದ್ರಪು. ೪-೧೭). ೩. ಕಾರ್ಯಪಟುತ್ವ: ಪೂರ್ವಸಿದ್ಧತೆ ಉಪಾಧ್ಯಾಯರ ಶಕ್ತಿ, ದಕ್ಷತೆ, ಕೌಶಲ್ಯ ಇವನ್ನೆಲ್ಲ ಹೆಚ್ಚಿಸುತ್ತದೆ (ಶಿಕ್ಷದ. ೨೬೩): ಹೀಗೆ ತೆಗೆದುಕೊಂಡ ಉಷ್ಣದಲ್ಲಿ ಎಷ್ಟು ಹೆಚ್ಚು ಭಾಗವನ್ನು ಅದು ಕೆಲಸವಾಗಿ ಮಾರ್ಪಡಿಸಿದರೆ ಅಷ್ಟು ದಕ್ಷತೆಯು (Efficiency) ಹೆಚ್ಚೆಂದು ನಾವು ಹೇಳಬಹುದು (ಭೌತವಿ. ೨೬೨). [ ಸಂ. ದಕ್ಷತಾ ]

**ದಕ್ಷಬಗುರಿ** (ನಾ). ವೇಗವಾಗಿ ಸುತ್ತುವ ಬುಗುರಿ (?) : ವಕ್ಷರುಹಗಳೊ ಚಕ್ರವಾಕದ ಪಕ್ಷಿಗಳೊ ಪೊಸ ಪೊನ್ನ ಕಲಶಗಳಿಕ್ಷುಚಾಪನ ಕರದ ಚೆಂಡುಗಳ ಸಮನಾಡುತಿಹ ದಕ್ಷಬಗುರಿಗಳೆಂದಪೋ ಮೂಲಕ್ಷಣೆಯ ಲತಿಕಾಂಗಫಲ ಲೋಕೇಕ್ಷನಂಗನೆ ಕುಟ್ಮಳಗಳರಿಯಂದಳೆಂದುಮುಖಿ (ಜಿರಾಪಾ. ೧೭-೪೮). 'ತಗಬುಗುರಿ' ಪಠಾ. [ ದಕ್ಷ + ಬಗುರಿ₀ (<ಬೊಗರಿ) ]

**ದಕ್ಷಬ್ರಹ್ಮ** (ನಾ). = ದಕ್ಷ ೨: ದಕ್ಷಃ – ಸರಸ್ವತೀ ಬ್ರಹ್ಮನ ಮಗನಾದ ಸತೀದೇವಿಯ ತಂದೆಯಾದ ಶಿವನ ಮಾವನಾದ ದಕ್ಷಬ್ರಹ್ಮಂ (ಕಾಶಕ್ಸ. ೧೧೭). [ ಸಂ. ]

**ದಕ್ಷಮುಖ** (ನಾ). ದಕ್ಷಯಜ್ಞ: ನಾಡೆ ದಕ್ಷಮುಖಶ್ರೀ ಕೆಟ್ಟುದು (ವೀರವಿ. ೦೨-೬೦). [ ದಕ್ಷ + ಮುಖ ]

**ದಕ್ಷಮುಖಕ್ಷಯ** (ನಾ). ದಕ್ಷನ ಯಜ್ಞವನ್ನು ಹಾಳುಗೆಡಿಸಿದವನು; ಶಿವ: ಅಕ್ಷಯಂ ನಿಟಿಲಾಕ್ಷನಭವಂ ದಕ್ಷಮುಖಕ್ಷಯಕ್ಷಮನುಕ್ಷಗಂ ಪ್ರತ್ಯಕ್ಷವಾಗಿ ಸಮಕ್ಷದಲಿ ನಿಂದು (ಬಸಪು. ೨೭-೬೨).
[ ದಕ್ಷಮುಖ + ಕ್ಷಯ ]

**ದಕ್ಷಯಾಗ** (ನಾ).=ದಕ್ಷಮುಖ: ದಕ್ಷಯಾಗವ ನಡೆಸಲೆಂದು ಅಜಮುಂಬರಾದ ಸುರರೆಲ್ಲಾ ನೆರೆದು (ಬಸವ. ೫೬೩). [ದಕ್ಷ + ಯಾಗ ]

**ದಕ್ಷಸಾವರ್ಣಿಕ** (ನಾ). ಹದಿನಾಲ್ಕು ಮನುಗಳಲ್ಲಿ ಒಂಭತ್ತನೆಯವನು: ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸೂರ್ಯಸಾವರ್ಣಿಕ, ದಕ್ಷಸಾವರ್ಣಿಕ, ಬ್ರಹ್ಮಸಾವರ್ಣಿಕ, ಧರ್ಮಸಾವರ್ಣಿಕ, ರುದ್ರಸಾವರ್ಣಿಕ, ರೌಚ್ಯ, ಇಂದ್ರಸಾವರ್ಣಿಕರೆಂಬ ಹದಿನಾಲ್ಕು ಮನುಗಳೊಳಗೆ (ವಿವೇಕ. ೨೦೪). [ ಸಂ. ]

**ದಕ್ಷಸ್ಮೃತಿ** (ನಾ). ಪತ್ತೊಂಭತ್ತು ಧರ್ಮಶಾಸ್ತ್ರಗಳಲ್ಲಿ ಹದಿನಾರನೆಯದು: ಮನುಸ್ಮೃತಿ, ಅತ್ರಿಸ್ಮೃತಿ, ಹರಿತಸ್ಮೃತಿ, ವಿಷ್ಣುಸ್ಮೃತಿ, ಯಾಜ್ಞವಲ್ಕ್ಯಸ್ಮೃತಿ, ಉಶನಸಸ್ಮೃತಿ, ಆಂಗೀರಸಸ್ಮೃತಿ, ಯಮಸ್ಮೃತಿ, ಆಪಸ್ತಂಬಸ್ಮೃತಿ, ಸಂವರ್ತಸ್ಮೃತಿ, ಕಾತ್ಯಾಯನಸ್ಮೃತಿ, ಬೃಹಸ್ಪತಿಸ್ಮೃತಿ, ಪರಾಶರಸ್ಮೃತಿ, ವ್ಯಾಸಸ್ಮೃತಿ, ಶಂಖಲಿಖಿತಸ್ಮೃತಿ, ದಕ್ಷಸ್ಮೃತಿ, ಗೌತಮ

ಸ್ಮೃತಿ, ಶಾತಾತಪಸ್ಮೃತಿ, ವಶಿಷ್ಠಸ್ಮೃತಿಗಳೆಂಬವೆ ಆಯಾಯ ನಾಮಧೇಯ ಮುಳ್ಳವಱಿಂದುಕ್ತವಾದ ಹತ್ತೊಂಭತ್ತು ಧರ್ಮಶಾಸ್ತ್ರಗಳು (ವಿವೇಶ. ೪). ಈ ಧರ್ಮಶಾಸ್ತ್ರಗಳ ಸಂಖ್ಯೆಯನ್ನು ಹದಿನೆಂಟು ಎಂದು ಹೇಳಿದ ವರೂ ಉಂಟು. [ ಸಂ. ]

**ದಕ್ಷಾಧ್ವರ** (ನಾ). ದಕ್ಷನ ಯಜ್ಞ; ದಕ್ಷಬ್ರಹ್ಮನ ಯಜ್ಞ. 'ದಕ್ಷಾಧ್ವರ ಧ್ವಂಸಿ' ನೋಡಿ. [ ದಕ್ಷ + ಅಧ್ವರ ]

**ದಕ್ಷಾಧ್ವರಧ್ವಂಸಕ** (ನಾ). ದಕ್ಷಬ್ರಹ್ಮನ ಯಜ್ಞವನ್ನು ನಾಶಪಡಿಸಿ ದವನು; ಶಿವ: "ಈಶಾನಃ : . . . ಅಂಧಕರಿಪುಃ, ದಕ್ಷಾಧ್ವರಧ್ವಂಸಕಃ . . . ನೀಲಲೋಹಿತಃ – ಈ ೪೫ ಮಹಾದೇವರ ಪೆಸರ್" (ಹಲಾಯು. ೩-೧೧).

[ ದಕ್ಷಾಧ್ವರ + ಧ್ವಂಸಕ ]

**ದಕ್ಷಾಧ್ವರಧ್ವಂಸಿ** (ನಾ). = ದಕ್ಷಾಧ್ವರಧ್ವಂಸಕ: ತೊಡೆವೆಂ ಶಕ್ರನ ಸಾಪಮಂ . . . ಪರಾಭವಿಸುವೆಂ ದಕ್ಷಾಧ್ವರಧ್ವಂಸಿಯಂ (ಜಗವಿ. ೩-೨೧); ದೇವ ಶೈವಾಚಾರ್ಯನ ಸೋಮನಾಥಮಾರನ ಮಹಾಯಾಗಕ್ಕೆ ದಕ್ಷಾಧ್ವರ ಧ್ವಂಸಿ ಬಿಜಯಂಗೆಯ್ವುದೆಂದು ಬಿನ್ನಪಂ ಮಾಡೆ (ನಂಬಿರ. ೧೬-೧೩೧); ದೇವ ನಿಮ್ಮಡಿ ಸಹಿತ ಕಂಡೆನು ದೇವದೇವನ ಚರಣವನು ಸಂಭಾವಿಸಿದ ನಮ್ಮಿಬ್ಬರನು ದಕ್ಷಾಧ್ವರಧ್ವಂಸಿ (ಕುಮಾವ್ಯಾ. ೯-೮); ಪೂರ್ವದಲ್ಲಿ ದಕ್ಷಾಧ್ವರಧ್ವಂಸಿಯಾದ ಪರಮೇಶ್ವರನ ಹಣೆಗಣ್ಣಿನಲ್ಲಿ ಹುಟ್ಟಿದ ಕೋಪವೇ ಜ್ವರರೂಪವಾಗಿ ವರ್ತಿಸಿರ್ಪುದು (ಸಕವೈ. ೬೧).

[ ಸಂ. ದಕ್ಷಾಧ್ವರಧ್ವಂಸಿನ್ ]

**ದಕ್ಷಾಧ್ವರಹರ** (ನಾ). = ದಕ್ಷಾಧ್ವರಧ್ವಂಸಕಃ: ಗಿರಿಶ ಶ್ರೀಕಂಠ ದಕ್ಷಾಧ್ವರಹರ ವೃಷಭಾರೂಢ . . . ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೮೮). [ ಸಂ. ]

**ದಕ್ಷಾರಿ** (ನಾ). ದಕ್ಷನ ಶತ್ರು; ವೀರಭದ್ರ: "ವೀರಂ ಭಯಂಕರಂ ದಕ್ಷಾರಿ ಶರಭನೆನೆ ವೀರಭದ್ರನೆನಿಕ್ಕು" (ಮಂಗರಾ. ೫-೧೫).

[ ದಕ್ಷ + ಅರಿ₆ ]

**ದಕ್ಷಿಣ** (ಗು). ೧. ಬಲಗಡೆಯ; ಬಲಭಾಗದ: ದಕ್ಷಿಣ ಪಾಣಿಪಲ್ಲವಾಭಿ ನಯಾನಿವೇದಿತಾವಿಸೇಯ ವಿಳಸಿತ ಚಕ್ರಾಯುಧಂ ನಿಂದಿರ್ದ (ಶಾಂತಿಪು. ೧೦.೧೬೮ ವ). ೨. ನೇರವಾದ; ಋಜುವಾದ; ಸರಿಯಾದ. ೩. ಚಾತುರ್ಯವುಳ್ಳ; ಜಾಣ್ಮೆಯುಳ್ಳ. (ನಾ). ೪. ಬಲಭಾಗ; ಬಲಗಡೆ; ಬಲಪಕ್ಕ: "ಅಪಸವ್ಯಂ, ದಕ್ಷಿಣಂ – ಈ ೨ ಬಲಂ" (ಹಲಾಯು. ೧೨೪-೭೧): ನವಗ್ರಹಗಳಲ್ಲಿ ದೃಷ್ಟಿಯು ವಾಮ ದಕ್ಷಿಣ ಸಮ್ಮುಖಗಳೆಂಬ ಭೇದದಿಂದ ಮೂರು ಬಗೆಯೆಂದು ತಿಳಿಯತಕ್ಕುದು (ಅರ್ಗಮೂ. ೩೯). 'ದಕ್ಷಿಣಬಾಹು' ನೋಡಿ. ೫. ತೆಂಕಣದಿಕ್ಕು; ತೆಂಕಲು: ವೃಷಭ ಕನ್ನೆ ಮಕರ ಈ ೩ ರಾಶಿಯು ದಕ್ಷಿಣದಿಕ್ಕು (ಭಾಸ್ಕರ. ೭೮-೫). ೬. ಭಾರತದ ದಕ್ಷಿಣಕ್ಕಿರುವ ದೇಶ; ದಕ್ಷಿಣದೇಶ. 'ದಕ್ಷಿಣಮಾರ್ಗ' ನೋಡಿ. ೭. ನೇರವಾದವನು; ಸರಿಯಾದವನು: "ಸರಳ:, ದಕ್ಷಿಣ :– ಈ ೨ ಸಪ್ಪಂ" (ಹಲಾಯು. ೬೩-೨೩೦). ೮. ಶೈವ ಪ್ರಭೇದಗಳಲ್ಲಿ ಒಂದು: ಮಾತ್ರವಾ ಶೈವವೇ ವಾಮ ದಕ್ಷಿಣ ಮಿಶ್ರ ಸಿದ್ಧಾಂತವೆಂದು ನಾಲ್ಕುತೆಱನಾಗಿರ್ಪುದು (ವಿವೇಶ. ೬೩). ೯. [ಜ್ಯೋತಿ] ಲಗ್ನದಿಂದ ನಾಲ್ಕನೆಯ ಸ್ಥಾನ: "ದಕ್ಷಿಣ– ಚತುರ್ಥ" (ಜಾತತಿ. ೨-೯ ಟೀಕು). ೧೦. ದಕ್ಷಿಣದಿಕ್ಕಿನಲ್ಲಿಟ್ಟ ಯಾಗದ ಬೆಂಕಿ. 'ದಕ್ಷಿಣಾಗ್ನಿ' ನೋಡಿ. ೧೧. [ಜೈನ] ಜೈನ ಬ್ರಾಹ್ಮಣರ ಮನೆಗಳಲ್ಲಿ ಅರ್ಹಂತನ ಪೂಜೆಗಾಗಿ ಸ್ಥಾಪಿಸುವ ಮೂರು ಬಗೆಯ ಅಗ್ನಿಗಳಲ್ಲಿ ಒಂದು: ಆ ಕ್ಷಣದೊಳೇ ಅಗ್ನಿಕುಮಾರನ ಕಿರೀಟದೊಳುತ್ಪನ್ನವಾದ ಗಾರ್ಹಪತ್ಯ ಆಹವನೀಯ್ಯ ದಕ್ಷಿಣಾಗ್ನಿತ್ರಯಮಂ ಕ್ರಮವಾಗಿ ಚತುರಶ್ರ ತ್ರಿಕೋಣವೃತ್ತಕುಂಡ [illegible] ಮಾಡಿತು (ಪುರುಚ. ೨೬೪). ೧೨. [ಕಾವ್ಯಮೀ] ದಕ್ಷಿಣ, ಧೃಷ್ಟ, ಅನುಕೂಲ, ಶಠವೆಂಬ ನಾಲ್ಕು ಬಗೆಯ ಶೃಂಗಾರ ನಾಯಕರಲ್ಲಿ ಒಂದು ಬಗೆ; ಅನೇಕ ನಾಯಿಕೆಯರಲ್ಲಿ ಸಮಾನ ಅನುರಾಗವನ್ನು ತೋರಿಸುವ ನಾಯಕ: ದೇವರಲಿ ಭಕ್ತರಿಗೆ ಗುರುಜನ ಸೇವೆಯಲಿ ಸತ್ಪುತ್ರರಿಗೆ ಪರಯುವ್ವತದಿ ದಕ್ಷಿಣರಿಗೆಂತೆಸೆ ವುದುತ್ಕ್ರಮಂ ಬಿಡದೆ (ವಿವೇಧ. ೨-೩೩); ದಕ್ಷಿಣನೆಂದರೆ, ಅನೇಕ ನಾಯಿಕೆಯರಿದ್ದು ಅವರೆಲ್ಲರಲ್ಲಿಯೂ ಒಂದೇ ರೀತಿಯಾದ ಪ್ರೇಮವನ್ನು ತೋರಿಸತಕ್ಕವನು (ಕೃಬಿಡಿ. ೨೦೯): ಶೃಂಗಾರನಾಯಕರಲ್ಲಿ ದಕ್ಷಿಣ, ಧೃಷ್ಟ, ಅನುಕೂಲ, ಶಠ ಎಂದು ನಾಲ್ಕು ವಿಧ (ಸಂನಾಟ. ೧೮).

ದಕ್ಷಿಣ ಅಕ್ಷಾಂಶ = ಸಮಭಾಜಕವೃತ್ತದ ದಕ್ಷಿಣಕ್ಕೆ ಗೋಳದ ಮೇಲ್ಮೈಯ ಮೇಲೆ ಅಡ್ಡಡ್ಡಲಾಗಿರುವಂತೆ ಭಾವಿಸಿರುವ ವೃತ್ತಾಕಾರದ ರೇಖೆ: ಸಮಭಾಜಕವೃತ್ತಕ್ಕೆ ಉತ್ತರದಲ್ಲಿರುವ ಅಕ್ಷಾಂಶ ಗಳಿಗೆ ಉತ್ತರಅಕ್ಷಾಂಶ, ದಕ್ಷಿಣದಲ್ಲಿರುವವುಗಳಿಗೆ ದಕ್ಷಿಣ ಅಕ್ಷಾಂಶ ಎಂದು ಹೆಸರು (ಭೂವಿವ. ೧೬).

[ ಸಂ. ]

**ದಕ್ಷಿಣಕರ** (ನಾ). ಬಲಗೈ; ಬಲಹಸ್ತ: ಶಿಷ್ಯನ ಶಿರದ ಮೇಲೆಯು ತಮ್ಮ ದಕ್ಷಿಣ ಕರವ ಚಾಚುತಲಿ (ಗಗಶಾ. ೨-೩೦). [ ದಕ್ಷಿಣ + ಕರ₃ ]

**ದಕ್ಷಿಣಖುರ** (ನಾ). ಬಲಗಾಲಿನ ಗೊರಸು: ನೆಲನಂ ಪೊಡೆವಂತಿರೆ ಬಾರಿ ವುದಡಿಗಡಿಗೆ ಹಯಂ ತನ್ನ ತೀಕ್ಷ್ಣದಕ್ಷಿಣಖುರವಂ (ಮಲ್ಲಿಪು. ೮-೧೫೧).

[ ದಕ್ಷಿಣ + ಖುರ ]

**ದಕ್ಷಿಣಘೂರ್ಜರಿ** (ನಾ). [ಸಂಗೀತ] ಒಂದು ರಾಗದ ಹೆಸರು: ಮಹಾರಾಷ್ಟ್ರ ಘೂರ್ಜರಿ, ಸೌರಾಷ್ಟ್ರಘೂರ್ಜರಿ, ದ್ರಾವಿಡಘೂರ್ಜರಿ ದಕ್ಷಿಣಘೂರ್ಜರಿ[ಪಾಠಾಂ. ಗುಜ್ಜರಿ]ಯೆಂಬ ನಾಲ್ಕುಂ ಉಪಾಂಗ ಘೂರ್ಜರೀರಾಗಂಗಳು (ವಿವೇಶ. ೨೬೪). [ ದಕ್ಷಿಣ + ಘೂರ್ಜರಿ ]

**ದಕ್ಷಿಣಚರಣ** (ನಾ). ಬಲಗಾಲು; ಬಲಗಡೆಯ ಪಾದ: ದಿವ್ಯಚಾಪಮಂ ಪಿಡಿದು ಪ್ರಥಮಚಳಿತ ದಕ್ಷಿಣಚರಣನಾಗಿ ನಿಜನಿವಾಸದಿಂ ಪೊಱಮಟ್ಟು (ಶಂಖಧಾ. ೪-೧೨ ವ): ಆ ಶುಕಂ ರಾಜಾಭಿಮುಖನುಮುನ್ನಮಿತ ದಕ್ಷಿಣ ಚರಣನುಮತಿಸ್ಪಷ್ಟವರ್ಣಸಂಸ್ಕಾರಮಪ್ಪ ವಾಣಿಯಿಂ ಕೃತಜಯ ಶಬ್ದನು ಮಾಗಿ (ಕಾದಂಪೂ. ೫೮). [ ದಕ್ಷಿಣ + ಚರಣ ]

**ದಕ್ಷಿಣತಟ** (ನಾ). ಬಲಭಾಗದ ತೀರ, –ದಂಡೆ: ಆ ಮೂವರು . . . ಸೇರೆ ಸರಯೂನದಿಯ ದಕ್ಷಿಣತಟವನಲ್ಲಿ, ಸವಿಗೊರಳ ನೀಹದಿಂ ನೀಡಿದನು ಕುಶಿಕತನಯಂ ರಾಮಚಂದ್ರಂಗೆ, ಮಂಗಳಸ್ನಾತಂಗೆ, ಮಂತ್ರಸದ್ವಿದ್ಯೆಯಂ (ಶ್ರೀರಾಮಾ. ೩೦-೮೯). [ ದಕ್ಷಿಣ + ತಟ₃ ]

**ದಕ್ಷಿಣದೋರ್ದಂಡ** (ನಾ). ೧. ಬಲಭುಜ. ೨. (ಆಲಂ) ಹೆಚ್ಚು ಸಹಾಯಕನಾದವನು; ಬಲಗೈಯಂತಿರುವವನು: ಮುದಿಯಪ್ಪ ನಾಯಕೇಂದ್ರನು ರಾಜ್ಯವಾಳುತ್ತಾಯಿರಲು ಆತಂಗೆ ದಕ್ಷಿಣದೋರ್ದಂಡ ವಾದ ವೀರಮಾಹೇಶ್ವರಾರಾಧಕನಾದ ಶೀಲವಂತದಳವಾಯಿ . . . ಮತ ಕೆರೆ ತೋಟಯ × × × ಮಾಡಿಸಿ (ಎಕ. XVI, ಚಕ್ನಾ. ೧-೦೦: 1623).

[ ದಕ್ಷಿಣ + ದೋರ್ದಂಡ ]

**ದಕ್ಷಿಣಧ್ರುವ** (ನಾ). [ಭೂಗೋಳ] ಅಕ್ಷರೇಖೆಗಳು ಕೂಡುವ ಬಿಂದು; ಅಕ್ಷರೇಖೆಗಳು ಒಂದೆಡೆ ಸೇರುವ ದಕ್ಷಿಣದ ತುದಿ; ಭೂಮಿಯ ಅಕ್ಷದ ಕೆಳತುದಿ: ಭೂಮಿಯ ಅಕ್ಷವನ್ನು ಅಂದರೆ ದಕ್ಷಿಣೋತ್ತರ ಧ್ರುವರೇಖೆಯನ್ನು ವೃದ್ಧಿಸಿದರೆ ಉತ್ತರದಲ್ಲಿ ಈ ರೇಖೆಯು ಖಗೋಳ ವನ್ನು ಸಂಧಿಸುವ ಬಿಂದು ಖಗೋಳೀಯ ಉತ್ತರಧ್ರುವ, ದಕ್ಷಿಣದಲ್ಲಿ ಸಂಧಿಸುವ ಬಿಂದು ದಕ್ಷಿಣಧ್ರುವ (ನಕ್ಷತ್ರ. ೩೪): ಉತ್ತರಧ್ರುವದಿಂ ದಕ್ಷಿಣಧ್ರುವಕೂ ಚುಂಬಕ ಗಾಳಿಯು ಬೀಸುತಿದೆ (ನಾದಲೀ. ೫೦-೧); ದಕ್ಷಿಣದ ಕಡೆ ಇರುವ ಧ್ರುವವನ್ನು ದಕ್ಷಿಣಧ್ರುವವೆಂದೂ ಕರೆಯುತ್ತಾರೆ (ಭೌತವಿ. ೩೧೦). 'ಉತ್ತರಧ್ರುವ' ನೋಡಿ. [ ದಕ್ಷಿಣ + ಧ್ರುವ ]

**ದಕ್ಷಿಣನಯನ** (ನಾ). ಬಲಗಡೆಯ ಕಣ್ಣು; ಬಲಗಣ್ಣು: ಶ್ರೀಪಥಗಾಮಿನಿಯೆನಿಪ ಜಾಹ್ನವಿ ನೃಪನ ಚರಣದಲುದಿಸಿದಳು ಗಡ ತಪನ ದಕ್ಷಿಣನಯನವೆಂಬರು ಕಾಂಬೆವಾ ಋಜುಹ (ಕೌಶಿರಾ. ೨೭-೭): ಸತಿಯ ದಕ್ಷಿಣನಯನವೀ ಭೂಪತಿಯ ವಾಮಭುಜಾಕ್ಷಿಗಳು ದುರ್ಗತಿಯ ಸೂಚಿಸಿ ತೋಱುತಿರ್ದುವು ಧರ್ಮನಂದನನ (ಕುವ್ಯಾಸ. ೧೭-೫೮).

[ ದಕ್ಷಿಣ + ನಯನ ]

**ದಕ್ಷಿಣನಾಯಕ** (ನಾ). [ಕಾವ್ಯಮೀ] ಶೃಂಗಾರನಾಯಕರಲ್ಲಿ ಒಂದು ಬಗೆ; ಅನೇಕ ನಾಯಿಕೆಯರಲ್ಲಿ ಸಮಾನ ಅನುರಾಗವನ್ನು ತೋರಿಸುವವನು: ನೋಟದಿನೊರ್ವಳಂ ನಗೆಯಿನೊರ್ವಳನೊಳ್ನುಡಿಯಿಂದವೊರ್ವಳಂ ಬೇಟದಿನೊರ್ವಳಂ ಪಿಡಿಯುತ . . . ತೃಪ್ತಿವಡಿಸಿರ್ದನವಂ ಗುಣರತ್ನಭೂಷಣಂ (ಇವಂ ದಕ್ಷಿಣನಾಯಕಂ) (ರಸರ. ೩-೧೩೪). [ ದಕ್ಷಿಣ + ನಾಯಕ ]

**ದಕ್ಷಿಣಪಕ್ಷ** (ನಾ). ಬಲಪಕ್ಕ; ಬಲಗಡೆ: ಅಂತಶ್ವಗ್ರೀವಂ ನಿರಾಯುಧನುಂ ನಿರ್ವಿದ್ಯನುಮಾಗಿ ಕೆಲಸಂ ನೋಡಿ ತನ್ನ ದಕ್ಷಿಣಪಕ್ಷದೊಳಿರ್ದ ಚಕ್ರಮಂ ಕೊಂಡಿಡೆ (ಶಾಂತಿಪು. ೫-೬೨ ವ). [ ದಕ್ಷಿಣ + ಪಕ್ಷ ]

**ದಕ್ಷಿಣಪತಿ** (ನಾ). ತೆಂಕಲುದಿಕ್ಕಿನ ಒಡೆಯ; ಯಮ: ಗರ್ವಿಸುವ ದಕ್ಷಿಣಪತಿಯ ಮದವಂ ವಿಭಾಡಿಸುವ ಸರ್ವಮಂಗಳದಣುಗ ಬಾರಾ (ಬಸವು. ೨೪-೩೭). [ ದಕ್ಷಿಣ + ಪತಿ₃ ]

**ದಕ್ಷಿಣಬಾಹು** (ನಾ). ಬಲಭುಜ; ಬಲತೋಳು: ಬಾಹುಬಲಿ ತನ್ನ ದಕ್ಷಿಣಬಾಹುವ ಕೆಲದಲ್ಲಿ ನಿಂದ ಚಕ್ರಮನಾಗಳ್ ಸಾಹಸರಸಿಕಂ ಕಂಡು (ಆದಿಪು. ೧೪-೧೨೦). [ ದಕ್ಷಿಣ + ಬಾಹು₂ ]

**ದಕ್ಷಿಣಭುಜ** (ನಾ).=ದಕ್ಷಿಣಬಾಹು: ಎಂತಾನುಂ ನೆನೆದಂ ಬಹುಚಿಂತಂ ಚಕ್ರೇಶನೆಮ್ಮ ದಿಗ್ವಿಜಯಮುಮಾದುಂತೆಡೆಬಿದೆಯ್ದೆ ನಡೆಮುದೆ ಸಂತಮೆ ದಕ್ಷಿಣಭುಜಕ್ಕೆ ಭೂವಲ್ಲಭನಾ (ಆದಿಪು. ೧೪-೪೮): ದಕ್ಷಿಣಭುಜೋತ್ಪನ್ನನುದ್ದಾಮ ದಾರುಣ ಪ್ರತಾಪಕೋಪ ಪಾವಕ ಕಬಳಿತಾರಾತಿಬಳನೆಂಬೊಂ (ಸುಕುಮಾ. ೧-೭೯ ವ). [ ದಕ್ಷಿಣ + ಭುಜ ]

**ದಕ್ಷಿಣಮಾರ್ಗ** (ನಾ). ೧. ದಕ್ಷಿಣದೇಶದ ವಿಧಾನ,-ಪದ್ಧತಿ,-ಸಂಪ್ರದಾಯ; ಸಾತ್ವಿಕವಾದ ಕರ್ಮಮಾರ್ಗ: ದಕ್ಷಿಣಮಾರ್ಗವು ದೇವತೆಗಳ ಪೂಜೆ, ಜಪ ಇವುಗಳನ್ನು ಅಸಂಕೀರ್ಣವಾಗಿ ಆಚರಿಸುವುದಾಗಿದೆ (ಶಾರದ. ೨೨೪). ೨. [ಕಾವ್ಯಮೀ] ಕನ್ನಡದೇಶದ ದಕ್ಷಿಣಭಾಗದಲ್ಲಿ ಪ್ರಚಾರವಾಗಿದ್ದ ಶೈಲಿ; ವಿಶೇಷವಾಗಿ ಸ್ವಭಾವೋಕ್ತಿಯಿಂದ ಕೂಡಿದ ಶೈಲಿ; ಒಂದು ಬಗೆಯ ಭಾಷಾಪ್ರಯೋಗ ಕ್ರಮ: ಸತತಂ ದಕ್ಷಿಣಮಾರ್ಗೋದಿತೋಕ್ತಿ ಭೇದಕಗುಣಂ ಸ್ವಭಾವಾಖ್ಯಾನಂ . . . ಸಮ ಮಧುರ ನಿಬಿಡ ಕಾಂತ ಸುಕುಮಾರ ಸುಸಮಾಹಿತ ಪ್ರಸನ್ನೋದಾರ ಪ್ರಮಿತ ಗ್ರಾಮ್ಯೋಜಸ್ವಿ ಕ್ರಮದಿಂ ದಶಭೇದಮಲ್ಲಿ ದಕ್ಷಿಣಮಾರ್ಗಂ (ಕವಿರಾ. ೨-೫೩). 'ಉತ್ತರಮಾರ್ಗ' ಪರಾ.

[ ದಕ್ಷಿಣ + ಮಾರ್ಗ ]

**ದಕ್ಷಿಣಮುಷ್ಟಿ** (ನಾ). ಬಲಗೈಯ ಹಿಡಿ,-ಮುಷ್ಟಿ: ತನ್ನ ಮುಂತೆಗೆದ ದಕ್ಷಿಣಮುಷ್ಟಿಯ [ಪಾಠಾಂ. ಮುಷ್ಟಿಯ ದಕ್ಷಿಣ] ಕರ್ಣಮೂಲದೊಳ್ ಸೊಗಯಿಸೆ ಪಾಳಿಯಂ ನೆಱಪದಾಳ್ದನ ಕಜ್ಜಮನೊಕ್ಕು ಸತ್ರರಂ ನಗುವ ಪೊಲ್ದಿರ್ದನಂಗಪತಿ (ಗದಾಯು. ೫-೧೦). [ ದಕ್ಷಿಣ + ಮುಷ್ಟಿ₂ ]

**ದಕ್ಷಿಣಮೇರು** (ನಾ). ಮೇರುಪರ್ವತದ ದಕ್ಷಿಣಭಾಗ. 'ಉತ್ತರಮೇರು' ಪರಾ. [ ದಕ್ಷಿಣ + ಮೇರು ]

**ದಕ್ಷಿಣವರ್ತನ** (ನಾ). ಬಲಭಾಗಕ್ಕೆ ತಿರುಗುವಿಕೆ: ದಕ್ಷಿಣವರ್ತನದಿಂದ ಪಜ್ಜಳಿಸುತಿರ್ದುದು ವಹ್ನಿಸಮುಸ್ಸಂ (ಚಂದ್ರಪು. ೩-೯೪). 'ದಕ್ಷಿಣಾವರ್ತ' ಪರಾ. [ ದಕ್ಷಿಣ + ವರ್ತನ ]

**ದಕ್ಷಿಣಶೀತವಲಯ** (ನಾ). [ಭೂಗೋಳ] ದಕ್ಷಿಣಧ್ರುವದ ಬಳಿಯಿರುವ ಅತ್ಯಂತ ಶೀತಲವಾದ ಪ್ರದೇಶ: ದಕ್ಷಿಣಶೀತ[illegible] ಧ್ರುವಕ್ಕೂ ಮತ್ತು ಅದಕ್ಕೆ ಉತ್ತರದಲ್ಲಿ ಸುಮ[illegible] ಅಕ್ಷಾಂಶಭಾಗಗಳ ದೂರದಲ್ಲಿರುವ ದಕ್ಷಿಣಧ್ರುವವೃತ್ತಕ್ಕೂ [illegible] ದೇಶ (ಭೂಗೋಳ. ೯). [ ದಕ್ಷಿಣ + ಶೀತವಲಯ ]

**ದಕ್ಷಿಣಶ್ರೇಣಿ** (ನಾ). ದಕ್ಷಿಣಭಾಗದ (ರಾಜ್ಯಗಳ) ಪಂಕ್ತಿ,-ಸಾಲು: ಕೇಣಮನೊಕ್ಕು ತಕ್ಕನಱದುಕ್ಕಿಪಮಂ ಪೆಱಗಿಕ್ಕಿ ದಕ್ಷಿಣಶ್ರೇಣಿಯ ರಾಜ್ಯಲಕ್ಷ್ಮಿ ದಮಿತಾರಿಯ ಪೋರ್ಕುಳಿಗಿರ್ದೊಡುತ್ತರಶ್ರೇಣಿಯ ರಾಜ್ಯಲಕ್ಷ್ಮಿ ಪುರುಡಾಕೆಯೊಳಾವಗಮಾಗೆ ಲಂಚಮಂ ಮಾಣದೆ ಕೊಟ್ಟಪೋಲ್ ಸೊಗಯಿಸಿರ್ದುವು ಕಪ್ಪದ ಪೊನ್ನರಾಶಿಗಳ್ (ಶಾಂತಿಪು. ೩-೧೭). 'ಉತ್ತರಶ್ರೇಣಿ' ಪರಾ. [ ದಕ್ಷಿಣ + ಶ್ರೇಣಿ ]

**ದಕ್ಷಿಣಸಮಶೀತೋಷ್ಣವಲಯ** (ನಾ). [ಭೂಗೋಳ] "ಮಕರ ಸಂಕ್ರಾಂತಿವೃತ್ತಕ್ಕೂ ದಕ್ಷಿಣ ಮೇರುವೃತ್ತಕ್ಕೂ ನಡುವೆ ಇರುವ ಭಾಗವು" (ಭೂವಿವ. ೦೯): ದಕ್ಷಿಣಸಮಶೀತೋಷ್ಣವಲಯವು ಮಕರ ಸಂಕ್ರಾಂತಿವೃತ್ತಕ್ಕೂ ದಕ್ಷಿಣಧ್ರುವವೃತ್ತಕ್ಕೂ ಮಧ್ಯದಲ್ಲಿರುವ ದೇಶವು (ಭೂಗೋಳ. ೦೦). [ ದಕ್ಷಿಣ + ಸಮಶೀತೋಷ್ಣವಲಯ ]

**ದಕ್ಷಿಣಸಾಗರ** (ನಾ). [ಭೂಗೋಳ] ಭೂಮಿಯ ದಕ್ಷಿಣ ಪ್ರದೇಶದಲ್ಲಿರುವ ಸಮುದ್ರ: (Antarctic Ocean. ಪಾರಿಭಾ. ೩). 'ಉತ್ತರಸಾಗರ' ಪರಾ. [ ದಕ್ಷಿಣ + ಸಾಗರ₃ ]

**ದಕ್ಷಿಣಸ್ಥ** (ನಾ). ೧. ಬಲಗಡೆಯಲ್ಲಿರುವವನು. ೨. ರಥವನ್ನು ನಡೆಸುವವನು; ಸಾರಥಿ: "ದಕ್ಷಿಣಸ್ಥಂ ನಿಯಂತ್ರಿಯಾಕ್ಷತ್ತ್ರ ಸೂತನೆನೆ ಸಾರಥಿಗೆ ನಾಮಮಕ್ಕುಂ" (ಮಂಗರಾ. ೮೫-೨೫). [ ಸಂ. ]

**ದಕ್ಷಿಣಹಸ್ತ** (ನಾ). = ದಕ್ಷಿಣಕರ: ಅಂತಕಾರಾದಿ ಹಕರಾಂತ . . . ಸಂಯೋಗಾಕ್ಷರಗಳುಮಂ ಬ್ರಾಹ್ಮಿಗೆ ದಕ್ಷಿಣಹಸ್ತದೊಳುಪದೇಶಂಗೆಯ್ದು (ಆದಿಪು. ೮-೫೯ ವ): ಆ ಬಾಲಿಕೆ ಗದ್ಗದಕಂಠೆ ವಾಮಕರ ಪಲ್ಲವಾಂಗುಳಿನಖಾಕ್ಷಿಪ್ತಾಶ್ರುಸ್ರುವೆ ದಕ್ಷಿಣಹಸ್ತಾಚ್ಛಾದ್ಯಮಾನ ಸ್ತನಾಂಶುಕೆಯಾಗಿ ಬಿನ್ನವಿಕುಂ (ಶಾಂತಿಪು. ೬-೬೨ ವ). [ ದಕ್ಷಿಣ + ಹಸ್ತ ]

**ದಕ್ಷಿಣಾಂಘ್ರಿ** (ನಾ). ಬಲಗಾಲು; ದಕ್ಷಿಣ ಚರಣ: ಮಿನಾಬ್ಜ ಶಂಖಚಕ್ರವಿತಾನಾಂಕಿತ ದಕ್ಷಿಣಾಂಘ್ರಿ ತಲಪಲ್ಲವಮುತ್ತ್ರಾಸಂ ರತ್ನಾಕರದಪೊಲೇನಮರ್ದುದೊ (ಶಾಂತಿಪು. ೩-೪೮). [ ದಕ್ಷಿಣ + ಅಂಘ್ರಿ ]

**ದಕ್ಷಿಣಾಂಸ** (ನಾ). ಬಲತೋಳು; ಬಲಭುಜ: ದಮಿತಾರಿ ಚಕ್ರಕ್ಕೆ ಕೆಯ್ಯಂ ನೀಡೆ ಅದು . . . ದಕ್ಷಿಣಾಂಸದ ಮೇಗಿರ್ದುದು ನೀಳಶೈಲತಟದೊಳ್ ತಿಗ್ಮಾಂಶುಮಿರ್ದಂದದಿಂ (ಶಾಂತಿಪು. ೪-೫೩). [ ದಕ್ಷಿಣ + ಅಂಸ ]

**ದಕ್ಷಿಣಾಕ್ಷಿ** (ನಾ). ಬಲಗಣ್ಣು; ದಕ್ಷಿಣ ನಯನ: ದಿನಪನುದಯಕ್ಕೆ ನಿಲೆ . . . ಪನ್ನಿರದನೆಯೆಡೆಯೊಳ್ ದಕ್ಷಿಣಾಕ್ಷಿರಹಿತಂ ಪತಿತಂ (ಜಾತಕ. ೧೮-೪): ನಿಜ ದಕ್ಷಿಣಾಕ್ಷಿ ದಕ್ಷಿಣಭುಜಪರಿಘಸ್ಪಂದವೊಗೆಯೆ . . . ಪವನಜವಾನ್ವಿತ ರಥದಿನೆಯ್ದಿದಂ ಗೋಕುಲಮಂ (ಜಗವಿ. ೫-೭೩). [ ದಕ್ಷಿಣ + ಅಕ್ಷಿ ]

**ದಕ್ಷಿಣಾಕ್ಷಿಸ್ಪಂದ** (ನಾ). ಬಲಗಣ್ಣು ಹಾರುವಿಕೆ,-ಅದಿರುವಿಕೆ; ☞ ಗಂಡಸರಿಗೆ ಶುಭ, ಹೆಂಗಸರಿಗೆ ಅಶುಭವೆಂಬ ನಂಬಿಕೆ ಇದೆ: ಅರಿಮಕುಟರತ್ನಮಂ ನಿಜಚರಣಕ್ಕರ್ಘ್ಯಪ್ರದೀಪವಮಾಗಿಪ್ಪುದನಾ ಭರತೇಶ್ವರಂಗೆ ಕಾಣ್ಬಂತಿರೆ ಸೂಚಿಸಿದತ್ತು ದಕ್ಷಿಣಾಕ್ಷಿಸ್ಪಂದಂ (ಆದಿಪು. ೧೧-೦೨): ಇಂದುವದನೆಗೆ ದಕ್ಷಿಣಾಕ್ಷಿಸ್ಪಂದವಾಯಿತು (ಕುವ್ಯಾಸ. ೧೩-೪೨).

[ ದಕ್ಷಿಣಾಕ್ಷಿ + ಸ್ಪಂದ ]

**ದಕ್ಷಿಣಾಗತಿ** (ನಾ). ಸೂರ್ಯನು ಸಮಭಾಜಕ ವೃತ್ತದಿಂದ [illegible] ಸರಿದು ತನ್ನ ಭ್ರಮಣದಲ್ಲಿ ಮಾರ್ಗವನ್ನು ಬದಲಿಸಿಕೊಳ್ಳು[illegible] ದಕ್ಷಿಣಾಗತಿ, ದಕ್ಷಿಣಾಯಣವೆಂಬುದೆ (ಸಿದ್ಧಾಂತಿ. ೩೭). [ ಸಂ. ]

**ದಕ್ಷಿಣಾಗ್ನಿ** (ನಾ). ೧. ಅಗ್ನಿತ್ರಯದಲ್ಲಿ ಒಂದು; ದಕ್ಷಿಣ ದಿಕ್ಕಿನಲ್ಲಿ ಇಟ್ಟಿರುವ ಯಾಗದ ಬೆಂಕಿ: "ದಕ್ಷಿಣಾಗ್ನಿಃ, ಗಾರ್ಹಪತ್ಯಃ, ಆಹವನೀಯಃ_ಈ ೩ನ್ನು ತ್ರಯೋಗ್ನಯಃ, ಪ್ರತ್ಯೇಕವಾಗಿ ತಮ್ಮ ತಮ್ಮ ಹೆಸರುಗಳಿಂದ ಪ್ರಸಿದ್ಧವಾದ ಮೂರು ಶ್ರೌತಾಗ್ನಿಗಳು" (ಸಿದ್ಧಾಂತಿ. ೨೧೮). ೨. = ದಕ್ಷಿಣ ೧೦: ತೀರ್ಥಕರಗಣಧರಾನಗಾರ ಕೇವಳಿಗಳ್ ಪರಿನಿರ್ವಾಣ ಕ್ಷೇತ್ರದೊಳ್ ಶರೀರಸಂಸ್ಕಾರಾದಿ ಗಾರ್ಹಪತ್ಯ ದಕ್ಷಿಣಾಗ್ನ್ಯಾಹವನೀಯ ಮೆಂಬ ಪೆಸರಂ ಪಡೆದು (ಆದಿಪು. ೧೫-೧೭ ವ). [ದಕ್ಷಿಣ + ಅಗ್ನಿ]

**ದಕ್ಷಿಣಾದಿ** (ನಾ). ೧. ದಕ್ಷಿಣದೇಶಕ್ಕೆ ಸಂಬಂಧಿಸಿದುದು. ೨. [ಸಂಗೀತ] ದಕ್ಷಿಣದಲ್ಲಿ ಪ್ರಚುರವಾಗಿರುವ ಸಂಗೀತ ಪದ್ಧತಿ; ಕರ್ನಾಟಕ ಸಂಗೀತ: ಯಕ್ಷಗಾನದ ರೂಢಿಯ ಹಲವು ರಾಗಗಳಿಗೂ, ದಕ್ಷಿಣಾದಿಯ ಅವೇ ರಾಗಗಳಿಗೂ ಸ್ವರಪ್ರಸ್ತಾರದಲ್ಲಿ ವ್ಯತ್ಯಾಸವಿಲ್ಲ (ಯಕ್ಷಬ. ೬೫). [ದಕ್ಷಿಣ + ಆದಿ೩]

**ದಕ್ಷಿಣಾನಿಲ** (ನಾ). ದಕ್ಷಿಣ ದಿಕ್ಕಿನ ಗಾಳಿ; ತೆಂಗಾಳಿ: ಪೂಗಣಿಯನಟ್ಟಿದ ದಕ್ಷಿಣಾನಿಲಂ ಮುಂತೆವಂದು ಸೊಗದ ಸುಗ್ಗಿವೆಸರೋಲಗಸಾಲೆಯ ಬಾಗಿಲ್ವಾಡದೊಳ್ ನಿಂದಿರ್ಪ ಬಸಂತನಂ ಕಂಡೆಬಗಿ (ರಾಮಾಶ್ವ ೫೭-೧). [ದಕ್ಷಿಣ + ಅನಿಲ]

**ದಕ್ಷಿಣಾಪಥ** (ನಾ). ೧. ಭರತಖಂಡದ ದಕ್ಷಿಣಭಾಗ; ವಿಂಧ್ಯಪರ್ವತದಿಂದ ದಕ್ಷಿಣಕ್ಕಿರುವ ದೇಶ: ದಕ್ಷಿಣಾಪಥದಿನೊರ್ವಳ್ಕನ್ನೆ ಚಂಡಾಲೆ ದರ್ಶನತಾತ್ಪರ್ಯದೆ ರಾಜಕೀರಸಹಿತಂ ಬಂದಿರ್ದಪಳ್ಬಾಗಿಲೊಳ್ (ಕಾದಂಪೂ. ೨೮); ಸಂಸ್ಕೃತಿಯ ದೃಷ್ಟಿಯಿಂದ ಆರ್ಯಾವರ್ತ, ದಕ್ಷಿಣಾಪಥ ಎಂಬ ಪ್ರಭೇದ ಮಾಯವಾಯಿತು (ಜುಕ್ಸಾರ. ೧೦೮ ಟೀಕೆ). ೨. = ದಕ್ಷಿಣಮಾರ್ಗ: ವಿಲಸಿತ ಸಸ್ಯಸಂಪದಭಿರಾಮಗುಣೋದಯೆ ತಾಳ್ದಿದಳ್ದರಾಲಲನೆ ವಿಶಾಲಲಕ್ಷ್ಮಿಯನನಾರತಮೆಂಬುದು ದಕ್ಷಿಣಾಪಥಂ (ಕವಿರಾ. ೨-೨೦೮). 'ಉತ್ತರಾಪಥ' ಪರಾ. [ಸಂ.]

**ದಕ್ಷಿಣಾಭಿಮುಖ** (ನಾ). ತೆಂಕಲು ದಿಕ್ಕಿಗೆ ಮುಖಮಾಡಿಕೊಂಡಿರುವವನು; ದಕ್ಷಿಣಕ್ಕೆ ಹೊರಟಿರುವವನು: ದಕ್ಷಿಣಾಭಿಮುಖನಾಗಿ ನಿತ್ಯ ಪ್ರಯಾಣಂಗಳಿಂ ಬಂದು (ಆದಿಪು. ೧೩-೭೭ ವ). [ದಕ್ಷಿಣ + ಅಭಿಮುಖ]

**ದಕ್ಷಿಣಾಮೂರ್ತಿ** (ನಾ). ೧. ಶಿವನ ಇಪ್ಪತ್ತೈದಂ ಲೀಲಾಮೂರ್ತಿಗಳಲ್ಲಿ ಒಂದು; ಜ್ಞಾನಮುದ್ರಾಂಗುಳಿಯಿಂ ಶಿಷ್ಯಪ್ರಬೋಧಪ್ರದನೆಸೆದನವಂ ದಕ್ಷಿಣಾಮೂರ್ತಿದೇವಂ (ರಾಜಶೇ. ೩-೦೦೯): ಅನೇಕವಿಧವಾದ ಮೂರ್ತಿಗಳನ್ನು ಶಿವದೇವಾಲಯಗಳಲ್ಲಿ ಕಾಣಬಹುದು. 'ಅಪೂಅರಿ' ನ ದಕ್ಷಿಣಾಮೂರ್ತಿ ... ಇವುಗಳಲ್ಲಿ ಪ್ರಸಿದ್ಧ (ಭಾರದ. ೫೦೩). ೨. ಮಹಾಮಂತ್ರಗಳಲ್ಲಿ ಒಂದು: ಗಾಯತ್ರಿ ಮೃತ್ಯುಂಜಯ ದಕ್ಷಿಣಾಮೂರ್ತಿ ನೀಲಕಂಠ ಶರಭ ವೀರಭದ್ರ ವಿಘ್ನೇಶ್ವರ ವಿಶಾಖ ವಿದ್ಯೇಶ್ವರ ಬ್ರಹ್ಮ ವಿಷ್ಣು ಸೂರ್ಯ ಭೈರವ ಪಾರ್ವತಿ ಕಾಮಧೇನು ಕಲ್ಪವೃಕ್ಷ ಮಾಯಾ ಸಾವಿತ್ರೀ ಸರಸ್ವತೀ ಅಮೃತೇಶ್ವರೀ ಸಪ್ತಮಾತೃಕಾ ದುರ್ಗಾ ಕಾಳೀ ಬಗಳಾಬಾಲಾ ಲಲಿತಾ ಶೂಲಿನ್ಯಾದಿ ಮಹಾಮಂತ್ರಂಗಳಂ (ವಿವೇಕ. ೮೧). [ಸಂ.]

**ದಕ್ಷಿಣಾಯಣ** (ನಾ). = ದಕ್ಷಿಣಾಗತಿ: ಸೂರ್ಯನಲ್ಲಿ ರಶ್ಮೀರೂಪವಾಗಿ ದಕ್ಷಿಣಾಯಣದಲ್ಲಿ ೩೬೦೦೦ ಉತ್ತರಾಯಣದಲ್ಲಿ ೩೬೦೦೦ ರಶ್ಮಿಗಳು ಆಗುವವು (ಚಸಾರ. ೬-೨ ತಾತ್ಪರ್ಯ); ಸೂರ್ಯನು ... ದಕ್ಷಿಣದಲ್ಲಿರುವಾಗ ದಕ್ಷಿಣಾಯಣ, ಆಗ ನಮಗೆ ಚಳಿಗಾಲ (ಕಿಂಕಥ. ೨). 'ಉತ್ತರಾಯಣ' ಪರಾ. [<ಸಂ. ದಕ್ಷಿಣಾಯನ]

**ದಕ್ಷಿಣಾಯನ** (ನಾ). ೧. = ದಕ್ಷಿಣಾಗತಿ: ಅಂಬುದಸಮಯಂ ಮೊದಲಾಗಜು ಋತುಗಳ್ ಮೂಱು ದಕ್ಷಿಣಾಯನಕೆ ಸಂತತಂ ವರ್ತಿಸುಗುಂ (ಜಾತಕ. ೨೮-೮). ೨. = ದಕ್ಷಿಣಮಾರ್ಗ ೨: ತ್ರಿದಶಗಣೇಶಮೌಳಿಮಣಿಕೀಲನಿಷೇವಿಗಳೊಳ್ಳುನೀಂದ್ರನಾ ಪದಯುಗಳಂಗಳೊಳ್ಳುದದೆ ಬಾಗುವೆನೆಂಬುದು ದಕ್ಷಿಣಾಯನಂ (ಕವಿರಾ. ೨-೧೦೭) [ಸಂ.]

**ದಕ್ಷಿಣಾಯನಪುಣ್ಯಕಾಲ** (ನಾ). ಸೂರ್ಯನು ವಿಷುವದ್ರೇಖೆಯಿಂದ ದಕ್ಷಿಣಕ್ಕೆ ಸಂಚರಿಸಲು ಪ್ರಾರಂಭಮಾಡುವ ಕಾಲ; P ಜುಲೈ ತಿಂಗಳ ಮಧ್ಯದಲ್ಲಿ ಬರುವ ಸಂಕ್ರಮಣ ಕಾಲ. ಸೂರ್ಯನು ಕರ್ಕಾಟಕ ರಾಶಿಯನ್ನು ಪ್ರವೇಶಿಸುವ ಈ ಕಾಲವು ಸ್ನಾನ, ಜಪ, ದಾನ, ತರ್ಪಣಗಳಿಗೆ ಪ್ರಶಸ್ತವೆಂದು ನಂಬಲಾಗಿದೆ: ಸೂರ್ಯನು ಮಿಥುನ ನಕ್ಷತ್ರದಲ್ಲಿರುತ್ತಾನೆಂದು . . . ಈ ಕಾಲವನ್ನು ದಕ್ಷಿಣಾಯನಪುಣ್ಯಕಾಲವೆಂದು ಕರೆಯುತ್ತಾರೆ (ನಕ್ಷತ್ರ. ೨೮). [ದಕ್ಷಿಣಾಯನ + ಪುಣ್ಯಕಾಲ]

**ದಕ್ಷಿಣಾರ್ಥ** (ನಾ). ೧. ದಕ್ಷಿಣೆಯ ಅಪೇಕ್ಷೆ; ದಾನವನ್ನು ಪಡೆಯುವ ಉದ್ದೇಶ: ನೆರೆವುತಿದೆ ನಾನಾ ದಿಗಂತದ ಧರಣಿಪರು ಕನ್ಯಾರ್ಥಿಗಳಂ ಭೂಸಾರಸಮೂಹದ ಸಾಲು ನೆರೆದುದು ದಕ್ಷಿಣಾರ್ಥದಲಿ ಎರಡಜೊಳು ನಿಮಗೇನು ಕನ್ಯಾವರಣವೋ ವೇಣ್ ದಕ್ಷಿಣಾರ್ಥವೊ ಬರವು ನಿಮಗುಂಟೇ ಯೆನುತ ದ್ವಿಜನಿವರ ಬೆಸಗೊಂಡ (ಕುಮ್ಯಾಭ. ೧೧-೦೮). ೨. ದಕ್ಷಿಣೆಯ ದ್ರವ್ಯ: ಎನಿತ ಕಿಂಚಿತ್ ಪ್ರಹಸಿತಾನನವನಜನಾಗುತ ದಕ್ಷಿಣಾರ್ಥಕ್ಕನುಗೊಳಲು (ಬಸಪು. ೮೩-೬೩). [ಸಂ.]

**ದಕ್ಷಿಣಾರ್ಧ** (ನಾ). ದಕ್ಷಿಣಭಾಗದ ಅರ್ಧ; ಬಲಭಾಗದ ಅರ್ಧ: ಇದರ ಅರ್ಧ ದಕ್ಷಿಣಾರ್ಧದ ನಕ್ಷತ್ರಗಳು ದಿನದಲ್ಲಿ ೧೨ ಘಂಟೆಗಳಿಗಿಂತ ಕಡಿಮೆ ಕಾಲ ನಮ್ಮ ದಿಗಂತದ ಮೇಲಿದ್ದು ಹೆಚ್ಚುಕಾಲ ಮುಳುಗಿರುತ್ತವೆ (ನಕ್ಷತ್ರ. ೩೫). [ದಕ್ಷಿಣ + ಅರ್ಧ]

**ದಕ್ಷಿಣಾರ್ಹ** (ಗು). ೧. ದಕ್ಷಿಣೆಯನ್ನು ಪಡೆಯಲು ಅರ್ಹತೆಯುಳ್ಳ. (ನಾ). ೨. ದಕ್ಷಿಣೆಗೆ ಯೋಗ್ಯನಾದವನು: "ದಕ್ಷಿಣೀಯಃ, ದಕ್ಷಿಣಾರ್ಹಃ, ದಾಕ್ಷಿಣ್ಯಃ – ೩ ದಕ್ಷಿಣೆಗೆ ಯೋಗ್ಯನಾದವನು" (ಸಿದ್ಧಾಂತಿ. ೨೭೯). [ದಕ್ಷಿಣ + ಅರ್ಹ]

**ದಕ್ಷಿಣಾವರ್ತ** (ಗು). ೧. ಬಲಭಾಗಕ್ಕೆ ತಿರುಗುವ: ಪ್ರದಕ್ಷಿಣಂ ಬಂದು ದಕ್ಷಿಣಾವರ್ತಶಿಖಾಸ್ಪದನಂ ಹೋಮಾನಳನಂ ಮದುವಕ್ಕಳ್ ವಿಸುಪಲಾಜೆಯಿಂ ಪೂಜಿಸಿದರ್ (ಜಗವಿ. ೧೦-೧೩೩). (ನಾ). ೨. ಬಲಭಾಗಕ್ಕೆ ತಿರುಗುವುದು: ಕರ್ಮಭೂತಳೋಪಸರ್ಗ ವಿಧ್ವಂಸನ ನಿಮಿತ್ತವಾಗಿ ನೀರಾಜನಂಗೆಯ್ವಂತೆ ತದ್ದಹನಳಂ ದಕ್ಷಿಣಾವರ್ತವಾಗಿ ಪಜ್ವಳಿಸೆ (ಆದಿಪು. ೬-೩೭ ವ); ದಕ್ಷಿಣಾವರ್ತವಾಗೆಸೆದುದು ಶಿಖಿ ಪಾಂಚಜನ್ಯದಂತೆ (ಮಲ್ಲಿಪು. ೧೨-೩). [ದಕ್ಷಿಣ + ಆವರ್ತ]

**ದಕ್ಷಿಣಾವರ್ತನ** (ನಾ). ದಕ್ಷಿಣಕ್ಕೆ ತಿರುಗುವುದು, – ಹೋಗುವುದು: "(ನಾವೆ) ದಕ್ಷಿಣಕ್ಕೆ ಪ್ರಯಾಣಮಾಡುವಲ್ಲಿ ಆದ ಅಕ್ಷಾಂಶವ್ಯತ್ಯಾಸ: ದಕ್ಷಿಣಾವರ್ತನ" (South.ng. ೫೦೪೧). [ದಕ್ಷಿಣ + ಆವರ್ತನ]

**ದಕ್ಷಿಣಾವರ್ತನಾಭಿ** (ನಾ). ಬಲಭಾಗಕ್ಕೆ ತಿರುಗಿರುವ ನಾಭಿ; ಬಲಸುಳಿ; ಹೊಕ್ಕುಳು: ಸರದೊಡನೆ ಗಂಭೀರಮಾದ ದಕ್ಷಿಣಾವರ್ತನಾಭಿಯುಂ ಅಧರಪಲ್ಲವದೊಡನೆ ಅಶೋಕ ಪಲ್ಲವಾನುರಕ್ತಂಗಳಾದ ಪಾಣಿಪಾದತಳಂಗಳುಂ ಲಲಾಟ ಪಟ್ಟದೊಡನೆ ಲಲಿತೋನ್ನತಂಗಳಾದ ಪೊಜಲಡಿಗಳುಂ . . . ಆತ್ಮೀಯ ಯೌವನಪ್ರಾದುರ್ಭಾವಮಂ ಪ್ರಕಟಂಮಾಡೆ (ಆದಿಪು. ೩-೯ ವ). [ದಕ್ಷಿಣಾವರ್ತ + ನಾಭಿ]

**ದಕ್ಷಿಣಾವೃತ್ತ[ತ್ತಿ]** (ನಾ). [ಸಂಗೀತ] ಗೀತ ಹಾಗೂ ವಾದ್ಯಗುಣಗಳು ಪ್ರಧಾನವಾಗಿರುವಿಕೆ: ಯತಿಯೊಳ್ ಗೋಪುಚ್ಛ ತನ್ನೊಳ್ ನೆಲಸಿನೆಗಟ್ವಿನಂ ಮಾರ್ಗದೊಳ್ ಚಿತ್ರಕೀಯಂ ಕೃತಕರೂಬಾಡುಂಬರಂ ರಂಜಿಸುವಿನ ಮೆಸೆಗುಂ ದಕ್ಷಿಣಾವೃತ್ತ[ತ್ತಿ]ವೃತ ತ್ರಿತಯಾಂತರ್ವರ್ತಿ ತಾನೆಂಬಿನಮನುಗತ ತತ್ತ್ವೌಘದೊಳ್ ತತ್ತ್ವದಿಂದನ್ವಿತಮಂ ವಿಸ್ತಾರಮತ್ಯ ಪ್ರಕಟಿತಮನದಿಂ ಮೆಚ್ಚಿದಂ ದೇವರಾಜಂ (ಅಜಿಪು. ೫-೧೨). [ಸಂ.]

**ದಕ್ಷಿಣಾಶಾಪತಿ** (ನಾ). ದಕ್ಷಿಣ ದಿಕ್ಪಾಲಕ; ಯಮ: "ಶಮನಃ . . . ದಕ್ಷಿಣಾಶಾಪತಿಃ, ಶ್ರಾದ್ಧದೇವಃ,–ಈ ೧೬ ಜವನ ಪೆಸರ್" (ಹಲಾಯು. ೧೩–೭೨). [ ಸಂ. ]

**ದಕ್ಷಿಣಾಶೆ** (ನಾ). ತೆಂಕಲು; ದಕ್ಷಿಣದಿಕ್ಕು: ದಕ್ಷಿಣಾಶೆಯು ನಱುಸುಯ್ಯ ಗಾಳಿಯನೆ ಪೋಲ್ವುದು ಗಂಧವಹಂ ವಸಂತದೊಳ್ (ಶಾಂತಿಪು. ೭–೦೨೬); ಮೇರುವಿನ ದಕ್ಷಿಣಾಶೆಯೊಳು . . . ಲಕ್ಷ್ಮಿಯ ರಾಜಧಾನಿಯೆನಲೊಪ್ಪು ವುದು ಬಾರುತರ ಲಾಳದೇಶಂ (ಹರಿಶ. ೧–೩೧). [ ದಕ್ಷಿಣ + ಆಶೆ ]

**ದಕ್ಷಿಣಾಸ್ಥ** (ನಾ). = ದಕ್ಷಿಣಸ್ಥ ೨: ನಿಯಂತಾ, ಪ್ರಾಜಿತಾ, ಕ್ಷತ್ತಾ, ದಕ್ಷಿಣಾಸ್ಥಃ . . . ಸೂತಃ—ಈ ೭ ಸಾರಥಿ" (ಹಲಾಯು. ೭೩–೨೧೫). [ ಸಂ. ]

**ದಕ್ಷಿಣೆ** (ನಾ). ೧. ಪಿತೃಕಾರ್ಯ, ದೇವತಾಪೂಜೆ, ಯಾಗ, ವ್ರತ ಮುಂತಾದ ಸಂದರ್ಭಗಳಲ್ಲಿ ಬ್ರಾಹ್ಮಣರು, ಗುರುಹಿರಿಯರು ಮುಂತಾದವರಿಗೆ ನೀಡುವ ಕಾಣಿಕೆ,–ಸಂಭಾವನೆ: ಆವ ಲಕ್ಷಣದ ಹಯಮುಮದಕೆ ಋತ್ವಿಜರೆನಿಬರೆನಿಸು ದಕ್ಷಿಣೆಗಳದರಂದಮಂ ವಿಸ್ತರಿಸ ವೇಳ್ಪುದು (ಜೈಮಿಭಾ. ೨–೨೫); ತೃಪ್ತಿಯೆ ತಣಿದು ತೇಗಿದುದೆನಲ್ಕೆ ನಲಿದುಂದು ಜನಂ ಭಾರಕಾ ಭೋಜನಕೆ ಮೇಣ್ ದಾನ ದಕ್ಷಿಣೆಗೆ (ಶ್ರೀರಾಮಾ. ೧೧–೨೮೪). 'ಗುರುದಕ್ಷಿಣೆ' ಪರಾ. ೨. ಹಣದ ದಾನ,–ಕೊಡುಗೆ: "ಯಾಗವ್ರಯಂ ದಾನಸಮುತ್ಸರ್ಗಮಪವರ್ಜನಂ ದಕ್ಷಿಣೆಯುದ ನಿಕ್ಕ್ಯಂ" (ಮಂಗರಾ. ೭೭–೧೪); ಬಂದ ದಕ್ಷಿಣೆ ಮೃಷ್ಟಭೋಜನದಿಂದ ತುಷ್ಟರು ನಾವು (ಕುಮಾ.ಆ. ೧೫–೩); ಮಾಡಿದನು ಮನದಣಿಯೆ ದಕ್ಷಿಣೆಗೂಡಿ ಕನ್ಯಾಧೇನು ದಾನವನು (ತೊರರಾ. ೨–೨–೨೦); ಮುತ್ತೈದ ಯರಿಗೆ ಅರಿಶಿಣ ಕುಂಕುಮ ಫಲಪುಷ್ಪ ತಾಂಬೂಲಗಳನ್ನೂ ದಕ್ಷಿಣೆಯನ್ನೂ ಇತ್ತು ಸತ್ಕರಿಸಿದನು (ಶ್ರೀರಾಯ. ೬) ಭಕ್ಷ್ಯವಿಲ್ಲದಿದ್ದರೂ ದಕ್ಷಿಣೆ ಸಿಕ್ಕಿದರೆ ಸಾಕು (ಗಾದೆ). [ ಸಂ. ದಕ್ಷಿಣಾ ]

**ದಕ್ಷಿಣೆಗೊಡು** (ಕ್ರಿ). ಪಿತೃಕಾರ್ಯ, ದೇವತಾಪೂಜೆ ಮುಂತಾದ ಸಂದರ್ಭಗಳಲ್ಲಿ ಗುರುಹಿರಿಯರೇ ಮೊದಲಾದವರಿಗೆ ದಾನವನ್ನು ಕೊಡು,–ದಕ್ಷಿಣೆ ನೀಡು: ಅಂತು ನಿಜಧವಳಚ್ಛತ್ರ ಚಾಮರ ಸಿಂಹಾಸ ನಾದಿ ರಾಜಚಿಹ್ನಂಗಳುಬೆಱಯೆ ಸರ್ವಸ್ವಮೆಲ್ಲಮಂ ದಕ್ಷಿಣೆಗೊಟ್ಟು (ಪಂಪಭಾ. ೬–೪೦ ವ). [ ದಕ್ಷಿಣೆ + ಕೊಡು₁ ]

**ದಕ್ಷಿಣೇಂದ್ರ** (ನಾ). ದಕ್ಷಿಣ ದಿಕ್ಕಿನ ಅಧಿಪತಿ: ಬ್ರಹ್ಮಲೋಕನಿಳಯರಪ್ಪ ಲೋಕಾಂತಿಕರುಂ ದಕ್ಷಿಣೇಂದ್ರರುಂ . . . ಭವವಲ್ಲೀದಳಫಲಮೂಲ ವಿಷಯಮುಮಂ ಪೞದು (ಶಾಂತಿಪು. ೧೨–೪೩ ವ). P ಜೈನರ ಪ್ರಕಾರ ದಕ್ಷಿಣೇಂದ್ರರು ಸೌಧರ್ಮ, ಸನತ್ಕುಮಾರ, ಬ್ರಹ್ಮ, ಶುಕ, ಆನತ ಮತ್ತು ಆರಣ್ಯರೆಂದು ಆರುಮಂದಿ. [ ದಕ್ಷಿಣ + ಇಂದ್ರ ]

**ದಖಿನ್, ದಕನ್** (ನಾ). ದಕ್ಷಿಣಭಾರತದ ಪ್ರದೇಶ; ನರ್ಮದಾ ಮತ್ತು ಕೃಷ್ಣಾ ನದಿಗಳ ನಡುವಿನ ಭೂಭಾಗ: ದಖನ್ನಿನ ಭಾಗವು ವಾಸಯೋಗ್ಯ ವಾಗಿತ್ತು (ಭಾಇಪ್ರ. ೧೫); ದಖನ್ನಿನ ಒಂದು ಭಾಗ (ಚೀನಬಾ. ೧೦೮). **ದಕನ್**: ಈ ಕಾಲದಲ್ಲಿ ದಕನ್ ಬಾದಷಹರು ದಿಲ್ಲಿ ರಾಜನಿಗೆ ವಿರುದ್ಧ ರಾದರಂ (ಉರ್ದುಪಾ. ೬).

[ ←ಪಾರ. ದಕನ್; ಹಿಂ. ದಖಿನ್, ದಕನ್; ಪ.ಪಾ. ದಬ್ಬಿನ್./ ಪ್ರಾ. ದಕ್ಖಿಣ ]

**ದಖಿನಿ** (ಗು). ೧. ದಕ್ಷಿಣಕ್ಕಿರುವ; ದಕ್ಷಿಣದೇಶದ. (ನಾ). ೨. ದಖನ್ ಪ್ರದೇಶದ ಗುಲ್ಬರ್ಗ, ಬಿಜಾಪುರ ಪ್ರದೇಶಗಳಲ್ಲಿ ಪ್ರಚಲಿತವಾಗಿದ್ದ ಉರ್ದು ಭಾಷೆಗೆ ಮೊದಲಿನ ಒಂದು ಇಂಡೋ–ಆರ್ಯನ್ ಭಾಷೆ: (ಶಿ). [ ←ಹಿಂ. ದಕ್ಖಿನೀ; ಮರಾ. ದಖಿಣೀ ]

**ದಖಾಖಿ** 'ಧಕ್ಕಾಖಿ' ನೋ.

**ದಫೀಲಿ** (ನಾ). ಮೊಗಲ್‌ಸೈನ್ಯದ ಒಂದು ಪಂಗಡ: ದಫೀಲೀ ಇದಕ್ಕೆ ಸಂಬಳವೇನೋ ಸರ್ಕಾರದಿಂದ ಬರುತ್ತಿದ್ದರೂ ಇದು ಮನ್‌ಸಬ್‌ದಾರರ ಅಧೀನದಲ್ಲಿರುತ್ತಿತ್ತು (ಇಸ್ಲಾಂಸಂ. ೬೮).

[ ←ಅರ. ಹಿಂ. ದಫೀಲ್ = ಅಧಿಕಾರಿ ]

**ದಗ** 'ದಗಾ' ನೋ.

**ದಗಡಿ** 'ಧಗಡಿ₁' ನೋ.

**ದಗದ** (ನಾ). (ಉಕ) ಕೆಲಸ; ಕಾರ್ಯ: ಹರಿಯ ಪೊತ್ತಿಲೆದ್ದು, ಅತ್ತಿ ಮಾವಗ ಶರಣ ಮತ್ತೊಂದು ಶರಣ ಗುರುವೀಗೆ ನಾ ಮಾಡಿ ಹೊಕ್ಕೀನಿ ಮನಿಯು ದಗದಕ (ಜನಗೀ. ೭೬); ಅಪ್ಪ ರಾಜಣ್ಣನ ತೇರೆಳೆದು ಬರುವಾಗ ತೀರಲಿಲ್ಲವ್ವ ಮನೆ ದಗದ (ಕನ್ನಜಾ. ೧೦); ಬೆಳತನಕ ದುಡಿಯೋವಪ್ಪು ದಗದ ಆದ್ರೂ ಏತಿರಾ ಅದು ? (ಕುಮಾರ. ೧೩೫); ಅವರ ಕಡೀಗೆ ತುಸು ದಗದ ಇತ್ತು (ಜೀವಪ್ರ. ೮೨). [ ?./ಮರಾ. ದಗದಗ = ಪರಿಶ್ರಮ. ]

**ದಗದಗ** (ನಾ). ಒಂದು ಅನುಕರಣ ಶಬ್ದ. 'ದಗದಗನೆ' ಪರಾ.

**ದಗದಗನೆ** (ಅ). ದಗದಗ ಎಂಬ ಶಬ್ದದೊಡನೆ: ಬೆಂಕಿ ದಗದಗನೆ ಉರಿಯಿತು (ರೂಢಿ) [ ದಗದಗ + –ಅನೆ₁ ]

**ದಗದಗಿಸು** (ಕ್ರಿ). (ಬೆಂಕಿ) ದಗದಗ ಎಂದು ಉರಿ; ಪ್ರಜ್ವಲಿಸು: ಕರಿಗಿರಿಯೊಳು ದಗದಗಿಸಿ ಹರಿಯಾವಳಿಯುರುಗುಲ್ಮದೊಳು ಭುಗುಭುಗಿಸಿ ಬಿರುದಿನ ಮನ್ನೆಯ ಭಟರ ಪ್ರತಾಪಾಗ್ನಿ ಪೆಱದುದು ರಿಪುವನದೊಳಗೆ (ಕಂನವಿ. ೧೫–೫೫). [ ದಗದಗ + –ಇಸು₃ ]

**ದಗಮು, ಧಗಮು** (ನಾ). ಒಂದು ಬಗೆಯ (ಚರ್ಮದ) ವಾದ್ಯವಿಶೇಷ: ಕೊಂಬು ಬೊಂಬುಳೆ ಕಾಳೆ ಡೋಲು ದಗಮು ಚಿನ್ನ ಚೆಂಬಕವಱ ತಿತ್ತಿರಿಗಳ ಡೊಂಬಿಯ ಧ್ವನಿಯಿಂದ ಪೌಜುಗಳತ್ಯಾಡಂಬರದಿಂದೆಯ್ದಿದವು (ಕುರಾಸಾಂ. ೧೨–೨೫); ಡಕ್ಕೆ ದಗಮು ಕೊಂಬು ಕೊಳಲು ತಪ್ಪಟೆ ಮೃದಂಗದ ರವ ತುಂಬಿತು ಲೋಕವನಿರದೆ (ರಾಮವಿ. ೭–೧೨); ಪೊಡೆವ . . . ತಂಬಟ ಡೋಲು ದಗಮು ಗಿಡಿಬಿಡಿಗಳ ಬಲ್ದನಿ ಮುಪ್ಪೊಡವಿಯನಡರಲು ನಡೆದುದಾ ಸೇನೆ(ಚಂಪ್ರಸಾಂ. ೨೦–೬೧); ಅನ್ನಿಗರೆನಗೊಡ್ಡಿ ನಿಂದರೆ ದಗಮಿನ ಸನ್ನೆಯೊಳ್ಪಾಯ ಕುಟ್ಟಿಸುವೆ (ಭರಪ. ೪೯–೭೬); ಪೊಱವ ತುಡುಮು ಭೇರಿ ದಗಮು ಡಿಂಡಿಮ ಡೌಡೆ ಪೊಱವ ದೋಲುಗಳು ಡಕ್ಕೆಗಳಂ (ಜ್ಞಾನಸ. ೪೧–೩೫). **ಧಗಮು**: ಭೇರಿ ತಮ್ಮಟ ನಿಸ್ಸಾಳ ಧಗಮು ರುಂಜೆ ಭೋರೆಂಬ ಶಂಖದೌಡೆಗಳು (ಜ್ಞಾನಸ. ೧೦–೬). [ ? ]

**ದಗಲಬಾಜಿ** 'ದಗಲ್ಬಾಜಿ' ನೋ.

**ದಗಲಬಾಜಿತನ** 'ದಗಲ್ಬಾಜಿತನ' ನೋ.

**ದಗಲು, ತಗಲ್₂, ತಗಲು₃** (ನಾ). ೧. ಮೋಸ; ವಂಚನೆ; ದ್ರೋಹ; ವಿಶ್ವಾಸಘಾತ: "ಠಕ್ಕತನ; ತಗಲು; (ದಗಲುಬಾಜಿ), ಅಪ್ರಾಮಾಣಿಕ ತನ" (ಜಾನಕೋ. ೨). **ತಗಲ್₂**: ೧. "ಮೋಸ, ವಂಚನೆ" (ಪ್ರಭಶ್ರ). **ತಗಲು₃**: ೧. ಯಾವುದರಲ್ಲಿ ತಂಟೆಯಿಲ್ಲ ತಗಲು ಇಲ್ಲ; ಮೋಸವಿಲ್ಲ; ಮರೆಯಿಲ್ಲ (ಜನಜೀ. ೨೯). ೨. ಸುಳ್ಳು: "ತೊದಳು, ಸುಳ್ಳು . . . ಸಟೆ, ತಗಲು" (ಕಂನಹು. ೮೭). 'ತಗಲುಸಾಕ್ಷಿ' ಪರಾ.

ತಗಲುಬಗಲು = ಮೋಸ; ವಂಚನೆ: ತಗಲುಬಗಲಿನಿಂದ ದುಷ್ಟವಾಜ ಗಳಾಗ ಬಿಗಸಾಳ್ವನಂತೆ ಪೊಕ್ಕಿಱಯೆ (ಬಿಜ್ಜರಾ. ೧೨–೨೦). **ತಗಲುಬಿಗಲ್ಪನ**= ತಗಲುಬಗಲು: ಹೌದದು ಅಂಥವರು ಇರೋ ಹೊತ್ಗೇ ಮತ್ತೆ ಇಂಥ ತಗಲುಬಿಗಲ್ಪನ ನಡಿಯೋದು (ರಂಚಿರ. ೧೨). ತಗಲು ಮಾಡು = ಮೋಸ ಮಾಡು; ವಂಚಿಸು: ಅದರಲ್ಲಿ ಒಂದು ಪೈಸಪ ತಗಲು ಮಾಡಿದ್ದಿಲ್ಲ (ಮುಂಬಯಿ. ४–೫೦); ತೂಕದಲ್ಲಿ ಯಾರಾದರೂ ತಗಲುಮಾಡಿದರೆ ಆ ತೂಕಕ್ಕೆ ಸರಿಯಾಗಿ ಅವರ ದೇಹದ ಮಾಂಸವನ್ನು ತೆಗಿಸುತ್ತಿದ್ದನು (ಹಿಂಮುಸ. ೭೦). [ ←ಅರ. ಹಿಂ. ಮರಾ. ದಗಲ್./ಸಂ. ಜಗಲ ]

**ದಗಲೆ₁**, ತಗಲೆ (ನಾ). ಕವಚ ; ತನುತ್ರಾಣ : "ದಗಲೆ ಜವಳಿ ಜೋಡು" (ಶಬ್ದಮಂ. ೯೪) : ಶೀರ್ಷಕಂ . . . ವ್ಯಾಧಕಂಟಕ ॥ ಈ ೧೭ ದಗಲೆಯು ತೊಟ್ಟು ಸನ್ನದ್ಧನಾಗಿದ್ದವನು (ರಾಜಶೇ. ೧೬೪) : ಕೆಂಪು ದಗಲೆಯಿಂದ ಕೆಳಗಾಗಲರುಣನ ಗರಿವಾದಕಂಸೆಯುಗಲಿ ಇಂದ್ರನೀಲದ ದಾಳ ದಿಕ್ಕುಗಳನೆ ಬೆಳಗುತಲೆ (ವಾದಿಕೀ. ೧೫೦-೨) ; ಮುತ್ತಿನ ದಗಲೆ ವಜ್ರದ ಜೋಡು ಸಿರದಲಿ ಬಿತ್ತರವಹ ಸೀಸಕದ ಪುಸ್ತಂಗ ತೊಡರಾ ಗಾವಳಿಯಿಂದ ಭೂಪೋತ್ತಮ ನಡೆದನುಬ್ಬಿನಲಿ (ಕಂನವಿ. ೧೫-೧೨) ; ಸಿರದ ಮುಂಡಾಸವ ಸೀಳ್ದಿಕ್ಕಿ ದಗಲೆಯು ಪರಿಪಾಟ ಮಾಡಿದರಾಗ (ಕಂನವಿ. ೧೫-೪೬) ; ಪೊಸದಗಲೆಯುಂ ಬಿಗಿದು ಅಳವಟ್ಟ ಪೊನ್ನ ಪಡಿದೇರನೇಱ ಮುಟ್ಟಯಿಸಿ ಕಟುತ್ರಜಗಿ (ರಾಮಾಶ್ವ. ೯೧-೨೯) ; ದಗಲೆ (ತಗಲೆ) :–ತೆಗಲೆ ಎಂಬುದು ಉರಸ್ಥಳಕ್ಕೆ ನಮ್ಮಾ ಕನ್ನಡನಾಡಿನಲ್ಲಿ ಮಾತ್ರ ರೂಢವಾದ ಹೆಸರಾದರೂ ಪಂಪಭಾರತದೊಳಗೆ ತೋರಿಬಾದುದರಿಂದ ಅದು ಅಚ್ಚಗನ್ನಡ ಎಂಬುದು ಈಗ ನಿರ್ಧಾರವಾಗಿದೆ. 'ದಗಲೆ' ಅಥವಾ 'ತಗಲೆ' ಎಂದರೆ ತೆಗಲೆಯ ಮೇಲೆ ಬಿಗಿದು ಕಟ್ಟುವ ಬಟ್ಟಲಿನಾಕಾರದ ಒಂದು ಪದಾರ್ಥ, ಇದನ್ನು 'ಉರಃಸ್ತ್ರ' ಎನ್ನಬಹುದು (ಪಾರ್ಶಸು. ೪೭). **ತಗಲೆ :** ದಗಲೆ (ತಗಲೆ):–ತೆಗಲೆ ಎಂಬುದು ಉರಸ್ಥಳಕ್ಕೆ ನಮ್ಮಾ ಕನ್ನಡನಾಡಿನಲ್ಲಿ ರೂಢವಾದ ಹೆಸರಾದರೂ . . . ಇದನ್ನು 'ಉರುಸ್ತ್ರ' ಎನ್ನಬಹುದು (ಪಾರ್ಶಸು. ೪೭).

**ದಗಲೆಜೋಡು** = ಯುದ್ಧಕಾಲದಲ್ಲಿ ಸೈನಿಕರು ಧರಿಸುವ ಕವಚ ; ತನುತ್ರಾಣ : ಜರಿಟೋಪಿ ದಗಲೆಜೋಡಿನ ರಾವುತರ ಮುಂದುರವಣಿಸುವ ನಿವನಾರೆ (ಕಂನವಿ. ೧೨-೫೮). [ <ಸಂ. ಜಗಲ ]

**ದಗಲೆ₂**, ಡಗಲಿ, ಡಗಲೆ, ದೊಗಲೆ, ದೊಗಳೆ (ಗು). ೧. ಸಡಿಲವಾದ ; ಅಳ್ಳಕವಾದ : ನನ್ನ ದೊರೆಯಾದ ಖಾಖಾನ್‌ಕಾಲಿಕಟ್ ದೊರೆಗೆ ಬಹುಮಾನವಾಗಿ ಕೆಲವು ಕುದುರೆಗಳನ್ನೂ, ದಗಲೆ ಅಂಗಿಗಳನ್ನೂ, ಜರತಾರಿ ಉಡುಪುಗಳನ್ನೂ . . . ಕಳುಹಿಸಿಕೊಟ್ಟಿದ್ದನು (ಪ್ರವಾಇ. II, ೦೪೯). (ನಾ). ೨. ಸಡಿಲವಾದ ಅಂಗಿ ಮೊದಲಾದುವು : ಬೂದುಬಣ್ಣದ ದಗಲೆ, ಕುರಿ ತುಪ್ಪಳಿನ ಅಂಗಿ, ಜೊತೆಗೆ ಬೇಡಿ ಕೋಳಗಳ ಸೈನಿಕರ ತಂಡ ದಾರಿಯುದ್ದಕ್ಕೂ ಮುಕ್ಕಾಲು ಮೈಲಿ ದೂರದ ತನಕ ವ್ಯಾಪಿಸಿತ್ತು (ಪುನರು. ೫೫೭); ಮೈಯಿಂದ ಇಳಿಯುತ್ತಿದ್ದ ಬೆವರು ಅವನ ದಗಲೆಯನ್ನೂ ಸೊಂಟದ ಪಂಚೆಯನ್ನೂ ಒದ್ದೆಮುದ್ದೆಯನ್ನಾಗಿ ಮಾಡಿತ್ತು (ಮಲಮ. ೫೭೩). ೩. ಉಡುಪು ಕೊಳೆಯಾಗದಂತೆ ಮೇಲೆ ಕಟ್ಟಿಕೊಳ್ಳುವ ಉಡುಗೆ ; ಮೇಲಂಗಿ : ದಗಲೆಯನ್ನು ಎತ್ತಿಕೊಂಡು ಅದನ್ನು ಎದೆಯ ಮೇಲೆ ಹೊಂದಿಸಿ, ಕೊರಳಿಗೆ ಹಿಂಗಡೆಯಿಂದ ಕಟ್ಟುವಂತೆ ತಿಳಿಸಿದ (ಬಣ್ಣಮೂ. ೯೦) : ಮಕ್ಕಳ ಮತ್ತು ಕೆಲಸಗಾರರ ಉಡುಪು ಕೊಳೆಯಾಗದಂತೆ ಮೇಲೆ ಹಾಕುವ ದಗಲೆ (Jumper. ಇಂಕನ್ನ). **ಡಗಲಿ :** ೩. ಕೆಂಪು ರುಮಾಲು ಡಗಲಿಗಳಿಂದಲಂಕೃತನಾದ ಉಸ್ಮಾನಸಾಹೇಬರು ಕರೆಯುತ್ತಾರೆಂದು ಹೇಳಲು, ಶೇಷಪ್ಪ ಮತ್ತೆ ತಿರುಗಬೇಕಾಯಿತು (ಗ್ರಾಮಾಯ. ೨೫೫) : ನಾನು ಅವರ ವಚನಕ್ಕೆ ಅನುಮತಿಸಿ, ಅವರು ಕೊಟ್ಟ ಒಂದು ಡಗಲಿಯನ್ನು ಮೈಯೊಳಗೆ ಹಾಕಿಕೊಂಡು ಅವರ ಸಂಗಡಲೆ ಬಿದ್ದೆನು (ಮುಂಜಾಕ. ೧೧೨) : ಅವರ ಮುರಿಗೀ ಮುಂಡಾಸ ಬಣ್ಣದ ಡಗಲಿ, ಕೈಯಾಗಿನ ಕಟಾರಿ . . . ಎಲ್ಲಾ ಗುಂಗ ಹಿಡಿಸಿ ಬಿಡತಾವ ! (ಬೆಂದಯ. ೧೧೨). **ಡಗಲೆ :** ೨. ಮೊಣಕಾಲುಗಳನ್ನು ಮುಚ್ಚುವಷ್ಟು ಉದ್ದನಾದ ಹಸುರು ರೇಸಿಮೆಯ ಡಗಲೆ ಅವನ ಸ್ಥೂಲವಾದ ಕಾಯವನ್ನು ಹೇಗೋ ಮುಚ್ಚಿತು (ಜರಂಗ. ೭೬). **ದೊಗಲೆ :** ೪. ಸಡಿಲು; ಅಳ್ಳಕ: ಯಾವುದೂ ಫಿಟ್ ಆಗಕೂಡದು, ಎಷ್ಟು ದೊಗಲೆ ಆದರೆ ಅಷ್ಟು ಚೆಂದ (ನನ್ನೂರು. ೧೯೦). **ದೊಗಳೆ :** ೪. ಗಂಡಸು ತುಂಬ ಉದ್ದವೂ ತೀರ ದೊಗಳೆಯೂ ಆದ ಜೈಲುಡುಪು ಧರಿಸಿದ್ದನು (ಪುನರು. ೩೩).

**ದಗಲೆ ಚಡ್ಡಿ, ದೊಗಳೆ ಚಡ್ಡಿ**=ಸಡಿಲವಾದ ಚಣ್ಣ,–ಚಲ್ಲಣ; ಅಳ್ಳಕವಾದ ನಿಕ್ಕರು: ರಾತ್ರಿಯಲ್ಲಾಗಲೀ, ಹಗಲಿನಲ್ಲಾಗಲಿ ದಗಲೆ ಚಡ್ಡಿಗಳನ್ನು ಹಾಕಿಕೊಂಡು ಮನೆಯಲ್ಲಿ ಓಡಾಡಬೇಡ (ಮಹಾಗ. ೦೦೨) ; ಬೆಳ್ಳಿಯ ನಡುಕಟ್ಟು–ನೀಲಿಯ ಮೇಲಂಗಿ–ದೊಗಳೆಚಡ್ಡಿ (hose) ತುಪ್ಪಟದ (fur) ಜೋಡು ಕಬ್ಬಿಣದ ತಲೆಮುಚ್ಚು (casque) ಒಂದು ಛುರಿಕೆಯು ನಡುವಿನಲ್ಲಿ ನೇತಾಡುತ್ತಿದೆ (ಆರ್ಯಶ. ೧). **ದಗಲೆ ಪರಾಯಿ, ದೊಗಲೆ ಪರಾಯಿ**= ಸಡಿಲವಾದ ಇಜಾರ,–ಪಾಯಿಜಾಮ : ಮೊಣಕಾಲಿನವರೆಗೆ ಬಂದು ಅಲ್ಲಿ ಗೊಂಡೆಯ ದಾರದಿಂದ ಕಟ್ಟಿದ್ದ ದಗಲೆ ಷರಾಯಿ ; ಅದರ ಎರಡು ಪಕ್ಕದಲ್ಲೂ ಗುಂಡಿಗಳು (ಯೋಧಪು. ೮೦); ಹಿಂದೆ ಬರುತ್ತಿರುವ ಮಾರ್ವಾಡಿಗಳನ್ನಾಗಲೀ, ದೊಗಲೆ ಷರಾಯಿಯವರನ್ನಾಗಲೀ ಕಂಡು ಕಂಬಿಕೀಳಲು ಏರ್ಪಾಟುಗಳನ್ನು ಮಾಡಿಕೊಳ್ಳಬಹುದು (ನಾಡಿಗೀ. ೪೫) ; ನಮ್ಮ ಜನರು ಅನ್ಯಾಯವಾಗಿ ದೊಗಲೆ ಷರಾಯಿ ವರ್ಗದವರಲ್ಲಿ ಸಾಲ ತೆಗೆದುಕೊಂಡು ನಾನಾ ವಿಧವಾದ ಕಷ್ಟ ನಷ್ಟ, ಅಪಮಾನಗಳಿಗೆ ಗುರಿಯಾಗುತ್ತಿದ್ದಾರಲ್ಲ (ಕಸಬು. ೭೧). **ದೊಗಳೆ ಷರಟು** = ಸಡಿಲವಾದ ಅಂಗಿ: ಸಾವಿರದ ಏಳನೂರ ಮೂರು ಸಂಖ್ಯೆಯ 'ಮಲ್ಲಿನ' ದೊಗಳೆ ಷರಟು (ಬಾಳಹೂ. ೩).

[ ←ಹಿಂ. ದಗಲ್, ದಗಲಾ ; ಮರಾ. ಡಗಳ, ಡಘಳ ]

**ದಗಲ್ಬಾಜಿ**, ದಗಲಬಾಜಿ (ನಾ). ೧. ಕಪಟ ; ಮೋಸ ; ವಂಚನೆ ; ದ್ರೋಹ: (ಕ). ೨. ಕಪಟಿ; ಮೋಸಗಾರ; ದಗಾಕೋರ: ಅವನೊಬ್ಬ ಭಾರಿ ದಗಲ್ಬಾಜಿ (ರೂ೧). **ದಗಲಬಾಜಿ :** ೧. "ನನ್ನ ಹತ್ರ ದಗಲಬಾಜಿ ಮಾಡ್ತೀಯಾ ? " ಎಂದು ಗಂಗನನ್ನು ಬೈದನು (ಶಾನೂರು. ೧೯೮); "ನನ್ನ ಹತ್ತಿರ ದಗಲಬಾಜಿ ಮಾಡ್ತೀಯಾ ? " ಎಂದನು (ಮಲಮ. ೧೨೪).

[ ←ಮರಾ. ದಗಲ್‌ಬಾಜೀ ]

**ದಗಲ್ಬಾಜಿತನ**, ದಗಲಬಾಜಿತನ (ನಾ). ಮೋಸಮಾಡುವಿಕೆ ; ದಗಾಹಾಕುವಿಕೆ : ಆ ನಾಗಪ್ಪಯ್ಯನ ದಗಲ್‌ಬಾಜಿತನ ತಿಳಿದುದರಿಂದ, ಆ ನಾಗಪ್ಪಯ್ಯನನ್ನು ಹಿಡಿದು ತೂಗಹಾಕಬೇಕೆಂಬದಾಗಿ ಟೀಪುಸುಲ್ತಾನರು ಅಪ್ಪಣೆಕೊಟ್ಟಿದ್ದರಿಂದ (ರಾಜೇಂದ್ರ. ೦೭). **ದಗಲಬಾಜಿತನ :** ಸುಬ್ಬಕೃಷ್ಣನಿಗೆ ಮಧುಸೂದನನ ವಿಷಯದಲ್ಲಿ ವಿಶ್ವಾಸವಿತ್ತು. ಆದರೆ ಮುರಲಿಯ ದಗಲಬಾಜಿತನಕ್ಕೆ ಹೆದರುತ್ತಿದ್ದ (ರಾಗಿಣಿ. ೩೬). [ ದಗಲ್ಬಾಜಿ + –ತನ ]

**ದಗಳು** (ನಾ). ಒಂದು ಬಗೆಯ ಯುದ್ಧಸಾಧನ : ಚೀಳು ಬಾಣಗಳ ಜಾಟಳವುರಿಪೊಟ್ಟಣವೇಳುವ ಜಂತ್ರದ ದಗಳು ತೂಳುವ ಗುಂಡುಗಲ್ಗಳ ರಾಸಿ ಪಟ್ಟಣದಾಳುವೇರಿಯ ತುಂಬಿಹುವು (ಕಂನವಿ. ೩-೨೧).

[ ದೇ.॥ ತೆಲು. ದಗರು ]

**ದಗಾ**, ಡಗೆ₂, ತಗ, ದಗ, ದಗೆ₂, ದಹ್ಯ (ನಾ). ಮೋಸ ; ಕಪಟ ; ವಂಚನೆ ; ದ್ರೋಹ : ಕುಡಿತಕ್ಕೆ ದುಡ್ಡಿಲ್ಲದೆ ಕಳ್ಳತನ, ಮೋಸ, ದಗಾ ಆರಂಭವಾಗಿವೆ (ನನ್ನೂರು. ೩೧೫). **ಡಗೆ₂ :** (ಕ). **ತಗ :** ನೂಜನಾದೊಡೆ ಕೊಂಬುದೇಱುದೂಜನಬೇಡ ವಿಾಱದಡೆ ತಗವ ಕೊಡುವುದು ಸಾಲಿಗನು ಗೂಱ ತಿಂದಾನೆ (ಸರ್ವಜ್ಞ.ಬ.೮೯೭). **ದಗ:** ಇದು ಪಶ್ಚಾತ್ತಾಪವೊ, ಸ್ವಕ್ಷೇಮ ಚಿಂತನೆಯೊ . . . ದಗವೊ ಹೃದ್ಗತವಾದ ಅಭ್ಯಾಸ ಬಿದ್ದ ಮಂತ್ರ ಮನಸ್ಸನ್ನು ಸುಳಿಯಿತು (ಸಂಸ್ಕಾರ. ೮೨); "ಎಷ್ಟು ಬಾರಿ ದಗ, ಅಧರ್ಮ ನಡೆಸಿದ ಮೇಲೆ" ನೀನೆ ನನಗೊಟ್ಟ ದಗ. ನಾನ್ ನಿನಗ್ಹಾಕ್ದೆ–ನಾವು (ಶಕಾರ. ೨೩). **ದಗೆ₂ :** ದಗೆಯೆಂಬುವದು ಹಗೆಯೇ ಸರಿ (ಗಾದೆ). **ದಹ್ಯ:** ಅಮ್ರುತೂರ ಸಂದ್ಯ ಮಂಟಪದ ಸತ್ರಕೆ ಬಿಟ ಗ್ರಾಮಯಿದಕೆ ದಹ ಮಾಡಿದವ ಹುಳತು ಸಾವರು (ಎಕ. XVI, ಕುಣಿಗ. ೮೭-೯: 18 ನೆಯ ಶತ).

**ದಗಾ ಕೊಡು, ದಗೆ ಕೊಡು** = ಮೋಸಮಾಡು ; ವಂಚಿಸು : ನನ್ನ ಹಾಗೆ ಅದೆಷ್ಟು ದೊಡ್ಡಮನುಷ್ಯರಿಗೆ ದಗಾ ಕೊಟ್ಟಿದಾನೋ (ಸಾಹೇಬ್. ೨೮೨) : ಎತ್ತಿನ ಗಾಡಿಯವರು ಮೋಸ ಕೊಟ್ಟರು, ಲಾರಿಯವರು ದಗೆ

ಕೊಟ್ಟರು (ಹಾರುದಾ. ೨೭೩). ದಗಾ ಮಾಡು=ಮೋಸಮಾಡು; ವಂಚಿಸು: ಆ ಚರಕಲ ರಾಜರು ಅರೆವಾಶಿ ಹಣಾ ಕೊಡದೆ ದಗಾಮಾಡಿದ ವಿವರ ಸೋಮಶೇಖರನಾಯಕರಿಗೆ ಬರೆಸಿ ಕಳುಹಿದಲ್ಲಿ (ರಾಜೇಂದ್ರ. ೭): ನಂಜಾ! ಸಾವಿರರೂಪಾಯಿಗೆ ದಗಾ ಮಾಡಿದೆಯಾ (ಮಾಂಗಲ್ಯ. ೨೫). ದಗಾ ಹಾಕು, ದಗ ಹಾಕು = ದಗಾಕೊಡು: ನಾನೇನೂ ಅವರ ಸಾಲಕ್ಕೆ ದಗಾಹಾಕು ವುದಿಲ್ಲ (ಮಳಮ. ४೭೨); ಒಂದಲ್ಲ ಎರಡಲ್ಲ ಐವತ್ತುಸಾವಿರ ರೂಪಾಯಿ ಗಳನ್ನು ಕಾಗದ ಪತ್ರವಿಲ್ಲದೆ ಸಾಲ ಕೊಟ್ಟ ರಾಣಿಯನ್ನು ಒಡಿಸಿ ಅವಳಿಗೆ ದಗ ಹಾಕಬೇಕೆಂದು ಯೋಚಿಸಿದವನು ಅವನು (ಬಂಕಿಮ. ೨೯೨).

[ ←ಅರ. ಪಾರ. ಹಿಂ. ಮರಾ. ದಗಾ ]

**ದಗಾಕೋರ, ದಗಾಖೋರ** (ನಾ). ಮೋಸಗಾರ; ಕಪಟಿ; ವಂಚಕ: "ಏತಕ್ಕೂ ಪೇಸದವನು; ದಗಾಕೋರ; ಪಟಿಂಗ, ಠಕ್ಕ" (Scoundrel. ಇಂಕನಿ): ಎಲ್ಲರೂ ದಗಾಕೋರರರೆ (ಚಂಗೂಂ. ೧४೦). **ದಗಾಖೋರ:** ದಗಾಖೋರರ ಕೈಲಿ ಸಿಕ್ಕಿಬಿದ್ದ ನರೇಶನ ಮರಣ? (ಹಾಡುಹು. ೭೧): ಅವನು ದಗಾಖೋರನಾಗಿ ವಂಚನೆಯಿಂದ ಪರರ ಧನವನ್ನು ಕಸರಿ ಕೊಂಡಿರುವನೋ ಅಂತಹವನ ಮೇಲೆ ನಾವು ಡಕಾಯಿತಿ ನಡೆಯಿಸುತ್ತೇವೆ (ದೇವೀಚಾ. ೧೦೯): "ಅವನೆಂಥ ಸ್ವಾಮಿ...ದಗಾಖೋರ, ನಿಷ್ಪ್ರಯೋಜಕ" (ಕಾಯಿಲ. ೦೭೦). [ ದಗಾ + – ಕೋರ$_3$ ]

**ದಗಾಖೋರ** 'ದಗಾಕೋರ' ನೋ.

**ದಗಾಬಾಜಿ** (ನಾ).=ದಗಲ್ಬಾಜಿ ೧: ಅದೆಲ್ಲಾ ಬರೇ ಮೋಸ, ಸುಳ್ಳು, ದಗಾಬಾಜಿ, ಅದರಿಂದೇನೂ ಉಪಯೋಗವಿಲ್ಲ (ಸಾಹೇಬ್. ೨೮೫).

[ ←ಪಾರ. ಹಿಂ. ಮರಾ. ದಗಾಬಾಜೀ ]

**ದಗುಂತಿ, ಅದಗುಂತಿ, ಡಗುಂತಿ** (ನಾ). ೧. ಹೆಚ್ಚಳ; ಅತಿಶಯ; ಆಧಿಕ್ಯ: ಅಂತೆ ಮೂಱುಮುಮರಾವಾಸಂಗಳೊಳ್ ಪೇೞ್ದುದುತ್ತಮಸಮ್ಯಕ್ತ್ವ ಫಲಂ ದಗುಂತಿ ಮಗಳೇ ನೀನಿಂತಿದಂ ನಂಬು (ಆದಿಪು. ೫-೭೩); ಕ್ಷಮೆ ಭೂರಿ ದಗುಂತಿ ವೆಂಪು . . . ಚತುರಾನ್ವಿತಮೆಂಬ ನೆಗೞ್ತೆಯಿಂದಿಳಾವಂತ ರೊಳಾರುಮೇಂ ದೊರೆಗೆ ವರ್ಪರೆ (ಲೋಕೋಪ. ಟೀಕೆ. ೧-೧೧): ಹರಿ ರುಕ್ಮಿಣಿಯರ ರಾಗದ ಪರಮಪ್ರೇಮದ ದಗುಂತಿಯಂ ಬಣ್ಣಿಸು ವಂ (ನೇಮಿಪು. ೭-೦೦೭): ಚದುರ ಚಾಗದ ದಗುಂತಿಯಂ ಮೆಱೆವ ವಿವಿಧ ವಿಟರೊಳಂ (ಪುಷ್ಪಪು. ೨-೭೭ ವ): ಪಡೆದುದು ತನ್ನಿತಂಬಿನಿಯ ಕಾಯದ ಕಾಂತಿ ಸುಧಾಂಶುವಿಂದೆ ನೂರ್ಮಡಿಸುವ ಕಾಂತಿ ಸಂತತಿಯ ಸಾರಸ ಮುಚ್ಚಯದಿಂ ದಗುಂತಿಯಂ (ಮಹಾನೇ. ೮-೫೭). ೨. ಆಶ್ರಯ; ನೆಲೆ: ವಿನಯದ ಮೇರೆ ಧರ್ಮ್ಮದ ತವರ್ಮ್ಮನೆ ಸತ್ಯದ ಜನ್ಮಭೂಮಿ ಮಾಂತನದ ದಗುಂತಿ ಚಾಗದ ಮಹಾನಿಧಿ (ಎಇ. XIII, ೦೭೧-೨೭; 1055). **ಅದಗುಂತಿ:** ೧. ನೆಗಟ್ಟಿಮರಾಂಗನಾಜನದ ರೂಪುಗಳೆಲ್ಲಮದೀಕೆಯೊಂದು ದೇಸಗೆ ನಿಮಿರ್ಪೊಂದು ಪುರ್ವಿನ ನಯುಕ್ಕಮರ್ಪೊಂದದಗುಂತಿಗೊಂದು ಭಂಗಿಗೆ ನೆಗೞ್ವೊಂದು ಮೆಲ್ಪಿನ ತೊದಳ್ನುಡಿಗಪ್ಪುಡಮೆಯ್ದೆವಾರವು (ಆದಿಪು. ೨-೭೫); ಸೋಂಕುವ ನಲ್ಲಳ ಸೋಂಕಲಂಬಿಸುದ್ದಾನಿಯನೀಯೆ ಸಂತಸದ ದೊಂದದಗುಂತಿಯೆ ರೂಪುಗೊಂಡುದು (ಚಂದ್ರಪು. ೭-೭೯). ೨. ಅವರೊಡ ವೆಟ್ಟದೊಳಱಿವಿಸ ತವರೆನೆ ಧರ್ಮದದಗುಂಕಿಯೆನೆ ನೆಗಟ್ಟಳ್ (ಎಕ. II, ೦೩೯-೭; ಶು. 950). **ಡಗುಂತಿ:** ೧. ಆ ಮಹಿಮಾವಿಲಾಸದ ಡಗು[ನ್ತಿ]ಯ ವೆರ್ಗ್ಗಡೆ (ಎಇ. XIX, ೨೨೦-೨೧: 1037). P ಇದು 'ದಗುಂತಿ' ಎಂಬುದರ ಅಪಲಿಖಿತವಿರಬಹುದು. [ <ಅಗುಂತಿ ]

**ದಗೆ$_1$, ಡಗೆ$_1$, ಧಗ, ಧಗೆ** (ನಾ). ೧. ಕಾವು; ಝಳ; ತಾಪ: ಕುದಿವ ಕೂಪಿಂಕೆ ಕುದಿದು ದಗೆಯೆೞೆದ ಕೋಡಗದಂತೆ ಬೆಬಗಾಗಿ (ಧರ್ಮಾಮೃ. ४-४೫): ಮೃಗನೇತ್ರೆಯರು ಪಥಿಕರ್ಗೆ ನಗುತ ನೀರೆಱೆವುತಿಹರು ವಿರಹಾಗ್ನಿಯಿಂ ದ[ಪಾಠಾಂ. ಡ]ಗೆ ಪೆಚ್ಚಲೆದೆಯೊಳವರಿಗೆ (ಕುಠಾಸಾಂ. ೨-४೭); ವಿಪರೀತವಾಗಿ ಕಾಯುತ್ತ ದಗೆಯು ಸೀಮೆಯಾಗಿರುವ ಅರಬ್ಬೀದೇಶದಲ್ಲಿ (ಕೃಮುಡ. ೫೮). **ಡಗೆ$_1$:** ೧. ಬಿಸಿಲ ಡಗೆ ತಾಗಿ ವಸುಧೆಯವರೆಲ್ಲರು ಬಾಯ ಕಿಸುವುತ್ತಿದ್ದರು (ಮನುಗುಂ. ೨೫೯-೫೦): ಶೋಕದ ಡ[ಪಾಠಾಂ. ಬ]ಗೆಯೊಳುಬ್ಬಿದ ನಗೆಯುಲಾ ಸ್ವೇದದಲಿ ರೋಮಾಂಚ ದುಗುಡದಲಿ ಪರಿತೋಷ . . . ಭೀಷ್ಮಾದಿಗಳೊಳಗೆ ಪಲ್ಲಟಿಸುತಿರ್ದುದು ಪಡಿಮುಹೂರ್ತದಲಿ (ಕುವ್ಯಾಸ. ೧೫-೫): ಈ ಕಿಚ್ಚನೀಗ ಸಂಹರಿಸುವೆಂ ವರುಣಬಾಣದೊಳೆಂದು ಧನುವಿನಿಂ ಪರಿಸಿದಂ ಪಿರಿದು ಸಂಹರಿಸುವುರಿಯ ಡಗೆಯಾವರಿಸೆ ನೀರ್ ನಿಮಿಷದೊಳಗೆ (ಚಬಪು. ४೦-೧೫): ಬೀಳ್ವೇಳ್ವ ಸುಳಿವ ಸುತ್ತುವ ಡಗೆಯಂ ತರಹರಿವ ಸಾರ್ವ ಪಾರ್ವಬ್ಬರಿಪೆಸಕಂ ಮಿಱಿ ಕಾದಿದರ್ ಕಡುಗಲಿಗಳ್ (ಕಬಶಂ. ४-೭೭); ಕಟ್ಟುಱಿದ ಡಗೆಯ ಪೇರೊಡಲ ಗೋರ ರೂಪಿನ ದಾನವಂ (ರಾಮಾಶ್ವ. ೧೦೨-೧). ೨. ಬಾಯಾರಿಕೆ; ಸೇದೆ: ಬಿಱುಬಿಸಿಲ ಸೆಕೆಯುಸುರ ಬಿಸಿ ಹೊಡೆದುದುರಿಪೊತ್ತಿ ಬಾಯ್ಬತ್ತಿ ಡಗೆಸುತ್ತಿ ಸಾವಡಸುತಿದೆ (ಹದಕಾ. ೭-೯). **ಧಗೆ:** ೧. ವಿರಹದ ಧಗೆ ರಥಾಂಗದೊಳಳಿಯ ರವಿಯುದಯಾ ಚಳಕೆ ಬಂದ (ಕುವ್ಯಾಕ. ೨-೧); ಝಳದ ಧಗೆ ಡಾವರಿಸೆ ಹೊಕ್ಕರು ಕೊಳನ (ತೊರರಾ. ೨-४-೨೨); ಧಗೆಯಿಂ ನೀರ ಪೊಕ್ಕನೊ ಮಿತ್ರನೆಂಬಂ ತಾಗಲಸ್ತಮಯ (ಅಂಬಿಕಾ. ೨४-೭೧). ೨. ಒಡಲ ಜಡಿದವು ರೋಮ ರೋಮದೊಳಡಸಿದಂಬುಗಳಂಗವೇದನೆ ತೊಡಕಿತುಬ್ಬರಿಸಿದುದು ಧಗೆ ಗೋನಾಳಿ ನೀರ್ದಗೆಯೆ ನುಡಿಯಲಾಱೆನು (ಕುವ್ಯಾಭೀ. ೧೦-೨४): ೩. (ಆಲಂ) ಕಳವಳ; ತಳಮಳ: ಮನದ ಧ[ಪಾಠಾಂ. ಡ]ಗೆ ಪನ್ನೀರ ಶೈತ್ಯದಿಂ ಪರಿವುದೇ (ಹದಕಾ. ಪರಿ. ४-೭३). ಮನದ ಧ[ಪಾಠಾಂ. ಡ]ಗೆ ಯಡಗಿದವು ಮತ್ಸ್ಯೇಶನ ಪುರಾಂತರದೊಳಗೆ ಮೈ ಮಱಿಸನುಪಮಿತ ಭುಜಸತ್ವರಿದ್ದರು ಭೂಪ ಕೇಳೆಂದ (ಕುವ್ಯಾವಿ. ೧-४೨). **ಧಗೆ:** ೧. ಸುರ ತರುನಂದನಕ್ಕಿದಟ ನಂದನದಿಂ ಧಗೆ ಪೋಪುವಾ ಮಹೇಶ್ವರನ ಜಟಾಗ್ರ ದಿಂದಿಳಿದ ಗಂಗೆಯಾ (ಎಇ. XIII, ४४-४೭; 1112); (P ಭಾಷಾಂತರ ದಲ್ಲಿ 'Danger' ಎಂದಿದೆ); ಹೊರಗೆ ಮುಗಿಲಿನಲ್ಲಿ ಮೋಡಕಟ್ಟಿ ಬಿಸಿಲಿಲ್ಲದಿದ್ದರೂ ಧಗೆ ಉಸಿರುಕಟ್ಟಿಸುತ್ತಿತ್ತು (ಚಂದಕೋ. ೦೨); ಹೊಗೆ ಸುಂಗುವುದಿದೆ ಧಗೆಯು ಕಳೆವುದಿದೆ ಅಡಿಯಿಂ ಮುಡಿವರ ಬೆಳಗುವುದಿದ ಇದೆ (ಅರಳು. ೨७೧-೭). ೩. ಒಳಗೆಯೊತ್ತುವ ಧಗೆಯು ಹೊಱಗಣ ತಳಿತ ಬಿಮ್ಮಿನ ನಗೆಯು ನೃಪಮಂಡಲವ ಮೌಳಿಯನೇನನೆಂಬೆನು (ಕುವ್ಯಾಅ. ೦४-४೭); ವೆಗ್ಗಳಿಸಿ ಭೋಗಿಸಲು ಧಗೆಯುಹುವಾಸಜಿಹುದು ಮತಿಗೆಡುವುದು ಪಗೆಯಹುದಾ ಸುಖ ತನಗೆ (ಭರಚ. ೭-೨೮).

[ ←ಮರಾ. ಧಗ್./ತೆಲು. ದಗ ]

**ದಗೆ$_2$** 'ದಗಾ' ನೋ.

**ದಗ್ಗನೆ** (ಅ).=ದಗದಗನೆ: ಬೆಂಕಿ ದಗ್ಗನೆ ಉರಿಯಿತು (ರೂಢಿ).

ದಗ್ಗನೆ ಹತ್ತಿಕೊಳ್ಳು = ದಗ್ಗನೆ ಉರಿ ಉಂಟಾಗು: ಬೆಂಕಿ ದಗ್ಗನೆ ಹತ್ತಿಕೊಂಡಿತು (ರೂಢಿ). [ ದಗ್$_0$ + – ಅನೆ$_1$ ]

**ದಗ್ಗಳಿ** 'ದೊಗ್ಗಳ್' ನೋ.

**ದಗ್ಗುದುಳಿ** (ಕ್ರಿ). ಚೆನ್ನಾಗಿ ತುಳಿ; ನುಗ್ಗುನುರಿ ಮಾಡು: ಖಂಡ ತೊಗಲೆಲು ದಗ್ಗುದುಳಿದುರೆ ಕೆಲವು ಮಾಡಿದುದು ಕರಿಗಳಳವಿಯಲಿ ಯುಗ್ಗಡವನೇನೆಂಬೆ (ಅಂಬಿಕಾ. ३೯-೧೫); ಎರಡೂ ಒಳಹೊಕ್ಕು ಮನಸ್ಸನು ದಗ್ಗುದುಳಿಯುವುದೂ ಉಂಟು (ದೇಶನ್ಮ. ೯೦)

[ <ತಗ್ಗು$_1$ + ತುಳಿ$_1$ (<ತುೞ$_1$) ]

**ದಗ್ಧ** (ಗು). ೧. ಸುಟ್ಟ; ಬೆಂದ; ದಹಿಸಿದ: ಮೈಮಾರೆವಂ . . . ಸತತವಿರಹ ಸಂತಾಪದಗ್ಧವಸುಧಾಧಿಪಂ! (ಶ್ರೀರಾಮಾ. ೯೫-४೭३). ೨. ಬಾಡಿದ; ಬತ್ತಿದ; ಒಣಗಿದ. ೩. ಅಶುಭದ; ಅಪಶಕುನದ;

ಅಪುಂಗಳದ. ೪. ದುಷ್ಟ; ಕುತ್ಸಿತವಾದ. (ನಾ). ೫. ಸಂಶಯವಿಲ್ಲದಿರುವುದು; ನಿಶ್ಶಂಕೆ. ೬. ಸುಟ್ಟುದು; ದಹಿಸಿದುದು. [ ಸಂ. ]

ದಗ್ಧಕ (ನಾ). ಸುಟ್ಟಂತಹುದು; ಹಪ್ಪಳ ಇತ್ಯಾದಿ: "ಹಪ್ಪಳಾದಿಗಳ್ ದಗ್ಧ[ ಪಾಠಾಂ. ಗ್ಗ ]ಕ ಮಕ್ಕು" (ಮಂಗರಾ. ೬೪-೩). [ ಸಂ. ]

ದಗ್ಧಕರ್ಪೂರ (ನಾ). ಸುಟ್ಟ ಕರ್ಪೂರ; ಉರಿದ ಕರ್ಪೂರ: ದಗ್ಧಕರ್ಪೂರದಂತೆಲ್ಲಾ ಜನಂಗಳೊಳ್ ಸ್ನಿಗ್ಧಮೆನೆ ಪಸರಿಸುವ ಕಾಮಾರಿಯುಗ್ನಿಕರರುಂಗ್ಧವಲಿಮಾಸ್ತ್ರ ತ್ರಿಯುಕ್ಷನೆ (ವೀಶೈಪು. ೩-೦೪-೧).

[ ದಗ್ಧ + ಕರ್ಪೂರ ]

ದಗ್ಧಪಟ (ನಾ). ಸುಟ್ಟ ಅರಿವೆ, ಬಟ್ಟೆ: ನಿತ್ಯನೇಮವೆಂದು ಮಾಡುವ ಭಕ್ತಿವಿದಂಗೆ ಮಾಡಿಯೂ ಮಾಡದಿದ್ದಡೇನು ದಗ್ಧಪಟದಂತೆ (ಮೋಳಿಮಾ. ೧೪-೫೦): ಅನುಭಾವಿಯಾದಡೆ ಸುಟ್ಟ ಸರವೆಯಂತಿರಬೇಕು ಅನುಭಾವಿಯಾದಡೆ ದಗ್ಧಪಟದಂತಿರಬೇಕು (ಅಬಂದೀ. ೧೯೨-೧೨); ದಗ್ಧಪಟವೆಂದಿನಂದದಿ ತೋಱಲಿಳೆಯಲಿ ವಿದಗ್ಧರಾರದನುಟ್ಟು ತಳ್ಳಿದರು ಹಿಮಮಂ (ಕವಿಚ. III, ೦೨೦ ನಿಜಲೀಟಕಾರತ್ನ). [ ದಗ್ಧ + ಪಟ$_2$ ]

ದಗ್ಧಪಟನ್ಯಾಯ (ನಾ). ಸುಟ್ಟ ವಸ್ತ್ರದಂತೆ ಮೂಲರೂಪವಿದ್ದರೂ ಮೂಲಗುಣವಿಲ್ಲದ ಸ್ಥಿತಿಯನ್ನು ವಿಪರಿಸುವ ಒಂದು ಬಗೆಯ ನ್ಯಾಯ: ಬಾಹ್ಯಕರಣಂಗಳು ಕರಣಮುದಕ್ಕೆ ತೆಱಹುಗೊಡದೆ ಅಳವಟ್ಟು ಅವಗ್ರಹಿಸಿ ದಗ್ಧಪಟನ್ಯಾಯದ ಹಾಂಗೆ ತೋಱುಕೆಯಿದ್ದು ಅವಱ ಗುಣಧರ್ಮ ಕರ್ಮಂಗಳೇನೂಯಿಲ್ಲದೆ ಸದ್ಯೋನ್ಮುಕ್ತನಾಗಿ (ಷಟಗೋ. ೨-೮೦).

[ ದಗ್ಧಪಟ + ನ್ಯಾಯ ]

ದಗ್ಧವಾಣಿ (ನಾ). ಚೆನ್ನಾಗಿ ಮಾತನಾಡುವುದಕ್ಕೆ ಬಾರದವನು; ವಾಗ್ಮಿಯಲ್ಲದವನು: ಕವಿಯಂ ಕಂಡೊಡೆ ಶಾಸ್ತ್ರಹೀನನಿವನೆಂದಿಂತಾರ್ದು ಶಾಸ್ತ್ರಜ್ಞನಂ ಕವಿಯಲ್ಲೆಂದಣಮಾರ್ದು ಮಿಕ್ಕ ಬಹುಶಾಸ್ತ್ರಜ್ಞನಪ್ಪ ಮಹಾಕವಿಯುಂ ಕಂಡೊಡೆದಗ್ಧವಾಣಿಯುವನೆಂದಿಂತಾರ್ದು ಹಾಸ್ಯೋಕ್ತಿಯಿಂ ಕವಿಗಳ್ ಪರ್ತಿಪರ್ (ಸೂಕ್ತಿಸು. ೦-೩೭). [ ದಗ್ಧ + ವಾಣಿ$_1$ ]

ದಗ್ಧವಾರಿ (ನಾ). ಸುಟ್ಟು ಆವಿಯಾಗಿ ಹೋದ ನೀರು(?): ಉರಿದಱಿದವ್ವ್ವದು ಎಮ್ಮಯ ಶರೀರವೋ ಮೆಮ್ಮ ಪುತ್ರಶೋಕಾನಲನಿಂ ನರಪಾಲ ಮತ್ತಮನಲಾಂತರಮೇವುದೊ ದಗ್ಧವಾರಿಯೆಂಬುದುಮುಂಟೆ (ಅಜಿಪು. ೧೦-೩೯). [ ದಗ್ಧ + ವಾರಿ$_2$ ]

ದಗ್ಧಹಸ್ತ (ನಾ). ೧. [ ಸಾಮುದ್ರಿ ] ದುರದೃಷ್ಟಕರವಾದ ಕೈ; ಬರಿಗೈ. ೨. ಅದೃಷ್ಟವಿಲ್ಲದವನು; ಬರಿಗೈಯವನು: ಯಾವಾತನ ಹಸ್ತದಲ್ಲಿ ರೇಖೆಗಳು ಕಪ್ಪಾಗಿಯಿರಲು ಆತನನ್ನು ದಗ್ಧಹಸ್ತನೆಂದು ಹೇಳುವರು (ಸಾಮುಲ. ೯೪-೮). [ ದಗ್ಧ + ಹಸ್ತ ]

ದಗ್ಧಿಕೆ (ನಾ). ಸೀದುಹೋದ ಅನ್ನ; ಕರಿಕಾದ ಅನ್ನ; "ಸುಟ್ಟ ಅನ್ನ ಹೊತ್ತು" (ಗಂಗಾಮ. ೦೬೨). [ ಸಂ. ದಗ್ಧಿಕಾ ]

ದಗ್ಲಿ 'ದೊಗ್ಗಳೆ' ನೋ.

ದಚ್ಚಿ (ನಾ). ೧. ಹುಣಿಸೇಬೀಜದ ಬೇಳೆ; ಹುಣಿಸೆಪಕ್ಕ. ೨. ಕವಡೆ. 'ದಚ್ಚಿಬಾರ' ಪರಾ. ೩. ದಚ್ಚಿಬಾರದ ಆಟದಲ್ಲಿ ಬೀಳುವ ನಾಲ್ಕರ ಗರ; ಚೌಕ.

ದಚ್ಚಿ ಬಾಚು=ಕವಡೆಯಾಟದಲ್ಲಿ ನಾಲ್ಕರ ಗರ ಬಿದ್ದ ಕವಡೆಗಳನ್ನು ಬಾಚು: ಕೈಮೇಲೆ ಕವಡೆಯಾಡುವಾಗ ಪ್ರತಿಸಾರಿಯೂ ಕಮಲೆಯೇ ದಚ್ಚಿ ಬಾಚುತ್ತಿದ್ದಳು (ರೂಢಿ). ದಚ್ಚಿಯಾಟ = ಚೌಕಾಬಾರ: ದಚ್ಚಿಯಾಟ ಆಡೋಣ ಬಾ (ರೂಢಿ). [ ದೇ.॥ ತಮಿ. ತಚ್ಚಿ; ತೆಲು. ದಚ್ಚಿ ]

ದಚ್ಚಿಬಾರ (ನಾ). (ಕವಡೆಯಿಂದಾಡುವ) ಚೌಕಾಬಾರ: ದಚ್ಚಿಬಾರ ಆಡೋಣ ಬಾ (ರೂಢಿ). [ ದಚ್ಚಿ + ಬಾರ್ಸ್ಯ./ತಮಿ. ತಚ್ಚಿಪಾರಾ ]

ದಟದಟ (ನಾ). ಒಂದು ಅನುಕರಣ ಶಬ್ದ. 'ದಟದಟಿಸು' ಪರಾ.

ದಟದಟಿಸು (ಕ್ರಿ). ದಟದಟ ಎಂದು ಶಬ್ದಮಾಡು: ಮುಗಿಲಡವಿಯೊಳ್ಪ್ಪಲೆಯುಗುಳ್ದ ದವಶಿಖಿಯಂತೆ ಬಗೆಗೊಳಿಸಿ ಬಳ್ಳಿಮಿಂಚಾವಳ್ಳಿ ದಟದಟಿಸಿ ದಗದಗಿಪ ದವದಂತೆ ಸಿಡಿಲ ರವವೆಸೆಯೆ (ಸೌಂದಪು. ೧೫-೩೯).

[ ದಟದಟ + -ಇಸು$_8$ ]

ದಟಲ್ (ನಾ). ಒಂದು ಅನುಕರಣ ಶಬ್ದ: ಜೊಜ್ರೆಂಬ ಚುಮ್ಮೆಂಬ ಚಕ್ಕೆಂಬ ಥೊಕ್ಕೆಂಬ ಧಡಲೆಂಬ ದಟ[ ಪಾಠಾಂ. ಡಟ, ಠಣ ]ಲೆಂಬ . . . ಕೂರಸಿಗಳುರವಣೆಯ ದನಿಯುಡಸುತಂ ಪುಟ್ಟೆ (ಇಹರ. ದೇ. ೪೨-೦).

ದಟ್ಟ$_1$ (ನಾ). ೧. ಒತ್ತಾದುದು; ಸಾಂದ್ರವಾದುದು: "ಘನ, ನಿರಂತರ, ಸಾಂದ್ರ-ದಟ್ಟವಾದುದು" (ನಾಚರಾ. ೬); "ಬಹುಳಂ ಘನಂ ಸಾಂದ್ರಮವಿರಳಂ ದಟ್ಟಮದು" (ಮಂಗರಾ. ೦೨೮-೮); ಆಶಾವಧೂ ಮೌತ್ಯವರ್ತನದಿಂದಂ ಗಗನಸ್ಥಳೀಕುಲಟೆ ಕೊಂಡಳ್ ನೀಲ ಚೇಲಾವಗುಂಠನಮಂ ತಾನೆನೆ ದಟ್ಟಮಾಗಿದೆ ತಮಂ ತಳ್ತತ್ತು ದಿಕ್ಪ್ರಾಂತಮಂ (ಅನಂಪು. ೭-೭೩); ದಟ್ಟದ ಸೀರೆ ಬಟ್ಟನ ಬಟ್ಟುಂಗುರಯಿಟ್ಟಾ ಶಿವಿಯ ಕಲ್ಲೋಲೆ (ಶ್ರೀಪಾಲ. ೪-೭೩): ಆ ವಾಯುವೊಂದೊಂದು ತಳದೊಳಗಿಪ್ಪತ್ತುಸಾಸಿರಗಾವುದ ದಟ್ಟ ಗಾವುದಕಿಪ್ಪು ಕಡಿಮೆ ತುದಿಗವಱಲ್ಲಿ ಕೀವಿರುತಿಹುವಾಱುದ್ರವ್ಯ (ಭರಚ. ೭೭-೭೧); ಗುರುವನ್ನು ಸುತ್ತಲೂ ಆವರಿಸಿಕೊಂಡಿರುವ ವಾಯುಮಂಡಲವು ಬಲು ದಟ್ಟ ಮತ್ತು ದಪ್ಪ (ಜ್ಯೋತಿರ್ವಿ. ೧೩೩). ೨. ಒತ್ತಾಗಿ ಹೆಣೆದ ಬಟ್ಟೆ: ಮಂದಲಿಗೆಯನ್ನು ಹಾಸಿ ಅದರ ಮೇಲೆ ಸತ್ತಿ ದಟ್ಟವೊಂದನ್ನು ಹಾಕಿ ಮಲಗಿಕೊಂಡ (ಚಂಗಾಳ್. ೨೦೭); ಹಲವಾರು ಬಣ್ಣಬಣ್ಣದ ಬಟ್ಟೆಯ ಚೂರುಗಳನ್ನು ನೇರವಾಗಿ ಕತ್ತರಿಸಿ ಸೇರಿಸಿ ಹೊಲಿದ ದಟ್ಟಗಳನ್ನು ನೆಲದ ಮೇಲೆ ಎಲ್ಲೆಲ್ಲೂ ಹಾಸಿದಂತೆ ಕಾಣಿಸುವ ಹೊಲಗದ್ದೆಗಳು(ನಂಟರು. ೧೩೦). 'ದಟ್ಟಿ$_1$' ಪರಾ. (ಗಂ). ೩. ದಪ್ಪವಾದ; ಮಂದವಾದ; ಸಾಂದ್ರವಾದ: ಹೊಲಸುಮೈಯುವಗೇಕೆ ಹೊಸ ಕಸ್ತೂರಿ ವಾಟ ತಲೆದೋಱುವವಗೇಕೆ ದಟ್ಟ ಪುನುಗು (ಪುರಂದ. ೦-೦೦೦-೧). 'ದಟ್ಟಗತ್ತಲೆ' ಪರಾ.

[ ದೇ. ॥ ತಮಿ. ಮಲ. ತಟ; ತುಳು. ದಟ, ದಟಿಂ; ತೆಲು. ದಟ್ಟ; ಕುಇ. ಡಾಟ./ಮರಾ. ದಾಟ್ ]

ದಟ್ಟ$_2$ (ನಾ). ಒಂದು ಬಗೆಯ ವಾದ್ಯ: ಈಱುನ ಈಶ್ವರಮುಡಿಯಾರ್ಗ್ಗೆ ಕೊಟ್ಟ ಶಿವಳಿ ೧ ದಟ್ಟ ೩ ಮಿಣ್ಡಕೆ ೩ . . . , ಪಜ್ಚಮಹಾಶಬ್ದಮಂ ತ್ರಿಕಾಳಂ ಬಾಜಿಸುಂದಕ್ಕೆ (ಮ್ಯಆರಿ. ೧೯೪೬, ೨೮-೧೪; 1033). [ ? ]

ದಟ್ಟ$_3$ (ನಾ). ಹೆಣ; ಶವ(?): ಪರ ಗಿರಿ ಬಲ ಪಾರ್ವತಿ ವಟ ತರು ಪುಳಿನಂ ದ್ವಿಫಳೆ ದಾಣೆ ಶುಕ ನರಿ ದಟ್ಟಂ ನೊರೆ ಪುಣ್ಯ ಪಾವು ಶುಭ ಸುಖ ವರ ಸಿತ ಪದಿನೆಂಟು ನಾಮ ಶಿವಶಬ್ದಂಗಳ್ (ನಾನಾರ್ಥಂ. ೫). [?]

ದಟ್ಟಂದರಿ (ಕ್ರಿ). ಬಟ್ಟೆಯನ್ನು ಹರಿ,-ಕತ್ತರಿಸು: ಪುರ್ಚಿನಿಂ ಕುಣಿದಾಡಿ ದಟ್ಟಂದರಿವ ನಗುವ ಕವಡಿನಟಮಟದ ವೇಸಂದಳೆಯುದಿರ್ಪೊಡಂ ನನ್ನಿ . . . ಪೊಡಕರಿಪ ದಾರಿಯನಿತ್ತನಿರುಕಿಸಾ ದುಃಖದಿಂ ಪರಿಪಕ್ವಮಾದ (ಸಂಸಪ. ೨೩-೧೪). [ ದಟ್ಟ$_1$ + ತರಿ$_1$ (< ತಱಿ$_1$) ]

ದಟ್ಟಕೂದಲು 'ದಟ್ಟಗೂದಲು' ನೋ.

ದಟ್ಟಗತ್ತಲೆ (ನಾ). ಸಾಂದ್ರವಾದ ಕತ್ತಲೆ; ಕಗ್ಗತ್ತಲೆ: ಪಾತಾಳದಡಿಯ ದಟ್ಟಗತ್ತಲೆಯನ್ನೆತ್ತಿ ಸತ್ಯಲೋಕದ ಪಾವಟಿಗೆಗೆ ಹೊದೆಯಿಸಿದಂತಿದೆ (ಮಂತ್ರಶ. ೯೦-೦೫). [ ದಟ್ಟ$_1$ + ಕತ್ತಲೆ$_1$ (< ಕಟ್ಟಲೆ) ]

ದಟ್ಟಗಾಡು (ನಾ). ಒತ್ತಾದ ಕಾಡು,-ಅರಣ್ಯ: ಮಳೆಯ ಬೀಡಿನೆದೆಯ ಮೇಲೆ ದಟ್ಟಗಾಡು ಹಬ್ಬಿರೆ (ಅನಿಕೇ. ೪೨-೭). [ ದಟ್ಟ$_1$ + ಕಾಡು$_2$ ]

ದಟ್ಟಗೂದಲು, ದಟ್ಟಕೂದಲು (ನಾ). ಒತ್ತಾದ ಕೂದಲು: (೬). ದಟ್ಟಕೂದಲು: ಅವಳಿಗೆ ದಟ್ಟಕೂದಲಿದೆ (ರೂಢಿ).

[ ದಟ್ಟ$_1$ + ಕೂದಲು (< ಕೂಂದಲ್) ]

**ದಟ್ಟಗೆ$_1$** (ನಾ). ಸೀರೆಯ ಸೆರಗು (?) : ಎಲೆಯಕ್ಕ ನಿನ್ನ ಪುರದೊಳಗೆ ಪರಮೇಶ್ವರಂ ಗೆಲವಿನಿಂ ಶ್ರೀಗಂಧವಿಧುಲೇಖನೀಲಪಂ ವಿಲಘದಿಂ ಕುಣಿ ಹಾಂತು ನೆಲಸಿದನಿದೇನೆಂದು ಗಿಳಿ ಕೇಳಲವಳು ನಾಣ್ಚಿ ಒಲವಿನಿಂ ದಟ್ಟಗೆಯ ಮುಚಿಸಿಕೊಂಡಳು (ಪ್ರಭುಪು. ೪-೧೪೨). [ ? ]

**ದಟ್ಟಗೆ$_2$** (ಅ). ಹೆಚ್ಚು ಒತ್ತಾಗಿ ; ತುಂಬ ನಿಬಿಡವಾಗಿ; ಸಾಂದ್ರವಾಗಿ: ಬೀಜಗಳನ್ನು ದಟ್ಟಗೆ ಬಿತ್ತಬಾರದು (ರೂಢಿ). [ ದಟ್ಟ$_1$ + – ಅಗೆ$_3$ ]

**ದಟ್ಟಡಿ, ತಟ್ಟಡಿ** (ನಾ). ಮಕ್ಕಳು ನಡೆಗಲಿಯುವಾಗ ಹತ್ತಿರ ಹತ್ತಿರವಾಗಿ ಇಡುವ ಹೆಜ್ಜೆ ; ಒತ್ತಾದ ಹೆಜ್ಜೆ ; ತಪ್ಪುಹೆಜ್ಜೆ : ತಳರ್ನಡೆಮು ದ್ದು ಮೊ ಗಂ . . . ದಟ್ಟಡಿಯೊಳ್ಪರಿದೋಡುವಂಗಣಂ ನೆಱೆ ತನಗೊಪ್ಪುವರ್ಭಕನನೊರ್ವನನಾಂ ಪಡೆವಂದಮಾವುದೋ (ಸುಕುಮಾ. ೯-೯೯) : ಬ್ರಹ್ಮಾಂಡ ಪವಣಿಸಿದ ವಿಲಸಿತದ ವಿಭುವಿಂಗೆ ದಟ್ಟಡಿ ಬಳುಕುನಡೆ ಮೆಲ್ನಡೆಗಳೆಂಬಿವು ತಿಳಿವವರ ಮನಸಿಂಗೆ ಮಱೆ ತಾನಲ್ಲವೇಯೆಂದ (ತೊರರಾ. ೦-೮-೭೭) ; ಮೆಲ್ಲಮೆಲ್ಲನೆ ದಟ್ಟಡಿಯನಿಡಲ್ ಗೆಜ್ಜೆಗಳ್ ಘಲಘಲ್ಲನೆ . . . ಪಳಿಕಿನಿಂ ಸವೆದ ನೆಲೆಗಟ್ಟು ಜಾರ್ವುದು (ಚಲಪು. ೫-೪೦) ; ದಟ್ಟಡಿಯನಿಕ್ಕುವ ಬಾಲಕನಂಗದೊಂದು ಮಾರ್ಪೊಳಪಿರೆ ನೀಲಕುಟ್ಟಿಮದೊಳ್ (ರಾಜಶೇ. ೪-೭೨) ; ಶಿಷ್ಯಂಗೆ ತೊದಲುನುಡಿಯೇಕೆ ಕಳ್ಳಂಗೆ ದಟ್ಟಡಿಯದೇಕೆ (ಸರ್ವಜ್ಞ. ೧೧೮೩) : ಹೆಜ್ಜೆಹೆಜ್ಜೆಗೆ ತಪ್ಪ ಮಾಡಿದರೇನಹುದು ದಟ್ಟಡಿಯನಿಡದೆ ನಡೆ ಕಲಿಯಬಹುದೇ ? (ಅರಳು. ೨೭೩-೪). **ತಟ್ಟಡಿ** : ಅಂಬೆಗಾಲಿಂದ ತೊದಲುಲಿದ ತಟ್ಟಡಿಯಿಟ್ಟು ಬೆಳಬೆಳದು (ಜಿನಮು. ೪೦-೪). [ ದಟ್ಟ$_1$ + ಅಡಿ$_1$ ]

**ದಟ್ಟಡಿಕಾಱ** (ನಾ). ದೃಢವಾದ ಹೆಜ್ಜೆಯನ್ನು ಹಾಕುವವನು ; ಗಂಭೀರವಾದ ನಡಗೆಯನ್ನುಳ್ಳವನು: ಹಲವು ಪಯಣದೊಳು ದಟ್ಟಡಿಕಾಱ ಗಂಗಾಕೂಟವದು ಮುಟ್ಟಮುಟ್ಟಲಾಯ್ತೆನೆ ಬರುತಿರ್ದ (ಭರತ. ೩೭-೨೪).

[ ದಟ್ಟಡಿ + – ಕಾಱ ]

**ದಟ್ಟಡಿಯಿಡಿಸು** (ಕ್ರಿ). ನಡೆಗಲಿಸು ; ತಪ್ಪುಹೆಜ್ಜೆಯನ್ನು ಹಾಕುವಂತೆ ಮಾಡು: ಪಟ್ಟಾಭಿಷೇಕಾನು ಕಟ್ಟಿದಾನೆಯ ನೋಡಿ ತೊಟ್ಟ ಭೂಷಣವ ಮಾವುತನಿಗೆ ಕೊಟ್ಟಾನು ದಳಕರ್ತ ಮೆಚ್ಚಿದನಾನೆಯ ದಟ್ಟಡಿಯಿಡಿಸಿ ನೋಡಿದರು (ಸೌಂದಕಾ. ೫-೭೦). [ ದಟ್ಟಡಿ + ಇಡಿಸು$_1$ ]

**ದಟ್ಟಡಿಯಿಡು** (ಕ್ರಿ). ನಡೆಯಲು ಪ್ರಾರಂಭಿಸು ; ತಪ್ಪುಹೆಜ್ಜೆಹಾಕು ; ನಿಧಾನವಾಗಿ ನಡೆ : ಎಡೆಯಾಡಿದಪುದು ರನ್ನದ ಸೊಡರೆನೆ ಹರಿನೀಳರತ್ನಕುಟ್ಟಿಮದೊಳ್ದಟ್ಟಡಿಯಿಡುವ ತನೂಭವನಂ ನಡೆ ನೋಡಲ್ಪಡೆದ ತಾಯ ಜನ್ಮಮೆ ಸಫಳಂ (ಮಲ್ಲಿಪು. ೩-೧೧೮) ; ಚಲನದೊಳ್ ಭವನಾಂಗಣದೊಳ್ ಕಂದನೆಂದು ದಟ್ಟಡಿಯಿಡುವಂ (ಚಂದ್ರಪು. ೩-೪೮) : ದಟ್ಟಡಿಯಿಟ್ಟು ಭಕ್ತಿ ತನ್ನಯ ಮನಮಂ ಬಂದಡರೆ ಭರಂ ಮಿಗೆ ಮುದದಿಂದಂ ಪುಷ್ಪಾಪಚಯಕೆ ಗಿರಿಸುತೆ ಬಂದಳ್ (ಗಿರಿಕ. ೫-೫೦) ; ದಟ್ಟಡಿಯಿಡುತಲೆ ಬೆಣ್ಣೆಯ ಮೆಲುವ ತೋಳನ್ನಾಡೈ (ಪುರಂದ. ೩-೦೮೯-೩) ; ಅಂಬೆಗಾಲಿಕ್ಕಿ ತೊಳಲುವನಲ್ಲ ಕಾಲು ಬಲಿದು ದಟ್ಟಡಿಯಿಡುವವನಲ್ಲ ಬಾಲನೆಲ್ಲಿಗೆ ಹೋದನವ್ವ (ಮೋಹತ. ೪-೮೩). [ ದಟ್ಟಡಿ + ಇಡು$_1$ ]

**ದಟ್ಟಣೆ** (ನಾ). ನಿಬಿಡತೆ ; ಒತ್ತಾಗಿರುವುದು ; ಕಿಕ್ಕಿರಿದಿರುವಿಕೆ ; ಸಾಂದ್ರತೆ ; ನೆರವಿ : ಕೊಡರಿದಡೆ ತಾಂ ಕೈಗಟ್ಟಿ ವ್ಯಾಡನೊಡನಾದಡಂಜದೆ ಗೆಲಲು ಜಂಗಮದ ದಟ್ಟಣೆಗೆ ಸೈರಿಸುವ ಮನವಳವಟ್ಟಿರಲು (ಬಸವು. ೮-೫೭) ; ಕಿಚ್ಚಿನುಱುಬೆಯ ದಟ್ಟಣೆಗೆ ಧಾರೆಗಳ ಬಿಡುತೆಣ್ಣೆಗಳ ಪಕ್ಕಲೆಯ ಥಟ್ಟುಗೆಡುವಾನೆಗಳಿಗಾನೆಯ ಕಟ್ಟುತ (ತೊರರಾ. ೫-೭-೧೩): ಜನವಸತಿಯ ದಟ್ಟಣೆಯಿಂದ ನಿರ್ಣಯಿಸಲ್ಪಡುವುದಾದರೆ ದ್ರಾವಿಡಜನಾಂಗದ ಗುರುತ್ವಾಕರ್ಷಣವು ಮೈಸೂರುರಾಜ್ಯದ ಸಮೀಪವರ್ತಿಯಾಗುವುದು (ಕಕ್ಕಪ್ರಾ. ೪೨೩). [ ದಟ್ಟಯಿಸು + – ಅಣೆ$_4$ ]

**ದಟ್ಟದರಿದ್ರ** (ನಾ). ಕಡುಬಡವ ; ನಿರ್ಗತಿಕ : ದಟ್ಟದರಿದ್ರನಂತೆ ಕಾಸಿಗೆ ಮನವಿತ್ತನೆಂದವಳಕೀರ್ತಿನಿತಂಬಿನಿ ದೂಱುತಿರ್ಪಳ್ (ವೀರವಿ. ೨-೫೪) : ದಟ್ಟದರಿದ್ರರು ಮೊದಲಾಗಿ ಹತ್ತಸು ಬಿಟ್ಟಹರುಂಟು ಬಾಹ್ಯದೊಳು (ಭರತ. ೭೦-೮೨) : ಸತಿಪತಿಯರು ರೂಪಸಂಪನ್ನರಾದರೆ ದಟ್ಟದರಿದ್ರರು ಅರರೆ ! (ಇಂಚಾಪ. ೧೮೧-೯೩) : ಹೊಟ್ಟೆಗೆ ಹಿಟ್ಟಿಲ್ಲದ, ಮೈಗೆ ಬಟ್ಟೆಯಿಲ್ಲದ, ದಟ್ಟದರಿದ್ರರಿಗೆ ಕುಲವಂತೆ ಕುಲ (ತುಂಗಭ. ೫೪) : ಇನ್ನೆಬ್ಬರ ಅನುಕೂಲತೆಗೆ ಒದಗದ ಲಕ್ಷಾಧೀಶನು ದಟ್ಟದರಿದ್ರನೆಂದೇ ನನ್ನ ಅಭಿಪ್ರಾಯ (ರಂಗಶೋ. ೧೫೮). [ ದಟ್ಟ$_1$ + ದರಿದ್ರ ]

**ದಟ್ಟದಾರಿದ್ರ್ಯ** (ನಾ). ಕಡುಬಡತನ ; ನಿರ್ಗತಿಕತನ : ಶ್ರೀರಮ್ಯವಪ್ಪ ಭೋಗಂಗಳಳಿದಾ ದಟ್ಟದಾರಿದ್ರ್ಯವಾಗಲು (ವೀಶೈಪು. ೩-೦೭-೧೪).

[ ದಟ್ಟ$_1$ + ದಾರಿದ್ರ್ಯ ]

**ದಟ್ಟದಾರಿದ್ರ್ಯತ್ವ** (ನಾ). = ದಟ್ಟದಾರಿದ್ರ್ಯ : ಅಕುಲಂಗೆ ಸಕಲರಾಜ್ಯಂ ತ್ರಿಕರಣಶುದ್ಧಂಗೆ ದಟ್ಟದಾರಿದ್ರ್ಯತ್ವಂ . . . ಮೆರೆವುದೀ ಕಲಿಯುಗದೊಳ್ (ನೀತಿಸಾ. ೧೫೨). [ ದಟ್ಟ$_1$ + ದಾರಿದ್ರ್ಯತ್ವ ]

**ದಟ್ಟದೊವಲ್** (ನಾ). ದಪ್ಪವಾದ ತೊಗಲು : ನಂಜುಂಡಂ ದಟ್ಟದೊ [ಪಾಠಾಂ. ದ]ವಲಂ ಪೊದೆದಗಜವೆರಸು ಬೆರೆಪೊಡಲೊಳಿರ್ದಂ (ರಾಮಾಶ್ವ. ೧೧೫-೭). [ ದಟ್ಟ$_1$ + ತೊವಲ್$_2$ (<ತೋಲ್$_1$) ]

**ದಟ್ಟಪಳುವ** (ನಾ). = ದಟ್ಟಗಾಡು : ಸಾಗಿದಳು ಹಜ್ಜೆಹಜ್ಜೆಯನಿಟ್ಟು ದಟ್ಟಪಳುವದ ಪಸುರ್ ನೆಳಲೊಳ್ (ಶ್ರೀರಾಮಾ. ೧೨೭-೭೭).

[ ದಟ್ಟ$_1$ + ಪಳುವ (<ಪಱುವ) ]

**ದಟ್ಟಯಿಸು, ದಟ್ಟಯ್ಸು, ದಟ್ಟವಿಸು, ದಟ್ಟಿಸು$_1$, ದಟ್ಟೈಸು** (ಕ್ರಿ). ೧. ಒತ್ತಾಗು ; ಸಾಂದ್ರವಾಗು ; ದಟ್ಟವಾಗು : ಧಿಗಧಿಪರೆಣ್ದೆಸೆಗಾಂತಿರೆ ಭುಜದೊಲು ಗಗನದ ಮೇಲ್ಕಟ್ಟಿಂ ದಟ್ಟಯಿ [ಪಾಠಾಂ. ದಟ್ಟೈ]ಸಲು ವಿಗೆ ಭಕ್ತರ ಜಯರವ ಒಟ್ಟಯಿಸಲು (ತಿರುನಾ. ದೀ. ೨೨೦-೫) : ಭೀಮಸೇನನ ದುಂಡಿಯನು ದಟ್ಟಯಿಸೆ ಸುಯಿ ದಳ್ಳುರಿಯ ಚೂಣಿಯಲಿ ಗಂಡುಗೆದಱಿದ ರೋಷಶಿಖಿ ಹುರಿಗೊಂಡುದಕ್ಷಿಗಳಲಿ (ಕುಮಾ್ಯಗ. ೮-೨೨) ; ಹೆಣೆದುಕೊಂಡವು ಗಗನ ದಿಗು ಧಾರಾಣಿಗಳನು ದಟ್ಟಯಿಸಿ ರಿಪುಮಾರ್ಗಣ ವಿತಾಳಿಸಿ ಮುಸುಕಿದುದು ರಘುನಂದನನ ರಥವ (ತೊರರಾ. ೬-೫೦-೩) : ಹೊಳೆಹೊಳೆಯುವ ಅವರ ಮುಖಗಳನ್ನು ಕಂಡು ಚಕೋರಚಯ ದಟ್ಟಯಿಸಿ ಬಂದವು (ಛಾಮುಹಿ. ೦೨೧). **ದಟ್ಟಯ್ಸು** : ೧. ಬಟ್ಟತಂ ಮಾಡಿ ಸುತ್ತುಗಳೆತ್ತಲ್ಕಸಿತಾತಪತ್ರಮೆನಲಕ್ಕುಂ ತಾನೆಂಬಂತಿರೀ ಜಗದೊಳ್ ಕಣ್ಗೆ ವಿಚಿತ್ರಮಾಗೆ ನೆಱೆ ದಟ್ಟಯ್ಸ[ಪಾಠಾಂ. ದಟ್ಟಯಿಸು]ತ್ತನಿತ್ತಂ ತಮಂ (ಗಿರಿಕ. ೪-೭೭). **ದಟ್ಟವಿಸು**: ೧. ದಟ್ಟವಿಸಿ ದಜ್ಞಾನತಿಮಿರದ ಥಟ್ಟು ಮಾರ್ಗವ ಕಾಣಲೀಸದು (ನಿಭಾಗ. ೫-೮-೪). **ದಟ್ಟಿಸು$_1$** : ೧. ನಟ್ಟಡವಿಯಲ್ಲಿ ಬೀಡು ಬಿಟ್ಟಿರಲಾ ಬಂಧುದತ್ತನಾತನ ಬೀಡಂ ನಟ್ಟಿರುಳು ಬಂದು ಬೇಡರ್ ದಟ್ಟಿಸಿ ಕೂಕಿಱಿದು ಸುತ್ತಿ ಮುತ್ತಿದರಾಗಳ್ (ಪುಣ್ಯಾಸ್ರ. ೮-೮) ; ತುರುಗಿ ದಟ್ಟಿಸಿದಾ ಕತ್ತಲೆಯ ಮೊತ್ತದೊಳು ಸ್ಮರನಂಗಜಾತ ಪ್ರೀತರ ಕೂಡಿ . . . ಮೆಲ್ಲಡಿಗಳಿಡುತೇ ಬರುತಿರಲು (ನವಮೋ. ೧೭-೨೧). **ದಟ್ಟೈಸು**: ೧. "ದಟ್ಟೈಸಿತೆಂದೊಡತಿಸಾಂದ್ರಾರ್ಥಂ" (ಭಾರನಿ. ೩೪) : ಚಿತ್ರಕ್ರೊಗೆಗುಮತಿಭೀತಿಯೆನಲುರ್ವಿಗೆ ದಟ್ಟೈಸಿರ್ದುದಂಧಕಾರಾಕಾರಂ (ದಶಕು. ೨-೪೨) : ಬಾಲಕನ ಘನತೇಜಮುರ್ವಿಯ ಮೇಲೆ ಪರ್ಬಲು ಸೂಚಿಮುಖಮುಂ ಕೀಲಿಸುವೊಡರಿದೆನಿಸಿ ದಟ್ಟೈಸುವ ತಮಂಧದಲಿ (ಬಸಪು. ೩-೩೦) ; ದಟ್ಟೈಸಿತು ಬನಬನದಲ್ಲಿ ಕೊಳ ಮಂಳಲೊಟ್ಟು ಗೋಮತಿಯ ತೀರದಲಿ (ಮೋಹತ. ೩೭-೭೨) : ಕಿನ್ನರರ್ ಸಿದ್ಧ ವಿದ್ಯಾಧರರ್ ಕಿಂಪುರುಷರು ದಟ್ಟೈಸಿದರ್ (ಚಬಪು. ೩೧-೪೦) ; ಕತ್ತಲೆಯ ಮೊತ್ತ ದಟ್ಟೈಸಲಾ ವಾರ್ತೆ ಕೇಳುತ್ತರ್ಕ ತನ್ನ ಚೂಣಿಯ ಘಟರ ಕಳು

ಮಲ್ಕೆ (ನವಮೋ. ೧೪-೨೭) ; ಬುವಿ ಬಾನಂತರವೆಲ್ಲವ ಕತ್ತಲು ತುಂಬಿರಲು . . . ತಮಾಕಿವು ಸೇತುಪೂ ಎನೆ ದಟ್ಟೈಸಿರೆ ತಾರೆಗಳು (ಗದೀಶ. ೨೮-೪) : ಕತ್ತಲಲಿ ಮಿಂಚು ಹೊಳೆದಂತಾಗಿ, ಬಟ್ಟೆಗೆಡುವುದು, ಕುರುಡು ದಟ್ಟೈಸಿ! (ಚಂದ್ರಸ. ೨೦-೧೯). ೨. ಹೆಚ್ಚಾಗು; ಅತಿಶಯವಾಗು: ನೆಟ್ಟನೆ ಪೃಥಿವೀ ಪತಿಗಳು ತನಯರ್ಗೆ ಪಟ್ಟವ ಕಟ್ಟಿ ಕಾಣಿಕೆಯ ಇಟ್ಟೆಡೆಗಿದರೇನು ಹೀನವೆ ಪರಿತೋಷ ದಟ್ಟೈಸುವುದು ಕಣ್ಮನಕೆ (ಮೋಹತ. ೩೭-೧೨).

[ ದಟ್ಟ$_1$ + – ಇಸು$_3$ ]

ದಟ್ಟಯ್ಸು ‘ದಟ್ಟಯಿಸು’ ನೋ.

ದಟ್ಟವಳ್ಳಿ (ನಾ). ಒತ್ತಾಗಿ ಬೆಳೆದಿರುವ ಬಳ್ಳಿ ; ನಿಬಿಡವಾದ ಲತೆ : ಅತ್ವಕ್ಕೆ – ಬಟ್ಟತ್ತು ತೊಡೆ, ಬಟ್ಟದೊಡೆ, ಬೆಟ್ಟವೇಸಗೆ, ದಟ್ಟವಳ್ಳಿ – ಇವುಮಾದಜಂತೆ (ಶಮದ. ೧೭೮ ಪ್ರಯೋ). [ ದಟ್ಟ$_1$ + ಬಳ್ಳಿ ]

ದಟ್ಟವಿಸು ‘ದಟ್ಟಯಿಸು’ ನೋ.

ದಟ್ಟಳ್ (ನಾ). ಪರಾಕ್ರಮಿ ; ಶೂರ (?) : ಅಟ್ಟದಲೆಯ ಮಾತನ್ನೆಟ್ಟನೆ ದಟ್ಟಳ್ಸಿರಗಂಬೆರಗುವಂ ಬಗೆಯದೆ ಕಟ್ಟಳ್ಸತ್ತನೆಱೆಯಮ್ಮ (ಸಾಇಇ. IX-1, ೩೧-೧೧ : 966).

[ ☞ ಇದು ‘ದಟ್ಟಾಳ್’ ಎಂಬುದರ ಅಪಲಿಖಿತವಿರಬಹುದು.]

ದಟ್ಟಿ$_1$, ಧಟ್ಟಿ (ನಾ). ೧. ಸೊಂಟಕ್ಕೆ ಸುತ್ತುವ ವಸ್ತ್ರ ವಿಶೇಷ : ಮಡದಿಯಿಲ್ಲದೆ ಬೊಮ್ಮಚರಿಯವು ಉಡಿಗೆ ನಾರಿನ ದಟ್ಟಿಯಲ್ತೆ ತಮ್ಮಡಿಗಳಾಳಗವೇಕೆ (ಕಾಶಿರಾ. ೨೩-೪೨) ; ಉಡಿಯ ಪಟ್ಟೆಯ ದಟ್ಟಿ ಬೆನ್ನ ಜಲ್ಲಿಯಂ ವೀರರೆಡಬಲದೊಳಗೈತರಲು (ಕಂನವಿ. ೧೨-೩೪) ; ನಡುವಂ ಬಿಗಿದುಡೆ ದಟ್ಟಿಯನೊಡನರಿವನಿತಾಜನಕ್ಕೆ ಜಗುಳ್ಗುಂ ಮುಡಿಗಳ್ (ಚಕವಿ. ೩-೨೨) ; ಪಾಂಚಾಲಿಯ ದೀನಾಲಾಪಗಳನ್ನು ಕೇಳಿ . . . ಭೀಮಸೇನನು . . . ವಿಜೃಂಭಿಸಿ ದಟ್ಟಿಯನ್ನು ಕಟ್ಟಿ (ಕೃವಾವಿ. ೪೭) : ಕಟ್ಟಿದ ದಟ್ಟಿಯ ಬಲ್ಪಿನ, ತೊಟ್ಟ ಪೊಸಗುಪ್ಪಸದ ಚೆಲ್ವಿನ . . . ಕಿಱುಜವ್ವನದ ಬಿಂಕದ ನಡೆವೊಂದುಗಾಡಿಯ ಪುಷ್ಕಲಂ (ರಾಮಾಶ್ವ. ೪೮-೧೭) : ಸೊಂಟದಿಂದ ಕೆಳಕ್ಕೆ ನಾಲ್ಕು ಮೊಳದ್ದು ಒಂದು ದಟ್ಟಿ (ನಮ್ಮೂರ. ೯) ; ಧರ್ಮಕ್ಕೆ ದಟ್ಟಿ ಕೊಟ್ಟರೆ ಹಿತ್ತಲಿಗೆ ಹೋಗಿ ಮೊಳ ಹಾಕಿ ನೋಡಿದ (ಗಾದೆ). ೨. ಬಟ್ಟೆ ; ವಸ್ತ್ರ : ನೀಲಿಯ ದಟ್ಟಿಯನಿಳಿಗೆ ದಿಶಾಲಂಬನವಾಗೆ ಕಪಿಚನಸುರಾರಿಯೆನಲ್ಕಾಲೋಕನಕ್ಕೆ ಭಯಮಂ ಸಾಲಿಡುತಂ ತಂದನಂಧಕಾರಕಾರಂ (ನಳಚಂ. ೧೪೩): ಕಾಗಿನ ಸುಚಲ್ಲಣದ ದಟ್ಟಿ ಹೇರಿಟ್ಟ ಹಿಲ್ಲರಿ (ರುಕ್ಮಾಂಗ. ೧೦-೧೮). ೩. ನಡುವಿನ ಸುತ್ತು ಕಟ್ಟಿಕೊಳ್ಳುವ ಪಟ್ಟಿ ; ನಡುಕಟ್ಟು : ಕಾಶೆ ದಟ್ಟಿ ಚಲ್ಲಣಂಗಳಂ ಸಮಂತು ತೊಟ್ಟು ಬಲ್ಮೆಸೆಯಂ ಕರಾಬ್ಜದಿಂದೆ ತಿರ್ದುತೆ (ಹಾರಾಸ್ತ. ೨-೧೧-೦೭). ೪. ಚಿಕ್ಕ ಸೀರೆ ; ಕಿರಿಗೆ : ಪಟ್ಟವಾಳಿಯನುಟ್ಟು ಬನ್ನಿ ದಟ್ಟಿ ಚುಂಗ ಬಿಟ್ಟು ಬನ್ನಿ (ಪುರಂದ. ೧-೧೦೭-೭) : ಚಪ್ಪರ ಮಂಟಪದಾಗ ಹೊಕ್ಕಬಾಳ್ವೊತ್ತಾತು ಪುತ್ರಿಯ ಮಾರಿ ಬಳಲ್ಯಾವ ಬೀಗುಕಿ ದಟ್ಟಿಯ ಉಡಿಸ ಮಗಳಿಗೆ (ಲೋಕಗೀ. ೫೯) : ಉಟ್ಟ ದಟ್ಟಿ ಎಷ್ಟು ಮಾಸಿದೆ (ಮುಂಜಯ. ೦-೦೩). ೫. ಅನೇಕ ಮಡಿಕೆಗಳಿರುವಂತೆ ಬಟ್ಟೆಯನ್ನು ಸೇರಿಸಿ ಹೊಲಿದ ಹೊದಿಕೆ; ಕವುದಿ; ಲೇಪು : ಭುಜಂಗಳ ತಣ್ಪನೊತ್ತು ಬಿಂಕಂಬಡೆದಿರ್ದ ಕೆಳ್ಗದಟಿನೊತ್ತು ವಿಟರ್ ನೆಱೆ ಕಾವುದಲ್ಲದಿ ಕಂಬಳಿ ದಟ್ಟಿ ಬೂರವಡವೆಂಬವು ಕಾವುವೆ ಶೀತಕಾಲಮಂ (ಸೂಕ್ತಿಸು. ೧೧-೨೭೧). ಧಟ್ಟಿ : ೨. ಮುಂಭಾಗದೊಳ್ ಮುತ್ತಿನ ಸರಂಗಳಂ ಚೌಕಳಿಯಾಗಿ ಪೆಣೆದು ಕಟ್ಟಿರುವ ಧಟ್ಟಿ (ಸೌಗಂಧಿ. ೩೦೫-೯). ೩. ಬಱಮಂಡೆ ಪೂಸಿದ ಗಂಧ ಕಾಸೆಯ ಧಟ್ಟಿ ಮೆಱೆಯೆ ಸಬಳಿಗರೆಯ್ತಂದು ತಱುಬಿದರಂದು . ಮಿಱುಗೆ ಸಬಳ ಕಯ್ಗಳಗೆ (ಶಂರಾಸಾಂ. ೧೦-೩೪).

[ ದೇ.॥ ತಮಿ. ತಟ್ಟು; ತುಳು. ದಟ್ಟಿ, ಜಟ್ಟಿ: ತೆಲು. ದಟ್ಟಿ./ಸಂ. ಧಟೀ ]

ದಟ್ಟಿ$_2$ ದಡ್ಡಿ$_2$ ನೋ.

ದಟ್ಟಿ$_3$ (ನಾ). ಶೌರ್ಯ ; ಪರಾಕ್ರಮ : ಕನ್ನಡವಕ್ಕಿ ಪೂಣಾರ್ವಕ್ಕಿ ಮೊದಲಾದ ದಟ್ಟಿಯ ಕೂರಾಳ್ಗಳುಂ ತುತಮ್ಮ ಪಡೆವೆರಸು ಬಂದು ಕಾಣ್ಬುದುಂ (ಕಬ್ಬಿಕಾ. ೧೯೭). [ <ಸಂ. ಧೃಷ್ಟಿ ]

ದಟ್ಟಿಗಟ್ಟಿಸು (ಕ್ರಿ). ೧. ನಡುಕಟ್ಟನ್ನು ಬಿಗಿಸು. ೨. (ಆಲಂ) ಸಿದ್ಧವಾಗಿರುವಂತೆ ಮಾಡು : ಇಂತು ಮೊರೆಯಿಟ್ಟು ಪುರುಡು ಪುಟ್ಟಿಸಿ ದಟ್ಟಿಗಟ್ಟಿಪುದುಂ (ಚಕವಿ. ೨-೩೮ ವ): ಸರ್ವಶಕ್ತಿಯೊಳ್ ಪೊಣರಲ್ಕಾತನಂ ದಟ್ಟಿಗಟ್ಟಿಸಲೆಂದು ದೇವರ್ ತಮ್ಮೊಳೆಸಗಿದ ಪರಿಭವಮುಮವನೊಳ್ ನಡೆಯಿಪೌದಾಸೀನ್ಯಮುಮಂ ಬಿನ್ನವಿಸಿ (ಚಕವಂ. ೨೧-೮): ನಿನ್ನ ವಾತ್ಸಲ್ಯ ಗುಣಂ ಮುಂದುವರಿದೆನ್ನಂ ದಟ್ಟಿಗಟ್ಟಿಸುತ್ತಿದೆ (ಚಕಬಿ. ೨೭).

[ ದಟ್ಟಿಗಟ್ಟು + – ಇಸು$_3$ ]

ದಟ್ಟಿಗಟ್ಟು (ಕ್ರಿ). ೧. ನಡುಕಟ್ಟನ್ನು ಬಿಗಿ. ೨. (ಆಲಂ) ಸೊಂಟಕಟ್ಟು ; ಸಿದ್ಧವಾಗು; ತಯಾರಾಗು: ಜೀಯ ಪರಾಕೆದು ಬೇಜೆಱೊಂದೋಯರದಿಂ ಬಂದು ವಂದಿಪೆರ್ ಕಿಱಿಯರಸರ್ ಸಾಯಸವಡುವರ್ ಸಂತತವಿನಯಿಸಕ ಮನೆಳಸಿ ದಟ್ಟಿಗಟ್ಟುವರನಿಬರ್ (ಚಕವಿ. ೫-೫೮).

[ ದಟ್ಟಿ$_1$ + ಕಟ್ಟು$_1$ ]

ದಟ್ಟಿಗೆ$_1$ (ನಾ). (?) : ಸುರರ ಮನ್ನಿಸಿ ಕಳುಹುತಂದನು ನಿರುತ ನಿಮ್ಮಯ ಬಾಧೆ ತನ್ನದು ಥರಥರದ ದಟ್ಟಿಗೆಯ ದೈತ್ಯರ ಹವಣು ತನಗೆಂದ (ಸಂಭಪ. ೭-೬೩). [ ? ]

ದಟ್ಟಿಗೆ$_2$ (ನಾ). ಉಪ್ಪರಿಗೆ; ಕರುಮಾಡ; ಮಂಪಡಿ (?) :

ದಟ್ಟಿಗೆಯಮನೆ = ಉಪ್ಪರಿಗೆ ಮನೆ (?) : ಕನಕಮಯ ನಿರ್ವಿಚಿತ್ರಗಳಿಂದಲಿಪ ದಟ್ಟಿಗೆಯಮನೆಯ ಸುತ್ತಲ್ ಮೆರೆವ ಮದನಗೃಗಳ ಮೇಲೆ ನಿನದದೊಳ್ ನವಿಲ ತಂಡಗಳಿರಲ್ (ರುಕ್ಮಾಂಗ. ೩-೪೨). [ ? ]

ದಟ್ಟಿಚಲ್ಲಣ (ನಾ). ನಡುಪಟ್ಟಿಯುಳ್ಳ ಚಲ್ಲಣ : ದಟ್ಟಿಚಲ್ಲಣವನುಟ್ಟು ಕರಾರಿಯಂ ನಡುವಿನೊಳು ಕಟ್ಟಿ (ಭೈರಸೂ. ೨೫೭) : ಮಲ್ಲಗಾಸಿಯ ದಟ್ಟಿಚಲ್ಲಣಗಳನುಟ್ಟು (ಸೌಂದರಾ. ೧೨-೩೩) : ಕಟ್ಟಿದ ದಟ್ಟಿಚಲ್ಲಣದ ಉಟ್ಟ ಮಲ್ಲವಳಿಯ ಈ ವೇಷದಿಂದ . . . ಕುಳ್ಳಿರುತ್ತ (ವಿಗದ. ೩೦-೨೫): ಕಂಠೀರವಒಡೆಯರು . . . ಅಲ್ಲಿ ಕೋಟೆ ಬಾಗಲಿಗೆ ಕಟ್ಟಿದ್ದ ದಟ್ಟಿಚಲ್ಲಣಗಳನ್ನು ತಮ್ಮ ಆಳಿನ ಕೈಕೋಲಿನಿಂದ ತೆಗೆಸಿ ಅನಂತರ ಕೋಟೆಯೊಳಕ್ಕೆ ಪ್ರವೇಶಮಾಡಿದರು (ಒಡಳ. ೩೫). ☞ ಇವು ಪ್ರತ್ಯೇಕವಾಗಿಯೂ ಬಳಕೆಯಾಗುತ್ತಿವೆ. [ ದಟ್ಟಿ$_1$ + ಚಲ್ಲಣ ]

ದಟ್ಟಿತು, ದಟ್ಟಿತ್ತು (ನಾ). ೧. ದಪ್ಪವಾದುದು ; ಗಾತ್ರದಿಂದ ಕೂಡಿದುದು : ಕುಟ್ಟಿ ಕಣಿಕದೊಳು ಸರಿ ಬೆಣ್ಣೆಯಾಱೊಳೊಂದು ಬಟ್ಟವಾಲಸೆಯಿಕ್ಕಿ ಮಿದಿದು ಬಟ್ಟಂ ಮಾಡಿ ದಟ್ಟತೆಂದೆನಿಸಿ ಲತೆಯಱದು ಹಂಚಿನೊಳಿಟ್ಟು ಸುಟ್ಟು ಪರಿಯಣಕೆ ತೆಗೆದು (ಸೂಪಶಾ. ೧-೧೦). (ಗಂ). ೨. ದಪ್ಪವಾದ; ದಟ್ಟವಾದ; ಗಾತ್ರವಾದ; ಮಂದವಾದ : ಬೆಟ್ಟಿತು. ಬೆಟ್ಟಿತ್ತು, ಪಟ್ಟಿತು, ದಟ್ಟಿತ್ತು (ಶಮದ. ೭೭ ಪ್ರಯೋ). ೩. ವಿಸ್ತಾರವಾದ ; ಅಗಲವಾದ : ನೂಱು ಗಾವುದದುದ್ದ ಮೊದಲ ದಟ್ಟಿತು . ನೋಡೆ ಪಗಡೆಯ ಕಾಯಂತೆ ತೋಱುಕಿದ್ದುದು ವೃಷಭಾದ್ರಿ (ಭರಚ. ೩೭-೮೦). ದಟ್ಟಿತ್ತು : ೧. “ಮ್ಲಕ್ಷ, ಮ್ರುಕ್ಷ – ಕ್ಷರಣಸ್ನಿಗ್ಧಾರ್ಥೇ, ಒರಸುಹಣದೊಳಂ ದಟ್ಟಿತ್ತರೊಳಂ” (ಶಾಶಕ್ಯ. ೨೬೮). ೨. ಮೇಲಿನ ‘ಶಮದ’ ಪ್ರಯೋಗವನ್ನು ನೋಡಿ.

ದಟ್ಟಿತಾಗು, ದಟ್ಟಿತ್ತಾಗು : ಒತ್ತಾಗು = ಸಾಂದ್ರವಾಗು ; ನಿಬಿಡವಾಗು : ದಟ್ಟಿತಾಗಿಹ ತೋಳು ತೊಡೆ ಬಾಯ್ಬಿಟ್ಟ ಬೆಟ್ಟದ ತೆರದಿ ಬಾದನು ಕಿತ್ತು ಪೇರ್ಮರನ (ಜರಾಮಾ. ೩೦-೩೭) ; ಈ ವನಮತೀವ ಭೀಕರಮೆನಿಸಿದಪುದು ನಾನಾವಿಧದ ಮರಗಿಡುಗಳಿಂದೆ ದಟ್ಟಿತ್ತಾಗಿ ಕಾವಳಂಗೊಂಡು (ಶೀಪರಾ. ೪-೨). [ <ದಟ್ಟಿ$_1$ ]

**ದಟ್ಟೈತ್ತು** 'ದಟ್ಟೈತು' ನೋ.

**ದಟ್ಟಪಂಚೆ** (ನಾ). ಅಡ್ಡಲಾಗಿ ಸುತ್ತಿಕೊಳ್ಳುವ ಪಂಚೆ; ಮುಂಡು; ತಡಪು : ಅವಳ ಜೊತೆಗೆ ಇದ್ದಾತ ಎ ತ್ತ ರ ವಾ ದ ಆಳು . . . ಒಂದು ದಟ್ಟಪಂಚೆಯುಟ್ಟು ಕೊಳೆಯಾದ ಒಂದು ಶರಟು ಧರಿಸಿದ್ದ (ಕುಸುಸಂ. ೩೪); ಕುಳ್ಳಗೆ ಇದ್ದಾನೆ. ಒಂದು ದಟ್ಟ-ಪಂಚೆ ಬಾದಿಯಾದು ಮೇಲಕ್ಕೊಂದು ಅರೆತೋಳಿನ ಪರಟು (ಅಂಪೂ. ೧೦೬). 'ಕಚ್ಚೆಪಂಚೆ' ಪರಾ. [ ದಟ್ಟ₁ + ಪಂಚೆ ]

**ದಟ್ಟಸೀರೆ** (ನಾ). ಸಣ್ಣಸೀರೆ; ಕಿರಿಗೆ : ದಟ್ಟಸೀರೆ, ಬೆಳ್ಳಿ ತೋಳಬಂದಿ, ಬೆಳ್ಳಿ ಕೈಕಡಗ, ಕೊರಳಲ್ಲಿ ಕೆಂಪುಹವಳದ ಸರ, ಕಿವಿಯಲ್ಲಿ ಬಂಗಾರದ ಬೆಂಡವಲಿ (ಹೊಸಂಸ್ತು. ೧೪೦). [ ದಟ್ಟ₁ + ಸೀರೆ₂ ]

**ದಟ್ಟಸು₁** 'ದಟ್ಟಯಿಸು' ನೋ.

**ದಟ್ಟಿಸು₂, ಧಟ್ಟಸು, ಧಟ್ಟೈಸು** (ಕ್ರಿ). ೧. ಗದರಿಸು; ಬೆದರಿಸು : ನಿನ್ನ ನಿಟ್ಟಿಲುವ ಮುಚ್ಚಿಪೆನೆಂದುರವಣಿಸಿ ಜಟಿಯುತ್ತ ದಟ್ಟಸುತ ಬಂದು (ಹಡಕಾ. ೧೨-೩೬); ದಟ್ಟಡಿಯಿಡುತಯಿತಹ ಹಸುಳೆಯನೊಲಿದಿಟ್ಟಯುದಜ ದಿಟ್ಟಯನು ತೊಟ್ಟನೆ ಮಾಱುಗೊಂಬಳು ಬಾಲ್ಕವಟಿಯಲು ದಟ್ಟಸದಿಹಳಿ ಲೋಕವನು (ಅಂಜಿಹ. ೪-೫೬); ದಟ್ಟಸುತ್ತೈಲೆ ಬಸವ ಕೊಡುಕೊಡು ಪೆಟ್ಟಿಗೆಯ ಪೊನ್ನಲ್ಲವಂ ಹಿಮ್ಮೆಟ್ಟದೀಗಳೆ (ಬಸಪು. ೧೧-೩); ತನಯರು ಗಳತಿ ದಟ್ಟಸುವರಂಗನೆಯರುಲ್ಲಂಘಿಸುವರಂ . . . ತಿಳಿಯೆ ದರಿದ್ರನಿಂದಧಿ ಕಷ್ಟರಿಲ್ಲೆಂದ (ಜೀವಂಚ. ೬-೩); ಇರುಳಿನಲಿ ನಿದ್ರೆಳಿದಾ ಹೊಲೆಯ ನ ವ ನಾ ವ ವ ನೊ ಮಾಂಸವ ಕಳುವವನು ಹೇಳೆನುತ ಗರ್ಜಿಸಿ ದ[ಪಾಠಾಂ. ಧ]ಟ್ಟಸುತಲಿರಲು (ತಿಮ್ಮಕಾಂ. ೫-೩೬); ರವಿನಂದನಂ ರಯದಿ ಪಾಶದಿಂ ಬಿಗಿದವನ ತವಕದಿ ಸೆಳೆಯೆ ಲಿಂಗದೊಳು ಪರಶಿವನುದಿಸಿ ಧವಳಾಂಗನಾಗಿ ದಟ್ಟಸುತಜನ ಮುಮ್ಮೊನೆಯ ಸಬಳದಟ್ಟುಗಿಯೊಳಿಱಿಯೆ (ಪ್ರಭುಪು. ೩-೧೦೦); ನೋಡಿರ್‍ಯ, ದೊರೆಸ್ವಾಮಿ ಹೆಂಡತಿ ನಳಿನಿ, ಏ ಪರಿ ಗಂಡನ ನಮ್ಮಿದಿರೆ ದಟ್ಟಸುತಲಿರುವಳು (ಗಡೀಕ. ೭೪-೨). ೨. ಹೀಗಳೆ; ತಿರಸ್ಕರಿಸು; ಮೂದಲಿಸು : ನೇವುರದ ದನಿ ದಟ್ಟಸಿತು ವೇದಾವಳಿಯ ನಿರ್ಘೋಷವನು ನಾನಾವಿಭೂಷಣಕಾಂತಿ ಕೆಣಕಿತು ಮುನಿಸವಾಧಿಗಳ (ಕುಮ್ವ್ಯಾ‌ಆ. ೧೮-೬); ಬೆಟ್ಟದ ಬಲ್ಮೆಯಿಂದೆಮ್ಮ ರಾಯುಸವನು ದಟ್ಟಸಿ ಕಳೆದ ಕಂಪಿಲನ ಕಟ್ಟ ತರಿಸುವೆನು (ಕುರಾಸಾಂ. ೦೭-೮೪). ೩. ಪ್ರತಿಭಟಿಸು; ವಿರೋಧಿಸು: ದಿಟ್ಟಸಿ ಹೋಗೆಂಬೆ ಹೋಗದಿದ್ದರೆ ಬೆನ್ನ ಮುಟ್ಟಿ ಹೋಗೆಂದು ನೂಂಕುವೆನು ದಟ್ಟಸಿದರೆ ಕಟ್ಟ ಕಳುಹುವೆ ಶಿಬಿಕೆಯೊಳಿಟ್ಟು ಚಿಕ್ಕಮ್ಮನ ಬಳಿಗೆ (ಭರಡ. ೪೯-೩೪). ೪. ಘಟ್ಟಿಸು; ಹೊಡೆ; ತಾಗು : ಪಟ್ಟಣದುರು ವೀಧಿಗಳೊಳಗಾ ನೃಪರಿಟ್ಟಣಿಸಿಯೆ ಬರುತಿರಲು ದಟ್ಟಸಿ ಪೊಡೆವ ನಾನಾವಾದ್ಯದ ರವ ಮುಟ್ಟ ದಿಗಂತರಾಳವನು (ಅಂಜಿಹ. ೧೧-೨೭೭); ಬಿಟ್ಟನು ನಿಜವೃಷಭಾಂಕನು ಬಲವೆರಸಿಟ್ಟಣಿಸಿಯೆ ತ್ರಿಪುರವನು ದಟ್ಟಸಿ ಪೊಡೆವ ನಾನಾವಾದ್ಯರವಗಳು ಮುಟ್ಟ ದಿಗಂತರಾಳವನು (ತ್ರಿಪುಸಾಂ. ೦೬-೦೮೦). ಧಟ್ಟಸು : ೧. ಸುರವನಾನಂದರಸವಜಿತು ಬೆಱಗಿನ ಮೊಗದೊಳಿರಲು ನಾರದಂ ಧಟ್ಟಸುತಿದ್ದು ಕೊಡು ವಸಿಷ್ಠಂಗೆ ಭಾಷೆಯನು ಕೌಶಿಕ ಎಂದನು (ಹಡಕಾ. ೨-೨೪); ಓರಪೋರೆಯೊಳಾಡಿ ಧರ್ಮದ ಧಾರಣೆಯ ಧಟ್ಟಸುವದಿದು ಗಂಭೀರರಿಗೆ ಗರುವಾಯಿಯೇ (ಕುಮ್ವ್ಯಾಸ. ೧೪-೮೪); ನೀ ತಳೋದರಿ ಕಱುಚುಗೆಡದೀ ಮಾತಿನಲಿ ತಾ ಬಿಡುವನೇ ನಿನ್ನಾತಗಳ ನುಡಿಸೆಂದು ಬಳ ಧಟ್ಟಸಿದನಂಗನೆಯು (ಕುಮ್ವ್ಯಾಸ. ೦೫-೧೦); ನಿನ್ನಯ ಪುರುಷನಪಗತನಾದ ಬಳಿಕೀ ಪರಿಯು ಮೆಱೆದಿಹುದುಚಿತವೇ ಹೇಳೆಂದು ಧಟ್ಟಸಿದ (ಜೀ ವಂ ಧ. ೦೩-೩); ಮಾರೀಚನಾ ದಶಗಳನ ಧ[ಪಾಠಾಂ. ದ]ಟ್ಟಸಿ ಕೆಲವು ದಿನ ನೀನುಳಿವುಪಾಯವ ಮಾಡುವನು . . . ಕಾನೆಂದ (ತೊರರಾ. ೩-೮-೧೦). ೨. ಧಿಟ್ಟನಹೆ ಬಾಣಸಿಗ ಸವಿಯೊಳಗಟ್ಟ ಕೂಳನ ತಿಂದು ದೇಹದೊಳಟ್ಟಯುಲಿ ಸಿರಪಿರಲಹಂಕಾರದಲಿ ನೀನೆಂದು ಧಟ್ಟಸುತ ಜೀಮೂತಮಲ್ಲನು . . . ಹೊಕ್ಕನು ತೋಳ ತೆಕ್ಕೆಯು ಮಲ್ಲಿಗಾಳಗಕೆ (ಕುಮ್ವ್ಯಾವಿ. ೦೩-೪-೬೪). ೩. ಗರ್ವಗರ್ಜನೆಗಳು . . . ರಾಮನ ಸರ್ವಸಾಮರ್ಥ್ಯದ ಪೆಸರ ಧಟ್ಟಸುವೆ . . . ನೆಂದೊಸೆದು . . ಐತಂದನು (ಸಿದ್ಧರಾ. ೬-೩೬). ೪. . . . ಹೊಯ್ದುದು ನೀಲನನು ನೀಲಾದ್ರಿಯನು ದಂಭೋಳಿ ಧ[ಪಾಠಾಂ. ದ]ಟ್ಟಸಿದಂತೆ ನೊಂದನು ಹೊಯ್ದಲಿಭಪತಿಯ (ತೊರರಾ. ೬-೩೨-೩೬). ೫. ನಿಗ್ರಹಿಸು; ಸೋಲಿಸು; ಹಿಡಿತಕ್ಕೆ ತರು; ಅಂಕೆಯಲ್ಲಿರಿಸು : ಪದಪಾಣಿ ಗುಹ್ಯ ಕರ್ಮೇಂದ್ರಿಯಂಗಳಲ್ಲಿ ಬೆದಱಿದವ ಧಟ್ಟಸುವ ಅದಟು ಬೇಕಪಱಿಲ್ಲಿ (ದೀಕ್ಷಾಬೋ. ೦೬-೦೯); ಚೋಳ ಪಾಂಡ್ಯರ ದಳವ ಧಟ್ಟಸಿ ಕೊಂಡನನುಪಮಸಾರವಸ್ತುಗಳ (ಕುಮ್ವ್ಯಾಸ. ೫-೨೦). ಧಟ್ಟೈಸು: ೨. ಪುಟ್ಟನೆಂದೆನಬೇಡ ಪರಮಶಕ್ತಿಯಂ ತಂದುಕೊಟ್ಟನು ಕೃಷ್ಣ ಮನ್ಮಥಗೆ ಧಟ್ಟೈಸಿ ನೀ ಬಾಹುಬಲದಿಂದ ಕಾದಲಂ ಪಟ್ಟನಿಕ್ಕದೆ ಬಿಡನೆಂದ (ಮೋಹಕ. ೦೨-೯).

ಧಟ್ಟಸುತೆ ಹೇಳು = ಒತ್ತಾಯ ಮಾಡು : ಬಿಟ್ಟು ಪೋಗುವ ಲಲನೆ ವಲ್ಲಭಗೆ ಬುದ್ಧಿಯಂ ಧಟ್ಟಸುತೆ ಹೇಳಿ ಮೇಲಟ್ಟದೊಳು ಗುಡುಹವದೆ ಬಟ್ಟಲೊಳು ಚಲಿಪಾಲ ಸಲಿಸೆಂದು ತಾ ತಳವರ್ಗಳಂತೆಯವಳಂತೆ ನೀನು ಆಟ್ಟುಳಿಯ ಮಾಡಿದವೆ (ಪ್ರಭುಪು. ೬-೨೩). [ ದಟ್ಟ₃ + – ಇಸು₃ ]

**ದಟ್ಟೆ** (ನಾ). ದಪ್ಪಬಿದಿರಿನ ಸೀಳು–ದಬ್ಬೆ : ಬಿಪಿನಕ್ಕೆ ಹೊರಟ ಕೇತಯ್ಯ ಚಂದದಿಂ ಬಿದಿರನುಂ ಸೋಸಿ ತರುವುದಕೆ ಹೋಗಿ ದಟ್ಟೆಯ ತರಿದು ಪೊಳವೆ ಸೀಳಂತಿರೆ (ಶರಲೀ. ೦೭೨-೧೦). [ <ತಟ್ಟ₁ ]

**ದಟ್ಟೈಸು** 'ದಟ್ಟಯಿಸು' ನೋ.

**ದಡ₁** (ನಾ). ಒಂದು ಅನುಕರಣ ಶಬ್ದ. 'ದಡಗುಟ್ಟು₁' ಪರಾ.

ದಡದಡ (ದ್ವಿರುಕ್ತಿ) = ೧. ರಭಸ; ವೇಗ; ಜೋರು : ದಡದಡ ಎಂದು ಓಡುತ್ತಾನೆ (ರೂಢಿ). ೨. ನಡುಕ; ಕಂಪನ : ಗಡಬಡಿಸಿದುದು ಲಗ್ಗೆವಱಿ ಕೋಟಪಗೆಗಳಂ ಕೆದಕೆದೆಯೆನುತ್ತ ಕಹಳೆಗಳೊದರ್ದುವಳ್ಳಿರ್ದಯ ದ ಡ ದ ಡ ಂ ಗ ಳ್ ಮಾಣ್ದುದವುರ್ಗೆ (ಜಬಪು. ೪೯-೫೦).

ದಡಮಾಡು = ಅವಸರಪಡಿಸು: ದಡಮಾಡಿದರು ಯಮನಾಳುಗಳು ಓಡಿ ಬಂದರು ಏಳೇಳೆನುತ ಏಳಲೆಳೆದರು ಪಾಪಿಯು ಬೀಳಲೆಳೆದರು (ಪುರಂದ. ೫-೦೨೬-೦).

**ದಡ₂** 'ದಡ್ಡ₂' ನೋ.

**ದಡ₃** 'ತಡ₂' ನೋ.

**ದಡ₄** 'ದಳ₁' ನೋ.

**ದಡಂಗೊಳ್** (ಕ್ರಿ). ದಡ ಸೇರು: ಮಕರಾಕರದಿಂ ಪೊಱಮಡುವ ಕರಿಮಕರದಂತೆ ಕಮಳಾಕರದಿಂ ಪೊಱಮಟ್ಟು ದಡಂಗೊಳ್ವಲ್ಲಿ (ಅರ್ಥನೀ. ೫-೧೧೩ ವ). [ ದಡ₃ (<ತಡ₂) + ಕೊಳ್₁ ]

**ದಡಂಪಡಿಸು** 'ದಡಪಡಿಸು' ನೋ.

**ದಡಕ್** (ನಾ). ಒಂದು ಅನುಕರಣ ಶಬ್ದ : ಅಟ್ಟದಿಂದ ಪಾತ್ರೆಯು ದಡಕ್ ಎಂದು ಬಿದ್ದಿತು (ರೂಢಿ)

**ದಡಕಟ್ಟು** 'ದಡೆಕಟ್ಟು' ನೋ.

**ದಡಗಲಿ** (ನಾ). ದಪ್ಪನೆಯ ಹೆಂಗಸು : ಈಗ ಹೊಸದಾಗಿ ನಡೆಯುವ್ವ ದನ್ನ ಕಲೀತೀರೋ ಈ ದಡಗಲಿ ಕೋಲು ಜಾರಿ ಬಿದ್ದಿದ್ದೇ ಒಂದು ಭಯಂಕರ ವಿಚಾರವೇ! (ಉಮೂಕ. ೬೮). 'ದಡಾಲಿ' ಪರಾ. [ ? ]

**ದಡಗುಟ್ಟು₁** (ಕ್ರಿ). ೧. ದಡದಡ ಶಬ್ದ ಮಾಡು: ಗಾಡಿ ದಡಗುಟ್ಟುತ್ತಾ ಬಂತು (ರೂಢಿ). ೨. ವೇಗದಿಂದ ಕೂಡಿರು : ಬೇಕಾದಷ್ಟು ಸಮಯ ವಿದ್ದರೂ ಆಕೆ ದಡಗುಟ್ಟಿಕೊಂಡು ಕೆಲಸ ಮಾಡುತ್ತಾಳೆ (ರೂಢಿ). [ ದಡ₁ + ಕುಟ್ಟು₁ ]

**ದಡಗುಟ್ಟು₂** (ಕ್ರಿ). ದಡ ಸೂಸಿ ಹರಿ; ತುಂಬಿ ಹರಿ : ಸಾಲದ್ದಕ್ಕೆ ಕೆಲಸದ ಆಯಾಸವೂ ಸೇರಿ ಬೆವರು ದಡಗುಟ್ಟಿಕೊಂಡು ಹರಿಯುತ್ತಿದೆ (ಶಾಟೀಮು. ೧೦೩). [ ದಡ₃ (<ತಡ₂) + ಕುಟ್ಟು₁ ]

**ದಡದಡನೆ** (ಅ). ೧. ದಡದಡ ಎಂಬ ಸದ್ದಿನೊಡನೆ : ಶ್ರೀ ಸೋಮನಾಥನು ನಡುವಿರುಳು ಭಕ್ತಂಗೊಲಿದು ದಡದಡನೆ [ಪಾಠಾಂ. ಧಡಧಡನೆ] ಕದವಂ ಹಾಟಿತೆಗೆಯಲು (ಬಸಪು. ೪೩-೪೭). ೨. ವೇಗವಾಗಿ : ಬೇಗನೆ : ಶೀಘ್ರವಾಗಿ : ಅವನು ದಡದಡನೆ ಮೆಟ್ಟಿಲಿಳಿದನು (ರೂಢಿ).
[ ದಡ₁ + – ಅನೆ₁ ]

**ದಡದಡಿಸು, ದಡಂದಡಿಸು, ಧಡಧಡಿಸು₁** (ಕ್ರಿ). ೧. ನಡುಗು; ಅದುರು; ತತ್ತರಿಸು : ತೊಡೆ ದಡದಡಿಸೆ ನಡೆಗೆಟ್ಟು ಕಳಲುಲಿಗೆ ಬಟ್ಸಲ್ಚ ಕಳಹಂಸಮಂಡಲಕ್ಕಯಶವಂ ಮಾಡಿಸಿಯುಂ (ಕಾದಂಉ. ೩೭) : ಕುತ್ತಂಬಡೆದರಂತೆ ಬೀಟ್ವರ್ ಬಡಗೊಂದೆಯಂತೆ ದಡದಡಿಸುವರ್ (ಧರ್ಮಾಮೃ. ೩-೮೧) : ಕಣ್ಗಳಂ ಮುಚ್ಚಿ ಸೆರಬಿಗಿದು ದಡದಡಿಸಿ ದೊಪ್ಪನೆ ಬಿದ್ದು (ಬಸರ. ೨-೫೮): ಕುಡಿದು ಕೊಬ್ಬಿದ ಬಸುಜು ದಡದಡಿಸಿ ತರಹರಿಸುವಡಿಯ . . . ಕಲಿವೀರ ಬಾಹುಕ ಬರುತ್ತಂ (ಹಡಕಾ. ೧೧-೧೭); ತನುವನೊಲೆದವು ದಡದಡಿಸಿ ಕಿವಿಗೊನೆಯು ಜೋಲಿಸಲಲ್ಲಿ ಮಡಿಗಾಲಿನಲಿ ಕುಸಿದವು (ಕುವ್ಯಾವಿ. ೮-೮೩) ; ಇಂತು ನಲ್ಮೆ ಮಿಗೆ ಬಸದಿಪ ಕಾಮಿನಿಯುರ್ಗೆ . . . ನೊಸಲೊಳ್ ಬೆಮರ್ ಪನಿಯೆ ತೆಳ್ಗದಂವು ಕೆಂಪಡರೆ ಎರ್ದೆ ದಡದಡಿಸೆ (ರಾಮಾಶ್ವ. ೧೨೩-೭). ೨. ಆತುರಪಡು ; ಸಂಭ್ರಮದಿಂದ ಕೂಡಿರು; ತ್ವರೆಮಾಡು : ತಾಳ್ದು ಪರಮಾನಂದವಂಕುರಂದೋಱುತಂ ದಡದಡಿಸುತೆದ್ದು ತಿರುನೀಲಕಂಠರ್ಬಂದು (೩ಕುರ. ದೇ. ೨೫-೧) : ದಡದಡಿಸಿ ಕೊಳನಿಂದ ಹೊಱಟಡಿಯಿಡುತ ಬಳಲಿದನನಿಲಸುತನವರೊಡನೆ ಮೆಯ್ಯಿಕ್ಕಿದನು (ಕುವ್ಯಾಅ. ೭ಗಿ೩. ೨೬-೨೯) ; ಕಡು ಮುಱುಗುತೆ ವಿಪ್ರಜನವೆದ್ದು ತಣ್ಣೀರ ತೊಡೆದು ಕಣ್ಗ ಳಿಗಾಗ ಮೆಲ್ಲನೆ ಒಡಿದೆತ್ತಿ ನಿಂದಿರಿಸಲು ದಡದಡಿಸುತ ಕೆಡಿಸಿದ ಶುಭವಸ್ತುನಿಚಯವ (ಶ್ರೀರುತ. ೯-೨೬). **ದಡಂದಡಿಸು** : ೧. ಅಡವಿಗಿಚ್ಚಟ್ಟಿದೆಳಹುಲ್ಲೆಯಂತೆರ್ದೆ ದಡಂದಡಿಸಿ ಪವ್ವನೆ ಪಾಱುದೂವೆಯೊಳ್ ಪೊಕ್ಕುರಗಿಯಂತೆ ಬೆದಬೆದನೆ ಬೆಂದು (ಜಬಪು. ೦೯-೪೩).
**ಧಡಧಡಿಸು₁** : ೧. ಕರಹಶಿಗೆ ಧಡಧಡಿಸಿ . . . ಧೈರ್ಯದಲಿ ಹೊಡಕರಿಸಿ ಹೊಱಬಿನೊಳೆದ್ದು ಹೊಯ್ದನು ಪಾರ್ಥನಂದನನ (ಕುವ್ಯಾದ್ರೋ. ೬-೫೯) : ಧಡಧಡಿಸಿದವೊಳ್ಪೊಡೆಗಳ್ ನಿಡುಸುಯ್ ಪೊಣ್ಮಿದುದು ಮೊಗದೆ ಬೆಮರ್ವನಿಯೊಗೆದತ್ತುಡುಗಿದುದಳವು ನಡುಂಗಿದು ದೊಡಲ್ವಿದರ್ಭಜಗವಿಪಿನಗಮನಶ್ರಮದಿಂ (ದಮಸ್ಕ. ೨-೧೧). [ <ತಡತಡಿಸು ]

**ದಡಪಡಿಸು** 'ಧಡಪಡಿಸು' ನೋ.

**ದಡಪಶಾಹಿ** (ನಾ). ಅಧಿಕಾರದ ಬಲದಿಂದ ಜನರನ್ನು ಹತ್ತಿಕ್ಕುವುದು ; ಅನ್ಯಾಯದ ಆಳ್ವಿಕೆ ; ದಬ್ಬಾಳಿಕೆ : ಈ ಮೊದಲೇ ದಡಪಶಾಹಿಗೆ ಕಳೆಯೇರಿ ಸಾವಿರಾರು ಜನರು ತುರಂಗದಲ್ಲಿ ಬಿದ್ದಿದ್ದರು (ಕಾಂಗ್ರೆಸ. ೧೭).
[ ←ಮರಾ. ದಡಪ್‌ಶಾಹೀ ]

**ದಡಬಡ₁** (ನಾ). ಒಂದು ಅನುಕರಣ ಶಬ್ದ : ದಡಬಡ ಶಬ್ದಮಾಡುತ್ತ ಗಾಡಿ ಹೊರಟಿತು (ರೂಢಿ).

**ದಡಬಡ₂** 'ಧಡಪಡ' ನೋ.

**ದಡಬಡನೆ** (ಅ). ಆತುರದಿಂದ ಕೂಡಿ : ಉದ್ದನ ಪಂಜೊಡೆಯು ದಡಬಡನೆ ಉರುಳಿ ಹೋಗುವಂತೆ ಈ ಮರಳನ್ನೂ ದಾಟ ... ಮರೆಯಾಗಿರುವಳು (ಹುಚ್ಚುಹ. ೧೨೯) ; ರಂಗಪ್ಪ ಪಕ್ಕದ ಮನೆಯಲ್ಲಿ ಗುಲ್ಲು ಕೇಳಿ ದಡಬಡನೆ ಎದ್ದು ಹೊರ ನೋಡಿದ (ಜಗುಬ. ೩೪) : ಹುಡುಗರ ತಲೆತಲೆ ಟೊಪ್ಪಿಯ ಆಟವ ದಡಬಡನಾಡಿಸಿ, ಮನೆಮನೆ ತೋಟವ ಅಡಿಮೇಲಾಗಿಸಿ (ಕಏಪು. ೨೮-೫). [ ದಡಬಡ₂ (<ಧಡಪಡ) + – ಅನೆ₁ ]

**ದಡಬಡಲು** (ನಾ). ಆತುರ ; ವೇಗ ; ಗಡಿಬಿಡಿ : ಯುಡತರದ ಕಾಂತೆಯರೆಲ್ಲಾ ದಡಬಡಲಾಗಿ ಅಲಂಕಾರಗಳಂ ಮಾಡಿಕೊಳುತ್ತಿರುವ (ಸೌಗಂಧಿ ೨೦೨-೧೫). [ ದಡಬಡ₂ ( <ಧಡಪಡ) + – ಅಲು (< – ಅಲ್₁) ]

**ದಡಬಡಿ** (ನಾ). ದಪ್ಪ ; ಗಾತ್ರ : ದಡಬಡಿ ಇದ್ದರೆ ರೊಣ್ಣನೆಂಬರು ತೆಳುವಿದ್ದರೆ ರೋಗಿಷ್ಟನೆಂಬರು (ಪುರಂದ. ೪-೭೦-೫). [ ? ]

**ದಡಬಡಿಸು₁** (ಕ್ರಿ). ದಡದಡ ಶಬ್ದವನ್ನು ಮಾಡು : ಸಣ್ಣ ಬಂಡಿಗಳು ದಡಬಡಿಸುತ್ತಿದ್ದುವು (ಪುನರು. ೧೮೨). [ ದಡಬಡ₁ + – ಇಸು₃ ]

**ದಡಬಡಿಸು₂** 'ಧಡಪಡಿಸು' ನೋ.

**ದಡಮಿ** 'ದುಡುಮಿ' ನೋ.

**ದಡಯ** 'ಧಡೆ₁' ನೋ.

**ದಡರ್** (ನಾ). ಒಂದು ಅನುಕರಣ ಶಬ್ದ : ತಡೆಯದೇ ಕಳ್ದೊಯ್ಯುದುಂ ಕಂಡು ಬೆದಱು ಎದೆ ದ[ಪಾಠಾಂ. ಧ]ಡರೆಂದು ಬಡಿಯಲಿನ್ನೇವೆನಕಟಕಟ (ಸಮ್ಯಕೌ. ೦೧-೬೮). 'ಬಡಾರ್' ಪರಾ.

**ದಡಲ್** (ನಾ). ಒಂದು ಅನುಕರಣ ಶಬ್ದ : ಬಾವಿಯಲ್ಲಿ ಕಲ್ಲು ದಡಲ್ ಎಂದು ಬಿದ್ದಿತು (ರೂಢಿ). 'ದಡಲನೆ' ಪರಾ.

**ದಡಲನೆ** (ಅ). ವೇಗವಾಗಿ ; ರಭಸವಾಗಿ : ಬಹುಮೃಗಗಳಂ ಕೋಂದು ಕೆಡಹಿ ಕೊಬ್ಬಿಟ್ಟು ಕಡುಲಹರಿಯಿಂ ದಡಲನೆಯ್ದುವ ಹುಲಿಗಳಾ ಪಂಕರುಹಮಿತ್ರನಪರವಾರಾಶಿಯಂ ಪುಗೆ ತದ್ವನಾಂತರದೊಳ್ ಸೊಗಯಿಸಿದುವು (ಸಮ್ಯಕೌ. ೧೦-೨೫). [ ದಡಲ್ + – ಅನೆ₁ ]

**ದಡಸಲು** (ನಾ). ಒಂದು ಬಗೆಯ ಮರ : ಬಾಳೆ . . . (ಪರೂಷಕ) ದಡಸಲಹಣ್ಣು, ಆಮ್ರಾತ . . . ಇವುಗಳ ಫಲಗಳು ಪೌಷ್ಟಿಕ (ಅಷ್ಟಾಂಗ. ೧೪೫-೧೧೭-೦೨೦). 'ತಡಸಲ್ಲು' ಪರಾ. [ ? ]

**ದಡಸು** 'ದಳಸು' ನೋ.

**ದಡಸೂಸು** (ಕ್ರಿ). ದಡಮೀರಿ ಹರಿ : ಅಂಚನ್ನು ಮೀರು ; ತುಳುಕಿ ಹೊರಬರು ; ತುಂಬಿ ಹರಿ : ತುಳುಕಿದ ಮಧುರಸ ದಡಸೂಸೆ ಪರಿವ ಪೆರ್ಚೊಳೆಯೆಸೆದುದನೀಕ್ಷಿಸಿದ (ಮೋಹತ. ೫-೨೩).
[ ದಡ₃ (<ತಡ₂) + ಸೂಸು₁ ]

**ದಡಾಣೆ** 'ದಡಾಲಿ' ನೋ.

**ದಡಾರ್** (ನಾ). ಒಂದು ಅನುಕರಣ ಶಬ್ದ : ಗಾಳಿಗೆ ಬಾಗಿಲು ದಡಾರ್ ಎಂದು ಮುಚ್ಚಿಕೊಂಡಿತು (ರೂಢಿ).

**ದಡಾರ** (ನಾ). ಮೈಮೇಲೆಲ್ಲಾ ಗುಳ್ಳೆಗಳಾಗಿ ಬಾಧೆಯುನ್ನುಂಟುಮಾಡುವ, ಸಾಮಾನ್ಯವಾಗಿ ಮಕ್ಕಳಿಗೆ ಬರುವ ಅಂಟುರೋಗ : ಮಕ್ಕಳಲ್ಲಿ 'ದಡಾರ' (Measles) ಕಾಣಿಸುವುದಕ್ಕೆ ಮುಂಚೆ ಕಣ್ಣು ಕೆಂಪಾಗಿ ನೀರು ಸುರಿಯುವುದುಂಟು (ನಿಮ್ಮಶ್ರ. ೦೩೯) : ಇದು ಮಕ್ಳ ಕಾಯಿಲೆ. ಮೈಮೇಲೆ ದಡಾರ ಬರೋದು. ಒಮ್ಮೆಯಲ್ಲ, ಒಮ್ಮೆ ನಮಗೆಲ್ಲರಿಗೂ ಬರುತ್ತೆ (ಕಾಯಿ. ೧೬೭) ; ಮಕ್ಕಳಿಗೆ ದಡಾರವೆದ್ದಾಗ ತಾಯಂದಿರು . . . ಮಾರಿಗುಡಿಗೆ ಪ್ರಯಾಣಬೆಳೆಸುವುದನ್ನು ನಾವು ಇಂದೂ ನೋಡುತ್ತಿದ್ದೇವೆ (ಕೆಲಕೋ. ೧) ; ನಮ್ಮ ದೇಶದಲ್ಲಿ ದಡಾರ ಇಳಿದ ತಕ್ಷಣ ಬೇವಿನಸೊಪ್ಪು ಮತ್ತು ಅರಶಿನ ಅರೆದು ಹಚ್ಚಿ ಸ್ನಾನ ಮಾಡಿಸುವರು (ಗೃಹವಿ. ೦೫೦). 'ಗೋಣಿದಡಾರ' ಪರಾ. [ ? ]

**ದಡಾರನೆ** (ಅ). ದಡಾರ್ ಎಂಬ ಶಬ್ದದೊಂದಿಗೆ : ದಡಾರನೆ ಬಾಗಿಲು ಮುಚ್ಚಿತು (ರೂಢಿ). [ ದಡಾರ್ + – ಅನೆ₁ ]

**ದಡಾಲಿ, ದಡಾಣೆ** (ನಾ). ದಪ್ಪನೆಯ ಹೆಂಗಸು : (೩). **ದಡಾಣೆ** : (೬.) ದಡಾಲ್ದಿಮ್ಮಿ, ದಡರದಿಮ್ಮಿ=ಗಟವಾಣಿ; ಗಯ್ಯಾಳಿ: ದಡಾಲ್ದಿಮ್ಮಿಯ ಹಾಗೆ ಆಡಿದರೆ ಜನ ನಗುತ್ತಾರೆ (ರೂಢಿ). ದಡರದಿಮ್ಮಿಯ ಹಾಗೆ ಆಡಬೇಡ (ರೂಢಿ). [ ? ]

**ದಡಾಳಿ** (ನಾ). (?): ಬಿಂಕದ ಬಿರುದಂಕದ ವಿಡಾಯದ ದಡಾಳಿಯ ವೀರಾಳಾಪದ ವಿವುಳಪ್ರತಾಪದ ಬನ್ನಣೆಯ ಬಿನ್ನಣದ ರನ್ನದೋರಣದ . . . ಮಿಂಚಿನ ಸಂಚಮದಂತೆ ಮುಂಚುವ ಸರಳೆಸುಗೆಯ ಕೌತುಕದ ಕಡುಗಲಿ ಬಿಲ್ಲಾಳ್ಗಳ ಬೆಂಬಲವಾಗಿರ್ದಂ (ಹಮ್ಮಿರ. ೩-೩೩ ವ). [ ? ]

**ದಡಿ**$_1$, ದಡೆ$_1$ (ನಾ . ೧. ಬಿದಿರಿನ ಕೋಲು ; ಬಡಿಗೆ : "ವೈಣವಂ ಯಷ್ಟಿ ರಂಭಾದಂಡಮೆನಲು ದಡಿ" (ಮಂಗರಾ. ೧೩೧-೨೦) : ತಲೆಯಂ ದಡಿಯಿಂ ಪೊಯ್ದುಂ (ಧರ್ಮಾಮೃ. ೭-೧೦೫) : ಗುಡಿಯೊಳಗಿರ್ದು ಗುಡಿಯ ನೇಣ ಕೊಯಿದರೆ ಗುಡಿಯು ದಡಿ[ಪಾಠಾಂ. ದಂಡಿಗೆ]ಬಿದ್ದು ಹಲ್ಲು ಹೋಹುದು ನೋಡಾ (ಬಸವ. ೫೭೭) : ದಡಿಯಂ ಪಿಡಿದಬ್ಬರಿಸುತ್ತುಮಿರ್ಪ . . . ತತ್ಪುರೀಜನದ ಪೊದಟ್ಟು ತಲ್ಲಣದ ಮಲ್ಲಣೆ ಬೀದಿಯೊಳಾದುದದ್ಭುತಂ (ಪರ್ಶ್ವಪು. ೩-೫): ಗೂಢಗರ್ಭವನಿದ ನೋಡೊಲ್ಲೆನೆಂದವ ಕೂಡಿ ಬಡಿದು ದಡಿಯೊಳಗೆ ಜೋಡೆ ನೀನೆಸಗಿದಂದಕೆ . . . ಸಮಮಾಡಿಸದಾನು ಬಿಡುವೆನೆ (ಅಂಜದ. ೯-೩೩) ; ನಿನ್ನ ತಲೆಗೊಂಬೆನೆಂದು ದಡಿ ಗುಂಡು ಬಡಿಯುಂ ಕೊಂಡು ನೆಲದಿನಾಕಾಶಂಬರಂ ಬೆಳೆದು ಘುಡುಘುಡಿಸಿ ಬೆದಱಿಸುತ್ತಿರಲು (ಸಮ್ಯಕ್ತ್. ೮-೬೨). (ಗು). ೨. ದಪ್ಪವಾದ ; ಗಾತ್ರದಿಂದ ಕೂಡಿದ. 'ದಡಿಗೋಲು' ಪರಾ. ದಡೆ$_1$ : ೧. ಎಱದು ಸತ್ತರ್ ಅಂಕನ್ ದಡೆಯೆ ಬಡಿದು ಸುರಾಂಗನೆಯೊಳ್ಪರದನಾತಗೆ ಕೊಟ್ಟ (ಎಕ. X, ಶ್ರೀನಿಪಾ. ೭೪,೪ ; ಸು. 930) ; ಕಾಬ ಕಣ್ಣದ್ದು ಕನ್ನಡಿಯ ನೋಡುವನಂತೆ ನಡೆವ ಕಾಲಿದ್ದು ದಡೆಯನೂಱಿ ನಡೆವವನಂತೆ (ಮೋಳಿಮಾ. ೧೭೭-೭೨೫).

ದಡಿಯ ಕೈಯವರು = ಕೋಲನ್ನು ಹಿಡಿದಿರುವವರು : ಬಿಡದೆ ನಾಯಕವಾಡಿ ಚೂಣಿಯ ಹಿಡಿದು ಕಾದಿತ್ತುಭಯರಾಯರು ದಡಿಯ ಕೈಯವರಿಂದ ಕವಿಸಿದರಂದು ಸಬಳಿಗರ (ಕುಮಾ್ಯಭೀ. ೪-೩೮).

[ ದೇ.॥ ತಮಿ. ಮಲ. ತಟಿ ]

**ದಡಿ**$_2$ 'ತಡಿ₂' ನೋ.

**ದಡಿ**$_3$ 'ತಡಿ$_3$' ನೋ.

**ದಡಿಕಾಱ** (ನಾ). ಕೋಲನ್ನು ಹಿಡಿದಿರುವವನು ; ದಂಡಧಾರಿ ; ಕಟ್ಟಿಗೆ ಕಾರ ; ವೇತ್ರಧಾರಿ : ಇಬ್ಬರು ದಡಿಕಾಱರು ಬಾಗಿಲ ಕಾಯ್ದಿಪ್ಪರು (ಅವದಂ. ೨೨೨-೧೦೦೮) ; ಗಡಬಡಿಸದಿರಿ ಗದಱಿಕೊಳ್ಳದಿರಿ ಮೂಲೋಕ ದೊಡೆಯನ ಸಮ್ಮುಖವುದಲ್ಲೆಂದು ದಡಿಕಾಱರುಗಳಡಿಗಡಿಗೆ ಪೇಳುತಿಹರು (ಚಕುಪು. ೦-೨-೧೦೦). [ ದಡಿ$_1$ + – ಕಾಱ ]

**ದಡಿಕೆ** (ನಾ). (ಕರಾ) ಬಾಸುಳು ; ಬಾಸುಂಡೆ : ಅವರು ರಾಕ್ಷಸರ ಹಾಗೆ ಈ ಮಗುವನ್ನು ಬಡಿಯುವಾಗ ಸುಮ್ಮನಿರಬೇಕೇ ? ನೋಡು. ಇದರ ಬೆನ್ನು ಹೇಗೆ ಕೆಂಪಾಗಿ ದಡಿಕೆ ಬಂದಿದೆ (ಋುಗಿಯು. ೯೫).

[ ←ತುಳು. ದಡಿಕೆ ]

**ದಡಿಗ, ಧಡಿಗ** (ನಾ). ೧. ದೊಣ್ಣೆಯನ್ನು ಹಿಡಿದವನು. ೨. ಶೂರ ; ಬಲಶಾಲಿ : ಸಡಿಲ್ದ ಪಾಲಿಗೆವಂದರಂ ಕರ್ಚಿ ಕೈಯಡ್ಡಾಯುಧಮನೀಡಾಡಿ ದಡಿಯುಂ ಕೊಂಡು ಪರಿವ ದಡಿಗರುಮಂ (ಲೀಲಾವ. ೫-೧೩೪ ವ) : ಕಾಲಾಳ್ಗಳಿಂ ಪಿಡಿದೀಡಾಡಿಯುಮರ್ದಿಯುಂ ತಿರಿಪಿಯುಂ ತೇದುಂ ತೆಱಂಬೊಯ್ದುಮಾ ದಡಿಗಂ ದಾನವನಂದದಿಂ ಕೆಡಪಿದಂ ಸಂಗ್ರಾಮ ರಂಗಾಗ್ರದೊಳ್ (ಮಹಾನೇ. ೧೨-೨೦೪) : ದಡಿಗ ಕಾಳಗಕೈದಲಾಕ್ಷಣ ಪೊಡವಿಸುತೆಗೆಡಗಣ್ಣು ಕಾಣೆದುದು (ಕೌಶಿರಾ. ೦೦-೩೨) : ಪೊಡೆಯರಿದ್ದಾ ಮನೆಯ ಪೊಕ್ಕುದೆ ನೋಡೆನುತ ಕೋಪವನು ಪಿಡಿದಾ ದಡಿಗನಪ್ಪಳಿಸಿದರೆ ಘಾಯುಕೆ ಹಿಂದೆ ಶಿರುಶಿರುಗಿ (ಕೃಷ್ಣಾಕ ೨೧.೦೯). ೩. ದಾಂಡಿಗ ; ದಡಿಯ : ದಡಿಗನ ಮಿಟ್ಟಾವಂ ಮಿಡಿದೊಡಲ್ಲದೆ ಮಾಣೆನಮೋಘಮೆಂದು ಕೂರ್ಪುಡುಗದೆ ಬಂದು ತಾಗೆ ಯಮಳರ್ ತಡೆಗೊಂಡೊಡೆ ತಾವುಮೆಮ್ಮೆಳಂ ತೊಡರ್ದಪರ್ (ಪಂಪಭಾ. ೧೨-೧೬೨); ಮಿಂಚುದಲೆ ಒಣಕರುಂ ಸಿಡುಗಿಯ್ಯ ದಡಿಗರುಂ . . . ಕುಳ್ಳಿರಲು (ವಾಗೀಶ. ದೀ. ೨೫೪-೨೨) ; ಕಡುಗಾಯ್ದು ಲೋಹರಸಮಂ ಕುಡಿಯೆಂದವರೊಡೆದು ಬಾಯೊಳೆಱಿವರ್ಗಳ್ಗಂ ಕುಡಿದ ಕಡುಪಾಪಿಯಿವನೆಂ . . . ದಂಡಿಸುತ್ತುಮಿರ್ಪರ್ದಡಿಗರ್ (ಧನ್ಯಕು. ೫೧-೫) ; ದಡಿಗಂ ರಕ್ಕಸನೆನ್ನದಿರ್ಗೆ ಮುಳಿಸಿಂದೆಟ್ಟಿಂದನಾ ಶೈಲದಿಂ (ದಶಕು. ೧೨-೬೪). ೪. ಒಬ್ಬಾತನ ಹೆಸರು: ಗಂಗಗಟ್ಟಿನ ಪಿರಿಯ ಮಗಂ ದಡಿಗಂ ವಯ್ಯೊನ್ನವಾಸಿಯಾದೊಡೆ ದಡಿಗೇಸ್ವರಮೆನ್ದಾ ದೇಗುಲಮಂ ಮಾಡಿಸಿದಂ (ಎಕ. IX. ಮಾಗಡಿ. ೭೫-೧೫ ; 960) ; ರಾಮ ಲಕ್ಷ್ಮಣರ್ಗ್ಗೆ ದಡಿಗ ಮಾಧವರೆಂದು ಪೆಸರನಿಟ್ಟು (ಎಕ. VII, ಶಿವಮ. ೪-೨೫ ; 1133). (ಗು). ೫. ದೊಡ್ಡದಾದ ; ಎತ್ತರವಾದ : [ವಿ]ಷ್ಣು ಭಟ್ಟೋಪಾಧ್ಯಾಯರಿಂಗೆ ಕೊನಿಗಾರಗದ್ದೆಯೊ[ಳಗೆ] ದಡಿಗೆ ಮೂಡೆ ೩ (ಎಇ. XXVII, ೧೬೨-೪೭ ; 1256) ; ದಡಿಗ ರಕ್ಕಸಿಯರಂತಾ ನೀಱಿ ಯಾಳಿಯರೊಡನೇಳ್ತಂದು ಬೇಗದೊಳು ಜಡಿದು ಕೆಡಪಲೆಳ್ದು ಬಂದಾ ಕಾಮುಕಿ ತೊಡಾ ಪಿಡಿದಳು ಪುತ್ರವನ (ಕುರಾಸಾಂ. ೩೨-೧೦೩). 'ದಡಿಗವೆಣ' ಪರಾ. ೬. ಬಲಿಷ್ಠವಾದ ; ಶೌರ್ಯದಿಂದ ಕೂಡಿದ : ಕಿಡಿಗಣ್ಣ ದಡಿಗಜಟ್ಟಿಗರ ಗರ್ಜನೆಗಳಿಂ ನಿಡುಗರುಳ ಮಾಲೆಯಂ ತಳೆದ ಸುರಮುನಿಗಳಿಂ . . . ದುರ್ಗಾನಿಲಯಮುಂ ಮಹೋದ್ಯೋಗದಿಂ ವಸುಧಾಧಿಪಂ ಪೊಕ್ಕನತಿಮನೋರಾಗದಿಂ (ದಶಕು. ೫-೫ ರಗಳೆ) : ದಡಿಗ ಕುಱಿಗಳನೇಳನೇಳಾಳೊಡನೆ ಕೊಂಡುರು ಕ್ರಮದಿ ತಿದ್ದಿದರೊಡನೆ (ಸಾಳ್ವಭಾ. ೧೭-೭೪). **ಧಡಿಗ** : ೬. ಕೊಂತ ಭಲ್ಲೆಯ ಶೂಲ ಸಬಳದಲಿ ಇಡುತ ಬಾಣದಲೆಸುತ ಕವಿದರೆ ಧಡಿಗ ದಾನವರೆರಡುಕಡೆಯಲಿ ಜಡಿದು ಹೆಮ್ಮರದಿಂದ ಹೊಡೆದೀಡಾಡಿದನು ಹನುಮ(ಕೌಶಿರಾ. ೧೧-೩೭).

[ ದಡಿ$_1$ + – ಗ$_2$ ]

**ದಡಿಗಯ್ಯ** 'ದಡಿಗೆಯ್ಯ' ನೋ.

**ದಡಿಗವಟಿ** (ನಾ). ೧. ಒಂದು ಊರಿನ ಹೆಸರು. ☞ ಈಗಿನ ಬೆಂಗಳೂರು ಜಿಲ್ಲೆಯ ನೆಲಮಂಗಲ ತಾಲ್ಲೂಕಿನ ದಡಿಗವಾಡಿ : ಶ್ರೀ ಸತ್ಯಯೂನಾಳೆ ದಡಿಗವಟಿಯ ಮಾಕಿಕಲ್ಲಗಾವುಣ್ಡನ ಮಗಂ ಮಟ್ಟಿಗಂ ಸೆಡೆಯಲ್ಲಾಕನ ಕಾಳೆಗದೊಳ್ ಸತ್ತಂ (ಮ್ಯಆರಿ. ೧೯೩೭, ೪೨-೦ : 900). ೨. ಒಂದು ಪ್ರದೇಶದ ಹೆಸರು (?) : ದೇವರ್ಗ್ಗೆ ನಿವೇದ್ಯಕ್ಕಂ ನನ್ದಾದೀವಿಗೆಗನ್ದಡಿಗವಟಿಯಾದ ವಿಕ್ರಮ ಚೋಳಮಣ್ಡಲದ ಕುಕ್ಕನೂರ್ನ್ನಾಡ ನಾಟ್ಗಾವುಣ್ಡಂ ಗಂಗಗಾವುಣ್ಡನ ಮಗಂ ರಟ್ಟಕುಳಕಾಲ ಚೋಳಗಾವುಣ್ಡಂಗಂ . . . ಗಟ್ಟಿಯುಂ ಕೊಣ್ಡಂ (ಎಕ. IX, ನೆಲಮಂ. ೧-೮ : 1029). [ ? ]

**ದಡಿಗವೆಣ** (ನಾ). ದೊಡ್ಡಗಾತ್ರದ ಹೆಣ : ಉಡಿದಿರ್ದ ಕಯ್ದು ನೆತ್ತರ ಕಡಲೊಳಗಡಿಗಡಿಗೆ ತಳಮನಾರ್ಚುತ್ತಿರೆ ಕಾಲಿಡಲೆಡೆವಡೆಯದೆ ಕುರುಪತಿ ದಡಿಗವೆಣಂಗಳನೆ ಮೆಟ್ಟಿ ನಡೆಯುತ್ತಿರ್ದಂ (ಗದಾಯು. ೪-೧೪)

[ದಡಿಗ + ಪೆಣ ]

**ದಡಿಗಸೆಟ್ಟಿ** (ನಾ). ಒಬ್ಬಾತನ ಹೆಸರು : ಶ್ರೀಮತ್ ಸ್ವಸ್ತ್ಯನೇಕ ಗುಣಗಣಾಳಂಕೃತರಪ್ಪ ದಡಿಗಸೆಟ್ಟಿಯರ ದೇವರದಾಸಯ್ಯನ ಅಬ್ಬೆಗಳ್ (ಎಕ. XV, ಹೊಳೆನ. ೭೭-೪ ; ಸು. 950). [ ದಡಿಗ + ಸೆಟ್ಟಿ ]

**ದಡಿಗಾಳು** (ನಾ). ದಪ್ಪವಾದ ಕಾಳು : ದಡಿಗಾಳುಗಳು ಜೇಗನೆ ಬೇಯುತ್ತವೆ (ರೂಢಿ). [ ದಡಿ$_1$ + ಕಾಳು$_2$ (<ಕಾಱ್$_2$) ]

**ದಡಿಗಿರಿ** (ನಾ). ದೊಡ್ಡ ಬೆಟ್ಟ ; ಭಾರಿ ಪರ್ವತ : ಕಿಡಿಗಳನು ಕಂಗಳಲಿ ಕಾಱುತ ದಡಿಗಿರಿಗಳನು ದಾಡೆಯಿಂದವೆ ಕೆಡಹುತಾಗಳೆ ಹರಿದ ರಾಕ್ಷಸಗಾಗಿ ಹರಿ ಬಳಿಕ (ಸಂಭಪ. ೭-೩೭). [ ದಡಿ + ಗಿರಿ$_1$ ]

**ದಡಿಗೆಯ್ಯ, ದಡಿಗಯ್ಯ, ದಡಿಗೈಯ** (ನಾ). ಕೋಲನ್ನು ಹಿಡಿದಿರುವವನು : ದಂಡಧರ ; ಯಮ : "ಜವನಱಿ ದಮ್ಮನು ದಡಿಗೆ[ಪಾಠಾಂ.

ಗ]ಯ್ಯ ... ನೇಸಱುಗನೆನಲಂತಕನೊಳೆದವಿದದ ನಾಮ" (ಶಬ್ದಮಂ. ೦೩). ದಡಿಗಯ್ಯ : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. ದಡಿಗ್ಯೆಯು :"ದಡಿಗ್ಯೆಯನೆಂದೆನಲ್ ದಮ್ಮನೆಂದನಲಂತಕಂ" (ಕಶರ. ೫೦).

[ ದಡಿ$_1$ + ಕೆಯ್$_2$ + – ಅ$_7$ ]

**ದಡಿಗ್ಯೆಯು** 'ದಡಿಗೆಯ್ಯ' ನೋ.

**ದಡಿಗೊಳ್** (ಕ್ರಿ). ಕೋಲನ್ನು ಹಿಡಿ; ದಂಡ ಹಿಡಿ: ಪುರವರವನು ಸೆಟ್ಟೆ ಕವಿಸಿದ ವಜ್ರುಖರ್ಪರವನುದ್ಧತ ಗದೆಯಿಂದ ಭರದಿ ಪೊಡೆಯಲದು ದಡಿಗೊಂಡ[ಡು] ಮಣ್ಣು ಬಗ್ಗರೆಯುನೊಡೆದ ತೆಜನಾಯ್ತು (ನೇಮಿಸಂ. ೨೫-೫೨). [ ದಡಿ$_1$ + ಕೊಳ್$_1$ ]

**ದಡಿಗೋಲು** (ನಾ). ದಪ್ಪವಾದ ಕೋಲು; ಲಾಠಿ: ಆಗುಭೀಗೆ ಎಂಬ ದಡಿಗೋಲಿನಲ್ಲಿ ಆಗಡದ ಎಮ್ಮೆಯ ಚರ್ಮವ ತೆಗೆದು ಉಭಯನಾಮವೆಂಬ ನಾರಿನಲ್ಲಿ ಕಿತ್ತಿಯನೊಪ್ಪವ ಮಾಡಿ (ಸರ್ವವ. ೦೦೨-೫೫೪).

[ ದಡಿ$_1$ + ಕೋಲು$_1$ (<ಕೋಲ್$_1$) ]

**ದಡಿತ** (ನಾ). (?) : ಕಿಡಿಯನುಗುವೆರಡಕ್ಷಿ ಕೆತ್ತುವ ನಿಡುಗಿವಿಗಳುಂ ಕಟಿದ ಹಲ್ಲಳು ದಡಿತ[ಪಾಠಾಂ. ದ]ಮಂಡೆಯ ಮೇಲೆ ವಿಡುಕುವ ಬಾಲವಾಯ ತದಿ (ಸಾಳ್ವಭಾ. ೫-೩೦). [ ? ]

**ದಡಿದೋಳ್** (ನಾ). ದಪ್ಪವಾದ ತೋಳು: ಪೇರೊಡಲುರ್ವಿನಿಂದ ದಡಿದೋಳ್ಗಳ ಕೊರ್ವಿನಿಳಾತಳಾಗ್ರುದೊಳ್ ಬೀಱುತೆ ತಮ್ಮ ಮಂತ್ರಜಯಮಂ (ಹಾಲಾಸ್ಯ. ೨-೦೩-೨೦). [ ದಡಿ$_1$ + ತೋಳ್ ]

**ದಡಿದೋತ್ರ**, ದಡಿಧೋತರ, ಧಡಿದೋತರ (ನಾ). ಅಂಚುಳ್ಳ ಪಂಚೆ: ಮಣಿದೊಡವಿನ ಪೆಡಗೆ ಪಾಗು ದಡಿದೋತ್ರದ . . . ಮಟ್ಟಗರೆಸೆದರ್ (ಹಮ್ಮೀರ. ೮-೦೯). **ದಡಿಧೋತರ** : ಶರೀಫರು . . . ತುದಿ ಕಾಲ್ಬೆರಳು ಗಳು ಮುಚ್ಚುವಂತೆ ನಿರಿಗೆ ಪೊಯ್ದು ದಡೀಧೋತರವನ್ನು ಉಡುತ್ತಿದ್ದರು (ಶರೀಫ. ೬೦ ಕವಿಜಾವ್ವ ಪರಿಚಯ). **ಧಡಿದೋತರ** : ಗದಗನ್ನು ದಾಟುತ್ತಲೆ ಚುಂಗುಬಿಟ್ಟು ಧಡಿದೋತರ ಉಟ್ಟ ಜನರು . . . ಕಪ್ಪುಮುಖದಲ್ಲಿ ಮುಳುಗಿಪೋದ ಸಾದಿನ ಬೊಟ್ಟು ಇಟ್ಟುಕೊಂಡ ಬಾಲಕಿಯರು–ಇವರೇ ತುಂಬಿಬಿಟ್ಟರು (ಮುಂಗಾರು. ೨೭).

[ ದಡಿ$_2$ (<ತಡಿ$_2$) + ದೋತ್ರ (<ಧೋತ್ರ) ]

**ದಡಿಧೋತರ** 'ದಡಿದೋತ್ರ' ನೋ.

**ದಡಿಯ$_1$**, ಧಡಿಯ$_1$ (ನಾ). ೧. ಬಲಶಾಲಿ; ಶಕ್ತ; ಶೂರ: ಕೈದು ವಿಡಿಯುನಾಂ ನಿನಗನಾಯುಧಗೆಂದು ಕೈಯ ಪಾವಂ ವಿನತಾತನಯಂ ಬಿಸುಡುವ ಪೋಲ್ ತೊಟ್ಟನೆ ಬಿಸುಟಂ ಪಿಡಿದ ಬಡಿಯುನಂತಾ ದಡಿಯಂ (ಚಂದ್ರಪ್ರ. ೫-೭೭). ೨. ದಾಂಡಿಗ; ಟೊಣಪ: ಯಾವ ಕೆಲಸಕ್ಕೂ ಬಾರದ ದಡಿಯ ಅವನು (ರೂಢಿ). **ಧಡಿಯ$_1$** : ೨. ಅವತ್ತು ಅಂಗಡಿಗೆ ಹೋಗದೆ ಮುದಿ ತಾಯಿಯುನ್ನೇ ಕಳುಹಿಸಿದ ಧಡಿಯ (ಹೊಸಕ್ಕ. ೦೨೭). 'ದಡಿಗ' ಪರಾ. [ ದೇ.॥ ತಮಿ. ಮಲ. ತಟಿಯ ]

**ದಡಿಯ$_2$** 'ಧಡೆ$_1$' ನೋ.

**ದಡಿವಲೆ** (ನಾ). ಒಂದು ಬಗೆಯ ಬಲೆ; ದಡಿಗಳನ್ನುಳ್ಳ ಬಲೆ: ಬರಿಯುಂ ಬಿಡದೆ ಪೊಡವ ದಡಿವಲೆಗೆ ಸೊಂದೆಡೆ ಮೊಳೆಯ ಪೊಕ್ಕು ನೇಣ ಕಡಿವುತಿರೆ (ಸೋಮುಕ. ೩-೦೨); ಸರಳ ಸೊಂಪಿನ ಸೋಹಿನಲಿ ನಿಱುಗರುಳ ದಾವಣಿವಲೆಗಳಲಿ ಸಂಗರದ ಸುಭಟವ್ರಜದ ಮಧ್ಯದ ಗೂಡುವಲೆಗಳಲಿ ಉರುಗದೆಯ ದಡಿವಲೆಯಲಸಿ ಮುದ್ಗರದ ಸಿಡಿವಲೆಗಳಲಿ ಸಮರದೊಳರಿ ಮೃಗವ್ರಾತವನು ಭೀಮಕಿರಾತ ಕೈಕೊಂಡ (ಕುಮಾವ್ಯಾದ್ರೋ. ೦೨-೩೦) : ಒಪ್ಪಿದರು ದಡಿವಲೆಯು ಸಿಡಿವಲೆ ಕದ್ದಿವಲೆ ಕುಣಿವಲೆಯನಗಲಕೆ (ತೊರರಾ. ೩-೩-೦೨); ತನ್ನಾಳ್ದನಂ ಬೇಂಟೆಯೊಳ್ ಮೆಚ್ಚಿಸಿ ಬಸಂಗೆಯ್ದುವೆನೆಂದು ದಡಿವಲೆಗಳಂ ಬಡಿಕೋಲ್ಗಳಂ ಅಂಟುಗಳೆಗಳಂ ಕಾಲ್ಗಣ್ಣಿಗಳಂ ಗಿಡುಗ ಸಾಳುವ ಜಾಯಿಲಂಗಳಂ ದೀಹದ ಮಿಗವಕ್ಕಿಗಳಂ ತರಿಸಿರಿಸಿ (ಚಿಕವಂ. ೫-೦೭). 'ತಡಿವಲೆ' ಪರಾ. [ ದಡಿ$_1$ + ಬಲೆ$_1$ ]

**ದಡಿವಿಡಿ** (ಕ್ರಿ). ಕೋಲನ್ನು ಹಿಡಿ; ದಂಡವನ್ನು ಹಿಡಿ: ದಡಿವಿಡಿದು ಧಟ್ಟಸುತೆ ಸಂದಿಪಾಠಕಾಳರತಿಬಳನಸಿತಗಳನ ಸಮ್ಮುಖದೊಳರ್ದರುನ್ನತಿ ಪೆರಸಿ ಸಲುಗೆಯಿಂದೆ (ಸಿದ್ದೇಪು. ೧-೪೩); ಅಧಿಕಾರದ ತಲೆಸುತ್ತು, ಕಕ್ಕಸದ ಎದೆ, ಕಿಡಿಕಣ್ಣುಗಳಿಂದ ದಡಿವಿಡಿದು ಹುಲಿಗಳಂತೆಯೇ ಬಂದು ಮುದುವೆಯ ಮನೆಯನ್ನು ಸುಗ್ಗಿದರು (ಕಾಲೂರ. ೦೫ ಕಥಾಸಾರ).

[ ದಡಿ$_1$ + ಪಿಡಿ$_1$ ]

**ದಡಿಪೊಯಿಲ** (ನಾ). ದೊಣ್ಣೆಯಿಂದ ಹೊಡೆಯುವವನು: ಕಡವೆಗ ತ್ಯಾಸ್ವಾದಿಯೆಂಬ ಸರಿವೊಲಗಳಿಗೆ ದಡಿಪೊಯಲನೆಂಬ ಕರಡಿಯ ಗಂಡನೆಂಬ ಬಿಟ್ಟಡೆ ತೋಳ ಜಜ್ಜಾರನೆಂಬ ಸರಿದಿನಿಹಿಯೆಂದೆಂಬ ಕುನ್ನಿಗಳನಾಯ್ದು ಗಡಣದಿಂ ಬೇಡವಡೆಯೊಡೆಯರೆಲ್ಲರು ನೆರೆದು (ಹದಶಾ. ೫-೭) : "ಕೋಲಿನ ಏಟು ; ದೊಣ್ಣೆಯ ಪೆಟ್ಟು" (ಹದಶಾ. ಕೋಶ).

[ ದಡಿ$_1$ + ಪೊಯಿಲ್ (<ಪೊಯ್ಯು) + – ಅ$_7$ ]

**ದಡಿಸೀರೆ** (ನಾ). ಅಂಚಿನ ಸೀರೆ: ದಡಿಸೀರೆ ದುಡಿಸೀರೆ ಪೊಸಸೀರೆಗಳನುಟ್ಟು ನಡು ಕನಕರುಚಿ ಪೋಲ್ವ ಕುಬುಸಗಳನುರೆ ತೊಟ್ಟು (ಸಿದ್ಧಕಾ. ೮-೦೨); ರಂಗೀಲಿ ಉಟ್ಟೇರಿ ರೇಸ್ಮಿ ದಡಿಸೀರೆ ಮತ್ತೆ ಹಂಗನೂಲಿನ ಪರವಿ ಮರತೆವ್ವ ನಾರಿ (ಶರೀಫ. ೨೧-೩). [ ದಡಿ$_2$ (<ತಡಿ$_2$) + ಸೀರೆ$_2$ ]

**ದಡುಂ** (ನಾ). ಒಂದು ಅನುಕರಣ ಶಬ್ದ : (+).

**ದಡುಕಿಸು** (ಕ್ರಿ). (?) : ಕಡಿಯಲು ಬಿದ್ದದಿ ತಲೆಯನು ಮಡದಿಯ ಶಿರ ತಾಗಿದಾಗ್ಯು ಛೇದಿಸದಿರಲಾ ಪೊಡವಿಪ ಚಿಂತಿಸಿ ಮನದೊಳ್ ದಡುಕಿಸಿ ತಾ ಪುನಹ ಕಡಿಯೆ ಸುರಗಣ ಮೆಚ್ಚಲ್ (ಹಮುಕ. ೨೦೩).

[ ? + – ಇಸು$_3$ ]

**ದಡೂತಿ** 'ಧಡೂತಿ' ನೋ.

**ದಡೆ$_1$** 'ದಡಿ$_1$' ನೋ.

**ದಡೆ$_2$**, ದಡ$_2$ (ನಾ). ತೂಕಮಾಡುವಾಗ ತಕ್ಕಡಿಯಲ್ಲಿ ಒಂದು ಕಡೆ ಪಾತ್ರೆ ಮೊದಲಾದುವನ್ನು ಇಟ್ಟು, ಅದರ ತೂಕಕ್ಕೆ ಸರಿಯಾಗಿ ಮತ್ತೊಂದು ಕಡೆ ಇಡುವ ಬಟ್ಟು, ಕಲ್ಲು ಮುಂತಾದ ವಸ್ತು; ಪೇರು; ಕಾಣಿ. 'ದಡೆಕಟ್ಟು' ಪರಾ. ದಡ$_2$. 'ದಡಕಟ್ಟು' ಪರಾ.

[ ದೇ.॥ ತಮಿ. ಕಟ್ಟೆಯು ; ತೆಲು. ದಡ ]

**ದಡೆ$_3$** 'ಧಡೆ$_1$' ನೋ.

**ದಡೆಕಟ್ಟು**, ದಡಕಟ್ಟು (ಕ್ರಿ). ತಕ್ಕಡಿಯಲ್ಲಿ ಪಾತ್ರೆ ಮೊದಲಾದುವುಗಳ ತೂಕವನ್ನು ಸರಿದೂಗಿಸುವಾಗ ಮತ್ತೊಂದು ಕಡೆಗೆ ಬಟ್ಟು, ಕಲ್ಲು ಮುಂತಾದ ಸಾಮಗ್ರಿಯನ್ನು ಹಾಕಿ ತೂಕವನ್ನು ಸಮತೋಲನ ಗೊಳಿಸು; ಪೇರುಕಟ್ಟು : ದಡೆಕಟ್ಟಿ ಬೆಣ್ಣೆ ತೂಗು (ರೂಢಿ). **ದಡಕಟ್ಟು**: ತೂಗುವ ಮುಂಚೆ ದಡಕಟ್ಟು (ರೂಢಿ). [ ದಡೆ$_2$ + ಕಟ್ಟು$_1$ ]

**ದಡೆಮಾರು** (ನಾ). (?): ಆ ಮೇಳಣ ದಡೆಮಾರುಂಗಳಲ್ಲಿ ಮುಡಿ ೪ (ಇಅ. V, ೪೨-೩೭ : 1587). [ ? ]

**ದಡೆಯ** 'ಧಡೆ$_1$' ನೋ.

**ದಡ್ಡ$_1$** (ನಾ). ಹೊಂದಿಕೆ ; ಜೋಡಣೆ; ಸೇರಿಕೆ ; ಒತ್ತಾಗಿರುವಿಕೆ : "ಗಾಥದೊಳೆ ದಡ್ಡಂ" (ಕರ್ಣಾನಿ. ೬೦). 'ದಡ್ಡಕ್ಕರ' ಪರಾ.

[ ದೇ.॥ ತೆಲು. ಜಡ್ಡ ]

**ದಡ್ಡ$_2$**, ಧಡ್ಡ (ನಾ). ೧. ತಿಳಿಗೇಡಿ; ಮೂರ್ಖ; ಅಜ್ಞಾನಿ : ಅನುಸರಣೆಯಿಂದ ದಡ್ಡರೂ ದೊಡ್ಡವರಾಗಬಹುದೆ ? (ಕಥವಿ. I, ४०) : ನಾ ಬಲು ದಡ್ಡ (ನನ್ನಕೊ. ೩೨); ದಡ್ಡನಿಗೆ ದೊಣ್ಣೆ ಪೆಟ್ಟು, ಜಾಣನಿಗೆ ಮಾತಿನ ಪೆಟ್ಟು (ಗಾದೆ). (ಗು). ೨. ತಿಳಿಗೇಡಿಯಾದ; ಮೂರ್ಖ

ತನದ; ಬುದ್ಧಿಯಿಲ್ಲದ: ಅಡ್ಡಬಿದ್ದು ಶಿಷ್ಯನ ಮಾಡಿಕೊಂಬ ದಡ್ಡ ಪ್ರಾಣಿಗಳನೇನೆಂಬೆನಯ್ಯ (ವಚಸಂ. ೧೨೮-೧೦). ಧಡ್ಡ: ೧. ನಮಗ ಧಡ್ಡರು ಅಂತ ಬಯ್ಯೋದನ್ನ ಬಿಟ್ಟು, ನಮ್ಮ ಊರವರು ಅಂತ ತಿಳಿಸಿಕೊಡು (ಕಮ್ಮಟ. ೫೭); ಈಗೇನು ಹೊತ್ತಿಲ್ಲದ ಹೊತ್ತಿನ್ಯಾಗ ಬಿರಡಿ ಹಚ್ಚಿ ಕೊಡತಾರೊ ಧಡ್ಡ ಮೋಡಿ (ವ್ಯನಿ. ೨೭).

ದಡ್ಡ ದಾಮೋದರ = ಹೆಡ್ಡನಾದವನು ಎಂಬರ್ಥದಲ್ಲಿ ಬಳಸುವ ಒಂದಂ ಮಾತಂ: ಅವನೊಬ್ಬ ದಡ್ಡ ದಾಮೋದರ (ರೂಢಿ).

[ದೇ.॥ ತುಳು. ದಡ್ಡ; ಕೊಡ. ದಡ್ಡೀ]

ದಡ್ಡ$_4$ 'ದಡ್ಡಸ' ನೋ.

ದಡ್ಡಕ್ಕರ (ನಾ). ಹೊಂದಿಕೊಂಡಿರುವ ಅಕ್ಷರ; ಒತ್ತಕ್ಷರ; ದ್ವಿತ್ವಾಕ್ಷರ; ಸಂಯುಕ್ತಾಕ್ಷರ: "ದ್ವಿತ್ವಾಕ್ಷರವುದು ದಡ್ಡಕ್ಕರಂ" (ಚತುನಿ. ೨೪): ಬಿಂದು ವಿಸರ್ಗಂ ವ್ಯಂಜನವೊಂದಿದ ದಡ್ಡಕ್ಕರಂ ಪದಾಂತ್ಯಂ ದೀರ್ಘಂ ಬಂದೊಡಱ ವನಜಮುಖಿ ಗುರುವೆಂದುಂ (ಛಂದೋಂಬು. ೧-೩೫): ಓರಿಯುರ್ ಸಲಿಪರ್ ದಡ್ಡಕ್ಕರದ ಱಟಕ್ಕೃದೆ ರೇಫೆವೆರಸಿದ ದಡ್ಡಕ್ಕರಮಂ ಱಟನಾಗದನುಚ್ಚರಿಸಲ್ಕಾಗಿರ್ದ ತೆಱದಿನಂತದು ಶುದ್ಧಂ (ಶಮದ. ೨೪): ಕಥೆಯನಾಲಿಸಿ ನವರಸಾಂಬುಧಿಯೊಳಾಳದೀ ಕಥೆಯ ನಿಂದಿಸುವರ್ ತಕಾರ ದಡ್ಡಕ್ಕರದ ಕಥೆಗಳಲ್ಲದೆ ಮನುಜರಲ್ಲವದಱಿಂ ಭಕ್ತರೀ ಕಥೆಯ ಕೇಳ್ವುದೊಲಿದು (ಚಬಪು. ೦-೩೦). 'ಒತ್ತಕ್ಕರ' ಪರಾ. [ದಡ್ಡ$_1$ + ಅಕ್ಕರ$_2$]

ದಡ್ಡತನ (ನಾ). ತಿಳಿಗೇಡಿತನ; ಅಜ್ಞಾನ; ಮಂಕುತನ: ದಡ್ಡತನದಿ ಹೀಗೆ ಹೆಡ್ಡೆಯಾಗಿರುವಂತ ಮಡ್ಡಿಯಾದರೆ ನಿನ್ನ ನೆನೆಯೆ (ಕಪೋತ. ೦೪-೫೦): ನಾವು ಮೌನದಿಂದಿದ್ದರೆ, ನಮ್ಮ ದಡ್ಡತನವು ಒಂದು ವೇಳೆ ಜನರಲ್ಲಿ ಪ್ರಕಟವಾಗದೆ ಇರಬಹುದು (ಮುಂಬಯಿ. ೪-೪೯): ತನ್ನ ಮಾತೃಭಾಷೆಯಲ್ಲಿ ಉಪನ್ಯಾಸ ಮಾಡುವದಂತೂ ಶುದ್ಧ ದಡ್ಡತನ (ಹುಚ್ಚುಹು. ೦೧೦).

[ದಡ್ಡ$_2$ + –ತನ]

ದಡ್ಡಸ, ದಡ್ಡ$_3$ (ನಾ). ಒಂದು ಬಗೆಯ ಚರ್ಮವಾದ್ಯ; ಡೊಂಬರವನ ಡೊಳ್ಳು; ದೊಂಬರ ಹರೆ: "ದಡ್ಡಸ = ದೊಂಬವಱ" (ಶಮದ. ೫೦. ೨); "ದಡ್ಡಸವೆಂದು ಡೊಂಬವಱ" (ಕರ್ಣಾನಿ. ೦೮): ದಡ್ಡಸವೆನಲ್ ಡೊಂಬರೂದುವ ವಾದ್ಯವು" (ಕಶರ. ೫೦); ಪೆಸರ್ ನಿನಗೆ ಕೇಳ್ ಮೊಸರ್ ಪೆಱರ್ಗೆ ನಿನ್ನ ಮೆಯ್ ಡೊಂಬ ದಡ್ಡಸಕ್ಕೆ [ಪಾಠಾಂ. ಮೆಯ್ಗೊಳ್ವ ದಡ್ಡಿಸಕ್ಕೆ] ಗುಱಿಯುಪ್ಪುದೊಡ್ಡಿಱದು ತಿಂಬರನ್ನಕ್ರಿಯಾವಸಾನವಿರಸಂಗಳಿಂದ್ರಿಯಸುಖಂಗಳಿಂತಾದ ಸಂತಸಂ ಗತವಿವೇಕ ಪೇೞ್ ನಿನಗಸಾರ ಸಂಸಾರದೊಳ್ (ಆದಿಪು. ೩-೭೦): ನಿಮ್ಮ ದಡ್ಡಸದ ಕುಡುಹಿನಾಣತಿಯಂತೆಯೇ ಗಳಿಗೂಸಾಡಲುಳ್ಳ ಡೊಂಬರ ಪೋರಿಯು ನಾನು (ಮಂತ್ರಶ. ೨೯-೬). ದಡ್ಡ$_3$: "ದಡ್ಡ–ಡೊಂಬರ ಡೊಳ್ಳು" (ಗಂಗಾವಚ. ೦೬೩).

ದಡ್ಡಿ$_1$ (ನಾ). ದಡ್ಡಳಾದ ಹೆಂಗಸು; ದಡ್ಡೆ: ಅವಳೋ ಶುದ್ಧ ದಡ್ಡಿ (ರೂಢಿ). [ದಡ್ಡ$_2$ + –ಇ$_2$]

ದಡ್ಡಿ$_2$, ದಟ್ಟಿ$_2$ (ನಾ). ೧. ತೆರೆ; ಪರದೆ; "ಜವನಿಕೆ" (ಚತುನಿ. ೬. II, ೨೪): ಕೂಡೆ ಮುಸುಱುವ ಮಱದುಂಬಿಯ ಬಂಬಲಿಂ ಲತೆಗಳುಂ ಕರಿಯ ದಡ್ಡಿಯಂ ಕವಿದಂತೆಯುಂಮಾಗೆ (ಕಾದಂಬ. ೨೦೯); ಗುರುವ ಬಿಜಯಂಗೈಸಿ ಮನಕೆ ಪರಿತೋಷ ಪುಟ್ಟಲು ವಜ್ರಪಂಜರದ ದಡ್ಡಿಯಾದ್ದಂಬಡೆಯಲು (ಸಿದ್ಧರಾ. ೯-೫); ರಾಣಿಯ ವಾಸದಂದಳಕೆ ದಡ್ಡಿ ಮುಸುಂಕುವುದುಂಟು ತಮ್ಮ ನೇರಾಣಿಯ ಪೊಂಗಳಂದಳಕೆ ದಡ್ಡಿ ಮುಸುಂಕಿದನಿತ್ತೆ ಭೇದಮಾ ರಾಣಿಯ ವಾಸದೊಳ್ ತಮಗೆನಿಪ್ಪ ವಿಳಾಸಿನಿಯರ್ . . . ಸಡೆ ತಂದರದೊಂದು ಲೀಲೆಯಿಂ (ಪಾರ್ಶ್ವಪು. ೮-೯೩): ಕವಿದ ಚಿತ್ರಾವಳಿಯ ದಡ್ಡಿಯ ವಿವಿಧ ಭಟರುಗ್ಗಡಣೆಯಲ್ಲಿ ಮೆರೆಯುವತಿ ಬಂದಳು (ಕುವ್ಯಾಉ. ೬-೦೮): ಮಣಿಮಯದ ಮುಕ್ತಾಫಲದ ಕೇವಣದ ಕನಕದ ದಡ್ಡಿ ಬಿಗಿದಂದಣವನೇಱಿದರರಸಿಯರು (ತೊರವೆ. ೦-೬-೫): [illegible] ದಡ್ಡಿಯ ಮಱಿಯ ಮೂರ್ಖರು (ಉತ್ತರಾ. ೧೧-೫೦): ಮುತ್ತಿನ ದಡ್ಡಿಯ ಪಲ್ಲಕ್ಕಿಯೇಱಿ ತಮ್ಮೊತ್ತಿನೊಳ್ಪಹ ಕೆಳದಿಯರ ಮೊತ್ತದ ದೊರೆಕುಮಾರಿತಿಯರಾ ಬೀದಿಯೊಳರ್ತಿಯೊಳೆಡೆಯಾಡುತಿಹರು (ಕೇನವಿ. ೭-೦೯): ಮುಗಿಲೊಡ್ಡಿನ ದಡ್ಡಿಯಂತೆ ಜವನಾಳ್ಗಳ ಜಂಗುಳಿಯಂತೆ ನಡೆವ ಕಾರೊಪಲ ವೇರಾನೆಗಳ (ರಾಮಾಶ್ವ. ೯೪-೯). ೨. ಮನೆಯ ಮಾಳಿಗೆ,–ಮಂಪಡಿ: "ದಡ್ಡಿಯೆಂದು ಮಾಳಿಗೆ" (ಕಶಸಾ. ೦೬-೩೦೫); "ದಡ್ಡಿಯೆ ಮಾಳಿಗೆಯೆನಿಪುದು" (ಚತುನಿ. ೩೮); ಸೆಗಳಿಗೆ ಪೆಂಡಿರ ಮೊಲೆ ಕಿಚ್ಚುಗರುವ ಪೊಗೆ ಕುಂಕುಮಾಂಕ ಮೋವರಿ ನೆಲಮಾಳಿಗೆ ದಡ್ಡಿಯೆಂಬಿವಮರ್ದರನಗಲ್ದುದು ಪೊಲೆಯಾಳಿ ತೆಱದೆ ಮುಟ್ಟದೆ ಶಿಶಿರಂ (ಪುಷ್ಪಪು. ೬-೫೩). ೩. ಮುಚ್ಚಳ; ಮುಸುಕು; ಆಚ್ಛಾದನ: "ದಡ್ಡಿಯೆನಲ್ಕೆ ಪಿಧಾನನಾಮದೊಳ್" (ಕರ್ಣಾನಿ. ೦೮); ತೆಗೆಸುವೆವು ನಾಳಿನಲಿ ನಿಮ್ಮಯ ಮೊಗದ ದುಗುಡದ ದಡ್ಡಿಯನು ಮೈದೆಗೆಯದಿರಿ ಕಲಿಯಾಗಿಯೆಂದನು ನೃಪತಿ ಸುಭಟರಿಗೆ (ಕುವ್ಯಾಕ. ೦-೨೨): ಮಂದಲೆಯಿಂದಮೋ ಜಗಲಿ ನಿಗ್ಗವದಿಂದಮೆ ಕಂಬವಿಟ್ಟಿಗಾವಿಂದಮೆಯದ್ದಮಾಸು ಕಣೆಯಿಂದಮೆ ಪಂಜರಗಟ್ಟು . . . ಪಲಗೆಯಿಂದಮೆ ದಡ್ಡಿಯುಮೆಡ್ಡಮಾಗೆ ಚೆನ್ನೊಂದಿತು ಬೀರಮಣ್ಮದುವೆಯೊಳ್ ಪಸೆಗಿಕ್ಕಿದ ಪಂದಲಂದದಿಂ (ಚಕವಿ. ೨-೬೨). ೪. "ಪಂಜರ" (ಚತುನಿ. ೬. I, ೦೧): ನವನಾಳ ಬಿಂದುಗಳ ದಡ್ಡಿಯಂ ನಿಟ್ಟಿಸುತ (ರಂಗಪು. ೨೨-೨೬). ದಟ್ಟಿ$_2$: ೧. ಸಿದ್ಧೇಂದ್ರನಂ ತಂದು ಬಿಜಯಂಗೈಸಿ ಇತ್ತರದಿ ವಜ್ರಪಂಜರದ ದಟ್ಟಿಯ ಬಿಗಿದು ಸುತ್ತ ಪರಿಜನವೈದೆ ಹರಿದು ಬರುತ (ಸಿದ್ಧರಾ. ೯-೯): ಪಸೆ ಪಂದಲ್ ದಟ್ಟಿ ಜಾಗಂ ಜಗಲಿ ಬಿಗಿದ ಭೃಂಗಾರಿ ಮೇಲ್ಕಟ್ಟು ಚಿತ್ರಂ ಪೊಸಕುಂಭಂ ಶಂಕು ಸೂಳ್ವೆರಣೆ ತಳಿರ್ಗಳಸಂ . . . ಸಮಸ್ತ ಸ್ತ್ರೀಜನಂ ಕನ್ನಡಿ ಜವಳಿಗಳುದ್ವಾಹದೊಳ್ ವರ್ಣನೀಯಂ (ಸೂಕ್ತಿಸು. ೬-೦). ೩. ಗುರುವಿಗೆ ಸೂರ್ಯನ ಸುತ್ತುಬರಲು, ೧೨ ವರುಷಗಳ ಕಾಲ ಹಿಡಿಯುವುದು. ಅದರ ಸುತ್ತಲು, ಮುಗಿಲುಗಳ ದಟ್ಟಿಯ ಮೇಲೆ ದಟ್ಟಿಗಳಿವೆ (ಬಾಲಪ್ರ. I, ೦೮೨). 'ತಟ್ಟಿ$_1$' ಪರಾ.

[ದೇ.॥ ತಮಿ. ಮಲ. ತಟ್ಟಿ; ತಟ್ಟು; ತುಳು. ದಪೆ, ತಟ್ಟಿ; ತೆಲು. ದಡಿ; ಕುಯಿ. ತಟಿ]

ದಡ್ಡಿ$_3$ 'ದಿಡ್ಡಿ' ನೋ.

ದಡ್ಡು, ಜಡ್ಡು$_2$, ಜಿಡ್ಡು (ನಾ). ಮೇಲಿಂದ ಮೇಲೆ ಏಟು ಬಿದ್ದು ಘರ್ಷಣೆಯಾಗಿ ಅಥವಾ ಒತ್ತಿ ಒತ್ತಿ, ಚರ್ಮವು ಒರಟಾಗಿ ಕಾಯಿಗಟ್ಟುವಿಕೆ,– ಒರಟಾಗುವುದು: ಚಿಂದಳಿರ ಮೆಲ್ಪಾಸಿನೊಳ್ಮಲಂಗುತಿರ್ದ ನಿನ್ನೀ ಚೆನ್ನಲುವಿನೊಳಾವಗಂ ಬಿಗಿದಿರ್ದ ಪಲ್ಲಣದೊತ್ತಿನಿಂದೊಗೆದ ದಡ್ಡುಗಳುಮಂ (ಕಾದಂಬ. ೭೩೦): ಕಿಱಿದೆಡೆಯಯಶದ ಭವದಿಂ ಕರಟಾದ ಪೊಲಣಿಯ ಬುಗುಟು ನೆಗೆದೆಡೆ ಶಿರದೊಳ್ ತರದಿಂದೆ ದಡ್ಡು ನೆಗೆದಂತಿರೆ ಪಿರಿದಪಮಾನಮೆಯ್ದಿದುದು ದುಶ್ಚರಿತಂ (ಪಾರ್ಶ್ವಪು. ೪-೨೬): ತಿರುಪೊಯ್ಲಿಂದಾದ ದಡ್ಡುಬ್ಬರಿಸಿ ಮೆಱೆವ ಮುಂಗೆಯ್ಗಳಿಂ ವನ್ಯಮಾತಂಗರದಾಘಾತಕ್ಷತಂ ಕಣ್ಗೊಳಿಪಗಲ್ದುರದಿಂ ಕಾಳಮುಂ ಕಾನನಕ್ಕುಬ್ಬರಮಾಗಲ್ . . . ತಾನಿರ್ದನಾ ಬೇಡರೊಳೊರ್ವಂ (ಶಾಂತೀಶ್ವ. ೩-೭೫); ಬಲೆ ಕಲ್ಲಿ ಕುಬ್ಬಿಗಳ ಪೊತ್ತ ಹೆಗಲಿನ ದಡ್ಡು [ಪಾಠಾಂ. ಸೊಗಡು, ದಂಡ]ಗಳ ಪಿಡಿದ ಬಲೆ ಕೋಲ ಕುಕ್ಕುರಂಗಳ ಕಯ್ಯೊಳಳವಟ್ಟ ಗಿಡುಗ ಲಗುಡಗಳೆಸೆಯಲಲ್ಲಿ ವನಚರರಿಂದೆ ವನಮೆಸೆದುದು (ಚಬಪು. ೫೩-೩೨): ನಮ್ಮ ಕಾಲಿಗೆ ಅಥವಾ ಇನ್ನಾವುದಾದರೂ ಭಾಗಕ್ಕೆ ಮೇಲೆ ಮೇಲೆ ಕೆಲಸ ಬಿದ್ದು ಅಲ್ಲಿ 'ದಡ್ಡು' ಆಗಿರುತ್ತದೆ (ಪರಿನ. ೨೭). ಜಡ್ಡು$_2$: ಭಕ್ತರಂ ಬಿಡದಱಿ ಜಡ್ಡಾದವೀ [ಪಾಠಾಂ. ಕಾಯ್ದಟ್ಟಿದುವು] ಪದಂ ಭಕ್ತರ್ಗೆಯಿತ್ತಿತ್ತು ನಿಂದುದೆಮ್ಮಯ ಪದಂ (ಅನೀರ ದೇ. ೩೮-೨೫): ದೊಡ್ಡಮಾರ್ಗಂ=ಆನೆ ಕುಮುರೆಗಳೊಳಾಪ

**ದಳಭವನ** (ನಾ). ಎಲೆಮನೆ ; ಪರ್ಣಕುಟಿ : ಲವನೆ ಕೇಳಾ ದಿನವನಾ ದಳಭವನದಲಿ ನೂಕಿದರು (ತೊರರಾ. ೨-೩-೨೭). [ ಸಂ. ದಲಭವನ ]

**ದಳಮಳ** (ನಾ). ತಂಬಿ ತಂಳುಕುವುದಂ ; ಡಮುಡಮಿಸುವುದಂ : ವರ್ಷಾಕಾಲದಲ್ಲಿ ವನಜ್ಯೋತ್ಸ್ನೀ ಎಂಬ ಲತೆಯು ತನ್ನ ಪತ್ರರಾಶಿಯ ಬಾಹುಳ್ಯದಿಂದ ಹೇಗೆ ದಳಮಳಮಾಡುವುದೋ ಅವಳ ಶರೀರವೂ ಹಾಗೆ ಪೂರ್ಣತೆಯಿಂದ ದಳಮಳವಾಗುತ್ತಿದ್ದಿತು (ಕವಾಕಂ. ೪೩). 'ಡಳಮಳ' ಪಠಾ. [ ←ಮರಾ. ದಳಮಳ್ ]

**ದಳಮೋಟು** 'ದಳವೇಟು$_1$' ನೋ.

**ದಳವಡಿಗ** (ನಾ). ಸೈನ್ಯದಲ್ಲಿ ವ್ಯವಹರಿಸುವವನು ; ಸೈನಿಕ; ಯೋಧ: ಮಣಿಮಯ ಹಜಾರದೊಳು ಬಿತ್ತರದ ದಳವಡಿಗರೊಡನೆ ಸೇನಾನಿಯರ ರಾಯ ರಾವುತರೊಗ್ಗಿನಲಿ (ನವಮೋ. ೨೭-೩೭). [ದಳವಡೆ + – ಇಗ]

**ದಳವಡೆ** (ನಾ). ಸೈನ್ಯದ ತುಕಡಿ ; ಪಡೆ: ಗುರಿಕಾರ ನಾಯಕರು ದಳವಡೆಯ ಜಟ್ಟಿಗಳು ಕರಣಿಕರು ಕಣಜ ಬೋ ರಕ್ಕಸರಾಯಭಾರಿಗಳು . . . ಮುಂತಾದಯುಸಮುಸದ್ಭುಧಜನರು ಮುಖ್ಯವಿನಿಯೋಗ ದೊಡ್ಡೋಲಗದ ಮಧ್ಯದಲೀ ಶಶಿಮೌಳಿಯಂದದಿ ಸಮಸ್ತ ಪ್ರಭುವರನೆನಿಸಿ (ನವಮೋ. ೩-೨೫). ☞ ಇದಂ ಒಂದೇ ಅರ್ಥದ ಎರಡಂ ಶಬ್ದಗಳಂ ಸೇರಿ ಆಗಿರುವ ರೂಪ. [ ದಳ$_2$ ( = ದಲ) + ಪಡೆ$_2$ ]

**ದಳವಯ** 'ದಳವಾಯ್' ನೋ.

**ದಳವರಿ** (ಕ್ರಿ). ದಾಂಗುಡಿಯಿಡು ; ಹಬ್ಬು ; ವ್ಯಾಪಿಸಂ : ಗಳಬಳಿಪ ಗದ್ದದುಂ ದಳವರಿವ ಮೋಹಲತೆ ತುಳುಕಿ ತುಂತುರುಗೆದರ್ವ ಘರ್ಮಂ (ಕೈಶವ. ೦-೭-೪). [ ದಳ$_2$ ( = ದಲ ) + ಪರಿ$_2$ ]

**ದಳವಾಡ** (ನಾ). ೧. ಸೇನಾಸಮೂಹ; ಪಡೆಯ ಸಾಲು ; ಸೈನ್ಯ : ಸಂಭ್ರಮದೆ ದಳವಾಡಪೋಲೈಸೆ (ರೇವಣ. ೧೧೫-೩) ; ದಳವಾಡಸಹಿತ ಬೈಚಪ್ಪ ದುರ್ಗವ ಹೊಕ್ಕು ತಳುವದದಟ ಬಲಿಕೆಯನು ಬಳಸಿ ಬಳಸಿ ನೋಡಿ (ಕುರಾಸಾಂ. ೩೭-೫೦) ; ತಿರುಂವಡಿಯ ರಾಜ್ಯಕೆ ಮನ್ನೆರನೂ ದಳವಾಡವನೂ ಕಳುಹಿಸಲಾಗಿ (ಸೌಇಇ. IX-II, ೫೫೦-೧ ; 1532) : ವಿಭೀಷಣ ಬಂದಿನ್ನು ಪೊಳಮೋಸಗೊಟ್ಟ ಕಾರಣದಿ ಕಳಿದುಳಿದವನ ಮರ್ದಿಸಿಯಲ್ಲದೆ ನಿನ್ನ ದಳವಾಡವೇನು ನೀನೇನು (ಮೋಹತ. ೪೦-೨೫) ; ಹೊಳೆವ ತ್ರಿಶೂಲಮುಮ್ಮೊನೆಯಿಂದೆ ಕೆಂಗಿಡಿಗಳನುಗುಳ್ದುರಿಯ ನಿಷ್ಠುರದಿ ದಳವಾಡ ದಹನವ ಮಾಡುತ್ತ ಹರಿಯುರಸ್ಥಲದಲ್ಲಿ ಬಂದು ಮೋಹಿಸಿತು (ಮೋಹತ. ೪೦-೭೭) : ಆಗ ಕೌರವರಾಯ ಸರ್ವ ದಳದಾಡದಿಂದ ಮುತ್ತಯ್ಯನಿಂಗೆ ಸರಿಬಲವಾಗಿ ಬರಲು ಬಳಿಕತ್ತ ಕಳುಪಿದ ನರನ ಬೆಂಬಲಕೆ ಪಾಂಚಾಲಮತ್ಸ್ಯನಂ (ತುರಂಗ. ೪೭-೨೧). ೨. ಸೇನೆಯ ನೆಲೆ ; ಶಿಬಿರ ; ಪಾಳೆಯ : ಬಳಿಕಾ ಯುಧಿಷ್ಠಿರಂ ಭೀತಿಯನ್ನಪಹರಿಸಿ ತನ್ನ ದಳವಾಡ ದಿಂದಾ ತತ್‌ಕ್ಷಣ ಪೊರಡಲೊದರಿದವು ಭೇರಿ ನಿಸ್ಸಾಳಂಗಳುರವಣೆಯೊಳು (ತುರಂಗ. ೪೯-೦) ; ಮೆರೆವ ಮಣಿಕನಕಂಗಳನ್ನಿತ್ತು ಕುರುನೃಪನ ಸುಭಟರಂ ಕಳುಪಿಸಿದನು ಭರದೊಳೈತಂದವರು ಪೋದ ವೃತ್ತಾಂತ ಮನ್ನರುಪಿದರು ಕೌರವಂಗನಿಲಜನ ಮತವ ವಿಸ್ತರಿಸಿದರು ಕದನಕಂ ಬರಲಾಗ ಕೌರವರು ಸರ್ವ ದಳವಾಡದಿಂದ (ತುರಂಗ. ೬೪-೧೯).

[ ದಳ$_2$ ( = ದಲ) + ವಾಡ$_2$ ]

**ದಳವಾಯ್**, ದಳವಯ, ದಳವಾಯಿ, ದಟಿವಾಯ್, ದಟಿವಾಯಿ (ನಾ). ೧. ದಳನಾಯಕ ; ಸೇನಾಪತಿ : ಸುಲಿತಿಂದು ರಾಜ್ಯವನಿತಂ ನೀಮೇಕೆ ತಾವೇತಕೆಂದುಳಿದರ್ಗೀಯಂದೆ ತಾನೆ ಕಾಲಯುಮನಂತತ್ಸುಗ್ರಮುಂ ತಾಳ್ದಿದಾ ದಳವಾಯೇ ಬಳಮಾರಿಯ್ಯೆ (ಸೋಮೇಶ. ೭೪) ; ಅರಿಯರ ದಳವಾಯ ಕೂಚರಸನು ಎತ್ತಿ ಬಂದು ಎಣಿಕಲನುಯಿಚಿದು ಸೆಚಿ ಸೂಜಿಗೊಣ್ಡು ಪೋಹಲ್ಲಿ (ಎಕ. XII, ಪಾವಗ. ೪೮-೧ : 1285?) ; ನೀವು ಕಟಕಾಚಾರ್ಯಪುತ್ರರು ನೀವಿರಲು ಕೃಪನಿರಲು ದಳವಾಯ್ ನಾವಹವೆ (ಕುವ್ಯಾಶ. ೧-೨೧); ಚತುರಂಗಬಲಸಹಿತವಾಗಿ ಬಲಾಹಕನೆಂಬ ದಳವಾಯನು ಕಳುಹಿಸಿ (ವಚಕಾ. ೮-೨೦) ; ಅವನ ದಳವಾಯ್ ದಧಿಕಿಸ್ ಎದೆಗೀಟಿ ನೆಟ್ಟು ಪಡಗಿಂದ ನೆಗೆದಾಲಿ ಮುಳುಗಿದನ್ (ಪಾರಸಿ. ೦೩-೩೦೭). ದಳವಯ: ೧. ಕರಿಮುಖಂ ದಳವಯುಂ ಜ್ಯೋತಿಷಂ ರವಿ ಯಜ್ಞಪುರುಷ ಬಾಣಸಿಗ ಯಮ ತಳವಾರ (ಲಶಿಚಂ. ೫-೧೩); ☞ ಇದು ಛಂದಸ್ಸಿಗಾಗಿ ಮಾಡಿ ಕೊಂಡ ರೂಪ. **ದಳವಾಯಿ:** ೧. ಬಲುಬಲಸಹಿತಲೆಮ್ಮಯ ದಳವಾಯಿ ಹಿಂದುಳಿದನಿಲ್ಲಿಲ್ಲ ಮುಖಿಗಳೆನೆ (ಸೊಬಸೋ. ೬-೨೧); ಬಾಗಿಲ ದಳವಾಯಿ ವೆಂಗಳರಾಜ ಹುಹಾ ಅರಸುಗಳು . . . ಕುಕ್ಕಸಮುದ್ರದ ಕೆಚಿಯ ಕಟ್ಟಿಸಿದರು (ಎಕ. VI, ಕಡೂರು. ೦೭೦-೬; 1542); ದಳವಾಯಿ ಚೆಂನ್ನಮ ನಾಯಕರ ಮಕ್ಕಳು ದಳವಾಯಿ ಕೃಷ್ಣಪ ನಾಯ[ಕ]ರೂ (ಸೌಇಇ. IX-I, ೬೦೫-೫ ; 1543) ; ಪ್ರೊಢಮಿಪ ದಳವಾಯಿ ನಂಜರಾಜೇಂದ್ರ ತನ್ನೊಡೆಯನ ಕಾರ್ಯದೇಳಿಗೆಯ ಗಡಣವ ಚರಿತೆಯಾಗೊಲಿದು ಪೇಳಿಸಿದನು (ಕಂಸವಿ. ೧-೨೮) : ನಿಮ್ಮ ಮಗನಿಗೆ ದಳವಾಯಿಯಾಗುವ ಯೋಗವಿದೆ (ಕಂಗಾಳ್ಯ. ೪) ; ಎಳಿಗರು ಎತ್ತಲ್ಲ ದಳವಾಯಿ ದೊರೆಯಲ್ಲ ಮನೆಗೆ ಬಂದಳಿಯ ಮಗನಲ್ಲ (ಹಳ್ಳಿಪಾ. ೬೫). ೨. (ಹಿಂದಿನ ಮೈಸೂರಂ ಸಂಸ್ಥಾನದಲ್ಲಿ) ಪ್ರಧಾನಿ ; ಮಹಾಮಾತ್ಯ : △ **ದಟಿವಾಯ್** : ೧. ಏಟುಮ್ ಬಾಗಿಲೊಳೇಟ್ ದಟಿವಾಯ್ಗಳ್ ಏಟ್ ದಟಿವಾಯ್ಗಳನಿದಿರಿಸಿ ನಿಂದರ್ (ಅಂತಿಗೂ ೭-೧೨೭). △ **ದಟಿವಾಯಿ** : ೧. ದಟಿವಾಯಿ ರಾಮರಾಜಂ ಬಟಿಕಟಿಜಸದೊಡನೆ ವೆರಸಿಯಾಳ್ದನ ಸಿರಿಗಂದಟುಪಿಯಳ ಯನೆನಿಸಿಯುಮೊಡನಟಿದಂ (ಚಕವಿ. ೨-೧೭).

[<ಸಂ. ದಲಪತಿ./ತಮಿ. ತಳಿವಾಯ್; ತುಳು. ತೆಲು. ದಳವಾಯಿ./ ಮರಾ. ದಳವಈ, ದಳವಾಯಿ, ದಳವೈ; ☞ ಸಂ. 'ಪತಿ' ಎಂಬುದು ಪ್ರಾ. 'ಪಇ' ಎಂದಾಗಿದ್ದು ದಲಪತಿ > ದಲಪಇ > ದಳವಯಿ > ದಳವಾಯಿ > ದಳವಾಯ್ ಎಂದು ಆಗಿರಬೇಕು ]

**ದಳವಾಯಿ** 'ದಳವಾಯ್' ನೋ.

**ದಳವಾಯಿತನ** 'ದಳವಾಯ್ತನ' ನೋ.

**ದಳವಾಯಿವರ್ಯ** (ನಾ). ದಳವಾಯಿಶ್ರೇಷ್ಠ : ದಳವಾಯಿವರ್ಯ, ಮುಂದಣ ಶ್ರೀಮನ್ಮಹಾರಾಜ ಮಹಾಸ್ವಾಮಿಯವರೆಂದು ನಿಷ್ಕಲ್ಪಷ್ಟ ರಾಗಿರುವ ಈಗಳಿನ ಕಿರಿಯರಸ ಪಟ್ಟದ ಶ್ರೀರಾಜಒಡೆಯರವರ ಸನ್ನಿಧಾನವು ಒಡ್ಡೋಲಗಕ್ಕೆ ಬಿಜಯಮಾಡಿದೊಡನೆಯೇ ಆಸ್ಥಾನಿಕರೆಲ್ಲ . . . ನಮಸ್ಕರಿಸಿ ಗೌರವಿಸಿಕೊಳ್ಳಬೇಡವೆ ? (ಚಟ್ಕಅ. ೩೪-೦೦).

[ ದಳವಾಯಿ (<ದಳವಾಯ್) + ವರ್ಯ ]

**ದಳವಾಯ್ತನ**, ದಳವಾಯಿತನ (ನಾ). ೧. ಸೇನಾಪತಿಯ ಹುದ್ದೆ ; ಪ್ರಧಾನಿಯ ಹುದ್ದೆ,–ಅಧಿಕಾರ. ೨. ದಳವಾಯಿಯ ಕೆಲಸ : ಈ ಅಸಮಾಧಾನದಿಂದ ನಿನ್ನ ದಳವಾಯ್ತನದ ಜೀವನದ ಮೂಲಶಕ್ತಿಯೇ ಬೇರಳಿದು–ಪ್ರಳಯವಾಗಿ ಹೋಗುತ್ತಿದೆಯೆಂಹುದು! (ಚಟ್ಕಅ. ೩೪-೨೩). **ದಳವಾಯಿತನ** : ೧. ಬಿಂಡೇರಾಯನಿಗೆ ದಿವಾನಪದವಿಯೂ ಹೈದರನಿಗೆ ದಳವಾಯಿತನವೂ ಗೊತ್ತಾದವು (ಒಡಕ. ೭೭) ; ಪೂರ್ವಿಕರು ಒಬ್ಬರೂ ದಳವಾಯಿತನವಂ ನೇಮಕ ಮಾಡಲಿಲ್ಲ (ಮಹಾವಂ. I, ೪೭). ೨. ದಳ ವಾಯಿತನವು ವಿಪತ್ಕರವು (ಸುಗುಗಂ. ೧೧-೨೦).

[ ದಳವಾಯ್ + – ತನ ]

**ದಳವಿಡು** (ಕ್ರಿ). ಚಿಗುರಂ ; ಅಂಕುರಿಸಂ ; ಮೊಳೆ : ಹೊಳೆವ ಹೊಂಜೆಳೆ ಮೆಯ್ಯ ಸೊಬಗಿಯ ಕಳಶಕುಚವರೆದೋಚಿ ಹೃದಯದಿ ದಳವಿಡುವ ಮೋಹದೊಳೆ ಯುವನೆವೆಹಳಚದೀಕ್ಷಿಸಿ ಹಿಗ್ಗುವಂತೆ (ಕೈಶವ. ೩-೫-೩).

[ ದಳ$_2$ (= ದಲ) + ಇಡು$_1$ ]

**ದಳವುಳ** 'ದಟದಂಟ' ನೋ.

**ದಳವುಳಕಾಟ** 'ದಳದಂಳಕಾಟ' ನೋ.

**ದಳವುಳಿ** 'ದಟದಂಟ' ನೋ.

**ದಳವುಳಿಕಾಟ** 'ದಳದಂಳಕಾಟ' ನೋ.

**ದಳವುಳಿಗ** 'ದಳದಂಳಿಗ' ನೋ.

**ದಳವುಳಿಗೊಳ್** (ಕ್ರಿ). ಕಸಿ ; ದೋಚು ; ಸುಲಿಗೆಮಾಡು : ಅರಿಬರ ಧೃತಿಯಂ ನೆಱೆ ಕವರುತ ಮತ್ತರಿಬರ ಮೆಯ್ಯಂ ದಳವುಳಿಗೊಳುತಂ ಸ್ಮರ ಚಕ್ರೇಶನ ಸಲ್ಗೆಯ ಮದವತ್ಪ್ರಾಯತೆಯೆಯ್ದಿದಳು (ಜಯುಕಾ. ೫-೫೦).

[ ದಳವುಳಿ (<ದಟದುಟ) + ಕೊಳ್$_1$ ]

**ದಳವುಳಿಸು** 'ದಳದುಳಿಸು' ನೋ.

**ದಳವೆತ್ತು** (ಕ್ರಿ). ದಂಡೆತ್ತು ; ದಂಡಂಸಹಿತವಾಗಿ ದಾಳಿಮಾಡು : ಅಲಂಬುಸ ಶ್ರುತಾಯುಗಳೂ ಸನ್ನದ್ಧರಾಗಿ . . . ಪಾಂಡವ ಬಲಗಳ ಮೇಲೆ ದಳವೆತ್ತಿ ಬಂದರು (ಕೃಪಾರ್ಥಿ. ೦೫೫).

[ ದಳ$_2$ ( = ದಲ) + ಎತ್ತು$_1$ ]

**ದಳವೇರು** 'ದಳವೇಱು$_1$' ನೋ.

**ದಳವೇಱಿಸು** (ಕ್ರಿ). ಹೆಚ್ಚಿಸು ; ವೃದ್ಧಿಗೊಳಿಸು : ನನಗಣೆಯನರ್ಚಿಪಂತೆ ಚಂದ್ರಕಳೆಯಂ ದಳವೇಱಿಪಂತೆ ಪುಣ್ಯಮಂ ಪುಟವಿಡುವಂತೆ . . . ಹರನ ಮನೋರಥಮಂ ಮುದವೇಱಿಪಂತೆ ಪಾರ್ವತಿಗೆ ಸುವಾಸಿನಿಯರ್ ಸಿಂಗರಮಂ ಮಾಡಿ (ಗಿರಿಕ. ೧೦-೪೫ ವ) ; ಇನಿಯರ ಕಂತುರಾಗರಸಮಂ ದಳವೇಱಿಸುವಂತೆ . . . ಕೆಂದಳಿರ ಪೊಂಪುಳಿ ಪಪ್ಪುಕಮಾಯ್ತಶೋಕೆ ಯೊಳ್ (ಅನಂಪು. ೬-೭೭). [ ದಳವೇಱು$_1$ + – ಇಸು$_3$ ]

**ದಳವೇಱು$_1$**, ದಳವೇಱು (ಕ್ರಿ). ೧. ದಟ್ಟವಾಗು ; ನಿಬಿಡವಾಗು ; ಸಾಂದ್ರವಾಗು : ಅಳಿಯ ಕಪ್ಪನು ನೀಲಮೇಘದಸಿತವನು . . . ಎಳೆದು ಕೊಂಡೊಡಗೂಡಿ ತುಳಿದು ಬಿಳಿದಬುಜಜಂ ಬೆಳಗು ಮುಳಿಂಗಲು ಬಳಿದನೋ ಬಯಲನೆಂದೆನಿಸಿ ದಳವೇಱಿತೊತ್ತರಿಸಿ ಮೋಡಗತ್ತಲೆ ಗಾಳಿ ಹನಿ ಮಿಂಚು ಮೊಳಗು ಸಹಿತ (ಸಿದ್ಧರಾ. ೬-೩೭) ; ಪೊರೆ ಪೊರೆಯಾಗಿ ದಳವೇಱೆ ಬಹುಳತರ ಧವಳತೆಯನಾಂತ ಮುಗಿಲ ಮೊತ್ತಮೊತ್ತಲುಂ ಚಿತ್ರರಂಬಡೆಯೆ (ಚಾಥಪು. ೪-೬೭ ವ). ೨. ಹೆಚ್ಚಾಗು ; ವೃದ್ಧಿಹೊಂದು; ಏಳಿಗೆಯಾಗು : ಉತ್ಪಲವಕರಮೆನೆ ಬೆಳೆವ ಶರತ್ಸಮಯದೊಳಿಂದುಕಾಂತಿ ದಳವೇಱುವವೋಲ್ ವತ್ಸಳರೆನಿಸುವ ಬುಧರಿನಮುತ್ಸರರಿಂ ಕೃತಿ ಕೃತಾರ್ಥ ಮಕ್ಕುಮಮೋಘಂ (ಜಗವಿ. ೧-೧೦) ; ದಳವೇಱಿಮುತ್ಸವದ ಹೆಚ್ಚುಗೆಯ ಬೀಜಮಂ ಬೆಳೆಸುವೈಸಲ್ಕೆಯಿಂತಾದನಿನ್ನಾವಾಗಳೆಳಸಿ ಮೊಲೆಯುಂಬನೋ (ಕೋಮುಚ. ೧-೭೫) ; ಹೊಸಪೊಲುಮೆ ದಳವೇಱೆ ಸಲೆ ಪಸರಿಸಿ ಮಹ ದ್ಗುರುವಿನ ಚರಣ ಸಾರಸಯುಗವನಾನಂದಜಲದಿಂ ತೊಳೆದು (ಬಸಪು. ೪-೫೯) ; ಬೇಗುದಿಯ ದುಮ್ಮಾನ ದಳವೇಱಿದುದು ಹೇಱಿತು ಭೀತಿ ಭೂಪತಿಗೆ (ಕುಪ್ಪಾಗ. ೧-೬೨). **ದಳವೇಱು** : ೨. ನೆಱೆಯೆ ನೆಗರ್ತೆ ವೆತ್ತುದು ನಿಯೋಗಮಂಗುಂದಲೆಯಾಯ್ತು ತೇಜಮುಚ್ಚಳಿಱಿದುದು ಮಿಕ್ಕ ಬಿಚ್ಚತಿಕೆ . . . ದಳವೇಱಿದುದಕ್ಕರಂ ಪಗಣ್ಣಱಿದುದು ಪೌರುಷಂ ಸಫಳವಾದುದು ಮಾಸ್ಯತೆ ಮಾದಿರಾಜನೊಳ್ (ಸೌಇಇ. XI-11, ೦೪೭-೩೭ ; 1099). [ ದಳ$_1$ + ಏಱು$_1$ (<ಏಱ್$_1$) ]

**ದಳವೇಱು$_2$**, ದಳವೇರು (ಕ್ರಿ). ೧. ಅರಳು; ವಿಕಾಸಗೊಳ್ಳು; ವಿಕಸಿಸು : ವನಜಂಗಳ್ ದಳವೇಱೆ ಚೂತಲತೆಗಳ್ ನೀರೇಱೆ . . . ಬಂದುದು ವಸಂತಂ (ಧರ್ಮಾಮೃ. ೦೩-೧೦) ; ಅಳಿಯೊಱಗದನಿಲನಲುಗದ ರವಿಕರಂ ಪುಗದ ಸುಳಿಗೊಂಡು ದಳವೇಱೆ ಹಸುರಳಿದು ಬೆಳುಪುಳಿದ ಸುರುಚಿರ ಮೆನಿಪ್ಪ ಮಿಸಲ ಪೊಗ್ಗಯಂ ಕೊಂಡು (ಬಸರ. ೬-೨೦). ೨. ಕಾಂತಿ ಹೊಂದು: ಮುಗುಳ ಮಾಲೆ ಸುಮ್ಮನಿರುಗಂಪಿನೊಳ್ಮುಡಿ ಗಮ್ಮನಾಗೆ ಸೆಳ್ಳುಗುರ್ವೆಳಗಿಂದರಲ್ಗಳ ದಳಂ ದಳವೇಱೆ ಮುದಾಳಿ ಮೆಲ್ಲಮೆಲ್ಲಗೆ ಸುಕಿಗೂಡೆ ಕಂಕಣದ ನುಣ್ದರದೊಳ್ . . . ಅಲರ್ಗಟ್ಟುವುದಂಗನಾಜನಂ (ವರ್ಧಪು. ೧-೬೪) ; ಬಾಗುತೆ ಬಲಿಯುತ ಪೊಳೆದಿನಿದಾಗುತೆ ದಳವೇಱು ತಿಡಿದಿಡಿದು ಹಿಗ್ಗುತೆ ಪಣ್ಣಾ [ಪಾಠಾಂ. ದಳವೇಱೆ ಹಿಗ್ಗುತ್ತವೆ ಹೂದಾ] ಗುತೆ ಕಾಯ್ಗಳ್ ಪೊಱಮಡೆ ಬೀಗುತ್ತುಂ ಬೆಳೆದುವಲ್ಲಿ ಕದಳೀಷಂಡಂ (ಗಿರಿಕ. ೨-೫೦). ೩. ಉಬ್ಬು ; ಹಿಗ್ಗು ; ಸಂತಸಗೊಳ್ಳು ; ಉತ್ಸಾಹಗೊಳ್ಳು : ಮಾಂಗೊನರಂ ನಸುಗರ್ಚಿ ಸೊರ್ಕಿನಿಂ ತನು ದಳವೇಱೆ ಕಂಠವಿವರಂ ತೊವರೇಱೆ ಪಟುತ್ವಮೇಱೆ ಕಾಮನ ನನೆಯಂಬುಗಳ್ ಏರದಿಂವ್ಯಂದದ ಮೆಲ್ಲೆರ್ದೆಯಂ ಪುಗಲ್ . . . ಪುಗಲ್ಪುಗಲೆಂದುದು ಕೋಕಿಲವ್ರಜಂ (ಜಗವಿ. ೧೪-೩೮) ; ಪುಟವೆದ್ದು ಪೊಂಗುತಂ ದಳವೇಱೆ ಹಿಗ್ಗುತಂ ನಟ್ಟಿರ್ದ ನೋಟದಿಂದೋಡೆಯಂ ಮಾಱುತಂ (ಬಸರ. ೩-೧೦೩) ; ತಲೆದಡವಿ ತರ್ಕವಿಸಿ . . . ಅಂಜದಿರೆಂದೆನ್ನೊಳು ನುಡಿಯೆ ಹದ್ದು ಹಸರಿಸಿ ದಳವೇಱುವೆನಾಂ (ಶಂಕಕಂ. ೭೧); ಇನಿಯಳ ಗರ್ಭದಂದಮಂ ನೋಡಲ್ಬಿತ್ತುಂ ದಳವೇಱುತ್ತಿರೆ ಬಂದಂದೊಳಪೊಕ್ಕಂ ತದೀಯ ಮಣಿಮಂಯ ಗೃಹಮಂ (ರಾಜಶೇ. ೪-೪೪). **ದಳವೇರು** : ೨. ನನ್ನ ಮಿದುಳು ದಳವೇರಿ ದಳ್ಳಿಸಿತು ಸ್ವರ್ಣದೀಪ್ತಿ ಇಳಿಯೆ ಮನದ ಕರಿನೆರೆಯು ಹುಳುಗಳಲ್ಲ ಹೊತ್ತೇರಿ ನಿದ್ದೆ ತಿಳಿಯೆ (ಅರಳು. ೧೯೧-೧). ೪. ಚಿಗುರು; ಎಲೆಬಿಡಂ; ಪಲ್ಲವಿಸಂ : ಬಿದುರು ಸಹ ಹೂ ಬಿಡುವುದುಂಟು. ಆದರೆ ಯಾವಾಗ ಅದು ದಳವೇರಿ ಹೂ ಬಿಟ್ಟೀತು ಇದರ ನಿಯಮವಿಲ್ಲ (ಇಪ್ಕಕ. ೨೮೦).

[ ದಳ$_2$ ( = ದಲ) + ಏಱು$_1$ (<ಏಱ್$_1$) ]

**ದಳಸಂಘಾತ** (ನಾ). ಪಡೆಯ ಒಡ್ಡು ; ಸೇನಾಜಾಲ : ಈತನೊಡ್ಡಿನ ಸಾರ ಸಂಗರಕಾತುಕೊಂಡದೆ ಕೃಪನ ದಳಸಂಘಾತಪೊಂದಕ್ಷೋಣಿ ಸುಭಟರ ಸಾಲ ಮಧ್ಯದಲಿ (ಕುಪ್ಪಾಭೀ. ೩-೦೨). [ದಳ$_2$ ( = ದಲ) + ಸಂಘಾತ ]

**ದಳಸರ**(ನಾ). ೧. ದಟ್ಟಣೆ; ಸಾಂದ್ರತೆ; ಹುಲುಸಂ: ಪೈರು ದಳಸರವಾಗಿ ಬೆಳೆಯಿತು (ರೂಢಿ). ೨. ಗಟ್ಟಿಮುಟ್ಟಾಗಿರುವಿಕೆ ; ದೇಹದಾರ್ಢ್ಯ : (ಸ್ಕಾಂಡರ್). ೩. ದರ್ಪ : ಅರಸನು ದಳಸರದಿಂದ ಆಳಿದನು (ರೂಢಿ).

[ ದಳ$_1$ + – ಸರ$_7$./ತುಳು. ತೆಲು. ದಳಸರಿ ]

**ದಳಸು**, ದಡಸು (ನಾ). ೧. ಮಂದವಾದದ್ದು ; ಗಟ್ಟಿಯಾದದ್ದು; ೨. ದಟ್ಟವಾದದ್ದು ; ಒತ್ತಾದುದು : "ದಡಸಂ, ಸಾಂದ್ರ, ಒತ್ತು" (ಪ್ರಥಮ). ರಾಗಿ ದಳಸಾಗಿ ಬೆಳೆದಿದೆ (ರೂಢಿ). ೩. ಗಟ್ಟಿಮುಟ್ಟಾಗಿರುವಿಕೆ; ದೃಢತೆ : (ಸ್ಕಾಂಡರ್). **ದಡಸು** : ೧. ಚಿನ್ನವು ವ್ಯವಹಾರದಲ್ಲಿ ಎಲ್ಲಕ್ಕೂ ಹೆಚ್ಚು ದಡಸಾದ ಪದಾರ್ಥವಿರುತ್ತದೆ (ಮುಂಬಯಿ. ೫-೩೪) ; ಇದು ವರ್ಣವೂ ಗಂಧವೂ ಇಲ್ಲದ್ದಾಗಿ ಎಣ್ಣೆಯಂತೆ ಸ್ವಲ್ಪ ದಡಸಾಗಿರುವುದು (ಮುಂಬಯಿ. ೬-೩೫). [ ದಳ$_1$ + – ಸು$_2$ ]

**ದಳಾದುಳಿ** 'ದಟದುಟ' ನೋ.

**ದಳಿ$_1$** 'ತಳಿ$_2$' ನೋ.

**ದಳಿ$_2$** (ನಾ). ೧. ಎಲೆ ; ಪತ್ರ : "ದಳಿ = ಪತ್ರಂ" (ಶಮದ. ಶಬ್ದ. ೨). ೨. (ಕರಾ) ತಡಿಕೆ ; ಮರದ ಸಲಕೆಗಳಿಂದ ಎಡೆ ಬಿಟ್ಟು ಮಾಡಿದ ಗೋಡೆ; ತಟ್ಟಿಗೋಡೆ: ಅದರ ಆಚಿನ ಚಾವಡಿ, ಅಡುಗೆಯ ಮನೆಗಳು. ನೀಲವಾದ ರಾಯಗಳು. ಅವಕ್ಕೆ ಎದುರಿನ ದಳಿಯಿಂದ ಒಳಗಡೆ ಬೆಳಕು ಬರುತ್ತದೆ (ನಂಬಿನಾ. ೪). 'ತಟಿ', 'ದಳಿಕೋಣೆ' ಪರಾ.

[ ದೇ.೫ ತಮಿ. ತಟ್ಟಿ; ಮಲ. ತಟ; ತುಳು. ದಳಿ./ಸಂ. ದಲ ]

**ದಳಿಂಬ**, ದಣಬ, ದಣೆಂಬ, ದಣಬ, ದಣೆಬು, ದಣುಬ, ದಳಿವ (ನಾ). ೧. ಶುಭ್ರವಾದ ಬಟ್ಟೆ ; ದಂಕೂಲ ; ಮಂಡಿ : ವಿವಾಹಮಂಟಪದ ನಡುವಣ ಮಣಿಮಯ ವೇದಿಕೆಯ ಹಾಟಕಪೀಠದ ಮೇಲೆ ಹಾಸಿದ ದುಗುಲದ ದಳಿಂಬದೊಳಿರಿಸಿದಾಗಳ್ (ಆದಿಪು. ೪-೪೭ ವ); ತೀರ್ಥಜಲಂಗಳಂ

ವಿಂದು ದಳಿಂಬವನುಟ್ಟು ಮುತ್ತಿನ ತೊಡಿಗೆಗಳಂ ತೊಟ್ಟು ದರ್ಭಶಯನದೊಳಿರ್ದು (ಪಂಪಭಾ. ೧-೧೧೮ ವ) ; ವಧೂಕಾಂತರಿರ್ವರುಮಂ ವಿವಾಹವೇದಿಕಾಮಧ್ಯದೊಳ್ ದಳಿಂಬದಿಂ ಪಚ್ಚವಡಿಸಿದ ಪಳಿಕಿನ ಪಟ್ಟವಣೆಯೊಳಿರಿಸಿ (ಚಂದ್ರಪ್ರ. ೭-೭೦ ವ) ; ಪರದಂ ಕೂಟಂ ಕಲಸಿ ಪಲವುಂ ಬಾಡುವೆರಸಿ ಕೂಟನೊಂದು ದಳಿಂಬದ ಕಪ್ಪಟದೊಳ್ ಕಟ್ಟಿ ಕೊಟ್ಟಡೆ (ಬಂಹರಿ. ೧೪-೭೦ ವ) ; ಪಾಸಿದ ದಳಿಂಬಮುಂಗುರ್ಗಳ ಕೇಸಡಿಗಳ ಚರಣಭೂಷಣಗಳ ರುಚಿಯುಂ ಬಾಸಣಿಸಿ ಚಿತ್ರಪಟಮಂ ಪಾಸಿದವೊಲಿರೆ (ಅನಂಪು. ೬-೫೪) ; ತಿಳಿನಗೆಯ ಮಣಿವಾರಿಯೊಳ್ ವಿಂದಳಂಟ್ಟಳು ಮುಡಿ ಮುಳುಗಿ ಬಿಳಿ ದಳಿಂಬವಂ ಮಡಿಗೆ ನೂರ್ಮಡಿ ಮೆರೆಯೆ ಕಡುನೋಂಪಿ (ಶ್ರೀರಾಮಾ. ೮೬೦-೨೯೨). ೨. ಹಾಸಿಗೆ ; ಶಯ್ಯೆ : ಗಂಧರ್ವಕನ್ಯಾಕರಗ್ರಹಣಪೂರ್ವಕಂ ಬಂದಾಕೆವೆರಸು ದಳಿಂಬದೊಳ್ಮಳ್ಳಿರ್ದು (ಕಾದಂಬ. ೫೨೦) ; ಅವನಿಪಾಲಕನರ್ಗಳ ತಲೆಗಿಂಬಿನಿಂದಮಲರ ಮಲಂಗಿಂದಲರ ದಳಿಂಬದಿನಿಂಬಾದಲವಾರ್ಸಿನ ಮೇಲೆ ಲೀಲೆಯಿಂ ಬಳ್ಳಿರ್ದಂ (ಪಾರ್ಶ್ವಪು. ೯-೩೦). ದಣಬ : ೧. ಬಂದ ಸುಕುಮಾರಕರುವೆರಸವವಿಂದು ದಣಬವನುಟ್ಟು (ಪಶುಭಾ. ೬-೬). ದಣಂಬ : ೧. ತೊಳಗುವ ದಣಂಬಂಗಳಂ ಮೇಲೆ ಮಿಗೆ ಹಾಸಿ ಅಳಿಗಳಲಿಸುವ ಸುಪ್ರಸವಕುಲಮುಮಂ ಹಾಸಿ (ಬಾಹೂರ. ಹ. ೩೨೫-೧೨) ; ಮೊಳೆವ ಪುಳಕಂಗಳಾಭರಣಮಂ ತೊಟ್ಟು ಸಂತಸದಣಂಬವನುಟ್ಟು (ಸಿದ್ಧರಾ. ೩-೪೦). ೩. ಮಡಿಯಾದ ಸೀರೆ ; ಶುಭ್ರವಾದ ಸೀರೆ : ಚಾತುರ್ಥಿಕಾಸ್ನಾನಮಂ ಮಾಡುತಂ ದಣಂಬವನುಟ್ಟಳು (ಚೀರಮ. ೩-೮) ; ಪರಿಮಳೋದಕದಿಂ ಜಳಕಂಬೆ ಏಕ್ಕು ದಣಂಬಮನುಟ್ಟು . . . ಸಡಗರದಿನೇಳ್ಗೊಂದು ಶಿವಾಲಯಮಂ ಪೊಕ್ಕು (ವೃಷವಿ. ೯-೭೦ ವ). ದಣಿಬ : ೧. ಧೋತ್ರದ ದಣಬವನು ನಿರಿವಿಡಿದು ಮುಹಳದ ಮನೆಯ ಚೌಕದಲಿ ಮಡಗೆ ಮಂಡಿಸಿ ಕುಳ್ಳಿತುಂಚೌತಣದ ವಿದ್ಯವ ಬಲ್ಲಿರಲ್ಲದೆ ರಣವಿಚಾರದ ವಿದ್ಯೆ ನಿಮಗೇಕೆ (ಕುಮಾವಿ. ೭-೧೨) ; ಸುಲಿದು ಪಲ್ಗಳ ವಿಂದು ದಣಬದ ಸೀರೆಯನೊಲಿದುಟ್ಟು . . . ಅರ್ಚಿಸಿದಳು (ಕುಮಾಸಾಂ. ೨೬-೧) ; ಉರೆ ಸಚೇಲಸ್ನಾನಮಂ ಮಾಡಿ ದಣಬವನಂ ಧರಿಸಿ (ಮುಹಾಂಕೇ. ೧೩-೧೫). ೨. ಪಾಸಿದ ವಣಿಬದೊಳ್ಲಿರು ಪಲ್ಯಂಕಾಸನದೊಳಗೊಲ್ದು ಕುಳಿತು ... ಭಾಸುರ ಸ್ತುತಿಯ ಮಾಡಿದರು (ಭರಚ. ೧೮-೮೩) ; ದುಗುಲ ಪಾಸಿದ ದಣಬದ ಮೇಲೆ ಮುದದಿಂ ಸುಗುಣದಂಪತಿಗಳೀರ್ವರನು ಅಗಣಿತಹರುಷದಿ ನಡಸಿದರು (ಅನಂಚ. ೭-೧೧೪). ೩. ಕೊಡಗೂಸು ವಾಗಳೆ ದಂತಧಾವನಗೆಯ್ದು ಮಿಂದೊಲವಾಂತು ದಣಬವನುಟ್ಟು ಭಸಿತವನಿಟ್ಟು ಭಾಳದಲಿ (ಬಸಪು. ೧೪-೫). ದಣಿಬು : ೧. ಉಟ್ಟ ದಣಿಬು ಸುಲಿಪಲ್ಬಿಟ್ಟ ನಿಡುಜಡೆ ಇಟ್ಟ ವಿಭೂತಿಯ ಬೊಟ್ಟು ಕಟ್ಟಿದ ಬಹುರಕ್ಷೆ ಹೊಸ ಮೊಂಜುರಿಗೆಯ ಕಟ್ಟಾಳು ಕಣ್ಗೆ ರಾಜಿಸಿದ (ಶ್ರೀಪಾಲ. ೮-೩೮). ದಣುಬ : ೧. ಆ ರಾಜಭವನದೊಳೊಂದಜುವ ಪರಿಚಾರಕಿಯರ್ ಕೆದಱುವ ಪೂವಲಿಗಳ್ . . . ಪಾಸುವ ದಣುಬುಂಗಳ್ಸೂಸುವ ನೀರಾಜನಂಗಳ್ (ನಾಗಕು. ೫-೭೦ ವ). ದಳಿವ : ೧. ತೊಟ್ಟೈಕ್ಕವಡಂ ಮರವಿಲ್ ಕಟ್ಟಿದ ಪಣೆಕಟ್ಟು ಬೇಂಟೆವಱಿ ದೊರೆಯೊಳೊಡಂಬಟ್ಟಸಿಯ ಸುರಗಿ ದಳಿವದ ತೊಟ್ಟುಂಗಿಗೆ ತಿನ್ನೊಳಮರೆ ಬೇಂಟೆಯನೊರ್ವಂ ಬಂಮ (ಪಂಪಭಾ. ೫-೩೬) ; "ಮೇಲುಹೊದಿಕೆ" (ಶಂಪದೀ. ೧೯೩).

[ ?₁/ತುಳು. ದಳಿಯ = ಮೈಲಿಗೆ ಕಳೆಯುವುದು, ಮಡಿಮಾಡುವುದು ; ತೆಲು. ದಡಿವ, ದಡಿಬ, ದಡಿಮು. ದಲಿವು = ಉತ್ತರೀಯ. ದುಪ್ಪಟಿ./ಪ್ರಾ. ತಲಿಮ./ಸಂ. ತಲಿಮ ]

**ದಳಿಕೋಣೆ** (ನಾ). ಒಂದು ಪಾರ್ಶ್ವದಲ್ಲಿ ಗೋಡೆಯ ಬದಲು ಮರದ ಕಟಕಟೆ ಅಥವಾ ಕಟಾಂಜನವಿರುವ ಕೋಣೆ : (೯ಸಂಗ್ಗಾ. ೮೧).

[ ದಳಿ₂ + ಕೋಣೆ₂ (<ಕೋಣ್) ]

**ದಳಿಗವಟಿಗೆ** (ನಾ). ಒಂದು ನಾಡಿನ ಹೆಸರು : ಸ್ವಸ್ತಿ ಶ್ರೀ ಕನ್ನರ ಬಲ್ಲಹ ದಳಿಗವಟಿಗೆಯನಾಳೆ ಮರಗಲ್ಲಗಾಮುಣ್ಡನ ಮಗ ದವೋಡೆಟಿ ಮಣ್ಣು ಲೋರವಿಪಾಕೆಗಾಳಿಯೊಳ್ಕಾದಿ ಪುಳಗಣ್ಣೊಳು ಸತ್ತು ಸಗ್ಗಿಯಾದಂ (ಎಕ. X (8), ಮುಳವ. ೧೮೭-೬ ; ಸು. 820). 'ದಡಿಗವಟಿ' 'ದಟಿಗವಾಡಿ' ಪರಾ. [ ? ]

**ದಳಿಗೆ₁**, ದಳಗೆ (ನಾ). ೧. ಹೊಲಿಗೆ : ಅಂಗಿಗೆ ಒಂದು ದಳಿಗೆ ಹಾಕಿಸಿಕೊಂಡು ಬಾ (ಜಾ). ದಳಗೆ : ೨. ಜೋಡಿಸಿ ಹೊಲಿದುದು ; ಹೊಲಿಗೆಯ ರೇಖೆ : (೬). [ < ದಳಿ₁ ]

**ದಳಿಗೆ₂** (ನಾ). ಒಂದು ಬಗೆಯ ಪಾತ್ರೆ : ಧೂಪ – ಒಂದಲಗನಸೊಪ್ಪು, ಗಾಂಧಾರಿಸೊಪ್ಪು . . . ಆಡಿನ ಹಿಕ್ಕೆ ಇವುಗಳನ್ನೆಲ್ಲಾ ದಳಿಗೆಯಲ್ಲಿ ಹಾಕಿ . . . ಕುದಿ ಬರುವ ಹಾಗೆ ಕಾಯಿಸಿ ಆ ಹೊಗೆಯಿಂದುಬ್ಬೆಯ ಕಾಯಿಸಲು ವಾತಜ್ವರಂ ತೀರ್ಗುಂ (ಸಕವ್ಯ. ೬೯). 'ಅಳಗೆ₁', 'ಅಳಿಗೆ' ಪರಾ.

**ದಳಿತ** 'ದಲಿತ' ನೋ.

**ದಳಿತಜನ** 'ದಲಿತಜನ' ನೋ.

**ದಳಿತಮರ್ಯಾದ** (ನಾ). ಮರ್ಯಾದೆ ಇಲ್ಲದವನು; ನೀತಿಯಿಲ್ಲದವನಂ; ಮಾನಗೇಡಿ: ಖಳನ ಧೂರ್ತನ ನಾಸ್ತಿಕನ ಚಂಚಳನ ಪರನಿಕ್ಷೇಪಹಾರಿಯ ದಳಿತಮರ್ಯಾದನ ಕೃತಘ್ನನ ಭರ್ತೃನಿಂದಕನ . . . ವಿಕಳವ್ರತನ ಲೋಕಾಪವಾದಗಳಾಗಲಿ ಕೊಲ್ಲದಿದ್ದರೆ ನಾಳೆ ಸೈಂಧವನ (ಕುಮ್ಯಾದ್ರೋ. ೮-೩೮).

[ ಸಂ. ದಲಿತಮರ್ಯಾದ (ದಲಿತ + ಮರ್ಯಾದಾ + –) ]

**ದಳಿತಮಾರ** (ನಾ). ಕಾಮನನ್ನು ನಾಶಮಾಡಿದವನಂ ; ಮನ್ಮಥನನ್ನು ಗೆದ್ದವನಂ : ಜಯ ಜಿನೇಂದ್ರ ನತಸುರೇಂದ್ರ ದುರಿತದೂರ ದಳಿತಮಾರ (ಅಜಿಪು. ೭-೧೫ ರಗಳೆ). [ ಸಂ. ದಲಿತಮಾರ ]

**ದಳಿತಾಂಬುಜ** 'ದಲಿತಾಂಬುಜ' ನೋ.

**ದಳಿತಾಂಬುಜನೇತ್ರ** 'ದಲಿತಾಂಬುಜನೇತ್ರ' ನೋ.

**ದಳಿತಾಬ್ಜ** (ನಾ). ೧. ಅರಳಿದ ತಾವರೆ,-ಕಮಲ : ದಳಿತಾಬ್ಜಪ್ರಸರಂ ಸರಂ ಕುಸುಮಮಾಳಾರಾಮಮಾರಾಮಂ (ಜಗವಿ. ೨-೨). ೨. ಅರಳಿದ ಕಮಲಗಳನ್ನುಳ್ಳುದಂ ; ಬಿರಿದ ತಾವರೆಯಿಂದ ಕೂಡಿದುದಂ. ೧,೨: ಕೊಳಗಳ್ ದಳಿತಾಬ್ಜಂಗಳ್ ದಳಿತಾಬ್ಜಂಗಳ್ ಸಮೃದ್ಧಮಧುಗಳ್ . . . ಬನದೊಳ್ (ಕಾವ್ಯಾವ. ೬೨೩). [ ದಳಿತ (= ದಲಿತ) + ಅಬ್ಜ ]

**ದಳಿತೇಂದೀವರ** (ನಾ). ಅರಳಿದ ಕನ್ನೈದಿಲೆ : ಒಂದಿನಿತು ಧೈರ್ಯಮಂ ದಳಿತೇಂದೀವರನಯನೆ ತಾಳ್ದು (ಚಂದ್ರಪ್ರ. ೮-೯).

[ ದಳಿತ (= ದಲಿತ) + ಇಂದೀವರ ]

**ದಳಿತೇಕ್ಷಣೆ** (ನಾ). ತೆರೆದ ಕಣ್ಣವಳಂ ; ಬಿಡಂಗಣ್ಣವಳಂ : ಬೆಮರ್ತುದು ತನುಶಶಿಮಂಣಿಶಲಾಕೆ ದಳಿತೇಕ್ಷಣೆಯಾ (ಲೀಲಾವ. ೭-೯೦).

[ ಸಂ. ದಲಿತೇಕ್ಷಣಾ (ದಲಿತ + ಈಕ್ಷಣ + –) ]

**ದಳಿಯಿಸು** 'ದಳಿಸು₂' ನೋ.

**ದಳಿವ** 'ದಳಿಂಬ' ನೋ.

**ದಳಿವಿಡಿ** (ಕ್ರಿ). "ಕೂಡಿಸು, ತೆತ್ತಿಸು,ಹತ್ತಿಸು, ಕಟ್ಟಿಸು" (ಆದಿಪು. ಕೋಶ) : ಹಾರಾದ್ಯಾಭರಣಂಗಳಿನಾ ರೂಪಾಶ್ಚರ್ಯವಾಗೆ ಮಾಣಿಕಚಟ್ಟಂ ನೀರಂಜಿಸಿ ದಳಿವಿಡಿದ ಮಹಾರತ್ನದ ದೊರೆಗೆವಂದುದಾ ಸ್ತ್ರೀರತ್ನಂ (ಆದಿಪು. ೪-೪೨). [ ದಳಿ₀ (<ದಳಿ₁) + ಪಿಡಿ₁ ]

**ದಳಿಸು₁** (ಕ್ರಿ). ಅರಳು ; ದಳ ಬಿಡು : ಇಂದು ಕೆಂದಾವರೆಯ ದಳ ದಳಿಸಿದಾರಿಯಲಿ ಗಂಧದೌತಣ ಹೋಗಿ ಬರುವ ಜನಕೆ (ನಡುಂ. ೨೦-೧).

[ ದಳ₂ (= ದಲ) + – ಇಸು₁ ]

**ದಳಿಸು₂**, ದಳಿಯಿಸು (ಕ್ರಿ). ೧. ನಾಶಮಾಡು; ಹಾಳುಮಾಡು : ಎನ್ನಂ ದಹಿಸಿ ದಳಿಸುವ ದವಾಗ್ನಿಗೆಯುನ್ನತಿಕೆಯ ಸತ್ತ್ವಮನಿರದೊಡವಿಪ

. ಗಾಳಿ ಎನ್ನೊಳೆ ಪುಗೆ ಕೇಡೆನಗಿರದಪ್ಪುದು (ಜಯಕಾ. ೧೫-೨೭). ದಳಿಯಿಸು : ೨. ಸೀಳಂ ; ಬಗಿ: ಅಸುಹೃತ್ಕರಿಯಂ ಹಲಿ ದಳಿಯಿಸು ವಂದುಚ್ಚಳಿಸಿ ಪುದಿದ ನೆತ್ತರ ಕೆಂಪಾಗಸದೊಳ್ ತೋಱುವುದಿನ್ನುಂ ಕಿಸು ಸಂಜೆಯ ನೆವದೆ ದಿವದ ರಾತ್ರಿಯು ಪುಗಿಲೊಳ್ (ಜಗವಿ. ೮-೪೪).

[ ದಳನ (= ದಲನ) + – ಇಸು$_3$ ]

ದಳೆ$_1$ (ಕ್ರಿ). ೧. (ಮರದಲ್ಲಿ ಎಲೆ, ಹೂವು, ಹಣ್ಣು ಮೊದಲಾದುವು) ಒತ್ತಾಗಿ ಬೆಳೆ; ದಟ್ಟವಾಗಿ ಬೆಳೆ; ವಿಪುಲವಾಗಂ: ಮುಗಿಲ್ಗಳತಿ . . . ಪೆರ್ಮೞೆಯುನು ಸೂಸದು ದಳೆದ ಪೂ ತಳಿರ್ಗಳಿಂಪಿನ ಸೊಂಪು ಮಾಸದು ತರುಗಳಲ್ಲಿ ಪಣ್ಕಾಯ್ಗಳಂ ಬೀಯಲೀಸದು ಸಮಸ್ತ ಋತುಸಮಯಂ ಗಳಚಲೇಂದ್ರತನುಜೆ ತಪಮಿರೆ ಬನದೊಳು (ಜೈಮಿಭಾ. ೧೬-೧೭). ೨. ಹೊಲಿಗೆ ಹಾಕು ; ಹೊಲಿ : ಸಕಲ ಶರೀರದಂಗಿಯು ಪೊಲಿದುವಾಯುಃ ಕರ್ಮದಳೆಗಳನು ಸೇರಿಸಿಯೆ ದಳೆದಂಬರವನು ವಿಸ್ತಾರದಾಕಾಶವನು ವಿಗೆ ಗೂಡಾರವಂ ಪೊಲಿದೆತ್ತಿದಂ ಕನಕಾದ್ರಿಕಂಬದೊಳು (ಶಂಕರದಾ. ೪-೩೨). ೩. (ಮೈ ಮೇಲೆ ಸಿಡುಬು ಮುಂತಾದುವು) ಸಂರಿ : 'ತಳ್ಳೆ$_1$' ಪರಾ. [ ದೇ.॥ ತಮಿ. ತಳ್ಳೈ, ತಟ್ಟೈ; ಮಲ.ತಟ್ಟ ]

ದಳೆ$_2$ 'ತಳೆ$_3$' ನೋ.

ದಳೆ$_3$ (ನಾ). ೧. ಎರಡು ಬಟ್ಟೆಗಳ ಅಂಚುಗಳನ್ನು ಜೋಡಿಸಿ ಹೊಲಿದ ರೇಖೆ ; ಕೂಡು ಹೊಲಿಗೆಯ ರೇಖೆ : (ಕ). ೨. ಗದ್ದೆಯ ಹಾಳೆ ; ಕಾಲುವೆ ದಂಡೆಯ ಗದ್ದೆ ಖ ೧ಕ್ಕೆ ದಳೆವೈನ ಮೊದಲ ದಳೆ ೧ಕ್ಕೆ ಸೀಳು ೩ಕ್ಕೆ ಖ ಕ್ಕಿ ಸೀಳು ೩ಕ್ಕೆ ಖ ಕ್ಕಿ ಮೂರನೆ ದಳೆ ಸೀಳು ೨ಕ್ಕೆ ಖ ಕ್ಕಿ ನಾಲ್ಕನೆ ದಳೆ ಸೀಳು ೨ಕ್ಕೆ ಖ ೧೦ ಅಂತೂ ಸೀಳು ೧೦ಕ್ಕೆ ದಳೆ ೪ಕೆಖ ೧೦ (ಎಕ. XVI, ಚಿಕ್ಕನಾ. ೫೩-೦೬ ; 1639).

[ ದೇ.॥ ತಮಿ. ತಳ್ಳೈ ]

ದಳೆಕಟ್ಟು (ಕ್ರಿ). (ಹಾಲು ಕರೆಯುವಾಗ) ಹಸು ಮೊದಲಾದುವುಗಳ ಕಾಲಿಗೆ ಹಗ್ಗವನ್ನು ಕಟ್ಟು : (ಕ್ಯಾಂಡರ್).

[ ದಳೆ$_3$ (< ತಳೆ$_3$) + ಕಟ್ಟು$_1$ ]

ದಳೆಯಿಕ್ಕಿಸು (ಕ್ರಿ). ದನದ ಕಾಲುಗಳಿಗೆ ಹಗ್ಗವನ್ನು ಕಟ್ಟಿಸು : ಕಱುವ ಕಟ್ಟುವ ಲಾಲಿಸುವ ಮೈದುಡುಸಿ ದಳೆಯಿಕ್ಕಿಸುವ ಕಱುಗಳ ಕರೆಕರೆದು ಮುಂಡಾಡಿ ತಟ್ಟುವ . . . ಲೀಲೆಯುಲಿ ಹರಿಯಿರೆ ಕಂಡನಕ್ರೂರ (ಅಕ್ರೂಕ. ೨-೫೨). [ ದಳೆಯಿಕ್ಕು (< ತಳೆಯಿಕ್ಕು) + – ಇಸು$_3$ ]

ದಳೆಯಿಕ್ಕು 'ತಳೆಯಿಕ್ಕು' ನೋ.

ದಳೆಹಾಕು (ಕ್ರಿ). = ದಳೆಕಟ್ಟು : ಈ ಹಸುವಿಗೆ ದಳೆಹಾಕದಿದ್ದರೆ ಹಾಲು ಕರೆಯಲು ಆಗುವುದಿಲ್ಲ. (ರೂಢಿ).

[ ದಳೆ$_3$ (< ತಳೆ$_3$) + ಹಾಕು (< ಪಾಯ್ಕು$_1$) ]

ದಳ್ದಳಿ 'ದಟ್ಟುಟಿ' ನೋ.

ದಳ್ದಳಿಸು 'ದಳದಳಿಸು' ನೋ.

ದಳ್ಳಾಳ 'ದಲ್ಲಾಳ' ನೋ.

ದಳ್ಳಾಳತನ, ದಳ್ಳಾಳ್ತನ (ನಾ). ೧. ಮಧ್ಯಸ್ಥನಾಗಿರುವಿಕೆ : ಸಮ್ಮೂರಿ ನಲ್ಲಿ ಮೂರು ಅಂತಸ್ತಿನ ಜನರಿದ್ದರೆಂದು ಧಾರಾಳವಾಗಿ ಹೇಳಬಹುದು. ಒಂದು ಯಜಮಾನಿಕೆ, ಎರಡನೇದು ಆಳುತನ, ಮೂರನೇದು ಇವರಿಬ್ಬರ ದಳ್ಳಾಳತನ (ಹುಬ್ಬೈಹ. ೬೬). ದಳ್ಳಾಳ್ತನ: ೨. ದಲ್ಲಾಳಿಯ ವೃತ್ತಿ ; ಇನ್ನೊಬ್ಬರ ಮಾಲಿಗೆ ಗಿರಾಕಿಯನ್ನು ಹೊಂದಿಸಿಕೊಡುವ ಕೆಲಸ : ನಗರದೊಳಗಿನ ವ್ಯಾಪಾರ ಮಾತ್ರವಲ್ಲ, ಹೊರನಾಡುಗಳ ವ್ಯಾಪಾರೀ ದಳ್ಳಾಳ್ತನವೂ ಅವರಿಗಿತ್ತು (ಕಾಬಯಾ. ೭೫).

[ ದಳ್ಳಾಳ (< ದಲ್ಲಾಳ) + – ತನ ]

ದಳ್ಳಾಳಿ 'ದಲ್ಲಾಳಿ' ನೋ.

ದಳ್ಳಾಳಿತನ 'ದಲ್ಲಾಳಿತನ$_1$' ನೋ.

ದಳ್ಳಾಳ್ತನ 'ದಳ್ಳಾಳತನ' ನೋ.

ದಳ್ಳಿಸು (ಕ್ರಿ). ೧. ಉರಿಯೇಳಂ ; ಭುಗಿಲಿಡು ; ಪ್ರಜ್ವಲಿಸಂ ; ಧಗಧಗಿಸಂ : ನಿಶಾಚರಬಲಮುಱಿವಱಗಾದ ಕಾಡನಳುರ್ವ ಬೇಗೆಯು ದಳ್ಳುರಿಯಂತೆ ದಳ್ಳಿಸಿ ಕೊಳ್ಳೆಂದರಾತಿಬಲಮುನಳುರೆ . . . ಬಂದು ತಾಗಿದಾಗಳ್ (ಪಂಪಭಾ. ೧೨-೭ ವ) ; ಅದ್ಭುತನಟನಿಟಿಲಾಲೋಲಕೀಲಾಕ್ಷಿಪೋಲ್ ದಳ್ಳಿಸೆ ಕೋಪಾರಕ್ತನೇತ್ರಂ (ಗದಾಯು. ೭-೩೦) ; ಶಿಶಿರೈಕ ನಿಧಾನಮಪ್ಪ ಚಂದನದೊಳೆ ಪುಟ್ಟಿ ಕಿಚ್ಚು ಸುಡದಿರ್ಪುದೆ [ ತತ್ಪಶಮ್ಯೈಕಕಾರಣಂ ವನನಿಧಿಯಾದೊಡೇ] ನುರಿಯದಿರ್ಪುದೆ ದಳ್ಳಿಸಿ ಬಾಡಬಾನಲಂ (ಕಾದಂಪೂ. ೫೪೦); ದಳ್ಳಿಸೆ ವಹ್ನಿಜ್ವಾಲೆ ದೀರ್ಘಾನನಕುಹರಸಹಸ್ರಂಗಳಿಂ . . . ಫಣಸಹಸ್ರಂಗಳಂ ಬಿರ್ಚಿ ಕಣ್ಗವಿರ್ಗಿಸಿ ವಜ್ರಾವರ್ತಚಾಪಂ ಪಡೆದುದು ಭಯಮಂ ಕಾಳಕಾಳಾಹಿರೂಪಂ (ಪಂಚಾಮೂ. ೫-೭೪) ; ಘೃತಾಹುತಿವಡೆದನಲನಂತೆ ವಿಗೆ ದಳ್ಳಿಸಿದಂ (ಶಮದ. ೨೩೦ ಪ್ರಯೋ) ; ಒಡನೊಡನೆ ಕೈಮಾಡಿದನು ಕೈಗಡಿಯುಸಂಬಿನ ಧಾರೆ ದಳ್ಳಿಸಿ ಕಿಡಿಗೆದಱಿದವು ನೃಪನ ರಥಸಾರಥಿ ಹಯಾಳಿಯುಲಿ (ಕುಮ್ಯಾಕ. ೨-೫೭) ; ಉಕ್ಕಿಱುವ ಕೋಪಾಗ್ನಿ ದಳ್ಳಿಸಿ ದಿಕ್ಕುಗಳನಳ್ಳಿಱಿಯೆ ಲಕ್ಷ್ಮಣನೆಕ್ಕತುಳದಲಿ ಬಂದನು (ತೊರರಾ. ೨-೩-೦೦) ; ಕಡಲೊಡಲ ವಡಬಂ ಬಿಡದೆ ತೀಡುವ ಬಿಱುಗಾಳಿಯ ತೀಟದಿಂ ದಳ್ಳಿಸಲೊಡಮೆಡೆಗೊಂಡ ಬೆಟ್ಟುಗಳ್ ಕರಂ ಸೀಕರಿಪೋಗೆ ಪುಟ್ಟತಕ್ಕುಂ (ರಾಮಾಕ್ಕ. ೨-೨೯). ೨. ಸುಡಂ ; ದಹಿಸಂ : ವಿಷವನಹಿರಾಜನನಿತಱಿಳುಗುಳಿಯಾ ವಿಷಜ್ವಾಲೆಯಾ ಋಷೀಶ್ವರನ ದಳ್ಳಿಸಲಾಗಳು (ಪಾಸೋಪು. ೧೦-೨೦೬). ೩. ಕವಿ ; ಆವರಿಸಂ ; ಮುತ್ತು ; ವ್ಯಾಪಿಸಂ : "ಅಳುರ್ಕೆಯೆಂದುಂ ದಳ್ಳಿಸಿತೆಂದುಂ ಆವರಿಸಿದುದು". (ಕಶಸಾ ೬೬-೪೭೭) ; "ದಳ್ಳಿಸಿತೆಂದಳುರ್ಕೆಯೆಂದಾವರಿಸಿದುದಕೆ ಪೊಸನಾಮಮುಕ್ಕು" (ಕವಿಕೈ. ೫೨): ಇಂಚರಮಂ ವಿಪಂಚಿ ಮೆಱೆದತ್ತಿಲ್ಲೇಕೆ ತನ್ವಂಗಿ ನಿನ್ನ ಸಭಾಸದ್ಮದೊಳೇಕೆ ದಳ್ಳಿಸಿದುದಿಲ್ಲುತ್ಸಾಸ ಪಂಶಸ್ವನಂ (ಮಲ್ಲಿಪು. ೪-೯) ೪. ಹೆಚ್ಚು ; ಉಕ್ಕೇರಂ ; ಉಕ್ಕು : ದಳ್ಳಿಸಿ ಕುಕಿಲುತ್ತುಂಬುಧಿಯುಲ್ಲೋಲಂ ನೆಗಱ ನಲಿದು ನರ್ತಿಸಿ ನಡೆದತ್ತಳ್ಳಾಡೆ ನೆಲಂ ಬಲಮುದು ಕೊಳ್ಳೆಂದು ಗುಹಾರವಂ ಪೊದಟ್ದಿಸೆ ವಿನೆಗಂ (ಆದಿಪು. ೧೩-೫೩) : ಕೊಳ್ಳೆನೆ ಕೊಳ್ಳಿವೀಸೆ ಪಡೆಯಂದೆರಡುಂ ದಿಗಧೀಶರೋಡಿದರ್ . . . ಎತ್ತಲುಂ ದಳ್ಳಿಸಿದತ್ತೊ ವೀರರಸವಾರಿಧಿ ವಾತಮಹಾಪ್ರಘಾತದಿಂ ನಿಲ್ಲದೆನಿಬ್ಬನಂ ರವಳಿ ಘೋಷಿಸೆ ಭೈರವಮಾದುದಾರಣಂ (ನೇಮಿಪು. ೧೧-೦೨೩) ; ತಿರ್ದುವಂ ಪ್ರಸರದ್ದಂತಿಯ ದಂತದೊಳ್ ಪರಿಯ ದಂಷ್ಟ್ರಾಲೇಖೆಯುಂ ಕಿಟ್ಟಿ ತೆತ್ತಿಸುವಂ ಲೀಲೆಯೊಳರ್ಧಚಂದ್ರ ಶರಮುಂ ಮಾಬ್ಬಟ್ಟಿಯಿಂದಣ್ಣು ದ[ಪಾಠಾಂ. ವ]ಳ್ಳಿಸೆ ಸಿಂಹೀಶತನೇತ್ರದತ್ತ ಪತಿ ಶೋಕಾವ್ಯಂದಕಂ ವಿಂಧ್ಯಕಂ (ಅರ್ಧನೇ. ೩-೫೩). ೫. ಹೊಳೆ ; ಥಳಥಳಿಸು: ದಿವಿಜೇಂದ್ರಭವನಮೆಂಬೀ ನಿವಾಸದಿಂದತ್ತ ಮತ್ತ ಮೇಲಿರ್ದವುದೆಂದವಗಯಿಪವೊಲಲ್ಲಿಯ ವಾತವಿಧೂತವಿನೂತಕೇತುಗಳ್ ದಳ್ಳಿಸುಗುಂ (ಸುಕುಮಾ. ೧೦-೪೯); ದಾಂಗುಡಿವಿಟ್ಟು ದಳ್ಳಿಸುವ ಕೆಂದಳದಿಂದೊಸೆದೆತ್ತಿ ಲಕ್ಷ್ಮಿ ಕಾಮಂಗೆ ಮಗಂಗೆ ಶೈಶವನಿರೀಕ್ಷಣಕೇಳಿಗೆ ನೇತ್ರಸೂತ್ರದಿಂ ದಿಂಗಡಲೆಂಬ ಸಜ್ಜವನೆಯೊಳ್ತರದೊಟ್ಟಿಲ ಮೇಲೆ ಕೆಂಬರಲ್ದಿಂಗಣೆಗಟ್ಟಿ ದಂತುದಯಶೈಲಶಿಖಂಡದೊಳಿಂದುಮಂಡಲಂ (ಮಲ್ಲಿಪು. ೭-೨೯). ೬. ಮುಂಚಾಚು; ಮುಂಬರಂ: ಅಳಿನೀಲೀಕಂಚುಕಂ ದಳ್ಳಿಸೆ ಮೊಲೆಯಲೆಪಂ ಕಯ್ಯಸೋಂಕಿಂದೆ ಕೆಂಪಂ ತಳೆದೊಪ್ಪಂಬೆತ್ತ ಪೊಂಬೆತ್ತದ ಸೆಳೆಗೆ ತಳಿರ್ಮೂಡಿದಂತಾಗೆ . . . ಎಸೆದು ಬಂದಳ್ ಪ್ರತೀಹಾರಿಯೊರ್ಬಳ್ (ರೀಲಾವ. ೪-೭೩); "ನೂಕಲ್ಪಡಂ" (ಪ್ರಥಮ). ೭. ಅದಿರು ; ಅಳ್ಳಾಡಂ ; ಅಲುಗಂ: ಸಿಡಿಲು ಹೊಡೆದಡೆ ಸಿಗುಱುದೋಱದ ಕಡುಹಿನಗ್ಗದ ಶೈಲನುಗ್ಗಿಯುದಡಿಗೆ ದ[ಪಾಠಾಂ. ಧ]ಳ್ಳಿ ಸುವುದೆ (ತೊರರಾ. ೭-೨೭-೨೮).

೮. (ಆಲಂ) (ಕೋಪ, ಗರ್ವ, ಅಹಂಕಾರ ಮೊದಲಾದುವುಗಳಿಂದ) ಕೆರಳಂ ; ಉರಿ; "ಗರ್ವದಿಂದ ಮೆರೆ" (ಶಂಪನಿ) : ಆ ದುಶ್ಶಾಸನನಂ ಪೊರ್ದಿ ರಣದೊಳ್ ಕೊಂದೀ ಮರುತ್ಪುತ್ರನಿಂತಾದಂ ದಳ್ಳಿಸೆ ನೋಡಿ ನೋಡಿ ಪುದುವಱಿಂತಕ್ಕುಂ (ಪಂಪಭಾ. ೧೩-೮೮) ; ಬಸಿವ ರಕುತವ ಬಳಿದು ಖಾತಿಯ ಮುಸುಕದಲಿ ಕೈಮುಱಿದು ಮಿಗೆ ದಳ್ಳಿಸುತ ಹೊಗರಿಡು ತೌಡುಗಚ್ಚುತ ಹುಬ್ಬುಗಳ ಬಲಿದು . . . ಪುನರಪಿ ಕಱಿದನಂಬುಗಳ (ಕುವ್ಯಾಭೀ. ೯-೩೯). ೯. (ಆಲಂ) ಸಡಗರಿಸಂ ; ಸಂಭ್ರಮಿಸು ; ಅತಿ ಆನಂದಪಡು : ಗಿಳಿಗಳೊಳೆ ಗಳಪಿ ಮೊಱೆವಳಿಕುಳದೊಡನಾಳ್ಯಿಸಿ ಪುರುಳಿಯೊಡನೆಳಸಿ ನವಿಲ್ಗಳ ಬಳಗದೊಡನೆ ನರ್ತಿಸಿ ವಿಳಾಸಿನೀನಿವಹ ಮಾಗಳೇಂ ದಳ್ಳಿಸಿತೋ (ಆದಿಪು. ೧೧-೮೩). [ ದಳ್ + – ಇಸು$_3$ ]

**ದಳ್ಳಿಱ್** (ಕ್ರಿ). ೧. ಕಿವಿ ; ಇರಿ ; ಚುಚ್ಚು : ಮುಗಿಲಂ ಮರಗಳ ತುದಿಗೋಡುಗಳೊಳೆ ದಳ್ಳಿಱಿದೊಡುದಿರ್ದ ಕೆದಱಿದ ಕಿಱುದಾರೆಗಳೆನಿಪುವು ಕಾನನದೊಳೊಗುಮಿಗೆ ಪರೆದಿರ್ದ ಬಿಳಿಯ ನೆಲ್ಲಿಯ ಕಾಯ್ಗಳ್ (ಲೀಲಾವ. ೬-೩೪). ೨. ಕಾಂತಿ ಹೊಂದು ; ಶೋಭೆಯನ್ನು ಪಡೆ ; ಹೊಳೆ : ಏಱೆ ವಿಮಾನಮಂ ಕೃತಕಗಾಯಿಕೆಯರ್ ಧವಳಾಭ್ರ ಕೂಟದೊಳ್ ತೋಱುವ ಮಿಂಚಿನಂತೆ ಮುಗಿಲೊಡ್ಡೊಡೆದಿಬ್ಬಗಿಯಾಗಿ ನಿರ್ಭರಂ ಪಾಱೆ ಪತಾಕೆಗಳ್ ಮಗುಳ್ದು ಮಿಳ್ಳಿಸಿ ದಳ್ಳಿಱಿದಾಡೆ ಯಾನವೇಂ ಕೀಱಿದುದೋ ನಭಃಪ್ರಸೃತಿಗಿಟ್ಟೆಡೆಯಾದುದೆಂಬಿನಂ (ಶಾಂತಿಪು. ೨-೮೨) : ಒಳ್ಪನೆಗೋಡಲಱಿಯದ ಬೆಳ್ಪಾಳಪೊಲಗಿದು ಕಂಡು ಲಾವಣ್ಯರಸಂ ತಳ್ಪಂಕುಗುಟ್ಟಿ ಮಿಳ್ಳಿಸಿ ದಳ್ಳಿಱಿದಾಡುವ ಜಿನೇಂದ್ರಶಿಶುವಂ ತಳೆದಿಂ (ಶಾಂತಿಪು. ೧೦-೮). 'ಅಳ್ಳಿಱಿ' ಪರಾ. [ ದಳ್ + ಇಱಿ$_1$ ]

**ದಳ್ಳುಬಾಱು** 'ತಳ್ಳವಾಱು$_1$' ನೋ.

**ದಳ್ಳುರಿ$_1$** (ಕ್ರಿ). ೧. ತೀವ್ರವಾಗಿ ಉರಿ; ಭುಗಿಲಿಡಂ ; ಪ್ರಜ್ವಲಿಸು : ೨. (ಆಲಂ) ಕೊಬ್ಬಿನಿಂದ ಉರಿ ; ಗರ್ವದಿಂದ ಮೆರೆದಾಡಂ. ೧, ೨: ಮೋಹದಿಂ ನೀಂ ಮಾಡಿದ ಪಲ್ಲವ ಪೊಲ್ಲಮೆಗಳಂ ಸೈರಿಸಿರ್ದೊಡಂ ನೀಂ ಕೊರ್ವಿ ಗಾಳಿಯೊಳ್ಕಡಿದ ಕಿರ್ಚಿನಂತ ದಳ್ಳುರಿದು ಪೊಟಲೊಳಗೆ ಮುನ್ನಿನೆಡೆಗೀಗಳುಂ ಪಿರಿದಬ[ಬ್ಬ]ರಮುಂ ಮಾಡಿದೆ (ಧರ್ಮಾಮೃ. ೨-೯೯). [ ದಳ್ + ಉರಿ$_1$ ]

**ದಳ್ಳುರಿ$_2$** (ನಾ). ೧. ಭುಗಿಲಿಡುವ ಕಿಚ್ಚು ; ದೊಡ್ಡ ಉರಿ; ಪ್ರಜ್ವಲಿಸುವ ಜ್ವಾಲೆ: "ದಳ್ಳುರಿಯುಂ ಪೇರುರಿಯುಂ ಘನಜ್ವಲಿತದೊಳು" (ಶಬ್ದಮಂ. ೧೨) ; ಮುಳಿಸಿನ ದಳ್ಳುರಿಗಳನುಗುಳುತ್ತುಂ ಚಕ್ರರತ್ನಮುಂ ಬಗೆದು ಬೆಸಸಿದಂ ಭರತೇಶಂ (ಆದಿಪು. ೧೪-೧೧೫) ; ವಿಜಾತಿರೂಪಮಲ್ಲದ ವಿನತಾಸುತಂ ಮಿಳಿರ್ವ ದಳ್ಳುರಿಯಲ್ಲದ ವಹ್ನಿ ಕಾಳನಲ್ಲದ ಜವನಬ್ಧಿ ಮಧ್ಯಗತನಲ್ಲದ ಬಾಡಬಂ (ಕಇ. V, ೫೨-೧೮ ; 1087) ; ಸೋಂಕಿದ ಗಾಳಿ ದಳ್ಳುರಿವೊಲಾದುದು ಪೊಕ್ಕ ಸರೋವರಾಂಬು ಕಾಯ್ಕುಂ ಕುದಿದತ್ತು . . . ನಿಜಾಂಗತಾಪದಿಂ ಪಂಕರುಹಾಕ್ಷಿ ಕಾಮಶಿಖಿ ಪೆಣ್ಬರಿಜಂ ತಳೆದಂತೆ ತೋಱಿದಳ್ (ಕಾವ್ಯಸಾ. ೬೦೩) ; ಬಗೆದು ಧಂಧಗಧಗಧಗಂ ಘುಳುಘುಳಿಂ ದುಬ್ಬಿ ನೆಗೆದು ದಳ್ಳುರಿ ಬಳ್ಳಿವರಿದು ಕತ್ತಲಿಸಿ . . . ದಾವಾಗ್ನಿ ಮುತ್ತಿತ್ತು ನಾಲ್ದೆಸೆಯುನಂ (ಹದಶಾ. ೧೦-೬); ಅರಗಿನರಸನ ಬಾಗಿಲಲಿ ದಳ್ಳುರಿಗೆ ತಡವೇ (ಕುವ್ಯಾದ್ರೋ. ೫-೪೧) ; ಆ ದಳ್ಳುರಿಯು ಕೆಂಬೊಗೆಯುಂ ಎತ್ತಲೂ ಚಿಮ್ಮಿ ಕಾಡ ದಾರಿಗರನ್ನು ಭೀತಿಗೊಳಿಸಿದೆ (ನೂರಜ. ೧). ೨. ಬಿಸಿ ; ಝಳ ; ತಾಪ ; ಶಾಖ: ಸಕಲದಿಗಂತರಂಗಳೊಳ್ ದಳ್ಳುರಿಯುಮಂಗುಟ್ಟ ತೀವ್ರರಶ್ಮಿಜಾಲಮುಂ ಪಸರಿಸುತ್ತಂ ನಿದಾಘಸಮಯ ಸಹಸ್ರಭಾನುಮಂಡಲಂ ಮಧ್ಯಾಹ್ನವರ್ತಿಯಾಗೆ (ಕಾದಂಉ. ೪೫೬) ; ನಾಸಿಕದುಸಿರ ದಳ್ಳುರಿ ಮೂಕುತಿ ಗಂಧಗ್ರಾಸ ಸಂತಾಗಿ ಮೆಯ್ಯೊಳಗೆ ಪೂಸಿದ ಸಿರಿಗಂದ ಕರಿಕಾದುದು (ಮೋಹತ. ೨೮-೧೬) ; ದಳ್ಳುರಿಗರೋತ್ತಮ = ವಿಷಜ್ವಾಲೆಯುಳ್ಳ ಮಹಾಸರ್ಪ : ರಜ್ಜುವ ದೆತ್ತ ದಳ್ಳುರಿಗರೋತ್ತಮನೆತ್ತ ವಜ್ರವೆತ್ತಾಲಿಕಲ್ಲೆತ್ತ ಮಜ್ಜೀವಿತೇಶ್ವರ ನೆತ್ತ ನೀನೆತ್ತ ಕೇಳ್ ದುರ್ಜೀವಿ ತೆರಳೆಂದಳಾಲಿದು (ಮೋಹತ. ೬-೩೪); "ದಳ್ಳುರಿಯಂತೆ ಉರಿಯುತ್ತಿರುವ ವಿಷಜ್ವಾಲೆಯಿಂದ ಮಹಿಮೆ ಹೊಂದಿದ ಕೃಷ್ಣಸರ್ಪ (?)" (ಮೋಹತ. ಅರಿಟಿ). ದಳ್ಳುರಿಗಂಡ = ನಿಗಿನಿಗಿಕೆಂಡ ; ತಳಲುಗೆಂಡ : ಸಿರಿಖಂಡದನುಲೇಪ ತನುವಿಗತಿಶಯತಾಪ . . . ಪರಪಿದಸುಗೆಯ ತೇರ ತಂಡ ದಳ್ಳುರಿ ಗೆಂಡ (ಸೌಂದಪು. ೮-೬೬). ದಳ್ಳುರಿ ಜ್ವಾಲೆ = ಧಗಧಗಿಸುವ ಉರಿಯ ನಾಲಗೆ : ಕಾಳುಕಿಚ್ಚಿದ್ದಡವಿಯನು ಕುಡಿನಾಲಗೆಯೊಳಳವಡಿಸಿ ದಳ್ಳುರಿ ಜ್ವಾಲೆ ತಗ್ಗಿದವೋಲು . . . ಸುರಪಾಲತನಯನ ತನಯನಸ್ತಮಿಸಿದನು ರಣದೊಳಗೆ (ಕುವ್ಯಾದ್ರೋ. ೬-೬೦). [ ದಳ್ + ಉರಿ$_2$ ]

**ದಳ್ಳುರಿತಿರುಳು** 'ದಳ್ಳುರಿದಿರುಳು' ನೋ.

**ದಳ್ಳುರಿದಿರುಳು, ದಳ್ಳುರಿತಿರುಳು** (ನಾ). ಉರಿಯುತ್ತಿರುವ ಬೆಂಕಿಯ ತಿರುಳು ; ಗಟ್ಟಿಕೆಂಡ : ಮುಳಿದು ಮಿಸೆಯ ಮುರಿದು ಹುಬ್ಬನು ಬಲಿದು ದಳ್ಳುರಿದಿರುಳನಕ್ಷಿಗಳೊಳಗೆ ಪಸರಿಸಿ ಘುಡುಘುಡಿಸಿ ರೋಮಾಳಿ ಸೈನಿಮಿರೆ . . . ಭಾರ್ಗವದತ್ತಬಾಣಕೆ ನೀಡಿದನು ಕರವ (ಕುವ್ಯಾದ್ರೋ. ೧೩-೫೧). ದಳ್ಳುರಿತಿರುಳು : ನೆರೆದುದಸುರರು ಕಾಲಕೂಟದ ಕರುವಿನೆರಕವೊ ಸಿಡಿಲ ದಳ್ಳುರಿತಿರುಳ ದಡ್ಡಿಯೊ ವಿಲಯಭೈರವನುಬ್ಬಟೆಯ ಪಡೆಯೊ . . . ಗಾಢಾಯ ತೇಜದ ದುರುಳ ದಾನವ ಭಟರು ಬಂದುದು ಕೋಟಿ ಸಂಖ್ಯೆಯಲಿ (ಕುವ್ಯಾಅ. ೧೨-೩೯). [ ದಳ್ಳುರಿ$_2$ + ತಿರುಳು (<ತಿರುಳ್) ]

**ದಳ್ಳುರಿದುಱುಗಲು** (ನಾ). ಉರಿಯುತ್ತಿರುವ ಜ್ವಾಲೆಯ ಸಮೂಹ,– ಗುಂಪು ; ಜ್ವಾಲಾಸಮೂಹ : ಹೊಗೆಯನೊದೆದೊಳಬಿದ್ದ ಕಿಡಿಗಳ ನುಗಿದು ದಳ್ಳುರಿದುಱುಗಲನು ತನಿಬಿಗಿದು ಭೀಮನ ರಥದ ಸುತ್ತಲು ಸೂಸಿ ತೆರೆಮಸಗೆ . . . ಉರವಣಿಸಿತಮಳಾಸ್ತ್ರ (ಕುವ್ಯಾದ್ರೋ. ೧೯-೪೬); ಬಿಱುನಗೆಯಲಿಂದ್ರಾರಿ ದಳ್ಳುರಿದುಱುಗಲಿನ ಕೊಳ್ಳಿಗಳಲಿದ್ದೆಸೆಗೊಱಗ ದಂತಿರೆ ಕಟ್ಟಿದರು ಕಂಭದಲಿ ಹಳವಿಗೆಯ (ತೊರರಾ. ೫-೬-೧೦).
[ ದಳ್ಳುರಿ$_2$ + ತುಱುಗಲು (<ತುಱುಂಗಲ್) ]

**ದಳ್ಳುರಿಧಾರೆ** (ನಾ). ದಳ್ಳುರಿಯಂತೆ ಹೊಳೆಯುವ ಅಲಗಂ : ಸಾರಥಿಯ ಕೊಂದಲ್ಲದರ್ಜುನ ತೀರುವವನಲ್ಲೆನುತ ದಳ್ಳುರಿಧಾರೆಯಂಬೈದಱಿಲಿ ದೇವನನೆಸಲು (ಕುವ್ಯಾದ್ರೋ. ೩-೫೪). [ ದಳ್ಳುರಿ$_2$ + ಧಾರೆ ]

**ದಳ್ಳೆನ್** (ಕ್ರಿ). 'ದಳ್' ಎಂದು ಶಬ್ದ ಮಾಡು: ಇವೆ ಕೋಪಾನಲಧೂಮಲೇಖೆಯೆನೆ ಪುರ್ವುರ್ವೆಟ್ಟು ಜರ್ವಲ್ ತಗುಳ್ದುವು . . . ಕೋಪಾನಲ ತಾಪದಿಂ ರಣರಸಂ ದಳ್ಳೆಂದು ಕಾಯ್ದುಕ್ಕುವಂತವೊಲಾಗಳ್ ಬೆಮರ್ಗಳ್ ಕಪೋಲತಲದೊಳ್ ತಳ್ತೊಯ್ದುವಾ ದೈತ್ಯನಾ (ಪಂಪಾಮ. ೯-೪೮) ; ನಿಶಾಚರನ ಕೋಪೋಗ್ರಾನಳಂ ಪೊತ್ತುತುಂ ಪೊಗೆಯುತ್ತುಂ ಕಿಡಿಗುಟ್ಟುತುಂ ಮಸೆಯುತುಂ ದಳ್ಳೆಂಬ ಭೋರೆಂಬ ಭುಗ್‌ಭುಗಿಲೆಂಬೇಱ್ಗಿಯನಾಂತು ಕೇಸುರಿಗಳಂ ಸೂಸಿತ್ತಗುರ್ವಪ್ಪಿನಂ (ಜಗವಿ. ೧೫-೪೦) ; ಜವದಿಂ ಬಂದುದು ದಳ್ಳೆನುತ್ತುರಿವ ಮೆಯ್ಯುಂ ಧೂಮದುರ್ಬೆಂಬ ಜರ್ಬುವ ಪುರ್ಬುಂ . . . ರೌದ್ರಜ್ವರಂ ತಪ್ತಹೇಮವಿಭೂಷಂ ತ್ರಿಶಿರತ್ರಿಪಾದ ವರುಣಾಕ್ಷಂ ರೂಕ್ಷರಕ್ಷಾಯುಧಂ (ಜಗವಿ. ೧೮-೧೩). [ ದಳ್ + ಎನ್$_1$ ]

**ದಱಿದಱಿ, ದರದರ$_1$** (ನಾ). ಒಂದು ಅನುಕರಣ ಪದ : ದಱಿದಱಿ ಮೊಂದೆಱೆದು ಪುಯ್ಯಲಿಡೆಯುಡೆ ಕೊಲ್ಗಂ (ಅಜಿಪು. ೧೦-೨೮) ; ಧುಳುಧುಳುಂ ದೊಪ್ಪೆಂಬ ಗುಱುಗುಱು ಧಳಧಳಂ ಜೋಱೆಂಬ ದಱಿದಱಿ ದೊಳದೊಳೆಂಬೀ ಧ್ವನಿಗಳವನಿಗೆ ಭಯವನೀವುತಿರೆ (ಸಾನಂದ. ೮-೧೩). ದರದರ$_1$ : ಕುರ್ಚಿಯನ್ನು ಕೈಗೆ ಎತ್ತಿಕೊಳ್ಳದೆ ದರದರ ಎಂದು ಎಳೆದು ನೆಲವನ್ನು ಗಾರು ಮಾಡಬೇಡ (ರೂಢಿ). 'ದರದರನೆ' ಪರಾ.

**ದೞದೞನೆ**, ದರದರನೆ (ಅ). (ಎಳೆದುಕೊಂಡು ಹೋಗುವಾಗ) ದರದರ ಎಂದು: ತಲೆನವಿರಂ ಹಿಡಿದು ದೞದೞನೆಱೆದುಕೊಂಡು ಬಂದಂ (ಪದ್ಮರಾ. ೧೧೭-೨೫); ದಱದಱನೆಱೆಯೆಱೆ ಪಿಡಿಪಿಡಿ ತಱೆತಱೆ . . . ಕೊಱೆಕೊಱೆಯೆಂದೊದಱೆ ಗಜಱೆ ಗರ್ಜಿಸಿ ಮುಳಿವರ್ (ಅಜಿಪು. ೧೧-೯); ಕಿಡಿಪೇಂ ಕರ್ಮಮನೊಳ್ಪಂ ಪಡೆವೆನೆನುತ್ತಿರಲಾತ್ಮನಾತ್ಮನ ಕಾಲಂ ಪಿಡಿದು ದೞದೞನೆ ಕರ್ಮಕ್ಕಳಿಪಿಂದೆಱೆದೊಯ್ದು ನೂಂಕುಗುಂ ಸಂಸೃತಿಯೊಳ್ (ಸಮುಪ. ೧೩-೫೨). ದರದರನೆ: ಹಿಂದೆ ಮುಂದೆ ನೋಡದೆ ದರದರನೆ ಎಳೆದೊಯ್ದರು (ಜಾನ). [ದೞದೞ + – ಅನೆ$_1$]

**ದೞ** (ನಾ). ೧. ಬಲ; ಸೈನ್ಯ; ಪಡೆ: "ಪಡೆ, ಅಣಿ, ದೞಂ, ಒಡ್ಡು ಬಲಂ–ಈ ೫ ಸೇನೆ" (ಕರಸಾ. ೧೪-೨೮೧); ಕದಱೆ ಚತುರ್ಬಲಂ ಬೆದಱೆ ತಳ್ತ ದೞಂ ಕೆಡೆದಟ್ಟೆ ತಟ್ಟೆ ಮಾಣದೆ ಪೞಗಿಟ್ಟು ಬಾಯ್ವಿಡೆ ಘಟಾಳಿ ಪಮಣದ ಪೆಣೆದಂ ಹರಂ ದಿಗಿಭದೊಳ್ ದಿಗಿಭಂ ಪೆಣೆವಂತೆ ಪಾರ್ಥನೊಳ್ (ಪಂಪಭಾ. ೮-೨೧); ನಾಲ್ಕುಂ ದೞಂ ನೂಂಕೆ ನುಗ್ಗುವೆಂ (ಶಬ್ಮಣಿ. ೧೫೪); ಊರವರ್ ಪುರದಿಂದಂ ಪೊಱಮಟ್ಟು ಪೊಕ್ಕು ದೞಮುಂ ನೆಗ್ಗುತ್ತೆ ನುಗ್ಗುತ್ತೆಯೊತ್ತರದೊಳ್ ಮುತ್ತಿದಿರಾಗೆ . . . ಶಿವಂ ಬಟ್ಟಾಡಿ ಬಿಟ್ಟೋಡಿದಂ (ಚಕವಿ. ೫-೨೨). ೨. ಕುದುರೆಗಳ ಪಡೆ; ತುರಗಬಲ: "ದೞಂ = ತುರಂಗಬಲಂ, ಸಾಮಾನ್ಯ ಬಲಂ" (ಶಮುದ. ಪರಿ. ೧). ೩. ಸೈನ್ಯದ ತುಕಡಿ; ಸೈನ್ಯವಿಭಾಗ: "ತುರಂಗಬಲದೊಳಮಲ್ಪಬಲದೊಳಂ ದೞವೆಸರ್" (ಸಂಜೀವ. ೧೪).

**ದೞವೋಡೆಗಂಡ** = ಸೈನ್ಯವು ಓಡಿದಾಗಲೂ ಏಕಾಂಗಶೂರನಾಗಿ ಹೋರಾಡುವವನು; ಏಕಾಂಗಶೂರ; ಒಂದು ಬಿರುದು: ಮಹಾಸಾಮನ್ತಂ ದೞವೋಡೆಗಣ್ಡನ್ದ್ರಮ್ಮಂಡಳಾಣ್ಮನುಜ್ಜನಿಭುಜಙ್ಗಂ ಶ್ರೀಮತ್ಪೊಸೂದ್ರಕಯ್ಯ (ಎಕ. XI, ಹೊಳಲ್ಕೆ. ೨೩-೭; ೯೬೮).

[P ಇದು ದ್ರಾವಿಡ ಶಬ್ದವೆಂದು ಕೆಲವರ ಅಭಿಪ್ರಾಯ]

**ದೞಂಬೞನೆ** (ಅ). ಒಂದು ಅನುಕರಣಾವ್ಯಯ: ಸೀರ್ಪನಿ ಸಿಡಿಯೆ ತೆರಮಸಗೆ ಕೊಳಂ ತಳಮಳಮಾಗೆ ವಿಹಂಗಳ್ ಮೊಯ್ಗರೆಯೆ ದೞಂಬೞನೆ ಕೈಕಾಲ್ಗಳೊಳೀಸುವ ಕಾವನ ಪಟ್ಟದಾನೆಗಳಂಬೋಲಾಡಿದರ್ ಬಾಲೆಯರ್ (ರಾಮಾಶ್ವ. ೧೨೩-೨೪). [ದೞಂಬೞ$_0$ + – ಅನೆ$_1$]

**ದೞದುೞ**, ದಳದುಳ$_2$, ದಳದುಳಿ, ದಳವುಳ, ದಳವುಳಿ, ದಳಾದುಳಿ, ದೞವುೞ (ನಾ). ೧. ಬಲವಾದ ಸುಲಿಗೆ; ತುಂಬು ಸೂರೆ; ಅಧಿಕವಾದ ಕೊಳ್ಳೆ; ಹೆಚ್ಚಾದ ಲೂಟಿ: "ದೞದುೞಂ (ದೞವುೞಂ) = ಬಲ್ಸೂಱೆ" (ಶಮುದ. ಪರಿ. ೧); "ಬಲ್ಸೂಱೆಯೊಳಂ ದೞದುೞವೆಂದೆನೆ" (ಕರ್ಣಾನಿ. ೮೨); ದೞದುೞವಾದುದಾಗಳಸಿಯೋಱಸಿದೇ[ಯೇ]ಱದು ಬಂದಿ ಬಂದಿ ದಂಡುಟವೆಲೆ ದಂಡುಳಂ ಪಿಡಿದರಂಗನೆಯಂ ಪಿಡಿದೊಯ್ದರೆಂದು ತಲ್ಲಣಿಸಿ (ಅನಂಪು. ೧೧-೭೩); ಗರಗರಿಕೆಯು ದೞದುೞದ ಬಿಂಕದ ಬೀರರುಗ್ಗಡಣೆ ಪಿರಿದಾಗೆ . . . ಪಡೆ ನಡೆಯುತುಮಿರ್ದುದು (ರಾಮಾಶ್ವ. ೫೦-೮). ದಳದುಳ$_2$: ೧. ಭಕ್ತಿದಳದುಳದಿಂದ ಬಂದಿಕಾಱರಾಗಿ ಬಂದು ಹೊಕ್ಕಡೆ ಬದನೆಯ ಕಾಯಿಗಳು ಬಾಣಲಿಂಗವಾಗವೆ ನಮ್ಮ ಬಸವಣ್ಣನ ದೃಷ್ಟಿ ತಾಗಲು (ಬಸವ. ಕ. ೮೯-೯೮೧); ಹುಸಿ ಕಳವು ದುಷ್ಕೃತಿ . . . ದಳದುಳ ನುಸುಳು ಹಿಂಸೆ ವಿವಾದ . . . ದೋಷಪ್ರಸರವಿಲ್ಲ ನೃಪನ ಕಾಲದೊಳ್ (ಜೀಮಂಧ. ೨-೫೨); ಬೆಳುಗವತೆಯನ್ಯಾಯವಾಱದ ಕಳವು ವಳದು[ಪಾಠಾಂ. ವು]ಳ ಬಂದಿ ಡಾವರ ಕೊಲೆ ಹುಸಿಗಳಿಲ್ಲಿವರ ರಾಜ್ಯದೊಳು (ಕುಮ್ಯಾಆ. ೧೮-೧೭); ಮರ್ಕಟರ ದಳದುಳದ ದೂಱನ ದಕ್ಕಡೆಯುತನ ಬಿದ್ದುದೈ ಕರ್ಣಕ್ಕೆ (ತೊರರಾ. ೪-೧೦-೧೭). ೨. ದಾಳಿ; ಮುತ್ತಿಗೆ; ಆಕ್ರಮಣ: ರಾಯಕುವರನ ಮದುವೆಗಬ್ಬದಳಾಯತಾಕ್ಷಿಯರನು ವಿಚಾರಿಸಿ ಹಾಯಿದನು ದಳದುಳದೊಳೊಂದು ವಿವಾಹಮಂಟಪಕೆ (ಕುಮ್ಯಾಆ. ೨-೩೨); ಗಿಳಿಯ ಹಿಂಡುಗಳೆತ್ತ ಗಿಡಿಗನ ದಳದುಳವು ತಾನೆತ್ತ ಭೀಮನ ಸುಳಿವು ಗಡ ಕಾಲೂಱುವವೆ ಕರಿಘಟೆಗಳೊಗ್ಗಿನಲಿ (ಕುಮ್ಯಾದ್ರೋ. ೨-೮೧). ೩. ಲೂಟಿ ಮಾಡುವ ಸೈನ್ಯ,–ದಳ: ಚರಣಗತಿಯಲಿ ಬಪ್ಪರಾಸರೋಜಾಸನೆಯರೊಂಬತ್ತುಕೋಟಿ ಬರಲು ಅರಲಬಾಣ ಹೊಲಬುಗೆಡುವ ಕಾನನವೊ ಹಿಮಕರನ ಮನೆಗೊಲಿದು ದಾಳಿಯನಿಡುವ ದಳದುಳವೊ ವರತಪೋಧನರ ನಿಷ್ಠಾಮನಿಧಿಯಂ ಕಳುವ ಚೋರರೆನಲೆಯ್ತಂದರು (ಹಪಶಾ. ೩-೨೪). ೪. ಉತ್ಸಾಹ; ಸಡಗರ; ಸಂಭ್ರಮ: ಕವಿತೆ ಕಲ್ಪನಶಕ್ತಿ ವಿರಚಿಸುವಿಂದ್ರಜಾಲಗಳಲ್ಲವಯ್ ಕವಿಯು ಪಿಂತಣ ಜನ್ಮಕೋಟಿಯೊಡರ್ಚಿಯಾಳ್ಗೊಂಡನುಭವಂ ವಿವಿಧಕೃತಿ ಸಾಕ್ಷಿತೆ ತಪಂ ಸತ್ಯಾನುಸನ್ಧಾನಂಗಳಾನವನ ನೆನೆಪಿಂ ದಳದುಳದೆ ಸೌನ್ದರ್ಯಮನುವದಿಪುದಱ್ತಗುಂ (ಸಂಸಪ. ೧೮-೪೭). ದಳದುಳಿ: ೧. 'ದಳದುಳಿಗಾಱ' ಪರಾ. ದಳವುಳ: ೧. ಕಳವಿಂದೆ ಬಲ್ಪಿಂದೆ ದಳವುಳದಿನರ್ಥದಿಂ ಚೆಲುವೆಂಬ ತೊವಲ ಮಱೆಗಱುವಿನಿಂದೆ ಪಲತೆಱದಿನಕಟ ಪರಲಲನೆಯರನೊಯ್ಯಲಾಪೊಲೆಮನದೆ ಕೆಡಿಸುವುದನೀಕ್ಷಿಸುವುದು (ಸಾನಂಚ. ೫-೧೮); ಹುಸಿ ನುಸುಳು ಡೊಳ್ಳಾಸ ಹಿಂಸಾವ್ಯಸನವಾಱದ ಬಂದಿ ದಳವು[ಪಾಠಾಂ. ದು]ಳವಸುರಭಯ ದುರ್ಭಿಕ್ಷ ಎಂಬಿವರೆಸಕ ಹೊದ್ದದಯೋಧಿಪನ ಧರಣೀತಳಾಗ್ರದಲಿ (ತೊರರಾ. ೧-೩-೨೭). ೩. ಕಾಮನ ಕಾರಾಗಾರದೊಳಿರ್ಪಂತೆ ಕೇಳೀವನದೊಳಿರ್ಪ ಬಾಲಕಿಗೆ ಚಂದ್ರನ ದಾಳಿ ಆಳಿಗಳ ದಳವು[ಪಾಠಾಂ. ದು]ಳಂ ಬಸಂತನ ಬಂದಿ . . . ಶಿಶಿರೋಪಚಾರದ ದಂಡಣೆಯುಬಿಂಡಿತವಾಗೆ (೧೦೬೮. ೪-೧೧೮ ವ); ತಳಿತ ಝಲ್ಲರಿಗಳಿಗೆ ಗಗನದ ವಳಯುವೈದದು . . . ದಿಗುವಳಯುವಿಟ್ಟೆಡೆಯಾಗೆ ರಥಹಯ ದಳವುಳಕೆ ಕುರುಸೇನೆ ನಡೆದುದು ದೊರೆಯ ನೇಮದಲಿ (ಕುಮ್ಯಾದ್ರೋ. ೧-೪೫). ದಳವುಳಿ. 'ದಳವುಳಿಗ', 'ದಳವುಳಿಗೊಳ್' ಪರಾ. ದಳಾದುಳಿ: ೧. ಬಡವರೆಂದು ಮಱೆಮಗ್ಗುಲಲ್ಲಿ ಕೊಂಬುದು ತುಡುಗುಣಿ ಪ್ರಸಾದ ನಚ್ಚುಮಚ್ಚಿನಲ್ಲಿ ಎಳೆದು ಸೆಳೆದುಕೊಂಬುದು ದಳಾ[ಪಾಠಾಂ. ಳ]ದುಳಿಪ್ರಸಾದ (ಬಸವ. ಕ. ೨೭೧-೫೭೭). ದೞವುೞ: ೧. "ದೞವುೞಂ ಬಲ್ಸೂಱೆ" (ಸಂಜೀವ. ೩); ದೞವುೞವಾಱದ . . . ಲಂಚಂ ಕಳವು ಪಿಸುಣ್ ಪಸವು ಬಱಂ ಪೞವೞೆ ವಲಸೊಲಸು ಕುತ್ತುಮಿಲ್ಲಾ ನಾಡೊಳ್ (ಶಬ್ದಾನು. ೧೪೦ ವ್ಯಾಖ್ಯಾ). ೫. "ಅಬ್ಬರ; ಗಲಾಟೆ" (ಪ್ರಭಣ್ಣ): ಕಿವಿಸಂ ಪಳಂಚಲೆವ ಮಂಚದ ಶಕುನಿಯಂಚೆಯ ಗಿಳಿಯ ಪುರುಳಿಯ ಪಾರಿವದ ಕೊರಲುಲಿಯ ದೞವುೞವನಾಲಿಸಿ (ಚಂದ್ರಪು. ೮-೭೭ ವ): ಜವನ ದೂಱುಗಾಱರ ಜಂಗುಳಿ ನೇಣ ಶೂಲದ ಕರಗಸದ ಇಟ್ಟಿಯ ಕವೆಗೋಲ ಇರ್ಕುಳಿಯ . . . ಪರುಟವಣೆಯ ಸಡಗರದ ದೞವುೞದಿಂ ಬಂದು ಮುತ್ತಿ ಮುತ್ತಿ ಅಱಗುಲಿ ಜೀವಾತ್ಮನಂ ಸೆಱೆವಿಡಿದತ್ತು (ರಾಮಾಶ್ವ. ೭೯-೨೨); "ದಾಂಧಲೆ" (ರಾಮಾಶ್ವ. ಕೋಶ); "ಅಬ್ಬರ; ಹಾವಳಿ" (ಪ್ರಭಣ್ಣ).

**ದಳದುಳವಾಗು**, **ದಳದುಳವಾಗು** = ೧. ಸೂರೆಹೋಗು; ಲೂಟಿಯಾಗು: ಮೊಳೆತುವೊಂದೊಂದು ನಕ್ಷತ್ರ ಕ್ಷತ್ರತ್ವದೊಂದಳವು ದಳದುಳವಾಯ್ತು ಕಾಮಿಜನಕಂಗಜಂ ಗೆಲಿದನೀ ಜಗವ ಗಮನೋದ್ಯುಕ್ತನಾಗಿ ನೇಸಱ್ ಬೀಳಲೇವೇಳ್ವೆನು (ಚಬಪು. ೯-೫): ಕಾಳಲದೇವಿಯ ಕುಮಾರ ಪಾಣ್ಡ್ಯದೇವ ಮಹಾದೇವನವರು ದಳದುಳವಾಗಿ ಆ ಮರಕಾಲನ ಕೊಂದು ವಸ್ತು ವಾಹನವನು ಕೊಣ್ಡುದಕ್ಕೆ (ಎಕ. VI, ಚಿಕ್ಕಮ. ೩೭-೭; 1292); ದಳವು ದಳವುಳವಾಯ್ತು . . . ತನಿಸೊಕ್ಕಿ ದೆಸೆವಟದುಳಿದು ಸೌಭದ್ರೀಯ ಭೃಂಗನ ಬಿಲುದನಿಯ ಭರವಂಜಿಸಿತು ಜಯಯುವತಿ ವಿರಹಿಗಳ (ಕುಮ್ಯಾದ್ರೋ. ೭-೩೧). **ದಳದುಳ ಮಾಡು** = ಲೂಟಿ ಮಾಡು: ಚರಲಿಂಗವಿಂತು ದಳದುಳ ಮಾಡೆ ಮುನ್ನಿರ್ದ ಸರಳ ಪೆಟ್ಟಿ ದರ್ಪನಂ ಪೆರ್ಚೆ ತುಳ್ಕಾಡುತಿರೆ ಕರಮೆ ವರ್ಧಿಸುತಿರಲ್ಗೋಕುಲಂ (ಅರಾಚ. ೧೩-೪೫).

**ದಟಿದುಟಿವಾಯ್, ದಳದಂಳವಾಯ್** (ಕ್ರಿ). ದಾಳಿಮಾಡಿ ಸೂರೆಗೊಳ್ಳು,-ಕೊಳ್ಳೆಹೊಡೆ,-ಲೂಟಿಮಾಡು : ದಟಿದುಟಿವಾಯ್ದುವೋಲ್ ಸಕಲಸೈನ್ಯಯುತಂ ಛಲಿ ಚಂಡವರ್ಮನಾಗಳೆ ಮುಳಿದಂಗಭೂಪತಿಯ ಸತ್ವಮನೊರ್ಮೆಯೆ ಸೂ ಱೆ ಗೊ ೦ ಡು (ದಶಕು. ೮ ೩೩೨) ; ನಿಶ್ಶಂಕಮಾಗಿರ್ದ ತೆಲುಂಗಪಾಳೆಯಮಂ ದಟಿದುಟಿವಾಯ್ದು (ಚಿಕವಿ. ೨-೪೯). **ದಳದುಳವಾಯ್** : ತಾನು ಅರ ಮೆ ೯ ಲೆ ಯಾ ದ ರೂ ದಳದುಳವಾಯ್ದಾಗ ಕೈಸಾರ್ವ ದೇಶಕೋಶ ಧನಕನಕ ವಸ್ತ್ರಭೂಷಣ ಧಾನ್ಯಾದಿಗಳಲ್ಲಿ (ಬಿರುಗಂ. ೩೬-೧೫). [ ದಟಿದುಟಿ + ವಾಯ್$_1$ ]

**ದಟಿಮುಖ** (ನಾ). ಸೈನ್ಯದ ಮುಂಭಾಗ ; ಜೂಣಿ.

ದಟಿಮುಖಧವಳ = ಸೇನೆಯ ಅಗ್ರಭಾಗದಲ್ಲಿ ಶೋಭಿಸುವವನು ; ಒಂದು ಬಿರುದು : ಗುಣಕ್ಕೆ ಸಲ್ಲ ಗಣೇಶಂ, ದಟಿಮುಖಧವಳಂ, ದಟಿಮುಖಾದಿತ್ಯಂ, ರಾಯಕೋಳಾಹಳಂ ಈ ತೆಱದ ಬಿರುದಿನೊಳ್ ಏತ್ತಾನುಂ ಸಲ್ವುದು (ಶಮದ. ೧೭೪ ಪ್ರಯೋ). ದಟಿಮುಖಾದಿತ್ಯ = ಸೈನ್ಯದ ಅಗ್ರಭಾಗದಲ್ಲಿ ಸೂರ್ಯನಂತೆ ಪ್ರತಾಪಶಾಲಿಯಾದವನು ; ಒಂದು ಬಿರುದು : ಗುಣಕ್ಕೆ . . . ದಟಿಮುಖಾದಿತ್ಯಂ, ರಾಯಕೋಳಾಹಳಂ (ಶಮದ. ೧೭೪ ಪ್ರಯೋ). [ ದಟಿ + ಮುಖ ]

**ದಟಿವಡು** (ಕ್ರಿ). ಪಡೆಯಾಗು ; ದಳವಾಗು ; ಗುಂಪಾಗು : ಕಟ್ಟುಱಿದೊಳಟ್ಟಣಿಸಿ ಮುಟ್ಟ ನಡೆದಾರ್ಪಿಂ . . . ನೆಟ್ಟನಿನಿಸಂ ಪಿಮ್ಮೆಟ್ಟ ದಟಿವಟ್ಟದರೆಯಟ್ಟಳೆವರಂ ಕೈಗೊಟ್ಟು ಪುಯಿಲಿಟ್ಟರೆನೆ ದಿಟ್ಟತನಮೆಂತೋ (ಚಿಕವಿ. ೨-೯೩). [ ದಟಿ + ಪಡು$_1$ ]

△ **ದಟಿವಾಯ್** 'ದಳವಾಯ್' ನೋ.

△ **ದಟಿವಾಯಿ** 'ದಳವಾಯ್' ನೋ.

**ದಟಿವುಟ** 'ದಟಿದುಟಿ' ನೋ.

**ದಟಿಗವಾಡಿ** (ನಾ). ಒಂದು ಸ್ಥಳದ ಹೆಸರು : ಅಯ್ಯಪದೇವನ ಮಗಂ ಗನ್ನರಸಂ ದಟಿಗವಾಡಿಯ ಕುಱುಕ್ಷನ್ನಟ್ಟಿಯನಾಳುತ್ತಿರೆ (ಎಕ. IX, ಹೊಸಕೋ. ೧೧೧-೪; 997); ದಟಿಗವಾಡಿಯಾನ ವಿಕ್ರಮಚೋಟಮಣ್ಣಲದ ಮಣ್ಣನಾಡ ಕೇಸೂರ ಬಣ್ಣಕರ ಬಲಿವಜ (ಮೈಆರಿ. ೧೯೧೫, ೧೯-೬ ; 1050). 'ದಳಿಗವಟಿಗ' ಪರಾ. [ ದಟಿಗ$_0$ + ಪಾಡಿ$_2$ ]

**ದಟಿ** (ನಾ). ಒಂದು ವೃತ್ತಿಯ ಹೆಸರು (?) :

ದಟಿಯರು=(?): ಪೆರ್ಬ್ಬಯಲ ಕಬ್ಬಿಚ್ಚರು ದಟಿಯರು ಕುರ[ಬ]ರು ಗಣಿಗರು ಪೆಮ್ಮದವರು ಆನಂದರು ಎನೆತ್ತರು ಸಾಕ್ಷಿ (ಇಆ. XIV. ೨೩೩-೫೯; ಸು. ೯ನೆಯ ಶತ). [ ? ]

**ದಟ್ಟಟಿ, ದಳ್ದಳಿ** (ನಾ). ಸಂಕೋಲೆ ; ಕೋಳ ; ಸರಪಣಿ : "ದಟ್ಟಟಿ= ಸಂಕಲೆ" (ಕಮದ. ಪರಿ. ೧) ; "ದಟ್ಟಟಿಯೆಂದು ಸಂಕಲೆಯೊಳಾಯ್ತು" (ಕರ್ನಾನಿ. ೭೩). **ದಳ್ದಳಿ** : ಮುಳಿಸಿಂದಂ ಭೂತವೃಂದಂ ಕೊಳುಗುಳದೆಡೆಯೊಳ್ ಸಿಲ್ಕಿದಸ್ವಪ್ನರಂ ದಳ್ದಳಿಯುಂ ಕಯ್ಕಾಲ್ಗೆ ಮತ್ತಾ ಜಠರಗಳಕೆ ತಂದಂತವಂ ಮೇಳಿಸುತ್ತಂ . . . ಕಟ್ಟುತ್ತುಂ ಬಳಿಕ್ಕಂತವರ್ಗಳನೆಳೆತಂದೊಪ್ಪಿಸುತ್ತಿರ್ದುದೇಗಂ (ವೀರವಿ. ೧೨-೬೯). [ ? ]

**ದಾ$_1$** (ನಾ). ಒಂದು ಅನುಕರಣ ಶಬ್ದ : ದಾಯೆನೆ ನೋಡುವ ಕರೆದಯ್ಯಾಯೆನಲಾರ್ಪವ . . . ಮೆಯ್ಯುೞಿದಾಯಿರವಿಂದತ್ತಲೆಸೆದಮತಿಯತಿಶಯಮಂ (ಮಹಾನೀ. ೬-೭); ಸಜಿಗಿನೊಳಗಡಗಿ ನೋಡುತಲಿದಾ[ಪಾಠಾಂ. ಬಾ]ಎನುತ ಚೈಮುಂಡಾಡಿ ಮುಂದಲೆವಿಡಿದು ಕುಣಕುಣದಾಡಿ (ಪ್ರಭುಲೀ. ೩-೨೯) ; ಬೇಡುವರ್ಕಯ್ಗಳೊಳ್ ಮೆ ಯ್ಗ ಳೊ ಳ್ ಬಾಯ್ಗಳೊಳಗಾಡಿಸುವ ರಾಯೆಂದುದಾಯೆಂದು ಬಾಯೆಂದು ಪಾ ಡು ವ ರ್ . . . ಕುವರನಂ (ಚಿಬಪು. ೫-೨೬) ; ಪಡಿನೆಳಲಂ ಮಣಿಕುಟ್ಟಿಮದೆಡೆಯೊಳ್ ನಡೆ ನೋಡಿ ನೋಡಿ ದಾಯೆನುತಂ (ರಾಜಶೇ. ೩-೫೨).

**ದಾ$_2$** 'ದಸ$_2$' ನೋ.

**ದಾ$_3$** (ನಾ). [ಗಣಿತ] ಆರು ಎಂಬ ಸಂಖ್ಯೆಯ ಸಂಕೇತ : "ದಾ . . . . . . ವದನ ? ಇಂತಿನಿತುಂ ಓಕ್ಕೆ ಪೆಸರು" (ವ್ಯವಹಾ. ೧೦-೨೬).

**ದಾಂಗುಡಿ** 'ದಾಂಟುಂಗುಡಿ' ನೋ.

**ದಾಂಗುಡಿಬಿಡು** 'ದಾಂಗುಡಿವಿಡು' ನೋ.

**ದಾಂಗುಡಿಯಿಡು** (ಕ್ರಿ). ೧. ಕುಡಿ ಚಾಚು ; ಕುಡಿ ಹಬ್ಬು : ಬಿಸರುಹನೇತ್ರೆಯೊಳ್ನಡು ಪೊದಟ್ಟುದು ದಾಂಗುಡಿಯಿಟ್ಟು ಜಾಸೆ ನೀಳ್ದೆಸೆದುದು ಪಿಂಗಿ ಪೋದುದು ವಳಿತ್ರಿತಯಂ (ಶಂಕಶಂ. ೧೮೪-೦೦) ; ಅಂಗಣದೊಳಗಾಡುವ ಭೂವಿಭಾವರನಂಗನೆಯರ ದಿಟ್ಟಿವೆಳಗು ದಾಂಗುಡಿಯಿಡಲಿಕ್ಕಿದ ಹೊಸ ಮುತ್ತಿನ ರಂಗವಲ್ಲಿಯ ತೆಜನಹುದು (ಶ್ರೀಪಾಲ. ೨-೪). ೨. ಹಬ್ಬು; ವೃದ್ಧಿಯಾಗು ; ವ್ಯಾಪಿಸು ; ಮುಂದುವರಿ : ದಾಂಗುಡಿಯಿಟ್ಟುದಿಂಗಡಲ ಬೆಳ್ಪು ಕರಂ ಪೊಳೆಪೊಯ್ದುದಿಂದುಕಾಂತಂಗಳ ಬೆಳ್ಪು ಮೂಡಿದುದು ನೆಯ್ದಿಲ ಬೆಳ್ಪು (ಲೀಲಾವ. ೨-೨೧) ; ಹೆಂಗಳು ಮಸ್ತೆಂಟುಡಸಿಗೆ ದಾಂಗುಡಿಯಿಟ್ಟು ಸಾಲ್ವಿಡಿದಾಗ ಶೃಂಗಾರಗಂಗೆ ಪರಿವಪೊಲಾಡಿದರು (ಭರತ. ೧೩-೯೮) ; ಆನಂದವಾರಾಶಿ ದಾಂಗುಡಿ [ಪಾಠಾಂ. ತಾಂಕುಡಿ, ತಾಂಗುಡಿ]ಯಿಟ್ಟುದು ಸಲೆ ಸೌಖ್ಯಮೇ ರೂಪನಾಂತು ನಡೆತಂದುದು (ಚಬಪು. ೨೦-೬) ; ವಿಜಯಾಂಶುವೃದ್ಧಿ ದಾಂಗುಡಿಯಿಡೆ ಧರ್ಮರಾಜ್ಯಮೆನಿಸುತ್ತವಿಲಾವನಿಭಾಗಮಂ ಜಸಂಬಡೆದಿರೆ ಕೃಷ್ಣರಾಯನನಿಪೊಳ್ಪಸರೀಯರಸಿಂಗೆ ಸಂಗತಂ (ಚಿಕವಿ. ೨-೧೧) ; ಅಮರರ್ವರಸಿ ಬಳಿವುದು ಶಂಕರ ಲಲಿತಾರಸ್ಯಂ . . . ಹರಿವಾಣೀವಾದನಕನುಕೂಲಂ ದಾಂಗುಡಿಯಿಡುವೊಲು ಮಾಯಾಜಾಲಂ (ಗದೇಶ. ೧೯-೪೯೦).

[ ದಾಂಗುಡಿ (<ದಾಂಟುಂಗುಡಿ) + ಇಡು$_1$ ]

**ದಾಂಗುಡಿವಡೆ** (ಕ್ರಿ). ಕುಡಿಯಿಡು ; ಬೆಳೆ : ಕಡುಚೆಲ್ವುವಡೆದು ಬಳಸಿದು ಪೆಂಡೆಯುಡುಗದ ಕಾಂತೆಯರ್ ನಯುಂಬಿಡದಿರೆ ದಾಂಗುಡಿವಡೆವ ಕಲ್ಪಲತೆಗಳ ನಡುವಣ ಕಲ್ಪಾವನೀಜಮಿರ್ಪಂತಿರ್ದಂ (ಸುಕುಮಾ. ೧೦-೧೧೧).

[ ದಾಂಗುಡಿ (<ದಾಂಟುಂಗುಡಿ) + ಪಡೆ$_1$ ]

**ದಾಂಗುಡಿವರಿ** (ಕ್ರಿ). ಕುಡಿ ಹಬ್ಬು ; ಮುಂದೆ ಚಾಚು : ಮರದಿಂದ ಮರಕ್ಕೆ ದಾಂಗುಡಿವರಿವೆಳಲತೆಯಂತೆ ನೀತಿವಾಂಧಾತನೊಳ್ವರಿಸಿರ್ದ ರಾಜವಿದ್ಯಾಧರನಲ್ಲಿಗೆ ರಾಜ್ಯಲಕ್ಷ್ಮೀ ನಿಲುಕಿದಳಾಗಳ್ (ಕಾದಂಪೂ .೫೮೧).

[ ದಾಂಗುಡಿ (<ದಾಂಟುಂಗುಡಿ) + ಪರಿ$_1$ ]

**ದಾಂಗುಡಿವಿಡಿಸು** (ಕ್ರಿ). ವೃದ್ಧಿಯಾಗುವಂತೆ ಮಾಡು ; ಬೆಳೆಸು : ಆ ಎಲ್ಲ ಝುರಿಗಳಿಂದ ತಮ್ಮ ಭಕ್ತಜೀವನದ ಬಳ್ಳಿಗೆ ನೀರುಣಿಸಿ ದಾಂಗುಡಿವಿಡಿಸಿದರು (ತಪನಿ. ೧೬೧). [ ದಾಂಗುಡಿವಿಡು + - ಇಸು$_3$ ]

**ದಾಂಗುಡಿವಿಡು, ದಾಂಗುಡಿಬಿಡು** (ಕ್ರಿ). ಹಬ್ಬು ; ವ್ಯಾಪಿಸು ; ಮುಂದುವರಿ : ವಿಕಟಾಕ್ಷರಂಗಳೋಳ್ತೊಡರದೆ ಸಕ್ಕದಂಗಳ ಪದಂ ಪದಣಾಗಿರೆ ಮೆಲ್ಪುವೆತ್ತು ದಾಂಗುಡಿವಿಡುವಂತೆ ನೀಟ್ಟು ನಿಲೆ ಪೇಟ್ವುದು ನೀತಿನಿರಂತರಕ್ರಮಂ (ಕವಿರಾ. ೦-೧೪೮); ಅಂತು ತನ್ನ ತಾಂಡವಾರಂಭದೊಳಳವಿಗಟಿದ ರಾಗದಿಂ ನಿರ್ಮಿಸಿದ ಭುಜಶಾಖಾಸಹಸ್ರಂಗಳೊಳ್ ದಾಂಗುಡಿವಿಟ್ಟನಂಗಜಂ ಗಮುಲತೆಗಳನನುಕರಿಸಿ ದೇವಗಣಿಕೆಯರಾಡುವಾಗಳ್ (ಆದಿಪು. ೬-೧೨೨ ವ) : ಚಾಗದ ಕೀರ್ತಿವಲ್ಲಿ ದಾಂಗುಡಿವಿಡೆ (ಗದಾಯು. ೧೦-೫): ತಳಿವುದು ಪಾಂಸವಾರಿಯಂ ಸ ಸಿ ಗ ಳೊ ದ ವಿ ದಾಂಗುಡಿವಿಡುಗುಂ(ಲೋಕೋಪ. ೬-೭). **ದಾಂಗುಡಿಬಿಡು** : ಪೊಕ್ಕುಳ ಬಳ್ಳಿ ಪರಿದಂದಿನಿಂದಲೂ ನಡೆದಿದ ಸಂಯೋಗಕ್ಕಾಗಿ ನಿರಂತರ ತಪ: ದಾಂಗುಡಿಬಿಟ್ಟದೆ ವಾತ್ಸಲ್ಯದ ಬಯಕೆಯಾಗಿ (ಮೂರುದಾ. ೨೦೭) ; ಹೊಸಹರುಷಗಳ ಬಳ್ಳಿಗಳು ಕೊನರಿ ಕುಡಿಯೊಡೆದು ದಾಂಗುಡಿಬಿಡುವಂತಿಲ್ಲ (ಜಾಹುತ್ತ. ೯೯).

[ ದಾಂಗುಡಿ (<ದಾಂಟುಂಗುಡಿ) + ಬಿಡು$_1$ ]

ದಾಂಟಿಸು$_1$, ದಾಟಿಸು (ಕ್ರಿ). . ಈ ಕಡೆಯಿಂದ ಆ ಕಡೆಗೆ ಹಾಯಿಸು ; ಹಾರಿಸು; ನೆಗೆಸು : ತುರಗವನು ಮುಡದಿಂದೊತ್ತಿ ದಾಂಟಿಸಿದನಾ ಮಹಾದ್ವಾರವನು (ರೇವಣ. ೯-೮) ೨. ಆಚೆಗೆ ಒಯ್ಯು ; ಕಡೆಹಾಯಿಸು ; ತಟಹಾಯಿಸು ; ಪಾರುಗಾಣಿಸು : ಸಂಸರಣಮಹಾಸಮುದ್ರಮನತೀವ ಸರೌದ್ರಮನೆಯ್ದೆ ದಾಂಟಿಸಿ ಕರುಣದಿನೆಮ್ಮಂ (ನೇಮಿಪು. ೧೮-೧೦೦) ; ಅದು ಸಂಸಾರಾಬ್ಧಿಯಂ ದಾಂಟಿಸುವುದದು ದುರಾಚಾರ ದುರ್ಬುದ್ಧಿಯಂ ಕೀಳ್ವುದು . . . ಲಿಂಗಾರೂಢನಂ ಮಾಡುವುದು ಶರಣಸಾಂಗತ್ಯವು (ರತ್ನಾಕ. ೫೭) ; ಸ್ವಕುಲದಖಿಲರಂ ಘೋರಭವವಾರ್ಧಿಯಿಂ ದಾಂಟಿಸುವನೆಂದು ಬೋಧಾಯನಸುಶಾಖೆಯುಳಿಗಂ (ಪದ್ಮರಾ. ೧೧-೧೩೫) ; ಪೆಸರುವಡೆದ ಮಧುರಸವಾಹಿನಿಯ ದಾಂಟಿಸಲು ಚಂದನಡೋಣಿಗಡದರ್ (ಮೋಹತ. ೫-೨೭). ೩. ದಮನ ಮಾಡು ; ನಿಗ್ರಹಿಸು : "ದಾಂತಃ, ದಮಿತಃ – ದಾಂಟಿಸಲ್ಪಟ್ಟುದು" (ನಾಚಂ. ೬) ೪. ಮೀರಿಸು : ನಿಜಗಳನಿಕ್ಕಿ ದಾಂಟಿಸದೆ ದುಂಡಿಸುವಾಕೆಯನೊತ್ತಗೊಳ್ಳದಂತೆಟೆಯದೆ ತೇವೆಗುಳ್ಳ ಬಳಿನೀರ್ಗಳನಗ್ಗದ ಪೆಣ್ಗೆ ಮೆಯ್ಯನೆಯ್ದುಟೆಯದೆ (ಲೀಲಾವ. ೨-೯೩). ೫. ಮೀರು ; ಅತಿಕ್ರಮಿಸು : ಮೃತ್ಯುವ ಜವನ ಮಾರಿಯ ದಾಂಟಿಸುವ ವೇದಾಂತಿಗಳ ಪಾಟ ಶಿವನ ಪೊಸ ಕರವಾಳು . . . ಶಂಕರ ನೊಲುಮೆಯುಳ್ಳಾಳು (ಬಸಪು. ೬-೧೦). ದಾಟಿಸು : ೨. ನಾನು ಅವಳಿಗೆ ಊಟದ ಮನೆಯ ಹೊಸಲು ದಾಟಿಸಿ ಅಡಿಗೆಯ ಮನೆಯೊಳಕ್ಕೆ ಕರೆದುಕೊಂಡು ಹೋದೆ (ಚಂಗಾಳ್ಯ. ೧೩) ; ಎಲೈ ಅಗ್ನಿಯೆ . . . ನೀನೇ ಅನ್ನ ಸಾಧಕನು, ಪಾಪದಿಂದ ದಾಟಿಸತಕ್ಕವನು (ಹುಕ್ಕಾರ. ೨೫). ೬. ಸಾಗಿಸು ; ಕಳುಹಿಸು ; ರವಾನಿಸು ; ಹೋಗುವಂತೆ ಮಾಡು : ಸುಗ್ರೀವ ಹಾಯೆನುತೊದಱೆ ರಣದಲಿ ಜೀವವನು ದಾಟಿಸಿ [ಪಾಠಾಂ. ಜಾಳಿಸಿ, ಜಾಱಿಸಿ]ದನಾ ಧ್ವನಿಗೇಳಿಸಿತು ಕಿವಿಗೆ (ತೊರರಾ. ೮-೨-೨೮) ; ಸೂಟಿಯ ಬಾಣಗಳಿಂದಿಟ್ಟು ಜೀವವ ದಾಟಿಸಿದರು ಯಮಪುರಿಗೆ (ಕಂನವಿ. ೧೮-೭೬) ; ಕನ್ಯಾದಾನವೆನ್ನುವುದು ಒಂದು ಕೈಯಿಂದ ಇನ್ನೊಂದು ಕೈಗೆ ವನಕರುಗಳನ್ನು ದಾಟಿಸಿದ ಹಾಗೆ (ವಕಥಾ. ೭೧) ; ದ್ರುಪದನು ರಾಜಾಧಿರಾಜನಾದ ತನಗೆ ಬಡಹಾರವರ ಗೆಳೆತನವೆಲ್ಲಿಯದೆಂದು ಅವನನ್ನು ಹೊರಗಣಿಂದ ಹೊರಕ್ಕೇ ದಾಟಿಸಿಬಿಟ್ಟನು (ನೀಗಟ್ಟು. ೧೧೮).

ದಾಟಿಸಿಕೊಳ್ = ರಕ್ಷಿಸು ; ಆಶ್ರಯ ಕೊಡು ; ಕಾಪಾಡು : ದೈತ್ಯವಧೂಟಿಯ ಕರೆದು ತನ್ನೊಡನೆ ಸೂಟಿಯೊಳ್ ಸಾವಂತ ಕೆಯ್ಯ ಖಡ್ಗವನಿಕ್ಕಿ ದಾಟಿಸಿಕೊಂಡಳೆಲ್ಲರನು (ಮೋಹತ. ೩೩-೩೮).

[ ದಾಂಟು$_1$ + – ಇಸು$_3$ ]

ದಾಂಟಿಸು$_2$ 'ತಾಂಟಿಸು' ನೋ.

ದಾಂಟು$_1$, ದಾಟು$_1$ (ಕ್ರಿ). ೧. ಹಾರು ; ನೆಗೆ ; ಜಿಗಿ ; ಲಂಘಿಸು : "ದಾಂಟು–ಲಂಘನೇ" (ಶಮುಧಾ) ; "ಲಂಘಿಸುವುದಕ್ಕೆ ದಾಂಟೆಂದು" (ಕಶರ ೧೩೫) ; ಸುಹೃಚ್ಛ್ರೇಕಾಂಧನಂ ಮಗುಟ್ದುಮರ್ತ್ಯಮಾರ್ಗದೊಳ್ ಪರಿಯುತ್ತಮೊರ್ವ ವೈಮಾನಿಕನಂ ಭರದಿಂ ದಾಂಟುವುದುಂ (ಕಾದಂಉ. ೭೧೮). ೨. ಹಾಯ್ದು ಹೋಗು ; ಮುಂದೆ ಸಾಗು ; ತಟಹಾಯು ; ಆಚೆಗೆ ಹೋಗು : ವಿಷಯಾಧಿಪತಿಗಳಪ್ಪರಸುಗಳೆಲ್ಲಂ ನೆರೆದಿರ್ದಲ್ಲಿಯಾರುಮಂ ಮೆಚ್ಚದೆ ದಾಂಟಿ ಪೋಗಿ ಕುಬೇರಕಾಂತಂಗೆ ಮಾಲೆಯಂ ಸೂಡಿದಳ್ (ಪದ್ಮರಾ. ೮೧-೮) ; ಭೀಮನಂ ಪೊಣರ್ದು ನೆಲಕ್ಕಿಕ್ಕಿ ಬೆನ್ನಂ ಮೆಟ್ಟಿ ದಾಂಟುವ ಮದಗಜದಂತೆ ಕೊಲಲೊಲ್ಲದೆ ದಾಂಟಿದಾಗಳ್ (ಪಂಪಭಾ. ೨೩-೮೧ ವ) ; ರುಧಿರಸ್ರೋತಂಗಳು ದಾಂಟಿದಾಂಟಭದೋರ್ನಿಲಲತಾಪ್ರತಾನವಿಟಿನವ್ರಾತಂಗಳೊಳ್ಸಿಲ್ಕಿಸಿಲ್ಕಿ (ಗದಾಯು. ೮-೮೭) ; ಗರಳಪುರದ ನದಿಯನು ದಾಂಟಿ ಬಲ ಸಹ ನೆಱೆಯರ್ಧರಾತ್ರಿಯೊಳಾಗ . . . ಅರಿತಂತ್ರವ ತಱಿದೊಟ್ಟಿದನು (ಕಂನವಿ. ೩-೫೫). ೩. ಬಿಟ್ಟು ಹೋಗು ; ತೊರೆದು ಹೋಗು : ಉತ್ತರಗುಡದೆ ಜಲವೀಂಟಿದನು ದಾಂಟಿದುದಸು ಕಳೇಬರವ (ಕುಪ್ಯಾಅ. ೨೩-೨೧). ೪. ಮೀರು ; ಪಾಲಿಸದೆ ಇರು ; ಅತಿಕ್ರಮಿಸು : ಸಪ್ತಸಮುದ್ರಂ ಕರಗಣ್ಮಿ ತನ್ನವಧಿಯಂ ದಾಂಟಿತ್ತು . . . ಎಂಬೊಂದು ಸಂದೇಹಮಂ ಪೊಸತಂ ಭೂಭುವನಕ್ಕೆ ಮಾಡಿದುದು ತತ್ಸನ್ನಾಹಭೇರೀರವಂ (ಪಂಪಭಾ. ೯-೯೮); ಯತಿಯೆಂಬುದು ಗಣನಿಯತಂ ಪ್ರತೀತಮುಸಿರ್ವಾಣಮಂತದಂ ದಾಂಟಲ್ಕಾ ಯತಿ ಕೆಡುಗುಂ ದಾಂಟದೊಡಾ ಯತಿ ಕೆಡೆ ಕವಿತಾಭಿಧಾನಮೇನೆಸೆದಪ್ಪುದೆ (ಛಂದೋಂಬು. ೧-೮೫); ರವಿ ಮಾಱಿಟ್ಟಳಿದಂ ವಿಯತ್ತಳಮನಾಶಾಸೀಮೆಯಂ ದಾಂಟುವನ್ನೆವರಂ ತನ್ನ ಕರಂಗಳಿಂದೆನೆ ಪೆಱಂಗೇಂ ಮೊಗ್ಗೆ (ಪಂಚಾಪಾ. ೧-೩೯); ನಿಱಿಯನಿಕ್ಕಿ ದಾಂಟಿದರೆ ಅಂತೆನ್ನ ನಂಬಾ (ಬಸವ. ೫೦೧): ಉಟ್ಟ ನಿಱಿ ದಾಂಟಿದೊಡೆ ಕಚ್ಚುವುದೆ ದೈವವುಂ ಮುಟ್ಟಿದೊಡೆ ಬೆರಳು ಹತ್ತುವುದೆ (ಸೋಮಚ. ೨-೮೦) ; ನಿಱಿಯು ದಾಂಟಲು ಕಚ್ಚುವುದೆ ಬಳಿನೀರ್ಗುಡಿಯುಲೀಯುದರ ಉರಿವುದೆ (ಜೀವಂಚ. ೧೭-೫೭) ; ಅಣ್ಣನಾಜ್ಞೆಯ ಚಿತ್ತದಲಿ ನೀವ್ ದಾಂಟದಿಹುದಾರಣ್ಯವಾಸದಲಿ (ಕುಪ್ಯಾಅ. ೬ರಿಇ. ೮-೫೯) ; ಉಟ್ಟ ಸೀರೆಯು ದಾಂಟು ಮುಟ್ಟನ್ನು ದೈವವ (ಅಮುಸಾಂ. ೩-೭೩) ; ಬಳಿನೀರ ಕುಡಿದು ನಿಱಿಯ ದಾಂಟ ಪುತ್ರೋದಿ ಬಳಿಸಂದಿನಿಯರ ಚಿತ್ರವನು ತಿಳಿಸಿ ಕಾಲ್ವಿಡಿದೊಡಗೂಡುವ ಗಳಿಸಾಳಿ ಬೆಲೆವೆಣ್ಣಳು (ಕುರಾಸಾಂ. ೨೮-೮೮). ದಾಟು$_1$ : ೨. ಪಳುವ ದಾಟಲಿ ದ್ರುಪದನಂದನೆಯುಳಲಶಿಖಿಗಿಂಧನವಲೇ ಕುರುಕುಲದ ಕರಡದ ಬಣಬೆ ಕಾದುರುಹುವುದು ಕೇಳೆಂದ (ಕುಪ್ಯಾಅ. ೨-೩೨) ; ದಾನದ ಕೈಯ ತೋಱಿಸಬೇಕು ಅದಱಿಂದ ನದಿಯ ದಾಟುತಿಯುಪ್ಪ (ಪುರಂದ ೧-೧೮೧-೨೧) ; ನೆಱೆ ತುಱು ಸಹಿತ ಸೋಸಲೆಯ ಕಡುವ ದಾಟ ಓರಿದು ಮಾರ್ಬಲಗೂಡಿ ಬಂದು (ಕಂನವಿ. ೩-೫೭) ; ನೀನು ಇನ್ನು ಸಂಸಾರವೆಂಬ ಮಹಾಸಾಗರದೊಳಗಿಂದ ದಾಟಿಹೋಗತಕ್ಕವನು (ಮುಂಬಯಿ. ೪-೩೯) ; ಹೊಳೆ ದಾಟಿದ ಮೇಲೆ ಅಂಬಿಗರ ಎಂಡ (ಗಾದೆ). ೮. ಗತಿಸು ; ಸಾಯು ; ತೀರಿಹೋಗು ; ಮಂಗಿ ; ಕೊನೆಗೊಳ್ಳು : ಅವನು ದಾಟಿಕೊಂಡನು (ಮುಂಬಯಿ. ೫-೧೯೯).

[ ದೇ. ॥ ತಮಿ. ತಾಣ್ಟು ; ಮಲ. ತಾಣ್ಟು, ತಾಟ್ಟು ; ತುಳು. ದಾಂಟು ; ತೆಲು. ದಾಟು ]

ದಾಂಟು$_2$ 'ತಾಂಟು' ನೋ.

ದಾಂಟು$_3$, ದಾಟು$_2$ (ನಾ). ೧. ನೆಗೆತ ; ಜಿಗಿತ. 'ಮಾಱಿಂದಾಂಟಂ' ಪರಾ. ೨. ಹಾದುಹೋಗುವಿಕೆ ; ಹಾಯುವಿಕೆ : (೬). ೩. ಹಬ್ಬುವಿಕೆ ; ಚಾಚುವಿಕೆ. 'ದಾಂಟುಂಗುಡಿ' ಪರಾ. ೪. (?) : ಇಬ್ಬೆಯೆ ಮುಸುಕಿಟ್ಟು ಬಾಗಿಲ ಬಱಿಯಾನೆ ಪರಿತಂದು ದಾ(ದ)ಂಟನೂರಿ(ಱ) ಸಿರೊ(ರೆ)ೀಜಂ ಬಡದೆ ನಡುಗುತ್ತು ಮೊಯ್ಯನೆ ಮಟೆಯುಂ ಬೆಸಗೊಂಡೊಡಮುಕ್ಕುಮಿದುಪೊಂದು ಮತಂ (ಅಟ್ಯಮ. ೧-೩೯). ದಾಟು$_2$ : ೨. ಕರವಾಳೋನ್ಮುಖ ಚಣ್ಡವಜ್ರಹತಿಯಂ ಬಿಳ್ದನ್ಯಮತ್ತೇಭ ಭೂವರದಿಂದುಣ್ಮುವ ರಕ್ತವಾಹಿನಿಯುಮಂ ಕಣ್ಡಯ್ದು ಭೂತಬ್ರಜಂ ತ್ವರಿತಂ ಮುಣ್ಣದ ತಪ್ಪದಿಂ ಶಿರದಲಾಂ ಬದ್ಧದಿಂ ದಾಟು ಭೀಕರವಾಗಿರ್ದ್ದುದು ಬಿಟ್ಟಿದೇವನಿಱಿದತ್ಯುಗ್ರಾಜಿರಂಗಾಂಗಣಂ (ಎಕ. XVI (೩), ಚಿಕ್ಕನಾ. ೯೮-೮೮; 1169). ೫. ದಾಟುವಂತಹ ಸ್ಥಳ,–ಎಡೆ : ಕೋಟೆಯಿದ್ದುದು . . . ಘೋಟಕದ ಮದಕರಿಯ ಕಂಡಿಯ ದಾಟುಗಳ[ಪಾಠಾಂ. ದ] ಹುಲಿ ಮುಖದ ಮಂಕದ ಕೂಟದುರುವಿಲಾಸದ ವಿವಿಧರಚನೆಯಲಿ (ತೊರರಾ. ೫-೨-೮). ೬. ಸಂಗ್ರಹ ; ಅಡಕಗೊಳಿಸುವಿಕೆ. 'ದಾಟಂಕಥೆ' ಪರಾ. ೭. ದೃಷ್ಟಿದೋಷ, ಕಾಲುಧೂಳು ಮುಂತಾದಂವುಗಳ ಪರಿಹಾರಕ್ಕಾಗಿ ನಿವಾಳಿಸಿ ಎಸೆದ ಪದಾರ್ಥಗಳನ್ನು ದಾಟುವುದರಿಂದ ಉಂಟಾಗುವ ಅನಾರೋಗ್ಯ. 'ಕಾಲುರಂಜು', 'ದಾಟುತೆಗೆ' ಪರಾ.

ದಾಟಾಗು = ನಿವಾಳಿಸಿ ಎಸೆದ ಪದಾರ್ಥಗಳನ್ನು ದಾಟಿ ಅನಾರೋಗ್ಯವುಂಟಾಗು; ಕಾಲುರಂಜು ಆಗು : ದಾಟು ತೆಗೆಯುವುದು : ದಾಟಾಗಿದ್ದರೆ, ಅಂದರೆ ಏನಾದರೂ ದೋಷದ ಕಾರಣ ತೊಡೆ ಅಥವಾ ಕಾಲು ಊದಿಕೊಂಡಿದ್ದರೆ . . . ಮಾಡುವ ಶಾಂತಿ (ನನ್ನೂರು. ೩೦೪).

[ <ದಾಂಟು$_1$ ]

**ದಾಂಟುಂಗುಡಿ, ದಾಂಗುಡಿ** (ನಾ). ಉದ್ದವಾದ ಕುಡಿ ; ಚಾಚಿಕೊಂಡಿರುವ ಕುಡಿ : "ದಾಂಗುಡಿಯೆಂದು ದಾಂಟುಂಗುಡಿಯೆಂಬರ್" (ಕಶಸಾ. ೨೭-೫೭೪) ; "ದಾಂಗುಡಿಯೆನ್ನಲ್ ನೆಟ್ಟನೆ ದಾಂಟುಂಗುಡಿ" (ಕವಿಕಂ. ೨೨೮) ; ಕಟಂಜನವನ್ನು ದಾಂಟುಂಗುಡಿಯನ್ನೆಂಬಂತೆ ಕಳೆದುಹೋಗಿ, ತಿರುಗಿ ನಿಂತು, ನಿಟ್ಟುಸಿರ್ಗೊಂಡು, ಹೊರಡಲನುವಾಗುತ್ತಿರುವನಂ (ಚಟ್ಟಅ. ೧೧೨-೧೪). **ದಾಂಗುಡಿ** : "ದಾಂಗುಡಿಯೆಂದು ದಾಂಟುಂಗುಡಿಯೆಂಬರ್" (ಕಶಸಾ. ೨೭-೫೭೪); "ದಾಂಗುಡಿಯೆನ್ನಲ್ ನೆಟ್ಟನೆ ದಾಂಟುಂಗುಡಿ" (ಕವಿಕಂ. ೨೨೮) ; ಸೋರ್ವ ಸೋನೆಯೊಳೆ ದಾಂಗುಡಿಯಿಂದೆಸೆದಿಪ್ಪುರ್ವವು (ಎಇ. XIII, ೩೬೧-೨೯ ; 929) ; ತಳ್ತು ಕಟ್ಟಿದ ಗುಡಿ ರಂಗವಲ್ಲಿಗಳ ದಾಂಗುಡಿಯಂತಿರೆ ಸೂಸೆ ಸೇಸೆಯುಂ ಸುದತಿಯರ್ (ಪಂಪಭಾ. ೫-೧೦೫) ; ಪಸರಿಸೆ ಸುತ್ತಲುಂ ಗುಡಿಯ ದಾಂಗುಡಿ ಮುತ್ತಿನ ರಂಗವಲ್ಲಿ ನಾಲ್ದೆಸೆಯೊಳಮರ್ಕೆವೆತ್ತ ಪಟಹಧ್ವನಿ (ಸುಕುಮಾ. ೧೦-೨೭) : ಗಜಿಕೆಯ ತೊಳಚಿಯ ದಾಂಗುಡಿಯುಂ ಚಿವುಂಟಿ (ರಾಮಾಶ್ವ. ೪೬-೧೭).

[ ದಾಂಟು$_1$ + ಕುಡಿ$_2$; ᑭ 'ದಾವುಕುಡಿ'ಯಿಂದಲೂ ಇದಕ್ಕೆ ನಿಷ್ಪತ್ತಿ ಹೇಳಬಹುದು ]

**ದಾಂಟುಗಳೆ** (ನಾ). ಹಳ್ಳವನ್ನು ದಾಟಲು ಹಾಕಿರುವ ಬಿದಿರಿನ ಕೋಲು, ಗಳು, ಬೊಂಬು ಇತ್ಯಾದಿ : ಕಾಡುಮೇಡುಗಳುಳಿದು ಪಾಡಿಗಳ ಬಳಿವಿಡಿದು ತೋಡುಗಳ ದಾಂಟುಗಳೆಗಳ ತೂಗಿ ನಡೆದು (ಕಾಲೂರ. ೧೫೧-೩೩೦).

[ ದಾಂಟು$_1$ + ಗಳೆ (<ಗಟೆ) ]

**ದಾಂಟುಗೊಡು** (ಕ್ರಿ). ದಾಟಲು ಅವಕಾಶ ಕೊಡು : ಎಙುಗೊಂಡಕ್ಕಲನ ದಾಂಟುಗೊಟ್ಟು ಪಾವಿನ ಪೊಸವಗೆಯೊಂದು ಮಸಕದಿಂ ಕಿಡಿಕಿಡಿವೋಗಿ ಕುಡಿವರಿವ ವಿಷಸೆಯಂ ತಿರ್ದುತ (ರಾಮಾಶ್ವ. ೮೫-೧೮).

[ ದಾಂಟು$_3$ + ಕೊಡು$_1$ ]

**ದಾಂಟುದಾಣ** (ನಾ). ದಾಟುವ ಸ್ಥಳ ; ಹಾಯ್ಗಡ : ದಾಂಟುದಾಣದಾ ಬಿರುವೊನಲ್ ಕಾಲ್ಗಡ್ಡವಾಗಿ ಕಣ್ಗಡ್ಡವಾದುದೊ ಮುಂದೆ ಕಾಳಿಂದಿಯಾ (ಶ್ರೀರಾಮಾ. ೧೩೮-೩೭೮). [ ದಾಂಟು$_1$ + ತಾಣ ]

**ದಾಂಟುಮರ** 'ದಾಂಟುಂವರ' ನೋ.

**ದಾಂಟುವರ, ದಾಂಟುಮರ, ದಾಟುಮರ** (ನಾ). ೧. = ದಾಂಟುಗಳೆ : ತೆಪತ್ತ ಕಾಲ್ಗಳಿಂ ದಾಂಟುವರವಳಿದಂ (ಕಾಲೂರ. ೧೩೭-೨೯೭). **ದಾಂಟುಮರ** : ೧. ಹಿಂದೆ ಪೋಗುವುದೇಕೆ ದಾರಿಯಿದನುಂ ಬಲ್ಲೆನೆಂದಿರ್ದ ದಾಂಟುಮರದಡೆಗೆ ನಡೆತಂದಂ (ಕಾಲೂರ. ೧೩೭-೨೯೫). **ದಾಟುಮರ** : ೨. ನೆಲಬಾವಿಯ ಮೇಲೆ ಅಡ್ಡವಾಗಿ ಹಾಸುವ ಗಳು : ದಾಟುಮರ ಮುರಿದು ಬಾವಿಯಲ್ಲಿ ಬಿದ್ದನು (ರೂಢಿ). [ ದಾಂಟು$_1$ + ಮರ$_1$ ]

**ದಾಂಡಗಾಯಿ** (ನಾ). ಪುಂಡುಗಾರಿಕೆ ; ಪುಂಡಾಟ : ಅಂತೆಯೇ ಪಡದಷ್ಟು ಕೊಟ್ಟ ಅರ್ಜಿ ನಾನಾನ ಪ ಕರಣದ ಬಗ್ಗೆ ಇರದೆ ದಾದಾ ತನ್ನ ಮೇಲೆ ಏರಿ ಬಂದು ದಾಂಡಗಾಯಿ ಮಾಡಿದ ಬಗ್ಗೆ ಇರಬೇಕು ಎಂದು ಅವರಿಗನಿಸಿತ್ತು (ಗ್ರಾಮಾಯ. ೧೧೩). 'ಕಾಟಕಾಯಿ' ಪರಾ.

[ ←ಮರಾ. ದಾಂಡಗಾಈ ]

**ದಾಂಡಪಟೆ** 'ದಾಂಡಪಟ್ಟೆ' ನೋ.

**ದಾಂಡಪಟ್ಟೆ, ದಾಂಡಪಟೆ** (ನಾ). ಒಂದು ಕೈಯ್ಯಲ್ಲಿ ಉದ್ದವಾದ ಕತ್ತಿಯನ್ನೂ ಮತ್ತೊಂದು ಕೈಯಲ್ಲಿ ಕೋಲನ್ನೂ ಹಿಡಿದು ಮಾಡುವ ಕಸರತ್ತು : ಕುಸ್ತಿಯಲ್ಲಿ ಅರ್ಜುನದಾಸನ ಕೈ ಮೇಲಾದರೆ, ದಾಂಡಪಟೆಯಲ್ಲಿ ರಾಜವರ್ಧನನ ಪರಿಶ್ರಮ ಹೆಚ್ಚು (ಪಠಮೇ. ೨). **ದಾಂಡಪಟೆ** : ಚಿಕ್ಕಂದಿನಿಂದ ಗರಡೀ ಸಾಧಕ, ದಾಂಡಪಟೆ, ಕುಸ್ತಿ ಮುಂತಾದ ಶೌರ್ಯದ ಅಭ್ಯಾಸಗಳನ್ನು ಇವರು ಮಾಡುತ್ತಾರೆ (ಕಥಾಗ. ೧೧೪).

[ ←ಮರಾ. ದಾಂಡ್‌ಪಟ್ಟಾ ]

**ದಾಂಡಾಜನಿಕ** (ನಾ). ಮೋಸಗಾರ ; ವಂಚಕ; ಮಾಯಾವಿ: "ದಾಂಡಾಜ[ಜಿ]ನಿಕಃ, ಕಂಪಕಃ, ಕಾಪಟಿಕಃ, ಜಾಲಿಕಃ, ಕೌಸೃತಿಕಃ, ಧೂರ್ತಃ, ವ್ಯಂಸಕಃ, ಮಾಯಾವೀ, ಮಾಯಿಕಃ, ಮಾಯೀ-ಈ ೧೦ ಮಾಯಾವಿ" (ಹಲಾಯು. ೫೮-೧೯೪). [ ಸಂ. ]

**ದಾಂಡಿ** (ನಾ). ಸಮುದ್ರತೀರದಲ್ಲಿ ಗುರುತಿಗಾಗಿ ನೆಟ್ಟ ಕಲ್ಲು: (ಕಿಸಂಗ್ರಾ. ೧೩೫). [ ದೇ.᠋ ತುಳು. ದಾಂಡಿ ]

**ದಾಂಡಿಗ, ಧಾಂಡಿಗ** (ನಾ). ೧. ಗಟ್ಟಿಗ ; ಕಟ್ಟುಮಸ್ತಾದ ಆಳು ; ಶಕ್ತಿವಂತ ; ಕಸುವುಳ್ಳವನು ; "ಬಲವುಳ್ಳ ದೊಡ್ಡ ಆಳು ; ಬಲವಂತ; ಶಕ್ತಿವಾನ" (ಜಾನಕೋ. ೪): ಮನೆಯಲ್ಲಿ ಕರೆಯುವ ಎರಡು ಎಮ್ಮೆಗಳು, ಎರಡು ಹಸುಗಳು, ದುಡಿಯಲು ಇಬ್ಬರು ದಾಂಡಿಗರಾದ ಆಳುಗಳು (ಜವರಿ. ೧೩೨). ೨. ಒರಟು ವ್ಯಕ್ತಿ ; ಅಸಂಸ್ಕೃತ ; ಹುಂಬ : ಕರೆಯದೇ ಮಾಡದೇ ನಾವಿಬ್ಬರು ದಾಂಡಿಗರು ಹೋದರೆ ಕತ್ತು ಹಿಡಿದು ತಳ್ಳಿಯಾರು (ಮಧುಸಂ. ೩೮). **ಧಾಂಡಿಗ** : ೧. ಧಾಂಡಿಗರಾದ ಯುವಕರೂ ಹೆದರುವ ಹುಲಿಗಳನ್ನು ನೀನು ಕೊಲ್ಲಬಲ್ಲೆಯಾ ? (ಈಕಥ. ೧೫) ; ನಾನು ಬಹಳ ಚೆನ್ನಾಗಿ ಬೆಳೆದು ಧಾಂಡಿಗನಾಗಿದ್ದೆ (ಗರುಡಾ. ೮೩); ಅಲ್ಲೊಬ್ಬ ಧಾಂಡಿಗನು ಬಂದವರನ್ನೆಲ್ಲ ಭುಜದ ಮೇಲೆ ಕೂರಿಸಿಕೊಂಡು ನದಿಯನ್ನು ದಾಟಿಸುವನು (ದೇಶಾಂಕ. ೭೫). 'ದಡಿಗ$_2$' ಪರಾ. [ ←ಮರಾ. ದಾಂಡಗಾ ]

**ದಾಂಡಿಗತನ** (ನಾ). ಒರಟುತನ : ಅವನ ದಾಂಡಿಗತನದಿಂದ ಎಲ್ಲರಿಗೂ ಬೇಸರವಾಯಿತು (ರೂಢಿ). [ ದಾಂಡಿಗ + – ತನ ]

**ದಾಂಡು** (ನಾ). ೧. ಚಿಣ್ಣಿಕೋಲಾಟದಲ್ಲಿ ಚಿಣ್ಣಿಯನ್ನು ಹೊಡೆಯಲು ಬಳಸುವ ಕೋಲು. 'ಚಿಣ್ಣಿದಾಂಡು' ಪರಾ. ೨. ಕ್ರಿಕೆಟ್ ಮೊದಲಾದ ಆಟಗಳಲ್ಲಿ ಚೆಂಡನ್ನು ಹೊಡೆಯುವ ಸಾಧನ ; ಬ್ಯಾಟು : ಹೃಷ್ಪಿಂಡ ಚೆಂಡು, ಬೆನ್ನೆಲುಬು ದಾಂಡು (ನಡಬಂ. ೧೧೨-೨೦) ; ಕ್ರಿಕೆಟ್ ಆಟದ ದಾಂಡು ; ಚಪ್ಪಟೆ ದಾಂಡು, ಬ್ಯಾಟು (Bat. ಇಂಕನಿ).

[ ←ಮರಾ. ದಾಂಡ್, ದಾಂಡಾ ]

**ದಾಂಡೆ** (ನಾ). (ಕರಾ) ಒಂದು ಬಗೆಯ ವಿಮಾನ. [ ? ]

**ದಾಂತ$_1$** (ನಾ). ದಕಾರದಲ್ಲಿ ಕೊನೆಗೊಳ್ಳುವ ಶಬ್ದ ; ಕೊನೆಯಲ್ಲಿ ದಕಾರವಿರುವಂತಹುದು : "ದಾಂತಕ್ಕೆ-ಆಬ್ದ (ಅಬ್ದ)-ಜಲಮುಗ್ನೇ (ಮುಳುಗ )" (ಶಮುಧಾ). [ ದ$_1$ + ಅಂತ ]

**ದಾಂತ$_2$** (ಗು). ೧. ನಿಗ್ರಹಗೊಂಡ ; ದಮನವಾದ. ೨. ಪಳಗಿಸಿದ ; ಸಾಧುಗೊಳಿಸಿದ. (ನಾ). ೩. ಇಂದ್ರಿಯನಿಗ್ರಹ : ದಾಂತರಹಿತನ ನಶುಚಿಯುಂ ವಿಭ್ರಾಂತವುಂ . . . ಸಲಹು (ಬಸಪು. ೨೨-೫೦). ೪. ಇಂದ್ರಿಯನಿಗ್ರಹವನ್ನು ಉಳ್ಳವನು : "ದಾಂತಃ, ದಮಿತಃ-ಇಂದ್ರಿಯನಿಗ್ರಹವುಳ್ಳವನಿಗೂ, ನಿಗ್ರಹಿಸಲ್ಪಟ್ಟ ಇಂದ್ರಿಯಕ್ಕು ಪೆಸರು" (ಸಿದ್ಧಾಂತಿ. ೩೪೯). ೫. ತಪಶ್ಚರ್ಯೆಯ ಮೂಲಕ ಇಂದ್ರಿಯಗಳನ್ನು ನಿಗ್ರಹಿಸಿದವನು; ತಪಸ್ಸಿನ ಕ್ಲೇಶವನ್ನು ಸಹಿಸಿಕೊಳ್ಳುವವನು : "ತಪದ ಬಾಧೆಯಂ ಸೈರಿಸುವಾತನಂ ದಾಂತನೆಂಬುದು" (ಹಲಾಯು. ೭೭-೨೪೫) ; "ಸಂದ ತಪಬಾಧೆಯುಂ ಸೈರಿಸುವವಂ ದಾಂತನಕ್ಕು" (ಮಂಗರಾ. ೭೪-೪); ಸಮಜೀವಿಯಾಗಿ ದಾಂತನಾದವನಿಗೆ . . . ಉಪಶಾಂತನಾದಂಥವನಿಗೆ ಕ್ರೋಧವೆಲ್ಲಿಯದು ? (ಬುದ್ಧಪ. ೭೫) : ದಾಂತನಲ್ಲದವನು ಲೋಕನಿಷ್ಠ ; ಬ್ರಹ್ಮನಿಷ್ಠನಲ್ಲ (ಛಾತತ್ತ್ವ. ೫೦೭). [ ಸಂ. ]

**ದಾಂತತೆ** (ನಾ). ಇಂದ್ರಿಯನಿಗ್ರಹ; ಸಂಯಮ: ದಾಂತತೆ ಎಂದರೆ ಮನಸ್ಸು ಮತ್ತು ಇಂದ್ರಿಯಗಳ ಸ್ವಾಭಾವಿಕವಾದ ಪ್ರವೃತ್ತಿಗೆ ತಾನು ಅಧೀನವಾಗದೆ, ತನ್ನ ಇಚ್ಛೆಯಂತೆ ಅವುಗಳನ್ನು ನಿಯಮಿಸುವುದು (ಭಾತತ್ತ್ವ. ಉಪೋದ್ಘಾತ. XIV). [ಸಂ. ದಾಂತತಾ]

**ದಾಂತಿ** (ನಾ). ೧. ಇಂದ್ರಿಯನಿಗ್ರಹ; ಸಂಯಮ: ದಾಂತಿಯೇ ಸುಖಭೋಗ ಮಾಯಾಭ್ರಾಂತಿಯೇ ಮಹಾತ್ಮೆಯಿವು ಋಷಿಸಂತತಿಗೆ ವರ್ತನವಲೇ ವೈದಿಕವಿಧಾನದಲಿ (ಕುವ್ಯಾಅ. ೫-೧೯); ನಿಮಗೆ ಐವತ್ತು ತುಂಬಿತು. ಈಗ ಮಡಿ ಮಂತ್ರ ಶಾಂತಿ ದಾಂತಿಗೆ ತಕ್ಕ ಕಾಲ (ದೀಪಮ. ೬೦-೫). ೨. ತಪಸ್ಸಿನ ಕಷ್ಟಗಳನ್ನು ಸಹಿಸಿಕೊಳ್ಳುವಿಕೆ. [ಸಂ.]

**ದಾಂದಣ** 'ದಣದಣ' ನೋ.

**ದಾಂದಲೆ** 'ಧಾಂದಲೆ' ನೋ.

**ದಾಂಧಣ** (ನಾ). ಒಂದು ಅನುಕರಣ ಶಬ್ದ: ನಟಿಸಿ ರಾಜನ ರಾಜಗೃಹದ ಮೇಲಾಕಾಶಘಟನೆಯೊಳದ್ಭುತವಾಗಿ ಝುಟ ದಾಂಧಣ [ಪಾಠಾಂ. ದಾಂದಳ] ದಿಂದಿಮಿಕು ದಿಮ್ಮೆನೆ ಸುರಪಟಹನಿನಾದ ಕೇಳುತದೆ (ಭರತ. ೩-೧೧೦).

**ದಾಂಧಣರ್** (ನಾ). ಒಂದು ಅನುಕರಣ ಶಬ್ದ: ದಾಂಧಣರೆನುತ ಭೇರಿ ನವಪೊತ್ತು ಕಹಳಾದಿ ದುಂದುಭಿಧ್ವಾನ ದಶದಿಕ್ಕುಗಳನಾವರಿಸ (ಕೃಷ್ಣವಿ. ೨-೩೦).

**ದಾಂಧಲೆ** 'ಧಾಂದಲೆ' ನೋ.

**ದಾಂಧಳನೆ** (ಅ). ಒಂದು ಅನುಕರಣಾವ್ಯಯ: ಮೇರುವಿನ ಮೇಲೆ ಶಂಖಧ್ವನಿಸಹಿತ ಭೇರಿ ದಾಂಧಳನುಲಿವುದು (ಕೃಕವ. ೪-೯-೪).

[ದಾಂಧಳ$_0$ + – ಅನೆ$_1$]

**ದಾಂಪತ್ಯ** (ನಾ). ದಂಪತಿಗಳಾಗಿರುವಿಕೆ; ಗಂಡಹೆಂಡಿರಾಗಿರುವಿಕೆ; ದಂಪತಿಗಳ ಜೀವನ; ಇರವಿನೊಳರಿವಿನ ಮರುಳೇ ನಲವು . . . ನಿವಿಶ್ವಾ ದಾಂಪತ್ಯದೊಳಿದ ಕಾಂಚೆ ಅಸ್ತು ಅಸ್ತು ಸ್ವಸ್ತಿ ಸ್ವಸ್ತಿ ಎಂಬೆ (ಗದೀಶ. ೫-೧೦೯); ಕೇವಲ ಬೌದ್ಧಿಕ ಮೈತ್ರಿಯೇ ಸಾಕಾದಲ್ಲಿ, ಬೇರೆ ಲಿಂಗಗಳು ಜೊತೆಗೂಡಿ ದಾಂಪತ್ಯವನ್ನು ಹೂಡುವುದೇ ಬೇಡ (ದೂರಸ. ೨೯); ದಾಂಪತ್ಯದ ನೊಗ ಕತ್ತಿನಿಂದ ಕಳಚಿ ಬಿತ್ತು (ಯೋಧಪು. ೯೪).

[ಸಂ.]

**ದಾಂಪತ್ಯಜೀವನ** (ನಾ). ಗಂಡಹೆಂಡಿರ ಜೀವನ; ಸಂಸಾರ: ಒಮ್ಮೊಮ್ಮೆ ಈ ಪ್ರಣಯವು ದಾಂಪತ್ಯಜೀವನಕ್ಕಿಂತಲೂ ಬಾಧುರವಾದುದು (ಕನ್ನಜಾ. ೧೧೫). [ದಾಂಪತ್ಯ + ಜೀವನ]

**ದಾಂಪತ್ಯಧರ್ಮ** (ನಾ). ದಾಂಪತ್ಯ ಜೀವನದ ನಡೆವಳಿ,–ಆಚಾರ: ಗೃಹ ಪವಿತ್ರವಾಗಿರಲೆಂದು, ದಾಂಪತ್ಯಧರ್ಮದಲ್ಲಿ ಅನುಮಾನಿಕ ಕಾಲ್ಪನಿಕ ಕಲಂಕ ಕೂಡ ಲೇಶಮಾತ್ರವೂ ಸ್ಪರ್ಶಿಸದೆ ಇರಲೆಂದು, ಸಾಧ್ವಿಯರಾದ ಸ್ತ್ರೀಯರ ಈ ಮಿತಿಮೀರಿದ ಜಾಗರೂಕತೆಯಲ್ಲಿ . . . ಒಂದು ಬಗೆಯ ಮಾಧುರ್ಯ ಉಂಟು (ಇಪ್ಪಕ. ೨೬೧). [ದಾಂಪತ್ಯ + ಧರ್ಮ]

**ದಾಂಪತ್ಯಪ್ರೇಮ** (ನಾ). ದಂಪತಿಗಳಲ್ಲಿರುವ ಪರಸ್ಪರವಾದ ಅನುರಾಗ,–ಪ್ರೀತಿ: ಶುದ್ಧ ದಾಂಪತ್ಯಪ್ರೇಮವೇನೆಂಬುದನ್ನು ನೀನು ಅರಿಯಲಾರದೆ ಹೋದೆ (ಹೊಸಕ್ಷ. ೧೧). [ದಾಂಪತ್ಯ + ಪ್ರೇಮ]

**ದಾಂಪತ್ಯಯೋಗ** (ನಾ). ದಾಂಪತ್ಯದ ಸಂಬಂಧ: ಇಲ್ಲವೋ ಪೆರ್ಗಡಿಯ ಪೆರ್ಮೆಯವರೊಡನೆ, ಪಂಬಲಿಸಲೇಕುದಯ್ ದಾಂಪತ್ಯಯೋಗಮನ್? (ಬದ್ಧಶ್ರ. ೪೭-೧೦೨೪). [ದಾಂಪತ್ಯ + ಯೋಗ]

**ದಾಂಪತ್ಯವಿಚ್ಛೇದನ** (ನಾ). ದಂಪತಿಗಳು ಬೇರ್ಪಡುವಿಕೆ; ಗಂಡ-ಹೆಂಡಿರು ತಮ್ಮ ಪರಸ್ಪರ ಸಂಬಂಧವನ್ನು ರದ್ದುಪಡಿಸಿ ಬೇರೆ ಬೇರೆಯಾಗುವಿಕೆ; ಸೋಡಚೀಟಿ; ಘಟಸ್ಫೋಟ; ಪಾರೀಖತ್ತು (ಉಕ): ದಾಂಪತ್ಯ ವಿಚ್ಛೇದನಕ್ಕೆ ಅವಕಾಶವಿರುವ ವಿಚಾರ ಮುಂತಾದುವುಗಳ ಸಂಬಂಧವಾಗಿ ಹೊಸ ಕಾನೂನು ರಚನೆಯಾಗಿರುವುದರಿಂದ ಮಹಿಳೆಯರ ಸ್ಥಿತಿಯು ಉತ್ತಮವಾಗುವ ಸೂಚನೆಗಳು ತೋರುತ್ತಿವೆ (ಭಾರದ. ೩೯೨).

[ದಾಂಪತ್ಯ + ವಿಚ್ಛೇದನ]

**ದಾಂಪತ್ಯಸಂಬಂಧ** (ನಾ). ದಂಪತಿಗಳ ಸಾಂಸಾರಿಕ ಸಂಬಂಧ: ನಿಮ್ಮ ದಾಂಪತ್ಯಸಂಬಂಧವನ್ನು ವಿಚ್ಛೇದಮಾಡುವುದು ಮಹಾಪಾತಕವೆಂತಲೂ ತಿಳಿದಿದ್ದೇನೆ (ಕಪಾಕುಂ. ೧೨೧). [ದಾಂಪತ್ಯ + ಸಂಬಂಧ]

**ದಾಂಬರು** 'ಡಾಮರು$_2$' ನೋ.

**ದಾಂಭಿಕ** (ಗು). ೧. ಕಪಟದ; ವೇಷಧಾರಿಯಾದ. ೨. ಆಡಂಬರದ; ಜಂಬದ. (ನಾ). ೩. ವೇಷಧಾರಿ; ಕಪಟಿ; ಸೋಗಿನವನು: ದುರ್ವಿನೀತ ಬ್ರಾಹ್ಮಣ ಏಳು ಭಿಕ್ಷಾಜೀವಿ! ...ದಾಂಭಿಕ! (ಬಾಅ. ೮೩); ದುರ್ಗುಣಘರಟ್ಟ ಘಟ್ಟವಾಳಯ್ಯ ದಾಂಭಿಕರಿಗೆ, ನಾಮಧಾರಿಗಳಿಗೆ . . . ಸಿಂಹಸ್ವಪ್ನವಾಗಿ ಉಳಿದಿದ್ದಾನೆ (ಶರತ. ೩೭೫). [ಸಂ.]

**ದಾಕ** 'ಡಾಗು$_1$' ನೋ.

**ದಾಕಲು** 'ದಾಖಲೆ' ನೋ.

**ದಾಕಿಡು** (ಕ್ರಿ). ದೂರದೂರಕ್ಕೆ ಹೆಜ್ಜೆಹಾಕು; ದಾಟುಹೆಜ್ಜೆ ಹಾಕು: ಸಾಕಿಂದು ತಪಸಿಗೆಯ್ದುವರೊಡನೆಮಗಾಸೆಯೇಕೆಂದು ನಾವು ಜಾಱುವೆವು ದಾಕಿಟ್ಟು ಹತ್ತೆಂಟು ಹಜ್ಜೆಯ ತಾವೆಯ್ದಿ ತಾಕಿ ಕೈವಿಡಿದೊಯ್ದರೆಮ್ಮ (ಭರತ. ೭೧-೪೩). [ದಾಕು$_2$ + ಇಡು$_1$]

**ದಾಕು$_1$** 'ಡಾಗು$_1$' ನೋ.

**ದಾಕು$_2$** (ನಾ). ದೊಡ್ಡ ಹೆಜ್ಜೆ; ದಾಟು ಹೆಜ್ಜೆ: ಮೂಲೋಕವ ಚೋಟಕ್ಕುವಂತೆ ದಾಕೊಂದಱೊಳು ಕೋಟವಾರ್ಧಿಯ ಪಾಯ್ದ ನಿರಾಕು ಲೋನ್ನತಿಯಿದರ್ದೊಳಗೆ (ಭರತ. ೭೪-೧೭). 'ದಾಪು' ಪರಾ. [?]

**ದಾಕುದಾರ** 'ಡಾಕ್ಟರು' ನೋ.

**ದಾಕುಹಾಕು** (ಕ್ರಿ). ಮೈಲಿ ಚುಚ್ಚು; ದೇವಿಹಾಕು; ಸಿಡುಬುಹಾಕು: ಮಗುವು ಹುಟ್ಟಿದ ನಾಲ್ಕು ತಿಂಗಳಿನಿಂದ ಹಿಡಿದು ಒಂದು ವರುಷದೊಳಗೆ ಕಡ್ಡಾಯವಾಗಿ, ಮೈಲಿಗೆ, ಕಾಲರಾ . . . ಇತ್ಯಾದಿ ೧೮ ಬೇನೆಗಳಿಗಾಗಿ ದಾಕುಹಾಕುವ ಯೋಜನೆಯು ನಡೆದಿದೆ (ದೇವದೂ. ೨೫೨); ಜನ್ನರನು ದನದ ಮೈಲಿಯ ಬೊಕ್ಕೆಗಳ ಕೀವನ್ನು ತೆಗೆದು ಶಸ್ತ್ರದಿಂದ ಫಿಪ್ಸನ ಚರ್ಮದ ಮೇಲೆ ಗಾಯಮಾಡಿ ರಕ್ತದಲ್ಲಿ ಸೇರಿಸಿದನು. ಇದೇ ಮೊತ್ತ ಮೊದಲು ದಾಕುಹಾಕಿದ ಉದಾಹರಣೆಯು (ಮಾನಸ. ೪).

[ದಾಕು$_1$ (<ಡಾಗು$_1$) + ಹಾಕು (<ಪಾಯ್ಕು$_1$)]

**ದಾಕೋಟಿ** 'ದಹಕೋಟಿ' ನೋ.

**ದಾಕ್ತಾರ** 'ಡಾಕ್ಟರು' ನೋ.

**ದಾಕ್ಷ** (ಗು). ದಕ್ಷನಿಗೆ ಸಂಬಂಧಪಟ್ಟ. [ಸಂ.]

**ದಾಕ್ಷಾಯಣಿ** (ನಾ). ೧. ದಕ್ಷನ ಮಗಳು; ಸತೀದೇವಿ; ಪಾರ್ವತಿ; ಗೌರಿ: "ರುದ್ರಾಣೀ, ಶರ್ವಾಣೀ . . . ದಾಕ್ಷಾಯಣೀ, ಶಿವಾ . . . ಮೇನಕಾತ್ಮಜಾ – ಈ ೨೧ ಗೌರೀದೇವಿಯ ಪೆಸರ್" (ಹಲಾಯು. ೯-೧೫); ದಕ್ಷನುದರದಲಿ ಸಂಭವಿಸಿದಳು ದಾಕ್ಷಾಯಣೀನಾಮದಿಂ (ಲಶಿಚಂ. ೧೩-೨); ನೀರೇಜಾಸನಸೂನು ದಕ್ಷನುಱ ಸದ್ದಾಕ್ಷಾಯಣೀದೇವಿಯಂ ... ಪಡೆದಂ (ಹಮ್ಮೀರ. ೨-೬). ೨. ಇಪ್ಪತ್ತೇಳು ನಕ್ಷತ್ರಗಳಲ್ಲಿ ಯಾವುದಾದರೂ ಒಂದು; P ದಕ್ಷಬ್ರಹ್ಮನಿಗೆ ವೀರಿಣಿ ಎಂಬುವಳಲ್ಲಿ ಹುಟ್ಟಿದ ಅಶ್ವಿನೀ ಮೊದಲಾದ ಇಪ್ಪತ್ತೇಳು ಜನ ನಕ್ಷತ್ರಕನ್ಯೆಯರು. ಇವರೆಲ್ಲಾ ಚಂದ್ರನ ಪತ್ನಿಯರು: "ಅಶ್ವಿನೀ ಮುಂತಾದ ೨೭ ನಕ್ಷತ್ರಗಳೂ ದಾಕ್ಷಾಯಣ್ಯಃ. ದಾಕ್ಷಾಯಣಿಯರೆನಿಸಲ್ಪಡುತ್ತವೆ" (ಸಿದ್ಧಾಂಶಿ. ೩೦).

[ಸಂ. ದಾಕ್ಷಾಯಣೀ]

**ದಾಕ್ಷಾಯಣೀರಮಣ** (ನಾ). ೧. ಶಿವ. ೨. ಚಂದ್ರ: "ಇಂದುಃ, ಚಂದ್ರಃ . . . ವಿಧುಃ, ದಾಕ್ಷಾಯಣೀರಮಣಃ—ಈ ೨೧ ಚಂದ್ರನ ಪೆಸರ್" (ಹಲಾಯು. ೮-೪೨). [ ಸಂ. ]

**ದಾಕ್ಷಾಯ್ಯ** (ನಾ). ರಣಹದ್ದು ; ದೊಡ್ಡಹದ್ದು ; ಗೃಧ್ರ. [ ಸಂ. ]

**ದಾಕ್ಷಿಣಾತ್ಯ** (ಗು). ೧. ದಕ್ಷಿಣಕ್ಕೆ ಸಂಬಂಧಿಸಿದ : ಇದು ದಾಕ್ಷಿಣಾತ್ಯ ಕವಿಮಾರ್ಗಮುದಾರಮುದೀಚ್ಯದುರುವಿಶೇಷಣಯುತಮಪ್ಪುದು (ಕವಿರಾ. ೨-೭೯). (ನಾ). ೨. ದಕ್ಷಿಣ ಭಾರತದಲ್ಲಿ ವಾಸಿಸುವ ಜನ: ವಿಂಧ್ಯ-ಪರ್ವತದ ದಕ್ಷಿಣದಲ್ಲಿರುವ ಪ್ರದೇಶವನ್ನು ದಕ್ಷಿಣಭಾರತವೆಂದು ಪರಿಗಣಿಸಬಹುದು. ಇಲ್ಲಿ ವಾಸಮಾಡುವ ಜನರು ದಾಕ್ಷಿಣಾತ್ಯರು (ಭಾರದ. ೩೯೫) ; ಆರ್ಯಸಂಸ್ಕೃತಿಯ ನಿಜವಾದ ರಕ್ಷಕರು ದಾಕ್ಷಿಣಾತ್ಯರು (ಋಗ್ಭಾರ. ೧೧೦ ಟೀ೨೪). ೩. [ಸಂಗೀತ] ಒಂದು ರಾಗದ ಹೆಸರು : ಕೌಶಿಕಿ, ವೇಳಾವಳಿ . . . ದಾಕ್ಷಿಣಾತ್ಯ [ಪಾಠಾಂ. ದಕ್ಷಿಣಾದಿತ್ಯ] . . . ಶಯ ಸೋದರಿಯೆಂಬ ಮೂವತ್ತುನಾಲ್ಕು ರಾಗಂಗಳೀ ಭಾಷಾಂಗದಿಂದ ಪುಟ್ಟಿದವು (ವಿವೇಕ. ೨೩೩). [ ಸಂ. ]

**ದಾಕ್ಷಿಣಾತ್ಯಕ** (ನಾ). [ಕಾವ್ಯವಿ] ದಕ್ಷಿಣಮಾರ್ಗ : ಮನದೊಳಗಾಗಳುಂ ನಿಜಿಸದಾ ಮುಳಿಸಂ ಗತರಾಗಮೋಹನೊಯ್ಯನೆ ಮುನಿನಾಥನೆಂಬ ವಚನಾಂತರವಿಂತಿದು ದಾಕ್ಷಿಣಾತ್ಯಕಂ (ಕವಿರಾ. ೨-೧೦೭). [ ಸಂ. ]

**ದಾಕ್ಷಿಣಾತ್ಯಪಾಠ** (ನಾ). ದಕ್ಷಿಣ ಭಾರತದಲ್ಲಿ ದೊರೆಯುವ ಪಾಠ : ಮಹಾಭಾರತಕ್ಕೆ ದಾಕ್ಷಿಣಾತ್ಯಪಾಠ, ಔತ್ತರೇಯಪಾಠವೆಂದು ಎರಡು ಪಾಠಗಳಿವೆ (ಭಾರದ. ೯೩). 'ಔತ್ತರೇಯಪಾಠ' ಪರಾ. [ ದಾಕ್ಷಿಣಾತ್ಯ + ಪಾಠ₂ ]

**ದಾಕ್ಷಿಣಾತ್ಯಸಂಗೀತ** (ನಾ). ದಕ್ಷಿಣ ಭಾರತದಲ್ಲಿ ಪ್ರಚುರವಾದ ಸಂಗೀತ; ಕರ್ಣಾಟಕ ಸಂಗೀತ : ಈಚೆಗೆ ದಾಕ್ಷಿಣಾತ್ಯಸಂಗೀತದಲ್ಲಿ ಹೆಚ್ಚಿನ ಪ್ರೋತ್ಸಾಹಗಳು ಅಂಕುರಿಸಿರುವಂತೆ ಕಾಣುತ್ತದೆ (ಸಂಗೀದಂ. ೧೮೩). [ ದಾಕ್ಷಿಣಾತ್ಯ + ಸಂಗೀತ ]

**ಜದಾಕ್ಷಿಣಾತ್ಯೆ** (ನಾ). ೧. ದಕ್ಷಿಣದೇಶದಲ್ಲಿ ವಾಸಿಸುವವಳು ಅಥವಾ ಹುಟ್ಟಿದವಳು. ೨. [ಸಂಗೀತ] ದಕ್ಷಿಣ ಭಾರತದಲ್ಲಿ ಪ್ರಚುರವಾದ ವೃತ್ತಿ,-ಪದ್ಧತಿ: ಮನಾವತಿಯುಂ ದಾಕ್ಷಿಣಾತ್ಯೆಯುಂ ಪಾಂಚಾಲಿಯುಂ ಮಾದ್ರ ಮಾಗಧಿಯುಮೆಂಬ ನಾಲ್ಕುಂ ವೃತ್ತಿಯುಮಂ (ಆಜಿಪು. ೫-೩೦ ವ). [ ಸಂ. ದಾಕ್ಷಿಣಾತ್ಯಾ ]

**ದಾಕ್ಷಿಣ್ಯ** (ಗು). ೧. ದಕ್ಷಿಣೆಗೆ ಸಂಬಂಧಿಸಿದ ; ಉಪಾಯನಕ್ಕೆ ಸೇರಿದ. (ನಾ). ೨. ದಕ್ಷಿಣೆಗೆ ಯೋಗ್ಯನಾದವನು: "ದಕ್ಷಿಣೀಯಃ, ದಕ್ಷಿಣಾರ್ಹಃ, ದಾಕ್ಷಿಣ್ಯಃ -೩ ದಕ್ಷಿಣೆಗೆ ಯೋಗ್ಯನಾದವನು, ಧಾರಾಳವಾಗಿ ಕೊಡತಕ್ಕವನು" (ಸಿದ್ಧಾಂತಿ. ೨೭೯). ೩. ಸಂಕೋಚ; ಭಿಡೆ: "ಬಿಡೆಯಮೆನಲ್ ದಾಕ್ಷಿಣ್ಯಂ" (ಚಕುನಿ. ೨೧೨). ೪. ದಯೆ ; ಅನುಕಂಪ ; ಕರುಣೆ ; ಮರುಕ: ಅರಸುಗಳ್ ತಮಗೆನಿತುಂ ಸಮಚಿತ್ತಮಿಲ್ಲದಿರ್ದೊಡಂ ಸಮ್ಮುಖಕ್ಕೆ ಬಂದ ಪ್ರಾಣಮಾತ್ರಕ್ಕೆ ಪರಾಙ್ಮುಖರಾಗಲಾಗದು ದಾಕ್ಷಿಣ್ಯಂ ಬೇಟ್ಟುಮೆಂಬ ನೀತಿಯುಂಟು (ಪಂಚತಂ. ೩೩-೧೧) ; ಮನೆಯಲ್ಲಿ ಇಟ್ಟುಕೊಂಡು ತೋರಿಸಿದ ಈ ಹೆಚ್ಚಿನ ದಾಕ್ಷಿಣ್ಯಕ್ಕೆ ಪ್ರತಿಯಾಗಿ ಅವನಿಂದ ಹೆಚ್ಚಿನ ಕೆಲಸವನ್ನು ಆದಾಯ ಮಾಡಿದರೆ ಸರಿ ಇಪ್ಪತ. ೩೦೩). ೫. ಜಾಣತನ. ೬. ಸಾಮರ್ಥ್ಯ. ೭. ಇನ್ನೊಬ್ಬರ ಮನಸ್ಸನ್ನು ಅನುಸರಿಸಿ ನಡೆಯುವಿಕೆ ; ಇನ್ನೊಬ್ಬರಿಗೆ ನೋವಾಗದಂತೆ ನಡೆಯುವಿಕೆ ; ಸೌಜನ್ಯ : ಒದವಿದ ದಾಕ್ಷಿಣ್ಯಕ್ಕುಂ ವಿದಗ್ಧವೃತ್ತಿಗಂ . . . ಮೊದಲೆನಿಸಿದ ಸಕಲಗುಣಾಸ್ಪದರಂ ಜಗದೊಳಗೆ ಪಡೆವುದಸದಳಮಲ್ತೆ (ಕಾದಂಪೂ. ೪೦) ; ಕಾಮದಿಂ ಕೋಪದಿಂ ಕೂರ್ಪರ ದಾಕ್ಷಿಣ್ಯಂಗಳಿಂ . . . ದೇವ ನಿಮ್ಮಂ ಸ್ಮರಿಯಿಪ್ಪಂತಿತ್ತು (ರಕ್ನಾಕ. ೭೦) ; ದಾಕ್ಷಿಣ್ಯಕ್ಕೆ ಬಸುರಾಗಿ ಹೆರೋಕೆ ತಾವಿಲ್ಲ (ಗಾದೆ). 'ಮುಖದಾಕ್ಷಿಣ್ಯ' ಪರಾ. ೮. ದಕ್ಷಿಣದೇಶಕ್ಕೆ ಸೇರಿದವನ . [ ಸಂ. ]

**ದಾಕ್ಷಿಣ್ಯಪರ** (ನಾ). ಸೌಜನ್ಯ ಸ್ವಭಾವದವನು ; ಇನ್ನೊಬ್ಬರ ಭಿಡೆ ಮುರವತ್ತಿಗೆ ಒಳಗಾಗುವವನು: ನ್ಯಾಯನಿಷ್ಠುರಿ ದಾಕ್ಷಿಣ್ಯಪರನು ನಾನಲ್ಲ ಲೋಕವಿರೋಧಿ ಶರಣನಾರಿಗಂಜುವನಲ್ಲ (ಬಸವ. ೭೫೩). [ ಸಂ. ]

**ದಾಕ್ಷಿಣ್ಯವಂತ** (ನಾ). ನಮ್ರತೆಯಿಂದ ಕೂಡಿದವನು : ಆತ ತುಂಬಾ ದಾಕ್ಷಿಣ್ಯವಂತ (ರೂಢಿ). [ ದಾಕ್ಷಿಣ್ಯ + – ವಂತ ]

**ದಾಕ್ಷಿಣ್ಯವರ್ತಿ** (ನಾ). ೧. ನಮ್ರತೆಯಿಂದ ವ್ಯವಹರಿಸುವವನು. ೨. ದಕ್ಷಿಣದೇಶದಲ್ಲಿ ವಾಸಿಸುವವನು ; ದಕ್ಷಿಣದೇಶದವನು. ೧, ೨ : ವಿದ್ಯಾಧರನರ್ಗಭೋಜನರನಿಸರೆಲ್ಲರುಂ ದಾಕ್ಷಿಣ್ಯವರ್ತಿಗಳ್ಪ್ರೀಯೆ ಲಂಕಾನಿವಾಸಿಗಳೆನಿಸರು (ಜೈಮಿಭಾ. ೨-೧೦). [ ಸಂ. ದಾಕ್ಷಿಣ್ಯವರ್ತಿನ್ ]

**ದಾಖಲ್** 'ದಾಖಲೆ' ನೋ.

**ದಾಖಲ** 'ದಾಖಲೆ' ನೋ.

**ದಾಖಲಾತಿ, ದಾಖಲಾತು, ದಾಖಲಾತೆ** (ನಾ). ೧. ಕಾಗದಪತ್ರ ; ದಫ್ತರು : ಪಿತೂರಿ ನಡೆಸಿದ್ದಾರೆಂದು ದಾಖಲಾತಿಗಳಿವೆ (ದಾಲತ್. ೧೪೭); ಅವನು ಮಂಗಲಾಂಧನ ದಾಖಲಾತಿ ಇಲಾಖೆಯಲ್ಲಿದ್ದಾನೆ (ಪುನರು. ೩೨೯). ೨. ರುಜುವಾತು. ೩. ಪ್ರವೇಶ ; ಸೇರಿಸುವಿಕೆ : ಶಾಲೆಗೆ ಮಕ್ಕಳನ್ನು ದಾಖಲಾತಿ ಮಾಡಿಸುವರು (ರೂಢಿ). **ದಾಖಲಾತು:** (೬). **ದಾಖಲಾತೆ:** ೧. ಪಾರ್ಲಿಮೆಂಟಿನ ದಾಖಲಾತೆಗಳಲ್ಲಿ ನಾನು ಓದಿದ್ದೇನೆ (ಥೇಮ್ಸ್‌ಗಂ. ೬೦). [ ದಾಖಲ್ (<ದಾಖಲೆ) + – ಆತಿ ]

**ದಾಖಲಾತು** 'ದಾಖಲಾತಿ' ನೋ.

**ದಾಖಲಾತೆ** 'ದಾಖಲಾತಿ' ನೋ.

**ದಾಖಲು** 'ದಾಖಲೆ' ನೋ.

**ದಾಖಲೆ, ದಾಕಲು, ದಾಖಲ್, ದಾಖಲ, ದಾಖಲು** (ನಾ). ೧. ಲೆಕ್ಕಕ್ಕೆ ಸೇರಿದುದು ; ಲೆಕ್ಕಕ್ಕೆ ಸಂದಾಯವಾದುದು : (೬). ೨. ಆಧಾರಪೂರ್ವಕವಾದ ಪ್ರಮಾಣಬದ್ಧವಾದ ಕಾಗದ ಪತ್ರಗಳಲ್ಲಿ ಸೇರಿಸಿದ ಒಕ್ಕಣೆಕೆ,-ನಮೂದು : ಅಗತ್ಯವಾದ ನೂತನ ಅಂಕಿ ಅಂಶಗಳನ್ನೂ ಹೊಸ ದಾಖಲೆಗಳನ್ನೂ ಅಳವಡಿಸಲು ಅವಕಾಶವಿರಬೇಕು (ಶಿಕ್ಷದ. ೩೭೫). ೩. (ಒಂದು ಸಂಗತಿಯನ್ನು ಸ್ಥಾಪಿಸುವುದಕ್ಕೆ ಪೂರಕವಾದ) ಲಿಖಿತ ; ರುಜುವಾತು ; ಪ್ರಮಾಣಬದ್ಧವಾದ ಕಾಗದ,-ಪತ್ರ ; ಸರ್ಕಾರಿ ದಫ್ತರದಲ್ಲಿ ನಮೂದಾದ ಕಾಗದ : ದೇವರಿಗೆ ನಿತ್ಯ ನೈಮಿತ್ತಿಕ ಪೂಜಾ ನಡಯೂ ಬಗ್ಗೆ ತಸದೀಕು ದಾಖಲೆಯು ಮಾಡಿಸಿ (ಎಕ. III, ತಿರುಮ. ೫೭-೩೧ ; 1855) ; ಗ್ರಾಮದ ಸರ್ವೆ ನಂಬರು ಒಂದು ಒಬ್ಬನ ಹೆಸರಿಗೆ ಪಟ್ಟೆಯಿರುತ್ತಾ ದಾಖಲೆಯಿಲ್ಲದೆ ಒಳ ಅನುಭವದಾರರು ಅನೇಕ ಮಂದಿ ಇರುತ್ತಾರೆ (ಭೂಮಿಅ. ೩೭) ; ಆ ಪಾದ್ರಿಯ ಪ್ರದೇಶದಲ್ಲಿ ಅದಕ್ಕೂ ಮೊದಲಿನ ಯಾವ ಕಾಲದ ದಾಖಲೆಗಳನ್ನೂ ಇಡಲಾಗಲಿಲ್ಲ (ಬೆಂಜನ್. ೧೦) ; ತೊರೆಯರು ಈಚೆಗೆ ಆ ಮಾರ್ಗವಾಗಿ ಹೋದ ದಾಖಲೆ ಇಲ್ಲ (ಕಲನೆ. ೨೦೫) ; ತನ್ನ ತಂದೆಯ ಆಸ್ತಿಯನ್ನು ವಿಲೇವಾರಿ ಮಾಡುವ ಹಕ್ಕಿದೆಯೆನ್ನುವುದಕ್ಕೆ ದಾಖಲೆಯೇನೂ ಸಿಕ್ಕಿಲ್ಲವಂತೆ (ಯೋಧಪು. ೩೭). ೪. ಸೇರುವಿಕೆ ; ಹಾಜರಾಗುವಿಕೆ : ಇಲ್ಲಿಗೆ ದಾಖಲೆಯಾದ ದಿನ ಹೇಗಿದ್ದನೋ ಹಾಗೇ ಇದ್ದ (ವೀರಜೋ. ೪). **ದಾಕಲು :** ೩. ವಿಷಯವನ್ನು ಸ್ಪಷ್ಟಪಡಿಸುವಂತಹ ದಾಕಲುಗಳು ಸಿಕ್ಕಿದವು (ರೂಢಿ). **ದಾಖಲ್ :** ೪. ಮೂರು ಗಂಟೆಗೆ ದಾಖಲ್ ಆದನು ತಂಗಿಪ್ಪೂರಿನ ಒಳಗೆ (ಕರ್ನಾಸಂ. ೮೪). **ದಾಖಲ :** ೩. ಮದ್ದಗಿರಿ ಸರಕಾರ

**ದಾಯುಗಲ್ಲು** (ನಾ). ಒಂದು ಊರಿನ ಹೆಸರು ಮತ್ತು ಅಲ್ಲಿ ತಯಾರಾಗುವ ಸೀರೆ : ಗುಜ್ಜರಿ ಸಿಂಗಳ ಗುಲುಗಂಜಿ ಮಡಿಯು ಗಂಗಪುರವು ದಾಯಗಲ್ಲು ಕರಾಳೆಯುತ್ತುಂಗ ವಿಳಾಸ ವಿಭ್ರಾಂತು (ಅಮುಸಾಂ. ೪-೧೨). [ ? ]

**ದಾಯುಗಾಜಿ** (ನಾ). ಅವಕಾಶವನ್ನು ಉಪಯೋಗಿಸಿಕೊಳ್ಳುವವನು ; ಸಮಯಸಾಧಕ; ಸ್ವಾರ್ಥಿ : ದಾಯುಗಾಜಿನ ಶೀಲ ತ್ರಿವಿಧ ಧಾಳಕನ ಭಕ್ತಿ ಶಬರನ ದಯ ಚೋರನ ಲಲ್ಲೆ ಕಳ್ಳಿಯು ಬಲ್ಲತನ ಇವೆಲ್ಲವು ಕಲಿಯು ಮಣಿಯಂತೆ ಅಲ್ಲಿಗಲ್ಲಿಗೆ ದಾಯ (ಬಿರೀಶ್ವ. ೪೨೭-೯). [ ದಾಯ$_1$ + -ಗಾಜಿ ]

**ದಾಯುಗಾಜಿಕೆ** (ನಾ). ಸ್ವಂತಕ್ಕೆ ಮಾಡಿಕೊಳ್ಳುವ ಸಂಪಾದನೆ,–ಗಳಿಕೆ: ಭಕ್ತರು ಕಾಯಕವೆಂದು ದಾಯುಗಾಜಿಕೆಯಲ್ಲಿ ತಂದು ದಾಸೋಹವ ಮಾಡಬಹುದೆ (ಕೂನ್ನಸಂ. ೨೭೩-೧೩). [ ದಾಯಗಾಜಿ + -ಇಕೆ ]

**ದಾಯುಗೆಡಿಸು** 'ದಾಯಂಗಿಡಿಸು' ನೋ.

**ದಾಯುಗೆಡು$_1$** (ಕ್ರಿ). ಸಮತೆಯನ್ನು ಕಳೆದುಕೊಳ್ಳು ; ತೂಕತಪ್ಪು : ಈ ಅಂತರ್ಭೇದದಿಂದ ರಾಜಕಾರ್ಯವು ದಾಯುಗೆಟ್ಟಿತು (ಆರ್ಯಕೀ. ೧೧೪).

[ ದಾಯು$_1$ + ಕೆಡು$_1$ ]

**ದಾಯುಗೆಡು$_2$** (ಕ್ರಿ). ಪಾಲನ್ನು ಕಳೆದುಕೊಳ್ಳು : ದಾಯಾದ್ಯವಿಷಯದಿ ಹಿಂದೆ ಕೆಲಂಬರು ದಾಯುಗೆಟ್ಟವರುಂಟು ಜೀಯ (ನಾಗಕು. ೧೧-೧೦).

[ ದಾಯು$_2$ + ಕೆಡು$_1$ ]

**ದಾಯುಗೊಡು** (ಕ್ರಿ). ದಾನಕೊಡು; ಕಾಣಿಕೆ ನೀಡು; ದಕ್ಷಿಣೆಬಿಡು : ಅವನ್ಗೆ ವಂಶೋತ್ಪತ್ತಿಯಾಗೆ ದಾಯುಗೊಟ್ಟುದುಮದೆಗೂಟುಂಬಿಟ್ಟಾದಿಯು (ಎಕ. X, ಶ್ರೀನಿವಾ. ೭-೧೦ ; ಕು. 780). [ ದಾಯು$_2$ + ಕೊಡು$_1$ ]

**ದಾಯುಗೊಳ್** (ಕ್ರಿ). ವಿಚಾರಮಾಡು ; ಆಲೋಚಿಸು ; ಪರಿಶೀಲಿಸು : ಪ್ರಾಯುದೋರ್ಱಿತು ಮದುವೆಯ ಮಾಡಬೇಕೆಂದು ದಾಯುಗೊಂಡಿರ್ದವು (ಭರತ. ೭೦-೨೮). [ ದಾಯು$_1$ + ಕೊಳ್$_1$ ]

**ದಾಯುದೋಱು** (ಕ್ರಿ). ಮಾರ್ಗವನ್ನು ತೋರಿಸು ; ದಾರಿಯನ್ನು ಕಾಣಿಸು : ತಾಯಿಲ್ಲ ತಂದೆಯಿಲ್ಲಂತ್ಯವಿಲ್ಲಾದಿಯಿಲ್ಲಾಯಾಸವಿನಿತಿಲ್ಲದಭವ ದಾಯುದೋಱಿನಗೆ (ಭರತ. ೪೭-೧). [ ದಾಯು$_1$ + ತೋಱು ]

**ದಾಯುದ್ರಮ್ಮ** (ನಾ). ಒಂದು ಬಗೆಯ ತೆರಿಗೆ (?) : ಪೊಳಲ ಮಣ್ಣಿಯ ದಾನಿಕೆಯುಳ್ಳ [ ದೀಪ ]ಮಂ ದಾಯುದ್ರಮ್ಮದ ಕಿಱುದೆಱೆಗಳುಮಂ ಸರ್ವ್ವಬಾಧಾಪರಿಹಾರಮಾಗೆ ಬಿಟ್ಟು ನಡೆಯಿಸಿದ (ಸೌಇಇ. XX, ೪೭-೩೭; 1076). [ ದಾಯು$_2$ + ದ್ರಮ್ಮ ]

**ದಾಯುನಿರ್ಣಯ** (ನಾ). ಆಸ್ತಿ ವಿಭಾಗದ ತೀರ್ಮಾನ : ವಿವದಿಗಳಾ ದಾಯುನಿರ್ಣಯಕೆ ಯೋಜಿಸುವಂತೆ, ನೀಂ ಜಗದ ಶ್ರೇಯಸ್ಸಿಗುದ್ಯುಗಿಸು (ಮುಂಕುಕ. ೮೦೪). [ ದಾಯು$_2$ + ನಿರ್ಣಯ ]

**ದಾಯುಬೀಳು** (ಕ್ರಿ). ೧. ಗರ ಬೀಳು. ೨. ಅವಕಾಶ ಉಂಟಾಗು ; ಸಮಯ ಉಂಟಾಗು : ದಾಯುಬಿದ್ದಾಗ ಹಾಯುಬೇಕು (ಗಾದೆ).

[ ದಾಯು$_1$ + ಬೀಳು$_1$ (<ಬೀೞ್$_1$) ]

**ದಾಯುಭಾಗ** (ನಾ). ಆಸ್ತಿಯ ಭಾಗ ; ಸಂಪತ್ತಿನ ಭಾಗ: ದಾಯುಭಾಗದ ವಿಷಯದಲ್ಲಿ ಅನೇಕ ವಿವಾದಗಳು ನಡೆದು ಕಡೆಗೆ . . . ರಾಜ್ಯವನ್ನು ಹೊಂದುವ ಸಂದರ್ಭ ಬಂದಿತು (ಭಾಶತ್ತ$_1$. ೯೯); ಈ ಸಿದ್ಧಾಂತದ ಮೇಲೆಯೇ ಸರ್ವರಲ್ಲಿಯೂ ಧರ್ಮ, ಚಾರಿತ್ರ್ಯ, ದಾಯುಭಾಗ ಮುಂತಾದುವುಗಳು ವ್ಯವಸ್ಥಿತವಾಗಿರುವುದು (ಆರ್ಯಧ. ೧೭೨).

[ ದಾಯು$_2$ + ಭಾಗ ]

**ದಾಯುರೆ** (ಗು). ೧. ಪ್ರಾಂತೀಯ. ೨. ಕರಾವಳಿಯಲ್ಲಿ ವಾಸಿಸುವ : ಕೆಲವು ದಾಯುರೆ ಮುಸಲ್ಮಾನ್ ಜಮೀನ್‌ದಾರುಗಳೂ, ವರ್ತಕರೂ ಇದ್ದರು (ಕಲಿವೆ. ೨೦೪).

[ ←ಪಾರ. ದಯಾರ್, ದಾಯುರಾ=ವೃತ್ತ; ಹಿಂ. ದಯಾರ್, ದಿಯಾರಾ ]

**ದಾಯುವಾದಿ** (ನಾ). ಆಸ್ತಿಯ ಭಾಗಕ್ಕಾಗಿ ವಾದ ಮಾಡುವವನು ; ದಾಯಾದಿ ; ನಂಬಬಹುದೇ ದಾಯುವಾದಿಗಳೆಂಬ ಪಾಪಿಗಳೀಸ ಮಾಡರು ತಿಂಬವನೆ ಕೊಲುವಲ್ಲಿ ಕರುಣೆಗಳುಂಟೆ ಭಾವಿಸಲು (ಜೈಶಿರಾ. ೧೮-೩೯) ; ದಾಯುವಾದಿಗಳಿರಿದಡಂ ಯುಲವೊ ಸಂಜಯ ವಿಡಾಯಿಗೆಡುವುದು ರಾಜ್ಯಕಾರ್ಯಗಳ್ (ತುರಂಗ. ೭೩-೬೦).

[ ಸಂ. ದಾಯುವಾದಿನ್ ]

**ದಾಯುವಾದ್ಯ** (ನಾ). = ದಾಯುವಾದಿ : ಸುಡು ತನ್ನ ಪ್ರಾಣವಂ ದಾಯುವಾದ್ಯರ ಕೈಯ ಬಿಡಿಸಿಕೊಂಡಾ ಜೀವವಿದ್ದೇನು ಫಲ (ತುರಂಗ. ೩೪-೦೪).

[ <ಸಂ. ದಾಯಾದ್ಯ ]

**ದಾಯುವಿಭಾಗ** (ನಾ). ೧. ಪಿತ್ರಾರ್ಜಿತವಾದ ಆಸ್ತಿಯಲ್ಲಿಯ ಭಾಗ ಅಥವಾ ಪಾಲು : ವ್ಯವಹಾರ – ಅಷ್ಟಾದಶ ವಿಭಾಗಗಳು, ಸಭಾ . . . ನಿಯೋಗ, ದಾಯುವಿಭಾಗ, ಅನಧ್ಯಯನ, ವರ್ಣಸಂಕರನಿಂದಾ, ಆಪದ್ಧರ್ಮಗಳು (ಭಾರದ. ೬೨). ೨. ಬರಬೇಕಾದ ಸ್ವತ್ತಿನ ಪಾಲು ; ಹಂಚಿಕೆ : ಯುಜ್ಞದ ದಾಯುವಿಭಾಗದಲ್ಲಿ ಪ್ರಮಿಥ್ಯೂಸ್ ಜ್ಯೂಸನ್ನು ವಂಚಿಸಿದ (ಬಧ್ಯಪ್ರ. V, ೬೮೦೮). [ ದಾಯು$_2$ + ವಿಭಾಗ ]

**ದಾಯಾದ** (ನಾ). ೧. ಪಿತ್ರಾರ್ಜಿತವಾದ ಆಸ್ತಿಯಲ್ಲಿ ಭಾಗವನ್ನು ಪಡೆಯುವವನು ; ಪಾಲುಗಾರ ; ಜ್ಞಾತಿ : ಎಮ್ಮ ದಾಯಾದನುಂ ಕೋಪದಿನೆನ್ನೊಳ್ ಕಾದಲೆಂದುಬ್ಬರಿಸಿದ ಸಮರಾಟೋಪದಿಂ ನಿಂದೊಡಂ ಮಾಣ್ಬುದು (ಆದಿಪು. ೧೪-೮೩) ; ಒಡವುಟ್ಟಿದ ಕೌಸ್ತುಭಮಿರ್ಪೆಡೆಗಂ ದಾಯಾದನಪ್ಪನೆನ್ನಗಮೆಂದಂದುಡುಪತಿಕಳೆ ನೆಲಸಿತ್ತೆನೆ ಪೊಡೆಯಲರನ ಕೊರಲ ಪುಲಿಯುಗುರ್ ಕರಮೆಸೆಗುಂ (ಜಗವಿ. ೩-೪೯) ; ಧುರದೊಳ್ ತನ್ನಯ ವೀರರೊಳ್ ಪ್ರಜೆಗಳೊಳ್ ದಾಯಾದರೊಳ್ . . . ಸ್ತ್ರೀಯರೊಳ್ ದೊರೆಗಳ್ಗೆಳ್ಚಱು ಬೇಕಲ್ತೆ (ಸೋಮೇಶ. ೫೭) ; ದಾಯಾದರಿಲ್ಲ ಮಾರ್ಮಲೆವ ಪರಮಂಡಲದ ನಾಯಕರ ಸುಳಿವಿಲ್ಲ ನಿನ್ನಾಳ್ಕೆಗೆಲ್ಲಿಯುಮಪಾಯಮವನಿಯೊಳಿಲ್ಲ (ಕೃಮಿಛಾ. ೨-೫೪). ೨. ಆಸ್ತಿಯ ಉತ್ತರಾಧಿಕಾರಿ ; ಹಕ್ಕುದಾರ. ೩. ಮಗ ; ಪುತ್ರ. ೪. ಸತ್ತ ಬಂಧುಗಳಿಗೆ ಪಿಂಡಾದಿಗಳನ್ನು ನೀಡುವ ಕರ್ಮಗಳನ್ನು ಆಚರಿಸುವಲ್ಲಿ ಭಾಗಿಯಾಗತಕ್ಕ ಬಂಧುವರ್ಗದವನು.

ದಾಯಾದಮಲ್ಲ= ದಾಯಾದಿಗಳಿಗೆ ಭಯಂಕರನಾದವನು,– ಜಟ್ಟಿಯಂತಿರುವವನು ; ಒಂದು ಬಿರುದು : ಶ್ರೀಯುಂ ಕುರುಭೂಭೃದ್ಬಲತೋಯಧಿಯೊಳ್ ಕಡೆದು ಪಡೆದು ಭುಜಮಂದರದಿಂ ದಾಯಾದಮಲ್ಲನೆನಿಸಿದಜೇಯುಂ ಭುಜಬಲವಿಭಾಸಿ ಸಾಹಸಭೀಮಂ (ಗದಾಯು. ೨-೧).

[ ಸಂ. ]

**ದಾಯಾದವಿಷಯ** (ನಾ). ಪಿತ್ರಾರ್ಜಿತವಾದ ಆಸ್ತಿಯ ವಿಷಯ ಸೋದರರ ಮನ ಕದಡಿದವು ದಾಯಾದವಿಷಯದಲಿ (ಕುಬ್ರಾಉ. ೨-೨೭).

[ ದಾಯಾದ + ವಿಷಯ ]

**ದಾಯಾದಿ$_1$** (ನಾ). ೧. ಆಸ್ತಿಯಲ್ಲಿ ಪಾಲನ್ನು ಪಡೆಯುವವನು ; ಅಣ್ಣ ಅಥವಾ ತಮ್ಮ. ೨. ಅಣ್ಣ ತಮ್ಮಂದಿರ ಮಕ್ಕಳು ; ಚಿಕ್ಕಪ್ಪ ದೊಡ್ಡಪ್ಪನ ಮಕ್ಕಳು. ೩. ಒಂದೇ ಕುಟುಂಬಕ್ಕೆ ಸೇರಿದ ಪೀಳಿಗೆಯವರು; ವಂಶಜ: ಜ್ಞಾತಿ: ಇವರಿಗೆ ಕೌರವರೆಂಬ ದಾಯಾದಿಗಳಿದ್ದರು (ನೀತಿಚಿಂ. I, ೯); ದೇಶಪದ್ಧತಿಯಂತೆ ರಾಜ್ಯವು ಹಿರಿಯನಾಗಿದ್ದ ದಾಯಾದಿಯಾರಿಸ್ತೇಯನ ಕೈಸೇರಿತು (ಮಹಸ. ೮೭) ; ಹುಟ್ಟುತ್ತಾ ಅಣ್ಣ–ತಮ್ಮ, ಬೆಳೆದಮೇಲೆ ದಾಯಾದಿ (ಗಾದೆ) ; ಸವತಿ ಸಣ್ಣವಳಲ್ಲ, ದಾಯಾದಿ ಚಿಕ್ಕವನಲ್ಲ (ಗಾದೆ). [ <ಸಂ. ದಾಯಾದ್ಯ ]

**ದಾಯಾದಿ$_2$** (ನಾ). ೧. ಆಸ್ತಿಯ ಹಕ್ಕು ಉಳ್ಳವಳು. ೨. ಮಗಳು.

[ ಸಂ. ದಾಯಾದೀ ]

ದಾಯಾದಿತನ (ನಾ). = ದಾಯಿಗತನ ೧ : ಈ ವಿಷಯದಲ್ಲಿ ನೀವು ದಾಯಾದಿತನವನ್ನು ತೋರತಕ್ಕದ್ದಲ್ಲ (ಭಾಮುಗ. ೭೫).

[ ದಾಯಾದಿ$_1$ + – ತನ ]

ದಾಯಾದ್ಯ (ನಾ). ೧. ಅಣ್ಣ ತಮ್ಮಂದಿರಿಗೆ ಬರಬೇಕಾದ ಪಿತ್ರಾರ್ಜಿತವಾದ ಆಸ್ತಿ; ಆಸ್ತಿಯಲ್ಲಿ ಬರಬೇಕಾದ ಪಾಲು,–ಭಾಗ : ನಮಗೆ ಬರಬೇಕಾದ ದಾಯಾದ್ಯವೇನಂಟೋ, ಅದ ಹಂಚಿಕೊಡುವುದಿಂದು (ಭಾಸನಾ. ೪೧). ೨. ಚಿಕ್ಕಪ್ಪನ ಅಥವಾ ದೊಡ್ಡಪ್ಪನ ಮಗ; ಪಾಲುಗಾರಿಕೆಯುಳ್ಳವನು; ದಾಯಾದಿ: ಮಕ್ಕಳಿಲ್ಲದಿರ್ದ್ದಡೆ ಮಗಳು ಮಗಳ ಮಕ್ಕಳು ದಾಯಾದ್ಯರ ಇಲ್ಲದೆ ನಿಸ್ಸಂತತಿಯಾದವ [ರ]ಲ್ಲವನರಸುಕಾ[ಣಿಕೆ] . . . ಕುಡುವುದು (ಕಇಅ. ೨೬–೩೯–೪೧ ; 1110); ಉದಯದಲೆದ್ದು ಪತ್ರ ಪುಷ್ಪಗಳಿಗೆ ಹೋಗುವ ಅಣ್ಣಗಳು ನೀವು ಕೇಳಿರೊ ನೀವು ಗಿಡದ ವೈರಿಗಳೋ ಗಿಡದ ದಾಯಾದ್ಯರೋ (ವಚಸಂ. ೦೯೦–೩೦ ಅಂಬಿಪ) ; ಹೆಱುವೆನಾ ಮುನ್ನೊಂದು ಗರ್ಭವ ಧರಿಸಿದೆನು . . . ವರುಷವೆರಡಾಯ್ತಿದಱ ಭಾರವ ಧರಿಸಿದೆನು ದಾಯಾದ್ಯರೊಳಗವತರಿಸಿದನು ಮಗನೆನುತ ಮುಖದಿರುಹಿದಳು ಗಾಂಧಾರಿ (ಕುವ್ಯಾಆ. ೯–೪೪) ; ಹೆಂಡತಿಯು ತನ್ನ ದಾಯಾದ್ಯರ ಮನೆಯಲ್ಲಿ ಕಷ್ಟದಿಂದ ಜೀವನ ಸಾಗಿಸುತ್ತಿದ್ದಳು (ನಿಜ್ಯಮ. ೯). ೩. ಬಲತಾಯಿಯ ಮಗ ; ಮಲ ಅಣ್ಣ ಅಥವಾ ಮಲ ತಮ್ಮ : "ಉಪಮಾತಯೆನೆ ಬಲದಾಯೆ ನಿಕ್ಕುಮಾಕೆಗೆ ಪುಟ್ಟಿದಾತ ದಾಯಾದ್ಯನು" (ಮಂಗರಾ. ೯೨–೧೨). [ಸಂ.]

ದಾಯಾಧಿಕಾರ (ನಾ). ಪಿತ್ರಾರ್ಜಿತವಾದ ಆಸ್ತಿಗೆ ಸಂಬಂಧಪಟ್ಟ ಅಧಿಕಾರ ; ಆನುವಂಶಿಕ ಹಕ್ಕು : ಅವಳ ಗಂಡನಿಗೆ ಪ್ರಿಯವೆಂದು ತೋರಬಹುದಾದ ದಾಯಾಧಿಕಾರದ ಬಗೆಗೆ ತನ್ನ ನಿರ್ಧಾರವನ್ನು ಸೂಚಿಸಿದಾಗ, ಅವಳ ಮುಖದಲ್ಲಿ ಮಿಂಚಿದ ಕಾಂತಿಯನ್ನು ಸ್ಪಷ್ಟವಾಗಿ ಗಮನಿಸಿದನು (ಪುಸರು. ೪೬೪). [ ದಾಯ$_2$ + ಅಧಿಕಾರ ]

ದಾಯಾರ್ಧ (ನಾ). ಆಸ್ತಿಯಲ್ಲಿ ಅರ್ಧ ಭಾಗ : ಗೃಹಯುಗ್ಮಂ ನೆಲಸಿರ್ದೊಡೊಂದೆ ಗೃಹದೊಳ್ ದಾಯಾರ್ಧಮಂ . . . ಆಳ್ಗಂ (ಜಾತತಿ. ೯–೯). [ ದಾಯ$_2$ + ಅರ್ಧ ]

ದಾಯಿ 'ದಾದಿ' ನೋ.

ದಾಯಿಗ (ನಾ). ೧.=ದಾಯಾದಿ$_1$ ೨: "ದಾಯಾದರೊಳ್ ದಾಯಿಗಂ" (ಕರ್ಣನಿ. ೫) ; ಅವರ ದಾಯಿಗಂ ಶಾಸ್ತ್ರಂಗಳಂ ಬಲ್ಲೊಂಗಂ ಮಂತ್ರಿಪದವಿಯುಂ ಕೊಟ್ಟುದಂ ಕೇಳ್ದು (ಪದ್ಮರಾ. ೨–೨೫) ; ಕಾಡೊಳ್ ಬೇಡರಂತೆ ತೊಟಲ್ತ ದಾಯಿಗರ ಕಂದಿ ಕುಂದಿದ ಮೊಗಂಗಳಂ ನೋಡುವುದುಂ (ಪಂಪಭಾ. ೭–೩೨ ವ); ಬಲ್ಮೊಗದಿಂದಿರ್ದು ಪದಾರ್ತ್ಥಮಂ ಬಿಸುಟು ತಮುಳ್ಳಾರ್ತ್ಥಮಂ ಬಯ್ಸಿ ಬಂದಿಗೆ ಕಳ್ಳಂಗರಸಿಂಗೆ ದಾಯಿಗರಿಗಂ ಕಟ್ಟೋವತಂ ಮಾಬ್ಬ ಲೋಭಿಗಳೇಂ ಪೋಲ್ವರೆ . . . ರಾಮನಂ (ಕಇಅ. ೭೮–೧೩–೨೬ ; 1088) ; ಕಾಂಚನಮಪ್ಪೊಡೆ ದಾಯಿಗರಿಂದನುನಯದಿಂ ಠಕ್ಕರಿಂದಮುಱುವುದು ಬೇಗಂ (ಧರ್ಮಾಮೃ. ೭–೧೪೫) ; ಜನಪನಾ ದಾಯಿಗನ ಮಱುಜೂಜಿನಲಿ ಗೆಲಿದನು (ತೊರರಾ. ೩–೨–೨೫) ; ಕಾದವರುಂಟು ದಾಯಿಗರ್ ಪಗೆಗಳಗ್ರಜಾನುಜರ್ . . . ಕಂಡೆನಿಲ್ಲ ಕೇಳ್ದಿನಿಲ್ಲೀ ತೆಱನ ದೊರೆವೆತ್ತ ಸೆಣಸಂ (ರಾಮಾಶ್ವ. ೧೬೨–೨). ೨. ಮಗ : "ಪುತ್ರನಲ್ಲಿ ದಾಯಿಗನೆಂಬುದು" (ಮಂಗರಾ. ೧೪೨–೧೮) ೩. ಮಲತಮ್ಮ ಅಥವಾ ಮಲಅಣ್ಣ : (ಹ). ೪. (ಆಲಂ) ಪುಣ್ಯದಲ್ಲಿ ಪಾಲುಗಾರ ; ಪುಣ್ಯಸಾಧಕ ; ಪುಣ್ಯಶಾಲಿ : ಬೀಯ ಮಾಡಿಯ ಲಿಂಗದಲಿ ನಿಜಕಾಯ ನಿಲುವೊಡೆ ನಿತ್ಯರಪ್ಪೊಡೆ ದಾಯಿಗರು ಲಾಲಿಸುವುದೀ ಪ್ರಭುಲಿಂಗ ಲೀಲೆಯನು (ಪ್ರಭುಲೀ. ೦–೧೧).

ದಾಯಿಗದಲ್ಲಳ = (ಶತ್ರುಗಳಾದ) ದಾಯಾದಿಗಳಿಗೆ ಭಯವನ್ನುಂಟುಮಾಡುವವನು ; ಒಂದು ಬಿರುದು : ಸಕಳಗುಣಗಣೋತ್ತುಂಗ ಮಾವನ ಸಿಂಗ ಜಿತವೈರಿಸಂಕುಳ ದಾಯಿಗದಲ್ಲಳಂ ಶ್ರೀಮತ್ ಕಲಿಯಮ್ಮರಸಂ (ಎಇ. XIX, ೧೮೧–೨೧ ; 1046). ದಾಯಿಗಮುರಾರಿ = ಒಂದು ಬಿರುದು : ಗೋತ್ರಪವಿತ್ರಂ ಪರಾಂಗನಾಪುತ್ರಂ ದಾಯಿಗಮುರಾರಿ ವಿನಯೋಪಕಾರಿ (ಎಕ. XII, ತಿಪಟೂ. ೧೦೪–೧೮ ; 1130). [ ದಾಯ$_2$ + – ಇಗ ]

ದಾಯಿಗತನ (ನಾ). ೧. ದಾಯಾದಿಯಾಗಿರುವಿಕೆ : (ಹ). ೨. ದಾಯಾದಿಯ ಸ್ವಭಾವ ; ವೈರ ; ದ್ವೇಷ : ಕಡಂಗಿ ಮಿಗೆ ತಳ್ತಿಱಿಯಲ್ಕೆಂದಾನುರ ಬಂದಿರ್ದರಿದೇಂ ದಾಯಿಗತನಮನೆಮಗವರ್ ತೋಱಿದಪರ್ (ಪಂಪಭಾ. ೧೦–೩) ; ನೀಮೆಲ್ಲಂ ದಾಯಿಗತನಮನಿಲ್ಲಿ ತೋಱಲ್ಕಾಗದು (ಗದಾಯು. ೭–೬೨); ಪೂಣ್ದೆನ್ನೊಳಂ ದಾಯಿಗತನಮನಿವಂ ತೋರ್ಕೆ (ಪಂರಾಮಾ. ೦೨–೭೩). [ ದಾಯಿಗ + – ತನ ]

ದಾಯಿತ (ನಾ). ಆತ್ಮೀಯ ; ಪ್ರೀತಿಪಾತ್ರನಾದವನು ; ಇಷ್ಟಮಿತ್ರ (?) : ದಾಯಿತರಿಂ ಪೆಸರ್ವೆತ್ತ ಪಸಾಯಿತರಿಂ ಸುಭಟ ಚೇಟಕ ಪ್ರಕಟಮಹಾನಾಯಕರಿಂ ನಿರುಪಮಂ ಶೋಭಾಯತಮಾಯ್ತೋಲಗಂ (ಕುಸುಮಾ. ೩–೮೮). 'ದಾಯಿದ' ಪಾಠಾ. [ ? ]

ದಾಯಿತ್ವ (ನಾ). ೧. ಕೊಡಬೇಕಾದುದು. ೨. ಸಾಲ–ಸೋಲ ಮುಂತಾದ ಹಣಕಾಸಿನ ಜವಾಬ್ದಾರಿ,–ಬಾಧ್ಯತೆ : ಭಾರತ ಡೊಮಿನಿಯನ್ನಿನ ಎಲ್ಲ ಅಧಿಕಾರಗಳೂ, ದಾಯಿತ್ವಗಳೂ, ಆಭಾರಗಳೂ . . . ಕ್ರಮವಾಗಿ ಭಾರತ ಸರ್ಕಾರದ ಮತ್ತು ಆಯಾ ರಾಜ್ಯಪಾಲಪ್ರಾಂತಕ್ಕೆ ಸಂವಾದಿಯಾದ ರಾಜ್ಯದ ಅಧಿಕಾರಗಳೂ, ದಾಯಿತ್ವಗಳೂ, ಆಭಾರಗಳೂ ಆಗಿರತಕ್ಕುದು (ಭಾಧಾನ. ೦೬೯). ೩. ಕೊಡುವಿಕೆ ; ನೀಡುವಿಕೆ : ಆ ಸಂಪತ್ತನ್ನು ದೇಶದೇಶಾಂತರಗಳ ಎಲ್ಲರಿಗೂ ದಾನಮಾಡಬೇಕೆಂಬ ಒಮ್ಮೊನೆಯ ದಾಯಿತ್ವಜ್ಞಾನವನ್ನು ಅವರು ಪಡೆದಿದ್ದುದು (ಸಿದಂಧ. I, ೩೩೭). [ ಸಂ. ]

ದಾಯಿದ (ನಾ). = ದಾಯಿತ (?) : ಚಕ್ರವರ್ತಿ ಸ್ವಕೀಯ ರಸನೆಗಶೀವಸ್ವಾದುವಾದ ವಸ್ತುಗಳಂ ಕುಮಾರಾವರೋಧವಧೂವಿಳಾಸಿವರ್ಗಕಂ ದಾಯಿದ ಪಸಾಯಿತರ್ಗಂ ಕಳಿಪುತ್ತುಂ (ಶಾಂತೀಶ. ೦೫–೭೧ ವ).

[ <ದಾಯಾದ್ಯ ? ]

ದಾಯಿದೊಡ (?). (ನಾ). ಒಂದು ಬಗೆಯ ತೆರಿಗೆ (?) : ಶ್ರೀಮನು ಮಹಾ ಮಂಡಳೇಸ್ವರಂ ಬೋ(ಂ)ಮಿದೇವರಸರ್ಗ್ಗೆ ಉರಗುರಕೆ ಕೊಟ್ಟು ದಾಯಿದೊಡ (?) ಸರ್ವ್ವ ನಮಸ್ಯಂ ಮಾಡಿ ಏರಿಂಗಲ್ಲದ ದಕ್ಷಿಣ ದಿಶಾಭಾ[ಗ]ದಲ್ಲಿ ತಾ ಪ್ರತಿಷ್ಠೆ ಮಾಡದ ಹಯಿಮೇಶ್ವರದೇ[ವ]ರಿಗೆ ಬಟ್ಟಕೆಯಿ ಮತ್ತರು ೭ (ಸೌಇಇ. XX, ೧೮೯–೨೦ ; 1208). [ ? ]

ದಾರ$_1$ (ನಾ). ನೂಲು ; ಎಳೆ ; ಸೂತ್ರ : ಮುನ್ನಮೆಂಬ ಬಱಿಕೆಂಬ ಜನೋಕ್ತಿಯೊಳಾಯ್ತು ಸೂಚಿಶಕ್ತಿಗೆ ನೃಪರಾನೆ ದಾರದವೊಲಾದುವು ರಾಜಕುಮಾರರಾನೆಗಳ್ (ಗದಾಯು. ೧–೧೬) ; ಸೂಜಿಯ ಬಱಿಯ ದಾರದಂತೆ (ಧರ್ಮಾಮೃ. ೦೪–೧೦೪) ; ಬಿಡುಮುತ್ತು ಘನೋಪಳದೊಂದು ರೂಪದಿಂ ಸುರಿಯಲನಂತರಂ ಬಱಿಯ ದಾರವೆಟಲ್ದಪುದೆಂಬ ಚೆಲ್ವನಾವರಿಸಿದುವು . . . ವಾರಿಧಾರೆಗಳ್ (ಜಗವಿ. ೪–೩೦) ; ದಾರ ಉರಗನ ಪೆಡೆವಣಿಯ ಗೊಂಡೆಯದ ಕಿಗ್ಗಟ್ಟಿಸೆಯ ಪಶುಪತಿಯ (ಕುವ್ಯಾಕ. ೭–೦೨); ಒಟ್ಟು ಬಟ್ಟೆಮಾಡುವ ಕೆಲಸವನ್ನು ತೆಗೆದುಕೊಂಡರೆ ದಾರದ ಎಳೆ ತೆಗೆಯುವುದೇ ಒಂದು ಭಾಗ (ಹಪ್ರ. ೮) ; ಎಲ್ಲಾ ನಾರುಗಳಿಂದ ಎಳೆಗಳನ್ನು ತೆಗೆದು ದಾರಗಳನ್ನಾಗಿ ಹೊಸೆದು, ದಾರಗಳಿಂದ ಬಟ್ಟೆಯನ್ನು ತಯಾರಿಸಲಾಗುತ್ತದೆ (ಗೃಹವಿ. ೭೨).

[ ?./ತಮಿ. ತಾರ್, ತಾರ ; ತುಳು. ತೆಲು.ದಾರ. / ಪ್ರಾ. ದಾರ = ಕಟೀ ಸೂತ್ರ. / ಸಂ. ದೋರ ]

**ದಾರ್$_2$, ದರ್$_1$, ದೋರ್$_2$** (ನಾ). ಬಾಗಿಲಂ; ದ್ವಾರ: ದರ ದಾರ ಬಾರ ಮುಕ್ಕುಂ ಪರದಾ ದ್ವಾರಕ್ಕೆ ಪೂರ್ವದೊಳ್ ತದ್ಭವಮಾಗಿರೆ (ಶಮದ. ೨೯೬). **ದರ್$_1$** : ಮೇಲಿನ 'ಶಮಂದ' ಪ್ರಯೋಗವನ್ನು ನೋಡಿ. **ದೋರ್$_2$** ] ಬಂದು ಕಾಷ್ಠಾಂಗಾರೆ ದೋರದಿ ಹೊಂದಿಸಿಹ ಹೊಂಗಂಟೆಯನು ಸಾನಂದ ದಲಿ ದನಿಗೆಯ್ಯೆ (ಜೀವಂಜ. ೩-೧೪). [ <ಪ್ರಾ. ದಾರ. / ಸಂ. ದ್ವಾರ:

**ದಾರ್$_3$** (ನಾ). ೧. ಬಿರುಕು; ಸೀಳಂ; ತೂತು; ರಂಧ್ರ. ೨. ಉತ್ತ ಭೂಮಿ. ೩. ಹೆಂಡತಿ; ಪತ್ನಿ; ಭಾರ್ಯೆ: "ದಾರಾಃ, ಕ್ಷೇತ್ರಂ, ಕಳತ್ರಂ . . . ಗೃಹಿಣೀ, ಗೃಹಾಃ – ಈ ೧೩ ಹೆಂಡಿತಿ" (ಹಲಾಯು. ೯೧-೩೪೦); "ದಾರಂ ಕಳತ್ರಂ . . . ಪತ್ನಿ ಮಹಿಳೆಯೆನೆ ಹೆಂಡಿತಿಗೆ ನಾಮಮಕ್ಕುಂ" (ಮಂಗರಾ. ೯೦-೬); ಪ್ರಭುಗಳ ಆಯುರ್ದಾಯ ದಾರಾ ಪುತ್ರಾದಿ ಕ್ಷೇತ್ರಗಳನ್ನು ಅವರು ಸೂಕ್ಷ್ಮವಾಗಿ ಗುಣಿಸಿ ನೋಡಿರಲಿಲ್ಲ (ಹಂತರಾ. ೯೫). 'ದಾರಪರಿಗ್ರಹ' ಪರಾ. [ ಸಂ. ]

**-ದಾರ್$_4$** (ಪ್ರ). ಹೊಂದಿರುವವನು; ಪಡೆದಿರುವವನು ಎಂಬ ಅರ್ಥದಲ್ಲಿ ಸೇರುವ ಒಂದು ತದ್ಧಿತಪ್ರತ್ಯಯ. 'ಅಬ್ಬುದಾರ', 'ಅಮಲ್ದಾರ', 'ಆಡಳಿತದಾರ' ಪರಾ. [ ←ಪಾರ. ಹಿಂ. ಮರಾ. ದಾರ್ ]

**ದಾರಂದ** 'ದಾರವಂದ' ನೋ.

**ದಾರಕ** (ನಾ). ೧. ಬಾಲಕ; ಗಂಡುಮಗು; ಕುಮಾರ; ಹುಡುಗ; ಮಗ: ಸುಂದರ ದಾರ ದಾರಕೋದಾರ ವಿಮೋಹದೊಳ್ ತೊಡರ್ದು ದಾರುಣದುಃಖಮನೆಯ್ದುದಿರ್ಕುಮೋ (ಅಜಪು. ೨-೫೭); ಕಲಿಕನೆಂಬ ಧೂಮಕೇಶಂಗೆ ದಾರಕನಾದಂ ಕಡೆಯೊಳ್ (ಪಂಚತಂತ್ರ. ೬-೩೭); ದಾರಕನಂ ಘನತೇಜಸ್ಸಾರನನಾವೆಂದು ನಲ್ಮೆಯಿಂದೆತ್ತುವನೋ (ಪುಷ್ಪಪು. ೩-೯೩); ನೀರೆಯುಮುರ್ಚಿತ್ರಿನಕ್ಷತೆಯ ದಾರಕನ ಮೇಲೆ ತಳಿದು ಹರಸಿದ ರಾಪಾರವರ್ಷ ಬದುಕೆಂದು (ಜ್ಞಾನಜ. ೩-೧೫೫); ಆಲಯದಿ ದಾರಕರ ಸಂಬಂಧ ಬಹುಳಂ (ವಂಕಾರಾ. ೨-೧೦-೫೦). ೨. ತರುಣ; ಯುವಕ: "ದಾರಕಃ, ತರುಣಃ, ಯುವಾ – ಈ ೩ ಜವ್ವನಿಗಂ" (ಹಲಾಯು. ೮೩-೩೯೯). [ ಸಂ. ]

**ದಾರಕಮಲ್ಲ** (ನಾ). ಬಾಲಕರಲ್ಲಿ ಗಟ್ಟಿಗ; ಬಲಿಷ್ಠನಾದ ಹುಡುಗ: ದಾರಕಮಲ್ಲನೆಲ್ಲಿದನವಮಾನುಪಹೇಳನದೆಲ್ಲಿದಂ ವ್ರಜಾಂಭೋರುಹಮಿತ್ರನೆಲ್ಲಿ ದನನಂತಸಹಾಯನದೆಲ್ಲಿದಂ . . . ಎಲ್ಲಿದನಬ್ಜಲೋಚನಂ (ಜಗವಿ. ೩-೯೦). [ ದಾರಕ + ಮಲ್ಲ ]

**ದಾರಗಟ್ಟು** (ನಾ). ದಾರದಿಂದ ಕಟ್ಟಿರುವಂತಹುದು: ದಡದಡನೆ ಹೋಗಿ, ನಂಜರಾಜಯ್ಯನ ಹಸ್ತಗಳಿಂದ ಆ ಪುಟಕೆಯನ್ನೆಳೆದೀಯುಸಿ ಕೊಂಡು, ತನ್ನ ಕರವಾಳಿಂದ ಮುದ್ರೆಯನ್ನು ದಾರಗಟ್ಟನ್ನು ಗವಸಣಿಕೆ ಯನ್ನು ಅರಿದು ಬಿಸುಟ್ಟು (ಮಂತ್ರಶ. ೦೭-೬). [ ದಾರ್$_1$ + ಕಟ್ಟು$_2$ ]

**ದಾರಗೊಂಡೆ** (ನಾ). ನೂಲಿನಿಂದ ಮಾಡಿದ ಕುಚ್ಚು: (ಶಿ). [ ದಾರ್$_1$ + ಗೊಂಡೆ (<ಕೊಂಡ್ಯ) ]

**ದಾರಣ** (ನಾ). ೧. ಒಡೆಯುವಿಕೆ; ಹರಿಯುವಿಕೆ; ವಿಭಜಿಸುವಿಕೆ. ೨. ತೆರೆಯುವಿಕೆ; ಹೊರಗೆಡಹುವಿಕೆ. 'ಅವದಾರಣ' ಪರಾ. [ಸಂ.]

**ದಾರಣೆ** 'ಧಾರಣೆ$_2$' ನೋ.

**ದಾರಣೆವಾಸಿ** 'ಧಾರಣೆವಾಸಿ' ನೋ.

**ದಾರದ** (ನಾ). ಒಂದು ವಿಧವಾದ ವಿಷ; ಪಾದರಸ; ಇಂಗಲೀಕ; P ಕಾಕೋಲ, ಕಾಲಕೂಟ, ಹಲಾಹಲ, ಸೌರಾಷ್ಟ್ರಿಕ, ಶೌಕ್ಲಿಕೇಯ, ಬ್ರಹ್ಮಪುತ್ರ, ಪ್ರದೀಪನ, ದಾರದ ಮತ್ತು ವತ್ಸನಾಭ ಎಂಬುವು ವಿಷಭೇದಗಳು: "ಬ್ರಹ್ಮಪುತ್ರಃ, ಶೌ(ಕ್ಲಿ)ಲ್ಲಿಕೇಯಃ, ದಾರದಃ . . . ತೀಕ್ಷ್ಣಃ, ವಿಷಂ – ಈ ೯ ವಿಷಂ" (ಹಲಾಯು. ೧೦೭-೨೪೮); "ದಾರದ – ನಂಜು, ವಿಷ" (ಗಂಗಾಮು. ೧೬೫). [ ಸಂ. ]

**ದಾರಪರಿಗ್ರಹ** (ನಾ). ಮದುವೆಯಾಗುವುದಂ: ನವಕುಮಾರನು ವೈಗರಾ ದಿಂದ ಪುನಃ ದಾರಪರಿಗ್ರಹ ಮಾಡಲಿಲ್ಲ (ಕಪಾಕುಂ. ೩೪); ದಾರಪರಿ ಗ್ರಹಕ್ಕೆ ವಿಮುಖರಾದರೂ ತಮ್ಮನ ಮದುವೆಗಾಗಿ ಪ್ರಯಾಸಪಟ್ಟರು (ಧೀಷ್ಮಜ. ೩೭). [ ದಾರ್$_3$ + ಪರಿಗ್ರಹ ]

**ದಾರವ** (ಗು). ಮರದ; ಮರದಿಂದ ಮಾಡಿದ. [ ಸಂ. ]

**ದಾರವಂದ, ದರವಂದ, ದಾರಂದ** (ನಾ). ೧. ಬಾಗಿಲ ಚೌಕಟ್ಟು; ಬಾಗಿಲುವಾಡ: ಅಗಲಕ್ಕಿರ್ಮಡಿ ನೀಳವಾಗೆ ತರುಗಳ್ ಬೇಜ್ಜಿಲ್ಲ ದೊಂದಾಗೆ ಮಾಡುಗೆ ನೇರ್ಪಟ್ಟಿರೆ ದಾರವಂದಮನದರ್ಕಾದೊಡೆಯುಂ ಮಾಟಿಸಿ ಮಾ ಜಿ ಗ ಜಾ ರೂ ಢ ಮ ನ ನ್ನ ಮಂ ನಿಜಗೃಹದ್ವಾರಾಂತರೋ ದ್ದೇಶಮಂ ಪುಗುವಾಗಲ್ (ಲೋಕೋಪ. ೩-೩೨); ಒಂಬತ್ತು ಬಾಗಿಲಿಗೆ ಕದವನಿಕ್ಕಿ ಒಂದು ಬಾಗಿಲ ಅಗುಳಿ ದಾರವಂದವನಿಕ್ಕಿ ಬಲಿಯಲು ತಿರುಗು ವುದಕ್ಕೆ ತಾವು ಕಾಣದೆ (ಲಿಂಗವ. ೪. ೭೩-೭೩); ಮಣಿದಾರವಂದವುಂ ಒಡಿದಣಿಮಿಕ್ಷಿಸುತ್ತುಮೆಲ್ಲರ ಸುಮ್ಮನೆ ಯಮ್ಮಗ್ರಣಿಯನ್ನುಂ ಬಾರನೆನು ತ್ತೆಣಸುತ್ತೆಸೆದಿರ್ದಳ್ (ಉದ್ಭಟ. ೧೧-೫೫); ಸುಪುತ್ರ ಮಾಕಯ್ಯನು ಮಾಡಿಸಿದ ದೇವರ ಓಲಗ ಜಾಳಾಂಧರ ದಾರವಂದ (ಎಕ. XII, ಚಿಕ್ಕನಾ. ೨೫-೬; 1312 ?) ವಿಳಸಿತ ಮಹಾಮರಕತದ ದಾರವಂದವುಂ ತೊಳಪ ವೈಡೂರ್ಯಗಳುಂ ನಾಡೆ ಕಂಗೊಳಿಸೆ ಮೆಚ್ಚಿದುದು (ಸಿದ್ಧೇಪು. ೦-೩೧). ೨. ಸಾಗವಂದಿಗೆ: ಗೋಮೇಧಿಕದ ದಾರವಂದದಿಂ, ಪವಳದ ಭ್ರಕ್ತಿಯಿಂ, ಮರಕತದೊಂದು ಕಳಸದಿಂ ತಾರಗೆವಟ್ಟ ಮುಟ್ಟಿ ನಿಗುರ್ದು ಸೈಮನಾಗರಂ ಬೋಲ್ . . . ಕಣ್ಗೆಡ್ಡವಾಗಿ ರಂಜಕುಂ (ರಾಮಾಶ್ವ. ೫೪-೨೨); ಚಪ್ಪಲನ್ನು ಸೂರಿಗೆ ಸಿಕ್ಕಿಸಿ ಅಥವಾ ಬಾಗಿಲ ದಾರವಂದದ ಮೇಲೆ ಇರಿಸಬಾರದು (ಬಿಣ್ಣಮಾ. ೧೪). **ದರವಂದ** : ೧. ಕೊರುವರಿ ಯೆಪತ್ತು ಕಂಭ(ಂ)ಕ್ಕೆ ಎರಡು ದರವಂದಕ್ಕಂ ಕೊಟ್ಟ ಗದ್ಯಾಣ ಮೂವತ್ತು (ಸೌಇಇ. XV, ೫೩೩-೬; 1076). **ದಾರಂದ** : ೧. ಬಾಗಿಲಿನ ದಾರಂದಗಳು ಗಡಚು, ಅದರಲ್ಲಿ ಶಂಖ, ಚಕ್ರ, ಗದಾಪದ್ಮಗಳೂ, ಗಿಳಿ, ನವಿಲು, ಇತ್ಯಾದಿ ಬಡಗಿಯ ಕಲಾಕೌಶಲ್ಯಗಳೂ ಇವೆ (ಕೃಹಿಕಾ. ೦೯); ಬಾಗಿಲಿನ ದಾರಂದ ಕ್ಕೊರಗಿ ಕೆಲಸದಾಳು ಸೋನ್ಯಾ ನಿಂತಿದ್ದ (ವಾತ್ಸಲ್ಯ. ೮೩); ಕೋಣೆಯ ಬಾಗಿಲಿನ ದಾರಂದಕ್ಕೊರಗಿ ಸುಮಿತ್ರ ನಿಂತಿದ್ದಳು (ಅನುರ. ೨೫); ಮನೆ ಬಾಗಿಲಿನ ದಾರಂದ ಹಣೆಗೆ ಬಡಿದುದೂ ಉಂಟು (ಮರಮು. ೧೦೪). [ <ಸಂ. ದ್ವಾರಬಂಧ ]

**ದಾರವಟ್ಟ, ದ್ವಾರವಟ್ಟ** (ನಾ). ೧. ಹೆಬ್ಬಾಗಿಲು; ಗೋಪುರ; ಪುರದ್ವಾರ: "ಗೋಪುರಮಾ ಪುರದ್ವಾರಮೆನೆ ದಾರವಟ್ಟ [ಪಾಠಾಂ. ದಾರವಟ]ಮಕ್ಕು" (ಮಂಗರಾ. ೫೭-೪); ಪ್ರಣವ ಪಂಚಾಕ್ಷರಿಯಗುಳಿ ದಾರವಟ್ಟ[ಪಾಠಾಂ. ಗುಡಿಯ ದ್ವಾರವಾಟ, ದ್ವಾರವಟ್ಟ]ವೊಪ್ಪುತ್ತಿರೆ (ಪದ್ಮವ. ೪. ೧೪೯-೩೪೦); ಮರದ ಕೊಂಬಿನೊಳ್ ಬರೆದು ಕಟ್ಟಿದ ಕಪ್ಪಡಮುಮಿರ್ದಪ್ಪುದೆಂದು ಪಿತೃವನಪಾಳಕಂ ರ ಪಾ ಳ ಕು ಂ ಡ ಳ ಂ ದಾರವಟ್ಟಕ್ಕೆ ಬಂದು (ಅರ್ಥನೇ. ೫-೪೦ ವ); ವತ್ಸಲೋಪಕ್ಕೆ ಈಶ್ವರ – ಈಸರ . . . ದ್ವಾರವಟ್ಟ – ದಾರವಟ್ಟ (ಶಮದ. ೨೮೧ ಪ್ರಯೋ); ವರುಣ ಸೂನು ಜಯಂತ ನಳಕೂಬರರು ಸಮಯುವನೊಮ್ಮೆ ಕಾಣದೆ ಮರುಪ ಪೋಲೈಸುವರು ಸೌಧದ ದಾ ರ ವ ಟ್ಟ ದ ಲಿ (ಕುಮಾರ. ೮-೯); ಕಳಿದು ಹೊಕ್ಕರು ಹೊಳೆವ ವಜ್ರೋಪಲ ಕವಾಟದ ದಾರವಟ್ಟಂಗಳನು (ನಿಧಾಗ. ೩-೩-೭). ೨. ಹೊಸ್ತಿಲು: (ಶಿ). ೩. ಕೈಸಾಲೆ; ಮೊಗಸಾಲೆ: "ಪ್ರಘಾಣಃ, ಪ್ರಘಣಃ, ಅಲಿಂದಃ–ಈ ೩ ಹನ್ನೆರಡು ಕಂಬದ ಕಡೆಯ ದಾರವಟ್ಟದ ಪೆಸರು" (ನಾಚಿರಾ. ೦೦೪); ಮಾಜಿಜು ತಟ್ಟೆಯ ನಡುವೆ ಒಂದು ಕಂಭವ ನೆಟ್ಟು ಎಂಬತ್ತುನಾಲ್ಕು ಲಕ್ಷ ದಾರವಟ್ಟವ ಕಟ್ಟಿ ಅದಜ ಮೇಲೆ ನಿಂದಾಡುತ್ತಿರಲಾಗಿ ನಡುವಣ ಕಂಭ ಮುರಿದು ಬೀಳುತ್ತಿರಲಾಗಿ

(ಮೋಳಿಮಾ. ೨೫೭-೮೦೮). ದ್ವಾರವಟ್ಟ: ಮೇಲಿನ ಚನ್ನವ. ಕ.೧೪೯-೩೪೦ ಪ್ರಯೋಗದ ಪಾಠಾಂತರವನ್ನು ನೋಡಿ ; ಕನಕಮಯ ಚಿತ್ರಗೆಲಸದ ದ್ವಾರವಟ್ಟಮಂ ಮಿನುಗುತಿಹ ರತ್ನ ಕೀಲಿತ ಕಳಶದುಪ್ಪರಿಗೆ ಮನ ಮನೋಹರ ವಿಶಾಲಂಬಡೆದು ರಾಜಿಸಲು (ಗುರುಜಾ. ೮-೪೩) ; ಶಶಿವದನೆ ಯೋರ್ವಳೊಡಲಿತ್ತು ಜೊನ್ನಕೆ ದ್ವಾರವಟ್ಟದೊಳು ನಿಂದಿರ್ದಳು (ರಾಘಜ. ೭-೪೫) ; ದ್ವಾರವಟ್ಟದ ಮುಂದೆ ನಿಂತ ವರಪ್ರಭು ಸಿದ್ಧರಾಮರ ಬರವ ಕಂಡು (ಸಿದ್ಧಪು. ೨೮-೮೪) ; ಆ ಪುರದ ದ್ವಾರವಟ್ಟದ ಮುಂದೆ ಶಾಸನ ದೊಳು ಕಲ್ಯಾಣದ ಮಹಾತ್ಮಯನು . . . ಬರೆದಿಡಲು (ಕೂನ್ನಸಂ. ೮೩-೦೭). [ <ಸಂ. ದ್ವಾರವಟ್ಟ./ಮರಾ. ದಾರವಟಾ ]

**ದಾರವಟ್ಟಗ** (ನಾ). ಬಾಗಿಲನ್ನು ಕಾಯುವವನು ; ದ್ವಾರಪಾಲಕ: ಪಂಡಿತೆ ಪಟ್ಟಿಸಿ ಪುಗುವುದಂ ದಾರವಟ್ಟಗಂ ದಟ್ಟಿಸಿ ಕೊರಳಂ ಪಿಡಿದು ನೂಂಕೆ (ಪುಣ್ಯಾಸ್ರ. ೫-೨೮ ವ). [ ದಾರವಟ್ಟ + – ಗ₂ ]

**ದಾರವಟ್ಟಲು** 'ದಾರೆವಟ್ಟಲ್' ನೋ.

**ದಾರವಾಡ** (ನಾ). ಬಾಗಿಲು ; ದ್ವಾರ : ಎಲುವಿನ ತೊಲೆಗಳು . . . ಹುಳುವಿನ ಡೋಣಿಗಳು ಜಂತಿನ ಬಣಬೆಗಳು ಇಂತಪ್ಪ ಗೃಹಕ್ಕೆ ಎಂಟು ರವಕ್ಕಿಗಳು ಬಾಯಿ ಎಂಬುದೇ ಒಂದು ದೊಡ್ಡ ದಾರವಾಡವು (ವಚಶಾ. I, ೨೫೧-೨೮). [ ←ಪಾರ. ದರ್‌ವಾಜಹ್ ; ಹಿಂ. ಮರಾ. ದರ್‌ವಾಜಾ ]

**ದಾರಸಂಗ್ರಹ** (ನಾ).=ದಾರಪರಿಗ್ರಹ : ಅಂತಾಗಿ ದಾರಸಂಗ್ರಹ ಪರ್ಣ ಶಾಲೆಗಳನಂತೊಲ್ಲದಚಿರಕಾಲದೊಳಳಿವ ಕಾಯಮಿದಕೆಂತಿದಿರ್ದೋಡೇನೆಂದು ತಲೆಗೆ ತಟಗೆಲೆವಿಡಿದುತಾಂ ಪೊತ್ತುಗಳೆವನು (ಜೈಮಿಭಾ. ೩೨-೩೦). [ ದಾರ₃ + ಸಂಗ್ರಹ ]

**ದಾರಾಢ್ಯ** (ನಾ). ಗಡುಸುತನ; ಗಟ್ಟಿತನ: ತನ್ನ ಅಣ್ಣನಿಗಿರುವ ದಾರಾಢ್ಯ ದಲ್ಲಿ ಅರ್ಧ ಪಾಲಷ್ಟೂ ಇವನಿಗೆ ಇಲ್ಲ (ರೂಢಿ). [ <ಸಂ. ದಾರ್ಢ್ಯ ]

**ದಾರಿ** (ನಾ). ೧. ಹಾದಿ ; ಬಟ್ಟೆ; ಮಾರ್ಗ: ನರಕದ ದಾರಿ ಮಹಾನಿಷ್ಠುರ ದುಃಖದ ಬಿತ್ತು ಪುಣ್ಯದ ಕ್ಷಯಮೆಳಪಿಂಗಿರಲೆಡೆ ಕೊಲೆಯು ತವರ್ಮನೆ (ಧರ್ಮಾಮೃ. ೧೨-೨೩೩ ಅಡಿಟಿ); ಆನೆಯೂ ಆ ದಾರಿಯಲ್ಲಿ ಹೋಯಿತ್ತೆಂದಡೆ ಆಡೂ ಆ ದಾರಿಯಲ್ಲಿ ಹೋಯಿತ್ತೆನ್ನಬಹುದೆ (ಬಸವ. ೩೨೮) ; ಹೋಗದ ಊರಿನ ಬಾರದ ದಾರಿಯ ಕಂಡು ಸುಖಿಯಾದೆನಯ್ಯ (ಆದಯ. ೪೧-೧೦೭); ದಾರಿ ವ್ಯತ್ಯಯವ ನುಂಗಿ ನಗುತ್ತಿದ್ದಿತ್ತು (ಅವದಂ. ೨೬-೧೧೧) ; ದಾರಿ ಯೊಳಿಡುಕುಟಿಯೊಳೋಣಿಯೊಳಾರವೆಗಳ ತಳದೊಳಂಗಡಿಗಳೊಳ್ . . . ಬೇರೂಱಿತು ಜಾರರನುಭವಂ ಕಳ್ತಲೆಯೊಳ್ (ಗಿರಿಕ. ೪-೮೩) ; ಆ ಬ್ರಹ್ಮ ಪುರಿಯ ಪಡುವಲು ದಾರಿಯಿಂ (ಎಇ. XIX. ೨೫-೫೩ ; 1245); ಸಾರತರ ಸುಕೃತವನು ಸಂಚಿಸಿ ಧೀರರೈದುವ ಸತ್ಯಲೋಕದ ದಾರಿಯೆಂಬಂದದಲಿ ಗಂಗೆಯ ಧಾರೆ ಮೆಱೆದಿಹುದು (ಕುಮಾವ್ಯಾಅ. ೭-೩೩) ; ದಾರಿ ಯಾವುದಯ್ಯ ವೈಕುಂಠಕ್ಕೆ ಹಾದಿ ತೋಱಿಸಯ್ಯ (ಪುರಂದ. ೨-೧೩೭ ಪಲ್ಲವಿ) ; ಊರಿಂಗೆ ದಾರಿಯನು ಯಾರು ತೋಱಿದರೇನು (ಸರ್ವಜ್ಞ. ೩೮); ಕನ್ನಡವೇ ತಾಯಿ ಕನ್ನಡವೇ ತಂದೆ ಕನ್ನಡವೇ ದಾರಿ ಮುಂದೆ (ಇಂಚಾಪ. ೮೦-೮೭) ; ಬಂದ ದಾರಿಗೆ ಸುಂಕವಿಲ್ಲ (ಗಾದೆ). ೨. ರೀತಿ; ಕ್ರಮ; ಉಪಾಯ: ಹಾಗಾದರೆ ಈ ಪಾಶದಿಂದ ಮುಕ್ತವಾಗುವ ದಾರಿಯಿಲ್ಲವೇ ? (ಧರ್ಮಸಾ. ೧೩೨). ೩. ನಡತೆ ; ನೀತಿ; ಶೀಲ ; ಆಚಾರ : ಕೆಟ್ಟ ಸಹವಾಸದಿಂದ ಅವನು ದಾರಿಯನ್ನು ತಪ್ಪಿದ (ರೂಢಿ); ಆ ಹುಡುಗನ ದಾರಿಯೇ ಸರಿಯಿಲ್ಲ (ರೂಢಿ). 'ದಾರಿದಪ್ಪು', 'ದಾರಿಬಿಡು' ಪರಾ. ೪. (ಆಲಂ) ಬರುವಿಕೆಯ ಅಥವಾ ಆಗಮನದ ಸಮಯ. 'ದಾರಿಕಾಯು' ಪರಾ. ೫. (?) : ಕ್ಷೀರಾಬ್ಧಿಯ ನೀರಲ್ಲದೆ ಧೀರನ ಮಜ್ಜನಕೆ ಪೆಱವು ನೀರ್ ತಗವೆಂದಾ ವಾರಾಶಿವರಂ ಸುರಜನ ದಾರಿ ಮನೋಹಾರಿ ನೀಳ್ದುವೆರಡುಂ ಕೆಲದೊಳ್ (ಆದಿಪು. ೭-೮೨).

ದಾರಿ ಗುಂಟ, ದಾರಿಯ ಗುಂಟ = ಹಾದಿಯುದ್ದಕ್ಕೂ : ದಾರಿಗುಂಟ ನಡೆಯುವುದು ನಿನ್ನ ಕೆಲಸವಲ್ಲವೇ ? (ಪರಪ. ೨೮) ; ದಾರಿಯ ಗುಂಟ ದೀಪವಾಗಬೇಕು (ಅಪನಾ. ೭). ದಾರಿಗೆ ತರು = ಒಳ್ಳೆಯ ನಡತೆಯನ್ನು ಕಲಿಸು ; ಪಳಗಿಸು : ಕೆಡುತ್ತಿರುವವನನ್ನು ದಾರಿಗೆ ತರಬೇಕಾಗಿದೆ (ರೂಢಿ). ದಾರಿಗೆ ಬರು = ಸರಿಯಾದ ರೀತಿಯನ್ನು ಅನುಸರಿಸು : ಆ ಮೂರ್ಖ ದಾರಿಗೆ ಬರಲಿಲ್ಲ (ವಚಭಾ. ೨೬೨). ದಾರಿಗೆ ಹಚ್ಚು = ವ್ಯವಸ್ಥೆಯನ್ನು ಉಂಟು ಮಾಡು ; ಏರ್ಪಾಟುಮಾಡು : ನಾನವನಿಗೆ ನೀರು ಕುಡಿಯುವ ಪಾತ್ರೆ, ಒಂದಿಷ್ಟು ಫರಾಳ, ಹಾಸಿಗೆ, ಹೊದಿಕೆ ಕೊಟ್ಟು ದಾರಿಗೆ ಹಚ್ಚಿದ (ಸ್ವಕೃತಿ. ೨೬೪). ದಾರಿ ತಪ್ಪಿಸು = ಮಾರ್ಗ ತಪ್ಪುವಂತೆ ಮಾಡು ; ಕೆಟ್ಟ ದಾರಿ ಹಿಡಿಯುವಂತೆ ಮಾಡು: ಅವನಿಗೆ ದಾರಿ ತಪ್ಪಿಸುವಂತಹ ಸ್ನೇಹಿತರೇ ಹೆಚ್ಚು ಮಂದಿ (ರೂಢಿ). ದಾರಿಯ ತೆಗೆ = ಹಾದಿಯನ್ನು ಮಾಡಿಕೊಳ್ಳು ; ಮಾರ್ಗವನ್ನು ತಿಳಿ : ಬಗಿದು ಹೊಕ್ಕರು ಮೇಳಗಳನು ಮಿಂಚುಗಳ ಕಂಬೆಳಗಿನಲಿ ದಾರಿಯ ತೆಗೆತೆಗೆದು ಸಾರಿದರು (ಕುಮಾವ್ಯಾಅ. ೯-೨೪). ದಾರಿಯ ದೀಪ = ಹಾದಿಯ ಬೆಳಕು ; ಮಾರ್ಗದರ್ಶನವನ್ನುಂಟುಮಾಡುವ ಪ್ರಭೆ: ಅವರು ದಾರಿಯ ದೀಪವಾದರು ಬಾಳಿಗೆ (ಇಂಚಾಪ. ೩-೫). [ ದೇ.೩ ತಮಿ. ಆತರ್, ತಾರಿ, ತಾರೈ; ತುಳು. ತೆಲು. ದಾರಿ ]

**ದಾರಿಕ** (ನಾ). ಹಾದಿಯಲ್ಲಿ ಹೋಗುವವನು; "ದಾರಿಗ, ದಾರಿಹೋಕ" (ಜಾನಕೋ. ೪). [ ದಾರಿ + – ಕ₃ ]

**ದಾರಿಕಟ್ಟು** (ಕ್ರಿ). ಹಾದಿಗೆ ಅಡ್ಡ ಬರು; ಅಡ್ಡಗಟ್ಟು; ಗಸ್ತಿಯಲ್ಲಿ ಬಂದು ತರುಬು : ಹಠಾತ್ತಾಗಿ ಕಳ್ಳರು ಬಂದು ದಾರಿಕಟ್ಟಿ ಮೇಲೆ ಬಿದ್ದು . . . ಕುಳಿತಿದ್ದ ಸುಂದರಾಂಗಿಯನ್ನು ಹೊರಕ್ಕೆ ಎಳೆದರು (ಛಾರವೀ. ೨). [ ದಾರಿ + ಕಟ್ಟು₁ ]

**ದಾರಿಕಾಯು** (ಕ್ರಿ). (ಆಲಂ) (ಯಾವುದಾದರೂ ವಸ್ತು ಅಥವಾ ಯಾರಾದರೊಬ್ಬರ ಬರವನ್ನು) ಎದುರುನೋಡು,-ನಿರೀಕ್ಷಿಸು ; ಹಾದಿನೋಡು : ಎತ್ತಿನ ಬಂಡಿಯಿಳಿದು, ಬಸ್ಸಿನ ದಾರಿಕಾಯ್ದು, ಕಾರಿನಲ್ಲಿ ತೂರಿ, ಹಡಗ ಬಿಟ್ಟು ವಿಮಾನದಲಿ ಹಾರಿ ಗೋಲಗಳ ಮೇಲೆ ದಾಳಿಮಾಡಿದ್ದೇವೆ (ಸಿಂಮು. ೬೧-೨೮); ಅವರೆಲ್ಲ ಗಪ್‌ಚಿಪ್ ಉಪಹಾರ ಮಾಡಿ ಬೇಗರ ದಾರಿ ಕಾಯುತ್ತಾ ಕುಳಿತರು (ಸ್ವಕೃತಿ. ೨೫). [ ದಾರಿ + ಕಾಯು₁ (<ಕಾ₁) ]

**ದಾರಿಕಾರ** 'ದಾರಿಕಾಱ' ನೋ.

**ದಾರಿಕಾಱ, ದಾರಿಕಾರ, ದಾರಿಗಾರ** (ನಾ). ಹಾದಿಯಲ್ಲಿ ಹೋಗುವ ವನು ; ಪಯಣಿಗ ; ಪಥಿಕ : ಊರಿಗೆಯ್ದಿದ ಮಾರಿ ಬೇರಸಟ್ಟಿಯ ಹೊಯ್ದು ದಾರಿಕಾಱರ ಗಾದೆಯಂತೆ (ಭರಪ. ೪೮-೯೪). **ದಾರಿಕಾರ:** ದಾರಿಕಾರರ ಹಾಗೆ, ನೀರಡಿಸಿ ಬೇಸಿಗೆಯ ನಡುಹಗಲಿನಲ್ಲಿ ನಡೆದು (ಸಹೀಗೀ. ೭೦-೩) ; ನೀರಡಿಸಿ ಬಂದನವನಾ ಜಗದ ದಾರಿಕಾರ (ನಲಂಬು. ೪೩-೧೭) ; ಮರೆಯದಿರು ರಾಜಕುವರ ಪಥದಿ ನೀನೊಬ್ಬನೇ ದಾರಿಕಾರ (ಸ್ವದರ್ಶಿ. ೨೯); ಸಂದರ್ಭ ಸಿಕ್ಕಿದಾಗಲೆಲ್ಲ ದಾರಿಕಾರರನ್ನು ಹಿಡಿದು ಕೊಳ್ಳೆ ಹೊಡೆಯುತ್ತ ಜೀವನ ಸಾಗಿಸಿದ್ದರು (ಅಕ್ರಮು. ೫೦). **ದಾರಿಗಾರ** : (೬). [ ದಾರಿ + – ಕಾಱ ]

**ದಾರಿಕೆ** (ನಾ). ೧. ಕನ್ಯೆ; ಹೆಣ್ಣುಮಗಳು; ಹುಡುಗಿ: ನೀರ ಬೊಬ್ಬುಳಿಕೆ ಕಾಮನ ಬಿಲ್ಲು ಸಂಜೆಯೊಳೊಪ್ಪುವ ಕೆಂಪು ಪುಲ್ಲನಿಯ ದಾರಿಸಂಗಡ ದಾರಿಕೆಯರ ಚಿತ್ತದವೊಲು ಆರಯ್ಯಲೆಲ್ಲವಧ್ರುವವು (ಶಾಂತೀಶ. ೮-೮೯). ೨. ಸೂಳೆ ; ವೇಶ್ಯೆ ; ವಾರಾಂಗನೆ : ಘನತರಭೋಗಮಂ ಗತಿಯ ವಕ್ರತೆಯುಂ ತಱವಾಗೆ ಸಾರ್ದು ಮೆಲ್ಲನೆ ಪುಗುವಂದವಂ ನೆಱೆಯೆ ಭಾವಿಸಿ ಬಂದ ಭುಜಂಗನಂ ಭುಜಂಗನೆ ದಿಟಮೆಂದು ದಾರಿಕೆ ಮಯೂರಿಕೆ ಯಂದದಿನೇಂ ಕನಲ್ದಳೋ (ಚಂದ್ರಪ್ರ. ೮-೫೮). [ ಸಂ. ದಾರಿಕಾ ]

**ದಾರಿಕೆಳೆ** (ನಾ). ೧. ದಾರಿಯ ಸ್ನೇಹ; ಹಾದಿಯ ಗೆಳೆತನ. ೨. (ಆಲಂ) ತಾತ್ಕಾಲಿಕ ಸ್ನೇಹ ; ನಶ್ವರವಾದ ಸಂಬಂಧ : ಏಕೆ ಮೋಹವನು ಸಂಸಾರದಿಂ ಭಯವೇನು ದಾರಿಕೆಳೆಯದು ನಿನಗೆ ? (ಮಂಕುಳ. ೬೧೪). [ ದಾರಿ + ಕೆಳೆ₃ ]

**ದಾರಿಗ** (ನಾ). = ದಾರಿಕಾಱ : ತೀರಲು ತೃಷೆ ನೀರು ತೀರಲು ಸಂತಾಪ ತೀರಲವರ ನೋಳ್ಪಾಸೆ ತೀರದೆ ನಿಂದಿರುತಿರೆ ಭೂರಿದಾರಿಗರಾ ವಾರಿಮಂಡವಗಳೊಳು (ಅಂಜಚ. ೨-೧೦೭); ನೀರಡಿಸಿ ಕಾಲ್ಗಳಚಿತವವಾರೆಯ ಜಳವಿಲ್ಲ ಕೆಲವು ಕೆಱೆತೊಱೆಗಳೊಳಂ ನೀರೊಳ್ಳಿಗೊಳ ಕಾದುದು ದಾರಿಗರುಂ ಬಿದದಂತುಱ್ ದೀಳ್ವರ್ ನೆಳಲೊಳ್ (ಹಮ್ಮಿ. ೪-೭೬) ; ಮಿಗೆ ಕುವರಗೆ ಶಶಿಪ್ರಭೆಯ ಚಿಲ್ವಿಕೆಯ ದಾರಿಗ ಪೇಳ್ದನೆಂದನಾ ಮುನಿಪ (ತಂತ್ರಸಾಂ. ೭); ದಾರಿಗರೂರುಗನರ್ಾಡುಗರಿಹ ಪರಿವಾರ ವಿದ್ವಾಂಸರು ನೃಪರು ನೀರುಗಣ್ಣೊಳು ಹಗಲಿರುಳು ಗೋಳಿಟ್ಟರು (ಭರತ. ೭೮-೧೦೩) ; ರಸ ದಾರಿಗರ್ವುಗಳ ಸೋಗೆಗಳ ಪಸುರುವೂಗರಾಗಕೆ ವರ್ಪ್ಪತಿಹುದಾ ನಾಡೊಳಲ್ಲಿಯುಂ ದಾರಿಗರ ಕಣ್ಗೆ ಕೌತುಕವಾಗಲು (ಕೃಮಿಥಾ. ೩-೫). [ ದಾರಿ + – ಗ₂ ]

**ದಾರಿಗಳ್ಳ** (ನಾ). ಮಾರ್ಗದಲ್ಲಿ ದರೋಡೆ ಮಾಡುವ ಕಳ್ಳ; ಹಾದಿಗಳ್ಳ: ದಾರಿಗಳ್ಳರ ಕೈಗೆ ಸಿಕ್ಕಿ ಅವರು ಹಣವನ್ನೆಲ್ಲಾ ಕಳೆದುಕೊಂಡಿದ್ದರು (ರೂಢಿ). [ ದಾರಿ + ಕಳ್ಳ₁ ]

**ದಾರಿಗಾಣ್** (ಕ್ರಿ). ೧. ದಾರಿಯನ್ನು ತಿಳಿ. ೨. ಉಪಾಯವನ್ನು ತಿಳಿ : ಅಕ್ಕ ಮಾತ್ರ ವಿಹ್ವಲಳಾಗಿ ದಾರಿಗಾಣದೆ ಒಳಗೆ ಓಡಿಬಂದು (ಕಮನ. ೨೧೦). [ ದಾರಿ + ಕಾಣ್ ]

**ದಾರಿಗಾಣಿಸು** (ಕ್ರಿ). ಮಾರ್ಗ ತೋರಿಸು; ದಾರಿತೋರು: ಎದೆಗೊಂಡು ದಾರಿಗಾಣಿಸುವ ಈ ವಾಗ್ವ್ಯಕ್ತಿ (ನಾಡೋಜ. ೩೭). [ ದಾರಿ + ಕಾಣಿಸು ]

**ದಾರಿಗಾರ** 'ದಾರಿಕಾಱ' ನೋ.

**ದಾರಿಗುಟಗ** (ನಾ). ಹಾದಿಯನ್ನು ಸವೆಸುವವನು; ದಾರಿಹೋಕ; ಪಯಣಿಗ : ದಾರಿಗುಟಗಂ ವಾರಿಪಂಥಿಕಃ (ಶಬ್ದಾನು. ೫೮೮ ವ್ಯಾಖ್ಯಾ). [ ದಾರಿ + – ಕುಟಗ₁ ]

**ದಾರಿಗೆಡು** (ಕ್ರಿ). ಮಾರ್ಗತಪ್ಪು ; ದಾರಿ ತಿಳಿಯದಾಗು : ಬಿರುದರ್ ಕರಿಗಿಕ್ಕಿದ ಕಳ್ಳನಂತೆ ಜರಿಯ ಬೀರರ್ ದಾರಿಗೆಟ್ಟರಂತೆ ಬೆದಱಿ (ಧರ್ಮಾಮೃ. ೨-೬೮). [ ದಾರಿ + ಕೆಡು₁ ]

**ದಾರಿಗೊಳ್**, ದಾರಿಗೊಳ್ಳು (ಕ್ರಿ). ಹಾದಿಹಿಡಿ ; ಮಾರ್ಗಹಿಡಿ : ದಾರಿಗೊಂಡು ಹೋಹವರಲ್ಲ ನೀವು ಕೇಳಿರೇ (ಅಪಡಂ. ೧೦೩-೪೭೮) ; ವೀರ ಕೋಪಾಟೋಪದಿಂ ಮದವಾರಣಂ ಬರೆ ಕಾಣುತಂ ಬಾಹೂರ ಬೊಮ್ಮಯ್ಯಂ ಬಗೆಯದಂಜದೆ ತೊಲಗದಿಂತು ದಾರಿಗೊಂಡಯ್ತರಲ ದುಗ್ರಾಕಾರದಿಂ ಮೇಲ್ವರಿಯೆ (ಬಸವು. ೨೨-೩೦). **ದಾರಿಗೊಳ್ಳು** : ಶಾಪವ ನಿತ್ತು ದೂರ್ವಾಸ ತನ್ನ ದಾರಿಗೊಂಡು ತಾನು ಹೋದಲ್ಲಿ (ಸಕವ್ವ. ೮). [ ದಾರಿ + ಕೊಳ್₁ ]

**ದಾರಿಗೊಳ್ಳು** 'ದಾರಿಗೊಳ್' ನೋ.

**ದಾರಿಡು** (ಕ್ರಿ). ಸುರಿ ; ಹರಿ ; ಪ್ರವಹಿಸು ; ಧಾರಾಕಾರವಾಗಿ ಹರಿ : ಚೂತಫಲದಾಸಾರ ದಾಡಿಮಕದರ ತದ್ರಸ ಕದಳಿಗಳ ಮೇಲೆ ದಾರಿಡಲು (ಜೀವಂಧ. ೨-೮) ; ಶೈಲದದಬಲದೊಱತೆಯನೆ ಸುಕಪೋಲದಲಿ ದಾರಿಡುವ ಮದಜಲ ಧಾರೆಗಳ . . . ನೋಡಿದರು (ಕುವ್ಯಾಲು. ೧೦-೧೯). [ ದಾರೆ₃ + ಇಡು₁ ]

**ದಾರಿತ** (ಗು). ಒಡೆದ ; ಭೇದಿಸಿದ ; ಸೀಳಿದ ; ಕತ್ತರಿಸಿದ ; ಹರಿದ : ದುಃಖಕ್ರಕಚದಾರಿತ ದಾರುದಾರುಣಕರುಣಾಕ್ರಷ್ಟಬಾಷ್ಪಜಲಲುಳಿತ ಲೋಚನಂ ಬಂದು ನೆಗವ (ಲೀಲಾವ. ೧೪-೬೫ ವ). [ ಸಂ. ]

**ದಾರಿತಪ್ಪು** 'ದಾರಿದಪ್ಪು' ನೋ.

**ದಾರಿತುಳಿ** (ಕ್ರಿ). ಹಾದಿಯಲ್ಲಿ ನಡೆದು ಸಾಗು,–ಮುಂದೆ ಹೋಗು ; ನಡೆ: ಬಿಸಿಲಿನಲ್ಲಿ ದಾರಿತುಳಿಯುವಾಗ ಅನೇಕ ವಿಧವಾದ ಆಲೋಚನೆಗಳು, ನೆನಪುಗಳು ಅವಳ ಮನಸ್ಸಿನಲ್ಲಿ ಸುಳಿಯುತ್ತಿದ್ದುವು (ದೂರಸ. ४೮). [ ದಾರಿ + ತುಳಿ₁ (<ತುಱಿ₁) ]

**ದಾರಿತೆಗೆ** 'ದಾರಿದೆಗೆ' ನೋ.

**ದಾರಿತೋಱ್** 'ದಾರಿದೋಱು' ನೋ.

**ದಾರಿತೋರಿಕೆ** (ನಾ). ಮಾರ್ಗದರ್ಶನ : ನಾಗವರ್ಮನು ಕಾಣದ, ೮೦೦ ವರ್ಷಗಳ ಹೊಸ ಹಾಡುಕಟ್ಟುಗಳ ದಾರಿತೋರಿಕೆಯ ಮೇಲೂ, ಇಂಗ್ಲಿಷ್ ಛಂದಸ್ಸಿನ ಸ್ವಾತಂತ್ರ್ಯ ವೈವಿಧ್ಯ ಸೌಂದರ್ಯಗಳ ಪ್ರೇರಣೆಯ ಮೇಲೂ . . . ಸರಳರಗಳೆಯನ್ನೂ ಪ್ರಯೋಗಿಸುತ್ತಾ ಇದ್ದಾರೆ (ಕೃಬಿ. ೧೧೮). [ ದಾರಿತೋರು (<ದಾರಿದೋಱು) + – ಇಕೆ ]

**ದಾರಿತೋರು** 'ದಾರಿದೋಱು' ನೋ.

**ದಾರಿತೋಱು** 'ದಾರಿದೋಱು' ನೋ.

**ದಾರಿದಪ್ಪು**, ದಾರಿತಪ್ಪು (ಕ್ರಿ). ೧. ಮಾರ್ಗವನ್ನು ಕಳೆದುಕೊಳ್ಳು ; ಹಾದಿತಪ್ಪು : ದಾರಿದ[ಪಾಠಾಂ. ತ]ಪ್ಪಿದೆವಱಿಸಿ ರಾಜದ್ವಾರವನು ಪೇಳೌ ಸ್ವಯಂಪ್ರಭೆ ಧಾರುಣೀಶನ ಹಗೆಯ ನಗರಕೆ ಹೋಗಬೇಕು (ತೊರವೆ. ४-೧೦-೨೫); ದಾರಿದಪ್ಪಿದವರಿಗೆ ವಿಭ್ರಮೆ ತೋರಿದಂತೆ (ಚಚಣ. ೨४-೦೨). ೨. ಧರ್ಮಮಾರ್ಗವನ್ನು ಬಿಡು ; ಅನ್ಯಾಯಕ್ಕೆ ಬೀಳು ; ಕೆಟ್ಟ ದಾರಿ ಹಿಡಿ : ದಾರಿದಪ್ಪಿದ ಮನುಷ್ಯನನ್ನು ಬಹಳ ಚಾತುರ್ಯದಿಂದ ದಾರಿಗೆ ತಂದುಕೊಂಡಳು (ರೂಢಿ). **ದಾರಿತಪ್ಪು** : ೧. ನನ್ನ ಭಾಗ್ಯ ದೇವತೆಯು ದಾರಿತಪ್ಪಿ ಬಂದಳೋ ಹೇಗೊ (ಚದೇವ. ೦೬४) ; ಬೋಳನು ದಾರಿತಪ್ಪಿ ನಡೆದಿದ್ದನು (ಉಲೂರ. ಕಥಾಸಾರ ೧೧). [ ದಾರಿ + ತಪ್ಪು₁ ]

**ದಾರಿದೀಪ** (ನಾ). ೧. ಬೀದಿಗಳಲ್ಲಿ ಸಾಲಾಗಿ ಹಾಕಿರುವ (ವಿದ್ಯುಚ್ಛಕ್ತಿಯ) ದೀಪ : ಆ ಸಣ್ಣ ಹಳ್ಳಿಯಲ್ಲಿ ಇತ್ತೀಚೆಗೆ ದಾರಿ ದೀಪಗಳನ್ನು ಹಾಕಿದ್ದಾರೆ (ರೂಢಿ). ೨. (ಆಲಂ) ಬದುಕಿನ ಮಾರ್ಗದರ್ಶನ ಮಾಡುವ ಬೆಳಕು,–ದಾರಿಯನ್ನು ತೋರಿಸುವ ಬೆಳಕು: ಈ ವಿಚಾರ ಓಸಿಯನರಿಗೆ ದಾರಿದೀಪವಾಗಿ ಕಂಡಿತು (ಬದ್ರಪ್ರ. XVI ೩೬೩೪) ; 'ಗೀತಾಂಜಲಿ' ಯಂಥ ಅಮೂಲ್ಯ ಗ್ರಂಥಗಳು ನಮ್ಮ ದಾರಿದೀಪವಾಗಬೇಕು (ಧರ್ಮಸಾ. ೯೫). [ ದಾರಿ + ದೀಪ₂ ]

**ದಾರಿದೆಗೆ**, ದಾರಿತೆಗೆ (ಕ್ರಿ). ೧. ದಾರಿಹಿಡಿ ; ಹೊರಡು : ಆ ಗಜದಿಂ ಪಲರು ಸೀಟಿಸಿ ವಿಜಯೋದ್ಯೋಗಕ್ಕೆ ದಾರಿದೆಗೆದನಲಂಪಿಂ (ಚಕು. ೭-೧೦೪) ; ಆ ಪರ್ವತಾಗ್ರದ ಚಾರಣರು ಚದುರೆಯರು ಸಿದ್ಧರು ಮುಗ್ಧೆಯರು ಕಟಿಯ ಭೈರವಾಡಂಬರಕೆ ಬೆದಱಿದು ದಾರಿದೆಗೆದರು ಸುರಪುರಕೆ (ತೊರವೆ. ४-೦೨-೨೧). **ದಾರಿತೆಗೆ** : ೨. ಹಾದಿಯನ್ನು ಕಂಡುಹಿಡಿ ; ಮಾರ್ಗವನ್ನು ಕಲ್ಪಿಸು : ಕಾದಿರಮಿಯಾ ಗಿರಿಧರನ ಕಿವಿಯಲ್ಲಿ ಮೆಲ್ಲನೆ ಹೇಳಿದ : ಮಹಾರಾಜ, ಮನೋಹರಗೆ ಏನಾರ ದಾರೀ ತೆಗೀರಿ (ಪ್ರೇಮಾಶ್ರ. ೧೩). [ ದಾರಿ + ತೆಗೆ₁ ]

**ದಾರಿದೋಂಟ** (ನಾ). ಮಾರ್ಗದಲ್ಲಿರುವ ತೋಟ : ಶರತರದ ಬಳ್ಳಿಗಿಡುಮರಗಳಿಂದಿಡಿದ ದಾರಿದೋಂಟಂಗಳಂ ಸೋವುತ್ತ ಕಣ್ ಕಿವಿಗಳೆಚ್ಚರಿಕೆಯಿಂ . . . ಪ್ರವೇಶಿಸಿದನಯ್ ಶಿಖರತ್ರಯವ್ಯಾಪಿಯಾ ದಶಗ್ರೀವ ಪುರದ ಪಾವದ ಸಾಂದ್ರಕೇಂದ್ರಮಂ (ಶ್ರೀರಾಮಾ. ४४೭-೩೦). [ ದಾರಿ + ತೋಂಟ ]

**ದಾರಿದೋಱು**, ದಾರಿತೋಱ್, ದಾರಿತೋರು, ದಾರಿತೋಱು (ಕ್ರಿ). ಹಾದಿತೋರು ; ಮಾರ್ಗ ಕಾಣಿಸು; ಉಪಾಯ ತಿಳಿಸು; ಗತಿ

ಭೃಂಗಿಯು ವೀರಭದ್ರಾದಿ ಪ್ರಮಥರೋಲೈಪ ಸಮಯುದೊಳು (ಬಸಪು. ೧-೫೨). ೨. ಕೃಷ್ಣನ ಸಾರಥಿ: ನಾಗಾಂಕೇತನಂ ದಾರುಕಾನ್ವಿತಂ ವರೂಥಸ್ಥನಾಗಿ ಕುಶಸ್ಥಳಕ್ಕೆ ತಳರ್ದಂ (ಜಗವಿ. ೯-೫೩ ವ); ಘನ ಬಳಾಹಕ ಸೈನ್ಯ ಸುಗ್ರೀವನನು ನಿರ್ಮಳ ಮೇಘಪುಷ್ಪನನನುವಿನಲಿ ಹೂಡಿದನು ದಾರುಕ ಹೇಮಮಯ ರಥವ (ಕುಮ್ನಾಉ. ೭-೬); ಪಾರ್ಥೋರುಹಾಕ್ಷನಂ ದಾರುಕಂನಿಟ್ಟಿಸಿ ವರೂಥಮಂ ತಿರುಗಿಸಿದನು (ಜೈಮಿಭಾ. ೭-೫೭). ೩. ದೇವದಾರಂ ಮರ. ೪. ಮರ; ಕಟ್ಟಿಗೆ; ಕಾಷ್ಠ. 'ದಾರುಕಾಸನ' ಪರಾ. ೫. [ವೀಶೈ] ಪಂಚಾಚಾರ್ಯರಲ್ಲಿ ಒಬ್ಬ; ಪಂಚಪೀಠಗಳಲ್ಲಿ ಒಂದಾದ ಉಜ್ಜಯಿನಿ ಪೀಠದ ಸ್ಥಾಪಕ. 'ದಾರುಕಪೀಠ' ಪರಾ.

[ ಸಂ. ]

**ದಾರುಕಪೀಠ** (ನಾ). [ವೀಶೈ] ಪಂಚಪೀಠಗಳಲ್ಲಿ ಒಂದು; ಉಜ್ಜಯಿನಿಯ ಪೀಠ: ಉಜ್ಜಯಿನಿಯಲ್ಲಿ ದಾರುಕಪೀಠವಿದೆ; ಬಾಳೆ ಹೊನ್ನೂರಿನಲ್ಲಿ ರೇಣುಕಪೀಠವಿದೆ (ರೂಢಿ).

[ ದಾರುಕ + ಪೀಠ ]

**ದಾರುಕರ್ಮ** (ನಾ). ಮರದ ಕೆಲಸ; ಬಡಗಿಯ ಉದ್ಯೋಗ: ದಾರುಕರ್ಮ ವಾಸ್ತುವಿದ್ಯಾಪೂರ್ವಯಂತ್ರ ಪ್ರಯೋಗ ವಿ[ಪಾ]ಪಹರಣ ಸರಭೇದ ರತಿತಂತ್ರೇಂದ್ರ ಜಾಲ ವಿವಿಧ ವಿದ್ಯೆಗಳೊಳಂ . . . ಜಾಣ (?) [ನು]ಮಾಗಿ (ಶಂಪಥಾ. ೨-೩೪ ವ). [ದಾರು$_2$ + ಕರ್ಮ]

**ದಾರುಕಾಸನ** (ನಾ). ಮರದ ಪೀಠ; ಮರದ ಮಣೆ: ದಾರುಕಾಸನ ಭಾಗ್ಯಹಾನಿಯು (ಗಗಶಾ. ೪-೨೨). [ ದಾರುಕ + ಆಸನ ]

**ದಾರುಕುಲ** (ನಾ). ಮರಗಳ ಸಮೂಹ: ಫಲವೀವ ವೃಕ್ಷಮಂ ಬಿಟ್ಟು ನೀರಸ ದಾರುಕುಲಕಾಲವಾಲಮಂ ತಿರ್ದಿಸಿ (ಆರಾಕ. ೧೨-೨೭).

[ ದಾರು$_2$ + ಕುಲ ]

**ದಾರುಜೀವನ** (ನಾ). (ಆಲಂ) ನೀರಸವಾದ ಜೀವನ; ಸ್ವಾರಸ್ಯವಿಲ್ಲದ ಬಾಳು: ತಾವು ಅನೋನ್ಯವಾಗಿರದೆ, ಮಾತುಕಥೆ ಕೂಡ ಇಲ್ಲದೆ, ಮಸಣ ಮೌನದಿಂದ ದಾರುಜೀವನವನ್ನು ಜೀವಿಸುವುದು ಸಾವಿಗಿಂತ ಕಡೆ! (ಬಂಕಿಮು. ೨೧೨). [ ದಾರು$_2$ + ಜೀವನ ]

**ದಾರುಣ** (ಗು). ೧. ಕ್ರೂರವಾದ; ಭಯಂಕರವಾದ; ಉಗ್ರವಾದ; ಕಠಿಣವಾದ: ಮುನಿಜನಕಿಚ್ಛಿವಿಘ್ನಂಗಳಂ ದಾರುಣ ದೈತ್ಯರ್ ಮಾಡೆ (ಶಂಪಥಾ. ೪-೧೧); ಕನಕ ಶಾಂತಿ ತಪೋಧನನುಂ ಧ್ಯಾನಾನಲಸಂಧುಕ್ಷ ಮಾಣದಾರುಣದುರಿತಾರಣ್ಯನಾಗಿ ಯೋಗದೊಳಿರೆ (ಶಾಂತಿಪು. ೯-೧೯ ವ); ವೀರರಸಂ ಬವರಿಸುಗುಮುದಾರೋತ್ಸಾಹ ಪ್ರವೃತ್ತಿ ಕಾರಣ ಕಾರ್ಯಂ ದಾರುಣ ರೋಷಾವೇಶ ವಿಕಾರಭವಂ ರೌದ್ರಮೆಂಬ ರಸವದು ನೆಗಳ್ಗುಂ (ಕಾವ್ಯಾವ. ೮೧೭). (ನಾ). ೨. ಭಯಂಕರವಾದುದು; ಕ್ರೂರ ವಾದುದಂ; ಕಠಿಣವಾದುದಂ: ಕಾನನಂ ಕಣ್ಗೆ ದೂರಕೆ ನುಣ್ಪು ದೋರ್ದಡಂ ಬಾಳ್ಕೆಗತಿ ದಾರುಣಂ (ಶ್ರೀರಾಮಾ. ೮೮-೨೮೭). ೩. ಕ್ರೂರಿ; ಹಿಂಸಿಸುವವನು; ನಿಷ್ಕರುಣಿ; ನಿರ್ದಯಿ: ರವಿ ಚಾಪಕ್ಷೇತ್ರದೊಳ್ ನಿಂದೊಡೆ ಧನಪತಿ ಸತ್ಪೂಜಿತಂ ದಾರುಣಂ ವೈದ್ಯವಿದಂ ತಕ್ಷೋಪಜೀವ್ಯಂ (ಜಾತಕ. ೧೭-೧೭); ಓಹೋ ಹೋ ಹಾ ಮಾಣ ದಾರುಣ ಮಾಣೆಂದೊ ಱಲುತ್ತೆ ಬೀಟ ತವೆ ಪೀರ್ದಂ ಪೂತನಾಜೀವಮಂ (ಜಗವಿ. ೩-೨೪); ನಾನೆ ದಾರುಣನೆಂದಿದೇತಕೆ ಬೀಗುವೆ ಸುಮ್ಮನೆ ಓ ಹಾಲಾಹಲವೆ (ಇಂಚಾಪ. ೨೨೧-೯೫). ೪. ಕ್ರೂರತನ; ಉಗ್ರತೆ; ನೋವು: ದಾರುಣದ ಕರ್ಮ ನಿಯತಿಯನಿನಿತು ಶಿಥಿಲಿಪುದು ಕಾರುಣ್ಯದಿಂ ದೈವ (ಮಂಕುತಿ. ೫೮೯). ೫. ಒಂದು ನರಕದ ಹೆಸರು: ಬಳಿಕ ಕುಂಭೀಪಾಕ ಸುಪಾಕ ಪ್ರಮುಖ ದಾರುಣ ಅಂಗಾರಕಮೆಂಬೈದು ಮಂತ್ರಿ ನರಕಂಗಳಿಂ ಸೇರಿ ತರಳತಾರ ವೆಂಬರಸುನರಕವಿಹುದು (ವಿವೇಕ. ೧೮೦). [ ಸಂ. ]

**ದಾರುಣತೆ** (ನಾ). ಉಗ್ರತೆ; ಕ್ರೌರ್ಯ; ಭಯಂಕರತೆ: ದೈವದ ದಾರುಣತೆಯುಮಂ ಶೋಕೋದ್ರೇಕಮುಮಂ ದುಃಖದ ದುಸ್ಸಹತೆ ಯುಮಂ ಪದಾರ್ಥದನಿತ್ಯತೆಯುಮಂ ಭಾವಿಸಿ ನೋಡಿ (ಕಾದಂಪೂ. ೯೫೨).

[ ಸಂ. ದಾರುಣತಾ ]

**ದಾರುಣಮುಖ** (ನಾ). ಕ್ರೂರವಾದ ಮುಖವುಳ್ಳವನು; ಅತ್ಯಂತ ಕಟುವಾಗಿ ಮಾತನಾಡುವವನು: ವಿದ್ವತ್ಸಭಾಮಧ್ಯದೊಳ್ ಕಾಳೋ ಗ್ರೋರಗನಂತೆ ದಾರುಣಮುಖರ್ ದುಷ್ಟರ್ ಖಳರ್ ದುರ್ಮುಖರ್ ದೋಷಾನ್ವೇಷಣರಪ್ಪವರ್ ಪಟಿದೊಡೇವಂ ಮಾಟ್ಪರೇಗೆಯ್ವರೋ (ಸುಕುಮಾ. ೧-೪೭). [ ದಾರುಣ + ಮುಖ ]

**ದಾರುಣವಡೆ** (ಕ್ರಿ). ಉಗ್ರತೆಯನ್ನು ಹೊಂದು; ಕ್ರೂರವಾಗು; ಸೊಗಯಿಪ ಸತಿಯುತಿಕಾರ್ಶ್ಯಂದಳೆದೊಪ್ಪಿದಳು ದಾರುಣವಡೆದ ನಿದಾಘ ಸಮಯ ಕಾಸಾರದ ಭಂಗಿಯುಮಂ ಸಿತಪಕ್ಷಂ ಕೀರಿದ ನಿರ್ಮಲಶಶಿಬಿಂಬದ ಭಂಗಿಯುಮಂ ನೆನೆಯಿಸುತ (ಜಯುಕಾ. ೪-೩೨). [ ದಾರುಣ + ಪಡೆ$_1$ ]

**ದಾರುದಾರುಣ** (ನಾ). ಮರದ ಹಾಗೆ ಒರಟಾದುದು: ದಾರುದಾರುಣನಂ ದಾನವಾರಿವಾರಿತಲೋಕನಂ ಬಾರಬಾರಣಮಂ ನೋಡಾ ಸಾರಸಾರಾಂಬು ದಾಭಮಂ (ಕವಿರಾ. ೨-೧೩೦); ಮಕರಂದನರಸನವಸ್ಥೆಯಂ ಕಂಡು ದುಃಖ ಕ್ರಕಚದಾರಿತ ದಾರುದಾರುಣ ಕರುಣಾಕ್ರಷ್ಟ ಬಾಷ್ಪಜಲಲುಳಿತಲೋಚನಂ ಬಂದು ನೆಗಪೆ (ಲೀಲಾವ. ೧೪-೬೯ ವ). [ ದಾರು$_2$ + ದಾರುಣ ]

**ದಾರುಪಾಶವಿಧಿ** (ನಾ). ಹಗ್ಗದಿಂದ ಮರಕ್ಕೆ ಕಟ್ಟುವ ಕ್ರಮ (?): ಅಪರಾಜಿತ ಮಹಿಪಸಮುದ ದ್ವಿಪಂಗಳಂ ಓಡಿಯಲವನಿನಾಥನ ಸೇನಾಧಿಪನ ತಲೆವಿಲ್ಲ ದರ್ ದಾರುಪಾಶವಿಧಿಯಾಯ್ತು ಬಂದು ಕಾಣ್ಬನ್ನೆವರಂ (ಶಾಂತಿಪು. ೧೧-೧೯). [ ದಾರು$_2$ + ಪಾಶ + ವಿಧಿ ]

**ದಾರುಪಂದಿ** (ನಾ). ಒಂದು ಬಗೆಯ ಹಂದಿ; ಕಾಡುಹಂದಿ: ಉಡುವು ಹೆಬ್ಬಾವು ಮುಂಗುರಿ ದಾರುಪಂದಿಯು ಕಡವೆ ಕನ್ನಾಯಿ ಕೊಂಡಗುರಿಯು (ಮಾದೇಸಾಂ. ೧-೫೮). [ ದಾರು$_2$ + ಪಂದಿ ]

**ದಾರುಹರಿದ್ರೆ** (ನಾ). ಮರದರಿಸಿನ; ಅಂಬೆಹಳದಿ: "ಪೀತದ್ರುಃ, ಕಾಲೇಯಕಃ . . . ದಾರುಹರಿದ್ರಾ, ಪರ್ಜನೀ–೭ ಮರದರಿಸಿನ, ಕಸ್ತೂರಿ ಅರಿಸಿನವೆಂದು ಕೆಲವರನ್ನುವರು" (ಸಿದ್ಧಾಂತಿ. ೦೩೫).

[ ಸಂ. ದಾರುಹರಿದ್ರಾ ]

**ದಾರುಹಸ್ತ** (ನಾ). ಮರದ ಸೌಟು; ಹುಟ್ಟು; ಸಟ್ಟುಗ; ಮರದ ಚಮಚ: "ದರ್ವೀ, ತರ್ದೂಃ, ಖಜಕಾ, ದಾರುಹಸ್ತಃ–ಈ ೪ ಸಟ್ಟುಗಂ" (ಹಲಾಯು. ೫೨-೧೫೭); "ಖಜಕೆ ದರ್ವೀ ದಾರುಹಸ್ತಂ ದ್ರುತಂ ಹುಟ್ಟೆನಿಕ್ಕು" (ಮಂಗರಾ. ೬೦-೧೮). [ ದಾರು$_2$ + ಹಸ್ತ ]

**ದಾರುಹಸ್ತಕ** (ನಾ). = ದಾರುಹಸ್ತ: "ತಂಡೂಃ, ದಾರುಹಸ್ತಕಃ – ೨ ಕೈಬಟ್ಟ ಪೆಸರುಗಳು. ಮರದ ಸೊಟಕ; ಮರದ ಸೌಟು" (ಸಿದ್ಧಾಂತಿ. ೨೮೪). [ ದಾರು$_2$ + ಹಸ್ತಕ ]

**ದಾರೆ$_1$** (ನಾ). ೧. (ನೀರು) ಧಾರೆಯಾಗಿ ಹರಿಯುವಿಕೆ; ಧಾರಾಕಾರ ವಾಗಿ ಬೀಳುವಿಕೆ: ಧಕಾರಕ್ಕೆ ದಕಾರಂ – ಧಾರಾ – ದಾರೆ; ಧೂಪ – ದೂಪ (ಶಮದ. ೨೫೫ ಪ್ರಯೋ); ಜೀರದಲಿ ನೆಱ ತುಂಬಿದಂತಿರೆ ಪೂರವಿಸಿ ಬುದಿರೆನಿಸಿ ಭಸಿತದ ದಾ[ಪಾಠಾಂ. ಧಾ] ರೆ ಪೊಱಮಡೆ ಜೀರ್ಕೊಳವಿಯಲಿ ಚಿಮ್ಮಿದಂತಾಯ್ತು (ಬಸಪು. ೪೪-೧೫). 'ಅಳಂದಾರೆ' ಪರಾ. ೨. ಪ್ರಧಾನ ವಾದ ಗೆರೆ; ಪ್ರಮುಖ ಗೆರೆ; ಮುಖ್ಯವಾದ ಗೀಟು; ಅಂಚು: ಮೇಲಣ ಪಟ್ಟಕ್ಕೆ ಎಂಟು ದಾರೆಯ ಏಣಂ ಮುಱಿದು ಗರಿಗೆಪಟ್ಟ ವರ್ತುಳಾಕಾರದಿಂ ಶುದ್ಧವ ಮಾಡಿ (ಸರ್ವವ. ೧೨೨-೬೦೭). ೩. ಕತ್ತಿಯ ಅಲಗು,–ಅಂಚು: ಕಂತು ಹೊಡೆದೊಡೆ ಮುನೀಶ್ವರ ಕಠಿನಮನಕಾಂತು ದಾರೆಗಳು ಮುಱಿದಲಗುಗಳಯುಕ್ಕುಗಳ ಬಳಗವೊ . . . ಎನಿಸಿ

(ಹವಕಾ. ೩-೨೭). ೪. [ಅಶ್ವಶಾ] ಕುದುರೆಯ ನಡಗೆಯ ಐದು ರೀತಿಗಳಲ್ಲಿ ಒಂದು: ತುರಗವನೇರಿ ದಾರೆಗಳಿಂದ [ ತೋರಿಪ ? ] ಪರಿಪರಿ ವಿಡಾಯದಿಂದ ತಿರುಗಿಸುವನು (ಗೋಪುಟೀ. ೨-೨೦). 'ದಾರೆಗತಿ' ಪರಾ. [ <ಸಂ. ಧಾರಾ ]

**ದಾರೆ$_2$** (ನಾ). ಹೆಂಡತಿ ; ಪತ್ನಿ : ದಶರಥನೃಪಂ, ತನ್ನವೊಲೆ ನಾರುಮಡಿಯುಟ್ಟು ನೋಂಪಿಗೆ ನಿಂದ ದಾರೆಯರ್ವೆರಸಿ ತನುಜಾತಕಾಮೋಷ್ಟಿಯಂ ಕೈಕೊಂಡು (ಶ್ರೀರಾಮಾ. ೧೧-೨೯೯). [ ಸಂ. ದಾರ ]

**ದಾರೆ$_3$** (ನಾ). ಒಂದು ಬಗೆಯ ಸಸ್ಯ : "ಉಪಹಾರಂ – ದಾರೆ, ಹೀರೆ" (ಓಷಧಿ. ೧೭). 'ದಾಹೀರೆ' ಪರಾ. [ ? ]

**ದಾರೆಕಟ್ಟು** (ನಾ). ೧. ವಾಮಾಚಾರದ ವ್ಯವಹಾರಗಳಲ್ಲಿ ಒಂದು ; ಕತ್ತಿಯ ಬಾಯಿ ಚಲಿಸದಂತೆ ನಿಲ್ಲಿಸುವ ಒಂದು ತಂತ್ರದ ಸಾಧನೆ ; ಖಡ್ಗಸ್ತಂಭನ. ೨. ಹಾಗೆ ನಿಲ್ಲಿಸುವ ಕ್ರಿಯೆ: ಆತನು ಮಂತ್ರ, ತಂತ್ರ . . . ದಾರೆಕಟ್ಟು, ಮೊನೆಕಟ್ಟೆಂಬ ಕುವಿದ್ಯದಿಂ ಗೆಲುವೆನೆಂದು ಬಂದವನ . . . ನಿವಾರಿಸಿ (ಭ್ರಕಸೂ. ೩೭೭). [ ದಾರೆ$_0$ + ಕಟ್ಟು$_8$ ]

**ದಾರೆಗಡಗ** (ನಾ). (ವಿವಾಹ ಸಮಯದಲ್ಲಿ) ಹೆಣ್ಣಿಗೆ ಧಾರೆಯೆರೆಯುವ ಮುನ್ನ ತೊಡಿಸುವ ಕಡಗ: ದಾರೆಗಡಗ ಪೇವುರ ಪೊಸರನ್ನದ ಚಾರುತರದ ಸೂಡಗವನು ನಾರಿಯ ಕರಯುಗದೊಳಂದು ಸತಿಯರು ಸೇರಿಸಿದರು ನಲವಿನಲಿ (ಅಂಜಚ. ೮-೬೩) ; ಗಿಳಿದಾಲಿ ತೋಳಬಂದಿ ದಾರೆಗಡಗಂ . . . ತೊಂಡಿಲ್ಗಳಿಂದಲಂಕೃತೆಯಾದ . . . ಕನ್ನಿಕೆಯಂ . . . ಪಸೆಯ ಜಗಲಿಗೆ ಬಿಜಯಂಗೆಯ್ಸುತಮಿರ್ಪಿನಮಾಗಳ್ (ಹಾಲಾಸ್ಯ. ೪-೯-೬೪ ಪ). [ದಾರೆ$_1$ + ಕಡಗ$_1$ ]

**ದಾರೆಗತಿ** (ನಾ). [ಅಶ್ವಶಾ] ಕುದುರೆಯ ನಡಗೆಯ ಐದು ರೀತಿಗಳಲ್ಲಿ ಒಂದು: ದಾರೆಗತಿ ಲಯ ಪೊಯ್ಸು ಕಾಯಕ್ಷಂ ತಿತಿಕ್ಷೆ ಪಿತನೆರಿ ತುರ(ಗ?) ಸಮಾನಂ ಭಾರಿಕೂಸಿ ಮುಟ್ಟಿಭಾಗಂ ವ್ಯೂಹಂ ನಿವರ್ತನೆ ಪದಂ ಯತಿ ಗಾತ್ರವ ವಿಮಾರ್ಗಂ (ಪುದುತಿ. ೧-೨೦). [ ದಾರೆ$_1$ + ಗತಿ ]

**ದಾರೆಗಿಂಡಿ** (ನಾ). ೧. ನೀರು, ಹಾಲು ಮೊದಲಾದ ದ್ರವಪದಾರ್ಥಗಳನ್ನು ಹೊರಸೂಸಲು ಸೊಂಡಿಲಂತಹ ಆಕಾರವಿರುವ ಗಿಂಡಿ; ಸೊಂಡಿಲಿಂಳ್ಳೆ (ಉಕ). ೨. ನೀರು ಕುಡಿಯುವ ಪಾತ್ರೆ. [ ದಾರೆ$_1$ + ಗಿಂಡಿ ]

**ದಾರೆಬಟ್ಟಲು** 'ದಾರೆವಟ್ಟಲ್' ನೋ.

**ದಾರೆವಟ್ಟಲ್, ದಾರ್ರವಟ್ಟಲು, ದಾರೆಬಟ್ಟಲು, ದಾರೆವಟ್ಟಲು** (ನಾ). ಜರಡಿ ; ಚಾಳನಿ ; ಒಂದರಿ ; "ಚಾಲನಿ, ತಿತವು" (ನಾಚಿರಾ. ೬). **ದಾರವಟ್ಟಲು**: ದಾ[ಪಾಠಾಂ. ಧಾ]ರವಟ್ಟಲ ತೆಜಿದಿ ನಿನ್ನ ಕುಮಾರಿ ಕಸವನೆ ಪಿಡಿಯೆ ನೀನವಿಚಾರಿಯಾದ್ದೆ ರಾಜಪುತ್ರ ಸಮಾಜವನು ಬಿಸುಟು (ಸಾಳ್ವಭಾ. ೦೮-೬೨). **ದಾರೆಬಟ್ಟಲು**: ರಸವನ್ನು ತ್ಯಜಿಸಿ ಕಸವನ್ನು ಹಿಡಿಯುವ ದಾರೆಬಟ್ಟಲಂತಹ ಜನರಿಗೆ, ದುರಾಸೆಯುಳ್ಳವರಿಗೆ . . . ಎಂದಿಗೂ ಸೊಗಸುವುದಿಲ್ಲವೆಂದೂ ಚಂದ್ರಕವಿಯು ಸ್ಪಷ್ಟವಾದ ಅಭಿಪ್ರಾಯ (ಶಂಕಶ. XLV ವಿಮರ್ಶೆ). **ದಾರೆವಟ್ಟಲು**: ಮೋಕ್ಷದ ಬಗೆಗಾಣ್ಬವರ್ಗೆ ಸೊಗಯಿಪ್ಪುದಿದಲ್ಲದೆ ದಾರೆ[ಪಾಠಾಂ. ದಾರೆ]ವಟ್ಟಲಂದದಿ ರಸಮಂ ಬಿಡುತ್ತೆ ಕಸಮಂ ಪಿಡಿದಿರ್ಪ ದುರಾಸೆಯರ್ಗೆ . . . ಸೊಗಯಿಪ್ಪುದೆ (ಶಂಕಶ. ೭). [ ದಾರೆ$_1$ + ಬಟ್ಟಲ್ ]

**ದಾರೆವಟ್ಟಲು** 'ದಾರೆವಟ್ಟಲ್' ನೋ.

**ದಾರೆಹುಳಿ, ಧಾರೆಹುಳಿ** (ನಾ). (ಕರಾ) ಒಂದು ಬಗೆಯ ಮರ ಮತ್ತು ಅದರ ಹಣ್ಣು : ಕಮರಿಕೆ : ಕಮರಕ್‌ಮರ, ಕಮರಾಕ್ಷಿ, ದಾರೆಹುಳಿ (ಮೃಔಗಿ. ೧೧-೧೮೪). **ಧಾರೆಹುಳಿ** : ಧಾರೆಹುಳಿ ಉಪ್ಪಿನಕಾಯಿ (ರೂಢಿ). [ ←ತುಳು. ದಾರೆಪುಳಿ ]

**ದಾರೇಷಣ** (ನಾ). ಹೆಂಡತಿಯನ್ನು ಬಯಸುವಿಕೆ : ಸಂಸಾರಿಯಾಗುವ ಅಪೇಕ್ಷೆ : ಪ್ರಕೃತಿಯು–ಮೂರು ಪರಿಚ್ಛೇದ ಸ್ವರೂಪಳು, ಸತ್ವ ಪರಿಚ್ಛೇದ, ರಜಃ ಪರಿಚ್ಛೇದ, ತಮಃ ಪರಿಚ್ಛೇದವೆಂದು ಈ ಮೂರರಲ್ಲಿ ವಿಶ್ವ, ತೈಜಸ, ಪ್ರಾಜ್ಞ ಎಂಬ ಮೂರು ರೂಪಗಳಿಂದ ಶ್ರೀ ಪರಮಾತ್ಮನು ವಾಸ ಮಾಡುವನು. ದಾರೇಷಣ, ಪುತ್ರೇಷಣ, ವಿತ್ತೇಷಣವೆಂಬ ಈಷಣತ್ರಯದಲ್ಲಿ ಆತ್ಮ, ಅಂತರಾತ್ಮ, ಪರಮಾತ್ಮನೆಂಬ ರೂಪತ್ರಯಗಳಿಂದ ವಾಸಮಾಡುವನು (ಹಸಾರ ೨೪-೧೦ ಟೀಕು). [ <ಸಂ. ದಾರೈಷಣ ]

**ದಾರೊಕ್ಕಲು** (ನಾ). ಸಂಬಳದಾಳುಗಳನ್ನು ಇಟ್ಟು ವ್ಯವಸಾಯ ಮಾಡುವ ಒಕ್ಕಲು ; ದೊಡ್ಡ ಒಕ್ಕಲು. 'ಕೂಡೊಕ್ಕಲು' ಪರಾ. [ ದಾರು$_0$ + ಒಕ್ಕಲು(<ಒಕ್ಕಲ್) ]

**ದಾರ್ಢ್ಯ** (ನಾ). ೧. ಗಟ್ಟಿಯಾಗಿರುವಿಕೆ ; ಬಿಗಿಯಾಗಿರುವಿಕೆ ; ಗಡುಸು. ೨. ಧೈರ್ಯ; ಬಲ ; ಶಕ್ತಿ : ತನುವೊಳ್ ದಾರ್ಢ್ಯಂ ಸಮಂತೊಪ್ಪುವಾ ಸುಖ ಪೂರ್ವಾರ್ಜಿತ ಪುಣ್ಯವೈ (ಸೋಮೇಶ. ೩೭). ೩. ಸ್ಥಿರವಾದುದು ; ದೃಢವಾದುದು. 'ಧರ್ಮದಾರ್ಢ್ಯ' ಪರಾ. [ ಸಂ. ]

**ದಾರ್ವ** (ಗು). ಮರದ ; ಮರದಿಂದ ಮಾಡಿದ. [ ಸಂ. ]

**ದಾರ್ವಾಘಾಟ** (ನಾ). ಮರಕುಟುಕ ಪಕ್ಷಿ : "ಶತಪತ್ರಕಃ, ದಾರ್ವಾಘಾಟಃ – ೨ ಮರಕುಟಕನ ಹಕ್ಕಿ" (ಸಿದ್ಧಾಂತಿ. ೧೩೮). [ ಸಂ. ]

**ದಾರ್ವಿ** (ನಾ). ಮರದರಿಸಿನ ; ದಾರುಹರಿದ್ರ : "ಸದಾಯುಗತ–ದಾರ್ವಿ" (ಓಷಧಿ. ೧೭೪). [ ಸಂ. ದಾರ್ವೀ ]

**ದಾರ್ವಿಕೆ** (ನಾ). ೧. ಮರದರಿಸಿನದಿಂದ ಮಾಡಿದ ಕಾಡಿಗೆ ಅಥವಾ ಕಣ್ಕಪ್ಪು ; ರಸಾಂಜನ : "ದಾರ್ವಿಕಾ, ಕ್ವಾಥೋದ್ಭವಂ, ತುತ್ಥಂ, ರಸಾಂಜನಂ, ರಸಗರ್ಭಂ, ತಾರ್ಕ್ಷ್ಯಶೈಲಂ – ೬ ರಸಾಂಜನದ ಹೆಸರುಗಳು" (ಸಿದ್ಧಾಂತಿ. ೦೩೯). ೨. ಒಂದು ಬಗೆಯ ಸಸ್ಯ ; ಎತ್ತುನಾಲಿಗೆ ಗಿಡ ; ಗೋಜಿಹ್ವೆ : "ಗೋಜಿಹ್ವಾ, ದಾರ್ವಿಕಾ – ೨ ಎತ್ತುನಾಲಗೆ ಗಿಡದ ಹೆಸರುಗಳು" (ಸಿದ್ಧಾಂತಿ. ೧೩೯). [ ಸಂ. ದಾರ್ವಿಕಾ ]

**ದಾರ್ಶನಿಕ** (ಗು). ೧. ತತ್ವಜ್ಞಾನಕ್ಕೆ ಸಂಬಂಧಿಸಿದ : ಈಸ್ಕಿಲಸ್ಸಿನ ಕೃತಿಗಳಲ್ಲಿ ಈ ಪ್ರಶ್ನೆ . . . ದಾರ್ಶನಿಕತರ್ಕವಾಗಿ ಎತ್ತಿ ಕಾಣದಿದ್ದರೂ ಅದನ್ನು ಗುರುತಿಸಲಾಗದಷ್ಟು ಅಸ್ಪಷ್ಟವಾಗಿಯೂ ಇಲ್ಲ (ಬದ್ಯಪ್ರ. LXVI ಟೀಕೆ). (ನಾ). ೨. ದರ್ಶನಗಳನ್ನು ತಿಳಿದವನು ; ತತ್ವಜ್ಞಾನಿ ; ವೇದಾಂತಿ: ದಾರ್ಶನಿಕನು ನೀರನ್ನು ಶೋಧಿಸಿ ಕುಡಿಯುವವನು (ಭಾರದ, ೦೮೩) ; ಆದ್ದರಿಂದಲೇ ಆತ್ಮಶಕ್ತಿ, ಆತ್ಮವಿಶ್ವಾಸ . . . ಇತ್ಯಾದಿಗಳಿಗೆ ಕೆಲವು ದಾರ್ಶನಿಕರು ಮಹತ್ವದ ಸ್ಥಾನವನ್ನು ಕೊಟ್ಟಿರುವುದು (ಶಿಕ್ಷದ. ೪೫೯) ; "ನಮ್ಮ ಇರವಿನ ಅರಿವು ನಮಗೆ ಪ್ರತಿಕ್ಷಣದಲ್ಲಿಯೂ ಆಗುತ್ತಿರುತ್ತದೆ . . . ಅದರ ಅಸ್ತಿತ್ವದಲ್ಲಿ ನಮಗೆ ಸಂದೇಹವೇ ಇಲ್ಲ" ವೆಂದು ಹಲವು ದಾರ್ಶನಿಕರು ಹೇಳುತ್ತಿರುತ್ತಾರೆ (ಜೀವಾತ್ಮ. ೪೭); ಆಧುನಿಕ ಮಹಾವಿಜ್ಞಾನಿಗಳನ್ನು ದಾರ್ಶನಿಕರ ಸಾಲಿಗೇ ಸೇರಿಸಬೇಕೆಂದೆನ್ನಿಸುತ್ತದೆ (ಪುಣ್ಯಾರ. ೭ ಟೀಕೆ). ೩. [ಜೈನ] ನೈಷ್ಠಿಕ ಶ್ರಾವಕರಲ್ಲಿಯ ಹನ್ನೊಂದು ತರಗತಿಗಳಲ್ಲಿ ಮೊದಲನೆಯ ತರಗತಿಯವನು : ಇಂತು ದಾರ್ಶನಿಕಂ ವ್ರತಿಕಂ ಸಾಮಯಿಕಂ ಪ್ರೋಷಧೋಪವಾಸಂ ಸಚ್ಚಿತ್ತವಿರತಂ ರಾತ್ರಿಭುಕ್ತಂ ಬ್ರಹ್ಮಚಾರಿ ಆರಂಭನಿವೃತ್ತಂ ಪರಿಗ್ರಹವಿರತಂ ಅನುಮತಿವಿರತಂ ಉದ್ದಿಷ್ಟವಿರತಂ ಎಂದು ಶ್ರಾವಕಸ್ಥಾನಂ ಪನ್ನೊಂದಕ್ಕಂ (ಧರ್ಮಾಮೃ. ೫-೦೪೭) ; ದಾರ್ಶನಿಕ – ಇವನು ನೈಷ್ಠಿಕ ಶ್ರಾವಕರಲ್ಲಿ ಮೊದಲನೆಯ ತರಗತಿಯವನು (ಜೈನಪ. ೪೭೭). [ ಸಂ. ]

**ದಾರ್ಶನಿಕವಾಣಿ** (ನಾ). ತತ್ವಜ್ಞಾನಿಗಳ ಮಾತು ; ದಾರ್ಶನಿಕರ ನುಡಿ : ಈ ದಾರ್ಶನಿಕವಾಣಿಗಾದರೂ ಅದರ ದಾರ್ಶನಿಕಶಕ್ತಿ ಹಾಗು ದಾರ್ಶನಿಕ ಅಭಿವ್ಯಕ್ತಿಗಳಿಗನುಗುಣವಾಗಿ ಬೇರೆ ಬೇರೆ ಶ್ರೇಣಿಗಳಿರುತ್ತದೆ (ಪ್ರಬಂಧ. ೧೨೫). [ ದಾರ್ಶನಿಕ + ವಾಣಿ$_1$ ]

**ದಾಷ್ಟಾರ್ಂತಿಕ** (ಗು). ೧. ದೃಷ್ಟಾಂತದೊಡನೆ ಕೂಡಿದ ; ದೃಷ್ಟಾಂತದಿಂದ ವಿವರಿಸಲ್ಪಟ್ಟ. (ನಾ). ೨. ದೃಷ್ಟಾಂತದಿಂದ ಸ್ಥಿರಪಡಿಸಿದುದು: ಜ್ಞಾನದ ಕರ್ಮವು ಇಲ್ಲದಿದ್ದರೂ 'ಅದು ಯೋಚಿಸಿ ನೋಡೀತು' (ತದ್ವ್ಯತಿಕ) ಎಂದು ಕರ್ತೃತ್ವನ್ನು ಹೇಳಬಹುದಾಗಿದೆ. ಆದ್ದರಿಂದ ದೃಷ್ಟಾಂತ ದಾಷ್ಟಾರ್ಂತಿಕಗಳಿಗೆ ಹೋಲಿಕೆ ಇಲ್ಲದೆ ಇಲ್ಲ (ಬ್ರಹ್ಮಥಾ. ೮೪).

[ ಸಂ. ]

**ದಾಲ** (ನಾ). ೧. ಒಂದು ವಿಧವಾದ ಕಾಡಂಜೇನು. ೨. ಮಕರಂದ ; ಪುಷ್ಪಪರಾಗ. [ ಸಂ. ]

**ದಾಲಕ್ಷ** 'ದಹಲಕ್ಷ' ನೋ.

**ದಾಲಚಿನಿ** 'ದಾಲಚಿನ್ನಿ' ನೋ.

**ದಾಲಚಿನ್ನಿ, ದಾಲಚಿನಿ, ದಾಲಚಿನ್ನೆ, ದಾಲ್ಚಿನ್ನಿ, ದಾಲ್ಚಿನ್ನೆ** (ನಾ). ಸಾಂಬಾರಿಗೆ ಬಳಸುವ ಮಸಾಲೆಯ ಸಾಮಾನುಗಳಲ್ಲಿ ಒಂದು ; ಮಸಾಲೆಚಕ್ಕೆ ; ಲವಂಗ ಪಟ್ಟೆ : ಸಿಂಹಲ ದ್ವೀಪದಲ್ಲಿ ದಾಲಚಿನ್ನಿ, ಮೆಣಸು ಮುಂತಾದ ಮಸಾಲೀ ಸರಕುಗಳು . . . ಬಹಳ ಆಗುತ್ತವೆ (ಮುಂಬಯಿ. ೪-೨೦೧) ; ಸೀಮೆಸುಣ್ಣದ ಪುಡಿ ೨ ತೊಲ . . . ದಾಲಚಿನ್ನಿ ೧ ತೊಲ–ಇವುಗಳನ್ನೆಲ್ಲಾ ಚೆನ್ನಾಗಿ ಪುಡಿಮಾಡಿ . . . ಪರಡಾವೃತ್ತಿ ಕುಡಿಸುವುದು (ಗ್ರಾಮೂಶ. ೧೨೪). ದಾಲಚಿನಿ : ಲೋಭಾನ, ಕಾಚು . . . ದಾಲಚಿನಿಯ ಎಣ್ಣೆ, ಗುಲಾಬನೀರು ಮುಂತಾದವುಗಳು (ಮುಂಬಪ್ರಾ. ೯೯). ದಾಲಚಿನ್ನೆ : ದಾಲಚಿನ್ನೆ ಅಡವಿಯಲ್ಲಿ ಸಾಧಾರಣ. ಬಹಳ ಎತ್ತರವಾಗುವುದಿಲ್ಲ. ಕಾಯಿಗಳಿಂದ ಎಣ್ಣೆ ಹೊರಡುತ್ತದೆ. ಅದು ಔಷಧಕ್ಕೆ ಬರುತ್ತದೆ (ಕಭಾಗ. ೪೧). ದಾಲ್ಚಿನ್ನಿ : ಜಾಯಿಕಾಯಿ, ಏಲಕ್ಕಿ . . . ದಾಲ್ಚಿನ್ನಿ, ಲವಂಗಪತ್ರೆ . . . ಚೂರ್ಣಿಸಿ ಜೇನುತುಪ್ಪದಲ್ಲಿ ಕಲಿಸಿ ತೆಗೆದುಕೊಳಲು ಬಹುಮೂತ್ರ ಕಲ್ಲುಕಟ್ಟು ಸಹ ಮಾಣುವುವು (ಸಕವೈ. ೫೦೦ ಪರಿ) : ಕ್ರಿ.ಪೂ. ೧೫ನೆಯ ಶತಮಾನದ ಈಜಿಪ್ಟ್ ಶಿಲಾಶಾಸನಗಳಲ್ಲಿ ಕಂಡುಬರುವ ಲವಂಗಪಟ್ಟೆ ಅಥವಾ ದಾಲ್ಚಿನ್ನಿ ಮಲಬಾರಿನಲ್ಲಿ ಉತ್ಪನ್ನವಾಗುವ ವಸ್ತುವನ್ನೇ ಪ್ರಾಯಶಃ ಸೂಚಿಸುತ್ತದೆ (ದಭಾಇ. ೩೨). ದಾಲ್ಚಿನ್ನೆ : ಸಿಂಹಳ ದ್ವೀಪದಲ್ಲಿ ದಾಲ್ಚಿನ್ನೆಯ ಗಿಡಗಳು ಬಹಳ (ಮುಂಬಯಿ. ೩-೭೩).

[ ←ಪಾರ. ಹಿಂ. ದಾರ್ಚೀನೀ ; ಮರಾ.ದಾರುಚಿನೀ, ದಾಲ್‍ಚಿನೀ ]

**ದಾಲಚಿನ್ನೆ** 'ದಾಲಚಿನ್ನಿ' ನೋ.

**ದಾಲಿಮ** (ನಾ). = ದಾಳಿಂಬ. [ ಸಂ. ]

**ದಾಲುಮರ** (ನಾ). ಒಂದು ಬಗೆಯ ಮರ : ಹೆಸವ . . . ಕವಲು, ಗಂಡಗರಿಗೆ, ದಾಲುಮರ, ಅರಸಿನಬೂರುಗ (ನಮ್ಮನು. ೨೩೭).

[ ದಾಲು? + ಮರ$_1$ ]

**ದಾಲ್ಚಿನ್ನಿ** 'ದಾಲಚಿನ್ನಿ' ನೋ.

**ದಾಲ್ಚಿನ್ನೆ** 'ದಾಲಚಿನ್ನಿ' ನೋ.

**ದಾವ$_1$** 'ದಾವುದು' ಪರಾ.

**ದಾವ$_2$** (ನಾ). ೧. ಕಾಡು ; ಅಡವಿ ; ಕಾನನ : "ಅಡವಿಯುಲ್ಲಿಯುಂ, ದವ, ದಾವ ಎಂಬುದು" (ಹಲಾಯು. ೧೩೩–೧೩) ; ಭವದಾವದಲ್ಲಿ ತೊಳಲುವ ಜೀವರಿಗೆ ಸದಾ ಶಿವಪಥವ ತೋರ್ಪ ಗುರುವರ್ಯ ಬಿನ್ನಪವನವಧರಿಪುದೀಗ (ಅನುಸಾ. ೨-೧-೨). ೨. ಕಾಡುಗಿಚ್ಚು ; ಕಾಳ್ಗಿಚ್ಚು ; ಕಾಡಂಬೇಗೆ : "ವನವಹ್ನಿಃ, ದವಃ, ದಾವಃ–ಈ ಮೂರು ಕಾಟ್ಕಿಚ್ಚು" (ಹಲಾಯು ೧೩-೭೦); "ನಿಮಿರ್ದ ಕಾಂತಾರದಲ್ಲಿಯ ಕಿಚ್ಚು ದಾವಂ [ದವಂ]" (ಮಂಗರಾ. ೧೪-೯) ; ಶಾಶ್ವತನವತರಿಸಿರ್ದಂ ಗದಾಶಂಖಚಕ್ರಾಂಕಿತಹಸ್ತಂ ವಾಸುದೇವಂ ದನುಜವಿಪಿನದಾವಂ, ಸಮಸ್ತಪ್ರಭಾವಂ (ಜಗವಿ. ೨-೦೦೦). ೩. ಕಿಚ್ಚು ; ಬೆಂಕಿ ; ಶಾಖ. [ ಸಂ. ]

**ದಾವಂತ** 'ಧಾವಂತ' ನೋ.

**ದಾವಂತಬಡಿಸು** (ಕ್ರಿ). ಗಾಸಿಪಡಿಸು ; ಬಳಲಿಸು ; ಆಯಾಸಪನ್ನುಂಟುಮಾಡು : ದಾವಂತಬಡಿಸಿ ದೇಹವನು ಪಸಿದಿರಲೇಕೆ ಶ್ರೀವರನನಂತನಾಮದೊಳು (ತಿರುಕ. ೭-೩೧).

[ ದಾವಂತಬಡು (<ಧಾವಂತಪಡು) + – ಇಸು$_3$ ]

**ದಾವಂತಬಡು** 'ಧಾವಂತಪಡು' ನೋ.

**ದಾವಡಸು** (ಕ್ರಿ). ಬಾಯಾರು ; ನೀರಡಿಕೆಯುಂಟಾಗು : ಮೃಗವನ್ನು ಕಾಣದಿರಲು ಬಳಲಿ ಬಸವಳಿದು ದೂವಡಿಸಿ [ದಾವಡಸಿ] ನೀರಂ ಕಾಣದಳಲಿಯರಸುತ್ತಿರಲು (ತುರಂಗ. ೩೪-೪೭).

[ ದಾವು$_1$ <ದಾಹ) + ಅಡಸು ]

**ದಾವಣ$_1$** (ನಾ). ಚಪ್ಪರ ; ಹಂದರ : ಪಾದರಿಯ ನೆಲಮಾಡಂಗಳೊಳಂ ದವನದ ದಾವಣಂಗಳೊಳಂ ಮಲ್ಲಿಗೆಯ ಮನೆಗಳೊಳಂ ಕಪ್ಪುರದ ಸೊದೆಯೊಳಂ ಸೊಂಪುವಡೆದ ಕಂಪಿನ ಪೊಟಲೆಂಬ ಬೀಡು ಬಗೆಗೊಳಿಸುತಿರ್ಪುದು (ಕಬ್ಬಿಕಾ. ೧೧೮); ದುರ್ಗಶಿಕ್ಷೇಶಕರಮಪ್ಪ ಮದ್ಯಂ ದೇವತೆಗೆಂದುಂ ಮಂತ್ರಸಿದ್ಧ್ಯರ್ಥಮಾಗಿಯುಂ ಮನೆ ಕೊಟ್ಟಗೆ ದಾವಣ ರಾಶಿ ತೋಂಟಂ ಮೊದಲಾದುವನರ್ಚಿಸಲೆಂದುಂ ಮನವಚನಕಾಯದಿಂ ಮಾಡಲಾಗದು ಮಾಡಿಸಲಾಗದು ಮಾಡುವನ್ನಗೊಡಂಬಡಲಾಗದು (ಚಸಾರ. ೨೯೮). 'ಕಾವಣ' ಪರಾ.

[ ದೇ.॥ ತಮಿ. ತಾವಳ ; ತೆಲು. ತಾವಲ = ನಿವಾಸ, ವಾಸಸ್ಥಾನ ]

**ದಾವಣ$_2$** (ನಾ). ಒಬ್ಬಾತನ ಹೆಸರು : ಸಿರದ ದವಟೆಯರ ಮಗ ದಾವಣಗವುದದ ಮಹಾ ಜನಕ್ಕೆ ಕೊಟ್ಟದು ಶಾಲೆ (ಎಕ. VII, ಶಿಕಾರಿ. ೪೫ (b)-೩೩; ಸು. 890 ?). [ <ದೇವಣ್ಣ ]

**ದಾವಣ$_3$** 'ದಾಹಣೆ' ನೋ.

**ದಾವಣಪೇರುಂದವ್ವ** (ನಾ). ಒಬ್ಬಾಕೆಯ ಹೆಸರು : ಇ ಧಮ್ಮದಿ ದಾವಣ ಪೇರುನ್ದವ್ವಜಿಗ್ಗ ಕೊಟ್ಟೊದಂ ಐಗುಳ ಕಟನಿ ಪರಿಹಾರ (ಎಕ. X, ಶ್ರೀನಿವಾ. ೭-೧೩ ; ಸು. 780). [ ದಾವಣ$_2$ + ಪೇರುಂದವ್ವ$_0$ ]

**ದಾವಣೆ$_1$, ಡಾಣೆ$_1$, ಡಾವಣ, ಡಾವಣೆ, ಡಾವಣೆ, ಧಾವಣೆ, ದವಣೆ, ದವನಿ, ದಾಮಿಣಿ, ದಾವುಣೆ** (ನಾ). ೧. (ದನಕರುಗಳನ್ನು ಸಾಲಾಗಿ ಕಟ್ಟುವ) ಹಗ್ಗ ; ಹುರಿ ; ಪಾಶ : "ದಾಮಿಣಿಯೆನಲು ದಾವಣೆ" (ಮಂಗರಾ. ೧೦೯-೩) ; ದಾವಣೆ[ಪಾಠಾಂ. ಣೆ]ಯೊಳ್ಕಟ್ಟಿರ್ದ ಜೀವಧನಮದೊಂದೆ ಮಗ್ಗುಲಿಂದಿರದೊಡವಿನ್ನೇವೇಟ್ಟುದಧಿಕಮೆನಿಸುವ ಜೀವಧನಮನೆಂದು ಸೇಸೆದಳಿವವಮೂರ್ಧರ್ (ಸಮುಪ ೩೮೨-೩೮ ಅನುಬಂಧ. ೧); ಆವ ಕುಲದಲಿ ಪುಟ್ಟಲಿ ಪರವೆಣ್ಣಳ ಭಾವಿಸನಾವನವನಿಗೆ ದೇವರು ಸರಿಯಲ್ಲ ನರಪಶುಗಳ ಬಲು ದಾವಣೆಯವನೆ (ಕುಡಸಾಂ. ೧-೯೪) ; ರಾವು ಗೋಚರಮಾಗದಿರೆ ಕೋಪ ವೆಗ್ಗಳಿಸಿ ತೀವಿ ಭದುರೋಪಮಿತ ಶಬ್ದವೇಧಿಯ ತೆಗೆದು ದಾವಣೆಯುನಿಟ್ಟು [ಪಾಠಾಂ. ರಾವವನ್ನರಿದು] ಕೊಂದವೆನೆನಲು ಥಾವವನ್ನರಿದು ಯಕ್ಷಿಣಿಯು ಜವದಿ ಮುಂಬರಿದು (ಪಂಚಾರಾ. ೧-೧೨-೪೨); ಕೊರಳ ದಾವಣೆಗೆ ಕುಣಿಕೆ ಬೇಕು ಕವಲೆತ್ತಿಗೂನು ಕಣಿಕೆ (ಅರಲು. ೨೯೨-೭); ಪುಂಡಿ ನಾರಿನ ಹಗ್ಗ ಹೊಸೆಯುವುದು, ಎತ್ತು ದನ ಕಟ್ಟುವ ದಾವಣೆ ತಿರುಪುವುದು (ಮಲೆಮ. ೭೦). ೨. ಕಟ್ಟು ; ಬಂಧನ : ಹೊಟ್ಟೆಯ ಪಾಡಿಗೆ ದುಡಿಯುವ ದಾವಣೆಯಲಿ ಸಿಕ್ಕಿ ಚಲಿಸುತ್ತಿವೆ ದಿಟ ನಿನಗಾ ಸಂಕುಲ ಪಂಕ್ತಿಯ ಬಕಪಕ್ಷಿ (ಅನಿಕೇ. ೪೭-೧೧); ನಾವಾದರೂ ಅರಸರ ದಾವಣೆಯಲ್ಲಿ ಸೇರತಕ್ಕವರೆ (ಮುಭಾರ. ೩೦). ೩. ಸಾಲು ; ಪಂಕ್ತಿ : ಆಟಾಟಿಗೆ ಬಲ್ಲಾಳನ ದಾಟಿಯಂ ದಾವಣೆಯ ತುರಗ ದಟ ಖುರಹತಿಯಿಂ ಪೇಟಿ ಪೆಸರಿಲ್ಲದಂತಿರೆ ಪಾಟಿದುವು ವೈರಿದುರ್ಗಮೆನಿತೊಳವನಿತುಂ (ಯಕೋಚ. ೧-೦೪) ; ಧರಣೀದೇವರನು ಸತ್ಕರಿಸಿ ಕಿಲಘರತ್ನರುಕ್ಮದಲ್ಲಿ ಥಾ [ದಾ [

ವಣಿ[ಪಾಠಾಂ. ಳಿ]ಯ ಸುರಭಿಗಳನಖಿಳ ಮಹಾವಿಭವಸಹಿತೆಱೆದು ಧಾರೆಯನಾವರಾಂಬಂಧಿಯಿತ್ತನು (ನಿಘಾಗ. ೧೦-೭೮-೨). ೪. ಗುಂಪು; ನೆರವಿ; ಸಮೂಹ: ಭೈರವನ ತೆತ್ತಿಗರ ದಾವಣಿಯೊಳಣ್ಣನ ಮತ್ತವಾರಣ ಭೀಮಸೇನನನಿತ್ತ ನೋಡ್ಯೆ ಮಗನೆ ಕುರುಕುಲಕೇಣಿಕಾಱನನು (ಕುವ್ಯಾಭೀ. ೨-೧೬); ದೇವ ನೀ ಬಹನೆಂದು ಬಂದರು ದಾವಣಿಯ ಹವಣಱಿದು ಬಳಿಕ ಮಹಾವಿಳಾಸದೊಳೊಪ್ಪವಿಟ್ಟರು ತಮ್ಮ ನಗರಿಗಳ (ಕುಬ್ಕಾವಿ. ೧೦-೪೭). ೫. ದನಗಳನ್ನು ಕಟ್ಟುವ ಸ್ಥಳ; ಕೊಟ್ಟಿಗೆ: ಇನ್ನು ಛತ್ರಕ್ಕೆ ಹೋಗಿ ಊಟ ತೀರಿಸಿಕೊಂಡು ನಮ್ಮ ದಾವಣಿಯ ಹತ್ತಿರ ಹಿಂತಿರುಗಿ ಬಂದು . . . ಕುಳಿತುಕೊಂಡೆವು (ಹಂಗಾಳ್ಯ. ೩೫೩). ಡಾಣಿ$_1$: (ಕ). ಡಾವಣ: ೧. ಆಣೆಯುಳ್ ಡಾವಣವೊಡ್ಡುವೊನ್ (ಎಇ. IX. ೦೮-೧೦ ; ೩೦೦). ಡಾವಣಿ: ೨. ಕಣೆಗಳೋ ಕಲ್ಪಾಂತ ವಹ್ನಿಯ ಡೊಣೆಗಳೋ ಹಾಳಾಹಳದ ಡಾವಣಿಗಳೋ ನಾವಱಿಯೆವು (ಕುವ್ಯಾಕ. ೨೦-೯); ಹ್ಯಾವರಿಕೆ ಸಂಸಾರ ಡಾವಣಿಯ ನಡುವೆ ಕೊರಳಾವಲಿಗೆ ಸಿಗಬಿದ್ದು ಮಿಡುಕುತಿಪ್ಪ ಜೀವಾಧಮನು ನಿನ್ನ ಮೆಚ್ಚಿಸಲಾಪನೆ (ವಿಸೂ್ತಸು. ೩೦-೧). ಡಾವಣಿ: ೧. ವಾರುವಗಳ ಡಾವಣಿ ನೇಣ್ಗಳ ಬಲು ಬೀರುಗುಣಿಕೆಗಳ ಪಱಿದು ಕೇರಿ ಕೇರಿಯೊಳು ತಮ್ಮಿಚ್ಛೆಯೊಳಗೆ ಸಲೆ ತಾಱುಮಾಱಾಗಿಯೋಡಿದುವು (ಕಂಜವಿ. ೦೫-೯೧). ಧಾವಣಿ: ೩. 'ಧಾವಣಿಗಿರಿ' ಪರಾ. ದವಣಿ: ೫. ಇನ್ನು ಈ ಮನೆಯೊಳಗೆ ಮಲಗಿಕೊಂಡರೆ ದನದ ದವಣಿಯೊಳಗೆ ಮಲಗಿದ ಹಾಗೆ (ಪ್ರಹಾಹ. ೨೧). ದವನಿ: ೫. ತಾರಕ್ಕ ಕಟ್ಟೆಯ ಮೇಲಿಂದ ಒಮ್ಮೆಲೇ ಕೆಳಗುರುಳಿ ಬಿದ್ದಳು ದನಗಳನ್ನು ಕಟ್ಟುವ ದವನಿಯಲ್ಲಿ (ನಿಸರ್ಗ. ೩೪೮). ದಾಮಿಳಿ: ೧. "ದಾಮಿಳಿ ಯೆನಲು ದಾವಣಿ" (ಮಂಗರಾ. ೦೦೯-೩). ದಾವುಣಿ: ೧. ಏರಿದನು ಕೈಯೊಡನೆ ಖಳನೇಳ್ನೂರು ಘಂಟೆಯ ರಥವ ಮದಕರಿ ಮೂರು ಸಾವಿರ ಸೇರಿದವು ದಾವುಣಿಯ ನೊಗಗಳಲಿ . . . ಹದಿನಾರು ಸಾವಿರ ಬಂಡಿಯಲಿ ನೂಕಿದಂವು (ಅಱಿಕಾ. ೧೯-೩೧). [ <ಸಂ. ದಾಮನೀ ]

ದಾವಣಿ$_2$, ಧಾವಳಿ (ನಾ). ಲಂಗವುಟ್ಟ ಹೆಣ್ಣುಮಕ್ಕಳಂ ಧರಿಸುವ ಮೇಲಂಹೊದಿಕೆ: ವೈಷ್ಣವಭಕ್ತರು ಅವಳ ದಾವಣಿಯ ಸೆರಗು ಮಾತ್ರ ಪರಮಾತ್ಮನ ಮೇಲಿರುವುದನ್ನು ಕಂಡರು (ಭಕ್ತಮಿ. ೯೨). ಧಾವಳಿ: ಪಟೇಲರ ಮಗ ನನ್ನನ್ನು ದುರುಗಟ್ಟಿ ನೋಡಿ ನಾನು ಹೊದ್ದಿದ್ದ ಧಾವಳಿಯನ್ನು ಕಿತ್ತೆಸೆದ (ಗೋಪುರ. ೩೫); ಕಾಲಿನ ಕಿರಿಗೆಜ್ಜೆಗಳಿಂದ ಹಿಡಿದು ತಲೆಯ ಮೇಲೆ ಹೊದೆದಿದ್ದ ಧಾವಳಿಯವರೆಗೆ ಎಲ್ಲವೂ ಸ್ಥಳೀಯ ಉಡುಗೆಯೇ ಆಗಿದ್ದಿತು (ಝೂರಾಹ. ೯೦).

[ ←ಪಾರ. ದಾಮನೀ ; ಹಿಂ. ದಾಮನ್ = ಸೆರಗು, ಅಂಚು ]

ದಾವಣಿ$_3$ 'ದಾಹಣಿ' ನೋ

ದಾವಣಿಗಟ್ಟು$_1$, ಡಾವಣಿಕಟ್ಟು (ಕ್ರಿ). ೧. ಸಾಲಾಗು; ಸಾಲುಗಟ್ಟು: ದಾವಣಿಗಟ್ಟಿದ ಮಧುಕರಜೀವಧನಕ್ಕೆಕ್ಕುವಂತೆ ಮೇಪಂ ಸಖಿ ಲೀಲಾವತಿಯ ಮಂತಿಗುರುಳೊಳ್ ಪೂವಿನ ಕೇಸರದ ರಜಮನೊರ್ವಳ್ ತಳಿದಳ್ (ಲೀಲಾವ. ೦೨-೭೦). ೨. ಸಾಲಾಗಿ ಕಟ್ಟು; ಮಾಲೆಗಟ್ಟು: ಮಱಿಮಿಂಗಳ ದಾವಣಿಗಟ್ಟಿದವೋಲ್ ಬೆಳ್ದಿಂಗಳ ಹಕ್ಕಿಯ ಹಸುಳೆಗಳ ಲಾವಣಿಗೆಯ ಮುಸುಕಿದವೋಲ್ . . . ಕುವರನ ಲಾವಣ್ಯಾಂಗ ಮನಡದರ್ಪು ಪುರಸತಿಯರ ಕಣ್ಗಳ ಬೆಳಗು (ಜಯುಕಾ. ೧೦-೫೫). ಡಾವಣಿಕಟ್ಟು: (ಕ). [ ದಾವಣಿ$_1$ + ಕಟ್ಟು$_1$ ]

ದಾವಣಿಗಟ್ಟು$_2$ (ನಾ). (ಹೂವನ್ನು) ಸಾಲಾಗಿ ಕಟ್ಟಿರಂಮಂತಹಂದಂ; ಮಾಲೆ: ನನೆಯಂ ದಾವಣಿಗಟ್ಟಂ ಕಟ್ಟುತ್ತಿನಿಯಗರ್ಪಿಸಿ ಕೊಡುವ ಪೊಲಿತ್ತವರ್ನಿತೆಯರಾ ಪೂವಿನ ಪೇಟೆಯೊಳ್ಪಿಸಿಗವಂ ವಿಟರ್ಗ (ಜಯುಕಾ. ೧-೫೮). [ ದಾವಣಿ$_1$ + ಕಟ್ಟು$_2$ ]

ದಾವಣಿಗುಱಿ (ನಾ). ಹಗ್ಗದಿಂದ ಸಾಲಾಗಿ ಕಟ್ಟಿದ ಕುರಿ: ನಿನ್ನಸಿ ಮುಖದಿಂ ದಾವಣಿಗುಱಿಯಂ ತಱಿದೊಡೆ ದೇವಿ ಶುಭೇತರವಿನಾಶಮಂ ದಯೆಗೆಯ್ಗುಂ (ಯಶೋಚ. ೩-೧೩). [ ದಾವಣಿ$_1$ + ಕುಱಿ$_3$ ]

ದಾವಣಿಗೂಂಟ (ನಾ). ಹಗ್ಗ ಬಿಗಿಯಲು ಹೊಡೆಯುವ ಗೂಟ: ದಾವಣಿಗೂಂಟಮಂ ಪೊಡೆವ ಕಾಟ್ಕುರುಳಂ ಪರಿದಾಯ್ದು ಪೇರ್ಗಳಂ ಕಾವಱಿದೊಟ್ಟಲೊಟ್ಟುವ . . . ಆಡುವ ದೋಲಿಗರಿಂದೆಸೆದಂ ವಣಿಗ್ವರಂ (ದಶಕು. ೪-೭೮). [ ದಾವಣಿ$_1$ + ಗೂಂಟ ]

ದಾವಣಿಗೆ (ನಾ). = ದಾಹಣಿ: ದಾವಣಿಗೆಯೊಳ್ ಕುಟ್ಟಿ (ಲಕ್ಷ್ಮೀಧಾ. ೭-೬-೬). [ ದಾವಣಿ$_3$ (<ದಾಹಣಿ) + –ಗೆ ]

ದಾವಣಿಗೆಡಹು (ಕ್ರಿ). ಸಾಲಿನಲ್ಲಿ ಉರುಳಿಸಂ: ಮಗಧನ ಹೆಣನ ದಾವಣಿ [ಣಿ]ಗೆಡಹಿದನು ಸಮರಂಗಭೂಮಿಯಲಿ (ಕುವ್ಯಾದ್ರೋ. ೬೦ಇ ಪು. ೨೮೦).

[ ದಾವಣಿ$_1$ + ಕೆಡಹು (<ಕೆಡಪು) ]

ದಾವಣಿಗೊಳ್ (ಕ್ರಿ). ಗುಂಪುಗೂಡಂ; ಒಟ್ಟಾಗಂ: ದಾವಣ [ಪಾಠಾಂ. ಗಾವಳಿ]ಗೊಂಡೆಱಗಿದ ಭೃಂಗಾವಳಿಯಂ ಸೋವಲ್ (ಲೀಲಾವ. ೦೩-೭೬).

[ ದಾವಣಿ$_1$ + ಕೊಳ್$_1$ ]

ದಾವಣಿಸುಳಿ (ನಾ). ಕೊರಳಿನ ಹತ್ತಿರ (ಹಗ್ಗ ಕಟ್ಟುವ ಬಳಿ) ಇರುವ ಸುಳಿ: ದನಾ ಪರೀಕ್ಷೆ ಮಾಡೋವಾಗ ಹೀನಸುಳಿ, ಪಾತಾಳಸುಳಿ, ದಾವಣಿ ಸುಳಿ . . . ಕೋರಬಗ್ರಿ, ಕೊಮ್ಗಲ್ಲು ಇವೆಲ್ಲಾನೂ ಚಂದಾಗಿ ನೋಡಿ ಒಳ್ಳೆ ಸುಳಿ ಇರೋದ ತತ್ತಾಲಾ (ಹುಟ್ಯಹ. ೧೩೯).

[ ದಾವಣಿ$_1$ + ಸುಳಿ$_2$ (<ಸುೞಿ$_2$) ]

ದಾವಣೆ 'ದಾಹಣಿ' ನೋ.

ದಾವತಿ 'ಧಾವತಿ' ನೋ.

ದಾವತಿಗೊಳ್ 'ಧಾವತಿಗೊಳ್' ನೋ.

ದಾವತಿಪಡಿಸು (ಕ್ರಿ). ಸಂಕಟವನ್ನುಂಟುಮಾಡು; ಆಯಾಸಗೊಳಿಸಂ:

[ ದಾವತಿಪಡು (<ಧಾವತಿಬಡು) + – ಇಸು$_3$ ]

ದಾವತಿಪಡು 'ಧಾವತಿಬಡು' ನೋ.

ದಾವತಿಬಡು 'ಧಾವತಿಬಡು' ನೋ.

ದಾವತಿವೆಱು (ಕ್ರಿ). ಬಳಲಿಕೆಯನ್ನು ಹೊಂದು; ಶ್ರಮಪಡಂ: ದಾವತಿವೆತ್ತುವಂದ ಋತುಪರ್ಣನೃಪಂ ಪುರದೊಳ್ ನಿರಂತರಂ ತೀವಿದ ವಾರ್ತೆಯಂ ಪಲಬರಿಂ ತಿಳಿವಂತಿರೆ ಕೇಳ್ದು (ನಳಚಂ. ೭೪೮).

[ ದಾವತಿ (<ಧಾವತಿ) + ಪೆಱು$_1$ ]

ದಾವತಿಹಿಡಿ (ಕ್ರಿ). ಕೆಲಸವನ್ನು ಪ್ರಾರಂಭಿಸು; ಕಾರ್ಯೋನ್ಮುಖನಾಗಂ: ಮಾಳೂನನ್ನು ನೋಡಿ ಮುಂಗೈ ತಗುಲಿಸಿ ಕೆಳದನಿಯಲ್ಲಿ ಕೇಳಿದನು "ದಾವತಿ ಹಿಡಿಯಲಾ ?" (ಪವನ. ೧೩).

[ ದಾವತಿ (<ಧಾವತಿ) + ಹಿಡಿ$_1$ (<ಪಿಡಿ$_1$) ]

ದಾವದಗ್ಧ (ಗುಂ). ಕಾಳ್ಗಿಚ್ಚಿನಿಂದ ಸುಟ್ಟ: ಎನೆ ದಾವದಗ್ಧಗಿರಿ ನೂತನ ಜಳದಜಳಂಗಳಿಂದಮಾಱುವವೋಲ್ ಭೋಂಕನೆ ಭರತನನಾಱಿಸಿದಂ ಮುನಿವಿನುತ ಗಣಾಧಿನಾಥವಚನಾಮೃತದಿಂ (ಆದಿಪು. ೧೬-೭೦).

[ ದಾವ$_2$ + ದಗ್ಧ ]

ದಾವದಹನ (ನಾ). ಕಾಡಿನ ಕಿಚ್ಚು; ಕಾಳ್ಗಿಚ್ಚು: ಮದನದಾವದಹನಂ ತಳ್ತಿರ್ದಪುದಿಲ್ಲ ನಿನ್ನಂ (ಕಾದಂಪೂ. ೮೪೯). [ ದಾವ$_2$ + ದಹನ ]

ದಾವಧೂಮ (ನಾ). ಕಾಡಂಕಿಚ್ಚಿನ ಹೊಗೆ: ಅವು(ವಿ)ಗೆಯ ಕಿಚ್ಚಿನಂತೆ ದಾವಧೂಮ [ಪಾಠಾಂ. ಧಾವಾಧೂಮ] ವಾದಂತೆ ಆವ ಓಡ ಸುಟ್ಟನೆಂದ ಱಿಯೆನವ್ವಾ (ಸರ್ವವ. ೭೫-೪೦೫). [ ದಾವ$_2$ + ಧೂಮ ]

ದಾವಪಾವಕ (ನಾ). = ದಾವದಹನ: ದಾವಪಾವಕಂ ಬಳಸೆ ಸುರುಳ್ದ ಬಾಳ ಸಹಕಾರಮಹೀರುಹಂ (ಆದಿಪು. ೨-೫೯); ದಾವಪಾವಕಜ್ವಾಲೆಯಂ

ಕಂಡ ವನಶಿಖಂಡಿಯುಂತೆಯುಂ ಗರುಡಚಂಚುವಂ ಕಂಡ ಕಂಚುಕೀಂದ್ರನಂತೆಯುಂ ಭಯುಂಗೊಂಡು (ಪುಷ್ಪಪು. ೧೩-೨೬ ವ).

[ ದಾವ$_2$ + ಪಾವಕ ]

**ದಾವಯ್ಯ** (ನಾ). ಒಬ್ಬಾತನ ಹೆಸರು : ಸ್ವಸ್ತಿ ಶ್ರೀ ದಾವಯ್ಯನ ಕಿಱಿಯ ನಾರಾಯಣಂ ರಾಜಾಶ್ರಯ ವಿಣ್ಣಗರ ದೇವಗ್ಗೆ ತನ್ನ ಪಡುವಣ ತೋಂಟ್ವ ಕಟನಿಯಲ್ (ಎಕ. XIV, ಮಳವ. ೧೨೫-೦ ; ಸು. 1014).

[ <ದೇವಯ್ಯ ]

**ದಾವರ** 'ಡಾವರ' ನೋ.

**ದಾವರಂಗ** (ನಾ). ಒಂದು ಸ್ಥಳದ ಹೆಸರು : ದಾವರಙ್ಗದ ದೊದಿಪನ್ನಿಗಲಿಯು ಕಲ್ಲೂರು ಕಬೂರುವೊಳನಿಕೆ (ಎಕ. XII, ತಿಪಟೂ. ೧೦-೩; ಸು. 920 ?). [ ? ]

**ದಾವರಿಸು** 'ಡಾವರಿಸು' ನೋ.

**ದಾವಶಿಖಿ** (ನಾ). = ದಾವದಹನ : ಉಗ್ರಾರಿವಂಶಲತಾವಲ್ಲರಿಗಳ್ಗೆ ದಾವಶಿಖಿಪೊಲ್ಮೆಯ್ದೋಱೆ (ಪಂಪಭಾ. ೩-೩೩) ; ರತ್ನಶಿಲಾಗೃಹಮಂ ಸಿಡಿಲಂತಿರೆ ಧವಲಹಾರಮಂ ದಾವಶಿಖಿಪೊಲಳುರ್ದುದು ದಹನಂ (ಪಂರಾಮಾ. ೧೧-೧೪೧). [ ದಾವ$_2$ + ಶಿಖಿ ]

**ದಾವಾ, ದಾವೆ$_1$** (ನಾ). (ವ್ಯವಹಾರಕ್ಕೆ ಸಂಬಂಧಿಸಿದ) ವ್ಯಾಜ್ಯ ; ಮೊಕದ್ದಮೆ ; ಕಟ್ಲೆ : ವಾದಿಯು ದಾಖಲ್ಮಾಡಿದ ದಾವಾಕ್ಕೆ ಪ್ರತಿವಾದಿಯ ಉತ್ತರವೂ ಆದಕ್ಕೆ ವಾದಿಯ ಜವಾಬೂ . . . ಕೋರ್ಟಿಗೆ ದಾಖಲಾಗುತ್ತಿದ್ದುವು (ಮಹಾವಂ. II, ೪೫). **ದಾವೆ$_1$** : ಕೋರ್ಟಿನಲ್ಲಿ ದಾವೆಗಳನ್ನು ಹಾಕಿದರೆ ಆ ದಾವೆಗಳ ತೀರ್ಮಾನ ಪ್ರತಿವಾದಿಗೆ ಬರೆದು ಕೊಟ್ಟ ಪತ್ರದ ಆಧಾರದ ಮೇಲೆ ಆಗುತ್ತದೆ (ಪ್ರಬಾಇ. I. ೩೮೭); ಆಸ್ತಿ, ಸಂವಿದೆಗಳು, ಅಧಿಕಾರಗಳು, ದಾಯಿತ್ವಗಳು, ಆಭಾರಗಳು ಮತ್ತು ದಾವೆಗಳು (ಭಾಧಾನ. ೧೭೯) : ರೆಗ್ಯುಲೇಷನಿನ ೬ನೆಯ ಪ್ರಕರಣದ ಮೇರೆ ದಾವೆಗಳನ್ನು ವಿಚಾರಿಸುವ ಬಗ್ಗೆ . . . ಹೆಸರುಗಳು ಸೇರಿರತಕ್ಕದ್ದು (ಗ್ರಾಮಾಕ. ೧೧).

**ದಾವಾ ಅರ್ಜಿ** = ಕೋರ್ಟಿನಲ್ಲಿ ತಗಾದೆ ಹೂಡಲು ಕೊಡುವ ಅರಿಕೆ: ವಾದಿಯುಂ ತನ್ನ ದಾವಾ ಅರ್ಜಿಯಲ್ಲಿ ಅಂಥಾ ಮನುಷ್ಯನನ್ನು ನೇಮಿಸಿದ್ದರೆ . . . ಆತನಿಗೆ ತಿಳಿಸತಕ್ಕದ್ದು (ಗ್ರಾಮಾಕ. ೧೭). **ದಾವಾದಾಖಲೆ** = ತಗಾದೆಯ ಅರಿಕೆಯನ್ನು ದಾಖಲು ಮಾಡಿಸುವುದು : ಲಿಖಿತ ಮೂಲಕವಾಗಿ ದಾವಾದಾಖಲೆಯನ್ನು ಪಡೆದು ಅದಕ್ಕೆ ಉತ್ತರ ಪ್ರತ್ಯುತ್ತರಗಳನ್ನು ಬರೆಸುವ ಪದ್ಧತಿಯಿರಲಿಲ್ಲ (ಮಹಾವಂ.II, ೨೮). **ದಾವಾ ಮಾಡು, ದಾವೆ ಮಾಡು** = ನ್ಯಾಯಾಲಯದಲ್ಲಿ ವ್ಯಾಜ್ಯ ಹೂಡು : ಸೆಟ್ಟ ದಾವಾ ಮಾಡವನೆ (ಮಾಂಗಲ್ಯ. ೧೯) ; ವಕೀಲರ ಮನೆಗೆ ಹೋಗಿ ಕೋರ್ಟಿನಲ್ಲಿ ದಾವೇ ಮಾಡಬೇಕೇ (ಮೋಹಿನೀ. ೧೨೪). **ದಾವಾ ಸೊತ್ತು** = ತಗಾದೆಯಲ್ಲಿರುವ ಭೂಮಿ ; ವ್ಯಾಜ್ಯದ ಆಸ್ತಿ : (ಕಿ). **ದಾವಾ ಹಾಕು, ದಾವ ಹಾಕು** = ಕೋರ್ಟಿನಲ್ಲಿ ವ್ಯಾಜ್ಯ ಹೂಡು ; ಮೊಕದ್ದಮೆ ನಡೆಸು : ನಿಮ್ಮ ತಂದೆಯವರ ಮೇಲೆ ದಾವಾ ಹಾಕಿ ಬಿಟ್ಟೇನು (ಹನ್ನೊಂದ. ೫೧); ಕಂಪನಿಯ ಡೈರೆಕ್ಟರುಗಳಲ್ಲಿ ಯಾರ ಮೇಲಾದರೂ ದಾವಾ ಹಾಕಿ ಸಾಲದ ಪೂರ್ತಿ ಹಣವನ್ನು ಅವರಿಂದ ವಸೂಲುಮಾಡಿಕೊಳ್ಳಬಹುದು (ಹಣಪ್ರ. ೧೨೯ ಅಡಿಟಿ); ಕೋರ್ಟಿಗೆ ಹೋಗಿ ಕಳಸಯ್ಯನ ಮೇಲೆ ದಾವಾ ಹಾಕಿದ (ಗಂಗಾಳ. ೩೩). **ದಾವೆ ಹೂಡು** = ದಾವಾ ಹಾಕು : ನನಗೆ ನಾಳೆ ದಾವೆ ಹೂಡಬೇಕಾಗಿ ಬರುತ್ತದೆ (ಪ್ರಕಾಶ. ೧೪೭) [ ←ಅರ. ಹಿಂ. ಮರಾ. ದಾವಾ ]

**ದಾವಾಗ್ನಿ** (ನಾ). ೧. = ದಾವದಹನ : ತೀವ್ರ ದಾವಾಗ್ನಿವೊಲುರಿದಪ್ಪ ದುರ್ಬಿತಳಂ (ಸುಕುಮಾ. ೪-೧೩) ; ದಾವಾಗ್ನಿಯನೆಟ್ಟಿಱಿವ ಮಹಾವಾಯುವಿನಂತೆ ತಮ್ಮ ಮನದಳಿಪಂ ನಾನಾ ವಿಧ ದುರಾಗವೋಕ್ತಿಗಳಾಪಗವೆಟ್ಟರಿಸೆ (ವರ್ಧಪು. ೧೧-೪೨) ; ಅಡವಿವಿಡಿದೋಡುತಿಪ ಗಜಂ ದಾವಾಗ್ನಿ ತನುವೊತ್ತು ಬೀದಿವರಿವಂತಿರ್ದುದು (ಜಜರಾ. ೫-೩೭) ; ಇಡಿದ ಧೂಳಿಯ ಧೂಮರಾಶಿಯ ಪಡೆ ವಿರಾಟನ ಮಗನ ಕಂಗಳಿಗೊಡನೊಡನೆ ದಾವಾಗ್ನಿಯಂತಿರೆ ತೋಱೆತಿದಿರಿನಲಿ (ಕುಮ್ಮಾವಿ. ೬-೩) ; ಅವಳ ಮನಸ್ಸಿನಲ್ಲಿ ಯಾವುದೋ ದಾವಾಗ್ನಿ ಎದ್ದಿದೆ (ಕಾಂತಲಾ. ೨೭೭). ೨. ಪಂಚಾಗ್ನಿಗಳಲ್ಲಿ ಒಂದು : ಗ್ರೀಷ್ಮಾದಿ ರೂಪಕಾಲಾಗ್ನಿ ಆತಪರೂಪ ಸೂರ್ಯಾಗ್ನಿ ಪುಣ್ಯಾಭಿವ್ಯಕ್ತರೂಪ ಸೂರ್ಯಕಾಂತಾಗ್ನಿ ವೇಣ್ವಭಿವ್ಯಕ್ತ ದಾವಾಗ್ನಿ ದೇಹಾಂತರ್ಗತ ಉದರಾಗ್ನಿಗಳೆಂಬ ಪಂಚಾಗ್ನಿಗಳು (ವಿವೇಕ. ೦೪೪).

[ ದಾವ$_2$ + ಅಗ್ನಿ ]

**ದಾವಾದಾರ, ದಾವೆದಾರ** (ನಾ). ವ್ಯಾಜ್ಯ ಹೂಡಿದವನು : ಕೋರ್ಟಿನ ಕೊನೆಯ ತೀರ್ಮಾನದ ಮೇರೆಗೆ ದಾವಾದಾರನೇ ಜಾಮೀನು ತರಬೇಕಾಯಿತು (ರೂಢಿ). **ದಾವೆದಾರ** : (ಕಿ). [ ದಾವಾ + – ದಾರ$_4$ ]

**ದಾವಾನಲ, ದಾವಾನಳ** (ನಾ). = ದಾವದಹನ : "ಬನಬೆಂಕಿಯೆ ದಾವಾನಲಂ" (ಕವಿಕಂ. ೫೮) : ಮಹಾಸ್ಮರವಿಶಿನದಾವಾನಲ ಕೃಪಾವನಧಿ ಬಲಿದುರುಶೃಂಗಿಯಾದಂದವೊ (ಬಕೋಟು. ೨-೬). **ದಾವಾನಳ** : ಆತ್ಮಜರಿನಾದ ಕುಲಾಪವಾದ ಪರಾಭವದ ದಾವಾನಳದಿಂ . . . ಚಿಂತಾಂತರಂಗನುಮಾಗಿ (ಸುಕುಮಾ. ೨-೧೦ ವ) ; ಲಲಿತ ಚಂದ್ರಿಕೆಗೇಕೆ ದಾವಾನಳನ ಪಾಡಾಪಾಡಿ (ಕುಮ್ಮಾದ್ರೋ. ೪-೪೮) ; ಲಲಿತನಿರ್ಮಲಚಂದ್ರಕಾಂತದ ಶಿಲೆಯ ಹತ್ತಿರ ಲತೆಯ ದಾವಾನಳನು ಕೊಳಲಾ ಜ್ವಾಲೆಯಾ ಶಿಲೆಯೊಳಗೆ ತೋರ್ಪಂತೆ (ಪ್ರಭುಲೀ. ೭-೨೫). [ ದಾವ$_2$ + ಅನಲ ]

**ದಾವಾನಲಚೂರ್ಣ** (ನಾ). ಒಂದು ವಿಧವಾದ ಚೂರ್ಣ : ದಾವಾನಲ ಚೂರ್ಣ–ಹಿಂಗು, ವಾಯುವಿಳಂಗ, ಪಂಚಲವಣ, ಕರ್ಕಾಟಕ ಶೃಂಗಿ, ತಾರೇಕಾಯಿ, ನೆಲ್ಲೀಚಟ್ಟು, ತ್ರಿಕಟುಕ, ಚವ್ಯ, ಚಿತ್ರಮೂಲ, ಮೋಡಿ, ಕೊನ್ನಾರಿಗೆಡ್ಡೆ, ಕಟುಕರೋಹಿಣಿ, ಕರೀಜೀರಿಗೆ, ಬಿಳೀಜೀರಿಗೆ, ಕೊಡಸಿಗೆ ಬೀಜ, ಚಂಗಲ್ವಕೋಷ್ಟ, ಹೆಗ್ಗುಳ್ಳ, ನೆಲಗುಳ್ಳ, ತಿಗಡೆ, ಗಜಹಿಪ್ಪಲಿ, ಸಿಹಿಹಾಲೆಬೇರು, ವಿಷಖದ್ದಿ, ಈಶ್ವರೀಬೇರು, ಗಂಟುಭಾರಂಗಿ, ಯವಕ್ಷಾರ, ಸರ್ಜಕ್ಷಾರ, ಬಿಳಿಗಾರ, ಅರಿಸಿನ, ಮರದರಿಸಿನ ಇವನ್ನು ಸಮಾಂಶ ಚೂರ್ಣಮಾಡಿ ಬೆಲ್ಲ ಅಥವಾ ಜೇನು ತುಪ್ಪದೊಡನೆ ತೆಗೆದುಕೊಳ್ಳಲು ಕಾಸ ಶ್ವಾಸ, ಅಜೀರ್ಣ, ವಾತತಿಮಿರ, ತ್ರಿದೋಷಶೂಲೆ, ಸಹ ಪರಿಹಾರವಾಗುವುವು (ಸಕವ್ಯ. ಪರಿ. ೪೩೭).

[ ದಾವಾನಲ? + ಚೂರ್ಣ$_2$ ]

**ದಾವಾನಳ** 'ದಾವಾನಲ' ನೋ.

**ದಾವಾರಿ** (?). (?) : ವೃಷಗ ವೃಶ್ಚಿಕಗಮನ ದಾವಾರಿ ಕಂಸಮಂ ಕೊಲೆಯುದಿರ್ಪ (ಬಕೋಪು. ೨). [ ? ]

**ದಾವು$_1$** 'ಡಾಹ' ನೋ.

**ದಾವು$_2$** (ನಾ). ಹಗ್ಗ ; ಹುರಿ; ರಜ್ಜು : "ತಳ್ಳೆಂದುಂ ದಾವೆಂದುಂ ಅಗ್ಗರಣೆಯೆಂದುಂ ರಜ್ಜು" (ಕಶಸಾ. ೩೦-೩೪೦) : ದಾವಿನ್ನಡುವಂ ತೊಡರ್ಚಿ ದೃಢವಾಗಲುಲೂಖಲದಲ್ಲಿ ಕಟ್ಟಿ ಪೋಗಿನ್ನು . . . ನೋಟ್ಪೆನೆಂಬುದುಂ (ಜಗವಿ. ೩-೩೭) ; ದಾವುಂ–ದಾವು (ಶಮದ. ೨೭೮ ಪ್ರಯೋ) ; ಮುನ್ನೇಂ ಕಟ್ಟದೆ ಮಾಣ್ದರೇ ಕಡೆವ ದಾವಿಂದೆನ್ನಂ (ಅಪ್ರಶಿ. ೪೪-೨೩) : ಎನ್ನೀ ಅಟಮೆಯ್ಕಂ ಬಾವಿ ದಾವುಗಳ್ಗೊಟ್ಟಿಸಿ ಎನ್ನನಿಯನಂ ಮುಗುಬ್ದುಂ ಕಾಣಲಕ್ಕುಮೆಂದೊಡೇವೆನ್ನೆ (ರಾಮಾಶ್ವ. ೪೨-೦). [ <ಸಂ. ದಾಮನ್ ]

**ದಾವುಣಿ** 'ದಾವಣಿ$_1$' ನೋ.

**ದಾವುದು** (ಸ). ರೂಪಗಳು (ಪುಂ. ಸ್ತ್ರೀ ಬಹುವ) ದಾರು$_1$, (ವಿಶೇ) ದಾವ$_1$. ಪ್ರಶ್ನಾರ್ಥಕ ಸರ್ವನಾಮ : ದಾವುದು ದಾರಿ ಆ ಊರಿಗೆ (ರೂಢಿ).

**ದಿಗ್ಬಲಿಗೆದರು** (ಕ್ರಿ). ದಿಕ್ಕುದಿಕ್ಕಿಗೆ ಎಸೆ; ದಿಕ್ಕಾಪಾಲಾಗಿ ಬಿಸುಡು: ಆ ಭಿಕಾರಿ ರಾಯನನ್ನೂ ಅವನ ಜನರನ್ನೂ ತುಂಡುತುಂಡಾಗಿ ಕತ್ತರಿಸಿ, ದಿಗ್ಬಲಿಗೆದರಿ, ಅಳ್ಳಾಡಿಸಿ ಧ್ವಂಸ ಮಾಡಿಬಿಡುವನು (ಮಂತ್ರಶ. ೪೭-೧೨). [ ದಿಗ್ಬಲಿ + ಕೆದರು (<ಕೆದಱ್$_1$) ]

**ದಿಗ್ಭರಿತ** (ಗು). ದಿಗಂತವನ್ನು ತುಂಬಿದ,–ವ್ಯಾಪಿಸಿದ: ಕುಮಾರಸ್ವಾಮಿಗಂದು ಬಿತ್ತರಿಸಿದಂ ವೇದಾಂತಶಾಸ್ತ್ರಮಂ ದಕ್ಷಿಣಾಮೂರ್ತಿ ದಿಗ್ಭರಿತಕೀರ್ತಿ (ವೀಶ್ರೀಪು. ೫-೨೦-೦೮). [ ಸಂ. ]

**ದಿಗ್ಭವ** (ನಾ). ದಿಕ್ಕಿನಿಂದ ಹುಟ್ಟಿದುದು; ವೈಹಾಯಸ, ಭೌಮ, ದಿಗ್ಭವ, ಸೈನ್ಯಜ, ಗೃಹೋದ್ಭೂತಗಳೆಂಬ ಐದು ರೀತಿಯ ಉತ್ಪಾತಗಳಲ್ಲಿ ಒಂದು: ವೈಹಾಯಸ ಭೌಮ ದಿಗ್ಭವ ಸೈನ್ಯಜ ಗೃಹೋದ್ಭೂತಂಗಳಪ್ಪ ತೆಱದುತ್ಪಾತಂಗಳೊಡನೊಡನೆ ನೆಗೆದುವಾಗಳ್ (ಶಾಂತಿಪು. ೬-೧೦೬.ವ). 'ದಿಗ್ದಾಹ' ಪರಾ. [ ಸಂ. ]

**ದಿಗ್ಭ್ರಮೆ** (ನಾ). ದಾರಿ ಅಥವಾ ಮಾರ್ಗ ತಪ್ಪಿಹೋದ ಸ್ಥಿತಿ; ಉಪಾಯ ತೋರದ ಸ್ಥಿತಿ; ವಿಸ್ಮಯ; ಗಾಬರಿ: ಇನಮಂಡಲಕೆ ದಿಗ್ಭ್ರಮೆಯಾಯ್ತು ನಭದಲಿ ಸುಳಿವ ಸುರರ ವಿಮಾನತತಿ ಚೆಲ್ಲಿದವು ದೆಸೆದೆಸೆಗೆ (ಕುವ್ಯಾಅ. ೨೦-೨೯); ಯಾವ ದಿಕ್ಕಿನಲ್ಲಿಯೂ ಏನೇನೂ ಕಾಣುತ್ತಿರಲಿಲ್ಲ ನಾವಿಕರಿಗೆ ದಿಗ್ಭ್ರಮೆಯುಂಟಾಗಿದೆಯೆಂದು ಗೊತ್ತಾಯಿತು (ಕಪಾಕಾಂ. ೩). [ ಸಂ. ದಿಗ್ಭ್ರಮ ]

**ದಿಗ್ಭ್ರಮೆಗೊಳಿಸು** (ಕ್ರಿ). ಬೆರಗುಗೊಳಿಸು; ವಿಸ್ಮಯವನ್ನುಂಟುಮಾಡು: ಕುಂಚವನ್ನಾಡಿಸುವುದರಲ್ಲಿ ಅಜಂತಾ ಕಲಾಕಾರರ . . . . ನಿರ್ಮಾಣತಂತ್ರ ವಿಶ್ವದ ಎಲ್ಲಾ ಕಲಾವಿಮರ್ಶಕರನ್ನು ದಿಗ್ಭ್ರಮೆಗೊಳಿಸಿದ (ಭಾರದ. ೬೨೫). [ ದಿಗ್ಭ್ರಮೆ + ಕೊಳ್$_1$ + – ಇಸು$_3$ ]

**ದಿಗ್ಭ್ರಮೆಹಿಡಿಸು** (ಕ್ರಿ). ಗಾಬರಿಗೊಳಿಸು; ವಿಸ್ಮಯತರು: ಭಿನ್ನ ಭಿನ್ನ ಪ್ರಭಾವಗಳ ಅಲೆಗಳು ಸಾಮಾನ್ಯರಿಗೆ ದಿಗ್ಭ್ರಮೆ ಹಿಡಿಸುವಂತೆ ಹೊಯ್ದಾಡುತ್ತಿವೆ (ಶಿಕ್ಷದ. ೬೯). [ ದಿಗ್ಭ್ರಮೆ + ಹಿಡಿಸು (<ಪಿಡಿಯಿಸು) ]

**ದಿಗ್ಭ್ರಾಂತ** (ಗು). ೧. ದಿಕ್ಕು ತೋಚದಂತಹ; ಗಾಬರಿಗೊಂಡ. (ನಾ). ೨. ಗಾಬರಿಗೊಂಡವನು; ದಿಗ್ಭ್ರಮೆಗೊಳಗಾದವನು: ಅಲ್ಲಮಪ್ರಭು ಒಂದು ಕ್ಷಣ ಆಗಿಹೋದ ಅಪಘಾತಕ್ಕೆ ಮರುಗಿ ದಿಗ್ಭ್ರಾಂತನಾಗಿ ಶೋಕಿಸುತ್ತಾನೆ (ಕೂಸ್ಕಕು. ೦೩೯); ವೈತರಣೀ ನದಿಯ ಪರಿಸರ. ಅದನ್ನು ನೋಡಿ ಮುನಿ ದಿಗ್ಭ್ರಾಂತನಾಗುತ್ತಾನೆ (ನಡದಾ. I, ೫೪೦). [ ಸಂ. ]

**ದಿಗ್ಭ್ರಾಂತಿ** (ನಾ). = ದಿಗ್ಭ್ರಮೆ. [ ಸಂ. ]

**ದಿಗ್ಭ್ರಾಮಿತ** (ನಾ). ಗದಾಯುದ್ಧದ ವರಸೆಗಳಲ್ಲಿ ಒಂದು: ವಿಳಂಬಿತಪಾಕುಂಚಿತಮಾಸ್ಫೋಟಿತಮಾಕ್ಷಿಪ್ತಮುದ್ಭ್ರಾಮಿತಂ ದಿಗ್ಭ್ರಾಮಿತಂ . . . . ಎಂಬೆಂಟುಂ ತೆಱದ ಪ್ರಹರಣಂಗಳೊಳಂ ಅತಿಪರಿಚಿತರಾಗಿ ವೈಶಾಖಸ್ಥಾನದೊಳ್ ನಿಂದು (ಗದಾಯು. ೮-೧ ವ). 'ಉದ್ಭ್ರಾಮಿತ' ಪರಾ. [ ಸಂ. ]

**ದಿಗ್ರದನಿ** (ನಾ). = ದಿಗ್ಗಜ ೧: ಮದಧಾರಾವೃಷ್ಟಿ (ಪಂಕಂ) ಮಸಗಿಸೆ ಸೆಲಸಂ ಘೋಷಘಂಟಾರವಂ ದಿಗ್ರದನೀಶ್ರೋತ್ರಕ್ಕೆ ಸಂಪಾದಿಸೆ ಬಧಿರತೆಯಂ. . . ಬಂದುದಂದನ್ಯಚಕ್ರಿಕ್ಕಿದು ಕಳ್ಪಾಂತಾಭ್ರಮೆಂಬಂತ:ದಿತರಿಪುಮನೋದೈನ್ಯಮುಗ್ರೇಭಸೈನ್ಯಂ (ಪುಷ್ಪಪು. ೫-೯). [ ಸಂ. ದಿಗ್ರದನಿನ್ ]

**ದಿಗ್ರಮಣ** (ನಾ). ದಿಕ್ಕಿನ ಒಡೆಯ,–ಪ್ರಭು; ದಿಕ್ಪತಿ: ವಿಗ್ರಪಸಮಯನಿಗ್ರಹ ಹಿತಾನುಗ್ರಹಗರಳಭುಗ್ರಸನನುತದಿಗ್ರಮಣ ಶ್ರೈವಾಗ್ರಗಣ್ಯವುದಗ್ರಬಲಶೌರ್ಯ . . . ಭಕ್ತಿಸಮಗ್ರ ಬಸವೇಶ (ಬಸಪು. ೫೪-೮೭); ದಿಗ್ರಮಣನುತಪಾದಶತಪತ್ರ ಫಣಿಯಗ್ರಸೂತ್ರ ಧಾವಳ್ಯಗಾತ್ರಾ . . . ವಾಗ್ರಚನೆಯಿಂದ ಕೃತಿಯ ನಡಸುಗೆ ವೊಲಿದು (ನವಮೋ. ೩-೧). [ ಸಂ. ]

**ದಿಗ್ರಾಜಿ** (ನಾ). ಎಲ್ಲ ದಿಕ್ಕು: ಬನಮಂ ಕೆಂದಳಿರಿಂದೆ ಬಾಸಣಿಸುತಂ ದಿಗ್ರಾಜಿಯಂ ಬಂದ ಮಾವಿನ ಕಂಪಿಂದಮೆ ಪೂಸುತಂ (ಕಾದಂಉ. ೭೮೧). [ ಸಂ. ]

**ದಿಗ್ವರ** (ನಾ). = ದಿಗ್ರಮಣ: ಉರ್ಕಳಿದರ್ ದಿಗ್ವರರಂಜಿದರ್ ದಿವಿಜರುರ್ವೀಧ್ರವ್ರಜಂ ಸೀಳ್ದುದು (ರಾಜಶೇ. ೫-೩೭); ಪೂಮಳೆಯು ಸುರಿಯೆ ದೇವಾಸುರಹರಿಯಜಮುನುಮುನಿಗರುಡಗಾಂಧರ್ವದಿಗ್ವರರು (ಧ್ಯರಸೂ. ೧೫೫). [ ಸಂ. ]

**ದಿಗ್ವಲಯ, ದಿಗ್ವಳಯ** (ನಾ). ದಿಕ್ಕುಗಳ ಆವರಣ,–ಪ್ರದೇಶ: ಧುರಧೀರ ನುಗ್ಗಿಹಳ್ಳಿಯ ರಾಯ ಭೂಪರನ ಪರಮಪ್ರಧಾನ ಸುಕಲಾಪ್ರವೀಣಂ ಕೀರ್ತಿಭರಿತ ದಿಗ್ವಲ [ ಪಾಠಾಂ. ಳ ] ಯಂ (ಶಬ್ರಿ ಕ್ರಿ. ೧೦೦). ದಿಗ್ವಳಯ: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಸಂ. ]

**ದಿಗ್ವಳಯ** 'ದಿಗ್ವಲಯ' ನೋ.

**ದಿಗ್ವಳೆಯ** 'ದಿಗುವಳಯ' ನೋ.

**ದಿಗ್ವಾಚಕ** (ನಾ). [ವ್ಯಾಕ] ದಿಕ್ಕನ್ನು ತಿಳಿಸುವ ಶಬ್ದ: ಉಕಾರಾಂತದಿಗ್ವಾಚಕಂಗಳ್ಗೆತ್ವಮಕ್ಕುಂ (ಶಮದ ೧೧೯ ವೃತ್ತಿ); ಪೂರ್ವಪದವಾಗಿ ಬರುವ ಹಿಂದು, ಮುಂದು, ಪೆಱಗು, ಒಳಗು ಮೊದಲಾದ ದಿಗ್ವಾಚಕಗಳಿಗೆ ಸಾಮಾನ್ಯವಾಗಿ ಅಂತ್ಯಾಕ್ಷರವು ಲೋಪವಾಗಿ ಅವುಗಳ ಪ್ರಕೃತಿರೂಪ ಬರುತ್ತದೆ (ಕ್ರಬಿಡಿ. ೨೭). [ ಸಂ. ]

**ದಿಗ್ವಾಚಿ** (ನಾ). = ದಿಗ್ವಾಚಕ: ಅಲ್ಲಿಯೊಳೆಂಬಿವು ಮಿಕ್ಕಡೆಗೆಲ್ಲಂ ದಿಗ್ವಾಚಿಯುಪ್ಪದಂತಕ್ಕಲ್ಮತ್ತಲ್ಲಿಯುದಂತಕ್ಕೆತ್ವಂ ಬಲ್ಲರ ಮತದಿಂ ವಿಕಲ್ಪವಿಧಿ ಸಪ್ತಮಿಯೊಳ್ (ಶಮದ. ೧೧೯). [ ಸಂ. ದಿಗ್ವಾಚಿನ್ ]

**ದಿಗ್ವಾರಣ** (ನಾ). = ದಿಗ್ಗಜ ೧: ರಣಪಟಹರವಂ ದಿಗ್ವಾರಣ ಕರ್ಣಾರ್ಭ್ಯರ್ಣಮಂ ಪಳಂಚಲೆಯೆ (ಪಂರಾಮಾ. ೧೦-೫೦); ದಿಗ್ವಾರಣದ ಮಱಿಯುಂಬುದೇ ಬಂದೂರುಮಂದಿಯ ಮೊಲೆಯನು (ಬಸಪು. ೧೦-೧೧). [ ಸಂ. ]

**ದಿಗ್ವಾಸ$_1$** (ನಾ). ಹದಿನೆಂಟು ಬಗೆಯ ಕೊಳಲುಗಳಲ್ಲಿ ಒಂದು: ಹದಿನೆಂಟುಗುಳ ಮೊದಲಾಗಿ ಒಂದಂಗುಳ ಪರ್ಯಂತಮಾದ ಪರಿಮಾಣಕ್ರಮವಿಡಿದು ಜಾತಿವಾಸ, ಸುಜಾತಿವಾಸ, ಸುಕುಮಾರಿಕಾವಾಸ, ಪಕ್ಷಾವಾಸ, ಭುವನಾವಾಸ, ಶ್ವೇತವಾಸ, ಆದಿತ್ಯವಾಸ, ರುದ್ರವಾಸ, ಹರಿವಾಸ, ದಿಗ್ವಾಸ, ನಿಧಿವಾಸ, ಋಷಿವಾಸ, ಕುಮಾರವಾಸ, ಅಘೋರವಾಸ, ಬ್ರಹ್ಮವಾಸ, ತ್ರಿಪುರವಾಸ, ಶಿವಶಕ್ತಿವಾಸ, ಭುವನಾಧಿಪವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣಮಱಿತು (ವಿವೇಕ. ೨೩೭). ೯ ಕೊಳಲಿನ ಧ್ವನಿಪ್ರಭೇದವೆಂದು ಭರತಕೋಶದಲ್ಲಿ ಹೇಳಿದೆ. [ <ಸಂ. ದಿಗ್ವಾಂಶ ]

**ದಿಗ್ವಾಸ$_2$** (ನಾ). ೧. ದಿಕ್ಕನ್ನು ಬಟ್ಟೆಯಾಗಿ ಉಳ್ಳವನು; ನಗ್ನ. ೨. ದಿಗಂಬರ; ಶಿವ. ೩. ದಿಗಂಬರನಾದ ಜೈನ ಭಿಕ್ಷು,–ಜೈನ ಸಂನ್ಯಾಸಿ: "ನಗ್ನಾಟಃ, ದಿಗ್ವಾಸಾಃ, ಕ್ಷಪಣಃ, ಶ್ರಮಣಃ . . . ಸಾಧುಃ– ಈ ೧೦ ಸವಣರ ಪೆಸರ್" (ಹಲಾಯು. ೫೭-೧೮೯). [ ಸಂ. ದಿಗ್ವಾಸಸ್ ]

**ದಿಗ್ವಿಜಯ** (ನಾ). ೧. ಎಲ್ಲ ದಿಕ್ಕುಗಳಲ್ಲಿರುವ ರಾಜ್ಯಗಳನ್ನು ಗೆಲ್ಲುವುದು: ಆದಿವಂಶಾವತಾರಸಂಭವಂ ರಂಗಪ್ರವೇಶಂ . . . ಇಂದ್ರಪ್ರಸ್ಥಪ್ರವೇಶಂ ಅರ್ಜುನದಿಗ್ವಿಜಯಂ . . . ಅರ್ಜುನಾಭಿಷೇಕಂ ಮೊದಲುಮುಪಾಖ್ಯಾನ ಕಥೆಗಳೊಳವೊಂದುಂ ಕುಂದಲೀಯದೆ ಪೇಟ್ದಂ (ಪಂಭಾ. ೧೪-೫೩ ವ); ವಸಂತದೊಳ್ ಮಾವು ಬಂದುದು ಶರದೊಳ್ ದಿಗ್ವಿಜಯಮುಚಿತಂ (ಶಮದ. ೧೩೩ ಪ್ರಯೋ); ಹಸನಾಯ್ತು ದಿಗ್ವಿಜಯದೊಳ್ ಗೊರವನೆಂದು ಪಾಲಿಸಿದೆವವನೇ ಜಗತ್ಕರ್ತೃ ಗಡವೆನುತಾಗ . . . ಒಡನೊಡನೆ ಗರ್ಜಿಸಿದನು (ಹಬಪು. ೪೭-೧೯); ನಿನ್ನಾಳ್ಕೆಗೆಲ್ಲಿಯುಮಪಾಯಮವನಿಯೊಳಿಲ್ಲಮಿನ್ನು ದಿಗ್ವಿಜಯಮಿಲ್ಲವಸರದ ಬೇಂಟೆಯಿಲ್ಲ (ಜೈಮಿಭಾ.

೨-೫೪) ; ಪೂರ್ವಪದ್ಧತಿವಿಡಿದು ಮಾಳ್ಪ ದಿಗ್ವಿಜಯ ಹಯಮೇಧ ಮೊದಲಾದುವಂ ತೋರೆದು (ಶ್ರೀರಾಮಾ. ೯-೨೪೩) ; ಪ್ರಭುವು ಹೀಗೆ ದಕ್ಷಿಣ ಪೂರ್ವದೇಶಗಳ ದಿಗ್ವಿಜಯವನ್ನು ಪೂರ್ಣಗೊಳಿಸಿದರು (ಚಾಂತಲಾ. ೧೫೪). ೨. [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು: ದಿಗ್ವಿಜಯ ಚಕ್ರಾಭಿಷೇಕ ಸಾಮ್ರಾಜ್ಯ . . . ನಿರ್ವೃತಿಯೆಂಬಯ್ವತ್ತುಮೂಱು ಗರ್ಭಾದಿ ನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯ ಕ್ರಿಯೆಗಳುಂ (ಆದಿಪು. ೧೫-೧೫ ವ) ; ದಿಗ್ವಿಜಯಮುಂ ಚಕ್ರಾಭಿಷೇಕಮುಂ ಸಾಮ್ರಾಜ್ಯಮುಂ . . . ಅಪ್ಪಯ್ವತ್ತುಮೂಱು ಗರ್ಭಾನ್ವಯ ಕ್ರಿಯೆಯೊಳ್ (ಚಾವುಂಪು. ೨೧೨). 'ದೀಕ್ಷೆ' ಪರಾ. [ಸಂ.]

**ದಿಗ್ವಿತತಿ** (ನಾ). ದಿಕ್ಕುಗಳ ಗುಂಪು,–ಸಮೂಹ; ಎಲ್ಲ ದಿಕ್ಕುಗಳು: ಆಟಿಕೆಯ್ದಾನೆಂದು ದಶಮುಖ ಕುಲದೇವತೆಯ ಪೊಯ್ಯಾಲಿಡುವವೋಲ್ ದಿಗ್ವಿತತಿಯುನಾವರಿಸಿದತ್ತು ಭೇರೀನಾದಂ (ಪಂಪರಾಮಾ. ೧೪-೧೨೫). [ಸಂ.]

**ದಿಗ್ವಿರತಿ** (ನಾ). = ದಿಗ್ವ್ರತ: ದಿಗ್ವಿರತಿಯುಂ ದೇಶವಿರತಿಯುಂ ಅನರ್ಥದಂಡವಿರತಿಯುಮೆಂದಿವು ಗುಣವ್ರತಂ ಮೂಱು ಭೇದಮಕ್ಕುಂ (ಪಸಾರ. ೩೦೦). [ಸಂ.]

**ದಿಗ್ವಿವರ** (ನಾ). ದಿಕ್ಕುಗಳ ಒಳಭಾಗ,–ಅವಕಾಶ; ದಿಗಂತರ: ಅಂತು ಚತುರಂಗಸೇನೆ ಯುಗಾಂತತರವ ವರ್ಣಾವಾರವಂ ಘನರವಮೆಂಬಂತಾಗೆ ತಾಗೆ ದಿಗ್ವಿವರಾಂತರವಂ (ಶಾಂತಿಪು. ೧೦-೧೫೦). [ಸಂ.]

**ದಿಗ್ವ್ರತ** (ನಾ). [ಜೈನ] ಶ್ರಾವಕನ ವ್ರತಗಳಲ್ಲಿ ಒಂದು; ಒಂದು ಮೇರೆಯನ್ನು ಇಟ್ಟುಕೊಂಡು ಅದಷ್ಟೇ ಸ್ಥಳದಲ್ಲಿಯೇ ವಿಹರಿಸುವೆನೆಂದು ಮಾಡಿಕೊಳ್ಳುವ ನಿಯಮ,–ವ್ರತ: ಮಿಗಿಲಾಗಿರೆ ಸೀಮೆಯುನವಧಿಗುಯ್ಯುದುಂ ಮಱೆದು ಮೊದಲ ಪವಣಂ ಪೆಱತಂ ಬಗೆವುದುಮೂರ್ಧ್ವಾಧಸ್ತಿರ್ಯಗ್ಗತಿಕ್ರಮಮುಂ ವ್ಯತಿಕ್ರಮಂ ದಿಗ್ವ್ರತದೊಳ್ (ವರ್ಧಮಾ. ೭-೧೫೩); ದಿಗ್ವ್ರತ . . . ನಾಲ್ಕೂ ದಿಕ್ಕುಗಳಲ್ಲಿರುವ ನದಿ, ಪರ್ವತ ಮೊದಲಾದುವುಗಳ ಮೇರೆಯನ್ನು ಗೊತ್ತುಮಾಡಿ ಅವನ್ನು ದಾಟಿ ಆಮರಣವೂ ಹೋಗುವುದಿಲ್ಲವೆಂದು ನಿಶ್ಚಯ ಮಾಡುವುದು (ಜೈನಧ. ೬೯). [ಸಂ.]

**ದಿಙ್ನಾಗ** (ನಾ). ೧. = ದಿಗ್ಗಜ: ದಿಙ್ನಾಗಯುದ್ಧಕ್ಕೆ ಕೃತ್ರಿಮಾರ್ಗಳಾ ಬಂಧಮೆಂಬಳವನೊಳಕೊಂಡ ಹಿಮವದ್ವಿಜಯಾರ್ಧನೀಲನಿಷಧ ಮಹೀಧರಂಗಳಂ ಪೋಲ್ತು (ಶಾಂತಿಪು. ೩-೧೯ವ); ಶೇಷನಂ ಪೊಸೆವ ದಿಙ್ನಾಗಂಗಳಂ ಪೊಯ್ದು ಘೀಳಿಡುವ . . . ಉಡುಸಂತಾನಮನಾರ್ದು ದಿರ್ಚುವ ಗಣಗಳ್ ಬಂದರಾನಂದದಿಂ (ಗಿರಿಕ. ೧೦-೭೪). ೨. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ: ವಸು ಕರಿ ದಿಙ್ನಾಗಂ . . . ವಾರಣ ಮಾರಯುಯೆಂಟಕ್ಕೆ ನಾಮಮಿದು (ವ್ಯವಹಾ. ೯-೩೦). [ಸಂ.]

**ದಿಙ್ನಾಥ** (ನಾ). = ದಿಕ್ಪಾಲ: ನೆಲನಂ ಘಟ್ಟಿಸೆ ಕಮಠನ ಬೆನ್ನೆಲು ನೆಗ್ಗಲ್ಕಿರುಪಿನ ಗಾಳಿಗೆ ದಿಙ್ನಾಥರ್ನಲೆದಪ್ಪಲು ಠಕ್ಕಿಸಿ ಭೂಪೆಯುನವಧರಿಸವ ಧರಿಸೆಂದು ಪಟುಭಟನು (ವೀರೇಶ. ೨-೧೦). [ಸಂ.]

**ದಿಙ್ನಿಕರ** (ನಾ). ದಿಕ್ಕುಗಳ ಸಮೂಹ,–ಗುಂಪು: ದಿಙ್ನಿಕರಕ್ಕೆ ಪರ್ಚಿ ಕಡುಕರ್ಬೊಗೆಯಿಂ ಕಿಡಿಯಿಂ ನೆಗಳ್ದು ದಾವಾಗ್ನಿ ಕವಲ್ದು ಪರ್ವೆ (ನೇಮಿಚಂ. ೨೮೪). [ಸಂ.]

**ದಿಙ್ಮಂಡಲ, ದಿಙ್ಮಂಡಳ** (ನಾ). ದಿಕ್ಕುಗಳ ಸಮೂಹ,–ಗುಂಪು: ಅಱಿಯರೆನ್ನನು ಶಕ್ರನೆಂದೇ ತಱುಬಿ ದಿಙ್ಮಂಡಲವ ಮುಸುಕಿದರಿಱಿತಕಂಜದ ದಿಟ್ಟನಾವನು ಸುರರ ಥಟ್ಟನಲಿ (ಕುಮಾವ್ಯಾಆ. ೧೨-೩೭). ದಿಙ್ಮಂಡಳ: ನಿರ್ವರ್ತಿತಜನ್ಮಾಭಿಷೇಕನನೇಕದುಂದುಭಿಬಧಿರಿತ ಸಕಳದಿಙ್ಮಂಡಳನಾಖಂಡಳ ನಮುರನವಿ ತಿಮೆರನಯೋಧ್ಯಾಪುರಕ್ಕಭಿಮುಖನಾದಾಗಳ್ (ಅಜಿಪು. ೭-೧೦೭ ವ). [ಸಂ.]

**ದಿಙ್ಮಂಡಳ** 'ದಿಙ್ಮಂಡಲ' ನೋ.

**ದಿಙ್ಮಾತ್ರ** (ನಾ). ಹೀಗಿರುವುದು–ಎಂದು ಮಾತ್ರ ಹೇಳುವ ವಿವರಣೆ; ಸ್ಥೂಲ ನಿರ್ದೇಶ,–ಪರಿಚಯ: ಶ್ರವಣಸುಖಮೆಂದೆ ದಿಙ್ಮಾತ್ರವರ್ಣನಂಗೆಯ್ವೆನುಂತದೇನೆನ್ನಳವೇ (ಆದಿಪು. ೧೯-೫೦). [ಸಂ.]

**ದಿಙ್ಮುಖ** (ನಾ). ದಿಕ್ಕಿನ ಮುಖ,–ಮುಂಭಾಗ: [illegible] ಗಳುಮಪ್ರತಿಹತ ಪ್ರಭಾದ್ಯೋತಿತದಿಙ್ಮುಖಂಗಳುಮಪ್ಪ [illegible] (ಆದಿಪು. ೫-೩೦ ವ) ; ಕಂಡಂ . . . ಆಖಂಡಲ ದಿಙ್ಮುಖದೆ ಬಂದು ಸರ್ವಗ್ರಾಸಂಗೊಂಡತ್ತಪರಾದಿತ್ಯನ ಮಂಡಲಮಂ (ಗದಾಯು. ೧-೨೬) ; [illegible] ಏಡಿದಡಗುವಿನನುದಯಿಪಿಂದು ಸಲೆ ಮೂಡಲೊಪ್ಪಿದುವುಭಯ ದಿಙ್ಮುಖಗಳು (ಹರಿಶಾ. ೪-೭೮). [ಸಂ.]

**ದಿಙ್ಮೂಢ** (ನಾ). ದಿಕ್ಕು ತೋಚದವನು; ಗಾಬರಿಗೊಂಡವನು; ದಿಗ್ಭ್ರಮೆ ಹಿಡಿದವನು; ದಿಗ್ಭ್ರಾಂತ: ಅವಿವೇಕಾತ್ಮತೆಯಿಂದೆ ಮೆಯ್ಮಱೆಯಿದಾಂ ದಿಙ್ಮೂಢನಾಗಿರ್ದೆನಿನ್ನೆವರಂ (ಸುಕುಮಾ. ೧೨-೧೫) ; 'ಸಾನಿ'ಯನ್ನು ಮನೆಗೆ ಊಟಕ್ಕೆ ಕರೆತಂದ ದೇಸಾಯರು ಜಾನಕಿಬಾಯರ ಪ್ರವೇಶದಿಂದ ದಿಙ್ಮೂಢರಾಗುತ್ತಾರೆ (ಸಮಜೀ. ೭ ಪೀಠಿಕೆ) ; ಅವಿನಾಶರಿಗೆ ಕೂಡಲೆ ಏನೂ ತೋರದೆ, ದಿಙ್ಮೂಢರಾಗಿ ನೋಡುತ್ತಿದ್ದು "ನೀವು ಹೇಳುತ್ತಿರುವುದಾದರೂ ಏನು?" ಎಂದು ಕೇಳಿದರು (ಲೀಪ್ರಶ್ನೆ. ೫೫) ; ಮುಂಗಾರಿನ ಮುಂಗೋಪಕೆ ಬಾನೇ ದಿಙ್ಮೂಢ (ನಲಮು. ೭-೧೧) ; ಲೋಕಮಾನ್ಯರ ಬಗೆಗೆ ಯೋಚಿಸಿದಾಗಲೆಲ್ಲ ಅವರನ್ನು ರಾಜಕಾರಣಿಯೆಂದು ಕರೆಯಬಹುದೆ . . . ತತ್ತ್ವಜ್ಞಾನಿಗಳೆಂದು ಉದ್ಘೋಷಿಸಬಹುದೆ ? – ಎಂದೆಲ್ಲ ದಿಙ್ಮೂಢರಾಗುತ್ತೇವೆ (ಧರ್ಮಸಾ. ೧೨೮). [ಸಂ.]

**ದಿಟ**$_1$ (ನಾ). ೧. ನಿಜ; ಸತ್ಯ; ವಾಸ್ತವ: "ನನ್ನಿ, ನಿಕ್ಕುವಂ, ನಿಸದಂ, ಸಾಜಂ, ನನಸು, ದಿಟಂ – ಈ ೬ ಸತ್ಯಂ" (ಕಶಸಾ. ೧೩೬-೨೫೪) ; ಆಂ ದಿಟಮಾಗಿ ಶಲ್ಯನಳವಂ ನೆಱೆ ಮುನ್ನಱಿದಿರ್ದುಮೆನ್ನ ತಮ್ಮಂದಿರನೇಕೆ ಕಾದಿಸುವೆಂ (ಪಂಪಭಾ. ೧೩-೩೨) ; ಸಟೆ ದಿಟವೆಂಬುವೆರಡುವಿಡಿದು ನಡೆವುದೀ ಲೋಕವೆಲ್ಲವು (ಮಹಾದೇ. ಬ. ೫೭-೧೯೦) ; ಶಿವನಾದೊಡೇಂ ಪುಸಿ ದಿಟಕ್ಕೆ ನಿಲ್ಲದೆ ಜಗದೊಳ್ (ಗಿರಿಕ. ೯-೧೧೭) ; ಕುರುರಾಯನಾಡಿತು ದಿಟವೆನುತ ಹೊಗರಂಬ ಹೊದೆಗೆದಱಿ ನೋಯಿಸಿದನುರವಣಿಸಿ ಪರಿತಹ ನಾಯಕರನು (ಕುಮಾವ್ಯಾದ್ರೋ. ೦-೫೮) ; ಪರಿಕಿಸೆ ಲೋಕದೊಳಗಾ ಸರಸಿಜಾಕ್ಷಿಯ ಬಗೆಗೆ ಸರಿ ದೊರೆಯಿಲ್ಲಮಿದು ದಿಟವು (ನಳಚ. ೨-೫) ; ಪುಸಿಯುಂ ದಿಟಂ ವಿಷಮು ಸಮೃತಂ ಪುಣ್ಯಮಾ ಪಾಪವ ಸಲೆ ತವರ್‍ವಂತೆ ಪರವಾದವಂ ಗೆಲ್ದು (ಜೈಪು. ೩-೨೮). ೨. ಪರವಸ್ತು; ಪರಮಾತ್ಮ; ಪದವಾಕ್ಯವಿದರಾಗವಾದಗ ಳೆಯ ಬಿಟ್ಟು ಒದವಿಪರು ದಿಟದರಿವ (ಮುಂಕುಶ. ೪೧).

**ದಿಟ**$_2$ 'ದಿಟಂ' ನೋ.

**ದಿಟಂ, ದಿಟ**$_2$ (ಅ). ನಿಶ್ಚಯವಾಗಿಯೂ; ನಿಜವಾಗಿಯೂ; ಸತ್ಯವಾಗಿಯೂ: ಎಸೆವ ಸಾನಂದದಿಂ ದಿಟಮುದರ್ದಪಾರಿಜಾತದ ವಿಟಪಿಗೆ ಕೌಸ್ತುಭದ ಸುತ್ತು ಸೊಗಯಿಪ ತೆಱದಿಂ (ಶಾಂತಿಪು. ೩-೪೩); ಪುತ್ರ ಮುಖಾಬ್ಜಾಲೋಕನ ಮಾತ್ರದೊಳಂ ಪಿತೃ ತಪಕ್ಕೆ ಪೋಕುಂ ಚಿತ್ರಂ ಪುತ್ರಂ ಮುಮುಕ್ಷುದರ್ಶನ ಮಾತ್ರದೆ ಜನದೀಕ್ಷೆಯಂ ದಿಟಂ ಕೈಕೊಳ್ಗುಂ (ಸುಕುಮಾ. ೯-೧೧೧): ನೋಡ ಮರುಳ್ಗಳೆ ದಿಟಂ ಮಾಡುವುದೆಗ್ಗಲೆ ನಿನ್ನನಟ್ಟಿ ರೊಳಾಂ ಮುದ್ದಾಡಿಸೆ ಮುನಿಸನ್ನಿಧಿಯೊಳ್ಕಾಡಿದುದಂ ಥಾಂದಸಿಕ್ಕೆಯೊಂದೊದವಿಂದಂ (ಧರ್ಮಾಮೃ. ೩-೨೫೭): ದೇವ ದಿಟಂ ನಿಮ್ಮಯ ಚೇತೋವೃತ್ತಿಯ ತೆಱದಿನೀ ಸರೋವರಸಲಿಲಂ ಪಾವನಮೆನಸುಂ ಸ್ವಚ್ಛಂ (ಕುಸುಮಾ. ೯-೪೦). ದಿಟ$_2$: ದೇವ ನೀ ದಿಟ ಕೊಲುವಡೆಯು ನಾ ಸಾವೆನೇ (ಕುಮಾವ್ಯಾಭೀ. ೭-೪೩) ; ಲೇಸನಾಡಿದೆ ಕರ್ಣ ದಿಟ ನೀನೀಸು ಸರ್ವಜ್ಞನಿಯೆಂಬುದನೀಸು ದಿನ ನಾವಱಿಯೆವೈ (ಕುಮಾವ್ಯಾದ್ರೋ. ೦-೩೦) ; ನೋಡಿದ್ರೆ ಪರಿವಾರ ಮನುಜನ ಬೀಡು ಕರ ಸೋಜಿಗವು ದಿಟ (ಶಾರಿಲಾ.

೨೬-೧೪) ; ತವ ಬಲು ಬಲು ಜಾಣತನದ ಮಹಾವಿಚಿತ್ರ ಪ್ರೌಢಿಯೋ ದಿಟ ದೇವನಪ್ಪ ನೋಲೆ ವೈತ್ಯಾಂತಕನಲಾ ರಣಕೆ (ತಿರುರಾ. ೦-೧೯-೧೮).

ದಿಟದಿಟ, ದಿಟದಿಟಂ (ದ್ವಿರುಕ್ತಿ) : ಹಲವು ವೇದ ಪುರಾಣ ಶಾಸ್ತ್ರವ ಕೇಳಿದು ನೀ ಮರುಳಾದೆ ದಿಟದಿಟ ಕೊಲುವರೇ ಸಿರಿಯಂದದವಳನು ಸರ್ವಜ್ಞನೇ ನಿನಗೆ (ಚಾಕಿರಾ. ೩೬-೦೮); ಯಿಂತೆರಡಜ ಬಂಗೆ ಪುಂಣ್ಯ ಪಾಪಂಗಳುಂ ಪಾದ್ದುರ್ಗ ಕೊಂಡೊಯ್ಯುದು ತಪ್ಪದು ದಿಟದಿಟಂ ಸತ್ಯಂಗಾಡಿರೇ (ಎಕ. XXIII, ೦೯೪-೦೮ ; 1265). [ <ದಿಟ$_1$ ]

ದಿಟಕರಿಸು (ಕ್ರಿ). ಪ್ರತ್ಯಕ್ಷವಾಗಿ ತೋರು. – ಕಾಣು ; ಸಾಕ್ಷಾತ್ಕಾರವಾಗು : ಘಟದಲ್ಲಿ ಆತ್ಮ ದಿಟಕರಿಸುವುದಿಲ್ಲ ಎಂದು ಅಱಿದ ಮಾತ್ರ (ಮಸುಗುಂ. ೨೬೫-೭೪) : ವಾಯು ಅಡಗಿದ ವಾರಿಧಿಯಂತೆ ಅಸು ಅಡಗಿದ ಪಟಬಿಪ್ಪದಂತೆ ದಿಟಕರಿಸು ಗುಡಿಯ ಗುಮ್ಮಟನಾಥನ ಅಗಮ್ಯೇಶ್ವರ ಲಿಂಗದಲ್ಲಿ ಪರಿಪೂರಿತವಾಗಿರು (ಮಸುಗುಂ. ೨೭೩-೯೬).

[ <ದಿಟ$_1$ + – ಇಸು$_8$ ]

ದಿಟಪುಟ (ನಾ). ೧. ವ್ಯಕ್ತವಾದುದು ; ಸ್ಪಷ್ಟವಾದಂದಂ. ೨. ಸತ್ಯ ; ನಿಜ : ಕಟಕದೊಳು ತ್ರಿಪುರಾರಿಯುಂ ದಿಟಪುಟದಿ ಕರದೋ ಎಂದೆನಿಸಿದು ಕ್ಕಟದ ಭಕ್ತನು ಕಿನ್ನರಯ್ಯನು (ಬಸಪು. ೨೮ ಸೂಚನೆ) : ನಾವ್ ದಿಟಪುಟವನರಿವರೆ ಸಾತಿಯಾಡುದ ನಿಮ್ಮ ಚಿತ್ತದಲಿ (ಕುಮಾದ್ರೋ. ೮-೬೫) : ನಿಮ್ಮ ಮಾತು ದಿಟಪುಟವು ಸ್ಫಟಿಕ ಅದಕಿಲ್ಲ ಬೇರೆ ತಂತ್ರ (ನೆಂಮು. ೩೫-೯). ೩. ಪರಮ ಸತ್ಯ ; ಪರವಸ್ತು ; ಶಾಶ್ವತವಾದುದು ; ಸ್ಥಿರವಾದುದು ; ಸತ್ಯವಾದುದು : ದಿಟಪುಟವನರಿಗಳಿದು ಸಟೆಯ ಬಳಸುವ (ಕೃಷ್ಣನ. ೨೭-೦೦) : ಎಷ್ಟು ಪಟುಭಟರಾದರೂ ಸ್ಫಟಿಕದ ಮಟ್ಟಿಯಲ್ಲಿ ಆಡಬೇಕು ದಿಟಪುಟವನಱಿದಡೂ ಗುರು ಕೊಟ್ಟ ನಿಟಿಲ ಲೋಚನನು ಘಟಸಬೇಕು (ಮೋಲಮಾ. ೨೦-೮೩) ; ಹುಸಿಯ ಮಾಯಾತಮಕ್ಕೆ ದಿಟಪುಟ ದಿವಾಕರ ಎನ್ನೊಡೆಯ (ಸಿದ್ದೇವ. ೪೧-೧೧೦).

ದಿಟಪುಟವಾಗು, ದಿಟಪುಟವಾಗು = ವ್ಯಕ್ತವಾಗು ; ಸ್ಪಷ್ಟವಾಗು : ದಿಟಪುಟವಾದ ಬಹುಲಾಕಿಯೊಳತಿಮಧುರವಾಗೆ ಕರ್ತರಿ ಸಮಗರ್ತರಿಮರ್ಧಗರ್ತರಿ ಮೊದಲಾದನೇಕ ಶಬ್ದಸಂಪಾದನದಿಂ ಸನ್ನೆಗೆಯ್ದು ತೋರ್ಪುದುಂ (ಮಹಾಸೇ. ೪-೫೫ ವ) : ಪ್ರವ್ಯಕ್ತಯಾತಿ ಪ್ರಯೋಗತ್ವಂ= ದಿಟಪುಟವಪ್ಪ (ವ್ಯಕ್ತವಹ ಆಭಾಸಮನುಳ್ಳುದು) ಜಾತಿಯಂ ಬಾಜಪುದುಂ (ಸೀತಬಾ. ೩೦-೦೦). [ <ದಿಟ$_1$ ]

ದಿಟಪುಟಗೆಡು (ಕ್ರಿ). ನಿಜಾಂಶ ತಿಳಿಯದಿರು ; ಸತ್ಯ ತಿಳಿಯದಿರು : ವಿಶ್ವರು ದೆಸೆಯಾರು ದಿಟಪುಟಗೆಟ್ಟೆನು ಹಿಕ್ಕಿ ಹೇಳ್ದೊಡೆ ಹಿತರಿಲ್ಲ ಆಕ್ಕಟಾ ರಂಗನ ಗತಿಯೋದಿರುವಳನಕ್ಕಟಕ್ಕಟ ಕಾಣ್ಬುದೆಂದೊ (ಶತಸಾಂ. ೩೫-೧೫).

[ ದಿಟಪುಟ + ಕೆಡು$_1$ ]

ದಿಟಪುಟವಡೆ (ಕ್ರಿ). ಸತ್ಯವನ್ನು ಹೊಂದು ; ಸಾಕ್ಷಾತ್ಕಾರವನ್ನು ಪಡೆ: ಚಿಪ್ಪುಟವಳಿ ಚಟಪಟಪಟಮಾಟವ ಬಿಟ್ಟಕ್ಕಡಾಂ ದಿಟಪುಟವೆತ್ತು ಟಕ್ಕನುಳಿದು ಪಟ್ಟತಟ್ಟನೆ ಜಟಿಸಲೆಂಟಕ್ಷರಕಾಗಿ ಮೆಯ್ದೋರ್ಪೆ (ಶತಸಾಂ. ೭೦-೫೩).

[ ದಿಟಪುಟ + ಪಡು$_1$ ]

ದಿಟಮಾತು 'ದಿಟವಾತು' ನೋ.

ದಿಟವಂತ (ನಾ). ನಿಜವನ್ನು ಆಡುವವನು ; ಸತ್ಯಮಾರ್ಗದಲ್ಲಿ ನಡೆಯುವವನು ; ಸತ್ಯವಂತ : "ಸೇದ್ಧಾ, ಸೇಧಕಃ, ಸಿದ್ಧಃ, ಸಿದ್ಧವಾನ್-ಈ ೪ ದಿಟವಂತರ್" (ಅಶಕ್ಕ. ೧೮೮). [ ದಿಟ$_1$ + – ವಂತ ]

ದಿಟವಾತು, ದಿಟಮಾತು (ನಾ). ನಿಜವಾದ ಮಾತು,–ನುಡಿ : "ದಿಟವಾ [ಪಾಠಾಂ. ಮಾ]ತು ಸೂನೃತಮಕ್ಕು" (ಮಂಗರಾ. ೨೫-೧). ದಿಟಮಾತು : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.

[ ದಿಟ$_1$ + ಮಾತು$_1$ ]

ದಿಟ್ಟ$_1$, ಧಿಟ್ಟ (ಗು). ೧. ಧೈರ್ಯದಿಂದ ಕೂಡಿದ ; ಧೀರತನವುಳ್ಳ : ಅಪ್ಪಮದಗಳನಿಪಟ್ಟಳಿಗಳು ಮೂಱು ಪಟ್ಟಣದಪ್ಪದಿಕ್ಕಿನೊಳು ಮುಟ್ಟಬಾರದು ಹರಿಹರಬೊಮ್ಮರಾದಿಯ ದಿಟ್ಟ ಮಹಾಪುರುಷರಿಗೆ (ತ್ರಿಪುಸಾಂ. ೪-೪೬). ೨. ಉದ್ಧಟತನದ ; ಸೊಕ್ಕಿನ : ದಿಟ್ಟ ಪೆಂಗಸೆ ನೃಪರ ಬಸುಱಲಿ ಹುಟ್ಟು ನೀ ಪೋಗೆಂದು ಶಾಪವ ಕೊಟ್ಟನು (ಕುಮಾಅ. ಒರಿಇ. ೩೩-೨೪). ೩. ಗಟ್ಟಿಮುಟ್ಟಾದ ; ಬಲವಾದ : (ಕ). (ನಾ). ೪. ಧೈರ್ಯಶಾಲಿ; ಧೀರವ್ಯಕ್ತಿ ; ಸಮರ್ಥ ; ಸಾಹಸಿ : ಜನವಾಕ್ಯಾಂಬುಧಿಯುಮನುಱದೀಸುವೆನೆಂಬ ದಿಟ್ಟರಿಮ್ಮಿಂ ಪೆಱರಾರ್ (ಧರ್ಮಾಮೃ. ೦-೫೩) ; ಎಲೆ ಮಱೆಯ ನೀರ ಸುಟ್ಟ ಬೂದಿಯದು ಪೂಜಿಸಿ ಸಿದ್ಧಿಗಳ ಗುದ್ದಾಟಕ್ಕೊಳಗಾದವರ ಕಡೆಮುಟ್ಟ ಬಿಟ್ಟಪ್ಪನೈ ಜಿಟ್ಟಜೆಪತಿ ದಿಟ್ಟ ಕಪಿಲಸಿದ್ಧ (ಸಿದ್ಧವ. ಕ. ೪೫-೪೮೩) : ದಿಟ್ಟ ನೀನಹೆ ಪುಂಡರೀಕಯೆಸುತ ಬಲು ಬಟ್ಟ ಸರಳುಗಳ ತೊಟ್ಟು ಕಟ್ಟಾಳುಗಳಧಿರಾಜನೆನಿಸಲು (ಅಂಜಪ. ೬-೧೪೩) : ದಿಟ್ಟನೈ ಗುರು ಸೂನು ಶಿವ ಜಗಜಟ್ಟಿಯಲ್ಲಾ (ಕುಮಾಕ. ೧೪-೨೨) : ಅಂದು ಕಾಳಿಂಗನ ಹೆಡೆಯ ತುಳಿದ ದಿಟ್ಟ ನಂದನ ಕಂದ ಮುಕುಂದ ಕಾಣಮ್ಮ (ಪುರಂದ. ೨-೭೦-೧) ; ಸ್ವಭಾವತಃ ನಾನು ದಿಟ್ಟಳಿದ್ದೇನೆ (ಹೇಮಂತ. ೨೭೧). ೫. ಧೃಷ್ಟ ; ಸೊಕ್ಕಿದವನು ; ಕೊಬ್ಬಿದವನು ; ಉದ್ಧಟ : ಕಟ್ಟತುರಿದೆಸೆ ನಾಲ್ಕಱಲಿ ಬೆನ್ನಟ್ಟ ಹೊಯ್ದುದು ಬಿನುಗುಗಳ . . . ದಿಟ್ಟರುರಿದುದು ವೀರರಸುಗಳು ಬಿಟ್ಟರಭವ ದ್ರೋಹಿಗಳು ನೆಱೆ ಕಟ್ಟ ಕೇಡಿಂಗಾರು ಮಱುಗುವರು (ಕುಮಾಕ. ೭-೪೧) : ಎಲೆ ದಿಟ್ಟ, ನಗುವೆಯ ನನ್ನ ಎನಗೇತಕೆಯೋ ಮದುವೆಯ ಬನ್ನ ! (ಗದೀಶ. ೫.-೦೦೭). ಧಿಟ್ಟ : ೧. ಧಿಟ್ಟ ಜೀವಿಗಳ ಭಂಗದ ಬರಿಯಂತರಂಗ (ವಿಸೀಗೀ. ೩-೧೦) ; ನಟ್ಟ ಕಂಬದ ಹಾಗೆ ಧಿಟ್ಟವೀರನಿರಬೇಕು (ಗಾದ). ೪. ವೃಥಾ ಕೆಡೆನುಡಿಯ ನುಡಿದರೆ ಧಿ[ಪಾಠಾಂ. ದಿ]ಟ್ಟನೆಂಬರೆ ವೀರರಾದವರು (ಕುಮಾದ್ರೋ. ೧೫-೬೬) ; ಧಿಟ್ಟ ಕೇಳು ನಿರಂತರವು ಕೈಗಟ್ಟ ನಿಂದೂಳಿಗವನೆಸಗಲು ನಿಟ್ಟಸನು ಪರಮಾತ್ಮ (ಗಗತಾ. ೦೨-೭೮).

ದಿಟ್ಟವನಾಡು = ಉದ್ಧಟತನದಿಂದ ಮಾತನಾಡು ; ಸೊಕ್ಕಿನಿಂದ ಮಾತನಾಡು : ಹಿರಿದು ದಿಟ್ಟವನಾಡಿ ಸಕಲರ ಮೆಚ್ಚಿಪುದುರುತರ ಮೌಖರ್ಯದೋಷ (ಪೂಜ್ಯದ. ೬-೫೫).

[ <ಪ್ರಾ. ಧಿಟ್ಟ./ ಸಂ. ಧೃಷ್ಟ ]

ದಿಟ್ಟ$_2$ (ನಾ). ದೃಢಸ್ಥಿತಿ ; ನೆಲೆ : ಹುಟ್ಟಿದುದು ದೇವಾಂಗನಾಜನ ನೆಟ್ಟನೆಯದೀರೇಳುಲೋಕದ ದಿಟ್ಟವನು ನಿರ್ಮಿಸಲಿಕಾಯ್ತು ಮನುಜ ವರ್ಗದಲಿ ಹುಟ್ಟಿದವರೊಂದೊಂದು ಕೆಲಸವ ನೆಟ್ಟನಾಶ್ರಯಿಸಿದರು (ಸಂಭಪ. ೫-೩೦) : ಅವಶ್ಯವಾದ ಪತ್ರವ್ಯವಹಾರ ನಡೆದು ಒಂದು ದಿಟ್ಟವನ್ನು ಮುಟ್ಟುವುದಕ್ಕೆ ಇನ್ನು ಎರಡು ಅಥವಾ ಮೂರು ತಿಂಗಳು ಆಗಬಹುದು (ಚಕರಾ. ೩೭೫). [ <ತಿಟ್ಟ$_3$ ]

ದಿಟ್ಟಂಗೊಳಿಸು (ಕ್ರಿ). ದೃಢಪಡಿಸು ; ಸ್ಪಷ್ಟಪಡಿಸು : ವಸಂತಕನೀಕೇರಿಯೊಳ್ ತಿರುಗಿ ಪರಿಣತನಾದುದಱಿಂದೆಮುಮೆಮಗೆ ಹಿತಪರನಾದುದಱಿಂದೆಯುಂ ... ಇದೊಂದು ನೆವದೊಳ್ ದಿಟ್ಟಂಗೊಳಿಸಿದನೆಂದಾಳೋಚಿಸಿ (ಚಕವಿ. ೭-೭೭ ವ). [ ದಿಟ್ಟ$_2$ + ಕೊಳ್$_1$ + – ಇಸು$_3$ ]

ದಿಟ್ಟಂಜಮಾಬಂದಿ 'ದಿಟ್ಟಂಜಮಾಬಂದಿ' ನೋ.

ದಿಟ್ಟಗಾರ (ನಾ). ಧೈರ್ಯಶಾಲಿ ; ಧೀರ : (ಕ).

[ ದಿಟ್ಟ$_1$ + – ಗಾರ (< – ಕಾಱ) ]

ದಿಟ್ಟತನ, ಧಿಟ್ಟತನ (ನಾ). ೧. ಧೈರ್ಯ ; ಸಾಹಸ : "ಕಡ್ಡಮೆನಲ್ ದಿಟ್ಟತನಂ[ಪಾಠಾಂ. ಸಹಂ]" (ಚತುನಿ. ೩೮) ; ದಾನವರ ಥಟ್ಟಣೆಗೆ ನಿಲುವರ ನಾನು ಕಾಣೆನು ದಿಟ್ಟತನದಲಿ ತಾನೆ ನಿಂದನು ಕೌರವೇಂದ್ರನು ಸಕಲಬಲ ಸಹಿತ (ಕುಮಾದ್ರೋ. ೧೫-೫೨) ; ಅವನ ದಿಟ್ಟತನವ ಸುರೆಮಂತಿ ಕಂಡು

ನೀನಾರ ದೂತಂ ನಮ್ಮ ಪುರಕದೇಂ ಕಾರಣಂ ಬಂದೆ . . . ಪೇಳೆಂದು ಬೆಸಗೊಳಲ್ (ಚಬಪು. ೨೩-೨೦); ಆ ಭೂಪನ ದಿಟ್ಟತನಕೆ ಸರಿಯುಂಟೆ (ಕಂನವಿ. ೦೮-೩೩). ೨. ಧಾರ್ಷ್ಟ್ಯ; ಉದ್ಧತಿಕೆ: ಹರಹರಾ ನೀನಿಷ್ಟು ಠಾವನರಿಯದೆ ಅಪ್ಪವಿಧಾರ್ಚನೆ ಪೋಡಶೋಪಚಾರವಂ ಮಾಡಿದನೆಂಬ ವರ ದಿಟ್ಟತನವ ನೋಡಾ (ಅಪದಂ. ೧೮೫-೮೩೩); ಪಟ್ಟಣದೊಳು ಜನ ಕೊಟ್ಟ ಹಣವನೆಡೆವಟ್ಟು ಬಾಹಿರವಾಟ್ಟವೆರದು ದಿಟ್ಟತನದೆ ಪಸರಿಟ್ಟು ವಟ್ಟವ ಕೊಂಬ ಸೆಟ್ಟಿಗಳಿರುತಿಹರಲ್ಲಿ (ಅಂಜಚ. ೩-೮೩). ೩. ಶೌರ್ಯ; ಬಲ; ಶಕ್ತಿ; ದಾರ್ಢ್ಯ: ಬೆಟ್ಟುಗಳ ರಟ್ಟೆಯಂ ಕುಟ್ಟಿದಮರಾವಳಿಯ ದಿಟ್ಟತನವಂ ನೋಳ್ಪೆನೆಂದು . . . ಬಂದುದೋ (ಹದಶಾ ಪರಿ ೨೦೪); ಭೀತಿ ಬಗಿದುದು ದಿಟ್ಟತನದನುಧಾತುಗೆಟ್ಟುದು (ಕುವ್ಯಾಕ. ೩-೨೫): ಚೆಟ್ಟದ ಚಾಮೇಂದ್ರನೆನೆ ರಿಪುಭೂಪರ ಪಟ್ಟದಂಗನೆಯರ ಗರ್ಭ ಊಟ್ಟುಳುಕಿಗೆ ಬಂದು ಕರಗುವುವಾತನ ದಿಟ್ಟತನವದೇವೇಳ್ವೆ (ಕಂನವಿ. ೩-೯೮). ಧಿಟ್ಟತನ: ೧. ಧಿ[ಪಾಠಾಂ. ದಿ]ಟ್ಟತನ ಪೊಳ್ಳಾಯ್ತು ಶೌರ್ಯದ ಘಟ್ಟ ಕರಗಿತು (ಕುವ್ಯಾಭೀ. ೮-೬೨); ಶ್ರದ್ಧೆಯೊಡನೆ ಮಾತ್ರ ಅವನ ಧಿಟ್ಟತನ ನಡೆಯುತ್ತಿತ್ತು (ಪ್ರೇಮಾಶ್ರ. ೨೪೬). ೨. ಈ ಧಿಟ್ಟತನವು ಸಹನವಾಗಲಿಲ್ಲ (ಸಮಜೀ. ೪೧). [ ದಿಟ್ಟ$_1$ + – ತನ ]

**ದಿಟ್ಟಪಡಿಸು** (ಕ್ರಿ). ದೃಢಪಡಿಸು; ಖಚಿತಪಡಿಸು: ಚಿಕ್ಕವರಾದಾಗ್ಯೂ ವಿವೇಕಶಾಲಿಗಳು ಕಾರ್ಯಗಳನ್ನು ದಿಟ್ಟಪಡಿಸುವರು (ಕಥಾಪು. IV, ೦೦).
[ ದಿಟ್ಟ$_2$ + ಪಡಿಸು ]

**ದಿಟ್ಟಮನುಷ್ಯ** (ನಾ). = ದಿಟ್ಟಗಾರ: ಮೇಜರ್ ಬಟ್ಲರನು ಮೊದಲಿನಿಂದಲೂ ದಿಟ್ಟಮನುಷ್ಯ (ಮಹಾತ್ಮಾ. ೬೬). [ ದಿಟ್ಟ$_1$ + ಮನುಷ್ಯ ]

**ದಿಟ್ಟವಾಳ** (ನಾ). ಧೈರ್ಯಶಾಲಿ; ಧೀರ: ಅಸಮಸೆಗೆ ಮೈಯಳುಕದೆಜಗುವ ಹುಸಿವ ಜಾರುವ ಹೊಳೆವ ಹಣುಗುವ ಬೆಸುವ ಬಿಡಿಸುವ ದಿಟ್ಟ [ಪಾಠಾಂ. ಷ್ಟ]ವಾಳರು ಹೊಕ್ಕು ಹೆಣಗಿದರು (ಕುವ್ಯಾಸ. ೨-೦೦೫).
[ದಿಟ್ಟ$_1$ + – ವಾಳ$_1$ ]

**ದಿಟ್ಟಸೊಕ್ಕು** (ನಾ). ಅಧಿಕವಾದ ಸೊಕ್ಕು, – ಉದ್ಧಟತನ: ನಿನ್ನ ಈ ಬಿರುಸಿನ ಗಡಸನ್ನು ಸೆಡಕನ್ನು ಬಲ್ಮೆಯಿಂದಿಳಿಹಿ, ಮನ್ಮಥನಿಗಲರಲೊಲ್ಲದ ನಿನ್ನ ಅಶಾಸಿತಯುವ್ವನಕ್ಕುಳ್ಳ ದಿಟ್ಟಸೊಕ್ಕನ್ನು ತಿದ್ದಿ ತಿಳಿಯಿಸಿಕೊಂಡು (ಮಂತ್ರಶ. ೫೯-೨೪). [ ದಿಟ್ಟ$_1$ + ಸೊಕ್ಕು$_4$ (<ಸೊರ್ಕು$_2$) ]

**ದಿಟ್ಟಾಯ್ಲ** (ನಾ). ಧೀರ; ಸಾಹಸಿ. 'ದಿಟ್ಟಾಯ್ಲತನ' ಪರಾ.
[ ದಿಟ್ಟ$_1$ + –ಆಯ್ಲ (<–ಆಯಿಲ$_2$) ]

**ದಿಟ್ಟಾಯ್ಲತನ** (ನಾ). ಧೀರತನ; ಸಾಹಸ: ಧನು ಮುರಿಯೆ ದಿಟ್ಟಾಯ್ಲತನವೀತನಲಿ ಸಾಕಿನ್ನೆನುತ ಗುರುನಂದನನು ಮುರಿದನು ಹೊಗರುಮೋರೆಯ ಪೊತ್ತ ದುಗುಡದಲಿ (ಕುವ್ಯಾಕ. ೧೪-೩೧).
[ ದಿಟ್ಟಾಯ್ಲ + – ತನ ]

**ದಿಟ್ಟಿ, ದಿಷ್ಟಿ$_1$** (ನಾ). ೧. ಕಣ್ಣು; ನೇತ್ರ: "ಅಚ್ಚಿ, ಅಲಿ, ದಿಟ್ಟಿ–ಈ ೩ ನಯನಂ" (ಕಶಸಾ. ೨೧-೪೨೫); ಮೆಯ್ಯೆಲ್ಲಂ ದಿಟ್ಟಿಗಳಾದೊಡಿಂದ್ರನೆನಿಸ ಲ್ಯಾರ್ತರ್ಂ ಮಹೇಂದ್ರಾಂತಕಂ (ಕಾವ್ಯಸಾ. ೫೩೦ ಶೂದ್ರಕ); ಆಗಸದೊಳಗೊಂದು ಮಹೀಭಾಗದೊಳಿನ್ನೊಂದು ದಾಡೆಯವಾಗಿರೆ ವನದಿಂ ಬೇಗಂ ಬರ್ಪಳ ದಿಟ್ಟಿಗಳಾಗಳೆ ಪತ್ತಿದುವು ಗೆಂಟಱೊಳ್ ಪಹಾರುತಿಯಂ (ಪುಶಧಾ. ೩-೦೩); ಮಾರಲ್ದ ದಿಟ್ಟಿ ಕತ್ತರಿಮೊನೆಗೊಂಡಬಲ್ವ ಕಿವಿ ಸೂಚಿಸಿದಪ್ಪುದು ಸೋಲ್ತ ಭಾವಮಂ (ಕಾದಂಪೂ. ೬೫೦); ನಟ್ಟ ದಿಟ್ಟಿಗಳ್ಪೆರಸು ನಿನ್ನನೆ ನೊಡುತ್ತುಮಿರ್ಕುಮಪ್ಪೊಡೆ (ಪಂಪಶಂ. ೧೬೬-೦೨): ಕಿವಿಗಳೆಳ(ಟ)ಲ್ದು ತೂಱುವೊಡೆ ಮೆಯ್ ಬಗಿದಪ್ಪೊಡೆ ದಿಟ್ಟಿ ನೆತ್ತಿಗೇಱು ವೊಡದಱಿಂದೆ ಕಣ್ ಗುಱಿದು ತೋಱಿದೊಡೆಚ್ಚುಗೆ ಪಟ್ಟ ಸೂ[ತ್ರಭಸ್ಮ]ವಂ (ರೋಕಶೋಷ. ೯-೨೦೯); ಹತ್ತೆಸಾರ್ದೆಯ್ದಿ ಕಣ್ಗೊಡೆದಿರ್ದುದಂ ಕಂಡು . . . ದಿಟ್ಟಿಯಿಂತೇಕಾಯ್ತು ಉರಿದೆ ನಾಂ ಉರಿದ ನಾಂ ಎನ್ನೊಡೆಯನೇ ಸೈರಿಸಲ್ಕಾಪನೇ ... ಎಂದು (ಕಥಾರ. ದೀ. ೦೪೭-೮); ಪಱಿದಿಟ್ಟ ದಿಟ್ಟಿಯು ಬಳಿಕೊರ್ವನ ಕಾಲ ಮುಱಿದಿಟ್ಟ ನಿಟ್ಟೆಲುಗಳನು ಸಿಱಿನಿಟಿಲೆಂಬಂತೆ ಕಿತ್ತು ವಸ್ತ್ರಕವನು ತಿಱಿಕಲ್ಲನಾಡಿ ಬೊಬ್ಬಿಱಿದ (ಪೋಹತ. ೧೨-೩೭). ೨. ದೃಷ್ಟಿ; ನೋಟ: "ದಿಟ್ಟಿಯೆಂದೆನೆ ದೃಷ್ಟಿಯಕ್ಕು" (ಕಶರ. ೫೧): ತಾಂ ಪಿಂಗದೆ ನಟ್ಟ ದಿಟ್ಟಿಯುನವಂ ಕಿಬಿಲೆಂದನುಗೆಯ್ದು ತೂಗಿದಂ (ಆದಿಪು. ೧೨-೧೫); ಪದಪಿಂ ನಟ್ಟಿರೆ ದಿಟ್ಟಿಯುಂ ತೆಗೆದೆನೆಂತೆಂತಾನುಮುದ್ವೇಗದಿಂ (ಕಾದಂಪೂ. ೭೭೩); ಬೆಟ್ಟಮದೊಂದು . . . ದಿಟ್ಟಿಗೆಡೆಯಾದುದು ಕರ್ಪುವಿಲ್ಲನಾ (ಕಬ್ಬಿಕಾ ೨೨೦). ೩. ಕೆಟ್ಟ ಪರಿಣಾಮವನ್ನುಂಟುಮಾಡುವ ನೋಟ; ಕಣ್ಣೆಂಜಲು; ದೃಷ್ಟಿದೋಷ: ಕಟ್ಟುಗೆ ಕೊರಲೊಳ್ ಸೀರೆಯ ಪೊಟ್ಟಣ(ಳ)ಮುಂ ಮಾಡಿ ಧಾನ್ಯಸಮೇತಂ ನೋಡಲ್ ದಿಟ್ಟಿಗಳಾಗವು ವಾಜಿಗಂ (ಅಶ್ವಶಾ. ೮-೧೮); ಅಮರಗಣದಿಂ ದಿಟ್ಟಿಯಾದಪುದು ಮತ್ಸುತಂಗೆಂದು ಗಿರಿರಾಜತನುಜೆ ಮಮತೆಯಿಂ ತದ್ಗರ್ಭರಕ್ಷಣಕೆ ಬರೆದ ಕಾಳಿಮಲೇಪೆಯೋ . . . ಎನಲ್ ಕಪ್ಪಡರ್ದ ನಿಡುಬಾಸೆ ಕಣ್ಗೆಸೆದುದು (ಚಬಪು. ೪-೧೨). ೪. ಲಕ್ಷ್ಯ; ಗಮನ: ತಳಿರ ಕಳಿಕೆಯ ಪೊಸ ಪೂವಿನ ಮೇಗೆ ದಿಟ್ಟಿಯಾಗಿರೆ ವನಜಾನನೆಯರ್ ವಿಳಾಸವನಮಂ ಪೊಕ್ಕರ್ (ಆದಿಪು. ೧೧-೬೯); ಎಲೆ ಆದಿತ್ಯ! ನಿನ್ನ ಕುಲವಧುವಿವಳ್ . . . ಅಂತರದಱಿಂ ಇವಳೊಳ್ ದಿಟ್ಟಿಯಿರ್ಕೆ (ರಾಮಾಶ್ವ. ೩೯-೮). ದಿಷ್ಟಿ$_1$: ೩. 'ದಿಷ್ಟಿಬೊಟ್ಟು'. 'ದಿಷ್ಟಿಮಣಿಸರ' ಪರಾ.

ದಿಟ್ಟಿಗೆವರ್ = ಕಣ್ಣಿಗೆ ಬೀಳು: ದಿಟ್ಟಿಗೆವರೆ ಬಂಧವಿಧಂ ಕಟ್ಟಿದ ಪಲತೆಱದ ಮಣಿಯ ಸೂಸಕದ ನೆಟಿಲ್ (ಚಂದ್ರಪು. ೬-೪೬). ದಿಟ್ಟಿಗೊಟ್ಟು = ದೃಷ್ಟಿಗೆ ಬೀಳು: ಎನ್ನಾ ಪೆಂಡತಿಯುಂ ಜಾನಕಿಯುಂ ರಕ್ಕಸಂ ರಾವಣಂ ಕಳ್ದುಯ್ದುಂ ಆದೊಡಂತಾ ದುಟ್ಟಂ ದಿಟ್ಟಿಗೊಟ್ಟದನಿಲ್ಲಂ (ಅದ್ಭುತ. ೩೬-೧೨). ದಿಟ್ಟಿ ಮೂಱಱ ದೇವ = ಮೂರು ಕಣ್ಣುಗಳುಳ್ಳವನು; ಮುಕ್ಕಣ್ಣ; ಶಿವ: ದಿಟ್ಟಿ ಮೂಱಱ ದೇವನಂ ಕಂಡು ಕಾಣದ ಜ್ಞಾನಿಗಳೆನುತ್ತ ಬಾಯ ಬಿಟ್ಟು ಪಲಬುವರು (ವೀಶೈಪು. ೨-೯-೨೬). ದಿಟ್ಟಿ ಮೂಱಱರಸ = ದಿಟ್ಟಿ ಮೂಱಱದೇವ: ದಿಟ್ಟಿ ಮೂಱ[ಮೂಱಱ]ರಸಂ ನಾರಾಯಣ ಪ್ರಿಯಂ ಕಾಮಾರಿಯಾರೋಗಣೆಗೆ ನಡೆತಂದು (ಗಿರಿಕ. ೦೦-೯೮ ವ).
[ <ಸಂ. ದೃಷ್ಟಿ ]

**ದಿಟ್ಟಿಗ** (ನಾ). ನೋಡುವವನು; ನೋಟಕ; ಪ್ರೇಕ್ಷಕ: ಆ ಹುರವ ನಿಟ್ಟಿಪ ದಿಟ್ಟಿಗರ ಬಗೆಗೆ . . . ಕಲಧೌತರೌಪ್ಯಗಳ ಸೌಧಸಮಾಜ ರಾಜಿಪುವು (ಮದೀಪು. ೨-೩೮). [ ದಿಟ್ಟಿ + – ಗ$_2$ ]

**ದಿಟ್ಟಿಗರ್ಪು** (ನಾ). ಕಣ್ಣೆಂಜಲಾಗದಿರಲು (ಗಲ್ಲ, ಹಣೆಗಳ ಮೇಲೆ) ಇಡುವ ಕಪ್ಪು, – ಕಾಡಿಗೆ; ದೃಷ್ಟಿ ತಾಗದಿರಲು ಇಡುವ ಕಪ್ಪು; ಬೊಟ್ಟು; ದೃಷ್ಟಿಬೊಟ್ಟು: ಸುಱಿಗುರುಳೊಳ್ಳೊಸಲ್ ಮಿಸುಪ ಸಾದಿನ ಬೊಟ್ಟು ಪೊದಟ್ದ ಗಲ್ಲದೊಳ್ ತೊಳಗುವ ದಿಟ್ಟಿಗರ್ಪು . . ಮನಂಗೊಳೆ (ಚಕವಿ. ೭-೫೩). [ ದಿಟ್ಟಿ + ಕರ್ಪು$_1$ ]

**ದಿಟ್ಟಿಗಿಡಿಯ** (ನಾ). ಕಣ್ಣಿನಲ್ಲಿ ಬೆಂಕಿಯನ್ನುಳ್ಳವನು; ಕಿಡಿಗಣ್ಣ; ಶಿವ: ದಿಟ್ಟಿಗಿಡಿಯನೊಲು ತದ್ವಕ್ತ್ರರಾ ನಿಂದೆಯಿಂ ರಾಘವಂಗಾಯ್ತು ಕೇಡು (ರಾಘರ. ೪-೨೦); ಮುಟ್ಟಬಾರದ ಕಿಚ್ಚ ನುಂಗಲು ಹೊಟ್ಟೆ ಬೇಯದೆ ಮಾಣ್ಬುದೇ ಇದ ದಿಟ್ಟಿಗಿಡಿಯಂ ಬಲ್ಲನೆನುತಲಿ ಮಱುಗಿದಳು ರಮಣಿ (ಶಂಕದಾ. ೭-೧೬). [ ದಿಟ್ಟಿ + ಕಿಡಿ + – ಅ$_7$ ]

**ದಿಟ್ಟಿಗೆಡು** (ಕ್ರಿ). ಕಂಗೆಡು; ದಿಕ್ಕುಗಾಣದಂತಾಗು: ಚಂತಿಪ ಸುಯ್ಯು ಜಾನಿಸುವ ಕಂದುವ ಕುಂದುವ ದಿಟ್ಟಿಗೆಟ್ಟುವಿಭ್ರಾಂತಿಪ ಲಜ್ಜೆಯಂ ಮಱೆವ ಕೊಳ್ವುಗದಾಪ್ತರ ಮಾತುಗೇಳದಿರ್ಪಂತುಟನೊಲ್ದ ಗಲ್ವ ಪರೋಕ್ಷಗಿವರಂಗನೆಯರ್ಕಳ್ ಜರಾಕಾಂತೆ ನರಂಗೆ ತಾನಗಲದಾಗಿವಳ್ ವಿಪರೀತವೃತ್ತಿಯೋ

(ಪುಷ್ಪಪು. ೧೩-೩೮) ; ಪೊಡೆವುರಳ್ವಂ ನಿಲ್ವನಳಲುಮಂ ಬಳಲುಮಂ ಬಟ್ಟೆಯೊಳ್ದಿಟ್ಟಿಗೆಟ್ಟು (ಚ್ರಮಿಥಾ. ೧೯-೩೦) : [ ದಿಟ್ಟಿ + ಕೆಡು$_1$ ]

**ದಿಟ್ಟಿಗೊಡು** (ಕ್ರಿ). ದೃಷ್ಟಿಕೊಡು ; ನೋಡು : ಉದಯದೊಳೂರ ನಟ್ಟನಡುವಿರ್ದಿನನತ್ತಲೆ ದಿಟ್ಟಿಗೊಟ್ಟು ವಾಣದೆ ಶುನಕಂಗಳೊಳ್ವಡವನೀಪತಿ ಗಕ್ಕುಮಪಾಯಂ (ಲೋಕೋಪ. ೧೨-೩೦). [ ದಿಟ್ಟಿ + ಕೊಡು$_1$ ]

**ದಿಟ್ಟಿಗೊನೆ** (ನಾ). ಕಡೆಗಣ್ಣು ; ಕಟಾಕ್ಷ ; ಅಪಾಂಗ : ಕಟ್ಟಿರ್ದ ಹಾರಾದಿಗಳ್ಪಱಿದುದಿರ್ವವೋಲ್ ದಿಟ್ಟಿಗೊನೆಗಳ ಕಾಂತಿ ಸೂಸುತಿರೆ (ಚ್ರಮಿಥಾ. ೩೩-೨೨). [ ದಿಟ್ಟಿ + ಕೊನೆ$_4$ ]

**ದಿಟ್ಟಿಗೊನೆವೆಳಗು** (ನಾ). ಕಡೆಗಣ್ಣಿನ ಕಾಂತಿ,-ಬೆಳಗು : ಆದಿಪುರುಷನ ದಿಟ್ಟಿಗೊನೆವೆಳಗ ಸೋಂಕಿನಿಂ ಭೂದೇವತೆಗೆ ಸಾತ್ವಿಕಂ ತನುವಿನೊಳ್ ಸ್ವೇದಾಂಬುವುಣ್ಮೆ ಪುಳಕಂ ಪೊಣ್ಮೆ ರಾರಾಜಿಪಂದವೋಯೆಂಬ ಪಾಂಗಿಂ (ಪದ್ಮರಾ. ೬-೭೩). [ ದಿಟ್ಟಿಗೊನೆ + ಬೆಳಗು$_2$ ]

**ದಿಟ್ಟಿಗೊಳ್. ದಿಟ್ಟಿಗೊಳ್ಳು** (ಕ್ರಿ). ಕಣ್ಣಿಗೆ ಬೀಳು ; ಕಾಣು ; ದೃಷ್ಟಿಗೆ ಸಿಗು. 'ದಿಟ್ಟಿಗೊಳಿಸು' ಪರಾ. **ದಿಟ್ಟಿಗೊಳ್ಳು** : ಕಟ್ಟಿದರು ಸಾಗರವ ಕಲುಮರಮುಟ್ಟನಲಿ ಸುರನರಭುಜಂಗರ ದಿಟ್ಟಿಗೊಳ್ಳದ ದುರ್ಗವನು ಕೆಡಹಿದರು ಕದನದಲಿ (ತೊರರಾ. ೬-೧೯-೪). [ ದಿಟ್ಟಿ + ಕೊಳ್$_1$ ]

**ದಿಟ್ಟಿಗೊಳಿಸು** (ಕ್ರಿ). ೧. ದೃಷ್ಟಿಗೆ ಬೀಳಿಸು ; ಕಾಣಿಸಿಕೊಳ್ಳು : ಬೆಳ್ದಾವರೆಯೊಳೆಱಗಿದಳಿಕುಲಂ ಗಗನಾಗ್ರದೊಳ್ದನದಿನಕೆ ಬೆಳೆವ ಚಂದ್ರಕಲೆ ಕನಕಾದ್ರಿಯೊಳ್ದಿಟ್ಟಿಗೊಳಿಸುವಸಿತಾಂಬುದಂ ರಾರಾಜಿಸುವ ತೆಱದೊಳು (ಚ್ರಮಿಥಾ. ೧೮-೫೫). ೨. ದೃಷ್ಟಿಯನ್ನು ಆಕರ್ಷಿಸು ; ಮನೋಹರವಾಗು ; **ಕಣ್ಸೆಳೆ** : ನಿಟ್ಟೆಲೆದೆಯರ್ ಕರೆತಂದಾ . . . ಸೌಂದರವತಿಯಂ ದಿಟ್ಟಿಗೊಳಿಪ್ಪ ಕಲ್ಯಾಣಮುತ್ತುಗಳಳವಟ್ಟ ಮೆಟ್ಟಕ್ಕಿ ಗೂಡೆಗಳೊಳುದ್ಭಟಾಂಕಂ ಬೆಸುರ್ವಿಸುರತತಿ ಸಂಭ್ರಮದಿಂದಂ ನಿಲಿಸೆ (ಉದ್ಭಟ. ೮-೫೭ ವ).

[ ದಿಟ್ಟಿಗೊಳ್ + – ಇಸು$_3$ ]

**ದಿಟ್ಟಿಗೊಳ್ಳು** 'ದಿಟ್ಟಿಗೊಳ್' ನೋ.

**ದಿಟ್ಟಿತಾಗು** (ಕ್ರಿ). ದೃಷ್ಟಿತಾಗು ; ಕಣ್ಣೆಂಜಲಾಗು : ದಿಟ್ಟಿತಾಗುಗುಮೆಂದು ಕತ್ತುರಿಯ ಗೆರೆಯನಱಿಯುಟ್ಟೆ (ಪದ್ಮರಾ. ೩-೨೮).

[ ದಿಟ್ಟಿ + ತಾಗು$_1$ (<ತಾಂಕು$_1$) ]

**ದಿಟ್ಟಿತೀವು** (ಕ್ರಿ). ಕಣ್ಣುತುಂಬು ; ಕಣ್ಣಿಗೆ ತೃಪ್ತಿಯಾಗು : ದಿಟ್ಟಿತೀವಲು ನೋಳ್ಪ ಜನಕೆ ತಾನಭಿಮುಖಂ ಮುಟ್ಟುವರ ಮುದ್ದು ಮುದ್ದಾಡಿಪರ ನಿಜಸುಖಂ (ಬಸವ. ೦.೦೪೦). [ ದಿಟ್ಟಿ + ತೀವು ]

**ದಿಟ್ಟಿದಂಡೆ** (ನಾ). ದೃಷ್ಟಿದೋಷ ಪರಿಹಾರಕ್ಕಾಗಿ ಧರಿಸುವ ಆಭರಣದಂತಹ ದಂಡೆ : ಕಡಗ ಕಂಕಣ ಸೂಡಗ ಹೊನ್ನ ಬಳೆ ಬಾದಿ ಖಡೆಯ ವೆಂಡೆಯ ದಿಟ್ಟಿದಂಡೆ (ಕುರಾಸಾಂ. ೧-೧೦೬) : ಅರಳೆಲೆ ಮಾಗಾಯಿ ಪುಲಿಯುಗುರುಡನೂಲು . . . ದಿಟ್ಟಿದಂಡೆ ಮೆಱೆಯಲಾ ತರುಣನೆಸೆದನು (ಕುರಾಸಾಂ. ೮-೭೭). [ ದಿಟ್ಟಿ + ದಂಡೆ$_1$ ]

**ದಿಟ್ಟಿದಾಹಕ** (ನಾ). ಕಣ್ಣಿನಲ್ಲಿ ಬೆಂಕಿಯುಳ್ಳವನು ; ಅಗ್ನಿನೇತ್ರ ; ಶಿವ : ದಿಟ್ಟಿದಾಹಕನ ಮಸ್ತಕ ಮುಱಿವಂದದಿ ಮೆಟ್ಟಿ ಕೆಂಗಿಡಿಗಳ ಕಱೆದು ಪುಟ್ಟಿಸಿ ಹೃದಯಸಂತಾಪವ ತಪವನೆಬ್ಬಿಟ್ಟುವೆನೆಂದನಬ್ಬಾರಿ (ಮೋಹತ. ೬-೨೦).

[ ದಿಟ್ಟಿ + ದಾಹಕ ]

**ದಿಟ್ಟಿದೆಱೆ** (ಕ್ರಿ). ಕಣ್ಣನ್ನು ತೆರೆ,-ಬಿಡು : ಮೆಲ್ಲನೆ ದಿಟ್ಟಿದೆಱೆದು ವಸಂತತಿಲಕೆಯು ನಿಟ್ಟಿಸಿಯೆ ಕಾಣದೆ ವಿಕಲನಾದನು ವಣಿಗ್ವರನು (ಸಾಳ್ವಭಾ. ೧೬-೩೩). [ ದಿಟ್ಟಿ +ತೆಱೆ$_1$ ]

**ದಿಟ್ಟಿದೋಸ** (ನಾ). ಕಣ್ಣೆಂಜಲು ; ದೃಷ್ಟಿದೋಷ : ದಿಟ್ಟಿದೋಸಂ ತಟ್ಟದಂತೆರಡುಂ ಮೆಲ್ಲದಾವುಗಳೊಳಿಟ್ಟ ಕಾಡಗೆಬೊಟ್ಟುಂ (ಚಕವಿ. ೪-೧೮ ವ). [ ದಿಟ್ಟಿ + ದೋಸ ]

**ದಿಟ್ಟಿನಡು** (ಕ್ರಿ). ೧. ದೃಷ್ಟಿಯಿಡು ; ಎವೆಯಿಕ್ಕದೆ ನೋಡು ; ಕಣ್ಣಿಟ್ಟು ನೋಡು : ಧಿಗಿಲನೆ ಮನಂ ಬೆದಱೆ ಪರವ ಕಾಣುತ್ತಲ್ಲಿ ಮಿಗ್ಗ ದಿಟ್ಟಿನ[ಪಾಠಾಂ. ಯಿ]ಟ್ಟು ನೋಡುತ್ತಿರಲ್ಕಂತಲ್ಲಿ (ನಂಬಿರ ೯-೧೧೨). ೨. ದೃಷ್ಟಿತಾಗು; ಕಣ್ಣೆಂಜಲಾಗು: ಮಡದಿ ರನ್ನೆಯ ಸಿರಿಮುಡಿಗರಿಸಿನದ ಪಾವುಡೆಯ ಬಾಧಿಸಿ ಕಲರ್ದಿಟ್ಟನಡದಂತೆ ಹಣೆಗೆ ಕಪ್ಪಿನ ಬೊಟ್ಟನಿಟ್ಟರು (ಮೋಹತ. ೧೬-೪೪). [ ದಿಟ್ಟಿ + ನಡು$_1$ ]

**ದಿಟ್ಟಿಬಿಸ** 'ದಿಟ್ಟಿವಿಸ' ನೋ.

**ದಿಟ್ಟಿಬೊಂಬೆ** (ನಾ). ಕಣ್ಣೊಳಗಿನ ಬೊಂಬೆ,-ಹಾಹೆ,-ಪಾಪೆ : ದಿಟ್ಟಿಬೊಂಬೆಗಳು ವಸಂತದೊಳಗೆ ಕೋಲ ನೆಟ್ಟನೆ ಪೊಡೆವಂದದೊಳು (ಶ್ರೀಪಾಲ. ೪-೧೨೬). [ ದಿಟ್ಟಿ + ಬೊಂಬೆ ]

**ದಿಟ್ಟಿಬೊಟ್ಟು, ದಿಷ್ಟಿಬೊಟ್ಟು** (ನಾ). ದೃಷ್ಟಿದೋಷ ತಾಗಬಾರದೆಂದು ಕೆನ್ನೆ ಅಥವಾ ಗಲ್ಲದ ಮೇಲೆ ಇಡುವ ಬೊಟ್ಟು,-ಗುರುತು: ಎಳಗಲ್ಲದೊಳಿಟ್ಟ ದಿಟ್ಟಿಬೊಟ್ಟಂ ಕಳಿಗೊಂಡೊಪ್ಪುವ ಪಟ್ಟಿಗನ್ನವಟ್ಟಂ (ಚಕವಿ. ೩-೪೪) : ಮೆಲ್ಲದಾವುಗಳೊಳಿಟ್ಟ ಕತ್ತುರಿಯ ದಿಟ್ಟಿಬೊಟ್ಟುಂ (ಚಕವಂ. ೬೫-೧೬). **ದಿಷ್ಟಿಬೊಟ್ಟು** : ಘವರ್ೋದಕದಿ ತನುವ ಪ್ರಕ್ಷಾಳಿಸಿ ದಿಷ್ಟಿಬೊಟ್ಟಿಟ್ಟು (ನವಮೋ. ೧೧-೪೮).

[ ದಿಟ್ಟಿ + ಬೊಟ್ಟು$_2$ (<ಬಟ್ಟು$_1$) ]

**ದಿಟ್ಟಿವಾರಿ, ದಿಟ್ಟಿವಾರೆ** (ನಾ). ಕಣ್ಣಳವು ; ಕಣ್ಣಳತೆ ; ದೃಷ್ಟಿಪಥ ; ಕಣ್ಬೊಲ (?) : ದಿಟ್ಟಿವಾರಿಯ ಧೀರರ ಪಾರಾರ ಗಣಿಕೆಯರ ವೀರರ ಹರಿವಾಣದಾಯದ ಲೆಂಕರ ಬಿಂಕದಾಸಕಾಜರ ಪಾಸಾಳ್ಗಳ . . . ಒತ್ತರದ ತಿಂಥಿಣಿಯನೊತ್ತರಿಸಿ (ಬಸರ. ೬-೨೦) : "ತನಗೂ ದೇವರಿಗೂ ನಡುವೆ ಬಂದವರನ್ನು ಕತ್ತರಿಸುತ್ತೇನೆಂಬ ಪ್ರತಿಜ್ಞೆ" (ಬಸರ. ಕೋಶ) ; ದಿಟ್ಟಿ[ಪಾಠಾಂ. ದಿಠಿ. ದ್ರಿಷ್ಟಿ]ವಾರಿಯ ಮೇಳದಾಳೋಚನೆಗಳೊಳಳವಟ್ಟು ಹತ್ತೈದು ಗಣನಾಥರ್ವೆರಸಿ ತನ್ನ ಪಟ್ಟದಂಗನೆ ಸಹಿತ ಸುಖದ ಸುಗ್ಗಿಯ ಮೇಲೆ ಶೂಲಿ ಪರಿಣಾಮವಿರಲು (ಸೋಮಚ. ೧-೩೪) ; ದಿಟ್ಟಿ[ಟ್ಟಿ] ವಾರಿಯೊಳುಳ್ಳ [ಪಾಠಾಂ. ದಿಟ್ಟಗಾಂಬನಿತದೆಯ] ನೀರೆಲ್ಲವಂ ಕೆಡಿಸಿ ಮುಟ್ಟ ನಾನಾ ಕ್ರೂರಮೃಗವಾಗಿ ಬಂದಡ್ಡಗಟ್ಟಿ ಗರ್ಜಿಸುತ ಮಾಯಾವೇಷದಿಂದೊಡನೆ ಬಾದ ವಿಶ್ವಾಮಿತ್ರನು (ಹಚಂ. ೯-೩೨) ; ಇರದೆ ನಿಜವುಸುರಾಟವೆಡೆಯೊಳು ಹರಿಯು ದರ್ಪವನಳಿದು ಕಾಯ್ದುರು ಕರುಣೆಯಭವನ ದಿಟ್ಟಿವಾರಿಯ ಪೋಲಗದೊಳೊಪ್ಪೆ (ಸಾನಂಚ. ೯-೨೬). **ದಿಟ್ಟಿವಾರೆ** : ಕಡುಗಿದರೆ ಕಾಲಂಗೆ ಬರುದಿನ ತೊಡರನಿಕ್ಕುವ ಜವನ ದಾಡೆಯ ತುಡುಕುವಗ್ಗದ ವೀರರೆಸೆದುದು ದಿಟ್ಟಿವಾರೆಯಲಿ (ಕುವ್ಯಾಉ. ೮-೪೩). [ ದಿಟ್ಟಿ + ವಾರಿ? ]

**ದಿಟ್ಟಿವಾರೆ** 'ದಿಟ್ಟಿವಾರಿ' ನೋ.

**ದಿಟ್ಟಿವಿಸ, ದಿಟ್ಟಿಬಿಸ** (ನಾ). ೧. ಕೆಟ್ಟ ಪರಿಣಾಮವನ್ನುಂಟುಮಾಡುವ ಕಣ್ಣು ; ಕೆಟ್ಟಕಣ್ಣು : (೩). ೨. ಕೆಟ್ಟಕಣ್ಣಿನಿಂದ ಉಂಟಾಗುವ ಪರಿಣಾಮ ; ಕಣ್ಣೆಂಜಲು : "ದಿಟ್ಟಿಬ(ವಿ)ಸ-ದೃಷ್ಟಿವಿಷ = ಕಣ್ಣೆಂಜಲು" (ಕಮ್ಯಕೋ. ೧೯) : ರಾಜ್ಯವಿಭವೋದಯದಿಂದೆ ವಿರಾಜಪಂಗೆ ದಿಟ್ಟಿವಿಸಮು[ಪಾಠಾಂ.ಪ]ಮಪ್ಪುದೆಂದು ಪದಪಿಂ ಪ್ರಭೂಸುನುಗೆ ತಾನೆ ರಕ್ಕೆಗಟ್ಟುವ ತೆಱದಿಂದೆ ಕಟ್ಟಿದನಿಳಾಪತಿ ತನ್ನಧಿರಾಜಪಟ್ಟಮಂ (ಚಂದ್ರಪು. ೬-೧೦೨). **ದಿಟ್ಟಿಬಿಸ** : ೩. ಹಾವು : ಎರಡು ಪದಂಗಳಪಭ್ರಂಶಕ್ಕೆ-ಅಚ್ಚಸ್ಪಟಕ-ಅಚ್ಚವಳಿಕು . . . ದೃಷ್ಟಿವಿಷ-ದಿಟ್ಟಿಬಿಸ, ದಿಟ್ಟಿವಿಸ (ಶಮದ. ೨೮೯ ಪ್ರಯೋ). [ ದಿಟ್ಟಿ + ವಿಸ ]

**ದಿಟ್ಟಿವೆಳಗು** (ನಾ). ಕಣ್ಣಿನ ಕಾಂತಿ,-ಬೆಳಗು,-ಪ್ರಕಾಶ: ದಿಟ್ಟಿವೆಳಗಿನಿಂ ನಿವಳಿಸುವಂತೆಯುಂ ಕಣ್ಣೊಳಗಿಟ್ಟು ಮುಚ್ಚುವಂತೆಯುಂ ಬಗೆಯೊಳೆ ತೆಗೆದಪ್ಪುವಂತೆಯುಂ ಅಕ್ಷೂಣಲಕ್ಷಣಲಕ್ಷಿತಂಗಳಪ್ಪ ಪುತ್ರನಂಗಪ್ರತ್ಯಂಗಂ

ಗಳಂ ನೀಡುಂ ಭಾವಿಸಿ ನೋಡಿ (ಚಂದ್ರಪು. ೩-೧೧೩ ವ); ಅಂಗನೆಯು ರ ದಿಟ್ಟವೆಳಗು . . . ಹೊಸಮುತ್ತಿನ ರಂಗವಲ್ಲಿಯ ತೆಟನಹುದ (ಶ್ರೀಪಾಂ. ೨-೪). [ ದಿಟ್ಟ + ಬೆಳಗು₂ ]

**ದಿಟ್ಟಸರ** (ನಾ). (ಕುದುರೆಯ ಕೊರಳಿಗೆ ತೊಡಿಸುವ) ಒಂದು ಬಗೆಯ ಆಭರಣ: ಇಕ್ಕಿದ ಪಕ್ಕರಕ್ಕೆ ನಿಡುರ್ಖುಲ್ಲಿ ತೊಡಂಕುವ ತೋರಗೊಂಡೆಯುಂ ಸೆಕ್ಕಿದ ಖಂಡೆಯುಂ ಬಿಗಿದ ಬಿಲ್ ಪೊದದುಂಬಿದ ಬೋಳಿಯುಂಬು ಕಂದಕ್ಕ ಮರ್ದಿಟ್ಟ ದಿಟ್ಟಸರ ಪೊಂಬಲೆಗಳ್ ಮೊಗರುಬನೊಂದು ಪೊಂಬಕ್ಕಿಯ ತೊತ್ತು ಮೆಯ್ಗುರೆಯಿ ಬಾಸಿಗದಿಂ ಮಟಿದತ್ತು ಸಪ್ತಿಗಳ್ (ಚಕವಿ. ೨-೯೬).

[ ದಿಟ್ಟ + ಸರ₆ ]

**ದಿಟ್ಟಸಲಿಸು** (ಕ್ರಿ). ಕಣ್ಣುಹಾಯಿಸು; ನೋಡು: ಹೊಗುಹೊಗುತ ಹೊರಬರುವ ಮಾನುಷ್ಯವಾಹಿನಿಯ ಕಲ್ಲೋಲಲೀಲೆಯೊಳು ದಿಟ್ಟಸಲಿಸಿ ಶಂಖ ಜಾಗಟೆ ದನಿಯು ಕೈವಾರದೊಳು ನಾಮದುಗ್ಗಡಣೆಯಿಂ ವಿನೇರುವ ಯಾಲಿಸಿ (ಮಠಚೆ. ೪೬-೬). [ ದಿಟ್ಟ + ಸಲಿಸು ]

**ದಿಟ್ಟಿಸು** (ಕ್ರಿ). ೧. ನೋಡು; ಅವಲೋಕಿಸು; ದೃಷ್ಟಿಸು: ಎಡನಂ ಬಲನಂ ದಿಟ್ಟಿಸುತೆ ನಿಂದು ನಿಲ್ಲದೆ ನಿಟ್ಟೋಟದೊಳೋಡಿತೆಸೆವ ಮಸಕದ ಶಶಕಂ (ಗಿರಿಶ. ೧-೮೬); ದಿಟ್ಟಿಪರ ದಿಟ್ಟಿಗಳಿಗಚ್ಚರಿ ಹುಟ್ಟ ಪೊನ್ನುಕ್ಕಿದಡೆ ಹರುಷಂಬಟ್ಟು ಭೂಪಂ ಬಸವರಸನಂ ಕೀರ್ತಿಸುತಮಿರಲು (ಬಸಪು. ೧೧-೧೫); ಅಕ್ಕಜಂದಾಲಿಂಗಿಸಿ ದಿಟ್ಟಿಸಿ ಬೊಬ್ಬಾಡಿ . . . ಪುಷ್ಪ ಪರಿಮಳದಂತೆ ನಾ ನೀನುಭಯಮಿಲ್ಲದಂತೆ ಕೂಡೆನ್ನ ಪ್ರಾಣೇಶನೇ (ಛನವ. ೨-೧); ಅವಿದ್ಯೆಯು ದಿಟ್ಟಿಪರ ಭಾವಾನುಸಾರದಿ ತೋರುತಿಹಳು (ಗಗಶಾ. ೧೪-೧೪). ೨. ಹುಡುಕು: ಕುಟ್ಟಂಬ ನುಡಿ ವ್ರೀಹಿಯೊಳಲ್ಲದೆ ಬೇರೆ ದಿಟ್ಟಿಸಲಾ ನಾಡೊಳಿಲ್ಲ (ಕಂಸವಿ. ೨-೧೫). 'ನಿಟ್ಟಿಸು' ಪರಾ.

**ದಿಟ್ಟಿಸಿ ನೋಡು** = ಎವೆಯಿಕ್ಕದೆ ನೋಡು: ಚಂದನೆಯ ಚಂದಮಂ ಸೆಟ್ಟಿತಿ ದಿಟ್ಟಿಸಿ ನೋಡಿ (ವರ್ಧಪು. ೧೫-೫೩ ವ); ದಿಟ್ಟಿಸಿ ನೋಡದವೆ ಯಿಕ್ಕದಿಹ ಕಣ್ಣಾ ದಕ್ಕಾಲಿಯೆಂದು ನಿರ್ಮಲ ದೇಹಮಂ ರಸವಜಿತು ಬೆಳೆದಂಗವೆಂದು . . . ದೂರದಿಂದ ದೀವಿಗೆವಿಡಿದು ದಿಟ್ಟಿಸಿದರು (ಸಿದ್ಧರಾ. ೨-೪); ಅಸುರೆ ದಿಟ್ಟಿಸಿ ನೋಡಿದಳು ಶಿಶುವ (ಕುವ್ಯಾಸ. ೨-೪೪); ಅವಳನ್ನೇ ಒಮ್ಮೆ ದಿಟ್ಟಿಸಿ ನೋಡಿದ (ಹಾಹುತ್ತ. ೬೬).

[ ದಿಟ್ಟ + -ಇಸು₃ ]

**ದಿಟ್ಟಿಹತ್ತು** (ಕ್ರಿ). ದೃಷ್ಟಿತಾಗು; ಕಣ್ಣಿಂಜಲಾಗು: ಮುಟ್ಟಲು ಮಾಸುವದು ದಿಟ್ಟಿಹತ್ತೀತೆಂದು ಬಟ್ಟೀಡತಿದ್ದ ಭಸಿತದ ಹಣೆಮೇಲೆ ಸುಟ್ಟು ಹೋಗಲೆಂದು ಕಟ್ಟಿಗಣ್ಣು (ಸಿದ್ಧಪು. ೪-೯೪).

[ ದಿಟ್ಟ + ಹತ್ತು₁ (<ಪತ್ತು₁) ]

**ದಿಟ್ಟಿಹಾಯಿಸು** (ಕ್ರಿ). ದೃಷ್ಟಿಬೀರು; ನೋಡು: ದುಷ್ಟಬುದ್ಧಿ ಅತ್ತಿತ್ತ ದಿಟ್ಟಿಹಾಯಿಸದೆ ಶ್ರೀಮದ್‌ಗಾಂಭೀರ್ಯಕ್ಕೆ ಊನ ಬರಬಾರದೆಂಬಂತೆ . . . ಮುಂಬರಿಯುತ್ತಾನೆ (ಚಂದ್ರಸ. ೬).

[ ದಿಟ್ಟ + ಹಾಯಿಸು (<ಪಾಯಿಸು) ]

**ದಿಟ್ಟೆ₁** (ನಾ). ೧. ದಿಟ್ಟತನವುಳ್ಳವಳು; ಧೈರ್ಯಶಾಲಿನಿ: ತುಂಬ ಒಳ್ಳೆಯ ಹುಡುಗಿ; ದಿಟ್ಟೆ (ದೀಪದ. ೦೪೮). ೨. ಉದ್ಧಟೆ; ಗಡಸುಗಾತಿ: ದಿಟ್ಟೆಯರು ಕುಟಿಲೆಯರು ಕುಹಕದ ಘಟ್ಟೆಯರು ಲಟ್ಟೆಯರು (ಬಸಪು. ೪೦-೫೬); ಅರರೆ ಹೆಂಗಸು ದಿಟ್ಟೆ ಮೋನದೊಳಿರಲಿದಾವಂತರವು ರಾಯನ ಹೊರೆಯಲೀ ಬಾಯ್ಬಡಿಕತನ ಗರುವಾಯಿಯೇಯೆನಲು (ಕುವ್ಯಾವಿ. ೩-೨೭). ೩. ಚಮರೆ; ಜಾಣೆ: ಹೊಳೆವುತಿಪ್ಪರು ಮನಸಿಜನ ಮಾಸಾಳಂಗಳೆಂತೆ ದಿಟ್ಟೆಯರು (ಭರತ. ೧೨-೯೧): ಮುಟ್ಟಿಪರೆ ಕಂದಿರದಿ ವಿಳ ಸುಕುಮಾರತನು ದಿಟ್ಟೆಯರದೆಂತೊ ನವಕುಸುಮವನೀಗ ನುಂಪಿಟ್ಟರು (ಜೈಮಿಭಾ. ೩೦-೬).

[ ದಿಟ್ಟ₁ + -ಎ₂ ]

**ದಿಟ್ಟೆ₂** (ನಾ). ದೃಷ್ಟಿ (?): ದಿಟ್ಟೆ ಮುರಿದಲ್ಲಿ ಕಡುಪಿನೊಳ್ ಮುರಿದ ಯಿಲ್ಲಿಲ್ಲಿಯ ಬಿನ್ನಣವನ್ನೆಟಿಯೆ ಕಲ್ಪದೆ ಜೀರರ ಬೀರಣಂ ಗಿಡಗಳಾಭರಣಂ ನೋಡಿ ಕಲ್ಲಾ (ಎಕ. II, ೧೫೩-೧೨೭; 982).

[ P ಇದು 'ದಿಟ್ಟ' ಎಂಬುದರ ಅಪಲಿಖಿತವಿರಬಹುದು ]

**ದಿಟ್ಟೆದೆ** (ನಾ). ಧೈರ್ಯದಿಂದ ಕೂಡಿದ ಮನಸ್ಸು,-ಹೃದಯ: ನಿಮ್ಮ ದಿಟ್ಟೆದೆಯ ಸಾಹಸದ ಸ್ವಾವಿನಿಷ್ಠೆಯಿಂದ ತಪ್ಪಿಸಿ ಕಾಪಾಡಿಕೊಂಡು ಬರುತ್ತ . . . ಪಾವನರಾಗಿರುವ ಶೂರರ ಮನೆತನದವರು ನೀವು (ಮಂತ್ರಶ. ೫೦-೧೭). [ ದಿಟ್ಟ₁ + ಎದೆ (<ಎರ್ದೆ) ]

**ದಿಡ, ಧಡ₃** (ಗು). ೧. ದೃಢವಾದ; ಬಲವಾದ: ದೃಢ, ದಿಡ (ಶಬ್ದಾನು. ೧೪೩ ಪ್ರಯೋ). (ನಾ). ೨. ದೃಢತೆ; ಸ್ಥಿರತೆ; ಬಲ: "ದಿಡ (ದುಡ) ದೃ ಢ = ಸ್ಥಿ ರ ತೆ" (ತದ್ಭಕೋ. ೧೯); ಭೀತಿಯನೆದೆಯೊಳಿನ್ನಿಡಸಲ್ಲ ನಂಬುವುದಿದನು ದಿಡವಾಗಿ (ರಾಮಾಸಂ. ೩-೧-೩೦). ೩. ಸತ್ಯ; ನಿಜ: ಮೃಡನರೆಯೆ ಮಗಳ ಮುಡಿಯಂ ಕೊಯ್ದು ಕೊಡೆ ಮದುವೆಯೆಡೆ ಯೊಳಾ ಬೀಯಗಮುರ್ಳಿದು ಕಾದುವ ಫೌಜು ದಿಡದೊಳು ತುಜುಂಬ ನಾದಂತೆ ತೊಂಡಲು ಸಹಿತ ಹಿಡಿದಳ್ತಿಯಾಗಿದೆಯಲಾ (ವೀಶೈಪು. ೮-೩-೮). ೪. ಭರವಸೆ; ನಂಬಿಕೆ. 'ದಿಡಂದಳೆ' ಪರಾ. ೫. ದೃಢವಾದುದು; ಗಟ್ಟಿಯಾದುದು; ಮನಮುಟ್ಟುವಂತಹುದು: ನಾಡೆ ಮುನ್ನರಿತ ಪಾಠವನು . . . ದಿಡಪೊ[ಪ]ವ್ವ ಪೊಲು ಪಾಡು (ಕಿರೀಟ. ೩-೧೫). ೬. ಶಾಶ್ವತ ವಾದುದು: ತಂಬೂರಿ ಶ್ರುತಿಗೆ ಸೀತಾರ ಜತಿಗೆ ದಿಡದಾದಿ ಮಿಟಾಟ ದಾಟಿ ಕುಂಭಿನಿಯ ತುಂಬಿ ಅಂಬರವ ತುಂಬಿ ತುಂಬಿಸಿದಳೆಂಥ ಲಹರಿ (ಗಂಗಾತ. ೧೧೯-೧೫). **ಧಡ₃**: ೭. ಗಟ್ಟಿಮುಟ್ಟಾದುದು; ಶಕ್ತಿಯುತ ವಾದುದು: ಕೈಕಾಲು ಧಡವಿದ್ದರೆ ಯಾರಾದರೂ ಕೇಳಿಯಾರು(ಸ್ವಾತಿಬ. ೨೧೭): ಪಾಪ ಮುದುಕಿ! ಕೈಕಾಲು ಧಡಾ ಇಲ್ಲಾ! (ಧರ್ಮಸಿ. ೧೨೮).

[ <ಸಂ. ದೃಢ ]

**ದಿಡಂದಳೆ** (ಕ್ರಿ). ದೃಢತೆಯನ್ನು ಹೊಂದು; ಭರವಸೆಯನ್ನು ಹೊಂದು: ಅಗಲದೀಕ್ಷಿಸುತಿರ್ಪನಂ ತ ದ ವ ಜ್ಞೆ ಯಿಂ ಖಲಚೋಳನಾ ಸ್ಥಗಿತ ಸೇನೆಯದೆಯ್ದಿ ವೇಗದೆ ಲೂಟಸುತ್ತಿರೆ ನಾಡನಾ ಜಗತಿಯಾಳ್ವನದೆಲ್ಲಮಂ ನಡೆ ಕೇಳ್ದು ಸುಂದರಪಾದದೊಳ್ ಮಿಗೆ ದಿಡಂದಳೆಯುತ್ತಹೋ ಹರ ಶಂಭುವೆಂದತಿ ಕೋಪದಿಂ (ಹಾಲಾಸ್ಯ. ೩-೮-೪೪). [ ದಿಡ + ತಳೆ₁ ]

**ದಿಡಕಿ, ದಿಡಕೆ** (ನಾ). ಹಸು, ಕರ ಗಳು ಗುಟುರು ಹಾಕುವುದನ್ನು ಸೂಚಿಸುವ ಶಬ್ದ. **ದಿಡಕಿ.**

**ದಿಡಕಿ ಹಾಕು** = ಗುಟುರುಹಾಕು: ಒಂದು ಅರೆಗಳಿಗೆ ತಡವಾದರೂ ಕಾಲು ಕೆದರುತ್ತ ದಿಡಕಿ ಹಾಕಿ (ಒದರುತ್ತ) 'ಅಂಬಾ' ಎಂದು ಕೂಗುವಳು ಬನಶಂಕರಿಯನ್ನು (ಸುವಸಂ. ೬೬). **ದಿಡಕಿ ಹೊಡೆ** = ದಿಡಕಿ ಹಾಕು: ಕೋಟೆ ಬಸವಣ್ಣ ದಿಡಕಿ ಹೊಡೆಯುತ್ತ ಎದ್ದು ಬಂದು (ಬೆಳುಮು. ೫೨).

**ದಿಡಕೆ** 'ದಿಡಕಿ' ನೋ.

**ದಿಡಗು** 'ದಿಡುಗು₁' ನೋ.

**ದಿಡಗೊಳ್ಳು** (ಕ್ರಿ). ಬಲವಾಗಂ; ದೃಢಗೊಳ್ಳು: (೩).

[ ದಿಡ + ಕೊಳ್ಳು₁ (<ಕೊಳ್₁) ]

**ದಿಡುಗು₁, ದಿಡಗು** (ನಾ). ೧. ಜಲಪಾತ; ಧಬಧಬೆ: ದಿಡುಗೋ ಗುಡುಗೋ ಜೋಗ ಪ್ರಪಾತ (ಮುಕ್ತಕಂ ೭೦-೮); ದಿಡುಗದೊ ಗುಡುಗುಡು ಗುಡುಗುತಿದೆ (ಉಷ್ಣಾರ. ೭೬-೩). **ದಿಡಗು**: ೨. ಜೋರು; ರಭಸ: ಅಜಗವಿಭವ ಕ್ರಿಯಾ ದಿಡಗವಿಲ್ಲದ ಯೋಳಿಯ ಹಿಗದವು ಇದ್ದತ ತನಗಿಗೆ ಹೋದರ ಕಿತಾಮಾರ್ಗ ವಶ್ಯ ನೇತಿಮಾರ್ಗ (ಅಕಗಿ. ೫೩). ೩. (ಆಲಂ) ಉತ್ಸಾಹ: [illegible] ದಿಡಗು ಯಾವಾಗಲೂ ಇರುತ್ತಿರಲಿಲ್ಲ (ರಾಗಿಜ. ೧೨೨).

ದಿಡುಗು₂ (ನಾ). ಹಿಂಡು ; ಸಮೂಹ (?) : ಇಡೆ ಬಡಿಕೋಲೊಳು ತೊಡರಿ ತೊಪ್ಪನೆ ಬೀಳಲೊಡನೆದ್ದು ಪರಿವ ಮಱಿಗಳ ದಿಡುಗುಗಾಣುತ ಲಿದಿರಡಸಿ ತಿವಿದು ನೂಂಕಿ ಕೆಡಹಿದನೋರ್ವ ಲುಬ್ಧಕನು (ಭರವೇ. ೩-೨೦). [ ? ]

ದಿದ್ವಣಿಗೆವಡೆ (ನಾ). ಒಂದು ವಿಧವಾದ ವಡೆ : ಅರೆದ ಕಡಲೆ ಹೆಸರು ಉದ್ದ ಸರಿಗೂಡಿಸದೆ[ದ] ಮೆಣಸುಳ್ಳಿ ಶುಂಠಿಗಳನುದ್ದಿಟ್ಟ ಹೂರಣಕ್ಕಾ ಕಣಿಕದೊಡೆಯುಮಂ ಪೊದ್ದಿಸಿಯುಮಂ ತುಪ್ಪದೊಳು ಪಾಕಂ ಮಾಡ ದಿದ್ವಣಿಗೆವ[ಪಾಠಾಂ. ಯೊ]ಡೆವಸರಾದುದು (ಸೂಪಶಾ. ೦-೬೬). [ ದಿದ್ವಣಿಗೆ ? + ವಡೆ ]

ದಿಡ್ಡಿ, ದಡ್ಡಿ₃, ದಿಡ್ಡೆ₂ (ನಾ). ೧. ಹೆಬ್ಬಾಗಿಲಲ್ಲಿ ಅಥವಾ ಅವರ ಪಕ್ಕದಲ್ಲಿ ಅದಂ ತೆರೆಯದಿರುವಾಗ ಉಪಯೋಗಿಸಂವಂತಹ ಸಣ್ಣ ಬಾಗಿಲಂ,–ಕಿಂಡಿ : ಪದಿನಾಱುದಿಡ್ಡಿ ಬತ್ತೀಸಬಿಲದ್ವಾರ ವಿಧುಮಿತ್ರ ದುವಲದಿಂ ಬಿಗಿದ ರುಧಿರಾಪುರದಾಳುವೇರಿಯ ಸೌಭಾಗ್ಯದುದಯವನೇನ ಬಣ್ಣಿಸುವೆ (ಮೋಹತ. ೨೦-೧೪) ; ಕೊತ್ತಳದ ಹುಲಿಮುಖದ ದಿಡ್ಡಿಗಳ ಸರಿಸದೊಳ್ ಪತ್ತಿದರ್ ಸಾಲ ನಿಚ್ಚಣಿಕೆಗಳ ಮೇಲೆ (ಚಬಪು ೪೨-೩೫) ; ನಾಲ್ಕುವೇದವೇ ನಾಲ್ಕುದ್ವಾರವಾಗೊಪ್ಪುಗುಂ ನಾಲ್ಕು ಪದ ಬೀದಿ ಪದಿನೆಂಟು ವಿಭವಂ ದಿಡ್ಡಿ (ಪ್ರಭುಪು. ೨-೧೪) ; ನೀರ ತುಂಬುವ ದಿಡ್ಡಿಯೊಳ ಸುರಂಗದ್ವಾರ ತೋಱಿತು ಕಣ್ಗೆ ಕೌತುಕವ (ಕಂನವಿ. ೧೧-೦೩೭) ; ಶೃಂಗಾರದ ತೋಟದ ದಿಡ್ಡಿಯಲ್ಲಿ ಹೊರಟು ಅವನ ಸಮೀಪಕ್ಕೆ ಹೋಗು ವಾಗ ದಾರಿಯಲ್ಲಿ ಯೋಚಿಸಿದನು (ವಡಕಾ. ೩೪) ; ನಗರದ ಪಶ್ಚಿಮ ದಿಡ್ಡಿಯಿಂದ ಹಾದುಹೋಗುತ್ತಾ (ಚೀನಾದಾ. ೩೩). ೨. ಹಿತ್ತಿಲು ; ಮನೆಯ ಹಿಂಭಾಗ : ಗಿರಿಜಾನ ಮನೆಯ ದಿಡ್ಡಿಯಲ್ಲಿ ಒಂದು ಎಳು ಮಕ್ಕಳ ತಾಯಿಯು ಶಿಲಾಪ್ರತಿಮೆ ಇತ್ತು (ದೀಪಹ. II, ೪೪೭). ದಡ್ಡಿ₃ : ೧. ಹೊಗಿಸಬೇಡಾರುವನು ಕರ್ಣಾದಿಗಳು ಮೊದಲಾಗೆಂದು ದಡ್ಡಿ ಯನುಗುಳುಗಂಡಿಯ ಕಾಹಕೊಟ್ಟನು ತನ್ನ ಬೇಹವರ (ಕುವ್ಯಾಭ. ೨೦-೧೭). ದಿಡ್ಡೆ₂ : ೧. ಕ[ತ]ಱಿದುಟ ದಾರಿವೆಂಟೆಯೆರ್ದೆ ಕಮ್ಮರಗಲ್ ಮೊಲೆಯೆ ತ್ತುಗುಂಡು ನಾಣ್ಡೆಱೆಯಸೆಪೂರ ದಿಡ್ಡ ಮೊಗವೋಜನ ಕನ್ನಡಿ ಪಾದವಟ್ಟ ಗೋಲ್ (ಕಾವ್ಯಸಾ. ೧೦೦೩) ; ಎಲೆಲೆ ಸೇರಿದರಗಳ ದಿಡ್ಡೆಯಂ ಸುಮನಸರ್ ಚಲಿಸದಿರಿಯೆಂದಸಿ ಮುಸುಂಡಿ ಮುದ್ಗರ ಗದಾವಳಿಯಿಂದೆ ಬೊಬ್ಬಿಱಿದು ಹೂಣಲಿಡುತಿರ್ದರಾ ಸುರಭಟರ್ ಸುರಭಟರನು (ಚಬಪು. ೪೨-೨೭) ; ಕಿಱುದಿಡ್ಡೆಗಳಿಂದ ಚೋರಗಂಡಿಗಳಿಂದ ವರವಜ್ರದರ್ಗಳದಿಂದ ಅರಿರಾಯರ ಹಮ್ಮು ಹಾರಿಸುತಾ ಕೋಂಟೆ ಮೆಱೆದುದು (ಜ್ಞಾನಡ. ೦.೦೨೩).
[ ದೇ.ಕ ತಮಿ. ತಿಟ್ಟು = ಕಿಟಕಿ ; ತುಳು. ಜಡ್ಡಿ ; ತೆಲು. ದಿಡ್ಡಿ ]

ದಿಡ್ಡಿಬಾಗಿಲು (ನಾ). = ದಿಡ್ಡಿ ೧ : ಊರು ದಿಡ್ಡಿಬಾಗಿಲಿನ ಸೂರಿನ ಕೆಳಗಡೆ ಬಿಳಿಯ ಹಲಗೆಯ ಮೇಲೆ ಕರಿಯ ಬಣ್ಣದಲ್ಲಿ ಈ ರೀತಿ ಬರೆದಿದೆ (ಮರಿನಾ. ೨೩) ; ದಿಡ್ಡೀಬಾಗಿಲ ಮೇಲೆತ್ತರದಲಿ ಬಿರುದನಿ ಬೀರುತ್ತ ದಿಗಿಲೆರಚುತ ಬಲ್‌ಬುರುಜುಗಳಿದ್ದವು (ನಾಪದ. ೦೬೯) ; ಸತ್ಯಪ್ಪನ ತಾಳ್ಮೆಗೆಡಿತನ ಅವಳನ್ನು ಅಪ್ಪುಬೇಗ ತಾಯ್ತನದ ದಿಡ್ಡಿಬಾಗಿಲಲ್ಲಿ ನೂಕುತ್ತಲಿತ್ತು (ನಡದಾ. II, ೮೯೨).
[ ದಿಡ್ಡಿ + ಬಾಗಿಲು (<ಬಾಗಿಲ್) ]

ದಿಡ್ಡು 'ದಿಂಡಂ' ನೋ.

ದಿಡ್ಡೆ₁ 'ತಿಟ್ಟು₃' ನೋ.

ದಿಡ್ಡೆ₂ 'ದಿಡ್ಡಿ' ನೋ.

ದಿಢೀರ್ (ಅ). ಒಂದು ಅನುಕರಣಾವ್ಯಯ ; ಒಮ್ಮಿಂದೊಮ್ಮೆಲೆ ; ತಕ್ಷಣದಲ್ಲಿ ; ಆ ಕ್ಷಣದಲ್ಲಿ : ಹೇಳದೆ ಮಾಡದೆ ದಿಢೀರನೆ ಬಂದರು (ರೂ೨). P ಇದರೊಂದಿಗೆ ಅನೇಕ ಶಬ್ದಗಳು ಸೇರಿ, 'ತಕ್ಷಣದಲ್ಲಿ ತಯಾರಾಗುವ ಪದಾರ್ಥ' ಎಂಬ ಅರ್ಥದಲ್ಲಿ ಅನೇಕ ಹೊಸ ಶಬ್ದಗಳು ಬಳಕೆಗೆ ಬಂದಿವೆ. ಉದಾ. ದಿಢೀರ್ ಇಡ್ಲಿ, ದಿಢೀರ್ ಕಾಫಿ, ದಿಢೀರ್ ಜಿಲೇಬಿ, ದಿಢೀರ್ ದೋಸೆ ಇತ್ಯಾದಿ.

ದಿಣೆ 'ದಿಣ್ಣೆ' ನೋ.

ದಿಣ್ಣೆ, ತೆಣೆ, ದಿಣೆ, ದಿನ್ನೆ (ನಾ). ೧. ತೆವರು ; ದಿಬ್ಬ ; ಬೋರೆ : ಪೇರೊಟ್ಟಿಯು ತುಟ್ಟಲ ಎರೆ ಪಡಿಯ ಗೊನಸು ಭೂಮಿಯಲ್ಲಣಿಸಿಯೆ ಬಬ್ಬಾಗಿಲ ಹುಸಗೂರ ದ್ವಿಸನ್ದಿ ನಡಿಯ ಪಡುವ ನೋಡಿ ಮಣಲದಿಣ್ಣೆ . . . ಮೂಡಣದಿ ಕೊಲದ ಗುಣ್ಣೆಯ ಕೂಡಿತ್ತು (ಎಕ. III, ನಂಜನ. ೧೨೨-೨೦ ; 266 ? ಕೃಶ) ; ಅತಿವೇಗದೊಳಿರ್ದು ನಾಲ್ಕೆರಡಾಳುದ್ದದ ದೊಂದು ಕಣಲ್ ಬಪ್ಪ ದಿಣ್ಣೆ[ಪಾಠಾಂ. ಡಿಣೆ, ದಿಣೆ]ಯಂ ಗಳಗಳನೇಱಿ ಕಣಿಗಿಲೆಯ ಸೊಪ್ಪಂ ಪಿಡಿದು ಸಿಂಹಧ್ವನಿಯಿಂ ಶಿವದಿಟ್ಟು (ನಂಚರ. ೬-೧೦೬) ; ನಿ ಱ ನಿ ಱ.ದು ತೆರೆಯುಱದು ಕಿಱುಮಱಲದಿಣ್ಣೆಯೊಳ್ ಪರಿವ ಬರಿಪೊನಲಸೆದುಪೋರೊಂದು ತಾಣದೊಳ್ (ಅನಂಪು. ೯-೧೭ ರಗಳೆ) ; ಪರಿವಡೆದ ಪೊಱವಾಱಂಬ ಮಣಲದಿಣ್ಣೆ ನೀಱೆಯರ ಬಲ್ಲಹನೆಂಬ ನೀರ್ವಕ್ಕಿಯ ಕಾಲಾಟಕ್ಕೆಡೆಗುಡೆಯುಂ (ಕಬ್ಬಿಕಾ. ೧೨೩) ; ಬೆಟ್ಟಕ್ಕಿಂತಲೂ ಚಿಕ್ಕದಾದರೆ ಗುಡ್ಡ, ದಿಣ್ಣೆ, ತಿಟ್ಟು . . . ತೆವರು ಎಂಬ ಹೆಸರುಗಳು ಬರುತ್ತವೆ (ಭೂಗೋಳ. ೧೧). ೨. ಕಟ್ಟೆ ; ವೇದಿಕೆ : ಜೂದಿನ ದಿಣ್ಣೆ [ಪಾಠಾಂ. ದಿಂಟೆ]ಯೊಳ್ ಜೂದಾಡಿ ಗೆಲ್ದು ಕೈಕೊಂಡ ಪೊನ್ನ ರಾಸಿಗಳ (ಕಬ್ಬಿಕಾ. ೪೪). ೩. ರಾಶಿ ; ಗುಂಪು ; ಸಮೂಹ : ಮುಸವು ಮೌನದಲಿ ಹೆಪ್ಪುಗೊಂಡಿರಲು ಮಂಜು ದಿಣ್ಣೆಯಂತೆ (ಅರಳು. ೪೦೪-೦೧). ತೆಣೆ : ೨. ಚಿನ್ನಮ್ಮ ತೆಣೆಯ ಮೇಲೆ ಕೂತುಕೊಂಡು ಪಾಡಿನ ನೆರಳು ತುಳಸಿಯ ಕಟ್ಟೆಯನ್ನು ದಾಟಿ ತೆಣೆಯ ಹತ್ತಿರಕ್ಕೆ ಬರುವುದನ್ನೇ ಕಾಯುತ್ತಾ ಕುಳಿತಳು (ಮಲೆಮ. ೮೮) ; ಅಬೋಲೀನ . . . ದೇಗುಲ ಹೊಕ್ಕು ಪಡಸಾಲೆಯ ತೆಣೆಯೊಂದರಲ್ಲಿ ಹಾಯಾಗಿ ಕುಳಿತಳು (ಅಬೋಲೀ. ೦೫) ; ಸಿದ್ದಣ್ಣನು ತೆಣೆಯ ಮೇಲೆ ನಿಂತು, ಬಗ್ಗಿ ಭಕ್ತಿಯಿಂದ ಗೌಡರಿಗೆ ನಮಸ್ಕರಿಸಿದನು (ಪಂಚಪಾಂ. ೫೦). ದಿಣೆ : ೧. ಇಸಾನದೆ ಬದಣೆಗುಪ್ಪೆಯ ದಾಸನೂರ ಪೊಟ್ಟದ ತ್ರಿಸಂಧಿಯ ತಟಾಕವು ಕೊಡಿಗಟ್ಟ ಚಿಣ್ಣುಮಿಕ್ಕವು ಕೆಂತಟಿಮ್ಬಿನ ದಿಣೆ ಇಂ ಪೂರ್ಬ್ಬದೆ ಕೂಡಿತ್ತು ಸೀಮಾಂತರಂ (ಎಕ. I, ೦-೩೦:466) ; ಕಾಲುವೆಯ ಪಡುವಣ ದಿಣೆಯಾಗಿದ್ದುದನು ಆ ದೇವರ ಶ್ರೀವೈಷ್ಣವರಿಗೆ ಮಾಱಿಕೊಂಡು (ಮೈಆರಿ. ೦೯೪೬, ೩೦-೦೨ ; 1314). ದಿನ್ನೆ : ೧. ಕಂಬರೆಯ ಸ್ರೋತ ಪರಲ ದಿನ್ನೆ ಪ್ರಾಪ್ಯ ತಥಾತು ದಕ್ಷಿಣ ಗ್ರಾಮ (ಇಅ. VIII, ೯೫-೨ ; 444 ಕೃಶ) ; ಮುನೇಶ್ವರನ ಗುಡಿಯವರೆಗೂ ನಿರ್ಜನವಾದ ದಿನ್ನೆ, ಕೊರಕಲು ಪ್ರದೇಶ (ಊರುಕ. ೦೩೦) ; ದಿನ್ನೇ ಮೇಲೆ ಮಳೆ ಹೊಯ್ದುರೆ ಹಳ್ಳಕ್ಕೇ ಬರುವುದು (ಗಾದೆ). 'ದಿಂಟೆ' ಪರಾ.
[ ದೇ.ಕ ತಮಿ. ತಿಣ್ಣೈ ; ಮಲ. ತಿಣ, ತಿಣ್ಣ ; ತುಳು. ತಿಣೆ, ದಿಣ್ಣೆ ತೆಲು. ತಿನ್ನೆ, ದಿಣ್ಣ ]

ದಿತ (ಗು). ೧. ಕತ್ತರಿಸಿದ ; ತುಂಡುಮಾಡಿದ. (ನಾ). ೨. ಕತ್ತರಿಸಿದುದು : "ದಾತಂ ಲೂನಂ ದಿತಮಱಿಗೆ" (ಪಸುಕೋ. ೧೦೭-೪೯) ; "ಛಿನ್ನಂ . . . ದಿತಂ, ಛಿತಂ, ವೃಕ್ಣಂ – ೮ ಕುಯ್ಯಲ್ಪಟ್ಟದ್ದು, ಕತ್ತರಿಸ ಲ್ಪಟ್ಟದ್ದು" (ಸಿದ್ಧಾಂತಿ. ೩೦೩). [ ಸಂ. ]

ದಿತಿ (ನಾ). ಕಶ್ಯಪನ ಹೆಂಡತಿಯರಲ್ಲಿ ಒಬ್ಬಳು ; ದೈತ್ಯರ ತಾಯಿ : "ದೈತ್ಯರ ತಾಯಿ ದಿತಿ, ದೇವರ್ಕಳ ತಾಯಿ ಅದಿತಿ, ದಾನವರ ತಾಯಿ ದನು, ನಾಗರ್ಕಳ ತಾಯಿ ಖದ್ರೂಃ ಎಂಬುದು" (ಹಲಾಯು. ೨೦-೦೦೯) ; "ಅಸುರರಂ ಪಡೆದಾಕೆ ದಿತಿಯೆಂದೆನಿಕ್ಕುಂ" (ಮಂಗರಾ. ೭-೨೪) ; "ದಿತಿ– ದಕ್ಷನ ಮಗಳ್, ಕಶ್ಯಪನ ಹೆಂಡತಿ, ರಕ್ಕಸನ ತಾಯಿ" (ಕಾಶಕ್ಕ. ೦೮೭). 'ದಿತಿಜ' ಪರಾ. [ ಸಂ. ]

**ದಿತಿಜ** (ನಾ). ೧. ದಿತಿಯ ಮಗ ; ದೈತ್ಯ : ''ಸುರವೈರಿಗಳು ದಾನವರು ನಾಗಲೋಕವಮಂದಿರರು ದಿತಿಜರು ಶುಕ್ರಶಿಷ್ಯರಸುರರು ಪೂರ್ವಸುರರೆನಲು ದೈತ್ಯರು" (ಮಂಗರಾ. ೩-೯). ೨. ನಿರರುತಿ ; ನೈರುತ್ಯ ದಿಕ್ಕಿನ ಅಧಿಪತಿ : ದಿವಿಜವಾರವರನಂ ದಹನನಾ ರವಿತನೂಜಂ ಧೀರದಿತಿಜಂ ವಿನುತ ನೀರನಿಲಯಂ ಪೃಥುಸಮೀರಣನಘಂ . . . ಸೇರಿ ಸೆರೆದೊಪ್ಪಿರೆ ಕೃಪಾರಸಸಮುದ್ರನಗಜಾರಮಣನುಜ್ವಳ ಪುರಾರಿ ಮೆ ಱೆ ದಿ ರ್ದ ಂ (ರಾಜಶೇ. ೦೪-೮೮). [ ಸಂ. ]

**ದಿತಿಜಕುಲ, ದಿತಿಜಕುಳ** (ನಾ). ದೈತ್ಯರ ಕುಲ,_ವಂಶ : ತನಗೆ ಕೊಟ್ಟ ಕೋಡಿಂಗೊಡಂಬಟ್ಟ ದಿತಿಜಕುಲದಾವಾನಲನುಮನರಾತಿಕಾಲಾನಲನುಮನನಲನಿಷ್ಪಾರ್ಥಸಿದ್ಧಿಯುಕ್ಕುಮೆಂದು ಪರಸಿ (ಪಂಪಭಾ. ೫-೭೭ ವ). **ದಿತಿಜಕುಳ** : ನಸು ಕಿನಿಸದೆ ಮಿಗೆ ಕಿನಿಸಿ ದಿತಿಜಕುಳದವದಹನಂ ಮುಳಿದು ತನಗರ್ಘ್ಯಮೆತ್ತಿದ ತಳಿಗೆಯೊಳಿಡೆ ತಿಱಿದ ತೆಱದೆ ತಲೆ ಪಱಿದಾಗಳ್ (ಪಂಪಭಾ. ೬-೭೩). [ ದಿತಿಜ + ಕುಲ ]

**ದಿತಿಜಕುಳ** 'ದಿತಿಜಕುಲ' ನೋ.

**ದಿತಿಜಾರಿ** (ನಾ). ರಾಕ್ಷಸರ ವೈರಿ ; ಕೃಷ್ಣ : ದಿತಿಜಾರಿಯು ಭೃಕೃತದೊಡನೆ ತಗುಳ್ದುನ್ನಿದುದು ಕೆರಳ್ದಿಭೇಂದ್ರದ ಗಳಬೃಂಹಿತವುಂ ಮದಧಾರಾ ಝಾತ್ಕೃತಮುಂ (ಜಗವಿ. ೬-೫೧). [ ದಿತಿಜ + ಅರಿ₆ ]

**ದಿತಿಜೇಜ್ಯ** (ನಾ). ದೈತ್ಯರಿಗೆ ಪೂಜ್ಯನಾದವನು ; ದೈತ್ಯರ ಗುರು; ಶುಕ್ರ: ದಿತಿಜೇಜ್ಯಾಲಯ ಲಗ್ನದೊಳ್ ಮಹಿಸುತತ್ರಿಂಶಾಂಶಕಂ ನಿಂದೊಡಲ್ಲಿ ತುಷಾರದ್ಯುತಿ ಕೂಡಿದಂದಸತಿ .-. . ಶಕ್ರೇಜ್ಯಾಂಶದೊಳ್ ಸದ್ಗುಣಾನ್ವಿತೆಯಕ್ಕುಂ (ಜಾತತಿ. ೨೨-೪). [ ಸಂ. ]

**ದಿತಿತನೂಭವ** (ನಾ).=ದಿತಿಜ ೧ : "ದನುಜರ್ ದೈತೇಯರ್ ದಿತಿತನೂಭವರ್ ಪೂರ್ವದೇವರಸುರರ್ ಪಾತಾಳನಿವಾಸಿಗಳ್ ಸುರದ್ವಿಷರೆನೆ ದೈತ್ಯರ್ ಶುಕ್ರಶಿಷ್ಯರಾರ್ಗವುದೃಶ್ಯರ್" (ವಸ್ತುಕೋ. ೬-೩೨).

[ ದಿತಿ + ತನೂಭವ ]

**ದಿತಿನಂದನ** (ನಾ).=ದಿತಿಜ ೧ : ದಿತಿನಂದನರ ಪತಿಯು ನೇಮದಿಂದೂರ್ವಸತಿ ರತಿಗೆ ಕೊಡಲಸಿಥಾರೆಯಲ್ಲಿ ಮೆಲ್ಲನೆ ಸೀಳೆ ಅತಿ ಚೆಲ್ವ ಶಿಶು ಮತ್ಸ್ಯಗರ್ಭದಲ್ಲಿರೆ ನೋಡಿ . . . ಬಲು ಮೋಹವುಂಟಾಗೆ (ಪ್ರಾಧರಾ. ೧೧-೩೩).

[ ದಿತಿ + ನಂದನ ]

**ದಿತಿಸುತ** (ನಾ).=ದಿತಿಜ ೧ : ದಿತಿಸುತರಂ ಕಂಸಾದ್ಯರನತಿಬಳರಂ ಕೊಲ್ವೆನಿಱುಪುವೆಂ ಭೂಭರವುಂ (ಜಗವಿ. ೧-೭೯). [ ದಿತಿ + ಸುತ ]

**ದಿದ್ದ** (ನಾ). (?) : ಕಣಕವುನಾಜ್ಯದಿಂ ತೊಡೆದು ಮೋದಿಸಿ ದಿದ್ದವುುಮಾಗೆ ಪೊಯ್ದು ಬಲ್ಮಣಿತನದಿಂದವೊತ್ತಿ ಮಿದಿದು (ಲೋಕೋಪ. ೮-೧೫); "ದಿದ್ದವುುಮಾಗೆ = ಚೆನ್ನಾಗಿ ಗಟ್ಟಿಯಾಗಿ" (ಲೋಕೋಪ. ಟೀಕು).

[ ? ]

**ದಿಧಿಲ್, ದಿಧಿಲು** (ನಾ). ಒಂದು ಅನುಕರಣ ಶಬ್ದ : ದೊಪ್ಪ ಧೊಗಪ್ಪನೆ ದಿಧಿಲ್ಬುಧಿಲ್ಲೆನೆ ಗದೆಗಳ್ ಸೊಪ್ಪುಸೊವಡಪ್ಪಿನಂ ಸೂಱ್ಱಪ್ಪುದ ಕಡುಕೆಯ್ದು ಪೊಯ್ದರೊರ್ವರನೊರ್ವರ್ (ಗದಾಯು. ೮-೧೧). **ದಿಧಿಲು** : ಕಡೆದರುಱಿ ದಿಧಿಲು ಬುದ್ಬುಧಿಲೆಂಬ ರವದಿಂದ (ವೀಶೈಪು. ೩-೧೭-೨೩).

**ದಿಧಿಲು** 'ದಿಧಿಲ್' ನೋ.

**ದಿಧಿಷು** (ನಾ). ೧. (ಯಾವುದೇ ವಸ್ತುವನ್ನು) ದೊರಕಿಸುವ ಪ್ರಯತ್ನ. ೨. ಗಂಡ; ಪತಿ. ೩. ಮೊದಲನೆಯ ಗಂಡನಿಂದ ವಿಚ್ಛೇದನ ಪಡೆದವಳನ್ನು ಮದುವೆಯಾದವನು; ಎರಡನೆಯ ಪತಿ: "ದಿಧಿಷುಃ, ತಸ್ಯಾಃ, ಪತಿಃ– ಮದುವೆಯಾಗಿದ್ದವಳನ್ನು ಪುನರ್ವಿವಾಹ ಮಾಡಿಕೊಂಡವನ ಹೆಸರುಗಳು" (ಸಿದ್ಧಾಂತಿ. ೦೭೩). ೪. ಕುಮಾರಿ ವಿಧವೆಯಾಗಿದ್ದು ಎರಡನೆಯ ಸಲ ಮದುವೆಯಾದವಳು. [ ಸಂ. ]

**ದಿಧಿಷೂ** (ನಾ). ೧. ಕುಮಾರಿ ವಿಧವೆಯಾಗಿದ್ದು ಮರುವಿವಾಹವಾದವಳು: "ಪುನರ್ಭೂಃ, ದಿಧಿಷೂಃ, ದ್ವಿರೂಢಾ–ಎರಡು ಸಾರಿ ಮದುವೆಯಾದವಳ ಹೆಸರುಗಳು" (ಸಿದ್ಧಾಂತಿ. ೦೫೦) ; "ಪುನರ್ಭೂಃ, ದಿಧಿಷೂಃ– ಈ ೨ ಮರುಮಾಟವಳ್" (ಹಲಾಯು.೮೦-೩೩೦) ; "ದಿಧಿಷೂ [ಪಾಠಾಂ. ದಿಗ್ಧಿಷು] ಪುನರ್ಭೂವೆನಲು ಮರುವಾಳ ಕಾಂತೆಯುಕ್ಕುಂ" (ಮಂಗರಾ. ೮೯-೩). ೨. ತಂಗಿ ಮದುವೆಯಾಗಿದ್ದರೂ ತಾನು ಇನ್ನೂ ಮದುವೆಯಾಗದಿರುವವಳು. ೩. ಅಕ್ಕನಿಗಿಂತ ಮೊದಲೇ ಮದುವೆಯಾದವಳು. 'ದಿಧಿಷೂಪತಿ' ಪರಾ. [ ಸಂ. ]

**ದಿಧಿಷೂಪತಿ** (ನಾ). ೧. ಅಕ್ಕನಿಗೆ ಮದುವೆಯಾಗುವ ಮುಂಚೆ ಅವಳ ತಂಗಿಯನ್ನು ಮದುವೆಯಾದವನು : ಪಿರಿಯಳ್ಗೆ ಮುನ್ನಮೇ ಕಿಱಿಯಳಂ ಮದುವೆಯಾದ ದಿಧಿಷೂಪತಿಗಳುಂ (ಧಾರಶಾಂ. ೨೪೫-೩೪). ೨. ಸಹೋದರನು ಮೃತನಾದರೆ, ಅವನ ಪತ್ನಿಯಲ್ಲಿ ರಮಿಸುವವನು.

[ ದಿಧಿಷೂ + ಪತಿ₂ ]

**ದಿನ್‍ಇಲಾಹಿ** 'ದೀನ್‍ಇಲಾಹಿ' ನೋ.

**ದಿನ** (ನಾ). ೧. ಸೂರ್ಯನು ಬೆಳಗುವಷ್ಟು ಕಾಲ ; ಹಗಲು ; ದಿವಸ: "ದಿವಸಂ ದಿನಂ ದಿವಾಹಂ ದ್ಯು ವಾಸರಂ ಘಸ್ರಮೆನೆ ಪಗಲ್" (ವಸ್ತುಕೋ. ೧೫-೪) ; ದಿನದೊಳ್ ಸಜಳತೆಯಿಂ ಮತ್ತ್ಯನಳಿನವುಂ ಮತ್ತಮಿರುಳೊಳುನ್ನಿದ್ರತೆಯಿಂದೆನಸುಂ ಚಕೋರ ಕುಮುದಮನನುಕರಿಸಿದುದಾ ವಿಯೋಗವಿಧುರೆಯ ಕಣ್ಗಳ್ (ಚಂದ್ರಪ್ರ. ೫-೧೩೫). ೨. ಒಂದು ದಿವಸ ; ಒಂದು ಹಗಲು, ಒಂದು ರಾತ್ರಿಗಳಿಂದ ಕೂಡಿದ ಕಾಲ; ಇಪ್ಪತ್ನಾಲ್ಕು ಗಂಟೆಗಳ ಕಾಲ ; ; ಎಂಟು ಜಾವ : ದಿನವು ಬೇಱಿಲ್ಲ ತಿರುನಾಳಿ ದಿನವಾ ಪುರಕೆ ಮನವು ಬೇಱಿಲ್ಲ ಶಿವಭಕ್ತಿ ಮನವಾ ಪುರಕೆ (ತಿರುರ. ದೇ. ೩-೦೪) ; ದಿನಮೆಲ್ಲಂ ನಿಯಮವ್ರತಕ್ಕೆ (ಶಾಂತೀಶ್ವ. ೨-೧೧) ; ಝಾವವೆಂಟಾಗೆ ಪಗಲಿರುಳಿಂದಜುವತ್ತುಘಳಿಗೆಯೊಂದುದಿನವಹುದು (ವಿವೇಕ. ೩೨೦). ೩. ತಿಥಿ; ಶ್ರಾದ್ಧ : ದಿನದ್ದ (ಉತ್ತರಕ್ರಿಯೆ) ತಯಾರಿ ನಡಸೀದಿ ಕಾಣಸ್ತೇತಿ ? (ನಿಸರ್ಗ. ೦೨೨). 'ತದ್ದಿನ', 'ದಿನಕರ್ಮ' ಪರಾ. ೪. ಆಡಳಿತದ ಅವಧಿ ಅಥವಾ ಅಧಿಕಾರದ ಸಮಯ : ರಾಮಾಘಟರ ಅಯ್ಯನವರ ಕಾರ್ಯ್ಯಕ್ಕೆ ಕರ್ತರಾದ ಲಕುಮರಸಯ್ಯನವರ ದಿನದಲು (ಎಕ. X (8), ಕೋಲಾರ. ೨೭೭-೩ ; 1540). 'ಕಾರಕರ್ದಿನ' ಪರಾ. ೫. ಪಡಿತರ ; ರೇಷನ್ನು : ನೆರೆದಿರುವ ಜನರೆಲ್ಲರ ರೇಷನ್‍ಕಾರ್ಡುಗಳನ್ನು ಸಂಗ್ರಹಿಸಿ ಒಬ್ಬೊಬ್ಬರನ್ನೇ ಕರೆದು ಅವರಿಗೆ ದಿನ ಕೊಡಿಸುತ್ತಿದ್ದರು (ಮರಳಿ. ೦೨). ೬. ಯೋಗ್ಯವಾದ ಕಾಲ ; ಹದಗಾಲ ; ತತು : ದಿನ ಹೋಗಿ ಮಳೆಗಾಲವೇ (ಗಾದೆ). ೭. [ಗಣಿತ] ಮೂವತ್ತು ಎಂಬ ಸಂಖ್ಯೆಯ ಸಂಕೇತ : "ದಿನವೆನಲು ಮೂವತ್ತು" (ಮಂಗರಾ. ೧೦೪-೯).

ದಿನಂದಿನ, ದಿನದಿನ, ದಿನದಿನಂ, ದಿನಾದಿನಾ, ದಿನೇದಿನೇ (ದ್ವಿರುಕ್ತಿ) = ೧. ಆಯಾದಿನ ; ಅಂದಂದು ೨. ಪ್ರತಿದಿನ; ಪ್ರತಿನಿತ್ಯ : ತನುವನೆಲ್ಲ ವಸೆಯ್ದೆ ಪೊಸಚಂದನಮದಾಗಲು ತೇದು ತೇದಿಂತನುನಯದಿ ದಿನದಿನದ ನೇಮಂ ತಪ್ಪದರ್ಪಿಸುವೆ (ಬಸವು. ೨೭-೩) ; ಪಾಡಿವದೆಳವೆಱ ಪುಣ್ಣಮಿಂವರೆಗಂ ರೂಡಿಸಿ ದಿನದಿನದವಪ್ಪದೆ ಕಲೆಯೊಳ್ ಕೂಡಿ ಬಳೆದು ಕುವಲಯ ಕತ್ಯಾನಂದಮನೀವಂದದೊಳು (ಜಯನೃ. ೨-೭೫) : ದಿನದಿನ ಶನಿ ಕಾಡಿದರೆ ಬಾಳೋದು ಯಾವಾಗ ? (ಗಾದೆ). ೧, ೨ : ದೇಶವಿದೇಶೀಯ ರಾಜಕೀಯಗಳನ್ನು ಕುರಿತು ದಿನಂದಿನದ ವಾರ್ತೆಗಳನ್ನು ತಿಳಿದುಕೊಳ್ಳುತ್ತಾನೆ (ಒಟಿದ. ೨೫೫). ೩. ದಿನದಿಂದ ದಿನಕ್ಕೆ ; ದಿನ ಕಳೆದಂತೆ ; ದಿನಕ್ರಮೇಣ: ಗೆರೆನಗೆಯ ಕಿರಿಯೊಡಲ ಪಸುಳೆದಿಂಗಳ್ ದಿನಂದಿನದಿನಂ ಬಳೆವಂತೆ(ಶ್ರೀರಾಮಾ. ೧೭.೪೫೫) ; ದಿನೇದಿನೇ ಸಶಿಸತೊಡಗಿರುವ ಈ ಜನಾಂಗ

ಗಳ ಭಾಷೆಗಳನ್ನು ಕುರಿತು ಹೆಚ್ಚು ಸಂಶೋಧನೆ ನಡೆಯುವುದು ಅಗತ್ಯ (ದ್ರಾವಿವಿ. ೨೦೩); ಚಿಂತೆಯಿಂದ ದಿನೇದಿನೇ ಆತ ಕುಂದುತ್ತಿದ್ದಾನೆ (ಕಬುಕ. ೬೭). ೪. ಪ್ರತಿದಿನವೂ ; ದಿನನಿತ್ಯವೂ : ಮಲಗಿಕೋ ಹೋಗು, ದಿನಾ ದಿನಾ ನಾನು ಹೇಳಬೇಕೆ (ಸಣ್ಣಕ. X, ೧೩). ದಿನ ಎಣಿಸು = (ಜೀವನದ ಕೊನೆಯಲ್ಲಿ) ಸಾವಿನ ದಿನವನ್ನು ಎದುರು ನೋಡು ; ಕಡೆಗಾಲವನ್ನು ನಿರೀಕ್ಷಿಸು : ಅವರು ತೀರ ಅನಾರೋಗ್ಯದಿಂದ ದಿನ ಎಣಿಸುವ ಸ್ಥಿತಿಗೆ ಬಂದಿದ್ದಾರೆ (ರೂಢಿ). *ದಿನಂದಪ್ಪದೆ = ಒಂದು ದಿನವನ್ನೂ ಬಿಡದೆ ; ಪ್ರತಿನಿತ್ಯವೂ : ಇರ್ಪವೆಮ್ಮಯ ಮನಂ ಬಂದೆಡೆಗಳೊಳ್ ಪೋಗಿ ಬರ್ಪವು ದಿನಂದಪ್ಪದೆ (ಜಬಪು. ೪೭-೧೭). ದಿನಂಪ್ರತಿ = ಪ್ರತಿದಿನ ; ಪ್ರತಿನಿತ್ಯ : ದಿನಂಪ್ರತಿಯೊಳಾ ಬಾಲೆಯತ್ಯಂತ ಪ್ರಯತ್ನದಿ ಜನ್ನಿಗೆಯ ಹಾಲಂ ಕಱೆದು ಕಾಸಿ ಕ್ಷಿಪ್ರದಿಂದು ತಂದುಕೊಡಲು (ಬಸಪು. ೧೪-೨೩) ; ದಿನಂಪ್ರತಿ ಸಭೆಗಳಾಗುತ್ತಿದ್ದವು (ಉರ್ದುಪಾ. ೧೪) ; ವಾರಕ್ಕೆ ೩-೪ ಸರ್ತಿ ಅಪಸ್ಮಾರ ಬಡಿದರೆ ಸಾಕಷ್ಟು ಔಷಧಿಗಳನ್ನು ದಿನಂಪ್ರತಿ ಬಿಡದೆ ಕೊಟ್ಟು, ಮೂರ್ಛೆ ಬರದಂತೆ ಮಾಡಬಹುದು (ಮನೋಗಂ. ೪೬). ದಿನ ಕೂಡಿಬರು = ಒಳ್ಳೆಯ ಸಮಯ ಹೊಂದಿಬರು ; ಅದೃಷ್ಟ ಒದಗು: ಯಾವುದಕ್ಕೂ ದಿನ ಕೂಡಿಬರಬೇಕು (ರೂಢಿ). ದಿನ ಕೂಡು = (ಶುಭಕಾರ್ಯ ಮುಂತಾದುವಕ್ಕೆ) ದಿನ ಹೊಂದಿಕೆಯಾಗು,-ಸೇರು: ಅವನ ಜಾತಕಕ್ಕೆ ದಿನ ಕೂಡಲಿಲ್ಲ (ರೂಢಿ). ದಿನ ಕೇಳು = (ಶುಭಕಾರ್ಯ ಮೊದಲಾದುವುಗಳಿಗಾಗಿ) ಒಳ್ಳೆಯ ದಿನವನ್ನು ವಿಚಾರಿಸು ; ತಿಥಿ, ನಕ್ಷತ್ರಗಳನ್ನು ವಿಚಾರಿಸು : ಅವರು ಜೋಯಿಸರ ಬಳಿಗೆ, ಮಗಳ ಮದುವೆಗೆ ದಿನ ಕೇಳಲು ಹೋಗಿದ್ದಾರೆ (ರೂಢಿ). ದಿನಕ್ರಮವಾಗಿ = ದಿನಕ್ರಮೇಣ : ಲುಬ್ಧ ಶಿರೋಮಣಿಯಾದ ದುಷ್ಟಬುದ್ಧಿಗೂ ದಾನಶೀಲನಾದ ಸತ್ಯಕೀರ್ತಿಗೂ ದಿನಕ್ರಮವಾಗಿ ದ್ವೇಷವು ಹೆಚ್ಚಲಾರಂಭವಾಯಿತು (ಕವಿಕ. ೧). ದಿನಕ್ರಮೇಣ = ದಿನದಿಂದ ದಿನಕ್ಕೆ ; ದಿನ ಕಳೆದಂತೆ: ದಿನಕ್ರಮೇಣ ಅವರ ಸ್ಥಿತಿ ಸುಧಾರಿಸಿತು (ರೂಢಿ). ದಿನಗಟ್ಟಲೆ, ದಿನಗಟ್ಲೆ = ೧. ಪ್ರತಿದಿನ ; ದಿನನಿತ್ಯ : ಅವರು ದಿನಗಟ್ಟಲೆಯಲ್ಲಿ ತೀರ ಸಾಮಾನ್ಯ ಉಡುಪು ಧರಿಸುತ್ತಾರೆ (ರೂಢಿ) ; "ದಿನಗಟ್ಲೆ—ನಿತ್ಯ ; ದಿನಾಲು" (ಜಾನಕೋ. ೫). ೨. ಹಲವು ದಿನಗಳವರೆಗೆ : ದಿನಗಟ್ಟಲೆ ಉಪವಾಸ ಮಾಡುವುದು ಮೈಗೆ ಒಳ್ಳೆಯದಲ್ಲ (ರೂಢಿ). ದಿನಗಳ ಮೇಲೆ ಬೀಳು = ಹಲವು ದಿನಗಳ ಕಾಲ ಬೇಕಾಗು ; ತುಂಬ ದಿನಗಳ ಸಮಯ ಹಿಡಿ : ಹೀಗೆ ಮೊದಲಿನ ದಾಖಲೆಯನ್ನು ಕೊಟ್ಟು ಬರೆಯುವದರಿಂದ ತಕ್ಷಣವೇ ಖರೀದಿಯಾಗದೆ ದಿನಗಳ ಮೇಲೆ ಬೀಳುವದು (ಮುಂಬವ್ಯಾ. ೬೯). ದಿನ ಗೊತ್ತುಮಾಡು = ದಿನ ನಿಶ್ಚಯಿಸು : ಮದುವೆಗೆ ಅಂದೇನೆ ದಿನ ಗೊತ್ತುಮಾಡಿದರು (ರೂಢಿ). ದಿನ ತಪ್ಪಿ ದಿನ = ದಿನಬಿಟ್ಟು ದಿನ : ಪೀನಸಕ್ಕೆ :-ಅರಿದಳ . . . ಚಿತ್ರಮೂಲದ ತಿಗಡು, ಇವಂ ಸಮಾನಂಗೊಂಡು ಚೂರ್ಣವಂ ಮಾಡಿ ಈ ಚೂರ್ಣದಲ್ಲಿ ಹೊಗೆ ದಿನತಪ್ಪಿ ದಿನ ಕೊಟ್ಟು ಸಬಸಿಗೆಸೊಪ್ಪಿನ ಎಸರಲ್ಲಿ ಊಟಕ್ಕೆ ಇಕ್ಕುವುದು (ವಿವೈವಿ. ೦೧೧). ದಿನ ತಳ್ಳು = ದಿನ ನೂಕು : ಅವರು ಕಷ್ಟದಿಂದ ದಿನ ತಳ್ಳುತ್ತಿದ್ದಾರೆ (ರೂಢಿ). ದಿನ ತುಂಬು = ಗರ್ಭಿಣಿಗೆ ನವಮಾಸ ಪೂರ್ಣವಾಗು,- ಹೆರಿಗೆಯ ಕಾಲ ಸಮೀಪವಾಗು: ಆಗ ನನಗೆ ಎರಡನೆಯ ಬಸಿರು. ದಿನ ತುಂಬಿತ್ತು (ಸ್ವ್ಯಚಿ. ೮೫) ; ರಮಾಬಾಯಿ ದಿನ ತುಂಬಿದ ಬಸುರಿ (ಶ್ರೀರಂಗ. ೧೮). ದಿನದಂತೆ = ಎಂದಿನಂತೆ ; ಪ್ರತಿನಿತ್ಯದ ಹಾಗೆ : ಗಂಡುಹೆಣ್ಣು ದಿನದಂತೆ ಎದ್ದು ದಿನದಾಟವಾಡುತಿರಲು ನಿನ್ನೆ ನಾಳೆಗಳ ಸಂಧಿಯಲ್ಲಿ ಜನ ನೋಟ ನೋಡುತಿರಲು (ಸೂರ್ಯಪಾ. ೩೪-೫). ದಿನ ದಾಟು = ದಿನ ಮೀರು : ಅವನು ದಿನ ದಾಟಿ ಬಂದರೆ ಏನೂ ಮಾಡಲಾಗುವುದಿಲ್ಲ (ರೂಢಿ). ದಿನದಿನಕೆ, ದಿನದಿನಕ್ಕೆ = ೧. ಪ್ರತಿದಿನಕ್ಕೆ ; ಆಯಾಯಾ ದಿನಕ್ಕೆ ; ದಿನನಿತ್ಯಕ್ಕೆ : ದಿನದಿನಕೆ ಪಡಿಯಂ ಕೊಡುವನುಮೆಯಿನಿಯನಾ ನಬ್ಬಣ್ಣಗೀಗಳು ಜನವಜಿಯೆ ಪಡಿಯಂ ಕೊಡುವನೀ ಕಿನ್ನರಯ್ಯಂಗೆ (ಬಸಪು. ೨೯-೧೧) ; ಮನವೊಲಿದು ಪರ್ಬಂಗಳಂ ದಿನದಿನಕೆ ಮಾಡಿಹೆನು (ಬಸಪು. ೪೮-೧೬). ೨. = ದಿನಕ್ರಮೇಣ : ಲತಾಂಗಿಯ ಜಠರವದು ದಿನದಿನಕೆ ನುಣ್ಪುಂ ಪೆಂಪುಮಿಂಪು ಕೊನರ್ದು ಬಲಿದೊಂಬತ್ತುತಿಂಗಳು ತುಂಬಿ (ಬಸಪು. ೩-೪) ; ಮೆಚ್ಚುದುದವರಭ್ಯುದಯ ದಿನದಿನಕೆ (ತೊರರಾ. ೧-೮-೮೩) ; ಅವಳಲ್ಲಿ ದಿನದಿನಕ್ಕೆ ಒಳ್ಳೆಯ ಗುಣಗಳು ಬೆಳೆಯುತ್ತಿದ್ದವು (ಸಣ್ಣಕ. X, ೧೭); ಕಾದಂಬಿನಿಯು ದಿನದಿನಕ್ಕೆ ದುರ್ಜ್ಞೇಯಳಾಗುತ್ತ ಹೊರಟಂತೆ, ಯೋಗವಾಯ ಅವಳ ಮೇಲೆ ಅಷ್ಟಷ್ಟು ಕುಪಿತಳಾಗಹತ್ತಿದಳು (ಇಕ್ಕಳ. ೨೩). ದಿನದೊಳಗೆ ಬೀಳು = ದಿನ ತುಂಬು : ಆಕೆಗೆ ಎರಡನೆಯ ಬಸಿರು ದಿನದೊಳಗೆ ಬಿದ್ದಿದೆ (ರೂಢಿ). ದಿನ ನಡೆ = ಜೀವನ ನಡೆ ; ಬದುಕು ಸಾಗು: ಅವರ ಸಂಪಾದನೆಯಲ್ಲಿ ದಿನ ನಡೆಯುವುದೇ ಕಷ್ಟವಾಗಿದೆ (ರೂಢಿ). ದಿನನಿತ್ಯ = ಪ್ರತಿದಿನ ; ಪ್ರತಿನಿತ್ಯ : ಬಹುಮಂದಿ ಸುಳಿವರು ಸುಗುಣ ಸಂಪನ್ನರು ದಿನನಿತ್ಯ ನೂರಾರುಜನರು (ಇಂಬಾಪ. ೧೫೦-೩೯) ; ಅವಳ ಆಲೋಚನೆಗಳು ಅವಾಸ್ತವ ಪ್ರಪಂಚದ ದಿನನಿತ್ಯದ ಸಮಸ್ಯೆಗಳ ಜಟಿಲತೆಯಿಂದ ಒಡಗೂಡಿರುತ್ತಿದ್ದುದರಿಂದ ಅವಳ ಮನಸ್ಸು ಆ ಹೊರೆಯಿಂದರೇ ಕುಗ್ಗಿ ಹೋಗಿ ಕಲ್ಪನೆಯ ಕುದುರೆಗಳನ್ನೇರಲಾರದಂತಾಗಿದ್ದವು (ಕುಸುಮಂ. ೧೧). ದಿನ ನಿಶ್ಚಯಿಸು = (ಶುಭಕಾರ್ಯಗಳಿಗೆ) ದಿನವನ್ನು ಗೊತ್ತುಮಾಡು ; ಮುಹೂರ್ತವನ್ನು ನಿಶ್ಚಯಮಾಡು : ದಿನ ನಿಶ್ಚಯಿಸಿದ. ಊರಿಗೆ ಮರಳಿದ (ಕುಡಕೊ. ೨೨೬). ದಿನ ನೂಕು = (ನೆಮ್ಮದಿಯಿಲ್ಲದೆ) ಜೀವನವನ್ನು ಸಾಗಿಸು ; (ಕಷ್ಟದಿಂದ) ದಿನಗಳನ್ನು ಕಳೆ : ಅವರು ಮಗನ ನಿರೀಕ್ಷೆಯಲ್ಲೇ ದಿನ ನೂಕುತ್ತಿದ್ದಾರೆ (ರೂಢಿ). ದಿನ ನೋಡು = ದಿನ ನಿಶ್ಚಯಿಸು : ಅವರು ಮಗಳ ಮದುವೆಗೆ ದಿನ ನೋಡುತ್ತಿದ್ದಾರೆ (ರೂಢಿ). ದಿನಪಡಿ = ಅತಿಥಿ ಮುಂತಾದವರಿಗೆ ಅಡಿಗೆ ಮಾಡಿಕೊಂಡು ಊಟ ಮಾಡುವುದಕ್ಕಾಗಿ ಕೊಡುವ ಒಂದು ದಿನಕ್ಕಾಗುವಷ್ಟು ಅಕ್ಕಿ, ಬೇಳೆ ಮುಂತಾದ ಪದಾರ್ಥಗಳು,-ಸ್ವಯಂಪಾಕದ ಸಾಮಗ್ರಿ : ನಮ್ಮ ಮನೆಗೆ ಬಂದ ಶಾಸ್ತ್ರಿಗಳು ಸ್ವಯಂಪಾಕದ ವ್ರತವನ್ನು ಪಾಲಿಸುವವರಾದ್ದರಿಂದ ಅವರಿಗೆ ದಿನಪಡಿ ಕೊಟ್ಟೆವು (ರೂಢಿ). 'ಅಕ್ಕಿಪಡಿ' ಪರಾ. ದಿನ ಬರು = ಕಾಲ ಒದಗು; ಸಮಯ ಸನ್ನಿಹಿತವಾಗು : ದಿನ ಬಂದಾಗ ಎಲ್ಲವೂ ನಡೆದುಹೋಗುತ್ತವೆ (ರೂಢಿ). ದಿನ ಬಿಟ್ಟು ದಿನ = ೧. ಕ್ರಮವಾಗಿ ಒಂದು ದಿನವನ್ನು ಬಿಟ್ಟು ಮತ್ತೊಂದು ದಿನ : ನನ್ನ ಹೆಂಡತಿ ತಾನೂ ಮೂರು ಕಾಸು ಗಳಿಸ್ತೇನೆ ಅಂತ, ದಿನ ಬಿಟ್ಟು ದಿನ ನನ್ನ ಜೊತೆಗೆ ಸೌದೆಗೆ ಬರ್ತಾಳೆ (ಸಣ್ಣಕ. VII, ೫೩); ಈ ಔಷಧಿಯನ್ನು ದಿನ ಬಿಟ್ಟು ದಿನ ತೆಗೆದುಕೊಳ್ಳಬೇಕು (ರೂಢಿ). ೨. ದಿನದಿಂದ ದಿನಕ್ಕೆ ; ದಿನಕ್ರಮೇಣ: ಯಾಕೋ ಏನೋ ನನ್ನ ಮರವೆ ; ದಿನ ಬಿಟ್ಟು ದಿನ ಹೆಚ್ಚಾಗುತ್ತಿದೆ (ಮರಮು. ೨೫). ದಿನಬೆಳಗೂ = ೧. ಪ್ರತಿದಿನವೂ; ಪ್ರತಿನಿತ್ಯವೂ : ದಿನಬೆಳಗೂ ನಿಮ್ಮಂಥವರೇ ಬರಲಿ ಅಂತಾ ನಾವು ದೊಡ್ಡ ಮನೆಗೆ ಬಾಗಿಲು ತೆರೆದುಕೊಂಡು ಕುಳಿತಿದ್ದೀವಿ ಅಲ್ಲವೆ ? (ಹೇಮುಕೊ. ೦೩) ; ಇನ್ನು ದಿನಬೆಳಗೂ ಇದೇ. ಹೆದರಿ ಏನು ಪ್ರಯೋಜನ ? (ಕಮನೆ. ೧೭೧). ೨. ದಿನವೆಲ್ಲ ; ಇಡೀದಿನ ; ದಿನಪೂರ್ತಿ ; ಅಹೋರಾತ್ರಿ : ದಿನಬೆಳಗೂ ರಾಮಾಯಣ ಕೇಳಿ, ರಾಮನಿಗೂ ಸೀತೆಗೂ ಏನಾಯಿತು ಎಂದಂತೆ (ಗಾದೆ). ದಿನ ಮಾಡು = ಪಿತೃಕಾರ್ಯವನ್ನು ಮಾಡು ; ಶ್ರಾದ್ಧವನ್ನು ನಡೆಸು : ಮಗನು ಪರದೇಶದಲ್ಲಿದ್ದುದರಿಂದ ತಂದೆಯ ದಿನಮಾಡಲು ಸಾಧ್ಯವಾಗಲಿಲ್ಲ (ರೂಢಿ). ದಿನ ಮೀರು = ಅವಧಿ ಮೀರು ; ಗಡುವು ಕಳೆದುಹೋಗು : ಸಬ್ಬಸಿಗೆ ಘೃತ . . . ದಿನ ಮೀರಿ ನೆರೆಯದ ಕನ್ನೆಯರು ಸೇವಿಸೆ ಋತುಮಹರು (ಸಕವೈ. ೧೨೫). ದಿನಮೇಕುಮಾಡು = ಕಾಲವನ್ನು ತಳ್ಳು ; ತಡಮಾಡು; ಕಾಲವಂಚನೆ ಮಾಡು : ದಿನಮೇಕುಮಾಡುತ್ತ ನಡೆದದ್ದಲ್ಲದೆ ಅವರನ್ನು

ಮುರಿಯುವುದಕ್ಕೆ ಸಂಬಳದ ದಂಡಾಳುಗಳನ್ನು . . . ಕೂಡಿಸ ಹತ್ತಿದನು (ಇಂಗ್ಲಂಡ. ೪೯); ಅವನು ನನ್ನ ಹಣವನ್ನು ಕೊಡದೆ ದಿನವೋಕು ಮಾಡುತ್ತಿದ್ದಾನೆ (ರೂಢಿ). ದಿನರಾತ್ರಿ = ಹಗಲುರಾತ್ರಿ; ದಿನಪೂರ್ತಿ; ಅಹೋರಾತ್ರಿ: ಅವರು ಕೆಲಸವನ್ನು ಬೇಗ ಮುಗಿಸಬೇಕೆಂದು ದಿನರಾತ್ರಿ ಮಾಡುತ್ತಿದ್ದಾರೆ (ರೂಢಿ). ದಿನ ಲೆಕ್ಕಹಾಕು = ದಿನ ಎಣಿಸು: ಅವರು ಬದುಕುವ ಆಸೆಯನ್ನೇ ಬಿಟ್ಟು ದಿನ ಲೆಕ್ಕ ಹಾಕುತ್ತಿದ್ದಾರೆ (ರೂಢಿ). ದಿನವಹಿ₂ : = ೧. ಪ್ರತಿದಿನ; ಪ್ರತಿನಿತ್ಯ; ದಿನಾಲು: ಯದುಗಿರೀಶಗೆ ನಮಿಸಲೋಸುಗ ಮುದದಿ ದಿನವಹಿ ಬರ್ಪ ಶಕ್ರನ ಕುದುರೆಗಳ ಪಸುರೊಗರು ಗಿರಿಮನೆಗಳಲಿ ಪಸರಿಸಲು (ಅವಾಗವಿ. ೨೮-೧೪); ಅವಳು ದಿನವಹಿ ಬರುವ ಹೊತ್ತೂ ಇದೇ (ಜಳಜೀ. ೨೫); ಹುಟ್ಟಿದ ಮಗು ದಿನವಹಿ ೧೯–೨೦ ಗಂಟೆ ನಿದ್ದೆ ಮಾಡುತ್ತವೆ (ಗೃಹವಿ. ೦೧೩); ದಿನವಹಿ ಕನಿಷ್ಠಪಕ್ಷ ಆರುಆಣೆಗಳನ್ನಾದರೂ ಸಂಪಾದಿಸುತ್ತಿದ್ದಾರೆ (ಭಾಗ್ಯಶಿ. ೫೧). ೨. = ದಿನರಾತ್ರಿ: ಅವರು ದಿನವಹಿ ಮಾತನಾಡಿದರೂ ಆಯಾಸಗೊಳ್ಳುವುದಿಲ್ಲ (ರೂಢಿ). ದಿನವಾಗು = ದಿನ ತುಂಬು: ಆಕೆಗೆ ದಿನವಾಗಿದೆ (ರೂಢಿ). ದಿನವಿಳಿ = ಹೊತ್ತು ಇಳಿ: ಸಾಯಂಕಾಲವಾಗು: ನನ್ನ ಕೆಲಸ ಮುಗಿಯುವ ವೇಳೆಗೆ ದಿನವಿಳಿಯುವ ಹೊತ್ತಾಯಿತು (ರೂಢಿ). ದಿನವೇರು = ಹೊತ್ತು ಏರು; ಬೆಳಗಿನ ಸಮಯ ಮೀರು: ಬೇಸಿಗೆಕಾಲದಲ್ಲಿ ದಿನವೇರಿದಂತೆ ಬಿಸಿಲ ಬೇಗೆ ಹೆಚ್ಚು (ರೂಢಿ). ದಿನ ಶುದ್ಧಿ ನೋಡು = ಆಯುಷ್ಕರ್ಮ ಮೊದಲಾದ ಕಾರ್ಯಗಳಿಗೆ ಒಳ್ಳೆಯ ದಿನವನ್ನು ನೋಡು: ಆಚಾರ್ಯರು ಇಂದು ದಿನಶುದ್ಧಿ ನೋಡಿದ್ದಾರೆ (ರೂಢಿ). ದಿನ ಸರಿ = ಕಾಲ ಹೋಗು; ಸಮಯ ಕಳೆ; ದಿನವು ಕಳೆದುಹೋಗು: ದಿನ ಸರಿದಂತೆ, ಕಂಪಿಯ ಹೆಸರಿಲ್ಲದ ಬೇನೆ, ಪ್ರಬಲಿಸಿತು (ಕುಡಿಕೂ. ೨೮೭). ದಿನ ಸಾಗು = ಬದುಕು ನಡೆ; ಜೀವನ ಸಾಗು: ಕಷ್ಟವೋ ಕಾರ್ಪಣ್ಯವೋ ದಿನ ಸಾಗುತ್ತಿದೆ (ರೂಢಿ). ದಿನ ಹಾಕು = ಕಾಲ ತಳ್ಳು; ಬದುಕು ಸಾಗಿಸು; ಜೀವನ ನಡೆಸು. ಇಂದು ನಾಳೆ ಎಂದು ದಿನ ಹಾಕುತ್ತ ಸಾವಿನ ಬಾಗಿಲಿಗೆ ಬಂದು, ಅಲ್ಲಿಂದ ಚಂಗನೆ ತಪ್ಪಿಸಿಕೊಂಡು ಹೋಗಬಹುದೇದರೆ ಸಾಧ್ಯವಿಲ್ಲ (ಬಾಳಬ. ೨೧); ಸಾಕಷ್ಟು ಮರೆ ಬಿಟ್ಟು ಅದನ್ನು ಪ್ರಯೋಗ ಮಾಡಿದರೆ ಅದರ ಸ್ವಾರಸ್ಯ ಇನ್ನೂ ಹೆಚ್ಚುವದೆಂದು ನಂಬಿ ನಾವು ದಿನ ಹಾಕುತ್ತಿದ್ದೆವು (ಮೇಘಮ. ೧೨). ದಿನ ಹೇಳು = ಪಂಚಾಗ ಹೇಳು; ಜ್ಯೋತಿಷ್ಯವನ್ನು ಹೇಳು: ನಮ್ಮೂರ ಜೋಯಿಸರು ಚೆನ್ನಾಗಿ ದಿನ ಹೇಳುತ್ತಾರೆ (ರೂಢಿ). ದಿನ ಹೋಗು = ವಯಸ್ಸಾಗು: ಬಿದ್ದಿಯುಬೇ ಮುದುಕಿ ನೀ ದಿನ ಹೋದಾಕಿ, ಬಲು ಜೋಕಿ (ಶರೀಫ. ೩೩-೨). ದಿನಾ = ದಿನಾಗಲೂ: ಮುದುಕಿ . . . ದಿನಾ ಬರುವುದಾದರೆ ಬಾ, ಮಿಠಾಯಿ ನಿನಗೆ ಬೇಕಾದಷ್ಟು ಕೊಡುತ್ತೇನೆ, ಎಂದಳು (ಸಣ್ಣಕ. X, ೫೨); ದಿನಾ ಹೀಗೆ ಮಾಡ್ತೀಯಮ್ಮ (ದೂಚಿಟ್ಕ. ೫). ದಿನಾಗಲೂ, ದಿನಾಲು, ದಿನಾಲೂ = ಪ್ರತಿದಿನ; ಪ್ರತಿನಿತ್ಯ: ಅವರು ದಿನಾಗಲೂ ನಮ್ಮ ಮನೆಗೆ ಬರುತ್ತಾರೆ (ರೂಢಿ); ನೀವು ದಿನಾಲು ಉದ್ಯಾನಕ್ಕೇಕೆ ಬರುವುದಿಲ್ಲ (ಮಂದಾಕಿ. ೩೭); ದಿನಾಲು ಆ ವಿಗ್ರಹಗಳಿಗೆ ಹೂಗಾರ ಶಿವಪ್ಪನು ಪೂಜೆ ಸಲ್ಲಿಸುತ್ತಾನೆ (ಹಬ್ಬಬ. ೯); ನೀನು ದಿನಾಲು ಸಾಲೆಯ ಆಟದ ಬಯಲಿನಲ್ಲಿರುವ ಬನ್ನಿಯ ಗಿಡದ ಹತ್ತಿರ ಬರುತ್ತಿರು (ರಂಗರೊ. ೧೭೫); ಇವರನ್ನೆಲ್ಲ ನಾವು ದಿನಾಲು ನಮ್ಮ ಸುತ್ತಮುತ್ತ ಕಾಣಬಹುದು (ಗೊಮ್ಮಗು. ೧೩); ಮನೆಯವರು ದಿನಾಲೂ ಒಂದಲ್ಲ ಒಂದು ರೀತಿಯಿಂದ ಆ ಹುಡುಗನ ಮತ್ತು ಅವರ ಮನೆಯವರ ಗುಣಗಾನ ಮಾಡಿದ್ದೂ ಮಾಡಿದ್ದೇ (ಸುವಸಂ. ೧೪). [ಸಂ.]

**ದಿನಂಗಳೆ, ದಿನಕಳೆ, ದಿನಗಳಿ, ದಿನಗಳೆ** (ಕ್ರಿ). ೧. ಕಾಲವನ್ನು ಕಳೆ; ಸಮಯವನ್ನು ಕಳೆ: ಇಂತೀ ನರಾಮರರ್ಲೋಕಾವನಕೀರ್ತನೀಯಗಳೆನಿಪ್ಪನ್ಯೋನ್ಯಕೃತ್ಯಂಗಳಿಂ ಮರಳಲ್ ನೂರುಯುಗಂ ದಿನಂಗಳೆದು ನೀವಾಸಂದದಿಂ ಬಾಳಿರ್ಪ (ಚಾಕುಂತ. ೧೧೫-೧೯೭). ದಿನಕಳೆ: ೨. ಬದುಕನ್ನು ಸಾಗಿಸು; ಜೀವನವನ್ನು ನಡೆಸು: ಎಲ್ಲೋ ಹೇಗೋ ದಿನ ಕಳೆಯುವುದು, ಎಂದು ಯೋಚಿಸಿಕೊಂಡರು (ಸಣ್ಣಕ. X, ೫೦). ದಿನಗಳಿ: ೩. ಕಾಲ ಕಳೆದುಹೋಗು; ಅವಧಿ ಮೀರಿ ಹೋಗು: ಸತಿ ಸಂತತಿಗೆ ಬಯಸಿ ದಿನಗಳಿ[ಪಾಠಾಂ. ಳೆ]ದುದಿನ್ನಿಲ್ಲ ಋತುಸಮಯಮೆಂದೆನಗೆ ಪೇಳ್ದೊಡಲ್ಲಿರ್ದನು (ಜೈಮಿಭಾ. ೧೧-೩೯). ದಿನಗಳೆ: ೩. ಮೇಲಿನ 'ಜೈಮಿಭಾ ಪ್ರಯೋಗದ ಪಾಠಾಂತರವನ್ನು ನೋಡಿ.

[ದಿನ + ಕಳೆ₂ (< ಕಟ್₁)]

**ದಿನಕರ** (ನಾ). ೧. ಹಗಲನ್ನು ಉಂಟುಮಾಡುವವನು: ಸೂರ್ಯ; ಆದಿತ್ಯ: "ಆದಿತ್ಯಃ, ಸವಿತಾ . . . ದಿನಕರಃ, ಸೂರಃ, ಅಂಶುಮಾಲೀ . . . ತ್ರಯಿತನುಃ–ಈ ೪೭ ಆದಿತ್ಯನ ಪೆಸರ್" (ಚಂಛಯು. ೭-೩೫); ಧರಾಧಿಪಾ ನಿನ್ನನ್ನಂ ವಿತತಯಶನಿಲಯ ತಾರಾಪತಿ ದಿನಕರ ಸದೃಶತೇಜನೆಂಬುದುಮುಂಟೇ (ಕವಿರಾ. ೩-೮೪); ದಿನಕರನಸ್ತಮಸ್ತಕಮನಾಸೆಪಡಲ್ ಬಗೆದಪ್ಪನೇಕೆ (ಪಂಪಭಾ. ೧೧-೧೪೫); ದಿನಕರ ಹಿಮಕರ ನಕ್ಷತ್ರ ನಿಖಿಲ ತಾರಾಗ್ರಹಂಗಳತ್ಯಾಗ್ರಹದಿಂ ಕನಕಮಹೀಧರಮಂ ನಿಚ್ಚನಿಚ್ಚಮೋರಂತೆ ಸಂತತಂ ಬಲಿವರ್ಕುಂ (ಸುಕುಮಾ. ೧೧-೬೦); ಮತ್ತಮಲ್ಲಿ ಮನಸಿಜನ ಬಿಲ್ಲ ಜೇಜದಿಂ ಬೆಳೆಯದಿಕ್ಷುದಂಡವಿಲ್ಲ . . . ದಿನಕರನ ಕರದ ಕಮಳದೊಡಮುಟ್ಟದ ಕಮಳವನಂಗಳಿಲ್ಲ (ಪುಷ್ಪಪು. ೯-೨೧ ವ). ೨. [ಗಣಿತ] ಹನ್ನೆರಡು ಎಂಬ ಸಂಖ್ಯೆಯ ಸಂಕೇತ: ದಿನಕರರೆಡೆಯೊಳೆ ಯತಿ ನಿರ[ಪಾಠಾಂ. ಯ]ತಂ (ಛಂದೋಂಬು. ೨-೧೯೫). [ಸಂ.]

**ದಿನಕರತನಯ** (ನಾ). ೧. ಸೂರ್ಯನ ಮಗ. ೨. ಕರ್ಣ: ದಿನಕರತನಯನ ದುಶ್ಶಾಸನನ ವಿಯೋಗದೊಳಮಿಂದುವರೆಗಂ ನೋವಿಲ್ಲೆನಗಹಿತರೊಡನೆ ಸಂಧಿಗುಡೆನೆ ನೊಂದಂ (ಗದಾಯು. ೭-೭). ೩. ಶನಿ. ೪. ಸುಗ್ರೀವ. ೫. ಯಮ. [ದಿನಕರ + ತನಯ]

**ದಿನಕರತೇಜ** (ನಾ). ಸೂರ್ಯನ ಕಾಂತಿ, –ಪ್ರಕಾಶ: ದಿನಕರತೇಜಮುಂ ಕ್ರಮದಿನೊಯ್ಯನೆ[ಯುಪ್ಪದ]ದತ್ತ ದಕ್ಷಿಣಾಯನದೊಳ್ . . . ಶಾಂತಿನಾಥನ ವಿತತಪ್ರತಾಪಶಿಖಿ ಕಣ್ಗೊಳೊಳ್ಳ್ಕೆ (ಶಾಂತಿಪು. ೧೧-೬).

[ದಿನಕರ + ತೇಜ₁]

**ದಿನಕರಯ್ಯ** (ನಾ). ಒಬ್ಬಾತನ ಹೆಸರು: ಎರೆಯೂರ ದಿನಕರಯ್ಯ ಸೆಟ್ಟಿಯ ಲಿಕಿತಂ (ಎಕ. IV, ಎಳಂದೂ. ೨೫-೦೫; ಸು. 925 ?).

[ದಿನಕರ + ಅಯ್ಯ₁]

**ದಿನಕರಸುತ** (ನಾ). ೧. ಸೂರ್ಯನ ಮಗ. ೨. ಕರ್ಣ: ದಿನಕರಸುತವಚನಂ ರಾಮನೇಸು ಕಂಡರಿಸಿ ಕಲ್ಲೋಳಟ್ಟಕ್ಕರಮೆಂಬಿನೆಗಮೆಸೆದವುದು ನೃಪಶಾಸನಮೆನಿಸುವ ನನ್ನಿ ನನ್ನಿನಾರಾಯಣನ (ಆಪು. ೧೨-೨೫). ೩. ಶನಿ. ೪. ಸುಗ್ರೀವ. ೫. ಯಮ. [ದಿನಕರ + ಸುತ]

**ದಿನಕರಾತ್ಮಜೆ** (ನಾ). ಸೂರ್ಯನ ಮಗಳು; ಯಮುನಾನದಿ: "ಕಾಳಿಂದೀ, ದಿನಕರಾತ್ಮಜಾ, ಯಮುನಾ–ಈ ೩ ಯಮುನೆ" (ಚಂಛಯು. ೧೧೧–೫೨). [ಸಂ. ದಿನಕರಾತ್ಮಜಾ]

**ದಿನಕರೋಪಲ** (ನಾ). ಸೂರ್ಯಕಾಂತ ಶಿಲೆ: ಹರಿಮಣಿಯುಜ ಯೊಳ್ಮಿಱುಗುತ್ತಿರೆ ವಿಧುಂತುದಂ ವೃತ್ತತೆವೆತ್ತ ದಿನಕರೋಪಲಮಿದು ಭಾಸ್ಕರಬಿಂಬಮೆಂದು ಬಂದಾ ಗರಣದ ಸಮಯದೆ ಪಿಡಿವುದದಾ (ರಾಜಶೇ. ೬-೨೨). [ದಿನಕರ + ಉಪಲ]

**ದಿನಕರ್ಮ** (ನಾ). ಸತ್ತವರಿಗೆ ಮಾಡುವ ಉತ್ತರಕ್ರಿಯೆ; ಅಪರ ಕರ್ಮ; ಪಿತೃಕರ್ಮ: ದಿನಕರ್ಮಗಳು ಮುಗಿದೊಡನೆ (ಮುನಿಮಾ. ೩೧).

[ದಿನ + ಕರ್ಮ]

**ದಿನಕಳೆ** 'ದಿನಂಗಳೆ' ನೋ.

**ದುಟದುಟನೆ** (ಅ). ದುಟದುಟ ಎಂಬ ಶಬ್ದದೊಡನೆ: ಖಾತಿಯಿಂ ದುಟದುಟನೆ ಉರುಳೆ ತಲೆಯುಂ ಹೊಡೆದ ಕೊಡಲಿಯಿಂ (ಇಆರ. ದೇ. ೧೦೮-೦೭); ತಲೆ ದುಟದುಟನೆ ಉ[ಪಾಠಾಂ. ತೊಟ್ಟನುಡಿದು]ರುಳೆ ಪೊಯ್ದನಾ ತಂದೆಯುಂ (ಹಂದೀರ. ದೇ. ೨೫೦-೦೯).

[ ದುಟದುಟ$_0$ + – ಅನೆ$_1$ ]

**ದುಟ್ಟ** (ಗು). ೧. ಕೆಟ್ಟ ; ದುಷ್ಟ : ಸಾಮಂತರ ಗಣ್ಡಂ . . . ಜಗದಾಳು ದುಟ್ಟಸಾಮಂತರ ನಿಟಿಲ್ದ ಮುಱಿವಂ (ಎಕ. XI, ದಾವಣ. ೧೦೫-೭; 1148 ?) : ದುಟ್ಟ ದೈತ್ಯರು ಬಂದು ಕವಿದರು ರಣರಂಗದಿಟ್ಟ ಕುಮಾರನ ಮೇಲೆ (ಮೋಹತ. ೩೪-೨೨) ; ದುಟ್ಟ ರಕ್ಕಸಂ ರಾವಣಂ . . . ಪರ್ಣಶಾಲೆಯಿಂ ಸೀತೆಯುಂ ಕಳ್ದು ಲಂಕೆಯತ್ತಲ್ ಕೊಂಡುಯ್ದಂ (ಅದ್ಭುತ. ೩೪-೦೯). (ನಾ). ೨. ನೀಚ ; ಕೆಟ್ಟವನಂ : "ದುಟ್ಟನೆಂದು ದುಷ್ಟಂ" (ಶಶಸಾ. ೨೭-೫೬೩) ; "ದುಟ್ಟಂ ತಾಂ ದುಷ್ಟನಕ್ಕು" (ಕವಿಕಂ. ೨೨೮) ; ದುಟ್ಟನೀ ತೆಱದಿಂದೆ ಎಕ್ಕಲನಾಗಿರಲು ಕಂಡು (ಸಾವಂಚ. ೮-೨೧) ; ಆ ಷಕಾರಕ್ಕೆ ಟತ್ವಂ—ಅಂಗುಷ್ಠ–ಉಂಗುಟ್ಟ, ಉಂಗುಟ . . . ದುಷ್ಟ–ದುಟ್ಟ (ಶಮದ. ೨೮೩ ಪ್ರಯೋ) ; ಕಟ್ಟುಗ್ರುವೆಂಬುದತಿತಪವ ತೆರಳುವರೊಳಂ ಗಟ್ಟಸೆಂಬುದು ರಜಕರೊಳು ಧೌತವಸನವಂ ಕಟ್ಟೆಂಬುದುಂ ಧಾನ್ಯರಸದೊಳಲ್ಲದೆ ಬೇರೆ ದುಟ್ಟರಿಲ್ಲಾ ನಾಡೊಳು (ಪ್ರಭುಪು. ೩-೧೧).

ದುಟ್ಟರ ಗಂಡ = ದುಷ್ಟರನ್ನು ಸದೆಬಡಿಯುವವನು : ಒಂದು ಬಿರುದು : ದುಟ್ಟರ ಗಣ್ಡಂ ನನ್ನಿಯ ಗಂಗು ಜಯದುತ್ತರಂಗಂ . . . ಗಂಗಪೆರ್ಮ್ಮಾಡಿದೇವರ್ಗ್ಗೆಱ್ಗ ಮಾಡಿ ತೊಂಭತ್ತಱುಸಾಸಿರಮುಂ ಬಾಯ್ಕೇಳಿಸಿ (ಎಕ. VII, ಶಿವಮೊ. ೦೦-೨೦ ; 1085 ?) ; ದುಟ್ಟರ ಗಣ್ಡ ಭುಜಬಳ ಗಂಗಪೆರ್ಮ್ಮಾಡಿ ದೇವರು . . . ರಾಜ್ಯಂಗೆಯ್ಯುತ್ತುಮಿರೆ (ಎಕ. VII, ಶಿವಮೊ. ೫೧-೧೦ : 1108 ?); ಸೌಚ ಗಾಂಗೇಯ ಮಂಡಲಂಗಾವ ದುಟ್ಟರ ಗಂಡನಾಳಿಂಮುನ್ನಿಱಿವನಯ್ಯನ ಸಿಂಗನಾಮೂಡಿ ಸಮಸ್ತ ಪ್ರಸಸ್ತಿ ಸಹಿತಂ (ಸೌಇಇ. IX-I, ೨೩೦-೯ ; 1134). [ <ಸಂ. ದುಷ್ಟ ]

**ದುಟ್ಟಗುದುರೆ** (ನಾ). ಅಗಡು ಕುದುರೆ; ಪಳಗದ ಕುದುರೆ ; ಕೆಟ್ಟ ಕುದುರೆ: ಅದು ಮಗುವಿನ ಮರಣಕ್ಕೆ ಕಾರಣವಾಗುವಂತಹ ದುಟ್ಟಗುದುರೆಯಲ್ಲ (ಸವತಿ. ೨೪೯). [ ದುಟ್ಟ + ಕುದುರೆ ]

**ದುಟ್ಟಗೊರವ** (ನಾ). ದುಷ್ಟನಾದ ಯತಿ : ಈಗಳ್ ಸಿವನೆಂಬ ದುಟ್ಟಗೊರವಂ . . . ನಿಮ್ಮಡಿಗಳುಮಂ ಮಱೆದು ಲೆಕ್ಕಿಸದೆ ಮೇಲೆ ಬಿಟ್ಟ ಪಾವುಂ ನೇವಾಳವಾಗೆ ಮೈಯ್ಯಿಱಿಯದಿರ್ದ್ದಂ (ಕಬ್ಬಿಗಕಾ. ೦೪೫).

[ ದುಟ್ಟ + ಗೊರವ ]

**ದುಟ್ಟತನ** (ನಾ). ಕೆಟ್ಟತನ ; ನೀಚತನ : ಮನಸಿನ ದುಟ್ಟ[ಪಾಠಾಂ. ದುಷ್ಟ] ತನವನು ಬಿಡಿಸುತ . . . ಬ್ರಹ್ಮದ ಬಟ್ಟೆಯನು ಹಿಡಿದವರೆ ನೆಱೆ ತತ್ವಾಧಿಕಾರಿಗಳು (ಅಮೃತ. ೧-೨೨): ಅಂತಹ ದುಟ್ಟತನ ಅವರಲ್ಲಿ ಕಾಣದು ಒಡೆಯ (ಸವತಿ. ೧೬೩). [ ದುಟ್ಟ + – ತನ ]

**ದುಟ್ಟತಳಕ್ಕ** (?) (ನಾ). (?) : ಕಟ್ಟಾಯದ ಕಣೆ . . . ನನ್ನಿಯ ತವರೂರ್ ನೆಟ್ಟನೆನಿಸಿದ ಜಸಂ ನೇರ್ಪಟ್ಟರೆ ನಿಟ್ಟಾಯುವಕ್ಕೆ ದುಟ್ಟತಳಕ್ಕಂ [ಪಾಠಾಂ. ತಳಕ್ಕಂ, ತುಳುಕ್ಕಂ] (ಕಾವ್ಯಾವ. ೨೨೯). [ ? ]

**ದುಟ್ಟಬಿದಿ** (ನಾ). ಕೆಟ್ಟ ದೈವ ; ದುಷ್ಟ ವಿಧಿ : ಎಲೆ ದುಟ್ಟಬಿದಿ, ನಿಸದವಿಂ ಜಲಜೋದರನಾಣೆ ಪೆಣ್ಗಳಂ ಸೃಜಿಸದಿರ್ (ಸುಗುಗಂ. ೭೮-೦೭). 'ದುಟ್ಟವಿಧಿ' ಪರಾ. [ ದುಟ್ಟ + ಬಿದಿ ]

**ದುಟ್ಟಮದ್ದು** (ನಾ). (ಇತರರಿಗೆ ಕೆಡುಕನ್ನುಂಟುಮಾಡಲು) ಆಹಾರದಲ್ಲಿ ಸೇರಿಸಿ ಹಾಕುವ ವಿಷ ; ಇಕ್ಕುಮದ್ದು ; ಕೈಯ್ಮಸಕ : ನಾವು ಹೇಳುತ್ತಿದ್ದೇವೆ, ಕುವರನನ್ನು ಯಾರೋ ದುಟ್ಟಮದ್ದಿಗೆ ಈಡುಮಾಡಿರುವರೆಂದು (ಸವತಿ. ೨೩೭). [ ದುಟ್ಟ + ಮದ್ದು$_1$ (<ಮರ್ದು) ]

**ದುಟ್ಟಮಾಯೆ** (ನಾ). (ಈ ಲೋಕ ಸತ್ಯವೆಂಬ) ಕೆಡುಕನ್ನುಂಟು ಮಾಡುವ ಭ್ರಾಂತಿ,–ಮಾಯೆ,–ಮಿಥ್ಯೆ : ದುಟ್ಟಮಾಯೆಯ ಸಿಟ್ಟುಗುಟ್ಟಸವೊಟ್ಟಲು ನೆಱೆ ಸುಟ್ಟು . . . ವಿರಾಜಿಪ ದಿಟ್ಟ ಬಸವಯ್ಯಾ (ಪ್ರಭುಪು. ೧-೨೦). [ ದುಟ್ಟ + ಮಾಯೆ ]

**ದುಟ್ಟವಿಧಿ** (ನಾ). =ದುಟ್ಟಬಿದಿ : ದುಟ್ಟವಿಧಿ, ನಮ್ಮ ಮೇಲದ ನಿನಗೆ ಬೇಡವೇಕೆ ! ಹೆರರ ನಲಿವಿಗೆ ನಲಿವ ಸಿರಿ ಬಾರದೇಕೆ ? (ನದಿದಾ. I, ४६०).

[ ದುಟ್ಟ + ವಿಧಿ ]

**ದುಟ್ಟೆ** (ನಾ). ನೀಚ ಸ್ತ್ರೀ ; ಕೆಟ್ಟವಳು ; ದುಷ್ಟೆ : ದುಟ್ಟೆಯರಾದ ಪಾಣ್ಬೆಯರ ಗೊಂದಣ ಸಂದಣಿಸಿರ್ದುದು (ವೀರವಿ. ೭-೩೦).

[ <ಸಂ. ದುಷ್ಟಾ ]

**ದುಡ** (ನಾ). ಮಣ್ಣಿನ ಪಾತ್ರೆ ; ಗುಡಾಣ : ನಿಮ್ಮನ್ನಿರೋ ಕಾಳುಕಡ್ಡಿ, ಹುರುಳಿ, ಹುಚ್ಚೆಳ್ಳು ಏನಾರಾ ನಿಮ್ಮ ದುಡದಲ್ಲಿರೋದ ಕೊಟ್ಟು ಕಳ್ಸಿ (ಹುಟ್ಯಹ. ೧೩೭) [ ←ಮರಾ. ದುಡ ]

**ದುಡಕಿ** (ನಾ). ಎತ್ತು, ಕುದುರೆ ಮೊದಲಾದವುಗಳ ವೇಗವಾದ ನಡಿಗೆ,–ಚುರುಕಾದ ಓಟ : ರೇಚಿತ – ಕುದುರೆ ದುಡಕಿಯ ನಡಿಗೆ (ಗಂಗಾಮು. ೨೭४). [ ←ಮರಾ. ದುಡಕೀ ]

**ದುಡದುಡನೆ** 'ದುಡುದುಡನೆ' ನೋ.

**ದುಡನ** (ನಾ). ಮಾಂಸ (?): ಶ್ರೀಪಾದಿಗ ಹೋಚನ ಶ್ರೀಕರನ ಕೊಡಗಿಯ ಗದ್ದೆಕೊಳಗಕ್ಕೆ ಅಳಿಹಿದವನು ಹಣಬಾ ಅಕ್ಕಿಯನು ನಾಯ ದುಡನವನು ತಿಂದವರು (ದ್ಯುಆರಿ. ೧೯೩೨, ೫೦-೮;18 ನಯ ಶತ). [ ? ]

**ದುಡಿ$_1$** (ಕ್ರಿ). ೧. ಕಷ್ಟಪಟ್ಟು ಕೆಲಸಮಾಡು; ಶ್ರಮಿಸು; ಹೆಣಗು : ಹಾಸಿ ದುಡಿದರ ತನಗುಂಟು ತನ್ನ ಪ್ರಮಥರಿಗುಂಟು (ಬಸವ. ೩೨४) ; ಅತಿಲಜ್ಜೆಗೆಟ್ಟನ್ಯರಾಳಾಗಿ ದುಡಿದು ದಾವತಿಗೊಂಡು ಧನವನಾರ್ಜಿಸಿ ಹರಿಶ್ಚಂದ್ರ ಭೂಪತಿ . . . ಸುತನ ಕರೆಯೆಂದಡೇನೆಂಬೆಂ (ಹದಕಾ. ೧೨-೨೯) ; ಬಿಡುವವರ್ ಈ ಬಾಳ್ ಆದೇಕೆಂಬ ಚರ್ಚೆಯ ; ನಾವು ದುಡಿವಮ್ ಅದು ಪೆಂಪುಗೊಳೆ (ಮಂಕುಕ. ೮೧೯) ; ದುಡಿಯೋ ಎತ್ತು ಮಡಿದು ಬಿತ್ತು (ಗಾದ). ೨. (ದುಡಿತದಿಂದ) ಸಂಪಾದಿಸು ; ಗಳಿಸು : ವ್ಯಾಪಾರಸಾಬರಿಗೆ ಹಣವೂ ವಿಶೇಷವಾಗಿ ದುಡಿದು ಕೊಟು ಯಿವರಲ್ಲಿ ಪ್ರಮುಖರಾಗಿ (ಹೈದರ. ೧೦೯) ; ಅಪ್ಪನೆನಗೆ ಕೊಟ್ಟುದಲ್ಲ, ಗಂಡನಿದು ಕೊಂಡನಲ್ಲ, ಅಕಟ ನಾನೆ ದುಡಿದೆನಲ್ಲ ಮೆಯ್ಯ ಮುರಿತದಿಂ ? (೧೯ವಿಂ. ೭೬-४೦); ಇಷ್ಟು ದಿನಗಳೂ ದುಡಿದು ನಿನ್ನನ್ನು ಸಾಕಿ ಸಲಹಲು ನಾನು ಬೇಕಾಗಿದ್ದಿತು. ಈಗ ಸುಖ ಅನುಭವಿಸಲು ಅವಳು (ಸುಂದರಿ. ೮೫).

ದುಡಿದುಡಿ (ದ್ವಿರುಕ್ತಿ): ನುಡಿದು ಬೇಸತ್ತಾಗ ದುಡಿದುಡಿದು ಸತ್ತಾಗ ಜನಕ ಹಿಗ್ಗಿನ ಹಾಡು ನೀಡಾಂವ (ಸಖೀಗೀ. ४೭-೦). [ ದೇ. ॥ ತುಳು. ದುಡಿ ]

**ದುಡಿ$_2$** 'ತುಡಿ' ನೋ.

**ದುಡಿ$_3$** (ನಾ). ಒಂದು ಬಗೆಯ ಚರ್ಮವಾದ್ಯ : ಕರಿಯನೂ ಒಳಗಿದ್ದ ತನ್ನ 'ದುಡಿ'ಯನ್ನು ಹೊರಗೆ ತಂದಿದ್ದ (ರಕ್ತರೂ. ३४) ; ಹಿಡಿದ ದುಡಿ, ಎತ್ತಿದ ಕೈ, ತುಂಬಿದ ಆವೇಶ ! ಎಲ್ಲವೂ ಇದ್ದಕ್ಕಿದ್ದಂತೆಯೇ ಇವೆ. ಆದರೆ 'ಚೋಮ'ನಿಲ್ಲ! (ಚೋಮದು. ೧೧೧) ; ದಕ್ಷಿಣಕನ್ನಡಜಿಲ್ಲೆಯ ಕೊರಗರು ದುಡಿಯ ನಾದಕ್ಕೆ ಕುಣಿಯುವ ನೃತ್ಯಗಳು ವಿಶಿಷ್ಟವಾಗಿವೆ (ಆಭಾನ್ನ. ೦೨೧) ; ದುಡಿ ಎಂಬ ಚರ್ಮವಾದ್ಯವನ್ನು ಬಡಿಯುತ್ತ, ಹಾಡುತ್ತ, ಕುಣಿಯುವುದು ಕೊಡಗರ ವಾಡಿಕೆ (ಜಾನಗೀ. ೮೯).

[ ದೇ. ॥ ತಮಿ. ತುಟ : ಮಲ. ತುಡಿ; ತುಳು. ದುಡಿ ]

**ದುಡಿಕೆ** (ನಾ). ೧. ದುಡಿಯುವಿಕೆ ; ಪರಿಶ್ರಮ. ೨. ಸಂಪಾದನೆ ; ಗಳಿಕೆ : "ದುಡಿಕೆ = ಕೂಲಿ; ಕೆಲಸ; ಪಗಾರ" (ಜಾನಕೋ. ೭).

[ ದುಡಿ$_1$ + – ಕೆ ]

**ದುಡಿಗೆ** (ನಾ). ಒಂದು ಬಗೆಯ ಸಸ್ಯ : ದುಡಿಗೆಯ ಕಾಯಿ ಎರದ ಹಣ್ಣು ಕುರುಟಿಗೆ ಹಣ್ಣು . . . ಎಲ್ಲಾ ಕಂದಮೂಲ ಕದಿರ ಶಾಕ ಪುಷ್ಪ ಫಲಾದಿಗಳಂ (ಶಾಸ್ತ್ರಟೀ. ೫೫-೪). [ ? ]

**ದುಡಿತ$_1$** (ನಾ). ೧. ದುಡಿಯುವಿಕೆ ; ಕೆಲಸ ; ಕಾರ್ಯ : ಈ ದುಡಿತದ ಪರಿಣಾಮದಿಂದಲೋ ಎಂಬಂತೆ ಅವರ ಮೂರನೆಯ ಹೆರಿಗೆ ತೊಂದರೆಯಿಂದಲೇ ಆಯಿತು (ಹಬ್ಬಿಲ. ೨೯) ; ಆ ಸಂಶೋಧನಾ ಮಂದಿರವು . . . ಭಾರತೀಯ ವಿಜ್ಞಾನ ಸಂಶೋಧನೆಗಳ ದುಡಿತದ ಹೆಗ್ಗುರುತಾಗಿಯೂ ಇತ್ತು (ಸಸ್ಮಳ. ೧೩೦) ; ದುಡಿತದಲ್ಲಿ ವಾಸುದೇವ ಭಟ್ಟರಿಗೆ ಸರಿಸಾಟಿಯಾಗಿದ್ದಳು (ಭ್ರಾಂತಿಸು. ೧) ; ದುಡಿತವು ದುಡ್ಡಿನ ತಾಯಿ (ಗಾದೆ). ೨. ಸಂಪಾದನೆ ; ಗಳಿಕೆ ; ಉತ್ಪನ್ನ : ದುಡಿತ ಪೋಯಿತು ಮಗೆಯ ಮಳೆಯೋಲ್ (ಕವಪು. ೧೯-೨೨) ; ಹಿರಿಯರಿಂದ ಬಂದ ಸಂಪತ್ತಿಗೆ . . . ತಂತಮ್ಮ ದುಡಿತವನ್ನೂ ಕೂಡಿಸಿ ಅದನ್ನು ಓರಂತೆ ಹಿಗ್ಗಿಸುತ ಬರಬೇಕು (ಮೂರುಉ. ೭ ಎರಡು ಮಾತು) : ಯಾರ ಹಂಗೂ ಇಲ್ಲದೆ ತನ್ನ ದುಡಿತದಿಂದ ಹಾಯಾಗಿ ಬಾಳುತ್ತಿದ್ದಳು (ಮುಕ್ತಿಮು. ೬). [ ದುಡಿ$_1$ + – ತ$_2$ ]

**ದುಡಿತ$_2$** 'ತಂಡಿತ' ನೋ.

**ದುಡಿತಗಾರ** (ನಾ). ದಂಡಿಯುವವನು; ಶ್ರಮದ ಕೆಲಸ ಮಾಡುವವನು (ಪ್ರಾಚೀನ ಸ್ಪಾರ್ಟಾ ರಾಜ್ಯದಲ್ಲಿ ಸ್ವತಂತ್ರಪ್ರಜೆಗೂ ಗುಲಾಮನಿಗೂ ಮಧ್ಯದರ್ಜೆಯಲ್ಲಿದ್ದ) ಒಂದು ತರಗತಿಯ ಸ್ವತಂತ್ರನಲ್ಲದ ಊಳಿಗದ ಜೀತಗಾರ ; ಸ್ವತಂತ್ರನಲ್ಲದ ದುಡಿತಗಾರ (Helot. ಇಂಕನ್ನ).

[ ದುಡಿತ + – ಗಾರ (< – ಕಾರ) ]

**ದುಡಿಮೆ** (ನಾ). ೧. ದುಡಿತ ; ಕಾಯಕ : "ತಂತಿ–ದುಡಿಮೆ" (ಕಾಕಳ್ಕ. ೮) ; ದುಡಿಮೆಯ ಉತ್ಸಾಹ ಮತ್ತೆ ಮನಸ್ಸಿನಲ್ಲಿ ಮೂಡುವುದು (ಪಾತ್ರಲ. ೨೮) ; ದೇವರು ಒಂದು ಹೊತ್ತಿನ ಅನ್ನಕ್ಕೆ ದುಡಿಮೆ ಕೊಟ್ಟರೂ ನನಗೆ ತೃಪ್ತಿ (ಪದ್ಮಸ. ೨೫೯) : ವಿದ್ಯಾರ್ಥಿಗಳ ವ್ಯಕ್ತಿತ್ವವು ವೃದ್ಧಿಯಾಗುವುದಕ್ಕೆ ದುಡಿಮೆಯೇ ಅತ್ಯಾವಶ್ಯಕ (ಕ್ರಿಯಾಶಿ. ೫೮). ೨. ಗಳಿಸುವುದು ; ಸಂಪಾದಿಸುವುದು. ೩. ಗಳಿಕೆ; ಸಂಪಾದನೆ: ನಾನು ಭಿಕಾರಿ, ದುಡಿಮೆಯಿಲ್ಲದ ಭಿಕಾರಿ . . . ಗಂಗಾಧರ ಕಿರುಚುತ್ತಲೆ ಇದ್ದ (ಮುಂಗಾಮು. ೩೦)

[ ದುಡಿ$_1$ + – ಮೆ$_1$ ]

**ದುಡಿಮೆಗಾರ** (ನಾ). ದಂಡಿತಗಾರ; ದಂಡಿಯುವವನು : ನಾನೂ ದುಡಿಮೆಗಾರನಾಗಬೇಕು (ಬೆಳುಮ. ೮).

[ ದುಡಿಮೆ + – ಗಾರ (< – ಕಾರ) ]

**ದುಡಿಮೆಟ್ಟು** (ಕ್ರಿ). ದುಡಿಯನ್ನು ಬಾರಿಸು : ಅವನಿಗೆ ಸಾವೂ ಒಂದೇ, ಹುಟ್ಟೂ ಒಂದೇ : ಹಗಲೂ ಒಂದೇ, ರಾತ್ರಿಯೂ ಒಂದೇ. ಕುಡಿಯುವುದು ; ದುಡಿಮೆಟ್ಟುವುದು (ಚೋಮದು. ೬). [ ದುಡಿ$_3$ + ಮೆಟ್ಟು$_1$ ]

**ದುಡಿಸೀರೆ** (ನಾ). ಒಂದು ಬಗೆಯ ಸೀರೆ : ದಡಿಸೀರೆ ದುಡಿಸೀರೆ ಪೊಸ ಸೀರೆಗಳನುಟ್ಟು (ಸಿದ್ಧಶಾ. ೮-೧೨). [ ದುಡಿ ? + ಸೀರೆ$_2$ ]

**ದುಡಿಸು** (ಕ್ರಿ). ಕೆಲಸ ಮಾಡಿಸು ; ದುಡಿಯುವಂತೆ ಮಾಡು : ಬಹುಸಂಖ್ಯೆಯ ಜನರು ಬಡವರಾಗಿ, ಅತ್ಯಂತ ಬಡವರಾಗಿ ಇರಬೇಕಾಗುತ್ತದೆ. ಮತ್ತು ಅಲ್ಪಸಂಖ್ಯೆಯ ಜನರು ಅವರಿಂದ ದುಡಿಸಿ ಹಣವಂತರಾಗುವ ಅವಸರವಿರುತ್ತದೆ (ಪ್ರಕಾಶ. ೬೨).

ದುಡಿಸಿಕೊಳ್ಳು = ೧. ತನಗಾಗಿ ಇನ್ನೊಬ್ಬರಿಂದ ಕೆಲಸ ಮಾಡಿಸಿಕೊಳ್ಳು. ೨. (ಪದಗಳನ್ನು) ಹೆಚ್ಚು ಅರ್ಥವತ್ತಾಗುವಂತೆ ಬಳಸು : ಅರ್ಧಸತ್ಯಗಳನ್ನು, ವಿಕೃತದೃಷ್ಟಿಕೋನಗಳನ್ನು, ನಿರುತ್ತರವಾದಿತ್ವವನ್ನೂ 'ಪೋಕ್ರಿ'ತನವನ್ನು ಅವರು ಚೆನ್ನಾಗಿ ದುಡಿಸಿಕೊಂಡಿದ್ದಾರೆ (ಗಾಳಿಪ. XI, ಮುನ್ನುಡಿ). [ ದುಡಿ$_1$ + – ಇಸು$_3$ ]

**ದುಡುಂ** (ನಾ). ಒಂದು ಅನುಕರಣ ಶಬ್ದ: ಹುಡುಗ ದುಡುಮ್ಮೆಂದು ನೀರೊಳಗೆ ಧುಮುಕಿದ (ರೂಢಿ).

ದುಡುಂ ಪ್ರವೇಶ=ಮುಂದಾಲೋಚನೆಯಿಲ್ಲದೆ ಕೆಲಸದಲ್ಲಿ ಪ್ರವೇಶ ಮಾಡುವುದು ; ವಿಚಾರಮಾಡದೆ ಕೆಲಸವನ್ನು ಕೈಗೊಳ್ಳುವುದು ; ದುಡುಕುತನ : (ಶಿ).

**ದುಡುಂಬಿಟು** 'ದುಡುಮ್ಮಿಟು' ನೋ.

**ದುಡುಕ** (ನಾ). ವಿಚಾರ ಮಾಡದೆ ಮುನ್ನುಗ್ಗುವವನು ; ದುಡುಕುವ ಸ್ವಭಾವದವನು: ಭೀಮನೆಂಬವ ದುಡುಕನೀ ಸುತ್ರಾಮಸುತ ಸೈರಣೆಯ ಮನದವನು (ಕುವ್ಯಾಅ. ಒರಿಜ. ೪-೬೦). [ ದುಡುಕು$_2$ + – ಅ$_7$ ]

**ದುಡುಕಿ** (ನಾ). ೧. ದುಡುಕು ಸ್ವಭಾವದ ವ್ಯಕ್ತಿ : ಶೂರನೂ, ರಾಮಭಕ್ತನೂ ಸ್ವಲ್ಪ ದುಡುಕಿಯೂ ಆದ ಲಕ್ಷ್ಮಣನ ಪಾತ್ರವು . . . ಸರ್ವರ ಹೃದಯಕ್ಕೂ ಪ್ರಿಯವಾಗಿದೆ (ಭಾರದ. ೯೧). ೨. ಉದ್ಧಟ ವ್ಯಕ್ತಿ.

[ ದುಡುಕು$_2$ + – ಇ$_3$ ]

**ದುಡುಕು$_1$** (ಕ್ರಿ). ೧. ಮುಂದಾಲೋಚನೆಯಿಲ್ಲದೆ ಕೆಲಸಮಾಡು ; ಆತುರದಿಂದ ವರ್ತಿಸು ; ವಿಚಾರಮಾಡದೆ ಮುನ್ನುಗ್ಗು : ಮುಕ್ತಿಯ ಮಂಚಿಸೆ ಮುಕ್ತಿಯ ಹುಡುಕಿದೆ ತತ್ತ್ವವಿಚಾರದ ಗಲಭೆಗೆ ದುಡುಕಿದೆ (ಪಾಂಚಜ. ೫೯-೧೩): ಚಿರುತನವ ಪಥಿಕ ನಾನು ಹೊರಟೆ ಕಿರುಳ ಹುಡುಕುತ ನೆರಳಿನಂತೆ ಹುರುಳಿನಲ್ಲಿ ಕರಗಿದರೂ ದುಡುಕುತ (ಅರಳು. ೪೪-೨೦) : ಜೀವನದಲ್ಲಿ ಅವರು ಎಲ್ಲೂ ದುಡುಕಿರಲಿಲ್ಲ (ಮಹಾಶ್ವ. ೨೦); ದುಡುಕಿದರೆ ಆಕೆಯು ಆತ್ಮಹತ್ಯವನ್ನಾದರೂ ಮಾಡಿಕೊಳ್ಳಬಹುದು (ರಾವಿಜ. ೪೦). ೨. "ಹುಂಬತನ ಮಾಡು" (ಜಾನಕೋ. ೬). ೩. ಉದ್ಧಟತನದಿಂದ ವರ್ತಿಸು ; ದುಷ್ಟತನದಿಂದ ವರ್ತಿಸು : (ಶಿ). 'ತಂಡುಂಕು$_1$' ಪರಾ.

[ ದೇ. ॥ ತುಳು. ತೆಲು. ದುಡುಕು ]

**ದುಡುಕು$_2$** (ನಾ). ೧. ಆಲೋಚನೆ ಮಾಡದೆ ಮುನ್ನುಗ್ಗುವುದು : ಈ ಪರಿಯೊಳ್ ದುಡುಕಿನಿಂ ಪೋದೊಡೆ ಅವಶ್ಯವಾಗಿ ಪಶ್ಚಾತ್ತಾಪವಪ್ಪುದು (ಮಿತ್ರಗೋ. ೧೫) ; ತುಂಗಳಮಾಸ್ತರರ ದುಡುಕಿಗೆ ನಾವೊಂದು ಪಾಠ ಕಲಿಸಿದಂತಾಗುವುದು (ರಂಗತೋ. ೨೫) : ಶಿವಮ್ಮಾವಧಾನಿ, ಇದೇನೀ ದುಡುಕು ? (ತುಂಗಭ. ೧೮) ; ಮಡಕೆ ಮಾರುವವನಿಗೆ ದುಡುಕಿನ ಗವುಜಿ ಯಾಕೆ? (ಗಾದೆ). ೨. ಆತುರ ; ಅವಸರ : ಬಾಲಗೆ ದೊರಕಿತು ಪುಣ್ಯೋದಯದಿ ಸಾಲಿಗ್ರಾಮಶಿಲೆಯು ಕೈಯ ದುಡುಕಿಲಿ ತೆಕ್ಕೊಂಡನು ಹರುಷದಿ ಲಕ್ಷ್ಮೀನಾರಾಯಣ ಮೂರುತಿಯ (ಚಂದ್ರಹಾ. ೧-೩೩) ; ಖಡಕೀಲೆ ಉಡಿಯಕ್ಕಿ ಹಾಕಿದರವ್ವಾ ಒಳ್ಳೆ ದುಡುಕಿಲೆ ಮುಂದಕೆ ನೂಕಿದರವ್ವಾ (ಶರೀಫ. ೨೧-೫) : ದುಡುಕು ಇದ್ದವಗೆ ಬಡಿತ ತಪ್ಪದು (ಗಾದೆ). ೩. ಉದ್ಧಟತನ : ಗುಡ್ಡ ಬೆರಳೊಳೆತ್ತಿ ದೊಡ್ಡಿಗೋವ್ಗಳ ಕಾಯ್ದು . . . ದುಡುಕು ಮಾಡಿ ಹಾಲುಮಡಕೆಗಳ ಒಡೆದು ಹಡಗನೇಟು ಬಂದು ಉಡುಪಿಲಿ ಇದ್ದನೆ (ಪುರಂದ. ೨-೩೨-೪).

ದುಡುಕಿನಾಳ್= ದುಡುಕುವ ಸ್ವಭಾವದವನು; ವಿಚಾರ ಮಾಡದೆ ಕೆಲಸಕ್ಕೆ ಕೈಹಾಕುವವನು : ಈಗಡಿನ ಕೇಡುಗಳ ಕುಟಿತಾರಯುಲ್, ದುಡುಕಿನಾಳ್, ನೀನ್, ತಕ್ಕ ಕಾಲದಲೆ ತಟ್ಗಿ ನಡೆದುಕೊಳ್ (ಬದ್ಧಪ್ರ. ೫೩-೧೧೫೫). [ <ದುಡುಕು$_1$ ]

**ದುಡುಕುತನ** (ನಾ). ಆಲೋಚನೆ ಮಾಡದೆ ಮುನ್ನುಗ್ಗುವುದು : ನಿನ್ನ ಪವಿತ್ರಪ್ರಾಣವನ್ನು ಅಗ್ನಿದೇವನಿಗೆ ದುಡುಕುತನದಿಂದ ಅರ್ಪಿಸದಿರು (ಹಿಂಕಿರು. ೬೩).

ದುಂದುಡುಕುತನ (ದ್ವಿರುಕ್ತಿ) : ಲಕ್ಷ್ಮಿ ಅಂತಹವಳಲ್ಲ. ಆಕೆಗೆ ದುಂದುಡುಕುತನವು ಇಲ್ಲ. ಆಕೆಯ ಸ್ವಭಾವವತಿಶಾಂತವು(ಲಕ್ಷ್ಮೀಪ್ರ. ೪೮).

[ ದುಡುಕು$_2$ + – ತನ ]

**ದುಡುಕುದೋರು** (ಕ್ರಿ). ಅವಸರ ಪಡು ; ಆತುರಪಡು : ನಡತೆ ನುಡಿತೆಗಳಿಂದ ಏರಿದಹ ದುಡುಕುದೋರಲು ಪುತ್ರಮೋಹವು ಪಡೆದರಿಗೆ ಪರ್ಯಾಯುಮೆಸೆವುದೆ (ಗಗತಾ. ೦೦-೭).
[ ದುಡುಕು₂ + ತೋರು (<ತೋಱು) ]

**ದುಡುಕುಪ್ರವೃತ್ತಿ** (ನಾ). ದುಡುಕಿನಿಂದ ನಡೆದುಕೊಳ್ಳುವಿಕೆ ; ದುಡುಕು ಪ್ರವೃತ್ತಿ ಅವರಲ್ಲಿ ಇರಲಿಲ್ಲ (ಮಹಾತ್ಮಾ. ೧೩).
[ ದುಡುಕು₂ + ಪ್ರವೃತ್ತಿ ]

**ದುಡುಕುಬುದ್ಧಿ** (ನಾ). ತಕ್ಕಷ್ಟು ಆಲೋಚನೆ ಮಾಡದೆ ಮುನ್ನುಗ್ಗುವ ಸ್ವಭಾವ : (೬). [ ದುಡುಕು₂ + ಬುದ್ಧಿ ]

**ದುಡುಕುಹೆಮ್ಮೆ** (ನಾ). ದುಡುಕುತನದಿಂದ ಉಂಟಾದ ಗರ್ವ: ದೊರೆಗಳ ದೊರೆ ಚಕ್ರಿಯೆನಿಸಿ ದಿಗ್ವೃಷನು ಮೆರೆದನು : ಈಗಳದನು ದುಡುಕು ಹೆಮ್ಮೆದೊಳ್ಗೊದೆದುದೊ ಅರಿಯನು (ಪಾರಸಿ. ೯-೧೮೭).
[ ದುಡುಕು₂ + ಹೆಮ್ಮೆ (<ಪೆರ್ಮೆ) ]

**ದುಡುಕೆಸಗು** (ಕ್ರಿ). ಆಲೋಚಿಸದೆ ಕಾರ್ಯಮಾಡು ; ಅವಸರಪಡು : ಬೆಳೆವೆಣ್ಣಳ ಪೆರ್ಗಡೆ ನೀಂ ಕಲೆಯಱಿತುರವಣಿಸಿ ಬಿರುದು ಬೊಜಗರ ಬಿಂಕಂ ತೊಲಗೆ ದುಡುಕೆಸಗಿ ಕೆಕ್ಕಲಗೆಲೆವಂದಮನಿಂದು ಸವಿಯುಲಂ ದೇಟ್ರೀದೆಂ (ಚಕವಿ. ೬-೨೭೭). [ ದುಡುಕು₂ + ಎಸಗು₁ ]

**ದುಡುಗುಟ್ಟು** (ಕ್ರಿ). ಬಡಿದುಕೊಳ್ಳು ; ನಡುಗು ; ಸ್ಪಂದಿಸು : ಒಡನೆ ಕೈಮುಗಿದು ಪೆಣ್ಣುಗಳೆಲ್ಲ ಪೋದರು ದುಡುಗುಟ್ಟುವೆದೆಯ ಬಲ್ಪಿಡಿದು (ಭರತ. ೪೮-೦೦೪). 'ದಡಗುಟ್ಟು₁' ಪರಾ.
[ <ದುಡುದುಡು + ಕುಟ್ಟು₁ ]

**ದುಡುದುಡನೆ,** ದುಡದುಡನೆ (ಅ). ದುಡುದುಡು ಎಂಬ ಶಬ್ದದೊಡನೆ: ದುಡುದುಡನೋಡಿ ಬರುತಿರ್ಪ ಬೇಡನಾಕಾರಮಂ ನೋಡಿದಂ ರೂಢೀಶನು (ಹಕಣಾ. ೬-೦೮) : ದುಡುದುಡನೆಯ್ದುಂದು [ಪಾಠಾಂ. ದಡದಡನೆಯ್ದುಂದು] ದುಂಡಿಯುರಾ ಚೆಲ್ವರೊಡೆಯುನ ಚೆಲ್ವ ನೋಡಿದರು (ಭರತ. ೨೦-೭೪). **ದುಡದುಡನೆ** : ಮಡದಿಯು ತಾನೆತ್ತಿಕೊಂಡು ದುಡದುಡನಡಿಯಿಟ್ಟು ಶಕುನಿ ಮಂಚದ ಮೇಲೆ ಮಡಗಿಕೊಂಡನು ರಾಜಮೋಹಿ (ಭರತ. ೪೨-೦೫೦). 'ದಡದಡನೆ' ಪರಾ. [ ದುಡುದುಡು + – ಅನೆ₁ ]

**ದುಡುದುಡಿಕೆ** (ನಾ). ಬಳಲಿಕೆ ; ಆಯಾಸ : ತಾಯ್ ನೊಂದು ಬಳಲುತ್ತ ತಾಯ ದೇಹಕ್ಕಲ್ಲಿ ದುಡುದುಡಿ[ಪಾಠಾಂ. ಡು]ಕೆಯಾಗುತಿರೆ ಬಾಯಳಿವುತೆ ನೃಪನಿಗೆ ಸಂದೇಹವಾಗುತಿರೆ ಇಂತು ನಾನಾ ವಿಧದ ಕಂಟಕಮುಮಂ ಕಳೆದು (ಬಿಂಡೀರ. ಹ. ೫೦೦-೦೭). [ ? ]

**ದುಡುದುಡು** (ನಾ). ಒಂದು ಅನುಕರಣ ಶಬ್ದ : ಓಡಿಹಿಡಿಹಿಡಿಯೆಂದು ಪುರಂದರವಿಠಲನ ದುಡುದುಡು ದುಡುದುಡನೇ ಓಡುತ . . . ಮೆಲ್ಲನೆ ಪಿಡಿಮಲು ಬಿಡಿ ಬಿಡಿ ಬಿಡಿ ದಮ್ಮಯ್ಯ ಎನ್ನುತ (ಪುರಂದ. ೩-೭೨-೩) : ಬಸ್ಸಿನ ಬುಡದಿಂದೆದ್ದು ಬಂದು ಸಿದ್ದಣ್ಣ ದುಡುದುಡು ಹೊರಟ (ಬೆಂಗಬ. ೧೦೪).

**ದುಡುಮ,** ದುಬ್ಬ (ನಾ). ೧. ದಪ್ಪಪುಷ್ಪವಾಗಿರುವವನು ; ದಾಂಡಿಗ : ಈ ದುಡುಮ ಕೆಲಸಮಾಡುವುದರಲ್ಲಿ ತುಂಬಾ ಪೈಗಳ್ಳ (ರೂಢಿ). ದುಬ್ಬ: ೧ : (೬). ೨. ಮಂಕ ; ಮೂಢ : ಆ ದುಬ್ಬನಿಗಲ್ಲಿ ಕಂಡೀತು ಬಿಡ್ರೋ (ಜೀಉಮ. ೮). 'ದುಮ್ಮ' ಪರಾ.
[ ದುಡುಮು₂ (<ದುಮ್ಮು₁) + – ಅ₆ ]

**ದುಡುಮಿ,** ದಡಮಿ, ದುಬ್ಬಿ₁ (ನಾ). ೧. ದಪ್ಪಪುಷ್ಪವಾಗಿರುವವಳು ; ದಢೂತಿ ಹೆಂಗಸು : ದುಡುಮಿಯಾದ ಅವಳ ನಡಗೆಯೂ ನಿಧಾನ (ರೂಢಿ). ೨. (?) : ಒಡೆಯ ಕೈಲಾಸಪುರಕ ಕೈವಲ್ಯವಾದಂತ ದುಡುಮಿ ಕಲ್ಯಾಣಿ ಬಾರ ಒರಳಕ್ಕಿ ಪಾಡುನು (ಲೋಕಗೀ. ೨೦). ದಡಮಿ: ೧. ಏಳು ವರ್ಷದ ಅವಳ ಮಗಳು . . . ಕೆಂಗೂದಲ ದಡಮಿಯು ಸೆರಗು ಹಿಡಿದುಕೊಂಡು ನಿಂತಿದ್ದಳು (ಪುನರು. ೧೯೩). ದುಬ್ಬಿ₁ : (೬). [ ದುಡುಮ + – ಇ₂ ]

**ದುಡುಮು₁** (ಕ್ರಿ). ಸಶಬ್ದವಾಗಿ ಬೀಳು ; ರಭಸದಿಂದ ಧುಮುಕು : ಮೇಲಕೆ ಪುಟನೆಗೆವ ದುಡುಮ್ಮಿಗಾಪೊಲೊಯ್ದು ಅಗುಳ್ದ ತೇಲುವ ನೀರಾಟವೆಸೆದರಾ ಬಗಸೆಗಂಗಳ ಭಾವೆಯರು (ಶ್ರೀಪಾಲ. ೫-೫೩) : ಬೀಳ್ವ ವೇಳುವ ಕೈದುಗಳನೀಡಾಡುವ ತೇಲುವ ಸುಳಿಯೊಳು ಸುಳಿವ ಆಳುವ ದುಡುಮುವ ಯಿಸುವ ಭಟರ ಹೇರಾಳದಿ ನದಿ ಹೂಳಿದುದು (ನಾಗಕು. ೦೫-೭೦). 'ದುಡುಮ್ಮಿಱು' ಪರಾ. [ <ದುಡುಂ ]

**ದುಡುಮು₂** 'ದುಮ್ಮು₁' ನೋ.

**ದುಡುಮ್ಮನೆ** (ಅ). ೧. ದುಡುಂ ಎಂಬ ಶಬ್ದದೊಡನೆ : ಅವಳು ದುಡುಮ್ಮನೆ ನೀರಿಗೆ ಬಿದ್ದುಬಿಟ್ಟಳು (ರೂಢಿ). ೨. ಇದ್ದಕ್ಕಿದ್ದಂತೆ ; ಕೂಡಲೆ ; ತಕ್ಷಣ : ಎದುರಾಳಿಗಳನ್ನು ವಿರೋಧಿಸಿ ದುಡುಮ್ಮನೆ ಪರಾಜಯಗೊಳಿಸುವ ಒಂದು ನೂತನ ಚಾಕಚಕ್ಯವಿದ್ದೆ ಅವರಲ್ಲಿ (ರಾಜಪ. ೮೦).
[ ದುಡುಂ + – ಅನೆ₁ ]

**ದುಡುಮ್ಮಿಱು,** ದುಡುಂಬಿಱು (ಕ್ರಿ). (ನೀರಿನಲ್ಲಿ) ಧುಮುಕಿ ಅಥವಾ ಕೈಯಿಂದ ಹೊಡೆದು ಶಬ್ದಮಾಡು : ಒಳಪೊಕ್ಕು ದುಡುಮ್ಮಿಱಿದಾಡಲೀಸಲಗ್ಗಲಿಸಿದಲಂಪಿನಿಂ ಬಗೆದುದಂದು ಜನಂ ಘನಚಂದ್ರಿಕಾಂಬುವಂ (ಅಜಿಪು. ೬-೪೫) : ಹಂಸೆಗಳ ಕ್ರೇಂಕಾರವೇ ಕಹಳೆಗಳ್ಕೆಳರ್ವ ನೀರೊಳ್ದುಡುಮ್ಮಿಱಿವ ಮಾನ್ಸಗಳ ರವಂ ತಂಬಟಂ (ಕೀರಮ. ೬-೨೦) ; ನಲಿದು ದುಡುಮ್ಮಿಱಿವುತ ತೇಂಕಾಡುತ ನಲಿದಾಡುತ (ಚಂಪ್ರಸಾಂ. ೦೭-೨೦೫). **ದುಡುಂಬಿಱು** : ಅಲ್ಲಿಯೋಲಾಡಿಸಲವನಾನಂದದಿಂದೀಸಿ ದುಡುಂಬಿಱಿದು ಕುಡಿದು ನೋಡಿ (ಪುಣ್ಯಾಸ್ರ. ೯-೩೭ ವ). [ ದುಡುಂ + ಇಱಿ₁ ]

**ದುಡುಮ್ಮು** (ನಾ). ಒಂದು ಅನುಕರಣ ಶಬ್ದ : ದೊಗಹು ಧೊಕ್ಕು ದುಡುಮ್ಮು . . . ಗರಿಗರಿಲೆಂಬ ನಿಷ್ಠುರರವಂ ಮಿಗೆ ತಳ್ತಿಱಿದತ್ತು ಯುದ್ಧದೊಳ್ (ಗಿರಿಜಾ. ೬-೭೮).

**ದುಡುಹು** (ನಾ). ಒಂದು ಅನುಕರಣ ಶಬ್ದ : ದು[ಪಾಠಾಂ. ಧು]ಡುಹೆಂಬ ಧುಮ್ಮೆಂಬ ಘೋರೆಂಬ ಭೋರೆಂಬ ಕೂರಸಿಗಳುರವಣೆಯ ದನಿಯುಡುಸುತಂ ಪುಟ್ಟೆ (ಇಹರ. ದೇ. ೪೨-೨) ; ಹೊಡೆದನಾ ಕೊಡಲಿಯಿಂ ತಲೆ ಮುಂಡ ಪೆರಡಲ್ಲಿ ದುಡುಹು ದುಮ್ಮೆಂದು ಬಿದ್ದವು (ವೀಶೈಪು. ೩-೧೨-೩೮).

**ದುಡ್ಡಸ್ತ** (ನಾ). ಹಣವುಳ್ಳವನು ; ಐಶ್ವರ್ಯವಂತ : ಅವನೊಬ್ಬ ಭಾರಿ ದುಡ್ಡಸ್ತ (ರೂಢಿ). [ ದುಡ್ಡು₁ + – ಸ್ತ ]

**ದುಡ್ಡಸ್ಥ** (ನಾ). = ದುಡ್ಡಸ್ತ: ದುಡ್ಡಸ್ಥರಿಗೇ ಈಗಿನ ಕಾಲದಲ್ಲಿ ಮರ್ಯಾದೆ (ರೂಢಿ). [ ದುಡ್ಡು₁ + – ಸ್ಥ ]

**ದುಡ್ಡು₁** (ನಾ). ೧. ಒಂದು ತಾಮ್ರದ ನಾಣ್ಯ: ಇಪ್ಪತ್ತು ದುಡ್ಡಿಗೆ ಸೇರು ತೀರ್ಥವ ಒಪ್ಪದಲಿ ಕ್ರಯಮಾಡಿ ಕೊಡಿಸುವ (ಪುರಂದ. ೧-೧೯೯-೩) ; ಹಿಂದೆ ರಘುರಾಮಂಗೆ ಕಾಡ ಕಪಿಗಳು ಕೂಡಿಯೊಂದು ದುಡ್ಡಾದರೂಂ ಸಂಬಳವು ಮಿಲ್ಲದೇ ಬಂದು ಸೇರಿದ ತೆರದಿ (ಅರ್ಜುವಿ. ೨೭-೦೮). ೨. ಮೂರು ಕಾಸು ; ಕಾಲಾಣೆ ; ಒಂದು ಬಿಲ್ಲೆ(ಉಕ) : ಮಧುಮತಿಯ ಕಿಸೆಯಲ್ಲೊಂದು ದುಡ್ಡು ಇತ್ತು (ಹೂಬಿಸಿ. ೩) : ಪಂಡಿತರಿಗೆ ನಾಲ್ಕು ದುಡ್ಡ ಕೊಡಲಿಕ್ಕೆ ಇಷ್ಟೇಕೆ ಜೀನತನ?(ಅಶೋಕ. ೪). ೩. ನಾಲ್ಕು ಕಾಸು: ಎಲೇ ಎಡ್ಡ ಪ್ರಾಣಿಗಳಿರಾ ಅಡ್ಡದಾಸೆಗೆ ದುಡ್ಡಿನ ಲಾಭವ ಕಳೆವರೇ (ಅಜಂದೀ. ೬೩-೦೭) ; ನಾಲ್ಕು ಕಾಸು ಒಂದು ದುಡ್ಡು, ಮೂರು ದುಡ್ಡು ಒಂದ ಆಣೆ, ಹದಿನಾರಾಣೆ ಒಂದು ರೂಪಾಯಿ– ಇದು ಹಿಂದಿನ ಕೋಷ್ಟಕ (ರೂಢಿ). ೪. ಹಣ ; ರೊಕ್ಕ : ದುಡ್ಡು ಕೂಡಿಟ್ಟು ಬಳಿದು ಹೋಗುವಾಗ ಬಳಲಿ ಬಳಲಿ ಆಳವಾರಿಗೆ ಬಂದೆ (ಪುರಂದ. ೩-೫೩-೧) ; ಅಳತೆ ತೂಗುವಿಕೆಯಲ್ಲಿ ನೀ ಸತ್ಯವಂತನುಮೆನಿಸಿಕೊಂಡೊಳ್ಳೆಮಾತಿಂದ ಮಾರು ದುಡ್ಡಾಗದಂತೆ

(ಅಜಾಗವಿ. ೩೧-೭೫); ಬ್ಯಾರಿಗಳಿಗೆ ಎರಡಾಣೆ ದುಡ್ಡೆಣಿಸಿ ಹೊರಟರು (ಮುಂಗಾಮ. ೧); ಬ್ಯಾಂಕಿನಲ್ಲಿ ದುಡ್ಡಿಟ್ಟವರೆಲ್ಲರೂ ದುಡ್ಡಿದ್ದವರೇ (ಹುಚ್ಚುಮು. ೭೧): ದುಡ್ಡಿದ್ದವನೇ ದೊಡ್ಡಪ್ಪ (ಗಾದೆ). ೫. ಒಂದಂ ದಂಡ್ಡಿನ ತೂಕ : ಅನ್ನಶುದ್ಧಿಗೆ ತುಪ್ಪ ದಿ ೧ಕ್ಕೆ ದುಡ್ಡು ತೂಕದಲ್ಲು ಸೇ ೧ಗಿಕ್ಕೆ ಕ್ರಯ (ಎಕ. VI, ಶೃಂಗೇರಿ. ೧೧-ಪುಟ ೩೭೨ : 1652).

ದುಡ್ಡಿನ ಚೀಲ = ಹಣದ ಚೀಲ ; ಥೈಲಿ ; ಹಮ್ಮಿಣಿ : ತಿಂಗಳ ಕೊನೆಯಾದ್ದರಿಂದ ದುಡ್ಡಿನ ಚೀಲ ಖಾಲಿಯಾಗಿಬಿಟ್ಟಿದೆ (ರೂಢಿ). ದುಡ್ಡಿನ ಡಬ್ಬಿ = ಹಣವಿಡುವ ಡಬ್ಬ: ಅಜ್ಜಿಯು ದುಡ್ಡಿನ ಡಬ್ಬಿಯಲ್ಲಿ ಬರೀ ಚಿಲ್ಲರೆ ಕಾಸೇ ತುಂಬಿದೆ (ರೂಢಿ). ದುಡ್ಡುಕಾಸು = ಹಣ; ಧನ : ದುಡ್ಡುಕಾಸನು ಕೂಡಿಹಾಕಲು ಹೋಗಿ ಹಡಗ ಸೇರಿಕೊಂಡ (ಇಂಗೀತ. ೫೨-೭). ದುಡ್ಡುತಿನ್ನು =ಇನ್ನೊಬ್ಬರ ಹಣವನ್ನು ನೀತಿಗೆ ವಿರುದ್ಧವಾಗಿ ಬಳಸಿಕೊಳ್ಳು.- ದುರುಪಯೋಗ ಪಡಿಸಿಕೊಳ್ಳು.- ಅಪಹರಿಸು : ಹುಲ್ಲು ತರುವಾಗ ಆಳುಮನುಷ್ಯ ದುಡ್ಡುತಿನ್ನುತ್ತಿದ್ದ. ಹೀಗಾಗಿ ಆ ಕೆಲಸ ನನಗೆ ಒಪ್ಪಿಸಲಾಯಿತು (ಸ್ಮೃತಿಚಿ. ೯೧). ದುಡ್ಡುದುಗ್ಗಾಣಿ = ದುಡ್ಡುಕಾಸು : ಅವನು ಬಹಳ ಕಷ್ಟಪಟ್ಟು ಒಂದಿಷ್ಟು ದುಡ್ಡುದುಗ್ಗಾಣಿ ಸೇರಿಸಿಟ್ಟಿದ್ದಾನೆ (ರೂಢಿ). ದುಡ್ಡು ನುಂಗು =ದುಡ್ಡುತಿನ್ನು : ಬೇರೊಬ್ಬರ ದುಡ್ಡು ನುಂಗುವಂತಹ ಹೀನಕಾರ್ಯ ಮತ್ತೊಂದಿಲ್ಲ (ರೂಢಿ). ದುಡ್ಡು ಹೊಡೆ = ದುಡ್ಡುತಿನ್ನು: ಈ ವ್ಯವಹಾರದಲ್ಲಿ ದಳ್ಳಾಳಿ ಸಾಕಷ್ಟು ದುಡ್ಡು ಹೊಡೆದಿದ್ದಾನೆ (ರೂಢಿ).

[ ದೇ.II ತಮಿ. ಮಲ. ತುಟ್ಟು: ತುಳು ತೆಲು. ದುಡ್ಡು: ಕೊಡ. ದುಡ್ಡಿ ]

**ದುಡ್ಡು₂** 'ದೊಡ್ಡು' ನೋ.

**ದುಢುಂ** (ನಾ). ಒಂದು ಅನುಕರಣ ಶಬ್ದ. 'ದಂಢುಮ್ಮಿಟ' ಪರಾ.

**ದುಢುಂದಾಳಿ** (ನಾ). ಇದ್ದಕ್ಕಿದ್ದಂತೆ ಮಾಡುವ ಆಕ್ರಮಣ,- ಮುಂತ್ತಿಗೆ: ಶ್ರೀಮನ್ನ ಸಂಜರಾಜಯ್ಯನ ದುಢುಂದಾಳಿಯ ಕೊಳ್ಳೆಯಲ್ಲಿ ನಿರ್ಮೂಲವಾಗಿ ಹೋಗುವರು (ಮುಂತ್ರಶ. ४೭-೭). [ ದುಢುಂ+ದಾಳಿ(<ದಾಟಿ)]

**ದುಢುಂಬಿಜು** 'ದಂಢುಮ್ಮಿಜು' ನೋ.

**ದುಢುಮಿಜು** 'ದಂಢುಮ್ಮಿಟು' ನೋ.

**ದುಢುಮ್ಮನೆ** (ಅ). ದಂಢಂ ಎಂಬ ಶಬ್ದದೊಡನೆ: ಅನುಕರಣಕ್ಕೆ- ಖಿಣಿಲ್ಲನೆ . . . ದುಢುಮ್ಮನೆ[ಪಾಠಾಂ. ದುಢುಮ್ಮನೆ, ಧಟಮ್ಮನೆ] (ಶಮದ. ೧೯ ಪ್ರಯೋ); ಅನುಕರಣಾವ್ಯಯಗಳು – ಗಟಗಟ . . . ಖಟಾಲನೆ, ದುಢುಮ್ಮನೆ, ಇತ್ಯಾದಿ (ಶ್ರೀಬಿಧಿ. ೫೨). [ ದುಢುಂ + – ( ನೆ₁ ]

**ದುಢುಮ್ಮಿಟು**, ದಂಢುಂಬಿಜು, ದುಢುಮಿಂಜು (ಕ್ರಿ) .= ದಂಡುಮ್ಮಿಟು : ಅಂತು ತನ್ನೊರೆಗಳ್ವೆರಸು ದುಢುಮ್ಮಿಟುದೋಲಾಡುವಲ್ಲಿ (ಶಾಂತಿಪು.೮-೨೮ವ). **ದುಢುಂಬಿಜು**: ವಿಕಲ್ಪಬಿಂದುಗೆ–ಕದಂವು. ಕದವು . . . ದುಢುಂಬಿಜುದಂ. ದುಢುಮಿಜುದಂ (ಶಮದ. ೩೭ ಪ್ರಯೋ). **ದುಢುಮಿಜು** : ಮೇಲಿನ ಶಮದ. ಪ್ರಯೋಗವನ್ನು ನೋಡಿ. [ದುಢುಂ + ಇಜು₁ ]

**ದುಣಕಲು** (ನಾ). (ಉಕ). ಕೊಟ್ಟಿಗೆಯಲ್ಲಿ ದನಗಳಿಗೆ ಹುಲ್ಲು ಹಾಕುವ ಜಾಗ : ಗೋಂತಂ. [ ? ]

**ದುಣ್ಣ** (ನಾ). ೧. ದಪ್ಪವಾಗಿರುವುದು ; ದಪ್ಪಪುಷ್ಪವಾಗಿರುವುದು. ೨. ದಪ್ಪವಾಗಿರುವವನು : " ಮಾವತಿ = ದಪ್ಪವಾದವ ; ಮಾವು = ದುಣ್ಣಂ" (ಕಾಶಕ್ಕ. ೫೨). (ಗು). ೩. ಸ್ಥೂಲವಾದ ; ದಪ್ಪವಾದ : ಅದಕ್ಕೇನು ಧಾಡಿ ? ದಿಂಡೆ ದುಣ್ಣ ದಾಂಡಿಗ ನಾಯಿ (ಮಲಮ. ೭೨೫).

[ ದೇ.II ತುಳು. ದುಣ್ಣ, ದುನ್ನ ]

**ದುಣ್ಣರ** (ನಾ). ೧. ಕೆಟ್ಟವನು. ೨. ಯಮ : ದುಣ್ಣರನು ಬಂದೆನ್ನ ಸುಣ್ಣಗುದಿಯೊಳಗದ್ದಿ ಬಿಣ್ಣಿತ್ತುಪೆಟ್ಟಿಗಳ ಪೊಜಿಸಿದವನು (ಪ್ರಭುಪು. ४-೧೦೦).

[ <ಸಂ. ದುರ್ನರ ]

**ದುತಯ**, ದೂತಯ (ನಾ). ಎರಡರ ಜೊತೆ, — ಜೋಡಿ : ದೂತಯಂ, ದುತಯಂ, ದ್ವಿತಯಂ (ಶಬ್ದಾನು. ೩೭೭ ಪ್ರಯೋ). **ದೂತಯ** : ಮೇಲಿನ ಪ್ರಯೋಗವನ್ನು ನೋಡಿ. [ <ಸಂ. ದ್ವಿತಯ ]

**ದುತಾರ್** (ನಾ). ಎರಡು ತಂತಿಗಳುಳ್ಳ ಒಂದು ಬಗೆಯ ವಾದ್ಯ : ಆ ತಂಬೂರಿಯ ಝುಂಕಾರಕ್ಕೆ ಅನುವಾದಿಯಾಗಿ ಒಂದು ದುತಾರ್ ಬಾಜಿಸುತ್ತಿತ್ತು (ನಗೆಹೂ. ೬೨). [ ←ಹಿಂ. ದುತಾರಾ ]

**ದುತೀಯ**, ದೂತೀಯ(ನಾ). ಎರಡನೆಯದು; ದ್ವಿತೀಯ: ದೂತೀಯಂ, ದುತೀಯಂ, ದ್ವಿತೀಯಂ (ಶಬ್ದಾನು. ೩೭೭ ಪ್ರಯೋ). **ದೂತೀಯ** : ಮೇಲಿನ ಪ್ರಯೋಗವನ್ನು ನೋಡಿ. [ <ಸಂ. ದ್ವಿತೀಯ ]

**ದುತೂಂಬುರ್** (ನಾ). ಒಂದು ಊರಿನ ಹೆಸರು : ಅಸ್ಯ ಗ್ರಾಮಸ್ಯ ಪೂರ್ವ್ವದಿಕ್ಸೀಮಾನಿ ದುತೂಂಬುರ್ಪ್ಪಳ್ಳಂ ದಕ್ಷಿಣತಃ ಪರದಗೆರೆಪ್ಪಳ್ಳಂ ಪಶ್ಚಿಮತಮ್ಮುಮುನ್ನೆಗುಂಡಿಪಳ್ಳಂ (ಮೈಆರಿ. ೧೯४४, ೧೫-४೦ ; ಸು. 725). [ ? ]

**ದುತ್ತಂಡಿಕೆ** (ನಾ). ದೌರ್ಜನ್ಯ : ದುತ್ತಂಡಿಕೆಯೊಳು ತನಗಿದಿರಾದ ಮನ್ನೆಯರ ತೊತ್ತಳದುಳಿದು ನಿರ್ವಂಶಮಂ ಮಾಡುವೆನೆನುತ್ತ ಕೋಪಾರೂಢನಾಗಿ (ಸಮ್ಯಕ್ತ್ವ. ೨-೯). 'ಉದ್ದಂಡಿಕೆ' ಪರಾ.

[ ದುತ್ತಂಡ₀ (P ← ಪ್ರಾ. ದುತ್ತುಂಡ) + – ಇಕೆ ]

**ದುತ್ಪಾರಿ** (ನಾ). ೧. ಕಸೂತಿ ಕೆಲಸ ಮಾಡಿದ ಮಸ್ಲಿನ್ ಬಟ್ಟೆ : (ಶ). ೨. ತೆಳ್ಳನೆಯ ಹತ್ತಿಬಟ್ಟೆಯಿಂದ ಮಾಡಿದ ಒಂದು ಬಗೆಯ ಉಡುಪು : ಕುಪ್ಪಸ ಚಲ್ಲಣಪೊಪ್ಪುವ ಪೈರಣೆ ಸುಪ್ಪುಕ್ತಿಗೆ ದುತ್ಪಾರಿ[ಪಾಠಾಂ. ಗಾಸಿ]ಗಳನು . . . ಹೊಲಿವುತ ಜಿಪ್ಪಿಗರಿರ್ದರೊಂದೆಸೆಯ (ಅಬ್ಬಂಅ. ೩-೯೦). [ ದೇ.II ತಮಿ. ತುತ್ಪಾರಿ ]

**ದುತ್ತುರ** 'ದುತ್ತೂರ' ನೋ.

**ದುತ್ತೂರ**, ದುತ್ತುರ, ಧುತ್ತೂರ (ನಾ). ಮದ್ದುಗುಣಿಕೆ ; ಉಮ್ಮತ್ತಿ : "ದುತ್ತೂರಂ ಕಾಂಚನಮುನ್ಮತ್ತಂ" (ವಸ್ತುಕೋ. ೩೯-೩೭) ; ದುತ್ತೂರರಸಂ ಲವಣಮೆಂಬಿವಂ ನೆಲದಾಟಿಯೊಳ್ ಚಾರಿಸಿ ಪೂಸುಗೆ (ಲೋಕೋಪ. ೯-೧೦೦); ದು[ಪಾಠಾಂ. ದ]ತ್ತೂರ ಬಿತ್ತಿನಲ್ಲಿ ಕಲ್ಪತರು ಹುಟ್ಟೆ ಕಲ್ಪತರುವಿನ ಅಗ್ರದಲ್ಲಿ ಇಟ್ಟಿಯ ಹಣ್ಣಾಯಿತ್ತು (ಅಡಿಮೂ. ೧೫೭-೫೯೯) ; ದುತ್ತೂರದ ಹೂವಿನಂತೆಸೆವ ಹೆಗ್ಗಾಳೆಯು ಮೊಗವಿನಂತೆಯಾವಗಂ ಸರ್ವಮುಮನೊಳಕೊಂಡು ಶುಭ್ರವರ್ಣವಿರಳ ತನ್ನ ತಾನೇ ವಿವೇಕಿಸಿ ನೋಡಿ (ವೀಶಿಪು. ೮-೨೦-೧೭). **ದುತ್ತುರ**: ದುತ್ತುರವ ಸವಿದುದೋ ತಲೆ ಪಿತ್ತಂ ಒಡಿದುದೋ ಮನಕ್ಕೆ ಹಲವು ದೆಸೆಯಂ ಸುತ್ತುತಿದೆ (ಶಂಕಕಂ. ೧೧). **ಧುತ್ತೂರ** : ಕನಕಾಭಿಧಾನ ಸಾಮ್ಯದೆ ಜನಿಯಿಪುದುನ್ಮತ್ತವೃತ್ತಿಯಂ ಧುತ್ತೂರಂ ಕನಕಮತಾಂ ತತ್‌ಕ್ಷಣದೊಳ್ ಜನಿಯಿಪುವಚ್ಚರಿಯೆ ಜನದ ಮನದೊಳ್ ಮದಮಂ (ಧಂಪ್ರಪು. ೧೧-೧೨೧). 'ದತ್ತೂರ' ಪರಾ.

[ <ಸಂ. ಧುಸ್ತೂರ, ಧುಸ್ತುರ ]

**ದುದುಗೆಟ** (ನಾ). ಒಂದು ಊರಿನ ಹೆಸರು : ನೊಳಮ್ಮನೊಳ್ ಕಾದಿ ರಾಚಿಯಗಜ್ಜ ಸತ್ತೊಡೆ ಪೆರ್ಮ್ಮಡಿಯುಂ ಎಱೆಯಪ್ಪನು ಬಿಟ್ಟ ಇಗ್ಗಲಿನುಂ ದುದುಗೆಟ್ಟುಮುಂ ಕಲ್ನಾಡುವಪೆದ ಸ್ಥಿತಿ ಯಾವುದನ್ನೊಡೆ (ಎಕ. III, ನಂಜನ. ೧೩೯-೩ ; ಸು. 10 ನೆಯ ಶತ). [ ? + ಕೆಟ ]

**ದುದ್ದಿಕೆ** (ನಾ). ಒಂದು ಬಗೆಯ ಸಸ್ಯ : ಉಪ್ಪಿನ ರಸಗಾಯಿ ದುದ್ದಿಕ ಸೋರೆಯ ಕಾಯಿ . . . ಮೊದಲಾಗಿ ಆಗಮದೊಳು ನಿಷಿದ್ಧಮಪ್ಪೆಲ್ಲಾ ಕಂದಮೂಲ ಕರೀರ ಶಾಖಾಶಾಕಪುಷ್ಪಫಲಾದಿಗಳಂ ಕೊಳ್ಳದುದು (ಪಸಾರ. ४೦೭); ಬೆಣ್ಣೆ ಕಳವಿಗೆ ಕಾಯಿ ಕರಜಿಗೆಯ ಹಣ್ಣು ದುದ್ದಿಕೆಯ ಕಾಯಿಗಳು (ದ್ವಾದಶಾ. ೧೫೫-೨೩೯). 'ದುಗ್ದಿಕ' ಪರಾ.

[ < ದುಗ್ಧಿಕೆ ]

**ದುದ್ದು$_1$**, **ದಂದ್ದೆ** (ನಾ). ಸೌತೇಕಾಯಿಂ, ಕುಂಬಳಕಾಯಿಂ ಮೊದಲಾದವುಗಳ ಒಳಗಿರುವ (ಬೀಜವುಳ್ಳ) ಮೆದುವಾದ ಭಾಗ,– ತಿರುಳು : ಕುಂಬಳಕಾಯು . . . ಬೀಜವುಂ ಮತ್ತದಱ ದುದ್ದುವುಂ ಚೆನ್ನಾಗಿ ತೆಗೆದು ಹಾಕಿ . . . ಕರಿಬೇವುವುಂ ಹಾಕಿ ಮುಗುಳ್ವದನಾಗು ವಂತಡುವುದು (ಸೂಪಶಾ. ೫-೧೮) : ಬೂದಿಗುಂಬಳದಕಾಯು ನಡುವೆ ಕತ್ತರಿಸಿ ಒಳಗಣ ಬಿತ್ತು, ದುದ್ದುಗಳ ತೆಗೆದು ಹಾಕಿ ಬೆಲ್ಲವ ಪುಡಿಮಾಡಿ . . . . . . ಕೊಡಲು ಹುಚ್ಚುಪಿತ್ತ, ಹುಚ್ಚು ದಾಹ ಸದ್ಯಃ ಮನವಹುದು (ವೈದ್ಯಸಾ. I. ೬೬) : ಕುಂಬಳದ ಹಣ್ಣಿನ ತೊಕ್ಕು ಒಳಗಣ ದುದ್ದು ಬಿತ್ತಗಳ ಸಹ ತೆಗೆದು . . . ಹುರಿದು ಚೂರ್ಣವ ಮಾಡಿ(ಸಕವೈ. ೨೨೫). **ದುದ್ದೆ** : ನಿಂಬೆಹಣ್ಣಿನ ಬೀಜ ದುದ್ದೆ ಸಹ ತೆಗೆದು ಶುಂಠಿ, ಹಿಪ್ಪಲಿ ಸಹ ಇವನ್ನೆಲ್ಲ ಅರೆದು . . . ತೆಗೆದುಕೊಳ್ಳಲು ವಿರೇಕವಹುದು (ಸಕವೈ. ೩೦೩).
[ ದೇ.॥ ತಮಿ. ತುತಿಯು, ತುತ್ತುರು = ತಾವರೆಯು ಬೀಜಕೋಶ;
ತೆಲು. ದುದ್ದು = ತಾವರೆಯು ಬೀಜಕೋಶ ]

**ದುದ್ದು$_2$** 'ದದ್ದು$_2$' ನೋ.

**ದುದ್ದೆ** 'ದುದ್ದು$_1$' ನೋ.

**ದುದ್ದೀಗ್ರಾಮು** (ನಾ). ಒಂದು ಹಳ್ಳಿಯು ಹೆಸರು. P ಈಗಿನ ಕೊಲ್ಲಾಪುರದ ಬಳಿಯು ದೂದಗಾವ : ಪೂರ್ವ್ವತಃ ದುದ್ದೀಗ್ರಾಮೋನಾಮ ಗ್ರಾಮಃ (ಇಆ. XVI, ೨೪-೬೫ : 1009). [ ದುದ್ದೀ$_0$ + ಗ್ರಾಮು ]

**ದುದ್ರುಮ** (ನಾ). ಹಸಿರು ಈರುಳ್ಳಿ ; "ಉಳ್ಳೇಗಡ್ಡೆ" (ಗಂಗಾಮ. ೧೬೮).
[ ಸಂ. ]

**ದುಧಿರ** (ಗು). ಭಯಂಕರವಾದ ; ಘೋರವಾದ : ಮದನನು ಕಾಲನಂ ತ್ರಿಪುರವಂ ತಿಂದುಗಿದು ದುಧಿರ ಭಿಕ್ಷುಕನ ಶುಕ್ರಾಕ್ಷಿಯಸ್ವಾಚಲದ ತುದಿಯೊಳ್ (ಏಕೋಪು. ೬-೪೭). [ < ಸಂ. ದುಧ್ರ ]

**ದುನಿಯಾ** (ನಾ). ಜಗತ್ತು ; ಪ್ರಪಂಚ ; ಲೋಕ : ತಮ್ಮ ಕೀರ್ತಿ ಈ ದುನಿಯಾ ಮೇಲೆ ಬಹಳ ದೊಡ್ಡದಾಗುವ ಹಾಗೆ . . . ಸಾಹೇಬರವರಿಗೆ ತಿಳಿಯು ಹೇಳಿ ಇದ್ದೇವೆ (ರಾಜೇಂದ್ರ. ೧೮೫).
[ ←ಅರ. ಪಾರ. ಹಿಂ. ಮರಾ. ದುನಿಯಾ ]

**ದುಪ್** (ನಾ). ಒಂದು ಅನುಕರಣ ಶಬ್ದ. 'ದುಪ್ಪನೆ' ಪರಾ.

**ದುಪಟ** 'ದುಪ್ಪಟಿ' ನೋ.

**ದುಪಟಿ** 'ದುಪ್ಪಟಿ' ನೋ.

**ದುಪಿಕಿ** (ನಾ). ವರ್ಷದಲ್ಲಿ ಸಿಗುವ ಎರಡು ಬೆಳೆ : ಇದು ಫಲವತ್ತಾದ ದುಪಿಕಿಭೂಮಿ (ರೂಢಿ). [ ←ಮರಾ. ದುಪಿಕೀ ]

**ದುಪುದುಪು** (ನಾ). ಒಂದು ಅನುಕರಣ ಶಬ್ದ : ಅಡಕಿದ್ದ ಮೂಟೆಗಳೆಲ್ಲ ದುಪುದುಪು ಎಂದು ಕೆಳಕ್ಕೆ ಬಿದ್ದುವು (ರೂಢಿ).

**ದುಪ್ಪಟ** 'ದುಪ್ಪಟಿ' ನೋ.

**ದುಪ್ಪಟಿ**, ದುಪಟ, ದುಪಟಿ, ದುಪ್ಪಟ, ದುಪ್ಪಟೆ, ದುಪ್ಪಟ್ಟ, ದುಬಟಿ, ದುವಟ, ದುವ್ವಟ, ದುವ್ವಟ್ಟ, ದೂಪಟ, ದೂವಟ, ದೂವಟಿ, ದೂವಾಟ (ನಾ). ೧. ಹೊದೆಯಲು ಅಥವಾ ಹಾಸಲು ಉಪಯೋಗಿಸುವ ಸಾಮಾನ್ಯವಾಗಿ ಎರಡು ಪದರಗಳನ್ನುಳ್ಳ ಬಟ್ಟೆ, – ವಸ್ತ್ರ ; ಚಾದರ ; ಹಚ್ಚಡ : "ದ್ವಿಪಟೀ = ದುಪ್ಪಟೀ" (ಕಾಶಕ್ಕ. ೨೭೯) : ಒಮ್ಮೆ ಒಬ್ಬ ಗೃಹಸ್ಥಳು ಮಹಮ್ಮದನಿಗೆ ಒಂದು ದುಪ್ಪಟಿಯನ್ನು ತಂದು ಕೊಟ್ಟಳಂತೆ (ಪೈಗಂಬ. ೫೮) : ನಾನು ಹೊದ್ದಿದ್ದ ಹಚ್ಚಡ ದುಪ್ಪಟ ಆಯಿತು (ಕಥಾಮಂ. IV, ೮೩) ; ಮಾಡೋನು ಕಂಬಳಿಯುವನು ದೂರೋದು ದುಪ್ಪಟಿಯುವನನ್ನು (ಗಾದೆ). ೨. ಹೊದೆದುಕೊಳ್ಳುವವಸ್ತ್ರ; ಉತ್ತರೀಯ ; ವಲ್ಲಿ : "ವಲ್ಲೀ = ಬಳ್ಳಿಯುಂ, ದುಪ್ಪಟಿಯುಂ"(ಕಾಶಕ್ಕ. ೧೦೩) ; ದುಪ್ಪಟಿಗಳನ್ನೆಲ್ಲ ಸುತರ್ಗೆ ತರಿಸಿಕೊಟ್ಟನು (ಭರತ. ೪೭-೧೩೩) ; ನಳರಾಜನು . . . ನವರತ್ನಾಭರಣವಂ ತೊಟ್ಟು ಅವರಂಜಿಸರಿಗೆ ದುಪ್ಪಟಿಯುಂ ಹೊದ್ದು (ಯುನಳ. ೬೩) ; ತಾನು ಹೊದ್ದಿದ್ದ ದುಪ್ಪಟಿಯನ್ನು ತೆಗೆದು ತಲೆಗೆ ಸುತ್ತಿಕೊಂಡುದಾಯಿತು (ನವನೀ. ೨೧). ೩. ಉಡುವ ಬಟ್ಟೆ, – ವಸ್ತ್ರ : ಅಸುಗೆದಳಿರ ದುಪ್ಪಟಿಯುಂ ಪಾಡಱುದುಟ್ಟು ಪುಳಿಂದ ಪುರಂಧ್ರಿಯುರೊಪ್ಪವಡೆದರಲ್ಲಿ (ಜಯುಣಾ. ೧೫-೩೮). **ದುಪಟ** : ೨. ಜೋಡಿಯು ಮೇಲೆ ಕಿಮ್ಮತ್ತು ಆಗತಕ್ಕ ಕವಡಾ ಜೀನಸಗಳು. ೧. ಧೋತ್ರ ಜೋಡು . . . . ೨. ದುಪಟ ಮುಂತಾದವುಗಳು (ಮುಂಬವ್ಯಾ. ೧೪೧) : ಮೊದಲು ಮೂರು ವರುಷ ವರುಷಕ್ಕೆ ಹತ್ತು ರೂಪಾಯಿ, ಊಟ, ಬಟ್ಟೆ – ಅಂದರೆ ಒಂದು ದುಪಟ, ಒಂದು ದಟ್ಟಿ (ಬಿಸ್ತಕ. ೩೭). **ದುಪಟಿ** : ೧. ಹಗಲಿನ ಸಭೆಯೇನೋ ಚದರಿದೆ ; ಆದರೂ ಅಲ್ಲಿ ಅದರ ಬಿಳಿಯು ದುಪಟಿ ಹಾಸಿದೆ (ನಿಬಂಧ. II, ೨೦೭). ೨. ಚಂದ್ರಕಾಂತಿಯು ದುಪಟಿಯುನ್ನು ಚಂದದಿಂದಲಿ ಪೊದ್ದನು (ಗೋಹಾಡು. ೬-೨೯). **ದುಪ್ಪಟ** : ೧. "ಹಚ್ಚಡಂ ದುಪ್ಪಟಾಖ್ಯಂ" (ಮಂಗರಾ. ೧೦೧-೨೮). ೨. ಲಾಲಿತ ಚಿಂಬುವುಗೆ ಮೆಟ್ಟಿ ಮೃದುವೆತ್ರ ಸಾಲಿಯು ದುಪ್ಪಟವಾಳ್ದು ಸೋಲಿಸಿ ತೊಲಗಿ ಪೋದವನ ನಿಟ್ಟಿಸುವ ಸಲ್ಲೀಲೆಯಿಂದದ್ದಳಾ ಕುವರಿ (ಮೋಹತ. ೨೮-೬) : ಕಟ್ಟಾಣಿ ಮುತ್ತು ತೆತ್ತಿಸಿದುಡಿಗೆಯೊಳಳವಟ್ಟು ಮೆಱೆದ ದುಪ್ಪಟದೆ ಸೃಷ್ಟಿಗೆ ನರರೂಪ ನರಸಿಂಹನ ಪೋಲ್ವವಪ್ಪು ಮೆಱೆದ ನರಸೇಂದ್ರ (ಕಂನವಿ. ೨೪-೬೩) : ಚೀಣಾ ಚಕ್ರವರ್ತಿಯವರು ಕೊಟ್ಟ ಅಪೂರ್ವವಾದ ರೇಷ್ಮೆ ದುಪ್ಪಟ ಅದನ್ನು ಕೊಡುತ್ತೇನೆ (ಅಯ್ಯಾಕ. ೫). **ದುಪ್ಪಟೆ** : ೧. ಮಲಗಿದ್ದ ರಾಗಪ್ಪ, ತಾನು ಹೊದೆದಿದ್ದ ದುಪ್ಪಟೆಯನ್ನು ಎಳೆದುಕೊಂಡೇ ಓಡಿ ಬಂದ (ವಂಶವೃ. ೪೦೫). **ದುಪ್ಪಟ್ಟ** : ೧. ಸಂದೂಕದ ಬೀಗದ ಕೈ, ಹಾಸಿಗೆಯು ಮೇಲಣ ದುಪ್ಪಟ್ಟ, ವೀಳಯದ ಸುಣ್ಣ, ಗ್ಲಾಸಿನ ನೀರು (ಬಂಕಿಮ. ೯೯). ೨. ರಾಮರಾಯನು ಎದ್ದು ಅಂಗರೇಕೆ ರುಮಾಲುಗಳನ್ನು ಧರಿಸಿಕೊಂಡು, ದುಪ್ಪಟ್ಟಾವನ್ನು ಹೊದ್ದುಕೊಂಡು . . . ಹೊರಟನು (ಶ್ರೀರಾಯ. ೦೬೮). **ದುಬಟಿ** : ೧. ಮಗು ದುಬಟಿಯುನ್ನು ಹೊದ್ದುಕೊಂಡು ಮಲಗಿತ್ತು (ರೂಢಿ). ೨. ಚಿನ್ನದ ದುಬಟಿಯುನ್ನು ಹೊದ್ದು ತೆರೆಯಿಂದ ಹೊರಟು (ಸೌಪರಿ. ೪-೨೦). **ದುವಟ** : ೨. ಪಟಪಲ್ಲವ ಛತ್ರ ಚಮರ ಝಲ್ಲರಿಗಳ್ದುವಟ[ಪಾಠಾಂ. ಗಳ್ದುವ್ವಟ್ಟಿ] ಜಗಜಗಿವ ಜೋಡುಗಳು ಛಟಛಟಧ್ವನಿಯಿಂದೆ ಬಿಸಿಯು ಕೆಂಗಿಡಿಗಳು ಪುಟನೆಗೆದುವು ನಭಸ್ಥಳಕೆ (ಮೋಹತ. ೪೦-೩೮); ಸೂಧಸವಿಲಾಸನಂ ಪುಷ್ಪದಿಂ ರಚಿತಂ ತಾ ದುವಟಮುಂ ಪೊದಿಸುತ (ಲಿಂಗಪು. ೨೮-೨೭). **ದುವ್ವಟ** : ೧. ಹಾಸುಮಂಚದ ಮೇಲೆ ಲೇಸಪ್ಪ ದುವ್ವಟವ [ಪಾಠಾಂ. ದುಪ್ಪಟವ] ಹಾಸಿ ಕರಚರಣಗಳನೊತ್ತಿ ನಿಮಿಷಕ್ಕೆ ಮೋಸ ಮಾಡುವರು ಯತಿಗಳ (ಗುರುಬೋ. ೧-೯೫) ; ಮಾಸಲಿಂ ತೊಳೆಯೆ ಮಡಿಯಾದ ದುವ್ವಟದಂತೆ . . . ನೆಲ ಹೇಸುವಂದದ ನಡೆಯ ನುಳಿದು ಸಚ್ಚರಿತಮಂ ತಳೆದು ಮಯನೊಪ್ಪಿರ್ದನು (ಸಮ್ಯಕೌ. ೧೦-೨೦). ೨. ಬಿಳಿಯು ಪಟ್ಟೆಯನುಟ್ಟು ದುವ್ವಟದ ಹಚ್ಚಡವನಳವಡಿಸಿ ಸಾಲಂಗಿಯುಂ ತೊಟ್ಟು . . . ಸೌಂದರಂ ವನಕೆ ಪೊಱಮಟ್ಟನು (ಸೌಂದಪು. ೧೦-೧೧) ; ಆನಂದರಸ ದೇವಗಿರಿ ಕೊಂದಿ ಬಳಿದಿನದೇಸವಣ್ಣವೆ ದುವ್ವಟ [ಪಾಠಾಂ. ಪಾಟ]ಗಳ (ಅಮುಸಾಂ. ೪-೧೭). ೩. ಉರ ತುಂಬಿ ಮೆಱೆವ ಕಂಚುಕ ಕಾಲ ಕುಪ್ಪಸ ಮಿಱುವ ದುವ್ವಟದ[ಪಾಠಾಂ. ದುವ್ವಪದ] ನಿಱಿಗಳ . . . ಚೆಲ್ವ ತುರುಕನಾರಿಯರೊಪ್ಪಿದರು (ಕಂನವಿ. ೨೧-೮೩). **ದುವ್ವಟ್ಟ** : ೨. ನಾರಿಯಂಗಗಂಧರಸಮನಾಂತ ದುವ್ವಟ್ಟ[ಪಾಠಾಂ. ಟ]ಮುದಲ್ಲದೆ ತಾಳದ . . . ನಲ್ಲನೊಪ್ಪಿದಂ (ಹರಿವಂ. ೩-೧೦೩). **ದೂಪಟ** : ೪. ರೇಷ್ಮೆಯು ಬಟ್ಟೆ ; ಪಟ್ಟೆವಸ್ತ್ರ : ಪದೆದು ದೂಪಟದ ಜವಕೆಗಳ ನಲವಿನಿಂ ತೊಟ್ಟು (ಅರಾವ. ೬-೨). **ದೂವಟ** : ೨. ಹೊದೆದ ದೂವಟವ ನಿವಾಳಿಯಿಟ್ಟೊಡನೊಂದ ಹೊದವುತ ನೃಪ ತನ ತಾಯು ಇದಿರಲ್ಲಿ

ಸಾಷ್ಟಾಂಗವೆಱಗಲು (ಭರತ. ೪೭-೪೫) ; ಬಾರುತರ ಪಂಚಾಮೃತಂಗಳಿಂ ನಭಿಷೇಕಗೈದು ದೂವಟವ ಪೊದಿಸಿ (ಸಿದ್ಧೇಪು. ೯-೬೦) : ರಂಭೆ ಶ್ವೇತಂಗೆ ನಿಜರಮಣೀಯುವಾಗಿ ಪನ್ನೀರೊಳಂ ಮಜ್ಜನಂಬೊಗಿಸಿ ದೂವಟವ ಪೊದಿಸಿ (ಪ್ರಭುಪು. ೩-೯೧). ೪. ಎಳೆವೆಣ್ಣುಡಲ್ ನಿಱಿಯ ಒಡಿದ ದೂವಟವೊ ಪೇಳೆನಲು ಬೆಳ್ಳಗಿಲೆಸೆದವು (ಚೇರಮ. ೪-೩) : ಶುಭ್ರ ದೂವಟವ ಸ್ಮರಬಾಣಗಱಿಯಂತೆ ನಿಱಿವಿಡಿದುಡಿಸಿದರ್ ವರಹಾಸವುಖಿಗೆ (ಮೋಹತ. ೨೩-೧೩) : ನಡುವ ಬಳಸಿ ಬಂದ ದೂವಟದೊಲ್ಲಿ ತನ್ನೆಡದ ತೋಳೊಳು ಸುತ್ತಿ ನಿಮಿರೆ . . . ನಡೆತಂದನಾ ಮೋಡಿಕಾಱ (ಭರತ. ೩೯-೧೪) ; ನಲ್ಲಳಂಗಗಂಧಂ ಬಗೆಗೊಂಡ ದೂವಟಮುನಲ್ಲದೆ ತಾಳದ . . . ಕಾಂತ ನೊಪ್ಪಿದಂ (ರಾಜಶೇ. ೧೧-೩೦). **ದೂವಟಿ :** ೪. ದೂವಟಿಯುಡ ಸುತ್ತಿ ಚಾವಡಿಯೊಳಹೊಕ್ಕು ಭೂವರನೆಡೆಗೆಯ್ದುವಾಗ (ಭರತ. ೫೭-೧೩). **ದೂವಾಟ :** ೨. ವೀರೇಶ ನೀಂ ಸೌಂದರ್ಯ ದೂವಾಟಮುಂ ತೊಳೆದು ಪೊದಿಸು (ಪ್ರಭುಪು. ೭-೬೦).

[ ದೇ.॥ ತಮಿ. ತುಪ್ಪಟ್ಟಿ, ತುಪ್ಪಟ್ಟಾ : ಮಲ. ತುಪ್ಪಟ್ಟ, ತುಪ್ಪಟ್ಟಾವು: ತುಳು. ದುಪ್ಪಟ, ದುಪ್ಪಟಿ; ತೆಲು. ದುಪ್ಪಟ, ದುಪಟ, ದುಪ್ಪಟ./ ಮರಾ. ದುಪಟಾ, ದುಪಟ್ಟಾ : ಹಿಂ. ದುಪಟಾ, ದುಪಟೀ, ದುಪಟ್ಟಾ, ದುಪಟ್ಟೀ ]

**ದುಪ್ಪಟಿ** 'ದುಪ್ಪಟ' ನೋ.

**ದುಪ್ಪಟ್ಟ** 'ದುಪ್ಪಟ' ನೋ.

**ದುಪ್ಪಟ್ಟು** (ನಾ). ಎರಡರಷ್ಟು: ಇಮ್ಮಡಿ: ಮಧ್ಯಾಹ್ನ ಕೆಲಸಕ್ಕೆ ಹೋದಾಗ ಕತ್ತೆಗಳು ಮುಂಜಾವಿನಕಿಂತ ದುಪ್ಪಟ್ಟಾಗಿದ್ದವು (ಮೇರಿಮ. ೧೭೦) : ಯಾವ ಅಂಚೆಚೀಟಿಯೂ ಇಲ್ಲದ ಪತ್ರಗಳ ಮೇಲೆ ಇಲಾಖೆಯವರು ದುಪ್ಪಟ್ಟು ದಂಡ ವಸೂಲಿ ಮಾಡುತ್ತಾರೆ (ಕವಿಕೋ. I, ೬೫) : ಇಂದಿಗೆ ಹಣ ಉಳಿಸಿಕೊಂಡು ನಾಳಿಗೆ ದುಪ್ಪಟ್ಟು ಕಳೆಯುವುದು ಎಂಥ ವ್ಯವಹಾರಜ್ಞಾನ? (ಸುಕೃವು. ೪೦) : ಈ ಅಂಗಡಿಯ ಮೇಲೆ ನಾ ಸುರಿಸಿದ ಬೆವರಿನ ಅರ್ಧದಷ್ಟನ್ನು ನನ್ನ ಮಗ್ಗದ ಮೇಲೆ ಸುರಿಸಿದ್ದರೆ ಇದರ ದುಪ್ಪಟ್ಟು ಗಳಿಸುತ್ತಿದ್ದೆ (ಮೂರುದಾ. ೭೧) : ದುಪ್ಪಟ್ಟದ್ದ ರಕಮು ಅರ್ಧಕ್ಕಿಳಿಸುವದೂ ಬಡ್ಡೀದರ ಕಡಿಮೆ ಮಾಡುವುದೂ ಇವೆಲ್ಲ . . . ಉಳಿತಾಯುವೇ ಎಂದನು (ದಾಸಹು. ೫೮). [ ದು + ಪಟ್ಟು₂ ]

**ದುಪ್ಪಡಿ** (ನಾ). (?) : ನಿಯುತ ದ್ವಿತ್ವಕ್ಕೆ–ಪಪ್ಪುಕಂ . . . ಟಿಪ್ಪರಂ, ದುಪ್ಪಡಿ (ಶಮದ. ೩೭ ಪ್ರಯೋ). [ ? ]

**ದುಪ್ಪನೆ** (ಅ). 'ದುಪ್' ಎಂಬ ಶಬ್ದದೊಡನೆ : (ಕ).

[ ದುಪ್ + – ಅನೆ₁ ]

**ದುಪ್ಪಳ, ದುಬ್ಬುಳಿ, ದೊಬ್ಬುಳಿ** (ನಾ). ೧. ಮನೆಯಂ ಒಂದು ಭಾಗ: ಪಾದರಿಯ ಪಟ್ಟಸಾಲೆಯೊಳಂ ಬಂದ ಮಾವಿನ ಬಳ್ಳಿವಾಡದೊಳಂ ತಳಿತ ಪಚ್ಚಕರ್ಪೂರಬಾಳೆಯ ಸುಳಿಗಳಿಂದೊಪ್ಪುವ ದುಪ್ಪಳಗಳಿಂದಂ . . . ಗುಜ್ಜುಮಾವಿನ ಸಜ್ಜೆವನೆಗಳಂ ಚೆಲ್ವಾಗಿರೆ (ನಾಗಕು. ೩೦-೫೫ ವ). **ದುಬ್ಬುಳಿ :** ೨. ಮೇಲಿನ ಮಹಡಿ,–ಉಪ್ಪರಿಗೆ ; "ಸಿರಿಯು ಕರುಮಾಡ ವೈಭವದಿಂದ ಕೂಡಿದ ಉಪ್ಪರಿಗೆ" (ಪ್ರಶಬ್ದ) ; ಕನಕಮಯಮಾಟಾಕೂಟಂಗಳಿಂದೇಳಂಟಾದಿಯಾದ ದ್ವಾದಶ ಷೋಡಶ ನೆಲೆಯ ದುಬ್ಬುಳಿಗಳಿಜ್ಜಾ [ ಜ್ಜಾ ] ಲಿಸಲಿ ವಿಭ್ರಾಜಮಾನದ ಜನಭವನಂಗಳೆಸೆದಿರ್ಪುವು (ಆದಿಪ. ೫-೭). **ದೊಬ್ಬುಳಿ :** ೨. "ದೊಬ್ಬುಳಿ [ಪಾಠಾಂ. ದುಬ್ಬುಳಿ] ಸಿರಿಯು ಕರುಮಾಡ" (ಕಬಿಕೈ. ೧೨). [ ? ]

**ದುಪ್ಪಿ, ದುಪ್ಪೆ** (ನಾ). ೧. ಒಂದು ಬಗೆಯ ಜಿಂಕೆ : ಎಕ್ಕಲನ ಪೊಕ್ಕಿಂದು ದುಪ್ಪಿ ಸಾರಂಗಕುಂ ಕುಕ್ಕುರಗಳಂ ಬಿಡುತೆ (ಶರಸು. ೨೦-೩೩). **ದುಪ್ಪೆ :** ೨. ಕವಲೊಡೆದಿರುವ ಕೊಂಬುಗಳನ್ನುಳ್ಳ, ಚುಕ್ಕೆಗಳುಳ್ಳ ಜಿಂಕೆ ; ಸಾರಂಗ : ಕರುಳ್ಗಳ ಪಗೆಯುತ ನಾಯ್ಗಳ ಬಿಗಿಯುತ ದುಪ್ಪೆಯು ಜಗಿಯುತ ಶಬರರು ವಗರಿಸಿ ಕಾಡಿನ ಮೃಗಗಳನೆಲ್ಲವನು (ಹಮಚ. ೧೮). 'ಚುಕ್ಕೆದುಪ್ಪಿ' ಪರಾ.

[ ದೇ.॥ ತೆಲು. ದುಪ್ಪಿ ; ಕೊಲಾ. ಡುಪ್ಪಿ ; ಗೊಂಡಿ. ಡುಪ್ಪಲ್ ]

**ದುಪ್ಪು₁** 'ದುಂಪು' ನೋ.

**ದುಪ್ಪು₂** (ನಾ). (?) : ಒಪ್ಪೇಸಿದೇನು ನಿನಗೆ ದುಪ್ಪೀನ ಶೀಕ್ಷಕೆ ಎನುತಾಲಿಯಿಂದುಮತಿಗೆ ಜನಪಾನು ಪೇಳುತಾಗ (ಹಮಚ. ೧೯೯). [ ? ]

**ದುಪ್ಪೆ** 'ದುಪ್ಪಿ' ನೋ.

**ದುಪ್ಪೆಗೆಣಸು** (ನಾ). ಒಂದು ಬಗೆಯ ಗಡ್ಡೆ,–ಗೆಣಸಂ : ದುಪ್ಪೆಗೆಣಸು, ಹೆಬ್ಬು (ಮೃಜಗಿ. ೩೦-೫೯೩). [ ದುಪ್ಪೆ? + ಗೆಣಸು (<ಗೆಟಸು) ]

**ದುಪ್ರತಿ** (ನಾ). ಮೊದಲಿನ ಪ್ರತಿಯಂತೆಯೇ ಸಿದ್ಧಪಡಿಸಿದ ಇನ್ನೊಂದು ಪ್ರತಿ ; ನಕಲು ; ಪ್ರತಿರೂಪ: (ಒಂದು ಪತ್ರದ ಅಥವಾ ದಸ್ತೈವಜಿನ) ದುಪ್ರತಿ. ನಕಲು (ಅಸಲಿನಂತೆಯೇ ಕಾನೂನಿನ ಅಂಗೀಕಾರವುಳ್ಳದ್ದು) (Duplicate. ಇಂಕನಿ). [ ದು + ಪ್ರತಿ ]

**ದುಫಸಲ್** (ನಾ). ಒಂದು ಜಮೀನಿನಲ್ಲಿ ವರ್ಷಕ್ಕೆ ಎರಡು ಬೆಳೆ ತೆಗೆಯುವುದು : (ಕೃಶಗಿ. II, ೫೪೭). [ ದು + ಫಸಲ್ ]

**ದುಬಟ** 'ದುಪ್ಪಟ' ನೋ.

**ದುಬದುಬ** (ನಾ). ಒಂದು ಅನುಕರಣ ಶಬ್ದ : (ಕ).

**ದುಬಾರಿ** (ಗು). ೧. ಎರಡರಷ್ಟು; ಇಮ್ಮಡಿ; ಎರಡು ಪಟ್ಟು. 'ದುಬಾರಿ ಕೆಲಸ' ಪರಾ. ೨. ಅತಿಯಾದ ; ಹೆಚ್ಚಾದ ; ಅಧಿಕವಾದ : ದುಬಾರಿ ಬಡ್ಡಿ ಹಾಕುವುದರಲ್ಲಿಯೂ ನಿಸ್ಸೀಮರು (ಪ್ರವಾಇ. II, ೩೩೨); ಅತ್ತ ಕಡೆ ಬರುತ್ತಿದ್ದ ದುಬಾರಿ ಬಡ್ಡಿಗಾರರನ್ನು ಕಂಡ ಕೂಡಲೇ ಜನ ಓಡಿ ಹೋದದ್ದರ ಕಾರಣವನ್ನು ತಿಳಿದುಕೊಂಡನು (ನಗೆಹೂ. ೯೯). 'ದುಬಾರಿ ಬೆಲೆ' ಪರಾ. (ನಾ). ೩. ಹೆಚ್ಚು ಬೆಲೆಯುಳ್ಳದು ; ತುಟ್ಟಿ: ಅರ್ಜಿ ಹಾಕಿಕೊಂಡರೆ ಎಲ್ಲವೂ ಸರಿಹೋಗುತ್ತದಂತೆ. ಆದರೆ ಅದು ದುಬಾರಿಯ ಕೆಲಸವಂತೆ (ಪುನರು. ೧೯೪) : ಅನುಭವಶಾಲೆಯ ಶುಲ್ಕ ದುಬಾರಿಯುದಲ್ಲಿ ರಿಯಾಯಿತಿಯಿಲ್ಲ (ಇಂಚಾಪ. ೧೦೮-೨೯). ೪. (ಆಲಂ) ಅಪಾಯಕಾರಿಯಾದ ವ್ಯಕ್ತಿ (?) : ದುರಾತ್ಮಚಾರಿಯುಂ ದುಬಾರಿಯುಂ ದೃಪ್ಪಪಾಂಡ್ಯರಾಜನುತ್ಕನಿಷ್ಕರ್ವರ್ಗದಲ್ಲಿ ತಾಂ ಸ್ವಪ್ಪವಾಗಲಿಟ್ಟು ಕಾಯ್ದು ನಪ್ಪಱಿಂದೆ ಪೆರ್ಗದೇ (ಹಾಲಾಸ್ಯ. ೩-೩-೪೧).

[ ←ಪಾರ. ದುಬಾರಾ, ದೋಬಾರಾ ; ಮರಾ. ದುಬಾರ್, ದುಬಾರಾ, ದುಬಾರೀ ; ಹಿಂ. ದುಬಾರಾ, ದೋಬಾರಾ./ತುಳು. ದುಬಾರಿ ]

**ದುಬಾರಿಕೆಲಸ** (ನಾ). ೧. ಎರಡು ಪಟ್ಟು ಕೆಲಸ; ಎರಡರಷ್ಟು ಕಾರ್ಯ: ಹೊಲಕ್ಕೆ ಮಡಿಕೆಯ ಹೊಡಿಯುವುದೇತಕ್ಕೆ ದುಬಾರಿಕೆಲಸವೆಂದು ಮೈಗಳ್ಳತನದಿಂದ . . . ಅಷ್ಟಕ್ಕೆ ಸಂತುಷ್ಟರಾಗುತ್ತಾರೆ (ಕೃಚಿಪ್ರ. ೫೦). ೨. ಬಹಳ ಖರ್ಚು ಉಂಟಾಗುವ ಕೆಲಸ : ಈಗಿನ ಕಾಲದಲ್ಲಿ ಮನೆ ಕಟ್ಟಿಸುವುದು ಬಹಳ ದುಬಾರಿಕೆಲಸ (ರೂಢಿ). ೩. (ಆಲಂ) ಅಪಾಯಕಾರಿಯಾದ ಕೆಲಸ ; ಹೆಚ್ಚು ತೊಂದರೆಯುಳ್ಳ ಕೆಲಸ : ನೀವೇನೂ ಶಾಶ್ವತವಾಗಿ ಮುಖಂಡರಾಗಿ ಉಳಿಯುವುದಕ್ಕಾಗುವುದಿಲ್ಲ. ಆದ್ದರಿಂದ ದುಬಾರಿ ಕೆಲಸಕ್ಕೆ ಕೈಹಾಕಬೇಡಿ (ಪಂಜಪಂ. ೧೭೮). [ ದುಬಾರಿ + ಕೆಲಸ ]

**ದುಬಾರಿಖರ್ಚು** (ನಾ). ಬಹಳ ಹೆಚ್ಚಾದ ವ್ಯಯ,–ವೆಚ್ಚ : ಬೆಲೆ ಏರಿಕೆಯ ಈ ಕಾಲದಲ್ಲಿ ದುಬಾರಿಖರ್ಚನ್ನು ಮಾಡಬಾರದು (ರೂಢಿ).

[ ದುಬಾರಿ + ಖರ್ಚು (<ಕರ್ಚು₄) ]

**ದುಬಾರಿಬೆಲೆ** (ನಾ). ಹೆಚ್ಚಾದ ಕಿಮ್ಮತ್ತು ; ಬಹಳವಾದ ಕ್ರಯ : ಇಂದಿನ ರೇಷನ್ ಮತ್ತು ಸಾಮಾನು ದುಬಾರಿಬೆಲೆ ಕಾಲದಲ್ಲೂ . . . ದೋಸೆಗಳನ್ನು ಆರು ಕಾಸಿಗೊಂದರಂತೆ ಮಾರುವ ಏರ್ಪಾಡು ಮಾಡಿದ್ದೇನೆ

(ನಾಡಿಗೇ. ೩೪೬) : ಆರುತಿಂಗಳು ಹೇಗೋ ಕಾಲ ಹಾಕಿ, ಇನ್ನಾರುತಿಂಗಳು ದುಬಾರಿಬೆಲೆ ಕೊಟ್ಟು ಸಾಮಾನುಗಳನ್ನು ಕೊಂಡು ಸಂಸಾರ ಸಾಗಿಸಬೇಕು (ನನ್ನೂರು. ೩೧೭). [ ದುಬಾರಿ + ಬೆಲೆ ]

**ದುಬಾರಿವೆಚ್ಚ** (ನಾ). = ದುಬಾರಿ ಖರ್ಚು: ದುಬಾರಿವೆಚ್ಚದ ಯಜ್ಞ ಯಾಗಾದಿಗಳ ನೆರವಿಲ್ಲದೆಯೇ ವ್ಯಕ್ತಿಯು . . . ಪರತತ್ವವನ್ನು ಕುರಿತು ಧ್ಯಾನಮಾಡಿ ಸಾಮೀಪ್ಯವನ್ನು ಸಾಧಿಸಬಹುದು (ತತ್ತ್ವಪ್ರಾ. ೧೫೪).
[ ದುಬಾರಿ + ವೆಚ್ಚ ]

**ದುಬಾರಿಸು** (ಕ್ರಿ). (?): ಸುಬಾಹುನಯುನಾಂತರಂ ಹನುಮಿನುತ್ಕ ಸನ್ನಾಸಿಕಂ ದು[ಪಾಠಾಂ. ದೂ]ಬಾರಿಸದ ಸತ್ಕುಟಾಂತರಮಿವ್ವೆದು ದೀರ್ಘಂ ವಲಂ (ಹಾಲಾಸ್ಯ. ೧-೧೨-೩೬). [ ? + – ಇಸು$_3$ ]

**ದುಬಾಷಿ** 'ದುಭಾಷಿ' ನೋ.

**ದುಬಾಸಿ** 'ದುಭಾಷಿ' ನೋ.

**ದುಬುದುಬು** (ನಾ). ಒಂದು ಅನುಕರಣ ಶಬ್ದ: ಇದ್ದಕ್ಕಿದ್ದಂತೆ ದುಬುದುಬು ಎಂದು ಮಳೆ ಬೀಳಲು ಆರಂಭವಾಯಿತು (ರೂಢಿ).

**ದುಬ್ಧಿ** (ನಾ). ೧. ಸಂಶಯ ; ಹೊಯ್ದಾಟ: ದುಬ್ಧಿಮೂಲಗಳಡಗಿ ದಧ್ಯಾತ್ಮ ಸ್ವಾರಸ್ಯಲಬ್ಧಮಂ ತಿಳಿದಿರ್ಪ ಯೋಗಾಢ್ಯರಿಂಗೆಯುಪಲಬ್ಧಿ ಯಿಂದುಣಬಡಿಸಿ ಸೌಖ್ಯದಿಂದನಿಬರಂ ಪೊಂಗಿಸಿದನಿಂಗಡಲೊಲು (ಪರಬು. ೧೬-೦೦). 'ದುಗ್ದೆ' ಪರಾ. ೨. ನಿರಾಶೆ ; ಚಿಂತೆ ; ದುಃಖ. 'ದುಬ್ಧಿಗೊಳ್ಳು' ಪರಾ. ೩. ಹೊಟ್ಟೆಕಿಚ್ಚು ; ಅಸೂಯೆ. 'ದುಬ್ಧಿಪಡು' ಪರಾ. [ ←ಹಿಂ. ದುಬಧಾ, ದುಬಿಧಾ, ದುಬಿಧಿ./ಸಂ. ದ್ವಿವಿಧ ]

**ದುಬ್ಧಿಗೊಳ್ಳು** (ಕ್ರಿ). ಹತಾಶನಾಗು ; ವ್ಯಥೆಪಡು ; ಬೇಗುದಿಗೊಳ್ಳು : ತನ್ನ ಸಂದಿಗ್ಧಪರಿಸ್ಥಿತಿಗಾಗಿ ತೀರ ದುಬ್ಧಿಗೊಂಡಂತೆ 'ಅಲ್ಲಾ' ಎಂದು ನಿಟ್ಟುಸಿರಿಡುತ್ತಾ . . . ಕೈ ಚಾಚಿದ (ನನ್ನರ. ೪೯).
[ ದುಬ್ಧಿ + ಕೊಳ್ಳು$_1$ (<ಕೊಳ್$_1$) ]

**ದುಬ್ಧಿಪಡು** (ಕ್ರಿ). ಹೊಟ್ಟೆಕಿಚ್ಚು ಪಡು ; ಕರುಬು ; ಮತ್ಸರಿಸು: ಕಮಲಮ್ಮ ಅವರ ಜೀವನ ನೋಡಿ ಗಂಭೀರಮುಖ ಮಾಡಿಕೊಂಡು ನಿಲ್ಲುತ್ತಿದ್ದಳು . . . ಲಕ್ಷ್ಮಿದೇವಿ ಮಾತ್ರ ಒಳಗೇ ದುಬ್ಧಿಪಡುತ್ತಿದ್ದಳು (ತಾಯಿಕ. ೩೬). [ದುಬ್ಧಿ + ಪಡು$_1$ ]

**ದುಬ್ಬ** 'ದುಡುಂಬು' ನೋ.

**ದುಬ್ಬಗಾಣಿಸು** (ಕ್ರಿ). ಪ್ರಕಟಪಡಿಸು ; ವ್ಯಕ್ತಗೊಳಿಸು : ಒಬ್ಬಳ ಮೇಲೆ ತನಗೆ ಸೋಲವಿದ್ದರು ದುಬ್ಬಗಾಣಿಸನದ ನುಡಿದು ಒಬ್ಬ ಪುರುಷನೊಬ್ಬ ಸತಿಯೊಳಿಪ್ಪಂತಿಹನುಬ್ಬಸವಿಲ್ಲದೆಲ್ಲರೊಳು (ಭರತ. ೫-೯೬).
[ <ತುಬ್ಬು$_3$ + ಕಾಣಿಸು ]

**ದುಬ್ಬಿ$_1$** 'ದುಡುಮಿ' ನೋ.

**ದುಬ್ಬಿ$_2$** (ನಾ). ದೊಡ್ಡಪಾತ್ರೆ ; ಕೊಪ್ಪರಿಗೆ : ಸರ್ಬನಾಶಕನೆಂಬನೊಬ್ಬನು ದುಬ್ಬಿಯಲಿ ಜನಿಸಿದನು ಕೌರವನು (ಸಂಭಪ. ೧೫-೭೮).
[ ದುಬ್ಬು (<ದುಮ್ಮು$_1$) + – ಇ$_3$ ]

**ದುಬ್ಬು** 'ದುಮ್ಮು$_1$' ನೋ.

**ದುಬ್ಬುಳಿ** 'ದುಪ್ಪಳ' ನೋ.

**ದುಬ್ಬುಳುಕ** (ನಾ). (?) : ಸರಕಾರಕ್ಕೆ ರುಜು ಇಲ್ಲದೆ ರೈತನಾಗಬಾರದು ಅದೇತೆಂದೊಡೆ ಇಷ್ಟುಳ್ಳಾತನೇ ಪಾಟ್ಟಾ ರೈತ ಇಲ್ಲದಾತ ದುಬ್ಬುಳುಕ ಎಂದಸಯ್ಯಾ ನಿಮ್ಮ ಶರಣ (ವಚಸಂ. ೭೦-೭೧). [ ? ]

**ದುಬ್ಬೆಸನ** (ನಾ). ಕೆಟ್ಟಚಾಳಿ ; ದುಷ್ಟವ್ಯಸನ : ಹುಸಿವ ತನಲ್ವ ಬಯ್ವ . . . ಬೇಸಟಿಕೊಳೊಂದಿದೆವೆಂಬ ಕೂಡೆ ದುಬ್ಬೆಸನದೊಳಿಕ್ಕಿ ದೇವರನವಂತವೆ ತಿಂಬ ತಪಸ್ವಿಯಲ್ಲಿ ಹೋಲಿಸುವುದೆ . . . ಹರಿಸಕ್ತಿದೇವನನ್ (ಕಇ. IV, ೧-೯೧ ; 1204). [ <ಸಂ. ದುರ್ವ್ಯಸನ ]

**ದುಭಾಷಿ, ದುಬಾಷಿ, ದುಬಾಸಿ** (ನಾ). ೧. ಭಾಷಾಂತರ ಮಾಡಿ ಹೇಳುವ ವ್ಯಕ್ತಿ.– ತಿಳಿಸುವ ವ್ಯಕ್ತಿ : ಅವರಿಗೆ ದುಭಾಷಿಯು ಕೆಲಸ ಮಾಡುವ ಮೊದಲನೆಯ ಪ್ರಸಂಗ ಇಲ್ಲಿಯೇ ಬಂದಿತು (ಕರವೀ. ೨೦೬). **ದುಬಾಷಿ** : ೧. ನೆತ್ತುದೋಪ್ ದುಬಾಷಿಯಾದನು (ಪುನರು. ೫೭೮) ; ಅಂಥಾ ಭಾರೀ ದುಬಾಷಿಗಳು ಯಾರಾದರೂ ಸಿಕ್ಕಿದರೆ . . . ನಾನೂರು ವರಹ ಸಂಬಳ ವನ್ನು ಕೊಟ್ಟು ಅವರನ್ನು ಇರಿಸಿಕೊಳ್ಳೋಣವು (ಮುಸುಗ. ೪೫) ; ಸಂದರ್ಭದಲ್ಲಿ ನೀವು ನಮ್ಮ ದುಬಾಷಿಗಳಾಗಿದ್ದರೆ ಚೆನ್ನಾಗಿರುತ್ತಿತ್ತು (ಕೃಷ್ಣಭೂ. ೨೦೪). **ದುಬಾಸಿ**: ೧. "ದುಬಾಸಿ–ದ್ವಿಭಾಷಿ" (ತದ್ಭಕೋ. ೭೧); "ಅರ್ಥ ವಿವರಣೆ ಮಾಡುವವನು ; ವ್ಯಾಖ್ಯಾಕಾರ. ಬೇರೆ ಬೇರೆ ಭಾಷೆಗಳನ್ನಾಡುವವರ ಮಾತನ್ನು ಒಬ್ಬರಿಂದೊಬ್ಬರಿಗೆ ಬಾಯಿಮಾತಿನಲ್ಲಿ ಭಾಷಾಂತರ ಮಾಡಿ ಹೇಳುವವನು ; ದುಬಾಸಿ" (Interpreter. ಇಂಕನಿ). ೨. ಎರಡು ಭಾಷೆಗಳನ್ನು ಬಲ್ಲ ವ್ಯಕ್ತಿ : ಯಿಲಿ ಕಾವಳು ದುಬಾಸಿಮಂಗನ ವಂಶಸ್ಥರದೂ (ಎಕ. XIV, ಶ್ರೀರಂಗ. ೧೮೭-೨೦ ; 1863).
[ ←ಹಿಂ. ಮರಾ. ದುಭಾಷೀ./ಸಂ. ದ್ವಿಭಾಷಿನ್ ]

**ದುಮಗುಟ್ಟು** 'ದುಮಂಗುಟ್ಟು' ನೋ.

**ದುಮಜಿ, ಧುಮ್ಮುಚಿ** (ನಾ). ಕುದುರೆಯ ಜೀನಿನ ಹಗ್ಗ.–ಬಾರು : ೧ ಸಿಂಹದ ತಲೆ ೧೮ ದುಮಜಿ ಗುಬ್ಬಿ ೨ ಯಿದರ ಕೆಳಗಣ ಪಟ್ಟಿ (ಎಕ. XIV, ನಂಜನ. ೨೯೩-ಪುಟ ೧೪೩ ; 1847). **ಧುಮ್ಮುಚಿ** : ಅವನ ಘೋಟಕಂಗಳ್ಗೆಂದುಂ ಧುಮ್ಮುಚಿಯನಿಕ್ಕಗಿಸ ಪರಿಯಪ್ಪಾಡಿಸಿ ತದ್ವಕೀಲಿಯಂ ಮಾಣಿಸಿದಂ (ಕಳನ್ನ. ೯-೩೩).
[ ← ಪಾರ. ದುಮ್ಚಾ ; ಹಿಂ. ಮರಾ. ದುಮಚೀ ]

**ದುಮದುಮಿಸು** 'ದುಮುದುಮಿಸು' ನೋ.

**ದುಮಾನ$_1$** 'ದುಮ್ಮಾನ' ನೋ.

**ದುಮಾನ$_2$** (ನಾ). ಒಂದು ಬಗೆಯ ಡೇರೆ: ಹಲವು ಬಣ್ಣದ ಮುಗಿಲಾಗಸದಿಂದೇತಕಿಳಿದುವೀ ಧರೆಗೆಂದೆನಿಸಿ ತಳಿತುವು ದೂಸು ದುಮಾನ ಗುಡಾರವಾ ಬಲದೊಳು ತಿಂಥಿಣಿಯಾಗಿ (ನಾಗಕು. ೧೫-೦೦೮) ; ಮಹಾಶೂರರಂ ಕಡಿದವರಾನೆ ಕುದುರೆ ಬೊಕ್ಕಸ ದೂಸು ದುಮಾನ ಬಿರುದು ಮುಂತಾದವಂ ಕೊಂಡು (ಸಕವ್ಯ. ೩ ಪ್ರಸ್ತಾವನೆ). 'ದುಮ್ಮಾಳ$_2$' ಪರಾ. [ ? ]

**ದುಮಾಲಿ** (ನಾ). ೧. ಸರ್ಕಾರ ಮತ್ತು ಖಾಸಗಿ ವ್ಯಕ್ತಿ ಈ ಇಬ್ಬರ ಆಳ್ವಿಕೆಗೆ ಒಳಪಟ್ಟ ಗ್ರಾಮ ಅಥವಾ ಜಮೀನು : ದುಮಾಲೀ ಭೂಮಿಗಳ ಪರಭಾರೆ ಜಮಾಖರ್ಚು ಬಿಟ್ಟು ಆ ವರ್ಷದ ಒಟ್ಟು ಆದಾಯ ೩೫೮೬೦೫ ರೂಪಾಯಿ (ಕಥಾಗ. ೩೯೦). ೨. ಖಾಸಗೀ ಒಡೆತನಕ್ಕೆ ಸೇರಿದುದಂ ಇನಾಂಗ್ರಾಮ : ಅರದಲ್ಲಿ ೧೨೦೪ ಗ್ರಾಮಗಳಿದ್ದವು ; ಅವುಗಳಲ್ಲಿ ಸರಕಾರೀ ೧೦೦೩, ದುಮಾಲಿ ೨೦೧ (ಕಥಾಗ. ೩೬೯).
[ ← ಮರಾ. ದುಮಾಲಾ ; ಪಾರ. ದುಬಾಲ್ ]

**ದುಮಿಕ್ಕು** 'ದುಮ್ಮಿಕ್ಕು' ನೋ.

**ದುಮು** (ನಾ). (ಕೋಪ, ಅಸಂತುಷ್ಟಿಯನ್ನು ಸೂಚಿಸುವ) ಒಂದು ಅನುಕರಣ ಶಬ್ದ. 'ದುಮುಗುಟ್ಟು' ಪರಾ.

ದುಮುದುಮು (ದ್ವಿರುಕ್ತಿ) : "ದುಮುದುಮು = ಉರಿಯುವುದು. ರೇಗುವುದು" (ಜಾನಕೋ. ೭) : ಹಗಲೆಲ್ಲ ದುಮುದುಮು ಉರೀತಿರತಾನ (ರಂಗರೋ. ೩೩).

**ದುಮುಕ, ದೂಮುಕ** (ನಾ). ಎರಡು ಮುಖಗಳಿಂದ ಕೂಡಿದುದು : ದೂಮುಕಂ, ದುಮುಕಂ, ದ್ವಿಮುಖಂ (ಶಬ್ದಾನು. ೩೭೭ ಪ್ರಯೋ). **ದೂಮುಕ**: ಮೇಲಿನ ಪ್ರಯೋಗವನ್ನು ನೋಡಿ. [ <ಸಂ.ದ್ವಿಮುಖ]

**ದುಮುಕದುಂಡಿ** (ನಾ). (?) : ಕಸಮಾರಿಗೇಕೆ ದುಮುಕದುಂಡಿ ? (ಗಾದ)
[ ? ]

ದುಮುಕು 'ದುಮ್ಮಿಕ್ಕು' ನೋ.

ದುಮುಗುಟ್ಟು, ದಂಮುಗುಟ್ಟು (ಕ್ರಿ). ೧. ಊದಿಕೊಳ್ಳು ; ದದ್ದರಿಸು ; ಉಬ್ಬು : ಜ್ವರದಿಂದ ಅವಳ ಮುಖ ದುಮುಗುಟ್ಟುತ್ತಿದೆ (ರೂಢಿ). ೨. ಸಿಡುಗುಟ್ಟು; ಅಸಂತುಷ್ಟಿ ತೋರು; ಮುಖಗಂಟಿಕ್ಕು: ಸಿಂಡರಿಸು: ಬೆಳಗಿನಿಂದ ಹುಬ್ಬುಗಂಟಿಕ್ಕಿ ದುಮುಗುಟ್ಟುತ್ತಲೆ ಇದ್ದಳು (ನಡಿದಾ. II. ೯೪೩) ; ಬೆಳಗಿನ ಮೋಡಗಳು, ಕೋಪ ಬಂದ ಮನುಷ್ಯ ಮಾತನಾಡಲಾಗದೆ ಪೋದರೆ ಹೇಗೆ ದುಮುಗುಟ್ಟುತ್ತ ದುಪ್ ಎಂದುಕೊಂಡಿರುತ್ತಾನೋ ಹಾಗಿದ್ದುವು (ನಿಬಂಧ. II, ೧೮೩) : ಯಾವಾಗಲೂ ದುಮುಗುಟ್ಟುತ್ತ ಇರುವುದೇಕೆ ? (ಸ್ವಾಮಿಸ್ನೇ. ೫೭). ದುಮುಗುಟ್ಟು : ೨. "ದುಮುಗುಟ್ಟು = ಸಿಟ್ಟಾಗು ; ಉರಿ" (ಜಾನಕೋ. ೭). [ ದುಮು + ಕುಟ್ಟು$_1$ ]

ದುಮುದುಮನೆ (ಅ). ದಂಮುದುಮು ಎಂಬ ಶಬ್ದದೊಡನೆ : ಅಲ್ಲಿಯ ವರೆಗ ಅವನ ಹೃದಯದಲ್ಲಿ ಹೊರಗಂಡಿ ಕಾಣದೆ ಮಡುಗೊಂಡಿದ್ದ ಪ್ರೇಮ ಪ್ರವಾಹ ದ್ವಾರ ತೆರೆದಂತಾಗಿ ದುಮುದುಮನೆ ಹರಿಯಲಾರಂಭಿಸಿತು (ಪುನರು. ೪೯೮). [ <ದುಮು + – ಅನೆ$_1$ ]

ದುಮುದುಮಿಸು, ದುಂದುಮಿಸು, ದೂಮುದಂಮಿಸು (ಕ್ರಿ). ೧.=ದುಮು ಗುಟ್ಟು ೨ : ಕೋಪವೇ ದುಮುದುಮಿಸುತ್ತಿರುವ ಮೊಗದವರು . . . ನರೆದರು (ಬದುಕಿ. ೧೩೮). ೨. ಆವರಿಸು ; ಇಡುಗು ; ತುಂಬು : ಜಯ ಘೋಷವು ರಾಜಾಂಗಣದಲ್ಲಿ ಸೆರೆದ ಸಂದಣಿಯಿಂದೆದ್ದು ಮೂರು ಬಾರಿ ಬಾಂದಳವನ್ನು ದುಮುದುಮಿಸಿತು (ವೀರಬಂ. ೬೩) ; ಗದ್ದಲದಿಂದ ದುಮು ದುಮಿಸಿದ ಪಡಸಾಲೆ ಬರಿದಾಯಿತು (ಗಂಮಾಯಿ. ೮೭). ದುಂದುಮಿಸು : ೨. ಇಷ್ಟಾಗುವಲ್ಲಿ ಮೇಲಿನ ಧರ್ಮಶಾಲೆಯ ಪರಿಸರದಿಂದೆದ್ದ ಗುಲ್ಲು ಬಾಂದಳವನ್ನು ದುಂದುಮಿಸಿತು (ವೀರಬಂ. ೫೧). ದುಮುದುಮಿಸು : ೩. ಪ್ರತಿಧ್ವನಿಸು ; ಅನುರಣನವಾಗು : ನನ್ನ ಕಿವಿಯಲ್ಲಿ ಹಾಗೆ ದುಮು ದುಮಿಸುವಂತಿದೆ ಆ ಭಜನೆ (ಸ್ಮೃತಿಚಿ. ೪೫೭). [ <ದುಮು + – ಇಸು$_3$ ]

ದುಮ್ಮಜಲು (ನಾ). ಎರಡಂತಸ್ತಿನ ಕಟ್ಟಡ : ಹೂಂ. ದುಮ್ಮಜಲಾಗೇದ. ತೆಳಗ ಮೋಟಾರಖಾನಿ, ಮ್ಯಾಲೆ ಸರ್ವಿಸ ಕಂಪನಿಯ ಆಫೀಸು (ದಾಸಡು. ೯).

[ ದು + ಮಜಲು./ಮರಾ. ದುಮಜಲಾ, ದುಮಜಲೀ ]

ದುಮ್ಮತಿ 'ದುರುಮಂತಿ' ನೋ.

ದುಮ್ಮನ 'ದುಮ್ಮಾನ' ನೋ.

ದುಮ್ಮರಾಸ್ಮೆ 'ದಂಪರಾಸ್ಮೆ' ನೋ.

ದುಮ್ಮಸ (ನಾ). ಒಂದು ಬಗೆಯ ಸಿಹಿಯ ತಿನಿಸು : ಆಕಳ ಹಾಲಾಗ ದುಮ್ಮಸ ಮಾಡ ಪರಡಿ ಸವತೀ ಬೀಜ ಪಾಯಸ ಮಾಡ (ಮಲ್ಲಿಗೆ. ೮೩).

[ ? ]

ದುಮ್ಮಸಾಲೆ 'ದುಮ್ಮಿಸಾಲು' ನೋ.

ದುಮ್ಮಳ$_1$ (ನಾ). ಕಳವಳ ; ಚಿಂತೆ ; ದುಗುಡ: ಕರ್ಮವ ಮಾಡುವಲ್ಲಿ ಆ ಕರ್ಮದ ಮರ್ಮವನರಿಯಬೇಕು ಆ ಮರ್ಮದ ಮರ್ಮವನರಿವಲ್ಲಿ ಉಮ್ಮಳ ದುಮ್ಮಳವೆಂಬ ಸುಖಸುಮ್ಮಾನವೆಂಬ ಉಭಯವಡಗಿದಲ್ಲಿ ಪ್ರಾಣ ಲಿಂಗ ಸಂಬಂಧ (ಮೋಳಿಮಾ. ೭೫-೧೪) : ಒಡನೆ ದುಮ್ಮಳ ತವಿಸುವಂತೆ . ಲಲನೆ ಪರಮೆಗೆ ಸೌಂದರಾಧಿಪನ ಕಂದಿತ್ತು ಸಲಹೈಯ್ಯ (ಸೌಂದಪು. ೮-೬೯). [ <ಉಮ್ಮಳ ]

ದುಮ್ಮಳ$_2$ (ನಾ). ಒಂದು ಬಗೆಯ ಡೇರೆ : ಗುಡಿ ದುಮ್ಮಳ ಚಂಪೆಯ ಗೂಡಾರಂ ಗಡಣಿಸೆ ತರತರದಿಂ ಬಿಡೆ ಕೆಲಕೆಲವೆಡೆಯೊಳು ಚೀನ ಮಹಾ ಚೀನದ ದೇವಾಂಗದ ತಾವಿಗಳಾ (ಕುಮುರಾ. ೧೬-೨೫) ; ಗುಡಿ ಗೂಡಾರಂ ಚೆಲ್ವಂಗಡಿ ಚೌಂಗೆ ಚಂಪೆ ತಿವುರಿ ದುಮ್ಮಳಮಿಮಱೊಂದಡಸಿದ ಪಸುರಿಂ ಕಪ್ಪಿಂ ಕಡುಗೆಂಪಿಂ ಮೆಱೆದುದವನ ಪೊಱವೀಡು ಕರಂ (ದಾಧಪು. ೧೦-೧೯). 'ದುಮಾನ$_2$' ಪರಾ. [ ? ]

ದುಮ್ಮಾನ, ದುಮಾನ$_1$, ದುಮ್ಮನ (ನಾ). ೧. ಮನಸ್ಸಿನ ಉಮ್ಮಳ ; ಚಿತ್ತಕ್ಷೋಭೆ: ಏನುಮಂ ಕಾಣದೋರಂತೆ ಮಱಮಟ್ಟು ದುಮ್ಮಾನಪೊಡಲಂ ಕೀವಿ ತುಳುಕಾಡುತಿರಲು ರಿಪುಭೂನಾಥಶರಧಿವಡಬಾನಲಂ ಮಱೆದು ಚಿಂತಾಚಿತ್ರನಿರುತಿರ್ದನು (ಹದಿಶಾ. ೬-೫೮) : ದುಮ್ಮಾನಂ ತೀರ್ದೊಡೆನಗೆ ರಿಪುಜಯೋಪಾಯಮಾವುದು (ದಶಕು. ೨-೬೫ ವ) : ಕೆತ್ತ ದುಮ್ಮಾನದಲಿ ದ್ರೌಪದಿಯುತ್ತಮೆಯಲಾ ದೃಢಪತಿವ್ರತೆಗೆತ್ತಣದು ಪರಿಭವವಿದೆಂದಸುರಾರಿ ಚಿಂತಿಸಿದ (ಕುಮ್ಯಾಸ. ಓರಿಇ. ೧೫-೧೩೪) : ಆಗ ಬಿಜ್ಜಳಂ ದುಮ್ಮಾನದಿಂ ಕುಳ್ಳಿರೆನಲು (ಬಬಪು. ೭-೨೫) ; ಕಾತರಿಸಿ ಕಳೆಗುಂದಿ ದುಮ್ಮಾನದಿಂ ಪೊಕ್ಕ ನಂತಃಪುರಕೆ ಪುತ್ರವ್ಯಗುವಹಿವನಂತೆ (ಜೈಮಿಭಾ. ೧೮-೪೭) : ಆ ದರೆ ದುಮ್ಮಾನಕ್ಕೆ ಒಳಗಾಗಿದ್ದ ವ್ಯಕ್ತಿಯು ಹುಡುಗಾಟಕೆಯ ಇಲ್ಲವೆ ಬಡಿ ವಾರದ ಮೇಳಕ್ಕೆ ಅರ್ಹತೆ ಪಡೆದಿರಲಿಲ್ಲ (ಹೇಮುಂತ. ೭೮). ೨. ದುಃಖ; ದುಗುಡ : ಅಳಲು ; ಚಿಂತೆ : "ಬೇಪಸಂ, ದುಮ್ಮಾನಂ, ಉಮ್ಮಳಂ – ಈ ೩ ಚಿಂತೆ" (ಕಶಸಾ. ೧೨-೨೨೭); ಕತ್ತಲೆಯಲ್ಲಿ ಗತಿಯು ಕಾಣದೆ ದುಮ್ಮಾನ ನೆಲೆಗೊಂಡಿತ್ತು ಸುಮ್ಮಾನ ಹೋಯಿತ್ತು (ಅವದಂ. ೪೦-೪೭೦) ; ಕಂದ ನುಡಿ ದುಮ್ಮಾನ ಬೇಡೆನ್ನಾಣೆನುತ ಸಂತೈಸಿದನು ಮಗನ (ಕುಮ್ಯಾಸ. ೧೬-೧೩) ; ಕಳೆಗುಂದಿದ ವದನ ದುಮ್ಮಾನವಾರಿಂದಾಯ್ತು (ತೊರರಾ. ೬-೨೬-೬೪) ; ಮನಮನಗಳಿಗೆ ದುಮ್ಮಾನವಡಸಿತು (ಸವತಿ. ೨೦೧) ; 'ಈ ಪ್ರಾಸಾದದಲ್ಲಿ ನನಗೆ ಪುಣ್ಯಭಾಗದ ಲಭ್ಯವಿಲ್ಲ' ಎಂದು ದುಮ್ಮಾನ ಹೊಂದಿ ಒಂದು ಕಡೆ ಅಳುತ್ತಾ ನಿಂತಳು (ಹತ್ತುಮ. ೫೩). ೩. ಕಷ್ಟ ; ಹಿಂಸೆ ; ತೊಂದರೆ ; ಕೆಡುಕಂ : ಭೂನಾಥ ಚಿಟ್ಟದ ಚಾಮೇಂದ್ರ ಬಹು ದುಮ್ಮಾನವಿತ್ತನ್ನ ರಿಪುಗಳಿಗೆ (ಕಂಠವಿ. ೩-೮೧); ಒಡಲಿನಬ್ಬರವೇನು? ಆತುಮದ ನಾಣ್ಕೇನು? ಪೊಡವಿಗಿದೆ ದುಮ್ಮಾನ (ಮಂಕುಕ. ೧೯೧); ಬಿಲದೊಡತಿ ನಾನಿಂತು ಅಳಿಯೆ, ಬಲು ದುಮ್ಮಾನ ಕುಲಕೆ ಬಹುದನುಮಾನ ಬೇಡ, ತಿಳಿಯಮ್ಮಾ ! (ಕವಿಪು. ೩೩-೩). ೪. ಅವಮಾನ; ಅಪಮಾನ : ಅಖಿಳ ಧರಣೀಪಾಲಕರ ದುಮ್ಮಾನವನು ಪಾಂಚಾಲದೇಶವ ಕಳೆದು ಹೊಕ್ಕರು ತಮ್ಮ ನಗರಿಗಳ (ಕುಮ್ಯಾಆ. ೧೬-೧) ; ಮುದಿ ತುಂಬುರಂಗೆ ಸಮ್ಮಾನವಮ್ಮೆಡೆಯೊಳೆನಗೆ ದುಮ್ಮಾನವಾದುದು ಗಡ ! (ಅದ್ಭುತ. ೨೦-೯): ನೆಲಗಟ್ಟನ್ನು ನೀರೆಂದು ಭ್ರಮಿಸಿ ತಾನು ಉಟ್ಟಿದ್ದ ಬಟ್ಟೆಯನ್ನು ಮುದುರಿಕೊಂಡನು. ಅದು ನೀರಲ್ಲ ವೆಂದು ತಿಳಿದಾಗ ದುಮ್ಮಾನದಿಂದ ಮುಖ ತೋರಿಸದೆ ಮುಂದೆ ಹೋದನು (ವದಧಾ. ೮೭). ೫. ಅಸಮಾಧಾನ ; ಅಸಂತುಷ್ಟಿ : ಒಮ್ಮೆ ನಿಸ್ನೊಳಗೆ ಪತಿಯು ಬಗೆ ದುಮ್ಮಾನವಾಗೆ ... ಸುಮ್ಮನಿಹುದು ಗುಣವಮ್ಮ (ಶಾಕುಂತ. ೫೭ ಅತಿಪದ್ಯ). ದುಮಾನ$_1$ : ೨. ಸುಮಾನ ಹೋಗಿ ದುಮಾನವಾಯಿತು ಮತ್ತೆ ಜನಪತಿಗೆ (ಪ್ರಭುಲೀ. ೧೧-೨೨). ದುಮ್ಮನ : ೨. "ದುಮ್ಮನ – ದುರ್ಮನಸ್ = ವ್ಯಥೆ" (ತದ್ಭಕೋ. ೨೦) ; ಕಱದನುರಾಗಮಂ ಕಱೆದು ದುಮ್ಮನಮಂ ... ಸೆಱೆವಿಡಿದೆನ್ನ ವಲ್ಲಭೆಯ ಮುದ್ದುಮೊಗಂ ವ್ಯಭಿಚಾರ ವಿಶ್ರಮಂ ಮೆಱೆದಪುದೋ ದಿನಾಗಮದ ರಾತ್ರಿವಿರಾಮದ ಪದ್ಮದಂದದಿಂ (ಅರ್ಧನೇ. ೧-೧೧೧) : ವಿಜಯವಿಠ್ಠಲ ಮಹಮೂರುತಿ ಘಮ್ಮನದಿಂದಲಿ ಬಂದು ದುಮ್ಮನವ ಕಳೆವ (ವಿಸಾಸು. ೩೩-೨).

[ <ಪ್ರಾ. ದುಮ್ಮಣ./ಸಂ. ದುರ್ಮನಸ್ ]

ದುಮ್ಮಾನಗೊಳು (ಕ್ರಿ). ಚಿಂತಿಸು ; ಬೇಗುದಿಗೊಳ್ಳು : ತನ್ನ ಮನದಲ್ಲಿ ದಕ್ಷ ದುಮ್ಮಾನಗೊಳುತ ಮಿಗೆಯನ್ನಪಾನಾದಿ ಭೋಗಗಳ ಕೊಳ್ಳದೆ ಮಗಳ ಮನ್ನಿಸುತ್ತಿತ್ತುದಕೆ ಫಲವಲಾ (ದಕುಪು. ೩-೮-೧೮).

[ ದುಮ್ಮಾನ + ಕೊಳು ( <ಕೊಳ್$_1$) ]

ದುಮ್ಮಾನತತಿ (ನಾ). ದುಗುಡದ ಸಮೂಹ : ಒಡನೆ ಸುರರಿಗೆ ಹತ್ತಿತ್ತೈ ದುಮ್ಮಾನತತಿ ನರನಾಥ ಕೇಳೆಂದ (ಅಂಬಿಕಾ. ೭-೪೯).

[ ದುಮ್ಮಾನ + ತತಿ$_2$ ]

**ದುಮ್ಮಾನಮನ** (ನಾ). ಚಿಂತೆಯಿಂದ ಕೂಡಿದ ಮನಸ್ಸುಳ್ಳವನಂ: ಯೋಚನೆಯಿಂದ ತುಂಬಿದವನು: ದೇವಿಯುರಿರವು ತನ್ನಯ ಕಂಗಳಿಗೆ ಗೋಚರಿಸುವುದು ದುರ್ಲಭವೆನುತ ದುಮ್ಮಾನಮನನಾದ (ಕೊರರಾ. ೫-೩-೫). [ ದುಮ್ಮಾನ + ಮನ₁ ]

**ದುಮ್ಮಾನಪಡು** (ಕ್ರಿ). ವ್ಯಥೆಪಡಂ: ದುಃಖಿಹೊಂದಂ: ಬೊಮ್ಮನೇ ಸಂಸ್ಕೃತಿಯು ಕಟ್ಟಿಕೊಂಡುತ್ಸಹಿಸೆ . . . ಜನ್ಮ ಸಾಕೆನುವುದೇಂ ? ದುಮ್ಮಾನಪಡುವುದೇಂ (ಮಂಕುಕ. ೨೭೨). [ ದುಮ್ಮಾನ + ಪಡು₁ ]

**ದುಮ್ಮಾನಿಸು** (ಕ್ರಿ). ಕಳವಳದಿಂದ ಕೂಡಿರು: ದೂರದಲಿ ದುಮ್ಮಾನಿಸಿದ ವದನಾರವಿಂದವ ಕಂಡು . . . ಶೌರಿಗಾಯ್ತುವಮಾನವಿದೆಲೇ ಮಾರಿ ಗುತ್ತಿವವೆನುತ ಬಂದನು ಮಾರುತನ ಮಗನು (ಕುಬ್ಮಾಲು. ೧೧-೨).
[ ದುಮ್ಮಾನ + – ಇಸು₃ ]

**ದುಮ್ಮಿ, ದಿಮ್ಮಿ₂** (ನಾ). ೧. ಒಂದು ಬಗೆಯಂ ಚರ್ಮವಾದ್ಯ. ೨.=ದುಮ್ಮಿಸಾಲು: ನೀರಾಜನಪದಂಗಳಂ ದುಮ್ಮಿಯು ಪದಂಗಳಂ ಪಾಡುತೊಸೆದು (ಆರಾಡ. ೧-೨೫): ದುಮ್ಮಿಸಾಲು ರಾಮನಿಂಗೆ ದುಮ್ಮಿ ತಜ್ಜನಕನಿಂಗೆ ನೆಮ್ಮಿ ಭಜಿಸಿ ನಿಜವನರಿತು ಕಾಮಹರನನು (ಕವಿಡ. III, ೮೦ ; ಕಾಮವಿಡಂಬನ). **ದಿಮ್ಮಿ₂**: ೧. ಕಲಾವಿದರು ದಿಮ್ಮಿಯನ್ನು ಕೈಯಲ್ಲಿ ಹಿಡಿದು ಕುಣಿತಕ್ಕೆ ಸಿದ್ಧರಾಗುತ್ತಿದ್ದಾರೆ (ರೂಢಿ). 'ದುಂದುಮೆ' ಪರಾ. [ <ದುಂ./ತುಳು. ದಿಮ್ಮ ]

**ದುಮ್ಮಿಕ್ಕು, ದುಮಿಕ್ಕು, ದುಮಯಕು, ಧುಮುಕಂ, ಧುಮ್ಮಿಕ್ಕು** (ಕ್ರಿ). ೧. ಕೆಳಗೆ ಹಾರು,-ನೆಗೆ ; ಎರಗು: ಕೂಪನಿರೀಕ್ಷಣಂಗೆಯ್ದಲ್ಲಿ ಸಿಸುವಂ ಕಂಡು ವಾತ್ಸಲ್ಯದಿಂ ನೆಲೆಗೊಡದ ವಿಷಮಯಮಪ್ಪ ಭಾವಿಯಂ ದು[ಪಾಠಾಂ. ಧು]ಮ್ಮಿಕ್ಕೆ (ಜೀವಸಂ. ಪರಿ. ೧-೨೩೭): ಕಿಚ್ಚಿಗಳಲ್ಲಿ ದು[ಪಾಠಾಂ. ಧು]ಮ್ಮಿಕ್ಕಿ ಮುಳುಗುತ ಸಚಿಗಳಂ ತಾಪದರುತಂ ಒರಿದೊಬಲುತಳುತಂ . . . ಅಖಿಳ ಜೈನರು ಹೊರಳುತಿರಲು (ಬಸಪು. ೫೨-೧೫) ; ಹಕ್ಕಿಗಳರಸ ಜೀಮೂತವಾಹನಗೆ ದುಮ್ಮಿಕ್ಕಿದೊಲೆಬಿಗಿ ರಕ್ಕಸನ ಸಿಕ್ಕಿಸಿ ತಲೆಮುಚ್ಚಿವಂತೊದ್ದು ನೆಲದೊಳಗಿಕ್ಕಿದ (ಮೋಹಕ. ೧೨-೯೪); ಇಳೆಯು ಮೇಗಣ್ಗೆ ದುಮ್ಮಿಕ್ಕಿ . . . ದಕ್ಷನಂ ತುಡುಕಿ ಕಡುಪಿಂ ಕೆಡಪಿ ಗೋಣ್ಗೊಚಿದ ವೀರಭದ್ರಂ (ನಂದಿಮೂ. ೧-೮) ; ತಲೆಗೆದರಿ . . . ತಿಲಪಿಷ್ಟಮಂ ಮೆಲುತ ತೈಲಪಾನದಿ ತಾವ ನಿಲದೆಂದು ದು[ಪಾಠಾಂ. ಧು]ಮ್ಮಿಕ್ಕಿದಂ ಗೋಮಯಹೃದಕ್ಕೆಂದು ಕಂದಿದಾನನದಿ ಪಿತನು (ಬಂಕಾಗಾ. ೨-೨೪-೩೨). ೨. ಹೊರಸೂಸು ; ಹೊರಹೊಮ್ಮು ; ಪ್ರಕಟಪಡಂ: ಕಂಡಳವಳೀ ರಾಜಚಂದ್ರಮನ ದೂರದಲಿ ದು[ಪಾಠಾಂ. ಧು]ಮ್ಮಿಕ್ಕಿದುದು ದೃಢವೈರ ದರುಶನಮಾತ್ರದಲಿ (ಕೊರರಾ. ೩-೪-೭) ; ದುಂದುಭಿನಿನಾದವಾದಂತೆ ಮಂತನ ವಾಗ್ಸರಿ ದುಮ್ಮಿಕ್ಕಿತು (ದಾನಜಿಂ. ೧೩). **ದುಮಿಕ್ಕು**: ೧. ಮುಗಿಲನೆತ್ತಿ ದು[ಪಾಠಾಂ. ಧು]ಮಿಕ್ಕ ಪೆರ್ಗಡಹುಗಳನೊಡಬಡಿ (ಬಸಪು. ೫೭-೩೭). **ದುಮುಕು**: ೧. "ಎಸೆವುದುಂ ದುಮುಕೆನಲ್ ಲಂಘನಕೆ" (ಕಶಿರ. ೧೨೫) ; ಧರ್ಮಸ್ರಾವಕೇಂದ್ರನು ಮುಂದ ಬಸದಿಯನೇಚಿ ದು[ಪಾಠಾಂ. ಧು]ಮುಕಿದನು (ಬಸಪು. ೫೨-೦೭) ; ಪ್ರಾಣಸ್ಪಂದನವು ನಿಂತುಬಿಟ್ಟರೂ ಸಾವು ದುಮುಕ ಸಲ್ಲ ಉಸಿರು ಹಿಂಗಿಯೂ . . . ಆತ ಬದುಕಬಲ್ಲ (ಅರಳು. ೨೧೯-೧೫) ; ದುಮುಕಿದರೆ ದುಃಖ ಹೋದೀತೆ ? (ಗಾದ). ೩. ಧಾವಿಸು ; ನುಗ್ಗು ; ಮುನ್ನುಗ್ಗು: ಅವುಗಳನ್ನು ನೋಡಿ ಮನಸ್ಸು ಚಕಿತವಾಗಿ ಸಂಶೋಧನೆಗೆ ದುಮುಕುವುದು (ಕನ್ನಜಾ. ೧೯೦). ೪. ದಂಡುಕು ; ವಿಚಾರವಿಲ್ಲದೆ ಪ್ರವೇಶಿಸಂ: ಯಾವ ಕೆಲಸವೇ ಆಗಲಿ, ಹಿರಿಯರ ಸಲಹೆಯನ್ನು ಕೇಳದೆ ಒಂದೇ ಸಲ ದುಮುಕಬಾರದು (ರೂಢಿ). **ಧುಮುಕು**: ೧. ಮಡುವ ಧುಮುಕಿ ಕಾಳಿಂಗನ ಒಡಿದು ಹೆಡೆಯ ಮೇಲೆ ಕುಣಿದಾಡುತ್ತಿರೆ (ಪುರಂದ. ೧-೯೭-೪) ; ಅವನು ಪೌಳಿಯಿಂದ ಧುಮುಕಿ ಹುಡುಗಿಯರ ಹಿಂದೆ ಓಡಿದನು (ಬಾಳನಾ. ೧೯೪). ೩. ಹಜ್ಜೆಯಿಟ್ಟಲ್ಲೆಲ್ಲ ಜೋರಿ ಹಿಡಿದಿದೆ ಮಣ್ಣು ಧುಮುಕುತಿದೆ ನೀರು (ನೆಲಮು. ೩೦-೩) ; ಅದು ತಕ್ಷಣವೇ ಬೊಗಳುವುದನ್ನು ನಿಲ್ಲಿಸಿ ಕಿಂಡಿಗಾಗಿ ಧುಮುಕುತ್ತಿತ್ತು (ಕಾಲಮು. ೧೯೪). ೪. ಹಲವು ಮಕ್ಕಳು ಪ್ರಶ್ನೆಯನ್ನೂ ಸಮಸ್ಯೆಯನ್ನೂ ಅರ್ಥಮಾಡಿಕೊಳ್ಳದೆಯೇ ಉತ್ತರಿಸಲು ಧುಮುಕುವರು (ಶಿಕ್ಷದ. ೫೪೫). **ಧುಮ್ಮಿಕ್ಕು**: ೧. ಜೀವವಂ ತ್ಯಜಿಸುವೆನೆನುತ್ತಂ ಬಾವಿಯೊಳು ಧುಮ್ಮಿಕ್ಕಿ ಬಿದ್ದಂತಾತನಂ ಹಿಡಿದು (ಬಸಪು. ೦೩-೯); ರಥದಿಂ ಪೊಡವಿಯೊಳು ಧು[ಪಾಠಾಂ. ದು]ಮ್ಮಿಕ್ಕಿದನು (ಕುದ್ಯಾಭೀ. ೭-೩೫); ಧುಮ್ಮಿಕ್ಕಿದನು ಧರೆಗೆ (ತೊರರಾ. ೩-೨-೨೨); ಕಲ್ಲಬಂಗಳ ಮೇಲೆ ಧುಮ್ಮಿಕ್ಕಿ ನೃತ್ಯವನಾಡುವಂತೆ (ಬೋಪಕ. ೧೯-೭೪): ಪ್ರಗುವೆನಂಗುಷ್ಠಮಾತ್ರದಿ ಕೇಳು ಘೋರತರ ಮೊಗವನೆಂದೆನುತ ಧುಮ್ಮಿಕ್ಕಿ ವದನವ ಪೊಕ್ಕು (ವೆಂಕರಾ. ೫-೧-೫೦) ; ದಿನಪನಿತೆ ಧುಮ್ಮಿಕ್ಕಿ ಪಶ್ಚಿಮ ಸಮುದ್ರಕ್ಕೆ. ಚಿಮ್ಮಿದುವು ರತ್ನಾಳಿ ತಳದಿಂ ನಭೋಗಣಕೆ (ಶ್ರೀರಾಮಾ. ೨೬೦-೮೭೭) ; ಆವ ಸಾಗರಕೆಲ್ಲಿ ಹೋಗಿ ಸೇರುವುದೊ! ಆವ ಕಡೆ ಧುಮ್ಮಿಕ್ಕುತಲ್ಲಿ ಸುಳಿಯುವುದೊ! (ವಿಸೀಗೀ. ೯-೦೭). ೪. ಏಕಾಏಕಿ ಧುಮ್ಮಿಕ್ಕಬಾರದು. ಸಾವಧಾನವಾಗಿ ಮೆಲ್ಲಮೆಲ್ಲನೆ ಕಾರ್ಯವನ್ನೆಸಗಬೇಕು (ಕುರುಕಾ. ೧೨೯).
[ ದೇ.೫ ತುಳು. ದುಮುಕು; ತೆಲು. ದುಮುಕು, ದುಮುಕ್ಕು ]

**ದುಮ್ಮಿಸಲೆ** 'ದುಮ್ಮಿಸಾಲು' ನೋ.

**ದುಮ್ಮಿಸಾಲು, ದಿಮಿಸಾಲೆ, ದಿಮ್ಮಿಸಾಲು, ದುಮ್ಮಸಾಲೆ, ದುಮ್ಮಿಸಲೆ, ದುಮ್ಮಿಸಾಲೆ** (ನಾ). ವಾದ್ಯದ ಸಂಗತಿಯೊಡನೆ ಹಾಡುವ ಒಂದು ಬಗೆಯ ಹಾಡು: ದುಮ್ಮಿಸಾಲು ರಾಮನಿಂಗೆ ದುಮ್ಮಿ ತಜ್ಜನಕನಿಂಗೆ ನೆಮ್ಮಿ ಭಜಿಸಿ ನಿಜವನರಿತು ಕಾಮಹರನನು (ಕವಿಡ. III, ೮೦; ಕಾಮವಿಡಂಬನ). **ದಿಮಿಸಾಲೆ**: ಇಲ್ಲಿನ ಮೂಲನಿವಾಸಿಗಳ ಒಂದು ಬಳಗದವರು ಮನೆಮನೆಗೆ ಬರುತ್ತಾರೆ. ಅವರು ಸ್ವಂತ ಬೇಸಾಯಗಾರರಲ್ಲ. ಅವರಲ್ಲಿ ಒಬ್ಬಾತ . . . 'ದಿಮಿಸಾಲೆ' ಎಂಬ ಪಲ್ಲವಿಯುಳ್ಳ ಒಂದು ಹಾಡನ್ನು ಹಾಡುತ್ತಾನೆ. ಸಾಲೆ, ಶ್ಯಾಲಿ ಅಕ್ಕಿಯ ಹೆಸರಾದುದರಿಂದ ಪೂರ್ವದ ಕೃಷಿಯ ಸಂಸ್ಕಾರಕ್ಕೆ ಸಂಬಂಧಿಸಿದುದು ಎಂದು ಊಹಿಸಬಹುದು (ಜಾನಗೀ. ೮೪); ಕುಂದಾಪುರದ ಕಡೆ ಪಾಡುವ ದಿಮಿಸಾಲೆ ಹಾಡಿನ ಕೊನೆಗೆ 'ಕಾಮನ ಭೀಮನಾ ಹೋಳಿಯ ಹಬ್ಬ' ಎಂಬ ಸೊಲ್ಲು ಬರುತ್ತದೆ (ಜಾನಗೀ. ೮೫). **ದಿಮ್ಮಿಸಾಲು**: ದಿಮ್ಮಿಸಾಲೆನ್ನಿ ಚಿಕ್ಕ ತಮ್ಮಗಳಿರಾ (ವಾದಿಕೀ. ೭೧ ಪಲ್ಲವಿ). **ದುಮ್ಮಸಾಲೆ**: ನಲಿದು ಮುಡುವಿಕ್ಕಿ ಗುಮ್ಮಡಿಗೆಲವಂ ಪೆರ್ಗರಡಿಯಂತೆ ಕುಪ್ಪಿಕ್ಕಿ ಕರಂ ಕೆಲವಂ ಕಣ್ಣಪ್ಪಂ ಮುಂದಲೆ ದುಬುಬಿಂ ದುಮ್ಮಸಾಲೆಯೆನುತಂ ಕೆಲವಂ ಪಿರಿದುಂ ಕೊಂಬು ಕೊಳಲ್ ಪಹೌವರಿಗಳ ನುಣ್ಚರಮನಾಸ್ಯದೊಳ್ ತೋಱುತ್ತ (ಶ್ರಿಪುವಿ. ೨೭-೧೩೭). **ದುಮ್ಮಿಸಲೆ**: ಮುಂದೆ ತುಬುಬುಂ ಕಟ್ಟಿ ದುಮ್ಮಿ [ಪಾಠಾಂ. ದುಂಬಿ] ಸಲೆಯಾಡುತಂ ಧುಂದಧುಂದದ ಬೇಡರಾಟಮಂ ತೋಱುತಂ (ಕಡ್ಡರ. ದೀ. ೧೩೯-೯). **ದುಮ್ಮಿಸಾಲೆ**: "ದುಂದುಂಪಿಂ ; ಹೋಳಿಯಂ ಹಾಡು ; ಕಾಲಜ್ಞಾನ ಪಲ್ಲವಿ" (ಜಾನಕೋ. ೭). ☞ 'ದಿಮ್ಮಸಾಲೆ' ಎಂದು ಕೊನೆಯಾಗುವ ಹಾಡಂಗಳನ್ನು ಹಾಡುವವನಿಗೂ ಈ ಹೆಸರಂ ಉಪಯೋಗವಾಗಂತ್ತದೆ. ಶ್ರೀರಂಗಪಟ್ಟಣದ ಕಡೆಯಲ್ಲಿ 'ಬಿಸಿಲು ಮಾರಮ್ಮ'ನ ಗಂಡ ಎಂಬ ಅರ್ಥದಲ್ಲಿ ಇದನ್ನು ಬಳಸುತ್ತಾರೆ.
[ ದುಮ್ಮಿ + ಸಾಲು₂ (<ಸಾಲ್₁) ]

**ದುಮ್ಮಿಸಾಲೆ** 'ದುಮ್ಮಿಸಾಲು' ನೋ.

**ದುಮ್ಮಿಸು** (ಕ್ರಿ). [illegible] ಸೂಚಿಸು: ಮಾತಾಡದ [illegible] ಮಾತಾಡ್ತೀವಿ ಹೇಳಿ (ನಿಂಡನ. ೨೭). [ ದುಮ್ಮು₁ + – ಇಸು [illegible] ]

ದುಮ್ಮು$_1$, ಡುಬ್ಬ, ಡುಬ್ಬು, ಡುಮ್ಮಿ, ಡುಮ್ಮು, ದುಡುಮ್ಮು$_2$, ದುಬ್ಬು (ನಾ). ೧. ದಪ್ಪನಾಗಿರುವುದು ; ಬೊಜ್ಜುಬೊಜ್ಜಾಗಿ ಬೆಳೆದುದು : ಹೊಟ್ಟೆಗೆ ಹಾಕುತ್ತಿದ್ದುದು ಗಂಜಿ ನೀರಾದರೂ ಆ ಮರಿ ದುಮ್ಮುದುಮ್ಮಾಗಿ ಬೆಳೆಯಿತು (ಮಳಮ. ೭). ೨. ಹೊಟ್ಟೆ : ದುಮ್ಮಿನಿಂದ ಹಮ್ಮು ಕಳಕೊಂಡ (ಗಾದೆ). ಡುಬ್ಬ : ೩. ಮೇಲಕ್ಕೆ ಉಬ್ಬಿಕೊಂಡಿರುವುದು ; ಉಬ್ಬಿದುದು : ಅಂಗಿಯ ಮೇಲೆ ಎದ್ದು ನಿಂತಿದ್ದ ಡುಬ್ಬದ ಮೇಲೆ ಕೈ ಆಡಿಸ (ಬಳಜೀ. ೮೯). ೪. ಒಂಟೆ, ಗೂಳಿ ಮೊದಲಾದುವುಗಳ ಬೆನ್ನಿನ ಮೇಲಿರುವ ಉಬ್ಬು, ಮೇಲಕ್ಕೆದ್ದಿರುವ ದುಂಡನೆಯ ಭಾಗ : ಎಂರಜಿಯ ಒಂಟೆಯ ಡುಬ್ಬದಂತಹ ಮಹಾ ವೀಥಿಯಲ್ಲಿ ಟ್ರಕ್ಕು ಏರಿ ಇಳಿದಾಗ ಜೋಕಾಲಿಯ ಜೀಕು ಕೊಡುತ್ತಿತ್ತು (ದೀಪಹ. II, ೩೯೪) ; ಯಾವ ಡುಬ್ಬ (ಹಿಣಲು) ವೃಷಭದ ಕಾಂತಿಯನ್ನು ವೃದ್ಧಿಗೊಳಿಸುವುದೊ ಆ ಡುಬ್ಬವು ಆಕಳಿಗಿಲ್ಲ (ಕಮುಕ. ೭೩). ೫. ಬೆನ್ನು ; ಶರೀರದ ಹಿಂಬದಿ : ನೀನು ನನ್ನ ಡುಬ್ಬವನ್ನು ಹಿಡಿದುಕೊಂಡು ಬಾ, ನಾನು ನಿನ್ನನ್ನು ಆಚೇ ದಂಡೆಗೆ ಸುರಕ್ಷಿತವಾಗಿ ಒಯ್ಯುವೆನು (ಅಂಬಿಕ. ೧೦೯) ; ಗುರುಗಳು ಹೊರಗೆ ಹೋಗುವುದೊಂದೇ ತಡ . . . ಇಳಿಜಾರು ಮೇಜು, ವಿದ್ಯಾರ್ಥಿಗಳ ಡುಬ್ಬ ಮುಂತಾದುವುಗಳ ಮೇಲೆ ಸಪ್ಪಳ ಹೊರಡುತ್ತಿತ್ತು (ರಕ್ತಧ್ವ. ೦೨೭). ಡುಬ್ಬು : (೩). ಡುಮ್ಮಿ : (ಗು). ೬. ದಪ್ಪವಾದ ; ಉಬ್ಬಿದ : ಏನು ಮಾಟ ಶಿವ ಡುಮ್ಮಿ ಡುಮ್ಮಿ ಹೊಟ್ಟೆ (ಶಲಾನ. ೬೦-೭). ಡುಮ್ಮು : ೧. ನೋಡುವುದಕ್ಕೆ ಡುಮ್ಮು ಡುಮ್ಮಾಗಿದ್ದರೂ ಶಕ್ತಿ ಮಾತ್ರ ಸ್ವಲ್ಪವೂ ಇಲ್ಲ (ರೂಢಿ). ದುಡುಮ್ಮು$_2$ : ೧. 'ದುಡುಮು' ಪರಾ. ದುಬ್ಬು : ೧. 'ದುಬ್ಬ' ಪರಾ.

ದುಮ್ಮು$_2$ 'ದುಂಪು' ನೋ.

ದುಮ್ಮೆಸಗು (ಕ್ರಿ). ದೂಳೆಬ್ಬಿಸು ; ನಾಶಮಾಡು : ಮಕುಟವ ಚಿಮ್ಮಿದವು ಮುಮ್ಮಖದಿ ಕವಚವ ಸೆಮ್ಮಿದವು ದುಮ್ಮೆಸಗಿ ಮಹಿಷಾಸುರನ ಶರಜಾಲ (ಅಂಬಿಕಾ. ೨೩-೨೩). [ ದುಮ್ಮು$_2$ (<ದುಂಪು) + ಎಸಗು$_1$ ]

ದುಮ್ಮೇಳು (ಕ್ರಿ). ರಭಸದಿಂದ ಏಳು; ಒಮ್ಮೆಲೆ ಮುನ್ನುಗ್ಗು : ಇಕ್ಕೆದರ್ ಚೀಲಗಳ್ದುಮ್ಮೆದ್ದು ಫಲಗಳಂ ಮುಕ್ಕಲದ ನಾರಿಗುಸರಲ್ಬೇಕು ಭೂಪ ನಿನ್ನಕ್ಕಳಿಗೆ ಬಹಳ ಬಲವಿದ್ದೇನು ದೈವಬಲವಿಲ್ಲ (ತುರಂಗ. ೫೪-೩೮) ; ಧಾಳಿಯಿಟ್ಟುದು ಸೇನೆ ಕರಿಘಟೆ ತುರಂಗಚಯ ಹೊಳೆದವು ಕಡುಹಿನೋಳ್ದುಮ್ಮೆದ್ದು ನೂಕೆ (ತುರಂಗ. ೬೩-೨೦). [ ದುಂ + ಏಳು$_1$ (<ಎೞ್$_1$) ]

ದುಯಂ 'ದುಯ್ಯಂ' ನೋ.

ದುಯಂತರಾಘಂಟೆ (ನಾ). ಎರಡನೆಯ ಮೆಟ್ಟಲಿನ ಘಂಟೆ : ರಥದ ಅಲಂಕಾರಕ್ಕೆ . . . ಆವಲುತರಾಘಂಟೆಗಳೂ × × × ೫೨ ದುಯಂತರಾ ಘಂಟೆಗಳೂ × × × ೧೩೪ ಸಿಯಂತರಾಘಂಟೆಗಳೂ (ಎಕ. XIV, ನಂಜನ. ೨೯೨--ಪುಟ. ೧೪೨ ; 1847).

[ ದುಯಂ (<ದುಯ್ಯಂ) + <ತರ$_3$ + ಘಂಟೆ ]

ದುಯುನೃತ್ಯ (ನಾ). [ನಾಟ್ಯ] ದ್ರುತಗತಿಯ ಒಂದು ಬಗೆಯ ನೃತ್ಯ : ಮೇಘಕುಮಾರರಾಜನ ಆಸ್ಥಾನದಲ್ಲಿ ದುಯುನೃತ್ಯ, ವಿಲಂಬಿತನೃತ್ಯ, ಆರ್ಭಟನೃತ್ಯ, ವಿಭವನೃತ್ಯ ಮುಂತಾದ ನಾಟ್ಯಗಳು ಅಭಿನಯಿಸಲ್ಪಡುತ್ತಿದ್ದುವೆಂದು ಉಕ್ತವಾಗಿದೆ (ಭಾರದ. ೫೫೧).

[ ದುಯು$_0$ (℗← ಪ್ರಾ. ದುಅ) + ನೃತ್ಯ ]

ದುಯ್ಯಂ, ದುಯಂ, ದೂಯಂ (ಗು). ೧. ಎರಡನೆಯ ಗಣನೆಯ,- ದರ್ಜೆಯ : ಅವ್ವಲು ದುಯ್ಯಂ ಶೀಯ್ಯಂ ಭೂಮಿಗೆ ಕೃಷ್ಣರಾಜ ಖಂಡಗ ಭೂಮಿಗೆ ಯಿಷ್ಟು ಖಂಡಗ ದವಸಾ ಯೆಂಬದಾಗಿ ಡವಲು ಕಟ್ಟಿ (ಮಹಾವಂ. II, ೭೦) ; ಜೂನಿಯರ್ (Junior)ಎಂದರೆ ದುಯ್ಯಂ ಕವಿಶಾಸನರೆಂದೂ ಹೀಗೆ ಇಬ್ಬರು ಕವಿಶಾಸನರನ್ನು . . . ನೇಮಿಸಿದರು (ಮಹಾವಂ. II, ೯೮). ದುಯಂ : ೧. 'ದುಯಂಪ್ರತಿ' ಪರಾ. ೨. ಕೈ ಕೆಳಗಿನ ; ಅಧೀನ : ಆ ಕಾಲದಲ್ಲಿ ರಾಯಚೂರಿನಲ್ಲಿ ದುಯಂ ತಾಲ್ಲೂಕು ದಾರ(Assistant Commissioner)ನಾಗಿದ್ದ ಮುಸಲ್ಮಾನ ಅಧಿಕಾರಿ ೩. ಯೊಬ್ಬನು . . . ದರ್ಶನಕ್ಕೆ ಬಂದನು (ಕಥವಿ. II, ೩೮೦). (ನಾ). (ಅಂತಸ್ತು ಅಥವಾ ಯೋಗ್ಯತೆಯಲ್ಲಿ) ಎರಡನೆಯ ದರ್ಜೆ (೩). : ದೂಯಂ : ೪. ಎರಡನೆಯದು : ಅವ್ವಲ್, ದೂಯು, ಸೀಯಂ, ಚಾರಂ ನಾಲ್ಕನು ಹೇಳುವರಂತೆಲೋ ಸೀಯಂ ನಂಬರು ದೂಯಂ ಮಾಡುವ ಸಬೂಬ್ ಜವಾಬ್ ನೋಡೆಲೋ (ನಾಪದ. ೧೬೦).

[ ←ಪಾರ. ದುಯುಮ್ ; ಮರಾ. ದುಯ್ಯಮ್, ದುಯಮ್ ]

ದುಯ್ಯಂಖಿಸ್ತು (ನಾ). ಎರಡನೆಯ ಕಂತು : ಬದಸ್ತೂರು ದುಯ್ಯಂಖಿಸ್ತು ಮಾರ್ಗಶಿರ ಲಾಗಾಯ್ತು . . . ಐವಜು ಕಾರ್ತಿಕ ಮಾಲದ ಭತ್ತ ಕಾಡಾರಂಭ ಮಹಾಸೂಲು ಆಗುತ್ತಾ ಇದೆ (ಮಹಾವಂ. II, ೭೭).

[ ದುಯ್ಯಂ + ಖಿಸ್ತು (<ಕಿಸ್ತು) ]

ದುಯ್ಯಂಪ್ರತಿ (ನಾ). ಎರಡನೆಯ ಪ್ರತಿ ; ನಕಲು : ಆ ಬಗ್ಗೆ ಇನ್ಸ್‌ಪೆಕ್ಟರು ಹಿಂದೆ ಕಳಿಸಿದ್ದ ದಾಖಲೆಗಳು ಕಛೇರಿಯಲ್ಲಿ ದೊರೆಯದ್ದರಿಂದ ದುಯ್ಯಂ ಪ್ರತಿಗಳನ್ನು ಮಾಡಿ ಕಳಿಸಬೇಕೆಂದೂ ಆಜ್ಞೆಮಾಡಿದ್ದರು (ರಂಗಕ. ೧೭೫).

[ ದುಯ್ಯಂ + ಪ್ರತಿ ]

ದುಯ್ಯಂಬಾರ್‌ಕಛೇರಿ (ನಾ). ಅಠಾರಾ ಕಛೇರಿಯ ಹದಿನೆಂಟು ಇಲಾಖೆಗಳಲ್ಲಿ ಒಂದು : ತಾಲ್ಲೂಕುಗಳೂ ಮತ್ತು ಈ ಗಡಿಗಳ ಒಟ್ಟು ವಿಚಾರಣೆ ಮಾಡುವುದಕ್ಕೋಸ್ಕರ . . . ೬. ಫೌಜುದಾರಿ (ತುಕಡಿ)ಗಳೂ ಸ್ಥಾಪಿತವಾದುವು. ಅದರ ವಿವರ :—ಕಛೇರಿಗಳು—೧. ದಿವಾನ್ ಕಛೇರಿ . . . ೧೪. ದುಯ್ಯಂಬಾರ್ ಕಛೇರಿ, ೧೫. ಜನಸಿ ಕಛೇರಿ (ಮಹಾವಂ. II, ೩೯) 'ಅಠಾರಾಕಛೇರಿ' ಪರಾ.

[ ದುಯ್ಯಂಬಾರ್? + ಕಛೇರಿ (<ಕಚೇರಿ) ]

ದುರ್‌-(ಉಪ). ಕೆಟ್ಟದ್ದನ್ನು ಸೂಚಿಸುವ ಸಂಸ್ಕೃತದ ಒಂದು ಉಪಸರ್ಗ; ℗ ಸಂಸ್ಕೃತ ಶಬ್ದದ ಸಾದೃಶ್ಯದ ಮೇಲೆ ರೂಪಿತವಾದ ಕನ್ನಡ ಶಬ್ದಗಳಿಗೆ ಈ ಉಪಸರ್ಗವನ್ನು ಬಳಸಲಾಗುತ್ತದೆ. 'ದುರ್ನಡತೆ', 'ದುರ್ನಡೆ' ಪರಾ. [ <ಸಂ. ದುಸ್ ]

ದುರ, ದುಱ, ಧುರ$_1$ (ನಾ). ಯುದ್ಧ; ಕಾಳಗ : ದುರದುಳ್ ದುಗ್ಗಮಾರರ ಪಡೆ ಒಟ್ಟಿ ಎಱಿದು ಬಿಟ್ಟ (ಎಕ. IX, ದೇವನ. ೬೩-೩೪ ; 780) ; ದುರದೊಳ್ ಕಾಯ್ದು ಕಡಂಗಿ ಪೊಂಗಿ ಮಲೆದೋರಂತಿಱ್ದಸೆಯ್ವಾಂದ (ಎಇ. XVIII, ೧೭೨-೫ ; 985) ; ಅವದಿರ ದುರದ ಸಿಂಹಧ್ಯಾನದಬ್ಬರ ಮೆರೆಯ ಲೀಕ್ಷಿಸಿ ನುಡಿದನಸುರಾರಾತಿಯಿದಿರಿನಲಿ (ಕೋಗಮ. ೧೦-೨೭). △ ದುಱ : ಅನೇಕಬಲಸಮೇತನಾಗಿ ಯಿದಿರಾಗಿ ನಡದು ಕಾದಿದಲ್ಲಿ[ದಳದ ತ]ನಗೆ ಅಟ್ಟಗಳು ಭಟ್ಟಗಳಾಗ ಖಂಡ ತುಂಡಗಳಂ ಮಾಡಿ ವೀರಮಂ ದುಱದಲ್ಲಿ ತಂನ ದಳವಿನಿ × × ರಿದ (ಕಇ. I, ೭೩-೧೫ ; 1481). ಧುರ$_1$ : "ಸಮಿತಿ ಸಂಗ್ರಾಮಂ ರಣಂ . . . ಧುರಂ ವಿಗ್ರಹಂ . . . ಸಂಖ್ಯಮೆಂದೆನಲು ಕಾಳೆಗಕೆ ನಾಮಮಕ್ಕುಂ" (ಮಂಗರಾ. ೮೫-೨೮); ಧುರದೊಳ್ ನಿಮ್ಮಡಿಯುಂ ಗೆಲಲೞಿಯರುಮಾ ಪಾಂಡುಸುತರ್ಗಂ (ಪಂಪಭಾ. ೧೨-೫೫) ; ಧುರದೊಳ್ಗೋನುಗ ಭೂಪನಿಂನ ನಿಸಿತಾಸ್ತ್ರಾಘಾತದಿಂ ಸತ್ತ ಭೂಪರ ಪೆಂಡಿರ್ ಬಿಸುಸುಯ್ಯೆ (ಎಕ. VIII, ಸಾಗರ. ೧೦೯-೩೪ ; 1042) ; ಧುರದೊಳ್ ಮಯನಾತನುಮಂ ವಿರಥಂ ಮಾಳ್ಪುದುಂ (ಪಂರಾಮಾ. ೧೪-೧೩೮) ; ನೀನೇ ಧುರವ ಜಯಿಸಿದೆನೆನ್ನು (ಕುವ್ಯಾವಿ. ೯-೩). [ <ಸಂ. ಉದರ./ತೆಲು. ದುರ; ℗ ಸಂ. ಧುರ್ ಎಂಬುದರಿಂದಲೂ ಇದರ ನಿಷ್ಪತ್ತಿಯನ್ನು ಹೇಳಬಹುದು]

ದುರಂಗಿ (ಗು). ೧. ಎರಡು ಬಣ್ಣಗಳನ್ನು ಉಳ್ಳ : ಕಂಬಿ ಕಂಬಿಯೊಳು ಬಂದಿಳುಹಿದ್ದ ಕೋಟಿ ಕಾಕಂಬಿಯ ರಸವನೆಱಿದನು ಬಿಂಬಕೆ ಪೋಳೆವ

ದುರಂಗಿಯು ವೈರಣೆಯುಂಬುಗೊಂಡಂತಿದ್ದುದಾಗ (ಭರತ. ೧೭-೭೭); ಮೆಚ್ಚಿವ ದುರಂಗಿ ಪಟ್ಟಿಯು ಗದ್ದುಗೆಯೊಳು ರಸಿಕ ಕುಳಿತ ಭಾವವಿಹುದು (ಜ್ಞಾನಕ. ೧೮-೧೯೫). ೨. ಎರಡು ಪಕ್ಕಗಳಲ್ಲೂ ಬೇರೆ ಬೇರೆ ಬಣ್ಣವನ್ನು ಹೊಂದಿದ. [ ←ಪಾರ. ಹಿಂ. ಮರಾ. ದುರಂಗೀ ]

**ದುರಂಜ** (ನಾ). ೧. ಒಂದು ಬಗೆಯ ಹಣ್ಣು; ಸೀತಾಫಲ: ಸೀತಾಫಲ, ಅಮೃತಫಲ, ದುರಂಜೀಹಣ್ಣು (ಮೃಜಿಗಿ. ೭-೧೫೩). ೨. ಮಯಳ್ಳು ರಾಮಫಲ: (೬). 'ತುರಂಜಿ' ಪರಾ. [ ? ]

**ದುರಂತ** (ಗು). ೧. ಕೊನೆಯಿಲ್ಲದ; ಎಂದಿಗೂ ಮುಗಿಯದ: ಘೋರ ದುರ್ಗತಿಯಂ ಪೊತ್ತು ದುರಂತದುಃಖಮನಃನಲ್ಪೇಡ (ಆದಿಪು. ೩-೫೭); ಮೋಕ್ಷದ ಬಟ್ಟೆಗಟ್ಟ ಬಿಡಪಾಜಡಿಗೊಳ್ವ ದುರಂತದುಷ್ಕರ್ಮಕ್ಷುಭಿ ಕೋಗ್ರುತಸ್ಕರರ ದುಷ್ಕರ . . . ಕ್ಷತಿ ಮಾಡಲಾರ್ಪ ತಪದೊಳ್ಪಿನ ತೆಳ್ಪಿನ ಸಾಧುವರ್ಗವಿಾಗಕ್ಷಯಸೌಖ್ಯಮಂ (ಜೀವಸಂ. ೧-೫); ಬಹು ದುಸ್ಸಹ ಕಠಿಣತರ ಕ್ರೂರ ಭಯಂಕರ ದುರಂತ . . . ತೀವ್ರವೇದನಾರೂಪಂಗಳಾಗಿ ಶಿವದ್ರೋಹಿಗಳಿಗೆ ನಿಷ್ಕಾರುಣ್ಯದಿಂ ಪಾಳ್ವ ಶಿಕ್ಷಾಲೇಶಮೆಂದನಿಸಿ (ವಿವೇಕ. ೧೯೪). ೨. ದುಃಖದಲ್ಲಿ ಕೊನೆಗೊಳ್ಳುವ; ದುಃಖಾಂತವಾದ: ಪದ್ಮಾವತಿಯ ದುರಂತವಿವಾಹಕ್ಕೆ ಕೇಶವನ ಮೋಹವೂ ಅದೇ ವೇಳೆಗೆ ಸ್ವಾಮಿಗಳ ಆಗಮನವೂ ಕಾರಣವಾಗುತ್ತದೆ (ಸಮಜೀ. ೩೩ ೩೧೫೪). 'ದುರಂತನಾಟಕ' ಪರಾ. (ನಾ). ೩. ಕೊನೆಯಿಲ್ಲದುದು: ಭೀಮನ ನರನಕುಲಸಹದೇವ ಸಾತ್ಯಕಿ ಧರಣಿಪನ ದ್ರೌಪದಿಯ ಚಿಂತೆ ದುರಂತವಾಯ್ತೆಂದ (ಕುಮ್ಮಾ.ಕ. ೨೭-೨೭). ೪. ದುಃಖಪೂರ್ಣವಾದ ಮುಕ್ತಾಯ; ದುಃಖದಲ್ಲಿ ಕೊನೆಗೊಳ್ಳುವಿಕೆ; ದುಃಖಾಂತ: ಆತ್ಮಯಾತ್ರೆಯು ಮಹಾಜ್ಯೋತಿರ್ಮಹದ್ದರ್ಶನಂ ಲಭಿಸಿ ದಾತಂಗದೇಂ ಗುರುತರಾನಂದಕರ ಗುಹ್ಯಮಾಗುವುದೇನೊ ದೇಹ ಯಾತ್ರೆಯು ದುರಂತಂ? (ಶ್ರೀರಾಮಾ. ೧೯೯-೨೦೪). ೫. ದುರ್ಘಟನೆ; ಅಪಘಾತ: ಒಗ್ಗಟ್ಟನಿಂದ . . . ಸಮಾಜದಲ್ಲಿ ಅಂದಂದು ಒದಗುತ್ತಿರುವ ದುರಂತಗಳೂ ನಿಂತಾವು (ಶಿಕ್ಷದ. ೨೭); ಅವರ ಆರ್ಥಿಕ ಪರಿಸ್ಥಿತಿಯ ದುರಂತವನ್ನು ಯಾರು ವಿಚಾರಿಸಬೇಕು? (ಹಬ್ಬಿಬ. ೧೪೯); ಈ ಕಾವ್ಯದಲ್ಲಿ ಕಿತ್ತೂರ ದುರಂತವೂ ಬರುವುದಿಲ್ಲ (ಕನ್ನಡಾ. ೪೪). [ ಸಂ. ]

**ದುರಂತಃಕರಣ** (ನಾ). ಕೆಟ್ಟ ಮನಸ್ಸಿನವನು: ದುರುಳರೆನ್ನವದಿರು ದುರಂತಃಕರಣರಾವ್ (ಕುಮ್ಮಾಕ. ೧೫-೪೯). [ ಸಂ. ]

**ದುರಂತಕತೆ** (ನಾ). ದುಃಖದಲ್ಲಿ ಮುಗಿಯುವ ಕತೆ; ದುರಂತದಲ್ಲಿ ಕೊನೆಗೊಳ್ಳುವ ಕತೆ: ಜೀವಕಳೆ ಧರಿಸಿ ತಂತಾನೆ ಹೆಣೆದು ನಿಲ್ಲುತ್ತದೆ– ಆ ಇಡಿಯ ದುರಂತಕತ ನನ್ನ ಕಣ್ಣ ಮುಂದೆ (ಅಮೋಲಿ. ೧೩).
[ ದುರಂತ + ಕತೆ ]

**ದುರಂತಕಥೆ** (ನಾ). = ದುರಂತಕತೆ: ಮೂಲತಃ ಉರ್ವಶೀ–ಪುರೂರವರ ಪ್ರಣಯಕಥೆ ದುರಂತಕಥೆ (ಕಾವ್ಯಸ. ೦೯). [ ದುರಂತ + ಕಥೆ ]

**ದುರಂತಘಟನೆ** (ನಾ). ದಾರುಣವಾದ ಸಂಗತಿ; ಸಂಕಟಕರವಾದ ಘಟನೆ; ದುಃಖಪ್ರಸಂಗ: ಅಂಥ ರುದ್ರಪ್ರಸಂಗದಲ್ಲಿಯೇ ಇನ್ನೊಂದು ದುರಂತಘಟನೆಯೂ ಸಂಭವಿಸುತ್ತದೆ (ಧರ್ಮಸಾ. ೧೪೦).
[ ದುರಂತ + ಘಟನೆ ]

**ದುರಂತಚಿಂತೆ** (ನಾ). ಕೊನೆಯಿಲ್ಲದ ಚಿಂತೆ: ಸಾಕು ಮಗನೆ ದುರಂತ ಚೀಂತೆಯಿದೇಕೆ . . . ಪಾಲಿಸು ಸಕಲಭೂತಳವ (ಕುಮಾಆ. ೨೦-೩೩); ಕೆಟ್ಟಕೇಡದನೇನ ಹೇಳುವೆನಾ ಜಯದ್ರಥನ ಬೆಟ್ಟದಿಂದುರುಳುವೆನೊ ಹಾಸಟಿಗಟ್ಟ ಹೊಗುವೆನೊ ಮಾಡುವೆನೆನುತ ಅಡಿಯಿಟ್ಟನಂತಃಕಲುಷಚಿತ್ತ ದುರಂತಚಿಂತೆಯಲಿ (ಕುಮ್ಮಾಆ. ೨೨-೪೨).
[ ದುರಂತ + ಚಿಂತೆ ]

**ದುರಂತಚಿತ್ರ** (ನಾ). ೧. ದುರಂತಪೂರ್ಣವಾದ ಘಟನೆಯ ದೃಶ್ಯ: ಪಂಡಿತ ಜವಹರಲಾಲರು ಪಂಜಾಬಿಗೆ ಹೋಗಿದ್ದಾಗಿನ ಒಂದು [illegible] ಪಾರ್ಟಿ ಫೋಟೋಗ್ರಾಫ್‌ನಲ್ಲಿ [illegible] ದುರಂತಚಿತ್ರವನ್ನು [illegible] (ದಿಲ್ಲಿಪ. ೫೦). ೨. ದುಃಖಪೂರ್ಣವಾದ ಘಟನೆಯ ಚಿತ್ರಣ– ನಿರೂಪಣೆ. [ ದುರಂತ + ಚಿತ್ರ ]

**ದುರಂತನಾಟಕ** (ನಾ). ದುಃಖದಲ್ಲಿ ಮುಕ್ತಾಯವಾಗುವ ನಾಟಕ; ಶೋಕದಲ್ಲಿ ಕೊನೆಗೊಳ್ಳುವ ನಾಟಕ; ರುದ್ರನಾಟಕ: ಪಾಶ್ಚಾತ್ಯರಿಗೆ ದುರಂತನಾಟಕವು ಕೇವಲ ಕಲೆಯ ಬೆಡಗಲ್ಲ. ಅದು ಆತ್ಮಸಂಸ್ಕಾರದ ಸಾಧನ, ಜೀವನ ಸಾರದ ಸಾಕ್ಷಾತ್ಕಾರಣ (ಕಾವ್ಯಸ. ೧).
[ ದುರಂತ + ನಾಟಕ ]

**ದುರಂತಪರಾಕ್ರಮ** (ನಾ). ಕೊನೆಗಾಣಿಸಲು ಅಸಾಧ್ಯವಾದ ಶೌರ್ಯವುಳ್ಳವನು; ಸೋಲಿಸಲು ಅಸಾಧ್ಯವಾದ ಪರಾಕ್ರಮವುಳ್ಳವನು; ಮಹಾಶಕ್ತಿಶಾಲಿ: ಸೈನ್ಯ ಮಹೋದಧಿಯ ಮಧ್ಯದಲಿ ಮೆಚ್ಚಿವವನಾ ದುರಂತಪರಾಕ್ರಮನು ಗಂಗಾಕುಮಾರಕನು (ಕುಮ್ಮಾಭೀ. ೩-೭).
[ ದುರಂತ + ಪರಾಕ್ರಮ ]

**ದುರಂತರ** (ನಾ). ಕಡಿಮೆಯಾದ ಅಂತರವುಳ್ಳುದು; ನಡುವೆ ಕಡಿಮೆ ಜಾಗವುಳ್ಳುದು; ದಟ್ಟವಾದುದು: ಅರಸನ ವರೂಥಮಂ ತುರಗಂಗಳ್ ತರುಗಳಿಂ ದುರಂತರಮಪ್ಪರಣ್ಯಮಾರ್ಗದೊಳ್ ತಮ್ಮಿಚ್ಚೆಯಿಂ ಕೊಂಡೋಡಿ ಪೋಗೆ (ದಶಕು. ೨-೩೭ ವ). [ ಸಂ. ]

**ದುರಂತಸಾಹಿತ್ಯ** (ನಾ). ದುಃಖಾಂತದ ವಸ್ತುವನ್ನುಳ್ಳ ವಾಙ್ಮಯ: ದುರಂತಸಾಹಿತ್ಯವು . . . ಕನ್ನಡದಲ್ಲಿ ಹನ್ನೊಂದನೆಯ ಶತಮಾನದ ಪೂರ್ವದಲ್ಲಿಯೇ ಅಸ್ತಿತ್ವದಲ್ಲಿದ್ದಿತೆನ್ನುವುದು ತುಂಬಾ ಅಭಿಮಾನದ ಸಂಗತಿ (ಸಾಹಿಸ. ೧೦೭). [ ದುರಂತ + ಸಾಹಿತ್ಯ ]

**ದುರಂತೋದ್ವೇಗ** (ನಾ). ಕೊನೆಯಿಲ್ಲದ ತಳಮಳ,– ಆತಂಕ: ತತ್ಪಿತೃದ್ವಂದ್ವದ ಮನಕೆ ಸವಾಕಾರಸಂಪದ್ವರಾಲಾಭದುರಂತೋದ್ವೇಗಮಂ ನೀಡಿದನತಿತರ ನಿರ್ಬಂಧದಿಂ ಪದ್ಮಸದ್ಮಂ (ಚಂದ್ರಪು. ೫-೪೭).
[ ದುರಂತ + ಉದ್ವೇಗ ]

**ದುರಕ್ಷರ** (ನಾ). (ಅಲಂ) ಕೆಟ್ಟ ಹಣೆಯ ಬರಹ: ಸರಸಿರುಹಸಂಭವಕೃತ ದುರ[ಪಾಠಾಂ. ರಾ] ಕ್ಷರವಿನಿಮಿತ ನಿರಾಸಕಮಹಾನಿರುಪಮಿತ ಮಹಿಮಾಢ್ಯನಂ ಪ್ರೌಢನನಮೌಢ್ಯನನು . . . ಕೊಂಡಾಡಿ (ಬಸವಪು. ೪೭-೭೦).
[ ಸಂ. ]

**ದುರಗಲಿ, ಧುರಗಲಿ** (ನಾ). ಕಾಳಗದಲ್ಲಿ ಶೂರನಾದವನು; ರಣಧೀರ: ದುರಗಲಿ ಕಂಸನುದ್ಧತಸಾಹಸವ ಕೇಳಿ ಹರಿವ ಹಾವುರಿವ ಕಿಚ್ಚುಗಳ ಭರದಿಂದಡಗುವುವು (ನೇಮಿಸಂ. ೧೪-೮); ದುರಗಲಿಯೆಯೆನ್ನ ಪ್ರೀತಿಯ ಸಲಿಸು ನೀನೆಂದು ವಿರಹದಿಂದೂರ್ವಶಿಯು ನುಡಿಯೆ (ಪ್ರಭುಪು. ೫-೮೭); ದುರಗಲಿ ಕಂಠೀರವ ನರಸೇಂದ್ರಭೂವರನೊಪ್ಪಿದನು ಸೊಬಗಿಂದ (ಕಂಸವಿ. ೮-೪೭). ಧುರಗಲಿ: ಎತ್ತಾನುಮಿ[ದುರ್ಮಿಜ್ಜಾಂ]ದೋಡಿಜಾವ ಧುರಗಲಿಗಳುಮಂ . . . ನೋಡಿ [ವಿಸ್ಮಯಂಬಟ್ಟು] (ಗದಾಯು. ೯-೩೪ ವ); ಧುರಗಲಿ ಚೋಳನ ಪಟ್ಟದ ಕರಿವರನಾ ನೀಲಗಿರಿಯ ನಿರ್ಝರಜಲದಂತಿರೆ ಗಂಡಯುಗಳದಿಂದಂ ಪರಿವ ಮದಾಂಬುಗಳನೆಸೆದುದದನೇಪೊಗಳ್ವೆಂ (ತ್ರಿಪುವಿ. ೨೨-೧೭); ಗರ್ಜನಕ್ಕಿಳೆ ನಡುಗೆ ಮಹಾಹವಮನೆಸಗಿದರ್ ಧುರಗಲಿ[ಪಾಠಾಂ. ದುರಗಲಿ, ಧುರಕಲಿ]ಗಳ್ (ಶಬಶಂ. ೪-೭೭). [ ದುರ + ಕಲಿ₂ ]

**ದುರಗಲಿತನ** (ನಾ). ಯುದ್ಧದಲ್ಲಿ ತೋರುವ ಪರಾಕ್ರಮ,–ಶೌರ್ಯ: ಆತನ ದಳಪತಿ ಮನ್ನೆಯರುಗಳ ದುರಗಲಿತನವ ಪೇಳದನು (ಕಂಸವಿ. ೧೧-೭೨); ಆತನ ಸೈನಿಕರು ದುರಗಲಿತನದಿಂದ ಹೋರಾಡಿ . . ತುರುಕರ ಸೈನ್ಯವನ್ನು ತರಿದು ತೂರಿದರು (ಕವೀರ ೧೦೪). [ ದುರಗಲಿ + –ತನ ]

**ದುಸ್ತರ್ಕ** (ನಾ). ಸರಿಯಲ್ಲದ ವಾದ ; ಕುತರ್ಕ : ವಾದಿಗಳ ದುಸ್ತರ್ಕ ನಸಿದುದು (ಕುವ್ಯಾಸ. ೯-೩೩) ; ಶಾಸ್ತ್ರಕ್ಕೆ ಪ್ರತಿಕೂಲವಾಗಿರುವ ತರ್ಕ ದುಸ್ತರ್ಕ (ಹಿಂದಸಾ. ೧೧೫). [ ಸಂ. ]

**ದುಸ್ತರ್ಕ್ಯ** (ಗು). ಊಹಿಸಲು ಸಾಧ್ಯವಿಲ್ಲದ ; ಅತರ್ಕ್ಯ : ನಿನ್ನಿಂದ ಲೇಸನಾರ್ಜಿಪೆನೆನ್ನುವಾಸೆಯಿಂದಿರೆ ಬಂದುದೀ ಸ ಮ ಯ ದೊ ಳ ಗ ತು ಳ ದುಸ್ತರ್ಕ್ಯ ವಿಘ್ನಮನ್ನೇನೆಂಬೆ ಕೃತಕೃತ್ಯಮಂ (ವಿಂಕಾರಾ. ೨-೯-೩). [ ಸಂ. ]

**ದುಸ್ತ್ಯಾಪಚತ್ವ** (ನಾ). ಒಂದು ಬಗೆಯ ಸಸ್ಯ : ದುಸ್ತ್ಯಾಪಚತ್ವ, ಕರ್ಕಟ ಶೃಂಗಿ (ಪ್ರುಔಗಿ ೬೨.೧೨೫೬). [ ? ]

**ದುಸ್ತ್ಯಾಮಸ** (ನಾ). ಅಧಿಕವಾದ ಅಜ್ಞಾನ,-ಅವಿವೇಕ : ಕ್ಷಾತ್ರ ದುಸ್ತ್ಯಾಮಸಮಡಸಿದವಂಗಕ್ಕುಮೇ ಸದ್ವಿವೇಕಂ (ಕಬಕಂ. ೪-೫೫) ; ದುಸ್ತ್ಯಾಮಸದ ದುಸ್ಸಂಗ, ದುಸ್ಸಂಧಾನದ ಸಹಗಮನ, ನಿರ್ಗತಿಕನ ನಿರ್ಗಮನ ! (ನವ್ಯಕಾ. ೩೫). [ ಸಂ. ]

**ದುಸ್ತ್ಯಾರ** (ಗು). ೧. ಹಾದು ಹೋಗಲಾರದ; ದುಸ್ತರವಾದ : ಅಲ್ಲಿಂದ ಪೊರಮಟ್ಟು ದುಸ್ತ್ಯಾರವಪ್ಪ ಕಾನನವ ಪೊಕ್ಕು ಪೋಗುತಿರಲು (ನವಮೋ. ೬-೪೭). ೨. ನಿವಾರಿಸಲಾಗದ ; ಸೈರಿಸಲಾಗದ : ಕರವಾಳಿಂದಿ ಸುರಿವ ರಕ್ತವನೊರಸಿಕೊಂಡು ದುಸ್ತ್ಯಾರಕೋಪದಿಮ್ಮಾರನೆಡಕರದ ಚಾ ಪ ಮ ೦ ಖಂಡಿಸಲು (ನವಮೋ. ೧೨-೭೯). [ ಸಂ. ]

**ದುಸ್ತು** (ನಾ). ಉಡಂಪು; ಉಡುಗೆ: ಅಂಗಡಿಯಲ್ಲಿ ದುಸ್ತುಗಳ ಹೊಲಿವುತ [ಪಾಠಾಂ. ಯೊಳು ಕುಳಿತು ಮಾರುತಲಿಹ] ಚಿಪ್ಪಿಗರಿರ್ದರೊಂದೆಸೆಯು (ಅಬ್ಯಲೂ. ೩-೯೦) ; ಮೋಸಕರವಾಗಿ ಸರಕಾರದ ದುಸ್ತನ್ನು ಧರಿಸಿದರೆ ೩ ತಿಂಗಳ ಬರೀ ಪೈದು ಅಥವಾ ೧೦೦೦ ರೂಪಾಯಿ ಜುಲ್ಮಾನೆ (ಗ್ರಾಮೂಳ. ೧೮೧) : ಒಳ್ಳೆಯ ದುಸ್ತಿನಲ್ಲಿ ಭುಜಂಗನು ಪ್ರವೇಶಿಸುವನು (ದೇಶಧು. ೪೯); ಬೇಡೇತರರು ದುಸ್ತು ಮಾಡಿಕೊಂಡು ಅವರನ್ನು ಸಂಧಿಸುವಾಗಲೇ ಹೊತ್ತಾಗಿತ್ತು (ಚಾರುದಾ. ೧೯೯). 'ದಿರಸು' ಪರಾ.

[ ←ಮರಾ. ದುಸ್ತ್./ತುಳು. ತೆಲು. ದುಸ್ತು ]

**ದುಸ್ತ್ರೀ** (ನಾ). ಕೆಟ್ಟ ಹೆಂಗಸು ; ದುಷ್ಟೆ: ಪತಿಯುತೆಯರಲ್ಲದಾ ಪಟ್ಟಣದೊಳಿಲ್ಲ ದುಸ್ತ್ರೀಯರೆಲೆ ಕಂಬುಕಂಠೀ (ನವಮೋ. ೨-೫೩). [ ಸಂ. ]

**ದುಸ್ಥಿತಿ** (ನಾ). ಹೀನಸ್ಥಿತಿ ; ದುರವಸ್ಥೆ : ಅವನಾಳ್ವ ಭುವನದೊಳಗನ್ಯತ . . . ದುರ್ನೀತಿ ದುಸ್ಸಂಗ ದುಸ್ಥಿತಿ ದುರಾಚಾರವಿಲ್ಲ (ಹಡಕಾ. ೨-೧೦) : ಎಲೆ ಯುಧಿಷ್ಠಿರನೃಪಕುಮಾರ ಪ್ರಳಯದಾಪತ್ತಾಯ್ತು . . . ದುಸ್ಥಿತಿಯಾಯ್ತು ನಕುಲಂಗೆ (ಕುವ್ಯಾದ್ರೋ. ೭-೨೨). [ ಸಂ. ]

**ದುಸ್ಥಿತೆ** (ಗು). ಕೆಟ್ಟಸ್ಥಿತಿಯಲ್ಲಿರುವ ; ದರಿದ್ರವಾದ : ದುಸ್ಥಿತೆ ಲೋಕ ಕಲ್ಪತರುವೆಂಬುದು . . . ಸಮಸ್ತಮಹೀಜನವಿಂದ್ರರಾಜನಂ (ಎಕ. II, ೦೩೩-೩೭ ; 982).

[ ? ಇದು 'ದುಸ್ಥಿತ' ಎಂಬುದರ ಅಪಲಿಖಿತವಿರಬಹುದು ]

**ದುಸ್ಥೆ** (ನಾ). ದುಷ್ಟತನದಿಂದ ವರ್ತಿಸುವವಳು ; ನೀಚ ಹೆಂಗಸು : ದುರ್ಮತಿ ದುಷ್ಟೆ ದುಸ್ಥೆ ದುರ್ವ್ಯಸನೆ ದುರಾತ್ಮೆಯಪ್ಪ ವಧು ಸಜ್ಜನಮೇ (ಮುದ್ರಿ. ೮-೭). [ ಸಂ. ದುಸ್ಥಾ ]

**ದುಸ್ಪರ್ಶ** (ನಾ). ೧. ಮುಟ್ಟಲಾಗದಂದು. ೨. ತೀಟಕಸಂಧಿ; ತುರಂಚಿ : "ದುಸ್ಪರ್ಶ [ಪಾಠಾಂ. ದುಃಸ್ಪರ್ಶ] ಮೆನೆ ತುಱುಚಿಯಕ್ಕುಂ" (ಮಂಗರಾ. ೪೪-೪೪) ; "ದುಸ್ಪರ್ಶಃ – ಬಳ್ಳಿದುಱುಚಿ" (ಓಷಧಿ. ೭೭). ೩. ಹೆಗ್ಗುಳ್ಳ.

[ ಸಂ. ]

**ದುಸ್ಪರ್ಶೆ** (ನಾ). ಮುಳ್ಳುಬದನೆ ; ಹೆಗ್ಗುಳ್ಳ : "ನಿದಿಗ್ಧಿಕಾ, ಸ್ಪೃಶೀ, ವ್ಯಾಘ್ರಿ, ಬೃಹತೀ . . . ದುಸ್ಪರ್ಶಾ ರಾಷ್ಟ್ರಿಕಾ–೧೦ ಹೆಗ್ಗುಳ್ಳದ ಹೆಸರುಗಳು. ಮುಳ್ಳುಳ್ಳ ಚಿರುಗುಳ್ಳ" (ಸಿದ್ಧಾಂತಿ. ೦೩೩).

[ ಸಂ. ದುಸ್ಪರ್ಶಾ ]

**ದುಸ್ಮಾನ** 'ದುಷ್ಮನ್' ನೋ.

**ದುಸ್ವಪ್ನ** (ನಾ). ಕೆಟ್ಟ ಕನಸು: ಮತ್ತೊಂದು ದಿವಸಂ ನಿಶಾವಸಾನ ಸಮಯದೊಳು ದುಸ್ವಪ್ನಂಗಳಂ ಕಂಡು (ಜಾವುಂಪು. ೫೨) ; ದುಸ್ವಪ್ನದಿಂ ಮರಣ ಸೂಚನೆ (ವಿವೇಕ. ೨೦೪). [ ಸಂ. ]

**ದುಸ್ವರ** (ನಾ). ೧. ಕೆಟ್ಟ ಸ್ವರ ; ಅಪಸ್ವರ. 'ದುಸ್ವರಗೈ' ಪರಾ. ೨. [ಜೈನ] ಎಪ್ಪತ್ತೆರಡು ಬಗೆಯ ನಾಮಕರ್ಮಪ್ರಕೃತಿಗಳಲ್ಲಿ ಒಂದು ; ದುಷ್ಟಸ್ವರ ಹೊರಡಲು ಕಾರಣವಾದ ಕರ್ಮ : ಸುಸ್ವರ ದುಸ್ವರ ಸುಭಗ ದುರ್ಭಗ . . . ನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿ ಪ್ರಕೃತಿಗಳಂ ನಿರವಶೇಷಂ ಕಿಡಿಸಿ (ಆದಿಪು. ೧೬-೪೪ ವ). [ ಸಂ. ]

**ದುಸ್ವರಗೈ** (ಕ್ರಿ). ಕೆಟ್ಟ ಸ್ವರವನ್ನುಂಟು ಮಾಡು ; ಅಹಿತವಾದ ಧ್ವನಿಯನ್ನು ಹೊರಡಿಸು : ತಮ್ಮೊಳು ತಾವು ಮಥಿಸುವೊಲು ವಿಸುಪ ದುಸ್ವರಗೈವ ಶುಕ ವಾಯಸ ಗರುಡ ಮೊದಲಾದ ಪಕ್ಕಿಗಳೆಸೆದಿಪವು ಬನಬನದ ತಾಣದಲಿ (ಕೋಗಯು. ೧೪-೧೦). [ ದುಸ್ವರ + ಗೈ (<ಕೆಯ್$_1$) ]

**ದುಸ್ಸಂಗ** (ನಾ). ೧. ಕೆಟ್ಟ ಸಹವಾಸ ; ಸರಿಯಲ್ಲದ ಜೊತೆ : ಸತತಂ . . . ಸದ್ಧರ್ಮಗುಣಂಗಳಸ್ತತಿಗಳ್ ನಿಸ್ತ್ರಿಂಶಧಾನುಷ್ಕಸಂಗತಿಯಿಂದಂ ಪರಮರ್ಮಭೇದಿಗಳೆನಲ್ ತೀಕ್ಷ್ಣಂಗಳುಂ ಮಾಂಸಲೋಹಿತವಕ್ತ್ರಂಗಳು ಮಾದುವೆನ್ನರುಮನೇಂ ದುಸ್ಸಂಗಮೇಗೆಯ್ಯದೋ (ಪಂಚಾಮಾ. ೧೩-೫೦) ; ಲಿಂಗವಂತನ ಸನ್ನಿಧಿಯಿಂದ ಹಿಂದಣ ದುಸ್ಸಂಗ ಕೆಡುವುದು (ಬಸವ. ೧೫೦); ಅವನಾಳ್ವ ಭುವನದೊಳಗನ್ಯತ . . . ದುರ್ನೀತಿ ದುಸ್ಸಂಗ ದುಸ್ಥಿತಿ ದುರಾಚಾರವಿಲ್ಲ (ಹಡಕಾ. ೨-೧೦) ; ಯತಿ ಕೆಡುಗು ದುಸ್ಸಂಗದಲಿ ಭೂಪತಿ ಕೆಡುಗು ದುರ್ಮಂತ್ರದಲಿ (ಕುವ್ಯಾಉ. ೩-೧೧೯) : ಭಾವ ಭಾವ ಏಕಾರ್ಥವಾಗದವರ ಸಂಗವದೇತರ ಸಂಗ ದುಸ್ಸಂಗವಲ್ಲದೆ (ಅಬಂದಿ. ೦೨೯-೯೪). ೨. ಕೆಟ್ಟ ಮನಸ್ಸು ; ದುಷ್ಟ ಪ್ರವೃತ್ತಿ : (ಕ). [ ಸಂ. ]

**ದುಸ್ಸಂಗಿ** (ನಾ). ಕೆಟ್ಟ ಸಹವಾಸದಲ್ಲಿರುವವನು : ದುಸ್ಸಂಗಿಗಳ ಸಂಗದೋಷಕ್ಕೆ ಈಡು ಮುಕ್ತಿಯ ಕೇಡು (ಅಬಂದಿ. ೦೨೯-೯೪).

[ ಸಂ. ದುಸ್ಸಂಗಿನ್ ]

**ದುಸ್ಸಂತತಿ** (ನಾ). ೧. ಕೆಟ್ಟ ಸಂತತಿ ; ದುಷ್ಟ ಸಂತತಿ. ೨. ಹಾದರಕ್ಕೆ ಹುಟ್ಟಿದುದು. [ ಸಂ. ]

**ದುಸ್ಸಂಧಾನ** (ನಾ). ೧. ಒಟ್ಟಿಗೆ ಸೇರಲು ಕಷ್ಟವಾದುದು ; ಕೂಡಲು ಅಸಾಧ್ಯವಾದುದು. ೨. ಕೆಟ್ಟ ಸಂಧಾನ,-ಸಂಚು. ೩. ಹಾದರ.

[ ಸಂ. ]

**ದುಸ್ಸಂಧಿ** (ನಾ). [ವ್ಯಾಕ] ಒಂದು ಬಗೆಯ ಸಂಧಿದೋಷ ; ಅಪಾರ್ಥವನ್ನು ಕೊಡುವ ಅಥವಾ ಶ್ರುತಿಕಷ್ಟವಾದ ಸಂಧಿ: ಅಸದರ್ಥಂ . . . ಅಪ್ರೌಢತೆಯಪ್ರತೀತಿವಚನಂ ದುಃಸ್ಸಂಧಿ ವಿಶ್ಲೇಷನಪ್ಪಸಮಾಸಂ . . . ಇನಿತುಂ ದೋಷಂಗಳಪ್ಪುದಕಂ (ಛಂದೋಂಬು. ೧-೪೭ ಅವಿ); ದುಸ್ಸಂಧಿಯು ನಿಬದ್ಧಂ ವಿರುದ್ಧಾರ್ಥ ನೀರಸಂ ಶೈಥಿಲ್ಯವರ್ಣಂ ಕಾರಕವಿರಹಿತಂ ಕ್ರಿಯಾಳಂಕಾರಹೀನವೆನಿಪ್ಪ ಪೊಳ್ಳಂ ತೂಱಿ ಕಳೆದಿಂತು . . . ರಚಿಸುವೆಂ ಕೃತಿಯ (ಬಸಪು. ೬-೧೮). 'ದುರ್ಲಕ್ಷಣ' ಪರಾ. [ ಸಂ. ]

**ದುಸ್ಸರ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ : ನುತಚೌಪಟಂ . . . ಪಂಚಾಯಿತಮೆನಿಪ್ಪಯಿದು ನಿಜಾಗೆಗಾಯತ ಮುಂಡಿ ದುಮಾಡಮೆಕ್ಕಸರ ವಿಸರವುಲ್ಲಾಸ ದುಸ್ಸರ . . . ಸಿಂಹಾನಕ ಚಟಿಯೆಂಬ ಚತುರ ಠಾಣದ ತರಹರದೊಳು ಹಲಗೆಯ ಮುಗ್ಗುಲೊಳು ಖಡ್ಗಮಂ ಜಡಿದರು (ಸೋಮದ. ೫-೧೪). [ ? ]

**ದುಸ್ಸರಣಿ** (ನಾ). ಕಠಿಣವಾದ ಮಾರ್ಗ : ದರಿಗಳೊಳು ದುಸ್ಸರಣಿಯೊಳು ದೊಂಗರಗಳೊಳು . . . ಅಗಲಕೆ ಪುದು ಹೋರಟೆಗುಟ್ಟದನು ಹೊಮ್ಮಟಿಯ ಬೆನ್ನನಲಿ (ಶೂರರಾ. ೩-೮-೫೭). [ ಸಂ. ]

**ದುಸ್ಸಹ** (ಗು). ೧. ಸಹಿಸಲುಂ ಕಷ್ಟವಾದ; ತಾಳಲಾರದ; ಸೈರಿಸಲಾಗದ: ತನ್ನ ಹಿರಿಯ ಮಗನಂ ಕರೆದು ತನ್ನ ದುಸ್ಸಹಾವಸ್ಥಾಂತರಮನಱುಪಿ (ಆದಿಪು. ೨-೧೪ ವ); ಅತಿ ದುಸ್ಸಹವಾರ್ತಾವಿಷಲತೆಯಂ ಸಾಂಟಿಸಲಿದಲ್ತೆ ಕಂಸಶೋತ್ರಕ್ಷಿತಿಖನನಪವಿಶಲಾಕಾತತಿಯೆಸೆ ದಶನಾಂತು ನಿಮಿರೆ ಮುನಿ ಯಿಂತೆಂದಂ (ಜಗವಿ. ೨-೪೩); ಇತ್ತ ಪೆತ್ತ ತಾಯಿ ದುಸ್ಸಹ ಸಮಾಚಾರ ವನ್ನು ಕೇಳಿ ಪ್ರಾಣಬಿಟ್ಟರು (ಶಾಂತಲಾ. ೧೬೦). (ನಾ). ೨. ಸಹಿಸ ಲಾಗದುದಂ; ತಾಳಲಾಗದುದು: ಆ ಕಾಮಬಾಣಾಗ್ನಿಯಿಂ ಸರ್ವ ಮುಖಕ್ಷ್ವೇಡಾಗ್ನಿಯೇಂ ದುಸ್ಸಹಮೆ (ಜಗವಿ. ೩-೯೫); ದುಸ್ಸಹವು ನಿಮ್ಮಭ್ಯುದಯುವಹಿತರಿಗೆ (ಕುಮ್ಯಾಸ. ೧೧-೦೮); ತೆರಳಲ್ಕಿಪ್ಪರ್ ದೇಶಾಂತರ ಕಬಲಾಜನದ ಚಿಂತೆ ದುಸ್ಸಹಮಲ್ತೇ (ಶಾಕುಂತ. ४೮-೪); ಅವಮಾನವನ್ನು ಸಹಿಸಲು ಯುವಕರಿಗೆ ದುಸ್ಸಹ (ಶಿಕ್ಷದ. ೧೧೫). ೩. ಸಹಿಸಿಕೊಳ್ಳಲು ಆಗದವನು: ದುರ್ಲಭನಾರು ದುಸ್ಸಹನಾರು ದುರ್ಮತಿ ಯಾರು ಧರ್ಮಜ ತಿಳಿಯಹೇಳೆಂದ (ಕುಮ್ಯಾಅ. ೦೩-೫೬): ಮಹಾದುಸ್ಸಹನ ದುಶ್ಶೀಲನ ದುರಾಚಾರನ . . . ಕೈವಿಡಿದೆತ್ತಬೇಕೆಲೆ ದೇವ (ತೊರರಾ. ೯-೪-೫೬); ದುಸ್ಸಹರಜೇಯರಪ್ರತಿಸಮರಥಸಾಹಸಿಗಳಿರ್ವರುಂ ಗಗನಗಮನದ ವೀರರು (ತ್ರಿಮಿಥಾ. ೨೨-೩೦). [ ಸಂ. ]

**ದುಸ್ಸಹವಾಸ** (ನಾ). ಕೆಟ್ಟ ಸಹವಾಸ ; ದುಸ್ಸಂಗ: ದುಸ್ಸಹವಾಸವು ದುರ್ಗತಿಯನ್ನು ಕೊಡುವದಾಗುವದು (ಅಕೇಮೂ. ೬೯). [ ಸಂ. ]

**ದುಸ್ಸಹಸ** (ನಾ). ಅಸಾಮಾನ್ಯವಾದ ಸಾಹಸ ; ಅತ್ಯಂತ ಸಾಹಸ: ಹುದುಗಿದಗ್ಗದ ಸತ್ತ್ವ ದುಸ್ಸಹಸದ ನಿರೂಢಿಯ ಸೋಸಮಯ [ಪಾಠಾಂ. ದುತ್ಸಾಹದ ನಿರೂಢಶ್ವಾಸದಲಿ]ಗದುಗದಿತ ಕಂಠದ . . . ಗುರುವಾಯಳಿದ ಭೀಮನ ಕಂಡನಾ ಭೂಪ (ಕುಮ್ಯಾಅ. ೧೩-೩೮). [<ಸಂ. ದುಸ್ಸಾಹಸ]

**ದುಸ್ಸಾಧ್ಯ** (ನಾ). ಕಾರ್ಯಗೊಳಿಸಲು ಅಸಾಧ್ಯವಾದುದಂ,-ಕಷ್ಟಸಾಧ್ಯ ವಾದುದು : ವಿದ್ಯಾವಂತರು . . . ಉತ್ತಮಮಟ್ಟದ ಜೀವನ ನಡೆಸ ಬೇಕೆಂದು ಹಾರೈಸುವುದು ಸಹಜವಾದ್ದು. ಆದರೆ ಅನೇಕರಿಗೆ ಅದು ದುಸ್ಸಾಧ್ಯವೆನಿಸಬಹುದು (ಶಿಕ್ಷದ. ೬೬೮). [ ಸಂ. ]

**ದುಸ್ಸಾಹಸಿಕ** (ನಾ). ಗಂಡಾಂತರವನ್ನು ಎದುರಿಸುವ ಅತಿಯಾದ ಸಾಹಸ : ತನ್ನ ಪ್ರಾಧಾನ್ಯವನ್ನು ರಕ್ಷಿಸಿಕೊಳ್ಳುವುದಕ್ಕೋಸ್ಕರ ದುಸ್ಸಾಹಸಿಕವಾದೊಂದು ಸಂಕಲ್ಪವನ್ನು ಮಾಡಿದಳು (ಕಪಾಕುಂ. ೬೫). [ ಸಂ. ]

**ದುಸ್ಸ್ಥಲ, ದುಸ್ಸ್ಥಳ** (ನಾ). ೧. ಕೆಟ್ಟ ಸ್ಥಳ ; ಅನುಕೂಲವಲ್ಲದ ಜಾಗ. **ದುಸ್ಸ್ಥಳ** : ೨. ಇಕ್ಕಟ್ಟಾದ ಮಾರ್ಗ,-ಸ್ಥಳ : ದುಸ್ಸ್ಥಳಮುದಯಾಚಳ ಧಾತುಸ್ಥಳಿಯಂ ಬೇಗಮಡರ್ವ ದಿನನಾಥರಥಪ್ರಸ್ಥಾನಮಾಯ್ತುವೆನಿಸಿ ದಿಶಾಸ್ಥಗಿತಂ ರಂಜಿಸಿತ್ತು ಸಂಧ್ಯಾರಾಗಂ (ಮಲ್ಲಿಪು. ೬-೧೦೫).
[ ಸಂ. ]

**ದುಸ್ಸ್ಥಳ** 'ದುಸ್ಸ್ಥಲ' ನೋ.

**ದುಸ್ಸ್ವಪ್ನ** (ನಾ). = ದುಃಸ್ವಪ್ನ : ದುಸ್ಸ್ವಪ್ನಕೆ ಬೆಚ್ಚುತಲೆಚ್ಚತ್ತಂತೆ ಸಾವ ದ್ದವು ನಲ್ಮಿಳಿವಿಗೆ (ಅಹಲ್ಯ. ೧೧೩-೧೧). [ ಸಂ. ]

**ದುಸ್ಸ್ವಭಾವ** (ನಾ). ಕೆಟ್ಟ ಸ್ವಭಾವ ; ದುಷ್ಟ ಗುಣ. [ ಸಂ. ]

**ದುಸ್ಸ್ವರ** (ನಾ). = ದುಸ್ವರ ೧ : ಕಾಗೆ ಬಂದು ಪಾಯ್ದುಂ ದುಸ್ಸ್ವರದಿಂ ಕರೆವುದುಂ (ಪಂಚತಂ. ೨೨೪-೧೧). [ ಸಂ. ]

**ದುಸ್ಸ್ವರೆ** (ನಾ). ಕೆಟ್ಟ ಧ್ವನಿಯುಳ್ಳವಳು : ದುರ್ಗಂಧೆ ದುಸ್ಸ್ವರೆ ಪುಟ್ಟುಂ ಗುರುಡಿ ಪೊಲತಿಯಾಗಿ ಪುಟ್ಟಿ (ವಡ್ಡಾರಾ. ೯-೩). [ ಸಂ. ದುಸ್ಸ್ವರಾ ]

**ದುಹತ್ತ, ದೂಹತ್ತ** (ನಾ). ಎರಡು ಕೈ : "ದುಹತ್ತ (ದೂಹತ್ತ) - ದ್ವಿಹಸ್ತ = ಹಸ್ತಯುಗ್ಮ" (ತದ್ಭಕೋ. ೨೦) ; ದುಗೆ - ದ್ವಿಗುಣ - ದುಗುಣ . . ದ್ವಿಹಸ್ತ - ದುಹತ್ತ, ದೂಹತ್ತ (ಶಮದ. ೨೯೦ ಪ್ರಯೋ). **ದೂಹತ್ತ**: ಮೇಲಿನ ಪ್ರಯೋಗಗಳನ್ನು ನೋಡಿ. [ ದು + ಹತ್ತ₂ ]

**ದುಹಾರ** (ನಾ). (?) : ಕಂಗಳೋರೆಯ ಥಾಳಿಸುವ ಹಾಸಂಗಿಗಳ ಬಿಗುಹಿನ ದುಹಾರದ ಭಂಗಿಗಳ ಬಲುವಿಟರ ಕರಣದ ಸಾರಿಗಳ ಸೆರೆಯ ಮುಂಗುಡಿಯ ನಿಜನಾರಿಯರ ಕವಿಮಂಗವಣಿಗಳ ಜೂಜುಗಾತಿಯರಂಗನೆಯ ದಂಡಿಗೆಯ ಬಳಿವಿಡಿದರು ವಿದಗ್ಧೆಯರು (ಕುಮ್ಯಾಅ. ೧೩-೪೨) : ಕೆಲಬಲನ ಭಿತ್ತಿಯ ಕಂಬ ಕಂಬದ ನಡುವೆ ಭಿತ್ತಿಗಳು ಹೊಳಹನೇ ಕಂಡನು ವಿವೇಕದ ಕಳವು ಚಿತ್ರದ ಸೆಱ ದುಹಾರದೊಳಿ [ಪಾಠಾಂ. ಳು] ಳದವಕ್ಷಿಗಳಂತು ಸೋತೆನು (ಕುಮ್ಯಾಸ. ೧೨-೩೬) ; ದುಗನ ಹಾಯಿಕು ತನಗೆ ಹಾಯ್ಕುತ್ತಿಗನವೆಂಬಬ್ಬರದ ಹಾಸಂಗಿಗಳ ಬೊಬ್ಬೆಯ ಸಾರಿಗಳ ಮಣಿಖಚಿಲನಿಸ್ವನವ ಉಗಿವ ಸೆರೆಗಳ ಬಳಿ ದುಹಾರದ ಬಿಗುಹುಗಳ ಬೀದಿಗಳ ತಳಿಸಾರಿಗಳ ಥಾಳಾಥೂಳಿ ಮಸಗಿತು (ಕುಮ್ಯಾಸ. ೧೩-೫೦) : ನಿಮ್ಮಣ್ಣನಾಡಿ ದುಹಾರದಲಿ ಸೆಱ ಯೋದನಾತನ ಹಂಬವೇ ನಿಮಗೆ (ಕುಮ್ಯಾಕ. ೨೦-೧೩). [ ? ]

**ದುಹಿ** (ನಾ). ದ್ವೇಷ ; ವಿರೋಧ : ದುಹೀ ಮಾಡುವವ ಅಹೀ ಹಾಗೆ (ಗಾದೆ) : ದುಹೀ ಮಾಡುವವ ಅಹಿಗಿಂತ ಕಡೆ (ಗಾದೆ).
[ ←ಮರಾ. ದುಹೀ, ದುಈ ]

**ದುಹಿತಾರ** 'ದುಹಿತೆ' ನೋ.

**ದುಹಿತೃ** (ನಾ). ೧. ಮಗಳು; ಪುತ್ರಿ : "ಪೆಣ್ ದುಹಿತೃ ನಂದನೆ ಪುತ್ರಿ ತನೂಜೆ ಸೂತಿ ತಾನೆನಿಕುಂ" (ಪಕ್ಕುಕೋ. ೫೪-೧೬) ; ಅಹಹ ನರ್ತಕಿಯಲು ಗಂಧರ್ವನಾಯಕನ ದುಹಿತೃವಲ್ಲಾ ನಿನ್ನ ಮಾತೆ (ತ್ರಿಮಿಥಾ. ೧೭-೫೫), ಅಂತರಿಕ್ಷದಲ್ಲಿ ಆದಿತ್ಯನು ತನ್ನ ದುಹಿತೃವಾದ (ಪುತ್ರಿ) ಪೃಥ್ವಿಯ ಗರ್ಭ ರೂಪವಾದ ಉದಕವನ್ನು ಧರಿಸಿದ್ದಾನೆ (ಋಗ್ಯಾರ. ೨೬೩). ೨. ಹಾಲು ಕರೆಯುವವಳು ; ಗೌಳಿಗಿತ್ತಿ : (ಶ). [ ಸಂ. ]

**ದುಹಿತೆ, ದುಹಿತಾರ** (ನಾ). ಮಗಳು ; ಪುತ್ರಿ : "ದುಹಿತೆ - ದುಹಿತೃ = ಮಗಳು" (ತದ್ಭಕೋ. ೨೦) ; ಆದಿಶಿವಭಕ್ತಂಗೆ ಮದುವೆಯನಾದರದಿ ನಾ ಮಾಳ್ಪನಲ್ಲದೆ ಈ ದುಹಿತೆಯುಂ ಭವಿಗೆ ಕೊಡೆನು (ಬಸಪು. ೩-೮೬); ದುಹಿತೆಯುಳ ಹರಿರಾಯನರಮನೆಗೆ ವಿಜಯದಿಂ ಕಳುಹಲ್ಕೆ ತೆರಳಿ ಬಂದಂ (ಗುರುಜಾ. ೩-೧೧). **ದುಹಿತಾರ** : ಆರಾದೇಶಕ್ಕೆ-ಸವಿತಾರ, ಕರ್ತಾರ ... ದುಹಿತಾರ (ಶಮದ. ೮೫ ಪ್ರಯೋ). [ <ಸಂ. ದುಹಿತೃ ]

**ದುಹಿಸು** (ಕ್ರಿ). (ಹಾಲಿನಂತೆ) ಕರೆ ; ಸುರಿಸು ; ನೀಡು : ಸ್ತನದೆ ಸರ ಸಾಮೃತವ ಕರೆಯುವ ಜನರ ಕಾಮನೆಯನ್ನು ದುಹಿಸುವ ಮುನಿಯ ಹೋಮದ ಧೇನುವನು ತನ್ನೆದುರಿನಲಿ ಕಂಡ (ರಘುವಂ. ೨-೬೧).
[ ದುಹ್₀ (P < ಸಂ. ದುಹ್) + - ಇಸು₃ ]

**ದುಹೇರ, ದುಹೇರಿ** (ಗು). ೧. ಇಮ್ಮಡಿ ; ದ್ವಿಗುಣಿತ (ಶ). **ದುಹೇರಿ**: ೨. ಪ್ರತಿ ; ಸಮಾನವಾದ ಗುಣವುಳ್ಳ : ಸ್ವಾತಂತ್ರ್ಯಚಳುವಳಿಯ ಕಾಲ ದಲ್ಲಿ ದುಹೇರಿ ಕಾರುಭಾರು ನಡೆಯುತ್ತಿತ್ತು (ರೂಢಿ).
[ ←ಮರಾ. ದುಹೇರಾ, ದುಹೇರೀ, ದುಹಿರೀ ]

**ದುಹೇರಿ** 'ದುಹೇರ' ನೋ.

**ದುಳಿರವಟ** (ನಾ). ಒಂದು ಬಗೆಯ ತೆರಿಗೆ : ಯಾ ಗ್ರಾಮದ ಚತುಸ್ಸೀಮೆಗೆ ಸಲುವ ನಂಜೆ ಪುಂಜೆ . . . ಕುಳವಡೆ ಸಾರಡೆ ದುಳಿರವಟ ಕಟಳಿವಟ ಏರಿ ಏಾನ ಬೆಲೆ ಸಂತೆ ಉಂಟಾದ ಹಲ ಉಪಾಧಿಗಳೂ ಸಹ ಸೇರ್‍ಸಿ ಕೊಟ್ಟೆವಾಗಿ (ಸೌಇಇ. IX-11, ೪೩೩-೮ ; 1470). [ ? ]

△ **ದುಱ** 'ದುರ್₁' ನೋ.

**ದುಱದುಱಿಸು** 'ದುಱುದುಱಿಸು' ನೋ.

**ದುಱು, ಜುಱು** (ಕ್ರಿ). ಹೊರಚಲ್ಲು; ಹೊರಸೂಸು : ಇಱಿದ ನೆಲಂಗಳಾಂ ತವರ ನೆತ್ತರನರ್ಕಿಸಲಾಱದ್ದೀಗಳುಂ ದುಱುತೊರೆಯುತ್ತವಿರ್ದ್ದಪುವು ತೀಂಬ ಕಟಂಗಳನೆಂಟುಮಾನೆಗಳುಂ ತಱತಱನಪ್ಪಿನಂ ಜಯದ ಲಚ್ಚಣಗಂಬ ದೊಳುದ್ದಿರ್ಕೊಳುವುವು (ಎಕ. V, ಬೇಲೂರು. ೦೬೧-೦೫ ; ಸು. 1160).

ಜುಱಿ: ಮುರಾರಿ ಮು[ಂ] ಪಿರನಂ ಸಜ್ಜನೆ ಸೀಬ್ರಾಜದ ಪಂಸಿಸಿಂದೊಗೆ ದಾಱಿ ಪರಪೆ ಧಾತು ನಿರ್ಝರದಂತಶ್ರು[ಜ]ಳವೊಱೆತು ಜುಱಿಯುತ್ತುಮಿರ್ಪ ಧಾತ್ರಿಯುವ್ವದುಂ (ಅರ್ಜನೇ. ೮-೩೨ ವ) : ತಱಿದ ಕುಱಿಗಳ ಹಂದಿಯಡಗಿನ ಜುಱಿತ ರಕುತದ ವೊಲನ ಖಂಡದ . . . ಹಱಿದೆಱಕೆಗಳ ಕಂಡಬಲೆ ಹೊಗಳಿದಳಡಬಳದ ವಂನೆಯ (ಕುವ್ಯಾವಿ. ೩-೩೭). 'ತೊರೆ$_2$', 'ಸುರಿ$_1$' ಪರಾ.

**ದುಱ್ದುಂಬಿ** 'ದುಱುದುಂಬಿ' ನೋ.

**ದುಱು-** (ಉಪ). ಕೆಟ್ಟದ್ದನ್ನು ಸೂಚಿಸುವ ಒಂದು ಉಪಸರ್ಗ. 'ದುಱುದುಂಡಿ', 'ದುಱುದುಂಬಿ' ಪರಾ. [ <ದುರ್- ]

**ದುಱುದುಂಡಿ**, ದುರುದುಂಡಿ, ದುರ್ದುಂಡಿ (ನಾ). ೧. ಕೆಟ್ಟ ವ್ಯಕ್ತಿ ; ಕೆಡುಕು ಮಾಡುವವಳು ; ದುಷ್ಟೆ : ಪಂಚವೃಥ್ವಿಯ ಮಧ್ಯದಲ್ಲಿ ಒಂದು ಉಡುವರದ ಗಿಡ ಹುಟ್ಟಿತ್ತು ಆ ಗಿಡುವನೊಡದು ಒಬ್ಬ ದುಱುದುಂಡಿ ಹುಟ್ಟಿದಳು (ಕಷೀಲಶಾಂ. ೨೨-೮) ; ತನುಮಧ್ಯದಲ್ಲಿ ಅಜ್ಞಾನಸ್ವರೂಪಿಣಿಯಾದ ಮಾಯೆಯೆಂಬ ದುರ್ವಿಕಾರಿ ಹುಟ್ಟಿ ಆ ತನುಮಧ್ಯದಲ್ಲಿ ಇರುತ್ತಿಹಳೆಂಬುದೀಗ . . . ದುಱುದುಂಡಿ ಹುಟ್ಟಿದಳು ಎಂಬ ಶಬ್ದಕ್ಕರ್ಥ (ಕೋಲಶಾಂ. ೨೨-೮ ಟೀಕು). **ದುರುದುಂಡಿ :** ೧. ಅನಿತರೊಳು ದುರುದುಂಡಿಯೈತಂದು ಪೂಜೆಗೈದಾ ಮಹಾಕಾಳಿಯಂ (ಪಂಕಾರಾ. ೭-೪೮-೪೮). **ದುರ್ದುಂಡಿ :** ೨. ಬಜಾರಿ; ಗಂಡುಬೀರಿ : ಈ ದುರ್ದುಂಡಿಯನ್ನು ಮದುವೆಯಾಗಲಾರೆ (ಸೀತಾರ. ೧೦) ; ಒಮ್ಮೊಮ್ಮೆ ಆಕೆಯನ್ನು ದುರ್ದುಂಡಿ ಎಂಶಲೂ ಕರೆಯುತ್ತಿದ್ದರು (ನನ್ನೂರು. ೮). [ ದುಱು + ದುಂಡಿ$_1$ ]

**ದುಱುದುಂಬ** (ನಾ). ಕೆಟ್ಟವನು; ನೀಚ : ದುಱುದುಂಬ ಪೊಡಪಿಯವುರರ ಬಸಿಱೊಳೊಗೆದು ಸುಗತಿಯ ಸೊಂಪುವಡೆಯದತ್ಯಂತ ಪಾತಕಿಯಾದ (ಕೊಟ್ಟೂಬ. ೪-೧೩೨). [ <ದುಱುದುಂಬಿ ]

**ದುಱುದುಂಬಿ**, ದುರುದುಂಬಿ$_1$, ದುಱ್ದುಂಬಿ (ನಾ). ೧. ಕೆಟ್ಟ ಗುಣವುಳ್ಳ ವ್ಯಕ್ತಿ ; ನೀಚ ವ್ಯಕ್ತಿ : ನಾಡ ದುಱುದುಂಬಿಯುರೇದುದನೇದ ಮಂದಿರೊಳ್ ನೆಱೆದೊಡಗೂಡಿ ಕಳ್ಗುಡಿವ ಡಂಬಗಿದೊತ್ತಿರನಾರಂ ಬಾರಿಪರ್ (ಪಸಾರ. ೪೭೭) ; ಪರಿಣತರ ನುಡಿಗಳನು ಕಿವಿಯೋಕರಿಸಿದವು ದುಱುದುಂಬಿಗಳ ಬಾಹಿರರ ನುಡಿಗಳನಡಿಗಡಿಗೆ ಕುಡಿದು ತೇಗಿದವು (ಕುವ್ಯಾಸ. ೧೦-೩) : ಪಿರಿಯಪಟ್ಟಣದ ರಾಜ್ಯವಾಳುವ ದುಷ್ಟ ದುಱುದುಂಬಿ ನಂದುಂಡರಾಜ . . . ಮಲೆತಿರ್ದನಾಗ (ಕಂನವಿ. ೦೮-೨೦) : ಮುಂಬಗಲ ನೆಳಲವೋಲ್ ದುಱುದುಂಬಿಗಳೊಳ್ ಮಾಳ್ಪ ಮೈತ್ರಿ ಕುಂದುಗುಂ (ನೀತಿಮಂ. I, ೨೩೯). ೨. ತುಂಟತನವುಳ್ಳುದುಂ : ನಿನ್ನಯ ಸುಱುಗುರುಳಲ್ಲವಿವನ್ನಯ ಮಱಿಯೆಂದು ಬಂದು ತಲೆವಿಡಿದವೊಲಾ ಚೆನ್ನೆಯ ತಲೆವಿಡಿದಿರ್ದುದು ತಾಂ ನಱುಗಂಪಿಗೆ ತುಂಬಿ ದುಱುದುಂಬಿ ಕರಂ (ಚಂದ್ರಪು. ೭-೧೦೨). ೩. ತುಂಟ : ಮಱಿಯೊಳು ಬಂದು ಮಕ್ಕಳ ಗರ್ದುಗವ ಹಾಲುಪಱಿಯೆಂದು ಬಾಚಿ ಹಿಡಿಯಲು ಹೆಱಿನೂಂಕಿ ಬಳಿಕ ಕೈಯಿಂದ ಸುಲಿವನಾವ ದುಱುದುಂಬಿಯಾ ಬಾಲವಿಷ್ಣು (ನೇಮಿಶಂ. ೧೩-೧೦೮). (ಗು). ೪. ಕೆಟ್ಟಗುಣವುಳ್ಳ ; ಭಂಡತನದ : ಕಲಬರ್ದುಱುದುಂಬಿ ಮುಂಡೆಯುರ್ವನೆಯೆಳಗುಳ್ಳುದಂ ತವಿಸಿ ಗಂಡರನೇಂ ಕುಱಿಮಾಡಿ ತಿಂದವರ್ (ಸಮ್ಯಪ. ೯-೧೧೩) ; ಸಂದುಗೊಂದಿನೊಳಡಂಗಿರ್ದು ಬಱಿವೋಕರ ಕೊಲ್ವ ಕಳ್ವ ದುಱುದುಂಬಿ ಕೊಲೆಗಂಗೆ (ರಾಮಾಶ್ವ. ೭೪-೨). **ದುರುದುಂಬಿ$_1$:** ೧. ಶಿಶುಪಾಲನು ಮಹಾ ದುರುದುಂಬಿ (ರಾಜಸೂ. ೧೧). ೪. ಈ ದುರುದುಂಬಿ ತುಂಬಿಯು ಪೂಜ್ಯಳಾದ ಈಕೆಯ ಮುಖಕ್ಕೆ ಎರಗುವುದು (ಶಾಕುಂತ. ೯೦-೧೭). **ದುಱ್ದುಂಬಿ :** ೫. ದುರಭಿಮಾನದ ; ಹೆಮ್ಮೆಯ : ತೆಱಪಿಲ್ಲದಿರೆ ಮುನ್ನಿನೊಂದು ದುಱ್ದುಂಬಿ ಲಿಪಿಯನುಜ್ಜಿಸಿ ಬರೆಸಿದೆನು (ಭರತ. ೫೪-೪೩). [ ದುಱು + ತುಂಬು$_2$ + -ಇ$_3$ ]

**ದುಱುದುಂಬಿಗ**, ದುರುದುಂಬಿಗ (ನಾ). ದುಷ್ಟ ; ನೀಚ ; ಕೆಟ್ಟವನು ; ಪುಂಡ : ನೋಟಕರು ನಿರ್ಭಯರು ಕೊಸಬಿಗಳಾಟವಿಕ ದುಱುದುಂಬಿಗರು [ಪಾಠಾಂ. ಗಳು] . . . ಖಳರು ಕೂಡಿತು ಕೋಟಿಸಂಪೆಯಲಿ (ಕೃಣರಾ. ೫-೫-೧೫) ; ಡಂಬಕನು ಡೌಳಿಯ ವೃಥಾ ದುಱುದುಂಬಿಗಂ . . . ವಾದಿರದೆ ಬಂದೆ ನಂಬಿ ನೆಱೆ ಪಕ್ಕ್ಯಾದಿರಕ್ಕಟ ದುಃಖದುರಿಗಂದ (ಮುದೇಪು. ೩-೨೬). **ದುರುದುಂಬಿಗ :** ಪೆರರ ಪಡಿಮಾತನಾಡುವ ದುರುದುಂಬಿಗನೆಕ್ಕಸಿಕ್ಕನು (ನೀತಿಸಾ. ೮೫೭). [ ದುಱುದುಂಬಿ + -ಗ$_2$ ]

**ದುಱುದುಂಬಿತನ**, ದುರುದುಂಬಿತನ (ನಾ). ೧. ಕೆಟ್ಟ ನಡವಳಿಕೆ ; ದುಷ್ಟತನ ; ನೀಚತನ : ತಾನಿಲ್ಲದುದ ನೆವವಱಿಕ್ಕಿ ದುಱುದುಂಬಿತನದಿ ನಿವಸಂ ಕೊಲಿಸಿ (ಸಮ್ಯಕಾ. ೨-೯೫) : ರಾಮನ ಕೊಱಚಾಟದಿಂ ಕೊಲಿಸುವುದು ದುಱುದುಂಬಿತನವಲ್ಲವಿದು ರಾಜಕಾರ್ಯದ ಹೊಱಿಗೆಯಲ್ಲೆಂದು ಪೇಳಿದನು (ಕುಂತಸಾಂ. ೩೫-೩೦) ; ಆತನೊಳ್ ನೆಲೆಗೊಂಡ ದೈವದೊಲವುಮಂ, ಪಾರ್ವರ ಪರಕೆಗಳುಮನಱಿಯದೆ ದುಱುದುಂಬಿತನದಿಂ ಕೆಣಕು ಜಗಳಂ ತೆಗೆವುದುಂ (ಚಾವುಂ. ೧೩-೭). ೨. ತುಂಟತನ : ಮಿಸುವ ಕರವೀರದ ಕಡುಗೊರ್ಬಿದ ದಱಿಮುಗುಳ್ಗಳಂ ಮುತ್ತುಂಕಿ ಮುತ್ತಿ ಮುಸುಂರಲೆಂದು ಮುಂಕೊಂಡು ಝೇಂಕರಿಸುತ್ತ ದುಱುದುಂಬಿತನದಿಂ ಬಂದು ಮಱಿದುಂಬಿಗೆ ಚಂಪಕಕೋರಕ ಭ್ರಾಂತಿಗೊಟ್ಟು ತೊಟ್ಟನೆ ಮುಗುಳ್ಚಿಯುಂ (ರಾಜಶೇ. ೧೨-೩೯ ವ). ೩. ಅವಿವೇಕ ; ದುಡುಕುತನ : ದುರುಳ ನೀ ದುಱುದುಂಬಿತನದಲಿ ನಿನ್ನ ಹೊಗಳಿದೊಡೆ ಗರುವ ಮಾನ್ಯರು ಮೆಚ್ಚುವರೆ (ಕುವ್ಯಾವಿ. ೭-೦೮) : ದುಱುದುಂಬಿತನದಿ ಧುರಮುಂ ಮಾಳ್ಪೆನೆಂದೂರ ಪೊಱಮಟ್ಟು ತನ್ನ ಸೇನೆಯನು ಪರಬಲಕೆ ಕುಯ್ಗುಱಿ ಮಾಡಿ ನಾಡು ಬೀಡಂ ಕೆಡಿಸಿಕೊಂಡನಲ್ಲಾ ನಮ್ಮ ನೃಪತಿ (ಸಮ್ಯಕಾ. ೮-೩೪) : ಇಱಿದು ಮೆಱೆದು ಪೊಕ್ಕು ಪೊಱಮಡಬಲ್ಲ ಅಱಿಕೆಯುಭಟರಿರ್ದಂತೆ ದುಱುದುಂಬಿತನದೊಳಿಂತಿದನೆಣಿಸುವರೇ ಕಿಱುವರೆಯದೊಳೆಲೆ ಮಗನೇ (ನೇಮಿಶಂ. ೨೮-೩೦). **ದುರುದುಂಬಿತನ :** ೧. ಬರಿದೆ ದುರುದುಂಬಿತನದ ಮಾನಿನಿಯವಳ್ ಕುಲನಾಶಿನಿ (ರುಕ್ಮಾಂಗ. ೬-೫೭) : ಅವರು ಮಕ್ಕಳ ದುರುದುಂಬಿತನಕ್ಕೆ ಎಡೆಕೊಟ್ಟು ಕುಟುಂಬವಿನಾಶಕ್ಕೆ ಕಾರಣರಾಗುತ್ತಾರೆ (ಕಸಾಕ. ೨೫೭); ದುರುದುಂಬಿತನ, ಕಾಮತೃಷ್ಣೆ, ಹಿಡಿಹೊನ್ನಾಸೆ ಈ ಗೋಡೆಗಳಾಚೆ ಮಾನವ ದೃಷ್ಟಿಯು ಇನ್ನೂ ಹರಿದಿಲ್ಲ (ರೂಪುಮ. ೧೮) : ಜೈಲುಗಳಲ್ಲಿ ತಾಂಡವವಾಡುತ್ತಿದ್ದ ಘೋರದುಷ್ಕರ್ಮವನ್ನೂ ದುಷ್ಕರ್ಮಪ್ರವರ್ತಕರ ದುರುದುಂಬಿತನವನ್ನೂ ಅವನು ಕಣ್ಣಾರೆ ಕಂಡಿದ್ದನು (ಕುನರು. ೫೯೧). ೪. ಮಂದ ; ಸೊಕ್ಕು ; ಅಹಂಕಾರ : ರಾಮುನನ್ನು ಬಗ್ಗು ಬಡಿಯುತ್ತೇನೆಂಬ ದುರುದುಂಬಿತನದಿಂದ ರುದ್ರ ಕರ್ನಾಟಕ ರಾಜ್ಯದ ಮೇಲೆ ಧಾಳಿ ನಡೆಸಿದನು (ನಂಜುಂಡ. ೪೪) : ಆದರೆ, ನಾನೀಗ ದುರುದುಂಬಿತನದ ಗಂಗನನ್ನು ಪದಗೊಳಿಸಲಾಗಿ ಅವನ ರಾಜ್ಯದೊಳಗೇ ನುಗ್ಗುತ್ತೇನೆ (ವೀರಬಂ. ೭೩).

[ ದುಱುದುಂಬಿ + -ತನ ]

**ದುಱುದುಂಬನಿ** (ನಾ). ದುಷ್ಟೆ ; ಕೆಟ್ಟವಳು : ಕೇಡಿಯೊ ಕುಂಟಣಿಯೊ ಕುಬ್ಜೆಯೊ ನಾಡೆ ದುರ್ಗಂಧಿನಿಯೊ ದುಱುದುಂಬಿನಿಯೊ ದುರ್ಜನಿಯೊ (ಮುದೇಪು. ೬-೨೧). [ < ದುಱುದುಂಬ ]

**ದುಱುದುಱನೆ** (ಅ). ವೇಗವಾಗಿ ; ದುರುದುರು ಎಂಬ ಶಬ್ದದೊಡನೆ: ಇಱಿದೆಚ್ಚು ಕಡಿವಲ್ಲಿ ಹೊಡವಲ್ಲಿ ಸೀಳ್ವಲ್ಲಿ ದುಱುದುಱನೆ ನೆತ್ತರುಗೆ (ವೀರಕೃಪು. ೨-೧೧-೮). 'ದುರುದುರನೆ' ಪರಾ.

[ ದುಱುದುಱು + -ಅನೆ$_1$ ]

**ದುಱುದುಱಿಸು**, ಜುಱುಜುಱಿಸು, ದುರುದುರಿಸು$_1$, ದುಱದುಱಿಸು (ಕ್ರಿ). (ನೊರೆ ಸಹಿತವಾಗಿ) ಧಾರೆಯಾಗಿ ಸುರಿ ; ಒಂದೇ ಸಮನೆ ಸ್ರವಿಸು ; ಬಳಬಳನೆ ಸುರಿ : ಕೋಣನ ಮುಱಿದೆಱೆಯ ವಿಾಸಲಿನ

ರಕುತದ ದುಬುದುಬುವ ದಂಡೆಯುಲಿ ಕಲಸಿದ ಕೂಳ ಮುದ್ದೆಗಳ (ಕುಮಾ.ಕ. ೮-೮) ; ದುಬುದುಬುವ ನೆತ್ತರ ನಿಹಾರದ ಮೈಯು ಸಡಲಿದ ಕೈಯು ಬಿಲುಸರಳ ಅರಸನು ಕಂಡಳಲಿದರು (ಕುಮಾ.ಕ. ೧೧-೫೫); ದುಬುದುಬುವ ತಲೆ ಮಿದುಳ ಹಬುಗರುಳ ನೆಣವಸೆಯು ಮೂಳೆಯು ಮುಬುಕುಗಳ ಕಡಿಖಂಡವಮಯಮಾಯ್ತು ಮಿಳಚತುರಂಗ (ಕುಮಾ.ದ್ರೋ.೧೮ ೩೩): ಮುಬುದ ಮೂಳೆಗಳಿಂ ಸುಭಟರ ದುಬುದುಬುಸುವ ಗಾಯಗಳಿಂದಾ ರಣ ಬುದುಬುದು ಭೀಕರವಡೆದು (ಕುರಾಸಾಂ. ೧೨-೮೦). ಜುಬುಜುಬುಸು: ಆ ಕುಮಾರ ಶರಾಭಿವರುಷದಲಿ ಜುಬುಜುಬುವ ಕರುಳಗಳ ಖಂಡದ ಹಬುದೊಗಲ ತೊಡೆ ತೋಳ್ಗಳಲಿ ಹೆದ್ದೊಬುಗಳಾದವು (ನಿಭಾಗ. ೧೦-೮೩-೮) ; ಜುಬುಜುಬುವ ಕೀವು ನೆತ್ತರ್ಗಜಗುತ ಝುಮ್ಮೆಂದು ಮೊರೆವ ಸೊಳವಿಗೆ (ವೃಷವಿ. ೩೮-೧೨೪). ದುರುದುರಿಸು$_1$ : ಗುರುಗುರಿಸುವ ಜೀವದೊಡಲೊಳು ದುರುದುರಿಸುತಿಹ ರಕುತಮಯದಿಂ ಮೆರದುದೈ ರಣಭೂಮಿ (ವೀವೀದು. ೩-೧೪): ದುಬದುಬಿಸು : ದುಬದುಬುವ ರಕುತದ ಕಾಲುವೆಯೊಳುಬು ತೇಲಿದುವು ಹಮುರಾವ್ರರಟ್ಟೆಗಳು (ಮೃರಾಕಾ. ೪-೪೯); ದುಬದುಬಿಪ ನೆತ್ತರಿನ ಕೋಡಿಯಿರದೊತ್ತರಿಸಿ ಸುತ್ತುವರಿಯೆ . . . ಬುಬತ್ತಿದರ್ ದಾನವರನೆತ್ತಿದಾಯುಧಗಳಿಂದೆ (ಚಿಲಕ. ೪೪-೪೦).

[ ದುಬ ದುಬು + – ಇಸು$_3$ ]

**ದುಬುದುಬು** (ನಾ). (ದ್ರವಪದಾರ್ಥಗಳು ಸುರಿಯುವುದನ್ನು ಸೂಚಿಸುವ) ಒಂದು ಅನುಕರಣ ಶಬ್ದ: ದುಬುದುಬೆಂದು ನೆತ್ತರುಬು ಶಾಕಿನಿಗಳ್ಗಳ್ಲಿ ಬಾಯ್ಗಳನೊಡ್ಡಿ ಬಿಸಿನೆತ್ತರ ಜುಬುಜುಬೆಂದು ಬೀರಿಯಾನಂದಿಸುತ ನಲಿದು ಘಬಘಬೆಂದು ತೇಗಿದವು (ಚೀರವು. ೪-೧೫); ದುಬುದುಬೆಂದು ನೆತ್ತರುಗೆ ಕುಕಿಲಿರಿದು ಭೂತಂಗಳೆಯ್ದೆ ಬಾಯೊಡ್ಡಿ ನಲಿದು . . . ಘಬುಘಬೆಂದು ತೇಗಿ ಪರಸಿದವು ಶಿವದೂತರಂ (ವೀಕೃಶು. ೨-೭-೪೮).

**ದುಳುದುಳುದಿನ್** 'ತುಂಬುತುಂಬುತಿನ್' ನೋ.

△ **ದುಬುಸು** 'ದುರುಂಸು$_1$' ನೋ.

**ದೂ** 'ದು' ನೋ.

**ದೂಂಟಿಕ್ಕು, ದೂಟಿಕ್ಕು** (ಕ್ರಿ). ೧. ಮೇಲಕ್ಕೆ ನೆಗೆ; ಜಿಗಿ : ಭರದಿಂ ಬಂದೆನ್ನ ಮೇಗಾಲ್ಗಳನಮಳದಿಯಿಂ ಮೆಟ್ಟಿ ದೂಂಟಿಕ್ಕಿ . . . ತಾಮೂಧರಮಂ ತತ್ಕಾಂತೆ ಮೆಲ್ಪಿಂ ಮಗುಟ್ದು ಮಗುಟ್ದವಳ್ ಚುಂಬನಂಗೆಯ್ದಳಾಗಳ್ (ದಕಕು. ೧೦-೯೬) ; ಮರಳಿ ಕುಂಟುತ್ತ ದೂಂಟಿಕ್ಕಿ ನಡೆಯುತಿರ್ಪನ್ನ ಕರದೊಳಗೆ ಲೇಖ್ಯಮಂ ಪಿಡಿದಿರ್ತ್ತಕೊಂಡು (ಅರಾಕ. ೬-೧೭). **ದೂಟಿಕ್ಕು** : ೧. ಉರದೊಳ್ ಪೆರ್ಮೊಲೆ ನಿಂದು ಮಿಳ್ಳಿಸೆ ಭುಜಾಮೂಲಂಗಳ ಸ್ಥಾನದೊಳ್ ಬೆರಸಲ್ ಪೆರ್ದೊಡೆ ನೀಳ್ದು ಕೂಡೆ ನಿಮಿರಲ್ ದೂಟಿಕ್ಕಿ ತಾಂ ನೀಳ್ಕೆ ಸೌಂದರಿಯೊರ್ವಳ್ ಕಡುನೀಡಿ ಮೇಲೆ ನಳತೋಳಂ ಚಂಚಳಂಬೆತ್ತ ನುಣ್ಪರಳಿಂ ಪೂದಿಬುವುತ್ತಮಿರ್ದಳೊಲವಿಂದೊಂದುಚ್ಚಶಾಖಾಗ್ರದೊಳ್ (ಲಾಧಕು. ೧೪-೮೫). ೨. ತಳ್ಳು ; ದೂಡು; ಸರಿಸು: ತರಳತನದಲಿ ತಾನು ಮಾಡಿದ ದುರುಳತೆಯ ದೂಟಿಕ್ಕಿ ನಿಮ್ಮಯ ಹಿರಿಯತನವನು ಮೆಬುವುದು (ತೊರಲಾ. ೬-೨೪-೩೭) : ನಿನ್ನ ನಂದನಂ ದುರುಳತನದಿಂ ನಿಮ್ಮ ದೂಟಿಕ್ಕಿ ಹಿರಿಯರಂ ಕುರುಡನಂ ನಂಬಿ ಕುರುಡಂ ಅಡವಿಯಂ ಪೊಕ್ಕವೊಲಾದ (ಕುರುಂಗ. ೭೦-೭) ; ಗುರು ಭೀಷ್ಮ ವಿದುರಾದಿಗಳ್ನುಡಿಯ ದೂಟಿಕ್ಕಿ ದುರುಳರ ಕುಯುಕ್ತಿಗಂ ಮೈಗೊಟ್ಟು ಕಿಟ್ಟು ಪೊರದೆಗೆದು ಪೋಪಾಗಳೀಗಾರುಂಟು (ಕುರುಂಗ. ೭೩-೫೪) ; ನಮ್ಮ ಪಾಂಡವರೆಂಬ ಪ್ರೀತಿಯು ಸೊಮ್ಮು ನಾವು ಸುರಿದರೆ ಕೌರವ ಕರ್ಮಗಾಬಿತವನೆನವನೆಂದೇ ಹೊರಗೆ ದೂಟಿಕ್ಕಿ ನಮ್ಮ ಪ್ರೀತಿಗೆ ಮುನಿದರರಿಯದೆ ಹೆಮ್ಮೆಯಿಂದವರೊಡನೆ ನೆರವಿಗಧರ್ಮವಿಡಿದೈತಂದ ಕೌರವನೆಲ್ಲಿ ತೋರೆಂದ (ಕೃಷ್ಣಾ.ಕ. ೨೪-೯೦). [ ದೂಂಟು$_1$ + ಇಕ್ಕು ]

**ದೂಂಟಿಸು, ದೂಟಿಸಂ, ದೂಡಿಸಂ** (ಕ್ರಿ). ೧. ಹಾರುವಂತೆ ಮಾಡು ; ಜಿಗಿಸು ; ಚಿಮ್ಮಿಸು : ಎಂಟು ಶಿರವನೀವೆನೆಂಟೊಡಲಾತಂಗೇದುಟ ಮಾನಸದಿ ಮಂತ್ರವನೂ ದೂಂಟಿಸುತವೆ ತನ್ನ ಕಂಠವರಿಯಲು ಶ್ರೀ ಕಂಠ ಹೋ ಪುರೆ ಸಾಕು ನಿಲ್ಲು ಎನುತ (ಛ್ರರವೇ. ೧-೨೭೮). **ದೂಟಿಸು** : ೧. ಉಚ್ಚದಿರು ದೋರ್ವಳತಟಾಕದ ಮುಚ್ಚುದೊಂಬನು ನಮ್ಮ ಮುಂದೆನು ತೆಚ್ಚು ಗಗನಕೆ ದೂಟಿಸಿದ[ಪಾಠಾಂ. ದನು] ದೂಷಣನ ಮಸ್ತಕವ (ತೊರಲಾ. ೩-೬-೧೮). ೨. ನಾಶಮಾಡು ; ಇಲ್ಲವಾಗಿಸು: ಭಕ್ತಜನ ಹೃದಯಾಂಧಕಾರವಂ ದೂಟಿಸಲು ಬಲದ ಕೈಯೊಳಗೆ ಚಕ್ರಾದಿತ್ಯನಂ ಧರಿಸಿ ರಾಜಿಸುತಿಪ (ಅರ್ಜವಿ. ೧-೮೫) ; ತಾಟಕಿಯಾಟವಂ ಕಣೆಯೊಂದರಿಂದ ದೂಟಿಸಿದನು ರಾಮ (ಸಂರಾಮಂ. ೧೭). **ದೂಡಿಸು** : ೩. ಮುಂದಕ್ಕೆ ಬರು ; ಚಾಚು: ದೂಡಿಪ ಬೆಳಗಾಯಿ ಬೊಗರಿಮೊಲೆಯು ಚೆಲ್ವ ಗಾಡಿಕಾತಿಯರ್ಕೈದಿದರು (ಕಂಸವಿ. ೯-೮೦) ; ಓಡಿತು ತಮದೊಡ್ಡು ಪಾಡಿದೊ ಕೋಗಿಲೆ ದೂಡಿಸಿ ಅಂಬುಜವರಳ್ದು (ಪೂಜ್ಯದ. ೭).

ದೂಡಿಸಿಕೊಳ್ಳು = ನೂಕಿಸಿಕೊಳ್ಳು ; ಹೊರಗೆ ಹಾಕಿಸಿಕೊಳ್ಳು : ದೂಡಿಸಿಕೊಂಡ ಮನುಷ್ಯ ಹೇಡಿಗಿಂತ ಕಡೆ (ಗಾದೆ) ; ದೂಡಿಸಿಕೊಂಡವನಿಗೆ ನಾಡಿನ ಗೊಡವೆ ಯಾಕೆ ? (ಗಾದೆ). [ ದೂಂಟು$_1$ + – ಇಸು$_3$ ]

**ದೂಂಟು$_1$, ದೂಟು$_1$, ದೂಡು** (ಕ್ರಿ). ೧. ಒಂದೇ ಕಾಲಿನಿಂದ ನಡೆ ; ಒಂಟಿಕಾಲಿನಲ್ಲಿ ನಡೆ ; ಕುಂಟಿನಡೆ ; ಕುಂಟು : "ದೂಂಟು – ಏಕಪಾದಗತೌ" (ಶಮುಧಾ) ; ನಿತ್ಯಬಿಂದುಗೆ–ಬೆಡಂಗು, ಕಡಂಗು . . . ದಾಂಟು, ದೂಂಟು (ಶಮದ. ೩೩ ಪ್ರಯೋ) ; ದಾಂಟು, ದೂಂಟು (ಶಬ್ದಾನು. ೮೦ ಪ್ರಯೋ) ೨. ಹಾರಾಡು ; ಗಾಳಿಯಲ್ಲಿ ತೇಲಾಡು, – ಸುತ್ತಾಡು : ನವಸಹಕಾರನೊಳ್ ನೆರೆದ ಮಲ್ಲಿಗೆ ಸಲ್ಲಳ ತಾರಹಾರದಂತೆವೊಲಿರೆ ಮೊಲ್ಲೆ ಮೊಗ್ಗರಿಸೆ ಕಂಪನಲಂಪಿನೊಳೀಂಟಿ ದೂಂಟುವಾಡುವ ಮುಬುದುಂಬಿ ಮಾಲೆ ತಳಿರೊಳ್ ತಡಮಾಯ್ದೆರ್ದೆ ಝುಂಕೃತಂ ತುಳುಂಕುವ ನೆವದಿಂದೆ ಚೇವೊಡೆದು ನೋಡಿದನಂಗಜನಿಕ್ಷುಚಾಪಮಂ (ಅನಂಪು. ೭-೯). **ದೂಟು$_1$** : ೩. ಹಾರು ; ಚಿಮ್ಮು : ದೂಟ ಬಿದ್ದವು ಸೀಸಕವು ಶತಕೋಟಿ ಘಾಯದ ಘಟನೆಯೊಳು ಶತಕೋಟಿ ಘಾಯಕೆ ಸಿಡಿದ ಹೇಮಾಚಳದ ತುದಿಯಂತೆ (ಕರ್ಣಾಮ್ಯಗ. ೭-೧೨). ೪. ಹಾರಿಸು ; ಚಿಮ್ಮಿಸು : ದೂಟಿ ಮಸ್ತಕವಭ್ರ ಕಿಟ್ಟುದು ಕೂಟದಲಿ (ತೊರಲಾ. ೩-೬-೧೯). ೫. ನೂಕು; ದಬ್ಬು ; ತಳ್ಳು. ೬. ನಿವಾರಿಸು ; ದೂರಮಾಡು : ಪದಧೂಳಿಯಲಿ ದೂಟದನಹಲ್ಯಾ ಸತಿಯ ದುಷ್ಕೃತವ (ತೊರಲಾ. ೦-೨-೨೦) : ದೂಡಿದಳು ಲಜ್ಜೆಯನು ಮೂರ್ಛೆಯ ಧಾಟಿಯಲಿ ಧೃತಿಗೆಟ್ಟಳು . . . ತರಳಾಕ್ಷಿ (ನಿಭಾಗ. ೧೦-೫೮-೨೪). ೭. ಅಲುಗಾಡು; ಕಂಪಿಸು; ತೂಗಾಡು; ಏರುಪೇರಾಗು: ಕೋಟಿಸಂಖ್ಯೆಯ ಬಲವ ಮಿಕ್ಕಿನ ಕೋಟಿಸಂಖ್ಯೆಯ ಯೂಥಪರು ಧರೆ ದೂಟಲಂಬುಧಿ ಮಿಾಟಲು . . . ತೋಬುಸಿದರೀ ಪರಿಪಾಟಿಯಲಿ . . . ಗಣನೆಯಿಲ್ಲದ ರಾಮಸೈನಿಕವ (ತೊರಲಾ. ೪-೭-೨೫). **ದೂಡು** : ೫. ತೊಟ್ಟಗೆ ವಿಭು ಸಾಯೆ ಪೊಯ್ದು ಕಿವಿಯಂ ಪಿಂಡಿ ದೂಡಲೊಡರ್ಚ ಬಂದನೇ (ಸುಕುಮಾ. ೨-೬೩) ; ದಶಕಂಠ . . . ದೂಡಿಬಿಟ್ಟನು ತಮ್ಮ ವಿಭೀಷಣನ (ಕೌಶಿರಾ. ೧೪ ಪಲ್ಲವಿ) ; ಚೇದಿಭೂಪತಿ ದಂತವಕ್ತ್ರರು ವಿಪ್ರಶಾಪದಲಿ ಆದರೀ ಪರಿ ವಿಷ್ಣುಪದದಿಂ ದೂಡಿದುದು ನಿಜಕರ್ಮಗತಿ (ನಿಭಾಗ. ೭-೦-೨೫); ಈ ಸಣ್ಣ ಮಗುವ ದೂಡುವರಲ್ಲೆ ಯುದ್ಧಕ್ಕೆ (ಅಭಿಕಾ. ೮) : ಬಳಿಕತ್ತ ಮಲ್ಲಮ್ಮನಂ ದೂಡಿ ತಾವುಣ್ಣಲೆಳಸುತೊಳಪೊಕ್ಕು ನೋಡಲ್ ಬೋನ ಕಜ್ಜಾಯ ಉಳಿಯದೆಲ್ಲವಡಂಗಿ ಪೋಗಿತ್ತು (ಮಲ್ಲಪ. ೭-೨) ; ಬೆಳಕು ಕತ್ತಲೆಯ ಎರಡು ಗೋಲಗಳು ಒಂದನೊಂದು ದೂಡೆ (ಅರಳು. ೨೨೮-೨೦) ; ಎರಡು ಗಂಟೆ ಕಾಲ ನಿದ್ದೆ ಮಾಡದೆ ಅತ್ತಿತ್ತ ಹೊರಳಿ ಸಮಯ ದೂಡಿದರು (ಶಾವೀಶಿ. ೧೭೦) ; ಕಂಡವರ ಮಕ್ಕಳನ್ನು ಬಾವೀಲಿ

ದೂಪಿ, ಅಳು ನೋಡಿದ ಹಾಗೆ (ಗಾದೆ). ೬. ಸವಿ, ಮುನ್ನಿನ ಸವ್ಪಿನ ಸಾರ್ಥಕವೆ ಸುವಿಕಾಲದಿ ಸವಿಯುರ ದೂಡುವರೆ (ವಿಜೀಗೀ. ೭೮-೧). ೮. (ಹಳ್ಳಿ, ಜಾತಿ ಮುಂತಾದುವುಗಳಿಂದ) ಹೊರಗೆ ಹಾಕು,-ಬಹಿಷ್ಕರಿಸು : "ದೂಡು-ಹೊರಗೆ ಹಾಕು" (ಜಾನಪೋ. ೭).
[ ದೇ.॥ ತಮಿ. ತೂಣ್ಣು ; ತುಳು. ದೂಡು ; ಕೊಡ. ದುಡ್, ದುಡಿ ; ತೆಲು. ದೂಂಟು ]

**ದೂಂಟು₁**, ದೂಟು₂ (ನಾ). ಹೆಜ್ಜೆ; ಅಡಿ (?): ಎಡೆಯೊಳ್ ದೂಂಟಿಂದ ದೂಂಟಿಂಗೆ ಪೆರ್ಬಜೆಯುಂ ಪೊಯ್ಯೆ ಕಲಕ್ಕ ನಾಣ್ಚಿ ತಲೆಗುತ್ತಿರ್ಪಾಕೆಯೋಂ ಜೋಡೆಯೋ (ಪಂಪಭಾ. ೪-೮೩). ದೂಟು₂ : ದೂಟಿಂದ ದೂಟಿಂಗೆ ಮುರವಟ್ಟುವಾ ಮುದುಕಿ ತೊಟ್ಟ ನೋಂಪಿಯು ಬಳ್ಳಿಯೂರೆಗೋಲಂ ನೆವ್ವಿ ಸಂಚಲಿಸಿದಳೊ ರಾಮನಂ ಕರೆದೊರಲಿ, ಕರೆದು ಕೂಗಿ (ಶ್ರೀರಾಮಾ. ೧೩೩-೨೯೪): ℙ ಇದು 'ದಾಂಟಿಂದೆ ದಾಂಟಿಂಗೆ' ಎಂಬುದರ ಅಪಲಿಖಿತವಿರಬಹುದೆ? [ <ದೂಂಟು₁ ]

**ದೂಂಡು** (ನಾ). ಮನಸ್ಸಿನ ಅನಿರ್ಧಾರ (?): ಮನವೊಸೆದಿತ್ತು ದೂಣ್ಣಿರದೆ ಭೂಮಿಯನಿತ್ತು (ಬೊಂಕಶಾ. ೧೯೪೫, ಬಂಕಾಪುರ. ೧೧-೩೭; ?).
[ <ದೂಂಟು₁ ? ]

**ದೂಕೀಲ** (ನಾ). ಒಂದು ಬಗೆಯ ಆಭರಣ (?): ಮಣಿಹಾರ ಕಾಣ್ಕೆಯನಿಟ್ಟುಯಿಟ್ಟು ದೂಕೀಲ ನೀವಾರಿಗಳನಿಟ್ಟನಾಗಮನೆಲೆಯನರಿದು ಕೈಗೋಣ್ಣಳೆತ್ತಿ ಸಾರಿದರು (ಜಿನಮು. ೩-೫). [ ? ]

**ದೂಕು**, ದೂಗು (ಕ್ರಿ). ದೂಡು ; ದಬ್ಬು ; ತಳ್ಳು : ಸಾವಿತ್ರಿ ಎರಡು ತಿಂಗಳ ಕಾಲ ಕಾಮುದಮ್ಮ ರಂಗಮ್ಮ ಇವರನ್ನು ಆಶ್ರಯಿಸಿ ಬಾಳು ದೂಕಬೇಕಾಯಿತು (ತಾಯಿಕ. ೧೫೦). ದೂಗು : ತನ್ನ ತಾನೆ ದುಂಬಾಲ ಬಿದ್ದ ಕವಿನೆರಳ ದೂಗು ನೂಗು (ಅರಲು. ೩೫೫-೧೧). 'ನೂಂಕು₁' ಪರಾ.
[ ದೇ. ॥ ತೆಲು. ದೂಂಕು = ಹಾರು, ನೆಗೆ ]

**ದೂಗ** 'ದುಗ' ನೋ.

**ದೂಗರುವ** (ನಾ). ಇಮ್ಮಡಿ ಪರಾಕ್ರಮವುಳ್ಳವನು (?) : ಪರಿಪರಿಯ ಶಸ್ತ್ರಾಸ್ತ್ರ ಕೌಶಲಗಳ ದೂಗರುವ ತೋರಿದಂ (ತುರಂಗ. ೧೦-೩೮).
[ ದೂ (<ದು) + ಗರುವ₁ ]

**ದೂಗಿಸು** (ಕ್ರಿ). ದಬ್ಬು ; ತಳ್ಳು ; ನುಗ್ಗಿಸು : ಮಧ್ಯಮರು ಪ್ರಥಾರಿತನದ ಯಜ್ಞದಲ್ಲಿ ಯಾರನ್ನೋ ದೂಗಿಸಿ ಕಪಟಸಾಕ್ಷಿತ್ವದ ತಾಟಸ್ಥ್ಯದಿಂದ ಅವರು ವ್ಯವಹರಿಸಿಕೊಳ್ಳುವುದು . . . ವಾಡಿಕೆಯುದೇ ಆಗಿದೆ (ಪಂಜಪಂ. ೭ ಮುನ್ನುಡಿ). 'ನೂಂಕಿಸು' ಪರಾ. [ ದೂಗು (<ದೂಕು) + -ಇಸು₃ ]

**ದೂಗು** 'ದೂಕು' ನೋ.

**ದೂಜಾವ** 'ದುಜಾವ' ನೋ.

**ದೂಟಾಡು** (ಕ್ರಿ). ಅಲುಗಾಡು ; ಅಲ್ಲಾಡು. 'ದೂಟಾಡಿಸು' ಪರಾ.
[ ದೂಟು₁ (<ದೂಂಟು₁) + ಆಡು₁ ]

**ದೂಟಾಡಿಸು** (ಕ್ರಿ). ೧. "ಹಾರಾಡಿಸು; ಚಿಮ್ಮಾಡು" (ಕ್ರಿಘಂ.). ೨. ಅಲುಗಾಡಿಸು ; ಅಲ್ಲಾಡಿಸು ; ತೂಗಾಡಿಸು : ಮೇರುಶೈಲವಂ ದೂಟಾಡಿಸಿತು ರಾಶಿ ತಾರಾಗ್ರಹಂಗಳಂ ತಾಟಾಡಿಸಿತು ಪನಃಮುನಬ್ಬರಣ (ಶ್ರೀವಿಧಾ. ೧೩-೪೩) ; ಮುರುತನೆಡೆಯಾಟವೇಂ ಗಿರಿವರನ ದೂಟಾಡಿಸಲು ಬಲ್ಲುದೆ (ದಿರೀಹ. ೨-೩೩) ; ಬುಡ ದೂಟಾಡಿಸಿ, ತಲೆ ತಾಟಾಡಿಸಿ, ಗುಡಿಸಿಲ ಮಾಡನು ಹುಲುಹುಲುಮಾಡಿಸಿ ಬಂತ್ಯೆ! ಬಂತ್ಯ(ಕಮಿಷು. ೨೮-೫).
[ ದೂಟಾಡು + -ಇಸು₃ ]

**ದೂಟಕ್ಕು** 'ದೂಂಟಕ್ಕು' ನೋ.

**ದೂಟಸು** 'ದೂಂಟಸು' ನೋ.

**ದೂಟು₁** 'ದೂಂಟು₁' ನೋ.

**ದೂಟು₂** 'ದೂಂಟು₁' ನೋ.

**ದೂಡಿಸು** 'ದೂಂಟಿಸು' ನೋ.

**ದೂಡು** 'ದೂಂಟು₁' ನೋ.

**ದೂಡುಗಾಡಿ** (ನಾ). ತಳ್ಳುಬಂಡಿ; ತಳ್ಳುಗಾಡಿ: "ಮಕ್ಕಳನ್ನು ಕುಳ್ಳಿರಿಸಿ ದೂಡಿಕೊಂಡು ಒಯ್ಯುವ ಗಾಡಿ" (ಕಸಾ_ಕೋ. ೪೯೪).
[ ದೂಡು (<ದೂಂಟು₁) + ಗಾಡಿ₃ ]

**ದೂತ** (ನಾ). ೧. ಸುದ್ದಿ ಅಥವಾ ಸಂದೇಶವನ್ನು ಒಯ್ಯುವವನು ; ಓಲೆಕಾರ : "ಲೇಖವಾಹಂ ದೂತಂ" (ಪಶು_ಕೋ. ೬೦-೫೮); "ದೂತನನೆ ಪೋಗಿ ಪೇಳುವನೆನಿಕ್ಕು" (ಮಂಗರಾ. ೭೩-೨೮): ದೂತಂ ದಪ್ಪನ ವಾರ್ತೆಯಂ ನುಡಿದು ಮೇಗಂ ನೋಟಿಪ್ಪುಡಿಲ್ಲಿಂಗೆ ತದ್ದೂತಂ ನಿಶ್ಚಯ ಕಾರ್ಯವುಂ ನಡೆಯುಕುಂ ತನ್ನಂಗವಂ ಮುಟ್ಟಿದಂತಾ ಕಾಣಂ ಫಣಿ ದಪ್ಪಮಂಗೆ (ಲೋಕೋಪ. ೧೧-೭) ; ಉಳಿದ ಚತುರಾಂಬುಧಿವೃತಾ ಭೂತಳದ ಭೂಪಾಲರಿಗೆ ದೂತರ ಕಳುಹಿದನು (ಕೊರರಾ. ೧-೭-೧೧). ೨. ರಾಯಭಾರಿ ; ನಿಯೋಗಿ: ಇನಿತೊಂದು ನುಡಿದ ಬಳಿಯ ನಿನಗಿಲ್ಲ ದೊಡೇಕೆ ನಿನ್ನನಾಳ್ದಂ ನಿನ್ನಂ ಮನವೊಲ್ದು ನಚ್ಚಿಯುಟ್ಟಿದನನಾಕುಳಂ ದೂತನಿಂತು ನುಡಿಯಲ್ವೇಟ್ಕುಂ (ಆದಿಪು. ೧೪-೬೫) ; ಎಟ್ಟೊ ೀಗು ದೂತನಪ್ಪನ ಬೆಟ್ಟನ ನುಡಿಗೇಳ್ದು ಮುಳಿಯಲಾಗದು (ಪಂಪಭಾ. ೯-೫೮) ; ದೂತನನಟ್ಟುವುದೆಂತುಂ ನೀತಿಯೆ (ಪಂಪಾಪು. ೧೧-೨೪) : ದೂತಂಗೋಲಗದೊಳ್ ಪೆರ್ಮಾತಂ ಮಂಗನಿಂದೆ ನುಡಿಯಿಪೆಡೆಯಲ್ಲಿದಂ (ಚಂದ್ರಪು. ೧೧-೧೧೧); ದೂತಂ ಸಂಗರವಂ ನಿರೂಪಿಸೆ (ಪಾರ್ಶ್ವಪು. ೨-೯೦); ಎರಡಕ್ಕಂ ಸಲ್ವಂತಿರೆ ನರನಾಥಂಗುಸಿರ್ಗೆ ಸಂಧಿವಿಗ್ರಹಿನುಡಿಯುಂ ಸರಿಯಪ್ಪುದನೆರಡಕ್ಕಂ ಪಣಿತಮಂತಿ ದೂತನಿಂತು ನುಡಿಯಲ್ವೇಟ್ಕುಂ (ಸೂಕ್ತಿಸು. ೧೬-೮೭); ಬಂದ ದೂತನ ಕೊಲುವನರಸೇ . . . ಕಾನೊಂದು ಹುಲುಂಗಟಿ ವೀರನನು ಬೇಹಿಂಗೆ ಕಳುಹುವರೇ (ಕಾಶಿರಾ. ೧೧-೫೩). ೩. ಸಂಧಾನ ಹೂಡುವವನು; ಮಧ್ಯಸ್ಥ. ೪. ಸೇವಕ ; ಆಳು : ಮನೋಜ ವಸಂತರಾ ಖಳನ ಬೆಸನ ಮಾಡುವ ದೂತರೀ ರವಿ ಶಶಿಗಳೊಪ್ಪುವ ದೀವಟಿಗರು (ಕೊಕರಾ. ೧-೮-೬೩) ; ನಿನ್ನ ಬಳಿ ಒಬ್ಬ ಸಿಪಾಯಿ ದೂತ ಇರುವನಲ್ಲವೇ ? (ಮಾಲಿನಾ. ೭೪). [ ಸಂ. ]

**ದೂತಕಾರ್ಯ** (ನಾ). ರಾಯಭಾರಿಯ ಕೆಲಸ : ಮುರಾಂತಕನಂತಪ್ಪವಂ ಯುಧಿಷ್ಠಿರಂ ದೂತಕಾರ್ಯಕ್ಕಟ್ಟಿದಂ (ಪಂಚತಂ. ೨೩೮-೮).
[ ದೂತ + ಕಾರ್ಯ ]

**ದೂತಕಿ** (ನಾ). ಸೇವಕಿ : ಇತ್ತ ಪುತ್ರೋದಯದ ಶುಭವಾರ್ತೆಯಾ ಬಂದೋರ್ವ ದೂತಕಿಯು ಶ್ರೀಕೃಷ್ಣರಾಯಂಗೆ ಪೊಂದಿಸುತ ನಿಂದು ಸೂಚಿಸೆ (ನವಮೋ. ೧೦-೨೨) ; ಶ್ರೀವೃಷಾದೇವಿಯುರುಯಿದನರಿದು ತಳಿತ ಭೂಜದ ನೆಳಲೊಳಂ ನಿಂತು ದೂತಕಿಯುರಂ ಕಳುಹೆ (ನವಮೋ. ೨೪-೬೯).
[<ಸಂ. ದೂತಿಕಾ ]

**ದೂತಟ್ಟು** 'ದೂದಟ್ಟು' ನೋ.

**ದೂತತನ** (ನಾ). = ದೂತತ್ವ : (+). [ ದೂತ + -ತನ ]

**ದೂತತ್ವ** (ನಾ). ರಾಯಭಾರ ಮಾಡುವಿಕೆ ; ದೂತ್ಯ : ಸಾಂಗವಾದುದು ನರಪತಿಯ ದೂತತ್ವವಿನ್ನೀಶ್ವರನು ಪಾಡಲ್ಲನೆನುತ ಹಿಗ್ಗಿದನು ಹರುಷದಲಿ (ಕೊರರಾ. ೫-೩-೨೭); ಮೆಲ್ಲಗೆ ಕಿವಿಯಲ್ಲಿ 'ನಿನ್ನ ತಂಗಿಯುತ್ತು ಬರುವಂತೆ ಹೇಳು' ಎಂದನು. ದೂತತ್ವವ ಸಿದ್ಧಿಸಿತು (ಮಾರಮ. ೨೭೮)
[ ಸಂ. ]

**ದೂತಮುಖ್ಯ** (ನಾ). ರಾಯಭಾರಿಗಳಲ್ಲಿ ಶ್ರೇಷ್ಠನಾದವನು,-ಪ್ರಮುಖನಾದವನು : ಚತುರವಚನರಚನಾಪ್ರಪಂಚಕಂಚುಕಿತ ರೋಮಾಂಚಚುಂಚು ಸಭಾಜನಶರೀರನುಮಪ್ಪ ದೂತಮುಖ್ಯನನಟ್ಟಿ (ಶಾಂತಿಪು. ೨-೫೦ ವ);

ನೀತಿನಿರತನುಮಾಚಾರವಂತನುಂ ವಚನಚತುರನುಮಪ್ಪುದ್ಧವನೆಂಬ ದೂತಮುಖ್ಯನನಟ್ಟಿದೊಡೆ (ತಂದ್ರಪು. ೬-೧೮ ವ); ದೃಷ್ಟಂ ವರವಕ್ರೋಕ್ತಿ ವಿಶಿಷ್ಟಂ ನಿಶ್ಶಂಕನನ್ವಿತಂ ನಯನಿಪುಣಂ ಸ್ಪಷ್ಟ ವರಚಿತ್ರವೃತ್ತಿಸ್ಪಷ್ಟಾರ್ಥನೆನಿಪ್ಪ ದೂತನುಮುಖ್ಯನನಾಗಳ್ ಕರೆದು (ಪಾರ್ಶ್ವಪು. ೨-೫೦).

[ ದೂತ + ಮುಖ್ಯ ]

**ದೂತಯ** 'ದುತಯಂ' ನೋ.

**ದೂತಲಕ್ಷಣ** (ನಾ). ರಾಯಭಾರಿಯು ಹೊಂದಿರಬೇಕಾದ ಲಕ್ಷಣ,-ವಿಶಿಷ್ಟ ಗುಣ : (+). 'ದೂತಾಂಗ' ಪರಾ. [ ದೂತ + ಲಕ್ಷಣ ]

**ದೂತವಚನ** (ನಾ). ರಾಯಭಾರಿಯ ಮಾತು; ದೂತನ ನುಡಿ: ಬಾಹುಬಲಿ ಕುಮಾರಂ ದೂತವಚನಾಕರ್ಣನೋದೀರ್ಣ ಕ್ರೋಧೋದ್ಗಚ್ಛದಚ್ಛೇದ ಜಳಸ್ವೇದಧಾರಾಸಾರಭೀಕರಾಲೋಹಿತ ಕಪೋಳತಳಮುಂ ... ಭೀಷಣಾರುಣ ಗಂಡಸ್ಥಳಮುಮಪ್ಪ ಗಂಧಸಿಂಧುರೇಂದ್ರಮನನುಕರಿಸಿ (ಆದಿಪು.೧೪-೬೩ ವ).

[ ದೂತ + ವಚನ ]

**ದೂತಸಂಪ್ರೇಷಣ** (ನಾ). ವಾರ್ತಾವಾಹಕನನ್ನು ಕಳುಹಿಸುವುದು ; ದೂತನನ್ನು ಕಳುಹಿಸುವುದು : ಆಕೆ ನಿನಗನುರಕ್ತೆ ವಿರಕ್ತೆಯೆಂಬುದಂ ದೂತಸಂಪ್ರೇಷಣದಿನರಿದನುರಕ್ತೆ ಯಪ್ಪೊಡೇನಾನುಮೊಂದು ಪಾಯದಿಂ ತಪ್ಪದು ವಿರಕ್ತೆಯಪ್ಪೊಡಾಕೆಯಂ ಬಲ್ಲಾಳ್ತನದಿಂ ತಪ್ಪದುಮನೆ (ಬಾಪುಂಪು. ೩೦೨). [ ಸಂ. ]

**ದೂತಾಂಗ** (ನಾ). [ಕಾವ್ಯಮೀ] ದೂತಲಕ್ಷಣವನ್ನು ತಿಳಿಸುವ ಭಾಗ; ರಾಯಭಾರಿಯು ಹೊಂದಿರಬೇಕಾದ ಲಕ್ಷಣಗಳ ವಿವರಣೆ ; ಅಷ್ಟಾದಶ ವರ್ಣನೆಗಳಲ್ಲಿ ಒಂದು : ಕೃತನಾದೇಯಸ್ವರೂಪಂ ಪರನೃಪ ವಸುಧಾಂತಃಕಾಳಕ್ಷಂ ಸದೃಷ್ಟಾಂತರವಾಕ್ಯಂ ಸಾಮಭೇದಾದ್ಯತಿಶಯ ವಿದನಗ್ರಾಮ್ಯವೇಷಂ ಸಭಾಭ್ಯಂತರ ನಿಶ್ಶಂಕಂ ಪರಾಶೇಂಗಿತವಿದನೆನಿಪಂ ದೂತನೆಂದಿಂತು ಧಾತ್ರೀಶ್ವರ ಕಾರ್ಯೋದ್ಯೋಗಿಗಳ್ ಬಿತ್ತರಿಪ ಕವಿಗಳಂ ಖ್ಯಾತ ದೂತಾಂಗವಕ್ಕುಂ (ಸೂಕ್ತಿಸು. ೧೬-೧); P ರಾಯಭಾರಿಗಳ ಕಾರ್ಯಗಳನ್ನು ಕುರಿತ ವಿವರಣೆ ; ರಾಯಭಾರಿಯಲ್ಲಿರಬೇಕಾದ ಸ್ಥಿರತೆ, ಔದಾರ್ಯ, ಶತ್ರುರಾಜ್ಯದ ಒಳಗಿನ ತೊಂದರೆಗಳನ್ನು ತಿಳಿಯುವಿಕೆ ದೃಷ್ಟಾಂತಸಹಿತವಾಗಿ ಭಾಷಣ ಮಾಡುವ ಚಾತುರ್ಯ, ಚತುರೋಪಾಯಗಳ ಆಳವಾದ ಜ್ಞಾನ, ನಾಗರಿಕವಾದ ವೇಷಭೂಷಣ, ಮಂತ್ರಿಸಭೆಗಳ ನಡುವೆ ನಿಶ್ಚಂಚಲವಾದ ಅಭಿಪ್ರಾಯವನ್ನು ಹೊಂದಿರುವಿಕೆ, ಇತರ ರಾಜರ ಅಂತರಂಗದ ಉದ್ದೇಶಗ್ರಹಣಶಕ್ತಿ, ಸಹಜಪ್ರಜ್ಞೆ, ಅನೇಕ ಭಾಷೆಗಳ ಜ್ಞಾನ, ದಕ್ಷತೆ, ನೋಟದಿಂದಲೇ ಇತರರನ್ನು ಗೆಲ್ಲಬಲ್ಲ ಶಕ್ತಿ, ಕೋಪರಾಹಿತ್ಯ ಮುಂತಾದುವೆಲ್ಲ ಇದ್ದರೆ ಅಂತಹವನನ್ನು ನಿಜವಾದ ದೂತನೆಂದು ಕರೆಯುತ್ತಾರೆ. ಕಾವ್ಯಗಳಲ್ಲಿ ಬರಬೇಕಾದ ಹದಿನೆಂಟು ವರ್ಣನೆಗಳಲ್ಲಿ ಇವುಗಳನ್ನು ಕುರಿತ ವರ್ಣನೆಯೂ ಒಂದು. ಅದನ್ನು ದೂತಾಂಗವೆಂದು ಕರೆಯುತ್ತಾರೆ. [ ದೂತ + ಅಂಗ ]

**ದೂತಾವಾಸ** (ನಾ). ರಾಯಭಾರಿಯ ವಾಸಸ್ಥಾನ ; ನಿಯೋಗಿಯ ಮನೆ : ಮಾಸ್ಕೋದಲ್ಲಿರುವ ಅಮೆರಿಕ ದೂತಾವಾಸದ ಮುಂಗಡೆ ಘೂತ ಪ್ರದರ್ಶನ (ಜಕಂಕ. ೧೧-೨-೬೩ ; ೫-೭). [ ದೂತ + ಆವಾಸ ]

**ದೂತಿ** (ನಾ). ೧. ಸೇವಕಿ ; ಗೌಡಿತಿ. ೨. [ಕಾವ್ಯಮೀ] ಶೃಂಗಾರ ಸನ್ನಿವೇಶಗಳ ನಿರೂಪಣೆಯಲ್ಲಿ ಕವಿಗಳು ಹೇಳುವ ನಾಲ್ಕು ಬಗೆಯ ಪರಿಚಾರಿಕೆಯರಲ್ಲಿ ಒಂದು ಬಗೆ ; (ಅಂತರಂಗದ ವಿಷಯಗಳನ್ನು ಹೇಳಬಹುದಾದ) ಸಖಿ ಗೆಳತಿ : "ಸಂಚಾರಿಯೆನೆ ದೂತಿಯಕ್ಕುಂ" (ಮಂಗರಾ. ೯೦-೫) ; ನವಪಲ್ಲವಗಳಂತೆ ಸರಾಗಂಗಳಾದ ದೂತೀವಚನಂಗಳ್ ಶ್ರಾಂತಾಜನಕ್ಕೆ ಕರ್ಣಪೂರಂಗಳಾಗೆಯುಂ (ಕಾದಂಪೂ. ೫೦೩) : ದೂತೀಪ್ರೇಷಣಕೃತ ಸಂಕೇತಾದಿಗಳೊಂದುಮಿಲ್ಲ (೮೧ಲಾವ. ೧೦-೩೮) ; ಬಳಿಕ ಅಭಿಸಾರಿಕೆ ಚತುರಿಕೆ ಸಹಸಂಚಾರಿಕೆ ದೂತಿಯರೆಂಬ ಚತುರ್ವಿಧ ಸಖಿಯರುಂ (ವಿವೇಕ. ೨೨೪) ; ಯಾಮವು ಕಳೆದರು ಬರಲಿಲ್ಲವಾತನು ದೂತಿಯ ಹೋಗೋಣ ಏಳು (ಇಂದಾಪ. ೧೬೭-೨೨). ೩. ಸಮಾಚಾರವನ್ನು ತಲುಪಿಸುವ ಹೆಂಗಸು : "ದೂತೀ, ಸಂಚಾರಿಕಾ – ಈ ೨ ದೂದವಿ" (ಹಲಾಯು. ೮೧-೩೨೭). ೪. ತಲೆಹಿಡುಕಿ ; ಕುಂಟಣಿ: ನೆರೆಯ ಮುಂದುಕ ಕನ್ನೆದೂತ್ತು . . . ಕುಂಟಿಯೆಂಬ ಪೆಣ್ಗಳರಸಿ ಕೇಳು ದೂತಿಯರ್ಕಳಪ್ಪುದೇದಿಟಂ (ಜನವ. ೧೬-೨). [ ಸಂ. ದೂತೀ ]

**ದೂತಿಕೆ** (ನಾ). ದೂತಿ; ದೂದವಿ: "ದೂತೀ, ಸಂಚಾರಿಕಾ–೨ ದೂತಿಕೆಯ ಹೆಸರುಗಳು" (ಸಿದ್ಧಾಂತಿ. ೧೭೨). [ ಸಂ. ದೂತಿಕಾ ]

**ದೂತೀಜಲ್ಪ** (ನಾ). ದೂತಿಯ ನುಡಿ : ಕಿವಿವುಗೆ ನುಡಿದೊಡಂಗೊಂಡು ಪೋಪುದುಂ ದಕ್ಷಿಣನವಳ ದೂತೀಜಲ್ಪಂ [ಪಾಠಾಂ. ದೂತಿಕಾಕಲ್ಪಂ] ವಿಸ್ಪಷ್ಟಾರ್ಥಮಾದುದೆಂದುಮಲ್ಲಿಂ ತಳರ್ದು ರಾಜಭವನಾಭಿಮುಖನಾಗಿ (ಚಂದ್ರಪು. ೮-೯೦ ವ). [ ಸಂ. ]

**ದೂತೀಯ** 'ದೂಷೀಯ' ನೋ.

**ದೂತು** 'ದೂದು' ನೋ.

**ದೂತ್ಕೃತ** (ನಾ). [ಕಾಮಶಾ] ರತಿಕ್ರೀಡೆಯ ಒಂದು ಧ್ವನಿ : ಸೀತ್ಕೃತಂ ಹೂಂಕೃತಂ . . . ದೂ[ಪಾಠಾಂ. ಹೂ]ತ್ಕೃತಂ ಶ್ವಸಿತಮುರುರಾತ್ಕೃತಂ ಎನಿಪೀ ಚಮತ್ಕೃತಿಯನರಿದು ರಮಿಸುವನೆ ಚದುರಂ (ಅನಕ. ೮-೫೦).

[ ಸಂ. ]

**ದೂತ್ಯ** (ನಾ). ೧. ರಾಯಭಾರಿಯ ಉದ್ಯೋಗ,-ಸ್ಥಾನ; ನಿಯೋಗಿಯ ಅಧಿಕಾರ. ೨. ದೂತನ ಕೆಲಸ ; ರಾಯಭಾರ : "ದೂತ್ಯಂ,(ದೌತ್ಯಂ) ತದ್ವ್ಯಾಪಕರ್ಮಣೋಃ, ದೂತಭಾವಕ್ಕೂ ದೂತಕೃತ್ಯಕ್ಕೂ ಹೆಸರು. ದೂತನಾಗುವಿಕೆ, ದೂತನು ಮಾಡತಕ್ಕ ಕೆಲಸ, ಇವುಗಳು" (ಸಿದ್ಧಾಂತಿ. ೨೨೪). ೩. ಸುದ್ದಿ; ವರ್ತಮಾನ; ಸಮಾಚಾರ. 'ದೌತ್ಯ' ಪರಾ. [ ಸಂ. ]

**ದೂದ** (ನಾ). ಸಂದ್ದಿಯನ್ನು ಒಯ್ಯುವವನು ; ವಾರ್ತಾವಾಹಕ ; ದೂತ : ಇನಿಯನಟ್ಟಿದ ದೂದರ ಸೀಯನಪ್ಪ ಮಾತಿನ ರಸದೊಳ್ ಕೊನರ್ವುದು ತಳಿರ್ವುದು . . . ನಲ್ಮೆಯೆಂಬ ನಂದನವನಮೋಪರೊಳ್ (ಪಂಪಭಾ. ೪-೧೦೨) ; ತೆಂಗಾಳಿಯೆಂಬ ದೂದನಂ ಕರೆದು . . . ನಮ್ಮ ಪೆಟೆಯುಂ ತಡೆಯದೆ ಬಿಡಿಸಿಕೊಂಡು ಬಾಯೆಂದೊಡೆ (ಕಬ್ಬಿಗಕಾ. ೧೬೦).

[ <ಸಂ. ದೂತ ]

**ದೂದಗ, ದೂದವ** (ನಾ). ದೂತ ; ಕುಂಟಣಿಗ : ಬೋಳೈಸಿ ತೆತ್ತು ಕಾಮನ ಕೇಳಿಯೊಳನುಮೆತ್ತು ಪೊರೆವ ಪುರುಳಿಗನಂ ತಾಂ ಮೇಳೈಸುವ ದೂದ[ಪಾಠಾಂ. ದು]ಗನಿಂ ಸೂಳೆಗಮುಪರಚ್ಚೆಯರ್ಗಮುಪ್ಪುದು ಪಚ್ಚಂ (ಚಕವಿ. ೬-೧೧೭). **ದೂದವ** : "ಸೂಳ್ಗರೆವನೆನಲ್ಕೆ ದೂದವಂ [ಪಾಠಾಂ. ದೂದಂ]" (ಚತುರಿ. ೬. I, ೪೫): ಓತು ಮಾತದಕಲೊಂದಿದ ದೂದವರಿಲ್ಲ ನೆಟ್ಟನಪ್ಪುದಱನದಿಂತರಣ್ಮರುದಿತಂ ವಲಮೆನ್ನೊಲವಿಂದು ವಕ್ತ್ರಯಾ (ಪಂಪಭಾ. ೪-೭೫); ತಪ್ಪದು ಮಾ[ತು] ದೂದವರ ಕಯ್ಯೊಳೆ ಕಾಲ್ಪಿಡಿದಟ್ಟಿ ಕಣ್ಣ ನೀರ್ ತಪ್ಪುವು (ಪಂಪಭಾ. ೪-೯೯). [ <ಸಂ. ದೂತಕ ]

**ದೂದಟ್ಟು, ದೂತಟ್ಟು** (ಕ್ರಿ). ೧. ಸಮಾಚಾರವನ್ನು ಕಳುಹಿಸು : ಸಂದ್ದಿಯನ್ನು ತಿಳಿಸು : ಸುವಸ್ತುವಾಹನವ ಸಡಗರದಿ ತೆಗೆಕೊಂಡು . . . ಮೇಘಕೂಟದ ಕಡೆಪೊಳಲ ಹೊಕ್ಕಿರ್ದು ದೂದಟ್ಟಿದನು ಪುರವರ್ಗೆ (ಶಾಬ್ಬಿಭಾ. ೩೭-೫೦). ೨. ರಾಯಭಾರವನ್ನು ಮಾಡಲು ಕಳುಹಿಸು : ಆ ನಾರದನನೆ ದಿವಿಜಾರಾಜಂಗೆ ದೂದಟ್ಟಿ (ಜಗವಿ. ೧೩-೩೨ ವ) ; ಬಹುಕಾಪಿದಶೋಕಾನೋಕಹಮೆಸೆದುದು ಮುನಿಯ ಪೆಂಗೆ ನೆಲಲಾಗ ಮನಸ್ಸೃಷ್ಟಿಯೆಂದಪ್ಪಮಹಾಪ್ರಾತಿಹಾರ್ಯತರನೆರೆಯಲೆಂದು ದೂದಟ್ಟಿದ

ವೊಲ್ (ಅಸಂಪು. ೩-೪೬); ಪುದುವಾಳ್ವರೊಳ್ ಪಗೆಯಂ ದೂದಟ್ಟಿಯುಂ, ತಾಂ ಪಿಡಿದಿರ್ಪರೊಳ್ ಕಾವನಂ ಕಾವಲ್ಮಾಡಿಯುಂ ನೋಟವಮಾಟಂಗಳ್ಗೆ ತೋಱಿದನಲ್ತೆ ! (ರಾಮಾಶ್ವ. ೪೫-೮). ೩. ಕಂಟಣಿಯ ಕೆಲಸಕ್ಕೆ ಕಳುಹಿಸು : ಮೋಹಧನಮಂ ಮುಂದಿಟ್ಟು ದಲ್ ತೃಷ್ಣೆ ಲಂಪಟೆ ಬೆನ್ನಂ ಬಿಡದೊಲ್ಲೆಮೊಲ್ಲೆಮೆನೆಯುಂ ದೂದಟ್ಟೆ ದುರ್ಬುದ್ಧಿಯಂ. (ಶಾಂತಿಪು. ೭-೭೭) : ನೃಪಂ ಬೆಂಬಿಟ್ಟಂ ದೂದಟ್ಟಿಯುಂ ಬಾರಂ (ಕಮದ. ೨೩೮ ಪ್ರಯೋ) : ವೇದಾಗಮವನೊರೆದ ವಾಮದೇವನನೆ ಬೆಲೆವೆಣ್ಣೆಡೆಗೆ ದೂದಟ್ಟೆ ತನ್ನ ಭಕ್ತಿಯ ಬಲ್ಮೆಯ ಭೂಮಿಯೊಳ್ಪ್ರಕಟಿಸಿದ ಕಡುನೀಱ (ಸೌಂದಪು. ೨-೩೫): ನಂಬಿ ದೂದಟ್ಟೆ ಕಾಳ್ಗಿಲಸಂಗೈಸಿದನಯ್ಯೊ ದೇಸಿಗನಿವಂ ತಾಯುಳ್ಳೊಡಿಂತಪ್ಪನೇ (ವೃಷವಿ. ೯-೧೦೭). **ದೂತಟ್ಟು** : ೨. ಮಾಱಜೂಜಂ ಕುಡುವೇಟ್ಟುದಾಂ ರವಣಮಂ ಬೇಟ್ಟುಂತುಟಂ ತಂದೆ ನೆಂದಱಿಪಲ್ಕೊರ್ವ ಕಠೋರವಾಕ್ಯಮುಖನಂ ದೂತಟ್ಟೆ (ಸಳಸಂ. ೭೫೪).

[ ದೂದು + ಅಟ್ಟು$_3$ ]

**ದೂದಪೇಡಾ** (ನಾ). ಹಾಲಿನಿಂದ ತಯಾರಿಸಿದ ಒಂದು ಬಗೆಯ ಸಿಹಿತಿಂಡಿ: ಪರೀಕ್ಷೆಯಲ್ಲಿ ಮೊದಲನೇ ದರ್ಜೆಯಲ್ಲಿ ತೇರ್ಗಡೆಯಾದುದರಿಂದ ಅವಳು ತನ್ನ ಗೆಳತಿಯರಿಗೆಲ್ಲಾ ದೂದಪೇಡಾ ಹಂಚಿದಳು (ರೂಢಿ).

[ ←ಮರಾ. ದೂಧ್‌ಪೇಢಾ ]

**ದೂದಫೇಣಿ** (ನಾ). ಹಾಲಿನಲ್ಲಿ ಬೇಯಿಸಿ ತಯಾರಿಸಿದ ಒಂದು ಬಗೆಯ ಸಿಹಿತಿಂಡಿ,–ಫೇಣಿ : (ಸ್ವಾಂಡರ್). [ ←ಹಿಂ. ದೂಧ್‌ಫೇಣೀ ]

**ದೂದವ** 'ದೂದಗ' ನೋ.

**ದೂದವಿ** (ನಾ): ೧. ದೂತಿ; ಸಮಾಚಾರವನ್ನು ತಿಳಿಸುವವಳು,–ತಲುಪಿಸುವವಳು: ಪಿಂದಾಂ ಬಂದಪೆನೆಂಬಿದು ನರರ್ಗೆ ನೀಂ ಪೇೞೆಂದು ಮಹಾರ್ಣಾಂತಕಂ ನಿಂದ್ಯಾಂಗಂ ಜರೆಯೆಂಬ ದೂದವಿಯುಮಂ ಮುಂದಟ್ಟಿ (ಧಾಧಪು. ೫-೩೫). ೨. ತಲೆಹಿಡುಕಿ ; ಕುಂಟಣಿ : "ಸಂಚಾರಿಕೆ ತಾಂ ದೂದವಿಯಭಿಸಾರಿಕೆ ಸಂಕೇತನಕ್ಕೆ ಪೋಪವಳಕ್ಕುಂ" (ವಸ್ತುಕೋ. ೫೩-೭): ಒರ್ವಳ್ ತನ್ನ ನಲ್ಲನಲ್ಲಿಗೆ ದೂದುವೋಗಿ ಬಂದ ದೂದವಿಗೇಗೆಯ್ದು ತೆಱನುಮನಱಿಯದೆ ಪದೆದು ಪಡೆಮಾತಂ ಬೆಸಗೊ[ಳ್ವುದಂ] ಕಂಡು (ಪಂಪಭಾ. ೪-೧೦೦ ವ) : ಬರ ಪಾರದೆ ದೂದವಿಯರ ಹಂಸದೆ . . . ಮನವೊಲ್ದಾಗಳ್ನೆರೆಯಲ್ಲೊರೆಕೊಳ್ವ ರತಮೆ ಸಂಕಲ್ಪರತಂ (ಕಾದಂಬ. ೩೧೮) : ಅನ್ನೆಗಂ ನೆರೆಮನೆಯ ನಾವಿದನ ಪೆಂಡತಿಯಪ್ಪ ದೂದವಿ ಪಾದರಿಗನಂ ಸಂಕೇತಸ್ಥಾನದೊಳಿರಿಸಿ ಪರಿತಂದು (ಪಂಚತಂ. ೭೫-೨) ; ಅವರ ದೂದವಿಯರ ಲಲ್ಲೆವರಸಿದ ಮೆಲ್ನುಡಿಯೆ ಕರ್ಣಪೂರಮಾಗೆಯುಂ (ಮಲ್ಲಿಪು. ೩-೪೨ ವ) ; ಅವನ ಕಾದಲಳ ದೂದವಿ ಬಂದು ಪೊಡೆವಟ್ಟು ಪೊರ್ದಿ ಕುಳ್ಳಿರ್ದು (ಚಂದ್ರಪು. ೮-೮೨ ವ) ; ಮುದುಗರಡಿಯ ಮಱುದೊವಲಂದದೆ ಕರಿಯಂ . . . ಎಂದೊಡೆ ದೂದವಿ ಗವೞ್ತೆಂದಳ್ (ಜುಕೋಚ. ೨-೪೧); ಪಾರದೆ ಬರ್ಪ ದೂದವಿಯರಂ ತವಕಂ ತವೆ ಮಿಕ್ಕು ನೀವಿಯೊಳ್ ಚಾರುಕಳಾಪಮಂ ನಿಲಿಸುತುಂ ದೆಸೆಯಂ ನಡೆ ನೋಡುತುಂ . . . ಜಾರೆಯರೆಯ್ದುತಿರ್ದರುಪಕಾಂತರನಂದು ಮಹಾಂಧಕಾರದೊಳ್ (ಕುಸುಮಾ. ೪-೩೫) ; ಉನ್ನತಪ್ರೌಢನಂಗನೆಗೆ ಎತ್ತಂಗುಡದೆ ಚೆನ್ನನುಡಿಗೂಟಂಗಳಿಂದೆ ಕಾಲಂ ಕಳೆವುದನ್ನೋಡಿ ಕಾಯ್ದು ದೂದವಿ . . . ಇಂತೆಂದಳು (ಭಾವಚಂ. ೬-೨೪) ; ಬಯಸಿದ ನರರೊಳವರ ತಂದು ನೆರೆಯಿಸುವರು ದೂದವಿಯರು (ಕುರಾಸಾಂ. ೨೯-೧೦೧).

[ ದೂದವ (<ದೂದಗ) + – ಇ$_2$ ]

**ದೂದವಿಗೆಲಸ** (ನಾ). ದೂತಿಯ ಕಾರ್ಯ ; ಕುಂಟಣಿಯ ಕೆಲಸ : ಶಿವಶಂಭುಶಂಕರನ ದೂದವಿಗೆಲಸಕೆ ತೆರಳಿಚಿದ ದುಷ್ಕರ್ಮಿ (ಸೌಂದಪು. ೧೭-೨೮). [ ದೂದವಿ + ಕೆಲಸ ]

**ದೂದಿ$_1$** (ನಾ). ೧. (ಶುದ್ಧಿಮಾಡಿದ) ಹತ್ತಿ ; ಅರಳೆ : "ದೂದಿ–ತಪಿಲೀ =ಹತ್ತಿ" (ತದ್ಭಕೋ. ೨೦). ೨. (ಬೆಂಕಿಯನ್ನು ಹೊತ್ತಿಸಲು ಉಪಯೋಗಿಸುವ) ಬೂರಗದ ಹತ್ತಿ ಮತ್ತು ಅದರ ಮರ "ದೂದಿ = ತೀವ್ರವಾಗಿ ಬೆಂಕಿ ಹತ್ತುವದೊಂದು ಪದಾರ್ಥ" (ಗಂಗಾಮ. ೩೫೬) ; "ದೂದಿ–ಕಿಡಿ ಹಿಡಿಯುವ ಹಿಂಜರ ; ಅರಳೆ" (ಜಾನಕೋ. ೭) ; ಕೆಂಡದೊಡಿಗೆಗೆಳಸುವ ದೂದಿಯೊಟ್ಟಲಂತೆ (ವೀಕ್ರಪು. ೩-೨-೧೧).

[ ದೇ.# ತೆಲು. ದೂದಿ ]

**ದೂದಿ$_2$** (ನಾ). ಸಮಾಚಾರವನ್ನು ತಿಳಿಸುವವಳು ; ದೂದವಿ ; ದೂತಿ : ತಕಾರಕ್ಕೆ ದಕಾರಂ–ಕೈತವ–ಕೈದವ . . . ದೂತಿ–ದೂದಿ (ಕಮದ ೨೫೫. ಪ್ರಯೋ) ; ದೂತಿ, ದೂದಿ ; ಕೈತವ, ಕೈದವ (ಶಬ್ದಾನು. ೧೮೩ ಪ್ರಯೋ).

[ <ಸಂ. ದೂತೀ ]

**ದೂದಿಬೋಯ** (ನಾ). ಒಬ್ಬಾತನ ಹೆಸರು: ದೂದಿಬೋಯಸ್ಯ ಕೌಣ್ಡಿಲ್ಯ ಗೋತ್ರ ಗಬೋತಶರ್ಮ್ಮಣ ಏಕಂಶಃ (ಇಆ. VII, ೧೮೮-೩೭ ; 668).

[ ದೂದಿ? + ಬೋಯ ]

**ದೂದು**, ದೂತಂ (ನಾ). ೧. ಸಮಾಚಾರ ; ಸುದ್ದಿ. 'ದೂದಂವೋಗು' ಪರಾ. ೨. ರಾಯಭಾರ ; ನಿಯೋಗ : "ದೂದು . . . ದೌತ್ಯ" (ತದ್ಭಕೋ. ೩೦). 'ದೂದೈದು' ಪರಾ. **ದೂತು**: ೨. ಏನೇನು ವಿಸ್ಮಯವನಾಂಗ್ಯೆದೆ ನಿಷ್ಠುರವ ನೀನಾಡ ಸಲ್ಲದಾದಿಯಲಿ ನಿಮ್ಮಯ್ಯಗೆ ನಿಧಾನದಿಂ ದೂತಿತ್ತ ಬಂದೆಯೆನಲೊಪ್ಪೆ ಪಿತವಾಕ್ಯವೆ ವಿವಾಹವೆನುತ (ಲಕ್ಷ್ಮಭಾ. ೧-೨೦-೪೪). [ ದೂದ + – ಉ$_4$ ]

**ದೂದುಗಾರ** 'ದೂದುಗಾಱ' ನೋ.

**ದೂದುಗಾಱ**, ದೂದುಗಾರ (ನಾ). ಸುದ್ದಿಯನ್ನು ಒಯ್ಯುವವನು ; ದೂತ : ಆ ನುಡಿಗೊಪ್ಪಿ ದೂದುಗಾಱನಲ್ಲಿಂ ತಳರ್ದು ... ಮೆಲ್ಲಮೆಲ್ಲನೆ ತವಸಿಯ ಪೊರೆಗೈತಂದಂ (ರಾಮಾಶ್ವ. ೫೭-೩೬). **ದೂದುಗಾರ** : ರಾಯಸಮಂ ಬರೆದೊರ್ವ ಪಟುಭಟನ ಕರದೊಳಿಟ್ಟು ಕಳಿಪಲೊಡಮಾ ದೂದಂಗಾರಂ . . . ಬಂದಾಸ್ಥಾನಮಂ ಪೊಕ್ಕು (ಚಂದ್ರಪ್ಖ. ೫-೧೧).

[ ದೂದು + – ಕಾಱ ]

**ದೂದುನಡೆ** (ಕ್ರಿ). ರಾಯಭಾರಕ್ಕಾಗಿ ಹೋಗು; ದೂತಕಾರ್ಯಕ್ಕೆಂದು ಹೋಗು : ಅಂದು ಪಾಂಡವರ ಪಾಳೆಯದಿಂ ಕುರುನಗರಿಗೆ ದೂದುನಡೆದ ಬಟಲ್ಮೆಗಳೆಯಲೆಂದು ಒಯ್ಯನೊತ್ತುವ ಸಿರಿಪೊಡವಿಯರ ಮೆಲ್ಗಾಲ ಸೋಂಕಿಗೆ ನವಿರುಣ್ಮುವ ಕಿಱುದೊಡೆಗಳಂ (ಚಿಕವಂ. ೩೪-೮).

[ ದೂದು + ನಡೆ$_1$ ]

**ದೂದುಪೋಗು** 'ದೂದುವೋಗು' ನೋ.

**ದೂದುವೋಗು**, ದೂದುಪೋಗು (ಕ್ರಿ). ವರ್ತಮಾನ ಕೊಡಲು ಹೋಗು; ಸುದ್ದಿ ತಿಳಿಸಲು ಹೋಗು : ತನ್ನ ನಲ್ಲನಲ್ಲಿಗೆ ದೂದುವೋಗಿ ಬಂದ ದೂದವಿಗೇಗೆಯ್ದು ತೆಱನುಮನಱಿಯದೆ ಪದೆದು ಪಡೆಮಾತಂ ಬೆಸಗೊ[ಳ್ವುದಂ] ಕಂಡು (ಪಂಪಭಾ. ೪-೧೦೦ ವ). **ದೂದುಪೋಗು** : ಬೇಟದ ಸೂಡಿಂ ಬಾಡಿ ಬಸಂಗೆಟ್ಟುದನಿಂದು ನಿಂದು ಕಾಂತೆಗಱಿಪಬೞಿಯುಟ್ಟುವೆವನಿತೊಂದು ಪೊಟ್ಟು ಸ್ಮೃತಿರ್ಪುದೆಂದು ಸಂತಯಿಸಿ ದೂದು ಪೋಪವೆನೆ ಮುಯ್ಯೇರಡಿಗಳೋಡೆ (ರಾಮಾಶ್ವ. ೨೨-೧೩).

[ ದೂದು + ಪೋಗು$_1$ ]

**ದೂದೈದು** (ಕ್ರಿ). ರಾಯಭಾರ ಮಾಡಲು ಹೋಗು,–ಪ್ರಯಾಣ ಮಾಡು : ಅಂತಪ್ಪುದುಮಾಗಳರ್ಕಿನ ಸೋರ್ಕೆನದಿಂ ನೀಳ್ದಂಗದಂಗದನಂದಿನ ರಾವಣನೆಡೆಗೆಂತಂತು ಕಡುಸದಗರದಿಂ ದೂದೈದಿವಂದು ಸಮುಚಿತಾಸನದೊಳ್ ಕುಳ್ಳಿರ್ಪುದುಂ (ರಾಮಾಶ್ವ. ೧೪೨-೭).

[ ದೂದು + ಐದು$_1$ (<ಎಯ್ದು) ]

**ದೂನ** (ಗು.) ೧. ಸಂತಾಪ ಹೊಂದಿದ ; ನೋವಾದ : ಪೀಡೆಗೊಳಗಾದ : ಆ ಲೇಖವಾಹಕರ್ . . . ಆ ವೃತ್ತಾಂತಮಂ ತ್ವರಿತಗತಿ ಬಿನ್ನವಿಸಿದಪ್ಪನೆನಿತ್ತಂ ವಿಷಣ್ಣದೂನವದನರಾಗಿರ್ಪುದುಂ (ಕಾದಂಬ. ೬೩೯). ೨. ಬಳಲಿದ ; ಆಯಾಸಗೊಂಡ. 'ದೂನಿಸು' ಪರಾ. ೩. ಸುಟ್ಟ ; ಕಾಯಿಸಿದ ; ತಪ್ತ. [ ಸಂ. ]

**ದೂನಿಕೆ** (ನಾ). ಒಂದು ಬಗೆಯ ಆಭರಣ (?) : ಪಟ್ಟಸರವು ದೂನಿಕೆಗಳ ಚಿನ್ನದ ದಾರಿ ಕಟ್ಟಾಣಿ ಪೊನ್ನ ದಾರಿಗಳ (ದೇವಾಂಪು. ೫-೧೦೬). [ ? ]

**ದೂನಿಸು** (ಕ್ರಿ). ೧. ದುಃಖಿಸು ; ಶೋಕಪಡು ; ಸಂತಾಪ ಹೊಂದು : ದೂನಿಸಿ ಜಾನಿಸಿ ನಿಟ್ಟುಸುತಿರ್ದಂ ತಾನದು ಕಾರಣದಿಂ ನಸುನಗೆ ಮಿಗೆಯೊಗೆದುದೆನಗೆಯೆನಲು (ಉದ್ಯದೀ. ೩-೬೨) ; ಸುತರು ಸುಮ್ಮಾನದೊಳೆಯ್ತರುತಿರಲು ದೂನಿಸುತಿದ್ದಿರಿ ನೀವೆಮಗಿದಟಿ ಸಂಧಾನಗಾಣಸದಾಡಿರೆಂದ (ಭರತ. ೪೫-೪೫) : ದೂನಿಸುತಿರೆ ನಿಮ್ಮ ನಗಿಸಬೇಕಾಗಿ ಹಾಸ್ಯಾನುವಾದದಿ ನಗಿಸಿದನೌ ಆನುದರದಿ ಶೋಕವಿಲ್ಲದೆ ತಾಳ್ದನೌ ಏನಹುದಿನ್ನಳಲಿದರೆ (ಭರತ. ೬೧-೧೦೪). ೨. ಬಳಲು ; ಆಯಾಸ ಹೊಂದು : ಬೆಚ್ಚುತ್ತ ಬೆದಱುತ್ತ ದೂನಿಸುತ . . . ಓಡಿದನು (ಸೌಂದಪು. ೧೬-೪೩). [ ದೂನ + – ಇಸು₃ ]

**ದೂಪ** (ನಾ). ೧. ಸುಟ್ಟಾಗ ಸುವಾಸನೆಯನ್ನು ಬೀರುವ (ಹಾಲುಮಡ್ಡಿ, ಸಾಂಬ್ರಾಣಿ ಮುಂತಾದ) ಪರಿಮಳಪದಾರ್ಥ : (ಕಿ). ೨. ಸಾಂಬ್ರಾಣಿ ಮೊದಲಾದ ಸುವಾಸನೆಯ ಪದಾರ್ಥಗಳಿಂದ ಹೊರಡುವ ಹೊಗೆ : ಧಕಾರಕ್ಕೆ ದಕಾರಂ–ಔಷಧ–ಔಸದ . . . ಧೂಪ–ದೂಪ (ಶಮದ. ೨೫೫ ಪ್ರಯೋ). ೩. ಒಂದು ಬಗೆಯ ಮರ; ಧೂಪದ ಮರ : ಕೆಲವು ಕಡೆಗಳಲ್ಲಿ ತೇಗ, ನಂದಿ, ಹೆಬ್ಬಲಸು, ಬಲಿಗೆ, ದೂಪ, ಜಂಬೆ . . . ಮುಂತಾದ ಗಗನಚುಂಬಿತ ವೃಕ್ಷಗಳಿದ್ದರೆ ಕೆಲವು ಕಡೆಗಳಲ್ಲಿ ಗರಗಿ, ಬಿದಿರು . . . ಮುಂತಾದ ಗಿಡ ಬಳ್ಳಿ ಪೊದೆಗಳಿದ್ದವು (ಪಂಜಪಂ. ೨).

ದೂಪದ ಕಡ್ಡಿ=ಧೂಪಕ್ಕಾಗಿ ಸುಗಂಧವಸ್ತುಗಳಿಂದ ತಯಾರಿಸಿದ ಕಡ್ಡಿ ; ಊದುಕಡ್ಡಿ : (ಕಿ). ದೂಪ ಹಾಕು = ೧. ಸುಗಂಧದ್ರವ್ಯಗಳಿಂದ ಹೊಗೆ ಹಾಕು ; ಧೂಪ ಹಾಕು : ದೂಪ ಹಾಕಿದರೆ ಪಾಪ ಹೋದೀತೆ ? (ಗಾದ). ೨. (ಆಲಂ) ಕೆರಳಿಸು ; ಉದ್ರೇಕವನ್ನುಂಟುಮಾಡು : ಅಣ್ಣ ತಮ್ಮಂದಿರಲ್ಲಿ ಜಗಳ ತರಲು ಮಾವನು ಕಿರಿಯವನಿಗೆ ಆಗಿಂದಾಗ ದೂಪ ಹಾಕುತ್ತಲಿದ್ದಾನೆ (ರೂಢಿ). [ <ಸಂ. ಧೂಪ]

**ದೂಪಟ** 'ದುಪ್ಪಟಿ' ನೋ.

**ದೂಪಾರತಿ**(ನಾ). ೧. ಧೂಪದಿಂದ ಮಾಡುವ ಆರತಿ: ಅರ್ಚಕರು ದೇವರಿಗೆ ದೂಪಾರತಿಯನ್ನು ಮಾಡುತ್ತಿದ್ದಾರೆ (ರೂಢಿ). ೨. ಸುಗಂಧ ವಸ್ತುಗಳಿಂದ ಆರತಿ ಎತ್ತುವುದಕ್ಕೆ ಉಪಯೋಗಿಸುವ ಸಾಧನ ; ಧೂಪಾರತಿಯನ್ನು ಮಾಡುವ ಪಾತ್ರೆ,–ಉಪಕರಣ : ಸ್ವಸ್ತಿಶ್ರೀ ನಗರೇಶ್ವರದೇವರಿಗೆ . . . ಸೊಣ್ಣಪ್ಪನು ಕೊಟ್ಟ ಉಪಕರಣ ಹರಿಯಾಣ ಅದ್ದಣಿಗೆ ಗಂಟಿನವಾರತಿ ದೂಪಾರತಿ ಬಟ್ಟಲು ಶಂಕು (ಎಕ. IX, ಬೆಂಗಳೂ. ೯೦-೧೦ : ಸು. 1400) ; ದೂಪಾರತಿಯು ಘಂಟೆಯುಮನುಯ್ಯೆನೂರನಾ ಪದ್ಮವದನೆಯರು ತಂದಿಡರು[ಲು]ಮಲವಿನಿಂ ತಾ ಪಿಡಿದು (ನವಮೋ. ೨೧-೨೬). 'ಧೂಪಾರತಿ' ಪರಾ. [ ದೂಪ + ಆರತಿ₁ ]

**ದೂಪಿಸು₁, ಧೂಪಿಸು₁** (ಕ್ರಿ). ೧. ಬಾಯಾರು; ನೀರಡಿಸು : ಯುವಾಶಿ ಬೇಂಟೆಯ ನೆವದಿ ಸೇನೆಸಹಿತಾರಣ್ಯದೊಳ್ ಬಳಲಿ ದೂಪಿಸಿ ಕೊಳದಿ ನೀರನೀಂಟಿ (ಲಕ್ಷ್ಮೀಶ. ೧೫-೮) : ವಿಪಿನದೊಳು ಮೃಗಹರಣಕೇಳಿಗಂ ನಡೆತಂದು ಸಂಚರಿಸಿ ದೂಪಿಸಿದರು (ತುರಂಗ. ೧೬-೧೯). ೨. ಸಂತಾಪ ಹೊಂದು; ಸಂಕಟಪಡು: ಹಸಿವು ತೃಷೆ ಬಳಲಿಕೆಗಳಲಿ ದೂ[ಪಾಠಾಂ.ಧೂ]ಪಿಸುತ ಬಂದಳು ಮಾಯೆ ತಾನಲ್ಲಮನನರಸುತಲಿ (ಪ್ರಭುಲೀ. ೬-೪೪) ; ಶರತಾಪದಿಂ ದೂಪಿಸುತ ಕೇಳದಳ್ (ಜನಮು. ೪೧-೧೪). ೩. ಮೂರ್ಛೆ ಹೊಂದು : ಶೋಕಪ್ರಳಾಪದಿಂ ನರನಳಲುತಿರಲತ್ತ ಕರ್ಣಸುತನಟ್ಟಿ ಬಂದಪ್ಪಳಿಸಲು ದೂ[ಪಾಠಾಂ. ಧೂ]ಪಿಸಿ ಧರೆಗೆ ಬಿದ್ದ (ಜೈಮಿಭಾ. ೨೩-೩೦).

ಧೂಪಿಸು₁ : ೧. ನಡೆದು ಪಡೆ ಧೂಪಿಸಿತು ಬಿಂಜದಿ ಕುಡಿಯೆ ನೀರನು ಕಾಣದಸವಳದು (ಕೌಶಿರಾ. ೯-೩೪): ಶರಹತಿಯುಲುಜಿ ನೊಂದು ಧೂಪಿಸಿ ತರಹರಿಸುವಶ್ವಾಳಿ (ಕುಮ್ಯಾಕ. ೨೩-೨೯) : ಮನುಮಥನ ಶರಹತಿಗೆ ಧೂಪಿಸುತ ಮೈಮುಱಿದರು (ನಿಥಾಗ. ೧೦-೮೦-೩೯).

[ ←ತೆಲು. ದೂಪಿಂಚು ]

**ದೂಪಿಸು₂** (ಕ್ರಿ). (ಸುಗಂಧ ದ್ರವ್ಯಗಳಿಂದ ಹೊಗೆ ಹಾಕಿ) ಪರಿಮಳಿಸುವಂತೆ ಮಾಡು,–ಸುವಾಸನೆ ಬೀರುವಂತೆ ಮಾಡು: ದೂಪಿಸಿದ ಬಿಳಿದುಗುಳನುಟ್ಟನುಲೇಪನಂಗಳ ಪೂಸಿ . . . ಇದಿರಾಯ್ತು ನೃಪಕಟಕ (ಕುಮ್ಯಾಗ. ೧-೨೬). [ ದೂಪ + – ಇಸು₃ ]

**ದೂಪೆ** 'ದೂವೆ₁' ನೋ.

**ದೂಬರದಿಂಡಿ** (ನಾ). ದುಂದುವೆಚ್ಚ ಮಾಡುವವಳು ; "ದುಂದುಗಾರತಿ" (ಜಾನಕೋ. ೬). [ ದೇ.॥ ತಮಿ. ತೂಪ್ಪರತಣ್ಣ ; ತೆಲು. ದೂಬಱದಿಂಡಿ ]

**ದೂಮರ** 'ತೂಪರು' ನೋ.

**ದೂಮುಕ** 'ದಂಮುಕ' ನೋ.

**ದೂಮುಧಾಮು** (ನಾ). ಹಾಳುಮಾಡುವಿಕೆ ; ಪೋಲುಮಾಡುವಿಕೆ : (ಸ್ಕಾಂಡರ್). 'ಧಾಮುಧೂಮು' ಪರಾ.

[ ←ಮರಾ. ಹಿಂ. ಧೂಮಧಾಮ್ ]

**ದೂಯುಂ** 'ದುಯ್ಯಂ' ನೋ.

**ದೂರ್** 'ದೂಱು₁' ನೋ.

**ದೂರ** (ಗು). ೧. ಸಮೀಪವಲ್ಲದ ; ಹತ್ತಿರವಲ್ಲದ. ೨. ದೀರ್ಘವಾದ ; ನಿಡಿದಾದ : ಅಂತು ದೂರಾಯುಸ್ಸಾಗರಪಾರಗನಾಗಲೊಡಂ (ಚಂದ್ರಪ್ರ. ೯-೫೬ ವ). (ನಾ). ೩. (ಕಾಲ, ಸ್ಥಳ ಮುಂತಾದುವುಗಳಲ್ಲಿ) ಹತ್ತಿರವಲ್ಲದುದು ; ಸಮೀಪವಲ್ಲದುದು : "ಗೆಂಟು ವಿಪ್ರಕೃಷ್ಟಂ ದೂರಂ" (ವಸ್ತುಕೋ. ೦೦೯-೬೮) ; ತಂದೆ ಕಟಿದಟಿಲ ಬೇಗೆಯೊಳಂ ದೂರದೆ ಬಿರ್ದದೊಂದು ಕಡುಸೇದೆಯೊಳಂ ಬಂದೆನ್ನಂ ಪರವಶತೆಯೊಳೊಂದಿಸಿದತ್ತಾಗಳಾ ಪಿಪಾಸೋದ್ರೇಕಂ (ಕಾದಂಪೂ. ೧೮೯): ಅಯ್ಯ ದೂರದಲ್ಲಿರ್ದಹೆಯೆಂದು ಬಾಯಾಱಿ ಬಳಲುತ್ತಿದ್ದೆನಯ್ಯ ನಾನು (ಮಹಾದೇ. ಬ. ೩೮-೮೧) ; ದೂರದೊಳೆ ನೋಡಿ ಕಂಡು ಪುರೂರವನಿದಪೂರ್ವಮೃಗಮೆನುತ್ತಿಸಲಂಬಂ ನಾರಿಯೊಳಿಟ್ಟಂ (ವರ್ಧಪು. ೧೦-೩೧); ದೂರದಿಂ ಪರ್ವ್ವತಂ ರಮ್ಯಂ (ಎಕ. VI, ತರೀಕೆ. ೪೫-೬೪; 1196); ತೇರನೆಚ್ಚನು ಕುಮಾರಕಾಱರ ದೂರದಲಿ ಖಂಡಿಸಿದನು (ಕುಮ್ಯಾಕ. ೨೦-೨೨) ; ಇರುಳು ಕತ್ತಲೆಯು ಗವಿ ; ಮನೆ ದೂರ ; ಕನಿಕರಿಸಿ, ಕೈಹಿಡಿದು ನಡಸೆನ್ನನು (ಇಂಗೀತ. ೯೬-೩) : ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ (ಗಾದ). ೪. ಸೇರದಂದು ; ಹೊರತಾದುದು ; ಎರವಾದುದು : ತನ್ನ ತಾನಱಿದೆನೆಂಬಹಂಕಾರವುಳ್ಳರೆ ನಿಮ್ಮವರಿಗೆ ದೂರ (ಬಸವ. ೬೫೯) ; ಈ ಗುಣ ಸಂಗನಬಸವಣ್ಣಂಗೆ ದೂರ (ಸರ್ವವ. ೧೨೦-೬೧೯). ೫. ಎರಡು ಸ್ಥಳಗಳ ನಡುವಿನ ಅಂತರ : ಮಕ್ಕಳ ಮೇಲೆ ಗಮನವಿದ್ದುದರಿಂದ ಕುಂತಿಗೆ ದೂರವೇ ಕಾಣಲಿಲ್ಲ (ಪಥಭಾ. ೧೫).

ದೂರದೂರ (ದ್ವಿರುಕ್ತಿ): ದೂರದೂರೋಪವಿಷ್ಟಮೂಕಮುಖಕುಬ್ಜವಾಮನಕಿರಾತವರ್ಷಧರಕಂಚುಕಿಪ್ರಪಂಚಿಯುಮಾಗಿರ್ಪನೆಗಂ (ಚಂದ್ರಪ್ರ. ೩-೫೧ ವ) : ನಿಮ್ಮ ನಿರ್ಮಳರೂಪಮಂ ಕಂಡವರುಗಳ ಬಹುಪಾಪಸಂಕುಳವಳಿದುಹೋಗವೆ ದೂರದೂರದಲಿ (ಬಸಪು. ೪೬-೩೩) ; ದೂರ

ದೂರದಿಂದ ಜನರು ಬರುತ್ತಾರೆ (ಮುಂಬಯಿ. ೪-೧೪೩). **ದೂರಣ** = ೧. ಸಮೀಪವಲ್ಲದ ; ದೂರದ : ದೂರಣ ದೇಶದಿಂ ಬಂದವನೀಶಕು ಮಾರರು ನೆರೆದು ನೋಡುತಿದೆ ಮಾರನ ಮದದಾನೆ ನೋಡೇಳು (ಕುಠಾಸಾಂ. ೨೧-೩೦); ನೋಡೆಂದು ಸಖಿಜನರು ಕರವೆತ್ತಿ ದೂರಣಂ ತೋರೆ ವೀಕ್ಷಿಸಲು (ನವಮೋ. ೬-೯). ೨. ಬಹುಕಾಲದಿಂದ ನಡೆದು ಬಂದ ; ಬಹಳ ದೀರ್ಘವಾದ : ಚಿರಕಾಲದಿಂ ದೂರಣ ಸ್ನೇಹವೆಮಗೆಂದು ತರಣಿ ತಾಮರೆಯೊಡೆಗೆಯ್ದು ಪರುಷದೊಳೊಪ್ಪಿತೆಂದೆನೆ ಚಕ್ರವರನಾ ಕರಕಮಲ ದೊಳೊಪ್ಪಿದುದು (ಶ್ರೀಪಾಲ. ೧೨-೪೩): P ಇದಂ ಅತ್ತಣ, ಇತ್ತಣ, ಪಡುವಣ, ನಡುವಣ ಎಂಬ ಕನ್ನಡ ಶಬ್ದಗಳ ಸಾದೃಶ್ಯದ ಮೇಲೆ ಮಾಡಿಕೊಂಡ ರೂಪವಿರಬಹುದಂ. **ದೂರದ ನಂಟ, ದೂರದ ನೆಂಟ** = ಹತ್ತಿರದ ಬಂಧುವಲ್ಲದವನು; ದೂರದ ನೆಂಟಸ್ತಿಕೆಯುಳ್ಳವನು : ದೂರದ ನಂಟರಂ ಕಂಡರಂತೆ ಸಂಶಯುವಾಗದೆ (ಧರ್ಮಾಮೃ. ೯-೧೯೩) ; ನಾವು ನಿನ್ನ ಮನೆಯಲ್ಲಿ ಯಾರೊ ದೂರದ ನೆಂಟ . . . ಅಂತ ತಗ್ಗಿ ನಡೆಯೋದು ನನ್ನಿಂದಾಗೋದಿಲ್ಲವಲ್ಲ ! (ಸಂ.ಕ. IX, ೬೬). **ದೂರದ ಬಳಗ.** = ಹತ್ತಿರವಲ್ಲದ ಸಂಬಂಧ,-ನೆಂಟಸ್ತಿಕೆ : ಅಲ್ಲಿರೋದು ದೂರದ ಬಳಗ ಅವರು ಹೋಗು ಅಂದಾಗ ಹೊರಟುಬರ್ತೀನಿ (ಬನಶಂ. ೧೯೦). **ದೂರದ ಸಂಬಂಧ** = ದೂರದ ಬಳಗ: ಓಬಯ್ಯ ಯಾವುದೋ ಭೂಗತ ವಾಗಿದ್ದ ದೂರದ ಸಂಬಂಧವೊಂದನ್ನು ಸಂಶೋಧನೆಯಿಂದ ಕಂಡುಹಿಡಿದು ಅವಳನ್ನು 'ತಂಗಿ' ಎಂದು ಕರೆಯತೊಡಗಿದ್ದನು (ಕಾನೂರು. ೧೩೦). **ದೂರ ಪಡಿಸು** = ಪರಿಹರಿಸಂ; ಇಲ್ಲವಾಗಿಸಂ : ಇದನ್ನೆಲ್ಲಾ ದೂರಪಡಿಸುವುದರಲ್ಲಿ ಕಾವೇರಿ ಸಾಯುವುದು ಮೇಲು (ಕಾವೇರಿ. ೨೧೩). **ದೂರಪಾರ, ದೂರ ಬಾರ** = ಹತ್ತಿರವಲ್ಲದುದಂ ; ದೂರ : ನಾವು ನೋಡಿಕೊಂಡು ಬರುವ ದೂರಪಾರ ಏನಿಲ್ಲ (ಸ್ವಪ್ನಹೂ. ೨೮) ; ಮಗಳನ್ನು ದೂರಬಾರ ಕೊಟ್ಟರೆ ಹೋಗಿಬರುವುದು ಕಷ್ಟವಾಗುತ್ತೆ (ರೂಢಿ). **ದೂರವಾಗು, ದೂರವಾಗು, ದೂರಾಗು** = ೧. ಹತ್ತಿರದಲ್ಲಿರದಿರು ; ಹೆಚ್ಚು ಅಂತರ ಹೊಂದು ; ತೊಲಗು: ಸಾಮಂತಸಂದೋಹಮವಸರಭೀತಿಯಿಂ ತೊಲಗಿ ಪೋಗೆಯುಂ ನಿಜನಿಯತಪ್ರದೇಶದಿಂ ಪ್ರತೀಹಾರರತಿದೂರವಾಗೆಯುಂ (ಮಲ್ಲಿಪು. ೪-೬೪ ವ); ತನುಮುಟ್ಟಿ ಮನಮುಟ್ಟದೆ ದೂರವಾದರಯ್ಯಾ ಬೆಲೆವೆಣ್ಣಿನಂತೆ (ವಚಸಂ. ೩೧೬-೯೦) ; ಸದ್ಭಕ್ತಂಗೆ ಜನನ ಮರಣಂಗಳು ದೂರವಾಗಿರ್ಪು ವಯ್ಯಾ (ಅಬಂದೇ. ೧೬೧-೨೩) ; ಸಾತ್ವಿಕಸದುಭಕುತಿಯನಱಿಯದವರ ಸಂಗದಿಂದ ಕೈಲಾಸಕ್ಕೆ ದೂರಾಗಿಪ್ಪರು (ಸವಮೂವ. ೨-೬) ; ಈ ಕರ್ನಾಟಕ ಭಾಗವು ಸಹ್ಯಾದ್ರಿಯಿಂದ ಪೂರ್ವಕ್ಕೆ ಹೆಚ್ಚುಹೆಚ್ಚು ದೂರಾಗುತ್ತ ಹೋಗು ತ್ತದೆ (ಕಭಾಗ. ೪). ೨. ಅಗಲು ; ಎರವಾಗು; ಸಂಬಂಧವನ್ನು ಕಳೆದು ಕೊಳ್ಳು : ಎಲ್ಲ ತೆಱದಿಂ ನಿಮಗೆ ದೂರವಪ್ಪಂ ದೇವ (ಬಸರ. ೧-೬೪) ; ಇಂದಿರೇಶನ ಅರ್ಚಿಸದಱಿಂದ ಬಹು ನೊಂದು ದೂರಾದೆ ಸದ್ಗತಿಯಿಂದ (ಪುರಂದ. ೧-೦೬೬-೬). ೩. ನಿವಾರಣೆಯಾಗು : ನಾನು ಪತ್ರಿಕೆಯನ್ನು ಉತ್ತಮವಾಗಿ ನಡೆಸಿಕೊಂಡು ಹೋದರೆ ಆರ್ಥಿಕ ಕೊರತೆ ತಾನೇ ದೂರಾ ಗುವದು (ಅಪನಾ. ೨೬). **ದೂರವಿರಿಸು** = ಹತ್ತಿರ ಬರದಂತೆ ಮಾಡು ; ಅಂತರವಿರುವಂತೆ ಮಾಡು : ಸಾಲವೆಂಬುದು ಭಯಂಕರಪಿಶಾಚಿ. ಅದನ್ನು ಆದಷ್ಟು ದೂರವಿರಿಸಬೇಕು (ಆಡುಸಾ. ೧೨೪). **ದೂರ ಸರಿ** = ಹತ್ತಿರದಲ್ಲಿರದಿರಂ ; ಅಂತರವನ್ನು ಹೆಚ್ಚಿಸಂ : ಬುದ್ಧಿಯ ಸೆಣಸಾಟ ಮೇಲುಗೈ ಆಗಿ ವಾಸ್ತವಿಕ ನಿಲುವಿನಿಂದ ದೂರ ಸರಿಯುವರು (ದ್ರಾವಿವಿ. ೬೮). **ದೂರ ಸಾರು** = ದೂರಸರಿ : ಕೈಕಟ್ಟಿ ಲಕ್ಷಿಸದೆ ದೂರ ಸಾರಿದೆಯಾ ? ಕೈಕೊಟ್ಟು ಬರಹೇಳಿ ಸಾಸಮಾಡಿದೆಯಾ ? (ಕವಿಪು. ೩೬-೬). **ದೂರಾ ದ್ದೂರ** = ಸಮೀಪವಲ್ಲದುದು; ಹೆಚ್ಚು ಅಂತರವಿರುವುದು : ದೂರಾ ದ್ದೂರದ ನೆಲನಾವುದುಯಿದು (ಬಧ್ನಪ್ರ. ೩೦-೬೪೮). [ ಸಂ. ]

**ದೂರಂಬೋಗು, ದೂರಪೋಗು, ದೂರಹೋಗು** (ಕ್ರಿ). ಸಮೀಪದಲ್ಲಿರ ದಿರು ; ತೊಲಗು : "ಕಱಿದಂ = ಸತ್ತಂ ; ದೂರಂಬೋದಂ ; ಕಯ್ಪಾ ಱಿದಂ" (ಕಮದ. ಪರಿ. ೧). **ದೂರಪೋಗು :** "ತೂಱಿಲ್ – ದೂರ ಪೋದುದು" (ಚಪುನಿ.ಕ. I, ೬೬). **ದೂರಹೋಗು:** ದೂರಹೋದವರಿಂದು ಬರುವರೆ, ಎಂದು ಬರುವ ನಿರೀಕ್ಷೆಯು ? (ನಲಮು. ೧೧-೮) ; ಅವಳು ದೂರಹೋದುದು ಒಳ್ಳೆಯದಾಯಿತು (ಹೂಹಣ್ಣು. ೦೯೩).

[ ದೂರ + ಪೋಗು$_1$ ]

**ದೂರಂಮಾಡು, ದೂರಮಾಡು** (ಕ್ರಿ). ೧. ದೂರಹೋಗುವಂತೆ ಮಾಡು ; ಹತ್ತಿರವಿರದಂತೆ ಮಾಡು ; ತ್ಯಜಿಸು : ಪೂರ್ವಾರ್ಜಿತ ಪ್ರಾಪ್ತಿಯಿಂ ದಾರಿದ್ರ್ಯಂ ಧನಮೆಂಬೆರಳ್ಗಮನಿಕುಂ ಮತ್ತೇಕೆ ಧೀರತ್ವಮಂ ದೂರಂಮಾಡಿ ಮನಂ ಸದಾ ಕುದಿವುದೋ (ರತ್ನಾಕ. ೪೬). **ದೂರಮಾಡು:** ೨. ಇಲ್ಲದಂತೆ ಮಾಡು ; ನಿವಾರಿಸು ; ಕಳೆ : ಪರಿಹರಿಸಂ : ನನ್ನ ಕಷ್ಟ ವನ್ನು ದೂರಮಾಡುವುದಕ್ಕಾಗಿ (ಮುಂಬಯಿ. ೪-೧೦೬) ; ಆದ ತಪ್ಪು ತಿಳಿವಳಿಕೆಯನ್ನು ದೂರಮಾಡಿ ಸರಿಯಾದ ವಿಚಾರಸರಣಿಯೊಂದಕ್ಕೆ ಎರಡೂ ಪಕ್ಷಗಳು ಬರಬಹುದು (ಅಪನಾ. ೧೩೨). [ ದೂರ + ಮಾಡು$_1$ ]

**ದೂರಗ** (ಗು). ೧. ಸಮೀಪವಲ್ಲದ ; ಹತ್ತಿರವಲ್ಲದ. (ನಾ). ೨. ದೂರ ಹೋಗುವಂಥದು. [ ಸಂ. ]

**ದೂರಗತ** (ಗು). ದೂರ ಹೊರಟುಹೋದ : ಕೃಷ್ಣವರ್ಣದ ಅವಳ ಮಾಲುಗಣ್ಣುಗಳು ಕ್ಷಣ ಮಾತ್ರ ಅವನ ಮುಖದಲ್ಲಿ ನಾಟದ್ದು, ಅನಂತರ ದೂರಗತವಾದುವು (ಪುನರು. ೩೨೨). [ ಸಂ. ]

**ದೂರಗತೆ** (ನಾ). ಸಮೀಪವರ್ತಿಯಲ್ಲದವಳಂ ; ಹತ್ತಿರವಿಲ್ಲದವಳಂ: ಇನ್ನು ಮೇಲೆ ನಿನಗೆ ನಾನು ದೂರಗತೆಯಾಗುವೆನಲ್ಲವೆ ? (ಶಾಕುಂತ. ೩೪-೧೯). [ ಸಂ. ದೂರಗತಾ ]

**ದೂರಗಾಮಿ** (ನಾ). ೧. ದೂರ ಹೋಗುವವನು : ಊರಿನಿಂದ ದೂರ ಗಾಮಿಯಾಗುವ ನನಗೆ ಈ ವ್ಯವಹಾರವೆಲ್ಲ ಏಕೆ? (ರೂಢಿ). ೨. ದೂರ ಹೋಗುವುದು,-ಚಲಿಸುವುದು : ಮನುಷ್ಯನ ಕಣ್ಣೂ ಕಿವಿಯೂ ಸಮಾನವಾದ ದೂರಗಾಮಿಯಾಗಿದ್ದರೆ ಮನುಷ್ಯನ ದುಃಖಪ್ರವಾಹವು ಹೆಚ್ಚುತ್ತಿದ್ದಿತೋ, ಕಡಿಮೆಯಾಗುತ್ತಿದ್ದಿತೋ ಆದನ್ನಾರು ಹೇಳಬಲ್ಲರು ? (ಕಪಾಕುಂ. ೧೨೨). ೩. ಬಾಣ ; ಶರ. [ ಸಂ. ದೂರಗಾಮಿನ್ ]

**ದೂರಗೆಯ್ಯು** 'ದೂರಗೈ' ನೋ.

**ದೂರಗೈ, ದೂರಗೆಯ್ಯು** (ಕ್ರಿ). ೧. ಬಿಡಂ ; ತ್ಯಜಿಸಂ : ಕೆಟ್ಟ ಅಭ್ಯಾಸ ಗಳನ್ನು ದೂರಗೈಯದಿದ್ದರೆ ಬಾಳು ಸಂತೋಷವಾಗಿರುವುದಿಲ್ಲ (ರೂಢಿ). ೨. ಪರಿಹರಿಸಂ; ಕಳೆ; ನಿವಾರಿಸು: ಸಜ್ಜನಸಂಗವು ತೋರಿ ಸುಗತಿಯನು ದೂರಗೈವುದು ಕುಮತಿಯನು (ಇಂಚಾಪ. ೬೪-೬೦). **ದೂರಗೆಯ್ಯು :** ೧. ಸಣ್ಣಪುಟ್ಟ ಮಾತಿಗೆ ಸ್ನೇಹಿತರನ್ನು ದೂರಗೆಯ್ಯುವುದು ಸರಿಯಲ್ಲ (ರೂಢಿ). [ ದೂರ + ಗೈ (<ಕೆಯ್$_1$) ]

**ದೂರಘ್ರಾಣ** (ನಾ). [ಜೈನ] ಹದಿನೆಂಟು ಬಗೆಯ ಬುದ್ಧಿಋದ್ಧಿಗಳಲ್ಲಿ ಒಂದು : ಆವುದೊಂದು ದೂರದಿಂ ಬಂದ ಗಂಧಮನಿಂತುಟೆಂದಱಿವುದು ದೂರಘ್ರಾಣಮೆಂಬುದು (ಪಸಾರ. ೩೮೬). [ ದೂರ + ಘ್ರಾಣ ]

**ದೂರತೋಪಾಸ್ತ** (ನಾ). ದುಸ್ತರವಾದುದು ; ಅಸಾಧ್ಯವಾದುದಂ : ನೀವು ಕನ್ಯಕುಬ್ಜದ ಸಾರ್ವಭೌಮನನ್ನು ಪರಾಭವಗೊಳಿಸಿದ ಹೊರತು, ಆ ದೇಶಗಳು ನಿಮ್ಮ ಮಾಂಡಲಿಕತ್ವವನ್ನು ವಹಿಸುವುದು ದೂರತೋಪಾಸ್ತ ವಿರುವದು (ಈಶಸಂ. ೧೪) ; ಇನ್ನು ಉಪಾಯಾಂತರಗಳಿಂದ ಹಿಡಿಯುವ ದಂತೂ ದೂರತೋಪಾಸ್ತವೇ ಸರಿ (ಕಳ್ಳಕಾ. ೪೬) : P 'ದೂರತಃ+ ಅಪಾಸ್ತ' ಎಂದು ಬಿಡಿಸಬಹುದಾದ ಸಂಸ್ಕೃತಶಬ್ದಕ್ಕೆ 'ದೂರ ದಿಂದಲೇ ತಳ್ಳಲಾದುದಂ' ಎಂಬ ಅರ್ಥವಿದೆ. [ ? ]

**ದೂರದರ್ಶಕ** (ಗು). ೧. ದೂರದಲ್ಲಿರುವುದನ್ನು ತೋರಿಸುವ,-ಕಾಣುವಂತೆ ಮಾಡುವ. 'ದೂರದರ್ಶಕಯಂತ್ರ' ಪರಾ. (ನಾ). ೨. ದೂರದ ವಸ್ತುಗಳು ಹತ್ತಿರದಲ್ಲಿದ್ದಂತೆಯೂ, ಹೆಚ್ಚು ಗಾತ್ರದಲ್ಲಿಯೂ ಕಾಣುವಂತೆ ಮಾಡುವ ಸಲಕರಣೆ,-ಯಂತ್ರ ; ದುರ್ಬೀನು : ದೂರದರ್ಶಕ ; ದುರ್ಬೀನು (Telescope. ಪಕ್ಷಿನಿ. ೮೨) ; ದೂರದರ್ಶಕವನ್ನು ಅಂತರಿಕ್ಷಕ್ಕೆ ತಿರುಗಿಸಿದುದರಿಂದ ಅದುವರೆಗೂ ಕೇವಲ ಕಲ್ಪನಾವಿಲಾಸದಿಂದ ಸೃಷ್ಟಿಸಲ್ಪಟ್ಟಿದ್ದ ಹಲವಾರು . . . ಕಟ್ಟುಕಥೆಗಳೂ ಆಧಾರರಹಿತವಾದುವು (ಮುಕ್ನಾರ. ೧೮ ಟೀರಿಕೆ) ; ದೂರದರ್ಶಕದ (Telescope) ಮೂಲಕ ಶನಿಗ್ರಹದ ಬಳೆಗಳನ್ನು ಕೆಲವು ಪಂಡಿತರಿಗೆ ತೋರಿಸಿದಾಗ ಅವರಲ್ಲೊಬ್ಬರು, "ಹೀಗೆ ಬಳೆಗಳು ಕಾಣುವುದು ದೃಷ್ಟಿದೋಷವೋ, ಈ ದೂರದರ್ಶಕದ ಗಾಜಿನ ದೋಷವೋ?" ಎಂದು ಕೇಳಿದರು (ಭಾತವಿ. ೨೦). [ ದೂರ + ದರ್ಶಕ ]

**ದೂರದರ್ಶಕಯಂತ್ರ** (ನಾ). = ದೂರದರ್ಶಕ ೨ : ದೂರದರ್ಶಕಯಂತ್ರದಕ್ಷಿಯೊಳ್ ಕಣ್ಣಿಟ್ಟು, ಗಗನವಿಜ್ಞಾನಿ ತಾಂ ರಾತ್ರಿಯಾಕಾಶದಲಿ ಕಾಣ್ಬೊಂದು ತಾರಾಗರ್ಭದಂತೆ (ಶ್ರೀರಾಮಾ. ೧೧-೨೭೩): ಗೆಲೀಲಿಯೊ ತನ್ನ ಪ್ರಖ್ಯಾತವಾದ ದೂರದರ್ಶಕಯಂತ್ರ ಅಥವಾ ದುರ್ಬೀನನ್ನು (Telescope) ತಯಾರಿಸಿದನು (ಗಣಿದ. ೦೦೨) ; ಆಕಾಶವನ್ನು ನೋಡುವುದಕ್ಕೆ ಒಂದು ಸರಳವಾದ ದೂರದರ್ಶಕ (Telescope) ಯಂತ್ರವನ್ನು ತಯಾರಿಸಿದ (ಆಕಾಶ. ೫). [ ದೂರದರ್ಶಕ + ಯಂತ್ರ ]

**ದೂರದರ್ಶನ** (ನಾ). ೧. ದೂರದಿಂದ ನೋಡುವಿಕೆ ; ದೂರದಿಂದ ಕಾಣುವುದಂ. ೨. ತಡೆಗಳಿಂದ ಅಥವಾ ಹೆಚ್ಚು ಅಂತರದಿಂದ ಮರೆಯಾಗಿರುವ ವಸ್ತುಗಳನ್ನು ಅಥವಾ ದೇಶಾಂತರಗಳಲ್ಲಿ ನಡೆಯುವ ಸಂಗತಿಗಳನ್ನು ನಿಸ್ತಂತು ತರಂಗಗಳ ಅಥವಾ ಇತರ ವೈಜ್ಞಾನಿಕ ಸಾಧನೆಗಳ ಸಹಾಯದಿಂದ ನೋಡುವುದಂ ; ಟೆಲಿವಿಷನ್ನು ದೂರ(ವಸ್ತು)ದರ್ಶನ; ಪರೋಕ್ಷವೀಕ್ಷಣ (Television. ೩೦೪೭ನಿ). ೩. ಮುಂದಾಲೋಚನೆ ; ದೀರ್ಘದೃಷ್ಟಿ. ೪. ಪಂಡಿತ ; ವಿದ್ವಾಂಸ. ೫. ಹದ್ದು. ೬. [ಜೈನ] ಹದಿನೆಂಟು ಬಗೆಯ ಬುದ್ಧಿಋದ್ಧಿಗಳಲ್ಲಿ ಒಂದು : ಅಯ್ದುವರ್ಣಂಗಳೊಳಾವುದೊಂದು ದೂರದಿಂ ಬಂದ ವರ್ಣಮನಿಂತುಟೆಂದಱಿವುದು ದೂರದರ್ಶನಮೆಂಬುದು (ಪಸಾರ. ೩೮೬). 'ಬುದ್ಧಿಋದ್ಧಿ' ಪರಾ. [ ದೂರ + ದರ್ಶನ ]

**ದೂರದರ್ಶಿ** (ಗು). ೧. ದೂರದೃಷ್ಟಿಯುಳ್ಳ ; ಮುಂದಾಲೋಚನೆಯನ್ನು ಮಾಡುವ; ವಿವೇಕವುಳ್ಳ. (ನಾ). ೨. ದೂರದರ್ಶಕಯಂತ್ರ: ದೂರದರ್ಶಿಯು (Telescope) ಹಾಲೆಂಡಿನಲ್ಲಿ ೧೬೪೫ರಲ್ಲಿ ತಯಾರಾಯಿತು (ಶಿಲ್ಪಸಾ. ೧೫೨) ; ನಮ್ಮ ದೃಷ್ಟಿಯ ಶಕ್ತಿಯನ್ನು ದೂರದರ್ಶಿಗಳು ಇನ್ನೂ ಹೆಚ್ಚಿಸಿವೆ (ಬಾಲಪ್ರ. I, ೫). ೩. ದೂರಾಲೋಚನೆಯುಳ್ಳವನು ; ವಿವೇಕಿ ; ಪಂಡಿತ : "ದೂರದರ್ಶಿ, ದೀರ್ಘದರ್ಶೀ – ಈ ೨ ದೂರವಾದ ಹಿಂದುಮುಂದು ಯೋಚನೆಯುಳ್ಳವನ ಹೆಸರು" (ಸಿದ್ಧಾಂತಿ. ೨೦೩).
[ ಸಂ. ದೂರದರ್ಶಿನ್ ]

**ದೂರದರ್ಶಿತ್ವ** (ನಾ). ದೂರದೃಷ್ಟಿ ; ಮುಂದಾಲೋಚನೆ ; ವಿವೇಕ : ಬಹುಶ್ರುತನ ಮಂತ್ರನಿಶ್ಚಯಮುಮಂ ದೂರದರ್ಶಿತ್ವಮುಮಂ ಪ್ರತಿಭಾಗುಣಮುಮಂ . . . ಸಚಿವಸಮೂಹಂ ಮೆಚ್ಚಿ (ಶಾಂತಿಪು. ೨-೬೦ ವ) ; ಸರ್. ಎಂ. ವಿಶ್ವೇಶ್ವರಯ್ಯನವರ ದೂರದರ್ಶಿತ್ವದಿಂದಲೂ . . . ದೇಶವು ಹೊಸರೂಪವನ್ನೇ ತಾಳಿತು (ಮೈಸಾಸು. ೨೦). [ ಸಂ. ]

**ದೂರದರ್ಶಿನಿ** (ನಾ). ೧. ಮುಂದಾಲೋಚನೆ ಮಾಡುವವಳಂ ; ವಿವೇಕಿ : ಆಗ ದೂರದರ್ಶಿನಿಯಾದ ನಿದಾನಬುದ್ಧಿಯು ಒರಿಯು ಹೆಂಗುಸು ಎಂದರೆ ಏನುತೆಯೇ (ದೂರಸ. ೧೫೫). ೨. ದೂರದರ್ಶಕಯಂತ್ರ : ದೂರದರ್ಶಿನಿಯು ನೋಟಕ್ಕೆ ಎಲ್ಲ ಜ್ಯೋತಿರ್ಮೇಘಗಳೂ ಬಹು ಸುಂದರ (ನಕ್ಷತ್ರ. ೫) ; ದೂರದರ್ಶಿನಿಯಿಂದ ನೋಡುವೆನಾ ಅನಂತದ ಅಂಚನು (ಶಿಲಾಂ. ೩೭-೧೩). [ ಸಂ. ದೂರದರ್ಶಿನೀ ]

**ದೂರದೃಷ್ಟಿ** (ನಾ). ೧. ದೂರದ ನೋಟ. ೨. = ದೂರದರ್ಶಿತ್ವ : ಸಾವಕಾನುಗಳನ್ನು ಕೊಂಡುಕೊಳ್ಳುವಾಗ ನೀವು ಕೊಡುವ ಬೆಲೆಗೆ ಸರಿಯಾದ ಪ್ರತಿಫಲ ಸಿಗಬೇಕೆಂದರೆ ಕೊಂಡುಕೊಳ್ಳುವವನಲ್ಲಿ ದೂರದೃಷ್ಟಿಯಿರಬೇಕು (ಅರುಶಾ. ೧೩೪). ೩. ಅರುವತ್ತು ನಾಲ್ಕು ವಿದ್ಯೆಗಳಲ್ಲಿ ಒಂದಂ ; ಮುಂದಾಗುವುದನ್ನು ತಿಳಿಯುವುದು : ಅಕ್ಷರ ಲೆಕ್ಕ . . . ದೂರದೃಷ್ಟಿ ದೂರಶ್ರವಣ . . . ಮಂತ್ರ ತಂತ್ರಸಿದ್ಧಿ ಇವೆಲ್ಲವ ಕಲಿತದೇನೋ (ವಚಸಂ. ೧೩-೪೨); P ಪರಂಪರಾಗತವಾದ ಅರುವತ್ತು ನಾಲ್ಕು ವಿದ್ಯೆಗಳಲ್ಲಿ ಇದರ ಉಲ್ಲೇಖವಿಲ್ಲ. ೪. ದೃಷ್ಟಿಯ ದೋಷಗಳಲ್ಲಿ ಒಂದು; ದೂರದ ವಸ್ತುಗಳು ಮಾತ್ರ ಸ್ಫುಟವಾಗಿ ಕಾಣುವ ಕಣ್ಣಿನ ಕುಂದಂ: ದೂರದೃಷ್ಟಿಯುಳ್ಳ ಕಣ್ಣು ಅದೇ ದೂರದ ವಸ್ತುಗಳನ್ನು ಸ್ಪಷ್ಟವಾಗಿ ನೋಡಬೇಕಾಗಿದ್ದರೆ ಹೆಚ್ಚು ತ್ರಾಸಪಡಬೇಕು (ನಿಮ್ಮಕ್ಕ. ೬೪). 'ಚಾಳೀಸಂ' ಪರಾ. [ ದೂರ + ದೃಷ್ಟಿ ]

**ದೂರದೆಸೆ** (ನಾ). (ಒಂದು ಪ್ರದೇಶದಿಂದ) ಅಂತರ ಅಧಿಕವಾಗಿರುವ ಪ್ರದೇಶ,-ಸ್ಥಳ : ಕದಡುಬಗೆ ತಿಳಿಯಾಗಿ, ದೂರದೆಸೆ ಬಳಿಯಾಗಿ, . . . ನುಡಿದಳವಳೆಂದು (ಹೊಂಗಳು. ೦೨-೨೨). [ ದೂರ + ದೆಸೆ₂ ]

**ದೂರದೇಶ** (ನಾ). ಬಹಳ ಅಂತರವಿರುವ ನಾಡಂ,-ಸೀಮೆಂ : ದೂರದೇಶದೊಳಿರ್ದ ಬಂದೆಂ (ಧರ್ಮಾಮೃ. ೧೩-೪೦). [ ದೂರ + ದೇಶ ]

**ದೂರನಿರ್ದೇಶನ** (ನಾ). ಅಧಿಕವಾದ ಅಂತರದಲ್ಲಿದ್ದೂ ಯಂತ್ರಗಳ ಕಾರ್ಯವನ್ನು ಮಾರ್ಗದರ್ಶನ ಮಾಡಬಲ್ಲ ಶಕ್ತಿ,-ತಿಳಿವು : ಬಿಲ್ಲುಬಾಣಗಳಿಂದ ಯುದ್ಧ ಮಾಡುತ್ತಿದ್ದ ಕಾಲಕ್ಕೂ ಅಣುಬಾಂಬುಗಳನ್ನು ದೂರನಿರ್ದೇಶನದಿಂದ ಹಾರಿಸುವ ಈಗಿನ ಕಾಲಕ್ಕೂ ಇರುವ ವ್ಯತ್ಯಾಸವೇ ಅನ್ನಿ (ಮನೋನಂ. ೧೩೪). [ ದೂರ + ನಿರ್ದೇಶನ ]

**ದೂರಪಥ** (ನಾ). ಬಹಳ ಅಂತರವುಳ್ಳ ಮಾರ್ಗದ ಸ್ಥಳ ; ಹತ್ತಿರವಲ್ಲದ ಜಾಗ : ದೂರಪಥಕ್ಕೆ ಪೋಪೆನೆನುತುಂ ಪ್ರಿಯಳಲ್ಲಿಗೆ ಬಂದು ಕೇಳಲ್ (ಮಲ್ಲಕಾ. ೧೫-೨೦೩). [ ದೂರ + ಪಥ ]

**ದೂರಪಾತಂ** (ಅ). ದೂರದಿಂದ ಗುರಿಯಿಟ್ಟು : ಒರ್ವನನೆ ಲಕ್ಷ್ಯಂಮಾಡಿ ಶರಾಸಾರದಿಂ ದೂರಪಾತಮಿಸುವುದುಂ (ಶಾಂತಿಪು. ೪-೮ ವ). [ ಸಂ. ]

**ದೂರಪೋಗು** 'ದೂರಂಬೋಗಂ' ನೋ.

**ದೂರಪ್ರತಿ** (ನಾ). (ಕಾಲ ಕಳೆದ ಕಾರಣದಿಂದ ಅಥವಾ ಅನೇಕ ಸಲ ಪ್ರತಿಮಾಡಿದ ಪರಿಣಾಮವಾಗಿ) ಬಹಳ ವ್ಯತ್ಯಾಸಹೊಂದಿದ ನಕಲು,-ಪ್ರತಿ : ಹಸ್ತಪ್ರತಿಸಂಗ್ರಹಗಳಲ್ಲಿ ನಮಗೆ ಇಂದು ಕಾಣಸಿಗುತ್ತಿರುವ ಪ್ರತಿಗಳು, ಸ್ವಹಸ್ತಪ್ರತಿಗಳಿಂದ ಇಲ್ಲವೆ ಅವುಗಳ ಸದ್ಯಪ್ರತಿ (Immediate Copy) ಅಥವಾ ದೂರಪ್ರತಿ(Distant Copy)ಗಳಿಂದ ಎಂಥ ಪರಿಸ್ಥಿತಿಯಲ್ಲಿ ನಕಲುಗೊಂಡವು ಎಂಬುದನ್ನು ನಾವು ಕೇವಲ ಊಹಿಸಬೇಕಷ್ಟೆ ! (ಭಾರಪ. ೨೮). [ ದೂರ + ಪ್ರತಿ ]

**ದೂರಪ್ರಾಚ್ಯ** (ಗು). ೧. ತೀರ ಪೂರ್ವದಲ್ಲಿರುವ : ದೂರಪ್ರಾಚ್ಯ ದೇಶಗಳಿಗೆ ಹೋಗಿ ಇದೇ ತರಹದ ಸಂಶೋಧನೆ ಮಾಡಿ ಆ ವಿವರಗಳನ್ನೂ ತಮ್ಮ ಪುಸ್ತಕಕ್ಕೆ ಸೇರಿಸುವುದಾಗಿ ಹೇಳಿದರು (ಮಾರ್ಗದ. ೧೫೫). (ನಾ). ೨. ಜಪಾನ್ ಮೊದಲಾದ ತೀರ ಪೂರ್ವದ ದೇಶ. [ದೂರ+ಪ್ರಾಚ್ಯ]

**ದೂರಪ್ರಿಯಃ** (ನಾ). ದಕ್ಕದ ಪ್ರಿಯ ; ದೊರಕದ ನಲ್ಲ : ನೀರೇಜನಿಯೆನಿತಲರ್ದೇಂ ಸಾರದೆ ಪೋದಂ ದಿನೇಶನಂತೆನಗಂ ನೀಂ ದೂರಪ್ರಿಯನಾದೈ ಸಂಸಾರಂ ವ್ಯಥೆಯಾದುದೆಂದು ಬೆಚ್ಚನೆ ಸುಯ್ದಳ್ (ಅರ್ಧನೇ. ೩-೨೭). [ ದೂರ + ಪ್ರಿಯ ]

**ದೂರಫಲ** (ನಾ). ೧. ಬಹಳ ಕಾಲದ ಬಳಿಕ ಆಗುವ ಪರಿಣಾಮ; ತುಂಬ ತಡವಾಗಿ ಬಂದೊದಗುವ ಫಲ: ಇವು ದೂರಫಲಂಗಳ್ ಸ್ವಪ್ನವಿಶೇಷಂಗಳ್ (ಆದಿಪು. ೧೩-೭೭). ೨. ಹೆಚ್ಚು ಅಂತರವಿರುವ ಸಂತತಿ, –ಸಂತಾನ: ತಮ್ಮನು ಅಣ್ಣನಿಂದ ಹದಿನೈದು ವರ್ಷಗಳಷ್ಟು ಅಂತರದಲ್ಲಿ ಹುಟ್ಟಿದ ದೂರಫಲವಾಗಿದ್ದನು (ರೂಢಿ). [ದೂರ+ಫಲ$_1$]

**ದೂರಭವ್ಯ** (ನಾ). [ಜೈನ] ಸಮ್ಯಕ್ತ್ವಕ್ಕೆ ಇನ್ನೂ ದೂರವಾಗಿರುವವನು: ಸಿದ್ಧಿಯನ್ನು ಸಾಧಿಸದಿರುವವನು: ಆತನತ್ಯುನ್ನತಬೋಧನೀಂ ಬೆಸಸಭವ್ಯನೋ ಭವ್ಯನೋ ದೂರಭವ್ಯನೋ (ಆದಿಪು. ೨-೩೯); ಎಮ್ಮರಸಂಗಾನಿನಿತು ಧರ್ಮಶ್ರವಣಂಗೆಯ್ದೊಡಂ ಭೋಗಂಗಳ್ಗೆ ವಿಮುಖನಾಗಂ ಆತನಭವ್ಯನೊ ಭವ್ಯನೊ ದೂರಭವ್ಯನೊ ನಿಮ್ಮಡಿಗಳೆ ತಿಳಿಯೆ ಬೆಸಸಿಂ (ಶಾಪುಂಪು. ೧೩); ವಾಯುಭೂತಿಚರನಪ್ಪಾ ಜೀವನೀಗಳಭವ್ಯನೋ ಭವ್ಯನೊ ಮತ್ತಂ ದೂರಭವ್ಯನೋ ಬೆಸಸಿಮೆಂದು (ಸುಕುಮಾ. ೫-೨೨): ಕಣ್ಬೇನೆ ಪಣ್ಣಾಂದು ಕಾಣ್ಬಕ್ಷಿರೋಗಿಯಂತೆ ದೂರಭವ್ಯಂ ಕರ್ಮೋಪಶಮ ಮಾಡಾಗಳೞಿಗುಂ (ಪಸಾರ. II, ೪೫೨). 'ಭವ್ಯ' ಪರಾ.

[ದೂರ + ಭವ್ಯ]

**ದೂರಮಾಡಿಸು** (ಕ್ರಿ). ದೂರವಾಗುವಂತೆ ಮಾಡು; ನಿವಾರಿಸು; ಪರಿಹರಿಸು: ನೆರೆಯವರ ಕಷ್ಟಗಳನ್ನು ದೂರಮಾಡಿಸಿದನು (ಮುಂಬಯಿ. ೫-೨೦೬). [ದೂರಮಾಡು (<ದೂರಂಮಾಡು) + –ಇಸು$_3$]

**ದೂರಮಾಡು** 'ದೂರಂಮಾಡು' ನೋ.

**ದೂರಮಾಪಕ** (ನಾ). ಒಂದು ಪ್ರದೇಶ ಅಥವಾ ವಸ್ತುವಿನೊಂದಿಗೆ ಇರುವ ಅಂತರವನ್ನು ಅಳೆಯುವ ಯಂತ್ರಸಾಧನ: ದೂರದಲ್ಲಿರುವ ಯಂತ್ರಸಲಕರಣೆಯು ಅಳತೆ ಸಂಖ್ಯೆಗಳನ್ನು ವಿದ್ಯುತ್ಪ್ರವಾಹದ ಸಹಾಯದಿಂದ ದಾಖಲಿಡುವ ಸಲಕರಣೆ; (ಮೋಜಣಿ, ಫಿರಂಗಿ ಅಭ್ಯಾಸ, ಮೊ.ಗಳಲ್ಲಿ) ದೂರಗಳನ್ನು ಗೊತ್ತುಮಾಡಲು ಉಪಯೋಗಿಸುವ ಸಲಕರಣೆ; ದೂರಮಾಪಕ (Telemeter. ಇಂಕನಿ). [ದೂರ + ಮಾಪಕ]

**ದೂರಮುದ್ರಕ** (ನಾ). ಯಾಂತ್ರಿಕ ನಿರ್ದೇಶನದಿಂದ ಹತ್ತಿರವಿರದ ಪ್ರದೇಶಕ್ಕೆ ಕಳುಹಿಸಿದ ವರ್ತಮಾನ, ಸೂಚನೆ, ನಿರೂಪಣೆ ಮುಂತಾದುವನ್ನು ಮುದ್ರಿಸುವ ಸಾಧನ: "ದೂರಮುದ್ರಕ; ಟೆಲಿಪ್ರಿಂಟರ್" (Tele-Printer. ಪತ್ರಿನಿ. ೮೨). [ದೂರ + ಮುದ್ರಕ]

**ದೂರಮುದ್ರಣ** (ನಾ). = ದೂರಮುದ್ರಕ: (Tele-Type. ಪತ್ರಿನಿ. ೮೨).

[ದೂರ + ಮುದ್ರಣ]

**ದೂರಲೇಖಿ** (ನಾ). ವಿದ್ಯುಚ್ಛಕ್ತಿಯ ಸಹಾಯದಿಂದ ವರ್ತಮಾನಗಳನ್ನು ಸಂಕೇತಗಳ ಮೂಲಕ ಹತ್ತಿರದಲ್ಲಿರುವವರಿಗೆ ತಿಳಿಸುವ ಯಾಂತ್ರಿಕ ಸಾಧನ: ಸಮಾಚಾರ ಕಳುಹಿಸಲು ಉಪಯೋಗಿಸುವ ದೂರಲೇಖದ (ಟೆಲಿಗ್ರಾಫ್) ಭಾಗ (Communicator. ಇಂಕನಿ).

[ದೂರ + ಲೇಖಿ]

**ದೂರವಂದೆ** (ನಾ). ತುಂಬ ಪುಕ್ಕಲ; ತೀರ ಅಂಜುಕುಳಿಯಾದ ವ್ಯಕ್ತಿ; ಮಹಾಭೀತ: ಶ್ರುತವಿಲ್ಲದ ಲಿಂಗಿಯಂತೆ ಮೂರ್ಖನಾಗದೆ ದೂರವಂದೆಯಂತೆ ತಲ್ಲಣಿಸದೆ . . . [ಧರ್ಮದೊಳ್] ನಿಶ್ಶಂಕನುಮಪ್ಪುದು (ಧರ್ಮಾಮೃ. ೪-೪೬). [ದೂರ + ಪಂದೆ]

**ದೂರವಾಣಿ** (ನಾ). ವಿದ್ಯುಚ್ಛಕ್ತಿಯ ಮೂಲಕ ಧ್ವನಿಯನ್ನು, ಮುಖ್ಯವಾಗಿ ಮಾತುಗಳನ್ನು ಸಾಗಿಸುವ ಸಲಕರಣೆ; ಟೆಲಿಫೋನು: ಮೊದಲು ದೂರವಾಣಿಯ ಮುಂದೆ ಕುಳಿತು ವಿಮಾನಕ್ಷೇತ್ರದ ಅಧಿಕಾರಿಯನ್ನು ವಿಚಾರಿಸಿದೆ (ನಂಟರು. ೧೦೩); ಟಪಾಲು ಮತ್ತು ತಂತಿ, ದೂರವಾಣಿ ನಿಸ್ತಂತುವಾರ್ತೆ ಮತ್ತು ಪ್ರಸಾರಣ ಮತ್ತು ಇತರ ಅದೇ ರೂಪದ ಸಮಾಚಾರ ಸಾಧನ (ಭಾರಾನ. ೨೮೦). [ದೂರ + ವಾಣಿ$_1$]

**ದೂರವಾರ್ತಾವ್ಯವಸ್ಥೆ** (ನಾ). ದೂರದೂರದ ಪ್ರದೇಶಗಳಿಗೆ (ದೂರಲೇಖಿ, ದೂರವಾಣಿ ಮುಂತಾದುವುಗಳ ಮೂಲಕ) ಸಮಾಚಾರಗಳನ್ನು ತಲುಪಿಸಲು ಮಾಡಿರುವ ವ್ಯವಸ್ಥೆ: ಇಂತಹ ಸಂಕ್ಷೋಭಗಳಿಂದ ಟೆಲಿಗ್ರಾಫ್, ಟೆಲಿಫೋನ್, ರೇಡಿಯೋ ಮುಂತಾದ ದೂರವಾರ್ತಾವ್ಯವಸ್ಥೆಗಳಿಗೆಲ್ಲಾ ಅಡಚಣೆಯುಂಟಾಗುವುದು (ಭೌತವಿ. ೩೨೨).

[ಸಂ. ದೂರವಾರ್ತಾವ್ಯವಸ್ಥಾ]

**ದೂರವೀಕ್ಷಣ** (ನಾ). ೧. ದೂರದಲ್ಲಿರುವ ವಸ್ತುಗಳನ್ನು ನೋಡುವುದು. 'ದೂರವೀಕ್ಷಣಯಂತ್ರ' ಪರಾ. ೨. ಕಣ್ಣಿಗೆ ಕಾಣದ ವಿಷಯಗಳನ್ನು ಪ್ರತ್ಯಕ್ಷವಾಗಿ ಕಂಡಂತೆ ಮನಸ್ಸಿನಲ್ಲಿ ಗ್ರಹಿಸುವುದು; ಅತೀಂದ್ರಿಯ ದೃಷ್ಟಿ: ಅವಧಿಜ್ಞಾನ ಆಧುನಿಕ ಮನಶ್ಶಾಸ್ತ್ರದಲ್ಲಿ ದೂರವೀಕ್ಷಣ (Clairvoyance) ವೆಂದು ಕರೆದಿರುವ ಶಕ್ತಿಯನ್ನು ಹೋಲುತ್ತದೆ. ದೂರದಲ್ಲಿ ನಡೆದಿರುವ ಅಥವಾ ಗತಕಾಲದಲ್ಲಿ ನಡೆದಿರುವ ಸಂದರ್ಭಗಳನ್ನು ಕುಳಿತ ಕಡೆಯಿಂದಲೇ, ಕಣ್ಣಿನ ಸಹಾಯವಿಲ್ಲದೆಯೇ ಒಂದು ದೃಶ್ಯದಂತೆ ನೋಡುವುದು-ದೂರವೀಕ್ಷಣಶಕ್ತಿಯಿಂದ ಸಾಧ್ಯ (ತತ್ತ್ವಪ್ರಾ. ೧೧೮).

[ದೂರ + ವೀಕ್ಷಣ]

**ದೂರವೀಕ್ಷಣಯಂತ್ರ** (ನಾ). ದೂರದರ್ಶಕಯಂತ್ರ: ಇದು ದೂರವೀಕ್ಷಣಯಂತ್ರ (Telescope) ಇರಬಹುದೇ ಎಂಬ ಸಂಶಯ ಬರುತ್ತದೆ (ಮೈವಾಸು. ೧೦೪). [ದೂರವೀಕ್ಷಣ + ಯಂತ್ರ]

**ದೂರವುಳಿ** (ಕ್ರಿ). ಹತ್ತಿರದಲ್ಲಿರದಿರು; ದೂರವಿರು: ಸಂಬಂಧಿಕರು ಅವರ ನಡವಳಿಕೆಯನ್ನು ನೋಡಿ ದೂರವುಳಿದರು (ರೂಢಿ).

[ದೂರ + ಉಳಿ$_1$ (<ಉೞಿ$_1$)]

**ದೂರಶ್ರವಣ** (ನಾ). ೧. ಅರುವತ್ತುನಾಲ್ಕು ವಿದ್ಯೆಗಳಲ್ಲಿ ಒಂದು; ಹೆಚ್ಚು ಅಂತರದಲ್ಲಿಯ ಧ್ವನಿಯನ್ನು ಕೇಳುವುದು: ಅಕ್ಷರ ಲೆಕ್ಕ . . . ದೂರದೃಷ್ಟಿ ದೂರಶ್ರವಣ . . . ಮಂತ್ರ ತಂತ್ರಸಿದ್ಧಿ ಇವೆಲ್ಲವ ಕಲಿತಡೇನೋ (ವಚಸಂ. ೧೩-೪೨). P ಪರಂಪರಾಗತವಾದ ಅರುವತ್ತುನಾಲ್ಕು ವಿದ್ಯೆಗಳಲ್ಲಿ ಇದರ ಉಲ್ಲೇಖವಿಲ್ಲ. ೨. = ದೂರಶ್ರವಣತ್ವ: ರಾಜಸದಶಸಿದ್ಧಿಯಿದ್ದಿಪವು . . . ಕೇಳನೂರ್ಮಿಯು ಒಂದು ಮತ್ತೆಯು ಕೇಳು ದೂರಶ್ರವಣ ಎರಡದು (ಜ್ಞಾನಸಿಂ. ೨೦-೫೩). ೩. [ಜೈನ] ಹದಿನೆಂಟು ಬಗೆಯ ಬುದ್ಧಿ ಋದ್ಧಿಗಳಲ್ಲಿ ಒಂದು: ದೂರದಿಂ ಬಂದ ಶಬ್ದಮನಿಂತು ಟೆಂದರಿವುದು ದೂರಶ್ರವಣಮೆಂಬುದು (ಪಸಾರ. ೩೮೬). 'ಬುದ್ಧಿ ಋದ್ಧಿ' ಪರಾ. [ದೂರ + ಶ್ರವಣ$_3$]

**ದೂರಶ್ರವಣತ್ವ** (ನಾ). [ಯೋಗ] ರಾಜಸಯೋಗದ ಹತ್ತು ಬಗೆಯ ಸಿದ್ಧಿಗಳಲ್ಲಿ ಒಂದು; ಇರುವ ಕಡೆಯಿಂದಲೇ ದೂರದ ಧ್ವನಿಯನ್ನು ಕೇಳಬಲ್ಲ ಶಕ್ತಿ: ಅನೂರ್ಮಿಮತ್ವ, ದೂರಶ್ರವಣತ್ವ, ದೂರದರ್ಶಿತ್ವ, ಕಾಮರೂಪತ್ವ, ಪರಕಾಯಪ್ರವೇಶಿತ್ವ, ಸ್ವಚ್ಛಂದಮೃತ್ಯುತ್ವ, ದೇವತೆಗಳ ಮತ್ತು ದೇವಕನ್ಯೆಯರ ಸಹಕ್ರೀಡೆಯನ್ನು ನೋಡುವಿಕೆ, ಯಥಾಸಂಕಲ್ಪಸಿದ್ಧಿ, ಅಪ್ರತಿಹತವಾದ ಆಜ್ಞಾಶಕ್ತಿ (ಶ್ರೀವಕ್ಷ. ೪೮೯). 'ದಶಸಿದ್ಧಿ' ಪರಾ. [ಸಂ.]

**ದೂರಸಂಪರ್ಕ** (ನಾ). ದೂರದಲ್ಲಿರುವವರೊಡನೆ ಸಂಭಾಷಿಸಲು ಸಹಾಯ ಮಾಡುವ ಸಾಧನ: (Tele-Communication. ಪತ್ರಿನಿ. ೮೦).

[ದೂರ + ಸಂಪರ್ಕ]

**ದೂರಸ್ಥ** (ನಾ). ೧. ಹತ್ತಿರಕ್ಕೆ ಬರದವನು; ದೂರವೇ ಉಳಿಯುವವನು. ೨. (ಆಲಂ) ಎರವಾದವನು; ದೂರವಾದವನು: ಇವರಲ್ಲಿ ನಾವು ಯಾರಾದರೂ ಕಾಣಿಕೆ ತೆಗದುಕೊಂಡರೆ ನಮ್ಮ ಶ್ರೀಸೈಲದ ಸೂರ್ಯಸಿಂಹಾಸನಕೆ ದೂರಸ್ತರು (ಎಕ. VI, ಚಿಕ್ಕಮ. ೧೧೧-೨೩; 1702).

[<ಸಂ. ದೂರಸ್ಥ]

**ದೊಡ್ಡತಾಯಿ** (ನಾ). ೧. ತಾಯಿಯ ಅಕ್ಕ ; ದೊಡ್ಡಮ್ಮ. ೨. ತಂದೆಯ ಅಣ್ಣನ ಹೆಂಡತಿ ; ದೊಡ್ಡಪ್ಪನ ಹೆಂಡತಿ : ದೊಡ್ಡತಾಯಿ ತೀರಿಕೊಂಡ ಬಗೆಗೆ ಹಟ್ಟಿನದು ತನಗೇನೂ ತಿಳಿದಿರಲಿಲ್ಲ (ಬಾತ್ಮಲ್ಕ. ೧೦) : ಆ ಮಂಗುವಿಗಾದರೂ . . . ತಾಯಿಯೊಡನೆ ಇರಲು ಮನಸ್ಸಾಗದೆ ನಿತ್ಯವೂ ಬಯಲು, ಬೆಂಗರೆ, ಅರಾಲುಗಳಿಂದು ಮನೆಯ ಹೊರಗೇನೆ ದಿನ ಕಳೆಯುತ್ತಿದ್ದ ದೊಡ್ಡತಾಯಿಯನ್ನು ಹಿಂಬಾಲಿಸುವ ಮನಸ್ಸಾಯಿತು (ಮಲಮ. ೧೪೩).
[ ದೊಡ್ಡ + ತಾಯಿ (<ತಾಯ್) ]

**ದೊಡ್ಡತಿಪ್ಪಲಿ** 'ದೊಡ್ಡಹಿಪ್ಪಲಿ' ನೋ.

**ದೊಡ್ಡತುಂಬೆ** (ನಾ). ಒಂದು ಬಗೆಯ ದೊಡ್ಡದಾದ ತುಂಬೆ ಗಿಡ ಮತ್ತು ಅದರ ಹೂವು: ಹಸುರುತುಂಬೆ, ದೊಡ್ಡತುಂಬೆ (ಮೈಜಿ. ೫೦-೦೦೦೩). [ ದೊಡ್ಡ + ತುಂಬೆ ]

**ದೊಡ್ಡತೊಪ್ಪೆಮರ** (ನಾ). ಒಂದು ಬಗೆಯ ಮರ : ದೊಡ್ಡತೊಪ್ಪೆಮರ, . . . ದರ್ಲ್ಲಿಮರ, ಬಟ್ಟಗ (ಮೈಜಿ. ೪೫-೮೮೫). [ದೊಡ್ಡ+ತೊಪ್ಪೆ+ಮರ]

**ದೊಡ್ಡದಗರೆ** (ನಾ). ಒಂದು ಬಗೆಯ ತಗರೆ ಸಸ್ಯ : (ಮೈಜಿ. ೦೫-೩೩೩).
[ ದೊಡ್ಡ + ತಗರೆ ]

**ದೊಡ್ಡದತ್ತೂರಿ** (ನಾ). ಒಂದು ಬಗೆಯ ಎಳ್ಳಗಸೆ ಸಸ್ಯ : ದೊಡ್ಡದತ್ತೂರಿ, ಉಮ್ಮೆ (ಮೈಜಿ. ೬೫-೧೩೧೯). [ ದೊಡ್ಡ + ದತ್ತೂರಿ ]

**ದೊಡ್ಡದನ** (ನಾ). ಒಳ್ಳೆಯ ತಳಿಯ ಪಶು ; ಉತ್ತಮಜಾತಿಯ ದನ : ಹೆಚ್ಚು ದನಗಳನ್ನು ಇಟ್ಟುಕೊಳ್ಳುವ ಬದಲು ಎರಡು ದೊಡ್ಡದನಗಳನ್ನು ಇಟ್ಟುಕೊಂಡರೆ ಸಾಕು (ರೂಢಿ). [ ದೊಡ್ಡ + ದನ ]

**ದೊಡ್ಡದನಿ** (ನಾ). ಗಟ್ಟಿಯಾದ ಧ್ವನಿ; ಜೋರಾದ ಧ್ವನಿ : ಕೆಲಹೊತ್ತಿನ ಮೇಲೆ ಭಟ್ಟರು ತಮ್ಮ ದೊಡ್ಡದನಿಯಲ್ಲಿ, "ವಾದ್ಯ ಬಾರಿಸಿರೋ" ಎಂದರು (ಅಜೋಲಿ. ೫೩).

ದೊಡ್ಡದನಿ ತೆಗೆ = ಎತ್ತರದ ಧ್ವನಿಯಲ್ಲಿ ಮಾತನಾಡು ; ಜೋರು ಮಾಡು : ನಾಗಮ್ಮನ ಅಳು ಅಳತೆ ಮೀರಿತು . . . ಅಳುತ್ತ "ನಾನು ನನ್ನ ಮಾವನವರ ಊರಿಗೇ ಹೋಗ್ತೀನಿ" ಎಂದು ದೊಡ್ಡದನಿ ತೆಗೆದಳು (ದಾಸಕಥ. ೮೬) : ಅವನು ದೊಡ್ಡದನಿ ತೆಗೆಯದೆ ಮಾತನಾಡುವಂತೆಯೇ ಇಲ್ಲ (ರೂಢಿ). [ ದೊಡ್ಡ + ದನಿ ]

**ದೊಡ್ಡದರ್ಭೆ** (ನಾ). ಒಂದು ಬಗೆಯ ಹುಲ್ಲು : "ಬಹುಮೂಲಃ – ದೊಡ್ಡದರ್ಭೆ, ಮಗ್ಗ" (ಓಷಧಿ. ೦೦೬). [ ದೊಡ್ಡ + ದರ್ಭೆ ]

**ದೊಡ್ಡನಡೆ** (ನಾ). ವೇಗದಿಂದ ಕೂಡಿದ ನಡಿಗೆ ; ವೇಗವಾದ ನಡಿಗೆ : ಎತ್ತುಗಳನ್ನು ದೊಡ್ಡನಡೆಯಲ್ಲಿ ಬಿಡು (ರೂಢಿ). [ ದೊಡ್ಡ + ನಡೆ ]

**ದೊಡ್ಡನಸುಕು** (ನಾ). ಇನ್ನೂ ಕತ್ತಲು ಇರುವ ಜಾವ ; ಬೆಳಗು ಬರಲು ಇನ್ನೂ ಸಾಕಷ್ಟು ಸಮಯವಿರುವ ಪ್ರಭಾತಕಾಲ : ದೊಡ್ಡನಸುಕಿನಲ್ಲಿ ಎದ್ದು ಸೋನಾಮಣಿಯು . . . ಬಾಗಿಲಿಗೆ ಬಂದು ಸದ್ದಿಲ್ಲದೆ ನಿಂತಳು (ಇಪ್ಪಕ. ೧೪೦) : ಅವು ಅಡ್ಡಾಡುವ ಕಾಲವೆಂದರೆ ಧೂಳಸಂಜೆ ಅಥವಾ ದೊಡ್ಡನಸುಕು (ಕನ್ನಡಾ. ೩೦). [ ದೊಡ್ಡ + ನಸುಕು ]

**ದೊಡ್ಡನಾತದಗಿಡ** (ನಾ). ಒಂದು ಬಗೆಯ ಸಸ್ಯ : ಅರದ್ರಿ, ದೊಡ್ಡನಾತದ ಗಿಡ, ಇಬನ್ನೆ, ರುಚಿಕತ್ರಿ (ಮೈಜಿ. ೦೫-೨೮೩).
[ ದೊಡ್ಡ + ನಾತ + ಗಿಡ (<ಗಿಡು) ]

**ದೊಡ್ಡನಾಯಿ** (ನಾ). ೧. ಎತ್ತರವಾಗಿ ಬೆಳೆದಿರುವ ನಾಯಿ, –ಶುನಕ: ದೊಡ್ಡತಲೆ ಯಮನ ದೂತರು ಗಡ್ಡದ ದೂತರು ಓಡಿ ಬಂದರು ದೊಡ್ಡ ನಾಯಿಗಳ ಟೊಂಕಕ ಬಿಗಿದು ಚಿಕ್ಕನಾಯಿಗಳ ಎಡಕೈಯಲಿ ಕೊಂಡು (ಪುರಂದ. ೫-೧೨೬-೫). ೨. ಹೆಬ್ಬುಲಿ : "ಶಾರ್ದೂಲಃ, ದ್ವೀಪೀ, ವ್ಯಾಘ್ರಃ – ೩ ದೊಡ್ಡಹುಲಿ, ಹೆಬ್ಬುರಹುಲಿ, ದೊಡ್ಡನಾಯಿ" (ಸಿದ್ಧಾಂತಿ. ೧೫೩).
[ ದೊಡ್ಡ + ನಾಯಿ (<ನಾಯ್) ]

**ದೊಡ್ಡನಾಳಲು** (ನಾ). ಒಂದು ಬಗೆಯ ದೊಡ್ಡದಾದ ಹುಲ್ಲುಗಿಡ : ದೊಡ್ಡದಾದ ಜೊಂಡುಗಿಡ : "ದೇವನಾಳಃ – ದೊಡ್ಡನಾಳ(ಲ)ಲು" (ಓಷಧಿ. ೬೯). [ ದೊಡ್ಡ + ನಾಳಲು (< ನಾಸಲ್) ]

**ದೊಡ್ಡನಿಂಬೆ** (ನಾ). ಒಂದು ಬಗೆಯ ದೊಡ್ಡದಾದ ನಿಂಬೆಯ ಗಿಡ ಮತ್ತು ಅದರ ಹಣ್ಣು : ಗಜನಿಂಬೆ : "ಜಂಬೀರ = ದೊಡ್ಡನಿಂಬೆ" (ಅಜಾನಿ. ೧೧-೩). [ ದೊಡ್ಡ + ನಿಂಬೆ ]

**ದೊಡ್ಡನಿದ್ದೆ** (ನಾ). ೧. ಗಾಢವಾದ ನಿದ್ರೆ ; ೨. ಸಾವು ; ಮರಣ : "ದೊಡ್ಡನಿದ್ದೆ–ಗಾಢನಿದ್ರೆ, ಸಾವು" (ಜಾನಕೋ. ೭). [ ದೊಡ್ಡ + ನಿದ್ದೆ ]

**ದೊಡ್ಡನಿದ್ರೆ** (ನಾ). = ದೊಡ್ಡನಿದ್ದೆ : (೩). [ ದೊಡ್ಡ + ನಿದ್ರೆ ]

**ದೊಡ್ಡನೀರಂಜಿ** (ನಾ). ಒಂದು ಬಗೆಯ ಸಸ್ಯ ; ನೀರಂಜಿಯಲ್ಲಿ ಒಂದು ವಿಧ : ದೊಡ್ಡನೆಗ್ಗಿಲು, ದೊಡ್ಡನೀರಂಜಿ, ಆನೆನೆಗ್ಗಿಲು (ಮೈಜಿ. ೬೦-೧೩೦೬). [ ದೊಡ್ಡ + ನೀರಂಜಿ (<ನೀರುವಂಜಿ) ]

**ದೊಡ್ಡನೀಲಿ** (ನಾ). ಒಂದು ಬಗೆಯ ದೊಡ್ಡದಾದ ನೀಲಿಗಿಡ : "ರಾಜನೀಲಿಕಾ – ದೊಡ್ಡನೀಲಿ" (ಓಷಧಿ. ೧೩೮) : ಕೊಮ್ಮೆಬೇರು, ದೊಡ್ಡನೀಲಿ, ಅಣಬೆ ಇವಿಷ್ಟನ್ನು . . . ಕಲ್ಲೊಳಟ್ಟು ಅರೆದು ಹಸುವಿನ ಮಜ್ಜಿಗೆಯಲ್ಲಿ ಕುಡಿಯ ಕೊಡಿಸಲು . . . ವಿಷ ಪರಿಹರವಹುದು (ವೈದ್ಯಸಾ. II, ೨೧೬). [ ದೊಡ್ಡ + ನೀಲಿ ]

**ದೊಡ್ಡನೂಲು** (ನಾ). ದಪ್ಪವಾದ, ಒರಟುನೂಲು: ಸ್ಥೂಲ, ಶಾಟಕ – ದೊಡ್ಡನೂಲ ಸೀರೆ (ನಾಚರ. ೬). [ದೊಡ್ಡ + ನೂಲು (<ನೂಲ್)]

**ದೊಡ್ಡನೆಕ್ಕರೆ** (ನಾ). ನೇರಳೆ ಬಣ್ಣದ ಹೂವುಗಳನ್ನು ಬಿಡುವ ನೆಕ್ಕರೆ ಎಂಬ ಗುಲ್ಮಜಾತಿಯಲ್ಲಿ ಒಂದು ವಿಧ : (ಮೈಜಿ. ೫೩-೦೦೬೯).
[ ದೊಡ್ಡ + ನೆಕ್ಕರೆ ]

**ದೊಡ್ಡನೆಗ್ಗಿಲು** (ನಾ). ಒಂದು ಬಗೆಯ ಸಸ್ಯ ; ನೆಗ್ಗಿಲಿನಲ್ಲಿ ಒಂದು ವಿಧ : ದೊಡ್ಡನೆಗ್ಗಿಲು, ದೊಡ್ಡನೀರಂಜಿ, ಆನೆನೆಗ್ಗಿಲು (ಮೈಜಿ. ೬೦-೧೩೦೬). [ ದೊಡ್ಡ + ನೆಗ್ಗಿಲು (<ನೆಗ್ಗಿಲ್) ]

**ದೊಡ್ಡನೆಲದಾವರೆ** (ನಾ). ಒಂದು ಬಗೆಯ ಹೂವಿನ ಗಿಡ ; ನೆಲದಾವರೆಯಲ್ಲಿ ಒಂದು ವಿಧ : "ಶುದ್ಧಮೂಲಂ – ದೊಡ್ಡನೆಲದಾವರೆ" (ಓಷಧಿ. ೧೬೮). [ ದೊಡ್ಡ + ನೆಲದಾವರೆ ]

**ದೊಡ್ಡನೆಲ್ಲಿ** (ನಾ). ನೆಲ್ಲಿಯಲ್ಲಿ ಒಂದು ವಿಧ : ಬೆಟ್ಟದ ನೆಲ್ಲಿಕಾಯಿ . . . ದೊಡ್ಡನೆಲ್ಲಿ, ಬೆಟ್ಟನೆಲ್ಲಿ (ಮೈಜಿ. ೩೪-೬೪೯). [ ದೊಡ್ಡ + ನೆಲ್ಲಿ ]

**ದೊಡ್ಡನೇರಿಲ್**, ದೊಡ್ಡನೇರಿಲು (ನಾ). ಗಾತ್ರದಲ್ಲಿ ಹಿರಿದಾದ ನೇರಿಳೆಹಣ್ಣಿನ ಮರ ಮತ್ತು ಅದರ ಹಣ್ಣು : "ಮಹಾಫಲ – ಬೆಲ್ಲವತ್ತ, ಹಲಸು, ದೊಡ್ಡನೇರಿಲ್" (ಓಷಧಿ. ೧೧೮). ದೊಡ್ಡನೇರಿಲು : "ಕೋಕಿಲೇಷ್ಟಾ – ದೊಡ್ಡನೇರಿಲು" (ಓಷಧಿ. ೪೧). [ ದೊಡ್ಡ + ನೇರಿಲ್ ]

**ದೊಡ್ಡನೇರಿಲು** 'ದೊಡ್ಡನೇರಿಲ್' ನೋ.

**ದೊಡ್ಡಪಟಿಕ** (ನಾ). ಸ್ಫಟಿಕದ ಗಿಡದಲ್ಲಿ ಒಂದು ಬಗೆ ಮತ್ತು ಅದರ ಹೂವು : ದೊಡ್ಡಪಟಿಕ, ನಾಗಮಲ್ಲಿಗೆ (ಮೈಜಿ. ೬೬-೧೩೪೫).
[ ದೊಡ್ಡ + ಪಟಿಕ ]

**ದೊಡ್ಡಪಡಪತ್ರೆ** (ನಾ). ಒಂದು ಬಗೆಯ ಮೂಲಿಕೆ : ದೊಡ್ಡಪಡಪತ್ರೆ ಚೂರ್ಣ ವರಾಹ ತೂಕ ಗುಳಿಗೆ ಮಾಡಿ ಕೊಡಲು ಹಾವುಗಳ ನಾನಾ ವಿಷ, ನಾನಾ ಪ್ರಾಣಿಗಳಿಗೂ ವಿಷ ಹರ (ವಿವೈವಿ. ೧೧೪). [ದೊಡ್ಡ+ಪಡಪತ್ರೆ]

**ದೊಡ್ಡಪತ್ರೆ**, ದೊಡ್ಡಿಪತ್ರೆ (ನಾ). ಅಡುಗೆಗೂ ಔಷಧಿಗೂ ಉಪಯೋಗಿಸುವ, ದೊಡ್ಡ ದೊಡ್ಡ ದಪ್ಪ ಎಲೆಗಳನ್ನುಳ್ಳ ಒಂದು ಬಗೆಯ ಗಿಡ ಮತ್ತು ಅದರ ಎಲೆ : "ಛತ್ರಕೋಶಾತಕೀ–ದೊಡ್ಡಪತ್ರೆ (ಬೋಬತರ ?)" (ಓಷಧಿ. ೫೯). ದೊಡ್ಡಿಪತ್ರೆ : "ಅಜಪಾದಃ – ಎಲೆಗಳ್ಳಿ, ದೊಡ್ಡಿಪತ್ರೆ" (ಓಷಧಿ. ೭). [ ದೊಡ್ಡ + ಪತ್ರೆ ]

**ದೊಡ್ಡಪರೀಕ್ಷೆ** (ನಾ). ಮುಂದಿನ ತರಗತಿಗೆ ತೇರ್ಗಡೆ ಮಾಡಲು ಮಾಡುವ ಪರೀಕ್ಷೆ ; ವಿದ್ಯಾ ಇಲಾಖೆಯವರು ನಡೆಸುವ ಸರ್ವಶಾಲಾ ಪರೀಕ್ಷೆ : ದೊಡ್ಡಪರೀಕ್ಷೆಯೊಳಿನ್ನ ದುರ್ದೈವಕೆ ವಿಜಯವು ಅರೆಬರೆಯಾಗೆ (ಇಂದಾಪ. ೧೯-೮೦). 'ಸಣ್ಣಪರೀಕ್ಷೆ' ಪರಾ. [ ದೊಡ್ಡ + ಪರೀಕ್ಷೆ ]

**ದೊಡ್ಡಪುಂಡರೀಕ** (ನಾ). ದೊಡ್ಡದಾದ ಬಿಳಿ ತಾವರೆಯ ಬಳ್ಳಿ ಮತ್ತು ಅದರ ಹೂವು : "ಪುಂಡರೀಯಕಂ – ದೊಡ್ಡಪುಂಡರೀಕಂ" (ಬಿಷಧಿ. ೧೦೧). [ ದೊಡ್ಡ + ಪುಂಡರೀಕ ]

**ದೊಡ್ಡಪುರಲೇಹುಲ್ಲು** (ನಾ). ಒಂದು ಬಗೆಯ ಹುಲ್ಲು : ದೊಡ್ಡಪುರಲೇ ಹುಲ್ಲು, ಸಣ್ಣಲಾಗು ಹುಲ್ಲು (ವೃಶಿಗಿ. ೩೪-೬೬೧).
[ ದೊಡ್ಡ + ಪುರಲ$_0$ (<ಪುರುಲ$_2$) + ಹುಲ್ಲು (<ಪುಲ್) ]

**ದೊಡ್ಡಪ್ಪ** (ನಾ). ೧. ತಂದೆಯ ಅಣ್ಣ ; ದೊಡ್ಡತಂದೆ : "ಪಿತೃವ್ಯಃ, ಪಿತುರ್ಭ್ರಾತಾ – ತಂದೆಗೆ ಪಡಹುಟ್ಟಿದವನ ಹೆಸರು. ಚಿಕ್ಕಪ್ಪ, ದೊಡ್ಡಪ್ಪ" (ಸಿದ್ಧಾಂತಿ. ೦೬೫); ಇಲ್ಲ ದೊಡ್ಡಪ್ಪ, ಇಲ್ಲಿಯೇ ಮಲಗುತ್ತೇನೆ (ವಾತ್ಸಲ್ಯ. ೦) : ವೈದಿಕಲೌಕಿಕೋಭಯವಿದ್ಯಾನಿಪುಣರು ನನ್ನ ಆ ದೊಡ್ಡಪ್ಪನವರು (ಇಂದಾಪ. ೧೫-೬೧). ೨. ಗೌರವವುಳ್ಳ ವ್ಯಕ್ತಿ ; ಮನ್ನಣೆಯನ್ನು ಹೊಂದಿರುವವನು : ದುಡ್ಡು ದೊಡ್ಡಪ್ಪಾದು ಗಂಡರಾಗಲು ಬಹುದೆ ದುಡಿದುಂಡರು ಗಂಡರಿರಬೇಕ (ಕನ್ನಜಾ. ೩೪೬): ದುಡ್ಡಿದ್ದವನೇ ದೊಡ್ಡಪ್ಪ (ಗಾದ). [ ದೊಡ್ಡ + ಅಪ್ಪ$_1$ ]

**ದೊಡ್ಡಬರ** (ನಾ). (ಹಿಂದೆ ೧೮೭೫-೭೬ರ ಧಾತು ಮತ್ತು ಈಶ್ವರ ಸಂವತ್ಸರಗಳಲ್ಲಿ ಇಡೀ ರಾಷ್ಟ್ರವನ್ನೇ ತಲ್ಲಣಗೊಳಿಸಿದ) ಒಂದು ದೊಡ್ಡ ಕ್ಷಾಮ ; ಭಯಂಕರವಾದ ಬರ : ಆಚಾರ್ಯರು . . . ಮೂರು ವರ್ಷದ ಬರ ಅಥವಾ ದೊಡ್ಡಬರ, ಜೋಳದ ಬರಗಳನ್ನು ಕಂಡಿದ್ದರು (ನನ್ನೂರು.೧೯೨) : ಮೊದಲೇ ಬಡತನ, ಅದರಲ್ಲಿ ದೊಡ್ಡಬರ (ಕನ್ನಜಾ. ೩೦).
[ ದೊಡ್ಡ + ಬರ$_1$ (<ಬಱ) ]

**ದೊಡ್ಡಬಸಲೆ, ದೊಡ್ಡಬಸಳೆ** (ನಾ). (ಅಡುಗೆಗೆ ಉಪಯೋಗಿಸುವ) ಒಂದು ಬಗೆಯ ಬಳ್ಳಿ ಮತ್ತು ಅದರ ಸೊಪ್ಪು : ಸೊಪ್ಪುಗಳು : ಅಗಸೆ . . . ದಗ್ಗಳಿ, ಕಸವೆ, ದೊಡ್ಡಬಸಲೆ, ಬಿಲವರಗ (ನಮ್ಮಸು. ೩೩೭). ದೊಡ್ಡಬಸಳೆ : ದೊಡ್ಡಬಸಳೆ ಬಳ್ಳಿ ತಾರಸಿಯ ಮೇಲಕ್ಕೂ ಹಬ್ಬಿಕೊಂಡು ಹೋಗಿದೆ (ರೂಢಿ). [ ದೊಡ್ಡ + ಬಸಲೆ ]

**ದೊಡ್ಡಬಸಳೆ** 'ದೊಡ್ಡಬಸಲೆ' ನೋ.

**ದೊಡ್ಡಬಿಂದಿಗೆಗಿಡ** (ನಾ). ಒಂದು ಬಗೆಯ ಹೂವಿನ ಗಿಡ : (ವೃಶಿಗಿ. ೫-೮೭). [ ದೊಡ್ಡ + ಬಿಂದಿಗೆ + ಗಿಡ (<ಗಿಡು) ]

**ದೊಡ್ಡಬೀದಿ** (ನಾ). ಮುಖ್ಯವಾದ ಬೀದಿ ; ಪ್ರಧಾನ ರಸ್ತೆ : ದೇವರ ಉತ್ಸವದ ಕಾರಣ ಆ ದೊಡ್ಡಬೀದಿಯಲ್ಲಿ ಬಹುಜನರು ಸೇರಿದ್ದಾರೆ (ರೂಢಿ). [ ದೊಡ್ಡ + ಬೀದಿ ]

**ದೊಡ್ಡಬೆಂಡೆ** (ನಾ). ಒಂದು ಬಗೆಯ ದೊಡ್ಡದಾದ ಕಾಯಿಗಳನ್ನು ಬಿಡುವ ಬೆಂಡೆ ಗಿಡ ಮತ್ತು ಅದರ ಕಾಯಿ : ದೊಡ್ಡಬೆಂಡೆ, ಕಾಡುಕುತ್ರಿ (ವೃಶಿಗಿ. ೭೬-೧೫೬೦). [ ದೊಡ್ಡ + ಬೆಂಡೆ ]

**ದೊಡ್ಡಬೆಟ್ಟ** (ನಾ). ಎತ್ತರವಾದ ಬೆಟ್ಟ : "ತ್ರಿಕೂಟಃ . . . ಮೂರು ಶಿಖರಗಳುಳ್ಳ ಬಹಳ ಪ್ರಸಿದ್ಧವಾದ ದೊಡ್ಡಬೆಟ್ಟ" (ಸಿದ್ಧಾಂತಿ. ೯೪) : ಅಂಬುಧಿಯೊಳ್ ಮಗನ ಮಲಗಿಸಿ ಮೇಲೆ ದೊಡ್ಡಬೆಟ್ಟವನ್ನು ಇಟ್ಟು ಬನ್ನಿರೋ (ಪುರಂದ. ೪-೭-೩) ; ಕನ್ನಡ ಶಾಸನಗಳಲ್ಲಿ ಚಿಕ್ಕ ಬೆಟ್ಟವನ್ನು ಕಟ್ವಪ್ಪ ಎಂದೂ ದೊಡ್ಡಬೆಟ್ಟವನ್ನು 'ವೆರ್ಗಟ್ವಪ್ಪ' ಎಂದೂ ಕರೆದಿದೆ (ಕಶಾಅ ೭೮). P ಶ್ರವಣಬೆಳಗೊಳದಲ್ಲಿರುವ ಚಂದ್ರಗಿರಿಗೂ ಊಟಿಯ ಬಳಿಯಿರುವ ನೀಲಗಿರಿಯ ಶಿಖರಕ್ಕೂ ದೊಡ್ಡಬೆಟ್ಟವೆಂಬ ಹೆಸರು ಬಂದಿದೆ. [ ದೊಡ್ಡ + ಬೆಟ್ಟ (<ಬೆಟ್ಟು$_2$) ]

**ದೊಡ್ಡಬೆಲ್ಲಗೆಣಸು** (ನಾ). ಒಂದು ಬಗೆಯ ಸಿಹಿಗೆಣಸು : "ತಾಂಬೂಲ ಪತ್ರಿಕಾ – ದೊಡ್ಡಬೆಲ್ಲಗೆಣಸು" (ಬಿಷಧಿ. ೬೮).
[ ದೊಡ್ಡ + ಬೆಲ್ಲ + ಗೆಣಸು (<ಗೆಣಸು) ]

**ದೊಡ್ಡಬೆಳ್ಳಿಹಣ** (ನಾ). ಒಂದು ಬಗೆಯ ಬೆಳ್ಳಿ ನಾಣ್ಯ : (ಕಿ).
[ ದೊಡ್ಡ + ಬೆಳ್ಳಿ + ಹಣ ]

**ದೊಡ್ಡಬೇನೆ** (ನಾ). ಕ್ಷಯ ಮೊದಲಾದ ಭಯಾನಕ ವಾದ ರೋಗ; ದೊಡ್ಡ ರೋಗ : ಜಗಳದ ಕಾವಿನಲ್ಲಿ ಆಕೆ ನಿನಗೆ ದೊಡ್ಡ ಬೇನೆ ಬರ, ಎಂದು ನಟಿಕೆ ಮುರಿದಳು (ರೂಢಿ). [ ದೊಡ್ಡ + ಬೇನೆ ]

**ದೊಡ್ಡಬೇವು** (ನಾ). ಒಂದು ಬಗೆಯ ಬೇವಿನ ಮರ : "ರಕ್ತಃ – ದೊಡ್ಡ ಬೇವು, ತಾರೆ, ಕಡಸಿಗೆ" (ಬಿಷಧಿ. ೧೩೩) : "ಏನಿಂಬಃ–ದೊಡ್ಡಬೇವು" (ಬಿಷಧಿ. ೧೫೩). [ ದೊಡ್ಡ + ಬೇವು ]

**ದೊಡ್ಡಬೊಂಬೆಯಾಟ** (ನಾ). ಬೊಂಬೆಯಾಟದಲ್ಲಿ ಒಂದು ಪ್ರಕಾರ.
ದೊಡ್ಡಬೊಂಬೆಯಾಟದವರು = ದೊಡ್ಡ ಬೊಂಬೆಯಾಟವನ್ನು ಆಡಿಸುವವರು : (ಎಸಮ್ಮ. XXII, ೩). [ ದೊಡ್ಡ + ಬೊಂಬೆಯಾಟ ]

**ದೊಡ್ಡಮದ್ದು** (ನಾ). ಅಶ್ವಗಂಧದ ಬೇರು ; ಹಿರೇಮದ್ದು : (ಕಿ).
[ ದೊಡ್ಡ + ಮದ್ದು$_1$ (<ಮರ್ದು) ]

**ದೊಡ್ಡಮನಸ್ಸು** (ನಾ). ಉದಾರಬುದ್ಧಿ ; ವಿಶಾಲಹೃದಯ : ಗಿರಿಜ ಬದುಕಿದ್ದಾಗ "ದೋಸೆ ತಿನ್ನು" ಎಂದು ದೊಡ್ಡಮನಸ್ಸು ತೋರಿಸಿರಲಿಲ್ಲ (ಶನ್ನಸ. ೬೨) ; ನೀವು ಅಂತಹ ದೊಡ್ಡಮನಸ್ಸಿನವರೆಂಬುದನ್ನು ಮುಂದಿ ಬಲ್ಲುದು ಮಹಾರಾಣಿ (ಸಪತಿ. ೧೨).
ದೊಡ್ಡಮನಸ್ಸು ಮಾಡು=ಉದಾರಬುದ್ಧಿಯನ್ನು ತೋರು; ಕರುಣೆ ತೋರು : ತಾವು ದೊಡ್ಡಮನಸ್ಸು ಮಾಡಬೇಕು (ಬಡಕ. ೯೧) : ಈಗ ಕುಂತಿಯು ದೊಡ್ಡಮನಸ್ಸು ಮಾಡಿದರೆ ನನಗೂ ಮುಕ್ಕಳಾದಾವು (ಪದಭಾ. ೧೩). [ ದೊಡ್ಡ + ಮನಸ್ಸು ]

**ದೊಡ್ಡಮನುಷ್ಯ** (ನಾ). ೧. ಗೌರವಯುತ ಮನುಷ್ಯ : ನನ್ನ ಸಬ್ ಡಿವಿಜನ್ ಆಫೀಸರು ದಳವಾಯಿ ಮನೆತನದ ಚಿಕ್ಕದೇವರಾಜೇಅರಸರಂಥ ದೊಡ್ಡಮನುಷ್ಯರು (ಕಲನೆ. ೨೧೭) ; ಊರಿಗೆ ದೊಡ್ಡಮನುಷ್ಯ ಅನ್ನಿಸಿಕೊಳ್ಳೋಕೆ ನಾನು, ಬಂದೋರ ಚಾಕರಿ ಮಾಡೋಕೆ ನೀವಾ ? (ಚಂದಕೋ.೩೬). ೨. ಶ್ರೀಮಂತ : "ದೊಡ್ಡಮನುಷ್ಯ, ದೊಡ್ಡಸ್ತಿಕೆಗಾರ" (Aristocrat. ಪಾರಿನಿ. ೬). [ ದೊಡ್ಡ + ಮನುಷ್ಯ ]

**ದೊಡ್ಡಮನೆ** (ನಾ). ೧. ವಿಶಾಲವಾದ ಮನೆ : ಸಾಹುಕಾರನು ಆ ದೊಡ್ಡ ಮನೆಯಲ್ಲಿ ಬೀದಿಯ ಕಡೆಯ ಒಂದು ಕೊಠಡಿಯನ್ನು ಸುಬ್ಬಣ್ಣನವರಿಗೆ ತೋರಿಸಿ, ನೀವು ಬೇಕಾದರೆ ಇಲ್ಲಿಯೇ ಇರಿ. ಎಂದು ಹೇಳಿದನು (ಸಣ್ಣಕ. X, ೫೪) : ಒಂದು ಕಾಲಕ್ಕೆ ಅದು ಬಹಳ ದೊಡ್ಡಮನೆ ಆಗಿದ್ದಿರಬೇಕು (ಚಂದಕೋ. ೩೧). ೨. (ಆಲಂ) ಕಾರಾಗೃಹ ; ಸೆರೆಮನೆ : (ಕಿ).
[ ದೊಡ್ಡ + ಮನೆ ]

**ದೊಡ್ಡಮುಬ್ಬು** (ನಾ). ಬೆಳಗಿನ ಜಾವಕ್ಕೂ ಮುಂಚಿನ ಸಮಯ ; ಬೆಳಗಾಗುವುದಕ್ಕಿಂತ ತುಂಬಾ ಮುಂಚಿನ ಸಮಯ : ಚನ್ನ ದೊಡ್ಡ ಮುಬ್ಬಿಗೇ ಊರು ಬಿಟ್ಟು ಮೂರಾಳುದ್ದ ಹೊತ್ತಿಗೆ ಬೆಟ್ಟ ಸೇರಿದ (ನನ್ನೂರು. ೨೦೯). 'ನಸುಮಂಬರ್' ಪರಾ.
[ ದೊಡ್ಡ + ಮುಬ್ಬು (<ಮರ್ವು) ]

**ದೊಡ್ಡಮರ** (ನಾ). ೧. ದೊಡ್ಡದಾದ ಮರ ; ಎತ್ತರವಾದ ವೃಕ್ಷ. ೨. ಹಿರೇಮರ ; ಹೆಮ್ಮರ : "ಮಂಡೂಕಪರ್ಣಃ, ಪತ್ರೋರ್ಣಃ, ನಟಃ, ಕಟ್ವಂಗಃ . . . ೧೨ ಹೆಮ್ಮರದ ಹೆಸರುಗಳು. ದೊಡ್ಡಮರ, ಹೆಗ್ಗೊಗಟೇ ಮರ" (ಸಿದ್ಧಾಂತಿ. ೧೦೯) : ದೊಡ್ಡಮರ, ಹೆಮ್ಮರ, ಹಿರೇಮರ (ವೃಶಿಗಿ. ೪-೨೮). [ ದೊಡ್ಡ + ಮರ$_1$ ]

**ದೊಡ್ಡಮಳೆ** (ನಾ). ಜೋರಾಗಿ ಸುರಿಯುವ ಮಳೆ ; ಬಿರುಮಳೆ : ದೊಡ್ಡಮಳೆ ಬೆಳ್ಳಿಬಿಸಿಲುಗಳಿರಡ ಮುಕ್ಕುಳಿಸಲೆಡ್ಡಮೆನೆ ಬಾನೊಡಲ್ ಬರಿದಾಗುತಿತ್ತು (ಕಾಊರ. ೫೭-೯೩); ಮಳೆಗಾಲದಲ್ಲೆಲ್ಲ ಕೂಡಿ ನಾಲ್ಕಾರು ದೊಡ್ಡಮಳೆಗಳು ಬಿದ್ದರೆ ಬಹು ಸುದೈವ (ಮುಂಬಯಿ. ೫-೧೯೪).
[ ದೊಡ್ಡ + ಮಳೆ (<ಮಱೆ³) ]

**ದೊಡ್ಡಮಾತು** (ನಾ). ಅತಿ ಉಚಿತವಾದ ಮಾತು ; ಎಲ್ಲರೂ ಒಪ್ಪಬಹುದಾದ ಮಾತು ; ತಿಳಿವಳಿಕೆಯಿಂದ ಕೂಡಿದ ಮಾತು : ದೊಡ್ಡ ಮಾತೇನು, ಗಿಡ್ಡಮಾತೇನು ? (ಹೀಟಮಾ. ೨೯) ; ಇಂತಹ ಕೆಲಸ ಮಾಡುವುದಕ್ಕೆ ನಿಮಗೆ ನಾಚಿಕೆಯಿಲ್ಲವಂತೆ . . . ಮತ್ತೆ ಮರ್ಯಾದಿ ಬಗ್ಗೆ ದೊಡ್ಡಮಾತು ಹೇಳುತ್ತೀರಿ (ದೇವಹಂ. ೧೭೨) : ನಮಗೇಕಪ್ಪ ಅಷ್ಟು ದೊಡ್ಡಮಾತು (ಕತ್ರಬಿ. ೩೯). [ ದೊಡ್ಡ + ಮಾತು₁ ]

**ದೊಡ್ಡಮಾರವಾಳಿ** (ನಾ). ಒಂದು ಬಗೆಯ ಒಣಹುಲ್ಲು : (ಕ).
[ ದೊಡ್ಡ + ಮಾರವಾಳಿ (<ಮಾರುಳಿ) ]

**ದೊಡ್ಡಮಾರ್ಗ** (ನಾ). ಆನೆ, ಕುದುರೆಗಳ ಸವಾರಿಯಿಂದ ಕಿರುದೊಡೆಯಲ್ಲುಂಟಾಗುವ ಜಡ್ಡು,-ದಡ್ಡು : "ದೊಡ್ಡಮಾರ್ಗಂ = ಆನೆ ಕುದುರೆಗಳಿಂದಾದ ಕಿಱುದೊಡೆಯ ಜಿಡ್ಡು, (ಜಡ್ಡು, ದಡ್ಡು)" (ಶಮದ. ಪರಿ. ೨); "ದೊಡ್ಡಮಾರ್ಗಮೆಂದಾನೆ ಕುದುರೆಗಳ ಕಿಱುದೊಡೆಯೊಳಿರದಾದ ದಡ್ಡಕ್ಕು" (ಕಬ್ಬಕ್ಕ. ೯೧) ; ಆರೂಢಸರ್ವಜ್ಞನ ದೊಡ್ಡ [ಪಾಠಾಂ. ಡ್ಡಿ]ಮಾರ್ಗಂಗಳೆಳವಾಟೆಯ ದಿಂಡಿನೊಳ್ ಸಾಣೆಗಟ್ಟಿದಂತಾದುವು (ಪಂಪಭಾ. ೨-೩೯ ವ) ; ಮದಗಜದ ಪೊರಜು ಪೊಯ್ದೇಟ್ವ ದೊಡ್ಡಮಾರ್ಗದ ಕಿಣಂಗಳಂ ಕಿಗ್ಗಣ್ಣೊಳ್ ಪದನತನ್ನವರೀಕ್ಷಿಸೆ (ಅನಂಪು. ೨-೯). [ ದೊಡ್ಡ+ಮಾರ್ಗ ]

**ದೊಡ್ಡಮಾವು** (ನಾ). ಒಂದು ಬಗೆಯ ಗಿಡ : "ಶರಾಟಿಕಾ – ದೊಡ್ಡಮಾವು" (ಒಷಧಿ. ೧೬೦). [ ದೊಡ್ಡ + ಮಾವು ]

**ದೊಡ್ಡಮೆಕ್ಕೆಗಿಡ** (ನಾ). ಒಂದು ಬಗೆಯ ಬಳ್ಳಿ ; ಹಾಲ್ಮೆಕ್ಕೆ ಬಳ್ಳಿ: (ಕ).
[ ದೊಡ್ಡ + ಮೆಕ್ಕೆ + ಗಿಡ (<ಗಿಡು) ]

**ದೊಡ್ಡಮೆಣಸಿನಕಾಯಿ** (ನಾ). = ದೊಣ್ಣೆಮೆಣಸಿನಕಾಯಿ : (ವ್ಯಜಿಗಿ. ೧೭-೩೧೩). [ ದೊಡ್ಡ + ಮೆಣಸಿನಕಾಯಿ ]

**ದೊಡ್ಡಮೇದೆ** (ನಾ). ಒಂದು ಬಗೆಯ ಮೂಲಿಕೆ: "ವೃಕ್ಷಾರ್ಹಃ – ದೊಡ್ಡಮೇದೆ" (ಒಷಧಿ. ೦೫೭). [ ದೊಡ್ಡ + ಮೇದೆ ]

**ದೊಡ್ಡಮ್ಮ** (ನಾ). ೧. = ದೊಡ್ಡತಾಯಿ ೧ : ಚಿಕ್ಕಮ್ಮಗಾ ರಾಯ ಕೈಲಾಗು ಗೊಟ್ಟೊಳಹೊಕ್ಕು ದೊಡ್ಡಮ್ಮನ ಕಂಡ (ಭರತ. ೫೨-೧೪೦) ; ಕಾಳೂರಿನಲ್ಲಿ ಗಿರಿಜಳ ದೊಡ್ಡಮ್ಮನ ಮನೆಯಿದೆ (ದೇವಹಂ. ೯೭). ೨. = ದೊಡ್ಡತಾಯಿ ೨ : ನಿದ್ದೆ ಚೆನ್ನಾಗಿ ಬಂತು ದೊಡ್ಡಮ್ಮ (ವಾತ್ಸಲ್ಯ. ೧೭). ೩. ಕೆಡುಕನ್ನುಂಟುಮಾಡುವದೆಂದು ನಂಬಲಾದ ಒಬ್ಬ ಹೆಣ್ಣು ದೇವತೆಯ ಹೆಸರು : ಮಾರುದ್ದ ಮಂಡೇ ಧರಿಸೊ ದೊಡ್ಡಮ್ಮಾ ನಿನ್ನ ಮಾಯಾ ಒಬ್ಬರಿಗೂ ತಿಳಿಯಾದೋ (ಹುಟ್ಟದ. ೪೨) ; ಕೋಣಗಳನ್ನು ಕಡಿದ ರಕ್ತ ಚಿಕ್ಕಮ್ಮನ ಗುಡಿಯಿಂದ ದೊಡ್ಡಮ್ಮನ ಗುಡಿಯ ತನಕ ಹರಿದು ಹೋಗುತ್ತಿತ್ತು (ನನ್ನೂರು. ೩೦). ೪. ಸಿಡುಬು : ಮಗೂಗೆ ದೊಡ್ಡಮ್ಮ ಆಗಿರುವುದರಿಂದ ಮೈಲಿಗೆ ಆಗಗೊಡಬಾರದು (ಊಧ). ೫. ದನಗಳಿಗೆ ಬರುವ ಕಾಲರಾ ಜಾತಿಯ ರೋಗ ; ದೊಡ್ಡರೋಗ : (ಎಸಮ್ಮ. XV, ೩೭). [ ದೊಡ್ಡ + ಅಮ್ಮ₂ ]

**ದೊಡ್ಡಯ್ಯ** (ನಾ). = ದೊಡ್ಡಪ್ಪ : (ಕ). [ ದೊಡ್ಡ + ಅಯ್ಯ₁ ]

**ದೊಡ್ಡರತ್ನಗಂಧಿ** (ನಾ). ಕೆಂಪು ಮತ್ತು ಹಳದಿ ಹೂವುಗಳನ್ನು ಬಿಡುವ ಒಂದು ಬಗೆಯ ಮರ ಮತ್ತು ಅದರ ಹೂವು ; ಗುಲ್ಮೊಹೋರ್ ಮರ: ಸೀಮೆಸಂಕೇಶ್ವರ, ದೊಡ್ಡರತ್ನಗಂಧಿ, ಕೆಂಪುತುರಾಯಿ, ಗುಲ್ಮಹರ್ ಮರ, ಕತ್ತೀಕಾಯಿ (ವ್ಯಜಿಗಿ. ೨೯-೫೩೪). [ ದೊಡ್ಡ + ರತ್ನಗಂಧಿ ]

**ದೊಡ್ಡರಾಗಿ** (ನಾ). ಒಂದು ಬಗೆಯ ರಾಗಿ; ಆರು ತಿಂಗಳಲ್ಲಿ ಕೊಯ್ಲಿಗೆ ಬರುವ ರಾಗಿ : ಪೊಲಗಳಲ್ಲಿ ಗಿಡ್ಡರಾಗಿಯು ಬಂದು, ದೊಡ್ಡರಾಗಿಯ ನಾಟಿಯನ್ನು ಹಾಕಿದರು (ಹುಟ್ಟಹ. ೬೨). [ ದೊಡ್ಡ + ರಾಗಿ₁ ]

**ದೊಡ್ಡರಾಜಾನ್ನ** (ನಾ). ಗಾತ್ರದಲ್ಲಿ ಹಿರಿದಾದ ಒಂದು ಬಗೆಯ ಭತ್ತ,-ನೆಲ್ಲು : "ಗಂಧಾಢ್ಯ–ಶಾಲಿ, ದೊಡ್ಡರಾಜಾನ್ನ" (ಒಷಧಿ. ೪೭).
[ ದೊಡ್ಡ + ರಾಜಾನ್ನ ]

**ದೊಡ್ಡರಿಸಿನ** (ನಾ). ಅರಿಸಿನದಲ್ಲಿ ಒಂದು ಬಗೆ: "ಪೀತದ್ರುಃ, ಕಾಲೀಯಕಃ ... ಪರ್ಜನೀ–೭ ಮರದರಿಸಿನ, ಕಸ್ತೂರಿಅರಿಸಿನವೆಂದು ಕೆಲವರನ್ನುವರು ದೊಡ್ಡರಿಸಿನ, ಕಾಡುಅರಿಸಿನ" (ಸಿದ್ಧೌಷ. ೧೩೫). [ ದೊಡ್ಡ + ಅರಿಸಿನ ]

**ದೊಡ್ಡರೋಗ** (ನಾ). ೧. ಭಯಂಕರವಾದ ರೋಗ ; ಸಾವು ತರುವ ರೋಗ ; ಕ್ಷಯ ಮೊದಲಾದ ಭಯಾನಕವಾದ ರೋಗ : ನಿಂಗೆ ದೊಡ್ಡರೋಗ ಬರ (ಹುಟ್ಟಹ. ೧೩೯). ೨. ದನಗಳಿಗೆ ಬರುವ ಕಾಲರಾ ಜಾತಿಯ ರೋಗ ; ದೊಡ್ಡಮ್ಮ : (ಎಸಮ್ಮ. XV, ೩೭).
[ ದೊಡ್ಡ + ರೋಗ ]

**ದೊಡ್ಡವನಮುಗುಳಿ** (ನಾ). ಒಂದು ಬಗೆಯ ದೊಡ್ಡದಾದ ಕಾಡುಮರ: (ವ್ಯಜಿಗಿ. ೭೧-೧೪೬೨). [ ದೊಡ್ಡ + ವನಮುಗುಳಿ₀ ]

**ದೊಡ್ಡವರಹ** (ನಾ). ಒಂದು ಬಗೆಯ ನಾಣ್ಯ : ಶಾಸನಗಳಲ್ಲಿ ಬರುವ ನಾಣ್ಯಗಳೂ, ಅಳತೆಗಳೂ:– ಗದ್ಯಾಣ . . . ವರಹ, ದೊಡ್ಡವರಹ, ಮಂಗಳೂರು ಗದ್ಯಾಣ (ತುಳುನಾ. ೨೭೧). [ ದೊಡ್ಡ + ವರಹ ]

**ದೊಡ್ಡವೂಸಿ** (ನಾ). ಪುಷ್ಯ ಮಳೆ: (ಎಸಮ್ಮ. XV, ೩೧). 'ಚಿಕ್ಕವೂಸಿ' ಪರಾ. [ ದೊಡ್ಡ + ಪೂಸಿ₃ (<ಪುಸ್ಯ₁) ]

**ದೊಡ್ಡವ್ವ** (ನಾ). = ದೊಡ್ಡತಾಯಿ : (ಕ). 'ಚಿಕ್ಕವ್ವ' ಪರಾ.
[ ದೊಡ್ಡ + ಅವ್ವ₁ (<ಅವ್ವೆ) ]

**ದೊಡ್ಡಶಣಬು** 'ದೊಡ್ಡಸಣಬು' ನೋ.

**ದೊಡ್ಡಶರ** (ನಾ). ಒಂದು ಬಗೆಯ ಹುಲ್ಲು : "ಮಹಾಶರಂ–ದೊಡ್ಡಶರ" (ಒಷಧಿ. ೧೧೭). [ ದೊಡ್ಡ + ಶರ ]

**ದೊಡ್ಡಸಂಪಿಗೆ** (ನಾ). ಒಂದು ಬಗೆಯ ಸಂಪಿಗೆ ಮರ ಮತ್ತು ಅದರ ಹೂವು : (ವ್ಯಜಿಗಿ. ೫೩-೧೧೭೫). [ ದೊಡ್ಡ + ಸಂಪಿಗೆ (<ಸಂಪಗೆ) ]

**ದೊಡ್ಡಸಣಬು, ದೊಡ್ಡಶಣಬು** (ನಾ). ಒಂದು ಬಗೆಯ ಗಿಡ: "ಮಹಾಶ್ವೇತಪರ್ಣೀ–ದೊಡ್ಡ ಸಣಬು" (ಒಷಧಿ. ೧೨೨). **ದೊಡ್ಡಶಣಬು**: "ಮಹಾಶಣಪುಷ್ಪಿಕಾ – ದೊಡ್ಡಶಣಬು" (ಒಷಧಿ. ೧೨೩).
[ ದೊಡ್ಡ + ಸಣಬು (<ಸಣಂಬು) ]

**ದೊಡ್ಡಸರ್ಲೆಹಕ್ಕಿ** (ನಾ). ಒಂದು ಬಗೆಯ ಪಕ್ಷಿ. ೧. ಸಿರಿಗಿರಿ. ೨. ತಾಡಿಗ್ಯ. ೩. ಸಲಿಕೆಬಾಯಿ ಹಕ್ಕಿ : (ಕ).
[ ದೊಡ್ಡ + ಸರ್ಲೆ (<ಸರಲೆ) + ಹಕ್ಕಿ₁ (<ಪಕ್ಕಿ₁) ]

**ದೊಡ್ಡಸಾಮೆ** (ನಾ). ಸಾಮೆಧಾನ್ಯದಲ್ಲಿ ಒಂದು ವಿಧ ; ಹೆಜ್ಜಾವೆ : ದೊಡ್ಡ ಜಾತಿಯ ಸಾಮೆ ಅಕ್ಕಿ : (ಎಸಮ್ಮ. I, ೩೧).
[ ದೊಡ್ಡ + ಸಾಮೆ₁ (<ಸಾವೆ₁) ]

**ದೊಡ್ಡಸಾಸುವೆ** (ನಾ). ಸಾಸವೆಯಲ್ಲಿ ಒಂದು ವಿಧ : (ಕ).
[ ದೊಡ್ಡ + ಸಾಸುವೆ (<ಸಾಸವೆ) ]

**ದೊಡ್ಡಸಿವನ್ನಿ** (ನಾ). ಒಂದು ಬಗೆಯ ದೊಡ್ಡದಾದ ಸಿವನ್ನಿ ಮರ : "ಮಹಾಕುಮುದ–ದೊಡ್ಡ ಸಿವನ್ನಿ" (ಒಷಧಿ. ೧೨೨).
[ ದೊಡ್ಡ + ಸಿವನ್ನಿ (<ಸೀವನ್ನಿ) ]

**ದೊಡ್ಡಸಿಹಿಗೆಣಸು** (ನಾ). ಸಿಹಿಗೆಣಸಿನಲ್ಲಿ ಒಂದು ಬಗೆ : "ಮಹಾನೀಲಾ ಕರಿಯ ಗಿರಿಕರ್ಣಿ, ಹಿರಿಯ ನೇಱಿಲ್, ದೊಡ್ಡಸಿಹಿಗೆಣಸು" (ಒಷಧಿ. ೧೧೭).
[ ದೊಡ್ಡ + ಸಿಹಿಗೆಣಸು (<ಸೀಗೆಣಸು) ]

**ದೊಡ್ಡಸುದ್ದಿ** (ನಾ). ವಿಶೇಷವಾದ ಸುದ್ದಿ ; ಮಹತ್ವದ ಸಮಾಚಾರ : ಶಾನುಭೋಗರ ಮಗಳಿಗೆ ಮದುವೆ ನಿಶ್ಚಯವಾದದ್ದು ಊರಿಗೆಲ್ಲ ದೊಡ್ಡ ಸುದ್ದಿಯಾಯಿತು (ಊ). [ ದೊಡ್ಡ + ಸುದ್ದಿ]

**ದೊಡ್ಡಸುರುಟಿ** (ನಾ). ಒಂದು ಬಗೆಯ ಸಸ್ಯ : ದೊಡ್ಡಸೊಳ್ತಿ, ದೊಡ್ಡ ಸುರುಟಿ (ವ್ಯಜಿಗ. ೧೦-೧೬೧). [ ದೊಡ್ಡ + ಸುರುಟಿ$_{0}$ ]

**ದೊಡ್ಡಸೇವಗೆ** (ನಾ). ಒಂದು ಬಗೆಯ ಸೇವಿಗೆ ; ದಪ್ಪನಾದ ಸೇವಿಗೆ : ಪರಡಿ ಗೌವಲಿಯಷ್ಟೆ ಮಣಿ ಸಣ್ಣ ಗೋಧೂಮ ಸರವಳಿಗೆ ದೊಡ್ಡಸೇವಗೆ ಕಡುಬುವುಂಡಲಿಗೆ ಬೆರಲ ಸೇವಗೆಯಾದಿಯಾಗಿಯುಡವಾದ ಕಜ್ಜಾಯಗಳ ತೆಗೆದುಕೊಂಡು (ಸೂಪಶಾ. ೩-೭). [ ದೊಡ್ಡ + ಸೇವಗೆ (<ಸೇವಿಗೆ) ]

**ದೊಡ್ಡಸೊಳ್ತಿ** (ನಾ). ಒಂದು ಬಗೆಯ ಸಸ್ಯ : ದೊಡ್ಡಸೊಳ್ತಿ, ದೊಡ್ಡ ಸುರುಟಿ (ವ್ಯಜಿಗ. ೧೦-೧೬೧). [ ದೊಡ್ಡ + ಸೊಳ್ತಿ$_{0}$ ]

**ದೊಡ್ಡಸೋಂಪು** (ನಾ). ಒಂದು ಬಗೆಯ ದೊಡ್ಡದಾದ ಸಾಂಬಾರದ ಕಾಳು : ದೊಡ್ಡ ಸೋಂಪು, ದೊಡ್ಡಜೀರಿಗೆ (ವ್ಯಜಿಗ. ೩೮-೭೪೭).

[ ದೊಡ್ಡ + ಸೋಂಪು ]

**ದೊಡ್ಡಸೋರೆ** (ನಾ). ಒಂದು ಬಗೆಯ ಸೋರೆ ಬಳ್ಳಿ ಮತ್ತು ಅದರ ಕಾಯಿ : ಕಾಯಿಗಳು :–ಅಗಸೆ . . . ದೊಡ್ಡಕುಂಬಳ, ದೊಡ್ಡಸೋರೆ (ನಮ್ಮನು. ೨೩೭). [ ದೊಡ್ಡ + ಸೋರೆ$_{1}$ ]

**ದೊಡ್ಡಸೌತೆ** (ನಾ). ಒಂದು ಬಗೆಯ ತರಕಾರಿ ಬಳ್ಳಿ ; ಸೌತೆಗಿಡದಲ್ಲಿ ಒಂದು ಬಗೆ ಮತ್ತು ಅದರ ಕಾಯಿ : "ನಾಗಮಾತಾ – ಮಣಸಿಲೆ, ತುಳಸಿ, ದೊಡ್ಡಸೌತೆ" (ಒಷಧಿ. ೮೭). [ ದೊಡ್ಡ + ಸೌತೆ (<ಸವುಂತೆ) ]

**ದೊಡ್ಡಸ್ತ** (ನಾ). ದೊಡ್ಡತನವುಳ್ಳವನು ; ಹಿರಿಮೆಯುಳ್ಳವನು. 'ದೊಡ್ಡಸ್ತನ', 'ದೊಡ್ಡಸ್ತಿಕೆ' ನೋಡಿ. [ ದೊಡ್ಡ + – ಸ್ತ ]

**ದೊಡ್ಡಸ್ತನ, ದೊಡ್ಡಿಸ್ತನ** (ನಾ). ದೊಡ್ಡತನ ; ಗೌರವ ; ಮರ್ಯಾದೆ; ಹಿರಿಮೆ : "ದೊಡ್ಡಸ್ತನ–ದೊಡ್ಡಸ್ತಿಕೆ" (ಜಾನಕೋ. ೭). **ದೊಡ್ಡಿಸ್ತನ** : ತಮ್ಮ ಅಣ್ಣನ ದೊಡ್ಡಿಸ್ತನವನ್ನು ಕೊಚ್ಚಿಕೊಳ್ಳುತ್ತಾ ಇದ್ದಳು (ಪ್ರತಿಬಿಂ. ೪೬): ನಿಮ್ಮ ಮರ್ಯಾದೆಯ ದೊಡ್ಡಿಸ್ತನವಾದರೂ ಏನು ? (ರಂಗಠೋ. ೭೯).

[ ದೊಡ್ಡಸ್ತ + – ತನ ]

**ದೊಡ್ಡಸ್ತಿಕೆ** (ನಾ). ೧. ಹಿರಿಮೆ ; ಹೆಚ್ಚುಗಾರಿಕೆ ; ಘನತೆ ; ಗೌರವ ; ಮರ್ಯಾದೆ : ಮನುಷ್ಯನ ಹಿರಿಮೆ ದೊಡ್ಡಸ್ತಿಕೆಗಳು ತಾಯಿ ತಂದೆಗಳನ್ನೇ ಪಟ್ಟಾಗಿ ಅವಲಂಬಿಸಿರುತ್ತವೆ (ಕ್ಷಾಮತಾ. ೧): ಮಾಡಬಾರದು ಎಂದು ಯಾವಾಗ ದೊಡ್ಡವರು ಹೇಳುತ್ತಾರೋ ಹಾಗೆ ಮಾಡದಿರುವುದೂ ಒಂದು ದೊಡ್ಡಸ್ತಿಕೆ! (ಕಂಬಹು. ೬೨) ; ಇದರಿಂದ ನನ್ನ ಅವನ ದೊಡ್ಡಸ್ತಿಕೆ ಮತ್ತೂ ಬೆಳೆಯಿತು (ಶಾಲಮ. ೨೨೧) : ಒಂದು ಬಾನಿ ಹೆಂಡಕ್ಕೆ ಎರಡು ಬಾನಿ ನೀರು ಬೆರಸಿ ಸಂಪಾದನೆ ಮಾಡಿದಾರೆ ಈ ದೊಡ್ಡಸ್ತಿಕೇನ (ಮರಳಿ. ೬೩). ೨. ಠೀವಿ ; ಜಬರ್ದಸ್ತು : "ಠೀವಿ = ದೊಡ್ಡಸ್ತಿಕೆ" (ಗಂಗಾಮ. ೧೪೪) : ದೊಡ್ಡಸ್ತಿಕೆಯ ಆಶೀರ್ವಾದಗಳಿಂದ ಸಂದೇಶವನ್ನು ಮಾತ್ರ ಕಳಿಸಬೇಕು (ಹುಡ್ಗುಡು. ೧೦೨). [ ದೊಡ್ಡಸ್ತ + – ಇಕೆ ]

**ದೊಡ್ಡಸ್ತು** (ನಾ). ಹಿರಿಮೆ ; ಘನತೆ : ದೊಡ್ಡಸ್ತಿನಿಂದೊಡನೆ ಸುಪ್ರಧಾನಿ ವರೇಣ್ಯಾ ಗಡ್ಡಮಂ ಗಂಟಿಕ್ಕಿ (ಪರಬು. ೯-೨೦). [ ದೊಡ್ಡಸ್ತ + – ಉ$_{4}$ ]

**ದೊಡ್ಡಹಂಚೀಹುಲ್ಲು, ದೊಡ್ಡಅಂಚಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ದೊಡ್ಡಹಂಚೀಹುಲ್ಲು . . . ಕರೀಸಣ್ಣ ಹಂಚೀ ಹುಲ್ಲು (ವ್ಯಜಿಗ. ೯-೧೪೭). **ದೊಡ್ಡಅಂಚಿಹುಲ್ಲು** : ಬೆಟ್ಟಂಚಿ ಹುಲ್ಲು, ಭೀಮನ ಹಂಚಿ, ದೊಡ್ಡಅಂಚಿಹುಲ್ಲು, ಗುಂಡುಮುಂಚಿ ಹುಲ್ಲು, ಗಂಟುಕಾಚಿ (ವ್ಯಜಿಗ. ೭೯-೧೫೦೯). [ ದೊಡ್ಡ + ಹಂಚಿಹುಲ್ಲು ]

**ದೊಡ್ಡಹತ್ತಿ** (ನಾ). ಹತ್ತಿಯ ಗಿಡದಲ್ಲಿ ಒಂದು ಬಗೆ : (ವ್ಯಜಿಗ. ೪೦-೭೮೨). [ ದೊಡ್ಡ + ಹತ್ತಿ$_{1}$ (<ಪಟ್ಟಿ) ]

**ದೊಡ್ಡಹನಿಚೆ** (ನಾ). ಒಂದು ಬಗೆಯ ಗಿಡ : (ವ್ಯಜಿಗ. ೧೫-೨೭೫).

[ ದೊಡ್ಡ + ಹನಿಚೆ ]

**ದೊಡ್ಡಹರಳು** (ನಾ). ದೊಡ್ಡ ಗಾತ್ರದ ಹರಳು ಮತ್ತು ಅದರ ಗಿಡ: ದೊಡ್ಡಹರಳು, ಚಿಟ್ಟಹರಳು, ತುರುಕುಹರಳು, ಮರಹರಳು, ಕಾಡುಹರಳು (ವ್ಯಜಿಗ. ४೭-೯೪೩). 'ಚಿಟ್ಟುಹರಳು' ನೋಡಿ.

[ ದೊಡ್ಡ + ಹರಳು (<ಪರಲ್) ]

**ದೊಡ್ಡಹಲ್ಲಿ** (ನಾ). ಒಂದು ಬಗೆಯ ಹೂವಿನ ಗಿಡ : "ಕಂಭವಿಪುಷ್ಪ–ದೊಡ್ಡಹಲ್ಲಿ" (ಒಷಧಿ. ೩೬). [ ದೊಡ್ಡ + ಹಲ್ಲಿ$_{0}$ ]

**ದೊಡ್ಡಹಾಲುಗುಂಬಳ** (ನಾ). ಒಂದು ಬಗೆಯ ಕುಂಬಳ ಬಳ್ಳಿ ಮತ್ತು ಅದರ ಕಾಯಿ : "ನಾಡ್ಯಲಾಬೂ – ದೊಡ್ಡಹಾಲುಗುಂಬಳ" (ಒಷಧಿ. ೮೫). [ ದೊಡ್ಡ + ಹಾಲುಗುಂಬಳ (<ಪಾಲ್ಗುಂಬಳ) ]

**ದೊಡ್ಡಹಾಲ್ಮೆಕ್ಕೆ** (ನಾ). ದೊಡ್ಡದಾದ ಹಾಲುಮೆಕ್ಕೆ ಗಿಡದಲ್ಲಿ ಒಂದು ಬಗೆ : ದೊಡ್ಡಹಾಲ್ಮೆಕ್ಕೆ, ಹಾವುಮೆಕ್ಕೆಕಾಯಿ, ಇಂದ್ರಾವರುಣ (ವ್ಯಜಿಗ. ೨೨-೪೦೦). [ ದೊಡ್ಡ + ಹಾಲ್ಮೆಕ್ಕೆ ]

**ದೊಡ್ಡಹಾಳತ, ದೊಡಹಳತ** (ನಾ). ಒಂದು ದೊಡ್ಡ ಅಳತೆಯ ಪ್ರಮಾಣ : ದೊಡ್ಡಹಾಳತದ ಮಣವಿನ ತೂಕಕ್ಕೆ ಇದೇ ೪೪–೪೬ ಸೇರು ಎಂತಲೂ ನಿಬಂಧನೆ ಮಾಡಿದರು (ಚಾಮರಾ. ೧೧೯). **ದೊಡಹಳತ** : ಹೊನ್ನವರದ ಲಿಂಗಸೆಟರ ಮಗ ಸಿದಲಿಂಗಸೆಟಿ ಯಡವುರ ಸಿದಲಿಂಗೇಸ್ವರ ಸೋಮಿ ಪದಕೆ ಮಲರ ಸೆ ಹ ನ ಕಳಸ ಯಾ ನಗದ ತೂಕ ದೊಡಹಳತ ನ ೨ ತಿಮೂರು ಸೇರು (ಎಕ. XVI, ಕುಣಿಗ. ೭೮-೨ ; ?).

[ ದೊಡ್ಡ + ಹಾಳತ (<ಪಾಳತ) ]

**ದೊಡ್ಡಹಿಂಗಿನಬಳ್ಳಿ** (ನಾ). ಒಂದು ಬಗೆಯ ಬಳ್ಳಿ : (ವ್ಯಜಿಗ. ೩೮-೭೪೭).

[ ದೊಡ್ಡ + ಹಿಂಗು$_{3}$ + ಬಳ್ಳಿ ]

**ದೊಡ್ಡಹಿಂಡಿಗಿಡ** (ನಾ). ಒಂದು ಬಗೆಯ ಸಸ್ಯ : (ವ್ಯಜಿಗ. ೩-೫೦).

[ ದೊಡ್ಡ + ಹಿಂಡಿ$_{2}$ (<ಪುಂಡಿ$_{1}$) + ಗಿಡ (<ಗಿಡು) ]

**ದೊಡ್ಡಹಿಟ್ಟೊಳಕ** (ನಾ). ಒಂದು ಬಗೆಯ ಸಸ್ಯ : "ಮಹಾಪೂಲ–ದೊಡ್ಡ ಹಿಟ್ಟೊಳಕ" (ಒಷಧಿ. ೧೧೪). [ ದೊಡ್ಡ + ಹಿಟ್ಟೊಳಕ ]

**ದೊಡ್ಡಹಿಪ್ಪಲಿ, ದೊಡ್ಡತಿಪ್ಪಲಿ** (ನಾ). ಒಂದು ಬಗೆಯ ಹಿಪ್ಪಲಿ ಗಿಡ ಮತ್ತು ಅದರ ಕಾಳು ; ಬಾಲಮೆಣಸು : "ಕಪಿವಲ್ಲಿ–ದೊಡ್ಡಹಿಪ್ಪಲಿ" (ಗಂಗಾಮ. ೭೦) : ಗಜಹಿಪ್ಪಲಿ, ದೊಡ್ಡಹಿಪ್ಪಲಿ (ವ್ಯಜಿಗ. ೬೮-೧೩೪೪); ಜೀನಸುಗಳು–೧ ಅಕ್ಕಲಕಾರ . . . ೬೭ ದೊಡ್ಡಹಿಪ್ಪಲಿ (ಮುಂಬಮ್. ೦೨೫). **ದೊಡ್ಡತಿಪ್ಪಲಿ** : (ವ್ಯಜಿಗ. ೬೬-೧೬೪೨). [ ದೊಡ್ಡ + ಹಿಪ್ಪಲಿ ]

**ದೊಡ್ಡಹೀರೆ** (ನಾ). ಹೀರೆಬಳ್ಳಿಯಲ್ಲಿ ಒಂದು ವಿಧ ಮತ್ತು ಅದರ ಕಾಯಿ : "ಕೋಶಾತಕಿ–ದೊಡ್ಡಹೀರೆ" (ಒಷಧಿ. ४೦)

[ ದೊಡ್ಡ + ಹೀರೆ$_{1}$ (<ಪೀರೆ) ]

**ದೊಡ್ಡಹುಳಕ** (ನಾ). ನೀಳವಾದ ಕೊಕ್ಕಿನ, ವಕ್ರವಾಗಿ ಹಾರುವ ಒಂದು ಬಗೆಯ ಬೇಟೆಯ ಹಕ್ಕಿ ; ತೇವದ ಮರಳುಪ್ರದೇಶಗಳಲ್ಲಿ ಸೇರಿಕೊಳ್ಳುವ ಒಂದು ಬಗೆಯ ಹಕ್ಕಿ ; ಉಲ್ಲಂಗಿ : (+).

[ ದೊಡ್ಡ + ಹುಳಕ ]

**ದೊಡ್ಡಹುಳಿ** (ನಾ). ಒಂದು ಬಗೆಯ ನಿಂಬೆಯ ಗಿಡ ಮತ್ತು ಅದರ ಕಾಯಿ : ಕಾಡುನಿಂಬೆ, ದೊಡ್ಡಹುಳಿ (ವ್ಯಜಿಗ. ೧೦-೧೬೩).

[ ದೊಡ್ಡ + ಹುಳಿ$_{3}$ (<ಪುಳಿ$_{1}$) ]

**ದೊಡ್ಡಹೆಂಡತಿ** (ನಾ). ಮೊದಲನೆಯ ಹೆಂಡತಿ ; ಹಿರಿಯ ಹೆಂಡತಿ : "ಕೃತಸಾಪತ್ನಿಕಾ, ಅಧ್ಯೂಢಾ, ಅಧಿವಿನ್ನಾ–ಇ ದೊಡ್ಡಹೆಂಡತಿ, ಹಿರೀ ಹೆಂಡತಿ ಹೆಸರುಗಳು" (ಸಿದ್ಧಾಂತಿ. ೧೪೭).

[ ದೊಡ್ಡ + ಹೆಂಡತಿ (<ಪೆಂಡತಿ) ]

**ದೊಡ್ಡಹೆಮ್ಮರ** (ನಾ). ಹೆಮ್ಮರದಲ್ಲಿ ಒಂದು ಬಗೆ "ಭೂತಸಾರಃ-ದೊಡ್ಡಹೆಮ್ಮರ" (ಒಪಧಿ. ೧೧೨).

[ ದೊಡ್ಡ + ಹೆಮ್ಮರ (<ಪೇರ್ಮರ) ]

**ದೊಡ್ಡಹೊಂಗೆ** (ನಾ). ಒಂದು ಬಗೆಯ ಹೊಂಗೆ: "ಕಳಾರಾಮಃ-ದೊಡ್ಡಹೊಂಗೆ" (ಒಷಧಿ. ೨೪). [ ದೊಡ್ಡ + ಹೊಂಗೆ ]

**ದೊಡ್ಡಹೊಟ್ಟೆ** (ನಾ). ದೊಡ್ಡದಾದ ಉಬ್ಬಿದ ಹೊಟ್ಟೆ, - ಉದರ ; ಡೊಳ್ಳುಹೊಟ್ಟೆ : ಮನದೊಳಿದ್ದುದನೆಹಗೆ ಹೇಳಿದೆಯೆನುತ ಪಡದಾ ದೊಡ್ಡಪೊಟ್ಟೆಯನೆನುತ ಬಡನುಡಿಯಂ ನುಡಿವರೇ (ಬಸವು. ೫೯-೧೪) : ದೊಡ್ಡಹೊಟ್ಟೆಯುದ್ದವ ಹೆಡ್ಡನೋ (ಗಾದೆ).

**ದೊಡ್ಡಪೊಟ್ಟೆಯುವ** = ದೊಡ್ಡ ಹೊಟ್ಟೆಯನ್ನು ಉಳ್ಳವನು ; ಗಣೇಶ : "ಪೆರ್ಬೊಡೆಯ, ಪೆರ್ವೊಡೆಯ-ದೊಡ್ಡಪೊಟ್ಟೆಯುವ, ಗಣೇಶ" (ಗಂಗಾಮ. ೨೧೫). [ ದೊಡ್ಡ + ಪೊಟ್ಟೆ$_1$ (<ಪೊಟ್ಟೆ) ]

**ದೊಡ್ಡಹೊನ್ನೆ** (ನಾ). ಒಂದು ಬಗೆಯ ದೊಡ್ಡದಾದ ಹೊನ್ನೆಮರ: "ಅವಸಾಯನಿ-ದೊಡ್ಡಹೊನ್ನೆ" (ಒಷಧಿ. ೮).

[ ದೊಡ್ಡ + ಹೊನ್ನೆ (<ಪೊನ್ನೆ) ]

**ದೊಡ್ಡಹೊಲೆಗಾರ** (ನಾ). ಒಂದು ಬಗೆಯ ಸಸ್ಯ : ದೊಡ್ಡಹೊಲೆಗಾರ, ಬೆಟ್ಟಹೊಲೆಗಾರ (ವೃಜಿಗಿ. ೪೪-೮೬೮). [ ದೊಡ್ಡ + ಹೊಲೆಗಾರ$_0$ ]

**ದೊಡ್ಡಾಟ** (ನಾ). ಬಯಲಾಟದ ಒಂದು ಪ್ರಕಾರ ; ಮೇಳ: ಮೊನ್ನೆ ಒಂದು ದೊಡ್ಡಾಟವೂ ಆಯ್ತು, ಸತ್ಯಹರಿಶ್ಚಂದ್ರ ಅಂತ (ತುಂಗಭ. ೧೪).

[ ದೊಡ್ಡ + ಆಟ ]

**ದೊಡ್ಡಾಣೆ** (ನಾ). ಎಂಟನೆಯ ಒಂದು ($\frac{೧}{೮}$) ರೂಪಾಯಿಯ ಬೆಲೆಯಿದ್ದ ಒಂದು ಹಳೆಯ ಬೆಳ್ಳಿಯ ನಾಣ್ಯ : ಒಂದೆರಡು ದಿವಸಗಳ ಮೇಲೆ ಊದಿದ ಸ್ಥಳಗಳಲ್ಲೆಲ್ಲಾ ದೊಡ್ಡಾಣೆಯಷ್ಟು ಅಗಲ ನೀಲಿಬಣ್ಣದ ಗುಳ್ಳೆಗಳೇಳುತ್ತವೆ (ಗ್ರಾಮೂಶ. ೧೬೦). [ ದೊಡ್ಡ + ಆಣೆ$_5$ ]

**ದೊಡ್ಡಾನೆ** (ನಾ). ಗುಂಪಿನಲ್ಲಿಯೇ ಹಿರಿದಾದ ಆನೆ ; ಗುಂಪಿನ ಒಡೆಯನಾದ ಆನೆ; ಸಲಗ: "ಯೂಥನಾಥಃ, ಯೂಥಪಃ-೨ ಆನೆಗಳ ಹಿಂಡಿನಲ್ಲಿ ಮುಖ್ಯವಾದ ಗಜದ ಪೆಸರುಗಳು ; ಸಲಗ, ದೊಡ್ಡಾನೆ" (ಸಿದ್ಧಾಂತಿ. ೨೧೧). [ ದೊಡ್ಡ + ಆನೆ$_1$ ]

**ದೊಡ್ಡಿ$_1$** 'ತೊಟ್ಟಿ$_1$' ನೋ.

**ದೊಡ್ಡಿ$_2$** (ನಾ). ಸೂಳೆ ; ವೇಶ್ಯೆ. 'ದೊಡ್ಡಿತನ' ಪರಾ. [<ತೊಟ್ಟಿ$_3$]

**ದೊಡ್ಡಿ$_3$** (ನಾ). ಒಂದು ಬಗೆಯ ಮೂಲಿಕೆ : ಋಷಭಕ, ದೊಡ್ಡಿ, ಹಾಲದೊಡ್ಡಿ . . . . ಪ್ರಾತಃಕಾಲದಲ್ಲಿ ಗ ಳ ತೂಕವಂ ಸೇವಿಸುವುದು (ಸಕವೈ. ೨೧೫). 'ತೊಟ್ಟಿ$_4$' ಪರಾ. [ ? ]

**ದೊಡ್ಡಿಗೂಡು** (ಕ್ರಿ). ದೊಡ್ಡಿಯಲ್ಲಿ ಕೂಡಿಹಾಕು : ಆ ಮಂದೆಯನ್ನು ಅರಮನೆಯ ಅಯ್ದುನೆದು-ಎಂದರೆ, ತಳಾತಳದ ಹೆಸರ-ನೆಲವಾಳಿಗೆಯಲ್ಲಿ ದೊಡ್ಡಿಗೂಡಿರು (ಬಟ್ಟಳಿ. ೧೯೩-೭).

[ ದೊಡ್ಡಿ$_1$ (<ತೊಟ್ಟಿ$_1$) + ಕೂಡು$_1$ ]

**ದೊಡ್ಡಿಗೊಳ್** (ಕ್ರಿ). ಗುಂಪುಗೂಡಂ ; ಗುಂಪಾಗು : ತೆನೆಯ ಸಂದಿಗಳೊಳ್ ಸಂದಣಿಸಿ ನೇಲ್ವ ವೀರಭಟ ಕುಣಪಂಗಳಿಂ ಪೆಣೆದ ಪೆರ್ಮಾಟೆಯಂ ಕಱುವ ವಿಳಯಜಳಧರದೊಡ್ಡಿನಂತೆ ದೊಡ್ಡಿಗೊಂಡಿರ್ದುದು (ಅನಂಪು. ೧೧-೮೪ ವ). [ ದೊಡ್ಡಿ$_1$ (<ತೊಟ್ಟಿ$_1$) + ಕೊಳ್$_1$ ]

**ದೊಡ್ಡಿತನ** (ನಾ). ೧. ಸೂಳೆತನ ; ಸೂಳೆಗಾರಿಕೆ : ನಾನು ವೇಶ್ಯೆ ! ನಾನು ಸೂಳೆ ! ಎಂದು ಕಂಡಕಂಡವರೊಡನೆ ಸಾರಿಕೊಳ್ಳುವುದಿದೊಂದು ದೊಡ್ಡತನವೇನು . . . ಅಲ್ಲ ದೊಡ್ಡಿತನ (ಮಂತ್ರಶ. ೨೭-೨೨). ೨. ಮೋಸ ; ವಂಚನೆ : ಸಲೆ ನಂಬಿದರೊಳೆರಡೆಂಟನೆಣಿಸುವರು ಕೈವಿಡಿದು ದೊಡ್ಡಿತನ ಮಾಡಿದನ ಲೆಕ್ಕಿಸದಿಹರು (ನಿಜಶ. ೮೪). [ ದೊಡ್ಡಿ$_2$ + - ತನ ]

**ದೊಡ್ಡಿತು, ದೊಡ್ಡಿತ್ತು** (ನಾ). ೧. ಗಾತ್ರದಲ್ಲಿ [illegible] ಪಾದುದು ; ಸ್ಥೂಲವಾದುದು : "[illegible] ರೊಳ್" (ಶಬ್ದಾಗನಿ. ೧೮) : ಅಸಿದು ಬೆಳೆಯದೆ ಕೊಬ್ಬಿ ದೊಡ್ಡಿತಪ [ಪಾಠಾಂ. ಗೊಡ್ಡಿಡದ] ತೆನೆಗಳೊಳು (ಸಿದ್ಧರಾ [illegible]) : [illegible] ದೊಡ್ಡಿತು ಒಡಿದು ತೊಱೆಯಿಳಿಯೆ ಚಿತ್ರೋಲ್ಲಾಸದಿಂದೆತ್ತಿ ಹಾಯ್ಕಲ್ (ಪಾಸೋಪು. ೪-೧೦೭). ೨. ಅಗಾಧವಾದುದು ; ಗಹನವಾದುದು ; ವಂಚಿಪ್ಪುದುದಂ : ದೇವ ಚಿತ್ತೈಸೈ ಸಲೆ ನಿಜಸೇವಕರು ನಾವಿರಲು ದೊಡ್ಡಿತದಾವುದು (ತೊರವೆ. ೪-೮-೧೦); ಅದೇನು ದೊಡ್ಡಿತು ಮಾಂಧಾತ ಸುತ್ಯಾಗವ ಬೇಡ ಬಂದವಗೆ ರಾಗದಿಂದೊಡಲ ಥಿಕ್ಕನೆ ಸೀಳ್ದು ದಕ್ಷಿಣಭಾಗವ ಕೊಟ್ಟುದನಱಿಯಾ (ಮೋಹತ. ೫-೫೪). ೩. ಎತ್ತರವಾದುದು ; ದೊಡ್ಡಿತಾದ ಎಲಚದ ಮರದ ಮೇಲೆ ಅನೇಕ ಗಿಣಿಗಳಿರುವುವು (ಪಡಕಾ. ೩). ೪. ಉದ್ದವಾದುದು ; ನೀಳವಾದುದು : ಮಹಾಬಾಹೋ ಎಲ್ಲೆ ದೊಡ್ಡಿತಾದ ತೋಳುಗಳುಳ್ಳಂಥಾ ಓಗೆ ಸಂಬೋಧನೆ ಮಾಡಿದ್ದರಿಂದ (ಉತ್ತಟೀ. ೨-೩). ೫. ಗಟ್ಟಿಯಾದುದು ; ಜೋರಾದುದು : ಐದು ತಿಂಗಳ ಕೂಸಂ ಸಂಸಿನಿಯೆಂಬ ದೇವತೆ ಪಿಡಿದೊಡಾ ಕೂಸು . . . ಆಕಾಶಮಂ ನೋಡುಗುಂ ದೊಡ್ಡಿತಪ್ಪ ಧ್ವನಿಯಿಂದಳುಗುಂ (ಬಾಲಚಿ. ೧೨೫-೧೭) : ಒಡ್ಡಿದ ಭೈರವ ಬಲರಾಮನ ಪೆಟ್ಟು ದೊಡ್ಡಿತೆನುತ್ತೆ ನಿಮ್ಮರದಿ ಒಡ್ಡಿಯ ನುಡಿದು (ಮೋಹತ. ೫೯-೧೩) ; ಕೇಳಿ ಕಿಡಿಕಿಡಿವೋಗಿ ಬಾಯ್ ದೊಡ್ಡಿತೆಂದೆನ್ನನೂಳುಪೆಯ (ಚಬಪು. ೪೭-೨೯). ೬. ಹೆಚ್ಚಿನದು; ಮಿಗಿಲಾದುದು ; ಮಹತ್ತಾದುದು : ಕೊಡುವರ್ಗಾವುದು ದೊಡ್ಡಿತ್ತೆ (ಸೋಮೇಶ. ೮೪) : ವರವೊಮ್ಮದಸಂಭವವೊಂದುಳ್ಳರವನಿಗೆ ದೊರಕದ ದೊಡ್ಡಿತೊಂದುಂಟೆ (ಭರತ. ೫-೮೩) : ತುಪ್ಪ ಸಕ್ಕರೆ ಪಾಲ ಸವಿವ ಮನುಜರ ತಂದೊಬ್ಬಿಸುವುದು ದೊಡ್ಡಿತಲ್ಲ (ಕಂಸವಿ. ೧೧-೪) : ಎನ್ನೀ ಕೀರ್ತಿಯೆ ದೊಡ್ಡಿತೆಂಬ ತೆರದಿಂ . . . ಕೀರ್ತಿಯ ನಾಂತು ಕಂಗೊಳಿಸಿದರ್ (ಮೃಸೂಮ. ೬-೨೨೨). ೭. ಅಮೂಲ್ಯವಾದುದು; ಶ್ರೇಷ್ಠವಾದುದು: ವ್ಯರ್ಥವಾದುದು ಮುದ್ದುಬಿನ ಸೃಷ್ಟಿಸುವ ಸಮರ್ಥ ಪೇರ್ಗಾವನೈಶ್ವರ್ಯ ಕರ್ತಳೀತನ ರಾಣಿ ನಿಖಿಳಮೈಭೋಗವು ವ್ಯರ್ಥ ದ್ವಾರಕಿ ದೊಡ್ಡಿತಹುದೆ (ಮೋಹತ. ೨೯-೨೭). ೮. ಹೆಚ್ಚಳ ; ಹಿರಿಮೆ ; ಘನತೆ : ನಾವಿವಗೆ ಮನವೊಡ್ಡಿಬಡದೆ ಸುಖಿಯಿಸುವ ದೊಡ್ಡಿತೆಂದಿಂಗಹುದೊ ಎಂದು ಕೆಲಬರು ಗುಡ್ಡಣಕೆಯನೆಣಿಸುವರು (ನೇಮಿಸಂ. ೮-೩೭). ೯. ದೊಡ್ಡವಸ್ತು ; ಹಿರಿಯವಸ್ತು : ಪೇಕೆ ನೀನೇನು ದೊಡ್ಡಿತು ನನ್ನ ಸರಲ ಮುಯ್ಯಾತುಕೊಂಬೊಡ ರುದ್ರಗರಿದು ಮಾತುಗಾಱಿಕೆ ಬೇಡ ಒಡಿಯೆಂದು ಭಾಳದೆ ತೂತೇಳಲೆಚ್ಚು ಬೊಬ್ಬಿಱಿದ (ಮೋಹತ. ೧೨-೫೯). **ದೊಡ್ಡಿತ್ತು** : ೧. ಆ ಗ್ರಾಮಕ್ಕೊಂದು ಎಳಗನಂ ಕಳಿಪಿ ಯಥೇಷ್ಟ ಗ್ರಾಸವನಿಕ್ಕೆವುದು ಬಡವಾದಡೆಯು ದೊಡ್ಡಿತ್ತಾ [ಪಾಠಾಂ. ಡ್ಡನಾ] ದಡೆಯು ತಪ್ಪು ಸಮಾನವಾಗಿಸದಿರ್ದೊಡೆ ನಿಮ್ಮ ಗ್ರಾಮಮುಮಂ ಕಿಡಿಸುವೆಂ (ಪುಣ್ಯಾಸ್ರ. ೩-೨೭ ವ) ; ಅದಜಲ್ಲಿ ದೊಡ್ಡಿತ್ತಾದ ತಗರು ಹುಟ್ಟಿ ಮಲವುತ್ತ ಬರಲು (ಛಿರಸೂ. ೦೧೨) : ಮೆಯ್ಯು ನುಣುಪಾಗಿ ಬಟುವಾಗಿ ದೊಡ್ಡಿತ್ತಾಗಿ ತನ್ನ ಮೆಯ್ಯಿಗೆ ತಕ್ಕ ಚೆಂದವಾದ ರೂಪು ಕಾಣಿಸುವುದು (ಅಕ್ಷಟೀ. ೨೨-೧೦). ೨. ಸುವ್ರತದ ಫಲದಿನುರಗ ನರ ನಾಕಮೆಂಬ ನೆಲಕೊಡೆಯರಾಗುವರ್ ಕೈವಲ್ಯಕಾಂತೆಯೊಳಗಲಸದೇ ಕೂಡುವರಿದೇನು ದೊಡ್ಡಿತ್ತೆಸಲ್ (ಸಮ್ಯಕೌ. ೮-೭). ೩. ಎಲ್ಲರಿಗೂ ಪ್ರಾಣದಾಸೆ ದೊಡ್ಡಿತ್ತಾಗಿರುವುದರಿಂದಲೂ . . . ಬದುಕಿರುವುದು ಕಾರ್ಯವೆಂದು ನಿಶ್ಚಯಿಸಿ (ಪಡಕಾ. ೯೦). ೭. ಗ್ರಹನಿಚಯಾ ಆದಿತ್ಯಾದಿ ನವಗ್ರಹಂಗಳೂ ಉರುತತ್ತ್ವ ಶಿವಾದಿ ಪೃಥುವ್ಯಾಂತವಾದ ದೊಡ್ಡಿತ್ತಾದ ಮೂವತ್ತಾಱು ತತ್ತ್ವಂಗಳು ಶ್ರೀಗುರುವಿನ ಪಾದದ ಜಂಘೆಯಲ್ಲಿಹವು (ಅಕ್ಷತ್ರಿ. ೫ ಟೀಕು) ; ಓಂಕಾರವು ಶಿವಾತ್ಮ ಪಕಾರವು ಉರು ಪಂಚ ಪ್ರಣವ

ದೊಡ್ಡಿತ್ತಾದವ್ವೆರು ಪ್ರಣವಂಗಳು (ಅಶ್ವಶ್ರ. ೯೧ ಟೀಕು). ೧೧. ಅಗಲವಾದುದು; ವಿಶಾಲವಾದುದು: ಸಿಂಹಕಟಿತಟಮನಿಳಿಸುವ ರಿಪುತುರಂಗಕಂಠೀರವನ ಕಟಿತಟವೊಲ್ದು ನೋಡುವ ಗಾಡಿಕಾರ್ತಿಯರ ಕಣ್ಗೆ ಕಾಮು[ನ]ದ್ದಣವಂತೆ ದೊಡ್ಡಿತ್ತಾಗಿ ವಿಾಜುವುದ್ವ್ಯತ್ತತೆಯು [ನೀಟ್ಟು] ಕೊಂಡುಂತುವ್ವೃತ್ತಂಗಳಾದುವು (ಪಂಪಭಾ. ೨-೬೯ ವ): ಪುಶ್ರಿನವೋಲ್ ಕೆಟಗು ದೊಡ್ಡಿತ್ತಾಗಿ ಮೇಗಸಿದಪ್ಪ ಶರೀರರೂಪ (ತತ್ತ್ವಪ್ರ. ೨೯೭). (ಗಂ). ೧೧. ಹಿರಿದಾದ; ದೊಡ್ಡದಾದ: ತುಕಾರ ದುಕಾರಂಗಳ ಕಡೆಯಾಗಿ ಪಲವು ಗುಣವಚನಂಗಳೊಳವು; ಅವಟೊಳ್ ತುಕಾರಾಂತಕ್ಕೆ ವಿಕಲ್ಪದಿಂ ದ್ವಿತ್ವಮುಂಟು . . . ಅಗಲಿತ್ತು, ದೊಡ್ಡಿತ್ತು, ಬಲ್ಲಿತ್ತು ಎಂಬಂತೆ ನೋಡಿಕೊಳ್ವುದು (ಶಮದ. ೭೭ ಪ್ರಯೋ).

ದೊಡ್ಡಿದ = ೧. ಹಿರಿಯು; ಪೂಜ್ಯ: ಭೀಮನ ಮಚಿಯುಂ ಬಂದು ಪುಗೆ ಕೊಂದು ಕುಡೆ ನೀನಂದಿಂ ಬಟಿಕಹಪ ದೇವ ದೊಡ್ಡಿದನಾದಯ್ (ಗದಾಯು. ೭-೪೯): ನಿನ್ನನತ್ಯಾದರದಿಂ ದೇವನೆ ವಿಂಡನೆಯೆಂದೊಡೆ ದೇವಂ ನೀನೆಂತದೆಂತು ದೊಡ್ಡಿದನಪ್ಪೈ (ಧರ್ಮಾಮೃ. ೯-೦೧೭). ೨. ಶೂರ; ಪರಾಕ್ರಮಿ: ನಿಮ್ಮ ಕಣ್ಣಿಗೆ ನರನು ದೊಡ್ಡಿದನುಳಿದ [ಪಾಠಾಂ. ದೊಡ್ಡಿತು ಉಳಿದ] ವೀರರ ಕಣ್ಣ ತುಸು ಮಾತ್ರ (ಕುಮಾವ್ಯಾ. ೭-೧೧): ಏನವನು ದೊಡ್ಡಿದನು ಶರಸಂಧಾನಸಮಯಿಗಳಾವು ನವಗಾ ವಾನರವಿತ್ರತ್ವವೆಂಬುದು ಲೋಕಹಾಸ್ಯವಲೆ (ತೊರರಾ.೪-೭-೦೪).

ದೊಡ್ಡಿದುವು (ಬಹುವ) = ಗಾತ್ರದಲ್ಲಿ ಹಿರಿದಾಗಿರುವಂಥವು: ನಡೆನೋಟ್ಪೊಡಮಂತುವಿಾತು ಮೊಜಸಿಯುವು ಮೊಜು ದೊಡ್ಡಿದುವು ಮೊಜಡೆ ತೆಳ್ಪಿದುವಂಬುಜಾಕ್ಷಿಯಾ (ಪಂಪಭಾ. ೪-೭೨); ಅತಿರಥನಾತಂ ಗಡ . . . ತದ್ರಥದ ಗಾಲಿಗಳ್ದೊಡ್ಡಿದುವೇ (ಗದಾಯು. ೬-೫೫).

ದೊಡ್ಡಿಯು = ಬಲವುಳ್ಳ; ಶಕ್ತಿಯು: ಇವಂ ದೊಡ್ಡಿಯಾಳ್ಕುದುರೆಯುಂ ಕೋಟ ವಿಾಜು ಕಾದಿದಡೆ ಎನ್ನ ಸತ್ತ ಸಾವುಂ ಕಟ್ಟ ಕೇಡುಂ ನಂಬಿಯುಮಂ ನರಸಿಂಗವೊನೆಯುರುವುಂ ತಾಗುವುದು (ನಂಬಿರ. ೬-೦೭೨).

[ < ದೊಡ್ಡ ]

**ದೊಡ್ಡಿತೆ** (ನಾ). = ದೊಡ್ಡತನ ೧: ಅವಳ ದೊಡ್ಡಿತೆಯು ಸಹನಶೀಲತೆಯಲ್ಲಿಯಷ್ಟೇ ಮುಗಿಯುವುದಿಲ್ಲ (ಗೊತ್ತುಗು. ೦೩೯); ಖಾನನಿಗೆ ತಾವು ಕಂಡ ಆ ದೊರೆಯ ದೊಡ್ಡಿತೆಯನ್ನು ಬಿನ್ನವಿಸುವರು (ಕರ್ನಾಜ. ೦೪೧); ಜ್ಞಾನ ಮತ್ತು ಧೈರ್ಯ–ಇವೇ ದೊಡ್ಡಿತೆಯ ಹಾಗೂ ಒರಿಮೆಯ ಅಡಿಗಲ್ಲು (ದಾಬುಕ್ತಿ. ೦೪). [ < ದೊಡ್ಡಿತು ]

**ದೊಡ್ಡಿತ್ತು** 'ದೊಡ್ಡಿತು' ನೋ.

**ದೊಡ್ಡಿದಾರ** (ನಾ). ದೊಡ್ಡಿಯನ್ನು ನೋಡಿಕೊಳ್ಳಲೆಂದು ನಿಯುಕ್ತನಾದ ಅಧಿಕಾರಿ: ಡಿಸ್ಟ್ರಿಕ್ಟ್‌ಮ್ಯಾಜಿಸ್ಟ್ರೇಟರವರು ಪ್ರತಿಯೊಂದು ದೊಡ್ಡಿಗೂ ದೊಡ್ಡಿದಾರರುಗಳನ್ನು ಸಹಾ ನೇಮಿಸುವರು (ಗ್ರಾಮಾಕ. ೦೦೩). [ ದೊಡ್ಡಿ₁ ( < ತೊಟ್ಟಿ₁) + – ದಾರ₄ ]

**ದೊಡ್ಡಿಪತ್ರೆ** 'ದೊಡ್ಡಪತ್ರೆ' ನೋ.

**ದೊಡ್ಡಿಪ್ಪೆ** (ನಾ). ಒಂದು ಬಗೆಯ ಮರ: ಇಪ್ಪೆಯಲ್ಲಿ ಒಂದು ವಿಧ: ಇಪ್ಪೆ, ದೊಡ್ಡಿಪ್ಪೆ, ಹಿಪ್ಪೆ, ಹಾಲಿಪ್ಪೆ (ವೃಕ್ಷಜೀ. ೦೨-೨೦೪).

[ ದೊಡ್ಡ + ಇಪ್ಪೆ₁ ( < ಇರ್ಪೆ) ]

**ದೊಡ್ಡಿಮರ** (ನಾ). ಒಂದು ಬಗೆಯ ಮರ,–ವೃಕ್ಷ: ದೊಡ್ಡತೂಪ್ಪೆ ಮರ, ದೊಡ್ಡಿಮರ, ಬಿಂದಾರಿಮರ, ದಲ್ಲಿಮರ, ಬಟ್ಟಗ(ವೃಕ್ಷಜೀ. ೪೫-೮೮೫).

[ ದೊಡ್ಡಿ₃ + ಮರ₁ ]

**ದೊಡ್ಡಿಮೆ** (ನಾ). ಮರ್ಯಾದೆ; ಘನತೆ; ದೊಡ್ಡಸ್ತಿಕೆ: ವ್ಯಾಪಾರೋದ್ಯೋಗಗಳಲ್ಲಿ ವ್ಯಕ್ತಿಸ್ವಾತಂತ್ರ್ಯವಿದೆ . . . ಒಕ್ಕಲತನದಲ್ಲಿ ದುಡಿತಕ್ಕೆ ತಕ್ಕ ದೊಡ್ಡಿಮೆ ಇದೆ (ರಕ್ತಧ್ವ. ೧೧೨). [ < ದೊಡ್ಡಿತು + – ಮೆ₁ ]

**ದೊಡ್ಡಿಲಿ** (ನಾ). ದೊಡ್ಡ ಇಲಿ; ಹೆಗ್ಗಣ: "ಮೂಷೀ–ದೊಡ್ಡಿಲಿ" (ಒಷಧಿ. ೧೨೭): ಸಣ್ಣಿಲಿ, ದೊಡ್ಡಿಲಿ, ಮೂಗಿಲಿ . . . ಹುದುಗಿಲಿ, ಎಲ್ಲಾ ಬಂದುವು ಓಡೋಡಿ, ಜೋಗಿಯು ಬಾರಿಸೆ ಕಿಂದರಿಯು (ಬೊಜೋಗಿ. ೧೦-೨೫೭). [ ದೊಡ್ಡ + ಇಲಿ₁ ]

**ದೊಡ್ಡಿಲೆ, ದೊಡ್ಡಿ** (ನಾ). ಒಂದು ಬಗೆಯ ಕಾಡುನಿಂಬೆಯ ಗಿಡ ಮತ್ತು ಅದರ ಕಾಯಿ: ಮಾದಲ ನಿಂಬೆ ದೊಡ್ಡಿಲೆ ಕಂಚಿ ಕಿತ್ತಿಳೆ ಸ್ವಾದು ಖರ್ಜೂರ ದ್ರಾಕ್ಷೆಗಳು (ಲೋಹಿತ. ೨೪-೩೨); "ದದ್ದಿಲೆಹಣ್ಣು" (ಪ್ರಕೃತ). ದೊಡ್ಡಿ: (ಶಿ). [ ←ತುಳು. ದೊಡ್ಡಲೆ, ದೊಡ್ಡೆ ]

**ದೊಡ್ಡಿವೆಸರ್** (ನಾ). ದೊಡ್ಡಹೆಸರು; ಕೀರ್ತಿ: ವಾರಿಜನಾಭ ಹರಿಯುಂ ದೊಡ್ಡಿ [ಪಾಠಾಂ. ದ್ದ]ವೆಸರಂ ಪೊತ್ತಿರ್ದ ನೀಂ ಮಂತ್ರಿಯಾಗೆ (ಪಂಪಭಾ. ೯-೪೭): ಬಲದ ಕೆಲದೊಳು ವಿಾಜುವಿಾಜುವಿಾಜುಗಿ ತನ್ನ ಪಡೆದೋಗಂ ತನ್ನ ಪೆಸರಿಂದಮ ದೊಡ್ಡಿವೆಸರಾಗಿ ನೆಗಟ್ವ ಚಕ್ರಮುಂ ನೋಡೆ (ಶಾಂತಿಪು. ೪-೪೮ ವ). [ < ದೊಡ್ಡಿತು + ಪೆಸರ್ ]

**ದೊಡ್ಡಿಸು** (ಕ್ರಿ). ವಿವರವಾಗಿ ಹೇಳು; ವಿವರಿಸು: ಗಂಗಾದೇವಿಗಾ ಗೋವಿಂದನೀ ರೀತಿಯಲಿ ದೊಡ್ಡಿಸಿಯುಂದು ತನ್ನಾನಸವ ಬಹುದುಃಖವನು ಬಿಡಿಸಿದನು (ತಿಮ್ಮಆ. ೧೧-೪೭). [ ದೊಡ್ಡಿತು + – ಇಸು₃ ]

**ದೊಡ್ಡಿಸ್ತನ** 'ದೊಡ್ಡಸ್ತನ' ನೋ.

**ದೊಡ್ಡೀಚಲು** (ನಾ). ಒಂದು ಬಗೆಯ ಈಚಲುಮರ ಮತ್ತು ಅದರ ಹಣ್ಣು: "ಪಿಂಡಖರ್ಜೂರಃ–ದೊಡ್ಡೀಚಲು" (ಒಷಧಿ. ೯೮).

[ ದೊಡ್ಡ + ಈಚಲು₁ ( < ಈಂಚಿಲ್) ]

**ದೊಡ್ಡೀಳೆ** (ನಾ). ಈಳೆಯ ಜಾತಿಗೆ ಸೇರಿದ ಒಂದು ಬಗೆಯ ಮರ ಮತ್ತು ಅದರ ಹಣ್ಣು: ತಂಗಡಕೆ ಪಲಸುಗಳ್ ನಾರಂಗಂ ಕಿತ್ತಿಳೆ ನಿಂಬೆ ದೊಡ್ಡೀ[ಳೆ]ಗಳಿಂ ಸಂಗಳಿಸಿದ ಸವಿನಿಂಬೆಗಳಿಂಗಿತದಿಂ ಬೆಳೆದ ರಾಯಗಿತ್ತೀಳೆ[ಳೆ]ಗಳುಂ (ಹಾರಾಸ್ಕ. ೧-೦೪-೧೦). [ ದೊಡ್ಡ + ಈಳೆ ]

**ದೊಡ್ಡು, ದುಡ್ಡು₂, ದೊಡ್ಡೆ₁** (ನಾ). ಕಾಡುಕೋಣ; ಕಾಸರ: ಅಡ್ಡವಿಸೋಹಿದರು ಕೋಣನ ದೊಡ್ಡುಗಳ ದಂತಿಗಳ ಮರೆಗಳ ಒಡ್ಡೊಡಯದವೊಲಾ ಸುಮಿತ್ರಾಸುತನ ಸರಿಸದಲಿ (ತೊರರಾ. ೬-೩-೧೨): ಕಾಡುಕೋಣಗಳಿಗೆ 'ದೊಡ್ಡು' ಎಂದು ಪೆಸರು (ಕಾನೂರು. ೫೮); ಕಡ ಮತ್ತು ಸಾರಗದ ಹಿಂಡುಗಳೂ ದೊಡ್ಡುಗಳ ಮಂದೆಗಳೂ . . . ಅಲ್ಲಲ್ಲಿ ಅವಿಶ್ರಾಂತವಾಗಿ ಸುತ್ತಾಡುತ್ತಿದ್ದವು (ಪಂಚಪಂ. ೨). ದುಡ್ಡು₂: ಗುಡ್ಡಗಳವೆಂಬಂತೆ ರಥನಿವಹ ಕಾರ್ಮುಗಿಲಿನೊಡ್ಡಿನಂತಿಭರಾಜಿ ಹಯನಿಕರ ಕಡಲಂತೆ ದುಡ್ಡಿನಂತಹಿಪುಟ್ಟಿ ಕಾಲ್ಬಲಂ ಕೂಡಿಕಿದಕಾವ ನಾಡೀಡಂಬೊಲು (ಶಠು ೯-೨೦): ಕೋಣಕ್ಕೆ "ದುಡ್ಡು" ಎಂದು ನಮ್ಮವರು ಕರೆಯುತ್ತಾರೆ (ದಾಕಿಕ್ರ. III, ೦೭೦೯). ದೊಡ್ಡೆ₁: ಹುಲಿಯಾಗಲಿ ಕರಡಿಯಾಗಲಿ ದೊಡ್ಡೆಯಾಗಲಿ ಉರಿಯುವ ಬೆಂಕಿಗೆ ಅಂಜ ಅದರ ಬಳಿ ಸಾರುವುದಿಲ್ಲ (ಮಲೆಮ. ೨೪೯).

ದೊಡ್ಡಿನ ಮೃಗ = ಕೋಣದ ಜಾತಿಗೆ ಸೇರಿದ ಪ್ರಾಣಿ: ಪರಿಹಂಕುಂ ದೊಡ್ಡಿನ ಮೃಗ [ಪಾಠಾಂ. ದೊಡ್ಡಿಮೃಗ] ದುರುವಿಷಮುಂ ನಸ್ಯಲೇವ ನಾಂಜನದಿಂದಂ (ಖವುದ. ೧೩-೬೯). ದೊಡ್ಡಿನ ಹೋರಿ = ಹೋರಿ ಕೋಣ: ಉಡು ನವಿಲಾವೆ ಬೆಕ್ಕು ನರಿ ಲಾವುಗೆ ದೊಡ್ಡಿನ ಹೋರಿ ಹೇರಣೆಲ್ . . . ಕೊಂಡುಗುಟು ಕೂರಗೆಯೆಂಬಿವನ್ನೆದೆ . . . ಪೊತ್ತು ಬೇಡವಡೆ ಬಾದುದು (ಸೂಕ್ತಿಸು. ೬-೦೭೮). [ ತೆ ೯.೫ ತುಳು. ದೊಡ್ಡು ]

**ದೊಡ್ಡೆ₁** 'ದೊಡ್ಡು' ನೋ.

**ದೊಡ್ಡೆ₃** (ನಾ). ದಪ್ಪವಾಗಿರುವವಳು; ಸ್ಥೂಲವಾಗಿರುವವಳು: ಕಡು ನಿಡಿಯಳ್ ಕರಮೆ ಗುಜ್ಜೆ ಮೇಣ್ ಕರಮುಸಿಯಳ್ ಕಡು ದೊಡ್ಡೆಯಿನ್ಪೊಡಂ ನೋಟ್ಪೊಡೆ ಪುರುಷಾಕಾರೆಯಪ್ಪೊಡಂ ಕಪ್ಪೆಯುವಳ್ (ಲೋಕೋಪ. ೦೦-೬೦). [ ದೊಡ್ಡ + – ಎ₂ ]

**ದೊಡ್ಡೆಲಚಿ** (ನಾ). ಒಂದು ಬಗೆಯ ಎಲಚಿಮರ ಮತ್ತು ಅದರ ಹಣ್ಣು : "ರಾಜವಲ್ಲಭಃ–ಹಣ್ಣಿನ ಪಾಲೆ, ದೊಡ್ಡೆಲಚಿ" (ಒಷಧಿ. ೧೩೮). [ ದೊಡ್ಡ + ಎಲಚಿ ]

**ದೊಡ್ಡೆಲೆಭೋಗಿ** (ನಾ). ಒಂದು ಬಗೆಯ ಮರ ; ಉನ್ನಿಮರ : ಹೈಗ, ಉನ್ನಿಮರ, ಕಲ್‍ಬೋವು, ದೊಡ್ಡೆಲೆಭೋಗಿ (ಮೃಶಿಗಿ. ೪೪–೮೭೪).

[ ದೊಡ್ಡ + ಎಲೆ$_1$ + ಭೋಗಿ ]

**ದೊಡ್ಡೇಲಕ್ಕಿ, ದೊಡ್ಡಏಲಕ್ಕಿ** (ನಾ). ಒಂದು ಬಗೆಯ ಏಲಕ್ಕಿ ಗಿಡ ಮತ್ತು ಅದರ ಕಾಯಿ : "ದಿವ್ಯಗಂಧಾ–ದೊಡ್ಡೇಲಕ್ಕಿ" (ಒಷಧಿ. ೭೫). **ದೊಡ್ಡ ಏಲಕ್ಕಿ** : "ಪೃಥ್ವೀಕಾ–ಜೀರಗೆ, ದೊಡ್ಡಏಲಕ್ಕಿ, ಹಿಂಗುಪತ್ರ, ಹರೇಣುಕ" (ಒಷಧಿ. ೧೦೩). [ ದೊಡ್ಡ + ಏಲಕ್ಕಿ ]

**ದೊಡ್ಡೊಕ್ಕಲು** (ನಾ). ಹಿರಿಯ ಒಕ್ಕಲು ; ಮುಖ್ಯವಾದ ಒಕ್ಕಲು ; ಶ್ರೀಮಂತ ಒಕ್ಕಲು : ಊರಿಗೆಲ್ಲಾ ಅವರದೇ ದೊಡ್ಡೊಕ್ಕಲು (ರೂಢಿ).

[ ದೊಡ್ಡ + ಒಕ್ಕಲು$_2$ (<ಒಕ್ಕಲ್$_2$) ]

**ದೊಡ್ಡಿ** 'ದೊಡ್ಡಿಲೆ' ನೋ.

**ದೊಣೆ$_1$, ಜೊಣೆ, ಡೊಣೆ$_2$, ಡೋಣೆ$_1$, ಧೊಣೆ, ದೋಣೆ$_2$, ಧೊಣೆ** (ನಾ). ೧. ಬೆಟ್ಟದ ಮೇಲಿರುವ ಸ್ವಾಭಾವಿಕವಾದ ಹೊಂಡ,–ಕೊಳ: ಮುಗಿಲ ನೀರಂ ನಂಬಿ ದೊಣೆಯ ನೀರಂ ತುಳುಂಕುವ ಕೋಡಗವುಮಂ (ಧರ್ಮಾಮೃ. ೮–೫೧) ; ಕಾಯ್ದುರ್ಕ್ಕುವ ದೊಣೆಯುದಕ ದೊಳಿಡೆ ಚಂಚು ಬೆಂದು (ಕುಸುಮಾ. ೮–೧೨೮); ಎಲ್ಲರೂ ದೊಣೆಯೊಂದರಲ್ಲಿ ಸ್ನಾನಮಾಡಿ ಮಧ್ಯಾಹ್ನಸಮಯಕ್ಕೆ ಊರಿಗೆ ಹಿಂತಿರುಗಿದರು (ಶಾಂತಲಾ. ೩೭೮) ; ಇಲ್ಲಿ ಎಲ್ಲೋ ಒಂದು ದೊಣೆ ಇದ್ದಹಂಗಿತ್ತಪ್ಪಾ (ಮಲಮ. ೨೫೪) ; ದೊಣೆಗೆ ಹೋದರೂ ಹೊಣೆ ತಪ್ಪದು (ಗಾದೆ). ೨. (ಕಟ್ಟಿಸಿದ ಅಥವಾ ನಿರ್ಮಿಸಿದ) ಕೊಳ,– ಕಲ್ಯಾಣಿ: ಆನಂದಸಂವತ್ಸರದಲ್ಲಿ ಕಟ್ಟಿಸಿದ ದೊಣೆಯು (ಎಕ. II, ೦೭೨-೦; 1194 ?); ಹೊಸ್ತಾಗಿ ಹಂಪೆಯ ದೊಣೆಯ ತೋಡ್ಸಿ ಬರಸಿದ ಶಾಸನ (ಸೌಇಇ. IX–I– ೩೫೯-೧೨ ; 1340). ೩. ಹಳ್ಳ ; ತಗ್ಗು : "ದ್ರೋಣಿಃ, ಶೈಲಸಂಧಿಃ . . . ಈ ೨ ದೊಣೆಯ ಹೆಸರು" (ನಾಚಿರಾ. ೧೦೪) : ದನಕಟ್ಟುವ ಕೊಟ್ಟಿಗೆಯಲ್ಲಿ ದೊಡ್ಡ ದೊಡ್ಡ ದೊಣೆಗಳು ಬಿದ್ದಿವೆ (ರೂಢಿ). **ಜೊಣೆ** : ೧. ಕೆರೆ ತೊರೆ ಮಡು ಜೊಣೆ ಪರಿವಾ ನಿರ್ಝರ (ಶರಹ. ೫೯೦). **ಡೊಣೆ$_2$** : ೧. ಮುಗಿಲ ನೀರಂ ನಟ್ಟಿ ಡೊಣೆಯ ನೀರಂ ತುಳುಂಕಿದ ಕೋಡಗದಂದಂ ನಿನಗಕ್ಕುಂ (ಪಂಚತಂ. ೬೮-೮) ; ನಾವೀ ಪ್ರದೇಶದೊಳು ಕೆಱೆಯಾಗಿ ತೊಱೆಯಾಗಿ ಡೊಣೆಯಾಗಿ ವಾಪಿಕೂಪಂಗಳಾಗಿ ಈಶನಭಿಷವದಗ್ರಜಲಕೆ ಸಂದಿಪ್ಪವು (ಸಿದ್ಧರಾ. ೪–೨೩); ನೀರಡಸಿ ಬಟಲ್ದು ಬಂದು ಬೆಟ್ಟದ ಡೊಣೆಗಳೊಳ್ ಮುನ್ನ ಪೊಕ್ಕಿರ್ದ ಕಳ್ಳುಂ ಬಳೆದು ತಿಳಿದಿರ್ದೊಡದಂ ಕುಡಿದು ಸೊರ್ಕಿ (ಜೀವಸಂ. ೧೪೪–೧೯); ದೆಂಚೆ ಡೊಣೆ ದೀರ್ಘಿಕೆ ಕರ್ಮಡು ಪಳ್ಳ ಕೊಳ್ಳ ನೀರೊಱೆವ ಕೊಳಂ (ಅಟ್ಟಮ. ೦-೪೫) ; ದಿವಿಜ ಧಾರುಣಿರುಹಂಗಳ ನೆಲೆಯೊ ಕಡವರದಿರವೊ ಶೋಭನದ ಡೊ[ಪಾಠಾಂ. ದೊ]ಣೆಯೊ (ಬಸವ. ೦-೫೯). ೨. ಬಡಗಣ ಭಾಗೆಯ ಪಡುವಣ ಭಾಗದಲು ಕಟ್ಟಿಸಿದ ಡೊಣೆ (ಎಕ. XII, ತುರುಕೆ. ೩೯-೮ ; 1387) ; ಕನ್ನರಿದೇವನ ಮಲವಗಳು ಕಟ್ಟಿಸಿದ ಲಖುಮಣ್ಣಗಳ ಬಾಗಿಲು ಡೊಣೆ ಸೋಪಾನಕೆ (ಎಕ. X, ಬಾಗೇಪ. ೩೩-೮; 1406). ೩. "ಡೊಣೆ–ತಗ್ಗು" (ಜಾನಕೋ. ೭೩) ; "ಬೆಟ್ಟಗಳ ನಡುವಣ ಆಳವಾದ ಗುಂಡು ಪೊಳ್ಳು" (Punch-bowl. ಇಂಕನಿ). **ಡೋಣೆ$_1$** : ೧. ಕಾಮ ಧೇನುವಿನ ನಡುವಪೊಂದು ಕೋಣ ಕಟ್ಟಯಿದ್ದಿತ್ತು ಕೋಣನ ಗವಲು ತಾಗಿ ಕಾಮಧೇನು ಕೆಡುತ್ತದೆ ಕೋಣನ ಡೋಣೆ [ಪಾಠಾಂ. ದೊಣೆ]ಗೆ ತಳ್ಳಿ ಕಾಮಧೇನುವ ಕಾಣದಂತೆ ಮಾಡು (ಕೋಲಶಾ. ೪೨–೩೨) ; ಕೆಱೆ ಬಾವಿ ಬಗರಗೆ ಡೊಣೆ ಡೋಣೆ [ಪಾಠಾಂ. ಣೆ] ದೀರ್ಘಿಕೆಯೊಱತೆ ಕಾಲುವೆ ಬೆಂಚೆ ಪಳ್ಳ ಮೆಱೆದಿರುತಿಹವು (ಕುರಾಸಾ. ೪–೭೭) ; ಸುರಕುಜದ ತೋಪು ಸುರಧೇನುವಿನ ಹಿಂಡು ಸಿದ್ಧರಸ ಶಿವಿರ್ದ ಡೋಣಗಳಮೃತದ ತಟಾಕಗಳು (ನಂದಿಮಾ. ೧೧-೧೦). ೨. ನಾಲ್ಕನೆಯ ವಿಟ್ಟಪಯ್ಯಂಗಳ ವ × × × ಸಿನಲು ಡೋಣೆಯಿಂ ಬಡಗಲು ಶಿವಾರಾಧನ ವೃತ್ತಿಯ ಮತ್ತರು ೪ (ಕೂರ್ಗ್ತಾಶಾ. ೮–೭೪ : 1147). ೩. ಎರಡು ಕೂರಿಗೆಯ ಡೋಣೆಯ ಹೊಲವೊಂದು ಮಾತ್ರ ಉಳಿದಿದ್ದಿತು (ನಿಸರ್ಗ. ೨೮೨). 'ಡೋಣೆವಟ್ಟೆ' ಪರಾ. **ಧೊಣೆ:** ೧. "ಥುಣಾ=ಧೊಣೆ" (ಶಾಶಕ್ಕ. ೩೫). **ದೋಣೆ$_2$** : ೧. ದೋಣೆಯ ತಿಳಿನೀರ ಕುಡಿದು (ಮಹಾವಿ. ೭–೩೮); ಬೆಟ್ಟದ ಮೇಲಿನ ದೋಣೆಗಳಲ್ಲಿ ನೀರು ಬಹಳ ಗಲೀಜಾಗುವುದೆಂದು ತಿಳಿದಿದ್ದರಿಂದ ಹೀಗೆಮಾಡಬೇಕಾಯಿತು (ಚಂಗಾಳ್ವ. ೩೪೮). ೩. 'ದೋಣೆವೋಗು' ಪರಾ. ೪. ತಗ್ಗಿನ ನೆಲ ; ಹಳ್ಳವಾಗಿರುವ ಹೊಲ,– ಗದ್ದೆ : ಸರ್ವನಮಸ್ಯ ಮಾಡಿ ಬಿಟ್ಟ ಮತ್ತರು ೧೦೦ ದೋಣೆಯಿಂ [ತೆಂ]ಕ ದೇ × × × ತೋಟ ಮತ್ತ ೨೭ (ಸೌಇಇ. XX, ೨೩-೨೨: 1029); ಕೇತಯ್ಯಂ ಬಿಟ್ಟ ದೋಣೆಯ ನೆಲ ಮತ್ತ[ರು ನಾ]ಲ್ವತ್ತು (ಸೌಇಇ. XI-I, ೮೩-೨೦ : 1049) : ಶ್ರೀಸೋಮೇಶ್ವರದೇವರ್ಗ್ಗೆ ತಮ್ಮ ಪ್ರಭುತ್ವದ ದೋಣೆಯಿಂ ತೆಂಕ ಒಡ್ಡವಾಡಿಗೆಯ ಬಟ್ಟೆಯಿಂ ಪಡುವ ಬನ್ನಿಚಿನ್ನಾಮಣೆಯ ಈಪ್ಪತ್ತೆಂಟು ಗೇಣ ಕೋಲಲು ತಮ್ಮಂ[ಶ]ಕ್ಕೆ ಬಂದ ಮತ್ತರಯ್ವತ್ತೇಳು (ಸೌಇಇ. XX, ೭೯–೯೪; 1107): × × × ಪೇಸ್ವರ ದೇವರ ೩ ದೋಣೆ × ಬೆಂಣ್ಣೆ × × × ದೇವ[ರು] ನದಿಯೊಜ[ವೆ]ಯ ಮಲ್ಲಿಕಾರ್ಜುನ [ದೇವ]ರು ಗುಂಡಿಯ ಹಳ್ಳಿಯ ರಾಮನಾಥದೇವ (ಸೌಇಇ. XI-I, ೩೦-೩೩ ; ಸು. 12ನೆಯ ಶಶ). **ಧೊಣೆ** : ೫. ಬಾವಿ : ಸಾನ್ತರಸ . . . ಬಟರಿಜ್ಗೆ ಕೊಟಾರ್ ಧೊಣೆಗೂಡಲಾ ನರಡಿ ಇಟ್ಟು ಕೊಟಾರ್ (ಎಕ. VI, ಕೊಪ್ಪ. ೩೯-೪ ; ಸು. 700 ?).

ದೋಣೆಗೆರೆ = ಹೊಲ, ಗದ್ದೆಗಳನ್ನು ಉಳುವಾಗ ನೇಗಿಲಿನಿಂದ ಮಾಡುವ ಹಳ್ಳದ ಗೆರೆ ; ಸೀತೆಸಾಲು; ಉಕ್ಕೆಗೆರೆ.–ಸಾಲು : ದೋಣೆ ಗೆರೆಗಳಿಗೆ ಸರಿಯಾಗಿ ಪೈರನ್ನು ನಾಟಿ ಮಾಡುತ್ತಾ ಹೋಗುತ್ತಾರೆ (ರೂಢಿ). ದೋಣೆಸಾಲು = ದೋಣೆಗೆರೆ : ಉಳುವಾಗ ದೋಣೆಸಾಲುಗಳು ಒಂದೇ ಸಮನಾಗಿ ಮೂಡುತ್ತಾ ಹೋಗುತ್ತವೆ (ರೂಢಿ).

[ ದೇ.॥ ತೆಲು. ದೊನ./ಸಂ. ದ್ರೋಣೀ ]

**ದೊಣೆ$_2$** 'ತೊಣೆ$_2$' ನೋ.

**ದೊಣೆನಾಯಕ, ಡೊಣೆನಾಯಕ** (ನಾ). ಕೆರೆ, ಕುಂಟೆಯ ಕಾವಲುಗಾರ; ದೊಣೆಯನ್ನು ಕಾಯ್ದುಕೊಂಡಿರತಕ್ಕವನು; ದೊಣೆಯ ರಕ್ಷಕ : ಹೊಳೇ ನೀರು ಕುಡಿಯಕ್ಕೆ ದೋಣೇನಾಯಕನ ಅಪ್ಪಣೆ ಬೇಕಿಲ್ಲ (ಚಂಗಾಳ್ವ. ೩೫೩). **ಡೊಣೆನಾಯಕ** : ಹರಿಯೋ ನೀರಿಗೆ ಡೊಣೆನಾಯಕನ ಅಪ್ಪಣೆ ಯೇನು (ಹುಟ್ಟಿಹ. ೦೨೩) : ಹೊಳೆಯ ನೀರಿಗೆ ಡೊಣೆನಾಯಕನ ಅಪ್ಪಣೆಯೇ ? (ಗಾದೆ). [ ದೊಣೆ$_1$ + ನಾಯಕ ]

**ದೊಣೆವೋಗು, ಡೊಣೆವೋಗು, ಡೋಣೆವೋಗು, ದೋಣೆಯೋಗು, ದೋಣೆವೋಗು** (ಕ್ರಿ). ಡೊಗರು ಬೀಳು ; ತಗ್ಗುಬೀಳು ; ಹಳ್ಳ ವಾಗು : ಪಿಸುಬ್ಬಿ ಕಟಿಸ್ಲೊಡೆಯುಂ ಕಣೆವೋದ ಕಣಕಾಲುಂ ದೊಣೆ [ಪಾಠಾಂ. ಡೊಣೆ, ದೋಣೆ]ವೋದ ಮೇಗಾಲುಂ ಪಱಿದು ಪಾಯ್ವ ಪಂದಲೆಗಳುಂ (ಪಂರಾಮಾ. ೦೩-೫೪ ವ). **ಡೊಣೆವೋಗು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ಡೋಣೆವೋಗು** : ಕುಮತಿ ಸಿದ್ಧಾಂಜನದಿನೊಡೆದೋದು ಕಣ್ಗಳಿಂ ತಱಿದುಕೊಳೆ ಡೋಣೆವೋಗಿರ್ದ ಪೆರ್ಬುಣ್ಗಳಿಂ (ಕಾದಂಬ. ೨೭೧ ರಗಳೆ). **ದೋಣೆಯೋಗು** : ೦೦ತು ಚಕ್ರಹತಿಯಿಂ ದೋಣೆಯೋದ [ಪಾಠಾಂ. ವೋದ] ರಣ ಕ್ಷೋಣಿಯಿಂ . . . ರಥಿಗಳಟ್ಟೆಗಳೆಂಬ ಬೆಟ್ಟುಗಳಿಂ ಪೂಟ್ಟು ಸಮತಳಂ ಮಾಡಿ

(ಪಾರ್ಶ್ವಪು. ೩-೧೨೧ ವ). **ದೋಣಿವೋಗು :** ಒಡೆದಿರ್ಬಗಿಯಾಗಿ ಪೋಟ್ದು ನೀರೇಱುವ ನಾಳಿಪುಗೞ್ದಡೆದು ಸೌಳಿಸ ಸೀಳ್ದುದು ದೋಣಿವೋಪಿನಂ [ಪಾಠಾಂ. ದೋಳಿವೋಪಿನಂ] (ಸುಕುಮಾ. ೫-೧೬) ; ತನು ದೋಣಿವೋದುವು ನೆತ್ತರ್ ಕೊಡನೆತ್ತಿ ಸುರಿವವೊಲ್ ಸುರಿದು (ನೇಮಿಪು. ೧೧-೧೭೫).

[ ದೊಣ₁ + ಪೋಗು₁ ]

**ದೊಣ್ಣೆ₁, ಡೊಣ್ಣೆ₁** (ನಾ). ೧. ದಪ್ಪವಾದ ಕೋಲು; ದಂಡ : ಲಗುಡ : ಕೈಯಲ್ಲಿ ದೊಣ್ಣೆ [ಪಾಠಾಂ. ದಾಣೆ] ಮನದಲ್ಲಿ ಕ್ರೋಧ ವಚನದಲ್ಲಿ ಕಿಂಕಿಲ ಲಿಂಗದ ವಾರ್ತೆ ನಿನಗೇಕೆ (ಅವಚ. ೨೭೫-೧೨೬೩) : ಮಂದರಗಿರಿಯಂತೆತ್ತುವಡೆ ನುಗ್ಗೆಯ ದೊಣ್ಣೆಯಿಂದ ಏಳೆಂಟವಡೇಳುವುದೆ (ಮೋಹತ. ೨೯-೩೪) ; ನೂತನ ಕತ್ತಿ ಕಠಾರಿ ದೊಣ್ಣೆಯು ಸಾಧಕೋತ್ತಮ ರಾಜಕುವರರು (ಕಂನವಿ. ೭-೧೮) ; ನಾನೆಷ್ಟು ಮುದುಕನಾದೊಡುಮೆನಗೆ ಬ್ರಹ್ಮಾಂಡತಾನದೊಳಗೆಲ್ಲೆಲ್ಲಿಯುಂ ತಿರುಗುವದು ತಪ್ಪದೇನಂ ಮಾಡಲು ಶಕ್ತಿ ಕುಂದಿರ್ಪುದೆಂದೂರಿಕೊಂಡಿರ್ಪ ದೊಣ್ಣೆಯಿಂದು (ಅದ್ಭುವಿ. ೧-೮೫) : ಈ ಡಕಾಯಿತರ ಕಥೆಗೆ ಸೂಕ್ತವಾಗಿರುವಂತೆ ಇದರಲ್ಲಿ "ಆ ಕಾಲದ ಸೀನಲ್ ಕೋಡಾಗಿದ್ದ" ದೊಣ್ಣೆಯು ಸ್ತೋತ್ರ ಬರುತ್ತದೆ (ಬಂಕಿಮ. ೨೯೮) ; ಕುಂಬಾರನಿಗೆ ವರುಷ, ದೊಣ್ಣೆಗೆ ನಿಮಿಷ (ಗಾದೆ) : ಕಂಕುಳಲ್ಲಿ ದೊಣ್ಣೆ ಕೈಯಲ್ಲಿ ಶರಣಾರ್ಥಿ (ಗಾದೆ). (ಗ್ರಾ). ೨. ದಪ್ಪವಾದ; ದೊಡ್ಡದಾದ. 'ದೊಣ್ಣೆಮುಳ್ಳು' ಪರಾ. **ಡೊಣ್ಣೆ₁ :** ೧. ಗಿಡುಗನ ಉಡು ನುಂಗಿ ಹೊಡೆವವನ ದಡಿ ನುಂಗಿತ್ತು . . . ಗಿಡುಗನ ಉಡುವ ಹೊಡೆವವನ ಡೊಣ್ಣೆಯು ಬಾಯಿಲ್ಲದ ಇರುಪೆ ನುಂಗಿತ್ತ ಕಂಡೆ (ಅಡಿಮಾ. ೧೪೭-೧೬೦) : ಡೊಣ್ಣೆಯೊಳು ಚಚ್ಚಿ ಕೆಲವು ಮಿಗಗಳ ಕೊಂದರು (ನೇಮಿಸಂ. ೨-೫೧) ; ಅಣ್ಣತಮ್ಮಂದಿರಿನ್ನು ಜಗದೊಳಿದ್ದವರೆಲ್ಲ ಡೊ[ಪಾಠಾಂ. ದೊ]ಣ್ಣೆಯೊಳ್ಪಡಿದಾಡದಿಹರೆ (ಭರತ. ೪೮-೫೮) : ಡೊಣ್ಣೆಗಳನ್ನು ಹಿಡುಕೊಂಡು ಬಂದು ಆ ಮೃಗವನ್ನು . . . ಕೊಂದುಬಿಟ್ಟರು (ಮುಂಬಯಿ. ೪-೪೨). ೨. 'ಡೊಣ್ಣೆಮುಳ್ಳು' ಪರಾ. ೩. ಟೊಣಪ : (ಕೆ)

**ದೊಣ್ಣೆ ಭಾಗವತ** = ಸೋಮಾರಿ ; ಲವಲವಿಕೆಯಿಲ್ಲದವನು ; ಕೂತ ಕಡೆಯೇ ಕೂತಿರುವವನು : ಹೊತ್ತಿಗೆ ಮುಂಚೆ ಏಳದೆ ದೊಣ್ಣೆ ಭಾಗವತನಂತೆ ಬಿದ್ದು ಕೊಂಡಿರುತ್ತಾನೆ (ರೂಢಿ).

[ ದೇ.₅ ತುಳು. ದೊಣೆಲ್, ಡೊಣ್ಣೆ ; ಕೊಡ. ದೊಣ್ಣೆ; ಕೋಲಾ. ದೊಣ್ ]

**ದೊಣ್ಣೆ₂** 'ತೊಂಡೆ₃' ನೋ.

**ದೊಣ್ಣೆಕಾಟ** 'ತೊಂಡೆಕೇತ' ನೋ.

**ದೊಣ್ಣೆಗ, ಡೊಣಗ, ಡೊಣ್ಣೆಗ** (ನಾ). ೧. ಟೊಣಪ; ದಡಿಗ : ಶಿವಕಥಾಮೃತರಸವ ದೊ[ಪಾಠಾಂ. ಡೊ]ಣ್ಣೆಗರ್ ಕಪಟಾಂಧನರರಱಿವರೇ ಪರಮಸತ್ಯವಿಗಳಱಿವಂದದಿ (ರಾಘವ. ೦-೧೯). **ಡೊಣಗ :** ೧. ಈ ಡೊಣಗಕ್ಷತ್ರಿಯಾಧಮನು ಅವರೆಲ್ಲರನ್ನು ಮೂರ್ಖರಲ್ಲಿ ಎಣಿಸಿ, ನಮ್ಮನ್ನು ಶಿಕ್ಷಿಸಬಂದಿರುವನಲ್ಲ (ಧಾಮ್ಯಕ. ೨೦೯). ೨. ಪುರುಷನ ಜನನೇಂದ್ರಿಯಂ : ರಣದೊಳು ಜಯವಧೂಟಿಯು ಮುಂದೆ ನಿನ್ನಯ ಡೊಣಗನ ಬಟ್ಟುಕೊಂಡಿರಲು ಅಣಕವಾಡುವರಪ್ಸರಗಣಕೆಯ ರೆಲೆ ರಣಭಂಡ ಹೋಗೆಂದು ನುಡಿದ (ಮೋಹತ. ೩೯-೪). **ಡೊಣ್ಣೆಗ :** ೧. ಮೇಲಿನ 'ದೊಣ್ಣೆಗ' ಉಲ್ಲೇಖಕ್ಕೆ ಕೊಟ್ಟಿರುವ ಪ್ರಯೋಗದ ಪಾಠಾಂತರವನ್ನು ನೋಡಿ. [ ದೊಣ್ಣೆ₁ + -ಗ₃ ]

**ದೊಣ್ಣೆಮುಳ್ಳು, ಡೊಣ್ಣೆಮುಳ್ಳು** (ನಾ). ದಪ್ಪವಾದ ಮುಳ್ಳು ; ದೊಡ್ಡ ಮುಳ್ಳು : (ಕ). **ಡೊಣ್ಣೆಮುಳ್ಳು :** ಎಣ್ಣೆ ಬಲು ಕಾಸಿ ಕಣ್ಣೊಳಗೆ ಸುರಿದಂತೆ ಡೊಣ್ಣೆಮುಳ್ಳುಗಳು ನಟ್ಟಂತೆ (ಕನ್ನಜಾ. ೨೩೯).

[ ದೊಣ್ಣೆ₁ + ಮುಳ್ಳು (<ಮುಳ್) ]

**ದೊಣ್ಣೆಮೂಗು, ಡೊಣ್ಣೆಮೂಗು** (ನಾ). ದಪ್ಪವಾದ ಮೂಗು : ಅವಳದು ದೊಣ್ಣೆಮೂಗು, ಲಕ್ಷಣವಾಗಿಲ್ಲ (ರೂಢಿ). **ಡೊಣ್ಣೆಮೂಗು :** ಗುಳ್ಳಗಣ್ಣು ಮತ್ತು ಡೊಣ್ಣೆಮೂಗು ಇರುವವಳೇನು ? (ಮೋಹಿನೀ. ೨೮).

[ ದೊಣ್ಣೆ₁ + ಮೂಗು₁ ]

**ದೊಣ್ಣೆಮೆಣಸಿನಕಾಯಿ, ಡೊಣ್ಣೆಮೆಣಸಿನಕಾಯಿ** (ನಾ). ಹೆಚ್ಚು ಖಾರವಿಲ್ಲದಿರುವ, ದಪ್ಪವಾಗಿಯೂ ದುಂಡಗೂ ಇರುವ ಒಂದು ಬಗೆಯ ಮೆಣಸಿನಕಾಯಿ ; ದಪ್ಪಮೆಣಸಿನಕಾಯಿ ; P ರುಚಿಯಾಗಿರುವುದರಿಂದ ಹೆಚ್ಚಾಗಿ ಇದನ್ನು ತರಕಾರಿಯಾಗಿ ಉಪಯೋಗಿಸುತ್ತಾರೆ : ದೊಣ್ಣೆಮೆಣಸಿನಕಾಯಿಯು ಬೋಂಡ ಬಹಳ ರುಚಿಯಾಗಿರುತ್ತದೆ (ರೂಢಿ). **ಡೊಣ್ಣೆಮೆಣಸಿನಕಾಯಿ :** ಮೆಣಸಿನಕಾಯಿ ಡೊಣ್ಣೆಮೆಣಸಿನಕಾಯಿ ಶಾವಿ ಹುಣಸೆಯಕಾಯಿ ಹುಳಿವಲ್ಕೆ ದಾಸೋಹಕೆ ಹಣ್ಣುಗಳ ತಂದಿಹರು ತರತರದ (ಸಿದ್ಧಪು. ೧೬-೪೮) ; ನಾನೇನು ನಿಮ್ಮ ಕೈತೋಟದಲ್ಲಿ ಬೆಳೆದ ಬದನೆಕಾಯಿಯೇ, ಚಳ್ಳವರಿಯೇ, ಡೊಣ್ಣೆಮೆಣಸಿನಕಾಯಿಯೇ (ಇಪ್ಪತ. ೨೧೫). [ ದೊಣ್ಣೆ₁ + ಮೆಣಸಿನಕಾಯಿ ]

**ದೊದಿಪಂದಿಗಲಿ** (ನಾ). ಒಬ್ಬಾತನ ಹೆಸರು : ಪಟ್ಟಬ್ಗಟ್ಟದ ಮೂರನೇ ವರುಷದನ್ದು ದಾವರಬ್ಬದ ದೊದಿಪನ್ದಿಗಲಿಯು ಕಲ್ಲೂರುಂ ಕಬೂರು ಪೊಳನಿಕೆ ಕರ್ಪೂರ . . . ತುಱುವನಿಕ್ಕಿಸಿ ಮಗುಚ್ದು ಬರುತಿಟ್ಟೊಡ (ಎಕ. XII, ತಿಪಟೂ. ೧೦-೪ ; ಸು. 930 ?). [ ? ]

**ದೊದ್ದಿ** (ನಾ). ಒಂದು ಬಗೆಯ ಗಿಡ : "ಶಂ(ಕ)ಖಿಕರ್ಣಃ-ದೊದ್ದಿ, ಕತ್ತ" (ಓಷಧಿ. ೧೬೦). [ ? ]

**ದೊದ್ದೆ₁, ದೊದ್ದೆಯ** (ನಾ). ೧. ಗುಂಪು; ಸಮೂಹ : ಎನಿತು ದೇವರ ದೊದ್ದೆ ಹಿಂಡುಗೊಳ್ಳದು ನೆನೆಯೆ (ರುದ್ರರ. ದೇ. ೨೦೭-೦೪) : ಎತ್ತ ನೈರುತಿಗೀರುತಿಗಳಿವರೆತ್ತ ಜಲಧಿಪ ಗಂಧಿಪಂ ಘಡಯೆತ್ತ ಪವನಂಗಿವನ ದೊದ್ದೆಗೆ ಪೊದ್ದಲೇನಲ್ಲಿ (ಸಾನಂದ. ೯-೧೫) : ದೊದ್ದೆ ತಗೆಯಲಿ ಪಾರ್ಥ ಪವನಜರಿದ್ದರಾದರೆ ಬರಲಿ ಸಮರವ ಹೊದ್ದಲಾಪರೆ ಹೊಗಲಿ ಹರಿ ತೋಱಲಿ ಸಹಾಯತೆಯ (ಕುಮಾ ಭೀ. ೮-೨೧) : ಎದ್ದಾ ನೃಪಂ . . . ನಿರ್ಮಲತಪಸ್ವಿಗಳ ನಿಶ್ಚಲಹೃದಯ ಮಧ್ಯಪಂಕೇಜಾತದ ಗದ್ದುಗೆಯೊಳೆಸೆವ ಚಿದ್ರೂಪನಂ ಜಗವಱಿಯೆ ದೊದ್ದೆಯೊಳ್ಕೂಡಿ ತೇರ್ಗುದುರೆಯುಂ ಪೊಡೆವುದಂ ಪೊದ್ದಿದ ಪಾರ್ಥನಾರಿದರೊಳೆಸಲರ್ಜುನಂ ಬಂದಾತನಂ ಕಂಡನು (ಜೈಮಿಭಾ. ೫-೯). ೨. ಗದ್ದಲ; ದೊಂಬಿ; ಗಲಭೆ ; ಗೊಂದಲ : ನೆಱೆ ಕೂಗುವ ಕೋಳರ್ವಕ್ಕಿಯ ದೊದ್ದೆ [ಪಾಠಾಂ. ಡ್ಡಿ]ಯ ಪಱಿಯೊಪ್ಪ ಮಱಿದುಂಬಿಗಳ ಗಱಿಯ ಝುಂಕಾರ ಸುಸ್ವರ ಪೂರಿತ ಮಹಪುರುಮೊಗಳಱಿಚಿದ ವಾಗ (ಮೋಹತ. ೭-೦೭). ೩. ಸೈನ್ಯ; ಪಡೆ ನೆರೆದ ದೊದ್ದೆಯನೊರಸಬಹುದೇನಿದು . . . ಗಹನವ ನಿನ್ನ ವೀರಂಗೆ (ಕುಮಾ ಭೀ. ೧-೬) : ಧಾತುಗೆಟ್ಟುದು ದೊದ್ದೆಯಿಂದೇ ಭೂತಳಾಧಿಪ ಬಗೆಯದಿರು (ಕುಮಾ ದ್ರೋ. ೧೬-೧೩) : ತವರು ದೊದ್ದೆಯ ಹೊಗಿಸಬೇಡು ಳಿದಪರನೆಂದೊಳಹೊಗುತ ನೇಮವನವಸರದ ಸೇವಕರಿಗಿತ್ತು (ತೊರರಾ. ೨-೨-೨೫) : ಗದ್ದೆಯ ಗೊರವನೊಳ್ ಕಡಿದಾಡಿ ಪೊಗರುವೆತ್ತಿದ್ದ ನೀ ರಣರಂಗದೊಳಗೆ ಬಿದ್ದೆಯ ನನ್ನ ಬಾಧೆಗೆ ಕೃಷ್ಣ ಕರೆ ನಿನ್ನ ದೊದ್ದೆಯ ನಿಲಲೊಬ್ಬಗರಿದು (ಮೋಹತ. ೪೦-೧೮) : ಇಂತು ದೊದ್ದೆಯ ಹೊಯ್ಲಿನಿಂ ಕ್ಷಿತಿಯಂತರದಿ ಮಡುಗಟ್ಟ ನೆತ್ತರ ಸಂತತಂ ಪರಿಯಲ್ಕೆ (ಅಪಾರವಿ. ೭-೭೯). **ದೊದ್ದೆಯ :** ೧. ಗದ್ದುದೇ ರಣವೆಲಪೊ ದಿವಿಜರ ದೊದ್ದೆಯದ ಸೂಳೆಯರ ಚೌರಿಗೆ ಬಿದ್ದಿನರ ವೀಳಯವ ಬದಗರು ಭಟರ ಮೋಡಿಯಲಿ (ಕುಮಾ ಅ. ೧೯-೨೫).

**ದೊದ್ದೆ₂** (ನಾ). ಉಗ್ಗು ; ತೊದಲುಮಾತು : (ಕ).

[ ದೇ.₅ ತುಳು. ದೊದ್ದೆ, ಗೊದ್ದೆ ]

**ದೊಡ್ಡೆಕಾಱ** (ನಾ). ಕೋಲಾಹಲವನ್ನುಂಟುಮಾಡುವವನು ; ಗೊಂದಲವನ್ನುಂಟುಮಾಡುವವನು ; ತೊಂದರೆಯನ್ನುಂಟುಮಾಡುವವನು: ಗುದ್ದುಗಳ ಮಳೆಗಱೆಯೆ ಕೌರವ ದೊಡ್ಡೆಕಾಱನು ಕಾಣಿಸದನಾ ಹೊಡ್ಡಿಸಿದ ಹೊಲವತ್ತ ಜುತ್ತಿಯನುಂಡು ನಿಂದಿದನ (ಸಂಭವ. ೨೮-೭೦).

[ ದೊಡ್ಡೆ$_1$ + – ಕಾಱ ]

**ದೊಡ್ಡೆಗ** (ನಾ). ೧. ಸೈನಿಕ: ಇದ್ದರಜುಪತ್ತಾಱುಕೋಟಿಯು ದೊಡ್ಡೆಗರು ಮುನ್ನಮೃತಮಥನದಲ್ಲಿಪ್ಪವರು ಮತ್ತಲ್ಲಿ ದೇವಾಸುರರ ಕದನದಲಿ (ಸೌಭರ. ೮-೧೦೫): ಎಲೆಲೆ ದೊಡ್ಡೆಗರೇಕೆ ಕೊಬ್ಬಿದರಳವನಱಿಯದೆ ನುಗ್ಗು ಮಂಱಿದರೆ ದಳದ ದೊರೆಗದು ಭಂಗವೇ ಬಾಹಿರನ ಹೊಯ್ಕೆನುತ (ಕುಮಾದ್ರೋ. ೧೭-೨೯) ; ಅದ್ದಲಿಸಿದುದು ತಲೆ ರಘೂತ್ತಮನಿದ್ದ ಠಾವನು ಹೇಳೆನುತ ಕಪಿ ದೊಡ್ಡಗರನಱೆಯಟ್ಟಿ ಕೊಲುತಿಟ್ಟಣಿಸಿತಿದಿರಿನಲಿ (ತೊರರಾ. ೬-೨೮-೬೦) ; ದೊಡ್ಡೆಗರೇಕೆ ಹೊಕ್ಕರು ಕೊಲ್ಲುಕೊಲ್ಲೆಂದು ಪೆದ್ದೊರೆ ವೈತ್ತರೆಯ್ದುವರು (ಮೋಹತ. ೩೫-೧೮) ; ತುಳುನಾಡಿನರಸು ದೊಡ್ಡೆಗರ ತುಳಿಸುತಯ್ದು ತುಳಿಲುಗೈದನು ಚಕ್ರಧರಗೆ (ಭರತ. ೨೨-೫೪) ; ದಾನವರ ಜಲದ ನೆರೆದ ದೊಡ್ಡೆಗರಾನಲರಿಯದೋಡದರ್ ಕಂಡು ದುರುಳಬಲ ಶುಂಭ ಧೂಮ್ರಾಕ್ಷವೃತ್ರಾದಿಗಳ್ ಕೈಕೊಂಡರಾಹವವನು (ಜಬಪು. ೨೬-೨೨). ೨. ಸಾಮಾನ್ಯಜನ ; ನಾಡಾಡಿ : ದೊಡ್ಡೆಗರು ರಕ್ಕಸನ ಕಾಣುತ ಕದ್ದು ಹಾಯ್ದರು ಜನಕ ಚಿಂತಯಲಿದ್ದನವ ನಡೆತಂದನುಗ್ಗಡಣೆಯ ನಿನಾದದಲಿ (ತೊರರಾ. ೧-೧೫-೧೧) ; ಮುದ್ದಿಸುತಿಹರು ಮಕ್ಕಳನವು ತೊಡೆಯ ಮೇಲಿದ್ದಂತೆ ಮಲವ ಬಿಡುವುವು ಎದ್ದು ವಸ್ತ್ರವ ಹಾಕಿ ಹೇಸುತಿಹರು ಛೀ ಛೀ ದೊಡ್ಡೆಗರೆನೆ ನಕ್ಕರವರು (ಭರತ. ೬೫-೩೦): ಮದ್ದಳೆಯ ಗತಿಗೆ ಜಘನಗಳೆದ್ದಾಡಲು ನಗುತ ಕಂಡು ಲಾಲಿಪರಲ್ಲದೆ ಪದ್ಯ ಪದ ಕಾವ್ಯದರ್ಥವ ದೊಡ್ಡೆಗರೇಂ ಬಲ್ಲರೆಂದ ಚೂಡಾರತ್ನ (ನೀತಿಸಾ. ೬೩). [ ದೊಡ್ಡೆ$_1$ + –ಗ$_2$ ]

**ದೊಡ್ಡೆಗವಿಸು** (ಕ್ರಿ). ಗುಂಪಾಗಿ ಮುತ್ತುವಂತೆ ಮಾಡು ; ಆಕ್ರಮಣ ಮಾಡಿಸು : ಎದ್ದು ತಾನೈತಂದು ಸೇನೆಯ ದೊಡ್ಡೆಗವಿಸಿದ ಮುನಿವ ರಾಶ್ರಮಕಿದ್ದು ಗೃಹಮಂಡಲವ ಕೊಂಡರು ಸೂಱೆಗರಂ ನೃಪನ (ಸಂಭವ. ೨೬-೨೦). [ ದೊಡ್ಡೆ$_1$ + ಕವಿಸು ]

**ದೊಡ್ಡೆಗೂಳು** (ನಾ). ರಾಶಿಗಟ್ಟಲೆಯ ಕೂಳಂ,–ಅನ್ನ: ದೊಡ್ಡೆಗೂಳಿನ ಮೈಸಿರಿಯ ಬಲು ಬಿದ್ದನಿಕ್ಕುವ ಭೂತ ಪವಮಾನಜನ ಕಿಬ್ಬರಿಯ ಗುದ್ದಿದರೆ ಕಲಿಭೀಮನದಕುಬ್ಬೆದ್ದು ಗೋಣನು ತಿರುಹಿ ಬಸುಱೊಳಗದ್ದಯಿಸಿ ಯರೆದರೆದು ಕಾಲಲಿ ತಿಕ್ಕಿದನು ಭೀಮ (ಕುಮಾವಿ. ೬೧೫. ೪-೬೦).

[ ದೊಡ್ಡೆ$_1$ + ಕೂಳ್$_2$ (<ಕೂಟ್$_1$) ]

**ದೊಡ್ಡೆಯು** 'ದೊಡ್ಡೆ'$_1$ ನೋ.

**ದೊಡ್ಡೆವೋಗು** (ಕ್ರಿ). ಗಲಭೆಯಾಗು ; ಕೋಲಾಹಲವುಂಟಾಗು : ಹೊದ್ದದೊಬ್ಬೊಬ್ಬರು ಕಲಹವಾಗೆದ್ದು ತಾವಿಱಿದಾಡಿದರು ಪುರಿ ದೊಡ್ಡೆ ವೋದುದು ಹುಟ್ಟಿದುದು ವಿಪರೀತವದಱೊಳಗೆ (ಬಸವು. ೬೦-೩೭).

[ ದೊಡ್ಡೆ$_1$ + ಪೋಗು$_1$ ]

**ದೊಣವುರ** (ನಾ). ಒಂದು ಊರಿನ ಹೆಸರು : ಸೂರ್ಯಡಿ ಚೋಟಂ ನವಲಖ(ಖ್ಖ)ಬಲಂಬೆರಸು ಬಂದು ದೊಣವುರದೊಳ್ ಬಿಟ್ಟಿಟ್ಟು ದೇಸ(ಶ)ವೆಲ್ಲವಂ ಸೂಱೆಗೊಣ್ಡು (ಎಇ. XVI, ೭೪-೨ : 1007).

[ P ಇದು 'ದೋಣವುರ' ಅಥವಾ 'ದ್ರೋಣಪುರ' ಎಂಬುದರ ಅಪಲಿಖಿತ ವಿರಬಹುದೇ ? ]

**ದೊಣ್ಣಮಾರ** (ನಾ). ಒಬ್ಬಾತನ ಹೆಸರು : ಶ್ರೀರಾಮರಾ ರಾಮುಡಿನಾಱು ಮೂನೂಱಱ ನಾಣ್ಣರಸಾ ಆಳೆ ಅವರ ಮಗನ್ದೊಣ್ಣಮಾರನ್ ಚೋಡದ ನಟ್ಟಯನ್ನೊಳ್ಪಟ್ಟು (ಎಕ. X, ಗೋರೀಬಿ. ೭೭-೩ : ಸು. 750).

[ ದೊಣ್ಣ? + ಮಾರ ]

**ದೊಣ್ಣೆ** (ನಾ). [illegible] ಅಥವಾ [illegible] ಬಟ್ಟಲು : ಎಲೆಬಟ್ಟಲು : [illegible] (ಬಸವು. ೧೮-೨೯) ; ದೊಣ್ಣೆಗಳ [illegible] ಮಾಡಿದಾ ಚೌಕದೆಡೆಗಳ ಮುಂದೆ . . . ಕಾಳ್ಗಿರ್ದು (ಸಮ್ಯಕ್ತ್ವ. ೭-೨೩). [illegible] ತುಪ್ಪಮಂ ಪತ್ತಿದಂದದಿ ತೊಡೆದು [illegible] (ಸೂಪಶಾ. ೭-೭). [illegible] ಕಾಸಿಕೊ ದೊಣ್ಣೆಯೊಳಗೆ ತುಪ್ಪ ಬಡಿಸಿಕೊ (ಪುರಂದ. ೩-೧೮೭-೭) : ನಳಿನದಳದ ದೊಣ್ಣೆಯೊಳು ಶಾಂತೋದಕವ ಮೊಗೆದು ಪಾನಂಗೈಸಿ (ನವಮೋ. ೭-೬೦) : ಆಡಕೆಯ ಹಾಳೆಗಳಿಂದ ಐದಾರು ದೊಡ್ಡದೊಡ್ಡ ದೊಣ್ಣೆಗಳನ್ನು ಹೊಲಿದರು (ಕಳಹು. ೬೫).

[ ದೇ.೫ ತಮಿ. ತೊನ್ನೈ ; ಮಲ. ದೊನ್ನ ; ತುಳು. ತೆಲು. ದೊನ್ನೆ; ಕುಇ. ಡೊನೊ ; ಕುವಿ. ದುನ್ನೋ ]

**ದೊಪ್ಪನೆ** (ಅ). ದೊಪ್ಪೆಂದು ಶಬ್ದವಾಗುವ ಹಾಗೆ: ರಂಗಮಂಟಪದೊಳು ದೊಪ್ಪನೆ ಬಿದ್ದು (ಬಸರ. ೨-೫೦) ; ದೊ [ಪಾಠಾಂ. ತೊ]ಪ್ಪನೆ ಕೆಡೆಗು ದನಿಗೊಟ್ಟು ಕರೆದು ಕರಂ ಮುಗಿದು ಪೊಡವಟ್ಟು ಗಿಣ್ಣಲನಂತು ಸೋಕಿ ಸುಮತ್ತೆ ಮುಂದಿದಿಗು (ಬಸವು. ೧೪-೧೮) ; ತನ್ನ ಬಾಯಂ ಪೊಯ್ದುಕೊಳುತಂ ತನ್ನ ಶೋಕಾಕ್ರಾಂತದಿಂದಂ ತನ್ನ ತಾ ಮಱೆದಿಂತು ದೊ[ಪಾಠಾಂ. ಧೊ]ಪ್ಪನೆ ಕೆಡೆದು ನೆಲದಲ್ಲಿ (ಬಸವು. ೪೯-೭) . ನೆಲಕೆ ದೊಪ್ಪನೆ ಹಾಯ್ದುಕೊಂಡನು (ಕುಮಾಕ. ೧೫-೨೭): ದೊಪ್ಪನೆ ಎಚ್ಚರ ತಪ್ಪಿ ಬಿದ್ದಳು (ಬಂಕಿಮ. ೧೮೧).

**ದೊಪ್ಪದೊಪ್ಪನೆ, ದೊಪ್ಪುದೊಪ್ಪನೆ** (ದ್ವಿರುಕ್ತಿ): ದೊಪ್ಪದೊ [ಪಾಠಾಂ. ತೊಪ್ಪತೊ]ಪ್ಪನೆ ಬಿರಿಯ ಕಲ್ಲೊಳು ತಪ್ಪಲಿಪುತಂ ಸೊಂಪುತಂ ಪರಿತಪ್ಪ ಕೆಲವಾಡುಗಳನು . . . ಪೊಡೆದು (ಬಸವು. ೨೦-೧೪) : ಶೂಲೆ ಬಾಧಿಸುತಿಪ್ಪ ಸಂಕಟಕಾಲದಿಳೆಯೊಳು ದೊಪ್ಪದೊ[ಪಾಠಾಂ. ತೊಪ್ಪತೊ]ಪ್ಪನೆ ಕೆಡೆದು ಹೊರಳುತ್ತ ಮಿಗೆ ನರಳುತಿರಲು (ಬಸವು. ೪೯-೨೬): ದೊಪ್ಪುದೊಪ್ಪನೆ ಪಜ್ಜೆಯಿಡುವಳು ದುಗುಡವ ಸೊಪ್ಪುಸೊಪ್ಪನೆ ತುಳಿವಂತೆ (ಭರತ. ೧೪-೬೫).

[ ದೊಪ್ಪು + – ಅನೆ$_1$ ]

**ದೊಪ್ಪು** (ನಾ). ಒಂದು ಅನುಕರಣ ಶಬ್ದ : ಪೆರಸಿ ಪದಾತಿ ನೆಕ್ಕು ನೆರಿಲೆಂಬ ನೆಳಿಲ್‌ನೆಳಿಲೆಂಬ ಘಾರು ಘಘರೆರ ಘರಿಲೆಂಬ ದೊಪ್ಪು ದೊದಲೆಂಬ . . . ನಿಷ್ಠುರರವಂ ಮಿಗೆ ತಳ್ತಱೆದತ್ತು ಯುದ್ಧದೊಳು (ಗಿರಿಕ. ೭-೭೮).

**ದೊಪ್ಪುಟು** (ನಾ). ಒಂದು ಬಗೆಯ ಹುಳು: ಸ್ಪರ್ಶನವೆರಡುವಾನಱಿವ ಶಂಖ ಶುಕ್ತಿ ಗುಳ್ಳೆ ಗುಬ್ಬಿ ನಾಯಿಸೊಳೆ ದೊಪ್ಪುಟು ಗೊಣ್ಣೆಹುಟು ಕ್ರಿಮಿ ಮೊದಲಾದುವೆಲ್ಲಱೊಳಂ (ಪಸಾರ. ೪೯). [ ? + ಪುಟು ]

**ದೊಪ್ಪೆ** 'ಡೊಪ್ಪೆ' ನೋ.

**ದೊಪ್ಪೆಗಿವಿ** (ನಾ). ದೊಣ್ಣೆಯಂತೆ ಅಗಲವಾಗಿರುವ ಕಿವಿ : ಕೈಕಾಲುಮ [illegible] ತೋರ ದೊಪ್ಪೆಗಿವಿ ದನಿ ಕಾಕು (ಕಕ್ಕೋಕ. ೨-೧೭).

[ ದೊಪ್ಪೆ (<ಡೊಪ್ಪೆ) + ಕಿವಿ$_3$ ]

**ದೊಪ್ಪೆನ್** (ಕ್ರಿ). ದೊಪ್ಪೆಂದು ಶಬ್ದಮಾಡು : [illegible] ಗುಳವನು ಹಾಯಿಕಲು ನೆಲಕುರುಳದವು ವಾನಾಯುಜಂಗಳು ಬಿಗುಹ ಬಿಡೆ ದೊಪ್ಪೆಂದವಾಜಿಯುಲಿ (ಕುಮಾಕ. [illegible]) [illegible] ದೊ[ಪಾಠಾಂ. ಧೊ]ಪ್ಪೆಂದು ಮುಂಡಂ ಕೆಡೆಯೆ ತಲೆ ಕರಂ ಬೀಳ್ವನಂ (ವೃಷವಿ. ೭-೧೭). [ ದೊಪ್ಪು + ಎನ್$_1$ ]

**ದೊಬ್ಬಿಕೆ** (ನಾ). ದಬ್ಬುವುದು ; ನೂಕುವುದು : ಅನಿರೀಕ್ಷಿತವಾದ ಈ ದೊಬ್ಬಿಕೆಯಿಂದಾಗಿ ಅನಂತನ ಹೆಜ್ಜೆ ತಪ್ಪಿಹೋಗಿ ಅವನು ಮುಗ್ಗರಿಸಿ ಬಿದ್ದನು (ಒಡ್ಡಿಉ. ೧೨೭). [ ದೊಬ್ಬು (<ದಬ್ಬು$_1$) + –ಇಕೆ ]

**ದೊಬ್ಬಿಸು** 'ದಬ್ಬಿಸು' ನೋ.

**ದೊಬ್ಬು** 'ದಬ್ಬು$_1$' ನೋ.

**ದೊಬ್ಬುಳಿ** 'ದಂಪ್ಪಳ' ನೋ.

**ದೊಮ್ಮ** (ನಾ). ಒಂದು ಮನೆತನದ ಹೆಸರು (?) : ಪುಯ್ಯಲೊಳ್ ದೊಮ್ಮರ ಕಾಡವಂ ಸತ್ತು ಸ್ವರ್ಗಾಲಯಕ್ಕೇಱಿದನ್ (ಎಇ. VI, ೦೬೩-೪ ; 780). [ ? ]

**ದೊಮ್ಮರ** 'ದೊಂಬ' ನೋ.

**ದೊಮ್ಮಳಿ** (ನಾ). ೧. ಗುಂಪು; ಸಮೂಹ. ೨. ಗಾಬರಿ. 'ದೊಮ್ಮಳಿಸು' ಪರಾ. [ <ದೋದುಳಿ ? ]

**ದೊಮ್ಮಳಿಸು** (ಕ್ರಿ). ೧. ಗುಂಪುಗೂಡು ; ಸಂದಣಿಗೊಳ್ಳು : ಧರಾಚಕ್ರಮನಾಕ್ರಮಿಸಿ ನಿಶಾತಹೇತಿಗರ್ಭಂಗಳುಮನೇಕಪ್ರಕಾರಕೇತನ ವಾಜಿರಾಜಿಗಳುಮಾಗಿ ದೊಮ್ಮಳಿಸಿ ನಡೆವ ರಥಂಗಳುಮಂ (ಪಂಪಭಾ. ೧೦–೫೧ ವ) : ಅಮಿತಾಳಾಪಂಗಳಿಂ ದೊ[ಪಾಠಾಂ. ದ]ಮ್ಮಳಿಸಿ ಕಿನಿಸಿ ಕೊಟ್ಟೊಳ್ಪ ತಾತ್ಪರ್ಯಮೇಂ (ಸುಕುಮಾ. ೭–೪೦) ; ನೆರೆವ ರಾಜಲೋಕಮೆಲ್ಲಂ ರಾಜಸುತೆಯನೀಡಾಡಿ ಬಂದು ದೊಮ್ಮಳಿಸಿ ಮುಮ್ಮಳಿಕೊಂಡು ನೋಡುತ್ತಮಿರ್ಪುದುಂ (ಅರ್ಧನೇ. ೭–೩೯ ವ) ; ಅಂತುಭಯಬಳಚತುರಂಗವಾಹನಂಗಳೊಳೊರ್ವೊರ್ವದಲೆ ದೊಮ್ಮಳಿಸಿ ಬೆರಸಿದಾಗಳ್ (ವರ್ಧಪು. ೮–೪೭). ೨. ಗಾಬರಿಯಾಗು ; ಗಾಬರಿಪಡು : "ದೊಮ್ಮಳಿಸು–ತಿರ್ಯಕ್ಸಮೂಹಸಂಭ್ರಮೇ (ದನದ ಹಿಂಡಿನಂತೆ ಗಾಬರಿಪಡು)" (ಶಮುಧಾ) ; ಅಗ್ನಿಶಿಖಾಮುಖಕ್ಕೆ ದೂರಮಪ್ಪ ಬಕ್ಕಬಯಲ ತಾಣದೊಳ್ ದೊಮ್ಮ [ಪಾಠಾಂ. ರ್ಮ]ಳಿಸಿ ನಿಂದು ಬಹುಜನಂಗಳುಮ್ಮಳಿಸಿ ತಮ್ಮೊಳಿಂತೆಂದರ್ (ಪಂರಾಮಾ. ೧೧–೧೫೫ ವ) ; ಆಗಳಂಜಲಿಮಂಜಲಿಮೆಂದು ಬೆಗಡುಗೊಂಡ ಗೋವಳಿಗರ ನೊಡಗೊಂಡು ದೊಮ್ಮಳಿಸಿ ಮಮ್ಮಳಿಗೊಳ್ವ ಗೋವುಗಳನಟ್ಟಿಕೊಂಡು ಕಿಱಿದಂತರದೊಳಿರ್ದ ಗೋವರ್ಧನಗಿರಿಯ ಮಱೆಗೆ ಪೋಗಿ (ಅರ್ಧನೇ. ೮–೧೦ ವ) ; ಹಯಂ ತಾಂ ತನಗೆ ತೂಱಿದ ಕೂರ್ಪಿನ ಪೆರ್ಮೆಯಿಂ ಸೊಮ್ಮುವೆರ್ಚಿ ದೊಮ್ಮಳಿಸಿ ಕಿಚಿಕಿಲ್ದು ಬಿಮ್ಮನೆ ನಡೆದು ಬಱಿಯು ಪೊಱೆಯುಂ ಮಿಕ್ಕು ಪೊಕ್ಕು ದಿಕ್ಕುಗೆಟ್ಟು ಮುಱುಂಗಿ ಕಣ್ಮಾಯವಾಯ್ತು (ರಾಮಾಶ್ವ. ೧೨೦–೨೩). ೩. ವೇಗಗೊಳ್ಳು : ರಭಸಗೊಳ್ಳು : ಅಂತು ನೆಗಟ್ದ ಭಾವವ್ಯತಿಕರಂಗಳ್ ದೊಮ್ಮಳಿಸೆ ತಮ್ಮನಿಬರುಂ ಘಟ್ಟಿಸಿ ನಿಂದು ಶಟ್ಟುತ್ತು ತಾಗಿ ಪೋಗದೆ (ಅನಂಪು. ೭–೪೭ ವ) ; ಅಂತು ನಿಂದಳವಿಯೊಳ್ ದೊಮ್ಮಳಿಸಿ ನೂಂಕುವ ದೈತೇಯಚಕ್ರಿಯ ಚತುರಂಗಬಲಮುಮನಿತುಮೊಂದೆ ಮುಖದೊಳ್ ಕೈಕೊಂಡು ನಿಜಗಜಘಟಾಪಟಲಕ್ಕೆ ಸೂಚೀಯಾನೆಯಂ ಮಾಡಿ (ಅನಂಪು. ೧೪–೭ ವ).

[ ದೊಮ್ಮಳಿ + –ಇಸು$_3$ ]

**ದೊಮ್ಮೇಜಾಡ್ಯ** (ನಾ). ಪಶುಗಳಿಗೆ ಬರುವ ಒಂದು ಬಗೆಯ ರೋಗ: (ಎಸಮ್ಯ. XV, ೪೦). [ ದೊಮ್ಮೆ$_0$ (P ←ತೆಲು. ದೊಮ್ಮ) + ಜಾಡ್ಯ]

**ದೊರಕಿಸು** (ಕ್ರಿ). ಪಡೆ; ಹೊಂದು ; ಪಡೆದುಕೊಳ್ಳು : ಎಲ್ಲಾದರೂ ಒಂದು ಉದ್ಯೋಗ ದೊರಕಿಸಿ ಉಪಜೀವನಕ್ಕೆ ಮಾರ್ಗ ಮಾಡಿಕೊಳ್ಳಬೇಕು (ಮುಂಜಯ. ೪–೫೦) ; ಸರ್ಕಾರದ ಆ ಅನ್ಯಾಯದ ವಿರುದ್ಧ ಹೋರಾಡಿ ದೊರಕಿಸಿದ ಪ್ರಥಮವಿಜಯದಿಂದಾಗಿ ಹುಡುಗರೆಲ್ಲ ಹರ್ಷದಿಂದ ಹಾರಾಡುತ್ತಿದ್ದಾರೆ (ಆಗಸ್ಟ್. ೮೧) ; ಗಾಂಧೀಜಿ ಹೇಳುತ್ತಾರೆ–'ರಾಟೆಯ ತಿರುಗಿಸಿರಿ! ಸ್ವಾತಂತ್ರ್ಯವ ದೊರಕಿಸಿರಿ' ಎಂದು! (ಇಶಿಶ್ರೀ. ೧೩೭).

[ ದೊರಕು + –ಇಸು$_3$ ]

**ದೊರಕು** (ಕ್ರಿ). ಸಿಗು ; ಸಿಕ್ಕು ; ಪ್ರಾಪ್ತವಾಗು; ಲಭ್ಯವಾಗು; ದೊರೆ ; ಪರರಾಜ್ಯಂ ಶ್ರೀಸಹಿತಂ ದೊರಕಲ್ ಕೈಕೊಳ್ಳದಿರ್ಪರಾರ್ (ಪಂಚತಂ. ೧೦೦–೧೩) ; ಮಂದಮತಿಗಳಿಗೆ ದೊರಕದ ಲೇಸನೀಯಬೇಕೆಂದು ಮನದೊಳು ನೆನೆದನು (ಸಿದ್ಧರಾ. ೧–೨೫) ; ತನಗೆ ಮಣಿ ದೊರಕದೆಂಬೊಂದನುತಾಪದೆ ತಪನನೆಯ್ದಿದನೊ ಶರನಿಧಿಗೆಂಬಿನಮೆಸೆವ ರಾಗದಿಂ ಭೋಂಕೆನಲಪರಾಂಭೋಧಿಗಿಳಿದನಬ್ಜಸಹಾಯಂ (ದಶಕು. ೫–೧೪) ; ಧೇನುವೇತಕೆ ದಾನಗೊಂಬ ಮಹಾನುಭಾವರು ದೊರಕದಿದ್ದರೆ (ಸಂಭಪ. ೧೦–೧೧); ಇರಲಿರಲಿ ತೋಱಿಸುವೆ ಮುಂದಕೆ . . . ದೊರಕು ಪಶುಭವ ಬೀದಿಗಲಹವನೆಂದಳು (ತೊರರಾ. ೨–೧–೨೯) ; ಪರಮಪಟ್ಟದ ಮಾರ್ಗಮಿಾ ಶರೀರದೊಳಿಲ್ಲಿ ದೊರಕಲರಿಯದು (ಚಬಪು. ೩–೨); ದುರ್ಲಭವಾದ ವಸ್ತುಗಳೆಲ್ಲವೂ ಅವನಿಗೆ ದೊರಕಿದ್ದವು (ಪರಿಚೀ. ೧೦).

[ <ದೊರೆ$_1$./ತುಳು.ದೊರಕು, ದೊರಂಕು, ದೊರಕ್; ತೆಲು. ದೊರಕು ]

**ದೊರಗು** 'ತರಕು' ನೋ.

**ದೊರಗುಉಸುಬು** (ನಾ). ಒರಟಾದ ಮರಳು,–ಉಸುಬು ; ದಪ್ಪ ಮರಳಂ : ಹೋಗುವ ದಾರಿಗೆ ದೊರಗುಉಸುಬನ್ನು ತಂದು ಸುರಿದು ಚೆನ್ನಾಗಿ ಮಾಡಿದ್ದಾರೆ (ಅಪೂಪ. ೩೨).

[ ದೊರಗು (<ತರಕು) + ಉಸುಬು (<ಉಸುಕು) ]

**ದೊರಗುಗಾಜು** (ನಾ). ಒರಟಾದ ಮೇಲ್ಮೈಯುಳ್ಳ ಗಾಜು ; ಪಾರದರ್ಶಕವಲ್ಲದ ಗಾಜು: ಅದರ ಮುಂಗಡೆಯಲ್ಲಿ ಒಂದು ಭೂತಕನ್ನಡಿಯೂ ಹಿಂಗಡೆ ಒಂದು ದೊರಗುಗಾಜಿನ ಹಲಗೆಯೂ ಇವೆ (ವಿಜ್ಞಾವಿ. ೮).

[ ದೊರಗು (<ತರಕು) + ಗಾಜು (<ಕಾಜು) ]

**ದೊರಪಯ್ಯ** (ನಾ). ಒಬ್ಬಾತನ ಹೆಸರು: ಪಡಿಯಱ ದೊರಪಯ್ಯನ ಹಿರಿಯರಸಿ ಪಾಂಬಬ್ಬೆ ತಲೆವಱಿದುಮೂವತ್ತುವರಿಸಂ ತಪಂಗೆಯ್ದುದ್ದಂ ನೋನ್ತುಚ್ಚಮರಣಮೇಱಿದರ್ (ಎಕ. VI, ಕಡೂರು. ೦–೧೩; 971).

[ <ದೋರ$_3$ + ಅಪ (<ಅಪ್ಪ$_1$) + ಅಯ್ಯ$_1$ ]

**ದೊರಯ್ಯನಾಯಕ** (ನಾ). ಒಬ್ಬಾತನ ಹೆಸರು : ಅಯ್ಯಹರಸರ ಮಗಮ್ ದೊರಯ್ಯನಾಯಕ (ಮ್ಯಆರಿ. ೧೯೨೪, ೯೫–೪ ; 1021).

[<ದೋರ$_3$ + ಅಯ್ಯ$_1$ + ನಾಯಕ ]

**ದೊರೆ$_1$** (ಕ್ರಿ). ೧. ಸಮಿಾಪಕ್ಕೆ ಬರು ; ಬಳಿಸಾರಂ : ಮುಳಿಯಿಸುವ ಮುಳಿವ ತಿಳಿಪುವ ತಿಳಿವೊಲಿಸುವ ದೊರೆವ ನೆರೆವ ರಮಣೀರಮಣಾಕುಳಕಳಕಳದಿಂದಂಗಜವಿಳಾಸದೆಱಿವೆಟ್ಟು ಸೆಟ್ಟನಿದೆ ಪೆಱತುಂಟೇ (ಶಾಂತಿಪು. ೩–೧೧). ೨. ಕಾಣು ; ತೋರು : ಮೂಡದೆಸೆಯೊಳ್ಕೆಂಪು ದೊರೆಯೆ ತಾರಗೆ ಪರೆಯೆ ಕೂಡೆ ತಂಗಾಳಿ ಮುಂಬರಿಯೆ (ಜೈಮಿಭಾ. ೨–೬೫). ೩. ದೊರಕು ; ಸಿಕ್ಕು ; ಸಿಗು ; ಪ್ರಾಪ್ತವಾಗು ; ಲಭಿಸಂ : ಎಮ್ಮ ಮಮ್ಮಂಗಮೆಮಗಮಿಾಗಳನುವರಂ ದೊರೆಯಲಾಯ್ತು [ಪಾಠಾಂ. ದೊರೆಯಾಯ್ತು] (ಪಂಪಭಾ. ೧೧–೪೨ ವ) ; ನಗರಾಂಗನೆಯುರ್ಮಹೋತ್ಸವಂ ದೊರೆದುದೆನುತ್ತಲಂಪು ಮಿಗೆ ನೋಡಿದರಾ ಮನುಜೇಂದ್ರಚಂದ್ರನಂ (ಕಾದಂಪೂ. ೪೮೩) ; ಬಿಜುನದೆಯ ಪದಹತಿಗಳಿವ ಪಲತೆಱದ ಜೀವಿಗಳಿಗೆ ವಿಮೋಕ್ಷಂ ದೊಱೆ[ರೆ]ವುದೆಂದಡೆ ಬೊಮ್ಮಯನ ಕೈಯಲಿ ಮರಣವಾದ (ಬಸಪು. ೩೪–೭೭) ; ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ (ಪುರಂದ. ೩–೧೪೯ ಪಲ್ಲವಿ) ; ವಿಶೇಷ ಸುಕೃತದ ಫಲಂ ದೊರೆತುದೆನಗೆಂದವಂ ಬಿದ್ದನಚ್ಯುತನಂಘ್ರಿಗೆ (ಜೈಮಿಭಾ. ೭–೬೫) : ಸೀಮೆಗೆ ಯಿರಪಗೌಡ × ರಡು ಕೈವಡ ಮುಂತಾಗಿ ಸೀಮೆನಹೆಸು ಮುಂತಾಗಿ ದೊರೆವ ತರು ಮುಂತಾಗಿ ಭೂಮಿಗೆ ನಾಲ್ಕುಮೂಲೆಗೆ ಕಲ್ಲು ಸಟ್ಟದ್ದು (ಎಕ. VII, ಶಿವಮೊ. ೯೩–೨೭; ?): ಪರಮಾತ್ಮನ ದರ್ಶನ

ಕೇವಲ ತಪಸ್ಸಿನಿಂದಲೂ ಕರ್ಮಯೋಗದಿಂದಲೂ ದೊರೆಯಬೇಕೆಂಬುದಿಲ್ಲ (ಧರ್ಮಸಾ. ೮೫). ೪. ಉಂಟಾಗು ; ಸಂಭವಿಸು : ಮಂತ್ರಿ ಚತುರೋಪಾಯಂಗಳಂ ಬಲ್ಲೊಡಂ ದೊರೆವೋಲ್ ಚಿನ್ನಕೆ ಸೌರಭಂ (ಸೋಮೇಶ. ೧೧).

[ ದೇ.೫ ತೆಲು. ದೊರೆಯು, ದೊರಪು ]

**ದೊರೆ$_2$** (ನಾ). ೧. ಸಮಾನ ; ಎಣೆ ; ಸಾಟಿ; ಸರಿ: "ಸರಿ, ದೊರೆ . . . ಸಂಗಡಂ–ಈ ೧೮ ಸಮಾನಕ್ಕೆ ಪೆಸರ್" (ಕಶಸಾ. ೫೯–೨೯೧) : ಹರಿಣಧರ ಸರಸಿಜಂಗಳ್ ದೊರೆಯಲ್ಲವು ತನಗೆ ತಾನೆ ದೊರೆ ನಿನ್ನ ಮೊಗಂ (ಕವಿರಾ. ೩–೭೭) : ಇದಱ ದೊರೆಗೆ ಗಿರಿಗಳುಮೊಳವೇ (ಆದಿಪು. ೭–೬೫) ; ಜಾಕವ್ವೆ ಗುಱಿದ ಪೆಂಡಿರ್ ದೊರೆಯೇ (ಪಂಪಭಾ. ೧–೪೦) ; ನರನಾರಾಯಣರೆಂಬಿರ್ವರುಮೊಡಗೂಡಿದೊಡೆ ಗೆಲ್ವರಾರುರ್ವರೆಯೊಳ್ ನಿರುತಮೆನೆ ನೆಗಟ್ದ ನಿಮ್ಮಿರ್ವರ ದೊರೆಗಂ ಬಗೆವೊಡಗ್ಗಳಂ ನರರೊಳರೇ (ಪಂಪಭಾ. ೧೨–೧೨೬) ; ದೊರೆಗಾಣೆಂ ನಿನಗೆ ಜಿನೇಶ್ವರ ಪೆಱರಂ ನಿನಗೆ ನೀನೆ ದೊರೆಯೆನಿಪ್ಪೆ (ಅಜಿಪು. ೮–೨೨) : ತನಿರಸದಿಂದಮೃತದ ದೊರೆಯೆನಿಸುವ ಕುಂಕುಮದ ರುಚಿಯುನನುಕರಿಸುವ ಮಾವಿನ ಪಣ್ಣಂ (ಧರ್ಮಾಮೃ. ೮–೧೬): ಕಡೆಯಲೆಂದು ಪಾಲ್ಗಡಲೊಳ್ ತಂದಿರಿಸಿದ ಮಂದರಗಿರಿಗೇಂ ದೊರೆಯಾದುದೊ ಪೊನ್ನ ಕೋಂಟೆ (ಮಲ್ಲಿಪು. ೨–೫೧). ೨. ಸರಿಯಾದಂದಂ ; ಸಮಂಜಸವಾದಂದಂ : ಕವಿಗಳ ನಾಮಧಾರಕನರಾಧಿಪರೋಳಿಯೊಳೀತ ನೊಳ್ಪಿದಂ ಕವಿ ನೃಪನೀತನೊಳ್ಪಿದನೆನಲ್ ದೊರೆಯಲ್ತು (ಪಂಪಭಾ. ೧–೧೧); ನಿನ್ನಂ ಪುಸಿಯಾಡಿ ಕಾಡಲೆನಗೇಂ ದೊರೆಯೇ (ಪಂಪಭಾ. ೮–೪) ; ದೊರೆಯೊಳೊಬ್ಬನ ಹಾನಿ ಭಟರೆಲ್ಲರಿಗೆ ದೊರೆ (ಕುವ್ಯಾಶ. ೨–೧೯). ೩. ರೀತಿ ; ಬಗೆ ; ಕ್ರಮ : ಸ್ಯಂದನಾಶ್ವಂಗಳನೊಂದೆ ದೊರೆಯೊಳ್ ಪರಿಯೆ ಪರಿಚೋದಿಸಿ ಬಾಣಪಾತಪ್ರಮಾಣದೊಳ್ ನಿಱಿಸುವುದುಂ (ಶಾಂತಿಪು. ೪–೧೧ ವ) ; ಮದವಾಂದ್ಯೋತ್ಪಾದನಾಪಹರಣಮಾರಣ ವಶೀಕರಣವ್ವೇಷಣಾದಿಗಳ್ಗೆ ಪೆಱಪುವಿಾ ದೊರೆಯುವರ್ಕೆ ಪಿರಿದುಮಾಗಮಂಗಳೆ ಪ್ರಮಾಣಂಗಳ್ (ಕಾದಂಉ. ೭೪೮); ಪೂಮಳೆಯಿಾ ದೊರೆಯುಕ್ಕುಮೆಂಬಿನಂ ಸುರಿದುದು ಪುಷ್ಪವೃಷ್ಟಿ (ಎಕ. II, ೨೩೪–೩೯ ; ಸು. 1180).

ದೊರೆಗೆ ವರ್ = ಸಮನಾಗು ; ಸಮಾನವಾಗು : ಸಮಕ್ಕೆ ಬರು : ಹಾರಾದ್ಯಾಭರಣಂಗಳಿನಾ ರೂಪಾಶ್ಚರ್ಯವಾಗೆ ಪಾಣಿಕಚಟ್ಟಂ ನೀರಂಜಿಸಿ ದಳಿವಿಡಿದ ಮಹಾರತ್ನದ ದೊರೆಗೆವಂದುದಾ ಸ್ತ್ರೀರತ್ನಂ (ಆದಿಪು. ೪–೪೨) ; ಖಳರೋಳಿಯೊಳ್ದೊರೆಗೆವಂದನೆನ್ನನದೇನನೆಂದಪೆಂ (ಕಾದಂಉ. ೪೦೦) : ಚತುರಾನ್ವಿತಮೆಂಬ ನೆಗಟ್ತೆಯಿಂದಿಳಾವಂತರೊಳಾರುಮೇಂ ದೊರೆಗೆ ವರ್ಪರೆ ಪೋಲಿಸೆ ಭಟ್ಟಪಾರ್ಯನೊಳ್ (ಲೋಕೋಪ. ೧–೧೧) : ಹರಿಕಾನ್ತೆಯುಮಿಾ ಕಾನ್ತೆಯು ದೊರೆಗೆ ವರಲ್ಕಾಱಳು (ಎಕ. VI, ಮೂಡಗೆ. ೨೨–೨೪ ; 1129). ದೊರೆಯಾಗು = ಹೋಲಿಕೆಯನ್ನು ಪಡೆ,–ಹೊಂದು ; ಹೋಲು : ನೇಣ್ಬಲೆಯ ತೊಡರೊಳ್ ತೊಡಂಕಿ ನಡುಗುವ ಕುರಂಗಿಯೊಳ್ದೊರೆಯುಪ್ಪಳ್ (ವರ್ಧಪು. ೪–೫೭ ವ) ; ಸುರನದಿಯ ಫೇನಪುಂಜದ ಸಿರಿಯಂ ಸಲೆ ತಳೆದು ತೊಳಪ ತುಹಿನಾಚಲದೊಳ್ ದೊರೆಯಾದಂ (ಕುಸುಮಾ. ೧–೧೨೧). 'ಒರೆ$_7$' ಪರಾ.

**ದೊರೆ$_3$, ಧೊರೆ** (ನಾ). ೧. ಒಡೆಯ ; ರಾಜ ; ಪ್ರಭು ; ಅರಸು : ಗಾಂಗೇಯಂ ದೊರೆಯ ಪಿರಿಯ ಮಗನುಂ ಕ್ರಮಕ್ರಮಾರ್ಹನುಮಿರ್ದಂತೆನ್ನ ಮಗಳಂ ಕುಡೆವು (ಪಂಪಭಾ. ೧–೭೦ ವ) ; ಹೊನ್ನುಳ್ಳ ದೊರೆಯಂತೆ ಭಾವಿಸಿಕೊಂಡು ಹಮ್ಮಿನಲಿಪ್ಪನೆ ಭಕ್ತನು (ಚನ್ನವ. ೪. ೧೨೧–೨೭೭) : ದೊರೆಯೊಳ್ ಸ್ನೇಹವನಾಂತವಂ ಬಡವರಂ ತಾಂ ನೋೞ್ಪನೇ ಪ್ರೀತಿಯಿಂ (ಸೋಮೇಶ. ೪೦) ; ದೊರೆ ತತ್ತ್ರರುಳಿದರು ನೆರವು ಬಹುದು (ಕುವ್ಯಾಶ. ೨–೧೯) : ಮಗಳಿಗೆ ವರನಾವ ಧರೆಯ ದೊ[ಪಾಠಾಂ. ಧೊ]ರೆಗಳೊಳಗೆಂದ (ವರ್ಧಚ. ೪–೮೩) : ದೊರೆ ಎನ್ನ ಒಲವು ಸುಸ್ಥಿರವೆಂದೆಲ್ಲರ ಪಗೆತರವಲ್ಲ (ಪುರಂದ. ೨–೪೫–೨) : ದೊರೆಯು ರಥವಾದರೂ ಏಣ್ಣೆಯಿಲ್ಲ[illegible] ತಿರುಗದು (ಗಾದ). ೨. ಯೂರೋಪಿನಿಂದ (ವಿಶೇ[illegible]ನಿಂದ) ಬಂದ ಮನುಷ್ಯ ; ಇಂಗ್ಲೀಷ್ ಅಧಿಕಾರಿ, ಕಾಫಿತೋಟದ ಒಡೆಯ, ಪಾದ್ರಿ ಮುಂತಾದವರು : ದೊರೆಗಳ ಮನಸ್ಸಿಗೆ, ಅವಳು ಆತ್ಮಹತ್ಯೆ ಮಾಡಿಕೊಂಡಿರಬೇಕೆಂಬ, ಭೀತಿ ಹುಟ್ಟಿತು (ಚೋಮದು. ೯೪) : ದೊರೆಗಳು ಪುಸ್ತಕಗಳನ್ನು ಇನಾಮು ಕೊಡುವದಕ್ಕೆ ಬರುತ್ತಾರೆ (ಮುಂಬಯಿ. ೧–೧೪). ೩. ಸಾಮರ್ಥ್ಯ ; ಪರಾಕ್ರಮ : ಪರಿಭವದ ಪೊಱೆಯುನಾಂತಿರ್ದರಾತಿಗಳ್ಗಳ್ಕೆ ತನ್ನ ಕುಲಮುಂ ಚಲಮುಂ ದೊರೆಯುಂ ಕಿಡೆ ದಾಟ್ವಂ ಗಂಡರೂಪಿನೊಳ್ ಗಂಡನಲ್ತು ಪೆಂಡತಿಯೆ ವಲಂ (ಆದಿಪು. ೧೨–೯೬). ೪. ಹಿರಿಮೆ ; ಯೋಗ್ಯತೆ. 'ದೊರೆಗೆಡಿಸು' ಪರಾ. ೫. ಶ್ರೇಷ್ಠತೆ ; ಆಧಿಕ್ಯ. 'ದೊರೆವೆಱು$_3$' ಪರಾ. ಧೊರೆ : ೧. ನಿಮ್ಮ ಧೊರೆಗೆ ಶೀಘ್ರವಾಗಿ ಅರಿಕೆಮಾಡು (ಕೃವಾಕ. ೫೩) ; ಆ ಸಮಿಾಪದ ಮಹೀಶೂರಪುರದ ಧೊರೆಗಳಂ ಕಾಪಿಟ್ಟುಕೊಂಡು ಇರುತ್ತಿರುವಳು (ಪಟ್ಟಅ. ೧೭–೨೫). ೬. ಅಧಿಕಾರಿ (?) : ಮಳಿಗೆಯೊಳಗೈನೂರ್ವರ್ ಸ್ವಾಮಿಗಳ್ ಬಿಟ್ಟಾಯಂ ಪೊಂಗೆ ಕೊಟ್ಟವರಲ್ಲಿಯಡಕೆಯೊಂದು ಕೊಂಡವರಲ್ಲಿಯಡಕೆಯೊಂದು ಎಣಿಸಿದ ಧೊರೆಗಳಲ್ಲಿ ಪ್ರತ್ಯೇಕವಡಕೆಯೊಂದು (ಎಇ. XX, ೧೨–೫೩ ; 1167).

[ ದೇ.೫ ತಮಿ. ತುರೈ, ಮಲ; ತುರ ; ತುಳು. ದೊರೆ, ಧೊರೆ ; ತೆಲು. ದೊರ, ಧೊರ ]

**ದೊರೆಕಾರ್ಯ** (ನಾ). (ಶ್ರೀಮಂತಿಕೆಯ) ಆಡಂಬರ : ಕಡೆವಳ್ಳಿ ಬೀಟು ಮನೆ ಮುಂಗಯ್ಯಾಭರ್ಣಜಂ ಸಾಲದಾ ದೊರೆಕಾರ್ಯಂ ಘೃತಮಿಲ್ಲದೂಟದ ಸುಖಂ . . . ಬಱಗೈಯುಂ ಸುಜುದಂತೆ (ಸೋಮೇಶ. ೧೭).

[ ದೊರೆ$_3$ + ಕಾರ್ಯ ]

**ದೊರೆಕುಮಾರಿತಿ** (ನಾ). ದೊರೆಯ ಮಗಳು ; ರಾಜಕುಮಾರಿ : ದೊರೆಕುಮಾರಿತಿಯರಾ ಬೀದಿಯೊಳರ್ತಿಯೊಳೆಡೆಯಾಡುತಿಹರು (ಕಂನವಿ. ೭–೧೯).

[ ದೊರೆ$_3$ + ಕುಮಾರಿತಿ ]

**ದೊರೆಕೊಳ್$_1$, ದೊರೆಕೊಳ್ಳು** (ಕ್ರಿ). ೧. ಸಿಕ್ಕು ; ಸಿಗು ; ಲಭಿಸು ; ಪ್ರಾಪ್ತವಾಗು : "ದೊರೆಕೊಳ್ – ಪ್ರಾಪ್ತೌ" (ಶಮಧಾ) ; ಧರಣೀಶರ ಕಾರುಣ್ಯಂ ದೊರೆಕೊಣ್ಡೊಡೆ (ಎಇ. XIII, ೩೩೦–೧೪ : 929) ; ಪೂರ್ವ ಪುಣ್ಯಫಲದಿಂ ದೊರೆಕೊಂಡ ವಿಮಾನಂ (ಆದಿಪು. ೨–೭೮): ಸೌಖ್ಯಮದೆಂತುಂ ದೊರೆಕೊಂಡಿತಿಲ್ಲ ಹೃದಯಕ್ಕೋರಂತೆ (ಕಾದಂಪೂ. ೩೪೭): ಸಂದ ತಿರಿಕಂಗೆ ತೊವೆ ತುಪ್ಪಂ ದೊರೆಕೊಳಲುಣ್ಮೆ ನಲಿವ ತೆಱದಿಂ (ಧರ್ಮಾಮೃ. ೯–೩೦) : ದಿವಸಶ್ರೀ ದೊರೆಕೊಂಡ ಕೋಕಮಿಥುನಂ . . . ವಿರಾಜತ್ಕಳಹಂಸಯುಗ್ಮಮೆನೆ ಕೂಡಿ ಕ್ರೀಡಿಸುತ್ತಿರ್ಪರುತ್ಸವದಿಂದಾ ವಿಜಯಾವತೀ ಯುವತಿಯುಂ ವಿಶ್ವಂಭರೋರ್ವೀಶನುಂ (ಕುಸುಮಾ. ೩–೨೭) : ಕೇಳಿದಗೆ ಮೋಕ್ಷದ ಮಂದಿರವು ದೊರೆಕೊಳ್ಳು (ಸಂಭವ. ೮–೧೪೨). ೨. ಉಂಟಾಗು ; ಸಂಭವಿಸು; ಕೂಡಿಬರು : ನಿಮ್ಮ ಮನದಿಂ ಮಿಥ್ಯಾಕಳಂಕಂ ತೆರಳ್ದಿನಸುಂ ಪೋಗದು ಕಾಲಲಬ್ಧಿ ದೊರೆಕೊಂಡಂದಲ್ಲದೇಂ ಪೋಕುಮೇ (ಆದಿಪು. ೨–೨೨) ; ಪ್ರಸವಸಮಯಂ ದೊರೆಕೊಳೆ (ಪಂಪಭಾ. ೧–೦೪೪ ವ) ; ನುಡಿತಡವಪ್ಪುದೊಂದು ಮೊಗದೊಳ್ ಮುಱುಕಂ ದೊರೆಕೊಳ್ವುದೊಂದು . . . ಕಳ್ಗಡಿದವರಂದಮಿಂತು (ಪಂಪಭಾ. ೨–೪೯) ; ಆ ಪುಲಿಯ ಪೂರ್ವ ಭವವೃತ್ತಾಂತಮುಮಂ ಕಾಲಲಬ್ಧಿ ದೊರೆಕೊಳೆ ತೋಱಿದಿರ್ದುದುಮ ನಱಿಪಿ (ಚಾವುಂಪು. ೨೫) : ಗುರುಮಂ ಲಘುಸಂಧಾನದೆ ನರನಿಸೆ ಗುರುಲಘುವಿಮಿಶ್ರಿತಂ ದೊರೆಕೊಳೆ ತದ್ಗುರು ತಚ್ಛಂದೋವೃತ್ತಿಗೆ ದೊರೆಯೆನಿಸಿರ್ದುದು ಮನಕ್ಕೆ ದುಯೋರ್ಧನನಾ (ಗದಾಯು. ೪–೪೮) : ಇನಿತೊ ದಾಕ್ರೋಶಮಿಾ ನಾಗಶರ್ಮನೊಳೇಕಾರಣದಿಂದಮಿಂದು ದೊರೆಕೊಂಡತ್ತು[illegible]

**ಧೂಳೀಧ್ವಂಸ** (ನಾ). ಮಣ್ಣುಪಾಲಾಗುವಿಕೆ : ನಾಶ : ಹಾಳಾಗುವಿಕೆ : [illegible] ಮಿಂಚು ಬಡಿಯುವುದು. ಇಂಥ ಬಡಿತಕ್ಕೆ [illegible] ಧೂಳೀಧ್ವಂಸವಾಗುವುದುಂಟು (ಬಾಲಪ್ರ. III, ೧೨೩೪). [ ಸಂ. ಧೂಲೀಧ್ವಂಸ ]

**ಧೂಳೀಪಟ** (ನಾ). = ಧೂಳಿಪಟ : ಎಷ್ಟು ಸಾಮ್ರಾಜ್ಯಗಳು ಧೂಳೀಪಟವಾಗಿವೆ (ನನದಿ. ೩೮).

ಧೂಳೀಪಟ ಮಾಡು = ಧೂಳೀಪಟವನ್ನಾಗಿ ಮಾಡು ; ನಾಶಮಾಡು ; ಹಾಳುಮಾಡು : [illegible] ಧೂಳೀಪಟ ಮಾಡಿ ಹೇಳಹೆಸರಿಲ್ಲದೆ ಮಾಡಿಬಿಡುತ್ತಿದ್ದೆ (ಕುರುಕಾ. ೯೮) ; ರಾಯ ರಾಮಲಿಂಗನ ಸೂಚನೆ ಕೇಳಿದೊಡನೆಯೆ ಬಿರುಗಾಳಿಯಂತೆ ಶತ್ರುಗಳ ಮೇಲ್ನುಗ್ಗಿ ಧೂಳೀಪಟ ಮಾಡಿದನು (ಅಳಾಕ. ೨೨).

[ ಸಂ. ಧೂಲೀಪಟ ]

**ಧೂಳೀಪಟಲ** 'ಧೂಲೀಪಟಲ' ನೋ.

**ಧೂಳೀಪಟ್ಟ** (ನಾ). = ಧೂಳಿಪಟ : ಮುತ್ತಿದನೋ ಇಂದೆ ಕೋಂಟೆ ಧೂಳೀಪಟ್ಟಂ [ಪಾಠಾಂ. ಧೂಳಿಪಟಂ] (ಶಮವ. ೩೭ ಪ್ರಯೋ); ಇದಿರಾದ ಬಲುದುರ್ಗಗಳನು ಧೂಳೀಪಟ್ಟಮಂ ಮಾಡುತ (ಸಮ್ಯಕ್. ೮-೨೭). ೨. ಧೂಳಿನ ರಾಶಿ._ಒಟ್ಟಿಲು : ''ಧೂಳೀಪಟ್ಟಮೆನಲ್ಕಡಂ ಧೂಳಿ ಪುಟ್ಟಿದುದಕ್ಕುಂ" (ಶಾಠನಿ. ೬೭). [ ಸಂ. ಧೂಲೀಪಟ್ಟ ]

**ಧೂಳೀಪ್ರತಾನ** 'ಧೂಲೀಪ್ರತಾನ' ನೋ.

**ಧೂಳೀಪ್ರಾಕಾರ** (ನಾ). = ಧೂಳೀಶಾಲ : ಆ ಧೂಳೀಪ್ರ{ಪ್ರಾ}ಕಾರದಿಂದೊಳಗೆ ನಾಲ್ಕುಂ ದಿಶಾಭಾಗದೊಳಮಿಸ್ಸೀಸಮುಮೀರ್ಬದಲುಮಾಗಿ ನೀಳ್ದ ಪೆರ್ವೀದಿಗಳ ನಟ್ಟನಡುವೆ (ವರ್ಧಮಾ. ೧೩-೩೮ ವ).

[ ಸಂ. ಧೂಲೀಪ್ರಾಕಾರ ]

**ಧೂಳೀಶಾಲ, ಧೂಳೀಶಾಳ** (ನಾ). [ಜೈನ] ಸಮವಸರಣಮಂಟಪದ ಮೊದಲನೆಯ ಪ್ರಾಕಾರ : ಕೈಲಾಸಾಚಳಮನೇಱೆ ಧೂಳೀ[ಪಾಠಾಂ. ಲಿ]ಶಾಲದಿಂ ತಗುಳ್ದು ಪೂರ್ವೋಕ್ತವರ್ಣನೋಪೇತಮಪ್ಪ ವೃಷಭನಾಥನಾಸ್ಥಾನ ಮಂಟಪಮಂ ನೋಡುತ್ತುಂ (ಆದಿಪು. ೧೩-೮೨ವ). **ಧೂಳೀಶಾಳ** : ಪಲಯಾಕೃತಿಯಿಂದಿವನೇಂ ಬಳಸಿದುದೊ ಸುರೇಂದ್ರಚಾಪಮಂಡಲಮೆನೆ ಬಳ್ವಳ ಬಳೆವ ಪಂಚರತ್ನದ ಬೆಳಗಿಂದಂ ಬೆಳಪುದಲ್ಲಿ ಧೂಳೀಶಾಳಂ (ಆದಿಪು. ೧೦-೩೩) ; ಪಂಚರತ್ನಧೂಳೀಶಾಳದಿಂ ಪರಿವೇಷಂಗೊಂಡ ಸಮವಸರಣಮಂಡಳಮುಂ ಪುಗುವ ಸಹಸ್ರಾಕ್ಷನ (ಮಲ್ಲಿಪು. ೧೪-೨೦೦).

[ ಸಂ. ಧೂಲೀಶಾಲ ]

**ಧೂಳೀಶಾಳ** 'ಧೂಳೀಶಾಲ' ನೋ.

**ಧೂಳೀಸಾಳ** (ನಾ). = ಧೂಳೀಶಾಲ : ರುತುಮಾನದ ದ್ವಾರಕುಟ್ಯಂ ಮೊದಲ್ಗೊಂಡು ಧೂಳೀಸಾಳಂಬರಮಂತರಾಳಚಕ್ರವಾಳಸ್ಥದೊಳ್ಸಿಂಕಿಕ್ಕಿಱಿಗಿಱಿದು (ಶಾಂತಿಪು. ೧೬-೨೩೦ ವ). [ ಸಂ. ಧೂಲೀಸಾಲ ]

**ಧೂಳು** 'ದೂಳಿ' ನೋ.

**ಧೂಳುಭೂಮ** (ನಾ). ಮದುವೆಯ ಸಂದರ್ಭದಲ್ಲಿ ಗಂಡು ಹೆಣ್ಣನ್ನು ಒಟ್ಟಿಗೆ ಕೂರಿಸಿ ಸಂಜೆಯ ಹೊತ್ತು ಹಾಕುವ ಊಟ : ವಧೂವರರನ್ನು ಧೂಳುಭೂಮಕ್ಕೆ ಕೂರಿಸಿದ್ದಾರೆ (ರೂಢಿ).

[ ಧೂಳು (<ದೂಳಿ) + ಭೂಮ$_1$ (<ಬೂವ) ]

**ಧೂಳುಮಱೆ** (ನಾ). ಧೂಳಿಗೆಯಾಗುವುದನ್ನು ತಪ್ಪಿಸಲು ರಥಕ್ಕೆ ಹಾಕಿರುವ ಮರದ ಅಥವಾ ಕಬ್ಬಿಣದ ಕಾಪು;–ಸಾಧನ : "ರಥಗುಪ್ತಿಃ, ವರೂಥಃ–ಅ. ೨ ಧೂಳುಮಱೆ" (ನಾಚಿರಾ. ೧೨೪).

[ ಧೂಳು (<ದೂಳಿ) + ಮಱೆ$_2$ ]

**ಧೂಳೆಬ್ಬಿಸು** (ಕ್ರಿ). ೧. ಧೂಳು ಏಳುವಂತೆ ಮಾಡು ; ಧೂಳನ್ನು ಏಳಿಸು : ಕುದುರೆಗಳು ಧೂಳೆಬ್ಬಿಸುತ್ತಾ ಓಡಿದವು (ರೂಢಿ). ೨. ಮಣ್ಣುಪಾಲುಮಾಡು ; ಹಾಳುಮಾಡು : ಇವತ್ತು ಇವರ ಮಾನ ಮರ್ಯಾದೆಯೆಲ್ಲಾ ಧೂಳೆಬ್ಬಿಸಿಬಿಡ್ತೀನಿ (ರಂಗವ. ೨೩೯). ೩. (ಆಲಂ) ತಿರುಗು ; ಅಲೆದಾಡು : ಅವನ ಎಣಿಕೆಯಲ್ಲಿ–ಆ ಸ್ನೇಹಿತರು ಬಂದದ್ದಾದರೆ, ನಾಲ್ಕು ದಿನ ನಗರವನ್ನೆಲ್ಲ ಧೂಳೆಬ್ಬಿಸಬಹುದು – ಎಂದಿತ್ತು (ಅಳಿವಿ. ೧೦೭). ೪. ಕೀಟಲೆಮಾಡು : ಸುಮ್ಮನೆ ಧೂಳೆಬ್ಬಿಸುವುದೇ ಅವನ ಸ್ವಭಾವ (ರೂಢಿ). [ ಧೂಳು (<ದೂಳಿ) + ಎಬ್ಬಿಸು (<ಎಬ್ಬಿಸು) ]

**ಧೂಳೆರಚು** (ಕ್ರಿ). ೧. ಮಣ್ಣನ್ನು ಎರಚು. ೨. (ಆಲಂ) ಕಳಂಕಗೊಳಿಸು ; ಕೆಟ್ಟ ಹೆಸರನ್ನು ತರು : ವಂಶದ ಮೇಲೆ ಧೂಳೆರಚಿದೆಯಲ್ಲ (ಕಗದ್ಯ. II. ೨೯).

[ ಧೂಳು (<ದೂಳಿ) + ಎರಚು (<ಎಱಚು) ]

**ಧೂಳೋದಕ** (ನಾ). [ವೀಶೈ] "ಗುರು ಮನೆಗೆ ಬಂದಾಗ ಪಾದ ತೊಳೆದ ತೀರ್ಥ" (ಶರಸಾ. ೨೪–೭). [P. ಇದು 'ಧೂಳ್ಯುದಕ' ಎಂಬುದರ ಅಶುದ್ಧವಾದ ರೂಪ]

**ಧೂಳ್ಗೋಂಟೆ** 'ದೂಳಿಗೋಂಟೆ' ನೋ.

**ಧೃತ** (ಗು). ೧. ತಳೆದ; ಧರಿಸಿದ: ಧೃತದೇವೇಂದ್ರವಿಮಾನರುಂದ್ರಮಹಿಮಂ . . . ಕಲಧೌತಶೃಂಗಕಲಿತಂ ಚೆಲ್ವಾಯ್ತು ರಾಜಾಲಯಂ (ಆದಿಪು. ೬-೧೦೭) ; ಆರೋಪಿತಚಾಪಂ ಸಂಧಾರಿತಕವಚಂ ಧೃತೋಗ್ರಶರಧಿಯುಗಂ ತಾನಾರುಂದ ಮಲ್ಲಮಂ (ಪಂಪಭಾ. ೮-೧೨) ; ಧೃತ ಪಂಚರತ್ನಮಂ ರಾಗಿತಯೊಳ್ ಭೂಷಣಮಂ ಪೆ ತೇಜದಿಂದೆ ವಿರಾಗಿತೆಯೊಳ್ . . . ಆತನಾ ಪಿಧು ತಪಮಂ (ಚಂದ್ರಪು. ೧೨-೨) ; ಧೃತಪಂಕಜಪ್ರರ್ಣಮಂಜರಿಕಂ ಧೃತ ವಿಶೀರ್ಣಾಗ್ರಗೋಚ್ಚಶೃಂಗಂ . . . ಬರುತಿದ್ದುದುದ್ಧತಘನಧ್ವಾನೋತ್ಕರಂ ಶಾಕ್ವರಂ (ಕುಸುಮಾ. ೧೦-೦೯೨) ; ಧೃತನಿದ್ರಾಲಸ್ಯಭಾರಂ ತೊಲಗೆ (ಸೂಕ್ತಿಸು. ೯-೬೫) ; ಧೃತಚಕ್ರವಾಕನೀಪರಿಷ್ಕೃತನಾಕಿನೀ . . . ಎಸುತಿರ್ದರು (ವೀಶೈಪು. ೩-೨೩-೭೪). ೨. ಹಿಡಿದ : ಧೃತಕನಕವೇತ್ರಲತೆ ಚಿತ್ರಿತಮಾಗೆ ಕರಾಂಗುಳೀಯುಕ ಪ್ರಭೆಯಿಂದಂ ಪ್ರತಿಹಾರಪದವಿಯಂ ತಳೆದು (ಪುಷ್ಪಪು. ೧೩-೦೦೫). ೩. ಹೊಂದಿದ ; ಪಡೆದಿರುವ : ಧೃತನಾನಾವರ್ಣಪರ್ಣಚ್ಛವಿಸಮುದಯ ಸಂದರ್ಶನೀಯಂ . . . ಪೌರರ್ಗೆ ಪಂಚೇಂದ್ರಿಯಸುಖದೊದವಂ ನಂದನಂ ಮಾಪ್ಪುದೆಂದುಂ (ಚಂದ್ರಪು. ೧-೧೧೨). ೪. ಕಾಪಾಡಲ್ಪಟ್ಟ ; ರಕ್ಷಣೆಗೊಂಡ. ೫. ಇಟ್ಟ ; ಇಡಲ್ಪಟ್ಟ. ೬. ನಿರ್ಧರಿಸಿದ ; ದೃಢವಾದ. ೭. ತಯಾರಾದ ; ಸಿದ್ಧವಾದ. ೮. ಉಪಯೋಗಿಸಿದ ; ಬಳಸಿದ. (ನಾ). ೯. ಹೊರುವುದು ; ತಳೆಯುವುದು ; ಧರಿಸುವುದು; ಧಾರಣೆ. [ ಸಂ. ]

**ಧೃತಕಂಟಕ** (ನಾ). ಮುಳ್ಳುಗಳನ್ನು ಪಡೆದಿರುವುದು ; ಮುಳ್ಳುಗಳನ್ನುಳ್ಳುದು : ಧೃತಕಂಟಕಮಾದೊಡಮುನ್ನತಿಯಂ ಕೇತಕಿಯೊಳೆಱಗಿದುದು ಮಧುಕರಂ (ಗಿರಿಕ. ೨-೭೪). [ ಧೃತ + ಕಂಟಕ ]

**ಧೃತಕಂಬಲ** (ನಾ). ಕಂಬಲನೆಂಬ ಸರ್ಪವನ್ನು ಧರಿಸಿದವನು ; ಶಿವ : ನಿಜಾಂಗಧೃತಕಂಬಲ ಧನಂಜಯ ಮಾದಂಬಕ (ರಾಜಶೇ. ೧೩-೩೪).

[ ಧೃತ + ಕಂಬಲ ]

**ಧೃತಕಳಾಕಳಾಪ** (ನಾ). ೧. ಅರುವತ್ತುನಾಲ್ಕು ಕಲೆಗಳನ್ನು ಪಡೆದವನು. ೨. ಹದಿನಾರು ಕಲೆಗಳನ್ನು ಹೊಂದಿದವನು. ೧, ೨ : ಅರಿಗೋತ್ರಭೇದಿ ವಿಬುಧೇಶ್ವರನಲ್ಲಂ ಧೃತಕಳಾಕಳಾಪಂ ದೋಷಾಕರನಲ್ಲಂ (ಕವಿರಾ. ೩-೧೧೨).

[ ಧೃತ + ಕಳಾಕಳಾಪ (= ಕಲಾಕಲಾಪ) ]

**ಧೃತಗೋತ್ರ** (ನಾ). (ಮಂದರ) ಪರ್ವತವನ್ನು ಹೊತ್ತವನು; ಕೂರ್ಮ: ಚಿತ್ರವದನೇವೇಳುಪನು ಧೃತಗೋತ್ರನುತ್ಸಾಸದಲಿ ವರವೇದತ್ರಯಂಗಳನುಗುಳಿದನು ಕಾರುಣ್ಯನಿಧಿಯೆಂದ (ನಿಧಾಗ. ೨-೩-೩೨).

[ ಧೃತ + ಗೋತ್ರ$_8$ ]

**ಧೃತಚಂದ್ರ** (ನಾ). ಚಂದ್ರನನ್ನು ಧರಿಸಿದವನು ; ಶಶಿಧರ ; ಶಿವ ಮಳೆಯರಾಜನ ಕಥೆಯ ಕೇಳ್ದರ್ಗೆ ಧೃತಚಂದ್ರ ಮನದಿಷ್ಟವೀವನು (ಪ್ರಾಭರಾ. ೯-೬೫). [ ಧೃತ + ಚಂದ್ರ₂ ]

**ಧೃತದೀಕ್ಷ** (ನಾ). ವ್ರತವನ್ನು ಹಿಡಿದವನು ; ವ್ರತವನ್ನು ತೊಟ್ಟವನು : ಧಾತ್ರಿಯೊಳಾವನ್ನಾಭಯಸತ್ರುದೆ ಧೃತದೀಕ್ಷರಲ್ತೆ ಪುರುಕುಲದರಸರ್ (ಶಾಕುಂತ. ೨೪-೫೦). [ ಸಂ. (ಧೃತ + ದೀಕ್ಷಾ + –) ]

**ಧೃತಧೈರ್ಯ** (ನಾ). ಧೈರ್ಯವನ್ನು ಉಳ್ಳವನು ; ದಿಟ್ಟ : ಧೃತಧೈರ್ಯಂ ತುಂಗಶೌರ್ಯಂ ರಜತಶಿಖರಿಧಾಮಂ . . . ಪಂಪಾಧಿನಾಥಂ (ಉದ್ಭಟ. ೧೩-೧೫೪). [ ಧೃತ + ಧೈರ್ಯ ]

**ಧೃತನವಶಶಿ** (ನಾ). ಬಾಲಚಂದ್ರನನ್ನು ಧರಿಸಿದವನು ಶಿವ: ಅತಿಶಯ ಮಹಿಮಂ ಧೃತನವಶಶಿವಿಶ್ರುತವರಗುಣಗಣಧಾಮಂ (ಹರಿಶ್ಚಂ. ೩-೧೧). [ ಧೃತ + ನವಶಶಿ ]

**ಧೃತಮಂಡಲಿ** (ನಾ). ಒಂದು ಬಗೆಯ ಸಸ್ಯ : "ತ್ರಿಪದಿ ಧೃತಮಂಡಲಿ [ಪಾಠಾಂ. ೪] ಮರಾಳಪದಿಯೆನೆ ಹಂಸಪಾದಿ" (ಮಂಗರಾ. ೪೩-೬೪). [ ಸಂ. ]

**ಧೃತಮನೋರಥ** (ನಾ). ದೃಢವಾದ ಮನಸ್ಸುಳ್ಳವನು ; ಸ್ಥಿರಮನಸ್ಕ : ಆ ಪುರಮನಾಳ್ವನುದ್ಧತ ಗೋಪುರಮಂ ವಿಜಿತಶಕ್ರುಧನಪತಿವರುಣ ತ್ರೈಪುರಮಂ ಧರಣೀಮಣಿ ನೂಪುರಮಂ ಧೃತಮನೋರಥಂ ಪದ್ಮರಥಂ (ಅನಂಪು. ೩-೧೯). [ ಧೃತ + ಮನೋರಥ ]

**ಧೃತಮೋಹ** (ನಾ). ಮೋಹಕ್ಕೊಳಗಾದವನು : ಹಾಹಾಧ್ವನಿ . . . ಸುಕ್ತಿರ್ದೊಡದು ಸಾಹಸಿಗು ಕೇಳ್ದುಂ ಧೃತಮೋಹಂ ಕೇಳ್ದುಮೆ ಜಿತಾರ್ತ ಕುರರೀರವಮಂ (ಶಾಂತಿಪು. ೬-೩೩). [ ಧೃತ + ಮೋಹ ]

**ಧೃತರಜ** (ನಾ). ಧೂಳಿನಿಂದ ಕೂಡಿದುದು : ಧೃತರಜನನಿಲಂ ದಿತಿಜಪ್ರತಿ ಕೂಲಂ ಹರಿಗೆ ಸೈನ್ಯದರ್ಶನದನುಕೂಲತೆಯಂ ಮೆರೆವಂ (ಜಗವಿ. ೧೫-೧೫). [ ಧೃತ + ರಜ₁ ]

**ಧೃತರಾಷ್ಟ್ರ** (ನಾ). ೧. ಸ್ಥಿರವಾದ ಚಕ್ರಾಧಿಪತ್ಯವನ್ನು ಉಳ್ಳವನು. ೨. ಒಳ್ಳೆಯ ಅರಸ. ೩. ಒಳ್ಳೆಯ ಅರಸನಿಂದ ಆಳಲ್ಪಟ್ಟ ದೇಶ. ೪. ಕುರುವಂಶದ (ದುರ್ಯೋಧನ ಮುಂತಾದ ನೂರು ಜನ ಕೌರವರ ತಂದೆಯಾದ) ಅಂಧ ದೊರೆ : "ಅಂಧರಾಜನೆನೆ ಧೃತರಾಷ್ಟ್ರನಕ್ಕುಂ" (ಮಂಗರಾ. ೭೮-೩) ; ಧೃತರಾಷ್ಟ್ರಂ ನುಡಿದಾರ್ತನೇ ಹರಿ ಭಗಂಗೆಯ್ದಾರ್ತನೇ (ಪಂಪಭಾ. ೧೧-೧೧) ; ಧೃತರಾಷ್ಟ್ರಕ್ಷಿತಿಪಾಲ ಕೇಳ್ ಜನನಿ ಕೇಳ್ ಗಾಂಧಾರಿ (ಗದಾಯು. ೬-೩೫) ; ಭರತವಂಶದೊಳ್ಳಿದು ಮಿಗೆ ನೂರ್ವರು ಕುಮಾರರು ಪಾಂಡು ಧೃತರಾಷ್ಟ್ರರಿಗೆ ಜನಿಸಿದರು (ಕುವ್ಯಾಆ. ೪ ಸೂಚನೆ). ೫. ಒಂದು ಹಾವಿನ ಹೆಸರು : ಬಳಿಕ ಧೃತರಾಷ್ಟ್ರನೆಂಬ ದುರ್ವ್ಯಾಳಪತಿ ನುಡಿದನು (ಜೈಮಿಭಾ. ೨೪-೨೦). ೬. ಒಬ್ಬ ಗಂಧರ್ವನ ಹೆಸರು : ಪುರಂದರಂ ಧೃತರಾಷ್ಟ್ರನೆಂಬ ಗಂಧರ್ವಂಗೆ ನೇಮಿಸಿದನು (ಜೈಮಿಭಾ. ೫-೪೧). ೭. ಒಬ್ಬ ಯಕ್ಷನ ಹೆಸರು : ಹೇಮಕೂಟಪರ್ವತದಲ್ಲಿ ಮಣಿಭದ್ರ . . . ಧೃತರಾಷ್ಟ್ರ ಪೂರ್ಣಭದ್ರ ವಿರೂಪಾಕ್ಷರೆಂಬವರು ಮೊದಲಾದ ಕೋಟಿಯಕ್ಷರ ಪಟ್ಟಣಂಗಳುಂ (ವಿವೇಕ. ೩೧೭). ೮. ಒಂದು ಬಗೆಯ ಪಕ್ಷಿ. ೯. (ಅಲಂ)ಕುರುಡ ; ಅಂಧ. [ ಸಂ. ]

**ಧೃತವೇತ್ರ** (ನಾ). ದಂಡವನ್ನು ಹಿಡಿದುಕೊಂಡವನು : ಧೃತವೇತ್ರಂ ಚಾರುಚೀನಾಂಬರರಚಿತಶಿರೋವೇಷ್ಟನಂ . . . ಅವನಿಪನೊಡ್ಡೋಲಗ ಕ್ಕೈದೆ (ಚಂದ್ರಪು. ೩-೭೪). [ ಧೃತ + ವೇತ್ರ ]

**ಧೃತವ್ರತ** (ನಾ) ೧. ಶ್ರೇಷ್ಠವಾದ ವ್ರತಗಳ ನಿಯಾಮಕ: ಎಲೈ ಅಗ್ನಿಯೇ, ಧೃತವ್ರತನೂ, ಸಕಲರಿಗೂ ಪ್ರಭುವೂ, ಪ್ರಕಾಶಮಾನನೂ ಆದ ವರುಣನೂ ನೀನೆ (ಋಕ್ಸಾರ. ೧೭). ೨. ವ್ರತವನ್ನು ಹಿಡಿದವನು. [ ಧೃತ + ವ್ರತ ]

**ಧೃತಶಕ್ತೆ** (ನಾ). ೧. ವೀರನನ್ನು ಹೊಂದಿದವಳು ; ವೀರಾಸ್ತ್ರೀಯ ಹೆಂಡತಿ. ೨. ಸಮರ್ಥರಾದವರನ್ನು ಪೋಷಿಸುವವಳು ; ಶೂರರಿಗೆ ಆಶ್ರಯವನ್ನು ಕೊಡುವವಳು. ೧, ೨ : ಶ್ರೀರಮಣ ಗೌರ . . . ಪತಿಭಕ್ತಿ ಧೃತಶಕ್ತೆಯೆನೆ ಸನ್ದೀ ವೀರನಿಧಿಯಂ ಚಲದ ವಾರಿನಿಧಿಯಂ ಗುಣದ ಚಾರುನಿಧಿಯಂ ನೆಗರ್ದ ದೇಕಲೆಯೆನಿನ್ನೀ ನಾರಿಜನರನ್ನಮನದಾರೊ ಮಚಿವರ್ (ಎಕ. IV, ಹೆಗ್ಗಡ. ೧೮-೨೪ ; 1057). ೧೧೬-೧೧). [ ಸಂ. ಧೃತಶಕ್ತಾ ]

**ಧೃತಶಶಿಖಂಡ** (ನಾ). ಚಂದ್ರಕಳೆಯನ್ನು ಧರಿಸಿದವನು ; ಶಿವ : ಧೃತಶಶಿಖಂಡ ಜಿತಸುಮಕಾಂಡ ವಿತರಣಶೌಂಡ ಧೃತಜಗದಂಡ (ಶಾಕುಂತ. [ ಧೃತ + ಶಶಿಖಂಡ ]

**ಧೃತಶಶಿಶಕಲ** (ನಾ).=ಧೃತಶಶಿಖಂಡ: ಧೃತಶಶಿಶಕಲಂ ಕೃತಭವನಕುಲಂ . . . ನುತಗಿರಿಜಾರಮಣಂ (ವೃಷವಿ. ೩೪-೬೫). [ ಧೃತ + ಶಶಿಶಕಲ ]

**ಧೃತಶಸ್ತ್ರ** (ನಾ). ಶಸ್ತ್ರವನ್ನು ಧರಿಸಿದವನು ; ಶಸ್ತ್ರಧಾರಿ : ಕೊಲಬಹುದು ಧೃತಶಸ್ತ್ರನಾದಡೆ ಕೊಲುವೆನೆಂತಾಚಾರ್ಯಸುತನನು ತಿಳಿಯ ಹೇಳೆಂದೆನುತ ಬೀಡಿಕೆಗಾಗಿ ನಡೆತಂದ (ನಿಘಾಗ. ೧-೪-೩೦). [ ಧೃತ + ಶಸ್ತ್ರ ]

**ಧೃತಶೈತ್ಯ** (ನಾ). ತಂಪನ್ನು ಹೊಂದಿರುವುದು ; ಶೈತ್ಯವನ್ನೊಳಗೊಂಡಿರುವುದು: ಧೃತಶೈತ್ಯಂ ಧಾರಾಜಲಯುತಮನುಕಂಪಾನ್ವಿತಂ ದಲೆನಿಸಿಯುಂ . . . ರಿಪುನೃಪರ್ಗೀವುದಧಿಕತಾಪೋದಯಮಂ (ಚಂದ್ರಪು. ೩-೩). [ ಧೃತ + ಶೈತ್ಯ ]

**ಧೃತಸತ್ತ್ವೆ** (ನಾ). ಗರ್ಭಿಣಿ : "ಗುರ್ವಿಣಿ ಧೃತಸತ್ತ್ವೆಯುಮಂತರ್ವತ್ನಿಯೆನಿಪ್ಪುದಾಕೆ ಗರ್ಭಿಣಿಯೆನಿಕ್ಕುಂ" (ವಸ್ತುಕೋ. ೩೪-೧೪). [ ಸಂ. ಧೃತಸತ್ತ್ವಾ ]

**ಧೃತಸೋಮ** (ನಾ). = ಧೃತಚಂದ್ರ : ಧೃತಸೋಮ ಗತಕಾಮ ಚಿರಲಿಂಗ ವರಸಂಗ . . . ಗಿರಿಜೇಶ (ಹತಕಾ. ೧-೫). [ ಧೃತ + ಸೋಮ ]

**ಧೃತಿ** (ನಾ). ೧. ಹಿಡಿದುಕೊಳ್ಳುವುದು ; ತೆಗೆದುಕೊಳ್ಳುವುದು. ೨. ತಾಳುವಿಕೆ ; ಧರಿಸುವುದು. ೩. ಪಡೆಯುವುದು ; ಹೊಂದುವುದು. ೪. ಧೈರ್ಯ ; ಧೀರತನ ; ಎದೆಗಾರಿಕೆ ; ಕೆಚ್ಚು : ಧೃತಿಯನವಳಂಬಿಸಿ . . . ನಡೆವಾಗಳ್ (ಲೀಲಾಪ. ೬-೪೯) ; ಪೊಜಗತುಳ ಧೃತಿಯ ನಾಂತಂ ನೆಟೆ ಮನದೊಳ್ ತಳೆದೆಸೆವ ಕುಸುಮಾವಳಿಯಂ (ಕುಸುಮಾ. ೧೦-೧೦೩) ; ಮರಳಿ ಧೃತಿಯಿಂದೆದ್ದು ಕೋಪಾತುರನು ತುರಗವನೊದೆದು ಕೆಡಹಲು (ಕಾಶಿರಾ. ೨೭-೨೪) ; ಪೆಣ್ಣಾದೊಡಂ ನೀನೆನಗೆ ಮತಿಯೊಳಂ ಧೃತಿಯೊಳುಂ ಗಂಡಿಗಣೆ (ಶ್ರೀರಾಮಾ. ೨೦೫-೧೨೭). ೫. ತಾಳ್ಮೆ ; ಸಹನೆ ; ಸಂಯಮ : ಧೃತಿ ಬಂದಾಗಲೆ ಪ್ರಾಣಂಬ ತೆಜದೆ ಪೇಸಿದನರಸಂ (ಜಾಕೋಚ. ೩-೫೩) : ವಿರತಿ ವಿವೇಕ . . . ಧೃತಿ ಸ್ಮೃತಿ . . . ತಪಸ್ಸು ಯೋಗ ನಿಶ್ಚಯ ಮುಂತಾದ ಸಾತ್ವಿಕಗುಣಗಳಂ ಸುಖಮಹಿತೋರ್ಧ್ವಲೋಕಂಗಳಂ ಸಾಧ್ಯ (ವಿವೇಕ. ೩೪೭) ; ಅಜೀದು ಪಂಚಾರ್ಣವನು ಧೃತಿಯನು ಮೇಜೀದು ಪ್ರಾಣವನು ನಿಲಿಸಿ ತನ್ನೀ ದಿವ್ಯಮೂರ್ತಿಯಲಿ ಅಜೀಯದಿತರವನಿರಲು ನೀಜನ್ನ . . . ನಾಲಾಕು ಯುಗಗಳುತ್ತರಿಸಲಾ ನಿಮಗಿಂದು ಮೈದೋಜೀದನು ನಾವಿಂದ (ನಿಘಾಗ ೧೧-೪-೩). ೬. ಸ್ಥಿರವಾಗಿರುವುದು ; ಅಚಲತೆ ; ಸ್ಥೈರ್ಯ : ಆತನ ಮಾತಂ ಕೇಳ್ದು ಪಗತಶೋಕನುಮುಪಗತವಿವೇಕನುಮಾಗಿ ಧೃತಿಯಂ ತಾಳ್ದು (ಅಜಪು. ೯-೬೭) ; ಧೃತಿಯಿಂ ಮುಚ್ಚರಿಸುವ . . . ಮೆಟ್ಟಿದಂತಿರೆ . . . ಇರ್ದಂ ಯೋಗಧುರ್ಯನಚಲಿತಧೈರ್ಯಂ (. . . ೬ ೨೦) ; ಅರ್ಥಬಂಧುಸುತಾದಿಗಳ ಪ್ರಾಪ್ತ್ಯಪ್ರಾಪ್ತಿ . . . ವಿಲ್ಲದಿರ್ಪುದೇ ಧೃತಿಯೆನಿಸುವುದು (ವಿವೇಕ. ೧೯೪) ; ಧೃತಿ . . . ಸುಖವಿವಿಧಿಪಾವಿವಿಧಿಪಮೆಂಬತಿಶಯಗಳ್ಗಿದು ವಿಧಮಂತು ಮತ್ತದ . . . ಮತಿಯಿಂದ ಮತ್ತುಸಿರಿ ಕೊನೆಗಾಣಲಸಗುವುದೆ ಧೃತಿ (ವೇದಾಶಾ. ೩-೭-೪೩):

[illegible] ಧೃತಿ ([illegible]. ೬-೮-೧೭). ೭. ಸಂತೋಷ; ಆನಂದ; ಉಲ್ಲಾಸ. 'ಧೃತಿವೆಱು' ನೋ. ೮. ಚಂದ್ರನ ಹದಿನಾರು ಕಲೆಗಳಲ್ಲಿ ಒಂದು: ಚಂದ್ರನಾದೊಡೆ ಅಮೃತ . . . ಧೃತಿ ಶಶಿನಿ ಚಂದ್ರಿಕೆ . . . ಕಾಮದಾಯಿನಿಯೆಂಬ ಷೋಡಶಕಲೆಗಳಿಂ ಭರಿತನಾಗಿ (ವಿವೇಕ. ೨೬೭). ೯. ಒಂದು ಬಗೆಯ ಸಸ್ಯ: "ಧೃತಿ [ಪಾಠಾಂ. ದ್ಯುತಿ]ಯೆನಲು ಮುಷ್ಟೆಯುಕ್ಕು" (ಮಂಗರಾ. ೪೩-೪೮) ೧೦. ಒಂದು ನಾಡಿಯ ಹೆಸರು: ಧಮನಿ, ಗಮನಿ, ಲೋಲಿ, ಧೃತಿ, ಸರ್ವಗಾ ಎಂಬೈದು ನಾಮವನುಳ್ಳ ನಾಡಿಯು ... ಕಾಣಬರುವುದು (ಸಕವೃ. ೧೦). ೧೧. ವಿಶ್ವೇದೇವತೆಗಳಲ್ಲಿ ಒಬ್ಬ ದೇವತೆಯ ಹೆಸರು. 'ವಿಶ್ವೇದೇವ' ನೋ. ೧೨. ಮನಸ್ಸಿನ ಹದಿನಾರು ಬಗೆಯ ವಿಕಾರಗಳಲ್ಲಿ ಒಂದು: ಐತರೇಯೋಪನಿಷತ್ತಿನಲ್ಲಿ ಸಂಜ್ಞಾನ (ಚೇತನಭಾವ) . . . ಪ್ರಜ್ಞಾನ, ಮೇಧಾ, ದೃಷ್ಟಿ, ಧೃತಿ, ಮತಿ, ಮನೀಷಾ . . . ಈ ಹದಿನಾರು ಮನಸ್ಸಿನ ವಿಕಾರಗಳೆಂದಿರುವವು (ಅಮೃತ. ೬-೨೬ ಟೀಕು). ೧೩. [ಛಂದ] ಅಕ್ಷರ ಛಂದಸ್ಸಿನಲ್ಲಿ ಹದಿನೆಂಟನೆಯ ಛಂದಸ್ಸಿನ ಹೆಸರು: ಉಕ್ತೆ ಅತ್ಯುಕ್ತೆ . . . ಧೃತಿ ಅತಿಧೃತಿ . . . ಉತ್ಕೃತಿ ಎಂದಿಪ್ಪತ್ತಾಱು ಛಂದಂಗಳಕ್ಕುಂ (ಛಂದೋಂಬು. ೧-೪೬ವ). ೧೪. [ಜ್ಯೋತಿ] ವಿಷ್ಕಂಭ ಮೊದಲಾದ ಇಪ್ಪತ್ತೇಳು ಯೋಗಗಳಲ್ಲಿ ಎಂಟನೆಯದು: ವಿಷ್ಕಂಭ ಪ್ರೀತಿ . . . ಧೃತಿ ಶೂಲ . . . ಬ್ರಹ್ಮ ಐಂದ್ರ ವೈಧೃತಿಗಳೆಂಬಿಪ್ಪತ್ತೇಳು ಯೋಗಂಗಳುಂ (ವಿವೇಕ. ೩೨೦); ಯೋಗಗಳತಿಶಯಮವನರಿಯೆಯು ಪೇಳುವೆ ವ್ಯತಿಯು ಧೃತಿ ವಿಷ್ಕಂಭ ಶೂಲವು (ಗಗತಾ. ೪-೬೯). 'ಧೃತಿಯೋಗ' ನೋ. ೧೫. [ಕಾವ್ಯವಿಮ] ಮೂವತ್ತಮೂರು ಸಂಚಾರೀಭಾವಗಳಲ್ಲಿ ಒಂದು; ಜ್ಞಾನ, ಅಭೀಷ್ಟಪ್ರಾಪ್ತಿ ಮುಂತಾದುವುಗಳಿಂದ ಆಸೆಯು ಪೂರ್ಣವಾಗುವುದು; ಸಂತುಷ್ಟಿ; ತೃಪ್ತಿ: ಧೃತಿ ನಿದ್ರಾವೇಗ . . . ಇವಿಂತಯ್ದು ಸಂಚಾರಿಭಾವಂ (ಕಾವ್ಯಾವ. ೬೯೫); ಮತಿ ಲಜ್ಜೆ . . . ಧೃತಿ ತರ್ಕ ಉನ್ಮಾದ . . . ಅಪಸ್ಮಾರಗಳೆಂಬ ಮೂವತ್ತುಮೂಱು ಸಂಚಾರೀಭಾವಂಗಳಿಂ ಪರಿವರ್ಧಿಸಿ (ವಿವೇಕ. ೨೨೭); ಜ್ಞಾನ ಮೊದಲಾದವುಗಳಿಂದ ಉಂಟಾಗುವ ಸಂತುಷ್ಟಿಯೇ ಧೃತಿ (ಕಾರಮಿ. ೩೪೭). ; ೧೬. [ಯೋಗ] ಧ್ಯೇಯವಸ್ತುವಿನಲ್ಲಿ ಅಚಲವಾಗಿ ಮನಸ್ಸನ್ನು ನೆಲೆಗೊಳಿಸುವುದು; ಧಾರಣ. 'ಧೃತಿತ್ರಯ' ನೋ. ೧೭. [ಜೈನ] ಐವತ್ತುಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ನಾಲ್ಕನೆಯದು: ದ್ವಾದಶಾಂಗದೊಳ್ ಪೇೞ್ದ ಆದಾನ ಪ್ರೀತಿ ಸುಪ್ರೀತಿ ಧೃತಿ . . . ಎಂಬಯ್ವತ್ತುಮೂಱು ಗರ್ಭಾದಿ ನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೫-೧೫ವ); ೭ನೇ ತಿಂಗಳ ಗರ್ಭವತಿಗೆ . . . ಅತ್ತಿಹಣ್ಣಿನ ರಸವಂ ಸಹ ಮಂತ್ರಪೂರ್ವಕ ಉದರದ ಮೇಲೆ ಬೀಳುವಂತೆ ಹಾಕುವುದೇ ಧೃತಿಯೆಂಬ ನಾಲ್ಕನೆ ಕರ್ಮವು (ಪುರುಜ. ೧೯೯). 'ದೀಕ್ಷೆ' ನೋ. ೧೮. [ನ್ಯಾಯ] ದೇವರಿದ್ದಾನೆಂದು ಸಾಧಿಸುವ ಹೇತುಗಳಲ್ಲಿ ಒಂದು; ಈ ವಿಶ್ವವು ಕುಸಿದು ಬೀಳದಂತೆ ಧಾರಣೆ ಮಾಡುವ ಕಾರ್ಯದಿಂದ ಅದಕ್ಕೆ ಕಾರಣಭೂತನಾದವನು ಒಬ್ಬನು ಇರಲೇಬೇಕು-ಅವನೇ ದೇವರು ಎಂದು ತಾರ್ಕಿಕರು ಸಾಧಿಸುತ್ತಾರೆ: ಧೃತಿಯೆಂದರೆ ಭೂಗೋಳ ಖಗೋಳ ಮೊದಲಾದ ವಸ್ತುಗಳನ್ನು ಧರಿಸುವ ಪುರುಷನಿರಬೇಕು (ಹಿಂದಸಾ. ೧೨೭). [ ಸಂ. ]

**ಧೃತಿಗಿಡಿಸು** 'ಧೃತಿಗೆಡಿಸು' ನೋ.

**ಧೃತಿಗಿಡು** 'ಧೃತಿಗೆಡು' ನೋ.

**ಧೃತಿಗುಂದು** (ಕ್ರಿ). ಎದೆಗುಂದು; ಧೈರ್ಯವನ್ನು ಕಳೆದುಕೊಳ್ಳು: ಪರಿಜನಮಾಮೆ ದಲ್ ನಿನಗೆ ನೀಂ ಧೃತಿಗುಂದದಿರು (ಕುಸುಮಾ. ೧೪-೧೧೮); ಪುರಹರನಿಟ್ಟ ಪುಲ್ಲ ಮುೞಿಯುಂ ಮುರವೈರಿ ವಿರಿಂಚಿ ಮುಖ್ಯ ನಿರ್ಜರರದ ನೆತ್ತಲಾಜಿದ ವಲಂ ಧೃತಿಗುಂದಿದರ್ (ರಾಜಶೇ. ೧೩-೨೪).

[ ಧೃತಿ + ಕುಂದು$_1$ ]

**ಧೃತಿಗೆಡಿಸು, ಧೃತಿಗಿಡಿಸು** (ಕ್ರಿ). ಅಧೈರ್ಯವನ್ನುಂಟುಮಾಡು; ಎದೆಗೆಡಿಸು: ಅತಿಕಾಂಕ್ಷೆಯೆಂಬಗಳತಿ ವಿಸ್ಮಯವಾಗಿ ಕ್ಷಿತಿಯನೊಡೆದು ನಾಗತಿಯ ಧೃತಿಗೆಡಿಸುತ ಬಳಸಿಹುದಾ ಪುರದೊಳು (ತ್ರಿಪುಸಾಂ ೪-೪೦); ದಿನದಿಂದ ದಿನಕ್ಕೆ ಆತನನ್ನು ಧೃತಿಗೆಡಿಸುತ್ತಿದ್ದವು ಅಂಥವೇ (ವಾತ್ಸಲ್ಯ. ೨೭೬). ಧೃತಿಗಿಡಿಸು: ಮೂದಲಿಸಿ ಧೃತಿಗಿಡಿಸಿ ಬೆಂಕೊಣ್ಡು ಮತ್ತಂ (ಎಕ. II, ೨೪೦-೨೭; ಸು. 1175). [ ಧೃತಿ + ಕೆಡಿಸು$_1$ ]

**ಧೃತಿಗೆಡು, ಧೃತಿಗಿಡು** (ಕ್ರಿ). ಧೈರ್ಯವನ್ನು ಕಳೆದುಕೊಳ್ಳು; ಅಧೈರ್ಯಪಡು; ಎದೆಗುಂದು: ಮದನ ಮದೋದ್ರೇಕದಿನೆನ್ನದಿರೊಳ್ ಧೃತಿಗೆಟ್ಟು ಸಿಗ್ಗಿನಿಂ ತನ್ನೊಳ್ ಪೊಲ್ಲದನೆತ್ತಾಚರಿಸುಗುಮೋ (ಕಾದಂಪೂ. ೮೨೫); ಮತಿಗೆಟ್ಟೆನು ಮನದ ವಿಕಾರದಿಂದ ಧೃತಿಗೆಟ್ಟೆನು ಕಾಯವಿಕಾರದಿಂದ (ಬಸವ. ೪೩); ವೃತಿಗಳ್ . . . ಮತಿಗೆಟ್ಟರ್ ಧೃತಿಗೆಟ್ಟರ್ (೧೦ಕ. ೮-೨೩); ಇನಿತು ಧೃತಿಗೆಡಲೇಕೆ (ಬಸಪು. ೨೫-೨೩); ಪಟುಭಟರು ಧೃತಿಗೆಟ್ಟು ದೆಸೆದೆಸೆಗಳಲಿ ಮಿಗೆ ಸಾಲಿಟ್ಟು ಸರಿದುದು (ಕುವ್ಯಾಕ. ೧೯-೯೮). ಧೃತಿಗಿಡು: ಧೃತಿಗಿ[ಪಾಠಾಂ. ಗೆ]ಡಬೇಡ ಧೈರ್ಯವನಾಂತು ಬಾರೆಂದು ರತಿರಾಜ ಮೂದಲಿಸಿದನು (ಮೋಹತ. ೧೨-೯೨). [ ಧೃತಿ + ಕೆಡು$_1$ ]

**ಧೃತಿತ್ರಯ** (ನಾ). [ಯೋಗ] ಸಾತ್ತ್ವಿಕಿ, ರಾಜಸಿ ಮತ್ತು ತಾಮಸಿ ಎಂಬ ಮೂರು ಬಗೆಯ ಧೃತಿ,-ಯೋಗಾಂಗವಾದ ಧಾರಣ; ಈ ಯೋಗಾಭ್ಯಾಸದಿಂದ ಮನಸ್ಸು, ಪ್ರಾಣ, ಇಂದ್ರಿಯವ್ಯಾಪಾರಗಳನ್ನು ಹತೋಟಿಯಲ್ಲಿಟ್ಟುಕೊಂಡು ಬೇರೆ ಕಡೆಗೆ ತಿರುಗದಂತೆ ಮಾಡುವುದು ಸಾತ್ತ್ವಿಕೀಧೃತಿ; ಫಲಾಪೇಕ್ಷೆಯಿಂದ ಮನಸ್ಸು, ಪ್ರಾಣ, ಇಂದ್ರಿಯಗಳನ್ನು ಬಿಗಿಹಿಡಿದು ಮಾಡುವ ಧ್ಯಾನ ರಾಜಸೀಧೃತಿ; ನಿದ್ರೆ, ಭಯ, ಶೋಕ, ವಿಷಾದ, ಮದ ಇವೊಂದನ್ನೂ ಬಿಡದೆ ದುರ್ಬುದ್ಧಿಯಿಂದ ಕೂಡಿರುವುದು ತಾಮಸೀಧೃತಿ. ಹೀಗೆ ಭಗವದ್ಗೀತೆಯಲ್ಲಿ ಧೃತಿತ್ರಯದ ವಿವರಣೆ ಇದೆ: ತಾಪತ್ರಯ ಕರ್ಮತ್ರಯ . . . ಧೃತಿತ್ರಯ ಗುಣತ್ರಯ ಶಕ್ತಿತ್ರಯ ಕಾಲತ್ರಯ (ವೇದಾಂಪ. ೪-೧೮-೪). [ ಧೃತಿ + ತ್ರಯ ]

**ಧೃತಿಯುಕ್ತ** (ಗು). ೧. =ಧೃತಿಯುತ ೧. (ನಾ). ೨. =ಧೃತಿಯುತ ೨: ಧೃತಿಯುಕ್ತರ್ ಶೌರ್ಯಯುಕ್ತರ್ ಕುರುಕುಲಧರಣೀಶರ್ಕಳ್ (ಮಹಾಸೀ. ೧೩-೯). [ ಸಂ. ]

**ಧೃತಿಯುತ** (ಗು). ೧. ಧೀರತೆಯನ್ನು ಹೊಂದಿದ; ಧೈರ್ಯವುಳ್ಳ: ಧೃತಿಯುತಕ್ಷತ್ರಿಯನು ವೇದಪ್ರತಿಯುತಶ್ರೋತ್ರಿಯನಹಿಂಸಾರತನು ಮಹಾಪುರುಷನು (ಕುವ್ಯಾಅ. ೨೩-೪೧). (ನಾ). ೨. ಧೀರ; ಧೈರ್ಯಶಾಲಿ: ಪತಿಯ ಮುಸುಕಿದನಾ ಸುಮಂತನು ಧೃತಿಯುತರ ನೆಱೆಗಾಪಲಿರಿಸಿದ ಸುತರ ಬಳಿಗಟ್ಟಿದನು ದೂತರ ಬೇಗ ಬಹುದೆನುತ (ಚಾರಿರಾ. ೪-೭).

[ ಸಂ. ]

**ಧೃತಿಯೋಗ** (ನಾ). = ಧೃತಿ ೧೪: ಧೃತಿಯೋಗಕೆ ರವಿ: ೪೨ ಗಳಿಗೆ ಮೇಲೆ ತ್ಯಾಜ್ಯ (ಭಾಸ್ಕರ. ೭೦-೮). [ ಧೃತಿ + ಯೋಗ ]

**ಧೃತಿವೆಱು** (ಕ್ರಿ). ಉತ್ಸಾಹದಿಂದ ಕೂಡಿರು; ಉಲ್ಲಾಸಗೊಳ್ಳು: ಸಂಭ್ರಮಂಬಡು: ಧೃತಿವೆತ್ತಾ ತವದಿಗ್ವಿಯೋದ್ಯಮಭವದ್ಭೇರೀಪ್ರಣಾದಕ್ಕೆ ಕಂಪಿತಮಪ್ಪುದಿಯು ಕೂರ್ಮನುಂ ಫಣಿಪನುಂ . . . ಭೂಮಿ ಬಿಸುಟ್ಟು ಬಂದು ಪಿರಿದುಂ ನಿಶ್ಚಿಂತದಿಂ ಸುಪ್ರತಿಷ್ಠಮಾಗಿರ್ಪುದು ಸುಪ್ರತಿಷ್ಠಿತ ಪಟಿಷ್ಠೋದ್ಯದ್ದಂಡದೋರ್ದಂಡದೊಳ್ (ಅರ್ಧನೇ. ೪-೩೪); ಧೃತಿವೆತ್ತಂ ನೃಪಕಂತುವೀ ತೆಱಿಂ (ಕುಸುಮಾ. ೧೦-೧೦೪). [ ಧೃತಿ + ಪೆಱು$_1$ ]

**ಧೃತಿಹೀನ** (ನಾ). ಧೈರ್ಯವಿಲ್ಲದವನು : ಕ್ಷಿತಿಯೊಳು ಧನಾಢ್ಯರುಂ ಸಕಲ ವ್ಯವಹಾರಿಗಳು ಧೃತಿಹೀನರೆರಡನೆ ಕುಬೇರರೆಂದೆನಿಸುವರು. . .ವೈಶ್ಯರು (ನವಮೋ. ೩-೪೧). [ಧೃತಿ + ಹೀನ]

**ಧೃಷ್ಟ** (ಗು). ೧. ಧೈರ್ಯವುಳ್ಳ ; ಕೆಚ್ಚಿನ ; ಆತ್ಮವಿಶ್ವಾಸದ. ೨. ದಯೆಯಿಲ್ಲದ ; ಕ್ರೂರವಾದ ; ಒರಟಾದ. ೩. ನಾಚಿಕೆಯಿಲ್ಲದ ; ಲಜ್ಜೆಯಿಲ್ಲದ. ೪. ವಿಷಯಲಂಪಟನಾದ ; ದುರ್ಮಾರ್ಗಿಯಾದ. ೫. ಮುಂದೆ ನುಗ್ಗುವ ಸ್ವಭಾವದ ; ಧಾರ್ಷ್ಟ್ಯದ ; ದುಡುಕುತನದ. ೬. ದುರಭಿಮಾನದ ; ಗರ್ವದಿಂದ ಕೂಡಿದ. (ನಾ). ೭. ಆತ್ಮವಿಶ್ವಾಸವುಳ್ಳವನು ; ಗಟ್ಟಿಗ ; ಧೈರ್ಯಶಾಲಿ : ಧೃಷ್ಟಂ ವರವಕ್ರೋಕ್ತಿವಿಶಿಷ್ಟಂ . . . ಎನಿಪ್ಪ ದೂತಮುಖ್ಯನಂ (ಪಾರ್ಶ್ವಪು. ೩-೫೦). ೮. ಧಾರ್ಷ್ಟ್ಯವುಳ್ಳವನು; ಉದ್ಧಟ; ದಂಡಂಕಿನವನು : "(ಧೃಷ್ಟ) ನಾತಂ ವಿಯಾತಂ" (ವಸ್ತುಕೋ. ೯೯-೬); "ವಿಯಾತಾ. ಧೃಷ್ಟಃ – ಈ ೨ ಬಗೆಯದವಂ" (ಹಲಾಯು. ೬೧-೩೧೬); "ಧೃಷ್ಟಃ. ಧೃಷುಃ. ವಿಯಾತಃ– ೩ ದಿಟ್ಟತನವುಳ್ಳವನ ಪೆಸರು" (ಸಿದ್ಧಾಂತಿ. ೩೨೯) : ಈ ಕಥೆ ಗುಣ್ಪುವೆತ್ತುದವರುಂ ಜ್ಞಾನರ್ಥಿಸಂಪನ್ನರೆಂದಿರದಾಂ ಧೃಷ್ಟನೆನೀ ಕಥಾಬ್ಧಿಯುಮನೇನೀಸಲ್ಕನಂದಂದೆನೋ (ಆದಿಪು.೧-೩೫). ೯. [ಕಾವ್ಯಮೀ] ದಕ್ಷಿಣ, ಧೃಷ್ಟ, ಅನುಕೂಲ ಮತ್ತು ಶಠ ಎಂಬ ನಾಲ್ಕು ಬಗೆಯ ಶೃಂಗಾರನಾಯಕರಲ್ಲಿ ಒಂದು ವಿಧ; "ಧೃಷ್ಟನೆಂದರೆ, ತನ್ನ ಪತ್ನಿಯಲ್ಲಿ ಅಪರಾಧ ಮಾಡಿ ದೋಷಗಳು ಸ್ಪಷ್ಟವಾಗಿದ್ದು ತಾನು ಆಕ್ಷೇಪಣೆಗೆ ಗುರಿಯಾದರೂ ನಾಚಿಕೆ ಪಟ್ಟುಕೊಳ್ಳದವನು" (ಕೃಬಿಡಿ. ೨೧೦); ಆಗಳರಸನು ಧೃಷ್ಟನ ಪಾತ್ರಾಸವಿಕಾರಣನ್ಯಾಯಮಾದ ಮುಳಿಸುಂ ತಿಳಿಪುವಿವರ್ಗರ್ಮುಬ್ಬೆಗಮುಂ ಪಡೆದುದೆಂದಿಂತೆಂದಂ (ಚಂದ್ರಪು. ೮-೫೪ವ) ; ಶೃಂಗಾರನಾಯಕರಲ್ಲಿ ದಕ್ಷಿಣ, ಧೃಷ್ಟ, ಅನುಕೂಲ, ಶಠ ಎಂದು ನಾಲ್ಕು ವಿಧ (ಸಂನಾಟ. ೧೮).
[ಸಂ.]

**ಧೃಷ್ಣು** (ಗು). ೧. ಕೆಚ್ಚಿನ; ದಿಟ್ಟತನವುಳ್ಳ; ಧೈರ್ಯವುಳ್ಳ. ೨. ನಾಚಿಕೆಯಿಲ್ಲದ ; ನಿರ್ಲಜ್ಜೆಯ. ೩. ಬಲವುಳ್ಳ ; ಪ್ರಭಾವವುಳ್ಳ. (ನಾ). ೪. ದಿಟ್ಟತನವುಳ್ಳವನು; ಉದ್ಧಟ : "ಧೃಷ್ಟ, ಧೃಷ್ಣು, ವಿಯಾತ" (ನಾಚಿರಾ. ೬); "ಧೃಷ್ಟಃ, ಧೃಷ್ಣುಃ, ವಿಯಾತಃ–೩ ದಿಟ್ಟತನವುಳ್ಳವನ ಪೆಸರು" (ಸಿದ್ಧಾಂತಿ. ೩೨೯). [ಸಂ.]

**ಧೇನಿಕೆ, ಗೇಣಿಕೆ, ಗೇನಿಕೆ** (ನಾ). ಯೋಚನೆ; ಧ್ಯಾನಿಸುವಿಕೆ : ಎದೆ ಕೀವಿ. ಕಣ್ ತುಂಬಿ ನಲುಮೆ ಹರಿದಾಡಿತ್ತು ತಾಯ ಧೇನಿಕೆ, ಎಣಿಕೆ ಅದರಲ್ಲಿ ಮುಳುಗಿ (ಬಪಾಸಿ. ೩೬-೮). ಗೇಣಿಕೆ: "ಗೇಣಿಕೆ–ವಿಚಾರ; ಕಲ್ಪನೆ" (ಜಾನಕೋ. ೫೦). ಗೇನಿಕೆ : ಕೈಯೊಳಗೆ ಕಾಸಿದ್ದರೆ, ಕುಣಿದಾಡಿಸಿಬಿಡುವೆ. ಮತ್ತ ಮನಸ್ಸಿನೊಳಗೆ ಗೇನಿಕೆ ಹಾಕ ಹತ್ತಿದ (ಕೂತಕಾ. ೩೩). 'ಧೇನಿಸು' ಪರಾ.
[<ಧ್ಯಾನ+– ಇಕೆ]

**ಧೇನಿಸು, ಗೇಣಿಸು, ಗೇನಿಸು, ಜಾನಿಸು** (ಕ್ರಿ). ೧. ಚಿಂತಿಸು ; ಧ್ಯಾನ ಮಾಡು : ಈಸು ಪುಣ್ಯವ ಮಾಡಿ ದಿನದಿನ ಧೇನಿಸೆ (ವೃಕಂವ. ೩-೪೪) ; ಮನೋಭಾವವ ಧೇನಿಸಿ ನೋಡುತ್ತ (ವಿದಾಕ್ಕ. ೧-೪೪) ; ಅಹರ್ನಿಶೀ ಧೇನಿಸುವೆ ನಿನ್ನನ್ನು (ಜಗದಾ. ೧೬೮) ; ತವುಗೊಗ್ಗಿದುದನು ಧೇನಿಸಿ ಜರ್ಜಿಸಿ ನಭದಲಿ ನೆಗೆದು ಸೊಬಗನು ವರ್ಣಿಸಿ (ಚಂತನ. ೮೦-೩೩). ೨. ಯೋಚಿಸಂ; ವಿಚಾರಿಸಂ ; ಬಗೆ : ಧೇನಿಸಿದರೀ ಜಗದೊಳೆಲ್ಲಿಯು ಕಾಣೆ ನಿನಗನು ರೂಪಪುರುಷನ (ಪಾರ್ವಪ. ೨-೪೭) ; ಪದ್ಮಾವತಿಯು ಮನದಲ್ಲಿ ಧೇನಿಸಿದಳು (ಸಮುಜೀ. ೮೭). ೩. ನೆನೆಸಿಕೊಳ್ಳು ; ಸ್ಮರಿಸು : ಆಗ ಕಂಡ ಅವಳನ್ನು ಅನಂತನು ಚೆನ್ನಾಗಿ ಧೇನಿಸಿಕೊಂಡ (ಕಾಗೆಳ. ೫೩). ಗೇಣಿಸು : ೨. ಅವಳನ್ನು ಮುಂದೆ ಕೂಡ್ರಿಸಿಕೊಂಡು ಬಲು 'ಬಿಚಿ'ಯಿಂದ ಮಕ್ಕಳಾದ ಮೇಲೆ ಉತ್ತಮ ನಡತನವನ್ನು ಮಾಡೋಣವೆಂದು ಗೇಣಸುತ್ತಾನೆ (ಕನ್ನಜಾ. ೬೦). ಗೇನಿಸು : ೨. ಏನು ಮಾಡಲಿ . . . ಎಂದು ಮನಸ್ಸಿನೊಳಗೆಯೇ ಗೇನಿಸುತ್ತಿದ್ದಳು (ಕೂತಕಾ. ೪೩) ; ಬಿದ್ದುಕೊಂಡೇ ಗೇನಿಸತೊಡಗಿದಳು (ಮಾಲತಿ. ೧) ; ಗೇನಿಸಿ ಗೇನಿಸಿ ಜಂಪುಹತ್ತಲು ಒಂದು ಕನಸು ಸುಳಿಯಿತು (ಪವನ. ೩೬). ಜಾನಿಸು: ೧. "ಜಾನಿಸು–ಧ್ಯಾನೇ" (ಶಮಧಾ) ; ದೇವರಂ ಜಾನಿಸುತ್ತಂ ಪಂಚನಮಸ್ಕಾರಮಂ ಮನದೊಳು [illegible] ಸುತ್ತಂ (ವಡ್ಡಾರಾ. ೧೦೧-೧೬) ; ಜಿನೇಂದ್ರನಂ ಬಗೆವ ಮನಂ ಗಡಂ ಮಿಗುಬ್ಬಿ ಜಾನಿಪ ಕಣ್ಗಡಂ (ಆದಿಪು. ೩-೬೦) ; ಮುನ್ನಿನಂದದೆೊಳ್ [illegible] ಗೊಂಡು ಜಾನಿಸುತಿರ್ದಂ (ಶಾದಂಉ. ೪೪೭). ೨. ಈ ನುಡಿಯನ್ನು ಕೇಳ ಭೀಷ್ಮಕಭಗಿನಿ ಜಾನಿಸಿ ನುಡಿದಳು ಜಾಣೆ (ಶಾಮಕ. ೧-೩೭) ; ಎಂದಿಗವನ ಪಡಿವೂಗದೊಳು ಸಂದಷೆನಂದೆಡೆವಿಡದೆ ಜಾನಿಪಳು (ಪವಿಬ. ೭-೨೯) ; ರಘುಪ್ರವರನುಂ ಮನಮಜುಗಿ ಇನಿಸುಂ ಪೊಚ್ಚಿ ಜಾನಿಸಿ (ರಾಮಾಶ್ವ. ೨೦-೨೪). ೩. ಆನಂದವ ಮಾಡು ಮಾಡುತೊಪ್ಪುವುತ್ತಮಾಂಗಿಯಂ ಜಾನಿಸಿದಂ ನೃಪಾಲಕಂ (ಉದ್ಭಟ. ೩-೧೧೧). ☞ ಇಲ್ಲಿ ಒಟ್ಟಿಗೆ [illegible] 'ಧೇನಿಸು' ಎನ್ನುವ ಶಬ್ದದ ಪರ್ಯಾಯರೂಪಗಳ ವ್ಯುತ್ಪತ್ತಿಯ ಬಗ್ಗೆ ಅನುಮಾನವಿದೆ. 'ಧೇನಿಸು', 'ಜಾನಿಸು' ಎನ್ನುವ ರೂಪಗಳು 'ಧ್ಯಾನ' ದಿಂದಲೂ, 'ಗೇಣಿಸು', 'ಗೇನಿಸು' ಎನ್ನುವ ರೂಪಗಳು 'ಜ್ಞಾನ' ದಿಂದಲೂ ನಿಷ್ಪನ್ನವಾಗಿರಬೇಕು. ಇದು ಪರಿಶೀಲನಾರ್ಹ.
[<ಧ್ಯಾನ+– ಇಸು₃]

**ಧೇನು** (ನಾ). ೧. ಆಕಳು ; ಹಸು ; ಗೋವು : ಮೊಸರಂ ದುಗ್ಧಮನಾಜ್ಯಮಂ ಸೆಗಣಮುಂ ಧಾನ್ಯಂಗಳಂ ಧೇನುಮಂ . . . ಬಸೆಯುಂ ತನ್ನಿದಿರಾಗಿ ಬರ್ಪವವ(ನಿಂ)ಕಣ್ಬಂತುಟತ್ಕೃತ್ಯಮಂ (ಲೋಕೋಪ. ೧೨-೪೪); ಹರಿಶ್ಚಂದ್ರ ಭೂಭುಜಂ ತನ್ನ ಸಾರ್ದರ . . . ತನ್ನಂತೆ ಮಾಳ್ಪುನ್ನತಿಕೆಯಂ ಕಂಡು . . . ಮಾಗುವಟ್ಟುದಮರರ ಧೇನು [ಪಾಠಾಂ. ಹಯಂ] (ಹರಿಶ್ಚಾ. ೧-೪೨) ; ಧೇನುಮಹಾತ್ಮ್ಯಯಾನಿತೊಂದು ದೊಡ್ಡಿತೇಂ (ರಾಮಾಶ್ವ. ೧೦೪-೮) ; ನಾನು ಅತಿಶಯವಾದ ಸ್ತುತಿಯ ಮೂಲಕ ಧೇನುವಿಗೆ ಆಹ್ವಾನ ಕೊಡುತ್ತೇನೆ (ಋಕ್ಸಾರ. ೨೭೯). ೨. ಹೊಸದಾಗಿ ಕರುಹಾಕಿರುವ ಹಸು ; [illegible] ಆಕಳು ; ಎಳಗಂದಿ : "ಧೇನು ನವಸೂತಿ . . . ನೈಚಿಕೆಯೆನಿಕುಂ" (ವಸ್ತುಕೋ. ೯೦-೭) ; "ಧೇನುಃ, [illegible]" (ಹಲಾಯು. ೪೫-೧೧೫) ; ಎಳಗಂದಿ ಧೇನುವಕ್ಕು" (ಮಂಗರಾ [illegible]). ೩. ಬಯಸಿದುದನ್ನು ಕೊಡುವ [illegible] ಹಸು ; [illegible] "ಸುರಭಿ ಸುರಪಶು ಧೇನುವನೆ ಕಾಮಧೇನುವಿಗೆ [illegible]" [illegible] ೯-೩೦). ೪. [illegible] ; ಪಿಡಿ : "[illegible] ಧೇನು [illegible]" ಗಜವಧೂಪರ್ಯಾಯದೊಳ್ [illegible]" ([illegible]). ೫. ಬ್ರಾಹ್ಮಣರಿಗೆ ಕೊಡುವ ಹಸು [illegible] ೬. [illegible] ೭. [illegible] ; [illegible] ವನಕುಸುಮದಂತೆಯಾಶಾನ್ಯವ್ಯಭವದಂತ ಘನತರಪ್ರತಪರಾರೋಹಿಣೀ ಧೇನು ಸಂಸುರಭಿ ವೃಷಯುಕ್ತವಾಗಿ . . . ವೈರಾಯಿರಬ್ಬದೊಳ್ ಪ್ರಜವುಸೆದುದು (ಚಬಪು. ೧೧-೧೮). [ಸಂ.]

**ಧೇನುಕ** (ನಾ). ೧. ಕತ್ತೆಯ ಆಕಾರದ ಒಬ್ಬ ರಾಕ್ಷಸ ; ಧೇನುಕಾಸುರ : ಆ ಮಹಾ ತಾಳವನಮಂ ಧೇನುಕನೆಂ ರಾಸಭರಾಕ್ಷಸಂ ಕಾದಿರ್ಪಂ (ಜಗವಿ. ೪-೩೯ವ) ; ಸುರರು ಭಾವಿಸೆ ತಾಳವನವನು ಬೆರಸಿ ಮಂಚಿದರು ಬಾಲಕೇಳಿಯ ಪರಿಣತರು ಧೇನುಕನಚ್ಯುತರಾಮರುರವಣಿಸಿ (ನಿಧಾನ ೧೦-೧೫ ಸೂಚನೆ). ೨. [illegible] ಹಸುವಿನಂತೆ ಅಂಬೆಗರೆ [illegible]

ವೃಂಗಾಲು ಮೇಲೆಯೊರದು ಕೈಗಳನಿಕ್ಕಿ ಮೆಲ್ಲನೆ ನಡೆಯಲ್ಕೆ ಗೂಳಿಯಂತೆ ಎತ್ತುಗಳ ರವಂಗಯ್ಯುತ್ತಾ ವುರುಷ ರವಿಸುತ್ತಾ ನಡೆಯುತ್ತಿರೆ ಧೇನುಕ ಮೆಂಬ ಕರಣಂ (ಕಾಮಶಾ. ೭-೧೪೯). [ ಸಂ. ]

ಧೇನುಕಕರಣ (ನಾ). = ಧೇನುಕ ೨ : ಬಾಗಿ ಪದಯುಗಕೆ ಕಾಮಿನಿ ಕೆಯ್ಗಳ ನಿಟ್ಟೈಮ್ಯನಡಿಯಿಡಲ್ ಪ್ರಿಯನದರ್ದಿಂಬಾಗಿ ತಳವೂರು ಪೃಷ್ಠ ವಿಭಾಗದ ಮನ ಮೊಲ್ದು ನೆರೆಯೆ ಧೇನುಕಕರಣಂ ಮನ್ಮವಿ. ೧೪-೩೬). [ ಸಂ. ]

ಧೇನುಕುಚ (ನಾ). ಹಸುವಿನ ಕೆಚ್ಚಲು : ಸುಗಂಧಿಯೆಂಬ ವಿಷಯುಮಂಟ ದೞಿ್ೞೊಳ್ ಕರಟೀಡನಂ ಧೆ ನುಕುಚದೊಳ್ ಬಂಧನಂ ಕಜದೊಳ್ . . . ಅಲ್ಲದಿಲ್ಲಮೆಲ್ಲಿಯುಂ (ಚಂದ್ರಪ್ರ. ೩-೯೭). [ ಧೇನು + ಕುಚ ]

ಧೇನುಕೆ (ನಾ). ೧. ಹೊಸದಾಗಿ ಕರು ಹಾಕಿರುವ ಹಸು; ಈದ ಆಕಳಂ; ಎಳಗಂದಿ. ೨. ಹೆಣ್ಣಾನೆ ; ಪಿಡಿ : "ಪಿಡಿಯಾನೆಯುಲ್ಲಿಯುಂ ಧೇನುಕಾ, ಗಣಿಕಾ ಎಂಬುದು" (ಹಲಾಯು. ೧೩೩-೧೩). ೩. ಆನೆಯ ಹೆಣ್ಣು ಮರಿ ; ಮರಿ ಹೆಣ್ಣಾನೆ : "ಎಳೆಯ ಪಿಡಿಯಾನೆಯಲ್ಲಿ ಅನುಗೊಳಿಸಿ ಧೇನುಕಾ ಗಣಿಕಾಯೆನಿಪ್ಪುದು"(ಮಂಗರಾ.೧೩೯-೭). ೪. (ಯಾವುದಾದರೂ) ಹೆಣ್ಣುಪ್ರಾಣಿ. ೫. ಕಠಾರಿ ; ಸುರಿಗೆ ; ಚೂರಿ : "ಬಾಲಕರೇಣು ಶಸ್ತ್ರ ದನುಜಂ ವಶುವಿಂತಿವು ಧೇನುಕಾಖ್ಯ" (ನಾನಾರ. ೯೯). [ ಸಂ. ಧೇನುಕಾ ]

ಧೇನುವಿಗ್ರಹಣ (ನಾ). ಹಸುಗಳನ್ನು ಸೆರೆಹಿಡಿದೊಯ್ಯುವುದು ; ಗೋಗ್ರಹಣ : ಧೇನುವಿಗ್ರಹಣವನು ಮಾಡಿದನಂದು ಕುರುರಾಯ (ಕುವ್ಯಾವಿ. ೪-೭೧). [ ಸಂ. ]

ಧೇನುಷ್ಯೆ (ನಾ). ೧. ಸಾಲ ತೀರುವವರೆಗೂ ಹಾಲು ಕರೆದುಕೊಳ್ಳಲು ಸಾಲ ಕೊಟ್ಟವನ ವಶದಲ್ಲಿರುವ ಹಸು : "ಧೇನುಷ್ಯಾ–ಬಂಧಕೇ–ಸರೆ ಯುಲ್ಲೆ ಸಿಕ್ಕಿದ ಆಕಳಿಗೂ ಅಡವು ಹಾಕಲ್ಪಟ್ಟ ಆಕಳಿಗೂ ಹೆಸರು" (ಸಿದ್ಧಾಂತಿ. ೨೯೩). ೨. ಕ್ಷೀರಾಗಾರದಲ್ಲಿರುವ ಹಸು. [ಸಂ. ಧೇನುಷ್ಯಾ ]

ಧೇಯ (ಗು).. ೧. ಇಡಬೇಕಾದ. ೨. ತೆಗೆದುಕೊಳ್ಳಬೇಕಾದ. ೩. ಉತ್ಪತ್ತಿಯಾಗುವ. (ನಾ). ೪. ಉತ್ಪತ್ತಿಯಾದುದು. [ ಸಂ. ]

ಧೈಂಚ (ನಾ). ಒಂದು ಬಗೆಯ ಸಸ್ಯ : ಮುಳ್ಳು ಜೀನಂಗಿ, ಧೈಂಚ (ಮೃಜಿಗಿ. ೭೯-೧೪೧೪). [ ? ]

ಧೈಂಡಿ (ನಾ). (ಮೊಸರು) ಗಟ್ಟಿಯಾದಂದು ; ಗಡ್ಡೆ ; ಗರಣೆ : ಒಳ್ಳೆಯ ಹೆಪ್ಪು ಹಾಕಿದ ಧೈಂಡಿ ಮೊಸರು (ರಂಗಕ. ೧೨೬) ; ಅವರೆಕಾಯಿ ಹುಳಿ, ಹುರುಳಿ ಹಪ್ಪಳ ಮತ್ತು ಧೈಂಡಿ ಮೊಸರು (ಮನೆಊಟನಂ. ೨೧೦). [ ? ]

ಧೈನುಕ (ನಾ). ಹಸುಗಳ ಸಮೂಹಾಯ ; ಆಕಳ ಹಿಂಡು. [ ಸಂ. ]

ಧೈರಿಯ (ನಾ). ದಿಟ್ಟತನ ; "ಧೈರ್ಯ" (ಪ್ರಭಪ್ಪ). [< ಸಂ. ಧೈರ್ಯ ]

ಧೈರ್ಯ (ನಾ). ೧. ದಿಟ್ಟತನ ; ಕೆಚ್ಚು ; ಎದೆಗಾರಿಕೆ : "ಧೈರ್ಯದೊಳು ಹೊನ್ನಿನೊಳು ಕ್ರೂರದೊಳು ... ಪರುಷವಕ್ಕು" (ಮಂಗರಾ. ೧೫೦-೫೧); ಎಲ್ಲಿತ್ತೊ ಧೈರ್ಯಮುಪಶಮಮೆಲ್ಲಿತ್ತೊ ಜಿತೇಂದ್ರಿಯತ್ವಗುಣಮೆಲ್ಲಿತ್ತೋ ಎಲ್ಲಿತ್ತೊ ನಿನ್ನ ಶೌರ್ಯಮದಲ್ಲಿತ್ತುಪಭೋಗರಾಗವಿಷಯುದ್ವೇಷಂ (ಶಾಂತೀಶ್ವ.೭೭೫); ಮುಜಿ್ವಗೆ ಶಾವಂ ಯುದ್ಧಧುರಸ್ಥರಂ ಧೈರ್ಯಧರಾಧರಂ (ಕ್ಕಿಇಇ. XI-1, ೯೨-೮; 1054 . ಧೈರ್ಯಂ ಘೋರತಪಂ ಪರೀಷಹ ಸಮೂಹಪ್ರಾಪ್ತಿಯೊಳ್ ಸಂದ ತಾತ್ತ್ವರ್ಯಂ (ಚಂದ್ರಪ್ರ. ೧-೩) ; ಧೈರ್ಯಂ ಸರ್ವಪರೀಷಹಾನ್ವಯ ಜಯಂ (ಜೀವಸಂ. ೨-೩) ; ತಳರು ಮಾಡದ ಧೈರ್ಯಸುರುಜದ (ಕುವ್ಯಾಸ. ೧೪-೮೭) ; ಬಳಿಕ ಧೈರ್ಯ ಸರ್ವ ... ವೆಂಬ ವಿಳಸಿತ ವಾಕ್ಯಾರ್ಥವನು ಕೇಳಿದವನೀಶ್ವರನಲಿವ ವಿಷಾದವ ತೊಳೆದು ವಿವೇಕಜಲದೊಳು (ಕುರಾಸಾ. ೪೨-೩೩) ; ನಡೆತಂದನಾ ವೀರಭದ್ರಂ ಧೈರ್ಯರಸಸಮುದ್ರಂ (ವೀಲ್ಲಿಪು. ೩-೩-೪೨) ; ತೃಷ್ಣೆಯೆ ದೇವಿಯೆ ನಿನಗಿದೊ ನಮಸವು ಧೈರ್ಯವಿಪ್ಲವಕಾರಿಯೆಂದೆ ಮೂರು ಲೋಕದ ನಾಥನಾದರು ವಿಷ್ಣುವು ವಾಮನನಾದ ನಿನ್ನಿಂದೆ (ಇಂಚಾಪ. ೧೮೨-೯೮). ೨. ಅಚಲವಾಗಿರುವುದು ; ಗಾಂಭೀರ್ಯ ; ನಿಶ್ಚಲತೆ ; ದೃಢತೆ : "ಪಾಷಾಣಮುಂ ಪರ್ವತಂ ಧೈರ್ಯಂ ಗ್ರಾವಸಮಾದ ಯಂ"(ನಾನಾರ.೧೦೭). ೩. ಸಹನೆ ; ಶಾಂತತೆ ; ತಾಳ್ಮೆ. [ ಸಂ. ]

ಧೈರ್ಯಂಗಿಡು 'ಧೈರ್ಯಂಗೆಡು' ನೋ.

ಧೈರ್ಯಂಗೆಡು, ಧೈರ್ಯಂಗಿಡು, ಧೈರ್ಯಗೆಡು (ಕ್ರಿ). ಎದೆಗುಂದಂ; ಅಧೈರ್ಯಪಡು ; ಧೈರ್ಯವನ್ನು ಕಳೆದುಕೊಳ್ಳು : ಧೈರ್ಯಂಗೆಟ್ಟತ್ತು [ಪಾಠಾಂ ಕೆಟ್ಟಿತ್ತು] ಸರ್ವಾರ್ತವಮಮೆನಿಪ್ಪುದಱಿೞೊಳ್ವರ್ತಿಸುಕಿವರ್ಣನಿಂತೀ ತಿರ್ಯಗ್ಗತಿತ್ವದೊಳ್ (ಶಾದಂಉ. ೭೦೩) ; ಎದುರು ಬಂದಡಸಿರಲು ಧೈರ್ಯಂಗೆಡುವರೇ (ಕಾಶಿರಾ. ೯-೨೭). ಧೈರ್ಯಂಗಿಡು : ಮುಜುಗಿಸೆ ಪರೀಷಹಂಗಳ್ ನೞ್ ಧೈರ್ಯಂಗಿಡುವರನ್ಯಯತಿಗಳ್ (ಸಮುಪ. ೭-೨೦) ; ನಿಷ್ಕಂಪಿತಶರೀರನಾಗಿ ಧೈರ್ಯಂಗಿಡದಿರಲ್ವೇಟ್ಟುಂ (ವರ್ಧಪು. ೧೨-೧೧೭). ಧೈರ್ಯಗೆಡು : ಇವನ ಕಡುನಿಬ್ಬರದ ಧಾಳಿಗೆ ಧೈರ್ಯ [ಪಾಠಾಂ. ಧಾತು]ಗೆಟ್ಟುದು ಕೂಡೆ ಪರುಸೇನೆ (ಕುವ್ಯಾದ್ರೋ. ೧೭-೧೨). [ ಧೈರ್ಯ + ಕೆಡು$_1$ ]

ಧೈರ್ಯಕ್ಷತಿ (ನಾ). ಕೆಚ್ಚಿನ ನಾಶ,–ನಷ್ಟ ; ಎದೆಗೇಡು ; ಅಧೈರ್ಯ : ದುರ್ಯೋಧನನ ಮನದ ಧೈರ್ಯಕ್ಷತಿಗೆ ಮನಃಕ್ಷತನಾಗಿ ಸಿಗ್ಗಾಗಿ ತಲೆಯೂಬಾಗಿ ಧರ್ಮನಂದನನಿರೆ (ಗದಾಯು. ೭-೩೯೭). [ ಧೈರ್ಯ + ಕ್ಷತಿ ]

ಧೈರ್ಯಗುಂದು (ಕ್ರಿ). ಧೈರ್ಯಕುಗ್ಗು : ಅಸಮಸಾಹಸಿ ಧೈರ್ಯ ಗುಂದದೆ ದೆಸೆಯ ನೋಡದೆ ಕಾದುತಿರೆ (ಕಾಶಿರಾ. ೨೭-೩೨).

[ ಧೈರ್ಯ + ಕುಂದು$_1$ ]

ಧೈರ್ಯಗುಣ (ನಾ). ಸ್ಥಿರತ್ವ ; ನಿಶ್ಚಲತೆ : ಕ್ಷಿತಿಪತಿಯ ಧೈರ್ಯಗುಣ ಪರ್ವತಮಂ ತಱಗೆಲೆಗಳೊಟ್ಟಲಂ ತೂಳ್ದುವವೋಲ್ ಅತಿವೇಗದ ಪಾಱಿಸಿದುದು ಸುತವಿರಹಪ್ರಳಯಪರುಷಪವನಾಪಾತಂ (ಚಂದ್ರಪ್ರ. ೫-೯).

[ ಧೈರ್ಯ + ಗುಣ ]

ಧೈರ್ಯಗೆಡಿಸು (ಕ್ರಿ). ಭಯಂಪಡಿಸಂ ; ಎದೆಗೆಡಿಸಂ : ಜಝ್ಝರದ ಡಿಂಡಿಮ ಡಮರು ಪಟಹದ ಧರಧುರದ ದನಿ ಧೈರ್ಯಗೆಡಿಸಿತು ಸಕಲಸಾಗರವ (ಕುವ್ಯಾಕ. ೧೦-೮). [ ಧೈರ್ಯ + ಕೆಡಿಸು$_1$ ]

ಧೈರ್ಯಗೆಡು 'ಧೈರ್ಯಂಗೆಡು' ನೋ.

ಧೈರ್ಯಗೊಳಿಸು (ಕ್ರಿ). ಧೈರ್ಯವನ್ನು ತುಂಬು.

[ ಧೈರ್ಯಗೊಳ್ಳು + – ಇಸು$_3$ ]

ಧೈರ್ಯಗೊಳ್ಳು (ಕ್ರಿ). ಕೆಚ್ಚನ್ನು ಪಡೆದುಕೊಳ್ಳು, – ಹೊಂದು ; ಧೈರ್ಯಶಾಲಿಯಾಗು. [ ಧೈರ್ಯ + ಕೊಳ್ಳು$_1$ (< ಕೊಳ್$_1$) ]

ಧೈರ್ಯದರಿದ್ರ (ನಾ). ಕೆಚ್ಚನ್ನು ಕಳೆದುಕೊಂಡವನು ; ಎದೆಗುಂದಿದವನು ; ಎದೆಗೇಡಿ : ಘನವಿಕರ್ಮದ ವಿಲಗದಲಿ ನಿಜತನುಜಶೋಕದ ತಗಹಿನೊಳಗರ್ಜನನು ಧೈರ್ಯದರಿದ್ರನಾದನು (ಕುವ್ಯಾದ್ರೋ. ೮-೩೨).

[ ಧೈರ್ಯ + ದರಿದ್ರ ]

ಧೈರ್ಯನಿಧಿ (ನಾ). ಕೆಚ್ಚಿನ ಆಗರ,–ಆಶ್ರಯಸ್ಥಾನ ; ಬಹಳ ಧೈರ್ಯಶಾಲಿ ; ಅಚಲವಾಗಿರುವವನು : ಧೈರ್ಯನಿಧಿ ಕೊಂಡಕುಂದಾಚಾರ್ಯರ ಚರಣಂಗಳೊಲೆದು ನೆಲಮುಟ್ಟದ ತಾತ್ಪರ್ಯಮನಱಿದಂ (ಅರ್ಥನೇ. ೧-೧೪) ; ಅಡಿಗೆಱಗಿ ನಡೆದನಾ ಧೈರ್ಯನಿಧಿ ಭೂಪಾಲನು (ಹಪಕಾ. ೮-೭೦).

[ ಧೈರ್ಯ + ನಿಧಿ ]

ಧೈರ್ಯಪರ (ಗು). ೧. ಧೀರತ್ವವನ್ನು ಹೊಂದಿದ ; ಧೀರನಾದ : ಧೈರ್ಯಪರ ಗೃದ್ಧಪಿಂಛಾಚಾರ್ಯ ಜಟಾಸಿಂಹನಂದಿ ಜಗತೀಖ್ಯಾತಾಚಾರ್ಯ ಪ್ರಭಾವಮುತ್ಕೃಷ್ಟಯ್ಯಮುದಂ ಪೊಗಳ್ವುದಬ್ಜಜಂಗಮಸಾಧ್ಯಂ (ಮಹಾನೇ. ೧-೧೪). (ನಾ). ೨. ಧೀರ ; ಅಚಲನಾಗಿರುವವನು : ಧೈರ್ಯಪರರ್ಸ್ವಪರತಪಸ್ಕಾರ್ಯರ್ ತತ್ತ್ವಾರ್ಥಕರ್ತೃಗಳ್ ಜಿನಮತತಾತ್ಪರ್ಯರ್ (ಸುಕುಮಾ. ೧-೧೩). [ ಸಂ. ]

**ಧೈರ್ಯಯುತ** (ನಾ). ಧೈರ್ಯವರ: ಧೈರ್ಯಯುತರ್ಧರಸೇನಾಚಾರ್ಯರ್ . . . ದಯಗೆಯ್ಗೆ ವಿಮಳರತ್ನತ್ರಯಮಂ (ಧರ್ಮಾಮೃ. ೧-೦೨). [ಸಂ.]

**ಧೈರ್ಯವಂತ** (ನಾ). = ಧೈರ್ಯಶಾಲಿ: ಸುಕುಮಾರಸ್ವಾಮಿಯುನಹೊಗೂರಾ ಅಹೊ ಮಹಾಪುರುಷ ಅಹೊ ಧೈರ್ಯವಂತ ಅಹೊ ಸಂಸಾರಭೀರು . . ಎಂದು ದೇವತೆಗಳ್ ಪೊಗಟ್ಟ ಕಳಕಳಧ್ವನಿಯುಮಂ ದೇವದುಂದುಭಿಯ ರವಮುಮಂ ಯಶೋಭದ್ರೆ ನೋಡಿ (ವಡ್ಡಾ. ೨೯-೨೧). [ಸಂ. ಧೈರ್ಯವತ್]

**ಧೈರ್ಯಶಾಲಿ** (ನಾ). ದಿಟ್ಟತನವುಳ್ಳವನು; ಕೆಚ್ಚು ಉಳ್ಳವನು: ಅವನು ತುಂಬ ಧೈರ್ಯಶಾಲಿ (ರೂಢಿ). [ಸಂ. ಧೈರ್ಯಶಾಲಿನ್]

**ಧೈರ್ಯಸ್ಖಲನ** (ನಾ). ಎದೆಗೆಡುವಿಕೆ; ಹೆದರುವಿಕೆ: ಜಲಪ್ರಪ್ರವಾಟ್ಟು ಧೈರ್ಯಸ್ಖಲನಾರ್ಥಂ ಬೆಟ್ಟುಗಳ್ ಸಿಡಿಲ್ದೊಡೆದುಂ ಪರ್ವತಗಳೆಬಗಿದೊಡೆ ಯೋಗೋತ್ಕಲಿತಮನರ್ ಬಲುಲೋಕರ್ವರಭಾಗವದೊಳ್ (ಪಂಪಭಾ. ೩-೧೦೨). [ಧೈರ್ಯ + ಸ್ಖಲನ]

**ಧೈರ್ಯಸ್ಥ** (ನಾ). ಭಯಪಡದವನು; ಧೈರ್ಯವನ್ನು ಕಳೆದುಕೊಳ್ಳದವನು; ಧೈರ್ಯಶಾಲಿ: ಅವನು ಬಹಳ ಧೈರ್ಯಸ್ಥನಾದ ಮನುಷ್ಯ (ರೂಢಿ). [ಸಂ.]

**ಧೈರ್ಯಾವಲಂಬೆ** (ನಾ). ದಿಟ್ಟತನವನ್ನು ಅವಲಂಬಿಸಿರುವವಳು; ಧೀರೆ: ಧೈರ್ಯಾವಲಂಬೆಯೆನಿಸಿದ ಭಾರ್ಯೆಯು ಧೀರಾಭಿಧಾನಮಂ ತಾಳ್ದುಗುಂ (ಶೃಂಗಾರ. ೩-೩೭). [ಸಂ. ಧೈರ್ಯಾವಲಂಬಾ (ಧೈರ್ಯ + ಅವಲಂಬ + –)]

**ಧೈವತ** (ನಾ). [ಸಂಗೀತ] ಸಪ್ತಸ್ವರಗಳಲ್ಲಿ ಆರನೆಯದು: ಷಡ್ಜ ವೃಷಭ ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾದಗಳೆಂಬ ಸಪ್ತಸ್ವರಮುಮಂ (ಅಜಿತ. ೫-೩೦ವ); ಶೃಂಗಾರಾದ್ಯರ್ಥಂ ಕಕುಭಜನಿತಂ ಧೈವತಂ ಸಂಗ್ರಹನ್ಯಾಸಾಂಗಂ . . . ಮಧ್ಯಮಂ ಮಂದ್ರಮೊಬೀ ಪಾಂಗಿ ವೇಳಾವಳಿಯನೊಲವಿಂ ಪೌರ್ಧ ಪಾಡುತ್ತುಮಿರ್ದಳ್ (ರಾಜಶೇ. ೨-೩೦); ಮಧ್ಯಮ ಧೈವತ ಷಡ್ಜ ಪಂಚಮ ನಿಷಾದ ರುಷಭ ಗಾಂಧಾರಂಗಳೆಂಬ ಸಪ್ತಸ್ವರಸಂಯೋಗಸಂಜಾತ ದೇಶೀಯರಾಗಂಗಳಂ . . . ವಲಿ ಹವಣಿ ರಾಯುಗಳಿಂದಾಲಾಪನಂಗೆಯ್ದು (ರಾಜಪು. ೯-೧ವ); ಷಡ್ಜಮಾ ಋಷಭಮಾ . . . ಧೈವತಂ ಸನಿಷಾದವೋರಂತೆ ಸಪ್ತಸ್ವರಂಗಳಕ್ಕು (ಮಂಗರಾ. ೨೩-೩); ಕ್ರಮವಾಗಿ ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ ಮತ್ತು ನಿಷಾದ ಎಂದು ಸಪ್ತಸ್ವರಗಳ ಹೆಸರುಗಳು (ಸಂಗೀದಂ. ೧೫). [ಸಂ.]

**ಧೊಕ್** (ನಾ). ಒಂದು ಅನುಕರಣ ಶಬ್ದ.

**ಧೊಕ್ಕನೆ** = ಧೊಕ್ ಎಂಬ ಶಬ್ದದೊಡನೆ: ಪೇರುರಮಂ ಧೊಕ್ಕನೆ ಕುತ್ತಿ ಚಕ್ಕನೆ ಭುಜದ್ವಂದ್ವಂಗಳಿಂದಪ್ಪಿ (ಎಕ. VI, ಕಡೂರ್. ೭೫-೩೭; 1196).

**ಧೊಕ್ಕನೆ** (ಅ). ಕೂಡಲೇ; ತಕ್ಷಣ; ಬೇಗನೆ: ಇಕ್ಕಲ್ ಧೂಮಪಾಸದು ತಾಂ ಧೊಕ್ಕನೆ ಫಣಿವೃಶ್ಚಿಕಾದಿವಿಷಮಂ ಕಳೆಗುಂ (ಖಮದ. ೧೭-೯೪); ಧೊಕ್ಕನೆ ಪೊಜಿಮಟ್ಟು ಶ್ರೀಕೃಷ್ಣ ಸಲೆ ಪೌಜಕ್ಕ ಪೇರಿಸಿದ ಭೂಭುಜರ (ಮೋಹತ. ೩೭-೩). 'ದೊಕ್ಕನೆ' ಪಠಾ. [ಧೊಕ್ + –ಅನೆ$_1$]

**ಧೊಣೆ** 'ದೊಣೆ$_1$' ನೋ.

**ಧೊಪ್** (ನಾ). ಒಂದು ಅನುಕರಣ ಶಬ್ದ.

**ಧೊಪ್ಪನೆ** = ಧೊಪ್ ಎಂಬ ಶಬ್ದದೊಡನೆ: ಧೊಕ್ಕನೆ, ಧೊಪ್ಪನೆ [ಪಾಠಾಂ. ಧೋಪನೆ] ಭೋಂಕನೆ (ಭಾಷಾಭೂ. ೧೧ ವೃತ್ತಿ); ಅನುಕರಣಕ್ರಿಯೆನಿಪ್ಪನೆ . . . ಧೊಪ್ಪನೆ [ಪಾಠಾಂ ಧೂಪ್ಪನೆ, ಧೊಪ್ಪನೆ] ಪೊಟ್ಟನೆ (ಶಮದ. ೧೮ ಸೃಷೂ).

**ಧೊಪ್ಪನೆ** (ಅ). ಧೊಪ್ ಎಂದು ಶಬ್ದವಾಗುವಂತೆ; ಒಮ್ಮೆಲೆ: ಕಿರುಗಿಲಕಂರರುಬ್ಬರಿಸುತ್ತೆ ಪರಿತಂದು ಚರಣತಳದಲ್ಲಿ ಧೊಪ್ಪನೆ ಕೆಡೆದು (ಕಿರಾರ. ದೇ. ೨೫-೨೧); ಸುಭದ್ರೆ ನಡೆತಂದು ನೆಲಕೆ ಧೊಪ್ಪನೆ ಕೆಡೆದು ಸಭೆಯೊಳು ಹಲುಂಬಿದಳು (ಕುಮಾ.ದಶ್ರೀ. ೬-೧೩); ಧೊಪ್ಪನೆ ಕೆಡೆದು ಮೊರೆದನು (ಶಾಕಿರಾ. ೨೨-೫೬): ಹಾ ರಘುಧೀರ ಹಾಹಾಯೆಂದು ಧೊಪ್ಪನೆ ಕೆಡೆದಳಾ ತರೆ (ಕಿರಾರಾ. ೪-೫-೨).

**ಧೊಪ್ಪಧೊಪ್ಪನೆ** (ದ್ವಿರುಕ್ತಿ): ಧೊಪ್ಪಧೊಪ್ಪನೆ ಬಿಗ್ಗಿಂದಿದುರಿತೋಡು ಪಾಡುಗಳಂ ಕರಂ ತಪ್ಪುವಂತಿರೆ ಮೆಲ್ಲಿದೆ . . . (ವೃಷ. ೧೫-೬೪). [ಧೊಪ್ + –ಅನೆ$_1$]

**ಧೊಪ್ಪಳಿಸು** (ಕ್ರಿ). ಧೊಪ್ ಎಂದು ಉರುಳು, –ಕುಸಿ: ಎರಡನೆಯ ಕ್ಷಣಕ್ಕೆ 'ಅಯ್ಯೋ' ಎಂದು ಕಿರುಚಿ ನೆಲಕ್ಕೆ ಧೊಪ್ಪಳಿಸಿದನು (ಕಾದಂಕಾ. ೨೫); ಕಣಿವೆಯ ಎದುರಿಗೆ ನಿಲ್ಲಿಸಿದ ಪೊದೆಮಂಚದ ಮೇಲೆ ಅದು ಧೊಪ್ಪಳಿಸಿ ಎರಗಿತು (ಕಾದಂಕಾ. ೩೦೭). [< ಧೊಪ್ + –ಇಸು$_{16}$]

**ಧೊರಯ್ಗ** (ನಾ). (?): ಕನ್ನಕವಾಳಿನ ಧುಕೆ ಧೊರಯ್ಗಂ ವೈರಿ ಕಾಳಾನಳಂ ಚಣ್ಣಮಾರ್ತ್ತಣ್ಣಂ (ಎಕ. VIII, ಸೊರಬ. ೯೯-೨; 912); ಗುಣಕೆ ಧೊರಯ್ಗ ಸುಭಟಚೂಡಾಮಣಿ ಸತ್ಯರತ್ನಾಗರಂ ತೇಜಾಗರಂ ಶ್ರೀಮತ್ಸಾಸ್ತ್ರವರ್ಮ (ಎಕ. VIII, ಸೊರಬ. ೪೭೭-೧೧; 991). [?]

**ಧೊರೆ** 'ದೊರೆ$_3$' ನೋ.

**ಧೊರೆಪೂಜೆ** (ನಾ). ವೈಭವದಿಂದ ಮಾಡುವ ಪೂಜೆ, –ಆರಾಧನೆ: ಸುರಹರಿ ನಮ ದೇವರ ಕಾಲೆ ಧೊರೆಪೂಜೆ ಮಾಡುವೆನ (ಮುದ್ದಿಗೆ. ೩). [ಧೊರೆ (< ದೊರೆ$_3$) + ಪೂಜೆ$_2$]

**ಧೋ** (ನಾ). ಒಂದು ಅನುಕರಣ ಶಬ್ದ. '. . .' ಪಠಾ.

**ಧೋಧೋ** (ದ್ವಿರುಕ್ತಿ): ರಾತ್ರಿಯಲ್ಲಿ ಧೋಧೋ ಮಳೆ ಬದ್ದಿತು (ಬಾಳ್ವಜಾ. ೦೨); **ಧೋಧೋಕಾರ** = ಮಳೆಯು ಹೊಡೆತದ ಶಬ್ದ: ಏಕಪ್ರಕಾರವಾಗಿ ಸುರಿಯುವ ಮಳೆಯ ಧೋಧೋಕಾರ (ವಾತ್ಸಲ್ಯ. ೨).

**ಧೋಂಕಾರ** (ನಾ). ಒಂದು ಅನುಕರಣ ಶಬ್ದ: ನಮ್ಮ ತನು ಮನ ಆತ್ಮಗಳಲ್ಲಿ ಆ ಧೋಂಕಾರದ ಶಂಖನಾದ ದುಮುದುಮಿಸತೊಡಗಿತು (ಮುಕ್ತಿ. ೫೫).

**ಧೋಕಾ, ಡೋಕಾ, ಧೋಕಾ** (ನಾ). ೧. ಅನರ್ಥ; ಅಪಾಯ: ಧೋಂಡೂ ಬಾಯಿಗೆ ತುಳಸಿಯನ್ನು ಕಸಬಿನ ಕಣದಲ್ಲಿ ನಿರಂತರ ಬಿಡುವುದು ಧೋಕಾದ್ದೆಂದು ಅನಿಸತೊಡಗಿತ್ತು (ದೀಪಹ. II, ೪೦೭). **ಡೋಕಾ:** (ಹ). **ಧೋಕಾ:** ೨. ಮೋಸ; ವಂಚನೆ; ಅದರಲ್ಲೇನು ಧೋಕಾ ಇಲ್ಲ (ಒಡಮು. ೩). [← ಹಿಂ. ಧೋಕಾ, ಧೋಖಾ; ಮರಾ. ಧೋಕಾ]

**ಧೋತರ** 'ಧೋತ್ರ' ನೋ.

**ಧೋತಿ** 'ಧೋವತಿ' ನೋ.

**ಧೋತ್ರ, ಡೋತರ, ದೋತ್ರ, ಧೋತರ** (ನಾ). ೧. ಉಡುವ ಬಟ್ಟೆ – ವಸ್ತ್ರ: ಕೂಡೆ ಕುಳ್ಳಿರ್ದನಖಿಳ ವಿಪ್ರರ ನೋಡಿ ಮೆಲ್ಲನೆ ಧೋತ್ರ ದರ್ಭೆ . . . ಗೂಡ ಸಂವರಿಸುತ್ತ ಸಭೆಯಿಂದೆದ್ದನಾ ಪಾರ್ಥ (ಕುಮಾವ್ಯಾ. ೧೫-೯); ನೆಲಕೆಳಲ್ಪ ಬಹಿರ್ವಾಸವಲ್ಕ ಧೋತ್ರಂಗಳ (ವೀರವಿ. ೪-೧೫); ಕಟ್ಟಿದಿರ ನೊಳ್ ತೋರ್ಪ ಮಟ್ಟಿಯ ಮರಾಳ್ ವಿಪ್ರರುಟ್ಟ ಧೋತ್ರಂಗಳಂ ನೆರೆದು ಭಂಗಿಸಿ (ದಕಪು. ೬೨-೭೫); ಧೋತ್ರಗಳನ್ನು ಉಡುಗೊರೆಯಾಗಿ ಕಳಿಸಿದ್ದಳು (ದೀಪಿಕಾ. ೫). ೨. ಭುಜದ ಮೇಲೆ ಹಾಕಿಕೊಳ್ಳುವ ವಸ್ತ್ರ; ವಲ್ಲಿ; ಉತ್ತರೀಯ: "ವಿಮರ್ಶಸ್ಥಿತಂ ಧೋತ್ರಮುಕ್ಕು" (ರಾಜಗಣ. ೭೭-೯); ತೆಗೆ ಶಿಲವನಾಪಾಸನದ ಕೊಳವಿನೆಳ ಧೋತ್ರವ ವಸ್ತ್ರವ (ಶಿವರಾ. ೫-೮-೭೦); ಜರಿಯ ಧೋತ್ರವನ್ನು ಹೊದ್ದುಕೊಂಡು ಸ್ವಯಂ ಮೆಚ್ಚು ನಾಯಕರು ದಯಮಾಡಿಸಿ (ಕೈಲಾಸು. ೧೪೭). **ದೋತರ:** ೧. ದೋತರ ಉಟ್ಟುಕೊಂಡು ಬೀದಿಯೊಳಗೆ ನೀರು ಹೊತ್ತುಕೊಂಡು ಹೋಗುವ

ಯಾವುದೊ ಅನಾಥ ಬಡ ವಿಧವಾ ಕಾಣಸ್ತ್ರಾಳೆ (ಸಂಧ್ಯಾರಾ. ೪೫); 'ಈತನ ತಪವಿನ್ನೂ ತೀರದಿರೆ ವಿಘ್ನಕೆ ನಿಮ್ಮಯ ವಾಣಿಯ ತಂದಿರೆ' ಎನ್ನುವೆ ನಾ ಮುನಿ ದೋತರವೆಳೆದು (ಗಡೀಶ. ೧೧-೨೨೭); ಒಂದು ಚಕ್ಕಡಿಯು ಬರುತ್ತಿತ್ತು . . . ಹಿಂದಕ್ಕೂ ಮುಂದಕ್ಕೂ ದೋತರ ಬಿಗಿದುದರಿಂದ ಅದರಲ್ಲಿ ಯಾರಿರುವರೆಂಬುದು ತಿಳಿಯುತ್ತಿರಲಿಲ್ಲ (ರಕ್ತಾಧ್ಯ. ೧೨). ೨. ಧಡಿಯ ದೋತರವನ್ನು ಹೆಗಲ ಮೇಲೆ ಸರಿಯಾಗಿ ಒಗೆದುಕೊಂಡು ಒಂದು ಮೂಲೆಗೆ ಹೋಗಿ ಬಾಯೊಳಗಿನ ತಾಂಬೂಲವನ್ನು ಉಗುಳಿ ಬರುತ್ತ ನುಡಿದ (ಅಶೋಕ. ೪). ದೋತ್ರ: ೧. ಎಸೆವ ದೋತ್ರದಿನುಜ್ವಲಿಪ ಕಟಿದೇಶಂ (ಪದ್ಮರಾ. ೫-೧೭); ನುತ ಪಲ್ಲವಮ ದೋತ್ರಮುಂ ಬಹಿರ್ವಾಸಮುಂ ತತಚಿಕಸ್ವರಮ ವೇದಸ್ವರಂ . . . ಎಸೆಯೊಂದಶೋಕವೃಕ್ಷಂ ಮೆಱೆದುದು (ಪದ್ಮರಾ. ೨-೨೮); ದೋತ್ರ ದೊಡ್ಡದಾದರೆ ಗೋತ್ರ ದೊಡ್ಡದೇ (ಗಾದ). ಧೋತರ: ೧. ಹಳೆಯ ಮಾದರಿಯ ಅಂಗಿ, ಅಂಥದೇ ಕೋಟು, ಒಂದು ಧೋತರ (ರತ್ನಗೋ. ೫); ಪಾದಗಳನ್ನೂ ಮುಚ್ಚುವಂತೆ ಉಟ್ಟ ಶುಭ್ರವರ್ಣದ ಧೋತರ (ಆಚೋಲೀ. ೧೩೧); ನನಗೆ ಒಂದು ಜೋಡಿ ಧೋತರ ಬರುತ್ತವೆ ಎಂದು ಮತ್ತಷ್ಟು ಹಿಗ್ಗಾಯಿತು (ವ್ಯನಿ. ೧೭೯); ಮೈಯಾಗೆ ಒಂಟೀ (ಪಟ್ಟಿ) ಧೋತರವಾ ಧರಿಸ್ಯಾರೋ (ಹುಟ್ಟಹ. ೧೨೦); ಕೋಟು ಶರ್ಟುಗಳನ್ನು ತೆಗೆದು, ಧೋತರದ ಮೇಲೆ ಮಲಗಿದ್ದ ರಾಯರು (ಫಲಸಂ. ೫೦). ೨. ಧೋತರದಿಂದ ಹಣೆಯ ಮೇಲಿನ ಬೆವರು ಹನಿಗಳನ್ನು ಒರೆಯಿಸಿಕೊಂಡರು (ತುಂಡುಟಿ. ೧೦೦): ಧೋತರವನ್ನು ಹೊದ್ದುಕೊಂಡು ಶೆಟ್ಟಿಯ ಮನೆಗೆ ಹೋಗೋಣ ನಡೆಯಿರಿ (ಹಬ್ಬಬ. ೧೯). 'ಧೋವತಿ' ಪರಾ.

[ ←ಮರಾ. ಧೋತ್ರ್, ಧೋತ್ರಾ, ಧೋತರ್ : ಹಿಂ. ಧೋತರ್, ಧೋತರಾ./ತುಳು. ದೋತ್ರ ]

ಧೋಬಿ, ಡೋಬಿ, ದೋಬಿ, ದೋಭಿ (ನಾ). ಬಟ್ಟೆಗಳನ್ನು ಒಗೆದು ಮಡಿಮಾಡುವ ಕಸಬಿನವನು; ಅಗಸ; ಮಡಿವಾಳ; ರಜಕ: ನಮ್ಮ ಧೋಬಿ ಬಟ್ಟೆಗಳನ್ನು ಚೆನ್ನಾಗಿ ಒಗೆಯುತ್ತಾನೆ (ರೂಢಿ). ಡೋಬಿ: ಅಗಸ, ಡೋಬಿ, ಮಡಿವಾಳ (ತುಳುನಾ. ೧೭೩); ರೈಲಿನಲ್ಲಿ ಹಜಾಮರಿದ್ದಾರೆ ಡೋಬಿಗಳೂ ಇದ್ದಾರೆ (ಅಳನಿ. ೩). ದೋಬಿ: ಅದಲು ಬದಲಾಗಿ ಹುದೀಯಂಗಿಯೆನ್ನುತ ದೋಬಿಯ ಬರಿದೆ ದೂರುವರೆ (ಚಂದ್ರವೀ. ೧೦೭-೨೨). ದೋಭಿ: ದೇವಭಾವದ ಹೊಳೆಗೆ ಮರುಳುಕಡ ಸಾಬಿ, ಕಲ್ಲು ಕಡವಮ್ಮ ಗುಡಿ ಭಟ್ಟನೇ ದೋಭಿ (ಗಡೀಶ. ೭೦-೪).

[ ←ಹಿಂ. ಮರಾ. ಧೋಬೀ ]

ಧೋಯೆನ್ (ಕ್ರಿ). ಧೋ ಎಂದು ಕೂಗು: ಈಯುಲಿಜೀಯುಲ್ ಶರಣ್ಬುಗೆ ಕಾಯರ್ ಕ್ಷತ್ರಿಯರೆ ಬಲ್ಲರಲ್ಲದೆ ಬ್ರಹ್ಮರ್ ಭೋಯೆನಲುಂ ಬಲ್ಲರ್ ಕೊಲೆ ಧೋಯೆನಲುಂ ಬಲ್ಲರಿಜೀಯುಲವರೆತ್ತಱಿವರ್ (ಗದಾಯು. ೯-೧೭). ℗ ಗದಾಯುದ್ಧಸಂಗ್ರಹದಲ್ಲಿ ತೀನಂಶ್ರೀಯವರು ಸ್ವೀಕರಿಸಿರುವ ಪಾಠಾಂತರ 'ಅವಿಧೋ' ಎನ್ನುವುದು. ಈ ಶಬ್ದವನ್ನೂ ನಿಘಂಟಿನಲ್ಲಿ ಸ್ವೀಕರಿಸಲಾಗಿದೆ. 'ಅವಿಧೋ' ಪರಾ. [ ಧೋ + ಎನ್$_1$ ]

ಧೋರ$_1$ 'ದೋರ$_3$' ನೋ.

ಧೋರ$_2$ (ನಾ). ಒಂದು ಬಗೆಯ ವಾದ್ಯ: ನಗಾರಿ: ಭೇರಿ: ಕಾಹಳವೆಂಬ ಗೌರಿಕಾಳೆ ದುಂದುಭಿಯೆಂಬ ಧೋರ . . . ವಾದ್ಯಂಗಳಂ (ವಿವೇಕ. ೨೩೭). [ ? ]

ಧೋರಣ (ನಾ). ೧. (ಆನೆ, ಕುದುರೆ, ರಥ ಮೊದಲಾದ) ವಾಹನ: "ಅದಿದೆನ್ನದೆ ವಾಹನಮಾವುದಾದೊ[ಡಂ] ಪತ್ರ ಯುಗ್ಯ ಧೋರಣನಾಮಂ" (ಪಸ್ತುಕೋ. ೮೮-೪೦); "ಪಕ್ಷಮಾ ವಾಹನಂ ಧೋರಣಂ ರಥ ಹಯಂ" (ಮಂಗರಾ. ೮೫-೨೫); "ಯಾನಂ, ಯುಗ್ಯಂ, ಪತ್ರಂ, ಧೋರಣಂ ೪ ಸರ್ವಾವಾಹನಂ – ನಾನಾ ಬಗೆಯಾದ ಸಕಲ ವಾಹನಗಳಿಗೂ ಹೆಸರುಗಳು" (ಸಿದ್ಧಾಂತಿ. ೨೫೪). ೨. ಕುದುರೆಯ ನಡಗೆಯಲ್ಲಿ ಒಂದು ಪ್ರಕಾರ. ೩. ಚುರುಕಾಗಿ ಹೋಗುವುದು; ಚಟುವಟಿಕೆಯಿಂದ ನಡೆಯುವುದು. ೪. ಗುರಿ; ಧ್ಯೇಯ: (ಕ). ೫. ಕ್ರಮ; ಧಾಟಿ: (ಕ). ೬. ಶೈಲಿ; ರೀತಿ: (ಕ). ೭. ವಿಚಾರಧಾರೆ; ಆಲೋಚನೆಯ ಮಾರ್ಗ: ಎಲ್ಲೋ ವಿಶ್ವಾಸ ತಪ್ಪಿ ಬಂದಿರಬೇಕು ಎಂಬ ಧೋರಣದಿಂದ ಆ ಆಗಂತುಕನನ್ನು ಅವರು ಪ್ರಶ್ನಿಸಿದ ಹಾಗಿತ್ತು (ಹೊಸಕ್ಷಿ. ೪೧); ಆದಷ್ಟು ವಸತಿಗಳನ್ನು ತಪ್ಪಿಸಿ ದಾರಿ ಹಿಡಿಯುವ ಧೋರಣವನ್ನಿಟ್ಟುಕೊಂಡೆವು (ಮೋದಿಮ. ೧೨೯). ೮. ವರ್ತನೆ; ವೃತ್ತಿ; ನಡವಳಿಕೆ: ತಮ್ಮ ಸಂಸ್ಥೆಯ ಆಡಳಿತವನ್ನು ನೋಡಲು ಧೋರಣವನ್ನು ಕಾಯಲು ನಿರ್ದೇಶಕರ ಮಂಡಲವೊಂದನ್ನು ಆರಿಸುತ್ತಾರೆ (ತರ್ಕಡಿ. ೪೭). ೯. ಒಲವು; ಪ್ರವೃತ್ತಿ: (ಕ). [ ಸಂ. ]

ಧೋರಣೆ (ನಾ). ೧. (ರಚಿಸುವುದರಲ್ಲಿ) ಒಳ್ಳೆಯ ಶೈಲಿ,-ರೀತಿ: (ಕ). ೨. ಧಾಟಿ; ಕ್ರಮ: ಮ್ಯಾನೇಜರರಿಗೆ ಅಧ್ಯಕ್ಷರ ಧೋರಣೆ ಸರಿ ಬೀಳಲಿಲ್ಲ (ದುಂಬಿಕ. ೧೫೯); ವಿಶಿಷ್ಟಾದ್ವೈತ ಧೋರಣೆಯು ಇಲ್ಲಿ ಒಂದು ವೈಲಕ್ಷಣ್ಯವನ್ನು ತೋರಿಸುತ್ತದೆ (ಭಾರತ. ೨೫೯); ಈ ಪ್ರಜಾಸತ್ತಾತ್ಮಕ ಧೋರಣೆಯು ಸಾಹಿತ್ಯವನ್ನಾದರೂ ಆವರಿಸಿದೆ (ಪ್ರಬಂಧ. ೧); ನೀವು ಈಗ ಎಂತಹ ಅನುಚಿತ ಧೋರಣೆಯನ್ನು ತಳೆದಿದ್ದೀರಿ (ಹಬ್ಬಬ. ೨೨೯); ಇದುವರೆಗೆ ಕಾಂಗ್ರೆಸ್ ಮುಂದಾಳುಗಳ ಧೋರಣೆಯಲ್ಲಿ ತಿಲಕ್ ನಂಬಿಕೆಯನ್ನಿಟ್ಟಿದ್ದರು (ಸ್ವಾವೀರ. ೫೯). ೩. ವಿಚಾರಧಾರೆ; ಆಲೋಚನೆಯ ಮಾರ್ಗ: ಒಂದೇ ರೀತಿಯ ವಿಚಾರವನ್ನೂ ಧೋರಣೆಗಳನ್ನೂ ಬೆಳಸಿಕೊಂಡು ಬಂದಿದ್ದೇವೆ (ದೂರಸ. ೮೦); ಅವಳಿಗೆ ನನ್ನ ಮಾತುಗಳು, ವಿಚಾರಗಳು ಮತ್ತು ಧೋರಣೆಯ ಬಗ್ಗೆ ಸಂಪೂರ್ಣ ಅರಿವಿದ್ದಿತು (ಜೀಮಂತ. ೨೫೫); ಪತ್ರದ ಧೋರಣೆಯನ್ನು ತಿಳಿದುಕೊಂಡು ದೇಸಾಯರಿಗೆ ಅವಮರ್ಯಾದೆಯಾದಂತಾಯಿತು (ಗಂಮಾಯಿ. ೯೮). ೪. ವರ್ತನೆ; ವೃತ್ತಿ; ನಡವಳಿಕೆ: ಇವರೆಲ್ಲರ ಮಧ್ಯೆ ತಟಸ್ಥ ಧೋರಣೆಯನ್ನು ವಹಿಸುವವಳೆಂದರೆ ಮುದುಕಿ (ಪೈಜಾ. ೧೦೭); ಬರ್‌ಬ್ಯಾಂಕ್ . . . ತನ್ನ ಧೋರಣೆಗಳಲ್ಲಿ ಟೀಕೆ ಅಥವಾ ತರ್ಕಕ್ಕೆ ಅವಕಾಶ ಕೊಡದವನು (ಸಸ್ಯಕ. ೩೨). ೫. ಗತ್ತು; ಠೇಂಕಾರ; ಹಮ್ಮು: ಅವರು ತುಂಬ ಧೋರಣೆಯಿಂದ ಮಾತನಾಡುವರು (ರೂಢಿ); ಅವನು ತುಂಬ ಧೋರಣೆಯ ವ್ಯಕ್ತಿ. (ರೂಢಿ). ೬. ನಿಲುವು: ಈಗಿನ ಸಾಹಿತ್ಯದ ಧೋರಣೆ ಪ್ರಾಚೀನಸಾಹಿತ್ಯಕ್ಕೆ ಹೊಂದುವುದಿಲ್ಲ (ರೂಢಿ); ೭. (ಆಲಂ) ಉದಾಸೀನತೆ; ಅಲಕ್ಷ್ಯ: ದುರ್ಯೋಧನನ ಆಶ್ರಯದಲ್ಲಿದ್ದುಕೊಂಡು ಪಾಂಡವರನ್ನು ಧೋರಣೆಯಿಂದ ನೋಡುತ್ತಿದ್ದನು (ಪಡಭಾ. ೧೮); ರಭಸ ಪ್ರವೃತ್ತಿಯನ್ನೋ ಧೋರಣೆಯನ್ನೋ ಅವಲಂಬಿಸಿದರೆ ತಪ್ಪಾಗುವುದು ಅನಿವಾರ್ಯ (ಕನ್ನಸಂ. ೧೭೩); ಇದಕ್ಕೆ ಬಹುಮಟ್ಟಿಗೆ ಇಂಜಿನಿಯರಿಂಗ್ ಖಾತೆಯ ಧೋರಣೆಯೆ ಕಾರಣ (ಶಿಕ್ಷದ. ೭೩೫). [ ಸಂ. ಧೋರಣ ]

ಧೋವತಿ, ದೋವತಿ, ಧೋತಿ (ನಾ). ಗಂಡಸರು ಉಡುವ ಬಟ್ಟೆ; ಪಂಚೆ; ಧೋತ್ರ: ಬಂದನಿತ್ತಲು ಪಾರ್ವನೊಲಿದಂದು ಪೂಸಿದ ವಿಭೂತಿ ರುದ್ರಾಕ್ಷಿ ಧೋವತಿಯೆಸೆಯೆ (ಕಣ್ವರ. ದೇ. ೧೩೩-೧೫); ಮಿಗಿಲು ಧೋ[ಪಾಠಾಂ. ದೋ] ವತಿ ದರ್ಭೆ ಸಂಬಳಿಗೆಗಳನೊಂದೆಡೆಯಲಿ ಮಡಗಿ (ಬಸಪು. ೫೭-೨೮). ದೋವತಿ: ದೋವತಿಯುಂ ಪಾದರಕ್ಷೆಯುಂ [ಪಾಠಾಂ. ಧೋತ್ರಮುಮಂ ಪಾದರಕ್ಷೆಯುಂ] ಸುತ್ತಿ (ಸಮುಪ. ೧೪-೧೫೪); ಪುಲಿ [illegible] ದೋವತಿಯ ನಿರ್ಮಲಂ . . . ವಿರೂಪಾಕ್ಷನೊಪ್ಪಿದಂ (ಕಾರಿರ. ದೇ. ೨೯೭-೧೭); ಜನ್ನಿವಾರವಂ ನೇರಗಟ್ಟಿ ದೋವತಿಯಂ ಮಲ್ಲಗಾಸೆಯನುಟ್ಟು (ವೃಷವಿ. ೩೮-೯೦ವ). ಧೋತಿ: ಬಟ್ಟೆಗೆ ನಾಲ್ಕು ಧೋತಿಗಳನ್ನು ಕೊಂಡುಕೊಳ್ಳಬೇಕು (ರೂಢಿ). 'ಧೋತ್ರ' ಪರಾ.

[ < ಸಂ ಧೃತವಸ್ತ್ರ ?./ಹಿಂ. ಧೋವತೀ, ಧೋತಿ; ಮರಾ. ಧೋತೀ./ತೆಲು. ದೋವತಿ, ದೋತಿ ]

**ಧೌತ** (ಗು). ೧. ತೊಳೆದ : ಸ್ವಚ್ಛವಮಾಡಿದ ; ಶುಭ್ರಗೊಳಿಸಿದ : ತರುಣೋದಗನಪನಿವರ್ತಕರುಚಿರವೆನಿಸಿರ್ದ ಧೌತಧವಳಾಂಬರದಿಂ ಕರವೆಸೆದಂ . . . ನರೇಂದ್ರಂ (ಕಾದಂಪೂ. ೬೮) ; ಶ್ರೀಮದಮರಮಣಿ ಮುಕುಟರಂಜಿತ ರತ್ನಧಾವಮಾಬುಧಾರಾಧೌತತಾಮರಸಾಂಘ್ರಿಯುಗಲ ವೀರನಾಥನುದ್ದಾಮಸುಖವನೀವುದೆಮಗೆ (ಶ್ರೀಪಾಲ. ೧-೧). ೨. ಬೆಳ್ಳಗಿರುವ ; ಕಾಂತಿಯುಕ್ತವಾದ : ಎಂದಾಗಳ್ ಅಮಿತತೇಜಂ ದಂತಾಂಶು ಧೌತಕಪೋಲಫಳಕನಾಗಿ (ಆದಿಪು. ೪-೮೦ವ). (ನಾ). ೩. ತೊಳೆದುದು ; ಶುಭ್ರವಾದುದು ; ಸ್ವಚ್ಛವಾದುದು : "ನಿರ್ಣಿಕ್ತಂ, ಪ್ರಕ್ಷಾಳಿತಂ, ಧೌತಂ – ಈ ೩ ತೊಳೆಯಲ್ಪಟ್ಟುದು" (ಹಲಾಯು. ೬೮-೨೫೪) ; "ಧೌತಮೆನಲು ಪ್ರಕ್ಷಾಳಿತಮೆಂದೆನಲು ತೊಳೆವುದಕ್ಕೆ ನಾಮಂ" (ಮಂಗರಾ. ೬೬-೮) ; ಅಸಿಲತೆ ರಣಧೌತಮದಿ' [ಪಾಠಾಂ. ರಣಧೌತಿಮದಿಂ] ಮಸಿಮುಸುಡನ ಜೀವಕಚ್ಛೆನಿಂ ಕಂದಿದೊಡೆಣ್ದೆಸೆಯನಡರ್ದನ್ನ ಕೀರ್ತಿಪ್ರಸರದ ಕುಡಿ ಕೃಪೆಸೊರೆಯ ಕುಡಿಯವೊಲಕ್ಕುಂ (ಯಶೋಧ. ೨-೫೫ . ೪. ಬೆಳ್ಳಗಿರುವುದು: "ಧೌತಂ ಸಿತಂ ಗೌರಮರ್ಜುನಂ . . . ನಿಜ ಶ್ವೇತಮಕ್ಕು" (ಮಂಗರಾ. ೧೩೧-೨೨). ೫. ಬೆಳ್ಳಿ: ರಜತ. ೬. ಮಡಿ ಮಾಡಿದ ಬಟ್ಟೆ; ಒಗೆದ ಬಟ್ಟೆ: ಉದಯದಲ್ಲೆದ್ದು ಸುಸ್ನಾನಮಂಗೈದು ಚಂದದಿಂ ಧೌತಮುಮನುಟ್ಟು (ನವಮೋ. ೧೧-೬) ; ಅಸುರೇಂದ್ರ ಸ್ನಾನವ ಮಾಡಲಾದು ತರುಣಿಯರು ಧೌತಮನೀಯ್ಕಲಳ ಪಟ್ಟು ಮಣಿಖಚಿತಪಾವುಗೆಗಳಾ ತ್ವರಿತದಿಂದೀಯ್ಕಲವನಡಿಯುಗಂಗಳಿಗರ್ಚಿ (ನವಮೋ. ೧೮-೪೦). ೭. (ಆಲಂ) ಮಸೆದುದು ; ಹರಿತ ಮಾಡಿದುದು : "ನಿಶಾತಂ, ನಿಶಿತಂ, ಧೌತಂ, ತೇಜಿತಂ – ಈ ೪ ಮಸೆದುದು" (ಹಲಾಯು. ೬೮-೩೨೦) ; "ಧೌತಂ ತೇಜಿತಂ ಮಸೆವ ತೆಱನಕ್ಕು" (ಮಂಗರಾ. ೮೮-೩೮). [ ಸಂ. ]

**ಧೌತಕೀರ್ತಿ** (ನಾ). ಧವಳಕೀರ್ತಿ ; ಶುದ್ಧವಾದ ಯಶಸ್ಸು : ಅನವದ್ಯಜನಾಗಮವಿದ್ಯನಿದ್ಧದುಗ್ಧೋದಧಿಧೌತಕೀರ್ತಿವಿಶದಂ ಭರತಾವನಿರಾಜಪೂಜಿತಂ (ಶಾಂತಿಪು. ೧-೨೯). [ ಧೌತ + ಕೀರ್ತಿ ]

**ಧೌತವಲ್ಕಲ** (ನಾ). ಬೆಳ್ಳಗಿರುವ ನಾರುಬಟ್ಟೆ: ಧೌತವಲ್ಕಲಮನಲಂಬು ವಕ್ಷಮಣಿಯುಂ ಸಮೆವೀ ವ್ಯವಸಾಯಮೆತ್ತಲುಂ (ಕಾದಂಪೂ. ೨೨೪). [ ಧೌತ + ವಲ್ಕಲ ]

**ಧೌತವಸನ** (ನಾ). = ಧೌತವಸ್ತ್ರ ; ಕುಶಜಾತಪವಿತ್ರಮಾತ್ರಧೌತವಸನ ಮುಂದ್ರಮೌಂಜಿ ಮೃಗತುಂದಿಯಿಂರಚಿತ್ಸ್ರಸ ಕೋವಣಂಗಳೆಂಬಿವು ಕಡುರಮ್ಯಮಾದ ವಟುವೇಷಮನಾಂತು (ವರ್ಧಪು. ೧೬-೪) ; ಪರಿವೃತ ಧೌತವಸನಸಮಂಚಿತ ಕೋಮಳ ಕಳೇವರರುಂ (ರಾಜಶೇ. ೪-೨೬ವ). [ ಧೌತ + ವಸನ ]

**ಧೌತವಸ್ತ್ರ** (ನಾ). ಮಡಿಮಾಡಿದ ಬಟ್ಟೆ ; ಶುಭ್ರವಸ್ತ್ರ : ತದ್ದುರ್ಗಕಳಸಾರೋಹಣಮಾಗಿನೆಱೆಯನಿರ್ವ್ವಹಿಸಿದಗ್ಗ್ರಂಗಾಜಳಧೌತವಸ್ತ್ರಪವಿತ್ರೀಕ್ರಿತೋತ್ತಮಾಂಗೆಯರಪ್ಪರ್ ಶ್ರೀಮದಕ್ಕಂ ನಾಲಬರಸಿಯರು (ಕಇಆ. ೪೯-೫-೫೭; 973) ; ತೀರ್ಥಸ್ನಾನಾರ್ಥಂ ಪರಸ್ಥಾನಂಗೆಯ್ದ ವಾನಪ್ರಸ್ಥಜನಂಗಳ ಧೌತವಸ್ತ್ರಪವಿತ್ರಾಕ್ಷಸೂತ್ರಂಗಳಂ ತಮ್ಮ ಕವಲ್ಕೊಂಬುಗಳೊಳ್ ನೇಱಿಸಿಕೊಂಡಿಂಬಿನೊಳವರೊಡನೆ ನಡೆವ ಸಾರಂಗಸಮೂಹಮುಮಂ (ಪಂಚತಂ. ೧೧೯-೨) ; ಪ್ರಾತಃಸಮಯದೊಳ್ ಜರಾಸಂಧಚಕ್ರವರ್ತಿ ಪಾವನಜಳಸ್ನಾನಪವಿತ್ರಗಾತ್ರನುಂ ಧೌತವಸ್ತ್ರಪರಿಧಾನನುಮಾಗಿ (ಮಹಾನೇ. ೧೧-೧೪೦ವ). [ ಧೌತ + ವಸ ]

**ಧೌತಾಂಬರ** (ನಾ). ೧. = ಮಡಿಬಟ್ಟೆ : "ಮರಣದೊಳು ಧೌತಾಂಬರದೊಳು ಮಡಿ" (ಶಬ್ದಮಂ. ೯೫) ; ಮಡಿಯೆಂಬುದು ಧೌತಾಂಬರದೆಡೆಯೊಳ್ಮಡಿಯೆಂಬುದಲ್ಪದಂಡದೊಳೀಗ ಒಡಿಯೆಂಬುದು ಕರಿಣಿಯೊಳೆಡೆವಿಡದಿರ್ಪವು ಬೇಱ ಮತ್ತಮಿವಿಲ್ಲ ನಾಡೊಳ್ (ವೀರವಿ. ೧-೪೮). ೨. ಬಿಳಿಯ ಬಟ್ಟೆ : ಅಂಬರಮೆಲ್ಲಂ ಕೂಡೆ ಧೌತಾಂಬರದ ನವವಿತಾನಂಬೊಲಿಂಬಾದುದು (ರಾಜಶೇ. ೧೧-೬೭). [ ಧೌತ + ಅಂಬರ ]

**ಧೌತಾಂಶುಕ** (ನಾ). = ಧೌತವಸ್ತ್ರ : ಧೌತಾಂಶುಕದೊಳಗೆ ತಂಬುಲವ ಕಟ್ಟಿದರು (ಕುಮ್ಯಾಅ. ೧೮-೮). [ ಧೌತ + ಅಂಶುಕ ]

**ಧೌತಿ** (ನಾ). [ಯೋಗ] ಧೌತಿ, ಬಸ್ತಿ, ನೇತಿ, ತ್ರಾಟಕ, ನೌಲಿಕ ಮತ್ತು ಕಪಾಲಭಿತ್ತಿ ಎಂಬ ಹಠಯೋಗದ ಆರು ಅಂಗಗಳಲ್ಲಿ ಒಂದು : ೪ ನಾಲ್ಕು ಅಂಗುಲ ಅಗಲದ, ಹದಿನೈದು ಮೊಳ ಉದ್ದದ ವಸ್ತ್ರವನ್ನು ನೆನೆಸಿ ಸ್ವಲ್ಪ ಸ್ವಲ್ಪವಾಗಿ ನುಂಗಿ ಪುನಃ ಅದನ್ನು ಗುದದ್ವಾರದ ಮೂಲಕ ಹೊರಗೆ ತೆಗೆಯಬೇಕು. ಈ ಧೌತಿಕರ್ಮದಿಂದ ಕೆಮ್ಮು, ಕುಷ್ಠ ಮುಂತಾದ ಇಪ್ಪತ್ತು ವಿಧ ಶ್ಲೇಷ್ಮರೋಗಗಳೂ ವಾಸಿಯಾಗುವುವು : ಬಿಳಿಯ ಮಾವಡೆಯನೊಂದು ತುದಿಯುಂ ಪಿಡಿದು ಮತ್ತೊಂದು ತುದಿಯ ಮೆಲ್ಲನೆ ಹೃದಯಪರ್ಯಂತಮಾಗಿ ನುಂಗಿ ತೆಗೆವುದೂ ಧೌತಿಯೆನಿಪುದು (ಶಿವಪ್ರ. ೬-೫). [ ಸಂ. ]

**ಧೌತೋದಕ** (ನಾ). ಶುದ್ಧವಾದ ನೀರು : ವಿಮಲಧೌತೋದಕ . . . ಸಕಲಭೋಗಾಹುತಿಗೆ ಪೋಷೋದಕವೆನಿಪುದೀ ಪರಮಪಾದೋದಕಂ (ಶಂಕರದಾ ೧೦-೬೦). [ ಧೌತ + ಉದಕ೨ ]

**ಧೌರಿತಕ** (ನಾ). [ಅಶ್ವಶಾ] ಕುದುರೆಯ ಚಲನೆಯಲ್ಲಿ ಒಂದು ಪ್ರಕಾರ : ಕುಕ್ಕುಲೋಟ : "ಧೌರಿತಕಂ, ಬಿರುನಡೆ, ಭರದಾಂಡ್" (ಸಿದ್ಧಾಂತಿ. ೨೫೦). 'ಪಂಚಧಾರೆ೨' ಪರಾ. [ ಸಂ. ]

**ಧೌರೇಯ** (ನಾ). ೧. ಭಾರ ಹೊರಲು ಯೋಗ್ಯವಾದ ಎತ್ತು, ಕುದುರೆ ಮುಂತಾದ ಪ್ರಾಣಿ : "ಧುರ್ಯಃ, ಧೌರೇಯಃ – ಈ ೨ ಹೊಟದೆತ್ತು" (ಹಲಾಯು. ೪೪-೧೧೦) ; "ಧೂರ್ವಹಃ, ಧುರ್ಯಃ, ಧೌರೇಯಃ, ಧುರೀಣಃ, ಧುರಂಧರಃ – ೫ ಬಂಡಿ, ಗೋಣಿ, ನೇಗಲು ಮುಂತಾದ ಭಾರವನ್ನು ಹೊತ್ತು ಶಳೆಯುವ ಎತ್ತು ಮುಂತಾದ ದನಗಳ ಹೆಸರುಗಳು" (ಸಿದ್ಧಾಂತಿ. ೨೯೩). ೨. ಭಾರವನ್ನು ಹೊತ್ತಿರುವವನು ; ಹೊಣೆಗಾರಿಕೆಯನ್ನು ವಹಿಸಿಕೊಂಡವನು; ಜವಾಬ್ದಾರಿಯನ್ನು ಹೊತ್ತಿರುವವನು: ಚಾಳುಕ್ಯರಾಜರಾಜ್ಯಭಾರಧೌರೇಯನುಂ (ಕಇಆ. ೫-೨-೧೪೬ ; 1068) ; ಅರ್ಥಿಜನತಾಸುರಭೂಜಾರಾಮಂ ಧರ್ಮೋದ್ಯಮಧೌರೇಯನುದಾತ್ತಚಿತ್ತನಭಿನವಪಂಪಂ (ಪಂರಾಮ. ೬-೧) ; ವಿಶ್ವವಿಶ್ವಂಭರಾಭಾರಧಾರಣಾಧೌರೇಯನುಮಾಸಾದಿತ ಯುವರಾಜಪದವಿವಿರಾಜನುಮಾಗಿ (ವರ್ಧಮಾ. ೬-೬೮ ವ). ೩. ಕುದುರೆ ; ಅಶ್ವ. [ ಸಂ. ]

**ಧೌರೇಯಕ** (ನಾ). = ಧೌರೇಯ. [ ಸಂ. ]

**ಧ್ಯಾತೃ** (ನಾ). ಧ್ಯಾನ ಮಾಡುವವನು : ಆ ಧ್ಯಾನಯೋಗಮಾರ್ಹತ್ಸಮಯದೊಳ್ ಧ್ಯಾನಂ ಧ್ಯೇಯಂ ಧ್ಯಾತೃ ಫಲಮೆಂದು ಚತುರಂಗಮಕ್ಕುಂ (ಅಜಪು. ೮-೨೮ ವ) ; ಧ್ಯಾತೃಹೃದಯಮಹೌಘಶಮಲವ್ರಾತಪರ್ವತವಜ್ರನನು . . . ತಾಪಕ್ಲೇಶಜಲನಿಧಿಸೇತುವನು ನೆನೆವುದು ತದಂಘ್ರಿಸರೋಜವನ ಬಿಡದೆ (ನಿಘಾಗ. ೩-೧೩-೩೯) ; ಧ್ಯಾನದಾಧಿಕ್ಯದ ವಿವೇಕದಿಂ ಧ್ಯಾತೃವಾ ಧ್ಯಾನಾದಿ ಭೇದವಳಿದಾ ಧ್ಯೇಯ ಸುಸ್ವರೂಪ (ವೀಶೈಪು. ೫-೧೭-೧೬). [ ಸಂ. ]

**ಧ್ಯಾನ** (ನಾ). ೧. ಚಿಂತನೆ ; ಮನಸ್ಸಿನಲ್ಲೇ ಯೋಚನೆ ಮಾಡುವುದು : ಮನನ : "ಲಕ್ಷಣಾ ದರ್ಶನಂ ಧ್ಯಾನಮುಪಲೋಕನಂ ನೋಟಮಕ್ಕು" (ಮಂಗರಾ. ೯೩-೨); ಧ್ಯಾನದೊಳಭವಂ ನೆಱೆದಿನಿಸಾನುಮನರೆಮುಚ್ಚಿ ಕಣ್ಗಳಂ (ಪಂಪಭಾ. ೮-೧೩) ; ಎನ್ನ ಚಿತ್ತವು ನಿಮ್ಮ ಧ್ಯಾನವಯ್ಯಾ (ಬಸವ. ೫೦೬) ; ಶಿವನುತಿಧ್ಯಾನದೊಳು ಮೂರ್ಛೆವೋದರ್ಕೆಲರು (ತಿರುರ. ದೇ. ೧೫-೪) ; ವನಜನಾಭಧ್ಯಾನಸುಧೆಯಲಿ ನನೆದು ಹೊಂಗಿದ ಕರಣ ಹೊರೆಯೇಱಿತ್ತು ನಿಮಿಷದಲಿ (ಕುಮ್ಯಾದ್ರೋ. ೦-೨೨) ; ಬಿನ್ನಹ ಗುರುವೇ ಧ್ಯಾನಕೆ ಸಜ್ಜಾದಾಗ ನಿನ್ನನಾದಿಯಂ ಮಾಡಿಕೊಂಡು ಕನ್ನಡದೊಳಗೊಂದು ಕಥೆಯ

ಪೇಳುವೆನದು ನಿನ್ನಾಜ್ಞೆ ಕಂಡ್ಯ ನನ್ನೊಡೆಯ (ಶರಶ. ೧-೫); ಒಂದು ಸಂಜೆ ಸಂಚಾರ ಹೊರಟು ಯಾವುದೋ ಧ್ಯಾನದಲ್ಲಿ ನಡೆಯುತ್ತಿರುವಾಗ (ಭಾವಗೀ. ೧೨). ೨. ಗಮನ; ಲಕ್ಷ್ಯ: ಹಾಗದ ಕೆರಹ ಹೊಱಗೆ ಕಳೆದು ದೇಗುಲಕ್ಕೆ ಹೋಗಿ ದೇವರಿಗೆ ನಮಸ್ಕಾರವ ಮಾಡುವನಂತೆ ತನ್ನ ಕೆರಹಿನ ಧ್ಯಾನವಲ್ಲದೆ ದೇವರ ಧ್ಯಾನವಿಲ್ಲ (ಬಸವ. ೧೯೯). ೩. ಆತ್ಮನನ್ನು ಯಾವಾಗಲೂ ಧ್ಯಾನಿಸುತ್ತಿರುವುದು; ಆತ್ಮಚಿಂತನೆ; ತಪಸ್ಸು: ಧ್ಯಾನಮರೀಚಿಯಿಂ ಬೆದಱೆ ಘಾತಿತಮಸ್ತಮಂ (ಆದಿಪು. ೧೦-೧೬); ಧ್ಯಾನನಿಶಿತಖಡ್ಗದಿನಘಸಂಕುಳಮೆಯ್ದೆ ಬೆದಱೆ (ಶಾಂತಿಪು. ೯-೩೭); ಪ್ರಾಯಶ್ಚಿತ್ತಂ ವಿನಯಂ ವೈಯ್ಯಾವೃತ್ಯಂ ಜನಂಗೆ ಕೂಡದು ದೋಷಾಪಾಯತಿಯಿಂ ಧ್ಯಾನಂ ಸ್ವಾಧ್ಯಾಯಮ್ಯುತ್ಸರ್ಗಮುಂಟು (ಅಜಿಪು. ೧೩-೩೧); ಧ್ಯಾನಂ ಮುಕ್ತಿಪ್ರಾಪ್ತಿವಿಧಾನಂ (ಮಲ್ಲಿಪು. ೧೪-೭೬); ಮುಖದಲ್ಲಿ ಮಂತ್ರ ಹೃದಯದಲ್ಲಿ ಧ್ಯಾನ ಪ್ರಾಣದಲ್ಲಿ ಲಿಂಗ ನೆನಹು ಕರಿಗೊಂಡ ಶಿವಾತ್ಮ ಶರಣನ ಹೃದಯವೇ ಪರಮೇಶ್ವರಂಗೆ ನಿವಾಸಸ್ಥಾನ (ನೆಲೆಮನೆ)ಯಾಗಿಪ್ಪುದಯ್ಯ (ಸಿದ್ಧೇವ. ೮೫-೩೨೩); ಶೋಧಿಸಿದ ನಿಜಚೈತನ್ಯ ತಾನೆಂದೆಂಬುದೇ ಧ್ಯಾನ (ಅಮೃಶ. ೬-೮೦); "ದೇಹಾದಿಗಳ ಎಚ್ಚರವಿಲ್ಲದೆ ತಾನು ಬ್ರಹ್ಮವೆಂದಿರುವುದು" (ಅಮೃಶ. ಟೀಕು); ಧ್ಯಾನವೆಂದರೆ ಇತರ ವಿಷಯಗಳಲ್ಲಿ ಹೋಗದೆ ಆತ್ಮವಿಷಯದಲ್ಲೇ ಮನಸ್ಸನ್ನು ಸ್ಥಿರವಾಗಿಡುವ ಅಭ್ಯಾಸ (ಹಿಂದಸಾ. ೩೨೦). 'ಆತ್ಮಧ್ಯಾನ' ಪರಾ. ೪. [ಯೋಗ] ಯೋಗದ ಅಷ್ಟಾಂಗಗಳಲ್ಲಿ ಒಂದು; ಮನಸ್ಸನ್ನು ಒಂದೇ ವಿಷಯದಲ್ಲಿ ಸ್ಥಿರವಾಗಿ ಇಡುವುದು; ಏಕಾಗ್ರತೆ: "ತತ್ವಾದಿ ಚಿಂತನಂ ತಾಂ ಧ್ಯಾನಂ" (ವಸುಕೋ. ೩೧-೧೮); ಯಮನಿಯಮಸ್ವಾಧ್ಯಾಯಧ್ಯಾನಧಾರಣಮೋನಾನುಷ್ಠಾನ ಜಪಸಮಾಧಿಶೀಳಸಂಪನ್ನರ್ (ಸೌಇಇ. XX, ೪೬-೧೬: 1072); ವಿಷ್ಣಂಬುಲಿಗನ ಹಕ್ಕಿಯಂತೆ ನೀರ ತಡಿಯಲ್ಲಿದ್ದು ಮೂಗ ಹಿಡಿದು ಧ್ಯಾನವ ಮಾಡು[ವಿ]ರಯ್ಯಾ (ಬಸವ. ೫೭೯); ಯಮನಿಯಮ . . . ಧ್ಯಾನಧಾರಣಸಮಾಧ್ಯಷ್ಟಾಂಗಯೋಗನಿಷ್ಠ (ವಿವೇಕ. ೧೪೩); "ಧ್ಯಾನ (ಅದನ್ನೆ ಎಡೆಬಿಡದೆ ನೆನೆಯುವುದು)" (ಅಮೃಶ. ೨-೩೭ ಟೀಕು); ಯಮನಿಯಮ . . . ಧ್ಯಾನಧಾರಣಸಮಾಧಿಗಳೆಂಬ ಅಷ್ಟಾಂಗಯೋಗದೊಳಗೆ (ಅಖಂಡೇ. ೩೧೪-೫೫); ಪ್ರಾಣಾಯಾಮ ಪ್ರತ್ಯಾಹಾರ ಧಾರಣ . . . ಧ್ಯಾನಸುಸಮಾಧಿಗಳ ಸಾಧಿಸಲು (ಗಗತಾ. ೧೧-೩೮); ಧ್ಯಾನವೆಂದರೆ ಧ್ಯೇಯವಸ್ತುವಿನಲ್ಲಿ ಚಿತ್ತಸ್ಥಿರೀಕರಣವು (ಹಿಂದಸಾ. ೧೧೬); ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಎಂಬ ಈ ಎಂಟೂ ಆವಶ್ಯಕ (ಭಾರದ. ೧೨೬). 'ಅಷ್ಟಾಂಗಯೋಗ' ಪರಾ. ೫. ರಾಜಯೋಗದ ಹದಿನೈದು ಅಂಗಗಳಲ್ಲಿ ಒಂದು: ರಾಜಯೋಗಕ್ಕೆ . . . ಅಂಗ ತಾ ಹದಿನೈದು . . . ಯಮ ಪ್ರಥಮ ನಿಯಮವೆರಡು . . . ಹದಿನಾಲ್ಕು ಧ್ಯಾನವು ಚಿತ್ತಕರಿ ಹದಿನೈದನೇಯದು ಸಮಾಧಿ (ಜ್ಞಾಸಿ. ೧೬-೧೪). 'ರಾಜಯೋಗ' ಪರಾ.

ಧ್ಯಾನ ಮಾಡು = ಚಿಂತನೆ ಮಾಡು; ಧ್ಯಾನಿಸು: ಇದರಲ್ಲಿ ಸ್ಥೈರ್ಯವುಂಟಾದರೆ ಮುಂದಕ್ಕೆ ಧ್ಯಾನ ಮಾಡುವುದಕ್ಕೆ ಅರ್ಹತೆಯುಂಟಾಗುತ್ತದೆ (ಭಾರದ. ೧೬೪); ಧ್ಯಾನ ಮಾಡುತ್ತ ಕುಳಿತ ಕೂಡಲೆ ಗುರುವಿನ ಧ್ಯಾನಸ್ಥಮೂರ್ತಿಯು ಪ್ರತ್ಯಕ್ಷ ನನ್ನ ಎದುರಿಗೆ ಬಂದು ನನಗೆ ಯಾವುದೂ [illegible]ಡಾಗುತ್ತದೆ! (ಮಾಧವ. ೯೩); ಇಲ್ಲಿಯೂ ಕುಳಿತು ಧ್ಯಾನ ಮಾಡುತ್ತಾರೆ; ಪದಿದುಂಡೆಯಲ್ಲಷ್ಟೇ ಅಲ್ಲ (ಅಳನಿ. ೧೧೦). ☞ ಜೈನರ ಪ್ರಕಾರ ಆರ್ತಧ್ಯಾನ, ರೌದ್ರಧ್ಯಾನ, ಧರ್ಮಧ್ಯಾನ ಮತ್ತು ಶುಕ್ಲಧ್ಯಾನ ಎಂದು ಧ್ಯಾನದಲ್ಲಿ ನಾಲ್ಕು ಬಗೆ. ಈ ಒಂದೊಂದರಲ್ಲೂ ಉಪಭೇದಗಳಿವೆ. [ಸಂ.]

**ಧ್ಯಾನಂಗೈ** (ಕ್ರಿ). ಚಿಂತನೆಮಾಡು; ಧ್ಯಾನಮಾಡು; ಧ್ಯಾನಿಸು: ಸಕಲವಿಶ್ವಮನಾ ವಿರಾಡ್ರೂಪೆಂದು ಧ್ಯಾನಂಗೈಯುವುದೆ ನಿಶ್ಚಯದವಸರ ಸಮಾಹಿತಿಯು (ಗಗತಾ. ೧೪-೪೩). [ಧ್ಯಾನ + ಗೈ (<ಕೆಯ್$_1$)]

**ಧ್ಯಾನಂಬೆಱು** (ಕ್ರಿ). = ಧ್ಯಾನಂಗೈ: ಭಕ್ತಿಯಿಂ ತತ್ಪದಧ್ಯಾನಂಬೆತ್ತು ದಯಾಬ್ಧಿಯಂ ಘನತಪಂಗೆಯ್ದೊಚ್ಚತಂ ಮೆಚ್ಚಿಪಂ (ಶಬಶಂ. ೩-೮೯. [ಧ್ಯಾನ + ಪೆಱು$_1$]

**ಧ್ಯಾನಗಮ್ಯ** (ಗು). ೧. ಏಕಾಗ್ರತೆಯಿಂದ ಕೂಡಿದ ಚಿಂತನೆಗೆ ಗೋಚರವಾಗುವ. (ನಾ). ೨. ಏಕಾಗ್ರತೆಯಿಂದ ಕೂಡಿದ ಚಿಂತನೆಗೆ ಗೋಚರವಾಗುವುದು: ಶಿಲೆಯಿಂದ, ಮರದಿಂದ . . . ಮರಳಿನಿಂದ ಧ್ಯಾನಗಮ್ಯವಾದ ಮನೋಮಯಮೂರ್ತಿಯಾಗಿ ಮತ್ತು ರತ್ನಾದಿಗಳಲ್ಲಿ ನಿರ್ಮಿಸಿಕೊಂಡು ಪೂಜಿಸಬಹುದೆಂದು ಆಧಾರವಿದೆ (ಭಾರದ. ೭೮). ೩. ಏಕಾಗ್ರತೆಯಿಂದ ಕೂಡಿದ ಚಿಂತನೆಗೆ ಗೋಚರನಾಗುವವನು; ಪರಮಾತ್ಮ. [ಧ್ಯಾನ + ಗಮ್ಯ]

**ಧ್ಯಾನಗಮ್ಯೆ** (ನಾ). ಏಕಾಗ್ರತೆಯಿಂದ ಕೂಡಿದ ಚಿಂತನೆಗೆ ಗೋಚರವಾಗುವವಳು: ಎಲೆ ಮಾತೆ! ನೀಂ ಭಕ್ತವತ್ಸಲೆ ಸಾಜಂ! ಧ್ಯಾನಗಮ್ಯೆ ಸಾಜಂ! (ರಾಮಾಶ್ವ. ೬೩-೧೧). [ಸಂ. ಧ್ಯಾನಗಮ್ಯಾ (ಧ್ಯಾನ + ಗಮ್ಯ + –)]

**ಧ್ಯಾನಗೋಚರ** (ನಾ). ಏಕಾಗ್ರಚಿಂತನೆಯಿಂದ ಕಾಣಿಸುವವನು: ಧ್ಯಾನಗೋಚರನಾಗಿ ವನಿತೆಯ ಮಾನಿಸದಲಿಹ ಪರಮಹಂಸನು ಮಾನುಷಾಕೃತಿಯಾಗಿ ತೋಱಿದ ಬಾಹ್ಯರಚನೆಯಲಿ (ಕುವ್ಯಾಅ. ೧೬-೩೩). [ಧ್ಯಾನ + ಗೋಚರ]

**ಧ್ಯಾನಚತುಷ್ಟಯ** (ನಾ). [ಜೈನ] ಆರ್ತ, ರೌದ್ರ, ಧರ್ಮ ಮತ್ತು ಶುಕ್ಲ ಎಂಬ ನಾಲ್ಕು ಬಗೆಯ ಧ್ಯಾನ: ಆರ್ತರೌದ್ರಧರ್ಮಶುಕ್ಲಾಭಿಧಾನಧ್ಯಾನಚತುಷ್ಟಯಮುಮಂ (ಸುಕುಮಾ. ೩-೩೯ ವ). [ಧ್ಯಾನ + ಚತುಷ್ಟಯ]

**ಧ್ಯಾನಚಿತ್ತ** (ನಾ). ಏಕಾಗ್ರಚಿತ್ತದಿಂದ ಚಿಂತನೆ ಮಾಡುವವನು; ಧ್ಯಾನದಲ್ಲಿ ಮನಸ್ಸನ್ನಿಟ್ಟವನು: ಶಿವಸಂಗಧ್ಯಾನಚಿತ್ತಂ ಶಿವಚರಣಲತಾಪುಷ್ಪವೃಂದಾಯಮಾನಂ (ನಂಬಿರ. ೨ ಸೂಚನೆ). [ಧ್ಯಾನ + ಚಿತ್ತ]

**ಧ್ಯಾನತತ್ಪರ** (ನಾ). = ಧ್ಯಾನಪರಾಯಣ: ಹಗಲು ಹಸಿವಿನ ಚಿಂತೆ ಇರುಳು ವಿಷಯದ ಚಿಂತೆ . . . ಇವು ಮಾದಲ್ಲದೆ ಸದಾಶಿವನ ಧ್ಯಾನತತ್ಪರನಾಗಿ ಶಿವತತ್ವವಿಚಾರದೊಳಗಿರಲೊಲ್ಲನು ನೋಡಾ (ಸಿದ್ಧೇವ. ೪೫-೧೩೮): ಹುಕ್ಕನು ... ಕೈಜೋಡಿಸಿ ಕಣ್ಣು ಮುಚ್ಚಿಕೊಂಡು ಗುರುಧ್ಯಾನತತ್ಪರನಾಗಿ ಕುಳಿತುಕೊಂಡುಬಿಟ್ಟನು (ಮಾಧವ. ೯೬). [ಧ್ಯಾನ + ತತ್ಪರ]

**ಧ್ಯಾನದರ್ಶಿತ** (ಗು). ಧ್ಯಾನಕ್ಕೆ ಗೋಚರವಾಗುವ; ಧ್ಯಾನದಿಂದ ತೋರಿಸಲ್ಪಟ್ಟ: ಕೇವಲ ಧ್ಯಾನದರ್ಶಿತಾನುಭವಗಳಿಂದಲೂ ಸೌಂದರ್ಯಾನುಭವಸಾಧ್ಯ (ಸೌಂದಸ. ೭೮); ಧ್ಯಾನದರ್ಶಿತ ದೇವತೆಗಳ ಈ ವರ್ಣನೆಯೇ ಮುಂದಿನ ಶಿಲ್ಪಕಲಾಚಾರ್ಯರ ಪರಿಭಾವನೆಯ ವಸ್ತುಗಳಾಗಿ, ಭಾರತೀಯ ದೇವದೇವತಾವಿಗ್ರಹಗಳ ಮಾದರಿಗಳೂ ಆದುವೆನ್ನುವುದು ಗಮನಾರ್ಹವಾದ ಸಂಗತಿ (ಸೌಂದಸ. ೯೯). [ಧ್ಯಾನ + ದರ್ಶಿತ]

**ಧ್ಯಾನನಿಯೋಗವಾದ** (ನಾ). [ಅದ್ವೈತ] ಪರಬ್ರಹ್ಮದ ಚಿಂತನೆಯಿಂದ ಉಂಟಾದ (ನಿಯೋಗವೆಂಬ) ಪುಣ್ಯಸಂಸ್ಕಾರದ ಮೂಲಕ ಮೋಕ್ಷವು ಲಭ್ಯವಾಗುವುದೆಂಬ ಸಿದ್ಧಾಂತ, – ತತ್ತ್ವ: ಇದರಲ್ಲಿ ಧ್ಯಾನನಿಯೋಗವಾದ, ನಿಷ್ಪ್ರಪಂಚೀಕರಣನಿಯೋಗವಾದ ಇವೇ ಮೊದಲಾದ ಪ್ರಭೇದಗಳಿರುವುವು (ಹಿಂದಸಾ. ೩೩೫). [ಧ್ಯಾನ + ನಿಯೋಗ + ವಾದ$_3$]

**ಧ್ಯಾನಪರ** (ಗು). ೧. (ಪರಮಾತ್ಮನ) ಚಿಂತನೆಯಲ್ಲಿ ಮನಸ್ಸನ್ನಿಟ್ಟ. (ನಾ). ೨. (ಪರಮಾತ್ಮನ) ಚಿಂತನೆಯಲ್ಲಿ ಮನಸ್ಸನ್ನಿಟ್ಟವನು: ಆ ನಗರದೊಳ್ಕುಂತಳೇಶ್ವರಂ ನಿರ್ಮಲಜ್ಞಾನದಿಂ . . . ಧ್ಯಾನಪರನಾಗಿರ್ಪನು (ಜೈಮಿಭಾ. ೩೦-೪೩): ಬಾಲ್ಯದಿಂದೆ ನೀನಗಧರಧ್ಯಾನಪರನಾಗಿರ್ಪೆ (ಜೈಮಿಭಾ. ೩೦-೭೦). [ಸಂ.]

**ಧ್ಯಾನಪರಾಯಣ** (ನಾ). ಚಿಂತನೆಯಲ್ಲಿ ಆಸಕ್ತನಾದವನು, – ಮಗ್ನನಾದವನು,— ತನ್ಮಯನಾದವನು : ತ್ರಿಜಗದ್ಗುರುವೇ ಗುರುಮೆಂದು ತತ್ಪದಸರಸಿಜಧ್ಯಾನಪರಾಯಣನಾಗಿ (ಆದಿಪು. ೧೬-೭೨ವ). [ ಧ್ಯಾನ + ಪರಾಯಣ ]

**ಧ್ಯಾನಬಲ** (ನಾ). ಧ್ಯಾನದಿಂದ ಉಂಟಾಗುವ ಶಕ್ತಿ ; ಸತತವಾದ ಚಿಂತನೆಯಿಂದ ಒದಗುವ ಬಲ ; ಆಧ್ಯಾತ್ಮಿಕ ಚೈತನ್ಯ : ನಿಯಾಮುವನಾಂತು ಜಟಿಸುವ ವಾಗ್ವಿಷೀಯ್ಯದಲಂತು ಮಾಯಾವಿಲಯಮುಪ್ಪುದು ಧ್ಯಾನಬಲಮಿರದೇ (ಗಗಶಾ. ೧೦-೩೦). [ ಧ್ಯಾನ + ಬಲ₂ ]

**ಧ್ಯಾನಮಗ್ನ** (ನಾ). = ಧ್ಯಾನಪರಾಯಣ : ಆಗ ತ್ರಿಕಾಲಜ್ಞಾನಿಯಾದ ಋಷಿಯು ಸ್ವಲ್ಪ ಹೊತ್ತು ಧ್ಯಾನಮಗ್ನನಾದನು (ಮಡಿಸ. ೬೫). [ ಧ್ಯಾನ + ಮಗ್ನ ]

**ಧ್ಯಾನಮುದ್ರೆ** (ನಾ). ಚಿಂತನೆಯಿಂದ ಕೂಡಿದ ಮುಖಭಾವ : ಲಕ್ಷೈಕಾಗ್ರತೆಯಿಂ ಧ್ಯಾನಮುದ್ರಾಸಮನ್ವಿತನಾಗಿ ಕುಳ್ಳಿರ್ದು (ವಿವೇಕ. ೦೦೩) ; ಅವನ ಮುಖ ಧ್ಯಾನಮುದ್ರೆಯಿಂದ ಗಂಭೀರವಾಗಿತ್ತು (ಪುನರು. ೬೨). [ ಧ್ಯಾನ + ಮುದ್ರೆ ]

**ಧ್ಯಾನಯೋಗ** (ನಾ). = ಧ್ಯಾನ ೩ : ಧ್ಯಾನಯೋಗಾದಿಗಳಿಂ ತನ್ನೊಳಹೊಳೆಗೆಲ್ಲಮುಂ ದೇವತಾತಾದಾತ್ಮ್ಯಮಂ ಪಡೆದು (ವಿವೇಕ. ೧೦೩) : ಶುದ್ಧಪ್ರಸಾದಜ್ಯೋತಿಯು ಧ್ಯಾನಿಸುವುದೇ ಧ್ಯಾನಯೋಗ (ಅಬುಂಡೇ. ೩೩೦-೮೦) : ಮೂರನೆಯದದು ಧ್ಯಾನಯೋಗವು (ಗಗಶಾ. ೨೦-೦೮) ; ದೇಹೇಂದ್ರಿಯವಿಷಯಗಳನ್ನೆಲ್ಲಾ ದೃಶ್ಯಭಾವದ ಅಕ್ಷರವನ್ನು ಮಾಡಿಕೊಂಡು ಆತ್ಮಧ್ಯಾನದಲ್ಲಿಯಿರುವದೇ ಧ್ಯಾನಯೋಗಯುಬುವದು (ತತ್ವಚಿಂ. ೨೭-೦೪). [ ಧ್ಯಾನ + ಯೋಗ ]

**ಧ್ಯಾನಯೋಗಿ** (ನಾ). ಧ್ಯಾನ ಮಾಡುವವನು ; ತಪಸ್ವಿ : ಧ್ಯಾನಯೋಗಿಯು ಏಕಾಂತಮನಸ್ಕನಾಗಿ, ಪ್ರತ್ಯೇಕನಾಗಿ ಭಾವಗಳನ್ನು ಚರ್ಚಿಸುತ್ತಾನೆ (ಬಂಕಿಮು. XXII, ಮುನ್ನುಡಿ). [ ಸಂ. ಧ್ಯಾನಯೋಗಿನ್ ]

**ಧ್ಯಾನಶೀಲ** (ಗು). ೧. ಚಿಂತನಶೀಲವಾದ ; ಯೋಚನಾಪರ. (ನಾ). ೨.ಧ್ಯಾನಮಗ್ನನಾದವನು ; ಚಿಂತನಶೀಲ. [ ಸಂ. ]

**ಧ್ಯಾನಸ್ಥ** (ಗು). ೧. = ಧ್ಯಾನಶೀಲ ೧ : ಧ್ಯಾನ ಮಾಡುತ್ತ ಕುಳಿತ ಕೂಡಲೆ ಗುರುವಿನ ಧ್ಯಾನಸ್ಥಮೂರ್ತಿಯು ಪ್ರತ್ಯಕ್ಷ ನನ್ನ ಎದುರಿಗೆ ಬಂದು ಕುಳಿತುಕೊಳ್ಳುವುದರಿಂದ, ಆ ದಿವ್ಯಮೂರ್ತಿಯ ದರ್ಶನಾನಂದದೊಳಗೆ ನನಗೆ ಯಾವುದೂ ಬೇಡಾಗುತ್ತದೆ ! (ಮಾಧವ. ೯೩). (ನಾ). ೨. =ಧ್ಯಾನಶೀಲ ೨: ಧ್ಯಾನಸ್ಥನಾಗುವ ಮೊದಲು ಹೀಗೆ ಕರ್ತವ್ಯಭ್ರಷ್ಟನಾಗಿ ಕುಳಿತುಕೊಳ್ಳುವದು ಯೋಗ್ಯವಲ್ಲೆಂದು ಪಶ್ಚಾತ್ತಾಪಪಡುವೆನು (ಮಾಧವ. ೯೩) ; ಧ್ಯಾನಸ್ಥನಾಗಿರುವ ತಪಸ್ವಿಯೊಬ್ಬನ ತಲೆಯನ್ನು ಕತ್ತಿ ಹಿಡಿದಿರುವ ಸೈನಿಕನೊಬ್ಬನು ಕತ್ತರಿಸಿದ್ದಾನೆ (ಕಚಾಳ. ೩೪೬). [ ಸಂ. ]

**ಧ್ಯಾನಾತೀತ** (ನಾ). ಚಿಂತನೆಗೆ ಮೀರಿದುದು ; ಪರಾತ್ಪರವಸ್ತು ; ಪರಮಾತ್ಮ : ಧ್ಯಾನ ಮೌನವನಳಿಯೆ ಧ್ಯಾನಾತೀತ ತಾನೆಯಾಯಿತ್ತಾಗಿ ಜ್ಞಾತೃಜ್ಞಾನಜ್ಞೇಯಂಗಳೆಲ್ಲವೂ ವಿಲಾಟಿ ಅಭಿನವಮಲ್ಲಿಕಾರ್ಜುನನಲ್ಲಿ ಪರಮಸುಖಿಯಾದೆನು (ವಚಸಂ ೫೦೫-೪೩). [ ಧ್ಯಾನ + ಅತೀತ ]

**ಧ್ಯಾನಾಧೀನ** (ಗು). ಚಿಂತನೆಗೆ ಒಳಗಾದ : ಧ್ಯಾನಪರವಾದ : ಸುಧರ್ಮಾಚಾರ್ಯರುಜ್ಜಯಂತಪರ್ವತದೊಳಾಧ್ಯಾತ್ಮಧ್ಯಾನಾಧೀನಮಾನಸರಾಗಿ ಘಾತಿಕರ್ಮಂಗಳಂ ಘಾತಿಸಿ ಕೇವಲವಿಭೂತಿಯಂ ಪಡೆದು (ಸುಕುಮಾ. ೪-೩ವ); ಧ್ಯಾನಾಧೀನಮನಂ ಮುನೀಂದ್ರನಿರೆ ಕರ್ಮಂ ಘಾತಿಸಂಘಾತಮಾ ಧ್ಯಾನೋಗ್ರಾನಳನಿಂದಮಂದುರಿಯೆ (ಮುಹಾನೇ. ೩-೧೪೬). [ ಸಂ. ]

**ಧ್ಯಾನಾನಂದ** (ನಾ). ಪರಬ್ರಹ್ಮದ ಚಿಂತನೆಯಿಂದ ದೊರಕುವ ಆನಂದ: 'ಥಿಯೊರಿಯಾ' ಎಂದರೆ 'ಧ್ಯಾನಾನಂದ'. ಅದು ದೇವನ ಒಂದು ಲಕ್ಷಣ. ಮನುಷ್ಯನ 'ಧ್ಯಾನಾನಂದ' ಅನುಭವವು ದೇವನ 'ಧ್ಯಾನಾನಂದ'ದ ಅಂಶವೇ ಎಂದು ಹೇಳಬಹುದು (ಧರ್ಮಸಾ. ೧೪೪). [ ಧ್ಯಾನ + ಆನಂದ ]

**ಧ್ಯಾನಾರೂಢ** (ನಾ). ೧. ಧ್ಯಾನವನ್ನು ಕೈಕೊಳ್ಳುವುದು ; ಪರತತ್ತ್ವದ ಚಿಂತನೆ: ಶ್ರೀನಾ[ರೀ]ನಿಳೆಯುಂ ಶ್ರೀವಿಮಾನಾಂಬರ ಮಿಥ್ಯಾಸ್ತಾ[ನಾ] [ಮೋ]ದಿ ಚೂಡಾಮಣಿಮುನಿಪಂ ಧ್ಯಾನಾರೂಢದೆ ನೋಡಿ ತಾವೊಪ್ಪೆ ಕೇವಳಜ್ಞಾನ ಪ್ರಸಿದ್ಧಮೋಂ ಪ್ರಕಟಿಸಿದ (ಕಇಅ. ೬೮-೫೩-೨: ?). ೨. ಧ್ಯಾನವನ್ನು ಕೈಗೊಂಡವನು. [ ಧ್ಯಾನ + ಆರೂಢ ]

**ಧ್ಯಾನಿ** (ನಾ). ಪರತತ್ತ್ವವನ್ನು ಕುರಿತು ಚಿಂತಿಸುವವನು ; ಧ್ಯಾನಶೀಲ : ವಿಗತೇಂದ್ರಿಯಾನಿ ಮನೋವಿಷಯುನಭವಾನವರತಂತರ್ಗತಧ್ಯಾನಿ (ಬಸವು. ೫೩-೧) . . . [illegible] . . . ಅಜುಹಿನಲ್ಲಿ ಮಾಯಾ [illegible] . . . ಎಂತು ಧ್ಯಾನಿಗಳೆಂಬೆ ಎಂತು ಅನುಭಾವಿಗಳೆಂಬೆ (ಸಿದ್ಧೇವ. ೯೧-೩೭೫). [ ಸಂ. ಧ್ಯಾನಿನ್ ]

**ಧ್ಯಾನಿಸು** (ಕ್ರಿ). ೧. ಪರತತ್ತ್ವವನ್ನು ಕುರಿತು ಚಿಂತಿಸು ; ಧ್ಯಾನಮಾಡು: ಶುಕ್ಲಧ್ಯಾನಮಂ ಧ್ಯಾನಿಸಿ ಎಂಟು ಕರ್ಮಂಗಳಂ ಕಿಡಿಸಿ ಮೋಕ್ಷಕ್ಕೆ ಪೋದರ್ (ವಡ್ಡಾರಾ. ೧೧೪-೦೭) : ನಾಲ್ಕುಂ ಧರ್ಮಧ್ಯಾನಮಂ ಧ್ಯಾನಿಸುತ್ತುಂ (ಆದಿಪು. ೧೦-೧೪ವ) ; ಇಂತೀ ತ್ರಿಶುದ್ಧಿಗಳಿಂ ಧ್ಯಾನಿಸುವೆಮ್ಮನೋತಜಗುವೆಮ್ಮಂ ಬಾದಿಪೆಮ್ಮಂ ತ್ರಿಕಾಲಗಯೋಗರ್ ಪರಮೇಶ್ವರರ್ ಪರಸುಗಿಂ ವಾತ್ಸಲ್ಯದಿಂ (ಶಾಂತಿಪು. ೧-೫) : ಪ್ರಶಸ್ತಧ್ಯಾನಮು ಧ್ಯಾನಿಸುವಾಗಳ್ (ಅಜಿಪು. ೮-೩೮ವ) ; ಜಾನಿಪೊಡೆ ಚತುರ್ಭುಜನಂ ಧ್ಯಾ[ಪಾಠಾಂ. ಜಾ]ನಿಪುದೋ ಮೋಣ್ಡಶಾವತಾರದ ರೂಪಂ ಧ್ಯಾ [ಪಾಠಾಂ. ಜಾ] ನಿವುದೊ (ಸಮುಪ. ೮-೧೪೫): ಪದ್ಮಸ್ತ್ತಮ ಪಡ್ಜಕ್ರಭುವನೇಜಮಧ್ಯದೊಳ್ ಧ್ಯಾನಿಸಿ (ಪದ್ಮರಾ. ೩-೪೮) ; ರುದ್ರಾಣಿ ಘನಧೈರ್ಯದಿಂದೆ ಸಾನುರಾಗದೆ ತನ್ನ ಹೃತ್ಕಮಲಮಧ್ಯದೊಳ್ ಧ್ಯಾನಿಸಿದಳೀಶನಂ (ಚಬಪು. ೩೬-೩). ೨. ಚಿಂತನೆ ಮಾಡು ; ಗಮನದಲ್ಲಿಡು ; ಆಲೋಚಿಸು : ಗಗನಮಂ ಪೃಥ್ವಿಯುಂ . . . ಭದ್ರವೀರಸೌಂದರ್ಯಮಂ, ಧ್ಯಾನಿಸುತೆ ಭಾವಿಸುತೆ ರೂಪಿಸುತೆ ಕಾಮಿಸಿದನಾ ಭೂಮಿಪಂ (ಶ್ರೀರಾಮಾ. ೩-೩೦೦) ; ಪರಿಭಾವಿಸು ! ಆಸ್ವಾದಿಸು ! ಧ್ಯಾನಿಸು ! ಒಂದಾಗು ! (ಅನಿಕೇ.೦೮-೧೧). ೩. ಆತ್ಮಚಿಂತನೆ ಮಾಡು; ಆತ್ಮವನ್ನು ಕುರಿತು ಚಿಂತಿಸು: ದೇಹ ಬೇರಾತ್ಮ ಬೇರೆಂದಾತ್ಮ ಕಲೆಯ ಮುನ್ನೊಲ್ದು ಧ್ಯಾನಿಸಿದ ಫಲದಿಂದ ದೊರೆಕೊಂಡುದಾ ರಾಯಗಾ ರೂಪು (ಭರತ. ೦-೫೪); ಧ್ಯಾನಿಸಿದನೊಂದೆರಡು ಗಳಿಗೆ (ಜೈಮಿಭಾ. ೦೦-೩೭). [ ಧ್ಯಾನ + –ಇಸು₃ ]

**ಧ್ಯಾಮ** (ನಾ). ೧. (ಒಂದು ಬಗೆಯ) ಸುಗಂಧಪೂರಿತವಾದ ಹುಲ್ಲು ; ಸುವಾಸನೆಯನ್ನು ಬೀರುವ ಹುಲ್ಲು. ೨. ಹಂಚೀಕಡ್ಡಿ : "ಕತ್ತೃಣಂ ಪೌರಂ, ಸೌಗಂಧಕಂ, ಧ್ಯಾಮಂ [ಪಾಠಾಂ. ಧ್ಯಾಯಂ], ದೇವಜಗ್ಧಕಂ, ರೌಹಿಷಂ – ೬ ಕಾಚೀಹುಲ್ಲು, ಕಾಚೀಕಡ್ಡಿ, ಹಂಚೀಕಡ್ಡಿ, ಬರಗುಕಡ್ಡಿ, ಇವುಗಳೆಲ್ಲಕ್ಕೂ ಹೆಸರುಗಳು" (ಸಿದ್ಧಾಂತಿ. ೧೫೧). [ ಸಂ. ]

**ಧ್ಯಾಸ, ದ್ಯಾಸ** (ನಾ). ೧. ಚಿಂತನೆ ; ಧ್ಯಾನ : ಈ ಸಾಧನಶಾಸ್ತ್ರದಲ್ಲಿಯ ಭವತಾರಕರು ಹೇಳುವ ಮೊದಲನೆಯ ಅಂಶವು ನ್ಯಾಸ ಮತ್ತು ಧ್ಯಾಸ ಎಂಬುದು (ಪಂಪ. ೫೮) ; ರಂಗಕ್ಕನಿಗೆ ಮಾತ್ರ ಆ ಶೀರೆಯ ಧ್ಯಾಸ ಬಿಡಲಿಲ್ಲ (ದೀಪಸ. II, ೦೩೩). ೨. ಎಚ್ಚರ ; ಪ್ರಜ್ಞೆ ; ಅರಿವು : ಅಲ್ಲಿದ್ದವರಿಗೆ . . . ಅಜಿತ ಮನೋರಮೆಯ ವಿಷಯದಲ್ಲೂ ಧ್ಯಾಸವಿರಲಿಲ್ಲ (ಶೀಪ್ರಕ್ಕ ೫೨) : ನಾನು ಎರಡು ಸಲ ಕೂಗಿದೆ, ನಿನಗೆ ಇತ್ತ ಧ್ಯಾಸವೇ ಇರಲಿಲ್ಲ (ಮರಮ. ೫೭); ಅವನ 'ಧ್ಯಾಸ'ವೆಲ್ಲಾ ಅತ್ತ ಇದ್ದ ಹಾಗಿಲ್ಲ (ದೇಗಾಗೌ. ೬). ೩. ನೆನಪು ; ಜ್ಞಾಪಕ. ನನಗೆ ಬಿಂದೂನ ಕ್ರಾಪಿನದೇ ಧ್ಯಾಸ (ವ್ಯನಿ. ೭೦) : ಅವರ ಧ್ಯಾಸವೇ ಉಳಿಯಲಿಲ್ಲ (ಕನಕ. ೨೭). ೪. ಲಕ್ಷ್ಯ ; ಗಮನ : ಬರೇ ತಿನ್ನೋವರ ಕಡೇನ ಧ್ಯಾಸಾ (ದೀಪಸ. II, ೫೬).

ದ್ಯಾಸ: ೨. "ಸ್ವಾಮಿಗೆ ಯಾಕೋ ಹೊರಗಿನ ದ್ಯಾಸೇ ಇಲ್ಲ" ಎಂದು ಅವರ ಗಮನವನ್ನು ತನ್ನತ್ತ ಸೆಳೆದ (ಸುವಸಂ. ೭೯). ೩. ನೆನಪು : (ದ್ಯಾಸ-ನೆನಪು ಜಾನಕೋ. ೪).

ಧ್ಯಾಸ ಬರು = ಗಮನಕ್ಕೆ ಬರು ; ಲಕ್ಷ್ಯಕ್ಕೆ ಬರು : ಅವನ ಮಾ ತೋಕಿದ್ದುದು ಧ್ಯಾಸ ಬಂದಿತು ಮೇಖಳೆಗೆ (ಅಳಾಳ. ೧೫೬).

[ ←ಮರಾ. ಧ್ಯಾಸ ]

**ಧ್ಯೇಯ** (ಗು). ೧. ಉದ್ದೇಶಿಸಿದ ; ಲಕ್ಷಿಸಿದ : ಸಮಾಧಿಯೆಂದರೆ ಈ ಧ್ಯಾನವೆಂಬ ಅತಿ ಸ್ವಚ್ಛಚಿತ್ತವೃತ್ತಿಪ್ರವಾಹಕ್ಕೂ ಧ್ಯೇಯವಸ್ತುವಿಗೂ ಭೇದ ತೋರದೆ ಧ್ಯೇಯವಸ್ತು ಸ್ವರೂಪದಲ್ಲೇ ಲೀನವಾಗುವಿಕೆ. ಇದನ್ನು ಧ್ಯೇಯಮಾತ್ರಸ್ಫೂರ್ತಿಯೆನ್ನುವರು (ಹಿಂದಸಾ. ೦೦೬). (ನಾ). ೨. ಲಕ್ಷ್ಯ ; ಉದ್ದೇಶ ; ಗುರಿ : "ಉದ್ದೇಶ ; ಗುರಿ; ಧ್ಯೇಯ" (ರಿಖ್ಯ. ಪತ್ರಿನಿ. ೧೬) ; ಜೀವನಕ್ಕೆ ಧ್ಯೇಯವೊಂದಿದೆಯೆಂಬುದನ್ನು ಅರಿಯುವುದೆ ಕಷ್ಟ (ಪುಣ್ಯಾರ ೧. ೬೮೩೪) ; ನಿರಂತರ ಸೇವೆಯೇ ಸದಿಗಳ ಧ್ಯೇಯ (ನನದಿ. ೧೬) ; ಜೈನರಂತೆ ಶೈವರೂ ಸರ್ವಭೂತಹಿತವನ್ನೇ ತಮ್ಮ ಉಚ್ಚ ಧ್ಯೇಯವನ್ನಾಗಿ ಮಾರ್ಪಡಿಸಿಕೊಂಡರು (ಸಾಹಿಸ. ೦೩೪). ೩. ಧ್ಯಾನದ ವಸ್ತು,-ಗುರಿ : ಪ್ರಾಯೋಪಗಮನವಿಧಿಯಿಂ ಕಾಯಮನಳವಡಿಸಿ ವಿಮಳಶುಭಧ್ಯಾನಂ ಧ್ಯೇಯ [ಪಾಠಾಂ. ದೇಯ, ಧೇಯ]ದೊಳಮರೆ ಮುಮುಕ್ಷುಜ್ಯಾಯಂ ಪಂಡಿತಸಮಾಧಿವಿಧಿಯಂ ತಳೆದಂ (ಅನಂಪು. ೪-೩೭). ೪. ಆದರ್ಶ. 'ಧ್ಯೇಯಜೀವಿ', 'ಧ್ಯೇಯವಾದಿ' ಪರಾ. [ ಸಂ. ]

**ಧ್ಯೇಯಜೀವಿ** (ನಾ). ಉತ್ತಮ ಉದ್ದೇಶವನ್ನಿಟ್ಟುಕೊಂಡಿರುವವನು ; ಆದರ್ಶವಾದಿ : ಮೈ ಮನಸ್ಸನ್ನು ಮನ್ನಿಸದೆ, ಒಂದು ಕ್ಷಣ ಕುಳ್ಳಿರಲೂ ಒಲ್ಲದೆ, ಕರ್ಮನಿರತರಾಗುವುದು ಧ್ಯೇಯಜೀವಿಗಳ ಹುಚ್ಚು (ಕಜಸಾ. IX. ೬೮೩೪). [ ಸಂ. ಧ್ಯೇಯಜೀವಿನ್ ]

**ಧ್ಯೇಯವಸ್ತು** (ನಾ). ಧ್ಯಾನ ಮಾಡಬೇಕಾದ ವಸ್ತು ; ಪರಮಾತ್ಮ : ಧ್ಯಾನಯೋಗದ ಧ್ಯೇಯವಸ್ತುವೆ ತಾನೆನುತ (ಗಗತಾ. ೦೬-೩೯) ; ಸಮಾಧಿಯೆಂದರೆ ಈ ಧ್ಯಾನವೆಂಬ ಅತಿಸ್ವಚ್ಛಚಿತ್ತವೃತ್ತಿಪ್ರವಾಹಕ್ಕೂ ಧ್ಯೇಯವಸ್ತುವಿಗೂ ಭೇದ ತೋರದೆ ಧ್ಯೇಯವಸ್ತುಸ್ವರೂಪದಲ್ಲೇ ಲೀನವಾಗುವಿಕೆ (ಹಿಂದಸಾ. ೦೦೬). [ ಧ್ಯೇಯ + ವಸ್ತು ]

**ಧ್ಯೇಯವಾದ** (ನಾ). ಉತ್ತಮವಾದ ಉದ್ದೇಶದ ಸಾಧನೆಯನ್ನು ಪ್ರತಿಪಾದಿಸುವ ವಾದ ; ಆದರ್ಶವಾದ : ಧ್ಯೇಯವಾದದ ಆಂತರಿಕ ಸ್ಫೂರ್ತಿಯು ಆತ್ಮದ ಅಮರವಾದ ಆಕಾಂಕ್ಷೆಗಳೊಳಗಿಂದಲೇ ಉದ್ಭವಿಸುತ್ತಿರುವುದು (ಪ್ರಬಂಧ. ೦೦೧) ; ಅವನು ಜೀವನದ ಎಲ್ಲ ವಿಷಯಗಳನ್ನೂ ಧ್ಯೇಯವಾದದ ದೃಷ್ಟಿಕೋನದಿಂದ ನೋಡುವ ಮನುಷ್ಯ (ದೂರಸ. ೪).

[ ಧ್ಯೇಯ + ವಾದ್ಯ ]

**ಧ್ಯೇಯವಾದಿ** (ನಾ). = ಧ್ಯೇಯಜೀವಿ : ಮೊದಲಿನಿಂದಲೂ ಕನ್ನಡರು ವೀರರು, ಉದಾತ್ತರು, ಧ್ಯೇಯವಾದಿಗಳು (ಭಾಷಾಶಾ. ೨೫೮).

[ ಸಂ. ಧ್ಯೇಯ.ವಾದಿನ್ ]

**ಧ್ಯೇಯಸಾಧನೆ** (ನಾ). ಉದ್ದೇಶದ ಸಾಧನೆ ; ಗುರಿಯನ್ನುಮುಟ್ಟಲು ಮಾಡುವ ಪ್ರಯತ್ನ : ಧ್ಯೇಯಸಾಧನೆಯ ಪ್ರಯತ್ನವೂ ಮಾನವನ ಸಹಜಪ್ರವೃತ್ತಿಯೇ ಹೊರತು ಕೃತಕವಲ್ಲ (ಪುಣ್ಯಾರ. ೦ ೬೮೩೪).

[ ಧ್ಯೇಯ + ಸಾಧನೆ ]

ಧ್ರುಪದ 'ದುರಪದ' ನೋ.

**ಧ್ರುವ** (ಗು). ೧. ಸ್ಥಿರವಾದ ; ಅಚಲವಾದ. ೨. ನಿಶ್ಚಿತವಾದ ; ಸಂಶಯವಿಲ್ಲದ ; ದೃಢವಾದ. ೩. ನಿತ್ಯವಾದ ; ಬದಲಾಗದ ; ಶಾಶ್ವತ ; ನಿರಂತರ ; ಸತತ. (ನಾ). ೪. ನಿತ್ಯವಾದುದು ; ಸ್ಥಿರವಾದುದು ; ಶಾಶ್ವತವಾದುದಂ : "ಸತತಂ . . . ಧ್ರುವಮಾವಿರತಂ [ನಿರಂ]ತರಮಜಸ್ರಮೆನೆ ತಾಂ ನಿತ್ಯಂ" (ವಸ್ತುಕೋ. ೦೦೯-೭೭) ; "ನಿತ್ಯಂ ಧ್ರುವಂ ಶಾಶ್ವತಮುದು ಸನಾತನಮುನಶ್ವರಂ ಸ್ಥಿರಮೆನಿಕ್ಕು" (ಮಂಗರಾ. ೮-೨೫) : ಧ್ರುವವಲಾ ರಾಜಾಗತೋಧರ್ಮವು ವಿದಿತವಿದ ನೀವಜಾಯಿರೇ (ಬಸವು. ೫೫-೮) ; ದಿವಿಜರಿವು ಕೇಳೆಲವೂ . . . ಧ್ರುವವು ನಿನಗಾಯುಃಷ್ಯವೆಂಬುತ್ಸವದಿ ನಮ್ಮನು ಕಣಿಕ ಲಯಮೃತ್ಯುವಿನ ಕೈವಶವಾದ ನೀನೆಂದಸುರಹರ ನುಡಿದ (ತೊರರಾ. ೭-೫೦-೦೩) ; ಅಧ್ರುವವನು ತೂರಿ, ಧ್ರುವದೆಡೆಯನು ತೋರಿ . . . ಪ್ರಣ್ಯಸವಿಾರನು ಬರುತಿಹನು (ಪಾಂಚಜ. ೨೩-೭). ೫. ಉತ್ತಾನಪಾದರಾಯನ ಮಗ ; ಧ್ರುವಲೋಕದ ಅರಸಂ : ಲೋಕೋತ್ತರದ ಪದದಲಿ ನಿಂದನಾ ಧ್ರುವನಧಿಕತೇಜದಲಿ' (ನಿಭಾಗ. ೪-೯ ಸೂಚನೆ) : ಕರಿ ಧ್ರುವ ಬಲಿ ಪಾಂಚಾಲೆ ಅಹಲ್ಯೆಯ ಪೊರೆದವ ನೀನಂತೆ (ಪುರಂದ. ೨-೭೧-೧) : ಜಲಜಾಕ್ಷಭಕ್ತಿಯಿಂ ಪ್ರಹ್ಲಾದನಾಗಿ ನಿಶ್ಚಲ ಹರಿಧ್ಯಾನ್ಯದಿಂ ಧ್ರುವನಾಗಿ (ಜೈಮಿಭಾ. ೨೯-೦೪). ೬. ಒಂದು ನಕ್ಷತ್ರದ ಹೆಸರು. "ಧ್ರುವಃ. ಔತ್ತಾನಪಾದಿಃ – ೨ ಧ್ರುವನಕ್ಷತ್ರದ ಹೆಸರು" (ಸಿದ್ಧಾಂತಿ. ೩೦). 'ಧ್ರುವನಕ್ಷತ್ರ' ಪರಾ. ☞ ಧ್ರುವನು ನಾರದರಿಂದ ಮಂತ್ರೋಪದೇಶವನ್ನು ಪಡೆದು ತಪಸ್ಸನ್ನಾಚರಿಸಿ, ಸಾಮ್ರಾಜ್ಯವನ್ನಾಳಿ ಬಳಿಕ ಧ್ರುವಮಂಡಲವಾದನೆಂದು ಪುರಾಣಗಳಲ್ಲಿ ಹೇಳಿದೆ. ೭. ಎಂಟು ಜನ ವಸುಗಳಲ್ಲಿ ಒಬ್ಬ. 'ಅಷ್ಟವಸು' ಪರಾ. ೮. ಭೂಮಿಯ ಅಕ್ಷದ ಉತ್ತರ ಹಾಗು ದಕ್ಷಿಣದಿಕ್ಕಿನ ಕೇಂದ್ರ ಬಿಂದುಗಳು ; ಉತ್ತರಧ್ರುವ ಮತ್ತು ದಕ್ಷಿಣಧ್ರುವ : ಭೂಮಿಯು ತನ್ನ ಮೈಸುತ್ತು ಸರ್ವಕಾಲವೂ ತಿರುಗುತ್ತಿದ್ದಾಗ್ಯೂ ಅದರ ಬುಡ, ತಲೆ, ಇವೆರಡು ಬಿಂದುಗಳು ಸ್ಥಿರವಾಗಿ ಇರುತ್ತವೆ. ಈ ಸ್ಥಿರಬಿಂದುಗಳನ್ನು ಧ್ರುವಗಳೆಂದೆನ್ನುವರು (ಮುಂಬಯಿ. ೬-೬೦) : ಪೂಜಕನೂ ಪೂಜ್ಯನೂ ಬೇರೆ ಬೇರೆ ಎಂಬುದರ ಕಲ್ಪನೆಗೂ ಇಬ್ಬರೂ ಒಂದೇ ಎಂಬ ಕಲ್ಪನೆಗೂ ಎರಡು ಧ್ರುವದ ಅಂತರ (ಭಾರದ. ೨೮೪) : ಇಂದ್ರಿಯಾನುಭವಕ್ಕೆ ಪ್ರತಿಭಾಸವೂ ಭಾವನೆಗೆ ಆಲೋಚನೆಯೂ ಎದುರು ಧ್ರುವಗಳಂತಿವೆ (ಶಿಕ್ಷದ. ೬೩೩). ೯. ಅಯಸ್ಕಾಂತದ ಪ್ರತಿತುದಿಯಲ್ಲೂ ಇರುವ ಪ್ರದೇಶ : ಕಬ್ಬಿಣವನ್ನು ಆಕರ್ಷಿಸುವ ಗುಣವನ್ನೇ ಕಾಂತತ್ವವೆಂದು (Magnetism) ಕರೆಯುವರು. ಈ ಗುಣವು ಕಾಂತದ ತುದಿಯಲ್ಲಿ ಹೆಚ್ಚಾಗಿದೆ . . . ಹೀಗೆ ಈ ಗುಣವು ಕೇಂದ್ರೀಕೃತವಾಗಿರುವ ಸ್ಥಾನಗಳನ್ನು ಕಾಂತದ ಧ್ರುವಗಳೆಂದು (Poles) ಕರೆಯುತ್ತೇವೆ (ಭೌತವಿ. ೩೦೦). ೧೦. ಕಂಬ ; ಗೂಟ : "ಧ್ರುವಂ ಶಂಕ್ವಾಖ್ಯಂ" (ವಸ್ತುಕೋ. ೩೧-೭) ; "ಗೂಂಟ ಮತ್ತೆ ಶಿವಕಂ ಧ್ರುವಂ ಪುಳಕಮೆನಿಸಿಕ್ಕು" (ಮಂಗರಾ. ೮೫-೨೭). ೧೧. (ಕೊಂಬೆ, ರೆಂಬೆಗಳನ್ನು ತರಿದ) ಮರದ ಬೊಡ್ಡೆ,-ಕಾಂಡ ; ಮೋಟುಮರ ; ಮರದ ತುಂಡು : "ಸ್ಥಾಣುಃ, ಧ್ರುವಃ, ಶಂಕುಃ–೩ ಮೋಟಿನ ಹೆಸರು. ಗೂಟ, ಮೇಕು" (ಸಿದ್ಧಾಂತಿ. ೦೦೦). ೧೨. ಎಣ್ಣೆಯ ಗಾಣದಲ್ಲಿ ಉಪಯೋಗಿಸುವ ಮರದ ತುಂಡು,-ದಿಮ್ಮಿ. ೧೩. [ಜ್ಯೋತಿ] ವಿಷ್ಕಂಭ ಮೊದಲಾದ ಇಪ್ಪತ್ತೇಳು ಯೋಗಗಳಲ್ಲಿ ಹನ್ನೆರಡನೆಯದು ; ☞ ಇದೊಂದು ಶುಭ ಯೋಗವೆಂದು ಹೇಳುತ್ತಾರೆ : ವಿಷ್ಕಂಭ ಪ್ರೀತಿ ಆಯುಷ್ಮಾನ್ ಸೌಭಾಗ್ಯ ಶೋಭನ ಅತಿಗಂಡ ಸುಕರ್ಮ ಧೃತಿ ಶೂಲ ಗಂಡ ವೃದ್ಧಿ ಧ್ರುವ ವ್ಯಾಘಾತ ಹರ್ಷಣ ವಜ್ರ ಸಿದ್ಧಿ ವ್ಯತೀಪಾತ ವರೀಯಾನ್ ಪರಿಘ ಶಿವ ಸಿದ್ಧ ಸಾಧ್ಯ ಶುಭ ಶುಕ್ಲ ಬ್ರಹ್ಮ ಐಂದ್ರ ವೈಧೃತಿಗಳೆಂಬಿಪ್ಪತ್ತೇಳು ಯೋಗಂಗಳುಂ (ವಿವೇಕ. ೩೨೦) ; ಯೋಗಗಳತಿಶಯವನರಿಯ್ಯೆಯ್ಯ ಪೇಳುವೆ ವ್ಯತಿಯು ಧೃತಿ ವಿಷ್ಕಂಭ ಶೂಲವು . . . ಧ್ರುವ ಪರಿಘ (ಗಗತಾ. ೪-೭೯). ೧೪. [ಸಂಗೀತ] ಒಂದು ತಾಳದ ಹೆಸರು : ಬೇಗದಿ ಧ್ರುವ ಮಠಯವು ಪಡಿಮರಯವು ಯೇಗೈಯಲಡತಾಳಗಳು (ಶರಕೀ. ೭-೫೭) : ಧ್ರುವ, ಮಠ್ಯ, ರೂಪಕ, ಜಂಪೆ, ತ್ರಿಪುಟ, ಅಟ್ಟ,

**ನಂಟಸ್ತ, ನೆಂಟಸ್ತ** (ನಾ). ಬಾಂಧವ್ಯವುಳ್ಳವನು; ಬಂಧಂ. 'ನಂಟಸ್ತಿಕೆ' ಪರಾ. ನೆಂಟಸ್ತ. 'ನೆಂಟಸ್ತಿಕೆ' ಪರಾ. [ <ನಂಟು$_2$ + – ಸ್ತ ]

**ನಂಟಸ್ತನ, ನೆಂಟಸ್ತನ** (ನಾ). = ನಂಟತನ : ಸಮುದ್ರದ ನಂಟಸ್ತನ ಉಪ್ಪಿಗೆ ಬಂಡಾಟ (ಹುಟ್ಟಿಹ. ೬೯); ಯೋಗ್ಯರಾದವರೊಂದಿಗೆ ನಂಟಸ್ತನ ಮಾಡಬೇಕು (ರೂಢಿ). **ನೆಂಟಸ್ತನ :** ಈ ಗೆದ್ದಲಿರಾಯನ ನೆಂಟಸ್ತನ ಸಾಹಿತ್ಯದೊಡನೆ ಅಷ್ಟೇ ಅಲ್ಲ, ಕಂಬಳಿಯೊಡನೆಯೂ ಇದೆಯೋ–ಎಂದು ಕೊಂಡೆ (ಮುಂಗಾಪು. ೧೬). 'ದೊಡ್ಡಸ್ತನ' ಪರಾ.
[ < ನಂಟಸ್ತ + – ತನ ]

**ನಂಟಸ್ತಿಕೆ, ನೆಂಟಸ್ತಿಕೆ** (ನಾ). = ನಂಟತನ : ಆ ಎರಡು ಮನೆತನಗಳ ನಡುವೆ ಮದುವೆಯ ನಂಟಸ್ತಿಕೆ ಕೂಡ ಬೆಳೆದಿತ್ತು (ನೊಳಂಬ. ೬೩); ಈಗಿನ ಕಾಲದಲ್ಲಿ ನಂಟಸ್ತಿಕೆ ಹೆಚ್ಚಿದಷ್ಟೂ ಸಂಸಾರ ನಿಭಾಯಿಸುವುದು ಕಷ್ಟ (ರೂಢಿ). **ನೆಂಟಸ್ತಿಕೆ :** ನೆಂಟಸ್ತಿಕೆ ಬೆಳೆಸುವುದಕ್ಕಾಗಿ ನೀವೆ ಬಿಟ್ಟೂರಿಗೆ ಹೋಗ ಬೇಕಾಗುವುದು (ಝೂರಾಣಿ. ೩೩); ಹೋಗಲೇಬೇಕೆಂದು ಯೋಚಿಸಿ ಕೂಡಲೇ ಹೋಗಲು ಇಲ್ಲಿ ಚಿನ್ನದ ಕೊಪ್ಪರಿಗೆಯಿದೆಯೋ ಅಥವಾ ಕುಬೇರನ ನೆಂಟಸ್ತಿಕೆಯಿದೆಯೋ ? (ವಾತ್ಸಲ್ಯ. ೨೪). 'ದೊಡ್ಡಸ್ತಿಕೆ' ಪರಾ.
[ ನಂಟಸ್ತ + – ಇಕೆ ]

**ನಂಟಿಕೆ** (ನಾ). = ನಂಟತನ : ತಂಟೆಯುವನ ನಂಟಿಕೆ ಸಲ್ಲ. ಒಂಟಿಯಾಗಿ ಹೋಗಸಲ್ಲ (ಗಾದ). [ ನಂಟ + – ಇಕೆ ]

**ನಂಟಿತಿ, ನೆಂಟಿತಿ, ನೆಂಟಿತ್ತಿ** (ನಾ). ನಂಟರವಳು ; ಸಂಬಂಧಿಯಾದವಳು: (ಕ). **ನೆಂಟಿತಿ :** ಮನೆಗೆ ಬಂದ ನೆಂಟಿತಿಯರಿಗೆ ಉಡುಗೊರೆಯಾಗಿ ಕೊಡಲು ತಂದಿದ್ದ ಸೀರೆಗಳ ವಿಚಾರ ಸಲಹೆ ಕೊಡುವ ನೆವದಿಂದ . . . ತಿಳಿಯಲು ಪ್ರಯತ್ನಿಸುತ್ತಿದ್ದನು (ಮಳಿಮ. ೨೨೧). **ನೆಂಟಿತ್ತಿ :** ಮನೆಯ ಮಗಳೂ ನೆಂಟಿತ್ತಿಯ ಹಾಗೆ ಮದುವೆಯ ದಿನವೇ ಬಂದಿದ್ದಾಳೆ (ರೂಢಿ).
[ ನಂಟ + – ಇತಿ$_1$ (< – ಇತ್ತಿ) ]

**ನಂಟು$_1$** (ಕ್ರಿ). ತಾಗು ; ಕೂಡು ; ಸೇರು: ಅವು ತಾಮುರ್ಚಟ್ಟನೊಳೊರ್ವ ಕಂಡು ಕಿಡಿಯಂ ಕೆಂಡಂಗಳಂ ಸೂಸೆ ನಂಟುವ [ಪಾಠಾಂ. ಗಂಟುವ, ತಾಗುವ, ನಂಟದ]ವೊಲ್ ಬೆಟ್ಟನೊಳೊಂದು ಬೆಟ್ಟು ಭವಬದ್ಧಕ್ರೋಧದಿಂ ಕಾಯ್ದು ತಾಗುವುದುಂ (ಅರ್ಜನೀ. ೪-೧೨೦).
[ ದೇ.॥ ತಮಿ. ನಣ್ಣು, ನಣುಙ್ಕು, ನಣುಕು ]

**ನಂಟು$_2$, ನೆಂಟು** (ನಾ). ೧. ಸಂಬಂಧ ; ಬಾಂಧವ್ಯ : "ನಂಟಣ್ಣನಿಕ್ಕಿಂ" (ಕಬ್ಬಿಕ್ಕೈ. ೬೯); ಜವನೊಡವುಟ್ಟು ಮಾರಿಯೊಡನಾಡಿ ಲಯಾಗ್ನಿಯ ನಂಟು . . . ಸಿಡಿಲ ಸಂಗಡವಿನಾಶನ ಬೆಂಕೆಗಣ್ಣ ಬಾಂಧವನೆನೆ ಶೌರಿ ಮರ್ದಿಸಿದ ನಪ್ರತಿಮಲ್ಲರೆನಿಪ್ಪ ಮಲ್ಲರು (ಜಗವಿ. ೬-೭೩); ಕೆಳೆತನದ ನಂಟು [ಪಾಠಾಂ. ಬಂಧು] ವಿಷಯದ ಬಂಧುವಾತುಗಳ ಬಲದೊಳಾಂ ಕವಿಯೆಂದು ಕವಿರಾಯ ನೆಂದು ಮೆಗ್ಗಳಿಸಿ . . . ನಂಟನೀಡಾಡಿ ಮಲೆತು (ಹಪಕಾ. ೧-೩೦); ಕರಕಪ್ಪರೊಳು ನಂಟದೇತಕುಳಿ ಶುಭವನೆಣಿಸು (ವೆಂಕಾರಾ. ೫-೯-೭); ಹಳಗನ್ನಡಕ್ಕೂ ತಮಿಳಿಗೂ ಇರುವ ನಿಕಟವಾದ ನಂಟು ನೋಡಬೇಕಾದುದು (ದ್ರಾವಿವಿ. ೧೧೨); ಸಮುದ್ರದ ನಂಟು ಉಪ್ಪಿಗೆ ಬಡತನ (ಗಾದ). 'ನಂಟು ಗಾಣಿಸು' ಪರಾ. ೨. ಪ್ರೀತಿ ; ಪ್ರೇಮ : ನಂಟಂ ಬಯಸುತ್ತಿನಿಯನ ನಂಟ ಮಹಾತುರದಿನಪ್ಪಿ ಮೆಗೆ ಪುಳಕಿಸುತುಂ . . . ಜೋಡೆಯುರ್ಸೆರ ಯುತಂದೆಸೆದರ್ (ಉದ್ಭಟ. ೧೦-೧೧೩); ನನಗೂ ನಿನಗೂ ಅಂಟಿದ ನಂಟಿನ ಕೊನೆ ಬಲ್ಲವರಾರು ಕಾಮಾಕ್ಷಿಯೆ! (ಸಹೀಗೀ. ೪೭-೯೭೧). **ನೆಂಟು :** ೧. ಸ್ತುತಿಯಿಲ್ಲ ನಿಂದೆಯಿಲ್ಲ ನೆಂಟಿಲ್ಲ [ಪಾಠಾಂ. ನಂಟಿಲ್ಲ, ನೆಂಟರಿಲ್ಲ] ಹಗೆಯಿಲ್ಲ ಆಜುಹಿಲ್ಲ ಮಚ್ಚಿಹಿಲ್ಲ ತಾನೆಂಬ ನೆನಹಿಲ್ಲವಾಗಿ (ಆದವ. ೧೭೧-೨೮೫); ರಾಮಣ್ಣನ ನೆಂಟೂ ನಮಗೆ ಗಂಟುಬೀಳುತ್ತದೊ ಏನೋ (ಮಾಹಾಗ. ೩೩೦); ಅಕ್ಕನ ಹಗೆ ಭಾವನ ನೆಂಟು (ಗಾದ).

ನಂಟು ಮಾಡು, ನೆಂಟು ಮಾಡು=ಸಂಬಂಧವನ್ನು ಮಾಡು; ಬಾಂಧವ್ಯ ವನ್ನು ಬೆಳೆಸು : ವಧುವಂ ತಂದೀಯೆ ಮುನ್ನಿನ್ನ ಚಿತ್ರದೊಳಿರ್ದಂದದ ನಂಟು ಮಾಡಿ ಸಿರಿಯಿಂದೆನ್ನೊಳ್ ಸಮಂ ಮಾಟ್ಪಿಂ (ವರ್ಧಪು. ೭-೩೪); ನೀರೆಱೆದೋವಿದವರ ಕಾಲ ಕುಂಟು ಮಾಡುವ ಬೇಲದಂತೆ ಕಂಟಕವನು ಕಾಣೆವರು ಕೆಲಂಬರು ನಂಟು ಮಾಡುವ ಮಾನ್ಯರಿಗೆ (ಪ್ರಭಂಜ. ೧-೨೨); ಒಂದೇ ಗಂಡುದೇವರ ಒಕ್ಕಲಾಗಿದ್ದರೂ ಹೆಣ್ಣುದೇವರು ಬೇರೆ ಬೇರೆ ಯಾಗಿದ್ದರೆ ನೆಂಟು ಮಾಡುವುದುಂಟು (ಹುಟ್ಟಿಹ. ೨೩).
[ <ನಂಟು$_1$./ತಮಿ. ನಟ್ಪು, ನಣ್ಪು ; ತುಳು. ತೆಲು. ನಂಟು ]

**ನಂಟುಗಾಣಿಸು** (ಕ್ರಿ). ಹೊಂದಾಣಿಕೆಯನ್ನುಂಟುಮಾಡು; ಹೊಂದಿಸು: ಒಂಟಿದಂಡಿಗೆಯೊಳು ಹಲವು ದಂಡಿಗೆಯೊಳು ನಂಟುಗಾಣಿಸಿ ಶ್ರುತಿಮುಟ್ಟ ಮಂಟಪ ಗುಮುಗುಮುಗುಮ್ಮೆನೆ ಕೊರಳೆದೆಗುಂಟಾಗಿ ಠಾಯೆದೋಱಿದರು (ಭರಡ. ೧೮-೧೩೭). [ ನಂಟು$_2$ + ಕಾಣಿಸು ]

**ನಂಟುಗೊಳುಹ** (ನಾ). ಹೊಂದಾಣಿಕೆಯನ್ನುಂಟುಮಾಡಿಕೊಳ್ಳುವಿಕೆ ; ಸಂಬಂಧವನ್ನು ಸ್ವೀಕರಿಸುವಿಕೆ ; ಸಮನ್ವಯ ಮಾಡಿಕೊಳ್ಳುವಿಕೆ : "ಸಾಮ ಎಂದೊಡೆ ವಿನಯದಿಂ ನಂಟುಗೊಳುಹ" (ನಾಚಿರಾ. ೬).
[ ನಂಟು$_2$ + ಕೊಳುಹ ]

**ನಂಟುತನ, ನೆಂಟುತನ** (ನಾ). = ನಂಟತನ : ಹರಿ ಕರಿಕಳಭದುರುಬಂಧುತ್ವ ಫಣಿ ಮುಂಗುಲಿಯ ನಂಟುತನ . . . ಇರ್ದುದು ಬಸದೊಳಾ ಮುನಿಯ (ಕೊರಲಾ. ೧-೫-೪೩); ಕೂಳ ಚಿಮೆಯಲಿ ನಂಟುತನ ದಾಕ್ಷಿಣ್ಯಪರನಾಗಿ (ಮದಿಭ. ೨೩); ಎಂದುಪಾಯದಿ ಮಮತೆ ನಂಟುತನ ತೋರಿ ಮುಂದು ವರಿಯಲು ; ಮನದಿ ಸಂದೇಹ ಮೀರಿ (ಕವಿಪು. ೧೨-೧೫); ಆ ಕನ್ಯೆಯರ ಪಾಣಿಗ್ರಹಣ ಮಾಡುವುದರಿಂದ . . . ಆ ಸಾಮಂತರಿಗೂ ದೊಡ್ಡವರೊಡನೆ ನಂಟುತನ ಬೆಳೆಸಿದೆವೆಂಬ ಮಾನಗೌರವಗಳೂ ಉಂಟಾಗುತ್ತಿದ್ದುವು (ಶಾಂತಲಾ. ೯೭). **ನೆಂಟುತನ :** ನೆಂಟುತನ ಹೊಸೆವ ಕಾಲೂರ್ಮದುವೆ ಪಿರಿದು (ಕಾಲೂರ. ೩೯-೪೫). [ ನಂಟು$_2$ + – ತನ ]

**ನಂಟುಭಕ್ತಿ** (ನಾ). ಬಾಂಧವರ ಮೇಲಿರುವ ಮೋಹ : ಸಂಸಾರಬಂಧು ಗಳೆನ್ನವರೆಂದೊಡೆ ನಂಟು[ಪಾಠಾಂ. ಟ]ಭಕ್ತಿ, ನಾಯಕನರಕ ಇಂತೆಂದುದು ಕೂಡಲಸಂಗನ ವಚನ (ಬಸವ. ೮೯); ಅಣ್ಣತಮ್ಮ ಹೆತ್ತಣ್ಣ ಗೋತ್ರ ವಾದರೇನು ಲಿಂಗಸಾಹಿತ್ಯವಿಲ್ಲದವರ ಎನ್ನವರೆನ್ನೆನಯ್ಯಾ ನಂಟುಭಕ್ತಿ ನಾಯಕನರಕ (ಬಸವ. ೭೧೩). [ ನಂಟು$_2$ + ಭಕ್ತಿ ]

**ನಂಟುಮೊಱೆ** (ನಾ). ನೆಂಟತನದ ಸಂಬಂಧ, – ಬಾಂಧವ್ಯ : ಈ ಅಪ ದೆಸೆಯುಂ ಕಂಡೊಂದು ಬಕಂ ಬೆಳರ್ತು ಮುಂಗಾಣದೆ ತನ್ನ ನಂಟು ಮೊಱೆಯ ಮಿಾಂಗಳ್ಗೆ ಮುಂತೆ ಬಟ್ಟೆ ಯಾವುದೆಂದಾವಗಮುಗಲದ ಚಿಂತಾ ಪರನಾಗಿರ್ದಂ (ರಾಮಾಶ್ವ. ೫೧-೨೫). [ ನಂಟು$_2$ + ಮೊಱೆ$_3$ ]

**ನಂಟುವಳಿ** (ನಾ). ಬಾಂಧವ್ಯ ; ನಂಟತನ : ನಂಟುವಳಿ ಜನ್ನಿಪುದು ತತ್ಸತಿಯ ದೆಸೆಯಿಂ (ಅಂಬಿಕಾ. ೩೩-೨೩). [ ನಂಟು$_2$ + – ವಳಿ$_1$ ]

**ನಂಡುಲಿ** (ನಾ). (ಕರಾ) ಮಳೆ ಬಿದ್ದು ಮಣ್ಣು ಸ್ವಲ್ಪ ಹಸಿಯಾಗಿರು ವಾಗ ಬಿತ್ತುವುದು : ಇಷ್ಟು ಬೇಗನೆ ಮಳೆ ಬರುತ್ತದೆಯೆಂದು ಯಾರಿಗೆ ಗೊತ್ತು ಕಡುಲಿಯಂತೂ ತಪ್ಪಿತು, ಇನ್ನು ನಂಡುಲಿಗಾದರೂ ಬಿತ್ತಬೇಕು (ರೂಢಿ). 'ಕಡುಲಿ' ಪರಾ. [ ? ]

**ನಂತರ$_1$** (ನಾ). ತರುವಾಯದ ಕಾಲ : ಹರನ ಪಾದಂಗಳಿಗೆ ವಂದಿಸಿ ಸುರರು ನಂತರದಲ್ಲಿ ಗಿರಿಜೆಯ ಚರಣಸರಸಿಜಗಳನು ನಮಿಸುವರು (ಪಾರ್ವಪ. ೩೦).
[ < ಅನಂತರ$_1$ ]

**ನಂತರ$_2$** (ಅ). ತರುವಾಯ ; ಆಮೇಲೆ : ಕಲ್ಲು ಕಾಮಗಾರಿ ಕರ್ಚ ೨೦ ವರಹ ಕೊಟ್ಟುಯಿಥಾಳೆ ಬಾವಿ ತೀರಿದಲಿ ನಂತ್ರರ ಬೋವಿಗಳಿಗೆ ವುಡುಗರೆ ೧೦ ಹ ಕೊಟ್ಟುಯಿಥಾಳೆ (ಮೈಆರಿ. ೧೯೨೯, ೯೭-೯; ಸು. 1764);

ಈ ವೆನೀಸಿಯನರು . . . ಪುನಃ ತನ್ನ ಅಸ್ಥಾನಕ್ಕೆ ಹಿಂದಿರುಗಿ ಬರುವ ಭರವಸೆಯನ್ನು ಅವರಿಂದ ಪಡೆದ ನಂತರವೇ . . . ಏರ್ಪಾಡು ಮಾಡಿಸಿದನು (ಪ್ರವಾಇ. II, ೮). [ < ಅನಂತರ₂ ]

**ನಂದ** (ನಾ). ೧. ಸಂತೋಷ ; ಆನಂದ ; ಸುಖ. 'ನಂದವಿಡಂ' ಪರಾ. ೨. ಕೃಷ್ಣನ ಸಾಕುತಂದೆ ; ನಂದಗೋಪ : ನಂದಾದಿಗೋಪರಿಂದು ಪುರಂದರಮುಹಮೆಂದು ಹರ್ಷದಿಂ ಸಂಭ್ರಮಿಸಲ್ (ಜಗವಿ. ೪-೭೭) ; ನಂದ ನಿತ್ತಲು ಕೇಳ್ದು ವಸುದೇವನ ತದುಕ್ತಿಗಳ ನೊಂದು ಶಂಕಿಸಿ ಚಿತ್ತದೊಳಗೆ ಮುಕುಂದನನು ಮಱಿಪೊಕ್ಕು ಮರಳಿದು ಬಂದನಾ ಮುಮ್ಮಾರ್ಗದಿಂದ ನಿಜಾಲಯಕ್ಕೊಲಿದು (ನಿಭಾಗ. ೧೦-೫-೩೭); ಮುಂದಗಮನೆ ಇವನಾರೆ ಪೇಳಮ್ಮ . . . ನಂದನ ಕಂದ ಮುಕುಂದ ಕಾಣಮ್ಮ (ಪುರಂದ. ೨-೭೦-೧). 'ನಂದನಂದನ' ಪರಾ. ೩. ಚಾಣಕ್ಯನಿಂದ ರಾಜ್ಯವನ್ನು ಕಳೆದುಕೊಂಡ ಪಾಟಲೀಪುತ್ರದ ಒಬ್ಬ ರಾಜ ಮತ್ತು ಅವನ ವಂಶದ ಹೆಸರು : ಪಾಟಳೀಪುತ್ರಮೆಂಬುದು ಪೊಟಲದನಾಳ್ವಂ ನಂದವಂಶದೊಂ ಪದ್ಮನೆಂಬೊಂ (ವಡ್ಡಾರಾ. ೧೮೦-೧೩) ; ನಂದರಿಗೆ ಮಂತ್ರಿಯಾದ ರಾಕ್ಷಸನು ಚಂದ್ರಗುಪ್ತನ ದೆಸೆಯಿಂದ ಭೀತನಾಗಿ ಆ ರಾಜ್ಯದಲ್ಲಿ ನಿಲ್ಲಲಶಕ್ಯವಾದ ಕಾರಣ ಇಲ್ಲಿಗೆ ಬಂದನೋ ! (ಮುದ್ರಾಮಂ. ೩೭೦). ೪. ಕುಬೇರನ ನವ ನಿಧಿಗಳಲ್ಲಿ ಒಂದು. ೫. [ಗಣಿತ] ಒಂಬತ್ತು ಎಂಬ ಸಂಖ್ಯೆಯ ಸಂಕೇತ : ನವ, ಪದಾರ್ಥ, ರಂಧ್ರ, ನಂದ . . . ನಾಟ್ಯಾಂಗ ಇಂತಿನಿತುಂ ೯ಕ್ಕೆ ಪೆಸರು (ವ್ಯವಹಾ. ೧೧-೩). ೬. [ಛಂದ] ಒಂದು ವರ್ಣವೃತ್ತದ ಹೆಸರು : ದಿನೇಶನಿಂದತ್ತ ನೀಲಕಂಠರ್ ತನೂದರೀ ನಿಲ್ಕೆ ನಂದ[ವಾಕಾಂ. ನಿಲ್ಕನಂಗ]ಮಕ್ಕುಂ(ಛಂದೋಂಬು. ೨-೭೧). [ ಸಂ. ]

**ನಂದಕ** (ನಾ). ೧. ಸಂತೋಷಗೊಳಿಸುವಿಕೆ ; ಆನಂದಗೊಳಿಸುವಿಕೆ. ೨. ಸಂತೋಷ ; ಆನಂದ. ೩. ಕತ್ತಿ ; ಖಡ್ಗ. ೪. ವಿಷ್ಣುವಿನ ಕತ್ತಿ, – ಖಡ್ಗ : ನಂದಕಮುಂ ದಿವಿಜಗಣಾನಂದಕಮುಂ ಕೊಂಡು ಚೇದಿಪತಿಯೊಳ್ ಪೊಣರ್ದಂ ಮಂದರಧರಂ (ಜಗವಿ. ೭-೯೭) ; ಘನಕರಿಗಿಕ್ಕಿದಂಕುಶಮಿದಬ್ದ ಮುಕುಂದನ ನಂದಕಾಯುಧಂ (ರಾಜಶೇ. ೮-೧೨೦) ; ಓಹೋ, ಈ ನಂದ ಕಾಸಿಯು ಬಂದಿತು (ಭಾಸನಾ. ೫೧). ೫. ಕಪ್ಪೆ. ೬. ಕೃಷ್ಣನ ಸಾಕುತಂದೆ. ೭. [ಛಂದ] ಒಂದು ವರ್ಣವೃತ್ತದ ಹೆಸರು : ಬಂದು ವಹ್ನಿಯೊಳ್ ನಿಂದೊಡಾಲಗಂ ಸುಂದರಾಂಗಿ ಕೇಳ್ ಸಂದ ನಂದಕಂ (ಛಂದೋಂಬು. ೨-೭೭). [ ಸಂ. ]

**ನಂದಕೆ** (ನಾ). = ನಂದಕ ೪ : ಭವನ ಶೂಲದ ಗಾಯದಿಂದವೆ ಕವಲುದಲೆಯಾದವರು ಬಲು ಮಾಧವನ ನಂದಕೆಯಿಂದ ಮೂಳೆಗಳೆದ್ದ ಬೆನ್ನವರು (ಕೌಶಿರಾ. ೨೧-೧೫). [ ಸಂ. ನಂದಕ ]

**ನಂದಗಿರಿ** (ನಾ). ಒಂದು ನಾಡಿನ ಹೆಸರು; ಈಗಿನ ಕೋಲಾರ ಜಿಲ್ಲೆಯ ನಂದಿಬೆಟ್ಟದ ಸುತ್ತುಮುತ್ತಲಿರುವ ಪ್ರದೇಶವಿರಬಹುದು : ಮಹಾರಾಜಾಧಿರಾಜ ಕೊಳಾಲಪುರವರೇಶ್ವರ ನನ್ದಗಿರಿನಾಥಂ (ಎಕ. III, ನಂಜನ. ೧೫೫-೩; ಸು. 970) ; ಮಹಾರಾಜಾಧಿರಾಜಂ ಕೋಳಾಳಪುರ ವರೇಶ್ವರಂ ನನ್ದಗಿರಿನಾಥಂ ಜಯದುತ್ತರಂಗಂ ಗಂಗಚೂಡಾಮಣಿ . . . ವಿಕ್ರಮಾದಿತ್ಯದೇವರ್ (ಸೌಇಇ. XX, ೩೫-೩; 1066) ; ಮಹಾರಾಜಾಧಿರಾಜ ಪರಮೇಶ್ವರಂ ಕೋಳಾಲಪುರವರೇಶ್ವರಂ ನಂದಗಿರಿನಾಥಂ ಮದ ಗಜೇಂದ್ರಲಾಂಛನಂ (ಎಕ. VII, ಶಿವಮೊ. ೪-೮೭; 1122).

[ ನಂದ + ಗಿರಿ₁ ]

**ನಂದಗೋಕುಲ** (ನಾ). ೧. ಯಮುನಾನದೀತೀರದಲ್ಲಿರುವ ಒಂದು ಸ್ಥಳದ ಹೆಸರು; ಕೃಷ್ಣನ ಸಾಕುತಂದೆಯಾದ ನಂದಗೋಪನು ಇದ್ದ ಸ್ಥಳ : ಉತ್ತರಿಸಿ ಯಮುನೆಂಗನು ಹರಿಯನು ಹೊತ್ತುಕೊಂಡುರದೊಳಗೆ ಪೋಗಿ ಯಮೊತ್ತಮನು ನಟ್ಟಿರುಳು ಹೊಕ್ಕನು ನಂದಗೋಕುಲವ (ನಿಭಾಗ. ೧೦-೪-೧೭). ೨. (ಆಲಂ) (ಮಕ್ಕಳಿಂದ ತುಂಬಿ) ಆನಂದ ಮಯವಾದ ಸಂಸಾರ, – ಕುಟುಂಬ : ಪಂತರವಾಡೇ ನಂದಗೋಕುಲ ವಾಗಬಹುದು (ದೀಪದ. II, ೩೦೯) ; ಅವರ ಸಂಸಾರ ನಂದಗೋಕುಲ ವಾಗಿದೆ (ರೂಢಿ). [ ನಂದ + ಗೋಕುಲ ]

**ನಂದದೀವಿಗೆ** 'ನಂದಂ' ಪರಾ.

**ನಂದನ** (ನಾ). ೧. ಸಂತೋಷಗೊಳಿಸುವಿಕೆ ; ಆನಂದಗೊಳಿಸುವಿಕೆ. ೨. ಆನಂದ ; ಸಂತೋಷ : ನಂದನನಾಮದ ನಂದನನುತಪ್ಪ ನಂದನಂ ಜನಿಕೆ ತಮಗೆಂದು ಧರೆಯೊಳಾನಂದದಿಂ ಬಯಸದವರಿಲ್ಲಾ (ವರ್ಧಪು. ೧೩-೧೦೪) ; ಶಂಕರ ನಿಮ್ಮ ಶ್ರೀಪದವ ಸಂದು ನಿಜದಿಂ ಧ್ಯಾನಿಸುವುದೇ ನಂದನಂ ವ್ಯಾಮೋಹದಿಂ ಘನವೆಂದು ಶಂಕರದಾಸಿ ಪೇಳಿದ ಜಡೆಯ ಶಂಕರಗೆ (ಶಂಕದಾ. ೧೬-೧೦). 'ಚೇತೋನಂದನ' ಪರಾ. ೩. ಮಗ ; ತನಯಂ ; ಪುತ್ರ : "ತನಯಂ ಸ್ತನಂಧಯಂ ತೋಕಂ ಸುತಂ ಸೂನು ತನುಜನಾತ್ಮಜನಪತ್ಯಂ ತುಕ್ ಪ್ರಸೂತಿ ನಂದನನೆನಲು ಪುತ್ರನೆನಿಸಿಕ್ಕು" (ಮಂಗರಾ. ೯೦-೯) ; ನಿನಗೆ ಭರತಾವನೀತಲಮನಿತನಿತುಮನಾಳ್ವನೊರ್ವ ನಾದಪ್ಪಂ ನಂದನಂ (ಆದಿಪು. ೮-೨೮) ; ನಿಜನಂದನರಂ ನೀನಿರೆ ನೃಪೇಂದ್ರ ಕೊಲ್ವರುಮೊಳರೇ (ಅಜಿಪು. ೧೦-೩೮) ; ನಂದನಜನ್ಮೋತ್ಸವದೊದವಿಂದಂ ಪರಿತಂದು ಪೂರ್ಣಪಾತ್ರಮ ತ್ಯಾನಂದಮೊದವಲ್ಕೆ ಪರಿಜನಮೆಂದೆಳಕುಳಿ ಗೊಳ್ವ ಸೈಪು ಸಮನಿಸಿದವುದೋ (ಕಾದಂಪೂ. ೩೫೩) ; ಆ ಕನಸುಗಳನನು ಕ್ರಮದಿಂ ಕೇಳ್ದು . . . ತತ್ಫಲಮನಜುಪಲಂದಿಂತೆಂದಂ . . . ಮೃಗ ರಾಜನಿಂ ಪುರುಷಸಿಂಹಂ ಪುಟ್ಟುಗುಂ ನಂದನಂ (ಜಗವಿ. ೩-೮೩) ; ನಂದನನಕ್ಕುಂ ಸಮುಗಿನ್ನೆಂದಧಿಪನಮೋಘವಚನದಿಂ ವನಿತೆ ಮಹಾನಂದಮ ನಾಂತಂಬುದರವದಿಂದಾನಂದಿಪ ಮಯೂರವನಿತೆಪೊಲಾದಳ್ (ಚಂದ್ರಪು. ೧೩-೩೦) ; ಆ ಜಂಪತಿಗಳ್ಗೆ ಕಳಾರಾಜಿತಮತಿಗಳ್ಗೆ ತತ್ಸಹಸ್ರಾರದ ವಿಭ್ರಾಜಿತಸುರಪರನುರುತರತೇಜಂ ನಂದನಸಮಾಖ್ಯನಂದನನಾದಂ(ವರ್ಧಪು. ೧೩-೧೦೨ ; ನಂದನನೆಳಮೆಯ ಕೈಮೆಯನಂದಿಗಾ ನಂದಗೋಪನಾಲಿಸಿ ನಲಿದಂ (ಚಕವಿ. ೪-೧೯೯). 'ನಂದನಂದನ' ಪರಾ. ೪. ಇಂದ್ರನ ತೋಟ, – ಉದ್ಯಾನವನ : ಸಾರಸಹಂಸಕೋಕಿಳಕುಳಧ್ವಾನೋತ್ಕರಂ ಚೆಲ್ವನಾಯ್ತು ಕರಂ ಸ [ ಕೃ ] ನಿಳಿಂಪದಂಪತಿಗಳಿಂದಾ ನಂದನಂ ನಂದನಂ (ಪಂಪಭಾ. ೫-೮೦) ; ನಂದನದಂದದಿಂದೆಸೆವಿನಂ ಬನಮುಂ ಮನದಟ್ಟಿಱಿಂದ ಸಂಕ್ರಂದನಸನ್ನಿಭಂ . . . ವಿಶ್ವನಂದಿವಿಭು ಮಾಡಿಸಿದಂ (ವರ್ಧಪು. ೩-೨) ; ವನ ಇಂದ್ರನ ನಂದನದಂತಿದೆ (ಶಾಂತಲಾ. ೪೦) ; ಇನ್ನು ಎಲ್ಲಿಗೋಟ ನಂದನದ ತೋಟ! (ಗರಿ. ೯೯-೧೩). 'ನಂದನವನ' ಪರಾ. ೫. ತೋಟ; ಉದ್ಯಾನ ವನ : ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳ್ಗಾಗರವಾದ ಮಾನಸರೆ ಮಾನಸರಂತವರಾಗಿ ಪುಟ್ಟಲೇನಾಗಿಯುಮೇನೊ ತೀರ್ದಪು[ದೆ] ತೀರದೊಡಂ ಮಱಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿದೇಶದೊಳ್ (ಪಂಪಭಾ. ೪-೨೯) ; ಸುಳಿವಂಚೆಗೆಲ್ಲದುದಿಲ್ಲ ನಂದನಂ (ಜಗವಿ. ೩-೧೦) ; ಪ್ರಚುರಚಂದನನಂದನ ಗಂಧದಿಂ ದಿಶಾಪರಿಧಿಯನೆಯ್ದೆ ಬಾಸಣಿಸುತಿರ್ಪುದು ಸುಗಂಧಿಮಂಡಲ ವಿಳಾರಮಣೀರಮಣೀಯಕುಂಡಲಂ (ಚಂದ್ರಪು. ೩-೧೧) ; ಮರುಭೂಮಿ ನಗುವ ನಂದನವಪ್ಪುದಿದನೀಂಟೆ (ಶ್ರೀರಾಮಾ. ೧೪-೩೫೭). ೧, ೫ : ರಾಜ ಕೀರಚ್ಛದಾನಿಳಲೋಲತ್ಕಣಿಶಾಳಿಶಾಳಿ ಜನಚೇತೋನಂದನಂ ನಂದನಂ (ಜಗವಿ. ೨-೨) ; ಘನತರಭದ್ರಶಾಳದಿನಿನಿತ್ತೆಡೆಮಾಡದೆ ನಂದನಕ್ಕೆ ನಂದನದಿನದೊಂದು ಬೇಗದೊಳೆ ಸೌಮನಸಕ್ಕೆ ತಗುಳ್ದು ಮತ್ತೆ ಸೌಮನಸದಿನೆಯ್ದೆ ಪಾಂಡುಕವನಕ್ಕಡರ್ದತ್ತು ಸುರೇಂದ್ರವಾರಣಂ (ಚಂದ್ರಪು. ೧೩-೧೦೪). ೬. ಅರುವತ್ತು ಸಂವತ್ಸರಗಳಲ್ಲಿ ಇಪ್ಪತ್ತಾರನೆಯದು : ಮತ್ತಮಾ ವರುಷವೇ ಪ್ರಭವ ವಿಭವ . . . ನಂದನ

ಅಕ್ಷಯಮೆಂದೆಱವತ್ತು ತೆಱನಾಗಿಹುದು (ವಿವೇಕ. ೩೨೦); ನಂದನಸಂವತ್ಸರದ ಪಾಲ್ಗುಣ ಶು ೧ ಲು . . . ಗುಡಿಯ ಜೀರ್ಣಉದರ ಮಾಡಿದ ವಿವಾರ (ಎಕ. III (R), ನಂಜನ. ೩೬೨-೨; 1653). ೭. ಶಿವ. ೮. ವಿಷ್ಣು. ೯. [ಜೈನ] ರುಚಕಾಚಲದ ಜಿನನಿಲಯದ ಎಂಟು ಶಿಖರಗಳಲ್ಲಿ ಒಂದು : ಜಿನನಿಲಯರುಚಿರರುಚಕಾಚಲದ ಪೂರ್ವದಿಗ್ಭಾಗದ ವೈಡೂರ್ಯ ಕಾಂಚನಕನಕಾವಿಪ್ಪದಿಕ್ಸ್ವಸ್ತಿಕನಂದನಾಂಜನಮೂಲಕಂಗಳೆಂಬೆಂಟುಂ ಕೂಟಂಗಳೊಳ್ (ಆದಿಪು. ೭-೩ ವ). ೧೦. [ಸಂಗೀತ] ಒಂದು ರಾಗದ ಹೆಸರು. [ ಸಂ. ]

**ನಂದನಂದನ** (ನಾ). ನಂದಗೋಪನ ಮಗ; ನಂದಕುಮಾರ; ಕೃಷ್ಣ : ಅಂತು ವಿಜಯಮಂಗಳಂ ನೆಗೞೆ ಗೋಕುಲಮುಂ ಪೊಕ್ಕು ನಂದನಂದನಂ ಗೋಪಾಲವಿನೋದಮೆ ನಿತ್ಯೋತ್ಸವಮಾಗೆ ಸುಖದಿಂದಿರ್ಪನ್ನೆಗಂ (ಜಗವಿ. ೯-೫೮ ವ); ನಂದನಂದನಸನ್ನಿಭನು ಸಾನಂದದಿಂದಲೆ ನಮ್ಮವನು ಕೃಪೆಯಿಂದ ಸಲಹಂಗೆ ದೇವ ಜಗದಾರಾಧ್ಯ ಗುರುರಾಯ (ಕುವ್ಯಾಆ. ೧-೧೨). [ ನಂದ + ನಂದನ ]

**ನಂದನಚರ** (ನಾ). [ಜೈನ] ಹಿಂದಿನ ಜನ್ಮದಲ್ಲಿ ಮಗನಾಗಿದ್ದು ಸಂಸಾರ ಚಕ್ರದಲ್ಲಿ ಸುತ್ತುತ್ತಿರುವವನು: ಅರಸನುಮವಾಗಳ್ ನೆತ್ತದ ಭರದಿಂ ಕೊಳ್ಳೆನುತುಮಿಕ್ಕೆ ನವಿಲಂ ಕೊಳ್ಳೆಂದರೆಸುತ್ತೆ ಪಿಡಿದುದಂಬಾಚರಿ ಕುಕ್ಕುರಿ ನೊಂದು ಬೀೞ್ವ ನಂದನಚರನಂ (ಜಂಬೂಚ. ೩-೪೨). [ ಸಂ. ]

**ನಂದನಬನ** (ನಾ). = ನಂದನವನ ೨ : ಕಾಗೆ ನಂದನಬನದೊಳಗಿರ್ದರೇನು ಕೋಗಿಲೆಯಾಗಬಲ್ಲುದೇ ಹೇಳಾ (ಬಸವ. ೯೮); ಹಿರಿಯ ಜಕ್ಕಿಯಂಮೆಯ ಕೆಱೆಯ ಹಿಂದಣ ನಂದನಬನದೊಳಗೆ ಗದೆ ಸಲಗೆ ಖ ೨ (ಎಕ. II (R), ೫೩೫-೮; 1250). [ ನಂದನ + ಬನ ]

**ನಂದನವನ** (ನಾ). ೧. ಇಂದ್ರನ ವನ, ಉದ್ಯಾನವನ : ನಂದನವನದೊಳಗೇನೇಂ ಬಂದಪೂ ಮರನೆಂದು ಕಂತು ಬೆಸಗೊಳೆ ವಹಿಂ ಬಂದಿರ್ದುವೆಂದು ಬನ್ನವಿಪಂದದೆ ಕೋಗಿಲೆಗಳುಲಿದುವಾಮ್ರದ್ರುಮದೊಳ್ (ಆಜಿಪು. ೭-೧೩); ನಂದನವನಮಧ್ಯದ ಕೊಳದಿಂದಗಲದ ಹಂಸಮಿಥುನಮೆನೆ . . . ನಲಿಯುತಿರ್ದರಾ ದಂಪತಿಗಳ್ (ಜಗವಿ. ೨-೫೩); ನಂದನವನಸಂಭವಪರಿಚಂದನ ಸಂತಾನ . . . ಕುಸುಮಕೋಟಿಯುಂ (ಪುಷ್ಪಪು. ೧೦-೪೪); ನಮ್ಮ ದೊರೆ ನಂದನವನಕ್ಕೆ ಬೇಂಟೆವೋಗಿ ತಂದಿರ್ಪನೀ ಕಂದರ್ಪನಂದನವನನ್! (ಚಂದ್ರಸ. ೩೯-೦). ೨. (ಸುಂದರವಾದ) ತೋಟ; ಉದ್ಯಾನವನ : ಬರಿಸುವೆನಿಂದು ನಂದನವನಾಂತರದಲ್ಲಿಗೆ ಕಾಂತನಂ ಸಮಾಹರಿಸುವೆನಂತನಂತಸುಖಸಂಗತಮಂಗಳಕಾರಣಂಗಳಂ (ಕವಿಜಾ. ೨-೧೦೪); ನೀನುಮವನುಂ ಕಿಱಿಯಂದೊರ್ವರುಪಾಧ್ಯಾಯರ ಪಕ್ಕದೊಳೋದುಮಂದು ನಂದನವನದೊಳಗೆ ನೀನೆನ್ನ ಪೂಣ್ದ ಪ್ರತಿಜ್ಞೆಯುಂ ನೆನೆದಾ (ವಡ್ಡಾರಾ. ೧೨೫-೨); ನಂದನವನಪವನಂ ಬೞಿವಂದೊಡಗೊಂಡೊಯ್ದು ಪುಗಿಸೆ ಬನಮಂ ಪುಗಲೆಂಬೊಂದನ್ಯಭೃತಕ್ವಾಣಿತಿವಂದಂತಾಯ್ತುತನು ಬೆಸಸೆ ಕುಸುಮಾವೋದಂ (ಶಾಂತಿಪು. ೮-೩); ಶ್ರೀಕಾಳಂ ದೇವತಾರ್ಚ್ಚನಂಗೆಯ್ವುದಕ್ಕಂ ದೇವರ್ಗ್ಗೆ ನಂನ್ದನವನಂ ಮಾಡುವುದಕ್ಕಂ . . . ಬ್ರಹ್ಮಲಿಂಗಿಭಟರ್ಗ್ಗೆ ಕೊಟ್ಟುದು (ಮೈಆರಿ. ೧೯೪೭, ೨೮-೭೭; 1032); ಆ ದ್ವಿತೀಯ ಮುನೀಶ್ವರ ನಗ್ರಮುನೀಶ್ವರಾದೇಶದಿಂ ನಂದನವನೋದ್ದೇಶದೊಳಿರ್ದ ಜನ್ಮಾಂಧಕಿಯಲ್ಲಿಗೆ ಬಂದು ಮುಂದೆ ನಿಂದು (ಸುಕುಮಾ. ೫-೨೩ ವ); ನಂದನವನಂಗಳಂ ಮಾಕಂದಮಹೀಜಾತರಂಜಿತೋದ್ಯಾನಗಳಿಂ ಸೌಂದರತೆವಡೆದು ತೋಱುವ ನಂದಿಗ್ರಾಮಕ್ಕೆ ಬಂದನಾ ನೃಪತನಯಂ (ಪುಣ್ಯಾಸ್ರ. ೩-೯). [ ನಂದನ + ವನ ]

**ನಂದನವಿಮಾನ** (ನಾ). [ಜೈನ] ಸ್ವರ್ಗಲೋಕದಲ್ಲಿರುವ ಒಂದು ಸ್ಥಳದ ಹೆಸರು: ಪರಾಹಾರ್ಯನುಂ ನಂದನವಿಮಾನದೊಳ್ ಮಣಿಮಕುಟಕೇಯೂರಮಣಿಕುಂಡಲವಿಭೂಷಣನಾಗಿ ಮಣಿಕುಂಡಲನೆಂಬೊಂ ದಿವಿಜನಾದಂ (ಆದಿಪು. ೫-೭೦ ವ). 'ವಿಮಾನ' ಪರಾ. [ ನಂದನ + ವಿಮಾನ ]

**ನಂದನಾವಲಿ, ನಂದನಾವಳಿ** (ನಾ). ವನಗಳ ಗುಂಪು, ಸಮೂಹ : ಊರ್ಜಿತವಸಂತಂ ಸಂತತಂ ನಂದನಾವಲಿಗಳ್ಗಂ ರತಕೇಳಿರಾಗವನಿತಾಸ್ತ್ರೀಪುಂವ್ರಜಕ್ಕೆಲ್ಲಮುಜ್ಜ್ವಲಚಂದ್ರಾತಪವೊರ್ಮೆಯುಂ ರಜನಿಜಾತಕ್ಕೆಲ್ಲಮಾ ದೇಶದೊಳ್ (ಜಗವಿ. ೨-೩). **ನಂದನಾವಳಿ** : ಕರಜಳಧರ ಕಳಧೌತೋತ್ಕರವರ್ಷದೆ ಪಂದಿ ನಂದ[ನಾ]ವಳಿಗಳ ವಿಸ್ತರಿವೆವೆನೆ ದಾನಮುಖ ಳೋರ್ವ್ವರೆಗೆ ವಿಚಿತ್ರೋಕ್ತಿ ರೂಪವಿದ್ಯಾಧರಿಯ (ಸಾಇಇ. XX, ೪೯-೩೭; 1076 ?). [ ನಂದನ + ಆವಲಿ ]

**ನಂದನಾವಳಿ** 'ನಂದನಾವಲಿ' ನೋ.

**ನಂದನೆ** (ನಾ). ಮಗಳು; ತನುಜೆ : "ವೇಣ್ ದುಹಿತೆ ನಂದನೆ ಪುತ್ರಿ ಸುತೆಯೆನಿಕ್ಕುಂ" (ಮಂಗರಾ. ೯೦-೯); ಈ ಭುಜಾದಂಡಮುಂ . . . ಈ ಧನುರ್ದಂಡಮುಮುಳ್ಳನಂ ದ್ರುಪದನಂದನೆ ಸಂಧಿಯನಾಗಲೀವೆನೇ (ಗದಾಯು. ೦-೭೩); ಕಮಲಭವ ಜಗವಱಿಯೆ ನಂದನೆಯ ಐದೆಯನು ನೆಱೆ ಮಾಡಿಯರವೇಕ್ಷ್ಣಾದನೀಶ್ವರನಿಂದ್ರಗಿಂದ್ರರ ಹಾದಿಯದು ನಗೆಯ ತೃಣವರನು ಹೇಳಲೇನೆಂದ (ತೊರಜಾ. ೧-೫-೩೭); ನಂದನೆ ನೊಂದಪಳೆಂದೊಲ್ದಿಂದುಧರಂ ಪಿಡಿದು ನೆಗಪಿ ನಿಜಕರದಿನವಳ್ಳಂದಣ್ಣೆವಾಲನೀಂಟಿದಂ (ವೃಷವಿ. ೯-೪೨). [ ಸಂ. ನಂದನಾ ]

**ನಂದನೋತ್ಕರ** (ನಾ). = ನಂದನಾವಲಿ : ಶರತ್ಪವನತಾಪದಿಂ ಕೊರಗಿ ಕೂಡೆ ಕೋರೈಸಿದಾ ನರೇಶ್ವರವಧೂಕದಂಬಕಮನಾಱಿಸಲ್ಕಾಗಳಬ್ಜರೇಣುಗಳನೆತ್ತಿಬಂದುದಿದಿರ್ವರ್ಪವೋಲ್ ನಂದನೋತ್ಕರಂಬಿಡಿದು ಮಾರುತಂ ಚಳತರಂಗೆಯಿಂ ಗಂಗೆಯಿಂ (ಆದಿಪು. ೧೧-೫೩). [ ನಂದನ + ಉತ್ಕರ ]

**ನಂದಯಂತಿ** (ನಾ). [ಸಂಗೀತ] ಒಂದು ರಾಗದ ಹೆಸರು : ಗಾಂಧಾರಿ ರಕ್ತೋಗಾಂಧಾರಿ . . . ನಂದಯಂತಿ ಕರ್ಮಾವ್ಯಭಿಚಾರಿನಿ ಕೌಶಿಕಿಯೆಂಬ ಹತ್ತು ರಾಗಂಗಳು ಮಧ್ಯಮಗ್ರಾಮದಿಂ ಪುಟ್ಟಿದವು (ವಿವೇಕ. ೨೩೩). [ ಸಂ. ನಂದಯಂತೀ ]

**ನಂದವರ್ತಿ** (ನಾ). = ನಂದಿಬಟ್ಟಲು : ನಂದವರ್ತಿಯನೊಲಿವನೆಮ್ಮ ಶಂಕರ ನೆಂಬ ಮಂದೈಪ ಕಂಪೆ ಸಾಲ್ವುದು ಶಿಶಿರಂಗೆಬ (ಬಸರ. ೭-೫೩). [ <ಸಂ. ನಂದ್ಯಾವರ್ತ ]

**ನಂದವಾಡಿಗೆ** (ನಾ). ಒಂದು ಊರಿನ ಹೆಸರು: ನವಿಲೆಯ [ಜಟೆ]ಯ ಸಂಕರ ದೇವಾಲಯಮುಮಂ ನನ್ದವಾಡಿಗೆಯೊಳ್ ಶ್ರೀನಾಗಲೇಶ್ವರಮು(ಂ) ನಲ್ಲಿಯ ಮಟಮುಮಂ (ಸಾಇಇ. XI-1, ೧೦೩-೨೭; ?). [ ? ]

**ನಂದವಿಡು** (ಕ್ರಿ). ಸಂತೋಷಗೊಳಿಸು; ಆನಂದಪಡಿಸು : ಅಂದು ಗುರುಮನವೊಲಿದು ಪಾರ್ಥನ ನಂದವಿಟ್ಟನು ತನ್ನ ವಿದ್ಯಾವೃಂದವನು ತಾನೀವೆನೆನುತಲಿ ದ್ರೋಣ ಹರುಷಿಸಿದ (ಸಂಭಪ. ೧೮-೧೯). [ ನಂದ + ಇಡು₁ ]

**ನಂದವಿಲ್ಲುಡಿ** (ನಾ). ಒಬ್ಬಾತನ ಹೆಸರು : ನನ್ದವಿಲ್ಲುಡಿಯುರಾ ಮಗನೆ ಪಲಿಪಟೆ (ಎಇ. IX, ೨೦-೭; 800). [ ? ]

**ನಂದಳಕ** 'ನಂದು' ಪರಾ.

**ನಂದಾಉಳ** 'ನಂದು' ಪರಾ.

**ನಂದಾತ್ಮಜ** (ನಾ). = ನಂದನಂದನ : ನಾರಾಯಣ ನಾಗಶಯನ ನಂದಾತ್ಮಜ ಮಾರಜನಕ ಮಂಜುಳಾಂಗ ಸಾರಸನಯನ ಸಕಲಲೋಕೇಶ್ವರ ಸಾರಿದೆ ಸಲಹೆನ್ನನೊಲಿದು (ಶತಸಾಂ. ೭೦-೩). [ ನಂದ + ಆತ್ಮಜ ]

**ನಂದಾದೀಪ** 'ನಂದಂ' ಪರಾ.

**ನಂದಾದೀಪ್ತಿ** 'ನಂದಂ' ಪರಾ.

**ನಂದಾದೀವಿಗೆ** 'ನಂದು' ಪರಾ.

**ನಂದಾದ್ಯುತಿ** 'ನಂದು' ಪರಾ.

**ನಂದಾಪುರ** (ನಾ). ಒಂದು ಊರಿನ ಹೆಸರು ; P ಈಗಿನ ಮಂಗಳೂರಿನ ಸಮೀಪದ ಒಂದು ಹಳ್ಳಿ. ಹಿಂದೆ ಇದು ನಂದಅರಸರ ರಾಜಧಾನಿಯಾಗಿತ್ತು : ನನ್ದಾಪುರದೊಳ್ ಕೇತೇಶ್ವರಮುಮಂ ಕೋಹಳ್ಳಿಯೊಳ್ ದಾನವಿನೋದತ್ರೈಪುರುಷದೇವರ ಸಾಲೆಯುಮಂ . . . ಮಾಡಿಸಿ (ಸೌಇಇ. XI-1, ೧೦೩-೨೦ ; ?). [ ನಂದ + ಪುರ₂ ]

**ನಂದಾಬೆಂಕಿ** 'ನಂದು' ಪರಾ.

**ನಂದಾಬೆಳಕು** 'ನಂದು' ಪರಾ.

**ನಂದಾವನ** 'ನಂದು' ಪರಾ.

**ನಂದಾವಳ** 'ನಂದು' ಪರಾ.

**ನಂದಾವುಳ** 'ನಂದು' ಪರಾ.

**ನಂದಾವೆಳಕು** 'ನಂದು' ಪರಾ.

**ನಂದಿ** (ನಾ). ೧. ಸಂತೋಷಗೊಳಿಸುವವನು ; ಮಗ. ೨. ಸಂತೋಷಪಡುವವನು : ಅಂತು ದುಶ್ಶೀಲ ದುರಾಚಾರ ದುರ್ಯಶೋನಂದಿಯಾದ ವಿಶಾಖನಂದಿ . . . ಪರಿಭ್ರಮಣಪರಿಣತನಾಗಿ ತೊಟಲ್ವೊಂ (ವರ್ಧಪು. ೨-೩೬ ವ). ೩. ಶಿವನ (ವಾಹನವಾದ) ಒಬ್ಬ ಅನುಚರ ; ಬಸವ : "ನಂದಿ ತಂಡುಮಕ್ಕುಂ" (ಮಂಗರಾ. ೫-೧೪) ; ಎಱು[ಯೆ] ನಂದಿ[ಯನಾ] . . . ಭೂತನಾಥಂ ಬಂದಂ (ಶಂಶಥಾ. ೧೨-೦೬೪) ; ನಾದಪ್ರಿಯ ನಂದಿಯ ನೇಱಿಕೊಂಡು ಅಶೀತನ ಮೇಲೆ ಆನಂದಸಿಂಹಾಸನವಿಕ್ಕಿ ಕುಳ್ಳಿತ್ತ ಕೂಡಲಸಂಗಮದೇವರ ದೇಪತ್ತ ಕಟ್ಟಿತ್ತು (ಬಸವ. ೯೩೦) ; ಆ ರಜತಗಿರಿ ಶಿಖರದೊಳ್ ಮದನಾರಿಯುಮಂ ಗೌರಿಯುಮುಚಿತಲೀಲಾರಚಿತಸುಖಸಂಕಥಾಪ್ರಸಂಗಕೌತುಕದೊಳಿರಲಂ ವೀರ ವೀರಕ ನಂದಿರೇಣುಕ . . . ಪ್ರಮಥರೋಲೈಪ ಸಮಯದೊಳು (ಬಸಪು. ೦-೫೨) ; ನಂದಿಯನು ಏಱಿದನ ಜುವಿರನ ಸೂಡಿದನ ಕಂದನ ಬೇಡಿ ನಲಿದಾನು ನೆಗವುತ್ತ ಮುಂದೆ ಪೇಳುವೆನು (ಸರ್ವಜ್ಞ. ೦) ; ಶಂಕರನ ಮುಂದೆ ನಂದಿಯೂ ಅಷ್ಟು ವಿಧೇಯತೆ ೨ಿಂದ ನಮ್ರತೆಯಿಂದ ನಿಲ್ಲುತ್ತಾನೋ ಇಲ್ಲವೋ (ಸುವಸಂ. ೮೦) ; ಕೆಂದಬಣ್ಣದ ಬಿಲು ಚೆಂದ ಚೆಂದ ಹೋರಿಗಳು ನಂದಿಯ ಹಂಗ ಮೈಮಾಟ ಹಂಡ ಜೂಡ ನೊಂದಿ ನಡೆದವು ಸಾಲುಗೊಂಡು (ಸಿದ್ಧಪು. ೧೭-೨೦). 'ನಂದಿವಾಹನ' ಪರಾ. ೪. ಬಸವನ ವಿಗ್ರಹ,–ಮೂರ್ತಿ : ನಂದಿಗಳು ಗಾತ್ರದಲ್ಲಿ ದೊಡ್ಡವಾಗಿವೆ (ವ್ಯಾಪಾಸು. ೧೦೦). ೫. ಒಂದು ಬಗೆಯ ಮರ : "ಪುಂಗವಪೆಸಲ್ ನಂದಿ" (ಮಂಗರಾ. ೩೭-೦೯) ; ನಂದಿ, ಬೋಳಂದವರು, ಬೆಳ್ಳತ್ತಿ (ಪ್ರಜಿಗಿ. ೪೯-೯೭೪) ; ಮರಗಳು : ಹೆಸವ, ಹೆಬ್ಬಲಸು . . . ತಡಸಲು, ತಪಸಿ, ನಂದಿ, ಕುಂಕುಮ, ಸಂಪಿಗೆ (ನಮ್ಮನು. ೩೬೬). 'ನಂದಿಮರ', 'ನಂದಿವೃಕ್ಷ' ಪರಾ. ೬. [ಜೈನ] ಸಂಘಗಳಲ್ಲಿ ಒಂದು ಬಗೆ : ಸಂಘಗಳು : ಮೂಲ, ನಂದಿ, ಯಾಪನೀಯ, ಯಾಪನೀಯ ನಂದಿ, ದ್ರಾವಿಡ, ಶ್ರೀಸಂಘ, ಕಿತ್ತೂರು (ಕಪಾಅ. ೮೬). 'ನಂದಿಸಂಘ' ಪರಾ. ೭. ಜೈನಮುನಿಗಳ ಗಣಗಳಲ್ಲಿ ಒಂದು ಬಗೆ : ಗಣಗಳು ದೇವ, ಸೇನ . . . ನಂದಿ, ಗ(ಕ)ವಾಟ . . . ಆಜಿ (ಕಪಾಅ. ೮೬). ೮. ಒಬ್ಬ ಜೈನಯತಿಯ ಹೆಸರು : × × × ಪೌತ್ರ ನನ್ದಿಮುನಿಪ × × × ಮಾಯ್ಯರ್ಕನ × × × (ಎಕ. II, ೧೧೧-೩ ; ಸು. ೭೦೦). ೯. ಗ್ರಾಮಾಧಿಕಾರಿ (?) : ಸೀಮಾಂತರಸ್ಯ ಸಾಕ್ಷಿಣಾಂ ಕೊತ್ತಮಜ್ಜಿಗಲದ ನಂದಿಯರು ಹಡದ ನಡೆದು ವುಡೆಯರು ಗಣಿಗನೂರ ಅನವಕರು ತಲಕಾಡಹನ್ನುವರು ಮುದ್ದೂರ ಗಣೆಯರುಂ (ಎಕ. III (R), ನಂಜನ. ೩೬೨-೩೬ ; ೯೬೯). ೧೦. (?) : ನನ್ದಿಯ ಸ್ಥಾನ ಮುಮೆನಾಯಗ ×× ಮಂಣಿಜಿವೆನಂದಜ್ಜಿಗೆ ವನ್ದಿಟ್ಟು ತುರುವನಿಕ್ಕಿಸಿ ಸತ್ತಂ (ಎಕ. IX, ದೇವನ. ೧೨-೯ ; ೯೦೦ ?).

ನಂದಿ ಬಿಡು = ಸತ್ತವರಿಗಾಗಿ ಮಾಡುವ ಅಪರಕರ್ಮದ ಸಂಬಂಧದಲ್ಲಿ ಒಂದು ಮರಿಯೆತ್ತನ್ನು ಸ್ವತಂತ್ರವಾಗಿ ಓಡಾಡಲು ಬಿಡು : ಸತ್ತಾತನು ವಂಶದ ಹಿರಿಯನಾದುದರಿಂದ ಉತ್ತರಕ್ರಿಯೆ ಮಾಡುವಾಗ ಯಾವುದಕ್ಕೂ ಕಡಮೆ ಮಾಡದೆ, ನಂದಿ ಬಿಡುವುದಕ್ಕೂ ಕೈಹಿಡಿಯಲಿಲ್ಲ (ರಂ೨). ನಂದಿಯ ಕುಣಿತ = ನಂದಿಕೋಲನ್ನು ಹಿಡಿದು ಮಾಡುವ ಕುಣಿತ : ಆ ದಿನದ ಉತ್ಸವದಲ್ಲಿ ನಂದಿಯ ಕುಣಿತ ಬಹಳ ಆಕರ್ಷಣೆಯುಳ್ಳದಾಗಿತ್ತು (ರೂ೨). ನಂದಿಯ ಕೋಲು = ನಂದಿಚಿಹ್ನೆಯ ಧ್ವಜವನ್ನುಳ್ಳ ಕೋಲು ; ನಂದಿಕಂಬ : ಆಕೆ ಕುರೂಪಿ ; ನಂದಿಯ ಕೋಲಿನಂತೆ ಉದ್ದವಾದ ಸೊರಗಿದ ದೇಹ (ಭೂಮಿತಾ. ೭೩). ನಂದಿಯ ಧ್ವಜ = ನಂದಿಧ್ವಜ ೩ : ನಂದಿಯ ಧ್ವಜವನ್ನು 'ನಂದೀಕೋಲು' 'ನಂದೀಕಂಬ' ಎಂದೂ ಕರೆಯುತ್ತಾರೆ (ರೂ೨). ನಂದಿಯ ಪಳವಿಗೆ, ನಂದಿಯ ಹಳವಿಗೆ = ನಂದಿಧ್ವಜ ೧ : ನಂದಿಯ ಪಳವಿಗೆ ಮಿಳಿರುತೆ ದುಂದುಭಿರವದೊಳಗೆ . . . ಪೊಕ್ಕಂ (ತ್ರಿಪುವಿ. ೬೨-೭೯ ; ಇಂದುಚೂಡನು ಸುತ್ತಿದೋಲೆಯನೊಂದು ನಂದಿಯ ಹಳವಿಗೆಯನಾಗಳು ಹಿಡಿದುಕೊಂಡು . . . ಕಣಜಂಗಳಿಗೆ ಹರಿತಂದು (ಬಸಪು. ೫೨-೦೬). ನಂದಿಯುಂಗುರ = ಶಿವಭಕ್ತರು ಧರಿಸುವ ಬಸವನ ಕೆತ್ತನೆಯುಳ್ಳ ಉಂಗುರ.

[ ಸಂ. ನಂದಿನ್ ]

**ನಂದಿಕ** (ನಾ). ಶಿವನ ವಾಹನ ; ನಂದಿ ; ಬಸವ. 'ನಂದಿಕೇಶ' ಪರಾ.

[ ಸಂ. ]

**ನಂದಿಕಂಬ** (ನಾ). ನಂದಿಯ ವಿಗ್ರಹವಿರುವ, ಅಲಂಕೃತವಾದ ಉದ್ದವಾದ ಕಂಬ : (+). 'ನಂದಿಕೋಲು' ಪರಾ.

[ ನಂದಿ + ಕಂಬ₁ (< ಕಂಭ) ]

**ನಂದಿಕಲ್ಲುಸೊಪ್ಪು** (ನಾ). ಒಂದು ಬಗೆಯ ಸೊಪ್ಪು : (ಪ್ರಜಿಗಿ. ೧೨-೨೨೦). [ ? + ಸೊಪ್ಪು₃ ]

**ನಂದಿಕಾಡ** (ನಾ). ಒಬ್ಬಾತನ ಹೆಸರು : ಕೂಡಲೂರ್ಪ್ಪಾಡಿ ಒಡೆಯ ನನ್ದಿಕಾಡನಾ ಎಱನಾಗನಾ ವ್ಯವಹಾರದನ್ತರು ಸಾಲವಿಲ್ಲಾವ್ (ಎಕ. X, ಕೋಲಾರ : ೭-೩ ಸು. 760). [ ? ]

**ನಂದಿಕೆ** (ನಾ). (ದೀಪ ಮೊದಲಾದುವು) ನಂದುವಿಕೆ ; ಆರಿಹೋಗುವಿಕೆ : ಒಂದಿಕೆ, ಒಂದಿಕೆಗಳ್ ; ನಂದಿಕೆ, ನಂದಿಕೆಗಳ್ (ಶಬ್ದಾನು. ೫೬೮ ಪ್ರಯೋ).

[ ನಂದು + – ಇಕೆ ]

**ನಂದಿಕೇಶ** (ನಾ). ೧. = ನಂದಿಕೇಶ್ವರ ೧ : ಶ್ರೀಸದಾಶಿವನೊಡನೆ ಗರ್ವಿಸಿ . . . ವ್ಯಾಸದೇವಂ ಕೈಯನೆತ್ತಿದೊಡಾ ಸಮಯದಲಿ ನಂದಿಕೇಶನು ಕೇಸಿ ಮುಂಜಿಯನೆ ಆತನೆರಡು ಕರಂಗಳಂ ಮುನಿದು (ಬಸಪು. ೫೭-೪೯) ; ಎಲೆ ಗುರುವೆಯಾ ಶುಕ್ರಗಾ ಮಂತ್ರವೇತೆಟದೆ ನೆಲೆಯಾಯ್ತುದಂ ಪೇಳ್ವುದೈ ನಂದಿಕೇಶ (ವೀಶೈಪು. ೨-೦೩-೨೦). ೨. ಈಶ್ವರ ; ಶಿವ. ೧, ೨ : ಶ್ರೀಶೈವಶ್ರೇಯಮಂ ಮಾಳ್ಕೆಮಗನವರತಂ ನಂದಿಕೇಶಂ ಮಹೇಶಂ (ರಾಜಶೇ. ೦-೦). [ ನಂದಿಕ + ಈಶ ]

**ನಂದಿಕೇಶ್ವರ** (ನಾ). ೧. ಈಶ್ವರನ ಪ್ರಮಥಗಣದಲ್ಲಿ ಪ್ರಮುಖನಾದವನು ; ಬಸವ : ನಂದಿಕೇಶ್ವರ ಭೃಂಗಿನಾಟ್ಯ ನಮ್ಮ ಲಿಂಗನ ಮುಂದೆ (ಬಸವ. ೫೬೫) ; ಮೃಡ ಮೃಡಾಣಿ ಕುಮಾರ ಗಣಪತಿ ಮೃಡಸಮಾನದ ನಂದಿಕೇಶ್ವರ (ಸಾಸಂತ. ೯-೪) ; ಮನ್ಮಥ ಮಿಂದಮೋನಿಜನಾಗಿಯೊಗೆದನು ನಂದಿಕೇಶ್ವರನೆಂಬ ಪೆಸರಿಂದಾ ಶಿಲಾದಂಗೆ (ಬಸಪು. ೨-೧೦) ; ಚಂದಯ್ಯ ಪ್ರೀತಿಯ ನಂದಿಕೇಶ್ವರನ ಮುನ್ನ ಕಂದ ಗಣಪದೇವಯ್ಯ ಅಂದದ ಶಿವಶರಣರುಯುರುತಿರೆ ಚಂದವನೇನ ಬಣ್ಣಿಸುವೆ (ಕಪೂಶ. ೬-೫೬) ೨. ಈಗಿನ ಬಿಜಾಪುರಜಿಲ್ಲೆಯ ಬಾದಾಮಿ ಹತ್ತಿರದ ಒಂದು ಗ್ರಾಮದ ಹೆಸರು. [ ಸಂ. ನಂದಿ + ಈಶ್ವರ ]

**ನಂದಿಕೇಶ್ವರಶೈವ** (ನಾ). [ಶೈವ] ಶೈವಮತದ ಎಂಟು ಪ್ರಭೇದಗಳಲ್ಲಿ ಒಂದು: ಶೈವಮತದಲ್ಲಿ ನಾವು ಎಂಟು ಪ್ರಭೇದಗಳನ್ನು ಕಾಣಬಹುದು. (೧) ದ್ವೈತ ಪಾಶುಪತ, (೨) ದ್ವೈತಶೈವಸಿದ್ಧಾಂತ, (೩) ದ್ವೈತಾದ್ವೈತಲಕುಲೀಶ ಪಾಶುಪತ, (೪) ವಿಶಿಷ್ಟಾದ್ವೈತಶೈವ, (೫) ವಿಶೇಷಾದ್ವೈತ (ವೀರಶೈವ), (೬) ನಂದಿಕೇಶ್ವರಶೈವ, (೭) ರಸೇಶ್ವರಶೈವ, (೮) ಕಾಶ್ಮೀರ ಶೈವ (ಭಾರದ. ೨೦೦). [ ನಂದಿಕೇಶ್ವರ + ಶೈವ ]

**ನಂದಿಕೇಶ್ವರಸಂಹಿತೆ** (ನಾ). [ಶೈವ] ಚಂದ್ರಜ್ಞಾನಾಗಮದ ಹದಿನಾಲ್ಕು ಭೇದಗಳಲ್ಲಿ ಒಂದು: ಸ್ಥಿರಸಂಹಿತೆ ಸ್ಥಾಣುಸಂಹಿತೆ ಮಹತ್ಸಂಹಿತೆ ನಂದಿಸಂಹಿತೆ ನಂದಿಕೇಶ್ವರಸಂಹಿತೆ ಏಕಪಾದಪುರಾಣ ಶಂಕರಾಗಮ ನೀಲಭದ್ರತಂತ್ರ ಶಿವಭದ್ರಾಗಮ ಕಾಲಭೇದಾಗಮ ಶ್ರೀಮುಖಾಗಮ ಶಿವಶಾಸನಾಗಮ ಶಿವರೇಖಾಗಮ ದೇವೀಮತವೆಂದು ಚಂದ್ರಜ್ಞಾನಾಗಮದ ಹದಿನಾಲ್ಕು ಭೇದಂಗಳು (ವಿವೇಕ. ೭೧). 'ನಂದಿಸಂಹಿತೆ' ಪರಾ. [ ನಂದಿಕೇಶ್ವರ + ಸಂಹಿತೆ ]

**ನಂದಿಕೋಲು** (ನಾ). = ನಂದಿಕಂಬ: ಆನ್ಕಿಜ ಸುಲದಿ ಕಂಬಕಂ ಕುಲಿಶಾವನ ಶಿತಾಗ್ರ ನಂದಿಕೋಲು ಸಂಗಮೇಶ್ವರನ ನುಡಿಗೆ ಸಬಳ ಶಾಸ್ತ್ರಿಕಸಯಲ್ಲಿ ಕತ್ತಿ ತೆಡಾಯ ಖಡಲ್ಲಿಡೆಯಲ್ಲಿ ಬಿಲ್ಲು ನಾರಾಚ ಗದೆ ಸೂಲ್ಗಿ ಚಕ್ರ ವಂಕಿ ಚೂರಿ ಜಯ ಬಾಡಿಶ್ರುಂಗಾರ ತೊಡಪೂ ಸಣ ಚಂದ್ರಾಯುಧಾ ಚಲುತಲಿ ಮೊದಲಾದಾ ಬತ್ತೀಶಾಯುಧಾ (ಎಕ. XVI, ಗುಬ್ಬಿ. ೭೪-೨೧; ಸು. 1672) ಒಂದು ನಂದಿಕೋಲಿನಷ್ಟು ಆಳ ಅವ (ದೀಪಹ. I, ೮೯); ಗಣೆ ಅಥವಾ ನಂದಿಕೋಲನ್ನು ಮೆರೆಸುತ್ತ ಒಯ್ಯುವುದು (ಕರ್ನಾಪೂ. II, ೬೪).

ನಂದಿಕೋಲು ಕುಣಿತ = ನಂದಿಕಂಬವನ್ನು ಹಿಡಿದು ಮಾಡುವ ನೃತ್ಯ: ನಂದಿಕೋಲು ಕುಣಿತದಲ್ಲಿ ಆ ಕಂಬಕ್ಕೆ ಕಟ್ಟಿರುವ ತಾಳಗಳು, ಕುಚ್ಚುಗಳು, ತಾಳಹಾಕಿದಂತೆ ಶಬ್ದಮಾಡುತ್ತವೆ (ಜೂರಿ). ನಂದಿಕೋಲು ಕುಣಿಸು = ನಂದಿಕಂಬವನ್ನು ಹಿಡಿದು ಕುಣಿ: ನಂದಿಕೋಲು ಕುಣಿಸ್ತಾ ಇದ್ದೀಯಾ? (ತುಂಗಭ. ೩). [ನಂದಿ + ಕೋಲು$_1$ (<ಕೋಲ್$_1$)]

**ನಂದಿಗುಂದ** (ನಾ). ೧. ಒಬ್ಬಾತನ ಹೆಸರು: ನಂದಿಗುನ್ದರ್ಗೆ ದಾಸಂ ಗೊಟ್ಟುದು ಕೆಸುಗೊಳದ ಮಾಜನಂ ಒನ್ದಡುವು ಮದ್ದೂರ್‌ರೊಳ್ (ಎಕ. IV, ಹೆಗ್ಗ. ೪-೩೬; ಸು. 750). ೨. ಒಂದು ಊರಿನ ಹೆಸರು: ನನ್ದಿಗುನ್ದದ ಪಸುಪೊನ್ನಮೊಟೆಯಿಂ × × × ಗಾಣಿಗಾವುಣ್ಡನಾಡಲ್ಲ ಪಾಟಿದೊಡಂ (ಎಕ. IX, ದೇವನ. ೪೩-೬; ಸು. 900 ?). [ ? ]

**ನಂದಿಗೊಳಿ** (ನಾ). ಒಂದು ಊರಿನ ಹೆಸರು: ಶ್ರೀಮದಿಜಿವನೊಟ ಮ್ಮಾಧಿರಾಜರ ನನ್ದಿಗೊಳಿಯ ಗವುಣ್ಡ × × ಮಿಯಾ ಭಸಪ್ಪಕೆ . . . ದೇವ ಭೋಗ××× ಎಲ್ಲ ಸಲ್ಲುದು (ಎಕ. IX, ಹೊಸಕೋ. ೩೭-೧೧; ಸು. 950). [?]

**ನಂದಿಣಗೆ** (ನಾ). ಒಂದು ಊರಿನ ಹೆಸರು: ನನ್ದಿಣಗೆ ನಾಮಗ್ರಾಮ (ಮೇ)ಪೂರ್ವ್ವಸ್ತಾಂದಿಶಿ (ಇಆ. VII, ೪೪-೯೩; 10ನೆಯ ಶತ). [ ? ]

**ನಂದಿತ** (ಗು). ಸಂತೋಷಗೊಂಡ; ಸಂತಂಪ್ಪವಾದ: ನಂದಿತಾಮಳ ಭಕ್ತಿರಸ ಸಾನಂದಪುಳಕಂಗಳು ತನುವಿನೊಳ್ ಸಂದಣಿಸೆ ದಂಡಪ್ರಣಾಮ ಮನಿಕ್ಕಿ ವಂದಿಸುತ (ಬಸಪು. ೨-೨೦). [ ಸಂ. ]

**ನಂದಿದೇವ** (ನಾ). ಒಬ್ಬಾತನ ಹೆಸರು: ಆಚಾರ್ಯ್ಯಪುರುಷ ಇಜಿದು ಬಸವಬಿಯದೆ ಬೇಟಿಬ್ಬೊರನ್ ತೆಜಿನ ಪೆಚ್ಚದೊಂ ಬಿಸುಣರ ಪೊಸವೊ ತುಱಲಂ ಪೊ × × ಪ ಈಯದೆ ಈಜಿಯದೆ ನನ್ನಿ ನುಡಿಯದೆ ನನ್ದಿದೇವಂ ಗಟಿಸ್ಸಿಮುಯ್ಯುವ್ಪುಡೆ ದೊಂಗರ ಅರೆದೊಂ ಮೂಡಲಿಪೊಂ (ಎಇ. XXIV, ೨೬-೧೩; ಸು. 885). [ ನಂದಿ + ದೇವ ]

**ನಂದಿದ್ರುಮ** (ನಾ). ನಂದಿಮರ; ನಂದಿವೃಕ್ಷ: ಅಲ್ಲಿ ಸೌಧರ್ಮೇಂದ್ರಂ ನಂದಿದ್ರುಮದೊಳ್ ಮಣಿಮಯಶಿಬಿಕಾಯಾನಮನಿಟುಪುವುದುಂ (ಶಾಂತಿಪು. [illegible]) [ ನಂದಿ + ದ್ರುಮ ]

**ನಂದಿಧ್ವಜ** (ನಾ). ೧. ನಂದಿಯ ಚಿಹ್ನೆಯುಳ್ಳ ಧ್ವಜ,- ಬಾವುಟ: ಎತ್ತಿಸಿದ ನಂದಿಧ್ವಜಂಗಳ ಮೊತ್ತದ ಪತಾಕೆಗಳ ಪಲ್ಲವಸತ್ತಿಗೆಯು ಸಾಲುಗಳನೇಕವ್ಯಾಸಹಸ್ರಗಳಿಂ . . . ದೇವಾ ಪೃಥ್ವಿ ಬಂದೆಸೆಯೆ (ಬಸಪು. ೫೬-೫೩); ಬಿಂಕದ ಬಿರುದಿನ ನಂದಿಧ್ವಜವಿತತಿ ಪುರದೊಳಿರ್ದುದು ಚೆಲ್ವಿಂ (ಹಮ್ಮೀರ. ೧-೬೫); ಶ್ರೀವೃಷಭರಾಜನನುಯಾರೋಹಣಂಗೈಯೆ . . . ಬಿರುದ ಕೊಂಡಾಡಿ ಕೈವಾರಿಸುವ ಚಂಡಕೀರ್ತಿಗಳು ಮುಂವಿಡಿದ ಶ್ರೀನಂದಿಧ್ವಜಪೂ (ನವಮೋ. ೨೨-೫೦). ೨. ನಂದಿಯ ಚಿಹ್ನೆಯುಳ್ಳ ಧ್ವಜವನ್ನು ಹೊಂದಿದವನು; ಶೈವ: ದೇವಾಂಗರು 'ನಂದಿಧ್ವಜ' ರೆಂದು ಹೇಳಿದ (ಕರ್ನಾಪೂ. II, ೨೦). ೩. ನಂದಿಯ ಚಿಹ್ನೆಯುಳ್ಳ ಧ್ವಜವನ್ನು ಹೊಂದಿರುವ ಕೋಲು; ನಂದಿಕಂಬ; ನಂದಿಕೋಲು: (+). [ ನಂದಿ + ಧ್ವಜ ]

**ನಂದಿನಾಗರಿ** (ನಾ). ಒಂದು ಬಗೆಯ ಲಿಪಿ: ನಂದಿನಾಗರಿ ಕನ್ನಡ ಮತ್ತು ಗ್ರಂಥಲಿಪಿಗಳನ್ನು ಉಪಾಧ್ಯಾಯರು ಬಾಲಕರಿಗೆ ಹೇಳಿಕೊಡುತ್ತಿದ್ದಿರಬೇಕು. ಆ ಕಾಲದ ಶಾಸನಗಳೂ ಕೂಡ ಕನ್ನಡ, ಗ್ರಂಥ ಮತ್ತು ನಂದಿನಾಗರಿಲಿಪಿಗಳಲ್ಲಿರುವುದು ಗಮನಾರ್ಹ (ಕಶಾಅ. ೨೪೩); ಅದರ ಕೆಳಗೆ ನಂದಿನಾಗರಿ ಅಕ್ಷರಗಳಲ್ಲಿ "ಷಣ್ಮುಖದಾಸ" ಎಂದಿದೆ (ಹೊಯ್ಸವಾ. ೧೫೦). [ ಸಂ. ನಂದಿನಾಗರೀ ]

**ನಂದಿನಾಥ** (ನಾ). = ನಂದಿಕೇಶ್ವರ ೧: ಇಂದುಧರನನುಮತದೊಳಾದಿಯು ನಂದಿನಾಥನು ಬಸವನಾಮದಿ ಬಂದಪಂ ಶಿವಭಕ್ತಿಯಂ ವಸುಮತಿಗೆ ಪಸರಿಸಲು (ಬಸಪು. ೨ ಸೂಚನೆ); ನಂದಿನಾಥನಂ ಭೃಂಗವೀರೇಶ ಷಣ್ಮುಖ ನಂದಿಷ ವಿಘ್ನೇಶ್ವರನು ಇಂದುಧರನ ಎಡಬಲದಲ್ಲಿ ಸೂರಿಯ ಚಂದ್ರರು ಮೆರೆದು ರಾಜಿಪರು (ಕಪೋತ. ೫-೦೩). [ನಂದಿ + ನಾಥ]

**ನಂದಿನಿ** (ನಾ). ೧. ಸಂತೋಷವನ್ನುಂಟುಮಾಡುವವಳು; ಆನಂದವನ್ನು ಕೊಡುವವಳು; ಮಗಳು. ೨. ಕಾಮಧೇನುವಿನ ಮಗಳು; ವಸಿಷ್ಠ ಮಹರ್ಷಿಯ ಹೋಮಧೇನು: ಸರಸಚರಿತನೆ ನಂದಿನಿಯ ಪರಿಚರಿಯಯನು ಹಗಲಿರುಳು ತಪ್ಪದೆ ವರವ ಪಡೆಯುವವರೆಗೆ ಮಾಡುವದೆಂದು ಮುನಿಯುಸುರಿ ಪರಸಿದನು (ರಘುವಂ. ೧-೯೦). ೩. ಒಂದು ಬಗೆಯ ವೃಕ್ಷ; ನಂದಿಮರ: "ನಂದಿನೀ – ಹರೇಣುಕ. ಹಸು, ನಂದಿಯ ಮರ, ಎತ್ತುನಾಲಿಗೆ" (ಓಷಧಿ. ೮೩). ೪. ಒಂದು ನಾಡಿಯ ಹೆಸರು: ಪೂರ್ವ ದಿಕ್ಕಿನ ನಂದಿನೀ ಎಂಬ ನಾಮಾಂತರವುಳ್ಳ ಧಾರಿಣೀನಾಡಿಯಲ್ಲಿ ಶುಕ್ಲವರ್ಣನಾಗಿ ವಾಸುದೇವ, ದಕ್ಷಿಣದಲ್ಲಿ ಪಿಂಗಳನಾಡಿಯಲ್ಲಿ ಪಿಂಗಳವರ್ಣನಾಗಿ ಸಂಕರ್ಷಣ, ಮಧ್ಯದಲ್ಲಿ ಸುಷುಮ್ನಾನಾಡಿಯಲ್ಲಿ ರಕ್ತವರ್ಣನಾಗಿ ನಾರಾಯಣ–ಹೀಗೆ ೫ ರೂಪಗಳಿಂದ ಭಗವಂತನಿರುವನು (ಹಸಾರ. ೪೭೬). ೫. ನಾದಿನಿ: "ಸ್ವಸೃತನಯಂ ಸ್ವಸ್ರೀಯಂ ಪೆಸರಿಂ ನಾದುನಿ ನನಾಂದ್ರ ನಂದಿನಿಯೆನಿಕುಂ" (ವಸ್ತುಕೋ. ೫೬-೨೪). P ಇದು 'ನಾದಿನಿ' ಎಂಬುದರ ಅಪಲಿಖಿತವಿರಬಹುದು. [ ಸಂ. ನಂದಿನೀ ]

**ನಂದಿನೆಲಬೇವು** (ನಾ). ಒಂದು ಬಗೆಯ ಸಸ್ಯ: (ವೃಕ್ಷಶಿ. ೪೮-೯೩೨). [ ? ]

**ನಂದಿಪತಾಕ** (ನಾ). = ನಂದಿಧ್ವಜ ೧: ನಂದಿಪತಾಕಮುದಬ್ಧಿಸದಾವಂದಿರ ಮಂದಿರ ಚಂದ್ರಕಲಾ . . . ಸುಬಂಧು ಜಯಾ (ಹಾಲಾಸ್ಯ. ೧-೪-೧೬). [ನಂದಿ + ಪತಾಕ ]

**ನಂದಿಪತಾಕೆ** (ನಾ). = ನಂದಿಧ್ವಜ ೧: ಕಣಿಯ ಕುಣಿಕಿಲ ಬಂಡಿಯಂ ಬಚ್ಚಣಿಸಿ ನಂ[ಪಾಠಾಂ. ವಂ]ದಿಪತಾಕೆಗಳ ತೋರಣವನದಟಿನೊಳಲಂಕರಿಸಿ (ಬಸಪು. ೫೫-೫). [ ನಂದಿ + ಪತಾಕೆ ]

**ನಂದಿಪುರಾಣ** (ನಾ). ಹದಿನೆಂಟು ಉಪಪುರಾಣಗಳಲ್ಲಿ ಒಂದು: ಸನತ್ಕುಮಾರಪುರಾಣ ನಾರಸಿಂಹಪುರಾಣ ನಂದಿಪುರಾಣ ಶಿವಧರ್ಮಪುರಾಣ

ದೂರ್ವಾಸ ಪುರಾಣ ನಾರದೀಯಪುರಾಣ ಕಪಿಲಪುರಾಣ ಮಾನವಪುರಾಣ ಉಶನಃಪುರಾಣ ಬ್ರಹ್ಮಾಂಡಪುರಾಣ ವಾರುಣಪುರಾಣ ಕಾಳೀಪುರಾಣ ವಾಸಿಷ್ಠಲೈಂಗಪುರಾಣ ಸಾಂಬಪುರಾಣ ಸೌರಪುರಾಣ ಪರಾಶರಪುರಾಣ ಮರೀಚಿಪುರಾಣ ಭಾರ್ಗವಪುರಾಣವೆಂಬವೇ ಆಯಾ ನಾಮಧೇಯಮುಳ್ಳವರಿಂ ನಿರೂಪಿತಮಾದ ಹದಿನೆಂಟು ಉಪಪುರಾಣಂಗಳು (ವಿವೇಕ. ೮).

[ ನಂದಿ + ಪುರಾಣ ]

**ನಂದಿಬಟ್ಟಲು, ನಂಜವಟ್ಟಲು, ನಂಜುಬಟ್ಟಲು, ನಂದಿವಟ್ಟ, ನಂದಿವಟ್ಟಲು** (ನಾ). ಸುವಾಸನೆಯಾದ ಬಿಳಿಯ ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ; ತಗರ; ನಂದ್ಯಾವರ್ತ; ವಂಜಟಿ: "ನಂದ್ಯಾವರ್ತ . . . ನಂದಿಬಟ್ಟಲ ಹೂವು" (ಗಂಗಾವು. ೧೭೭); ಮನೆಯ ಮುಂದೆ ಚಮನ್, ರೋಜಾ, ಡೇರಾ, ನಂದಿಬಟ್ಟಲು ಗಿಡಗಳ ಮಧ್ಯೆ ಪನ್ನೇರಳೆ ಹಣ್ಣಿನ ಮರ (ಹೊಸಕ್ಕಿ. ೧೨೩). **ನಂಜವಟ್ಟಲು:** ನಂಜವಟ್ಟಲಿನ ಗಿಡದ ತುಂಬ ಹೂವು ಅರಳಿದೆ (ಅದೇ). **ನಂಜುಬಟ್ಟಲು:** ನಂಜಪ್ಪ ಬೆಳೆದನೆ ನಂಜುಬಟ್ಟಲ ಹೂವ ಮಲ್ಲಯ್ಯಬೆಳದನೆ ಮರುಗವ (ನಾಪದ. ೧೦೦). **ನಂದಿವಟ್ಟ:** "ನಂದಿವಟ್ಟಮುದು ತಗರಸಂಜ್ಞಕಂ ತಾನಕ್ಕುಂ" (ವಸ್ತುಕೋ. ೩೮-೩೫); ಪೊಕ್ಕುಟು ನಂದಿವಟ್ಟದರಲಂ ಚೆಲ್ವಿಂದು ಗುರ್ಕೂಡೆ ಕೇದಗೆಯುಂ . . . ಕೈವಿಗೆ ಪುಷ್ಪಾಸ್ತ್ರನ ಪಂಚಬಾಣ ಮಿವಳೆಂಬಾಶಂಕೆಯುಂ ಮಾಡಿದಳ್ (ಧರ್ಮಾಮೃ. ೭-೩೦೭); ನಂದಿವಟ್ಟದ ಪಾಯವಟ್ಟಮುಮಂ ಕಾಂಚವಾರದ ಕಾಂಚಿಯುಮಂ . . . ವಿವಿಧ ಕಿಸಲಯದ ಕಿಸಲಯಮುಂಮಂ ಮನೋಹರಮೆನೆ ಸಮೆದು ತಮತಮಗೆ ಮದನನಂಗೊಂಡು (ಚಂದ್ರಪ್ರ. ೭-೧೧೧ ವ); ಪಾದರಿ ಪಾರಿಜಾತವು ನಂದಿವಟ್ಟವು ಹಾದರಿ ತುಂಬುರ ಜಾಲಿ (ದೇವಾಂಪು. ೬-೩೭೦). **ನಂದಿವಟ್ಟಲು:** "ನಂದ್ಯಾವರ್ತಃ–ನಂದಿವಟ್ಟಲು, ಮಿಾನಿನ ಭೇದ" (ಒಷಧಿ ೮೪); ಗುಲಾಬಿ, ನಂದಿವಟ್ಟಲು . . . ಮೊಲ್ಲೆ, ಮಲ್ಲಿಗೆ, ಇರವಂತಿಗೆ ಇವುಗಳಲ್ಲಿ ಕೆಲವು ಕೊಳ್ಳೆಗಳನ್ನು ಕೆಲವು ಅಂಟ ಗಳನ್ನು ಮಾಡಿ ಹಚ್ಚಬೇಕು (ಕೃಷಿಪ್ರ. ೨೦೧).

[ ದೇ.॥ ತಮಿ. ನನ್ದಿಯಾವಟ್ಟ; ತುಳು. ನಂದಿಬಟ್ಟಲ್ ]

**ನಂದಿಮರ, ನಂದಿಯ ಮರ** (ನಾ). ಒಂದು ಬಗೆಯ ಮರ; ನಂದಿವೃಕ್ಷ: "ಕಚ್ಛಃ –ನಂದಿಮರ" (ಒಷಧಿ. ೨೦); ಅದೂರದಿಂದಾಲಾಪನೆಗೆ ಮೊದಲ್ಗೆಯ್ದುದೊರ್ ಖಂಜನಂ. ಹಿಂಬಾಲಿಸಿದುಪವಂ . . . ಇಲ್ಲಿ ಬದಿರ ತುದಿಯಿಂದಲ್ಲಿ ನಂದಿಮರದಿಂದಿತ್ತ . . . ಎತ್ತ ಕಿವಿಯಿತ್ತೊಡತ್ತಣಿಂದೆ (ಶ್ರೀರಾಮಾ. ೪೮೨-೧೭೦). **ನಂದಿಯ ಮರ:** "ಜಟಾವೃಕ್ಷಃ–ನಂದಿಯ ಮರ" (ಒಷಧಿ. ೬೧); ಹೊಳೆಯ ದಡದ ಮೇಲಣ ನಂದಿಯ ಮರನ ಒಕ್ಕಿಸಲು (ಎಕ. VIII, ತೀರ್ಥಹ. ೧೯೦-೩೬; 1407). [ ನಂದಿ + ಮರ$_1$ ]

**ನಂದಿಮುಖ** (ನಾ). ನಂದಿಯ ಎದುರು,–ಸಮಕ್ಷ (?): ಹಾರುವರೆಲ್ಲರೂ ನೆರೆದು ಶೂದ್ರನ ಹಾರುವನ ಮಾಡುವಲ್ಲಿ ನಂದಿಮುಖವಲ್ಲದೆ ಮಾಡಲಾಗದು ವಿಭೂತಿಯಲ್ಲದೆ ಮತ್ತೇನನೂ ಮಾಡಲಾಗದು (ಬಸವ. ೬೧೪).

[ ನಂದಿ + ಮುಖ ]

**ನಂದಿಮುದ್ರೆ** (ನಾ). ನಂದಿಯ ಗುರುತು; ವೃಷಭನ ಚಿಹ್ನೆ: ವಂದಿಸುತ ಮುಂದೆಸೆಯೊಳಿರಲಂತವರ ಹಣೆಗಳಲಿ ನಂದಿಮುದ್ರೆಯನೊತ್ತಿ (ಬಸಪು. ೫೦-೪೭). [ ನಂದಿ + ಮುದ್ರೆ ]

**ನಂದಿಮೆಟ್ಟಲು** (ನಾ). ಬಸವನ ವಿಗ್ರಹಗಳನ್ನು ಎರಡು ಕಡೆಗಳಲ್ಲೂ ಹೊಂದಿರುವ ಮೆಟ್ಟಲು; ದೇವಾಲಯಗಳ ಶಿಲ್ಪರಚನೆಯ ಒಂದು ಭಾಗ: ಮೊದಲು ನಾಲ್ಕು ಗರ್ಭಗುಡಿಗಳು . . . ಒಂದೇ ಸಾಲಿನಲ್ಲಿದ್ದವೆಂದು, ಅನಂತರ ಐದನೆಯ ಗರ್ಭಗುಡಿಯನ್ನು ಸೇರಿಸಲಾಯಿತೆಂದು ಅಂತರಾಳಗಳಿಂದಲೂ ನಂದಿಮೆಟ್ಟಲುಗಳಿಂದಲೂ . . . ಸ್ಪಷ್ಟವಾಗಿದೆ (ಹೊಯ್ಸಳವಾ. ೧೩೫). [ ನಂದಿ + ಮೆಟ್ಟಲು ]

**ನಂದಿಯಮರ** 'ನಂದಿಮರ' ನೋ.

**ನಂದಿಯಾಲ, ನಂದ್ಯಾಲ** (ನಾ). ಒಂದು ಊರಿನ ಹೆಸರು: ಶ್ರೀನಿವೃತ್ತಿ ನೀತರಾ ಕಿಜುಯಾ ಮಗನ್ದಿರ್ಕಾಡುವಟ್ಟಯರಿನ್ದುಮ್ ವಲ್ಲವರಸರಿನ್ದುಂ ಕೊಟ್ಟೊಣ್ಣಿವಟಂ ಸೂಡಿದೊರಾ ಅನುಜೊಇನ್ದುಕನಲ್ಗೊಳಿ ನನ್ದಿಯಾಲರಾವಿಟ್ಟದುಪಡವ್ವಲಾಮಿಅವುಸಪಾಲುಮ್ (ಎಕ. VI, ಚಿಕ್ಕಮ. ೫೦-೩; ಸು. ೬೫೦); ಮಣೆಯಡೆಗುರೆಯ ನಂದಿಯಾಲ ಸೀಮ್ಪಾಲ ನಾಣ್ಣಡಿಯ ಮದಣ್ಣ (ಮೈಆರಿ. ೧೯೨೪, ೭೮-೨೬; ?). **ನಂದ್ಯಾಲ:** ಮಣಿಗ್ರಾಮಶ್ರೇಣಿ ಚತುಸ್ಸಾಮನ್ತ ಟೆಗುರೆ ಅಮಣೆಯ ನಂದ್ಯಾಲ ಸೀಂಬಾಲದೇಶ ಪ್ರಕೃತ್ಯಾಧ್ಯಕ್ಷಾಣಾಂ (ಮೈಆರಿ. ೧೯೩೦, ೩-೨೦; ಸು. 500); ಶೀಯವಲ್ಲವರಸರು ಟೆಗುರೆಯುರುಂ ವಣೆಯರುನ್ನಂದ್ಯಾಲರುಂ ಶೀಮ್ಬಾಲರುಂ ಚಾತುರ್ವೈದ್ಯಮುಮುಜಿಯೆ ಪೆತ್ತಾ ಎಲ್ಲಾ ಸಾಮನ್ತರು ಮತ್ತಾಣಉಂ ಸಾಕ್ಷಿ (ಮೈಆರಿ. ೧೯೧೧, ೧-೩೪; ಸು. 788); ಶ್ರೀಮನ್ಮಹಾಮಂಡಲೇಶ್ವರ ನಂದ್ಯಾಲದ ವೀರರಾಜ ಶ್ರೀರಂಗರಾಜಗಳ ಮಕ್ಕಳು (ಎಕ. X, ಮುಳಬಾ. ೪-೧೨; 1547). [ ? ]

**ನಂದಿಯುಂಡಿಗೆ** (ನಾ). ನಂದಿಯ ಚಿಹ್ನೆ,–ಮುದ್ರೆ; ವೃಷಭನ ಮೊಹರು: ತಾಮ್ರಪರ್ಣಿಯ ಮುತ್ತುಗಳುಂ ನಂದಿಯುಂಡಿಗೆಯ ವಿಸುನಿಯ ಪೊಂಗಳುಂ . . . ಬಸವನ ಮನೆಯ ಮುಂದೆ ಸುರಿದು ರಾಶಿಯಾಗಿರೆ (ಬಸರ. ೧೨-೬೪); ಪಡಿಪೊನ್ನ ಜಾಳಿಗೆಯನಂತದು ಸೌಂದರಂ ಕೈಕೊಂಡು . . . ನಂದಿಯುಂಡಿಗೆಯ ರಾಯಸವಿರಲು ಕಂಡದಕೆ ವಂದಿಸಿ ನಿಜೋತ್ತಮಾಂಗದೊಳಿಟ್ಟು (ಸೌಂದಪು. ೧೯-೧೧). [ ನಂದಿ + ಉಂಡಿಗೆ$_3$ ]

**ನಂದಿಲಿಪಿ** (ನಾ). ಒಂದು ಬಗೆಯ ರಹಸ್ಯ ಲಿಪಿ: ದೇವಲಿಪಿ ನಂದಿಲಿಪಿಯಾ ಅಗಣಿತ ಲಿಪಿಗಳ ನೋಡಲಟಿಯದೆ ಬಿಜ್ಜಳರಾಯನ ಸಭೆಯೊಳು ಕಳಕಳಗೊಳುತಿದ್ದರು ವಿದ್ವಾಂಸರುಗಳೆಲ್ಲಾ (ಭಾಸ್ಕರ. ೭೭-೭).

[ ನಂದಿ + ಲಿಪಿ ]

**ನಂದಿವಟ್ಟ** 'ನಂದಿಬಟ್ಟಲು' ನೋ.

**ನಂದಿವಟ್ಟಲು** 'ನಂದಿಬಟ್ಟಲು' ನೋ.

**ನಂದಿವರ್ಧನ** (ನಾ). ೧. ಈಶ್ವರ; ಶಿವ. ೨. ಮಗ; ತನಯ. ೩. ಸ್ನೇಹಿತ; ಮಿತ್ರ. ೪. ನಂದಿಮರ ಮತ್ತು ಅದರ ಹೂವು: "ತುನ್ನಃ, ಕುಬೇರಃ, ಕುಣಿಃ, ಕಚ್ಛಃ. ಕಾಂತಕಲಃ, ನಂದಿವೃಕ್ಷಃ–೬ ನಂದೀಯೆಂಬುವ ಮರದ ಹೆಸರು. ಬಸವನ ಗಿಡ, ನಂದಿವರ್ಧನಹುವ್ವ ಪ್ರಸಿದ್ಧ" (ಸಿದ್ಧಾಂತಿ. ೧೪೧). ೫. ಒಂದು ಬಗೆಯ ದೇವಸ್ಥಾನದ ರಚನೆ. ೬. [ಜ್ಯೋತಿ] ಹುಣ್ಣಿಮೆಯ ಅಥವಾ ಅಮಾವಾಸ್ಯೆಯ ಹೆಸರು; ಪಕ್ಷದ ಕೊನೆಯ ದಿವಸ. [ ಸಂ. ]

**ನಂದಿವಳ್ಳಿ** (ನಾ). ಒಂದು ಊರಿನ ಹೆಸರು: ಕಿಜುವಳ್ಳಿ ಬಾಳಪುರು ಇತ್ಯೇಕಾಂತೇಗ್ರಾಮಾನಾಂ ಮಧ್ಯೇ ನೆಜ್ಜೂಯೂರ್ನ್ನನ್ದಿವಳ್ಳಿ ಸಹಿತಸ್ಸುಳ್ಳಿಯೂರ್ನ್ನಾಮಗ್ರಾಮೋದತ್ತಃ (ಎಕ. X, ಕೋಲಾರ. ೬೩-೬೮; 757).

[ ನಂದಿ + ವಳ್ಳಿ$_1$ ]

**ನಂದಿವಾಹ** (ನಾ). = ನಂದಿವಾಹನ. [ ನಂದಿ + ವಾಹ ]

**ನಂದಿವಾಹನ** (ನಾ). ವೃಷಭನನ್ನು ವಾಹನವಾಗಿ ಉಳ್ಳವನು; ಶಿವ: ಮುಕ್ಕಣ್ಣ ಅಂದದಹಿಕುಂಡಲ ಚತುರ್ಭುಜ ನಂದಿವಾಹನ ಗೌರಿಸಹಿತಂ ಮುಂದೆ ನಿಂದು ಮಹೇಶನೀಶನು ಪಾಶಧರಕರನು (ಬಸಪು. ೨೭-೨೬).

[ ನಂದಿ + ವಾಹನ ]

**ನಂದಿವಾಳ** (ನಾ). ಒಂದು ಬಗೆಯ ಹೂವು: ಮಲ್ಲಿಗೆಯುಂ . . . ನಂದಿವಾಳ ಮುಡಿವಾಳ ಸೌಗಂಧಿ ಕಣಗಿಲು ಚಂಪಕಾ ಸಲ್ಲಲಿತ ಪಾರಿಜಾತಾದಿ ಬಹುಪುಷ್ಪಗಳ ಸಲ್ಲೆಯರುಯತಿಜಿತನದಿಂ ಶಿರಿಕೆಂದು (ನವಮೋ. ೨೪-೭೯). [ ? ]

**ನಂದಿವೃಕ್ಷ** (ನಾ). = ನಂದಿಮರ; "ನಂದಿವೃಕ್ಷಃ–ನಂದಿಮರ" (ಒಷಧಿ. ೮೪); ಅಶ್ವತ್ಥಾಕಾರವಪ್ಪ ನಂದಿವೃಕ್ಷ (ನಾಚಿರಾ. ೬); ಕಂಪುಗಂಧಗಿರಿ, ನಂದಿವೃಕ್ಷ . . . ಗಂಧಗರಿಗೆ (ಮೃಜಿಗಿ. ೧೯-೩೪೮). [ ನಂದಿ + ವೃಕ್ಷ ]

**ನಂದಿಸಂಘ** (ನಾ). [ಜೈನ] ಜೈನಸಂಘದ ಪ್ರಭೇದಗಳಲ್ಲಿ ಒಂದು: ನಂದಿಸಂಘದರುಂಗಳಾನ್ವಯದ ಗುಣಸೇನಪಣ್ಡಿತದೇವರ್ಗ್ಗೆ . . . ಕೊಟ್ಟರು (ಎಕ. I, ೭೨-೪೩; 1059); ಸ್ವಸ್ತಿಶ್ರೀ ರಾಜಾಧಿರಾಜ ಕೊಂಗಾಳ್ವನಬ್ಬೆ ಪೋಚಬ್ಬರಸಿಯರ್ದ್ರವಿಳಗಣದ ನನ್ದಿಸಂಘದರುಙ್ಗಳಾನ್ವಯದ ಗುಣಸೇನಪಣ್ಡಿತದೇವರ ಗುಡ್ಡಿ ಮಾಡಿಸಿದ ಬಸದಿ (ಎಕ. I, ೬೮-೦; ?); ಈ ಸಂಪ್ರದಾಯದಲ್ಲಿ . . . ಬೌದ್ಧರ ಮಹಾಸಾಂಘಿಕರಂತೆ ನಂದಿಸಂಘ ಗಣಸಂಘ ದೇವಸಂಘ ಮೊದಲಾದ ಸಂಘಪ್ರಭೇದಗಳಿದ್ದರೂ ಈ ಗ್ರಂಥಗಳು ಸರ್ವಸಮ್ಮತಗಳಾಗಿರುವುವು (ಹಿಂದಸಾ. ೭೪).
[ ನಂದಿ + ಸಂಘ ]

**ನಂದಿಸಂಹಿತೆ** (ನಾ). [ಶೈವ] ಚಂದ್ರಜ್ಞಾನಾಗಮದ ಹದಿನಾಲ್ಕು ಭೇದಗಳಲ್ಲಿ ಒಂದು: ಸ್ಥಿರಸಂಹಿತೆ ಸ್ಥಾಣುಸಂಹಿತೆ ಮಹತ್ಸಂಹಿತೆ ನಂದಿಸಂಹಿತೆ ನಂದಿಕೇಶ್ವರಸಂಹಿತೆ . . . ದೇವೀಮತವೆಂದು ಚಂದ್ರಜ್ಞಾನಾಗಮದ ಹದಿನಾಲ್ಕು ಭೇದಂಗಳು (ವಿವೇಕ. ೭೦). 'ನಂದಿಕೇಶ್ವರಸಂಹಿತೆ' ಪಠಾ. [ ನಂದಿ + ಸಂಹಿತೆ ]

**ನಂದಿಸು₁**, ನೊಂದಿಸು (ಕ್ರಿ). ೧. (ದೀಪ, ಉರಿ, ಬೆಳಕು ಮೊದಲಾದುವನ್ನು) ಆರಿಸು: ಇಲ್ಲದಂತೆ ಮಾಡು: ಕಪ್ಪಂಗವಿಯಾಗಿ ಕವಿವ ದ್ರುಪದವಿಳಯಾನಳನಂ ದ್ರೋಣಂ ಮಹಾದ್ರೋಣ ಪುಷ್ಕಳಾವರ್ತಕಂಗಳೆಂಬ ವಿಳಯಕಾಳನೀಳಜಳಧರವರ್ಷಂಗಳಿಂ ನಂದಿಸಿಯುಂ ನಂದದೆ ಮುಟ್ಟವರೆ (ಪಂಪಭಾ. ೧೨-೨೦೪); ತಮ್ಮೊಡಂಕೆಯು ಗಾಳಿಯಿಂ ಪೊಗೆಯಂ ನಂದಿಸಲೀಯದೆ ಹೋಮಾನಲಪ್ರಜ್ವಲನಮನೆಸಗುವ ಸೋಗೆನವಿಲ್ಗಳಿಂ ಸೊಗಯಿಸುವುದು (ಶಾಂತಿಪು. ೨೨೬); ಜಿನಧರ್ಮಮೆಂಬ ನೀರಿಂ ಕರ್ಮಮೆಂಬ ಕಿರ್ಚಂ ನಂದಿಸದೆ ... ಇರ್ದೊಡೆ ಶಾಶ್ವತಸುಖಂ ದೊರೆಕೊಳ್ಳದು (ಧರ್ಮಾಮೃ. ೭ ೯೭); ತಳ್ಪುಪ್ಪ ಪಾರಾಸಿಯಿಂ ತದ್ಗಿರಿ ವಹ್ನಿಜ್ವಾಲೆಯಂ ನಂದಿಸಿ ಬಟಿಕ ಜರಾಸಂಧಸೇನಾಸಮೂಹಾಂತರಮಂ ಕಾಲಾಗ್ನಿರುದ್ರಂ ಪುಗುವ ತೆಱದೆ ದೈತ್ಯಾಂತಕಂ ಬಂದು ಪೊಕ್ಕಂ (ಜಗವಿ. ೮-೪೭); ಶಿಶಿರೋಪಚಾರಮಂ ಅಲನೆಗೆ ಮಾಳ್ಪಂದಂ ಘೃತದಿಂ ಕಿರ್ಚಂ ನಂದಿಪ ತೆಱವಾಗಿ ತೋಱುತಿದೆ (ಗಿರಿಕ. ೪-೧೧೩); ತರಜಿ ಪಾಶುಪತಾಸ್ತ್ರವಾದಿಯ ದಿವ್ಯಮಾರ್ಗಣದ ಪುರಹರನ ಕೃಪೆಯಿಂದ ಪಡೆದಂತುಗಿಗಳನು ಸಂಹರಿಸಿ ನಿನ್ನಯ ಪರಿಭವಾಗ್ನಿಯ ನಂದಿಸುವೆ (ಕುಮಾ. ೪-೩೧). ೨. ನಾಶಮಾಡು; ಕೊನೆಗಾಣಿಸು; ಕೊಲ್ಲು: ಉರಃಪ್ರದೇಶದ ಬಿಸಿ ನೆತ್ತರೊಕ್ಕು . . . ಜೋಲ್ದೊಡಾದಮ ನಸುನೊಂದು ನಂದಿಸದೆ ತನ್ನನೆ ನಿಂದಿಸಿದಂ ದಿನೇಶಜಂ (ಪಂಪಭಾ. ೧೨ ೧೧೬). ೩. ನಿವಾರಿಸು; ಕಳೆ: ರವಿಚಂದ್ರರ್ ನಿಲೆ ಸಿಂಹಲಗ್ನದೊಳಿಳಾಜಾತಾರ್ಕಜರ್ ನೋಡೆ ನೇತ್ರವಿಹೀನಂ . . . ಆ ದುರಿತಮಂ ನಿರೆ [illegible] ನಂದಿಪರ್ (ಜಾತಿ. [illegible]); ತತ್ಪುರದೊಳ್ ವರ್ಷ [illegible] ನಂದಿಸಲೆಂದು ಅಂದಣಿಗರ ಮುಂದಿರಕ್ಕೆ ಪೋಪಮಂ ಮುಂದೆ [illegible] ಸೆರವಿಯಂ ಘೋಂಟೆನೆ ಕಂಡು (ವರ್ಧಪು. ೩-೧೨೮); ತಂದೆಯ [illegible] ನಂದಿಸುವೆನೆನುತ್ತ ಮುಗಿದ ಕೈಮೆರಸಾಗಳ್ ತಂದೆ [illegible] ಮಧುರವಚನ ರಚನೆಗಳಿಂದಂ (ಪ್ರ [illegible]). [illegible] ನೊಂದಿಸು: ೧. ಘಟನಂ [illegible] ನಾನಾವಿಧಿಯಲಿ ನೊಂದಿನ ಶೋಕಶಿಖಿಯಹ್ನಾಗ [illegible] ಮುಮನಂದನನು (ತುರಂಗ. [illegible]); ಅಡವಿಯಲ್ಲಿ ಅಡಿಗೆ ಮಾಡಿಕೊಂಡು ನೊಂದಿಸದೆ ಹೊರಟು ಹೋಗುತ್ತಾರೆ (ಮುಂಬಯಿ. ೫ ೩); ಬಂಡಾಯದ ಬೇಗೆಯನ್ನು ಕಾಲಲ್ಲಿ ತುಳಿದು ನೊಂದಿಸಿಬಿಟ್ಟಿತು (ಇಪ್ಪಕ. ೧೯೪). [ ನಂದು + – ಇಸು₃ ]

**ನಂದಿಸು₂** (ಕ್ರಿ). ಸಂತೋಷಗೊಳಿಸು: ಆನಂದಪಡಿಸು: ಒಂದು ದಾರಿಯಲೀಗ ಕ್ಷಣದಲ್ಲಿ ಸಾಗಿ ವಂದಿಸುವೆ ನಂದಿಸುವೆ ಮಾತಿನನುರಾಗಿ (ಕಿಎಪು. ೧೨-೪). [ ನಂದನ + – ಇಸು₃ ]

**ನಂದಿಸೇನ** (ನಾ). ಒಬ್ಬ ಜೈನಯತಿಯ ಹೆಸರು: ಉಱುಸತ್ವನ್ನನ್ದಿಸೇನ ಪ್ರವರಮುನಿವರನ್ದೇವಲೋಕಕ್ಕೆ ಸನ್ದಾರ್ (ಎಕ. II, ೮೮-೪; ಸು. 700).
[ ನಂದಿ + ಸೇನ ]

**ನಂದಿಸೋಪಾನ** (ನಾ). = ನಂದಿಮೆಟ್ಟಲು: ತಂಗಿಯಮ್ಮಾ ಹೋಗಿ ತುಗಿಬರ ಭಾಸಿಂಗ ನಂದಿಸೋಪಾನದ ನಸಲೀಗಿ (ಮಲ್ಲಗ. ೭೯). [ನಂದಿ+ಸೋಪಾನ]

**ನಂದಿಹಾಳ** (ನಾ). ಒಂದು ಬಗೆಯ ಜೋಳ: ಮೂರ ತಿಂಗಳ ಜೋಳ, ದೊಡ್ಡಜೋಳ . . . ನಂದೀಹಾಳ ಈ ಆರು ಜಾತಿಗಳನ್ನು ಮುಖ್ಯ ಪೈರುಗಳಾಗಿ ಬಿತ್ತುವರು (ಕಭಾಗ. ೨೭೧). [ ? ]

**ನಂದೀಮುಖಿ** (ನಾ). ಒಂದು ಬಗೆಯ ಗೋದಿ: ನಂದೀಮುಖಿಯೆಂಬ ಸಣ್ಣವಾಗಿಯೂ ಉದ್ದವಾಗಿಯೂ ಇರುವ ಗೋದಿಯು ಶೀತ ಒಗರು (ಅಷ್ಟಾಂಗ. ೧೧೫). [ ? ]

**ನಂದೀಶ** (ನಾ). = ನಂದಿಕೇಶ್ವರ ೧: ನಂದೀಶಂ ವೀರಭದ್ರಂ ಘನರವನಚಲಂ (ಗಿರಿಕ. ೧೧-೭೫); ನಂದೀಶ ವೀರಭದ್ರ ಸ್ಕಂದ ಗಜಾನನಮುಖಾಖಿಲ ಪ್ರಮಥಗಣಂ . . . ಎಸೆದಿರ್ದುಂ (ಉದ್ಭಟ. ೧೨-೧೨೫); ನಿರುತದಿಂ ದಶಿವೀರಘೋರಾಪರಿಮಿತೋತ್ಕಟಪಟುತಪವನಾಚರಿಸಿದನು ನಂದೀಶನತಿಶಯಮತಿಶಯಮಿದೆನಲು (ಬಸವು. ೨-೧೫). [ ನಂದಿ + ಈಶ ]

**ನಂದೀಶ್ವರ** (ನಾ). ೧. = ನಂದಿಕೇಶ್ವರ ೧: ಆದಿಶಿವಲಿಂಗಕ್ಕೆ ವಾಹನವಾದ ನಂದೀಶ್ವರನೆ ಮತ್ತೆ ಶಿಲಾದಮುನಿಗುದಯಿಸಿದ ಪರಿಯಂ ಪೇಳ್ವೆನು (ಬಸವು. ೧ ಸೂಚನೆ): ನಂದೀಶ್ವರಮಂತಜನಿಪನೆಂದಱಿಪುವ ತೆಱದೊಳಮಳ ಗಗನಾಂಗಣದೊಳ್ ಸ್ಫುಂದದ ಬೆಂಕದ ಬಿರುದಿನ ನಂದೀಧ್ವಜವಿತತಿ ಪೊದೊಳಿರ್ದುದು ಚೆಲ್ವಿಂ (ಹವಿಷ್ಕರ. ೧-೭೫); ಬೇಗದಿಂದೈದಿ ನಂದೀಶ್ವರಂ ಗರುಡನಂ ಪೋಗದಿರ್ಕಲೆಯನಾಭರಣಕ್ಕೆ ತಾರೆಂದು ನಾಗಭೂಷಣನಟ್ಟಿದಂ ತನ್ನನೀಯದೊಡೆ ನಿನಗೆ ಬಹುದುಪಹತಿಯೆಂಸೆ (ಜೈಮಿಭಾ. ೧೪-೨೧). ೨. [ಜೈನ] ಮಧ್ಯಮಲೋಕದ ಎಂಟನೆಯ ದ್ವೀಪ. ೩. ಜೈನರ ಒಂದು ವ್ರತ,–ಹಬ್ಬ: P ಕಾರ್ತಿಕ, ಫಾಲ್ಗುಣ, ಆಷಾಢ–ಈ ಮೂರು ತಿಂಗಳುಗಳ ಕಡೆಯ ಎಂಟುದಿನಗಳಲ್ಲಿ ನಂದೀಶ್ವರವೆಂಬ ದ್ವೀಪದಲ್ಲಿ ಸೌಧರ್ಮಾದಿ ಇಂದ್ರರು ಅದೇ ಸಮಯದಲ್ಲಿ ಲೋಕದ ಜನರೂ ಈ ರೀತಿ ಪೂಜಿಸುತ್ತಾರೆ. ಇದಕ್ಕೆ ನಂದೀಶ್ವರ ಎಂದು ಹೆಸರು: ಇತ್ತ ದಾದಿಯುಂ . . . ನಂದೀಶ್ವರದೆಂಟುದಿವಸಮಭಿಷೇಕಮುಮರ್ಚನೆಯುಮುಪೋಷವಾಸಮುಮಂ ಮಾಡಿ (ಪದ್ಮಚ. ೦೦೭-೫); ಶಕವರ್ಷಮೊಂಟುನೂಱಕೆ ಕಡೆಯೊಳಱುವತ್ತುಮೂಱು ಸಂದುದು ಜಗತ್ಸ್ಫುಟ ಪ್ಲವಸಂವತ್ಸರದ ಕಾರ್ತಿಕಂ ಮುದಮುನೀಯೆ ನಂದೀಶ್ವರದೊಳ್ (ಆದಿಪು. ೧೬-೭೩); ಶಕವರ್ಷಂ ಪಂಚದಶಾಧಿಕ ನವಶತಮಾಗೆ ವಿಜಯಸಂವತ್ಸರ ಕಾರ್ತಿಕ ನಂದೀಶ್ವರದಿನದೊಳ್ ಪ್ರಕಟಿಸಿದುದು ರತ್ನನಿಂದಜಿತಪುರಾಣಂ (ಅಜಿಪು. ೧೨-೫೪): ಭವಭವದೊಳ್ ಕಟ್ಟಿದನೇಕವಿಧದ ದುಷ್ಕರ್ಮಮಂ ಕಟಲ್ಚಿರ್ ಪುಣ್ಯಾಸ್ರವದೊಳ್ ನೆರೆಯಲ್ ಭವ್ಯರ್ಗೆವೆ ದಿವಸಮೆನಲ್ಕೆ ಬಂದ ನಂದೀಶ್ವರದೊಳ್ (ಪುಷ್ಪಪು. ೩-೧೨೪); ಚಂದಣ ವರ್ಣಿಯ ನಂದೀಶ್ವರದ ನೋಂಪಿಯ ಕಥೆ ಒಂದು ಚಂಪೂಗ್ರಂಥ (ಯಕೋಸಂ. ೭೭ ಟೀಕೆ). 'ಶಿಱುನಂದೀಶ್ವರ' ಪಠಾ. ೪. ಬಾಹುಬಲಿ ವಿಗ್ರಹದ ಮುಂದಿರುವ ಮಂದರವೆಂಬ ತೇರಿನ ಭೇದಗಳಲ್ಲೊಂದು: ಬಾಹುಬಲಿವಿಗ್ರಹ . . . ಇದರ ಮುಂದಿರುವ "ತೇರಿ"ಗೆ ಮಂದರವೆಂಬ ಹೆಸರು. ಮಂದರಗಳಲ್ಲಿ ನಂದೀಶ್ವರ ಮತ್ತು ಮೇರು ಎಂಬ ಭೇದಗಳಿವೆ (ಜೊಯ್ಸವಾ. ೨೦೭).

**ನಂದೀಶ್ವರದಷ್ಟಮಿ** = ನಂದೀಶ್ವರವ್ರತವನ್ನು ಆಚರಿಸುವ ಅಷ್ಟಮಿ: ಜೈನಶಾಸನಗಳಲ್ಲಿ ಮುಖ್ಯವಾಗಿ ಎರಡು ಹಬ್ಬಗಳ ಅಥವಾ ವ್ರತಗಳ ಪ್ರಸಕ್ತಿ ವಿಶೇಷವಾಗಿ ಬರುತ್ತದೆ. 'ಜೀವದಯಾಷ್ಟಮಿ' ಎಂಬ 'ಪರ್ವ' ಒಂದು; ಮತ್ತೊಂದು 'ನಂದೀಶ್ವರದಷ್ಟಮಿ'; ಎರಡನೆಯ ಪರ್ವಕ್ಕೆ 'ಅಷ್ಟಾಹ್ನಿಕ' ಎಂಬ ಹೆಸರೂ ಉಂಟು (ಕಶಾಅ. ೯೯). **ನಂದೀಶ್ವರದ್ವೀಪ** = ಜೈನರು ನಂದೀಶ್ವರನೋಂಪಿಯ ಕಾಲದಲ್ಲಿ ಜಿನನನ್ನು ಪೂಜಿಸಲು ಹೋಗುವ ದ್ವೀಪ: ನಂದೀಶ್ವರದ್ವೀಪಮಹಾಚೈತ್ಯಾಲಯೊಳ್ ಪಾವನತರನಮಸಂಗೀತಕಕ್ರೀಡೆಯುಂಮಾಡಿ ಮನಃಪ್ರಹ್ಲಾದಮಂ ತಾಳ್ದುವನನವರತಂ ಶ್ರೀಧರಂ ಕೇಳಿಸೀಳಂ (ಚಂದ್ರಪ್ರ. ೪-೭೬). **ನಂದೀಶ್ವರನೋಂಪಿ** = ನಂದೀಶ್ವರ ೩: ನಂದೀಶ್ವರನೋಂಪಿಯ ಸಮಯದಲ್ಲಿ ದಾನ ಮಾಡುವುದು ಶ್ರೇಷ್ಠವೆಂದು ಶಾಸನವೊಂದು ಹೇಳುತ್ತದೆ (ಕಶಾಅ. ೯೯). [ ಸಂ. ]

**ನಂದೀಶ್ವರಂಗೆಯ್** (ಕ್ರಿ). ನಂದೀಶ್ವರವ್ರತವನ್ನು ಮಾಡು,-ಆಚರಿಸು: ಫಾಲ್ಗುಣಮಾಸದ ನಂದೀಶ್ವರದಂದಜುವರುಂ ಕೊಡಗೂಸುಗಳುಮ ಮಾಸಂಗೆಯ್ದು ಬಸದಿಗರ್ಚನೆಯುಂ ಕೊಂಡು ಪೋಗಿ ದೇವರನರ್ಚಿಸಿ ನಂದೀಶ್ವರಂಗೆಯ್ದು ಬಂದಿಸಿ (ವಡ್ಡಾರಾ. ೧೧೩-೦೮).

[ ನಂದೀಶ್ವರ + ಕೆಯ್$_1$ ]

**ನಂದು, ನೊಂದು$_1$** (ಕ್ರಿ). ೧. (ಬೆಂಕಿ, ಬೆಳಕು ಮೊದಲಾದುವು) ಆರಿಹೋಗು ; ಇಲ್ಲವಾಗು : " ನಂದು – ವಿನಾಶೇ, ಗತತೇಜಸಿ ಚ ( ಬೆಳಕು ತಪ್ಪಿಹೋಗು ) " (ಶಮದ); ಇಂದುಕಿರಣಂಗಳಿಂದಂ ಚಂದನರಸದಿಂದಮಾಗಿಯಾ ನೀರಿಂದಂ ನಂದದು ಪಾತಾಪಾನಳನಿಂದಜಿದಂ ನಿನ್ನ ಮೆಯ್ಯ ಕಾಮಜ್ವರಮುಂ (ಕವಿರಾ. ೩-೧೬೪); ಹೋಮಾಗ್ನಿಯುನೆಜಂಕೆಯ ಗಾಳಿಯಿಂ ನಂದಲೀಯುದುರಿಪುವ ರಾಜಹಂಸೆಗಳುಮಂ (ಪಂಪಭಾ. ೧-೧೧೩ ವ); ಕಿಚ್ಚು ನಂದಿದೊಡೆ ಮತ್ತವಿಂಧನಮನಿಕ್ಕಲೇದು ಕೊಡಲಿಗೊಂಡು ಪುಳ್ಳಿಯುಂ ಪೋಟಬ್ಬಾಗಳ್ (ದಾಪುಂಪು. ೩೭೪); ಮನಬೀಸರವೆಂಬ ಗಾಳಿ ಬೀಸಿತ್ತು ವಿದ್ಯಾಮುಖದ ಜ್ಯೋತಿ ನಂದಿತ್ತು (ಅವಜಂ. ೪೦-೧೭೧); ಮರೀಚಿ ನಂದುವ ಸೊಡರ ಕುಡಿವೆಳಗಿನಂತೆ (ವರ್ಧಪು. ೧೦-೪೯ವ); ಕಿಚ್ಚು ನೀರಿಂದ ನಂದುವುದದು ನೆಯ್ಯಿಂದ ಹೆಚ್ಚುವುದಂತೆ ಕಾಮಾಗ್ನಿ ಸಚ್ಚಿದಾನಂದಾತ್ಮರಸದಿ ನಂದುವುದದು ಹೆಚ್ಚುವುದಬಲೆಯರಿಂದ (ಭರತ. ೭೩-೪೦). ೨. ಶಮನವಾಗು : ಕುಂದು ; ನಾಶವಾಗು : ಎರ್ದೆಗೆಟ್ಟನೀಗಳಿ ದಿಟ್ಟ ಮರಳ್ದು ನಂದಿದಪುದು (ಕಾದಂಪೂ. ೦೯೯); ತಂದೆಯನಗಲ್ದ ವಿರಹಂ ನಂದದೆ ಕಾರ್ಪಾಸಕಿಖಿಯೊಲೊಳಗೊಳಗಟಲಂ ಸಂಧಿಸೆ ನಿಲಲಾಜದೆ ನಿಜಮಂದಿರದೊಳ್ ರಾಜ್ಯಸುಖಪರಾಙ್ಮುಖನಾದಂ (ಅನಂಪು. ೦೦-೩೩); ಪೆಚ್ಚಿತು ಧರ್ಮ ಧರೆಯೊಳು ದುರ್ಮಾರ್ಗದ ಕಿಚ್ಚಿನೇಳಿಗೆ ನಂದಿತು (ಕಂನಪಿ. ೩-೧೧); ನಂದಿದರು ದುಷ್ಕೃತ್ಯದ ಮನಸತ್ತ್ವೋನ್ನತರು ರಾಮಕೃಷ್ಣಾದಿಗಳು ದಿವ್ಯಭೂತಿಗಳು (ಮುಕದೀ. ೪೦-೧). 'ನಂದಿಸು$_1$' ಪರಾ. ೩. ಕಳೆಗುಂದು ; ತೇಜೋಹೀನವಾಗು ; ಮಂಕಾಗು : ಕಡುನಂದಿ ಕುಂದಿ ಸಮ್ಯಕ್ತ್ವಲ ದೀಪಕಂಗೆ ಮಗುಬ್ದಂದುಸಿರ್ದರ್ ಸಚಿವರ್ವಿಷಾದದಿಂ (ಉದ್ಭಟ. ೧೦-೪೧). **ನೊಂದು$_1$** : ೧. ಸವತಿಮತ್ಸರವು ಪ್ರಪಂಚದಲ್ಲಿ ಹೆಣ್ಣಿನ ಪಾಲಿಗೆ ಬಂದ ನೊಂದದ ಕಿಚ್ಚು (ಕನ್ನಡಾ. ೦೦೩). ೨. ಅತ್ರಿಯ ಸುತನೆ ನಿನ್ನಯ ಕಳೆಯು ನೊಂದುಗುಮೆಂದು ಸುರಗುರು ನಳಿನವೈರಿಗೆ ಶಾಪವಿತ್ತನು (ಸಂಭಪ. ೦೨-೩); ಎಂದಿಗಾನುಂ ನಿನ್ನ ಪೂರ್ವಋಣಗಳ ಲೆಕ್ಕ ನೊಂದಬೇಕೆಂದಿರ್ದೊಡಿಂದ ಮೊದಲನಿಡು (ಮುಂಕುಕ. ೭೩೭).

**ನಂದದೀವಿಗೆ, ನಂದಾದೀವಿಗೆ** = ಆರದೆ ಇರುವ ದೀಪ ; (ದೇವರ ಮುಂದೆ) ನಿರಂತರವಾಗಿ ಉರಿಯುವ ದೀಪ,–ಜ್ಯೋತಿ: ಜನಚಂದ್ರ ಕುಮಾರಂ. . .ಪೋಲ್ತು ಕನಕರುಚಿಯಿಂದಮಾ ಪಳಿಕಿನ ಕೊಡನೊಳಗಿರ್ದ ನಂದದೀವಿಗೆಯಿರಪಂ (ಜಾಂತಿಪು. ೦೦-೪೨) ; ಮೂಲಸ್ಥಾನಕಲಿದೇವಸ್ವಾಮಿಗೆ ವಿಷ್ಣುದೇವರ್ಗ್ಗೆ ನನ್ದದೀವಿಗೆಗಂ ನಿವೇದ್ಯಕ್ಕಂ ಶ್ರೀಖಣ್ಡಕ್ಕಂ ಧೂಪಕ್ಕಂ ಮೊದಲ್ಗೊಟ್ಟ ಗದ್ಯಾಣಂ ಪದಿನೈಯ್ದು (ಸೌಇಇ. XI-1, ೯೨-೩೩; 1054); ಈ ಪೊನ್ನ ವೃದ್ಧಿಯೊಳಂ ಕಯ್ಯ ಗುತ್ತಗೆಯೊಳಂ ಗಂಧಧೂಪ ನಿವೇದ್ಯ ನಂದದೀವಿಗೆಗಂ ಅಟ್ಟುಸುವ ಮಾಣಿಯ ಜೀವಿತಕ್ಕಂ ಕುಡುವುದು (ಕಇ. II, ೯-೨೮; 1076) ; ಶ್ರೀಪಾದಪಯದೇವಗೆ ಸ್ನಾನಕ್ಕೆ ಆ ಕವಿಲೆಯ ಬಿಟ್ಟ ನನ್ದನವನ ಮಾಡಿಸಿ ನಂದಾದೀವಿಗೆಯುಂ ಮಾಲೆ ಪೂವ ಸದಿಯ ಸಿಲ × × × ಬ್ರಹ್ಮಚಾರಿಯ × × × ನದೊಳು (ಎಕ. IV, ಗುಂಡ್ಲುಪೇ. ೮೪-೬; 10007) ; ಮತ್ತಂ ದೇವರ್ಗೆ ನನ್ದಾದೀವಿಗೆಗಿತ್ತ ಗಾಣವೊನ್ದದೆ ಕರಮಂಡ ತಳಭೋಗಮುಸತು ಮೊದಲಾಗಿ ಸರ್ವಬಾಧಾಪರಿಹಾರಂ (ಸೌಇಇ. XI-1, ೫೨-೭೪; 1007) ; ದೇವರ್ಗ್ಗೆ ಒನ್ದು ನನ್ದಾದೀವಿಗೆ ಚನ್ದ್ರಸೂರ್ಯ್ಯರ್ಕೃತಂ ಕುನ್ದದೆ ನಡೆವನ್ತಾಗೆ (ಎಕ. XIV, ಮಳವ. ೧೨೪-೧; 1014); ನಂದಾದೀವಿಗೆಯ ನಡೆಸಿಹೆವೆಂಬವರ ಮುಖವ ನೋಡಲಾಗದು (ಬಸವ. ೨೨೫) ; ಶಂಕರ, ಮಧ್ವ, ರಾಮಾನುಜರಂಥ ಆಚಾರ್ಯರು . . . ಭಗವದ್ಗೀತೆಯಿಂದ ಸ್ಫೂರ್ತಿ ಪಡೆದಿದ್ದಾರೆ; ತಮ್ಮ ಬಾಳ ನಂದಾದೀವಿಗೆಯನ್ನು ಹೊತ್ತಿಸಿಕೊಂಡಿದ್ದಾರೆ (ಧರ್ಮಸಾ. ೦೨೭). **ನಂದಳಕ** = ನಂದದೀವಿಗೆ (?): ನಯಿವೇದ್ಯ ನಂದಳಕ ನಿತ್ಯಚಿತ್ರ (ಸೌಇಎ. ೧೦೩೨. ಉಡುಪಿ. ೩೪೨-೮; ?). ☞ ಇದು 'ನಂದಾವೆಳಕು' ಎಂಬುದರ ಅಪಲಿಖಿತವಿರಬಹುದು. **ನಂದಾಉಳ, ನಂದಾವಳ, ನೂದಾವುಳ**=ನಂದದೀವಿಗೆ: ಶ್ರೀಬಿಕ್ಕಿದೇವಯ್ಯಗಳ ಕಯ್ಯಲು ಶ್ರೀಮಧುಕನಾಥದೇವರಿಗೆ ಮೂಜುನಂದಾಉಳವನೂ ಆಚಂದ್ರಾರ್ಕ್ಕಸ್ಥಾಯಿಯಾಗಿ ನಡಸುವಂತಾಗಿ ಕೊಟ್ಟುದು (ಸೌಇಇ. XX, ೩೭೭-೯; ಶು.14ನೆಯ ಶತ) ; ನೈವೇದ್ಯ ನಂದಾವಳ ಪೂಜಾರಿಯ [ ಜ ]ತಸತ್ರ (ಸೌಇಇ. XX, ೨೨೯-೨೬; 1363 ?); ನಂದಾವುಳಕ ವೊಂದು ಗಾಣದ ಮಾನೆಣ್ಣೆ ಸಲುಪದು (ಎಕ. VIII, ತಿವರೂ. ೭೯-೨೬; 1820). **ನಂದಾದೀಪ** = ನಂದದೀವಿಗೆ : ಹೊಂದಿ ನಿದ್ರೆಯ ದೇವ ನಂದಾದೀಪವ ಅಂದು ಪ್ರಜ್ವಳಿಸುತ ಮಿಂದುಟ್ಟು ಪೊಂದಟ್ಟೆಯ ಮಣಿವೃಂದದ ಭೂಷಣ ಸಿಂಧೂರಸೀಮಂತದಲಿಟ್ಟು (ಕೃಸಥಾ. ೧೯-೧) ; ವಿಜ್ಞಾನಮಂದಿರದಲ್ಲಿ ಒಂದು ಪ್ರಕಾಶವಾದ ನಂದಾದೀಪ ನಂದಿದಂತೆ ಆಯಿತು (ಸಸ್ಯಕ. ೭೬) ; ಅರ್ಚಕ ಜನ್ನಯ್ಯ . . . ನಂದಾದೀಪಕ್ಕೆ ಎಣ್ಣೆ ಸುರಿದು . . . ಧ್ವಜಮರದ ಕಟ್ಟೆಯ ಹತ್ತಿರ ಬಂದಿದ್ದರು (ಹದ್ಯಸ. ೨೨೬). **ನಂದಾದೀಪ್ತಿ** = ನಂದದೀವಿಗೆ : ಆ ಪುರದಲ್ಲಿ ಪುಟ್ಟಿದ ದ್ರವ್ಯದಲ್ಲಿ ರುದ್ರಾಭಿಸೇಕ ಅಮೃತ್ರಪಡಿ ನಂದಾದೀಪ್ತಿ . . . ಮುಂತಾಗಿ ನಡೆಯಬೇಕೆಂದು ಆ ಪುರವನೂ . . . ಕೊಟೆಉ (ಎಕ. XV[I] ಚಿಕ್ಕನಾ. ೮೩-೧೯; 1520) ; ದೇವಸ್ಥಾನ ಇಕ್ಕೆ ಅಮೃತಪಡಿ ನಂದಾದೀಪ್ತಿ ಮುಂತಾದ ದೇವಕಾಮೆಚ್ಚಕ್ಕೆ . . . ಉಂಡಿಗೆ ವಿವರ (ಎಕ. VII, ತಿವರೂ. ೨-೮೨; 1641) ; ಬಿನ್ನಹ ಸ್ಥಾನಿಕ ತಂಮಣನು ಗಣಾಚಾರದ ಕಟ್ಟುಗೆಯ ತೆರ್ಪುವ ಹಣವನು ಸಿವರಾತ್ರಿ ಪುಣ್ಯಕಾಲದಲೂ ಧಾರಾಪೂರ್ವಕವಾಗಿ ನಂದಾದೀಪ್ತಿಗೆಂ . . . ನಂದಾದೀಪ್ತಿಯನು ನಡಸುದು (ಎಕ. VII, ತಿವರೂ. ೨೧-೧೦; ?). **ನಂದಾದ್ಯುತಿ** = ನಂದದೀವಿಗೆ : ಕಡವೂರ ವೀರೇಶ್ವರದೇವರಿಗ ಅಮೃತಪಡಿ ನಂದಾದ್ಯುತಿ ಆಂಗರಂಗವಯಿಭೋಗಕ್ಕೆ . . . ಸಮರ್ಪಿಸ್ತವು (ಎಕ. XI, ಹೊಳಲ್ಕೆ. ೮೧-೮; 1640). **ನಂದಾಬೆಂಕಿ** = ಆರದೆ ಇರುವ ಬೆಂಕಿ; ನಿರಂತರವಾಗಿ ಉರಿಯುವ ಅಗ್ನಿ : ಆ ಬೆಂಕಿ ನಿನ್ನೆ ಮೊನ್ನೆಯದಾಗಿರಲಿಲ್ಲ ; ಅನೇಕ ದಿನಗಳಿಂದ ಇಪ್ಪತ್ತನಾಲ್ಕು ಗಂಟೆಯೂ ಆರದೆ ಸಜೀವವಾಗಿದ್ದ 'ನಂದಾಬೆಂಕಿ'ಯಾಗಿತ್ತು (ಮುಕಮು. ೭೭೪). **ನಂದಾಬೆಳಕು, ನಂದಾವೆಳಕು** = ನಂದದೀವಿಗೆ : ಆ ಕಿಮಿಸೆಟಯರು . . . ಸಂಕ[ ರ ] ನಾರಾಯಣ ( ೦ ) ದೇವರಿಗೆ ಕಟಕಂಡ ತೆಜು ಒಂದು ನಂದಾಬೆಳಕು ವರುಷ ೧ದಕಂ ಯೆಂಣೆ ಹಾನೆ ೩೭ನು ನಡಸುವದು

(ಸೌಇಇ. IX-II, ೪೧೯-೨೩; 1380) ; ನೂಱು ಬತ್ತದ ಮಣ್ಣು ಯಾಱು ಪಸುವಂ ಮಾದೇವಗ್ಗ್ರಪಾ ಪಳ್ಳಿಗೊಣ್ಣ ದೇವಗಂ ನನ್ದಾವೆಳಕಿಂಗೆ ಕೊಟ್ಟಂ (ಎಕ.IV, ಗುಂಡ್ಲುಪೇ. ೯೩-೨೭; 1049); ಅಡಿಗನಂ ಭಾಗವ ಹಿತ್ತಿಲ ಮೇಲೆ ವೊಂದು ನಂದಾವೆಳಕು . . . ಮೂ[ ಲ ] ಗಡಿಯಿಂದಲುವೊಂದು ನಂದಾ ವೆಳಕು . . . ಗುಡಿಯ ಹಿತಿಲ ಮೇಲೆ ಒಂದು ನಂದಾವೆಳಕು (ಕಇ. III, ೪-೧೭; 1339) ; ಸಾಪಿರನಾರಾಯಣದೇವರ ಅಮೃತಪಡಿಗೆ × × × ಪ್ರತಿ ದಿನ ೧ ಕಂ ನಾಡಹಾನೆ ೩ ನಂದಾವೆಳಕಿಂಗೆ . . . ನಡಸುವ ಯೆಂಣೆ ವರುಷ ೧ ಕಂ ಹಾನೆ ೨ಡನೂ ನಡೆಸುವಂತಾಗಿ (ಸೌಇಇ. IX-II, ೪೦೩-೦೦; 1357). ನಂದಾವನ = ಸದಾಕಾಲವು ಹೂವು ಬಿಡುವ ತೋಟ: ಪ್ರತಿ ದಿನವೂ ತಿರುಪಡಿವಾಕ್ಷ ಸಮರ್ಪಿಸುವ ನಂದಾವನ ಮಾಡುವ ಸಂಬಳ ೬ ವರಹ (ಎಕ. XIV, ಶ್ರೀರಂಗ. ೯೫-೩; 1535) ; ದೇವರ ನಂದಾದೀವಿಗೆ ಕಟ್ಟಿಯ ಕೆಳಗಣ ನಂದಾವನಯಿಷ್ಟನು ಸರ್ವ್ವಮಾನ್ಯವಾಗಿ ನಡಸಿ ಬಹಾಂಗೆ ಬಿಟ್ಟ ಮಗ್ಗ ತೋಟ (ಎಕ. XIV, ತಿರುಮ. ೨೪೩-೫; ?). ನಂದಿ ಪೋಗು, ನಂದಿ ಹೋಗು, ನೊಂದಿ ಹೋಗು = ೧. ಇಲ್ಲವಾಗು ; ನಾಶವಾಗು ; ಶಮನ ವಾಗು : ವಾಮನಪದಹತಿವಿದಳಿತ ಜೀಮೂತವಿಮುಕ್ತಬಹಳಜಲಧಾರೆ ಗಳಿಂದಂ ಮುನಿಜನಾಪಕಾರಕ ಧೂಮಧ್ವಜನೆಯ್ದೆ ನಂದಿ ಪೋದತ್ತಾಗಳ್ (ಅರ್ಜನೀ. ೬-೩೫); ನಾನೆಂಬ ಜೀವರು ನಂದಿಹೋಗುವರ್ಶ್ಯೆಯುವದಿರಿಗಹುದ ಶಿಪಪದವು (ಸಂಭಪ. ೧೩-೫೦). ೨. ಆರಿಹೋಗು ; ಬೆಳಕನ್ನು ಕಳೆದು ಕೊಳ್ಳು : ಕಪಾಲಕುಂಡಲೆಯು . . . ಕೊಠಡಿಯನ್ನು ಬಿಟ್ಟು ಹೊರಗೆ ಹೊರಬಿದ್ದದ್ದೇ ತಡ ಮನೆಯ ದೀಪವು ನೊಂದಿಹೋಯಿತು (ಕಪಾಕುಂ. ೦೨೯). ನಂದೆವೊಯ್ = ನಂದುವಂತೆ ಹೊಡೆ ; ನಾಶವಾಗುವಂತೆ ಮಾಡು : ಧೂರ್ಜಟಿಯ ನೊಸಲ ಕಣ್ಣಿಂ ಸ್ಮರು ನಂದೆವೊಯ್ದಂ (ಮಲ್ಲಿಪು. ೨-೫೭) ; ಉರಿಲಿಂಗಮನಾಲಿಂಗಿಸಲುಂ ಯುಗಾಂತಹುತವಹನಂ ನಂದೆ ವೊಯ್ಕಲುಂ (ಜಗವಿ. ೭-೮೪ವ) ; ತಳ್ತು ಚುಂಬನಮನೊಡರ್ಚಿ ತತ್ತದುಚಿತ ಕ್ರಿಯೆಯಿಂದಮ ನಂದೆವೊಯ್ದು (ಚಂದ್ರಪು. ೮-೯೪) ; ಮನಸ್ತಾಪಮಂ ಧೃತಿ ಸಾಂದ್ರಚಂದ್ರಿಕೆಯಿಂ ನಂದೆವೊಯ್ದು (ರಾಜಶೇ. ೧೩-೯೭ವ).

[ ದೇ.೮ ತಮಿ. ನನ್ನು, ನತು, ನುತು, ನೊನ್ನು, ನೊತು ]

ನಂದುರಿ (ನಾ). ಒಂದು ಬಗೆಯ ಮರ : ಕೆಂಪುಗಂಧಗಿರಿ, ನಂದಿವೃಕ್ಷ. ಟೂನಮರ, ನೂಗೆ, ನಂದುರಿ, ಬೆಳಂದಿ, ಗಂಧಗರಿಗೆ (ಮೃಶಿಗಿ. ೦೯-೩೪೮).

[ ? ]

ನಂದುವ (ನಾ). ಒಂದು ವಂಶದ ಹೆಸರು (?) : ಜಕ್ಕಿಯಬ್ಬೆ ನಾಟಾಗ್ಗ್ ವೃಣ್ದಗೆಯ್ಯುತ್ತಿರೆ ನಣ್ದುವರ ಕಲಿಗಂ ಪೆರ್ಗ್ಗಡೆತನಂ ಗೆಯ್ಯೆ (ಎಕ. VII, ಶಿಕಾರಿ. ೨೦೯-೦೨; 918). [ ? ]

ನಂದೆ (ನಾ). ೧. ಶಕ್ತಿದೇವತೆ ; ದುರ್ಗೆ ; ಪಾರ್ವತಿ. ೨. [ಜ್ಯೋತಿ] ಎರಡೂ ಪಕ್ಷಗಳ ಪಾಡ್ಯಮಿ, ಷಷ್ಠಿ ಮತ್ತು ಏಕಾದಶಿ ತಿಥಿಗಳು : ಅಭಿಧಾನಕ್ರಮದಿಂ ನಂದೆ ಭದ್ರೆ ಜಯೆ ರಿಕ್ತೆ ಪೂರ್ಣೆಯೆನಿತುಂ ಪ್ರತಿಪತ್ಪ್ರ ಭೃತಿದಿನಂಗಳುಂ (ಲೋಕೋಪ. ೧-೨) ; ನಂದಾ ಭದ್ರಾ ಜಯಾ ರಿಕ್ತಾ ಪೂರ್ಣೆಯೆಂದು ಪಾಡಿವಾದಿಯಾಗಿ ತಿಥಿಪಂಚಕಂಗಳಕ್ಕುಂ (ಜಸಾರ. ೬೭) ; ನಂದೆಯುನು ಭದ್ರೆಯುನು ಒಂದಾಗಿ ಅರ್ಥಿಸಲು ಅಂದಿನ ತಿಥಿಗೆ ಸವನಾಗೆ ಗ್ರಹಣ ತಾ ಮುಂದೆ ಬಂದಿಬ್ಬ (ಸರ್ವಜ್ಞ. ೧೫೭೦) ; ೩೦ ತಿಥಿಗಳಲ್ಲಿ ನಂದಾ, ಭದ್ರಾ, ಜಯಾ, ರಿಕ್ತಾ, ಪೂರ್ಣಾಯೆಂಬ ಸಂಕೇತವು ಪಾಡ್ಯ ಮೊದಲು ಪಂಚಮಿವರೆಗೂ ಆಗುವುವು. ಹೀಗೆ . . . ಅಮಾವಾಸ್ಯೆ ಪರ್ಯಂತ ೬ ಸಲ ಸುತ್ತಿಬರುವವು (ಜಸಾರ. ೩೯೦ ಪದ್ಯಾರ್ಥ). [ ಸಂ. ನಂದಾ ]

ನಂದ್ಯಾಮ್ಲ (ನಾ). ಒಂದು ಬಗೆಯ ಸಸ್ಯ : "ಕೋಶಾಮ್ರಃ-ನಂದ್ಯಾಮ್ಲ" (ಒಷಧಿ. ೪೧). [ ? ]

ನಂದ್ಯಾಲ 'ನಂದಿಯಾಲ' ನೋ.

ನಂದ್ಯಾವರ್ತ (ನಾ.) ೧. = ನಂದಿಬಟ್ಟಲು : "ಗಂಧರಾಜಃ – ಶ್ರೀಗಂಧ. ನಂದ್ಯಾವರ್ತ. ಜವಾದಿ" (ಒಷಧಿ. ೪೬) ; ಕುಂದ ಮುಚುಕುಂದ ಮಂದಾ ರೇಂದೀವರನಂದ್ಯಾವರ್ತ . . . ಮಲ್ಲಿಕಾದ್ಯನೇಕ ಸುರಭಿಕುಸುಮಂಗಳಂ ಸಜ್ಜುಕಮಪ್ಪವಂ ಪುಟ್ಟಿಯೊಳ್ ತೀವಿಕೊಂಡು (ಪಂಚತಂ. ೧೧೭-೩) ; ನಂದ್ಯಾವರ್ತದ ಪೂವಂ ತಂದುಱೆ ನೋಣಪೂಱೆದಡೆಗೆ ಪೂಸುಗೆ (ಖಮಠ. ೧೩-೧೧೬) ; ನಂದ್ಯಾವರ್ತದ ಹೂವನ್ನು ಧರಿಸಿದರೆ – ನೇತ್ರದಲ್ಲಿ ಹುಟ್ಟಿದ ಹೂವು, ಕಾಯಿ ಮುಂತಾದ ರೋಗಗಳಂ ಪರಿಹರಿಸಿ . . . ವಿರಹವೇದನೆ ಯನ್ನು ಪರಿಹರಿಸುವುದು (ಸಕವ್ಯ. ೪೪); ಪಾರಿಜಾತ, ನಂದ್ಯಾವರ್ತ . . . ಮೊದಲಾದ ಹೂಗಳೂ ಅಲ್ಲಿ ಬೇಕಾದಷ್ಟು ಇದ್ದವು (ಕರ್ಣಾಜ. ೧೫೫). ೨. ಪಶ್ಚಿಮದ ಬಾಗಿಲಿಲ್ಲದ ಒಂದು ಬಗೆಯ (ವರ್ತುಲಾಕಾರದ) ವಿಶಿಷ್ಟಾಕೃತಿಯ ಕಟ್ಟಡ : ದಿಕ್ಸ್ವಸ್ತಿಕವೆಂಬ ಸಭಾಭೂಮಿಯುಂ ನಂದ್ಯಾವರ್ತವೆಂಬ ಶಿಬಿರನಿವೇಶಮುಂ (ಆದಿಪು. ೧೫-೩ವ) ; ಸರ್ವತೋ ಭದ್ರಾಹ್ವಯವಿಶೇಷದಿಂ ನೋಂಪಿಯ ವಿಶೇಷಮಂ ನಂದ್ಯಾವರ್ತ ರಮಣೀಯತೆಯಿಂ ನಂದನವನಾಂತರಾಳಮಂ ಸ್ವಸ್ತಿಕವಿಸ್ತಾರದಿಂ ವಿವಾಹಮಾಮನನುಕರಿಸಿ ಶೋಭಿಸುವುದು (ಸುಕುಮಾ. ೧೦-೫೦ವ) ; ಮಣಿ ಸತ್ತಿಗೆಯ ಮೊಗಮಂಟಪದ ಬಣ್ಣವಟ್ಟಿಗೆಯ ಅಮಳಗುಳಿಯ ನಂದ್ಯಾ ವರ್ತದ ತೋರಣದೋರಣದ ಲೋವೆಯ ಮದನಗೈಯ ಬಾಗಿಲ್ವಾಡದ ಸಿಂಗರದೊಂದು ದೇಗುಲಂ ಕಣ್ಗೆಡ್ಡವಾಗಿ ರಂಜಿಕುಂ (ರಾಮಾಶ್ವ. ೩೪-೨೫). ೩. ಒಂದು ಬಗೆಯ ದೊಡ್ಡ ವಿಮಾನು : "ನಂದ್ಯಾವರ್ತಃ–ನಂದಿವಟ್ಟಸು. ವಿಮಾನಿನ ಭೇದ" (ಒಷಧಿ. ೮೪). ೪. [ಅಶ್ವಶಾ] ಒಂದು ಬಗೆಯ ಚಿಹ್ನೆ,-ಗುರುತು : ಶ್ರೀವತ್ಸಂ ಕನ್ನಡಿ ನಂದ್ಯಾವರ್ತಂ ವರ್ಧಮಾನಕಂ ಸ್ವಸ್ತಿಕ ಮೆಂಬೀ ವಿವಿಧಲಾಂಛನಂಗಳನಾವಾಸಿದ ವಾಜಿಗಾಯು ತ್ರಿಂಶದ್ವರ್ಷಂ (ಅಶ್ವಶಾ. ೫-೩೬). ೫. ದೇಹದ ಮೇಲೆ ಇರುವ ಒಂದು ಗುರುತು (?) : ನಾಭಿರಾಜಾಂಗಸಂಗತಮಪ್ಪ ನಂದ್ಯಾವರ್ತದಂತೆ ಸೊಗಯಿಸುವ ನಂದ್ಯಾವರ್ತಂಗಳೊಳಂ (ಆದಿಪು. ೬-೧೦೬ ವ). P ಇದು ವಕ್ಷಸ್ಥಳ ದಲ್ಲಿರುವ ಶ್ರೀವತ್ಸಲಾಂಛನವಿರಬಹುದು : (ಚಾವುಂಪು. ೩೭೧ ನೋ).

[ ಸಂ. ]

ನಂದ್ಯಾವರ್ತವಿಮಾನ (ನಾ). [ಜೈನ] ಒಂದು ಸ್ವರ್ಗದ ಹೆಸರು: ವಾನರಾರ್ಯನುಂ ನಂದ್ಯಾವರ್ತವಿಮಾನದೊಳ್ ಸುರನಾರೀಮನೋಹರಂ ಮನೋಹರನೆಂಬನಿಮಿಷನಾದಂ (ಆದಿಪು. ೫-೭೦ ವ).

[ ನಂದ್ಯಾವರ್ತ + ವಿಮಾನ ]

ನಂಬರು (ನಾ). ೧. ಅಂಕೆ ; ಸಂಖ್ಯೆ : ನಿನ್ನದು ಎಷ್ಟನೆಯ ನಂಬರು ? (ರೂಢಿ). ೨. ಪರೀಕ್ಷೆ ಮುಂತಾದ ಮೌಲ್ಯಮಾಪನದಲ್ಲಿ ಕೊಡುವ ಗುಣಾಂಕ : ನೀವು ರಷ್ಯನ್ ಮತ್ತು ಲೆಖ್ಖದಲ್ಲಿ ಹೆಚ್ಚು ನಂಬರುಗಳನ್ನು ತೆಗೆದುಕೊಳ್ಳುವವರೆಗೆ ನಿಮ್ಮನ್ನು ಅದರಲ್ಲಿ ಸೇರಿಸಿಕೊಳ್ಳುವುದಿಲ್ಲ (ಬಾಲಮ. ೬೫) ; ಎಲ್ಲದರಲ್ಲೂ ಹೆಚ್ಚು ನಂಬರು ಗಳಿಸಿ ತರಗತಿಗೇ ಅವನು ಮೊದಲಿಗ ನಾಗಿದ್ದಾನೆ (ರೂಢಿ). ೩. ಸರಕಾರಿದಾಖಲೆಯಲ್ಲಿ ಒಂದು ಅಂಕೆ ಯನ್ನು ಪಡೆದಿರುವ ಜಮೀನು : ನೂರಿಪ್ಪತ್ತು ನಂಬರುಗಳು ಖಾಸಗಿ ಜಮೀನು ಎಂಬ ಆಧಾರ ಸಿಕ್ಕಿತು (ಗ್ರಾಮಾಯ. ೪) ; ದೂರದಿಂದಲೇ ಒಂದು ನಿಟ್ಟಿನಿಂದ ಮತ್ತೊಂದು ನಿಟ್ಟಿಗೆ ಕೈಮಾಡಿ ಅವೆಲ್ಲ ತನ್ನ ನಂಬರು ಗಳೇ ಎಂದು ಇದ್ದು ಬಿದ್ದ ಹೊಲಗಳನ್ನು ತೋರಿಸಿದಾಗ ರಾಧಕ್ಕನ ತಂದೆ ಹಿರಿ ಹಿರಿಹಿಗ್ಗಿದರು (ಗಂಗಾಸಾ. ೪೫) ; ಖಾತೆ ಇಲ್ಲ, ಎಕರೆ ಇಲ್ಲ, ನಂಬರಿಲ್ಲ, ಇದೇನ್ಬುದ್ಧಿ ನೀವೆ ಹಿಂಗ್ಯಾಡ್ತೀರಿ (ಹುಟ್ಟಿಹ. ೧೩೮).

ನಂಬರ ಮನೆ = (ಉಕ) ಊಟದ ಮನೆ : ಖಾನಾವಳಿ : ರಾಮಣ್ಣನಿಗೆ ಎರಡಾಣೆ ಕೊಟ್ಟು ನೇರವಾಗಿ ನಂಬರ ಮನೆಯಲ್ಲಿ ಊಟಮಾಡಿ ಬಂದ (ಜೀದಾನ. ೩೫) ; ಊಟ ಮಾಡುವ ನಂಬರ ಮನೆಗೆ ಹೋದರೆ ತನ್ನ ಹೆಸರು

"ಅ–ಬ" ಎಂದು ಹೇಳುತ್ತಾನೆ! (ಮೋಹಿನೀ. ೧೩೭) ; ನಂಬರ ಮನೀಕಿಂತಾ ಸೋವಿ ಮಾಡಿ ತೋರಿಸತೀನಿ (ವ್ಯನಿ. ೩೮೭).

[ ←ಇಂ. Number ]

**ನಂಬಿ** (ನಾ). ೧. ಭಕ್ತ. ೨. ದೇವಾಲಯಂದ ಅಧಿಕಾರಿ,–ಸ್ಥಾನಿಕ : ಗೋಪಾಲದೇವರ ಸ್ಥಾನೀಕ ನಂಬಿಯರು ಗಡಬಡೆಯರು ಯಾ ಧರ್ಮ್ಮಕೆ ಸಹಾಯಿ ಖಿಡೆಯದಲ್ಲಪ್ಪನವರು (ಎಕ. XI, ಚಿತ್ರದು. ೬–೩೭; 1338) ; ಆ ದೇವರ ನಂಬಿಗಳು ತೆಱುವ ವಿಭೂತಿ (ಎಕ. X (S), ಮಾಲೂರು. ೯೪–೧೦; 1406) ; ನಿರೂಪದಿಂದ ನಂಬಿಗಳು ಅಪಚಿ ಅನತಪಗಳಿಗೆ (ಸೌಇಎ. ೧೯೩೪, ಪುಂಗನೂರು. ೧೫೬–೪; 1419) ; ಗೋವಿಂದರಾಜದೇವರ ನೈವೇದ್ಯ ಪ್ರಸಾದ ವನೂ ತಿರುಪತಿಯ ವರಿಗೆ ಕಾಣೆಪರಾಗಿ ನಾಲ್ಕು ಹರಿವಾಣಉೂ ನಂಬಿಗಳಿಗೆ ಒಂದು ಹರಿವಾಣವೂ . . . ಕೊಟ್ಟು (ಸೌಇಇ. IX–II, ೪೬೩–೨; 1467) ; ಪುರೋಹಿತವರ್ಗ (Priests) (ಬ್ರಾಹ್ಮಣರೂ, ಇತರರೂ) ಆಚಾರ್ಯ . . . ನಂಬಿ, ನಂಬಿದಿ, ಪಾಡಿಯ (ತುಳುನಾ. ೧೭೧). ೨. ತಮಿಳುನಾಡಿನ ಅರುವತ್ತುಮೂವರು ಪುರಾತನರಲ್ಲಿ ಒಬ್ಬ : ನಂಬಿಯಣ್ಣ : ನಂಬಿ ಕರೆದೊಡೋ ಎಂದೆ ತಲುಗ ಜೊಮ್ಮಯ್ಯಂಗೆ ಒಲಿದೆ ದೇವಾ (ಬಸವ. ೫೦೯) ; ಹರ ತಾಂ ಕುಂಟಣಿಯಾಗೆ ನಂಬಿಯೊರೆದಂ (ಸೋಮೇಶ. ೭೪) ; ಪುಷ್ಪದತ್ತಾಖ್ಯನನಿಳೆಯಱಿಯಲ್ ನಂಬಿಯೆಂದಿಟ್ಟು ಮತ್ತಂ ಹರ ನೀನೊಲ್ದಾ ಕಥಾಸಾರವನವಧರಿಸೈ ಶ್ರೀವಿರೂಪಾಕ್ಷಲಿಂಗಾ (ನಂಬಿರ. ೧ ಸೂಚನೆ) ; ಕುಂಬಾರ ಗುಂಡಯ್ಯ ನಂಬಿ ತ್ರಿಯಂಬಕಂ ನಿಂಬವ್ವೆ ನಿಂಬಂ ಕಂಬಿಯಲಿ ಭೈರಯ್ಯನುದ್ಭಟದೇವರ್ (ಸಾನಂಚ. ೯–೮೦) ; ಹಲವು ಸೂಳೋರಂತೆ ನಂಬಿಯ ಬಳಿಗೆಲಸವಂ ಮಾಡಲಾಱದೆ ಬಳಲಿಕೆಯನಾಱಿಸಿ ಕೊಳಲು ಬೇದಡವಿಯೊಳಗಿರ್ದ್ಯ (ಬಸಪು. ೦೮–೧೨).

[ ದೇ.॥ ತಮಿ. ನಮ್ಪಿ; ಮಲ. ನಮ್ಪಿ; ತುಳು. ಕೊಡ. ತೆಲು. ನಂಬಿ ]

**ನಂಬಿಕಸ್ತ** (ನಾ). ನಂಬಿಕೆಗೆ ಅರ್ಹನಾದವನು ; ವಿಶ್ವಾಸಕ್ಕೆ ಯೋಗ್ಯನಾದವನು : ಅವನೊಬ್ಬ ನಂಬೀಸ್ತನಾದ ಸೇವಕ (ರೂಢಿ).

[ < ನಂಬಿಕೆ + –ಸ್ತ ]

**ನಂಬಿಕಸ್ತಿಕೆ** (ನಾ). = ನಂಬಿಕೆ : ಅವನ ನಂಬಿಕಸ್ತಿಕೆ ಯಾರಾದರೂ ಮೆಚ್ಚುವಂಥದು (ರೂಢಿ). [ ನಂಬಿಕಸ್ತ + –ಇಕೆ ]

**ನಂಬಿಕೆ** (ನಾ). ಶ್ರದ್ಧೆ ; ವಿಶ್ವಾಸ : ಬೆಳ್ಳಿ, ಬಂಗಾರ ಕೈಯಲ್ಲಿದ್ದರೆ . . . ಬೇಕಾದ ವಸ್ತುಗಳನ್ನು ಕೊಳ್ಳುವ ಶಕ್ತಿ ಬರುವುದೆಂದು ಜನರಿಗೆ ದೃಢವಾದ ನಂಬಿಕೆ (ಹಣಶ್ರ. ೧೬) : ಇಂದು ನನ್ನ ನಂಬಿಕೆ ಸಡಿಲವಾದಂತೆ ಭಾಸವಾಗುತ್ತಿದೆ (ಬಾಣಳ. ೩೮೦).

**ನಂಬಿಕೆ ಮೂಡಿಸು**=ವಿಶ್ವಾಸವನ್ನು ಹುಟ್ಟಿಸು ; ಭರವಸೆಯನ್ನುಂಟುಮಾಡು ವಿಷಯವನ್ನು ಒಳಹೊಕ್ಕು ನೋಡಿದರೆ ತಾನವಳಿಗೆ ಕಟ್ಟುಗೊಂಡಿದ್ದುದಾಗಿಯೂ ಅಲ್ಲಿ ನಂಬಿಕೆ ಮೂಡಿಸಿದ್ದುದಾಗಿಯೂ ಅವನು ತಿಳಿದುಕೊಂಡಿದ್ದನು (ಪುನರು.೧೩೮). **ನಂಬಿಕೆ ಹುಟ್ಟಿಸು**=ವಿಶ್ವಾಸವುಂಟಾಗುವಂತೆ ಮಾಡು ; ನಂಬಿಸು : ನನ್ನ ಮಾತಿನಲ್ಲಿ ಅವರಿಗೆ ನಂಬಿಕೆ ಹುಟ್ಟಿಸಲು ಬಹಳ ಶ್ರಮಪಡಬೇಕಾಯಿತು (ರೂಢಿ). **ನಂಬಿಕೆ ಹುಟ್ಟು** = ವಿಶ್ವಾಸವುಂಟಾಗು : ನಂಬು : ಅವರ ಮಾತಿನಲ್ಲಿ ನನಗೆ ಎಳ್ಳಷ್ಟೂ ನಂಬಿಕೆ ಹುಟ್ಟಲಿಲ್ಲ (ರೂಢಿ).

[ ನಂಬು + – ಇಕೆ./ತಮಿ. ನಮ್ಪಿಕ್ಕೈ, ನಮ್ಪಕ; ಮಲ. ನಮ್ಪಿಕ್ಕ; ತುಳು.ನಂಬಿಗೆ ; ತೆಲು. ನಮ್ಮಕ, ನಮ್ಮಿಕೆ, ನಮ್ಮಿಗ ]

**ನಂಬಿಕೆದ್ರೋಹ** (ನಾ). ವಿಶ್ವಾಸವುಳ್ಳವರಿಗೆ ಕೆಡುಕುಮಾಡುವಿಕೆ ; ವಿಶ್ವಾಸಘಾತುಕತನ "ನಂಬಿಕೆದ್ರೋಹ, ವಿಶ್ವಾಸಘಾತುಕತೆ" (Breach of trust. ಶಾರಿನಿ. ೧೦) ; ಪಾಲುದಾರ ನಂಬಿಕೆದ್ರೋಹ ಮಾಡಿದ್ದರಿಂದ ಕೋರ್ಟಿಗೆ ಹೋಗಬೇಕಾಯಿತು (ರೂಢಿ). [ ನಂಬಿಕೆ + ದ್ರೋಹ ]

**ನಂಬಿಕೆದ್ರೋಹಿ** (ನಾ). ನಂಬಿಸಿ ಮೋಸಮಾಡುವವನು ; ವಿಶ್ವಾಸಘಾತುಕ. [ ನಂಬಿಕೆ + ದ್ರೋಹಿ ]

**ನಂಬಿಗ** (ನಾ). ನಂಬಲು ಯೋಗ್ಯನಾದವನು ; ವಿಶ್ವಾಸಯೋಗ್ಯ : ಇದೆ ಸಮಯವಣ್ಣ ಇದೆ ಸಮಯ ತಮ್ಮ ನಮ್ ನಿಮ್ಮ ಆತ್ಮಗಳಿಗೆ. ಅಂಬಿಗನು ಬಂದ ನಂಬಿಗನು ಬಂದ ಬಂದದ ದಿವ್ಯಗಳಿಗೆ (ಹೃದಸ. ೧–೮).

[ ನಂಬಿಗೆ (<ನಂಬುಗೆ) + – ಅ₇ ]

**ನಂಬಿಗಸ್ತ** (ನಾ). = ನಂಬಿಕಸ್ತ : (ಕಿ). [ <ನಂಬುಗೆ + –ಸ್ತ ]

**ನಂಬಿಗಸ್ತಿಕೆ** (ನಾ). = ನಂಬಿಕಸ್ತಿಕೆ : (ಕಿ). [ ನಂಬಿಗಸ್ತ + – ಇಕೆ ]

**ನಂಬಿಗೆ** 'ನಂಬುಗೆ' ನೋ.

**ನಂಬಿರ** (ನಾ). (?) : ಇವೆಲ್ಲವನು ದೇವರ ಅಮೃತಪಡಿ ನಂದಾದೀಪ ಪಡಿದೀಪ ಗಂಧ ವಸ್ತ್ರವಯಿಭೋಗ ಪರ್ವತಿಥಿ ನಂಬಿರ ಹೂವಡಿಗ ಪೊಗಬುರಜ ಮತ್ತಾವ ವಿನಿಯೋಗವನು ನಡಸಿ ಬಹರುಯೆಂದು ಸಮರ್ಪಿಸಿದ್ದು (ಎಕ. III, ತಿರುಮ. ೩೭–೧೬; 1513).

[ ☞ ಇದು 'ನಂಬಿ' ಎಂಬುದರ ಅಪಲಿಖಿತವಿರಬಹುದು ]

**ನಂಬಿಸು**(ಕ್ರಿ). ೧. (ಸ್ನೇಹ, ಆಪ್ತತೆ, ಧರ್ಮ ಮುಂತಾದುವುಗಳ ವಿಷಯದಲ್ಲಿ) ನಂಬಿಕೆಯನ್ನುಂಟುಮಾಡು ; ವಿಶ್ವಾಸವನ್ನುಂಟುಮಾಡು ; ಭರವಸೆ ಮೂಡಿಸು ; ಶ್ರದ್ಧೆಯನ್ನುಂಟುಮಾಡು : "ನಂಬಿಸು – ಅನುಮೋದನೇ" (ಶಮುಧಾ) ; ಈ ರೂಪಂ ತೋಱಿ ನಂಬಿಸಿ ನಿಮ್ಮ ಪ್ರಾಣಕ್ಕಪಾಯಮಂ ಮಾಡಲ್ ಬಗೆದು (ವಡ್ಡಾರಾ. ೧೭೬–೦೯) ; ನಂಬಿದ ಬರವುಮಂ ನಂಬದ ಬರವುಮನಱಿದು . . . ನಂಬದುದಂ ನಂಬಿಸಲುಂ ನಂಬಿದುದಂ ಬಿಡಿಸಲುಂ .... ನಿಮ್ಮಡಿಯ ಕೆಲದೊಳಾನೆ ಬಲ್ಲೆಂ (ಪಂಪಭಾ. ೫–೪೩ ವ) ; ತನಗಲ್ಲದೊಡಲ್ಗೊಡಮೆಗೆ ಮನವಿಟ್ಟಪವರ್ಗಮಾರ್ಗಮಂ ಪೊರ್ದದೆ ತನ್ನನೆ ತಾನೆ ನಂಬಿಸುವೊಡಾತ್ಮನಂತು ಮೇಟಾತ್ಮವಂಚಕರ್ ಪೆಱರೊಳರೇ (ಅಜಪು. ೩–೫೫) ; ಮಕ್ಕಳ ಕೈಯ ಮಾಣಿಕವಂ ಗುಗ್ಗುರಿಯಿಂ ತೋಱಿ ನಂಬಿಸಿ ಕೊಳ್ವಂತೆ (ಧರ್ಮಾಮೃ. ೧೦–೮೩) ; ಎಂತಕ್ಕೆ ನಾ ನಿಮ್ಮ ದೇವರೆಂದಱಿದೆನು ಇಂತಾಗಿ ನೀವೆನ್ನನಾರೆಂದಱಿಯರಿ ನಂಬಲಱಿಯೆ ನಂಬಿಸಲಱಿಯೆ (ಬಸವ. ೩೬೮) ; ಹಿಂದೆ ನಂಬಿಸಿ ಭೀಷ್ಮ ಗುರುವನು ಕೊಂದ ಗೆಲುವಿನಲುಬ್ಬಬೇಡ (ಕುವ್ಯಾಕ. ೩–೫). ೨. ಹಾಲುಣಿಸು; ಹಾಲುಕೊಡು: ಕಂಬನಿಯನೊಗುತಾ ಮಱಿಯ ಮಯ್ಯಂಬನದು ನಕ್ಕುತ್ತ ಮೋಹದಿ ನಂಬಿಸುತ್ತಸುವುಳಿವುಳಿದುದಯ್ಯೋ ವಿಮೋಹ ಕಷ್ಟವಲ (ಸಾಳ್ವಭಾ. ೫–೩೮).

[ ನಂಬು + – ಇಸು₃. / ತೆಲು. ನಮ್ಮಿಂಚು ]

**ನಂಬಿಸುಹ** (ನಾ). ನಂಬಿಸುವಿಕೆ ; ಭರವಸೆಯನ್ನುಂಟುಮಾಡುವಿಕೆ : "ಸ್ವಾಂತಮೊನೆ ಸಾಮವೆನೆ ನಂಬಿಸುಹಮುಕಂ" (ಮಂಗರಾ. ೧೩೫–೩೭).

[ ನಂಬಿಸು + – ಹ₂ ]

**ನಂಬು** (ಕ್ರಿ). ೧. (ಸ್ನೇಹ. ಆಪ್ತತೆ. ಧರ್ಮ ಮುಂತಾದುವುಗಳ ವಿಷಯದಲ್ಲಿ) ನಂಬಿಕೆಯಿಡು ; ವಿಶ್ವಾಸವಿಡು ; ಭರವಸೆಯನ್ನು ಹೊಂದು : "ನಂಬು–ವಿಶ್ವಾಸೇ" (ಶಮುಧಾ) ; ಆ ಲಘುಗಳಲ್ಲದ ತಾಣದೊಳಂ ಲಘುಪಾಗಮಕ್ರಮದೆ ನಂಬುಗೆ ಲಾಘವದೋಷಮಂ (ಕವಿರಾ. ೧–೧೩೭) ; ಧರ್ಮಮಂ ಕೇಳ್ದು ಮೆಚ್ಚಿ ನಂಬಿ ಶ್ರಾವಕಬ್ರತಂಗಳಂ ಕೈಕೊಂಡು ಶ್ರಾವಕನಾಗಿ (ವಡ್ಡಾರಾ. ೧೭೬–೯) ; ನಂಬು ನಂಬೆನ್ನ ಕಣ್ಣಂ ಕಿಡಿಪುಂ ಕೆಂಡಂಗಳಂ ಸೂಸಿದಪುವಹಿತರಂ ನೋಡಿ ಪಂಕೇಜವಕ್ತ್ರೇ (ಪಂಪಭಾ. ೬–೧೩) ; ತುಱುಗಾಳ್ಗಳನಿರ್ವರುಮಂ ಕಱಿಪಿ ಸುಯೋಧನನ ಬಾಱ್ವುದಂ ನಂಬಿದಿರೆ (ಗದಾಯು. ೩–೭೮) ; ಅಂಬುಪಸೆಱಿವಾಗಳ್ ಪ್ರತಿಬಿಂಬಿಸೆ ಕೆಯ್ಗನ್ನಡಿರೊಳವಳ ವದನಂ ಪಥಿಕಂ ನಂಬಿ ನಲಿದೀಂಟಿದಂ (೧ರಿಕ. ೩–೩೭) ; ಅವನಿಪಾಲರು ಕಂಗಳಿಂದವೆ ಕಿವಿಗೆ ಕರಪೊಳ್ಳಿದರು ಕಂಡುದನವರು ನಂಬರು ಕೊಂಡೆಯರ ನುಡಿಗೇಳ್ದು ನಂಬುವರು (ಕುಮಾರ‍್ದ್ರೋ. ೧೮–೩) ; ತಾ ಕಳ್ಳ ಪರರನ್ನು

ನಂಬ (ಗಾದೆ). ೨. ನೆಮ್ಮು; ಆಧರಿಸು; ಆಶ್ರಯಿಸು: ನಯಮಂ ನಂಬುವೊಡನ್ನ ಪೇಟ್ವ ಸತಿಯುಂ ಕೈಕೊಂಡಂ (ಪಂಪಭಾ. ೦-೭೭); ಅಧರ್ಮ ಯುದ್ಧದೆ ನರಂ ಕೊಲ್ವಲ್ಲಿ ಕಂಡುಂತುಪೇಕ್ಷಿಸಿ ನೀವುಂ ನಡೆ ನೋಡು ತಿರ್ದಿರೆನೆ ಮತ್ತಿನ್ನಾರನಾಂ ನಂಬುವೆಂ (ಪಂಪಭಾ. ೧೧-೮೩); ಜ್ಞಾನಕ್ಕೆ ಲೇಪವಾದವನಿರವು ತುಪ್ಪವ ನಂಬಿದ ಬತ್ತಿಯಂತೆ ಕಾದ ಲೋಹದ ಜಲ ದಿರವಿನಂತೆ (ಪ್ರೋಲವಚ. ೪-೧೧); ನಂಬದಿರು ಈ ದೇಹ ನಿತ್ಯವಲ್ಲ ಅಂಬುಜಾಕ್ಷನ ಭಜಿಸಿ ಸುಖಿಯಾಗು ಮನವೆ (ಪುರಂದ. ೦-೨೭ ಪಲ್ಲವಿ).

ನಂಬೆ ನುಡಿ = ನಂಬಿಸು; ವಿಶ್ವಾಸವನ್ನುಂಟುಮಾಡು: ಆನಲ್ಲಿಗೆ ವರ್ಪೆನೆಂ[ದಾ ಪಾಣ್ಬ]ನಂ ನಂಬೆ ನುಡಿದು (ಪಂಪಭಾ. ೮-೬೨). ನಂಬೆ ಪಡು = ನಂಬಲ್ಪಡು: ಕೊಲ್ಲದ ಪುರುಷಂ ಎಲ್ಲರಿಂ ನಂಬೆ ಪಡುವನುಂ ಪೂಜ್ಯನುಂ ಅಕ್ಕುಂ (ಶಬ್ದಪ್ರ. ೨೭೧).

[ ದೇ.೫ ತಮಿ. ನಮ್ಬು; ಮಲ. ನಮ್ಬು; ತುಳು. ನಂಬು, ನಮ್ಬು; ಕೊಡ. ನಂಬ್; ತೆಲು. ನಮ್ಮು ]

ನಂಬುಗೆ, ನಂಬಿಗೆ (ನಾ). ೧. ನಂಬಿಕೆ; ಶ್ರದ್ಧೆ; ವಿಶ್ವಾಸ: "ವಿಸ್ರಂಭಃ, ವಿಶ್ವಾಸಃ – ಈ ೨ ನಂಬುಗೆ" (ಚಂದ್ರಮು. ೧೨೭-೮೪); ಕನಸುಗಂಡುದಂ ತವಗೆ ನೇಸರ್ಮೂಡೆ ಪೇಟ್ದೊಡೆ ನಂಬುಗೆಯಾಗಿ ಉಬ್ಬೆಗಂಬಟ್ಟು (ವಡ್ಡಾರಾ. ೧೦೦-೦೯); ಆರ್ ಕೆಲಂಬರರಸನನೋಲೈಸುವರ್ ಅವರೈಶ್ವರ್ಯಂ ಪರಾಧೀನವಾಗಿಹುದು . . . ಜೀವಿಸುಹ್ವಂ ನಂಬುಗೆಯಿಲ್ಲದುದು (ಪಂಚತಂ. ೦೩೩-೪); ತಳ್ಪಿಲ್ಲದೆ ಒರಿದಾದರದಿಂ ಕೊಲ್ಲದ ಧರ್ಮಮನೆ ಪಿಡಿಗೆ ನಂಬುಗೆಯಿಂದಂ (ಧರ್ಮಾಮೃ. ೧-೦೯೬); ಶಂಭುಪದಭಕ್ತಿ ನಂಬುಗೆಯ ಹಂಬಲು ಬೇಕು (ದೀಕ್ಷಾಬೋ. ೮೯-೦೦); ಗುರುಗಳಲಿ ನಂಬುಗೆ ನಿರರ್ಥಕವಾಯ್ತೆನುತ ಕುದುರಾಯ ಬಿಸುಸುಯ್ದು (ಕುಮಾರವ್ಯಾ. ೪-೫). ೨. ಭಾಷೆ; ಮಾತುಕೊಡುವಿಕೆ; ಆಣೆ. 'ನಂಬುಗೆಗೊಳ್ಳು' ನೋ. ನಂಬಿಗೆ: ೧. ಜಂಗಮದೊಳಗೆ ಲಿಂಗಯ್ಯನಿದ್ದಾನೆಂದು ನಂಬಿಗೆಯುಳ್ಳರೆ ತೋರುವ ಕೂಡಲಸಂಗಯ್ಯ (ಬಸವ. ೧೮೬); ಭಾಷೆಗೆಡುಕನಿಗೆ ನಂಬಿಗೆ [ಪಾಠಾಂ. ಟುಗೆ] ಯೇತಕೆ (ಪುರಂದ. ೨-೬೪-೫); ನಂಬಿಗಿಂ ಹುಳಿಯಿಲ್ಲ ತುಂಬೆಗಿಂ ಕಿರಿದಿಲ್ಲ ನಂಬಿಗೆಯಿಂದಧಿಕ ಗುಣವಿಲ್ಲ (ಸರ್ವಜ್ಞ. ೨೩೫); ನನ್ನ ಬೆಂಬಲದ ನಂಬಿಗೆಯ ಮಂದಿರ ನೀನು (ಉಯ್ಯಾಲೆ. ೯೦-೦೭); ಗೊಂಬೆಗೆ ಕೈಮುಗಿದರೂ ನಂಬಿಗೆ ಇರಬೇಕು (ಗಾದೆ). [ ನಂಬು + – ಗೆ]

ನಂಬುಗೆಗೆಡು (ಕ್ರಿ). ವಿಶ್ವಾಸವನ್ನು ಕಳೆದುಕೊಳ್ಳು: ಭರವಸೆಯನ್ನು ಕಳೆದುಕೊಳ್ಳು: ತಂಬುಲಿಗರ್ ನಂಬುಗೆಗೆಟ್ಟವರಂತೆ ಪೆಱಸಾರೆ(ಧರ್ಮಾಮೃ. ೨-೬೯). [ ನಂಬುಗೆ + ಕೆಡು$_1$ ]

ನಂಬುಗೆಗೆಯ್ (ಕ್ರಿ). ನಂಬು; ವಿಶ್ವಾಸವಿಡು: ಬಗೆ ನಿಲುಕದತುಳ ಕೈವಲ್ಯಪರಿಪ್ರಾಪ್ತರಜತನಗವೃಷಭವಾಯ್ತೊ ಹೇಳೆಂಬ ಸಂಶಯಕೆ ನಂಬುಗೆಗೆಯ್ದು ಪುಂಗವನ ನುತದೇವಪುಂಗವಂ ನಲಿದೇಱೆ ಕಣ್ಗೆಸೆದನು (ಸೋಮನಾ. ೪-೮೦). [ ನಂಬುಗೆ + ಕೆಯ್$_1$ ]

ನಂಬುಗೇಡು (ನಾ). ನಂಬಿದವರಿಗೆ ಮೋಸಮಾಡುವಿಕೆ; ವಿಶ್ವಾಸ ದ್ರೋಹ: ಈ ಉಪ್ಪಿಗೆ ನಂಬುಗೇಡನ್ನು ಅಹಿತವನ್ನು ಮನಸ್ಸಿನಲ್ಲಿಯೇ ನಡೆಯಿಸಿದಿರಾದರೂ, ನಿಮ್ಮ ಗತಿಯೇನು (ಚಟ್ಟಿಅ. ೫೫-೧).

[ ನಂಬುಗೆ + ಕೇಡು ]

ನಂಬುಗೇಳು (ಕ್ರಿ). ನಂಬಿಕೆಯ ಮಾತನ್ನು ಒಪ್ಪು: ವಿಶ್ವಾಸವಿಡು; ಭರವಸೆಯಿಡು: ಹೇಳದೀ ಕುಱುಹುಗಳು ತಪ್ಪವು ಕೇಳದೈ ಹನುಮಂತ ನಂಬುಗೇಳದಿದೆ ಮನವೇನಮಾಡುವೆನೆಂದಳಾ ಸೀತೆ (ತೊರರಾ. ೫-೩-೮೯).

[ ನಂಬುಗೆ + ಕೇಳು (<ಕೇಳ್) ]

ನಂಬುಗೊಡು (ಕ್ರಿ). ನಂಬಿಕೆಯನ್ನುಂಟುಮಾಡು; ಭರವಸೆಯನ್ನು ಕೊಡು; ವಿಶ್ವಾಸವನ್ನುಂಟುಮಾಡು: ನುಡಿದೊಡವೆಯಂ ಕೊಡುವೆನೆಂದು ನುಡಿದಂದದಿಂ ನಡೆವೆನೆಂದೊಬ್ಬರೊಬ್ಬರಿಗೆ ನಂಬುಗೆಗೊಟ್ಟು [ಪಾಠಾಂ. ಯಿತ್ತು] (ಹರಿಶ್ಚ. ೧೧-೨೬); ಸುದತಿ ತಪ್ಪದುಯೆಂದು ನಂಬುಗೆಗೊಡಲಾ ವಿಧುಮುಖಿ ನಲಿದಿರುತಿರ್ದಳ್ (ಜೀವಂಸಾಂ. ೧೬-೫೨); ಇವನ ಪ್ರಾಣಗಳಿಗೆ ತಪ್ಪದೆನಾದರೆ ಶಿವನ ಪಾದಗಳಾಣೆಯೆನುತೆ ಧವಳಸರೋಜಾಕ್ಷಿಗೆ ನಂಬುಗೆಗೊಟ್ಟು ಕುವರನನೊಡಗೊಂಡು ಬಂದ (ಮೋಹತ. ೩೫-೫೩); ಶರಣು ತೊರ್ಕರಿಗೆ ನಂಬುಗೆಗೊಟ್ಟು ಮುಂದಕ್ಕೆ ತೆರಳಿದನಾ ಖಾನನಾಗ (ಕಂಠವಿ. ೧೧-೫೬). [ ನಂಬುಗೆ + ಕೊಡು$_1$ ]

ನಂಬುಗೆಗೊಳ್, ನಂಬುಗೆಗೊಳ್ಳು (ಕ್ರಿ). ೧. ನಂಬಿಕೆಯನ್ನು ಹೊಂದು; ವಿಶ್ವಾಸವನ್ನು ಪಡೆ; ಭರವಸೆಯನ್ನು ಹೊಂದು: ಬೇಪಡೆವೊಡನೆ ದಾ ಕೋರ್ವೆವೆನೆ ಹೈ ಬಂದಪೆಂ ತೋಱ ಕೊಡಿರಯ್ಯ ಎಂದು ಪೊಡಮಟ್ಟು ನಂಬುಗೆಗೊಂಡು ಹೋದನಾ ಪುರುಷನೊಡನೆ (ಸಿದ್ಧರಾ. ೨-೪೨). ನಂಬುಗೆಗೊಳ್ಳು: ೨. ಪ್ರಮಾಣವನ್ನು ಪಡೆ; ಭಾಷೆಯನ್ನು ಪಡೆ: ಕೃಶಾನು ನಂಬುಗೆಗೊಂಡನಾ ನೃಪನ [ಪಾಠಾಂ. ವರವನು ಕೊಟ್ಟನಾ ನೃಪಗೆ] (ಕುಮಾರವ್ಯಾಸ. ೫-೦೫); ರಾಗದೆ ಮದನನ ಕೈಯ ನಂಬುಗೆಗೊಂಬ ಭೋಗದ ರತಿದೇವಿಯಂತೆ ಭೂಗಧೀಶ್ವರ ಕಂಠೀರವೇಂದ್ರಗೆ ಕೈಲಾಗಿತ್ತಳೋರ್ವಬ್ಜನೇತ್ರೆ (ಕಂಠವಿ. ೨೪-೭೬); ಇಂತೆಂದು ವೇಳೆ ನಂಬುಗೆಗೊಂಡು ಗುರುವರ್ಯ ಕಂತುವಿಂ ಬೀಳ್ಕೊಂಡು ಪೊರಮಡಲು (ನವಮೋ. ೫-೧೯).

[ ನಂಬುಗೆ + ಕೊಳ್$_1$ ]

ನಂಬುಗೆಗೊಳ್ಳು 'ನಂಬುಗೆಗೊಳ್' ನೋ.

ನಂಬುಗೆದಾಳು (ಕ್ರಿ). ನಂಬಿಕೆಯನ್ನು ಹೊಂದು; ವಿಶ್ವಾಸವನ್ನು ಇಡು: ಪೇಳದತಿಗುಹ್ಯದಲಿ ನಂಬುಗೆದಾಳಿ ವಾಙ್ಮನಕಾಯಗಳಲದ್ವೈತವನ ಬಳಸಿ (ಗಗತಾ. ೧೭-೨೧). [ ನಂಬುಗೆ + ತಾಳು$_1$ (<ತಾಳ್$_1$) ]

ನಂಬುಗೆದೋಱು (ಕ್ರಿ). ವಿಶ್ವಾಸವುಂಟಾಗು; ಒಪ್ಪು: ಮೂಱುಭಾಗದ ಸಂಶಯವು ಕೆಲಸಾರಿತವನೀಸುತೆಗೆ ನಂಬುಗೆದೋಱದಿರೆ ತುದಿಯಂಶದಲಿ ಹನುಮಂತನಾ ಹದನ ಮಾಱುನುಡಿಯುರದಿರಲು (ತೊರರಾ. ೫-೩-೯೦).

[ ನಂಬುಗೆ + ತೋಱು ]

ನಂಬುಗೆಯೀ (ಕ್ರಿ). ಭಾಷೆಯನ್ನು ನೀಡು; ವಚನ ಕೊಡು: ಅರ್ಧರಾತ್ರಿಯ ಹೊತ್ತಿನೊಳಗಾಗಿ ಸುಗುಣಾನಿರುದ್ಧನ ತಪೆನೆಂದು ನಗುತ ನಿರ್ಧರವಾಗಿ ನಂಬುಗೆಯಿತ್ತು ಬೀಳುಕೊಂಡದ್ದಳು (ಮೋಹತ. ೩೦-೦೦).

[ ನಂಬುಗೆ + ಈ$_3$ ]

ನಂಬುಗೆವಂತ (ನಾ). ನಂಬಿಕೆಗೆ ಪಾತ್ರನಾದವನು; ಭರವಸೆಯಿಡಲು ಅರ್ಹನಾದವನು: ಸಾಷ್ಟಾಂಗವೆಱಗಿ ನಂಬುಗೆವಂತರೆದ್ದು ಸಂತುಷ್ಟದಿ ಬೀಳ್ಕೊಂಡರು (ಭರತ. ೩೮-೦೨೩); ಅರಮನೆಗಾಗಿ ನಂಬುಗೆವಂತರತ್ತ ತಮ್ಮರಸಿಯರ್ಕಳನೊಯ್ಯಲಿತ್ತ ಅರುಹನಾಲಯಕೆಯ್ದಿ ತಂದೆಯ ಬಳಿಗಾಗಿ ಬರುತಿರ್ದನಾ ಯುವರಾಜ (ಭರತ. ೫೮-೩೮). [ ನಂಬುಗೆ + – ವಂತ ]

ನಂಬುಗೆವಡೆ (ಕ್ರಿ). = ನಂಬುಗೆದಾಳು: ಅಂಬುಜಭವ ಭವೇಂದ್ರಾದಿ ದೇವತೆಗಳ ನಂಬುಗೆವಡೆದ ರಕ್ಕಸರ ಕಂಬುಚಕ್ರಾಂಕಿತ ನಿಮ್ನೊಳು ಮಥನಿಸಿ ಪಾಂಬದಿದರು ಯಮಪುರಿಗೆ (ಮೋಹತ. ೩೭-೩೪). [ ನಂಬುಗೆ + ಪಡೆ$_1$ ]

ನಂಬುಗೆವಿಡಿ (ಕ್ರಿ). = ನಂಬುಗೆದಾಳು: ಶಂಭುಪದಭಕ್ತಿ ನಂಬುಗೆವಿಡಿದು ಅಗಲದೆ ಇರಬಲ್ಲರೆ ಶರಣ (ಸಿದ್ಧೇವ. ೯೪-೨೮೬); ಪ್ರಮಿತವಚನದಲುದಿಸಿದೊಡೆ ವಿಕ್ರಮದ ಬಗೆ ಬಳಿಕಱಿಯಬಹುದೆಂಬಮರರಿಪುವಿನ ನುಡಿಗೆ ನಂಬುಗೆವಿಡಿದನರುಣಸುತ (ತೊರರಾ. ೩-೧೦-೨೪). [ ನಂಬುಗೆ + ಪಿಡಿ$_1$ ]

ನಂಬುಗೆವೆರೆ (ಕ್ರಿ). ವಿಶ್ವಾಸ ಹೊಂದು; ಭರವಸೆ ಪಡೆ; ನಂಬು: ಕರಿಯಿದಿರೊಳಗಿರ್ಪಂದದು ಕರಿಯಲ್ಲೆಂದೈದಿದಂದು ಸಂಶಯಿಸುತ್ತುಂ ನಿರುಕಿಸಿ ಪಕ್ಷಿಯ ನಂಬುಗೆವೆರೆದಂತಾಯ್ತೆನ್ನ ಮನದೊಳಾದ ವಿಕಾರಂ (ಶಾಕುಂತ. ೧೦೩-೧೯೪). [ ನಂಬುಗೆ + ಬೆರೆ$_1$ ]

. . . ಪರಿಪರಿಯ ಊರ್ಗಿಗದ ನಡತೆಕಾಱರುಗಳಿಂ ಪುರರಕ್ಷಕರ ಮಹಾ ಗಾಱಿರೆದೆಯಾಟದಿಂದೊಪ್ಪಿತಾ ರಾಜವೀಧಿ (ಗುರುಚಾ. ೧-೩೫).
[ ನಡತೆ + – ಕಾಱ ]

**ನಡತೆಗೆಡು** (ಕ್ರಿ). ೧. ಸರಿಯಾದ ನಡತೆಯಿಲ್ಲದಿರು ; ನಡವಳಿಕೆಯನ್ನು ಕೆಡಿಸಿಕೊಳ್ಳು ; ಸಂಪ್ರದಾಯವನ್ನು ಬಿಡು : ನಡತೆಗೆಟ್ಟ ವ್ಯಕ್ತಿಗೆ ಎಲ್ಲೂ ಬೆಲೆ ದೊರಕದು (ರೂಢಿ). ೨. ಶೀಲವನ್ನು ಕೆಡಿಸಿಕೊಳ್ಳು ; ನೀತಿಗೆಡು : ಅಯ್ಯೋ ಕೆಟ್ಟ ಹುಡುಗಿ ! ನೀನು ನಡತೆಗೆಟ್ಟಿರಲೇಬೇಕು (ನಿಕಲು. ೫೩). [ ನಡತೆ + ಕೆಡು$_1$ ]

**ನಡತೆವಂತ** (ನಾ). ಒಳ್ಳೆಯ ನಡವಳಿಕೆಯುಳ್ಳವನು.-ನಡೆನುಡಿಯುಳ್ಳವನು : ನೀನು ವಿದ್ಯಾವಂತ ನಡತೆವಂತ ಗುಣವಂತ ; ಇಂಥವನು ಅಸತ್ಕುಲಪ್ರಸೂತರೂ ದುರಾತ್ಮರೂ ಘಾತುಕರೂ ನಾಚಿಕೆಗೆಟ್ಟವರೂ ನಡೆಯುವಂತೆ ನಡೆಯಬಾರದು (ವಚಥಾ. ೩೫೪). [ ನಡತೆ + – ವಂತ ]

**ನಡನಡ** (ನಾ). ಒಂದು ಅನುಕರಣ ಶಬ್ದ. 'ನಡನಡನೆ' ಪರಾ.

**ನಡನಡನೆ** (ಅ). ನಡನಡ ಎಂದು : ಪಾಱಲಳವಲ್ಲದೆ ನಡನಡನೆ [ಪಾಠಾಂ. ಗಡಗಡನೆ] ನಡುಗಿ ಸಿಡಿಮಿಡಿಗೊಂಡೆಱಕೆಗಳೆಳೆಲ ಕೊರಲ್ಕುಸಿಯೆ ಜೋಲ್ದು ನೇಲ್ವ ಪೆರ್ಬಕ್ಕಿಗಳಿಂ (ರಾಜಶೇ. ೫-೫೫ ವ). [ ನಡನಡ + – ಅನೆ$_1$ ]

**ನಡಪತಿ** (ನಾ). ವಿವಾಹವಾಗದೆ ಗಂಡನಂತೆ ನಡೆದುಕೊಳ್ಳುವವನು : ಕಲ್ಯಾಣದಲ್ಲಿ ಮಾಳಾದೇವಿಯೆಂಬ ವಾರಾಂಗನೆಯು . . . ಜಂಗಮದೇವರಿಂದಾ ಲಿಂಗವು ಸಾಧ್ಯಮಪ್ಪುದೆಂಬುದ ತನ್ನ ನಡಪತಿಯಾದ ಭಕ್ತರಿಂದ ತಿಳಿದು (ಭೈರಸೂ. ೦೧೭). [ ನಡಪು$_1$ + ಪತಿ$_2$ ]

**ನಡಪಾಡಿಸು** (ಕ್ರಿ). ಅಲೆ ; ಚದರಿಹೋಗು ; ಓಡು : ಗುರುಸಂಭವನ ಮಂತ್ರದ ಪಾಡಿ ನಡಪಾಡಿಸಿತು ಪಾಂಡವರ (ಕುವ್ಯಾಗ. ೧೦-೩೩).
[ ನಡಪು$_2$ + ಆಡಿಸು ]

**ನಡಪಾಡು**, ನಡೆಪಾಡು (ಕ್ರಿ). ನಡೆದಾಡು ; ಸಂಚರಿಸು ; ಓಡಾಡು ; ಅಡ್ಡಾಡು : ದಾದಿಯುಂ ಸಖೀಜನಂಗಳ್ ಬೆರಸು ನಡಪಾಡುತ್ತಿರ್ದಳ ಮುಂದಾ ಕೆಯ್ಯಂ ಪರ್ದು ತಂದಿಕ್ಕಿದೊಡೆ (ವಡ್ಡಾರಾ. ೦೧೮-೦೩) ; ಪಾಡುವ ತುಂಬಿ ಕೋಡುವ ಪುಟಿಲ್ ನಡಪಾಡುವ ರಾಜಹಂಸೆ (ಪಂಪಭಾ. ೩-೩೭) ; ಆ ಚಂದ್ರಿಕೆಯೊಳ್ ನೃಪರೂಪಚಂದ್ರಂ ಕೇಳೀಶೈಲದ ತಪ್ಪಲೊಳ್ನಡಪಾಡುತಿರ್ಪುದುಂ (ಕಾದಂಬು. ೧೧೭) ; ಮುಡಿಯ ತಡಿವಿಡಿದು ಮೆಲ್ಲನೆ ನಡಪಾಡುವ ಕಳಮಗಾಟಕಾಜನದ ಬೆಡಂಬಿಡಿದ ವಿಕಚಾಕ್ಷಿಬಿಂಬಂ ಪಡೆಗುಂ ಪಗಲೊಳಮುರಲ್ದ ಕುಮುದಶ್ರೀಯಂ (ವರ್ಧಮಾ. ೧೦-೧೪) ; ನಡಪಾಡುವ ವನದೇವಿಯರಡಿಯುಡಿದಲಕ್ತಕದ್ರುಮ ಪತ್ರಿದಪ್ಪೊಲ್ ಕಡುಗೆಂಪನಾಳ್ದುವೊಂದೊಂದೆಡೆ ವನಚರವಿದ್ಧ ಮೃಗಗಣಾರುಣಜಳದಿಂ (ಚಂದ್ರಪ್ರ. ೫-೪೯) ; ಕಾರಕಾತ್ಮಜಂ ನೋಡುತಿರ್ದನ್ ಬೆರಗುಬಡಿದು ನಡಪಾಡುತಿರ್ದಿ ದೈತ್ಯನೃಪನಂ (ಶ್ರೀರಾಮಾ. ೩೩೪-೩೩೭). ನಡೆಪಾಡು : ಸಮದಗಜಗಮನೆಯರ್ ಮುಗಿಲ ಮೇಲೆ ನಡೆಪಾಡುವೀವಾಕೆಗಳ್ ತಮಗೆ ಧರಾಗಮನಂ ಪೊಸತಪ್ಪುದಱಿಂದಮರ್ದಿರೆ ನಡೆನಡದು ನಡೆಯಲಾಱದೆ ಸುಱಿದರ್ (ಪಂಪಭಾ. ೭-೮೯) ; ನಡೆಪಾಡುತಿರ್ದೆಡಪಿ ಕೆಡೆವ ಜರತ್ತಾಪಸರ ಕೆಯ್ಯಂ ಪಿಡಿದೊಯ್ಯನೆತ್ತುವ ಗೋಲಾಂಗೂಲಜಾಲಮುಮ (ಪಂಚತಂ. ೦೧೪-೦೭) ; ಗಿಳಿ ಪನ್ನಗನೀಂಟುವ ಭಂಗಿಯಿಂ ವಿನೋದದೆ ನಡೆ[ ಪಾಡಿ ] ಚುಂಬನದ [ ಚೀತ್ಕೃತಿಯಂ ] ಕಲಲಾ ಬನಕ್ಕೆ ಬರ್ಪುದು ಪಿರಿದುಂ ನುಮತ್ತಚರಕಿನ್ನರವನ್ನಗಕನ್ಯಕಾಜನಂ (ಶಾಂತೀಶ್ವ. ೧೩-೧೪೮).
[ ನಡಪು$_2$ + ಆಡು$_1$./ತೆಲು.. ನಡವಾಡು, ನಡುಪಾಡು ]

**ನಡಪಾಡುಹ** (ನಾ). ನಡೆದಾಡುವಿಕೆ ; ಓಡಾಡುವಿಕೆ ; ಸಂಚರಿಸುವಿಕೆ : "ವಿಹಾರ, ಪರಿಕ್ರಮ = ನಡಪಾಡುಹ" (ನಾಚಿರಾ. ೬).
[ ನಡಪಾಡು + – ಹ$_2$ ]

**ನಡಪು$_1$**, ನಡಹು$_1$, ನಡೆಪು$_1$ (ಕ್ರಿ). ೧. ನಡೆಯುವಂತೆ ಮಾಡು ; ನಡೆಸು ; ಗಮಿಸುವಂತೆ ಮಾಡು : ನಡುವಗಲಲ್ಲಿ ತಾಂ ನಡಪಿ ದಂತಿಗಳಂ ರವಿತಪ್ತಯೂಥಪಂ ಬಿಡದತಿಶೀತಲಸ್ಥಲವ ಸೇವಿಸುವಂತೆವೋಲೀ ನರೇಶ್ವರಂ ಇಡಿದಸುರಾಗದಿಂ ಪ್ರಜೆಗಳಂ ನಿಜಪುತ್ರರ ಪೋಷಿಪಂದದಿಂ ನಡಪಿ ವಿವಿಕ್ತ ಮಾದೆಡೆಯ ಸೇವಿಸುವಂ ಸಲೆ ಶಾಂತಮಾನಸಂ (ರಾಕುಂತ. ೬೭-೦೦೫). ೨. ಸಲಹು ; ಪೋಷಿಸು ; ಪಾಲಿಸು ; ಕಾಪಾಡು : ಎರಟ್ಟೂಱು ತಿಂಗಳಿಂಗೆ ತಾಯ್ ಕಟ್ಟಿದೊಡೆ ಬಂದ ನಂಟರ್ ನಡಪಿ ಬಳೆದೊಡಾ ನಂಟರುಂ ಕಟ್ಟಿದುಳ್ಳರೆಲ್ಲಂ ಸತ್ತು ಕುಲಕ್ಷಯಮಾದೊಡೆ (ವಡ್ಡಾರಾ. ೬೩-೦೭) ; ಮುನ್ನ ವೃಷಭನಾಥನ ನಡಪಿದ.ದುಮಂ ತಮ್ಮ ಸಣ್ಣುವಂ ಬಡೆದು ಕುರುರಾಜಾದಿಮೂರ್ಧಾಭಿಷಿಕ್ತ ಪಾರ್ಥಿವರ್ . . . ಭರತೇಶ್ವರ ಚಕ್ರವರ್ತಿಯಾಸ್ಥಾನದೊಳ್ ಬಂದು ಕಂಡು (ಆದಿಪು. ೦೩-೩೦೭) ; ನಡಪಿದನಜ್ಜನೆಂದು ವಿಜಯಂ ಕಡುಕೆಯ್ದುಸನೆನ್ನ ಮಮ್ಮನಾಂ ನಡಪಿದನೆಂದು ಸಿಂಧುತನಯಂ ಕಡುಕೆಯ್ದುಸಂ (ಪಂಪಭಾ. ೧೦-೧೮) ; ಪಡಿಯೊಳ್ ಪೊರಳುತ್ತುಂ ಕಂಠಗತಪ್ರಾಣನಾಗಿರ್ದುದನೀ ಗಿಳಿಯಂ ಕಂಡು ಕರುಣಿಸಿ ತಂದೆ ನಡಪಿ ಗಱಿಮೂಡಿದ ಬಟಿಕ್ಕಂ ಪಾಱಿ ಪೋಕುಂ (ಕಾದಂಪೂ. ೩೬೫)[!]; ವರ್ಷ ೯[೨೭] ನೆಯ ವಿಶ್ವಾವಸು ಸಂವತ್ಸರದ ಫಾಲ್ಗುಣದಮಾವಾಸ್ಯೆಯಾದಿತ್ಯವಾರ[ದ]ನ್ದು ನಡಪಿದ ಸತ್ತಿಗಂ ಬೆಸಸೆ (ಸೌಇಇ. XI-1, ೫೦-೩ ;1006) : ತಜ್ಜಗಮನೆ ಪುಟ್ಟಿಪಂ ನಡಪುಮಂ ನಡಯಿಪಂ ಕಿಡಿಪಂ ಕ್ರಮದಿಂದಮಾನೆ (ಸಮಪ. ೧೧-೧೮೪) ; ಬೇವಿನ ಗಿಡುವಂ ತಂದಿಟ್ಟಾವಿನ ಸೊಜ್ಜಾಲನೆಱಿದು ನಡಪಿದೊಡಂ ಕೇಳ್ ಬೇವಿಂಸೆ ಕೈಪೆ ಪಿಂಗದು (ಧರ್ಮಾಮೃ. ೫-೦೫೭) ; ಆಕೆಯ ನಡಪಿದ ದಾದಿಯ ಮಗಳು ಕಾಮಲತೆಯೆಂಬಳಾಕೆ ರೂಪಸಿ (ಪುಣ್ಯಾಸ್ರ. ೭-೭೪ವ). ನಡಹು$_1$ : ೨. ಹೊಸ್ಸದೇವರು ಬೆಸಸಲು ಕಾದಿ ಸುರಲೋಕಪ್ರಾಪ್ತನಾದ ಹಿಂನ್ದಾ ದನ್ನಹವರಂ ಲೇಸಾಗಿ ನಡಹುವರು (ಮೈಆರಿ. ೦೯೩೩. ೩೦-೪ ; 1125). ನಡೆಪು$_1$ : ೨. ಕರಿ ಪೋಗವು ಹರಿ ಪೋಗವು ಪರಿವಾರು ಪೋಗವೊಡನೆ ನಡೆಪಿದ ನಾಲ್ವರ್ ನೆರವಾಗಿ ಪೋಗರಂತಃಪುರಕ್ಕೆ ಪೋಪೆಡೆಯೊಳ ರಸರೊರ್ವರೆ ಪೋಪರ್ (ಅಜಿಪು. ೨-೦೦೪) ; ನೆಗಳ್ದ ಭಾವಶಿವದೇವ ಕ್ರಿಯಾಶಿಯ ಮಾಣಿಯಂ ಕೈಕೊಣ್ಡು ಪೋಷಿಸಿ ಮದುವೆಯಂ ಮಾಡಿ ನಡೆಪಿದ ಧರ್ಮ್ಮ ಸನ್ತತಿಯ ಬ್ರಾಹ್ಮಣ ಸರ್ವ್ವಧರ್ಮ್ಮಾಧಿಕಾರಿ ಬ್ರಹ್ಮಪುರಿ ಮುಖ್ಯಂ (ಸೌಇಇ. XI-1, ೬೪-೦೭ ; 1028) ; ಮತ್ತಲ್ಲಿ ಜಲಕೇಳಿಯಾಡುವ ಗಾಡಿಕಾರ್ತಿಯರು ಕಾಡಲೆಂದೊಳ್ಳೆಗಳಂ ತಂದು ಬಿಡಿಸಿಯವರ್ಕೆ ಪಾಲನೆಱಿದು ನಡೆಪುತಿರ್ಪನ್ನೆಗಂ (ಪಂಚತಂ. ೦೨೩-೩೦) ; ಮಗನಂ ನಡೆಪಿ ಬಾವಿಯೊಳ್ ನೂಂಕುವಂತೆ (ಧರ್ಮಾಮೃ. ೯-೦೫೭) ; ಎನ್ನ ಮಗಳ್ಗಾದ ತನುಜನಂ ಪಿಡಿದು ರಾಜ್ಯದೊಳ್ ನಡೆಪುವುದೆಂದು ನಿಲೆ ನುಡಿಯಿಸಿ (ನೇಮಿಪು. ೩-೩೭ ವ).
[ ನಡೆ$_1$ +– ಪು$_1$./ತಮಿ. ನಟವು; ತುಳು. ನಡಪು; ತೆಲು. ನಡುವು, ನಡುಪು ]

**ನಡಪು$_2$**, ನಡಹು$_2$, ನಡೆಪು$_2$ (ನಾ). ನಡೆಯುವಿಕೆ ; ಚಲಿಸುವಿಕೆ ; ಓಡಾಟ ; ಸಂಚಾರ. 'ನಡಪಾಡು' ಪರಾ. ನಡಹು$_2$ : ಕಡಿತಲೆಯ ಮಿಂಚುಗಳ ಹೊಯ್ಲಿನ ಸಿಡಿಲುಗಳ . . . ಬಿಡುಮಿಡುಳ ಹೊರಳಿಗಳ ಹುಸಿಯ ನಡಹುಗಳ ನವಖಂಡದೊಳು ಹೆಣನಡವಿ ತಳಿತಿರೆ ಮೆಚ್ಚಿದುದೈ ಸಂಗ್ರಾಮ ಕಾಗ್ಗಾಲ (ಕುವ್ಯಾಭೀ. ೪-೩೭). ನಡೆಪು$_2$ : 'ನಡಪಾಡು 'ಪರಾ.
[ ನಡೆ$_1$ + – ಪು$_2$./ತಮಿ. ನಟಪ್ಪು; ಮಲ. ನಡಪ್ಪು ; ತುಳು. ನಡಪು ; ತೆಲು. ನಡವು, ನಡುವು ]

**ನಡಪ್ಪಳ್ಳಿ** 'ನಡುಂಪಳ್ಳಿ' ನೋ.

**ನಡಪ್ರಾಯ** (ನಾ). ಹುಲ್ಲು, ಜೊಂಡುಗಳಿಂದ ತುಂಬಿರುವಿಕೆ. [ ಸಂ. ]

**ನಡಬಾವಿ** 'ನಡೆಬಾವಿ' ನೋ.

**ನಡಭಾವಿ** 'ನಡೆಬಾವಿ' ನೋ.

**ನಡಮಣ್ಣ** (ನಾ). ಒಂದು ಬಗೆಯ ಜವಿಾನು; ಸಾಗುವಳಿ ಜವಿಾನು (?): ಆತಂಗಂ ನಡಮಣ್ಣ ವನ್ನಿವ್ವೃತ್ತರ್ನೆಲ್ಲ ಮಣ್ಣ ಖ × × × ವರ ಸೂಳೆವಳ್ಳ (ಎಕ. XI, ದಾವಣ. ೧೧೯-೭ ; ೯೫೦). [ ? ]

**ನಡಮಾನ** (ನಾ). ಒಂದು ಬಗೆಯ ವಿಮಾನಂ. [ ಸಂ. ]

**ನಡಮುರುಕನಬಳ್ಳಿ** (ನಾ). ಒಂದು ಬಗೆಯ ಬಳ್ಳಿ : (ಶ). [ ? + ಬಳ್ಳಿ ]

**ನಡಯಿಸು** 'ನಡೆಯಿಸು' ನೋ.

**ನಡಲು** (ನಾ). ಒಂದು ಸ್ಥಳದ ಹೆಸರು : ನೇಱಿಲೆಯುಂ ಮೂಯಾತ್ತಿಂ ನಡಪ್ಪಳ್ಳಿ ಮೂಟಾಣಂ ನಡಲು ಎಪ್ಪಣ್ಳ್ಳಿದತ್ತಿಟಿ ಕಿಱಿಯ ಒರಲೊಳ್ಗೇಡು (ಎಕ. VI, ಚಿಕ್ಕಮ. ೯೫-೧೬ ; ಸು. 1025 ?). [ ? ]

**ನಡವಣ** 'ನಡವಳಿ$_1$' ನೋ.

**ನಡವಳಿ** 'ನಡೆವಳಿ$_1$' ನೋ.

**ನಡವಳಿಕಸ್ತ** (ನಾ). ಒಳ್ಳೆಯ ನಡವಳಿಕೆಯುಳ್ಳವನು,-ನಡತೆಯುಳ್ಳವನು : ಈಶ್ವರರಾಯರು ಒಳ್ಳೆಯ ನಡವಳಿಕಸ್ತರಾದುದರಿಂದ ನೃತ್ಯಕಲೆಗಳಲ್ಲಿ ಅಷ್ಟಕ್ಕಷ್ಟೆ (ಕಲಾಸಾ. ೫). [ ನಡವಳಿಕೆ (<ನಡೆವಳಿಕೆ) + – ಸ್ತ ]

**ನಡವಳಿಕಾರ** 'ನಡೆವಳಿಕಾಱ' ನೋ.

**ನಡವಳಿಕಾಱ** 'ನಡೆವಳಿಕಾಱ' ನೋ.

**ನಡವಳಿಕೆ** 'ನಡೆವಳಿಕೆ' ನೋ.

**ನಡವಳಿತ** (ನಾ). ೧. ನಡತೆ; ನಡವಳಿಕೆ; ವರ್ತನೆ: "ನಡವಳಿತ = ನಡತೆ" (ಗಂಗಾಮ. ೧೭೭) ; ನುಡಿದೊಡೇನ್ನೈ ಶ್ರುತಿಸ್ಮೃತಿಗಳಂ ನಡವಳಿತದೊಳು ಶುದ್ಧಮಿಲ್ಲದೆ (ಶಂಕದಾ. ೧೫-೧೧). ೨. = ನಡೆವಳಿಕೆ ೩ : ಘೂಟು ನಡವಳಿತವನ್ನು ಕುರಿತ ಸಿವಿಲ್ ಪ್ರೊಸೀಜರ್ ಕೋಡಿನ . . . ಪ್ರಕರಣದ ಮೇರೆಗೆ ಆರು ತಿಂಗಳು (ಗ್ರಾಮೂಕ. ೧೬೦). [ ನಡವಳಿ ( < ನಡೆವಳಿ$_1$) + – ತ$_2$ ]

**ನಡವೆ** 'ನಡುವೆ$_1$' ನೋ.

**ನಡಸಂಹತಿ** (ನಾ). ಹುಲ್ಲು, ಜೊಂಡುಗಳ ಸಮೂಹ,–ಗುಂಪು. [ ಸಂ. ]

**ನಡಸು$_1$** 'ನಡೆಯಿಸು' ನೋ.

**ನಡಸು$_2$** 'ನಡಿಸು$_2$' ನೋ.

**ನಡಹ** 'ನಡೆಹ' ನೋ.

**ನಡಹು** 'ನಡಪು$_1$' ನೋ.

**ನಡಹು$_2$** 'ನಡಪು$_2$' ನೋ.

**ನಡಾವಳಿ** 'ನಡೆವಳಿ$_1$' ನೋ.

**ನಡಾವಳಿಕೆ** 'ನಡೆವಳಿಕೆ' ನೋ.

**ನಡಾಳ** (ನಾ). ಒಂದು ಬಗೆಯ ಹಗ್ಗ,–ಮಿಣಿ. 'ನಡಾಳಮಿಣಿ' ನೋ. [ ←ಮರಾ. ನಾಡಾ ]

**ನಡಾಳಮಿಣಿ** (ನಾ). ನೊಗವನ್ನು ಮೂಕಿಗೆ ಬಂಧಿಸುವ ಹಗ್ಗ : (ಶ). [ ನಡಾಳ + ಮಿಣಿ (<ಮಿಳಿ$_2$) ]

**ನಡಿ** 'ನಡೆ$_1$' ನೋ.

**ನಡಿಕೆ** 'ನಡಗೆ' ನೋ.

**ನಡಿಗೆ$_1$** 'ನಡಗೆ' ನೋ.

**ನಡಿಗೆ$_2$, ನೆಡುಗೆ**(ನಾ). ೧. ನಡುವಿಕೆ ; ನಾಟುವಿಕೆ ; ಸ್ಥಿರಗೊಳಿಸುವಿಕೆ. ೨. ನಾಟಿ ; ನೇಜಿ. ನೆಡುಗೆ: ೧. "ತಲ-ಪ್ರತಿಷ್ಠಾಯಾಂ, ನೆಡುಗೆಯೊಳ್" (ಕಾಶಕ. ೨೬೧).

ನಡಿಗೆಯ ಹಿತ್ತಿಲು = ನಾಟಿ ಹಾಕಿರುವ ಹಿತ್ತಿಲು ; ಸಸಿಗಳನ್ನು ನಟ್ಟಿರುವ ಸ್ಥಳ : ಬಸವಂತನ ನಡಿಗೆಯ ಹಿತ್ತಿಲು ತೋಟದಲೂ (ಶಾಇಶ. IX-II, ೪೭೬-೭೦ ; 1606). [ <ನಡು$_1$ + – ಗೆ ]

**ನಡಿಸು$_1$** 'ನಡೆಯಿಸು' ನೋ.

**ನಡಿಸು$_2$, ನಡಸು$_2$, ನೆಟಿಸು, ನೆಡಿಸು** (ಕ್ರಿ). ೧. (ಗಿಡ, ಸಸಿ ಮೊದಲಾದುವನ್ನು ನೆಲದಲ್ಲಿ) ನಡುವಂತೆ ಮಾಡು ; ನಾಟುವಂತೆ ಮಾಡು : "ಪೀಲತೀಕಿ ನಡಿ(ಟ್ಟ)ಸಿದವುದೆಂಬುದು" (ಕಾಶಕ. ೪೩) ; ದಿವ್ಯಶಕ್ತಿಪ್ರಭಾವದಿಂದ ಮಾನುಷಾರಣ್ಯಂಗಳ ಮಹಾದ್ರುಮಂಗಳಂ ತರಿಸಿ ನಡಿಸಿ (ಆದಿಪು. ೧೩-೫೨ ವ). ೨. (ಕಲ್ಲು, ಕಂಭ ಮೊದಲಾದುವನ್ನು ನೆಲದಲ್ಲಿ) ಹುಗಿಸು ; ಹೂಳಿಸು ; ಸ್ಥಾಪಿಸು : ಯಾತುಕರೊಳ್ ಚಲ್ಲೇಶ್ವರದ ಮುಂದೆ ಕಲ್ಲನ್ನಡಿಸಿ ಪಿರಿಯ ಕಿಱಿಯ ಕಟಗೆ ಮಟ್ಟಿಕಾಲುಜ್ಜ ಕೊಳ್ಕ್ಯಂಡುಗಂ ಮಣ್ಣು ಕೊಟ್ಟರ್ (ಎಕ. III, ಮಂಡ್ಯ. ೪೧-೦೫ ; ೯೫೦); ಕಡಲ ತಡದಡಿಯೊಳಾತಂ ನಡಿಸಿದ ಕಾಂಚನಜಗಜ್ಜಯಸ್ತಂಭಗಳಂ ಕುಡಿನಿಮಿರ್ದು ನಾಕನಿಳಯಮನಡರ್ವ ಯಶೋಲತೆಗಡರ್ಪನಿಟ್ಟವೊಲೆಸೆಗುಂ (ಚಂದ್ರಪು. ೭-೩೧). ೩. (ಕತ್ತಿ ಮೊದಲಾದುವನ್ನು ಮೈಯೊಳಗೆ) ನಾಟಿಸು ; ಚುಚ್ಚುವಂತೆ ಮಾಡು : ತನ್ನ ಕಠಾರಿಯನ್ನು ಪೂರ್ತಿಯಾಗಿ ಅದರ ದೇಹದಲ್ಲಿ ನಡಿಸಿದಳು (ಮೀದಿಮು. ೦೦೪); ಅಡವೀಬೆಕ್ಕುಗಳು ಬೇಟೆಯ ಮೆಯ್ಯೊಳಗೆ ಹಲ್ಲು ನಡಿಸಿ, ಅದನ್ನು ಕೊಲ್ಲುತ್ತವೆ (ಮುಂಬಯ. ೫-೩೧). ನಡಸು$_2$ : ೩. ಫಡಫಡೆನುತ ಬಕಾಸುರನ ಮಗ ನಡಸಿದನು ಕೂರಂಬನು (ಕುಮಾರವ್ಯಾ. ೧೫-೬೬). ನೆಟಿಸು : ೨. ಗುರವನಾಯಂ ಕೊಟು ಕಲ್ಲ ನೆಟಿಸಿದನ್ (ಎಕ. VIII, ಸಾಗರ. ೧೧೧-೦೫ ; ೯೮೬ ?). ನೆಡಿಸು : ೧. ತಡೆಯುದ್ಯದಂಗುಲಕೆ ರಥವನು ನೆ[ಪಾಠಾಂ. ನ] ಡಿಸಿದನು ಹರಿ ಧರೆಗೆ ಪಾರ್ಥನ ಮುಡಿಯ ಸರಿಸಕೆ ಬಾಣ ಬಂದುದು ಕೊಲುವ ತವಕದಲಿ (ಕುಮಾರಕ. ೨೫-೨೮). ೨. ಮುಂದೆಸೆಯೊಳುಱಿ ಬಸಿದ ಶೂಲವನೊಂದನಾಗಳೆ ತರಿಸಿ ನೆಡಿ[ಪಾಠಾಂ. ನಡಿ]ಸಿಂತೆಂದನು (ಬಸಪು. ೩೮-೪೬) ; ತೊಡೆವನೀ ತೋರ್ಪೀ ನಿಶಾಚರಪಡೆಯ ಭಾಗ್ಯದ ಭಾಳಲಿಪಿಯನು ನೆಡಿಸುವೆನು ನೈಶಾಟವಿಜಯಸ್ತಂಭಡಂಬರವ (ತೊರರಾ. ೩-೬-೪) ; ನೆ [ಪಾಠಾಂ. ನ] ಡಿಸಿದನೆರಡು ಕಂಬವಂ (ಕೃಮಿಥಾ. ೨೬-೫೦).

ನಡನಡಿಸು(ದ್ವಿರುಕ್ತಿ) : ಸಿಡಿಲ ಬೊಬ್ಬೆಯ ಧಾಳಿಯಲಿ ನಡನಡಿಸಿತಾಗಿ ನಿದಾಘಭೂಪನ ಹಿಡಿದು ಹೆಕ್ಕಳಿಸಿದನು ಮೇಘಾಗಮ ಮಹೀಪಾಲ (ತೊರರಾ. ೪-೬-೪). [ ನಡು$_1$ + – ಇಸು$_2$ ]

**ನಡು$_1$, ನೆಟ್ಟು$_1$, ನೆಡು** (ಕ್ರಿ). ನಟ್ಟ$_1$, ನೆಟ್ಟ (ಭೂತಕೃ). ನಟ್ಟು$_1$, ನಾಟ್ಟು, ನೆಟ್ಟು$_2$ (ಭೂತನ್ಯೂ) ೧. (ಕಲ್ಲು, ಕಂಬ ಮೊದಲಾದುವುಗಳ ಕೆಳಭಾಗವನ್ನು ನೆಲದಲ್ಲಿ) ಹೂಳು ; ನಿಲ್ಲಿಸು ; ಸ್ಥಾಪಿಸು ; ಸ್ಥಿರಗೊಳಿಸು : "ನಡು–ಸಂಸ್ಥಾಪನೇ, ಮಧ್ಯೇ ಚ" (ಶಮುಧಾ) ; "ಸ್ಥಾಪನ – ಮಧ್ಯದ ಸ್ಥಾನಂಗಳೊಳ್ ನಡು" (ಶಬ್ದಮಂ. ೯೪) ; ಅಜವರ್ಮ್ಮನ ಕಲ್ಲ ನೊಟವ್ವುಸ್ಸು ರ್ಟೂಡೆ ಇವ್ವರ್ಗ್ಗ ಈ ಕಲ್ಲು ನಟ್ಟುದು (ಎಕ. XI, ಜಗಳೂ. ೦೯-೬ ; ೯೦೭) ; ಮಹಾದ್ರುಮಂಗಳಂ ತರಿಸಿ ನಡಿಸಿ ನಟ್ಟ ಕಂಭಂಗಳ ಮೇಗೆ ಸಾರದಾರುಗಳನಡೆಗಿಱಿದಿರೆ ಪಾಸಿ ಪಸರಿಸಿ (ಆದಿಪು. ೧೩-೫೨ ವ) ; ಮಟ್ಟಿ ಕಿಱಿಯ ತೆಂಕಣ ಕಡೆಯಂ ಪಿರಿಯಯ್ಯ ಪುಣುಸೆವರು ನಟ್ಟ ಓಳಗಲ್ಲಿನ್ದಂ ಪಡುವಣ ತವರಿಂದೊಳಗೆ ಅಯ್ದು ಕೊಳಗ ಬೆದೆ ಪೂಂಬೊಲನುಂ . . . ಸಲ್ವುದು (ಎಕ. IV, ಹೆಗ್ಗಡ. ೧೬-೨೦ ; 1021) ; ಕಮ್ಮನೂರ ಬಳವಿಯೊಳು ಅಯ್ಗಣ್ಣುಗಂ ಬೆಟ್ಟದಲೆ ಅಯಂಗಳು ಕಲ್ಲು ನಾಟ್ಟು ಸೊಭೆ ಕೆಯ್ದಂ (ಎಕ. XIV, ಎಡತೊ. ೯೮-೧೧ ; 1078) ; ಮತ್ತುಟಿದವರಂ ದೇವರೆನವೇಡ ಧರೆಯೊಳ್ ದೇವರೆ ನಟ್ಟರ್ದ ಕಲ್ಲುಮೊಟ್ಟದ ಮಣ್ಣುಂ (ಧರ್ಮಾಮೃ. ೮-೩೧) ; ಇದು ವೈರಾಗ್ಯದ ಕೊತ್ತಳದ ಮೇಲೆ ಮನ್ಮಥನು ನಟ್ಟ ವಿಜಯ ಪತಾಕೆಯಂತೆ ಕಾಣಿಸುತ್ತದೆ (ಕಾವ್ಯಸ. ೫೮). ೨. (ಗಿಡ, ಸಸಿ, ಬೀಜ ಮೊದಲಾದುವನ್ನು ನೆಲದಲ್ಲಿ) ಊರು ; ಹಚ್ಚು ; ನಾಟಿಹಾಕು : ತೆಂಗಿನೆಳನೀರುಮಂ ಕೊಳಲಿಂಬಪ್ಪಂತಿರೆ ಮಾಡಿ ನಟ್ಟ ಕಾಂಗಿನ ತೆಂಗಿನ

ಮರಂಗಳುಮಂ (ಪಂಪಭಾ. ೫-೪೭ ವ) ; ಒಂದು ದೆಸೆಯೊಳೆರ್ತಡಿವಿಡಿದು ನಟ್ಟ ತಮಾಲದ ತಳಿರ್ಗೊಂಬುಗಳಿಂ ಸಮೆದ ವನಲೇಖೆಗಳುಮಂ (ಕಾದಂಬ. ೨೧೪) ; ಪೂಗಿಡುವೆಂಬ ಪೆಸರಿಂಗೆ ಕೊಳವಳ್ಳಿಯ ಗಿಡುಗಳಂ ನಟ್ಟು ನೀರೆಱೆದು ನಡೆಪೆ ಮಲ್ಲಿಗೆಯ ಪೂವಿನಂತಾಗಲಱಿಯದಂತೆ (ಧರ್ಮಾಮೃ. ೭-೭೯) ; ನೀ ನಟ್ಟ ಸಸಿ ಸುರಕುಜವಲೇ ಕೊಡದೇ ಮನೋರಥವ (ಕುಮಾ.ಆ. ೧೨-೫೪) ; ನಟ್ಟು ಧರ್ಮಭಯವನೆದೆಗೆ ಹುಟ್ಟಿಗೊಂದು ಅರ್ಥವಿತ್ತರು (ರಾಮಾನ. ೨ ನಿವೇದನೆ). ೩. (ಬಾಣ, ಕತ್ತಿ, ಮುಳ್ಳು ಮೊದಲಾದುವು) ಚುಚ್ಚು; ನಾಟು; ಒಳಹೊಗು; ಇರಿ ; ಭೇದಿಸು : ನಟ್ಟ ಸರಲ್ಗಳಿಂದಿದಕರಂಕ × ಯಿಂ ಕಿಡಿಕೆಯ್ದು (ಎಕ. II, ೧೩೮-೧೫ ; ಸು. ೯೫೦) ; ತಡದಡಿಸುತ್ತುಮಿಱಿಯಲ್ ಪರಿಮಾತಂ ಮಾಪೀಸೋಪಾನ ಮನಡರುತ್ತುಂ ಜಾಱಿವಱಿದು ಕೆಡೆದುರದೊಳ್ ನಟ್ಟ ಸುರಿಗೆ ಬೆನ್ನೊಳ್ಮೂಡೆ (ಆದಿಪು. ೨-೧೪ ವ) ; ತಡೆಯದೆ ರಾಜರಾಜನಿದಿರಂ ಬರೆ ಭೋರ್ಗರೆದೆಟ್ಟೊಡುಂಬುಗಳ್ ನಡದೆ ಸಿಡಿಲ್ವುದುಂ (ಪಂಪಭಾ. ೧೧-೧೩೯); ವಾಮನನು ದರ್ಭೆಯೊಳೋವದೆ ಕುತ್ತೆ ನಟ್ಟು[ಪಾಠಾಂ. ದರ್ಭೆಯೊಳಾಸಿದೊಡಾರೆ ನಾಂಟ] ಶುಕ್ರನ ಬಲಗಣ್ಣುವಾಗಳೊಡೆದತ್ತು (ಸಮುಪ. ೧೦-೯೭) ; ಬಾಲಾಭ್ಯಾಸವ ಮಾಡಹೋದರೆ ಎನ್ನ ಸುರಿಗೆ ಎನ್ನ ನಟ್ಟಿತ್ತು (ಬಸವ. ೭೨೪) ; ನಂಜುಮುಳ್ಳಡಿಯನು ನಟ್ಟು ನಡೆಗೆಟ್ಟನೋ (ಸಿದ್ಧರಾ. ೩-೪೫) ; ರೋಮಗಳೆಲ್ಲ ಬಾಣಮಯವಾಗೆ ನಟ್ಟವು ಕಣೆಗಳು (ಸಂಭಪ. ೧೬-೦೨) ; ಎಡೆಬಿಡದಿಡುವ ತುಪಾಕಿಯ ಗುಂಡಿನ ಕಡುಹಿಂದ ನಡುವ ಬಾಣಗಳ ಗಡಣದಬ್ಬರದಿಂದ ಕೂಡಿದ ರಿಪುಬಲ ಕಡಿಖಂಡವಡೆದುದು (ಕಂಸವಿ. ೩-೭೭). ೪. ನೆಲೆಗೊಳ್ಳು ; ಸ್ಥಿರವಾಗು ; ಕೀಲಿಸು ; ಅಲುಗದೆ ನಿಲ್ಲು ; ಕೂಡು : ದಿಟ್ಟ ಮನಮುಂಬಿವು ತೊಟ್ಟನೆ ನಟ್ಟು ನಟ್ಟವೋಲ್ ಘಟಯಿಸೆ (ಆದಿಪು. ೩-೯೦) ; ಆತನ ವಿಷಮಶರಶಲಾಕೆಗಳಿಂ ಕೀಲಿತಮಾದಂತವಯವಂಗಳ್ ನಟ್ಟು ನಿಂದುವು (ಕಾದಂಬ. ೭೩೮) ; ಆಲಿ ನಿಮ್ಮಲ್ಲಿ ನಟ್ಟವು ನೋಡಯ್ಯ (ಮಹಾದೇ. ಬ. ೩೮-೮೦) ; ತನ್ನಯ ಸುಭೋಗಸಮಾಶ್ರಯಭಂಗಶಂಕೆಯಿಂದುನ್ನತ ಚಿಂತೆ ನಟ್ಟು ನಿಲೆ (ಬಾಧಪು. ೩-೮) ; ಕುಮಂತ್ರಿಗಳ ವಚನವಶಿಗಾಥದಲಿ ನಟ್ಟುದು (ಕುಮಾ.ಭೀ. ೧-೨೫). ನೆಟ್ಟು₁ : ೧. ಸಿವಾರಗಾವುಣ್ಡರ ಮಗ ಪೊನ್ನಯ್ಯನ ದಣ್ಡಿಗೆ ನೆಟ್ಟದ ಕವ್ಬ (ಎಕ. VI, ಕಡೂರು. ೧೦-೨೩ ; 1126?). 'ಕಿತ್ತು₁' ಪರಾ. ನೆಡು : ೧. ಆತನ ತಮ್ಮ ರಾಯನು ಅಳಿಯ ಮಾದೆಯ್ಯನುವಿಾ ಕಲ್ಲ ನೆಟ್ಟರ್ (ಎಕ. VIII, ಸೊರಬ. ೩೩೪-೧೨ ; 999) ; ಹುಟ್ಟಿದ ಮಾರ ನಟ್ಟ ಕಲ್ಲು ಮತ್ತೇತರ ಇಷ್ಟದಲ್ಲಿ ಒತ್ತಿದ ಲಿಂಗಮುದ್ರೆ ಇರಲಿಕೆ ಕಿತ್ತುಕೊಂಡವ ದ್ರೋಹಿ ಎಂಬರು (ಕೂನ್ನಸಂ. ೨೭೫-೧೫) ; ಜಂಬೂದ್ವೀಪದ ನಡುವೆ ನಿತಂಬದ ಮಣಿಕಾಂತಿ ನಿಮಿರೆ ದೆಸೆದೆಸೆಗೆ ದಿಶಾಸ್ತಂಬೇರಮಕ್ಕೆ ಬದಿ ನೆಟ್ಟಂಬಿನ [ಪಾಠಾಂ. ಬಿಸುದಿನದಂಬಿನ]ಪೊಂಗಂಭಮೆನಿಸಿ ಮಂದರಮೆಸೆಗುಂ (ಪಾರ್ಶ್ವಪು. ೧-೧೧೮) : ಜಗದ ಜಾಣರು ಸೀಮೆಯಲಿ ಹಳವಿಗೆಯ ನೆಟ್ಟರು (ಕುಮಾ.ದ್ರೋ. ಪರಿ. ೨೭೫) : ೬೦ ವರಹದ ಭೂಮಿಯಂನು ಕಲ್ಲು ನೆಟ್ಟು ಫಲಿಸಿಕೊಟ್ಟುದರಿಂದ (ಎಕ. VII, ಶಿವಮೊ. ೧೦೮-೨೧ ; 1568). ೨. ವರ್ಷದ ಯಾವ ಸಮಯದಲ್ಲಿಯೂ ಮೆಣಸಿನ ಗಿಡ ನೆಡಬಹುದು (ಆಡುಸಾ. ೧೩೮) : ಒಂದು ದಿನ ಹಿತ್ತಿಲ ಕಡೆ ಒಂದು ತೆಂಗಿನ ಸಸಿಯನ್ನು ನೆಡುವುದಕ್ಕಾಗಿ ಗುದ್ದಲಿಯಿಂದ ಅಗೆಯುತ್ತಿದ್ದೆ (ಪ್ರತಾಪ. ೪೮). ೩. ನಗುತಲಿಱಿದುಕೊಂಡರೆ ಅಲಗು ನೆಡದಿಹುದೆ (ಬಸವ. ೭೭೧) ; ಅನ್ಯವಿಮಲಾಂಭೋಜಾತಪತ್ರಾಕ್ಷಿ ಮಾಬ್ಬುರು ಬಿಬ್ಬೋಕದಲಂಪಿನಿಂಪು ಮನಮಂ ತಾಂ ನೆಟ್ಟುದೋ(ಉದ್ಭಟ.೧೧-೨೪); ಇಂತಂಗಾಲ ನೆಟ್ಟು ಕಟ್ಟುಗಿಮುಲಾ ನೋವಿನಿಂ ನಡೆಯುಡುಗುತಂದು ನೊಂದು . . . ಈ ಬಲ್ಗಸಿಯುಂ ತೆಗೆದಪೆನೆಂದೊಡೆ (ಉದ್ಭಟ. ೦೧-೦೦೩ ವ) ; ಬಿರಿಯೆ ಬಲುವಜ್ರಾಂಗಿ ಹಾಯ್ದುವು ಗಱಿಸಹಿತಲುಚ್ಚಳಿಸಿ ನೆಲದಲಿ ಸರಳು ನೆಟ್ಟವು ಕರ್ಣ ನೆನೆದನು ರುಧಿರಧಾರೆಯಲಿ (ಕುಮಾ.ಕ. ೧೧-೨೯) ; ಇಟ್ಟಡೆ ಸೆಲ್ಲೆಹ ಕಂಗಲ ಜೋಡನು ತಟ್ಟುರ್ಚಿ ಮೆಯ್ಯನುಚ್ಚಳಿಸಿ ನೆ[ಪಾಠಾಂ. ನ]ಟ್ಟಿಹುದವನಿಯನೆನೆ ರಾಮನೀಡಿಸ ಘಟ್ಟವಾಳಿಕೆಯನೇನೆಂಬೆ (ಕುರಾಸಾಂ.೦೩-೦೧೭). ೪. ಅಪ್ಪಭೋಗಂಗಳು ಲಿಂಗದಲ್ಲಿ ಮನಮುಟ್ಟ ನೆ[ಪಾಠಾಂ. ನ]ಟ್ಟರಲು ಅದೇ ಅರ್ಪಿತ ಅಂಗಲಿಂಗಾರ್ಪಿತವಾಗಿ (ಅದವ. ೨೩-೭೨) ; ನೆಟ್ಟ ನೇಹದಲವಳು ನುಡಿಗೊಡಬಟ್ಟಳೈ (ಕೊರರಾ. ೩-೧-೩೭) ; ಪರರಾಯರ ನಿಯೋಗಿಗಳಿಗೆ ಭಯಾನಕ ರಸವು ನೆಡುವಂತೆ (ಸೌಗಂಧಿ. ೬-೧೭).

ನಟ್ಟ ಕಂಭ=ಸ್ಥಿರವಾಗಿ ನಿಲ್ಲಿಸಿದ ಸ್ತಂಭ: ಮಹಾದ್ರುಮಂಗಳಂ ತಂಸಿ ನಡಿಸಿ ನಟ್ಟ ಕಂಭಂಗಳ ಮೇಗೆ ಸಾರದಾರುಗಳನೆಡೆಗಿಱಿದಿರೆ ಪಾಸಿ ಪಸಂಸಿ (ಆದಿಪು. ೧೩-೫೩ವ) ; ನಟ್ಟ ಕಂಭದ ಹಾಗೆ ದಿಟ್ಟವೀರನು ಇರಬೇಕು (ಗಾದೆ). ನಟ್ಟ ಕಲ್ಲು,ನೆಟ್ಟ ಕಲ್ಲು=(ಗಡಿಯನ್ನು ಸೂಚಿಸಲು, ಶಾಸನವನ್ನು ಕೆತ್ತಲು ಅಥವಾ ಸ್ಮಾರಕಕ್ಕಾಗಲಿ) ನೆಟ್ಟಿರುವ ಕಲ್ಲು : ಸ್ಥಾಪಿಸಿರುವ ಕಲ್ಲು : ಪ್ರಥಮಂ ದುಗ್ಗನ್ಕಱ ಮೂಡ್ಯಕಡೆ ಗೋಡೆಎ ಸಂಗ ಪೋಯರಾ ಕೆಱ ಯಿನ್ತೆಂಕೈ ನಟ್ಟ ಕಲ್ಲೆ ಪೆರ್ಗ್ಗಟನಿಯಿನ್ ಬಡಗೈ ನಟ್ಟ ಕಲ್ಲೆ (ಎಕ. X (8), ಚಿಕ್ಕಬ. ೭೭-೧೭ ; 850) ; ಸರ್ವರಱಿಯಲು ನಟ್ಟಕಲ್ಲೆ ನಿಸದಿಳೆಯೊಳಗೆ ಸುಳಿವ ಶಾಸನವೆನಿಸಿ ಪೇಳ್ವನೀ ಸತ್ಕೃತಿಯನು (ಸಿದ್ಧರಾ. ೦-೫) ; ಸಿಂಹಪೋತನ ಮಗಳು . . . ಮಹಾದೇವಿಯ ಆಳು ಬಿಸಮನ್ ಎಂಬುವನು ನಟ್ಟ ಕಲ್ಲಿಗೆ ಕೆಲವು ದಾನಗಳನ್ನು ಮಾಡಿದ್ದರೆಂದು ತಿಳಿದು ಬರುತ್ತದೆ (ನೊಳಂಬ. ೩೭). ನಟ್ಟಕ್ಷಿ, ನೆಟ್ಟಕ್ಷಿ = ಚಲಿಸದೆ ಇರುವ ಕಣ್ಣು ; ಒಂದೇ ಕಡೆಗೆ ಸ್ಥಿರವಾಗಿ ದೃಷ್ಟಿಯಿಟ್ಟ ಕಣ್ಣು ; ಅಚಲವಾದ ನೋಟ : ಆತನಿಗೆ ನಟ್ಟಕ್ಷಿಯಾಗಿ (ಜಟ್ಟಆ. ೧೩೯-೧೨) ; ಚೆಲುವ ಕೃಷ್ಣನ ಮೂರ್ತಿಯನು ಭೂವಳಯದಂಗನೆಯರು ನಿರೀಕ್ಷಿಸಿ ಬಲಿದು ನೆಟ್ಟಕ್ಷಿಗಳ ತೆಗೆಯದೆ ಯೋಗಿಗಳವೋಲು ಸಲೆ ಸುಜಾಡ್ಯಯಲಾಳುವರು (ನಿಭಾಗ. ೦೧-೩೭-೩). ನಟ್ಟಗಣ್ಣು, ನೆಟ್ಟಗಣ್ಣು = ನಟ್ಟಕ್ಷಿ : ಸ್ವಾಮಿಗೆ ಜರುಗುವ ವಿಶೇಷಪೂಜೆಗಳನ್ನು ಶಾಂತಲಾದೇವಿ ನಿಂತೇ ನೆಟ್ಟಗಣ್ಣಿನಿಂದ ನೋಡಿದಳು (ಸಪತಿ. ೨೮೮); ನೆಟ್ಟಗಣ್ಣಿನಿಂದ ನೋಡಬೇಡ (ರೂಢಿ). ನಟ್ಟಚ್ಚ = ನಟ್ಟಕ್ಷಿ : ನಟ್ಟಚ್ಚಿಯಿಂದೆ ನಿರ್ಘೃಣಮಿಾಕ್ಷಿಸುತ್ತುಂ (ಸಂಸಪ. ೨೨-೨). ನಟ್ಟ ದಿಟ್ಟ, ನೆಟ್ಟ ದಿಟ್ಟ = ನಟ್ಟಕ್ಷಿ : ತಾಂ ಪಿಂಗದೆ ನಟ್ಟ ದಿಟ್ಟಿಯನವಂ ಕಿಟಲೆಂದನುಗೆಯ್ದು ತೂಗಿದು (ಆದಿಪು. ೧೨-೧೩) ; ಬಗೆ ಬೆಚ್ಚು ನಟ್ಟ ದಿಟ್ಟಿಯನುಗಿಯಲ್ಕಂ ಬಗೆಯ ತಾಱದೆ (ಶಾಂತಿಪು. ೫-೫) ; ಕಿವಿಯಂ ಕತ್ತರಿಸಿ ಶರೀರಮಂ ಸಂಕೋಚಿಸಿ ನಟ್ಟ ದಿಟ್ಟ[ಪಾಠಾಂ. ದಿಟ]ಗಳ್ವೆರಸು ನಿನ್ನನೆ ನೋಡುತ್ತುಮಿರ್ಕುಂ (ಪಂಚತಂ. ೧೭೭-೦೩) ; ವಿಡುಕದೆ ಮೆಯ್ಯಿಕ್ಕದೆ ವನಿತಾರತ್ನಮಂ ವಪ್ರಲೇಪದೊಳ್ಬತ್ತಿದಂತೆ ನಟ್ಟ ದಿಟ್ಟಿಯಂ ತೆಗೆಯಲಾಱದೆ ನೋಡಿ ನೋಡಿ (ಧರ್ಮಾಮೃ. ೩-೧೩೮ ಅಡಿಪದ್ಯ); ಕವಪಿನಲಿ ನೆಲಸಿದ ಕೈ ನಟ್ಟ ದಿಟ್ಟಿಯ ಕಾಮುಕರಲಸದೀಕ್ಷಿಸಿದರಂದವಳ (ಕಂಸವಿ. ೯-೯೪). ನಟ್ಟ ದೃಷ್ಟಿ=ನಟ್ಟಕ್ಷಿ : ನೋಡುತಿರ್ದನು ನಟ್ಟದೃಷ್ಟಿಯೊಳೊಗುವ ಜಲದಲಿ ರೋಮಪುಳಕದಲಿ (ಕುಮಾ.ಆ. ೬-೭೮). ನಟ್ಟ ಬಡಪ = ನಿರಂತರವಾಗಿ ಸುರಿಯುವ ಮಳೆ ; ಜಡಿಮಳೆ : ತುಂತುರ್ ತುಷಾರವಿಡುಕುಂಬನಿ ತಂದಲ್ತೋನೆ ನಟ್ಟ ಬಡಪಮೆನಲ್ ಸುರಿದುವು ಬಿಡದೆ ಮುಗಿಲ್ಗಳಿರುಳುಂ ಪಗಲುಂ (ಜಗವಿ. ೪-೩೨). ನಟ್ಟವನಿ, ನಟ್ಟೆವನಿ = ನಟ್ಟಬಡಪ: ಅಡಸರಿ ಬಲ್ಸರಿಯಱಿವಳೆಯಿಡುಕುಂಬನಟ್ಟೆವನಿ ತುಷಾರಂ . . . ತುಂತುರ್ ಬಿಡದಡಿಯಿಡಗೊಡದೆ ಕಱಿದುವಿರುಳುಂ ಪಗಲುಂ(ತ್ರಿಪುವಿ. ೮-೩೯); ಲೋಪವಿಲ್ಲದುಚಿತಾಕ್ಷರಾಗಮಕ್ಕೆ—ನಟ್ಟೆವಾನ್, ನಟ್ಟೆವನೆ, ನಟ್ಟೆಗೆಂಬು, ನಟ್ಟೆವನಿ. ಇಲ್ಲಿ ಎಕಾರಮುಚಿತವರ್ಣಾಗಮಂ (ಶಮದ. ೦೭೭ ಪ್ರಯೋ). ನಟ್ಟಾಲಿ, ನೆಟ್ಟಾಲಿ = ನೋಟ ಬದಲಾಯಿಸದ ಕಣ್ಣುಗುಡ್ಡೆ ; ನೇರವಾಗಿ ನೋಡುವ ಕಣ್ಣು ; ನಿಡುನೋಟದ ದೃಷ್ಟಿ : ಪದೆದಾಂ ನೋಡಿದೆನಾತನಿರ್ದ ದೆಸೆಯಂ ನಟ್ಟಾಲಿ ಬೀಳ್ವನ್ನೆಗಂ

(ಕಾದಂಪೂ. ೭೮೯); ಬಹುಕದನಮನೊರ್ಡರ್ಚಲೆಂದು ನಟ್ಟಾಲಿಗೊಂಡು ಮುಟ್ಟೆವರ್ಪನಂ ಕಂಡು (ಜಗವಿ. ೯-೩೯ ವ); ನೋಡಿದಳಬ್ಜಾನನೆ ನಿನ್ನ ಚಿತ್ರಪಟಮಂ ನಟ್ಟಾಲಿ ಬೀಳ್ವನ್ನೆಗಂ (ದಶಕು. ೧೦-೩೨); ಮಲೆಯಂ ಸಾರ್ದೋಡಿ ಬಾಲಂ ತೊನೆಯೆ ಕುಸಿದ ಗೋಣೆತ್ತಿ ನಟ್ಟಾಲಿಯಿಂ ಹವ್ವಳಿ ಸುತ್ತಂ ನೋಡಿ (ತ್ರಿಪುವಿ. ೨೭-೭೦); ಬಟ್ಟಲೊಳ್ವಿಡಿದ ಮಧುರಸವನಾ ವೇಕ್ಷೆಯಿಂ ನಟ್ಟಾಲಿಯಿಂದೀಕ್ಷಿಸಲ್ (ಚಂಪು. ೧೧-೭೨); ಕಟ್ಟಿದಿರೊಳೊಂದು ಚಟಕೆ ನೀಡದೋರ್ದರ್ಪಂ ಕಿಱುಮುಱಿಯಂ ತುಟುಂಕಿತ್ತು . . . ಲಲ್ಲೆ ಗೆಯ್ವುದಂ ನಟ್ಟಾಲಿಯೊಳಳೀಕ್ಷಿಸಿ ಮಕ್ಕಳ ಬಯಕೆಯಂ ಜಾನಕಿ ಸಖಿ ಗಿಂತೆಂದರ್ (ರಾಮಾಶ್ವ. ೧೮-೩); ನೆತ್ತಿ ಮುಸುಕಿನ ಕೈಯ ಗಲ್ಲದ ಕುತ್ತದಲೆ ನೆಟ್ಟಾಲಿಗಳ ಚಲಚಿತ್ತರಿದ್ದುದು ಸಕಲ ನಾಯಕವಾಡಿ ದುಗುಡದಲಿ (ಕುಮಾವ್ಯಾ. ೪-೪). ನಟ್ಟು ನಿಲ್ = ಸ್ಥಿರವಾಗಿ ನಿಲ್ಲು; ಅಚಲವಾಗಿ ನಿಲ್ಲು: ಆವೆಡೆಯೊಳಂ ವಿಕ್ರಮಂ ಕ್ರಮಮೆನಿಸಿದುದಱಿಂ ಪರಾಕ್ರಮಧವಳ ನುಂ ಎಂತಪ್ಪ ಸಂಗ್ರಾಮದೊಳಂ ಪೋಗದೆ ನಟ್ಟು ನಿಲ್ವುದಱಿಂ ಸಮರೈಕ ಮೇರುವುಂ (ಪಂಪಭಾ. ೧೪-೩೭ವ). ನಡ ದಿಟ್ಟಿಸು = ನೆಟ್ಟನೋಟದಿಂದ ನೋಡು; ದುರುಗುಟ್ಟಿಕೊಂಡು ನೋಡು: ಪರಸ್ಪರರನ್ನು ನುಂಗಿ ಕೊಳ್ಳಲೆಂಬಂತ ಕೆಂಡಗಣ್ಣಿಂದಿವರಂ ನಡೆ ದಿಟ್ಟಿಸುತ್ತಿರುವುದು ಇವುಗಳ್ಳ ಪೂರ್ವಪರಿಚಯವನ್ನು ಬಿಟ್ಟಾಡಿ ಕುಡುತ್ತಿದೆ (ಮಂತ್ರಶ. ೨೨-೭). ನೆಟ್ಟಗಣ್ಣು ಬೀಳು = ಗುಡ್ಡೆ ಅಲುಗಾಡದಿರು; ಸಾವು ಸಮೀಪಿಸಂ.

[ದೇ.೫ ತಮಿ. ನಟು; ಮಲ. ನಡು; ಕೊಡ. ನಡಿ]

**ನಡು₁** (ನಾ). ೧. ಮಧ್ಯಭಾಗ; ಕೇಂದ್ರ: "ನಡು–ಸಂಸ್ಥಾವನೇ, ಮಧ್ಯೇ ಚ" (ಶಮುದಾ); "ಮಧ್ಯಮಾಯಮೆನೆ ಮಧ್ಯಮೆನೆ ನಡುವಕ್ಕು" (ಮಂಗರಾ. ೦೪೫-೩೮); ಪೂವಿನ ಪಿಪ್ಪರಗೆ[ಯ ನಾಲ್ಕುದೆಸೆಯ ಪೊಲಮೇರೆಯುಂ ನ]ಡು ಸರಿಯಾಗಿ ನಡದು[೦]ಕೊಟ್ಟರ್ (ಸೌಇಇ. XI-i, ೯-೩೪; 862); ಕಡೆವಿಡಿದು ಬಳಸಿ ನೀರಿರೆ ನಡು ಬತ್ತಿದ ಕೆಱೆಯನಿಂತು ಕಂಡುದಱಿಂದಂ ನಡು ನಾಡೊಳಱಂ ನೆಲಸದೆ ಕಡೆಯೊಳ್ ನೆಲೆಗೊಳ್ಗುಂ (ಆದಿಪು. ೧೫-೪೦); ಎತ್ತೆತ್ತಂ ನೋಟ್ಟಡೆಂತುಂ ಕಡೆ ನಡು ಮೊದಲೆಂಬೀ ವಿಭೇದಂಗಳಂ ತೋಱು ತ್ತಿಲ್ಲಂತೆಂದೆನಿಪ್ಪಾಗಸದೊಳ್ (ಶಾಥಪು. ೧-೬೦); ಕರಗಸದ ನಡು ಬಡ ವಾದರೆಯು ಕೊಱೆದಿಕ್ಕದೇ ತರುವ (ಸಂಥವ. ೨೦-೩೯); ತುದಿ ಮೊದಲು ನಡುವೆಂಬ ಲಯುದಭ್ಯುದಯಮೆಂಬ ವಿಕಾರಗಳು ಸೋಂಕದ ಸನಾತನಗಾಯ್ತು ಲೀಲೆ ಮನುಷ್ಯರೂಪಿನಲಿ (ಕೊರಿರಾ. ೧-೮-೭೨). ೨. ಶರೀರದ ಮಧ್ಯ ಭಾಗ; ಸೊಂಟ; ಟೊಂಕ: "ಅವಲಗ್ನಂ, (ವಿ)ಲಗ್ನಂ, ಮಧ್ಯಂ, ಮಧ್ಯಮಂ – ಈ ೪ ನಡು" (ಹಲಾಯು. ೧೫-೩೭೩); ಬಡಿ ಕೊರಲ್ ಕಟ್ಟಱು ಮುಱಿ ಕಡಿ ನಡುವಂ ಕೊಱೆ . . . ನುಂಗೆಂದು ಮುಸುಱಿ ನಾರಕರಾಗಳ್ (ವಡ್ಡಾರಾ. ೧೨೭-೧೧); ಆಕೆಯ ನಡುವಿನ ಬಡತನಮುಂ ಪಗೆವರ ಸಿರಿಯು ಮೊಡನೊಡನೆ ಕೆಟ್ಟುವು (ಪಂಪಭಾ. ೧-೧೧೧ ವ); ನಡುವುಡಿವನ್ನಮೋಱು ಬರಿಯೆಲ್ವುಡಿವನ್ನಗಮೊತ್ತಿ . . . ಉರಮನಿರ್ಬಗಿಯಾಗಿರೆ ಪೋಟ್ಟು (ಗದಾಯು. ೫-೪); ತಡೆಯದೆ ಮಗಳೆಂದಳಿಯನ ನಡುವಂ ತಟ್ಕೈಸಿಕೊಂಡು ಹಿತ್ತಲ ದೆಸೆಯೊಳ್ ಬಡದೋಡುವಾಕೆ ಕಾಣದೆ ಕೆಡೆದಳ್ತಲ್ಲಣದಿನಾಗಳೆಂಜಲ ಕುಱಿಯೊಳ್ (ಧರ್ಮಾಮೃ. ೨-೪೪); ಸಿಂಗದ ನಡು ಮುಱಿಯಲಾ ಸಿಂಗ ವೇನು ಬಾತೆ (ಬಸವ. ೭೩೪); ಸಡಿಲೆ ಮುಡಿ ಬಳ್ಕೆ ನಡು ದಡದಡಿಸುತ್ತಿರೆ ತೊಡಗಳುಣ್ಚೆ ನೂಪುರನಿನದಂ (ಕುಸುಮಪಾ. ೮-೯); ಕವಿಲು ಖಂಡಿಸಿ ಬೀಳೆ ಕರುಳಿನ ಮಾಲೆಯೊಳು ತೊಡಕಿದುವು ಪಡಿದವ ಬಾಳೆಯುಂಡದೊಳುಡಿಯೆ ತೊಡೆ ನಡು ಮುಱಿಯೆ ಕಟಿ ಕೆಡಱಿ (ಕುಮಾಭೀ. ೪-೩೦); ಬೈಗಿನ ಕೆಂಬಿಸಿಲ ಬೆಳಗಿಂಗೆ ದೊರೆವರ್ಪ ಪೀತಾಂಬರದುಡೆ ನಡುವಿನೊಳ್ ವಿರಾಜಿಸ (ರಾಮಾಶ್ವ. ೬೯-೨೦).

ನಡುಕಲ = ಮಧ್ಯದ; ನಡುವೆಯ: ನಡುಕಲ ಹೆಂಡತಿಯಾದ ಕೈಕೆಯ ಹೊಟ್ಟೆಯಲ್ಲಿ ಭರತ ಹುಟ್ಟಿದನು (ನೀತಿಚಿಂ. I, ೦೩); ನಾನು ಇನ್ನೂ ಮಗು ವಾಗಿದ್ದಾಗ, ನನ್ನ ನಡುಕಲ ಅಣ್ಣ ಸಿವಿಲಿಯನ್ ಆಗಿ ನಮ್ಮ ದೇಶಕ್ಕೆ ಹಿಂತಿರುಗಿ ಬಂದಿದ್ದನು (ನಿಬಂಧ. II, ೩೪); ಹಿರಿಯವನು ಒಂಬತ್ತು, ನಡು ಕಲವನು ಆರು, ಕಿರಿಯವನು ಎರಡು ಆನೆಗಳನ್ನು ಹಂಚಿಕೊಂಡರು (ಕಸಾಪ. ೧-೦೨೯). ನಡುವಣ = ಮಧ್ಯಭಾಗಕ್ಕೆ ಸಂಬಂಧಿಸಿದ; ಮಧ್ಯ ದಲ್ಲಿರುವ: "ಮಧ್ಯಮಂ, ಮಧ್ಯಮಾಯಂ, ಮಧ್ಯಂದಿನಂ – ಈ ೩ ನಡು ವಣದು" (ಹಲಾಯು. ೧೨೭-೯೦); ಸದಭಿಸ್ತುತಮಪ್ಪೊಂತುಂದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ (ಕವಿರಾ. ೧-೩೭); ಕೌರವರ್ ಕಡಲ ನಡುವಣ ಪರ್ವತದಂತಲ್ಲಾಡೆ (ಪಂಪಭಾ. ೭-೧೫ ವ); ಎರಡುಂ ಕೆಲದೊಳು ಮಿರ್ವರುಮರಸಿಯರಿರೆ ಸೊಗಯಿಸಿರ್ದನವನಿಪನೆರಡುಂ ಕರಿಣಿಗಳ ನಡುವಣೆಡೆಯೊಳ್ ಕರೀಂದ್ರನೊಪ್ಪುವವೊಲ್ (ಶಾಂತಿಪು. ೧-೭೩); ಪೊಸವಂದರ ನಡುವಣ ಪೂವಿನೆಸಟ ಪಾಸಿನೊಳಿರ್ದನಲ್ (ಕಾದಂಬ. ೨೨೩); ಕಡೆಯ ದಳಂಗಳೆ ವಜ್ರಂ ನಡುವಣ ಕರ್ಣಿಕೆಯೆ ಕೇವಣಂ (ಗದಾಯು. ೬-೪೩); ನಕ್ಷತ್ರಗಣಂಗಳ ನಡುವಣ ಚಂದ್ರಬಿಂಬದಂತಿರ್ದ ಸಂಬಿಯಣ್ಣನಂ ಕಂಡು (ನಂಬಿರ. ೨-೪೮); ದಿಗ್ವಾಚಿಯ ಅಣ್ಗೆ . . . ನಡುವಣಂ, ಕಡೆಯನಂ . . . 'ನಡು' ಎಂಬುದು ಶರೀರಮಧ್ಯಮಂ ಕುಱಿತು ದಿಗ್ವಾಚಕಮಲ್ತು, ಮಧ್ಯಮಂ ಕುಱಿತು ದಿಗ್ವಾಚಕಂ (ಶಮದ. ೧೧೦ ಪ್ರಯೋ); ಸುಳಿಯ ಬಹುದಂಬುಧಿಯ ನಡುವಣ ಸುಳಿಯೊಳಗೆ . . . ಕಾಣೆನು ಗೆಲುವ ಹದನನು ಮಗನೆ ಪದ್ಮವ್ಯೂಹದೊಡ್ಡಣೆಯ (ಕುಮಾವ್ಯಾ. ೪-೩೭). ನಡುವಣಂ = ನಡುವೆ ಇರುವವನು; ಮಧ್ಯದವನು: ಪುದಿದಿರ್ಪ ಶ್ವೇತಾತಪತ್ರೋತ್ಕರದ ನಡುವಣಂ ವಜ್ರದಂತೆ ಸಮಂತೆತ್ತಿದ ಪಿಂಛಚ್ಛತ್ರಮಂಡಂಗಳ ನಡುವೆಸೆವ ವಜ್ರಬಾಹುಕ್ಷಿತೀಶಂ (ಆದಿಪು. ೪-೨೫); ಮೇಗಣಂ, ಕೆಳಗಣಂ, ನಡುವಣು (ಶಮದ. ೧೧೦ ಪ್ರಯೋ). ನಡುವಣಕ್ಕರ = [ಛಂದ] ಅಂಶಗಣದ ಒಂದು ಪದ್ಯಜಾತಿಯ ಹೆಸರು; ಐದು ಬಗೆಯ ಅಕ್ಕರಗಳಲ್ಲಿ ಒಂದು,– ನಡುವಿನದಂ: ಜಳಜಸಂಭವಗಣಮಕ್ಕೆ ಮೊದಲೊಳೆ . . . ಕಾಮಬಾಣಾ ವಳಿಯ ಪಾಂಗೆಯ್ದೆ ಗಣಮಕ್ಕೆ ನಡುವಣಕ್ಕರಕ್ಕೆ ಸಖೀ (ಛಂದೋಂಬು. ೫-೨೪೪); ನಾಗವರ್ಮನು ೫ ಅಕ್ಕರಗಳನ್ನು ಹೇಳಿರುವನು:– ಪಿರಿಯಕ್ಕರ, ದೊರೆಯಕ್ಕರ, ನಡುವಣಕ್ಕರ, ಎಡೆಯಕ್ಕರ, ಕಿರಿಯಕ್ಕರ (ಕೈಪಿಡಿ. ೧೨೫); ನಡಂವಣಕ್ಕರದ ಗಣಯೋಜನೆ . . . ಮೊದಲು ಒಂದು ಬ್ರಹ್ಮ, ನಡುವೆ ಮೂರು ವಿಷ್ಣು, ಕೊನೆಯಲ್ಲಿ ಒಂದು ರುದ್ರಗಣ (ಛಂದೋವಿ. ೧೩೯). ನಡುವಲ, ನಡುವಳ = ಮಧ್ಯದ; ನಡಂಕಲ: ನಡುವಲವನು ಮಾರಯ್ಯ ಮನೆಯಲ್ಲಿದ್ದಾನೆ (ದಾನಚಿಂ. ೮೬); ಹಿರಿಯ ಮಗನ ಕಾಲ ಮುಱಿದು ನಡುವಳ ಮಗನ ಕಯ್ಯ ಮುಱಿದು ಕಿಱಿಯ ಮಗನ ಬಾಯ ಮುಚ್ಚಿ (ಅಱವಸಾ. ೧೪೭-೫೫೯).

[ದೇ.೫ ತಮಿ. ನಟು; ಮಲ. ಕೊಡ. ತುಳು. ನಡು; ತೆಲು. ನಡು. ನಡಿ; ಕೊಲಾ. ನಡುವ್; ನಾಯ್ಕಿ. ನಜುವ್; ಪರ್ಜಿ. ನಜುಬ್]

△ ನಡುಂಗು 'ನಡುಂಗು₁' ನೋ.

**ನಡುಕ** (ನಾ). ೧. (ಚಳಿ, ಭಯ, ಜ್ವರ ಮುಂತಾದ ಕಾರಣಗಳಿಂದ) ಕಂಪಿಸುವಿಕೆ; ಅದಿರುವಿಕೆ; ನಡುಂಗುವಿಕೆ; ಕಂಪನ: "ವೇಪಥುಃ, ಕಂಪಃ – ಈ ೨ ನಡುಂಕು" (ಹಲಾಯು. ೯೮-೪೪೩); "ವೇಪಥು ಕಂಪಮೆನೆ ನಡುಕಮಕ್ಕುಂ" (ಮಂಗರಾ. ೧೧೩-೨); ಆಗಳಾದಿತ್ಯನಾಕೆಯ ಮನದ ಶಂಕೆಯುಮಂ ನಡುಗುವ ಮೆಯ್ಯ ನಡುಕಮುಮಂ ಕಿಡೆ ನುಡಿದಿಂತೆಂದು (ಪಂಪಭಾ. ೧-೯೨ ವ); ಶೀತಂ ನಡುಕಂ ಬೆವರುದ್ಭೂತಂ ತಲೆಬೇನೆ . . . ವಾತಜ್ವರಚೇಷ್ಟೆ ನೋಯೆ ಕಿವಿದೋಳುಗೆಗಳ್ (ಕಲ್ಯಾಕಾ. ೩-೭); ಕಾಲೊಳ್ ನಡುಕಂ ಮೆಯ್ಯೆರ್ಚೆ ಗಂಟಲ್ ಕುಸಿದು ಕಿವಿಯೆಬಲ್ಪಂದು ನಿಂದಿರ್ದುದೋ ರೊಂದೆಡೆಯೊಳ್ ತಾಱಲ್ಗಳೊತ್ತಂಬಡಿದು ಮೃಗಮೃಗೀವೃಂದಮೇರಂದ

ದಿಂದಂ (ಚಂದ್ರಪು. ೪-೪೭) ; ಭಾವದೊಳ್ ಕ ಪ್ರತ್ಯಯಮುಂಟು–ಉಡುಕಂ. ನಡುಕಂ – ಎಂಬಂತೆ (ಶಮದ. ೨೦೨ ಪ್ರಯೋ) ; ಶಿರದ ಗಂಗೆಯ ತೂಱಿ ತುಹಿನಾಕರನನಂಬರಕಿಟ್ಟು ಹಣೆಗಣ್ಣುರಿಯನೆಬ್ಬಿಸಿ ತನುವನೊಡ್ಡಿದನಭವ ನಡುಕದಲಿ (ತೊರರಾ. ೩-೨-೩) ; ನಡುಕಂ ಕೈಮಿಱೆ ದಂತಚ್ಛದಮೊಡೆ ದುಹುದುಧ್ವಾನಮುಂ ಪೊಣ್ಮೆ . . . ಪಾಂಥತರ್ಜಡೆ ತೋಳ್ಗಳ್ಕ್ಕಡೆ ಜಾನು ಪ್ರಹಿತಶಿರರದೇನಿರ್ದರೋ ಶೀತಭೀತರ್ (ರಾಜಶೇ. ೯-೨೨). ೨. ಅಂಜಿಕೆ ; ಭಯ ತಲ್ಲಣ ; ಭೀತಿ : ಮೆಲ್ಲರ್ದೆಯ ನಡುಕಮಂ ಮಾಣೆ ಸಲ್ಸಂಭ್ರಮಿಸುವಂತಿರಾ ಕಂಪಿಪವಯವಂಗಳುಂ (ವರ್ಧಪು. ೬-೧೨ ವ) ; ತುರಗಾಕಾರದ ಶೈಳಮನಿರದಡರ್ದೇಱಿದೊಡೆ ಬೆಚ್ಚಿ ನಡುಕದಿನಾಗಳ್ ತುರಗಾಶ್ರುಮನುಚ್ಚೈಶ್ರವತುರಗೋಪಮನಿತ್ತು [ತ್ತ] ದೊಂದು ತುರಗಮ ನಿತ್ತಂ (ಬಂಹರಿ. ೮-೩೮) ; ಸೌಂದರಸುಂ ತುಂಬುರನುಂ ಬೆಗಡುಗೊಂಡು ಬೆಬ್ಬಳೆವೋಗಿ ನಡುಕದ ಮಳೆ ಕಱೆದು . . . ಕೌತುಕರಸದೊಳವಗಾಹಮಿರ್ದು (ಸಂಬಿರ. ೧೮-೪೩) ; ಶ್ರೀಮಂತರ ಮನೆ ಅಂದರೇನೇ ನನಗೆ ನಡುಕ ಬರುತ್ತದೆ (ಶಿಕ್ಷ. ೪) ; ಈ ಮಾದರಿಯ ಬೈಗುಳಗಳನ್ನು ಎಂದೂ ಕೇಳದ ಜ್ಞಾನಾಂಬೆಗೆ ನಡುಕವುಂಟಾಗಿ ಜ್ವರವೂ ಬಂದು ಗರ್ಭಕ್ಕೆ ಧಕ್ಕೆ ಬರುವಂತಾಗಿ ಬಿಟ್ಟಿತು (ಪ್ರಶಾಪ. ೪೧). ೩. (ಅಲಂ) ಚಂಚಲವಾದುದಂ ; ಸ್ಥಿರವಲ್ಲದುದು : ಪೊಲಸಿನಂತಶುಚಿಯಪ್ಪ ವಾತದಂತೆ ನಡುಕಮಪ್ಪ . . . ಕೊಡದ ನೀರಂತೆ ಪೆರ್ಚಿಸಲರಿದಪ್ಪ ಸಂಸಾರಮಂ ನಂಬಿ ದರ್ಶನಮುಮಂ ವ್ರತಮುಮಂ ಕೆಡಿಸುವುದೆಗ್ಗಿಕೆ (ಧರ್ಮಾಮೃ. ೩-೧೮೭). ೨, ೩ : ನಡುಕಮುಮಾಱಡಿಯುಂ ಚೂತ ಮಂಜರಿಯೊಳ್ (ಎಕ. XIII, ೩೩೨-೪೩ ; ೧೭೨೯).

[ < ನಡುಗು$_1$./ತಮಿ. ನಟುಕ್ಕ ]

**ನಡುಕಂಗಿಡು** (ಕ್ರಿ). ಕಂಪನ ನಿಲ್ಲು ; ನಡಂಗುವಿಕೆ ಇಲ್ಲದಾಗು : ಪದುಳಿಸ ದುಗಮೆಬ್ಬಱದ ಕಣ್ಮಲರ್ . . . ನಡುಕಂಗಿಡದೂರು ಗಂದಯೇಱದ ಕರಘಾತಮೊಪ್ಪೆ ಸುಸಿಲಿಂ ತಣದೊಯ್ಯನೆ ಜಾರೆ ಜಾಱಿದಳ್ (ಲೀಲಾವ. ೩-೧೫). [ ನಡುಕ + ಕಿಡು ( < ಕೆಡು$_1$ ) ]

**ನಡುಕಂಗೊಳ್** (ಕ್ರಿ). ೧. ಕಂಪಿಸು ; ನಡಂಗು. ೨. ಭಯವನ್ನು ಹೊಂದಂ ; ಹೆದರು : "ಸಡೆದನೆಂದುಂ, ನಡುಕಂಗೊಂಡನೆಂದುಂ . . . ಕೆಮರ್ತನೆಂದುಂ–ಈ ಲ ಭಯಂಗೊಂಡವಂ" (ಶಶಸಾ. ೫೭-೨೨೫) : ಇಂದ್ರಂ ವಹ್ನಿ ಧರ್ಮಂ ನಿರುತಿ ಜಲಧಿಪಂ ವಾಯು ವಿತ್ತೇಶನೀಶಂ ನಡುಕಂಗೊಳ್ವಂ ಸುರುಳ್ವಂ ಸುಗಿವವಗಿವನುಳ್ಳಳ್ಕುವಂ ಬಳ್ಕುವಂ ಪಾವಡದರ್ಗಂತಿರ್ಪಂ ಬೆಮರ್ವಂ ಜಯೆಪೊಡೆದ ರವಕ್ಕದ್ಭುತಂ ಕಂಸಚಾಪಂ (ಜಗವಿ. ೬-೩೦).

[ ನಡುಕ + ಕೊಳ್$_1$ ]

**ನಡುಕಂಬೆರು**, ನಡುಕವೆರು (ಕ್ರಿ). ೧. ನಡಂಕವನ್ನು ಹೊಂದಂ ; ಕಂಪಿಸು : ನಡುಗು. ೨. ಭೀತಿಯನ್ನು ಹೊಂದು ; ಹೆದರು ; ಭಯಗೊಳ್ಳು : ನಡುಕಂಬೆತ್ತಿರ್ಪಳಂ ಸೋಂಕುವೆಯಡಿಗಡಿಗಂ (ದಾಕಂಂಶ. ೧೧-೨೪). **ನಡುಕವೆರು** :೧. ನಡುಕವೆತ್ತಿದ ಅವಳ ಕೈಬೆರಳುಗಳು . . . ಬಳೆಗಳನ್ನು ತೆಗೆಯಲೊಲ್ಲದೆ ಹೋದುವು (ಭಾರವೀ. ೩).

[ ನಡುಕ + ಪೆರು$_1$ ( < ಪೆಱು$_1$ ) ]

**ನಡುಕಟ್ಟು$_1$** 'ನಡುಗಟ್ಟು$_1$' ನೋ.

**ನಡುಕಟ್ಟು$_2$** 'ನಡುಗಟ್ಟು$_2$' ನೋ.

**ನಡುಕಡಲು** 'ನಡಂಗಡಲ್' ನೋ.

**ನಡುಕವೆರು** 'ನಡುಕಂಬೆರು' ನೋ.

**ನಡುಕಾನನ** (ನಾ). ಅರಣ್ಯದ ಮಧ್ಯಭಾಗ ; ನಟ್ಟಡವಿ : ನಡೆದರು ಪುಣ್ಯದ ನಿಜವೃತ್ತಿಯಂತೆ . . ನಡುಕಾನನವ ಹೊಕ್ಕರು ಉಗ್ರದಡವಿಯ ಮೃಡ ಬಲ್ಲನವರ ದುಃಖಗಳ (ಹರಿಸಾಂ. ೩-೩೮). [ ನಡು$_2$ + ಕಾನನ ]

**ನಡುಕೇರಿ** 'ನಡುಗೇರಿ' ನೋ.

**ನಡುಕೋಣೆ** (ನಾ). ಮನೆಯ ನಡುವಿನಲ್ಲಿರುವ ಕೋಣೆ ; ನಡುಮನೆ : ನರ್ಸಿಗೆ ಪೊರಗಿನಿಂದ ಉತ್ತರ ಬಾರದಿರಲು, ಅವಳಾಗಿಯೇ ನಡುಕೋಣೆಗೆ ಬಂದು ನೋಡಿದಳು (ಒಡ.ಉ. ೪೯). [ ನಡು$_2$ + ಕೋಣೆ$_2$ ( < ಕೋಣ್ ) ]

**ನಡುಕೋಲ್** 'ನಡುಗೋಲ್' ನೋ.

**ನಡುಗಂತಿ** (ನಾ). ಎಳಗಂದಿಯಾಗಿರುವ ಸ್ಥಿತಿಯನ್ನು ದಾಟಿದ ಹಸು ; ಕರುವಿನ ಮಧ್ಯಕಾಲದಲ್ಲಿರುವ ಹಸಂ : ನಡುಗಂತಿಯಾದ ಹಸಿಗೆಯ ಹಸುವಿನ ಮೊಸರು ಕಡೆದ ಹೊಸ ಬೆಣ್ಣೆಯಂ ಸೋದಿಸಿಯೊಲೆಯೊಳೆತ್ತಿ... ತುಪ್ಪಮುಂ ಹಸಮಾಳ್ಪುದು (ಸೂಪಶಾ. ೨-೧೭). 'ಎಳೆಗಂತಿ' ಪರಾ.

[ ನಡು$_2$ + ಕಂತಿ$_1$ ( < ಕಂದಿ$_1$ ) ]

**ನಡುಗಂಬ** 'ನಡುಗಂಭ' ನೋ.

**ನಡುಗಂಭ**, ನಡುಗಂಬ (ನಾ). ಮಧ್ಯಭಾಗದಲ್ಲಿರುವ ಕಂಭ,–ಸ್ತಂಭ : ಅವಳ ವಿಪರೀತವೇಷಂ ತನಗೆ ರೋಷಮನೀಯೆ ಸಾಯೆ ಸದೆಬಡಿದು ಮನೆಯ ನಡುಗಂಭದೊಳಡಸಿ ಕಟ್ಟಿ ಕಳ್ಳಸೂರ್ಕಿನೊಳಮವಳ ಪೊರ್ಕುಳ ಯೊಳಂ ಬಟಲ್ದು ನಿದ್ರಿತನಪ್ಪುದುಂ (ಶಂಭಶಂ. ೭೪-೨೧). **ನಡುಗಂಬ** : ಸುತ್ತುಮೆಟ್ಟಿಲು ಹಂತದ ನಡುಗಂಬ (Newel. ಇಂಕನ್ನ).

[ ನಡು$_2$ + ಕಂಭ ]

**ನಡುಗಟ್ಟು$_1$**, **ನಡುಕಟ್ಟು$_1$** (ಕ್ರಿ). ೧. ಸೊಂಟಕ್ಕೆ ಬಟ್ಟೆ ಮುಂತಾದುವನ್ನು ಸುತ್ತು,–ಕಟ್ಟು : ಎಲೆ ಮರುಳೆ, ನಡುಗಟ್ಟಿ ವೀರಮುಂಡಿಯನಿಕ್ಕಿ ಬಲಗೆಯ್ಯನೆಳೆದು ಕಿವಿಗಾನಿಸುವ ಸರಳಂ ! (ಗಿಲಿವಿಂ. ೨೮-೧೭). ೨. (ಅಲಂ) ಟೊಂಕಕಟ್ಟು ; ಸಿದ್ಧವಾಗು ; ಸಜ್ಜಾಗು : ರಣದಲ್ಲಿ ನಡುಗಟ್ಟಿ ಹಿಮ್ಮೆಟ್ಟಿದೊಡಲೊಡ್ಡಿ ಯತ್ನದಲಿ ಬಲುಬಳಲಿ (ವಿಸೀಗೀ. ೫೩-೦೭). **ನಡುಕಟ್ಟು** : ೨. ಹಜ್ಜೆಹಜ್ಜೆಗೆ ನಿಧಿಯ ಕೊಪ್ಪರಿಗೆ ಕಾದಿಹುದು ... ಎಡವಿಬೀಳುವದೊಂದೆ, ಹಿಡಿದು ಅಗೆದವರಿಲ್ಲ ನಡುಕಟ್ಟಿ ನಿಂತವ ೦ ಪಡೆಯಬಹುದು (ನೆಲಮು. ೨೦–೨೦).

ನಡುಗಟ್ಟಿ ನಿಲ್ಲು, ನಡುಕಟ್ಟಿ ನಿಲ್ಲು = ಟೊಂಕ ಕಟ್ಟಿ ನಿಲ್ಲಂ ; ಸಿದ್ಧವಾಗಿ ನಿಲ್ಲು ; ಸಜ್ಜಾಗು : ನಾವೀಗ ನಡುಗಟ್ಟಿ ನಿಲ್ಲಬೇಕಾದುದು ನಮ್ಮ ಧರ್ಮ (ಸವಿತಿ. ೬೩) ; ಅವುಗಳ ಪಕ್ಕದಲ್ಲಿ ನಂಜರಾಜಯ್ಯನ ನಚ್ಚಿನ ಜ್ಯೋತಿಷಿ ಉಪಾಧ್ಯಾಯ ನಡುಕಟ್ಟಿ ನಿಂತಿದ್ದ (ಚಿದೀವ. ೦೩೨).

[ ನಡು$_2$ + ಕಟ್ಟು$_1$ ]

**ನಡುಗಟ್ಟು$_2$**, **ನಡುಕಟ್ಟು$_2$** (ನಾ). ಸೊಂಟಕ್ಕೆ ಕಟ್ಟುವ ಬಟ್ಟೆ ಮುಂತಾದ ಪಟ್ಟಿ ; ಸೊಂಟಪಟ್ಟಿ : ತೊಟ್ಟಿಸೆವಾ ಕರಿಯ. ನಡುಗ [ಖಾಶಾಂ. ಕ]ಟ್ಟಿಸಂಗಿಗೆವೆರಸಿದ ತಲ್ಲೀಖಿವಾಹನುನ್ನತದೇಹಂ (ವರ್ಧಪು.೩-೧೩). **ನಡುಕಟ್ಟು$_2$** : ಬೆಳ್ಳಿಯ ನಡುಕಟ್ಟು–ನೀಲಿಯ ಮೇಲಂಗಿ (ಅರ್ಯಕ. ೦) ; ಪ್ರತಿಯೊಬ್ಬನೂ ತನ್ನ ನಡುಕಟ್ಟಿನಲ್ಲಿ ಆವಾಗಲೂ ಒಂದು ಚೂರಿಯನ್ನೋ, ಕಠಾರಿಯನ್ನೋ ಇಟ್ಟೇ ಇರುತ್ತಿದ್ದನು (ರಾಜಾಮು. ೨೦) ; ಕಾಡುಕೋಳಿಗಳನ್ನೂ, ಕೆಲವು ವೇಳೆ ಬೇರೆ ಪ್ರಾಣಿಗಳನ್ನೂ ಕೊಂದು ನಡುಕಟ್ಟಿನಲ್ಲಿಟ್ಟು ಕೊಂಡು ಬರುತ್ತಿದ್ದನು (ಮಲಿಸಾ. ೧೨೮) ; ಆಗದೋನೆ ಭೋಗದೋನೆ ನಾಗರಾ ನಡುಕಟ್ಟಿನೋನೆ (ಹಳ್ಳಿಪಾ. ೩೭). [ ನಡು$_2$ + ಕಟ್ಟು$_3$ ]

**ನಡುಗಡಲ್**, ನಡುಕಡಲು, ನಡುಗಡಲು (ನಾ). ಸಮುದ್ರದ ಮಧ್ಯಭಾಗ ; ನಡುನೀರು : ನಡುಗಡಲೊಳ್ ಪಱುಗೋಲಂ ನಡೆಯಿಸುವಂಬಿಗನಂತೆ (ಧರ್ಮಾಮೃ.೭-೨೦೯); ಇಂತು ನಡುಗಡಲೊಳಾಳುವಂಗೆ ತೆಪ್ಪವಾಗುತ್ತೆ ಪಿಂಗುವರೆ (ಬಸರ. ೪-೩೦). **ನಡುಕಡಲು** : ನಡುಕಡಲಿನಲ್ಲಿ ಮುಳುಗುತ್ತಿದ್ದವನಿಗೆ ತೆಪ್ಪವಾಗಿ, ಕೈಬಿಡುವಿರಾ ? (ಹುಂಗಫ. ೪೧). **ನಡುಗಡಲು** : ಎಲೆ ವಿಧಾತನೆ ವೃಥಾ ಹೊಳೆಯ ನಡುಗಡಲೊಳಗೆ ಸಾವೆಯಂ ಮುಳುಗಿಸಿದೆಲ್ಲ (ಕುರಂಗ. ೨-೨೭). [ ನಡು$_2$ + ಕಡಲ್$_3$ ]

**ನಡುಗಡಲು** 'ನಡುಗಡಲ್' ನೋ.

ನಡುಗಡ್ಡೆ (ನಾ). ಸುತ್ತಲೂ ನೀರಿನಿಂದ ಸುತ್ತುವರಿದ ಭೂಪ್ರದೇಶ; ದ್ವೀಪ: "ಅಂತರೀಪ – ನಡುಗಡ್ಡೆ, ದ್ವೀಪ" (ಗಂಗಾವು. ೨); ದಕ್ಷಿಣ ಮಹಾಸಾಗರದಲ್ಲಿ ಹಲವು ನಡುಗಡ್ಡೆಗಳುಂಟು (ಮುಂಬಯು. ೪-೧೦೫); ಆ ನಡುಗಡ್ಡೆಯು ರಾಜಧಾನಿಯಿರಬೇಕು ಆ ಅಪೂರ್ವ ವಿಚಿತ್ರರೂಪಸಿ (ಸಿಡಿಲು. ೩೬); ಒಂದು ಕಾಲಕ್ಕೆ ಹಿಂದೀಉಪಸಾಗರದಲ್ಲಿದ್ದು, ಈಗ ಮುಳುಗಿಹೋದ 'ಲಿಮೂರಿಯಾ' ಎಂಬ ನಡುಗಡ್ಡೆಯಿಂದ ಇವರು ಬಂದವರು (ಭಾಷಾಶಾ. ೬೬); ದೋಣಿಯು . . . ರಘುನಾಥಜೀಬಾರ ನಡುಗಡ್ಡೆಯ ದಂಡೆಗೆ ಸ್ವಲ್ಪ ಹೊತ್ತಿನ ಮೇಲೆ ಬಂದು ತಲುಪಿತು (ಮೇದಿಮ. ೧೦೦).

[ ನಡು$_2$ + ಗಡ್ಡೆ ]

ನಡುಗಣ್ (ನಾ). ೧. ಕಣ್ಣಿನ ಮಧ್ಯಭಾಗ. 'ನಡುಗಣ್ಬೆಳಗು' ಪರಾ. ೨. (ಹಣೆಯ) ಮಧ್ಯದಲ್ಲಿರುವ ಕಣ್ಣು; ಹಣೆಗಣ್ಣು: ಸುರನದಿಯು ತುಡಲದ ನಡುಗಣ್ಣ ಪಂಚಾಸ್ಯದೀರ್ಘದುಭುಜದ . . . ನಿಜದ ಮೂರ್ತಿಯಂ ತೋಱಿಸಿದನು (ಸಿದ್ಧರಾ. ೨-೨೬); ಐಕಿಲ್ಗಂಜಿ ನಂಜುಂಡಂ . . . ಪಣೆಯ ನಡುಗಣ್ಣ ಕಿಚ್ಚನುಜ್ಜಳಿಸಿ ಸಜ್ಜನ ಬೆಂಬೂದಿಯಂ ಮೆಯ್ಗೆ ಪೂಸಿ ದಟ್ಟದೊವಲಂ ಪೊದೆದಗಜಿವೆರಸು ಬೆರೆವೊಡಲೋರ್ದಂ (ರಾಮಾಶ್ವ. ೧೧೫-೫). [ ನಡು$_2$ + ಕಣ್ ]

ನಡುಗಣ್ಣು, ನೆಡುಗಣ್ಣು (ನಾ). ಅತ್ತಿತ್ತ ಚಲಿಸದ ಕಣ್ಣು; ಒಂದೇ ಕಡೆಗೆ ಸ್ಥಿರವಾದ ದೃಷ್ಟಿಯುಳ್ಳ ಕಣ್ಣು; ಅಚಲವಾದ ನೋಟ: ನಿಟ್ಟುಡಿಯಿಂದ ಹೋಗಿ, ಚೆನ್ನನಿಗೆ ನಿಂತು, ಆತನಿಗೆ ನಡುಗಣ್ಣಾಗಿದ್ದು (ಮಂತ್ರಕ. ೮೨-೬). ನೆಡುಗಣ್ಣು: ನರಸಣ್ಣನು ನೆಡುಗಣ್ಣಾಗಿ ನೋಡುತ್ತ ನಿಂತುಬಿಟ್ಟನು (ನಡದಾ. I, ೪೩೬). [ ನಡು$_1$ + ಕಣ್ಣು (<ಕಣ್) ]

ನಡುಗಣ್ಬೆಳಗು (ನಾ). ಕಣ್ಣಿನ ಗುಡ್ಡೆಯ ಕಾಂತಿ; ಆಲಿಯ ಹೊಳಪು: ಸಿರಿವೊಗಮಂ ನಸುಬಾಗಿ ಕರಂ ಭೂವರನಂ ಪುರ್ಬೇಱಿಸಿ ನಡೆ ನೋಡುವ ತರುಣಿಯ ನಡುಗಣ್ಬೆಳಗಾ ಯಮೆಯಾ ಪುರ್ಬನಡರಿ ಪರಿಯೆ (ಜಯುಕಾ. ೪-೧೩). [ ನಡುಗಣ್ + ಬೆಳಗು$_2$ ]

ನಡುಗನ್ನಡ (ನಾ). ಮಧ್ಯಕಾಲದ ಕನ್ನಡ; ಹಳಗನ್ನಡ ಮತ್ತು ಹೊಸಗನ್ನಡಗಳ ನಡುವಿನ ಕಾಲದ ಕನ್ನಡ: ಈಗ ನಾವು ಬಳಸುತ್ತಿರುವ ಭಾಷೆ "ಹೊಸಗನ್ನಡ". ಇದಕ್ಕೆ ಹಿಂದೆ ಇದ್ದ ರೂಪವನ್ನು "ನಡುಗನ್ನಡ" ವೆನ್ನುತ್ತಾರೆ (ಕೃಬಿಡಿ. ೦); ಅನೇಕ ದೃಷ್ಟಿಗಳಿಂದ ಹನ್ನೆರಡನೆಯ ಶತಮಾನದ ಮಧ್ಯಭಾಗವನ್ನು ಒಂದು ಪರ್ವಕಾಲವೆಂದು ಕರೆಯಬಹುದು . . . ಭಾಷೆಯ ದೃಷ್ಟಿಯಿಂದ ನೋಡಿದರೆ ಹಳಗನ್ನಡವು ನಡುಗನ್ನಡವಾಗಿ ಸಂಕ್ರಮಣವಾಗುತ್ತಿದ್ದುದು ಆ ಕಾಲದಲ್ಲಿಯೇ (ಕಶಾಅ. ೭); ನಡುಗನ್ನಡ –ಹೊಸಗನ್ನಡ ಕವಿತೆಗಳಲ್ಲಿ ಮತ್ತು ಆಡುನುಡಿಯಲ್ಲಿ ನೀನು, ನಾನು, ತಾನು ಎಂಬಿವಕ್ಕೆ ನೀ, ನಾ, ತಾ ಎಂಬಿವೂ ಸ್ಥಾನಿಗಳಾಗುತ್ತವೆ (ಸಂಶೋಧ. ೩೫). [ ನಡು$_2$ + ಕನ್ನಡ$_1$ ]

ನಡುಗಲ್ (ನಾ). ನಟ್ಟಿರುವ ಕಲ್ಲು; ನಿಲ್ಲಿಸಿರುವ ಕಲ್ಲು: ಮುಂಚ್ಚನ್ದಿನ್ನಡುಗಲ್ಲೆ ಪಡುವಯಾಲೆ ತಾಯನ್ದೆಕಱಿಯೆ ವಡಗಾಯ್ನಡುಗಲ್ಲೆ ಕೊತ್ತನ್ದೆಱಿಯೆ (ಎಕ. X (8), ಚಿಕ್ಕಬ. ೧೦೩-೬೪; 850). [ ನಡು$_2$ + ಕಲ್$_3$ ]

ನಡುಗಾಡು (ನಾ). ಕಾಡಿನ ಮಧ್ಯಭಾಗ; ಅರಣ್ಯದ ಮಧ್ಯಪ್ರದೇಶ; ಕಾಡಿನ ಒಳಗಿನ ಪ್ರದೇಶ: ಹೊತ್ತಿಹ ಪೊಱೆಯಂ ನಡುಗಾಡಿನಲ್ಲಿ ಮಡುಗುತ್ತೊಡೆಯರೆ ಬರಲಮ್ಮೆವೆಂದು ನುಡಿದರ್ಭಯದಿಂ (ನನ್ನಚಾ. ೨-೯೧): ಪರಮುಕ್ತಿಪಾಕರನೆಂಬೀ ಸಿರುದಂ ಬಿಸುಟಕಟ ಶಂಕರಾ ಶಂಕರನಂ ಹರಸಿ ನಡಗಾಡೊಳಂಥೆಯ ಕರದುಡಮನೆಳೆದುಕೊಂಡಪೋಲ್ವಾಡಿದೆಯ್ (ರಾಜಶೇ. ೦೩-೧೨೯). [ ನಡು$_2$ + ಕಾಡು$_2$ ]

ನಡುಗಾನಲ್ (ನಾ). = ನಡುಗಾಡು: ಮಿಕ್ಕ ಸರುವಿಂಗೆ ದರುವಿಂಗೆ . . . ನಡುಗಾನಲಿಂಗೆ [ಪಾಠಾಂ. ನಡುಮಾನಲಿಂಗೆ, ನಳುನಾನಂಲಿಂಗೆ] ತೆಕ್ಕೆಗತ್ತಲೆಗ . . . ಇಕ್ಕಿವನೆಯಾನೆಂದು ಬೊಬ್ಬಿಟ್ಟು ಮೇಳ್ವಂತೆ ಘೀಳಿಡುತ್ತುಲಿದುದಡವಿ (ಸೋಮಚ. ೩-೩). [ ನಡು$_2$ + ಕಾನಲ್ ]

ನಡುಗಾಲ (ನಾ). ೧. ಮಧ್ಯಕಾಲ; ಮಧ್ಯಂತರ ಕಾಲ. ೨. ಸ್ಥಿರವಾದ ತೀರ್ಮಾನ ಕೈಕೊಳ್ಳುವ ಮುಂಚಿನ ಕಾಲ, –ಸಮಯ; ತಾತ್ಕಾಲಿಕವಾಗಿ ನಿರ್ಣಯ ತೆಗೆದುಕೊಳ್ಳುವ ಕಾಲ.

ನಡುಗಾಲದ ವರದಿ=ತಾತ್ಕಾಲಿಕವಾದ ವರದಿ; ಸ್ಥಿರವಲ್ಲದ ಸಂದ್ಧಿ: (Interim report. ಪತ್ರಿನಿ. ೪೬). ನಡುಗಾಲದ ಸರಕಾರ=ಮಾಧ್ಯಕಾಲದ ಸರಕಾರ; ತಾತ್ಕಾಲಿಕವಾದ ಆಡಳಿತ: ರಾಜ್ಯದ ಮಂತ್ರಿಮಂಡಲವು ಬಹುಮತವನ್ನು ಕಳೆದುಕೊಂಡಾಗ ರಾಜ್ಯಪಾಲರು ನಡುಗಾಲದ ಸರಕಾರವನ್ನು ನೋಡಿಕೊಳ್ಳುತ್ತಿದ್ದರು (ರೂಢಿ). [ ನಡು$_2$ + ಕಾಲ ]

ನಡುಗಿಸು (ಕ್ರಿ). ೧. ನಡುಗುವಂತೆ ಮಾಡು; ಅಲುಗುವಂತೆ ಮಾಡು; ಅಲ್ಲಾಡಿಸು: ಅಂಗವಂ ನಡುಗಿಸುತ ಬಸುಱಂ ಪೊಂಗಿಸುತವಕ್ಕಳಿಸುತಂ ವಾದ್ಯಂಗಳಿಗೆ ಬೆಚ್ಚುತ ಬೆದಱುತಂ (ಬಸಪು. ೧-೪೯); ಮೂಲೋಕಮಂ ಮಾಗಿ ನಡುಗಿಸಿತು ಮೇಣುಡುಗಿಸಿತು ಪೆರ್ಚಿದ್ದೈಕಿಲಿಂದೆ (ಜೈಮಿಭಾ. ೨೮-೨); ಕಾಶೀಮ ಕೈ ನಡುಗಿಸುತ್ತ ಚೀಟಿ ಬರೆಯುತ್ತಿದ (ಜೀವರಂ. ೩); ಒಳ್ಳಿದರ ನೆಚ್ಚರಿಸೆ ಒಡಿದು ನಡುಗಿಸುಗುಂ (ಕಾಲೂರ. ೭೭-೧೪೧). ೨. ಭಯಗೊಳಿಸು; ತಲ್ಲಣಗೊಳಿಸು: ಧುರದೊಳರಿಗಳಂ ನಡುಗಿಸುವುದಾಗಿ ಚತುರಂಗಬಲವೆನಿಸಿತೀ ಛತ್ರವು (ಹಚಕಾ. ೭-೧೪); ಸಹದೇವ ನಕುಲರ ನಡುಗಿಸಿದನುಡುಗಿಸಿದನಾಟೋಪವನು ಪವನಜನ (ಕುಮ್ಯಾಕ. ೩-೦೩).

ನಡನಡುಗಿಸು (ದ್ವಿರುಕ್ತಿ): ನಡನಡುಗಿಸಿ ನಲ್ಲನೆದೆಯ ಧೈರ್ಯವ . . . ಪೊಂಗೊಡಮೊಲೆಮೆಂಗಳು ಮುಸುಕಿತು ಮೃಡಕಪರ್ಧ್ಯಂಸಿಯ ಬಿತನ (ಮೋಹಕ. ೧೪-೫೧). [ ನಡುಗು$_1$ + –ಇಸು$_3$ ]

ನಡುಗು$_1$, ನಡುಂಗು (ಕ್ರಿ). ೧. ಅದುರು; ಅಲ್ಲಾಡು; ಕಂಪಿಸು: "ನಡುಗು (ನಡಗು)—ಕಂಪನೇ" (ಶಮುಧಾ); "ಕಂಪಿಸಿದುದೆನಲ್ಕೆ ನಡುಗಿದುದು" (ಕರ್ಣಾಟನಿ. ೨೮); ತೆಂಕಣಗಾಳಿಯೊಳಾದ ಸೋಂಕಿನೊಳೆ ನಡುಗುವಶೋಕವಲ್ಲರಿಯ ಪಲ್ಲವದೊಳೆ ನವಚೂತಪಲ್ಲವಂ ತೊಡರ್ದಪೊಲಾದ (ಪಂಪಭಾ. ೩-೭೫); ಎಲರಲೆಪದಿಂ ನಡುಗುವೆಲೆದುಱುಗಲಿಂ ಕದಳೀವನಂಗಳು ಮೈಕಿಲುಡರ್ದು ನಡುಗಿದಪ್ಪುವೆಂಬಂತೆಯುಂ (ಕಾದಂಬ. ೨೧೯): ಭಯದಿಂದು ನೋಡಿ ನಾಡೆ ನಡುಗುತ್ತಿರ್ದರ್ (ಧರ್ಮಾಮೃ. ೩-೪೫); ನಡುಗುವ ನರೆದಲೆಯಿಂ ನರೆತು ಸಡಿಲ್ದ ಸರ್ವಾಂಗದಿಂ (ನಂಬಿರ. ೬-೨೫); ಸವನಿಸೆ ಹಮ್ಮುದಂ ನಡುಪ ಕಾಲ್ ಬೆಮರಂ ಬಿಡುತಿರ್ಪ ಗಲ್ಲಮುಣ್ಮುವ ನವಿರ್ . . . ಇವರೊಳೊಪ್ಪೆ ನೋಡಿದರ್ (ಕಬ್ಬಿಕಾ. ೩೬); ಕರ ನಡುಗೆ ಮೈ ಬಲಿಯೆ ಹುಬ್ಬುಗಳುಱೆ ಬಿಗಿಯೆ (ಕುಮ್ಯಾಕ. ೦೨-೧೧). ೨. ಹೆದರು; ಭಯಪಡು; ಭೀತಿಗೊಳ್ಳು: ನಡುಗುವುದುಂತೆ ಪಾಂಡವಬಲಂ ನಿನಗರ್ಜುನನೆಂಬನೆಂದುಮುರ್ಕುಡುಗಿ ಸುರುಳ್ವನೀಯೆಡೆಗೆ ಪೇೞ್ ಪೆಱರಾರ್ ದೊರೆ . . . ಅಂಗಮಹೀತಳಾಧಿಪಾ (ಪಂಪಭಾ. ೦೨-೫೧): ಮುಳಿದು ಕೊಲಲಿರ್ದ ಕುಂಭನೆಂಬ ರಕ್ಕಸಂಗೆ ನಡುಗಿ ಚಂಡಕೌಶಿಕಂ ಮುಂಡಕೌಶಿಕನನೊಯ್ದು ದ್ರಿಗುಹಾಂತರದೊಳ್ ಪ್ರಯತ್ನಂ ಬೆರಸಿರಿಸಿ ಕಾವುದುಂ (ಶಾಂತಿಪು. ೬-೨೫ವ); ನಡುಗಿ ಮೊಡೆವಡುವುದುಂ ಮೊಱೆಯಿಡುವುದುಮೇಕಣ್ಣ (ಸಮಪ. ೯-೮೦): ಕಳ್ಳರ ಕೊಟ್ಟಮಿದೆಂದೊಡೆ ಬಲ್ಲಿದರುಂ ನಡುಗುತಿರ್ಪರ್ (ಧರ್ಮಾಮೃ. ೦೨-೨೩೬); ಒಡೆಯರಾಡುವ ಮಾತ ಕಡೆಮರಿಯಂತರ ಕೇಳಿ ಇದಿರುಪೋಗಿ ಕಿಂಕರನಾಗಿ ನಡುಗುತ್ತ ಬಿನ್ನಹವ ಮಾಡುವ ಸದ್ಭಕ್ತರ ತೋಱಯ್ಯಾ (ಬಸವ. ಕ. ೧೭೩-೪೪೯): ಸುರನಗರಿ ನಡುಗಿತ್ತು ಸುರಪತಿ ಹರನ ನೆನೆದನು . . . ಎನೆ ನರನ ಕಡುದುಮ್ಮಾನ ನೆಱೆ ಹೆದಱಿಸಿತು ಮೂಜಗವ (ಕುಮ್ಯಾದ್ರೋ. ೮-೧೧). △ ನಡುಂಗು: ೧. "ಝೊಂಪಿಸಿದನೆನೆ ನಡುಂಗಿದನಕ್ಕುಂ" (ಕವಿಕಂ. ೧೪೦).

ನಡಂನಡುಗು, ನಡನಡುಗು, ನಡುನಡುಗು (ದ್ವಿರುಕ್ತಿ) : ಕೆಡೆಯೆ ಕೃಪಂ ನಡಂನಡುಗಿ ಶಲ್ಯನುರುಳ್ದರೆ . . . ಗಗನೇಚರರ್ ಒಡಿದು ಕಟ್ಟಿದರಾ ಧೃತರಾಷ್ಟ್ರಪುತ್ರರಂ (ಮಹಾನೇ. ೧೦-೯೭) ; ಪರಿಭವಾ[ನಿ]ಲನಿಂ ಶೋಕಾ ನಲನಿರ್ಮಡಿಸೆ ನಡುನಡುಗಿ ಕಾಯ್ಕಿನೊಳ್[ಬಿ]ಡುಗಿ . . . ಇಂತೆಂದಳ್ (ಹಂಪಭಾ. ೮-೭೦ವ) ; ಬಂದ ಜಂಗಮದ ಇಂಗಿತಾಕಾರವನರಿತು ಇದಿರೆದ್ದು ವಂದಿಸಿ ಕೈಮುಗಿದು ನಡ[ಪಾಠಾಂ. ಡು]ನಡುಗಿ ಕಿಂಕರನಾಗಿ . . . ಇರಬಲ್ಲರೆ ಅದು ವರ್ಮ (ಅವಶಂ. ೨೨೩-೧೧೧೦) : ನುಡಿಯಲಾರದೆ ನಂ ಮಕ್ಕಳಿರ ನೀರಡಿಸಿದೆನು ಹಿರಿದಾಗಿಯೆನೆ ನಡನಡುಗಿ ದುರ್ಯೋಧನನು ದೂತರ ಕರೆದು ನೇಮಿಸಿದ (ಕುಮ್ಯಾಭೀ. ೧೦-೩೪) : ನೆಲ ಬಿರಿವಂತೆ ನಾನಾ ವಾದ್ಯರಭಸದಿ ಕುಲಗಿರಿ ನಡನಡುಗಿದುವು (ಪ್ರೋಚತ. ೧೯-೮೭) : ಅಂತು ಶಾಪಂಗುಡಲಾಂ ನಡುನಡುಗಿ ಕಯ್ಗಳಂ ಮುಗಿದು . . . ಏನಾದೊಡ ಮೆನಗೆ ಶಾಪಾಂತಕಾರಣಮಂ ಬೆಸಸೆಂಬುದುಂ (ಕಾದಂಬ. ೭೧೪) : ಪಲವು ನಾಯ್ಗಳ ನಡುವಣ ಪುಲ್ಲೆಯಂತೆ ನಡುನಡುಗಿ (ಧರ್ಮಾಮ್ಮ. ೭-೯೨) ; ವೇದ ವೇಧಿಸಲರಿಯದೆ ಅಭೇದ್ಯಲಿಂಗವೆಂದು ನಡುನಡುಗಿತ್ತು (ಬಸವ. ೯೩೬); ಮಡದಿ ತನ್ನಯ ಪತಿಗೆ ತೋರಿಲು ನಡುನಡುಗಿಯಾ ವರಕುವಾರನ ಪೊಡವಿಪತಿಗವನೀಯೆ(ಸಂಧಪ. ೧೩-೭). ನಡನಡಂ ನಡುಗು, ನಡನಡ ನಡುಗು = ನಡಂನಡುಂಗು : ಲುಬ್ಧಕಂ . . . ಬರ್ಪುದಂ ತಡೆಯದೆ ಕಂಡು ನಡನಡಂ ನಡುಗಿ ತಲ್ಲಣಿಸಿ . . . ಪಾಟಲನುವಾಗಿ ಕೂಡಿಕೊಂಡೆಬಿನೋಳಿರ್ಪ ವಿಹಂಗ ಸಂಕುಳದಿಂ (ಗಿರಿಕ. ೧-೧೨೮ವ) ; ನಡನಡ ನಡುಗುವಿನಮುಡಿಸಿ ತಡೆಯದೆ ಖಳನಂ ಒಡಿದುಡಿಯ ಕಟ್ಟು (ವಾಲ್ಮಾರಾ. ೧೨೭-೭) ; ಗಾಳಿಗೊಡ್ಡಿದ ಸೊಡರಂತೆ ನಡನಡ ನಡುಗುವ ಕುರುಧ್ವಜನಿಯಂ ಕಂಡು . . . ಇಂತೆಂದಂ (ಹಂಪಭಾ. ೮-೧೧೧ವ) ; ನಡನಡ ನಡುಗಿ ಮಿಡುಮಿಡು ಮಿಡುಕಿ . . . ಪುಯ್ಯಲಿಡುತ್ತಂ (ಅಜಿಪು. ೧೧-೦೦ವ).

[ ದೇ.॥ ತಮಿ. ನಟುಕ್ಕು, ನಟುಙ್ಙು ; ಮಲ. ನಡುಙ್ಙು : ತುಳು. ನಡುಗು ; ತೆಲು. ನಡುಂಗು, ನಡುಂಕು ]

ನಡುಗು$_2$ (ನಾ). ೧. (ಚಳಿ ಮುಂತಾದುವುಗಳಿಂದ) ಅದಿರುವಿಕೆ ; ಕಂಪಿಸುವಿಕೆ; ನಡುಕ; ಕಂಪನ : "ನಡುಕ=ನಡುಗು" (ಗಂಗಾಮು. ೦೭೭) ; ಪದಾರ್ಥಗಳ ಕಂಪನವೆಂದರೆ ನಡುಗು (ಮುಂಬಯಿ. ೫-೧೧೧) : ಅದಕ್ಕೆ ನಾವು ಕಂಪ ಅಥವಾ ನಡುಗು ಎನ್ನುತ್ತೇವೆ (ಮುಂಬಯಿ. ೫-೧೦೨). ೨. ಹೆದರುವಿಕೆ ; ಭಯಗೊಳ್ಳುವಿಕೆ ; ಅಂಜಿಕೆ : ಈತನನ್ನು ನೋಡಿದರೆ ನನಗೆ ನಡುಗು ಬರುತ್ತದೆ (ಉರಾಡ. ೧೦) : ತಿಳಿಯದ ಮಂತ್ರ ಹೇಳಲಾರಂಭಿಸಿದರೆ ನನಗೆ ನಡುಗು ಬರುತ್ತದೆ (ಹುಬ್ಬಾಟ. ೧೨); ನೀನು ಹೇಳೋದು ಕೇಳಿ ನನಗೆ ನಡುಗು ಹುಟ್ಟಿತು (ದಂಡುಬ. ೭೮).

[ <ನಡುಗು$_1$./ತಮಿ. ನಟುಕ್ಕು ; ಮಲ ; ನಡುಙ್ಙು; ತೆಲು. ನಡುಂಗು, ನಡುಂಕು ]

ನಡುಗುಂಪೆಣ (ನಾ). ಅತ್ಯಂತ ಭಯಗೊಂಡ ವ್ಯಕ್ತಿ : ನಡುಗುಂ ಪೆಣನಾಗಿ. ತನ್ನ ವರ್ಗ ಕಯ್ಕಾಣಕಿದೋರುವನು (ಮಂತ್ರಕ. ೮೩-೭).

[ನಡುಗು$_1$ + ಪೆಣ]

ನಡುಗುಡ್ಡ (ನಾ). ಗುಡ್ಡದ ಬುಡಕ್ಕೂ ತುದಿಗೂ ಮಧ್ಯವಿರುವ ಪ್ರದೇಶ : (ಕ). [ ನಡು$_2$ + ಗುಡ್ಡ$_2$ ]

ನಡುಗುಹೆ (ನಾ). ಗುಹೆಯ ಮಧ್ಯಭಾಗ ; ಗವಿಯ ನಡುಭಾಗ ; ಗುಹಾಮಧ್ಯ : ಕಡುಗೆರಳಿದ ಮೃಗಾಧಿಪನ ನಡುಗುಹೆಯೊಳಿಹ ಸುಧೆಯು ಘಟವೀ ಪೊಡವಿಯೊಡೆತನ ಸದರವೇ ಕಡುಬಡವರಿಗೆ ದೊರೆಕೊಂಬುದೇ (ಕುಮ್ಯಾಸ. ೧-೭೭). [ ನಡು$_2$ + ಗುಹೆ ]

ನಡುಗುಜುವ (ನಾ). = ನಡುಗಡ್ಡೆ : "ಅಂತರೀಪಂ ನೀರ ನಡುಗುಜುವವೆನಿಸಿಕ್ಕುಂ" (ಮಂಗರಾ. ೦೨೩-೧೩). [ ನಡು$_2$ + ಕುಜುವ$_1$ ]

ನಡುಗೆರೆ (ನಾ). ಕೆರೆಯ ನಡುಭಾಗ ; ಮಧ್ಯದ ಕೆರೆ : ಕೆರೆಯಲ್ಲಿ ಈಜಲು ಹೋಗುತ್ತಿದ್ದ . . . ನಡುಗೆರೆಯನ್ನೂ ಮೀರಿ ಹೋಗುತ್ತಿದ್ದ (ಧರ್ಮಶ್ರೀ. ೨೦). [ ನಡು$_2$ + ಕೆರೆ$_2$ (<ಕೆಱು) ]

ನಡುಗೇರಿ, ನಡುಕೇರಿ (ನಾ). ಕೇರಿಯ ಮಧ್ಯಭಾಗ : ಬೀದಿಯ ಮಧ್ಯಭಾಗ : ನಡುಗೇರಿ ಉರಿದು ನಾನಾ ಭಟರು ಮಡಿದಾರು (ಶಿವಗೀ. ೮೦೭) : ಮಾರನ ಚಾಪಾಗಮಾವಿಸ್ತಾರಮನೀಕ್ಷಿಪ ತವಂಗಮಾಂಗನೆಯರ ಶೃಂಗಾರರಸಂ ತೀವಿದ ನಡು[ಪಾಠಾಂ. ದೆ]ಗೇರಿಯಿಂದೆನೆ ಸೂಳೆಗೇರಿ ಮಿಗೆ ಸೊಗಯಿಸುಗುಂ (ಪಾರ್ಶ್ವಪು. ೭-೩೭). ನಡುಕೇರಿ : ಪೆಡಗಯ್ಯ ಕಟ್ಟಿಸಿ ಪುರವರದ . . . ನಡುಕೇರಿಯೊಳೆಲ್ಲರು ನೋಡುವಂದದಿ ನಡೆಯಿಸಿದನು ಮಂತ್ರಿಯುವರ (ಕುರಾಸಾಂ. ೩೭-೭೨) ; ಕಾಣಿಕೆಯನಿತ್ತಾನೆಯ ಸಜ್ಜಾರ ನಡುಕೇರಿಯೊಳಗೊಪ್ಪುತಿಹುದು (ಕಂಪವಿ. ೭-೩೨). [ನಡು + ಕೇರಿ]

ನಡುಗೊಂಬು (ನಾ). = ನಟ್ಟಗೊಂಬು : "ನಟ್ಟಗೊಂಬೆಂದು ನಡುಗೊಂಬು" (ಕಬ್ಬಿಕೈ. ೧೮) : "ನಡುಗೊಂಬೆಂದು ನಾಡೆ ತಾ ನಟ್ಟಗೊಂಬಕ್ಕು" (ಕಬ್ಬಮಂ. ೨೫). [ ನಡು$_2$ + ಕೊಂಬು$_1$ ]

ನಡುಗೊಣ 'ನಡಂಗೊಳ' ನೋ.

ನಡುಗೊರಲು, ನಡುಗೊರಳು (ನಾ). ಕೊರಳಿನ ಮಧ್ಯಭಾಗ ; ಕುತ್ತಿಗೆಯ ಮಧ್ಯಭಾಗ : ನಡುಗೊರಲ ಸುಟಿ ದೇವಮಣಿ (ಮಂಗರಾ. ೮೩-೨೦). ನಡುಗೊರಳು : ಬರುತಿಹ ಬಾಣವನು ಖಳ ಕಂಡು . . . ಬಲುಹುಶಕ್ತಿಯೊಳಿಟ್ಟೊಡನಿತನು ಮುಳಿದು ನುಂಗಿತು ಕಡಿದುದಮಮಾ ಖಳನ ನಡುಗೊರಳ (ಕಾಶಿರಾ. ೨೭-೫೫).

[ ನಡು$_2$ + ಕೊರಲು (<ಕೊರಲ್) ]

ನಡುಗೊರಳು 'ನಡುಗೊರಲು' ನೋ.

ನಡುಗೊಳ, ನಡಂಗೊಣ (ನಾ). ಪುಷ್ಕರಿಣಿಯ ಮಧ್ಯಭಾಗ ; ಸರೋವರದ ಮಧ್ಯಭಾಗ : ತೊಳೆದು ಚರಣಾನನವ ನಡುಗೊಳದೊಳಗೆ ಪೊಕ್ಕು . . . ಶೀತಳಜಲವ ಕುಡಿದು (ಕುಮ್ಯಾಅ. ೧೨-೫೭). ನಡುಗೊಣ : ಗುರುತನುಜಂ ಕೃಪನ ಕೃತವರ್ಮನ ನುಡಿಗಳಂ ನಡುಗೊಣದಿ ನುಡಿವ ನಮ್ಮವರ ಮಾರೆನುಡಿಗಳಮ್ಮರೆಯ ಗಡಬಡೆಗಳಿಂ ಧ್ವನಿಯ ಕಡುಬೆಡಗಿನಿಂದರಿದು (ಕುರಂಗ. ೭೪-೩೧). [ ನಡು$_2$ + ಕೊಳ$_2$ ]

ನಡುಗೋಲ್, ನಡುಕೋಲ್ (ನಾ). ಸರಳಿನ ಮಧ್ಯಭಾಗ : ಬಾಣದ ಮಧ್ಯಭಾಗ : ನಡೆ ನಡುಗೋಲ್ವರೆಗಂ ದಶಮುಖಂ ಮನಮಂ ಸುಮನಶ್ಶಿಲೀಮುಖಂ . . . ಸತ್ಯಶೌಚಗುಣಸಂಪದವೇಳಿದನಾದಂ (ಪಂರಾಮಾ. ೯-೮೫). ನಡುಕೋಲ್ : ಭೋರೆಂದು ಕವಿವ ಬಿಸುನೆತ್ತರ್ ಕಣ್ಣಂ ಕವಿಯೆ ಸೀಂಟಿ ಕಳೆದು ನಡುಕೋ[ಪಾಠಾಂ. ಕಾ]ಲ್ವರಂ ನಟ್ಟ ಕೂರ್ಗಣೆಗಳಂ ಗಱೆವೆರಸು ತೊಱೆದು ಕಳೆದು (ಪಂಪಭಾ. ೧೨-೭೪ ವ); ಸ್ಮರನ ಸರಲ್ಗಳ್ ನಡುಕೋಲ್ವರೆಗಂ ನಡೆ (ಧರ್ಮಾಮ್ಮ. ೮-೧೭೮). [ ನಡು$_2$ + ಕೋಲ್$_1$ ]

ನಡುಚವುಕಿಗೆ (ನಾ). ಮೊಗಸಾಲೆಯ ಮಧ್ಯಭಾಗ : ನಡುಚವುಕಿಗೆಗೆ ಬಗಿದ ತೊಲೆಯ ಪೊಱವಳಸಿನುಗ್ಗಡದ ನಾನಾ ವರ್ಣಚಿತ್ರಪತ್ರಿಕೆಗಳಂ . . . ಪೊಗಳಲಳವೆ (ಡೇರಮು. ೫-೧೨). [ ನಡು$_2$ + ಚವುಕಿಗೆ (<ಚೌಕಿಗೆ) ]

ನಡುಜವ್ವನ (ನಾ). ತುಂಬುಜವ್ವನ ; ಏರುಯೌವನ : ಒಡಿದ ತುಂಬು ನೀರ ಪೊಂಗೊಡಮಾನಿಟ್ಟಿ ಪಡಿಮೊಗದ ನೆರೆವೀಡ ನಡುಜವ್ವನದ ಕೆಳದಿಯೊರ್ವಳಂ ಸನ್ನೆಯಿಂ . . . ಎನೆ (ರಾಮಾಶ್ವ. ೫೦-೧೭).

[ ನಡು$_2$ + ಜವ್ವನ ]

ನಡುತರ (ನಾ). ಮಧ್ಯಮ ಮಟ್ಟ, – ರೀತಿ : ಒಂದು ಅಳಕ ಹಿಟ್ಟು ನಡುತರದ ಚಮಚದಲ್ಲಿ ಒಂದು ಚಮಚ ಸಕ್ಕರೆ (ಅಡುಗೆ. ೯೭)

[ ನಡು$_2$ + ತರ$_6$ (<ತರಹ) ]

ನಡುತಲೆ 'ನಡುದಲೆ' ನೋ.

**ನಡುತೂತು** (ನಾ). ಮಧ್ಯದಲ್ಲಿರುವ ತೂತು,-ರಂಧ್ರ : ನಾಭಿ-ರಥದ ಗಾಲಿಯ ನಡುತೂತು (ಗಂಗಾವು. ೧೮೧).

[ ನಡು$_2$ + ತೂತು$_2$ (<ತೂಂತು$_2$) ]

**ನಡುತೂಬು** (ನಾ). = ನಡುತೂತು : "ಬಂಡಿಕಾ. ನಾಭಿಃ-೨ ಬಂಡಿಯ ಕಣ್ಣಿನ ನಡುತೂಬಿಗೆ ಹೆಸರು" (ಸಿದ್ಧಾಂತಿ. ೨೫೩).

[ ನಡು$_2$ + ತೂಬು (<ತೂಂಬು) ]

**ನಡುತೊಟ್ಟಿ** (ನಾ). = ನಡುಂಚವುಕಿಗೆ : "ಕಕ್ಷಾ-ಉಪ್ಪರಿಗೆ, ಮನೆಗಳ ನಡುತೊಟ್ಟಿ" (ಸಿದ್ಧಾಂತಿ. ೮೦೧). [ ನಡು$_2$ + ತೊಟ್ಟಿ$_1$ ]

**ನಡುದಟ್ಟಿ** (ನಾ). ಸೊಂಟಕ್ಕೆ ಸುತ್ತಿಕೊಳ್ಳುವ ಬಟ್ಟೆ,-ವಸ್ತ್ರ ; ನಡುಪಟ್ಟಿ : (ಕ). [ ನಡು$_2$ + ದಟ್ಟಿ$_1$ ]

**ನಡುದಲೆ, ನಡುಂತಲೆ** (ನಾ). ತಲೆಯ ಮೇಲಿನ ಮಧ್ಯಭಾಗ ; ನೆತ್ತಿ : ತುಡೆ ಧನ್ವಿ ಸರಲನೊರ್ವಂಗೆಡೆವುಗೆ ಮತ್ತೊರ್ವನವನಸದು ತಱಿವವೊಲೊಳ್ಪುಡುಗದೆ ಯಕ್ಷಪ್ರತಿಮೆಯ ನಡುದಲೆಯೊಳ್ ಬಿಟ್ಟುದವನಿ ನರ್ಗಬ್ಬಿನೆಗಂ (ಶಾಂತಿಪು. ೬-೩೯) ; ನಡುವಲೆ ಗೋಣ್ ನೊಸಲ್ . . . ಪುರ್ಬುಗಳೆಂಬೆಡೆಯಂ ಮಹಾಹಿ ಕೊಂಡೊಡೆ ಗರುಡಂಗಮೆತ್ತಲರಿದೆಂದೊಡೆ ಪೇಱುಱಿದಂಗೆ ಸಾಧ್ಯಮೇ (ಲೋಕೋಪ. ೧೦-೪). **ನಡುತಲೆ :** ಪಾರ್ವನ ಕಾಲ್ ಮೋದೆ ನಡುತಲೆಯುಲಿರ್ಪುದುವಸಾದುದು ನಿಮಗೆಂದು ನುಡಿದು ಕಾಯ್ಪಿನೊಳೊದೆದಂ (ಪಂಪಭಾ. ೩-೬೪). [ ನಡು$_2$ + ತಲೆ$_1$ ]

**ನಡುದಾರ** (ನಾ). ಸೊಂಟಕ್ಕೆ ಕಟ್ಟುವ ನೂಲಿನ ಅಥವಾ ಚಿನ್ನ, ಬೆಳ್ಳಿಯ ಎಳೆ ; ಉಡಿದಾರ : (ಕ). [ ನಡು$_2$ + ದಾರ$_1$ ]

**ನಡುದಾರಿ** (ನಾ). ಮಾರ್ಗದ ಮಧ್ಯ ; ದಾರಿಯ ಮಧ್ಯ ; ನಡುಮಾರ್ಗ : ಹುಲಿ . . . ಕುದುರೆಯ ಮೇಲೆ ಬೀಳಲು ಸಿದ್ಧವಾಗಿ ನಡುದಾರಿಯಲ್ಲಿ ಕುಳಿತುಬಿಟ್ಟಿತು (ಕಳಹು. ೬). [ ನಡು$_2$ + ದಾರಿ ]

**ನಡುದೆರಪು** (ನಾ). ನಡುವಿನ ಸ್ಥಳ,-ಅಂತರ : ಎರಡುಂ ಸಗ್ಗಂಗಳ ನಡುದೆರಪಿನೊಳಧಿಯಾದ್ಯಮನ್ಯಮಲ್ಲದ ಮಧ್ಯಾಜರದೊಳ್ ಧರ್ಮಗ್ಲಾನಿಯ ನರಕದೊಳಳಲ್ವರುವಾನಕಟ ! ನೆನೆಗೆಮ ! ಕೃಷ್ಣಂ (ಜಟ್ಟಿಅ. ೯-೬). [ ನಡು$_2$ + ತೆರಪು (<ತೆಱಪು) ]

**ನಡುದೊಱೆ**[3] (ನಾ). ನದಿಯ ಮಧ್ಯಭಾಗ ; ನಡುನೀರು : ನಡುದೊಱೆಯಲ್ಲಿ ಹುಟ್ಟುಹಾಕಿದಡೆ ಹಱುಗೋಲು ಮುಳುಗದೆ ಏಱಿದವರು ಸತ್ತರು (ಅವಚಂ. ೮೦-೩೬೦) ; ನಡುದೊ[ಪಾಠಾಂ. ತೊ]ಱೆಯೊಳಗೆ ಹಱುಗೋಲನಿಳಿದಂತಾಯಿತ್ತೆನ್ನ ಭಕ್ತಿ (ಬಸಹೆ. ೯೮-೩೯೩).

[ ನಡು$_2$ + ತೊಱೆ$^3_2$ ]

**ನಡುನಾಡು** (ನಾ). ೧. (ದೇಶದ) ಮಧ್ಯಭಾಗ ; (ರಾಜ್ಯದ) ಮಧ್ಯಪ್ರದೇಶ : ಕಡೆವಿಡಿದು ಬಳಸಿ ನೀರಿರೆ ನಡು ಬತ್ತಿದ ಕೆಱೆಯನಿಂತು ಕಂಡುದಱಿಂದಂ ನಡುನಾಡೊಳಱಂ ನೆಲಸದೆ ಕಡೆಯೊಳ್ ನೆಲೆಗೊಳ್ವಂ (ಆದಿಪು. ೧೫-೪೦) : ಕಡೆನಾಡ ಲಿಂಗವ ನಡುನಾಡಿಗೆ ತಂದೆನೆಂಬ ಅಹಂಕಾರವ ಮುಂದುಗೊಂಡಿದ್ದೆಯಲ್ಲಾ . . . ಗೊಹೇಶ್ವರಲಿಂಗವು ನಿನ್ನ ತಪ್ಪಿಸಿ ಹೋದುದ ಮಱೆದೆಯಲ್ಲಾ (ಅವಚಂ. ೨೧೯-೯೯೨) ; ಊರೂರ್ದಪ್ಪದೆ ದೇವತಾನಿಳಯದಿಂ ಸದ್ಭಕ್ತರಿಂ ಚೆಲ್ವುವೆತ್ತೂರೂರ್ದಪ್ಪದೆ ಬಲ್ಲಕುಂದೆ ನಡುನಾಡಱ್ ಸಂತಂ ಬಸಂತಂ ಕರಂ (ಶಾಪವಂ. ೯೬೪) ; (ಎಇ. XIV, ೨೭೦-೧೯ ; 1181 ನೋ). ೨. (ಮೂರು ಲೋಕಗಳಲ್ಲಿ) ಮಧ್ಯದಲ್ಲಿರುವ ಲೋಕ ; ಭೂಲೋಕ ; ಮರ್ತ್ಯಲೋಕ : ನಡುನಾಡರಸದ ಪೆರ್ದೊರ್ಗಟಿ ನಡುವಳ್ಳಿಯ ಕಾಮಧೇನು[ವಂ]ಗಣದೊಳನಿಪ್ಪದೆ ವಣ್ತಾ ಕಲ್ಪತರುವೆಂದಡದೇವಣ್ಣಿಪುದೊ ರೂಪ ವಿದ್ಯಾಧರಿಯ (ಸಾಇಇ. XX, ೪೯-೩೫ : ಸು. 1076 ?) ; ನಡುನಾಡು ಮೇಲ್ನಾಡು ಕೀಳುನಾಡೆಂಬ . . . ನ ಹೆಮ್ಮಗಗೆ ತಡೆಯುಂಟೆ (ಭರವ. ೪೪-೬೬).

**ನಡುನಾಡ ತೀರ್ಥ** = ೧. ಭೂಲೋಕಕ್ಕೆ ಪೂಜ್ಯವಾದ ಸ್ಥಳ,-ಶ್ರೇಷ್ಠವಾದ ಪ್ರದೇಶ : ನಡುನಾಡ ತೀರ್ಥಮೆನಿಸಲ್ಪಡೆದಿಂದ್ರಪ್ರಣಯಮೆಂಬ ಪರ್ವತಕಟಕಂಬಿಡಿದು ನಿಜಕಟಕಮಂ ತಾಂ ಬಿಡಿಸಿ ಮಗಂಗಿತ್ತು ಕೊಡೆಯುಮಂ ಪಟ್ಟಮುಮಂ (ಅನಂಪು. ೧೩-೩೯). ೨. ಭೂಲೋಕಕ್ಕೆ ಪೂಜ್ಯನಾದವನಂ ; ಒಂದಂ ಬಿರಂದು : ಸಕಳಗುಣಸಂಪೂರ್ಣ್ಣಂ ಕಲಿಕಾಲಕರ್ಣ್ನನಮಳಚರಿತ್ರಂ ನಡುನಾಡ ತೀರ್ತ್ಥಂ ಶ್ರೀಮತ್ತೊಸವೂರಾಯ್ತುಗಾವುಣ್ದಂ (ಸಾಇಇ. XI-1, ೬೫-೩೯ ; 1028) ; ಬಮ್ಮ[ಂ]ಗಣ್ಡ ಎಲರ್ಪ್ಪುಗಳೆ ನೆಗಟ್ದನವನೀತಳದೊಳ್ . . . ಕುನ್ದಿಗನೊಳ್ಪಡೆದಂ ನಡು[ನಾ] [ಡ] ತೀರ್ತ್ಥವೀ ಮಹಿಮೆಗಳಂ (ಸಾಇಇ. XX, ೩೪ ೧೪ ; 1034).

[ ನಡು$_2$ + ನಾಡು ]

**ನಡುನಿದ್ದೆ** (ನಾ). ನಿದ್ರೆಯ ಮಧ್ಯಕಾಲ ; ಗಾಢನಿದ್ರೆ : ಇದು ಬೇರೊಂದು ಕಾಲ ; ನಡುನಿದ್ದೆಯಲ್ಲಿ ಕನಸು ಬಿದ್ದ ಹಾಗೆ ತಣಿವಿಗಾಗಿ ಈ ನಾಡನ್ನು ತೆರೆದಂತಿದೆ (ಕುಸುಸಂ. ೧೫೮). [ ನಡು$_2$ + ನಿದ್ದೆ ]

**ನಡುನಿಲ್** (ಕ್ರಿ). (ಆಲಂ) ನಿಷ್ಪಕ್ಷಪಾತದಿಂದಿರು : ಎರಡುಂ ಪಕ್ಕಮುಮೊಂದೇ ಸರಿಯೆನೆ ನಡುನಿಂದು ನೆಗಱ್ಯಾ ದ್ವಿಜವರನೊಳ್ ಕರವೊಸೆದು ತನ್ನ ಭಾರಮನಿರಿಸಿದವೊಲ್ ಪೆಂಪುಗೊಳಿಪನುತ್ತಮಪುರುಷಂ (ಚಕವಿ. ೧-೪೨). [ ನಡು$_2$ + ನಿಲ್ ]

**ನಡುನೀರ್, ನಡುಂನೀರು** (ನಾ). (ಸರೋವರ, ನದಿ ಮುಂತಾದಂವುಗಳ) ನೀರಿನ ಮಧ್ಯಭಾಗ,-ಜಲಮಧ್ಯ : ಅಂಜದೆ ಪೊಕ್ಕು ನಡುನೀರೊಳಾಡುವ ವನದೇವಿಯರ ಸೋಮುರ್ಗಡಿಯಿಂ ಪರೆದರಲ ಬೆರಕೆಗಂಪಿನ ಪೊಂಪುಱಿಯೊಳಂ (ಕಾದಂಪೂ. ೧೦೭) ; ಅನ್ಯಾಯದೊಳ್ಪಡೆದರ್ಥಂ ನಡುನೀರಿನೊಳಿಕ್ಕಿದೊಡಂ ಕಿಡುಗುಂ (ಧರ್ಮಾಮೃ. ೬-೧೨೮) ; ಹಿಡಿದುದ ಬಿಡದಿದ್ದರೆ ಕಡೆಗೆ ಚಾಚುವ ಅಲ್ಲದಿದ್ದರೆ ನಡುನೀರಲ್ಲದ್ದುವ ನಮ್ಮ ಕೂಡಲ ಸಂಗಮದೇವ (ಬಸವ. ೨೩೦) ; ಎಲೆ ಭಕ್ತ ನೀನೇಕೆ ನಡುನೀರೊಳಿರ್ದಪ್ಪೆ (ರುದ್ರರ. ದೇ. ೨೧೦-೯) ; ನಡುನೀರೊಳೊಗೆದ ಸಳಿನಮುಮುಱಿಯಲೆಳಸಿ ಮಗುಳ್ದು ತೆರವಿಡಿದೀಸುವೆಳವೇಡಿತಿ (ರಾಜಶೇ. ೬-೩೯೮). **ನಡುನೀರು :** ಕೃಪ ಗುರುಸುತರ ನುಡಿಗಳನು ನಡುನೀರಲಿ ನೃಪಧ್ವನಿಯ ಅಱಿದರಿವರಾಲಿಸಿದರು (ಕುವ್ಯಾಗ. ೪-೪೩).

ನಡುನೀರಲ್ಲಿ ಕೈಬಿಡು, ನಡುನೀರಲಿ ಕೈಬಿಡು = ೧. ಪ್ರವಾಹದ ಮಧ್ಯದಲ್ಲಿ ಹಿಡಿತದ ಸಹಾಯವನ್ನು ತಪ್ಪಿಸು : ನಡುನೀರಲ್ಲಿ ಕೈಬಿಟ್ಟ ಹಾಗೆ (ಗಾದ). ೨. ನಂಬಿಕೊಂಡವರಿಗೆ ಅತ್ಯಗತ್ಯವಾದ ಸಮಯದಲ್ಲಿ ಉದ್ದೇಶಪೂರ್ವಕವಾಗಿ ಸಹಾಯ ನಿಲ್ಲಿಸು ; ಕೈಕೊಡು : ಆಕೆಯ ಅಂತಸ್ತಿನ ಭವಿಷ್ಯವೆಲ್ಲ ನನ್ನ ಕೈಯೊಳಗಿರುವಾಗ್ಗೆ ನಾನೀಗ ಆಕೆಯನ್ನು ನಡುನೀರಲಿ ಕೈಬಿಡುವುದೆ ? (ನಡದೇ. II, ೮೭೦). [ ನಡು$_2$ + ನೀರ್$_1$ ]

**ನಡುನೀರು** 'ನಡಂನೀರ್' ನೋ.

**ನಡುನೆತ್ತಿ** (ನಾ). ತಲೆಯ ಮೇಲಿನ ಮಧ್ಯಭಾಗ ; ನಡುಂದಲೆ : ಪುಡುಪಂ ಬೆನ್ನಂ ಕೊರಲಂ ನಡುನೆತ್ತಿಯನೆತ್ತಿಪೊಯ್ದರೊರ್ವರನೊರ್ವರ್ (ಗದಾಯು. ೮-೧೫); ಎರಡುಂ ಬಾಳಕ ಪದ್ಮಕಮೆರಡುಂ ಚಂದನಮೆನಿಪ್ಪುವಂ ತೆಳ್ಗಱಿಯಿಂದರೆದು ನಡುನೆತ್ತಿಯೊಳ್ ಪೂಸೆ ರುಜಾರ್ತನ ತೃಷೆಯ ದಾಹದೊದವಂ ಕಳೆಗುಂ (ಲೋಕೋಪ. ೯-೩೮) ; ಆಧಾರ ಸ್ವಾಧಿಷ್ಠಾನ . . . ಆಜ್ಞೆ ಎಂಬ ಷಡಾಧಾರದ ಬಳಿವಿಡಿದು ನೆತ್ತಿಯಿಂದುತ್ತರಕ್ಕೆ ಉಚ್ಚಳಿಸಿ ಹಾಯ್ದು ನಡುನೆತ್ತಿ ತೂತಾದರೂ ಲಿಂಗಸಾಹಿತ್ಯವಿಲ್ಲ (ಆದವ. ೧೧-೩೧) ; ನಿರವಧಿಯಿಂ ಕುಳಿರ್ವುದಕಮಂ ನಡುನೆತ್ತಿಯೊಳಾಂತು ತನ್ನ ಕಣ್ಣುರಿಗುಪ ಶಾಂತಿಯುಂ ಪಡೆದನಿಲ್ಲಭವಂ (ದಶಕು. ೧-೫೩) ; ಒಡೆದು ನಡುನೆತ್ತಿಯನು ಝುಳಪಿಸಿ ಕಡುವೆಳಗು ಥಳಥಳಿಸಿ ತರಣಿಯ ತುಡುಕಿ ಹಾಯ್ದುದು ರಶ್ಮಿ ರಂಜಿಸಿತಖಿಳದಿಗುತಟವ (ಕುವ್ಯಾದ್ರೋ. ೧೮-೭೧) ; ನಡುನೆತ್ತಿ ಬಿರಿದು

ಮುತ್ತುಗಳೊಡೆದುಚ್ಚಳಿಸುತ್ತಿ ವಾಜಿ (ರಾಜಶೇ. ೫-೪೦). [ನಡು3+ನೆತ್ತಿ]

**ನಡುನೆಲ** (ನಾ). ಮಧ್ಯದ ಪ್ರದೇಶ,-ಸ್ಥಳ: ಸನ್ನೆಯ ಭೇರಿಕಾಜರು ನಡುನೆಲದಲ್ಲಿ ಸನ್ನದ್ಧರಾಗಿ ನೆರೆದರು (ಭರತ. ೫೦-೨೯). [ನಡು2 + ನೆಲ]

**ನಡುನೆಲೆ** (ನಾ). ಮಧ್ಯಸ್ಥಿಕೆ; ನಿಷ್ಪಕ್ಷಪಾತತೆ: ನಡುನೆಲೆಯುಳ್ಳವಸ ಬದುಕು ಅಜಿವಿಲ್ಲದೆ ಸಂತತಿಗಂ ಕಾಪುಳ್ಳುದಕ್ಕುಂ (ಕುಂದ. ೧-೧೨-೨). [ನಡು2 + ನೆಲೆ]

**ನಡುನೇಸಱ್**, ನಡುನೇಸಱು (ನಾ). ನಡುಹಗಲು; ಮಧ್ಯಾಹ್ನ: ಒಡಲಳಂತ ತನುವೀತನ ನೆವದಿಂದೆದು ಕಡುಗಳಲ್ದಾಕಾಶಮೆಂಬ ಮೃಡ ನುಂಗಣ್ಣ ತೆಱೆದವೊಲು ನಡುನೇಸಱಡಸಿದುದುದು ಬಳ್ಪಿಸುವ (ಶ್ರೀಪಾಲ. ೪-೫೪). **ನಡುನೇಸಱು**: ನಡುನೇಸಱಲಿ ತವು ನಿಲಬಲ್ಲರೇ ಜನನಾಥ (ನಿಭಾಗ. ೫-೧೨-೨೭). [ನಡು2 + ನೇಸಱ್]

**ನಡುನೇಸಱು** 'ನಡುನೇಸಱ್' ನೋ.

**ನಡುನೊಸಲು** (ನಾ). ಹಣೆಯ ಮಧ್ಯಭಾಗ: ಜಡೆಮುಡಿಯುನಳವಡಿಸಿ . . . ಭಸಿತಲೇಪನದೊಡಲು ನಡುನೊಸಲೊಳು ತ್ರಿಪುಂಡ್ರದ ರೇಖೆಗಳು ಮೆಱೆಯ (ಬಸವು. ೩-೨೭). [ನಡು2 + ನೊಸಲು (<ನೊಸಲ್)]

**ನಡುನೋಟ** (ನಾ). ಸ್ಥಿರವಾದ ನೋಟ; ನೆಟ್ಟ ದೃಷ್ಟಿ: ಪಸುಳೆಗುಪರಂ ತನ್ನ ಕಟ್ಟದಿರ ಪುರ.ಪೋತ್ರಮುಮೂರ್ತಿಯನೆಮೆಯಿಕ್ಕದ ನಡುನೋಟದಿಂ ದಿಟ್ಟಿಸುತೆ ಕುಳ್ಳಿರಲ್ (ರಾಮಾಶ್ವ. ೭೭-೪). [ನಡು1 + ನೋಟ]

**ನಡುಹಗಲ್** 'ನಡುವಗಲ್' ನೋ.

**ನಡುಪಟ್ಟ?** (ನಾ). (?): ತೊಡೆಯಿಂ ಕಡುಗುದುರೆಗಳು ಮಃಡದಿಂ ನಡು [. . . ಜೆ]ಪಟ್ಟ ದ್ಯುತಿಯಿಂ ನಿಡುದೋಳಿಂ ಕದುವಾಳಂ ಕೂರಸಿಯಿಂ ಕಡಂಗಿದನೆಯುಂ ಸಮಂತು ಬಸವಾಗಿಸುವಂ (ಕಾವ್ಯಾವ. ೨೩೦); ಚಿತ್ರಭವ ಚಕ್ರವರ್ತಿಯ ನಡುಪಟ್ಟ ಪಟ್ಟದಾನೆಯಂತೆ ವಾಗವುಗಿಸುವ ಮದಮದದ ಸೊನೆಸೊನೆಯುಂ ಬಿಡುವ ಬಾಳರಸಾಳಂಗಳಿಂ ಕಾಮದೇವನ ದೀವದ ಪಿಂಡಿನಂತಿರ್ಪ ಕಳಪಂಸೆಗಳಿಂ . . . ಮನಂಗೊಳಿಸಿ (ಅರ್ಥನೇ. ೪-೭೮ ವ). [?]

**ನಡುಪಟ್ಟ** (ನಾ). ೧. ಸೊಂಟಕ್ಕೆ ಕಟ್ಟಿಕೊಳ್ಳುವ ಚರ್ಮ, ವಸ್ತ್ರ, ಲೋಹ ಮುಂತಾದಂವುಗಳ ಪಟ್ಟಿ; ಬೆಲ್ಟು: ಅವಳು ಬಿರುಬಿರನೆ ಕೈಚಾಚಿ ನೋಟನ್ನು ಕಸಿದ-ಕೊಂಡು ತನ್ನ ನಡುಪಟ್ಟಿಯ ಕೆಳಗೆ ಬಚ್ಚಿಟ್ಟು ಕೊಂಡಳು (ಪುನರು. ೧೯೫); ಕಯ್ಯ ಪಟ್ಟದ ಖಡ್ಗವನ್ನು ನಡುಪಟ್ಟಿಯ ಒರೆಯೊಳಕ್ಕೆ ಸಶಬ್ದವಾಗಿ ನೂಂಕಿಬಿಡುವನು (ಬಿರುಗಂ. ೩೦-೬). ೨. ಸೊಂಟದಲ್ಲಿ ಧರಿಸುವ ಒಂದು ಬಗೆಯ ಆಭರಣ; ಒಡ್ಯಾಣ; ಡಾಬು. [ನಡು2 + ಪಟ್ಟ2]

**ನಡುಪಳ್ಳಿ**, ನಡಪ್ಪಳ್ಳಿ (ನಾ). ಒಂದು ಸ್ಥಳದ ಹೆಸರು: ನಡುನಾಡ ರಸದ ಪೆರ್ದ್ದೊರೆ ನಡುಪಳ್ಳಿಯ ಕಾಮಧೇನು[ವಂ] ಗಣದೊಳಿನಿಪ್ಪದೆ ವಣ್ಣ ಕಲ್ಪತರುವೆಂದಡದೇವಣ್ಣಪುದೂ ರೂಪವಿದ್ಯಾಧರಿಯ (ಸೌಇಇ. XX, ೪೮-೩೫; ಸು. 1076 ?). **ನಡಪ್ಪಳ್ಳಿ**: ನೇಱಿಲೆಯುಂ ಪಮಯೊತ್ತಿಂ ನಡಪ್ಪಳ್ಳಿಮೂಱೂಣಂ ನಡಲು ಎಪ್ಪಳ್ಳಿ (ಎಕ. VI, ಚಿಕ್ಕಮ. ೯೫-೧೫; ಸು. 1025 ?). [ನಡು3 + ಪಳ್ಳಿ1]

**ನಡುಪಾಯ್** 'ನಡುಂಪಾಯ್' ನೋ.

**ನಡುಪ್ರಾಯ** (ನಾ). ಮಧ್ಯವಯಸ್ಸು: ಅವರು ನಡುಪ್ರಾಯದಲ್ಲಿ ತೀರಿ ಹೋದುದರಿಂದ ಸಂಸಾರಕ್ಕೆ ಬಹಳ ಕಷ್ಟವಾಗಿದೆ (ರೂಢಿ). [ನಡು2 + ಪ್ರಾಯ]

**ನಡುಬನ** (ನಾ). ಕಾಡಿನ ಮಧ್ಯಭಾಗ; ಅರಣ್ಯದ ಒಳಭಾಗ: ಸ್ವರ್ಗಸ್ಥ ರಾದರು ತಂದೆ ತನ್ನನುಗನ ನಡುಬನದೊಳು ಬಿಟ್ಟ ಹಾಗೆ (ಇಂಬಾಪ. ೨೧-೯೫). [ನಡು2 + ಬನ]

**ನಡುಬಾನು** (ನಾ). ಆಕಾಶದ ಮಧ್ಯಭಾಗ: ನಡುಬಾನೇಱಿದುಷ್ಣಾಂಶು ಮಂಡಲವಲ್ಲಿ ಕಡು ಸೊಗಸಿತು (ಶ್ರೀಪಾಲ. ೪-೪೭). [ನಡು2 + ಬಾನು3 (<ಬಾನ್3)]

**ನಡುಬಾವಿ** (ನಾ). ಬಾವಿಯ ಮಧ್ಯಭಾಗ: ಶ್ರೀವಿಜಯಮುನಿ ಪೋಗಿ ತಾ ನಡುಬಾವಿಯಲಿ ಬಿದ್ದನು (ಬಸವು. ೫೦-೧೭). [ನಡು2 + ಬಾವಿ]

**ನಡುಬೀಡು** (ನಾ). ಸ್ವಲ್ಪ ಬೆಳೆ ಬೆಳೆಯುವ ಹೊಲ ಮುಂತಾದಂವು: ಕೀಳು ಮೇಲು ನಡುಬೀಡುಬೀಡು ಬಿಯ ತಪುಪೊಪ್ಪು (ಸೌಇಇ. ೦೯೩೭, ಪುತ್ತೂರು. ೧೧೪-೯; 1282). [ನಡು2 + ಬೀಡು2]

**ನಡುಬೀದಿ** 'ನಡುವೀದಿ' ನೋ.

**ನಡುಬೆಟ್ಟ** (ನಾ). ಬೆಟ್ಟದ ಮಧ್ಯಭಾಗ: ನಡುಬೆಟ್ಟಕ್ಕೆ ಹತ್ತುವ ವೇಳೆಗೆ ಬಿಸಿಲೇರಿಬಿಟ್ಟಿತು (ರೂಢಿ). [ನಡು2 + ಬೆಟ್ಟ (<ಬೆಟ್ಟು1)]

**ನಡುಬೆಟ್ಟು** (ನಾ). = ನಡುಬೆರಳು: (?).

[ನಡು2 + ಬೆಟ್ಟು3 (<ಬೊಟ್ಟು1)]

**ನಡುಬೆನ್**, ನಡಂಬೆನ್ನು (ನಾ). ಬೆನ್ನಿನ ಮಧ್ಯಭಾಗ: ಇಱಿದು ಮರ ದಿಂದಮಾಗಳ್ ಕೆಳಗೆಲ್ಲಂ ಪರೆದು ಬಿರ್ದ ಶುಕಸಂತತಿಯುಂ ಗಟಗಟಿಸಿ ಕಟ್ಟಿ ನಡುಬೆನ್ನಿಱಿವಿನೆಗಂ ಪೊತ್ತು ಪೋದನಾ ಮುದುವೇಡಂ (ಕಾದಂಪೂ. ೧೮೭); ನಡುಬೆನ್ನಂ ಸಜ್ಜನೆ ಸೀಱಿಯುಂ (ಅಜಪು. ೧೧-೧೧ ವ). **ನಡುಬೆನ್ನು**: ಮೂಟೆ ಹೊತ್ತು ನಡುಬೆನ್ನು ಮುರಿದುಹೋಯಿತು (ರೂಢಿ).

[ನಡು2 + ಬೆನ್]

**ನಡುಬೆನ್ನು** 'ನಡುಬೆನ್' ನೋ.

**ನಡುಬೆರಳು** (ನಾ). (ಹಸ್ತದ ಅಥವಾ ಪಾದದ ಐದು ಬೆರಳುಗಳಲ್ಲಿ) ಮಧ್ಯದ ಬೆಟ್ಟು,-ಬೆರಳು: ಮಗುವಿನ ನಡುಬೆರಳಿನಲ್ಲಿ ಉಂಗುರವಿದೆ (ರೂಢಿ). [ನಡು2 + ಬೆರಳು (< ಬೆರಲ್)]

**ನಡುಬೊತ್ತು**, ನಡುಹೊತ್ತು (ನಾ). = ನಡುನೇಸಱ್: ಮತ್ತದು ಪೊಗೆ ಹೋದ ತಱಿಗಂಡದೊಳಗೆ ನಡುಬೊತ್ತಾಗುವನ್ನವರ ಮಱುಚ್ಚಳಂ ಮುಟ್ಟೆರಿಸಿ (ಸೂಶಂಕ. ೨-೧). ಅಂಬರಮೆಂಬವನಿಯ ಹೊತ್ತ ಭೂಧರ ಮೆಂಬ ಶೇಷನ ಮಸ್ತಕದ ಕೆಂಬರಲೆನೆ ನಡುಬೊತ್ತಿನೊಳೆಸೆದುದು ಬಿಂಬ ಮಂಭೋರುಹಸಖನ (ಶ್ರೀಪಾಲ. ೪-೪೯). **ನಡುಹೊತ್ತು**: ದೂರದ ಪೂಳಲಿಗೆ ಯಾತ್ರ ಹೊರಟದ್ದೇನೆ. ನಡುಹೊತ್ತಿನಲ್ಲಿ ಆಸರೆ ಸಿಕ್ಕೀತೆಂದು ಇಲ್ಲಿಗೆ ನುಗ್ಗಿದೆವು (ಹಾಡುಕ. ೯೦).

[ನಡು2 + ಪೊತ್ತು3 (< ಪೊಱ್ತು)]

**ನಡುಭವಗಾವುಂಡ** (ನಾ). ಒಬ್ಬಾತನ ಹೆಸರು: ಅಂಕಗವುಣ್ಣಗೆ ಪಲಮ್ಯಱಿ ಗಾವಣ್ಣಂ ನಡುಭವಗಾ[ವು]ಣ್ಣಂಗೆ ತಲುಗರ ಮಾಂಗಾವುಣ್ಣನೊಳ್ಪಜ್ಜಟ (ಎಕ. IV, ಹೆಗ್ಗಡ. ೧೧೪-೧೮; 1037).

[? + ಗಾವುಂಡ (< ಗಾಮುಂಡ)]

**ನಡುಭಾಗ** (ನಾ). ಮಧ್ಯಭಾಗ: ನದಿಯ ನಡುಭಾಗದಲ್ಲಿ ಬಹಳ ಆಳವಿದೆ (ರೂಢಿ). [ನಡು2 + ಭಾಗ]

**ನಡುಮಂಡೆ** (ನಾ). = ನಡುದಲೆ: ಭಂಡರಾದವಲಾಯೆನುತ ನಡುಮಂಡೆ ಯನು ತುಡುಕಿದನು ಮೆಱೆವುದ್ದಂಡಜಡೆಯನು ಕಿತ್ತು ಬೀಸಾಡಿದನು ಭೂತಳಕೆ (ನಿಭಾಗ. ೪-೨-೪); ದಂಡೆ ಕಾಣದು ನಮ್ಮೂರು ನಡುಮಂಡ ಸ್ಥಳವೆ ನಮ್ಮೂರು (ಪುರಂದ. ೫-೭೧-೦). [ನಡು2 + ಮಂಡೆ1]

**ನಡುಮಟ್ಟ1** (ನಾ). ನಡುವಿನ ಮಟ್ಟ; ಸೊಂಟದ ಸಮ: ಅವನು ನಡು ಮಟ್ಟದ ನೀರಿನಲ್ಲಿ ನಿಂತಿದ್ದಾನೆ (ರೂಢಿ). [ನಡು2 + ಮಟ್ಟ1]

**ನಡುಮಟ್ಟ2** (ಅ). ಸೊಂಟದ ವರೆಗೆ; ಸೊಂಟದ ತನಕ: ಆ ಕೆರೆಯಲ್ಲಿ ಒಬ್ಬ ಮನುಷ್ಯನ ನಡುಮಟ್ಟ ಬರುವಷ್ಟು ಮಾತ್ರ ನೀರಿದೆ (ರೂಢಿ).

[ನಡು2 + ಮಟ್ಟ1]

**ನಡುಮಣ್ಣು** (ನಾ). (ತಕ್ಕಮಟ್ಟಿಗೆ ಚೆನ್ನಾಗಿರುವ) ಮಧ್ಯಮವರ್ಗದ ಭೂಮಿ: (ಕಿಸಂಗ್ರಾ. ೧೮). [ ನಡು$_2$ + ಮಣ್ಣು (<ಮಣ್) ]

**ನಡುಮಧ್ಯ$_1$** (ನಾ). ನಡುಭಾಗ ; ಮಧ್ಯಭಾಗ ; ನಟ್ಟನಡು : ನಡು ಮಧ್ಯದಲ್ಲಿ ನಕ್ಷತ್ರ ಉದಯವಾಗಲು . . . ಕಾಳಲಾದೇವಿ ಕಿಡಮುಂಜಿ ದೋಡಿದಳು ನೋಡಾ (ಸಿದ್ಧೇವ. ೪೮-೧೩೫) ; ಸುತ್ತ ಮೆರದಿಹ ಸೇನೆ ನಡುಮಧ್ಯದೊಳು ಹಿಮಕರನಾ ಚಿತ್ರಭವನವೊಯೆನಲು ರಂಜನೆವೆತ್ತ ನಿಜಬೀಡಿನಲಿ . . . ಎಸೆದನು ಕೇಳು ಕೌರವನು (ಜಿನಭಾ. ೫೭-೨) ; ಬಿಡಾರವಿರುವವನಿಗೆ ನಡುಮಧ್ಯವಾದರೇನು ? (ಗಾದೆ). [ ನಡು$_2$ + ಮಧ್ಯ$_1$ ]

**ನಡುಮಧ್ಯ$_2$** (ಅ). ಮಧ್ಯಭಾಗದಲ್ಲಿ ; ನಟ್ಟನಡುವೆ : ನಡುಮಧ್ಯ ಇರುವಂಥ ಸೀಮೆಯನ್ನು ಕಟ್ಟಿಕೊಂಡು (ರಾಜೇಂದ್ರ. ೨೭). [ ನಡು$_2$ + ಮಧ್ಯ$_2$ ]

**ನಡುಮಧ್ಯೆ** (ಅ). ಮಧ್ಯಭಾಗದಲ್ಲಿ ; ನಟ್ಟನಡುವೆ : ಇಬ್ಬರು ದುಷ್ಟರಿಗೆ ಜಗಳವಾಗುತ್ತಿರುವಾಗ ನಡುಮಧ್ಯೆ ಪ್ರವೇಶಿಸುವುದು ಅಪಾಯಕರ (ರೂಢಿ); ನಡುಮಧ್ಯ ಇವರ ಕಿತಾಪತಿ ಬೇರೆ (ರೂಢಿ). [ ನಡು$_2$ + ಮಧ್ಯೆ$_2$ ]

**ನಡುಮನೆ** 'ನಡಂವನೆ' ನೋ.

**ನಡುಮರ** (ನಾ). ವೃಕ್ಷದ ಮಧ್ಯಭಾಗ : ನಡುಮರ ಹತ್ತಿ ಬುಡ ಕಡಿದ (ಗಾದೆ). [ ನಡು$_2$ + ಮರ$_1$ ]

**ನಡುಮಾಳ** (ನಾ). ಮೈದಾನದ ಮಧ್ಯಭಾಗ ; ನಡುಬಯಲು ; "[illegible]" ([illegible]): [illegible] . . . [illegible] ಮುಂದೆ ನೀರಿಲ್ಲಣಮೆ ಮಗುಚಿಕೊಳ್ಳುದು [illegible] ([illegible] ೧೯೩ ಪ್ರಯೋ). 'ನಿಡುಮಾಳ' ಪಠಾ. [ ನಡು$_2$ + ಮಾಳ$_4$ ]

**ನಡುಮುರಿ$_1$** (ಕ್ರಿ). ೧. ಸೊಂಟ ಬಾಗಂ, – ಬಗ್ಗು : ನಡುಮುಜಿ[೦]ದು ಗುಡುಗೂಜಿ ತಲೆ ನಡುಗಿ . . ಒಂದನಾಡಮೋಗಿ ಒಂಬತ್ತನಾಡುವ ಅಜ್ಜಾನಿಗಳೆಲ್ಲರೂ ಹಿರಿಯರೆ (ವಚನವ. ೪. ೧೩೯-೩೩೭). ೨. (ಆಲಂ) ಸಂಪೂರ್ಣ ಶಕ್ತಿಗುಂದಂ. [ ನಡು$_2$ + ಮುರಿ$_1$ ]

**ನಡುಮುರಿ$_2$** (ಕ್ರಿ). ೧. ಸೊಂಟವನ್ನು ಮುರಿದಂಹಾಕು. ೨. (ಆಲಂ) ನಾಶಮಾಡು ; ಹಾಳುಮಾಡು : ಬರುತದೆ ! ಮೈತೋರದೆ ಬರುತದೆ ! ಆದೆ – ನಡುಮುರಿಯುತ ನಗನಾವೆಗೆ. ಕೂವೆಗೆ (ಕಎಪು. ೨೭-೩). [ ನಡು$_2$ + ಮುರಿ$_2$ (<ಮುಜಿ$^3$$_1$) ]

**ನಡುಮೂಗು** (ನಾ). ಮೂಗಿನ ಮಧ್ಯಭಾಗ ; ನಾಸಿಕದ ನಡುಭಾಗ : ನಡುಮೂಗು, ನಾಸಾಸೇತು (Bridge of the nose. ಪಾರಿಶಿ. ೧೦). [ ನಡು$_2$ + ಮೂಗು$_1$ ]

**ನಡುರಂಗ** (ನಾ). (ದೇವಸ್ಥಾನದ) ಮಧ್ಯಭಾಗದಲ್ಲಿರುವ ರಂಗಮಂಟಪ, –ಸಭಾಮಂಟಪ ; ನವರಂಗ : ಗುಡಿಯ ಬೋದಿಗೆ ಕಲ್ಲು ನಡುರಂಗ ತಾ ಕಲ್ಲು ಕಡೆಮೂಲೆ ಸೆಜಿಗು ತಾ ಕಲ್ಲು ವರವನು ಕೊಡುವಾತ ಬೇಜಿ$^3$ (ಸರ್ವಜ್ಞ. ೨೦೫). [ ನಡು$_2$ + ರಂಗ$_2$ ]

**ನಡುರಾತ್ರಿ** (ನಾ). ಮಧ್ಯರಾತ್ರಿ ; ಸಮರಾತ್ರಿ : ನಡುರಾತ್ರಿಯಿಂದ ಮುಂಜಾನೆ ನಾಲ್ಕು ಗಂಟೆಯ ತನಕ ವಿಶ್ರಾಂತಿ ತೆಗೆದುಕೊಳ್ಳುವರು (ರಾಜವ. ೭೮). [ ನಡು$_2$ + ರಾತ್ರಿ ]

**ನಡುರಾತ್ರೆ** (ನಾ). = ನಡುರಾತ್ರಿ : ಆತನಿಗೆ ಈಗ ನಡುರಾತ್ರಿಗೆ ತನ್ನನ್ನು ಕರೆದು ಪಸೆ ತುಂಬಿದ ಕಣ್ಣುಗಳಿಂದ 'ನನ್ನನ್ನು ರಕ್ಷಿಸು' ಎನ್ನುತ್ತಿದ್ದ ತಂಗಿಯನ್ನು ಇದಿರಿಸುವುದು ಸಾಧ್ಯವಾಗಲಿಲ್ಲ (ವಾತ್ಸಲ್ಯ. ೩೩೭) ; ಈ ನಡುರಾತ್ರೆಯಲ್ಲಿ ಭೀತಿಯಿಲ್ಲದೆ ನನ್ನ ಬೆಂಬತ್ತಿ ಬಂದವನು ನೀನು ಯಾರು ? (ಚಿತ್ರೀಸ. ೩೦). [ ನಡು$_2$ + ರಾತ್ರೆ ]

**ನಡುವಂತರ** (ನಾ). ೧. ನಡುವೆ ಇರುವ ಸ್ಥಳ. ೨. ಮಧ್ಯದ ಅವಸ್ಥೆ, –ಕಾಲ : ಹೀಗೆ ನಡುವಂತರದಲ್ಲಿ ಕೈಬಿಟ್ಟುಬಿಟ್ಟರೆ ಯಾರು ಗತಿ ? (ರೂಢಿ). [ ನಡು$_2$ + ಅಂತರ ]

**ನಡುವಗಲ್, ನಡುಂಪಗಲ್, ನಡುವಗಲು, ನಡುಂಹಗಲು** (ನಾ). ಹಗಲಿನ ಮಧ್ಯಭಾಗ; ಮಧ್ಯಾಹ್ನ; ನಡುಂಹೊತ್ತು: "ಮುಂಬಗಲ್, ನಡುವಗಲ್, ನಡೆವಗಲ್ – ಇವು ೩ ತ್ರಿಕಾಲಂಗಳ್" (ಶಶಸಾ. ೫೭-೨೫೦) ; ನಡುವಗಲ ಬಿಸಿಲ್ಮನ್ನಂ ಸುಡೆ ವನಕರಿ ಕಮಳಬಂಧುವೊಳ್ಸಿನಕರನೊಳ್ ಕಡುಗಾಯ್ಪನೆ ಸರಸಿಜಮಂ ಕಿಡಿಸಲ್ಕಾಂ ಪೊಕ್ಕುದಾಗ ಬಗೆಗಾ ಕೊಳನಂ (ಕವಿರಾ. ३-೦೦೯); ನರೇಂದ್ರ ನೋಡೀ ನಡುವಗಲೊಳ್ ಚಕ್ರವಾಕವಧು ವಿರಹಿಸುವಳ್ (ಆದಿಪು. ೧೧-೬೩) ; ಕಡುಪೊತ್ತಾದುದು ರವಿಯುಂ ನಡುವಗಲೊಳ್ಕಿಂದು ಕೆದಱಿದಂ ಕರತತಿಯಿಂ ಕಿಡಿಗಳನನೆ ಬಿಜುವಿಸಿಲುಂ ಸುಡುತಿರೆ ನೀರಡಿಕೆ ತಿಣ್ಣಮಾದತ್ತಾಗಳ್ (ಕಾದಂಪೂ. ೧೯೬) ; ನಡುವಗಲಾದಿತ್ಯನಂತೆ ನೋಡಲರಿದು (ಧರ್ಮಾಮೃ. ३-೧೮೬) ; ಸೊಲ್ಲಿಸಲು ಬಾರದಾನಂದದಿಂದಾಡಿ ಪಾಡಿದನು ನಡುವಗಲ ತನಕ (ಸಿದ್ಧರಾ. ೨-೦೬) ; ನಡುವಗಲೊಳ್ ಕಡುನೀರನೊಳೊಡವೆರೆದ ಬಳಲ್ಕೆಗಳೆಯಲೆಳಸಿ ಘಳಿಲನೊಳಪೊಕ್ಕು ಮೈದೊಳೆದು (ರಾಜಶೇ. ೬-೨೯೪) ; ನಡುವಗಲ ಭಾಸ್ಕರು ನಿಶ್ಚಲಂ ಪೊಳೆಯುತಿರ್ದಂ (ರಾಮಾಶ್ವ. ३೧-೧३). **ನಡುಪಗಲ್** : ಮರುಸ್ಥಳದ ಪಾಳದೊಳ್ ನಡುಪಗಲ್ವರಂ ಗ್ರೀಷ್ಮದೊಳ್ ಸುರುಳ್ವನೆಗವುಟ್ಟ್ವ ಬೇವವರ್ಗೆ ಜೋಂಪವಿಮುಕ್ತಾಪ್ರ ನಿಜ್ಜರಾಂಬು ದೊರೆಕೊಳ್ವಪೊಲ್ (ಆದಿಪು. ೧३-೮೬) ; ಸಡೆಯು [illegible] ನಡುಪಗಲು [illegible] (ಪರ್ಪು. ३-२). **ನಡುವಗಲು** : ನಡುವಗಲಿನ ಸನ್ನಿಯಾದುದು ಪಾದತರಡಬಲಿಕೊಳೆದು ಸಾಗಿದರು (ಪ್ರರಾ. ೧೬-೧३೪) ; ನಡುವಗಲಿನ ಬೇಸಗೆಯ ಮಾರ್ತಂಡನ ಕದುಝುಳದುಬ್ಬರಕಾಗ ಅಡಗುವ ಹಿಮದೊಲಿಪ್ಪತ್ತುಸಾವಿರಬಲ ಮಡಿದುದು (ಕಂನವಿ. ೦೫-೮೯) ; ನಡುವಗಲಲ್ಲಿ ತಾಂ ನಡಪಿ ದಂತಿಗಳಂ ರವಿತಪ್ತಯೂಥಮಂ ಬಿಡದತಿ ಶೀತಲಸ್ಥಲವ ಸೇವಿಸುವಂತೆಪೊಲ್ (ರಾಕುಂತ. ೬३-೧೦೫) ; ಬೆಳಗು ಬೈಗಸುದುಃಖ ಸುಖದ ಸಮಶೀತೋಷ್ಣದೊಳಗದ್ದಿ, ನಡುವಗಲು ಕುದಿಸಿ ಒಣಗಿಸಿ (ನಲಮು. ೬೪-೫). **ನಡುಹಗಲು** : ಕಂಡಿರೇ ಮುರವೈರಿ ದಳಪತಿ ಚಂಡಬಳನಹ ನಡುಹಗಲ ಮಾರ್ತಾಂಡನಂತಿರೆ ತೋಱುತೈದನೆ ರಥವ ತಿರುಹೆಂದ (ಕುಮಾರ. ೧೪-೩೬) ; ನಡುಹಗಲ ಸೂರ್ಯನನಳುಕಿಸುವುದೇ ಮಂಜು (ನಿಘಂಗ. ೦೦-೫೬-೪೮) ; ನಡುಹಗಲ ಸಿರಿಹೊತ್ತು, ಭಾಸ್ಕರನ ಸುಳುವಿಲ್ಲ (ಗೊಲ್ಲಾಥಾ. ೧೦-३೬३) ; ನಡುಹಗಲಿನ ಆಕಾಶವನ್ನು ನೀವು ನೋಡಿರಬಹುದು (ರಾಮಾನಿ. ೦೦೬) ; ನಡುಹಗಲಲ್ಲಿ ಸೂರ್ಯನ ಸೆಕೆಯಿಂದ ಪಾರಾಗಲು, ತಂಪಾದ ನೆರಳಲ್ಲಿ ಮಲಗಿ ವಿಶ್ರಾಂತಿ ಪಡೆದರು (ಮಂಚಸ. ೭೯). [ ನಡು$_2$ + ಪಗಲ್ ]

**ನಡುವಗಲು** 'ನಡುವಗಲ್' ನೋ.

**ನಡುವಗಲ್ಪಂಜು** (ನಾ). (ದೇವರ ಅಥವಾ ಹಿರಿಯ ವ್ಯಕ್ತಿಗಳ ಗೌರವಾರ್ಥವಾಗಿ) ಮಧ್ಯಾಹ್ನದಲ್ಲಿ ಉರಿಸುವ ಪಂಜು ; ಹಗಲು ದೀವಟಿಗೆ : ಪಿಡಿದರಳ್ ಸತ್ತಿಗೆಗಳೆರಡೆರಳ್ ಚವರಗಳ ನಡುವಗಲ್ಪಂಜುಗಳ . . . ಗದಾದಿಯಾಯುಧಮನುಜಿ ಜಡಿವುಕ್ತ ಸಿಡಿಲ ಬಳಗಂಗಳೆನೆ ಬಂದುದು ಪದಾತಿಬಲಮೇನೆಂಬೆನು (ಚಿಬಪು. ೪೭-३೭). [ ನಡುವಗಲ್ + ಪಂಜು ]

**ನಡುವಟ್ಟು** (ನಾ). ಬಿಂಬದ ಮಧ್ಯಭಾಗ ; ಮಂಡಲದ ನಡುಭಾಗ : ಬಡಲೊಳ್ ಪೊತ್ತಪನಾವ ವಸ್ತುವನಹೀಂದ್ರಂ ಕಂದದೊಳ್ ತಾರ್ಕ್ಷ್ಯನಂ ನಡುವಟ್ಟೊಳ್ ಪಗಲಾಣ್ಮಂ . . . ತೊಡರ್ದಿರ್ಕಾ ಪರವಸ್ತು ವೀರ ಚಿಕದೇವೇಂದ್ರಕ್ಷಮಾಪಾಲನಂ (ಚಿಕವಿ. ೫-೨) ; ಅಚ್ಚಪೊಚ್ಚಪೊಸ ಸೇವಂತಿಗೆಯೆಸಲ್ಪರದ ಸುತ್ತಿನಿಂದಿನಿಸುಂ ನಡುವಟ್ಟನುಱಿದು ತಲೆಯೆಡೆಯಂ

ಬೆಳರ್ಚಿಸುವೋರಸಿಕ್ಕ ತನ್ನ ಕುಲದೇವಿಗ್ನಿಯುಂ ನಿಟ್ಟಿಸಲ್ಕಿಂತಂದ ಚಂದಿರನೆಂಬ ಸಂದೆಯುವುಂ ಸಮನಿಸುತ್ತಿದೆ (ಚಿಕವಂ. ೮೧-೨೧).

[ ನಡು₂ + ಬಟ್ಟು₁ ]

**ನಡುವಟ್ಟೆ** (ನಾ). ಮಧ್ಯದಾರಿ ; ಮಾರ್ಗಮಧ್ಯ : ಪೆಸರ್ವೆತ್ತ ತೀರ್ಥ ಕ್ಷೇತ್ರಂಗಳೊಳ್ ಸಂಚರಿಸುತಿಪ್ಪನ್ನಂ ನಡುವಟ್ಟೆಯೊಳ್ ಪಲಂಬರಂ ಕರ್ವೇಡರಂ ಕಂಡಂ (ರಾಮಾಶ್ವ. ೭೬-೧೩). [ ನಡು₂ + ಬಟ್ಟೆ₁ ]

**ನಡುವನ** (ನಾ). ಕಾಡಿನ ಮಧ್ಯಭಾಗ; ಅರಣ್ಯದ ಮಧ್ಯಭಾಗ: ನೆರಹಿದರದಟಗಂಧರ್ವರು ಭಟವ್ರಜವ ಬಂದುದದು ನಡುವನಕೆ ಕೌರವ ವ್ಯಂದವನು ಕರೆದರು ವಿನೋದಕೆ ಬಂದಿರ್ಪ ನಾರಾಚಸಲಿಲಕ್ರೀಡೆಯಿದ ಯೆನುತ (ಕುಮಾ.ಅ. ೧೮-೩೩). [ ನಡು₂ + ವನ ]

**ನಡುವನೆ**, ನಡುಮನೆ (ನಾ). ಮನೆಯ ಮಧ್ಯಭಾಗ : "ನೆಟ್ ನಡುವನೆ ನಟ್ಟವನೆಯುಮುಕ್ಕು ಬುಧರಿಂ" (ಕವಿಕಂ. ೧೪೪). ನಡುಮನೆ : "ನಟ್ಟವನೆ ಯೆನೆ ನಡುಮನೆಯುಮುಕ್ಕು" (ಕಬ್ಬಿಕೈ. ೪೩); ಅಸುವವೊರಲೊನಕೆ ಗೂಟಂ ಪೊಸತಿಲು ನಡು[ಪಾಠಾಂ. ಮನೆ]ಮನೆಯ ಕಂಭವೊರೆ ಪಡಿ ಪಾಲುಂ . . . ಸಮಸ್ತಂ ದೆಯ್ವಮಿಂತಿವೆಂಬಮೂರ್ಢರ್ (ಸಮಯ. ೯-೮೩); ನಡುಮನೆ ಯೊಳಿರ್ದವನ ಕೋಣೆಗೊಡಗೊಂಡೊಯ್ದು ಪಡಿಗದವನಿಕ್ಕಿ ಉಮ್ಮಳಿಸಿ ಸುಟ್ಟಿನ ಸುಯ್ದು ಬಂದ ಭಕ್ತರ್ಗೆ ನೆಟ್ ಬೋನವಂ ಮಾಡುತಿರೆ (ಕಲಿಕಾ. ೭೬-೧೭) : ತನ್ನ ಛಾತ್ರನಪ್ಪ ಯಜ್ಞನಂ ನಡುಮನೆಯ ಜಗಲಿಯಿಂ ತೆರಳಲಾಗದೆಂದು ನಿಯಮವಾಜ್ಞೆಯುಂ ಕೊಟ್ಟು ಪೋಗೆ (ಧರ್ಮಾಪ. ೩-೧೩೭); ನಡುಮನೆಯೊಳಗೊಂದು ನಾಲ್ಕು ತೆಂಗಿನ ಮರ . . . ತಲೆ ಮೊದಲಿಲ್ಲದ ಬೆಳದು ಹಣ್ಣಾಯಿತು (ಪುರಂದ. ೨-೧೯೧ ಪಲ್ಲವಿ) ; ಊಟವಾದ ಮೇಲೆ ನಡುಮನೆಯಲ್ಲಿ ಕುಳಿತುಕೊಂಡು ಮೂವರೂ ಲೆಕ್ಕದ ಪರಿಶೀಲನೆ ಮಾಡ ತೊಡಗಿದರು (ಮರಳಿ. ೧೩೮) ; ವೆಂಕಮ್ಮನವರು ನಡುಮನೆಗೆ ಬಂದು ಹುಡುಗರ ಗುಂಪನ್ನು ನೋಡಿ ಸ್ವಲ್ಪ ದಿಗಿಲು ಬಿದ್ದರು (ಕಳಹು. ೧೦).

ನಡುಮನೆ ಕಂಬ = ಮನೆಗೆ ಆಧಾರಸ್ತಂಭದಂತಿರುವವನು ; ಮನೆಯ ಹಿರಿಯ,–ಮುಖ್ಯಸ್ಥ. [ ನಡು₂ + ಮನೆ ]

**ನಡುವರಿ** (ನಾ). [ನಾಟ್ಯ] ಕರಣಗಳಲ್ಲಿ ಒಂದು ಬಗೆ: ನಡುವರಿ ಮೊಸಳೆವರಿ ಜಲಶಯನಚ್ಯುತಂ ಮತ್ಸ್ಯಪುಟಂ ಲಂಕಾದಹನಮೆಂಬ ಪಲವುಂ ತೆಱದ ಕರಣಂಗಳಿಂ . . . ಎರಡುಂ ತೆಱದ ನೃತ್ಯಭೇದದಿಂದಾಡಿ (ಧರ್ಮಾಪ. ೨-೨೬ವ). [ ? ]

**ನಡುವಲೆ** (ನಾ). ಬಲೆಯ ಎರಡುಂ ಬೇರೆ ಬೇರೆ ಕೊನೆಗಳನ್ನು ಭೂಮಿ ಯಲ್ಲಿ ನಾಟಿರುವ ಒಂದು ಬಗೆಯ ಬಲೆ (?) : ತಡಿಕೆವಲ ಕಣ್ಣವಲ . . . ನಡುವಲ ತಡವಲ ಸಿಡಿವಲ ನಿಡುವಲೆಗಳೊಪ್ಪಿದವು ಲಬ್ಧಕರೊಳ್ (ಗಿರಿಕ. ೧-೮೦). 'ನಡೆವಲ' ಪರಾ. [ ನಡು₁ + ಬಲೆ₁ ]

**ನಡುವಳಿ** (ನಾ). ಮಧ್ಯಭಾಗ : ನೀರುಳ್ಳಿ ಹಸಿಯಲ್ಲದ ಹುಡಿಯ ತುಪ್ಪದಿ ಹುರಿದು ಮತ್ತಮಾ ಹೋಳುಗಳ ನಡುವಳಿಯ ಕತ್ತಿಯೊಳು ಸೀಳಿಕೊಂಡು . . . ನಾರಿಂದಮು ಬಿಗಿವುದು (ಸೂಪಶಾ. ೫-೧೩) : ಆ ಮಧ್ಯದ್ವೀಪದ ನಡುವಳಿಯ ಮಹಾಮೇರುಮಹೀಧರಮೆಸದತ್ತು (ಜಪುಕಾ. ೧-೩೨).

[ ನಡು₂ + ಬಳಿ₃ (< ಬಟ್ಟೆ₂) ]

**ನಡುವಾಯ್**, ನಡುಪಾಯ್ (ಕ್ರಿ). ೧. ನಡುವೆ ಹಾಯಂ ; ಮಧ್ಯೆ ಪ್ರವೇಶಿಸು. 'ನಡುವಾಯಿ' ಪರಾ. ನಡುಪಾಯ್ : ೨. ಕಾಲಕ್ಕೆ ಮುಂಚಿತವಾಗಿ ಹೊರಬೀಳು ; ಮಧ್ಯಕಾಲದಲ್ಲಿ ನೆಗೆ : ಈಂಬ ಸಿಂಹಿಕಿಶೋರಂ ನಡುಸೂಲೊಳ್ಸಿರ್ ಕಣ್ಣಂ ತೆಱೆದಿ ಭಪತಿಯುಂ ತಾಱಲೊಳ್ಕಂಡು ಕಾಯ್ಪಿಂ ನಡುಪಾಯ್ದಾ ತಾಯ್ಗೆ ದುಃಖಪ್ರಸವಸಮಯ ದೊಳ್ತಂದುದುತೊಂದಲಂಪಂ (ಅನಂಪು. ೧೨-೬೨).

[ ನಡು₂ + ಪಾಯ್₁ ]

**ನಡುವಾಯಿ** (ನಾ). ಮಧ್ಯೆ ಪ್ರವೇಶಿಸುವವನು ; ನಡುವೆ ತಲೆಹಾಕು ವವನು : ಬಣಗುಗಳು ಭೀಮಾರ್ಜುನರು ಕಾರಣಕ ನೀ ನಡುವಾಯಿ ಧರ್ಮದ ಕಣಿ ಯುಧಿಷ್ಠಿರನೆತ್ತ ಬಲ್ಲನು ನಿನ್ನ ಮಾಯೆಗಳ (ಕುಮಾ.ಗ. ೬-೩೯). [ ಸಡುವಾಯ್ + – ಇ₃ ]

**ನಡುವಾಯು** (ನಾ).ಸೊಂಟದಲ್ಲಿ ಬರುವ ವಾಯುರೋಗ,–ಸಂಧಿವಾತ: (ಕಿಸಂಗ್ರಾ. ೧೧೮). 'ಕಟಿವಾತ' ಪರಾ. [ ನಡು₂ + ವಾಯು ]

**ನಡುವಿಡಿ** (ಕ್ರಿ). ನಡುವನ್ನು ಹಿಡಿ ; ಸೊಂಟವನ್ನು ಬಳಸು : ಉಟ್ಟುವ ಪೆಣ್ದಿಂಬುಂ ಸುತ್ತಿ ನಡುವಿಡಿದ ಕಟ್ಟಣಿಗೇಂ ನೇವಳು ಬಿಗಿವುದಲ್ತೆ (ಕಾಲಜ್ಞಾ. ೧೪೮-೩೩೩). [ ನಡು₂ + ಪಿಡಿ₁ ]

**ನಡುವಿರುಳ್₁**, ನಡುವಿರುಳು₁ (ನಾ). = ನಡುರಾತ್ರಿ : "ನಿಶೀಥಃ, ಮಹಾನಿಶಾ – ಈ ೨ ನಡುವಿರುಳ್" (ಹಲಾಯು. ೧೮-೧೧೯) ; ಜನಮಂದಿರ ದೊಳ್ ನಡುವಿರುಳಪ್ಪಿನಂ ಪೂಜಾವೈಭವಮಂ ನೋಡುತ್ತಿರ್ದು (ಧರ್ಮಾಮೃ. ೨-೨೦೬) ; ನಡುವಿರುಳೊಳಿದ್ದ ಕುರುಡಂಗೆ ಆಗಸೆಯಲ್ಲಿ ಬೆಳಗಾದಂತೆ (ಬಸವ. ೨೮೭). ನಡುವಿರುಳು₁: ನಡುವಿರುಳಲ್ಲಿ ಹೊರಟವರಿಗೆ ಹೆಬ್ಬಾಗಿಲಲ್ಲಿ ಬೆಳಗಾಯಿತು (ಗಾದೆ). [ ನಡು₂ + ಇರುಳ್ ]

**ನಡುವಿರುಳ್₂**, ನಡುವಿರುಳು₂ (ಅ).ಮಧ್ಯರಾತ್ರಿಯಲ್ಲಿ; ನಡುರಾತ್ರಿಯ ಸಮಯದಲ್ಲಿ : ನಡುವಿರುಳ್ ಕರ್ಪಟವುಂ ಪೞದುಟ್ಟು ನಾಗಪುರಕ್ಕೆ ಪೋಗಿ (ಶಾಂತಿಪು. ೯-೫೦ವ) ; ನಡುವಿರುಳವರ್ ನಾಟಕಂ ನಲಿದು ಮೞ ದೊಱಗಿರ್ದ ಸಮಯದೊಳ್ (ಪಂಚತಂ. ೨೬೪-೧) ; ನಡುವಿರುಳಾರುಮಿಲ್ಲ ದೆಡೆಯೊಳ್ ಕೊರಲೊಳ್ ವಧು ಕೋದು ಬಳ್ಳಿಯಂ ಮಡಿಯಲೊಡರ್ಚೆ (ಪಂರಾಮಾ. ೮-೦೫) ; ತರುಣಿ ನಡುವಿರುಳೈದಿ ಕರ್ಣನ ಹೊರೆಯೊಳಾ ವಿರ್ಭವಿಸಲು (ಕುಮಾ.ಅ. ಓಂಇ. ೨೩-೪). ನಡುವಿರುಳು₂ : ನೆಲೆವಟ್ಟಣಕ್ಕೆ ಬರೆ ನಡುವಿರುಳು ನಡೆತಂದು ಊರ ಹೊಱಗಣ ಮಸಣವಟ್ಟಗೆಯೊಳಿರ ಲಂದು (ನಂಬಿರ. ೭-೫೪) ; ನಡುವಿರುಳು ಕಲಿಪಾರ್ಥನರ್ಚಿಸಿದನು ನಿಜಾಯುಧವ (ಕುಮಾದ್ರೋ. ೯-೩) ; ಪೊಡವಿಪತಿಯೆಡೆಗೊಯ್ವೆಯಿಪಾಶನ ಬಿಡಲಿ ಮೇಣಲ್ಲದೊಡೆ ಕೊಲಿಸಲಿ ನಡುವಿರುಳು ರಣದೊಳಗೆ ಕೊಂದುದ ಮಱದುದಿಲ್ಲೆಂದ (ಕೌಶಿರಾ. ೩೪-೪೭) ; ದೀವಿಗೆಯು ಕಡುಬೆಳದು ಸಟ್ಟುದಿನಿಪ ಶಂಕೆಯ ಬೆಳಸಿ ಕಡುನಡುವಿರುಳದಕೆ ಕಿಚ್ಚಿಕ್ಕಿ ಹೊಱವಂಟ (ಸಾಳ್ವಭಾ. ೩೫-೫); ಬೇಗೆಯೊಳು ಹೋಗದಿರು ಮೂಗರೊಳು ನುಡಿಯದಿರು ಆಗದರ ನಂಬಿ ಕೆಡದಿರು ನಡುವಿರುಳು ಪೋಗದಿರು ಪಯಣ (ಸರ್ವಜ್ಞ. ೧೫೪೫). [ < ನಡುವಿರುಳ್₁ ]

ನಡುವಿರುಳು₁ 'ನಡುವಿರುಳ್₁' ನೋ.

ನಡುವಿರುಳು₂ 'ನಡುವಿರುಳ್₂' ನೋ.

**ನಡುವೀದಿ**, ನಡುಬೀದಿ (ನಾ). ಬೀದಿಯ ನಡುಭಾಗ ; ದಾರಿಯ ಮಧ್ಯಭಾಗ : ನಿಜಜನನಿ ನೀರ್ಗೆ ಪೋದ ಪೊಳ್ತಿನೊಳಾ ಕಳಕಳವುಂ ಕೇಳ್ದು ನೋಡಲೆಳಸಿ ನಡಗರಂ ಮಿಗೆ ನಡುವೀದಿಗೆ ತಡೆಯದೆ ಬಂದು (ರಾಜಶೇ. ೧೩-೯೫ವ). ನಡುಬೀದಿ : ಪಶು ಮಡುವಿನ ಅಗ್ಗಣಿಯ ಕುಡಿದು ನಡುಬೀದಿ ಯಲ್ಲಿ ಬರುತಿರಲು (ಸಿದ್ಧೇವ. ೪೮-೧೩೬) ; ಅವಳನ್ನು ಕುರಿತು ಯೋಚಿಸಲು ನಡುಬೀದಿ ತಕ್ಕ ಸ್ಥಳವಲ್ಲ (ದುಂಬಿಕ. ೬) ; ಏನಿಲ್ಲಿ ನಿಂತುಬಿಟ್ಟರಿ ಮೂಳೆಗಳ ನಿಳಂಹ ನಡುಬೀದಿಯಲ್ಲಿ ? (ಚಂದ್ರಸ. ೪೨).

[ ನಡು₂ + ಬೀದಿ ]

**ನಡುವು** (ನಾ). ನಡು ; ಮಧ್ಯಭಾಗ : ವಿಮಾನಂಬುಬುವುಮಂ ನೀರಿಲ್ಲದ ಕೆಱೆಯ ನಡುವುವುಂ . . . ಇಂತೀ ಪದಿನಾಱುಂ ಕನಸುಗಳಂ ಕಂಡೆನೆಂದಂಪೆ (ವಡ್ಡಾರಾ. ೮೫-೨೬) ; ನಡುವಿನಲ್ಲಿ ಅಧಿಕಾರ ಬಂದರೆ ಅವನನ್ನು ಹಿಡಿಯ ಸಲ್ಲ, ನಡುವಿನಲ್ಲಿ ಸೀರೆ ಹರಿದರೆ ಉಡ ಸಲ್ಲ (ಗಾದೆ).

[ ದೇ.೫ ತಮಿ. ನಟುವು ; ತುಳು. ನಡುವುಲು ; ತೆಲು. ನಡುಮು ]

**ನಡುವೂರು** (ನಾ). ಊರಿನ ಮಧ್ಯಭಾಗ : ಪಟ್ಟಣದ ಮಧ್ಯಸ್ಥಳ,–ಕೇಂದ್ರಪ್ರದೇಶ : ದುರಾಸೆ ಮುಂದುಗೊಂಡು ನಾನಾ ದೇಶವ ತಿರುಗಿ ಹುಸಿಯ ಬೋಗಳ ವ್ಯಾಪಾರದ ಮಾಟಿಯಿಂದ ನಡುವೂರ ಬೀದಿ ನಡುವೆ ಕುಳಿತು (ಮಡಿವಮ. ೪೭–೬೪).. [ ನಡು$_2$ + ಊರು$_3$ ( < ಊರ್ ) ]

**ನಡುವೆ$_1$, ನಡವೆ** (ನಾ). ಮನೆಯ ಮಧ್ಯದ ಭಾಗ; ನಡುಮನೆ : ಇವ್ವರಲ್ಲಿಯೇ ಪುನಃ ನಡುವೆಯ ಬಾಗಿಲಲ್ಲಿ ಅಪ್ಪಯ್ಯ ಬಂದು ನಿಂತಿದ್ದರು (ಹಂಗಾಳ್ಯ.೪); ನಡುವೆಯ ಕಡೆಗೆ ಬಾಗಿಲು ತೆರೆದ ಕೋಣೆಯಿಂದ ತಂಬಾಕು ಹೊಗೆಯನ್ನು . . . ಕುಡಿಯುತ್ತಿದ್ದಂತೆ ಅವಳ ಬಯಕೆ ಕಾವೇರುತ್ತಿತ್ತು (ಪುನರು. ೦೩೭). ನಡವೆ : ಒಡನಾ ಪೂಥತ್ವಾಟ್ವಾರ್ ನಡವೆಯೊಳನಿತೆಡೆಯನೀವುದೆನೆ (ದಿವ್ಯಸ. ೨–೯) ; ಗಣಿಕಾವನಿತಾಲಯಂ ಮೆರೆಗುಮವುಗಳೊಂದರ ಮುಂಬಾಗಿಲ ನಡವೆಯ ಜಗುಲಿಯ ರತ್ನಮಂಜರದಲ್ಲಿ (ಅರ್ಜಾವಿ. ೨೦–೩೮ವ) : ಒಬ್ಬ ಬ್ರಾಹ್ಮಣನ ಮನೇ ನಡವೆಯಲ್ಲಿ ಇಳುಕೊಂಡರು (ಕಥಾಮಂ.IV, ೨೮); ಅಂದಣಾವನೇರಿ ಬಂದಳಣ್ಣಾನ ಮನೆಗೆ ನಿಂದೀರು ಅಕ್ಕ ನಡವೇಲಿ ಒಳಗೀರೊ ರಂಭೇಯ ಕೇಳಿ ಬರತೀನಿ (ಹಳ್ಳಿಪ. ೧೧೨). [ < ನಡು$_2$./ ತೆಲು. ನಡುವ, ನಡವ ]

**ನಡುವೆ$_2$** (ಅ). ಮಧ್ಯೆ ; ಮಧ್ಯಭಾಗದಲ್ಲಿ : ಇತ್ತರಸನುಮಾ ಇರುಳೊಳ್ ಶ್ವೇತವೃಷಭನಂ ಕನಸಿನೊಳ್ ಕಂಡು ಪೊಟ್ರಜಿನೋಲಗದೊಳ್ ಆಸ್ಥಾನದ ನಡುವೆ ಸಿಂಹಾಸನಮಸ್ತಕಸ್ಥಿತನಾಗಿ ತನ್ನ ಕಂಡ ಕನಸಂ ಮಂತ್ರಿಗೆ ವೇಟ್ಳೊಡೆ (ವಡ್ಡಾರಾ. ೦೦೨–೧೦) : ರಮಣೀಯಮಪ್ಪ ಗಂಧಿಲವಿಷಯದ ನಡುವೆ . . . ನೂಜ ಪತ್ತುಂ ಪೊಟಲ್ಗಳನೊಳಕೊಂಡು (ಆದಿಪು. ೧–೯೨ವ); ಅಂತು ಪೇರಿದಪ್ಪರ್ ಬಗೆದ ಮಹಾಸಮುದ್ರಂಗಳೆರಡಱ ನಡುವೆ ಕುಲಗಿರಿಯಿರ್ಪಂತಿರ್ದಶ್ವತ್ಥಾಮನಂ ಕಂಡು (ಪಂಪಭಾ. ೨–೭೩ವ) : ಮೂಱುಂ ಬೆಳ್ಗೊಡೆಯ ನಡುವಿರ್ಪ ನೀನಿರ್ದೆಡೆಯುಮನೆಮಗಱಿಯ ದಂತಾಱುದುದೆ ಮಗನೇ (ಗದಾಯು. ೩–೬೪) ; ದುಪ್ಪರ ನಡುವಿರ್ದ ಶಿಷ್ಟಂಗೇಗೆಯ್ದುಂ ಸುಖಮಾಗಲಱಿಯದು (ಪಂಚತಂ. ೧೪೭–೧) ; ಕೂಡಲ ಸಂಗಮದೇವ ಭಕ್ತನ ನುಡಿಯ ನಡುವೆ ರಾಶಿಯಾಗಿರ್ಪನು (ಬಸವ. ೧೪೫) : ಬಿಡದ ಬೆಂಡೆದ್ದೇಳ್ವ ತರೆಗಳ ಗಡಣ ನೀರ್ವಕ್ಕಿಗಳ ಸರಸಿಯ ನಡುವೆ ನಲಿನಲಿದಾಡುತಿರ್ದುದು ಭೀಮವನದಂತಿ (ಕುಮಾರವ್ಯಾ. ೧೨–೨೩) : ನನ್ನ ಅವರ ನಡುವೆ ಮೊದಲಿನ ಸೌಜನ್ಯವಿರಲಿಲ್ಲ (ನಾಡಿಗೇ. ೧೭).

ನಡುನಡುವೆ, ನಡನಡುವೆ (ದ್ವಿರುಕ್ತಿ) : ನಡುನಡುವೆ ಯಮುನ ಪಟ್ಟಣವು ಎನ್ನೊಡೆಯ ಪಂಚೇಂದ್ರಿಯ ದೈವಕರು ತಡೆಯದಂತೆ ನೀ ದಯಮಾಡೊ (ಪುರಂದ. ೩–೧೭೭–೩) : ಈ ವನದ ನಡುನಡುವೆ ತೊಳತೊಳಗುತಿರುತಿಹ ಸರೋವರದೊಳಿ . . . ಮೊರೆಮೊರೆವ ಭೃಂಗಾವಳಿಯ ಗಾವಳಿಯ ಕಳಕಳಂಗಳ ನೋಡು ನೋಡು ರವಿತನಯತನಯ (ಜೈಮಿಭಾ. ೩–೩೭); ತಿಂಗಳಿಗೊಮ್ಮೆ ತರುವ ಮತ್ತು ನಡುನಡುವೆ ತರಬೇಕಾಗುವ ಸಾಮಾನುಗಳನ್ನು ಪಟ್ಟಿಮಾಡಿಟ್ಟುಕೊಳ್ಳಬೇಕು (ಆಡುಸಾ. ೫೩) ; ನಡನಡುವೆ "ಚಾಯ್‌ಗರಮ್" ದವರ ಬಾಯಿ–ಗರಮು ಗದಗವಿಸುತ್ತಿತ್ತು (ದೀಪಹ. II, ೩೯೮). [ < ನಡುವೆ$_1$./ತಮಿ. ನಟುವೆ ; ತುಳು. ನಡುವೆ ]

**ನಡುವೆಟ್ಟು** (ನಾ). ಬೆಟ್ಟದ ನಡು,–ಮಧ್ಯಭಾಗ : ಸಿಡಿಲಾಳ್ ತಡಮಡೆಡೆಯ ನಡುವೆಟ್ಟುಗಳ್ಗೆ ಕಟ್ಟುಬ್ಬರದಿಂ ಬಂದೆಱಗುಗುಂ (ರಾಮಾಶ್ವ. ೧–೬). [ ನಡು$_2$ + ಬೆಟ್ಟು$_2$ ]

**ನಡುವೊಗು** (ಕ್ರಿ). ನಡುವೆ ಪ್ರವೇಶಿಸು ; ಮಧ್ಯೆ ತಲೆಹಾಕು : ತಗರ್ ಕಾದುವಲ್ಲಿ ನಡುವೊಕ್ಕು ನರಿ ಸತ್ತುದು (ಪಂಚತಂ. ೭೯–೧೮).

[ ನಡು$_2$ + ಪೊಗು(< ಪುಗು) ]

**ನಡುಸಂತೆ** (ನಾ). ೧. ಸಂತೆ ಸೇರಿರುವ ಸ್ಥಳದ ಮಧ್ಯಭಾಗ. ೨. ಸಂತೆಯಲ್ಲಿ ವ್ಯಾಪಾರ ಭರಾಟೆಯಿಂದ ನಡೆಯುವ ಸಮಯ,–ವ್ಯಾಪಾರದ ಸಮಯದ ಮಧ್ಯಕಾಲ : ಈಗ ನಡುಸಂತೆಯ ಹೊತ್ತು. ಜನ ನುಗ್ಗುತ್ತಿದ್ದಾರೆ (ಊಧ). ೩. ಹೇರಳವಾಗಿರುವಿಕೆ ; ಆಧಿಕ್ಯ ; ಯಥೇಚ್ಛವಾಗಿರುವುದು : ಎಡಬಲದೊಳಗೋಲೈಪ ಕೋಮಲೆಯರು ತೊಡೆದ ಲೇಪನವುಟ್ಟ ದುಗುಲ ಮುಡಿಹೂದಂಬುಲಗಂಪಿನ ಕಂಪಿನ ನಡುಸಂತೆಯಾದುದಾಸ್ಥಾನ (ಶ್ರೀಪಾಂ. ೩–೭) ; ತೆಂಗಿನ ನಡುಸಂತೆಯಲ್ಲಿ ಕಾಯಿಗ ಬರವೇ ? (ಊಧ). [ ನಡು$_2$ + ಸಂತೆ$_1$ ]

**ನಡುಸರಕು** (ನಾ). ವ್ಯವಹಾರದಲ್ಲಿ ವಿನಿಮಯಕ್ಕಾಗಿ ಇಬ್ಬರ ನಡುವೆ ಬಳಸುವ ಸರಕು,–ಪದಾರ್ಥ : ಅಕ್ಕಿ, ಜೋಳ ಒಂದು ಉಪಯುಕ್ತ ಧಾನ್ಯವಿನಿಮಯದ "ನಡು–ಸರಕು" ಆಗಬಹುದು (ಪಾಪಾದ. ೦೦೪).

[ ನಡು$_2$ + ಸರಕು$_3$ ]

**ನಡುಸರು** (ನಾ). ನಡುವಿನ ಉಸಿರು ; ಮಧ್ಯೆ ಮಧ್ಯೆ ತೆಗೆದುಕೊಳ್ಳುವ ಉಸಿರು (?) : ಕಿಡಿನಯನ ಘರ್ಷಣೆಯೊಳುದುರ್ವಾರಿಕಲ್ಗಳಂತೊಡನೆ ಸಂರನದಿಯು ನಡುಸರು ಬಿರ್ದವಂತಾಗ ಮೃಡ ಪೊಡವಿಡಿಣಿದವ್ಯುತಫಲ ಬತ್ತದಂತಾಗ ಕೊಡುತಿರ್ದ ಶರಣಜನಕೆ (ಮರುಜಾ. ೦–೯).

[ ನಡು$_2$ + ಉಸರು$_0$ ( < ಉಸಿರ್$_2$ ) ]

**ನಡುಸಾಲೆ** (ನಾ).=ನಡುಮನೆ : ಬಾಗಿಲು ದಾಟಿದ ಕೂಡಲೆ ಒಂದು ವಿಶಾಲವಾದ ನಡುಸಾಲೆ ಕಾಣುತ್ತದೆ (ಕವಿಕೋ. I, ೦೯೮) ; ಪಡಸಾಲೇ ಊಟ, ನಡುಸಾಲೇ ನಿದ್ರೆ (ಗಾದೆ). [ ನಡು$_2$ + ಸಾಲೆ$_3$ ]

**ನಡುಸುಳಿ** (ನಾ). ನಡುವೆ ಇರುವ ಸುಳಿ, – ಆವರ್ತ, – ಗರ್ತ : ಹೋಲಿಸುವಡಿದು ಮೃತ್ಯುವಿನ ಗೋನಾಳಿ ಹೊಗುವಡೆ ಕಡಲ ನಡುಸುಳಿ ಕಾಳಮೇಘದ ಮೊತ್ತವೆನೆ ರಂಜಿಸಿದುದಾ ವ್ಯೂಹ (ಕುಮಾರವ್ಯಾ. ೭೦೩. ಪರಿ. ೩೭೭). [ ನಡು$_2$ + ಸುಳಿ$_3$ ( < ಸುೞಿ$_2$ ) ]

**ನಡುಸೂಲ್** (ನಾ). ಪ್ರಸವದ ಮಧ್ಯಸಮಯ ; ಹೆರಿಗೆಯ ಮಧ್ಯಭಾಗ : ಬೇನೆಯಿಂ ಧೂಳಿಡುತುಂ ಶೈಲಾಗ್ರದೊಳ್ಕುಕ್ಕುಜಿಸಿ ಮಱುಕದಿಂದೀಂಬ ಸಿಂಹಿಕಿಶೋರಂ ನಡುಸೂಲೊಳ್ಸಿರ್ಕಿ ಕಣ್ಣಂ ತೆಱೆದಿಭಪತಿಯುಂ ತಾಱಲೊಳ್ಕೊಂಡು ಕಾಯ್ಪಂ ನಡುಪಾಯ್ದಾ ತಾಯ್ಗೆ ದುಃಖಪ್ರಸವಸಮಯದೊಳ್ಕಂದುದಂತೊಂದಲಂಮಾ (ಅನಂಪು. ೧೨–೬೨).

[ ನಡು$_2$ + ಸೂಲ್ ]

**ನಡುಸೆಱಂಗು** (ನಾ). ಸೆರಗಿನ ಮಧ್ಯಭಾಗ ; ಉಡಿ ; ಮಡಿಲು : ಉಕಾರಕ್ಕೆ . . . ನಿಡುದೋಳ್, ನಿಡುಮಯಣಂ, ನಡುಸೆಱಂಗು (ಕವಿಮ. ೧೪೧ ಪ್ರಯೋ). [ ನಡು$_2$ + ಸೆಱಂಗು ]

**ನಡುಹಗಲು** 'ನಡುವಗಲ್' ನೋ.

**ನಡುಹಣೆ** (ನಾ).=ನಡುನೊಸಲು : ಕೊರಳೊಳು ವಿಷವುಂಟು ತಲೆಯೊಳು ಹಾವುಂಟು ನಡುಹಣೆಯೊಳು ಬೆಂಕಿಯುಂಟು (ಇಂಚಾಪ. ೭೫–೬೦).

[ ನಡು$_2$ + ಹಣೆ$_1$ ( < ಪಣೆ$_2$ ) ]

**ನಡುಹರೆಯ** (ನಾ). ಮಧ್ಯವಯಸ್ಸು ; ಪ್ರಾಯದ ಮಧ್ಯಾವಸ್ಥೆ : ನಡುಹರೆಯದವಳು ಕಿತ್ತಾಯನಿಕೆಯಕ್ಕು (ಮಂಗರಾ. ೮೯–೨).

[ ನಡು$_2$ + ಹರೆಯ ( < ಪರೆಯ ) ]

**ನಡುಹಾದಿ** (ನಾ).=ನಡುದಾರಿ : ನಡುಹಾದಿಯಲ್ಲಿ ವಿಮಾನದ ಮಾಡು ಕೆಟ್ಟುಹೋಯಿತು (ರಾಜವ. ೫೦) ; ಹೊರಬಂದ ಗುಂಡಣ್ಣನಿಗೆ, ಕತ್ತಲೆಯು ನಡುಹಾದಿಯ ಆಚೆ ಅಂಗಳಕ್ಕಿಳಿಯುತ್ತಿದ್ದ ಸಾಮಾನುಗಳು ಗೋಚರಿಸಿದುವು (ರಂಗವ. ೮೦). [ ನಡು$_2$ + ಹಾದಿ ( < ಪಾದಿ$_1$ ) ]

**ನಡುಹಾಳೆ** (ನಾ). "ಪುಸ್ತಕದ ಹಾಳೆಗಳ ನಡುವೆ ಸೇರಿಸಿದ (ಸಾ., ಬರಿಯಂ) ಹೆಚ್ಚುಹಾಳೆ, ನಡುಹಾಳೆ" (Interleaf. ೩೦೪೩).

[ ನಡು$_2$ + ಹಾಳೆ$_1$ ( < ಪಾಳೆ$_1$) ]

**ನಡುಹೊತ್ತು** 'ನಡುಂಬೊತ್ತು' ನೋ.

**ನಡುಹೊಳೆ** (ನಾ). ೧. ನದಿಯ ಮಧ್ಯಭಾಗ ; ನಡುನೀರು : ಇಂದು ನಾನು ಹಡಗೋಲಲ್ಲಿ ಕುಳಿತಿರ್ದು ನಡುಹೊಳೆಯಲ್ಲಿ ಹೋಗಲಿಕೆ ರಾಮು ವೆಂಬ ಕೋಡು ಅಡ್ಡಬಿದ್ದಿತ್ತು (ವಡ್ಡಾ. ೨೪೯-೨೩) ; ನಡುಹೊಳೆಯ ಹಡಗೋಲ ಮೂಲೆಯು ಕಡಿದಿರ್ದರೆ ನಮ್ಮ ಪುಣ್ಯದ ಬಿಡುಗಡೆಯು ಕಾಲವು ಶಿವಾಯೆಂದರಸ ಬಿಸುಸುಯ್ದ (ಕುಮಾವ್ಯಾ. ೯-೩). ೨. ಒಂದು ಊರಿನ ಹೆಸರು : ನಂಜೇಗವಡ ವಿರಕ್ತಗವಡಯಿವರ ಕುಲದೇವರು ನಡುಹೊಳೆಬ್ರಹ್ಮೇಶ್ವರ (ಎಕ. III. (R). ಗುಂಡ್ಲುಪೇ. ೩೧-೩೩; 1027).

**ನಡುಹೊಳೆಯಲ್ಲಿ ಕೈಬಿಡು** = ೧. ಹೊಳೆಯ ಮಧ್ಯದಲ್ಲಿ ಹಿಡಿತದ ಸಹಾಯವನ್ನು ತಪ್ಪಿಸು : ನಡುಹೊಳೆಯಲ್ಲಿ ಕೈಬಿಟ್ಟ ಹಾಗೆ (ಗಾದೆ). ೨. ನಂಬಿಕೊಂಡವರಿಗೆ ಅತ್ಯಗತ್ಯವಾದ ಸಮಯದಲ್ಲಿ ಉದ್ದೇಶ ಪೂರ್ವಕವಾಗಿ ಸಹಾಯ ನಿಲ್ಲಿಸು ; ನಡುನೀರಲ್ಲಿ ಕೈಬಿಡು : ನನ್ನನ್ನು ನಡುಹೊಳೆಯಲ್ಲಿ ಕೈಬಿಡಬೇಡ (ಮಸಕೂ. ೩೮).

[ನಡು$_3$ + ಹೊಳೆ$_3$ ( < ಪೊೞೆ$^3{}_1$ ) ]

**ನಡೆ$_1$, ನಡಿ, ನೆಡೆ** (ಕ್ರಿ). ೧. (ಕಾಲುಗಳಿಂದ) ಚಲಿಸು ; ಹೋಗು ; ಗಮಿಸು : "ನಡೆ-ಗಮನೇ" (ಶಮದ) ; ಜಯದ್ರಥನಂ ಕೋಡಗಗಟ್ಟು ಗಟ್ಟಿ ಬೆನ್ನಂ ಬಿಲ್ಲ ಕೊಪ್ಪಿನೊಳಿಟ್ಟು ನಡೆಯೆಂದು ನಡೆಯಿಸಿ (ಪಂಪಭಾ. ೬-೩೦ವ) : ಆ ಧರಿತ್ರೀನಾಥನತ್ಯಂತಹರುಷಾಂತರಂಗನಾಗಿ ಸಿಂಹಾಸನ ದಿಂದಿೞಿದು ಮುಂದನೇಟಡಿಯಂ ನಡೆದು (ಸುಕುಮಾ. ೮-೪೬ವ) ; ನಡೆದೊಡೆ ಕಾಲ್ನೋಂದಪುದು (ಧರ್ಮಾಮೃ. ೩-೫೫) ; ತಲೆಯಿಲ್ಲದ ಕಾಗೆ ನೆಲದಲ್ಲಿ ನಡೆಯಿತ್ತು (ಆದವ. ೦೫-೩೩) : ನಡೆಯುತ್ತ ನಡೆಯುತ್ತ ಬಳಲು ವರಲ್ಲದೆ ಬಟ್ಟೆ ಬಳಲುವುದೆ (ಬಸವ. ೦೧೩) : ತಲೆ ಮೇಲಣಿಗೆ ಬಿಗಿದುದು ಮುಂಡ ನಡೆದುದು ನೂಱು ಹಜ್ಜೆಯನು (ಕುಮಾವ್ಯಾ. ೨-೨೧) : ಭೂತಳ ದೊಳಗಂಬೆಗಾಲಿಟ್ಟು ನಡೆವಂತೆ ಚೇತನವಾದುದಂಗಜಗೆ (ಮೋಹತ. ೦೧-೫೯) ; ಪಾದಗಳಿಂದ ಹೆಚ್ಚು ದೂರ ಮತ್ತು ಜಾಗ್ರತೆಯಾಗಿ ನಡೆಯುವುದು ಕಷ್ಟ (ನಾಡಿಗೇ. ೪೪) ; ನಡೆಯೋದು ಕಾಲ್ನಡೆ ಆಡೋದು ಪಾಲ್ಕಿ ಮೇಲೆ (ಗಾದೆ). ೨. ಮುಂದುವರಿ ; ಮುಂದೆ ಸಾಗು ; ಸಾರೋದ್ಧಾರವಾಗು : ತೋಱಿಯ ತಡಿಯೊಳೋಡಮಂ ನಡೆಯಿಸುವ ಮತ್ಸ್ಯಗಂಧಿಯಂ ಕಂಡೆಮ್ಮನೀ ತೋಱಿಯಂ ಪಾಯಿಸೆಂಬುದುಂ ಸಾಸಿರ್ವರೇಱಿದೊಡಲ್ಲದೀ ಯೋಡಂ ನಡೆಯದೆಂಬುದುಂ (ಪಂಪಭಾ. ೧-೩೮ವ) ; ಪನ್ನೆರಡು ಪೞ್ಗವೀ ಸ್ಥಿತಿಯೊಳ್ ಸಲ್ವುದು ಚನ್ದ್ರಾದಿತ್ಯರ್ಕರ್ಗಳ್ ಉಳ್ಳನ್ನವುಂಬರಂ ನಡೆವುದು (ಎಕ. IV. ಚಾಮರಾ. ೪೮-೦೩ ; 966) ; ಪಿರಿಯಂ ಜಯಕುಮಾರಂಗೆ ಕುಡುವುದು ಕೊಟ್ಟಂದು ಕುರುಕುಲಸಂಬಂಧಮವಿಚ್ಛಿನ್ನಮಾಗಿ ನಡೆಗುಂ (ಚಾಪುಂಪು. ೬೮-೨೬); ಸಮರಾಭಿಮುಖನಾಗಿ ನಡೆವ ಫಣಿರಾಜಕೇತನನಂ ಸಂಜಯನಂಜದೆ ಮಾರ್ಕೊಂಡು (ಗದಾಯು. ೩-೪೯ ವ) : ಪೆಜ್ಜುಂಕದದಿ ಗೆಯನ್ದವ ಕೋಲಮುಮಕ್ಷೋಣಿಯಾಗಿ ನಡೆವ ಗದ್ಯಾಣ ಆ ಮಾರ್ಗ್ಗದೆ ಪನ್ನಾಯದಿಂದಕ್ಷೋಣಿಯಾಗಿ ನಡೆವ ಗದ್ಯಾ ೧ (ಸೌಇಇ. XX. ೪೫-೨೯ ; 1071) ; ಕೂಡಲಸಂಗನ ಶರಣರು ನಡೆದ [ಪಾಠಾಂ. ಹೋದ] ದಾರಿ ಭಯ ಕಾಣಿರಣ್ಣಾ (ಬಸವ. ೦೪೭) : ಖಟಿಲೆ ನುಡಿದಬಲೆ ಬಗ್ಗಿಸಿ ಘಟಿಲನೆ ನಡೆಯೆಂದು ಜಡಿದು ಸಾರಥಿಯಂ (ಶಮರ. ೧೯ ಪ್ರಯೋ) ; ಅದ್ದುದತಳಕೆ ಅವನಿಯೆನೆ ಹೊದಱಿದ್ದು ನಡೆದುದು ದಂತಿಘಟೆ ಬರುತಿದ್ದುದಗಣಿತ ರಥಪದಾತಿಗಳಾಹವಾಂಗಣಕೆ (ಕುಮಾವ್ಯಾದ್ರೋ. ೯-೧೩) ; ಈಸುದಿನ ನಮ್ಮಗ್ನಿಹೋತ್ರಕೆ ವಿಘ್ನಸಲಿಯದೆ ನಡೆದುದೀಗ ವಿನಾಶಕರವಾಯ್ತೆಂದಱಿನಾದುದು ಬರವು ನಮಗೆನಲು (ತೊರರಾ. ೦-೯-೨೫) : ಲಿಪಿರಹಿತಭಾಷೆಯನ್ನು ಆಡುವವರ ವ್ಯವಹಾರವೆಲ್ಲಾ ಹೆಚ್ಚಾಗಿ ಸಂಭಾಷಣೆಯಲ್ಲೇ ನಡೆಯುತ್ತದೆ (ದ್ರಾವಿವಿ. ೪೫) : ಧರ್ಮಾತ್ಮರಾದ ಮಹೀಶೂರಮನೆತನದಲ್ಲಿ ಹುಟ್ಟಿದ . . . ದೇವರಾಜಮ್ಮಣ್ಣಿಯವರಿಗೆ ಪುತ್ರನ ವಂಶವು ನಡೆಯಲಿ (ಒಡೆಕ. ೨೧). ೩. ತೆರಳು ; ಹೊರಡು : ಅಂತೆರಡುಂ ಪಡೆಗಳುಂ ಪಣ್ಣಿಪಣ್ಣಿಸಿ ಪಣ್ಣಿ ಕಾಳಗಕ್ಕೆ ನಡೆಯಲೊಡರಿಸಿದಾಗಳ್ (ಪಂಪಭಾ. ೧೦-೫೦ವ); ಬೇಡಿದರ್ಗೆ ಬೇಡಿತಂ ಕೊಟ್ಟು ಬಂದಿಱಿವ ಕಸವರಗಲಿಗಳುಮಂ ಮತ್ತಮುಣ್ಣೆ ನಡೆದಿಱಿವ ನಡೆಗಲಿಗಳುಮಂ ನೋಡಿ (ಗದಾಯು. ೯-೩೪ವ) : ನಡೆವೆ ನಾನಿರಲೆಲ್ಲಿ ಕೈಲಾಸಪುರಕೆನುತ . . . ಪೊಱಮಟ್ಟಳಮ್ಮಮ್ಮ ಪುರಜನಂ ನೋಡುತಿರೆ (ಕಾರಿರ. ದೇ. ೨೮೮-೩) : ಒಡಲನೊಡೆದಾ ಜ್ಯೋತಿ ಗಗನಕೆ ನಡೆದುದಿತ್ತಲಂ ಸುರರು ಮರ್ತ್ಯರು ಸುಡುಸುಡೆಂದುದು ಸಾತ್ಯಕಿಯ ದುಷ್ಕರ್ಮವಾಸನೆಗೆ (ಕುಮಾವ್ಯಾದ್ರೋ. ೧೪-೨೪) : ದಶದಿಕ್ಕಿನ ಪುರಾಧಿಪರೆಡೆಗೆ ನಡೆದುದು ದಂಡು ಬಳಿಕೆಂದ (ತೊರರಾ. ೦-೮-೩೦) ; ನಡೆ ಮಜ್ಜನ ಭೋಜನಕೆ ಶೃಂಗಾರದ ತೊಡವುಗಳಿಡು ನೀ ಬೇಗ (ಕಂನವಿ. ೯-೦೩೩). ೪. ತೊಲಗು; ದೂರ ಸರಿ : ಉಂಬ ಜಂಗಮ ಬಂದರೆ ನಡೆಯೆಂಬರು ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯಾ (ಬಸವ. ೧೯೪). ೫. ಆಚರಿಸು ; ಆಚರಣೆ ಮಾಡು : ಶ್ರೀಬಾಳಾ ಮೇಲ್ಸಿಖಿ ಮೇಲೆ ಸರ್ವ್ವದ ಮಹಾದನ್ನಾಗ್ರದುಳ್ಳಲ್ಲವೊರ್ ಸಾಲಾಮ್ವಾಲ ತಪೋಗ್ರದಿನ್ನು ನಡದೊಂ ನೂಱಿಣ್ಬುಸಂವತ್ಸರಂ (ಎಕ.II. ೨೨-೨ ; ಸು. 700) : ನಡೆಯಿಂ ಧರ್ಮದ ಬಟ್ಟೆಯೊಳ್ ಬಿಸುಡಿಯಾದು ಷ್ಪಾಪದು ಮಾರ್ಗ್ಗಮಂ (ಸುಕುಮಾ. ೦-೪) ; ಪೊಲ್ಲದಂ ಬಿಸುಟ್ಟನುಪಮಜೈನಮಾರ್ಗದೊಳೆ ತಾಂ ನಡೆಗುಂ ಪರಮೋಕ್ಷಕಾಂಕ್ಷೆಯಿಂ (ಸಮಪ. ೧-೦೮) ; ಜೈನಾಗಮದೋಜೆಯಿಂ ನಡೆ ಬುಧವ್ರಾತಕೆ ಲೇಸಾಗು (ಧರ್ಮಾಮೃ. ೪-೨೬೦) ; ನುಡಿದಂತೆ ನಡೆಯಲು ಬಾರದಯ್ಯಾ ಕೂಡಲಸಂಗನ ಶರಣರ ಭಕ್ತಿ ಬಾಳ ಬಾಯ ಧಾರೆ (ಬಸವ. ೨೦೦). ೬. ವರ್ತಿಸು ; ನಡೆದು ಕೊಳ್ಳು : ವ್ಯವಹರಿಸು : ಕಡುಗಲಿತನಮುಂ ಚಾಗದ ಪಡೆಮಾತುಂ ವಿದ್ಯೆಯುಂ ಕುರ್ವೊರ್ವನೊಳೆಂತುಂ ನಡೆಯವು ಭುವನಾಂತರದೊಳ್ (ಆದಿಪು. ೦೨-೧೦೪) ; ದಯೆಗೆಯ್ಯೆಂ ಪ್ರಸಾದಮೆಂಬಿವು ಪೆಱರೊಳ್ ನಡೆಗೆಮ್ಮ ನಿನ್ನಯೆಡೆಯೊಳ್ ನಡೆಯಲ್ವೇಡೆನಗೆ ಕೆಳೆಯನ್ನೆ ರಾಧೇಯಾ (ಪಂಪಭಾ. ೨-೮೫) ; ನಿಮಗೆ ಕರಿಗಳ್ ದೊರೆಕೊಳ್ವನ್ನಂ ನಿಚ್ಚಲೊಂದೊಂದು ಮೃಗವನಟ್ಟುವೆವದು ಕೈಕೊಂಡಿಂತು ನಡೆವಿರಪ್ಪೊಡೆ ನಿರ್ವಹಿಪೆವಾಗ ದೊಡೋಡಿಪೋಪೆವೆನೆ (ಪಂಚತಂ. ೮೮-೦೦) ; ಒಡೆಯಂಗುತ್ಸವವಾಗೆ . . . ಗಡಿದುರ್ಗಂಗಳು ಭದ್ರಮಾಗೆ ಧನಧಾನ್ಯಂ ತೀವೆ ಭಂಡಾರದೊಳ್ ನಡೆಮ ಮಂತ್ರಿವರೇಣ್ಯನೈ (ಸೋಮೇಶ. ೩೫) ; ಪೊಡವಿಪನೊಲುಮೆಯ ಕಡುನೆಚ್ಚಿ ಗರ್ವದಿ ನಡೆಯದಿರೆಚ್ಚಱಿಕೆ (ಪುರಂಪ. ೨-೪೫-೦) ; ನೃಪ ಹಿಂದಣಳಲನು ನೆನೆಯದೆನ್ನಪರೊಂದು ನಡೆ ಕಾಮಂಗೆ ಕೊಡದಾಗಿಗೆತ್ತುಬಿರಿಸಿತೆಯ (ಸಾಳ್ವಭಾ. ೩೧-೧೦) ; ನಿನಗಿಂತ ಹಿರಿಯರಾದವರು ಹೇಳಿದ ಮೇರೆಗೆ ನಡೆ (ಮುಂಬಯಿ. ೪-೫೯). ೭. ಕೆಲಸ ಮಾಡು ; ಕಾರ್ಯ ಮಾಡು : ಈ ಗಡಿಯಾರ ಸರಿಯಾಗಿ ನಡೆಯುತ್ತಿಲ್ಲ (ರೂಢಿ); ರಜಾದಿನಗಳಲ್ಲಿ ಶಾಲೆಗಳು ನಡೆಯುವುದಿಲ್ಲ (ರೂಢಿ). ೮. ಜರುಗು ; ಘಟಿಸು ; ಉಂಟಾಗು : ದೇಶದ ಮೇಲೆ ನಡೆದ ಸುದ್ದಿ ತಿಳಿಕೊಳ್ಳುವುದಕ್ಕಾಗಿ ವರ್ತಮಾನಪತ್ರಗಳನ್ನು ತರಿಸುತ್ತಾರೆ (ಮುಂಬಯಿ. ೪-೮೬) ; ಆ ಊರಿನಲ್ಲಿ ಜಾತ್ರೆ ನಡೆಯುತ್ತದೆ (ರೂಢಿ) ; ಅವರ ಮನೆಯಲ್ಲಿ ಹಬ್ಬ ಹುಣ್ಣಿಮೆಗಳು ವಿಜೃಂಭಣೆಯಿಂದ ನಡೆಯುತ್ತವೆ (ರೂಢಿ). ೯. ಈಡೇರು; ನೆರವೇರು ; ಪಾಲನೆಯಾಗು : ಲೇಸೆನಿಪ ಮಹಿಪಾಕ್ಷಿರೂಪದ ಭಾಷೆ ನಡೆಯಲು . . . ಅರ್ಥವನೋಸರಿಸದಿಂಕರ್ಪಿಸುತ್ತಿರೆ (ಬಸಪು. ೨೬-೯). ೧೦. ಚಲಾವಣೆಯಾಗು ; ಚಾಲತಿಯನ್ನು ಹೊಂದಿರು ; ಬಳಕೆಯಾಗು : ಸವಕಳಿ ನಾಣ್ಯ ನಡೆಯುವುದಿಲ್ಲ (ರೂಢಿ) ; ಈಗ ಅವನಿಗೆ ಹದಿನಾಲ್ಕನೆಯ ವರ್ಷ ನಡೆಯುತ್ತಿದೆ (ರೂಢಿ). ೧೧. ಆಕ್ರಮಣ ನಡೆಸು ; ಮುತ್ತು; ಮೇಲೆ ನುಗ್ಗು : ನಿನಗುತ್ತರಾರ್ಧವೊಂದರ್ಧನಿಮೇಷಮುಹೂರ್ತಮಾತ್ರದಿಂ ಬಾರದೆ ಕೈಗನಿತುವರಂ ದೇವರ್ ನಡೆವನಿತುಂ ಮಾಣ್ಬನಿತುಮಂತದಾವುದು ಗಹನಂ (ಆದಿಪು. ೦೩-೨೨).

೧೨. ಸಲ್ಲು ; ಒಳಪಡು : ತುರಗಮೇಧಾಧ್ವರದ ಮೇಲಾರ್ಯೆಕೆ ನಡೆದುದು ಪರಮಋಷಿಜಾದಾಲಿಗವಾನೀಶ್ವರರ ಮಾನ್ಯತೆಯು ಮರುಟವಣೆ ವಿಜಯಂಗೆ ಸೇರಿತು (ಕೂರಣ. ೦-೭-೨೪). ೧೩. ಪ್ರವರ್ತಿಸು ; ತೊಡಗು : ಎನ್ನವ ರಾದರೆ ಜನ್ನಕ್ಕೆ ನಡೆವರೆ ಎನ್ನವರಲ್ಲ ಕೂಡಲಸಂಗಾ ನಿಮ್ಮಾಣೆ (ಬಸವ. ೭೧೩). ೧೪. ಗದ್ಯ ಅಥವಾ ಪದ್ಯದ ಲಯಕ್ಕೆ ಹೊಂದಿಕೊಳ್ಳು : ಷಟ್ಪದಿ ಈಗ ಮಾತ್ರೆಗಳಿಂದ "ನಡೆ"ದರೂ ಒಮ್ಮೆ ಅಂಶಗಳಿಂದ "ನಡೆ" ಯುತ್ತಿದ್ದಿತೆಂಬುದನ್ನೂ . . . ಮರೆಯಬಾರದು (ಕ್ರಾಬಿ. ೦೪೭). ೧೫. ಪ್ರಭಾವಶಾಲಿಯಾಗು ; ಯಶಸ್ವಿಯಾಗು : ನನ್ನ ಮುಂದೆ ನಿನ್ನ ಯಾವ ಆಟವೂ ನಡೆಯುವುದಿಲ್ಲ (ರೂಢಿ). 'ಕೈನಡೆ' ನೋಡಿ. ೧೬. ನಡಗೆಯಿಂದ ಅಳತೆ ಮಾಡು ; ಹೆಜ್ಜೆಯಿಂದ ಅಳೆ (?): ರಣಾವಳೋಕ ಶ್ರೀಕಮ್ಬ ಯ್ಯನ್ ಪೃಥುವೀರಾಜ್ಯಂಗೆಯೆ ಬ × × × ರಸಕ್ಕೆರ್ಟ್ವಪ್ಪ × × × ೪ ಪೆರ್ಗ್ಗರ್ಟ್ವಪ್ಪನಾ ಪೊಲದಿನ್ನಡದು ಕೊಟ್ಟುದು (ಎಕ. II, ೩೫-೪ ; ಸು. 800). ☞ ಇದು ಅನೇಕ ಕಡೆ ನಾಮಪದದೊಡನೆ ಸೇರಿದಾಗ ಬೇರೆ ಬೇರೆ ಅರ್ಥವನ್ನು ಕೊಡುತ್ತದೆ. ಉದಾಹರಣೆಗೆ-'ಆಟನಡೆ', 'ಜೀವನ ನಡೆ', 'ಮಾತು ನಡೆ', 'ವ್ಯಾಪಾರ ನಡೆ' ಇತ್ಯಾದಿ. ನಡಿ : ೧೦. ಸವಿಗೊಂಡನಹಳ್ಳಿಯಿಂದು ಪಸರು ನಡಿಯಬೇಕು (ಎಕ. VII, ಶಿವಮೊ. ೯೩-೩೩ ;?). ನೆಡೆ : ೨. ಸುರ್ರಚಂದರುಯಿರೂ ಪರಿಯಂತ್ರ ನೆಡೆಯಬೇಕೆಂದು ಆ ಗ್ರಮವನು ಹುಗಿನು ಹೊಯಿಸಿ ಪಲಿಸಿಕೊಟರು (ಎಕ. VII, ಶಿವಮೊ. ೦೦೮-೩೪ ; 1558). ೧೭. ಬಾಳು; ಬದುಕು : ಜನರು ಕೂಡಿ ನೆಡೆಯಬೇಕುಹೆಂದು ನಗಸಮುದ್ರದಮೆಂದೊ ಗ್ರಾಮವಂನು ಹೆಸರಗಿ ಕಟಿಸಿ (ಎಕ. VII, ಶಿವಮೊ. ೦೦೮-೩೩ ; 1558).

**ನಡನಡೆ₁** (ದ್ವಿರುಕ್ತಿ) : ಸಮದ ಗಜಗಮನೆಯರ್ ಮುಗಿಲ ಮೇಲೆ ನಡೆಪಾಡುವಾಕೆಗಳ್ ಶಪಾಗೆ ಧರಾಗಮನಂ ಪೊಸತಪ್ಪುದಱಿಂದಮರ್ದಿರೆ ನಡೆನಡೆದು ನಡೆಯಲಾಱದೆ ಸುಟಿದರ್ (ಪಂಪಭಾ. ೭-೮೪); ನಡೆನಡೆ ದೊಂಬುವೇಡ ನಿನಗೇಕೆ. ತಪಸ್ಸಿನ ಕುತ್ತಮೆಂದು ನೇರ್ಪಡೆ ಜಡಿದಟ್ಟಿ (ಧರ್ಮಾಮೃ. ೮-೮೮); ನಡೆನಡೆದು ನಿಂದಡಿಗಡಿಗೆ ನೆನೆದು (ಸಿದ್ಧರಾ. ೦-೩೭); ಕ್ರಿಯಾಸಮಭಿಹಾರಕ್ಕೆ – ನಡೆನಡೆಯೆಂದು; ಇದಿರ್ಚಿದರ್ಚನೆ ಜಟಾಯು (ಶಮದ. ೧೯೫ ಪ್ರಯೋ); ಸಕಳೇಶನ ನಿರೂಪವಿದಕ್ಕೆ ನಡೆನಡೆ ಮಗನೆ ಹೋಹವೆನುತ್ತ (ಬಸಪು. ೪೭-೫೦); ತಿರುಹಿ ಗಾಲಿಯ ತೆಗೆದು ಮುಂಗೈಗೊಂಡು ನಡೆನಡೆದು ಅರಿಬಲವನಿಡೆ (ಕುಮಾವ್ಯಾ. ೬-೫೫). **ನಡದಾಟ** = ಓಡಾಟ; ಅಲೆತ; ಸಂಚಾರ : ಅತಿಯಾದ ನಡೆದಾಟದಿಂದ ಮೈಗೆ ಆಲಸ್ಯವಾಗಿದೆ (ರೂಢಿ). **ನಡದಾಡಿಸು**=೧. ನಡೆಯುವಂತೆ ಮಾಡು; ಓಡಾಡಿಸು : ಸಣ್ಣ ಮಗುವನ್ನು ಹೆಚ್ಚು ನಡೆದಾಡಿಸಬೇಡ (ರೂಢಿ). ೨. ನಡೆದುಕೊಳ್ಳುವಂತೆ ಮಾಡು : ವ್ಯವಹರಿಸುವಂತೆ ಮಾಡು : ಹುಡುಗರು ಆಸ್ತಿಗೆ ಅಧಿಕಾರಿಗಳಾಗಿ ಬಂದಾಗ ತಾವೇ ತಾವಾಗಿ ಸರ್ವಾಧಿಕಾರ ವನ್ನೂ ಸ್ವಾಧೀನಪಡಿಸಿಕೊಂಡು ಆ ಹುಡುಗರನ್ನು ಸ್ವೇಚ್ಛೆಯಂತೆ ನಡೆ ದಾಡಿಸಿಕೊಂಡದ್ದುಂಟು (ಇಶ್ಯಕ. ೩೦೫). **ನಡದಾಡು** = ಓಡಾಡು : ಅಡ್ಡಾಡು : ಅರಸಂಡೆಮಾಱೆ ನಡೆದಾಡುತರೆ ತಾಯೊಡನೆ (ಸಾಳ್ವಭಾ. ೩-೯) ; ಮೇರು ನಡೆದಾಡೆ . . . ದಿನಕರ ಕಾರಿರುಳಾಗೆಸೆಯೆ ಸತಿಯರಂ ನೆಂಬುವರೇ (ಸನ್ನದ. ೩-೪೩) ; ಕುಡಿತೆಗಂಗಳ ಭಾಮಿನಿಯರು ನಡೆದಾಡು ತಿರ್ದರು (ಅದ್ಭುರಾ. ೩-೦೧೦) ; ಹೆಚ್ಚು ನಡೆದಾಡಿ ಆಯಾಸ ಮಾಡಿಕೊಳ್ಳ ಬೇಡ (ರೂಢಿ). **ನಡೆದುಕೊಳ್ಳು, ನಡಕೊಳ್ಳು** = ೧. ವರ್ತಿಸು; ವ್ಯವಹರಿಸು : ರಾಮನು ಯಾವಾಗಲೂ ಗುರುಹಿರಿಯರಲ್ಲಿ ವಿಧೇಯನಾಗಿಯೆ ನಡೆದುಕೊಳ್ಳುತ್ತಿದ್ದನು (ವಾದಾಶ್ಯ. ೫೭) ; ಎಲ್ಲ ಪ್ರಜೆಗಳೂ ಇವರ ಅಪ್ಪಣೆಯ ಮೇರೆಗೆ ನಡಕೊಳ್ಳತಕ್ಕದ್ದು (ಮುಂಬಯಿ. ೪-೩). ೨. ವ್ರತ, ಪೂಜೆ ಮುಂತಾದುವನ್ನು ಆಚರಿಸಿ ಭಕ್ತಿಯನ್ನು ತೋರಿಸು : ಇವರು ಯಾವತ್ತು ಹಿಂದೂದೇವತೆಗಳಿಗೆ ನಡಕೊಳ್ಳುವರು (ಕಭಾಗ. ೧೮೫) ; ಪಥ್ಯ-ಉಪಚಾರವನ್ನು ಮಾಡಿದ್ದಾಯಿತು. ದೇವರು-ದಿಂಡರಿಗೆ ನಡಕೊಂಡ ದ್ದಾಯಿತು. ಏನೂ ಉಪಯೋಗವಾಗಲಿಲ್ಲ (ಜೊಸಕ್ಕ. ೧೮೪). **ನಡೆದು ಬರು**= ಮುಂದುವರಿ; ಮುಂದೆ ಸಾಗು : ನಾನು ಸ್ಥಾಪಿಸಿರುವ ಧರ್ಮದಾರ್ಢ್ಯವು ಬಹುಕಾಲದವರೆಗೂ ನಡೆದುಬರುವುದು (ಕಗದ್ಯ. II, ೧೦). **ನಡೆದೊವಲ ಪಾವೆ** = ಚಲಿಸುವ ತೊಗಲ ಬೊಂಬೆ ; ಶರೀರ : ದೇಹ : ನಡೆದೊವ[ಪಾಠಾಂ. ಗ]ಲ ಪಾವೆ...ಘನರೋಗದಾಗರಂ ತಾನೆನಿಪೀಯೊಡಲಿದು ಕಾಲನ ತಿಂಗುಳ್ ಜಡಮ.ನುಜರ್ ನಿತ್ಯಮೆಂದು ಮೆಯ್ಯಾಂಟಿದಿರ್ಪರ್ (ತ್ರಿಪುವಿ. ೩೩-೧೧೩).

[ ದೇ.॥ ತಮಿ. ನಟ; ಮಲ. ಕೊಡ. ನಡ; ತೆಲು. ನಡಚು, ನಡುಚು; ಕೊಲಾ. ಅಡ್ಗ್; ನಾಯ್ಕ್. ಅರ್ಗ್ ]

**ನಡೆ₂** (ನಾ). ೧. (ಕಾಲಿನಿಂದ) ನಡೆಯುವಿಕೆ ; ನಡಗೆ ; ಚಲನೆ ; ಗಮನ : "ಪರಿಕ್ರಮಂ ಪರಿಸರ್ಪವೆನೆ ನಡೆ" (ಮಂಗರಾ. ೧೩೦-೧೭); ಒರ್ವ[ನೊರ್ವ]ಳ ನಡೆಯು ನುಡಿಯು ಮುಡಿಯು ಗಾಂಭೀರ್ಯಗೆ ಮುಗುಳ್ನಗೆ ನಕ್ಕು ತನ್ನ ಕೆಳೆಯಂಗೆ ತೋಱಿ (ಪಂಪಭಾ. ೪-೯೩೭) ; ಬಾಳ ಮೊನೆ ಯಂಬಿನ ಕಿಂತಿಣಿಯೊಳ್ ತಗುಳ್ದು ಕಿಕ್ಕಿಱಿಗಿಱಿದಿರ್ದ ಕೊಳ್ಗುಳದೊಳಂ ನಡೆವೀ ನಡೆಗೆಂತು ನೋಂತೆಯೋ (ಪಂಪಭಾ. ೧೩-೫೩) ; ಕಡುಗೂರ್ಪಿಲ್ಲದ ಕರವಾಳ್ . . . ನಡೆಯಿಲ್ಲದ ಕರ್ತೆ ಮನಕ್ಕೆಡಂಬಡಂ ಮಾಬ್ಯಮೂರ್ತಿಯಂ ಮಾಡುಗುಮೇ (ಅಜಿಪು. ೬-೯೭) ; ಆವೆಡೆ ಪಂಸಗೀ ನಡೆಯ ಚೆಲ್ವನೆ ನೂಪುರದಿಂಚರಂ ಸ್ವರಂ ಜೇವೊಡೆದಂದದವಾಗೆ . . . ಬಂದಳದೊಂದು ಲೀಲೆಯಿಂ (ಮಲ್ಲಿಪು. ೪-೭೩) ; ಮರಾಳಂ ನಡೆಯೊಳುರುಚಿಕಂ ನಾದ ದೊಳ್ . . . ಭೃಂಗಂ ವಿಚಲನ್ನೀಲಾಳಕಾನೀಕದೊಳಮರ್ದೆಸೆಯಲ್ ಶೋಭಿಕುಂ ವಾರನಾರೀನಿಚಯಂ (ಉದ್ಭಟ. ೧೧-೪೩) ; ಬನದೊಳೆಡೆ ಯಾಡುವ ಸಬರಿಯರ ನಡೆಯನೇಡಿಸುವಂತೆ ಮೆಲ್ಲಡಿಯಿಡುವ ಪೆಣ್ಣಂಚೆ ಗಳ ಬಳಗಂಗಳ (ಕಬ್ಬಿಕಾ. ೧೮) ; ಮಾಯೆ ತನ್ನಂತೆ ನಡೆಯ ಕಲಿಸಿದಳಂಚೆ ವಿಂಡಿಗೆ ನುಡಿಯ ಕಲಿಸಿದಳರಗಿಳಿಗೆ (ಪ್ರಭುಲೀ. ೩-೩೩) ; ಅಂಚೆಯ ನಡೆಯನಿದಂ ತನತೆನುತುಂ ಮಂಚಲ್ಪಿಡಿಪೊಳ್ನಡೆ (ಜಯುಕಾ. ೨-೨) ; ನಡೆ ಮಂದವಾಯ್ತು, ನಡುಗಡಸಿತ್ತು, ಬಡತನಂ ನುಡಿ ಮೆಲ್ಲನಾಯ್ತು, ಕೆಳವೆಯ ಮಡಿಗಳಂ ಕಾವ ಮಡದಿಯರ್ಗೆ (ಭಾವಚಿಂ. ೨-೯). ೨. ಆಚ ರಣೆ ; ನಡವಳಿಕೆ ; ಆಚಾರ ; ಚರ್ಯೆ ; ಸಂಪ್ರದಾಯ ಎನ್ನ ನಡೆಯೊಂದು ಪರಿ ಎನ್ನ ನುಡಿಯೊಂದು ಪರಿ . . . ನುಡಿಯ ತಕ್ಕ ನಡೆಯ ಕಂಡೊಡೆ ಕೂಡಲಸಂಗಮದೇವನೊಳಗಿರ್ಪನಯ್ಯಾ (ಬಸವ. ೩೦); ಪೊಡವಿಗಚ್ಚರಿ ನಿಮ್ಮ ಭಕ್ತಿಯ ನಡೆ ಸೊಗಸದೆಮಗೀ ಹಿರಿಯತನಗೆಡದೆ ಹೊಱವಡಿ ಸಾಕು (ಬಸಪು. ೫೫-೧೯) ; ಸಂತೋಷ ಮಾಣಾವ ನುಡಿ(ನಡೆ) ತತ್ವ ನಡೆ(ನುಡಿ) ಪಾವನ ಆತನ ಸುಳುಹು ವಸಂತಗಾಳಿ (ಸಿದ್ಧೇವ. ೧೫೫-೪೭೩) ; ನಿನ್ನ ನಡೆಯ ನಿನ್ನ ನುಡಿಯ ನಿನ್ನೊಳ್ಳೆ ಕಂಡು ನಿನ್ನ ಮುಂದೋದಿದೆನರಸಾ (ಭರಡ. ೨-೩೭) ; ನಡೆಯೊಳಗೆ ನುಡಿ ತುಂಬಿ ನುಡಿಯೊಳಗೆ ನಡೆ ತುಂಬಿ . . . ಲಿಂಗವ ಕೂಡಬಲ್ಲಾತನೇ ಶರಣ ನೋಡಾ (ಅಖಂಡೇ. ೦೪೭-೧೩೯) ; ಸತ್ಯರ ನುಡಿ ತೀರ್ಥ ನಿತ್ಯರ ನಡೆ ತೀರ್ಥ ಉತ್ತಮರ ಸಂಗವದು ತೀರ್ಥ ಹರಿವ ನೀರೆತ್ತಣದು ತೀರ್ಥ (ಸರ್ವಜ್ಞ. ೮೨೦) ; ಪೆತ್ತರಂ ಸೋಲಿಪಂ ನಲ್ಲಮಗನೊಳ್ಪುಗುಣಂಗಳಿಂ ಮಂಗಿಲ್ಪೊಲ್ ನಡೆಯಿಂ ನೀರಿಂ ಲೋಗರು ನಲವೇರಿಪಂ (ಸೌನಂದ.೨-೩೦); ಅವರ ಕಡೇಲಿ ಏನು ನಡೆ ಇದೆಯೋ ಹಾಗೆಯೇ ಮಾಡಲಿ (ಬೆಳುವ. ೨೦೭) ; ನುಡಿ ಪುರಾತನದು ನಡೆ ಕಿರಾತನದು (ಗಾದೆ). ೩. ಶೀಲ : ನಡತೆ : ಎನ್ನಲ್ಲಿ ನಡೆಯಿಲ್ಲಾಗಿ ನಾನು ಭಕ್ತನೆಂತಪ್ಪೆನಯ್ಯಾ (ಬಸವ. ೨೯೧); ಹುಡುಗಿಯ ಗುಣವನು ಜನರು ನಿರ್ಣಯಿಪರು ತಾಯಿಯ ನಡೆಯನು

ನೋಡಿ (ಇಂದಾಪ. ೨೦೫-೨೯). ೪. ಮುಂದುವರಿಕೆ; ಮುನ್ನಡೆ; ಪ್ರಗತಿ : ಜ್ಞಾನವಿಜ್ಞಾನಕ್ಷೇತ್ರಗಳಲ್ಲಿ ಹಲವು ಪ್ರಯೋಗಗಳನ್ನು ನಡೆಸಿ ಪಾಶ್ಚಾತ್ಯ ಜಗತ್ತು ಅಣುಬಾಂಬನ್ನು ಕಂಡುಹಿಡಿದಿದೆ. ಇಲ್ಲಿಗೆ ಪಾಶ್ಚಾತ್ಯಜಗತ್ತಿನ ನಡೆ ನಿಂತಿತು (ಧಾರದ. ೫೮೦) ; ನಮ್ಮ ಸಯ್ಯನ ಬಿದಿಯು ನಡೆಗೆ ತೊಡ ರೊದಗದೊಲ್ ಸರ್ವಮುಂ ಪುರುಷಪ್ರಯತ್ನಮುಂ ಮಾಳ್ಪೆ ನಾವ್ ! (ಚಂದ್ರಸ.೧೩-೨೧). ೫. ಪ್ರಯಾಣ; ಸಂಚಾರ: "ನಡೆ ಸಿದ್ಧ ಯಾತ್ರಯುಕ್ತು" (ಮಂಗರಾ. ೦೨೧-೫). ೬. ಎತ್ತುಗಳು ಒಂದು ಸಲ ಒಟ್ಟಿಗೆ (ಒಂದು ರಾತ್ರಿಯಲ್ಲಿ) ನಡೆಯುವಷ್ಟು ದಾರಿ; ಸುಮಾರು ಮೂವತ್ತು ಮೈಲಿ: ಈ ಊರಿನಿಂದ ಹೊರಟರೆ ನಮ್ಮ ಎತ್ತಿನ ಗಾಡಿಯು ಎರಡು ನಡೆಯಲ್ಲಿ ತುಮಕೂರು ಸೇರಬಹುದು (ರೂಢಿ). ೭. ದಾರಿ ; ಹಾದಿ. 'ನಡೆದಾರಿ'. ಪರಾ. ೮. ದನಕರು, ಕಾಲ್ನಡೆ ಇತ್ಯಾದಿ : ಮಠದ ಧರ್ಮಕೆ ಹೇರುವ ಮಾನ್ಯದ ಎತ್ತು ನಡೆ ೫೦ ಅಯಿವತ್ತುಯೆತ್ತಿನ ಮಾನ್ಯವನೂ ಶಿವಾರ್ಚಿತ ವಾಗಿ ಬಿಟ್ಟಿದೇವೆ (ಎಕ. VII, ಶಿವಮೊ. ೨೮-೧೩ ; 1670) ; ಛಾರಾಮಾರ್ಗದ ವೈರ್‍ರಿಗೆ ಅರಮನೆ ಕಟ್ಟಲಿ ಸಿಂತ್ರ ನಡೆ ೧ ಪಂದಕ್ಕೆ ಹಂ (ಎಕ. X (8), ಕೋಲಾರ. ೨೫೮-೧೭ ; 1761) ; ಯಿಾ ಹುಳಿಯಾರ ಸುಂಕದಲ್ಲಿ ನಾನಾ ದಿನಶಿನ ನಡೆಗಳಿಗೆ ಬದ್ದನೆ ಪ್ರಕಾರಾ ಲೆಖ್ಖಾ ಹಾಕಿಕೊಳುತ್ತಯಿದ್ದಾರೊ ಅದೆ ಪ್ರಕಾರಕ್ಕೆ ಬದ್ದನೆ ಸಿಂತ್ರ ನಡೆ ೧ಕ್ಕೆ ಕಂಟಿರಾಯಿ ೮೦೦೦೦ (ಎಕ. XVI, ಚಿಕ್ಕನಾ. ೯೦-೧೭ ; 1802) ; ಒಡಕು ಕೊಟ್ಟಿಗೆ ಹಿಡಿಯಲಾರದು, ನಡೆಗಳಿಪ್ಪತ್ತಾದವು (ಕಪ್ರು. ೧೮-೦೦). 'ಕಾಲ್ನಡೆ' ಪರಾ. ೯. (ಕೆಲವು ವಿಶೇಷ ಸಂದರ್ಭಗಳಲ್ಲಿ) ನಡೆಯುವ ದಾರಿಗೆ ಹಾಕುವ ಹಾಸು: ನಡೆಮಡಿ ; ಹಡದಿ (ಉಕ) : ವಿಳಸತ್ಕಾಂತಂ ವಸಂತಂ ತಳರದಿರೆ ವನಶ್ರೀ ಮುದಂಬೆತ್ತು ಮುಕುಳಕುಳದಿಂ ನೀಳೌಘದಿಂದಿಕ್ಕಿದ ನಡೆಗಳೊ ಪೇಟೆಂತಿ ವೆಂಬಂದದಿಂ ಕಣ್ಗೊಳಿಸುತ್ತಿರ್ದಪ್ಪವಂತಾ ವನದೊಳಗೆಲ್ಲೊರ್ಯಿಂದ ಮಲ್ಲಿಕ ನವ್ಯಾಮಳಪುಷ್ಪಂಗಳ್ ಜನುಂಗುತ್ತಬಗಿದ [ಮದ]ಭೃಂಗಾವಳೀ ಸಂಗದಿಂದಂ (ಕುಸುಮಾ. ೭-೦೦೩). ೧೦. ಗದ್ಯ ಅಥವಾ ಪದ್ಯದ ಲಯ,-ಓಟ : ಅವರ ಕಾವ್ಯದ ನಡೆ ಇತರರ ಕಾವ್ಯದ ರೀತಿಗಿಂತ ಭಿನ್ನವಾಗಿದೆ (ರೂಢಿ). ೧೧. ಒಂದು ಬಾರಿ ಹೊರುವಷ್ಟು ಪ್ರಮಾಣ; ಒಂದು ಹೊರೆ,-ಹೇರು; ಸಾರಿಗೆ (ಉಕ) : ಕಲಿನಾಥ ದೇವರ ಗಂಧ ಕಸ್ತೂರಿಗೆ ಎಲೆಯ ನಡಗೆ ತಾರ ೧ ನು ಬಿಟ್ಟರು (ಸೌಇಇ. IX-1, ೩೪೪-೪೭ ; 1292) : ಎತ್ತಿನ ಮಾನ್ಯ ಹದಿನೈದು ನಡೆಲು ಅದಕೆ ಮೆಣಸು (ಎಕ. VIII, ತೀರ್ಥಹ. ೭೩-೨೨ ; 1674). ತೆಂಗಿನಕಾಯಿ. ನಡೆ ೧೧೦೦ಕ್ಕೆ ಪಕ್ಕಾ ಸಾವಿರ ಅಂತ ತಿಳಿದು ಅದರ ಮೇಲೆ ಧಾರಣೆ ಇರುತ್ತದೆ (ಮುಂಬವ್ಯಾ. ೨೮೩) ; ರೈತ ಬೆಳಗಿನಿಂದ ಐದು ನಡೆ ಗೊಬ್ಬರ ಹೇರಿದ್ದಾನೆ (ರೂಢಿ). ೧೨. [ನಾಟ್ಯ] ತಟ್ಟು, ಮೆಟ್ಟು, ನಾಟು, ತಟ್ಟುಮೆಟ್ಟು, ಕುದಿತ ಮೆಟ್ಟು, ಮೈ, ಮುಡಿ, ಜಾತಿ, ಅರುಧಿ ಮತ್ತು ನಡೆ ಎಂಬ ಹತ್ತು ವಿಧವಾದ ಅಡವುಗಳಲ್ಲಿ ಒಂದು : ಮೊಗದೊಳಿನಗೆದೋಱಿ ಬಿನ್ನಣದ ನಡೆ ಸೋಲವುಡಿಳಾಯುಧರು ಕಾಲರವಯ ಚೆಲ್ವಡರೆ ದೇಶಿಯನಾಡು ತಿರ್ದಳು ವಿಲಾಸವಿಭ್ರಮಹಾವಭಾವಮೆಸೆಯೆ (ರೇವಣ. ೩೨-೪೯).

**ನಡೆನಡೆ$_2$** (ದ್ವಿರುಕ್ತಿ) : ನಡನಡೆಗೆ ಬಾವುಲಿಯ ಪೊಡೆಯು ಕೊಡರುಗಳು ಘಲಘಲನೆ ಮೊರೆಯಲು ಬಿಡದೆ ತಾಟಿಪ ಹಲಗೆ ಘಂಘಂಘಲಿಗು ಘಲಿರೆನಲು (ಭಸಪು. ೦೬-೦೭). **ನಡೆನುಡಿ** = ೧. ನಡಗೆ ಮತ್ತು ಮಾತು : ಕೈಕಾಲ್ ನಡೆನುಡಿಯುಳ್ಳ ಮನುಷ್ಯನಿಂದೆಂತುಂ ಕಾರ್ಯಮುಂಟು (ಪಂಚತಂ. ೩೪-೦೫) ; ನಡೆನುಡಿ ಬಳಲ್ಕೆ ಮುನ್ನಂ ಕಡುಚೆಲ್ವೆಯ ರೂಪುಗುಂಡ ಬಳಿಕಂ ನಡೆಯುರ್ ನುಡಿಯುರ್ ನೀರಂ ಕುಡಿಯುರ್ ನಡೆ ನೋಡುತಿರ್ಪರತನುಶಿಥಿಲರ್ ಪಥಿಕರ್ (ಗಿರಿಕ. ೨-೨೫) . ಪಾಲಿಸಿದಳಂತು ನಡೆನುಡಿಗಳಂ ಕಲಿಪಲ್ಲಿ ಪರಿಯುತಮಾ ಶಿಶುವನು (ಕೃಮಿಭಾ. ೨೮-೦೯). ೨. ನಡತೆ; ನಡವಳಿಕೆ; ಆಚಾರ : ಸಂಪ್ರದಾಯ ; ನಡೆನುಡಿ ಪುಸಿಯುಂಟಾದರೆ ಕೂಡಲಸಂಗನ ತೋಱದ ಚೆನ್ನಬಸವಣ್ಣನಾಣೆ (ಬಸವ ೭೦೮) ; ಶುಕ್ಲಶೋಣಿತದಿಂದ ತನುಮನ ಜನಿಸಿತ್ತು ತನುಮನದಿಂದ ನಡೆನುಡಿ ಜನಿಸಿತ್ತು (ಆದವ. ೨೭-೮೦) ; ನಡೆನುಡಿಯೊಳಭವನೆಂದೆನಿಸುರ್ವನಾ ಪುರಕೆ (ತಿರುರ. ದೀ. ೪-೫) : ದೃಢಭಾವವೇ ತತ್ಕವೆದೆಗುಡದೆ ಬಲಿತವನ ನಡೆನುಡಿಯು ಬಗೆದ ಸರಿನೂಲಿಮೊಳೆ ಮೃಡನೊಳು ತೊಡಂಕಿ ಬಿಡದಡರ್ದುದೆನಲಾಹ ಸಡಿಘಡ ಶರಣನಿರವನಾವಂ ಬಣ್ಣಿಪಂ (ಶಾಮಂಚ. ೧-೭೯) ; ನಡೆನುಡಿ ಭಕ್ತ ಮಸ್ತುಗಳ ಕೊಳ್ಳಿವುಮಂಜಿಕ ಕಾಯಶುದ್ಧಿ ಮಾಟ್ಟುಡುಮೆಸಿಸಿರ್ವ ಪಂಚಸಮಿತಿಸ್ಥಿತಿಯುಂ ತಳೆದು (ಅನಂಪು. ೪-೦೨) ; ವ್ಯಕ್ತಿಯು ನಡೆನುಡಿಗಳು, ಮನೋಭಾವಗಳು, ದೃಷ್ಟಿಧ್ಯೇಯಗಳು . . . ಇವೆಲ್ಲದರ ಮೇಲೂ ಬುದ್ಧಿಶಕ್ತಿ ತನ್ನ ನಿರ್ದಿಷ್ಟ ಪ್ರಭಾವವನ್ನು ಬೀರುತ್ತದೆ (ಶಿಕ್ಷದ. ೬೧೨). **ನಡೆನುಡಿಮುಗ್ಧ** = ಆಚಾರ, ವಿಚಾರಗಳಲ್ಲಿ ಮುಗ್ಧನಾದವನು,-ನಿಷ್ಕಪಟಿಯಾದವನು; ಶುದ್ಧವಾದ ಚಾರಿತ್ರವುಳ್ಳವನು: ಕಂಗಳ ನೋಟ ಲಿಂಗಕ್ಕೆ ಭಾವ ಲಿಂಗಜೀವಿಗಳ ಕೂಡೆ ಕೂಡಿವನೆ ಶರಣನು ನಡೆನುಡಿಮುಗ್ಧ ಗುಹೇಶ್ವರ ನಿಮ್ಮ ಶರಣನು (ಅವಚಂ. ೮೦-೩೬೪). **ನಡೆಮಾಡು** = ೧. ಚಲಿಸು ; ಸುತ್ತಾಡು ; ಸುತ್ತಲೂ ಹಾಯು : ಕೈತಡವೆ ಕಣ್ ನಡೆಯಾಡೆ ಲತಾಂಗಿ ಕಂಡಳುಜ್ಜ್ವಳಕಳಶಂಗಳಂ ಘನರಸಾ ಕಳಿತಂಗಳನುನ್ನತಂಗಳಂ (ಆದಿಪು. ೪-೦೦೮). ೨. ನಡೆದುಕೊಳ್ಳು : ಆಚರಿಸು ; ವ್ಯವಹರಿಸು : ಮದನಕದಳೀವನಕುಠಾರರುಂ . . . ಪಾಪಾಟವೀಪಾವಕರುಮಪ್ಪ ಶ್ರೀಪದ್ಮಪ್ರಭಮಲಧಾರಿದೇವರು ತಪೋನಿಷ್ಠರಾಗಿ ನಡೆಯಾಡಿ (ಸೌಇಇ. IX-1, ೨೭೮-೨೯ ; 1185).

[ <ನಡೆ$_1$./ತಮಿ. ನಟ್ಟೈ ; ಮಲ. ನಡ ; ತುಳು.ನಡೆ, ನಡಿ ; ತೆಲು. ನಡ ]

**ನಡೆ$_3$** (ಅ). ಚೆನ್ನಾಗಿ ; ವಿಶೇಷವಾಗಿ ; ಅತಿಶಯವಾಗಿ : ಎಡೆಯುಱದು ತೊಳಗುವಂತಿರೆ ಸಿಡಿಲ್ಗಳ್ ಪೋಯ್ತುಟ್ಟುದಾಗಳಂಗಜಕಲೆಯೊಳ್ ನಡೆ ಮೊಗ ವಿಕ್ಕಿ ಬಿಯಂಗಿಡದೊಡನುಲಿದುವು ಬೆರಲ ಕೊರಲ ನಾಲಗೆಯುಲಿಗಳ್ (ಕಾವ್ಯಸಾ. ೬೫೮ ಟಿಪ್ಪಣಿ): ಶೀಡೆ ತುಷಾರವಾಯು ನಡೆ ಕೋಡಿ ಕಡಂಗಿ ಜಲಕ್ರೀಡೆಯೊಳಂತೆ ಸೇದುವಡೆದೊಪ್ಪಿದಪೊಲ್ (ರೀಲಾವ. ೧೪-೧೭) ; ತದನಸರದೊಳೆ ನೆಲದ ಪತಿ ಪೊಸಮಣ್ಣಂ ನಡೆ ಬಗ್ಗಿಸುತಂ . . . ಅತಿಶಯ ಚತುರೆಯನಿರದಾರೋಹಣಮುಂ ವಿಗೆ ಮಾಡುತಿರಲ್ (ಜಾರಾಸ. ೩-೧೨-೩೭); ನಡೆ ವಿಡುಕದ ಚಮರದ ನೀಳ್ದೊಡಲೆತ್ತಿದ ಕಿವಿಯು ತಮ್ಮ ಪದರಜಮುಂ ಪಾಯ್ದೊಡೆ ಸಿಲ್ಕದಶ್ವಗಳ್ ಧೀಂಕಿಡುವುವು (ಬಾಕಲಂಕ. ೪-೮). 'ನಾಡೆ' ಪರಾ.

**ನಡೆನೋಟ** = ಚೆನ್ನಾದ ನೋಟ ; ಅತಿಶಯವಾದ ದೃಷ್ಟಿ: ನಡೆನೋಟದಿಂದೆ ಬೆಮರೂ ಪಡೆದು ಮನೋಭವನ ಮನಮುಮಂ ನನೆವಿಲ್ಲಂ ಪಿಡಿದಿಸುವ ಕೆಯ್ಯುಮಂ ಕೇಳ್ ನಡುಗಿಸದೊಡೆ ನಿನ್ನ ಕಳದಿಯಲ್ಲಂ ಕೆಳದೀ (ರೀಲಾವ. ೧೧-೮೨). **ನಡೆ ನೋಡು** = ಚೆನ್ನಾಗಿ ನೋಡು ; ನಟ್ಟ ದೃಷ್ಟಿಯಿಂದ ನೋಡು : ನಿಡಿಯಲಗಣ್ಗಳ ಬೆಡಂಗಿಯರ್ಕಳನರ್ಕಂ ನಡೆ ನೋಡಿ ಪೋಗಲಾಱದೆ ತಡೆಯ ಪಗಲ್ ಒರಿಯುಪಷ್ಟವಾ ಪುರವರದೊಳ್ (ಕಾವ್ಯಸಾ. ೦೬೮ ಟಿಪ್ಪಣಿ) ; ಮೆಲ್ಲನೆ ಮೃಗಮೊಂದು ಸಾರ್ದು ನೆಟ್ಟನೆ ನಡೆ ನೋಡಿ ನರೇಂದ್ರನೆಚ್ಚು ಭೋಂಕನೆ ಮೃಗಬೇರಿಯುಂ ತನಗೆ ಮಾಣದೆ ತಂದನದೊಂದು ಮಾರಿಯುಂ (ಪಂಚತಂ. ೦-೮೦೧) ; ಎಳೆಮೆಂಡಿನ್ನೆರೆಲವಾದ ದೊಳೆಳಸಿರೆ ನಡೆ ನೋಡಿ ಸೋಲ್ತಮೋಲ್ಬಂದ್ರಂ ಮಾರ್ಪೊಳೆವ ನೆಪದಿಂ ಪೊರಳ್ದಂ ಬುಳಿಯುದರಸಿಕ್ತರತ್ನಕುಟ್ಟಿಮತಳದೊಳ್ (ಕಾದಂಪೂ. ೩೦೯) : ನಡೆ ನೋಟ್ಟರ ಕಡೆಗಣ್ಣಂ ಕಡುನಲ್ಲರ ಮನವುಮೊಡನೆ ಪೊತ್ತುವ ಪುರದೊಳ್ ಮಡದಿಯರ ಮೊಲೆಯನಲ್ಲದೊಡುಡಿಸುವ ಬಳುವಳಿಕೆವಡೆದ ಬಡನಡು ಭರದಿಂ (ಅರ್ಧನೇ. ೪-೨೨); ಕೃತಕಗಿರಿಯೊಳ್ ನವಿಲೆಬ್ಬಿದುವುದಂ

ಪಥಿಕರ್ ನಡೆ ನೋಡುವರೆರ್ದೆ ಥಕ್ಕೆವಾಜಿಸುತ್ತಿರ್ಪಿನೆಗಂ (ವರ್ಧಪು. ೨-೨೨) ; ತೊವಲನುಗಿದು ಕರುಳ ತೊಡುಕಂ ಬಿಡಿಸಿ ನಡೆ ನೋಟ್ಪನೊಳಗೆಲು ವಡಗಿರ್ಪುದು ಜೀವನಿರ್ಪೊಡೆಲ್ಲಿಗೆಪೋದು (ಯಶೋಚ. ೯-೧೯) ; ಕುಸುಮ ಮಾಲೆಯ ತಿರುಹುತತ್ತಿರ್ದ ಮುಸುಡಿನರೆನೋಟದಲಿ ಲಜ್ಜೆಯ ಬೆಸುಗೆಯಲಿ ನಡೆ[ಪಾಠಾಂ. ನೆಟ್, ಎಂಗೆ]ನೋಡುತಿರ್ದಳು ಸೀತೆ ರಘುಪತಿಯ (ತೊರವೆ. ೧-೦೩-೩೯) ; ನಡೆ ನೋಡಿ ನಲವಿಂದ ಹರಸಿದವರು ಮತ್ತೊಡನೆ ಲಂಘಿಸಿದರಂಬರಕೆ (ಭರತ. ೩-೧೨೯) ; ಜನಪತಿಯ ವದನಮಂ ಕಣ್ಗೊನೆಯಿಂ ನಡೆ ನೋಡಿ ನಾಡೆ ಮುದಮಂ ತಳೆದಳ್ (ರಾಜಶೇ. ೪-೬).

**ನಡೆಕೆಯ್ ?** (ಕ್ರಿ). (?) : ಎಡೆಪಱಿಗೀ ನಡೆಕೆಯ್ದು ತಪಂ ಸಯ್ಯಮ ಮಾನ್ಯೊಳತ್ತೂರ ಸಂಘ × × ವಡೆ ಕೊಱದಿನ್ತು ಮಾಟ್ಟಿದರಿದು (ಎಕ. II, ೯೩-೧ ; ಕು. 700). [ ? ]

**ನಡೆಕೋಲು** 'ನಡೆಗೋಲು' ನೋ.

**ನಡೆಗ** (ನಾ). ೧. ನಡೆಯುವವನು ; ನಡೆಗಾರ : "ಕಸನ್, ಕಸಕಃ, ಈ ೨ ನಡೆಗಂ" (ಶಾಶಕ್ಕ.೧೫೦). ೨. ಒಳ್ಳೆಯ ನಡಗೆಯುಳ್ಳ ಒಂದಂ ಬಗೆಯ ಕುದುರೆ : ನಡೆಗ ನಾಗರ ಮಱ ಮಿಡಿವ ಚಿನ್ನಗರ ಮುಂಗುಡಿಯಲೇಱುವ ಮುದ್ದುಮೊಗದ ಕಡುರಭಸದ ಕಾಡಿಗೆಗಣ್ಣ ತೇಜಿಯ ಪೊಡವಿಪಂಗೆ ತೋಱದರು (ಅಂಜಿದ. ೬-೮೪) ; ನಡೆಗನನೇಱ ಮೇಳದವಳಂ ಪೆಱಗೇಱಸಿ ಕೊಂಡು ಪಕ್ಕದೊಳ್ ಗಡಣಸಿ ಮೇಳದೊಳ್ ನಗಿಸುತಂ ಬರೆವಾದಿಗೆ ಗೆಂಟುಪೋಗಿ (ಸೂಕ್ತಿಸು. ೦೨-೩೭). [ ನಡೆ$_1$ + –ಗ$_2$ ]

**ನಡೆಗಲ್, ನಡೆಗಲಿ$_1$** (ಕ್ರಿ). ನಡಗೆಯುನ್ನು ಕಲಿ ; ಓಡಾಡಲು ಕಲಿತುಕೊಳ್ಳು : ಆ ಬಾಲಕಂ ಬಾಲಮಡಿಗೆಗಳಂ ತೊಟ್ಟು ನಡೆಗಲ್ತೊಂದು ದಿವಸಂ ಗೋವ್ರಜಂಗಳೊಳ್ ಸೋಂಕುವುದನಾಂ ಕಂಡು (ಹಂದಕಂ.೦೮೭-೯); ನಡೆಗಲ್ವಂದುಂ ಬಿಣ್ಪಂ ಕೊಡೆನೆಗೆದಪುದುರ್ವಿಯೆಂದು ವಾಸುಗಿ ಪಲವುಂ ಪೆಡೆಯುಂ ಶಿಶುನಡೆಪೆಡೆಯೊಳ್ ಪಡೆದಂತು ಸಹಸ್ರಫಣನೆನಲ್ ಪೆಸರ್ವಡೆದುಂ (ಶಂರಾಮೂ. ೩-೦೨೯) ; ದೃಢಚಿತ್ತಂ ಗುಣನಿಳಯಂ ಕಡುಗಲಿ ಕಿಱಯಂದು ದಿವ್ಯಜಿನಮುನಿಗಳ ಮೆಲ್ಲಡಿಯುಂ ಪಿಡಿದು ತಳರ್ನಡೆ ನಡೆಗಲ್ತಂ ಭವ್ಯವನಜ ವನಕಳಹಂಸಂ (ಧರ್ಮಾಮ್ಮ.೭-೧೩); ನಡೆಗಲ್ವಲ್ಲಿಯೆ ಧರ್ಮದಲ್ಲಿ ನಡೆಯಲ್ ಕಲ್ತಂ (ಎಕ. V, ಹಾಸನ. ೭೨-೩೩ ; 1160) ; (ಶಾಶದುಂ. ೬೧೦ ನೋ) ; ನಡೆಗಲ್ವಂದೆ ತಳರ್ನಡೆ ನಡೆಯಿಸಿದುಂ ನೃಪಕುಮಾರನೆಳೆಯಂ ಬಿಣ್ಪಂ ನುಡಿಗಲಂದೆ ತೊದಳ್ನುಡಿ ನುಡಿಯಿಸಿದುಂ ತನಗೆ ಸೋಲ್ತ ವಾಕ್ಕನ್ನಿಕೆಯುಂ (ಅರ್ಧನೇ. ೨-೩೦) ; ವಿಚಾರಿಪಂತಿದು ನಡೆಗಲ್ತು ಸಂಚರಿಪ ಮೇಚಕಶೈಲಮೊ . . . ಪೇಳೆನೆ ಕೋಱದುದಾ ವರಾಹಕಂ (ಶಬಶಂ. ೪-೩). **ನಡೆಗಲಿ$_1$** : ಅಂಬೆಗಾಲಿಟ್ಟು ನಡೆಗಲಿತನು ಶ್ರಾವಕರ ಗಡಣಮಾರಣ್ಯದಾವಾನಲ ಮೃಡಭಕ್ತ ಪಡೆದರ್ಗರ್ಭಿಯನೀವುತಿರ್ದ (ಅಬ್ಬಲೂ. ೨-೫೩).

[ ನಡೆ$_2$ + ಕಲ್$_1$ ]

**ನಡೆಗಲಿ$_1$** 'ನಡೆಗಲ್' ನೋ.

**ನಡೆಗಲಿ$_2$** (ನಾ). ಆಕ್ರಮಣ ನಡೆಸುವ ಶೂರ ; ಮುನ್ನುಗ್ಗುವ ವೀರ : ಬೇಡಿದರ್ಗೆ ಬೇಡಿತಂ ಕೊಟ್ಟು ಬಂದಿಱವ ಕಸವರಗಲಿಗಳುಮಂ ಮತ್ತಮಣ್ಣ ನಡೆದಿಱವ ನಡೆಗಲಿಗಳುಮಂ ನೋಡಿ (ಗದಾಯು. ೯-೩೪ ವ).

[ ನಡೆ$_1$ + ಕಲಿ$_2$ ]

**ನಡೆಗಲಿಸು** (ಕ್ರಿ). ನಡಗೆಯುನ್ನು ಕಲಿಸು ; ನಡೆಯುವುದನ್ನು ಹೇಳಿಕೊಡು : ನಡೆಗಲಿಸುತ್ತುಮಂಚೆಗಳನೋದಿಸುತುಂ ಗಿಳಿಯುಂ ಪಿಕಕ್ಕೆ ಮಾವಿಂಡಿಗಳನಿಕ್ಕುತುಂ . . . ನಿರುತರಂ ತೊಲಗದಿರ್ಪುದು ಪೌರವಿಲಾಸಿನೀ ಜನಂ (ಮಲ್ಲಿಪು. ೨-೩೯). [ ನಡೆ$_2$ + ಕಲಿಸು$_1$ ]

**ನಡೆಗಟ್ತಿ** (ನಾ). ಹೇರನ್ನು ಹೊರುವ ಕತ್ತೆ : ಭಾರವನ್ನು ಹೊತ್ತು ನಡೆಯುವ ಕತ್ತೆ : ನಡೆಗಟ್ತಿಗಳನ್ನಿರ್ಗಮೇಱಲ್ ಕೊಟ್ಟು ಪಿರಿದಾಳಂ ನೆರಂಬೇಟ್ದು ಕಿಱದುಂತರಂ ಕಟ್ಪುತ್ತುಂ ಬಂದು (ಸುಕುಮಾ. ೨-೫೯ ವ).

[ ನಡೆ$_1$ + ಕಟ್ತಿ ]

**ನಡೆಗಾಣ್** (ಕ್ರಿ). ೧. ನಡಗೆಯುನ್ನು ನೋಡು : ನಡೆಗಂಡು ಕವಿವ ಕಳಹಂಸೆಯಂ ಜಡಿವ ಸವಿನುಡಿಗೇಳ್ದು ಮುತ್ತುಮರಗಿಳಿಗಳಂ ಕೊಡಹಿ (ಹದಶಾ. ೪-೩೦). ೨. ನಡವಳಿಕೆಯುನ್ನು ತಿಳಿ ; ಆಚಾರ ವ್ಯವಹಾರಗಳನ್ನು ತಿಳಿದುಕೊಳ್ಳು ; ಸಂಪ್ರದಾಯವನ್ನು ಅರಿತುಕೊಳ್ಳು : ಕಡೆಯ ದಿನದೊಳು ಮೂಱನೆಯ ಜಾವದೊಳೆಲ್ಲ ಕಡೆಯಿಂದ ಕೂಡಿದ ಪ್ರಜೆಗೆ ನಡೆಗಂಡು ಸಂಘಪೂಜೆಯ ಮಾಡಲಾ ಚಕ್ರಿ ತೊಡಗಿದನೇನ ಬಣ್ಣಿಪೆನು (ಭರತ. ೭೧-೧೦೦). [ ನಡೆ$_2$ + ಕಾಣ್ ]

**ನಡೆಗಿಡು** 'ನಡೆಗೆಡು' ನೋ.

**ನಡೆಗುಱ** (ನಾ). (ಗುಂಪಿನಲ್ಲಿ) ಮುಂದಕ್ಕೆ ಹೋಗುವ ಕುರಿ : ಕೊಱದು ತೊಡೆಯೊಳ್ ಕಾಯ್ದು ಕೋದ ಸಂಕಲೆಯಿಂದೆ ಕೊಱದು ಕಿವಿಯೊಳ್ ಕೊಱದು ಚಿಬುಕದೊಳ್ ನೇಣಿಂದೆ ನಡೆಗುಱಗಳಂ ಮಾಡಿ ಕೈಯನೆಚ್ಚು ಪರಿರದೆ ನಡೆಯಿಸೆಚ್ಚಾರ್ದರ್ ಕಾಲ್ಗಳನರಿದು ಬಡದಿರದೆ ತಲೆಗಳಂ ತುದಿ ಮೂಗನೆಚ್ಚು ಕೆಡಪುವರಹೋ (ಸಾನಂದ. ೪-೧೮೯ ರಗಳೆ).

[ ನಡೆ$_1$ + ಕುಱ$_2$ ]

**ನಡೆಗೆಡಿಸು** (ಕ್ರಿ). ನಡಗೆಯುನ್ನು ನಿಲ್ಲಿಸು ; ಚಲನೆಯುನ್ನು ತಪ್ಪಿಸು, ಅಡ್ಡಿಪಡಿಸು ; ನಿಲ್ಲುವಂತೆ ಮಾಡು : ವಿಟರ ಮೇಳಂಗಳಂ ಚೇಟಿಯರ ಗಡಣದಿಂ . . . ವಾರನಾರೀಜನಂ ಕಟಕದೊಳ್ಕಾಮುಕರ ನಡೆಗೆಡಿಸು ತೊಗ್ಗಿನಿಂ ಪೊಱಮಟ್ಟು ಬರುತಿರ್ದುದು (ಕೃಮಿಥಾ. ೭-೬).

[ ನಡೆ$_2$ + ಕೆಡಿಸು$_1$ ]

**ನಡೆಗೆಡು, ನಡೆಗಿಡು** (ಕ್ರಿ). ೧. ನಡೆಯಲಾರದಾಗು ; ಚಲನೆ ಇಲ್ಲವಾಗು; ಮುಂದು ಹೋಗಲು ಆಗದಿರು : ತೊಡೆ ದಡದಡಿಸೆ ನಡೆಗೆಟ್ಟು ಕಟಲುಲಿಗೆ ಬಱಸಲ್ವ ಕಳಹಂಸಮಂಡಲಕ್ಕಯಶಮಂ ಮಾಡಿಸಿಯುಂ. . . ತತ್ಕ್ಷಂತೆ ಬಂದೆರಡಡಿಯನಿಡುವಲ್ಲಿ (ಶಾದಂಉ. ೩೬) ; ನಭವೆತ್ತ ಪೋದುದೆ ನಿಸಲ್ನಡೆಗೆಟ್ಟುದು ಗಾಳಿ ರೂಪುಗೆಟ್ಟುದು ದೆಸೆ (ಜಗವಿ. ೬-೮೦) ; ಕಳಹಂಸ ಮಾಲೆ ಕಾಸಾರದೊಳಂಜಿ ಪೊಕ್ಕುವು ರಥಾಂಗರಥಂ ನಡೆಗೆಟ್ಟುವದ್ಭುತಂ (೧೦೪. ೮-೦೧) ; ನಂಜುಮುಳ್ಳಡಿಯನು ನಟ್ಟು ನಡೆಗೆಟ್ಟನೋ (ಸಿದ್ಧರಾ. ೨-೪೫) ; ಮೆಲ್ಲಡಿಯ ಇಡಲಱಯದಿನ್ನನಿತು ಕಾನನದೆಡೆಯೆನುತ ಬೆಸಗೊಂಬಳೀ ಪರಿ ನಡೆನಡೆದು ನಡೆಗೆಟ್ಟು ನೆಮ್ಮಿದಳಾತ್ಮವಲ್ಲಭನ (ತೊರವೆ. ೨-೪-೧೭) ; ಆರು ಕರುಣಿಸುವವರು ನಡೆಗೆಟ್ಟಡವಿಯಲಿ ಬೀಳೆ (ತಿಭಾಗ. ೩-೧೪-೧೨) ; ಜಡೆಗನ ತಪಗೇಡಿಯ ಸೂನು ತನ್ನಯ ಪೊಡೆಯೊಳಗಿರಲು ಬಾಲಕನ ನಿಡಿದೋಳ ಮೊದಲ ಭೂಭಾರವ ನೆಲೆದಾಳ್ದ ನಡೆಗೆಟ್ಟು ಬಿಸುಸುಯ್ದಳು (ಮೋಹತ. ೦೭-೯) ; ೨. ಕ್ರಮಂ ತಪ್ಪು ; ರೀತಿ ತಪ್ಪು : ನಾವು . . . ವಿಂತಿಮೀರಿ ಅತಿರೇಕದಿಂದ ಸೊಕ್ಕಿನಿಂದ (Hubris) ನಡೆಯುತ್ತೇವೆ. ಹೀಗೆ ನಡೆಗೆಟ್ಟ ತಪ್ಪಿಗೆ ತಕ್ಕ ಶಿಕ್ಷೆ ನಮ್ಮನ್ನು ಬಡಿಯುತ್ತದೆ (ಬದ್ಧಶ್ರ. XXXV ಅಡಿಟ) ; ನಡೆಗೆಟ್ಟ ಕಟ್ಟಳೆಯೊಳೆ ಯುಚ್ಚು ಪೆರ್ಚಿನಿಂ ಸುಡುವ ನನ್ನಿಯನುಳಿಸೆ ತಿಳಿಯದೆಡೆಗೆಟ್ಟಂ (ಕಾಲೂರ. ೦೬೧-೩೫೭). ೩. (ಸಾಮಾನ್ಯವಾದ) ಆಚರಣೆಗೆ ಅಸಾಧ್ಯವಾಗು ; (ಸಾಧಾರಣವಾದ) ವ್ಯವಹಾರಕ್ಕೆ ಒಳಪಡದಿರು : ತಾ ನಡೆವಡೆ ನಡೆಗೆಟ್ಟ ನಡೆಯ ನಡೆಯಬೇಕು ತಾ ನುಡಿವಡೆ ನುಡಿಗೆಟ್ಟ ನುಡಿಯ ನುಡಿಯಬೇಕು (ಅವದಂ. ೯೯-೪೪೮). **ನಡೆಗಿಡು** : ೧. ನಡೆಗಿಡೆ ಗಾಳಿ ಪೊಱ ಗಗನಸ್ಥಳಿ ಕೆಕ್ಕನೆ ತೀವೆ ದಿಙ್ಮುಖಂ . . . ದೇವರುಂ ದಿವಿಜಕಾಂತೆಯರುಂ ಬೆಱಗಾಗೆ ಪೊಣೆಪೊಕ್ಕೊಡನೊಡನಾರ್ದರಬ್ಬೆಡೆಯ ಬಿಲ್ವಡೆ ಬೀಱದುದಸ್ತ್ರವಿದ್ಯೆಯುಂ (ಶಂರಾಮೂ. ೧೩-೪೪) ; ನಡೆಗಿಡೆ ಗಾಳಿ . . . ಘನಾಘನಂ ಕಱಯ ಪೆರ್ಮಱ ಕೊಂಡವು ಸರ್ವಸತ್ತ್ವಮೋಗಡಿಸೆ ತದಭ್ರ

ಕಾಲಮವನೀವಳಯಕ್ಕಶಿಬೋದ್ಯಮಪ್ಪನಂ (ಮಹಾಪು. ೭-೩೪) ; ನಡೆಗಿ [ಡಾಕಾಂ ಗೆ]ಡೆ ಚಿತ್ತಂ ಧೃತಿಲತೆ ಕುಡಿಗಿಡೆ ಮನಸಿಜ ವಿಕಾರತತಿ ಮಾನಸ್ತ ದೊಳ್ಪಡೆಗಿಡೆ . . . ವಿರಹವಿಹ್ವಳನಾದಂ (ವೃಷವಿ. ೮-೨೧) ; ಕಾಲಿಡಲ್ಕಾ ಶಿಲೆಯೊಳಾ ತುರಂಗದ ಖುರಂ ಕೀಲಿಸಿತು ಭಿನ್ನಿಸದೆ ಕೂಡೆ ಬೆಚ್ಚಂದದಿಂ ಮೇಲೆ ನಡೆಗೆಟ್ಟು ನಿಂದುದು (ಜೈಮಿಭಾ. ೧೦-೧೦). [ ನಡೆ$_2$ + ಕೆಡು$_1$ ]

**ನಡೆಗೇಡು** (ನಾ). ನಡಗೆಗೆ ಒದಗುವ ಅಡ್ಡಿ,-ತೊಂದರೆ : ಕಲಕೊಜಗಿರ್ದ ಬಲ್ವರವಿಯುಂ ಬಲಗೈ ಜಡಿದೊಪ್ಪ ತೂಗೆ ನೀಳ್ದಲೆದೆಡಗೈಯೊಳಾವರೆಯು ಪಂದಳಿರ್ಗಳ್ನಡೆಗೇಡು ಮಾಡೆ . . . ಒಪ್ಪಿದರ್ ಕಲಬಲದೂರ್ಗೆ ಪೋಗಿಯಳೆ ಮಾಜಿ ಮಗುಬ್ಬಿರುತಿರ್ಪ ಗೋಪಿಯರ್ (ಲೀಲಾವ. ೫-೧೦೦).

[ ನಡೆ$_2$ + ಕೇಡು ]

**ನಡೆಗೊಳ್**, ನಡೆಗೊಳು (ಕ್ರಿ). ೧. ಚಲಿಸು ; ಹೋಗು ; ಸಾಗು ; ತೆರಳು : ಆಗಳಶ್ವತ್ಥಾಮನುಂ ಕೃಪನುಂ ಸಿಗ್ಗಾಗಿ ಹಿಮವತ್ಪರ್ವತಕ್ಕೆ ನಡೆಗೊಂಡರ್ (ಪಂಪಭಾ. ೧೩-೧೦೭ವ) ; ನಡೆಗೊಂಡತ್ತು ಮದೇಭದಾನ ಜಲಧಾರಾಸಾರದಿಂ ಮಾರ್ಗತಂ ನಡೆಗೆಟ್ಟೆರ್ಗನಂ. . .ರಘುತನೂಜಾಖರ್ವ ಚಾತುರ್ಬಲಂ (ಪಂರಾಮಾ. ೧೨-೩೨) ; ಒಡನೆಯ್ದಿದವಲರ್ಗಣ್ಗಳ್ ಬಿಡದೆ ಮನಂ ಪೋಯ್ತು ಮನದ ಪಿಂತನೆ ಧೈರ್ಯಂ ನಡೆಗೊಂಡುದು ಧೈರ್ಯದ ಬೆಂಬಿಡದೊರ್ವಳ ಜೀವವಿರದೆ ಪೋದತ್ತಾಗಳ್ (ಜಗವಿ. ೫-೯೯). ೨. ನಡೆ ಯಲು ಸಮರ್ಥವಾಗು ; ಗತಿಯನ್ನು ಪಡೆ : ಆಗಳಾಗಳೆ ಪೆಳವಂ ನಡೆಗೊಂಡಾತುಂ ಕುರುಡಂ ಕಣ್ಬಡೆದಂತುಂ ಪಂಡಂ ಪುರುಷನಾದಂತುಂ ಪೆರ್ಚಿದೊಂದು ಸಂತಸದಿಂ . . .ಕರ್ವಟ್ಟಮನೇಱಿ ಪೋದರ್ (ರಾಮಾಶ್ವ. ೮೨-೧೨). ೩. ಹೊರಡು ; ಹೊರಬೀಳು : ಪಡೆಯುಂ ನಡೆಯಲ್ಕೆ ಬೇಱೆ ಭೋರೆಂದು ಗಭೀರನಾದದಿನದೇಂ ನಡೆಗೊಂಡುದೊ ಚಕ್ರವರ್ತಿಯಾ (ಶಾಂತಿಪು. ೧೧-೪೬) ; ಅಂತು ನಡೆಗೊಂಡು ಕುಂಡಿನೀಪುರಾಭಿಮುಖನಾಗಿ ಪೋಗುತ್ತುಮಾತ್ಮಗತದೊಳ್ ಗರುತ್ಮನನಾಮಂತ್ರಣಂಗೆಯ್ದು (ಜಗವಿ. ೮-೭೯ವ). ೪. ಬಿಟ್ಟುಹೋಗು ; ತೊಲಗು ; ದೂರಸರಿ : ನಾಣ್ ನುಣ್ಚ ಸೋಲದೊದವಿಂ ಕಣ್ ನಸುಮುಗುಳ್ದಸೆಯೆ ನಸೆಯನೆಸಗುವ ಪಲವುಂ ನುಣ್‌ನುಡಿ ಪಸರಿಸೆ ಮನದಿಂ ಜಾಣ್ ನಡೆಗೊಳೆ ತೊಡರ್ದರಿನಿಯಕೂಟ ದೊಳಿನಿಯರ್ (ಚಂದ್ರಪು. ೮-೭೯). ೫. ಮೇಲೆ ನುಗ್ಗು ; ಆಕ್ರಮಣ ನಡೆಸು : ಬಲದಲ್ಮಹೇಶ್ವರನನ್ನರುಮಾಯುದಲ್ವಿಷ್ಣುವಿನನ್ನರ್ವಿಜ್ಞಾನದಲ್ ಬ್ರಹ್ಮನನ್ನಯ್ಯರ್ಗಮು ವರುಣ ವಾಯುವ ಚೇರ ಚೋಳ ಪಾಣ್ಡ್ಯರ್ಕಳನ್ನಡೆ ಗೊಂಡು ಕನ್ನರದೇವನ ಕರುಮಾಂ (ಎಕ. IV, ಹೆಗ್ಗಡ. ೧೭-೧೫ ; 1033). **ನಡೆಗೊಳು** : ೧. ಪೊಳೆವ ಬೆಳ್ಗೊಡೆ ಚಾಮರಂ. . .ಮುಂತಾದ ಸಕಲವಿನಿಯೋಗಸಹಿತಂ ಸೌಂದರಾಧೀಶನು ಒಲಿದು ತಿರುವಾರೂರ್ಗೆ ನಡೆಗೊಂಡ (ಸೌಂದರಪು. ೫-೩೪) ; ಜೋಡಿಸಿದ ಕರಿತುರಗರಥಮೆಡೆಯಾಡಿದವು ಗುಡಿಮಂಡವಿಗೆಗಳ ಹೂಡಿದೆತ್ತಿನ ಬಂಡಿಗಳು ನಡೆಗೊಂಡವಗಲದಲಿ (ತೊರರಾ. ೨-೬-೯) ; ರಾಜಮರಾಳ ಮತ್ತೇಭಸಂಕುಲಕೆ ಸರೋಜಪಾಂಘ್ರಿ ಯುಗದ ಸದ್ಗತಿಯು ಮಾಜದೆ ಮನಗೊಳಿಸುವವೊಲು ನಡೆಗೊಂಡುದಾ ಜಾಣೆಯು ಸಖೀನಿವಹ (ಮೋಹತ. ೪೧-೩೬) ; ಎಣ್ದೆಸೆಯು ಮೆಟ್ಟಿದುದು ಸಕಲ ವಾದ್ಯಂಗಳ ನಿನದಮುಳ್ಳಿವಟ್ಟರಚ್ಚರಿಯುರುತ್ಸವವನೀಕ್ಷಿಸಲೆಂದು ಪುರಜನಂ ನಡೆಗೊಂಡುದು (ಚಬಪು. ೬-೫೨) ; ಶರಣ್ಗೊಂಡು ಮುನಿಪ ಅತ್ತ ನಡೆಗೊಳಲಿತ್ತ ದನುಜೇಂದ್ರ ತನ್ನನದಿ ಚಿತ್ರಭವನುದಿಪ ದಿನಮುಂ ಶಂಕಿ ಸುತ್ತಿರಲು (ನವಮೋ. ೧೧-೦೯). [ ನಡೆ$_2$ + ಕೊಳ್$_1$ ]

**ನಡೆಗೊಳಿಸು**(ಕ್ರಿ). ೧. ನಡೆಯುವಂತೆ ಮಾಡು ; ನಡೆಸು : ವಸುರ್ವಲ್ಲಂ ಮೇವುತಿರ್ದ ಪೊಸವಣಿತಿಷಲ್ಲೆ . . . ಪಟ್ಟಿರ್ದ ಕೊಣಸುಪಂ ಬಿಟ್ಟು ಬರಲಾಜದೆ . . . ತೊರೆದ ಮೊಲೆಯುಂ ಸಾರ್ಚಿ ತಣಯೂಡದೆ ನಡೆ ಗೊಳಿಸಿ ತವಕದಿಂ ಬರುತ್ತುಂ (ಪುಷ್ಪಪು. ೩-೭೭ವ). ೨. ಹೋಗುವಂತೆ ಮಾಡು; ತಳ್ಳು; ಅಟ್ಟು: ಭೂವನ ಸೈನ್ಯಸಾಗರವ ಸಂದಿಸಿಯೆ ನಿಮಿಷಾ ರ್ಧದಲಿ ಯಮಮಂದಿರಕೆ ನಡೆಗೊಳಿಸಿ ಮುಖಜರ ಮಂದಿಗಿತ್ತನು ಸಕಲ ಭೂಮಿಯು ಜಾಮದಗ್ನಿಕನು (ಸಂಭಪ. ೨೬-೪೭) ; ರಿಪುಪರಿವಾರವನು ನಡೆಗೊಳಿಸಿದನು ಯಮರಾಜನಾಲಯಕೆ (ಕುವ್ಯಾದಶ್ರೀ. ೫-೧೦).

[ ನಡೆಗೊಳ್ + – ಇಸು$_3$ ]

**ನಡೆಗೊಳು** 'ನಡೆಗೊಳ್' ನೋ.

**ನಡೆಗೊಳ್ಳಿ** (ನಾ). ನಡೆದಾಡುವ ಕೊಳ್ಳಿ ; ಚಲಿಸುವ ಕೊಳ್ಳಿ : ಅಡ ಪೊತ್ತುವ ಬೇಸಗೆಯೊಳ್ ಪಡೆವಣ ಬಿಡೆ ಕಾಯ್ದು ನೆತ್ತಿ ಧಟಧಟಲೆನುತುಂ ನಡೆಗೊಳ್ಳಿಯಂತೆ ನಡೆದುದು ಗಿಡುಗಳ ನೆಟಲಾಸೆಗಹಿಪನಸುವಿಡುತುಸಿರು (ಸೂಕ್ತಿಸು. ೧೦-೧೧೦). [ ನಡೆ$_1$ + ಕೊಳ್ಳಿ$_1$ ]

**ನಡೆಗೋಂಟೆ**, ನಡೆಗೋಟೆ (ನಾ). ೧. ಯುದ್ಧದಲ್ಲಿ ಶತ್ರುಗಳಿಂದ ರಕ್ಷಿಸಿಕೊಳ್ಳಲು ಉಪಯೋಗಿಸುವ (ಸೈನ್ಯದಿಂದ ರಚಿಸಿರುವ) ರಕ್ಷಣೆಯ ವ್ಯೂಹ : "ಜಂಗಮಃ 'ಪ್ರಾಕಾರಃ – ನಡೆಗೋಂಟೆ" (ನೀತಿವಾ. ೨೦-೭) ; ಸಂಗರಭೂಮಿಯೊಳೊಡ್ಡಿ ನಿಂದದ್ದಮಾಗಿ ಬಗ್ಗಿಸಿ ಮೊಗ್ಗರಿ ಸುತ್ತೊಗ್ಗಗೆಡದೆ ನಡೆಗೋಂಟೆಯಂತೆ ನೆಲವೆರ್ಚಿ ನಿಂದು (ಗಿರಿಕ. ೬-೫೫ವ) ; ಕಟ್ಟಿದಲಗಿನ ಕನ್ನಡಿಯು ತೊಲಗದ ಕಂಬದ ವೀರಘಂಟೆಯು ನಡೆಗೋಂಟೆಯು ಡಾಯಿಲದ ಪೊಂಬಟ್ಟೆಯು . . . ಬೆಳಗುಗಳ್ ಮಾರ್ತಂಡಂಗೆ ಮಾಪೂರ್ ಳೆಯು (ಮಹಾನೀ. ೧೨-೦೯ವ); ಬಿಡದೆ ನಡೆಗೋಂಟೆಗಳ ಮೊಗ್ಗರಂ ನೂಂಕಿ ದವು ಪುರದ ಪೊಱಬುಳಿಸಿನೊಳ್ ಪಡಿಯಟ್ಟಣೆಗಳೆದ್ದುವು (ಚಲಪು. ೪೨-೨೪). ೨. ರಕ್ಷಣೆಯ ಸಾಧನ : ಮಂಟಪದೊಳು ಸುತ್ತಿ ಸುಳಿದರೊಲ್ಮೆಯು ನಡೆಗೋಂಟೆಯೊಯೆಂಬ ರೀತಿಯೊಳು (ಭರತ. ೧೩-೭೯). **ನಡೆಗೋಟೆ** : ೧. ತಾಟಿಸಿದರೊಡನೊಡನೆ ಕುಲಗಿರಿ ದೂಟ ಬಿದ್ದವು ಚಿತ್ರದಲಿ ನಡೆಗೋಟೆ ಯೆನೆ ಮಂಡಳಿಸಿ ಬಲಿದರು ತೆಕ್ಕೆವರಿಗೆಗಳ (ಕುಪ್ಯಾಭೀ. ೪-೨೫) ; ಈ 'ನಡೆಗೋಟೆ'ಗಳು 'ತಳಿ' 'ಮುಳುವೇಲಿ'ಗಳಂತೆ ಪಾಳೆಯದ ಸಂರಕ್ಷಣೆ ಗಾಗಿಯೂ ಇದ್ದಿರಬಹುದು (ಕರ್ನಾಜ. ೨೯).

**ನಡೆಗೋಂಟೆಮಲ್ಲ**, **ನಡೆಗೋಟೆಮಲ್ಲ** = ನಡೆಗೋಟೆಯಂತೆ ರಕ್ಷಿಸುವ ವನು; ಏಕಾಂಗವೀರ; ಮಹಾ ಪರಾಕ್ರಮಿ; ಒಂದು ಬಿರುದು: ಮಾಱ್ಬಲಕ್ಕೆ ನಿಜಸೇನೆಗೆ ವಜ್ರದ ಕೋಂಟೆಯಾಗಿ ತೋಱುಗು ನಡೆಗೋಂಟೆ ಮಲ್ಲನ ಭುಜಾಬಳಮೀ ಅವನೀತಳಾಗ್ರದೊಳೂ (ಎಕ XI, ಚಿತ್ರದು. ೨-೦೬; 1355) ; ಸುಭಟರಾಚಾರ್ಯ (೦) ಸತ್ಯರತ್ನಾಕರಂ ನಡೆಗೋಟೆಮಲ್ಲಂ ಗ (೦) ಣ್ಡರಗೋಪಂ ಮಣ್ಡಳೀಕ ನಾರಾಯಣಂ (ಸಾಇಇ. XI-1. ೫೭-೨೦ ; 1019) ; ಶ್ರೀಮತು ಮಹಾಮಂಡಳೇಶ್ವರಂ ಉಭಯದ[ಳ]ಪಿತಾಮಹ ನಡೆಗೋಟೆ ಮಲ್ಲ ಸೆಟ್ಟಿ ಸಾ[ಹಸ]ಧೀಮ ಗುಂಡರಸನು ತಂನಾಳ್ಕೆಯೊಳು ಕಾ[ಳ್ದ] ಗೆಯಲ್ಲಿ ಕೊಟ್ಟ ಮ ೧೨ ಮನೆ ೧ (ಸಾಇಇ. XX. ೨೨೭-೨೪ ; 1306).

[ ನಡೆ$_1$ + ಕೋಂಟೆ ]

**ನಡೆಗೋಟೆ** 'ನಡೆಗೋಂಟೆ' ನೋ.

**ನಡೆಗೋಟೆಕಾಱ** (ನಾ). ಸೈನ್ಯದಿಂದ ರಚಿಸಿರುವ ರಕ್ಷಣೆಯ ವ್ಯೂಹದ ಲ್ಲಿರುವ ಮುಂದಾಳು,-ಪರಾಕ್ರಮಿ : ನಡೆಗೋಟೆಕಾಱರು ಕೆಣಕಿದರು ಕಪಿರಾಜಸೈನಿಕವ (ತೊರರಾ. ೬ ೩೩-೨).

[ ನಡೆಗೋಟೆ (<ನಡೆಗೋಂಟೆ) + – ಕಾಱ ]

**ನಡೆಗೋಲು**, ನಡೆಕೋಲು (ನಾ). ನಡೆಯುವಾಗ ಊರಿಕೊಳ್ಳಲು ಹಿಡಿದುಕೊಳ್ಳುವ ಕೋಲು; ಊರುಗೋಲು ; ಬೆತ್ತ : ಆ ವ್ಯಕ್ತಿ ಮಿರುಮಿರನೆ ಮಿಂಚುತ್ತಿದ್ದ ಹಿಡಿಕೆಯನ್ನುಳ್ಳ ನಡೆಗೋಲನ್ನು . . . ನೆಲದ ಮೇಲೂರುತ್ತ ಹಳ್ಳಿಯ ಬೀದಿಯಲ್ಲಿ ನಡೆದು ಬರುತ್ತಿದ್ದನು (ಪುನರು. ೨೭೬); ಕಡೆಗೆ ಬಾದೇ ಬಂದ ಒಬ್ಬ ಮುದುಕ, ನಡೆಗೋಲು ಅವನೆತ್ತರ (ಶಿಲಾಂ. ೮೭-೧೭). ಏ, ನನ್ನ ನಡೆಗೋಲು ಎಲ್ಲಿ ? (ಉದಮ್ಮ. ೫೯). **ನಡೆಕೋಲು** :

ವ್ಯಾಸಸ್ಫೂರ್ತಿಗೆ ನಡೆಕೋಲಾದನೆ ಮರುಳ್ಗಳ ಪುರುಳೇ ಎಡರಾಳುವನೇ ಎ ಬನದಕ ನನ್ನೆದೆಗೈತಂದ (ಗದೀಶ. ೨-೪೭).

[ ನಡೆ$_1$ + ಕೋಲು$_1$ (<ಕೋಲ್$_1$) ]

ನಡೆಗೋಳ (ನಾ). (ಅಲಂ) (ಆತ್ಮನಿಗೆ) ನಡೆದಾಡುವ ಬಂಧನ: ದೇಹ : ಕೂಳು ನೀರನ್ನು ಕೊಂಡು ತನುವಿದು ಮೇಲೆಮೇಲುಬ್ಬುಂಕಿ ಬೆಳೆವುದು . . . ಬೀಳುವುದು ಕೂಡದಿರ್ದಡೀ ನಡೆಗೋಳದಲ್ಲಿ ನಾ ಸಿಲುಕಿ ಬಳಲದೇ ಬೇಸರುಗೊಳ್ಳದಿರು (ನಿಥಾಗ. ೯-೧೪-೦೨). [ ನಡೆ$_1$ + ಕೋಳ$_1$ ]

ನಡೆಗೌಡ (ನಾ). (?) : ಮುನಿಭದ್ರಗೌಡರ ಮಕ್ಕಳು . . . ರೇಗರೇವಂತ ನಡೆಗೌಡ ಸುರಿತಂಣ ಹಿರಿಯತಮ್ಮಗೌಡರು ಮುಖ್ಯವಾದ ಆತನ ಅನುಜ ವರ್ಗ್ಯಯನು (ಎಕ. VII, ಶಿವಮೊ. ೧೦೪-೧೫ ; ೮೮೦ ?).

[ P ಇದು 'ನಾಡಗೌಡ' ಎಂಬುದರ ಅಪಲಿಖಿತವಿರಬಹುದೆ ? ]

ನಡೆಚಪ್ಪರ (ನಾ). ೧. ದ್ವಾರಿಯುದ್ದಕ್ಕೂ ಹಾಕಿರುವ ಚಪ್ಪರ : ಅಂಬರ ಸ್ಥಳಮ ಮುಸುಕಿದಾಡಂಬರದ ನಡೆಚಪ್ಪರಂಗಳು ಬಿಂಬಿಸುವ ಧವಳಾತ ಪತ್ರವು ಚಾಮರಾದಿಗಳು (ಬಸವು. ೬-೨೨). ೨. ಕೆಲವು ವಿಶೇಷ ಸಂದರ್ಭಗಳಲ್ಲಿ, ಮರ್ಯಾದೆಗಾಗಿ ಜನರು ಹಿಡಿದು ತರುವ ನಾಲ್ಕು ಕೋಲುಗಳುಳ್ಳ ಚಪ್ಪರದಾಕಾರದ ವಿತಾನ; ಸಿಂಧೂವ : ನೃಪತಿಲಕರ ಪಲವು ಕೊಡೆಯಾಗಸವುಂ ಮಂದಲಿಸುತ್ತಂ ನಡೆತರೆ ನನೆವಿಲ್ಲಂ ರಿಪುದುರ್ಗಕೆ ನಡೆಯಂಪ ಗಡಣದ ನಡೆಚಪ್ಪರಮೆಸಲೆಸಕವಡೆದುದಾಗ (ಜಯಸ್. ೮-೩೭); ಪಟ್ಟಾವಳಿಯ ನಡೆಚಪ್ಪರದ . . . ಚಾಮರದ ಘನಸಂಕುಳದಲಿಪನಿಯನಂ ಬರವನಡಗಲಸಿ ನಡೆದುದು ಕೂಡೆ ಯಮುನಾನದಿಗೆ ಜನನಿವಹ (ನಿಥಾಗ. ೧೦-೧೧೧-೧೧) ; ರಾಜಮರ್ಯಾದೆಗಳಾದ ರಾಜದಂಡ ಛತ್ರಿ ಚಾಮರ . . . ನಡೆಚಪ್ಪರ-ಇತ್ಯಾದಿ ಬಿರುದುಗಳು ಬಂದ ಮೇಲೆ . . . ಅತ್ಯಂತ ಗೌರವದಿಂದ ಕಳೆದುಕೊಂಡು ಬರುತ್ತಾನೆ (ತಾಂಗಳ. ೭೦). ೩. ಯುದ್ಧ ಕಾಲದಲ್ಲಿ ಉಪಯೋಗಿಸುತ್ತಿದ್ದ ಒಂದು ಬಗೆಯ ರಕ್ಷಣೆಯ ಸಾಧನ: ಡೆಂಕಣಿಗಳಂ ಮೇಳೈಸಿ ನಡೆಚಪ್ಪರವನ್ನು ನಡೆಯಿಸಿ . . . ದೂಳಿಗೋಂಟೆಯ ಕೊಳ್ಳಬೇಕೆಂಬ ವಡಿಯಚರ ಕಳಕಲಂ ಕರವೊಪ್ಪಿತು (ಹಮ್ಮೀರ. ೮-೩೦) ; ನಡೆಚಪ್ಪರದ ಮರ ಬದ್ದರ ಡೆಂಕಣೆ ಸುಡುವ ಪೆಟಲು ಕೋಟೆಯನು ಕೆಡವುವ ಡಗ್ಗ ಹತ್ತುವ ನಿಚ್ಚಣಿಗೆಗಳಂದೊಡನೈದಿದ ವಸಂಪ್ರಾಪ್ತ (ಸುರಥಾಸಾಂ. ೩೭-೬೭). [ ನಡೆ$_1$ + ಚಪ್ಪರ ]

ನಡೆಜಂತ್ರ (ನಾ). ಚಲಿಸುವ ಯಂತ್ರ; ನಡೆದಾಡುವ ಯಂತ್ರ : ಆದತ್ಮ ವಿರಹದೊಳಮರ್ಕ್ಷೀದತವುಂ ಪೆರ್ಪುವಂತ ಜಗಮುಂ ಜೀವಂ ಪೋದೊಡ ಮುದಂಗರುಚಿ ಬೀಜಿಾದುದು ನಡೆಜಂತ್ರವುಮಲ್ತೆ ನರರ ಶರೀರಂ (ಚಾಂತಿಪು. ೬-೯೭) ; ಕುಸುಮಾವಳಿದೇವಿ ಬರುತ್ತುಮಿರ್ದಳಾ ಮನಸಿಜನಾಡಿಪೊಂದು ನಡೆಜಂತ್ರದ ಪುತ್ರಿಕೆಯೆಂಬ ಭಂಗಿಯಿಂ (ಕುಸುಮಾ. ೧೨-೦೨೫).

[ ನಡೆ$_1$ + ಜಂತ್ರ ]

ನಡೆಜಾಣ (ನಾ). ನಡವಳಿಕೆಯನ್ನು ಚೆನ್ನಾಗಿ ತಿಳಿದವನು ; ರೀತಿನೀತಿಗಳನ್ನು ಬಲ್ಲವನು : ನುಡಿಜಾಣ ನಡೆಜಾಣ ನೆಲೆಜಾಣ ಕಡುಜಾಣ ಜಗಕೆ ಸುಜಾಣ ಎಡೆಬಿಡದೆನ್ನಂತರಂಗದೊಳಿರು ಜಾಣರೊಡೆಯ ಚಿದಂಬರ ಪುರುಷಾ (ಭರತ. ೭-೬೬). 'ನುಡಿಜಾಣ' ಪರ್ಯಾ. [ ನಡೆ$_2$ + ಜಾಣ ]

ನಡೆಜಾಣ್ಮೆ (ನಾ). ವ್ಯವಹಾರದಲ್ಲಿ ಜಾಣತನ,-ಬುದ್ಧಿವಂತಿಕೆ : ನುಡಿ ಜಾಣ್ಮೆ ನಡೆಜಾಣ್ಮೆ ನನಗೂ ದೇವರಿಗೂ ಸಂಗಡದ ಭೂಪರು ಮೇಳ ಲೆಂದ (ಭರತ. ೫೯-೧೦೭). 'ನುಡಿಜಾಣ್ಮೆ' ಪರ್ಯಾ.

[ ನಡೆ$_2$ + ಜಾಣ್ಮೆ ]

ನಡೆಜೋಡು (ನಾ). ನಡಿಗೆಗೆ ಹೊಂದಿಕೊಳ್ಳುವ ಜೋಡಿ,-ಜೊತೆ : ಕೂಡೆ ಸಂಜಯನಟಿಸಿದನು ನಡೆಜೋಡಿನವು [ಪಾಠಾಂ. ವಯಪಾಡಿನಲಿ] ವಾನೂಚು ಕುದುರೆಯ ಕೂಡಿ ಕೌರವವ್ರಪನ ಕಾಣದೆ ಕಳವ ಚೌಕದಲಿ (ಕುಮ್ವ್ಯಾಗ. ೨-೩). [ ನಡೆ$_2$ + ಜೋಡು ]

ನಡೆಡೆಂಕಣೆ (ನಾ). ಕೋಟೆಯ ಬುರುಜಿನ ಮೇಲೆ ಚಲಿಸುವಂತೆ ಏರ್ಪಡಿಸಿರುವ ಒಂದು ಬಗೆಯ ಆಯುಧ ; ಚಲಿಸುವ ಡೆಂಕಣಿ : ನಡೆಡೆಂಕಣಿ ಸೂಸುಡೆಂಕಣಿ ಬಲುಗುಂಡನಿಡುವ ಡೆಂಕಣಿ ತೋಟಿದೆಡೆಗೆ ಸಿಡಿವ ಡೆಂಕಣಿ ರಾಯಡೆಂಕಣೆಗಳ ಸಾಲು ಬಿಡದೊಪ್ಪಿದವು ದುರ್ಗದೊಳು (ಸುರಥಾಸಾಂ. ೪೩-೩೯). 'ಡೆಂಕಣಿ' ಪರ್ಯಾ. [ ನಡೆ$_1$ + ಡೆಂಕಣಿ ]

ನಡೆತ (ನಾ). ನಡೆಯುವಿಕೆ ; ನಡಿಗೆ. [ ನಡೆ$_1$ + -ತ$_2$ ]

ನಡೆತರ್, ನಡೆತರು (ಕ್ರಿ). ಬರು ; ಆಗಮಿಸು : ಕೆಯ್ಯೊಳ್ಕ್ಕಾದಲ್ ನಡೆತರ್ಪಾರ್ವೇಗದೊಳ್ ಮುಮ್ಮುಟಿಸಿದ ಪಲವುಂ ರಾಜಚಿಹ್ನಂಗಳಂ ಬೆಳ್ಗೊಡೆಗಳ್ ತಳ್ಪೊಯ್ದುದೇಂ ಕಣ್ಗೊಳಿಸಿದುದೊ ಚಳಚ್ಚಂದ್ರಕಚ್ಛತ್ರ ಪಿಂದಂ (ಪಂಪಭಾ. ೧೩-೩೮) ; ಚೆಲ್ವನಾಳ್ದು ಮೆಲ್ಲನೆ ನಡೆತರ್ಪ ನೀಲಮಣಿ ಪುತ್ರಿಕೆಯಂದದಿನಾದಮೊಪ್ಪಿದರ್ (ಕಾದಂಪೂ. ೩೮): ಸಾಯಂಕಾಲ ಶೃಂಗಾರಸಮಯಮೆಂದು ಮಧುರಾಪುರಾಧೀಶ್ವರಸಲ್ಲಿಗೆ ಪೋಪ ಬಗೆಯಿಂ ಕುಬ್ಜೆಯೆಂಬ ಸೈರಂಧ್ರಿ ನಡೆತರೆ (ಜಗವಿ. ೭-೧೫೭) ; ಉರವಣಿಸಿ ನಡೆತರುತ್ತುಂ ಗಿರಿಶಿಖರಮನೇಜಲಾಜದರಡುಂ ದೆಸೆಯೊಳ್ ಬರಲನುವಂ ಕಂಡು ದಿವಾಕರನಂದಿ ದಕ್ಷಿಣೋತ್ತರಾಯಣನಾದಂ (ಗಿರಿಶ. ೧-೫೩) ; ಕಡುಸೊರ್ಕಿಂದಲದಬುಬನಾನೆಯೆನಿಪೀ ತಂಗಾಳಿ ತನ್ನಿಚ್ಚೆಯಿಂ ನಡೆತಂದಪ್ಪುದು ಬೇಗದಿಂ ಬಿರಿಯಿ ನೀಂ ಪೋ ಪೋಗು (ಕಬ್ಬಿಗಕಾ. ೫೫). ನಡೆತರು : ಕಪ್ಪಡಿಯ ಸಂಗಮವುಂ ಪೊಕ್ಕು ಕೇರಿ ಕೇರಿಯೊಳು ನಡೆತಪ್ಪಾಗಳು ಶಂಕರಾಲಯಮುಂ ಭೋಂಕನೆ ಕಂಡು (ಬಸರ. ೨-೫೦) ; ಆ ಸಮಯದಲ್ಲಿ ರಾಯವೇದವ್ಯಾಸಮುನಿ ನಡೆತಂದು ಗತಪರಿತೋಷನನು ಸಂತೈಸಿ ಕರಸಿದನಂದು ಸಂಜಯನ (ಕುಮ್ವ್ಯಾಗೀ. ೧-೫೫) ; ತೆಗೆದ ತೊಟಿ ಕಾಲುವೆಗಳುದ್ಯಾನಗಳ ಕಳವೆ ದ್ರಾಕ್ಷೆ ಧವಳೇಕ್ಷುಗಳ ವನವೀಧಿಗಳನೀಕ್ಷಿಸುತರಸ ನಡೆತಂದ [ಪಾಠಾಂ. ನೈತಂದ] (ತೊರರಾ. ೧-೬-೧೦) ; ಸತಿಯರ ಗಡಣದಲಿ ನಡೆತಂದಳಿಂದುಮುಖಿ (ನಳಚ. ೩-೫೫) ; ಪಿರಿಪಿರಿ ಪಾತ್ರವೆಂಗಳು ಸಿಂಗರಿಸಿಯ ಹರುಷದೊಳಗೆ ನಡೆತಂದು (ಕಂಸವಿ. ೭-೦೦೭).

[ ನಡೆ$_1$ + ತರ್ ]

ನಡೆತರು 'ನಡೆತರ್' ನೋ.

ನಡೆತೋರಣ 'ನಡೆದೋರಣ' ನೋ.

ನಡೆದಾಣ (ನಾ). ನಡೆದಾಡುವ ಸ್ಥಳ ; ಓಡಾಡುವ ಜಾಗ ; ದಾರಿ : ಪೊಂಬೆಟ್ಟಂ ಪೊಂಬಸಿರಂಗಿಂಬುವಸದಿಯುಮುಲರ್ಪೊಡೆಯಂಗೆ ನಡೆದಣಾಮುಂ . . . ಬೋಟಿಯರ್ಗೆ ಮೇಳದೆಡೆಯುಮೆನಿಸಿ ಕಣ್ಗೊಳಿಕುಂ (ರಾಮಾಶ್ವ. ೬-೫). [ ನಡೆ$_1$ + ತಾಣ ]

ನಡೆದಾರಿ (ನಾ). ನಡೆದಾಡುವ ದಾರಿ ; ಓಡಾಡುವ ಮಾರ್ಗ : ಆಚೀಚೆ ಹುಡುಕುತ್ತ ಜಾನೂ ಅಮ್ಮನ ಕೋಣೆಯ ಪಾರ್ಶ್ವಭಾಗದ ಇಕ್ಕಟ್ಟಾದೊಂದು ನಡೆದಾರಿಯನ್ನು ಸೇರಿದನು (ಕಾಲಭೂ. ೨೫) ; ತೋಟಗಳು ಸಾಮಾನ್ಯವಾಗಿ ಚೌಕ ಇಲ್ಲ. ನಿಡುಚೌಕ ಇದ್ದು . . . ಒಳಗೆ ತಿರುಗಾಡಲು ನಡೆದಾರಿಗಳು ಇದ್ದವು (ಇಸ್ಲಾಂಸಂ. ೦೮೯). [ ನಡೆ$_1$ + ದಾರಿ ]

ನಡೆದುಳಿ (ಕ್ರಿ). ದಾರಿಯನ್ನು ತುಳಿ; ದಾರಿ ಸವೆಸು : ಅಡಿಯ ನೆಲದೊಳ್ ಬಿಸಿಲ್ ಕಡೆಸಾಲ ಬರೆಯುತಿರೆ ನಡೆದುಳಿದು ನೆಲ್ಲೂರ ಮನೆಗೆ ನಡೆತಂದಂ (ಕಾಲಾಂಕರ. ೧೦೩-೩೩೦). [ ನಡೆ$_2$ + ತುಳಿ$_1$ ( < ತುಳಿ$_1$ ) ]

ನಡೆದೇಗುಲ (ನಾ). ಚಲಿಸುವ ದೇವಸ್ಥಾನ ; (ಒಂದೆಡೆ ಸ್ಥಿರವಾಗಿರದೆ) ಉತ್ಸವದಲ್ಲಿ ಎಳೆಯುವ ದೇವರ ವಿಗ್ರಹವಿರುವ ಮಂಟಪ, ತೇರು,-ರಥ : ಪಲರಂ ರಕ್ಷಿಸಿ ಮತ್ತಂ ಪಲವಂ ನಡೆದೇಗುಲಂಗಳಂ ಮಾಡಿಸಿದಂ ನೆಲನಲ್ಲಿವರುಚಿಯ ಚಟ್ಟಂ ನೆಲದೇಗುಲಮುಮನಿದೊಂದನೊಪ್ಪೆ ಕ್ಕಿಸಿದು (ಎಕ. V, ಬೇಲೂರು. ೧೯೩-೯೪ ; 1160). [ ನಡೆ$_1$ + ದೇಗುಲ ]

**ನಡೆದೋರಣ, ನಡೆತೋರಣ** (ನಾ). ಎರಡು ಕಡೆ ಹಿಡಿದಿರುವ ಕೋಲುಗಳ ತುದಿಗಳಿಗೆ ಕಟ್ಟಿ, ಉತ್ಸವಾದಿಗಳ ಮುಂದೆ ಹಿಡಿದುಕೊಂಡು ಹೋಗುವ ತೋರಣ; ಚಲಿಸುವ ತೋರಣ; ಮಕರ ತೋರಣ: ಸಿರಿವತ್ಸ ಕ ನ ಕ ದ ಂ ಡ ದ ಚಾಮರ ಸೀಗುರಿ ನಡೆದೋರಣನಿಚಯ ಪರುಠವಿಸಿರ್ದ ನಾನಾವಿಧ ಟೆಕ್ಕೆಯ ತರಕೆತು ನಭವನಳ್ಳಿಱಿದು (ಮೋಹಕ. ೧೫-೩೦). ನಡೆತೋರಣ: ನುಡಿವ ನಾನಾವಾದ್ಯಘೋಷಣೆ ಕಲಶ ಕನ್ನಡಿಯು ಪ್ಪುಗ ರಾಗರಚನೆ ಇಡಿಕಿಱಿದುದು ಸೆಟ್ಟಿಸವುಯರುಗಳ ಕೆಯ್ಯ ಗುಡಿ ನಡೆತೋರಣನಿಚಯ (ಮೋಹಕ. ೪೦-೩೮); ರಾಜವೀಧಿಯೊಳ್ಕಟ್ಟಿರ್ದ ಪತಾಕೆಗಳ ಸೂಸುವ ಸೀಗುರಿಗಳ ಬೀಸುವ ಚಾಮರಂಗಳ ಸೊಗಯಿಪ ಧವಳ ಪತ್ರಂಗಳ ನವರತ್ನದ-ನಡೆತೋರಣಂಗಳ . . . ಸಿರಿ ಕಂಗೊಳಿಸೆ (ವೃಷವಿ. ೩-೪೪ವ). [ ನಡೆ$_1$ + ತೋರಣ ]

**ನಡೆನಿಱಿಗೆ** (ನಾ). ಓಡಾಟದ ರೀತಿ,-ಸೊಗಸು; ನಡಗೆಯ ಸೊಬಗು: ನೆರೆವನೆಯಂ ಪೋವ ಬರ್ಪ ಜವ್ವನಿಗರ ನಡೆನಿಱಿಗೆಯುನಿಡಿಕಿಱಿದ ಪಂತಿಯಿಂ (ರಾಮಾಶ್ವ. ೨೩-೭). [ ನಡೆ$_2$ + ನಿಱಿಗೆ ]

**ನಡೆಪಾಡಿಸು** (ಕ್ರಿ). ನಡೆಪಾಡಿಸು; ನಡೆಯುವಂತೆ ಮಾಡು; ಚಲಿಸುವಂತೆ ಮಾಡು; ಓಡಾಡಿಸು: ಹಂಸಾವಳಿಯುಂ ನಡೆಪಾಡಿಸು ಕೋಕಿಳನಾದವುನಾಲಿಸುಸಿರದಿರ್ಪರೆ ಮದನಾ (ಗಿರಿಕ. ೮-೭೦); ವಾರುವಮಂ ನಡೆಪಾಡಿಸಲ್ಕೆ ನೋಡುವ ಮಱಿಗಳ್ಗೆ ಪಾಲನೆಱಿವುಜ್ಜುಗವಂ ತಳೆದಿರ್ಪ ನಾವಗಂ (ನೇಚಂ. ೬೪೯). [ ನಡೆಪಾಡು ( <ನಡಪಾಡು) + – ಇಸು$_3$ ]

**ನಡೆಪಾಡು** 'ನಡಪಾಡು' ನೋ.

**ನಡೆಪು$_1$** 'ನಡಪು$_1$' ನೋ.

**ನಡೆಪು$_2$** 'ನಡಪು$_2$' ನೋ.

**ನಡೆಬಾವಿ, ನಡಬಾವಿ, ನಡಭಾವಿ, ನಡೆಭಾವಿ** (ನಾ). ಇಳಿದು ನೀರು ತುಂಬಿಕೊಳ್ಳುವಂತೆ ಸೋಪಾನಗಳಿರುವ ಬಾವಿ,-ಮೆಟ್ಟಿಲುಗಳುಳ್ಳ ಬಾವಿ,-ಕೊಳ: ಪೊಸದುರ್ಗವಂ ಮಾಡಿಸಿ ಪಿರಿಯ ನಡೆ [ಪಾಠಾಂ. ಡ] ಬಾವಿಗಳನಗುಳಿಸಿದನದಱೊಳಗೆ (ಬಸವು. ೦೫-೦೦). ನಡಬಾವಿ: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. ನಡಭಾವಿ: ಅಮೃತರಸ ಪರಿಪೂರ್ಣವಾದಮೃತಸಂಜೀವಿನಿ ಎಂಬ ಹೆಸರುಳ್ಳ ಒಂದು ನಡಭಾವಿಯು ಉಂಟಾಗಬೇಕೆಂದು ದೇವರನ್ನು ಬೇಡಿ (ಕೃವಾಕ. ೩೪). ನಡೆಭಾವಿ: ನೂರು ಸೇದೋ ಭಾವಿ ಕಟ್ಟಿಸುವುದಕ್ಕಿಂತಲೂ ಒಂದು ನಡೆಭಾವಿ ಕಟ್ಟಿಸುವುದುತ್ತಮ (ಕೃವಾಳ. ೧೭೦).

[ ನಡೆ$_1$+ ಬಾವಿ. / ತಮಿ. ನಟ್ಟೆವಾವಿ, ನಟ್ಟೆವಾವಿ, ನಟಪಾವಿ; ತೆಲು. ನಡಬಾವಿ ]

**ನಡೆಬೆಡಗು** (ನಾ). ನಡಗೆಯ ಸೊಗಸಂ,-ಒಯ್ಯಾರ: ನಡೆಬೆಡಗೋ ನಿಲುಬಗೆಯೋ ನಗುವೊಗವೋ ತಹ ಸೊಗವೋ ಕನಸಿಗು ಇಂಥವ ಸುಳಿವೊಲ್ಲ (ಗೋಕುನಿ. ೦೫-೦೧). [ ನಡೆ$_2$ + ಬೆಡಗು ( <ಬೆಡಂಗು ) ]

**ನಡೆಭಾವಿ** 'ನಡೆಬಾವಿ' ನೋ.

**ನಡೆಮುಂದಸ** (ನಾ). ಚಲಿಸುವ ಪೆಟ್ಟಿಗೆ: ರಿಪುವೆಚ್ಚಱಿದಿಟ್ಟ ಕೈದುವೆನ್ನುದರ ದೊಳೆಯ್ದೆ ತಳ್ತಡಿದಿರಲ್ ಯುವರಾಜನ ಶ ಸ್ತ್ರ ಕೋ ೯ ಟಿ ಕೀವಿದ ನಡೆ ಮುಂದಸಂಬಿನೆಗಮಿರ್ಪನದೆಂದೊ ಮಹಾಜಿರಂಗದೊಳ್ (ಜಗವಿ. ೦೭-೮೭).

[ ನಡೆ$_1$ + ಮುಂದಸ ]

**ನಡೆಮಡಿ, ನಡೆಮುಡಿ** (ನಾ). ದೇವರ ಕಾರ್ಯ ಮುಂತಾದ ಶುಭ ಸಂದರ್ಭವಲ್ಲಿ ಉತ್ಸವಗಳು ನಡೆಯುವಾಗ ಉತ್ಸವದ ದಾರಿಯಲ್ಲಿ ಗೌರವಾರ್ಥವಾಗಿ ಹಾಸುವ ಮಡಿಯಾದ ವಸ್ತ್ರ,-ಬಟ್ಟೆ: ಹಡದಿ: ದೇವಾಂಗವೌಕ್ತಿಕದ ಸಜಿಗಿನ ಸೆರೆಯಂ ನಡೆಮಡಿಯ ಹಾಸಿ . . . ಧೂಪಾರತಿ ಘಂಟೆ ಸಹವಾಗಿ ಪ್ರಭುದೇವರ ಕರೆಯ ಬಹ ಸಂಭ್ರಮದಿಂದಿರುತ್ತಿರಲು (ಶೂನ್ಯಸಂ. ೯೯-೨೨); ನಡೆಮಡಿ ಗಂಧದಕ್ಷತೆ ಫಲಾವಳಿ ಪೂವಿನ ಮಾಲೆ ಮುತ್ತು ಕನ್ನಡಿ ಕಳಸಂ . . . ಚಾಮರಮುಂಬಿವೊಪ್ಪಮುಂ ಕುಡೆ ಜನದತ್ತೆಯೇಂ ನಡೆದಳೋ (ಅಭಗಸೀ. ೧-೮೮); ಆ ನಗೆಗ್ಗೂಳ ಕಡೆಯ ಬೆಳಂತಿಗೆವೆಳಗು ಹರಿದು ಮುಂಗುಡಿಯೊಳ್ ಪಸರಿಸಲೆಸೆದುದು ನಡೆಮಡಿಯಂ ಪಾಸಿದ ತೆಱದಿ (ಜಹುಕಾ. ೫-೩೭); ಕಟ್ಟಿದ ಗುಡಿ ತೋರಣ ನಡೆಮಡಿ ಮೇಲ್ಗಟ್ಟು ಮೌಕ್ತಿಕರಂಗವಲ್ಲಿಯಿಂ ಅಲಂಕೃತವಾದ ನಿಜಾಲಯದೊಳು . . . ಕುಳ್ಳಿರಿಸಿ (ರಾಂಕೀದ. ೯-೨೨); ನಡೆಮಡಿಗಳ ಪಾಸುತ್ತುಂ ಸಡಗರದಿಂ ಶೋಭನಂಗಳಂ ಪಾಡುತ್ತುಂ ಮುಡದಿಯರಿದಿರ್ಗೊಂಡರಲ್ಲಿ ವಿಶ್ವೇಶ್ವರನಂ (ವೀರವಿ ೯-೩೫); ನಡೆಮಡಿ ನಾಲ್ಕೆಂಟುವಾರ್ಕೈದಲಲ್ಲಲ್ಲಿಗೊಡನೆತ್ತುವಾರತಿ ಸೇಸೆ ಇಡುವ ನಿವಾಳಿ ಢಾಳಿಸುವ ಚಾಮರಗಳಿಂದಡಿಯಿಡಿಸಿದರು ಯೋಗಿಗಳ (ಭರತ. ೩-೮೦); ಸುರರಂ ಸಮಂತು ಪೊರೆದ ಭವಂಗೀ ಧರೆ ಪಾಸಿದ ನಡೆಮುಡಿಯೆನೆ ಕರಮೆಸೆದುದು ವಿಮಳಗುಣದಿನಾ ನದಿ ಪದಸಿಂ (ರಾಚಕೀ. ೨-೫); ಹರಿಹರದೇವರು ನಡೆದು ಬರುವ ಹಾದಿಯುದ್ದಕ್ಕೂ ನಡೆಮಡಿಯನ್ನು ಹಾಸಿ ಹೂವುಗಳನ್ನು ಚೆಲ್ಲುತ್ತಿರುವರು (ಕುಂಗಥ. ೭೦). ನಡೆಮುಡಿ: ಬಿಳಿಯ ಚಿತ್ರಿ ನಡೆಮುಡಿ ಕಲಶ ಕನ್ನಡಿಗಳು ಇಲ್ಲದ ಮೆರವಣಿಗೆಯೇ ಇಲ್ಲ (ಚದೀಪ. ೦೯೩); ಯಾವ ಮೋತೀಬಾಯಿಗಾಗಿ ರಾಜನು ಕೆಡೆಮುಡಿಯನ್ನು ಹಾಸುತ್ತಿದ್ದನೋ ಆವಳು ಪಾಪ, ಬೀದಿ ಬೀದಿ ಅಲೆಯುತ್ತಿದ್ದಾಳೆ (ಭಾರತಿ. ೦೦೫); ಊರಿನ ಅಗಸ "ನಡೆಮುಡಿ" ಹಾಸಿಕೊಂಡು (ದಾರಿಯುದ್ದಕ್ಕೂ ಬಟ್ಟೆ ಹಾಸಿಕೊಂಡು) ಅವರನ್ನು ನಡೆಸಿಕೊಂಡು ಬರುತ್ತಾನೆ (ಸರ್ವಮಂ. ೧೯೨). [ ನಡೆ$_1$ + ಮುಡಿ$_2$ ]

**ನಡೆಮಾಡ** (ನಾ). ಚಲಿಸುವಂತೆ ರಚಿಸಿರುವ ಒಂದು ಬಗೆಯ ಮನೆ; ವಿಮಾನ; ವ್ಯೋಮಯಾನ: "ನಡೆಮಾಡಮೆಂದುಂ ವಿಮಾನಂ" (ಕರಕಾ. ೨೮-೫೮೫); ನಡೆಮಾಡ [ಪಾಠಾಂ. ಡು] ಪಾಙೆನೆ ವ್ಯೋಮಯಾನನಾಮಂ (ಅಭಿಮಂ. ೦೦); "ನಡೆಮಾಡಮೆನೆ ಸುರವಿಮಾನಂ" (ಕಶಠ. ೫೨); ಗಜೇಂದ್ರಂ ತುರಂಗಂ ನಡೆಮಾಡಂ ದಣ್ಡನಾಥೋತ್ತಮಪದವಿ ಮಹಾತೂರ್ಯಮುಂಬಿಂತಿವಂತುಂ ಪಡೆದಂ ಚೆಲ್ವಿಂದೆ ವೀಸೊತ್ತರವಿದಿತಧರಾದೇವನಿಪ್ಪಪ್ರಭಾವಂ (ಎಇ. XIII. ೩೩೦-೦೩ : ೨೭೮); ಅವನಿ ಮುಂದೆ ಸಾಹಣೌಘದೊಳಗಿರಿಸುವ ಪಂಚಕಲ್ಯಾಣದ ಸೂಜೀಯಾನೆಗಳ್ಗಿದು ನಿಜಿಸಿದ ನಡೆಮಾಡಸಾಲೆಗಳೆಂದು (ಶಾಂತಿಪು. ೦೦-೦೪೭ವ); ನಡೆಮಾಡಂ ನಡೆಗೊಪ್ಪುವಶ್ವತತಿ ಚೆಂಬೊನ್ನಿಂದಣಂ ವಾಜಿಪರ್ವಿಡಿ ವೀರಾನೆ ಸುಖಾಸನಂ ತುಱುಗೆ ಬಂದರ್ಗಾಯಕರ್ವಾದಕರ್ (ಮಲ್ಲಿಪು. ೫-೭೭); ತನತು ವಿಚಿತ್ರ ಮಪ್ಪ ನಡೆಮಾಡದ ಗಾಡಿಯ ಸದ್ವಿಮಾನಮುಂ ತನತು ಸುರರಮ್ಯಹರ್ಮ್ಯದ ವಿಳಾಸದ ರುಂದ್ರಫಣೀಂದ್ರಗೇಹಮುಂ . . . ಇಂತು ಕನಸು ಪದಿನಾಱುಮನಂಬುಜವದನೆ ಕಂಡಳ್ (ಪುಷ್ಪಪು. ೯-೦೦೧); ನಡೆಮಾಡದೊಳಗಿರ್ದ ರಾತ್ರಿಂಚರನ್ನೋಡಿ ವಿಂಡಿದು ತಂತಮ್ಮ ಬಿಲ್ಗಳನ್ಸೆದೆ ಗರ್ಜಿಸುತೆ (ಕೀಪರಾ. ೧೪-೩೪); ಪಡೆವಳರೆಲ್ಲರ್ . . . ನಡೆಮಾಡಮನಡರ್ದು ಹಯಮನುಯ್ಯಲ್ ವರ್ಬಿಗನಂ ತಱುಬ ಆಬಿಪಡೆಯುಂ ಬಱಿಕೆಯ್ದು ಪವಣರಾಯನ ಕಟ್ಟಾಣತಿಯಂ ಪಾಱುತಿರ್ಪುದು (ರಾಮಾಶ್ವ. ೧೧೧-೦೭); ಆಕಾಶದೊಳಗಿಂದ ಅಥವಾ ಹವೆಯೊಳಗಿಂದ ಹೋಗುವ ವಾಹನಕ್ಕೆ ವಿಮಾನ ಅಥವಾ ನಡೆಮಾಡುಂದನ್ನುತ್ತಾರೆ (ಮುಂಬಯಿ. ೫-೯೨). [ ನಡೆ$_1$ + ಮಾಡ$_4$ ]

**ನಡೆಮುಡಿ** 'ನಡೆಮಡಿ' ನೋ.

**ನಡೆಯಡಿ** (ನಾ). ನಡೆಯುವ ಕಾಲು; ಚಲಿಸುವ ಪಾದ: ಕಂದರ್ಪವಂಗನೆಯು . ಪ್ರಣಾಮಿಸುತ ನಡೆಯಡಿಗಳೀವ ಬರವರಲ್ (ನವಮೋ. ೭-೫). [ ನಡೆ$_1$ + ಅಡಿ$_1$ ]

**ನಡೆಯಿಸು, ನಡಯಿಸು, ನಡಸು$_1$, ನಡಿಸು$_1$,** ನ[illegible] ೧. ನಡೆಯುವಂತೆ ಮಾಡು; ಚಲಿಸುವಂತೆ ಮಾಡು: [illegible]

ಕೋದಗಗಟ್ಟುಗಟ್ಟಿ ಬೆನ್ನಂ ಬಿಲ್ಲ ಕೊಪ್ಪಿನೊಳಿಟ್ಟಿದು ನಡೆಯೆಂದು ನಡೆಯಿಸಿ (ಪಂಪಭಾ. ೭-೩೧ ವ); ಮ್ಲೇಚ್ಛಖಂಡಮಂ ದಾಯ್ಕೇಳಿಸಿ ಚಕ್ರಪೂಜೆಗೆಯ್ದು ಕಟಕಮಂ ನಡೆಯಿಸಿ (ಚಾವುಂಪು. ೯೧); ನಡೆನಡೆಯೆಂದು ನಡೆಯಿಸಿದರ್, ಕೊಯ್ ಕೊಯ್ ಎಂದು ಕೊಯಿಸಿದರ್ (ಭಾಷಾಭೂ. ೨೧೭ ಉದಾ); ಪುರವರದ ನಡುಕೇರಿಯೊಳೆಲ್ಲರು ನೋಡುವಂದದಿ ನಡೆಯಿಸಿದನು ಮಂತ್ರಿಯವರ (ಶಬರಸಾಂ. ೩೭-೬೨). ೨. ಮುಂದುವರಿಸು; ಮುಂದೆ ಸಾಗಿಸು; ಸಾಗಿಸಿಕೊಂಡು ಹೋಗು: ನೆಗಟ್ದೀ ಕ್ರಿಯಾವಿಶೇಷಂಗಳನಿಲ್ಲಿಂದಿತ್ತೆಡೆಯುಡುಗದೆ ನಡೆಯಿಸುವುದು (ಆದಿಪು. ೧೫-೧೬ವ); ಇದನ್ ತಪ್ಪದೆ ನಡೆಯಿಸಿದಾತಮ್ ಸಾಸಿರವ್ ಕವಿಲೆಯ ಕೋಡುಮ್ . . . ಸಹಶ್ರ(ಸ್ರ)ಭೋಜನವ್ ಊಡಿದ ಫಲವ್ ಅಕ್ಕುಂ (ಇಅ. XII, ೨೫೭-೧೬; 951): ಇದಂ ಕಯ್ಕೊಂಡು ನಡೆಯಿಸಿದಾತಂಗೆ ಅನಂತ ಪುಣ್ಯ (ಎಕ. IV, ನಾಗಮಂ. ೫೧-೨೪; 972); ಇನ್ತೀ ಧರ್ಮ್ಮಮಂ ಕಾದು ನಡೆಯಿಸಿದಂಗೆ ವಾರಣಾಸಿ ಕುರುಕ್ಷೇತ್ರ ಪ್ರಯಾಗೆಯರ್ಗ್ಘ್ಯತೀರ್ತ್ಥಗಂಗೆ ಗಂಗಾಸಾಗರದೊಳ್ ಸಾಸಿರ ಕವಿಲೆಯಂ . . . ಕೊಟ್ಟ ಫಲವಕ್ಕು (ಸೌಇಇ. XI-1, ೪೭-೧೯; 994). ೩. ಹೋಗುವಂತೆ ಮಾಡು; ಕಳಿಸು: ಅಡಿದಳಿರ್ಗೆ ಧರಾವಲಯಂ ಕಡುವೆಟ್ಟಿತ್ತಾಗೆ ನಡೆಯಲ್ಬಟ್ಟಿಯದೆ ಮನುಜರ್ ಸಿಡೆಯೆ ಹಯಾದಿಗಳಿಂದಂ ನಡೆಯಿಸಿದಂ ಕಲಿಸಿ ವಾಹನಾರೋಹಣಮಂ (ಪಂಚಾಮೂ. ೦-೭೬). ೪. (ರಥ ಮೊದಲಾದುವನ್ನು) ಚೋದಿಸು; ಹೊಡೆ: ದೇವಕೀನಂದನಂ ಸ್ಯಂದನಮಂ ಕಿಟ್ಟಿದು ನಡೆಯಿಸೆ (ಜಗವಿ. ೪-೪೦ವ). ೫. ಆಚರಿಸು; ನಿರ್ವಹಿಸು; ಜರುಗಿಸು; ಮಾಡು: ಅವರಿಬ್ಬರೂ ನಡೆಯಿಸಿದ ಜೀವನದ ಅದ್ಭುತರಸಾಯನದ ಪ್ರಯೋಜನವು ಕನ್ನಡನಾಡಿಗೆ ಇನ್ನೂ ಆಗಬೇಕಾಗಿದೆ (ನನಲ್ಲ. ೬ ಕವಿಪರಿಚಯ). ೬. ಈಡೇರಿಸು; ನೆರವೇರಿಸು; ಪಾಲಿಸು: ಚಕ್ರವರ್ತಿಯೇ ತಮ್ಮ ಅಪ್ಪಣೆಯನ್ನು ನಡೆಯಿಸಿರುವನು (ಮಂಚಸ. ೫೬); ದಂದುಗಡ ಬಿಡುಗಡೆಗೆ ಮನೆಯೊಡವೆಗಳ ತೆತ್ತು ಪೊಂದಿದೊಸಗೆಯ ನಡೆಯಿಪುದು ಕೊರಗನೆಣಿಕೆ (ಕಾಲೂರ. ೦೬೯-೩೭೬). ೭. ಪಾಲನೆ ಮಾಡು; ರಕ್ಷಿಸು; ಕಾಪಾಡು: ಎಮ್ಮ ಕಾರಣದಿನಿತ್ತಣ ಪಂಬಲನೀಕೆ ಮಾಡದಂತಿನ್ನಡೆಯಿಪ್ಪುದೊಂದೆ ತೆಱನಪ್ಪುದಿದಂ ಸೆಱಗೊಡ್ಡಿ ಬೇಡಿದೆಂ (ಚಂದ್ರಪು. ೬-೮೬). ೮. (ಆಸಕ್ತಿ ಮುಂತಾದುವನ್ನು) ಉಂಟುಮಾಡು; ಒದಗಿಸು; ದೊರಕುವಂತೆ ಮಾಡು: ಕುಡಿದೊಡೆ ಸೊರ್ಕಿಸದವು ನಾಣ್ಗೆಡಿಸದವು ಮನಕ್ಕಲಂಪನೀವುವು ರತಮಂ ನಡೆಯಿಪುವೆನಿಸುವ ಮಧುಗಳನೆಡೆಯುಡುಗದೆ ಕುಡುಗುಮುಚಿತಮದ್ಯಾಂಗ ಕುಜಂ (ಆದಿಪು. ೫-೩೨): ಪ್ರಸಾದಪರಿಮಳಮಂ ಘ್ರಾಣಕ್ಕೆ ನಡೆಯಿಸುವ ಸಂಪಗೆಯ ಮುಗುಳ ನಾವೆಯಂತೊಪ್ಪುವ ನಾಸಿಕದ . . ರೂಪುಸೌಂದರ್ಯದಿಂ (ಬಸರ. ೨-೨೬). **ನಡಯಿಸು**: ೧. ಮುಂದಕೆ ನಡಯಿಸಿ ಪುಲಿಮೊಗವಿಕ್ಕುವ ಬಂದರ ಕೂಡೆ ದೂರದೊಳು ನಿಂದಿಱಿದಾಡುವ ಬಲು ಭದ್ರವೆಸಗುವರಿಂದ ಕಣ್ಗೆಸೆದುದಾ ದುರ್ಗ (ಶಬರಸಾಂ. ೩೭-೬೩). ೨. ಧರ್ಮ್ಮಂಗಳಂ ನಮಸ್ಯಂ ನಡಯಿಸಿ ಬಱಿಯಮೊನ್ದು ವರ್ಷಂ ರಾಜ್ಯಮಂ ಪತ್ತುವಿಟ್ಟು (ಎಕ. II, ೫೯-೧೦೯; 974). ೯. ವ್ಯವಹರಿಸುವಂತೆ ಮಾಡು; ವರ್ತಿಸುವಂತೆ ಮಾಡು. ೧, ೯: ದೇವನಂ ತನಗೆ ಕುಂಟಣಿ ಮಾಡಿ ನಡಯಿಸುವ ತೆಱನೀ ತೆಱನೆಂಬುದಂ ತೋಱುವಂತೆ ಮೆಲ್ಲಮೆಲ್ಲನೆ ದಟ್ಟಡಿಯಿಡುತ್ತುಂ (ಸಂಬಿರ. ೨-೭). **ನಡಸು**$_1$: ೧. ಭೃತ್ರುವನೇಱಿಸಿ ನಡಸೆ ಕೆಲವು ದಿನಕ್ಕೆ ತಿಳಕದ್ವೀಪಮನೆಯ್ದಿ (ಪುಣ್ಯಾಸ್ರ. ೮-೮ವ); ಹಿಡಿವ ಬಿಡುವೊಬ್ಬುಳಿಗೆ ತಹ ಬಲನೆಡಕೆ ಹಾಯ್ಸುವ ಸುತ್ತಲೊತ್ತುವ ತಡೆವ ನಡಸುವ ಸೆಳೆವ ತಿರುಹುವ ಹದಿರ ಡೊಂಕೆಯಲಿ ಗಡಣಿಸಿದನು (ಕುವ್ಯಾದ್ರೋ. ೩-೧೧); ಮೊಗಕೆ ಮುತ್ತುಗದೆಲೆಯ ಮುಱಿವಿಡಿದಗಲಿದುಮ್ಮಹದಿಂದ ಜನಕನ ಮಗಳ ನಡಸುತ ತಂದರೊಂದು ಮಹಾಸರೋವರಕೆ (ತೊರರಾ. ೨-೪-೧೯); ಕರುಣಾಳು, ಬಾ, ಬೆಳಕೆ, ಮುಸುಕಿದೀ ಮಬ್ಬಿನಲಿ, ಕೈಹಿಡಿದು ನಡಸೆನ್ನನು (ಇಂಗೀತ. ೯೭-೨). ೨. ಧರ್ಮ್ಮವಱವವರೆಲ್ಲರು ಪೊಡೆಯರಾಗಿ ಪರಿರಕ್ಷೆಗೆಯ್ದು ಸ್ವಧರ್ಮ್ಮದಿವ್ ನಡಸುವ್ರದು (ಇಅ. XVIII, ೩೯-೨೬; 999); ಇದವ್ ನಡಸಿದರ್ಗ್ಗೆ ಅನನ್ತಪುಣ್ಯ[ಂ] (ಇಅ. XII, ೨೨೫-೦೭; ಸು.12ನೆಯ ಶತ); ಆಚಂದ್ರಾರ್ಕ್ಕ ನಿತ್ಯಪಡಿ ೩ ಯಮಾನ ಹಲ ನಡಸುವುದು (ಎಕ. II, ೨೪೪-೨೩; ಸು.1274); ಶಿವಾರ್ಪಿತವಾಗಿ ನಡಸುವ ಅಗ್ರಹಾರದ ಧರ್ಮಕೆ ಉತ್ತಾರವ ಮಾಡಿಸಿಕೊಟ್ಟ ಕಾಶೀನಾಥಪುರದ ಗ್ರಾಮಕ್ಕೆ ಶಿಲಾಸ್ಥಾಪಿತ ಮಾಡಿಸಿ ಅದೆ (ಎಕ. VII, ಶಿವಮೊ. ೧೮-೧೧; 1714). ೫. ಸಂಪದಾದಿಗಳು ಭರಿತವಾಗಿಹವಾ ಮುನಿಪನಿಹ ಧರಣಿಯಲಿ ನೀನಾ ಮುನೀಂದ್ರನ ಬರಸಿ ಕ್ರತುವನು ನಡಸಿದರೆ ಸುತರಹರು ನಿನಗೆಂದ (ತೊರರಾ. ೧-೫-೫೯); ಎಮ್ಮ ಲಿಂಗವು ಕೊಟ್ಟ ಕಾಯಕವ ನಡುಸುತಿಹವಂತಾಗಿಯುಂ ಭವಿಯೊಡನೆ ಮಾತಾಡೆವು (ಬಸಪು. ೪೦-೩೭); ನಾನೀಗ ನಡಸಿರುವುದರಲ್ಲಿ ಅವಸರವೇನಾದರೂ ಕಾಣುತ್ತದೆಯೇ ? (ಅಶ್ರುಮ. ೧೨): ನಮ್ಮ ಪ್ರಾಚೀನ ಕಾವ್ಯಗಳ ಅಭ್ಯಾಸವನ್ನು ಸೂಕ್ಷ್ಮವಾಗಿ ನಡಸಿ ಸರಿಯಾಗಿ ಅವಲೋಕಿಸಿದರೆ ನಮ್ಮ ಹಿಂದಿನ ಕವಿಗಳಿಗೂ ಲಾಕ್ಷಣಿಕರಿಗೂ ಭಾಷೆಯನ್ನು ಕುರಿತು ಪ್ರತ್ಯೇಕವಾಗಿ ವಿಚಾರ ಮಾಡುವ ವೃತ್ತಿ ಇತ್ತೆಂಬುದು ಓದುಗರಿಗೆ ಮನದಟ್ಟಾಗುತ್ತದೆ (ದ್ರಾವಿ. ೧೧ ಹಿನ್ನಲೆ). ೬. ಫಡಫಡರ್ಜುನ ಹೋಗುಹೋಗೆಳವಡದು ಸೈಂಧವನಳಿವು ಭಾಷೆಯ ನಡಸಬಲ್ಲರೆ ಬೇಗ ಬೆಳಗಿಸು ಹವ್ಯವಾಹನನ (ಕುವ್ಯಾದ್ರೋ. ೧೪-೩೧). ೯. ದುರ್ಜನಸ್ವಭಾವಮಂ ಕೂಡು ಯತ್ನದಿಂ ನಡಸುವೊಡಂ ನೈಜಗುಣಂ ಬಿಡದು (ಪಂಚತಂ. ೧೦೫-೧); ಮುನ್ನ ಪರಸತಿ ಪಾರ್ವತಿಯೆಂದು ನಡಸಿತ್ತು ನುಡಿಸಿತ್ತು ಗುರುವಚನ (ಸರ್ವವ. ೮೭-೪೮೦). ೧೦. ಪ್ರಯೋಗಿಸು; ಬಳಸು; ಉಪಯೋಗಿಸು: ಮಡದಿ ಪಕ್ಷದಿಯರಿಯದಲೆ ಮದದೊಡಗಿ ಕಾಣನು ಇನ್ನು ಬುದ್ಧಿಯ ನಡಸು ಸ್ವಾಮಿದ್ರೋಹಿ ಬಸವನೆಯೆಂದನಾ ಮಂತ್ರಿ (ಬಿಜ್ಜಪು. ೬೩-೫೮). ೧೧. ರೂಪಿಸು; ಹೊಂದಿಸು; ಸಾಧಿಸು; ಅಳವಡಿಸು; ಸಿದ್ಧಪಡಿಸು: ಋಕಾರಾಂತಗಳಾದ 'ಕರ್ತೃ' ಮೊದಲಾದುವನ್ನು 'ಗುರು' ಎಂಬುದರಂತೆ ನಡಸಬಹುದು (ಮಧ್ಯಮ. ೬೮) **ನಡಿಸು**$_1$: ೬. ಯಿನ್ನು ತಂನ ಪಾತು ನಡಿಸಬೇಕು (ಎಕ. VII, ಶಿವಮೊ. ೧೦೮-೨೫; 1558). ೯. ನಾರಿ ಕೇಳ್ನಿನ್ನ ಮನೋರಥ ನೆಱೆ ಕೈಸಾರಿತು ಚೆಲುವರೆಱೆಯನ ಮೇರೆಯುಱಿತು ನಡಿಸೆಂದಾಗ ಸಖಿಯು ಪಚಾರವ ಪೇಳ್ದಳಂಗನೆಗೆ (ಕಂನವಿ. ೧೦-೫೬). **ನಡೆಸು**: ೧. ಹುಟ್ಟುಗುರುಡನ ಕೈಯ ಕೋಲ ಕೊಟ್ಟು ನಡೆಸುವಂತೆ ನಡೆಸಯ್ಯಾ ಎನ್ನ (ಬಸವ. ೨೬೫): ಪೊಡವಿಯಲಿ ಕೈಗೊಟ್ಟು ಭೋಗಂ ನಡೆಸಲಡಿಯಿಡ ಕಲಿತೆನು (ಬಸಪು. ೨೫-೮); ಕಾಲಿಲ್ಲದೆ ನಡೆಸುವ ಕೈಯಿಲ್ಲದೆ ಹಿಡಿಸುವ ಹಲ್ಲಿಲ್ಲದೆ ಮೆಲಿಸುವ (ಪುರಂದ. ೩-೧೧೯-೧); ದಿವಿಜರು ಪೆತ್ತ ರತ್ನವಿಮಾನಕೋಟಿಯ ಸೂತ್ರಿಸಿದವೊಲು ನಡೆಸಿದರು ಸುರವೇತ್ರಪಾಣಿಗಳು (ಸಾಳ್ವಭಾ. ೩೩-೩೮); ಪೊಡೆಸು ಭೇರಿಯ ನಿಂದೆ ನಡೆಸು ಮತ್ಸ್ಯನ್ಯಮಂ (ಜಬಪು. ೪೭-೨೨); ಆ ಕುದುರೆ . . . ಲೋಕವಂ ತಣಿಸುತ್ತೈತರಲಖಿಳದೆಸೆಯೊಳದನಾಕೆವಾಳರ್ತಡೆಯೆ ಬಿಡಿಸಬೇಕನಿಬರಿಂ ನೂಕದೊಡೆ ಕರ್ತೃ ಕಾನಾದೊಡಂ ಪೋಗಿ ನಡೆಸುವುದು ಬಳಿಕಾ ಹಯವನು (ಜೈಮಿಭಾ. ೨-೨೯). ೨. ಈ ಧರ್ಮವ[ಂ] ನಡೆಸಿದವರಿಗಕ್ಷ(ಕ್ಷ)ಯಪುಣ್ಯ[ಂ] (ಇಅ. XII, ೨೨೫-೧೯; ಸು. 11ನೆಯ ಶತ); ಹತ್ತುಮತ್ತರದ ಭೂಮಿ ಬತ್ತುವ ಹಯನು ನಂದಾದೀವಿಗೆಯ ನಡೆಸಿಹವೆಂಬವರ ಮುಖವ ನೋಡಲಾಗದು (ಬಸವ. ೨೨೫); ಪೊಡೆಯರು ನಡೆಸಿ ××× ನಡೆಸುವ ಯೆಂಣೆ ವರುಶ ೧ ಕಂ ಹಾನೆ ೨ ಡನೂ ನಡೆಸುವಂತಾಗಿ (ಸೌಇಇ. IX-ii, ೪೦೫-೧೧: 1357); ಅಲ್ಲಿ ಇಂಗ್ಲಿಷ್‌ನಲ್ಲಿ ಪ್ರೌಢವಿದ್ಯಾಭ್ಯಾಸ ಮಾಡಿದವರೂ ಕೂಡ ಮಾತೃಭಾಷೆಯಲ್ಲಿ ಸಂಭಾಷಣೆಯನ್ನು ನಡೆಸುತ್ತಿದ್ದುದನು

ನೋಡಿದೆ (ಹಂಗಾಳ್ಕೆ. ೩ ಮುನ್ನುಡಿ). ೫. ಸಕಳಮುಂ ಕೌತುಕದಿ ನಡಸುತ ಸಕಳದೊಳು ನಡೆಯದ ಸುಜಾಣನು ಸಕಳವಳಿಯಲು ಸಕಳದೊಳು ತಾನಳಿಯದಿಹ ನಿತ್ಯ (ಬಸವು. ೩೦-೪೪); ತೊಡಿಗೆಯಿಂದಿರ್ದರು ದೇವಪೂಜೆಯ ಮಾಡಿ ನಡಸಿದರಾಗವೋಕ್ರಿಯಲಿ (ಪೋಹಶ. ೩೦-೪); ದೇವರನ್ನು ಮೂಲ ದೇವರ ಗುಡಿಯ ಮುಂದೆ ಬೀಳಬಟ್ಟಿಯ ಮೇಲೆ ಕುಳ್ಳಿರಿಸಿ ಗುಡಿಯೊಳಗೆ ಪೂಜೆ ನಡಸುತ್ತಾರೆ (ನನ್ನೂರು. ೫೦). ೬. ನುಡಿದ ಭಾಷೆಯನಿಂತು ನಡೆಸಲು ಬಸವನೇ ಬಲ್ಲ (ಬಸವು. ೩೭-೨೭); ನಮ್ಮ ಕರ್ತವ್ಯ ಒಡೆಯನ ಅಪ್ಪಣೆಯನ್ನು ತಲೆಬಾಗಿ ನಡೆಸುವುದು (ಹಂಗಾಳ್ಕೆ. ೪೭). ೭. ಪಟಿಯಿಲ್ಲದಂತೆ ಪ್ರಪಂಚುವಿಲ್ಲದಂತೆ ವೈಶಿಕವಿಲ್ಲದಂತೆ ನಡಸಯ್ಯಾ (ಬಸವ. ೬೧); ನಿಮ್ಮ ನೆಂದೂ ಅಗಲದಂತೆಮಾಡಿ ನಡಸಯ್ಯ (ಮಹಾದೇ. ಬ. ೧೫-೧೯); ನಿಚ್ಚಂ ಪ್ರಿಯದಿಂದಂ ನೋಡುವರ್ ಮನ್ನಿಸಿ ನಡೆಸುವರೆಮ್ಮತ್ರವಿರ್ ದೇವಕೀ ದೇವಿಯರ್ (ಜಗವಿ. ೧೨-೧೦೬); ಅರಸೊಲಿದು ನಡಸಿದರೆ ಸಿರಿಯಕ್ಕು ಜಸವಕ್ಕು ಕರಿತುರಗ ಬಲವು ಪಿರಿದಕ್ಕು ಮುನಿದರೆ ಕರ ನಾಶವಕ್ಕು (ಸರ್ವಜ್ಞ. ೭೫೨). ೮. ಘಡ ತೊಲಗು ಕೌರವಕೃತಾಂತನ ಪಡೆಗೆ ಪಾರಣೆ ಯೊಗಳೀಗಳೆ ನಡಸುವೆನು(ಕುಮಾರವ್ಯಾ. ಶರಿ. ೨೮೮). ೯. ಸಾಧುತ್ವಮಂ ಕೆಡಿಸಿ ನಡೆ[ಪಾಠಾಂ. ಡ]ಸುವ ದುರಾಚಾರೆ ಕಪಟನಾಟಕತತಿಗೆ ತಾನೆ ನೆಲೆಯೆನಿಸುವಳ್ (ಕಾದಂಪೂ. ೫೫೩); ಇನಿತುಂ ಮೋಹಂ ಕೇಳೀತನಮೇಲಿಂ ಪಿರಿದುಮನ್ನೊಳುಂಟಪ್ಪುದಜಿಂದನಿಯತಿಕೆಯಿಂದೆ ನಡಸಲ್ಕಿನಿತಾದುದು ಶಿಕ್ಷೆಗೆಟ್ಟ ಕಾರಣದಿಂದಂ (ಧರ್ಮಾಮೃ. ೨-೮೧). ೧೨. ಅಟ್ಟು; ತಳ್ಳು: ಹೊಡೆದು ಹೊಡೆಚೆಂಡಾಡಿ ರಿಪುಗಳ ಗಡಣವನು ಯಮರಾಜಧಾನಿಗೆ ನಡೆಸುವೆನು (ಕುಮಾವ್ಯಾ. ೮-೮). P ಈ ಧಾತು ಅನೇಕ ಕಡೆ ನಾಮ ಪದದೊಡನೆ ಸೇರಿ ವಿಶಿಷ್ಟವಾದ ಧಾತುವಾಗಿ ಬೇರೆಬೇರೆ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಉದಾಹರಣೆಗೆ 'ಉತ್ಸವ ನಡೆಸು', 'ಶಾಲೆ ನಡೆಸು' ಇತ್ಯಾದಿ.

ನಡೆಸಿಕೊಡು, ನಡಸಿಕೊಡು = ೧. ಮಾಡಿಕೊಡು; ಮಾಡು: ನೀನು ಸೂಚಿಸಿದಂತೆಯೇ ನಡೆಸಿಕೊಡುತ್ತೇನೆ (ವಚಥಾ. ೪). ೨. ಪಾಲಿಸು; ಈಡೇರಿಸು: ನಿನ್ನಲ್ಲಿ ಭರವಸೆಯಿಟ್ಟು ಒಂದು ಮಾತು ಹೇಳುತ್ತೇನೆ. ಅದನ್ನು ನೀನು ನಡೆಸಿಕೊಡಬೇಕು (ವಚಥಾ. ೬). [ ನಡೆ₁ + – ಇಸು₃ ]

**ನಡೆಯುಡುಗು** (ಕ್ರಿ). ನಡೆಯಲಾರದಾಗು; ಚಲನೆ ಇಲ್ಲದಂತಾಗು: ನಡೆಯುಡುಗಿ ಮುಪ್ಪಾಗಿ ಕಾಂತಿ ಮಸುಳಿಸಿ . . . ಬೇಟಿಗೊಂದೆಸೆಯ ಕಡೆಯೊಳಿರ್ಪವಂತಾದುದೀಗ (ಹಡಕಾ. ೩-೭೪); ಭಕ್ತಿ ಚಿತ್ರಮನೋವೆ ಕಂಪಿಸುತೆ ನಡೆಯುಡುಗೆ ಮನವಕ್ಕಟಾಂ ಕರಗೆ (ಬಸರ. ೩-೧೧೧); ನಡೆನಡೆದು ಕಡೆಕಡೆಗೆ ನುಡಿಯುಡುಗೆ ನಡೆಯುಡುಗೆ (ಶಾಲೂರ. ೧೫೧-೩೩೦). [ ನಡೆ₂ + ಉಡುಗು₁ ]

**ನಡೆಯೂಡು** (ಕ್ರಿ). ಚೆನ್ನಾಗಿ ತಿನ್ನಿಸು: ನಡೆಯೂಡೆ ಮುದ್ದು ವಿಷಮೂಡಲಿಂಗೆ ಹಿತವೆಂಬ ನುಡಿಯಂತೆ ಸುಖವಿಲ್ಲ ಪುಣ್ಯವುಂಟಾಳಿದ ಹಲವೆಡೆಯ ಸುಕ್ಷೇತ್ರಂಗಳೊಳಗೆ (ಹಡಕಾ. ೧೦-೩೫). [ ನಡೆ₃ + ಊಡು₁ ]

**ನಡೆಲಿಂಗ** (ನಾ). [ವೀಶೈ]-ಚಲಿಸುವ ಲಿಂಗವೆಂದು ಭಾವಿಸಲಾದವನು; ಜಂಗಮ: ಬಡವರೆಂದೆನಬೇಡಾ ಲಾಂಛನಧಾರಿಯನು ಕಂಡು ಸ್ನೇಹದಿಂದವರ ಪೂಜೆಯ ಮಾಡುವುದು ನಿಜವಡಗಿದ ರೂಪು ನಿರ್ಮಯಲ ಸ್ಥಾನ ನಡೆಲಿಂಗ ಜಂಗಮ (ಬಸವ. ೪೧೫). [ ನಡೆ₁ + ಲಿಂಗ ]

**ನಡೆವಕ್ಕಿ** (ನಾ). (ಚಿತ್ತಾಕರ್ಷಕವಾಗಿ) ನಡೆಯುವ ಹಕ್ಕಿ; (ಮನೋಹರವಾಗಿ) ಚಲಿಸುವ ಪಕ್ಷಿ; ಹಂಸ: ನಡೆವಕ್ಕಿಯ ನಲ್ಮೆಯ ಪೊಣರ್ವಕ್ಕಿಯ ನುಡಿವಕ್ಕಿಯ . . . ಬಳಗಂ ಬಳಸಿದುದಾ ನೃಪವಸತಿಯಾ (ಜಯಾಹಾ. ೨-೧೮); ನಡೆವಕ್ಕಿ ನುಡಿವಕ್ಕಿ ... ಗಱಿಗಣ್ಣಕ್ಕಿಗಳಾ ನೆಲದೆಡೆಯ ಬನದೊಳಿರುತಿಹವು (ಕುಂದಾಶಾಂ. ೨-೩೦); ಆ ವನದ ಮಧ್ಯದೊಳು ನಡೆವಕ್ಕಿ ನುಡಿವಕ್ಕಿ ಪಾವಸತ್ವವನ್ಯದಿ ಜೀವಿಪುವು ಭಯವನುಳಿದು (ಪ್ರಭುಪು. ೩-೧೪). 'ನುಡಿವಕ್ಕಿ' ಪರಾ. [ ನಡೆ₁ + ಹಕ್ಕಿ₁ (<ಪಕ್ಕಿ₁) ]

**ನಡೆವಡು** (ಕ್ರಿ). ಹೋಗು; ಚಲಿಸು; ಗಮಿಸು: ತಾಂ ತನಗೆ ಪಯಂ ತಡವಿಟ್ಟ ಪಾವಂತಂತು ನಡೆವಟ್ಟು ಕನ್ನಿಚ್ಚೆಯುಂ ಪೋಗೆ (ರಾಜಶೇಖ. ೧೩೮-೧೩). [ ನಡೆ₂ + ಪಡು₁ ]

**ನಡೆವಣಿಗ** (ನಾ). ಪಾದಚಾರಿ; ಕಾಲಾಳು: ನಡೆವಣಿಗ ಘೋಳೆಯು ಸೂಳೆಯ್ಯುತ್ತಪವಳ ಬಳಿಗಾಬ ಕಮ್ಮಟ ನುಡಿಗ ಕುಂಬಟ ಕಂಚುಗಾಜರ ಕೇರಿ ಮುಱಿದಿಹವು (ಸಾಳ್ವಭಾ. ೨-೮). [ ನಡೆ₁ + – ವಣಿಗ ]

**ನಡೆವಲೆ** (ನಾ). ಒಂದು ಬಗೆಯ ಬಲೆ: ಇಡುವಲೆ ಸಿಡಿವಲೆ ಕೆಱುವಲೆ ನಡೆವಲೆ . . . ಬಿಡುಂವಲೆಗಳೆನಿಪ್ಪುವೆಸೆದುವಾ ಬೇಂಟೆಗಾರರೊಳ್ (ಶಬಶಂ. ೩-೨೪). [ ನಡೆ ? + ಬಲೆ₁ ].

**ನಡೆವಳಿ₁**, ನಡವಣಿ, ನಡವಳಿ, ನಡಾವಳಿ (ನಾ). ೧. ನಡೆಯುವಿಕೆ; ನಡಿಗೆ: ನಡೆವಳಿಗಳಿಂದೆ ಪೊಡವಿಯನು ನಗ್ಗಿಪ ಹಸ್ತಿಗಡಣ (ನವವೋ. ೩೦-೨೭). ೨. ನಡವಳಿಕೆ; ವ್ಯವಹಾರ; ನಡತೆ; ವರ್ತನೆ: ಬಿಕ್ಕೆಯಂ ಬೇರುಮನುಂಡಡವಿಯೊಳಗಿರ್ಪ ಮುನಿಗಳ ನಡೆವಳಿಯತ್ರೆತ್ತ ಯುವತಿ ಜನದನುರಾಗಂ (ಕಾದಂಪೂ. ೮೦೮); ಪಟಿಯುಂ ಕೇಳ್ದನೊ ಮೇಣ್ಣಡವಟಿ[೪]ಯುಂ ತಪ್ಪಿದನೊ ರಾಜಿ ಕಣ್ಣಿಂದಂ ಕೂರ್ತಟಿಲ್ದಿವರಂ ಬಗೆದನೊ ಪಚ್ಚಟಿದನೊ ಪೇಟ್ಮಾಡಿ ನಿನ್ನೊಳಂಗಾಧಿಪತೀ (ಗದಾಯು. ೫-೧೪); P ಇದನ್ನು ಪ್ರಾಸಕ್ಕಾಗಿ 'ಟ' ವನ್ನಾಗಿ ತಿದ್ದಿಕೊಂಡಿರಬಹುದು; ಹಗಲಿರುಳು ಉದಯ ಬೈಗುಗಳು ಧರ್ಮವು ಎಂಬಿವು ಮನುಷ್ಯರ ನಡೆವಳಿಯನಱಿವುವು (ಪಂಚತಂ. ೧೭೨-೧೧); ಪರವಧುಗಳಿವುವುದುಮಿಹಂ ಪರವಟಿಗುಂ ನಿನ್ನ ಮಹಿಮೆಗಿದು ನಡೆವಳಿಯೇ (ಪಂಪಾಮಾ. ೯-೧೪೫); ನಡೆವಳಿಯೊಳ್ ತನ್ನ ಸಮಂಬಡೆವಾರುಂ ನಡೆದರಿಲ್ಲ (ಪುಷ್ಪಪು. ೧-೨೯); ಹರಿಯ ಚಕ್ರವ ತುಡುಕಿಸುವೆ ವಾಸರವತಾಕನ ರಥವ ಹಿಂದಕೆ ಮುರಿಯಲಿಸುವೆನು ಮಹಿಮರಿಬ್ಬರ ನಡೆವಳಿಯ ಕೆಡಿಸಿ (ಕುಮಾರವ್ಯಾ. ೧-೪೧); ನಡೆವಳಿಯ ನೋಡಿದಿರ ಲೋಗರ ಮಡದಿಯರು ತನ್ನವರು ಠಕ್ಕಿನ ಕಡಲು ಕೃಷ್ಣನ ನಂಬಲಿಹವರಿಲ್ಲ (ಕುಮಾರವ್ಯಾ. ೧೪-೦೮); ನುಡಿಗೆ ನಾಚಿದನರಸ ಹಂಸದ ನಡೆ[ಪಾಠಾಂ. ಡ]ವಳಿಗೆ ಮೆಚ್ಚಿದನು (ನಳಚ. ೨-೨೧). ೩. ಸಂಪ್ರದಾಯ; ಪದ್ಧತಿ; ರೂಢಿ: ಪಿರಿಯರೆಲ್ಲರ್ನಡೆದ ನಡೆ[ಪಾಠಾಂ. ಡ]ವಳಿಯನೊಲ್ಲೆನೆಂಬುದು ಬಲ್ಲತನಮಲ್ತು (ವೃಷವಿ. ೩-೫೨.). ೪. (ಸಂಘ, ಸಂಸ್ಥೆ ಮುಂತಾದುವುಗಳ ಅಧಿವೇಶನಗಳಲ್ಲಿ ನಡೆದ) ಕಾರ್ಯಕಲಾಪ, – ಕಾರ್ಯಕ್ರಮ ಮತ್ತು ಅದರ ವರದಿ: "ಕಾರ್ಯ; ವರ್ತನೆ; ನಡವಳಿ" (Proceeding. ಇಂಕನಿ). ನಡವಣೆ: ೨. ಧರ್ಮದ ನಡವಣಿಗೆ ಮೆಚ್ಚಿದೆನು ಸತ್ಯವು ಕೆಡದವೊಲು ರಕ್ಷಿಸಿದೆ (ತಿಮ್ಮಭ. ೧-೩೪). ನಡವಳಿ: ೨. ಅವರವರ ದಮ್ಮದಂದವುನವರ ವರಾಗಮದೊಳವರ ನಡವಳಿಗಳ [ಪಾಠಾಂ. ಕಥೆಗಳೊಳಂ] ನೋಡುಪದವ ದೂಷಿಸಿದವುವಿನ್ನವರನ್ನರ್ಮಡಿಯ ಮುಳಿವರಾ ಸಮುಯುದವರ್ (ಸಮಸ ೮-೨೦೭); ಅಳವಟ್ಟ ಪಿರಿಯ ಸಿರಿ ನಲ್ಲಳ ನಡ [ಪಾಠಾಂ. ಡೆ] ವಳಿಯೊಳ್ಪು . . . ಮನಂಗೊಳ್ಳುತಿರೆ ಪಲಕಾಲಮರಸುಗೆಯ್ಯುತ್ತಿರ್ದ್ದ (ವರ್ಧಪು. ೧೦-೭೯); ಕುಲವಧುವಿನ ನಡವಳಿಯೊಳ್ ಕುಲಮುಮಂ ಚಲಮುಮಂ ಪತಿಬ್ರತಾಗುಣದಿಂದಂ ನೆಲಸಿಕ್ಕುಮ್ (ಸೌಇಇ. XX, ೨೪೮-೯೯; 1228); ವನಧಿಪನ ಗಾಂಭೀರ್ಯ ರವಿನಂದನನ ನಡವಳಿ ಧರೆಯ ಸ್ಥಿರಡೆಯಿನಿತು ದಶರಥಸಾರ್ವಭೌಮಂಗಲ್ಲದಿಲ್ಲೆಂದ (ತೊರರಾ. ೧-೩-೨೭). ನಡಾವಳಿ: ೨. ನಮ್ಮ ನಡಾವಳಿ ನಮ್ಮ ಪುರಾತರ ನುಡಿಯು ಇಪ್ಪವಯ್ಯ (ಸಿದ್ಧವ. ೪. ೨೭೦-೮೫೭); ಜಗತ್ತಿನ ರೀತಿನೀತಿ ನಡತೆ ನಡಾವಳಿಯ ಅನುಭವ ನನಗೆ ಸಾಕಷ್ಟಾಗಿದೆ (ಪರಿಚೀ. ೪೫); ಇದೆಲ್ಲಕ್ಕಿಂತಲೂ ಪ್ರಭಾಕರನ ಮನಸ್ಸನ್ನು

ಗಾಸಿ ಮಾಡಿದುದು ನಿರ್ಮಲೆಯ ನಡಾವಳಿ (ಕೀಮಾರ. ೧೦೮) : ಅವರಿಗೆ ಒಳ್ಳೇ ನಡಾವಳಿಯ ಬಯಕೆಯು ಹೆಚ್ಚಾಗುವ ಹಾಗೆ ತಕ್ಕ ಕಾರಣವನ್ನೇ ನೋಡಿ ಕೊಡಬೇಕು (ಮುಂಬಯಿ. ೫-೯೫) ; ಕ್ರಮಬದ್ಧಜೀವನವೂ ನೀತಿ ನಡಾವಳಿಗಳೂ ಮೊಳೆಯುವಂತೆ ಪ್ರೋತ್ಸಾಹಿಸಿದರು (ಕಷು. ೬-೧೨೧); ೩. ಕುಮ್ರಿ ಕಡಿಯುವ ನಡಾವಳಿಯು ಧಾರವಾಡಜಿಲ್ಲೆಯಲ್ಲಿಲ್ಲ (ಕಭಾಗ. ೫೪) : ಬೈಲುಸೀಮೆಯಲ್ಲಿ ಮಳೆ ಕಡಿಮೆ ಬೀಳುವದರಿಂದ ಮಾಳಗೇಮನೆಗಳನ್ನು ಕಟ್ಟುವ ನಡಾವಳಿ ವಿಶೇಷವುಂಟು (ಮುಂಬಯಿ. ೪-೧೧೮). ೫. ಧರ್ಮಸ್ಥಳದಲ್ಲಿ ಹನ್ನೆರಡು ವರ್ಷಗಳಿಗೊಮ್ಮೆ ನಡೆಯುವ ಒಂದು ಉತ್ಸವ,-ಹಬ್ಬ : ಉಡುಪಿಯಲ್ಲಿ ಎರಡು ವರ್ಷಗಳಿಗೊಮ್ಮೆ ನಡೆವ ಪರ್ಯಾಯ, ಪಡುಬಿದ್ರೆಯಲ್ಲಿ ಜರಗುವ ಢಕ್ಕಬಲಿ. . ಧರ್ಮಸ್ಥಳದಲ್ಲಿ ಹದಿನೆರಡುವರ್ಷಗಳಿಗೊಮ್ಮೆ ನಡೆವ 'ನಡಾವಳಿ' ಎಂಬ ಉತ್ಸವ . . . ಇವುಗಳು ಪ್ರಾಮುಖ್ಯವಾದುವುಗಳಾಗಿವೆ (ತುಳುನಾ. ೨೫೩).

[ ನಡೆ$_1$ + – ವಳಿ$_1$. / ತಮಿ. ನಟವಟ, ನಟ್ಪೆಪಟ; ಮಲ. ತೆಲು. ನಡವಡಿ; ತುಳು. ನಡಾವಳಿ, ನಡುವಡಿ ]

**ನಡೆವಳಿ$_2$** (ನಾ). ನಡೆಮಡಿ; ನಡೆಯುವ ದಾರಿಗೆ ಹಾಸುವ ಮಡಿಬಟ್ಟೆ : ಸುಗ್ಗಿಯೊಳ್ ಮದುವೆಯನೆ ಕುಳಿರಗಸ ನಡೆವಳಿಯು ಹಿಗ್ಗಿನಿಂ ಬಿಡಿಸುವನು ತೊಳೆದಡೆಯ ಕೊಳೆಯಾ (ಕಾಯಾರ. ೭೪-೧೩೪) : "ನಡೆವಳಿ=ನಡೆಬಟ್ಟೆ (ಮದುವೆಯಲ್ಲಿ ಮಂಟಪದ ಸುತ್ತು ಹಾಕುವ ಬಟ್ಟೆ)" (ಕಾಯಾರ. ಅಡಿಟಿ).

[ ನಡೆ$_1$ + ವಳಿ$_6$ (<ವಟ್$_6$) ]

**ನಡೆವಳಿಕಾರ** 'ನಡೆವಳಿಕಾಟಿ' ನೋ.

**ನಡೆವಳಿಕಾರತನ** (ನಾ). ನಡತೆ ; ನಡವಳಿಕೆ ; ಸಂಪ್ರದಾಯ : ಶ್ರೀರಾಜ ಒಡೆಯರವರ ಸನ್ನಿಧಾನವು ಒಡ್ಡೋಲಗಕ್ಕೆ ಬಿಜಯಮಾಡಿದೊಡನೆಯೇ ಆಸ್ಥಾನಿಕರೆಲ್ಲ ಇದಿರೆದ್ದು ತಮ್ಮ ತಮ್ಮ ಮಾನಾನುಗುಣವಾಗಿ ನಮಸ್ಕರಿಸಿ ಗೌರವಿಸಿಕೊಳ್ಳಬೇಡವೆ ? ಓಲಗದ ನಡೆವಳಿಕಾರತನವಿದು (ಬಟ್ಟೆಅ.೩೮-೧೬).

[ ನಡೆವಳಿಕಾರ (<ನಡೆವಳಿಕಾಟಿ) + – ತನ ]

**ನಡೆವಳಿಕಾರ್ತಿ** (ನಾ). ನಡವಳಿಕೆಯನ್ನು ತಿಳಿದವಳು : ಆಚಾರ ವಿಚಾರಗಳನ್ನು ಬಲ್ಲವಳು : "ನರೀ, ನಾರೀ, ಈ ೨ ನಡೆವಳಿಕಾರ್ತಿ" (ಕಾಶಬ್ಧ. ೨೪೬). [ ನಡೆವಳಿಕಾರ (<ನಡೆವಳಿಕಾಟಿ) + – ತಿ$_1$ (< – ಇತ್ತಿ) ]

**ನಡೆವಳಿಕಾಟಿ**, ನಡವಳಿಕಾರ, ನಡವಳಿಕಾಟಿ, ನಡೆವಳಿಕಾರ (ನಾ). ೧. ನಡವಳಿಕೆಯನ್ನು ತಿಳಿದವನು ; ಆಚಾರ, ವ್ಯವಹಾರಗಳನ್ನು ಬಲ್ಲವನು ; ನಡತೆವಂತ : ಕಾಜಕ್ಕ–ನಡೆವಳಿಕಾಟಿಂ, ನುಡಿವಳಿಕಾಟಿಂ . . . ಪಗೆಕಾಟಿಂ, ಬಗೆಕಾಟಿಂ (ಕಮದ. ೧೯೯ ಪ್ರಯೋ). **ನಡವಳಿಕಾರ** : ೧. "ನರನ್, ನರ್ತಾ, ನ್ನಃ, ನರಃ, ಈ ೪ ನಡವಳಿಕಾರರು" (ಕಾಶಬ್ಧ. ೨೪೬). **ನಡವಳಿಕಾಟಿ** : ೨. (ದೇವಸ್ಥಾನ, ಮನೆ ಮೊದಲಾದುವುಗಳ) ವ್ಯವಹಾರಗಳನ್ನು ನೋಡಿಕೊಳ್ಳುವವನು,–ಮೇಲ್ವಿಚಾರಣೆ ನಡೆಸುವವನು : ಪೂಜಾರಿಗ ಪರಿಚಾರಕರೆನಿಸಿಗಾದ ನಡವಳಿಕಾಟಿರ ಜೀವಿತಕ್ಕಂ . . . ಮಹಾಜನಂಗಳು ಬಿಟ್ಟ ದತ್ತಿ (ಮ್ಯಅರಿ. ೧೯೩೨, ೪೬-೩೫ ; 1181) : ರಾಜಾರ್ತ್ಥವನೂ ತೀರಿಸಿಕೊಡುವರು ನಡವಳಿಕಾಟಿ ಪ್ರಭುಗಳು (ಸೌಇಇ. IX-ii, ೪೩೩-೬೩ ; 1408) : ತಿಂಮಣರಾಯರ ಮನೆಯ ನಡವಳಿಕಾಟಿಂ ಹೊಂಸಪ್ಪನಾಯಕರು (ಮ್ಯಅರಿ. ೧೯೩೫, ೨೩-೨ ; 1618). **ನಡೆವಳಿಕಾರ** : ೧. "ಸರ್ತಾ, ಸರಕಃ, ಈ ೨ ನಡೆವಳಿಕಾರಂ" (ಕಾಶಬ್ಧ. ೭೩).

[ ನಡೆವಳಿ$_1$ + – ಕಾಟಿ ]

**ನಡೆವಳಿಕೆ**, ನಡವಳಿಕೆ, ನಡಾವಳಿಕೆ (ನಾ). ೧. ನಡತೆ ; ನಡೆನುಡಿ : ಆಚಾರ, ವ್ಯವಹಾರ ; ವರ್ತನೆ : ಆದರೆ ಕೃತಿಯು ಏನಾದರೂ ನುಡಿವಳಿಕೆ; ಚಾರಿತ್ರ್ಯವು ನಡೆವಳಿಕೆ. ನುಡಿವಳಿಕೆಯು ಅತ್ಯುಚ್ಚವಾಗಿ ನಡೆವಳಿಕೆಯು ಅದರ ಕನ್ನಡಿಯಂತಿದ್ದರೆ, ಆ ಮನುಷ್ಯನು ಸಾಧುವೆಂದೆನಿಸಿಕೊಳ್ಳುವನು (ಸಾಹಿಸಂ. ೨) : ಅಂದೆ ನೆಲವು ಪಡೆದೀತು ಅಮರಜೀವಂತಶಾಂತಿಯನ್ನು ಎಂದು ನಾಡ ನಡೆವಳಿಕೆಯಲ್ಲಿ ನೆಲೆಗೊಂಬುದೊಂದೆ ನಿಜವು (ಅರಳು.೧೭೫-೨) ; ನಡೆವಳಿಕೆಗಳು ಮತ್ತೂ ಉತ್ತಮಗೊಂಡು (ಮುನಿಮೂ. ೭೯). ೨. ರೂಢಿ ; ಪದ್ಧತಿ ; ಸಂಪ್ರದಾಯ : ನಮ್ಮ ಸೀಮೆಯಲ್ಲಿ ನಡೆವಳಿಕೆಗೆ ಬಂದಿರುವ ಅಳತೆಯು ಯಾವುದನ್ನು ಅನುಸರಿಸಿರುವುದು (ಭೂಮಿಅ. ೦). ೩. (ಸಂಘ, ಸಂಸ್ಥೆ, ಸಭೆ ಮೊದಲಾದುವುಗಳ ಅಧಿವೇಶನಗಳಲ್ಲಿ ನಡೆವ) ಕಾರ್ಯಕಲಾಪ,–ಕಾರ್ಯಕ್ರಮ ಮತ್ತು ಅದರ ವರದಿ : ರಾಯಲ್ ಸೊಸೈಟಿಯ ನಡೆವಳಿಕೆಗಳು (Proceedings of Royal Society. ಇಂಕನಿ). **ನಡವಳಿಕೆ** : ೧. ಅಂದಿನ ತನ್ನ ನಡವಳಿಕೆಯಲ್ಲೇನೋ ಕಳಂಕವಿದೆಯೆಂದು ಮನಸ್ಸು ಹೇಳುತ್ತಿತ್ತು (ಮುರುಕು. ೩೭) ; ಆದರೆ ನಿಮ್ಮ ನಡವಳಿಕೆಗಳು ಅರ್ಥವಾಗದೆ ಹೋದರೆ ಅವು ತಪ್ಪುಮಾಡುತ್ತವೆ (ಕಾಲಮು. ೧೯೨) : ಅರ್ಥವಾಗದ ನಡವಳಿಕೆಯು ಕಕ್ಕ (ವಾತ್ಸಲ್ಯ. ೪೮) ; ವಿದ್ಯಾರ್ಥಿಗಳು ತಮ್ಮ ನಡವಳಿಕೆಯನ್ನು ಉತ್ತಮಪಡಿಸಿಕೊಳ್ಳಬೇಕೆಂಬ ಹುರುಪಿನಲ್ಲಿರುವಾಗ ಅವರನ್ನು ತಿದ್ದುವುದೂ ಶಿಕ್ಷಕನ ಕರ್ತವ್ಯ (ಕ್ರಿಯಾಶಿ. ೨೦). ೩. ನಡವಳಿಕೆಗಳು (Proceedings. ಪತ್ರಿನಿ. ೭೪). **ನಡಾವಳಿಕೆ** : ೨. ವ್ಯವಸಾಯದಲ್ಲಿ ಹಿಂದಿನ ನಡಾವಳಿಕೆ ಹೋಗಿಲ್ಲ (ಕಾಂ).

[ ನಡೆವಳಿ$_1$ + – ಕೆ./ತಮಿ.ನಟವಟಿಕ್ಕೈ ; ತೆಲು. ನಡವಡಿಕ ]

**ನಡೆವಳಿಗ** (ನಾ). (ಅರಮನೆ, ದೇವಸ್ಥಾನ ಮೊದಲಾದುವುಗಳ) ವ್ಯವಹಾರಗಳನ್ನು ನೋಡಿಕೊಳ್ಳುವವನು,–ಮೇಲ್ವಿಚಾರಣೆ ನಡೆಸುವವನು ; ಪಾರುಪತ್ಯಗಾರ : ಪಡೆವಳ್ಳರ ಪರದೇಶಾಧೀಶರ ನಡೆವಳಿಗರ ನಲ್ಮೆಯ ಸಚಿವರ . . . ಪೊಸಪೂವಲಿಗುಡುವ ಮಡದಿಯರ ಮೊತ್ತಂ ಕಣ್ಗೊಳ್ಳಿಪುದುದಾವುದಯದೊಳು (ಜಯುಕಾ. ೧೨-೧೩). [ ನಡೆವಳಿ$_1$ + – ಗ$_2$ ]

**ನಡೆವಳಿದಪ್ಪು** (ನಾ). ನಡೆವಳಿಕೆಯ ತಪ್ಪು ; ನಡತೆ, ಆಚಾರ, ವ್ಯವಹಾರಗಳಲ್ಲಿಯ ದೋಷ : ನಡೆವಳಿದಪ್ಪು ಪ್ರಾಪಂಚಿಕರಿಗಿಲ್ಲದೆ ಜ್ಞಾನಿಪುಗಿರದು (ಗಗತಾ. ೦೬-೪೬). [ ನಡೆವಳಿ$_1$ + ತಪ್ಪು$_{೨೪}$ ].

**ನಡೆವೆಣ** (ನಾ). ನಡೆಯುವ ಹೆಣದಂಥವನು ; ಸತ್ತಂತೆ ಇರುವವನು ; ನಿರ್ವೀರ್ಯ ; ಜೀವಚ್ಛವ : ನಡೆವೆಣನ ನುಡಿವೆಣನ ಸಂಸಾರವೇನವನ (ಬಸವ. ೧೫೭) ; ಸಂಸಾರವೆಂಬ ಮಹಾವ್ಯಾಧಿ ಬಾಧಿಸಿ ನಡೆವೆಣನ ಮಾಡಿ ಕಾಡುತ್ತಿದೆ ನೋಡಯ್ಯಾ (ವಚರ. ೪೩-೧೭೧) : ಕೇಳು ನಡೆವೆಣನೇ ದರಿದ್ರನು ಸಾಲದೆನಿಸಿದ ದಕ್ಷಿಣೆಯ ಯಜ್ಞಾಳಿ ನಿಷ್ಫಲವೆಂದು ನುಡಿದನು ರಾಯ ಕೌಂತೇಯ (ಕುವ್ಯಾಅ. ೨೩-೪೩) ; ತೊಡೆಯನೇಣಿಲು ಬಂದ ಮಗನನು ಮಡದಿ ಪಾತಕಿ ಬೈದು ಭಂಗಿಸಿ ಜಡಿದು ನೂಕಲು ನೋಡುತ್ತಿದ್ದನು ಕಾಣದವನಂತೆ ನಡೆವೆಣನಪನ್ನೇನ ಕೇಳುವೆ (ನಿಭಾಗ. ೪-೭-೨೧) ; ಸತ್ತಡೆ ಯಾಡುವ ನಡೆವೆಣನೊಲು ಕೈಹೊತ್ತುಕೊಂಡಿದೆ ತರಳೆದನು (ಮೋಹತ. ೯-೨೦) ; ಗುಣ ಜಪ್ಪನ ಕುಲ ರೂಪುಗುಂದಿದ ನಡೆವೆಣಕೀಯಲಾಗದು ಪೆಣ್ಣ (ಹದಿಬ. ೫-೦೬). 'ನುಡಿವೆಣ' ಪರಾ. [ ನಡೆ$_1$ + ಪೆಣ ]

**ನಡೆವೆಱು** (ಕ್ರಿ). ನಡಗೆಯನ್ನು ಹೊಂದು ; ಚಲನೆಯನ್ನು ಪಡೆ : ಪ್ರಾಯಂ ಕೂಸಾದೊಡೇನೀ ಸಾಯಕಂ ಕೂಸಕ್ಕುಮೆ ! ಜಗದೆ ನೀಂ ಬಲ್ಲಳ್ಳರ್ ! ಅಂ ನಡೆವೆತ್ತ ಸೀರ್ಪುಟಿಾಗವೆ ! (ರಾಮಾಶ್ವ. ೧೫೪-೨೧).

[ ನಡೆ$_2$ + ಪೆಱು$_1$ ]

**ನಡೆಸರ** 'ನಡೆಸಾರ' ನೋ.

**ನಡೆಸಾರ**, ನಡೆಸರ (ನಾ). ೧. (ನದಿ, ಕಂದಕ ಮೊದಲಾದುವನ್ನು ದಾಟಲು ಕಟ್ಟುವ) ಕೃತಕವಾದ ಮರ, ಬೊಂಬು ಮುಂತಾದುವುಗಳಿಂದ ಕಟ್ಟುವ ಸೇತುವೆ: ಕೋಟೆಯನ್ನು ಹತ್ತುವುದಕ್ಕೆ ಈ 'ಸಾರ'ಗಳನ್ನು ಕಟ್ಟುತ್ತಿದ್ದರು . . . ಸಾರ ಕಟ್ಟುವುದನ್ನು ಅನೇಕರು ನೋಡಿರಬಹುದು. 'ನಡೆಸಾರ' ಎಂಬುವು ಅಗಳನ್ನು ದಾಟಿಹೋಗುವುದಕ್ಕಾಗಿ ಉಪಯೋಗವಾಗು

ತ್ರಿದ್ವವು (ಕರ್ಣಾಟ. ೫೮). ೨. ಕೋಟೆ ಮೊದಲಾದುವನ್ನು ಏರಲು ತಯಾರಿಸಿದ ಒಂದು ಸಾಧನ : ದುರ್ಗಕ್ಕೆ ನಿಚ್ಚಣಿ ಸಾರ್ಚುಂದೊಳೆ ವೀರಸೇತು ನಡಸಾರಂ ಬದ್ದರಂ . . . ಪಡಿಗೋಂಟೆಯೆಂಬ ಬಹುಕೋಟಾ ಯಂತ್ರಸಾಮಗ್ರಿ ತಿಂತಿನಗೊಂಡಾಂತಿರೆ (ಅಜಂಪು. ೧೧-೯೩); ನಡಸಾರಂ ನೆಲವಾಗೆ ಪಡೆಕಡವುವ ಡೆಗ್ಗೆ ಬದ್ದಿರುಂಗಳಿನಾರ್ದಂದೆಡೆಗುಡದಧಟಿಂ ಕೋಂಟೆಯನಡರ್ದಾ ರಿಪುಭಟರನಿಕ್ಕಿದು ಕಲಿಕಾವಂಂ (ತ್ರಿಪುವಿ. ೫-೧೧). ನಡೆಸರ : ೨. ಭೈರವ ಬದ್ದರುದ ನಡೆಸ [ಪಾಠಾಂ. ನ]ರದ ಡಬ್ಬುಕ ಡೆಂಕಣ ಗಳನು ತೂಱಿದರು ನಭಕೆ (ತೊರರಾ. ೬-೧೧-೧೪). 'ನಡೆಸೇತು', 'ಸಾರಮಾರಿ' ಪರ್ಯಾ. [ ನಡೆ$_1$ + ಸಾರ$_1$ ]

**ನಡೆಸು** 'ನಡೆಯಿಸು' ನೋ.

**ನಡೆಸೇತು** (ನಾ). ನಡೆಯುವ ಸೇತುವೆ; ಚಲಿಸುವ ಸೇತುವೆ : ಕೇತನಾವಳಿಯತ್ರ ವಾದ್ಯ ಘೂರ್ಣಿಸೆ ನಡೆಸೇತುಗಳಂತಾನೆ ನಡೆಯೆ ಭೂತಳ ತುಂಬಿ ಪ್ರಾಯ್ದಳ ಬರೆ ಬಂದು ಏನೀತಪುರದೊಳಾಗ ಹೊಕ್ಕ (ಭರತ. ೫೮-೩೭). 'ನಡೆಸಾರ' ಪರ್ಯಾ. [ ನಡೆ$_1$ + ಸೇತು ]

**ನಡೆಸೊಡರು** (ನಾ). (ಯಾರಾದರೂ ಓಡಾಡುವಾಗ ಕೈಯಲ್ಲಿ ಹಿಡಿದು ಮುಂದೆ ದಾರಿ ತೋರಿಸಲು ಉಪಯೋಗಿಸುವ) ದೀವಟಿಗೆ : ನಿನ್ನಂಗಣದಲ್ಲಿ ದೊಗಳುವ ಶ್ವಾನನಯ್ಯಾ ನಿನ್ನ ಮನೆಯ ನಡೆಸೊಡರಯ್ಯಾ (ವಚಸಂ. ೦೯೬-೪೮). [ ನಡೆ$_1$ + ಸೊಡರು (<ಸೊಡರ್) ]

**ನಡೆಹ, ನಡಹ** (ನಾ). ೧. ನಡೆಯುವಿಕೆ ; ಚಲಿಸುವಿಕೆ : "ಗತಿಃ, ವಿಂಖಃ, ವಿಹಾರಃ, ಪರಿಸರ್ಪಃ, ಪರಿಕ್ರಮಃ-ಈ ೫ ನಡೆಹ" (ಹಲಾಯು. ೦೨೦-೪೧). ನಡಹ : ೨. ನಡೆದುಕೊಳ್ಳುವಿಕೆ; ವ್ಯವಹರಿಸುವಿಕೆ : ಸ್ವತಂತ್ರ ವೃತ್ತಾಂತನಂ ವಿಪ್ರಕ್ರಿಯೆಸಲೊಲಿದುತೆ ನಡಹಮಕ್ಕುಂ (ಮಂಗರಾ. ೦೩೩-೩೦). [ ನಡೆ$_1$ + - ಹ$_2$ ]

**ನಡ್ಡಿಮೂಗು** (ನಾ). ಚಪ್ಪಟೆಯಾದ ಮೂಗು; ತಗ್ಗಿದ ನಾಸಿಕ : "ಅವಟೀಟಃ, ಅವನಾಟಃ, ಅವಭ್ರಟಃ, ನತನಾಸಿಕಃ -೪ ಕುಳಿಮೂಗಿನವನ ಹೆಸರುಗಳು, ಚಿಕ್ಕಮೂಗುಳ್ಳವನು, ನಡ್ಡಿಮೂಗುಳ್ಳವನು" (ಸಿದ್ಧಾಂಶಿ. ೦೫೭). [ ←ತೆಲು. ನಡ್ಡಿಮುಕ್ಕು ]

**ನಡ್ಡೆ** (ನಾ). ಜೊಂಡು ಹುಲ್ಲಿನ ರಾಶಿ : "ನಡ್ವಾ, ನಡಸಂಹತಿಃ – ಹೊಲ ಗದ್ದೆಗಳ ಬಗುವುಗಳಲ್ಲಿಯೂ, ತೋಟದ ಸಾಲಿಗೇ ಬದುವುಗಳಲ್ಲಿಯೂ ಗುಂಪಾಗಿ ಬೆಳೆದಿರುವ ಹುಲ್ಲುಗಳ ಸಮೂಹ" (ಸಿದ್ಧಾಂಶಿ. ೦೫೩). [ ಸಂ. ನಡ್ವಾ ]

**ನಡ್ವಲ, ನಡ್ವಳ** (ವಾ). ಜೊಂಡುಹುಲ್ಲು ಹೆಚ್ಚಾಗಿ ಬೆಳೆದ ಭೂಮಿ : "ನಡ್ವಾನ್, ನಡ್ವಲಃ, ನಡಪ್ರಾಯಃ,-ಶತ್ರ ಹುಲ್ಲು ಬಹಳವಾಗಿರುವ ದೇಶದ ಹೆಸರು, ಹುಲ್ಲುನೆಲದ ಪ್ರಾಂತ್ಯವು" (ಸಿದ್ಧಾಂಶಿ. ೮೪). ನಡ್ವಳ : "ನಡ್ವಳಂ, ನಳಸಂಯುತಂ-ಈ ೨ ನಾ(ಣ)ನಲುಳ್ಳ ಭೂಮಿ" (ಹಲಾಯು. ೨೬-೪); "ನಡ್ವಳಂ ನಳಯುತಂ ನಳ್ಳುನೆಲನಕ್ಕು" (ಮಂಗರಾ. ೨೮-೨). [ ಸಂ. ]

**ನಡ್ವಳ** 'ನಡ್ವಲ' ನೋ.

**ನಣ್ಕೆ** (ನಾ). ನಂಟತನ; ಬಾಂಧವ್ಯ : ಸಂಸಾರದಪಾಯುಮುಮಂ ನಿನ್ನಱಿವಿನ ಬಲ್ಮೆಯುಮಂ ಧೈರ್ಯದೊಳಾದ ಪಣ್ಕೆಯುಮಂ ಕಂಡಂ (ಜೀವಸಂ. ೨೬-೪೭ವ). [ <ನಣ್ಪು ? ]

**ನಣ್ಪು** (ನಾ). ೧. ನಂಟು ; ಬಾಂಧವ್ಯ ; ಸಂಬಂಧ : "ನಣ್ಪು ನಂಟು" (ಕರ್ಣಾನಿ. ೨೩); ಕುಲಜನುಮಲ್ಲಂ ನಣ್ಪಿನ ಬಲಮುಂ ತನಗಿಲ್ಲ ಕಣ್ಗಮೇಳಿದನಾರೊಳ್ ನೆಲಸಿರನೆಲ್ಲಿಯುಮ[ವನ]ಂ ಚಲವೆಂದುಂ ಪತ್ತುವಿಡದದೊಂದುಂಟು ಗುಣಂ (ಕವಿರಾ. ೩-೦೬೨) ; ಬೆಳ್ಗಟ್ಟಿಯ ನರಸರ್ಕಳೇಱುವುದಂ ಕಂಡುದಱಿಂದುತ್ತಮಕುಲದವರ್ಗಳ್ಗೆ ಕುಲಜರಲ್ಲದವರೊಡನೆ ಮದುವೆಯೊಳ್ ತೊಟ್ಟ ಪಣ್ಪುಗಳಕ್ಕುಂ (ಪಡ್ಡಾ. ೮೭-೦೩); ಸುಯೋಧನನೆನೆಗೊಳ್ಕೆಯ್ದು ಕೃತಮಂ ಪೆಱಗಿಕ್ಕಿ ನೆಗಟ್ಚಿ ಪಸಾಸ ಪಣ್ಪಿನ ನೆವದಿಂದೆ ಪಾಂಡವರನಾನೊಳಪೊಕ್ಕೊಡೆ ನೀಮೆ ಪೇಸಿರೇ (ಪಂಪಭಾ. ೯-೬೮) : ರಾಗದಿಂದಿನ್ನಿವರ್ಗೆ ಮದುವೆಯಂ ಮಾಳ್ಪುದೆಂದಟ್ಟಿದಂ ನಿಮ್ಮನುಜನ್ನಂ ನಿಮ್ಮ ನಣ್ಪಂ ಬಯಸಿ ಪದೆಪಿನಿಂದೆಮ್ಮ ವಿದ್ಯಾಧರೇಂದ್ರಂ (ಶಂರಾಮಾ. ೧೧-೧೧೪) ; ಎನ್ನವರೆಂದು ಪುತ್ರಪಿತೃಮಿತ್ರ ಕಳತ್ರದ ನಣ್ಪು ನಾಡೆ ಸೋವಂ ನಿನಗುಂಟುಮಾಡೆ (ಜೀವಸಂ. ೬೮-೧೨) ; ಪೆಂಪಿನ ಸೊಂಪಿನ ನಣ್ಪನಾಳ್ದು ಪೊಂಗೊಡನನಮರ್ಚಿದುತೆಸೆವುವಾ ಲಲಿತಾಂಗಿಯ ಪೀವರಸ್ತನಂ (ಕಾವ್ಯಸಾ. ೩೦೫); ನಿನ್ನಯ ಮಱುಕಳ ಒಡಮಱುಗಿದನಾನ್ ಎಮ್ಮಯ ನಣ್ಪಿಂದಾನ್ ಸೆಳೆಗೊಂಡೆನ್ (ಬಲ್ಪಶ್ರ. ೦೭-೩೪೦). ೨. ಸ್ನೇಹ; ಕೆಳೆ : ನೋಡು ನಣ್ಪಂ ನಿಮಗಮೆಮಗಮಾಮ್ನಾಯದಿಂ ಬಂದುದಿಂತೀ ಜನಧರ್ಮಂ (ಆದಿಪು. ೨-೩೦); ಪಗೆಗೆ ಕಣಿಯೊಂದುಂಟೇ ನಣ್ಪಿಂಗಮಾಗರ ಮುಂಟೆ ನೀಂ ಬಗೆಯ ಪಗೆಯುಂ ನಣ್ಪುಂ ಕಯ್ಕೊಂಡ ಕಜ್ಜದಿನಲ್ತೆ ಪುಟ್ಟುಗುಮರಸುಗಳ್ಗೆ (ಪಂಪಭಾ. ೦೩-೧೧); ಒರ್ಮೆ ಬಂದೆನಗೆ ಮಾಳ್ಪುದು ಪೆರ್ಮೆಯ ನಿಮ್ಮ ನಣ್ಪನಿಂ ಜನಿಯಿಸಿದೀ ಕದರ್ಥನೆಗೆ ಸೈರಿಪುದು (ಕಾದಂಉ. ೧೯೩); ಪಲಕಾಲದ ರಾಕ್ಷಸವಾನರವಂಶದ ನಣ್ಪಿನ್ನೀದವುಟಿದುದೆಂಬುದು ಲೋಕಂ (ಶಂರಾಮಾ. ೦೦-೧೬೨); ಮತ್ಪೂರ್ವಂ ನೀನೀಗಳಾಕೆಯ ನಣ್ಪನೇಕೆ ಮಾಣ್ದೆಯೆಂದಾ ಕೆಳೆಯಂಗಿಂತೆಂದಂ (ಲೀಲಾವ. ೨-೧೦೧೨ವ). ೩. ನಂಬಿಕೆ ; ವಿಶ್ವಾಸ : ಆಗಳಾ ಮಾನವೇಂದ್ರನ ಮದಗಜಮಂ ಸದೆವಂತೆ ಮದಗಜಮಂ ಮಾಟಿದೇವನಾರ್ಪಿಂ ಸದೆಯೆ ಭಕ್ಷವ್ರಜಂ ಕಂಡು ನಣ್ಪನೊಳಕೊಂಡು ಕೊಂಡಾಡುತ್ತುಮಿರೆ (ವೃಷವಿ. ೦೨-೩೧ವ). ೪. ಪ್ರೀತಿ; ಅನುರಾಗ: "ನಣ್ಪಲ್ಲಯಂ ಪ್ರಸರವೆಂಬುದು" (ಹಲಾಯು. ೦೩೫-೨೪) ; ಪಾಂಡುರ ಕೀರ್ತಿಯ ನೆಗಟ್ಟುಂ ಪಾಂಡುತನೂಭವರ ನಣ್ಪುಂ ನೆಗಟ್ಟುಮೆ ಬಟಿಯಂ (ಜಗವಿ. ೦೫-೫೩) ; ಪಡೆಮುದೆ ಬರ್ಕುಮೇ ಸುತನ ವಕ್ತ್ರಮನೀಕ್ಷಿಪ ಲಲ್ಲೆಗೈವ ನಣ್ಪಿಡಿದನುರಾಗದಿಂ ನಗಿಸುವಳ್ಕಱೊಳಪ್ಪುವ . . . ಅಡಿಗಡಿಗಂ ತೊದಳ್ನುಡಿಯುನಾಲಿವ ಸೈಪು ಸರೋರುಹೇಕ್ಷಣೇ (ವೃಷವಿ. ೨-೩೩) : ಶಾರೇಶು ನಣ್ಪಂ ಮು[ಮು]ತ್ತಾ ರೋಹಿಣಿಯಲ್ಲಿ ಕೂರ್ಪನವಳೇ ಧನ್ಯಳ್ (ನರಡ. ೫೨-೧೨೦).

[ ನಂಟು$_1$ + - ಪು$_2$/ತಮಿ. ನಣ್ಪು; ತೆಲು. ನನ್ಪು, ನನುವು, ನನುವು ]

**ನಣ್ಪುಗೆ?** (ಕ್ರಿ). (?) : ಅನ್ನೆಗಂ ಮುಂಬಯ್ಸರಿರ್ವರುಂ ಬಂದದು ಕಾಣದ ಮಾಣದೆ ತಮ್ಮೊಳೋರೊರ್ವರಂ ನಣ್ಪುಗೆ ಕಪ್ಪಂಗೆಟ್ಟು ಇಱಿಯಿಱಿದು ತಮ್ಮೊಳೆರ್ವರುಮಱಿಯಮೆಯಿಂ ಬಿಟ್ಟಿರಲ್ಕೆ (ನೇಮಿಪು. ೩-೭೦ವ). [ ? ಇದು 'ನಣ್ಪುಗೆಟ್ಟು' ಎಂಬುದರ ಸ್ಖಲಿತ ರೂಪವಿರಬಹುದು ]

**ನಣ್ಪುಗೆಯ್** (ಕ್ರಿ). ಸಂಬಂಧವನ್ನುಂಟುಮಾಡು, -ಅಳವಡಿಸು : ಕಳೆಯಂ ಪತ್ತಿಸಿ ರಾಗಮಂ ನಿಲಿಸಿ ಸುಣ್ಣಂ ನಣ್ಪುಗೆಯ್ದಿಂಪನಿರ್ಕೆ ಗೊಂಡೊಟ್ಟಜೆಯಂ ನಿವಿರ್ಚಿ . . . ಗೋವಳರಾಯಂ ಕೊಟಲೂದಿದಂ ನೆಗಟ್ಟಿನಂ ಮಾಧುರ್ಯಶೌರ್ಯಸ್ಸನಂ (ಜಗವಿ. ೫-೨). [ ನಣ್ಪು + ಕೆಯ್$_1$ ]

**ನಣ್ಪುನೆತ್ತರ್** (ನಾ). ನಂಟಿನ ರಕ್ತ ; ಸಂಬಂಧಿಗಳ ನೆತ್ತರು : ನೆನೆಯುವು ದುರ್ವಿಧಿಯ ಅಣ್ಣಂದಿರಿರ್ವರನ್ ಸಮಸಾವು ಸತ್ತರ್ ನಣ್ಪುನೆತ್ತರನಸಾಱು. ಒರೊರ್ವರಾ ಕಯ್ಮುನೊರ್ಪಗಲ್ ಕೊಲೆಯಿನ್ (ಅಂತಿಗೊ. ೩-೯೭). [ ನಣ್ಪು + ನೆತ್ತರ್ ]

**ನಣ್ಪುವೆಱು** (ಕ್ರಿ). ವಿಶ್ವಾಸವನ್ನು ಹೊಂದು ; ನಂಬಿಕೆಯನ್ನು ಪಡೆ : ಕುಸುಮ ವಿಲೇಪನಾದಿ ಬಹುವಸ್ತುಗಳಂ ಮಿಗೆ ಕೊಟ್ಟು ನಣ್ಪುವೆತ್ತೆಸೆವನ ನೊರ್ವನಂ ಚರನನೊಲ್ದನುಯಾಯಿಯುನಿತ್ತು . . . ಕಳುಪಿದಂ (ವೃಷವಿ. ೯-೫). [ ನಣ್ಪು + ಪೆಱು$_1$ ]

**ನತ** (ಗು.) ೧. ಬಾಗಿದ ; ಬಗ್ಗಿದ ; ವಕ್ರವಾದ. 'ನತಚಂಚು' ಪರಾ. ೨. ಎರಗಿದ ; ನಮಸ್ಕರಿಸಿದ ; ವಂದಿಸಿದ : ಅತಿವಿಶದಯಶೋವೃತ್ತಂ ನತಸಕಳಾರಾತಿಜನವಿತಾನಂ ಮತ್ತಂ ವಿತತಶ್ರೀಸಂಪತ್ತಂ ಶತಮುಖ ಸದೃಶಾನುಭಾವನೊಲವಿಂ ಪೆತ್ತಂ (ಕವಿರಾ. ೨-೪೪) ; ನತನಾನಾಮರಮೌಳಿ ರತ್ನಕಿರಣಂ ನಾನಾಪ್ಸರಃಕೇಕರದ್ಯುತಿ ನಾನಾಚಮರೀಜವಾಯು ಸಭೆಯಂ ತಳ್ಪೊಯ್ಯಲಿರ್ದಂ ಜಗತ್ಪತಿಯೊಡ್ಡೋಲಗದೊಳ್ (ಜಗವಿ. ೧-೨೬) : ನತನಾನಾವನಿಪಾಲವಮೌಳಿಮಣಿಮಾಲಾಸಂಘಸಂಘಟ್ಟನೋದ್ಧತರೇಣುವ್ರಜ ವರ್ಣಪೂರರಚಿತಂ ರಾಜಾಲಯಪ್ರಾಂಗಣಕ್ಷಿತಿಯಾಗುತ್ತಿರೆ ನಿಚ್ಚವಿಂತರಸುಗೆಯ್ಯುತ್ತಿರ್ಪಂ . . . ತತ್ಖೇಚರಾಧೀಶ್ವರಂ (ಶಾಂತೀಶ್ವ. ೬-೫) ; ನತ ಸಂತತಿಚಿಂತಾಮಣಿ ಭುವನಸ್ತುತಲಿಂಗಂ ತಾನಿದೆಂದು ಪೊಗಳ್ದಂ ಭೂಪಂ (ರಾಜಶೇ. ೧೩-೫೧). ೩. ಕುಗ್ಗಿದ ; ತಗ್ಗಿದ. 'ನತನಾಸಿಕ' ಪರಾ. ೪. ಶರಣಾದ. 'ನತಜನ' ಪರಾ. (ನಾ). ೫. ಬಾಗಿದುದು ; ವಕ್ರವಾದುದು : "ವಕ್ರಂ, ವೃಜಿನಂ, ಭಂಗುರಂ, ಆವಿದ್ಧಂ, ವೇಲ್ಲಿತಂ, ನತಂ, ಜಿಹ್ಮಂ . . . ಊರ್ಮಿಮತ್-ಈ ೧೨ ಕೊಂಕಿದುದು" (ಹಲಾಯು. ೧೦೬-೧೧) : "ನತಂ, ನಮ್ರಂ, ಬಂಧುರಂ-ಈ ೩ ಎಱಗಿರ್ದುದು" (ಹಲಾಯು. ೧೨೫-೬೫) ; "ನಮ್ರಮೆನೆ ನತಮೆನಲ್ಕೆಱಗುವುದು" (ಮಂಗರಾ. ೦೩೪-೬೨). ೬. ನಮಸ್ಕರಿಸಿದವನು ; ನಮಸ್ಕಾರ ಮಾಡಿದವನು : ನತನಾಗಿ ಕೃಷ್ಣನಿರೆ ಕುರುಪತಿಯೆಂದು (ನೇಮಿಪು. ೧೧-೨೩) ; ನತನಾದನಲ್ತೆ ಕಾಣಾತ್ತತಿರಾಗದೆ ಚಂದ್ರಭೂತಿ ಕಂದರ್ಪಮಹೀಪತಿಗೆ (ಕುಸುಮಾ. ೮-೩) : ಬೇಡಿದುದನಿತ್ತು ಸಲಹುವೆನಂಜಲೇವುದೆನೆ ಕೃತಕೃತ್ಯನಾಗುತುಂ ನಂಬಿಯಣ್ಣಂ ನಿಂದು ನತನಾಗಿ ಶಂಭುವಂ ಹಾಡತೊಡಗಿದನೆಂದು (ನಂಬಿರ. ೬-೧೪೬): ಮಂದರಗಿರಿ ಧೈರ್ಯನೆಂದೆನಿಪ ಪ್ರಭೇಂದುಮುನಿಪಗೆ ನತನಪೆನೂ (ಧನ್ಯಕ. ೮): ಹರುಷದಿಂ ಮುಳುಗೆ ಗರ್ಭಂ ಜಾಱೆ ಪುರುಷತ್ವ ತ್ವರಿತದಿಂದ ವರನಾವರಿಸೆ ಸುರಜಾಲತ್ರ್ಯಂಬಕೆ ನತರಾದರು (ಐಕೋಪು. ೧೩-೫೭). ೭. ಒಂದು ಗ್ರಹಕ್ಕೂ ಮತ್ತು ಖಗೋಳ ಮಧ್ಯರೇಖೆಗೂ ಇರುವ ಅಂತರ. 'ನತಕೋನ' ಪರಾ. [ ಸಂ. ]

**ನತಕೋನ** (ನಾ). "(ನಕ್ಷತ್ರ ಮೊ.ಗಳ) ಕ್ಷಿತಿಜದ ಕೆಳಗಿನ ಕೋನದೂರ : ನತಿ ; ಅವನತಿ . . . ನತಕೋನ" (Depression. ಇಂಕನಿ).
[ ನತ + ಕೋನ (<ಕೋಣ್) ]

**ನತಚಂಚು** (ನಾ). ೧. ಬಾಗಿದ ಕೊಕ್ಕು. ೨. ಬಾಗಿದ ಕೊಕ್ಕನ್ನುಳ್ಳುದು: ಕುಡಿದಳಿರನುಗುರ ಮೊನೆಯೊಳ್ ಪಿಡಿದುದು ನತಚಂಚು ನೀಡಿ ಗಳಕಂದಳಮಂ ಮಡಗೆದಱೆ ನವಾಮ್ರದ ಪೂಮಿಡಿಯಂ ಕರ್ದುಕಿದುದು ಪರಭೃತಂ ಪರಭೃತದಿಂ (ಮಲ್ಲಿಪು. ೫-೩೮). [ ನತ + ಚಂಚು₂ ]

**ನತಜನ** (ನಾ). ೧. ನಮಸ್ಕರಿಸಿದ ಜನ : ನತಜನಕಭಿಮತವೀವಪ್ರತಿಮನೆನಿಪ್ಪಭವಸುತನೆ ಚಿತ್ತೈಸು (ತ್ರಿಪುವಿ. ೩೨-೪೬) : ನತಜನವರದಂ ಶ್ರುತಿನುತಶುಭಗಂ . . . ರತಿಪತಿಹರಣಂ ಜಿತಭವಮರಣಂ ಕ್ಷಿತಿವರನಿದಿರೊಳಿ ನಿಂದಂ (ಹವಿಸ್ಮರ. ೨-೧೦). ೨. ಶರಣಾದವನು : ನತಜನಾಶ್ರಯಧೇನು ಭಕ್ತವತ್ಸಲ ಕೃಪಾಕರ ಮಹಾಭಯನಿವಾರಣ ನೃಸಿಂಹ ತ್ರಾಹಿಯೆನುತಿರ್ದನಾ ಸುಧನ್ವಂ ಮಱೆಯದೆ (ಜೈಮಿಭಾ. ೧೧-೩೬). [ ನತ + ಜನ ]

**ನತದೃಷ್ಟ** (ನಾ). ಅದೃಷ್ಟಹೀನವ್ಯಕ್ತಿ; ದುರ್ದೈವಿ; ದುರದೃಷ್ಟಶಾಲಿ: ಒಟ್ಟನಲ್ಲಿ ನಾವು ಮೂವರು ಅವರ ಕುಟುಂಬದಲ್ಲಿಯ ಮೂರು ನತದೃಷ್ಟ ವ್ಯಕ್ತಿಗಳೆಂದು ಪರಿಗಣಿಸಲ್ಪಟ್ಟೆವು (ಸ್ಮೃತಿಚಿ. ೩೩); ನನ್ನಂತಹ ನತದೃಷ್ಟಳನ್ನು ಬಿಟ್ಟು ಅವರು ಬೇರೆ ಯಾರನ್ನಾದರೂ ಪ್ರೀತಿಸಿದ್ದರೆ ಎಷ್ಟು ಸುಖವಾಗಿರುತ್ತಿದ್ದರು ! (ದೂರಸ. ೨೯೦) ; ನೀನು ಎಂದೂ ನತದೃಷ್ಟರ ಕೈಹಿಡಿಯುವುದಿಲ್ಲ (ಪದಭಾ. ೬೬) : ನಾನು ನತದೃಷ್ಟ (ದೀಪದ. ೧೫೨).
[ <ಸಂ. ನತಾದೃಷ್ಟ (ನತ + ಅದೃಷ್ಟ) ]

**ನತದೃಷ್ಟೆ** (ನಾ). ಭಾಗ್ಯಹೀನಳಾದವಳು ; ದುರ್ದೈವಿ : ಆಕೆ ನತದೃಷ್ಟೆಯಾದ್ದರಿಂದಲೇ ಎಲ್ಲವನ್ನೂ ಕಳೆದುಕೊಂಡಳು (ರೂಢಿ).
[ ನತದೃಷ್ಟ + -ಎ₂ ]

**ನತದೇಹ** (ನಾ). ಬಾಗಿರುವ ದೇಹ ; ಬಗ್ಗಿರುವ ಶರೀರ : ನತದೇಹವಂ ಸೀಳಿ ಭಿನ್ನಭಿನ್ನಂ ಮಾಡಿದೊಡೆಯಾತ್ಮರೂಪಿರ್ಪುದೇ (ವೀಶೈಪು. ೪-೬-೩).
[ ನತ + ದೇಹ ]

**ನತನಾಸಿಕ** (ನಾ). ತಗ್ಗಾದ ಮೂಗುಳ್ಳವನು ; ಚಪ್ಪಟೆಯಾದ ನಾಸಿಕವುಳ್ಳವನು ; ನಡ್ಡಿಮೂಗುಳ್ಳವನು : "ಅವಟೀಟಃ, ಅವನಾಟಃ, ಅವಭ್ರಟಃ, ನತನಾಸಿಕಃ-೪ ಕುಳಿಮೂಗಿನವನ ಹೆಸರುಗಳು, ಚಿಕ್ಕಮೂಗುಳ್ಳವನು, ನಡ್ಡಿಮೂಗುಳ್ಳವನು" (ಸಿದ್ಧಾಂತಿ. ೧೫೬). [ ನತ + ನಾಸಿಕ ]

**ನತಬಂಧು** (ನಾ). ಶರಣು ಬಂದವರಿಗೆ ನಂಟನಾಗಿರುವವನು : ಬಂಧುರದ ವಿದ್ಯೆಯನು ಕಲಿಸಿ ಮದಾಂಧನ ಕೊಲಿಸಿದನಲಾ ನತಬಂಧುವನು ನಾವಗಲಿದುಳಿವೆವದೆಂತು (ನಿಭಾಗ. ೧-೧೦-೫೨).
[ ನತ + ಬಂಧು ]

**ನತಭುವನತ್ರಯ** (ನಾ). ಮೂರುಲೋಕದವರಿಂದಲೂ ನಮಸ್ಕರಿಸಲ್ಪಡುವವನು,-ವಂದಿಸಲ್ಪಡುವವನು ; ತ್ರಿಲೋಕಪೂಜ್ಯ : ನತಭುವನತ್ರಯನೀಶ್ವರಸುತನವಿರಳದಾನನಧಿಕಸಿದ್ಧಿನಿಧಾನಂ ಧೃತವರಶುಗಣಪನಸ್ಮತ್ಕೃತಿಯಂ ಕೆಯ್ಕೊಂಡು ಮಾಳ್ಕೆ ನಿರ್ವಿಘ್ನತೆಯಂ (ಲೋಕೋಪ. ಪೀಠಿಕೆ ೨). [ ನತ + ಭುವನತ್ರಯ ]

**ನತಮುಖಿ** (ನಾ). ಮುಖವನ್ನು ಬಾಗಿಸಿದವಳು ; ತಲೆಯನ್ನು ತಗ್ಗಿಸಿದವಳು : ನನ್ನ ದೃಷ್ಟಿ ಮತ್ತು ಅವಳ ದೃಷ್ಟಿಗಳು ಒಂದು ಕ್ಷಣ ಕಾಕಲಾಡಿದವು. ಅವಳು ಪುನಃ ನತಮುಖಿಯಾದಳು (ಹೇಮಂತ. ೧೯೪).
[ ಸಂ. ನತಮುಖೀ (ನತ+ಮುಖ+-) ]

**ನತರಕ್ಷಾಚತುರ** (ನಾ). ನಮಸ್ಕರಿಸಿದವರನ್ನು ಕಾಪಾಡುವುದರಲ್ಲಿ ಜಾಣನಾದವನು : ಶರಣು ಬಂದವರನ್ನು ರಕ್ಷಿಸುವುದರಲ್ಲಿ ಕುಶಲನಾದವನು : ಶ್ರೀಚಂಡಿಕಾಮುಖೇಂದುವಿಲೋಚನರುಚಿಚಂದ್ರಿಕಾಚಕೋರಂ ನತರಕ್ಷಾಚತುರಂ ಭವಪಾಶವಿಮೋಚಕನೆಮಗೀಗೆ ಸೌಖ್ಯಮಂ ಶಿವಲಿಂಗಂ (ರಾಜಶೇ. ೧೧-೧). [ ಸಂ. ]

**ನತವಾಣಿ** (ನಾ). ಸರಸ್ವತಿಯಿಂದ ನಮಸ್ಕೃತಳಾದವಳು; ವಾಣಿಯಿಂದ ಪೂಜ್ಯಳಾದವಳು : ನತವಾಣಿ ಕನಕಾಚಲಶ್ರೋಣಿ ಕಾಳಾಹಿವೇಣಿ (ಕನಾಶೇಕ. ೨೨೪). [ ನತ + ವಾಣಿ₁ ]

**ನತಾಸ್ಯ** (ನಾ). ಮುಖವನ್ನು ಬಾಗಿಸಿದವನು ; ತಲೆಯನ್ನು ತಗ್ಗಿಸಿದವನು : ನಯದಿಂದೆಳ್ದು ನತಾಸ್ಯನಾಗಿ . . . ದಿಟ್ಟವಾರಿಯ ಧೀರಂ ವೃಷಭೇಂದ್ರನಪ್ರತಿಮಕಾಯಂ ಮುಂದೆ ನಿಂದಿರ್ಪುದುಂ (ಗಿರಿಕ. ೧೦-೭೮).
[ ನತ + ಆಸ್ಯ ]

**ನತಿ** (ನಾ). ೧. ಬಾಗಿರುವಿಕೆ : ವಕ್ರವಾಗಿರುವಿಕೆ. ೨. ನಮಸ್ಕಾರ : ವಂದನೆ : ಜಿನಚರಣದೊಳಿರೆ ನತಿ ಮತಿ ಜಿನಗುಣಸಂಪತ್ತಿಯೊಳ್ ಪೊದಟ್ಟಿರೆ (ಶಾಂತಿಪು. ೬-೮೦) ; ನಿರ್ಮಳಮೌಕ್ತಿಕಾಕ್ಷತೋತ್ಕರವನುಪೇಂದ್ರಪಾದದುಪಭೂಮಿಗೆ ಸೂಸಿದನುತ್ಸಹಂ ಪೊದಟ್ಟಿರೆ ವನಪಾಳಕಂ ನತಿಚಳಾಳಕ[ಪಾಠಾಂ. ವಿನತಜಾಲಕ]ನುದ್ಗತರೋಮಜಾಳಕಂ (ಆಗವಿ. ೧೪-೪೩) ; ನತಿ ನುತಿಪೂಜೆಗಳಂ ಸನ್ನುತಿ ಜಿನಪತಿಗಿಂತು ಭಕ್ತಿಯಿಂ ಮೊದಲೊಳ್ ಗೋಪತಿ ಮಾಡಿ ನೋಡಿದಂ ದಶಶತನಯನದೆ ಸಮವಸೃತಿಯ ಶೋಭೋನ್ನತಿಯಂ (ವರ್ಧಪು. ೧೫-೮೬) ; ನತಿಯಂ ನುತಿಯಂ ಸತ್ಸಂಗತಿಯಂ ಸಂಸ್ಕೃತಿಯನತಿಶಯಾಸ್ಪದ ಪೂಜಾತತಿಯಂ ಜಿನೇಂದ್ರಪದದೊಳ್ ಮತಿಮಂತಂ ಮಾಳ್ಪುದರ್ಥಿಯಿಂ ಸ್ವಾರ್ಥಪರಂ (ಉಸಾರ. ೫೧) ; ಶ್ರೀಗುರುವಿಗಾಗಿ ತನುಧಾರಿಯಾಗಿ ಬಂದಂಥ ಸದಾಶಿವಗೆ ಅನಂತಾನಂತ

ನತಿಯು ಉಪಕ್ಕತಿಯು ಒಪ್ಪಿಸುವೆವು ಇವಗೆ (ಅರಳು. ೨೯೩-೨).೩. "(ನಕ್ಷತ್ರ. ಮೊ. ಗಳ) ಕ್ಷಿತಿಜದ ಕೆಳಗಿನ ಕೋನದೂರ: ನತಿ; ಅವನತಿ . . ನತಕೋನ" (Depression. ಇಂಕನಿ). [ಸಂ.]

**ನತಿಗೆಯ್, ನತಿಗೈ** (ಕ್ರಿ). ನಮಸ್ಕರಿಸು; ಪೊಡಮಡು; ಕೈಮುಗಿ: ಭಯಭಕ್ತಿಯಿಂದಡಿಗಳ್ಗೆ ಲೀಲೆಯಿಂ ದಂಡವನ್ನತಿಗೆಯ್ದು ಮುಗುಳ್ದಿಳ್ದು ನಿಂದು ಕರಯುಗವ ಮುಗಿದು (ಕುಮಾವ್ಯ. ೨-೫೧). ನತಿಗೈ: ಪ್ರತಿಮೆಯ ರೂಪದ ಪಂಕಜನಾಭಗೆ ನತಿಗೈದು ನಲವೇರುವಂತೆ ಪತಿಯ ರೂಪದ ತನ್ನ ಪಾಲಿಗೆ ಬಂದ ಶ್ರೀಪತಿಯ ಪಾದವ ಭಜಿಸುವುದು (ಹರಿಬ. ೩-೭).

[ನತಿ + ಕೆಯ್$_1$]

**ನತಿಗೈ** 'ನತಿಗೆಯ್' ನೋ.

**ನತೆ** (ನಾ). ನಮಸ್ಕಾರ ಮಾಡಿದವಳು: ನತೆಯಾಗಿ ತತ್ಪಪಶ್ರುತ ಯುತೆಯರ ಪಕ್ಕದೊಳಿ ಪರಮನಿಷೆ ಯನರ್ಹನ್ಮತಕಥಿತಸಿಂಹ ನಿಃಕ್ರೀಡಿತಾ ದಿನೋಂಪಿಗಳನಾಂತು ನೋನುತ್ತುಮಿರ್ದಲ್ (ಮಹಾನೇ. ೧೭-೧೩).

[ಸಂ. ನತಾ]

**ನತೋನ್ನತ** (ಗು). ಏರು ತಗ್ಗುಗಳುಳ್ಳ; ಹಳ್ಳತಿಟ್ಟುಗಳಿಂದ ಕೂಡಿದ ಇಳಿದೇರಿ ಮುರ ಪೊದೆಯ ಚೆಲ್ವಿನ ನತೋನ್ನತವನಾದ್ರಿಸೀಮೆಯನಾ ವಿಭೀಷಣಂ ಮರೆಯಾಗೆ (ಶ್ರೀರಾಮಾ. ೮೧೭-೧೮೩). 'ನಿಮ್ನೋನ್ನತ' ಪರಾ. [ನತ + ಉನ್ನತ]

**ನತ್ಕುಟಕ** (ನಾ). [ಛಂದ] ಪ್ರತಿಯೊಂದು ಚರಣದಲ್ಲಿಯೂ ಹದಿನೇಳು ಅಕ್ಷರಗಳಿರುವ ಒಂದು ಸಮವೃತ್ತದ ಹೆಸರು; ಸುಮಂಗಲಿ: ನಜಭಜಜಂಲಗಂ ಬರೆ ಸುಮಂಗಲಿಯೆಂಬರದಂ ಇದಕ್ಕೆ ನತ್ಕುಟಕ ಎಂದು ಮತ್ತೊಂದು ಹೆಸರು (ಛಂಬು. ೮೩). 'ನರ್ಕುಟಕ' ಪರಾ. [?]

**ನತ್ತ** (ನಾ). (?) : ಪೂರು ನತ್ತದ ಸುತ್ತಲೂ ಮತ್ತು ಇತರ ಕಿಷ್ಕಂಧವಾದ ಕುರುಮುಂದೆ ಹಿತ್ತಲುಗಳು ಮುಂತಾದ ಸ್ಥಳದಲ್ಲಿ ಬಾಂದುಗಳಿಗೆ ಬದಲು ಕಲ್ಲುಗಳನ್ನು ಹೂಳಬಹುದು (ಭೂಮಿಆ. ೨೪). [?]

**ನತ್ತಿ** 'ನತ್ತು$_2$' ನೋ.

**ನತ್ತು$_1$** (ಕ್ರಿ). (ಸ್ವಾಭಾವಿಕವಾಗಿ ಅಥವಾ ಉದ್ರೇಕದಿಂದ) ಬಿಕ್ಕುತ್ತ ಮಾತನಾಡು; ಉಗ್ಗು; ತೊದಲು.

**ನತ್ತಿ ಮಾತಾಡು** = "(ಸ್ವಾಭಾವಿಕವಾಗಿ ಅಥವಾ ಉದ್ರೇಕದಿಂದ) ಬಿಕ್ಕುತ್ತ, ಉಗ್ಗುತ್ತ, ನತ್ತಿ,-ಮಾತಾಡು, ಹೇಳು" (Stammer. ಇಂಕನಿ); ನತ್ತಿ ಮಾತಾಡುವವನ ಮಾತು ಸುತ್ತಿ ತೊಳಲಿದರೆ ಪಟ್ಟು ಆದೀತೇ? (ಗಾದೆ). [ದೇ. ■ ಮಲ. ತೆಲು. ನತ್ತು]

**ನತ್ತು$_2$, ನತ್ತಿ** (ನಾ). ಉಗ್ಗುವಿಕೆ; ಬಿಕ್ಕುತ್ತ ಮಾತನಾಡುವಿಕೆ; ಬಿಕ್ಕಲು: "ಉಗ್ಗು, ಬಿಕ್ಕಲು, ನತ್ತು" (Stammer. ಇಂಕನಿ). ನತ್ತಿ: "ಉಗ್ಗು, ಬಿಕ್ಕಲು, ತೊದಲು, ನತ್ತಿ" (Impediment in one s speech. ಇಂಕನಿ); ಶಾಸ್ತ್ರಿಗಳ . . . ನಾಲಿಗೆಯಲ್ಲಿ ನತ್ತಿ ಇಲ್ಲದೆ ಇದ್ದಿದ್ದರೂ ಬಹುಶಃ ಅವರು ಅದೇ ಶಿಕ್ಷಣಕ್ರಮವನ್ನು ಅನುಸರಿಸುತ್ತಿದ್ದರೆಂದು ತೋರುತ್ತದೆ (ಜ್ಞಾಪಕ. ೧೩೮); ಪಾರಾಯಣಕಾಲದಲ್ಲಿ ಅವರನ್ನು ನೋಡಿ ದವರು ಅವರಿಗೆ ನತ್ತಿ ಇತ್ತೆಂಬುದನ್ನು ನಂಬುತ್ತಿರಲಿಲ್ಲ (ಜ್ಞಾಪಕ. ೧೪೨).

[<ನತ್ತು$_1$./ತೆಲು. ನತ್ತಿ]

**ನತ್ತು$_3$** (ನಾ). ಮೂಗಿನಲ್ಲಿ ಧರಿಸುವ ಆಭರಣ: ಹರಳೋಲೆ ಹೊನ್ನ ಪೂ ಮಾಣಿಕದ ಪೊಸನತ್ತು ಮೋಹನದ ಮಾಲೆ ಬಹುಭೂಷಣಂಗಳ ನಿಡುತ್ತ (ಚಕುಪು. ೧-೭-೯); ರಜಪೂತ ಹೆಂಗುಸಿನ ಮುಖ್ಯ ಕುರುಹು ಆಕೆಯ ನತ್ತು (ಕಥಾಗ. ೧೧೪); ಮುತ್ತೈದೆರೆಲ್ಲರೂ ನತ್ತಿಟ್ಟು ನಲಿಯುತ ಮುತ್ತಿನಾರುತಿ ಬೆಳಗುತ ಹಾಡಿದರು (ಸಿದ್ಧಪು. ೧-೭೮); ಮನವು ಮುತ್ತಾಗಿಹುದು ನತ್ತಾಗಿ ಧರಿಸಿ ಕೋ ಸಿಪ್ಪು ತೆರೆಯುವ ಮುನ್ನ (ಕರಿಬ್ರ೧೯. ೯-೭); ಮೊಗಕ್ಕೊಪ್ಪುವ ಮಾಟಾದ ಮೂಗಿನಲ್ಲಿ ಅಂದವಾದ ನತ್ತು (ಕಂಪಾ. ೧); ನತ್ತಿಗೆ ಯೋಗ್ಯರಾದವಳು ಮುತ್ತು ಬಯಸಿದ ಹಾಗೆ (ಗಾದೆ).

**ನತ್ತಿನೋರು** = ಸೂಳೆಯರು; ವೇಶ್ಯೆಯರು: ■ ಕೆಲವು ಪ್ರದೇಶ ಗಳಲ್ಲಿ ವೇಶ್ಯಾವೃತ್ತಿಯ ಜನ ಪುರುಷನನ್ನು ತನ್ನವನನ್ನಾಗಿ ಒಪ್ಪಿ ಕೊಳ್ಳುವುದಕ್ಕೆ ಮುಂಚೆ ಅವನಿಂದ ಒಂದು ಮೂಗಿನ ಬಟ್ಟು ಎಂಬ ಒಡವೆಯನ್ನೋ ಅಥವಾ ಒಂದು ಸೀರೆಯನ್ನೋ ಪಡೆದು ಹಿಂದಿ ನಿಂದ ಬಂದ ಸಂಪ್ರದಾಯವನ್ನು ಅನುಸರಿಸುವ ಕ್ರಮವಿದೆ: ಈ ಊರಿನ 'ನತ್ತಿನೋರೆಲ್ಲಾ' ಅವನ ಮನೆಯವರೇ. 'ನತ್ತಿನೋರು ಅಂದರೆ' . . . ಸೂಳೇರು (ಗುಲಾಬಿ. ೧೯).

[←ಅರ. ನತ್ಥ್; ಹಿಂ. ನತ್ಥ್, ನಥ್, ನಾಥ್; ಮರಾ. ನಥ್./ಪ್ರಾ. ಣತ್ತಾ]

**ನತ್ತು$_4$** (ನಾ). ೧. ಹೇನಿನ ಸಣ್ಣ ಮರಿ; ಸಣ್ಣಹೇನು: ಸೀರು ಸಿರವನು ತಿಂತು ನತ್ತು ನರವನು ತಿಂತು ಚಿಂತೆಯು ಜನುಮವ ತಿಂತು (ಇಂಪಾಕ. ೧೭೧-೪೪); ಅವಳ ತಲೆಯಲ್ಲಿ ತುಂಬ ನತ್ತು, ಹೇನುಗಳಿವೆ (ರೂಢಿ). ೨. ಕೀಟ; ಹುಳು. [ದೇ. ■ ತವಿ. ನತ್ತು, ನತ್ತೈ = ಶಂಖದ ಹುಳು; ಮಲ. ನನ್ನಿ; ತೆಲು. ನತ್ತ = ಶಂಖದ ಹುಳು]

**ನತ್ವ** (ನಾ). ನ ಎಂಬ ಅಕ್ಷರ: ಪರದೊಳ್ ಸ್ವರಮಿರೆ ಬಂದುಗೆ ದೂರೆ ಕೊಳ್ಗುಂ ನತ್ವಮಾತ್ವಂ (ಶಮದ. ೧೦೪). [ಸಂ.]

**ನದ** (ನಾ). ೧. ಶಬ್ದ ಮಾಡುವಿಕೆ; ಗದ್ದಲ ಮಾಡುವಿಕೆ; ಸಪ್ಪಳ; ಶಬ್ದ. ೨. (ಶಬ್ದದೊಂದಿಗೆ ರಭಸವಾಗಿ ಹರಿಯುವ) ದೊಡ್ಡ ನದಿ; ಗಂಡುತೊರೆ; ಗಂಡುನದಿ; ■ ಪ್ರಸಿದ್ಧ ಸಂಸ್ಕೃತ ಟೀಕಾಕಾರ ಮಲ್ಲಿನಾಥನ ಅಭಿಪ್ರಾಯದಂತೆ ಪಶ್ಚಿಮಕ್ಕೆ ಹರಿಯುವ ನದಿ: "ಭಿದ್ಯಃ, ಉದ್ಯಃ, ನದಃ – ಈ ೩ ಗಂಡುದೊಜೆ" (ಹಲಾಯು. ೧೧೧-೪೪); "ನದಮುದ್ಯಮನೆ ಭಿದ್ಯಮನೆ ಗಂಡುದೊಜೆಯುದು" (ಚುಂಗರಾ. ೧೩೩-೧೧); ಪುಣ್ಯನದೀನದನಗ[ಲಾ]ವಣ್ಯವಿಭೂಷಣೆಯನೊಲ್ದು ನೋಡುತ್ತುಮಿಳಾಪುಣ್ಯಸ್ತ್ರೀಯಂ ಸಂಚಿತಪುಣ್ಯರ್ ಪಾಂಚಾಲದೇಶಮಂ ಪುಗುತಂದರ್ (ಪಂಪಭಾ. ೩-೩೭); ಪೊಜಮಟ್ಟಭಂ ಬಿನದದಿಂ ನದದಿಂ ನದದಿಂದ್ರುವಜ್ರನಿಷ್ಠುರರವಜಗಿತ್ರಿಭಾಪಥನವಂ ಘನವಂ ಘನವಂಶ ದಾಲವಂ (ಜಗವಿ. ೧೭-೯); ಮದವದಿಭೇಂದ್ರದಾನಸಲಿಲಂ ನದರೂಪಮನೆಯ್ದಿ . . . ರಾಗದೆಯ್ದಿದನಿರದಾ. ಸುಧರ್ಮಮುನಿಪೋತ್ತಮನಾಶ್ರಮಮಂ ನೃಪೋತ್ತಮಂ (ಕುಸುಮಾ. ೪-೯೪); ಅಲ್ಲಿಗಲ್ಲಿಗೆ ಗವಾಸ್ಪದಗಳಿಂ ನದ ಗಳಿಂದಾ ದೇಶಮೊಪ್ಪಿರ್ದುದು (ಚಂಪು. ೧೧-೪). ೩. ಸಮುದ್ರ; ಸಾಗರ. ೪. ಮೋಡ; ಮೇಘ.

**ನದನದಿ** = ಗಂಡು ಮತ್ತು ಹೆಣ್ಣು ಹೊಳೆಗಳು: ನದ[ನ] ದ್ಯುದ್ಭೂತವಾರಿಪ್ರಸರಮೆಸ[ೆ] ನೀರಂದದಿಂ ಕಾಯ್ದುದಾಕಾಶದಿಶೌಘಂ . . . ಎಂಬ ವೈಶಾಖಮೊಳಾ ಯೋಗೀಶ್ವರರು ಕಲ್ಮೆರೆ ನೆಲಸಿ ಹಿಮಾದ್ರೀಂದ್ರ ವಿರ್ಪರಂತಿರಿರ್ದರ್ (ಸುಕುಮಾ. ೪-೧೩); ನದನದೀಕುಲದೊಳ್ ಪರಿ ವರ್ಧಿಕುಂ ಜಗಜ್ಜೀವನಜೀವನಂ ಮುಟಿಗಳಿಂ ಮುಟಿಯುಂ ಕಟಿಮಂ ಹಿತಾರ್ಥಮಿಾ ಭೂವಳಯಕ್ಕೆ ಶಕ್ರನದು ಕಾರಣಮರ್ಚಿಪುದಿಂದ್ರಮಂ ಜನಂ (ಜಗವಿ. ೪-೭೭); ನದನದ್ಯಾಘಾಂಬುವಂ ಪೀರ್ದಳೆ ನೆಜೆಯುದೆ ಬಾಯ್ವಿಟ್ಟು ಪೊಲ್ ಬೀಡ್ಗಳ್ ಪರ್ವಿದುವು (ಚಂದ್ರಪು. ೯-೭೭). [ಸಂ.]

**ನದನಿಕಟ** (ನಾ). ಹೊಳೆಯ ತೀರದ ಪ್ರದೇಶ: ವಿದಳಿತ ನಳಿನೀಸುಖದಂ ನದನಿಕಟಂ ವಿವಿಧವರ್ಣಮಣಿಗಣಶೋಭಾಸದನಂ ಪರ್ವತನಿಕಟಂ ಮದಗಜ ಮದಸಲಿಲಾರ್ದನಮಟವೀನಿಟಂ (ಮಲ್ಲಪು. ೨-೧೧). [ನದ + ನಿಕಟ]

**ನದರಿಡು, ನೆದರಿಡು, ನೆದರಿಡು** (ಕ್ರಿ). ೧. ಲಕ್ಷಿಸು; ಗಮನವಿಡು

ರಾತ್ರಿವುದಯ ಸಾಯಂಕಾಲ ನದರಿಟ್ಟು ಹಸು ನಿದ್ರೆದೊಳದು ಪದವಿರ್ದ ಲಿಂಗ ಪೂಜಿಸುವಾರುಯನ್ನಂತ ಮುದಿವುೂರ್ತಿಗಾರು ಮನ್ನಿವರು (ದೀರಶಾ. ೬-೧೫) ; ಸದಮಲಜ್ಞಾನದ ಕುದಿ ಉಕ್ಕಿ ಬರುವಾಗ ನದರಿಟ್ಟು ನಿಮ್ಮೊಳು ಸದಘುಲ ತತ್ವದಿ ತಿಳಕೋ ಬರಕೋ (ಶರೀಫ. ೭೭ ಕವಿಕಾವ್ಯ ಚುಡಯು). ನೆಜರಿಡು : ೧. ಒಂದೀಟು ನೆಜರಿಟ್ಟು ನಡಿ. ನಮ್ಮ ಬಿಟ್ಟು ನಷಘಪ್ಪ . . . ಕೂದರೇಲೆ ಉರುಲು ಹಾಕಾಂವ (ಪತಿಕೋ. ೭೭). ನೆದರಿಡು : ೧. ಸದ್ಯ ನೆದರಿಟ್ಟು ನೋಡಿಕೋ ಉದಿಸಿದ್ಯಾವಲ್ಲೆ (ಶರೀಫ. ೩೫-೧೦). ೨. ಬಯಸು ; ಕಾಮಿಸು ; ಅಪೇಕ್ಷೆಪಡು : ಮಾವೀನ ಹಣ್ಣು ಮನಿಯಾಗ ಇಟಗೊಂಡು ನೀರಲಕ್ಯಾಕ ನೆದರಿಟ್ಟ (ಗರತಿ. ೦೨೮).

[ ನದರು (<ನಜರು) + ಇಡು$_1$ ]

ನದರಿಸು 'ನಜ್ರಿಸು' ನೋ.

ನದರು 'ನಜರಂ' ನೋ.

ನದರುಕಾಣಿಕೆ 'ನಜರುಗಾಣಿಕೆ' ನೋ.

ನದರುಗಾಣಿಕೆ 'ನಜರುಗಾಣಿಕೆ' ನೋ.

ನದರುಗೆಡು (ಕ್ರಿ). ಕಂಗೆಡು ; ದಿಗ್ಭ್ರಮೆಗೊಳ್ಳು : ಮದನಗಂಜುತ ಮೂಂದಳಂಗೆದಬೆದರುತಳಿಎಂಡುಗಳ ರಭಸಕೆ ನದರುಗೆಡುತ . . . ಚಂಡ ರಕ್ಕಸ ಬೆದರುತ್ತಿದಿದ ಬನದೊಳಗಜೆಯು ಕಾಬ ತವಕದಲಿ (ಅಂಬಿಕಾ. ೦೮-೮)... [ ನದರು (<ನಜರು) + ಕೆಡು$_1$ ]

ನದಿ (ನಾ). ಹೊಳೆ ; ತೊರೆ ; ೯ ಎಂಟು ಸಾವಿರ ಧನುಃಪ್ರಮಾಣಕ್ಕೆ ಕಡಮೆಯಿಲ್ಲದಷ್ಟು ದೀರ್ಘವಾಗಿಯೂ ಅಗಲವಾಗಿಯೂ ಹರಿಯುವ ಜಲಪ್ರವಾಹಕ್ಕೆ 'ನದಿ' ಎಂದು ಟೀಕಾಕಾರರು ಸೂಚಿಸುತ್ತಾರೆ : "ಸಿಂಧುಃ, ಸ್ರವಂತೀ, ತಟಿನೀ, ತರಂಗಿಣೀ, ನದೀ, ಧುನೀ . . . ರೋಧೋವಕ್ರಾ – ಈ ೨೧ ತೊರೆ" (ಹಲಾಯು. ೦೦೦-೯೩) ; "ನದಿ ತರಂಗಿಣಿ ತಟನಿ ಧುನಿ ಸಿಂಧು . . . ದ್ವೀಪವತಿಯಾಪಗೆಯೆನೆ ತೊರೆಗೆ ನಾಮಂ" (ಚುಂಗರಾ. ೬೨೨-೦೦) ; ಜಂಬೂದ್ವೀಪದ ಮೇರುವಿನ ಮೂಡಣ ವಿದೇಹದ ಸೀತಾನದಿಯ ಬಡಗಣ ತಡಿಯೊಳ್ (ಆದಿಪು ೩-೮ವ) ; ಹರಿವ ನದಿಗೆ ಮೈಯೆಲ್ಲ ಕಾಲು ಉರಿವ ಕಿಚ್ಚಿಗೆ ಮೈಯೆಲ್ಲ ಬಾಯಿ (ಅಪಡಂ. ೦೭೨-೭೭೫) ; ನದಿಯಂ ನಾವಿಕನಂತೆ ಪೊಕ್ಕು ಗುಟಿಯಂ ಧಾನುಷ್ಕನೆಂಬಂತೆ ತವ್ವದಿದಂ ಕಂಬಮನೆಚ್ಚುದು (ಪಾರ್ಶ್ವಪು. ೦೦-೧೨೦) ; ನದಿ ಕಣ್ದೆರೆದಂತೆ ಪೊಳಂಕಿದ ಮೀನಂ ಮೊಸಳೆ ಪಾಯ್ದು ನರಪತಿಯು ವಿನೋದದ ಗುಜ್ಜುಸಿಕ್ಕಿ ಹಿಡಿದತ್ತದನಧಿಪತಿ ಜಾಲಗಾರರಿಂ ತೆಗೆಯಿಸಿದಂ (ಯಶೋಧ. ೩-೯೮) ; ಮರುದಿವಸ ವೇದಾವತಿಯು ಸಾರ್ದರು ಬಳಿಕ್ಕವರಲ್ಲಿ ರಜನಿಯ ಪರಿಹರಿಸಿ ದಾಂಟಿದರು ನದಿಯನು ಮೂರನೆಯ ದಿವಸ (ತೊರರಾ. ೨-೪-೯) ; ನದೀ ದಾಟ ಬದೀಲಿ ಬಿದ್ದ ಹಾಗೆ (ಗಾದೆ).

ನದನದ, ನದೀನದ = ಹೆಣ್ಣು ಮತ್ತು ಗಂಡು ಹೊಳೆಗಳಂ : ಮೂಳೆದ ಗಾಳಂಗಳಿಂ . . . ಸೊಗಡುಗೂಳುಗಳ ಮದ್ದುಗಳ ಮಸಕದಿಂದಂ ನದನದಾಳಿಯೊಳು ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂನಾಥನು (ಹಹಶಾ. ೫-೯೪) ; ಅಂತವರಿರ್ವರುಂ ನಾನಾನದೀನದಾಂತರಾಳಸಂಪನ್ನನಪದಂಗಳಂ ಕಳೆದು ಕತಿಪಯಪ್ರಯಾಣಂಗಳಿಂ . . . ಬಂದು (ಸುಕುಮಾ. ೨-೧೫೫) ; ನದೀನದೌಘಮಾಗಳೆ ಬ ಉ ಗ ೦ ಪ ಲಾ ಯ್ಯು ಕುಟಿಯುಂ ತೆವರುಂ ಸಮನಾಯ್ತುದತ್ತಲುಂ (ಕೃಷ್ಣಪು. ೫-೪೭) ; ಕಾಮಿ ತಾರ್ಥವನೀವವಂದಿನ. ಭೂಮೀಬತ್ತದೆ ಜವಿಪ ವಸ್ತುಸ್ತೋಮವನು ತಂದೀವುದದ್ರಿನದೀನದಾದಿಗಳು (ನಿಜಾಗ. ೧-೭-೮) ; ಅಕ್ಷಯವಾದ ಸರೋವರವೊಂದರಿಂದ ಅನೇಕ ದಿಕ್ಕುಗಳಲ್ಲಿ ಸಹಸ್ರಾಧಿಕ ನದೀನದಗಳು ಹೊರಹೊರಟು ಬರುವಂತೆ (ತತ್ವಪ್ರಾ. ೧೨೯). ನದಿಯ ಮಗ = (ಗಂಗಾ) ನದಿಯ ಸುತ ; ಗಾಂಗೇಯಂ ; ಭೀಷ್ಮ : "ನಾದೇಯಃ, ನದೀಸುತಃ– ಈ ೨ ನದಿಯ ಮಗಂ" (ಹಲಾಯು. ೮೨-೩೪೭) ; ಇದು ಮಹಾಮಖವಿಲ್ಲಿ ಪೂಜ್ಯನು ಯದುಗಳರಸನು ಭಟ್ಟನಿಲ್ಲಿಗೆ ನದಿಯ ಮಗನಿಲ್ಲಿಗೆ ಸದಸ್ಯರು ನಾರದಾದಿಗಳು (ಕುಮಾವ್ಯಾಸ. ೧೦-೩೯) ; ನದಿಯ ಮಗ ಗುರು ಗುರುತನೂಜನು ವಿದುರಭಾರದ್ವಾಜಮುಖ್ಯರು . . . ಬಹಳಾಭ್ಯುದಿತಬಲ ನೆರೆದದ್ದು ನಡೆದುದು ಭರದ ಪಯಣದಲಿ (ಕುಮಾವ್ಯಾಆ. ೬೦೩. ೨೫-೬). ನದಿ ಹಾಯು = ಹೊಳೆಯನ್ನು ದಾಟು,–ಕ್ರಮಿಸು : ನದಿ ಹಾಯೋನಿಗೆ ತಿದಿ ಯಾಕೆ ? (ದುರಂನಾ. ೯೪). [ ಸಂ. ನದೀ ]

ನದಿಗವುಂಡ (ನಾ). ಒಬ್ಬಾತನ ಹೆಸರು : ಸದೆಯನೂರ ನದಿಗವುಣ್ಡನು ತಿಬರ್ೂರ ಮಾರಗವುಣ್ಡ (ಮೈಆರಿ. ೧೯೦೯, ೧೦-೭೩ : ೪೦೦).

[ ನದಿ + ಗವುಂಡ (<ಗಾವುಂಡ) ]

ನದಿಜ (ನಾ). = ನದೀಜ ೩ : ಇದಿರುಗೊಂಡರು ಒಲಿದು ಮನ್ನಿಸಿ ವಿದುರನನು ಕೊಂಡಾಡಿ ಗುರು ನೃಪ ನದಿಜ ಧೃತರಾಷ್ಟ್ರಾದಿಗಳ ಸುಕ್ಷೇಮ ಕುಶಲಗಳ ವಿದುರನಾಗಮನಪ್ರಪಂಚದ ಹುದನನೆಲ್ಲವ ಕೇಳಿದರು (ಕುಮಾವ್ಯಾಆ. ೧-೧೮).

[ <ಸಂ. ನದೀಜ ]

ನದಿಪು (ಕ್ರಿ). (ಬೆಂಕಿ, ದೀಪ, ಉರಿ, ಬೆಳಕು, ತಾಪ ಮೊದಲಾದುವನ್ನು) ನಂದಿಸು ; ಆರಿಸು : ಭರತನ ಮೊಗದೊಳ್ ಪರ್ವಿದ ಖರಕೋಪಾನಲನನೆಯ್ದೆ ನದಿಪುವವೊಲ್ [ಪಾಠಾಂ. ನಂದಿಪವೋಲ್] ತನ್ನರಕತಮಣಿವರ್ಣಂ ಕರಪರಿಘದಿನೊಡನೊಡನೆ ತುಳ್ಕಿದು ಕಿಲಿನೀರಂ (ಆದಿಪು. ೦೯-೦೦೫) ; ಬಲದೇವನ ಮನದೊಳಾದ ಮುಳಿಸೆಂಬ ಕಿಚ್ಚಂ ತನ್ನ ಮೃದುಮಧುರವಚನರಚನಾಜಲಂಗಳಂ ತಳಿದು ನದಿಪಿದಂ (ಪಂಪಭಾ. ೫-೨೨ವ) ; ಮದನದಾವಾಗ್ನಿಯುಂ ನದಿಪೆ ಮಾಡಿದ ಕಾಮನದಿಯೆನಿಸುವುವು ದಿವಿಜದಂಪತಿಶತದೊದವಿದ ರತದ ಪದನಲ್ಲಿ (ಶಾಂತಿಪು. ೨-೯೩) ; ದವರೌದ್ರಜ್ವಲನಾದ್ಭುತಂ ಹೃದಯದೊಳ್ ಶೋಕಾಗ್ನಿ ಕೈಗಣ್ಮೆ ಪೊಣ್ಮುವ ಕಿಚ್ಚಂ ನದಿಪಲ್ಕೆ ಬರ್ಪ ತೆರದಿಂದಂ ಕಣ್ಗಳಿಂದಜ್ಜ ಪೊಣ್ಮುವ ನೇತ್ರಾಂಜನಮಿಶ್ರ ಬಾಷ್ಪಜಲಧಾರಾಬಿಂದುಗಳ್ ಕೂಡೆ (ಅಜಿಪು. ೦೦-೯೫) ; ಅಳವಿಗಟಿದ ಳುರ್ವ ಮದನಾನಳನಂ ನದಿಪಲ್ಕೆ ಪಲವುಮಮೃತದ ಪನಿಯುಂ ತಳಿವಂತೆ ಧುಂತರುಚಿಗಳ್ ತುಳುಂಕೆ ನೃಪಸುತನನಾರ್ಯಸುತನಿಂತೆಂದಂ (ರೀಲಾವ. ೪-೩೫) ; ಉಂತೆ ಜಗಂಗಳಂ ತಿಗುರಿಗಂ ತರುತಿರ್ಪ ಮನೋಜನೀ ವಸಂತಂ ತಲೆದೋಱಿತಿಂ ಹರನ ಕಣ್ಣುರಿಯುಂ ನದಿಪಲ್ ಸಮರ್ಥನೋ (ಚಂದ್ರಪು. ೭-೪೭).

ನದನದಿಪು (ದ್ವಿರುಕ್ತಿ) : ನಿಚ್ಚಂ ಪಗಲಿನಕಾಂತದ ಕಿಚ್ಚನಿರುಳ್ ಚಂದ್ರಕಾಂತಮೊಱೆವಂ ಪಡೆದಾ ಕಿಚ್ಚ ನದ[ದ]ನದಿಪೆ [ಪಾಠಾಂ. ನದನದಿಸೆ, ನದನಡಿಸೆ] ಮಾಡುಗುಮಚ್ಚರಿಯಂ ಪಗಲುಮಿರುಳುಮಾ ವಿಜಯಾರ್ಧಂ (ಅಜಿಪು. ೯-೨೨). [<ನಂದು ? ]

ನದಿಮೊಗ (ನಾ). ಹೊಳೆಯಪಾತ್ರ,–ಪ್ರವಾಹ: ಮೂರು ಖಂಡಗಳೇಳು ಸಾಗರಂಗಳನು ಹದಿಮೂರು ನದಿಮೊಗಗಳನು ದಾಟಿ ಬಂದೆಲ್ಲಿ ಭಾರತೀಯರ ಹೃದಯ ದೈವಸಮ್ರಾಜ ದರಬಾರ ನಡೆಸಿದನೆಲ್ಲಿ–ನೋಡಿದುವೆ ಇಲ್ಲಿ ! (ಕವಿಪು. ೫೫). [ ನದಿ + ಮೊಗ ]

ನದಿಯಮರ (ನಾ). ಒಂದು ಬಗೆಯ ಮರ : "ಬೃಹತ್ಪತಿಃ, ಬೃಹಸ್ಪತಿಃ ಈಯೆರಡು ನದಿಯಮರ, ನೇಱಲ್" (೬ಪಧಿ. ೧೦೯).

[ ನದಿ + ಮರ$_1$ ]

ನದಿವಾಸಿ (ನಾ). ಹೊಳೆಯ ಬಳಿ ವಾಸಿಸುವವನು : ನದಿವಾಸಿಗಳು ವನವಾಸಿಗಳು ಗಿರಿವಾಸಿಗಳು ಗುಹ್ಯ ಗುಹೆವಾಸಿಗಳು ಇಂದ್ರಿಯಭಯಂಗಳಿಗೆ ಅಂಜಿ ಕಂದಮೂಲಾದಿಗಳ ಭಕ್ಷಿಸುವ ಕಾನನದ ಮರುಳುಗಳೆಲ್ಲಾ ಲಿಂಗಪ್ರಾಣಿಗಳಿಗೆ ಪ್ರಾಣಲಿಂಗ ಸಂಬಂಧಿಗಳಾದ ಪರಮಶಿವಯೋಗಿಗಳಿಗೆ ಸರಿಯೇ ಈ ಭ್ರಾಂತರೆಲ್ಲಾ (ಏಡೇಪ. ೦೦೭-೩೫೯). [ ನದಿ + ವಾಸಿ$_1$ ]

**ನದೀಚರ** (ನಾ). ಹೊಳೆಯಲ್ಲಿ ಸಂಚರಿಸುವುದು : ಪಿರಿದು ಪೊೞ್ತಂ ವನಪ್ರಚಾರದೊಳಲಸಿದ ನದೀಚರನಪ್ಪ ಯೂಥಪತಿಯಂತೆ ವನವಿಹಾರದೊಳಲಸಿ ಬಂದು ರಾವಣನುಂ ಪುಗೆ (ಶಾಂತಿಪು. ೮-೨೩ವ). [ ಸಂ. ]

**ನದೀಜ** (ಗು). ೧. ಹೊಳೆಯಲ್ಲಿ ಹುಟ್ಟಿದ. (ನಾ). ೨. ಹೊಳೆಯಲ್ಲಿ ಹುಟ್ಟಿದುದು ; ನೀರಿನಲ್ಲಿ ಹುಟ್ಟಿದುದು. ೩. (ಗಂಗಾ) ನದಿಯ ಮಗ ; ಗಾಂಗೇಯ ; ಭೀಷ್ಮ : ಬಿಲ್ಲೋಜರ್ ಮುನ್ನಂ ಪಿನಾಕಾಯುಧನೆ ಸಕಲಚಕ್ರಾಯುಧಂ ಜಾಮದಗ್ನ್ಯಂ ಬಲ್ಲಂ ರಾಮಂ ನದೀಜಂ (ಎಕ. VI. ಚಿಕ್ಕಮ. ೭೭-೩೪ ; 1180) ; ತತ್ಸೇನೆ ದಾವಾಗ್ನಿಯಿಂ ನೆಲೆವೆರ್ಚಿರ್ದಟವೀಪ್ರತಾನಮುರಿಯುತ್ತಿರ್ದಪ್ಪುದೆಂಬಂದಮಂ ಗೆಲೆ ಮಾಡಿತ್ತು ನದೀಜನುಗ್ರಶರಪಾತೋದ್ಭೂತಜಾತಾದ್ಭುತಂ (ಮಹಾನೇ. ೧೨-೧೬೬) ; ಮುರಹರ ಗುರು ನದೀಜರ ಬೀಳುಕೊಟ್ಟನು ಕೃಪನ ಮನ್ನಿಸಿ ಮನೆಗೆ ಕಳುಹಿದನು (ಕುಮಾ್ಯಉ. ೮-೧). ೪. ಅರ್ಜುನವೃಕ್ಷ ; ನೀರುಹಲಸಿನ ಮರ ; ಕದಂಬವೃಕ್ಷ : ಕವಿಗಳ ಕೊಂಡಾಟ ವಿವಿಧರೂಪಗಳನ್ನು ತಾಳಿತು. ಮರಕ್ಕೆ ಅವರು ಕೊಟ್ಟಿರುವ ವಿಶೇಷಣಗಳನ್ನು ನೋಡಿ. ಷಟ್ಪದೇಷ್ಟ . . ನದೀಜ, ದಾಸವೃಕ್ಷ (ಹಸುಹೂ. ೪೬). [ ಸಂ. ]

**ನದೀಜಾತ** (ನಾ). = ನದೀಜ ೩ : ವೈರಾಗ್ಯಂ ಭೋಂಕೆನೆ ಕೆಯ್ಯಾರ ಮನಕ್ಕಾಗಳಾ ನದೀಜಾತಂ ಸಂಸಾರಕ್ಕೇವೈಸಿ ದಯಾಧಾರಂ ಪರಮಾತ್ಮತತ್ತ್ವನಿಷ್ಠಿತನಾದಂ (ಮಹಾನೇ. ೧೨-೧೭೩). [ ಸಂ. ]

**ನದೀತನೂಜ** (ನಾ). = ನದೀಜ ೩ : ಆಗಳ್ ನದೀತನೂಜಭಾರದ್ವಾಜ ಕೃಪರವಿರಳ ಬಾಷ್ಪವಾರಿ ದುರ್ದಿನ ದೀನಾನನರಾಗಿರೆ ವಿದುರಂ ತಾನಱಿದುಮಱಿಯದಂತೆ ಶೋಕಾಕ್ರಾಂತನಾಗಿ (ಪಂಪಭಾ. ೩-೮ ವ). [ ಸಂ. ]

**ನದೀತರಣ** (ನಾ). ಹೊಳೆಯನ್ನು ದಾಟುವಿಕೆ : ಹಯಶಾಸ್ತ್ರಂ ಸೂಪಶಾಸ್ತ್ರಂ ನದೀತರಣಂ ತಾಪನಮಿಂದ್ರಜಾಲಮೆಂಬಿತಂ ... ಅಖಿಲವ್ಯಾಹೋತ್ಕರಮೆಂಬಿನಿತಱೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಕೌಶಲಮಂ (ಪುಷ್ಪಪು. ೪-೩೯). [ ಸಂ. ]

**ನದೀತೀರ** (ನಾ). ಹೊಳೆಯ ದಂಡೆ, – ತೀರ : ಬಾಳೆಯ ಗರ್ಭದೊಳಿರ್ದ ಬಾಳೆಯುಂ ಬಾಳನುಮಂ ಕಂಡೆತ್ತಿಕೊಂಡು ಮತ್ಸ್ಯಗಂಧಿಯುಂ ಮತ್ಸ್ಯಗಂಧನುಮೆಂದು ಪೆಸರನಿಟ್ಟು ನಡಪಿ ಯಮುನಾನದೀತೀರದೊಳ್ವರ್ಧನ್ನೆಗಂ (ಪಂಪಭಾ. ೧-೬೮ ವ) ; ಆ ನದೀತೀರಕ್ಕೆ ಸಮಾಧಿಗುಪ್ತರೆಂಬ ದಿವ್ಯಮುನೀಶ್ವರರ್ ಬಂದಸ್ತಮಯಸಮಯದೊಳ್ ರಾತ್ರಿಪ್ರತಿಮೆಯೊಳಿರೆ (ಮಹಾನೇ. ೦೩-೧೦ ವ) ; ನದೀತೀರದ ರಮ್ಯಸ್ಥಾನ (ಹುಸಹು. ೬೨). [ಸಂ.]

**ನದೀನಂದನ** (ನಾ). = ನದೀಜ ೩ : ನದೀನಂದನು ವಾರಣಾಸಿಯಂ ಪೊಱಮಟ್ಟೀಕೆ ಬಂದಿರಲ್ಲಿರ್ದರೆಂದುಂ ಬೆಸಗೊಳ್ವುದುಂ (ಮಹಾನೇ. ೯-೧೧೧ ವ) : ಈ ನದೀನಂದನನ ಬಲದಲಿ ಸೇನೆ ಶಿವಗಂಜುವುದೆ (ಕುಮಾ್ಯಭೀ. ೧-೩೩). [ ಸಂ. ]

**ನದೀನಾಥ** (ನಾ). ೧. ಹೊಳೆಗಳ ಒಡೆಯ ; ಸಾಗರ ; ಸಮುದ್ರ. ೨. [ಜೈನ] ಒಂದು ಕಾಲಪ್ರಮಾಣ : ಕಲ್ಪ ಷೋಡಶ ನದಿ[ದೀ]ನಾಥೋಪಮಾಯುಷ್ಯನೆಬರು ದಿವ್ಯ ಸುಖಮನುಂಡು (ಮಹಾನೇ. ೧೩-೧೪೬ವ). [ಸಂ. ]

**ನದೀನಿಕಟ** (ನಾ). ತೊರೆಯ ತೀರದ ಪ್ರದೇಶ ; ಹೊಳೆಯ ತೀರ : ವಿದಳಿತ ಕಂಜವಿಲ್ಲದ ಕೊಳಂ ಗಜವಿಲ್ಲದ ಕಾಡು ಚೂತವಿಲ್ಲದ ಬನಮಂಚೆಯಿಲ್ಲದ ನದೀನಿಕಟಂ ... ಅತ್ಯುದಾತ್ತಗುಣವಿಲ್ಲದ ಮಾನವರಿಲ್ಲದೆಲ್ಲಿಯುಂ (ಪುಷ್ಪಪು. ೨-೧೧). [ ಸಂ. ]

**ನದೀಪೂರ** (ನಾ). ಹೊಳೆಯ ಪೂರ್ಣಪ್ರವಾಹ ; ತುಂಬುಹೊಳೆ : ಘನಶೋಕ ಘನಾಗಮಜಳಜನಿತೋತ್ಕರ್ಷಮನನೂನಬಾಂಧವಜನಿತಾಶ್ರುನದೀಪೂರಮನುಡುಗಿಪುದಿನತೇಜಮಸಂತದಂತೆ ಬಂದೀ ಕ್ಷಣದೊಳ್ (ಚಂದ್ರಪ್ರ. ೩-೧೪). [ ಸಂ. ]

**ನದೀಪ್ರವಾಹ** (ನಾ). ಹೊಳೆಯ ಪ್ರವಾಹ, – ಹರಿವು : "ಜಲ್ಯ–ನದೀಪ್ರವಾಹಂ" (ಶಮದ. ಶಿ. ೧) ; ತೊಲಗಿರ್ಪ ಮುನಿವರರು ಒಳದೀ ಹೊಳೆಯೊಳಗೆ ಹೋಗದಿರಿ ದಿವದಿಂದಿಳಿದ ದಿವ್ಯನದೀಪ್ರವಾಹದ ಸತ್ಯಕಮವೆನಲು ಅಲಘುಮತಿ ಕೇಳುತ್ತ ಘುಳುಘುಳುಘುಳು ವಿಗಲು ಬಹ ನದಿಯನೀಕ್ಷಿಸಿ ತೊಲಗದಾಪೋಶನವ ಕೊಂಡನು ಜಹ್ನುಮುನಿ ನಗುತ (ನಿಜಾಗ. ೯-೮-೪೬). [ ಸಂ. ]

**ನದೀಬೂಡು** (ಗು). ನದಿಯಲ್ಲಿ ನೆರೆ ಬಂದಾಗ ನೀರಿನಲ್ಲಿ ಮುಳುಗುವ ; ಹೊಳೆ ಸಾಲಿನ : ದೇಸಾಯರ 'ನದೀಬೂಡು' ಜಮೀನು, ನಾಡಗೌಡರ 'ಮಡಿಗದ್ದೆ', ಕೇಶವರಾಯನ ಮಾವಿನ ಗಿಡಗಳು ನಿನ್ನ ಕಣ್ಣು ತುಂಬಲಾರವೆ? (ಹದ್ಬಿಬ. ೩೩). [ ←ಮರಾ. ನದೀಬುಡ ]

**ನದೀಮಾತೃಕ** (ನಾ). ೧. ಹೊಳೆಯ ನೀರಿನಿಂದ ಬೆಳೆ ಬೆಳೆಯುವ ಭೂಮಿ ; ನೀರಾವರಿ ಭೂಮಿ : "ತೊಱೆಯ ನೀರಿಂ ಬೆಳೆವ ಭೂಮಿ ನದೀಮಾತೃಕವೆಂಬುದು" (ಹಲಾಯು. ೨೭-೬) ; "ಹೊಳೆಯ ನೀರಿಂ ಬೆಳೆವ ಮಹಿ ನದೀಮಾತೃಕಂ" (ಮಂಗರಾ. ೨೯-೪) ; ಭೂತಲವರ್ತಿಯಪ್ಪ ವಿಷಯಾಳಿ ವಿಚಾರಿಪೊಡಾವಗಂ ನದೀಮಾತೃಕ ದೇವಮಾತೃಕಮೆ (ಚಂದ್ರಪ್ರ. ೧-೯೦) ; ಅದಲ್ಲದೆಯುದೆ ನದೀಮಾತೃಕಮುಂ ದೇವಮಾತೃಕಮುಮೆಂಬ ಭೇದಮಂ ಬೇರ್ಪಡಿಸಿ (ಪುಷ್ಪಪು. ೨-೧೪೩) ; ನೂತನ ನಾರಿಕೇಳಜಲದಿಂ ಧವಳೇಕ್ಷುಗಳಾವಗಂ ನದೀಮಾತೃಕ ದೇವಮಾತೃಕದ ಮಂಗುಳಿದೊಳ್ಳೆಳಸಾಗಿ ರಂಜಿಕುಂ (ತ್ರಿಪುವಿ. ೨-೩೬) ; ಬೆಳೆವುವು ಶಾಲಿ ಪಾಮರಿಯರ ಮೊಗಸಿ ವೆಳಗಿಗೊಸರುವಿಂದುಕಾಂತದ ಜಲದಿಂದೆ ದೇವಮಾತೃಕ ನದೀಮಾತೃಕಗಳ ಬಗೆಗೊಳದಾ ನಾಡೊಳು (ತ್ರಿಭುತಿ. ೨-೧೪). ೨. ಗದ್ದೆ ; ತರೀ ಜಮೀನಂ. 'ದೇವಮಾತೃಕ' ಪರಾ. [ ಸಂ. ]

**ನದೀಮಾತೃಕೆ** (ನಾ). = ನದೀಮಾತೃಕ ೧ : ದೇವಮಾತೃಕೆ ನದೀಮಾತೃಕೆಯಾದ ನಾನಾವಿಧ ಬೆಳೆಯ ಭೂಮಿಗಳು ಅವಾಗ ಬೆಳೆದೊಱಗುವ ಧಾನ್ಯಸಂದೋಹಕಾವಾಸವಾಗಿರುತಿಹುದು (ನಾಗಕು. ೨-೧೮). [ ಸಂ. ನದೀಮಾತೃಕಾ ]

**ನದೀಮುಖ** (ನಾ). ಹೊಳೆಯು ಸಮುದ್ರಕ್ಕೆ ಸೇರುವ ಸ್ಥಳ; ಅಳಿವೆ: ಸ್ವಯಂಭೂರಮಣ ಸಮುದ್ರದ ಮಹಾಮತ್ಸ್ಯಂಗಳ್ಸಾಸಿರಯೋಜನದೀರ್ಘಂ ನದೀಮುಖದೊಳು ಐನೂಱು ಯೋಜನ ನೀಳಂ (ಧ್ಯಾವಕಾ. ೧೨೩) : ನದೀಮುಖ (The mouth) ಅಂದರೆ ನದಿಯು ಸಮುದ್ರಕ್ಕೆ ಸೇರುವ ಸ್ಥಳ (ಭೂಗೋಳ. ೧೨) ; ಗಂಗಾನದಿಯಲ್ಲಿ ನದೀಮುಖದಿಂದ ಎಪ್ಪತ್ತುಮೈಲಿಗಳವರೆಗೂ ಹಡಗುಗಳು ಹೋಗುತ್ತವೆ (ನಕದಿ. ೨೦) : ಈ ವಲಯದಲ್ಲಿ ನದೀಮುಖಗಳಲ್ಲಿರುವ ಮೆಕ್ಕಲುಮಣ್ಣು ನೀರಾವರಿಗೆ ಅನುಕೂಲವಾಗಿದೆ (ಶಿಲ್ಪಸಾ. ೩೬೧). [ ಸಂ. ]

**ನದೀಮುಖಖಂಡ** (ನಾ). = ನದೀಮುಖಜಭೂಮಿ: "ನದೀಮುಖಖಂಡ ಅಥವ ಡಲ್ಟ (Delta)" ಅಂದರೆ ಒಂದು ನದಿಯ ಮುಖಭಾಗದಲ್ಲಿರುವ ತ್ರಿಕೋಣಾಕಾರವಾದ ಭೂಮಿ (ಭೂಗೋಳ. ೧೩). [ನದೀಮುಖ + ಖಂಡ]

**ನದೀಮುಖಜಭೂಮಿ** (ನಾ). ನದಿಯು ಸಮುದ್ರಕ್ಕೆ ಸೇರುವಲ್ಲಿ ನಿರ್ಮಾಣವಾಗುವ, ಮೆಕ್ಕಲುಮಣ್ಣಿನಿಂದ ಕೂಡಿದ ನೆಲ; ಮೆಕ್ಕಲು ಭೂಮಿ; ಜಲಾನಯನ ಭೂಮಿ: "ನದೀಮುಖದಲ್ಲಿ ಇಂತಹ ತ್ರಿಕೋನಾಕಾರವಾಗಿ ಏರ್ಪಟ್ಟ ಮೆಕ್ಕಲುಭೂಮಿ : ನದೀಮುಖಜಭೂಮಿ; ಕುದುರು" (Delta. ಇಂಕನಿ) ; ನದಿಗಳು ತಮ್ಮ ಗತಿಗಳನ್ನು ಬದಲಾಯಿಸುವುದು, ನದೀಮುಖಜಭೂಮಿಗಳೆಂದು ಹೊಸ ಪ್ರದೇಶಗಳು ಸಿದ್ಧವಾಗುವುದು . . . ಮುಂತಾದುವು ಪ್ರಕೃತಿಯಲ್ಲಿ ಯೇ ನಡೆದಿರುವ ಘಟನೆಗಳು

(ಧಾಇಶ್ರ. ೬) ; ದಕ್ಷಿಣ ಭಾರತದ ನದಿಗಳು . . . ಸಮುದ್ರ ಸೇರುವ ನದೀಮುಖಜಭೂಮಿಯಲ್ಲಿ ಮಾತ್ರ ಅವು ಭೂಮಟ್ಟದಲ್ಲಿ ಹರಿಯುತ್ತವೆ (ನನ೦. ೩೨). [ ಸಂ. ]

**ನದೀಮೂಲ** (ನಾ). ನದಿಯ ಉಗಮಸ್ಥಾನ ; ನದಿಯು ಹುಟ್ಟುವ ಸ್ಥಳ : "ನದೀಮೂಲ" (Source) ಅಥವ "ಉಗಮ" ಅಂದರೆ ನದಿಯು ಹುಟ್ಟುವ ಸ್ಥಳ (ಭೂಗೋಳ. ೧೨) ; ಋಷಿಮೂಲವನ್ನೂ ನದೀಮೂಲವನ್ನೂ ಗುರುಮೂಲವನ್ನೂ ಹುಡುಕಬಾರದು (ರೂ೦) . P ಈ ರೀತಿಯಲ್ಲಿ ಮೂಲಗಳನ್ನು ಬೆದಕುತ್ತಾ ಹೋದರೆ ಅಪ್ರಿಯವಾದ ವಿಷಯಗಳು, ಅಪಾಯ ಪ್ರಸಂಗಗಳು ಉಂಟಾಗುತ್ತವೆ ಎಂಬುದು ರೂಢಿವಾಕ್ಯದ ತಾತ್ಪರ್ಯ. [ ಸಂ. ]

**ನದೀಯೋಜನೆ** (ನಾ). ನದಿಗಳಿಂದ ಉಪಯೋಗ ಪಡೆಯಲು ಅಣೆಕಟ್ಟು ಕಟ್ಟುವ ವ್ಯವಸ್ಥೆ,–ಏರ್ಪಾಡು : ನದೀಯೋಜನೆಗಳು ನಮ್ಮ ದೇಶದ ಇಂಜನಿಯರ್‌ಗಳ . . . ಕೆಲಸಗಾರರ ಪ್ರತಿಭೆಯ ಪ್ರತೀಕಗಳು (ನನ೦. ೩೪). [ ಸಂ. ನದೀಯೋಜನಾ ]

**ನದೀಸರ್ಜ** (ನಾ). ಒಂದು ಬಗೆಯ ಮರ ; ಅರ್ಜುನವೃಕ್ಷ : ಮತ್ತಿಮರ : "ನದೀಸರ್ಜಃ, ವೀರತರುಃ, ಇಂದ್ರದ್ರುಃ, ಕಕುಭಃ, ಅರ್ಜುನಃ–೫ ತೋರಮತ್ತೀಗಿಡ, ಕೆಂಪುಮತ್ತೀಗಿಡ. ರಕ್ತಾರ್ಜುನವೃಕ್ಷ" (ಸಿದ್ಧಾಂತಿ. ೧೨೨). [ ಸಂ. ]

**ನದೀಸುತ** (ನಾ). = ನದೀಜ ೩ : "ನಾದೇಯಃ, ನದೀಸುತಃ–ಈ ೨ ನದಿಯ ಮಗಂ" (ಹಲಾಯು. ೮೨-೩೪೭) : ಗುರು ಗುರುಪುತ್ರ ಶಲ್ಯ ಭಗದತ್ತ ನದೀಸುತರೆಂಬ ಸಂದ ಬೀರರೆ ಮುಖ್ಯವಕ್ಕುಂ (ಪಂಪಭಾ. ೧೦-೧೨); ತ್ರಿದಶನದೀಸುತನಿಂ ತೀರದ ಕಜ್ಜಂ ಮುನ್ನಂ ಕಳಶಸಂಭವನಿಂ ತೀರದ ಕಜ್ಜಮಿನಜನಿಂ ತೀರದ ಕಜ್ಜಂ ದ್ರೋಣಪುತ್ರನಿಂ ತೀರ್ದಪುದೇ (ಗದಾಯು. ೩-೬೦) ; ಆ ನದೀಸುತನಡಿಗಳಿಗೆ ರವಿಸೂನು ಕಳುಹಿಸಿಕೊಂಡು ಬಹಳ ಮನೋನುರಾಗದಲ್ಲೈದಿದನು ಕುರುರಾಯನೋಲಗವ (ಕುಮ್ಯಾದ್ರೋ. ೧-೬೨). [ ಸಂ. ]

**ನದೀಸೂನು** (ನಾ). = ನದೀಜ ೩ : ಕಾನೀನಂ ದ್ರೋಣ ನದೀಸೂನುಗಳ ಬಿದಿಂಬಳಿಕ್ಕೆ ಪೆಜರೆನಗಿಲ್ಲೆಂದಾನೆ ಗಳಿತಾಶ್ರುಜಲದಿಂ ಸೇನಾಪತ್ಯಾಭಿಷೇಕಮಂ ಮಾಡಿದಪೆಂ (ಗದಾಯು. ೩-೬೬). [ ಸಂ. ]

**ನದೀಹ್ರದ** (ನಾ). ನದಿಯ ಆಳವಾದ ಭಾಗ ; ಮಡು : ಜಳಾವಗಾಹಾಸೆಯಿಂ ವೈತರಣಿಯ ಒರಿಯ ದರಿಯಂ ಮೆಟ್ಟಿ ನುಣ್ಣನಲಂ ಮಣಲ್ದಿಂಟೆಗೆತ್ತದಱ ಪರಿತಪ್ತಲೋಹರಜಸ್ಸಿಕತಿಳತಳದೊಳ್ ಮೆಯ್ಯನೀಡಾಡುವುದುಂ . . . ಅಂತಲ್ಲಿಯುಂ ಸೈರಿಸದೆ ನದೀಹ್ರದಮಂ ಪುಗುವುದುಂ (ಶಾಂತಿಪು. ೬-೯೨ಪ). [ ಸಂ. ]

**ನದುಗು₁** (ಕ್ರಿ). ಪರಾಙ್ಮುಖವಾಗು ; ಮುಖ ತಿರುಗಿಸು : ಒದವಿದ ಪುರುಡಿಂದಂ ನೋಡದು ನುಡಿಯದು ಪೊರ್ದದೆನಿತು ಕಾಲ್ಪಿಡಿದೊಡ ಮೊಲ್ಲದು ಕಿನಿಸಿ ಕಡುಪಿನಿಂದಂ ನದುಗಿದಪುದು ತಿಳಿಯದೆಂತುಮಾರ್ ತಿಳುಪಿದೊಡಂ (ಕಾದಂಬ. ೬೬). [ ? ]

**ನದುಗು₂** (ನಾ). ಗುನುಗು : ಪಾಪನ ಕಡೆಯಿಂದ ಎಲ್ಲಾ ಬಂದಿದೆ ಅವನಿಗೇನು ನದುಗು ? (ರೂ೦). [ ? ]

**ನದುರು** 'ನಜರು' ನೋ.

**ನದರುಗಾಣಿಕೆ** 'ನಜರುಗಾಣಿಕೆ' ನೋ.

**ನದುಳು** (ಗು). ೧. ಒಳಗಿರುವ ; ಹುದುಗಿರುವ ; ಮುಚ್ಚಿಟ್ಟಿರುವ : ಕಿದರಿದಾಲಿಯ ಕಿಡಿಯ ಮಾಲೆಯ ವದನದೆಗಹಿನ ದೌಂಷ್ಟ್ರ ಬಿಗುಹಿನ ನದುಳು ಜಿಹ್ವೆಯ ಗಳದ ಹೃಂಹೆಯ ಸುಚ್ಚು ಹೊಯ್ಲುಗಳ ಪದಯ ನಾಮದ ಬರಿಯ ರೋಮದ ತ್ರಿದಳ ಕರ್ಣದ ಕದಳಿವರ್ಣದ ಪದದ ಕೇಸರಿಯುದಿಸಿ ರೋಷದಿ ಕವಿದವರಿಭಟನ (ಅಂದಿಶಾ. ೬೨-೩೮). (ನಾ). ೨. ಮುಚ್ಚಿಟ್ಟಿರುವಿಕೆ ; ಹುದುಗಿರುವಿಕೆ : ವಿಷದ ಲಹರಿಯ ಲಳಿಯ ನದುಳಿನ [ಪಾಠಾಂ. ಉಸುರಿನ] ಹಸರಿಕೆಯ ಚೂರಿಸುವ ಜಿಹ್ವಾಪ್ರಸರದುರುಪೂತ್ಕಾರದಹಿಪಂಜರದ ಮಧ್ಯದಲಿ ಎಸೆದನೈ ಲವ (ತೊರರಾ. ೬-೦೬-೯). 'ನದುಳುನಗೆ' ಪರಾ. [ ? ]

**ನದುಳುನಗೆ** (ನಾ). ಹೊರತೋರದ ನಗೆ ; ಹತ್ತಿಕ್ಕಿದ ನಗೆ ; ಅಂತರಂಗಿಕವಾದ ನಗೆ : ನೋಡಿದುದುಖಿಳಖಳನಿಕರ ನದುಳು [ಪಾಠಾಂ. ಪುದಿದ]ನಗೆಗಳ ಮೊಗದ ಮುರುಹಿನ ವದನದರೆಮುಸುಕುಗಳಲಿದ್ದುದು (ತೊರರಾ. ೩-೬-೦೩) ; ನ[ಪಾಠಾಂ. ನು] ದುಳುನಗೆಗಳಲಿವರು ಮೂವರು ಪುದಿದ ಪರಿತೋಷದಲಿ ರಾಮನ ಪದಪಯೋಜವ ಸಾರಿದರು ಕಪಿಕಟಕ ನಲಿದಾಡೆ (ತೊರರಾ. ೬-೨೭-೬೨). [ ನದುಳು + ನಗೆ ]

**ನದ್ಧ** (ಗು). ೧. ಸೇರಿರುವ; ಕೂಡಿಕೊಂಡಿರುವ ; ಕಟ್ಟಿದ. (ನಾ). ೨. ಬದ್ಧನಾದವನು ; ಒಳಪಟ್ಟವನು ; ಸೇರಿದವನು : "ಬದ್ಧಃ, ನದ್ಧಃ. ಸಂಯುತಃ–ಈ ೩ ಕಟ್ಟುಪಟ್ಟವಂ" (ಹಲಾಯು. ೫೬-೦೮೫.; ಕರಿಸೇನಾಸಾರಿನದ್ಧೋತ್ತರಳಕದಳಿಕಾಕಾನಸೋಚ್ಚುಂಬ್ಯಮಾನಾಂಬರಚಕ್ರಂ (ಆದಿಪು. ೪-೨೪). [ ಸಂ. ]

**ನದ್ಧ್ರಿ** (ನಾ). ಚರ್ಮದ ಪಟ್ಟಿ ; ತೊಗಲಿನ ಹಗ್ಗ : "ನದ್ಧ್ರೀ ವದ್ಧ್ರೀ ಸಂಜ್ಞೆಯದು ವರತ್ರಯೆನಿಕ್ಕುಂ" (ವಸ್ತುಕೋ. ೫೦-೩೭) ; ನದ್ಧ್ರೀ, ವದ್ಧ್ರೀ, ವರತ್ರಾ–೩ ತೊಗಲ ಮಿಣಿಯ ಪೆಸರು, ತೊಗಲ ಹಗ್ಗ" (ಸಿದ್ಧಾಂತಿ. ೨೩೯). [ ಸಂ. ನದ್ಧ್ರೀ ]

**ನದ್ಯಂಬು** (ನಾ). ನದಿಯ ನೀರಿನ ಆಶ್ರಯ. [ ಸಂ. ]

**ನದ್ಯಾಮ್ಲ** (ನಾ). ಒಂದು ಬಗೆಯ ಸಸ್ಯ : "ಉಪಕರದಂತಿ–ನದ್ಯಾಮ್ಲ" (ಓಷಧಿ. ೦೬). [ <ಸಂ. ನದ್ಯಾಮ್ರ ]

**ನದ್ಯುತ್ತರಣ** (ನಾ). ನದಿಯನ್ನು ಹಾಯುವಿಕೆ,–ದಾಟುವಿಕೆ : ಅಂತುಭಯನದಿಯ ವೈಷಮ್ಯಮುಮನಾಶ್ಚರ್ಯಂಬಟ್ಟು ನೋಡಿ ನದ್ಯುತ್ತರಣೋಪಾಯಮಾವುದೆಂದು ಬಗೆದು (ಆದಿಪು. ೦೩-೫೦ಪ). [ ಸಂ. ]

**ನನವತಿ** (ನಾ). ಒಂದು ಸ್ಥಳದ ಹೆಸರು : ನೆಲ್ಲಿ ಕುಡಿಕ್ಕಿಜುವಳೆ ನನವತಿ ಸಾಗಲ ತಟಾಕಸ್ಯಾತ್ (ಮ್ಯಆರಿ. ೦೯೩೯, ೩೦-೨೯ : 670). [ ? ]

**ನನವರಿಕೆ** 'ನೆನವರಿಕೆ' ನೋ.

**ನನಸು, ನೆನಸು₁** (ನಾ). ನಿಜಸ್ಥಿತಿ ; ವಾಸ್ತವಸ್ಥಿತಿ ; ಸತ್ಯ ; ದಿಟ ; ನಿಶ್ಚಯ : "ನನಸು = ದಿಟಂ" (ಕಮದ. ಪರಿ. ೨) ; "ನನ್ನಿ, ನಿಕ್ಕುವಂ, ನಿಸದಂ, ಸಾಜಂ, ನ.[ಪಾಠಾಂ. ನೆ]ನಸು, ದಿಟಂ–ಈ ೬ ಸತ್ಯಂ" (ಕಕಸಾ. ೦೩-೨೫೪) ; ಪುಳಿನಕಂಸರಪ್ರದೇಶದೋಳ್ ಮಱಿದೊಱಗುವೈರಾವತದಂತೆ ಪವಡಿಸಿ ಕಿಱುದಾಸಾಂ ಬೇಗದೊಳ್ ಸುಭದ್ರೆಯುಂ ಕನಸಿನೊಳ್ ಕಂಡು ನನಸೆಂದು ಬಗೆದು (ಪಂಪಭಾ. ೪-೧೧೦ಪ) ; ಭೀತಿಯುಂಬಟ್ಟದನೆ ಕನಸು ಗಂಡುಮ್ಮಳಂಗೊಂಡು ಚೋದ್ಯಂ ನನಸೆಂದೆಚ್ಚತ್ತಿರುತ ತಂನೆಯ ತಲೆಯುನತಿಭ್ರಾನ್ತನಂದಿಂದು ನೋಳ್ಕುಂ (ಎಕ. VII, ಶಿಮೊ. ೬೪-೩ : 1112) ; ಕನಸೆಂದೊಡಂ ನನಸೆಂದವಾಳ್ದಲ್ [ಪಾಠಾಂ. ನೆನಸೆನುತ್ತಾಂತಳ್] ಮಹಾಚಿಂತೆಯಂ (ಜಗವಿ. ೧೬-೧೦೭) : ತಮ್ಮ ಕಲ್ಪನೆಯ ಕನಸನೆ ನನಸಿನ ನನ್ನಿ ಎಂಬಂತೆ ಏನೇನೊ ಕಣವೇಳುತಿಹುದವರ ಚಾಳಿ (ಚಂದ್ರಸ. ೬೨-೨೨); ಅವಳು ಕನಸಿನಲ್ಲಿ ಮೈತೋರಿ, ನನಸಿನಲ್ಲಿ ನಿಧಿಯನ್ನು ತೋರಿಸಿಕೊಟ್ಟಳು! (ರಾಜ್ಯೋದ. ೧೮೬). **ನೆನಸು₁** : "ನೆನಸೆಂದು ದಿಟಂ" (ಕಚುನಿ. ೦೯೧) ; "ನನ್ನಿ ಸಾಜ ನೆನಸುಂ ದಿಟವೆಂದುಸಿರಲ್ಕೆ ಸತ್ಯಮಕ್ಕುಂ" (ಕವಿಕಂ. ೧೨೧); "ನೆನಸೆನಲ್ ನಿಶ್ಚಯಂ" (ಕಪ. ೫೬) : ಕನಸಂ ಧನದತ್ತಂ ನೆನಸೆಂದು ಭೋಂಕನೆಚ್ಚತ್ತು (ಪಂಚತಂ. ೯೧-೦೦) ; ಕನಸಿಂದಂ ನೆರೆದವನಂ ನೆನಸಿಂ ನೆರೆದಪ್ಪನೆಂದು ತರವೇಟ್ಟಪೆ ಕುಂತನಂ ((ಜಗವಿ. ೦೬-೦೧೨); ದನುಜರಟ್ಟಿದ

ಕನಸ ಕಂಡರೆ ನೆನಸಿನಲಿ ನರರಂಜುತಿಪ್ಪರು (ಕಾಶಿರಾ. ೩೩-೮); ಮಱುವಗಲಾದಯಾದೊಳರಸಂ ತುಱುಗಿರೆ ಕಡುಹಂಸವಿರುಳ ಕನಸಂ ನೆನಸೆಂದಱಿವಲಳಸಿಂಗರಾಯರ್ ರನು ಱದಿಂದಂ ಕರೆಯಲಟ್ಟಿದಂ ಪಡಿಯಱರಂ (ಚಳವಿ. ೩-೧೧೦).

**ನನಸಾಗು, ನೆನಸಾಗು** = ಪ್ರತ್ಯಕ್ಷವಾಗಿ ಕಾಣುವಂತಾಗು; ವಾಸ್ತವವಾಗು: ನುಡಿದೊಡಂ ಬರೆಯಿಸಿದೊಡಂ ಕಳಿಪಿದೊಡಂ ನನಸಾಗಿ ತೋಱಲಕ್ಕುಮೆ (ಪದ್ಮರಾ. ೧೦-೦೮೮); ಅವನು ಕಾಣುತ್ತಿದ್ದ ಕನಸುಗಳೆಲ್ಲಾ ನನಸಾದವು (ರೂಢಿ): ಅಂತುದಾರಮಹೇಶ್ವರನೀಶ್ವರವರಪ್ರಸಾದಮೆಲ್ಲಂ ತನಗೆ ನೆನಸಾಗೆಯುಂ ಕನಸಿನಂದದವಾಗಿ ತೋಱೆ (ಪಂಪಭಾ. ೧೦-೧೩೦ ವ).

[ ದೇ.॥ ತಮಿ. ನನವು, ನನಾ ]

**ನನಸುಗಿರು** (ಕ್ರಿ). ದಿಟವೆಂದು ಭಾವಿಸು; ನಿಜವೆಂದು ಭ್ರಮಿಸು: ಅಹುದೆ! ಬಂದೆ ಬೆದರಿದೆ, ಅಜ್ಜ, ಕನಸಂ ನನಸುಗೆತ್ತು! (ಚಂದ್ರಸ. ೨೬-೨೩).

[ ನನಸು + ಗಿರು (< ಗಿಱು) ]

**ನನಾಂದೃ** (ನಾ). ಗಂಡನ ಸೋದರಿ; ನಾದಿನಿ ಅಥವಾ ಅತ್ತಿಗೆ: "ನಾದುನಿ ನನಾಂದೃ ನಂ[ನಾ]ದಿನಿಯೆನಿಕುಂ" (ವಸ್ತುಕೋ. ೫೬-೨೪); ಋಕಾರಾಂತಕ್ಕೆ–ಪಿತೃ, ಸವಿತೃ . . . ನನಾಂದೃ, ಯಾತೃ, ಮಾತೃ, ಧಾತೃ (ಶಮದ. ೮೪ ಪ್ರಯೋ). [ ಸಂ. ]

**ನನೂರು** 'ನಾಲ್ನೂಱು' ನೋ.

**ನನೆ₁, ನೆನೆ₁** (ಕ್ರಿ). ನನೆತು, ನನೆದು, ನೆಂದು, ನೆನೆದು (ಭೂತನ್ಯೂ). ೧. ಆರ್ದ್ರವಾಗು; ಒದ್ದೆಯಾಗು; ತೋಯು: "ನನೆ–ಆರ್ದ್ರಭಾವೇ, ಪುಷ್ಪಕುಟ್ಮಲೇ ಚ (ಮೊಗ್ಗು)" (ಶಮುಧಾ); ಅಂತೆಟ್ಟತ್ತು ನೆತ್ತರ ಪೊನಲೊಳ್ ನಾಂದು ನನೆದ ಮೆಯ್ಯುಮಂ ತೊಯ್ದು ತಳ್ಪೊಯ್ದ ಜಡೆಯುಮಂ ಕಂಡು (ಪಂಪಭಾ. ೧-೧೦೫ವ); ನಿರವಧಿಪ್ರೇಯಪ್ರೀತಿವಚನಂ ಪುಳಕದೊಳ್ ನನೆತು ಹರ್ಷದೊಳರಲ್ದು ಆನಂದಾಶ್ರುಭರದೊಳ್ ತುಳುಂಕಿ (ಅನಂಪು. ೩-೫೩ವ): ಮೊಮ್ಮಂದಿರುಗಳಳಲಿನ ಘನತೆಯನು ಕಿವಿಗೊಟ್ಟು ಕೇಳಿದು ನನೆದುದಂತಃಕರಣ ಕಂಬನಿದುಂಬಿದನು ಭೀಷ್ಮ (ಕುವ್ಯಾಭೀ. ೬-೨೪); ಎಲೆ ವನಜಾಕ್ಷ ಬಟ್ಟುಮಂ ಕೊಡುವಿಡಿದು ಪಟ್ಟೆಯಂ ನನೆಯುಲೀಯುದವೋಲೀ ಪಾರ್ಥನಂ ರಕ್ಷಿಸುವೆ ನೀಂ ಕೃಪೆಯೊಳು (ಜೈಮಿಭಾ. ೦೩-೩೪). ೨. ನೀರನ್ನು ಹೀರಿ ಮೃದುವಾಗು,–ಮೆತ್ತಗಾಗು: ಕಲ್ಲೆಂತುಂ ನನೆಯದವೋಲ್ ಪೊಲ್ಲಮೆಯೊಳ್ ಕೂಡಿ ರೌಪವಕ್ಕಿಟಾವವರುಂ ಸಲ್ಲಲಿತಮಪ್ಪ ಧರ್ಮಕ್ಕಿಲ್ಲಿ ಯುವೋರಂತೆ ಬಾರರಘವಶದಿಂದಂ (ಧರ್ಮಾಮೃ. ೧೦-೧೩೬); ಉತ್ತಮದ ಸೊಡ್ಡಿಗೆಯ ಬಟ್ಟವಾಲೊಳು ನನೆಹಿ ಮತ್ತೆ ನನೆ [ಪಾಠಾಂ. ಮೆತ್ತನಾ]ದಾಗ ತೆಗೆದದನು ಓಟ್ಟೆಯ ಹಿಟ್ಟನೊತ್ತಿ (ಸೂಪಶಾ. ೧-೧೧). ನೆನೆ₁: ೧. ಎಱೆದರೆ ನೆನೆಯದು ಮಱೆದರೆ ಬಾಡದು ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ (ಬಸವ. ೧೯೬); ಚಿತ್ರಜಾಂತಕನೊಂದುದಿನವೃದ್ಧತ್ತಪೋಧನವೇಷದಿಂ ನೆನೆವುತ್ತ ಮಳೆಯೊಳು ನಡುಗುತಂ ನಡುವಿರುಳು ನಡೆತರಲು (ಬಸಪು. ೨೬-೪೬); ಸೂಕ್ತಿಸುಧಾರಸದಿ ನೆಱೆ ನೆನೆದುದಾತನ ಮೈವಿಲೋಚನವಾರಿಪೂರದಲಿ (ಕುವ್ಯಾಕ. ೧೬ ೨೩); ಮೊದಲೇ ಸೀಮೆಎಣ್ಣೆಯಲ್ಲಿ ನೆಂದ ಚಂಡು ಉರಿಯತೊಡಗಿತು (ಗೋಪುರ. ೪೪); ನೆನೆದ ಕಲ್ಲು ಮೆತ್ತಗೆ ಆದೀತೇ? (ಗಾದೆ). ೨. ಕೂಡಲಸಂಗಮದೇವ ಬಱಯುದಕದಲ್ಲಿ ನೆನೆವನೆ (ಬಸವ. ೧೮೪): ಧರಣಿ ನೆನೆದುದು ಗಂಧರಸಕತ್ತುರಿಯ ಪನ್ನೀರುಗಳ ಹೊಸಲೊಡೆವರಿ (ಕುವ್ಯಾವಿ. ೧೦-೯೩). 'ನೆನೆಗಡಲೆ', 'ನೆನೆಯಕ್ಕಿ₁' ಪರಾ. [ ದೇ.॥ ತಮಿ. ನನ್ಯೆ; ಮಲ. ನನ, ನನೆ; ತುಳು. ನನೆ; ಕೊಡ; ನೆಲೆ, ನೆಲ ]

**ನನೆ₂** (ಕ್ರಿ). ೧. ಹೂವು ಬಿಡು; ಮೊಗ್ಗಾಗು; ಮುಗುಳಾಗು: "ನನೆತುದೆಂದು ನನೆವೆತ್ತುದು" (ಶಶಸಾ. ೯-೧೮೯); "ನನೆತುದು ನನೆಯೇಱದುದು" (ಕವಿಕಂ. ೭೭); "ನನೆತುದೆನೆ ಮೊಗ್ಗೇರಿದುದು" (ಕಕರ. ೫೩); ತಳಿತಜ್ಜುಗುವಶೋಕೆಗಳುಂ ನನೆತೆಲ್ದ ಜಾದಿಗಳುಂ ಮುಗುಳ್ತು ಮುಱಿವ ಮೊಲ್ಲೆಗಳುಂ (ಲೀಲಾವ. ೬-೬೦ ವ): ಬೆಳಕು ಚೆಂಕಿ ಬೆರೆತುಕೊಂಡು ಭಾದವ್ರ ಹೋದಡಿರ ಬಾಳು ಮೊಳತು ಸುಗ್ಗಿ ನನೆತು ಹೂವಿನಂತೆ ಮಾಡಿರಿ (ಗಙಾಕ. ೨೩-೬). ೨. ಚಿಗುರು ಬಿಡು; ಅಂಕುರಿಸು. 'ನನೆವೊಯ್' ಪರಾ. [ ದೇ.॥ ತಮಿ. ನನ್ಯೆ: ತೆಲು. ನನಯು, ನನಚು, ನನೊಚು ]

**ನನೆ₃** (ನಾ). ೧. ಅರಳದ ಹೂವು; ಮೊಗ್ಗು; ಕುಟ್ಮಲ: "ನನೆ–ಆರ್ದ್ರಭಾವೇ, ಪುಷ್ಪಕುಟ್ಮಲೇ ಚ" (ಶಮುಧಾ); "ನನೆ ಕುಟ್ಮಲಂ" (ಕಶಸಾ. ೯-೧೫೩); "ನನೆಯೆನಲು ಕುಟ್ಮಳವಕ್ಕು" (ಕಶರ. ೫೩); ನನೆಯ ಕೊನೆಯ ತಳಿರ ಮುಗುಳ ವನಲತಾನಿಕುಂಜದಿಂ ಪ್ರಸೂನರಜದ ಪುಂಜದಿಂ (ಹಂಪಭಾ. ೧-೫೮ ರಗಳೆ); ಬನದಿಂ ಬನಕ್ಕೆ ನನೆಯಿಂ ನನೆಗಲರಿಂದಲರ್ಗೆ ಪೊರೆದು ಬಿರಯಿಗಳರ್ದೆ ಪೌವನೆ ಪಾಱೆ ಪಾಱುಗುಂ ಕಾವಾನಿಕಾವುಕಿಲೀಮುಖಂ ಶಿಲೀಮುಖನಿವಹಂ (ಮಲ್ಲಿಪು. ೨-೪೧); ತುಱುಗಿದ ತಳಿರಿಂ ನನೆಯಿಂ ಕಿಱುವಿಡಿಯಿಂದೆಸೆದುದಸದಳಂ ಮಾಕಂದಂ (ಕಾವ್ಯಾರ. ೨೩೨); ಸಣ್ಣ ನನೆಯೊಳಗಣ ಪರಿಮಳವ ಹೊಱಸೂಸಿ ಇದಿರಿಂಗಱುಹಿಸಬಲ್ಲುದೇ ವಾಯು (ದೇದಾಷ. ೩೩-೦೨೮); ಸಂಪಗೆಯು ನನೆಗೆಯ್ದ ಬಟ್ಟೆಕೊಯ್ಯಗೆ ಜಾಱುವ ತುಂಬಿ ನಗಿಸಿದುದು ಮಲ್ಲಿಗೆಯಂ (ಕಬ್ಬಿಕಾ. ೫೮); ತನುವುಳಕ ತಲೆದೋಱೆ ರೋಮಾಂಚನದ ಬಿಗುಹಡಗಿತ್ತು ಕಂಗಳ ನನೆಗಳರಳಿದವಾಯ್ತು ಭೀಷ್ಮಂಗಿತ್ತಣವಧಾನ (ಕುವ್ಯಾದ್ರೋ. ೧-೨೨); ಪೂವಳ್ಳಿಗಳ್ ನನೆಕೊನೆ ಮುಗುಳರೆ ಮುಗುಳ್ ಬಿರಿಮುಗುಳುಳ್ಳಲರ್ದ ಪೂಸವುಲರ್ಗಳಿಂದೆ ಸೊಗಯಿಸೆಯುಂ, ಮನೋಹರವಾಯ್ತು ಪೊಸಸುಗ್ಗಿ (ರಾಮಾಕ್ಮ. ೧೬-೧). ೨. ಹೂವು; ಪುಷ್ಪ: ಕಂಪುವಂ: ನನೆಯನೆ ಪೇಱೆ ಕೆಂದಳಿರೊಳೆಯ್ದ ಬಟಲ್ದಳಮಾವು (ಆದಿಪು. ೧-೬೪). 'ನನೆಗಣೆ', 'ನನೆವಾಸು₂' ಪರಾ.

**ನನೆಯ ಕೋಲ್** = ಹೂಬಾಣ; ಪುಷ್ಪಬಾಣ ನೀಂ ನಾಲ್ಕರಡು ಪಗಲೊಳಿಪ್ಪೊಡೆಯನ ಕೈಯ ನನೆಯ ಕೋಲ ಕಾಲಾಟಮುಂ ಕಾಣ್ಬರನುತೋಲಗಸಾಲೆಯಂ ಪೊಱಮಟ್ಟು (ಕಬ್ಬಿಕಾ. ೧೮೮). **ನನೆಯ ಶಿಶು** = ಮೊಗ್ಗು; ಮುಗುಳು: ಜ್ಞಾನಿಯ ಸಂಗ ನನೆಯ ಶಿಶುವಿನಂತಿರಬೇಕು ಜ್ಞಾನಿಯ ಸಂಗ ಭಾನುವಿನ ತಾವಿನಂತಿರಬೇಕು (ಮೋಳಿಪು. ೯೬-೩೮೫). **ನನೆಯ ಸರ** = ಪುಷ್ಪಬಾಣವನ್ನುಳ್ಳವನು; ಕಾಮ; ಮನ್ಮಥ: ನನೆಯ ಸರಂಗೆ ಚಿತ್ರದೆಡೆಯುಂ ಕುಡದಿರ್ದನ ಪೆಂಪು ಜಾಣ್ ಜಸಂ . . . ಕೂರ್ಪು ಪೊಡರ್ಪೆಸದಿರ್ಪುದು (ಶಾಂತೀಶ್ಮ. ೬ ೬೨). **ನನೆಯ ಸರಲ್** = ನನೆಯ ಕೋಲ್: ನನೆಯ ಸರಲ್ಗಳುಮಂ ಕಬ್ಬಿನ ಬಿಲ್ಲುಮನೊಲ್ಲದಿಲ್ಲಿಗವತರಿಸಿದನಂಗನನೆಯ್ದ ಕಾಮ್ಬವೋಲ್ ಕಂಡು ನೃಪಕುಮಾರರ್ ಸ್ವಯಂವರಾಸೆಯನುಱೆದರ್ (ಶಾಂತಿಪು. ೫-೯೪); ನನೆಯ ಸರಲ್ಗಳಂತೆ ನೆಱೆದಿಂಗಳ ತಣ್ಣದಿರಂತೆ . . . ಲೋಲಲೋಚನರು ಚ ಸಂತ್ರಿಮುತ್ತಿದುದಶೇಷನೃಪಾಲಸಭಾಂತರಾಳಮಂ (ಪಂರಾಮಾ. ೫-೭೦): ಕೃತ್ರಿಮ ವಿಹಗಾವಳಿ ಶುಕಪಿಕಮೆನಲಾ ಮಂಟಪಮಂ ಶೋಭಿಸಿದುದು ನನೆಯ ಸರಲ ನೀಱನ ಕೇಳೀವನದಂದಮನನುಕರಿಸಿ (ಜಯುಕಾ. ೪-೫೦).

[ <ನನೆ₂./ತಮಿ. ನನ್ಯೆ, ನಕ್ಕೆ; ಕೊಡ. ಕೊದ. ನನ್; ತೆಲು. ನನ ]

**ನನೆಕೇರ್** (ನಾ). ಮೊಗ್ಗಿನಿಂದ ನಿರ್ಮಿಸಿದ ಗೋಡೆ: ನನೆಕೇರಿಂ ಕಂಬನಿಪ್ಪಂ ಕುಸುಮಿತಲತಿಕಾದಂಡಸಂದೋಹದಿಂ . . . ಒಪ್ಪುವ ನವಸುಮಮೋಮಂಡಪಕ್ಕೆಯ್ದುವಂದಳ್ (ಲೀಲಾವ. ೧೧-೫೯). [ ನನೆ₃ + ಕೇರ್₁ ]

**ನನೆಕೊನೆ** (ನಾ). ೧. ಚಿಗುರಿದ ಕುಡಿ; ಅಂಕುರ; ಮೊಳಕೆ: ನನೆಕೊನೆಯು ತಳಿರ ಪೂವಿನ ಬನವನಿತುಂ ಕಿಱಿಗಳಳುರೆ ಬೆಂಕಿಯ ಪೊಂಜುದ್ದರ್ವಿನೊಳ್ ಕೊರಗಿರ್ದ ಲತೆಗಳ ಕೊನೆಗೊನೆಯುನೆ ದಪನನಲರ್ದು ಕೊನೆಗೊನೆಗೊಂಡಂ (ಪಂಪಭಾ. ೫-೮೭); ಇಂದೂ ನಾಳೆಯೂ ಮತ್ತೆ ಮೈಯೆಲ್ಲ ನನೆಕೊನೆಯು

ಫಲೆಯುದುರಿ ನಿಂತರೂ ಒಣಗಿಲ್ಲ ವನವು (ಕರುಶ್ರಾ. ೪೧-೩೩). ೨. (ಆಲಂ) ಹಿಗ್ಗು ; ಸಂತೋಷ ; ಆನಂದ : ನೆನಹು ನೆಮ್ಮಿತು ಶಿವನಾತರದ ನನೆಕೊನೆಯು ತೆರಳಿಕೆಯು ತೊಡಚೆಯು ಮನದ ಸಂಚಲವೀಜುವೋದುದು ತಲಿಧನಂಜಯನ (ಕುಪ್ರಾ.ಅ. ೪-೪೨) ; ಒಂದರಿಂದಿನ್ನೊಂದು ಮನೆಗಿಲ್ಲಿ ನಡೆದುದೀನೆ ವಿಜಯಯಾತ್ರೆಯ ನನೆಕೊನೆ ! (ಚಿಂತನ. ೬೭-೪). 'ನನೆಕೊನೆ ವೋಗು' ಪರಾ.

**ನನೆಕೊನೆಯಾಗು** = ವಿಕಸಿತವಾಗು ; ಅರಳು : ನಲ್ಲನೆ ನಗೆನುಡಿಗಾಟನೆ ವೆಣ್ಗಲರ್ವಿಲ್ಲನೆ ನುಡಿ ಬಸಂತದೊಳು ಪಲ್ಲವಿಸುತೆ ನನೆಕೊನೆಯಾಯ್ತು ಚಿತ್ರಸುಫ[ಪು]ಲ್ಲವಲ್ಲರಿ ಬಗೆಗಾಣಿ (ಭರತೇಶ. ೯-೨) ; ಭರತೇಶ – ಕುಸುಮರಾಜಿಯುರ ದಿವ್ಯಪ್ರಣಯವು ಸುರತದಲ್ಲಿ ನನೆಕೊನೆಯಾಗುತ್ತದೆ (ಕನಾತ. ೩೭೦). [ ನನೆ$_{3}$ + ಕೊನೆ$_{2}$ ]

**ನನೆಕೊನೆಯೇರು** 'ನನೆಕೊನೆಯೇಱು' ನೋ.

**ನನೆಕೊನೆಯೇಱು,** ನನೆಕೊನೆಯೇರು (ಕ್ರಿ). ಚಿಗುರು ; ಕೊನರು ; ಮೊಳೆ ; ಅಂಕುರಿಸು : ಜನಕಜೆ ವಕ್ತ್ರದೀಪಕಲಿಕಾಕೃತಿಯಿಂ ಪುಗೆ . . . ನರೇಂದ್ರನಂದನಗರ್ಗ ಮನೋವಿಕಾರದೊಡನಂಗವಿಕಾರಮಂದೇಂ ಪೊದಟ್ದುದೋ ನನೆಕೊನೆಯೇಱುವಂತೆ ವನರಾಜಿ ಮಧುಪ್ರಥಮಪ್ರವೇಶದೊಳ್ (ಕುಂದಾಮೂ. ೫-೫೦). **ನನೆಕೊನೆಯೇರು** : ಇಂತಹರ ನೆನಹು ನನೆಕೊನೆಯೇರಿ ದ್ವಾರಶಿಲ್ಪದಿ ಚಿತ್ರವರಳುತಿರೆ, ಎತ್ತ ಹೊರಳಿದರು ನೂತನ ಸೃಷ್ಟಿ (ಶಿಲಮು. ೭೦-೯). [ ನನೆಕೊನೆ + ಏಱು$_{1}$ (<ಏಱ್$_{1}$) ]

**ನನೆಕೊನೆವೋಗಿಸು** (ಕ್ರಿ). ೧. ಚಿಗುರು ಮತ್ತು ಹೂವುಗಳಿಂದ ತುಂಬಿರುವಂತೆ ಮಾಡು. ೨. ಸಂತೋಷಗೊಳಿಸು : ಹರ್ಷಪಡಿಸು : ವನದೊಳು ಚರಿಸಿ ವಸಂತನಾ ವನವ ಭೋಂಕನೆ ಚಿಗುರೇಱಿಸುವಂತೆ ವನಧಿಮಧ್ಯದ ಧರಣಿಯ ನಿನ್ನ ಸುಳುಹಿಂದ ನನೆಕೊನೆವೋಗಿಸು ನೃಪತಿ (ಭರದ. ೫೦-೧೩). ೧, ೨ : ಮನಸಿಜಕಲ್ಪಲತಾನಂದನಮನೆ ಬಿಂಕಕ್ಕೆ ಕೊಂಕಿದಬಾಜನವಂ ನನೆಕೊನೆವೋಗಿಸುತಿರ್ಪುದು ಮನುಜಮನೋಭವ ಭವದ್ವಿಲಾಸವಸಂತಂ (ಯಶೋಧ. ೬-೩). [ ನನೆಕೊನೆವೋಗು + – ಇಸು$_{3}$ ]

**ನನೆಕೊನೆವೋಗು** (ಕ್ರಿ). ೧. ಚಿಗುರು ; ಪಲ್ಲವಿಸು ; ಅಂಕುರಿಸು : ನನೆಕೊನೆವೋಯ್ತು ತನ್ನ ನನೆಯಿಂ ಮುದಮುರ್ವಿಗೆ ತನ್ನ ಪುಷ್ಪದಿಂ ಮನಸಿಶಯಂಗೆ ಪುಷ್ಪಶರನೆಂಬ ಪೆಸರ್ ಬೆಳಗಿತ್ತು (ಜಗವಿ. ೧೪-೭೨) : ಮನಸಿಜ ಮತ್ತವಾರಣಮೊ ಕಾಮನ ಕಾರ್ಮುಕಗೇಹಮೋ . . . ನನೆಕೊನೆವೋದ ಮಾಮರನೊ ಪೇೞೆನೆ ರಂಜಿಸಿದತ್ತು ಮಾಮರಂ (ವರಕಂ. ೪-೮೬) ; ಬೀದಿವರಿದುದು ಬಿಂಕ ನನೆಕೊನೆವೋದುದಾಶಾಬೀಜ ಲಜ್ಜೆಯು ಹೋದ ಮಾಗಿಗೆ ಕದವ ಹೊಯ್ದನು (ಕುಪ್ರಾ.ಕ. ೦-೨೫) ; ನನೆಕೊನೆವೋದ ನವಾಮ್ರದ ನೆಳಲೊಳ್ ಮನಮಂ ತನುವಂ ಬೇರ್ಕೆಯ್ದೊರ್ವಂ ಮುನಿಕುಲತಿಲಕಂ ಯೋಗದೊಳಿರೆ ಕಂಡಂ ಜಯಭೂಪರನು (ಜಯುಕಾ. ೯-೪೦). ೨. ಉಬ್ಬು ; ಉತ್ಸಾಹಿಸು ; ಹಿಗ್ಗು ; ಸಂತೋಷಗೊಳ್ಳು : ಅಂತು ಮೂರ್ಛಾಪ್ರಸಂಗನಾದ ಪನ್ನಗಪತಾಕಂಗೆ ಶಿಶಿರೋಪಚಾರಕ್ರಿಯೆಗಳಂ ಮಾಡಿ ಸಂಜಯನಿರವಂ ತತ್ಪರಿಜನಂ ಕಂಡು ಪೇೞೆ ಗಾಂಧಾರಿ ಮನದೊಳೆಳ್ಳು ಬಳ್ಳಿ ನನೆಕೊನೆವೋಗಿ (ಗದಾಯು. ೩-೬೬ ವ) ; ಪುತ್ರದೋಹಳದಿಂ ಸಮನಿಸಿದುದ್ದೀಪನಧಾರ[ವ]ವೆಂಬಮರ್ದಿನ ಮಟ್ಟಿಯಿಂ ಮಡಲ್ತು ನನೆಕೊನೆವೋಗೆ (ಅರ್ಧನೇ. ೧-೯೨ ವ) ; ತನತನಗುರ್ವುತುಂ ಬಿಡದೆ ಕೊರ್ವುತೆ ಪರ್ವುತುಮುರ್ವಿಯೊಳ್ ಕರಂ ನನೆಕೊನೆವೋಗಿ ಮಾಯೆ ಕೊಬಟಾದದ ಮಾಣ್ಬುದೆ ಹುಪೆಯಾಳ್ದನೇ (ಪಂಪಾಶ.೭೮); ಅನುಪಮಚಿದ್ವಿನಾಯರ್ಕರುಗಳ್ ಹಿರಿದುತ್ಸವದಿಂದ ಬಂದು ತಜ್ಞನಪತಿಪುತ್ರನಂ ಸಚಿವಪುತ್ರನುಮಂ ಪಡೆ ನೋಡಿ ಚಿತ್ರದೊಳ್ ನನೆಕೊನೆವೋಗಿ (ರಾಜಶೇ. ೪-೮೩) ; ನುಡಿಗಬ್ಬದ ಗಬ್ಬದುಬ್ಬರದಿಂ ನನೆಕೊನೆವೋಗಿ (ರಾಮಾಶ್ವ. ೧೫೩-೬).

[ ನನೆಕೊನೆ + ಪೋಗು$_{1}$ ]

**ನನೆಗಣೆ** (ನಾ). ಹೂವಿನ ಬಾಣ ; ಪುಷ್ಪಬಾಣ ; ಹೂಬಾಣ : ಅಂತು ತಿರುವಿಂ ಬರ್ದುಂಕಿದ ಕಂತುವ ನನೆಗಣೆಗಳಂತೆವೋಲ್ ನಡೆಕಂದರ್ ಸಂತಸದೆ (ಪಂಪಭಾ. ೯-೧೦೧) ; ಬಾಲೆಯ ಕಡೆಗಣ್ನೋಟಮೆ ಸಾಲದೆ ನನೆಗಣೆಗಳೇವುವೆಂದು ಮನೋಜಂ ಶೂಲಿಯ ನೊಸಲುರಿಗಣ್ಣಂ ಬೀಲಿಯ ಕಣ್ಣಿಂಬಂ (ಪಂರಾಮೂ. ೫-೪೪) ; ನನೆಗಣೆಯಂ ಸ್ಮರಂ ಪಡೆದ [ಪೂಗೊ]ಳ ದಂತೆವೊಲಿರ್ದುದಚ್ಚವಿಂಚಿನ ಸಾಲಿವಲ್ಗಳ್ (ಅರ್ಧನೇ. ೨-೧೪) ; ನನೆಗಣೆ ನಡುಗುಂ ಕಾಮಿಗಳನೆಂಬ ಮಾತಿಲ್ಲಿ ಪುಸಿ ಪರಸ್ತ್ರೀರತರಂ ನನೆಯ ಮೊನೆಯೆಂಬು ಮಲರಲಗಿನಂಬುಮಾ ಬನದೊಳಂರ್ಚಿ ನೋಯಿಪುದು ದಿಟಂ (ವರ್ಧಪು. ೧೧-೨೬) ; ವಸಂತಂ ವಸಂತನಂ ಕಾಮಂ ಕಾಮನಂ ಇಕ್ಷುಚಾಪಂ ಇಕ್ಷುಚಾಪಮಂ ನನೆಗಣೆ ಸಾರ್ವಂತೆ ಪಾರ್ವತಿಯಂ ನವಯೌವನಂ ಸಾರ್ವಲ್ಲಿ (ಗಿರಿಕ. ೪-೭ ವ) ; ಜಕ್ಕುಲಿಪ ಮನದ ನನೆಗಣೆಯನರಸಿಗೆ ನೋಡೆ ಸಕ್ಕಸ್ವಮವೆನಿಪ ರೂಹಿನ ಮೋಹನಂ ಜನಿಪ ಚಿಕ್ಕಹರೆಯದ ಬೆಚ್ಚದೆರಳೆಗಣ್ಮರಲ ವೆಣ್ಮಕ್ಕಳೆಯ್ತಂದರೊಸೆದು (ಪದ್ಮರಾ. ೩-೬೭). [ ನನೆ$_{3}$ + ಕಣೆ$_{1}$ ]

**ನನೆಗಣೆಗೊನೆ** (ನಾ). ಹೂಬಾಣಗಳ ತುದಿ ; ಪುಷ್ಪಬಾಣಗಳ ಮೊನೆ: ಆ ನನೆಗಣೆಗೊನೆಯಿಂದುದಯಿಸಿದುಗ್ರಾನಲನೊಳ್ಪರಿಯೊಳು ತದ್ವಿರಹದ ಮಾನಿನಿ ಕಣ್ಗೆ ವಿರಾಜಿಸಿದಳ್ ಸ್ವಾಹಾವಧುವೆಂಬಂತೆ (ಜಯುಕಾ. ೪-೪೨).

[ ನನೆಗಣೆ + ಕೊನೆ$_{2}$ ]

**ನನೆಗಣೆದೊಡು** (ಕ್ರಿ). ಪುಷ್ಪಬಾಣವನ್ನು ತೊಡು ; ಹೂಬಾಣವನ್ನು ಹೂಡು : ಕವಿದನ್ನನಿಸಲೆಂದು ತಿರುವಿನೊಳು ನನೆಗಣೆದೊಟ್ಟು ಹದಿವಟ್ಟು ಕಂದರ್ಪನು ಸನ್ನದ್ಧನಾಗಿ ನಿಂದು (ಸೌಂದಪು. ೧೭-೪೩).

[ ನನೆಗಣೆ + ತೊಡು$_{1}$ ]

**ನನೆಗಣೆಯ** (ನಾ). ಹೂವಿನ ಬಾಣಗಳನ್ನು ಹೊಂದಿದವನು ; ಕಾಮ ; ಮನ್ಮಥ : ನನೆಗಣೆಯನ ಕಣೆಗಳವೊಲು ಗೋಪರಂಗನೆಯರ ನಯನ ಮಱೀಚಿ ತನುವಿನೊಳಗೆ ಪಸರಿಸಲಾ ತಾಪಸ ಮನವನಿತ್ತನು ಮಂನಸಿಜಗೆ (ಅಂಜಚ. ೨-೭೩): ಕಡುಚೆಲ್ವಂ ಪಡೆದನಾವಗಂ ನನೆಗಣೆಯಂ (ಕಬ್ಬಿಗಕಾ. ೧೩೭) ; ನನೆಗಣೆಯನೊಲಿದರ್ಚಿಸುವ ಮೋಹನದ ಸಿರಿಯೋ ಕಬ್ಬುವಿಲುಗಾಜಿನ ನಲವಿನಾರಾಧಿಸುವ ಮಂತ್ರಾಧಿದೇವತೆಯೋ (ಸಾಳ್ವಭಾ. ೨-೨೫) ; ನನೆಗಣೆಯನ ನೇಹದ ಜಾಳವೊ ಪೇಳೆನೆ ಗಣಿಕಾಜನವೆಸೆದುದು ಸೌವರ್ಣದ ಸೌಧದ ಮುಂಬಿನೊಳು (ಉದ್ಯದೇ. ೪-೧೯). [ ನನೆಗಣೆ + – ಅ$_{7}$ ]

**ನನೆಗಪ್ಪಡ** (ನಾ). ತೊಯ್ದ ವಸ್ತ್ರ ; ಒದ್ದೆಯಾದ ಬಟ್ಟೆ : ಮನಂದಣಿಯೆ ಚೊಕ್ಕಳದಿಂ ನೀರೊಳಾಡಿ ಮಿಂದು ಬಂದು ತಡಿಯನಡರ್ದು ನನೆಗಪ್ಪಡ ಮನುಟ್ಟಿದು ಪೊಸಸೀರೆಯಂ ನಿಱಿವಿಡಿದಿಟ್ಟು (ರಾಮಾಶ್ವ. ೦೨೪-೨).

[ನನೆ$_{1}$ + ಕಪ್ಪಡ]

**ನನೆಗುದಿ,** ನೆನೆಗುದಿ (ನಾ). ೧. ಅರ್ಧ ಬೇಯುವುದು : ಹೆಚ್ಚಾಗಿ ನೆನೆದು ಪೂರ್ತಿ ಬೇಯದಿರುವುದು : ಹೊತ್ತುವುದು ಸರಿಯುಹುದು ನನೆಗುದಿಯುಹುದು . . . ಒಣಗಿಹುದು ದೋಷಮಸನಕ್ಕಿಂಟು ಕೆಟನಪ್ಪುದು (ಸೂಪಶಾ. ೩-೧). 'ನೆನೆಗುದಿಗೊಳ್' ಪರಾ. ನೆನೆಗುದಿ: ೨. (ಆಲಂ) ಪೇಚು ; ತಳಮಳ : ಆತ ಈ ಕೆಲಸ ಮಾಡಬೇಕೋ ಬೇಡವೋ ಎಂದು ನೆನೆಗುದಿಯಿಂದ ಒದ್ದಾಡುತ್ತಿದ್ದ (ರೂಢಿ).

**ನೆನೆಗುದಿಗೆ ಬೀಳು** = ಅನಿಶ್ಚಿತವಾಗಿರು; ಅನಿರ್ಧಾರವಾಗಿರು; ಬಗೆಹರಿಯದಿರು : ಹೀಗೆ ಪ್ರಣಯ ನೆನೆಗುದಿಗೆ ಬಿದ್ದ ಮೂಲಕ ಕಿಟ್ಟ ಕಂಗಾಲಾದನು (ಗಂಮಾಯಿ. ೯೯) : ಸದ್ಯದ ಮಟ್ಟಿಗಂತು ಆ ವಿಲಾಸಭವನದ ನಿರ್ಮಾಣಕಾರ್ಯವು ನೆನೆಗುದಿಗೆ ಬಿದ್ದಿತಂ (ಸ್ವಾಂಮಿ. ೩೯) ; ಆಮೇಲೆ ಮಂತ್ರ ಆಂದೋಲನವು ನೆನೆಗುದಿಗೆ ಬಿದ್ದ ಮೇಲೆ ತಂದೆಯ ಒತ್ತಾಯದ ಮೂಲಕ ಕಾಲೇಜು ಸೇರಿದ್ದು (ದಾಸಹು. ೮೪).

[ ನನೆ$_{1}$ + ಕುದಿ$_{2}$ ]

**ನನೆಗುಂದಿಗೊಳ್** (ಕ್ರಿ). ತಳಮಳ ಹೊಂದು : ಮನಸಿಜಕರೀಂದ್ರಕಟಮೊಳ್ ಸೊಣೆ ತೊಳ್ಪನೆ ಪುಟ್ಟುವಂತೆ ಪಕುಳಕ್ಕೆ ಪಸುರ್ಗನೆ ಪುಟ್ಟೆ ಬಿರಯಿಯೆರ್ದೆಗಳ್ ನನೆಗುದಿ[ಪಾಠಾಂ. ದಿ]ಗೊಂಡವು ಬಸಂತಮಾಸದ ಪುಗಿಲೊಳ್ (ಮಲ್ಲಿಪು. ೫-೧೬). [ ನನೆಗಂದಿ + ಕೊಳ್$_{1}$ ]

**ನನೆಗೈದುಗಾಱ** (ನಾ). ನನೆಯಂಬ ಆಯುಧವನ್ನು ಹಿಡಿದವನು ; ಮನ್ಮಥ : ನನೆಗೈದುಗಾಱನೆಂದೆನಿಪ ಧೀವರ ದಿವಿಜ ದನುಜ ಮಾನುಷರ ಧೈರ್ಯವೆಂಬ ಮಾತ್ಸ್ಯಂಗಳಂ ತನಗೆ ವಶಮಾಡಿಕೊಳಲು (ಸೌಂದಪು. ೦೨-೩೨). [ ನನೆ$_{3}$ + ಕೈದುಗಾಱ (<ಕೆಯ್ದುಕಾಱ) ]

**ನನೆಗೊಂಬು** (ನಾ). ಹೂವುಗಳಿಂದ ತುಂಬಿದ ರೆಂಬೆ,-ಕೊಂಬೆ : ಬಂದನುಂಡು ನನೆಗೊಂಬುಗಳಂ ಮೊರೆದೇೞ್ವ ಭೃಂಗಝಂಕಾರಮೆ ಮಾೞ್ಪುದಾರ ಬಗೆಗಂ . . . ಹರ್ಷಭಾರಮಂ (ಶಂರಾಮಾ. ೦-೧೦೮) ; ನನೆಗೊಂಬುಂ ನೀಳ್ಕೆ ಚಂದ್ರಾತಪಮ ಷುದಿದುದೆಂಬನ್ನೆಗಂ ನೋಡಿ ಚಂದ್ರಾನನೆ ಪೂವಂ ಲೀಲೆಯಿಂದಂ ತಿಱಿಯೆ (ಮಲ್ಲಿಪು. ೬-೭೬) ; ನನೆಗೊಂಬಾಣತಿಮಾಡಿ ಪಾಡುವವೊಲಿರ್ದತ್ತು ಭೃಂಗಾಂಗನಾಧ್ವನಿಯಿಂದಂ (ಸೂಕ್ತಿಸು. ೦೦-೩೧). [ ನನೆ$_{3}$ + ಕೊಂಬು$_{1}$ ]

**ನನೆಗೊಯ್** (ಕ್ರಿ). ಹೂವುಗಳನ್ನು ಕೀಳು,-ಬಿಡಿಸು,-ಕಿರಿ : ಕೆಗೆದು ನನೆಗೊಯ್ದು ಬಡ ಮೇಲೊಗೆವಳದಳಿಗೊರ್ಂಬು ಪೋಲ್ತುದಾ ಪೂವಿನ ಸೂಱೆಗೆ ತೊವಲಂ ಪಿಡಿದು ಮದಾಳಿಗಳುಲಿಯಿಂ ಪುಯ್ಯಲಿಡುವಶೋಕೆಯ ಶ್ರೈಯಂ (ಚಂದ್ರಪು. ೭-೧೦೦). [ ನನೆ$_{3}$ + ಕೊಯ್ ]

**ನನೆಗೋಲ್** (ನಾ) =ನನೆಗಣೆ ; ನನೆಗೋಲ್ ನಟ್ಟು ಕೊನರ್ತವೊಲ್ಪುಳಕ ಮಾಣ್ಕೆತ್ತಲ್ಲಿ ರಕ್ತಾಂಬುಗಳ್ ಪನಿವಂತೆರ್ದುವು ಘರ್ಮವಾರಿ (ಲೀಲಾವ. ೩೮೯) ; ಮಿಸುಪನ್ನಯೆ ಪುರ್ವಿನ ಕರ್ವುವಿಲ್ಲ ನೋಟದ ನನೆಗೋಲ ಲೀಲೆಯೊಳೆ ಸೋಲಿಸುವಂ ಜಿತಕವಲಶೂಲಿಯಂ (ಗಿರಿಜಾ. ೭-೬೭) ; ನನೆಗೋಲ್ಕಬ್ಬಿನಬಿಲ್ಲದಾಳಿಕಾಳಲೀಜಾವಾರ್ವಿರ್ಯದುಂಬರ್ಮನೋಜನ ಬಿಲ್ಲಂ (ಅನುಪು. ೯-೦೦) ; ಜೊನ್ನೊಡಲಂ ನಿಮಿರ್ಚಿದಪನಗ್ನಿಯ ತಣ್ಗದಿರಿಂದ ಮೋಹೊ ನೀನುನ್ನನೆಗೋಲ್ಗಳಂ ಸಿಡಿಲ್ಗೆ ಸಾಟಿಯನಾಗಿಪೆ ಪಂಚಸಾಯಕಾ (ಜಗಂತ. ೩೨-೫೬). [ ನನೆ$_{3}$ + ಕೋಲ್$_{1}$ ]

**ನನೆಗೋಲ** (ನಾ). =ನನೆಗಣೆಯಂ : ನನೆಗೋಲನಂಪಟಳದಲಿ ಭ್ರಾಂತಿಗೊಂಡಿರ್ದ ವನಚರ ಪೂತ ಸಂಪಗೆಯ ಕೊನೆಗಳ ಮುಱಿದಿಡಲಂಜಿ ತಾಪಸರೆಲೆವನೆಗಾಶಿಯುರನಬ್ಬಿದರು (ಮೋಹತ. ೭-೦೫) ; ವಿನಯದಿ ಮಾತಾಡು ಮಳರಾಯ ನಿನ್ನಯ ತನಯಳಿಗೋಸುಗ ಬಂದ ಮನೆಯಳಿಯನ ಕೂಡೆ ಮಚ್ಚರವೇಕೆಂದು ನನೆಗೋಲನಾತ್ಮಜ ನುಡಿದ (ಮೋಹತ. ೩೫-೨೮). [ ನನೆಗೋಲ್ + - ಅ$_{7}$ ]

**ನನೆದಂಡೆ** (ನಾ). ಹೂವಿನ ದಿಂಡಂ,-ಮಾಲೆ : ಗಂಡನಿಂದಲೇ ಗಂಳದಾಳಿ, ಅರಿಷಣ, ಕುಂಕುಮ, ಮಲ್ಲಿಗೆಯ ನನೆದಂಡೆ (ಕನ್ನಜಾ. ೦೨೨). [ ನನೆ$_{3}$ + ದಂಡೆ$_{1}$ ]

**ನನೆದುಱುಗಲ್** (ನಾ). ಹೂವಿನ ಗೊಂಚಲು,-ಗುಚ್ಛ : ನೆಱೆ ಬಸಂತನ ಮದನಶರಕೆಂದೆಱಕದೋವಿದ ಚೆಂದಳಿರ ನನೆದುಱುಗಲೊದವಿದಶೋಕೆಗಳು ಬನದೊಳು ವಿರಾಜಿಪವು (ಸಾಳ್ವಭಾ. ೨-೩). [ ನನೆ$_{3}$ + ತುಱುಗಲ್ (<ತುಱುಂಗಲ್) ]

**ನನೆದೊಡಿಗೆ** (ನಾ). ಹೂವಿನ ಆಭರಣ,-ಅಲಂಕಾರ : ಇಂತು ಜಲಕ್ರೀಡೆಗೆಂದು ಕೊಳನಂ ಪೊಕ್ಕಲ್ಲಿ ನನೆದೊಡಿಗೆಯ ನಾಯಕಿಯರುಂ ತಿಲಕದ ಲಲನೆಯರುಂ . . . ಗಿರಿಜೆಯ ಚರಣಕಮಲಕ್ಕೆ ಭರದಿಂದೆಱಗುತ್ತುಂ (ಗಿರಿಜಾ. ೪-೨೦ ವ). [ ನನೆ$_{3}$ + ತೊಡಿಗೆ (<ತೊಡುಗೆ) ]

**ನನೆದೋಱು** (ಕ್ರಿ). ಮೊಗ್ಗನ್ನು ಹೊಂದು; ಮುಗುಳಂ ಬಿಡು: ಇದಿರೊಳ್ ನನೆದೋಱೆ ವಸಂತದೂತಿಯೆನೆ ತಾನೆ ನೆಗಟ್ದ ಮಾಧವಿಯೆನೆ ಸಂದದಿಪರ್ಮರ್ತ್ರೆಯ ಪೂಗೊಂಚಲ ಪುದುವಿನೊಳೆಱಗಿದ ಮದಾಳಿಗಳ್ ಮಱೆದಪ್ಪುವೇ (ಆದಿಪು. ೧೧-೧೦೮) ; ದೇವಿ ನೀಂ ನಡಪಿದೆಳಲತೆ ನನೆದೋಱಿತೆಂದು ಬಿನ್ನವಿಸಿದ ಬಾಲಕಿಯರನಾಭರಣಪ್ರದಾನಾತಿ ಸಮ್ಮಾನಗಳಿಂ ಸಂತೋಷಂಬಡಿಸುತಿರ್ದಳ್ (ಕಾದಂಬ. ೨೫) ; ನನೆದೋಱಿತ್ತು ವಸಂತದೂತಿ (ಮಲ್ಲಿಪು. ೫-೭) ; ಕಡವಲರ್ಪೊತ್ತು ಮೊಲ್ಲೆ ಮುಗುಳ್ತಿತ್ತು ಪೊದಟ್ದು ಪೂಲಂ ಪಸುರ್ತುವಾಸಡಿ ಕುಡಿಯೇಱೆ ಮುತ್ತೆ ನನೆದೋಱೆ (ಕುಸುಮಾ. ೬-೦೩) ; ಮರುಗ ಮೊನೆ ನನೆದೋಱೆ ಸುರಗಿ ಜಾಜಿಯ ನನೆಗಳರೆ ಪರಿಮಳದಲೆಸೆಯಲ್ಕೆ (ಹರಿಶ್ಚಾ. ೩-೩೨) ; ಎಲೆ ಸುಳಿದೆಡೆಗಳ [ಕಣ್]ಕಣ್ಗಲೆಯೆಡೆ ಗಂಟೊಡೆದು ಮೊನಸಿ ನನೆದೋಱೆ[ಪಾಠಾಂ. ಕೊನೆದು] ಮುಗುಳ್ತಲರ್ದು ಮಱಿದುಂಬಿಗಂ ತುಂಬೆಳಗರ್ಗಂ ಮುದ್ದಾದುವಲ್ಲಿ ಹೊಸ ಮಲ್ಲಿಗೆಗಳ್ (ಯಶೋಧ. ೪-೫). [ ನನೆ$_{3}$ + ತೋಱು ]

**ನನೆನಾಱು** (ಕ್ರಿ). ಹೂವಿನಿಂದ ಗಮಗಮಿಸು,-ಸುವಾಸನೆ ಬೀರಂ : ನನೆಯೆಳಗಂಪನೆತ್ತಿಯುಮಣಂ ನನೆನಾಱದರಲ್ದನೇಕಕೋಕನದ ವನಂಗಳೊಳ್ ಸುೞಿದು ತಣ್ಣಸವಾಗದೆ . . . ಕೀಡಿದುದು ತುರಣಗಾಳಿ ವಸಂತಮಾಸದೊಳ್ (ಶಂಪಾ. ೫-೩೪). [ ನನೆ$_{3}$ + ನಾಱು$_{1}$ ]

**ನನೆಬಿಜ್ಜಣಗೆ** (ನಾ). ಹೂವಿನಿಂದ ಮಾಡಿದ ಬೀಸಣಿಗೆ : ನನೆಬಿಜ್ಜಣಗೆಯ ತಣ್ಗಲರಿನಾಱದುಯೆನ್ನ ತನುತಾಪ (ಹರಿಶ್ಚಾ. ಪರಿ. ೨೧೦). [ ನನೆ$_{3}$ + ಬಿಜ್ಜಣಗೆ ]

**ನನೆಮುಗುಳ್** (ನಾ). ಎಳೆಯ ಮೊಗ್ಗು ; ಹೊಸ ಮೊಗ್ಗು : ನನೆಮುಗು[ಪಾಠಾಂ. ಗು]ಳ್ ಕೊನೆಮುಗಳ್ಪಿಂದಿರೆ ಮುಗುಳ್ಗಳಂ ತನಿಗಂಪು ಕೀಳಿರ್ದ ಪೊಚ್ಚಪೊಸಪೂಗಳಂ ಕೊಂಡು ಕುಕಿಲಿಱಿಪುಕಂ ನಡೆತಂದು (ಪುಷ್ಪರ. ಹ. ೫೨೩-೨೭) ; ನನೆಮುಗುಳ್ ನನೆಕುಸುಮ ವಸುಗಾಯ್ . . . ತೊನೆದು ತೂಗುವ ಫಲಭರಂಗಳ ಘನತರದ ಸಹಕಾರ ಸಹ ಸುರವನಕದಂಬಕ ವೆಸೆದುದಿದಿರಲಿ ಕಪಿಕುಲೇಶ್ವರನ (ತೊರಗಾ. ೫-೩ ೧೪). [ ನನೆ$_{3}$ + ಮುಗುಳ್$_{2}$ ]

**ನನೆಮೊನೆ** (ನಾ). ಮೊಗ್ಗಿನ ತಂದಿ,-ಅಗ್ರಭಾಗ : ತೋಳಿನೊಳೊಱಗಿದನಿಯಳ ಕರ್ಣಪೂರದೊಳೆಱೆಯ ಕತ್ತುರಿರಸದ ನನೆಮೊನೆಯಿಂದ ಲೇಖಿಸಿದ (ಸಾಳ್ವಭಾ. ೦೭-೦).

ನನೆಮೊನೆಯಾಗು = ಚಿಗುರು : ನನೆಮೊನೆಯಾಗಿ ಬಂದುವೆಳಮಾವೆಳ ಮಾವಿನ ಮುಂಚೆ ಬಂದ ಪೂವಿನ ಪೊಸಗೊಂಚಲೊಪ್ಪಿದುವು (ಶಾಂತಿಪು. ೭-೦೨೫). [ ನನೆ$_{3}$ + ಮೊನೆ$_{1}$ ]

**ನನೆಯಂಬ** (ನಾ). = ನನೆಗಣೆಯಂ : ನನೆಯಂಬಂ ತಾವರೆವೂವಿನ ಕೈಪೊಡೆಯಿಂ ಮನೋಭವಂ ತೊಡೆವವೋಲ್ ವನಿತೆಯ ಸಬಾಷ್ಪಲೋಚನ ಮನವನಿಪತಿ ಶೋಣಪಾಣತಳದಿಂ ತೊಡೆದಂ (ಮಲ್ಲಿಪು. ೪-೦೬) ; ಹೂವಿನ ಬಿಲ್ಲನೊಬ್ಬ ತಂಗೊಂಡರ್ಚಿಸುತ್ತಿರ್ಪ ನಿಡುವುರ್ವಿನ ನೀಱೆಯರಿಂ ನನೆಯಂಬ ಕೆಯ್ಗಿಯ್ಯು ಸವಿನೋಟದ ಸಾಧಾರಣೆಯರಿಂ (ಗಿರಿಜಾ. ೭-೧೦ ವ) ; ನೀನೀ ಪೂವಿನ ಪೊಬಲೊಳ್ ನನೆಯಂಬನೆಂಬರಸಾದ (ಕಬ್ಬಿಗಕಾ. ೩೧೯) ; ಸೊಗಸುವಮರಾಂತು ಕತ್ತುರಿಗಂಧಿ ಬರೆದಳು ನನೆಯಂಬನ ಚಿತ್ರಪಟವ ವಿನಯದೆ ಕೈಕೊಂಡು ಬಂದಳು ಸ್ಮರವರತನಯನ ಶಯನಸ್ಥಳಕೆ (ಮೋಹತ. ೫೯-೫೩). [ ನನೆಯಂಬು + - ಅ$_{7}$ ]

**ನನೆಯಂಬು** (ನಾ). = ನನೆಗಣೆ : ಮೊನೆಯಂಬುಗಳೊಳ್ ಪೂಣ್ದವಸನಿಬರುವಂ ಕಱಿದು ಬೇಗದಿಂ ಜರಿಗನದರ್ಶನಗೆಡವೇೞ್ಕುಮೆ ಎಂಬವೊಲನಿಬರುಮಂ ಪೂಣ್ದನ[ತಪಂ] ನನೆಯಂಬುಗಳಿಂ (ಶಂಪಾ. ೩-೫೨) ; ನನೆಯಂಬಂ ಮಿಗೆ ಕರ್ಮ್ಮಱಿರ್ ಮಕರಮಂ ಕ್ರೀಡಧ್ವಜಂ ಪೋಲೆ (ಗದಾಯು. ೦-೬) ; ಮನೋಜಂ ನನೆಯಂಬಿನಿಂದಿಸ ತದಸ್ಯಾಘಾತಪಾತಾನಿಲಂ ನಿಮಿರ್ದೋರಂತಳರಲ್ಕೆ ಹೃತ್ಕುಟಿಯ ನಾ ಕಂದರ್ಪರೀಜೇಂದನಾ

(ಶಂಸುಮೂ. ೧೧-೧೧೦); ಧೈರ್ಯದ ಜೋಡ ತೊಟ್ಟಿದಿರಾಗಿ ನಿಲೆ ನನೆಯಂಬು ನಾಟುವುವ (ಶಿವಾ.ಅ. ೮-೩೫); ಎನ್ನ ನನೆಯಂಬಿನ ಮೊನೆಗೆ ಸಿಗಿವಹಲ್ಯೆಯುಂ ನೀಮಂ ಶರಣ್ಬೊಕ್ಕುದೇನಱಿಯದುದೇ! (ರಾಮಾಶ್ವ. ೩೬-೧೦). [ ನನೆ$_3$ + ಅಂಬು$_3$ ]

**ನನೆಯಕ್ಕಿ**, ನೆನೆಯಕ್ಕಿ$_1$ (ನಾ). ೧. ನೆನೆಯಿಸಿದ ಅಕ್ಕಿ; ನೀರಿನಿಂದ ಒದ್ದೆ ಮಾಡಿದ ಅಕ್ಕಿ: ಮನೆಯ ಸಾರಿಸಿ ರಂಗವಲ್ಲಿಯನಿಕ್ಕಿ . . . ನನೆಯಕ್ಕಿ ಕಡಲೆ ಪಣ್ಯಾರದಿ[ಪಾಠಾಂ. ನನೆಯರಳ್ದರಳುಬ ಪುಣ್ಯಹರ] ನಿಖಿಲಾರ್ಚನೆಯ ವಸ್ತುಗಳ ಸಾರ್ಚಿದರು (ಮೋಹತ. ೧೮-೮೨). ೨. ಶುಭಕಾರ್ಯಗಳಲ್ಲಿ ಆಶೀರ್ವಾದಕ್ಕಾಗಿ ಉಪಯೋಗಿಸುವ ಅಕ್ಷತೆ: ತಳಿರ ತೊಟ್ಟಿಲೊಳಿಟ್ಟು ಸಣ್ಣ ಸನಗಳ ನನೆಯಕ್ಕಿಯನಿಕ್ಕಿ ಪಣ್ಣ ಬಾಯಿನವನಣ್ಣಾವಳಿಯದ ಕೊಟ್ಟು ಚೂತವಲ್ಲಭನೆಂಬ ಪೆಸರಿಟ್ಟು (ಗಿರಿಕ. ೨-೬೧ ವ). ನೆನೆಯಕ್ಕಿ$_1$: ೧. ನೆನೆಯಕ್ಕಿ ನೆನಗಡಲೆ ಗೊನೆಯ ಬಾಳೆಹಣ್ಣು . . . ತಗೊಂಡು ಗಂಗವ್ವ ಪೂಜೆಗ್ಯದಾರ (ಜೋಕಗೀ. ೧೩೨). 'ನೆನಗಡಲೆ' ಪರಾ.

[ ನನೆ$_1$ + ಅಕ್ಕಿ$_1$ ]

**ನನೆಯಿಕ್ಕು**, ನೆನೆಯಿಕ್ಕು (ಕ್ರಿ). ತೋಯಿಸು; ಒದ್ದೆ ಮಾಡು; ನೆನೆಹಾಕು: ನನೆಯಿಕ್ಕಿದ ಕಡಲೆಯ ತುರಗನಿಕಾಯಕ್ಕಱಿದು ಕಟ್ಟುವುದು (ಅಶ್ವಶಾ. ೬-೫೬). ನೆನೆಯಿಕ್ಕು: ಗರುಗದ ಸೊಪ್ಪಿನ ರಸದಲ್ಲಿ ಎರಡು ವರಹ ತೂಕ ಚೂರ್ಣವ ನೆನೆಯಿಕ್ಕಿ ಬೆಲ್ಲವ ಬೆರಸಿ ಕೊಡಲು ಪಾಂಡುರೋಗ, ಕ್ಷಯರೋಗ ಪರಿಹರ (ವೈದ್ಯಸಾ. I, ೩೩೬). [ ನನೆ$_1$ + ಇಕ್ಕು ]

**ನನೆಯೆಸಳ್** (ನಾ). ೧. ಹೂವಿನ ಎಸಳು, -ದಳ. ೨. ಹೂವಿನ ಚಿತ್ರ, -ಕಸೂತಿ, -ನಕ್ಷೆ: ನನೆಯೆಸಳಿಂದಮಾದ ಗುಟವುಂ ಪೊಳೆಯುತ್ತಿರ ನೀಳ್ಪವಸ್ತ್ರ ಪೂವಿನ ಪೊಸಟಿಕ್ಕೆಯುಂ ಮಿಳಿರೆ . . . ಮೆಲ್ಲನೆ ನಡೆತಂದು ವಂದು ಪೊಸಮಾವಿನ ಪುಗ್ಗಡದಗ್ಗದಾನೆಗಳ್ (ಕಬ್ಬಿಕಾ. ೨೧೧).

[ ನನೆ$_3$ + ಎಸಳ್ ]

**ನನೆಯೇಱು** (ಕ್ರಿ). ಹೂವು ಬಿಡು; ಹೂವು ತುಂಬು: "ನನೆತುದೆನೆ ನನೆಯೇಱಿದುದು" (ಕಬ್ಬಿಮುಂ. ೨೨): "ನನೆತುದು ನನೆಯೇಱಿದುದೆಂದೆನುತಂ" (ಕವಿಕಂ. ೬೭); ನನೆಯೇಱಿದ ಮಲ್ಲಿಗೆಯಂತೆ ಪೂರ್ಣಚಂದ್ರನ ಸಿರಿಯಂತೆ ... ರುದ್ರಭಟ್ಟನ ಕವಿತಾರಸಂ ಮನಮನಿರ್ಕುಳಿಗೊಳ್ಳದು ಸಜ್ಜನರ್ಕಳಾ (ಜಗವಿ. ೧-೧೬); ವಿಾಱಿ ಮುಗಿಲಿದಿರೇಱಿ ನಿಶಿ ಹರುಷವೇಱಿ ನನೆಯೇಱಿ ಕುಂದವ್ರಜಕೆ ಕಡದಲರ ಸಿರಿಯು ಸೊಂಪೇಱಿ (ಸಾಳ್ವಭಾ. ೨೬-೧೮); ಪಳಿಯೆಲೆ ಯಿಕ್ಕ ಸಣ್ಣನನೆಯೇಱಿದ ಪಾಟಳಿಪೂವನಾಂತು ಕಂಗೊಳಿಸುವ ಕರ್ಣಿಕಾರ ಮಲರ್ದಿಕ್ಕಿದ ಮುತ್ತುಮದೆತ್ತ ನೋಳ್ಪೊಡಂ (ರಾಜಶೇ. ೯-೭೬); ಬನಂ . . . ನನೆಯೇಱಿದ ಸುರಯಿಯಿಂ, ಬಕುಳದಿಂ, ಸಿರಿಸದಿಂ, ಪುನ್ನಾಗದಿಂ, ಸೊಗಯಿಸಿ ತೋರ್ಕುಂ (ರಾಮಾಶ್ವ. ೫೩-೨೨).

[ ನನೆ$_3$ + ಏಱು$_1$ ( < ಏಱು$_1$ ) ]

**ನನೆಯೊತ್ತು** (ಕ್ರಿ). ೧. ಅರಳು; ವಿಕಾಸವಾಗು; ಮೊಗ್ಗು ಹೊರಬರು: ಶಿವಾಚಾರಲತೆ ನನೆಯೊ[ಪಾಠಾಂ. ವ]ತ್ತೆ (ಸೋಮಶ. ೧-೬೩); ನನೆಯೊತ್ತ ವಿಂಸುವ ಮಲ್ಲಿಗೆ ನನೆಯೊತ್ತುವುದತನುಸತಿಯ ಲಾವಣ್ಯರಸಾಭಿನವನದಿ ಸುರಭಿಗಂಧದಿನೆಸಮ ಶೀವಿದೊಡೆ ಶೀವುವುದು ತೊದಳುಂಟೇ (ಪಾರ್ಶ್ವಪು. ೯-೫೬). ೨. (ಅಲಂ) ಸಂತಸಗೊಳ್ಳು: ಧರ್ಮಜನು ಸುರಮುನಿ ಸೂಕ್ತಿಸುಧೆಯಭಿಷೇಕದಲಿ ನನೆಯೊತ್ತಿದಂತಃಕರಣನರಮನೆಗಾಗಿ ನಡೆತಂದು (ನಿಭಾಗ. ೧ ೯-೭೫). [ ನನೆ$_3$ + ಒತ್ತು$_1$ ]

**ನನೆಲತೆ** (ನಾ). ಹೂವು ಬಿಟ್ಟ ಬಳ್ಳಿ; ಹೂಬಳ್ಳಿ: ಚಾಮರದಿಂ ಬೀಸುವ ಬೀಸುಗಾಳಿಯ ತಣ್ಪಿನಿಂ ತೊಯ್ದು ನನೆಲತೆಗಳ ಮೇಳದ ಮನ್ನಣೆಯ ಕನ್ನೆಯರ ಲತಾಂಗಂಗಳೊಳ್ ಲಾವಣ್ಯರಸವಿಸರದ ಬಿಂದುಗಳ್ ತಲೆದೋಱಿದುವು (ಲೀಲಾವ. ೪-೧೭ ವ). [ ನನೆ$_3$ + ಲತೆ ]

**ನನೆವಾಸು**$_1$ (ನಾ). ತೊಯ್ದ ಹಾಸಿಗೆ: ಆರ್ದ್ರವಾದ, ತಂಪಾದ ಹಾಸಿಗೆ: ತನುವಲ್ಲದತನುತಾಪಂ ತನುವಂ ಸಂಡೆ ನಿಲಿಸಲೆಂತುಮಾಱದ ತನುವಂ ತನುಮಧ್ಯೆಯರಲರ್ವಾಸಿನ ನನೆವಾಸಿನ ಮೇಲೆ ಪಾಸಿದರ್ ತನುತನುವಂ (ಮಲ್ಲಿಪು. ೩-೩೩). [ ನನೆ$_1$ + ಪಾಸು$_2$ ]

**ನನೆವಾಸು**$_2$ (ನಾ). ಹೂವಿನ ಹಾಸಿಗೆ: ಪುಷ್ಪಶಯ್ಯೆ: ನನೆವಾಸನೆ ಮುತ್ತಿನ ಪಸೆ ಮನಸಿಜನನೆ ಕುವರನಲ್ಲಿ ನೆಲಸಿರೆ ಲಜ್ಜಾವನತಾಂಗಿ ಕೆಲದೊಳಿಳುಪಿದ ನನೆವಿಲ್ಲನೆ ಸುಗುಣವತಿ ಕರಂ ಮೆಱೆದಿರ್ದಳ್ (ರಾಜಶೇ. ೮-೬೧). [ ನನೆ$_3$ + ಪಾಸು$_2$ ]

**ನನೆವಿಲ್** (ನಾ). ಹೂವಿನ ಬಿಲ್ಲು: ಹೂಬಿಲ್ಲು: ಪುಷ್ಪಚಾಪ: ಪುರಿದಂತಾದುವು ಪೂವಿನಂಬು ನನೆವಿಲ್ ನಿಸ್ಸಾರವಾದತ್ತು (ಮಲ್ಲಿಪು. ೧-೧೯): ನನೆವಿಲ್ಲನೆತ್ತುವಂತೆ ನನೆಯ ನಿಡಿಯ ದಂಡೆಗಳಂ . . . ಎತ್ತುವ ಮಾಲೆಗಾರ್ತಿಯರ ಕಟಾಕ್ಷಕುಸುಮಮಾಲೆಗಳಂ ಸೌಂದರ್ಯಧನದಿಂ ಮಾಱುಗೊಳುತ್ತರಸಂ ಬರೆವರೆ ಪೂವಿನ ಸಂತೆಯಿಂ ಪೊಱಗೆ (ಲೀಲಾವ. ೨-೨೬ ವ); ನನೆವಿಲ್ಲಂ ಬಿಟ್ಟು ವಿದ್ಯುಲ್ಲತೆಯ ತಿಱುವುವೊಯ್ದೇಂದ್ರ ಕೋದಂಡಮಂ ಕೊಂಡು . . . ಮೊಲ್ಲೆಯ ನನೆಗಣೆಯುಂ ತೂಗುತ್ತುಂ ಕಂತುವೀಬಂದಂ (ಜಗವಿ. ೪-೨೧); ನನೆವಿಲ್ಲಿನ್ನಣೆಯೋವಳೊರ್ವ ವಧುವಾ ಕಾಂತಾಕಚಶ್ರೇಣಿಗೊಯ್ಯನೆ ಮುಂದಿಕ್ಕಿದ ಚಂದನಾಂಬುವನಲಂಪಾದೆತ್ತು ತಾಂ ಪಿಂಡಿದಳ್ (ಉದ್ಭಟ. ೮-೨೦); ನನೆವಿಲ್ಲಾಱಿವೆದೆಯೇಱುವ ಪೊಲ್ಮ ನಿತಾಮಣಿಯಂತೊಪ್ಪುವ ರೂಪಿಗೆ ಮಿಸುಗುವ ವಿಾಱುಂಜೌವನವೇಱಿ ವಿರಾಜಿಸುತಿರೆ (ಜಯಕಾ. ೩-೪೪): ನನೆವಾಸನೆ ಮುತ್ತಿನ ಪಸೆ ಮನಸಿಜನನೆ ಕುವರನಲ್ಲಿ ನೆಲಸಿರೆ ಲಜ್ಜಾವನತಾಂಗಿ ಕೆಲದೊಳಿಳುಪಿದ ನನೆವಿಲ್ಲನೆ ಸುಗುಣವತಿ ಕರಂ ಮೆಱೆದಿರ್ದಳ್ (ರಾಜಶೇ. ೮-೬೧). 'ನನೆವಿಲ್ಲ' ಪರಾ.

ನನೆವಿಲ್ಲ ಬಲ್ಲಹ = ಹೂಬಿಲ್ಲಿಗೆ ಒಡೆಯನಾದವನು: ಪುಷ್ಪಬಾಣ ಪ್ರಯೋಗದಲ್ಲಿ ಶೂರನಾದವನು; ಕಾಮ; ಮನ್ಮಥ: "ನನೆವಿಲ್ಲ ಬಲ್ಲಹನೆನಲ್ ಪೂವಿಲ್ಲ ಕಾಮಂ" (ಕರ್ಣಾನಿ. ೮); ಆವನ ಪಜ್ಜಳಿಪ್ಪ ಜಸಮೆಣ್ದೆಸೆಯೊಳ್ ನೆಲಸಿರ್ಪುದಾತನೀಗಾವಗಮನ್ನ ಜಾಣ್ಣುಡಿಗೆ ಮೆಯ್ಸಿರಿಯುಂ ನನೆವಿಲ್ಲ ಬಲ್ಲಹಂ (ಕಬ್ಬಿಕಾ. ೦): ಜಗದ್ವಳಯಮನದಟಲೆದು ನುಲಿದು ಕೋಟಲೆಗೊಳಿಸುವ ನನೆವಿಲ್ಲ ಬಲ್ಲಹನ ದಿಗ್ವಿಜಯಕ್ಕಾಗಿ . . . ಬೆಳಗುವಚ್ಚಬೆಳ್ದಿಂಗಳ್ ಪಿರಿದುಂ ಪರ್ಚಿಬಿಚ್ಚದೆ ನಿಬಿಡವಾಗಿ ಬಿಡದಡರ್ದು ಕೆದಱಿ ನಾಂದು ಪೊದಱುಗಟ್ಟಿ ಪರಕಲಿಸಿ ಪಸರಿಸುತ್ತುಮಿರೆ (ಧರ್ಮಪು. ೧೫-೫೦ ವ); ಇದು ಕುಸುಮಾಸ್ತ್ರನಸ್ತ್ರವಿದು ದರ್ಪಕನಾರ್ಪು ಮನೋಜ ನೋಜಿ ನೋಡಿದು ನನೆವಿಲ್ಲ ಬಲ್ಲಹನ ಬೆಲ್ಪಿದು . . . ಎಂದೆನಿಸಿರ್ದುದು ರೂಪು ನೀಱೆಯಾ (ರಾಜಶೇ. ೬-೬೩). ನನೆವಿಲ್ಲ ಬೀರ = ನನೆವಿಲ್ಲ ಬಲ್ಲಹ: ಬಂದು ಬಸಂತನೊಲ್ದು ಸಂವರಣೆಯನೆಯ್ದೆ ತೋಱಿ ತಲೆದೂಗಿದುದು ನನೆವಿಲ್ಲ ಬೀರನಾ (ಕಬ್ಬಿಕಾ. ೨೦೧). ನನೆವಿಲ್ಲಾತ = ಪುಷ್ಪಧನುಸ್ಸನ್ನುಳ್ಳವನು; ಕಾಮ; ಮನ್ಮಥ: ನನೆವಿಲ್ಲಾತನ ಮುಕ್ಕಣ್ಣನ ತಕ್ಕಂ ನೋಡ ವೇಟ್ಕುಮೆಂದೊಲವಿಂದು ತನತನಗೆ ಬಂದು ಮುಗಿಲೊಡ್ಡಿನ ಕೆಲದೊಳ್ ಸಗ್ಗದವರ್ಗಳೆಲ್ಲರ್ ನಿಂದರ್ (ಕಬ್ಬಿಕಾ. ೨೮೯). [ ನನೆ$_3$ + ಬಿಲ್$_2$ ]

**ನನೆವಿಲ್ಲ** (ನಾ). ೧. ಹೂವಿನ ಬಿಲ್ಲುಳ್ಳವನು; ಕಾಮ; ಮನ್ಮಥ: ನನೆವಿಲ್ಲನೆಸೆವ ಬಿರಿದಿನ ನಾಟಕವ ಬಿಂಕವನೆ ಕಂಡೆನೆಂದು ಕಳವಳಿಸಿ ಮಂಗಳೆ ತನ್ನ ತನುಜೆಯುಂ ಪಲ್ಲಕಿಯೊಳಿರಿಸಿ ಶಂಭುವನು ಬೀಳ್ಕೊಂಡು ಮನೆಗೆಯ್ತಂದಳು (ಸೌಂದಪು. ೮-೧೮); ಪೊಸ ಕಮ್ಮಂಗಳವೆಯ ತನೆಯ ತುದಿಯ ತನಿಗಂಪಂ ಭುಂಜಿಸಲೆನುತನುರಾಗದಿನವಱೊಳ್ಕುಳ್ಳಿರ್ದಾಱಿಪ ಪಸುಳೆಗಳು ಅನುವಂ ಪಡೆದುವು . . . ನನೆವಿಲ್ಲನ ಪಸುರ್ಗಾವಿನ ವಿಂಗಸೊಕ್ಕಿನ ಪೊಸಮಿಂಟೆಯೆನೆ (ಜಯಕಾ. ೧-೩೯); ಖಳನೀ ನನೆವಿಲ್ಲಂ . . . ನಲ್ಲಂ ತೊಲಗಿದ ಪದದೊಳಗೆನ್ನೊಡಲಲ್ಲಿ ನಡುವಪೊಲರಳ್ಗೆಯ್ಗಾಣಿಸಿ

ನಿಲ್ಲದೆ ಮನವನೆಸುತ್ತಿರ್ದಪನೆಂದಳ್ವಿರಹಿಣಿ ಸಖಿಯೊಳ್ (ಉದ್ಭಟೀ. ೪-೩೫). ೨. [ಜೈನ] ಬಾಹುಬಲಿ; ಕಾಮ: ಎತ್ತಿ ನೀನಣ್ಣನೊಡನೆ ಕಾದಿದಾಗ ತೊಂಭತ್ತಾಱುಸಾವಿರ ಹೆಣ್ಣು ಚಿತ್ತ ನೋಯದೆ ನಮಗೆಂಟುಸಾವಿರಕಳ ಲೊತ್ತದಿಹುಧೆ ನನೆವಿಲ್ಲಾ (ಭರತ. ೫೦-೪೫). [ ನನೆವಿಲ್ + – ಅ$_7$ ]

**ನನೆವೂ** (ನಾ). ಬಿರಿದ ಹೂವು; ವಿಕಸಿತ ಕುಸುಮ: ತೋಳ ಮೊದಲ್ನನೆ ವೂವನೆತ್ತುವಂತಿರೆ ನನೆಯಂಬುಗಳ್ಗೆ ಬೆರಲೆತ್ತುವರಲ್ಲಿಯ ಮಾರೆಗಾರ್ತಿಯರ್ (ಮಲ್ಲಿಪು. ೨-೫೯). [ ನನೆ$_2$ + ವೂ$_2$ ]

**ನನೆವೂದುಱುಗಲ್** (ನಾ). ಅರಳಿದ ಹೂವುಗಳ ಗೊಂಚಲು,–ಗುಂಚ್ಛ: ತಳಿರ್ಗಳನೊಂದು ಕೊಂಬು ನನೆವೂದುಱುಗಲ್ಗಳನೊಂದು ಕೊಂಬು . . . ತಳೆದಿಂತು ಮನೋಹರಮಾಯ್ತು ಮಾಮರಂ (ಕುಸುಮಾ. ೧೦-೧೫೫). [ ನನೆವೂ + ತುಱುಗಲ್ (< ತುಱುಂಗಲ್) ]

**ನನೆವೆರಸು$_1$** (ಕ್ರಿ). ಮೊಗ್ಗುಗಳಿಂದ ಕೂಡಿರು; ಪುಷ್ಪಭರಿತವಾಗಿರು: ನನೆವೆರಸಿದಸುಗೆದಳಿರುಳ್ಳುಡೆಯ ವೇಣುವಿಂ ಜನಿಸಿದ ನವೀನಮುಕ್ತಾಫಲದ ಮುಱುಗುತಿಯು . . . ನಿತಂಬಿನಿಯರತಿಹರುಷದಿಂ ರಂಜಿಸಿದರು (ಸೌಂದರ್ಪು. ೧೮-೧೯). [ ನನೆ$_2$ + ಬೆರಸು$_1$ ]

**ನನೆವೆರಸು$_2$** (ಅ). ಹೂವುಗಳಿಂದ ಕೂಡಿಕೊಂಡು; ಪುಷ್ಪಸಹಿತವಾಗಿ: ನನೆವೆರಸು ಗುಜ್ಜುಮಾವಿನ ಕೊನರ್ಗಳನುಡಿದುಡಿದು ನೀಡೆ ಬೇಟದ ಓಡಿಯೇಂ ಮನವೊಸೆದು ಮೇವುತಿರ್ದುದೊ ವನಕರಿ ಪರಿದಂತೆ ದಂತಹಸಿತ ಕಟಾಕ್ಷಂ (ಅರ್ಧನೇ. ೫-೯೪); ನನೆವೆರಸುಟ್ಟು ಮಾಂದಳಿರನೊಪ್ಪಿರೆ . . . ಓಪನಿಗೆ ಪುಳಿಂದಿ ಪಾಡಿದಳೊಱಲ್ದು ಗುಣಪ್ರಿಯನಂಕಮಾಲೆಯಂ (ಲೀಲಾವ. ೮-೩೦). [ ನನೆ$_3$ + ಬೆರಸು$_3$ ]

**ನನೆವೆಱು** (ಕ್ರಿ). ಮೊಗ್ಗುಗಳನ್ನು ಪಡೆ; ಮುಂಗಳು ಬಿಡು: "ನನೆತುದೆಂದು ನನೆವೆತ್ತುದು" (ಕರ್ಣಾ. ೯-೧೮೯); ತನಯಂ ಬಂದಾ ವಾರ್ತೆಗೆ ತನುಪುಳಕದ ತೆಕ್ಕೆವೆತ್ತು ಶಿಶಿರದ ಸೋಂಕಿಂ ನನೆವೆತ್ತೂವ್ವುವ ಮಾಲತಿಯನೆ ವಿಜಯಾವತಿ ಸಮಂತು ಪೋಲ್ತೆಸೆದಿರ್ದಳ್ (ಕುಸುಮಾ. ೧೫-೯೮). [ ನನೆ$_3$ + ಪೆಱು$_1$ ]

**ನನೆವೊಯ್** (ಕ್ರಿ). ೧. ಚಿಗುರು; ಪಲ್ಲವಿಸು: ತನಿಗರ್ಬಿನ ಸೋರ್ವ ರಸಪ್ರವಾಹದಿಂದವೆ ನನೆವೊಯ್ದು ಕಾಯ್ತುಱುಗಿ ಪಣ್ತುದು ಮಾಮರಂ (ಲೀಲಾವ. ೬-೧೩೮). ೨. ಉಂಟುಮಾಡು; ಹೊಮ್ಮಿಸು: ಪನಿವಲ್ಲಂಬು ಕಣಂಗಳಂ ಕೆದಱುತುಂ ಕೋಕಂಗಳೊಳ್ ರಾಗಮಂ ನನೆವೊಯ್ದುಣ್ಮಿಸುತುಂ . . . ತಣ್ಣನೆ ತೀಡಿತ್ತನಸುಂ ಪ್ರಭಾತಸಮಯಪ್ರೋದ್ಭೂತಶೀತಾನಿಲಂ (ಕುಸುಮಾ. ೧-೫೨). [ ನನೆ$_3$ + ಪೊಯ್$_2$ ]

**ನನೆವೊಱೆ** (ನಾ). ಹೂವುಗಳ ಭಾರ; ಪುಷ್ಪಭಾರ: ನನೆವೊಱೆಯಿಂ ಬಳ್ಕಿದ ಮಾವಿನ ಕೊಂಬಿನೊಳಳಿಯ ಮಾಲೆ ಮೊರೆಯುತ್ತಂ ಪೂವಿನ ಬಿಲ್ಲನತನು ದೇವೊಡೆದನುಗೆಯ್ದೇಱಿಸುವ ಬಿಲ್ಯನೇಂ ಬೀಱಿದುದೋ (ಪಾರ್ಶ್ವಪು. ೯-೫೩). [ ನನೆ$_3$ + ಪೊಱೆ ]

**ನನೆವೋಗು** (ಕ್ರಿ). ಮೊಗ್ಗು ಬಿಡು; ಮೊಗ್ಗಾಗು: ಅಧೀಶವಚನಕದಂಬಕಮಂಬೊಂದು ಕಂಕೆಲರೊಳ್ ನನೆವೋಯ್ತೆಂಬಿನಮಾಕೆಯ ತನಂಲತೆ ತುಂಬಿದುದತಿಬಹಳಪುಲಕವಿಪುಲಶ್ರೀಯಿಂ (ಆದಿಪು. ೭-೩೦). [ ನನೆ$_3$ + ಪೋಗು$_1$ ]

**ನನೆಸು, ನೆನಸು$_1$, ನೆನಸು$_2$** (ಕ್ರಿ). ಒದ್ದೆಯಾಗುವಂತೆ ಮಾಡು; ತೋಯಿಸು: ಆರ್ದ್ರಗೊಳಿಸು: ನಾರದ ಕಲಹತಾತ್ಪರ್ಯದೆ ತರಳ ಕುಮಾರನ ಕೊಂದೆ ನೀನೆನುತ ಮಾರಮಾತ್ಯಕೆ ರುಕ್ಮಿಣಿ ಸತ್ಯಭಾಮೆ ಕಣ್ಣೀರಿಂದ ನನೆಸಿದರೊಡಲ (ಮೋಹತ. ೩೭-೨೦). ನೆನಸು$_2$: ಆಪ್ಲಾವ, ಆಪ್ಲವ, ಸ್ನಾನಂ–೩ ಸ್ನಾನದ ಹೆಸರು. ತಲೆ ಮುಂತಾದ ಸರ್ವಾಂಗವನ್ನು ನೀರಿನಲ್ಲಿ ನೆನಸಿ ತೊಳೆಯುವಿಕೆ (ಸಿದ್ಧಾಂತಿ. ೨೦೭). ನೆನಸು$_2$: ಭಟ್ಟನಿಯ ಕಣ್ಣುಗಳಲ್ಲಿ ನಾನು ಒಂದು ಅಪೂರ್ವಮಾಧುರಿಯನ್ನು ಕಂಡೆ . . . ಆ ದೃಷ್ಟಿ ನನ್ನನ್ನು ಅಭಿನವರಸದಲ್ಲಿ ನೆನೆಸುತ್ತಾ . . . ಒಂದು ಅನಸುಭೂತ ಜಗತ್ತಿಗೆ ಎಳೆದೊಯ್ಯಿತು (ಬಾಣಭ. ೩೦೪). [ ನನೆ$_1$ + – ಸು$_1$ ]

**ನನೆಹ** (ನಾ). ನೆನೆಯುವಿಕೆ; ಒದ್ದೆಯಾಗುವಿಕೆ; ತೇವಗೊಳ್ಳುವಿಕೆ: "ತೇವ ಸ್ತೇಮ ಸಮುಂದನ ಈ ಮೂಱು ನನೆಹದ ಹೆಸರು" (ನಾಥರಾ. ೬). [ ನನೆ$_1$ + – ಹ$_2$ ]

**ನನ್ನಗ** (ನಾ). ಒಬ್ಬಾತನ ಹೆಸರು: ನ × ಗರಮುಪ್ಪ ಪಯಂಬಯನ್ ತುರಗಗೊಳ್ಗಾಗಿ ದುಗ್ಗದರಸನುಂ ಕೊದಳ್ದು ವೇಳೆಯುವನಾಳು × ಪಱಿಯುತ್ತಂ ಬಪ್ಪುದ ನನ್ನಗನ್ನಾದೆ (ಸೌಇಇ. IX-1, ೨೨-೭; 928). [ ? ]

**ನನ್ನಪ** (ನಾ). ಒಬ್ಬಾತನ ಹೆಸರು: ಆಹವಶೌಣ್ಡವೀರನುದಾರು ಕಣ್ಣವ ಭಾರದ ನನ್ನಪನ್ನಪಂ ಮಹಸಾಮಂತಂ (ಎಕ. IX. ದನ್ನಪ. ೧೯೧-೦೮; 1007). [ <ನನ್ನಿ ? + ಅಪ (<ಅಪ್ಪ$_1$) ]

**ನನ್ನಯ್ಯ** (ನಾ). ಒಬ್ಬಾತನ ಹೆಸರು: ಶ್ರೀಮತ್ಪರ್ಮ್ಮನಂಗಳ್ಗೆ ವಿದ್ಯಾಧರಯ್ಯಂ ಬಿನ್ನವಂಗೆಯ್ದು ನಗರಲ ನನ್ನಯ್ಯನ ದೇಗುಲಕ್ಕೆ ಮುತ್ತೆರೆಯು ಪಡೆದು ಕೊಟ್ಟಂ (ಎಕ. III, ನಂಜನ. ೧೫೫-೫; 970). [ <ನನ್ನಿ ? + ಅಯ್ಯ$_1$ ]

**ನನ್ನಾನನ್ನಿ, ನನ್ನಾನಿನ್ನಿ** (ನಾ). ಸಣ್ಣಸಣ್ಣದು: ಚೂರುಚೂರಾದುದು; ಪುಡಿಪುಡಿ: ಸನ್ನಾಹಭೇರಿಗಳುನ್ನಾದದಿಂ ದೆಸೆ ನನ್ನಾನನ್ನಿಯಾಗೊಡೆಯು ತನ್ನ ಮೋಹರಗೂಡಿ ಚೆನ್ನರಾಮುಗ ಶೌರ್ಯದುನ್ನತಿಕೆಯೊಳಿದ್ದುದನು (ಕುಮಾರಾಂ. ೧೨-೨೬); ಚೆನ್ನೆಯ ನಿಟ್ಟುಸಿ ಕಾಪನಂಬಿಂ ನನ್ನಾನನ್ನಿಯಾದರು ನೋಟಕರು (ರಾಮವಿ. ೭-೧೪೨). ನನ್ನಾನಿನ್ನಿ: ಬಿನ್ನಣದಿಂದೆಚ್ಚರು ರಿಪುಭಟರರ್ದ ನನ್ನಾನಿನ್ನಿಯುಪ್ಪಂತೆ (ದಂಪ್ರಸಾಂ. ೮-೩೩). [ ←ಹಿಂ. ನನ್ನಾ, ನನ್ಹಾ ]

**ನನ್ನಾನಿನ್ನಿ** 'ನನ್ನಾನನ್ನಿ' ನೋ.

**ನನ್ನಾರಿ** (ನಾ). ಒಂದು ಬಗೆಯ ಸಸ್ಯ; ಸೊಗದೆ: ಸುಗಂಧೀಬೇರು, ಸೊಗದೇಬೇರು, ನಾಮದ ಬೇರು, ನನ್ನಾರೀಬೇರು (ವೃಕ್ಷಗಿ. ೪೨-೮೪೦). [ ದೇ.॥ ತಮಿ. ಮಲ. ನನ್ನಾರಿ ]

**ನನ್ನಿ** (ನಾ). ೧. ಸಹಜವಾದುದು; ವಾಸ್ತವವಾದುದು; ಸತ್ಯ; ದಿಟ; ನಿಜ; ನಿಶ್ಚಯಂ: "ಸತ್ಯದೊಳ್ ನನ್ನಿಯುಕ್ಕುಂ" (ಕರ್ಣಾನಿ. ೫೦); "ನನ್ನಿ ಸಾಜ ನೆನಸುಂ ದಿಟಮೆಂದುಸಿರಲ್ಕೆ ಸತ್ಯಮುಕ್ಕುಂ" (ಕವಿಕಂ. ೦೨೦); "ನಿಶ್ಚಯದೊಳಂ ನನ್ನಿಯೆಂದಕ್ಕು" (ಕರ್ಣ. ೫೩); ನನ್ನಿಯನೀ ಪಲ್ಲವಮೆನೆ ಸನ್ನುತರೂಪಿಂ ವಿಪರ್ಯಯೋಪಮಮಕ್ಕುಂ (ಕವಿರಾ. ೩-೬೨); ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ (ಪಂಪಭಾ. ೧೪-೩೪); ಅನೃತಂ ಲೋಭಂ ಭಯಮೆಂಬಿನಿತುಂ ನೀನಿರ್ದ ನಾಡೊಳಿರ್ಕುಮೆ ರವಿನಂದನ ನನ್ನಿ ಚಾಗಮುಕ್ಕೆಂಬಿನಿತರ್ಕಂ ನೀನೆ ಮೊತ್ತಮೊದಲಿಗನಾದ್ಯೆ (ಗದಾಯು. ೫-೧೭); ಇನ್ನರ ನುಡಿ ಕನಸಿನೊಳಂ ನನ್ನಿಯೆನಲ್ ಕೇಳ ದಿವ್ಯಪುರುಷಂ ಪ್ರತ್ಯಕ್ಷಂ ನಿನ್ನ ಮುಂದೆ ನುಡಿಯಲ್ಕಿನ್ನುಮದೇನೆಂಬೆ ಸಂದೆಗಕ್ಕೆಡೆಯುಂಟೇ (ಶಾಂತಿಪು. ೯೪೫); ಅನ್ನವನು ಇಕ್ಕುವದು ನನ್ನಿಯನು ನುಡಿಯುವದು ತನ್ನಂತೆ ಪರರ ಬಗೆದಡೆ ಕೈಲಾಸ ಬಿನ್ನಾಣವಕ್ಕು (ಸರ್ವಜ್ಞ. ೭೦೩); ಏವಣ್ಣಪೆನ್ನ ಮನದ ನನ್ನಿಯ ನೆಲೆಯಂ (ಚಕವಿ. ೩-೯೭). ೨. ಸತ್ಯವಂತಿಕೆ; ಸತ್ಯಸಂಧತೆ: ನೆನೆಯದಿರಣ್ಣ ಭಾರತದೊಳಂ ಪೆಱರಾರುಮನೊಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ . . . ಕರ್ಣನ ಕಡುನನ್ನಿ ಕರ್ಣನಳವಂಕದ ಕರ್ಣನ ಚಾಗಮೆಂದು ಕರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ (ಪಂಪಭಾ. ೧೨-೨೦೭); ನನ್ನಿ ವಿನಯಂ ನಯಂ ಜಯಮುನ್ನತಧೃತಿ ಸತ್ವಮೆಂಬ ರಾಜಗುಣಂಗಳ್ ನಿನ್ನೊಳ್ ನೆಲಸಿದುವಿನ್ನುಂ ಮುನ್ನಂ ನಿನ್ನನ್ನರೊಳರೆ ರಾಜಕುಮಾರಾ (ಲೀಲಾವ. ೪-೩೭); ದಿಟಂ ನನ್ನಿಯುಳ್ಳವನೆಂದು ಬಗೆದು ಬೇಡಿದೆನುತ್ತಮದ್ವಿಜರು

ಕೊಂಬುದೆಂದು (ಹರಿಶ್ಚ. ೧೧-೨೧). ೩. ಅಕ್ಕರೆ; ಪ್ರೀತಿ; ವಿಶ್ವಾಸ: ಎನ್ನ ಭವತಿಮಿರಭಾನುವೇ . . . ಎನ್ನ ನನ್ನಿಯೆಯೆನ್ನ ಚೆನ್ನಿಗನೆಯೆನ್ನ ಗತಿಯೇ ಮತಿಯೇ ಧೃತಿಯೇ ಪತಿಯೇ (ಪದ್ಮರಾ. ೭-೩೯): ತನ್ನರಸಿ ವರಚಂದ್ರಮತಿಗೆ ವಿಭಿನ್ನ ನಾಲಕು ಜಂಬುಫಲವನು ನನ್ನಿಯಿಂದಿತ್ತಾಗ ಸುರಸೆಗೆ ಕೊಟ್ಟನೊಂದುವನು (ಸಂಭಪ. ೧೯-೫೦); ನಿನ್ನಂಗಸಂಗಮನ ಗಲ್ದಾಯ್ತು . . . ಎಂತು ಸೈರಿಪರೊ ಕಾಂತನೊಳ್ನನ್ನಿಯುಳ್ಳರಸಿಯರ್ ದ್ರೌಪದಿ ಸುಭದ್ರೆಯರದೆಂತುಳಿವರಕಟೆಂದರು (ಜೈಮಿಭಾ. ೨೩-೫೯); ಬಲ್ಗಾಲಂಬಡಿದು ನೀನೆ ಗತಿಯೆಂದು ನನ್ನಿಯಿಂ ನಂಬಿದಳಂ ಮಱೆದು ಸವತಿಯೊಂದು ಪಿಸುಣ್ಗೆ ಎಱೆಯಂ ಮಾಡುವೋದಂ (ರಾಮಾಶ್ವ. ೨೨-೮). ೪. ಕೊಟ್ಟಮಾತು; ಭಾಷೆ; ವಚನ; ಪ್ರತಿಜ್ಞೆ: ಕಿಡುಗುಮೆ ರಾಜ್ಯಂ ರಾಜ್ಯದ ತೊಡರ್ಪದೇವಾಟಿತ್ತ ಬಾಟ್ಸ್ ನನ್ನಿಯ ನುಡಿಯಂ ಕಿಡೆ ನೆಗಟೆ ನಾನು ಮೆರಡು ನುಡಿದೊಡೆ ಹರಿಹರಹಿರಣ್ಯಗರ್ಭರ್ ನಗರೇ (ಪಂಪಭಾ. ೧-೮೩); ಮದುವೆಯ ದಿವಸದಂದು ಬರವೇಟ್ಟುದು ನೀನೆಂದೆನ್ನನಂದು ನೀಂ ಬದುಗ್ಗಿಡೆ ನುಡಿದೊಡಾಂ ನುಡಿದ ನನ್ನಿಗೆ ವಂದೆಂ (ಸುಕುಮಾ. ೭-೨೨); ನಿನ್ನಂ ಬಿಡಿಸಿದಪೆಂ ನಂಬೆನ್ನಂ ಸಂದೇಹಮಿಲ್ಲಮೆಂದೊಲವಿಂದಂ ನನ್ನಿಯನೀಯೆ (ದಶಕು. ೮-೨೮೪); ಪುಸಿ ಪೊಂದದ ಪೊಸನುಡಿಯಂ ವಸುಮತಿಯೊಳ್ ನುಡಿಯಲಕ್ಕುಮಿಾ ನೃಪಸುತನಂಕಸುವಳಿಗುಮೆಂಬ ಬಗೆಯೊಳುಮುಸುರುವ ನನ್ನಿಗಳ ನಾಯಕರ್ಮಟರೊಳರೇ (ರಾಜಶೇ. ೧೪-೨೧). ೫. ಒಳ್ಳೆಯದಂ; ಸರಿಯಾದುದಂ; ಸಮಂಜಸವಾದುದಂ: ನಿನ್ನಂ ತನ್ನೊಳ್ ಭೇದಂ ಮಾಡದೆ ನಲ್ಮೆಯನೆಸಗದ ನೀಱನೊಳು ಕನ್ನಮಿದಿರನಱಿಯದೆ ಹೋರು ವುದಿದು ನನ್ನಿಯೆ (ಜಯಕಾ. ೭-೫೦). ೬. ಚೆಲುವು; ಅಂದ; ಸೌಂದರ್ಯ.

ನನ್ನಿ ಕಂದರ್ಪ = ಚೆಲುವಿನಲ್ಲಿ ಮನ್ಮಥನಂತಿರುವವನಂ; ಒಂದಂ ಬಿರುದು: ಸ್ವಸ್ತಿಶ್ರೀ ಸಾಮನ್ತರಾಮನ್ನಣ್ಣಕನ್ದರ್ಪ ಸಿರಿಪುರದೊ ಅಣ್ಣಿಗನೊಳ್ ಕಾದಿ ಸತ್ತ ಅರಕೆಲ್ಲನ ಮಗ (ಮೈಆರಿ. ೧೯೩೨. ೩೭-೨; ಸು. 950). ನನ್ನಿಗಾಶ್ರಯಂ = ಸತ್ಯಕ್ಕೆ ಆಶ್ರಯನಾದವನಂ; ಒಂದು ಬಿರುದಂ: ಸ್ವಸ್ತಿ ಸಮಧಿಗತ ಪಞ್ಚಮಹಾಶಬ್ದ ಪಲ್ಲವಾತ್ಮಯಂ ನನ್ನಿಗಾಶ್ರಯಂ ಶ್ರೀಮತು ಅಯ್ಯಪದೇವಂ ರಾಜ್ಯಂಗೆಯ್ಯೆ (ಎಕ. XI, ಚಿತ್ರದು. ೬೨-೫; 918). ನನ್ನಿ ಚಳುಕಿ = ಸತ್ಯವಂತನಾದ ಚಾಲುಕ್ಯ: ಒಂದು ಬಿರುದು: ಚಾಳುಕ್ಯಕರ್ಣ್ಣಮಹಾರಾಜಂ ಧರಣೀಲೋಕಾಶ್ರಯನಭಿಮಾನ ಗಳ್ಳನಹಿತರ ಗಣ್ಡಂ ಮಾವನ ಗನ್ಧವಾರಣಂ ನನ್ನಿಚಳುಕಿ ಶ್ರೀಮತ್ ರಾಜಾದಿತ್ಯ (ಮೈಆರಿ. ೧೯೩೫. ४೦-೫೦; 950?). ನನ್ನಿನಾರಾಯಣ = ಸತ್ಯಕ್ಕೆ ನಾರಾಯಣನಂತಿರುವವನು; ಸತ್ಯರಕ್ಷಕ; ಸತ್ಯಪಾಲಕ; ಒಂದು ಬಿರುದು: ಇನ್ತು ನನ್ನಿನಾರಾಯಣಂ ಸಮ್ಯಕ್ತ್ವರತ್ನಾಕರಂ . . . ಎನಿಸಿ ಶ್ರೀಮತ್ಸ್ವದೇವಳ್ಳ ತ್ಯಲಪಯ್ಯಂ ಮಾಸವಾಡಿನೂಱನಾಲ್ವತ್ತುಮಂ ಬೀಳ ವೃತ್ತಿಯಿನಾಳುತ್ತುಮಿರೆ (ಸೌಇಇ. XI-I, ೫೩-೩೫; 1007). ನನ್ನಿಮಹಾರ್ಣವ = ಸತ್ಯಕ್ಕೆ ಸಾಗರದಂತಿರುವವನಂ; ಒಂದಂ ಬಿರುದಂ: ವೀರ ಶ್ರೀ ಚೇ ತ್ರ ನು ಂ ನನ್ನಿಮಹಾರ್ಣ್ಣವನುಂ ಕನ್ದುಕಪುರನ್ದರನುಮೆನಿಸುವ ವೀರಾಗ್ರಣಿಯ ಪರಾಕ್ರಮಮೇದೊರೆ (ಸೌಇಇ. XI-I, ೫೩-೦೪; 1008). ನನ್ನಿ ಮಾಡು = ದಿಟ ಮಾಡಂ; ಸತ್ಯವನ್ನಾಗಿಸಂ; ಸಾಬೀತುಗೊಳಿಸಂ: ಪೊಸನಿಱಿದು ಪಗೆಗೊಂಡರೆಂಬ ನಾಣ್ನುಡಿಯಂ ನನ್ನಿ ಮಾಡಿ (ಪಂಪಭಾ. ೧೨-೨೯ಪ); ಅಂತು ಪವಡಿಸಿದ ಪರಮೇಶ್ವರಂಗೆ ಮನೋಗತಮಲ್ಲದ ಕಾಮಿನಿ ಯಂತೆ ಯಾಮಿನಿ ತನ್ನ ಕ್ಷಣದಾಭಿಧಾನಮಂ ನನ್ನಿ ಮಾಡಿ (ಶಾಂತಿಪು. ೧೦-೧೫೫ ಪ); ಕಳ್ಳಂಗೆ ಬೆಳ್ದಿಂಗಳ್ ಸೊಗಸದೆಂಬ ನಾಣ್ನುಡಿಯಂ ನನ್ನಿ ಮಾಡಿ (ಧರ್ಮಾಮೃ. ೨-೧೨೪); ಪ್ರಾರಬ್ಧಸ್ಯಾಂತಗಮನಂ ಮಹಾಪುರುಷಸ್ಯ ಲಕ್ಷಣ ಮೆಂಬ ನಾಣ್ನುಡಿಯಂ ನನ್ನಿ ಮಾಡಿ (ಸೌಇಇ. IX-I, ೨೭೩-೮೭; 1179); ಪರಮಾತ್ಮನಂ ಧ್ಯಾನಿಸುವೊಡಂತರಾತ್ಮನೊ ಪರಮಾತನಕ್ಕುಮೊಯೆಂಬ ಸಮಯುಕ್ತಮಂ ನನ್ನಿ ಮಾಟ್ಪೆನೆಂಬಂತೆ ಪಗಲುಮಿರುಳುಂ ವಸುದೇವನನೇ ಧ್ಯಾನಿಸುತ್ತಿರೆ (ಬಂಹರಿ. ೧-೫೭ ಪ). ನನ್ನಿಮಾರ್ತಂಡ = ಸತ್ಯವನ್ನು ಪ್ರಕಾಶಪಡಿಸುವ ಸೂರ್ಯನಂತಿರುವವನು; ಒಂದು ಬಿರುದು: ಶ್ರೀನನ್ನಿಮಾರ್ತ್ತಣ್ಡ ಪಟ್ಟಳಿಗೆಯ ಎಱೆಯಂಗರಸನ ಮಗ ಚಿಣ್ಣಮ್ಮರಸ (ಮೈಆರಿ. ೧೯೪೩, ೨೭-೦; 1080). ನನ್ನಿಯ ಗಂಗ = ಒಬ್ಬ ಅರಸನ ಹೆಸರು: ಸತ್ಯವಾಕ್ಯ ರಾಚಮಲ್ಲಪೆರ್ಮ್ಮಾನಡಿ ಪ್ರಿಥುವೀರಾಜ್ಯಂಗೆಯ್ಯುತ್ತಂ × × × ನನ್ನಿಯ ಗಂಗನ ಪರಿ ಬನ್ದು ಬೆಳ್ಗೆಱೆಯಂ ಕುನ್ದೂರುಮನಿಱಿದು ಹೋಗೆ (ಎಕ. XII, ತಿಪಟೂ. ೫೫-೦; ಸು. 880): ಶ್ರೀಮತ್ ಬಿಟ್ಟಿಮಿಪತಿಯ ಮಗ ನನ್ನಿಯ ಗಂಗನಣ್ಣಿಯೆಂಬ ಗಣ್ಡ ಬೀರನೊಬವ್ವಂ ತಾಗಿ ಶಾನ್ತರ ನೆಱೆಯರಟ್ಟಿದೊಡೆ (ಎಕ. X, ಗೌರಿಬಿ. ४-೧೧, ಸು. 920); [ನ]ನ್ನಿಯ ಗಂಗಂ ಬೂತಯ್ಯಂ ಪುರಿಗೆಱೆ ಮೂನೂಱುಂ ಬೆಳ್ವೊಲ ಮೂನೂಱು ಮನಾಳುತ್ತಿರೆ (ಸೌಇಇ. XI-I, ೩೭-೫; 946); ಜಯಲಕ್ಷ್ಮೀಪತಿ ಮಾರಸಿಂಗನನುಜಂ ಸತ್ಯಪ್ರಿಯಂ ಸನ್ದ ನನ್ನಿಯ ಗಂಗ ಕ್ಷಿತಿಪಾಳಕಂ (ಎಕ. VII, ಶಿವಮೊ. ४-೭೦; 1122). ನನ್ನಿಯ ಮೇರು = ಒಂದು ಬಿರುದು: ಸ್ವಸ್ತಿ ಶ್ರೀಮನ್ಮಹಾಪ್ರಭು ನಂನಿಯ ಮೇರು ಕಲಿಕಾಲ ಧರ್ಮ್ಮರಾಜ ಕಿರಾಹು ನಾಡಾಳುವ . . . ಬಾಚಿಯ ಹಳ್ಳಿಯ ಗಂಡನಾರಾಯಣಸೆಟ್ಟಿಯರು (ಎಕ. VI(B), ಕೃಷ್ಣರಾ. ೭೭-೩; 1179). ನನ್ನಿವೆಡಂಗ = ಸತ್ಯದ ಬೆಡಗುಳ್ಳವನಂ; ಒಂದು ಬಿರುದು: ನನ್ನಿವೆಡಂಗು ಕನ್ನಟೆತ್ತಿಯೆ ಕೊಟ್ಟು ಕೆಱೆಗೆ ಯಶಮಂ ಪಡೆದಂ (ಕಇ. II, ४-೫; 918).

[ದೇ.॥ ತಮಿ. ನನ್ನಿ, ನನ್ನು; ಮಲ. ತುಳು. ನನ್ನಿ]

**ನನಿ ಕರ್ತಾರ, ನನ್ನಿಕಾರ್ತರ** (ನಾ). ಒಬ್ಬಾತನ ಹೆಸರು. ಬಾಧಪರಿ ಹಾರಮ್ ನನ್ನಿಕರ್ತಾರ ಭಟರರ್ಗೆ ಧಾರೆ ಎಱೆದು ಕೊಟ್ಟಮ್ (ಮೈಆರಿ. ೧೯೦೭, ೦೩-೧೮; 900). ನನ್ನಿಕಾರ್ತರ: ಸರ್ವ್ವಬಾದಾಪರಿಹಾರ ನನ್ನಿ ಕಾರ್ತ್ತರ ಭಟರರ್ಗೆ ಎ × × × ಱೆದು ಕೊಟ್ಟ (ಎಕ. III, ಮೈಸೂರು. ೩೭-೫; ಸು. 990 ?). [ನನ್ನಿ + ಕರ್ತಾರ]

**ನನ್ನಿಕಾರ್ತರ** 'ನನ್ನಿಕರ್ತಾರ' ನೋ.

**ನನ್ನಿಕಾಱ** (ನಾ). ಸತ್ಯವಂತ; ದಿಟವಂತ; ಸತ್ಯನಿಷ್ಠ; ದಿಟಗಾರ: ಕಾಯಕ್ಲೇಶದಿನಡವಿಯ ಕಾಯಂ ಪಣ್ಣುಮನುದಿರ್ಪ ಕಿಂದಗಲದೆ ನಿಂದೀ ಯಮರಾವ ತೆಱದಿಂ ನೋಯಿಸರ್ಪೆ ನಿನ್ನ ನನ್ನಿಕಾಱನ ಮನಮಂ (ಪಂಪಭಾ. ೭-४೮); ಹುಸಿಯಂ ಹುಸಿಮಾತಂ ಸೈರಿಸನೆಂದುಂ ನಂನಿಕಾಱ ನಂನಿಗೆ ಸಂತಸಮೆಯ್ದುವನಿಂತಿದು ಭಾವಿಸೆ ಹಬ್ಬೆಯನಾಯಕಂಗೆ ಸಲೆ ಸಹಜ ಗುಣಂ (ಕಇ. I, ೨೫-४೮; 1186): ಮುನ್ನೆಲ್ಲರಂ ಸುಡುವ ಕಾಡಾವುದೆಂದು ನೋಳ್ಪನ್ನೆಗಂ ಹಲವು ಕಲವುರಿಯ ಬಳಗಂ ಕಂಡು ನನ್ನಿಕಾಱಂ ಕಾವ ಕಾಡತ್ತ ನಡೆವಾಗ (ಹರಿಶ್ಚ. ೧೨-೩೧); ನನ್ನಿಕಾಱರ ದೇವ ಕೇಳ್ವಾಸಿನ್ನೆನಗೆ ಸಾಮ್ರಾಜ್ಯಸುಖಸಂಪನ್ನತೆಯ ಸೌಭಾಗ್ಯ (ತೊರರಾ. ೧-೫-೧೭).

[ನನ್ನಿ + -ಕಾಱ]

**ನನ್ನಿಗ** (ನಾ). =ನನ್ನಿಕಾಱ: ನಿನ್ನನ್ನೆನೆದಾಪೊನ್ನನ್ನಿಗ ಜಱುಚೆಲ್ಲದ ಬಾಗಿಗಳಾಣ್ಮ ಎನ್ನಯ ಮೊಗ ಮುಂದೇ ಬನ್ನಂಬೆತ್ತನ್ನಯ ಬಿನ್ನಪಮಂ ಮನ್ನಿಸು (ಉದ್ಭಟ. ೩-೨೯): ನನ್ನಿಗರಿಂಪುಗಾಱರಿನಿವಾತುಗರ್ . . . ತನ್ನೊಡನಾಡೆ ನಾಡೆ ನಲಿಗುಂ ಚಿಕದೇವನೃಪಂ ಕೃಪಾಕರಂ (ಚಿಕವಿ. ೫-೧೧೦); ಇಂತೊಂದು ಮಾಟ್ಕೆಯಿಂ ಪೊಱನಲ್ಮೆಯಂ ಕಪಡುಗಾತಿನಿಯ ಕಲ್ದೆರ್ದೆಯೊಳ್ ನಾಂಟಿದ ನಾಡಾಡಿ ನನ್ನಿಗ ಚೆನ್ನಿಗನ ಮನೋರಥದೊಂದು ಹಯದ ಕಾಲ್ಗಳಂತಿರೆ ಕಲ್ಲೊಳ್ ಕೀಲಿಸಿರ್ಪುದುಂ ಕಂಡು (ರಾಮಾಶ್ವ. ೧೩೭-೫); ನಿಮ್ಮವರ ನನ್ನಿಗರ ಹಿಂದು ಸಿಖ್ ಮುಸಲ ಹರಿಜನರ, ನಿಮ್ಮೊಲವು ಧೀರ ಮಾನವತೆಯೇ ಅಡಿಗಡಿಗೆ ಕಾಡಿತ್ತು, ಬೆನ್ನಟ್ಟಿ ಬೇಟೆಯಾಡಿತ್ತು (ಅಮಹಂ. ೨೧-೬).

[ನನ್ನಿ + -ಗ₂]

**ನನ್ನಿಗೆಡು** (ಕ್ರಿ). ಮಾತು ತಪ್ಪು ; ಭಾಷೆ ತಪ್ಪು ; ಸುಳ್ಳಾಡು : ನಾಣ್ಗೊಡೆದು ನನ್ನಿಗೆಟ್ಟೊಗಡಿಸದೆ ನಾನಾವರ್ಣದಂಜಲ ತಿಂದು ಬಾಳುವ ಗನ್ನಗತಕದ ವೇಶ್ಯೆಯರ ಸುಡಲಿ (ಜೀವಂಧ. ೩-೩೭) ; ನನ್ನಿಗೆಟ್ಟಂತು ನುಡಿವರ ಸಲ್ಲದಿದು ನೀನು ಖಿನ್ನನಾಗಿರದೆ ಭಜಿಸೈ ಪಾರ್ವತೀಶ್ವರನ (ಸೌಂದಪು. ೬-೫) ; ಎನ್ನ ರಾಜತೇಜಕರಸ ನನ್ನಿಗೆಡಲು ಮೂಜು ತಪ್ಪಿನಿಂ ನರೇಶನೆಡೆಯು ಬಿಡುವನೊಪ್ಪಿದಡೆ ಗಡ (ಮದೇಪು. ೨೨-೫೭). [ ನನ್ನಿ + ಕೆಡು$_1$ ]

**ನನ್ನಿಗೆಯ್** (ಕ್ರಿ). ನಿಜಗೊಳಿಸು ; ಸಾಬೀತುಗೊಳಿಸು ; ಸತ್ಯವನ್ನಾಗಿಸು : ಬಿಸಿಯೆಲ್ಲವಂ ಕೆದರೆ ಚಳಿಯದು ಕುದುರೆ ಮೇಣ್ ಬಿಸುಗೆಯೊಳ್ ನೆಲೆ ನಿಲ್ವುದು ನನ್ನಿಗೆಯ್ವಂ (ಕಾಲೂರ. ೮೭-೨೬೮). [ ನನ್ನಿ + ಕೆಯ್$_1$ ]

**ನನ್ನಿಗೊಡು** (ಕ್ರಿ). ಭಾಷೆ ಕೊಡು ; ಮಾತು ಕೊಡು : ಓರಿಯುದೊಂದು ಮನೆವಾಟ್ಟೆಯುಂಟೇಗಳೆ ಪೋಗಿ ಬಂದಪ್ಪೆಂ ಬಂದ ಬಟಿಕ್ಕನ್ನಂ ಮೆಚ್ಚಿದಂತೆ ಮಾಡೆಂದು ನನ್ನಿಗೊಟ್ಟು ನಂಬಿಸಿ ಪೋದೊಡೆ (ವಡ್ಡಾರಾ. ೧೬-೯).

[ ನನ್ನಿ + ಕೊಡು$_1$ ]

**ನನ್ನಿಗೊಳ್** (ಕ್ರಿ). ಪ್ರತಿಜ್ಞೆಯುನ್ನು ಪಡೆ ; ಭಾಷೆಯುನ್ನು ಕೊಡುವಂತೆ ಮಾಡು ; ಮಾತು ಪಡೆ : ಚಾಣಾಕ್ಯಂ ಕೇಳ್ದು ಅರಸನಂ ಕಂಡಾನರಸಿಯಾ ಬಯಕೆಯುಂ ನೆಱಪುವೆನಾಯರಸಿಗೆ ಪುಟ್ಟಿದ ಕೂಸನೆನಗೀಯಲಾರ್ಪೊಡೆಂದೊಡರಸನೀವೆನೆಂದೊಡರಸಿಯುಮಂ ನನ್ನಿಗೊಂಡಾರುಮಱಿಯದಂತಿರೆ (ವಡ್ಡಾರಾ. ೧೮೬-೦೩). [ ನನ್ನಿ + ಕೊಳ್$_1$ ]

**ನನ್ನಿದಪ್ಪು** (ಕ್ರಿ). ಭಾಷೆ ತಪ್ಪು ; ಮಾತು ತಪ್ಪು : ನನ್ನಿಯಹುದೆ ನಿಮ್ಮ ವಾಕ್ಯ ನನ್ನಿದಪ್ಪದಮ್ಮಯೆಂದೊಡೆನ್ನದೊಂದು ನುಡಿಯನಾಲಿಸುವುದು (ಮದೇಪು. ೨೨-೫೭). [ ನನ್ನಿ + ತಪ್ಪು$_1$ ]

**ನನಿನುಡಿ** (ಕ್ರಿ). ದಿಟವನ್ನು ನುಡಿ ; ಸತ್ಯವನ್ನು ಹೇಳು : ಈಯುದೆ ಈಱಿಯದೆ ನನ್ನಿ ನುಡಿಯದೆ ನಣ್ಪದೇವಂಗಟ್ಟಿಗ್ಗಿಸ್ಸಿ ಮುಯ್ವುವಪ್ಪಡೆದೊಂಗರ ಅಲೆದೊಂ ಮೂದಲಿಪ್ಪೊಂ (ಎಇ. XXIV. ೨೬-೧೩ ; 885).

[ ನನ್ನಿ + ನುಡಿ$_1$ ]

**ನನ್ನಿನೊಳಂಬ** (ನಾ). ಒಬ್ಬಾತನ ಹೆಸರು : ಆತನ ಮಗಂ ನನ್ನಿನೊಳಂಬನ್ (ಮ್ಯಆರ್. ೧೯೩೨, ೪೮-೪ ; ಸು. 960) ; ಶ್ರೀಪೃಥ್ವೀವಲ್ಲಭ ಪಲ್ಲವಕುಲತಿಲಕ ಏಕವಾಕ್ಯಮಿಱಿವನೊಳಂಬ ಶ್ರೀಮದೆಲಿಪಯ್ಯನ ಮಗ ನನ್ನಿನೊಳಂಬನ ಬಿಟ್ಟ ಬ್ರಹ್ಮಾದೇಯಂ (ಎಕ. XI. ಹಿರಿಯೂ.೧-೩ ; 976).

[ ನನ್ನಿ + ನೊಳಂಬ ]

**ನನಿಮುಟಲೂರ್** (ನಾ). ಒಂದು ಊರಿನ ಹೆಸರು (?) : ಶೌಚವಣಲೆಯರುಂ ನನ್ನಿಮುಟಲೂರುಂ ಸನ್ನೊನವಾಳ ಕಿಱುವೆಟ್ಟಗರಾ ಪನ್ನಿರ್ವ್ವರ್ಗ್ಗಂ ರಣಪಾರರಾ ಮಣಲೆಯರಸರಾ ಸಮಾಧಿಯೆ ಸಮಾಧಿ (ಎಕ. XIV. ತಿರುಮ. ೨೫೩-೨ ; ಸು. 800). [ ? + ಊರ್ ]

**ನನ್ನಿವಂತ** (ನಾ). ಸತ್ಯವಂತ ; ಧರ್ಮಿಷ್ಠ : ನನ್ನಿವಂತರ ದೇವ ಬಾರೈ ಮನ್ನಣೆಯ ಮದಗಜವೆ ಬಾರೈ (ಕಾಶಿರಾ. ೩೮-೬೦) ; ಯತಿಯು ರತಿಕನೆನಿಸಿ ಪತಿವ್ರತೆಯು ಸಿತಗೆಯೆನಿಸಿ ದಿವ್ಯವ್ರತಿಯು ಗತಿವಿಹೀನನೆನಿಸಿ ನನ್ನಿವಂತರ ಮತಿಗೆ ಸಟೆಯು ಬಿತ್ತಿದಾಗಿ (ಮದೇಪು. ೨೨-೨೭). [ ನನ್ನಿ + -ವಂತ ]

**ನನ್ನಿಮಾತು** (ನಾ). ಪ್ರತಿಜ್ಞೆಯ ಮಾತು ; ಶಪಥದ ನುಡಿ : ಮಱುಮಾತಿಂಗೆಡೆಯಿಲ್ಲದಂತಿರೆ ನುಡಿದ ಪಡೆಮೆಚ್ಚೆಗಂಡನ ಗಂಡಮಾತುಮಂ ನನ್ನಿಮಾತುಮಂ ಮುರಾಂತಕಂ ಮೆಚ್ಚಿ (ಪಂಪಭಾ. ೫-೭೫ ವ).

[ ನನ್ನಿ + ಮಾತು$_1$ ]

**ನನ್ನಿವೇೞ್** (ಕ್ರಿ). ಸತ್ಯವನ್ನು ನುಡಿ ; ನಿಜವನ್ನು ಹೇಳು : ತನ್ನರಸಿಯ ಉಱುಗಿಲ್ಲದ ನಡೆಗೆ ದೇವರ್ಕಳಂ ಸಾಕ್ಷಿಗೊಟ್ಟು ಆಗಳೆ ತನ್ನತನ್ನೆಯುಮಂ ಮನ್ನಿಸೆಂದು ನನ್ನಿವೇೞ್ದು ಸಂತವಿಟ್ಟು (ರಾಮಾಶ್ವ. ೧೬೩-೯).

[ ನನ್ನಿ + ವೇೞ್ ]

**ನನ್ನು** (ನಾ). ಅರಿಸಿನ, ಕುಂಕುಮ ಮೊದಲಾದುವನ್ನು ತೂಗುವ ಒಂದು ಬಗೆಯ ತೂಕ : ಸುಗಂಧಗಳಿಗೆ ಪಚ್ಚೆಕರ್ಪುರ ಕೂರು ಒಂದಕ್ಕೆ ಹಾಗ ಪನ್ನೆಕುರು ಒಂದಕ್ಕೆ ಬೇಳೆ ಕಸ್ತೂರಿ ತೊಲೆ ಒಂದಕ್ಕೆ ಬೇಳೆ ಕುಂಕುಮ ನನ್ನು ಒಂದಕ್ಕೆ ಹಾಗ ಅಗಿಲು ತೊಲೆ ಒಂದಕ್ಕೆ ಅರ್ಧ (ಎಕ. V. ಬೇಂಲೂರು ೭೫-೮೨ ; 1382). [ ? ]

**ನನ್ನೂಱು** 'ನಾಲ್ನೂಱು' ನೋ.

**ನಪತ್ತು** 'ನೌಬತ್ತು' ನೋ.

**ನಪರ** 'ನಫರ' ನೋ.

**ನಪಾಸು** 'ನಾಪಾಸು' ನೋ.

**ನಪಿರಿ, ನಪೂರಿ, ನೌಪೂರಿ** (ನಾ). ಒಂದು ಬಗೆಯ ವಾದ್ಯ ; ತುತ್ತೂರಿ : ಚಂಬಕ ಡವುಡೆ ನಪಿರಿ ಬುರುಗುಗಳುಱ್ ಕೊಂಬಿನ ಕಾಳೆ ಮುಪುರಿಯ ಬೊಂಬುಳಿ ಡೋಳು ನಿಸ್ಸಾಳಗಳಬ್ಬರ ತುಂಬಿತಾಕಾಶಮಂಡಲವ (ಕಂಸವಿ. ೧೪-೨) ; ಚಂಬಕ ; ಡವುಡೆ ; ನಪಿರಿ ; ದುಂದುಭಿ . . . ಜಬರುಜಂಗಿ ಇತ್ಯಾದಿ (ಛಾಪಾಶಾ. ೫). **ನಪೂರಿ** : ನಿರ್ಜೀವಿ ಯಾವುದೆಂದೊಡೆ... ಲೋಹವಿಡಿದ ಶಬ್ದ ತಾಳ ಕಂಸಾಳ ಗಂಟೆ ಕಹಳೆ ಕರ್ನೆ ನಪೂರಿ ಸ್ವನಾಯಿ (ಪದಸಂ. ೯೦೫-೮೯) ; ನುಡಿವ ಮದ್ದಳೆ ಜೋಡುಶಂಖ ನಪೂರಿಯು ಬಡಿವ ತುಡುಮು ಡಮಾಮಿಗಳು ಹೊಡೆವ ಭೇರಿಯು ದೇವದುಂದುಭಿ ಮೊದಲಾದ ಗಡಣವೆಣ್ದೆಸೆಯ ವ್ಯಾಪಿಸಿತು (ಅಬ್ಯಂಲೂ. ೪-೮೨) ; ಭೇರಿ ಹೆಗ್ಗಾಳೆ ನಪೂರಿ ನಾಗರ ಡೋಳು ಬಾರಿಸುತಿರಲು (ದೀದಶಾ. ೯-೩) ; ಭೇರಿ, ಕಹಳೆ, ಕರ್ನೆ, ನಪೂರಿ, ನಗಾರಿ, ಜಾಗಟೆ, ಕರಡಿ ಸಮ್ಮೇಳ (ಗುರುದ. ೦೦). **ನೌಪೂರಿ** : ಕಹಳಾ ಭೇರಿ ನಗಾರಿ ತಮ್ಮಟೆ ತುತೂರೀ ಮೌರಿ ನೌಪೂರಿಗಳ್ ಬಹು ವಾದ್ಯಾದುರು ತಾಂ ಧಳಂಧಳರವಂ ಪರ್ಬುತ್ತಿರಲ್ಕತ್ತಲುಂ (ದೀಳಮಂ. ೨-೨೭೧).

[ ←ಪಾರ. ನಫೀರೀ. ನಫೀರೂ ; ಹಿಂ. ನಫೀರ್, ನಫೀರೀ, ನಫೇರೀ, ನಪ್ಪೇರೀ ; ಮರಾ. ನಫೇರೀ ]

**ನಪುಂಸ** (ನಾ). = ನಪುಂಸಕ ೧ : ಈರ್ವರಿಗೆ ಸೂರ್ಯಸ್ವರ ನಡೆಯಲ ನಪುಂಸನಹನೂ (ನವಮೋ. ೦೪-೪೫). [ ಸಂ. ] ೦

**ನಪುಂಸಕ** (ನಾ). ೧. ಪುರುಷನೂ ಅಲ್ಲದ ಸ್ತ್ರೀಯೂ ಅಲ್ಲದ ವ್ಯಕ್ತಿ ; ಗಂಡೂ, ಹೆಣ್ಣೂ ಅಲ್ಲದ ಮನುಷ್ಯ : ಷಂಡ. ೨. ಖೋಜ ; ಕೊಜ್ಜ : "ಕ್ಲೀಬಃ, ವರ್ಷಧರಃ, ಷಂಡಃ, ಷಂಡಕಃ, ನಪುಂಸಕಃ – ಈ ೫ ನಪುಂಸಕಂ" (ಹಲಾಯು. ೭೧-೨೭೬) ; "ಷಂಡಂ ಕ್ಲೀಬನೆನೆ ನಪುಂಸಕನೆನಿಕ್ಕುಂ" (ಮಂಗರಾ. ೮೦-೮) : ಮತ್ತಮಾ ನಾರಕರೆಲ್ಲಂ ಹುಂಡಮುಂಡಸಂಸ್ಥಾನರುಮತಿವಿರೂಕ್ಷ ಕೃಷ್ಣವರ್ಣರುಮತಿದುರ್ಗಂಧರುಂ ನಪುಂಸಕರುಂ (ಸುಕುಮಾ. ೦೦-೪೮ ವ) ; ನಪುಂಸಕ ವ್ಯವಹರಿಸಬಲ್ಲನೇ ಅಯ್ಯ (ಸಿದ್ಧೇವ. ೦೭-೫೨೩) ; ಅರ್ಜುನಂಗೀ ಸೂ ತ ತನ ವೆ ತ್ತ ಲು ನಪುಂಸಕವೇಷ ವೀಕ್ಷಿಸಲು (ಕುಮಾವಿ. ೬-೦೫). ೩. = ನಪುಂಸಕತ್ವ ೧ : ವರುಷ ತನಕ ನಪುಂಸಕದಲಾಚರಿಸಬಲ್ಲೆನೆ ಸಾಕು ದೇಹಾಂತರವನಂಗೀಕರಿಸುವೆನಲಾ ತನ್ನ ಸುಡಲೆಂದ (ಕುಮಾಅ. ೮-೪೫). ೪. (ಅಲಂ) ನಿರ್ವೀರ್ಯನಾದವನು ; ದುರ್ಬಲ ; ಬಲಹೀನ : ಈ ನಪುಂಸಕರುಗಳ ನಂಬಿದ ನಾನು ನೀತಿಜ್ಞನೆ ಮಹಾದೇವೇನ ಹೇಳುವೆನೆನುತ ಭೀಷ್ಮನ ಹೊರಗೆ ನಡೆತಂದ (ಕುಮಾಭೀ. ೮-೬೭) ; ನಾನು ದುರ್ಯೋಧನನಿಗೆ ಧನಾಧೀನನಾಗಿ ನಪುಂಸಕನಾದ್ದರಿಂದ (ಕೃಪಾಭೀ. ೨೭). ೫. [ವ್ಯಾಕ] ಮೂರು ಲಿಂಗಗಳಲ್ಲಿ ಒಂದು ; ಪುಲ್ಲಿಂಗ, ಸ್ತ್ರೀಲಿಂಗಗಳಲ್ಲದ ಲಿಂಗ ಮತ್ತು ಅದಕ್ಕೆ ಅಳವಡದ ಶಬ್ದ : ಸ್ವರವಿಂದಿರೊಳ್ಕಾರಾಂತಕ್ಕೆರೆ . . . ನಪುಂಸಕಕ್ಕೆ ದಾಗಮಮಕ್ಕುಂ (ಶಾವ್ಯಾವ. ೦೦೪) ; ಕರ್ಣಾಟಕದೊಳ್ ಪೇಸು ಸ್ತ್ರೀಪುಂ ನಪುಂಸಕೋಭಯ ಪುಂಸ್ತ್ರೀ ಸ್ತ್ರೀ ನಪ್ಸಮಸ್ತ ವಾಚ್ಯಾನ್ಯಾವ್ಯಯ ಮೆಂದು ಲಿಂಗಮೊಂಬತ್ತು ತೆಱು (ಶಮದ. ೮೮) : ಕೆಲವು ನಲವು ಎಱುವು

ನಪುಂಸಕ ಬಹುವಚನದ ರೂಪಗಳು (ಮಧ್ವಮು. ೯೪). ೧. ೫ : ಮನವ ನಪುಂಸಕವೆಂದೆ ನಾನವಳನು ಕರೆತರಲಟ್ಟಿದೆ ಮನವು ರಮಿಸಿತದಲ್ಲಿಯೆ ವಂಚಿತ ನಾದೆನು ವಾಣನಿಯೆಂತಹ ಕಿತವ (ಇಂಚಾಪ. ೮೬-೧೭).

**ನಪುಂಸಕಪಕ್ಷಿಗ್ರಹ** = ಒಂದು ಬಗೆಯ ಹಕ್ಕಿರೋಗ : ಮಂಡುಹು ಗಳಲ್ಲಿಯೂ ಬೆನ್ನಿನಲ್ಲಿಯೂ ಕುಳಿ ಬಿದ್ದಿಹುದು. ಮೈ ಉರಿತ, ಕಾರುವಣ, ಉಬ್ಬುವಣ, ಬಾಯಾಟಿಕೆ. ಇವಿಷ್ಟು ಉಂಟಾಗಿದ್ದರೆ ನಪುಂಸಕಪಕ್ಷಿಗ್ರಹ ಹಿಡಿದಿದೆ ಎಂದರಿವುದು (ವೈದ್ಯಸಾ. II, ೧೩). [ಸಂ. ]

**ನಪುಂಸಕತನ** (ನಾ).=ನಪುಂಸಕತ್ವ ೧ : ಉತ್ತರಗೋಗ್ರಹಣದ ಸಮಯಕ್ಕೆ ಅರ್ಜುನನ ನಪುಂಸಕತನ ಕೊನೆಗೊಂಡಿತು (ರೂ೦).

[ ನಪುಂಸಕ +. – ತನ ]

**ನಪುಂಸಕತ್ವ** (ನಾ). ೧. ಪುರುಷನೂ ಸ್ತ್ರೀಯೂ ಅಲ್ಲದಿರುವ ಸ್ಥಿತಿ; ಕ್ಲೀಬತ್ವ ; ಷಂಡತ್ವನ : ಅರ್ಜುನನು ಊರ್ವಶಿಯ ಶಾಪದಂತೆ ಒಂದು ವರ್ಷಕಾಲ ನಪುಂಸಕತ್ವವನ್ನು ಹೊಂದಿದ್ದನು (ರೂ೦). ೨. [ವ್ಯಾಕ] ಪುಂ, ಸ್ತ್ರೀಲಿಂಗಗಳಿಗೆ ಸೇರದಿರುವಿಕೆ ; ನಪುಂಸಕಲಿಂಗವಾಗಿರುವಿಕೆ : ನಿತ್ಯಂ ನಪುಂಸಕತ್ವಮುಪತ್ಯಕಲತ್ರಾದಿ ಶಬ್ದದೊಳ್ ಸ್ತ್ರೀಪುಂಸವ್ಯತ್ಯಯಮಕ್ಕುಂ ಕರಚಕೋಪತ್ಯಕೆಗಳೊಳಂ ವಧಾಭಿಲಾಷಾದಿಯೊಳಂ (ಕಾವ್ಯಾವ. ೧೭೦).

[ ಸಂ. ]

**ನಪುಂಸಕಲಿಂಗ** (ನಾ). = ನಪುಂಸಕ ೫ : ಪುರುಷರು ಪೇಟ ಶಬ್ದಂಗಳ್ ಪುಲ್ಲಿಂಗಂಗಳ್ ; ಸ್ತ್ರೀಯರು ಪೇಟ್ವ ಶಬ್ದಂಗಳ್ ಸ್ತ್ರೀಲಿಂಗಂಗಳ್ ; ಉಳಿದು ವೆಲ್ಲಂ ನಪುಂಸಕಲಿಂಗಂಗಳ್ (ಶಮದ. ೯೧ ವೃತ್ತಿ) ; ಪುಲ್ಲಿಂಗವೆಂತಲೂ ಸ್ತ್ರೀಲಿಂಗವೆಂತಲೂ ನಪುಂಸಕಲಿಂಗವೆಂತಲೂ ಮೂರು ವಿಧವಾಗಿರುವುದು (ಹೊಸಗ. ೬೫) ; ಪುಲ್ಲಿಂಗವೂ ಸ್ತ್ರೀಲಿಂಗವೂ ಅಲ್ಲದ ಪದಗಳೆಲ್ಲಾ ನಪುಂಸಕ ಲಿಂಗ (ಮಧ್ವಮು. ೩೧). [ ನಪುಂಸಕ + ಲಿಂಗ ]

**ನಪುಂಸಕವೇದ** (ನಾ). [ಜೈನ] ಒಂದು ಬಗೆಯ ನೋಕಷಾಯಂ; ಚಾರಿತ್ರಮೋಹನೀಯದ ಭೇದಗಳಾದ ಮೂರು ಬಗೆಯ ವೇದ ಗಳಲ್ಲಿ ಒಂದು; P ಆತ್ಮನಿಗೆ ಚೈತನ್ಯರೂಪ ಪರ್ಯಾಯದಲ್ಲಿ ಮೈಥುನರೂಪವಾದ ಚಿತ್ತವಿಕ್ಷೇಪವುಂಟಾಗುತ್ತದೆ. ಇದಕ್ಕೆ ವೇದವೆಂದು ಹೆಸರು. ಇದರಲ್ಲಿ ಪುರುಷವೇದ, ಸ್ತ್ರೀವೇದ, ನಪುಂಸಕ ವೇದವೆಂದು ಮೂರು ಬಗೆಗಳಿವೆ. ಪುರುಷವೇದದ ಉದಯದಿಂದ ಸ್ತ್ರೀವಿಷಯಕವಾದ ಕಾಮವುಂಟಾಗುತ್ತದೆ. ಸ್ತ್ರೀವೇದದ ಉದಯದಿಂದ ಪುರುಷವಿಷಯಕವಾದ ಕಾಮವುಂಟಾಗುತ್ತದೆ. ನಪುಂಸಕವೇದದ ಉದಯದಿಂದ ಸ್ತ್ರೀಪುರುಷೋಭಯಾತ್ಮಕ ವಾದ ಕಾಮವುಂಟಾಗುತ್ತದೆ. ನಪುಂಸಕವೇದದಿಂದ ಉಂಟಾಗುವ ಭಾವವು ಆವಿಗೆಯಲ್ಲಿರುವ ಬೆಂಕಿಯಂತೆ ದೀರ್ಘಕಾಲವಿರುತ್ತದೆ. ಆ ಕಾರಣದಿಂದ ವ್ಯಕ್ತಿಯು ಪುರುಷಶಕ್ತಿ, ಸ್ತ್ರೀಶಕ್ತಿ ಎರಡೂ ಇಲ್ಲದವನಾಗುತ್ತಾನೆ. ಹೀಗೆ ಬೇರೆ ಬೇರೆ ವಿವರಣೆಗಳು ಜೈನಗ್ರಂಥ ಗಳಲ್ಲಿ ನಿರೂಪಿತವಾಗಿವೆ : ಮತ್ತಂ ಕಿಡಿದು ಬೇಗದಿಂ ಕ್ರಮಾಕ್ರಮದೊಳೆ ನಪುಂಸಕವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ... ಘಾತಿಸಿ (ಆದಿಪು. ೧೦-೧೪ ವ); ಅಭಿಭವಿಸಿ ನಪುಂಸಕವೇದ ಭಾಮಿನೀವೇದಯುಗಳದೊಡ ನೊಡನೆ ಜಗದ್ವಿಭು ಹಾಸ್ಯರತ್ಯರತಿಶೋಕಭಯಜುಗುಪ್ಸೆಗಳನಾಱುಮಂ ಬೆಂಕೊಂಡಂ (ಮಲ್ಲಿಪು. ೧೪-೮೪) ; ಮತ್ತಂ ಕಶಿವಯಸಮಯದೋಲನು ಕ್ರಮದಿಂ ನಪುಂಸಕವೇದಂ ಸ್ತ್ರೀವೇದಮೆಂಬ ಎರಡುಮಂನದಿರ್ಪ (ಚಂದ್ರಪು. ೧೪-೬೯ ವ) ; ಸ್ತ್ರೀವೇದಂ ಪುರುಷಾಭಿಲಾಷೆಯಂ ಮಾಳ್ಪುದು ಪುರುಷವೇದಂ ಸ್ತ್ರೀಯಭಿಲಾಷೆಯಂ ಮಾಳ್ಪುದು ನಪುಸಂಕವೇದಮುಭಯಾಭಿಲಾಷೆಯಂ ಮಾಳ್ಪುದು (ಷಸಾರ. ೧೨) ; ನಪುಂಸಕವೇದಮನಡಿಯಿಟ್ಟು ಹಾಸ್ಯಾದಿಯಾಱ (ವರ್ಧಮಾ. ೧೩-೫೦). 'ನೋಕಷಾಯ' ಪರಾ. [ ಸಂ. ]

**ನಪುಂಸಕಶಿಲೆ** (ನಾ). ಮೂರ್ತಿಶಿಲ್ಪಕ್ಕೆ ನಿರುಪಯುಕ್ತವಾದ ಶಿಲೆ; ಮೂರ್ತಿ ಶಿಲ್ಪಕ್ಕೆ ಉಪಯೋಗವಾಗದ ಶಿಲೆ : ಶಿಲೆಯಲ್ಲಿ ಪುಂಶಿಲೆ, ಸ್ತ್ರೀಶಿಲೆ, ನಪುಂಸಕಶಿಲೆಯೆಂದು ಮೂರು ವಿಧ. ಕಂಚಿನ ತಾಳದ ನಾದದಂತೆ ಧ್ವನಿಕೊಡುವ ಶಿಲೆಯು 'ಪುಂಶಿಲೆ' ಯೆಂದೂ, ಘಂಟಾನಾದದಂತೆ ಧ್ವನಿತ ವಾಗುವ ಶಿಲೆಯು 'ಸ್ತ್ರೀಶಿಲೆ' ಯೆಂದೂ, ತಾಳವಿಹೀನವಾದ ಶಿಲೆಯು 'ನಪುಂಸಕಶಿಲೆ' ಯೆಂದೂ ಉಕ್ತಿ ಇದೆ . .. ಸ್ತ್ರೀದೇವತಾವಿಗ್ರಹಗಳನ್ನು ಸ್ತ್ರೀಶಿಲೆಯಿಂದಲೂ, ಆಧಾರಪೀಠಾದಿಗಳನ್ನು ನಪುಂಸಕಶಿಲೆಯಿಂದಲೂ ಮಾಡಬೇಕೆಂದು ವಿಧಿಸಿದೆ (ಭಾರದ. ೭೭). [ ನಪುಂಸಕ + ಶಿಲೆ ]

**ನಪುಂಸಕಿ** (ನಾ). ಸ್ವರೂಪದಲ್ಲಿ ಹೆಣ್ಣಾಗಿ ಕಂಡರೂ ಹೆಣ್ತನವಿಲ್ಲದ ವ್ಯಕ್ತಿ : ಪರವಧುವಂ ನಪುಂಸಕಿಯುಮಂ ಗುರುಭಾರ್ಯೆಯುಮಂ ಮುನೀಂದ್ರ ಸೌಂದರಿಯರನಂತ್ಯ ಜಾತಿಯವಳಂ ವ್ರತಮುಳ್ಳಳನಂಗಹೀನೆಯುಂ ಶಿಶಿವ ವಳಂ ಕುಲಕ್ಷಯೆಯುನಾ ಕೊಡಗೂಸುಗಳಂ ವಿದಗ್ಧನಾದರದೊಳೆ ಕೂಡಲುಂ ಬಯಸಿನೋಡಲು ಮಾಗದು ಕೂರ್ತು ಬಂದೊಡಂ (ಮದಿ. ೯-೨).

[ ನಪುಂಸಕ + – ಇ₂ ]

**ನಪೂರಿ** 'ನಫಿರಿ' ನೋ.

**ನಫೆ** 'ನಫೆ' ನೋ.

**ನಪ್ತಾರ** (ನಾ). ಮೊಮ್ಮಗ ; ನಪ್ತೃ : ಪಿತೃ ಮೊದಲಾದ ಶಬ್ದಗಳನ್ನುಳಿದ ಋಕಾರಾಂತ ಶಬ್ದಗಳ ಋಕಾರಕ್ಕೆ ಆರಾದೇಶ ಬರುತ್ತದೆ . . . ಸ್ವಸೃ – ಸ್ವಸಾರನು :-ನಪ್ತೃ – ನಪ್ತಾರನು ಇತ್ಯಾದಿ (ಹೊಸಗ. ೧೦೭).

[ ಸಂ. ನಪ್ತೃ ]

**ನಪ್ತೃ** (ನಾ). ಮಗನ ಅಥವಾ ಮಗಳ ಮಗ ; ಮೊಮ್ಮಗ : "ದೌಹಿತ್ರ, ನಪ್ತಾ-ಈ ೨ (ಮ)ಗಳ ಮಗಂ ; ಪೌತ್ರನುಂ ಅಹಂ" (ಹಲಾಯು. ೮೩-೩೫೧); "ಮಗನ ಮಗಂ ನಪ್ತೃ ಪೌತ್ರನೆನಿಕುಂ" (ವಸ್ತುಕೋ. ೫೫-೨೨); ಋಕಾರಾಂತಕ್ಕೆ-ಪಿತೃ, ಸವಿತೃ, ನಪ್ತೃ . . . ಧಾತೃ (ಶಮದ. ೮೯ ಪ್ರಯೋ) ; ಮಡದಿಯರಂ ಮಕ್ಕಳಂ ಮೊಮ್ಮಕ್ಕಳಂ ನಪ್ತೃಗಳಂ ನಿಗ್ರಹಾನುಗ್ರಹಪೂರ್ವಕಮಾಗಿ ಸಂರಕ್ಷಣೆಯನೆಸಗು (ಭಾರತಾಂ. ೬೭-೪೧೩).

[ ಸಂ. ]

**ನಪ್ತ್ರಿ** (ನಾ). ಮಗನ ಅಥವಾ ಮಗಳ ಮಗಳು ; ಮೊಮ್ಮಗಳು : "ನಪ್ತ್ರೀ,-ಪೌತ್ರೀ, ಸುತಾತ್ಮಜಾ – ಮಗನ ಮಗಳ ಹೆಸರುಗಳು, ಮಗಳ ಮಗಳಿಗೂ ಹೆಸರು, ಮೊಮ್ಮಗಳು" (ಸಿದ್ಧಾಂತಿ. ೧೫೩). [ ಸಂ. ನಪ್ತ್ರೀ ]

**ನಪ್ಪು** (ನಾ). [ವ್ಯಾಕ] ನಪುಂಸಕಲಿಂಗ ಎಂಬುದರ ಸಂಕೇತ : ಪುರುಷರೆ ಪುಲ್ಲಿಂಗಂ ಸ್ತ್ರೀಯರೆ ತಾಂ ಸ್ತ್ರೀಲಿಂಗಮುಳಿದುವೆಲ್ಲಂ ನಪ್ಪಾಗಿರೆ ಸಲ್ಗುಂ ಕನ್ನಡದೊಳ್ ಪರಿವರ್ತಿಸವುಳಿದ ಲಿಂಗಮೊಳವಾಗಿರ್ದುಂ (ಶಮದ. ೯೦); ನಪ್ಪಾಗಿರೆ = ನಪುಂಸಕಲಿಂಗವಾಗಿರೆ (ಶಮದ. ೯೧ ಟೀಕೆ).

[ ಸಂ. ನಪ್ ]

**ನಪ್ಪುರಿ₁** (ಕ್ರಿ). ಗಾಡಿ, ನೇಗಿಲು ಮುಂತಾದುವುಗಳ ಚಲಿಸುವ ಎತ್ತು ಗಳನ್ನು ನಿಲ್ಲಿಸಲು, ಬಾಯಲ್ಲಿಯ ಶಬ್ದದಿಂದ ಸೂಚನೆ ಕೊಡು : ಎತ್ತುಗಳನ್ನು ಗೌಡರು ನಪ್ಪುರಿದು, ಗಾಡಿಯನ್ನು ಮನೆಯ ಮುಂದೆ ನಿಲ್ಲಿಸಿ, ಮುಖದಲ್ಲಿ ಆ ಗೆಲುವಿನ ನಗೆಯನ್ನು ಸೂಚಿಸಿದಾಗ ಆತನಿಗೆ ಪೂರ್ತಿ ಜೀವ ಬಂತು (ನನ್ನೂರು. ೧೩೪). 'ನಕ್ಕಿಱು', 'ಮುಪ್ಪುರಿ' ಪರಾ.

**ನಪ್ಪುರಿ₂** (ನಾ). "ನೇಗಿಲಿಗೆ ಅಥವಾ ಗಾಡಿಗೆ ಕಟ್ಟಿದ ಎತ್ತುಗಳನ್ನು ನಿಲ್ಲಿಸಲು ಬಾಯಲ್ಲಿ ಮಾಡುವ ಒಂದು ರೀತಿಯ ಶಬ್ದದ ಸನ್ನೆ" (ನನ್ನೂರು. ಕೋಶ). [ <ನಪ್ಪುರಿ₁ ]

**ನಫರ್** 'ನಫರ' ನೋ.

**ನಫರ್‌ಜಾಮಿಾನು** 'ನಫರಜಾಮಿಾನು' ನೋ.

**ನಫರ, ನಪರ, ನಫರ್** (ನಾ). ೧. (ಕೀಳು ತರಗತಿಯು) ಆಳು ; ದಾಸ ; ಸೇವಕ. ೨. ವ್ಯಕ್ತಿ ; ಮನುಷ್ಯ ; ಇಸಮು : ನಿಜ, ಅಹುದು ! ಆದರೆ ಈ ಹಳೇ ನಫರನಾದ [ಮನುಷ್ಯನಾದ] ನನ್ನ ದೆಸೆಯೇನಾಗಬೇಕು ? (ಕಪಾಕುಂ. ೮೦). 'ನಫರಜಾಮೀನು' ಪರ್ಯಾ. **ನಪರ** : ೧. ನಪರನ ಹೆಂಡತಿಗೆ ಹುರನ ಕಾವಲು (ಗಾದ). **ನಫರ್** : ೧. 'ನಫರ್‌ಜಾಮೀನ್' ಪರ್ಯಾ. [←ಅರ. ಹಿಂ. ನಫರ್ ; ಮರಾ. ನಫರ್, ನಫ್ರ್ ]

**ನಫರಜಾಮೀನು, ನಫರ್‌ಜಾಮೀನ್** (ನಾ). ಒಬ್ಬ ವ್ಯಕ್ತಿಯು ಒಂದು ಷರತ್ತನ್ನು ಪಾಲಿಸುವುದಕ್ಕೆ ಬದ್ಧನಾಗಿ ನ್ಯಾಯಾಸ್ಥಾನದ ಎದುರಿಗೆ ಒಪ್ಪಿಕೊಳ್ಳುವಿಕೆ ; ಸ್ವಂತಜಾಮೀನು : (ಕ). **ನಫರ್‌ಜಾಮೀನ್** : ನಫರ್‌ಜಾಮೀನ್ ಖತ್ತಿನ (recognisance) ಮೇಲೆ. ಹನ್ನೆರಡು ವರ್ಷಗಳು (ಗ್ರಾಮೂಕ. ೧೭೦). [ ನಫರ + ಜಾಮೀನು ]

**ನಫಾ** 'ನಫೆ' ನೋ.

**ನಫೆ, ನಪೆ, ನಫಾ** (ನಾ). ವ್ಯಾಪಾರದಲ್ಲಿ ಬರುವ ಆದಾಯ ; ಲಾಭ ; ಫಾಯಂದೆ ; ಕಿಫಾಯಿತ್ತು : ಈಚೆಗೆ ಒಂದಕ್ಕೆ ಎರಡರಷ್ಟು ನಫೆ, ವ್ಯಾಪಾರ ದಲ್ಲಿ ಬಂದದ್ದರಿಂದ ಕಾಮಗಾರಿ ಪ್ರಯತ್ನ ಮಾಡಿದೆವು (ಎಕ. XVI, ಮುದ್ದಗಿ. ೦೦೭-೮ ; 1612) ; ಉತ್ತಮವಾದ ರತ್ನಗಳನ್ನು ಹನುಮಂತರಾಯನು ಅಂದಾಜು ನೋಡಿ ತಾನೇ ಕ್ರಯಕ್ಕೆ ತೆಗೆದುಕೊಂಡು ಅವುಗಳನ್ನು ನಫೆಗೆ ಮಾರುತ್ತಿದ್ದನು (ಮುಸುಗ. ೬೨) ; ವಾಸ್ತವವಾಗಿ ಬಂದ ನಫೆಯ ಮೇಲೆ ಸೇಕಡ ಹತ್ತರಂತೆ ದಳ್ಳಾಳಿಯನ್ನು ಕೊಡುವ ಪದ್ಧತಿ (ಭಾಗ್ಯಶಿ. ೨೭) ; ಅಂತೂ ಲುಕ್ಸಾನಿಲ್ಲ. ನಫೆಯಾಗಿದೆ (ಧೀಮಕಾ. ೬). **ನಪೆ** : ಈ ದಿನದ ವ್ಯಾಪಾರದಲ್ಲಿ ಆತನಿಗೆ ಹೆಚ್ಚು ನಪೆಯಾಯಿತು (ರೂಢಿ). **ನಫಾ** : ಯಾರಿಗೆ ಹ್ಯಾಗೆ ಖರೀದಿ ಮಾಡಲ್ಪಟ್ಟದೆಯೋ ಆದರ ಹಾಗೆ ಅವರು ನಫಾ ಕಿಮ್ಮತ್ತಿನಲ್ಲಿ ಸಾಮೀಲಮಾಡಿ ಹೇಳುತ್ತಾರೆ (ಮುಂಬವ್ಯಾ. ೧೯೪).
[←ಅರ. ನಫ್‌ಅ; ಹಿಂ. ನಫಾ ; ಮರಾ. ನಫಾ, ನಪ್ಪಾ ]

**ನಬಾಬ** 'ನವಾಬ' ನೋ.

**ನಬೀ** (ನಾ). ದೈವಪ್ರೇರಿತವಾದ ಧರ್ಮೋಪದೇಶಕ ; ಪೈಗಂಬರ ; ಪ್ರವಾದಿ ; ದೇವದೂತ ; "ಧರ್ಮಸ್ಥಾಪಕ" (ಜಾನಕೋ. ೯).
[ ←ಫಾರ. ಅರ. ಹಿಂ. ಮರಾ. ನಬೀ ]

**ನಬ್ಯ** (ನಾ). ಹೊಸತು ; ನವ್ಯ : "ನಬ್ಯ-ನವ್ಯ = ಹೊಸತು" (ಶಬ್ದಕೋ. ೨೦) ; ತರಿಸಿಯೊಟ್ಟಿಸಿ ನಬ್ಯ[ಪಾಠಾಂ. ವ್ಯ]ದಿವ್ಯಾಂಬರ ನಿಕರಮಂ (ಬಸಪು. ೫೭-೧೮). [ <ಸಂ. ನವ್ಯ ]

**ನಭ** (ನಾ). ೧. ಬಾನು ; ಆಗಸ ; ವ್ಯೋಮ ; ಆಕಾಶ ; ಗಗನ : "ನಭಃ . . . ಗಗನಂ, ದ್ಯುಃ–ಈ ೧೫ ಆಕಾಶಂ" (ಹಲಾಯು. ೨೨-೧೩೬) ; "ತಾರಾಪಥಂ ವ್ಯೋಮಮಂತರಿಕ್ಷಂ ನಭಂ . . . ಅಂಬರಂ ವಿಷ್ಣುಪದಮೆನಲು ಗಗನಮಕ್ಕುಂ" (ಮಂಗರಾ. ೯-೩೦) ; ಒತ್ತಿ ತಱುಂಬಿ ನಿಂದ ರಿಪುಭೂಜ ಸಮಾಜದ ಬೇಗ್ರ್ಗಳಂ ನಭಕ್ಕೆತ್ತದೆ ಬಂದು ತನ್ನ ಮುಟ್ಟುಕೊಳ್ಳಡೆ ಕಾಯದೆ ಚಾಗದೊಳ್ಪಿನಚ್ಚೊತ್ತದೆ ಮಾಣ್ದು ಬಾಟ್ಟ ಪುಟುವಾನಸನೆಂಬನಜಾಂಡ ಮೆಂಬುದೊಂದತ್ತಿಯ ಪಣ್ಣೊಳಿಪ್ಪ ಪುಟುವಲ್ಲದೆ ಮಾನಸನೇ ಮುರಾಂತಕಾ (ಶಂಖಶಾ. ೫-೭೫) ; ನಭದಿಂದಮಿೞಿದವಂ ರಾಜಭವನಮಂ ಪೊಕ್ಕು ಪವನಸುತ ಪಾದನಖಪ್ರಭೆ ಪಸರಿಸೆ ತನಗೆ ಶಿರೋವಿಭೂಷಣಶ್ರೀಯನೀಯೆ ವಿನಮಿತ ನಾದಂ (ಶಂಖಾಮಾ. ೧೧-೨೭) ; ಭೋರೆನೆ ತೂರ್ಯವಂಚೆಮನಜಂ ಗಜಮಂ ಬಳವೈರಿ . . . ವಿಮಾನಮಂ ಮಾರಹಾಟ್ರಿಯಂ ವೃಷಭನಂ ಹರನೇಱ ನಭಕ್ಕೆ ಸಲ್ವುದುಂ (ಜಗವಿ. ೧-೩೬) ; ಗಗನ ರಂಧ್ರ ವೂ ಅಲುಗಗುಡದಂತೆ ಕೀಲಿಸಿದ ವಜ್ರವೊಳೆಗಳೊ ನಭದ ಲತೆ ಹಬ್ಬಿಯೊಗೆದ ನನೆಯೊ ಕಡು ಹಸಿದವೊಂದು ಶಶಿಯೆಲ್ಲಾ ಚಕೋರಕ್ಕೆ ಕೊಡುವ ಸವಿದುತ್ತುಗಳೊ . . . ಎನೆ ತಾರಾಳಿಯೆಸೆದುವಾ ಜಗದ ಜನ ನಲಿಯುತಿರಲು (ಹದಕಾ. ೩-೦೯) ; ತೊಳಗುವ ನಭದೊಳ್ ಚಿತ್ರಾವಿಳದ್ಯಷ್ಟಿಗವಿದ್ಯವಾನಮೇಚಕರುಚಿಯಿಂ ದೆಳಸಿ ಮಿಗೆ ತೋರ್ಪ ತೆಱದಿಂ ಖಳಂಗೆ ಪೊಲನಲ್ತೆ ಕೃತಿಯೆಳ್ಳಿದೂ ದೋಷಂ (ಪುಷ್ಪಪು. ೧-೪೮) ; ನಭಮಿಂದಿಳಿವ ಗಂಗೆಯ ಧಾರೆ ಮೆಱೆದುದ ಪುರದ ಬಾಹೆಯಲಿ (ಕುವ್ಯಾಅ. ೭-೩೨) ; ಶುದ್ಧಿಸದೆ ನಭ ಧರೆಯ ಮರ ಮರಳಿ ಮಳೆಯಿಂ ? (ಮಂಕುಶ. ೪೭೪). ೨. ಮುಗಿಲು ; [illegible] 'ನಭಪ್ರಸೃತಿ', 'ನಭೋಂಗ' ಪರ್ಯಾ. ೩. ಚಾಂದ್ರಮಾನ [illegible] ಒಂದು ತಿಂಗಳ ಹೆಸರು; ಶ್ರಾವಣಮಾಸ: "ಶ್ರಾವಣಮಾಸಮುಂ ನ[illegible] ಮೆಂಬುದು" (ಹಲಾಯು. ೧೯-೧೧೪); "ಶ್ರಾವಣಃ, ನಭಾಃ, ಶ್ರಾವಣಿಕಃ–[illegible] ಶ್ರಾವಣಮಾಸದ ಹೆಸರುಗಳು" (ಸಿದ್ಧಾಂತಿ. ೩೮). ೪. ಸೊನ್ನೆ ; ಶೂನ್ಯ : "ನಭ ಸೊನ್ನೆ" (ಮಂಗರಾ. ೧೨೪-೮). ೫. [ಛಂದ] ಅಕ್ಷರಗಣಗಳಲ್ಲಿ ಒಂದು; ಆದಿಯಲ್ಲಿ ಎರಡು ಗುರುವಿರುವ ಗಣ; ತಗಣ ; (– – ∪): "ಆದಿಗುರುವೆರಡಿರಲು ನಭಮಕ್ಕು" (ಮಂಗರಾ. ೧೦೭-೨೨) ; ಇಂದು ನಭ ಗಳ್ಸರವುರಪವನೇಂದುದ್ವಯುವಾಗಿರೆ . . . ಧರೆಗಿದು ಪೆಸರಾಯ್ತೆಲ್ಲಿಯು ಮುದ್ಯವಕರಮೆನೆ ತನ್ನಿಂ (ಛಂದೋಂಬು. ೨-೧೯೦). ೬. [ಜ್ಯೋತಿ] "ಲಗ್ನದಿಂದ ಹತ್ತನೆಯ ಸ್ಥಾನ" (ಜಾತಕ. ಪರಿ. ೭). [ ಸಂ. ]

**ನಭಃಪಯೋಜ** (ನಾ). (ಅಲಂ) ಅತ್ಯಂತ ಅಸಂಭವವಾದುದು ; ಗಗನಕುಸುಮ : ಅದಱಿಂದೆ ನಂಬಿ ಜಪಿಸಿದೊಡಿದಱಿಂ ದೊರೆಕೊಳ್ಗು ಮಮಳ ಶಿವಪದಮಿಂತಲ್ಲದೆ ಪೆಱಕು ಮಾರ್ಗದಿಂದಪ್ಪುದು ತಾನೆಂಬುದು ನಭಃಪಯೋಜಪ್ರಾಯಂ (ರಾಜಶೇ. ೪-೯೫). [ ಸಂ. ]

**ನಭಃಪ್ರಸೃತಿ** (ನಾ). ಮೋಡಗಳ ಗುಂಪು.–ಸಮೂಹ : ಏಱ ವಿಮಾನಮಂ ಕೃತಕ ಗಾಯಿಕೆಯರ್ . . . ಯಾನಮೇಂ ಕೀಱದುದೋ ನಭಃಪ್ರಸೃತಿಗಿಟ್ಟೆಡೆಯಿಟ್ಟಡೆಯಾದುದೆಂಬಿನಂ (ಶಾಂತಿಪು. ೨-೮೩). [ ಸಂ. ]

**ನಭಃಫಲ** (ನಾ). (ಅಲಂ) (ಗಗನಕುಸುಮದಂತೆ) ಅತ್ಯಂತ ಅಸಂಭವ ವಾದುದು : ಅದಱ ಕಾಂಕ್ಷಣಮೆಂಬುದು ಗಾವಿಲಂ ನಭಃಫಲದುವ ಭೋಗಮಂ ಬಯಸಿ ಬಾಯ್ದಿಡುವಂದಮನಂಟುಮಾಡುಗುಂ (ಧಾಭಪು. ೫-೬೩). [ ಸಂ. ]

**ನಭಶ್ಚರ** (ನಾ). ಆಕಾಶದಲ್ಲಿ ಸಂಚರಿಸುವವನು ; ಖೇಚರ ; ವಿದ್ಯಾಧರ : ಸದ್ಯಸ್ಸುಭಾಷನನಪ್ಪೆನ್ನೊಳೆ ಮಾಟ್ಪುದಾಕೆಗೆ ವಿವಾಹೋದ್ಯೋಗಮಂ ರಾಗದಿಂ ಎಂದಪನಲ್ತೆ ನಭಶ್ಚರವೃಂದಾರಕಂ (ಚಂದ್ರಪು. ೬-೨೨) ; ಕರಮೆಸೆದತ್ತು ದೇವನಗದಿಂ ಬನದಿಂ ಬಿನದಂಬಡುತ್ತೆ ಸಂಚರಿಪ ನಭಶ್ಚರ ಪ್ರಕರದಿಂ . . . ಖಗದಿಂ ಮೃಗದಿಂ ನಗದಿಂದೆ ಕಂದರಂ (ಶಬಶಂ. ೨-೩೬). 'ಖಚರ' ಪರ್ಯಾ. [ ಸಂ. ]

**ನಭಶ್ಚರಪತಿ** (ನಾ). ಆಕಾಶದಲ್ಲಿ ವಿಮಾನದಲ್ಲಿ ಸಂಚರಿಸುವ ವಿದ್ಯಾಧರರೇ ಮುಂತಾದವರ ರಾಜ ; ಖೇಚರರಾಜ : ಅನುಕೂಲ ಮಿತ್ರನನುರಕ್ತ ನಾಯಿಕಾನೀಕನನುಗತ ಪ್ರಕೃತಿ ಚಿರಂತನರೆನಿಪ ಚಕ್ರವರ್ತಿ ಗಳ ನೆಗಟ್ದ ನೆಗಟ್ತೆ ತನ್ನಭಶ್ಚರಪತಿಯಾ (ಶಾಂತಿಪು. ೨-೫೦).
[ ನಭಶ್ಚರ + ಪತಿ ]

**ನಭಶ್ಚರಾನ್ವಯ** (ನಾ). ಖೇಚರರ ವಂಶ : ನಿಜದಿಂ ಗೂಢಂಗಳ್ ಗುಲ್ಫಜಾನುಗಳ್ ಮಂತ್ರದಂತೆ ರಕ್ತತರಂಗಳ್ ನಿಜಕರಪಾದತಲಂ ಪ್ರವೃದ ಯಂತೆ ನಭಶ್ಚರಾನ್ವಯಾಂಬರರವಿಯಾ (ಶಾಂತಿಪು. ೩-೪೫).
[ ನಭಶ್ಚರ + ಅನ್ವಯ ]

**ನಭಶ್ಚರೇಂದ್ರ** (ನಾ). = ನಭಶ್ಚರಪತಿ : ನೆಗಟ್ತೆಯೊಳ್ ತೊಡರ್ದಿರೆ ವೃದ್ಧರಾಜ್ಯಮುಮದೇನೆಸೆದತ್ತೋ ನಭಶ್ಚರೇಂದ್ರನಾ (ಆದಿಪು. [illegible]) ವೈರಿಜಯಶ್ರೀ ಸೆಱೆಯಿರೆ ಭೂರಿಭುಜಾಂತರದೊಳ[illegible] ಮುಕ್ತಾಹಾರಮನೆ ಪೋಲ್ತು ನವಕೇಯೂರಂ ಸೊಗಯಿಸಿತು ನಭಶ್ಚರೇಂ[illegible] ತೋಳೊಳ್ (ಶಾಂತಿಪು. ೩-೩೫). [ ನಭಶ್ಚರ + ಇಂದ್ರ ]

**ನಭಶ್ಚಲಿ** (ನಾ).=ನಭಶ್ಚರ : ತಾಣಮಂ ತಿಳಿವುದೆ ತಡಂ ವಂಪಾವೀರರಿಂ, ಪರ್ವತೋಪಮಧೀರರಿಂ ನಭಶ್ಚಲಿಗಳಿಂ . . . ಲಂಕೆಯನಿದಂ ದಹಿಸದೇ ನಿರ್ವುದೆ ಧರಾತ್ಮದಾವಲ್ಲಭನ ರೌದ್ರರೋಷಂ ? (ಶ್ರೀರಾಮಾ. ೩೦೩-೩೬೨): [ ಸಂ. ನಭಶ್ಚಲಿನ್ ]

**ನಭಶ್ಚುಂಬಿ** (ನಾ). ಗಗನವನ್ನು ಮುಟ್ಟುವಂಥದು ; ಅತ್ಯಂತ ಎತ್ತರವಾದುದು ; ಗಗನಚುಂಬಿ : ಜನಮನೋಮಂದಿರದ ಸುಸ್ವಪ್ನ ಗೋಪುರದ ಕಲಶಂ ನಭಶ್ಚುಂಬಿಯಾಗದಿರೆ . . . . ಏನಿರ್ದುಮೇನ್ ಅನಾಗರಿಕತಾ ಶ್ರೀ ದಿಟಂ ಮಸಣಮಾ ಪತ್ತನಮಯೋಧ್ಯೆ ತಾನಾದೊಡಂ! (ಶ್ರೀರಾಮಾ. ೦೭೩-೬೨೭). [ ಸಂ. ನಭಶ್ಚುಂಬಿನ್ ]

**ನಭಸ** (ಗು). ೧. ಮಂಜುಮುಸುಕಿದ; ಮಸುಕಾದ. (ನಾ).೨. ಆಕಾಶ; ಆಗಸ ; ಬಾಂದಳ. ೩. ಮಳೆಗಾಲ. ೪. ಸಾಗರ : ಸಮುದ್ರ ; ಕಡಲು. [ ಸಂ. ]

**ನಭಸಂಗಮ** (ನಾ). ಆಕಾಶದಲ್ಲಿ ಸಂಚರಿಸುವುದು ; ಖಗ ; ಪಕ್ಷಿ : "ಖಗಃ, ವಿಹಂಗಃ, ವಿಹಗಃ, ವಿಹಂಗಮಃ . . . ನಭಸಂಗಮಃ–೧೭ ಸಾಮಾನ್ಯವಾಗಿ ನಾನಾ ಬಗೆ ಪಕ್ಷಿಗಳೆಲ್ಲಕ್ಕೂ ಹೆಸರುಗಳು" (ಸಿದ್ಧಾಂತಿ. ೧೪೨). [ ಸಂ. ]

**ನಭಸ್ಥಲ, ನಭಸ್ಥಳ** (ನಾ). ೧. ಬಾಂದಳ ; ಆಕಾಶಭಾಗ ; ಗಗನತಳ : ವಿಸ್ತೀರ್ಣಮೆನಿಪ ನೀಲಪ್ರಸ್ತರದೊಳ್ ಮುನಿಪನಿರ್ದನವಗತ ಜೀಮೂತ ಸ್ತೋಮಮಾಗಿ ವಿಮಳನಭಸ್ಥಲ [ಪಾಠಾಂ. ಳ]ದೊಳ್ ತೊಳಪ ಚಂದ್ರ ನಂದದಿನಾಗಳ್ (ಚಂದ್ರಪು. ೩-೨) ; ಬಲದೇವಂ ಬರೆ ಕಂಡು ತದ್ವೃಷಭ ಸೇನೋರ್ವೀಶನಿತ್ತಿತ್ತಲಿತ್ತಲೆನುತ್ತುಂ ಪರಿತಂದು ತಾಗಿ ಕಚಿದಂ ಕೂರಂಬಿನಾಸಾರಮಂ . . . ನಭಸ್ಥಲಮತ್ತಲ್ ದೆಸೆಯೆತ್ತಲೆಂದೆನಿಸೆ ಬಾಣವ್ರಾತಜಾತಂ ತಮಮಂ (ಮಹಾನೇ. ೧೩-೩೬). ೨. ಶಿವನ ಒಂದು ಹೆಸರು. ನಭಸ್ಥಳ : ೧. ತಳರೆ ಮಹೀರಜದಿಂ ಘನವಿಳಾಸ ಗಜಘಟೆ ಯಿನವನಿಯುಂ ನಭಕೆ ನಭಸ್ಥಳಮಂ ನೆಲಕ್ಕೆ ತಂದಂತಳುಂಬಮಾದುದು ತದೀಯ ಚತುರಂಗಬಳಂ (ಶಾಂತಿಪು. ೧೦-೧೪೭) : ಶರನಿಕರಂ ಕರಂ ಬಿಡದೆ ಪಾಚಿ ನಭಸ್ಥಳದೊಳ್ ನಿರಂತರಂ ಬಚಿನೆಬಲಾಯ್ತು ಮುನ್ನಮದಚಿಂದೆ . . . ರಣಾಗ್ರಭೂತಳಂ (ಬಂಜಿರಿ. ೦೧-೧೦೯) ; ಮುಸುಕಿ ನಭಸ್ಥಳಂ ನೆಚಿಯೆ ತೀವೆ ದಿಶಾತತಿಯರ್ಕಮಂಡಲಂ ಮಸುಳೆ . . . ತೀವಿದುದಾ ಬಲಪಾದಘಾತದಿಂ ಪಸರಿಪ ಧೂಳಿ (ಮಹಾನೇ. ೧೧-೭೩). [ ಸಂ. ]

**ನಭಸ್ಥಳ** 'ನಭಸ್ಥಲ' ನೋ.

**ನಭಸ್ಫಟಿಕ** (ನಾ). ಪಾರದರ್ಶಕವಾದ ಸ್ಫಟಿಕ ; ಗಗನಸ್ಫಟಿಕ : ಅದಚಿಂ ದೊಳಗೆ ನಭಸ್ಫಟಿಕದ ವೇದಿವಿರಾಜಮಾನ ಮರಕತ ಮಾಣಿಕ್ಯದ ಗೋಪುರಂಗಳವಚಿಗ್ರದೊಳಂ ಪೂರ್ವೋಕ್ತ ರಚನೆಗಳ್ ಪುದಿದಿರ್ಕುಂ (ಮಹಾನೇ. ೦೩-೬೭): ಮಕರತೋರಣಾದ್ಯಲಂಕಾರಗಳಿಂದಲೂ ದ್ವಾರಸ್ಥಿತ ಶಂಖಾದಿ ನವನಿಧಿಗಳಂ ರಕ್ಷಿಸುತ್ತಿರುವ ದೇವರ್ಕಳಿಂದಲೂ ಪೊಳೆಯುತ್ತಿರುವ ನಭಸ್ಫಟಿಕಮಯ ಪ್ರಾಕಾರವಂ ನಿರ್ಮಿಸೆಂದಾಜ್ಞಾಪಿಸಿದನು (ಪುರುಚ ೧೨೪). [ ಸಂ. ]

**ನಭಸ್ಯ** (ನಾ). ಚಾಂದ್ರಮಾನ ವರ್ಷದ ಆರನೆಯ ತಿಂಗಳಿನ ಹೆಸರು ; ಭಾದ್ರಪದಮಾಸ : "ಭಾದ್ರಪದಮಾಸಮಂ ನಭಸ್ಯವೆಂಬುದು" (ಪಲಾಯು. ೦೯-೧೧೪): "ನಭಸ್ಯಃ, ಪ್ರೌಷ್ಠಪದಃ, ಭಾದ್ರಃ, ಭಾದ್ರಪದಃ–೪ ಭಾದ್ರಪದಮಾಸದ ಹೆಸರುಗಳು" (ಸಿದ್ಧಾಂತಿ. ೩೮). [ ಸಂ. ]

**ನಭಸ್ಸು** (ನಾ). ಆಕಾಶ; ಆಗಸ ; ಬಾಂದಳ : "ತಾರಕಿತಂ–ನಭಸ್ಸು" (ಕಾಶಕ್ಯ. ೭೮); ಪಯಸ್ಸು, ನಭಸ್ಸು, ರಜಸ್ಸು (ಶಬ್ದಾನು. ೩೯ ಪ್ರಯೋ). [ ಸಂ. ನಭಸ್ ]

**ನಭಿ** (ನಾ). ಚಕ್ರ ; "ಗಾಲಿ" (ಗಂಗಾಮ. ೧೭೮). [ ಸಂ. ]

**ನಭೋಂಗ** (ನಾ). ಮೋಡದಂತೆ ಶರೀರವುಳ್ಳವನು ; ನೀಲವರ್ಣ ; ವಿಷ್ಣು : ಜಯತು ಜನಾರ್ದನ ಜಯ ಮುರಮರ್ದನ ಜಯಶ್ರೀ ವರಾಂಗ ನಭೋಂಗ (ಶಶಸಾಂ. ೬೪-೨೨). [ ಸಂ. ]

**ನಭೋಂಗಣ** (ನಾ).=ನಭಸ್ಥಲ ೧ : ದೂಣಗಳನುರ್ಚುವ ಶಿರುವಾಯ್ತೊಣರ್ಚಿ ತೆಗೆನೆಚಿವ ಬೇಗಮಂ ಕಾಣದೆ ಕೂರ್ಗಣೆಗಳ ಪಂದರನೆ ನಭೋಂಗಣದೊಳ್ ಕಂಡತ್ತು ದೇವಗಣವಿನಸುತನಾ (ಶಂಪಭಾ. ೧೨-೧೮೪) : ಇಂದ್ರದಿಗ್ದೇವಿ ನವಶರ್ಕಮಂಡಲಮನಾಂತಿರೆ ತತ್ಪ್ರಭೆಯಂ ನಭೋಂಗಣ ಶ್ರೀವಧುವೊಂದೆ ಕಾಲದೊಳೆ ತಾಳ್ದಿ ವಿರಾಜಿಸುವೊಂದು ಮಾಟ್ಕೆಯಿಂ (ಜಗವಿ. ೨-೮೭). [ ಸಂ. ]

**ನಭೋಗ** (ನಾ). ಆಕಾಶದಲ್ಲಿ ಸಂಚರಿಸುವವನು ; ದೇವತೆ ; ಸುರ ; ಅಮರ : ಮಂಜುಮಹಿಮಾಸ್ಪದಂ ಚಾರುವೃತ್ತಂ ಕಲಾಪುಂಜಂ ಸದಾ ನಭೋಗಂ (ಜ್ಯವಿಭಾ. ೨೮-೬೨) : ಸದಾನ ಭೋಗಂ . . . ಸದಾ ನಭೋಗಂ (ಚಂದ್ರಸ. ೪೪). 'ನಭೋಗಪುರ' ಪರಾ. [ ಸಂ. ]

**ನಭೋಗತಿ** (ನಾ). ೧. ಗಗನದಲ್ಲಿ ಸಂಚರಿಸುವಿಕೆ ; ಆಕಾಶಗಮನ : ನಭೋಗತಿಯಂ ಸಾಧಿಸಲಕ್ಕು ಬೆಟ್ಟಗಳ ಚೂರ್ಣಂ ಮಾಡಲಕ್ಕೀಕ್ಷಿಸಲ್ ಸತಿಯಾ ಚಿತ್ತವಭೇದ್ಯವೈ (ಸೋಮೇಶ. ೮೦). ೨. ಆಕಾಶದಲ್ಲಿ ಸಂಚರಿಸುವವನು; ಆಕಾಶಗಾಮಿ ; ಖೇಚರ : ಬೇಗಮುಸಿರ್ ಮುಟ್ಟಿಗವರೆ ಮೇಗುಸಿಗೊಂಡೊಮ್ಮೆಗೊಮ್ಮೆಗಗಿವೊ[ ಮು ]ಟ್ಟದೆ ಬಂದಾಗಳೆಚಿಗಿರ್ದನಂದು ನಭೋಗತಿಯೊರ್ದಂ ನೃಪೇಂದ್ರಪದಸರಸಿಜದೊಳ್ (ಶಾಂತಿಪು. ೯-೮೩). ೩. ಹಕ್ಕಿ ; ಪಕ್ಷಿ. [ ಸಂ. ]

**ನಭೋಗಪುರ** (ನಾ). ಆಕಾಶದಲ್ಲಿ ಸಂಚರಿಸುವ ಪಟ್ಟಣ ; ತ್ರಿಪುರ : ಹರಿಯಿಂದಂ ಹರನಿಂದೆ ಶಕ್ರಧರನಿಂ ನೀರಿಂದೆ ಪಾಳಾದ ದುಷ್ಕರ ಲಂಕಾಪುರಮಂ ನಭೋಗಪುರಮಂ . . . ಸುಸ್ಥಿರ ಹಮ್ಮೀರಪುರಕ್ಕೆ ತೋಡಿಸಲೊಡಂ ಮೂಢೋಕ್ತಿ ಮಾಲೋಕದೊಳ್ (ಹಮ್ಮೀರ. ೦-೬೪). [ ನಭೋಗ + ಪುರ೩ ]

**ನಭೋಗಮನ** (ನಾ). ೧.=ನಭೋಗತಿ ೧ : ನಾರದಂ ನಭೋಗಮನ [ಪಾಠಾಂ. ಮಾರ್ಗ]ದಿಂದಿಚಿದು ಬಂದು ಜನಾರ್ದನನ ವದನಾರವಿಂದಮಂ ನೋಟ್ಪುದುಂ (ಮಹಾನೇ. ೭-೧೪೧೨). ೨. = ನಭೋಮಾರ್ಗ : ಆಗಳಾ ದೇಶಪುರುಷಂ ಬಂದನೆಂದು ಅಪ್ಪಶೋಭೆಗೆಯ್ದುದಿಗೂಳೆ ಮತ್ತಮಂತೆ ನಭೋಗಮನದೊಳು ಬರೆ (ಚಾವುಂಪು. ೭೭). [ ಸಂ. ]

**ನಭೋಜನ** (ನಾ). ಆಕಾಶದಲ್ಲಿರುವವರು ; ದೇವತೆಗಳು : ಎಲ್ಲರುಂ ಭೋಗಿಗಳ್ಪಾತಾಳಗಹರೆನಿಸರೆಲ್ಲರುಂ ವಿದ್ಯಾಧರರ್ನಭೋಜನರೆನಿಸರ್ (ಜ್ಯವಿಭಾ. ೨-೧೦). [ ಸಂ. ]

**ನಭೋದೇಶ** (ನಾ).=ನಭಸ್ಥಲ ೧: ತುಂಬಿದತ್ತಶರೀರ ಗಂಧರ್ವಗಾಯನಂ ನೀರವನಿಶಾನಭೋದೇಶಮಂ (ಶ್ರೀರಾಮಾ. ೦೬-೪೨೩). [ ಸಂ. ]

**ನಭೋನಗರ** (ನಾ).=ನಭೋಗಪುರ. 'ನಭೋನಗರ ಹರಣ' ಹರಾ. [ ಸಂ. ]

**ನಭೋನಗರಹರಣ** (ನಾ). (ಆಕಾಶದಲ್ಲಿದ್ದ) ತ್ರಿಪುರಗಳನ್ನು ನಾಶಗೊಳಿಸಿದವನು ; ತ್ರಿಪುರಾರಿ ; ಶಿವ : ಜಯಜಯ ನಭೋನಗರಹರಣ ಪಟುನಿಟಿಲಾಕ್ಷ ಜಯಜಯ ಜಲಂಧರಮದಾಂಧಗಜಹರ್ಯಕ್ಷ (ರಾಜಶೇ. ೧೪-೧೭೯ ರಗಳೆ). [ ನಭೋನಗರ + ಹರಣ೨ ]

**ನಭೋನಿನದ** (ನಾ). ಆಕಾಶದಿಂದ ಹೊಮ್ಮುವ ಮಾತು ; ಆಕಾಶವಾಣಿ ; ಅಶರೀರವಾಣಿ : ಇಲ್ಲಿ ನಿಲ್ಲರ್ಜುನ ತಪೋವನಕಿಲ್ಲಿ ನೆಲೆ ಶ್ರುತಿಯುವತಿ ಸೂಸುವ ಚೆಲ್ಲಗಂಗಳವೊಸೆಗೆ ಮಾಸಲುಗುಡದ ಮೈಸಿರಿಯ . . . ಶಿವನ ಕ್ಷೇತ್ರವಿದೆಯೆಂದುದು ನಭೋನಿನದ (ಕುಮ್ಯಾಭ. ೪-೪೦). [ ಸಂ. ]

**ನಭೋನೌಕೆ** (ನಾ). ಅಂತರಿಕ್ಷ ವಿಮಾನ; ಪುಷ್ಪಕ ವಿಮಾನ: ಮತ್ತೆ ಮತ್ತಮೊಳಿಸಿದನು ಆ ನಭೋನೌಕೆ ಪಕ್ಷಸಂಜನಿತರುಂಝಾವಾತಗರ್ತಕ್ಕೆ ಸಿಲ್ಕಿ ತಿರ್ರನೆ ಪುರ್ಚುಗಿರಿಗಂ ತಿರುಗುವಂತೆ (ಶ್ರೀರಾಮಾ. ೧೩೯-೫೬೫). [ ಸಂ. ನಭೋನೌಕಾ]

**ನಭೋಭಾಗ** (ನಾ).=ನಭಸ್ಥಲ : ೧ ಅಂತು ನಭೋಭಾಗದಿಂ ಭೂಮಿ ಭಾಗಕ್ಕಿಳಿದು ತನ್ನ ಮುಂದೆ ನಿಂದರವಿಂದಬಾಂಧವನಂ ನೋಡಿ (ಶಂಪಥಾ. ೧-೯೧ ವ) : ಇಂದ್ರಂ ಬರ್ಪಂತೆ ಬಂದು ಕಂಡೊಡವರೆ ನಭೋಭಾಗದೊಳ್ ಪಯಣಂಬಂದು ಚಂಪಾಪುರಮನೆಯ್ದಿ ಪುರಬಹಿರಂಗೆಯೊಳ್ ಬೀಡಂ ಬಿಟ್ಟರ್ದು (ಬಂಹರಿ. ೪-೪೧ ವ). [ ಸಂ. ]

**ನಭೋಮಂಡಲ** (ನಾ).=ನಭಸ್ಥಲ ೧ : ಆ ನಾರದಂ ನಭೋಮಂಡಲದಿಂ ಸಭಾಮಂಡಲಕ್ಕವತರಿಸೆ (ಶಂರಾಮಾ. ೩-೧೯ ವ); ಕೊಂಡುಬಂದೆಳನೀರ್ಗಳಂ ಸುರಿಯುಲುಬಿ ನಭೋಮಂಡಲವನಪ್ಪಳಿಸಿ (ಜೈಮಿಥಾ. ೧೧-೩೮) ; ಇನ್ನು ಬರಲಿರುವ ಆರನೆಯ ಕಾಲವಂತೂ ಹಿಂಸೆಯ ಪತಾಕೆಯನ್ನು ನಭೋ ಮಂಡಲಕ್ಕೆ ಹಾರಿಸುವುದೆಂದು ಸರ್ವಜ್ಞರ ವಾಣಿ (ಭಾರದ. ೧೬೫). [ಸಂ.]

**ನಭೋಮಣಿ** (ನಾ). ಸೂರ್ಯ; ಗಗನಮಣಿ; ಭಾನು: ಆ ಮಣಿ ಮುಳಿದುದು ತರುಣನಭೋಮಣಿ ನಿಜಸುವೃತಾಪವಿಜಿತಂ ಪರಿತಂದಾ ಮಹಿತರಾಜಶೇಖರ ಭೂಮಿಸ್ವರನಂಘ್ರಿಕಮಳಮಂ ಸೇವಿಪವೋಲ್ (ರಾಜಶೇ. ೫-೨೬). [ ಸಂ. ]

**ನಭೋಮಾರ್ಗ** (ನಾ). ಮೇಘಮಾರ್ಗ; ಆಕಾಶ: ಭೋಗಭೂಮಿಜರ ಕಣ್ಗಾಗಳ್ ನಭೋಮಾರ್ಗಪರ್ಯಟನಂ ಶಿಕ್ಷಿಸಿ. ಪೋದರಾತ್ಮಸಿಯಮಕ್ಕ ತ್ಯಾರ್ಯರಿತ್ತನ್ನಗಂ (ಶಾಂತಿಪು. ೬-೯) ; ಕಾನ್ಯೈರಾವತಸ್ಕಂಧದೇಶನಿಷಣ್ಣಂ ಸುರರಾಜನಾತ್ಮಶಚಿದೇವೀಸಂಯುತಂ... ಮೃದುಮೃದಂಗಧ್ವಾನಮುಂ ಗಾಯಕೀಜನತಾಮಂಗಲಗೇಯಮುಮಂ ಸೊಗಯಿಸಲ್ ಬಂದಂ ನಭೋ ಮಾರ್ಗದೊಳ್ (ಮುಹಾನೇ. ೮-೮೮). [ ಸಂ. ]

**ನಭೋಮಾಸ** (ನಾ). ಚಾಂದ್ರಮಾನದ ಪ್ರಕಾರ ಬರುವ ಶ್ರಾವಣ ಮಾಸ: "ಮಧು ಮಾಧವಂ ಶುಕ್ರಮಾ ಶುಚಿ ನಭೋಮಾಸಮುದು ನಭಸ್ಯಮಿಷಂವೂರ್ಜಂ ಸಹಂದದಮುಂದದು ಸ ಹ ಸ್ಯಂ ತಪಮುದಾ ತಪಸ್ಯಾಖ್ಯಮೆನೆ ಚೈತ್ರಾದಿ ನಾಮಮಕ್ಕುಂ" (ಮಂಗರಾ. ೨೧-೧೧). [ ಸಂ. ]

**ನಭೋಯಾನ** (ನಾ). ಆಕಾಶಗಮನ; ಬಾನಿನಲ್ಲಿ ಹೋಗುವುದು : ಮತ್ತಂ ನಭೋಯಾನದೊಳ್ ಕಿಱಿದು ಪೊಲ್ಮಾಗೆಯುಂ . . . ಧರ್ಮೋಪದೇಶಂಗೆಯುತ್ತುಮುತ್ತಮತೀರ್ಥೇಶ್ವರಂ ವಿಹಾರಿಸೆ (ಶಾಂತಿಪು. ೦೩-೨೩ ವ) ; ನಭೋಯಾನದೆ ಕಾಲಶಂಬರ ಖಗೇಂದ್ರಂ ಬಂದು (ಮುಹಾನೇ. ೮-೦೬). [ ಸಂ. ]

**ನಭೋವಚನ** (ನಾ). = ನಭೋನಿನದ : ಮ ರು ಳೆ ನೀ ಕೌಂತೇಯ ಮಾದ್ರೇಯರನು ನೋಡುವುದಿತ್ತ ನನಗುತ್ತರವನಿತ್ತುದಕವನು ಕುಡಿ ಯೆಂದುದು ನಭೋವಚನ (ಕುಮ್ಮಾಭ. ೨೩-೨೪) : ನೊಂದ ನೋವೆಲ್ಲದಗಿ ರಣದಲಿ ಹೊಂದಿದವರೇಳುವರು ಮಾ ರು ತಿ ಯಿಂ ದ ಚಿಂತಿಸಬೇಡ ಕೇಳೆಂದುದು ನಭೋವಚನ (ಕಾಶಿರಾ. ೨೯-೨೨). [ ಸಂ. ]

**ನಭೋವಳಯ** (ನಾ). = ನಭಸ್ಥಲ ೧ : ಬಂದು ಭವತ್ಪುರಾಗ್ರಮ ನಭೋವಳಯಾಂತರದಲ್ಲಿ ನಿಂದು ಪೋಗೆಂದೊಡೆ ಬಂದೆನಾಂ (ಚಂದ್ರಪು. ೬-೨೦). [ ಸಂ. ನಭೋವಲಯ ]

**ನಭೋವಾಣಿ** (ನಾ). ಅಶರೀರವಾಣಿ. [ ಸಂ. ]

**ನಭೋವೀಥಿ** (ನಾ).=ನಭೋಮಾರ್ಗ : ನಭೋವೀಥಿ[ಪಾಠಾಂ. ಧಿ] ಯೊಳುಮಾಕಾಂತೆಯುಂ ಮಹೇಶ್ವರನು ಮಾನಿತೋನ್ನತದಿವ್ಯರತ್ನವಿಮಾನ ರೂಢಿತಯಾನರಾಗಿ ಸುಮಾನದಿಂ ಗಮನಿಸುತ (ಬಸ. ೫೦-೨). [ ಸಂ. ]

**ನಮ** (ನಾ). ವಂದನೆ; ನಮಸ್ಕಾರ : "ನಮಂ [ಪಾಠಾಂ. ತಂ] ವಂದನಂ ಪೊಂಗಿ ಪೊಡಮಡುಹ" (ಮಂಗರಾ. ೧೩೬-೩೯) ; ನಮ ಸ್ವಸ್ತಿ (ಎಕ. II, ೨೩-೧ : 700) : ಎಲ್ಲರಿಗವಿವಾಗ ನಮೊ—ಬಂಧುಗಳೆ, ಭಾಗಿಗಳೆ . . ಕೊಳ್ಳಿರೀ ನಮವನೆನು (ಮಂಕುಕ. ೯೨೨). [ ಸಂ. ನಮಸ್ ]

**ನಮಃಶಿವಾಯ** (ನಾ). ೧. ಶಿವನಿಗೆ ನಮಸ್ಕಾರ: P ವೀರಶೈವರು ಭಜನೆಯಂತೆ ಈ ಶಬ್ದಗಳನ್ನು ಉಚ್ಚರಿಸುತ್ತಾರೆ. 'ನಮಃಶಿವಾಯ' ಪಂಚಾಕ್ಷರಿಮಂತ್ರವೆರಡು. 'ಓಂ ನಮಃಶಿವಾಯ' ಎಂಬುದು ಷಡ ಕ್ಷರಿಮಂತ್ರವೆಂದು ತಿಳಿಯಲಾಗಿದೆ : ನಮಃಶಿವಾಯ ನಮಃ ಶಿವಾಯ ಶರಣೆಂದಿತ್ತು ಲಲಾಟಲಿಖಿತ ಬರೆದ ಬಳಿಕ ಪಲ್ಲಟವ ಮಾಡಬಾರದು (ಬಸವ. ೮೬). ಶಿಥಿಲಾಕ್ಷರಂಗಳಿಂ ನಮಃಶಿವಾಯ ನಮಃಶಿವಾಯಯೆನುತ್ತೆ (ನಂಬಿರ. ೬-೨೭); ಎನ್ನ ರೇಚಕವೇ ನಮಃಶಿವಾಯ ನಮಃಶಿವಾಯ ನಮಃ ಶಿವಾಯ ಎನ್ನುತಿಪ್ಪುದು ನೋಡಾ (ಸಿದ್ಧೇವ. ೬೨-೨೦೮) : ನಮಃ ಶಿವಾಯಪಾದ್ರಿಸುತಾಪ್ರಿಯಾಯ ತೇ (ವೃಷವಿ. ೬-೧೦). ೨. ಶಿವನಿಗೆ ಅರ್ಪಿತವಾದುದು; ಶಿವಾರ್ಪಣ : ಲೋಗರೇನನೆಂದೊಡಂ ನಮಃ ಶಿವಾಯವಾಗೆ ತನಗೆ ತಾಗಿದಚ್ಚಪರಿಮಳಂ ನಮಃಶಿವಾಯವಾಗೆ (ನಮಂರ. ದೇ. ೧೯೮-೧೩). [P ಸಂಸ್ಕೃತದಲ್ಲಿ ಇವು ಭಿನ್ನಪದಗಳು]

**ನಮಃಶಿವಾಯವಿಡಿ** (ಕ್ರಿ). ನಮಃಶಿವಾಯ ಎಂಬ ಮಂತ್ರವನ್ನು ಬಿಡದೆ ಜಪಿಸು : ಇಂತು ಪಂಚವರ್ಣದಿಂ ಶರೀರವಾಗಿ ಬೀಗಿ ಬೆಳೆದು ಸಂತತಂ ನಮಃಶಿವಾಯವಿಡಿದು ತೀವಿ ತುಳುಕಿ ತಳೆದು (ಪಮಂರ. ದೇ. ೧೯೮-೧೦). [ ನಮಃಶಿವಾಯ + ಪಿಡಿ$_1$ ]

**ನಮಕ್‌ಹರಾಮ್** 'ನಮ್ಮಕ್‌ಹರಾಮ' ನೋ.

**ನಮಕ** (ನಾ). ರುದ್ರವೆಂಬ ಮಂತ್ರ ; P ಯಜುರ್ವೇದದ ಒಂದು ಭಾಗ. ನಮ ಎಂದು ಮುಗಿಯುವ ರುದ್ರಮಂತ್ರ : ಚಮಕದಿಂ ದಖಿಲಾಧಿಪತ್ಯವ ನಮಕದಿಂದಖಿಲಾತ್ಮಭಾವವನಮರ ಮನುಜ ಭುಜಂಗ ಮುಖದೊಳ್ಬಿತ್ತರಿಸುತಿರಲು (ವಿವೇಛ. ೦೩-೯೯) ; ಪರಮಭಕ್ತಿಲಿ ಹಿಡಿದು ಗದ್ದುಗೆ ಮೇಲೆ ಕುಳ್ಳಿರಿಸಿ ನಮಕಚಮಕಗಳಿಂದ . . . ಸ್ನಾನಿಗಭಿಷೇಕವನು ಮಾಡಿಸಿ (ಕೊಲ್ಲಮಾ. ೬೦-೪). [ ಸಂ. ]

**ನಮಕಾನುವಾಕ** (ನಾ). ನಮಃ ಶಬ್ದದ ಆವೃತ್ತಿಯಿಂದ ಕೂಡಿದ ಯಜುರ್ವೇದದ ಒಂದು ಭಾಗ; ರುದ್ರಾಧ್ಯಾಯ : ವೇದಾಂತ ವಾಕ್ಯಗಳ ನಮಕಾನುವಾಕಗಳ . . . ನೀನುತ್ಕ್ರಮಿಸೆ ಸಾಧನವೊ ಮುಕ್ತಿಗದು (ಮಂಕುಕ. ೯೩೦). [ ನಮಕ + ಅನುವಾಕ ]

**ನಮತ** (ನಾ). ಒಡೆಯ; ಯಜಮಾನ : ನಮತಂ ಚಾತುರ್ವಲಮಂ ಸಮರಕ್ಕನುವಾಗಲೊಡ್ಡಿ ಸೇನೆ ಮುರಿವು ದೇವ ಮಹಾಪ್ರಸಾದ ಮೆನುತುಂ . . . ಆಕರ್ಷಿಸಿದಂ (ಮುಹಾನೇ. ೦೨-೦೬). [ ಸಂ. ]

**ನಮನ** (ನಾ). ೧. ಬಾಗಿಸುವಿಕೆ; ಮಣಿಸುವಿಕೆ. ೨. ಬಾಗು ವುದು; ಮಣಿಯುವುದು; ನಮಸ್ಕರಿಸುವುದು; ನಮಸ್ಕಾರ; ವಂದನೆ : "ಬಳ್ಕು – ನಮನೇ" (ಶಮದ) ; "ಮೊಟ್ಗು – ನಮನೇ" (ಶಮದ) ; ದಾರಿದ್ರ್ಯಲಕ್ಷ್ಮಿಯೆ ನೀ ಕೊಟ್ಟ ಅಂಜನವದ್ಭುತ ಕೋ ಲಕ್ಷ ನಮನ ನಾ ಕಂಡೆನೆಲ್ಲರನಾರು ಕಾಣರು ನನ್ನ ಪರಿಚಯವಿದ್ದರು ಮುನ್ನ (ಇಂಚಾಪ. ೧೧೩-೫೫) : ಈ ಗುರುವೃಂದಕ್ಕೆ ಅನಂತ ನ ಮ ನ ಗ ಳು (ದ್ರಾವಿವಿ. XII ಮೊದಲ ಮಾತು) : ಆ ಮರದ ಬದಿಗೊಮ್ಮೆ ಸುಳಿದೆ ಯಾದೊಡೆ, ಪಥಿಕ ! ಹೇ ! ದೇವಿ ! ನಿನಗೊಂದು ನಮನವೆನ್ನು ! (ಚಿಂತನ ೦೨-೨೧). ೩. [ಭೌತವಿ] ಬಾಗುವಿಕೆ; ಬಾಗುವ ಕ್ರಿಯೆ; ವಕ್ರ ನಿಯೋಜನ : ಬೆಳಕಿನ ಅಥವಾ ಇತರ ಅಲೆಗಳು ತಡೆಗಳನ್ನು ಸುತ್ತಿ ಕೊಂಡು ಬಾಗು ಪ್ರತಿಯೋಗ ಹೊಂದುವುದರಿಂದ ಉಂಟಾದ ಘಟನೆಗೆ ನಮನ (Diffraction) ವೆಂದು ಹೆಸರು (ಭೌತವಿ. ೨೧೦) [ ಸಂ. ]

**ನಮಲು₁, ನೆವರು₁** (ಕ್ರಿ). ೧. ದವಡೆಹಲ್ಲುಗಳಿಂದ ಆಹಾರವನ್ನು ನುಣ್ಣಗೆ, ಸಣ್ಣಗೆ ಮಾಡಿ ತಿನ್ನು; ಅಗಿದಗಿದು ತಿನ್ನು; ಅಗಿ; ಚರ್ವಣಮಾಡು; ನುರಿಸು: ರಕ್ಕಸಿಯು ಮಾನುಗಳನ್ನು ನಮಲುತ್ತ ಆವಾಗಲಾದರೊಮ್ಮೆ ಸುರೆಯನ್ನು ಸ್ವಲ್ಪ ಸ್ವಲ್ಪ ಕುಡಿಯುತ್ತಿದ್ದಳು (ಶ್ರೀರಾಪ. ೧೧೭). ೨. ಮೆಲುಕುಹಾಕು; ಮೆಲುಕಾಡಿಸು: (ಕ). **ನೆವರು₂**: ೧. ನೆವರಿಕೊಂಡು ಹೋಗುವವ ಬವರಕ್ಕೆ ಬಂದಾನೆ? (ಗಾದೆ). [ದೇ. ॥ ತುಳು. ನವುಂತು, ನವುಂಪು, ನೌಂತು, ನೌಂಪು; ತೆಲು. ನವಲು, ನವುಲು, ನವ್ವು, ನೆಮರು]

**ನಮಲು₂, ನೆಮರು** (ನಾ). ೧. ಅಗಿಯುವಿಕೆ; ತಿನ್ನುವಿಕೆ. 'ನಮಲುಗರೆ' ಪರಾ. ೨. ಮೆಲುಕುಹಾಕುವಿಕೆ; ಮೆಲುಕಾಡಿಸುವಿಕೆ. ನೆಮರು.

ನಮಲು ಹಾಕು, ನೆಮರು ಹಾಕು = ಮೆಲುಕುಹಾಕು: ಮೆಲುಕಾಡಿಸು: (ಕ); ದನಕರುಗಳು ನೆಮರುಹಾಕುವುದು ನಿನ್ನೆ ಮೊನ್ನೆ ಕಲಿತ ಅಭ್ಯಾಸವಲ್ಲ (ಪ್ರಾಚಿಪ್ರ. ೨೫). [<ನಮಲು₁]

**ನಮಲುಗರೆ** (ಕ್ರಿ). ಕಚ್ಚಿ ತಿನ್ನು; ಅಗಿದು ತಿನ್ನು: ಮಾನುಗಳನ್ನು ನಮಲುಗರೆಯುತ್ತ ಅಮ್ಮ, ಅಯೋಧ್ಯೆಗೆ ಹೋಗುವುದು ಯಾವಾಗ? ಎಂದನು (ಶ್ರೀರಾಪ. ೧೧೭). [ನಮಲು₂ + ಕರೆ ?]

**ನಮಶ್ಶಿವಾಯ** (ನಾ). = ನಮಃಶಿವಾಯ: ನಮಶಿವಯ ನಮಶ್ಶಿವಾಯುಂ ನಮಶಿವಯುಂ ನಮಶ್ಶಿವಾಯ ನಮಶಿವಯೆನುತಂ ಮಮತೆಯಿಂ ನೆನೆವುದೆಂದೀಕ್ರಮದಿಂದುಪದೇಶವೇಳ್ದ ಸಾನಂದೇಶಂ (ನನ್ನಪ. ೫-೧೫೫). [ಸಂ.]

**ನಮಸಿತ** (ಗು). ೧. ಪೂಜಿಸಿದ; ಸನ್ಮಾನಿತ; ನಮಸ್ಕರಿಸಿದ. (ನಾ). ೨. ನಮಸ್ಕರಿಸಿದುದು: "ಅರ್ಹಿತಂ, ನಮಸ್ಯಿತಂ, ನಮಸಿತಂ, ಅಪಚಾಯಿತಂ, ಅರ್ಚಿತಂ, ಅಪಚಿತಂ – ೬ ಪೂಜಿಸಲ್ಪಟ್ಟದ್ದು, ನಮಸ್ಕರಿಸಲ್ಪಟ್ಟದ್ದು" (ಸಿದ್ಧಾಂತಿ. ೩೦೩). [ಸಂ.]

**ನಮಸ್ಕರಣ** (ನಾ). ನಮಸ್ಕಾರ; ವಂದನೆ. 'ನಮಸ್ಕರಣಂಗೆಯ್' ಪರಾ. [ಸಂ.]

**ನಮಸ್ಕರಣಂಗೆಯ್** (ಕ್ರಿ). ನಮಸ್ಕಾರ ಮಾಡು; ವಂದಿಸು: ಶರಣರಂ ಕಂಡಾಕ್ಷಣಂ ತನ್ನಮಸ್ಕರಣಂಗೆಯ್ಯದೆ ಪೋದನೋ (ವೃಷವಿ. ೩೦-೨೦). [ನಮಸ್ಕರಣ + ಕೆಯ್₁]

**ನಮಸ್ಕರಿಸು** (ಕ್ರಿ). ನಮಸ್ಕಾರ ಮಾಡು; ವಂದಿಸು: ವಿಮಲಸ್ವರೂಪನೆ ಭುವನಸ್ತುತ್ಯಗೆ ಯಾ ಶಾಸ್ತ್ರಪ್ರಾರಂಭದಲ್ಲಿ ನಮಸ್ಕರಿಸುವಾಶನಪ್ಪಂ (ಶಮದ. ೦ ವೃತ್ತಿ, ೩೫೦೫): ಧಿಕ್ಕನೆ ಭೂಮಿಯೊಳು ಸಾಷ್ಟಾಂಗವೆರಗಿ ನಮಸ್ಕರಿಸುತಿರಲು (ಬಸಪು. ೪೭-೭೭): ತಾಯಿಗೂ ದ್ರೌಪದಿಗೂ ನಮಸ್ಕರಿಸಿ (ಚಂಗಾಳ್ಯ. ೨೦). [ನಮಸ್ಕರಣ + – ಇಸು₃]

**ನಮಸ್ಕಾರ** (ನಾ). ೧. (ದೇವರು, ಗುರು ಹಿರಿಯರು ಮೊದಲಾದವರಿಗೆ ಗೌರವವನ್ನು ಸೂಚಿಸುವುದಕ್ಕಾಗಿ) ಬಾಗುವಿಕೆ; ವಂದನೆ; ಪ್ರಣಾಮ: "ಪಾದಗ್ರಹಣಂ, ಅಭಿವಾದನಂ ಈ ೨ ನಮಸ್ಕಾರ ಮಾಡುವುದಂ" (ನಾಚಿಂ. ೧೩೯); "ತುಳಿಲೆಱಗು ಪೊಡ್ಮು ಮಣಿ ಕುಂಬಿ ಪೊಡಮಡಿಕೆಯುಂ ನಮಸ್ಕಾರಕೆ ತವೆ ಸಂದ ನಾಮ" (ಶಬ್ದಮಂ. ೩೫): ಒಳ್ಳಿತಪ್ಪ ಮುಹೂರ್ತದೊಳ್ ದೀಕ್ಷೆಯಂ ಕೊಟ್ಟು ಪಂಚಮಹಾವ್ರತಂಗಳನೇಱಿಸಿ ಪಡಿಕಮಣಾ ವೇಟ್ಟ ತದನಂತರವಿಂ ಕಲ್ಪಿಸಿಮೆಂದೊಡೆ ನಮಸ್ಕಾರಂಗಳುಮಾಲೋಚನೆಗಳುಂ ನಿಯಮಮುಮುಮನೋದಿದೊಡಲ್ಲದೆ ಪೇಟಲಾಗದೆಂದೊಡೆ (ವಡ್ಡಾರಾ. ೬-೪); ಹಾಗದ ಕೆರಹ ಹೊಜಗೆ ಕಳೆದು ದೇಗುಲಕ್ಕೆ ಹೋಗಿ ದೇವರಿಗೆ ನಮಸ್ಕಾರವ ಮಾಡುವನಂತೆ ತನ್ನ ಕೆರಹಿನ ಧ್ಯಾನವಲ್ಲದೆ ದೇವರ ಧ್ಯಾನವಿಲ್ಲ (ಬಸವ. ೧೯೬); "ನಮಸ್ಕಾರ"! ಎಂದದ್ದು ನಡೆದಿರೆ ವಿಭೀಷಣಂ, ಮೇಲೆಳ್ದನಲೆ (ಶ್ರೀರಾಮಾ. ೫೮೨-೨೦೦); ಗುರುತಿನವರನ್ನು ಕಂಡರೆ . . . ಅವರಿಗೆ ನಮಸ್ಕಾರ ಮಾಡಬೇಕು (ಮುಂಬಯಿ. ೪-೩೪). ೨. ನಮಸ್ಕರಿಸುತ್ತೇನೆ ಎಂದು ಆದರ ಸೂಚಿಸುವುದಕ್ಕಾಗಿ ಹೇಳುವ ಮಾತು: ನಮಸ್ಕಾರ, ಬನ್ನಿ ಕುಳಿತುಕೊಳ್ಳಿ (ರೂಢಿ). ೩. ಗ್ರಂಥಗಳ ಆದಿಯಲ್ಲಿ ಬರುವ ದೇವತಾಪ್ರಾರ್ಥನೆ ಎಂಬ ನಾಂದಿಯಲ್ಲಿ ಒಂದು ವಿಧ,–ಬಗೆ.

ನಮಸ್ಕಾರ ಹಾಕು = ೧. ಪ್ರಣಾಮ ಮಾಡು; ವಂದಿಸು: ದೇವರಿಗೆ ನಮಸ್ಕಾರ ಹಾಕಿ ಬರುತ್ತೇನೆ (ರೂಢಿ). ೨. ವಿದಾಯ ಹೇಳು: ಆತ ಈ ಕೆಲಸಕ್ಕೆ ನಮಸ್ಕಾರ ಹಾಕಿ ಹೊರನಡೆದ (ರೂಢಿ). ನಮಸ್ಕಾರ ಹೊಡೆ = ೧. ನಮಸ್ಕರಿಸು; ವಂದಿಸು: ಅವನು ಅವರನ್ನು ನೋಡಿದಾಗಲೆಲ್ಲಾ ನಮಸ್ಕಾರ ಹೊಡೆದು ತನ್ನ ಬಡ್ತಿಯ ಬಗ್ಗೆ ಕೇಳುತ್ತಾನೆ (ರೂಢಿ). ೨. = ನಮಸ್ಕಾರ ಹಾಕು: ೨: ಕೆಲಸ ಮಾಡಲಾರದೆ ಆ ಕೆಲಸಕ್ಕೆ ನಮಸ್ಕಾರ ಹೊಡೆದ ಆತ (ರೂಢಿ). [ಸಂ.]

**ನಮಸ್ಕಾರಂಗೆಯ್** (ಕ್ರಿ). ನಮಿಸು; ವಂದಿಸು: ಅರಸಂ . . . ದೇವರ್ಗೆ ನಮಸ್ಕಾರಂಗೆಯ್ದು ಋಷಿಯರಂ ಬಂದಿಸಿ ತನ್ನ ಮನೆಗೆವೋದಂ (ವಡ್ಡಾರಾ. ೩೩-೦೨); ನಾರದಂಗೆ ನಮಸ್ಕಾರಂಗೆಯ್ದು ಪೀಠಾಸನದೊಳಿರಿಸುವುದುಂ (ಮಹಾನೇ. ೦೦-೯೦ ವ). [ನಮಸ್ಕಾರ + ಕೆಯ್₁]

**ನಮಸ್ಕಾರಮಂತ್ರ** (ನಾ). [ಜೈನ] ಣಮೋ ಅರುಹಂತಾಣಂ ಇತ್ಯಾದಿ ಮಂತ್ರ: ಜೈನಧರ್ಮದ ಪಂಚಗುರುಗಳಿಗೆ ಸಲ್ಲುವ ನಮಸ್ಕಾರ: ಣಮೋ ಅರಹಂತಾಣಂ, ಣಮೋ ಸಿದ್ಧಾಣಂ, ಣಮೋ ಆಯಾರಿಯಾಣಂ, ಣಮೋ ಉವಜ್ಝಾಯಾಣಂ, ಣಮೋ ಲೋಏ ಸಬ್ಬ ಸಾಹೂಣಂ (ಅರ್ಹಂತರಿಗೆ ನಮಸ್ಕಾರ, ಸಿದ್ಧರಿಗೆ ನಮಸ್ಕಾರ, ಆಚಾರ್ಯರಿಗೆ ನಮಸ್ಕಾರ, ಉಪಾಧ್ಯಾಯರಿಗೆ ನಮಸ್ಕಾರ, ಲೋಕದಲ್ಲಿರುವ ಸರ್ವಸಾಧುಗಳಿಗೂ ನಮಸ್ಕಾರ) – ಇದು ಪಂಚ(ಪರಮೇಷ್ಠಿಗಳ)ನಮಸ್ಕಾರ ಮಂತ್ರ . . . ಈ ನಮಸ್ಕಾರಮಂತ್ರ ಜೈನರ ಗಾಯತ್ರಿ ಎನ್ನಬಹುದು (ಆದಿಸಂ. XI ೩೯೦೫). [ನಮಸ್ಕಾರ + ಮಂತ್ರ]

**ನಮಸ್ಕಾರಮುದ್ರೆ** (ನಾ). ಪೂಜೆ ಮೊದಲಾದ ಸಂದರ್ಭಗಳಲ್ಲಿ ಮಾಡುವ ಒಂದು ಮುದ್ರೆ; ಹಸ್ತದ ಬೆರಳುಗಳನ್ನು ಹೊಂದಿಸುವ ರೀತಿ: ಗಾಯತ್ರೀಮುದ್ರೆ ಕಾಲಕಂಠಮುದ್ರೆ ಶೂಲಮುದ್ರೆ ನಮಸ್ಕಾರ ಮುದ್ರೆ . . . ಸಂಹಾರಮುದ್ರೆಯೆಂಬಾದಿಯಾಗಿ ಸಕಲಮುದ್ರೋಪ ಮುದ್ರಾಪ್ರಬಂಧಲಕ್ಷಣಗಳಂ ಗುರುಮುಖದಿಂದಱಿತು (ವಿವೇಕ. ೧೦೩). [ನಮಸ್ಕಾರ + ಮುದ್ರೆ]

**ನಮಸ್ಕಾರಿ** (ನಾ). ಮುಟ್ಟಿದರೆ ಎಲೆಗಳನ್ನು ಮುದುರಿಕೊಳ್ಳುವ ಒಂದು ಬಗೆಯ ಸಸ್ಯ; ಮುಟ್ಟಿದರೆ ಮುನಿ; ಮುಟ್ಟಲ ಮುರುಕ; "ನಮಸ್ಕಾರೀ, ಗಂಧಕಾರೀ, ಸಮಂಗಾ, ಖದಿರಾ – ೪ ಮುಟ್ಟಿದರೇ ಮುನಿವನ ಪೆಸರುಗಳು. ಮುಟ್ಟುಮುದುಗಿಡ" (ಸಿದ್ಧಾಂತಿ. ೧೪೪). [ಸಂ. ನಮಸ್ಕಾರೀ]

**ನಮಸ್ಕಾರ್ಯ** (ನಾ). ನಮಸ್ಕರಿಸಲು ಯೋಗ್ಯನಾದವನು; ಪೂಜ್ಯ: ಆರ್ಯಾವಾರ್ಯಂ . . . ಸಜ್ಜನಂ ಶಿವಕಾರ್ಯಧುರ್ಯಂ ಭೂಜನ ನಮಸ್ಕಾರ್ಯನೆನಲೆಸೆದ (ಬಸಪು. ೨೨-೨೪). [ಸಂ.]

**ನಮಸ್ಕೃತಿ** (ನಾ). ನಮಸ್ಕಾರ ಮಾಡುವಿಕೆ; ವಂದನೆ: ನಮಸ್ಕೃತಿಗಗ್ರ ಭಾಗದೊಳ್ ಕೂಡುತುಮಿರ್ಪ ಕೆಯ್ಗಳುಮನಿತ್ತ (ಚಂದ್ರಪು. ೧೨-೧೫೩). [ಸಂ.]

**ನಮಸ್ಕ್ರಿಯಾವಿಧಿ** (ನಾ). ನಮಸ್ಕಾರದ ನಿಯಮ,–ಕಟ್ಟಳೆ: ನಂದೀಶ್ವರಾದ್ಯುದಿತದ್ವೀಪ ನಮಸ್ಕ್ರಿಯಾವಿಧಿಗಳಂ ನೀಂ ಮಾಡು ದೇವಾಧಿಪಾ (ಶಾಂತಿಪು. ೬-೨೫). [ಸಂ.]

**ನಮಸ್ತೇ** (ನಾ). ೧. ನಿನಗೆ ನಮಸ್ಕಾರ : ಶ್ರೀಮದಜಿತಭಟ್ಟಾರಕಜಿನ ನಮಸ್ತೇ ನಮಸ್ತೇ (ಅಜಿಪು. ೪-೭೯ ಗದ್ಯ); ಭವಿತನವ ಕಳೆದು ಭಸ್ಮನ ಮಾಡಿ . . . ತ್ರಿವಿಧ ಸುಖಸಮರತಿಯುನವಿರತಂ ದಯೆಗೆಯ್ದು ಧವಗೇಡಿ ಯೆನಿಸದವರ ಅವಿರಳನೇ ಗುರು ನಮಸ್ತೇ (ಭ್ರಂರಾ. ೦೮೮-೧) ;ಅನಿಟ್ಟನ್ನ ಬಿಕ್ಕಿ ಮುಗಿದೆಂದ ಗುಲಾಬಿಗೆ: "ನಮಸ್‌ತೇ!" (ಅನಿಳೇ. ೩೨-೦೭). ೨. = ನಮಸ್ಕಾರ ೨ : ಹೋಗಿ ಬರುತ್ತೇನೆ ನಮಸ್ತೇ (ರೂಢಿ).

[ P ಇದು ಸಂಸ್ಕೃತದಲ್ಲಿ ನಮಃ ಮತ್ತು ತೇ ಇವು ಸೇರಿ ಆದ ಒಂದು ವಾಕ್ಯ ]

**ನಮಸ್ಯ** (ಗು). ೧. ಪೂಜಿಸಬೇಕಾದ; ಪೂಜ್ಯವಾದ. (ನಾ). ೨. ನಮಸ್ಕಾರವನ್ನು ಪಡೆಯುವವನು; ಪೂಜ್ಯನಾದವನು : ಚತುರಾಸ್ಯನುಮಹಿಮೇಂದ್ರ ನಮಸ್ಯನುಂ . . . ಆಗಿ (ಶಾಂತಿಪು. ೦೨-೧ ವ) ; ವರಬುಧೋಪಾಸ್ಯನಂ ಭೂತಳನಮಸ್ಯನಂ ಹರಶರಣಸಿಂಹನಂ (ಅರಾಪ. ೧-೩೫). ೩. ತೆರಿಗೆ ವಿನಾಯಿತಿ : ನೂಱಯ್ವತ್ತು ಮ[ತ್ತ]ರ್ಕೆಯ್ಯಂ ನಮಸ್ಯಮಾಗಿ ಬಿಟ್ಟಳ್ (ಸೌಇಇ. XX, ೧೮-೪೨ ; ೯೮೦) : ನಂದಾದೀವಿಗೆಗಂ ಏಕಾದೆಸಿಯಭ್ಯಂಗದೆಣ್ಣೆಗಂ ನಮಸ್ಯವಾಗಿ ಬಿಟ್ಟ ಗಾಣ ೨ (ಸೌಇಇ. XV, ೦೨-೩೪ ; 1128). 'ಸರ್ವನಮಸ್ಯ' ಪರಾ.

**ನಮಸ್ಯಂ ಬಿಡು** = ತೆರಿಗೆ ವಿನಾಯಿತಿಯೊಂದಿಗೆ ಭೂಮಿಂ ಪೊದಲಾದುವನ್ನು ಕೊಡು,-ದಾನಮಾಡು : ಶ್ರೀಮತ್ತಿಕುಪ್ಪೊಳಲ ಮೂಲಸ್ಥಾನದ ಮಹಾದೇವರುಪಭೋಗಕ್ಕೆ ಸರ್ವ್ವಬಾಧಾ ಪರಿಹಾರವಾಗಿ ನಮಸ್ಯಂಬಿಟ್ಟ ಸಣ್ಣನ ಮಾಹಾಳಿಯ ಕೆಯಿ ಮತ್ತ ೧೨ (ಕೊಲ್ಹಾಪ. ೨-೧೪ ; 1069). [ ಸಂ. ]

**ನಮಸ್ಯಿತ** (ಗು). ೧. ಪೂಜಿಸಿದ ; ಗೌರವಿಸಿದ. (ನಾ). ೨. ನಮಸ್ಕರಿಸಿದುದು : "ಅರ್ಹಿತಂ, ನಮಸ್ಯಿತಂ, ನಮಸಿತಂ, ಅಪಚಾಯಿತಂ, ಅರ್ಚಿತಂ, ಅಪಚಿತಂ – ೬ ಪೂಜಿಸಲ್ಪಟ್ಟದ್ದು. ನಮಸ್ಕರಿಸಲ್ಪಟ್ಟದ್ದು" (ಸಿದ್ಧಾಂತಿ. ೩೦೩). 'ನಮಂಸಿತ' ಪರಾ. [ ಸಂ. ]

**ನಮಸ್ಯೆ** (ನಾ). ನಮಸ್ಕಾರ; ವಂದನೆ : "ನಮಸ್ಯಾ, ವಂದನಾ – ಈ ೨ ಪೊಡವಡಿಕೆ" (ಹಲಾಯು. ೧೨೮-೯೦). [ ಸಂ. ನಮಸ್ಯಾ ]

**ನಮಾಜು, ನಿಮಾಜು** (ನಾ). ಮುಸಲ್ಮಾನರ ದೇವತಾಪ್ರಾರ್ಥನೆ : ನಮಾಜು ಮಾಡಲು ಮಸೀದಿಗೆ ಹೋಪನು (ಕೃಗಂಬ. ೧೩೩) : ಇಲ್ಲಿಯವರು ಬಹುಬೇಗ ಪೂಜೆ, ನಮಾಜುಗಳಲ್ಲಿ ಆಸಕ್ತರಾಗುವರು (ಧೂರಾಚ. ೦೦೯) ; ಮಹಮ್ಮದಪೈಗಂಬರರು ಪ್ರತಿನಿತ್ಯ ನಮಾಜು ಮಾಡುವುದೊಂದು ಸ್ಥಳವಿತ್ತಂತೆ (ಮೂಢವ. ೭); ನಮಾಜು ಮಾಡುವುದಕ್ಕೆ ಹೋದಾಗ ಮಸೀದಿ ಮೇಲೆ ಬಿತ್ತು (ಗಾದೆ). ನಿಮಾಜು : ಜಾತಿದೇವರ ಧ್ಯಾನಕೆಸಗಿ ನಿಮಾಜುವೆಂದ್ಯಸೂತಿಯನು ಗೈಸಿ (ಕದಂಪು. ೮೪).

[ ← ಪಾರಸ. ನಮಾಝ್ ; ಹಿಂ. ಮರಾ. ನಮಾಜ್, ನಿಮಾಜ್ ]

**ನಮಿ** (ನಾ). [ಜೈನ] ಇಪ್ಪತ್ತನಾಲ್ಕು ಜನ ತೀರ್ಥಂಕರರಲ್ಲಿ ಒಬ್ಬ : ಇಪ್ಪತ್ತೊಂದನೆಯ ತೀರ್ಥಂಕರ : ವಿನಮಿಯುಂ ನಮಿಯುಂ ನಯದಾಳ್ದರ್ (ಶಾಂತಿಪು. ೫-೧೪೯) : ಶ್ರೀಪಂಚಮಹಾಕಲ್ಯಾಣೋಪೇತಂ ಕರ್ಮಗಹನದಹನಂ ಮುಕ್ತಿಶ್ರೀಪತಿಸಂಸಾರರೋಗ್ರಭ(ಯೊ)ಯೋಪಹರಂ ವರದನಕ್ಕೆ ನಮಿ ತೀರ್ಥಜಿನಂ(ಕರಂ) (ಚಾವುಂಪು. ೩೧೯); ಮುಚುಕುಂದಂ ತಾಂ ನಮಿಸ್ವಾಮಿಗಳ್ಗೊಲವಿಂಗಾಬ್ಬಕೆ ಸೇವ್ಯಮಾನಮನಲಂ ಪೂಜಾವಿಧಾನೋತ್ಕರಂ (ಪುಣ್ಯಾಸ್ರ. ೧-೧೦೩). [ ಸಂ. ]

**ನಮಿತ** (ಗು). ೧. ಬಗ್ಗಿದ ; ಮಣಿದ : ನಮಿತೋದ್ಯತ್ಕಣಿಶಪ್ರಕೀರ್ಣಕಳಮಪ್ರಸ್ತಾತಕೇದಾರಜಾಲಮಯಂ (ಕುಸುಮಾ. ೧೦-೧೫೪) ; ನಮಿತಕದಳೀಫಲಸ್ತಬಕಂಗಳಂ ತೂಗಿ (ಉದ್ಭಟ. ೧೦-೧೨೩); ಪಾರ್ಥನ ನಮಿತ ಮಕುಟವ ನೆಗಹಿ ಪುಳಕಾಶ್ರುಗಳ ಪೂರದಲಿ . . . ಬಿಜಯಂಗೈದನಸುರಾರಿ (ಕುಮ್ಯಾಗ. ೧೩-೧೪). ೨. ನಮಸ್ಕರಿಸಿದ ; ವಂದಿಸಿದ : ನಮಿತಲೋಕವೆನಿಪ್ಪಮ ಸಕಳೇಶ ಮಾದರಸ (ಬಸಪು. ೧೯-೩) ; ನಮಿತಜನ ದುರ್ಮಾರ್ಗತತ್ಪ್ರಯಾಣಕ್ಕೆ ವಿಘ್ನಮನೆಸಪ . . . ಶಾಂತಮರ್ತ್ಯೇಶ್ವರಾ (ವೀಶೈಪ. ೬-೩-೧). ೩. [ಭೌತವಿ] ಬಾಗಿದ. 'ನಮಿತಪ್ರತಿಬಿಂಬ' ಪರಾ. (ನಾ). ೪. ನಮಸ್ಕರಿಸಲ್ಪಟ್ಟವನು : ಗುರುದೇವೇಂದ್ರ ಮುನೀಂದ್ರನಿಂದ್ರನಮಿತಂ ದೇವಂ ಕಥಾನಾಯಕಂ ಪುರುದೇವಂ (ಆದಿಪು. ೧-೨೫) : ನಮಿತಂ ಖಚರಾನುಚರಂ ಕ್ರಮದಿಂ ತಿಳಿವಂತು ತನಗೆ ತನಯನ ವೃತ್ತಾಂತಮನಜಿಪ . . . ಪಲವು ಸೂಟ್ಟಿಸಗೊಂಡು (ಪಂರಾಮಾ. ೭-೪೪). [ ಸಂ. ]

**ನಮಿತಪರ್ವ** (ನಾ). ಗೆಣ್ಣುಗಳಲ್ಲಿ ಬಾಗನ್ನುಳ್ಳುದಂ : ಸುರಪುರಕಂಟಕರೆನಿಸಿದ ಸುರರಿಪುಗಳನಿರದೆ ತೂಳ್ದುವಿವೆರಡೆ ಧರಣೀಶ್ವರ ನಿನ್ನ ಶಿಲೀಮುಖಮುಂ ನರಸಿಂಹನ ನಮಿತಪರ್ವವೆನಿಸಿದ ನಖಮುಂ (ಜಾಕುಂಪ. ೯೯-೧೭೩). [ ನಮಿತ + ಪರ್ವ ]

**ನಮಿತಪ್ರತಿಬಿಂಬ** (ನಾ). [ಭೌತವಿ] ನಮನಹೊಂದಿದ ಪ್ರತಿಬಿಂಬ : ಕೋನವನ್ನು ಮಾಡುವ ನೇರದಲ್ಲಿ ಕಿರಣಗಳೆಲ್ಲಾ ಒಂದೇ ದಶೆಯಲ್ಲಿ ಸೇರುವುದರಿಂದ ಮೊದಲನೆಯ ನಮಿತಪ್ರತಿಬಿಂಬವು (Diffracted image) ಉಂಟಾಗುವುದು (ಭೌತವಿ. ೨೧೨). [ ನಮಿತ + ಪ್ರತಿಬಿಂಬ ]

**ನಮಿತಶಿರಸ್ಕೆ** (ನಾ). ತಲೆಯನ್ನು ಬಾಗಿಸಿದವಳು; ನಮಸ್ಕರಿಸಿದವಳು: ನಮಿತಶಿರಸ್ಕೆಯಾಗಿ ನಸುದೂರದೊಳಂಜಲಿಹಸ್ತದಿಂ ಸಸಂಭ್ರಮೆಯಿರೆ ಯಾಕೆಯುಂ ದಯೆಯಿನೀಕ್ಷಿಸಿ (ದಿವ್ಯಪ. ೭-೨೮).

[ ಸಂ. ನಮಿತಶಿರಸ್ಕಾ ]

**ನಮಿತಾನನೆ** (ನಾ). ಮುಖವನ್ನು ತಗ್ಗಿಸಿದವಳು: ನಮಿತಾನನೆ ಲಜ್ಜಾನಿಷ್ಠೆ ಮೋಹಪರವಶತೆಯಿಂದೆ ಮಾಱುತ್ತರನುಂ ಸಮನಿಸದಿರಲ್ (ದಿವ್ಯಪ. ೭-೪೭). [ ಸಂ. ನಮಿತಾನನಾ ]

**ನಮಿತಾರಿ** (ನಾ). ಶರಣಾಗತರಾದ ಶತ್ರುಗಳುಳ್ಳವನು ; ಶತ್ರುಗಳನ್ನು ಶರಣಾಗಿಸಿಕೊಂಡವನು : ನಮಿತಾರಿಗೆ ದಮಿತಾರಿಗೆ ಸಮಸ್ತ ಧಾತ್ರೀವಿಭಾಗದೊಳ್ ಭಾವಿಸೆ . . . ಪೋಲ್ಕೆಗಾವಂ ಬರ್ಪಂ (ಕಾವ್ಯಾವ. ೩೪೭).

[ ನಮಿತ + ಅರಿ₁ ]

**ನಮಿಯಿಸು** 'ನಮಿಸು' ನೋ.

**ನಮಿಸು, ನಮಿಯಿಸು** (ಕ್ರಿ). ಬಾಗು ; ನಮಸ್ಕರಿಸು ; ವಂದಿಸು: ನಮಿಸುತಂ ಕಂಪಿಸುತೆ ಮನವೊಲಿದು ಹೊಗಳುತಂ (ಬಸರ. ೩-೧೦೮) ; ನಮಿಸಿದ ಕಾದಲರಂ ತನ್ನಮಳಕರದೊಳೆತ್ತಿ ಪರಸಿ . . . . ಬೀಟ್ಕೊಂಡಂ (ಉದ್ಭಟ. ೮-೭೭); ಕಿನ್ನರಯ್ಯನ ಪಾದಪಂಕಜಕಂ ನಮಿಸುತಾ ಬಸವರಾಜನು (ಬಸಪು. ೨೮-೪೭) : ಗುರುವಿನ ದಳವ ಹೊಕ್ಕನು ನಮಿಸಿ ಬಿನಹ ಮಾಡಿದನು ನಗುತ (ಕುಮ್ಯಾದ್ರೋ. ೧೦-೪೩) ; ನಮಿಸುತೆ ಪೂಜ್ಯಋಷಿಪದಕೆ ಬೀಳುಕೊಂಡರು ಮೂವರುಂ ಪಂಚವಟಿಗಾಗಿ (ಶ್ರೀರಾದ. ೧೯೭-೯೭೮). ನಮಿಯಿಸು : ನಮನಮಂ ಮಾಡುವಂ_ನಮಿಸುವಂ, ನಮಿಯಿಸುವಂ (ಶಬ್ದಾನು. ೫೩೪ ಪ್ರಯೋ). [ ನಮನ + _ ಇಸು₃ ]

**ನಮೀಕೃತ** (ಗು). ಬಾಗಿಸಿದ; ಮಣಿಸಿದ; ಶರಣಾಗತರನ್ನಾಗಿ ಮಾಡಿದ: ದೃಢೀಕೃತತಳವರ್ಗನುಂ ನಮೀಕೃತಸಾಮಂತವರ್ಗನುಮಾಗಿ (ಚಂದ್ರಪ. ೪-೨೮ ವ). [ ಸಂ. ]

**ನಮೂದಿಸು** (ಕ್ರಿ). ಉಲ್ಲೇಖಿಸು ; ದಾಖಲೆಮಾಡು ; ಬರೆದಿಡು: ಏಜೆಂಟ್ ಅಥವಾ ಮುತಾಲಿಕನ ಹೆಸರನ್ನೂ ನಮೂದಿಸಬೇಕು (ಗ್ರಾಮೂಕ. ೬): ಪೋಲೀಸಿನವರು ಸಾಕ್ಷಿಪಟ್ಟಿಯಲ್ಲಿ ಅವನ ಹೆಸರನ್ನು ನಮೂದಿಸಿರಲಿಲ್ಲ (ಪಂಚಪಂ. ೧೦೩) ; ಈ ವಿಷಯ ರಾಜಿಗಳಿಗೂ ಗೊತ್ತಿಲ್ಲ : ಗೊತ್ತಿದ್ದರೆ: ಕುರಾನಿನಲ್ಲಿ ನಮೂದಿಸದೆ ಬಿಡುತ್ತಿರಲಿಲ್ಲ (ತಕ್ಕಪ್ರಾ. ೫೭೭).

[ ನಮೂದು + –ಇಸು₃ ]

**ನಮೂದು** (ನಾ). ಉಲ್ಲೇಖ ; ದಾಖಲೆ ; ನೋಂದಣಿ.

ನಮೂದಾಗು=ನೋಂದಣಿ ಆಗು ; ದಾಖಲಂ ಆಗಂ : 'ವುಯಿಲ್ಲು' ಬರೆದು ಸಿದ್ಧವಾಯಿತು. ಇಷ್ಟರಲ್ಲಿ ನಮೂದಾಗುವದಿತ್ತು (ಸಮಜೀ. ೨೫೧). ನಮೂದುಮಾಡು = ಉಲ್ಲೇಖಿಸಂ ; ಬರೆದು ತಿಳಿಸು : 'ಡಿನ್ನರ್' ಇಷ್ಟು ಹೊತ್ತಿಗೆ ಎಂದು ಲಗ್ನಪತ್ರಿಕೆಯಲ್ಲಿ ನಮೂದುಮಾಡಿದ್ದರು (ನಾದಿಗೇ. ೧೪೬) ; ಜ್ವರ ಬಂದ ಕಾರಣ ನಮೂದುಮಾಡಿ, ಪರೀಕ್ಷೆಯ ಕತ್ತರಿಯಿಂದ ನುಸುಳಿ (ದೀಪಹ. II, ೧೮).

[ ←ಪಾರ. ಹಿಂ. ನಮೂದ್ ; ಮರಾ. ನಮೂದ್, ನಮೋದ್ ]

**ನಮೂನಿಸುಳಿ** (ನಾ). ದನದ ಮೈಮೇಲಿನ ಸುಳಿಗಳಲ್ಲಿ ಒಂದು ಬಗೆ: ದನಾ ಪರೀಕ್ಷೆ ಮಾಡೋವಾಗ ಹೀನಸುಳಿ, ಪಾತಾಳಸುಳಿ, ದಾಮಣಿಸುಳಿ, ಪರಕಲಸುಳಿ, ನಮೂನಿಸುಳಿ, ಸಿಡಕ್ಕಾಲು, ಕೋರಬಗ್ರಿ, ಕ್ಟೊಡವಹಲ್ಲು ಇವೆಲ್ಲಾನೂ ಚಂದಾಗಿ ನೋಡಿ ಒಳ್ಳೆಸುಳಿ ಇರೋದ ತತ್ಗಾಲಾ (ಹುಟ್ಟಹ. ೧೩೫). [ <ನಮೂನೆ + ಸುಳಿ$_2$ (<ಸುಟ್ಟು$_2$) ]

**ನಮೂನೆ** (ನಾ). ೧. ಮಾದರಿ ; ತೆರ ; ಕ್ರಮ ; ಪ್ರಕಾರ; ರೀತಿ; ವಿಧ; ಬಗೆ: ನೋಟದಲ್ಲಿ ಒಂದು ನಮೂನೆಯ ಬಿಂಕ (ಅಂಹೂ. ೧೮) : ಆ ಮಾಸ್ತರ ಹೇಳಿದ ನಮೂನೆ ನೋಡಿದರೆ ಈಗಾಗಲೆ ಏನು ಮಾಡಿ ಕುಳಿತಾಳೊ (ಮೂರುದಾ. ೩೮) ; ಚೊಕ್ಕ ಬಂಗಾರವೇ ಬೇಕೆಂಬ ಹಟವೇಕೆ ನಿನಗೆ ಈ ಲೋಕದಲ್ಲಿ ನಾನಾ ನಮೂನೆ ಲೋಹವಿರುವಾಗ ? (ನಂಬು. ೨೬-೬): ಪಾಚಿಯು ವಿವಿಧ ನಮೂನೆಗಳನ್ನು ಬೆಳಸಲು ಉದ್ಯುಕ್ತನಾದನು (ಸಸ್ಯಕ. ೮೬). ೨. ರಚನಾಕ್ರಮ; ನಕ್ಷೆಯ ವಿನ್ಯಾಸ : ಆ ಕೋಟೆ ನಮೂನೆ ಯಾವ ಮೇಳ ಇದೆ (ರಾಜೇಂದ್ರ. ೨೯). ೩. ಚಿತ್ರಾಕೃತಿಯ ಮಾದರಿ : ಎಲ್ಲಿ ಅವನಿಗೆ ಚಿತ್ರಕಲೆಯ ಸುಂದರವಾದ ನಮೂನೆಗಳು ದೊರೆಯುತ್ತಿದ್ದವೋ ಅಲ್ಲಿಗೆ ಅವನು ಹೋಗಿಯೇ ಹೋಗುತ್ತಿದ್ದನು (ಮೈಜಂ. ೧೮) ; ಅವನ ಚೌಕಳಿ . . . ಮಾಟ ಬೆಂಡೋಲೆಗಳ ನಮೂನೆ ಕಂಡಿತು ನನಗೆ (ವೈನಿ. ೮): ಈಗಿನ ದಿನಗಳಲ್ಲಿ ಸುಂದರವಾದ ಹಾಗೂ ಆಕರ್ಷಕವಾದ ಅನೇಕ ನಮೂನೆಯ ಮನೆಕೆಲಸದ ಸಲಕರಣೆಗಳು ಸಿಗುತ್ತವೆ (ಅಡುಗೆ. ೩೨). ೪. ಅರ್ಜಿ, ದಾಖಲೆ ಮೊದಲಾದಂವುಗಳಲ್ಲಿ ಉಲ್ಲೇಖಿಸಬೇಕಾದ ಅಂಶಗಳನ್ನೊಳಗೊಂಡ ಪತ್ರ,-ಕಾಗದ : ಆ ಸರ್ಕಾರದವರಿಂದ ವಿಧಾಯಕವಾಗಿರುವ ನಮೂನೆಯಲ್ಲಿ ಮತ್ತು ರೀತಿಯಲ್ಲಿ ಕೊಟ್ಟಂಥ ಆವೇದನಪತ್ರದ ಮೇಲೆ (ಛಾಧಾನ. ೫) ; ಈಗಿದ್ದ ಮರಾಟಿ ನಮೂನೆಗಳು ತೀರಿದ ಬಳಿಕ ಕನ್ನಡ ನಮೂನೆಗಳನ್ನು ಮುದ್ರಿಸಬೇಕು (ಕಠ್ನಸು. I, ೨೬). ೫. ಮಾದರಿಗಾಗಿ ಕೊಟ್ಟುದಂ; ಮಾಸಲೆ (ಉಕ): ನಮೂನೆಗೆ ಸ್ವಲ್ಪ ತೆಗೆದುಕೊಂಡು ಬಾ (ರೂ೦); ೬. (ಆಲಂ) ವಿಚಿತ್ರವಾದುದಂ ; ಅಸಮಾಧಾನಕರವಾದುದು : ಅವರ ಮುಖ ಒಂದು ನಮೂನೆಯಾಗಿತ್ತು (ರೂ೦).

[ ←ಪಾರ. ನಮೂನಾ, ನಮೂನಹ್ ; ಹಿಂ. ನಮೂನಾ ; ಮರಾ. ನಮೂನಾ, ನಮೋನಾ ]

**ನಮೆ$_1$, ನವೆ$_1$** (ಕ್ರಿ). ೧. ದಂಡಿಸಂ ; ನರಳಂ ; ಕೊರಗಂ : ಬಳಿಕ ಪಣ್ಬಟ್ಟಟದೊಳ್ಪುಳುವಾಗಿ ನಮೆಗುಂ (ಎಕ. VIII, ಸಗರ. ೬೦-೧೧ ; 870); ಚಕ್ರದಿಂ ನಾಲ್ಕು ಕಾಲುಮನೊರ್ಮೊದಲೆ ಪಱಿಯುಟ್ಟೊಡೆ . . . ಆ ಇರುಳೆಲ್ಲಾಮ ಛಿಂದು ವೇದನೆಯಿಂದು ನಮೆದು ಸತ್ತು (ವಡ್ಡಾ. ೧೨೦-೨೦) ; ಕೂರದರ್ ನೆಲನನೊಟ್ಟಜೆಯಿಂ ಕೊಳೆ ಕೊಟ್ಟು ಮುಟ್ಟು ಗೆಟ್ಟಿನ್ನುದುರಣ್ಯದೊಳ್ ನಮೆದಪಂ ಯಮನಂದನಂ (ಪಂಪಭಾ. ೬-೫೫) ; ಎನಿತುಂ ದ್ರೌಪದಿ ಮುಕ್ತಕೇಶಿ ನಮೆವಳ್ (ಗದಾಯು. ೬-೨೪). ಎನ್ನ ಮಕ್ಕಳುಮಾನುಂ ದುಃಖಾಗ್ನಿಯೊಳ್ ಪುದುಪುಡನೆ ಪುರ್ಗಿ ನಮೆವ ಪಾಪದ ಫಲಮಂ ನೀನಮೋಘಮುಣ್ಬೆಯೆಂದು ಮೂದಲಿಸಿ (ಸುಕುಮಾ. ೫-೭೮) ; ಮೊಂಟಾಗಿ ಕೈಗಳೆರಡುಂ ಗೆಂಟಾಗಿರೆ ತನಗೆ ಸಿರಿಯುಂ ಕೂಟುಂ ಕಾಲುಂ ಕುಂಟಾಗಿ ನಮೆಯುತಿರ್ಪರ್ಬೆಂಟಣಿಸಿ ಮಹಾತಪಂಗಳಂ ಕಿಡಿಸಿದವರ್ (ಧರ್ಮಾಮೃ. ೬-೧೮೦) ; ಅಳಿಯಾಸೆಯಿಂ ನಮೆಯದಿರ್ಬೇಡಾಗ್ರಹಂ (ಅನಂಪು. ೧೧-೯೩) ; ಬಂದರೇನಪರಾಧವೇ ಇನ್ನೆಂದುಮರಿಯಂತವರು ನಮೆವರು (ಕುಮಾವ್ಯ. ೧-೨೦) ; ನಮೆವ ದೀನಾಂಧಬಧಿರರಂ ದಾನ ಧರ್ಮಂಗಳಿಂ ಪಾಲಿಸುತುಂ (ರಾಮಾಶ್ವ. ೧೫-೧೯); ಆಗದುದಕೆ ಹೋಗದುದಕೆ ಆಸೆಪಟ್ಟು ಭಂಗಪಡುತೆ ನಮೆವುದೇತಕೆ? (ವಿಸೀಗೀ. ೮೫-೧೦). ೨. ಸೊರಗು; ಕೃಶವಾಗು ; ಬಡವಾಗಂ : "ನಮೆ–ಗುರುಯಾಪ್ಯೇ (ಬಡವಾಗು) ದಾರಿದ್ರ್ಯೇ ಚ" (ಶಮದಾ) ; ಆದಿಯೇಧಬೋಧಿತ ತಪೋದಾನವಿಧಾನದು ಮಬುಧಾಕ್ಲೇಶಾಯಾಸನಿರತರಾಗಿ ನಮೆವರ್ (ಆದಿಪು. ೨-೯೮) : ಉಪವಾಸದೊಳ್ ನಮೆದು ನೋಂಪಿಗಳೊಳ್ ನಿಯಮಕ್ರಮಂಗಳಂ ಸಲಿಸಿದರ್ (ಪಂಪಭಾ. ೦-೦೩೬) ; ತೆರ್ಪತ್ತು ಬಿಟ್ಟು ನಮೆಯುತ್ತಿರ್ಪರ್ ವಾರಕರ್ (ಶಾಂತಿಪು. ೭-೯೯): ಲೋಕದೊಳಾಂ ಕಾಣದಿರಿಲ್ಲೀ ಕುತ್ತಂ ಪೊರ್ದಿ ನಮೆವ ಮಾನಿಸರುಂ ಕೇಳೀ ಕಷ್ಟಸಂದದಿಂ ಮೆಯ್ಯುಕಾರಂಗೆಟ್ಟು ನಮೆವರಂ ಕಂಡಱಿಯೆಂ (ಧರ್ಮಾಮೃ. ೪-೯೦). ೩. ಬಡವನಾಗಂ : "ನಮೆ–ಗುರುಯಾಪ್ಯೇ (ಬಡವಾಗು), ದಾರಿದ್ರ್ಯೇ ಚ" (ಶಮದಾ): ೪. ಮಹತ್ವವನ್ನು ಕಳೆದುಕೊಳ್ಳು : (ಕ). ನವೆ$_1$ : ೧. ಮಹಾನರಕದೊಳ್ ದುಃಖಾಗ್ನಿಯಿಂ ಬೆಯ್ವೊಡಂ ನವೆಯುತ್ತಿರ್ಪೊಡಂ (ಧರ್ಮಾಮೃ. ೩-೬೧) ; ಹಲಕಾಲ ನವೆವುತಲ್ಲಿರ್ದ ಹೆಳವಂಗೆ ಕಾಳ್ . . . ಬರಲ್ (ಸೋಮಂಶ. ೪-೬) : ಕಟಕಟಾ ಪೇರಡವಿಯೊಳಗೆಕ್ಕಟಯಿದೇತಕೆ ನವೆವುತಿರ್ದಪೆ (ಬಸಪು. ೧೮-೯) ; ಸತ್ಯವ ಕಾದು ಹದಿಮೂಱುಬುದ ನವೆದಿರಿ ಮುಂದೆ ಲೇಸಹುದು (ಕುಮಾವ್ಯ. ೨-೦೫) ; ಪಾಪಧಿ ಪಡೆದಱಾವಿಳಗೊಳಿದು (ಹರಿಪ. ೪೫) ; ನವೆವುತ್ತಿದೇನೆ ಭವರೋಗವ ನಿಲಿಸಯ್ಯಾ (ಶಂಕಕಂ. ೪೫) ; ತಪ್ಪ ಗಂಡನು ಎಷ್ಟು ರೀತಿಯಿಂದ ನವೆಯಬೇಕಾಗುತ್ತದಲ್ಲಾ ಎಂದು ಮನಸ್ಸು ಕರಗಿ ಕಂಬನಿ ಹರಿಯತೊಡಗಿದವು (ಗಂಮಾಯಿ. ೨೫೮). ೨. ನವೆದು ರೋಗಂಗಳಿಂದುಂ (ರತ್ನಾಕ. ೨೪) ; ಕಡುಜರದಿಂ ಕರಂ ನವೆದು (ದಶಕು. ೮-೩೦೩) ; ದಾರಿದ್ರ್ಯದಿಂದಂ ನವದ ನಡುವನಾಶ್ರೈಸಿದಂ . . . ಏಂದೈತರ್ಪ ಬಾಸೆಯುಂ (ಧಾವದಂ. ೩-೪೨). ೫. ಕ್ಷಯಿಸಂ ; ನಾಶವಾಗು : ಶ್ರವಣದಿಂ ಪಾತಕ ಕುಲಂಗಳು ನವೆದು ಪೋಪುವು (ಗಗಶಾ. ೦೬-೫೧).

ನಮೆದು ನಾರುಗಿ = ದೇಹದ ಸೆರೆಗಳಂ ಎದ್ದು ಕಾಣು ; ಸೊರಗಿ ಜರ್ಜರಿತವಾಗಂ,-ಶಿಥಿಲವಾಗು:ಉಣ್ಣದ ಮಿಾಯದಂಗ ನಿರ್ಜೀವಕಮೆತ್ತು ದೆತ್ತ ವಿಫಲದ್ವಯದಾನವಿಧಾನಮೆತ್ತ ನಾನಾ ವಿಧದಿಂದಮೇಂ ನಮೆದು ನಾರುಗಿದಿರ್ಪರೊ ಜೈನದೀಕ್ಷಿತರ್ (ಶಾಂತಿಪು. ೮-೧೨೯) ; ಅಪವಿರಿದು ದುಃಖದೊಳ್ ನಮೆದು ನಾರುಗಿದು ಪೊಗೆದು ಸತ್ತಲ್ಲಿ ನಿಷಾದನ ಮನೆಯೊಳ್ಪೆಣ್ಣಾಯಾಯ್ತು ನೆನೆದೊಡಾಶ್ಚರ್ಯಮಲ್ತೆ ಸಂಸೃತಿಚಕ್ರಂ (ಸುಕುಮಾ. ೫-೦೯).

[ ದೇ.೫ ತುಳು. ನಮೆ; ತೆಲು. ನವಯು, ನವಿಯು]

**ನಮೆ$_2$, ನವೆ$_2$** (ನಾ). ೧. ಕಾಟ ; ಪೀಡೆ ; ತೊಂದರೆ ; ಕಿರಂಕುಳ : ಕಣ್ಣನ್ ಬಿಡಱಿತು ಕಟ್ಟಲೆ ಪಾರಯ್ ! ನಮೆಯಾ ಭ್ರಮೆಯಾ ಕಟ್ಟಲೆ ಪಾರಯ್ ! (ಆದ್ಯಶಾ. ೨೯-೫೬೨). ನವೆ$_2$ : ೨. ತುರಿಕೆ ; ತಿನಿಸಂ ; ಕೆರೆತ: ತೆಕ್ಕು – ಕಿರ್ಯರ್ಕ್ಕಂಡೂತಿಲೇಹಸೇ (ನವೆಗೆ ನೆಕ್ಕು) (ಶಮದಾ) : ಆಗವನು ಲೈಲಾಕ್ ಪೊದೆಯ ಹಿಂದೆ ಬಿದ್ದಿದ್ದುದರಿಂದ ತುರುಚಿ ಗಿಡ ಅವನ ಕೈ ಕಚ್ಚಿ ನವೆಹತ್ತಿಕೊಂಡಿತ್ತು (ಪುನರು. ೨೬೩). ೩. ಚಪಲ; ತವಕ: ಸುನಂದೆಯನ್ನು ಗಂಡ ಬಿಟ್ಟಿರುವನೆಂಬುದು ತಿಳಿದಿತ್ತು. ನಾಲಿಗೆಗೆ ನವೆ. ಮಾದಲಿಸಿ ಲೇವಡಿ ಮಾಡುವ ತವಕ (ಬಿಕಾಂಗಿ. ೨೧೧). 'ನವೆತ$_2$' ಪರಾ.

[ ದೇ. ೫ ತಮಿ. ನಮ್ಮೈ, ನಮ್ಮೈಪ್ಪು, ನಮ್ಮೈಚ್ಚಲ್ : ತುಳು. ನವುಂಟ; ತೆಲು. ನವ ]

**ನಮೆಯಿಸು, ನವಸು, ನವೆಸು** (ಕ್ರಿ). ೧. ಕೊರಗಿಸು ; ಕಷ್ಟಕ್ಕೆ ಗುರಿಪಡಿಸು : ಪಲಕಾಲಂ ನಮೆಯಿಸಿದ ಪಗೆಯುಮಂ ನೆನೆದು (ವಡ್ಡಾರಾ. ೨೧೧-೨೦); ಲೋಗರೊಡವೆಯುಂ ಝಳಾಳಿಯುಂಗೊಂಡನಿವನಂ ಪಲವು ದಿವಸಂ ನಮೆಯಿಸಿ ಕೊಲ್ಲಿಂ (ಸುಕುಮಾ. ೬-೩೭ ವ). ೨. ಸೊರಗಿಸು ; ಕೃಶಗೊಳಿಸು : ತಪದೊಳ್ ನಮೆದು ತಮ್ಮ ಶಿಷ್ಯರ್ಕಳುಮಂ ತಾಂ ಶಿಕ್ಷೆಗೊರವಿ ಬೆನಕನುಮಂ ತಿರಿಯಿಪಳೆಂಬ ತಜದೆ ನೆಱೆ ನಮೆಯಿಸಿದರ್ (ಶಾಂತಿಪು. ೮-೧೩೦) : ಬಸಿಱ ಕುತ್ತದಂತೆ ನಮೆಯಿಸುವುದು (ಧರ್ಮಾಮೃ. ೪-೦೭೫). ನವಸು : ೩. ನಾಶವಾಗುವಂತೆ ಮಾಡು ; ಕೆಡಿಸು ; ಹಾಳುಮಾಡು : ವಿವಿಧ ರಕ್ಕಸರು . . . ಎನ್ನ ಕಾರ್ಯಮಂ ನವಸಿದಲ್ಲದೆ ಮಾಣರೆಂತಿದಕುಪಾಯಮೇನೆಂದು ಯೋಚನೆಗೈದನು (ವಂಕಾಧಾ, ೩-೨-೪೩). 'ನವಸಿಗೆ' ಪರಾ. ನವೆಸು : ೧. ಈ ಶಿಶುವ ಶಿವಕುಮಾರಂ ತೀಱಯಲು ಮುಂದೆ ಮಜ್ಜನಭೋಜನಾದಿ ನಾನಾಕ್ರಿಯೆಗಳೊಂದಱೊಳ್ ನರವೇಷ ಕಾಯಮಂ ನವೆಸಬೇಡೆಂದು ಕೈವೆಡಗೊಟ್ಟಳ್ (ಚಿಲಪು. ೩-೩೦) ; ಕುವಲಯ ಪ್ರಿಯಕಾಂತ ನಮ್ಮನೇಂ ಕಾರಣದಿ ನವೆಸುವೆ ಜಗನ್ಮೋಹನನೆ (ಬಂಕಾರಾ. ೩-೪-೨೦). [ ನಮ್$_1$ + – ಇಸ್ಸು$_3$ ]

**ನಮೇರು** (ನಾ). ೧. ಒಂದು ಬಗೆಯ ಮರ ಮತ್ತು ಅದರ ಹೂವು ; ಸುರಹೊನ್ನೆ; ಸುರಗಿ: ನಮೇರು ಮಂದಾರ ಸಂತಾನಕ ಪಾರಿಜಾತಂಗಳೆಂಬ ಪೂಗಳಂ ಸುರಿಯುತ್ತಂ (ವಡ್ಡಾರಾ. ೮೪-೬) ; ಸೂಡಿದ ಪಾರಿಜಾತದ ನಮೇರುವ ಬಾಸಿಗವೊಯ್ಯನೊಯ್ಯನಿರ್ಪೂಡಿದುದು (ಆದಿಪು. ೩-೩) ; ಎಱಗದೆ ಪೂತ ಚಂಪಕವನಕ್ಕೆ ನಮೇರುಮಹೀರುಹಕ್ಕೆ ಬಂಡೆಱಗುವ ಚಂಚರೀಕದಪೊಲಾಕೆಯ ಕೇಕರಮನ್ಯರಾಜಕಕ್ಕೆಱಗದೆ ರಾಘವಂಗೆಱಗೆ (ಪಂರಾಮಾ. ೩-೭೦) ; ನಿನಗೆ ಶುಭವೆಂದ ವಂದಿಯ ಮನೆಯಂಗಣದೊಳಗೆ ಪಣ್ಣು ಪರ್ವಿದ ಮಂದಾರ ನಮೇರು ಪಾರಿಜಾತದ ಬನದೊಳ್ಸಿರಿ ಮೆಱೆವುದಲ್ತೆ ವನಕೇಳಿಗಳಂ (ಯಕೋಚ. ೩-೨) ; ನಮೇರುಸುಮನೋವರ್ಷಂ ಸ್ಫುಟಂ (ಎಕ. II (B), ೩೩೬-೩೦ ; 12ನೆಯ ಶತ): ವನಪ್ರದೇಶದೊಳಗಿರ್ಪ ನಮೇರುವಿನಂತೆ (ಕೃಷ್ಣಪು. ೯-೨೦) ; ಉದ್ಯಾನದಲ್ಲಿದ್ದ ನಮೇರುವೃಕ್ಷದಡಿಯನ್ನು ಸೇರಿದ (ದೂಮಕು. ೬೧). ೨. ಒಂದು ಬಗೆಯ ಮರ; ರುದ್ರಾಕ್ಷಿ ಮರ. [ ಸಂ. ]

**ನಮೇರುಕುಜ** (ನಾ). = ನಮೇರು ೧ : ಪಂಕಜಮೋ ನಮೇರುಕುಜಮೋ . . . ಗಿಳಿಯೋ ಕಂಡಿರೆ ಪೇೞಿಮೆಮ್ಮ ಪತಿಯಂ (ಸುಕುಮಾ. ೦೨-೨೧). [ ನಮೇರು + ಕುಜ ]

**ನಮೇರುಕುಸುಮ** (ನಾ). ಸುರಗಿಹೂವು : ಸುರಹೊನ್ನೆಯ ಹೂವು : ಕಿವಿ ಸಾರ್ದು ಜನಂಗೆ ಸೌರಭಕ್ಕಾಡುವ ತುಂಬಿಗಳ್ದಿ ವಿಜನಾಥನವರ್ಕೆ ಕನಲ್ದು ಮಱುದೀಡಾಡುವನಾ ನಮೇರುಕುಸುಮಸ್ತಬಕಂಗಳ ಕರ್ಣಪೂರಮಂ (ಪಂರಾಮಾ. ೩-೧೬) : ಸುರಿದುದು ನಮೇರುಕುಸುಮದ ಸರಿ ಮೊಟಗಿದು ದಮರಪಟಹಂ (ಕೃಷ್ಣಪು. ೦೪-೪೧) ; ತಾನೆಳೆಸದಿರ್ದೊಡಂ ಪರಮಾನಿನಿ ಮೇಲ್ಪಾಯ್ದೊಡೆಳೆಪಿ ಮಂದರಶೈಲಂ ಸ್ಥಾನನಿವನೆನಿಸಿ ನಿಂದಭಿಮಾನಿಗ ಸುರಿಯುದೆ ನಮೇರುಕುಸುಮಾಸಾರಂ (ಉಷಾರ. ೯೮).

[ ನಮೇರು + ಕುಸುಮ ]

**ನಮೇರುಭೂಜ** (ನಾ). = ನಮೇರು ೨ : ನಮೇರುಭೂಜಮಂ ತಳೆದ ಸುಮೇರುಮೇಖಳೆ (ಚಂದ್ರಪು. ೦೨-೨೮). [ ನಮೇರು + ಭೂಜ ]

**ನಮೋ** (ನಾ). ೧. ನಮಸ್ಕಾರ ಮಾಡುತ್ತೇನೆ ಎಂಬರ್ಥದ ಮಾತು.– ಶಬ್ದ : ಪರಮರೂಪನೇ ನಮೋ ಪರತತ್ವನೇ ನಮೋ ಆದಿಯಾರೂಢ ಭಯಂಕರನೇ ನಮೋ . . . ಎಂದು ಶ್ರುತಿಯು ಸಾರುತ್ತಿರಲು (ಬಸವ. ೩೩೬); ಹರಿ ನಮೋ ಜಯ ಭಕ್ತರಘಸಂಹರ ನಮೋ ಜಯಸಕಲ ಭುವನೇಶ್ವರ ನಮೋ ಜಯಕೃಷ್ಣ ಕೇಶವ ವಿಷ್ಣುವಾಮನನೆ(ಕುಮ್ಯಾಲ. ೨೩-೩೩); ಎಲ್ಲಿಂಗವಿಾಗ ನಮೋ–ಬಂಧುಗಳೆ, ಭಾಗಿಗಳೆ (ಮಂಕುಕ. ೯೨೨). ೨. ಸಾಕು; ಸಾಕು, ಇನ್ನು ಇದರ ಗೊಡವೆ ಬೇಡ ಎಂಬರ್ಥದಲ್ಲಿ ಹೇಳುವ ಮಾತು : ಪೊಡವಿಯಾದುದೊ ಮೋಹರವಸದಱ ಒಡನೆ ಕಾದುವನಾವನಾತನೆ ವ್ಯಾಧನು ಶಿವಶಿವ ಕಾದಿ ಗೆಲಿದೆವು ಬಳಿಕ ನಮೋಯೆಂದ (ಕುವ್ಯಾವಿ. ೬-೭೧ ; ☞ ಇಲ್ಲಿ 'ನಮೊ' ಎಂಬ ಹ್ರಸ್ವರೂಪ [illegible] ಮಾಡಿಕೊಂಡುದು; [illegible] (ಗಾಳಿಪ. ೮೦).

ನಮೋನಮೋ (ದ್ವಿರುಕ್ತಿ) : ಕೂಡಲಸಂಗಮದೇವಾ ನಿಮ್ಮ ಸದ್ಭಕ್ತರಿಗೆ ನಮೋ ನಮೋ ಎಂಬೆನು (ಬಸವ. ೪೬೯); ನಾರಾಯಣ ತೇ ನಮೋ ನಮೋ ಭವ ನಾರದಸನ್ನುತ ನಮೋ ನಮೋ (ಪುರಂದ. ೩-೪೦ ಪಲ್ಲವಿ) : ಎಷ್ಟು ದುಡಿದೆ ನೀನೆಷ್ಟು ಪಡೆದೆ ಹೇ ನಮೋ ನಮೋ ನಿನಗೆ (ಅರಳು. ೨೪೩-೩) ; ಅವನು ನಮೋ ನಮೋ ಎಂದು ದುಡತೆತ್ತು ದೈವ ಕೂಡುವನು (ಕನ್ನಜಾ. ೦೯). [ < ಪ್ರಾ. ಣಮೋ. / ಸಂ. ನಮಸ್ ]

**ನಮೋಸ್ತು** (ನಾ). ೧. ನಮಸ್ಕಾರ; ವಂದನೆ: ಅತ್ಯಂತ ರೂಪವತಿಯಪ್ಪ ಬಾಲಕಿಯು ಬರುತ್ತಿಪ್ಪುದಂ ಯತೀಂದ್ರಂ ಕಂಡು ನೋಡುತ್ತಿಪ್ಪನವಾಕೆ ಬಂದು ನಮೋಸ್ತು ಎಂದು ನಿಲಿಸಲು (ಕಗವಿ. ೯೭; ರಾಜಾವಳೀ ಕಥೆ). 'ನಮೋಸ್ತುಗೆಯ್' ಪರಾ. ೨. [ಜೈನ] ಸಂನ್ಯಾಸಿ; ಸವಣ: ಅರಸಿ ಮಂಚದಿಂದಿೞಿದು ಕೈಗಳಂ ಮುಗಿದು ನಮೋಸ್ತಿದೇಸೆಂದು ನುಡಿದೊಡೆ (ವಡ್ಡಾರಾ. ೦೭೭-೨೨) ; ನಮೋಸ್ತುಗಳಿರ್ಪಂದದಿನಿರ್ದಂ(ನಮೋಸ್ತುಗಳೆಂದು ಸವಣರ್ಗೆ ಪೆಸರಾಯ್ತು) (ಶಮದ. ೭೫ ಪ್ರಯೋ) ; ಜನಮುಖಕಮಲದೊಳುದಿಸಿ ನಮೋಸ್ತುಗಳನಿದಪ್ಪ ನುಡಿಯೊಳು ಬಳೆದು ಜನನುತೆ ಮುಕ್ತಿಗೆ ಸಖಿಯಾದ ಶಾರದೆಗನುನಯದಿಂ ವಂದಿಸುವೆನು (ಶ್ರೀಪಾಲ. ೧-೧೧) ; ನೆಟ್ಟನೋರ್ವನೆ ಬೈಗಿನಿಂ ರವಿ ಪುಟ್ಟುವನ್ನೆಗ ಧ್ಯಾನ ಜಪವಳವಟ್ಟು ನಿಲುವಾ ಪಾಲಕೀರ್ತಿ ನಮೋಸ್ತು[ಗೆ]ಱಗುವೆನು (ಸಾಳ್ವಭಾ. ೧-೨೨). ☞ ಇದಂ ಸಂಸ್ಕೃತದಲ್ಲಿ ಒಂದು ಶಬ್ದವಲ್ಲ ವಾಕ್ಯ.

**ನಮೋಸ್ತುಗೆಯ್, ನಮೋಸ್ತುಗೈ** (ಕ್ರಿ). ನಮಸ್ಕಾರ ಮಾಡು ; ವಂದಿಸು: ತಾನೊಂದು ಬಟ್ಟೆಯೊಳ್ಪೋಗಿ ಯತೀಂದ್ರನಂ ಕಂಡು ನಮೋಸ್ತುಗೆಯ್ದು (ಪುಣ್ಯಾಸ್ರ ೩-೭೨ ವ) : ವಿಭವದಿಂ ಗುಹೆಯನೆಯ್ದಿ ನಮೋಸ್ತುಗೆಯ್ದು ಬಾವಲಿಯಂ ಪ್ರಾರ್ಥಿಸೆ (ಕಗವಿ. ೯೨ ರಾಜಾವಳೀ ಕಥೆ). ನಮೋಸ್ತುಗೈ : ಶುದ್ಧಚಿತ್ತದೊಳು ನಮೋಸ್ತುಗೈದರೆ ಧರ್ಮವೃದ್ಧಿಯೆಂದುಱೆ ಹರಸಿದರು (ಭರತ. ೭೦-೦೦೬). [ ನಮೋಸ್ತು + ಕೆಯ್$_1$ ]

ನಮೋಸ್ತುಗೈ 'ನಮೋಸ್ತುಗೆಯ್' ನೋ.

ನಮ್ಕ್‌ಹರಾಮ್ 'ನಮ್ಕ್‌ಹರಾಮ' ನೋ.

**ನಮ್ಕ್‌ಹರಾಮ, ನಮಕ್‌ಹರಾಮ್, ನಮ್ಕ್‌ಹರಾಮ್, ನಿಮಕ್‌ಹರಾಮ, ನಿಮ್ಕ್‌ಹರಾಮ** (ನಾ). ಉಪ್ಪಿಟ್ಟವನಿಗೆ ಎರಡು ಬಗೆಯುವವನು; ಉಂಡಮನೆಗೆ ಎರಡು ಬಗೆಯುವವನು; ಸ್ವಾಮಿದ್ರೋಹಿ ; ಕೃತಘ್ನ : ನಾನು ನಮ್ಕ್‌ಹರಾಮನೆನಿಸಿಕೊಳ್ಳದೆ, ಇದುವರೆಗೂ ಸ್ವಾಮಿಭಕ್ತಿಯಿಂದಲೇ ಚಾಕರಿಮಾಡಿಕೊಂಡು ಇರುತ್ತಿದ್ದೆನು (ಮಹಾವಂ. I, ೨೩೨) ; ಬುದ್ದೀ ಬುದ್ದೀ ನಮ್ಕ್‌ಹರಾಮಾ ಬುದ್ದಿ, ಸುಳ್ಳು ಹೇಳುತ್ತಾನೆ ನನ್ನೊಡೆಯ (ನಮ್ಮಳ್ಳಿ. ೪೭). ನಮಕ್‌ಹರಾಮ್ : (೬). ನಮ್ಕ್‌ಹರಾಮ್ : ಸರ್ಕಾರದ ಉಪ್ಪುತಿಂದು ಸರ್ಕಾರ ಬಯ್ಯುವವರಿಗೆ 'ನಮ್ಕ್‌ಹರಾಮ್' ಅಂತಾರೆ (ಪಂಜಿಸಂ. ೧೬೦). ನಿಮಕ್‌ಹರಾಮ : ನಮ್ಮ ಇಸ್ಲಾಂಮತವು ನಿಮಕ್‌ಹರಾಮರನ್ನು ಎಂದೂ ಹರಸುವುದಿಲ್ಲ ಮಹಾರಾಜ (ರಾಜಯೋ. ೧೩೩). ನಿಮ್ಕ್‌ಹರಾಮ: ಆ ನಿಮ್ಕ್‌ಹರಾಮ ಹೇಳಿದ್ದು (ರಾಜೇಂದ್ರ. ೪).

[ ← ಪಾರ. ನಮಕ್‌ಹರಾಮ್ ; ಹಿಂ. ನಮಕ್‌ಹರಾಮ್, ನಿಮಕ್‌ಹರಾಮ್ ; ಮರಾ. ನಿಮಕ್‌ಹರಾಮ್ ]

ನಮ್ಮಕ್‌ಹಲಾಲ್, ನಿಮ್ಮಕುಹಲಾಲು (ನಾ). ಉಪ್ಪಿಟ್ಟವನನ್ನು ನೆನೆಯುವವನು; ಸ್ವಾಮಿಭಕ್ತ; ಸ್ವಾಮಿನಿಷ್ಠ: ನಿಮ್ಮಕುಹಲಾಲು: ಅವಂಗೆ ದೂರಮಾಡಿ, ಬದಲು ಅವುಲುದಾರರ ನಿಮ್ಮಕುಹಲಾಲಾಗಿ ಇರು ವಂಥವರ ನೋಡಿ ನಿಲ್ಲಿಸ್ಯಾರು ಎಂಬುದಾಗಿ ನಾವು ಕೇಳಿದು ಇದ್ದವು (ರಾಜೇಂದ್ರ. ೧೦೪).

[ ← ಹಿಂ. ನಮಕ್‌ಹಲಾಲ್ ; ಮರಾ. ನಿಮಕ್‌ಹಲಾಲ್ ]

ನಮ್ಮು 'ನೆಮ್ಮು₁'ನೋ.

ನಮ್ಮೆ (ನಾ). "ಹಬ್ಬ" (ಹುಲಿಹಾ. ಕೋಶ): ಮನೆಯವರೆಲ್ಲ ಸಾಲಾಗಿ ಕುಳಿತು ಪುತ್ತರಿ ನಮ್ಮೆಯ ಬಿರ್ದೂಟವನ್ನು ಮಾಡಿದರು (ಹುಲಿಹಾ. ೧೮೪).

[ ← ಕೊಡ. ನಮ್ಮೆ ]

ನಮ್ರ (ಗು). "ಬಾಗುವ; ಬಳುಕುವ; ನಮ್ರ" (Litho. ೩೦೪೫).

[ ಸಂ. ]

ನಮ್ರತೆ (ನಾ). ಬಾಗುವಿಕೆ; ಮಣಿಯುವಿಕೆ: ಇಂಗ್ಲಿಷ್ ಮೊದಲಾದ ಯೂರೋಪಿಯ ಭಾಷೆಗಳು ಭಾಷಾಂತರಸಾಹಿತ್ಯವಿಲ್ಲದಿದ್ದರೆ ಇಂದಿನ ಪ್ರಬುದ್ಧಾವಸ್ಥೆಗೇರುತ್ತಿರಲಿಲ್ಲ. ಸುಲಭ ನಮ್ರತೆಯನ್ನಾಗಲೀ ಹಿಗ್ಗು ಕುಗ್ಗುಗಳನ್ನಾಗಲೀ ಪಡೆಯುತ್ತಿರಲಿಲ್ಲ (ಸುವರ್ಣ. ೨೫೭). [ಸಂ. ನಮ್ರತಾ]

ನಮ್ರ (ಗು). ೧. ಬಾಗಿದ; ಮಣಿದ. ೨. ಬಗ್ಗಿಸಿದ; ತಗ್ಗಿಸಿದ. 'ನಮ್ರಶಿರೋಧರೆ' ಪರಾ. ೩. ವಿಧೇಯ; ವಿನಯಶೀಲ; ವಿನಯ ಪೂರ್ವಕವಾದ: ಒಮ್ಮೆಯಾದರೂ ತಣಿಯಿರೆಂದು ನಮ್ರ ಬಿನ್ನಹ (ಕನ್ನಡಾ. ೬೨). 'ನಮ್ರವಚನ' ಪರಾ. ೪. (ನಾ). ನಮಸ್ಕರಿಸಿ ದುದು; ವಂದಿಸಿದಂದಂ. ೫. ಬಾಗಿದಂದಂ: "ನತಂ, ನಮ್ರಂ, ಬಂಧುರಂ–ಈ ೩ ಎಱಗಿರ್ದುದು" (ಹಲಾಯು. ೦೨೫–೭೫). ೬. [ನಾಟ್ಯ] ತೋಳುಗಳಿಂದ ಮಾಡುವ ಹದಿನಾರು ಬಗೆಯ ಅಭಿನಯಗಳಲ್ಲಿ ಒಂದು; "ತೋಳನ್ನು ಸ್ವಲ್ಪ ಬಗ್ಗಿಸುವುದು" (ಮಾನಸೋ. ೨೬೧ ಗಜ್ಜಾನುವಾದ): ಬಗೆಗೊಂಬೂರ್ಧ್ವದ ತಿರ್ಯಕ್ . . . ಕುಂಚಿತಮುಂರಂತ [ರ]ನಮ್ರಾಖ್ಯ ಸರಳಮಾಂದೋಳಂಗಳ್ ತರುಣ ಪದಿನಾಱು ಭೇದದಿ ನೆರವುದು ಕೇಳ್ ಬಾಹುವಿಂತು ಭರತಾಗಮದೊಳ್ (ಲಾಸ್ಯರಂ. ೨–೧೨೨): ಊರ್ಧ್ವ, ಅಧೋಮುಖ, ತಿರ್ಯಕ್, ಅಪವಿದ್ಧ, ಪ್ರಸಾರಿತ, ಅಂಚಿತ, ಮಂಡಲಗತಿ, ಸ್ವಸ್ತಿಕ, ಉದ್ವೇಷ್ಟಿತ, ಪೃಷ್ಠಾನುಸಾರಿ, ಆವಿದ್ಧ, ಕುಂಚಿತ, ನಮ್ರ, ಸರಳ, ಆಂದೋಲಿತ, ಉತ್ಸಾರಿತ – ಈ ಹದಿನಾಱು ತೋಳ ಭೇದಂಗಳ್ (ಲಾಸ್ಯರಂ. ೨–೦೨೨ವ). [ಸಂ. ]

ನಮ್ರತೆ (ನಾ). ೧. ಹೆಮ್ಮೆಯಿಲ್ಲದಿರುವಿಕೆ; ಅಹಂಕಾರವಿಲ್ಲದಿರುವಿಕೆ; ವಿನಯಶೀಲತೆ: ಧರ್ಮಪುತ್ರನ ನಮ್ರತೆ ಭೀಮನಿಗೆ ಒಡಿಸಲಿಲ್ಲ (ವ್ಯಾಸವಿ. ೯೮): ನೆಕ್ಸುದೋವ್ ನಮ್ರತೆಯಿಂದ ಮಾರುತ್ತರವಿತ್ತನು (ಪುನರು. ೧೮೭). ೨. ನಮಸ್ಕಾರ ಮಾಡುವಿಕೆ; ನಮನ: ಜನಾಂಬಿ ಕಾನುಪಮಪದಾಬ್ಜಯುಗ್ಮದೊಳು ನಮ್ರತೆಯಿಂ ನಲವಿಂದೆ ಮಾಡಿದರ್ (ಮುಹಾನೇ. ೮–೪೩). [ಸಂ. ನಮ್ರತಾ]

ನಮ್ರತ್ವ (ನಾ). ೧. ಬಾಗಿರುವಿಕೆ; ಮಣಿದಿರುವಿಕೆ. ೨. ಬಾಗುವುದು: "ಬಾಗು – ನಮ್ರತ್ವೇ" (ಕವಿಮಾ). ೩. = ನಮ್ರತೆ. [ಸಂ. ]

ನಮ್ರಭಾವ (ನಾ). = ನಮ್ರತೆ ೧: ಅವರ ನಮ್ರಭಾವ ಎಂಥವರ ಮನಸ್ಸ ನ್ನಾದರೂ ಸೆಳೆಯಬಲ್ಲುದು (ರೂಪಿ). [ನಮ್ರ + ಭಾವ]

ನಮ್ರಮೂರ್ತಿ (ನಾ). ವಿನಯಶೀಲನಾದವನು; ಅಹಂಕಾರವಿಲ್ಲದ ವನು; ಹೆಮ್ಮೆಯಿಲ್ಲದವನು: ಪಡೆವಳ್ಳಂಗೆ ರಥಾಂಗಹೇತಿ ನಡೆಯ ಲ್ವೇಟ್ಟುದು ಬೇಗವಿದಾ ನಿನ್ನ ಪೆರ್ಮೆಯುಂ ನೀನೆನೆ ನಮ್ರಮೂರ್ತಿ ಬೆಸವೆತ್ತಾ ಬೀರವಟ್ಟಕ್ಕೆ ಮೆಟ್ಟಿಡೆ . . . ಪಡೆಯಂ ಕೈಸನ್ನೆಗಯ್ದುದ್ಧತಂ ನಡೆಯ ಲ್ವೇಟ್ಟುದ್ದಿದೆ (ಶಾಂತಿಪು. ೧–೧೧೭). [ನಮ್ರ + ಮೂರ್ತಿ]

ನಮ್ರವಚನ (ನಾ). ವಿನಯದಿಂದ ಕೂಡಿದ ಮಾತು: ಅಮಿತ ನಮ್ರ ವಚನಗಳಿಂದಲುಪಚರಿಸಲು (ಪಂಚಾರ. ೨–೮–೭). [ನಮ್ರ + ವಚನ]

ನಮ್ರಶಿರೋಧರೆ (ನಾ). ಕತ್ತನ್ನು ಬಾಗಿಸಿದವಳು; ಕೊರಳನ್ನು ತಗ್ಗಿಸಿ ದವಳು: ನಮ್ರಶಿರೋಧರೆ ಸೀತೆ ಲೋಕಸಂತ್ರಾಸಿಯ ರೂಪು ಪಾದನಖ ದರ್ಪಣದೊಳ್ ಪಲವಾಗಿ ತೋಱೆ ಕಂಡಾ ಸತಿ ಬೆರ್ಚಿ ಮುಚ್ಚಿದಳೆರಲ್ಕರದಿಂ ತರಲೇಕ್ಷಣಂಗಳಂ (ಪಂಪರಾಮಾ. ೯–೧೧೨).

[ ಸಂ. ನಮ್ರಶಿರೋಧರಾ ]

ನಮ್ರಸ್ಥ (ನಾ). ವಿನೀತನಾದವನು; ವಿನಯಶೀಲ: ಹಸ್ತವೆರಡರಲಾತು ಉಳಿಗರ್ಹಸ್ತಕ್ಕೆತ್ತರಿಯಾಣಗಳ ನಮ್ರಸ್ಥರಾಗೆಲ್ಲದ್ದು ನಿಂದರ ನೋಡಿ ಭೂಭುಜನು (ಬಿಜ್ಜಪು. ೮೦–೨೭). [ನಮ್ರ + –ಸ್ಥ]

ನಯ₁ (ನಾ). ೧. ಮೃದುವಾಗಿರುವಿಕೆ; ನುಣುಪು; ಸ್ನಿಗ್ಧತೆ; ಕೋಮಲತೆ; ಸೌಕುಮಾರ್ಯ: ತುಂಬಿ ಕುರುಳ್ ತಳಿರ್ ತಳಂ . . . ಕೊನೆ ಸೆಳ್ಳುಗುರ್ಗಳ್ ಕುಡಿ ಕೋಲ್ ನಯಂ ನಯಂ ನೆಲೆ ನೆಲೆ ಭಂಗಿ ಭಂಗಿ ಪದವಣ್ ಬೆಳವಾಗೆಯ್ ಪೆಚತಲ್ಲಿದೆಂತೊ ಕೋಮಲತೆ ಪೇೞೆಮನ್ನಿ ಯಳಂ ಮುಚ್ಚಿಗೊಂಡುದೂ ಸೂಱೆಗೊಂಡುದೋ (ಪಂಪಭಾ. ೩–೧೨): ತ್ರಿದಶನದೀಸಲಿಲದ ಪೂರದಿನಂಗನೆ ನಯದೊಳಭಿಷವೋತ್ಸವಮನೊಡ ರ್ಚಿದಳೆನೆ ದಿನಜನನಿಗೆ ರಾಗದಿನಿಕ್ಕಿದಳೂರ್ವಳಿಮುರಿ ಚಮರೀರುಹಮಂ (ಶಾಂತಿಪು. ೯–೦೭೪): ಸಂದಣಿಪ ತೋಳ್ಗಳಗ್ಗಳಿಪ ನಯಮಂ ಕಚೆಯ (ಇಹರ. ದೀ. ೩೨–೧೭): ಕೈಲಲೇಪದ ನಯದ ಹೊಗರಿನ . . . ರಾಳೋರ ಗನ ಕಂಡನಾಲಗೆಯವೊಲೆಸೆದುದಂಕುಶ ಭಟನ ಮುಷ್ಟಿಯಲಿ (ಕುಮ್ಮಾರ್ರಾ. ೩–೫೭): ನಯವಿರಬೇಕು ನುಡಿಗಡಣದಲ್ಲಿ (ಅಹಂದೇ. ೧೩೦–೦೦೦). ೨. ಪೆಂಪುವು; ಸೌಮ್ಯತೆ: ಮೇಲುದದ ಸೆಱಂಗಿನಿಂ ನಯದೆ ಬೀಸಿದನಾ ಮುನೀಂದ್ರಚಂದ್ರಮಂ (ಕಾದಂಪೂ. ೯೨೪): ನಯದಿಂದ ಕೊಗ್ಗಿ ಪಿಟಿ ಗೆಣ್ಣೆಯನುಪ್ಪಂ ಬೆರಸು ಕರ್ಣಕೂಲವ್ಯಥೆಗೆ . . . ಮಂದವಸಲೆಗಳ ದಳ ದೊಳೊಂದಂ ಕಿವಿಯೊಳ್ (ಲೋಕೋಪ. ೯–೬೫): ನಯದಿಂ ಕೋಕಿಳನಾದ ನಿಮ್ಮರಸರಿಂಕೇಱಾರಣಂ ಬಂದರ್ (ಅನಂಪು. ೧೧–೩೪). ೩. ಸೊಗಸು; ಅಂದ; ಕಳೆ; ಮನೋಜ್ಞತೆ: ನಯದಿಂ ರಾಜೇಂದ್ರಚಂದ್ರಂಗಭಿಷವ ವಿಧಿಯಂ ಮಾಡುವೆಂ ಚಂದ್ರಿಕಾವಾರಿಯಿನೆಂಬುತ್ತಲುಂ ತಣ್ಪೆಳಗಿನ ಬಳಗಂ ಸಿಂಪಿಸಲ್ . . .ಉದಯಿಸಿತುದಯಾದ್ರೀಂದ್ರದೊಳ್ ಚಂದ್ರಬಿಂಬಂ (ಕಾದಂಬ. ೩೭೭): ನಯಮಂ ಬೀಱುವ ಚಿತ್ರಪತ್ರ ನಿಧಿಂಬೂಟಸ್ತಂಭ ಭಿತ್ತಿಚ್ಛದಾಶ್ರಯದಾಲಕ್ಷಣಮಾನಮೇಯ ಗುಣರೇಖಾಶುದ್ಧಿ ಸರ್ವಾರ್ಥ ಸಿದ್ಧಿಯ ತದ್ರತ್ನವಿಮಾನವಲ್ಲಿಯುಮಿವಿಲ್ಲೆಂಬೀ ಜಸಕ್ಕಾದುದಾಶ್ರಯಂ (ಚಂದ್ರಪ್ರ. ೦೫–೯೩): ನಯದ ಹರಿನೀಳಕುಟ್ಟಿಮಮಯದ ವಿಮಾನಂಗಳಲ್ಲಿ (ಶಾಂತೀಶ್ವ. ೦೩–೧೧೭): ನಯಮುಳವಟ್ಟ ಜವ್ವನದ ರೂಢಿಯ ಗಾಡಿಯ ಪೆಂಡಿರೆಲ್ಲಮುಳ್ಳಿಯ . . . ಪೆಸರಾದ ಸಮಸ್ತವಸ್ತುವಲ್ಲಿಯೆ ಪಡೆಕೊಂದು ಪಟ್ಟಣದೊಳಿಲ್ಲೆನೆ ಪಟ್ಟಣವೊಪ್ಪಿ ತೋಱುಗುಂ (ಸೂಕ್ತಿಸು. ೪–೧೦೩). ೪. ಪ್ರೀತಿ; ಅನುರಾಗ: ಪುತ್ರವರಾರ್ಥಿಗಳಾಗಿ ತನ್ನ ಕಟ್ಟದಿರೊಳ ನಿಂದರಂ ನಯದೆ ನೋಡೆ ಮುನೀಂದ್ರನ ದಿವ್ಯದೃಷ್ಟಿಮಂತ್ರದೊಳ್ ಪೊದಳ್ದುದಾ ಸತಿಯರ್ಗಿರ್ವರೊಳಂ ನವಗರ್ಭವಿಭ್ರಮಂ (ಪಂಪಭಾ. ೧–೮೫): ನಯದಿಂ ಮುನಿಪತಿ ಜನದೀಕ್ಷೆಯನಂಬರಚರತನೂಭವಂಗನುನಯದಿಂ ದಯೆಗೆಯ್ದೆ (ಧರ್ಮಾಮೃ. ೮–೦೫೬). ೫. ನವಿರು; ನಾಜೂಕು; ಸೂಕ್ಷ್ಮತೆ; ಕಲಾತ್ಮಕತೆ: ನಯದಿಂದಂ ಬರೆದಂತೆಯುಂ ಕಡೆದು ತಂದಿ ಟ್ಟಂತೆಯುಂ . . . ಇರ್ಕುಂ ಜನಬಾಲರೂಪಮೆರ್ದೆಯೊಳ್ ಮುಂ ಕಂಡಗಲ್ದಿರ್ದರಾ (ಶಾಂತಿಪು. ೧೧–೮೫): ನಯದಿಂ ಪೆಂಪಸೊಱಲ್ದು ಪಿರ್ದಿಸದ ಪೊನ್ನಂ ಪ್ರೀತಿಯಿಂ ಪೇೞ್ದ . . .ಶತ್ರುವ್ಯತ್ಯಯುಕ್ಕಂ ಜಗತ್ತ್ರಯಮುಮಂ ಮುಂ ಬೆಲೆಯಾಗಿ ಪೋಯ್ತೆನೆ (ಚಂದ್ರಪ್ರ. ೧–೭೭). ೬. [ಕಾವ್ಯಮೀ] ಕಾವ್ಯದ

ಹತ್ತು ಗುಣಗಳಲ್ಲಿ ಒಂದು; ಸೌಕುಮಾರ್ಯ: ಮೃದುವರ್ಣ ಗಳಿಂದ ಕೂಡಿರುವಿಕೆ: ಇನಿತುಮಾರ್ವಿ ಮಾತ್ಯತಿಯೊಳೇ ಧರೆ ಬಣ್ಣಿಸೆ ಸಂದ ಶುಖವರ್ಮನ ಬಗೆ ಶಾಂತಿವರ್ಮನ ನಯಂ (ಜಗವಿ. ೧-೧೧). ೭. [ಸಂಗೀತ] ಮಾರ್ದವ; P ೧. ವೀಣೆಯ ತಂತಿಗೆ ಅನ್ವಯಿಸಿದಾಗ: ವೀಣೆಯ ಕಕುಭ (ಇಂದಿನ 'ಕುದುರೆ', 'ಬ್ರಿಡ್ಜ್')ದ ಮೇಲೆ ಲಾಕ್ಷಾ ರಸದಿಂದ ಅಂಟಿಸಿದ ಲೋಹದ ಪತ್ರಿಕಾ. ಇದಿನ 'ರೇಕು' ಎಂಬ ಭಾಗ. ವೀಣಾತಂತಿಯಲ್ಲಿ ನಾದಸಮೃದ್ಧಿಯನ್ನೂ ಸ್ವರಕ್ಕೆ ನುಣು ಪನ್ನೂ ಜೀವವನ್ನೂ ಕೊಡುವ ಜೀವಾ (ಇಂದಿನ 'ಜೀವಾಳ') ಎಂಬ ರೇಷ್ಮೆ, ಹತ್ತಿ ಅಥವಾ ಬಿದಿರಿನ ನೂಲು. ಇದಕ್ಕೂ ತಂತಿಗೂ ಸುಶ್ಲಿಷ್ಟವಾಗಿರುತ್ತದೆ. ೨. ಸ್ವರಕ್ಕೆ ಅನ್ವಯಿಸಿದಾಗ: ಸ್ವರದಲ್ಲಿ ಸ್ವನಿಷ್ಠವಾಗಿರುವ ನಾದಸಮೃದ್ಧಿಗೂ ರಂಜನೆಗೂ ಆಸ್ಪದ ವಾಗಿರುವ ಆವರ್ತಕಧ್ವನಿಗಳ ವ್ಯೂಹದಲ್ಲಿ ಪರಸ್ಪರ ಸಂಘರ್ಷವೂ ವಿರೋಧವೂ ಇಲ್ಲದಿರುವುದು; ಇದರಿಂದಾಗಿ ಸ್ವರವು ಒರಟಾಗಿರದೆ ನುಣುಪಾಗಿರುತ್ತದೆ. ೩. ಗಾನವ್ಯವಹಾರಕ್ಕೆ ಅನ್ವಯಿಸಿದಾಗ: ಒಂದು ಸ್ವರಶ್ರೇಣಿಯಲ್ಲಿರುವ ರಾಗಭಾವವನ್ನು ಮುಂದಿನ ಸ್ವರ ಶ್ರೇಣಿಯಲ್ಲಿರುವ ರಾಗಭಾವಕ್ಕೆ ಒಯ್ಯುವ ಅಗ್ರಸ್ವರ. ಹೀಗೆ ನಯಶಬ್ದವು ಸಂಗೀತ ವರ್ಣನಾ ಸಂದರ್ಭಗಳಲ್ಲಿ ಬೇರೆ ಬೇರೆ ಅರ್ಥ ಗಳಲ್ಲಿ ಪ್ರಯುಕ್ತವಾಗಿರುವುದು ಕಂಡುಬರುತ್ತದೆ: ಪದ ಕೊರ ಲಿಂಪನವೃಕೆಯ [ಕೊಂಕು ನ]ಯಂ ಗಮಕಂಗಳಿಂ ಪೊದರ್ಕೊದಳೆಟು ದಿಕ್ಕಿದಂತೆ ಸುತಿಯೊಳ್ ಸಮವಾಗಿರೆ ಜಾಣನಾಂತಿ ಮೆಚ್ಚಿದ ತಿಱದಾಸ ವಟ್ಟಸದಕ್ಷಿನವೋಲ್ ದೊರೆವೆತ್ತು ದೂಱದಾಱದ ದನಿ ಮುಟ್ಟೆ ಮೇನಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್ (ಪಂಶಥಾ. ೭-೧೮): "ನುಣುಪು" (ಪಂಪದೀ. ೨೬೬); ಘನ, ನಯ ಮತ್ತು ದೇಶ್ಯಗಳನ್ನು ಹಾಡುವುದರಲ್ಲಿ ಅವರು ಚೆನ್ನಾಗಿ ನುರಿತವರು (ಸಂಗೀತ. ೪೩).

**ನಯನಾಜೂಕು**, **ನಯನಾಜೋಕು** = ಕೋಮಲತೆ; ಸೂಕ್ಷ್ಮತೆ: ಸೂಕ್ಷ್ಮರೇಖಾವಿನ್ಯಾಸಗಳೊಂದಿಗೆ ಜಯಪುರ ಕೃತಿಗಳು ನಯನಾಜೂಕಿನ ಕೃತಿಗಳಾಗಿದ್ದವು (ಭಾರದ. ೫೩೦): ಅವಳು ಸ್ವಲ್ಪ ನಯ — ನಾಜೋಕು (ಫ್ಯಾಷನ್)ಗಳಿಂದ ಇರಲೆಂದು ನನ್ನ ಆಸೆ (ಗಂಸಮ. ೨೨). **ನಯ ಮಾಡು** = ನುಣುಪುಗೊಳಿಸು: ಅವರು ತೋಪರ ಹಾಕಿ ಮರಗಳನ್ನು ನಯ ಮಾಡಿದರು (ಗಂಪ್ರ. ೯೯). **ನಯವಾಗು** = ೧. ನುಣ್ಣಗಾಗು; ಮೆತ್ತ ಗಾಗು: ಹಿಟ್ಟು ಬಹಳ ನಯವಾಗಬೇಕೆಂದಿಲ್ಲ (ಅಡುಸೌ. ೯೬). ೨. ಕಲಾತ್ಮಕತೆಯಿಂದ ಕೂಡಿರು; ನಾಜೂಕಾಗಿರು: ಹಣಗೆ ಮತ್ತು ಕಸೂತಿ ಕೆಲಸಗಳನ್ನು ನಯವಾಗಿ ಮಾಡಿಕೊಡುತ್ತಾಳೆ (ಮುಡಿಹಕ್ಕಿ. ೮೬).

[ ದೇ.: ತಮಿ. ಮಲ. ತುಳು. ತೆಲು. ನಯ ]

**ನಯ್ಯ** (ನಾ). ೧. ಒಯ್ಯುವಿಕೆ; ತಲುಪಿಸುವಿಕೆ. ೨. ನಿರ್ವಹಿಸುವಿಕೆ. ೩. ನಡವಳಿಕೆ; ವರ್ತನೆ; ಗುಣ. ೪. ವಿವೇಕಯುತವಾದ ನಡವಳಿಕೆ; ಯೋಗ್ಯವಾದ ವರ್ತನೆ; ವಿವೇಕ; ಸದ್ಗುಣ; ದೂರದೃಷ್ಟಿ: ಜನ ನಿನ್ನ ಮೂರ್ತಿ ಜನ ನಿನ್ನ ನಯಂ ಜನ ನಿನ್ನ ಸಮತೆ . . . ಜನ ನಿನ್ನ ಕಾಣ್ಕೆ ವರ್ಣಿಸಲಳವೇ (ಪುಷ್ಪಪು. ೧೧-೫೭); ಕಲಿತರ್ಕ ಬಿಲ್ಬಿದ್ದೆಯಂ, ವೇದಮುಂ ನೀತಿ ನಯ ವಿನಯ ನಿಯತಿಯಂ ಶ್ರೀರಾಮಾ. ೨೫-೬೭೦); ಸತ್ಯಭಕ್ತಿಯ ಸೇವೆಗೆಯ್ದಮ ಭರತಂ ನಿತ್ಯ ಜೀವನದಿ ನೀವಾ ನಯವನನು ಸರಿಸೊ (ಮಂಕುಕ. ೭೧೦). ೫. ಒಳ್ಳೆಯತನ; ವಿನಯ; ಸೌಜನ್ಯ; ಸಭ್ಯತೆ: ನಯದಿಂದಮಾ ಸರೋರುಹನಯನೆಯನಳವಡಿಸಲಾರ್ತನಿಲ್ಲಳ ವಡಿಪಂ ಭಯದಿಂದಂ (ಪಂರಾಮಾ. ೯-೦೫೭); ನಯದಿ ಗಂಧರ್ವವಿದ್ಯಾ ಪ್ರವುಖನತಿನುತಂ ಬಂದು (ನೇಮಿಪು. ೩-೦೭೦); ನಯದಿಂದೆಳ್ದು ನತಾಸ್ಯ ನಾಗಿ (ಗಿರಿಕ. ೧೦-೭೮); ನಯದಿಂ ನಿನ್ನೊಳೊಡಂಬಡಂ ಪಡೆಯದಿಂ ದೌಶ್ಚಿಕ್ಯದಿಂ ತಂದ ಸಲ್ಗೆಯ ನೀಂ ಮನ್ನಿಸು (ಅಜಿಂಪು. ೦೨-೮೮): ನಯ ವಿಲ್ಲದರೊಳ್ ನಯವಮಂ ಬಯಸಲ್ಕೇಂ ಬಪ್ಪುದುಂಟೆ (ನಳಚಂ. ೨೦೩): ನಯ ವಿದ್ದಲ್ಲಿ ಭಯವಿಲ್ಲ (ಗಾದೆ). ೬. ಭಕ್ತಿ; ಪೂಜ್ಯಭಾವ: ನಯದಿಂ ಜಿನೇಂದ್ರ ಚರಣದ್ವಯಮಂ ಚಿತ್ತದೊಳೆ ನಿಲಿಸಿ (ಧರ್ಮಾಮೃ. ೩-೪೫). ೭. ಔಚಿತ್ಯ; ನ್ಯಾಯ; ನೀತಿ: ನಯಮುಂ ನಂಬುವುದನ್ನ ಡೇಟ್ಟ ಸಕಿಮಾ ಕೈಕೊಂಡಂ (ಪಂಪಭಾ. ೧-೭೭):: ಸನ್ಮಾರ್ಗಕ್ಕೆ ಮುದ್ದಾರದೆ ನಯಮುಂ ಸಾರದನಾವ ಕಾಳೆಗದೊಳಂ ಕಣ್ಣಾರದು ನಾರದು (ಪಂರಾಮಾ. ೩-೦೮): ನಯವಿದು ಶೂರಂ ಭೇದೇನ ದೋಜಯೇತ್ತೆಂಬ ನೀತಿಯಿದನಱಿದು ನಯಜ್ಞನಯ ವಿದ್ಯಾರ್ಜದ ನಮ್ಮೊಳ್ ಪ್ರಯೋಗಿಸಲ್ ಬಲ್ಲ ಸಚಿವರಾಮ ದೇವಾ (ಮುಹಾನೇ. ೦೨-೦೬೨). ೮. ಸರಿಯಾದ ರೀತಿ; ಯೋಗ್ಯವಾದ ವಿಧಾನ. ೯. ರಾಜನೀತಿ; ರಾಜ್ಯಭಾರಕ್ರಮ; ಮುತ್ಸದ್ದಿತನ: ಇರ್ಪುದಲ್ತು ನಯವಿನ್ನೀ ಪೊಟ್ಟೆ ಪೊಟ್ಟಾಗೆ ಪೀನೊಡಗೊಂಡುಯ್ವುದು ಕನ್ನೆಯಂ ತಡೆಯದಿರ್ (ಪಂಪಭಾ. ೫-೨೦); ನಯವಂ ಪೇಟ್ದೊಡೆ ಸಂಧಿಮಾಡಿ ಜಿಯದಿರ್ಕೆಂತೇದಾರೊಳ್ (ಗದಾಯು. ೪-೬೫): ಕೀರ್ತಿ ದಿಗ್ವಳಯದಾತಂ ನುಡಿ ಮೇರುಶೈಲಲಿಖಿತಂ ಧರ್ಮ್ಮಂ ಜಗನ್ಮಿತ್ರ ಭೂತಳಮುದ್ಯಂ ಚರಿತಂ ನಯಂ ಜನನುತಂ ಶ್ರೀಸಿಂಹಭೂಪಾಳನಾ (ಎಕ. VIII. ಸೊರಬ. ೦೮೪-೦೦ : 1083): ಅಮಳಗುಣನಮಳಕುಳನತ್ಯಮಳಚರಿತ್ರೈಕನಿಳಯನಮಳ ನಯಪ್ರಕ್ರಮನಮಳಯಶೋರೋಚಿಸ್ಸಮಾವೃತಾಶಾಳಿಯೆನಿಸಿದಂ ರೇಚ ರಸಂ (ಎಕ. VII. ಶಿಕಾರಿ. ೧೨೩-೩೭; 1159); "ನೀತಿ" (ಶಾಶಮಂ. ೨೭೯ ಕೋಶ): ನಯದಿಂ ಜನಕ್ಕೆ ಪುಣ್ಯೋದಯದಿಂ ಪಾರ್ಥಿವಜಪಕ್ಕೆ . . . ದಯೆಮಾಡುವೆ ನೀನೆ ದಲ್ ಚಮತ್ಕೃತಿಯೊದವಂ (ಚಂದ್ರಪು. ೯-೩೪). ೧೦. ಯೋಜನೆ; ಉಪಾಯ; ಹಂಚಿಕೆ; P ಸಾಮ, ದಾನ, ಭೇದ ಮತ್ತು ದಂಡ ಎಂಬ ನಾಲ್ಕು ಬಗೆಯ ಚತುರೋಪಾಯಗಳು: ಸಾಮಭೇದಮುಮಪ್ರದಾನದಂಡಮೆಂಬ ನಾಲ್ಕುಂ ನಯಂಗಳನಱಿದು (ಬಂಹರಿ. ೭-೦ ವ). 'ನಯವಿವೇಕ' ಪರಾ. ೧೧. ಶಾಸ್ತ್ರ; ತತ್ತ್ವ; ಸೂತ್ರ; ನಿಯಮ; ಸಿದ್ಧಾಂತ: ಪೂರ್ವಮೀಮಾಂಸೆಯು ಸಂಶಯ ಗ್ರಸ್ತವಾದ ಅಥವಾ ಅನೇಕಾರ್ಥಗರ್ಭಿತವಾದ ವೇದವಾಕ್ಯಗಳನ್ನು ಸರಿಯಾಗಿ ಅರ್ಥಮಾಡುವುದಕ್ಕೆ ಉಪಯುಕ್ತವಾದ ರೀತಿ ನಯಗಳನ್ನು ಉದಾಹರಿಸುತ್ತ, ಧರ್ಮ, ಸ್ವರೂಪವಿವೇಚನೆಯಲ್ಲಿ ತೊಡಗಿರುವ ದರ್ಶನವಾಗಿ ಏರ್ಪಟ್ಟಿದೆ (ತತ್ತ್ವಶಾ. ೨೮೫). ೧೨. ಕಿರುದ್ದವಿಕೆ. 'ನಯನಿಪುಣ' ಪರಾ. ೧೩. [ನಾಟ್ಯ] ಲಯಬದ್ಧವಾದ ಗತಿ; ಭಾವಸೂಚಕವಾದ ಗಮನ: "ಅನುಕರಣೆ ನಯಮೆನಿಕು" (ಮುಂಗರಾ. ೨೪-೬): ರಸಭಾವಾಭಿನಯಂಗಳ್ ಪೊಸವೆ . . . ನಯಂ ಪೊಸವೆ ಕರಣಂಗಳುಂ ನಿಪ್ಪೊಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮಂ (ಆದಿಪು. ೯-೨೫); ಪದಗತಿ ಹಸ್ತಂಗಳ ಚಾಲಯಮತಿ ಕಯಮಂಗಹಾರದುಲ್ಲಾಸಂ ದೃಷ್ಟಿಯ ಭೇದಂ ಕರಣಂಗಳ ನಯಂ ನಮ ಬಡೆಯ ನರ್ತನವರಿಯದಿಂದಂ (ಮುಹಾನೇ. ೧೫-೫೯). ೧೪. [ಜೈನ] (ತಿಳಿಯುವವನ ಅಭಿಪ್ರಾಯಕ್ಕೆ ವಿಷಯವಾದ) ವಸ್ತುವಿನ ಏಕ ದೇಶ ಜ್ಞಾನ; P ಜೈನಸಿದ್ಧಾಂತದಲ್ಲಿ ಸಪ್ತಭಂಗಿಯನ್ನು ಅಂಗೀ ಕರಿಸಿರುವುದರಿಂದ ಯಾವುದರಲ್ಲೂ ನಿರ್ಣಯವಿಲ್ಲದಿರುವುದಾಗಿ ಲೋಕವ್ಯವಹಾರವು ನಡೆಯುವುದು ಕಷ್ಟವಾಗುತ್ತದೆ. ಹೀಗಾಗಿ, ನಯವನ್ನು ಅಂಗೀಕರಿಸುತ್ತಾರೆ. ಹೇಗೆಂದರೆ ಉದಾಹರಣೆಗೆ ಗಡಿಗೆ ಇದೆಯೆ ಎಂದು ಕೇಳಿದರೆ ಗಡಿಗೆಯು ಇರುವುದೂ ಸಂಭವಿಸ ಬಹುದು ಎಂದು ಜೈನಸಿದ್ಧಾಂತದಂತೆ ಹೇಳಬೇಕು. ಇಲ್ಲಿ ನಿರ್ಣಯ ವಾಗುವುದಿಲ್ಲ. ಆದರೆ ಇದು ಪ್ರಮಾಣವಾಗಿದೆ. ಇದರಲ್ಲಿ ಗಡಿಗೆ ಯಿರುವುದು ಎಂಬ ಒಂದು ಅಂಶವನ್ನು (ಇರಬಹುದು ಎಂಬು ದನ್ನು ಬಿಟ್ಟು) ಗ್ರಹಿಸಿದರೆ ಆಗ ಗಡಿಗೆ ಇದೆಎಂದು ಅರ್ಥವಾಗುತ್ತದೆ.

ಹೀಗೆ ಒಂದಂಶವನ್ನು ಗ್ರಹಿಸುವುದು ನಯ. ಒಟ್ಟಿನಲ್ಲಿ ಸ್ಯಾದ್ವಾದದಲ್ಲಿ ಪ್ರಮಾಣವು ಸಂಶಯದಂತಿದ್ದರೂ ವ್ಯವಹಾರಕ್ಕೆ ನಯವು ಬೇಕೇಬೇಕು. ಆದುದರಿಂದಲೇ ಜೈನಸಿದ್ಧಾಂತವು ಸಂಶಯ ಸಿದ್ಧಾಂತವಲ್ಲ. ಒಂದಂಶವನ್ನು ಪರಿಗ್ರಹಿಸಿ ಲೋಕವ್ಯವಹಾರವನ್ನು ನಡೆಸಬಹುದು. "ನಯ- ೨ : ದ್ರವ್ಯಾರ್ಥಿಕ, ಪರ್ಯಾಯಾರ್ಥಿಕ (ತತ್ತ್ವಪ್ರ. ೧-೬ ವ್ಯಾ-೧೧) ; ನಯ-೪ : ಭಿನ್ನಭೇದನಯ, ಅಚ್ಛಿನ್ನಭೇದ-, ತ್ರಿಕ-, ಚತುರ್-(ಜೈಧ. ೧೫೭). ನಯ-೭ : ನೈಗಮ, ಸಂಗ್ರಹ, ವ್ಯವಹಾರ, ಋಜುಸೂತ್ರ, ಶಬ್ದ, ಸಮಭಿರೂಢ, ಏವಂಭೂತ (ರತ್ನಕ. ೬೨೮) ; ನಯ-೯ : ನಯ-೨+ನಯ-೭. ಅಂತರ್ಭೇದಗಳು (i) ದ್ರವ್ಯಾರ್ಥಿಕನಯದಲ್ಲಿ–ಕರ್ಮೋಪಾಧಿ ನಿರಪೇಕ್ಷ, ಸತ್ತಾಗ್ರಾಹಕ, ಭೇದವಿಕಲ್ಪನಿರಪೇಕ್ಷ ಕರ್ಮೋಪಾಧಿ ಸಾಪೇಕ್ಷ, ಉತ್ಪಾದವ್ಯಯಸಾಪೇಕ್ಷ, ಭೇದಕಲ್ಪನಾಸಾಪೇಕ್ಷ, ಅನ್ವಯ, ಸ್ವದ್ರವ್ಯಾದಿ ಗ್ರಾಹಕ, ಪರದ್ರವ್ಯಾದಿ ಗ್ರಾಹಕ, ಪರಮ ಭಾವಗ್ರಾಹಕ (೧೦). (ii) ಪರ್ಯಾಯಾರ್ಥಿಕನಯದಲ್ಲಿ – ಅನಾದಿ ನಿತ್ಯ, ಸಾದಿ ನಿತ್ಯ, ಅನಿತ್ಯಶುದ್ಧ, ಅನಿತ್ಯ ಅಶುದ್ಧ, ಅನಿತ್ಯ–ಶುದ್ಧ, ವಿಭಾವ–ಅನಿತ್ಯ–ಅಶುದ್ಧ (೬), (iii) ನೈಗಮನಯದಲ್ಲಿ–ಭೂತ, ವರ್ತಮಾನ, ಭಾವಿ, (iv) ಸಂಗ್ರಹನಯದಲ್ಲಿ–ಶುದ್ಧ, ಅಶುದ್ಧ (v) ವ್ಯವಹಾರನಯದಲ್ಲಿ–ಶುದ್ಧಾರ್ಥಭೇದಕ. ಅಶುದ್ಧಾರ್ಥ ಭೇದಕ (vi) ಋಜುಸೂತ್ರನಯದಲ್ಲಿ–ಸೂಕ್ಷ್ಮ, ಸ್ಥೂಲ (ದೇವ ಸೇನಕೃತ ನಯಚಕ್ರ–ಕನ್ನಡ ರತ್ನಕರಂಡಕ, ೬೨೮)." (ಶ್ರೀವತ್ಸ. ೨೨೯): ಪ್ರಮಾಣನಯನಿಕ್ಷೇಪಾನುಯೋಗಸದಾದಿಗಳಿಂ ನಿಶ್ಚಯಿಸಿದ ಸಪ್ತತತ್ತ್ವಂಗಳೊಳಗೆ ಚೇತನಾಲಕ್ಷಣಮಪ್ಪುದು ಜೀವತತ್ತ್ವಮಾಜೀವ ತತ್ತ್ವಮುಂ ಸಂಸಾರಮುಕ್ತಭೇದದಿಂ ದ್ವಿವಿಧಮಕ್ಕುಂ (ಆದಿಪು. ೧೦-೬೩ ವ): ನಯನಿಕ್ಷೇಪಪ್ರಮಾಣಂಗಳೊಳೆ ಪಡೆದನೈಕಾಂತಸಿದ್ಧಿಪ್ರತಿಜ್ಞಾಜಯಮುಂ (ಚಂದ್ರಪು. ೧-೪) ; ಅಧಿಗಮೋಪಾಯಮಂ ನ್ಯಾಸಮೆಂಬುದು ಅದನರಿವಭಿ ಪ್ರಾಯಮಂ ನಯಮೆಂಬುದು (ತಸೂವ್ಯ. ೩೦): ದ್ರವ್ಯಾರ್ಥಿಕಮುಂ ಪರ್ಯಾ ಯಾರ್ಥಿಕಮುಂ ನೈಗಮಮುಂ ಸಂಗ್ರಹಮುಂ ವ್ಯವಹಾರಮುಂ ಋಜು ಸೂತ್ರಮುಂ ಶಬ್ದಮುಂ ಸಮಭಿರೂಢಮುಂ ಏವಂ ಭೂತನಯಮುಮೆಂದು ನಯಮೊಂಭತ್ತುಭೇದಮಕ್ಕುಂ (ಶಸಾರ. ೮೨) ; ಸಮಗ್ರ ಪದಾರ್ಥವನ್ನು ತಿಳಿಯುವುದು ಪ್ರಮಾಣ: ಏಕದೇಶವನ್ನು ತಿಳಿಯುವುದು ನಯ ಎಂದು ಪರಿಭಾಷೆ (ಹಿಂದಶಾ. ೬೬) ; ಪ್ರಮಾತೃವಿನ ಅಭಿಪ್ರಾಯಕ್ಕೆ ವಿಷಯವಾದ ಯಾವುದೊಂದೇ ಭಾವವನ್ನು ಅನುಲಕ್ಷಿಸಿ ವಿಷಯವನ್ನು ನಿರೂಪಿಸುವುದು ನಯವೆನಿಸುವುದು (ಜೈನಧ. IX. ಉಪೋದ್ಘಾತ) ; ವಸ್ತುವಿನ ಅಂಶವನ್ನು ಗ್ರಹಿಸುವ ಜ್ಞಾತೃವಿನ ಅಭಿಪ್ರಾಯವು ನಯವು. ವಸ್ತುವನ್ನು ನಾನಾ ಸ್ವಭಾವಗಳಿಂದ ವ್ಯಾವರ್ತನ ಮಾಡಿ ಒಂದು ಸ್ವಭಾವದಲ್ಲಿ ತಂದು ನಿಲ್ಲಿಸು ವುದು (ನಯತೀತಿ ನಯಃ) ನಯವು (ಜೈನಧ. ೪). 'ನಯಮಾರ್ಗ' ಪರಾ.

**ನಯದ ಘಟ್ಟ** = ಸೌಜನ್ಯದ ಪುಂಜ ; ವಿನಯದ ಕಣ ; ಒಂದು ಬಿರುದು : ವನಧಿಪರೀತ ಧಾತ್ರಿ ನೆಱೆ ಬಣ್ಣಿಸುಗುಂ . . . ಗುಣ ರತ್ನರಾಶಿಯುಂ ಮನಸಿಜರೂಪನುಂ ನಯದ ಘಟ್ಟಯುನಗ್ಗದ ಕಾಮಿಸೆಟ್ಟ ಯುಂ (ಕಇ. IV, ೦-೪೭ : 1204). **ನಯಧೀರ** = ಒಂದು ಬಿರುದು : ಶ್ರೀಕಲಿನೆಲಬಪ್ಪಾಧಿರಾಜ ಶ್ರೀಕೊಲ್ಲಿಯರಸರಾ ತತ್ಪುತ್ರಃ ನಿಜ ರಾಮ [ನುಂ] ನಯಧೀರನುಂ ಒಡನಿಟ್ಟು ತಿಪ್ಪೆರುರಾನ್ ಬ್ರಹ್ಮದೇಯ ಕೊಟ್ಟಮ್ (ಎಕ. VI(R), ಶ್ರೀರಂಗ. ೬೬-೧೫ ; ?). **ನಯವಾಗು** = ತಕ್ಕುದಾಗು ; ಉಚಿತವಾಗು : ಯೋಗ್ಯವಾಗು : ನಯವಾದುದು ನಯಮಾಗಿ ಕೂಡೆ ಪೊಳೆಯಲ್ ನಿಕ್ಷೇಪಮಾಕ್ಷೇಪಮಾದಯವಿಲ್ಲೆಂದೆನಿಸಲ್ (ಪುಷ್ಪಪು. ೧-೪). [ಸಂ.]

**ನಯಂಗುಂದು, ನಯಗುಂದು** (ಕ್ರಿ). ಕಾಂತಿಗುಂದು ; ಕಳೆಗುಂದು : ಬೇಸಗೆಯ ಬಿಸಿಲ ಸೋಂಕಿಂ ವಾಸಂತೀವಲ್ಲಿ ಸರಡುವಿರ್ದಂತಿರೆ ನಿನ್ನೀ ಸುಕುಮಾರಲತಾಶಿವಿಳಾಸಮಿದೇಕಾರಣಂ ನಯಂಗುಂದಿದುದೋ (ಮಲ್ಲಿಪು. ೪-೭). **ನಯಗುಂದು** : ತನ್ನರೆಯನತಿಚಿಂತೆಯಿಂ ಜಲಧಿ ಮುಳುಗಿದನು ಯೆನ್ನೆಂದು ಕಾಣ್ಬನೋಯೆನುತಲತಿತಾಪದಿಂದ ನಯಗುಂದಿ ತಲೆವಾಗಿ ಮುರುಟಿದಪೊಲು ಕುಮುದಾಳಿ ಮುಗಿಯುತೊಡನೆ (ನವಮೋ. ೧೧-೪೦).

[ ನಯ$_1$ + ಕುಂದು$_1$ ]

**ನಯಂಗೆಡು** (ಕ್ರಿ). ಅಂದಗೆಡು ; ಕಳೆಗೆಡು : ಕಿಚ್ಚು ತಗುಳ್ದ ಮರದಂತೆ ನಯಂಗೆಟ್ಟು (ಧರ್ಮಾಮೃ. ೧-೧೬೮). [ ನಯ$_1$ + ಕೆಡು$_1$ ]

**ನಯಂಬಡೆ, ನಯವಡೆ** (ಕ್ರಿ). ೧. ಮೃದುತ್ವವನ್ನು ಪಡೆ; ನುಣುಪನ್ನು ತಳೆ : ಓದಿನೊಳ್ ಮಾಧುರ್ಯಂಬಡೆದು ಪಾಡಿನೊಳ್ ಪರಿವಡೆದು ನೋಡಿಯೊಳ್ ನಯಂಬಡೆದು (ಗಿರಿಕ. ೨-೧೦೫ ವ). ೨. ಆನಂದವನ್ನು ಪಡೆ ; ಚೆಲುವನ್ನು ತಳೆ ; ಸೊಗಸಾಗಿರು : ಮೊಗ ರಾಗಮಂ ಪಡೆಯೆ ನೋಟಮನಂಗನ ಬಿಲ್ಲ ಬಲ್ಮೆಯಂ ಪಡೆಯೆ ನಯಂ ನಯಂಬಡೆಯೆ (ಆದಿಪು. ೨-೪) ; ದಿಟ್ಟಿಗೆ ನಯಂಬಡೆದ ಪೊಚ್ಚಪೊಸ ದೇಸೆಯಂ (ಅಜಿಪು. ೪-೭ ರಗಳೆ): ಮೆಲ್ಲಿದುವಾಗಿ ನಯಂಬಡೆದೆಲ್ಲಿಯುಮಾ ತಾಮ್ರಭಾವಮೆಸೆದಿರೆ ಪಲವುಂ ಸಲ್ಲಕ್ಷಣಂಗಳಿಂದುತ್ಫುಲ್ಲಾಂಬುಜವದನೆಯಡಿದಳಿರ್ ಸೊಗ ಯಿಸುಗುಂ (ಬಂಹರಿ ೭-೨೧) ; ಪಯಗತಿ ಹಸ್ತಂಗಳ ಚಾಲಯಮತಿಶಯಿ ಪಂಗಹಾರದುಲ್ಲಾಸಂ ದೃಷ್ಟಿಯ ಭೇದಂ ಕರಣಂಗಳ ನಯಂ ನಯಂಬಡೆಯೆ ನರ್ತಿಪಮರಿಯರಿಂದಂ (ಮುಹಾನೇ. ೧೫-೫೯). **ನಯವಡೆ** : ೨. ಪಳುಕಿಂದ ನಯವಡೆದ ನೆಲಗಟ್ಟು (ಸೋಮಚ. ೨-೧೯). ೩. ಸೌಮ್ಯತೆ ಯನ್ನು ಪಡೆ ; ಶಾಂತವಾಗಿರು : ಕಂಗಳ ಕಡಲಿಡುವ ಕರುಣಾಮೃತದ ನಯವಡೆದ ನಯನಾಂಬುಜದ ಮೃಡನನು ಕಂಡು (ನಿಛಾಗ. ೪-೩-೨೭).

[ ನಯ$_1$ + ಪಡೆ$_1$ ]

**ನಯಂಬೆಱು** (ಕ್ರಿ). ೧. = ನಯಂಬಡೆ ೨ : ಪಗೆವನೊಳ್ ತಡೆಯದ ತಾಗುವವ್ಮ ರಥಸಮಂ ಕೇಳ್ದು ವಿಮಾನಾಜಿರದೊಳಿರ್ದ ನಿಮ್ಮ ಸೊಸೆ ಬಾಡಿದ ಸಸಿ ಮೞೆಯಿಂ ಪೆತ್ತಂತೆ ರಾಗಿಸಿ ನಯಂಬೆತ್ತಿಂತೆಂದಳ್ (ಶಾಂತಿಪು. ೬-೩೩ ವ). ೨. ಇಂಪನ್ನು ತಳೆ ; ಮಧುರವಾಗಿರು : ಎರಡುಂ ಬಂಚಂಗಳಿಂದಿಂಚರಮೊಸರ್ವಿನೆಗಂ ಕಿನ್ನರದ್ವಂದ್ವಮೊತ್ತುತ್ತಿರೆ ನಾನಾ ಭಂಗಿಯಿಂ ನಾರದತನಯೆ ನಯಂಬೆತ್ತುದೆಂಬಂತೆ ಪಾಡುತ್ತಿರೆ (ಕಾದಂಉ. ೧೬೮). [ ನಯ$_1$ + ಪೆಱು$_1$ ]

**ನಯಕಾರ** (ನಾ). ಪಳಗಿಸುವವನು ; ತರಬೇತಿಗೊಳಿಸುವವನು ; ಶಿಕ್ಷಕ : ಮೂವತ್ತಿರ್ವರ್ ನಯಕಾರರೀತನ ಗಜವ್ರಾತಂಗಳಂ ತಿದುರ್ಪವರ್ (ಶಾಂತಿಪು. ೫-೧೧೩). [ ಸಂ. ]

**ನಯಕಾರಿಣಿ** (ನಾ). (ಔಚಿತ್ಯದಿಂದ) ಸುಖವನ್ನುಂಟುಮಾಡುವವಳು ; (ಉಚಿತ ವರ್ತನೆಯಿಂದ) ಸಂತೋಷವನ್ನುಂಟುಮಾಡುವವಳು : ಎಣೆಯಿಲ್ಲೆನಿಸುವ ಸಲ್ಲಕ್ಷಣಯುತ ಕುಲಜನಿತವಿನುತವನಿತೆಯನಗಧಾರಿ ಣಿಯಂ ನಯನಮನೋಹಾರಿಣಿಯಂ ರುಗ್ಮಿಣಿಯನಖಿಳ ನಯಕಾರಿಣಿಯಂ ಕಂಡು (ಬಂಹರಿ. ೭-೨೦). [ ಸಂ. ನಯಕಾರಿಣೀ ]

**ನಯಕ್ರಮ** (ನಾ). ರಾಜ್ಯವ್ಯವಹಾರದ ನೀತಿ (?) : ಪರಹಿತದೊಳ್ ನಯಕ್ರಮದೊಳಾಯತಿಯೊಳ್ ಸುಚರಿತ್ರದೊಳ್ ದಯಾಪರಿಣತಿಯೊಳ್ . . . ಸುಜನಾಗ್ರಣಿ ಶಾಂತಿವರ್ಮ . . . ನಿನಗಾರ್ ದೊರೆ (ಪುಷ್ಪಪು. ೧-೮೦).

[ ನಯ$_2$ + ಕ್ರಮ ]

**ನಯಗಂಬಳಿ** (ನಾ). ನುಣುಪಾದ ಕಂಬಳಿ ; ನಯವಾದ ಉಣ್ಣೆಯ ಕಂಬಳಿ : ಅವರ ಮನೆಯ ಹಜಾರದಲ್ಲಿ ನಯಗಂಬಳಿಯನ್ನು ಹಾಸಿದ್ದಾರೆ (ರೂಢಿ). [ ನಯ$_1$ + ಕಂಬಳಿ ]

**ನಯಗಾತಿ** (ನಾ). ಉಪಾಯಗಾತಿ; ಚೂಪುಗಾರಿಕೆಯುಳ್ಳವಳು : ಆಕೆ ತುಂಬಾ ನಯಗಾತಿಯಾದ್ದರಿಂದ ಕೆಲಸವನ್ನು ಸುಲಭವಾಗಿ ಸಾಧಿಸಿದಳು (ರೂಢಿ). [ ನಯ$_1$ + -ಗಾತಿ$_2$ ]

**ನಯಗಾರ** 'ನಯಗಾಱ' ನೋ.

**ನಯಗಾರೆ** (ನಾ). ನುಣುಪಾಗಿ ಅರೆದ ಗಚ್ಚು,-ಗಾರೆ : ನಯಗಾರೆ: ಮೆತ್ತಿಗೆ; ಅಂಟುವುಡಿ; ಅಂಟುಲೇಪ (Compo. ಇಂಕೆನಿ). [ ನಯ$_1$ + ಗಾರೆ$_1$ ]

**ನಯಗಾಱ, ನಯಂಗಾಱ** (ನಾ). ೧. ಸೌಜನ್ಯಶೀಲ; ವಿನಯಶಾಲಿ: ಸತ್ಕ್ರಗೆರ್ ಪಾದಪೂಜೆಯನೆಸಪ ನಯಗಾಱನ್ (ಅಜಿತಪು. ೪೦-೮೧೩). **ನಯಗಾರ**: ೨. ಉಪಾಯಗಾರ; ಚೂಪುಗಾರಿಕೆಯುಳ್ಳವನು: ಆತ ಬಹಳ ನಯಗಾರ (ರೂಢಿ). [ ನಯ$_1$ + -ಗಾಱ ]

**ನಯಗುಂದು** 'ನಯಂಗುಂದು' ನೋ.

**ನಯಗುಣ** (ನಾ). ಒಳ್ಳೆಯ ಗುಣ; ಯೋಗ್ಯವಾದ ಗುಣ : (೬). [ ನಯ$_2$ + ಗುಣ ]

**ನಯಗೆಡು** (ಕ್ರಿ). ಔಚಿತ್ಯ ಕೆಡು; ನೀತಿ ತಪ್ಪು : ದೃಷ್ಟಿಮೋಹನ ಮೂರ್ತಿಗಳು ನಯಗೆಟ್ಟ ನಾಲ್ವರು ಸಿದ್ಧರಮ್ಮನು ಬಿಟ್ಟ ಕಂಗಳಲೀಕ್ಷಿಸಿ ದರುಱ ಜಱದು ಸುಡುವಂತೆ (ನಿಘಾಗ. ೬-೩-೧೦); ಬಯಲು ರೂಪಿನ ವಸ್ತು ಜೀವವೆಡಕೆ ಗುಣ ನಿಯತದಿಂದಱವು ಕಾಣ್ಕೆಗಳು ನಯಗೆಟ್ಟ ನರಸುರರಾದಿಯಾದಾಕಾರಚಯಗಳದಱ ಪರಿಯಾಯ (ಭರತ. ೬೮-೦೨೩). [ ನಯ$_2$ + ಕೆಡು$_1$ ]

**ನಯಚಿತ್ರ** (ನಾ). ಯೋಗ್ಯವಾದ ನಡತೆಯುಳ್ಳವನು; ವ್ಯವಹಾರವನ್ನು ಬಲ್ಲವನು. 'ನಯಂಚಿತ್ರ' ಪರಾ. [ ನಯ$_2$ + ಚಿತ್ರ ]

**ನಯಚಿತ್ರೆ** (ನಾ). ಯೋಗ್ಯವಾದ ನಡತೆಯುಳ್ಳವಳು; ವ್ಯವಹಾರವನ್ನು ಬಲ್ಲವಳು; ವ್ಯವಹಾರ ಚತುರೆ: ನಯಚಿತ್ರ ಚಿತ್ರಮತಿದೇವಿಯುನಾ ವಿಜಯಾಮತೀಮಹಾದೇವಿ ಮನಃಪ್ರಿಯದಿಂದ ಬರಿಸಿ ಕೊರಲಪ್ಪಿಯ ಪಿರಿದುಂ ಮೆಱದಳಾತ್ಮಮಹಿಮೋನ್ನತಿಯಂ (ಕುಸುಮಾ. ೧೩-೧೪೦). [ ನಯಚಿತ್ರ + -ಎ$_2$ ]

**ನಯಜ್ಞ** (ನಾ). ರಾಜನೀತಿನಿಪುಣ: ಜಯಂವಧುಗಾಣ್ಮನಾಗಿಯು ಮಸೌಮ್ಯನೆ . . . ಮಹಿತನಾಗಿಯುಮುಂದ್ರುತಸೇನ ಯಜ್ಞನಾಗಿಯು ಮಕೃತಜ್ಞನೇ (ಶಾಂತಿಪು. ೧೧-೬೬); ದಶದಿಶೆಯೊಳಿಂದುಕರರುಚಿ ಯಶಮಂ ಪರೆವಲ್ ಪರನೃಪರುಮನೊತ್ತರಿವಲ್ ಸಾಲ್ವುದುಂ ನಯಜ್ಞಹಿತಮಿತ ವಚನಂ (ರಾಜಶೇ. ೦೩-೦೫); ಗೋಳಿಡುವ ದ್ರೌಪದಿಯ ಕುಡಿನೋಟದಲಿ ನೋಡಿ ಈ ನಯಜ್ಞನು, ನೆಲದಲೇನನೋ ಬರೆಯುತಿಹನು (ಭಾಸನಾ. ೩೮). [ ಸಂ. ]

**ನಯಣ** (ನಾ). [ಜೈನ] ಗಿರಿಯ ತಪ್ಪಲಿನಲ್ಲಿ ವಿಶ್ರಾಂತಿಗಾಗಿ ಕಟ್ಟಿಸಿದ ಶಿಲಾಮಂಟಪ,-ಕಲ್ಲಿನ ಗೃಹ : ಬೊಪ್ಪದೇವನ ತಾಯಿ ಜಕ್ಕಮಬ್ಬೆ ಮೋಕ್ಷತಿಳಕಮಂ ನೋಂತು ನೋಂಬರೆ ನಯಣದ ದೇವರ ಮಾಡಿಸಿ ಪ್ರತಿಷ್ಠೆಯ ಮಾಡಿಸಿದರು (ಎಕ. II, ೩೬೬-೪; 1120); ಶುಭಚಂದ್ರದೇವರ ಗುಡ್ಡಿ ಜಕ್ಕಿಮಬ್ಬೆ ಕೆಱೆಯ ಕಟ್ಟಿಸಿ ನಯಣದ ದೇವರ ಮಾಡಿಸಿದರು (ಎಕ. II, ೩೬೮-೨; 1120); ತಳಿರ ನೆಲಗಟ್ಟು ಪೊಸದರ್ಗೆಳ ಕಂಬಂ ತಳಿರ ಭಿತ್ತಿ ತಳಿರ ಲೋವೆ ಕೆಂದಳಿರ್ಗಳ ಜಂತೆಗಳೊಪ್ಪಿರೆ ತಳಿರೋವರಿ ತಳಿರ ನಯಣ[ಪಾಠಾಂ. ತಳಿರಾವಳಿ ತಳಿರ ಸದನ]ಮೆನೆ ಕಣ್ಗೊಳಿಕುಂ (ಪಾರ್ಶ್ವಪು. ೯-೨೯); ಅನುನಾಸಿಕ ಯಕಾರಕ್ಕೆ-ಮೇಯಿಸಿದು, ನೋಯಿಸಿದಂ, ಮಯಣಂ, ನಯಣಂ, ಮಾಯಂ (ಶಮದ. ೧೬ ಪ್ರಯೋ); ಪೂರ್ವ ನಯಣದ ಮೇಲೆ ಮತ್ತೊಂದು ನಯಣಮಂ ರಚಿಸಲ್ವೇಕೆಂದು ಪ್ರತಿಮ ಸೂಚಿಸಿದ ಕಾರಣಮಂಲ್ಲಿ ನೆಲಸಿತ್ತೆನೆ . . . ಕರಕಂಡುಮುಹಾರಾಜಂ ತನ್ನ ಪೆಸರೊಳಂ ತನ್ನ ತಾಯಿ ಪದ್ಮಾವತಿಯ ಪೆಸರೊಳಂ ತನ್ನಂ ಸಲಹಿದ ಬಾಲದೇವನ ಪೆಸರೊಳಂ ಮೂಱು ನಯಣಮಂ ಮಾಡಿಸಿ ಜಿನಪ್ರತಿಷ್ಠೆಗಳಂ ಮಾಡಿ (ಪುಣ್ಯಾಸ್ರ ೨-೬೯ ವ).
[<ಪ್ರಾ. ಲಯಣ, ಲೇಣ; ಪಾಲಿ. ಲೇಣ./ಸಂ. ಲಯನ ]

**ನಯದಪ್ಪು** (ಕ್ರಿ). ನೀತಿಯನ್ನು ಮೀರು; ಅನ್ಯಾಯ ಮಾಡು : ಮರಳಿ ಹೊಡೆ ಹಿಂಡಾಕಳನು ಗೋಪರನು ಬಿಡು . . . ನಮ್ಮರಸ ನಯದಪ್ಪಿದನು ತುಱುಸೆಱವಿಡಿವರೇ ನೃಪರು (ಕುಮಾವ್ಯಾ. ೬-೩೫). [ ನಯ$_2$ + ತಪ್ಪು$_1$ ]

**ನಯದಾಳ್** (ಕ್ರಿ). ಔಚಿತ್ಯವನ್ನು ಪಡೆ,-ಹೊಂದು : ಕ್ಷೋಣಿಗೆ ಪಾರಮಲ್ತೆ ರಜತಾದ್ರಿ ತದದ್ರಿಗೆಱಂಕೆ ನೋಡುಭಶ್ರೇಣಿಗಳಂತವಂ ವಿನಮಿಯುಂ ನಮಿಯುಂ ನಯದಾಳ್ದರ್ (ಶಾಂತಿಪು. ೫-೧೪೯). [ ನಯ$_2$ + ತಾಳ್$_1$ ]

**ನಯದೃಷ್ಟಿ** (ನಾ). [ಜೈನ] ವಸ್ತುವಿನ ಒಂದು ಗುಣ, ಧರ್ಮಕ್ಕೆ ಪ್ರಾಧಾನ್ಯ ಕೊಟ್ಟು ಉಳಿದ ಗುಣ, ಧರ್ಮಗಳನ್ನು ಗೌಣವೆಂದು ಪರಿಗಣಿಸುವುದು : ಎಲ್ಲಿ ಒಂದು ಧರ್ಮಕ್ಕೆ ಪ್ರಾಧಾನ್ಯತೆ ಕೊಟ್ಟು, ಉಳಿದ ಧರ್ಮಗಳನ್ನು ಗೌಣವೆಂದು ತಿಳಿದುಕೊಳ್ಳಲಾಗುವುದೋ. ಅದಕ್ಕೆ ವಿಕಲಾದೇಶ-ಅಪೂರ್ಣದೃಷ್ಟಿಯೆಂದು ಹೇಳಲಾಗುವುದು. ಸಕಲಾದೇಶಕ್ಕೆ ಪ್ರಮಾಣದೃಷ್ಟಿಯೆಂದೂ ವಿಕಲಾದೇಶಕ್ಕೆ ನಯದೃಷ್ಟಿಯೆಂದೂ ಹೇಳಲಾಗಿದೆ (ಜೈನಪ. ೨೦೧). [ ನಯ$_2$ + ದೃಷ್ಟಿ ]

**ನಯನ** (ನಾ). ೧. ಕರೆದೊಯ್ಯುವುದು; ಸಾಗಿಸುವುದು; ತೆಗೆದುಕೊಂಡುಹೋಗುವುದು : ಪದಾರ್ಥ ಸಾಗಿಸುವಿಕೆಗೆ ನಯನ, ಆನಯನ ಎಂದೂ, ಇಂಗ್ಲಿಷಿನಲ್ಲಿ ಟ್ರಾನ್ಸ್‌ಪೋರ್ಟ್ ಎಂದ ಹೆಸರು (ಭೂವಿವ. ೨೦೦). ೨. ಚಲಿಸುವುದು; ಗಮನ. ೩. ಕಣ್ಣು : "ದೃಕ್, ದೃಷ್ಟಿಃ, ನೇತ್ರಂ, ಲೋಚನಂ ಚಕ್ಷುಃ, ನಯನಂ, ಅಂಬಕಂ, ಈಕ್ಷಣಂ, ಅಕ್ಷಿ – ಈರ್ ಕಣ್" (ಹಲಾಯು. ೮೬-೩೬೫); ಅಳಿಕಾನನ ನಯನಂಗಳೊಳಿ ಪಳಿನೋತ್ಪಳವಿಕಾಶಮಂ ಗೆಲ್ದುದಱಿಂ ತಿಳಿಗೊಳನಂ ಪೋಲ್ತಿರ್ದಂ ತಿಳಿಯದಿದೇನೆಂಬುದುಂ ತದನ್ವಯಮುದಱೊಳ್ (ಕವಿರಾ. ೧-೮೮); ಗಳಿತಶರಮಾಯ್ತು ಹಸ್ತಂ ಗಳಿತರಣೋತ್ಸಾಹಮಾಯ್ತು ಹೃದಯಂ ನಯನಂ ಗಳಿತಾಶ್ರುವಾಯ್ತು ಕೌರವಕುಲತಿಲಕಂಗಾ ಕುಮಾರನಂ ಕಾಣಲೊಡಂ (ಗದಾಯು. ೪-೬೦); ನಯನಂ ನೀಲಸರೋಜಮಂ ಸೆಣಸುಗುಂ (ಪಂಪಾಮಾ. ೦-೯೫); ನಯನದಲ್ಲಿ ಮೂರುತಿ ತುಂಬಿ . . . ನಿಮ್ಮ ಚರಣ ಕಮಲದಲಾನು ತುಂಬಿ (ಬಸವ. ೪೯೨); ನಯನ ಬುದ್ಧಿಯೊಳಗೊ ಬುದ್ಧಿ ನಯನದೊಳಗೊ ನಯನ ಬುದ್ಧಿಗಳೆರಡು ನಿನ್ನೊಳಗೊ ಹುಯ (ಕನಕ. ೬೮-೧). ೪. ವಾಹನ. ೧, ೩, ೪ : ಜನನುತ ರಾಜಹಂಸನಯನಂ ಕಮಳಾವಸಥಂ ಕಳಾನಿಕೇತನೆನಿಸಿರ್ದ ಪೆಂಪುಮೆಮೆತ್ತೊಡಮೇನೊ . . . ರಜಮೊಂದದ ಸತ್ತ್ವನಿಧಾನನೆಂಬ ಪೆಂಪನುಗುಣಮಾದ ಲೋಕಹಿತನೊಲ್ದು ಚತುರ್ಮುಖನೀಗೆ ರಾಗಮಂ (ಜಗವಿ. ೧-೨). ೫. ಅನ್ವಯ : ಮೂಲದಲ್ಲಿ 'ಆಕ್ಷೇಪಕ್ಕೆ' ಬೇರೆ ಉದಾಹರಣೆಯೇ ಇಲ್ಲವಾದ್ದರಿಂದ ಇದನ್ನೇ ಹೇಗಾದರೂ ನಯನ ಮಾಡುವ ಉದ್ದೇಶದಿಂದಲೋ ಎಂಬಂತೆ (ಧ್ವನ್ಯಾಲೋ. ೩೦ ಅಡಿಟಿ). ೬. ಪೋಷಿಸುವುದು; ಪೋಷಣೆ : "ನಯಃ, ನಯೀ, ನಯುಃ, ನಾಯಃ, ನಯನಂ, ನಯನೀಯಂ, ಈ ೬ ಪೊರೆತಂ" (ಕಾಶಕಾ. ೧೦೦). ೭. ಎರಡು ಎಂಬ ಸಂಖ್ಯೆಯ ಸಂಕೇತ : ಅಮರೇಜ್ಯಂ ಕೇಂದ್ರ ಲಾಭಾಷ್ಟಮಸಹಜಧನಸ್ಥಾನದೊಳ್ . . . ಧಾತ್ರೀಜನಿಂ ಕೇಂದ್ರನಿಧನ ನಯನಾಯಂಗಳೊಳ್ ಪೂಜ್ಯನಕ್ಕುಂ (ಜಾತಕ. ೧೧-೧೦); ಯಮ ನಯನ ಕರ್ಣ ಕರ ಪದ . . . ಸಮ ಉಭಯಂ ಬಾಹು ಕಿವಿಗಳೆರಡು ನಾಮಂ (ವ್ಯವಹಾ. ೯-೨); ಉಡುದೇವ ನಿಧಿ ನಯನೆಂದು ಸಂಖ್ಯೆಗಳೊಳಿ ಶಕವರುಷಂಗಳಾಗಲು . . . ಬಸವಚರಿತೆ ಸಮಾಪ್ತವಾಯಿತ್ತು (ಬಸಪು. ೬೦-೯೨). [ ಸಂ.]

**ನಯನಕರ್ಣ** (ನಾ). ಕಣ್ಣೇ ಕಿವಿಯಾಗಿರುವುದಂ; ಹಾವು; ಸರ್ಪ. **ನಯನಕರ್ಣವಿಪಕ್ಷ** = ಹಾವುಗಳ ಹಗೆ; ನವಿಲು. **ನಯನಕರ್ಣವಿಪಕ್ಷಲಕ್ಷಣ** = ಧ್ವಜದಲ್ಲಿ ನವಿಲಿನ ಗುರುತನ್ನುಳ್ಳವನು; ಮಯೂರಧ್ವಜ; ಷಣ್ಮುಖ: ನಯನಕರ್ಣವಿಪಕ್ಷಲಕ್ಷಣ ಜಯತು ಸಿದ್ಧೇಶ (ಬಸವು. ೨೦-೩೭). **ನಯನಕರ್ಣಾಶನ** = ೧. ನವಿಲು; ಮಯೂರ. ೨. ಗರುಡ. **ನಯನಕರ್ಣಾಶನವರಧ್ವಜ** = ಗರುಡಧ್ವಜ; ವಿಷ್ಣು: ನಯನಕರ್ಣಾಶನವರಧ್ವಜನಯನ ಭುವನೇಡಾರ್ಚಿತಕ್ರಮ (ಬಸವು. ೨೦-೩೭). **ನಯನಕರ್ಣಾಹಾರ** = ೧. ನವಿಲು; ಮಯೂರ. ೨. ಗರುಡ. **ನಯನಕರ್ಣಾಹಾರವಾಹನ** = ಗರುಡವಾಹನ; ವಿಷ್ಣು. **ನಯನಕರ್ಣಾಹಾರವಾಹನನಯನ** = ಶಿವ: ನಯನಕರ್ಣಾಹಾರವಾಹನನಯನ ಭುವನೇಶಯನ ನಯನಾನಯನ ಭುವನತ್ರಯನಯನ ಕರ್ಣಾಕಲಿತಕರ್ಣ (ಬಸವು. ೨೦-೩೭). [ಸಂ.]

**ನಯನಚ್ಛದ** (ನಾ). ಕಣ್ಣಿನ ರೆಪ್ಪೆ. [ಸಂ.]

**ನಯನಜಲ, ನಯನಜಳ** (ನಾ). ಕಣ್ಣೀರು; ಕಂಬನಿ; ಬಾಷ್ಪ: ಬಳದ ಸುತಶೋಕದಿಂದಿಗಳ ಸುರಿಗುವೆ ಸುರಿಯುವಾ ಜಯದ್ರಥನ ಜತಾನಳ ನಿಂದವೊಗೆದ ಪೊಗೆಗಳ್ ಕೊಳೆ ಸುರಿವೊಡೆ ಸುರಿವುವನ್ನ ನಯನಜಲಂಗಳ್ (ಪಂಪಭಾ. ೧೧-೧೧೯); ಕರುಣಂ ಕೈವಿಂಗೆ . . . ಮುನ್ನು ಮಿಕ್ಕು ನಯನಜಲಂಗಳ್ ಸುರಿದು (ಸುಕುಮಾ. ೫-೩); ಪರಮಸುಖದಲಿ ತನುವ ಮಱೆದನು ನಯನಜಲವೊಗಲು (ಕುಮಾವ್ಯಾ. ೮-೩). **ನಯನಜಳ**: "ಅಶ್ರು, ಬಾ(ಷ್ಪಂ)ರ್ವಂ, ರೋದನಂ, ನಯನಜಳಂ, ಅಸ್ರಂ – ಈ ೫ ಕಣ್ಣ ನೀರ್" (ಹಲಾಯು. ೮೬-೩೭೫). [ನಯನ+ಜಲ]

**ನಯನಜಳ** 'ನಯನಜಲ' ನೋ.

**ನಯನತ್ರಯ** (ನಾ). ೧. ಮೂರು ಕಣ್ಣುಗಳು: ಲೋಕವಿಸ್ತರಣ ಪ್ರಭಾವನಯನತ್ರಯಂ ದೇವ ಗಂಗಾಧರಂ ಬಿಡದೆ ಸಲಹುಗೆ ನಮ್ಮನು (ಕೃಮಿಭಾ. ೦-೨). ೨. ಮುಕ್ಕಣ್ಣ; ಶಿವ: ಭುವನೇಶಯನಭುವನನಯನ ನಯನತ್ರಯ ನಯನಕರ್ಣಾಕಲಿತಕರ್ಣ (ಬಸವು. ೩೦-೫೦). ೩. (?): ನಯನತ್ರಯಯುತರತ್ನತ್ರಯನಿಧಿ ಲೋಕತ್ರಯಂ ಸಲೋಕಿತ ತಾಳತ್ರಯ ಪಾಂಡುರಾತಪತ್ರತ್ರಯಮಿವು ನಿನಗಲ್ಲದಜಿತ ಪೆಜರ್ಗೆ ವಪ್ಪುಗುಮೆ (ಅಜಿಪು. ೮-೯). [ನಯನ + ತ್ರಯ]

**ನಯನತ್ರಿಭಾಗ** (ನಾ). ಕಣ್ಣಿನ ಕೊನೆ; ಕಡೆಗಣ್ಣು; ಕೇಕರ: ಕುಸುಮ ಶರಾಸ್ತ್ರವಿಷ್ಕಲರಜದಿಂ ಪೊರೆದಂತಿರೆ ಬಾಷ್ಪವಾರಿಗಳ್ ಪಸರಿಸೆ ರಾಗವಗ್ಗಲಿಸೆ ಚಾರುಚಲನ್ನಯನತ್ರಿಭಾಗದಿಂ ಕುಸಿಕುಸಿದನ್ನನೀಕ್ಷಿಸುವಳ್ (ಕಾದಂಬ. ೮೯); ಜೀವಿತೇಶನ್ನಿಗೆ ತನ್ನನಾಗ್ರಹಿಸೆ ಸೊಲ್ಲಿಸಲೊಲ್ಲದೆ ನಾಣ್ಚಿ ನೋಡಿದಳ್ ಶಾಮ್ಮನದನ್ನಳಿಪ್ಪ ಕಳಭಾಷಿಣಿಯಂ ನಯನತ್ರಿಭಾಗದಿಂ (ಚಂದ್ರಪ್ರ. ೩-೬೨); ನಯನತ್ರಿಭಾಗದಿಂದನ್ನಯ ಮೊಗಮಂ ನೋಡಿ ಮಗುಬ್ಬಿದ ಮಱವಟ್ಟಂತಾಶ್ರಯಮಿಲ್ಲದ ಲತೆ ತೆಂಗಾಳಿಯೊಳಲ್ಲಾಡುವವೊಲಾಕೆ ಕಣ್ಗೆಸೆದಿರ್ದಳ್ (ವಿಕಕು. ೯-೯೦). [ನಯನ + ತ್ರಿಭಾಗ]

**ನಯನಪಕ್ಷ್ಮ** (ನಾ). ಕಣ್ಣಿನ ರೆಪ್ಪೆ; ಎವೆ: ವಿಪದ ಪೂತನಿ ನಯನಪಕ್ಷ್ಮದೊಳಗಿರಳೆ? (ಮಂಕುಳೆ. ೪೧೭). [ನಯನ + ಪಕ್ಷ್ಮ]

**ನಯನಪಾವಕ** (ನಾ). ಕಣ್ಣಿನ ಬೆಂಕಿ; ನೇತ್ರಾಗ್ನಿ: ಹರಿ ಸರೋಜಾಸನರು ಶೂಲಿಯ ಹೊರಗೆ ಬಂದರು ದೇವದೈತ್ಯಕರ ಪುರವಧರ್ವದ ಪೇಟೆಯಾದುದು ನಯನಪಾವಕನ ಕರೆದು ಬೆಸಸುವಡಿದು ಸಮಯ . . . ಎಂದರು ಪಾರ್ವತೀಪತಿಗೆ (ಕುಮಾವ್ಯಾ.ಕ. ೬-೩೯). [ನಯನ + ಪಾವಕ]

**ನಯನಪುತ್ರಿಕೆ** (ನಾ). ಕಣ್ಣಿನ ಗೊಂಬೆ; ಪಾಪೆ: ಜಾನಕಿ . . . ಧಾರಾನಿಳಯ ಜಲಯಂತ್ರಪುತ್ರಿಕೆಯಂತೆ ನಯನಪುತ್ರಿಕೆಗೆ ಮಣಿಭೂಷಣಮೆನಿಸಿ (ಪಂರಾಮಾ. ೫-೪೦ ವ). [ನಯನ + ಪುತ್ರಿಕೆ]

**ನಯನಪ್ರಭೆ** (ನಾ). ಕಣ್ಣಿನ ಕಾಂತಿ: ನಯನಪ್ರಭೋಜ್ಜ್ವಲ ಜ್ಯೋತ್ಸ್ನೆಯಿನಾದಂ ಕನ್ನೆ ಮುನ್ನ ಧವಳಿಸಿ ಭೂಷಾಚಯಮಣಿಗಣನಿಚಯದೆ ತಾಂ ಬಯಲಂ ಚಿತ್ರಿಸಿದಳೆಯ್ದೆ ಗಮನೋತ್ಸವದೊಳ್ (ಚಂದ್ರಪ್ರ. ೫-೧೦೫). [ನಯನ + ಪ್ರಭೆ]

**ನಯನಮಧ್ಯ** (ನಾ). ಕಣ್ಣಿನ ಕರಿಯ ಗುಡ್ಡೆ, –ಆಲಿ: "ಕನೀನಿಕಾ, ನಯನಮಧ್ಯಂ, ತಾರಾ – ಈ ೩ ಕರಿಯಾಲಿ" (ಹಲಾಯು. ೮೬-೩೭೭). [ನಯನ + ಮಧ್ಯ]

**ನಯನಮನೋಹರ** (ಗು). ೧. ಚೆಲುವಾದ; ಸುಂದರವಾದ; ನೋಟಕ್ಕೆ ಆಪ್ಯಾಯಮಾನವಾದ: ಹಾ ನಯನಮನೋಹರ ರೂಪರಿರಾ ಹಾ ನರಪಕುಲೋಜ್ಜ್ವಲದೀಪರಿರಾ (ಜೀವಸಂ. ೨೪-೪೫೧೯). (ನಾ). ೨. ಚೆಲುವಾದುದಂ; ಸುಂದರವಾದುದು: ನಯನಮನೋಹರಂ ಮನುಜನಿರ್ಮಿತಮಲ್ಲದು . . . ಎಂಬ ನಿಶ್ಚಯಮಂ ನೊಡರ್ಚೆ ವಿಸ್ಮಯರಸಾಕರಮಾ ಕರುಮೂಡಮೊಪ್ಪುಗುಂ (ಮಲ್ಲಿಪು. ೨-೬೫); ಶಾಂತವಾಗಿರುವ ತನುವಿನಿಂದ ನಯನಮನೋಹರವಾಗಿರುವ ರುದ್ರಮೂರ್ತಿ (ಮಹಾಂ. ೩೮). [ಸಂ.]

**ನಯನಮನೋಹರಿ** (ನಾ). ಅಂದವಾಗಿರುವವಳು; ನೋಟಕ್ಕೆ ಆಪ್ಯಾಯಮಾನವಾಗಿರುವವಳು: ನಯನಮನೋಹರಿ ಹೃದಯಾಶ್ರಯನ ಸತೀ ಸದೃಶಿ ನೃಪವಧೂಮುಖತಿಳಕಂ ಪ್ರಿಯಕಾರಿಣಿಯಾ ಭೂಪ ಪ್ರಿಯೆಯವರ್ಗಳ್ ಸುಖದಿನಾಳುತಿರೆ ತತ್ಪುರಮಂ (ಮಹಾಸೇ. ೨-೩೩). [ಸಂ. ನಯನಮನೋಹರೀ]

**ನಯನಮರೀಚಿ** (ನಾ). ಕಣ್ಣಿನ ಕಿರಣ, –ಕಾಂತಿ: ನನೆಗಣೆಯನ ಕಣೆಗಳ ಪೊಲು ಗೋಪತರಂಗನೆಯರ ನಯನಮರೀಚಿ ತನುವಿನೊಳಗೆ ಪಸರಿಸಲಾ ತಾಪಸ ಮನವನಿತ್ತನು ಮನಸಿಜಗೆ (ಅಂಜಿವ. ೫-೭೩); ನಯನಮರೀಚಿಯುಂ ಕಬರಿಕಾಂತಿಯುಮುರ್ದಸಗಿಂದ್ರನೀಲಮಾಲೆಯ ವರಮೌಕ್ತಿಕಾವಳಿಯ ರಜ್ಜುಗಳಂತಿರೆ (ಸೂಕ್ತಿಸು. ೮-೩೩೩); ನಯನಮರೀಚಿಗಳ್ ಪುದಿಯೆ ನೀಲದ ಮಾಲೆಗಳಂತೆ . . . ಅಚ್ಚ ಜಾದಿಯ ಪೂಸಮಾಲೆಗಳ್ಗಿಡದು ಮಾಜುವ ನೀಱೆಯನಲ್ಲಿ ಮಾಲೆಗಾರ್ತಿಯೋ ಮಣಗಾರ್ತಿಯೋ ಎನುತೆ ನೋಟ್ಟುದು ವಿಸ್ಮಯಭಾಜನಂ ಜನಂ (ಧರ್ಮನಾ. ೨-೬೯). [ನಯನ + ಮರೀಚಿ]

**ನಯನಯುಗ** (ನಾ). ಕಣ್ಣುಗಳ ಜೊತೆ; ಎರಡು ಕಣ್ಣುಗಳು: ನಯನಯುಗಂ ನಾಸಾಗ್ರಪ್ರಯುಕ್ತಮವ್ಯಕ್ತವರ್ತನಂ ಪ್ರಾಣಾಪಾನಾಯುಗಂ (ವರ್ಧಪು. ೧೫-೬೨); ನಯನಯುಗಂ ತಳತ್ತಳಿಸೆ ದಂತಮರೀಚಿ ಲಸತ್ಕಪೋಳಭಿತ್ತಿಯನವಳಂಬಿಸಲ್ . . . ರಂಜಿಸಿದಂ ನಿಷಧಾಧಿನಾಯಕಂ (ನಳಚಂ. ೦೨೯); ನಯನಯುಗದಿಂ ಜಗವ ಪೊರೆದು, ನಿಟಿಲಾಕ್ಷಿಯಿಂ ಲಯವಡಿಸುವುದದೇನು ಶಿವಯೋಗಲೀಲೆ? (ಮುಕ್ತಕ. ೬೦೩). [ನಯನ + ಯುಗ]

**ನಯನಯುಗಳ** (ನಾ). = ನಯನಯುಗ: ಅಳಿ ನಳಿನೋತ್ಪಳರುಚಿಗಳ ನಳಕಾನನ ನಯನಯುಗಳದಿಂ ಗೆಲ್ದಿರ್ದುಂ ಕೊಳದೊಳಗೇನಂ ನೋಟ್ಪೆಗ ವಿಳಾಸಿನೀ ನಿನ್ನವೋಲದೇನತಿಶಯಮೋ (ಕವಿರಾ. ೦-೮೭). [ನಯನ + ಯುಗಳ (= ಯುಗಲ)]

**ನಯನರೋಗ** (ನಾ). ಕಣ್ಣಿನ ಬೇನೆ, –ರೋಗ: ಚಿತ್ರಾಳಿಯೊಳು ನಯನರೋಗದೊಳು ಬಾಣಲೆಯೊಳು . . . ವಿಮಾನದೊಳು ಪುಷ್ಪಕಮೆನಿಕ್ಕು (ಮಂಗರಾ. ೦೫೩-೩೭); ನಯನರೋಗದೊಳು ಭೇದನದೊಳರಿಯೆಂಬ ಶಬ್ದಂ (ಶಬ್ದಮಂ. ೧೦೫). [ನಯನ + ರೋಗ]

**ನಯನರೋಮ** (ನಾ). = ನಯನಪಕ್ಷ್ಮ: "ನಯನರೋಮಂ ಪಕ್ಷ್ಮಂ" (ವಸ್ತುಕೋ. ೭೧-೨೨). [ನಯನ + ರೋಮ].

**ನಯನವಾರಿ** (ನಾ). = ನಯನಜಲ : ಗಳಿಯಿಸುತಿರೆ ಕಬರಿಭರಂ ಗಳಿಯಿಸುತಿರೆ ನಯನವಾರಿ ನಿನ್ನಾನವದಿಂ (ಗದಾಯು. ೧-೬೩) : ಇವರುಬ್ಬರಿಸಿದರು ಹರುಷದಲಿ ನೆನೆದರು ನಯನವಾರಿಯಲಿ (ಕುವ್ಯಾಅ. ೨೦-೨೦) : ಕೃಷ್ಣನ ವರಸುಧಾಮಯವಚನವನು ಪಂಕರುಹಮುಖಿ ಕೇಳುತ್ತ ನನೆದಳು ನಯನವಾರಿಯಲಿ (ಕುವ್ಯಾಉ. ೮-೨೪). [ ನಯನ + ವಾರಿ₂ ]

**ನಯನವಿಹ್ವಲ** (ನಾ). ಕಂಗೆಟ್ಟವನು ; ದಿಗ್ಭ್ರಮೆಗೊಳಗಾದವನು : ನಯನದ್ವಯದಿಂ ತವೆ ನೋಡಲ್ ನೆಱೆಯಾದೆ ನಯನವಿಹ್ವಲಂ ಹರಿ ಸಹಸ್ರಲೋಚನನಾದಂ (ಶಾಂತಿಪು. ೧೦-೬೦). [ ನಯನ + ವಿಹ್ವಲ ]

**ನಯನವೀಧಿ** (ನಾ). ಕಣ್ಣಿನ ನೋಟದ ಪರಿಧಿ,-ಹರವು: ಸರಸಿಜದ ಮಧು ಮಧುಕರನನನುಕರಿಸಿದೊಡೆ ಚಂದ್ರಿಕೆ ಚಕೋರನ ವಂಚಿಸಿದರೆ ನಿಧಿ ಲಕ್ಷ್ಮಿ ಸುಳಿದರೆ ನಯನವೀಧಿಯಲಿ ಗರುವೆಯರು ಮೇಲಿಕ್ಕಿ ಪುರುಷನ ನೆಟಿಸಿದರೆ ಬಾಟುವರೆ ಸುಡಲಾ ಸರಸಿಜವನಾ ಚಂದ್ರಿಕೆಯನಾ ನಿಧಿಯನಾ ವಧುವ (ಕುವ್ಯಾಅ. ೮-೩೩). [ ನಯನ + ವೀಧಿ (<ಬೀದಿ) ]

**ನಯನಶಿಖಿ** (ನಾ). ಕಣ್ಣಿನ ಬೆಂಕಿ : ನಿಟಿಲನೇತ್ರನ ನಯನಶಿಖಿಯುಬ್ಬಟೆಗೆ ಸವ ಜೋಡಿಸಿತು ಕರ್ಣನ ಚಟುಳವಿಕ್ರಮವವನವಂಗಕಬಾಣಶಿಖಿನಿಕರ (ಕುವ್ಯಾಕ. ೧೩-೬೪). [ ನಯನ + ಶಿಖಿ ]

**ನಯನಶ್ರವಣ** (ನಾ). = ನಯನಕರ್ಣ. 'ನಯನಶ್ರವಣವೇಣಿ' ಪರಾ. [ ನಯನ + ಶ್ರವಣ₂ ]

**ನಯನಶ್ರವಣವೇಣಿ** (ನಾ). ಹಾವಿನಂಥ ಜಡೆಯುಳ್ಳವಳು ; ನಾಗವೇಣಿ : ಭಯಪಾಪತಾಪದೂರೆ ಜಯಜಯ ಗುಣಸಾರೆ . . . ನಯನಶ್ರವಣವೇಣಿ (ಶೀರ್ಥಮ. ೧೧). [ ನಯನಶ್ರವಣ + ವೇಣಿ ]

**ನಯನಸಂಪ್ರೀತಿ** (ನಾ). ನೋಟ ಮಾತ್ರದಿಂದಲೇ ಉಂಟಾಗುವ ಪ್ರೀತಿ ; ಚಕ್ಷುರಾಗ : ನಸುನಗುತ ಕಡೆಗಣ್ಣಲಂಗನೆಯಸವ ಮುಖವನು ನೋಳ್ಪನು . . . ಶಶಿವದನೆ ಯತಿಯಲಿ ಕಟಾಕ್ಷವ ಹಸರಿಸಿದಳಿಂತಿಬ್ಬರಿಂಗೆ ಮನ ಬೆಸುಗೆವಡೆದುದು ನಯನಸಂಪ್ರೀತಿಯಲಿ ತಮ್ಮೊಳಗೆ (ನಿಭಾಗ. ೧೧-೬೨-೨೫). [ ನಯನ + ಸಂಪ್ರೀತಿ ]

**ನಯನಸಲಿಲ** (ನಾ). = ನಯನಜಲ : ಪ್ರೇಮಪುಳಕದ ನಯನಸಲಿಲದ ರೋಮಹರ್ಷದ ಸತ್ವಭಾವದ ಭೂಮಿಪತಿ ಮೈಯಿಕ್ಕಿದನು ಮುನಿವರನ ಚರಣದಲಿ (ಕುವ್ಯಾಅ. ೪-೮). [ ನಯನ + ಸಲಿಲ ]

**ನಯನಸುಂದರತೆ** (ನಾ). ನೋಟಕ್ಕೆ ಅಂದವಾಗಿರುವಿಕೆ ; ನಯನಮನೋಹರತೆ: ಅಖಿಲೋಕಪ್ರಿಯಜನನ ನಯನಸುಂದರತೆಯುಂ (ಶಾಂತಿಪು. ೧೨-೧೯ ವ). [ ಸಂ. ನಯನಸುಂದರತಾ ]

**ನಯನಾಂಚಲ, ನಯನಾಂಚಳ** (ನಾ). ಕಣ್ಣಿನ ಕೊನೆ ; ಕಡೆಗಣ್ಣು ; ಕಟಾಕ್ಷ : ತಮ್ಮ ನಯನಾಂಚಲಚಂದ್ರಿಕೆಯಿಂ ನವೇಂದುಕಾಂತದ ಗಿರಿಯಂತೆ ಕೌತುಕಮನಾ ಕ್ಷಣದೊಳ್ ಕುಡೆ (ಪಂಚಮಾ. ೧-೧೧೮) : ವಲ್ಲಭವಾಜಿವಾರಣಂಗಳ ನಯನಾಂಚಲಂಗಳಿಂ ಗಳಿತಾಶ್ರುಬಿಂದುಗಳನಾನಂದಾಶ್ರುಬಿಂದುಗಳೆಂದುಂ (ಮಹಾಸೀ. ೧೩-೪೪ ವ) : ನಲಿಯುತೆ ನಯನಾಂಚಲದ ಕವಿಸಿ ನಿನಗೊಲಿವನು ಸಂದೆಗವಿಲ್ಲ (ಕರ್ನಾಕ. ೨೨೬). **ನಯನಾಂಚಳ** : ತರ್ವೆರ್ಳವೆಣ್ಗಳ ನಯನಾಂಚಳರುಚಿಚಂದ್ರಿಕೆಯನಾಂತು . . . ಅಲ್ಲಿಯ ಸೋಮಸೂರ್ಯವೀಧಿಗಳೆಸಗುಂ (ರಾಜಶೇ. ೨-೯೦) ; ಸರಾಗನಯನಾಂಚಳ ಮೊಪ್ಪಿರೆ . . . ಎಳೆಯಳೊಜಲ್ಲು ಬಂದು ಮಣಿವಾಗಿಲೊಳೀಕ್ಷಿಸಿದಳ್ ಮಹೀಶನಂ (ರಾಜಶೇ. ೬-೯) ; ಸೊಂಪೊದವಿದೊಡಲ ರಾಗನಯನಾಂಚಳ ಮೊಪ್ಪಿರೆ ನೋಡಿದಳ್ ಮನೋಮುದದಿನರಾತಿಭೂಪಚಯಮೌಳಿವಿರಾಜಿತ ಪಾದಪದ್ಮನಂ (ಜೂಡಚಂ. ೩-೭). [ ನಯನ + ಅಂಚಲ ]

**ನಯನಾಂಚಳ** 'ನಯನಾಂಚಲ' ನೋ.

**ನಯನಾಂಜನ** (ನಾ). ೧. ಕಣ್ಣಿಗೆ ಲೇಪಿಸುವ ಕಾಡಿಗೆ ; ಕಣ್ಕಪ್ಪು : ನಯನಾಂಜನಮಂಜನಮೆನೆ ನಯದಿಂ ಮುಸುಕಿದ ದುಕೂಲಮುಮಿಂದಿರೆ ಮೊಗದೊಳ್ ಪ್ರಿಯನಿಧಿಯುಂ ಶೈತ್ಯಕುಶೇಶಯಲೋಚನೆ ನೋಡು ಮಂತೆ ಸೊಗಯಿಸೆ (ರಾಜಾವ. ೬-೬೮) : ಖಳರ ಹೃದಯದ ಗರಳದ ಘೂಕಾವಳಿಯ ನಯನಾಂಜನ . . . ಅದನೇವೊಗಳುವೆನು ಮಸಗಿತು ತಮಸ್ತೋಮ (ಕುವ್ಯಾದ್ರೋ. ೧೫-೨೮). ೨. ನಿಧಿ, ನಿಕ್ಷೇಪಗಳನ್ನು ಕಾಣುವ ಶಕ್ತಿಯನ್ನು ಕೊಡುವುದೆಂದು ನಂಬಲಾದ ಅಂಜನ ; ಸಿದ್ಧಾಂಜನ. [ ನಯನ + ಅಂಜನ ]

**ನಯನಾಂಬು** (ನಾ). ಕಣ್ಣೀರು ; ಕಂಬನಿ : ಪೊಳೆವಲರ್ಗಂಗಳಿಂ ಪೊಣರ್ವ ಬೆಳ್ಪು ರಸಾತ್ಮಕವಾಗಿ ಗಂಡಮಂಡಳತಳದಿಂದಮಿಂದಿಳಿಯುತಿರ್ದುದೆನಲ್ ನಯನಾಂಬುಲೋಚನಂಗಳಿನಿರದುಣ್ಮೆ (ಕಾದಂಪೂ. ೬೯೯) ; ಸುರಿವನಯನಾಂಬುಗಳ ಮೂಗಿನ ಬೆರಳ ತೂಗುವ ಮಕುಟದವನೀಶ್ವರನು ಮೌನದೊಳಿದ್ದನೊಂದು ವಿಗಳಿಗೆ ಮಾತ್ರದಲಿ (ಕುವ್ಯಾಸ. ೦೨-೫೫). [ ನಯನ + ಅಂಬು₂ ]

**ನಯನಾಂಶು** (ನಾ). = ನಯನಮರೀಚಿ : ಶಿಶುಗೆ ನಯನಾಂಶು ದುಗ್ಧಪ್ರಸರದ ಜನ್ಮಾಭಿಷೇಕಮಂ ಮುನ್ನೊಂದಂ ಪೊಸೆಯಿಸಿ . . . ಇಂದ್ರಾಣಿ ನೆಗಟಿದಳ್ ಕಂದಳದಿಂ (ಚಂದ್ರಪ್ರ. ೧೨-೫೫) : ಪೊಣ್ಮೆ ನಯನಾಂಶು ಗಗನಕೆ ತಟಲ್ಲತೆಯ ಪರ್ಬಂ ಪಡೆಯಲು ಬರುತಿರ್ದರಖಿಳಸ್ತ್ರೀಯರು (ಜಿನಾ. ೫-೧೨). [ ನಯನ + ಅಂಶು ]

**ನಯನಾಕರ್ಷಣವಿದ್ಯೆ** (ನಾ). (ಬೇರೆಯವರ) ನೋಟವನ್ನು ತನ್ನ ಕಡೆಗೆ ಸೆಳೆಯುವ ಕಲೆ,-ಸೆಳೆಯುವಿಕೆ : ನಯನಾಕರ್ಷಣವಿದ್ಯೆ ಗುಂಡುವರಿಜಂ ಕೈಕೊಂಡುದೋ . . . ವೇಟಿಂಬಿನಂ . . . ಪೊಕ್ಕಂ ಸಭಾಸದ್ಮಮಂ (ಪಂಚಮಾ. ೩-೩೮). [ ನಯನ + ಆಕರ್ಷಣ + ವಿದ್ಯೆ ]

**ನಯನಾಗ್ನಿ** (ನಾ). (ಶಿವನ) ಕಣ್ಣಿನ ಬೆಂಕಿ : ಕಂಡನಾ ಸಮಯದೊಳ್ ಕಮಲಜಂ ಹರಕರದೆ ಖಂಡಿಸಿದ ತನ್ನುತ್ತಮಾಂಗಮಂ ರುಧಿರಜಲಮುಂಡು ಪೋಳಿಸಿದ ನಯನಾಗ್ನಿಯಂ ಪೊಗಳುತಿಹ ಸಕಲವೃಂದಾರಕರನು (ಭುವು. ೧೮-೦೬). [ ನಯನ + ಅಗ್ನಿ ]

**ನಯನಾತಿಥಿ** (ನಾ). ನೋಟಕ್ಕೆ ವಸ್ತುವಾದ ವ್ಯಕ್ತಿ ; ಕಣ್ಣಿಗೆ ಕಾಣಿಸುವ ವ್ಯಕ್ತಿ : ಅಂತಾ ಮಹಾತಿಥಿ ನಯನಾತಿಥಿಯಾಗಿರ್ಪುದುಂ (ಪಂಚಮಾ. ೨-೧೯ ವ) ; ಬಟ್ಟೆಗರಡಿವಟ್ಟೆಗೆಯ ಬಾಲೆಯರ ನಯನಾತಿಥಿಗಳಾದರ್ (ರಾಮಾಶ್ವ. ೫೨-೧೧). [ ನಯನ + ಅತಿಥಿ ]

**ನಯನಾನಂದ** (ಗು). ೧. ಕಣ್ಣಿಗೆ ಸುಖಕರವಾದ ; ಅಂದವಾದ ; ಮನೋಹರವಾದ: ನಯನಾನಂದವಿಳಾಸರೂಪನಮರೀನೀಲಾಲಕಾಲೀಢಪಾದಯುಗಂ ಅದೇಂ ನಲಿದನೋ (ಅಪಿಪು. ೩-೬೧) ; ನಯನಾನಂದಮೃಗಾಂಕಬಿಂಬಮುದಯಂಗೆಯ್ವರ್ಕಬಿಂಬಂ . . . ಪ್ರಿಯಾಗಳ್ಪಂಗೊಸೆದೀಗೆ ಮಂಗಳಮಹಾಶ್ರೀಯುಂ ಜಯಶ್ರೀಯುಮಂ (ಪಂಪಭಾ. ೦೯-೩೫). ೨. ಕಣ್ಣಿಗೆ ಉಂಟಾಗುವ ಆನಂದ ; ನೋಟದ ಸುಖ : ನಯನಾನಂದಮನುಂಟುಮಾಡಿ ಮಧುವಿಂ ಕೈವಂದುದು . . . ಉದ್ಯಾನಮಾಲೆಯನಾಮ ರಸಚಿತ್ರಮಾಗೆ ಬರೆಮ (ಮಲ್ಲಿಪು. ೫-೪೬) ; ನಯನಾನಂದಮನಿತ್ತುದಿಂದ್ರನಟನಪ್ರಾಗಲ್ಭ್ಯದಿಂ . . . ದೇವಕಾಂತೆಯರಲ್ಲಾಡದೆ ಸೆದಸಲ್ಪುಗುರ ಸೂಚೀನರ್ತನಂ (ಅನಂಪು. ೫-೯೭). [ ನಯನ + ಆನಂದ ]

**ನಯನಾನಂದಕರ** (ನಾ). ಕಣ್ಣಿಗೆ ಸಂತೋಷವನ್ನುಂಟುಮಾಡುವುದು ; ಅಂದವಾದುದು ; ಸೊಗಸಾಗಿರುವುದು: ನಯನಾನಂದಕರಂ ಸುಖಚಯಸಹಿತಂ . . . ಸಜ್ಜನಚಿತ್ತಪ್ರಿಯಮೆನಲೆಸೆದಿರ್ಪುದಧಿಪಮೆನೆ ಕುಸುಮಪುರಂ (ದಶಕು. ೧-೨೪). [ ಸಂ. ]

**ನಯನಾನಂದನ** (ಗು). ಕಣ್ಣಿಗೆ ಸುಖಕರವಾದ,-ಆಪ್ಯಾಯನವಾದ ; ಅಂದವಾದ : ನಯನಾನಂದನದಾಮಮಂ ಹಿಮಕರಾಂಶುದ್ದಾಮಮಂ ಕನ್ನೆ ತನ್ನಯ ಕೆಯ್ಯೊಳ್ ಕುಡೆ (ಶಾಂತಿಪು. ೩-೧೬೧). [ನಯನ+ಆನಂದನ]

**ನಯನಾಭಿರಾಮ** (ಗು). (೧.). ಕಣ್ಣಿಗೆ ಸುಂದರವಾದ ; ಮನೋಹರವಾದ : ನಯನಾಭಿರಾಮದೇಹಂ . . . ನಯವಿನಯನಿತ್ಯಶೀಲಂ ಜಯಕಾಂತಾಕಾಂತನಲ್ತೆ ನಳಭೂಕಾಂತಂ (ನಳಚಂ. ೧೩೨). (ನಾ). ೨. ಕಣ್ಣಿಗೆ ಮನೋಹರನಾದವನು ; ಸುಂದರ ; ಒಂದು ಬಿರುದು : ಬಪ್ಪನಂಕಕಾಜಂ [ಕುಮಾರ]ಂಕಭೀಮಂ ನಯನಾಭಿರಾಮಂ . . . ಶ್ರೀಮದ್ಯುವರಾಜಂ ಮಲ್ಲಿಕಾರ್ಜುನದೇವರು (ಸಾಇಇ. XX, ೬೧-೧೦ ; 1108). ೩. ಕಣ್ಣಿಗೆ ಸುಂದರವಾದುದು ; ಮನೋಹರವಾದುದು : ನಯನಾಭಿರಾಮಮೆಂಬುದುಮಿದು ಕೃಷ್ಣನಿರ್ಪ ಪುರಂ (ಮಹಾನೇ. ೬-೧೩೦).
[ ನಯನ + ಅಭಿರಾಮ ]

**ನಯನಾಮೃತ** (ನಾ). ಕಣ್ಣಿಗೆ ಅಮೃತಪ್ರಾಯವಾದುದು,-ಆಪ್ಯಾಯಮಾನವಾದುದು ; ನೋಟಕ್ಕೆ ಸುಖಕರವಾದುದು : ನಯನಾಮೃತಕ್ಕೆ ಮತ್ತಾರಯೆ ಕರ್ಣರಸಾಯನಕ್ಕೆ ಸುರನರಜನತಾಶಯಸೌಖ್ಯಕ್ಕುದ್ಭವಭೂಮಿಯಿದೆನೆ ಸಂಗೀತಭೂತಳಂ ಸೊಗಯಿಸುಗುಂ (ಚಂದ್ರಪು. ೧೩-೭೦).
[ನಯನ + ಅಮೃತ ]

**ನಯನಾಶ** (ನಾ). [ಕಾವ್ಯಮೀ] ಕಾವ್ಯದ ಹದಿನೆಂಟು ಬಗೆಯ ದೋಷಗಳಲ್ಲಿ ಒಂದು ; ಕವಿಸಂಪ್ರದಾಯಕ್ಕೆ ವಿರುದ್ಧವಾದುದು : ಅಸದರ್ಥಂ ವಿಪರೀತ ಕಲ್ಪನೆಯುಭವ್ಯಂ ದುಷ್ಕರಂ . . ನಷ್ಟಸಮಾಸಂ ನಯನಾಶರೀತಿವಿಫಲಂ ದುರ್ಲಕ್ಷಣಂ ಹಾಸ್ಯವಾಗ್ವಿಷಮಾಸೌಮ್ಯಮನೋಜೆಯೆಂಬಿವಿನಿತುಂ ದೋಷಂಗಳಷ್ಟಾದಶಂ (ಛಂದೋಂಬು. ೧-೪೬ ಅಡಿಟಿಪ್ಪ). 'ಅಷ್ಟಾದಶದೋಷ', 'ದುರ್ಲಕ್ಷಣ' ಪರಾ.
[ ನಯ$_{2}$ + ನಾಶ ]

**ನಯನಾಶ್ರು** (ನಾ). ಕಣ್ಣೀರು ; ಕಂಬನಿ : ಅಲ್ಲಲ್ಲಿ ಶಿವಪುರಾಣಂಗಳಂ ಕೇಳುತುಂ ಸಲ್ಲೀಲೆವೆರ್ಚಿ ನಯನಾಶ್ರುವಂ ಸೂಸುತಂ (ತಿರುಶ. ದೇ. ೪-೧೩).
[ ನಯನ + ಅಶ್ರು ]

**ನಯನಾಸ್ಪಂದ** (ನಾ). ಕಣ್ಣುಗಳನ್ನು ಅಲುಗಾಡಿಸುವಿಕೆ (?) : ವಂದಿಸಿ ದರಿವರ್ಕೆವರವಾನಂದಜಲಪರಿಲುಳಿತ ನಯನಾಸ್ಪಂದ ಪರಿತೋಷದಲಿ ತೆಗೆದಪ್ಪಿದರು ಪಾಂಡವರ (ಕುವ್ಯಾಆ. ೧೬-೩೦). [ ಸಂ. ]

**ನಯನಿಪುಣ** (ನಾ). ೧. ರಾಜನೀತಿಯಲ್ಲಿ ನುರಿತವನು ; ರಾಜನೀತಿಕುಶಲ ; ಕೋವಿದ : ನಯನಿಪುಣರುಪಾಯಚತುಷ್ಟಯದೊಳ್ ಸಾಮಮನಗಣ್ಯಷಾಡ್ಗುಣ್ಯದೊಳಾರಯೆ ಸಂಧಿಯಂ ಮೊದಲ್ ಮಾಡಿಯೆ ಪೇಳ್ದರ್ (ಪಾರ್ಶ್ವಪು. ೨-೩೯). ೨. (ಪ್ರಾಣಿಗಳನ್ನು) ತಿದ್ದಿ ಪಳಗಿಸುವ ವಿದ್ಯೆಯಲ್ಲಿ ನಿಷ್ಣಾತನಾದವನು ; ಶಿಕ್ಷಾವಿಧಾನದಲ್ಲಿ ನುರಿತವನು : ನಯನಿಪುಣ ಸೂತ್ರಧಾರರ್ ನಿಯಮಿಸುವರ್ ಭದ್ರಮಂದಮೃಗಸಂಕೀರ್ಣಾನ್ವಯದ ನೃಪಕರಿಗಳಂ ಪ್ರಣಧಿಯೊಡಂಬಡೆ ಸಕಳಶಿಕ್ಷೆಕಣ್ಣೋಜಮವಿನಂ (ಪುಷ್ಪಪು. ೨-೩೬). [ ನಯ$_{2}$ + ನಿಪುಣ ]

**ನಯನುಡಿ** (ನಾ). ಮೃದುವಾದ ಮಾತು; ಹಿತವಾದ ಮಾತು: ರಾಮನ ಮಾವನ ನಯನುಡಿಯಿಂದ ತಿಳುಹಿದನು (ಕುವ್ಯಾಗ. ೮-೩೩) ; ಬದ್ಧವಾದ ನಯನುಡಿಯು ಇಲ್ಲದಾತನೆ ಹೊಲೆಯ (ಪುರಂದ. ೧-೧೬೮-೩).
[ ನಯ$_{1}$ + ನುಡಿ$_{2}$ ]

**ನಯನೋತ್ಸವ** (ನಾ). = ನಯನಾನಂದ ೨ : ನಯನೋತ್ಸವಮಂ ನವಕಳಿಕೆಯಿನ್ನುದ್ಯತ್ಪಳದಿನೀವ ಸಂತಾನದ ಲೀಲೆಯನಾಂತು ಖಚರರಾಜಂ ಸ್ವಯಂಪ್ರಭೆಯುಮಾರ್ಕಕೀರ್ತಿಯುಮಂ ಬೆರಸಿರ್ದಂ (ವರ್ಧಪು. ೩-೪೨).
[ ನಯನ + ಉತ್ಸವ ]

**ನಯನೋತ್ಸವಕರಿ** (ನಾ). ಕಣ್ಣಿಗೆ ಆನಂದವನ್ನುಂಟುಮಾಡುವವಳು : ನಯನೋತ್ಸವಕರಿ ರತಿಪತಿ ಜಯಲಕ್ಷ್ಮೀಸಮಸ್ತಸತ್ಕಳಾಕೋವಿದೆ ಪುಣ್ಯಯಶೋರ್ಥಿನಿ ಪೆಸರ್ವೆತ್ತಳ್ ಸ್ವಯಂಪ್ರಭಾದೇವಿಯಾತನನುಜಾತೆ ಮಲಂ (ವರ್ಧಪು. ೩-೬೩). [ ಸಂ. ನಯನೋತ್ಸವಕರೀ ]

**ನಯನೋತ್ಸಾಹ** (ನಾ). ಮತ್ತೆ ಮತ್ತೆ ನೋಡಬೇಕೆಂಬ ಆಸೆ ; ನೋಟದ ಆಕರ್ಷಣೆ : ನಯನೋತ್ಸಾಹಮನಿತ್ತು ದೇಹರುಚಿಯಿಂದೆಯ್ತಂದನಾಕಾಶಗಂಗೆಯ ನೀರ್ಮಾನಿಸನೆಂಬಿನಂ. . . ನಾರದಂ (ಪಂಪಾಭಾ. ೩-೧೮). [ ನಯನ + ಉತ್ಸಾಹ$_{1}$ ]

**ನಯನೋದಕ** (ನಾ). ಕಣ್ಣೀರು; ಕಂಬನಿ: ನಾದಿದಳು ನೃಪನಂಘ್ರಿಯನು ನಯನೋದಕದ ಧಾರೆಯಲಿ (ಕುವ್ಯಾಆ. ೨೦-೬) ; ಕೊರಗಿದಾನನದೊಸರ್ವ ನಯನೋದಕದ ಸುಯ್ಲಿನ ಹಸರಿಕೆಯಲ್ಕೆತಂದರಿರುಳು ದಶಾಸ್ಯನಿದ್ದೆಡೆಗೆ (ತೊರರಾ. ೬-೧೨-೧). [ ನಯನ + ಉದಕ$_{2}$ ]

**ನಯನೋದ್ಗತ** (ಗು). ಕಣ್ಣಿನಲ್ಲಿ ಹುಟ್ಟಿದ,-ಉಂಟಾದ: ನಯನೋದ್ಗತಕುಸುಮಗ್ರಂಥಿಯೊಲ್ಲಮೊರ್ಮೆಯೆ ತೆರಳ್ದು ಕಿಡುವುದು (ಲೋಕೋಪ. ೯-೬೬). [ ನಯನ + ಉದ್ಗತ ]

**ನಯನೋದ್ಗಳಿತ** (ಗು). ಕಣ್ಣಿನಿಂದ ಹೊಮ್ಮಿದ,-ಸೂಸಿದ : ನಯನೋದ್ಗಳಿತಜಲಧಾರೆಯಲಿ ನೆನೆದುದು ಸಭೆ ವಿಷಾದದಲಿ (ಕುವ್ಯಾಸ. ೧೪-೬೩). [ ಸಂ. ನಯನೋದ್ಗಲಿತ ]

**ನಯನೋನ್ಮಾದ** (ನಾ). ಕಣ್ಣುಗಳಿಗೆ ನೋಟದಿಂದ ಉಂಟಾಗುವ ಆನಂದಾತಿಶಯ : ನಯನೋನ್ಮಾದಮನೀಯೆ ನುಣ್ಬರಿಜುಗಳ್ ಕಣ್ಬೇಟದಿಂ (ಅನಂಪು. ೩-೧೬). [ ನಯನ + ಉನ್ಮಾದ ]

**ನಯನೋನ್ಮೀಲನ** (ನಾ). ಕಣ್ಣು ತೆರೆಯುವಿಕೆ : ರತಿದೇವಿ ಲೀಲೆಯಿಂ ಪೊಸಪತ್ತೆಳಿ ತಿರ್ದಿ ನಯನೋನ್ಮೀಲನ ಮಾಡಿದಂತಾಯ್ತು (ಶ್ರೀಪಾಂ. ೪-೧೨೪). [ ನಯನ + ಉನ್ಮೀಲನ ]

**ನಯನೋಪಾಂತ** (ನಾ). ಕಣ್ಣಿನ ಕೊನೆ ; ಕಡೆಗಣ್ಣು ; ಕಟಾಕ್ಷ : "ನಯನೋಪಾಂತಃ ಅಪಾಂಗಃ—ಈ ೨ ಕಡೆಗಣ್" (ಹಲಾಯು. ೧೬-೩೬೬).
[ ನಯನ + ಉಪಾಂತ ]

**ನಯಪಂಡಿತ** (ನಾ). ನೀತಿವಿದ; ವಿವೇಕಿ: ನೀಂ ಪ್ರಾಣಜಂ. ದೇಶಕಾಲಾನುವೃತ್ತಿಯ ನಯದಿ ನಯಪಂಡಿತಂ (ಶ್ರೀರಾಮಾ. ३೬೦-೩೪೯).
[ ನಯ$_{2}$ + ಪಂಡಿತ ]

**ನಯಮಂತ** (ನಾ). ವಿವೇಕಿ ; ಗುಣವಂತ : ಧಾತ್ರಿಗೆಲ್ಲಮಿಶ್ವರನಾದಂ ಭಯಮುಂ ಲೋಭಮುಮಿಲ್ಲದ ನಯಮನ್ತಂ ಪ್ರಜೆಗೆ ನಲ್ಲನಾಹವಮಲ್ಲ[ಂ] (ಕೊಲ್ಲಾಪ. ೯-೦೦; 1147).
[ P ಇದು 'ನಯವಂತ' ಎಂಬುದರ ಅಪಲಿಖಿತವಿರಬಹುದು ]

**ನಯಮಟಿ** (ಕ್ರಿ). ರಾಜನೀತಿಯನ್ನು ತಿಳಿ ; ನೀತಿನಿಪುಣನಾಗಿರು : ಅಡವವಳಂ . ಪಡೆವಳ್ಳಂ ಮಡಿವಳ್ಳಂ ಸಜ್ಜೆವಳ್ಳನಜ್ಜಂ ಬೆಜ್ಜಂ ಅಡವಳನೆಂದಿಂತಿವರಂ ಕಡಂಗಿ ಬಿಡೆ ಜಡಿಯದಿರ್ಕೆ ನಯಮಟಿವರಸಂ (ಕಾವ್ಯಾವ. ೩೨೬). [ ನಯ$_{2}$ + ಅಟಿ ]

**ನಯಮಾತು** (ನಾ).=ನಯನುಡಿ : (೬). [ ನಯ$_{1}$ + ಮಾತು$_{1}$ ]

**ನಯಮಾರ್ಗ** (ನಾ). [ಜೈನ] ವಸ್ತುವಿನ ಒಂದಂಶವನ್ನು ಮಾತ್ರ ಪರಿಗ್ರಹಿಸಿ ವ್ಯವಹರಿಸುವುದು : ಒಂದಂಶವನ್ನು ಮಾತ್ರ ಪರಿಗ್ರಹಿಸಿ ವ್ಯವಹರಿಸುವುದು ನಯಮಾರ್ಗವು (ಹಿಂದಸಾ. ೬೮). 'ನಯ$_{2}$' ಪರಾ.
[ ನಯ$_{2}$ + ಮಾರ್ಗ ]

**ನಯಮೂರ್ತಿ** (ನಾ). ರಾಜನೀತಿಯೇ ಮನುಷ್ಯಸ್ವರೂಪವನ್ನು ತಾಳಿದಂತಿರುವವನು: ಪ್ರಿಯೆಯ ಬರಪಾರ್ವಪೊಲಪ್ರಿಯ ಗಗನಚರೇಂದ್ರ

ರುಂದ್ರಸೇನೆಯ ಬರಪಾರ್ವಯಮೂರ್ತಿಯುಮಂ ನಯಮೂರ್ತಿಯು ಮಂ ಪೋಲ್ವರನಪಾರಪೌರುಷಪರರಂ . . . ಅಪರಾಜಿತಾನಂತವೀರ್ಯರಂ ಕಂಡು (ಶಾಂತಿಪು. ೩-೭೫). [ನಯ$_2$ + ಮೂರ್ತಿ]

**ನಯಯುಕ್ತ** (ನಾ). ನಯಜ್ಞ; ನೀತಿವಂತ; ವಿವೇಕಿ : ನಯಯುಕ್ತರಗ್ನಿವತ್ಸಾಶ್ರಯಮೇವ ದಹಂತಿ ದುರ್ಜನಾ ಎಂಬುದನಾರಯುದಿರಿಸಿದುದು ನಮ್ಮನ್ವಯಕಂ ಕೇಡಕ್ಕುಮಿವನನೀಗಳೆ ಕಳೆವೊಂ (ಪಾರ್ಶ್ವಪು. ೪-೩೦). [ನಯ$_2$ + ಯುಕ್ತ]

**ನಯವಂಚಕ** (ನಾ). ಒಳ್ಳೆಯಂತನದ ಸೋಗಿನಲ್ಲಿ ಮೋಸ ಮಾಡುವವನು : ಅವನೊಬ್ಬ ನಯವಂಚಕ (ರಜಂ). [ನಯ$_2$ + ವಂಚಕ]

**ನಯವಂತ** (ನಾ). ೧. ರಾಜನೀತಿನಿಪುಣ; ನೀತಿವಿಶಾರದ : ನಯವಂತನಾದೊಡಂ ಕೇಳ್ವುದತಿಹಿತವಚನಮಂ (ಮಹಾವಿ. ೮-೫೧). ೨. ಗುಣವಂತ. 'ನಯವಂತೆ' ಪರಾ. [ಸಂ. ನಯವತ್]

**ನಯವಂತಿಕೆ** (ನಾ). ನಯ; ಕೋಮಲತೆ; ಸೌಕುಮಾರ್ಯ; ಮಾರ್ದವ : ಅವರ ಗಾಯನದಲ್ಲಿ ಬಾಯಿಹಾಡುಗಾರಿಕೆಯ ಎಲ್ಲ ನಯವಂತಿಕೆ, ಚಾತುರ್ಯ ಮತ್ತು ಸೊಗಸುಗಳನ್ನು ಕೇಳಬಹುದಾಗಿತ್ತು (ಸಂಗೀತ. ೩೧). [ನಯ$_1$ + -ವಂತ + -ಇಕೆ]

**ನಯವಂತೆ** (ನಾ). ವಿನಯವತಿ; ಸೌಜನ್ಯಶೀಲೆ; ಗುಣವಂತೆ : ಆಚಭೂಪನ ಕಾನ್ತೆ ದಯಾವಂತೆ ಭಾಗ್ಯವಂತೆ ನಿತಾಂತಂ ಶಾನ್ತೆ ನಯವಂತೆ ಸತ್ಕುಳವಂತೆ ಮಹಾದೇವಿಯೆಂಬ ಪೆಸರಿಂದೆಸೆದಳ್ (ಎಇ. XX. ೧೨-೧೫; 1167). [ನಯವಂತ + -ಎ$_2$]

**ನಯವಡೆ** 'ನಯಂಬಡೆ' ನೋ.

**ನಯವರ್ತನೆ** (ನಾ). ಸೌಜನ್ಯದಿಂದ ಕೂಡಿದ ನಡವಳಿಕೆ: ನಿನ್ನ ನುಡಿನುಣ್ಪಿಂಗೆ, ನಿನ್ನ ನಯವರ್ತನೆಗೆ, ನಾಣ್ಚುತಿಹೆನಾಂ (ಶ್ರೀರಾಮಾ. ೪೩೦-೩೮). [ನಯ$_1$ + ವರ್ತನೆ]

**ನಯವಾದ** (ನಾ). [ಜೈನ] ಲೋಕವ್ಯವಹಾರಕ್ಕಾಗಿ ವಸ್ತುವಿನ ಒಂದು ಅಂಶವನ್ನು ಪರಿಗ್ರಹಿಸಬೇಕೆಂಬ ವಾದ; ಸಮಗ್ರಜ್ಞಾನವನ್ನು ಪಡೆಯಲು ವಸ್ತುವಿನ ಒಂದೊಂದು ಅಂಶವನ್ನು ಕ್ರಮವಾಗಿ ಗ್ರಹಿಸುವುದು : ನಯವಾದಂ ನಯವಾಗಿ ಕೂಡೆ ಪೊಳೆಯಲ್ . . . ವೇಟ್ಬರೀಗೆಮಗುಪಾಧ್ಯಾಯರ್ ಸುಖೋಪಾಯಮಂ (ಪುಷ್ಪಪು. ೦-೪); ವಸ್ತುವಿನ ಒಂದೊಂದು ಭಾಗ (ಧರ್ಮ)ವನ್ನು ಗ್ರಹಿಸುವ ಜ್ಞಾನವು ಸಂಪೂರ್ಣವಾಗಿ ಪ್ರಮಾಣವಾಗಲಾರದು. ಈ ವಾದಕ್ಕೆ ನಯವಾದವೆಂದು ಹೆಸರು (ಭಾತತ್ತ್ವ. ೨೨೮). 'ನಯ$_2$' ಪರಾ. [ನಯ$_2$ + ವಾದ$_3$]

**ನಯವಿದ** (ನಾ). ೧. ರಾಜನೀತಿನಿಪುಣ; ನಯಜ್ಞ : ಸದುದಿತಗುಣನದೞಿಂ ನಯವಿದನಪ್ಪಂ ಕಾಲಮಂ ನೆರಂ ತೋರ್ಕೆ ನೃಪಂ (ಕವಿರಾ. ೩-೧೪೭); ಕಾವುದು ನೀನೆಮ್ಮನ್ನಯವಿದ ಧರ್ಮಮಾರ್ಗದಿಂ ಗಜವೈರೀ (ಪಂಚತಂ. ೮೮-೬); ನಯವಿದನಂ ಸಾಮುದಿನವನಯನಂ ದಂಡದೊಳಗೆಲುವುದು (ಪಾರ್ಶ್ವಪು. ೨-೪೨); ನಯವಿದರೆಲ್ಲಮಲ್ಲಿಯೆ ಕಳಾನ್ವಿತರಲ್ಲಿಯೆ (ಪುಷ್ಪಪು. ೯-೧೭); ನಯವಿದನು ಹೊಂಬಟ್ಟಲಲಿ ವೀಳೆಯವನನಿಬರಿಗಿತ್ತು . . . ವಾಳೆಯಕೆ ನೇಮವ ಕೊಟ್ಟನು (ಕುಮಾರದ್ರೋ. ೨-೦೨). ೨. ಒಳ್ಳೆಯ ನಡತೆಯಿಂದ ಕೂಡಿದವನು; ಸದಾಚಾರಸಂಪನ್ನ : ನಯವಿದನಪ್ಪುದಱಿಂ ದುರ್ನಯಮಂ ಬಿಸುಟೇಕಚಿತ್ತದಿಂ ನಂಬಿರ್ದಂ . . . ಜನಪತಿಯುಂ (ಧರ್ಮಾಮೃ. ೧೨-೨೫). ೩. ಸೌಜನ್ಯವುಳ್ಳವನು; ಮಾರ್ದವದಿಂದ ಕೂಡಿದ ನಡವಳಿಕೆಯುಳ್ಳವನು: ನಯವಿದನೊಪ್ಪುವ ಬಿಯಕಾಣನೊಳ್ಪಿದ ಪ್ರಿಯುತಮನಾಗೆ ತನ್ನ ಮುನ್ನೋಂತ ನೋಂಪಿಯ ಫಲವೆನೆ ಬೆಲೆವೆಣ್ಣ (ಲೀಲಾವ. ೨-೩೪); (ಸೂಕ್ತಿಸು. ೮-೩೪೪ ನೋ); ನಯವಿದರಱಿವುದು ರತಿವಿಸ್ಮಯಕೋಪೋತ್ಸಾಹಶೋಕಹಾಸ್ಯಜಂಗುಪ್ಸಾ

ಭಯಮೆಂಬೆಂಟುಂ ಭಾವಪ್ರಯೋಗದೊಳ್ ಸ್ಥಾಯಿಭಾವಮೆಂಬ ಪೆಸರ್ವಡೆಗುಂ (ಶೃಂಗಾರ. ೨-೪). ೪. ವಿವೇಚನೆಯುಳ್ಳವನು; ವಿವೇಕಿ: ನಯವಿದನೆ ಲವ ಕೇಳು ಬಾದಳು ಮಯನ ಸುತೆ . . . ಕರ್ಪೂರದಾರತಿಯ ಕೆಂಜೊಡರ ಸೊಂಪಿನಲಿ (ತೊರವೆ ೬-೪೭-೩೦).
[ಸಂ. ನಯವಿದ್]

**ನಯವಿದೂರ** (ನಾ). ಒಳ್ಳೆಯ ನಡವಳಿಕೆಯನ್ನು ಬಿಟ್ಟವನು : ಚಿತ್ರಾಂಗದ ವಿಕರ್ಣನ ನಯವಿದೂರರ ತಂದರಿಪ್ಪತ್ತೈದು ಸಹಭವರ (ಕುಮಾಆ. ೧೯-೫೨). [ನಯ$_2$ + ವಿದೂರ]

**ನಯವಿದ್ಯಾವಿದ** (ನಾ). ನೀತಿಶಾಸ್ತ್ರವನ್ನು ಬಲ್ಲವನಂ : ಸದುವಿದ್ಯಾವಿದರಿಂ ಕವಿಪ್ರಕರದಿಂ ತರ್ಕಜ್ಞರಿಂ . . . ದೇವತಾಲಯದಿಂದೆಪ್ಪುವ ಗು ಪ್ತ ವಂ ಶ ವ ಸು ಧಾ ಧೀ ಶಾವಳೀರಾಜಧಾನಿಯನುಜ್ಜೈನಿಯನೆಯ್ದು ಬಂದನಜಿತಂ (ಪಂಚತಂ. ೧೯೩-೧೫). [ಸಂ. ನಯವಿದ್ಯಾವಿದ್]

**ನಯವಿನಿಮಯ** (ನಾ). ರಾಜರು ಪರಸ್ಪರ ನೀತಿಗಳನ್ನು ತಿಳಿದುಕೊಳ್ಳುವುದು,-ಪರಸ್ಪರ ರಾಜ್ಯಸಂಬಂಧದ ವಿಚಾರವನ್ನು ಅರಿಯುವುದು: ನಯವಿನಿಮಯ ನಾನಾಮಂತ್ರದೂತಪ್ರಯಾಣಾಕ್ಷಯ ಸಮಯವಿಳಾಸೋಲ್ಲಾಸಿ ಸಂಗ್ರಾಮಿತಾಂಗಂ (ಕವಿರಾ. ೩-೨೦೩). : "ನೀತಿ ವಿನಿಮಯ" (ಕವಿರಾ. ಟಿಪ್ಪಣಿ). [ನಯ$_2$ + ವಿನಿಮಯ]

**ನಯವಿವೇಕ** (ನಾ). ಯೋಜನೆಯ ಕುಶಲತೆ : ಮಯನ ಮತದಲಿ ವಿಶ್ವಕರ್ಮನ ನಯವಿವೇಕದಲಮಲ ಮಖಶಾಲೆಯನು ನಿರ್ಮಿಸಿದನು ಸುಲಕ್ಷಣ ಶಾಸ್ತ್ರಸೂತ್ರದಲಿ (ಕುಮಾಸ. ೬-೨೪). [ನಯ$_2$ + ವಿವೇಕ]

**ನಯವಿಹೀನೆ** (ನಾ). ಔಚಿತ್ಯವನ್ನು ತಿಳಿಯದವಳು : ಪಾಂಚಾಲಿಯನು ಕರಸಿದಳು ನಯವಿಹೀನೆ ಸುದೇಷ್ಣೆ (ಕುಮಾವಿ. ೩-೧).
[ಸಂ. ನಯವಿಹೀನಾ]

**ನಯವೇಱು** (ಕ್ರಿ). ಕಳೆಯೇರು; ಅಂದ ಹೆಚ್ಚಾಗು; ಸೊಗಸಾಗು : ಉದಯಗಿರೀಂದ್ರಮನಿನನೇಱೆ ಸರೋಜಸಮಿತಿ ನಯವೇಱುವವೊಲ್ (ಚಂದ್ರಪ್ರ. ೬-೨); ಅಂತರಂಗದ ಗರ್ಭವೊಡನೊಡನೆ ಬೆಳೆವುತಿರೆ ಅಂಗಲತೆ ನಯವೇಱೆ ಬೇಱೊಂದು ಚೆಲುವಾಗೆ (ಬಸವ. ೦-೦೦೭).
[ನಯ$_1$ + ಏಱು$_1$ (< ಏಱ್$_1$)]

**ನಯಶಟ್ಟ** (ನಾ). ಒಂದು ಊರಿನ ಹೆಸರು : ಶ್ರೀ[ಪೃಥುವೀವಲ್ಲಭ] ಮಹಾರಾಜಾಧಿರಾಜಪರಮೇ[ಶ್ವರ] ಪರಮಭಟ್ಟಾರಕಂ ನಯಶಟ್ಟಪುರವರೇಶ್ವರಂ (ಸೌಇಇ. XX. ೧೯-೭; 1016). [?]

**ನಯಶಾಲಿ** (ನಾ) ೧. ನೀತಿನಿಪುಣ; ನಯಜ್ಞ : ವೀರನುದಾರಂ ಶುಚಿ ಗಂಭೀರಂ ನಯಶಾಲಿ ಕೃದುಪೂತ್ತಂ ದೇವಂಗಾರೆಟಿಗರ್ ನೃಪತುಂಗಂಗ (ಶಮದ. ೧೪೦ ಪ್ರಯೋ). ೨. ಒಳ್ಳೆಯ ನಡತೆಯುಳ್ಳವನು; ಸದಾಚಾರಿ: ನಯಶಾಲಿ ವತ್ಸಗೋತ್ರಶ್ರಯನೇಯನನೇಕಸಕಳಶಾಸ್ತ್ರಾರ್ಥವಿನಿಶ್ಚಯಮತಿಕೃತಿ ಮಾಧವಸೋಮಯಾಜಿ ಸಲೆ ನೆಗಟ್ದ (ಪಂಪಭಾ. ೧೪-೪೨). ೩. ವಿನಯಶಾಲಿ; ಸೌಜನ್ಯಶೀಲ : ನಯಶಾಲಿಯಾದವ ಜಯಶಾಲಿಯಾದಾನು (ಗಾದೆ). [ಸಂ. ನಯಶಾಲಿನ್]

**ನಯಶಾಸ್ತ್ರ** (ನಾ). ರಾಜನೀತಿ; ರಾಜ್ಯಭಾರದ ಕ್ರಮವನ್ನು ಕುರಿತ ಶಾಸ್ತ್ರ : ನಯಶಾಸ್ತ್ರಕ್ರಮದಿಂ ವಿರೋಧಿನೃಪರಂ ಗೆಲ್ದು (ಪಂಚತಂ. ೧೭-೨೦); ನಯಶಾಸ್ತ್ರಂ ಧರ್ಮಶಾಸ್ತ್ರಂ ಕರತಳಕಳಿತವ್ಯಕ್ರಮುಕ್ತಾಫಳಮದೀಯಾನ್ವಯರಾಜ್ಯಶ್ರೀಲತಾಲಂಬನಮೆನೆ ನೆಗಟ್ದಿಲ್ಲ ಪುತ್ರನಿನ್ನನ್ನನಾವಂ (ಮಲ್ಲಿಪು. ೯-೮೭); ನಯಶಾಸ್ತ್ರಾನೀಕಮಾಣಿರಮನೆ ಪಡೆದುದೆಂಬಂತೆ ಸನ್ಮಂತ್ರಿವಿಖ್ಯಾತಿಯನಾದಂ ತಾಳ್ದ ಮಂತ್ರೀಶ್ವರತತಿ (ಶಾಂತೀಶ್ವ. ೧೫-೯೭); ಸಂಸ್ಥಾನವನ್ನು ನೀತಿಯುಕ್ತ ಮಾಡಲಿಕ್ಕೆ ನಯಶಾಸ್ತ್ರವಾಯಿತು (ವಿಚಾಮಂ. ೪೫). [ನಯ$_2$ + ಶಾಸ್ತ್ರ]

**ನಯಸಂಪನ್ನ** (ನಾ). ನೀತಿವಂತ ; ನಯವಿದ : ನಯಸಂಪನ್ನನಶೇಷ ಯುವ್ಯನಯುತಂ ರೂಪಾನ್ವಿತಂ . . . ಸಂಭೋಗಸಂಪ್ರಿಯನುತ್ಸಾಹಿ ಯೆನಿಪ್ಪನೊಳ್ನೆರೆವ ವೇಶ್ಯಾ ರಂಭೆಯೇಂ ಸಾಟಿಯೇ (ರಾಜಶೇ. ೧೧-೧೩೦) ; ನಯಸಂಪನ್ನನಧೀತಶಾಸ್ತ್ರನಿಚಯಂ ನಾನಾಕಲಾಶಾಲಿ . . . ಬಲದೇವ ನೆಂಬನನಘಂ ಗಾಂಭೀರ್ಯರತ್ನಾಕರಂ (ವೃಷವಿ. ೪-೯೭).

[ ನಯ₂ + ಸಂಪನ್ನ ]

**ನಯಸಪ್ತಭಂಗಿ** (ನಾ). [ಜೈನ] ಏಳು ಬಗೆಯಾಗಿ ನಿರೂಪಿಸಬಹುದಾದ ವಸ್ತುವಿನ ಒಂದು ಧರ್ಮವನ್ನು ಮಾತ್ರ ಹೇಳುವುದು : ನಯಸಪ್ತ ಭಂಗಿಯೊಳೀವಕಾರವಿಶೇಷವುಕ್ಕುಮೆಂದಱಿದುಕೊಂಬುದು (ಷಡಾರ.೧೦೦); ಸಪ್ತಭಂಗಿಯು ಪ್ರಮಾಣಸಪ್ತಭಂಗಿಯೆಂದೂ ನಯಸಪ್ತಭಂಗಿಯೆಂದೂ ಎರಡು ವಿಧ . . . ನಯಸಪ್ತಭಂಗಿಯೆಂದರೆ ವಸ್ತುವಿನ ಒಂದು ಧರ್ಮವನ್ನು ಬೋಧಿಸುವ ವಾಕ್ಯ ಎಂದರ್ಥ (ಧಾಕಕ್ಕ₁. ೨೪೭).

[ ನಯ₂ + ಸಪ್ತಭಂಗಿ ]

**ನಯಸರ** (ನಾ). ಮೃದುವಾದ ದನಿ ; ಇಂಪಾದ ಸ್ವರ ; ಮಧುರವಾದ ಧ್ವನಿ : ಮೊರೆವ ತುಂಬಿಯ ಗಾಯಕರ ನಯಸರದ ಕೋಕಿಲಪಾಠಕರ . . . ಚಾತುರ ವಸಂತನೃಪಾಲ ನಡೆದನು ಪಾಂಡುವಿನ ಮೇಲೆ (ಕುಬ್ಯಾಭ. ೩-೭) ; ಬೀಜಾಕ್ಷರ್ದವು ನಯಸರವ ಮದವೇಱಿದಳಿಗೋಗಿಲೆಗಳೊಳು ನುಡಿದೋಱುತಿರ್ದವು ರಾಜಕೀರ (ತೊರರಾ. ೩-೧-೩೯).

[ ನಯ₁ + ಸರ₃ ]

**ನಯಸಾಣೆ** (ನಾ). ನಯವಾಗುವಂತೆ ಮಾಡುವುದಕ್ಕಾಗಿ ಉಜ್ಜುವಿಕೆ ; ಸಾಣೆಕಲ್ಲಿನಿಂದ ನಯ ಮಾಡಿದ ಸ್ಥಿತಿ : ಬೆಳ್ಳಕ್ಕದ ತುಂಬುವೆಱ ಗಳನೊಟ್ಟಿಸಿ ಮೂಸೆಯೊಳಿಟ್ಟು ತಿದಿಯೊತ್ತಿ ಕರಗಿಸಿಯುಂ . . . ನಯಸಾಣೆ ವಿಡಿದುಂ ಸಮೆದುದೆಂಬಂತಿರೆ ತಳತಳನೆ ಪೊಳೆದು ಬಿತ್ತರಂಬಡೆದ ಬಿದುಗಲ್ಲ ಸುತ್ತಣ ಮಟ್ಟಡಿಯಿಂ (ರಾಮಾಶ್ವ. ೩೨-೧೭). [ ನಯ₁ + ಸಾಣೆ ]

**ನಯಸಾಧ್ಯ** (ನಾ). ಒಳ್ಳೆಯ ಮಾತಿನಿಂದ ವಶನಾಗುವವನು ; ಸಾಮೋಪಾಯಕ್ಕೆ ವಶನಾಗುವವನು: ವನಜಕೇಳಿಯರ್ಥಿಯೊಡೆಯಂ ನಯಸಾಧ್ಯನಧೋವಲೋಕನಂ . . . ಕುಬ್ಜಶರೀರಿ ಕುಳೀರಸಂಭವಂ (ಜಾತತಿ. ೧೭-೪). [ ನಯ₂ + ಸಾಧ್ಯ ]

**ನಯಹೀನ** (ನಾ). ೧. ವಿವೇಕಶೂನ್ಯನಾದವನು ; ಅವಿವೇಕಿ : ನಯಹೀನನಾದ ನರನಾಥನಾಳುವ ನಾಡು ದಯೆಯಿಲ್ಲದಾ ತಪಸಿ ಮಾಡುವ ತಪಂ . . . ಲಯಮಾಗದೇ (ಸಮ್ಯಕೌ. ೪-೧೪). ೨. ಸೌಜನ್ಯವಿಲ್ಲದವನು; ಸಭ್ಯತೆಯಿಲ್ಲದವನು : ನಯಹೀನರ್ಬಡಿದೊತ್ತಿ ಕೆನ್ನವರೆಗಂ ಕರ್ಣಂಗಳಂ ಕೊಯ್ದು ನಿರ್ದಯದಿಂ ಪೀಡಿಸಿ (ಸುಕುಮಾ. ೬-೨೫).

[ ನಯ₂ + ಹೀನ ]

**ನಯಾಂಕವಚಸ್ಕ** (ನಾ). ರಾಜನೀತಿಯನ್ನು ಅರಿತ ಮಾತುಗಾರ : ಸಮದರ್ಶಿ ಸದ್ಗುಣಯುತಂ ಸತ್ಕೀರ್ತಿಯುಕ್ತಂ ನಯಾಂಕವಚಸ್ಕಂ ಹತಿಮೋಹಿಸಾಮದಿನಲಂಪಿಂ ಮಂತ್ರಿಪಂ ರಂಜಿಪಂ (ರಾಜಶೇ. ೩-೨೨).

[ ಸಂ. ]

**ನಯಾಗಮ** (ನಾ). ನೀತಿಶಾಸ್ತ್ರ : ಮತಿಹೀನರಪ್ಪ ಮನುಜರ್ ಪತಂಗ ವೃತ್ತಿಯನೆ ಕೊಂಡು ಕೊಪೆಯುತ್ತಿರ್ಪರ್ ಸತತಮದೆಂತುಂ ವಿಬುಧ ಪ್ರತತಿಗನಿಷ್ಟಂ ನಯಾಗಮಕ್ಕೆ ವಿರುದ್ಧಂ (ಪಂಚತಂ. ೨೧೭-೪).

[ ನಯ₂ + ಆಗಮ ]

**ನಯಾನುಗಾಮಿ** (ನಾ). ರಾಜನೀತಿಗೆ ಅನುಗುಣವಾಗಿ ನಡೆಯುವವನು, ವರ್ತಿಸುವವನು: ನಯಾನುಗಾಮಿಗಳು ದೇಶ ಕಾಲಾವಸ್ಥೆಗಳನ್ನು ನೋಡಿ ಹಾನೀ ಕಾರ್ಯವನ್ನು ತೋರಿಸುವುದು (ಧಾಸನಾ. ೪೩).

[ ಸಂ. ನಯಾನುಗಾಮಿನ್ ]

**ನಯಾನ್ವಿತ** (ನಾ). ನೀತಿಯಿಂದ ಕೂಡಿರುವವನು : ರಾಜನೀತಿನಿಪುಣ : ನಯಮೆಸೆಯೆ ನೆಗಟ್ದ ಶಕ್ತಿತ್ರಯದೊಳ್ ಪ್ರಭುಶಕ್ತಿ ಎಸೆವಪೋಲೆಸೆದಂ ತತ್ಪ್ರಿಯತನಯ[ಮ್ಮೆರ್]ವರೊಳಂ ನಯಾನ್ವಿತಂ ಕಾಳಿದಾಸದಣ್ಣಾ ಧೀಶ[ಂ] (ಕಇಳ. ೩-೨-೭೦ ; 1058). [ ನಯ₂ + ಅನ್ವಿತ ]

**ನಯಿಂದ** 'ನಾವಿದ₁' ನೋ.

**ನಯಿಸು** (ಕ್ರಿ). ಮಾಡು ; ಯೋಜಿಸು (?) : ಜಾಯೆ ನಿಜವಲ್ಲಭನಂ ರತಿಕೇಳಿಯೊಳ್ ಮನಂಬಯಸಿದ ಹಾಗೆ ತರ್ಜನ ವಿಡಂಬನ ಗರ್ಹಣ ತಾಡನಾದಿಯಂ ನಯಿಸಲ್ ಅದೇಂ ವಿರೋಧವೇ (ಶಕಶ. ೬೮).

[ ನಯ₂ + – ಇಸು₃ ]

**ನಯೀತಾಲೀಂ** (ನಾ). ಹೊಸ ಶಿಕ್ಷಣ ಪದ್ಧತಿ ; ಕ್ರಿಯಾತ್ಮಕಶಿಕ್ಷಣ ; ಮೂಲಶಿಕ್ಷಣ : ಮಹಾತ್ಮಾಗಾಂಧಿಯವರು ಕ್ರಿಯಾತ್ಮಕಶಿಕ್ಷಣಪದ್ಧತಿ ಯನ್ನು (Basic Education) ಏರ್ಪಡಿಸಿದರು . . . ಅದನ್ನು "ನಯೀತಾಲೀಂ" ಎಂದು ಕರೆದರು (ಶ್ರಿಯಾಶಿ. ೧೫೩).

[ ←ಹಿಂ. ನಯೀತಾಲೀಮ್ ]

**ನಯುತ** (ನಾ). [ಜೈನ] ಕಾಲಗಣನೆಯ ಅಪರಿಮಿತವಾದ ಒಂದು ಪರಿಮಾಣ, – ಅವಧಿ : ಹದಿನೈದು ದಿನಗಳಿಂದ ಒಂದು ಪಕ್ಷವು, ಎರಡು ಪಕ್ಷಗಳಿಂದ ಒಂದು ಮಾಸವು, ಎರಡು ಮಾಸಗಳಿಂದ ಒಂದು ಋತುವು, ಮೂರು ಋತುಗಳಿಂದ ಒಂದು ಅಯನವು, ಎರಡು ಅಯನಗಳಿಂದ ವರುಷವು, ಐದು ವರುಷಗಳಿಂದ ಯುಗವು, ಎಂಬತ್ತುನಾಲ್ಕುಲಕ್ಷ ವರುಷಗಳಿಂದ ಪೂರ್ವಾಂಗವು, ಎಂಬತ್ತುನಾಲ್ಕುಲಕ್ಷ ಪೂರ್ವಾಂಗಗಳಿಂದ ಒಂದು ಪೂರ್ವವು, ಎಂಬತ್ತುನಾಲ್ಕು ಪೂರ್ವಗಳಿಂದ ನಯುತಾಂಗವು, ಎಂಬತ್ತುನಾಲ್ಕುಲಕ್ಷ ನಯುತಾಂಗಗಳಿಂದ ನಯುತವು (ಜೈನಪ. ೩೦೬).

[ ಸಂ. ]

**ನಯುತಾಂಗ** (ನಾ). [ಜೈನ] ಕಾಲಗಣನೆಯ ಅಪರಿಮಿತವಾದ ಒಂದು ಅವಧಿ : ಎಂಬತ್ತುನಾಲ್ಕುಲಕ್ಷ ವರುಷಗಳಿಂದ ಪೂರ್ವಾಂಗವು, ಎಂಬತ್ತು ನಾಲ್ಕು ಲಕ್ಷ ಪೂರ್ವಾಂಗಗಳಿಂದ ಒಂದು ಪೂರ್ವವು, ಎಂಬತ್ತುನಾಲ್ಕು ಪೂರ್ವಗಳಿಂದ ನಯುತಾಂಗವು, ಎಂಬತ್ತುನಾಲ್ಕುಲಕ್ಷ ನಯುತಾಂಗಗಳಿಂದ ನಯುತವು (ಜೈನಪ. ೩೦೬). 'ನಯುತ' ಪರಾ. [ ನಯುತ + ಅಂಗ₂ ]

**ನಯೋಕ್ತಿ** (ನಾ). ವಿನಯದಿಂದ ಕೂಡಿದ ನುಡಿ : ಹಗಲು ಕತ್ತಲೆ ಯಹುದು ಕತ್ತಲೆ ಹಗಲಹುದು ತಾನಿದುವೆ ಸಲೆ ಸೋಜಿಗವಲಾ ನೀ ನೋಡಿಕೋಯೆಂದರು ನಯೋಕ್ತಿಯುಲಿ (ತೊರರಾ. ೬-೧೨-೩).

[ ನಯ₂ + ಉಕ್ತಿ ]

**ನಯೋದಯ** (ನಾ). ರಾಜನೀತಿಯ ಏಳಿಗೆ, – ವೃದ್ಧಿ : ಜಯವೊಡ ವುಟ್ಟಿದುದು ನಯೋದಯುಮೊಡವಳೆದುದು ವಿಳಾಸಮೊಡನಾಡಿದುದನ್ವಯ ದೊಡವು ತಾಯುಮಂ ತಂದೆಯುಮಂ ತಣ್ಪಿದುದು (ಶಾಂತಿಪು. ೧-೭೮).

[ ನಯ₂ + ಉದಯ ]

**ನರ₁** 'ನರವು' ನೋ.

**ನರ₂** (ನಾ). ೧. ಮನುಷ್ಯ ; ಮಾನವ ; ಪುರುಷ : "ಮನುಷ್ಯಃ, ಮಾನುಷಃ, ಮರ್ತ್ಯಃ . . . ಪೂರುಷಃ, ವಿಟ್ – ಈ ೧೨ ಮಾನಸರ್" (ಶಬ್ದಾಯು. ೩೩-೧೭೬) ; ನರಖಚರನಿಶಾಚರರಾದರದಿಂ ಬೆಸರೆಯ್ಯೆ (ನೇಮಿಪು. ೧೪-೮೨) ; ವ್ಯಾಧನೊಂದು ಮೊಲನ ತಂದರೆ ಸಲುವ ಹಾಗೆನ್ನೆ ಬಲಿವರಯ್ಯಾ . . . ಮೊಲನಿಂದ ಕರಕಷ್ಟ ನರನ ಬಾಳುವೆ (ಬಸವ. ೧೫೦) ; ದುಗ್ಧೋದಧಿತಲ್ಪನಂ ನರನಭಿಪ್ರೀತಿಗೆಯ್ವುದು ಧಾರ್ಷ್ಟ್ಯಮಲ್ಲವೇ (ಆದಿ. ೨-೩೦); ನರಕರಿತುರಗವರೂಥೋತ್ಕರ ಸರಭಸಗಮನದಿನೊಗೆವ ರೇಣುವ್ರಜ ಮಂಬರದತ್ತಭಿಮುಖಮಾಗುತ್ತಿರೆ (ಕುಸುಮಾ. ೪-೦೦೩) ; ನರರನ್ನೆರಿಲ್ಲಾ ೨ತ್ತು ಮಂಥರೆಯ ಲೋಕಕ್ಕೆ (ಶ್ರೀರಾಮಾ. ೨೭-೨೦೭). ೨. ಅರ್ಜುನನ

ಹೆಸರುಗಳಲ್ಲಿ ಒಂದು : ನರನಂ ಮುಂ ಕೊಲ್ವೆನಾಂ ಕರ್ಣನನಟ್ಟಿದುದಟ್ಟಿಂ ಕೊಲ್ವೆನಾ ಭೀಮನಂ ಸಂಗರದೊಳ್ / ಸೀಳ್ದೊಟ್ಟೆ ದುಶ್ಶಾಸನನಟಲನದಂ ನೀಗುವೆಂ (ಪಂಪಭಾ. ೧೩-೨೦) ; ನರನುಂ ನಾರಾಯಣನುಂ ಪರಿಕಿಸ ಲೆಂದೆನುತುಮಿರ್ಪುದೀ ಧರೆ (ನೇಮಿಪು. ೧೧-೧೩೮) ; ನರ ಕೂರುಂಬಿನರೆಚ್ಚ ಆವಂಗೊಲಿದೆಯಯ್ಯಾ (ಬಸವ. ೬೫). ೩. ಒಬ್ಬ ಋಷಿಯ ಹೆಸರು ; ☞ ಸ್ವಾಯಂಭುವ ಮನ್ವಂತರದಲ್ಲಿ ಧರ್ಮಮುನಿಯ ಇಬ್ಬರು ಪುತ್ರರಲ್ಲಿ ಹಿರಿಯವ. ವಿಷ್ಣು ಹಿರಣ್ಯಕಶಿಪುವನ್ನು ಸಂಹರಿಸಿದ ಬಳಿಕ ಆತನ ಸಿಂಹರೂಪ ನಾರಾಯಣನಾಗಲು, ಮನುಷ್ಯರೂಪ ನರನೆಂದು ಪ್ರಖ್ಯಾತಿಗೊಂಡಿತು. 'ನರನಾರಾಯಣಾಶ್ರಮ' ಪರಾ. ೪. ಒಬ್ಬ ಮನುಷ್ಯನ ಅಳತೆ; ಒಬ್ಬ ಪುರುಷನ ಎತ್ತರ. ೫. (?) : ನರನಾಗ ಶೈಲಸಪ್ತಂ ಷಡುರುತು ಶರಬಾಣ ಶರಧಿವಾರುಧಿ ಮತ್ತಾ ಅನಲಾಗ್ನಿ ನಯನಲೋಚನ ಹಿಮಕರ ಶಶಿಯನ್ನು ನಿಧಿಯೊಳುಳಿವದು ಮತ್ತಾ (ಭಾಸ್ಕರ. ೪೪-೫). [ ಸಂ. ]

ನರಂ 'ನರಮ್' ನೋ.

ನರಂಜಿಬಳ್ಳಿ (ನಾ). ಒಂದು ಬಗೆಯ ಬಳ್ಳಿ : ನರಂಜಿಬಳ್ಳಿ, ಹಸುರಾಣಿ ಬಳ್ಳಿ, ಭೂಚಕ್ರ ಬಳ್ಳಿ (ವ್ಯಜಿಗಿ. ೨೪-೪೪೪). [ ನರಂಜ್ಞಿ + ಬಳ್ಳಿ ]

ನರಕ (ನಾ) ೧. ಪಾಪ ಮಾಡಿದವರನ್ನು ಮರಣಾನಂತರ ಯಮ ಲೋಕದಲ್ಲಿ ಶಿಕ್ಷೆಗೆ ಗುರಿಪಡಿಸುವ ಸ್ಥಳವೆಂದು ಭಾವಿಸಲಾದ ಲೋಕ; ಯಮಧರ್ಮರಾಯನ ಆಳ್ವಿಕೆಗೊಳಗಾಗಿದೆಯೆಂದು ನಂಬಲಾದ ಲೋಕ; ಅಧೋಲೋಕ ; ☞ ಸ್ವರ್ಗ ಭೂಮಿಯ ಮೇಲ್ಭಾಗದಲ್ಲೂ ನರಕ ಭೂಮಿಯ ಕೆಳಭಾಗದಲ್ಲೂ ಇದೆ ಎಂಬ ನಂಬಿಕೆ ಇದೆ. ಇಲ್ಲಿ ಕೊಡುವ ಶಿಕ್ಷೆಗಳ ವಿವರದಿಂದ ಜನರು ಪಾಪಕ್ಕೆ ಹೆದರುತ್ತಾರೆಂದು ಜನಸಾಮಾನ್ಯರ ನಂಬಿಕೆ. ಮುಖ್ಯವಾದ ೨೮ ನರಕಗಳನ್ನು ಇಲ್ಲಿ ಹೆಸರಿಸಿದೆ. ಇವುಗಳ ಹೆಸರು ಮತ್ತು ಸಂಖ್ಯೆಗಳ ವಿಷಯದಲ್ಲಿ ಆಕರ ಗ್ರಂಥಗಳಲ್ಲಿ ವ್ಯತ್ಯಾಸವು ಕಂಡುಬರುತ್ತದೆ. ೧. ತಾಮಿಸ್ರ. ೨. ಅಂಧ ತಾಮಿಸ್ರ. ೩. ರೌರವ. ೪. ಮಹಾರೌರವ. ೫. ಕುಂಭೀಪಾಕ. ೬. ಕಾಲಸೂತ್ರ. ೭. ಅಸಿಪತ್ರವನ. ೮. ಸೂಕರಮುಖ. ೯. ಅಂಧ ಕೂಪ. ೧೦. ಕೃಮಿಭೋಜನ. ೧೧. ಸಂದಂಶ. ೧೨. ತಪ್ತಸೂರ್ಮಿ ೧೩. ವಜ್ರಕಂಟಕ. ೧೪. ಶಾಲ್ಮಲಿ. ೧೫. ವೈತರಣಿ. ೧೬. ಪೂಯೋದ ೧೭. ಪ್ರಾಣರೋಧ. ೧೮. ವಿಶಸನ. ೧೯. ಲಾಲಾಭಕ್ಷ. ೨೦. ಸಾರಮೇಯಾದನ. ೨೧. ಅವೀಚಿ. ೨೨. ಅಯಃಪಾನ. ೨೩. ಕ್ಷಾರಕರ್ದಮ. ೨೪. ರಕ್ಷೋಗಣಭೋಜನ. ೨೫. ಶೂಲಪ್ರೋತ. ೨೬. ದಂದಶೂಕ. ೨೭. ಪರ್ಯಾವರ್ತನ. ೨೮. ಸೂಚೀಮುಖ: "ನಿರಯಃ, ದುರ್ಗತಿಃ–ಈ ೨ ನರಕಂ" (ಹಲಾಯು. ೦೦೩-೩) ; ನರಕವ್ಯಾವರ್ಣನೆಯನಾ ಭಟಾರ ರಿಂತೆಂದು ಪೇಳ್ವುದುಂ ಕೇಳ್ದಂ (ವಡ್ಡಾರಾ. ೧೨೬-೧೨) ; ನರಕದೊಳಿಯ್ದುದ ದುಃಖಾಂತರಮಂತದು ಬಗೆವೊಡಾರ್ಗಮರ್ವಲ್ತೆ (ಆದಿಪು. ೯-೪೭) ; ನರಕದೊಳಡಿಗಡಿಗೆ ಮಹಾದುರಿತದ ಫಲದಿಂದ ಬಿರ್ದು ನವೆವರ್ (ಧರ್ಮಾಮೃ. ೧೪-೦೩೮) ; ಆಚಾರವೆ ಸ್ವರ್ಗ ಅನಾಚಾರವೇ ನರಕ (ಬಸವ. ೨೩೯) ; ನರಕದ ವಿಚಿತ್ರದುಃಖೋತ್ಕರಮಂ ತಾವುಣುತುಮಿದಿರುಮಂ ಬಾಧಿಸುವರ್ (ಪರ್ಶ್ವಪು. ೧೧-೩೩) ; ಹಿಂಸಾಪರನ ಹಿಸುಣನ ಶಠನ ಕೃಪಣನ ನರಕವಾಗಲಿ ಕೊಲ್ಲದಿದ್ದರೆ ನಾಳೆ ಸೈಂಧವನ (ಕುಮಾವ್ಯಾ. ೮-೩೭) ; ರಾಜರಾದವರೆಲ್ಲರೂ ನರಕವನ್ನು ನೋಡಲೇಬೇಕು (ಪಡಭಾ. ೩೯೧). ೨. ಪಾಪ ಮಾಡಿದವರು ಮರಣಾನಂತರ ನರಕಲೋಕದಲ್ಲಿ ಅನುಭವಿಸುವ ದಂಡನೆ,-ಶಿಕ್ಷೆ : ನರಕವ ಮುನ್ನಲುಂಡು ಏರಿದಾಗಿಹ ಧರ್ಮವನೆಯ್ದಿದರ್ ಭೂಸುರರುಂ (ನನ್ನಭಾ. ೬-೧೯೫). ೩. ಒಬ್ಬ ರಾಕ್ಷಸನ ಹೆಸರು ; ☞ ವರಾಹಾವತಾರ ಮಾಡಿದ ವಿಷ್ಣುವಿನ ಬೆವರು ಭೂಮಿಯ ಮೇಲೆ ಬೀಳಲು ಅಲ್ಲಿ ಜನಿಸಿ, ಪ್ರಾಗ್ಜ್ಯೋತಿಷ ಪಟ್ಟಣದಲ್ಲಿ ರಾಜನಾಗಿದ್ದನು. ಕೊನೆಗೆ ಕೃಷ್ಣನಿಂದ ಸಂಹಾರವಾದನು : ನರಕನಾತಂ . . . ದಶಾಸ್ಯಾದಿಗಂ ಬಲಾಧಿಕಂ (ಜಗವಿ. ೧-೬೯). 'ನರಕಮರ್ದನ' ಪದಾ. ೪. [ಜೈನ] ನರಕ, ತಿರ್ಯಂಚ, ಮನುಷ್ಯ ಮತ್ತು ದೇವ ಎಂಬ ಚತುರ್ಗತಿಗಳಲ್ಲಿ ಒಂದು : ನರಕಾದಿ ಚತುರ್ಗತಿಯೊಳ್ ಬೆರಸಿದ ಜೀವಸ್ವರೂಪ ಭೇದಮನಾ ಜನವರಂ . . . ಪೇಳುತ್ತಿರ್ದಂ (ಚಂದ್ರಪ್ರಪು. ೧೬-೩೭೭). ೫. [ಜೈನ] ರತ್ನಪ್ರಭೆ, ಶರ್ಕರಾಪ್ರಭೆ, ವಾಲುಕಾಪ್ರಭೆ, ಪಂಕಪ್ರಭೆ, ಧೂಮಪ್ರಭೆ, ತಮಃಪ್ರಭೆ ಮತ್ತು ಮಹಾತಮಃಪ್ರಭೆ ಎಂಬ ಏಳು ನರಕಗಳು : ಏಬಣೆಯಾ ನರಕದಾ ಪುಟು ಅಕು(ಕ್ಕು)ವ್ (ಇಂ. X. ೬೦-೪ ; 578) ; ಏಳೆಂಬ ನರಕಮಾವುದೊ ಪೇಳೆಂಬ ದುರಂತದುಃಖ ದೊಳೆ ಕೇಳಿಸಿ ನಿಂದೇಳುಂ ಶರೀರಧಾತುಗಳೇಳುಂ ನರಕಂಗಳವಟ್ಟೊಳೇ ಗುಂದದವೋಲ್ (ಅಜಪು. ೨-೫೪) ; ನರಕಗತಿಯಲ್ಲಿ ರತ್ನಪ್ರಭೆ . . . ಮಹಾತಮಃಪ್ರಭೆಯೆಂಬೇಳುಂ ನರಕಂಗಳಕ್ಕುಂ (ಪಸಾರ. ೧೪೭). ೬. (ಅಲಂ) ಅಮೇಧ್ಯ : ನರಕದ ನೆಲೆ ಪೇಸಿಕೆಗಳ ಕರು ಮಸಣದ ಪೆಟ್ಟು ಪಾಪದಿಟ್ಟಿ ಪಾತಕದಾಗರಮದು ನೆನೆವರ್ಗೆ ಭಯಂಕರಮತಿಪಾಪಕರ ಮಾದುದುದ್ವೇಗಕರಂ (ಕಾದಂಗ. ೭೪೬). ೭. ದುಃಖ ; ಯಾತನೆ ; ಕ್ಲೇಶ : ನಾಲ್ಕುಗೋಡೆಗಳ ಮಧ್ಯದಲ್ಲಿ ನಾನು ಕಂಡ ನರಕದ ಅರಿವು ಈ ಬಾಹ್ಯ ಪ್ರಪಂಚಕ್ಕಿದೆಯೇ ? (ಕಾವೇರಿ. ೧೯೫). [ ಸಂ. ]

ನರಕಂಬುಗು, ನರಕಂಬೊಗು (ಕ್ರಿ). ನರಕವನ್ನು ಪ್ರವೇಶಿಸು ; ನರಕಕ್ಕೆ ಹೋಗು,-ಸೇರು : ಬೇಗಂ ನರಕಂಬುಗಲ್ವೇಡಿರ್ದ ಜೀವಮುಮಂ ಅಭವ್ಯನಪ್ಪ ಜೀವನುಮಂ ಪರಮಾಗಮಮೆನಿತು ಲೇಸಾಗಿಯುಂ ಸೋಲಿಸ ಲಾಜಿದು (ಧರ್ಮಾಮೃ. ೭-೬೭) ; ಎನಗಟ್ [ಮಂಕಿರೆ ಧರ್ಮಮನಟ್] ಓ ಸಮುದ್ಧರಿಸಿದರಲ್ಲದೊಡೆ ಮಗುಳ್ ನರಕಂಬುಗೆನೇ (ಪರ್ಶ್ವಪು. ೧೨-೨೮) ; ನರಕಂಬುಗಲ್ಕೆ ತಡೆಯ್ಯೆ ಮಾಯಾವಿಯುಮಪ್ಪಾತ್ಮನೇ (ಜೀವಸಂ. ೧೪೭-೨೭). ನರಕಂಬೊಗು : ಸ್ಕಂದಕುಮಾರನೆಂಬ ರಿಸಿ . . . ತನ್ನ ಶರೀರಮುಮಂ ಭಸ್ಮಂ ಮಾಡಿ ಸುಟ್ಟು ಸತ್ತೀಟನೆಯ ನರಕಂಬೊಕ್ಕಂ (ವಡ್ಡಾರಾ. ೧೮೮-೧೪) ; ನರಕಂಬೊಕ್ಕ ಪಂಚಮಹಾಪಾತಕನಕ್ಕು (ಸೌಇಇ. XX. ೨೯-೩೦ ; 1044) ; ದುರಿತೋದಯದಿಂ ನರಕಂಬೊಗಲಿರ್ದವರುಂ ಪರಕ್ರಿಯುಂ ಕಾಣಾರ್ (ಧರ್ಮಾಮೃ. ೪-೨೩೪). [ ನರಕ + ಪುಗು ]

ನರಕಂಬೊಗು 'ನರಕಂಬುಗು' ನೋ.

ನರಕಕರ್ಮ (ನಾ). ದುರ್ಗತಿಯನ್ನುಂಟುಮಾಡುವ ಕೆಲಸ ; ನರಕ ವಾಸವನ್ನು ತರುವ ಕೃತ್ಯ,-ಕಾರ್ಯ : ಪಾಪಕೃತ್ಯ : ನರಕಕರ್ಮವ ಮಾಡಿ ಇಹದೊಳು ದುರಿತಭಾಜನನಾಗಿ ಕಡೆಯೊಳು ಪರಕೆ ಬಾಹಿರನಾಗಿ (ಕುಮಾವ್ಯಾಭೀ. ೩-೨೯). [ ನರಕ + ಕರ್ಮ ]

ನರಕಕುಂಡ (ನಾ). ನರಕದಲ್ಲಿ ಪಾಪಿಗಳನ್ನು ಶಿಕ್ಷಿಸುವುದಕ್ಕಾಗಿ ಇರುವು ದೆಂದು ಭಾವಿಸಲಾದ ಕುಣಿ,-ಕುಳಿ,-ಘೋರವಾದ ಯಾತನೆಯ ಸ್ಥಳ ; ☞ ಇವು ಅನೇಕವಾಗಿವೆ. ಬೇರೆ ಬೇರೆ ಪುರಾಣಗಳಲ್ಲಿ ಬೇರೆ ಬೇರೆ, ಹೆಸರುಗಳಿಂದ ವರ್ಣಿತವಾಗಿವೆ. ಕಾಲಕಾಲಕ್ಕೆ ನರಕಸಂಖ್ಯೆಗಳೂ ಅವುಗಳ ವಿವರಗಳೂ ಬೆಳೆಯುತ್ತ ಹೋಗಿರ ಬಹುದು ಮತ್ತು ಇವಕ್ಕೆ ಚಾರಿತ್ರಿಕ ಹಿನ್ನೆಲೆಯಿರಬಹುದು. ಬ್ರಹ್ಮವೈವರ್ತಪುರಾಣದಲ್ಲಿ ಎಂಬತ್ತಾರು ಕುಂಡಗಳ ಹೆಸರುಗಳು ಮತ್ತು ಯಾವ ಯಾವ ಪಾಪಿಯು ಯಾವ ಯಾವ ಕುಂಡದಲ್ಲಿ ದಂಡನೆಯನ್ನನುಭವಿಸುವನೆಂಬುದು ನಿರೂಪಿತವಾಗಿದೆ. ೧. ವಹ್ನಿ ಕುಂಡ-ಕೆಟ್ಟ ಮಾತುಗಳನ್ನಾಡುತ್ತಾ ನೆಂಟರಿಷ್ಟರ ಹೊಟ್ಟೆ ಉರಿ ಸುವವನು. ೨. ತಪ್ತಕುಂಡ-ಬ್ರಾಹ್ಮಣರಿಗೂ ಅತಿಥಿಗಳಿಗೂ ಅನ್ನ ಹಾಕದವನು. ೩. ಕ್ಷಾರಕುಂಡ-ನಿಷಿದ್ಧ ದಿನಗಳಲ್ಲಿ ಬಟ್ಟೆಗೆ ಚೌಳುಪ್ಪು

ಹಾಕಿ ಒಗೆಯುವವನು. ೪. ವಿಟ್ಕುಂಡ-ಹಿಂದಿನವರು ಬ್ರಾಹ್ಮಣರಿಗೆ ಕೊಟ್ಟಿದ್ದ ವೃತ್ತಿಗಳನ್ನು ಅಪಹರಿಸುವವನು. ೫. ಮೂತ್ರಕುಂಡ-ಬೇರೆಯವರು ಕಟ್ಟಿಸಿದ ಕೆರೆಗಳನ್ನು ಒಡೆದುಹಾಕುವವನು. ೬. ಶ್ಲೇಷ್ಮಕುಂಡ-ಒಬ್ಬನೇ ಮೃಷ್ಟಾನ್ನ ಭೋಜನ ಮಾಡುವವನು. ೭. ಗರಕುಂಡ-ತಾಯಿ-ತಂದೆ, ಹೆಂಡತಿ-ಮಕ್ಕಳನ್ನು ಸಾಕದಿರುವವನು. ೮. ದೂಷಿಕಾಕುಂಡ-ಅತಿಥಿಗಳನ್ನು ವಕ್ರದೃಷ್ಟಿಯಿಂದ ನೋಡುವವನು. ೯. ವಸಾಕುಂಡ-ಒಬ್ಬನಿಗೆ ದಾನಮಾಡಿ ಅದನ್ನೇ ಮತ್ತೊಬ್ಬರಿಗೂ ದಾನಮಾಡುವವನು. ೧೦. ಶುಕ್ರಕುಂಡ-ಜಾರ ಮತ್ತು ಜಾರಿಣಿ. ೧೧. ಅಸೃಕ್ಕುಂಡ-ಗುರುಹಿರಿಯರನ್ನು ಹೊಡೆದು ರಕ್ತಬರಿಸುವವನು. ೧೨. ಅಶ್ರುಕುಂಡ-ಭಗವಂತನ ಸ್ತೋತ್ರಗಳನ್ನು ಹಾಡುತ್ತ ಬಾಷ್ಪಗದ್ಗದಕಂಠನಾಗುವ ಭಕ್ತನನ್ನು ಗೇಲಿಮಾಡುವವನು. ೧೩. ಗಾತ್ರಮಲಕುಂಡ-ಕೊಳಕು ಮನಸ್ಸಿನವನು. ೧೪. ಕರ್ಣವಿಟ್ಕುಂಡ-ಕಿವುಡರನ್ನು ಲೇವಡಿ ಮಾಡುವವನು. ೧೫. ಮಜ್ಜಕುಂಡ-ತನ್ನ ಹೊಟ್ಟೆಗಾಗಿ ಪ್ರಾಣಿಹಿಂಸೆ ಮಾಡುವವನು. ೧೬. ಮಾಂಸಕುಂಡ-ಹಣಕ್ಕಾಗಿ ಹೆಂಗಸನ್ನು ಮಾರುವವನು. ೧೭. ನಖಕುಂಡ ಮತ್ತು ೧೮. ಲೋಮಕುಂಡ-ಶ್ರಾದ್ಧ ಮತ್ತು ಉಪವಾಸ ದಿನಗಳಲ್ಲಿ ಜಿತೇಂದ್ರಿಯನಾಗದಿರುವವನು. ೧೯. ಕೇಶಕುಂಡ-ಕೂದಲು ಸೇರಿರುವ ಮಣ್ಣಿನಿಂದ ಮಾಡಿದ ಪಾರ್ಥಿವ ಲಿಂಗವನ್ನು ಪೂಜಿಸುವವನು. ೨೦. ಅಸ್ಥಿಕುಂಡ-ಗಯೆಯಲ್ಲಿ ವಿಷ್ಣುಪಾದದಲ್ಲಿ ಪಿತೃಗಳಿಗೆ ಪಿಂಡಹಾಕದವನು. ೨೧. ತಾಮ್ರಕುಂಡ-ಗರ್ಭಿಣಿಯೊಂದಿಗೆ ಬೆರೆಯುವವನು. ೨೨. ಲೌಹಕುಂಡ-ಮುಟ್ಟುನೀರು ಹಾಕಿಕೊಂಡ ದಿನ ಆ ಹೆಂಗಸಿನ ಮತ್ತು ಪತಿ-ಪುತ್ರರಿಲ್ಲದ ಹೆಂಗಸಿನ ಕೈಯಲ್ಲಿ ಊಟಮಾಡುವವನು. ೨೩. ತೀಕ್ಷ್ಣಕಂಟಕಕುಂಡ-ಕಠೋರವಾದ ಮಾತುಗಳಿಂದ ಗಂಡನನ್ನು ನೋಯಿಸುವವಳು. ೨೪. ವಿಷಕುಂಡ-ವಿಷ ಕೊಟ್ಟು ಜನರನ್ನು ಕೊಲ್ಲುವವನು. ೨೫. ಧರ್ಮಕುಂಡ-ಚಮ್ಮಾರನ ಕೈಯಿಂದ ದೇವರ ವಸ್ತುಗಳನ್ನು ಮುಟ್ಟುವವನು; ೨೬. ತಪ್ತಸುರಾಕುಂಡ-ಶೂದ್ರಾನ್ನಭಕ್ಷಕ. ೨೭. ಪ್ರತಪ್ತತೈಲಕುಂಡ-ಕೋಲಿನಿಂದ ಎತ್ತುಗಳನ್ನು ಹೊಡೆಯುವವನು. ೨೮. ಕುಂತಕುಂಡ-ಈಟಿ, ಕಬ್ಬಿಣದ ಆಯುಧ, ಗಾಳ ಮೊದಲಾದುವುಗಳಿಂದ ಪ್ರಾಣಿವಧೆ ಮಾಡುವವನು. ೨೯. ಕ್ರಿಮಿಕುಂಡ-ಮೀನು ತಿನ್ನುವ ಬ್ರಾಹ್ಮಣ; ಮಾಂಸವನ್ನು ತಿನ್ನುವವನು; ದೇವರಿಗೆ ನೈವೇದ್ಯಮಾಡದೆ ತಿನ್ನುವವನು. ೩೦. ಪೂಯಕುಂಡ-ಶೂದ್ರ ಪೌರೋಹಿತ್ಯ, ಶೂದ್ರಶ್ರಾದ್ಧ, ಶೂದ್ರಾಂತ್ಯಸಂಸ್ಕಾರಗಳಿಂದ ಹೊಟ್ಟೆ ಹೊರೆಯುವವನು. ೩೧. ಸರ್ಪಕುಂಡ-ಕೃಷ್ಣನ ಪಾದ ಚಿಹ್ನೆಯುಳ್ಳ (ನಾಗರ) ಹಾವನ್ನು ಕೊಲ್ಲುವವನು. ೩೨. ಮಶಕಕುಂಡ-ಶಾಸ್ತ್ರನಿಯಮಕ್ಕೆ ವ್ಯತಿರಿಕ್ತವಾಗಿ ಕ್ಷುದ್ರಜಂತುಗಳನ್ನು ಕೊಲ್ಲುವವನು. ೩೩. ದಂಶಕುಂಡ-ಶಾಸ್ತ್ರನಿಯಮಕ್ಕೆ ವ್ಯತಿರಿಕ್ತವಾಗಿ ಪ್ರಾಣವಧೆ ಮಾಡುವವನು. ೩೪. ಗರಲಕುಂಡ-ಜೇನುನೊಣಗಳನ್ನು ಕೊಂದು ಜೇನುತುಪ್ಪವನ್ನು ತೆಗೆದುಕೊಳ್ಳುವವನು. ೩೫. ವಜ್ರದಂಷ್ಟ್ರಕುಂಡ-ನಿರಪರಾಧಿಗಳನ್ನೂ ಶ್ರೋತ್ರಿಯರನ್ನೂ ದಂಡಿಸುವವನು. ೩೬. ವೃಶ್ಚಿಕಕುಂಡ-ಹಣದ ಮೇಲಿನ ದುರಾಸೆಯಿಂದ ಪ್ರಜೆಗಳನ್ನು ದಂಡಿಸುವವನು. ೩೭. ಶರಕುಂಡ ಮತ್ತು ೩೮. ಶೂಲಕುಂಡ ಮತ್ತು ೩೯. ಖಡ್ಗಕುಂಡ-ಆಯುಧವನ್ನು ಹಿಡಿಯುವ ಅಗಸ ಹಾಗು ಸಂಧ್ಯಾವಂದನೆ ಮತ್ತು ವಿಷ್ಣುಭಕ್ತಿಗಳಿಲ್ಲದ ಬ್ರಾಹ್ಮಣ. ೪೦. ಗೋಲಕುಂಡ-ಸಣ್ಣ ಪುಟ್ಟ ತಪ್ಪಿಗಾಗಿ ಪ್ರಜೆಗಳನ್ನು ಬಂಧಿಸಿ ಸೆರೆಯಿಡುವ ರಾಜ. ೪೧. ನಕ್ರಕುಂಡ-ನೀರಿನಿಂದ ಮೇಲಕ್ಕೆದ್ದ ಮೊಸಳೆ ಮೊದಲಾದ ನೀರುಪ್ರಾಣಿಗಳನ್ನು ಕೊಲ್ಲುವವನು. ೪೨. ಕಾಕಕುಂಡ-ಕಾಮದಿಂದ ಹೆಂಗಸಿನ ಎದೆ, ನಿತಂಬ, ಮುಖಗಳ ಮೇಲೆ ಕಣ್ಣಿಡುವವನು. ೪೩. ಸಂಚಾಲಕುಂಡ-ಚಿನ್ನವನ್ನು ಕದಿಯುವವನು. ೪೪. ವಾಜಕುಂಡ-ತಾಮ್ರ, ಕಬ್ಬಿಣ ಮತ್ತು ಉಕ್ಕುಗಳ ಕಳ್ಳ. ೪೫. ವಜ್ರಕುಂಡ-ದೇವತಾಮೂರ್ತಿಗಳ ಮತ್ತು ದೇವರ ಸ್ವತ್ತಿನ ಕಳ್ಳ. ೪೬. ತಪ್ತಪಾಷಾಣಕುಂಡ-ದೇವಬ್ರಾಹ್ಮಣರ ಬೆಳ್ಳಿ, ಗೋವು, ಬಟ್ಟೆಬರೆಗಳ ಕಳ್ಳ. ೪೭. ತೀಕ್ಷ್ಣಪಾಷಾಣ ಕುಂಡ-ದೇವಬ್ರಾಹ್ಮಣರ ಹಿತ್ತಾಳೆ, ಕಂಚು ಪಾತ್ರೆಗಳ ಕಳ್ಳ. ೪೮. ಲಾಲಾಕುಂಡ-ಸೂಳೆಗಾರಿಕೆಗೆ ಅವಕಾಶ ಮಾಡಿಕೊಟ್ಟು ಹೊಟ್ಟೆಹೊರೆಯುವವನು. ೪೯. ಮಸೀಕುಂಡ-ಮ್ಲೇಚ್ಛರ ಸೇವೆಯಿಂದ ಜೀವಿಸುವವನು ಮತ್ತು ಬರಹದಲ್ಲಿ ಮೋಸಮಾಡಿ ಜೀವಿಸುವವನು. ೫೦. ಚೂರ್ಣಕುಂಡ-ದೇವಬ್ರಾಹ್ಮಣರ ದವಸಧಾನ್ಯ, ತಾಂಬೂಲ, ಆಸನಗಳನ್ನು ಕದಿಯುವವನು. ೫೧. ಚಕ್ರಕುಂಡ-ಬ್ರಾಹ್ಮಣರ ಹಣವನ್ನು ಕದಿಯುವವನು. ೫೨. ವಕ್ರಕುಂಡ-ಬ್ರಾಹ್ಮಣರಿಗೂ ನಂಟರಿಷ್ಟರಿಗೂ ಪ್ರತಿಕೂಲವನ್ನು ಮಾಡುವವನು. ೫೩. ಕೂರ್ಮಕುಂಡ-ಶ್ರೀಮಹಾವಿಷ್ಣು ಮಲಗಿರುವಾಗ ಅಂದರೆ ಆಷಾಢಶುದ್ಧ ಏಕಾದಶಿಯಿಂದ ಕಾರ್ತಿಕಶುದ್ಧ ದ್ವಾದಶಿಯವರೆಗೆ ನಾಲ್ಕು ತಿಂಗಳು ಚಾತುರ್ಮಾಸದಲ್ಲಿ ಆಮೆಯ ಮಾಂಸವನ್ನು ತಿನ್ನುವ ಬ್ರಾಹ್ಮಣ. ೫೪. ಜ್ವಾಲಾಕುಂಡ ಮತ್ತು ೫೫. ಭಸ್ಮಕುಂಡ-ದೇವ ಬ್ರಾಹ್ಮಣರಿಗೆ ಸೇರಿದ ತುಪ್ಪ, ಎಣ್ಣೆ ಮೊದಲಾದುವನ್ನು ಕದಿಯುವವನು. ೫೬. ದಗ್ಧಕುಂಡ-ದೇವಬ್ರಾಹ್ಮಣರ ನೆಲ್ಲೀಚಟ್ಟು, ಗಂಧ, ಎಣ್ಣೆ ಮೊದಲಾದುವನ್ನು ಕದಿಯುವವನು. ೫೭. ತಪ್ತಶೂರ್ಮಿಕುಂಡ-ಬಲಾತ್ಕಾರದಿಂದ ಇತರರ ಭೂಮಿಯನ್ನು ಆಕ್ರಮಿಸಿಕೊಳ್ಳುವವನು. ೫೮. ಅಸಿಪತ್ರಕುಂಡ-ಹಣದ ದುರಾಸೆಯ ಪರಿಣಾಮವಾಗಿ ಕತ್ತಿ ಮೊದಲಾದ ಆಯುಧಗಳಿಂದ ಜನರ ಪ್ರಾಣವನ್ನು ತೆಗೆಯುವವನು. ೫೯. ಕ್ಷುರಧಾರಕುಂಡ-ಊರು, ಪಟ್ಟಣಗಳನ್ನು ಸುಟ್ಟು ಹಾಕುವವನು. ೬೦. ಸೂಚೀಮುಖಕುಂಡ-ಇತರರ ಕಿವಿಯಲ್ಲಿ ಪಿಸುಗುಟ್ಟಿ ಪರನಿಂದೆ ಮಾಡುವವನು, ಇತರರ ದೋಷಗಳನ್ನು ಎತ್ತಾಡುವವನು. ೬೧. ಗೋಧಾಮುಖಕುಂಡ-ಮನೆಯನ್ನು ಒಡೆದು ಪಾತ್ರೆ ಪರಟೆ, ದನಕರುಗಳು, ಆಡುಕುರಿಗಳನ್ನು ಕದಿಯುವವನು. ೬೨. ನಕ್ರಮುಖಕುಂಡ-ಸಾಮಾನ್ಯವಸ್ತುಗಳನ್ನು ಕದಿಯುವವನು. ೬೩. ಗಜದಂಶಕುಂಡ-ಆನೆ, ಕುದುರೆ, ಆಳುಕಾಳುಗಳ ಕಳ್ಳ. ೬೪. ಗೋಮುಖಕುಂಡ-ಹಸು ನೀರು ಕುಡಿಯುವುದನ್ನು ತಪ್ಪಿಸುವವನು. ೬೫. ಕುಂಭೀಪಾಕಕುಂಡ-ಗೋಹತ್ಯೆ, ಸ್ತ್ರೀಹತ್ಯೆ, ಯತಿಹತ್ಯೆ, ಭ್ರೂಣಹತ್ಯೆ, ಬ್ರಹ್ಮಹತ್ಯೆಗಳನ್ನು ಮಾಡಿದವನು; ತಾನು ಬೆರೆಯಲು ಉಚಿತವಲ್ಲದ ಸ್ತ್ರೀಯರೊಂದಿಗೆ ಬೆರೆಯುವವನು; ವ್ರತ, ಸಂಧ್ಯಾವಂದನೆಗಳನ್ನು ಬಿಟ್ಟವನು; ಪುಣ್ಯಕ್ಷೇತ್ರಗಳಲ್ಲಿ ದಾನ ತೆಗೆದುಕೊಳ್ಳುವವನು; ಗ್ರಾಮಪುರೋಹಿತ, ಪೂಜಾರಿ, ಶೂದ್ರರಿಗೆ ಅಡಿಗೆ ಮಾಡಿ ಜೀವಿಸುವವನು; ಋತುಮತೀವಿವಾಹವನ್ನು ಮಾಡಿಕೊಂಡಿರುವವನು. ೬೬. ಕಾಲಸೂತ್ರಕುಂಡ-ಸೂಳೆಯೊಂದಿಗೆ ಬೆರೆಯುವವನು; ಸೂಳೆಯ ಅನ್ನವನ್ನು ತಿನ್ನುವವನು. ೬೭. ಅವಟೋದಕುಂಡ-ಕುಲಟೆ ಮೊದಲಾದ ಆರು ಬಗೆಯ ಸೂಳೆಯರನ್ನು ಅನುಭವಿಸುವವನು. ೬೮. ಅರುಂತುದ ಕುಂಡ-ಚಂದ್ರಸೂರ್ಯಗ್ರಹಣದಲ್ಲಿ, ನಿಷಿದ್ಧಕಾಲದಲ್ಲಿ ಊಟಮಾಡುವವನು;

ನರಳಿಸು 'ನರಲಿಸು' ನೋ.

ನರಳು$_1$ 'ನರಲ್$_1$' ನೋ.

ನರಳು$_2$ 'ನರಲ್$_2$' ನೋ.

ನರಳುದನಿ (ನಾ). ನರಳುವ ಧ್ವನಿ ; ನರಳಾಟ : "ಓ ಓ, ಅಯ್ಯೋ . . ." ಎಂಬ ಹೆಂಗಸಿನ ನರಳುದನಿ ಅವನ ಕಿವಿದೆರೆಯನ್ನು ಮೀಟಿತು (ಪುನರು. ೪೫೪). [ ನರಳು$_2$ (<ನರಲ್$_2$) + ದನಿ$_1$ ]

ನರಳೆ (ನಾ). ಒಂದು ಬಗೆಯ ಬಳ್ಳಿ ; ಮಂಗರವಳ್ಳಿ : ಈ ದಿನ ನಮ್ಮ ಮನೆಯಲ್ಲಿ ನರಳೆ ಚಟ್ನಿ ಮಾಡಿದ್ದರು (ರೂಢಿ). 'ನರಳೇಬಳ್ಳಿ' ಪರಾ. [ ದೇ.॥ ತಮಿ. ನರಳ್ಳಿ ]

ನರಾಂಗ (ನಾ). ೧. ಮನುಷ್ಯದೇಹ : ಉಜ್ವಲ ಬಡಬಾಬ್ಧಿವಹ್ನಿ ಯುಗಮಾಂತು ನರಾಂಗಮನಣ್ಮಿ ಕಾದುವಂತೆ (ಶಬಶಂ. ೪-೭೩). ೨. ಪುರುಷನ ಜನನೇಂದ್ರಿಯ. [ ನರ$_2$ + ಅಂಗ$_2$ ]

ನರಾಕೃತಿ (ನಾ). ಮನುಷ್ಯನ ಆಕಾರ,-ರೂಪ : ಆಗಳ್ ನರಾಕೃತಿ ಗಕ್ಕನೆ ಪೋಗಿ ರಾಜಕೀರಾಂಚಿತಜನ್ಮವನ್ನಮರ್ದಪ್ಪಿದುದು (ಉದ್ಭಟ. ೭-೧೧೫) ; ನರಾಕೃತಿಯ ಪರಬೊಮ್ಮರೂಪನು ಕಿರುಹಿದನು ರಥವ (ಕುವ್ಯಾದ್ರೋ. ೧೮-೩೧). [ ನರ$_2$ + ಆಕೃತಿ ]

ನರಾದಿ (ನಾ). ಒಂದು ಬಗೆಯ ಆಯುಧ : ಬಲ್ಲೆಹ ಬಂಕು ಬಾಣನರೆ ನರಾದಿ ಶೂಲ ಶಿರಾದಿ ಚೂರಿ ಚಿಕ್ಕಠಾರಿ . . . ಜವದಾಡೆಗಳೆಂಬ ಬತ್ತೀಸಾಯುಧಗಳಿಂ (ವಿವೇಕ. ೨೬೩). [ ? ]

ನರಾಧಮ (ನಾ). ಕೀಳುಮನುಷ್ಯ ; ನೀಚ ; ಹೀನ ಮಾನವ : ನರಾಧಮರೆಮಗೆ ಪಾಡೇ ಪಥವ ಬಿಡು ಬೇಡೆನುತ ತೆಗೆದೆಚ್ಚ (ತೊರರಾ. ೭-೨೦-೩೨) ; 'ನೀನು ಹೇಡಿ' ಎಂದು ಹೇಳಿದರೆ ಕೋಪಿಸಿಕೊಳ್ಳದ ನರಾಧಮನೂ 'ನೀನು ಧೀರ' ಎಂದರೆ ಹಿಗ್ಗದ ನರನೂ ಈ ಪ್ರಪಂಚದಲ್ಲಿ ಇಲ್ಲವೆಂದೇ ನನ್ನ ಅಭಿಪ್ರಾಯ (ಹಂಯಾತ್ರೆ. ೪೨) ; ಏಳ್, ಸರ್ವಶಕ್ತಿ ಸ್ವರೂಪಿಣಿಯೆ . . . ನರಾಧಮ ಕಪಿಪ್ರಾಣಾಪಹಾರಕ್ಕೆ ! (ಶ್ರೀರಾಮಾ. ೭೮೪-೯೦) ; ಈ ನರಾಧಮನ ಬೆದರಿಕೆಗೆ ಅಪ್ಪ ಹೆದರಿದಿರಾ ? (ಹಂಗೀತ. ೨೦೨). [ ನರ$_2$ + ಅಧಮ ]

ನರಾಧಿಪ (ನಾ). ಅರಸ ; ರಾಜ : ಶನಿ ಮಕರಲಗ್ನದೊಳ್ . . . ದನುಜೇಜ್ಯಂ ತೊ ಲೆ ಯೊ ಳ್ ಸೌಮ್ಯನಿರಲ್ ನರಯುಗ್ಮದೊಳ್ ನರಾಧಿಪನಕ್ಕುಂ (ಜಾತಕ. ೧೨-೫) ; ಪೊಲ್ಲವಪ್ಪ ಕನಸಂ ಪರಿವೀಕ್ಷಿಸಿದಂ ನ ರಾ ಧಿ ಪ ಂ (ಬಂಹರಿ. ೬-೮) ; ಉನ್ನತಚಿತ್ತನಾದನನಿತೊಂದುಪಸರ್ಗದೊಳಾ(ಳಂ) ನರಾಧಿಪಂ (ಜೀವಸಂ. ೫೭-೩೭) ; ಖಳತನೂಭವನಿಳೆಯ ನಾಡಾಡಿಯ ನರಾಧಿಪನನ್ನಸಲೇಯೆಂಬ ಬಳಕೆಯಲಿ ಬೊಬ್ಬಿಟದು . . . ನಿಡುದನಿದೋಜಲೆಚ್ಚನು ರಾಘವೇಶ್ವರನ (ತೊರರಾ. ೭-೪೧-೩೫). [ ನರ$_2$ + ಅಧಿಪ ]

ನರಾಧೀಶ (ನಾ) = ನರಾಧಿಪ : ತ್ರಿದಶಲೋಕಕ್ಕೇಱುತಿರ್ದಾ ತ್ರಿಶಂಕು [illegible] ಲಕ್ಕೆ ಶಕ್ರನ ಮಹಾ ಹುಂಕಾರದಿಂ ಬಿರ್ದಳೆಂಬಿನೆಗಂ . . . ಬರ್ದಳ್ [illegible] ಚಂಡಾಲಿ ದರ್ಶನತಾತ್ಪರ್ಯದೆ ರಾಜಕೀರಸಹಿತಂ ಬಂದಿರ್ದಪಳ್ ಬಾಗಿಲೊಳ್ (ರಾದಂಪು. ೨೪). [ ನರ$_2$ + ಅಧೀಶ ]

ನರಾಮರ (ನಾ). = ನರಾಧಿಪ : "ನೃಪತಿ ರಾಟ್ ರಾಜಂ ನರಾಮರಂ ಪಾರ್ಥಿವಂ. . .ಎನಲ್ಕರಸಕ್ಕು" (ಮಂಗರಾ. ೭೮-೧). [ನರ$_2$+ಅಮರ$_3$]

ನರಾಯುಷ್ಯ (ನಾ). ಮನುಷ್ಯನ ಆಯುಸ್ಸು ; ನೂರು ವರ್ಷ: ಜನನಂ ಸಂಭವಿಸಿರ್ದ ಲಗ್ನಗೃಹದೊಳ್ ತಾಪಗ್ರಹಂ ನಿಂದಿರ್ದರ್ದ ನವಾಂಶ [illegible]ದಾಯುವನ್ನಳಿದು ಭಾಗಂಗೊಂಡು ನಾಱಿಂಟಱಿಂದೆ ನರಾಯುಷ್ಯ [illegible] ಲಬ್ಧವಪ್ಪಂ (ಜಾತಕ. ೯-೮) [ [illegible] ]

ನರಾವರಣ (ನಾ). ನರಗಳ ಆವರಣ,-ಆಚ್ಛಾದನ : ನಸ್ವರವಕ್ಷೀಯುಗಳಲ್ಲಿ ನರಗಳ ಹುರಿಯ ಮೇಲೆ, ನರಾವರಣದ (Perineural Sinus) ಕೆಳಕುಹರ ವಾಗಿದೆ (ಕೀಟಶಿ. ೩೨). [ ನರ$_1$ (<ನರವು) + ಆವರಣ ]

ನರಾಶ್ವ (ನಾ). ಕುದುರೆಯ ತಲೆ ಹಾಗು ಮನುಷ್ಯನ ಶರೀರ ಅಥವಾ ಮನುಷ್ಯನ ಮುಖ ಹಾಗು ಕುದುರೆಯ ಶರೀರವುಳ್ಳ ಒಂದು ವಿಧದ ದೇವತೆ ; ಕಿನ್ನರ ; ಕಿಂಪುರುಷ : ಹಲವು ಅಸಮಂಜಸ ಭಾಗಗಳು ಸೇರಿ ಆದ ಯಾವುದಾದರೂ ಕಾಲ್ಪನಿಕ ಪ್ರಾಣಿ (ನರಾಶ್ವ, ಕಿಂಪುರುಷ, ಮೊ. ವು) (Monster. ಇಂಕನಿ). [ ನರ$_2$ + ಅಶ್ವ ]

ನರಿ (ನಾ). ೧. ಉದ್ದವಾದ ಮೂತಿ ಮತ್ತು ಕುಚ್ಚಾಗಿರುವ ಬಾಲ ವನ್ನುಳ್ಳ (ನಾಯಿ ಜಾತಿಗೆ ಸೇರಿದ) ಮಾಂಸಾಹಾರಿಯಾದ ಒಂದು ಬಗೆಯ ಕಾಡುಪ್ರಾಣಿ ; ಜಂಬುಕ ; ☞ ಇದು ಬಹಳ ತಂತ್ರಗಾರ ಎಂದು ನಂಬಲಾಗಿದೆ : ಆಕಾಶಕ್ಕೆ ಬಾಯಂ ತೆಱೆದೂಳ್ವ ಬಳ್ಳಗಳುಮಂ ನರವುಮಂ ಬರಿಯುಮಂ ಪತ್ತಿ ತೆಗೆದು ಪೆಡಸಾರ್ವ ನರಿಗಳುಮಂ (ಪಂಪಭಾ. ೧೩-೫೭ ವ); ಹರಿ ಕರಿಗೆ ಮುನಿಗುಮಲ್ಲದೆ ನರಿಗಂ ಕೋಟಿಗಮೇಂ ಮುಳಿಗುಮೆ (ರಾಂತಿಪು. ೩-೬೨) ; ಉತ್ತುಂಗಮತ್ತಮಾತಂಗಮಂ ಕೊಂದು ತಿಂಬ ಸಿಂಹನೊಂದು ನರಿಯುಂ ತಿಂದುದೆಂದು ಲೋಕಮಾವಹಾಸ್ಯಂಗೆಯ್ಗುಂ (ಪಂಚತಂ. ೧೪೫-೯) ; ಕಬ್ಬಿನ ತೋಂಟವಂ ನರಿ ಪೊಕ್ಕಂತೆ (ಧರ್ಮಾಮೃ. ೨-೭೦) ; ಇಟ್ಟಿಯ ಹಣ್ಣು ನರಿ ತಿಂದು ಸೃಷ್ಟಿ ತಿರುಗಿತ್ತೆಂಬಂತೆ (ಬಸವ. ೫೭೮) ; ಕೊಬ್ಬಿ ನರಿ ಹೆಬ್ಬುಲಿಯ ಕೂಸನು ಬೇಡುವಂದದಿ ಅಳವನಱಿಯದೆ ಅಧಮ ರಥಿಕರ ಕೂಡೆ ತೊಡಕುವರ (ಕುವ್ಯಾದ್ರೋ. ೫-೪೨) ; ಕರಿಗಳನು ಮುಱಿದಿಡುವ ಸಿಂಹಕೆ ನರಿಗಳದಿರೇ ತಾನು ನಿನಗಂ ತರವೆ (ನಳಚ. ೨-೧೮). 'ಕರಟಕ' ಪರಾ. ೨. ಹುಲಿ. 'ನರಿಬೇಂಟೆ', 'ನರಿಮಂಗಲ' ಪರಾ. ೩. (ಆಲಂ) ವಂಚಕ: ಮೋಸಮಾಡು ವವನು ; ತನ್ನ ಠಕ್ಕುತನವನ್ನು ಸುಳಿವು ಕೊಡದವನು : ತಾನು ಮಾಡುತ್ತಿರುವುದು ಕೇವಲ ಮುಖ್ಯವಾಗಿ ಸ್ವಾರ್ಥ; ಅದರೊಡನೆ ಸ್ವಲ್ಪ ಪರೋಪಕಾರವೂ ಘಟಿಸುವುದಲ್ಲ, ಅಷ್ಟಾದರೂ ಕಡಿಮೆಯ ? ಎಂಬ ನರಿಗಳುಂಟು (ಯಜ್ಞಪ್ರ. ೧೭೦).

ನರಿಕೂಗು = ಅಲ್ಪರ ಪ್ರಾರ್ಥನೆ, - ಅಹವಾಲು, - ಕೂಗು : ನರಿಕೂಗು ಗಿರಿ ಮುಟ್ಟೀತೆ ? (ಗಾದೆ). ನರಿಮದುವೆ : ಬಿಸಿಲಿದ್ದೂ ಮಳೆ ಬೀಳುವಿಕೆ ; ☞ ಬಿಸಿಲಿದ್ದು ಮಳೆ ಬೀಳುವಾಗ ನರಿಗೂ ನಾಯಿಗೂ ಮದುವೆ ನಡೆಯುತ್ತದೆಂದು ಜನಸಾಮಾನ್ಯರು ಹೇಳುವ ವಾಡಿಕೆ : ನರಿಮದುವೆಯಲ್ಲಿ ಕತ್ತೆಪೌರೋಹಿತ್ಯ (ಗಾದೆ). ನರಿಯ ಬುದ್ಧಿ = ಮೋಸಮಾಡುವ ಬುದ್ಧಿ ; ವಂಚಕತನ : ನನ್ನ ರಾಯಭಾರ ಅಯಶಸ್ವಿಯಾದುದನ್ನು ಕಂಡು ರಾಜ ನನ್ನ ಮೇಲೆ ಮುನಿದು ಕೊಳ್ಳುವನೆಂದೇ ಈ ನರಿಯ ಬುದ್ಧಿಯ ಮುರಾರಿ ನನ್ನನ್ನು ಕಳಿಸಿರಲು ಸಾಕು (ಗಿರಿನ. ೧೧೯). ನರಿಯ ಮುಖ ನೋಡು = ಒಳ್ಳೆಯ ಶಕುನವನ್ನು ಹೊಂದು ; ಅದೃಷ್ಟವಂತನಾಗು : ಬೆಳಿಗ್ಗೆ ಎದ್ದು ನರಿಯ ಮುಖ ನೋಡಿದ್ದ ಅಂತ ಕಾಣುತ್ತೆ, ಬಿತ್ತು ಸಿಕ್ಕಿತು (ರೂಢಿ). [ ದೇ.॥ ತಮಿ. ಮಲ. ತುಳು. ಕೊಡ. ನರಿ ; ತೆಲು. ಕೊರಾ. ಕುವಿ.ನಕ್ಕ ]

ನರಿಕು 'ನಱುಂಕು' ನೋ.

ನರಿಕೊಂತ (ನಾ). ಒಂದು ಬಗೆಯ ಆಟ : ನರಿಕೊಂತನ ಆಟ : ಇಲ್ಲಿಯೂ ಕೈತಾಳ ಹಾಕುವುದರ ಮೂಲಕ ಪಕ್ಷ ನಿರ್ಧಾರವಾಗುತ್ತದೆ. ನೆಲಕ್ಕೆ ಸುಮಾರು ಕಡ್ಡಿಗಳನ್ನು ನೆಟ್ಟಿರುತ್ತಾರೆ. ಅವುಗಳನ್ನು ಕಾಯುವವನು ಒಬ್ಬ. ಉಳಿದವರೆಲ್ಲ ಕಡ್ಡಿಗಳನ್ನು ಕೀಳಲಿಕ್ಕೆ ಪ್ರಯತ್ನಿಸುವರು. ಹೀಗೆ ಕಡ್ಡಿಗಳನ್ನು ಕೀಳಲು ಬಂದಾಗ, ಕಾಯುವವನು ಅವರನ್ನು ಹಿಡಿಸಿಕೊಂಡ ವರೇ ಕಡ್ಡಿಗಳನ್ನೂ ಕಾಯಬೇಕಾಗುತ್ತದೆ. ಕಾಯುವವನು ಹಿಡಿಯಲಂ

ಹೋದಾಗ. ಉಳಿದವರು ಸುಮ್ಮನಿರದೆ ಬೇರೆಕಡೆಯಿಂದ ಬಂದು ಕಡ್ಡಿಯನ್ನು ಕೀಳುವರು. ಅಷ್ಟು ಜನರನ್ನೂ ಹೆದರಿಸಿ ಕಡ್ಡಿಗಳನ್ನು ಕಾಯಬೇಕಾಗುತ್ತದೆ (ಕವಿಕೋ. I. ೭೦೯). [ ? ]

**ನರಿಕೊಂಬು** 'ನರಿಗೊಂಬು' ನೋ.

**ನರಿಗಣ್ಣು** (ನಾ). (ಆಲಂ) ತೀಕ್ಷ್ಣವಾದ ಕಣ್ಣು ; ಚುರುಕುಗಣ್ಣು : ನರ್ಸಿಯ ಕೊರಳಲ್ಲಿ ಎರಡೆಳೆಯ ಸರ ಹೇಗೆ ಬಂದುವು ಎಂಬುದೇ ಕೆಲವು ನರಿಗಣ್ಣಿನ ಕುಹಕಿಗಳ ಪ್ರಶ್ನೆಯಾಗಿತ್ತು (ಒಡ್ಡು. ೪೭).

[ ನರಿ + ಕಣ್ಣು (<ಕಣ್) ]

**ನರಿಗನಗಟ್ಟ** (ನಾ). ಒಂದು ಪ್ರದೇಶದ ಹೆಸರು : ಹೊನ್ನೆದಜು[3] ಆಳಗನಹಳ್ಳ ಎತ್ತರುಳಿ ನರಿಗನಗಟ್ಟ ಮತ್ತರನಜು[3] ನಿಜಿಯಿಂಗಲು ಪಿರೆಯುವು × ಡಿಗರ ಪಳ್ಳ ಪೆಂಪುಳಿಯ ಕಜು[3] (ಎಕ. VI, ತರೀಕೆ. ೬೭-೧೨ : 838). [ ? ]

**ನರಿಗೊಂಬು, ನರಿಕೊಂಬು** (ನಾ). (ಆಲಂ) ಅಪರೂಪದ ವಸ್ತು ; ☞ ನರಿಯ ತಲೆಯ ಮೇಲೆ ಅತ್ಯಂತ ಅಪರೂಪವಾಗಿ ಕೆಲವು ವೇಳೆ ಕೊಂಬು ಮೂಡುವುದೆಂದು ನಂಬಿಕೆಯಿದೆ : ಕರಿಯ ರಘುಲ್ಲರಿಗಳು ಬೆಳ್ಳವ್ವಾದಿ ಕತ್ತುರಿಯೇಣ ಪುಣುಗಿನ ಚಿಟ್ಟು ಹರಿಣ ಗೋರೋಚನ ಕೃಷ್ಣಾಜಿನ ಪುಲಿಚರ್ಮ ನರಿಗೊಂಬುಗಳನಿತ್ತರೊಲಿದು (ವೆಂಕಟೇಶ. ೧೯-೭೫). **ನರಿಕೊಂಬು** : ನರಿಕೊಂಬಿದ್ದರೂ ನರಿಗೆ ಹೆದರಬೇಕು (ಗಾದೆ) : ನರಿಕೊಂಬಿದ್ದರೂ ಹುರಿಯೋದು ತಪ್ಪೀತೆ ? (ಗಾದೆ).

[ ನರಿ + ಕೊಂಬು₁ ]

**ನರಿಚೆಂಡು** (ನಾ). ಒಂದು ಬಗೆಯ ಸಸ್ಯ : (ಕ).

[ ನರಿ + ಚೆಂಡು (<ಸೆಂಡು) ]

**ನರಿದಾವಿಳೆನಾಡು** (ನಾ). ಒಂದು ಪ್ರಾಂತದ ಹೆಸರು : ಕಲಭೋರ [ನಾ] ಅರಿ ಕಕುಸ್ಥಭಟೋರನಾಳೆ ನರಿದಾವಿ[ಳೆ]ನಾಡುಳ್ (ಮೈಅರಿ. ೦೯೩೬, ೧೬-೩ ; ಸು. 450). [ ನರಿದಾವಿಳೆ + ನಾಡು ]

**ನರಿಬಲೆ** (ನಾ). ಒಂದು ಬಗೆಯ ಬಲೆ (?) : ಊರ ಹೊರಗೊಂದು ಗಿಡು ಮರ. ಅದರೊಳಗೆ ಅಡಗಿವರ್ಯವರು ಕಳ್ಳರು ಒಬ್ಬ ನರಿಬಲೆಯುವ ಒಬ್ಬ ಹುಲಿಬಲೆಯುವ (ಕಲ್ಯಾಣಂ. ೧೬-೧೦೯). [ ನರಿ + ಬಲೆ₁ ]

**ನರಿಬಾಲ** 'ನರಿವಾಲ' ನೋ.

**ನರಿಬಾಲದಗಂಡುಹುಲ್ಲು** (ನಾ). ಒಂದು ಬಗೆಯ ಸಸ್ಯ : ನರಿಬಾಲದ ಗಂಡುಹುಲ್ಲು, ನರಿಬಾಲಹುಲ್ಲು (ಮೈಜಿಗಿ. ೩೦-೫೯೦).

[ ನರಿಬಾಲ (<ನರಿವಾಲ) + ಗಂಡು + ಹುಲ್ಲು (<ಪುಲ್) ]

**ನರಿಬಾಲದಹುಲ್ಲು** (ನಾ). ೧. ಒಂದು ಬಗೆಯ ಸಸ್ಯ : "ಕ್ರೋಷ್ಟುವಿನ್ನಾ, ಸಿಂಹಪುಚ್ಛೀ, ಕಲಶೀ, ಧಾವನೀ, ಗುಹಾ – ೫ ನರಿಬಾಲದ ಹುಲ್ಲು, ನರಿಬಾಲದ ಹೊನ್ನೆ" (ಸಿದ್ಧಾಂತಿ. ೦೧೭). ೨. ಬಿಳಿ ಕೊರ್ಲೆ ಹುಲ್ಲು : (ಕ). [ ನರಿಬಾಲ (<ನರಿವಾಲ) + ಹುಲ್ಲು (<ಪುಲ್) ]

**ನರಿಬಾಲದಹೆಣ್ಣುಹುಲ್ಲು** (ನಾ). ಒಂದು ಬಗೆಯ ಸಸ್ಯ : (ಮೈಜಿಗಿ. ೭೨-೧೪೬೮).

[ ನರಿಬಾಲ (<ನರಿವಾಲ) + ಹೆಣ್ಣು (<ಪೆಣ್) + ಹುಲ್ಲು (<ಪುಲ್) ]

**ನರಿಬಾಲದಹೊನ್ನೆ** (ನಾ). = ನರಿಬಾಲದಹುಲ್ಲು ೧ : ಕ್ರೋಷ್ಟುವಿನ್ನಾ, ಸಿಂಹಪುಚ್ಛೀ, ಕಲಶೀ, ಧಾವನೀ, ಗುಹಾ – ೫ ನರಿಬಾಲದ ಹುಲ್ಲು, ನರಿಬಾಲದ ಹೊನ್ನೆ (ಸಿದ್ಧಾಂತಿ. ೦೧೭).

[ ನರಿಬಾಲ (<ನರಿವಾಲ) + ಹೊನ್ನೆ (<ಪೊನ್ನೆ) ]

**ನರಿಬಾಲಹುಲ್ಲು** (ನಾ). = ನರಿಬಾಲದ ಗಂಡುಹುಲ್ಲು : "ನರಿಬಾಲದ ಗಂಡುಹುಲ್ಲು, ನರಿಬಾಲಹುಲ್ಲು" (ಮೈಜಿಗಿ. ೩೦-೫೯೦).

[ ನರಿಬಾಲ + ಹುಲ್ಲು (<ಪುಲ್) ]

**ನರಿಬಿಕ್ಕಿ** (ನಾ). ಒಂದು ಬಗೆಯ ಬಿಕ್ಕೆಯ ಮರ : ಕರ್‌ಬಿಕ್ಕಿ, ನರಿಬಿಕ್ಕಿ (ಮೈಜಿಗಿ. ೩೩-೬೩೬). [ ನರಿ + ಬಿಕ್ಕಿ₁ (<ಬಿಬ್ಕಿ) ]

**ನರಿಬೇಂಟೆ, ನರಿಬೇಟೆ** (ನಾ). ಹುಲಿಯ ಶಿಕಾರಿ. 'ನರಿಬೇಂಟೆಗಾರ' ಪರಾ. **ನರಿಬೇಟೆ** : ನೀನೊಬ್ಬನೇ ನರಿಬೇಟೆಗೆ ಹೋಗುವುದು ಬೇಡ (ಹುಲಿಪಾ. ೧೭).

ನರಿಬೇಟೆಯಾಡು = ಹುಲಿಯ ಶಿಕಾರಿಯನ್ನು ಮಾಡು : ಗ್ರಾಮತಕ್ಕ ನರಿಬೇಟೆಯಾಡಲು ಬರಬೇಕೆಂದು ಮಾದಪ್ಪನಿಗೆ ಹೇಳಿ ಕಳುಹಿದ (ಹುಲಿಪಾ. ೧೭). [ ನರಿ + ಬೇಂಟೆ ]

**ನರಿಬೇಂಟೆಗಾರ, ನರಿಬೇಟೆಗಾರ** (ನಾ). ಹುಲಿಯ ಶಿಕಾರಿಯನ್ನು ಮಾಡುವವನು : ಸ್ನೇಹಿತರು ನರಿಬೇಂಟೆಗಾರನನ್ನು ಎಚ್ಚರಿಸಿದರು (ಹುಲಿಪಾ. ೧೭). **ನರಿಬೇಟೆಗಾರ** : ನಾಡವರು ಅವನಿಗೆ ನರಿಬೇಟೆಗಾರ ಮಾದಪ್ಪ ಎಂದು ಗೌರವಸಂಬೋಧನೆಯನ್ನು ಬಳಸುತ್ತಿದ್ದರು (ಹುಲಿಪಾ. ೧೭). [ ನರಿಬೇಂಟೆ + – ಗಾರ (< –ಕಾಱ) ]

**ನರಿಬೇಟೆ** 'ನರಿಬೇಂಟೆ' ನೋ.

**ನರಿಬೇಟೆಗಾರ** 'ನರಿಬೇಂಟೆಗಾರ' ನೋ.

**ನರಿಮಂಗಲ** (ನಾ). "ಹುಲಿಮದುವೆ ; ಬೇಟೆಗಾರನು ಹುಲಿಯನ್ನು ಹೊಡೆದ ವಿಜಯಸಮಾರಂಭದ ಉತ್ಸವ" (ಹುಲಿಪಾ. ಕೋಶ) : ☞ ಕೊಡಗರಲ್ಲಿ ರೂಢಿಯಲ್ಲಿರುವ ಒಂದು ಪದ್ಧತಿ.–ಸಮಾರಂಭ : ಚಿಂಗುಮಣಿ. ಮೂರು ಸಲ ನರಿಮಂಗಲ ಮಾಡಿಸಿಕೊಂಡ ಕೆಚ್ಚೆದೆಯ ಕಲಿಯ ಮಗ (ಹುಲಿಪಾ. ೦೭). [ ನರಿ + ಮಂಗಲ ]

**ನರಿಮಾನಿ** (ನಾ). (?) : ನಾವಿಲರಿಗೆ ಖ ೬೦ ದನವ ಕಾವ × × × ೪೦ ಅಂತೂ ಖ ೨೨೦ ಕೆ ಕಂಪುಗಾಳಿ ಖ ೧೨ ನರಿಮಾನಿ ಖ ೫ ಯೋಗೀಯ ದೀದ ಖ ೧೦ ಹಾರುವ ಬಳ್ಳಿ ಖ ೪೫ (ಎಕ. VIII, ತೀರ್ಥಹ. ೦೯-೦೦೯ : 1578). [ ? ]

**ನರಿಮೀಸೆಹುಲ್ಲು** (ನಾ). ಒಂದು ಬಗೆಯ ಸಸ್ಯ : ನರಿಮೀಸೆಹುಲ್ಲು, ಜಬ್ಬುರುಕೊರ್ಲೆ ಹುಲ್ಲು (ಮೈಜಿಗಿ. ೬೧-೧೩೧೮).

[ ನರಿ + ಮೀಸೆ + ಹುಲ್ಲು (<ಪುಲ್) ]

**ನರಿಮೊಗ** (ನಾ). ೧. ನರಿಯ ಮುಖ. ೨. (ಆಲಂ) ಮೋಸದ ಸುಳಿವನ್ನು ತೋರಗೊಡದ ಮುಖ : ನರಿಮೊಗದ ನಗೆಯ ಕಾಡುಗೋಲ್ ಕೊಂಕು ನೆರವಿಂದು ತುಟಿಗಳಿರ್ಕೆಲದಲ್ಲಿ ಸುಳಿಯುತಿರ್ದುದನಿರುಳ್ ಮರೆಸಿದುದು ಜೊನ್ನಾಯಿಯಿಂ (ಶ್ರೀರಾಮಾ. ೩೭೨-೨೨೯).

[ ನರಿ + ಮೊಗ ]

**ನರಿಯುಂಬೊಳೆ** (ನಾ). ಒಂದು ಊರಿನ ಹೆಸರು : ಶ್ರೀಮತ್ ಜ್ಞಾನರಾಶಿ ಪಂಡಿತರ್ಗೆ ಧಾರಾಪೂರ್ವಕಂ ಮಾಡಿಕೊಟ್ಟ ನರಿಯುಂಬೊಳೆಯ ಪೃತ್ತಿ (ಇಆ. VIII, ೫೦-೧ : 1077) ; ನರಿಯುಂಬೊಳೆಯವೃತ್ತಿ ಬಳಿಯ ಕಿಜಿಯ ಬೆಳ್ಳುಂಬಟ್ಟಿಯ ಪೊಲದೊಳಗೆ (ಎಇ. XII, ೨೮೩-೨೨೯ : 1077).

[ ? ]

**ನರಿಯುಳ್ಳಿಗೆಡ್ಡೆ** (ನಾ). ಒಂದು ಬಗೆಯ ಉಳ್ಳಿಗಡ್ಡೆ, –ಈರುಳ್ಳಿ.

[ ನರಿ + ಉಳ್ಳಿಗಡ್ಡೆ ]

**ನರಿವಾಲ, ನರಿಬಾಲ** (ನಾ). ಒಂದು ಬಗೆಯ ಸಸ್ಯ ; ನರಿಹೊನ್ನೆಗಿಡ : "ಪೃಶ್ನಿಪರ್ಣೀ – ನರಿವಾಲ" (ದ್ರಾವಟೀ. ೨-೨-೬೦ ವ) : "ಪೃಥಕ್ಪರ್ಣೀ – ನರಿವಾಲ, ಹೊನ್ನೆ, ಹಗ್ಗುರುಟಿಗೆ, ಒಂದೆಲೆಹೊನ್ನೆ, [illegible]" (ಓಷಧಿ. ೧೦೨). **ನರಿಬಾಲ** : ಆನೆಚೆಂಡು. ಅಪು. ನರಿಬಾಲ (ಮೈಜಿಗಿ. ೭೬-೧೫೫೭). [ ನರಿ + ವಾಲ₁ ]

**ನರಿವಾಲವೊನ್ನೆ, ನರಿವಾಲಹೊನ್ನೆ** (ನಾ). = ನರಿವಾಲ : "ಪೃಶ್ನಿಪರ್ಣೀ ಪೃಥಕ್ಪರ್ಣೀ, ಚಿತ್ರಪರ್ಣೀ, ಅಂಘ್ರಿಪರ್ಣಿಕಾ, ಕ್ರೋಷ್ಟುವಿನ್ನಾ, ಸಿಂಹ

ಪುಚ್ಛೀ, ಕಲಶೀ, ಧಾವನೀ, ಗುಹಾ_ಈ ೯ ನರಿವಾಲವೊನ್ನೆ" (ನಾಚಿರಾ. ೦೦೯) : "ಕ್ರೋಷ್ಟುವಿನ್ನಾ–ನರಿವಾಲವೊನ್ನೆ" (ಒಷಧಿ. ೪೨). ನರಿವಾಲಹೊನ್ನೆ : "ಕ್ರೋಷ್ಟುವಿನ್ನೆ, ಸಿಂಹಪುಚ್ಛೆ, ಕಲಶಿ, ಧಾವನಿ, ಗುಹೆ" (ನಾಚಿರಾ. ೬); "ದೀರ್ಘವಾಲಾ_ನರಿವಾಲಹೊನ್ನೆ" (ಒಷಧಿ. ೭೭).

[ನರಿವಾಲ + ಪೊನ್ನೆ ]

**ನರಿವಾಲಹೊನ್ನೆ** 'ನರಿವಾಲವೊನ್ನೆ' ನೋ.

**ನರಿಹೆಸರು** (ನಾ). ಒಂದು ಬಗೆಯ ಸಸ್ಯ : ನರಿಹೆಸರು, ಬಿಲ್ಲಿಪೆಸರ (ವೃಜಿಗಿ. ೭೧-೧೨೩೭). [ ನರಿ + ಹೆಸರು$_2$ (<ಪೆಸಱ್) ]

**ನರಿಹೊನ್ನೆ** (ನಾ). = ನರಿವಾಲ : "ಪೃಶ್ನಿಪರ್ಣೀ, ಪೃಥಕ್ಪರ್ಣೀ, ಚಿತ್ರಪರ್ಣೀ, ಅಂಘ್ರಿಪರ್ಣಿಕಾ . . . ೪ ಕೋಲಪೊನ್ನ ಎಂಬುವದು, ನರಿಹೊನ್ನೇಗಿಡ, ನಕ್ಕಚಿಕ್ಕನಾಕು" (ಸಿದ್ಧಾಂತಿ. ೧೩೩). [ ನರಿ + ಹೊನ್ನೆ (<ಪೊನ್ನೆ) ]

**ನರು** 'ನಱು' ನೋ.

**ನರುಕು** 'ನಱುಂಕು' ನೋ.

**ನರುಗಂಪು** 'ನಱುಗಂಪು' ನೋ.

**ನರುಗಳ್ಳು** (ನಾ). ಕಮ್ಮನೆಯ ಹೆಂಡ; ಕಂಪುಳ್ಳ ಮದ್ಯ : ಸೇಸನಾಯ್ಕನ ಹುಳಿಗಂಜಿನ ನರುಗಳ್ಳನ್ನು ಕರಟ ತುಳುಕುವಷ್ಟರ ಮಟ್ಟಿಗೆ ಬೊಗ್ಗಿಸಿ (ಕುಲವು. ೧೩). [ ನರು (<ನಱು) + ಕಳ್ಳು (<ಕಳ್$_3$) ]

**ನರುಗಾಳಿ** (ನಾ). ಕಂಪುಳ್ಳ ಗಾಳಿ ; ಪರಿಮಳ ಭರಿತವಾದ ವಾಯು : ಸಂದರ್ಭಾನುಸಾರವಾಗಿ ಸೂಸುವ ಕಾವ್ಯದ ನರುಗಾಳಿಯನ್ನು ವಾಚಕರು ಸೇವಿಸಬಹುದು (ನಾಡೋಜ. ೩೪೪) ; ಕಚ್ಚಿದೆಯ ದಂಡಾಳುಗಳೇ, ನಮ್ಮ ದಾಳಿಯ ನರುಗಾಳಿಯಿಂದ ಕಂಪಣ್ಣನನ್ನು ಮುತ್ತಿ ಮುಸುರಿಸಿದ ಚೆಂದುಂಬಿಗಳೇ ಕಿವಿಗೊಟ್ಟು ಕೇಳಿರಿ (ನಡದಾ. I, ೪೪೦).

[ ನರು (<ನಱು) + ಗಾಳಿ$_1$ ]

**ನರುಗು** (ನಾ). ಕಂಪು ; ಸುವಾಸನೆ : ಇಂಪು, ಸೊಂಪು, ಕಂಪು, ಸೌಸವ, ಅಲಂಪು, ನರುಗು, ಸೊವಡು, ಮಗಮಗ (ಘಮಘಮ) (ಕಂಸುಹು. ೭೯).

[ <ನಱು ]

**ನರುಗುಗಂಬಳಿ** (ನಾ). ಕಪ್ಪು ಮತ್ತು ಬಿಳಿ ಪಟ್ಟೆಗಳನ್ನುಳ್ಳ ಕಂಬಳಿ : (✦). [ ನರುಗು$_0$ + ಕಂಬಳಿ ]

**ನರುಚಲು** 'ನರಚಲು' ನೋ.

**ನರುಟು** 'ನರಟು$_2$' ನೋ.

**ನರುಟುಗೊಳ್** (ಕ್ರಿ). ಬೆಳೆವಣಿಗೆ ಕುಂಠಿತವಾಗು ; ನರಚಲಾಗು ; ಪೀಚಾಗು : "ಹ್ರಸತಿ–ನರುಟುಗೊಂಡಪುದು" (ಕಾಶಕ್. ೩೨).

[ ನರುಟು (<ನರಟು$_2$) + ಕೊಳ್$_1$ ]

**ನರುನೆಯ್ಯಿ** 'ನಱುನೆಯ್' ನೋ.

**ನರುಮಲ್ಲಿಗೆ** (ನಾ). ಸುವಾಸನೆಯಿಂದ ಕೂಡಿರುವ ಮಲ್ಲಿಗೆ : ಇದು ಮಣ್ಣಿನ ನರುಮಲ್ಲಿಗೆ, ಇದು ನೆಲದ ನಿಧಾನ (ಅರಳು. ೨೫೦-೫).

[ ನರು (<ನಱು) + ಮಲ್ಲಿಗೆ ]

**ನರುಲಿ** 'ನರವುಲಿ' ನೋ.

**ನರುವಂಜಿ** 'ನಱುಪಂಜಿ' ನೋ.

**ನರುವಲ** 'ನಱುಪಲ್' ನೋ.

**ನರುವಲು** 'ನಱುಪಲ್' ನೋ.

**ನರುವಾಯ** (ನಾ). ಒಂದು ಬಗೆಯ ಬಾಣ (?) : ನೆಱೆದು ನಿವಾರ್ಯಮುಂ ನರುವಾಯುಂ ಮುಂ ಮೊನೆ ನೆರಕೆ ನಾರಾಚಂ . . . ಕಣಕನೆ ಪೋಪಂ[ಬು] ಕವಲ[ಂಬುಮೆಂ]ಬುಕದಂಬೆತ್ತ[ಲುಂ] ತುಱುಗಿ ನಡುವಿನಂ ಸಾರ್ದು ಸಾರ್ದೆಚ್ಚೆಚ್ಚು ಕಾದಿದರತಿರಥರೊಂದು ಜಾವಂ (ಪಂಪಭಾ. ೧೩-೩೯). [ ? ]

**ನರುಳ್ಳಿ** 'ನರವುಲಿ' ನೋ.

**ನರೂಲಿ** 'ನರವುಲಿ' ನೋ.

**ನರೆ$_1$, ನೆರೆ$_4$** (ಕ್ರಿ). ೧. ಕೂದಲು ಬೆಳ್ಳಗಾಗು ; ಪಲಿತವಾಗು : ತೊಗಲು ಸಡಿಲಿದ ಗಲ್ಲ ಬತ್ತಿದ ಹೆಗಲು ನರುಕಿದ ನರೆತ ಮೀಸೆಯ . . . ಮುಪ್ಪಿನ ಮುಗುದನೀತನು (ಕುಮಾವ್ಯಾಸ. ೧_೩೫) ; ನರೆತ ಮಂಡೆಯು ಸೀರೊಗುವ ಕಂಗಳು . . . ಪತ್ತಿದ ಗಲ್ಲದ ನೆಱೆ ವೃದ್ಧನಡಿಯಿಟ್ಟನೊಲಿದು (ಜೀವಂಸಾಂ. ೧೭-೩೦) ; ನ[ಪಾಠಾಂ. ನೆ]ರೆತ ಮಂಡೆಯ ಕುಸಿದ ತೊಗಲಿನ ಜೋಲ್ವ ಹುಬ್ಬಿನ . . . ಶಬರಿಯು ಸುಪ್ರಸಿದ್ಧೆಯು ಸಾರ್ದರೊಲವಿನಲಿ (ತೊರರಾ. ೩-೧೨-೨೯) ; ನಮಗೇನು ನರೆತ ಹುಬ್ಬುಗಳಿವೆಯೆ ? (ಕವಿಸೂೕ. ೮೯-೨೦). ೨. ಮುಪ್ಪಾಗು ; ವೃದ್ಧಾಪ್ಯವನ್ನು ಹೊಂದು : "ಜರಯತಿ–ನರೆತಪಂ" (ಕಾಶಕ್. ೧೪೩): ಬೆಳುಗಡ್ಡದಿಂ ನಡುಗುವ ನರೆದಲೆಯಿಂ ನರೆತು ಸಡಿಲ್ವ ಸರ್ವಾಂಗದಿಂ . . . ಮೆಲ್ಲಮೆಲ್ಲನೆ ಚಪ್ಪರದ ಬಾಗಿಲ್ಗೆ ಬಂದೊಡೆ (ನಂಬಿರ. ೭-೨೫) ; ಅಂದಿನೀಶ್ವರನಿಂದು ನರೆತನೆಯಿಂದಿನ ಚಳಿತಭಕ್ತಿಮಹಿಮೆಯಿಂದು ನವೆಯಿತೆ (ಬಸಪು. ೫೨-೩೦) ; ತನ್ನ ನರೆತ ಅಜ್ಞಾನದಲ್ಲಿ ತಾ ನರೆತ ಒಂದು ಪ್ರಾಣ ನೆರಳು ಬೆಳಕು ಅರ್ಧಾರ್ಧವಿರುವ ಮನ ; ಬದುಕಿನೊಂದು ಕಾಣೆ (ಅರಳು. ೧೯೫-೫). ನೆರೆ$_4$ : ೧. ಪಲಿತಂ . . . ಕೂದಲು ನೆರೆತುಹೋಗುವಿಕೆ (ಸಿದ್ಧಾಂತಿ. ೧೫೭) ; ಅವರ ಗಡ್ಡ ಮೀಸೆಗಳು ನೆರೆತು ಹೋಗಿದ್ದವು (ಕಳಹು. ೧).

[ದೇ.೩ ತಮಿ. ನರೈ ; ಮಲ. ನರೆ ; ತುಳು. ನರೆವು, ನರೆ ; ತೆಲು. ನರಯು, ನರಿಯು]

**ನರೆ$_2$, ನೆರೆ$_8$** (ನಾ). ೧. ಬೆಳ್ಳಗಾದ ಕೂದಲು ; ನರೆಗೂದಲು : "ಪಳಿತಮೆಂಬುದು ನರೆ" (ಹಲಾಯು. ೮೮-೩೭೮) ; ಕಚ್ಚು–ಕೆರಕುಂ, ಜರ–ನರೆಯುಂ, ಖಾಸ–ಕೆಮ್ಮುಂ (ಪದ್ಮಾರಾ. ೫೩-೪) ; ತೀವಿದ ನರೆಯುಂ ಡೊಳ್ಳುಂ ದೇವವ್ರತನೆನಿಸಿ ನೆಗಟ್ದ ಯಶಮುಂ ಬೆರಸಿನ್ನೀವುದು ಹರಿಗರ್ಘ್ಯಮನೆಂದಾವನುಮಾ ಭೀಷ್ಮರಂತು ನುಡಿದರುಮೊಳರೇ (ಪಂಪಭಾ. ೭-೪೩) ; ಎನ್ನಟ್ಟಡುಗೆಯನುಂಡೊಡೆ ಬಿನ್ನಣಮೇನರಸ ನರೆಗಳಾಗವೆ (ಪಂಪಭಾ. ೮-೫೪): ನರಪತಿ ನಿನ್ನಂಗಾಲೊಳ್ ನರೆ ಬರ್ಪನಮುತ್ತರೋತ್ತರಂ ಪುದುವಾಟಾ (ಶಾಂತಿಪು. ೯-೫೨) ; ಅಂಜಿಸಿದುವು ಜವನಾಳ್ಗಳ ತೆಱದಿನೆನ್ನ ಕೆನ್ನೆಯ ನರೆಗಳ್ (ಅಜಿಪು. ೨-೭೯) ; ನರೆ ಬಂದನಿತಱೊಳ್ ನರರ್ ಪಿರಿಯರೆ (ಧರ್ಮಾಮೃ. ೩-೦೯೮) ; ನಿಮ್ಮ ನಿಜವನಱಿಯದ ಮನುಜಂಗೆ ನರೆ ಹಿರಿದಾದಡೇನು ಮನದವಗುಣ ಬಿಡದು (ಸಮೂವ. ೫-೧೭) ; ನರೆಯೆಂಬ ಹೊಜಸು ಮೊಗಮೆಂಬರಮನೆಯಂ ಪೊಕ್ಕೊಡೆ (ಯಶೋಚ. ೨-೦೨) ; ಮನದ ಶುದ್ಧತಿಕೆ ತಲೆದೋರ್ಪವೊಲು ನರೆ ಪೊಳೆತುದು (ಸಿದ್ಧರಾ. ೧-೩೪) ; ಪಱಪು (ಪಟಪು)–ನರೆಗಿಕ್ಕುವ ಕರ್ಪುರ (ಶಮದ. ಶಿ. ೧) ; ನರೆ ಶಿರದೊಳೊಗೆದುವು (ಕುಮುರಾ. ೫-೧೯); ನಾಯಿಗೆ ನರೆ ಬಂದರೆ ಅಜ್ಜ ಅನಿಸಿಕೊಂಡೀತೇ? (ಗಾದೆ). ೨. ಮುಪ್ಪು ; ವಾರ್ಧಕ್ಯ : "ಜರೆಯಕ್ಕು ನರೆ" (ಮಂಗರಾ. ೯೦-೧೦) ; "ನರೆಯೆನಲ್ ಜರೆ" (ಕಶರ. ೫೩). ನೆರೆ$_8$ : ೧. ಭರತಂ ಕಂಡಂ ಕೆನ್ನೆಯ ನೆ[ಪಾಠಾಂ. ನ]ರೆಯಂ ದಳದಳಿಸಿ ಪೊಳೆವ ಮಣಿದರ್ಪಣದೊಳ್ (ಆದಿಪು. ೧೭-೭೧) ; ನೆ[ಪಾಠಾಂ. ನ]ರೆ ಕನ್ನೆಗೆ ತೆರೆ ಗಲ್ಲಕೆ ಶರೀರ ಗೂಡು ಹೋಗದ ಮುನ್ನ . . . ಪೂಜಿಸು ನಮ್ಮ ಕೂಡಲಸಂಗಮದೇವನ (ಬಸವ. ೧೭೧) ; ಎಡೆಗೊಂಡೀ ಮುಪ್ಪುದೋಱಲ್ ನೆರೆ ನೆಗೆದು ಸಿರಂದೂಗಿ ಬೆನ್ ಬಾಗಿ (ರಣ್ಣಾಶ. ೩೮) ; ತೆರೆಯಿಲ್ಲದೆ ನೆರೆಯಿಲ್ಲದೆ ಸೆರೆಯಿಲ್ಲದೆ ಕಿಱಿದು ಮಾಗಿ ತೆಳ್ಳಗೆ ಮೊನೆಯಾಗಿರೆ ಕಿವಿಗಳೊಳಂ ನುಣ್ಪಾಗಿರೆ ಕಟಮುಂ ವಿಕಟ ಮಾಗದಿರೆ [ಹರಿ] ಶುಭದಂ (ಅಶ್ವಶಾ. ೧-೨೮) : ಬಾಧಿಸುವುದೀ ದೇಹವಂ ನೆ[ಪಾಠಾಂ. ನ]ರೆ ತೆರೆಗಳಿನ್ನು ಸಾಧಿಸುವುದೇನು (ಜೈಮಿಭಾ. ೦೦-೩೮) : ತಲೆಯೊಳೊಂದು ನೆರೆಯಿಲ್ಲ (ಸೌಂದರಾ. ೩-೫೨).

[<ನರೆ$_1$./ತಮಿ. ನರೈ; ಮಲ. ನರ; ಕೊಡ. ನೆರೆ; ತುಳು. ನರೆ; ತೆಲು. ನರ]

**ನರೆಕೂದಲ್** 'ನರೆಗೂದಲ್' ನೋ.

**ನರೆಕೂದಲು** 'ನರೆಗೂದಲ್' ನೋ.

**ನರೆಗಡ್ಡ** (ನಾ). ನರೆತ ಗಡ್ಡ ; ಬಿಳಿಯ ಗಡ್ಡ : ತೋರದ ದೇಹ ಕುಂಡಲವದೆ ನರೆಗಡ್ಡ ಸೇರಿದ ಚಂದಿ ಕುಲ್ಲಾಯಿ . . . ರತ್ನಹಾರ ದೊಳಿದ್ದನಾ ಮಂತ್ರಿ (ಭರಐ. ೧೩-೯) ; ನರೆಗಡ್ಡ ನೆಲಕೆಳಲುವ ಧೋತ್ರ ಭಸಿತಾಂಗ ಧರಿಸಿದ ರುದ್ರಾಕ್ಷಿಗಳಿಂದೆ . . . ವಿಪ್ರರ ಮಧ್ಯಕೆಳ್ತಂದ (ತ್ರಿಋಷಿ. ೯-೨೪) ; ನರೆಗಡ್ಡದ ಮಿಸೆಯು ಮೇಲೆ ಕೈಯನಂತೋರಣದಿಂದ ಪಾಯುತೆ ಪರಾಕ್ರಮಮಂ ಸಲೆ ತೋರ್ದಂ (ಹಾಲಾಸ್ಯ ೨-೧೧-೧೯).

[ ನರೆ$_2$ + ಗಡ್ಡ$_1$ ]

**ನರೆಗೂದಲ್**, ನರೆಕೂದಲ್, ನರೆಕೂದಲು, ನರೆಗೂದಲು (ನಾ). ನರೆತ ಕೂದಲು ; ಬಿಳಿಕೂದಲು : ನರೆಗೂದಲ್ಗಿಕ್ಕಿ ನುಣ್ಪಂ ಮುಡಿಯುನಳ ವಡಲ್ಸಕ್ಕಿ . . . ಮುಸುಕನಿಟ್ಟೈದಿದಳ್ ವೃದ್ಧೆ (ದಶಕು. ೮-೧೯೭) ; ಒಂದು ನರೆಗೂದಲು ಪಱಿದು ತೋಱಿದಾಗಳೆ ವೈರಾಗ್ಯಂ ಪುಟ್ಟೆ (ಪುಣ್ಯಾಸ್ರ. ೧೦-೧೦ ವ). **ನರೆಕೂದಲ್** : ಪೊತ್ತ ಬೆಳ್ನರೆಕೂದಲಾ ಮುದಿ ಸೂಳೆಯರ ಮೊತ್ತವೊಪ್ಪಿದುದಾಗಲ್ಲಿ (ಕಂನವಿ. ೬-೧೯೦) **ನರೆಕೂದಲು** : ಇಂದಿರೆಯು ಯಜಮಾನಿಯ ತಲೆಯ ನರೆಕೂದಲು ತೆಗೆಯುವುದೇ ಮುಂತಾದ ಕೆಲಸಗಳಿಂದ ಅವಳಿಗೂ ಅಚ್ಚುಮೆಚ್ಚಾದಳು (ಬಂಕಿಮು. ೧೧೯). **ನರೆಗೂದಲು** : ಪಲಿಕ್ನ-ನರೆಗೂದಲುಳ್ಳ ಮುದುಕಿ (ಗಂಗಾಮ. ೨೦೧) : ನರೆಗೂದಲ ತಲೆಯನ್ನು ಬೋಳಿಸಿಕೊಂಡಿದ್ದ ಮನುಷ್ಯನನ್ನವಳು ಅದೆ ತಾನೆ ಮೊದಲ ಬಾರಿಗೆ ಕಂಡಿದ್ದಳು (ಪುನದು. ೧೮೭).

[ ನರೆ$_2$ + ಕೂದಲ್ (<ಕೂಂದಲ್) ]

**ನರೆಗೂದಲು** 'ನರೆಗೂದಲ್' ನೋ.

**ನರೆತನ** (ನಾ). ಮುದಿತನ; ಮುಪ್ಪು. ಎಳೆತನಕ್ಕೂ ನರೆತನಕ್ಕೂ ಸಂಬಂಧವೇ ಇಲ್ಲ . . . ನರೆತನದ ಎಲೆಗಳ ಅಂಚು ನೀಟಾಗಿರುತ್ತದೆ (ಹಸುಹೂ. ೩೭).

[ ನರೆ$_2$ + –ತನ ]

**ನರೆದಲೆ, ನೆರೆದಲೆ** (ನಾ). ೧. ಕೂದಲು ನರೆತ ತಲೆ : ನಡುಗುವ ನರೆದಲೆಯಿಂ ನರೆತು ಸಡಿಲ್ದ ಸರ್ವಾಂಗದಿಂ . . . ಮೆಲ್ಲಮೆಲ್ಲನೆ ಚಪ್ಪರದ ಬಾಗಿಲ್ಗೆ ಬಂದೊಡೆ (ನಂಬಿರ. ೬-೨೫) : ನರೆದಲೆ ಬೇರ್ಬಟಲ್ದ ಪಟವಲ್ . . . ಮಹೋದರಮೆಸೆಯಲ್ಕೆ ಶೋಕಿಸುತೆ ಓಂದನೆ ಬಂದಳ್ (ದಶಕು. ೮-೧೨) ; ನರೆದಲೆ ಜೋಲ್ದ ಪುರ್ಬು ಕುಳಿದಕ್ಷಿಯುಗಂ (ಧರ್ಮಪ. ೩-೩೭) : ಸರಡುಪತ್ರದಲಾಳುಗೊಂಬ ಗಡ ನಮ್ಮನೀ ನರೆದಲೆಯ ಬಾಳಕನೆನುತ್ತ ಕೋಪಿಸಿದ ಸೌಂದರಕುಮರನಾ ವಿಪ್ರನ (ಸೌಂದಪು. ೫-೯). ೨. ಮುಪ್ಪಾದವಳು ; ಮುದುಕಿ : ತಾಯಿಲ್ಲದನನ್ ಸಾಕಿದ ಮುದಿಯಳ್. ಕಂದನ ಕೇಡನ್ ನೋಡಲೊ ಬಟ್ದಳ್ ? ನರೆದಲೆ, ದುಃಖದ ಮಡುವೊಳ್ ಬಿಟ್ದಳ್ (ಅಶ್ವತ್ಥಾ. ೨೫-೫೦೩). **ನೆರೆದಲೆ** : ೧. ನೆರೆದಲೆಗೆ ಮುಸಿದೊಡೆದು . . . ಬಾ ಜಾಣಯೆಂಬಾ ಹಣ್ಣುಮುದುಕಿ ಸೂಳೆಯರೆಸೆದರೇನೆಂಬೆನು (ಶಬಪು. ೧೦-೭೬). [ ನರೆ$_1$ + ತಲೆ$_1$ ]

**ನರೆದಲೆಗ** (ನಾ). ೧. ಕೂದಲು ಬೆಳ್ಳಗಾದವನು ; ನರೆತ ಮಂಡೆಯಂವನು. ೨. ರಾಗಿ : ನರೆದಲೆಗನಿದು ನೆಲ್ಲು ಹಾರಕ ಬರಗು ಜೋಳವು ಕಂಬು ಉರುತರದ ರವೆ ಯವೆ ನವಣೆಯಿದೂ ನವಧಾನ್ಯವೆಂದೆನಲು(ರಾಮುಧ. ೦೧-೬೨) ; ಕೆಲರು ಗೋಧಿಯ ಸಾಮೆಯನು ಕೆಲಕೆಲರು ನವಣೆಯ . . . ಕೆಲರು ನರೆದಲೆಗನನು ಪತಿಕರಿಸಿರಲು (ರಾಮುಧ.೧೦-೩೩); ನರೆದಲೆಗ (ರಾಗಿ), ನೆಲ್ಲು, ಹಾರಕ, ಬರಗು, ಜೋಳ, ಕಂಬು, ಸಾಮೆ, ನವಣೆ, ಗೋಧಿ ಈ ನವಧಾನ್ಯಗಳನ್ನು ತಂದು ಸುರಿದರು (ನಾಡು.ದಿ. ೩೧); ರೀಹಿ (ವ್ರೀಹಿ–ಬತ್ತ) ಹೆಚ್ಚೋ ನರೆದಲೆಗ (ರಾಗಿ) ಹೆಚ್ಚೋ ಎಂಬ ವಾದ ಹುಟ್ಟಿತು (ನನ್ನೂರು. ೫೫). [ ನರೆದಲೆ + –ಗ$_2$ ]

**ನರೆದೊಡು** (ಕ್ರಿ). ಬಿಳಿಯ ಕೂದಲನ್ನು ಹೊಂದು, –ಪಡೆ ; ಕೂದಲು ಬೆಳ್ಳಗಾಗು : ಕನ್ನೆ ನರೆದೊಟ್ಟು ಶಿಥಿಲತ್ವವಳವಟ್ಟು ನೆಱೆ ಪಾಣ್ನಿನಂಗ ವಿಕಾರಮಂ ಬಿಟ್ಟು ಹೋಗಿ ಧಾತುಗಳು ಪಲ್ಲಟವಾದವು (ಸಿದ್ಧರಾ. ೦-೪೧).

[ ನರೆ$_2$ + ತೊಡು$_1$ ]

**ನರೆದೋಱು** (ಕ್ರಿ). ೧. ಬಿಳಿಕೂದಲು ಕಾಣಿಸಿಕೊಳ್ಳು. ೨. ಮುಪ್ಪಾಗು; ವೃದ್ಧಾಪ್ಯವನ್ನು ಹೊಂದು.

**ನರೆದೋಱದರ್** = ಮುಪ್ಪಿಲ್ಲದವರು ; ದೇವತೆಗಳು : "ಅಮರ್ದುಣಿಸುಗಳ್, ಕನಸಿಲ್ಲದರ್, ನರೆದೋಱದರ್, ಎವೆಯಿಕ್ಕದರ್ . . . ಅಚ್ಚರರ್ (ಬೋಳೆಯರ್)–ಈರ್ ದೇವರ್ಕಳ ಪೆಸರ್" (ಕಶಸಾ. ೨-೧೯). [ ನರೆ$_2$ + ತೋಱು ]

**ನರೆನವಿರ್** (ನಾ). ನರೆತ ಕೂದಲು ; ಬೆಳ್ಳಗಾದ ಕೂದಲು; ಬಿಳಿಯ ಕೂದಲು : ನರೆನವಿರ ಹೊತ್ತು ನಡುಗುವ ಮಂಡೆ ಬಿಳ್ದ ಮೊಲೆ ತೆರೆ ಮುಸುಂಕಿದ ಮುಖಂ . . . ಜೋಲ್ದ ಗಲ್ಲಂ ಮಿಸುವ ವೃದ್ಧವನಚರಿಯೊರ್ವಳಾಪಣ್ಗಗಳಂ ಸವಿದು . . . ವಿಱುಂಜವ್ವನಂಬಡೆದಳು (ಸಮ್ಯಕ್ತ್ವಕೌ. ೧೦-೪೩). [ ನರೆ$_2$ + ನವಿರ್ ]

**ನರೆಪ** (ನಾ). ಕೂದಲು ನರೆತವನು,–ಬೆಳ್ಳಗಾದವನು ; ಮುದುಕ : ಕೆಮ್ಮಿ ಕುಮ್ಮಿದೊಡೆ ತೋಳೊಳೆ ಜೀವವಿಯೋಗಮಪ್ಪುದೆಂದಿರದರ್ದಗಪ್ಪುದತ್ತಳಗಮಾ ನರೆಪಂ ನೆರೆಪಂದು [ಪಾಠಾಂ. ನರೆಬಂದ] ಪೊಂಗಳಂ ಸುರಿವೊಡ ಮಾರೊ ಸೈರಿಸುವರಾತನ ಪಲ್ಲಿಲಿಮಾಜು ನಾತಮಂ (ಪಂಪಭಾ. ೪-೦೦೦).

[ ನರೆಪು + –ಅ$_7$ ]

**ನರೆಪು** (ನಾ). ಕೂದಲು ನರೆಯುವಿಕೆ,–ಬೆಳ್ಳಗಾಗುವಿಕೆ. 'ನರೆಪ' ಪರಾ. [ ನರೆ$_1$ + –ಪು$_2$./ತಮಿ. ನರೈಪ್ಪು; ತೆಲು. ನರಪು ]

**ನರೆಯಂಗಲ್** (ನಾ). ಒಂದಂ ಊರಿನ ಹೆಸರಂ; ಇ ಈಗಿನ ಧಾರವಾಡ ಜಿಲ್ಲೆಯ ನರೇಗಲ್ಲು: ಸ್ವಸ್ತಿ ವಿಕ್ರ(ಕ್ರ)ಮಾದಿತ್ಯ ಪ್ರಿಥು(ಥ)ವಿವಲ್ಲಭ ಲೋಕಮಹಾದೇವಿಯರಾ ಲೋಕೇಶ್ವರದಾ ನರೆಯಙ್ಗಲ್ಲ ಪನ್ನಾಸುಗಳಾನಿತ್ರ (ಇಆ. X, ೦೭೭-೨ : 7ನೆಯ ಶತ) ; ನರೆಯಂಗಲ್ಲ ಸಾಸಿರ್ವ್ವರ ತುಱುಪಿನ ಪುಯ್ಯಲೊಳ್ (ಎಇ. VI, ೧೬೩-೨ ; 780) ; ಆಚಾರ್ಯ ರಾಜಗುರು ವಿಮಳಶಕ್ತಿದೇವರುಂ ನರೆಯಂಗಲ್ಲ ಮಹಾಜನಂಗಳುಂ . . . ಇನ್ನಿವರ ಸಮಕ್ಷದಲ್ಲಿ (ಕಶಬಂ. ೧೭-೦೧ : 10ನೆಯ ಶತ).

ನರೆಯಂಗಲ್ ಪನ್ನೆರಡು=ಒಂದು ಪ್ರಾಂತದ ಹೆಸರು : ನರೆಯಂಗಲ್ ಪನ್ನೆರಡಱೊಳಗಣ ಉಮ್ಮಚಿಗೆಯಂ ಸರ್ವ್ವಾಭ್ಯಂತರಸಿದ್ಧಿಯಾಗಿ . . . ಕುಡೆ (ಎಇ. XX, ೬-೧೧ ; 1012).

**ನರೆಯೇಱು** (ಕ್ರಿ). ೧. ಕೂದಲು ಬೆಳ್ಳಗಾಗು. ೨. ಮುಪ್ಪಾಗು : ಮುದಿಯಾಗು. ೧, ೨ : ವಾರ್ಧಿಯಂತೆ ತೆರೆಯೇಱದೆ ಕೋಡಗದಂತೆ ಶಾಖೆಯೊಳ್ ನಡೆಯದೆ ಪೊಟ್ಟೆ [ ಪಾಠಾಂ. ಪೋದೆ]ಪೋದ ಮರದಂತೆ ಕರಂ ನರೆಯೇಱದಿಟ್ಟು ಮುಪ್ಪಡಸದ ಮುನ್ನಮೇಕೆ ಮನುಜಮರ್ಬಿಱದಿಕ್ಕರೊ ಮೋಹಮಲ್ಲನಂ (ಮಲ್ಲಿಪು. ೧೩-೯೪) ; (ಕಾವ್ಯಸಾ. ೦೦೩೧ ನೋ).

[ ನರೆ$_2$ + ಏಱು$_1$ (< ಏಱ್$_1$) ]

**ನರೆವೆಣ್** (ನಾ). ಕೂದಲು ನರೆತ ಹೆಣ್ಣು ; ಮುದುಕಿ : ನರೆವೆಣ್ಗಳೊಡನಾಡೆ ಮುಪ್ಪಹುದೈಸೆ (ಭರಐ. ೭೩-೧೨). [ ನರೆ$_1$ + ಪೆಣ್ ]

**ನರೇಂದ್ರ** (ನಾ). ೧. ಅರಸ ; ದೊರೆ : ರುಂದ್ರಾಂಭೋಧಿಪರೀತ ಮಹೀಂದ್ರರದಾರಿನ್ನರೀ ನರೇಂದ್ರಂ ಸಾಕ್ಷಾದಿಂದ್ರಂ ತಾನೆನೆ ಸಲೆ ನೆಗಳ್ದಂ ದ್ರೇಂದ್ರನ ತೋಳೆ ತೊಟ್ಟಿಲಾಗಿರೆ ಬಳೆದಂ (ಪಂಪಭಾ. ೦-೯೪) ; ಉದ್ಧೃತ್ತ ನರೇಂದ್ರಕಂಠಕದಳೀಚ್ಛೇದೈಕದಕ್ಷಾಸಿ (ಗಂತಿಪು. ೨-೨೦) : ಚತುಷ್ಪಾದಿ ತದ್ಭೇದದೊಳ್ ತಾನಿದು ಕುಂಪಾಳಂ ನರೇಂದ್ರಂ ನಿಮಗೆ ಕುಡುವ ನಾಗಿರ್ದಪಂ ನೋಡೆ ದೃಷ್ಟಂ (ಖಳುಮಾ. ೩-೭). ೨. ವಿಷಚಿಕಿತ್ಸಕ

ವಿಷವೈದ್ಯ; ಗಾರುಡಿಗ. ೩. ಮಾಂತ್ರಿಕ; ಮಂತ್ರವಾದಿ: "ನರೇಂದ್ರ [ನೆನಲಾಹಿತುಂಡಿಕಂ] ಪಾರ್ಥಿವನುಂ" (ವಸ್ತುಕೋ. ೧೩೦-೦೭): "ನೃಪನಲ್ಲಿ ವಾದಿಯುಲಿ ನರೇಂದ್ರನೆಂದನಿಕು" (ಮಂಗರಾ. ೧೪೪-೩೬).

[ ನರ$_2$ + ಇಂದ್ರ ]

**ನರೇಂದ್ರಚಂದ್ರ** (ನಾ). ರಾಜರಲ್ಲಿ ಚಂದ್ರನಂತೆ ಹೊಳೆಯುವವನು; ಶ್ರೇಷ್ಠನಾದ ರಾಜ: ಕೃತಿಪತಿ ನರೇಂದ್ರಚಂದ್ರಂ ಕೃತಿಯಂ ಪೇಟ್ದಂ ಬುಧಾಬ್ಜವನಕಳಹಂಸಂ (ಕಾದಂಪೂ. ೭); ರವಿಕುಲನರೇಂದ್ರಚಂದ್ರಂ, ತನ್ನ ಕಿರುಮಂಡಿತಿಯ ಮನಮನೊತಾದೊಡಂ ತನ್ನಾಸೆಗೇಳಲ್ಕೆ ತರಿಸಂದು ಹೊರಟನವೇಡೆಗೆ (ಶ್ರೀರಾಮಾ. ೬೬-೩೩೭). [ ನರೇಂದ್ರ + ಚಂದ್ರ$_2$ ]

**ನರೇಂದ್ರನಿಕಾಯ** (ನಾ). ರಾಜರ ಸಮೂಹ, -ಗುಂಪು: ಶಿವ ಎನುತಾ ನರೇಂದ್ರನಿಕಾಯ ನಡುಗಿತು (ಕುವ್ಯಾದ್ರೋ. ೮-೪೩).

[ ನರೇಂದ್ರ + ನಿಕಾಯ ]

**ನರೇಂದ್ರವಧು** (ನಾ). ಅರಸಿ; ರಾಣಿ: ಬಾಣಸಿಗಂ ಮಾಡಮನಾ ನರೇಂದ್ರ ವಧುವಂ ತಕ್ಕಯ್ಸಿಕೊಂಡೇಱಿದಂ (ಬಂಹರಿ. ೯-೩೦).

[ ನರೇಂದ್ರ + ವಧು ]

**ನರೇಂದ್ರಾಸನ** (ನಾ). ರಾಜನ ಪೀಠ; ಸಿಂಹಾಸನ: "ಗದ್ದುಗೆ ಪಟ್ಟವಣೆ ನರೇಂದ್ರಾಸನಂ" (ಚಕುನಿ. ೫೦). [ ನರೇಂದ್ರ + ಆಸನ ]

**ನರೇಯಣ** 'ನಾರಯಣ' ನೋ.

**ನರೇಶ್ವರ** (ನಾ). ಅರಸ; ದೊರೆ: ಸ್ವಸ್ತಿಸಮಸ್ತನರೇಶ್ವರಮಸ್ತಕವಿನ್ಯಸ್ತಶಾಸನಂ (ಆದಿಪು. ೧೩-೭೩); ಸಕಲಮೇದಿನೀತಳವನೇಕಚ್ಛತ್ರದಿಂ ಪಾಲಿಸುವ ನರೇಶ್ವರನವಂಗಚ್ಛಿದ್ರವಾಗಿ ನಡೆವುದು (ಜೈಮಿಭಾ. ೩-೩೬).

[ ನರ$_2$ + ಈಶ್ವರ ]

**ನರ್ಕುಟಕ** (ನಾ). [ಛಂದ] ಪ್ರತಿಯೊಂದು ಪಾದದಲ್ಲಿಯೂ ಹದಿನೇಳು ಅಕ್ಷರಗಳಿರುವ ಒಂದು ವೃತ್ತ; P ನಜಭಜಜಲಗ-ಹೀಗೆ ಗಣ ನಿಯಮವಿರುವ ವೃತ್ತ. ಇದಕ್ಕೆ 'ಕನಕಾಬ್ಜನೀಯಂ' ಎಂಬ ಹೆಸರೂ ಇದೆ. 'ಕನಕಾಬ್ಜನೀಯ', 'ನರ್ಕುಟಕ' ಪರಾ. [ ಸಂ. ]

△ **ನರ್ಚು**$_1$ 'ನಚ್ಚು$_1$' ನೋ.

△ **ನರ್ಚು**$_2$ 'ನಚ್ಚು$_2$' ನೋ.

**ನರ್ತಕ** (ನಾ). ೧. ನೃತ್ಯ ಮಾಡುವವನು; ರಂಗದ ಮೇಲೆ ಕುಣಿಯುವವನು; ನಟ: ಧರೆ ರಂಗಂ ಗಗನಂ ಮನೋಹರತರಂ ನಾಟ್ಯಾಲಯಂ ನರ್ತಕಂ ಸುರರಾಜಂ ಸಭೆ ದೇವಮರ್ತ್ಯಸಭೆ (ಆದಿಪು. ೭-೧೩೭): ಪಾಣಿನಿಯು ತನ್ನ ಅಷ್ಟಾಧ್ಯಾಯಿಯಲ್ಲಿ . . . ನಾಟ್ಯಗಾರನಿಗೆ ನರ್ತಕ ಎಂಬ ಹೆಸರಿದ್ದುದನ್ನು ತಿಳಿಸುತ್ತಾನೆ (ಭಾರದ. ೫೫೦). ೨. [ಜೈನ] ಸೈನ್ಯದ ಏಳು ವಿಭಾಗಗಳಲ್ಲಿ ಒಂದು. 'ನರ್ತಕಿ' ಪರಾ. [ ಸಂ. ]

**ನರ್ತಕಾಳಿ** (ನಾ). ನರ್ತಕರ ತಂಡ, -ಸಮೂಹ: ಪ್ರಕಟಿಸಿದತ್ತು ಪದ್ಮಜನ ಪಕ್ಕದೊಳ್ . . . ಗಾಯಕಪ್ರತತಿ ವಾದಕಮಂಡಳಿ ನರ್ತಕಾಳಿ (ಪುಷ್ಪಪು. ೫-೩೧). [ ನರ್ತಕ + ಆಳಿ$_4$ ( = ಆಲಿ$_4$ ) ]

**ನರ್ತಕಿ** (ನಾ). ೧. ನೃತ್ಯ ಮಾಡುವವಳು; ನಟಿ: ಕುಡುಪುಂ ಕಯ್ಯುಂ ಜಕಿಯೊಳ್ ತಡತಡವರೆ ವಾದಕಂಗೆ ಪುರ್ವಿಂ ಜತಿಯಂ ತೋಱರದೆ ನಡೆಯಿಸಿ ಪುರ್ವದೆ ಕುಡುಪೆನೆ ನರ್ತಕಿಯಿ ಸಭೆಗೆ ವಾದಕಿಯಾದಳ್ (ಆದಿಪು. ೯-೩೩): ನರ್ತಕಿಯರಾಟಗಳ ನೋಡಲು ಮುತ್ತುತಿಪ ಮಂತರರ ಜಡಿಕೈದತ್ತ ತೊಲಗಿಸಿ . . . ಓಜೆಗೊಳಿಸಿದರಮರಪಡಿಯಜರು (ಸಾಳ್ವಭಾ. ೩೩-೩೭); ಕಡುತೋರಮಲ್ಲದಗ್ಗದ ಸಿಡಿದಲ್ಲದ ಕಿಱಿದುಮಲ್ಲದತಿ ಬಡವಲ್ಲದ ಮುಡುಬಲ್ಲದವಯವಂಗಳನೊಡರಿಸುವಂಗನೆಯೆ ಲಲಿತನರ್ತಕಿಯೆನಿಪಳ್ (ರಾಜಶೇ. ೧-೪೪); ರಂಭೆ ಮೊದಲಾದ ಅಪ್ಸರಸ್ತ್ರೀಯರೇ ಇವನ ನರ್ತಕಿಯರು (ನೀತಿಚಿಂ. IV, ೮). ೨. [ಜೈನ] ಸೌಧರ್ಮೇಂದ್ರನ ಏಳು ಬಗೆಯ ಸೇನಾಂಗಗಳಲ್ಲಿ ಒಂದು; P ಮರ್ತ್ಯಲೋಕದಲ್ಲಿರುವಂತೆ ದೇವಲೋಕದಲ್ಲೂ ರಾಜ್ಯಾಂಗವ್ಯವಸ್ಥೆ ಇದೆ. ಸೌಧರ್ಮೇಂದ್ರಾದಿ ಇಂದ್ರರಿಗೂ ಸೈನ್ಯವಿದೆ. ಆ ಸೈನ್ಯವನ್ನು ಅನೀಕವೆಂದು ಕರೆಯುತ್ತಾರೆ. ಆ ಸೈನಿಕರಿಗೆ ಅನೀಕದೇವತೆಗಳೆಂದು ಹೆಸರು. ಇವರಿಗೆ ವೈಕ್ರಿಯಿಕ (ನಾನಾರೂಪವನ್ನು ತಾಳಬಲ್ಲ) ಶಕ್ತಿಯಿದೆ. ಇವರು ಏಳು ಬಗೆಯ ರೂಪವನ್ನು ತಾಳಿ ಇಂದ್ರನನ್ನು ಸೇವಿಸುವ ಸೇನಾಂಗವೆನಿಸುತ್ತಾರೆ. ಅವು ಯಾವುವೆಂದರೆ ೧. ವೃಷಭ = ಎತ್ತು. ೨. ರಥ = ತೇರು. ೩. ತುರಗ = ಕುದುರೆ. ೪. ಮದಗಜ = ಆನೆ. ೫. ಪದಾತಿ ಅಥವಾ ಭೃತ್ಯವರ್ಗ = ಕಾಲುಬಲ. ೬. ನರ್ತಕ ಅಥವಾ ನರ್ತಕಿ = ನಾಟ್ಯಮಾಡುವವರು. ೭. ಗಂಧರ್ವ = ಸಂಗೀತಗಾರರು. ಈ ವಿವರಗಳು ಸರ್ವಾರ್ಥಸಿದ್ಧಿ ಮೊದಲಾದ ಜೈನಗ್ರಂಥಗಳಲ್ಲಿ ದೊರಕುತ್ತದೆ: ಹಸ್ತ್ಯಶ್ವರಥಪದಾತಿವೃಷಭಗಂಧರ್ವನರ್ತಕೀಪ್ರಮುಖ ಸಪ್ತಾನೀಕಸಮೇತನುಂ (ಆದಿಪು. ೬-೧೩ ವ); ಗಜತುರಗಸ್ಯಂದನಪದಾತಿ ಗಪೇಂದ್ರ ಗಂಧರ್ವ ನರ್ತಕೀಪ್ರಮುಖ ಪ್ರಥಿತಸಪ್ತಾನೀಕಸಂಯುತನುಂ (ನೇಮಿಪು. ೨-೩೩ವ); ಗಜತುರಗಪದಾತಿರಥಗಂಧರ್ವನರ್ತಕೀವೃಷಭವಿಕಲ್ಪದಿಂ ಸಪ್ತವಿಧಮಂಗರಕ್ಷಕರ್ ಪದಿನಾಱುಸಾಸಿರಂ (ತತ್ತ್ವಪ್ರ. ೦೯೪): ಸಿಂಧುರಘಟಾಸಂದೋಹದಿಂ . . . ನವನರ್ತಕೀನಿವಹದಿಂ ಗಂಧರ್ವಸಂದೋಹದಿಂದಿದು ಸಪ್ತಾಬ್ಧಿಯೆನಲ್ಕೆ ಸಪ್ತವಿಧಸೇನಾಚಕ್ರಮೇನೊಪ್ಪಿತೋ (ಪುಷ್ಪಪು. ೧೪-೪೭). ೩. [ಸಂಗೀತ] ಒಂದು ರಾಗದ ಹೆಸರು: ನರ್ತಕಿ ಕಕುಭ ಷಡ್ಜ ಕೌಶಿಕಿ ಭೃಪಾಳ ಪಂಚಮಭೃಪಾಳ ಪಂಚಮಗಾಂಧಾರ ರೂಪಸಾಧಾರಣಮೆಂಬೇಳುರಾಗಂಗಳಂ ಸಪ್ತಸಾಧಾರಣಜಾತೀಯಂಗಳು (ವಿವೇಕ. ೩೩೩). [ ಸಂ. ನರ್ತಕೀ ]

**ನರ್ತನ** (ನಾ). ರಂಗದ ಮೇಲೆ ನಡೆಯುವ ನಾಟ್ಯಾಭಿನಯ; ನೃತ್ಯ; ನಾಟ್ಯಮಾಡುವುದು; ಕುಣಿತ: ಪೇಡನನರ್ತನ ಹಾಸ್ಯವನಾಡಂಬರ ನಟನವೇಣುವಾದನಗೇಯಕ್ರೀಡೆಗಳಿಂ. . . ರಾಮಕೃಷ್ಣರಿರ್ದಪಸರದೊಳ್ (ಜಗವಿ. ೪-೪೮); ಗಣನಾಥನೃತ್ಯಸರಸೀರುಹಕೇಳಿನಿವಾಸದಲ್ಲಿ ನರ್ತನಮಂ ನೊಡರ್ಟ . . . ಇನಿಸು ಬಟಲ್ದು ವಾಗ್ವನಿತೆ ವಿಶ್ರಮಿಸಿರ್ಕೆ ಮದಾನನಾಬ್ಜದೊಳ್ (ಪುಷ್ಪಪು. ೧-೭): ನರ್ತನದಿಂ ನವರಕ್ತಿಯು ಹೊಮ್ಮಿ . . . ತೋರ್ಪುದು ಸುಖದುಃಖಗಳನು! (ಪಾಂಚಜ. ೧೯ ೧೫): ಸರಳಾ ವೈದ್ಯನಾಥರಲ್ಲಿ ನರ್ತನವನ್ನು ಕಲಿಯುತ್ತಿದ್ದಳು (ಕಲಾಸ. ೨೧). [ ಸಂ. ]

**ನರ್ತನಗಾತಿ** 'ನರ್ತನಗಾತಿರ್' ನೋ.

**ನರ್ತನಗಾತಿರ್, ನರ್ತನಗಾತಿ** (ನಾ). ನೃತ್ಯಮಾಡುವವಳು; ನರ್ತಕಿ: ಸುರನರ್ತಕಿಯರೊಳು ಮತ್ಸರವಾಂತರಿ ನರನರ್ತನಗಾತಿರ್ಯರ ಪರಮೋತ್ಸವದೆ ನೋಡುತ ಬಂದ (ಮೋಹತ. ೪೩ ೩೪). ನರ್ತನಗಾತಿ: ಗುಡಿಗುಡಿಗಳ ನರ್ತನಗಾತಿಯರೊಳು ಪರ್ಬಡಿಸುವ ಗೀತಬ್ಬಗಳ ಪಡಿ ತಪ್ಪದೆ ಕೋಲಬಾರಿಗಳಿಂದ ಜಕ್ಕಡಿ ಮೆಱೆದಾವು ದೇವ[illegible] (ಮೋಹತ. ೧೮ ೭); ತಾಳಮದ್ದಳೆಗೀತ ನರ್ತನಗಾತಿಯು ಮೇಳವಿದ್ವತ್ಸಭೆ ಸುರರ ಜಾಲಕ್ಕೆ ಹಸೆಯಿತ್ತು ಬೀಳ್ಕೊಟ್ಟು (ಮೋಹತ. ೪೩ ೩೭).

[ ನರ್ತನಗಾಱ + -ತಿ$_1$ (< ಇತ್ತಿ) ]

**ನರ್ತನಗಾಱ** (ನಾ). ನೃತ್ಯ ಮಾಡುವವನು; ನರ್ತಕ. 'ನರ್ತನಗಾತಿರ್', ಪರಾ. [ ನರ್ತನ + -ಗಾಱ (< -ಕಾಱ) ]

**ನರ್ತನಗೃಹ** (ನಾ). ನೃತ್ಯ[illegible]: [illegible] ಶಾಂತಿಮರ್ನೆನಿಸಿ[illegible] . . . [illegible] ನರ್ತನಗೃಹಂ (ಪುಷ್ಪಪು. ೧-೭೬). [ ನರ್ತನ + ಗೃಹ ]

**ನರ್ತನವಿದ್ಯೆ** (ನಾ). ನಾಟ್ಯ; ನೃತ್ಯಕಲೆ: [illegible] (ಜಂಬಾಪ. ೪೭ ೨೧). [ ನರ್ತನ + ವಿದ್ಯೆ ]

**ನರ್ತನಶಾಲೆ** (ನಾ). = ನರ್ತನಗೃಹ : ಮಂತ್ರಮಾ ಪವನಂಗಳಲ್ಲಿ ಚಿತ್ರಶಾಲೆ . . . ನರ್ತನಶಾಲೆ ಗಾನಶಾಲೆ ಕ್ರೀಡಾಶಾಲೆ . . . ತರುವಾಟಿಗಳ ತಣ್ಗೆಳಲ್ಗಳೊಳಗೆಯುಂ (ವಿವೇಕ. ೩೨೮). [ ನರ್ತನ + ಶಾಲೆ₃ ]

**ನರ್ತನಸ್ಥಳ** (ನಾ). = ನರ್ತನಸ್ಥಾನ : ರಂಗಃ – ನರ್ತನಸ್ಥಳವುಂ, ರಂಗವಲ್ಲಿಯುಂ (ಕಾಶಕೆ. ೩೦೪). [ ನರ್ತನ + ಸ್ಥಳ (= ಸ್ಥಲ) ]

**ನರ್ತನಸ್ಥಾನ** (ನಾ). ರಂಗಮಂಟಪ ; ರಂಗಸ್ಥಳ : "ನರ್ತನಸ್ಥಾನವಮದು ರಂಗಮಕ್ಕು" (ಮಂಗರಾ. ೨೪-೬). [ ನರ್ತನ + ಸ್ಥಾನ ]

**ನರ್ತನೋತ್ಸವ** (ನಾ). (ಒಂದು ದಿನ ಅಥವಾ ಅನೇಕ ದಿನಗಳು ನಡೆಯುವ) ನಾಟ್ಯಕ್ಕೆ ಸಂಬಂಧಿಸಿದ ಸಂತೋಷಸಮಾರಂಭ,-ಉತ್ಸವ: ರಚನೆಯ ಪ್ರಕರಣದ ನರ್ತನೋತ್ಸವದಲ್ಲಿ ಎಲ್ಲ ನವೀನ ಪಾತ್ರಗಳು ಸಾಮುದಾಯಿಕವಾಗಿ ನಮ್ಮ ಚಿತ್ರದಲ್ಲಿ ನೆಲಸುತ್ತವೆ (ಸಮಜೀ. ೨೪ ೬೮೦೪). [ ನರ್ತನ + ಉತ್ಸವ ]

**ನರ್ತಿಣಿ** (ನಾ). ನರ್ತಕಿ : ನಾಟ್ಯ ಮಾಡುವವಳು : ನರ್ತಿಣಿಯ ತೆರದೊಳಗೆ ಲೋಕವಿಮೋರ್ತಿವುದು ತ್ರ್ಯಮಾಯು ಬಿಗಿಯೊಳು ಸುತ್ತಿಹುವ (ಹರಿಭಾ. ೧-೧೪) : ಸಿಡಿಲ ಮುರಜಂಬರವೆ ತೆರೆ ಅರಲ್ವಿಡಿವ ಪುಷ್ಪಾಂಜಲಿಯ ಮಳೆ ಚಿಮ್ಮಿರೊಡೆದ ತೆರದಿಂ ನಟಿಸಿ ಕುಡಿಮಿಂಚೆಂಬ ನರ್ತಿಣಿಯು (ಚಿರಾಮಾ. ೧೧೦-೪೬). 'ನಚ್ಚಣಿ' ಪರಾ. [ < ಸಂ. ನರ್ತಿನೀ ]

**ನರ್ತಿಸು** (ಕ್ರಿ). ೧. ಕುಣಿ ; ನಾಟ್ಯಮಾಡು : ಕುಡುಮಿಂಚಿನಂತೆ ಮೇಗೊಗೆದು ನಾರದಂ ನರ್ತಿಸಿದಂ (ಪಂಪಭಾ. ೧೨-೧೮೯) : ಭೂತಗಣಂ ಪೇರಾನೆಯ ನೆಣನಂ ತಿಂದೆರ್ದ್ದಾನಂದದೆ ಕೂಡೆ ನಲಿದು ನರ್ತ್ತಿಸುತಿರ್ಕ್ಕುಂ (ಎಕ. VIII, ಸಾಗರ. ೧೦೯-೩೯ : 1042) ; ಶಾರದೆಯ ನರ್ತಿಸುಗೆ ನಲಿದೂಲಿದೆನ್ನ ಜಿಹ್ವೆಯಲಿ (ಕುಮಾ.ಅ. ೧-೫) : ನರ್ತಿಸು, ತಾಯೆ, ಅಜಜಾಯೆ, ಮಮ ಮಸ್ತಕ ನೀರೇಜದಲಿ! (ಅನಿಕೇ. ೧-೧). ೨. ಆಡು ; ಚಲಿಸು : ಭೂಭೃತ್ತಿಲಕನ ಸಿತಾತಪತ್ರದ ಕೆಲದೊಳ್ ನರ್ತಿಸಿತು ಧವಳಚಾಮರಯುಗಳಂ (ಕಾದಂಪೂ. ೪೭೩). [ ನರ್ತನ + – ಇಸು₃ ]

**ನರ್ದನ** (ನಾ). (ದನಗಳ) ಗುಟುರು : ಗರ್ಜನೆ : ಜನಾರ್ದನ ನಾಡುತ್ತುಮಿರ್ದ ಪದದೊಳ್ ದೆಸೆಗಳ್ ಮಾರ್ದನಿವಿಡಲದ್ಭುತವೃಷನರ್ದನ ವರ್ಣ್ಮದುದದೊಂದು ವಜ್ರಾಶನಿಪೊಲ್ (ಜಗವಿ. ೫-೩೪). [ ಸಂ. ]

**ನರ್ಮ₁** (ನಾ). ೧. ಆಟ ; ಲೀಲೆ ; ಕ್ರೀಡೆ : ವಿನೋದ. ೨. (ಶೃಂಗಾರದಲ್ಲಿನ) ಪರಿಹಾಸ; ನಗೆ: "ಸ್ತ್ರೀ ಪುರುಷರ ಪರಿಹಾಸ" (ಅಮರ. ೬೮೪). ೩. ಚೆಲುವು ; ಸೊಗಸು : ಕೂರ್ಮೋನ್ನತಮೆನಿಸಿರ್ದ ಪದಂಗಳ್ ನರ್ಮಮನಾದರಿಸಿದವು ಮಡಂಗಳ್ (ಸುಕುಮಾ. ೫-೫೦ ರಗಳೆ). ೪. ಸಂತೋಷ ; ಉಲ್ಲಾಸ : ಧರ್ಮಮೆ ದೇಹಿಗ(ಮ)ಹಪರ ಶರ್ಮಕ್ಕೆ ನಿದಾನಂ . . . ನರ್ಮದಿನನಗುತ್ಕಟಸತ್ಕರ್ಮಂ ಪ್ರತ್ಯಕ್ಷಫಲಮನೀವುದು ಪುಸಿಯೇ (ಪುಷ್ಪಪು. ೩-೧೧೮). [ ಸಂ. ನರ್ಮನ್ ]

**ನರ್ಮ₂** 'ನರಮ್' ನೋ.

**ನರ್ಮಕಥೆ** (ನಾ). ವಿನೋದದ ಪ್ರಸಂಗ,-ಘಟನೆ : ಈ ನರ್ಮಕಥೆಯನ್ನು ತನ್ನ ಚಿತ್ರದಲ್ಲಿ ಬಚ್ಚಿಟ್ಟು ಜೋಪಾನವಾಗಿ ಕಾಪಾಡಿಕೊಂಡು ಬಂದಿದ್ದಳು (ಕಾವ್ಯಸ. ೪೪). [ ನರ್ಮ₁ + ಕಥೆ ]

**ನರ್ಮಕುಂಜ** (ನಾ). ವಿನೋದವಾಗಿ ಕ್ರೀಡಿಸುವ ಲತಾಮಂಟಪ ; ಕ್ರೀಡಾಸ್ಥಾನ ; ಕೇಳೀಸದನ : ಕವಿಯ ಹೃದಯವೆ ನರ್ಮಕುಂಜ ಕವಿತಾಸತಿಗೆ (ಗೀವಿಂ. ೨೦-೧೮). [ ನರ್ಮ₁ + ಕುಂಜ ]

**ನರ್ಮಗೋಷ್ಠಿ** (ನಾ). ವಿನೋದದ ಗೋಷ್ಠಿ ; ಸಂತೋಷಕೂಟ : ನಯಸಂಪನ್ನನತೀವಯುಪ್ಪನಯುತಂ ರೂಪಾನ್ವಿತಂ ನರ್ಮಗೋಷ್ಠಿಯ •ನಾಳ್ವಂ . . . ಉತ್ತಾನಿಪಿಯೆನಿಪ್ಪನೊಳ್ನೆರವ ಪೆಣ್ಣಾ ರಂಭೆಯೋಂ ನಾಟಿಯೆ (ರಾಜಶೇ. ೧೧-೨೫೦). [ ನರ್ಮ₁ + ಗೋಷ್ಠಿ ]

**ನರ್ಮದೆ** (ನಾ). ೧. ಸಂತೋಷಪಡಿಸುವವಳು ; ನಗಿಸುವವಳು. ೨. ಒಂದು ನದಿಯ ಹೆಸರು ; P ಭರತಖಂಡದಲ್ಲಿ ಬಹಳ ಪವಿತ್ರವಾದುದೆಂದು ಭಾವಿಸುವ ಗಂಗೆ, ಯಮುನೆ, ಗೋದಾವರಿ, ಸರಸ್ವತಿ, ನರ್ಮದೆ, ಸಿಂಧು ಮತ್ತು ಕಾವೇರಿ ಎಂಬ ಏಳು ಮಹಾನದಿಗಳಲ್ಲಿ ಒಂದು : "ಮೇಖಲಕನ್ಯಾ, ನರ್ಮದಾ, ರೇವಾ – ಈ ೩ ನರ್ಮದೆ" (ಹಲಾಯು. ೧೧೧-೫೨) : ನರ್ಮದೆಗೆ ಹೋದರೆ ಕರ್ಮ ತಪ್ಪೀತೇ? (ಗಾದೆ). [ ಸಂ. ನರ್ಮದಾ ]

**ನರ್ಮದ್ಯುತಿ** (ನಾ). ೧. ಸಂತೋಷಕರವಾದ ಬೆಳಕು : ನಿರ್ಮಲಜಲಕಲನಾದಾಹ್ಲಾದಿನಿ ನವಶಶಿನರ್ಮದ್ಯುತಿಸಂವಾದಿನಿ ಗಂಗೆ ತರಂಗಿಣಿ ಮಂಗಳ ಪೆರೆಯೆ (ಗತೀಶ. ೧೫-೩೮೦). ೨. [ಕಾವ್ಯವಿ] ನಾಟಕವೇ ಮೊದಲಾದ ರೂಪಕಗಳಲ್ಲಿ ಇರಬೇಕಾದ ಅರುವತ್ತುನಾಲ್ಕು ಸಂಧ್ಯಂಗಗಳಲ್ಲಿ ಒಂದು ; ಪ್ರತಿಮುಖಸಂಧಿಯಲ್ಲಿ ಆರನೆಯ ಅಂಗ ; ಪರಿಹಾಸದಿಂದ ಹುಟ್ಟಿದ ಧೈರ್ಯ ಅಥವಾ ಸಮಾಧಾನ, ದೋಷವನ್ನು ಮುಚ್ಚಲು ಬಳಸುವ ವಾಕ್ಯ. [ ಸಂ. ]

**ನರ್ಮಲಿ** (ನಾ). ಒಂದು ಬಗೆಯ ಗಿಡ : ಇಬ್ಬದಿಯ ಅಡಸೋಗೆ, ನರ್ಮಲೀ ಗಿಡಗಳ ಬೇಲಿಗಳಿಂದ ಚೆಲ್ಲಿಗೆದ್ದ ಯ ಬಾಳಕ ಸುಟ್ಟ ವಾಸನೆ ಮೂಗಿಗೆ ಬಡಿಯಿತು (ಮೂರುದಾ. ೯೦). [ ? ]

**ನರ್ಮವಚನ** (ನಾ). ವಿನೋದದ ಮಾತು,-ನುಡಿ : ನಾರಿಯರ ನರ್ಮವಚನಕ್ಕೆ ನಗುವ ಮುಂದಿರವಂದದಿ ಕಾಡ ದೇವು ಹೂವಪ್ಪುದೇ (ಸಮ್ಯಕ್ತ್ವ. ೫-೬೬). [ ನರ್ಮ₁ + ವಚನ ]

**ನರ್ಮಸಖ** (ನಾ). = ನರ್ಮಸಚಿವ : (೩). [ ಸಂ. (ನರ್ಮ + ಸಖಿ + –) ]

**ನರ್ಮಸಚಿವ** (ನಾ). ಅರಸನ ಶೃಂಗಾರ ಮತ್ತು ವಿನೋದದ ಕ್ರೀಡೆಗಳಲ್ಲಿ ಜೊತೆಯಲ್ಲಿರುವವನು,-ಸಹಾಯಕ; ವಿದೂಷಕ ಮೊದಲಾದವರು; ಆಪ್ತಸಚಿವ ; ಅಂತರಂಗದ ಸಹಾಯಕ : ಭೀಮಸೇನನುಮತದೊಳ್ ನರ್ಮಸಚಿವನುಂ ಪರಿಹಾಸಕೇಳೀಶೀಲನುಮೆನಿಸಿದ ವಿದೂಷಕನೆಂದುಂ (ಗದಾಯು. ೨-೯ ವ) ಅವನಿಪತಿ ದಿನಪ್ರಥಮಯಾಮದೊಳ್ ನರ್ಮಸಚಿವ [illegible] ಮಂಗಳಗಾಯನೀಜನಧ್ರುವಗೀತಮನಾಲಿಸುತ್ತು [illegible] (ಪಾರ್ಶ್ವ. ೫-೩೯). ಅಂತವರ್ ನರ್ಮಸಚಿವರಾತಿಚೈಯುಂ [illegible] (ಕುಂರಾಮಾ. ೧೨-೫೧ ವ) : ನರ್ಮಸಚಿವ [illegible] (ಚಂದ್ರಪ್ರ. ೭-೮೩ ವ) ; ನರ್ಮಸಚಿವರ [illegible] . . . ಆಗಿ ನಡೆತರ್ಪಾಗಳ್ [illegible] ಅವರು ನಮ್ಮಾಜನ ಅಂತರಂಗದ ಮಿತ್ರನೂ ನರ್ಮಸಚಿವನೂ ಆಗಿದ್ದ [illegible] ; ಗೋವಿಂದಭಟ್ಟ, ಗಾಂಧರ [illegible] ಅರ್ಪಿತ ರೆಕಾರ್ಡ್ಕಾಪರ್ (ಲೇಖಕ 11, [illegible]). [ ಸಂ. ]

**ನರ್ಮಸಹಾಯ** (ನಾ). = ನರ್ಮಸಚಿವ : [illegible] ತತಿಗಳ್ ಬಳಸುವವೊಲೆಳಸಿ ಬಳಸಿದರಂತಾ ಕ್ಷಿತಿಪತಿಸುತನಂ ವಿಟಪಂಡಿತ ನಟಪರಿಹಾಸಕಾದಿ ನರ್ಮಸಹಾಯರ್ (ಅಧನೇ. ೯-೦೩೩). [ ನರ್ಮ₁ + ಸಹಾಯ ]

**ನರ್ಮಾಲಾಪ** (ನಾ). ವಿನೋದದ ಮಾತು : ನಗೆನುಡಿ : ಪಲವುಂ ನರ್ಮಾಲಾಪಂಗಳಿಂದವೆ ಸುಖಿಯುಮಾನಸ್ವಾಂತನಾಗಿ ರಾಜಾಧಿರಾಜಂ ಪೋಷಿಸಿದಂ (ಕಾದಂಬ. ೧೧೭). [ ಸಂ. ]

**ನರ್ಮೋಕ್ತಿ** (ನಾ). = ನರ್ಮಾಲಾಪ : ಪರಿಪರಿಯ ನರ್ಮೋಕ್ತಿಗಳ ಬಂಧುರ ವಿಹಾರಂಗಳನು ನೆನೆಯುತಿರಬಹುದಲ್ಲದೆ ತಾಳದು ಕೃಷ್ಣಾತ್ಮ ಭಾವನೆಯು (ನಿಧಾಗ. ೧೧ ೨೬-೨೪). [ ಸಂ. ]

**ನರ್ವಲ್** 'ನಿಱುವಲ್' ನೋ.

**ನರ್ವಾಳಿ** (ನಾ). ಒಂದು ಬಗೆಯ ಗಿಡ : ನರ್ವಾಳಿ, ಕಿರಿಚಳ್ಳಿ (ವೃಕ್ಷಗಿ. ೨೪-೪೫೪). [ ? ]

**ನರ್ಸ್**, ನರಸು, ನರ್ಸು (ನಾ). ರೋಗಿಗಳಿಗೆ ಆರೈಕೆಮಾಡುವ ದಾದಿ ; ದಾಯಿ : ನಮ್ಮ ಆಫೀಸಿನಲ್ಲಿ ಕಂಪೌಂಡರ್, ಅಕೌಂಟೆಂಟ್ . . . ನರ್ಸ್ ಕೂಡಾ ನಾನೇ ನಾನು (ಸೀತಾರ. ೯೨) ; ಗುಲಾಬಿಯಂಥ ಚಂದದ ನರ್ಸ್ ಇದ್ದಾಳಾದರೆ ಅವಳನ್ನಾದರೂ ನೋಡಿ ಠಾಯಿಲೆಯ ಜನ ಬಂದಾರಲ್ಲ ? (ಜಾರುದಾ. ೧೮೦). ನರಸು: 'ನರಸಮ್ಮ' ಪರಾ. ನರ್ಸು: ಓರ್ವ ನರ್ಸಿನ ಸಹಾಯದಿಂದ ಪರೀಕ್ಷೆ ನಡೆಯಿಸಿದ ಡಾಕ್ಟರು .... ಗಾಬರಿಯ ಧ್ವನಿಯಲ್ಲಿಯೇ ಹೇಳಿದರು (ಸಮಜೀ. ೧೦೦೮). [ ← ಇಂ. Nurse ]

**ನರ್ಸು** 'ನರ್ಸ್' ನೋ.

**ನಲ್** (ಗು). ೧. ಒಳ್ಳೆಯ ; ಉತ್ತಮವಾದ ; ಶ್ರೇಷ್ಠವಾದ : "ನಲ್ಲಿಂದೊಳ್ಳಿತು"(ಶಬ್ದಾನು. ೧೦೦). 'ನಲ್ಗಣ', 'ನಲ್ಗುದುರೆ', 'ನಲ್ತಪ' ಪರಾ. ೨. ಅಂದವಾದ ; ಸೊಗಸಾದ ; ಮನಸೆಳೆಯುವ : "ನಲ್ ನಯಕ್ಕೆಸಕವುದು" (ಶಶರ. ೧೨೫). 'ನಲ್ಗಾಡಿ', ನಲ್ಬಪ್ಪನೆ', 'ನಲ್ವೆಣ್³' ಪರಾ. ೩. ಹಿತವಾದ ; ಪ್ರಿಯವಾದ ; ಪ್ರೀತಿಯ. 'ನಲ್ನುಡಿ₂', 'ನಲ್ವರಕೆ', 'ನಲ್ವಾತು' ಪರಾ. ೪. ಸವಿಯಾದ ; ಮಧುರವಾದ. 'ನಲ್ಗಂಪು', 'ನಲ್ಗಳಲ್', 'ನಲ್ಗುಟುಕು', 'ನಲ್ದಂಬುಲ', 'ನಲ್ಲಂಜಿಸು' ಪರಾ. ೫. ಹರಿತವಾದ ; ತೀಕ್ಷ್ಣವಾದ. 'ನಲ್ಲಂಬು' ಪರಾ. ೬. ಅತಿಶಯವಾದ ; ಹೆಚ್ಚಾದ. 'ನಲ್ಸೊಗ' ಪರಾ.

ನಲ್ಲದು = ಒಳ್ಳೆಯದು : ನಲ್ಲದು ನನ್ನುಮನ್ ನನ್ನಿಗ್ಗತನಮುಮನ್ ಬಿಟ್ಟು ಕಳೆಯೇಗಳ್ (ಅಂತಿಗೂ. ೫-೮೦). ನಲ್ಲವರ್ = ಒಲಿದವರು ; ನಲ್ಲರು : ಅಂತೆ ಮಾತಾಡುವ ರಾಜಕೀರ ಒಲವಟ್ಟಿಸಲಾಜಿದಗಲ್ದು ಪೂವಿನಂಬಾಡೆ ಲತಾವನಂಬುಗುವ ನಲ್ಲವರಲ್ಲಿಯ ನಂದನಂಗಳೊಳ್ (ಎಇ. XIII, ೪೪-೪೬ ; 1112 ; ಶಾಸಮಂ. ೨೦೬ ನೋ). ನಲ್ಲವರ್ = ಪ್ರಿಯೆ ; ನಲ್ಲೆ : ಅಳುರ್ವತನುಸಂತಾಪಕ್ಕುಳ್ಳಿಕ್ಕೆ ನಲ್ಲಪಳಂಬುಕೆಯ್ವುಳವಸಲೆಯಂ ಕೇಳೀಶೈಲಂಗಳಂ . . . ಸೆಟೆಗೆಯ್ದನಾಕುಳಮನೆ ಕುಳಿರ್ಕೊಡಿತ್ತಾಗಳ್ ಮನಂ ಮನುಜೇಂದ್ರನಾ (ವರ್ಧಪು. ೪-೬೨). ನಲ್ಲಾತ = ಸ್ವಾಮಿ; ಒಡೆಯ: ನಲ್ಲಾತಂ ಶ್ರೀಮತ್ ಸೋವಯ್ಯ (ಎಕ. XI, ಚಿತ್ರದು. ೪೯-೭೦ : 947); ಆನೆವೆಡೆ(ಡ)ಙ್ಗಂ ಮದಗಜಮಲ್ಲಂ ಥಾಲಕೆ ನಲ್ಲಾತಂ ಶ್ರೀ ಕನ್ನರದೇವನ ರಾಜ್ಯಂ (ಇಆ. XII, ೨೫೭-೩; 951); ಯಸಕ್ಕೆ ನಲ್ಲಾತಂ ಶ್ರೀಕೊಟ್ಟಿಗದೇವನ ರಾಜ್ಯಂ (ಸೌಇಇ. XI-I, ೪೩-೪; 970) ; ವರಬಳಧೂರ್ತ್ತಂ ಕೃತಯುಗ ಚರಿತನಾಳ್ಗೆ ನಲ್ಲಾತಂ (ಸೌಇಇ. XI-I, ೯೨-೭ : 1064).

[ ದೇ.೩ ತಮಿ. ಮಲ. ನಲ್; ತುಳು. ನಲ್, ನಲು ; ಕೊಡ. ನಲ್ಲ; ಗೊಂಡಿ. ನೆಲಾ ]

**ನಲ₁** (ನಾ). ೧. ನಲಿವು ; ಸಂತೋಷ. 'ನಲಂದಳೆ', 'ನಲವೆಚ್ಚು' ಪರಾ. ೨. ಪ್ರೀತಿ ; ವಂಪಂತೆ. 'ನಲವರಕೆ' ಪರಾ.

[ ದೇ.೩ ತಮಿ. ನಲ; ಮಲ. ನಲ = ಒಳ್ಳೆಯತನ, ಸೌಂದರ್ಯ; ತುಳು. ನಲ = ಒಳ್ಳೆಯ ]

**ನಲ₂**, ನಳ₁ (ನಾ). ೧. ಒಂದು ಬಗೆಯ ಜೊಂಡು,-ಹುಲ್ಲು ; ಲಾಳದ ಕಡ್ಡಿ ಹುಲ್ಲು. ೨. ಕಂಪು; ವಾಸನೆ. ೩. ನಿಷಧದೇಶದ ಒಬ್ಬ ಪ್ರಸಿದ್ಧ ರಾಜ; ವೀರಸೇನನ ಮಗ; ದಮಯಂತಿಯ ಗಂಡ. ೪. ರಾಮಾಯಣದಲ್ಲಿ ಒಬ್ಬ ಕಪಿನಾಯಕನ ಹೆಸರು ; ಸುಗ್ರೀವನ ಸೇನಾಪತಿ. ೫. ಅರುವತ್ತು ಸಂವತ್ಸರಗಳಲ್ಲಿ ಐವತ್ತನೆಯದು. ನಳ₁ : ೩. ಹರಿಶ್ಚಂದ್ರ ನಳ ಪುರು . . . ಚಕ್ರವರ್ತಿಗಳಕ್ಕವರ್ಗೆ ಪುಣ್ಯಶ್ಲೋಕರೆಂಬ ನಾಮಂ (ಪುಂಗರಾ. ೭೮-೨); ನಳನ ನಹುಷನ ಶಾಲಿಹೋತ್ರನ ಬಲುಮೆಗಳು ಕಿಚುದೆಂಬ . . . ಹಯಪಾಶ್ರೆಢಪ್ರತಾಪರು ಹೊಳೆವ ಮಕುಟದ ಸಾಲುಗಳ ಲೊಪ್ಪಿದರು ರಾವುತರು (ಕುವ್ಯಾಉ. ೮-೪೦) ; ಏತಚ್ಛಾಯಾಸವಿವು ಜಗದ್ವಿಖ್ಯಾತನಲ್ಲಾ ರಾಯರಲ್ಲಿ ನಳನಾತಗಾದಾಪತ್ತು ಬಲ್ಲೆ ಕೇಳಿ ಪೂರ್ವದಲಿ (ತೊರರಾ. ೩-೨-೧೩). ೪. ಒದೆದ ಕೆಡಹಿದ ನಳನ ಮೈಂದನ ಸದೆದ ನೀಲನ ತುಳಿದ (ಕೌಶಿರಾ. ೨೫-೨೨); ಇಟ್ಟ ಗಿರಿಗಳ ಒಡಿಹಿಡಿದು ನಳನೊಟ್ಟಿದನು ಮೆಟ್ಟಿದನು ಕಟ್ಟಿದನಿಟ್ಟಣಿಸಿ ಬಹ ಗಿರಿಯ.ನಾ ಬಳಸಲಿಸಿ ಬಹ ಗಿರಿಯ (ತೊರರಾ. ೬-೫-೨೨) : ನಳ ನೀಲ ಅಂಗದ ಜಾಂಬವಂತ ದಳಪತಿಯಧಿಕ ಸುಗ್ರೀವ ಬಲವಂತ (ಪುರಂದ. ೩-೮೭-೫). ೫. ಮತ್ತಮಾ ವರುಷವೇ ಪ್ರಭವ . . . ನಳ . . . ಅಕ್ಷಯವೆಂದರುವತ್ತು ತೆಱನಾಗಿಹುದು (ವಿವೇಕ. ೩೨೧). ೬. ಒಂದು ಬಗೆಯ ವಿಮಾನು ; ಕಿರುವಿಮಾನು : ಬಕ ಮರಾಳ ರಥಾಂಗ ಸಾರಸನಿಕರ ಪುಳಿನಸ್ಥಳದೊಳಿರೆ ನಳಮಕರನಕ್ರಜಳೂಕ ಮಡುಗಡಲೊಳಗೆ ಸಂಚರಿಸೆ (ಅಕ್ರೂರ. ೫-೨೬). 'ನಳವಿಮಾನ' ಪರಾ. ೭. [ಜ್ಯೋತಿ] ಒಂದು ಬಗೆಯ ಯೋಗ. 'ನಳಯೋಗ' ಪರಾ. [ ಸಂ. ]

**ನಲಂದಳೆ** (ಕ್ರಿ). ಸಂತೋಷಪಡು ; ಸಡಗರಿಸು ; ಸಂಭ್ರಮಿಸು : ಅಕಂಪನೃಪಂ ಅಲಘುಪ್ರಿಯದಿಂದಿದಿರ್ವಂದು ನಲಂದಳೆದು ಪೊಳಲನೆಯ್ದಿಸಿ . . . ಸಕಲಸನ್ಮಾನಂ ಮಾಡಿದನು (ಜಜುಕಾ. ೪-೪೬). [ ನಲ₁ + ತಳೆ₁ ]

**ನಲಕ**, ನಳಕ (ನಾ). ೧. ದೇಹದ ಉದ್ದವಾದ ಎಲುಬು,-ಮೂಳೆ. ೨. ಕೈಯ ಅಥವಾ ಕಾಲಿನ ಎಲುಬು ; ಶಾಖಾಸ್ಥಿ. ನಳಕ : ೨. "ಕೆಯ್ಯ ಕಾಲ ಎಲ್ಲು ನಳಕಯೆಂಬುದು" (ಹಲಾಯು. ೧೦೪-೦೨) ; "ನಳಕಮೆನೆ ಶಾಖಾಸ್ಥಿಯೆಂದೆನಲು ಕೈಕಾಲ ಯೆಲುವು" (ಮಂಗರಾ. ೧೦೭-೭). [ ಸಂ. ]

**ನಲಕುಪ್ಪು** (ನಾ). (?) : ಮೃಗಶಿರೆ ನಲಕುಪ್ಪಿನ ಹಾಗೆ ೩ ಆದ್ರೆ ಹವಳದ ಹಾಗೆ೧ (ಭಾಸ್ಕರ. ೬೦-೨). [ ? ]

**ನಲಕೂಬರ**, ನಳಕೂಬರ (ನಾ). ಕುಬೇರನ ಮಗ. ನಳಕೂಬರ: ಪೆಜತೇನುಮಂ ಒಗೆಯದೆ ನಳಕೂಬರನೊಳ್ ಕೂಡಿ ಸುಖದಿರೆಂದಾಕೆಯ ದುಷ್ಪರಿಣಾಮಮುಮಂ ಪತ್ತುವಿಡಿಸಿ (ಪಂರಾಮಾ. ೧೦-೧೯೫ ವ) ; ಸುರರಮಣ ನಳಕೂಬರಾಧಿಕಸರಸಕಾಮುಕರಂ ಸಮಸ್ತಾಮರರನೆಲ್ಲರ ಬಗೆಯದಾವಿಷ ಸತಿಯರು ಸಹಸ್ರ ನೆರೆದು ನಿನ್ನಂ . . . ಮನಸಿಜಸುಖಾಮೃತಶರನಿಧಿಯೊಳೋಲಾಡಿಸುತ್ತಿರಲ್ (ಬಸಪು. ೪೧-೧೮) : ಉರ್ವ ನಳಕೂಬರ ಜಯಂತಾದಿ ಸುರತನುಜರುರ್ವರೆಗದೇಕೆ ಬಹರು (ಕೃಮಿಥಾ. ೩೦-೨೦).

[ ಸಂ. ]

**ನಲಕೆ** (ನಾ). ಒಂದು ಬಗೆಯ ಸುಗಂಧದ್ರವ್ಯ: (೬). [<ಸಂ. ನಲಿಕಾ]

**ನಲಗು** 'ನಲಂಗು₁' ನೋ.

**ನಲದ** (ನಾ). ಲಾಮಂಚ ; ಉಶೀರ. [ ಸಂ. ]

**ನಲಭರಿತ** (ನಾ). ನಲಿವಿನಿಂದ ಕೂಡಿದುದು ; ಸಂತೋಷಭರಿತವಾದುದು ; ಸುಖಮಯವಾದುದು : ಆರರೆ ನೆಲ ನಲಭರಿತವಮೃತದ ಶರಧಿ ಸಾವಿರವಪ್ಪವಂಗಡಿ ಮೆಚಿವ ಗಣೇಶಭವನ ಕೋಟಿಯ ಸುತ್ತ ಉದ್ಯಾನ (ಕೌಶಿರಾ. ೧-೨೩). [ ನಲ₁ + ಭರಿತ ]

**ನಲಮೀನ**, ನಳಮೀನ (ನಾ). ಒಂದು ಬಗೆಯ ಮೀನು ; ಚಲಿಚಿಮ : "ನಲಮೀನ ಚಲಿಚಿಮ ಎಂದೊಡೆ ಸಿಸಿಲು, ಚಳಿಯ ಮೀನೆಂದು ಎಂಬರು" (ನಾಚಿರಾ. ೬). ನಳಮೀನ: "ನಳಮೀನಃ, ಚಿಲಿಚಿಮಃ—ಈ ೨ ಕಿಱುಮೀನ್" (ಹಲಾಯು. ೧೦೮-೩೭) : "ಚಿಳಿಚಿಮವೆನಲು ನಳಮೀನವೆನೆ ಕಿಱುಮೀನ ಪೆಸರೆನಿಸ್ಕುಂ" (ಮಂಗರಾ. ೧೨೦-೭). [ ಸಂ. ]

**ನಲವತ್ತು** 'ನಾಲ್ವತ್ತು' ನೋ.

**ನಲವರಕೆ** (ನಾ). ಪ್ರೀತಿಯಿಂದ ಮಾಡಿದ ಆಶೀರ್ವಾದ : ಅರಸಿ ನಲವರಕೆಯಿಂದಂ ಪರಸುತ್ತಿಂದೆನ್ನ ತಂದೆ ಬಂದನೆನುತ್ತಂ (ಕಾದಂಪೂ. ೪೯೯೩; ಕುಮಾರನನಜಿತಸೇನಮಹಾದೇವಿ ನಲವ[ಪಾಠಾಂ. ನಲ್ವ]ರಕೆಯಿಂ ಪರಸಿ

ಮೋಹರಸಪರವಶತೆಯಿಂ . . . ಅಬ್ಬಿ (ಚಂದ್ರಪ್ರ. ೬-೯೦ ವ): ನಿಜಾಂಘ್ರಿಗಳನರ್ಚಿಸುವ ಕನ್ಯಾರತ್ನಮುಂ ನಿಜಕುಲಕ್ಕಿದುವೆ ಚೂಡಾರತ್ನಮೆಂದು ನೋಡಿ ಪಾರಯ್ಸಿ ಪಲವುಂ ನಲವ[ಪಾಠಾಂ. ಪಲವಂ ನಲ್ವ]ರಕೆಯುಂ ಪರಸಿ (ವರ್ಧಪು. ೫-೪೭ವ): ನಿಜಜನನೀಜನಕರಿರ್ವೆಡೆಗೆ ರಮಣಿಮೆರಸೇಳ್ತಂದು ಪೊಡಮಟ್ಟು ನಿಂದಾಗಳ್ . . . ಇರ್ವರುಂ ನಲವರಕೆಯಿತ್ತು ಸಂತೋಷದಿಂ ಬರಿಸಿ ಕುಳ್ಳಿರಿಸಿ (ರಾಜಶೇ. ೯-೪೩ ವ): ನಲವರಕೆಯಿತ್ತು ಸಂತೋಷದಿಂ ನಡೆ ನೋಡಿ ನಲಿದು (ಕುಮಾಪು. ೭-೩೧೪). [ ನಲ$_1$ + ಪರಕೆ$_1$ ]

**ನಲವರಿ** (ಕ್ರಿ). ಸಂತೋಷಗೊಳ್ಳು ; ಆನಂದಿಸು : ಭರದಿಂ ತಲೆಯೆತ್ತಿ ಯುರ್ಬಿ ನಭಮುಂ ನುಂಗಲೊಡರ್ಚಿದಂತೆ ಮೇಘಮುಂ ನೋಡಿ ದೆಸೆದೆಸೆಯುಂ ಪಾಸಿಸಿ ನಲವರಿದು ಪ್ರಾಣಿಗಳೊಳ್ ತನಗದಿರದದಿರಾಂಪರೊರ್ವರುಮಂ ಕಾಣದೆ (ಪಂಚತಂ. ೪೬-೭). 'ನಲಿವರಿ' ಪಾಠ.

[ ನಲ$_1$ + ಪರಿ$_2$ ]

**ನಲವರಿಕೆ** (ನಾ). ಅಭಿನಂದನೆ: "ಅಭಿನಂದಿಸುವುದು . . . ನಲವರಿಕೆ" (Congratulation. ಇಂಕನಿ) ; ಈಗೆಲ್ಲರೂ ನಲವರಿಕೆ ಸಲ್ಲಿಪರು (ಮೂರುನಾ. ೧೧೮-೬೫೦). [ ನಲವು + ಅರಿಕೆ (<ಅಱಿಕೆ) ]

**ನಲವಾನ್** (ಕ್ರಿ). ಸಂತೋಷವನ್ನು ತಳೆ ; ಆನಂದಿಸು ; ಪ್ರಸನ್ನಚಿತ್ತನಾಗು : ಏಂ ತಾಳ್ದುದೋ ಚೆಲ್ವನೀ ದೇಶಮೆಂದು ನಲವಾಂತು ಮುಂದಳೆಯುತಿರೆ (ಜೈಮಿಭಾ. ೩-೧೩). [ ನಲವು + ಆನ್$_1$ ]

**ನಲವು** (ನಾ). ೧. ಹಿಗ್ಗು ; ಸಂತೋಷ ; ಸಡಗರ : "ನಲವೆಂದೆನೆ ಸಂತೋಷಂ" (ಭಾರನಿ. ೩೩); ನಲವಿಂ ಕೃತಾರ್ಥಭಾವವನೆಯ್ದುತಿರೆ ಕಂಡು ಚಲಿಸದದಿರದೆ ಬೆನ್ನನೊಡ್ಡಿಕೊಂಡಿರೆ ಕಂಡು (ಸೌದರ. ದೀ. ೭೪-೧೩) ; ಕೊಬ್ಬಿ ನಲವಿಂದ ಮಡಲಿಱಿದಡಸಿ ಬೆಳೆದು (ಸಿದ್ಧರಾ. ೩-೨೩) : ನಲವಿಂ ಪಂದಿಯ ಬೇಂಟೆಯಾಡಿ (ಉದ್ಭಟ. ೨-೬೯) ; ನೆರೆದೋಲಗಂ ನಲವು ಕೈಮಿಗೆ ತನ್ನನೆ ನೋಡುತಿರ್ಪಿನಂ (ಕಬ್ಬಿಕಾ. ೮೨) ; ಫಲವ ತಲೆಯಲಿ ಹೊತ್ತು ಬೇಗದಿ ನಲವು ಮಿಗೆ ನಡೆತಂದು (ಕುಮಾಆ. ಓರಿಇ. ೪-೧೬) : ಪರಿಮಳದಲರ ಪನ್ನೀರಿನಲಿ ತವಕದಿ ನಲವು ಇಂಗಿದ ಸತಿಯನುಪಚರಿಸಿದರು ಪಲತೆಱದಿ (ನಳಚ. ೦-೩೯) : ಅರ್ಥಲಾಲಿತ್ಯವೆನುವ ಸತೀತ್ವವಿರದೊಡನುಗೊಳಿಸುವಳೆ ಕವಿತಾರಮಣಿ ರಸಿಕನಿಗೆ ನಲವು ? (ಗೀವಿಂ. ೨೨-೨೪). ೨. ಪ್ರೀತಿ ; ಆದರ : ಸಿರಿ ನಲವಿಂದಮಿರ್ಪ ನೆಲೆ ಕಣ್ಗಳ ಪರ್ವಮೆನಿಪ್ಪ ಪಂಕಜೋತ್ಕರಮುಮನಿಂದುಮಂಡಲಮುಮಂ ಮೊದಲೊಳ್ ಸಮೆದಬ್ಜಜಂ ಮನೋಹರಮೆನೆ ಮಾಡಿದೀ ಮೊಗದ ಪೋಲ್ವೆಗೆ ಮುನ್ನೆಗಟಲ್ ತಗುಳ್ದು ಬಿತ್ತರಿಸಿದು (ಕಾದಂಪೂ. ೭೪೩) : ಸಕಲಬುಧಸಮಿತಿ ನೆಱೆ ಕೊಂಡುಕೊನೆಮು ನಲವಿಂದೆ ಕೀರ್ತಿಸುತ್ತಿರೆ ಮುದದಿಂ . . . ಕಾವ್ಯಾವಲೋಕಮಂ ವಿರಚಿಸುವೆಂ (ಕಾವ್ಯಾವ. ೩) ; ಯತಿಪಸಮಂತಭದ್ರನನಿಳಾ (ವಳಯಂ) ನಲವಿಂದೆ ಕೀರ್ತಿಕುಂ (ವರ್ಧಪು. ೧-೧೨) ; ನಲ್ಲನ ನಲವಿಂ ನಡೆ ನೋಡಿ (ಉದ್ಭಟ. ೨-೭೭) : ಕಂದುಮೋಱೆಯ ರಾಯನನು . . . ಆಲಿಂಗಿಸುತ ನಲವಿಂದ ಮನ್ನಿಸಿ ತಂದನರಮನೆಗುಚಿತವಚನದಲಿ(ಕುಮಾಭೀ. ೧-೦೭). ೩. ಚೆಲುವು; ಸೌಂದರ್ಯ ; ಮನೋಹರತೆ : ಸುಲಲಿತಮಹನಾನಾವರ್ಣಜ್ಝರ ಪಲವಿಧಮಾಂತ ಕೇರಿಗಳು ನಲವಿಂದ ಮೆಱೆದಿಹುವು (ಕೆಂನವಿ. ೨-೭೪). [ ನಲ$_1$ + – ವು./ತಮಿ. ನಲವು; ತೆಲು. ನಲುವು ]

**ನಲವುಗೆಡು** (ಕ್ರಿ). ಸಂತೋಷಗುಂದು ; ಹಿಗ್ಗು ಇಲ್ಲವಾಗು : ಎನ್ನೋಪಳಾ ಕಂದಿದೊಂದಿರವಾ ಚಿಂತಿಸುವಂದವಾ ನಲವುಗೆಟ್ಟಾಕಾರವಾ ಬಾಪ್ಪದೊಳ್ ಪೊರೆದಾಲೋಕನವಾ ಬಟಲ್ವಧರವಾ ಸುಯ್ಯೊಂದು ಪಾಂಗಾಸ್ಮರಾತುರಮುಂ ತಾಳ್ದುವ ಭಂಗಿ ಒಂಗಿರದದೇಂ ಬೆಚ್ಚತ್ತೊ ಮಚ್ಚಿತ್ತದೊಳ್ (ಜಗವಿ. ೦೭-೧೩೦) ; ಮುಂದುಗೆಟ್ಟೆರ್ದೆಯ ಗುಂಡಿಗೆಗಳೊಡೆದರೆಬರಾಚರಿಸಿದರ್ ನಡುಗಿದರ್ ನಲವುಗೆಟ್ಟಸಿಬರು (ಚಬಸ್ಪು. ೩೦-೩೭). [ನಲವು+ಕೆಡು$_1$]

**ನಲವುದಾಳು** (ಕ್ರಿ). ಸಂತೋಷವನ್ನು ತಾಳು ; ಪ್ರಸನ್ನತೆಯನ್ನು ಹೊಂದು : ಭೂಸುರರಿಗೆ ನಿತ್ಯದಾನವ ಮಾಡಿ ನಲವುದಾಳಿದ ಭೂಮಿಪಾಲ (ಕೆಂನವಿ. ೨೨-೭೭). [ ನಲವು + ತಾಳು$_1$ (<ತಾಳ್$_1$) ]

**ನಲವುಮತ್ತು** (ನಾ). ಆನಂದದ ಅಮಲು ; ಸಂತೋಷದ ಗುಂಗು : ಪರಮನಿತ್ತು ನಲವುಮತ್ತು ನಮಗೆಂದಿಗು ಇರೆ ಹರಸೈ ಗೋಕುಲಾನಂದನಾ (ಗೋಕುನಿ. ೬೨). [ ನಲವು + ಮತ್ತು$_1$ ]

**ನಲವೆ** (ನಾ). ಸಂತೋಷಚಿತ್ತೆ ; ಹರ್ಷಿತೆ : ಸುಣ್ಣನಿಯ ನೂತನೆ ಭಾಳದ ಶ್ರೀಮತಿ . . . ನಗೆಗಣ್ಗಳ ನಲವೆ ನಾಸಿಕದ ನೀಱ (ಉದ್ಭಟ. ೫-೫೩ ವ).

[ ನಲವು + – ಎ$_2$ ]

**ನಲವೆಚ್ಚು** (ಕ್ರಿ). ಹಿಗ್ಗು ಹೆಚ್ಚು ; ಸಂತೋಷವು ಅಧಿಕವಾಗು : ಶಬರಿ ಮುದದಿಂ ಗಾಢಪರಿರಂಭಣಂಗೆಯ್ದು . . . ಬೇಂಟೆಯಂ ನೋಡುತ್ತ ನಲವೆಚ್ಚುತಂ ಪೋದಳು (ರಾಘಚ. ೧೭-೭೧).

[ ನಲ$_1$ + ಪೆಚ್ಚು$_1$ (<ಪೆರ್ಚು$_1$) ]

**ನಲವೆರೆ** (ಕ್ರಿ). ಪ್ರೀತಿಯನ್ನು ಸುರಿಸು ; ಮಮತೆಯನ್ನು ತೋರು : ಶಿವದ ನೆಲೆಯನು ಬಲ್ಲ ವಿಪುಲಮತಿಗಳ ತಡೆದ ಧ್ಯಾನಬಿಂಬ, ನೆನೆದೊಡನೆ ಕೊಳೆ ತೊಳೆದು ನಲವೆರೆದು ನಿಲ್ಲನ್ನ ಮನದ ತುಂಬ (ಮಾಲದೀ. ೪೦-೦೦).

[ ನಲವು + ಎರೆ$_1$ (<ಎಱೆ$_1$) ]

**ನಲವೇರು** 'ನಲವೇಱು' ನೋ.

**ನಲವೇಱಿಸು** (ಕ್ರಿ). ಸಂತೋಷವನ್ನು ಹೆಚ್ಚಿಸು ; ಹರ್ಷಗೊಳಿಸು : ಕಂದಾವರೆಗಳ ಮುಗಿಸುತ ಚಾಳಕವೃಂದವ ನಲವೇರಿ[ಱಿ]ಸುತ ಚಂದ್ರಕಾಂತವ ಕರಗಿಸುತಾಗ ಪರಿಪೂರ್ಣೇಂದುವದನೆಯರ್ಯೆದಿದರು (ಕೆಂನವಿ. ೨೧-೭೬). [ ನಲವು + ಏಱಿಸು ]

**ನಲವೇಱು, ನಲವೇರು**(ಕ್ರಿ). ಅಧಿಕವಾದ ಸಂತೋಷವನ್ನು ಹೊಂದು : ಉದಯಗಿರೀಂದ್ರಮಾನಿಸನೇಱೆ ಸರೋಜಸಮಿತಿ ನಲ[ಪಾಠಾಂ. ಯು]ವೇಱುವ ಪೊಲ್ (ಚಂದ್ರಪ್ರ. ೦-೨) ; ಹೊಸಪರಿಯ ಬಿರಿಮುಗುಳ್ಗಳಿರೆ ಬೇಗಿ ನಲವೇಱಿ ಮಲ್ಲಿಗೆಯರಳ್ಗಳಂ ಮನವಾರೆ ತಿಱಿಯುತಂ (ಪುಷ್ಪರ. ಪ. ೫೨೪-೧೮); ಆಗಲದೆ ನೋಡಿನೋಡಿ ನಲವೇಱುವ ದೇವಿಯ ಭೂಪಚಕ್ರಿಯಾ ಸೊಗಯಿಪ ದೃಕ್ಚಕೋರಚಯಸೇವೆಗೆ ಮೆಚ್ಚಿ (ಕುಸುಮಾ. ೬-೮೩) : ದೇಗುಲಕೆ ನಲವೇಱಿ ನಡೆತಪ್ಪಾಗ (ಬಸಪು. ೨೭-೬) : ದಶರಥನಂದನರ ನಿರೀಕ್ಷಿಸುತ ನಲವೇಱಿದನು ಕಲಿಹನುಮ (ತೊರರಾ. ೬-೩೦-೧೬). ನಲವೇರು : ತೆಂಗಿನ ಗರಿ ತಲೆದೂಗಲಿ ಬಾಗಲಿ ಗಿಡಮರಗಳು ನಡ ನಲವೇರಿ (ಕಪಪು. ೬-೧೪೯). [ ನಲವು + ಏಱು$_1$ (<ಏಱ್$_1$) ]

**ನಲಾವು** 'ನಲ್ಲಾವು' ನೋ.

**ನಲಿ$_1$** (ಕ್ರಿ). ೧. ಕುಣಿ ; ನೃತ್ಯ ಮಾಡು : ಸುತ್ತಲುಂ ಪರಿವ ಜರಿವೊನಲ್ಗಳಿಂದೆತ್ತಲುಂ ನಲಿವ ಪೊಸನವಿಲ್ಗಳಿಂ (ಪಂಪಭಾ. ೩-೨೨) : ನಡುವಿರುಳವರ್ ನಾಟಕಂ ನಲಿದು ಮಱೆದೊಱಗಿರ್ದ ಸಮಯದೊಳ್ (ಪಂಚತಂ. ೨೭೪-೧) ; ಸರ್ವಾಂಗಸುಂದರಿ ವಿದ್ಯಾನಟಿ ನಾಟಕಂ ನಲಿಗೆ ಮತ್ಕಾವ್ಯಸ್ಥಲೀರಂಗದೊಳ್ (ಶಂಖಮಾ. ೧-೬). ೨. ಹಿಗ್ಗು ; ಸಂತೋಷಪಡು ; ಆನಂದಿಸು : ಉಲ್ಲಾಸಗೊಳ್ಳು : ತಾವರೆಯರಲೊಳ್ ಸರಸನಿಜಾಮೋದದೊಳೊಂದಿ ನಲಿದು ಮಕರಂದರಜೋವ್ಯಾಮುಗ್ಧದೊಳೀ ಮುಗುಳೊಳಮಾ ಮಾಟ್ಕೆಯನಜಿಸಿ ಸುಱಿವುದಳಿ ಕಲಕಲದೊಳ್ (ಕವಿರಾ. ೩-೮೭) : ಮೆಯ್ವೆರ್ಚಿ ತನ್ನಿನಿಯಂ ಬಂದೊಡೆ ನಲ್ಲಳೇಂ ನಲಿದಳೊ ನಾನಾವಿಳಾಸಂಗಳಿಂ (ಆದಿಪು. ೦೨-೪೩) : ಗಗನತಳಮೆ ಪಱಿದು ಬಿಟ್ಟುದೆನಿಪ ಬಹುತಟಾಕದಿಂ ಕುಕಿಲ್ವ ನಲಿವ ಕೋಕದಿಂ (ಪಂಪಭಾ. ೧-೫೮): ದೀನವೃದ್ಧದ್ವಿಜನಟಭಟಸಚ್ಚಕ್ರಯುಗ್ಮಂ ಸರುಗ್ಮಂ ನಲಿಯುತ್ತಂ ನೋಡೆ ತನ್ನಂ ಬೆಳಗುವನೆಳೆಯೊಳ್ಬೆಳ್ವಲಾದಿತ್ಯದೇವಂ (ಸಾಇಇ. XI-i, ೪೫-೦೭ : 980) : ಅರರೆ ಇಂದ್ರಾಣಿಯುತು ನಲಿದು

ಸೀಗುರಿಯಿಕ್ಕೆ (ಬಸರ. ೧-೧೩) ; ನಗುತ ನಲಿಯುತ್ತ ಹಾಡುತ್ತಾಡುತಾನಂದ ವೊಗೆಯುತಿರಲು (ಪದಕಾ. ೬-೪೪) ; ಮರುಳ್ಗಳ ತಂಡಂ ನಲಿವಂತೆ ಕೊಂದಂ (ಉದ್ಭಟ. ೪-೮೪) ; ದುಶ್ಶಾಸನಂಗುಬ್ಬರಿಸೆ ರೋಮಾವಳಿ ವಿಕರ್ಣಾದಿಗಳ ಮನ ನಲಿಯೆ (ಕುಮಾ.ಭ. ೧-೩೦). ೩. ಸಂತೋಷದಿಂದ ಸುಳಿದಾಡು ; ಲೀಲೆಯಿಂದ ಓಡಾಡು : ವಿಚರೀಜನಾನನ ನವಾಂಭೋಜಂಗಳೊಳ್ ಕಂಪನೀಂಟಿಕೊಳುತುಂ ನಂದನರಾಜಿಯೊಳ್ ನಲಿಯುತುಂ ತದ್ರಾಜಹಂಸಂ ನಿರಾಕುಳವಿಹಾರಾಟಿಕೆಗೆ ಪೊಣ್ಮುಗಳಿಂ ಸಂಸಾರಸಾರೋದಯಂ (ಆದಿಪು. ೧-೮೪) ; ಪೊಸಕೊಳಂಗಳೊಳೋಲಿದು ನಲಿವಂಚೆಯಿಕ್ಕೆಯಿಂ (ಶಿರುರ. ದೇ. ೧-೧೪) ; ಶಾರದೆಯ ನರ್ತಿಸುಗೆ ನಲಿದೊಲಿದೆನ್ನ ಜಿಹ್ವೆಯಲಿ (ಕುಮಾ.ಆ. ೧-೫) ; ಪೊಸಪೊಳಲ ರಮ್ಯೋದ್ಯಾನವೆಸೆದುದು . . . ನಲಿವ ಕಿನ್ನರಮಿಥುನದಲಿ ಮಿಗೆ ಗಳಹುವರಗಿಳಿವಿಂಡಿನಲಿ ಪಕ್ಕಳಿಪ ಕೋಗಿಲೆಗಳಲಿ (ತೊರವೆ. ೧-೯-೧೧) ; ತಾಯೆ . . . ನಲಿದೊಲಿದು ನರ್ತನಂಗೈಯೆನ್ನ ಜಿಹ್ವೆಯಲಿ (ಚತ್ರಾಂಗ. ೧-೯). ೪. ಮೆಚ್ಚು ; ಇಷ್ಟಪಡು ; ಒಲಿ : ದರ್ಪ್ಪ ವಿಷಯಂಗಳನೇಳಿಸಿ ಕಾಡಿಯಾಡಿ ಕಾಮಾರಿಯನಟ್ಟಿರ್ಪಲ್ಕೆ ನಲಿದಿರ್ಪ್ಪ ಮುನೀಶ್ವರನೀ ಧ್ರುವೇಶ್ವರ (ಸೌಇಇ. XI-1, ೯೬-೫೪ ; 1062) ; ಸಕಲಸೂರಿಗಳ ಪಾದಾರವಿಂದವ ನೆನೆದೀ ಕೃತಿಯನು ಮೇದಿನಿ ನಲಿಯೆ ಪೇಳುವೆನು (ಕಂನವಿ. ೧-೧೩) ; ಪೊಲುಸೆಯಿಂ ಕೆಸಿನ ಪೊಣಮನ್ ಮಣ್ ಪಾಡದಿರ್ಪ್ಯಾರುಮ್, ಅಱದಿರ್, ಅಱದೆ, ಪೂಱದೆ, ಬಯಸಿ ಮಾರ್ದ್ದು, ನಲಿದೆಱಪ ಪರ್ದಿಂಗೆ ಸವಿಯೆಂಡೆಯ ನಿಧಿಯಾಗೆ ಬಿಸುಟರ್ಕ್ಕೆ ಬಯಲೊಳ್ (ಅಂಕಗೂ. ೩-೩೫). ೫. ತೂಗು ; ಅಲ್ಲಾಡು ; ಸಂಚಲವಾಗು : ಅಲಗಣ್ಗಳಮದಗಂ ತೊದಳ್ನುಡಿಯ ತವಕಿಗಂ ನಲಿವ ಮೊಗಾಯ ನವನರ್ತನದ ಹಸನಿಗಂ (ಬಸರ. ೧-೧೫೦) ; ಶ್ರೀವಧು ಮುತ್ತಿನೆಕ್ಕಸರದಂತುರದೊಳ್ ನಲಿವಂತು ವಿಕ್ರಮಶ್ರೀವಧು ಬಾಹುಪೂರಕದ ಪೊಲ್ ಭುಜದೊಳ್ ನಲಿವಂತು . . . ಪಾಳಿಸಿದನುರ್ವ್ವರೆಯಂ ನರಸಿಂಹ ಭೂಭುಜಂ (ಎಕ. III, ಮಂಡ್ಯ. ೧೨೧-೧ ; 1235). ೬. ಸಂತೋಷದಿಂದ ಕೂಗು ; ಕುಕಿಲು : ಘಣಿಯುಂ ನವಿಲ್ಗಳುಂ ಪುರುಡಿಪ ಕಾಗೆಯುಂ ನಲಿವ ಕೋಗಿಲೆಯುಂ ತೊಱದೆಯ್ದೆ ವೈರಮಂ ನೆರೆದೊಡನಿರ್ದ್ದವು (ಧರ್ಮಾಮೃ. ೩-೯೦).

**ನಲಿನಲಿ** (ದ್ವಿರುಕ್ತಿ) : ಪಲರು ನಲಿನಲಿದಾಟಂದು ಕೊಂದಮಂ ಯಮರಾಜಂ (ಅಜಿಪು. ೨೧-೩೬); ಕಿಲದ ಕೇರಿಯ ಸಕ್ಕಜದ ಮಕ್ಕಳೊಡನೊಕ್ಕಲಿಕ್ಕಿ ನಲಿನಲಿದು ನರ್ತಿಸುತ್ತಿರಲ್ (ನಂಬಿರ. ೩-೧೪) ; ನಲಿನಲಿದು ಪೆಚ್ಚು ಮೆಚ್ಚುತ್ತ . . . ಲಲನೆಯರು ನೃಪನ ಪದಯುಗಜಲರುಹದೊಳ್ ಮೆಯ್ಯನಿಕ್ಕೆ (ನನ್ನಚಾ. ೪-೨೧೫). **ನಲಿದಾಟ** = ಹಿಗ್ಗುವಿಕೆ ; ಸಂತೋಷಪಡುವಿಕೆ. **ನಲಿದಾಡಿಸು** = ಸಂತೋಷದಿಂದ ಕುಣಿದಾಡುವಂತೆ ಮಾಡು : ಸಿವ್ಮ್ಯವರ ಮಾರ್ಗಣೆಗಳುಬ್ಬರಿಸಿದವು ಗಗನಾಂಗಣವ. ನಲಿದಾಡಿಸಿದವು ನಾರದಾದಿಗಳ (ತೊರವೆ. ೧-೧೧-೧೦) ; ಸೊಗಯಿಸುವ ಪರಿಕರದ ನಲಿದಾಡಿಸುವ ರಥಯಿಲ್ಲೆಂದು ನೆಱೆ ನೊಂದು ಮಱುಗುವಳಜಸ್ರುಮುಖಿ (ಜೈಮಿಭಾ. ೨೦-೧೮). **ನಲಿದಾಡು** = ೧. ಸಂತೋಷದಿಂದ ಆಟವಾಡು : ತಮ್ಮೊಡನೆ ನಲಿದಾಡುವ ಕಿಶೋರಕೇಸರಿಗಳಂ ಒಡಿದು ತೆಗೆವ ಕರಿಕಳಭಂಗಳುಮಂ (ಪಂಪಭಾ. ೧-೧೧೫ ವ) ; ಹರಿಣಂಗಳ್ ನಲಿದಾಡುತಿರ್ದ್ದವು ಕರಂ ವ್ಯಾಘ್ರಂಗಳಂ ಪೊರ್ದ್ದಿ (ಸುಕುಮಾ. ೮-೬೧) ; ಜಳನಿಧಿಯಲ್ಲಿ ಪುಟ್ಟಿ ಬಲಜಾಕ್ಷನ ಪೇರುರಮೆಂಬ ತೊಟ್ಟಿಲೊಳ್ ಬಳೆದು ಪಿತಾಮಹಂ ಜಲಜದೊಳ್ ನಲಿದಾಡಿ ಬಟಿಕ್ಕ ಯಶೋವನಂ ದೊಳೆವುದುಮಾರುಮಂ ಒಗೆಯದಾ ನೃಪನೊಳ್ ಸಿರಿ ಕೂರ್ತು ಬಂದು ಕೋಮಳಿ ನೆರೆದಿರ್ದ್ದಳ್ (ಶಾಸ್ತ್ರಸಾ. ೨೧೬) ೨. ಬಹಳ ಹಿಗ್ಗು ; ತುಂಬ ಸಂತೋಷಪಡು : ನೆರೆ ಕಾದ್ರಾಂತಕಾಂತೆಯರ್ ನೆರೆದೊಸಗೆಯಿಂ ಮಾಡೆ ಮೃದ್ಧ್ರಕಂಚುಕಿಗಳಿಂದವರೊಡನೆ ನಲಿದಾಡೆ (ಅಜಿಪು ೪-೬೮ಗಳ) ; ಕಿರಿಕಂ ನಿಧಿಪಡೆದೊಡೆಂತು ನಲಿದಾಡುಗುಮಂತಿರೆ ಜನಪದಾಬ್ಧಸೇವನೆ ದೊರೆಕೊಳೆ ಸಂಸಾರಿ ನಲಿವುದೊಲುಪಡೆ ಸುಖಿಮಂ (ಸಮುಷ. ೧-೧೦೩) ; ಶರಣರ ಸಂಗದಲ್ಲಿ ನಲಿದಾಡು ಕಂಡೆಯಾ ಎಲೆ ಮನವೇ (ಮಹಾದೇ. ಬ. ೭೯-೧೯೩) ; ಭೋಯೆಂದಾಗಲರಸಂಚೆಗಳುಮಳಿವಿಂಡುಗಳು ನಲಿದಾಡೆ (ನಳಚ. ೧-೩೭). ೨. ಸಂತೋಷದಿಂದ ಕುಣಿದಾಡು,-ನೃತ್ಯಮಾಡು : ನಭದೊಳ್ ನಲಿದಾಡುವ ಸೋಗೆನವಿಲ್ಗಳ ಹಿಂಡುಗಳುಮಂ (ಪಂಚತಂ. ೧೧೮-೧೦) ; ಆಡುವ ನಲಿದಾಡುವ ನಡೆ ನೋಡುವ ಕೊರಲಪ್ಪಿಕೊಳ್ವ . . . ಬಾಳಕ್ರೀಡೆಗಳಂ ನೋಡುತಿರ್ಪ್ಪುದೊಂದಿರವಲ್ತೆ (ಸುಕುಮಾ. ೯-೧೦೦) ; ಹುಲಿ ನಲಿದು ನಿಲುಗಿಸಿ ಗೆಜ್ಜೆಗಟ್ಟಿ ನಲಿದಾಡಿತ್ತು (ಆದವ. ೧೫-೩೩) : ನಾರದನು ನಲಿದಾಡಿದನು ಗಗನದಲಿ (ತೊರವೆ. ೪-೧೩-೩೭) ; ನಲಿದಾಡೆ ಎನ್ನ ನಾಲಿಗೆ ಮೇಲೆ ಸರಸ್ವತಿದೇವಿ (ಪುರಂದ. ೧-೧೯೧ ಪಲ್ಲವಿ) ; ಲಕ್ಷ್ಮೀ ನನ್ನ ಮನೆಯಲ್ಲಿ ನಲಿದಾಡುತ್ತಿದ್ದಾಳೆ (ಕಂಬಡು. ೧೩೪); ಅವಳ ತಲೆಯಲ್ಲಿ ಹಿಂದಿನ ಎಷ್ಟೋ ಘಟನೆಗಳು ನಲಿದಾಡಿದವು (ಹಳ್ಳಹಾ. ೧೧೬). **ನಲಿನಲಿದಾಡು** = ೧. ಚಲಿಸಿ ಸುತ್ತು : ಆತನ ಮನೆಯ ಮುಂದೆ ನಭದೊಳ್ ನಲಿನಲಿದಾಡುವ ಬಿಂಕದ ವಿಮಾನನೆಚ್ಚಸುಮಾಕೆಗೆ ಗಂಡನಕ್ಕಂ (ಪಂಪಭಾ. ೩-೩೩ ವ). ೨. ಬಹಳ ಸಂತೋಷಪಡು, –ಹಿಗ್ಗು : ಜಾಲಗಾಱನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಯ ಕೊಂದು ನಲಿನಲಿದಾಡುವ (ಮಹಾದೇ. ಬ. ೪೬-೧೦೯) ; ಆನಂದದಿಂದ ನಲಿನಲಿದಾಡುವೆ (ಬಸವ. ೩೬೬).

[ ದೇ.: ತುಳು. ಕೊಡ. ನಲಿ; ಕುರುಖ್. ನಲ್ನಾ ]

**ನಲಿ$_2$, ನಳಿ$_4$** (ನಾ). ಒಂದು ಬಗೆಯ ಸುಗಂಧ ದ್ರವ್ಯ : "ನಳಿಯೆಂಬ ಗಂಧ-ನಟಿ, ನಲಿ" (ನಾಚಿರಾ. ೬) : "ಸುಷಿರಾ, ವಿದ್ರುಮಲತಾ, ಕಪೋತಾಂಘ್ರಿಃ, ನಟೀ, ನಲೀ, ಧಮನೀ, ಅಂಜನಕೇಶೀ – ೭ ನಳಿ ಎಂಬುವ ಗಂಧದ್ರವ್ಯದ ಹೆಸರುಗಳು ; ಗೂಪಗುತ್ತಿಗೆ" (ಸಿದ್ಧಾಂತ. ೧೩೪). **ನಳಿ$_4$** : ಮೇಲಿನ ಪ್ರಯೋಗಗಳನ್ನು ನೋಡಿ. [ ಸಂ. ನಲೀ ]

**ನಲಿಗಚ್ಚು** 'ನಲಿಗರ್ಚು$_2$' ನೋ.

**ನಲಿಗರ್ಚು$_1$** (ಕ್ರಿ). ಪ್ರೀತಿಯಿಂದ ಕಚ್ಚು : ಆ ಶುಕಶಿಶುಪ್ರಕರಚಂಚೂಪುಟಸಂಚಯಮುಮಂ ಚೂತಕಳಿಕಾಕುಳಮೆಂದು ನಲಿಗರ್ಚಲೆಂದಪ್ಪಳಿಪ ಕಲಕಂಠಜಾಲಕಂಗಳುಂ (ಸುಕುಮಾ. ೨-೭೧ ವ) ; ಕಳಿಕೆಗಳಂ ಪಿಕಾಳಿ ನಲಿವಿಂ ನಲಿಗರ್ಚುತಮುನ್ಮದಾಳಿಸಂಕುಳಮಲಗೆಂಚಲಂ ತುಡುಕುತಂ ತನಿವಣ್ಗಳ ಸಾರಮಂ ಶುಕಾವಳಿ . . . ಪೀರುತುಂ ವಿಳಸಿತ ಚುಂಬನಾಭಿನಯಮುಂ ನೆಱೆ ತೋರ್ಪ್ಪವೊಲಿರ್ದ್ದಾಮ್ರದೊಳ್ (ಸುಕುಮಾ. ೫-೮೯). [ ನಲಿ$_1$ + ಕರ್ಚು$_1$ ]

**ನಲಿಗರ್ಚು$_2$, ನಲಿಗಚ್ಚು** (ನಾ). ಪ್ರೀತಿಯಿಂದ ಕಚ್ಚಿದುದಂ ; ದಂತಕ್ಷತ : ನಲಿಗರ್ಚುಂ ನಖರೇಖೆಯುಂ . . . ಮೆಯ್ವೋಱ ರತಾಲಯಾಂಗಣದೊಳೊಪ್ಪಲ್ ನೀಱ . . . ನಿಂದಿರ್ದ್ದಳ್ (ಸೂಕ್ತಿಸು. ೧೪-೭೪). **ನಲಿಗಚ್ಚು** : ನಲಿಗಚ್ಚು ಕಚ್ಚು ಕಡಿಯಾಗದೆಯಾಳನೆ ಸೀಳ್ದು ಸಿಱುಂಬಳಾದದಂಟದ ನೆಱನೆಂದು ಭಾವದೊಳೆ ಬಳ್ಳ್ಯ ಸೋಂಬೆಯನಿಕ್ಕು ಕಿಚ್ಚಿನೊಳ್ (ಸೂಕ್ತಿಸು. ೮-೪೩೪). [ < ನಲಿಗರ್ಚು$_1$ ]

**ನಲಿಗಱ** (ನಾ). ಪ್ರೀತಿಯಿಂದ ಕಚ್ಚಿದುದರ ಕಲೆ ; ದಂತಕ್ಷತದ ಗುರುತು : ನುಂಗಿಯುಗುಳ್ಪುಲಿಯರ ದಶನಂಗಳ ನಲಿಗಱಗಳಲ್ಲದೆಳ್ಳಿಕ್ಕಿಲ್ಲಂಗಮೆನೆ ನಂದ ನೊಬಗಿನ ಬಂಗಮಂಶಾಸನವೆನಿಪ್ಪ ಸುರತವಿಳಾಸಂ (ಅನಂಪು. ೧-೫೪). 'ನಲಿಗರ್ಚು$_2$' ಪದ. [ ನಲಿ$_1$ + ಕಱ$_2$ ]

**ನಲಿಗೆದಱು** (ಕ್ರಿ). ಸಂತೋಷದಿಂದ ಕೆದಕು,-ಬೆದಕು : ಕದಲಿಗದಿರನುರದಿನಮಣಿ ನೆತ್ತಿಯಿಂ ಪೊತ್ತು ನೆಗೆದು ಚಂಚುವಿಂ ಚಲ್ಲಿಪೊಯ್ದು ನಖದಿಂ ನಲಿಗೆದಱಿ ಕೋಟಗಱಿಸಿ ನುಡಿಯದು (ಅನಂಪು. ೭-೮೦ ವ).

[ ನಲಿ$_1$ + ಕೆದಱು$_1$ (< ಕೆದಱು$_1$) ]

**ನಲಿತ** (ನಾ). ನಲಿಯುವಿಕೆ ; ಕುಣಿದಾಟ : ಒಲಿತ. ಅಲಿತ. ನಲಿತವೊ! ಎಲ್ಲಿ ಇದನು ಕಲಿತವೊ ? (ಸೂರ್ಯಕಾ. ೧೧೨-೧೧). [ ನಲಿ$_1$ + – ತ$_2$ ]

**ನಲಿನ, ನಳಿನ** (ನಾ). ೧. ತಾವರೆ; ಕಮಲ. ೨. ನೀರು ಹೂವು; ಆವಲು. ೩. [ಜೈನ] ಕಾಲವನ್ನು ಅಳೆಯುವ ಒಂದು ಪ್ರಮಾಣ : ಇದೇ ರೀತಿ ಎಂಬತ್ತನಾಲ್ಕು ಮತ್ತು ಎಂಬತ್ತುನಾಲ್ಕುಲಕ್ಷ ಗಣಿತ ಕ್ರಮದಿಂದ ಕುಮುದಾಂಗ ಮತ್ತು ಕುಮುದ. ಪದ್ಮಾಂಗ ಮತ್ತು ಪದ್ಮ. ನಲಿನಾಂಗ ಮತ್ತು ನಲಿನ . . . ಎಂಬಿವು ಕ್ರಮದಿಂದ ಆಗುತ್ತವೆ (ಜೈನಪ. ೩೦೬). **ನಳಿನ :** ೧. "ಸಹಸ್ರಪತ್ರಂ, ಶತಪತ್ರಂ . . . ಅಬ್ಜಂ. ನಳಿನಂ. ಪುಷ್ಕರಂ. ರಾಜೀವಂ ಅರವಿಂದಂ. ಪದ್ಮಂ, ಪಂಕಜಂ–ಈ ೧೭ ತಾವರೆ" (ಹಲಾಯು. ೧೧೨-೫೭) : ವಿಜೃಂಭಮಾಣ ನವನಳಿನಪರಿಕರಾಕೃಷ್ಟಮಧುಕರ ರಮಣೀಯ . . . ಧರಾತಳಮನುತ್ಫುಲ್ಲ ಪಲ್ಲವ ಲೀಲಾಯಮಾನ ಮತ್ತ ಕೋಕಿಲೋಲ್ಲಾಸಿತ ಶೀಕರೋದ್ಭಾಮ ದುರ್ದಿನ ವನಮನೆಯ್ದುವುದು (ಪಂಪಭಾ. ೫-೧೦ ವ) : ಅವನತಾರಾತಿನೃಪ ಮಣಿಮಯ ಕಿರೀಟಪ್ರಭಾಲೀಢ ಚಳನನಳಿನಯುಗ್ಮಂ (ಸುಕುಮಾ. ೧-೬೯ ವ) : ನಳಿನದ ಕರ್ಣಿಕೆಯೊತ್ತಿನೊಳ ಳವಡೆ ಕಣ್ಮುಟ್ಟಿ . . . ನಿದ್ರಾಸುಖದಿಂ ಕಳಹಂಸೆಯ ಮಱಿಗಳಿರ್ಪುವು (೧೦ಕ. ೨-೫೫) ; ನಳಿನಂ ಕುಂದೆ . . . ಮೂಡಿದುದು ತೇಜೋಮಂದಿರು ಚಂದಿರಂ (ರಾಜಶೇ. ೧೦-೪೩). [ ಸಂ. ]

**ನಲಿನಗರ್ಭ, ನಳಿನಗರ್ಭ** (ನಾ). ಕಮಲದಲ್ಲಿ ಹುಟ್ಟಿದವನು ; ಬ್ರಹ್ಮ. 'ನಲಿನಗರ್ಭಾಂಡ' ಪರಾ **ನಳಿನಗರ್ಭ :** 'ನಳಿನಗರ್ಭಾಂಡ' ಪರಾ.
[ ನಲಿನ + ಗರ್ಭ ]

**ನಲಿನಗರ್ಭಾಂಡ, ನಳಿನಗರ್ಭಾಂಡ** (ನಾ). ಬ್ರಹ್ಮಾಂಡ; ವಿಶ್ವ : ನಲಿ[ಪಾಠಾಂ. ೪]ನಗರ್ಭಾಂಡಂಗಳೆಂಬಗ್ಗಳದ ಘಟಂಗಳಾದಿಗಳೊಳಗೆಮಲತೆಬಿದ ಪಕ್ವಾನ್ನ ದಿವ್ಯಾನ್ನಂಗಳಂ ತೀವಿ (ಬಸವು. ೮-೩೭). **ನಳಿನಗರ್ಭಾಂಡ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.
[ ನಲಿನಗರ್ಭ + ಅಂಡ$_2$ ]

**ನಲಿನಜ, ನಳಿನಜ** (ನಾ). = ನಲಿನಗರ್ಭ. **ನಳಿನಜ :** ನಳಿನಜ ಹರಿ ವಾಸವ ನತಪದಪಂಕರುಹ ನವಿ ತ ಶುಭವಾಸ . . . ಗಳಲನೆ ಜಗದಂ ಸಲಹುಗೆ ಸಲೆ ತೋಂಟದ ಗುರು ನಿರುತವಿಲಾಸಂ (ಪಾಲಾಕ್ಷ. ೨ ೧-೨). [ ಸಂ. ]

**ನಲಿನದಲ, ನಳಿನದಳ** (ನಾ). ೧. ತಾವರೆಯ ಎಸಳು ; ಕಮಲದ ದಳ. 'ನಲಿನದಲಲೋಚನ' ಪರಾ. **ನಳಿನದಳ :** ೧. 'ನಳಿನದಳಲೋಚನ' ಪರಾ. ೨. ಕಮಲದ ಎಲೆ : ನಳಿನದಳದೊಳ್ ತೀವಿರ್ದಬ್ಬೊಯ ತಳ್ತಲರ್ವಾಸು . . . ಪೂಗಂಪು ರಾಗದಲಂಪನಗ್ಗಳಿಸೆ (ಪುಷ್ಪಪು. ೨-೪೩) 'ನಳಿನದಳಪುಟ' ಪರಾ. [ ನಲಿನ + ದಲ ]

**ನಲಿನದಲಲೋಚನ, ನಳಿನದಳಲೋಚನ** (ನಾ). ತಾವರೆಯ ಎಸಳ ಆಕಾರದ ಕಣ್ಣುಳ್ಳವನು ; ವಿಶಾಲಾಕ್ಷ ; ಕೃಷ್ಣ : ಸುಧನ್ವನ ಶಿರವ ನೆರಡುಕ್ಕಿಗಳಿಂ ನಲಿನದಲ[ಪಾಠಾಂ. ನಳಿನದಳ]ಲೋಚನಂ ಪಿಡಿದೆತ್ತಿಕೊಂಡು ನೋಡಿದನು (ಜೈಮಿಭಾ. ೧೩ ೫೧) **ನಳಿನದಳಲೋಚನ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ನಲಿನದಲ + ಲೋಚನ ]

**ನಲಿನನಾಭ, ನಳಿನನಾಭ** (ನಾ). ಹೊಕ್ಕುಳಲ್ಲಿ ತಾವರೆಯುಳ್ಳವನು ; ಪದ್ಮನಾಭ ; ವಿಷ್ಣು : ನಲಿ[ಪಾಠಾಂ. ೪]ನನಾಭನ ಮಗನ ಕುಂಗಣಗಳ ನನುವಿಸಿ ತೊಳತೊಳಗುವಪ್ಪ . . . ವಿಶಾಲವಿಲೋಚನದ್ವಯವು (ಬಸವು. ೪ ೨೭) **ನಳಿನನಾಭ :** ನಳಿನನಾಭನ ಮಧುರವಾಣೀಲುಳಿತಪರ ಮಾರ್ಥವಚನಪರಿಕಲಿತ ೨ಮಚಿಕೆಯ ಪಾಂಡವರಾಯ ಹೊಱಮಂಟ (ಕುಮಾವ್ಯಾ. ೮ ೩) : ನಳಿನನಾಭನ ನೀನು ಪಾಡೂ ಬೇಗ ಒಳಗಣ್ಣಿಂದ ಲಾವನ ಕಂಡು ನಲಿದಾಡೊ (ಪುರಂದ. ೨ ೨೦೯ ಪಲ್ಲವಿ).
[ ಸಂ. (ನಲಿನ + ನಾಭಿ + –) ]

**ನಲಿನಬಾಂಧವ** (ನಾ). ತಾವರೆಯ ಮಿತ್ರ ; ಸೂರ್ಯ.
[ ನಲಿನ + ಬಾಂಧವ ]

**ನಲಿನಭವ, ನಳಿನಭವ** (ನಾ). = ನಲಿನಗರ್ಭ. 'ನಲಿನಭವಾಂಡ' ಪರಾ **ನಳಿನಭವ:** ಆಕ್ಷಣ ನಳಿನಭವ ತಾನಂದು ಕೊಟ್ಟನು ಕನ್ಯಾವಾತ್ಮಜನೊಡ ಪಡಗ (ಸಂಭಪ. ೮-೧೦) : ಆ ನಳಿನಭವ ಶಂಕರರ ಸಂಮ್ಮಾನವಾಯ್ತು ಸಕಲ ವಾನರಸೇನೆಗಿಂದ್ರಾದಿಗಳು ಸೇವಕರಾಯ್ತು ಪಯಣದಲಿ (ತೊರರಾ. ೬-೬-೯): ಹರಿಹರ ನಳಿನಭವರಾರಾಜ್ಞೆಯಿಂ ಲಯ ಸೃಷ್ಟಿಗೈಯುವರು (ಗಗಹಾ. ೧೨-೬೯). [ ಸಂ. ]

**ನಲಿನಭವಾಂಡ, ನಳಿನಭವಾಂಡ** (ನಾ).=ನಲಿನಗರ್ಭಾಂಡ : ಆವಿರ್ಭವಿಸಿ ನಲಿ [ಪಾಠಾಂ ೪]ನಭವಾಂಡಣಿಚಯಮುಮನುರಂಪುತುರವಣಿಸಿ ಕವಿದ ವಿಷಮಂ ನುಂಗಿದನು ಮಾಪ್ರವರನೆನಲು (ಬಸವು. ೧೩-೨). **ನಳಿನಭವಾಂಡ :** ರಾಘವನನುಜನಗ್ಗದ ಚಾಪಮೌರ್ವೀನಿನದವನು ನೆಗಹಿದನು ನಳಿನಭವಾಂಡ ಗುಮ್ಮಿಡಲು (ತೊರರಾ. ೬-೪೩-೯). [ ನಲಿನಭವ + ಅಂಡ$_2$ ]

**ನಲಿನಮಿತ್ರ** (ನಾ).=ನಲಿನಬಾಂಧವ. [ ನಲಿನ + ಮಿತ್ರ ]

**ನಲಿನಮುಖಿ, ನಳಿನಮುಖಿ** (ನಾ). ಕಮಲದಂತೆ ಮುಖವುಳ್ಳವಳು ; ಚೆಲುವೆ : ತನ್ನನಿಯನಂ ನೋಡಿ ನಲಿ[ಪಾಠಾಂ. ೪]ನಮುಖಿ ನಗುತಂ (ಬಸವು. ೪೭-೨೩). **ನಳಿನಮುಖಿ :** ನಳಿನಮುಖಿಯರ ಸಕಲ ಸೃಷ್ಟಿಗೆ ತಳಸವಿದು (ಕುಮಾವ್ಯಾಆ. ೦೩-೨೩) ; ಚೆಲುವೆಯೋರ್ವಳು ಬಂದು ಹೊಳೆಯೊಳಗೆ ಈಜಾಡಿ ನಲಿವುದನು ನೋಡಿ ನಳಿನಮುಖಿಯನು ಮೇಲೆ ಕರೆಸಲು (ಪುರಂದ. ೩-೦೫೦-೩). [ ಸಂ. ನಲಿನಮುಖೀ ]

**ನಲಿನಲೋಚನೆ, ನಳಿನಲೋಚನೆ** (ನಾ). ತಾವರೆಯೆಸಳಿನಂತೆ ಕಣ್ಣುಳ್ಳವಳು ; ಸುಂದರಿ : ನಲಿ[ಪಾಠಾಂ. ೪]ನಲೋಚನೆಯನೊರ್ವಳನೊಸೆದು ಮಿಗೆ ಕೊಟ್ಟ (ಬಸವು. ೨೫-೯). **ನಳಿನಲೋಚನೆ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಸಂ. ನಲಿನಲೋಚನಾ ]

**ನಲಿನವೈರಿ, ನಳಿನವೈರಿ** (ನಾ). ತಾವರೆಯ ಶತ್ರು ; ಚಂದ್ರ :.(ಕ). **ನಳಿನವೈರಿ :** ನಳಿನವೈರಿಯ ಸುಳಿವು ತನ್ನಯ ಕೊಲೆಗೆ ಒಂದುದು (ಕುಮಾವ್ಯಾವಿ. ೨-೫೨). [ ನಲಿನ + ವೈರಿ ]

**ನಲಿನಸಂಭವ, ನಳಿನಸಂಭವ** (ನಾ).=ನಲಿನಗರ್ಭ : ನಲಿ[ಪಾಠಾಂ. ೪]ನಸಂಭವಲಿಖಿತವಾರ್ಲಿಪಿಗಳನೊರಸಿ (ಬಸವು. ೪೯-೩೨). **ನಳಿನಸಂಭವ :** ಕೃಪಾಳುವನೊಲಿದು ಹೊಗಳದನಜನು ವೇದಸಹಸ್ರಸೂಕ್ತದಲಿ ಬಳಿಕ ಕಾರುಣ್ಯದಲಿ ನಾಭೀನಳಿನದಲಿ ತೆಗೆದನು ವಿರಿಂಚಿಗೆ ನಳಿನಸಂಭವನೆಂಬ ಹೆಸರಾಯ್ತೆಂದು ಮೊದಲಾಗಿ (ಕುಮಾವ್ಯಾಆ. ೦೯-೩೦). [ ನಲಿನ + ಸಂಭವ ]

**ನಲಿನಸಖ, ನಳಿನಸಖ** (ನಾ). = ನಲಿನಬಾಂಧವ : ಘನಜಿನಭವನವದು ನಲಿ [ಪಾಠಾಂ. ೪]ನಸಖನುದಯಕ್ಕೆ ಮುನ್ನವೆ ಗೋಡೆಗಳುವೆರಸಿ ನೆಲನ ಸರಿಸಕೆ ಬಿದ್ದು (ಬಸವು. ೫೨-೩೨). **ನಳಿನಸಖ :** ನಳಿನಸಖಕೋಟಿತೇಜವ ಮಿಕ್ಕುತೆಂಬವನ ಚರಣಾಂಬುಜಕ್ಕೆ ಶರಣು (ಶಿಚಂ. ೧೦-೭) : ನಳಿನಸಖ ನಪರಾಂಬುರಾಶಿಯ ನಿಲುಕುತೈದನೆ ಹಸಿದುದಿ ಮುನಿಬಳಗವಾರೋಗಣೆಗೆ ಚಿತ್ತವಿಸೆಂದ ಯಮಸೂನು (ಕುಮಾವ್ಯಾಆ. ೦೬-೪೭).
[ ಸಂ. (ನಲಿನ + ಸಖಿ + – ) ]

**ನಲಿನಾಂಗ** (ನಾ). [ಜೈನ] ಕಾಲವನ್ನು ಅಳೆಯುವ ಒಂದು ಪ್ರಮಾಣ : ಇದೇ ರೀತಿ ಎಂಬತ್ತುನಾಲ್ಕು [illegible] ಗಣಿತ ಕ್ರಮದಿಂದ ಕುಮುದಾಂಗ [illegible] ಪದ್ಮಾಂಗ [illegible] ನಲಿನಾಂಗ ಮತ್ತು [illegible] ಎಂಬಿವು ಕ್ರಮದಿಂದ ಆಗುತ್ತವೆ (ಜೈನಪ. ೩೦೬). [illegible]

**ನಲಿನಾಕ್ಷ, ನಳಿನಾಕ್ಷ** (ನಾ). ೧. ತಾವರೆಯ [illegible] ಕಣ್ಣುಳ್ಳ [illegible] . ೨. ವಿಷ್ಣು ; ಕೃಷ್ಣ (ಕ) **ನಳಿನಾಕ್ಷ**

೨. ನಳಿನಾಕ್ಷನ ಪದಪದ್ಮಕಿಗಳ ಬಟಿಯೊಳಲಕ್ತಕಾಂಕ ಪದಪದ್ಮಕಿಗಳ್ ಪೊಳೆವುವು (ಆಗವಿ. ೫-೨೬) ; ನಳಿನಾಕ್ಷ ನಿನ್ನ ಮಱೆಯ ಪೊಕ್ಕು ತಬಿಸಲು ಒಲಿದು ಧ್ರುವಗೆ ನಿಜಲೋಕವಿತ್ತವನು (ಪುರಂದ. ೨-೦೦೯-೩) ; ನಳಿನಾಕ್ಷನಿಲ್ಲ ದಧ್ವರಕುವಕ್ರಮಿಸೆ ನಡೆಯದು (ತ್ರಿಮಿರಾ. ೨-೪೫).

[ಸಂ. (ನಲಿನ + ಅಕ್ಷಿ + –)]

**ನಲಿನಿ, ನಳಿನಿ** (ನಾ). ೧. ತಾವರೆ ; ಕಮಲ. ೨. ತಾವರೆಗಳಿಂದ ತುಂಬಿರುವ ಕೊಳ ; ಕಮಲಗಳು ಹೆಚ್ಚಾಗಿ ಇರುವ ಸ್ಥಳ. ೩. ತಾವರೆಯ ದಂಟು. –ನಾಳ. ನಳಿನಿ : ೧. ನಳಿನಿಯ ಬಿರಿಮುಗುಳೊಳ್ಪುಯ್ಯಾಳಿಕಳಭಂ ಬೆಂಡು ನೆಗದು ಬಂಡುಣ್ಬಪೊಲ್ . . . ಯಶೋದೆಯ ಮೊಲೆಯುಂಡಂ ನವತಮಾಲಕೃಷ್ಣಂ ಕೃಷ್ಣಂ (ಅರ್ಧನೇ. ೬-೫೫); ನಳಿನಿಯುನಪ್ಪಿ ತುಂಬಿಗುರುಳಂ ನೆಱೆ ನೇರ್ಪಡೆ ತಿರ್ದಿ . . . ಅದೇಂ ಸುಳಿದುದೊ ಮೆಲ್ಲನಾಳ್ದಪೊಲತಿ ಶ್ರಮಮುಮಂ ವನಮುಂದವಪಾರುತಂ (ಕಬಿಕಂ. ೧-೫೬). ೨. ನಳಿನೀತೀರ ಲತಾಗೃಹಂಗಳ ನೆೞಲ್ ನೇರ್ಪಟ್ಟಿರಲ್ ಪಟ್ಟು . . ಪಥಾರ್ತರಿರ್ಪರ್ (ಆಗವಿ. ೯-೮೮). ೩. ನಳಿನಿಯ ನಳಿನವುನಿನನಾಳಪಂತಿರೆ ಕರದೆ ಪಥುವ ಕರಮುಂ ಕರದಿಂ ತಳೆದಂ ಕುಮಾರನಾದ್ರ್ಯಾಂಗುಳಿದಳಕಂಟಕಿತಬಾಹು ನಾಳಾನ್ವಿತಮುಂ (ಚಂದ್ರಪು. ೬-೭೪). ೪. ತಾವರೆಯ ಗಡ್ಡೆ : "ಕಂದಃ, ಬಿಸಿನೀ, ನಳಿನೀ – ಈ ೩ ಅವಟಿ ಗೆಡ್ಡೆ" (ಹಲಾಯು. ೦೦೨-೬೦).

[ಸಂ. ನಲಿನೀ]

**ನಲಿನೀಮಿತ್ರ, ನಳಿನೀಮಿತ್ರ** (ನಾ). =ನಲಿನಬಾಂಧವ: ಸರೋಜಾಸನಂ ನಲಿ[ಪಾಠಾಂ. ೪]ನೀಮಿತ್ರ ಸುಪರ್ವರೆಂಬಿವು ವಿವಸ್ವಂತಾಹ್ವಯಂ (ಶಬ್ದಮಾರ. ೦೧೦) . ನಳಿನೀಮಿತ್ರ: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ಸಂ. ]

**ನಲಿಪ** (ನಾ). ಸಂತೋಷ ; ಆನಂದ ; ಉಲ್ಲಾಸ : ಕುಟುಕಿನಿಂದಾಹಾರಮಂ ಸ್ನಾನದಿಂ ನೆಲೆಯುಂ ಕೂಟಮಂ ನಲಿಪದಿಂದಂ ನಲ್ಮೆಯುಂ ಗೆಲ್ಲದಿಂ ಗೆಲವಂ . . . ಪೇಟಲ್ಲಿಯುಂ ತದ್ವಿದಂ (ಲೋಕೋಪ. ೧೨-೬). [ನಲಿ$_1$ + –ಪ$_2$]

**ನಲಿಬಾಳು** (ನಾ). ಸುಖಮಯವಾದ ಜೀವನ ; ಸಂತೋಷದ ಬದುಕು : ಕಂಡೊರೆ ನುಂಗುವ ಜವನನ್ ಕಂಡರ್, ಈ ನಲಿಬಾಳನ್ ಕಡೆ ಬೀಳ್ಕೊಂಡರ್, ಬಯಲಾದರ್ (ಪಾರಸಿ. ೩೬-೮೫೪).

[ನಲಿ$_2$ + ಬಾಳು$_2$ (<ಬಾೞ್$_2$)]

**ನಲಿಯಿಸು, ನಲಿಸು** (ಕ್ರಿ). ೧. ಸಂತೋಷಗೊಳಿಸು ; ಉಲ್ಲಾಸಗೊಳಿಸು : ಆ ವಿಶ್ವೇಶ್ವರನ ಮನೋಮಧುಕರಮಂ ತಮ್ಮ ಮುಖಾರವಿಂದದೊಳ್ ನಲಿಯಿಸಿಯುಂ (ಆದಿಪು. ೮-೨೪ ವ) ; ಶ್ರೀಯೆರ್ದೆಗೊಂಡಿರೆ ಮಯನ್ನಿಱದಾಯೊಳೆಯ ನೆಗಪಿ ದಾಡೆಯಿಂ ನಲಿಯಿಸಿದಾ ಮಾಯಾವರಾಹನವಿಲಶ್ರೀಯಮು ನೊಲ್ದೀಗೆ ವೀರನರಪತಿಗೀಗಳ್ (ಚಿಕವಿ. ೪-೧) ; ಈ ವರದ ಕರಮ . . . ಸುಮಲರ್ದ ಲಸಜ್ಜೀವನಜಾತದ ಗರ್ಭದ ಭಾವನೆಯಂ ಬಗೆಗೆ ತಂದು ನಲಿಯಿಕುಮೆಮ್ಮಂ (ವಸ್ತುಕೋ. ೮). ೨. ಅರಳಿಸು ; ಪ್ರಫುಲ್ಲಗೊಳಿಸು : ನಲಿಯಿಸುಗೆಯ್ದೆ ಮತ್ತ್ಯಶಿಕುಮುದ್ವತಿಯಂ ಕಳೆಗುಂದದಾವಗಂ ನಲುಗದ . . ಕಂದನಾನದೀ ಬಲಮುರಿಪುಕುಮಯ್ಯಮರೆ ಮೈವೆಯ್ಯುನಾಂತ ನವೀನಚಂದ್ರಮಂ (ಚಿಕವಿ. ೧-೬). ನಲಿಸು : ೧. ಮಿತ್ರಂ ಮದಯತಿ ಗೆಳೆಯನಂ ನಲಿಸಿದಪಂ(ಕಾಕಶ್ಮ. ೧-೩೩). [ನಲಿ$_1$ + – ಇಸು$_3$]

**ನಲಿವರಿ** (ಕ್ರಿ). ಹಿಗ್ಗಿನಿಂದ ಓಡಾಡು ; ಸಂತೋಷದಿಂದ ಓಡಾಡು ; ನಡಗರಿಸು : ಪಲದಿಪಸಕ್ಕೆಂತಾನುಂ ಕಲಹಂ ದೂರೆಕೊಂಡುದೆಂದು ಕಿಲಬರ್ ಬಿಲ್ಲಂ ಗೊಲೆಗೊತ್ತಿ ತೀವಿ ತೆಗೆದೇಂ ನಲಿವರಿದುದೊ ಜವನ ದೂತರೆನಿಸಿ ಕಿರಾತರ್ (ಪಂಪಭಾ. ೪-೫೬) ; ಸಿರಿಸದ ಬಾಸಿಗದೊಳ್ ನಲಿವರಿದಾಡುವ ತುಂಬಿಯಂತೆ ಪಾಣ್ಬನ ಕಣ್ಗಳ್ ಪರಿಮುಱಿಯಾಡಿದುವು ತನೂದರಿಯ . . . ದೋರ್ವಲ್ಲರಿಯೊಳ್ (ಪಂಪಭಾ. ೯-೮೦) ; ನಲಿವರಿದು ನವೀನಮೊನಲ್ ಜಲಜಾಕ್ಷನ ಮುಂದೆ ಕುಣಿದು (ಜಗನ್ನಾ. ೬-೬೪) : ಮೆಲ್ಪು(ಳ್ಪು)ವಡೆದತಿವ್ಯಾಲತೆಯಿಂದೋದಿ ನಲಿವರಿದು ಬಲ ವರ್ಣಂದಾ ಮಱಿಗೆರಡು ತಿಂಗಳ್ (ಲಕ್ಷ್ಮೀಶಾ. ೫-೪). 'ನಲವರಿ' ಪರಾ.

[ನಲಿ$_1$ + ವರಿ$_2$]

**ನಲಿವಾಱಿಸು** (ಕ್ರಿ). ಸಂತೋಷದಿಂದ ಹಾರಾಡುವಂತೆ ಮಾಡು : ಮದನದವಾಗ್ನಿತಪ್ತಯರ ಸುಯ್ಯ ಸಮೀರಪಚಿವವಾಗಿ ಬರ್ಪ ತಣ್ಣದಿರನೆಲರ್ಚಿ ಚಂಚುವಿನೊಳ್. . .ಉತ್ಪಲಾಗ್ರಪತ್ರದ ಮೊಗೆದೂಡಿವಾಡಿ ನಲಿವಾಱಿಸಿ ತೋಱಿಸಿ ಸೋಂಕಿ ನೂಂಕಿ ಕೌಮುದಿಯೊಳದೇಂ ಚಕೋರಿ ಪಿಳ್ಗಾಡಿಸಿ ದಕ್ಕೊ ನಿಜಾಗ್ರಜಾಬಮಂ (ಅನಂಪು. ೬-೮೧).

[ನಲಿವಾಱು$_1$ + – ಇಸು$_3$]

**ನಲಿವಾಱು$_1$** (ಕ್ರಿ). ಹಿಗ್ಗಿನಿಂದ ಮೇಲಕ್ಕೆ ಹಾರು ; ಸಂತೋಷದಿಂದ ಹಾರಾಡು ; ಆನಂದದಿಂದ ಏರು : ಇರ್ಪೋಡಿದ ಚಂಚುಮಂ ತೆಱೆದೆಱಂಕೆ ನೆಱಿಲ್ದಿರೆ ಕರನಾಳಮಂ ನೀಡಿ ಪಿಯುತ್ತಲಕ್ಕೊಗೆದು ಕಾರಮುಗಿಲ್ವನಿಯುಂ ಮನಂ ಕುಳಿರ್ಗೊಳುವುವಿನಂ ಕರ್ದುಂಕಿ ನಲಿವಾಱುದುವಾಱುದುಪಂದುಚಾತಕಂ (ಪಂಪರಾಮಾ. ೬-೧೪೬) : ಇಂತಿದು ಗಗನಕ್ಕೆ ನಾಡೆ ನಲಿವಾಱುದದೊಂದು ಕಪೋತಮಂತುಮಲ್ಲಿದು ಪರಿದಿರ್ದ ಪಾಪಸ ಮುಗಿಲ್ಮುಱಿಯೆಂಬಿನಮಿಂಬುಗೆಟ್ಟು ಕಂದಿದ ಪಬಗಂಚುಗನ್ನಡಿವೊಲೇನಿಱಿದಾದುದೊ ಚಂದ್ರಮಂಡಲಂ (ಚಂದ್ರಪು. ೯-೫) : ಚಕೋರಮಯೂರ ರಥಾಂಗ ಭೃಂಗಮುಂಡಳಿ ನಲಿವಾಱಿದವ್ಪುವು ತರಂತರದಿಂದನಿಸಿತ್ತು ಕಣ್ಗೆ (ವರ್ಧಪು. ೫-೨೮). [ನಲಿ$_1$ + ಪಾಱು$_1$]

**ನಲಿವಾಱು$_2$** (ನಾ). (ಹಕ್ಕಿಗಳ) ಸಂತೋಷದ ಹಾರಾಟ ; ಸಂಭ್ರಮದ ಹಾರಾಟ. 'ನಲಿವಾಱುವಾಱು' ಪರಾ. [ನಲಿ$_1$ + ಪಾಱು$_2$]

**ನಲಿವಾಱುವಾಱು** (ಕ್ರಿ). ಸಂತೋಷದಿಂದ ಹಾರಾಡು ; ಉಲ್ಲಾಸದಿಂದ ಹಾರಾಡು: ಒಸಗೆಗಳೆಂದು ಬಿಟ್ಟ ಶುಕಶಾರಿಕೆಗಳ್ ನಲಿವಾಱುವಾಱಿ ರಾಗಿಸಿ ದವಿ ತಾರಿನಾಪು ಪರಿಪಾಱಿಯನೋಳಿಯಿನೋದೆ ಕೇಳ್ದು (ಕಾಂತಿಪು. ೨-೪೮). [ನಲಿವಾಱು$_2$ + ಪಾಱು$_1$]

**ನಲಿವು** (ನಾ). ಹಿಗ್ಗು ; ಸಂತೋಷ ; ಆನಂದ : ನಿನ್ನ ಸುಖವೇ ಸುಖಂ ನಿನ್ನ ನಲಿವೇ ನಲಿವು (ಶಂಬಿರ. ೧-೬೧): ವ್ಯಾಗೀಬಾಳಕಜಾಲದೊಳ್ ನಲಿವಿನಿಂ ನೆಗೆದಾಡುತುಂ (ಪುಷ್ಪಪು. ೩-೯೬) : ಪಲವುದಿನಂ ಮನಂ ಬಯಸಿ ಕಯ್ವಿಡಿದಂಗನೆಯಂಗಸಂಗದಿಂ ನಲಿವನನಾರತಂ ಪಡೆದು ರಾಜ್ಯಸುಖಂ ಸತತಂ ಸಲುತ್ತಿರಲ್ (ನಳಚಂ. ೯೮೮) : ನಲಿವು ಮಿಗೆ ತಾನವರಡಿಗಳಂ ತೊಳೆದು ಮದಿಸು ವೆಡೆಯೊಳು (ಬಸಪು. ೫೬-೩೩): ನಲಿವು ಹಿಂಗಿದ ತಾಯ ಕಂಗಳ ಜಲವ ಸೆಱಗಿನೊಳೊರಸಿದನು (ಕುಮಾರವ್ಯಾ. ಓರಿಇ. ಶರಿ. ೨೬೮) : ನೋವು, ನಲಿವುಗಳು ಪರಮಾತ್ಮನ ಇಷ್ಟವೆಂದು ತಿಳಿಯುತ್ತದೆ (ಧರ್ಮಸಾ. ೮೬). 'ನಲವು' ಪರಾ. [ನಲಿ$_1$ + – ವು]

**ನಲಿಸು** 'ನಲಿಯಿಸು' ನೋ.

**ನಲುಗಂಟಿ** (ನಾ). ಜಾನುವಾರಂಗಳ ಮೇಲೆ ಹಾಕುವ ಒಂದು ಬಗೆಯ ಸಣ್ಣ ತೆರಿಗೆ : ಉಗ್ರಾಣ ಪರಿಧಾನ ಬೆಡುಂಗೊಳು ಚಳಾಯ ದಾಯದೆಱೆ ಹಡುವರ ಬೀರವಣ ನಲ್ಲೆತ್ತು ನಲುಗಂಟಿ ನಲ್ಲಾವು ದಣ್ಣಾಯ ತವುಡೆಯೊಳಗಾದ ಸಮಸ್ತ ಕಿಱುಕುಡಃವೆಲ್ಲಮ . . . ಧಾರಾಪೂರ್ವಕಂ ಮಾಡಿ (ಎಕ. V, ಬೇಲೂರು. ೫೯-೮೭ : 1117). [<ನಲ್ + ಗಂಟಿ$_1$]

**ನಲುಗಿಡು** (ಕ್ರಿ). ಅರಿಸಿನ, ಕುಂಕುಮ ಮುಂತಾದವುಗಳಿಂದ ಪಾದದ ಮೇಲೆ ಚಿತ್ರವನ್ನು ರೇಖಿಸು : ದಿನಾಂತದಲಿ ನದಿಯ ದಂಡೆಯನ್ನು ನಾವ್ ಸೇರಿ ಬಿಳಿಮಳಲಮಧ್ಯದಲಿ ನಲುಗಿಟ್ಟುದನ್ನು ತಿಳಿನೀರ ವಾಹಿನಿಯು ಹರಿವುದೊ ನಿಂದಿಹುದೊ ಬಳಿ ಸೇರಿ ಪರಿಕಿಸುವೆವೆಂದು ಹೋದುದನು (ವಿಸಿಗೀ. ೭೯-೧೨). [←ತಮಿ. ನಲಙ್ಗಿಟು]

**ನಲುಗಿಸು** (ಕ್ರಿ). ೧. ಸುಕ್ಕುಗೊಳಿಸು ; ಮುದುರಿಸು ; ಮುದುಡಿಸು : ಹೂವನ್ನು ಅಷ್ಟು ಗಟ್ಟಿಯಾಗಿ ಹಿಡಿದು ನಲುಗಿಸಬೇಡ (ರೂಢಿ). ೨. ಸೊರಗುವಂತೆ ಮಾಡು ; ಕೊರಗಿಸು ; ಶೋಷಿಸು : ಈ ರೀತಿಯಲಿ ಮಱುಗುತಲನುದಿನವು ತತ್ಪಾಂಡುನೃಪನಂದನರು ದುಃಖದಿ ರಾಜಭೋಗಂಗಳನು ನೆಱೆ ಬಿಟ್ಟು ತನುವ ನಲ[ಲು]ಗಿಸಿಕೊಂಬರು (ತಿಮ್ಮಕ. ೩-೧೯) : ಒಕ್ಕಲನು ನಲುಗಿಸದೆ ಲೆಕ್ಕವನು ಸಿಕ್ಕಿಸದೆ ಠಕ್ಕುಲತೆಯಿಂದ ನಡೆಯಿಸುವ ಅರಸು ತಾ ಚಕ್ಕಂದವಿರುವ (ಸರ್ವಜ್ಞ. ೬೨೭) : ಹೊಟ್ಟೆಗೆ ಹಾಕದೆ ನಲುಗಿಸಿದ್ದಾಳೆ ಅಂತಾ ಸಾರಿಕೊಂಡು ಬಂದಾರು! (ನೀಡನ. ೪೮).

[ ನಲುಗು$_1$ + -ಇಸು$_3$ ]

**ನಲುಗು$_1$** (ಕ್ರಿ). ೧. ಸುಕ್ಕುಸುಕ್ಕಾಗು ; ಮುದುರು : ಬಟ್ಟೆಯ ಮಡಿ ನಲುಗದಂತೆ ತೆಗೆದುಕೊಂಡು ಬಾ (ರೂಢಿ). ೨. ಅಲ್ಲಾಡು ; ಅಲುಗು ; ಸ್ಪಂದಿಸು : ಆವೇಶ ಅಂಗಾಂಗ ತುಂಬಿ ನರನರ ನಲುಗಿ ಅಲುಗಿ ಗೊಂದಣ ತಾಂಡವಲಾಸ್ಯ ನೃತ್ಯದಲ್ಲೀ (ಸೂರ್ಯಪಾ. ೪-೧) : ಬೇಗ ಬೇಗ ಹೆಜ್ಜೆ ಹಾಕಿದಾಗ ಎದೆ ನಲುಗಿ ನಲುಗಿ ಕುಬುಸದ ಮಧ್ಯೆಯ ಗುಬ್ಬಿ ಕಳಚಿಹೋಗಿದ್ದಕ್ಕಿ . . . 'ಪಿನ್ನ'ನ್ನು ಹಾಕಿ 'ಫಿಟ್' ಮಾಡಿದಳು (ಹೊಸಕ್ಕಿ. ೪೭). ೩. ಒಯ್ಯಾರ ಮಾಡು ; ಬಳುಕು : ಕುಟ್ಟುವ ನೆವದಿಂದ ರಟ್ಟೆಯನು ಶಿರುಹುವಳು ನಿಟ್ಟಿಸಿ ನಲುಗಿ ಹಾಡುವಳು ಹಾದರದ ಮೊಟ್ಟೆ ಕಾಣಯ್ಯ (ಸರ್ವಜ್ಞ. ೦೮೪೧) : ರತ್ನಾ ಮತ್ತೆ ನಾಚುತ್ತ ನಲುಗುತ್ತ ಎರಡು ವಿಡಾ ತಂದಿಟ್ಟು ಹೋದಳು (ಗಂಪಮಾದು. ೫೭). ೪. ಕಷ್ಟಕ್ಕೆ ಗುರಿಯಾಗು ; ಬಾಡು ; ಕಂದು : ಕಾಕಸಂಘಾತದೊಳ್ ಸಿಕ್ಕಿರ್ದ ಕೋಗಿಲೆಯ ಮಱಿಯಂತೆ ನಲುಗಿ ಕತ್ತಲೆಯೊಳಿರ್ದ ಶೀತಳಮರೀಚಿಲಾಂಛನದಂತೆ . . . ಬಾಲಕನಿರ್ದನವರೆಡೆಯೊಳಂಜುತಳುತೆ (ಕ್ಷಮಿಭಾ. ೨೮-೩೧) ; ಕಳೆಗುಂದದಾವಗಂ ನಲುಗದೆ ವಾಮದೇವನುರಿಗಣ್ಣಡವಾವುಗಳಿಂ . . . ಕಂದನಾನದೀ ಬಲಮುರಿಸಂಕುಮೆಯ್ಯುಮರೆ ಮೈಮೆಯನಾಂತ ನವೀನಚಂದ್ರಮಂ (ಚಿಕವಿ. ೦-೭) ; ಒಡೆದ ಕೊಳಲ ವಾದ ನೋಡು ಇನ್ನೆಲ್ಲಿದೆ ಸುಗ್ಗಿ ಎಂದು . . . ಮುಗ್ಗಿ ಮುರುಟಿ ನಲುಗಿತು (ನಡಬಂ. ೩೭-೮) ; ತಾಯಿ, ತಾಯಿ . . . ನಲುಗಿ, ನಿನ್ನ ನೆರಳ ಸೇರಿ ನಲಿವ ಹೆಣ್ಣನು (ಹೊಂಗಳ. ೦೨-೫). ೫. ಸೊರಗು ; ಕೊರಗು ; ಕೃಶವಾಗು : ನಲುಗಿದಿರಿ ಹಿರಿದಾಗಿ ಜಡೆ ವಲ್ಕಲ ಫಲಾಶನದಿಂದ . . . ತನ್ನಿಂದಾದುದೀಯಾಪತ್ತು ನಿಮಗೆ (ತೊರರಾ. ೬-೫೫-೭) : ನಿರ್ಬಂಧಕಿಕ್ಕಲುರೆ ಕಿರಿದುಂಡು ನಲುಗಿದಂ (ಪರಶು. ೦೪-೨೩) ; ಒಲಿದವರು ಬೇರಾಗಿ . . . ಕೆಲಕಾಲ ನೂಕುವರು. ನಲುಗದೆಯೆ ಕಾಣುವರು (ಇಂಗೀತ. ೫೦-೧೭) ; ಬಡತನದ ಬವಣೆಯಿಂದ ನಲುಗಿದ್ದ ಬಳಗದ ಗೆಳೆಯರಾರೂ ಹಣ ಕೊಡುವ ಸ್ಥಿತಿಯಲ್ಲಿರಲಿಲ್ಲ (ಜೀವನ. ೨ ಅರಿಕೆ). ೬. ಬಾಗು; ನಮಸ್ಕರಿಸು : ನಾನೇನಾಡಿದೆ ನಾ ನಿನ್ನ ಪಾಡಿದೆ ನಾ ನಿನ್ನ ನೋಡಿ ನಲುಗಿದೆ ಭೈರೂಪಾ ಸ್ವಾಮಿಯಾ ದೊಡ್ಡವನೆಂದು ಮಾರೀ ಬದ್ದ (ಹುಟ್ಟಿಹ. ೦೦೦).

[ ದೇ.॥ ತಮಿ. ನಲಙ್ಕು, ನಲಕ್ಕು =ಮುದುಡಿಸು; ತುಳು. ನಲಗು; ತೆಲು. ನಲುಗು, ನಲಗು, ನಲಿಯು, ]

**ನಲುಗು$_2$** (ನಾ). ಹಾಡುವಾಗ ಧ್ವನಿಯನ್ನು ನಡುಗಿಸುವುದು ; ಕಂಪನ; ಪಲುಕು : ಚಿಕ್ಕಪುಟ್ಟ ಕಲಹಗಳು ಬಾಳಿನ ಏಕತಾನಕ್ಕೆ ನಡುನಡುವೆ ನಲುಗಾಗಿ ಬಂದು ಸೊಗಸನ್ನು ಹೆಚ್ಚಿಸುತ್ತಿದ್ದವು (ಗಂಪಮಾದು. ೭).

[ <ನಲುಗು$_1$ ]

**ನಲುಮೆ** 'ನಲ್ಮೆ' ನೋ.

**ನಲುಮೆಕೂಟ** (ನಾ). ಪ್ರೀತಿಯ ಮೇಳ; ಸ್ನೇಹದ ಗೋಷ್ಠಿ : ಮಧುರ ಹೆಣ್ಣಾ ಬೇಟವುಳಿದು ಮರಳಿ ಬರುವೆಯಾ ನಲುಮೆಕೂಟ ಕುಣಿತಗಳಲಿ ನಮ್ಮ ನರಿವೆಯಾ (ಗೋಕುನಿ. ೫೪-೨).

[ ನಲುಮೆ (<ನಲ್ಮೆ) + ಕೂಟ$_1$ ]

**ನಲುಮೆಯೋಲೆ** (ನಾ). ಪ್ರೇಮಪತ್ರ: ನೀಳವಾದ ನಲುಮೆಯೋಲೆಗಳನ್ನು ಅವನು ಸುಶೀಲಾನಿಗೆ ಬರೆಯುತ್ತಿದ್ದ (ಸಮಜೀ. ೬೭೪).

[ ನಲುಮೆ (<ನಲ್ಮೆ) + ಓಲೆ ]

**ನಲುವು** (ನಾ). ಬಲಹೀನತೆ ; ಅಶಕ್ತತೆ : (ಶ).

[ <ನಲುಗು$_1$./ತಮಿ. ನಲಿವು=ತೊಂದರೆ, ನಾಶ ]

**ನಲ್ಕಳೆ** (ನಾ). ಒಳ್ಳೆಯ ಶೋಭೆ,-ಚೆಲುವು,-ಸೊಗಸು: ಕವಿ ಗುಂಡೀತನ ಸ್ತರಕ್ಕೆ ಏರಿದಾಗ ಮಾತ್ರ ಆತನ ಕೃತಿ ನಲ್ಕಳೆಯಿಂದ ಮೆರೆಯುತ್ತದೆ (ಕಾವ್ಯಕು. ೨೦). [ ನಲ್ + ಕಳೆ$_6$ (=ಕಲೆ$_3$) ]

**ನಲ್ಕುಂಚ** (ನಾ). ಸುಂದರವಾದ ಚವರ,-ಚಾಮರ : ನೆಗಳ ಸೊಂಡಿಲ ಚಿನ್ನದಣಸಿನ ಪಲ್ಲಕ್ಕಿ ಸೊಗಯಿಪ ರತ್ನವಿಮಾನ ವಿಂಗೆ ನಲ್ಕುಂಚ ಕಾಳಾಂಜಿ ಮುಂತಾದ ವಸ್ತುಗಳನಿತ್ತನು ಕೃಷ್ಣ ಮಗಗೆ (ಮೋಹಕ. ೦೫-೨೦).

[ ನಲ್ + ಕುಂಚ ]

**ನಲ್ಕೆ** (ನಾ). ನಲ್ಮೆ ; ಅನುರಾಗ : ಮನ ಮೆಚ್ಚಿ ನಚ್ಚಿನ ನಲ್ಕೆಯುಲಿ ಮನದನ್ನಳೆನಿಸಿದಳು (ಹಾಳ್ಯಭಾ. ೧೮-೩೭). [ ನಲ್ + -ಕೆ ]

**ನಲ್ಗಂಪು** (ನಾ). ಸುವಾಸನೆ ; ನರುಗಂಪು : ಧೂಪಮುಂ ನಲ್ಗಂಪುಣ್ಮುತಿರಲಾಗಳರ್ಚಿಸಿದನಾ ಗಂಗಾಧರಂಗಬ್ಜಜಂ (ಉದ್ಭಟ. ೧೧-೭೪) ; ಚಂದನಂಗಳ ಧೂಪಧೂಮದಾಮೋದಮುಂ ಮುಂಗೀಗೆ ನಲ್ಗಂಪನೀಯುದಿಹುದಿತ್ತಜ್ಞೆ (ಶ್ರೀರಾಮಾ. ೧೦೫-೦೫೭). [ ನಲ್ + ಕಂಪು ]

**ನಲ್ಗಂಪುವೀಱು** (ಕ್ರಿ). ಸುವಾಸನೆಯನ್ನು ಬೀರು ; ನರುಗಂಪು ಸೂಸು: ನಲ್ಗಂಪುವೀಱೆ ಮೋಹಿಸುವ ಚೆಂಗಣಗಿಲೆಯರಲ್ಗೊಳಂ . . . ತಣ್ಗೊಳಂ ಮೆಱೆದುವು (ಪದ್ಮರಾ. ೮-೩೮). [ ನಲ್ಗಂಪು + ಬೀಱು ]

**ನಲ್ಗಡಲು** (ನಾ). ಸಿಹಿಯಾದ ಕಡಲು ; ಇಂಗಡಲು : ಈ ಹಿಗ್ಗು ನನ್ನೆದೆಯ ನಲ್ಗಡಲನ್ನು ತುಂಬಿ ತುಳುಕುತ್ತಿದೆ (ಫಲಸಂ. ೪೮).

[ ನಲ್ + ಕಡಲು (<ಕಡಲ್$_2$) ]

**ನಲ್ಗತೆ** (ನಾ). ಒಳ್ಳೆಯ ಕಥೆ ; ಸ್ವಾರಸ್ಯವಾದ ಕಥೆ : ಏನಾನುಮೊಂದು ನಲ್ಗತೆಯುಂ ವೇಟ ? (ರಾಮಾಶ್ವ. ೪-೧೭). ಮೇಣಾವ ನಲ್ಗತೆಯುಂ ವೇಟ್ವೆನೋ (ರಾಮಾಶ್ವ. ೫-೧). [ ನಲ್ + ಕತೆ ]

**ನಲ್ಗಬ್ಬಿಗ** (ನಾ). ಒಳ್ಳೆಯ ಕವಿ; ಸತ್ಕವಿ : ಅನಿಬರ್ನಲ್ಗಬ್ಬಿಗರೊಳಮನಿತರ ಸಾಧಾರಣಾಭಿಮಾನಂ . . . ಬಳೆಯಿಕುಂ (ಅಪ್ರತಿ. ೩-೩).

[ ನಲ್ + ಕಬ್ಬಿಗ ]

**ನಲ್ಗಳಲ್** (ನಾ). ರುಚಿಕರವಾದ ಮಜ್ಜಿಗೆ: ಎಳನೀರ್ಗಳ ತನಿಗರ್ಬಿನ ತಿಳಿರಸದ ರಸಾಲಪಕ್ವ ಫಳಸಾರದ ನಲ್ಗಳಲ ಬಹುವಿಧದ ಪಾನಂಗಳನಲ್ಲಲ್ಲೆಱೆವರಾ ಪ್ರಪಾಪಾಲಿಕೆಯರ್ (ವೃಷಪ. ೪-೩೦).

[ ನಲ್ + ಕಳಲ್$_0$ (<ಕಟಲ್$_3$) ]

**ನಲ್ಗಳವು** (ನಾ). ಲಾಭ ತರುವ ಕಳ್ಳತನ; ಹೆಚ್ಚು ಧನ ಸಿಗುವ ಚೌರ್ಯ: ತಾನುಂ ತತ್ಸಖನುಂ ಭೃತ್ಯಾನೀಕಂಬೆರಸು ಪೋಗಿ ನಲ್ಗಳವಿಂದಂ ತಾನಧಿಕ ಲಾಭಮಾದೊಡನೂನಗುಣರ್ ಮಗುಟ್ದು ಲಾಭದಿಂದಂ ಬರುತುಂ (ಧರ್ಮಾಮ್ಮ. ೨-೧೯೦). [ ನಲ್ + ಕಳವು ]

**ನಲ್ಗಾಡಿ** (ನಾ). ಮನಸೆಳೆವ ಚೆಲುವು ; ಮೋಹಕವಾದ ಸೌಂದರ್ಯ: ತಾಟಂಕಂಗಳ್ಕಪೋಲಸ್ಥಲಮನಲೆಯೆ ಮಧ್ಯಂ ಕರಂ ಬಳ್ಕೆ ತೋರ್ಪೊಳ್ಪೋಟಂ ನಲ್ಗಾಡಿಯಂ ಪುಟ್ಟಿಸೆ . . . ಕಾಂತಾಮಣಿಯುಗುರಿಸಿದಳ್ ತೈಲಮಂ ಬಾಲೆಗಾಗಳ್ (ಉದ್ಭಟ. ೮-೧೫). [ ನಲ್ + ಗಾಡಿ$_1$ ]

**ನಲ್ಗಾದೆ** (ನಾ).ಉತ್ತಮವಾದ ನಾಣ್ನುಡಿ,-ಜಾಣ್ನುಡಿ. 'ನಲ್ಗಾದೆಗಾಱ' ಪರಾ. [ ನಲ್ + ಗಾದೆ ]

**ನಲ್ಗಾದೆಗಾಱ** (ನಾ). ಉತ್ತಮವಾದ ನಾಣ್ನುಡಿಗಳನ್ನು ಬಲ್ಲವನು,-ಕಟ್ಟಬಲ್ಲವನು : (ಚತುನಿ. ೬. I, ೪೩). [ ನಲ್ಗಾದೆ + -ಗಾಱ ]

ನಲ್ಗಾಪು (ನಾ). ಉತ್ತಮವಾದ ರಕ್ಷಣೆ; ಭದ್ರವಾದ ಕಾವಲು: ಆಗುಬಿ ಮದಿಲ್ ಬಾಗಿಲ್ ಬಿಯ್ಯಗವೆಂಬಿವಱಿಂದೆ ಕಾವ ಕಾವೇವುದೊ ವೇಣ್ ಮಿಗೆ ಪಾತಿವ್ರತ್ಯದೆ ನೆಟ್ಟಗೆ ತನ್ನಂ ಕಾವ ಕಾಪೆ ನಲ್ಗಾಪಕ್ಕು (ನೇಮಿಪು. II, ೨೭). [ ನಲ್ + ಕಾಪು ]

ನಲ್ಗಿರಿ (ನಾ). ಶ್ರೇಷ್ಠವಾದ ಪರ್ವತ; ಪವಿತ್ರವಾದ ಗಿರಿ: ವಿಪುಲ ಶ್ರೀಕಟವಪ್ರ ನಲ್ಗಿರಿಯ ಮೇಲ್ನೋನ್ತೊಂದು ಸನ್ಮಾರ್ಗದಿನ್ ಉಪ ಮಿಲ್ಗಾ ಸುರಲೋಕಸೌಖ್ಯದೆಡೆಯಾನ್ತಾಮೆಯ್ದು ಇಟ್ಟಾಳ್ ಮನಮ್ (ಎಕ. II, ೯೮-೩; ಶು. 700). [ ನಲ್ + ಗಿರಿ₁ ]

ನಲ್ಗುಟುಕು (ನಾ). ಸವಿಯಾದ ಗುಟುಕು; ರುಚಿಯಾದ ತುತ್ತು: ಸುಂದರಿ ಬಾರ ಸಾರಸಕಳಾಯತಲೋಚನೆ ನೋಡದಿರ್ಪುದೇ ನಿಂದಲ ರಾಜಪಕ್ಷಿ ಪೊಸಪಣ್ಗಳ ನಲ್ಗುಟು[ಪಾಠಾಂ. ಟ]ಕಿಕ್ಕು . . . ಎಂದು ಸಾರಿಕಾಬ್ಬೆಂದಮರಾತಿಮಂದಿರದೊಳಿಂಬುದು ಬಂದ ಪುಳಿಂದಿಯರ್ಕಳಂ (ರಾಜಶೇ. ೫-೧೨). [ ನಲ್ + ಕುಟುಕು₂ ]

ನಲ್ಗುಣ (ನಾ). ಒಳ್ಳೆಯ ಗುಣ; ಸದ್ಗುಣ: ಕೃತಿಪತಿಯ ನಲ್ಗುಣಂಗಳ್ ಕೃತಿವೇಟ್ಟನ ಮನಮನಲೆದು ನಲಿಯಿಸೆ ಪೇೞ್ದಾ ಕೃತಿಯ ಕೃತಿ (ಚಿಕವಿ. ೧-೫೦). [ ನಲ್ + ಗುಣ ]

ನಲ್ಗುದುರೆ (ನಾ). ಒಳ್ಳೆಯ (ಲಕ್ಷಣಗಳಿಂದ ಕೂಡಿದ) ಕುದುರೆ; ಶ್ರೇಷ್ಠವಾದ ಅಶ್ವ: ಅಧ್ವರದ ನಲ್ಗುದುರೆ ಬಂದು ವಾಲ್ಮೀಕಿಯ ನಿಜಾಶ್ರಮದ ವಿನಿಯೋಗದುಪವನದೆಡೆಗಳು . . . ಪೊಕ್ಕೊಡೆ (ಜೈಮಿಧಾ. ೨೦-೫). [ ನಲ್ + ಕುದುರೆ ]

ನಲ್ಗುನಿಗುಂಜಿ (ನಾ). ಒಳ್ಳೆಯ ಗುಲಗಂಜಿ: ನಲ್ಗುನಿಗುಂಜಿಯೊಳ್ವರ ಮನೊಯ್ಯನೆ ನೇರ್ಪಡಿಸುತ್ತುಮೆತ್ತಲುಂ ಪಲ್ಗಳ ಕಾಂತಿಯಂ ಪರಪುತುಂ ನಗುತಂ ನಡೆದರ್ ಪುಳಿಂದಿಯರ್ (ಉದ್ಭಟ. ೨-೬೧).

[ ನಲ್ + ಗುನಿಗುಂಜಿ ( < ಗುರುಗುಂಜಿ) ]

ನಲ್ಗೆಯ್ (ಕ್ರಿ). ಶುದ್ಧಗೊಳಿಸು; ಶುಭ್ರಗೊಳಿಸು: ಪಾಲ್ಗಡಲ ಜಿಲ್ವ ಬಂಬಲ್ವೆರೆಯಸೇಲ್ಕೊಂಡು ನಲ್ಗೆಯ್ದ ತಱರಾಜಮೊಡವೆರಸದಿನಿದದೇಂ ಸಾಲ್ಗೆ ಜೇನೆಯ್ದ ಕಂದಲ್ ಸೊಗಸು ಸಾಜಿಯೋ (ಭಾವಚಿಂ. ೭-೮); "ಒಳ್ಳೆಯದನ್ನು ಮಾಡು, ಉತ್ತಮವಾಗಿ ತಯಾರಿಸು, ಹಿತವನ್ನು ಮಾಡು" (ಶಬ್ದಮ). [ ನಲ್ + ಕೆಯ್₁ ]

ನಲ್ಗೆಳದಿ (ನಾ). ಪ್ರೀತಿಯ ಗೆಳತಿ; ಪ್ರಿಯಸಖಿ: ಹಾ ನಲ್ಗೆಳದಿ . . . ಪಾಂಗುಬಿ ನಿನ್ನನಾವೆಡೆಯೊಳ್ ಕಾಣ್ಬೆಂ (ಮಿತ್ರಗೋ. ೫೦): ತಾನುಂ ನಲ್ಗೆಳದಿ ಚಂದ್ರನಾಬಿಯುಂ ಸಲ್ಲಾಪಮಗೊಳುತಿರೆಯಿರೆ (ರಾಮಾಶ್ವ. ೧೭-೩೦).

[ ನಲ್ + ಕೆಳದಿ ]

ನಲ್ಗೆಳೆಯ (ನಾ). ಪ್ರೀತಿಯ ಗೆಳೆಯ; ಪ್ರಿಯಸಖ: ಸಿರಿಯಾಳ್ವನ ಸೂನುವಿಂಗೆ ನಲ್ಗೆಳೆಯನೆನಿಪ ಸೋದರಾಧಿಪನ ದಣಿತನೂ (ವೃಷವಿ. ೩೨-೩೩).

[ ನಲ್ + ಕೆಳೆಯ ]

ನಲ್ಗೆಱೆ³ (ನಾ). (ಕೈಗಳಲ್ಲಿರುವ) ಒಳ್ಳೆಯ ಲಕ್ಷಣವನ್ನು ಸೂಚಿಸುವ ರೇಖೆ; ಶುಭರೇಖೆ: ನೀಳ್ದುಸವೆಳಗ್ಗೆ ಕಾಲ್ಗಳ್ ತಾಳ್ದಪ್ಪುವು ಕೆಂದಳಂ ಗಳೊಳ್ ನಲ್ಗೆಱೆಯ ೧ (ಚಿಕವಿ. ೪-೯೨). [ ನಲ್ + ಗೆಱೆ³ ]

ನಲ್ಗೊಣಸು (ನಾ). ಪಸುರ್ವಾದ ಮಿಱುಗುವ - ಚಿಂಕೆಯ ಮರಿ: ನಸು ಮುಗುಳ್ದ ಬಿಡಿದು ಗೂರ್ವ . . . ಸೆಱೆಯೊಪ್ಪೆ ನಲ್ಗೊಣಸು ಪಟ್ಟೆದಿರ್ದಡದನೊಂದು ಕೂಣಿಗಳ್ (ಲಬಕು. ೨ ೪೦).

[ ನಲ್ + ಕೊಣಸು₁ ]

ನಲ್ಜವ್ವನೆ (ನಾ). ಚೆಲುವೆಯಾದ ಯುವತಿ; ಸುಂದರ ತರುಣಿ: ಬಂದರಂದು ಬಲಿಪ್ಪೆ ಕವಡೆದು . . . ನಲ್ಜವ್ವನೆಯರ ಮೂನ್ನಣ್ಣ ಬೆಳ್ವರ್ಣ್ಣ ಮುನಪಣ್ಣಗೊಳಿಸಿಲ್ದತಿಗಳ (ಉದ್ಭಟ. ೫-೨೩). [ ನಲ್ + ಜವ್ವನೆ ]

ನಲ್ಜೋಡು (ನಾ). ಒಳ್ಳೆಯ ಜೊತೆ: ಇದು ಕಱು ಧರ್ಮಾರ್ಜನ ಸತಾಭ್ಯುದಯಕೋಸುಗಪೂರ್ವಾರ್ಚಿಯ ಶಾಪದಲಿ ಬಂದುದು ಹೊತ್ತು ನೂಕಿದೆ ನೊಂದುವತ್ಸರವ ಇದಕೆ ನಲ್ಜೋಡಾಯ್ತು ನಿರ್ವಿಘ್ನದಲಿ ದಾಂಟದೆ ವವಧಿಯನು (ಕುಮಾವ್ಯಾ. ಒರಿಪ. ೭-೩೩). [ ನಲ್ + ಜೋಡು ]

ನಲ್ತದ (ನಾ). (?): ನವಿಲೂರಾ ಸಿರಿಸಂಘದಾಚಿಗಣದಾ ರಾಜ್ಞೀಮತೀ ಗನ್ತಿಯಾರ್ ಅಮಲಂ ನಲ್ತದ ಶೀಲದಿಂ ಗುಣದಿನಾಮಿಕ್ಕೋತ್ತಮ ವ್ಯಾಳದೊಳ್ ನಮಗಿನ್ದೊಟ್ಟಿದುಯೆನ್ದು ಏಱಿ ಗಿರಿಯಾನ್ಸನ್ಯಾಸನಂ ಯೋಗದೊಳ್ (ಎಕ. II, ೯೭-೨; ಶು. 700).

[ P ಇದು 'ನಲ್ತಪ' ಎಂಬುದರ ಅಪಲಿಖಿತ ]

ನಲ್ತಪ (ನಾ). ಉತ್ತಮವಾದ ತಪ; ಶ್ರೇಷ್ಠವಾದ ತಪಸ್ಸು: ನೆಱೆದಾದ ವ್ರತಶೀಲ ನೋನ್ಪಿ ಗುಣದಿಂ ಸ್ವಾಧ್ಯಾಯಸಮ್ಪತ್ತಿನಿವ್ ಕಱಿ ಇಲ್ಲಲ್ತಪ ಧರ್ಮ್ಮದಾ ಸಸಿಮತಿ ಶ್ರೀಗನ್ತಿಯರ್ (ಎಕ. II, ೭೬-೨; ಶು. 700). [ ನಲ್ + ತಪ₃ ]

ನಲ್ತೆತ್ತು (ನಾ). ಒಂದು ಬಗೆಯ ಸಣ್ಣ ತೆರಿಗೆ: ಉಗ್ರಾಣ ಪರಿಧಾನ ಬೆಡಂಗೊಳು ಚಳಾಯ ದಾಯದೆಱಿ ಹಡುವರ ಬೀರವಣ ನಲ್ತೆತ್ತು ನಲುಂಗಂಟ ನಲ್ಲಾವು ದಣ್ಣಾಯ ತಪುದೆಯೊಳಗಾದ ಸಮಸ್ತ ಕಿಱುಕುಡ ವೆಲ್ಲಮಂ . . . ಧಾರಾಪೂರ್ವ್ವಕಂ ಮಾಡಿ (ಎಕ. V, ಬೇಲೂರು. ೫೯-೭೭; 1117). [ P ಇದು 'ನಲ್ಲೆತ್ತು' ಎಂಬುದರ ಅಪಲಿಖಿತವಿರಬಹುದೆ ? ]

ನಲ್ದಂಬುಲ (ನಾ). ಸವಿಯಾದ ವೀಳೆಯ; ರುಚಿಯಾದ ತಾಂಬೂಲ: ನರುದಂಬುಲ: ಪೆರ್ಚುತೊಯ್ಯಗೆ ನಲ್ದಂಬುಲಮಿಾವಳೊತ್ತಿ ಸೊಗಸುಣ್ಮ ಲ್ಚುಂಬಿಪಳ್ . . . ಕಾತರು ಮಿಗೆ ತಾಂ ಕೂಡುವಳೆಂದು ಸೌಂದರಿ ಲಸತ್ಸುಂಭಾವದಿಂ ಕಾಂತನಂ (ಉದ್ಭಟ. ೮-೧೨೩). [ ನಲ್ + ತಂಬುಲ ]

ನಲ್ದಾಣ (ನಾ). ಒಳ್ಳೆಯ ನೆಲೆ - ಆಶ್ರಯಂ: ಮುಂದಣವಧಿಯ ವನದ ವಾಸಮುಂ ಕಳೆಯೆ ನೆಮ್ಮದಿಯ ನಲ್ದಾಣವೊಂದಂ ಕೃಪೆಯಿಂ ಬೆಸಸಿಂ (ಶ್ರೀರಾಮಾ ೧೯೨-೪೪೭). [ ನಲ್ + ತಾಣ ]

ನಲ್ದಾಯಿ (ನಾ). ಅಕ್ಕರೆಯ ತಾಯಿ; ಪ್ರೀತಿಯ ಜನನಿ: ಶ್ರೀಯೆ ವಾಗ್ದೇವಿಯೆ ಸೌಭಾಗ್ಯದಾಯಿಯೆ . . . ಅಕ್ಕರೆಯ ನಲ್ದಾಯಿಯೆ ಕೃತಿಗೆ ಉನ್ನತಿಯನು ಈಯೆ (ಅಂಬಾಪ. ೩-೧).

[ ನಲ್ + ತಾಯಿ ( < ತಾಯ್) ]

ನಲ್ದೊಟ್ಟಿಲು (ನಾ). ಅಂದವಾದ ತೊಟ್ಟಿಲು: ತಾಯ್‌ವಸಿರ್ ನೀನಾದೆ ಪುಟ್ಟುವಾಗಳ್ ಮತ್ತೆ ನಲ್ದೊಟ್ಟಿಲಾದೆ. ಜೋಗುಳವಾದೆಯೆಳೆಯಂಗೆ (ಶ್ರೀರಾಮಾ. ೩೦೬-೯೦೦). [ ನಲ್ + ತೊಟ್ಟಿಲು₁ ( < ತೊಟ್ಟಿಲ್₁) ]

ನಲ್ದೊಡವು (ನಾ). ಅಂದವಾದ ಆಭರಣ: ಮುಡಿಯಿಂದಡಿವರೆಗಂ ನಲ್ದೊಡವುಗಳಂ ತುಡಿಸಲೇನು ವಾದಿ . . . ನುಡಿವಲಂತಚ್ಯುತನಂ (ಗೀತಗೋ. ೭ ೧೭). [ ನಲ್ + ತೊಡವು ]

ನಲ್ನಯ (ನಾ). ಒಳ್ಳೆಯ ರೀತಿ; ಸರಿಯಾದ ಕ್ರಮ: ಕರಂ ರಸಿಕರಿನಿಯ್ದು ತಿರ್ದಿಸಿದೊಡಲ್ಲದೆ ನಿಲ್ಲದು ಚಿತ್ರಮಂತೆ ತಿರ್ದಿಸುವುದೆ ನಲ್ನಯಂ (ಚಗವಿ. ೧-೧೫). [ ನಲ್ + ನಯ₂ ]

ನಲ್ನಿಶಿ (ನಾ). ಸರಿರಾತ್ರಿ; ಮಧ್ಯರಾತ್ರಿ: ನಲ್ನಿಶಿಯೊಳ್, ಆಱು ತಿರೆ ಸುಣೆಯುಂ. ಇರ್ಬ್ಬಾಯ, ಖಡ್ಗಮುನ್ ತುಡುಕಿ ಗುಬಾಯಿಲ್ಲನೆತ್ತಲೋ ತೆರಳ್ದನನ್ ನಾನ್ ತಡೆದು (ಅಶ್ವತ್ಥಾ. ೧೨-೨೪೯). [ ನಲ್ + ನಿಶಿ₁ ]

ನಲ್ನುಡಿ₁ (ಕ್ರಿ). ಹಿತವಾದುದನ್ನು ಹೇಳು; ಹಿತವನ್ನು ನುಡಿ: ಆಗಳಾನ್ ನೆಲ ಮುಗಿಲ ಮಕ್ಕಳಾ ಬೈತ್ಯರನ್ ನಲ್‌ನುಡಿದು ನಡಪಲ್ಕೆ ನೆಗೆದಿಟ್ಟೆನ್ (ಬಲ್ಯಪ್ರ. ೧೨-೨೩೭). [ ನಲ್ + ನುಡಿ₁ ]

ನಲ್ನುಡಿ₂ (ನಾ). ೧. ಹಿತವಾದ ಮಾತು; ಸವಿನುಡಿ: ಸುಧರ್ಮ ಭೂಮಿಪನಂ ನಲ್ನುಡಿಯಿಂ ಬೀಳ್ಕೊಂಡು (ಉದ್ಭಟ. ೭ ೬೦); ಅವನ

ನಲ್ನುಡಿ ತಾನುಪದೇಶವಾಗೆ (ರಾಜಶೇ. ೧೪-೫೯) : ಕಾಲವಶದಿಂ ಪಲತೆಱನಾದ ದುಃಖಂಗಳ್ಗೆ ಭಾಜನರಾಗಿರ್ಪ ಸೋದರರ್ಗೆ ನಲ್ನುಡಿಗಳಂ ನುಡಿದು (ಧಾರಣಾಂ. ೧೪) ; ನಲ್ನುಡಿ. ಅದುಂತಿರ್ಕೆ ಊಡಿದೆಯು–ವೇಟ್ನಗೆ ಪಾಂಡವರ ದಟಿದ ಬಿಸುನೆತ್ತರಿನ್ ಖಡ್ಗಮನ್ ? (ಅಶ್ವತ್ಥಾ. ೫-೮೦) ; ಒಂದುದಿನ ವಾದರೂ ಪ್ರೀತಿಯಿಂದ ನಲ್ನುಡಿಗಳನ್ನಾಡಿದವನು ನಾನಲ್ಲ (ಕುರುಕ್ಷೇ. ೧೦೩). ೨. ಅಂದವಾದ ಮಾತು; ಚೆಲುವಾದ ನುಡಿ : ಎಡೆಯೆಡೆಯೊಳ್ ಸಕ್ಕದದ ನಲ್ನುಡಿ ಮೆಱೆಯೆ ತಿರುಳ್ಗನ್ನಡದೊಳೆ ಕತೆಯನುಸಿರ್ವೆಂ (ರಾಮಾಶ್ವ. ೬-೧೭) : ನಲ್ನುಡಿಗಳನ್ನು ಛಂದಸ್ಸಿನ ನೂಲಿನಲ್ಲಿ ಸುರಿದು ಮಾಲೆಗೊಳಿಸಬಲ್ಲವನೇ . . . 'ಜಾಣ'ನು (ನಾಡೋಜ. ೩೪೭) ; ಕನ್ನಡದ ನಲ್ನುಡಿಗಳು ಮೂಲೆಪಾಲಾಗುತ್ತಿರುವ ಈ ದಿನಗಳಲ್ಲಿ . . . ಕನ್ನಡಿಗರ ತಿಳಿನುಡಿಯಾಗಿ ಬೆಳೆಯಿಸಲು ಈ ಕೃತಿಯು ಸಹಾಯಕ (ಕಾಲೂರ. ೦೦ ಮುನ್ನುಡಿ). [ ನಲ್ + ನುಡಿ$_2$ ]

**ನಲ್ನೆಟಲ್** (ನಾ). ೧. ಹಿತವಾದ ನೆರಳು; ತಂಪಾದ ಛಾಯೆ. ೨. (ಆಲಂ) ಪ್ರೀತಿಯ ಆಶ್ರಯ. ೧, ೨ : ಎಸೆವೈ ಕಲ್ಪಮಹೀಜದಂತೆ . . . ಬಣ್ಣಿಸೆ ಪುಷ್ಪಸ್ತಬಕಂಗಳಂ ನಖರುಚಿವ್ರಾತಂ ನತರ್ಗೊಲ್ದು ಸರ್ವಸಮಂ ನಲ್ನೆಟಲಿತ್ತು ಕಾಪೆ (ಪಸ್ತ್ರಮಂ. ೮೫). [ ನಲ್ + ನೆಟಲ್$_1$ ]

**ನಲ್ನೋಟ** (ನಾ). ಪ್ರೀತಿಯ ನೋಟ : ಕೋಟಿ ಮಾಱಿನಿಪ್ಪ ಲೆಕ್ಕದರ್ಥ ದಾಣ್ಮನಾಗಿ ನಲ್ನೋಟಕೊಳ್ಪವೀವ ಯೌವನಾತಿರೇಕ ಮಲ್ಲಣಂ (ಉದ್ಭಟ. ೧೨-೩೫). [ ನಲ್ + ನೋಟ ]

**ನಲ್ಪರಕೆ** 'ನಲ್ವರಕೆ' ನೋ.

**ನಲ್ಪರಕೆವೆಱು** (ಕ್ರಿ). ಪ್ರೀತಿಯ ಆಶೀರ್ವಾದವನ್ನು ಪಡೆ : ಭೂದಿವಿಜರ ನಲ್ಪರಕೆವೆತ್ತು ಜೇಂಗೆಬೆಲ್ಲದೂಪ್ಪಮೆಸೆಯಲ್ . . . ಅವನ ಕೈಗೆ ಧಾರೆಯನೆಱೆದನು (ಜೈಮಿಥಾ. ೩೧-೧೬).

[ ನಲ್ಪರಕೆ (< ನಲ್ವರಕೆ) + ವೆಱು$_1$ ]

**ನಲ್ಪು** (ನಾ). ಸುಂದರವಾದುದು; ಅಂದವಾದುದು : ಇವರ ನಲ್ಪಿನ ದೇಹ ಉತ್ತಮರ ದಾಹ (ವೀಶೈಪು. ೨-೩-೨೬). [ ನಲ್ + –ಪು$_2$ ]

**ನಲ್ಬರ** 'ನಲ್ಬರವು' ನೋ.

**ನಲ್ಬರವು, ನಲ್ಬರ** (ನಾ). ಸುಖಾಗಮನ; ಸುಸ್ವಾಗತ : ಬಾ, ಕೃಷ್ಣ, ನಲ್‌ಬರವು, ನಮ್ಮೊಳಗೆ ಸೇರು (ಹೊಂಗಳು. ೩೨-೧). ನಲ್ಬರ : ನಮ್ಮ ಕೌರೀ ಮಲೆಗೆ ನಿಮಗಕ್ಕೆ ನಲ್ಬರಂ (ಶ್ರೀರಾಮಾ. ೨೦೯-೧೦೦).

[ ನಲ್ + ಬರವು ]

**ನಲ್ಮಗು** (ನಾ). ಸುಂದರವಾದ ಮಗು; ಅಂದವಾದ ಶಿಶು. ನಲ್ಮಕ್ಕಳು (ಬಹುವ) : ಅಯೋಧ್ಯೆ . . . ಕೊರಳಿಂಚರದಿ ಪಕ್ಕಿಗಳನಣಕಿಸುವ ನಲ್ಮಕ್ಕಳಿಂದಮಾ ಸಗ್ಗದೂರನೆ ಸೂರೆಗೊಂಡಂತೆ ಮೆರೆದುದಯ್ (ಶ್ರೀರಾಮಾ. ೬-೧೬೪). [ ನಲ್ + ಮಗು ]

**ನಲ್ಮಿಸುನಿ** (ನಾ). ಒಳ್ಳೆಯ ಬಂಗಾರ; ಅಪ್ಪಟ ಚಿನ್ನ : ಪಿಕ್ಕಂಧೀಶ ನೊರ್ವನೆನಿಸಿದನುಮೇಶನೆಂದು ಬಿದಿ ಶಾಸನಮಂ ಬರೆದಿಟ್ಟು ನಟ್ಟ ನಲ್ಮಿಸುನಿಯ ಕಂಬದಂತೆಸೆದುದಾ ಗಿರಿ (ಶಬಶಂ. ೧-೩೬).

[ ನಲ್ + ಮಿಸುನಿ ]

**ನಲ್ಮೆ, ನಲುಮೆ** (ನಾ). ೧. ಪ್ರೀತಿ; ಅನುರಾಗ; ಒಲುಮೆ : "ತಕ್ಕು, ಅಕ್ಕಱು, ಒಱಲ್, ಕಾದಲ್ಮೆ, ನಲ್ಮೆ, ಕೂರ್ಮೆ, ಎಱಕಂ, ಓವು – ಈ ೮ ಸ್ನೇಹಕ್ಕೆ ಪೆಸರ್" (ಕಶಸಾ. ೦೯-೩೯೦) ; ಚಲಂಗಳಿಂದಂ ವಿಲಾಸಿನೀಜನದ ನಲ್ಮೆಯುಂ ಸಂಗಮುಮುಂ (ಕವಿರಾ. ೩೯೭) ; ತೆಕ್ಕುತನಕ್ಕೆ ತೆಕ್ಕುತನಮುಂ ಪುಸಿನಲ್ಮೆಗೆ ಮೋದಿ ನಲ್ಮೆಯುಂ . . . ಉಕ್ಕೆವಕುಕ್ಕೆವಗೆಯ್ವುಮುಂ ಪೊಣರ್ಚುತ್ತುಮುಪಾಯದಿಂ ಕಳಿಯೆ ಕೂಡುವನಂ ಪಿಟು ಕಂಡು ಮೆಚ್ಚಿದಂ (ಕಾವ್ಯಸಾ. ೯೦೫ ಶೂದ್ರಕ) : ಬೆಂಬೆನ್ನನೆ ಬಾರದಂದು ಲಲಿತಾಂಗಿಯ ನಲ್ಮೆಗೆ ಬನ್ನವಾಗದೇ (ಆದಿಪು. ೩-೧೭) : ಕೈದವಮಿಲ್ಲದ ನಲ್ಮೆಯುಂ ಗಾಲಿಗೆಯು ತುದಿಗೆ ತಂದು ನುಡಿದಳ್ ಮತ್ತೊರ್ವಳ್ ತನ್ನಾಣ್ಮನ ದೋರ್ವಲದಗುರ್ವಂ ನಟ್ಟೆ (ಪಂಪಭಾ. ೦೦-೪೫ ವ) : ಆತ್ಮಭವಂಗೆ ನಲ್ಮೆಯಿಂದುಱಿಪೆ ನಿಜಾತಪತ್ರ ಹರಿವಿಷ್ಟರ ಚಾಮರಮೆಂಬಿವಂ ಬಱಿಕ್ಕುಟಿದುದಾತ್ಮಂ (ಚಂದ್ರಪು. ೩-೧೦೨) : ಕಡುಬಿಂದಾತನೊಳಾಂತರೋಡಿ ಬನಮಂ ಪೊಕ್ಕುಂ ಪೊಡರ್ವಾರ್ದುರ್ ಕಾಲ್ವಿಡಿದುಂ . . . ನಲ್ಮೆಯುಂ ನುಡಿದುಂ ಮೆಯ್ಸುರಿಗೆಟ್ಟುವಿಂತು ನೆಲದೊಳ್ ನಾಣ್ಗುಂದಿ ನಿಂದಿರ್ಪರ್ (ಕಬ್ಬಿಗಕಾ. ೦೬೨) : ತಳುವಡವಿಯೊಳು ತನ್ನ ತಪ್ಪಿಸಿ ಪೋದ ನಳನೊಳು ನಲ್ಮೆಯನೆಸಗಿ . . . ಕೀರ್ತಿಯ ತಳೆದೆಸೆದಳು ದಮಯಂತಿ (ಹರಿಬ. ೩-೪೬). ೨. ಅನುಗ್ರಹ; ಕೃಪೆ; ದಯೆ : ವಿಶ ನಾಥು ಕುಡುಗವಿಃಜನಾನಂದಮುಂ ನಲ್ಮೆಯಿಂದುಂ (ಕುಸುಮಾ. ೦-೦) ; ಪುತ್ರನನೀಶನಿಂ ನಲ್ಮೆಯುಂ ಪಡೆದುಂ ಮಹೀಪತಿ ರಾಜ್ಯಮಾಳುತಮಿರ್ಪನಂ (ಹಾರಾಸ್ವ. ೪-೦೩-೪೩) : ಅವಳ ನಲ್ಮೆಯುಂ ಪಡೆವನಾಯ್ಕುಳಿಯುಂ ತ್ರಿಜಗತ್ಪ್ರಭುತ್ವಮುಂ . . . ಆ ಮಾದೇವಿ ನಿರೀಕ್ಷಿಕನ್ನನತಿವೇಲದಯಾರಸಪೂರ್ಣದೃಷ್ಟಿಯುಂ (ಮರಾಠ. ೧-೨). ೩. ಒಳ್ಳೆಯತನ; ಒಳಿತು; ಒಳ್ಳೆಯದು; ಒಳ್ಪು : "ನಲ್ಮೆಯೆ ಶುಭಮೊಳ್ಪು ಲೇಸು" (ಕಬುನಿ. ೮೫) ; ಉಮೆ ಸೌಭಾಗ್ಯದೊಳೊಳ್ಪುವೆತ್ತ ರತಿ ರೂಪಾಶ್ಚರ್ಯದೊಳು ಲಕ್ಷ್ಮಿವಕ್ಷಮ ನಂಗೀಕರಿಸಿ × × ನಲ್ಮೆಯೊಳತಿಪ್ರಾಗಲ್ಭ್ಯದೊಳು ಸೂಕ್ತಿಲಕ್ಷ್ಮಿ (ಎಕ. VIII, ಸೊರಬ. ೦೩೮-೪೫ ; ಸು. 1145) : ಮಗನೆಂದು ನಿಮ್ಮನಾಂ ಪೊರೆದ ಪೊಲ್ಲಮೆಯು ನಲ್ಮೆಯು ಮಾಡಿ ಕೈಕೊಂಡು ರಕ್ಷಿಸನೆ (ಸೌಂದಪು. ೫-೪೪) : ಕಿಱಿದಾಸೆಯಿಂದೆ ಜನರು ನಲ್ಮೆ ಪೊಲ್ಮೆಯನಱಿಯದೆ ನೆನೆದುದನೆಸಗಿ ಬಱಿದೆ ಯೌವನವನೆಲ್ಲವನು ಕಳೆವರು (ಕರ್ಣಾವ್ಯ. ೧೦-೩೦) ; ಈ ಜಾಣ್ಮೆಯಾ ನಲ್ಮೆಯಾ ಗಾಡಿಯಾ ಮೋಡಿ . . . ಅಂಗಳವಡದು ಕೇಳೀ ಜಗತ್ರಯ ದೊಳೀ ಚೆಲುವ ವ್ಯರ್ಥಂಗ್ಯೆಯುದಿರು (ವೆಂಕಾರಾ. ೫-೯-೦೦) ; ನುಣ್ಣನಪ್ಪ ಜಾಣ್ಮೆಯಿನ್ ಕಡಕಿಗೂರ್ಮೆ ನಡೆದವನ್ ನಲ್ಮೆಗೂರ್ಮೆ ನಡೆದವನ್ (ಅಂತಿಗೊ. ೦೬-೩೫೨). ನಲುಮೆ : ೧. ಆ ಪುರಕೆ ಬಂದನೊರ್ವಂ ಭಕ್ತನೊಲುಮೆಯಿಂ ಕಾಪಾಲಿಪೊಲಿವ ಶರಣಂ ತನ್ನ ನಲುಮೆಯಿಂ (ಬಸಾರ. ದೇ. ೦೦೫-೦೦) : ನಿನ್ನ ಸಸಿನೆದೆಯೊಳೋರೆಮೆಯ ನಲುಮೆಯ ನೀಡ ! (ಗೀವಿಂ. ೨೮-೨೬) : ಎಳುನೆಲೆಯಲ್ಲಿ ನೆಲಸಿಹುದು ನಿಲುವಿನ ನಲುಮೆ (ಅರಳು. ೪೦೦-೦೬). ೪. ಸಂತೋಷ : ನಲುಮೆಯಲಿ ಮಾಡಿ ದಾಸೋಹ ಹರಸೇವೆ (ಕನ್ನಡಾ. ೨೦೬).

ನಲ್ಮೆಗೆ ದಿಬ್ಯಂಬಡಿ, ನಲ್ಮೆಗೆ ದಿವ್ಯಂಬಡಿ = ಪ್ರೇಮಕ್ಕೆ ಸಾಕ್ಷಿಯಾಗಿ ದಿವ್ಯವೆಂಬ ಪರೀಕ್ಷೆಗೆ ಒಳಗಾಗು : ಶಂತನು . . . ತನ್ನ ಗಶಾಬಾಕ್ಷಿಯ ಕಂಪು ತಟ್ಟೆ ಮಧುಪಂಬೋಲ್ ಸೋಲ್ತು ಕಂಡೊಲ್ದು ನಲ್ಮೆಗೆ ದಿಬ್ಯಂಬಡಿ ಪಂತೆಪೋಲ್ ಪಿಡಿದು (ಪಂಪಭಾ. ೦-೭೦) ; ಅಂಬುಜದ[ಲ]ಮನಮರ್ಚಿ ನಿತಂಬಿನಿ ಪಿಡಿದಿರ್ದ ಕಾಚಮೆ ತಪ್ತಾಯಃಪಿಂಡಂಬೋಲ್ತಿರೆ ನಲ್ಮೆಗೆ ದಿವ್ಯಂ ಬಿಡಿದಳೋ ಮೇಣ್ಪೆಸಿವಳಾ ವ್ಯತಿಕರದೊಳ್ (ಚಂದ್ರಪು. ೫-೦೩೦).

[ ನಲ್ + – ಮೆ$_1$ /ತಮಿ. ನನ್ಮೈ, ನಱುಮೈ ]

**ನಲ್ಮೆಕಾಱ** 'ನಲ್ಮೆಗಾಱ' ನೋ.

**ನಲ್ಮೆಕಾಱಿಕೆ** (ನಾ). ನಲ್ಮೆಗಾರನ ಭಾವ; ಪ್ರೀತಿ; ಒಲುಮೆ : ಬೇಱರ ಮನೆಯಿತ್ತ ತಂಗಿಯರನು ನಲ್ಮೆಕಾಱಿಕೆವೆತ್ತ ಮೈದುನರಾ ಮಾಱು ಹೊತ್ತಾರೆಯುತ್ತೊಲಿದು ಮನ್ನಿಸಿದನು (ಭರತ. ೩೨-೮೫).

[ ನಲ್ಮೆಕಾಱ (< ನಲ್ಮೆಗಾಱ) + – ಇಕೆ ]

**ನಲ್ಮೆಗಾರ್ತಿ** (ನಾ). ಪ್ರೀತಿಯನ್ನು ಹೊಂದಿರುವವಳು; ಒಲವಿನವಳು; ನಲ್ಲೆ; ಪ್ರಿಯೆ : ಇದು ಮನ ಬಂದೊಡೆ ಕುರುಳಂ ಬೆರಲಂ ಬೇಡಿತ್ತಪೆ ತೊಡೆಳಲ್ಲೆಂದು ನುಡಿದ ನಲ್ಮೆಗಾರ್ತಿಯ ನುಣ್ಣಾತಂ ಕೇಳ್ದು ಪರ್ಮಂದವಳ್ತು (ರಾಜಶೇ. ೦೧-೦೫೬ ವ). [ ನಲ್ಮೆಗಾಱ + –$_1$ (< –ಇತ್ತಿ) ]

**ನಲ್ಮೆಗಾಜಿ, ನಲ್ಮೆಕಾಜಿ** (ನಾ). ಪ್ರೀತಿಯನ್ನು ಹೊಂದಿರುವವನು; ನಲ್ಲ; ಪ್ರಿಯ ; ಕಾದಲ ; ಒಪ. 'ನಲ್ಮೆಗಾರ್ತಿ' ಪರಾ. **ನಲ್ಮೆಕಾಜಿ** : 'ನಲ್ಮೆಕಾಜಿಕೆ' ಪರಾ. [ ನಲ್ಮೆ + – ಕಾಜಿ ]

**ನಲ್ಮೆವಾತು** (ನಾ). ಪ್ರೀತಿಯ ಮಾತು : ಏನು ಕಲಿತರೇನು ಫಲವು . . . ಕಲಿಯಲಿಲ್ಲ ನಲ್ಮೆವಾತು ದೇವಯಾನಿ ಕಲಿಪಳು (ಕವಿಸೂ೯. ೨೫-೧೧). [ ನಲ್ಮೆ + ಮಾತು$_1$ ]

**ನಲ್ಮೊಗ** (ನಾ). ಅಂದವಾದ ಮುಖ : ಅವರ ನಲ್ಮೊಗಗಳನ್ನು ಅಂಗಡಿಯೊಳಗಿನ ಹೊಗೆಯು 'ಪಾಲಿಸ್' ಮಾಡಿಬಿಟ್ಟಿತ್ತು (ಮುಂಗಾಪು. ೫೪). [ ನಲ್ + ಮೊಗ ]

**ನಲ್ಮೊರೆ** (ನಾ). ಒಳ್ಳೆಯ ಪ್ರಾರ್ಥನೆ : ಮಾನವ ಮುಡಿಯಾಗಿಡಲು ದಮ್ಮುಡಿಯು ತಮುಡಿ ನಮಗೆ ಬೇಕೀತನಿಗೊ ನಲ್ಮೊರೆಯು ತಮುಡಿ (ಗಡೀಶ. ೭೦-೬). [ ನಲ್ + ಮೊರೆ$_2$ ]

**ನಲ್ಲ$_1$** (ನಾ). ೧. ಪ್ರೀತಿಗೆ ಪಾತ್ರನಾದವನು ; ಪ್ರಿಯ : "ಕಾದಲಂ, ನಲ್ಲಂ, ಇನಿಯಂ, ಒಪಂ, ಮನದನ್ನಂ – ಈ ೫ ಪ್ರಿಯಂಗೆ ಪೆಸರ್" (ಶಶಸಾ. ೧೯-೩೮೯) : ಅನುಪಮನಂ ಬರಿಪ್ಪೆನನುಂಗಾಗದೆ ನಲ್ಲನನೀಂದು (ಕವಿರಾ. ೨-೧೦೬); ನಿನ್ನ ನಾನನುವಿಪೆನೆನ್ನ ಮೆಯ್ಪಡವೊ ನಲ್ಲನ ಮೆಯ್ಪಡವೋ ನಿಶಾಕರಾ (ಆದಿಪು. ೧೨-೪೧) ; ನಲ್ಲಳ್ ನಲ್ಲನಂ ವ್ಯವಹಾರಿ ಪಡಪಂ . . . ನೆನೆವಂತು (ಧರ್ಮಾಮೃ. ೩-೧೯೦) : ಒಡಲಿಲ್ಲದ ನುಡಿಯಿಲ್ಲದ ಕಡೆಯಿಲ್ಲದ ನಲ್ಲನ ಒಡಗೂಡಿ ಸುಖಿಯಾದೆ ಕೇಳಿರಯ್ಯ (ಮಹಾದೇ. ಬ. ೩೧-೬೭) : ಎಲ್ಲರ ವರ್ಣಿಸಬಹುದು ಎನ್ನ ನಲ್ಲ ಗುರುದೇವನ ವರ್ಣಿಸಬಾರದು (ಸಿದ್ಧವ. ೧೦೬-೬೭೮) : ಬಿಡದೆ ಸಿಂಗರಿಸಿ ನಲ್ಲರ ಗೋಷ್ಠಿಯೊಳಗಿಪ್ಪ ಮಡದಿಯರನೀಕ್ಷಿಸುತ (ಹದಶಾ. ೪-೯) ; ಪೊಲ್ಲಮೆಯ ಲೇಸು ನಲ್ಲರ ಮೆಯ್ಯೊಳ್ (ಯಶೋಧ. ೨-೪೨) : ಕೆಳದೀ ನೀಂ ಬಲ್ಲೆಯೆಂತೆಂದನುವಿಸಿದಪೆ ಬೇಸತ್ತ ನಾಂ ನಲ್ಲನೇಕಿನ್ನೊಳಗಪ್ಪಂ ನೀನುಪಶಾನಂ ಸುಟುವ ಮದನನುಂ ಬಲ್ಲಿರಾಪೆತ್ತ ಬಲ್ಲೆಂ (ಅನಂಪು. ೮-೧೨) ; ನಲ್ಲರ ಕಂಡು ನಗುವಳ ತನ್ನ ಬಲ್ಲಿದ ಗಂಡನ ಬೈದು ಕರೆವಳ . . . ಜಪ್ಪೆ ಸೀಳಬೇಕು (ಪುರಂದ. ೨-೧೪-೪) : ನಲ್ಲನಗಲಿಕೆಯಾಗ ಮನಕೆ ಕುಗ್ಗು (ನನಲ್ಲ. ೪-೧೦) ; ನಲ್ಲ ಮುಟ್ಟದ ಗಲ್ಲ, ನಲ್ಲೆಯ ಮೈಯೆಲ್ಲ ಹಿಗ್ಗಿನ ಮುಳ್ಳಿಗೆ ಸಿಕ್ಕಾಂಗ (ಸಹೀಗೀ. ೫೧-೧೧). ೨. ಗಂಡ ; ಪತಿ : "ಕಾದಲನುಂ ನಲ್ಲನುಮೆಂದೀ ಧರೆಯೊಳಗಿನಿಯನೋಪನಾ ಮನದನ್ನಂ ಸಾದರದೆ ಪತಿಯ ಪೆಸರುಗಳ್" (ಕವಿಕಂ. ೦೭೦) ; ಎಲ್ಲರ ಗಂಡರ ಪರಿಯಂತಲ್ಲ ನೋಡವ್ವಾ ನಮ್ಮ ನಲ್ಲ ಸುಳಿಯಲಿಲ್ಲ ಸುಳಿದು ಸಿಂಗಾರವ ಮಾಡಲಿಲ್ಲ (ಬಸವ. ೮೪೯). ೩. ಒಡೆಯ; ಸ್ವಾಮಿ: ಧಾತ್ರೀಶ್ವರ ಚೂಡಾಮಣಿ ವಿಜಯಕ್ಕೆ ನಲ್ಲನಾಹವಮಲ್ಲ ಅವನೀಮಣ್ಡಳಮಂ . . . ಪಾಳಿಸಿದಂ (ಸೌಇಇ. IX-I, ೦೨೬-೧ : 1064) ; ದಕ್ಷಿಣದಿಶಾವಿಷಯ ಗಡಿಯಂಕಮಲ್ಲಂ ವಿಬುಧಸಂದೋಹಕ್ಕೆ ನಲ್ಲಂ (ಎಕ. XI, ಚಿತ್ರದು. ೩೪-೦೩; 1123) ; ವೀರದ ಚಾಗದ ಕಾವ ಪೆಮ್ಮೆಗಾವಂ ತೋಣೆಯೆಂದು ಬಣ್ಣಪರು ಮಲ್ಲನನುದಘಯಶಕೆ ನಲ್ಲನಾ (ಎಕ. VI, ಕಡೂರು. ೩೦-೨೬ : 1170) ; ಗುಣಕ್ಕೆ ನಲ್ಲ ಗಣೇಶಂ (ಕಮುದ. ೭೫ ಪ್ರಯೋ). ೪. ಒಳ್ಳೆಯಂವನಂ : (ಕ). ೫. ಒಳ್ಳೆಯತನ ; ಶ್ರೇಷ್ಠತೆ : "ಒಳಿತು, ನಲ್ಲ, ಲೇಸು, ಚೆನ್ನ" (ಕಂನುಡು. ೮೦). ೬. ಅಂದ ; ಚೆಲುವು : (ಕ).

ನಲ್ಲರ್ (ಬಹುವ) ೧. ಪ್ರೀತಿಗೆ ಪಾತ್ರರಾದವರಂ : ಎರೆದರ್ ಸಂತುಷ್ಟರಾದರ್ . . . ಬಿರ್ದುಗೊಂಡಾಡುವ ಮದನಮದೋನ್ಮತ್ತೆಯರ್ ನಲ್ಲರಾದರ್ ನರರಾರ್ ನಿನ್ನನ್ನರಿನ್ನೀ ಭುವನಭವನದೊಳ್ ಗಂಗಚಕ್ರಿಯ ಧಾಂಕಾ (ಕಾವ್ಯಸಾ. ೨೧೫ ಚೂದ್ರಕ). ೨. ಹಿತವರು : ಪೊಡೆವಡುವಪ್ಪಿಕೊಳ್ವ ನೆನೆಯುತ್ತಿರಿವೆಂಬ . . . ಕೈಯೆಡೆ ನಿಮಗೆಂದೊಡಂಬಡಿಪ ನಲ್ಲರಗಲ್ಕೆಗೆ ಕಣ್ಣನೀರ್ಗಳಂ ಮಿಡಿವ ಬಹುಪ್ರಕಾರಜನಸಂಕಟಮೊಪ್ಪಿದುದಾ ಪ್ರಯಾಣದೊಳ್ (ಆದಿಪು. ೪-೫೭); ನಂಟರುಂ ಶಂಭುವೇ ನಲ್ಲರುಂ ಶಂಭುವೇ (ಅರಿರ. ದೇ. ೦೭೩-೧೫). ೩. ಪ್ರಿಯಪ್ರೇಯಸಿಯರಂ ; ಪರಸ್ಪರ ಒಲಿದವರಂ : ಮಲ್ಲಿಗೆಗಳ್ ವಸಂತದೊಳ್ ಬರಿದೊಡೆ ನಲ್ಲರಂ ನೆನೆದು ನಲ್ಲರ ಮೆಲ್ಲೆರ್ದೆಗಳ್ ನಿರಂತರಂ ಬಿರಿವುವದೆಂತೊ ಮಲ್ಲಿಗೆಗೆ ನಲ್ಲರ ಮೆಲ್ಲೆರ್ದೆ ಮೇಳಗೊಂಡುದೋ (ಆದಿಪು. ೧೧-೧೧೦) ; ನಲ್ಲರೊಳ್ಮೊಗಂ ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋಟಕ್ಕೊಡಾವ ಬೆಟ್ಟುಗಳೊಳಮಾವ ನಂದನವನಂಗಳೊಳಂ ಬನವಾಸಿದೇಶದೊಳ್ (ಪಂಪಭಾ. ೪-೨೮) : ನಲ್ಲರ ಕೂಡುವಾಸೆಯೆ ಬರ್ದುಕುವುದರ್ಕೆ ನಿಮಿತ್ತಮಾಗದೇ (ಕಾದಂಸಾ. ೩೨೮) ; ಬೇಟೂರ್ಗೆ ಪೋದ ನಲ್ಲರ ನೆನೆದು ದೂಟಿಸುವ ನೀಟಿಯರ ನಿಡುಸುಯ್ಯ ಗಡಣದಿಂ ಜೌವನ ಮೇಟಿಯುಂ (ಕಬ್ಬಿಕಾ. ೫೪). ನಲ್ಲರ ಮರುಳ = ಒಂದು ಬಿರುದಂ : ಮಹಾರಾಜಾ[ಧಿ]ರಾ[ಜನೆ (ನ)]ಲ್ಲರ ಮರುಳನಾನೆ[ಪೆಡೆ]ಙ್ಗಂ (ಎಇ. XIX, ೨೦೯-೪ : 963). ನಲ್ಲಳ್ = ೧. ಪ್ರಿಯೆ ; ಪ್ರೇಯಸಿ : "ಮನದನ್ನಳ್ ಕಾದಲೆಯೆಂದಿನಿಯಳ್ ತಾನೋಪಳೆಂದು ನಲ್ಲಳೆನಲ್ಕೆಂದನುನಯದಿಂ ಪ್ರಿಯೆ ತಾಂ" (ಕವಿಕಂ. ೦೭೨) ; ಕೆಲದೊಳ್ ನಿಲೆಯುಂ ಜ್ಯೋತ್ಸ್ನಾವಿಲಾಸದೊಳ್ ಬಗೆದನಿಲ್ಲ ನಲ್ಲಳನಿನಿಸಂ (ಕವಿರಾ. ೩-೯೪) ; ಅಗಲ್ಕೆ ಮುಳಿಸೆಂಬೆರಡುಂ ಗಡ ಕಾಳಕೂಟಮಾಗಮರ್ದಿನ ಕಾಳಕೂಟದೊಡವುಟ್ಟಿದಳೆಂದಪೆನೆನ್ನ ನಲ್ಲಳಂ (ಆದಿಪು. ೧೨-೨೮) ; ನಲ್ಲಳೊಲುಮೆಗಾಗಿ ಸಖಿ ಸಖಿ ದೂತಿಯರೆಲ್ಲರ ಮನ್ನಿಪನಂತೆ (ಭರಜ. ೨-೪೫). ೨. ಹೆಂಡತಿ ; ಪತ್ನಿ : ಎನ್ನ ನಲ್ಲಳೆಯೆಂದು ಪ್ರಳಾಪಂಗೆಯ್ದು (ಪಡ್ಮರಾ. ೦೯೧-೫) : ಅಂತು ಕಂಡು ಮಾಸಂಗೊಂಡೆತ್ತಿಕೊಂಡು ಮನೆಗೆ ತಂದು ರಾಧೆಯೆಂಬ ತನ್ನ ನಲ್ಲಳ ಸೋಂಕಿಲೊಳ್ ಕೂಸನಿಟ್ಟೊಡೆ (ಪಂಪಭಾ. ೧-೯೬ ವ). ನಲ್ಲಿರ್ = (ಸಂಬೋಧನಾ ರೂಪದಲ್ಲಿ) ಒಳ್ಳೆಯವರಂ : ನಿಲ್ಲದಿರಿಂ, ಅಣ್ಣಂದಿರ್, ಓಡಿಂ. ತಡೆಯ ಪೊಟ್ಟಲ್ತು, ಓ ನಲ್ಲಿರ್ (ಅಶ್ವತ್ಥಾ. ೩೩-೬೩೭). P ತಮಿಳಿನಲ್ಲಿ ಪಂಥ್ಯಮಪುರುಷವಾಚಕ ಪ್ರತ್ಯಯವು ಗುಣವಚನಾದಿಗಳಿಗೆ ಹತ್ತಿ ಸಂಬೋಧನಾರ್ಥವನ್ನೂ ಕೊಡುತ್ತದೆ. ಉದಾ–"ನಲ್ಲೀರ್=ಒಳ್ಳೆಯವರೇ!" "ಪೆರಿಯಾಯ್=ಹಿರಿಯಂವನೇ (ಳೇ)!" (ಸಮಾಲೋ. ೨೫೨). [ ನಲ್ + – ಅ$_7$ ]

**ನಲ್ಲ$_2$** (ಗು). ೧. ಒಳ್ಳೆಯ ; ಚೆನ್ನಾದ ; ಶ್ರೇಷ್ಠವಾದ. 'ನಲ್ಲಗುಣ', 'ನಲ್ಲಪಾಲ್' ಪರಾ. ೨. ಅಂದವಾದ; ಸುಂದರವಾದ. 'ನಲ್ಲವೆಣ್' ಪರಾ. ೩. ಶುದ್ಧವಾದ ; ನಿರ್ಮಲವಾದ. 'ನಲ್ಲತ್ತೈಲ', 'ನಲ್ಲಭಕ್ತಿ' ಪರಾ. ೪. ಶುಭಕರವಾದ ; ಮಂಗಳಕರವಾದ. 'ನಲ್ಲವರಕೆ' ಪರಾ. [ ದೇ.॥ ತಮಿ. ಮಲ. ನಲ್ಲ, ತುಳು. ನಲ್, ನಲ ; ಕೊಡ.ನಲ್ಲೇ ; ತೆಲು. ನಲುವು ; ಗೊಂಡಿ. ನೆಲಾ ]

**ನಲ್ಲ$_3$** 'ನೆಲ್ಲ' ನೋ.

**ನಲ್ಲಂಬು** (ನಾ). ೧. ಮೋಹವನ್ನುಂಟುಮಾಡುವ ಬಾಣ : ನಲ್ಲಂಬಿಂದಿಸೆ ಪುಷ್ಪಬಾಣನೆರ್ದೆಯಂ ಬೆಂಬಿಟ್ಟು ಬೆಳ್ಳಾಗಿ ತಕ್ಕೆಲ್ಲಂ ಕೆಟ್ಟೆರ್ದೆಗೆಟ್ಟು (ಕಾವ್ಯಸಾ. ೫೫೧ ಚೂದ್ರಕ) ; ಪುಲ್ಲಶರಂಗಿಸುವೆಡೆಗಿವೆ ನಲ್ಲಂಬುಗಳೆನಿಸಿ ತುಱುಗಿ ಮಲರ್ದಲರ್ದೆಸೆವೀ ಮೊಲ್ಲೆಯುಮೊಲಿಸಿದ ನಲ್ಲರ ಲಲ್ಲೆಯುಂ ಮಾರಾರ ಮನಮುಮಂ ಸೋಲಿಸದೇ (ಆದಿಪು. ೧೧-೧೧೪) ; ಅಂಗಜಂ ಪೆಲ್ಲಗೆ ಪಾರ್ದಾರ್ದಾಗಳುಂ ಕಿನ್ನರಯುವತಿ ಮೃಗೀವ್ರಾತಮುಂ ತನ್ನ ನಲ್ಲಂಬುಗಳಿಂದೆಚ್ಚೆಚ್ಚು ಮೆಚ್ಚಂ ಸಲಿಸುವಂ (ಪಂಪಭಾ. ೪-೨೩). ೨. ತೀಕ್ಷ್ಣವಾದ ಬಾಣ ; ಹರಿತವಾದ ಬಾಣ : ತನ್ನ ನಲ್ಲಂಬುಗಳಿಂದಮಾರ್ದಿರದಡುತಿಸೆ ಭೂಭುಜರೆಲ್ಲಮಲ್ಲಿ ಬಿಲ್ಲುಂಬೆಜಗಾಗೆ (ಪಂಪಭಾ. ೧೦-೪೨) ; ಅವರ ಪಿಡಿವ ಬಿಲ್ ಬಿಲ್ಲೆಮ್ಮೆಬುಗಳುಮಪರಿತ್ತ ನಲ್ಲಂಬುಗಳೆನೆ ಬಟಿಗಾಯದಂತು ಚಲಮನೆ ಕಾಮಂ (ಪಂಪಭಾ. ೧೨-೩೯). [ ನಲ್ + ಅಂಬು$_2$ ]

**ನಲ್ಲಗನ್ನೆ** (ನಾ). ಒಂದು ಬಗೆಯ ಗಿಡ : ಕೊರ್ಮೆ, ಗನಿಜೆಲೆ, ಈಜಿಮುಳ್ಳು, ಕೊಂಬೆ, ನಲ್ಲಗನ್ನೆ (ಮೃಜಿಗಿ. ೧೫-೨೭೦). [ ? ]

**ನಲ್ಲಗುಣ** (ನಾ). ಒಳ್ಳೆಯ ಗುಣ ; ಸದ್ಗುಣ : ಬಳಿಯುಂ ಬೆಳಗಿಪ್ಪಂ ತಾಂ ತನ್ನ ನಲ್ಲಗುಣಂಗಳಿಂ (ಸಾನಂದ. ೨-೩೪). [ ನಲ್ಲ$_2$ + ಗುಣ ]

**ನಲ್ಲತನ** (ನಾ). ಒಳ್ಳೆಯತನ ; ಸಜ್ಜನಿಕೆ : ನಲ್ಲತನಕೆ ಬಲ್ಲತನಕೆ ಲೋಕದೊಳು ನೀನಲ್ಲದುಂಟೆ ನಿನ್ನ ನಡೆಗೆ ನಲ್ಲರು ನಾರಿಯರೊಲಿವರು (ಭರತ. ೬೬-೩೯). [ ನಲ್ಲ$_2$ + – ತನ ]

**ನಲ್ಲತೈಲ** (ನಾ). ಒಳ್ಳೆಣ್ಣೆ ; ಶುದ್ಧವಾದ ಎಣ್ಣೆ ; ಅಚ್ಚೆಣ್ಣೆ : ನಲ್ಲತೈಲದೊಳಡರ್ದ ಸೊಡರಾ ಎಳ್ಳಿನಿಂದಲರುವುದೆ (ಬಸವು. ೫೧-೩೭). [ ನಲ್ಲ$_2$ + ತೈಲ$_1$ ]

**ನಲ್ಲತ್ತೂರ್** (ನಾ). ಒಂದು ಊರಿನ ಹೆಸರು : ಪುತ್ತೂರುಡೆ ಶಿವಮಾರಮ್ಮಂ ದುಣ್ಣಗೆಗ್ಗಂ ನಲ್ಲತ್ತೂರೊಡೆ ಬಗ್ಗಮನೆ ಬಳಿಗಮುಂ ಅಯ್ದೂಮ್ಪು . . . ಕೊಟ್ಟೂದು (ಎಕ. X, ಕೋಲಾರ. ೨೩೧-೩ ; ಸು. 800 ?). [ ? + ಊರ್ ]

**ನಲ್ಲಪಾಲ್** (ನಾ). "ಒಳ್ಳೆಯ ಅದೃಷ್ಟ, ಸೌಭಾಗ್ಯ" (ಅಂತಿಗೂ. ಕೋಶ) : ಈಯೊಂದು ನಲ್ಲಪಾಲೆನಗೆ ತಾನ್ ಬಂದತ್ತು (ಅಂತಿಗೂ. ೧೯-೩೮೪). [ ನಲ್ಲ$_2$ + ಪಾಲ್$_2$ ]

**ನಲ್ಲಭಕ್ತಿ** (ನಾ). ಶುದ್ಧವಾದ ಭಕ್ತಿ : ನಲ್ಲಭಕ್ತಿಯೊಳಿರ್ದು ಏಣಾದಿನಾಥ ಭೂವಲ್ಲಭನ ಭಕ್ತಿಗಾನಂದಿಸಿ (ಗುರುಬಾ. ೩-೪೫). [ ನಲ್ಲ$_2$ + ಭಕ್ತಿ ]

**ನಲ್ಲಮನ** (ನಾ). ೧. ಒಳ್ಳೆಯ ಮನಸ್ಸು. ೨. ಅನುರಾಗದಿಂದ ಕೂಡಿದ ಮನಸ್ಸು. 'ನಲ್ಲಮನಂದೋಱು' ಪರಾ. [ನಲ್ಲ$_2$ + ಮನ$_1$ ]

**ನಲ್ಲಮನಂದೋಱು** (ಕ್ರಿ). ೧. ಒಳ್ಳೆಯ ಮನಸ್ಸನ್ನು ತೋರಿಸು. ೨. ಒಲವನ್ನು ತೋರಿಸು ; ಅನುರಾಗವನ್ನು ವ್ಯಕ್ತಪಡಿಸು : ಈಱಿಯು ಮೆನಗೆರಡಱಿಯದ ನಲ್ಲಮನಂದೋಱುವುದು ಸಲ್ಗೆದೋಱುವುದುಮಾವುದು ದೋಸಂ (ಪಂಪಭಾ. ೫-೧೭ ವ). [ ನಲ್ಲಮನ + ತೋಱು ]

**ನಲ್ಲಮುದ್ದು** (ನಾ). ಪ್ರೀತಿಯ ಮುದ್ದು,-ಲಲ್ಲೆ : ನಲ್ಲಮುದ್ದಿಗೆ ಬಯಸುವಂ ಮನದಲ್ಲಿ ಕೇಳ್ವನು ನಸುತೊದಲಿಸುವ (ಬಸವು. ೪೭-೩೨). [ ನಲ್ಲ$_2$ + ಮುದ್ದು ]

**ನಲ್ಲಯ್ಯ** (ನಾ). ಒಬ್ಬಾತನ ಹೆಸರು : ದಾತಾರಂ ದೇಯಿಮಯ್ಯಸೆಟ್ಟಿಯರಗಂ ಮುಟ್ಟಂ [ನ]ಲ್ಲಯ್ಯನುಂ ಮರಳಯ್ಯನುಂ (ಸೌಇಇ. XX, ೧೯-೭೦ ; 1016). [ ನಲ್ಲ$_2$ + ಅಯ್ಯ$_1$ ]

**ನಲ್ಲರಿವು** (ನಾ). ಒಳಿತು ಕೆಡುಕಂಗಳ ತಿಳಿವಳಿಕೆ ; ಸದಸದ್ವಿವೇಕ : "ಒಪ್ಪುತಪ್ಪುಗಳ ಪ್ರಜ್ಞೆ ; ಸದಸದ್ವಿವೇಚನೆ . . . ಒಳ್ಳುಣಿಸರಿವು ; ನಲ್ಲರಿವು" (Conscience. ಇಂಕನಿ). [ ನಲ್ + ಅರಿವು (<ಅಱಿವು) ]

**ಲ್ಲರೂಪು** (ನಾ). ಅಂದವಾದ ರೂಪ ; ಸುಂದರವಾದ ರೂಪ: ನಲ್ಲರೂಪಿಲ್ಲೆಂದೊಡೀಕ್ಷಿಸು ಚೆಲ್ವಗಂಗಳಿಂ (ಬಸವು. ೪೦-೦೪). [ ನಲ್ಲ$_2$ + ರೂಪು ]

**ನಲ್ಲಲರ್** (ನಾ). ಅಂದವಾದ ಹೂವು ; ಸುಗಂಧಭರಿತವಾದ ಪುಷ್ಪ : ನಲ್ಲಲರ ಕಂಪು ಪೀನಸದಲ್ಲೊಂದಿದವಂಗೆ ಸೊಗಸದಿರೆ ಕೆಟ್ಟಪುದೇ (ಉದ್ಭಟ. ೦-೧೭). [ ನಲ್ + ಅಲರ್$_2$ ]

**ನಲ್ಲಲೋಹ** (ನಾ). ಉತ್ತಮವಾದ ಧಾತು,-ಲೋಹ ; ಚಿನ್ನ : ಬೆಳ್ಳಿ ಮೂಕುತಿ ಮುರುಹು ತಾಂಬ್ರಂ ನಲ್ಲಲೋಹಂ ಕಂಚು ಮೊದಲಾದೆಲ್ಲಮಂ ಒಟ್ಟೈಸಿ ತರಿಸಿ (ಬಸವು. ೧೬-೮). [ ನಲ್ಲ$_2$ + ಲೋಹ ]

**ನಲ್ಲವರಕೆ** (ನಾ). ಮಂಗಳಕರವಾದ ಹರಕೆ ; ಶುಭಾಶೀರ್ವಾದ : ಅವರ್ ನಲ್ಲವರಕೆಯುಂ ಪರಸುವುದುಂ (ನೇಮಿಪು. ೯-೮೬ ವ). 'ನಲ್ವರಕೆ' ಪರಾ. [ ನಲ್ಲ$_2$ + ಪರಕೆ$_1$ ]

**ನಲ್ಲವಸ್ತು** (ನಾ). ಪ್ರಿಯವಾದ ವಸ್ತು : ಗೌರೀವಲ್ಲಭಂ . . . ನಲ್ಲವಸ್ತುಗಳಂ ಬಯಸುವಂ (ಬಸವು. ೨೫-೧೮). [ ನಲ್ಲ$_2$ + ವಸ್ತು ]

**ನಲ್ಲಪೂ** (ನಾ). = ನಲ್ಲಲರ್ : ಅವಿರಳವಾಗಿ ಝೇಂಕರಿಸುತುಂ ವನವಲ್ಲಿಯ ನಲ್ಲಪೂಗೆ ಪಾಱುವ ಮದಭೃಂಗಸಂಚಯಂ (ಕುಸುಮಾ. ೧೪-೨೩) [ ನಲ್ಲ$_2$ + ಪೂ$_2$ ]

**ನಲ್ಲವೆಣ್** (ನಾ). ಅಂದವಾದ ಹೆಣ್ಣು ; ಸುಂದರಸ್ತ್ರೀ : ನಲ್ಲವೆಂಗಳ ವಸ್ತ್ರವರು ಪೆಣ್ಣ ತಂದರದಿಲ್ಲದಿದ್ದವರು ಭೂಷಣವ ಝಲ್ಲಿಪಟ್ಟಿಗಳು ಮುಂತಾದವ ತಂದಿದ್ದರೆಲ್ಲರ ಕರೆಸಬೇಕೆಂದ (ಭರತ. ೩೧-೦೬). [ ನಲ್ಲ$_2$+ ಪೆಣ್ ]

**ನಲ್ಲಪೊಣರ್** (ನಾ). ನಲ್ಲರ ಜೋಡಿ ; ಪ್ರಿಯ ಪ್ರೇಯಸಿಯರ ಜೊತೆ : ಕಂದದೊಳ್ ಭುಜಲತಾವಳಿ ತಳ್ತಿರೆ ಬಾಯೊಳಗೊಂದಿ ಬಾಯ್ ತೊಡರ್ದಿರೆ ಕೂಡೆ ನಿದ್ದೆಗಿಳಿದಿರ್ದುವು ನಲ್ಲಪೊಣರ್ ನಿಶಾಂತ್ಯದೊಳ್ (ಸೂಕ್ತಿಸು. ೯-೬೦). [ ನಲ್ಲ$_2$ + ಪೊಣರ್$_2$ ]

**ನಲ್ಲಪೋಗಂಡಿಕೆ** (ನಾ). ತನ್ನ ಸಮಾನರಿಲ್ಲವೆಂದು ಭಾವಿಸುವಿಕೆ ; ಅತಿಶಯವಾದ ಒಣಜಂಬ ; ಅಧಿಕವಾದ ದುರಹಂಕಾರ : "ಅಹೋ ಪುರುಷಕಾ ಎಂಬುದು ನಲ್ಲಪೋಗಂಡಿಕೆ[ ಒಣಜಂಬ, ವೃಥಾದರ್ಪ ]" (ಹರಾಯು. ೧೨೯-೯೯). [ ನಲ್ಲ$_2$ + ಪೋಗಂಡಿಕೆ ]

**ನಲ್ಲಳಿ** (ನಾ). (?) : ಮಿಸುಗುತುಮಿರ್ಪ ಬಲ್ಸೊನೆಯ ಸನ್ನೆಗೆ ಕಾಂಚನಕೇತಕೀ ದಳಪ್ರಸವದಳಂಗಳೋಲೆಗೊಡೆ ನಲ್ಲಳಿಗಪ್ಪುವು ನಂದನಂಗಳೊಳ್ (ಸೂಕ್ತಿಸು. ೪-೩೪). [ ? ]

**ನಲ್ಲಾಲು** 'ನಲ್ಲಾವು' ನೋ.

**ನಲ್ಲಾಟ** (ನಾ). ಉಲ್ಲಾಸಕರವಾದ ಆಟ ; ಚೆಲ್ಲಾಟ ; ವಿನೋದ : "ಆಟ, ಕೇಳಿ, ಚಿಣ್ಣಾಟ (ಕೂಸಾಟ), ಹುಡುಗಾಟ, ನಲ್ಲಾಟ" (ಕಂನುಹು. ೭೮) : ಪುಲ್ಲೆಗಂಗಳ[ ಳಳ ]ಯರ ಚಲ್ವಿಕೆಗಳ ಕಂಡು ನಲ್ಲಾಟ ವಾಡುವೆ ಖಿ ಲ್ಲಮನವೆ (ಮ್ಯಲಾರ. ೧೯೮-೮). [ ನಲ್ + ಆಟ ]

**ನಲ್ಲಾಮು** (ನಾ). ಒಂದು ಬಗೆಯ ತೆರಿಗೆ : ಚಳಾಯ ದಾಯದೆಱ ಹಡುವರ ಬೀರವಣ ನಲ್ವತ್ತು ನಲುಗಂಟಿ ನಲ್ಲಾಮು ದಣ್ಣಾಯ ತವುಡೆಯೊಳಗಾದ ಸಮಸ್ತ ಕಿಱುಕುಡವೆಲ್ಲವಂ (ಎಕ. V, ಬೇಲೂರು. ೫೯-೮೭ ; 1117). 'ನಲ್ಲಾವು' ಪರಾ. [ ☞ ಇದು 'ನಲ್ಲಾವು' ಎಂಬುದರ ಅಪಲಿಖಿತವಿರಬಹುದು ]

**ನಲ್ಲಾಲ** (ನಾ). ಒಂದು ಊರಿನ ಹೆಸರು : ಕೊಱಕುಂದವಿಷಯೇ ನಲ್ಲಾಲನಾಮಗ್ರಾಮಃ (ಮ್ಯಆರಿ. ೧೯೨೪, ೭೯-೩೪ : ಸು. 6ನೆಯ ಶ೫). [ ? ]

**ನಲ್ಲಾವು, ನಲಾವು, ನಲ್ಲಾಲು, ನಾಲ್ಲಾವು** (ನಾ). ಒಳ್ಳೆಯ ಹಸುಗಳ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ಎಳ್ಳು ಜೋಳ ನಲ್ಲಾವು ನಲ್ವತ್ತು ಕಳುಕು ಕಂಡಿಕೆವಣ . . . ಆಗಾಮ್ಯಕವೊಳಗಾಗಿ ಸರ್ವಾಯ ಶುದ್ಧಿ (ಎಕ. VI, ಕಡೂರು. ೨೦-೨೮ ; 1186): ಮಾನಿಬ್ಬರು ಮಹಾಜನಂಗಳ ಭೋಜನಕ್ಕಂ ಬಿಟ್ಟ ನಲ್ಲೆಂಮೆ ನಲ್ಲಾವು . . . ಧಾರಾಪೂರ್ವಕಂ ಮಾಡಿ ಕೊಟ್ಟರು (ಸೌಇಇ. IX-1, ೩೪೯-೭ ; 1282). **ನಲಾವು**: ಶ್ರೀಕರಣ ಸುಂಕ ಪಂನಾಯ ಅಡಕೆಯ ಸುಂಕ ಪಣವೊಂದಱ ಸೇಸೆ ವೀರಸೇಸೆ ತೊಡರು ನಲಾವು ನಲ್ವತ್ತು ಕಳಕು ಕಂಡಿಕೆವಣ . . . ಧಾರಾಪೂರ್ವಕಂ ಮಾಡಿ ತಾಂಮ್ರಶಾಸನಮಂ ಕೊಟ್ಟರು (ಮ್ಯಆರಿ. ೧೯೪೦, ೩-೨೫ : 1215). **ನಲ್ಲಾಲು**: ಗ್ರಾಮಗದ್ಯಾಣ ನಲ್ಲಾಲು ಸುಂಕ ತಳವಾರಿಕೆ (ಎಕ. VIII, ತೀರ್ಥಹ. ೧೭೮-೨೬ ; 1420). **ನಾಲ್ಲಾವು**: ನಾಲ್ಲಾವು ನಲ್ವತ್ತು ಗಣವಿ (ಎಕ. V, ಹಾಸನ. ೮೪-೬೩ : 1230). 'ನಲ್ವತ್ತು' ಪರಾ. ☞ ಇಲ್ಲಿ ಮುಖ್ಯೋಲ್ಲೇಖವನ್ನುಳಿದು ಮಿಕ್ಕುವು ಅಪಲಿಖಿತ. [ ನಲ್ + ಆವು ]

**ನಲ್ಲಿ$_1$, ನಳಿ$_3$, ನಳ್ಳಿ$_2$** (ನಾ). ೧. ನಾಳ ; ಕೊಳವೆ : "ನಲ್ಲಿ – ನಾಲೀ = ನಳ್ಳಿ" (ತದ್ಭಕೋ. ೨೧). ೨. ನೀರನ್ನು ಪೂರೈಸುವ ಕೊಳವೆ ;

ಕೊಳಾಯಿ ; ನಳ : ನನ್ನ ಮಾಗ್ಯಾಹಿನಿ ಬೇಸಗೆ ದಿನದ ನಲ್ಲಿಯ ನೀರಿನಂತೆ ತೊಟತೊಟ ಎಂದು ಕ್ಷೀಣವಾಗಿ ಜಿನುಗುತ್ತಿತ್ತು (ನಂಟರು. ೩೯) : ಎಲ್ಲಿ ಕಿರುಗಿದರಲ್ಲಿ ಅಮೃತ ಸೂಸುವ ನಲ್ಲಿ (ಚಂಡಮು. ೮-೧೧೦) ; ಬೆಳಗ್ಗೆ ಆಕೆ ಎಂದಿನಂತೆ ನೀರಿನ ನಲ್ಲಿಯನ್ನು ತೆರೆದಿದ್ದು ಕೇಳಿಸಿತು (ಒಂಟಿದ. ೬೯). ನಳಿ$_3$ : ೨. ಶರೀರದಲ್ಲಿರುವ ಯಾವುದೇ ನಾಳ,-ತಂತು : ಬೆನ್ನ ನಳಿಯುಚಿದಂಗೆ ಮನ್ನಣೆಯುಂ ಒರಿದಕ್ಕು ಉನ್ನತವಕ್ಕು ಸಿರಿಯಕ್ಕು (ಸರ್ವಜ್ಞ. ೫೪೭). ೩. ಕೊಳವೆ ಅಥವಾ ನಾಳದಂಥ ಸಾಧನ : ಅವನು ಟೆಲಿಫೋನಿನ ನಳಿಗಳನ್ನು ಕೆಳಗಿಟ್ಟು, ಕಳ್ಳನ ಈ ಕಿವಿಮಾತುಗಳನ್ನು ಯೋಚಿಸುತ್ತ ಕುಳಿತುಕೊಂಡನು (ಕಳ್ಳರಾ. ೧೮) ; ರಾವಜೀಶಾಕಾನ ಜೋಡುನಳಿಯ ಬಂದೂಕಿನಿಂದ ಅಗ್ನಿಕಿಡಿ ಸಿಡಿಯಬೇಕು (ದೀಶಹ. II, ೨೨೨). ನಳ್ಳಿ$_2$ : ೧. ಕೆಲವು ಮನೆಗಳಲ್ಲಿ ಕೊಳಚೆ ನೀರು ಹೋಗಲು ನಳ್ಳಿಗಳಿರುತ್ತವೆ (ಆಚುಸಾ. ೪೦).

ನಲ್ಲಿ ನಿಲ್ಲು = ನೀರು (ಕೊಳಾಯಿಯಲ್ಲಿ) ನಿಂತುಹೋಗು : ನೀರು ತುಂಬಿಟ್ಟುಕೊಳ್ಳುವಷ್ಟರಲ್ಲಿ ನಲ್ಲಿ ನಿಂತುಹೋಯಿತು (ರೂಢಿ). ನಲ್ಲಿ ಬರು = (ಕೊಳಾಯಿಯಲ್ಲಿ) ನೀರು ಬರು : ಕಾಲಕ್ಕೆ ಸರಿಯಾಗಿ ಈಚೀಚೆಗೆ ನಲ್ಲಿ ಬರದೆ ತುಂಬಾ ಕಷ್ಟವಾಗಿದೆ (ರೂಢಿ). [ < ಸಂ. ನಾಲಿ, ನಾಲೀ ]

ನಲ್ಲಿ$_2$ (ನಾ). ಒಂದು ಬಗೆಯ ಭೂಮಿ (?) : ಮೂವತ್ತೆರಡು ಹೊಂನಿಗೆ ಕ್ರಯುವ ಕೊಂಡ ಮಾನಿಯ ಬೈಲ ಒಳಗೆ ನಲ್ಲಿ ಹುಲ್ಲಿ ಸಹ ಬೀಜವರಿ ಖಂಡಕ್ಕಂ(ಎಕ. VI, ಕೊಪ್ಪ. ೩೨-೧೬ ; 1448). [ ? ]

ನಲ್ಲಿತಿರುಪು (ನಾ). ಕೊಳಾಯಿಯಿಂದ ಬೇಕಾದಾಗ ನೀರನ್ನು ಹರಿಬಿಡಲೂ ಬೇಡವಾದಾಗ ತಡೆಯಲೂ ಅನುಕೂಲವಾಗುವಂತೆ ಅಳವಡಿಸಿರುವ ತಿರುಪು : ನಲ್ಲಿತಿರುಪು ಸಡಿಲವಾಗಿ ನೀರು ವ್ಯರ್ಥವಾಗಿ ಸುರಿಯುತ್ತಿದೆ (ರೂಢಿ). [ ನಲ್ಲಿ$_1$ + ತಿರುಪು$_2$ ( < ತಿರಿಪು$_2$ ) ]

ನಲ್ಲಿಚುಂಪೆ (ನಾ). ೧. ಇರುವೆಗಳಲ್ಲಿ ಒಂದು ಬಗೆ. ೨. ಕರಿ ಇರುವೆ ; ಕಟ್ಟಿರುವೆ : ಧರೆಯೊಳ್ ಸಂಚಲಿ ನಲ್ಲಿಚುಂಪೆ ಮೊದಲಾದೆಲ್ಲಂ ವಿಷಗ್ರಾಹಿಗಳ್ (ಖಮದ. ೧-೬೯).

[ ನಲ್ಲ$_0$ + ಇಚುಂಪೆ. / ತಮಿ. ತೆಲು. ನಲ್ಲ = ಕಪ್ಪು ]

ನಲ್ಲುಗುಳು (ನಾ). (ಮಕ್ಕಳ) ಆಕರ್ಷಕವಾಗಿರುವ ಉಗುಳು : ಉಸುರಿನಿಂದುಣ್ಮುತಿಹ ಸೊಲ್ಲುಗಳ ಗಲ್ಲುಗಳ ವಿಸರದಿಚುಬಿನೋಳಿವ ಚೊಲ್ಲುಗಳ ನಲ್ಲುಗ[ಗು]ಳ ಪಸರಿಸುವ ಕೂಸಾಟದಾಟಗಳ ನೋಟಗಳ ಪಸುಳೆ ಪರಿಶೋಭಿಸಿದಳು (ಮದೀಪು. ೧೭-೧೧).

[ ನಲ್ + ಉಗುಳು$_2$ ( < ಉಗುಳ್$_2$ ) ]

ನಲ್ಲುಣಿಸಿಕ್ಕು (ಕ್ರಿ). ಸವಿಯಾದ ಊಟವನ್ನು ಬಡಿಸು ; ರುಚಿಯಾದ ತಿನಿಸುಗಳನ್ನು ನೀಡು : ಪರಿಮಳವಾರಿಯಿಂ ಜಳಕಮಾಗಿಪ ನಲ್ಲುಣಿಸಿಕ್ಕುವ . . . ದೆಳ್ಳಲೆಯಂ ಮಡಿದೀವ ದಿವ್ಯಚಾಮರಮನೆ ಬೀಸುವಗ್ಗದ ವಿದಗ್ಧೆಯರೊಳ್ಪಿರೆ ದೇವಿ ರಂಜಿಪಳ್ (ರಾಚರಿ. ೪-೪೧).

[ ನಲ್ಲುಣಿಸು + ಇಕ್ಕು ]

ನಲ್ಲುಣಿಸು (ನಾ). ಸವಿಯಾದ ಊಟ ; ರುಚಿಕರವಾದ ಆಹಾರ : ಒಳ್ಳೆಯ ತಿನಿಸು : ಅಚುತೆರ್ದೆಯಾಚ ಪೀರ್ದುಂ . . . ಗೆಲವಕ್ಕಿಯೆಲ್ಲಮಂ ನೆಚ ಬಚಿಯಟ್ಟಿ ನಲ್ಲುಣಿಸನೂಡಿಯುಮಾವ್ರದ ತೋರವಣ್ಣೊಳೊಂದಲಿ ರಸದಂತುಗಾಣದೆ ದಲೊಂದು ಶುಕಂ ಮಧುಸಮ್ಮದೋತ್ಸವಂ (ಚಂದ್ರಪು. ೭-೪೭) ; ನಸು ಬಿಸಿಯಪ್ಪ ನಲ್ಲುಣಿಸಿನಿಂ . . . ವಿಸರದ ಶೋಣವರ್ಣವಸನಾವೃತದಿಂ ಜನಮಾಗಳಂತು ಜೀವಿಸತಿನಿತಲ್ಲದುಂದುಚಿವುದೇ ಹಿಮದಾಗರಮಾದ ಮಾಗೆಯೊಳ್ (ಕುಸುಮಾ. ೭-೨೩) ; ಮಜ್ಜನವ ಮಾಡಿಸಿ ನಲ್ಲುಣಿಸನಿಟ್ಟನುಪಮಸ್ನೇಹದಲಿ ಸಂತುಷ್ಟತೆಯ ಮಾಡಿದಳು (ಸಾಳ್ವಭಾ. ೧೭-೩೭) : ನಲ್ಲುಣಿಸುಗಳನಟ್ಟು ತಂದಿಹನ್ (ಶಿ,ರಾಮಾ. ೧೫೫-೮೫). [ ನಲ್ + ಉಣಿಸು$_2$ ]

ನಲ್ಲುಲಿ (ನಾ). ೧. ಹಿತವಾದ ಮಾತು; ಒಳ್ಳೆಯ ನುಡಿ: ಗಾನದ ಮೆಲ್ಲುಲಿ ಶ್ರುತಿಶಾಸ್ತ್ರವ್ಯಾಖ್ಯಾನದ ನಲ್ಲುಲಿ . . . ಎಸೆಗಾ ಹುರದೆಲ್ಲೆಡೆಯುರ ಬೀದಿಯೊಳು (ಉದ್ಯದೀ. ೨-೩೭). ೨. ಮಧುರವಾದ ಧ್ವನಿ ; ಇಂಪಾದ ಉಲಿ : ಹೆಲನರಿನ್ ಮೊದಲೆದ್ದುದೊಂದಾರ್ದು - ಬಲ್ಲುಲಿಯ, ನಲ್ಲುಲಿಯ ಪಾಡು, ದೀವಿಕರೆಯುರೆಗಳಿನ್ ಮೊಳಗೆ ಮಾರುಲಿಗಳ್ (ಪಾರಸಿ. ೧೫-೩೫೩).

[ ನಲ್ + ಉಲಿ$_2$ ]

ನಲ್ಲೂರ್, ನಲ್ಲೂರು (ನಾ). ಒಂದು ಊರಿನ ಹೆಸರು : ತತಃ ಗ್ರಾಮತ್ರಯ ಸೀಮಾ ಅಶ(ಶ್ವ)ತ್ಥ ತತ ನಲ್ಲೂರ್ತಟಾಕಸ್ಯ ದಕ್ಷಿಣಾನ್ತಭಾಗ (ಮ್ಯಆರಿ. ೧೯೪೨, ೭೫-೧೧೮ ; 819). ನಲ್ಲೂರು : ಪೂವಿನ ಪುಲ್ಲಿಮುಜ್ಜಲ ಕೂತನಿಡುನಲ್ಲೂರು ನಲ್ಲೂರು ಕೊಮರಜ್ಜುನ್ದು ಇಗ್ಗಲೂರು (ಎಕ. IX, ದೆಂಗಳೂ. ೮೩-೬ ; ಸು. 890) ; ಇದಕ್ಕೆ ಸಾಕ್ಷಿ . . . ಕಿಚಿಯ ಮುಗುಳಿ ಮುಟವಳ್ಳಿ ನಲ್ಲೂರು ಮಾಗಣ್ಣ ತೇಗುರು (ಎಕ. VI, ಚಿಕ್ಕಮ. ೪೨-೨೨ : 959) : × × × ಟ ಗಾವುಣ್ಣನುಂ ನಲ್ಲೂರೆಚಿಯಂಗ ಗಾವುಣ್ಣ × × × (ಎಕ. I (R), ೭೫-೧೨ ; 11ನೆಯ ಶತ). [ ನಲ್ಲ$_2$ + ಊರ್ ]

ನಲ್ಲೂರು 'ನಲ್ಲೂರ್' ನೋ.

ನಲ್ಲೆ (ನಾ). ೧. ಪ್ರಿಯೆ ; ಕಾದಲೆ : ನಕ್ಕನು ಕೃಷ್ಣ ನಲ್ಲೆಯ ಮಾತ ಕೇಳ್ದು (ಮೋಹತ. ೪-೨೨) : ನಲ್ಲೆಯುಂ ನೆನೆಯುತ್ತ ಬಿಕ್ಕಿದಂ (ಸಾನಂದ. ೭-೩) : ಬದುಕಿನೊಳವಂ ಕಡೆಗಣ್ಣ ಕೂಡಲಿಂದರಿವಂತೆ ನಲ್ಲೆ, ನಿನ್ನೊಳವನೇತರಿಂ ನಾನರಿಯ ಬಲ್ಲೆ? (೧ಳಿವಿಂ. ೨೮-೩೫): ನಲ್ಲೆ ಪರಿಸಿದಳೆನ್ನ (ಅನಿಕೀ. ೯-೭). ೨. ಹೆಂಡತಿ : ನಲ್ಲೆ ಲಕ್ಷ್ಮೀಮತಿಯು ಸಹ ತಾನುಲ್ಲಸದಿ ಕುಳ್ಳಿರಲು (ನಾಗಪ. ೩೦-೫೪). [ ನಲ್ಲ$_1$ + - ಎ$_2$ ]

ನಲ್ಲೆಣ್ಣೆ (ನಾ). ಅಡುಗೆಗೆ ಉಪಯೋಗಿಸುವ ಎಣ್ಣೆ ; ಒಳ್ಳೆಯ ಎಣ್ಣೆ : ಎಳೆಯ ಬಾಳೆಯ ಹೂವಿನೆಸಳ ಕಾಯ್ಗಳನು ಸಂಬಳಿಸಿದಾ ಹುಡಿಗೆ ನಲ್ಲೆಣ್ಣೆ ಸುಣ್ಣವನಿಕ್ಕಿ ತಿಳಿಯಕ್ಕಿಗಟ್ಟಿನಿಂದುತ್ಕರಿಸಿ (ಸೂಪಶಾ. ೪-೬೪).

[ ನಲ್ + ಎಣ್ಣೆ ]

ನಲ್ಲೆತ್ತು (ನಾ). ೧. ಒಳ್ಳೆಯ ಎತ್ತು ; ಉತ್ತಮವಾದ ವೃಷಭ : ನಲ್ಲೆತ್ತುವಿಡಿದು ನಾಡೊಳಗೆಲ್ಲಂ ಪೆಸರ್ವೆತ್ತ ಜೀವದನವಂ ಕೊಂಡೊಯ್ದುಲ್ಲಲ್ಲಿ ವೀರವೂರ್ಣಂ ನಿಲ್ಲದೆ (ಪುಣ್ಯಾಸ್ರ. ೬-೧೮) : ನಲ್ಲೆತ್ತು ಬಂಡಿ ಬಲವಿಲ್ಲದ ಆರಂಬ ಕಲ್ಲು ಕಸಗಳನು ಬಿಟ್ಟಾತ ಹೊಲದೊಳಗೆ ಹುಲ್ಲನೇ ಬೆಳೆವ (ಸರ್ವಜ್ಞ. ೦೩೬೦). ೨. ಒಳ್ಳೆಯ ಎತ್ತುಗಳ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ನಲಾವು ನಲ್ಲೆತ್ತು ಕಳುಕು (ಎಕ. VI, ಕಡೂರ. ೨೦-೨೮ : 1186) ; ನಲಾವು ನಲ್ಲೆತ್ತು ಕಳುಕು ಕಂಡಿಕೆವಣ (ಮ್ಯಆರಿ. ೧೯೪೦, ೩-೨೫ : 1216) ; ನಲ್ಲೆತ್ತು ನಲ್ಲಎಡಕ್ಕಯಗೋಣಿ ಕವಡಿಯಿಲ್ಲ (ಎಕ. IV (R), ಕೊಳ್ಳೇಗಾ. ೬೨-೩೦ : 1364) ; ಕ್ರಯ ಕಡ್ಡಾಯ ನಲ್ಲೆತ್ತು ನಲ್ಲೆಮ್ಮೆ ಪೊಂಬಳಿ × × × (ಮ್ಯಆರಿ. ೧೯೩೪. ೫೩-೧೧ ; 1405) ; ಕ್ರಯ ಕಡಾಯ ಭಿಟ್ಟ ಕೊಟ್ಟ ನಲ್ಲೆತ್ತು ನಲ್ಲೆಮ್ಮೆ (ಮ್ಯಆರಿ. ೧೯೩೪, ೨೭-೨೧ ; 1480).

[ ನಲ್ + ಎತ್ತು$_2$ ( < ಎಟ್ಟು$_1$ ) ]

ನಲ್ಲೆಮ್ಮೆ (ನಾ). ೧. ಒಳ್ಳೆಯ ಜಾತಿಯ ಎಮ್ಮೆ. ೨. ಒಳ್ಳೆಯ ಎಮ್ಮೆಗಳ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ಈಂತಿ ಅಧಿಕಾರದ ಅವಸಗಿ ಹಡದು ಬಂದಾತ ತನ್ನ ಧರ್ಮ್ಮವಾಗಿಯೆ ಪ್ರತಿಪಾಳಿಸುದು ನಲ್ಲೆಂಮೆಯ [ವ]ರಣಪ್ಪ ಶ್ರೀಮತು ಮಾರ್ಕಂಡೇಸರ (ಸಾಇಇ. IX-1, ೩೨೪-೧೪ : 1197) : ನಲ್ಲೆಂಮೆಯು ಉಗಾಣಿ ನಾರಣವೆಗ್ಗಡೆಯ ಗರಿಪಯ್ಯ ಪಿರಿಯಂಣಂಗಳು (ಸಾಇಇ. IX-1, ೩೪೯-೪ ; 1292) : ಗಡುಗೆ ನಿವೇದ್ಯ ನಂದಾದೀವಿಗೆ ಪಂನಿರ್ಬ್ಬರು ಮಹಾಜನಂಗಳ ಭೋಜನಕ್ಕಂ ಬಿಟ್ಟ ನಲ್ಲೆಂಮೆ ನಲ್ಲಾವು . . . ಧಾರಾಪೂರ್ವ್ವಕಂ ಮಾಡಿಕೊಟ್ಟರು ನಲ್ಲೆಮ್ಮೆಯ ನದಿಕೆಯನೆತ್ತುವ ಹೆಗ್ಗಡೆಗಳಾರು ಬಂದಡು ತಂಮ ಧರ್ಮವಾಗಿ ಪ್ರತಿ

ಪಾಳಿಸುವರು (ಸೌಇಇ. IX-I, ೬೪೯-೭ ; 1285) ; ತುಪ್ಪ ನಲ್ಲೇರು ನಲ್ಲೆಮ್ಮೆ ಹೊಡಕೆ ತಿರುಪು ಮಗ್ಗ ಮುದ್ರೆ ಕ್ರಯ . . . ಧಿಕಮಾಸ ಮುಂತಾಗಿ ಯೇನುಳ ಸರ್ವ್ವಸ್ವಾಮ್ಯವನೂ ನೀಉ ಆಗುಮಾಡಿಕೊಂಡು . . . ಭೋಗಿಸಿ ಬಹುದು (ಸೌಇಇ. IX-II, ೪೪೦-೨೫ ; 1419) ; ಕ್ರಯ ಕಡಾಯಭಿಟ್ಟಕೊಟ್ಟ ನಲ್ಲೆತ್ತು ನಲ್ಲೆಮ್ಮೆ ಮಾವಿನ ಬಿಟ್ಟ . . . ನಿಮಗೆ ಧಾರೆಯೆರೆದು ಕೊಟ್ಟು (ಮ್ಯಆರಿ. ೧೯೩೪, ೨೭-೨೦ ; 1430).

[ ನಲ್ + ಎಮ್ಮೆ (<ಎಮೆF) ]

**ನಲ್ಲೆವೆಣ್** (ನಾ). ಪ್ರೀತಿಯ ಹೆಣ್ಣು ; ಪ್ರಿಯೆ : ಒಳ್ಳಿತಾಯ್ತಾದ ಪೇಳ್ವೆ ವೆಮ್ಮಣ್ಣಗೆಂದರು ನಲ್ಲೆವೆಣ್ಣದೆ ನಾಟಿ ಬೆದಱಿ (ಭರಜ. ೪೦-೭೭).

[ ನಲ್ಲೆ + ಪೆಣ್ ]

**ನಲ್ಲೇರು** (ನಾ). ಒಳ್ಳೆಯ ನೇಗಿಲಿನ ಮೇಲೆ ಹಾಕುತ್ತಿದ್ದ ಒಂದು ಬಗೆಯ ತೆರಿಗೆ : ತುಪ್ಪ ನಲ್ಲೇರು ನಲ್ಲೆಮ್ಮೆ ಹೊಡಕೆ ತಿರುಪು ಮಗ್ಗ ಮುದ್ರೆ ಕ್ರಯ ಕಡ್ಡಾಯ . . . ಮುಂತಾಗಿ ಯೇನುಳ ಸರ್ವ್ವಸ್ವಾಮ್ಯವನೂ ನೀಉ ಆಗುಮಾಡಿಕೊಂಡು . . ಭೋಗಿಸಿ ಬಹುದು (ಸೌಇಇ. IX-II, ೪೪೦-೨೫ ; 1419). [ ನಲ್ + ಏರು₃ (<ಏರ್) ]

**ನಲ್ಲೈವರು** (?) (ನಾ). (?) : ತಗೂಡರ ಕುರುಳ ಕೊಗೂಣ್ಣೆ ಎಡತಲೆಯ ಕೊತದ ಪುಳ್ಳಿಗನುಂ ಕಂನ್ನೆಲ್ಲೆಯ ಬದ್ರುಷೆ ಐಯನೂಂ ನಿಟ್ಟರೆಯ ಬೋರೆ ಅಚ್ಚಗಣ್ಣನುಂ ನಲ್ಲೈವರು ಸಕ್ಷಿ (ಎಕ. III, ನಂಜನ. ೧೯೯-೧೯ : 972 ?).

[ P ಇದು 'ನಾಲ್ವರು' ಎಂಬುದರ ಅಪಲಿಖಿತವಿರಬಹುದೆ? ]

**ನಲ್ವ** (ನಾ). ದೂರವನ್ನು ಅಳೆಯುವ ಒಂದು ಪ್ರಮಾಣ; ನಾನೂರು ಹಸ್ತಗಳ ಅಳತೆ; ಫರ್ಲಾಂಗು: ಆ ಸುಧನ್ವಂ ಬಳಿಕ ಮೇದಿನಿಯದಿರ್ವಿನಂ ತೆಗೆದೆಚ್ಚನರ್ಜುನನ ತೇರೊಂದು ನಲ್ವಮಾತ್ರಂ ತೊಲಗಲು (ಜೈಮಿಭಾ. ೧೩-೩೦). [ ಸಂ. ]

**ನಲ್ವಗಲ್** (ನಾ). ೧. ಒಳ್ಳೆಯ ಹಗಲು. ೨. ಒಳ್ಳೆಯ ದಿವಸ ; ಶುಭ ದಿನ : ಬಟುಕ್ಕ ಮೌಹೂರ್ತಿಕರ್ ಕೂರ್ತು ಪೇಟ್ದ ನಲ್ವಗಲೊಳ್ . . . ನಾಮಕರಣಮುಂ ನಿರ್ವರ್ತಿಸುತ್ತ (ಚಿಕವಿ. ೪-೮೩). [ ನಲ್ + ಪಗಲ್ ]

**ನಲ್ವಗೆ** (ನಾ). ೧. ಒಳ್ಳೆಯ ಮನಸ್ಸು ; ಸ್ನೇಹಪರವಾದ ಮನಸ್ಸು. 'ನಲ್ವಗೆಗೊಳ್' ಪರಾ. ೨. ಉಲ್ಲಾಸದಿಂದ ಕೂಡಿದ ಮನಸ್ಸು ; ಪ್ರಸನ್ನಚಿತ್ತ. 'ನಲ್ವಗೆವೆಱು' ಪರಾ. [ ನಲ್ + ಬಗೆ₃ ]

**ನಲ್ವಗೆಗೊಳ್** (ಕ್ರಿ). ಒಳ್ಳೆಯ ಮನಸ್ಸನ್ನು ಹೊಂದು; ಪ್ರಸನ್ನವಾಗು: ನಿನ್ನಯ ಚಾಗಮುಂ ಸಿರಿಯುಂ . . . ನನ್ನಿಯುಮಾರ್ಗಮಚ್ಚರಿಯನಿತ್ತುಪುವೆಮ್ಮೊಡೆಯಂಗಮಿ ತೆಱಂ ಪೊನ್ನದು ಕಮ್ಮಿತಾದ ತೆಱನಲ್ಲವೆ ನಲ್ವಗೆಗೊಂಡೊಡಿರ್ಪರುಂ (ಕಬ್ಬಿಕಾ. ೦೭೩) [ ನಲ್ವಗೆ + ಕೊಳ್₁ ]

**ನಲ್ವಗೆವೆಱು** (ಕ್ರಿ). ಸಂತೋಷಗೊಳ್ಳು ; ಉಲ್ಲಾಸದಿಂದ ಕೂಡು : ತಾವರೆಮೊಗದವರ್ಮುದ್ದುಮೊಗದ ಮಿಗೆ ಚೆಲುವಿನ ಬಟ್ಟಮೊಗದವರು ನಲ್ವಗೆವೆತ್ತು ನಡೆದರೆಗ್ಗನಲಿ (ಮೋಹತ. ೨೪-೧೩). [ ನಲ್ವಗೆ + ಪೆಱು₁ ]

**ನಲ್ವಚ್ಚ** (ನಾ). ಅಂದವಾದ ಒಡವೆ,-ಆಭರಣ : ಚಲಧಮ್ಮಿಲ್ಲಕ್ಕೆ ಚಾಂಪೇಯದ ಬಿರಿಮುಗುಳಂ . . . ಉರುಕುಚಂಗಳ್ಗೆ ಸನ್ಮಾಥಪೀಕುಟ್ಮಲಮುಂ ನಲ್ವಚ್ಚಮುಂ ಗೈದುಟಿ ತೊಡಿಸಿದರಾ ಕಾಂತೆಯರ್ಕಾಂತೆಗಾಗಳ್ (ಉದ್ಭಟ. ೯ ೭೩). [ ನಲ್ + ಪಚ್ಚ₂ ]

**ನಲ್ವಡಿಗ** (ನಾ). ಸುಂದರವಾದ ಹೀಕದಾಸಿ : ಒಮ್ಮೆ ಪೀಳಿಯಮೀಯು ಕೊಮ್ಮೆ ಪಸ್ನೀರ್ಗುಡುತೊಮ್ಮೆ ನಲ್ವಡಿಗವನೊದಪಿಸ ತ ಒಮ್ಮೆ . . . ನಡೆಪ್ಪೆ (ಗೀತಗೋ. ೫೭-೨). [ ನಲ್ + ಪಡಿಗ ]

**ನಲ್ವಣ್ಣ** (ನಾ). ಅಂದವಾದ ಬಣ್ಣ ; ಸುಂದರವಾದ ವರ್ಣ : ನಸುಜೋಲ್ವ ಮೋಲುದಸಿಸಿಸು ಮುಸುಕತುಲಗಣ್ಣ ಬಂಬಲ್ವೆಳಗುಗಳ ಸೂಸುತೆ ನಲ್ವಣ್ಣದಿನ್ನಳಿ [ಖಂಡಂ. ಗಿನ್ನರಿ]ಯುನುಟಿ ಮೇಳಯಿಸಿಕೊಂಡು . . . ಕಾಂತೆಯೊರ್ವಳ್ ವಿಲಾಸದಿಂ ಚೆಲ್ವಮರೆ ಪದ್ಮರಾಜಾಂಕಮಾಲೆಯ ಬಾಜಿಸುತ್ತಿಸೆದಳ್ (ಪದ್ಮರಾ. ೮-೨೦). [ ನಲ್ + ಬಣ್ಣ ]

**ನಲ್ವತ್ತ** (ನಾ). ಒಳ್ಳೆಯಂ ಬತ್ತ ; ಶ್ರೇಷ್ಠ ದರ್ಜೆಯ ನೆಲ್ಲು (?) ಸ್ವಸ್ತಿಶ್ರೀ ಅಪ್ಪೋರಯ್ಯದಿವಕ್ಕರ್ ಪದಿಕ್ಕಣ್ಣುಗ ನಲ್ವತ್ತ × × × ಮರಮಾಸುಕೆಯ (ಎಕ. VI, ಚಿಕ್ಕಮ. ೫೦-೬ ; ಸು. 690 ?)

[ ನಲ್ + ಬತ್ತ₁ ]

**ನಲ್ವಯಕೆ** (ನಾ). ಪ್ರಿಯವಾದ ಬಯಕೆ ; ಹಾರೈಕೆ : ಸ್ಕೂಸ್ ಅಧಿಕಾರ ಪದದಿಂದ ಉರುಳಬೇಕೆನ್ನುವುದು ಅವಳ ನಲ್ವಯಕೆ (ಜದ್ಮಪ್ರ. II ೩೬೦೯).

[ ನಲ್ + ಬಯಕೆ₂ ]

**ನಲ್ವರಕೆ, ನಲ್ಪರಕೆ** (ನಾ). ಪ್ರೀತಿಯ ಆಶೀರ್ವಾದ; ಶುಭಾಶೀರ್ವಾದ : ಅಮುಳರುಮುಟ್ಟಜನೊಜಲ್ದು ತೆಗೆದಪ್ಪಿ ಪರ[ಸೆ] ನಲ್ವರಕೆಗಳಿಂ (ಪಂಪಭಾ. ೯-೩) ; ಕಾರ್ಯಸಿದ್ಧಿಯಕ್ಕೆಂದು ಪರಸೆ ನಲ್ವರಕೆಗಳಿಂ (ಸುಕುಮಾ. ೨-೪೫); ಮಾತುಳಂಗಂ ಮಾತುಳಾನಿಗು ತುಟಿಲ್ಗೆಯ್ವುದುಮವರನೇಕ ನಲ್ವರಕೆಗಳ್ವೆರಸು ಪರಮೋತ್ಸವಪರಂಪರೆಯನೆಯ್ದಿ (ಪುಷ್ಪಪು. ೮-೪೯ ವ) : ಪುರೋಹಿತರ್ ನಾಮಕರಣಂಗೆಯ್ದು, ನುಡಿದು ನಲ್ವರಕೆಯಂ (ಶ್ರೀರಾಮಾ. ೧೬-೪೩೦). ನಲ್ಪರಕೆ : 'ನಲ್ಪರಕೆವೆಱು' ಪರಾ. [ ನಲ್ + ಪರಕೆ₁ ]

**ನಲ್ವಳಿ** (ನಾ). ೧. ಒಳ್ಳೆಯ ದಾರಿ; ಸನ್ಮಾರ್ಗ: ಆರ್ಗೆ ನಲ್ವಳಿ ತಪ್ಪಿತ್ತೋ ತಪ್ಪಿತ್ತಾತಂಗೆ ಮುಕ್ತಿಯುಂ (ಸೌನಂದ. ೦೪-೪೪). ೨. ಒಳ್ಳೆಯ ವಂಶ ; ಸತ್ಕುಲ. 'ನಲ್ವಳಿಗ' ಪರಾ. [ ನಲ್ + ಬಳಿ₃ (<ಬಟು₂) ]

**ನಲ್ವಳಿಗ** (ನಾ). ಒಳ್ಳೆಯಂ ವಂಶದಲ್ಲಿ ಹುಟ್ಟಿದವನು ; ಸತ್ಕುಲಪ್ರಸೂತ; ಕುಲೀನ : ಜವ ನಿಗನುಂ ಸೊಬಗನುಂ ನಲ್ವಳಿಗನುಮ್ಮೆಸಿರಿವಂತನುಂ ಚೆಲ್ವನುಮುವನಾಗಿರ್ದೊಡಂ ವಿಚಾರನೆಂದುಂ ನಿನ್ನಂ (ಸೌನಂದ. ೬-೨೦).

[ ನಲ್ವಳಿ + -ಗ₂ ]

**ನಲ್ವಾಡು** (ನಾ). ಪ್ರೇಮಗೀತೆ; ಪ್ರಣಯಗೀತೆ: ತರುಣವರ್ಗದ ನಲ್ವಾಡುಗಳನ್ನು ಕೇಳಬೇಕು : ತಾಳವಿಲ್ಲ ; ತಂತಿಯಿಲ್ಲ (ಜಲಾನಿ. ೨೪) : ನೀವು ಇಪ್ಪೊಂದು ನಲ್ವಾಡುಗಳನ್ನು ಬರೆದಿದ್ದೀರಿ. ಈ ಸ್ಫೂರ್ತಿಯ ನೆಲೆ ಯಾವುದು ಹೇಳಬಲ್ಲಿರಾ ? (ಸಮುಜೀ. ೩೫೪). [ ನಲ್ + ಪಾಡು₂ ]

**ನಲ್ವಾತು** (ನಾ). ಒಳ್ಳೆಯ ಮಾತಂ ; ಹಿತವಾದ ನುಡಿ. 'ನಲ್ವಾತುಗುಟ್ಟು' ಪರಾ. [ ನಲ್ + ಮಾತು₁ ]

**ನಲ್ವಾತುಗ** (ನಾ). ಹಿತವಾದ ಮಾತುಗಳನ್ನಾಡುವವನು ; ಸವಿಮಾತುಗಳನ್ನಾಡುವವನು : ಪ್ರಜೆಗಳ್ ವೀರರೆನಿಸಿಯುಂ ವಿನಯವಂತರುಂ ನಲ್ವಾತುಗರಾಗಿಯುಂ ಸನ್ನಿಗರುಂ (ಚಿಕವಂ. ೧೪೩-೧೭).

[ ನಲ್ವಾತು + -ಗ₂ ]

**ನಲ್ವಾತುಗುಟ್ಟು** (ಕ್ರಿ). ಒಳ್ಳೆಯ ಮಾತುಗಳನ್ನಾಡು : ಮುದದಿಂದೋಸಬಾಗೀಳಲೆಂದು ಸಿಲೆ ಮೋನಂಗೊಂಡು ನಲ್ವಾತುಗುಟ್ಟದೆ ಮಾಣ್ದಿರ್ದೊಡೆ ಸಿಪ್ಪಲಂ (ಲೋಕೋಪ. ೧೨-೫೬). [ ನಲ್ವಾತು + ಕುಟ್ಟು₁ ]

**ನಲ್ವಾಸು** (ನಾ). ಮೃದುವಾದ ಶಯ್ಯೆ ; ಮೆತ್ತನೆಯ ಹಾಸುಗೆ : ಆ ಚಂದ್ರನುಖಿ . . . ದಶರಥನ ಸೊಸೆಯನಿರಿಸಿದಳಂಚೆತಿಪ್ಪುಳಿಂ ಸಮೆದ ನಲ್ವಾಸಿನೊಳ್ (ಶ್ರೀರಾಮಾ. ೩೨೦ ೪೪). [ ನಲ್ + ಪಾಸು₂ ]

**ನಲ್ವಾಟವಣ್** (ನಾ). ಸವಿಯಾದ ಬಾಳೆಯ ಹಣ್ಣು ; ರುಚಿಯಾದ ಬಾಳೆಹಣ್ಣು : ಉರುಕರ್ಣಿಕಾರದಲರಂ ನಲ್ವಾಟವಣ್ಣಂ ಮಹೀಶಂಗಿತ್ತಳ್ವನಪಾಲಿಕಾಂಗನೆ (ಉದ್ಭಟ. ೯ ೦೨); ನಲ್ವಾಟವಣ್ಣಂ . . . ತೋಂಟಿಗಂ ಕೊಟ್ಟಸೊರ್ವಂ (ಕಬ್ಬಿಕಾ. ೮೮). [ ನಲ್ + ಬಾಟವಣ್ ]

**ನಲ್ವಡಿ** (ನಾ). ಒಂದು ಊರಿನ ಹೆಸರು ; P ಈಗಿನ ಬಳ್ಳಾರಿಜಿಲ್ಲೆಯ ಕುರುಗೋಡು ತಾಲ್ಲೂಕಿನ ನಲವಡಿ : ನೊಳಂಬಮಾಹಾದೇವಿಯ ರಂಗವು ಗಂಗೆಯೊಳಕ್ಕೆ ಬಂದ ಬ್ರಾಹ್ಮಣ ನುಡುಪುಸೊಂಗಿಗಾಗಿ

ಕೃಷ್ಣಯ್ಯಂಗಂ ಕುಪ್ಪದ ದೇವಯ್ಯಂಗಂ ನಲ್ವಿಡಿ ೧೨ ಅ ಕಂಪಣಂ ಒರ್ವಾರ್ಯಿಯಂ ಕುಡೆ (ಸೌಇಇ. IX-1, ೯೨-೧೬ ; 1036). [ ? ]

**ನಲ್ವು** (ನಾ). ನಲಿವು ; ಸಂತೋಷ : ಬಿಲ್ವಪತ್ರಯನೆಯ್ದೆ ಕೊಯ್ದಾತಿ ನಲ್ವಿನಿಂ ಶಿವಲಿಂಗಪೂಜೆಗೆ ಸಲ್ವ ವಸ್ತುವಿದೆಂದು ಶೋಧಿಸಿ ಸಜ್ಜೆಯೊಳು ತುಂಬಿ (ಬಸವು. ೪೩-೨೬). 'ನಲವು$_1$', 'ನಲಿವು' ಪರಾ.

[ ನಲ್ + – ವು ]

**ನಲ್ವೆಣ್** (ನಾ). ಒಳ್ಳೆಯ ಹೆಂಗಸು ; ಪತಿವ್ರತೆ.

ನಲ್ವೆಂಡಿರ್ (ಬಹುವ) : ಪಲನೀರ ಮುಳುಗಿ ಮುಂಗೆಡದೆ ನಲಿದೆಸಗುವ ನಲ್ವೆಂಡಿರ ನಡತೆಗೆ ಪಲನೇಮಗಳು ಪಾಸಟಿಯೆ (ಹರಿಬ. ೨-೨೩) : ಮೂವರುಂ ನಲ್ವೆಂಡಿರುಂ ಕಾಮದಿಂ ಪ್ರೇಮದಿಂ ಮದುವೆನಿಂದಿರ್ದಡಂ (ಶ್ರೀರಾಮಾ. ೮-೧೯೧). [ ನಲ್ + ಪೆಣ್ ]

**ನಲ್ವೆಸ** (ನಾ). ಒಳ್ಳೆಯ ಕೆಲಸ ; ಉತ್ತಮ ಕಾರ್ಯ,-ಕರ್ತವ್ಯ : ಈ ಎಡರಿನೊಳ್ ನಿಮ್ಮ ನಲ್ವೆಸನ್, ಜನಮುಂಜದಂತೊಳ್ಪು ನುಡಿದು, ನಂಬುಗೆಯನುಳಿಸುವುದು (ಹಾರಿಸಿ. ೧೯-೪೪೦). [ ನಲ್ + ಬೆಸ$_1$ ]

**ನಲ್ವೆಸರ್** (ನಾ). ಉತ್ತಮವಾದ ಹೆಸರು ; ಚೆನ್ನಾದ ಹೆಸರು : ದೇವರಾಜರಸರೆಂದುಂ ಚೆನ್ನರಾಜರಸರೆಂದುಮನ್ವರ್ಥಂಗಳಾದ ನಲ್ವೆಸರ್ಗಳನಿಟ್ಟು (ಚಿಕವಿ. ೨-೨೪). [ ನಲ್ + ಪೆಸರ್ ]

**ನಲ್ವೆಱ** (ನಾ). ಸುಂದರವಾದ ಚಂದ್ರ : ಸುರನಿಮ್ನಗೆ ನಲ್ವೆಱ ಕೆಂಜೆಡೆ ತಳ್ಳುರಿಗಣ್ಣೆಸುಳಂ ಗರಳಂ ಭಸಿತಂ . . . ಫಣಾಧರನೊಪ್ಪಿರೆ ರಂಜಿಸಿದಂ ಗಿರಿಶಂ (ವೃಷವಿ. ೪೨-೩೪). [ ನಲ್ + ಪೆಱ ]

**ನಲ್ವೊಬ್ಬು** (ನಾ). ಒಳ್ಳೆಯ ಗಳಿಗೆ; ಶುಭಮುಹೂರ್ತ : ಬಱಿಕ್ಕೆ ರಾಜನೃಪಂ . . . ಜೋಯಿಸಿಗನಿತ್ತ ನಲ್ವೊಬ್ಬಿನೊಳೋಲಗವಿರ್ದು . . . ಅರಸುಗೆಯ್ಯುತ್ತಿರೆ (ಚಿಕವಂ. ೪೯-೦೬). [ ನಲ್ + ಪೊಬ್ಬು ]

**ನಲ್ಸೊಗ** (ನಾ). ಅತಿ ಸುಖ ; ಆತ್ಮಾನಂದ : ಒಡರ್ಚೆ ನಲ್ಸೊಗಮುನಗ್ಗಿವೊಗರ್ಗೆ ಸಮಂತು ಬೆಳ್ಪಸಂದಳೆದೆಸೆದಿರ್ದ ಬಾನ್ನವಿರನೊಳ್ವರಿಜಂ ತಳೆದೊಪ್ಪಿ ತೋಱಿದಂ (ಶಬಶಂ. ೩-೯). [ ನಲ್ + ಸೊಗ ]

**ನವ$_1$** (ನಾ). ಒಂದು ಸಂಖ್ಯಾವಾಚಕ ; ಒಂಬತ್ತು : "ನವ, ಪದಾರ್ಥ, ರಂಧ್ರ . . . ನಾಟ್ಯಾಂಗ, ಇಂತಿನಿತುಂ ೯ಕ್ಕೆ ಪೆಸರು" (ವ್ಯವಹಾ. ೧೧-೩) ; ನವ ನಿಧಿ ಶರ ಶಶಿ ಸಂಖ್ಯಾಪ್ರವಿಲಸಿತಂ ಶಾಲಿವಾಹನ ಶಕಾಬ್ದಂಗಳ್ (ಜೂದಜಂ. ೦೬-೧೮೬). 'ನವನಿಧಿ', 'ನವರತ್ನ' ಪರಾ. [ ಸಂ. ನವನ್ ]

**ನವ$_2$** (ಗು). ೧. ಹೊಸತಾದ ; ನವೀನವಾದ : "ನವಮಭಿನವಂ ನವೀನಂ ನೂತನಂ ನವ್ಯಮಿವು ಪೊಸತೆನಿಕುಂ" (ಮಂಗರಾ. ೦೨೯-೦೩) ; ಅದೊರ್ಮೆ ನವಕಾವ್ಯಬಂಧರಚನಾವಿಶೇಷಂಗಳಿಂದಂ . . . ಕಳೆವನಿತು ಪೊಬ್ಬಂ ನೃಪಂ (ಕಾದಂಪೂ. ೨೨) : ತನ್ನ ಬಾಟ್ಕಿಯುನ್ನೇತಱದೆಂಬ ಮೆಯ್ಮೂಱುಕದಿಂ ನವಚಿತ್ರಪಟಂಬೊಲಿರ್ಪನಾ ಭೂತಳವಲ್ಲಭಂ (ನೇಶಂ. ೬೩) ; ಐತಂದುಪೆಡೆಬಿಡದೆ ಕ್ರೌಂಚಸಾರಸಪಂಕ್ತಿ . . . ನವವರ್ಷಹರ್ಷದುನ್ಮಾದಕಲನಾದದಿಂ (ಶ್ರೀರಾಮಾ. ೦೩-೩೯೯). ೨. ಎಳೆಯ ; ತರುಣ ; ತಾಜಾ : ನವಕಂಕೇಲುದ್ಗಮಮುಂ ತವೆ ಕೊಯ್ಕುಲ್ಕೈಯ್ಯನಿಕ್ಕಿ (ಉದ್ಭಟ. ೯-೬೬) ; ತೋಳ ನವಗುಂಜಿಯಿಂ ಕಿಸಲಯದ ನಿಱಿಗಳಿಂ ಭಾಳತಟದಡೆಯ ಕತ್ತುರಿಯ ನವತಿಲಕದಿಂ (ಲಿಂಗಪು. ೬-೨೦). 'ನವಕನ್ನೆ', 'ನವಪಲ್ಲವ' ಪರಾ. ☞ 'ನವ' ಎಂಬುದನ್ನು ಇತರ ಅನೇಕ ನಾಮಪದಗಳೊಡನೆ ಸೇರಿಸಿ ಸಮಾಸ ಗಳನ್ನು ಮಾಡುತ್ತಾರೆ.

ನವಸವ (ದ್ವಿರುಕ್ತಿ) : ಮತಿಯು ತಾಂ ಸತ್ಯಶುಭಗಳ ನವನವಾಂಶಗಳ ಗತಿಯನರಸುತ ನಡೆಯೆ ಪೌರುಷಪ್ರಗತಿ ಮತನೀತಿ ಶಾಸ್ತ್ರಗಳು ರಾಜ್ಯ ಸಂಧಾನಗಳು ಮತಿಯ ಕಿಂಚಿದ್ವಿಜಯ (ಮಂಕುಳ. ೨೨೮).

[ ಸಂ. ]

**ನವಕ$_1$** (ಗು). ೧. ಒಂಬತ್ತರಿಂದ ಕೂಡಿದ. (ನಾ). ೨. ಒಂಬತ್ತರ ಗುಂಪು : ಬಱಿಯಂ ಸಂಜ್ವಳನಕಷಾಯಚತುಷ್ಕನೋಕಷಾಯ ನವಕ ನಾಮ ತ್ರಯೋದಶಪ್ರಕೃತಿಗಳನರೆದು (ಶಾಂತಿಪು. ೧೦-೧೧೧ ವ) ; ಇಂತು ಸೂತ್ರ ನವಕದಿಂ . . . ಪೀಠಿಕಾಕಥನಂ ಸಮಾಪ್ತಂ (ಶಕ್ತ್ಯಪ್ರ. ೦೮೩) : ಬಳಿಕ್ಕಂ ದ್ವೈವಿಧಪೂರ್ವದಶಂಗಳ್ ತಾವಿರೆ ಸದ್ದಿವಸಂಗಳ್ ಕೋವಿದ ಕೇಳ್ ನವಕಂಗಳ್ (ಹಾರಾಸ್ಕ. ೪-೧೧-೯೯). ಕ್ರಮದಿ ಮೂಱಂ ಬಿಟ್ಟುದು ಪರಿದುತ್ತಮವನ್ನೆದು ಮೇಲೆ ನವಕವ ಸುಮುಖನಾಗಿಯೆ ನಡಿಸುವವನಾವವನಿವಂ ಧನ್ಯ (ವಿವೇಥ. ೮-೨೪). [ ಸಂ. ]

**ನವಕ$_2$** (ನಾ). ೧. ಹೊಸತನ ; ನವೀನತೆ ; ಅಪೂರ್ವತೆ : ಗುಲ್ಮಂಗಳೆಸೆವವು ವೃತ್ತವೆತ್ತತಿ ನವಕದಲಿ ಸಕಿಯ (ಬಸವು. ೪-೦೬) ; ನವಕವಿಲ್ಲದ ಕಳಿದ ಮುನ್ನಿನ ದಿವದ ತೊಟ್ಟಂ ಕಳೆಯುದರಳಂ ವಿವರದಲಿ ಶೋಧಿಸದೆ (ಬಸವು. ೪೭-೦೫). ೨. ಹೊಸಬ ; ಅಪರಿಚಿತ : ನವಕನಿವಂ ಬಂದಂ ಮಾಣವಕಂ ತಾನೆತ್ತಣಿಂದಮೆಂದಾ ವಿಪ್ರಪ್ರವರನ ಸಭೆ . . . ಇನಿತು ಬೇಗವಿಾಕ್ಷಿಸುತಾಗಳ್ (ವರ್ಧಪು. ೦೬-೬). [ ಸಂ. ]

**ನವಕಂಟಕ** (ನಾ). ಹೊಸದಾಗಿರುವ ಮುಳ್ಳು ; ಎಳೆಯ ಮುಳ್ಳು : ನವಕಂಟಕಮಾಡಿಯಂ ನಡೆ ಸವತಿಯನಪ್ಪಿದುದನಱಿದು ಪತಿ ಪೆಗಲಿಂ ಪೊತ್ತವಳಗಿದಳ್ (ಲೀಲಾವ. ೦೩-೯೦). [ ನವ$_2$ + ಕಂಟಕ ]

**ನವಕಂಡ** (ನಾ). (?) : ಅ[ ಸು ]ವಟ್ಟಗವೊನ್ದು ದೇಗುಲಕ್ಕೆ ನವಕಣ್ಣದ ಪಲಗೆಯುವ ಕೊಳನುಂ ಬೀಕೆಸ್ವರಕೆ ಕೊಟ್ಟ (ಸೌಇಇ. XI-1, ೩೫-೦೨ ; 993). [ ? ]

**ನವಕಂಬಡೆ** (ಕ್ರಿ). ಹೊಸತನವನ್ನು ಪಡೆ ; ನವೀನವಾಗು : ಛವಿವಡೆದು ನವಕಂಬಡೆದ ನವ್ಯಸಹಸ್ರದಳಶತದಳಮನರ್ಪಿಸುತ (ಬಸವು. ೩೫-೦೩).

[ ನವಕ$_2$ + ಪಡೆ$_1$ ]

**ನವಕನ್ನೆ** (ನಾ). ಎಳೆಹರಯದ ಕನ್ಯೆ ; ಹೊಸಪ್ರಾಯದ ಹುಡುಗಿ : ಎಸಳೆಸಳಿನ ಸಿರಸಲ ಚವುರಿಸುವದು ಮೈಯನ್ನೆ ಬೀಸಲು ಮೈನವಿರೇರಿದ ನೇರಿಳೆ ನವಕನ್ನೆ (ಮುಕ್ತಕಂ. ೪೪-೮). [ ನವ$_2$ + ಕನ್ನೆ$_1$ ]

**ನವಕಮಲ, ನವಕಮಳ** (ನಾ). ಆಗ ತಾನೇ ಅರಳಿದ ತಾವರೆ ; ಹೊಸದಾಗಿ ಅರಳಿದ ಕಮಲ : ನವಕಮಲೋದ್ಗಮದಿಂದುತ್ಸವಮಂ ತಾಂ ಗಂಧಗಜಕೆ ಕಮಲಿನಿ ಮಾಟ್ಪಂತೆಪೊಲರಸ ನಿನಗೆ ಪರಮೋತ್ಸವಮಂ ಮಾದೇವಿ ಮಾಟ್ಪುಮಿಾ ಕನಸಿಂದಂ (ಕಾದಂಪೂ. ೩೬೫). **ನವಕಮಳ :** ನವಕಮಳದಳಂಗಳ್ ಭೀಕರಂ ಬಲ್ಪುಮಾಗಿರ್ಪುವೆ ತಳಕೆ ತಳಂಗಳ್ ನೋಯುವೇ ಮೆಟ್ಟಿದಂದೆಂದವಱಿಸಟನವಳ್ದಿರ್ ಮೆಟ್ಟಿದರ್ ಮೆಟ್ಟರೆಂಬಂತ ವಯವದೊಳೆ ಲೀಲಾನೃತ್ಯದಿಂ ಕಣ್ಗೆವಂದರ್ (ಆದಿಪು. ೭-೫೫).

[ ನವ$_2$ + ಕಮಲ ]

ನವಕಮಳ 'ನವಕಮಲ' ನೋ.

ನವಕರಿ 'ನೌಕರಿ' ನೋ.

**ನವಕರ್ಮ** (ನಾ). ೧. ಜೀರ್ಣೋದ್ಧಾರದ ಕೆಲಸ ; ಮುರಿದುದನ್ನು ಅಥವಾ ಜೀರ್ಣವಾದುದನ್ನು ಮತ್ತೆ ಕಟ್ಟುವ ಕೆಲಸ : ತಪೋಧನರ ವಿದ್ಯಾರ್ಥಿಮಾಣಿಗಳಾಹಾರದಾನಕ್ಕಂ ಪಾವುಳಪರಿವಾರದ ಜೀವಿತಕ್ಕಂ ದೇಗುಲದ ಖಣ್ಡಸ್ಫುಟಿತ ನವಕರ್ಮ್ಮಕ್ಕವೆಂದು ಕೊಟ್ಟ ಅಲ್ಲಿಯ ಘಳೆಯ ಮತ್ತರು ೫೦ (ನಾಂದೇಡ್. ೩-೨೨ ವ : 1047). ೨. ನವೀನವಾಗಿ ಮಾಡಿದುದು ; ಹೊಸರಚನೆ : ವಿಶ್ವಕರ್ಮನಿರ್ಮಿತ ನವಕರ್ಮಜಾಳಂ ತರಂಗಳೊಳ್ . . . ಅಕಳಂಕಾಚಾರಸಾರನನೆ ಲಕ್ಷ್ಯಂ ಮಾಡಿ ನೋಡುವಲ್ಲಿ (ಶಾಂತಿಪು. ೬-೫ ವ). [ ನವ$_2$ + ಕರ್ಮ ]

**ನವಕರ್ಮಿಕ** (ನಾ). (?) : ನವಕರ್ಮಿಕ ಮಾಡಿರಿಪುತ ಸಿರಿವೀರ ಪುಸಿದತ (ಮ್ಯಎರಿ. ೦೯೩೪ ; ೨೮). [ ? ]

**ನವಕವಿ** (ನಾ). ಹೊಸಕವಿ ; ಆಧುನಿಕ ಕವಿ : ಕನ್ನಡಿಸುವ ನವಕವಿಯುವ ನಾವನು ವಿರಹಿಣಿಯರ ಬವಣೆಯನು (ಇಂಜಾಪ. ೩೦೦-೮೭).

[ ನವ$_2$ + ಕವಿ$_6$ ]

**ನವಕವಿತ್ವ** (ನಾ). ಹೊಸಕಾವ್ಯ; ನೂತನ ಕಾವ್ಯ : ಈ ನುಡಿಯು ಪಾಯಂಗಳನೆನಗೆ ಪೇಟ್ಟುದು ನಿನ್ನೆಯ್ದುದ ನವಕವಿತ್ವಮುಂ ನೀನಭಿನಯಿಸಿ ದಂತಾಗಿರ್ದಪುದು (ಶಾಂತಿಪು. ೩-೯೩ ವ). [ ನವ$_2$ + ಕವಿತ್ವ ]

**ನವಕಳೆ** (ನಾ). ಒಂಬತ್ತು ಅಂಶಗಳು : ಬಿಂದುವೆ ಶಿವಾಂಶಿಕಂ ರಕ್ತ ಶಕ್ತ್ಯಂಶಿಕವು ಚಂದ್ರಾಂಶು ಶುಕ್ಲಶೋಣಿತವು ಸೂರ್ಯಾಂಶುವಿವು ದ್ವಂದ್ವ ಸಮ್ಮಿಳಿತದಿಂ ಪಿಂಡವೆನಿಸಿತ್ತು ರುಧಿರಮ್ಮಾಂಸ ಚರ್ಮತ್ರಿವಿಧಾ ಸಂದು ಮಾತಾಂಶ್ಸಸ್ಥಿ ನಾಡಿ ರೋಮಮಜ್ಜೆರು ತಂದೆಯಂಶಗ್ನಿ ವಾಯುವು ಯಾತ್ಮಯಾ ತ್ರಿತಯು ಬಾಧುರ ಶಿವಾಂಶುಗಳಿಂದೆ ನವಕಳೆಯು ಸಂಯೋಗ್ಯದಿಂ ಪಿಂಡವಹುದು (ನವಮೋ. ೧೪-೪೦).

[ ನವ$_1$ + ಕಳೆ$_6$ (= ಕಲೆ$_3$ ) ]

**ನವಕಾಂಡ** (ನಾ). (?) : ನವರತ್ನದ ಸೌಧಂಗಳ ಸವಿವೆಳಗಾ ಪುರಮನೆಲ್ಲ ಮಾವರಿಸೆ ಜನರ್ ನವರತ್ನಪುತ್ಥಳಿಗಳೆನೆ ನವಕಾಂಡದರೆಯ್ದೆ ನೋಡ ಬಂದಂತಪ್ಪರ್ (ಹಾಲಾಸ್ಯ. ೧-೪-೭೨). [ ? ]

**ನವಕಾರಮಂತ್ರ** (ನಾ). [ಜೈನ] ಶಾಸ್ತ್ರದಲ್ಲಿ ಪ್ರಸಿದ್ಧವಾದ ಒಂದು ಸೂತ್ರ,-ಮಂತ್ರ ವಿಶೇಷ : ಜೈನಸಾಧುಗಳು ಘನಗಂಭೀರವಾಗಿ ನವ ಕಾರಮಂತ್ರವನ್ನು ಹಾಡಿದರು (ಸಪತಿ. ೨೩೮).

[ ನವಕಾರ$_1$ (P ← ಪ್ರಾ. ಣವಕಾರ) + ಮಂತ್ರ ]

**ನವಕುರುಜು** (ನಾ). ಹೊಸದಾಗಿ ನಿರ್ಮಿಸಿದ ಮಂಟಪ : ರಂಗವಾಲಿ ಯಿಂದನುಪಮದ ಕಸ್ತುರಿ ಚಳೆಯ ನವಕುರುಜಿನಿಂ ಜನಿತ ಹರುಷದೊಳೆಸಗಿ ಶರಣ ಸಹ ಬರುತಿರ್ದ ಘನಮಹಿಮ ನಂದೀಶನು (ಲಿಂಗಪು. ೭-೪೦).

[ ನವ$_2$ + ಕುರುಜು ]

**ನವಕೇಶವ** (ನಾ).=ನವನಾರಾಯಣ ೨: ನವಕೇಶವರುರ್ವರೆಯೊಳಗವರುಂ ಮುನ್ನಾಗಿ ಪೋದರ್ (ಧರ್ಮಾಮೃ. ೫-೨೨೨). [ ನವ$_1$ + ಕೇಶವ ]

**ನವಕೋಟಿ** (ನಾ). ಒಂದು ಸಂಖ್ಯೆ : ಒಂಬತ್ತು ಕೋಟಿ: ನಿಮ್ಮ ದೇವರೆಂದು ನಂಬಿ ಪೂಜಿಸಲಾಗದಯ್ಯಾ ನವಕೋಟಿಬ್ರಹ್ಮರಿಗೆ ಪ್ರಳಯವ ಮಾಡುವದ ನಾ ಬಲ್ಲೆನಾಗಿ (ಬಸವ. ೩೯೦). [ ನವ$_1$ + ಕೋಟಿ$_1$ ]

**ನವಕೋಟಿನಾರಾಯಣ** (ನಾ). ೧. ನವಕೋಟಿಹೊನ್ನಿಗೆ ಒಡೆಯ ನಾದವನಂ; ಒಂದಂ ಬಿರುದು; P ಚಿಕ್ಕದೇವರಾಜರ ಬಿರುದು : ತಮ್ಮಲ್ಲಿದ್ದ ವಸ್ತ್ರಾಭರಣ ದ್ರವ್ಯಗಳನ್ನು ಲೆಕ್ಕಮಾಡಿಸಿ ನೋಡಲು, ನವ ಕೋಟಿ ದ್ರವ್ಯವಾಗಿದ್ದುದರಿಂದ . . . ಉತ್ಸವಕಾಲದಲ್ಲಿ ನವಕೋಟಿ ನಾರಾಯಣ ಎಂಬದಾಗಿ ಹೊಗಳಿಸಿಕೊಳ್ಳುತ್ತ (ಮಹಾವಂ. I, ೧೫೦). ೨. ಪುರಂದರದಾಸರ (ಶ್ರೀನಿವಾಸನಾಯಕನಾಗಿದ್ದಾಗ ಇದ್ದ) ಬಿರುದು: ಬೆಳ್ಳಿ ಬಂಗಾರ ರತ್ನಪಡಿ ವ್ಯಾಪಾರಗಳಿಂದ ಕೋಟ್ಯಾವಧಿ ಧನಾರ್ಜನೆ ಮಾಡಿ ನವಕೋಟಿನಾರಾಯಣನೆಂದು ಹೊಗಳಿಸಿಕೊಂಡನು (ಕಳವಿ. ೦೭೯). ೩. ತುಂಬ ಶ್ರೀಮಂತ,-ಧನಿಕ: ನಮ್ಮ ಶೀನು ನವ ಕೋಟಿನಾರಾಯಣನಾಗ್ತಾನೆ, ನೋಡ್ತಿರಿ (ಹೇಮಕೂ. ೧೦). ೪. (ಆಲಂ) ಒಂಬತ್ತುಕೋಟಿ ಮಕ್ಕಳನ್ನುಳ್ಳವನು; ಕೃಷ್ಣ : (+). ೫. ಹೆಚ್ಚು ಮಕ್ಕಳಿರುವವನು : (+). [ ನವಕೋಟಿ + ನಾರಾಯಣ ]

**ನವಖಂಡ$_1$** (ನಾ). ೧. ಭೂಮಿಯ ಒಂಬತ್ತು ವಿಭಾಗಗಳು : ಜಂಬೂ ದ್ವೀಪ ನವಖಂಡ ಪೃಥ್ವಿಯೊಳಗೆ ಕೇಳಿರಯ್ಯ ಎರಡಾಳಿನ ಭಾಷೆಯ (ಬಸವ. ೬೭೭) : ನವಖಂಡ ಪೃಥ್ವಿ ಚತುರ್ದಶಭುವನ ಗ್ರಾಮದಿಂದತ್ತತ್ತ ಮುನ್ನ ಅನಾದಿಯಲ್ಲಿ ಜಂಗಮವೆ ಲಿಂಗವೆಂಬಿರಿ (ಅವಕಂ. ೪. ೩೨೩-೮೮೩). ೨. ಒಂಬತ್ತು ಚೂರು; ಚೂರು ಚೂರು; ಛಿದ್ರಛಿದ್ರ: ಭವ ಬದ್ಧವೈರಮಂ ಕಿಳಿದು ವಿಭಂಗಜ್ಞಾನದಿಂದೆ ಪರಿಕ್ರುದ್ಧಮನರ್ ನವಖಂಡ ವಾಗೆ ಮಾಟ್ಪರ್ ನವನಾರಕರಂ ಪುರಾಣನಾರಕರಾಗಳ್ (ಧನ್ಯಪು. ೧೩-೧೩೫) ಹುಟ್ಟಿದ ಮಕ್ಕಳ ನವಖಂಡವ ಮಾಡಿ ಕಡಿಯುತ್ತಿರಲಿ (ಬಸವ. ೭೦೭). ೩. [ಜೈನ] ಇಂದ್ರಖಂಡ, ಶ್ವೇತಖಂಡ, ತಾಮ್ರಖಂಡ, ಗಭಸ್ತಿ ಖಂಡ, ನಾಗಖಂಡ, ಸೌಮ್ಯಖಂಡ, ಗಂಧರ್ವಖಂಡ, ಚಾರಣ ಖಂಡ ಮತ್ತು ಭರತಖಂಡ ಎಂಬ ಭೂಮಿಯ ಒಂಬತ್ತು ಭಾಗ ಗಳು : ನವಖಂಡಾವನಿಯೊಳಗಿರ್ಪವನೀಶರ ಹೃದಯಮೆಯ್ದೆ ಶತಖಂಡ ಮೆನಿಪ್ಪವೊಲೊಡೆಯೆ ಭೂರಿಭೇರೀರವವೊಗೆದುದು ಚಕ್ರಿವಿಜಯಯಾತ್ರೋ ತ್ಸವದೊಳ್ (ಪಾರ್ಶ್ವಪು. ೮-೩೦). [ ನವ$_1$ + ಖಂಡ ]

**ನವಖಂಡ$_2$** (ನಾ). ಹೊಸ ಮಾಂಸ : ಕರುಳ ಪೂಗೊಂಚಲಿನ ಮಾಳಿಯ ಬಿರಿಮುಗುಳ ನವಖಂಡದಿಂಡೆಯ ಕರತಳದ ತಳಿರೆಲೆಯ ಕಡಿದೋಳುಗಳ ಕೊಂಬುಗಳ . . . ರಣವನವಸೆದುದೀತನ ಖಡ್ಗಚೈತ್ರದಲಿ (ಕುಮಾರದ್ರೋ. ೬-೪೨). [ ನವ$_2$ + ಖಂಡ ]

**ನವಗರ** (ನಾ). = ನವಗ್ರಹ : ಕುಟಿಲತೆ ಬಾಲಕೀವ್ರಜದ ಕುಂತಳದಲ್ಲಿ . . . ಪಟುತರವಕ್ರಮಾ ನವಗರಂಗಳೊಳಲ್ಲದೆಯಿಲ್ಲ ನಾಡಿನೊಳ್ (ದಶಾವ. ೫-೦೨). [ ನವ$_1$ + ಗರ$_2$ ]

**ನವಗಾಯ** (ನಾ).(ಆಲಂ) ದೇಹದ ಒಂಬತ್ತುದ್ವಾರಗಳು; ನವದ್ವಾರ: ಓಹೊ ಎನ ಜೀವಾ ಮೈಯೊಲ್ಲಾ ನವಗಾಯ (ಕನಕ. ೨೨೦ ಅನುಪಲ್ಲವಿ).

[ ನವ$_1$ + ಗಾಯ ]

**ನವಗುಣ** (ನಾ). ಸುಖ, ದುಃಖ, ರಾಗ, ದ್ವೇಷ, ಬುದ್ಧಿ, ಭಾವನೆ, ಪ್ರಯತ್ನ, ಧರ್ಮ ಮತ್ತು ಅಧರ್ಮ ಎಂಬ ಆತ್ಮನ ಒಂಬತ್ತು ಗುಣಗಳು : ತೇಜದ ಮಜ್ಜೆಯ ನವಗುಣದ ಹೊಳಹಿನಂತೆ ವಾಯುವಿನ ಮಜ್ಜೆಯ ನಾನಾ ಸುಳುಹಿನಂತೆ . . . ಇಂತಿಪ ತದ್ರೂಪು ತದ್ರೂಪಂಗಳ ಹೊದ್ದಿಹವಾದ ಕಾರಣ ಇಂತೀ ಆತ್ಮತತ್ತ್ವಭೇದದಲ್ಲಿ ಆಗುಚೇಗೆಯನಱಿಯ ಬೇಕು (ಮೋಳಿಮಾ. ೧೧-೪೦) : ಬುದ್ಧಿ ಸುಖ ದುಃಖ ರಾಗ ದ್ವೇಷ ಪ್ರಯತ್ನ ಧರ್ಮ ಅಧರ್ಮ ಭಾವನೆಯೆಂಬ ನವಗುಣಗಳಂ ವ್ಯವಹರಿಸಿ (ವಿವೇಕ. ೨೪೭). P 'ಬ್ರಹ್ಮಸೂತ್ರಭಾಷ್ಯ'ದ ಪ್ರಕಾರ: ಜ್ಞಾನ, ಸುಖ, ದುಃಖ, ಇಚ್ಛೆ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಸಂಸ್ಕಾರ ಎಂಬುವು ಆತ್ಮನ ನವಗುಣಗಳಂ. [ ನವ$_1$ + ಗುಣ ]

**ನವಗ್ರಹ** (ನಾ). (ಭಾರತೀಯ ಸಂಪ್ರದಾಯದಂತೆ) ಸೂರ್ಯ, ಸೋಮ, ಮಂಗಳ, ಬುಧ, ಗುರು, ಶುಕ್ರ, ಶನಿ, ರಾಹು ಮತ್ತು ಕೇತು ಎಂಬ ಒಂಬತ್ತು ಗ್ರಹಗಳಂ : ಇಪ್ಪತ್ತೇಳು ನಕ್ಷತ್ರ . . . ರಾಹು ಕೇತು ನವಗ್ರಹ ಇಂತಿವರೆಲ್ಲರು ಆ ಮೇರುವುಂದಿರದ ಹೊಜ ಪ್ರದಕ್ಷಿಣವ ದಿವರಾತ್ರಿಯಲ್ಲಿ ತಿರುಗುತ್ತಿಹರು (ಚನ್ನವ. ೪. ೫೮೨-೧೩೮) ; ನವಗ್ರಹದ ನಡುವೆ ಚಂದ್ರಾದಿತ್ಯರ್ . . . ಎಸೆವ ತೆಱದಿ . . . ಮುನಿ ಕುಲದ ನಡುವಿರ್ದರಧಿಕ ವಿಶ್ವಾಮಿತ್ರ ವಾಸಿಷ್ಠರು (ಹರಿಶ್ಚ. ೨-೫) : ಮಂಗಳ ಬುಧ ಬೃಹಸ್ಪತ್ಯಾದಿ ನವಗ್ರಹಂಗಳೆಲ್ಲಂ ಪುಂ ನಪುಂಸಕಲಿಂಗಂಗಳ್ (ಶಮದ. ೮೮ ಪ್ರಯೋ). [ ನವ$_1$ + ಗ್ರಹ ]

**ನವಗ್ರಹಜಪ** (ನಾ). ಸೂರ್ಯನೇ ಮೊದಲಾದ ಗ್ರಹಗಳ ಅನುಗ್ರಹ ಕ್ಕಾಗಿ ಶಾಸ್ತ್ರೋಕ್ತವಾದ ವಿಧಾನದಿಂದ ಮಾಡುವ ಆಯಾಯ ಗ್ರಹಗಳ ಮಂತ್ರ ಪುರಶ್ಚರಣೆ : ನವಗ್ರಹಜಪ ಮಾಡಿ. ಪೀಡೆ ಪರಿಹಾರ ವಾಗುತ್ತದೆ (ರೂಢಿ). [ ನವಗ್ರಹ + ಜಪ ]

**ನವಗ್ರಹದಾನ** (ನಾ). ನವಗ್ರಹಗಳನ್ನು ಪ್ರಸನ್ನಗೊಳಿಸುವುದಕ್ಕಾಗಿ ಮಾಡುವ ನವಧಾನ್ಯಗಳ ದಾನ : (+). P ಸೂರ್ಯನ ಪ್ರೀತ್ಯರ್ಥ ವಾಗಿ ಗೋದಿ, ಚಂದ್ರನಿಗೆ ಬತ್ತ, ಕುಜನಿಗೆ ತೊಗರಿ, ಬುಧನಿಗೆ ಹೆಸರು, ಗುರುವಿಗೆ ಕಡಲೆ, ಶುಕ್ರನಿಗೆ ಅವರೆ, ಶನಿಗೆ ಎಳ್ಳು,

ರಾಹುವಿಗೆ ಉದ್ದು ಮತ್ತು ಕೇತುವಿಗೆ ಹುರುಳಿಯನ್ನು ದಾನ ಮಾಡಬೇಕೆಂಬ ವಿಧಿಯಿದೆ. [ ನವಗ್ರಹ + ದಾನ ]

**ನವಗ್ರಹಶಾಂತಿ** (ನಾ). ಜಪ, ದಾನ, ಹೋಮಗಳಿಂದ ನವಗ್ರಹಗಳನ್ನು ಪ್ರಸನ್ನಗೊಳಿಸುವ ಪುಣ್ಯಕರ್ಮ : (?). [ ನವಗ್ರಹ+ ಶಾಂತಿ ]

**ನವಗ್ರಹಹೋಮ** (ನಾ). ನವಗ್ರಹಗಳ ಸುಪ್ರೀತಿಗಾಗಿ ಸಮಿತ್ತು, ಚರು, ಆಜ್ಯಗಳಿಂದ ಯಥೋಕ್ತಸಂಖ್ಯೆಯಿಂದ ವಿಧಿಪೂರ್ವಕವಾಗಿ ಮಾಡುವ ಮಂತ್ರಪೂರ್ವಕವಾದ ಹೋಮ: (?).

[ ನವಗ್ರಹ + ಹೋಮ ]

**ನವಗ್ರಾಹಕರಿಣಿ** (ನಾ). ಹೊಸದಾಗಿ ಹಿಡಿದ ಹೆಣ್ಣಾನೆ : ಗಂಟಿನೊಳ್ ಬರುತಿರ್ದ ಯುವರಾಜನಂ ಭೋಂಕನೆ ಕಂಡು ನವಗ್ರಾಹಕರಿಣಿಯಂದದಿ ನೂರುಸ್ತಂಭವಿಧೃತೆಯಾಗಿ (ಕಾದಂಬ. ೨೩೨). [ ಸಂ. ನವಗ್ರಾಹ್ಯಕರಿಣೀ ]

**ನವಗ್ರೈವೇಯಕ** (ನಾ). [ಜೈನ] ಪದಿನಾರು ಸ್ವರ್ಗಗಳ ಮೇಲೆ ಇರುವ ಸುದರ್ಶನ, ಅಮೋಘ, ಸುಪ್ರಬುದ್ಧ, ಯಶೋಧರ, ಸುಭದ್ರ, ಸುವಿಶಾಲ, ಸುಮನಸ, ಸೌಮನಸ ಮತ್ತು ಪ್ರೀತಿಂಕರ ಎಂಬ ಒಂಬತ್ತು ಕಲಾತೀತವಾದ ಸ್ವರ್ಗಗಳು : ಆ ಪದಿನಾಱು ಕಲ್ಪಂಗಳ ಮೇಲೆ ನವಗ್ರೈವೇಯಕಂಗಳಿರ್ದುವು (ಆಪು. ೧೦-೨೯ ವ): ಬಱಿಯ ಮಗ್ರಿಮನವಗ್ರೈವೇಯಕಮಧ್ಯನಾಯಕನಾದಂ (ಪಂಪಾಭಾ. ೬-೫೭ ವ): ಇರ್ಪತೊಂದುಜಲಧಿ ಮೊದಲಿನಲ್ಮೂವತ್ತೊಂದುವರಮಾಯುಃಕ್ರಮದ ನವಗ್ರೈವೇಯಕದಮರರುಮಂ ನೊಡೆವನೇ ಜವಂ ನಿರ್ಗುಣನೋ (ಮಲ್ಲಿಪು. ೧೬-೧೧೮). [ ನವ$_1$ + ಗ್ರೈವೇಯಕ ]

**ನವಚಕೋರಿ** (ನಾ). ಎಳೆಯ ವಯಸ್ಸಿನ ಹೆಣ್ಣುಚಕೋರಪಕ್ಷಿ: ಹೊನ್ನ ಪೆಟ್ಟಿಗೆಗಳಂ ನಲವಿಂದೆ ಬಗೆವೆಚ್ಚಿಕೊಂಡು ಬರುತಿರ್ದನುತ್ಸವದಿಂದೆ ನವ ಚಕೋರಿಗೆ ಚಂದ್ರಿಕೆಯು ಕುಟುಕುದಪ್ಪಂತೆ (ನಂಬಿರ. ೧೦-೧೨೫).

[ ನವ$_2$ + ಚಕೋರಿ ]

**ನವಚಕ್ರ** (ನಾ). [ಯೋಗ] ಕುಂಡಲಿನಿಯು ಏರುವ ಒಂಬತ್ತು ಬೇರೆ ಬೇರೆ ಸ್ಥಾನಗಳು ; ಆಧಾರಚಕ್ರ, ಸ್ವಾಧಿಷ್ಠಾನಚಕ್ರ, ಮಣಿಪೂರಕ ಚಕ್ರ, ಅನಾಹತಚಕ್ರ, ವಿಶುದ್ಧಿಚಕ್ರ, ಆಜ್ಞಾಚಕ್ರ, ಬ್ರಹ್ಮ ಚಕ್ರ, ಶಿಖಾಚಕ್ರ ಮತ್ತು ಪಶ್ಚಿಮಚಕ್ರ ಎಂಬ ಒಂಬತ್ತು ಚಕ್ರಗಳು : ಕರಣಾದಿ ಗುಣಂಗಳಳಿದು ನವಚಕ್ರಂಗಳು ಭಿನ್ನವಾದ ಬಳಿಕ ಇನ್ನೇನೋ ಇನ್ನೇನೋ (ಅವಚಂ. ೮೭-೩೮೮) ; ನವಚಕ್ರಾಂಬುಜಂಗಳ ದಳ ಕುಳವರ್ಣಾದಿ ದೇವತೆಗಳ ತೋಱಿಕೆ ಏನೇನೂ ಇಲ್ಲದ ನಿತ್ಯನಿರಂಜನ ನಿರಾಮಯನಾದ ಶರಣಂಗೆ ನಮೋ ನಮೋ ಎಂಬೆನು (ಸಿದ್ಧೇವ. ೧೫೯-೪೭೮) : ನವಚಕ್ರಂಗಳಲ್ಲಿ ನವಬ್ರಹ್ಮಂಗಳ ಮೂರ್ತಿಗೊಳಿಸಿ ಕಾಯದ ಕಣ್ಣಿಂದ ಕರತಲಾಮಲಕವ ನೋಡುವಂತೆ ಮನದ ಕಣ್ಣಿಂದ ನವಬ್ರಹ್ಮಸ್ವರೂಪವ ಮನದಣಿವಂತೆ ನೋಡಿ (ಭಿನವ. ೨೩-೦೯). 'ಷಟ್ಚಕ್ರ' ಪರಾ. [ನವ$_1$ + ಚಕ್ರ$_1$ ]

**ನವಚೂಟ** (ನಾ). ಅಪೂರ್ವವಾದ ಚುರುಕುತನ,-ಚಟುವಟಿಕೆ : ನವ ಚೂಟಿಯುಳ್ಳಿ ಕಾಯ ನಡಸಿ ಹಳದಿ ಜೋಡ ಬವರಕ್ಕೆ ನಿಲಿಸಿಯಾಡಿದರು (ಸೌಂದರಾ. ೪-೪೯). [ ನವ$_2$ + ಚೂಟಿ$_1$ (<ಸೂಟಿ$_1$) ]

**ನವಜವಾನ** (ನಾ). ತುಂಬುಹರೆಯದವನು ; ನವಯುವಕ ; ತರುಣ : ಅವನಿಗೆ ೭೫ ವರ್ಷ ಪ್ರಾಯ, ಮುದುಕರು. ಹುರುಪು ಮಾತ್ರ ನವ ಜವಾನರದು (ಕರವೀ. ೧೦೫) ; ಹರಕು ಅಂಗಿಯ ಉಬ್ಬ ದೃಢಕಾಯನಾದ ನವಜವಾನನು ಶೀಳು ಹಾಕುತ್ತಿದ್ದನು (ರಕ್ತಾಕ್ಷಿ. ೧೬೨).

[ ←ಪಾರ. ಹಿಂ. ನೌಜವಾನ್ ]

**ನವಜ್ವರ** (ನಾ). ಒಂದು ಬಗೆಯ ಜ್ವರ; ಒಂಬತ್ತು ದಿನಗಳವರೆಗೆ ತೀಕ್ಷ್ಣವಾಗಿ ಕಾಡುವ ಜ್ವರ : ಶಿಗಡ, ರಸ, ಗಂಧಕ . . . ಇವಂ ಕಲ್ವದಲ್ಲಿ ಕಳ್ಳಿಯ ಹಾಲಲ್ಲೂ ಎರಡುಜಾವ ಮರ್ದಿಸಿ ರಸಸಿದ್ಧಿ ಮಾಡಿಕೊಂಡು ಎರಡು ಗುಂಜಿಯ ತೂಕವನ್ನು ಅಲ್ಲದ ರಸ ಸಕ್ಕರೆ ಬೆರಸಿಕೊಡಲು ನವಜ್ವರ ಹರ (ವೈದ್ಯವಿ. ೩೩) ; ನವಜ್ವರದಲ್ಲಿಯೂ, ಸನ್ನಿಪಾತದಲ್ಲಿಯೂ, ಗರ್ಭಿಣಿಯರಲ್ಲಿಯೂ . . . ವಿರೇಚನ ಮಾಡಲಾಗದು (ಸಕವೈ. ೨೬) ; ಸೌಭಾಗ್ಯವತಿ ನವಜ್ವರದಿಂದ ತೀರಿಕೊಂಡಳೆಂದು ತಿಳಿದುಬಂತು (ಸ್ಮೃತಿಚಿ. ೩೦). [ ನವ$_1$ + ಜ್ವರ ]

**ನವಟಾಕು** (ನಾ). ತೂಕದಲ್ಲಿ ಒಂದಂ ಸೇರಿನ ಎಂಟನೆಯ ಭಾಗ ; ತೂಕದಲ್ಲಿ ಎಂಟನೆಯ ಒಂದಂ ಭಾಗ ; ಅರಪಾವು : ನನ್ನವಳು ಒಂದು ಸಿಂಗಲ್ ಅಥವಾ ಒಂದು ನವಟಾಕು ಸಜ್ಜಿಗೆ ಮಾಡಿದರೆ ಸೇರುತ್ತುಪ್ಪ ಅಚ್ಚೇರು ದೀಪದಾಕ್ಕೆ ಖರ್ಚುಮಾಡುತ್ತಾಳೆ (ಮುಂಗಾಪು.೫೭). 'ಚಟಾಕು' ಪರಾ. [ ←ಮರಾ. ನವಟಾಂಕ ]

**ನವಠಾಣ** (ನಾ). [ಸಂಗೀತ] ಒಂಬತ್ತು ಸ್ವರಗಳು (?) : ಗಾನವೊಪ್ಪುವ ದಂಡಿಗೆಯನವಧಾನಿಸುತ ಮಿಗೆ ಮೋಘಚೀಳವನೊಡನೆ ಯಾಠಾಣವಾನಿತಂ ನವಠಾಣಮುಂ . . . ಅನೂನಪತ್ರಂ ಪೊಟ್ಟವಣ ಸಾರಣಮುಲರ್ದಿರಲು (ಬಸಪು. ೧೯-೮). [ ನವ$_1$ + ಠಾಣ ? ]

**ನವಣಕ್ಕಿ** 'ನವಣೆಯಕ್ಕಿ' ನೋ.

**ನವಣ** 'ಲವಣ' ನೋ.

**ನವಣವಡೆ** (ಕ್ರಿ). ಸೊಗಸಾಗು ; ಅಂದವನ್ನು ಪಡೆ : ಬಿಂಕಂ ಉಳಿವಡೆಯ ಉಳಿ ನವಣವಡೆಯ ನವಣ ಬಹುವಿಕೆವಡೆಯ ಬಹುವಿಧದ ವಹಣಿಯ ಮಾರ ಚಿತ್ರದ ಗತಿಗಳೊಳ್ ಮೆಱೆದು (ಅನಂಪು. ೨-೨೮ ವ).

[ ನವಣ (<ಲವಣ) + ಪಡೆ$_1$ ]

**ನವಣೆ** (ನಾ). ಒಂದು ಬಗೆಯ ಧಾನ್ಯ ; ಕಂಗು : "ಪ್ರಿಯಂಗುಃ, ಕಂಗುಃ- ಈ ೨ ನವಣೆ" (ಹಲಾಯು. ೯೫-೪೨೮) ; ನವಣೆಯ ಪಿಟ್ಟಂ ನೆಲದಾಬುವ ನೊಡವೊಯ್ದಟ್ಟು ಘೃತಸಮೇತಂ ಮೇಣ್ ದುಗ್ಧವಿಮಿಶ್ರಂ ಸೇವಿಸೆ ವೀರ್ಯವೃದ್ಧಿಯುಂ ಮೆಯ್ಯ ಪುಷ್ಟಿಯುಂ ಸವನಿಸುಗುಂ (ಲೋಕೋಪ ೯-೪೫) ; ಮರ್ದಂ ನವಣೆಯ ಪಿಟ್ಟಿನೊಳ್ ಕೂಡಿ ಕಿಱಿಯವಪ್ಪಂಡೆಗಳಂ ಮಾಡಿ (ಧರ್ಮಾಮೃ. ೧೨-೮೮) ; ನವಣೆ ಹಾರಕ ಬರಗು ಸಾವೆ ಮಾಸಿಗಳೆಂಬ ಧಾನ್ಯ ಐವತ್ತುಲಕ್ಷ ಖಂಡುಗ (ಶೂನ್ಯಸಂ. ೩೩೪-೦೪) ; ನವಣೆಯ ಹಾಳಲು ಬೆದ್ದತಿ ಮತ್ತರೊಂದು (ಎಕ. VI, ಕಡೂರು. ೩೭-೭೩ ; 1187 ?) ; ಬಾಗಿ ಬಳುಕುವ ತೆನೆಗಳಿಂದೆಸೆವ ತಮ್ಮ ನವಣೆಯ ಕಯ್ಯ ಬಳಿಯೊಳ್ (ಸಿದ್ಧರಾ. ೨-೨೩) ; ಬಲು ರಾಯರೊಳ್ಮೆ ಗಡಯುಂಬುದಲ್ಲಂ ನವಣೆಯೊಳು ಗಂಜಿ (ಕಬಪು. ೧೦-೭೦) ; ನವಣೆಯ ಬೋನಕ್ಕೆ ಹವಣಾದ ತೊಗೆಯಾಗಿ ಕವಣೆಗಲ್ಲಷ್ಟು ಬೆಣ್ಣೆಯಿಡಲೂಟದ ಹವಣ ನೋಡು (ಸರ್ವಜ್ಞ. ೧೬೦೮).

**ನವಣೆಯ ಪಾಯಸ** = ನವಣೆ ಅಕ್ಕಿಯನ್ನು ತುಪ್ಪದಲ್ಲಿ ಹುರಿದು, ಬೇಯಿಸಿ ಮಾಡುವ ಪಾಯಸ : ಅವರು ಮಾಡಿದ ನವಣೆಯ ಪಾಯಸ ಬಹಳ ರುಚಿಯಾಗಿತ್ತು (ರೂಢಿ).

[ದೇ.॥ ತಮಿ. ನವರೈ = ಒಂದು ಬಗೆಯ ಬತ್ತ ; ಮಲ. ನವಿರ, ನವಿರಿ = ಒಂದು ಬಗೆಯ ಅಕ್ಕಿ ; ತುಳು. ನವರ, ನವರೆ ; ತೆಲು. ನಿವರಿ ]

**ನವಣೆಅಕ್ಕಿ** 'ನವಣೆಯಕ್ಕಿ' ನೋ.

**ನವಣೆಯಕ್ಕಿ, ನವಣಕ್ಕಿ, ನವಣೆಅಕ್ಕಿ** (ನಾ). ಹೊಟ್ಟು ತೆಗೆದ ನವಣೆ : ಚಾಜೀಸೊಪ್ಪನು ನವಣೆಯಕ್ಕಿಯನ್ನು ಕೂಡ ಕುಟ್ಟಿ ಹಿಟ್ಟು ತೊಳಸಿ . . . ಸಪ್ಪೆ ತುಪ್ಪದಿಂ ಮೆಲ್ಲಲು ಪನ್ನೆರಡು ಮಾಣ್ಗುಂ (ಸಕವೈ. ೧೯೫). **ನವಣಕ್ಕಿ:** ನವಣಕ್ಕಿಯ ಹಿಟ್ಟುಕುಟ್ಟಿ ತುಪ್ಪದಲ್ಲಿ ಮೆಲ್ಲೆ ಗರ್ಭವಕ್ಕುಂ (ವೈದ್ಯವಿ. ೮). **ನವಣೆಅಕ್ಕಿ :** ಹೊನ್ನುಗೊನ್ನೆಸೊಪ್ಪು ಸಹಮೂಲವನ್ನು ನವಣೆಅಕ್ಕಿ ಗಂಜಿಯಲ್ಲಿ ಅರೆದು ಮೂರುದಿನ ಕೊಟ್ಟರೆ ಕಲ್ಲುಕರಗಿ ಬೀಳುವುದು (ಸಕವೈ. ಪರಿ. ೪೯೬). [ ನವಣೆ + ಅಕ್ಕಿ$_1$ ]

**ನವತ** (ನಾ). ೧. ಹೊದಿಕೆ ; ಆಚ್ಛಾದನೆ. ೨. ಉಣ್ಣೆಯ ಹೊದಿಕೆ ; ಕಂಬಳಿ : ಸ್ನಾನಂಗೆಯ್ವೆಡೆಯೋ ಮೇಣ್ ದಾನಂ ಕೊಳ್ವೆಡೆಯೊ ನವತಮಂ ಪೊಳ್ವೆಡೆಯೋ ನೀನಿ: ಸಂಗ್ರಾಮಮಾವನಿಗೇನೆಂದಟ್ಟುವೆ ವಿಪ್ರ ಪೆರ್ಮೆಟ್ಟಿ ನುತುಂ (ಮಹಾನೀ. ೧೨-೨೦೦). [ ಸಂ. ]

**ನವತಯಾರುಮಾಡಿಸು** (ಕ್ರಿ). ಹೊಸದಾಗಿ ಸಿದ್ಧಪಡಿಸು : ಒಂದು ಹೂವನ್ನು ಅರ್ಧಚಂದ್ರನೋಪಾದಿ ಚಿನ್ನದಲ್ಲು ಮಾಡಿಸಿ. ಆದಕ್ಕೆ ವಜ್ರಕೆತ್ತಿಸಿ. ಹೊಳೆಯುವಂಥಾದ್ದು ಒಂದು ನವತಯಾರುಮಾಡಿಸಿ, ತಮ್ಮ ಬಳಿಯ ಮಡಗಿದ್ದರು (ರಾಜೇಂದ್ರ. ೨೨೫). [ ನವ$_2$ + ತಯಾರು + ಮಾಡಿಸು ]

**ನವತರುಣ** (ನಾ).=ನವಯೌವನ ೨ : ಈಗ ಮಾತ್ರ ನಾನೊಬ್ಬ ನವತರುಣನಂತೆ ಹುರುಪಿನಿಂದ ಆಕಾಶಕ್ಕೇರುವಷ್ಟು ಪ್ರಫುಲ್ಲನಾಗಿದ್ದ (ಗಂಗಾವ. ೧೧೧). [ ನವ$_2$ + ತರುಣ ]

**ನವತರುಣಿ** (ನಾ). = ನವಯುವ್ವನೆ : ಈಗಿನ ನವತರುಣಿಗಿಂತ ನವತರುಣಿಯರಲ್ಲಿ ಓದಿನ ಬಗೆಗೆ ಒಲವು ಹೆಚ್ಚು (ರೂಢಿ). [ ನವ$_2$ + ತರುಣಿ ]

**ನವತಾರುಣ್ಯ** (ನಾ). ಹೊಸಹರೆಯ ; ನವಯೌವನ : ಮಕ್ಕಳು ನವತಾರುಣ್ಯವನ್ನು ಹತ್ತುವಾಗ ಆರಂಭವಾಗುವ ಪ್ರೌಢಶಿಕ್ಷಣ ಉತ್ತಮವೆಂದು ಹಲವರು ಭಾವಿಸುವರು (ಶಿಕ್ಷದ. ೯೦). [ ನವ$_2$ + ತಾರುಣ್ಯ ]

**ನವತಾಲ** (ನಾ). [ಶಿಲ್ಪಶಾ] ಮೂರ್ತಿಶಿಲ್ಪದಲ್ಲಿ ಬಳಸುವ ಒಂಬತ್ತು ತಾಳಪ್ರಮಾಣದ ಒಂದು ಅಳತೆ : ಮಾನಾಂಗುಲ, ಮಾತ್ರಾಂಗುಲ, ದೇಹಲಬ್ಧಾಂಗುಲವೆಂಬ ಅಳತೆಗಳಿಂದ ಪಂಚತಾಲ, ನವತಾಲಾದಿ ವಿವೇಚನೆಯಿಂದ ಮೂರ್ತಿಗಳನ್ನು ರಚಿಸುವ ವಿಧಾನಗಳನ್ನೂ . . . ಶಿಲ್ಪಶಾಸ್ತ್ರ ಮತ್ತು ಆಗಮಶಾಸ್ತ್ರಗಳು ತಿಳಿಸುತ್ತವೆ (ಭಾರದ. ೮೦). [ ನವ$_1$ + ತಾಲ ]

**ನವತಿ** (ನಾ). ಒಂದು ಸಂಖ್ಯೆ : ತೊಂಬತ್ತು : ಭರತಕ್ಷೇತ್ರದ ವಿಷ್ಕಂಭಂ ಜಂಬೂದ್ವೀಪದ ನವತಿಶತಭಾಗಪ್ರಮಾಣಮಕ್ಕುಂ (ಸುಕುಮಾ. ೧೧-೫೦ವ); ಬಾಹುಕ್ಷೇಪದಿಂದಂ ನವತಿ ನಯನಭೇದಂಗಳಿಂ ರಂಜಿಸುತ್ತಿರ್ದುದು ಸರ್ವಾಶಾಪ್ರದೇಶಂ ಸುರಪತಿನಟನಂ ವಿಸ್ಮಯಂಬೆತ್ತುದಾದಂ (ಪಾಳ್ಪು. ೯-೧೪). [ಸಂ.]

**ನವತುಷ್ಟಿ** (ನಾ). [ಸಾಂಖ್ಯ] ಅಂಭಸ್ಸು, ಸಲಿಲ, ಓಘ, ವೃಷ್ಟಿ, ಪಾರ, ಸುಪಾರ, ಪಾರಾಪಾರ, ಅನುತ್ತಮಾಂಭ ಮತ್ತು ಉತ್ತಮಾಂಭ ಎಂಬ ಬುದ್ಧಿಗೆ ಸೇರಿದ ಒಂಬತ್ತು ಬಗೆಯ ತುಷ್ಟಿಗಳು : ನವತುಷ್ಟಿಗಳು–ವಿವೇಕಸಾಕ್ಷಾತ್ಕಾರವನ್ನು ಪ್ರಕೃತಿಯೇ ಮಾಡುತ್ತದೆ. ನಾವೇಕೆ ಶ್ರಮಪಡಬೇಕೆಂಬ ತೃಪ್ತಿಯೊಂದು. ಇದಕ್ಕೆ ಅಂಭಸ್ಸೆಂದು ಹೆಸರು . . . ಉತ್ತಮಾಂಭ ಎಂದರೆ ಪ್ರಾಣಿಹಿಂಸೆಯಿಲ್ಲದ ಸುಖವಿಲ್ಲವೆಂದು ತಿಳಿದು ವೈರಾಗ್ಯವನ್ನು ಪಡೆಯುವುದು ಒಂಬತ್ತನೆಯದು. ಈ ನವತುಷ್ಟಿಗಳು ಬುದ್ಧಿಗೆ ಸೇರಿದುವು (ಹಿಂದತಾ. ೬೪). [ ನವ$_1$ + ತುಷ್ಟಿ ]

**ನವತೆ** (ನಾ). ಹೊಸತನ ; ನವೀನತೆ : ಮುದುಕತೊರೆಗೆ ಹೋಗಬೇಕಾದರೆ ದೋಣಿಯಲ್ಲೇ ಪ್ರಯಾಣಮಾಡುತ್ತಿದ್ದೆವು. ಆದರ ನವತೆ ಸಮೊದರೂ ನಿರ್ಮಜನಕತ್ವ ಸಮೆಯಲಿಲ್ಲ (ಕಲಸಿ. ೩೩೪) : ಹಳೆಯ ಕರ್ಮವ ಹೊಸದು ಕೊಟ್ಟ ಪೌರುಷನದಿಯ ಬೆಳೆಯಿವುದು ನವತೆಯಲಿ (ಮಂಕುತ. ೧೬೪).

[ ಸಂ. ನವತಾ ]

**ನವತೇಜ** (ನಾ). ಹೊಸಕಾಂತಿ ; ನವೀನಶೋಭೆ : ನನ್ನಂತೆ ಲಾಂಗೂಲ ಯಜ್ಞದಿಂ ನವತೇಜವುಣ್ಣಗಳ ಗಳಸಿ ಜೀವನ್ಮುಕ್ತರಾಗಿ ! (ಕವಿಪು. ೪೩-೧೦).

[ ನವ$_2$ + ತೇಜ$_1$ ]

**ನವತ್ವ** (ನಾ). = ನವತೆ : ಮಾತೂ ಕೂಡ ನವತ್ವವನ್ನು ಪಡೆಯುತ್ತದೆ (ರೃನ್ನಾ.ಲೋ. ೨೪೦). [ ಸಂ. ]

**ನವದಂಪತಿ** (ನಾ). ನೂತನ ದಂಪತಿ ; ಆದೇ ತಾನೇ ಮದುವೆಯಾದ ಗಂಡಹೆಂಡಿರು: ತಾನುಂ ಪತಿಯುಂ ಮಹಾ[ವಿಭವ]ತೀಕರಮೊಪ್ಪಿರೆ ಮಾಡೆ ಕಾಮದೇವಂ ಪಸೆಯೊಳ್ ಸುರೇಂದ್ರ ನವದಂಪತಿಯಿರ್ದಪೊಲಿರ್ದರ್ (ಬಂಧರಿ. ೯-೮೩) ; ಅಮ್ಮ ಅಪ್ಪ ನವದಂಪತಿಗಳಂತೆ ಇನ್ನೂ [illegible] ಅರಸಿ ಹೊರಟಂತಿದೆ (ನಡೆದಾ. II. ೯೬೫). [ ನವ$_2$ + ದಂಪತಿ ]

**ನವದರ್ಶನಾವರಣ** (ನಾ). [ಜೈನ] ಚಕ್ಷುಸ್ಸು, ಅಚಕ್ಷುಸ್ಸು, ಅವಧಿ, ಕೇವಲ, ನಿದ್ರಾ, ನಿದ್ರಾನಿದ್ರಾ, ಪ್ರಚಲಾ, ಪ್ರಚಲಾಪ್ರಚಲಾ ಮತ್ತು ಸ್ತ್ಯಾನವೃದ್ಧಿ ಎಂಬ ಒಂಬತ್ತು ಬಗೆಯ ದರ್ಶನಜ್ಞಾನವರಣೀಯ ಕರ್ಮಪ್ರಕೃತಿಗಳು : ಪಂಚಜ್ಞಾನಾವರಣಂಗಳುಂ ನವದರ್ಶನಾವರಣಂಗಳುಂ ದ್ವಿವೇದನೀಯಂಗಳುಮಷ್ಟಾವಿಂಶತಿಮೋಹನೀಯಂಗಳುಮೇಕಂದೊಡೆ (ಗೊಮ್ಮಸಾ. ೬-೪) [ ನವ$_1$ + ದರ್ಶನಾವರಣ ]

**ನವದುರ್ಗಿ** (ನಾ). ಶೈಲಪುತ್ರೀ, ಬ್ರಹ್ಮಚಾರಿಣೀ, ಚಂದ್ರಘಂಟಾ, ಕೂಷ್ಮಾಂಡಾ, ಸ್ಕಂದಮಾತಾ, ಕಾತ್ಯಾಯನೀ, ಕಾಲರಾತ್ರೀ, ಮಹಾಗೌರೀ ಮತ್ತು ಸಿದ್ಧಿಧಾತ್ರೀಎಂಬ ದುರ್ಗಾದೇವಿಯ ಒಂಬತ್ತು ರೂಪಗಳು : ಸಪ್ತಮಾತೃಕೆಯರುಂ ಉರಗಿಯರ್ ನವದುರ್ಗಿಯಂಬಿಕೆಯರನಿಬರುಂ ಧರಿಸಿದರು ಶಾಬರವನು (ಲಶಿಚಂ. ೨೩-೧೩); ವಿಷ್ಣುವಿನ ದಶಾವತಾರ . . . ಶಕ್ತಿಯ ನವದುರ್ಗಿಯರು, ಸಪ್ತಮಾತೃಕೆಯರು (ಭಾರದ. ೮೦). [ ನವ$_1$ + ದುರ್ಗಿ ]

**ನವದ್ವಾರ** (ನಾ). ೧. ಒಂಬತ್ತು ಬಾಗಿಲುಗಳು : ನರಕಕ್ಕೆ ನವದ್ವಾರ, ನಾಕಕ್ಕೆ ಒಂದೇ ದ್ವಾರ (ಗಾದೆ). ೨. ಕಣ್ಣುಗಳು, ಕಿವಿಗಳು, ಮೂಗಿನ ಹೊಳ್ಳೆಗಳು, ಬಾಯಿ, ಮೂತ್ರದ್ವಾರ ಮತ್ತು ಗುದದ್ವಾರ ಎಂಬ ದೇಹದ ಒಂಬತ್ತು ದ್ವಾರಗಳು : ಪರಿಮಳದಿಂದೆಯು ಕಟ್ಟ ಪೂಜಿಸುತ್ತಿರ್ದುದೋ ನವದ್ವಾರ ಶಿವಾಲಯದಾದಿ ಮಧ್ಯಸ್ಥಾನದಲ್ಲಿ (ಅವಚಂ. ೪೫-೧೯೩) ; ಬಿಸುಗುದಿಯ ನವರುಧಿರಜಲ ಜಾಳಿಸೆ ನವದ್ವಾರದಲಿ ದೈತ್ಯನ ಕುಸುಕಿಜಾದು ತಿವಿತಿವಿದು ಕೊಂದನು ಕಲಿ ಜಟಾಸುರನ (ಕುಪ್ರಾಆ. ೧೧-೧೧); ನೆಲೆಗೊಂಡ ನವದ್ವಾರದ ಹೊಲೆಯೊಳು ಸರಳುತ ನೀ ಬಿದ್ದೆ ಬಿಕನಾಸಿ (ಪುರಂದ. ೧-೧೦೫-೧) ; ಐದುತಿಂಗಳಿಗೆ ಕಿವಿ ಮೂಗು ಕಂಗಳು ಜನಿಸಿ ನವದ್ವಾರಂಗಳಂ ತೋರ್ಪವು (ನವಮೋ. ೧೪-೫೦); ಸುರಲೋಕಕ್ಕೆ ತೆರಳುವ ತವಕದಿಂದ ಅವಳು ನವದ್ವಾರಗಳ ವಾಯುವನ್ನು ಬಲಿದು, ಪ್ರಾಣತ್ಯಾಗ ಮಾಡಿದಳು (ನಂಜುಂಡ. ೫೦). [ ನವ$_1$ + ದ್ವಾರ ]

**ನವದ್ವೀಪ** (ನಾ). = ನವಚಕ್ರ : ಚಿದ್ಬ್ರಹ್ಮಾಂಡದೊಳಗಣ ಏಳುತಾವರೆಯ ಮೇಲಿಪ್ಪ ನಿಷ್ಕಲಚಿದ್ಬಿಂದುಲಿಂಗಕ್ಕೆ ಪ್ರಾಣಪೂಜೆಯಂ[ಮಾಡಿ] ಮಹಾಜ್ಞಾನ ಬಲದಿಂದ ನವದ್ವೀಪಂಗಳ ಲಿಂಗಂಗಳ ಬೆಳಗು ಪಿಂಡಾಂಡದಲ್ಲಿ ಪ್ರಭಾವಿಸಿ ತೋಱುತಿರ್ಪುದಾಗಿ ನಾನು ಸರ್ವಾಂಗಲಿಂಗಿಯಾದೆನಯ್ಯ (ಘನವ. ೩೯-೩೨); "ಆಚಾರಾದಿಯಾಗಿ ನಿರಂಜನಲಿಂಗಾಂತ್ಯವಾದ ಒಂಬತ್ತು ಲಿಂಗಗಳಿರುವ ಆಧಾರಾದಿಯಾಗಿ ಪಶ್ಚಿಮಾಂತ್ಯವಾದ ಒಂಬತ್ತು ಚಕ್ರಗಳು" (ಘನವ. ಕೋಶ). P ಇಲ್ಲಿ 'ಚಕ್ರ'ವೆಂಬ ಸ್ಥಾನವನ್ನು 'ದ್ವೀಪ'ವೆಂದು ರೂಪಕ ಮಾಡಿದೆ. [ ನವ$_1$ + ದ್ವೀಪ ]

**ನವಧಾನ್ಯ** (ನಾ). ಗೋದಿ, ಭತ್ತ, ಉದ್ದು, ಹೆಸರು, ಕಡಲೆ, ತೊಗರಿ, ಹುರುಳಿ, ಅವರೆ ಮತ್ತು ಎಳ್ಳು ಎಂಬ ಒಂಬತ್ತು ಬಗೆಯ ಧಾನ್ಯಗಳು : ನವಧಾನ್ಯ ಬೆಳೆದವನಿಗೆ ವ್ಯವಧಾನವಿಲ್ಲ (ಗಾದೆ). P ಪಿತೃಶ್ರಾದ್ಧದಲ್ಲಿ ಉಪಯೋಗಿಸಲು ಪ್ರಶಸ್ತವಾದುವು : ಭತ್ತ, ಯವೆ, ಎಳ್ಳು, ಉದ್ದು, ಗೋದಿ, ಸಾವೆ, ನವಣೆ, ಹೆಸರು ಮತ್ತು ಸಾಸುವೆ.

[ ನವ$_1$ + ಧಾನ್ಯ ]

**ನವಧಾಭಕ್ತಿ** (ನಾ). [ಜೈನ] ಶ್ರಾವಕನು ಸಾಧುಗಳ ಬಗ್ಗೆ ಭಕ್ತಿಯನ್ನು ತೋರಿಸುವ ಸಂಗ್ರಹ, ಉಚ್ಚಸ್ಥಾನ, ಪಾದಪ್ರಕ್ಷಾಲನ, ಪೂಜನ, ಪ್ರಣಾಮ, ಮನಃಶುದ್ಧಿ, ವಚನಶುದ್ಧಿ, ಕಾಯಶುದ್ಧಿ ಹಾಗು ಆಹಾರಶುದ್ಧಿಗಳೆಂಬ ಒಂಬತ್ತು ವಿಧಾನಗಳು : ನಿಜವಾದ ಶ್ರಾವಕ ಊಟದ ಹೊತ್ತಿನಲ್ಲಿ ಬಾಗಿಲದೊಳಗೆ ನಿಂತು ಸಾಧುಗಳ ಬರವನ್ನು

**ನಸುಗೋಪ** (ನಾ). ತುಸು ಕೋಪ: ಆರ ಸಂಭ್ರಮಃವಿದಾರ ಮರುಳ್ಗನೆಂದು ನಂದಿಕೇಶ್ವರ ನಸುಗೋಪ [ಪಾಠಂ. ನಸಿಕೋಪ]ದಿಂ ಮದನಸೇನೆಯು ನೀಕ್ಷಿಸಿದಾ ಕ್ಷಣಾರ್ಧದೊಳ್ (ಗಿರಿಕ. ೮-೯); ಕುಮುದಳ ಮೊಗದ ಮೇಲೆ ನಸುಗೋಪ ಮೂಡಿತು (ಪಾತುಮ. ೧೧೧). [ ನಸು$_1$ + ಕೋಪ ]

**ನಸುಜೋೞ್** (ಕ್ರಿ). ಸ್ವಲ್ಪ ಜಾರು: ನಸುಜೋೞ್ದ ಳ್ಳುಡೆಯುಂ ತೞಂಬೊಳೆದು ಪಾಱುತ್ತಿರ್ಪ ಸುವ್ಯಾನಮುಂ ... ಪೊಸತೊಂದೊಪ್ಪಮ ನೀಯ ವಿಹ್ವಳತೆಯಿಂ ಬಂದತ್ತು ಗೋಪೀಜನಂ (ಜಗವಿ. ೩-೮೯); ಪೂಗಳಿಂ ಸಮೆದ ಮಾಲೆಯುಂ ಧರಿಸಿ ನಸುಜೋೞ್ದ ಮೇಲುದನನಿಸು ಮುಸುಕುತ (ಪದ್ಮರಾ. ೮-೨೦). [ ನಸು$_2$ + ಜೋೞ್$_1$ ]

**ನಸುತೂಕಡಿಕೆ** (ನಾ). ಸ್ವಲ್ಪ ತೂಕಡಿಕೆ,–ಜೋಂಪು: ಔಕುವುದು ಬಲುನಿದ್ರೆ ನಿದ್ರೆಯು ನೂಕುವನು ಕಣ್ಣೆವೆಗಳಲಿ ನಸುತೂಕಡಿಕೆ ತೋಱಿದೊಡೆ ಮೈಗೆದಱುವನು ಕೈಯೊಡನೆ (ಕುಮಾ.ಆ. ೯-೮).

[ ನಸು$_1$ + ತೂಕಡಿಕೆ (<ತೂಂಕಡಿಕೆ) ]

**ನಸುತೇಂಕು** (ನಾ). ಮೆಲ್ಲನೆ ತೇಲುವಿಕೆ. 'ನಸುತೇಂಕುದೇಂಕು' ಪರಾ.

[ ನಸು$_1$ + ತೇಂಕು$_1$ ]

**ನಸುತೇಂಕುದೇಂಕು** (ಕ್ರಿ). ಮೆಲ್ಲನೆ ತೇಲು; ನಿಧಾನವಾಗಿ ತೇಲು: ಬೆಳಗುವ ತಾರಕಾನಿಕರಮಾ ಕಡಲೊಳ್ ನಸುತೇಂಕುದೇಂಕಿ ಬೊಬ್ಬುಳಿಕೆಗಳಂತೆ ತೋಱಿದುವು (ಆದಿಪು. ೭-೯೮). [ ನಸುತೇಂಕು + ತೇಂಕು$_1$ ]

**ನಸುದಗ್ಗು** (ಕ್ರಿ). ಸ್ವಲ್ಪ ಕೆಳಕ್ಕೆಬರು; ತುಸು ಕೆಳಗಿರು: ಅದಱಿಂ ಕೆಲದೊಳ್ ನಸುದಗ್ಗಿ ದಲಿರೆ ಭದ್ರಾಸನಂಗಳುನ್ನುಖರುಚಿಗಳ್ ಮುದದಿಂ ನೆಲಸಿದರದಱೊಳ್ ಪದುಳಂ ಪ್ರಥಮ ದ್ವಿತೀಯ ಕಲ್ಪಾಧೀಶರ್ (ಪುಷ್ಪಪು. ೧೦-೭೯). [ ನಸು$_2$ + ತಗ್ಗು$_1$ (<ತಟ್ಗು) ]

**ನಸುದಱ** (ನಾ). ಸಣ್ಣ ತುಂಡು; ಚಿಕ್ಕ ಚೂರು.

ನಸುದಱಮಾಡು = ಸಣ್ಣ ತುಂಡುಗಳಾಗಿ ಮಾಡು; ಚೂರಾಗಿಸು: ಮಸೆಗೆಟ್ಟ ಕೊಡಲಿಯ ಹೊಯಿಲಂತೆ ಕರ್ಮವ ನಸುದಱ ಮಾಳ್ಪುದು ಧರ್ಮ ಮಸೆಯುಳ್ಳ ಕೊಡಲಿಯ ಹೊಯಿಲಂತೆ ಕರ್ಮವ ಕುಸುರಿದಱಿವುದೀಗ ಶುಕ್ಲ (ಭರತ. ೬೯-೪೪). [ ನಸು$_1$ + ತಱಿ$_2$ ]

**ನಸುದಿಟ್ಟಿ** (ನಾ). ಅರೆದೆರೆವ ಕಣ್ಣಿನ ನೋಟ; ಓರೆನೋಟ: ಬಟ್ಟಮೊಲೆಗಳ ತುದಿಯೊಳಿಟ್ಟುದಱ ನಸುದಿಟ್ಟಿಯಿಂದೀಕ್ಷಿಸುತಾಗ ಕಟ್ಟಿದಿರ ದೊಳಾತನ ಚರಣಕೆ ಪೊಡಮಟ್ಟು ಕೂಡೆಂಬಳಂದೊಲಿದು (ಕಂನವಿ. ೯-೧೭೮). [ ನಸು$_1$ + ದಿಟ್ಟಿ ]

**ನಸುದೆಱಹು** (ನಾ). ಸ್ವಲ್ಪ ಅವಕಾಶ; ಕೊಂಚ ತೆರಪು,–ಎಡೆ: ಮಱವೆಗೆ ನಸುದೆಱಹುಗೊಡದಾತ್ಮನಲಿ ಚೇಷ್ಟಿಸುವ ಕರಣಂಗಳಿಗೆ ರವಿಯುಂತಿದ್ದನವನೀಶ (ನಿಘಾಗ. ೪-೧೩-೩೩). [ ನಸು$_1$ + ತೆಱಹು (<ತೆಱವು) ]

**ನಸುದೆಱೆ$^3$** (ಕ್ರಿ). ಸ್ವಲ್ಪ ತೆಗೆ; ಕೊಂಚ ಬಿರಿ: ನಸುದೆಱೆಯುತ್ತುಮಿರ್ದ ಪೊಸಮುತ್ತಿನ ಸಿಂಪಿನ ಸಂಪುಟಂಗಳಿಂ ನುಸುಳ್ದು ಸುಪಾಣಿಯಾಗಿ ಪೊಱಪೊಣ್ಮುವ ಮುತ್ತಿನ ಮಾಲೆಯಂದದಿಂ ಮಿಸುಗಿ . . . ಪಸರಿಸಿ ನೀಳ್ದುಪೊಣ್ಮದುವು ಕಣ್ಬನಿಗಳ್ ತರಳಾಯತೇಕ್ಷಣೇ (ಕಾದಂಪೂ. ೩೩೧); ನಸುದೆಱೆದಿರ್ದ ಬಾಯ್ ನಿಮಿರ್ದ ಗೋಣೆಮೆಯಿಕ್ಕದ ದಿಟ್ಟಿ . . . ಕಣ್ಗೆಸೆದಿರ ಸುಯ್ಕೆ ವೆಪಟಿದು ಚಿತ್ರದ ಪೆಣ್ಣೊಲಾಗಿ ಬಾಗಿಲೊಳ್ ಸಸಿಮುಖಿ ನಿಂದು ನೋಟ್ಪಳಿನಿಯಂ ತಡೆದೊಯ್ಯನೆ ಬರ್ಪ ಬಟ್ಟೆಯಂ (ರಸರ. ೪-೨೬೩); ನೊಸಲ ತಿಲಕದ ಕೆದಱಿದಳಕದ ನಸುದೆಱೆದ ಲೋಚನದ . . . ಮುನಿಪತಿ. (ನಿಘಾಗ. ೧-೩-೧೨). [ ನಸು$_2$ + ತೆಱೆ$^3_1$ ]

**ನಸುದೆಱೆಬಾಯ್** (ನಾ). ಅರೆದೆರೆದ ಬಾಯಿ: ನಟ್ಟ ಕಣ್ ನಿಮಿರ್ದ ಕೊರಲು ನಸುದೆಱೆಬಾಯ್ ಬಿಟ್ಟ ಮೇಲುದು ಬೀಳ್ದ ಕೇಶ (ಶ್ರೀಪಾಲ. ೧೩-೩೭). [ ನಸುದೆಱೆ$^3$ + ಬಾಯ್ ]

**ನಸುದೇಲ್** (ಕ್ರಿ). ಸ್ವಲ್ಪ ತೇಲು; ನಸುವೆ ಮೇಲಕ್ಕೆ ಏಳು: ನಸುದೇಲ್ವಕ್ಷಿ ವಿಲುಪ್ತವರ್ಣವಚನಂ ರೋಮಾಂಚನಂ . . . ಕರಂ ಶೋಭಿಸಲ್ ಕುಸುಮಾಸ್ತ್ರೋನ್ನತಕೇಳಿಯೊಳ್ಪಡದೆ ತಾಂ ಬೆಚ್ಚಿರ್ದರಾ ಕಾದಲರ್ (ಉದ್ಭಟ. ೮-೧೧೯). [ ನಸು$_2$ + ತೇಲ್ ]

**ನಸುದೋಯಲು** (ನಾ). (?): ಈ ಹೆಬ್ಬಟ್ಟೆಗಳಲ್ಲಿ ಹೋದರೆ ಎಂಬತ್ತು ನಾಲ್ಕುಲಕ್ಷ ಪ್ರಕಾರದ ಪರಮಂಡಲದಲ್ಲಿ ಸುಳಿವುದು ತಪ್ಪದೆಂದು ಅದಕ್ಕೆ ಹೇಹವಂ ಮಾಡಿ ತಮ್ಮವರು ಹೋದ ನಸುದೋಯ [ಪಾಠಂ. ತೋಯಿಲ] ಬೆಂಬಳಿವಿಡಿದು ಹೋಗಿ ಭಕ್ತಪುರಮಂ ಕಂಡು (ಘನವ. ೪೯-೪೫); "ನಸುದೋಯಲು–ಅಸ್ಪಷ್ಟವಾದ ಜಾಡು ?" (ಘನವ. ಕೋಶ).

[ ? ]

**ನಸುದೋರೆ** (ನಾ). ಸ್ವಲ್ಪ ಹಣ್ಣಿಗೆ ಬರುತ್ತಿರುವ ಕಾಯಿ; ಪಾಡುಂಗಾಯಿ: ಅಲರ್ ಮಿಡಿಕಾಯ್ ನಸುದೋರೆ ದೋರೆವಣ್ ಬಳಸಿರಲಾಗಳಾವ ಪರಿಯಿಂ ನಡೆ ನೋಟ್ಪೊಡಮಂತೆ ತಾನೆ ಕಣ್ಗಳ ಸಿರಿ . . ಆದುದು ಬಂದ ಮಾಸುರಂ (ಜಗವಿ. ೧೪-೨೭); ತಳಿರಲರುಳ್ಳಲರ್ಮಿಡಿ ಪೊದಳ್ದೆಳಗಾಯ್ನಸುದೋರೆ ದೋರೆವಣ್ಣಳಿತಸೆವಚ್ಚಪಣ್ಣಡಿದು ಬೀಗಿದ ಬಿಣ್ಪೊನೆ (ಶಬಶಂ. ೧-೫೧). [ ನಸು$_1$ + ದೋರೆ$_1$ ]

**ನಸುದೋರೆವಣ್** (ನಾ). ಸ್ವಲ್ಪ ದೋರೆಯಾದ ಹಣ್ಣು: ಸಣ್ಣಗಾಯ ಬಲುಗಾಯ ಪೊಱಲ್ ನಸುದೋರೆವಣ್ಣ ತಾಯ್ವನೆ ಪೊಸವಣ್ಣ ಗೊತ್ತಿದನೆ ಕಣ್ಗೆಸೆದಿರ್ದುದದೊಂದು ಮಾಮರಂ (ಕಬ್ಬಿಕಾ. ೧೧೧).

[ ನಸುದೋರೆ + ಪಣ್$_3$ ]

**ನಸುದೋಱು** (ಕ್ರಿ). ೧. ಸ್ವಲ್ಪ ಕಾಣಿಸು,–ಕಾಣು: ತುಸುವೆ ವ್ಯಕ್ತವಾಗು: ನಸುದೋಱುತ್ತಿರ್ದ ನುಣ್ಮೀಸೆಗಳುಮತಿಮೃದುಸ್ನಿಗ್ಧಕೇಶಂಗಳುಂ ಕಣ್ಗೆಸೆಯಲ್ (ಕಾದಂಉ. ೫೪೭); ಎತ್ತಾನುಮೊರ್ಮೆ ನಸುದೋಱುತ್ತುಂ ಜಿನಭಕ್ತಿ ಮಾಣ್ದುದುದೊಡಮಾಭವ್ಯೋತ್ತಮನಘಮುರಿತಾಗಿದ ಬಿತ್ತಿಂಗೆಣೆಯಕ್ಕುಂ (ವರ್ಧಪು. ೧೨-೧೭); ಕುಚಂಗಳೊತ್ತರಿಸೆ ಕಕ್ಷಪುಟಂ ನಸುದೋಱೆ . . . ಕರ್ಣಪೂರಿತೋತ್ಪಳಮೊರೆದಾಡೆ ಗಟ್ಟಗಳನಂದು ಮಗುಳ್ಚಿದರಿಂದುವಕ್ತ್ರೆಯರ್ (ಗಿರಿಕ. ೨-೯೦); ನಸದೋಱುವ ಕಿಱುನಗೆಯ ಕದಪುಗಳ ಕುಂಡಲದ ಚೆಲ್ವಿನಿಂ ಮೆಱೆವ ಸದ್ವದನನಂ . . . ಕಂಡನವನೀಪಾಲನು (ಜೈಮಿಭಾ. ೨-೪೮). ೨. ತುಸುವೆ ತೋರಿಸು: ಕುಂಚಿತಕುಂತಳಾಳಿಗಳನೊಯ್ಯನೆ ನೇರ್ಪಡಿಪೊಂದು ಲಕ್ಷ್ಯದಿಂ ಕಾಂಚನಕುಂಭಮಂ ಪಱಿವ ಮೆರ್ಮೆಲೆಯಂ ನಸುದೋಱುತುಂ (ಉದ್ಭಟ. ೧೦-೬೮).

[ ನಸು$_2$ + ತೋಱು ]

**ನಸುನಗು$_1$** (ಕ್ರಿ). ೧. ಸ್ವಲ್ಪ ನಗು; ಮುಗುಳುನಗೆ ನಗು; ಮಂದಹಾಸವನ್ನು ಬೀರು: ಆವರ್ತನಾಭಿ ನಸುನಕ್ಕು ಪರನಿಂದತ್ತ ಪೋದಳ್ (ಶಾಂತಿಪು. ೫-೧೪೭): ಬಹ ಭೃಂಗಿಯುಂ ಕಂಡು ನಸುನಕ್ಕರು (ಸಿದ್ಧರಾ. ೧-೨೪); ಸತಿ ನಸುನಗುತ್ತಕ್ಕಕ್ಕ . . . ನಾನಱಿದನಱಿದನು ನಿನ್ನ ಮಾಯುವನು (ಬಸಪು. ೨೪-೬೩): ಧುರದ ಜಯುವಹುದೊಂದು ಪರಿಯಲಿ ನಿರುತವಲ್ಲದ ನುಡಿಯ ನುಡಿದರೆ ಪರಿಹರಿಸಬಹುದೆಂದನಸುರಾರಾತಿ ನಸುನಗುತ (ಕುಮಾ.ದ್ರೋ. ೧೮-೩೯); ಮುಖದಲ್ಲಿ ಕಿಱುಬೆವರಿಟ್ಟದೆ ಹೊಸಹೊಸ ಪರಿ ಸುದ್ದಿ ಹುಟ್ಟದೆ ನಸುನಗುವೆಲ್ಲ ನಿನ್ನ ಕೀರ್ತಿ ಹಚ್ಚದೆ (ಪುರಂದ. ೫-೧೭-೧); ಅಪ್ಪಾಜಿಯು ನಸುನಗುತ್ತ ಕೇಳಿದರು (ಚದೇವ. ೧೭೦); ಹುಸಿನಗುತ ಬಂದೇವ ನಸುನಗುತ ಬಾಳೋಣ ತುಸುನಗುತ ತೆರಳೋಣ (ಗರಿ. ೧೦೩-೯). ೨. ಹೀಯಾಳಿಸು; ಜರೆ; ತಿರಸ್ಕರಿಸು: ಅರಿಗಳ್ ಪೆಸರ್ಗೇಳ್ದೆರ್ದೆಪೊಡೆವರೆಂಬ ಶೂದ್ರಕನ ವಿಕ್ರಮಾಡಂಬರಮಂದರೆವಾನಿಸಿಕೆಯೊಳೊಂದಿದ ನರಸಿಂಹಾಡಂಬರಕ್ಕೆ ನಸುನಗುತಿರ್ಕುಂ (ಕಾದಂಪೂ. ೧೦); ಪಗೆಗೊಂಡ ತುಂಬಿಯುಂ ನಸುನಗುವವೊಲುಳ್ಳಲರ್ದು ಪೊಂಗಿ ಕಂಪಾದು

ದೆಸಲ್ ಸೊಗಯಿಸಿ ಕಾವಿನ ಪಗೆಯುಂ ಬಗೆಯುಂ ಕೀರ್ಚಿದುವು ಸುಗ್ಗಿಯೊಳ್ ಸಂಪಗೆಗಳ್ (ಮಲ್ಲಿಪು. ೫-೧೯); ತಾರೆಗಳಿತಿರುಭುವಿವಿಡಿದಿರ್ದರಿಮ್ಮಂತೆ ಸೌರಭ್ಯವಿಲ್ಲೆಂದು ಜಜಿದು ಸೇರದೆ ನಸುನಗುವೊಲು ಬಿರಿಮುಗುಳ ಶೃಂಗಾರದ ವಲ್ಲಿಗೆಯಿಹುವು (ಕಂನವಿ. ೭-೫೦). ೩. (ಅಲಂ) ಅರೆ ಬಿರಿ; ತುಸು ಅರಳು: ವಿಸುಪ ಕುವಲಯಜಲತ್ವತ್ರುಂಗಳೊಳ್ಳುಟಿದು ನಸುನಗುವ ನವನೀರಜಾತಂಗಳಂ ತುಟಿದು (ಉದ್ಭಟ. ೧೦-೧೨೩).

[ ನಸು₂ + ನಗು₁ ]

**ನಸುನಗು₂** (ನಾ). ತಿಳಿಯಾದ ನಗು; ಮುಗುಳುನಗೆ; ಮಂದಹಾಸ: ಸುಖಾರುವಿನ ಮುಖದಲ್ಲಿ ನಸುನಗು ತೋರಿತು (ಮಂತಸ. ೫೬).

[ ನಸು₁ + ನಗು₂ ]

**ನಸುನಗೆ** (ನಾ).=ನಸುನಗು₂: ನಸುನಗೆ ದಶನಪ್ರಭೆಯಿಂದ ಕೂಡಲಾ ದೆಸೆ ಧವಳಿಸಿದವೊಲಾಯ್ತು (ಕಾದಂಪೂ. ೯೮೨ ರಗಳೆ): ನಸುನಗೆ ಕಮಳದ ಸಿರಿಯಂ ನಸುನಗೆ ಜನನಿಯುತ ಲೋಚನಭ್ರಮರಂಗಳ್ ಮುಸುಜಿದುವು ಮೋಹ ವಲ್ಲರಿ ಪಸರಿಸಿ ಪರ್ವಿದುದು ಸುತರ ಲೀಲಾಜಲದಿಂ (ಪಂರಾಮಾ. ೩-೧೩೯): ಶ್ರೀಮುಖದೊಳ್ ನಸುನಗೆ ಬೆಳ್ದಾವರೆಯೊಳಲರ್ಕೆಯೆಂಬವೊಲ್ ಪಸರಿಸೆ (ಚಂದ್ರಪು. ೧೩-೧); ಒಸೆದರಳ್ದ ನಸುನಗೆಯು ಶಶಿಮೌಳಿಯೊಪ್ಪಿದಂ (ಪಾಗೀರ. ದೇ. ೨೮೦-೧೫); ಎಸೆವ ನಸುನಗೆ ದಶನರುಚಿ ದೆಸೆದೆಸೆಗೆ ಪಸರಿಸೆ ವೀಣೆಯಂ ಬಾಜಿಸುತ (ಬಸಪು. ೧-೫೩); ನಸುನಗೆ ಮೊಳೆಯೆ ನುಡಿದನು ಧರ್ಮನಂದನನು (ಕುವ್ಯಾಅ. ೨೩-೪೮); ಮೆಲ್ನಗೆ, ಮುಗುಳ್ನಗೆ, ನಸುನಗೆ ಇತ್ಯಾದಿ ನೂರುಬಗೆಯ ನಗೆಯನ್ನು ಮೊಗದ ಮೇಲೆ ನಲಿಸುತ್ತಲೇ ಇರಬಹುದು (ಕರಜ. ೪೮೫). [ ನಸು₁ + ನಗೆ ]

**ನಸುನಗೆವೊಗ** (ನಾ). ಮುಗುಳುನಗೆಯಿಂದ ಕೂಡಿದ ಮುಖ: ನಸುನಗೆವೊಗದ ಸೊಂಪಿನಲಾಹವಕ್ಕನುವಾದನಭಿಮನ್ಯು (ಕುವ್ಯಾದ್ರೋ. ೪-೪೯).

[ ನಸುನಗೆ + ಮೊಗ ]

**ನಸುನಡುಗು** (ಕ್ರಿ). ಸ್ವಲ್ಪ ಕಂಪಿಸು: ನಿಡುಸುಯ್ಯಿನ್ನಾರೋಡುವ ವದನಂ ನಸುನಡುಗುವ ಪೆಂಯ್ (ಜದುಕಾ ೩-೧೪). [ ನಸು₂+ನಡುಗು₁ ]

**ನಸುನನೆ** (ನಾ). ಸಣ್ಣ ಮೊಗ್ಗು; ಎಳೆಮೊಗ್ಗು; ಕಸುಕಾದ ಮೊಗ್ಗು: ಕರಲುಂಮೊಗ್ಗು: ನಸುನನೆಯೊಳಡಗಿರ್ದ ನವಸುಗಂಧದ ತೆಜದಿ ಉಸಿರೊಳಡಗಿರ್ದ ಚೈತನ್ಯದಂತೆ (ಶಿವಗೀ. ೧-೩); ನಸುನನೆಯನಪ್ಪಿದಳಿ ಕುಳದಂತೆ ಕಡುಹಸಿದು ಕಸುಗಾಯನಗಿದ ಗಿಳಿಗಳ ಬಳಗದಂತೆ (ಹದಶಾ. ೮-೭೦). [ ನಸು₁ + ನನೆ₃ ]

**ನಸುನಳಿ** (ಕ್ರಿ). ಸ್ವಲ್ಪ ಬಾಗು: ನಸುನಳಿದು ನಿಮಿರೆ ತೋಳ್ಗಳ್ ಲಸಿತ ತ್ರಿಪತಾಕದಿಂ ಲತಾಕರಮೆಸೆಯಲ್ ಪೊಸದಳಿರಂ ಪೊತ್ತೆಳಲತೆ ಮಿಸುಗುವ ಕುಡಿಯೆರಡನೆಬಲೆ ಬಿಟ್ಟವೊಲೆಸೆದಳ್ (ಲೀಲಾವ. ೪-೧೧೮).

[ ನಸು₂ + ನಳಿ₁ ]

**ನಸುನಾಚಿಕೆ** (ನಾ). ತುಸು ಲಜ್ಜೆ: ಮುಂಜೆಜಗ ಸಂವರಿಸುತ್ತ ನಸುನಾಚಿಕೆಯ ಭಾರದಲಿ . . . ಮುಖಚುಕ ಮಿಗೆ ಕಾಣಿಸುತ ಬಂದಳು ರಾಮನಿದ್ದೆಡೆಗೆ (ತೊರರಾ. ೩-೪-೮). [ ನಸು₁ + ನಾಚಿಕೆ (< ನಾಣ್ಚಿಕೆ) ]

**ನಸುನಾಚು** 'ನಸುನಾಣ್ಚು' ನೋ.

**ನಸುನಾಣ್ಚು, ನಸುನಾಚು** (ಕ್ರಿ). ಸ್ವಲ್ಪ ಲಜ್ಜೆಪಡು: ಎಂದೊಡಾ ಮಾತಿಂಗೆ ನಸುನಾಣ್ಚಿ ಹೃದಯಾರವಿಂದದುಲ್ಲಾಸ ಪೂರಯಿಸಿ ಚಂದನ ಸೌರಭ್ಯಪಡೆದ ವಿಗ್ರಹಜಾತ ಸಂದೋಹ ಗುಡಿಗಟ್ಟುತವಳ (ಮೋಹತ. ೨೭-೩೮); ನಸುನಾಣ್ಚುತ ನಲವಿನೊಳು ಒಸೆದೊಲವಚುತೊಯ್ಯನುಚಿತೋಪಚಾರ ವನೆಸಗುವುದೇಕಚಿತ್ತದೊಳು (ಹರಿಬ. ೩-೧೬). ನಸುನಾಚು: ಮಾಯಾ-(ನಸುನಾಚಿ) ನಾನು . . . ನಾನು . . . ನಾನೊಬ್ಬ ನರ್ತಕಿ (ತುಂಗಭ. ೮೪). [ ನಸು₂ + ನಾಣ್ಚು₁ ]

**ನಸುನಿದ್ದೆ** (ನಾ). ಗಾಢವಲ್ಲದ ನಿದ್ದೆ; ಲಘುನಿದ್ರೆ: ಜೋಂಪು: ಎಸಟ್ಟಡಿಗೆತ್ತ ತಾವರೆಗಳೋವರಿಯೊಳ್ ನಸುನಿದ್ದೆ[ಪಾಠಾಂ. ನಸುನಿದ್ರೆ] ಯಿಂದೆ ಜೋಂಪಿಸುವಳಿಯುಂ . . . ಪುಜಾರಿಸಿದುದು ಕಾಲಭುಪನ ನಿಯೋಗದ ಸೂಳೆವಳಂಬೊಲೋದೆಲರ್ (ವರ್ಧಪು. ೮-೩೩)

[ ನಸು₁ + ನಿದ್ದೆ ]

**ನಸುನಿದ್ರೆ** (ನಾ).=ನಸುನಿದ್ದೆ: ಸಸಿಗಲ್ಲ ಬಟ್ಟಬಿಗಳ ಮೇಲೆರಳೆಗಳು ನಸುನಿದ್ರೆಯಿಂದೊಜಗಿರಲು (ಕುರಾಸಾಂ. ೪-೧೬). [ ನಸು₁ + ನಿದ್ರೆ ]

**ನಸುನೀಡು** (ಕ್ರಿ). ತುಸುವೆ ಮುಂದಕ್ಕೆ ಚಾಚು: ಪಣ್ಗಳ ಸದ್ರುಸಮಿಂದು ವೃಂದಮುಂ . . . ತಂದಿದಿರೊಳ್ ನಸುನೀಡಿ ಗೋಣನಾಗಳೆ ನೆಜೆ ಚಂಚುವಂ ತೆಜೆದು ಮೆಲ್ಲನೆ ಲಲ್ಲೆಯೊಳಿಂತು ತನ್ನ ಪೆಣ್ಗೀಗೆಜೆಯುತ್ತುಮಿರ್ದುದನಸುಂ ನಲವಿಂ ಸುರತೋತ್ಸುಕಂ ಶುಕಂ (ಕುಸುಮಾ. ೫-೮೬). [ ನಸು₂ + ನೀಡು₁ ]

**ನಸುನೆನೆ** (ಕ್ರಿ). ಸ್ವಲ್ಪ ತೋಯು; ತುಸುವೆ ಒದ್ದೆಯಾಗು: ನಸುನೆನೆ ದೊಯ್ಯನುಳ್ಳಲರ ಪೊಟ್ಟಿಲೆ ಕಂದದೆ ಕೂಡೆ ಕಂಪಿನಿಂ ರಸಮೊಸರ್ವಂತಿ ರೊಕ್ಕ ನಜುದಂಬುಲಕಂ . . . ಮಿದಾಳಿ ಮೊರೆದೆರ್ದಜಗುತ್ತಿರೆ ಬೀದಿಗಳ್ ಜನಕ್ಕಸಕಿಯರೆರ್ದು ಪೋದುದನೆ ಪೇಟ್ವವೊಲಿರ್ದುವು ಸುಪ್ರಭಾತದೊಳ್ (ಲೀಲಾವ. ೩-೦೭). [ ನಸು₂ + ನೆನೆ₂ (< ನನೆ₁) ]

**ನಸುನೆಮ್ಮು** (ಕ್ರಿ). ತುಸು ಒರಗು,-ಆಶ್ರಯಿಸು: ನಡುಗಿ ಬೆಮರ್ವ ಪೆಟ್ಟಳಿಸಿ ನೋಟಿಸ್ವಿರ್ದ ಕಂಪಿಪ ತಲ್ಲಣಿಪ್ಪ ಕಾಲ್ ತಡತಡಮಾಗೆ ಕೆಯ್ಯುಗಿಡಾವಳಂ ನಸುನೆಮ್ಮು [ಪಾಠಾಂ. ಮರ್ಗು]ವ ಮೇಲುದು ಕುಚಕ್ಕಡಿಗಡಿಗೇಜ ಸಾರ್ಚುವ . . . ವಿಕಾರವಮಾಕೆಗಿದಿರೊಳ್ ಕರೆಗಣ್ಮಿದುದಂಬುಜಾಕ್ಷಸಾ (ವರ್ಧಪು. ೬-೧೪). [ ನಸು₂ + ನೆಮ್ಮು₁ ]

**ನಸುನೋ** (ಕ್ರಿ). ಸ್ವಲ್ಪ ವ್ಯಥೆಪಡು,-ನೋಯು: ಉರಃಪ್ರದೇಶಮನಿಸೆ ನೆತ್ತರೊಕ್ಕು ಪತಿ ಮುಚ್ಚೆಯೊಳಿಚ್ಚೆಯಿಗೆಟ್ಟು ಜೋಲ್ದೊಡಾದಮ ನಸುನೊಂದು ನಂದಿಸದ ತನ್ನನೆ ನಿಂದಿಸಿದಂ ದಿನೇಶಜಂ (ಪಂಪಭಾ. ೧೨-೧೦೭).

[ ನಸು₂ + ನೋ₁ ]

**ನಸುನೋಟ** (ನಾ). ಕಡೆಗಣ್ಣೋಟ; ಕುಡಿನೋಟ; ಓರೆನೋಟ: ನಸುನೋಟಂ ಜನವಶ್ಯಮಾಕೃತಿ ಗತಿಸ್ತಂಭಂ ವಚಃಪ್ರೌಢಿ ಭಾವಿಸೆ ಸಮ್ಮೋಹನ ಮಂತ್ರಂ (ಸೂಕ್ತಿಸು. ೮-೪೬೦); ಅಜ್ಞಾನದ ತಿಮಿರವ ಕೆಡಿಸುವುದು ಗುರುವರ್ಯ ನಿನ್ನ ನಸುನೋಟ (ಅನುಸಾ. ೫-೪-೧); ತಾಳಿ ನಸುವರೆಯ ನಸುನೋಟ ನಸುಲಜ್ಜೆಯಿಂ ಬಾಲಕಿಯರಿರ್ಪರು ವಿರಾಜಿಸಲು (ನವಮೋ. ೨೨-೩೪). [ ನಸು₁ + ನೋಟ ]

**ನಸುಬಳಲ್ಕೆ** (ನಾ). ಸ್ವಲ್ಪ ಆಯಾಸ; ತುಸು ದಣಿವು: ನೋಟಂ ತವೆ ತಳೆದುವು ನಸುಬಳಲ್ಕೆಯಂ ಮೇನಕೆಯಾ (ಗಿರಿಕ. ೩-೩೭).

[ ನಸು₁ + ಬಳಲ್ಕೆ (<ಬಬಿಲ್ಕೆ) ]

**ನಸುಬಾಗು** 'ನಸುವಾಗು' ನೋ.

**ನಸುಬಾಡು** 'ನಸುವಾಡು' ನೋ.

**ನಸುಬಾನಲ್** (ನಾ). ತುಸು ಮಸುಕಾದುದು; ಸ್ವಲ್ಪ ಬಣ್ಣವಳಿದುದು: ಚುಂಬಿಸಿ ಬೀಗಿ ಬೆಳ್ಪಡರ್ದ ಬಾಯ್ದೆಜೆ . . . ಉಣ್ಮೆ ಬೆಮರ್ ನಸುಬಾನಲಾ [ನಲಾ]ದ ಬೊಟ್ಟೆಂಬಿವು ಕೂಟದೊಂದು ಸವಿಯಂ ಪಿಸುಣಾಡುವುವೀ ಲತಾಂಗಿಯಾ (ಚಂದ್ರಪು. ೮-೭೨). [ ನಸು₁ + ಬಾನಲ್ ]

**ನಸುಬಿರಿ** 'ನಸುವಿರಿ' ನೋ.

**ನಸುಬಿಸಿ** (ಗು). ೧. ಸ್ವಲ್ಪ ಬಿಸಿಯಾದ; ಬೆಚ್ಚನೆಯ: ನಸುಬಿಸಿಯಪ್ಪ ನಲ್ಲಣಸಿನಿಂ ಘನಸ್ತನಾರ್ದ್ರವಿಲೇಪದಿಂ ವಿಂಜಿಸುವ ಕದಂಬದಂಬುಲದಿಂ . . . ಜನಮಾಗಳಿಂತು ಜೀವಿಸಿತಿನಿತಲ್ಲದಂದುಜಿವುದೇ ಹಿಮದಾಗರಮಾದ ಮಾಗಿಯೊಳ್ (ಕುಸುಮಾ. ೭-೨೩); ಬೆಸುನೊಳ್ ಮಸಗಿ ನಸುಬಿಸಿರಕುತ ಪೊನಲಿಡಲು (ಕುವ್ಯಾದ್ರೋ. ೧೦-೬). (ನಾ). ೨. ಸ್ವಲ್ಪ ಬೆಚ್ಚಗಾದುದು

ಗಾಂಧಾರೀಸೊಪ್ಪಿನ ರಸವಂ ನಸುಬಿಸಿಯುಂ ಮಾಡಿ ನೆತ್ತಿಗೊತ್ತೆ ವಾತಜ್ವರ ಪರಿಹಾರವಾಗುವುದು (ಸಕವೈ. ೬೦). [ನಸು$_1$ + ಬಿಸಿ]

**ನಸುಬಿಸುಪೇಱು** (ಕ್ರಿ). ಸ್ವಲ್ಪ ಬೆಚ್ಚಗಾಗು: ನಸುಬಿಸುಪೇಱೆ ಮೆಯ್ಯ್ಮಗುಱೆ ಕೆತ್ತುವ ತಣಿಮ ಕೆತ್ತೆ . . . ಜಾನಕೀಯೆನುತ್ತುಸಿರ್ದುಸಿರ್ದೆಬ್ಬನಾ ರಘು ಕುಲಾಂಬರಚಂದ್ರಮರೀಚಿ ಮೂರ್ಛೆಯಿಂ (ಪಂರಾಮಾ. ೯-೧೧೭). [ನಸು$_2$ + ಬಿಸುಪು + ಏಱು$_1$ (< ಏಱ್$_1$)]

**ನಸುಬಿಳಿದು** (ನಾ). ತಿಳಿಯಾದ ಬಿಳಿ ; ಮಾಸಲು ಬಿಳಿ ; ಬೂದುಬಣ್ಣ ; ಧೂಸರ : "ಧೂಸರಂ=ದೂಸರು, ದೂಸರಮೆಂದು ನಸುಬಿಳಿದು" (ಶಮದ. ಸೂ. ೨೩೫ ಪ್ರಯೋ) : ಕೋರ = ನಸುಬಿಳಿದಾಗಿ ಮಿಂಚುಹ ಬಟ್ಟಹ ತೊನ್ನು (ನಾಚಿರಾ. ೪). [ನಸು$_1$ + ಬಿಳಿದು]

**ನಸುಬಿಳುಪು** 'ನಸುವೆಳ್ಪು' ನೋ.

**ನಸುಬೆಡಗು** (ನಾ). ತುಸು ಒಯ್ಯಾರ : ನಡಿಗೆಯಲ್ಲಿ ಕಂಡೂ ಕಾಣದಂತಹ ನಸುಬೆಡಗು (ಅಲಹೂ. ೧೮). [ನಸು$_1$ + ಬೆಡಗು (< ಬೆಡಂಗು)]

**ನಸುಬೆಳಕು** 'ನಸುವೆಳಗು' ನೋ.

**ನಸುಬೆಳಗು** (ಕ್ರಿ). ಮಂದವಾಗಿ ಉರಿಸು: ನಸುಬೆಳಗುಗೆ ಸೊಡರಂ (ಮದಶಿ. ೮-೨೮). [ನಸು$_2$ + ಬೆಳಗು$_1$]

**ನಸುಬೆಳರ್** (ಕ್ರಿ). ಸ್ವಲ್ಪ ಬಿಳಿದಾಗು ; ಮಾಸಲುಬಿಳಿ ಬಣ್ಣವನ್ನು ತಾಳು: ಮುಂದ್ಯಸಿದ ಸಿಂಧುವಾರ ವನರಾಜಿಯಿಂ ನಸುಬೆಳರ್ತ ತಡಿಗಳುಮಂ . . . ಪಥಿಕರಜಲ್ಗೊಂಡು ತೋಡಿದಱುಂಬುನೀರ ಬಗರಗೆಗಳುಮನೊಳಕೆಯ್ದು ಬತ್ತಿದ ಪಳ್ಳಂಗಳೊಳಮತಿರೌದ್ರಮಾದ ವೇಸಗೆಯೊಳಗೆ ಬರ್ಪಾಗಳ್ (ಶಾಪಂಉ. ೨೬೭). [ನಸು$_2$ + ಬೆಳರ್$_1$]

**ನಸುಬೇನೆ** (ನಾ). ಅಲ್ಪವಾದ ಬೇನೆ ; ಘನವಲ್ಲದ ನೋವು : ಗರ್ಭಿಣಿಗೆ ನವಮಾಸ ಪೂರ್ಣಮಾದುದು ತದ್ವಿಲಾಸಿನಿಯ ಸಂತಸದ ಮುಂದೆ ನಸು ಬೇನೆಯುಂ ಪೇಳಲಹುದೇ (ಭಾವಚಂ. ೩-೫೬). [ನಸು$_1$ + ಬೇನೆ]

**ನಸುಬೇ** (ಕ್ರಿ). ಸ್ವಲ್ಪ ಬೇಯು ; ಅರ್ಧ ಬೇಯು : ಹುರಿದ ತೆಂಗಾಯ ನಸುಬೆಂದ ಬೇಳೆಯು ಹೆಸರು ಹುರಿದು ಬೇಯಿಸಿದ ಸೊಜ್ಜಿಗೆಯುವನು ಕೂಡಿ ಸಕ್ಕರೆಯಿಕ್ಕಿ ಕರ್ಪೂರವನು ತಳಿದು (ಸೂಶಾ. ೦-೩೪). [ನಸು$_2$ + ಬೇ$_1$]

**ನಸುಭಯ** (ನಾ). ತುಸು ಅಂಜಿಕೆ ; ಸ್ವಲ್ಪ ಹೆದರಿಕೆ : ಬಾಣಧಿಯೊಳನ್ನ ಬರಡಗಿರೆಂದಸುರಾರಿ ನೇಮಿಸೆ ನುಡಿದನತ್ತಲು ರಾವಣನು ನಸುಭಯದ ಬೆಱಗಿನಲಿ (ತೊರರಾ. ೭-೯-೦೯). [ನಸು$_1$ + ಭಯ]

**ನಸುಮರ್ಬು** (ನಾ).=ನಸುಗತ್ತಲೆ : ಉಳಿವೆಳಗು ಸಂಜೆ ನಸುಮರ್ಬು ಳುರ್ದಂಬರದಂತೆ ತಿಳಿವು ರಾಗಂ ನೆಗಳ್ದುಮ್ಮಳಮನೊಳಕೊಂಡ ಬಗೆಯಿಂ ತಳವೆಳಗಾಗುತ್ತೆ ಪಾರ್ಥನಂದಿಂತೆಂದು (ಕಬಶಂ. ೪-೦೦೪). [ನಸು$_1$ + ಮರ್ಬು (<ಮರ್ವು)]

**ನಸುಮಸಿ** (ನಾ). ಸ್ವಲ್ಪ ಕಪ್ಪು ; ತುಸು ಕಪ್ಪು : ನಸುಮಸಿಯಾದ ಕರ್ಪಾಡಪನಸುಟ್ಟು (ಕಹಿಕಂ. ೧೭). [ನಸು$_1$ + ಮಸಿ]

**ನಸುಮಸುಳ್** (ಕ್ರಿ). ಸ್ವಲ್ಪ ಕಳೆಗುಂದು ; ಮಂಕಾಗು ; ಮಸುಕಾಗು : ಪೊಸತಲರ್ದ ಬಿಳಿಯ ತಾವರೆಯೆಸಟ್ಗಳ ನಡುವಿರ್ಪ ಸಿರಿಯುಮಾಕೆಯ ಕೆಲದೊಳ್ ನಸುಮಸುಳ್ದು ತೋರ್ಪಳ್ (ಪಂಪಭಾ. ೧-೪೦) ; ಒರ್ಮೊ ದಳೆಱಗಿ ದೆಸೆಗಳೆಲ್ಲಮನೊಡನಾವರಿಸಿ ತರತರದೆ ನಸುಮಸುಳ್ದಿರೆ ಪುದಿದುವು ನಭವನಭವನಂಬುಗಳೆತ್ತಂ (ಕಾವ್ಯಾವ. ೧೯೪) ; ನಸುಮಸುಳ್ದಂಗಲೇಖೆ ಪೊಱಮಟ್ಟೆಡಗಾಲ್ . . . ಕಣ್ಗೆಸೆದಿರೆ ಪಾಱಿದಳ್ ಪೊಳೆದು ಪೇಚರಿ ಮಿಂಚಿನ ಬೊಂಬೆಯೆಂಬಿನಂ (ಅರ್ಧನೇ. ೩-೧೭). [ನಸು$_2$ + ಮಸುಳ್]

**ನಸುಮಾತು** (ನಾ). ಸಣ್ಣ ಮಾತು : ವಿಷಯಾತುರಗೆ ವಿವೇಕವಿಲ್ಲೆಂಬುದು ಪುಸಿಯಲ್ಲ ಮಾಯಾವಿ ನುಡಿದ ನಸುಮಾತಿಗೆ ನಿಶ್ಚಯಿಸಿದ ಪಯಣವನುಪೆಯ ತಾತ್ಪರ್ಯದುಬ್ಬಿನಲಿ (ಮೋಹತ. ೩೧-೨೫). [ನಸು$_1$ + ಮಾತು$_1$]

**ನಸುಮಾಸು** (ಕ್ರಿ). = ನಸುಮಸುಳ್ : ನಸುಮಾಸಿ ಪಾಡೞಿದ ರೂಪಿ ನೊಳುಣ್ಮುವ ಗಾಡಿ ನಾಡೆ ಕಣ್ಗೆಡಱೆ (ಪಂಪಭಾ. ೧೩-೯೯) : ನಸುಮಾಸಿ ದೆಱಂಕೆಗಳಿಂ ಕಲಹಂಸೆಗಳೆಂಬುದು (ಹರಾಯು. ೪೨-೯೯) : ಎಸೆದುದು ಧರಿತ್ರಿ ಪೊಗೆ ಪುಗೆ ನಸುಮಾಸಿದ ಪೊಗೆಯ ಚಿತ್ರಭಿತ್ತಿಯ ತೆಱದಿಂ (ಪುಷ್ಪಪು. ೫-೪೦). [ನಸು$_2$ + ಮಾಸು$_1$]

**ನಸುಮುಗಿ** (ಕ್ರಿ). ಸ್ವಲ್ಪ ಮುಚ್ಚು ; ಅರೆಮುಚ್ಚು ; ಅರ್ಧ ನಿಮೀಲಿತ ವಾಗು : ನಸುಮುಗಿದಕ್ಷಿ ನಾಸಿಕದೊಳೊಂದಿರೆ (ದಶಕು. ೨-೬೩). [ನಸು$_2$ + ಮುಗಿ]

**ನಸುಮುಚ್ಚು** (ಕ್ರಿ). ಅರ್ಧ ಮುಚ್ಚು ; ಅರೆಮುಗಿ : ನಸುಮುಚ್ಚುವ ಬಿಚ್ಚುವ ಪೊಳೆವ ಸುಟಿವ ಬಳಸುವ ಬಟಲ್ದ ತೆರೆಮಸಗಿ ಮರಲ್ದೆಸೆವ ರಸಭಾವದೃಷ್ಟಿಗಳಸದಳಮೆನಿಸಿದುವು ನೃತ್ಯದೊಳ್ ನರ್ತಕಿಯಾ (ರೀಲಾವ. ೪-೧೨೭) ; ಬಿಗಿಯುಪ್ಪಿ ಮೊಗಮನಿಟ್ಟಾಲಿಗಳಂ ನಸುಮುಚ್ಚಿ (ಗಿರಿಕ. ೨-೩೯). [ನಸು$_2$ + ಮುಚ್ಚು$_1$]

**ನಸುಮುಚ್ಚಿವೋಗು** (ಕ್ರಿ). ಸ್ವಲ್ಪ ಮೈಮರೆ,-ಎಚ್ಚರ ತಪ್ಪು ; ಮೂರ್ಛೆಹೋಗು : ತನ್ನ ಚಿತ್ತದೊಳ್ ನೆಲಸಿದ ರಾಮನಂ ಬಯಸಿ ನೋಡಲಪೇಕ್ಷಿಸಿ ಬಾಹ್ಯದರ್ಶನಕ್ಕಲಸಿದಳೆಂಬಿನಂ ಮುಗಿಯೆ ಕಣ್ಮಲರ್ಗಳ್ ನಸುಮುಚ್ಚಿವೋಗಿ ತಣ್ಣಲರ್ಲೆಪಿಂದೆ ಮೂರ್ಛೆದಿಳಿದಳ್ (ಪಂರಾಮಾ. ೯-೧೧೧). [ನಸು$_2$ + ಮುಚ್ಚಿ$_2$ + ಪೋಗು$_1$]

**ನಸುಮುಟ್ಟು** (ಕ್ರಿ). ಸ್ವಲ್ಪ ತಾಗು ; ಮೃದುವಾಗಿ ಸ್ಪರ್ಶಿಸು : ಮೃಗಧರನಂಶುಮಾಲೆ ನಸುಮುಟ್ಟುವುದುಂ ಜಲಸೂಕ್ಷ್ಮಬಿಂದುಗಳ್ಸೆಗೆದಪ್ಪ ವಿಂದುಕಾಂತಮಣಿಪುತ್ರಿಕೆಯಿಂದನೆ (ಮಲ್ಲಿಪು. ೪-೨೯). [ನಸು$_2$ + ಮುಟ್ಟು$_1$]

**ನಸುಮುತ್ತು** (ನಾ). ಹಗುರವಾದ ಚುಂಬನ; ಲಘುವಾದ ಚುಂಬನ : ನಸುಮುತ್ತ ಕೊಡುವಾಗ ಮೂರ್ಛೆ ಸಂಧಿಸಿತು ಸಾಹಸದಿ ಬೀಳದೆ ನಿಂದೆ ನಾನು (ಭರಪ. ೯-೧೦೦). [ನಸು$_1$ + ಮುತ್ತು$_4$]

**ನಸುಮುರಿ** (ಕ್ರಿ). ಸ್ವಲ್ಪ ತಿರುಗು ; ತುಸುವೆ ಹೊರಳು : ಪರಿದ ತಲೆ ಬಿಟ್ಟ ಬಾಯ ನಸುಮುರಿದ ಕೊರಲ್ಮಗುಬ್ಬ ಕಣ್ಗಳ್ (ಗದಾಯು. ೪-೨೫). [ನಸು$_2$ + ಮುರಿ$_1$]

**ನಸುಮುರುಟು** (ಕ್ರಿ). ತುಸು ಮುದುಡು,-ಬಾಗು,-ತಿರಿಚಿಕೊಳ್ಳು. 'ನಸುಮುರುಟುಗಿವಿ' ಪರಾ. [ನಸು$_2$ + ಮುರುಟು$_1$ (<ಮುರುಂಟು$_1$)]

**ನಸುಮುರುಟುಗಿವಿ** (ನಾ). ತುಸು ಮುದುಡಿದ ಕಿವಿ : ನೊರೆವಾಯ ಹಾವಸೆವರಿದ ಪಲ್ಗಳ ಜೋಲ್ದುಟಿಯ ನಸುಮುರುಟುಗಿವಿಗಳ ಹಱಿಕಗಡ್ಡದ ಕೆಂಪುಮೀಸೆಗಳ . . . ತೋರ ಕಾರೊಡಲ ಉಱುಬನು (ಬಸಪು ೨೦-೧೧). [ನಸುಮುರುಟು + ಕಿವಿ$_3$]

**ನಸುಮುಸುಂಕು** (ನಾ). ತೆಳುವಾದ ಮುಸುಕು,-ತೆರೆ : ಎಸೆವ ಸಭೆ ಯೊಳ್ ನಸುಮುಸುಂಕು ನಾಡೆ ಮೆಱೆಯೆ ಮಱೆಗೊಂಡು ಕುಳ್ಳಿರ್ಪಲ್ಲಿ (ಗಿರಿಕ. ೨-೧೦೫ ವ). [ನಸು$_1$ + ಮುಸುಂಕು$_2$]

**ನಸುಮೆಲ್** (ಕ್ರಿ). ಸ್ವಲ್ಪ ಜಗಿ; ತುಸು ಅಗಿ : ನಸುಮೆಲ್ದುಚ್ಚಗಱುಕೆ ಸೂಸುತಿದೆ ಪೋದತ್ತಿಲ್ಲಿ ನಾನಾಮೃಗಂ (ಕಾದಂಪೂ. ೧೫೮). [ನಸು$_2$ + ಮೆಲ್$_1$]

**ನಸುಮೊಳೆ** (ಕ್ರಿ). ತುಸು ಅಂಕುರಿಸು ; ಸ್ವಲ್ಪವೆ ಕಾಣಿಸಿಕೊಳ್ಳು : ಮುಗುಳುನಗೆ ನಸುಮೊ[ಪಾಠಾಂ. ಹೊ]ಳೆಯೆ ಭೀಮಾದಿಗಳಿಗೆಂದನು ಕೃಷ್ಣನು (ಕುವ್ಯಾಭೀ. ೭-೦೨). [ನಸು$_2$ + ಮೊಳೆ$_1$]

**ನಸುಲಜ್ಜೆ** (ನಾ).=ನಸುನಾಚಿಕೆ : ನಗೆ ನಸುಲಜ್ಜೆಯೊಳ್ ತೊಡರಲಿರ್ದುದೆ ಬಲ್ಮಡೆ ಮಾಂದ್ಯಭಾವದೊಳ್ ಪುಗಲಿದೆ . . . ಯೌವನೋದಯಮೊ

ಬಾಲ್ಯವಿಮೋಚನವೋ . . . ಭವಾನಿಯಾ (ಗಿರಿಕ. ೪-೫) : ನಸುಲಜ್ಜೆ ನಗೆಮೊಗದೊಳಂಕುರಿಸೆ (ಜೈಮಿಭಾ. ೨೯-೨೮). [ ನಸು$_1$ + ಲಜ್ಜೆ ]

**ನಸುವಕ್ಕೆ** (ನಾ). ತುಸು ಒರಗುವಿಕೆ; ಸ್ವಲ್ಪ ಬಾಗುವಿಕೆ: ಪರವಸಮೊಯ್ಯನಾಜಿ$^3$ ಮುಗುಳ್ದಕ್ಷಿಗಳೆಟ್ಟಟಿ$^3$ ಕೂಡೆ ಮೆಯ್ಯೊಳುಬ್ಬರಿಸಿದ ರೋಮರಾಜಿ ನಸುವಕ್ಕೆಗೆ ಸಾಟಿ$^3$ ಬಟಲ್ದ ಮೆಯ್ಗೆ ಚೇತರಣೆಯುಲರ್ಚೆ(ಚಂದ್ರಪು. ೮-೭೦). [ ನಸು$_1$ + ಪಕ್ಕೆ$_1$ (<ಪಟಿ$^3$ಕೆ) ]

**ನಸುವರೆ** (ಕ್ರಿ). (ಸಂದಣಿ) ಸ್ವಲ್ಪ ಚೆದರು : ನೂಕುತಾಸಂ ನಿರವಿಸಿ ಕಿಟಿ$^3$ದುಂ ಪೊಟ್ಟು ನೀದು ಅಲ್ಲಿಯ ಸಂದಣಿ ನಸುವ[ಪಾಠಾಂ. ಪ]ರೆವುದುಂ . . . ಪೊಂಬಾಗಿಲನೊಳಪೊಕ್ಕು (ಚಕವಂ. ೧೨೧-೨೨); "ಸ್ವಲ್ಪ ಹರಿ, ತುಸು ಕಮ್ಮಿಯಾಗು" (ಪ್ರಭಾ.). [ ನಸು$_2$ + ಪರೆ$_1$ ]

**ನಸುವರೆಯ** (ನಾ). ಎಳೆಯ ಪ್ರಾಯ ; ಹರೆಯದ ಪ್ರಾರಂಭ ; ಏರುಂಜವ್ವನ : ತಾಳಿ ನಸುವರೆಯ ನಸನೋಟ ನಸುಲಜ್ಜೆಯಿಂ ಬಾಲಕಿಯರೀರ್ವರು ವಿರಾಜಿಸಲು (ನವಮೋ. ೨೬-೩೪). 'ಎಳವರೆಯ' ಪರಾ. [ ನಸು$_1$+ ಪರೆಯ$_2$ (< ಪರಯ) ]

**ನಸುವಾಗು, ನಸುಬಾಗು** (ಕ್ರಿ). ೧. ತುಸು ಬಾಗು; ಕೊಂಚ ಬಳುಕು,-ಬಗ್ಗು : ಮೇಲುದಿನೊಳ್ಪೊದಳ್ದ ಕುಚಭಾರದಿಂ ನಸುವಾಗಿದಾಗಲತೆ (ಜೈಮಿಭಾ. ೭-೪೭). **ನಸುಬಾಗು** : ೧. ನಸುಬಾಗಿ ಕೊಂಬಿನೊಳ್ ಪೊಳೆವೆಳಗಾಯ ನುಣ್ಬೊಗರಿಯಿಂ ಪುಟಿ$^3$ತರ್ಪೆಲರಿಂದೆ ಬಿಟ್ದ ಪೂಗಳ ಪುಡಿಯಿಂ ಕರುಸೊಗಯಿಪೋಲಗಸಾಲೆಯೊಳಿರ್ದರೊಪ್ಪದಿಂ (ಕಬ್ಬಿಗಾ. ೧೨೭). ೨. ತುಸು ತಗ್ಗಿಸು,-ಬಾಗಿಸು : ಪರರು ಪತಿಕರಿಸಿದೊಡೆ ಲಜ್ಜೆಗೆ ಶಿರವ ನಸುಬಾಗುವರು ಗರುವರು (ಕುವ್ಯಾವಿ. ೭-೧೮). [ ನಸು$_2$ + ಬಾಗು$_1$ ]

**ನಸುವಾಡು, ನಸುಬಾಡು** (ಕ್ರಿ). ತುಸು ಬಾಡು : ನಸುಗಂದು : ಮಿಸುಗುವ ಬಣ್ಣವಾಸಿಗಡೆಸಟಿ$^3$ ನಸುವಾ[ಪಾಠಾಂ. ಬಾ]ಡೆ ವಿಭೂಷಣಾಂಶುಗಳ್ ಮಸುಳೆ (ಸುಕುಮಾ. ೧೦-೫) ; ನೀರ್ಗುಡಿಯಲ್ ಗಡಣದಿಂ ಬಂದು ಬಟಲ್ದು ಕುಳ್ಳಿರ್ದ ಪಾಮರಿಯರ ಪೆರ್ಮುಡಿಯಿನಲರ್ಪೊಕ್ಕು ನಸುವಾಡಿದ ಸೆಲ್ಲನಿಡುವೊಡೆಂಗಳಿಂ (ಲೀಲಾವ. ೫-೭೭ ವ). **ನಸುಬಾಡು** : ಮೇಲಿನ 'ಸುಕುಮಾ' ಪ್ರಯೋಗದ ಪಾಠಾಂತರವನ್ನು ನೋಡಿ. [ ನಸು$_2$ + ಬಾಡು$_1$ ]

**ನಸುವಿರಿ, ನಸುಬಿರಿ** (ಕ್ರಿ). ತುಸು ಅರಳು ; ಅರೆಬಿರಿ : ನಸುವಿರಿದ ಸೇವಂತಿಗೆಯ ಕೇವಣದುಂಗುರುಂಗಳುಮಂ. . .ನೋಡಿ (ಜಗವಿ. ೬-೧೬ವ) ; ನಸುವಿರಿದಿರ್ದ ಪದ್ಮವನದೊಳ್ ನಲಿವಂಚೆಗಳಿಂ . . ರಸಾಲದೊಳ್ ಪೊಸತನಿವಣ್ಗಳಿಂ ಸವಿದು ರಾಗಿಪ ರಾಜಶುಕಂಗಳಿಂ ನಿರೀಕ್ಷಿಸೆ ಸೆಜೆ$^3$ಗೆಯ್ದೊರ್ಮೊದಲೊಳಾ ವನಮಾ ವನಲೋಚನಂಗಳಂ (ಧರ್ಮನಾ. ೨-೫೪). **ನಸುಬಿರಿ** : ಕುಸುಮಕುಳಕ್ಕೆ ನಿನ್ನರಸೆ ನಿನ್ನ ವಿಳಾಸಮೆ ನಿನ್ನ ಚೆಲ್ವೆ . . . ಎಂದಭಿಷೇಕಪುರಸ್ಸರಂ ಸ್ಮರಂ ನಸುಬಿರಿದಿರ್ದ ಮಲ್ಲಿಗೆಗೆ ಕಟ್ಟಿದನಂಕದ ರಾಜ್ಯಪಟ್ಟಮಂ (ಶಾಂತಿಪು. ೭-೧೪೨); ನಸುಬಿರಿವ ಕಮಲಮುಕುಳದ ನಸುಬಿರಿವುತ್ಪಲದ ಮುಗ್ಧ ಪರಿಮಳಗಂಧಂ (ಅಜಪು. ೬-೬೫) ; ನಸ ಬಿರಿವ ಕುಸುಮಕೆ ಸುಗಂಧ ರನ್ನಕೆ ರಂಗು ದೊರೆಕೊಂಡ ಮಾಳ್ಕೆಯಿಂ (ಸೌಂದಪು ೭-೨). [ ನಸು$_2$ + ಬಿರಿ$_1$ ]

**ನಸುವಿರಿದು** (ನಾ). ಸ್ವಲ್ಪ ದೊಡ್ಡದು : ಎಳದು + ಪೆಜಿ$^3$ = ಎಳವೆಜಿ$^3$ ಏವಂ ಬೆಳೆಪೊಲಂ, ಮೂವಣ್ಣಂ, ನಸುವಿರಿದು, ಮರವಣಿ (ಶಬ್ದಾನು. ೯೦ ಪ್ರಯೋ). [ ನಸು$_1$ + ಒರಿದು ]

**ನಸುವೆಸೆ** (ಕ್ರಿ). ಸ್ವಲ್ಪ ಬಿಂಕವನ್ನು ತೋರು,-ಬೀಗು : ವಸರಿಸಿದ ಕುಸುಮದೆಸಟ್ಗಳ ಮಸುಳಗೆಯಂ ಪಳುಕುವೆಸವ (ಸೆಗಸವಸದಿಂ ಸಸಿವಸಿಯಿಸಿದವೊಲೆಸೆದುದನಸಿಯಳ್ ನಸುವೆಸೆದು ಪಸುಗೆ ಕುಡೆ ಕುಳ್ಳಿರ್ದಂ (ಅನಂಪು. ೮-೬೫). [ ನಸು$_2$ + ಬೆಸೆ$_1$ ]

**ನಸುವೆಳಗು, ನಸುಂಬೆಳಕು** (ನಾ). [illegible] ಮಂಜು ಬೆಳಕು : ಕುಸುಮರಜದಿಂದೆ ಸೊಗಯಿಪ [illegible] ಚಂದ್ರೋದಯವಿನ್ನೆಸೆದಪ್ಪುದೆನೆ ನಸು[illegible] ಮಸಗಿದುದಿನಿಂದ್ರುದಿಗ್ವಧೂಮುಖಬಿಂಬಂ (ಕಾದಂಪೂ. ೮೭೮). **ನಸುಬೆಳಕು** : ಇನ್ನೂ ನಸುಬೆಳಕು ಹರಿಯುತ್ತಿತ್ತಷ್ಟೆ (ರೂಪಸಂ. ೧೭). [illegible]

**ನಸುವೆಳ್ದಿಂಗಳ್** (ನಾ). ತಿಳಿಯಾದ ಬೆಳದಿಂಗಳು : ನಸುವೆಳ್ದಿಂಗಳ ತಣ್ಗದಿರ್ಗೊನರ್ಗಳಂ ದಂತಾಂಶುಗಳ್ ಬೀಜಿ$^3$ (ಮಾಲಾನೀ. ೮-೧೩). [ ನಸು$_1$ + ಬೆಳ್ದಿಂಗಳ್ ]

**ನಸುಂವೆಳ್ಪು, ನಸುಂಬಿಳುಪು** (ನಾ). [illegible] ಒಸರ್ದಪುದು ನುಡಿಯೊಳೊಲವಿನ [illegible] ಸ್ಮಿತದಿಂ ಪಸರಿಸುತಿರೆ (ಕಾದಂಉ. ೧೮೭). **ನಸುಬಿಳುಪು** : "ಈಷತ್ಪಾಂಡು, ಧೂಸರ = ನಸುಬಿಳುಪು" (ನಾಚಿರಾ. ೬). [ ನಸು$_1$ + ಬೆಳ್ಪು ]

**ನಸುಸಂಜೆ** (ನಾ). ಸೂರ್ಯ ಮುಳುಗುವ ಸಮಯ ; (ರಾತ್ರಿಯಾಗಲು) ಸ್ವಲ್ಪ ಕಾಲವೆ ಉಳಿದಿರುವ ಸಂಜೆ ; ಗೋಧೂಳಿಕಾಲ : ನಸುಸಂಜೆಯಾಗಲುದ್ಭಟನೊಸೆದರ್ಘ್ಯಮನಿತ್ತು ಚಂದ್ರಭೂಷಣನಂ ಪೂಜಿಸಿ ಮೆಲ್ಲನೆ ಮಗುಟ್ವಾರೋಗಿಸಿದಂ ಶಿವಭದ್ರುವೆರಸು ಮುದದಿಂದಾಗಳ್ (ಉದ್ಭಟ. ೮-೮೭). [ ನಸು$_1$ + ಸಂಜೆ ]

**ನಸುಸವಿ** (ಕ್ರಿ). ಸ್ವಲ್ಪ ರುಚಿ ನೋಡು ; ತುಸು ತಿನ್ನು : ನಸುಸವಿದಿತ್ತು ಪೊಚ್ಚಪೊಸಗಂಪಮರ್ದಿಂಬಿನ ತಂಬುಲಂ (ಉದ್ಭಟ. ೪-೩೮). [ ನಸು$_2$ + ಸವಿ$_1$ ]

**ನಸುಸುಯ್** (ಕ್ರಿ). ಸ್ವಲ್ಪ ಉಸಿರುಬಿಡು : ಸುರಭಿಪರಿಮಳಸುಗಂಧೋತ್ಕರಮಂ ಪನ್ನೊಂದು ತಿಂಗಳಿಗೊರ್ಮೆ ಮನೋಹರಮಾಗಿರೆ ನಸುಸುಯ್ವಂ ನಿರುಪಮಮಹಿಮಾಪ್ರಭಾವನಂತಾ ದೇವಂ (ಸುಕುಮಾ. ೯-೩೪). 'ಬಿಸುಸುಯ್' ಪರಾ. [ ನಸು$_2$ + ಸುಯ್$_1$ ]

**ನಸುಸುರ್ಕು** (ಕ್ರಿ). ಸ್ವಲ್ಪ ಕುಗ್ಗು : ಸುರ್ಕುಟಿ$^3$ದುರುಳಿಗುರುಳಿ ನಸುಸುರ್ಕಿದ ಕುಚಚೂಚುಕಂ (ಆದಿಪು. ೧೦-೧೪೫). [ ನಸು$_2$ + ಸುರ್ಕು$_1$ ]

**ನಸುಸುಳಿವು** (ನಾ). ಮಂದವಾದ ಚಲನೆ : ಲಲಿತಮೃದುತರ ಹಂಸತೂಲದ ತಳಿತ ಮಂಚದ ತಂಬೆಲರ ನಸುಸುಳಿವಿನಲಿ ಥಳಥಳಿಪ ಜಾಳಕಪಂಕ್ತಿ ರಂಜಿಸಲು (ಬಸಪು. ೧೧-೧೪). [ ನಸು$_1$ + ಸುಳಿವು ( < ಸುಟಿ$^3$ವು ) ]

**ನಸುಸೇಕ** (ನಾ). ಸ್ವಲ್ಪ ಶಾಖ ; ಸುಖೋಷ್ಣ : ದಿಟ್ಟ ಪಾರ್ವಂ ಕಾಸಿ ತೆಗೆವುತ ಪೊಟ್ಟಣವನಂಗೈಯೊಳೊಯ್ಯನೆ ಮುಟ್ಟಿಮುಟ್ಟಿ ಶರೀರದೊಳು ನಸುಸೇಕಮಂ ಮಾಡಿ ಅಟ್ಟ ವಾತದ ತೈಲಮಂ ತಾಂ ಬೊಟ್ಟಿಡಿಸಿ ಲೇಪಿಸುತ ಪಥ್ಯಂಗೊಟ್ಟದಕೆ ತಕ್ಕನಿತು ಜೋಪಾಸನವನಾಚರಿಸಿ (ಬಸಪು. ೧೭-೮). [ ನಸು$_1$ + ಸೇಕ$_1$ ]

**ನಸುಸೈರಣೆ** (ನಾ). ಸ್ವಲ್ಪ ತಾಳ್ಮೆ,-ಸಹಿಷ್ಣುತೆ: ಪ್ರಣಯಕಲಹವನೊಡರ್ಚೆ ನಸುಸೈರಣೆಯ ಗೆಲವಂ ಕೊಟ್ಟು ಮೆಲ್ಲನೆ ಸಣಸಿ ಮುನಿವಡೆ ಸೋಲ್ತು ಮನವಲುಸುತೊಡನೆ ಸಾರ್ದು . . . ಮೇಳೈಸಿ (ಬಸಪು. ೪೨-೧೪). [ ನಸು$_1$ + ಸೈರಣೆ ]

**ನಸುಸೋಂಕು$_1$** (ಕ್ರಿ). ಸ್ವಲ್ಪ ತಗುಲು,-ತಾಗು : ಪೊಸ ಪೂವಿನ ಕಂಪಿನೊಳಟ್ಟು ಚಿತ್ರಜೋತ್ಪನ್ನವಿಳಾಸಮಂ ವಿರಹಿಗಿರ್ಮಡಿಮಾಡಿ ಶರದ್ವಮಂ ಸಮೀರ[ನ್ನ]ಸುಸೋಂಕಿ ಘರ್ಮಜಲಬಿಂದುವನಾಜಿ$^3$ಸಿದತ್ತು ನಲ್ಲರಾ (ಶಾಂತಿಪು. ೧೦-೧೩೨) ; ಅರಗಿಳಿವಿಂದು ಪಾಜಿ$^3$ ನಸುಸೋಂಕಿದೆಜಂಕೆಯಗಾಳಿಗೊಂದನೊಂದೊರಸೆ ನಿರಂತರಂ ಸುರಿವ ನುಣ್ದನೆವಾಲ್ಗಳ ಧಾರೆಗೊಡ್ಡಿ ಚಂಚುರ ನಿಜಚಂಚುವಿಂ ಸವಿದು (ಕಾವ್ಯಸಾ. ೧೧೪) : ತಕ್ಕೆಯೊಳ್ಪಿರಿದು ನಸುಸೋಂಕಿ ವಿಟರಾ ಫಣಂವೆಗೆಯೊಂದು ಮುದಿಸೂಳೆ ಮಗುಳುಸುರ್ದಳು (ನಂದಿವಾ. ೨೩-೪೩). [ ನಸು$_2$ + ಸೋಂಕು$_1$ ]

**ನಸುಸೋಂಕು$_2$** (ನಾ). ಮೃದುವಾದ ಸ್ಪರ್ಶ : ಎನ್ನ ಕದಂಪಿನ ನಸುಸೋಂಕಿನೊಂದು ಸುಖದಿಂದಾದಂ ಕಂಪಿಸುತಿರೆ ಕರತಳದಿಂದಂ ಪೋದತ್ತಕ್ಷಮಾಲೆ ನಾಣ್ಚೆರಸಾಗಳ್ (ಲಾದಂಪೂ. ೬೬೦). [ ನಸು$_1$ + ಸೋಂಕು$_2$ ]

**ನಸುಹೊಳೆ** (ಕ್ರಿ). ಸ್ವಲ್ಪಕಾಣು.-ತೋರು : ನಗೆಯ ಮೊಳೆ ನಸುಹೊಳೆಯೆ ಬೊಮ್ಮನ ಮೊಗವ ನೋಡಿದನಭವ (ಕುಮಾ.ಕ. ೬-೨೩).
[ ನಸು$_2$ + ಹೊಳೆ$_1$ ( < ಪೊಳೆ$_1$) ]

**ನಸೆ$_1$, ನಸಿ$_2$, ನೆಸೆ$_3$** (ನಾ). ೧. ಕಾಮಾತುರ ; ಕಾಮವಿಕಾರ ; ಬೆದೆ : "ನಸೆ ಕಾಮವಿಕಾರ ವೃದ್ಧಿಯೊಳ್" (ಕರ್ಣಾನಿ. ೯೦) ; ಪೊಸಮದದಾನೆಯುಂ ನಸೆಯು ಪೆರ್ಚಿಡಿ ಜಂಗಮಕಲ್ಪವೃಕ್ಷಮುಂ ಮಿಸುಗುವನಲ್ಪಕಲ್ಪಲತೆ ನೀರದಮುಂ ಕುಡುಮಿಂಚು ಪೊರ್ದಿ ಶೋಭಿಸುವವೋಲು ಸುರಾಧಿಪನ ನಾಪರವೇಶ್ವರಿ ಪೊರ್ದಿ ನಾಡೆ ಕಣ್ಗೆಸೆದಳ್ (ಶಾಂತಿಪು. ೬-೩೯) ; ನಸೆಗನುವಶಮಾಗಿರ್ದುದಂದೊಂದಿಭೇಂದ್ರಂ (ಜಗವಿ. ೧೬-೧೧) ; ಹಸಿವಿಲ್ಲದೆ ಮುನ್ನ ಉಂಡೂಟವ ನಸೆಯಿಲ್ಲದೆ ಅಪ್ಯಾಯನವನರಿಯರು (ಸರ್ವವ. ೩೨-೧೬೦) : ಮಡಿಕದ ನಸೆಗಸವಸದಿಂದಣಿಯುರಮಾಡುವ ಗವೇಂದ್ರನಂ ಸತಿ ಕಂಡಳ್ (ಅನಂಪು. ೪-೧೧೧) ; ಹಿಂಡಗಲಿದ ಹುಲ್ಲೆಯು ನಸೆಯೊಳಗಿಪ್ಪ ಗಂಡೇಣ ತನ್ನ ವಲ್ಲಭನ ಕಂಡುದುಂಟಾದಡೆ ತೋರು ತೋರೆನುತಲಿ ಪುಂಡರೀಕಾಕ್ಷಿ ಕೇಳಿದಳು (ಮೋಹತ. ೯-೩೪) ; ಆಕಳು ನಸಗೆ (ಬೆದೆಗೆ) ಬಂದಾಗ ಇಂದ್ರಿಯದಿಂದ ಸಣ್ಣಗೆ ಸ್ರಾವ ಜಿನುಗುವುದು (ಗೋಗ್ರಾಸ. ೨೪). **ನಸಿ$_2$** : ೧. ಅಳಿಗಳಪ್ಪುಗೆ ಸಿಂಗವಜಿಗಳ ಚೆಲ್ಲಾಟ ಕಳಹಂಸಗಳ ಬಾಯ್ದೂಟ ತೊಳಗುವ ಹರಿಣಹುಲ್ಲೆಯ ನಸಿಯುರ್ವರ ನೆಲೆಗೊಂಡು ಮೆರೆದುವೇನೆಂಬೆ (ಕಂನವಿ. ೧೧-೪೪) ; ಕಡುಹಸಿದ ತೋಳನು ಮಾಂಸದ ಪಿಂಡವನ್ನು ನೋಡುವಂತೆ ನಸಿಯನ್ನೆಲ್ಲ ಕಣ್ಣಿಗೆ ತಂದು, ಇಳಿದು ಬರುತ್ತಿರುವ ಗೃಹಿಣಿಯನ್ನು . . . ನೋಡುತ್ತ ನಿಂತಿದ್ದಾರೆ (ಬೆಳುವ. ೧೬೪). **ನೆಸೆ$_3$** : ೨. (ಕರಾ) ಸಲಿಗೆ ; ಸದರ : ಮಕ್ಕಳಿಗೆ ನೆಸೆ ಕೊಡಬಾರದು (ಮಕಮ. ೧೮೦) ; ನೆಸೆ ಕೊಟ್ಟವ ಹಸೆ ಕದ್ದುಕೊಂಡುಹೋದ (ಗಾದೆ).

**ನಸೆ ಮಾಡು** = ಕಾಮಚೇಷ್ಟೆಗಳನ್ನು ಮಾಡು ; ರತಿಕ್ರೀಡೆಯಾಡು : ತನ್ನ ಪರೆಯದ ನಲ್ಲರೊಡನೆ ನಕ್ಕು ನಸೆ ಮಾಡುತಂ ಸಿಂಗರಕ್ಕೆ ಮನಮೊಳಸಿ . . . ಲೋಲೆಯರ್ ಮೆರೆದರು (ಚಬಪು. ೧೧-೭೫).
[ ದೇ. ॥ ತಮಿ. ನಚ್ಚೈ ; ತೆಲು. ನಸ ; ಕೊಲಾ. ನಸವ್ = ತುರಿಕೆಯಾಗು, ನವೆಯಾಗು ]

**ನಸೆ$_2$** (ನಾ). ಒಂದು ಬಗೆಯ ಸಸ್ಯ : ಕಬ್ಬು, ನಸೇ, ಲಾವಂಚಿ, ಕಾಶಿ . . . ಜಂಡು, ಬಿದಿರು (ನಮ್ಮನು. ೨೩೯). [ ? ]

**ನಸೆಗಾರ** 'ನಸೆಗಾಟಿ' ನೋ.

**ನಸೆಗಾರ್ತಿ** (ನಾ). ಕಾಮೋದ್ರೇಕವನ್ನುಂಟುಮಾಡುವವಳು ; ಬೆದೆಗಾತಿ : ನಸೆಗಾರ್ತಿ! ಇಂತು ದಮನಂ ಹಯಮಂ ಸೆರೆವಿಡಿದು ನಿಜಪುರಕೆ ಕಳಿಪಲ್ (ರಾಮಾಶ್ವ. ೮೬-೧೧). [ ನಸೆಗಾಟಿ + -ತಿ$_1$ (< -ಇತ್ತಿ) ]

**ನಸೆಗಾಟಿ, ನಸೆಗಾರ** (ನಾ). ೧. ಕಾಮೋದ್ರೇಕವನ್ನುಂಟುಮಾಡುವವನು. ೨. ಕಾಮ ; ಮದನ ; ಮನ್ಮಥ : "ಕುಡುವಿಲ್ಲ ಪೂವುಣಂಬಂ . . . ಕಾವ ಕೊಂಕುವಿಲ್ಲಂ ಒಡಲಿಚಂ ನಸೆಗಾಟಿ ಕಮ್ಮಂಗಣೆಯ ಜೊನ್ನೊಡಲನಳಿಯಂ ದಪ್ಪಕಂ ಮಯಣನೆಂಬಿವಿಂತೊಡನೆ ಮನ್ಮಥ ನಾಮವು" (ಕಬ್ಬಮಂ. ೮) ; ತನಗೆ ಬಿರಯಿಮಿಗಂಗಳ ಬೇಂಟೆಗೆ ಬೇರೆವೇರೆವಿಲ್ಗಳ್ ದೊರೆಕೊಳ್ವಂತು ನಸೆಗಾಟಿನೊಸೆದು ಬೆಳೆಯಿಸಿದನೆನಲ್ಕೆಸೆವ ಕರ್ಬಿನ ತೋಂಟ (ರಾಮಾಶ್ವ. ೧೧೧-೨೦). **ನಸೆಗಾರ** : ೧. "ನಸೆಗಾರ - ಬೆದೆಗಾರ, ಕಾಮ" (ಗಂಗಾಮ. ೧೬೯) ; ಸ್ವೈರಿಪನೆಂತು ಚೆನ್ನ ನಸೆಗಾರನ ರೂಪಮ ನೀನೆಯುತ್ತೆ ವೇಳ್ವಾರಸಮಾನರೂಪ ನಸೆಗಾರನೆ ಸುತ್ತಿಹಳೀಕೆ ಬಾರಳೊ (ನಳವಿ. ೩೮).
[ ನಸೆ$_1$ + -ಗಾಟಿ ( < -ಕಾಟಿ ) ]

**ನಸೆಗೆಡು** (ಕ್ರಿ). ಕಾಮೋದ್ರೇಕವಿಲ್ಲದಾಗು ; ಕಾಮಾತುರವನ್ನು ಕಳೆದುಕೊಳ್ಳು ; ನೀರಸವಾಗು : ಅಲ್ಲಿಯೋದುವ ಶುಕಾವಳಿ ಮೂಗುವಟ್ಟಿರ್ದುವಲ್ಲಿ ಸಲಹಿದ ಹಂಸಮಾಲೆ ನಸೆಗೆಟ್ಟಿರ್ದುವು (ವೀರರ. ಹ. ೪೯೦-೬).
[ ನಸೆ$_1$ + ಕೆಡು$_1$ ]

**ನಸೆದಿಟ್ಟಿ** (ನಾ). ಕಾಮಾತುರತೆಯಿಂದ ಕೂಡಿದ ದೃಷ್ಟಿ ; ಕಾಮುಕ ನೋಟ : ಸಿಂಗಾರಮ್ಮ . . . ನಸೆದಿಟ್ಟಿಯು ಬಿತ್ತುಂದನಿಯಿಂದ (ಚಟ್ಟಳ. ೯೬-೨೦). [ ನಸೆ$_1$ + ದಿಟ್ಟಿ ]

**ನಸೆನಸೆ, ನಶನಶೆ, ನಸನಸೆ** (ನಾ). ಸಂಶಯ ; ಅನುಮಾನ ; ಅಪನಂಬಿಕೆ : ನಸೆನಸೆಯುಳ್ಳವನು ಹುಸಿಯನೇ? (ಗಾದೆ). **ನಶನಶೆ** : ಆಡುವ ಮಾತನ್ನೆಲ್ಲಾ ಖಂಡಿತವಾಗಿ ಆಡುವುದು. ನಶನಶೆ ಇಲ್ಲ (ಮುಸುಗ. ೩೩). **ನಸನಸೆ** : (ಕ).

**ನಸೆನಸೆ ಪಡು** = ಅನುಮಾನ ಪಡು ; ಸಂಶಯಹೊಂದು : ಜೋಕೆಯಿಂದ ಆರಿಸು ; ಆಯ್ಕೆಯಲ್ಲಿ ( ಸುಲಭವಾಗಿ ಒಪ್ಪದೆ ) ನಸೆನಸೆ ಪಡು (Pick and Choose. ಇಂಕನಿ). **ನಸೆನಸೆ ಮಾಡು** = ನಸೆನಸೆ ಪಡು : ನಮ್ಮ ದೇಶದ ಕಥಕರು . . . ಕೊಟ್ಟದ್ದಕ್ಕೆ ತಕ್ಕಷ್ಟು ತಿಳಿವು ಬಂತೇ ಇಲ್ಲವೇ ಎಂದು ತುಂಬ ನಸೆನಸೆ ಮಾಡಿ ನೋಡುವರು (ನಿಬಂಧ. II, ೫೯).
[ ದೇ. ॥ ತಮಿ. ನಚುನಚು = ( ಮಾತು ಅಥವಾ ಕೃತಿಗಳಲ್ಲಿ ) ನಿರ್ಧಾರಕ್ಕೆ ಬರದಿರು, ಹೊಯ್ದಾಡು ]

**ನಸೆನೋಟ** (ನಾ). ಕಾಮೋದ್ರೇಕವನ್ನುಂಟುಮಾಡುವ ನೋಟ ; ಕಾಮಾತುರದಿಂದ ಕೂಡಿದ ದೃಷ್ಟಿ : ಬೆಸುಗೆವಾತಿನ ವಿಟರಸುಗುಬ್ಬಸವ ಮಾಳ್ಪ ನಸೆನೋಟದೊಳು ಶಂಕಿನಿಯರು (ಭೃರಸೂ. ೨೬೯).
[ ನಸೆ$_1$ + ನೋಟ ]

**ನಸೆಮುಸಪು** (ನಾ). ವಿರಹದ ಹೆಚ್ಚಳ : ನಸೆಮುಸಪೊಂದೆ ಸುಣ್ಣಸಲೆಯೊಳ್ ಸುಸಿಲಾಂತೆಸೆವೇಣನಂ ವಿಲಂಬಿಸದಿಸಲೆಂದು ಬಂದನ ಪುಳಿಂದನ ವಕ್ಷಮನುದ್ಗಮಾಸ್ತ್ರದಿಂದಿಸೆ ಕುಸುಮಾಸ್ತ್ರಂ (ರಾಜಶೇ. ೫-೧೧೫). [ ನಸೆ$_1$ + ಮುಸಪು ]

**ನಸೆಮುಸೆ$_1$** (ನಾ). ಕಾಮೋದ್ರೇಕವನ್ನುಂಟುಮಾಡುವಂಥದು ; ಬಯಕೆಯನ್ನು ಹೆಚ್ಚಿಸುವಂಥದು : ಬೆಸುಗೆವಾತಿನ ವಿಟರಸುಗುಬ್ಬಸವ ಮಾಳ್ಪ ನಸೆಮುಸೆಯ ನೋಟದ ಶಂಖಿನಿಯರು (ಭೃರವೇ. ೨-೧೬) ; ರಸಿಕದಂಪತಿಗಳು ಕೂಡಿದರೆನೆ ಸಾಕು ನಸೆಮುಸೆ ಲಲ್ಲೆ ಕೊಲ್ಲಿಯೊಳು ಬೆಸುಗೆವಡೆದ ರಂತುಟಿಂತುಟಾಡಿದರೆಂದು ಹಸರವಿಕ್ಕುವುದಾವ ಜಾಣ್ಮೆ (ಭರತ. ೧೧-೧೧೨).
[ ನಸೆ$_1$ + ಮುಸೆ$_2$ ]

**ನಸೆಮುಸೆ$_2$** (ನಾ). ಹರಿತವಾಗುವಂತೆ ಮಸೆಯುವಿಕೆ; ತೀಕ್ಷ್ಣವಾಗುವಂತೆ ತೀಡುವಿಕೆ (?) : ಕದಡಿದವು ಬಲವೆರಡು ಕಲ್ಪದೊಳುದಧಿಯುದಧಿಯ ನೊದೆವವೊಲು ತಾಗಿದರು ನೀಗಿದರಸುವ ನಸೆಮುಸೆಗಳ್ಕುಡಿಸಿದವರು (ಕುಮಾರರಾ. ೧೬-೨೧) ; ಕಾಲನೇಮಿಯುಂ ಜಡಿದುಂ ಬಡಿದುಂ ಸಂದ ತನ್ನ ಪನ್ನತಿಕೆಯಿಂ ಪೊಣರ್ದ ರಾಮಭೃತ್ಯಂ ನಸೆಮುಸೆಯ ತಿಸುಳಂ ಬೆಳಬೆಳಗೆ ಉರಿಗಣ್ಣ ಜಾಲ ದಳ್ಳಿಸೆ ... ಮಾರುತಿಗೈಮೊಗಂ ಮುಮ್ಮೊಗನಾಗಿ ಜಡಿವಂ (ರಾಮಾಶ್ವ. ೧೩೨-೬) [ ನಸೆ$_0$ + ಮುಸೆ$_2$ ]

**ನಸೆಯಳಿಪು** (ನಾ). = ನಸೆಯಿಚ್ಚೆ : ನಸೆಯ [ಪಾಠಾಂ. ಮಸಪ, ಮಸುಪ] ಳಿಪಿಂ ಪ್ರಿಯಾನನಮನೀಕ್ಷಿಸಲುದ್ಯತೆಯಾಗಿ ತಾನೆ ಲಜ್ಜಿಸಿ ತಲೆವಾಗಿ (ಸೂಕ್ತಿಸು. ೬-೮೨) ; (ಚಂದ್ರಪು. ೬-೭೬ ನೋ). [ ನಸೆ$_1$ + ಅಳಿಪು$_2$ ]

**ನಸೆಯಿಚ್ಚೆ** (ನಾ). ಕಾಮಾತುರ ; ಕಾಮೇಚ್ಛೆ ; ಸಂಭೋಗಾಪೇಕ್ಷೆ .

**ನಸೆಯಿಚ್ಚೆಯಾಗು** = ಕಾಮಾಪೇಕ್ಷೆಯುಂಟಾಗು ; ರತಿಯ ಬಯಕೆಯುಂಟಾಗು : ಪಸಿದೂಡೆ ಸಲ್ಲಕೀಕಿಸಲಯಂಗಳನೊಯ್ಯನೆ ನೀಡಿ . . . ನಸೆಯಿಚ್ಚೆಯಾದೊಡಗೂಡಿ ಬಟಲ್ದೊಡೆ ಕರ್ಣವಾತಮಂ ಪಸರಿಸಿ ತನ್ನ ಕೈಪಿಡಿಯವೊಲ್ ಪಿಡಿಯಂ ಪಿಡಿದಿರ್ದುದೊಂದಿಭಂ (ಚಂದ್ರಪು. ೫-೬೪).
[ ನಸೆ$_1$ + ಇಚ್ಚೆ ]

**ನಸೆಯೋಜಿಸು** (ಕ್ರಿ). ಉದ್ರೇಕಿಸು : ತಗರ ತಲೆಗೆ ಜಂಬೀರದ ಪುಳಿಯಿಟ್ಟು ವಿಾಗೆ ನಸೆಯೋಜಿಸಿ ನಗುತ ಜಗಳವ ಕಾದಿಸುತಿಹ ರಾಜಪುತ್ರರು ಸೊಗಸಿದರಾ ಬೀದಿಯೊಳಗೆ (ಕಂನವಿ. ೭-೧೧). [ ನಸೆ$_1$ + ಎಜಿಸು ]

**ನಸೆವಣಕ** 'ನಸೆವಣಿಕ' ನೋ.

**ನಸೆವಣಿಕ, ನಸೆವಣಕ** (ನಾ). ಕಾಮೋದ್ರೇಕವುಳ್ಳ ಪಶು ; ಬೆದೆಗೆ ಬಂದಿರುವ ಮಣಕ,-ಪಡ್ಡೆ : ನಸೆವಣಿ[ಪಾಠಾಂ. ಣ]ಕದೆ ಬೆಸ್ನಂ ಸಂಧಿಸುವುದುಮುಸವಸದಿನೆಡೆಗೆ ಪುಗಲೊಡನಂತಾ ಬಸವಂ ಪಾಯ್ದೊಡೆ ಕೆಸಱೊಳ್ ಬಸವಟಿದಿರ್ದೊಂದು ಗೊಂದೆ ಪೊಂದಿತ್ತಾಗಳ್ (ಚಂದ್ರಪ್ರ. ೨-೨೯). ನಸೆವಣಕ: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ನಸೆ$_1$ + ಮಣಿಕ ]

**ನಸೆಹಚ್ಚು** (ಕ್ರಿ). ಕಾಮದ ಬಯಕೆಯನ್ನುಂಟುಮಾಡು, – ಆಸೆ ತೋರಿಸು : ನಸೆಹಚ್ಚಿ, ಪುಸಲಾಯಿಸಿ, ಹೊತ್ತುಗೊತ್ತುಗಳ ಸವ ಹೇಳಿ, ತುಸುತುಸು ಎಳೆದುಕೊಳ್ಳಬೇಕು ... ಸ್ವಲ್ಪ ಸಹನೆಯಿಂದಿರು (ಕೃಹಿಶಾ. ೯೦).
[ ನಸೆ$_1$ + ಹಚ್ಚು$_1$ (< ಪಚ್ಚು$_3$) ]

**ನಸ್ತ** (ನಾ). ಮೂಗು ; ನಾಸಿಕ. [ ಸಂ. ]

**ನಸ್ತಿತ** (ನಾ). ಮೂಗಿನಲ್ಲಿ ರಂಧ್ರವನ್ನು ಮಾಡಲ್ಪಟ್ಟುದು ; ಮೂಗುದಾರವನ್ನು ಹಾಕಿರುವ ಎತ್ತು, ಹಸು, ಮೊದಲಾದುವು "ನಸ್ಯೋತಃ, ನಸ್ತಿತಃ–ಈ ೨ ಮೂಗಿಟ್ಟುದು" (ಹಲಾಯು. ೪೪-೧೨೩) ; "ಒತ್ತಿ ಮೂಗಂ ಚುರ್ಚಿ ನಸ್ತಿತಂ [ಪಾಠಾಂ. ಮೂಗುರ್ರಿ ಬೊಚ್ಚಿ] ನಸ್ಯರಂ" (ಮಂಗರಾ. ೫೩-೨). [ ಸಂ. ]

**ನಸ್ಯ** (ನಾ). ೧. ಮೂಗಿಗೆ ಸಂಬಂಧಿಸಿದುದು. ೨. (ಔಷಧದ್ರವ್ಯ ಮೊದಲಾದುವನ್ನು)ಮೂಗಿಗೇರಿಸುವಿಕೆ; ಮೂಗಿನಿಂದ ಸೇವಿಸುವಿಕೆ: ☞ ಆಯುರ್ವೇದದಲ್ಲಿ ರೋಗಗಳನ್ನು ಗುಣಪಡಿಸಲು ೧. ನಸ್ಯ= ಪುಡಿಯನ್ನು ಮೂಗಿಗೇರಿಸುವುದು. ೨. ಪಾನ=ನೀರಾಗಿರುವ ಔಷಧಿಯನ್ನು ಕುಡಿಸುವುದು. ೩. ಅಂಜನ=ಲೇಪನ ದ್ರವ್ಯವನ್ನು ಬಳಿಯುವುದು ಎಂಬ ಮೂರು ವಿಧದಲ್ಲಿ ಚಿಕಿತ್ಸೆಯನ್ನು ನಡೆಸುತ್ತಾರೆ: ನರಮೂತ್ರದಿಂದೆ ನಸ್ಯಮನಿರದಾಗಿಸೆ ಕಣ್ಗೆ ತೇದೆಸಲ್ ತದ್ವಿಷಮುಂ ಪರಿಗುಂ (ಖಮದ. ೭-೭); ಒಳ್ಳಿತ್ತಾಗಿ ಹಣ್ಣಾದ ಗದುಗಿನ ತಿರುಳಂ ಶುಂಠಿಯುಮನ ದಕದಲ್ಲರೆದು ನಸ್ಯಮಂ ಮಾಡಲ್ ಮುಂಕಿನಂತೆ ಇರ್ಪುದುಂ. ಬಾಹುಗಂಟುಗಳುಂ ಮಾಣ್ಬುವು (ಲೋಕೋಪ. ೯-೧೦೦ ಟೀಕೆ) ; ಮಹಾಷಟ್ಪಲ ಘೃತವನಾದರೂ ... ಹಾಕಿ ಕಾಸಿ ಪಾಕದಲ್ಲಿ ಇಳುಹಿ ಹಿಂಡಿಕೊಂಡು ಪಾನ, ಅಭ್ಯಂಗ, ನಸ್ಯ ಮೊದಲಾದ ಕ್ರಿಯೆಗಳನು ಮಾಡಿಸಲು ಸಕಲ ನಾಸಿಕರೋಗಂಗಳು ಶಮನವಹವು (ವೈದ್ಯಸಾ. II, ೦೦೪). ೩. ಮೂಗಿಗೇರಿಸುವ ಔಷಧದ್ರವ್ಯ : ನಸ್ಯಂಗಳಿಂದೆ ತನುಸಾರಸ್ಯಂ ಒರಿದಕ್ಕುಂ (ಖಮದ. ೭-೨) ; ರಜನಿ ಬರಿವದಣೆ ಕಟುಕವ್ರಜಮಿನಿತುಮನರೆವುದಾಡಪಾಲೊಳ್ ತುರಗವ್ರಜಕೆ ಕುಡೆ ನಸ್ಯಮುಂ ವಾತಜ ಪಿತ್ತಜ ಕಫಜಮೆನಿಪ ಸಿಂ(ಘಾ)ಹಾಣಹರಂ (ಅಶ್ವಶಾ. ೧೧-೫೦); ಮದ್ದುಗಳನಿಡಿವ ಉರಿವ ಸೇಕದ ನಸ್ಯದೊಳು ಹದನಱಿವ ತುರಗದ ವೈಸ್ಯತಕಿಯುಚ್ಚಱಿಕೆಯಲಿ ಸಂತೈಸಿದರು ವಾಜಿಗಳ ವೇದನೆಯ (ಕುವ್ಯಾಭೀ. ೫-೩೯). ೪. ಹೊಗೆಸೊಪ್ಪಿನಿಂದ ತಯಾರಿಸಿದ, ಮೂಗಿಗೇರಿಸುವ ಪುಡಿ ; ನಾಸೀಪುಡಿ ; ತಂಬಾಕುಪುಡಿ ; ನಶ್ಯ : ಈ ಅರಸು ಬಾಲ್ಯದಿಂದಲೂ ನಸ್ಯವನ್ನು ಹಾಕಿಕೊಳ್ಳುತ್ತಾ ಇದ್ದನು (ನೀತಿಚಿಂ. II, ೩೧) ; ನೆರೆಮನೆ ಮಲ್ಲವ್ವ ಮುದುಕಿ ಕಲ್ಲವ್ವನ ಹತ್ತಿರ ನಸ್ಯ ಬೇಡಲು ಬಂದವಳು ...ಕೇಳಿದಳು (ಬಿಸ್ಸುಹಿಂ. ೭೧); ನಸ್ಯ ನೆತ್ತಿಗೆ ಮೂಲ ಗುಡಿಗುಡಿ ಗುಂಡಿಗೆಗೆ ಮೂಲ (ಗಾದೆ).

ನಸ್ಯಂಮಾಡು, ನಸ್ಯ ಮಾಡು=೧.ನಸ್ಯಂಗೆಯ್ ೧: ಶುಂಠಿಯುಂ,ಬೆಲ್ಲಮುಂ ಉದಕದಲ್ಲಿ ತೇದು ನಸ್ಯಂಮಾಡಲ್ ತಲೆತಿರುಗುಹ ... ಶ್ಲೇಷ್ಮವಾತಂ, ಈ ರೋಗಂಗಳ್ ಕಿಡುವುವು (ಲೋಕೋಪ. ೯-೧೫ ಟೀಕೆ) : ಬಿಳಿಯ ಉಗನಿಯ ಬೇರಂ ಮೊಲೆಹಾಲಲ್ಲಿ ನಸ್ಯಂ ಮಾಡೆ ಮುಖರೋಗ ಮಾಣ್ಗುಂ (ವಿವೈವಿ. ೧೫೧) ; ತಾಳಕದ ಪಣ್ಣಂ ಮೊಲೆಹಾಲಲ್ಲಿ ತೇದು ನಸ್ಯ ಮಾಡೆ ಅರೆದಲೆಬೇನೆ ಮಾಣ್ಗುಂ (ವಿವೈವಿ. ೭೩). ೨. ಮೂಗಿಗೇರಿಸುವ ಔಷಧವನ್ನು ತಯಾರಿಸು,-ಸಿದ್ಧಮಾಡು. ೩. ಹೊಗೆಸೊಪ್ಪಿನಿಂದ ನಶ್ಯದ ಪುಡಿಯನ್ನು ಮಾಡು. ನಸ್ಯ ಮಾಡಿಸು = ಮೂಗಿಗೇರಿಸುವ ಔಷಧ ಮೊದಲಾದುವನ್ನು ತಯಾರುಮಾಡಿಸು,—ಸಿದ್ಧಗೊಳಿಸುವಂತೆ ಮಾಡು : ನಸ್ಯ ಮಾಡಿಸುವದಕ್ಕೆ ತೈಲವನ್ನಾಗಲೀ ಘೃತವನ್ನಾಗಲೀ ಮೃದುಪಾಕದಲ್ಲಿ ಇಳಿಸಬೇಕು (ಸಕವೈ. XIII ಪ್ರಸ್ತಾವನೆ). ನಸ್ಯ ಹಾಕು = ನಶ್ಯವನ್ನು ಮೂಗಿಗೇರಿಸು,-ಸೇದು : ವಿಲಾಯಿತಿಯಲ್ಲಿಯೂ ನಸ್ಯ ಹಾಕುವ ರೂಢಿಯಿತ್ತು (ಸಮಜೀ. ೭೧೭) : ಪುಷ್ಯಮಾಸವಾದರೆ ನಸ್ಯ ಹಾಕಿಕೊಳ್ಳಬಾರದೆ? (ಗಾದೆ). [ ಸಂ. ]

**ನಸ್ಯಂಗುಡು** (ಕ್ರಿ). (ಔಷಧವನ್ನು) ಮೂಗಿನ ಮೂಲಕ ಏರಿಸು,-ಸೇವಿಸುವಂತೆ ಮಾಡು : ನರಮೂತ್ರದೆ ನಸ್ಯಂಗುಡು ಗುರುಗುಂಜಿಯ ಬಕುಳಮರಿಚಯುಗ್ಮದ ಬಿತ್ತುಂ ಪರಿಹರಿಕುಂ ಗರಳಭಯಂ ನಿರುತಂ (ಖಮದ. ೭-೪೭). [ ನಸ್ಯ + ಕುಡು$_1$ (<ಕೊಡು$_1$) ]

**ನಸ್ಯಂಗೆಯ್** (ಕ್ರಿ). ೧. (ಔಷಧ ಮೊದಲಾದುವನ್ನು) ಮೂಗಿಗೇರಿಸು,-ಸೇದು : ಬವಣೆ ತಲೆಬೇನೆಗಳ್ . . . ಕಫ ವಾತವಿಕಾರಂ ಪಿಂಗುಗು ವಾಡವೆ ನಸ್ಯಂಗೆಯ್ಯೆ ಶುಂಠಿಯುಂ ಬೆಲ್ಲಮುಮಂ (ಲೋಕೋಪ. ೯-೧೫) ; ಅರಿಸಿನಮುಂ ನೀಲಿಯುಮುಂ ಬೆರಸಲ್ಲವ ರಸದೊಳರೆದು ನಸ್ಯಂಗೆಯ್ಯಲ್ಕುರಗೋಗ್ರವಿಷಂ ಕಿಡುಗುಂ (ಖಮದ. ೭-೧೪); ಅರವಗಸೆಯೆಲೆಗಳಂ ವಿಸ್ತರದಿಂ ಗಾಳಿಸಿ ಕಟುತ್ರಿಕಂ ತ್ರಿಫಲೆಗಳಂ ಬೆರಸಿ ತನಿರಸದೊಳಿಂಬಾಗಿರೆ ನಸ್ಯಂಗೆಯ್ದೊಡದುವೆ ಸಿಂಘಾ(ಹಾ)ಣಹರಂ (ಅಶ್ವಶಾ. ೧೧-೫೧) : ಯಷ್ಟಿಮಧುಕ, ಇಂಗು, ಇಪ್ಪೆಮರದ ಕೆಚ್ಚು ಇವಂ ನೀರಿಂ ತೇದು ನಸ್ಯಂಗೆಯ್ಯೆ ಭಗ್ನನೇತ್ರ, ಸನ್ನಿ ಗುಣಮಕ್ಕುಂ (ಸಕವೈ. ೧೬೩). ೨. (ಔಷಧ ಮೊದಲಾದುವನ್ನು) ಮೂಗಿನ ಮೂಲಕ ಏರಿಸುವಂತೆ ಮಾಡು,-ಸೇವಿಸುವಂತೆ ಮಾಡು : ಹಾಮೆಕ್ಕೆಯ ಹಣ್ಣೊಳತಿಕ್ಷೇಮದೊಳಿರಿಸಿಟ್ಟು ಸುಂಟಿ ಹಿಪ್ಪಲಿ ಮೆಟಸೆಂಬೀ ಮೂಜಿನಾತ್ಮಜಲದಿಂ ಪ್ರೇಮದಿನಾತುಗೆ. ನಲಿದು ನಸ್ಯಂಗೆಯ್ವಂ (ದಶಕು. ೯-೦೧೧). [ ನಸ್ಯ + ಕೆಯ್$_1$ ]

**ನಸ್ಯಕರ್ಮ** (ನಾ). (ಔಷಧ ಮೊದಲಾದುವನ್ನು) ಮೂಗಿನ ಮೂಲಕ ಸೇವಿಸುವ ಕ್ರಿಯೆ,-ಮೂಗಿಗೇರಿಸುವ ಕ್ರಿಯೆ : ಸಿರಿಸದ ಪೂವಂ ಹುಲಿಗಿಲ ವರಫಲ ಮಡುವಾಗಲೆಲೆ(ಳೆ)ಯ ಫಲಮುಂ ಮೂತ್ರಂಬೆರಸರೆದು ನಸ್ಯಕರ್ಮಕ್ಕಿರದೊಡರಿಸಲಹಿಕುಳೋಗ್ರವಿಷಮುಂ ಕಳೆಗುಂ (ಖಮದ.೭-೫೬).
[ ನಸ್ಯ + ಕರ್ಮ ]

**ನಸ್ಯಮಿಾ** (ಕ್ರಿ).=ನಸ್ಯಂಗೆಯ್ ೨ : ಏಱಿಸದಿಲುಮಿಚ್ಚೆಯ ಹುಳಿಬೇಟೆಯದಳ ಲಶುನ ಮರಿಚಮೆಂಬಿವನಿಂಬಿಂ ಮೇಳಯ್ಸಿ ನಸ್ಯಮೀಯಲ್ [ಪಾಠಾಂ. ನಸ್ಯನಾಳಿಸು] ಜಾಳಿಸುಗುಂ ಸರ್ಪವಿಷಮುಂ (ಖಮದ. ೭-೧೭).
[ ನಸ್ಯ + ಈ$_2$ ]

**ನಸ್ಯವಿಧಿ** (ನಾ). (ಔಷಧವನ್ನು)ಮೂಗಿನ ಮೂಲಕ ಸೇವಿಸುವ ಕ್ರಮ,-ರೀತಿ,-ಪದ್ಧತಿ : ಶ್ಲೇಷ್ಮ ರೋಗದಲ್ಲಿ ನಸ್ಯವಿಧಿಯನ್ನು ಪ್ರಯೋಗಿಸುವುದು. ಸನ್ನಿಪಾತರೋಗಗಳಲ್ಲಿ ನಸ್ಯವಿಧಿಯನ್ನು ಪ್ರಯೋಗಿಸುವುದು (ಸಕವೈ. ೨೫). [ ನಸ್ಯ + ವಿಧಿ ]

**ನಸ್ಯವೆಜು** (ಕ್ರಿ). (ಔಷಧವನ್ನು) ಮೂಗಿನ ಮೂಲಕ ಏರಿಸು,-ಸೇವಿಸು : ಸಮಭಾಗೆಯಾಗಿ ಪೊಸ ಸಾಸಿವೆಯುಮನಂಕೊಲೆಯ ಬೀಜಮುಂ ಕೂಡಿ ಬಟ್ಟಿಕ್ಯವನಣ್ಣೆಗೊಂಡು ಸಲೆ ನಸ್ಯವೆಜುದೊಡಾಯುಷ್ಯವರ್ಧನಂ (ಲೋಕೋಪ. ೯-೪೦). [ ನಸ್ಯ + ಎಜು$_1$ ]

**ನಸ್ಯಸೇದು** (ಕ್ರಿ). ನಶ್ಯಹಾಕು; ನಶ್ಯವನ್ನು ಮೂಗಿಗೇರಿಸು: ಅವನಿಗೆ ನಸ್ಯ ಸೇದುವ ಅಭ್ಯಾಸವಿದೆ (ಬಳಕೆ). [ನಸ್ಯ + ಸೇದು$_1$ (< ಸೇಂದು)]

**ನಸ್ಯಾಂಗ** (ನಾ). = ನಸ್ಯ 3: ಮಂಥ್ಯಾಕರ್ಷೋತ್ಕಟಿತೋ ಕಂಪದೊಳೆಚ್ಚಿವುದಜಾ ಮಾತ್ರದಿಂ . . . ಬೇಟೀಂ ಧ್ಯಾನಂ ತದ್ವಿಷಕ್ಕಾರಿಗೆ ವಿಷಧರದಷ್ಟಂಗೆ ನಸ್ಯಾಂಗ [ಪಾಠಾಂ. ನಸ್ಯಗ]ಮಾಗಲ್ ಸಂಧ್ಯಾಭ್ರಾರಕ್ತದಂತಾಗಳೆ ವಿಷ ಮುಟ್ಟಿಗುಂ (ಖಮದ. ೭-೯೧). [ಸಂ.]

**ನಸ್ಯೋತ** (ನಾ). = ನಸ್ತಿತ: "ನಸ್ಯೋತಃ, ನಸ್ತಿತಃ– ಈ ೨ ಮೂಗಿಟ್ಟುದು" (ಹಲಾಯು. ೪೪-೧೧೩). [ಸಂ.]

**ನಸ್ರಾಣಿ, ನಸರಾಣಿ** (ನಾ). ೧. ಕ್ಷುದ್ರವ್ಯಕ್ತಿ; ತುಚ್ಛನಾದ ಮನುಷ್ಯ; ಅಲ್ಪಜೀವಿ: ಅವನಿಗೆ ಈಗ ಸಾರಥಿಯಾದ ಆ ನಸ್ರಾಣಿ ಸುಬ್ಬಭಟ್ಟ. ಆ ಗಾಣಿಗ ಸಂಕ . . . ಇವರೆಲ್ಲರ ದೆಸೆಯಿಂದ ಏನು ಹೇಳಿದರೂ ಗೋರ್ಕಲ್ಲ ಮೇಲೆ ಮಳೆ ಕರೆದಂತೆ ಸರ್ವಜ್ಞ ಎಂಬ ಹಾಗೆ ಆಗಿದೆ (ಹಹಸ. ೫೭). **ನಸರಾಣಿ:** ೨. ನಯವಾಗಿ ಮಾತನಾಡಿ ಮೋಸ ಮಾಡುವವನು; ಚಾಣಾಕ್ಷ; ಚಾಲಾಕಿ; ಚಿರಕಿ: "ನಸರಾಣಿ=ಪಕ್ಕಾ, ಚಾಲಾಕು" (ಜಾನಕೋ. ೧೧). [← ಅರ. ನಸ್ರಾನೀ; ಮರಾ. ನಸರಾಣೀ./ತುಳು. ನಸ್ರಾಣಿ, ನಸರಾಣಿ]

**ನಹಿ** (ಅ). ನಿಷೇಧಾರ್ಥವನ್ನು ಸೂಚಿಸುವ ಸಂಸ್ಕೃತದ ಒಂದು ಅವ್ಯಯ; ಇಲ್ಲ; ನಾಸ್ತಿ: "ನಹಿ ನೋನ ಅ–ಈ ೪ ಅವ್ಯಯಗಳೂ . . . ಅಭಾವದಲ್ಲಿಯೂ ನಿಷೇಧದಲ್ಲಿಯೂ ಭೇದದಲ್ಲಿಯೂ ವರ್ತಿಸುವವು" (ಸಿದ್ಧಾಂತಿ. ೩೭೭): ವಿಶಾಲಮತಿಯೆ ನಿನ್ನ ಪೋಲುವ ಸತಿಯರು ಮೂಲೋಕದಿ ನಹಿ (ಚಿಂಾರವಾ. ೧೭).

ನಹಿನಹಿ (ದ್ವಿರುಕ್ತಿ): ನಹಿನಹೀ ಎಂಬವ ಮಹಿಗೆ ಹೊರೆ (ಗಾದೆ). [P ಇದು ಸಂಸ್ಕೃತದ ಎರಡು ಅವ್ಯಯಗಳು ಸೇರಿ ಆಗಿರುವ ಕೂಡುನುಡಿ]

**ನಳ$_1$** 'ನಲ$_2$' ನೋ.

**ನಳ$_2$** (ನಾ). (ಉಕ) ೧. ನಾಳ; ಕೊಳವೆ: ಮನೆಯ ಕೊಳಚೆನೀರು ಹೋಗಲು ನಳಗಳಿರುತ್ತವೆ (ಬಳಕೆ). ೨. ನಲ್ಲಿ; ಕೊಳಾಯಿ: ಸಮಾಜಸುಧಾರಕರೆಂಬುವರೆಲ್ಲ ಮೊದಲು ಬೀದಿಯ ನಳಕ್ಕೆ ಬಂದು ಅಲ್ಲಿ ನಡೆಯುವ ಕಾರ್ಯಕಲಾಪಗಳನ್ನು ನೋಡುವುದು ಒಳ್ಳೇದು! (ಗಾಳಿಗು. ೭೧): ಚಾಳಿನ ಕೊನೆಗೆ ಇದ್ದ ನಳದಿಂದ ನೀರು ತರುವದೆಂದರೆ ಜೀವದ ಮೇಲೆ ಬರುತ್ತಿತ್ತು (ಕೃತಿಜ. ೫೭): ಅತ್ತಿಕೊಳ್ಳದಲ್ಲಿ ದೊಡ್ಡದೊಂದು ಕೆರೆ ಕಟ್ಟಿ ಊರೊಳಗೆ ನಳ ತರುವ ಆಲೋಚನೆಯು ನಡೆದದೆ (ಕಥಾಗ. ೪೩೫). [← ಮರಾ. ನಳ./ ಸಂ. ನಾಲ]

**ನಳಕ** 'ನಲಕ' ನೋ.

**ನಳಕೂಬರ** 'ನಲಕೂಬರ' ನೋ.

**ನಳದ್ವಯ** (ನಾ). ಒಂದು ಬಗೆಯ ಸಸ್ಯ,-ಜೊಂಡು (?): "ನಳಕಃ– ನಳದ್ವಯ, ಕಪ್ಪಲಿ" (ಒಷಧಿ. ೮೩). [ಸಂ. ನಲದ್ವಯ]

**ನಳನಳ** (ನಾ). ಕೋಮಲತೆ, ಮೃದುತ್ವ, ಸೌಂದರ್ಯ, ಕಾಂತಿಗಳನ್ನು ಸೂಚಿಸುವ ಒಂದು ಶಬ್ದ. 'ನಳನಳಿಕೆ', 'ನಳನಳಿಸು' ಪರಾ.

**ನಳನಳನೆ** (ಅ). ಮನೋಹರವಾಗಿ: ನೆಲ ಗಿರಿಯಲ್ಲವು ಕಂಪಾಗೆ ಗಗನ ಕುಚ್ಚಳಿವ ಸುಗಂಧಕರ್ಷಿಸುತ ನಳನಳನೀತಂದು ಗಿರಿಯ ಸಾರ್ದಾನೆಯಿಂದಿ ಳದನಂಗನೆಗೂಡಿ ಪಪ್ರಿ (ಭರತ. ೭೩-೧೩೭). [ನಳನಳ + –ಅನೆ$_1$]

**ನಳನಳಿಕೆ** (ನಾ). ಕೋಮಲತೆ; ಮೃದುತ್ವ: "ನಳನಳಿಕೆಯೆಂದು ಕೋಮಲಂ" (ಕಶಸಾ. ೭೧-೭೦೩); "ನಳನಳಿಕೆಯೆನೆ ಕೋಮಲಂ" (ಕರಿರ. ೫೩): ತುಂಬುರದಾಡನಾಥಂ ನಂಬಿಮನ್ನಣೇಚುಂಜವ್ವನದುರವಣೆಯುಮಂ ಸ್ವರೂಪಸೌಂದರ್ಯದ ನಳನಳಿಕೆಯುಮಂ . . . ದೃಷ್ಟಿಯ ದೈನ್ಯಮುಮನಟಿದು (ನಂಬಿರ. ೪-೧೧); ಸುಕುಮಾರಚೂಡಾಮಣಿಗೆ ಶೈಶವಂ ಕ್ರಮದೆ ಜಾಱೆ ಒತ್ತೆಸೆವ ಕೋಮಲಾಂಗದ ನಳನಳಿಕೆ . . . ಪೊಸಜವ್ವನಮನದೇಂ ಸೂಚಿಸಿದುವೊ (ಪದ್ಮರಾ. ೩-೨): ನಳನಳಿಕೆಯೊಳೊಡಗೂಡಿದರೆನೆ ಸಾತು ಕೊಳರ್ವಕ್ಕಿಗಳ ಕೊರಳಂತೆ ಗಳರವ ತಾಡನ ಸೀತ್ಕಾರ ಭೂಷಣದಾಲುಹು ಪೆರ್ಚಿಸಿಹುದೆನಲೇಕೆ (ಭರತ. ೧೧-೧೧೪). [ನಳನಳ + –ಇಕೆ]

**ನಳನಳಿಕೆವೆಱು** (ಕ್ರಿ). ಕೋಮಲತೆಯನ್ನು ಹೊಂದು; ಮೃದುತ್ವವನ್ನು ಪಡೆ: ಪರಿಕಾಲ್ಗಳಿಂ ಬಳಸಿದ ಪರಮಕೈಪಲ್ಲ ಕಲ್ಪತರುವೆಂಬಂತೆಸೆದು ನಳನಳಿಕೆವೆತ್ತ ವಿಮಳಕೋಮಳದಳತ್ರಯವಿಳಸಿತ ಸರಳಶಾಖಾನಿಕಾಯಾಕಲಿತಬಿಲ್ವವೃಕ್ಷ (ಚಬಸಂ. ೩-೭೮೪). [ನಳನಳಿಕೆ + ವೆಱು$_1$]

**ನಳನಳಿಸು** (ಕ್ರಿ). ೧. ಕೋಮಲವಾಗಿರು; ಮೃದುವಾಗಿರು; ನವುರಾಗಿರು: ವಿಳಸಿತಫಳಮಂಜರಿಯಂ ತಳೆದೊಪ್ಪುವ ಕಲ್ಪಲತೆಗೆ ಪಾಸಟಿಯಾವಳ್ ನಳನಳಿಸುವ ಜನಶಿಶುವಂ ತಳೆದು ತಳತ್ತಳಿಪ ಹರಿಯ ಪರಿಷಧುವಾಗಳ್ (ವರ್ಧಪು. ೧೩-೯೭); ನಳನಳಿಪಶೋಕೆಯ ತರುವಿನ ತಳಿರ ತೊಂಗಲು (ಹರಿಕಾ. ೩-೧೭). ೨. ಕಾಂತಿಯುಕ್ತವಾಗು; ಪ್ರಕಾಶಮಾನವಾಗು; ತೇಜೋಮಯವಾಗು: ನಳನಳಿಸಿ ಬಳೆದು ವಿರಹಾನಳ ನಳಂರ್ಗುಮಾ ವಿಳಾಸರಸದ ತರಂಗಾವಳಿಗಳನಿಟ್ಟಿಸುವ ಮಧ್ಯದ ವಳಿಗಳ ನೀಕ್ಷಿಸಿದ ನೀಜರಂ ರುಕ್ಮಿಣಿಯಾ (ಜಗವಿ. ೧೧-೩೭); ಓರಂತೆ ನಳನಳಿಸಿ ತೊಳಗುತ್ತಿರ್ಪನೋರ್ವನೇ ರುದ್ರಂ (ಪದ್ಮರಾ. ೧೧-೪೭). ೩. ಸುಂದರವಾಗು; ಚೆಲುವಾಗು; ಸೊಂಪಾಗು: ನೆಱೆ ಬಣ್ಣಿಸಲ್ಬಲ್ಬವಂ ನೆಱೆಯಂ ಪೆಱರಳವೆ ಪೊಳೆವ ತರುಗಳಿಂ ಪಣ್ಬೊಱೆಗಳ ನೆಱವಿಂದು ಬಗೆಗಜ್ಜೊಳ್ ನಳನಳಿಸುತೊಱಗಿ ರುಱುಗಿದ ಬನಮಂ (ಲೋಕೋಪ. ೬-೩೦); ತಿಳಿಗೊಳನ ಬಳಸಿ ನಳನಳಿಸಿ ಬೆಳೆದೆಳಮಾವುಗಳ ತಳದ ಮಲ್ಲಿಕಾಮಂಟಪದ . . . ಅಶೋಕೆಯ ತಳಿರ ತೊಂಗಲ ಗದ್ದುಗೆಯೊಳು . . . ಪಶುಪತಿಯಂತಿರ್ದ ಮುನಿನಾಥ ಕಣ್ಗೆಸೆದಿರ್ದನು (ಹರಿಕಾ. ೩-೭೭); ಮುತ್ತದಟಿ ವಲಯದೊಳೋರಣದಿಂ ಕೀಲಿಸಿ ವಜ್ರಳಿಸುವ ಪಸುರ್ವಣಿಯೆಂಬ ತೆಱದಿ ನಳನಳಿಸುತೆ ತುಱುಗಿ ಬೆಳೆದ ಬಹಿರುದ್ಯಾನಂ ಕಣ್ಗೊಳಿಸಿದುದು (ಜಯುಕಾ. ೧-೪೫). ೪. ಸೊಗಸಾಗು; ರುಚಿಕರವಾಗು: ನಳನಳಿಪ ಬಹುವಿಧದ ಭಕ್ಷಾವಳಿಯ ಹೆಡೆಗೆಗಳೋರಣಿಸಿ ಮುಂಡಳಿಸಿ ಕೂಡಿದ . . . ಕೂಳ ರಾಶಿಯ ಬಂಡಿ ಜೋಡಿಸಿತು (ಕುವ್ಯಾಅ. ೧೧-೨೫). [ನಳನಳ + –ಇಸು$_3$]

**ನಳಪಾಕ** (ನಾ). (ಆಲಂ) ಅತ್ಯಂತ ರುಚಿಕರವಾದ ಅಡುಗೆ; P ನಳನು ರುಚಿಕರವಾದ ಅಡುಗೆ ಮಾಡುವುದರಲ್ಲಿ ತುಂಬಾ ಸಮರ್ಥನಾಗಿದ್ದನೆಂದು ಇತಿಹಾಸಪ್ರಸಿದ್ಧವಾಗಿದೆ: ಷಡ್ರಸಗಳನ್ನು ಸೇರಿಸಿ ನಳಪಾಕ-ಭೀಮಪಾಕಗಳನ್ನು ಇಳಿಸುವವರೇ ಪಾಕಕಲಾನಿಪುಣರು (ಜೀವಾತ್ಮ. ೦೭೩); ಚಂದ್ರಿಯ ಅಡಿಗೆ ಎಂದರೆ ನಳಪಾಕ (ನಿಕಲು. ೪೦): ಸೀತೆಯ ನಳಪಾಕದಿಂದ ಹೊಟ್ಟೆಯಲ್ಲಿನ ವೈಶ್ವಾನರವನ್ನು ತಣಿಸೋಣ (ಸೀತಾರ. ೨೯). 'ಭೀಮಪಾಕ' ಪರಾ. [ನಳ$_1$ (=ನಲ$_2$) + ಪಾಕ$_1$]

**ನಳಮಾನ** 'ನಲಮಾನ' ನೋ.

**ನಳಯೋಗ** (ನಾ). [ಜ್ಯೋತಿ] ಜಾತಕನ ಜನ್ಮಕಾಲದಲ್ಲಿ ಏಳುಗ್ರಹಗಳು ದ್ವಿಸ್ವಭಾವ ರಾಶಿಯಲ್ಲಿರುವುದು; P ಈ ನಳಯೋಗದಲ್ಲಿ ಹುಟ್ಟಿದ ವ್ಯಕ್ತಿ ಸಿರಿವಂತನಾಗಿ, ಸುಖಿಯಾಗಿ, ಚತುರನಾಗಿರುತ್ತಾನೆಯಾದರೂ ಅಂಗವಿಕಲನಾಗುತ್ತಾನೆಂದು ನಂಬಿಕೆಯಿದೆ: ಏಱುಗ್ರಹಂ . . . ದ್ವ್ಯಂಗರಾಶಿಯೊಳ್ ಕೂಡಿ ನಿಂದೊಡದು ನಳಯೋಗಂ (ಜಾತತಿ. ೧೩-೧): ದ್ವಿಸ್ವಭಾವರಾಶಿ (ಮಿಥುನ ಕನ್ಯಾ ಧನುಸ್ಸು ಮೀನ)ಗಳಲ್ಲಿ ಏಳುಗ್ರಹಗಳೂ ಇದ್ದರೆ ನಳಯೋಗ (ಜಾತತಿ. ೧೩-೧ ಟೀಕೆ). [ನಳ$_1$ (=ನಲ$_2$) + ಯೋಗ]

**ನಳಸಂಯುತ** (ನಾ). ಜೊಂಡುಹುಲ್ಲಿನಿಂದ ತುಂಬಿದುದು: "ನಡ್ವಳಂ. ನಳಸಂಯುತಂ – ಈ ೨ ನಾ(ಣ)ನಲುಳ್ಳ ಭೂವಿ." (ಹಲಾಯು. ೨೬-೪). [ ನಳ$_1$ (=ನಲ್ಲ$_2$) + ಸಂಯುತ ]

**ನಳಸಂವತ್ಸರ** (ನಾ). ಅರುವತ್ತು ಸಂವತ್ಸರಗಳಲ್ಲಿ ಐವತ್ತನೆಯದು: ನಳಸಂವತ್ಸರದೊಳ್ ಮ.೦ ಘಟಿಲೆನೆ ಮನುಜರ್ಗಮಧಿಕತೃಪೆ ತಾನಕ್ಕುಂ (ಅಟ್ಟಮ. ೭-೨೩). [ ನಳ$_1$ (=ನಲ್ಲ$_2$) + ಸಂವತ್ಸರ ]

**ನಳಸಮುದ್ಭವ** (ನಾ). [ಜ್ಯೋತಿ] ನಳಯೋಗದಲ್ಲಿ ಹುಟ್ಟಿದವನು: ಧನಪತಿ ಪದುಳಿದನೂನಾಂಗಿ ನಿಪುಣಮತಿ ನಳಸಮುದ್ಭವಂ (ಜಾತತಿ. ೧೩-೧೨). [ ನಳ$_1$ ( = ನಲ್ಲ$_2$ ) + ಸಮುದ್ಭವ ]

**ನಳಿ$_1$** (ಕ್ರಿ). ೧. ಬಾಗು; ಬಗ್ಗು; ಡೊಂಕಾಗು: "ನಳಿ_ನಮನೇ" (ಶಮಧಾ); ಪದುಳಂ ನಿಂದೆಡಗಯ್ಯೊಳೊತ್ತಿ ಘುಜಂ ಕೊಪ್ಪಂ ಪವಾಂಗುಪ್ಪ ಮೂಲದೊಳಿಟ್ಟೇಱಿಸೆ ಕಾಲದಂಡನಿಭಮಂ ಕೋದಂಡಮಂ . . . ಕೂರ್ಮೋನ್ನತ ಕರ್ಪರಂ ನಳಿದು ಬೆನ್ನಂ ಪತ್ತದೇಂ ಮಾಣ್ದುದೇ (ಶಂರಾಮಾ. ೫-೮೭); ಶಿರದ ನರೆ ಮೆಯ್ಯ ತೆರೆ ಕಯ್ಯ ಕೋಲಿಂದೆಸೆಯ ಸುರುಳ್ದ ತನು ನಳಿತ ಬೆನು ಜೋಲ್ವ ಪುರ್ವಿಂದೆಸೆಯೆ (ಇಳಿರ. ದೇ. ೫೧-೧೭); ಕಿಱುಗೊಂಬು ನಳಿದ ಬೆನ್ನಂ ಕಿಱುಕಿದ ತೊಡೆಗೆಚ್ಚಲಲೆವ ಬಾಲಂ ತಳುವ್ಮೈ ಮೆಱೆಯೆ ಬಿಳಿದಾಗಿ ಮಾಣದೆ ಕಱೆವೆಮ್ಮೆಯ ಹಿಂಡು ಪಳ್ಳಿಪಳ್ಳಿಯೊಳೆಸೆಗುಂ (ಸೂಕ್ತಿಸು. ೪-೬೧); ಕವಿದು ಹಳಚಿದುದುಭಯಬಲ ಶಿವಶಿವ ಮಹಾದೇವಮವು ಪದರಜ ರವಿಯ ಶಿವಿದುದು ದಿವವನಳಿದುದು ನಳಿದನಹಿರಾಯ (ಕುಮ್ಯಾಧೀ. ೪ ಸೂಚನೆ). ೨. ಮಣಿ; ನಮಸ್ಕರಿಸು; ಶರಣಾಗು: "ನಳಿಯೆಂಬ ನುಡಿ ನಮಸ್ಕಾರಾರ್ಥದಲ್ಲಿ ಕಾಡಿನ ಸರವಿನಲ್ಲಿ ಸಲ್ಗುಂ" (ಸಂಜೀವ. ೨೮); ಕದನದೊಳಂದು ನಿನ್ನ ತರವಾರಿಯ ಜಾರಿಗೆ ಮೆಯ್ಯನೊಡ್ಡಲಾಱದೆ ನಳಿದಿನ್ನುವಂತದನೆ ಜಾನಿಸಿ ಜಾನಿಸಿ ಗಂಗ ತನ್ನ ನಂಬಿದ ಸುದಶೀಕದುಬದೆರ್ದ ಪೌವನೆವೋಗಿರೆ ಪುಲ್ಲೆವೆಚ್ಚುವೆಚ್ಚದಪನಹನ್ನಿಂಶಂ ಕಿಗುಳ ದಾಮನರಣ್ಯಶರಣ್ಯವೃತ್ತಿಯಿಂ (ಎಕ. II, ೨೪೦-೨೩: 1175). ೩. ಬಳುಕು; ತೊನೆದಾಡು: ಕಾಲ್ ಬಲೆಯ ನಡು ನಳಿಯೆ ಕಳಲುತುಂ ಬೞಲುತುಂ . . . ಬಾದರತಿವೇಗದಿಂ (ಲೀಲಾವ. ೧೧-೯); ಮುಡಿ ಜಡಿಯೆ ಕುಂತಳಂ ಕೞೆಯ ಕಡೆಗಣು ಪೊಳೆಯೆ ನಡು ನಳಿ[ಪಾಠಾಂ. ಮಣಿ]ಯೆ . . . ನೇವುರ ಝಣಂ ಝಣಮೆನಲು ವನಿತೆಯರ ನಡುವೆ ಚೆಂಡಂ ಹೊಯ್ಯುತಿರ್ದಳೊಬ್ಬಳು ಕಾಮನಂಕಮಾಲೆಯ ಮಾಡುತ (ಹಚಕಾ. ೪-೧೩).

ನಳನಳಿ (ದ್ವಿರುಕ್ತಿ): ಮದಸಿಂಧುರಭಾರಮನಾನಲಾಱದಳಿಪಿಂ ಬೆನ್ನಂ ನಳಿನಳಿದು ನಡೆವ ಹಯದಟೆಯುಳವಂ ಕಂಡು (ಆದಿಪು. ೧೫-೩೧).

[ ದೇ.॥ ತಮಿ. ನೆಳಿ; ಮಲ. ಞೆಳಿ; ತೊದ. ನೊಳ್ಗ ]

**ನಳಿ$_2$** (ನಾ). ೧. ಸೊಬಗು; ಚೆಲುವು: ತೊಳಗುತಿವೆ ತೋಟದಲಿ ತರತರ ಗುಲಾಬಿಹೂ . . . ಎಳೆಬಿಸಿಲು, ತಿಳಿಗಾಳಿ; ನೋಡಿಕೊಳ್ಳಲು ಮಾಲಿ; ಏಳಿ ಹೇಳುವುದು ಆ ನಳಿಯ ? (ಸುನೀತ. ೬-೮). (ಗು). ೨. ಕೋಮಲವಾದ; ಮೃದುವಾದ. ೩. ಕಾಂತಿಯುಕ್ತವಾದ. 'ನಳಿದೋಳ್', 'ನಳಿಮೊಗ' ಪರಾ.

**ನಳಿ$_3$** 'ನಲ್ಲಿ$_1$' ನೋ.

**ನಳಿ$_4$** 'ನಲ್ಲಿ$_2$' ನೋ.

**ನಳಿಕೆ** (ನಾ). ೧. ಸಣ್ಣ ಕೊಳವೆಯಂಥ ಟೊಳ್ಳಾದ ಸಾಧನ; ನಾಳ: ವಿವಿಧ ಬಗೆಯ ಉದ್ದೀಪನಕಾಲಕ್ಕೆ ಸಸ್ಯಗಳ ನಳಿಕೆಗಳು ವ್ಯಕ್ತಪಡಿಸುವ ಪ್ರತಿಕ್ರಿಯೆಯು ಪ್ರಾಣಿಗಳ ನರಗಳ ಪ್ರತಿಕ್ರಿಯೆಯಂತೆಯೇ ಇರುವುದೆಂಬುದನ್ನು ಅವರು ಯಶಸ್ವಿಯಾಗಿ ತೋರಿಸಿದರು (ಸಸ್ಯಕ. ೧೦೩). ೨. ಕೊಳವೆಗಳಿಂದ ತಯಾರಿಸಿದ ಪಂಜರ: ಬಲವಂತರೆಲ್ಲ ನಳಿಕೆಯ ಕೀರನಂತೆ ಅವರು ದಿಕ್ಕಾಗಲಱಿಯರು (ಮೋಲಮಾ. ೭೭-೨೭೯). [ ಸಂ. ನಲಿಕಾ ]

**ನಳಿಗೆ, ಲಳಗಿ, ಲಳಿಗೆ** (ನಾ). ೧.=ನಳಿಕೆ ೧: "ನಳಿಗೆ (ಲಳಿಗೆ) – ನಾಲಿಕಾ (ನಲಕ) = ಕೊಳವೆ" (ತದ್ಭಕೋ. ೨೧); ನಳಿಗೆಯೊಳ್ ನಾಯ ಬಾಲವನು ಕಟ್ಟಲ್ಕನ್ನ ನಳುಪ ಬಿಡದು (ಸಮ್ಯಕಾ. ೧೨-೧೨); ನಾಯ ಬಾಲ ನಳಿಗೆಯಲ್ಲಿ ಹಾಕಿದ ಹಾಗೆ ಅವನ ಬುದ್ಧಿ ಎಂದಿಗಾದರೂ ಸರಿದಾರಿಗೆ ಬರುವುದಿದೆಯೇ ? (ತ್ಯಾಗಮ. ೧೨೦); ಪಿಸ್ತೂಲಿನ ನಳಿಗೆಯೊಂದು ಗಂಗಾರಾಮನ ಎದೆಯ ಕಡೆಗೆ ಗುರಿ ನೋಡುತ್ತಿತ್ತು (ವಿಧಿವ್ಯ. ೧೧೪); ಇಬ್ಬರೂ ಹುಕ್ಕಾಯ ನಳಿಗೆಗಳನ್ನು ಬಾಯಲ್ಲಿಟ್ಟುಕೊಂಡು ತುಸುಹೊತ್ತು ಸುಮ್ಮನೆ ಈಚಿಚೆಯರುಗಳಲ್ಲಿ ಒರಗಿದರು (ನಿಷ್ಕಾಮ. ೧); ನಾಯಿಯ ಬಾಲ ನಳಿಗೆಯಲ್ಲಿ ಹಾಕಿದರೆ ಡೊಂಕು ಬಿಟ್ಟೀತೆ ? (ಗಾದೆ). ೨. ನೆಯ್ಗೆಯಲ್ಲಿ ಉಪಯೋಗಿಸುವ ಸಾಧನ; ಲಾಳಿ: ಊಕೆಯ ಮಾಡುವಾತನ ಕಯ್ಯ ಕುಂಚಿಗೆಯ ತುಂತುಱು ನುಂಗಿತ್ತು ನೆಯ್ವ ಅಣ್ಣನ ಕಣ್ಣ ಕೆಯ್ಯ ನ[ಪಾಠಾಂ. ಲ]ಳಿಗೆ ನುಂಗಿತ್ತು (ಗುಪ್ತಮಂ. ೪). ೩. ಬಲಿತ ಬಿದಿರು; ಬೊಂಬು. ೪. ಬೊಂಬಿನಿಂದ ತಯಾರಿಸಿದ ಪಾತ್ರೆಯಂಥ ಸಾಧನ; ಅಂಡೆ: ಉಗ್ರಮಾತಂಗ ದಂತಗಳಂ ಚಮರಿವಿಣಲಂ ಜೇನ ನಳಿಗೆಯುಂ ಪೂತಿಪೆಕ್ಕಂ ಪರಿಷ್ಕಂದ್ರು ರಾಯಂಗೆ ಕಾಣಿಕೆಯನಿತ್ತಡಿಗೆಱಗುತಿರ್ದರಗ್ಗದ ಬೇಡವಡೆಯೊಡೆಯರು (ಹಚಕಾ. ೫-೩): ತೈಲವನೊಂದು ನಳಿಗೆಯೊಳು ತುಂಬಿ (ವೀಶೈಪು. ೮-೮-೪೦); ಪುಲಿದೊವಲೆತಲೆಯ ಮುಱಿ ಪೀಲಿಪೊಱೆ ಜೇನ ನಳಿಗೆ ಬಲ್ಪಿಂದಿದಾಡೆಗಳ ಒಲಿದಿತ್ತು ಕಾಣಿಕೆಯನು ಕೈಮುಗಿದರಾ ಬಲದ ನಾಯಕರು ಕಂಪಿಲಗೆ (ಕುರಾಸಾಂ. ೨೭-೩೮); ಪುಲಿದೊಗಲ ಪೊಱೆ ಜೇನುತುಪ್ಪದ ನಳಿಗೆ ಮೇಣದ ಮುದ್ದೆ (ಸಾಳ್ವಭಾ. ೧೬-೬). ೫. ಒಂದು ಬಗೆಯ ಸುಗಂಧದ್ರವ್ಯ: "ನಾಳಿಕಾ – ನಳಿಕೆ, ಬಳ್ಳಿ, ತೆಂಗು, ಸೂರ್ಯಭಕ್ತ" (೭ಷಧಿ. ೮೫). ಲಳಗಿ: ೧. ಶ್ವಾನನ ತಂದು ಬಾಲ ನೀವಿ ಲಳಗಿಯೊಳು ತಾನಿಡಲದರಿಂದ ಮೇಣ್ಸರಳಾಗುವದೇ (ವಿಸಾಸು. ೪೧-೧); ನಾಯಿಯ ಬಾಲವನ್ನು ಲಳಗಿಯಲ್ಲಿ ಹಾಕಿದರೂ ಅದರ ಡೊಂಕು ಹ್ಯಾಗೆ ಹೋದೀತು ? (ಮೋಹನೀ. ೪೯). ಲಳಿಗೆ: ೧. "ನಾಳಃ = ಲಳಿಗ" (ಕಾಶಕ್ಕ. ೫೧); ಬಿಳಿಯಕ್ಕಿವಿಟ್ಟ ಸೋದಿಸಿ ಮತ್ತೆ ಪರಿಯಣಕೆ ತಳಿದುಕೊಂಡು . . . ಲ[ಪಾಠಾಂ. ನ]ಳಿಗೆಯಂದದಿ ತಿರಿಹಿ ತಿರಿಹಿ ಮುಖಗೆಡದೆ ಹಪ್ಪಳವನೊತ್ತುವ ಹಾಗೆಯೊತ್ತಿ (ಸೂಪಶಾ. ೧-೪೮); ಹೊರಗೆ ಬಂದೂಕಿನ ಲಳಿಗೆಗಳು ಹಾಯ್ದವೆ (ಕೃಣಸ. ೧೮); ಶ್ವಾನದ ಬಾಲವ ಲಳಿಗೆಯೊಳಿಟ್ಟರೆ ಮಾಣದೆ ಸರಳವದಾಗೀತೆ ? (ಜನನಾ. ೧೦೨); ನಾನಿಯ ಮನಸ್ಸು ಲಳಿಗೆಯಲ್ಲಿ ಹಾಕಿದ ನಾಯಿಯ ಬಾಲದಂತೆ ಇದ್ದಿತು (ನಾಡಿಗೇ. ೧೦೭). ೩. ಕಳಲೆಯ ನಖದಲ್ಲಿ ಚಿವುಟಲಹುದು ಮುಂದೆ ಲಳಿಗೆ ಕೂರುಗುರಿಗಂಜುವುದೇ (ಮೋಹತ. ೧೧-೧೩); ಕಳಲೆಯನ್ನಖದಿ ಚಿವುಟಲು ಸುಲಭವುದು ಬಲಿದು ಲಳಿಗೆಯಾದೊಡೆಯು [ಯಃ] ಗುರ್ಗಳಿಗೆ ಸಾಧ್ಯಮೆ (ನವಮೋ. ೧೧-೧೭). ೪. ಧಾರುಣಿಯೊಳಗೆ ಹೇಱಿನಕ್ಕ ಲಳಿಗೆಯು ಎಣ್ಣೆ ಹೂವು ಕಾಯಿ ಹಣ್ಣು ಮೊದಲಾದುದ ತಪ್ಪ ಸಾಧಿಸಿ ತರಿಸಿಕೊಂಡುಂಬ ಚಿಕ್ಕಮಕ್ಕಳಿಗೆಲ್ಲಿಯದೋ ಸೆಟ್ಟಸೆಯ ದೇವತ್ವ (ಮೋಲಮಾ. ೧೦೪-೯೧೭); ತುಡುವೆಯ ಜೇನು ಕೋಲುಜೇನು ಹುತ್ತಜೇನು ಪೆಜ್ಜೇನು ಸಕ್ಕರೆಜೇನು ಯಿಂತಿವು ಮೊದಲಾದ ಜೇನುತುಪ್ಪದ ಲಳಿಗೆಗಳ ಸಾಲುಪೊಱೆಯಿಂ . . . ಕಾಣಿಕೆಯನಿಕ್ಕಿ (ನನ್ನಚಾ. ೪-೧೪ ವ). [ <ಸಂ. ನಲಿಕಾ / ತುಳು. ನಳಿಗೆ ]

**ನಳಿಗೊಂಬು** (ನಾ). ಕೋಮಲವಾದ ಕೊಂಬೆ; ಎಳೆಯದಾದ ರೆಂಬೆ: ಕವಲ್ತ ಕೊಂಬಿನ ಮಡವದ್ದವಂದ ನಳಿಗೊಂಬಿನ ಪತ್ತುಗೆ ಜೋಲ್ವ ಬಳ್ಳಿಗೊಂಬಿನ ಬಳಿ ತೋರಗೊಂಬಿನ ನೊಗಂ ನಿಡುಗೊಂಬಿನ ಮುಂಕು ಕಣ್ಗೆ ಚೆಲ್ವನೆ ನಡೆತಂದುಪಂದಸುಗೆಯೆಂಬ ನೆಗೞ್ತಿಯ ತೇಗರ್ಳೆತ್ತಲುಂ (ಕಬ್ಬಿಗ. ೨೦೩). [ ನಳಿ$_2$ + ಕೊಂಬು$_1$ ]

**ನಳಿತೋಳ್** 'ನಳಿದೋಳ್' ನೋ.

**ನಳಿತೋಳು** 'ನಳಿದೋಳ್' ನೋ.

**ನಳಿದು** (ನಾ). ಬಾಗಿದುದು; ಡೊಂಕಾದುದು; ವಕ್ರವಾದುದು. 'ಕಡುನಳಿದು' ಪರ್ಾ. [<ನಳಿ$_1$ ]

**ನಳಿದೋಳ್, ನಳಿತೋಳ್, ನಳಿತೋಳು** (ನಾ). ಕೋಮಲವಾದ ತೋಳು; ಮೃದುವಾದ ಬಾಹು: ನಳಿದೋಳ್ಗಳ್ ಶಾಖೆಯುಂ ಕೆಂದಳ ವೆಳದಳಿರಂ . . . ಸುಯ್ಗಂಪು ಕಂಪಂ ಮಿಗೆ ಸೊಗಯಿಸಿತಂಗೋದ್ಭವ ಶ್ರೀ ಜಗನ್ಮಂಗಳಶೃಂಗಾರಾಬ್ಧಿವೇಳಾವನಲತೆಯೆನೆ ಶುದ್ಧಾಂತಕಾಂತಾಕದಂಬಂ (ಪುಷ್ಪಪು. ೭-೨೯). **ನಳಿತೋಳ್:** ಕುಂತಿ . . . ನಿಧಾನಮನೀಡಾಡು ವಂತೆ ಕೂಸಂ ಗಂಗೆಯೊಳೀಡಾಡಿ ಬಂದಳಿತ್ತ ಗಂಗಾದೇವಿಯುಮಾ ಕೂಸಂ ಮುಳುಗಲೀಯದೆ ತನ್ನ ತೆರೆಗಳೆಂಬ ನಳಿತೋಳ್ಗಳಿನೊಯ್ಯನೊಯ್ಯನೆ ತಟ್ಟಿ ಕೈಸಿ ತರೆ (ಪಂಪಭಾ. ೧-೯೩ ವ); ಮುಗುಳ್ಗಳಂ ಮಿಸುಗುವ ದಂತ ಪಂಕ್ತಿ ಲತೆಯುಂ ನಳಿತೋಳ್ಗಳಿಟ್ ಪೋಲ್ತು ನಾಡೆ ರಂಜಿಸುವ ವಿಳಾಸಿನೀ ನಿಕರದಿಂ ಪೊಸಸುಗ್ಗಿ ಪೊಲಿರ್ದುದೋಲಗಂ (ಧರ್ಮಾಮೃ. ೪-೧೪೦); ತಾಮರಸವಮುಖಿಯ ನಳಿತೋಳ್ ತಾವುರಸಬೆಡಂಗುವೆತ್ತು ಸಿರಿಸದ ಸುಮನೋದಾಮಕಮಂ ಗೆಲೆವಂದಸೆದುದು ಮಕರಧ್ವಜನ ಪಾಶಮೆನೆ ಸೊಗಯಿಸುಗುಂ (ಜಗವಿ. ೧೧-೩೨); ನಿಜಾಗುರುಳ್ ಸೋರ್ಮುಡಿ . . . ನಳಿತೋಳ್ ಕಂದಳಂ . . . ಸೊರ್ಕುಂಗೋಗಿಲೆ – ಇವು ಉಪಸರ್ಗಂ ಬೆರಸಿದ ಶಬ್ದಂಗಳ್ (ಶಶಸಾ. ೬೩-೪೧೬); ಕಂದನಾಡುವ ಬಾಲಲೀಲೆಯಂ ನೋಡಿ ತೊದಲೊಂದಿದಿನಿವಾತನುಜ್ ಕೇಳ್ದು ಮುದ್ದಿನ ಮುದ್ದೆಯಂದ ದಂಗವನೆತ್ತಿಕೊಂಡು ನಳಿತೋಳ್ಗಳಿಂದಪ್ಪಿ . . ಪಂಚೇಂದ್ರಿಯ ಪ್ರೀತಿಯಂ ಪಡೆವರಿನ್ನಾವ ಕೃತರೊ (ಜೈಮಿಭಾ. ೧೮-೨೦); ಮಲ್ಲಸಾಧನೆಯಂತೆ ನಳಿತೋಳ್ಗಳಿಂದಪ್ಪಿಯುಲ್ಲಾಸಪವನು ತೋಟಿ ವಿಟಗೆ (ಕಂನವಿ. ೬-೧೨೨). **ನಳಿತೋಳು:** ವನಿತೆ ಹೊರಳಿದಳು ಶೋಕದ ತಾಳ್ದು . . . ನಳಿತೋಳನು ಕೆದಬಿದಳವನಿಯಲಿ ಹಲುಬಿದಳಭಿಮನ್ಯುವಿನಲಲಿನಲಿ (ಕುಮಾ. ದ್ರೋ. ೬೦೩. ಪಠಿ ೨೮೪); ಶೂರ್ಪಣಖಿ . . . ಹೊಳಹೊಳವ ನಿಡುಗಂಗಳಿನ ಕೋಮಲದ ಕದಪಿನ . . . ನಳಿತೋಳುಗಳ ಮಾನವವಿಲಸಿತಾಂಗದ ರೂಪ ಕೈಕೊಂಡೆಸೆದಳದಿರಿನಲಿ (ತೊರರಾ. ೩-೪-೫); ಮಿಸುಪ ನದೀನಾರಿಯ ನಳಿತೋಳೆನಲೆಸೆವಿರ್ತಡಿಗಾಲುವೆ (ಜಯಚಾ. ೧-೩೮); ಕಂದರ್ಪ ನಗುತ ಲಾಲಿಸುತ ಸಂತಸದೊಳಂ ಚಂದದೆ ಪಿಡಿದು ರಾಜಿಸುವ ಇಂದೀವರವಾಂತ ಲತೆಯೆನೆ ತತ್ಕರದಿಂದೊಪ್ಪಿದುವು ನಳಿತೋಳು (ಕಂನವಿ. ೯-೨೯); ನಳಿತೋಳ ತಲೆಗಿಂಬ ಮಾಡಿ ಪದಗಳ ನೀಡಿ ಸುಳಿಗುರುಳ ಚದರಿ ಕೆದರಿದ ಲಲಾಮಂಗಳಿಂ ಲಲನೆಯರಿರಲು (ವಂಕಾರಾ. ೫-೪-೦೩). [ ನಳಿ$_2$ + ತೋಳ್ ]

**ನಳಿನ** 'ನಲಿನ' ನೋ.

**ನಳಿನಕೋರಕ** (ನಾ). ತಾವರೆಯ ಮೊಗ್ಗು: ತಳಿರ ಕಕ್ಕಡದರುತ್ಪಳದ ತೋಮರದವರ್ ನಳಿನಕೋರಕದಿಟ್ಟಿಯವರು . . . ಬಳಸಿ ಕೈಮಾಡಿದರ್ ನೃಪನ (ಭೃರವೇ. ೨-೪೮). [ ಸಂ. ನಲಿನಕೋರಕ ]

**ನಳಿನಗರ್ಭ** 'ನಲಿನಗರ್ಭ' ನೋ.

**ನಳಿನಗರ್ಭಾಂಡ** 'ನಲಿನಗರ್ಭಾಂಡ' ನೋ.

**ನಳಿನಜ** 'ನಲಿನಜ' ನೋ.

**ನಳಿನಜಾಂಡ** (ನಾ). ಬ್ರಹ್ಮಾಂಡ; ಪ್ರಪಂಚ: ನಳಿನಜಾಂಡ ತಲೆಯ ತೂಗಿ ಮೋಹಿಸುತಿರಲು ಕೊಳಲನೂದಿ ಭ್ರಾಜಿಸುವ ಚೆಲುವ ಕೃಷ್ಣರಾಯನ ನೋಡಿ (ಪುರಂದ. ೫.೪೬ ಪಲ್ಲವಿ). [ ಸಂ. ನಲಿನಜಾಂಡ ]

**ನಳಿನದಳ** 'ನಲಿನದಲ' ನೋ.

**ನಳಿನದಳನಯನೆ** (ನಾ). ಕಮಲದ ಎಸಳಿನಂತೆ ಕಣ್ಣುಳ್ಳವಳು; ಕಮಲಾಕ್ಷಿ: ನಳಿನದಳನಯನೆ ತನಗಾಗುಬಿವರೆ ಕರತಳದೆ ವದನಮಂ ಮುಚ್ಚುತವಗ್ಗಲಿಸಿ ಪೊಜವಡುವ ಗೋತ್ರಸ್ಖಲನೆಯ ಭಯದಿಂದೆ ಮಬಿಚ್ಚಿದಂತೆಪೊಲಿರ್ದಳ್ (ಕಾದಂಉ. ೧೨೮). [ ಸಂ. ನಲಿನದಲನಯನಾ ]

**ನಳಿನದಳಪುಟ** (ನಾ). ಕಮಲದ ಎಲೆಯಿಂದ ಮಾಡಿದ ದೊನ್ನೆ: ನಳಿನದಳಪುಟದೆ ನೀರು ನಳಿನಿಗಳಿವು ರೂಪುಗೊಂಡು ಸುರಿದಪುವೆನೆ ಕಂಗೊಳಿಪ ಮರಕತದ ಕಳಶಂಗಳ ಜಲಮಂ ಸುರಿದರಮಳಕಮಳಾನನೆ ಯರ್ (ಕಾದಂಪೂ. ೭೩). [ ನಳಿನದಳ (= ನಲಿನದಲ) + ಪುಟ$_3$ ]

**ನಳಿನದಳಲೋಚನ** 'ನಲಿನದಲಲೋಚನ' ನೋ.

**ನಳಿನದಳಾಕ್ಷ** (ನಾ). ೧. ಕಮಲದ ಎಸಳಿನಂತೆ ಕಣ್ಣುಳ್ಳವನು. ೨. ಕೃಷ್ಣ: ನಳಿನದಳಾಕ್ಷಂ ರುಕ್ಮಿಣಿ ಸಲೆ ಭಾಗ್ಯಸಂಬಾನುಭಾವದಿಂದಂ ದಿನವಂ ಕಳೆಯುತ್ತಿರೆ (ದಶಾವ. ೯-೧೬೮). [ ಸಂ. ನಲಿನದಲಾಕ್ಷ (ನಲಿನದಲ + ಅಕ್ಷಿ + –) ]

**ನಳಿನದಳಾಯತಾಕ್ಷ** (ನಾ). ಕಮಲದ ಎಸಳಿನಂತೆ ವಿಶಾಲವಾದ ಕಣ್ಣುಳ್ಳವನು: ನಳಿನದಳಾಯತಾಕ್ಷನುರುವಕ್ಷನಿಭಾಹಿತವಕ್ಷ್ಯಸಕ್ಷರಾಡ್ಗಳ ನಳಿಪಾಳಿಕಾಪ್ರಭನಹಿಪ್ರಭುಸನ್ನಿಭಬಾಹುಯುಗ್ಮಂ . . . ನಿಟ್ಟಿದಿರಾಗಿ ನಿಲ್ಪುದುಂ (ಮಹಾನೇ. ೭-೩೮). [ ಸಂ. ನಲಿನದಲಾಯತಾಕ್ಷ (ನಲಿನದಲ + ಆಯತ + ಅಕ್ಷಿ + –) ]

**ನಳಿನದಳಾಯತಾಕ್ಷಿ** (ನಾ). ಕಮಲದ ಎಸಳಿನಂತೆ ವಿಶಾಲವಾದ ಕಣ್ಣುಳ್ಳವಳು: ನಳಿನದಳಾಯತಾಕ್ಷಿ . . . ಪೊಳೆವವತಂಸಪುಷ್ಪ ರಜದಿಂ ಪೊರೆದಿರ್ದ ಕಪೋಲಪಟ್ಟಮಂ ತೊಳೆದಳನಾರತಂ ಸುರಿವ ಚಂದನಶೀತಲ ಹರ್ಷ ವಾರಿಯಿಂ (ಕಾದಂಉ. ೨೩೭). [ನಳಿನದಳ (=ನಲಿನದಲ) + ಆಯತಾಕ್ಷಿ]

**ನಳಿನದೃಶ** (ನಾ). ೧ ಕಮಲದಂತೆ ಕಣ್ಣುಳ್ಳವನು. ೨ ಕೃಷ್ಣ: ಜಲಧಿಯಲಿ ನಿಜಯೋಗ ನಿದ್ರಾಲಲನೆಗಭಿಮುಖನಾಗಿ ಪವಡಿಸಿ ನಳಿನದೃಶನಿರೆ ನಾಭಿನಳಿನ ದಲುದಯಿಸಿದನಜನು (ನಿಭಾಗ. ೧-೨-೨). [ ಸಂ. ನಲಿನದೃಶ್ ]

**ನಳಿನದೃಶೆ** (ನಾ). ಕಮಲದಂತೆ ಕಣ್ಣುಳ್ಳವಳು: ಎಳೆಯ ಮಿಂಚಿನ ಕುಡಿಯ ಸೂಸುವ ನಳಿನದೃಶೆಯರು [ಪಾಠಾಂ. ನಯನದ] ಶಶಿಯ ಬಿಂಬವ ಹಳಿವ ಹುರುಡಿಸುವಬುಜಮುಖಿಯರು . . . ಕುರುರಾಯ ನೆಡವಂಕದಲಿ ಮೋಹಿದರು (ಕುಮಾಉ. ೮-೪೪). [ ನಳಿನದೃಶ + – ಎ$_2$ ]

**ನಳಿನನಯನ** (ನಾ). ೧. ಕಮಲದಂತೆ ಇರುವ ಕಣ್ಣು: ಎಳೆಯ ಮಿಂಚಿನ ಕುಡಿಯ ಸೂಸುವ ನಳಿನನಯನದ [ಪಾಠಾಂ. ದೃಶೆಯರು] ಶಶಿಯ ಬಿಂಬವ ಹಳಿವ ಹುರುಡಿಸುವಬುಜಮುಖಿಯರು (ಕುಮಾಉ. ೮-೪೪). ೨. ಕಮಲದಂತೆ ಕಣ್ಣುಳ್ಳವನು: ಶ್ಯಾಮಸುಂದರನೂ ಮಹಾಬಾಹುವೂ ನಳಿನ ನಯನನೂ ಆದ ಈತನು ನನಗೆ ತಕ್ಕ ಗಂಡ (ವಚಭಾ. ೩೭). ೩. ವಿಷ್ಣು. [ ನಳಿನ (= ನಲಿನ) + ನಯನ ]

**ನಳಿನನಾಭ** 'ನಲಿನನಾಭ' ನೋ.

**ನಳಿನನಾಳ** (ನಾ). ತಾವರೆಯ ದಂಟು; ಕಮಲದ ಕಾಂಡ,–ದೇಟು: ನಳಿನನಾಳವು ಗಜದ ಕೈಯೊಡನಳವಿಗೊಡಲಂತರವೆ (ಕುಮಾ. ದ್ರೋ. ೪-೪): ಬಳಿಕ ನೋಡುವೆ ದನುಜಗಿನುಜರ ಬಲುಹನೆನುತಾ ವೀರ ಲಂಕೆಯ ನಳಿನನಾಳವ ಭದ್ರಗಜ ಕೀಳ್ವಂತೆ ಕೀಳ್ವಗೆದ (ಆರಾಶಿರಾ. ೧೧-೪೮): ಜಲವೆಲ್ಲ ಹರಿಮಯ ಶಿಲೆಯೆಲ್ಲ ಶಿವಮಯ ಮಳಲುಮಿಟ್ಟೆಗಳೆಲ್ಲ ಮಣಿಯ ಮಯವು ಬೆಳೆದಿಪ್ಪ ದರ್ಭೆಗಳು ಸಾಕ್ಷಾತ್ತು ಬ್ರಹ್ಮಮಯ ನಳಿನನಾಳವು ಸರ್ವ ವಿಷ್ಣು ಮಯವು (ಪುರಂದ. ೪-೪೧-೨). [ ನಳಿನ (= ನಲಿನ) + ನಾಳ$_1$ (= ನಾಲ$_1$) ]

**ನಳಿನನಿಭ** (ನಾ). ತಾವರೆಯಂತಿರುವುದು; ಕಮಲಕ್ಕೆ ಸದೃಶವಾದುದು: ಕಾಂಚನಭಾಜನರತಮಭಿಕಾಂಚನಭಾಜನಮೆನಿಪ್ಪ ಸುರುಚಿರಚರುವಿಂ ಸಂಚಿತ ಗುಣನದಿಗಳನಿಸಂಚಿತಗುಣ ನಳಿನನಿಭಮನೊಸೆದರ್ಚಿಸಿದಂ (ಪುಷ್ಪಪು.೧೪-೭). [ಸಂ. ನಲಿನನಿಭ]

**ನಳಿನಪತ್ರ** (ನಾ). ತಾವರೆಯ ಎಲೆ: ದಿವಿಜಕುಲವಿಳಯಕಾಲಾನಲಂ ಬಪ್ಪಂತೆ ಹಾಲಾಹಳ ಸುಡುತ ಬರಲು . . . ಶಂಕರನು ಕರತಳದೊಳದ

ತಳೆದು ನೋಡಲು ನಳಿನಪತ್ರದೊಳು ಜಲಬಿಂದುವಂತೆ ತಲ್ಲಣಗೊಳಲು (ಲಶಿಚಂ. ೧೩-೧೩). [ ನಳಿನ(= ನಲಿನ) + ಪತ್ರ ]

**ನಳಿನಭವ** 'ನಲಿನಭವ' ನೋ.

**ನಳಿನಭವಾಂಗ** (ನಾ). ಬ್ರಹ್ಮನ ದೇಹ,-ಶರೀರ: ಮತ್ತಮಾ ಘನ ಸಮಯಂ ಗದಾಧರಮೂರ್ತಿಯಂತೆ ಘನಶ್ರೀಮನೋಜ್ಞಮುಂ ನಳಿನ ಭವಾಂಗದಂತೆ ಕಾದಂಬವಿತತಾವೋದವಾಹಮುಂ . . . ಎನಿಸಿರ್ದುದು (ರಾಜಶೇ. ೮-೧೧೮ ವ). [ ನಳಿನಭವ ( = ನಲಿನಭವ) + ಅಂಗ$_2$ ]

**ನಳಿನಭವಾಂಡ** 'ನಲಿನಭವಾಂಡ' ನೋ.

**ನಳಿನಮುಖಿ** 'ನಲಿನಮುಖಿ' ನೋ.

**ನಳಿನರಿಪು** (ನಾ). ಕಮಲದ ವೈರಿ; ಚಂದ್ರ: ಬೆಳೆವುತಿರ್ದರು ಹರಿಣಪಕ್ಷದ ನಳಿನರಿಪುವಿನವೊಲ್ ಕುಮಾರರು (ಕುವ್ಯಾಳ. ೬-೧೧); ಎಲೆ ಭಗೀರಥವಂಶ ವಾರುಧಿ ನಳಿನರಿಪು[ಪಾಠಾಂ. ಸಖ]ಸುತ ಕೇಳು ಕರುಣಾಜಲಧಿಯಲ್ಲಾ ಕಾಯ್ದನನ್ವಯನಾಮಧಾರಕನ (ತೊರರಾ. ೭-೫-೧).

[ ನಳಿನ ( = ನಲಿನ) + ರಿಪು ]

**ನಳಿನಲೋಚನ** (ನಾ). ೧. ಕಮಲದಂಥ ಕಣ್ಣುಳ್ಳವನು. ೨. ವಿಷ್ಣು: ನಳಿನಲೋಚನನಾರ್ದು ಶಾರ್ಙ್ಗವ ಬಲಿದು ಜೇವೊಡೆಗೆಯ್ಯೆ ಲೋಕ ವನಳಿಸುವ ದನಿ ಮಾಯವಾದುದು (ಸಾಳ್ವಭಾ. ೩೦-೭೫).

[ ನಳಿನ (= ನಲಿನ) + ಲೋಚನ ]

**ನಳಿನಲೋಚನೆ** 'ನಲಿನಲೋಚನೆ' ನೋ.

**ನಳಿನವದನೆ** (ನಾ). ಕಮಲದಂತೆ ಮುಖವುಳ್ಳವಳು; ಸುಂದರಿ: ಕಳಸಕನ್ನಡಿ ಸಹಿತ ನಡೆಯಲಿ ನಳಿನವದನೆಯರೆಂದು ನೇಮಿಸಿದನುಮಹೀಪಾಲ (ಕುವ್ಯಾಳು. ೭-೧೭). [ ಸಂ. ನಲಿನವದನಾ ]

**ನಳಿನವನ** (ನಾ). ಕಮಲಗಳ ಸಮೂಹ; ತಾವರೆಗಳ ಗುಂಪು: ನಳಿನ ವನಶ್ರೀನಿವಹಂ ಕಳಹಂಸಂಬೆರಸು ಬಂದುದೆನೆ ಲತಿಕಾಕೋಮಳೆಯರ ನಡುವೊರ್ವಂ ನಿರ್ಮಳರೂಪಂ ದ್ವಿಜಕುಲೋತ್ತಮಮಂ ಬರುತಿರ್ದಂ (ಅನಂಪು. ೨-೩೯). [ ನಳಿನ (= ನಲಿನ) + ವನ ]

**ನಳಿನವೈರಿ** 'ನಲಿನವೈರಿ' ನೋ.

**ನಳಿನಶರ** (ನಾ). ಮನ್ಮಥ; ಅನಂಗ: ದೇವರಾಜೇಂದ್ರಭೂಪತಿಚಂದ್ರನು ನಳಿನಶರಸಧಟ ಹರಪಾದಸರಸಿಜಭೃಂಗನೆಳೆಕೀರವಾಣ . . . ಶಚಿದೇವಿ ಯೆಂದೆಂಬ ಸತಿಸಹಿತ ರಾಜ್ಯವನಾಳುತ (ಪ್ರಾಭರಾ. ೯-೩೭).

[ ನಳಿನ (= ನಲಿನ)+ ಶರ ]

**ನಳಿನಸಂಭವ** 'ನಲಿನಸಂಭವ' ನೋ.

**ನಳಿನಸಖ** 'ನಲಿನಸಖ' ನೋ.

**ನಳಿನಸಖನೇತ್ರ** (ನಾ). ಸೂರ್ಯನನ್ನು ಕಣ್ಣಾಗಿ ಉಳ್ಳವನು; ಶಿವ: ನಳಿನಸಖನೇತ್ರನಿಹನುಮೆಯೊಳುಂ ಕ್ರೀಡಿಸುತ (ಲಶಿಚಂ. ೧೭-೧೩).

[ ನಳಿನಸಖ (= ನಲಿನಸಖ) + ನೇತ್ರ ]

**ನಳಿನಸಖಸುತ** (ನಾ). ಕಮಲದ ಗೆಳೆಯನ ಮಗ; ಸೂರ್ಯನ ಮಗ; ಯಮ: ನಳಿನಸಖಸುತ ಕೋಪದಿಂದ ಸೇನಾಧಿಪತಿಗಳನೆಲ್ಲ ಬೇಗದಿಂ ಬಲಗೂಡಿ ಕಳುಹಲ್ಕೆ ತಳುವದವತ್ಯೆತಂದು ಕಾದಿ ಮುರಿದೋಡಲಾ ಯಮ ರಾಜ ತಾನೆ ಬಂದು ಮಲಹರನ ದೂತರೊಳು ಪಲಕಾಲ ಕಾದುತಿರೆ (ಪ್ರಾಭರಾ. ೧೭-೫). [ ನಳಿನಸಖ(= ನಲಿನಸಖ) + ಸುತ ]

**ನಳಿನಸಮಾಜ** (ನಾ). = ನಳಿನವನ: ನಳಿನಸಮಾಜಮುಳ್ಳಲರೆ ತಣ್ಣೆಲರೊಯ್ಯನೆ ತೀಡೆ ಚಕ್ರಸಂಕುಳಮುರುಲೀಲೆಯಿಂ ನೆರೆಯೆ ಮೆಲ್ಲನೆ ವಾಜಿ ವಿಹಂಗರಾಜಿ ಕೆಂಬೆಳಗಳಿಲೋರ್ವಿಯಂ ಪರೆದು ತೆಕ್ಕನೆ ತೀವೆ ನಿಳಿಂಪರಾಟ್ ದಿಶಾಚಳಶಿಖರಾಗ್ರದೊಳ್ಪೆಳಗುತೊಪ್ಪಿದನಂದು ಕರಂ ದಿವಾಕರಂ (ಉದ್ಭಟ. ೧೧-೬). [ ನಳಿನ (= ನಲಿನ) + ಸಮಾಜ ]

**ನಳಿನಳಿನಬಾಣ** (ನಾ). ಕೋಮಲವಾದ ಕಮಲಪುಷ್ಪದ ಬಾಣವನ್ನುಳ್ಳವನು; ಪುಷ್ಪಬಾಣ; ಕಾಮ; ಮನ್ಮಥ: ನಳಿನಳಿನಬಾಣಂಗೆ ಕೊರ್ಸರಲಾಗಿ ತಾಗಿಯಾ ಲಲನೆಯರ ವಿರಹದಿಂ ನೋಯಿಸಲು ಮುನಿದವರು ಬಲುಗೋಪ್ಪದಿಂದೆ ಶಾಪಿಸಲು (ನವಪೊ. ೨೩-೧೫).

[ ನಳಿ$_2$ + ನಳಿನ (= ನಲಿನ) + ಬಾಣ ]

**ನಳಿನಾಂಬಕೆ** (ನಾ). ಕಮಲದಂತೆ ಕಣ್ಣುಳ್ಳವಳು; ಸುಂದರಿ: ಉಳಿದು ಸುಮಶಯನಮಂ ಮೇಣ್ ನಳಿನೀದಳದಿಂದ ರಚಿಸಿದದೆಗುಪ್ಪಸಮಂ ಬಳಲಿಕೆಯಂ ತಳೆದಂಗದೆ ನಳಿನಾಂಬಕೆ ನೀನದೆಂತು ಪೋದಪೆ ಬಿಸಿಲೊಳ್ (ಬಾಕುಂತ. ೪೧-೭೩). [ ಸಂ. ನಲಿನಾಂಬಕಾ ]

**ನಳಿನಾಕರ** (ನಾ). ಕಮಲಗಳ ಆವಾಸಸ್ಥಾನ; ಕೊಳ; ಸರೋವರ: ನಳಿನಾಕರಮುಂ ರಮೆಯುಂ ಜಳನಿಧಿಯುಂ ನಿರ್ಮಳೋರ್ಮಿಯುಂ ಚಂದ್ರಮನುಂ ಕಳೆಯುಂಮೆಸೆವಂತೆ ಸಮಸಂದಿಳೇಶನುಂ ಕಾಂತೆಯುಂ ಕರಂ ಸೊಗಯಿಸುವರ್ (ಚಂದ್ರಪು. ೧೧-೧೧೪): ನಳಿನಾಕರಕ್ಕೆ ಬಂದು ಕೊಳದೊಳಲರ್ದಬ್ಜದಲರಂ ನಳಿನೇಕ್ಷಣೆ ಮುಟಿವೆನೆಂದು ಪುಗೆ . . . ಕಣ್ಗದೇಂ ರಂಜಿಸಿತೊ (ರಾಜಶೇ. ೧೦-೪೫ ವ). [ ನಳಿನ (= ನಲಿನ) + ಆಕರ$_3$ ]

**ನಳಿನಾಕ್ಷ** 'ನಲಿನಾಕ್ಷ' ನೋ.

**ನಳಿನಾಕ್ಷಿ** (ನಾ). ಕಮಲದಂತೆ ಕಣ್ಣುಳ್ಳವಳು; ಕಮಲಾಕ್ಷಿ: ಹಾ ತರುಣಿ ನಳಿನಾಕ್ಷಿ ನಯಸುಪ್ರೀತಿಪೂರ್ವಕದಿಂದ ಕನಸಲಿ ಮಾತುದೋಱದೆ ಬಂದು ನನ್ನಲಿ ಕರುಣದಿಂ ನೀನು (ನಳಚ. ೭-೯); ಕೆಳಗಣ ಮೇಗಣ ಪಲ್ಲಂ ಘಳಿಲನೆ ತಾಗಲ್ಕೆ ಕುಟ್ಟನಾಖ್ಯಂ ಮತ್ತಂ ನಳಿನಾಕ್ಷಿ ಪಲವು ಸೂಳಿಂದೆಳೆಯಳೆ ಸೋಂಕು ತ್ರಮುಗಲೆ ಖಾದನಮಕ್ಕುಂ (ಲಾಸ್ಯರಂ. ೩-೮೯). [ ಸಂ. ನಲಿನಾಕ್ಷೀ ]

**ನಳಿನಾನನೆ** (ನಾ). ಕಮಲದಂತೆ ಮುಖವುಳ್ಳವಳು: ಗಳಿಯಿಸುತಿರೆ ನಯನ ವಾರಿ ನಿನ್ನಾನನದಿಂ ನಳಿನಾನನೆ ನೀನಿರೆ ಕುರುಕುಳಾಂತಕಂ ಗಳತಕೋಪನೇ [ಕಲಿ]ಭೀಮಂ (ಗದಾಯು. ೧-೬೩). [ ಸಂ. ನಲಿನಾನನಾ ]

**ನಳಿನಾಭಿನಳಿನ** (ನಾ). ಕೋಮಲವಾದ ನಾಭಿಯಲ್ಲಿರುವ ಕಮಲ; ವಿಷ್ಣುವಿನ ಹೊಕ್ಕಳಿನಲ್ಲಿರುವ ತಾವರೆ: ಹರಿಯ ನಳಿನಾಭಿನಳಿನಂ ವಿರಂಚಿಯುಂ ಪಡೆಮುದರ್ಕೆ ಪುರುಡಿಸಿ ತಾನಾ ಪರಿಯನೆ ಪಡೆದವೊಲೆಸದುದು ಸರೋವರಾವರ್ತನಳಿನಮೊಂದಳಿಗರ್ಭಂ (ಅರ್ಧನೇ. ೫-೧೦೩).

[ ನಳಿ$_2$ + ನಾಭಿ + ನಳಿನ (= ನಲಿನ) ]

**ನಳಿನಾರಿ** (ನಾ). = ನಳಿನರಿಪು. 'ನಳಿನಾರಿಧರ' ಪರಾ.

[ ನಳಿನ (= ನಲಿನ) + ಅರಿ$_6$ ]

**ನಳಿನಾರಿಧರ** (ನಾ). ಚಂದ್ರನನ್ನು ಧರಿಸಿದವನು; ಶಿವ: ನಳಿನಾರಿಧರ ನಿಪ್ಪ ಕೈಲಾಸಗಿರಿಯಲ್ಲಿ . . . ಚಳಿವೆಟ್ಟಮಗಳರಸನಂ ಕೂರ್ತು ತಪದಿ ಮುನಿಗಳ ಶ್ರೇಷ್ಠ ಮಾರ್ಕಂಡ್ಯನಿರೆ (ಪ್ರಾಭರಾ. ೦೦-೧೮).

[ ಸಂ. ನಲಿನಾರಿಧರ ]

**ನಳಿನಿ** 'ನಲಿನಿ' ನೋ.

**ನಳಿನೀಗರ್ಭ** (ನಾ). ಕಮಲದಲ್ಲಿ ಹುಟ್ಟಿದವನು; ಬ್ರಹ್ಮ. 'ನಳಿನೀಗರ್ಭಾಂಡ' ಪರಾ. [ ಸಂ. ನಲಿನೀಗರ್ಭ ]

**ನಳಿನೀಗರ್ಭಾಂಡ** (ನಾ). ಬ್ರಹ್ಮಾಂಡ; ವಿಶ್ವ: ನಳಿನೀಗರ್ಭಾಂಡವಮಾಲಾ ಫಲಿತಮೆನಿಪ ಪೃಥ್ವೀಮಹಾವಲ್ಲಿಯಂ ತಾಂ ಬಳಸಿರ್ದಾವಾಲದಂತಿರ್ಪುದು ಜಲಚರಸಂಭೂತಸಂಪದ್ವಿಧಾನಂ . . . ಪ್ರಬಳಘುಳುಘುಳುಧ್ವಾನಮಂಭೋನಿಧಾನಂ (ಜಗವಿ. ೧-೩೩). [ ಸಂ. ನಲಿನೀಗರ್ಭಾಂಡ ]

**ನಳಿನೀತೀರ** (ನಾ). ಕಮಲಗಳಿಂದ ಕೂಡಿದ ಸರೋವರದ ತೀರ,-ದಡ: ನಳಿನೀತೀರಲತಾಗೃಹಂಗಳ ನೆಬಲ್ ನೇರ್ಪಟ್ಟಿರಲ್ . . . ಎಳನೀರಿಂಬ ಪಥಾರ್ತಿನಿರ್ಪರಳಿಕೇರಧ್ವಾನದುದ್ಯಾನದೊಳ್ (ಜಗವಿ. ೯-೮೮).

[ ಸಂ. ನಲಿನೀತೀರ ]

**ನಳಿನೀದಳ** (ನಾ). ೧. ಕಮಲದಳ; ತಾವರೆಯ ಎಸಳು: ಉಳಿದು ಸುಮಶಯನಮುಂ ಮೇಣ್ ನಳಿನೀದಳದಿಂದೆ ರಚಿಸಿದೆದೆಗಃಪ್ಪಸವುಂ ಬಳಲಿಕೆಯುಃ ತಳೆದಂಗದೆ ನಳಿನಾಂಬಕಿ ನೀನದೆಂತು ಪೋದಪೆ ಬಿಸಿಲೊಳ್ (ಶಾಕುಂತ. ೪೧-೭೩). ೨. ಕಮಲಪತ್ರ; ತಾವರೆಯ ಎಲೆ. 'ನಳಿನೀದಳತಾಳವೃಂತ' ಪರಾ. [ಸಂ. ನಲಿನೀದಲ]

**ನಳಿನೀದಳತಾಳವೃಂತ** (ನಾ). ಕಮಲಪತ್ರಗಳಿಂದ ತಯಾರಿಸಿದ ಬೀಸಣಿಗೆ: ಬಳಲಿಕೆ ಪಿಂಗುವಂತೆ ನಿನಗಾಂ ನಳಿನೀದಳತಾಳವೃಂತದಿಂ ಸುಳಿಯಿಪೆನೇಂ ಕುಳಿರ್ವಾಸವ ತಂಬೆಲರಂ (ಶಾಕುಂತ. ೪೧-೭೩).
[ನಳಿನೀದಳ + ತಾಳವೃಂತ (= ತಾಲವೃಂತ)]

**ನಳಿನೀಪತ್ರ** (ನಾ). = ನಳಿನೀದಳ ೨: ನಳಿನೀಪತ್ರಾಂಶುಕಾಚ್ಛಾದಿತಕುಚಯುಗಳಂ ಚಂದನಾಪಾಂಡುಗಂಡಸ್ಥಳಯುಗ್ಮಂ ... ಭೋಂಕನೆ ಪೊಱಮಡುತಿರ್ದತ್ತು ಕಾಂತಾಕದಂಬಂ (ಕಾದಂಉ. ೨೦೦): ನಳಿನೀಪತ್ರಗತಾಂಬುವೋಲ್ ನಡುಗಿತೀ ವಿಶ್ವಾವನೀಮಂಡಲಂ . . . ಭೂಭಾಗಮುಂ ಬಳಸಿತ್ತಾ ವಿಜಯಪ್ರಯಾಣಜನಿತಂ ಪ್ರಸ್ಥಾನಭೇರೀರವಂ (ಸೂಕ್ತಿಸು. ೧೮-೧೩).
[ಸಂ. ನಲಿನೀಪತ್ರ]

**ನಳಿನೀಮಿತ್ರ** 'ನಲಿನೀಮಿತ್ರ' ನೋ.

**ನಳಿನೀರೇಣು** (ನಾ). ಕಮಲದ ಹೂವಿನ ಪರಾಗ,-ಧೂಳಿ: ನಳಿನೀರೇಣುಗಳಂ ಒಟ್ಟಲ್ದಲರ್ಗಳಂ ಕೀರಾಳಿ ನಾದಂಗಳಂ ತಳೆದಿತ್ತಂ ಪಟವಾಸಮಂ ಕೆದಱುತುಂ . . . ಇದಿರ್ವಂದತ್ತೊಂದು ಮಂದಾನಿಳಂ (ಜಗವಿ. ೧೪-೫೩).
[ಸಂ. ನಲಿನೀರೇಣು]

**ನಳಿನೇಕ್ಷಣೆ** (ನಾ). = ನಳಿನನ್ಯನೆ: ರಜನಿಗಳ್ಯಂದವಬಿಂಬವ್ರಜದಿಂ ಜ್ಯೋತ್ಸ್ನಾಪ್ರವಾಹವುಂ ಪಸರಿಪವೋಲ್ ರಜತಕಳಶಂಗಳಿಂ ಮಳಯಜಜಳಮಂ ಸುರಿದರಸಿತನಳಿನೇಕ್ಷಣೆಯರ್ (ಕಾದಂಪೂ. ೭೪).
[ಸಂ. ನಲಿನೇಕ್ಷಣಾ]

**ನಳಿನೋದರ** (ನಾ). ಹೊಟ್ಟೆಯಲ್ಲಿ ತಾವರೆಯನ್ನು ಉಳ್ಳವನು; ವಿಷ್ಣು: ಜಲಧಿಶಯನ ರವಿಚಂದ್ರವಿಲೋಚನ ಜಲರುಹಭವನುತ ಚರಣಯುಗ ಬಲಿಬಂಧನ ಗೋವರ್ಧನೋದ್ಧಾರ ನಳಿನೋದರ ತೇ ನಮೋ ನಮೋ (ಪುರಂದ. ೩-೪೧-೨).
[ನಳಿನ (= ನಲಿನ) + ಉದರ]

**ನಳಿಮೊಗ** (ನಾ). ಕಾಂತಿಯುಕ್ತವಾದ ಮುಖ: ಎಳವಿದಿರ ಬಣ್ಣಮೊಳ್ನಡು ಕಳಶಮನವ್ವಳಿಪ ಮೊಲೆ ಪೊದಟಿಸುವ ಬಾಯ್ ಬಳಸುವ ಕಣ್ ಮಿಳಿರ್ವ ಕುರುಳ್ ನಳಿಮೊಗಮೆನೆ ಸೊಬಗಿವಳ್ಗೆ ನಾಟ್ಯರ್ತನಮೋ (ಆದಿಪು. ೪-೪೪).
[ನಳಿ₂ + ಮೊಗ]

**ನಳು** (ನಾ). ತಗ್ಗಾದ ಪ್ರದೇಶ; ಹಳ್ಳ: ಇಡುಕುಱಿನೊಳು ಕುಸಿದು ಹೊದಱಿನೊಳು ನುಸುಳಿ ನಳುವಿ[ಪಾಠಾಂ. ಕಪ್ಪಿ]ನೊಳಡಗಿ ನಾಳಲೊಳು ಪೊಕ್ಕು . . . ಅದಟುಗೆಟ್ಟು ಬೆಂಡಾದಸುಬಿಗಳನುಗ್ರದಳಲ ಬೇಸಱ ಬೇಗೆಗಿಚ್ಚು ವಿಶ್ವಾಮಿತ್ರಮುನಿಮುನಿಸೆಯ್ದದೆ ಮಾಣದು (ಹಕರಿ. ೯-೫೩).
[ < ನಳಿ₁ ]

**ನಳುರವಾಡಿ** (ನಾ). ಒಂದು ಊರಿನ ಹೆಸರು: ನಳುರವಾಡಿಯ ಬಯಲೊಳ್ ಕೀರ್ತಿವಾತ್ತಾರ್ಣಂಡದೇವರಿಗೆ ಪಡುವಣಾಡೆಯಿಂ ತೆಂಕಣ ತೆಂಬಡಗಣ ತೆವರಿಂ ಮೂಡಲ್ಯೆವತ್ತೆರಡು ಗೇಣ ಗಳೆಯುಲೊಂದು ಮತ್ತರುಮನ್ . . . ಸರ್ವ್ವನಮಸ್ಯಂ ಮಾಡಿ ಕೊಟ್ಟನ್ (ಎಕ. VIII, ಸಾಗರ. ೧೦೯-೭೩; 1042). [? + ವಾಡಿ₁ (< ವಾಡಿ₂)]

**ನಳುಹು** (ನಾ). ಬಾಗಿರುವಿಕೆ; ಡೊಂಕು; ವಕ್ರತೆ: ನಳಿಗೆಯೊಳ್ ನಾಯಬಾಲವನು ಕಟ್ಟಲ್ಕನ್ನ ನಳುಹ ಬಿಡದಂತೆ (ಸಮ್ಯಕ್ತ್ವ. ೦೦-೧೨).
[ < ನಳಿ₁ + -ಹು₂ ]

**ನಳಿಯಿಸು** (ಕ್ರಿ). ನಡೆಸು; ಮುಂದುವರಿಸು: ಈ ಶ್ರೀಧರ್ಮಂ ನಳಿಯಿಸಿದಾತಂ ತುಳಾಪುರುಷವಿಟ್ಟು ಅಸ್ವಮೇಧಂಗೆಯ್ದು ಫಲಮನೈದುವಂ (ಎಕ. XI, ಚಿತ್ರದು. ೭೪-೩೨; 968).
[P ಇದು 'ನಡೆಯಿಸು' ಎಂಬುದರ ಅಪಲಿಖಿತವಿರಬಹುದು]

**ನಳ್ಗಿಸು** 'ನೆಗ್ಗಿಸು' ನೋ.

**ನಳ್ಳು** 'ನಜುಂಕು' ನೋ.

**ನಳ್ಳಿ₁** (ನಾ). ಹತ್ತುಕಾಲಿನ, ಗಡಸುಚರ್ಮದ ಒಂದು ಬಗೆಯ ಸಣ್ಣ ಜಲಚರ ಪ್ರಾಣಿ; ಎಸಡು; ಏಡಿ: "ಊರ್ಧ್ವದ್ಯರ್-ನಳ್ಳಿ" (ಒಪಧಿ. ೧೭): ಲಿಂಗನಿಷ್ಠಾಂಗಿ ವಚನವ ಹಾಡಿದರೆ ಒಪ್ಪುವರಲ್ಲದೆ ಲಿಂಗನಿಷ್ಠಾಹೀನರು ಓದಿ ಹಾಡಿದರೆ ನಳ್ಳಿ ಗುಳ್ಳೆಯ ತಿಂದ ನರಿ ಹಳ್ಳದ ತಡಿಯಲ್ಲಿ ಬಳ್ಳಿಟ್ಟು ಬಗುಳಿದಂತೆ ಎನೆಂದೂ ಮಾಟಮಾಡರಯ್ಯಾ (ಸಿದ್ಧೇವ. ೭೫-೨೦೯): ಭೂಸುತ ಭುಜಬಲರಿದ್ದು ಗೆಲಲು ಬಾರದೀ ನಳ್ಳಿ ಗುಳ್ಳೆ ವಿಮಾನುಗಳ ಸೇನೆ ಏಡಿದು ಗೆಲ್ವೆನೆಂದು ಹೊಕ್ಕೆಯಲಾ ಈ ನೀರ ನಡುಮಡುವಿನೊಳು (ನೇಮಿಸಂ. ೩೦-೮೩); ತಾಯಿನಳ್ಳಿಯ ಒಡಲನ್ನು ಅದರ ಮರಿಗಳು ಸೀಳುವುದರ ಹಾಗೆ ಈ ಅಂಬುಗಳು ನನ್ನ ಪ್ರಾಣವನ್ನು ಸಂಕಟಪಡಿಸುತ್ತಿವೆ (ವ್ಯಾಸಜ. ೩೭೨): ಶೀಗಡಿ, ನಳ್ಳಿ, ಏಡಿ ಮತ್ತು ಅವುಗಳ ಸಂಬಂಧಿಗಳಿಗೆ ೫ ಜೊತೆ ಕಾಲುಗಳು (ಕೀಟಪ. ೧೫); ಸಮುದ್ರದ ನಳ್ಳಿಯ ಪಲ್ಯ . . . ಬೆಣ್ಣೆ - ರುಚಿರುಚಿಯಾದ ಈ ಭಕ್ಷ್ಯಗಳು ಮೇಜಿನ ಮೇಲಿದ್ದುವು (ಪುನರು. ೧೧೮); ದೂರದರ್ಶಕದಲ್ಲಿ ನೋಡಿದರೆ ಈ ಗುಚ್ಛಗಳು ಅನೇಕ ವೇಳೆ ಕಿರೀಟಗಳಂತೆಯೂ ಮಾಸುಗಳಂತೆಯೂ ನಳ್ಳಿಗಳಂತೆಯೂ . . . ಮೆರೆಯುತ್ತಿರುವುವು (ಜ್ಯೋತಿರ್ವಿ. ೭೪); ನಳ್ಳೀ ರಾಗಕ್ಕೆ ನರಿ ತಲೆ ತೂಗಿದ ಹಾಗೆ (ಗಾದೆ).
[ದೇ.॥ ತಮಿ. ನಳ್ಳಿ, ನಳಿರ್, ಞಣ್ಡು, ಞೆಣ್ಡು, ನಣ್ಡು;
ಮಲ. ಞಣ್ಡು, ನಣ್ಡು]

**ನಳ್ಳಿ₂** 'ನಲ್ಲಿ₁' ನೋ.

**ನಳ್ಳಿಕೈವಾರ** (ನಾ). ಬಾಗಿರುವ ಕೈವಾರ; ಬಗ್ಗಿರುವ ವೃತ್ತರೇಖಿಕ: "ಕೀಲು ಹಾಕಿ ಅಳವಡಿಸಿರುವ ತೋಳುಗಳುಳ್ಳ ಕೈವಾರ: ಬಿಲ್ಲು ಕೈವಾರ; ನಳ್ಳಿಕೈವಾರ" (Bows, Bow-Compass(೭೬). ಇಂಕಸಿ).
[ < ನಳ್ಳಿ₁ + ಕೈವಾರ₂ ( < ಕೆಯ್ವಾರ₁) ]

**ನಳ್ಳಿಮೂಗು** (ನಾ). ಡೊಂಕಾದ ಮೂಗು; ವಕ್ರವಾದ ನಾಸಿಕ: ಬಾತಕಕ್ಕೆಯ ಬಲುಮುಕ್ಕರಿಹೊಟ್ಟೆಯ ಓತಿದಲೆಯ ಕೀಸದನಿಯ ನಾತ ಪಡೆದ ತನುವಿನ ನಳ್ಳಿಮೂಗಿನ ಭೂತವೆ ನಡೆತಪ್ಪಂತೆ ಮನೆಗೆ ಬರಲು (ನೇಮಿಸಂ. ೭-೦೦೫). [ < ನಳ್ಳಿ₁ + ಮೂಗು₁ ]

**ನಳ್ಳಿಸು** (ಕ್ರಿ). ತಗ್ಗು; ಬಗ್ಗು; ಬಾಗು: ಪಡೆಯ ಭಾರವ ತಾಳಲಾಜದೆ ಫಣಿಪತಿ ಪೆಡೆಯ ಪಲ್ಲಟಿಸಿ ಕಮಠನ ನಡುಬೆನ್ನು ನಳ್ಳಿಸೆ ನಲವಿಂದ ಕುವರ ನಂದೊಡನಿಕ್ಕಿದನು ಧಾಳಿಯನು (ಕುರಾಸಾಂ. ೦೦-೩೦).
[ < ನಳ್ಳಿ₁ + - ಇಸು₃ ]

**ನಳ್ಳು** (ನಾ). ಒಂದು ಬಗೆಯ ಜೊಂಡು; ನಾಣಲು. 'ನಳ್ಳುನೆಲ', 'ನಾನಲ್' ಪರಾ.

**ನಳ್ಳುನೆಲ** (ನಾ). ಜೊಂಡು ಬೆಳೆದಿರುವ ಪ್ರದೇಶ; ನಡ್ವಲ: "ನಡ್ವಳಂ ನಳಯುತಂ ನಳ್ಳುನೆಲನಕ್ಕು" (ಮಂಗರಾ. ೨೮-೨). [ನಳ್ಳು + ನೆಲ]

**ನಳ್ಳುಶಿಲೆ** (ನಾ). (?): ಅಲ್ಲಿಂದಂ ದಕ್ಷಿಣವಾಗಿ ಹೊಕ್ಕ ಓಲೇಹಳ್ಳಿ ಬೇವಿನ ಹಳ್ಳಿ ಪೊಂನಾಪುರ ಮುಗ್ಗಡ್ಡೆಯಲ್ಲಿ ವಾಮನಮುದ್ರೆ ನಳ್ಳುಶಿಲೆ (ಎಇ. XIV, ೨೨೯-೨೯೭; 1551). [? + ಶಿಲೆ]

**ನಜುಕು** 'ನಜುಂಕು' ನೋ.

**ನಜವಾಡಿ** (ನಾ). ಒಂದು ನಾಡಿನ ಹೆಸರು: ಶ್ರೀಮನ್ಮಹಾಮಂಡಳೇಸ್ವರ ಬದ್ದಣಚೋಳಮಹಾರಾಜರು ಕನ್ನೆಮೂನೂಱುಂ ಪೆಡಕಲ್ಲೆಂಟುನೂಱು

ನಱವಾಡಿಯಯ್ಯನ್ನೂಱಱವುಯಱ ಮುನಱುವಿನ್ನು ನಾಲ್ಕುಂ ನಾಡುಮಂ ದುಷ್ಟನಿಗ್ರಹಂ ವಿಶಿಷ್ಟಪ್ರತಿಪಾಳನಂ ಗೆಯ್ದು ಬಿಡವಿತ್ತಿಯಿನಾಳುತ್ತುಂ (ಶಕಇಆ. ೧೧೭-೨೨-೧೮ : 1073). [ ? + ವಾಡಿ₁ (<ವಾಡಿ₂) ]

**ನಱಿಬ್ಬೆಗವುಂಡಿ** (ನಾ). ಒಬ್ಬಾಕೆಯ ಹೆಸರು : ತವುದಟ್ಟಿಗೆ ನಱಿಬ್ಬೆಗವುಣ್ಡಿಯ ಮಗ ಅಮ್ಮನ್ನಗವುಣ್ಡ ತನ್ನೂರಟಱವ ಕಂಡು ಕಱಿಪಳಿತಱಿಸಂನ್ದು ಸ್ವರ್ಗ್ಗಕ್ಕೆ ಸಂದನ್ (ಎಕ VIII, ಸೊರಬ. ೨೬೪-೯ ; 999). [ ? + ಗವುಂಡಿ (<ಗಾವುಂಡಿ) ]

**ನಱಿಲಕೆಱೆ** (ನಾ). ಒಂದು ಕೆರೆಯ ಹೆಸರು : ಅಪ್ಪಣಭಟ್ಟರು ಪಾದಪೂಜೆಗೊಟ್ಟ ದೇಸಿಗ ಪ್ರವಾಸಿಗರಾಹಾರಸತ್ರಕ್ಕೆ ದೆವಸಲುಂ ಬ್ರಾಹ್ಮಣರುಣ್ಬಂತಾಗಿ ನಱಿಲಕೆಱೆಯ ಕೆಳಗೆ ಕಚ್ಚವಿಯ ಗಡಿಂಬದಲು ಬಿಟ್ಟ ಗಱ್ದೆ ಕಮ್ಮ ಅಯ್ವತ್ತು ೫೦ (ಎಕ. VII, ಶಿಕಾರಿ. ೧೭-೨೩ ; 1085). [ ? + ಕೆಱೆ ]

**ನಱು, ನರು** (ನಾ). ೧. ಕಂಪು ; ಪರಿಮಳ ; ಸುವಾಸನೆ ; ಸೌರಭ : "ನಱು ಸೊವಡು ಕಂಪು ನಾತಂ . . . ಸೌರಭ್ಯಮುಕ್ಕು" (ಕವಿಕಂ. ೯೭) ; "ಸೌಸವಂ, ನಱು, ಕಮ್ಮಿತು, ಸೊವಡು, ಕಂಪು, ನಾತಂ, ಮಗಮಗಿಸು – ಈ ೭ ಪರಿಮಳಕ್ಕೆ ಪೆಸರ್" (ಕಶಸಾ. ೫೪-೧೬೭). 'ನಱುವಂಡು', 'ನಱುಸುಯ್' ಪರಾ. (ಗು). ೨. ಕಂಪಿನಿಂದ ಕೂಡಿದ ; ಪರಿಮಳಯುಕ್ತವಾದ : ಸುರಗಿ ಸುರಹೊನ್ನೆ . . . ಸರಸಿರುಹ ಕುಮುದ ಪಾದರಿ ನಱುಸೇವಂತಿಗೆಯ ಹೂವಿನಂಗಡಿಯೆಸೆಗುಂ (ದಶಾವ. ೫-೫೩). ೩. ರಸವತ್ತಾದ ; ರಸಪೂರ್ಣವಾದ. 'ನಱುಗಬ್ಬು' ಪರಾ. ನರು : ೧. "ನರುಯೆನಲ್ಕೆ ಪರಿಮಳ" (ಕಶರ. ೫೩). ೨. 'ನರುಗಂಪು' ಪರಾ.

[ ದೇ.೫ ತಮಿ. ನಱ, ನಱವು, ನಱು, ನಱ್ಯ; ಮಲ. ನಱು ]

**ನಱುಂಕು, ನಗ್ಗು₁, ನರಿಕು, ನರುಕು, ನಳ್ಗು, ನಱಕು, ನಱುಕು, ನೆಕ್ಕು₂, ನೆಗ್ಗು₁, ನೆರ್ಗು, ನೆಳ್ಗು, ನೆಱ್ಗು** (ಕ್ರಿ). ೧. ಬೆಳವಣಿಗೆ ಕುಂಠಿತವಾಗು ; ನರಚಲಾಗು : ತುಱುಗಿ ತಳಿರ್ತು ಪೂತು ಫಲವಾದೆಲೆಯಿಕ್ಕಿ(ಕ್ಕ)ದ ಕೊಂಬುಗಳ್ ನೆಲಕ್ಕೊಱಗಿದ ನುಣ್ಬುವೆತ್ತ ಮಱನುಳ್ಳೆಡೆಯೊಳ್ ಜಳಮಕ್ಕುಮಲ್ಲಿಯೆಂದಱಿವುದು ತಾಱಿದಂಕಿದ ನಱುಂಕಿದ ಕೊಂಬೋಣಗಿರ್ದ ಪೊಟ್ಟೆವೋದೊಱಗಿದ ವೃಕ್ಷದಿಂದಱಿವುದಾಯೆಡೆಯೊಳ್ ಜಳವಾಗದೆಂಬುದಂ (ಲೋಕೋಪ. ೫-೪). ನಗ್ಗು₁ : ೨. ಕುಗ್ಗು ; ಕುಸಿ : ಅಗ್ಗಿಸಿದೊಡೆ ದಿಟವೆಂದೆಗ್ಗಱಿಯದ ನಗ್ಗದ ಹೆಗ್ಗರು ನುಗ್ಗುಗಳಂ ಬಗ್ಗಿಸಿ (ವೀರೇಶ. ೨-೨೭) ; ನಗ್ಗಿದವು ದಿಗ್ಗಜಂ ಜರ್ಜದುದು ಕಚ್ಛಪಾಂಗು (ಚಬಪು. ೨೮-೧೧). ೩. (ಪಾತ್ರೆ ಮುಂತಾದುವು) ಜಜ್ಜಿ ತಗ್ಗಾಗು,-ತಗ್ಗುಬೀಳು : ನಗ್ಗಿಹೋಗಿರುವ ಪಾತ್ರೆಗಳನ್ನೆಲ್ಲಾ ಸರಿಮಾಡಿಸಬೇಕು (ರೂಢಿ). ೪. ಪೆಟ್ಟುಬೀಳು : "ನಗ್ಗು = ಪೆಟ್ಟು ಹತ್ತು ; ಹೊಡತ ಬೀಳು" (ಜಾನಶೋ. ೯). ೫. ಕೆಳಕ್ಕೆ ಹಾರು : "ಧುಮುಕು, ಬೀಳು, ನೆಗೆ, ನಗ್ಗು, ಹಾರು, ಜಿಗಿ, ಎಗರು, ಎರಗು" (ಕಂನುಹು. ೮೭). ನರಿಕು : ೬. ಅರೆ ; ಜಜ್ಜು ; ಕುಟ್ಟು ; ಚಚ್ಚು : ಯಾರೋ ತಿಪ್ಪಾರೆಡ್ಡಿಯೆಂಬುವನನ್ನು ಆ ಹಿಂದಿನ ದಿನ ಅಲ್ಲಿ ಹೇಗೆ 'ನರಿಕಿ' ಹಾಕಿದರೆಂಬ ಪ್ರಸಂಗಕ್ಕೆ ಮೊದಲಾಗುವುದರೊಳಗಾಗಿ ಮಳೆಯ ಜೋರು ಸ್ವಲ್ಪ ಕಡಿಮೆಯಾಯಿತು(ಪಂಯಾತ್ರ. ೪೩). ನರುಕು : ೭. ಅಗಿ ; ಜಗಿ ; ನುಣ್ಣಗೆ ಮಾಡು ; ಮೆಲುಕಾಡಿಸು : ಕೆಲವರು ಸೂರ್ಯಕಾಂತಿಯ ಬೀಜಗಳನ್ನು ನರುಕಿ ತಿನ್ನುತ್ತಿದ್ದರು (ಪುನರು. ೪೭೯). ೮. ಕತ್ತರಿಸು ; ಚೂರುಮಾಡು : ಅಡಕೆಯನ್ನು ನರುಕು (ರೂಢಿ). ನಳ್ಗು : ೯. ಇಲ್ಲವಾಗು ; ಕಾಣದಂತಾಗು. 'ನಳ್ಗಿಸು' ಪರಾ. ನಱಕು : ೧೦. ಒತ್ತು ; ಅದುಮು : ತೊರೆದ ಮೊಲೆಯ ನಱಕುತೆ ಚೆಲ್ಲಕಣ್ಗಳು ಸುರಿವ ಸಂತಸಗಂಬನಿಗಳ ಒರಸುತೆ. . . ತರಳನ ಬಿಗಿಯಪ್ಪಿದಳು ಮಾತೆ (ತ್ರಿಭುತಿ. ೭೭-೩೦). ನಱುಕು : ೨. ತೊಗಲು ಸಡಲಿದ ಗಲ್ಲ ಬತ್ತಿದ ಪೆಗಲು ನಱುಕಿದ [ಪಾಠಾಂ. ನಲುಗಿದ] ನರೆತ ಮಿಸೆಯ ಜಗುಳ್ದ ಹಲುಗಳ . . . ಮುಟ್ಟಿನ ಮುಗುದನೀತನ ಕಾದ ಪೇಳ್ದುನಗೆಯ ಸುರಿದ್ಯ ರಾಯ (ಕುವ್ಯಾಭೀ. ೧-೩೫). ೭. ಅಱುಮುಪ ಮೇಲೆ ಗಳಂಬೆಗರೆವ ಗೋವು ನಱುಕುತೆಯ್ದುವ ಮುಹಿಹಿಗಳು (ನಾಗಕು ೦೫-೫೫). ನೆಕ್ಕು₂ : ೧೧. ಒಳಸೇರು ; ಗುಳಿಬೀಳು ; ಹಳ್ಳವಾಗು : ತಗ್ಗಾಗು : ಮಕರಂ ಬಾಯ್ದೆಱೆದಂದದಿಂ ತೆಱದ ಬಾಯ್ ಪೇಟೆರ್ದ ಕೂದರ್ಗಡೆ ನೆಕ್ಕ ಕದಂಪೆತ್ತಿದ ಪುರ್ವು . . . ಭಯದಮಾಯಪ್ಪ ರಾಕ್ಷಸೀರೂಪಕಂ (ಕಾವ್ಯಾವ. ೮೩೩) ; ಪೆಱೆ ನೊಸಲಾಗೆ ನೆ[ಪಾಠಾಂ. ನೊ]ಕ್ಕನೊಸಲೊಳ್ನಲೆಯಪ್ಪೊಡಲಾಗೆ ನಿಟ್ಟೊಡಲ್ನಿಱದಲೆಯಾಗೆಯೊಪ್ಪುದಲೆ. . . ಪೂರ್ವ ಗೋಪಿಪ್ಪೊಲಾಗೆ ಬೇಗದಿಂ ಬಂದು (ಅರ್ಧನೇ. ೭-೭೦); ನೆಕ್ಕ ಕದಂಪು ಕಂಪಿಯಧರಂ ವಿಗೆ ಕೆಂಪಡರ್ದಕ್ಷಿ . . . ಮರುಳ್ವಕ್ಕದ ನಿಟ್ಟೊಡಲ್ ಮಸೆದ ಕತ್ತಿಗೆ ಕಣ್ಗೊಬ್ಬಲನಾದುವೆತ್ತಲುಂ (ವರ್ಧಪು. ೧೫-೩೮). ನೆಗ್ಗು₁ : ೨. ಬಲಭಾರಕ್ಕೆ ನೆಗ್ಗಿದುದಾ ರಣಭೂಮಿ (ತ್ರಿಪುಸಾಂ. ೨೦೫) ; ಕಚ್ಛಪಂ ನೆಗ್ಗಿದನುರಗಪತಿ ಕುಗ್ಗಿತು (ಬಸಪು. ೨೮-೫೬) ; ಅಳುಕಿತೀ ನಮ್ಮವಾಭೀಮನ ಸುಳಿವಿನಲಿ ಸೊಪ್ಪಾದೆವರ್ಜುನನೆಳತಟಕೆ ನಿಲವೆಂತೆನುತ ನೆಗ್ಗಿದುದು ದುಗುಡದಲಿ (ಕುವ್ಯಾಕ. ೧೮-೨೫) ; ವೆಗ್ಗಳವಾಗಿ ಸೇನೆಯ ಕೊಂಡು ಹೋಹುದು ಮೊಗ್ಗಾಗಿ ನಡೆದು ಗೆಲ್ಲುವುದು ನೆಗ್ಗಿಹುದವರಂಗಾಗಳ ಕಿಚ್ಚ ಕಂಡೆದೆ ಭೊಗ್ಗನಿನ್ನೆಯ್ದ ನೀವೆಂಪ (ಭರತ. ೩೦-೫) : ಕರಿಘಟೆಯ ಮೊಗ್ಗರಂ ವರ ಸರೋವರ ಸಲಿಲಪಾನಕೆಳೆ ನೆಗ್ಗಿದಲ್ಲದೆ ಮಾಣದೆಂಬಿನಂ ಪೊಳಲ ಪೊಱಮಟ್ಟು ಬಂದವುದು (ಜೈಮಿಭಾ. ೩-೩೮) : ನೆಪವಿಲ್ಲದೆ ನೆಗ್ಗಿ ನೆಲಕಿಳಿದೊಱಲದೆ ಸವನಿಸುವುದು ಸಂತಸವನು (ಹರಿಬ. ೩-೨೪) : ನಾಗೇಂದ್ರ ಕೂರ್ಮರ ಹೆಗಲುಗಳು ನೆಗ್ಗಿದವು (ಉತ್ತಕ. ೭-೪೭). ೩. ಬಂಗಾರದ ಪಾತ್ರೆಯನ್ನು ಒಮ್ಮೆ ಸಿಟ್ಟಿನಿಂದ ಎತ್ತಿ ಹಾಕಿದರೂ ಅದು ಒಡೆದು ಹೋಗುವದಿಲ್ಲ ; ಸ್ವಲ್ಪ ನೆಗ್ಗುವದು(ನೀಗಟ್ಟು. ೧೦೭). ೬. ಒಡೆದೊತ್ತಿಯೊದೆದಲುವ ನೆಗ್ಗಲಾ ಕಾಲದೊಳು (ವೀಕೃಪು. ೩-೧೪-೩೧) ; ನೆಗ್ಗಲೋ ಬ್ರಹ್ಮಾಂಡವಂ ಬ್ರಹ್ಮನೆಲುಗಳಂ ನುಗ್ಗಮಾಡಲೋ (ಚಬಪು. ೩೦-೧೧) : ಆ ಆನೆ ಭೀಮಸೇನನ ಮೇಲೆ ಹಾಯ್ದು ಅವನ ರಥವನ್ನು ಕುದುರೆಗಳನ್ನು ನೆಗ್ಗಿ ಪುಡಿ ಮಾಡಿಬಿಟ್ಟಿತು (ವ್ಯಾಸಭಾ. ೩೮೧) ; ಹಿಡಿಂಬಾಸುತನು ಅವರನ್ನು ಲೆಕ್ಕಕ್ಕೆ ತಾರದೆ ನುಚ್ಚುನುರಿಯಾಗಿ ನೆಗ್ಗಿ ನಾಶಮಾಡಿದನು (ಭಾಮುಕ. ೦೮). ೯. ಕೃತಾಂತನ ದಾಳಿಗೆತ್ತಣ ವೀರವೋ ನೆಗ್ಗಿದವುನೆ ಸಹುಗಳು (ಕುವ್ಯಾದ್ರೋ. ೨-೩೩) : ಮನದ ಮದವಕ್ಕಱಿಸ ವಿಷಯದ ನೆನಹು ನೆಗ್ಗಿತು . . . ಉದಿಸಿತವಳಾನನದಲಧಿಕಕ್ರೋಧಶಿಖಿ ಸಿಡಿದೊಗುವ ಕಿಡಿಗಳಲಿ (ತೊರಾ. ೩-೪-೨೪) : ಪಱಿದನೊಡನೆ ಮುಂದರತಿ ಶೋಕಾದಿಯಾದಾಱು ಕಷಾಯ ನೆಗ್ಗಿದುವು (ಭರತ. ೭೭-೭೬). ೧೧. ಬಿಡೆ ಬಾದಗೆಯ್ದೊಡರಿಸುವ ತಮ್ಮ ಕಡುಪಿಂದೆ ಒರ್ಲೋವರ್ಗಂ ತಿವಿಯೆ ನೆಗ್ಗಿರ್ದ ಕದಪಿಂದೆ ಹಾಸ್ಯ ಬೀಭತ್ಸಾದಿ ನಾನಾರಸಂಗಳಿಂದೊಂದಿದ ಜರದ್ವಿಪ್ರ ಧಾರ್ಮಿಕ ಜನಂಗಳಿಂ (ಕಾದಂಉ. ೨೭೧) ; ದೌಡೆಗಳು ನೆಗ್ಗಿರೆ ದಂತಗಳುದುರಿಪೊಡದು ರಕ್ತವು ತೋರುತಿರೆ (ಕೊಲ್ಲಮ. ೮೭-೧) : ಮುಗ್ಗಿಬೀಳುತ ಮತ್ತೆ ನೆಲ ತಾಂ ನೆಗ್ಗಲೋಡುತ (ದೇವಪು. ೦೯-೧೧೦) : ೧೨. ಪುಡಿಯಾಗು ; ಚೂರಾಗು : ಮೊದಲ ಲಗ್ಗೆಗೆ ಮೂಱುಸಾವಿರ ತೇರು ನೆಗ್ಗಿದವೊಂದು ನಿಮಿಷದಲಿ (ಕುವ್ಯಾಭೀ. ೮-೪೮) ; ಸೀಸಕ ಸಿಡಿಯಲು ವಜ್ರಕವಚ ನೆಗ್ಗಲು ವಾಹಕರು ಬವರದೊಳಱಿದಾಡಿ ಮಡಿದರು (ಕುರಾಸಾಂ. ೧೨-೨೦೦) ; ಸಿಡಿದ ಹುಬ್ಬಿನ ಕಡಿದ ತೋಳ್ಗಳ ನೆಗ್ಗಿದಲಗಳ . . . ಒಡೆದ ನೆತ್ತಿಗಳಿಂದ ರಕುತದ ಮಡು ಹರಿಯೆ (ನಳಚ. ೯-೨೭) : ಮಗ್ಗಿದ ಮಣಕ ಮುರಿ ಸಾರಥಿ ಮಡಿದನಾ ರಥಂ ನೆಗ್ಗಿದುದು (ಜೈಮಿಭಾ. ೭-೪೭). ೧೩. ಕುಂದು ; ಕಡಿಮೆಯಾಗು ; ಕ್ಷೀಣಿಸು : ನೆಗ್ಗಿದಾಕ್ಷನ ದೆಸಕದೊಣಗಿಲ ಬಾಯ ಫಲ್ಗುಣನ ಕಂಡನಾ ದ್ರೋಣ (ಕುವ್ಯಾದ್ರೋ. ೫-೨೦);

ಕಾಮುಕತ್ವದ ನೆನಹು ನೆಗ್ಗದೆ ಮಾಣದೆಂದಸುರೇಂದ್ರನಳವಳಿದ (ತೊರರಾ. ೬-೨೬-೯) : ಸೆರೆ ಬಿಗಿದು ಗಂಟಲು ಗದುಗದಿಸಿ ನುಡಿ ನೆಗ್ಗಿ ತನು ನಡುಗಿ . . . ಕಣ್ಣಲಿ ನುಂಗುವಂತಿರಲಗನಿವಾಸಿಯಃನೀಕ್ಷಿಸುತ್ತಿಂತೆಂದನಾ ದಕ್ಷ (ನಿಘಾಗ. ೪-೪-೪) : ಬಗ್ಗಿದ ತಲೆಯು . . . ನೆಗ್ಗಿದ ಧೈರ್ಯದ ನಿಜತನಯನ ಕಂಡು ಕುಗ್ಗಿದಳೆದೆಯೊಳು ಕುಂತಿ (ಕರ್ಣಪ್ಸ. ೭-೩) ; ಅಂದವುಳ್ಳವನೆ ನಿನ್ನಧಟು ನೆಗ್ಗಿದವು (ಕಂಠೀ. ೮೩-೭). ೧೪. ಮುಂದುರಿಕೊಳ್ಳು ; ಸಂಕುಚಿಸು : ತಳೆತ ಚಿಂತೆಯು ಬಾಡಿದಾಸ್ಯದ . . . ನೆಗ್ಗಿದಂಗದ ನಟ್ಟ ದೃಷ್ಟಿಗಳ ಬಲಿದ ಭೀತಿಯು ಕುತ್ತುದಲೆಗಳಲಿಳೆಯು ಪತಿಗಳು ಸತಿಯು ಬಯ್ಯುತ ಮುಳಿಯುತಿರ್ದರು ತತ್ಕುಮಾರನಿಗಧಿಕ ರೋಷದಲಿ (ಜೀವಂಚ. ೯-೧೮) ; ನೆಗ್ಗಿದವಯವದ ಅಗಿಬುಲಲುಗುವ ತಲೆಯು ಮುಪ್ಪಿನ ಮುಗುದ ನೀತನ ಕಾದ ಹೇಳಿದು ನಗೆಯು ಸುರಿದ್ಯೆ ರಾಯು ಕಟಕದೊಳೆಂದನಾ ದ್ರೋಣ (ಕುವ್ಯಾಭೀ. ೧-೩೫) ; ಶಿವನ ಮೆಲ್ಲಡಿ ಸೋಂಕಲೊಡನೆ ಕೌಂತೇಯು ನವಯುವಮೆಲ್ಲ ನೆಗ್ಗಿ ಮೈಮಱೆದು ಚೀತರಿಸಿ ಕಣ್ಣವೆದೆಱೆದು ನೋಡಿ (ಚಬಪು. ೫೩-೫೭). ೧೫. ಕಡಿಮೆಮಾಡು ; ತಗ್ಗಿಸು : ಬ್ರಿಟಿಷರ ಆಡಳಿತವು ಪ್ರಾರಂಭವಾದ ಮೇಲೆ ಗ್ರಾಮಪಂಚಾಯಿತಿಗಳ ಪ್ರಾಬಲ್ಯವನ್ನು ಆಗಲೇ ಸೂಚಿತವಾದಂತೆ – ನೆಗ್ಗಿದರು (ಕ್ರಿಯೂಶಿ. ೧೦೭) : ಬನ್ನಿ ಕನ್ನಡ ನಾಡ ಗಡಿಮೂಲೆಯಿಂದ, ಹಳ್ಳಿಪಟ್ಟಣಗಳಿಂದ, ಸುಗ್ಗಿಗಾಳಿಗೆ ಹಿಗ್ಗಿ ಬೆಳ್ಗೊಡೆಗಳನ್ನು ನೆಗ್ಗಿ ನುಗ್ಗಿ ಬಹ ಬೂರಲದ ಮಾಲೆಯಂದ (ನಚಬಂ. ೬೩-೮). ೧೬. ಇಲ್ಲವಾಗಿಸು ; ಇಲ್ಲದಂತೆ ಮಾಡು : ಮೃದ್ವಧುವಿತ್ತ ದಾಸಿಗಳ ನೆಗ್ಗಿದುದ ವೈರಾಗ್ಯವೆಂಬರು (ಗಗತಾ. ೦೬-೩೮). ೧೭. ಹಳ್ಳವಾಗಿಸು; ತಗ್ಗುಮಾಡು : ತುಳಿದರೆ ಭೂಮಿ ನೆಗ್ಗುವ ದಂತಿ ಹೊಸ ವಜ್ರ ಹಳವೆತ್ತ ರಥವಾಜನಿಚಯು ತಳೆತ ಕೋರಿತದ ಪೊಂಚೆಳಗಿನ ಭಟರು ಸಂದಳಿಸಿತು ಖಳರಾಯನೊಡನೆ (ಮೋಹಶ. ೪೦-೬) ೧೮. ಬಾಗು ; ಬಗ್ಗು : ಮೊರೆದೆರಗುವ ಭೃಂಗಾವಳಿಯಡಿಯಿಂ ನೆಗ್ಗಿದ ಮಾವಿನ ಕೊನರಿದನೆ ಖತುಗೆ ಮಂಗಳವೆಂಬೆಂ (ಶಾಕುಂತ. ೭೯-೧೩೩). ೧೯. ನಾಶಮಾಡು ; ಧ್ವಂಸಮಾಡು ; ಹಾಳುಮಾಡು : ಇಪ್ಪತ್ತೈದು ಸಾವಿರ ಚಾರ್ವಾಕರಂ ನೆಗ್ಗಲೊತ್ತಿ ಅಪ್ರತಿಮ ಶಿವಗಣಂಗಳ ಮಹಾತ್ಮ್ಯೆಯಂ ಮೆಱೆದಾತ ನಮ್ಮ ಬಸವಯ್ಯನು (ನೀಲವ. ೭-೯) : ಮುಗ್ಗದಿರು ಮಾಯೆಯಲಿ ಮದದಲಿ ನೆಗ್ಗದಿರು . . . ಹಿಗ್ಗದಿರು ಹೊಗಳಿಕೆಗೆ ಮನದಲಿ ಪಾರ್ಥ ಕೇಳೆಂದ (ಕುವ್ಯಾಅ. ೪-೩೩); ದಾನವರ ಥಟ್ಟಣೆಯು ಕೀಲಣದಾ ನಗರಿಯನು ನೆಗ್ಗಿ [ಪಾಠಾಂ. ನುಂಗಿ] ದಂತಿರಲೀ ನಿಘಾತದ ಸೇನೆ ಮುಱಿದುದು ಭಟನ ಭಾರಣೆಗೆ (ಕುವ್ಯಾಕ. ೧೩-೧೩) : ಪೊಯ್ದಾಡಿ ರಿಪುಸೈನ್ಯಕಾನನವನು ನೆಗ್ಗಿದ ನೆಲೆಗೆಡಿಸಿ (ಜೈಮಿಭಾ. ೮.೩೩) ; ಆದು ಸಕಲ ಸಚರಾಚರವನು ನೆಗ್ಗುತ್ತ ಬರಲ್ಪೆದರಿಯಾಲೋಕ ಶಿವಶಿವಯೆಂದು ಮೊರೆಯಿಡಲ್ (ದತುಪು. ೩-೩-೧೯) ; ಅವನನ್ನು ನೆಗ್ಗಬೇಕೆಂದು ದೃಢಸಂಕಲ್ಪ ಮಾಡಿದರು (ಪ್ರಮು.ಹ. ೪೮). ೨೦. ಒಡೆ ; ಮುರಿ : ಬಳಿಕ ಬಳೆಗಳನ್ನು ನೆಗ್ಗಿ ಹೆಣ್ಣುಡೆಯನ್ನು ತೊರೆದು (ಕಸಾಚ. ೯೦). ೨೧. ಪುಡಿಯಾಗು ; ಚೂರಾಗು: ಪಳುಕಿನಱ ನೆಗ್ಗಿದವು ವಜ್ರದ ಪಳಿಯ ಹೊಯ್ಲಿಗೆ (ತೊರರಾ. ೫-೭-೧೭) : ತುಳಿದೊಡದ ಮಣ್ಣ ಕಪ್ಪರದಂತೆ ನೆಗ್ಗಿದುದು ಕೂರ್ಮನ ಬಿರ್ದರಂ (ಚಬಪು. ೪೮-೫). ೨೨. ಮುರಿದು ಬೀಳು ; ಕತ್ತರಿಸಿಹೋಗು: ಸವಡಿಮುರ ನೆಗ್ಗಿದುವು ಗಡ (ಕುವ್ಯಾಸ. ೦೦-೧೩) ; ಭರದ ಬವರದಲಚ್ಚು ನೆಗ್ಗಲು ಕರವ ಸಲಿಸಿಯೆ ತೇರ ನಡೆಸಿದಳರಸಿ (ಕಾಶಿರಾ. ೧-೩೬) ; ನೆಲೆಮಾಡ ಗಳು ನೆಗ್ಗಿದವು ಮಾಳಿಗೆಗಳಂದೊಲೆದವು . . . ರಿಪುಭವನದೊಳಾ ವಾಜಿ ಪೊಲಿದು ರಾಮುಗೆ ಕೈಸೇರೆ (ಕುರಾಸಾಂ. ೯-೧೧೮). ೨೩. ಹಾಳಾಗು ; ನಾಶವಾಗು: ದ್ಯೂತಮೃಗಯಾವ್ಯಸನ ಪಾರ್ಥಿವಜಾತಿಗಿವು ದುರ್ವಿಷಯ ವಿದಱಿ ನೆಗ್ಗಿದರು ನಳ ದಶರಥಾದಿಗಳು (ಕುವ್ಯಾಸ. ೦೧-೧೮). ೨೪. ಕೊಲ್ಲು ; ಸಾಯಿಸು : ನೆಗ್ಗಿದನೊಂದು ಹಲಗೆಯಾಲೇಱಿದವರನು (ಕುವ್ಯಾಕ. ೧೫-೩೪). ೨೫. (?) : ಅಗ್ಗಳಿಯನೆಮ್ಮರಸ ಸಂಪ್ರತಿ ನೆಗ್ಗಿ ಕಟ್ಟಿರಿ ನೀವು ನಿಮಗೀ ಹುಗ್ಗಿಗರು ಹುರಿಗೂಡಿ ಗೆಲಿದಿನ್ನಿಳೆಯು ಕೊಡಿಸುವರೆ (ಕುವ್ಯಾಭೀ. ೧-೫೪). ನೆಗರ್ : ೨. ಭೂಮಿ ದಳಭಾರಣೆಯಿಂ ನಸುನೆರ್ಗೆ ವೈರಿ ಮಂಗೆಟ್ಟಿರೆ ಚಂಡವರ್ಮನರಪಂ ನಡೆಗೊಂಡನತೀವಕೋಪದಿಂ (ದಶಕು. ೭-೬೭) ; ದುರ್ಗದಿಂ ಕಂಪಿಲನೃಪತಿ ನಿರ್ಗಮಿಸಿದನು ಭೂಮಿಗೆ ಬಲಭಾರದಿಂ ನೆರ್ಗೆ ಪೆಡೆಗಳು ಫಣಿಪನ (ಕುರಾಸಾಂ. ೨೭-೫೩). ೧೯. ಕೆತ್ತು ಪೊಡೆ ಸೀಳ್ಕಡಿ ಖಂಡಿಸು ನೆರ್ಗು ನುಗ್ಗು ಕೊಯ್ ಕೊಱ ಮುಱ ಯೆಂದು ನಿನ್ನ ಭಟರಡ್ಡರಿಸಲ್ (ಅಪ್ರತಿ. ೨೬-೨೧) ; ಪುರದಿಂದು ಪೊಱ ಮಟ್ಟು ಪೊಕ್ಕುದಬಮಂ ನೆಗ್ಗುತ್ತೆ ನುಗ್ಗುತ್ತೆಯೊತ್ತರದೊಳ್ ಮುತ್ತಿದಿರಾಗೆ ಮೂಗಱಿದು (ಚಕವಿ. ೫-೩೩) : ೨೬. ಬಗ್ಗಿಸು ; ಜಗ್ಗು : ನೆಗಬ್ಬುದ್ದಂಡದ ಪುಷ್ಪಕಾಂಡನಲರಂಬಂ ನೆರ್ಗೆ ಕೋದಂಡಮಂ ತೆಗೆದಾರ್ಪಿಂ ಮುಳಿದಿಕ್ಕೆ (ಧರ್ಮನಾ. ೦-೫). ನೆಳ್ಗು : ೧೧. ಸುಳ್ಗಿದ ಪಲ್ಗಳಿಂದೊಡೆದ ಮಂಡೆಗಳಿಂ ಮುಱಿದಿರ್ದ ಕಾಲ್ಗಳಿಂ ನೆಳ್ಗಿದ ಬಾಯ್ಗಳಿಂ . . . ಬಂದೆಱಗಿ ಕೀರ್ತಿಸುತಿರ್ದುದು ದೇವಸಂಕುಳಂ (ವೀರವಿ. ೧೩-೧೧೦). ೧೩. "ನವೆ, ಸವೆ, ತವಿ (ತವು), ಸೊರಗು, ಕೊರಗು, ನೆಳ್ಗು (ನೆಗ್ಗು)" (ಕಂನುಹು. ೮೬). △ ನೆಟ್ಗು : ೩. "ನೆಟ್ಗು [ಪಾಠಾಂ. ನೆಗ್ಗು] ಅಂತರ್ಲೀನೇ (ಅಡಗಿ ಹೋಗು) " (ಶಮಧಾ) : ಮೂಗು ನೆಟ್ಗಿ ಬಿಣ್ಸರೆಯೊಡೆದುರ್ಕಿ ಪಾಯ್ದು ಪೊನಲಿಟ್ಟುದು ಮಲ್ಲನ ನೆತ್ತರೆತ್ತಲುಂ (ಚಕವಿ.೪-೧೪೩).

ನೆಗ್ಗುನೆಗ್ಗು (ದ್ವಿರುಕ್ತಿ): ಅಗ್ಗಳಿಯೆಳೆತನದಿ ನಿಜದ ಹಗ್ಗದಿಂದ ಬಿಗಿದು ಕಟ್ಟಿ ನೆಗ್ಗನೆಗ್ಗಿ ಮಱವೆ ಜಡವ ನುಗ್ಗುಮಾಡಿ ಓಡಿಸುವೆನು (ಶಿವಗೀ.೭೯೪). 'ನುಱುಂಗು', 'ನೊರಕು' ಪರಾ.

[ ದೇ.೫ ತಮಿ. ನಱುಕ್ಕು, ನರುಕ್ಕು, ನೆರುಕ್ಕು ; ಮಲ. ನಱುಕ್ಕು, ಞೆರುಣ್ಣು ; ತುಳು. ನಗರ್ ; ತೆಲ. ನಱುಕು, ನಱಕು, ನರ್ಕು; ಪರ್ಜಿ. ಗಡಬ. ನೆನ್ಕ್ ]

**ನಱುಂಬು** (ಕ್ರಿ). ಒತ್ತು ; ಇರಂಕಿಸು : ರಸೆಯೊಳ್ ಕಾರಸೆಗೊಂಡವೊಲ್ ತಳಮಳಂ[ತಿ]ರ್ಪನ್ನೆಗಂ ತುಂಗಕೂಟಸಹಸ್ರಂ ದಿವಮಂ ನಱುಂಬಿದವೊಲಂ ತಿರ್ಪನ್ನೆಗಂ ಸುತ್ತಲುಂ ದೆಸೆಗಳ್ ಪೊಂಗಳಪಂಗಳಿಂ ತೊಳಗುಗುಂ ತೋರ್ಪನ್ನೆಗಂ ಮಾಡೆ ಮಾಡಿಸಿದಂ ಚೈತ್ಯನಿಕೇತನಾವಳಿಗಳಂ ತನ್ನಾಳವಾಧೀಶ್ವರಂ (ವರ್ಧಮಾ. ೭-೫೮). 'ನಱುಂಕು' ಪರಾ. [ ? ]

**ನಱುಕು** 'ನಱುಂಕು' ನೋ.

**ನಱುಗಂಪು**, ನರುಗಂಪು (ನಾ). ಒಳ್ಳೆಯ ವಾಸನೆ; ಸಂವಾಸನೆ; ಪರಿಮಳ: ನೆಱೆದಾತನ ಪುಣ್ಯಮ ಕಣ್ದೆಱೆದಂತಿರೆ ತೆಱೆದುವಾ ವಿಮಾನದ ಪಡಿಗಳ್ ನಱುಗಂಪು ಪೊಣ್ಮೆ ಸಗ್ಗದ ಮಿಱುಪಿನಿಯರ ಮನಮುಮೊಡನೆ ಪಡಿದೆಱೆವಿನೆಗಂ (ಚಂದ್ರಪು. ೪-೬೩) : ಮುಗುಳ್ಗಳ ಮಾಲೆ ಸುಯ್ಯ ನಱುಗಂಪಿನೊಳ್ ಮರ್ಡಿ ಗಮ್ಮನಾಗೆ . . . ಕಾಮಿಗಳ ಮನಂಗಳೊಳ್ ಗಡಣದಿಂದಲಗಣ್ಟ್ಟುವುದಂಗನಾಜನಂ (ವರ್ಧಪು. ೧-೬೪) ; ಅರ್ಕಮಂಡಲಮಂ ಕಂಡ ಮುಂಬಳನಂತೆ ನಱುಗಂಪಂ ಕಂಡ ಮಱಿದುಂಬಿಯಂತೆ (ಉದ್ಭಟ. ೧೧-೫೫ ವ); ಕಣ್ಮಲರ್ಗೆ ಕಡುರಮ್ಯಮಾಗಿ ನಱುಗಂಪು ನೆಱಪೊಣ್ಮಲರೆವಿಂದ ಪೊಂದಾವರೆಯು ಬಂಡನುಂಡುಣ್ಮಿವಾನಂದದಿಂ ಮೈಮಱೆದು ಜಿನುಗುವಾಱಡಿವಱಿಯು ಲೀಲೆಯುಂತೆ (ಪದ್ಮರಾ. ೧-೪೧) ; ನಱುಗಂಪನೆಣ್ಟಸೆಗೆ ಬೀಱುವಲರ್ವಂಡುಣ್ಬ ಪಱಮೆಗಳು (ಭಾವಚಿಂ. ೭-೨೦); ಕಿಱುಜವ್ವನದ ಬಾಲೆಯರ್ ... ಸುಯ್ಯೆಲರ ನಱುಗಂಪನೂಡಿ, ತಣ್ಣೀರಂ ಬಿದುಗಲ್ಗಂದಲೊಳೊಸರ್ವ ಪನಿನೀರನೆ ನೀರಡಿಸಿದರ್ಗೆಱೆದಪರ್ (ರಾಮಾಶ್ವ. ೯-೦೬). **ನರುಗಂಪು**: ಅರೆವಿರಿದ ಕುಸುಮ ನರುಗಂಪಿನಿಂ ಯಿಂಪಿನಿಂ ತಣ್ಣೆಳಲ ತಂಪಿನಿಂದೆ . . . ಇಂತೊಪ್ಪುವಾ ಬನ (ನವಮೋ. ೮-೨೮) : ದಿನದಿನದ ಬೆಳಗು ಹೊಂಗಿರಣದ

ಕಿರೀಟ ನೂರುಬಣ್ಣದ ಹೂವ ನರುಗಂಪನೊಮ್ಮೆಲೇ ಚಿಮ್ಮಿಸುವ ತೋಟ (ನೆಲಮು. ೫-೯) ; ಪೂಗಳು ನರುಗಂಪು ಸೂಸುತ್ತಿವೆ (ಧರ್ಮಸಾ. ೭) : ನರುಗಂಪು ಬೀರುತ್ತಿರುವ ನವಕುಸುಮ (ಸುವಸಂ. ೧೬).

[ ನಱು + ಕಂಪು ]

**ನಱುಗಂಪುವೊರೆ** (ಕ್ರಿ). ಸುವಾಸನೆಯಿಂದ ಕೂಡಿರು ; ಸುಗಂಧವನ್ನು ಹೊಂದಿರು : ತುಱುಗಿದ ತಾರಾಪುಂಜದೆ ಮಿಱುಗುತಿರ್ದಪುದೊ ಪಶ್ಚಿಮಾದ್ರೀಂದ್ರಮೆನಲ್ ನಱುಗಂಪುವೊರೆದ ಜಾದಿಯ ತುಱುಬು ಕಣ್ಗೊಳಿಸೆ ಶೂದ್ರಕಂ ಕರಮೆಸೆದಂ (ಕಾದಂಪೂ. ೩೩).

[ ನಱುಗಂಪು + ಪೊರೆ$_2$ ]

**ನಱುಗಬ್ಬು** (ನಾ). ರಸವತ್ತಾದ ಕಬ್ಬು,-ಇಕ್ಷು : ನಱುಗಬ್ಬಿನೊಳಗಣ ರಸವ ಕಾಣದೆ ಪಶು ಹೊಱಗಣೆಲೆಯ ಸವಿವಂತೆ ಅಱಿದೊಳಗಾತ್ಮಸುಖವನುಣಲಱಿಯದೆ ಹೊಱಗೆಳಸುವರಂಗಸುಖಕೆ (ಭಂಜ. ೧-೧೦೫).

[ ನಱು + ಕಬ್ಬು$_2$ (<ಕರ್ವು$_1$) ]

**ನಱುಗೋಲ** (ನಾ). ೧. ಪುಷ್ಪಬಾಣವನ್ನು ಉಳ್ಳವನು ; ಕಾಮ ; ಮನ್ಮಥ : ನಱುಗೋಲನೊಲಿದು ತನ್ನಖಿಲರಾಣಿಯರೊಡವರಸಿ ಬಿನದವಮಾಳ್ಪವೊಲು ಸರಸಸಲ್ಲಾಪವಿನೋದದಿಂದರಸ ತನ್ನರಸಿಯರೊಡನಿರುತಿರಲು (ನಾಗಕು. ೩೨-೬೪). ೨. [ಜೈನ] ಬಾಹುಬಲಿ : ನಱುಗೋಲನೊತ್ತಿಂದ ದಕ್ಷಿಣಗಿದಿರಾಗಿ ಮಱಿಯೆರಳೆಗಳೋಡಿ ಬಂದು ದುಱುಮುಱನೀಕ್ಷಿಸಿ ಹೊಸಗವಲಿಗೆ ಬೆಚ್ಚಿ ಬಿರಿತೋಡಿದುವು ಕಂಡ ಕಡೆಗೆ (ಭರಚ. ೪೭-೬೩) ; ಒಱಗು ಮೂಡೆಯ ನೆಮ್ಮಿ ಕುಳಿತನು ಚಕ್ರೇಶ ನಱುಗೋಲ ನಿಲೆ ಬಿಸಿಲಲ್ಲಿ ಮಱಿಸನ್ನಗೈದು ಸತ್ತಿಗೆವಿಡಿಸಿದನೇನು ಮಱುಕವೊ ತಮ್ಮನ ಮೇಲೆ (ಭರಚ. ೫೧-೧೩೯). [ ನಱುಗೋಲು + -ಅ$_7$ ]

**ನಱುಗೋಲು** (ನಾ). ಪುಷ್ಪಬಾಣ : ನಱುಗೋಲ ತುಱುಗೆವೆದುಂಬಿದಿರುವ ಹೊಡಿಯುಱುವ ಕಬ್ಬಿನ ಬಿಲ್ಲುಗಳನು (ಚಂಪ್ರಸಾಂ. ೩೩-೭೨).

[ ನಱು + ಕೋಲು$_1$ (<ಕೋಲ್$_1$) ]

**ನಱುಜವ್ವನ, ನಱುಜೌವನ** (ನಾ). ಪೂರ್ಣಯೌವನ ; ತುಂಬಿದ ಹರಯ : ಈ ಸಿರಿಯಾ ನಱುಜವ್ವನಮಾ ಸುಭಗತೆಯಾ ವಿಳಾಸಮಾ ಸಕಳಕಳಾಭ್ಯಾಸಂ ಸುತನಂ ಪಡೆಯದ ದೂಸಱಿನಿನಿತುಂ ನಿರರ್ಥಮಲ್ತೆ ಮೃಗಾಕ್ಷಿ (ವೃಷವಿ. ೨-೩೪). **ನಱುಜೌವನ** : ಅಂತ್ಯದಿದ ನಱುಜೌವನದ ಸಿರಿಯಂ ಮೈಸಿರಿಯೊಡನೆ ಕೇಳಿಯಾ ಕಳೆಗೊಳಿಸಿ . . . ನರೇಂದ್ರಸೂನು ತಳೆದಂ ತಾರುಣ್ಯಲಾವಣ್ಯಮಂ (ರಾಜಶೇ. ೪-೧೦೬ ವ). [ ನಱು + ಜವ್ವನ ]

**ನಱುಜೌವನ** 'ನಱುಜವ್ವನ' ನೋ.

**ನಱುದಂಬುಲ** (ನಾ). ಸುಗಂಧಭರಿತವಾದ ತಾಂಬೂಲ ; ಪರಿಮಳಯುಕ್ತವಾದ ತಾಂಬೂಲ : ಬಾಯೊಳೆ ಬಾಯನಿಟ್ಟು ನಱುದಂಬುಲ ಮಿಕ್ಕುವ ಮುಗ್ಧೆಯೊಂದುಮೊಟ್ಟೈಯತದಿಂದಮಾನಱಿದೆನಾಕೆಯ ವಲ್ಲಭನಾತನೆಂಬುದಂ (ಲೀಲಾವ. ೨-೯೩) ; ಮೊಱಿಯನುಳಿದ ಮೆಲ್ನುಡಿ ಮೊನೆಮಸೆವಕ್ಕಱು ಬಾಯೆಡೆಱಿಗೆಡೆವಿಡದೆಡೆಯಾಡುವ ನಱುದಂಬುಲ . . . ನೆಱೆ ಸೊಗಯಿಸಿದುವು ನವಸುರತಕ್ರೀಡೆಯೊಳಾ ದಂಪತಿಗೆ (ಜಯುಕಾ. ೮-೫೫) ; ಸಸಿಯುದಯಂ ಮುಗಿಲ್ಮೊಟಗು . . . ನಱುದಂಬುಲಂ ಸುಗೀತಸರಸದೂತಿವಾಕ್ಪ್ರಭೃತಿ ಮುಂ ಪೆಸರ್ಗೊಂಡ ತಟಸ್ಥಮಲ್ಲದೇ (ರಸರ. ೧-೩೩) ; ಅತ್ತಮಿತ್ತ ಚೆಲ್ವಿಂಗೆಡೆಯಾಗಿ ಸೂಸಿದಲರುಂ ನಱುದಂಬುಲಮುಂ ಮೃಗೋದ್ಭವಂ ಸಂಗಳಿಸಿರ್ದ ಕುಂಕುಮಪರಾಗಮುಮಾರ್ದಱಪುಷ್ಪದಾಳಿಯಂ ಓಂಗದೆ ದೇವದಂಪತಿಯ ಕೂಟಮನೇಂ ಬಿಸುಪಾಡಲಾರ್ತವೋ (ಶಬಶಂ. ೦-೫೦) ; ಈವುಪಚಾರದಿನಾತನ ಪಸಿವುಂ ಬಱಲ್ಕೆಯುಂ ಮುಡಿಯೆ ಕೆಳದಿ ನಱುದಂಬುಲಮಂ ಸವಿಯಲ್ಕೆಂದು ಮಡಿದೀಯುತುಮಿರೆ (ರಾಮಾಶ್ವ. ೪-೧೩). [ ನಱು + ತಂಬುಲ ]

**ನಱುನಾಣು** (ನಾ). ಆಕರ್ಷಕವಾದ ಲಜ್ಜೆ ; ಮೋಹಕವಾದ ನಾಚಿಕೆ : ನಸುನಗೆ ನಱುನಾಣು ನೆಲೆವೊಲೆ ನಳಿತೋಳು ಮಿಸುಪ ಕಣ್ಬಗೆಯ ಕಳಸ ಪೊಸದೇಸಿವಡೆಯೆ ನೀರೆಱೆವ ನೀಱೆಯರು ಕಣ್ಗೆಸೆದಿಪರಲ್ಲಿ ಪಥಿಕರ (ಕುರಾಸಾಂ. ೨-೪೩). [ ನಱು + ನಾಣು$_1$ (<ನಾಣ್$_1$) ]

**ನಱುನೆಯ್, ನರುನೆಯ್ಯಿ** (ನಾ). ಸುವಾಸನೆಯಿಂದ ಕೂಡಿದ ತುಪ್ಪ ; ಪರಿಮಳಭರಿತವಾದ ಘೃತ : ಕುಱಿಯುಂ ಕಳ್ಳುಂ ಕೂೞುಂ ನಱುನೆಯ್ಯುಂ ಬೇಡಿ ತಿಂಬ ಬಿರುತಿನಿ ಬರಪಂ ಪೆಱರ್ಗೆ ಕುಡಲಱಿಯಳೆಂಬುದನಱಿಯದ ಪಶು ಮನುಜನಲ್ಲ ಕುಱಿಗಳ ಭಾವಂ (ಸಮುಪ. ೯-೧೧೧) : ನಾಯೆ ನಱುನೆಯ್ಯುಟ್ಟದೆಂಬಂತೆನ್ನ ಪೇೞ್ದ ಧರ್ಮಶ್ರವಣಮನೊಲ್ಲದೆ ಸುದಂತಿಯನೆ ಮನದೊಳ್ನೆನೆಯುತಿರ್ಪ (ಧರ್ಮಾಮೃ. ೭-೨೨೭ ವ) ; ನಱುನೆಯ್ವಾಱಿದ ಸಿರಿಯುಂ ಮೆಱಿಯಲೆ ಪೊಂಗಳನೆ ಗೋಪಿಯರ್ ಕಿದಱಿದಪೊಲ್ ತಾಱುಪೆಯ ನೆಗ್ಗಿಲ ಪೂಗಳ್ ತುಱುಪಟ್ಟೆಯ ಪೊಱಗೆ ತುಱುಗಿ ಕರಮೆಸೆದಿರ್ಕುಂ (ಲೀಲಾವ. ೫-೯೯) ; ಪೊಸಸಕ್ಕರೆಯಂ ನವಮಧುರಸಮಂ ನಱುನೆಯ್ಯನೆಸೆವ ಕದಳೀಫಲಮಂ ರಸನೆಯುಳಸಿದುದನೆನ್ನೊಳ್ಬೆಸಸೀಗಳೆ ನಿನಗೆ ತಂದಪೇಂ ಶಶಿಮೌಳಿ (ವೃಷವಿ. ೯-೭೭) ; ನಱುನೆಯ್ಯಂ ಪಾಲನುಣಾತ ಬಾಟ್ಟರೊಳಧಮರ್ ತುಱುಗಿದ ಕಱುಂಬಿನಿಂದು ಪೊಱಿಸಲ್ ಪಾದಿರ್ಪರ ಕೃಟಿಲ್ಲದ ದೂಱು (ನೀತಿಮಂ. II, ೩೭೯). **ನರುನೆಯ್ಯಿ** : ನರುನೆಯ್ಯಿ, ಬಾಳೆಹಣ್ಣು . . . ಇವೆಲ್ಲ ಇವೆ ನಮ್ಮ ಮನೆಯಲ್ಲಿ (ಕಸಾಚಿ. ೧೦೬).

[ ನಱು + ನೆಯ್$_2$ ]

**ನಱುಮುಡಿ** (ನಾ). ಸುವಾಸನೆಯಿಂದ ಕೂಡಿದ ಮುಡಿ ; ಪರಿಮಳಯುಕ್ತವಾದ ಕೇಶ : ನಱುಮುಡಿಗೆ ಮುಡಿವೆನು ಕುಸುಮಮಾಲೆಯನು (ಸಾಳ್ವಭಾ. ೧೦-೩೫). [ ನಱು + ಮುಡಿ$_2$ ]

**ನಱುವಂಜಿ, ನರುವಂಜಿ** (ನಾ). ಒಂದು ಬಗೆಯ ಹುಲ್ಲು : "ಶಂಖಿನೀ, ಚೋರಪುಷ್ಪೀ, ಕೇಶಿನೀ, ಹಗಱಿ = ನಱುವಂಜಿ" (ನಾಚಿರಾ. ೬) : ನಱುವಂಜಿ [ಪಾಠಾಂ. ನಱುವಲ್ಗೆ] ನೆಲಾ[ವಲ್ಗೆಲಾ]ವರೆಗಳ್ ತುಱುಚಿಯ ಕರಿಯಂ ಜಲಾನ್ವಿತಂ ಪೂಸುಗೆ ಮೇಣ್ ಪಱಿಗುಂ ಪಂಕದ ಲೇಪದಿನಱಿ ನಸುಗುನ್ನಿಯ ವಿಷಂ ಭಿಷಗ್ವರಮತದಿಂ (ಖಮದ. ೨-೯೯) : ಮೂತ್ರರೋಗಕ್ಕೆ . . . ನರು[ಱು]ವಂಜಿ, ಕಳ್ಳಂಗಡಲೆ ಇವಂ ಅರೆದು ಬಹಿಗೆ ಪೂಸಿಇಳಿಯ ತೊಡೆಯುವುದು (ವಿವ್ಯವಿ. ೧೫೩) : ನಱುವಂಜಿಯ ಬೇರು, ನೆಲಾವರೆಯ ಬೇರು, ಬಳ್ಳಿದುಱುಚಿಯ ಬೇರು ಇವಿಷ್ಟನು ಸುಟ್ಟು ಕರಿಯ ಮಾಡಿ ನೀರಲ್ಲಿ ಅರೆದು ಪೂಸಲು ನಸುಗುನ್ನಿಯ ವಿಷ ಶಮನವಹುದು (ವೈದ್ಯಸಾ. II, ೨೩೪). **ನರುವಂಜಿ** : "ಅಲಕ್ಷ್ಮಿ-ನರುವಂಜಿ" (ಅಕಾನಿ. ೨-೧೬). [ ? ]

**ನಱುವಂಡು** (ನಾ). ಸುವಾಸನೆಯಿಂದ ಕೂಡಿದ ಬಂಡು,-ಮಧು : ಸೊಪ್ಪುಸೊಪಡಾಗದೆಸಱಿಸಟ್ಟಪ್ಪದೆ ಮೊಗಮಿಱಿದು ಕಾರ್ದುಱಿಚಪ್ಪಲರ್ವಿನೆಗಂ ಸಿಪ್ಪಿಟ್ಟು ಕಱಿದು ಕೊಂಡುವು ಸಪ್ಪದಮುಪ್ಪಳದಿನೊಱಿವ ನಱುವಂಡುಗಳಂ (ಲೀಲಾವ. ೯-೮೬). [ ನಱು + ಬಂಡು$_2$ ]

**ನಱುವಲ್, ನರವಲು, ನರುವಲ, ನರುವಲು, ನರ್ವಲ್, ನಱುವಲ. ನಱುವಲು** (ನಾ). ೧. ಒಂದು ಬಗೆಯ ಮರ; ನೆಲ್ಲಿಗಿಡದಲ್ಲಿ ಒಂದು ಬಗೆ : "ಅಗ್ನಿಮಂಥನ ನಱುವಲ್" (ಪಸುಕೋ. ೩೭-೨೭) : "ಅಗ್ನಿಮಂಥಮೆನೆ ನರು[ಱು]ವಲೆನಿಸಿಕ್ಕು" (ಮಂಗರಾ. ೩೩-೧೬); ಲವಣಂ ನಱುವಲಬೇರ್ ಗುಳ್ಳವದಣೆ ಬರಿವದಣೆ ಲೊಕ್ಕಿ ಕಿಱುಮೆಕ್ಕೆಗಳಂ ಬಿಪನಱಿದು ತಕ್ರದೊಳ್ ಪೂಸುವುದು (ಲೋಕೋಪ. ೯-೧೯೭) : ನಱುವಲ್ ಮಗ್ಗಾರೆಯ ಕಾಯ್ . . . ಇವನಱಿಯಲ್ ಜಲದಿಂದ ಫಣಿಯ ವಿಷ ನಿರ್ಹರಣಂ (ಖಮದ. ೫-೧೦೪) ; ಬರಿವದಣೆ ಸಣ್ಣಗುಂದಿಗೆ ನಱುವಲ್‌ಗುಳ್ಳಂ ಮಣಿಸಿ ನೀವನ್ನಿ (ಅಶ್ವಶಾ. ೧೧-೬೦). ೨. ಸೀಗೆಮರ :

ನರವಲು : (೬). ನರುವಲ : ೧. ನೆಲಬೇವು, ಭದ್ರಮುಸ್ತೆ, ಅಮರವಳ್ಳಿ, ನರುವಲದ ಬೇರು . . . ಶುಂಠಿ ಇವುಗಳ ಕಷಾಯವಿಕ್ಕಿ ಸೇವಿಸಿದರೆ ವಾತಜ್ವರಂ ಕೆಡುಗುಂ (ಸಕವೈ. ೬೫); ನರುವಲದ ಸೊಪ್ಪು, ಪುಳ್ಳಂಪುರಚಿ, ಒಂದೆಲಗ . . . ಈರುಳ್ಳಿ ಇವುಗಳೆಲ್ಲವೂ ಜ್ವರದವರಿಗೆ ಪಥ್ಯದ್ರವ್ಯಗಳು (ಸಕವೈ. ೧೦೩). ನರುವಲು : "ಬಾನಲ–ನರುವಲು" (ಅಕಾನಿ. ೧೦-೩೩). ನರ್ವಲ್ : ೧. (ನಾಚಿರಾ. ೬). ನಱುವಲ : ೧. "ಅರಿಣಿಕೇತುಃ – ನಱುವಲ" (ಒಷಧಿ. ೯). ನಱುವಲು : ೧. "ಶ್ರೀಪರ್ಣಂ, ಅಗ್ನಿಮಂಥಃ ಕಣಿಕಾ, ಗಣಿಕಾರಿಕಾ, ಜಯಃ – ಈ ೫ ನಱುವಲು" (ನಾಚಿರಾ. ೧೦೮) ; ೩. ಒಂದು ಬಗೆಯ ಸೊಪ್ಪು : ಕೀರೆ ನಱುವಲು ಚಕ್ಕವತ್ತ ಸೊಲೆ ಸಬ್ಬಸಿಗೆ ಮೊದಲಾದ ಸೊಪ್ಪುಗಳ ಬೇೞಬೇಱುಕ್ಕರಿಸಿ (ಸೂಪಶಾ. ೪-೧೭) ; ಹಾಲೆಯ ಸೊಪ್ಪು, ಚಕ್ರೋತ, ಕೀರೆಸೊಪ್ಪು, ಕೆಂಪಿನ ಚಕ್ರೋತ್ತ, ನರು[ಱು]ವಲ ಸೊಪ್ಪು . . . ಸೂರಣದ ಗೆಡ್ಡೆ– ಇವು ಜ್ವರ ಬಂದವರಿಗೆ ಪಥ್ಯ (ವೈದ್ಯಸಾ. I, ೫೫) ; ಬಜೆ, ಓಮ, ಔಡಲದ ಬೇರು, ನರು[ಱು]ವಲಬೇರು, ಹಿಪ್ಪಲಿ, ಚಿತ್ರಮೂಲ ಇವಿಷ್ಟನು ಸಮಾಂಶವಾಗಿ ಕೂಡಿಸಿ ನೀರಿಂದ ಅರೆದು ಕುಡಿಯ ಕೊಡಿಸಲು ಒಂಟೆಯ ವಿಷಗಳೆಲ್ಲವೂ ಪರಿಹರವಹವು (ವೈದ್ಯಸಾ. II, ೨೧೮). ೪. (?) : ನಱುವಲ ಮೊನೆಯಲ್ಲಿ ನಟ್ಟ ಕಲ್ (ಎಕ XIII, ೩೦-೩೦ : 1204). [ ದೇ.॥ ತುಳು. ನರುವೊಲು, ನರ್ವೊಲು ]

ನಱುವಲ 'ನಱುವಲ್' ನೋ.

ನಱುವಲರು (ನಾ). ಸುಗಂಧಯುಕ್ತವಾದ ಪುಷ್ಪ ; ಸುವಾಸನೆಯ ಹೂವು : ತರುಣ . . . ಶಿವನಿರ್ಮಾಲ್ಯವೆನಿಪ ನಱುವಲರನೆಯ್ದೆ ಶಿರದೊಳ್ತುಱುಂಬಿ . . . ಶಿವವೇಷದಿಂ ತಣಿದು (ಪಾಸೋಪು. ೨-೩೦) : ನಱುವಲರುಗಳ ಪಿಡಿದು ಪುಷ್ಪಾಂಜಲಿಯನೆಸಗಿ . . . ಹರ್ಷದಿಂದಖಿಳ ಪುರಜನ ಪರಿಜನಂಗಳೆಲ್ಲಂ ತುಱುಗಿ ಬರುತಿರೆ (ಸಿದ್ಧೇಪು. ೧೯-೨೦).

[ ನಱು + ಅಲರು₂ (<ಅಲರ್₂) ]

ನಱುವಲು 'ನಱುಪಲ್' ನೋ.

ನಱುವೂವಲಿ (ನಾ). ಸುವಾಸನೆಯ ಹೂವುಗಳನ್ನು ಹರಡುವಿಕೆ ; ಹೂವಿನ ಹಸೆ : ರಂಗವಲ್ಲಿಯಿಂದೈದು ರನ್ನದ ರಂಗಿಸಿದ ಪುಡಿಗಳ ಚದುರಿನಿಂ ಪಿಂಗದಾ ನಱುವೂವಲಿಗಳಿಂ ಚಿನ್ನಬೆಳ್ಳಿಗಳಾ ತುಂಗಘಟದೊಳ್ಪೊಹಿಪ ಚೆಲ್ವದಶಾಂಗಮುಖ್ಯದ ನಱುಪೊಗೆಗಳಿಂ ತೊಂಗಲಿಪ ಸುರಘಂಟೆಯಿಂ ಮೆಱೆವುದನರಸ ಕಂಡ (ಸಾಳ್ವಭಾ. ೪-೪೧). [ ನಱು + ಪೂವಲಿ ]

ನಱುವೊಗೆ (ನಾ). ಸುವಾಸನೆಯ ಹೊಗೆ ; ಧೂಪ : ಚಿನ್ನಬೆಳ್ಳಿಗಳಾ ತುಂಗಘಟದೊಳ್ಪೊಹಿಪ ಚೆಲ್ವದಶಾಂಗಮುಖ್ಯದ ನಱುಪೊಗೆಗಳಿಂ ತೊಂಗಲಿಪ ಸುರಘಂಟೆಯಿಂ ಮೆಱೆವುದನರಸ ಕಂಡ (ಸಾಳ್ವಭಾ. ೪-೪೧).

[ ನಱು + ಪೊಗೆ₂ ]

ನಱುಸುಯ್ (ನಾ). ಸುವಾಸನೆಯಿಂದ ಕೂಡಿದ ಉಸಿರು ; ಸುಗಂಧಪೂರಿತವಾದ ಶ್ವಾಸ : ಪೋಪ ಸಪ್ತಸಪ್ತಿಯ ವಿರಹಕ್ಕಿದಲ್ತು ಬಿಸುಸುಯ್ ಪುಸಿಸುಯ್ಯೆನೆ ಸುಯ್ದು ದಕ್ಷಿಣಾಶೆಯ ನಱುಸುಯ್ಯ ಗಾಳಿಯನೆ ಪೋಲ್ತುದು ಗಂಧವಹಂ ವಸಂತದೊಳ್ (ಶಾಂತಿಪು. ೭-೧೫೬) : ನಱುಸುಯ್ಗಂ ಮಾಲೆಗಂ ಸೂಟಱಿದೆಱಗುವಿನಂ ತುಂಬಿಗಳ್ ನೋಡಿದರ್ಮೆಯ್ಮಱೆವನ್ನಂ (ಪಂರಾಮಾ. ೧-೧೩೦) ; ಭರದಿಂದಂ ನವಕುಸುಮಾಭರಣಂಗಳನಭವನಂಗದೊಳ್ ಸಿಂಗರಿಸುತ್ತರಳುತ್ತುರ್ಬುತೆ ಕೊರ್ಬುತೆ ಗಿರಿಸುತೆ ನಱುಸುಯ್ಯ ಧೂಪಮಂ ಪದೆದಿತ್ತಳ್ (ಗಿರಿಕ. ೫-೮೩) : ಮುಗಮುಗಿಸುತ್ತುಮಿರ್ಪ ನಱುಸುಯ್ ಪೊಸಪೂಗಳ ಕಂಪನೆತ್ತೆ . . . ಸುತ್ತಲುಂ ಸೊಗಯಿಸುತಿರ್ಪ ಬಾಸಿಗಮನೆತ್ತು ಪರಗ್ಗದ ಮಾಲೆಗಾರ್ತಿಯರ್ (ಕಬ್ಬಿಕಾ. ೪೦) : ಮಾಲೆಗಟ್ಟುತೆ ನೋಟಕರ ಕಣ್ ಮಾಲೆಗಟ್ಟುವರೊರ್ವರ್ ತುಂಬಿಯ ಮಾಲೆಮಾಲೆಯ ಕಾಣಗುಡದಿರೆ ತಮ್ಮ ನಱುಸುಯ್ಯಾ ಮಾಲೆಮಾಲೆಯ ತೋಟಿ ಕಟ್ಟಿದ ಮಾಲೆಯನೆ ವಿಟನಾಲೆಗತಿಸಲ್ಲೀಲೆಯಿಂ ಮಾಱುವರದಲ್ಲಿಯ ಮಾಲೆಗಾರ್ತಿಯರು (ಸಾಳ್ವಭಾ ೨-೧೩). [ ನಱು + ಸುಯ್₂ ]

ನಱುಸುಯ್ಯೆಲರ್ (ನಾ). ಸುವಾಸನೆಯಿಂದ ಕೂಡಿದ ಉಸಿರಿನ ಗಾಳಿ; ಒಳ್ಳೆಯ ಕಂಪುಳ್ಳ ಶ್ವಾಸವಾಯುಂ: ನಱುಸುಯ್ಯೆಲರ್ಗೆಱಗುವ ಮಱಿದುಂಬಿಗಳಂ ಸೞಂಗಿನಿಂ ಸೋವುತುಮಾ ತೆಱದೊಳೆ ಯುವರಾಜನನಟ್ಟಿ ಱಿಂದಡಿಗಡಿಗೆ ಕಾಂತೆ ಕರೆವಂತಿರ್ದಳ್ (ಕಾದಂಉ. ೧೨೯) ; ಎಲೆ ತೀಡುವ ತೆಂಗಾಳಿಯೆ ನಲವಿಂ ಕಾಲ್ವಿಡಿದು ತಿಳಿಪಿ ತಳ್ವಿಲ್ಲದೆ ಕಾದಲನಂ ತಂದೊಡೆ ನಱುಸುಯ್ಯೆಲರಿಂದಂ ನಿನ್ನನಾಗಳುಂ ನೆೞಲ್ ಪೊರೆವೆಂ (ಕಬ್ಬಿಕಾ. ೭೧) : ಕುರುಳೊಳ್ಳೀವಿದ ಕಸ್ತುರಿಯ ರಜಂ ಮೊಗರಸದೊಳುದಿರ್ದು ನಱುಸುಯ್ಯೆಲರಿಂ ಪರೆದು ತೆರೆಮುಸಗಿ ನಿಂದುತಿರೆ ಕೊಂಕಿಂ ಭ್ರೂಯುಗಂ ವಿರಾಜಿಪುದವಳಾ (ರಾಜಶೇ. ೭-೫೬). [ ನಱುಸುಯ್ + ಎಲರ್ ]

ನಱುಸುಯ್ಲು (ನಾ). = ನಱುಸುಯ್ : ನಱುಸುಯ್ಲ[ಪಾಠಾಂ. ಯ್ಯ] ಗಾಳಿಗೆ ತೇಲ್ವ ದುಕೂಲದ ಸೆಱಗು ಸೇರುವೆ ದೂರೆ ಹೊದೆದು ತೆಱಪಿನೆದೆಯ ಹೊನ್ನ ಜನ್ನಿವಾರದ ರವಿ ಮೆಱೆಯೆ ರಾಜೇಂದ್ರ ಮೆಱೆದನು (ಭರತ. ೧-೩೩). [ ನಱು + ಸುಯ್ಲು ]

ನಱುಹರೆಯ (ನಾ). ತುಂಬಿದ ಪ್ರಾಯ ; ಪೂರ್ಣಯೌವನ : ಹಿಂದಣಾಗರಿಲ್ಲದಾಯುಸವಟ್ಟು ಗುರುಕರುಣದಿಂದೆನ್ನ ಪೆತ್ತು ಬಾಲ್ಯದ ಮುದ್ದು ನಱು[ಪಾಠಾಂ. ಡು] ಹರೆಯದಿಂದೆಸೆವ ಸಿರಿಯ ನಡೆನೋಡಿ ದಣ್ಣನೆ ದಣಿವ ಕಾಲದೆ ಇಳು ನುಡಿದಪ್ಪಿಗೆ ತಂದೆ ತಾನೇ ಕೊರಲೊಗ್ಗಿಯಿಸಿದವನು (ಭಾವಚಿಂ. ೯-೧೫) : ಪುಟ್ಟ ಲಾವಣ್ಯಲತೆ ಬೆಳೆವಂತೆ ನಱುಹರೆಯವಿಟ್ಟಣಿಸಿ ದಿನದಿನಕೆ ಬಳೆದು ವಿಂಗೆ ಸಂತಸಂಬಟ್ಟು (ಕೊಟ್ರೇಶಬ. ೪-೧೧೨).

[ ನಱು + ಹರೆಯ (<ಪರಯ ) ]

ನೞ (ನಾ). ಒಗ್ಗರಣೆ. 'ನೞಗೊಡು' ಪರಾ.

ನೞಯುಂ ಕೊಡು, ನೞಯ ಕೊಡು = ನೞಗೊಡು : ಪುಡೆಯಮುಂ ಮಾಡಿ . . . ಹುರುಳಿಯ ಹಾಲಿನೊಳಗಿಳಿಯಬಿಡುತ ಪೊಗ್ಗರಿಸಿ ನರೆ[ೞ]ಯುಂ ಕೊಟ್ಟು ನಸುಹುಳಿಯನಿಕ್ಕಿ ಪರಿಮಳವಿಡುವುದು (ಸೂಪಶಾ. ೫-೫೦); ಮೆತ್ತನುಕ್ಕರಿಸಿಕೊಂಡೆಳೆಯ ಕಳಿಲೆಯ ಕುಡಿಯನು ... ಪೊಡ್ಡಣಿಗೆಯಿತ್ತು ನರೆ[ೞ]ಯು ಕೊಟ್ಟು ಪರಿಮಳವನಿಕ್ಕಲದು ಚುಚ್ಚುಗಳಿಲೆ[ವೆಸರು] (ಸೂಪಶಾ. ೬-೨); ಪಸಿಯ ಕರಿಬೇವು ಕೊತ್ತುಂಬರಿಯನಿಕ್ಕಿ ತಾಳಿಸಿ ನರೆ[ೞ]ಯ [ಪಾಠಾಂ. ಯುಂ] ಕೊಟ್ಟು . . . ಮುದ್ಗರಂಭಾಕುಸುಮಪಾಕಮೆಂದೆಂಬ ಹೆಸರಂ ಕರೆವುದು (ಸೂಪಶಾ. ೪-೫೩).

[ ← ತಮಿ. ನೞ್ = ಮಸಾಲೆಪದಾರ್ಥ, ಸಂಬಾರದ್ರವ್ಯ ]

ನೞಗೊಡು (ಕ್ರಿ). ಒಗ್ಗರಣೆಯನ್ನು ಕೊಡು,–ಹಾಕು ; ಒಗ್ಗರಿಸು : ಅಟ್ಟೆರಡು ಭಾಗೆಯಂ ಮಾಡುಳ್ಳಿ ಸಕ್ಕರೆಯನಿಟ್ಟು ಪಸರಿಸಿದ ಹೋಳೊಳು ತುಂಬಿ ತುಪ್ಪದೊಳಗಟ್ಟು ಕೆಂಪಂ ಮಾಡಿ ನರೆ[ೞ] [ಪಾಠಾಂ. ರೆಯುಂ] ಗೊಡಲು ಗೌರಬದನೆಯಕಾಯಿವೆಸರಾದವು (ಸೂಪಶಾ. ೪-೨೪).

[ ನೞ + ಕೊಡು₁ ]

ನೞಯಿಕ್ಕು (ಕ್ರಿ).=ನೞಗೊಡು : ಶೋಧಿಸಿದ ಕೊಣಬಿನೊಳು [ಬಾಳೆಯ] ಹೂವನು ಇಟ್ಟು . . . ಒಗ್ಗರಣೆಗೊಟ್ಟು ನರೆ[ೞ]ಯಿಕ್ಕಿ ಪರಿಮಳಗೊಡಲು ತಕ್ರರಂಭಾಕುಸುಮಪಾಕಮಾಯ್ತು (ಸೂಪಶಾ. ೪-೩೭).

[ ನೞ + ಇಕ್ಕು ]

ನೞಯೀ (ಕ್ರಿ). = ನೞಗೊಡು : ಮತ್ತೊಂದು ಬೆಸಳಿಗೆಯ ತೊಳೆದುಕೊಂಡದಕೆ ನ[ಪಾಠಾಂ. ನೆ]ರೆ[ೞ]ಯಿತ್ತದಂ ಪೊಯ್ದು ಕರಿಬೇವು ಮಾದಲವಿಕ್ಕಿ(ಸೂಪಶಾ. ೫-೧೦): ಕೊತ್ತುಂಬರಿಯನಿಕ್ಕಿ ಚೆನ್ನಾಗಿ ನ[ಪಾಠಾಂ.ನೆ, ಲ]ರೆ[ೞ]ಯಿತ್ತು [ಜಡಿದುಕೊಂಡು] (ಸೂಪಶಾ. ೫-೧೪). [ನೞ + ಈ₂]

**ನಟೀಣ್ಣಿಗ** (?) (ನಾ). (?) : ಕಾಲ್ನಾಡಿಂ ನಟೀಣ್ಣಿಗರಾರೆನ್ದೊಡೆ ತೊರೆ ಕಾವಗಾವದನುಂ ಬೀವಗದನುಂ . . . ಇಲ್ಲಿಯ ಪುರದ ಒಕ್ಕಲಿವರು (ಎಕ. III, ನಂಜನ. ೧೪೯-೫ ; 915 ?). [ ? ]

**ನಟುಳ್ಗುಂದ** (ನಾ). ಒಂದು ಸ್ಥಳದ ಹೆಸರು : ಸ್ವಸ್ತಿಶ್ರೀ ನಟುಳ್ಗುಂದ ಬಾತಮ್ಮನ್ ತೊಱುಗೊಳ ಇರ್ವ್ವರ್ ವೇಡರಾ ಕೊನ್ದು ತೊಱುವ ಇಕ್ಕಿಸಿ ಸುರಲೋಕಮ್ ಪುಕ್ಕ (ಎಕ. X, ಚಿಂತಾಮ. ೧೨೨-೧ ; ಸು. 1000). [ಈ ಇದು 'ನವಿಲ್ಗುಂದ' ಎಂಬುದರ ಅಪಲಿಪಿತವಿರಬಹುದು]

**ನಟ್ಟಿಗವುಂಡು** 'ನಾಟ್ಗಾವುಂಡು$_2$' ನೋ.

**ನಟ್ಟಿಗವುಂಡುಗೆಯ್** 'ನಾಟ್ಗಾವುಂಡುಗೆಯ್' ನೋ.

**ನಾ$_1$** 'ನಾನ್$_2$' ನೋ.

**ನಾ$_2$** 'ನಾಲ್' ನೋ.

**ನಾಊದ** (ನಾ) (?) : ಮುಡೆ ೧ ನಾಊದನ ಬಗುಳ ಗದೆ ಮೇಲೆ ಮುಡೆ ೨ (ಸೌಇಎ. ೧೯೬೨, ಉಡುಪಿ. ೩೦೭-೬ : ?). [ ? ]

**ನಾಂ** 'ನಾನ್$_2$' ನೋ.

**ನಾಂಗರು, ನಂಗರಿ, ನಾಕರ** (ನಾ). ನೇಗಿಲು ; ಹಲ ; ಲಾಂಗಲ : ದರ ನಾಂಗರು ೧ಕ್ಕ ಗು ೪ ನಾಲ್ಕು ವರಹಾದ ಪ್ರಕಾರ (ಮಹಾಮಂ. II, ೬೨). **ನಂಗರಿ :** ನಂಗರಿ ಹೊಡೆಯುವುದರಿಂದ ನೆಲ ಪೊಳ್ಳಾಗಿದೆ (ರೂಢಿ). **ನಾಕರ :** 'ನಾಕರಕುಂಟೆ' ಪರಾ.
[ ←ಮರಾ. ನಾಂಗರ್, ನಾಗರ್. / ಪ್ರಾ. ಣಂಗಲ. / ಸಂ. ಲಾಂಗಲ ]

**ನಾಂಗಲಿಕ** 'ನಾಂಗುಲಿಕ$_1$' ನೋ.

**ನಾಂಗುರಿಕ** 'ನಾಂಗುಲಿಕ$_1$' ನೋ.

**ನಾಂಗುಲಿಕ$_1$, ನಾಂಗಲಿಕ, ನಾಂಗುರಿಕ, ನಾಂಗುಲೀಕ, ನಾಗುಲಿಕ** (ನಾ). ಒಂದು ಬಗೆಯ ಗಿಡ ; ಕೋಳಿಕುಟುಮನ ಗಿಡ : ಜಲರುಹ ಕಂದಾನ್ವಿತಮಿರುಳೆಲೆಯೊಳ್ ಸಲೆ ಕಟ್ಟಿಗಿರಿಯ ಬೂದಿಯ ತಿಳಿದೂಱ ಲೊಳಿಂಬಿನೆ ಕುದಿಯಿಸೆ ನಾಂಗುಲಿಕಮುನಡುಗಾಜ್ಯದಿಂ ರಸಾಯನಮಕ್ಕುಂ (ಲೋಕೋಪ. ೮-೨೪) ; ದೃಷ್ಟಿ ದ್ರಾವಣಕ್ಕೆ – ಬದುರೆಲೆ . . . ನಾಂಗುಲಿಕ ಇವನ್ನು ಕೂಡಿ ಮರ್ದಿಸಿ ತಿಲಕವಿಡಲು ದೃಷ್ಟಿದ್ರಾವಣ ಮಾಣ್ಗುಂ (ವಿವೈವಿ. ೨೧೧) : ವಿಷಮುಷ್ಟಿ ನಾಂಗುಲಿಕ ಶಶನಯನ ಪಿತ್ತವರರಸವು ತಾಂಬೂಲ ದೊಡಗೂಡೆ ಸ್ತ್ರೀವಶವು ಹುಸಿಯಲ್ಲ ನೋಡ (ಸರ್ವಜ್ಞ. ೦೯೭೯) **ನಾಂಗಲಿಕ :** ಮೂಲವ್ಯಾಧಿಗೆ–ನಾಂಗಲಿಕ, ಮೊಗನ ಹರುವೆ, ಚಿತ್ರಮೂಲ . . . ಕಲಸಿ ಗುದದಲ್ಲಿ ಪೂಸೆ ಎಲ್ಲಾ ಮೂಲವ್ಯಾಧಿ ಕೆಡುಗುಂ (ವಿವೈವಿ. ೦೬೭). **ನಾಂಗುರಿಕ :** ವಿಷಮುಂಗುರಿಯುಂ ಗುರು ನಾಂಗುರಿಕಂ ಬಱಿಯುವನರದಿಂಬಿಂ ಪೂಸೆ ಕಂಟಕೋಗ್ರವಿಷಘ್ನಂ (ಖಮುದ. ೨-೨೧೩). **ನಾಂಗುಲೀಕ :** ಬಯಸಿ ಚುಂಬಿಸಿದರ್ ಸ್ಮರನಿರ್ದು ನಾಂಗುಲೀಕದ ಕುಸುಮಂಗಳಂ ವಱಿದು ಪತ್ರಿಸಿದಂತೆವೊಲೊಪ್ಪಿ ತೋರ್ಪಿನಂ (ಕಾವ್ಯಸಾ. ೬೬೬ ಶೂದ್ರಕ). **ನಾಗುಲಿಕ :** "ಲಾಂಗಳೀ, ಅಗ್ನಿಶಿಖಾ ಈ ೨ ನಾಗುಲಿಕಂ" (ನಾಚಿರಾ. ೧೦೦).
[ <ಸಂ. ಲಾಂಗಲಿಕ ]

**ನಾಂಗುಲಿಕ$_2$** (ನಾ). ಒಂದು ಬಗೆಯ ಗಿಡ; ಸರ್ಪಾಕ್ಷಿ ಗಿಡ; ನಾಗದಾಳಿ; ಮುಂಗುಸಿಮೇವುಗಿಡ ; ನಾಗಸುಗಂಧ : "ವ್ಯಾಳಗಂಧಿಯೆನೆ ನಾಂಗುಲಿಕವಕ್ಕು" (ಮಂಗರಾ. ೪೧-೩೧). [< ಸಂ. ನಾಕುಲಿಕ ]

**ನಾಂಗುಲಿಕಬಳ್ಳಿ** (ನಾ). ನಾಂಗುಲಿಕದ ಬಳ್ಳಿ,-ಲತೆ; ಕೆಂಪು,ಹಳದಿ ಹೂವು ಬಿಡುವ ಸುಂದರವಾದ ಹಾಗೂ ಮೇಲಕ್ಕೆ ಹಬ್ಬಿಕೊಂಡು ಹೋಗುವ ಒಂದು ಬಗೆಯ ಬಳ್ಳಿ : (ಕ). [ ನಾಂಗುಲಿಕ$_1$ + ಬಳ್ಳಿ ]

**ನಾಂಗುಲೀಕ** 'ನಾಂಗುಲಿಕ$_1$' ನೋ.

**ನಾಂಚಿಕೆ** 'ನಾಣ್ಚಿಕೆ' ನೋ.

**ನಾಂಚು** 'ನಾಣ್ಚು$_1$' ನೋ.

**ನಾಂಟಿಸು, ನಾಟಿಸು** (ಕ್ರಿ). ೧. ಚುಚ್ಚುವಂತೆ ಮಾಡು ; ನಾಟಿಕೊಳ್ಳುವಂತೆ ಮಾಡು : [illegible] ಪದಕಂಟಕರವ ನಾಂಟಿಸದೆ [ಪಾಠಾಂ. ಪಂಟಿಸುತ] . . . ಜನಕನ ಮ.ಗಳ [illegible] ತಂದರೊಂದು ಮಹಾಸರೋವರಕೆ (ತೊರರಾ. ೨-೪-೧೯); ಕಂಟಣಂಪುರೆಳೆವ ಕುಲಟೆಯುರಂತೆ ಖುರಪುಟವ ನಾಂಟಿಸಂಗವನೆಳೆದು ಕಾಲಮುಹಿಚಿದ [illegible] (ಜಿನಮು. ೫-೫೦). ೨. [ಗಣಿತ] ಗುಣಿಸು : ಒತ್ತಿಟ್ ನಾಂಟಿಸಪ್ಪು ? ಬಳಸೊತ್ತು . . . ಗುಣಿಸು ಪರ್ಚಿಸೆನಲಿವು ಗುಣಕಾರ ಭಾಷೆಗಳ್ ಪೇಟ್ ಗಣಕಾ (ವ್ಯವಹಾ. ೧೧-೧೩). **ನಾಟಿಸು :** ೩. ಉಂಟುಮಾಡು; ನೆಲೆಗೊಳಿಸು : ಮನದ ಬೆಚ್ಚ ಬಱಿಯಱಿವು ಬಱಿದು ಬೆಱಗನೆ ನೋಟದೊಳ್ ನಾಟಿಸೆ [ಪಾಠಾಂ. ನಾಂಟಿಸಿ] (ಅರ್ಧನೇ. ೨-೭೦ ವ); ಬೇಟದ ಸೊಗಸಂ ಪ್ರಿಯರೊಳ್ ನಾಟಿಸುತುಂ . . . ಶಬರಿಯರ್ ನಡೆತಂದರ್ (ಉದ್ಭಟ.೨-೬೨) ; ನಾಟಿಸುವೆನವರಱಿವಿಗಱಿವನು ಮಾಟವಲ್ಲವ ಮಾಣಿಸುವೆನೆನುತಿರ್ದ ಪ್ರಭುರಾಯ (ಪ್ರಭುಲಿ. ೨೦-೩೪) ; ಕೂಟದೊಳಗೆ ದಣಿವನು ಪೊರ್ದದಾ ಸಕಿ ನಾಟಿಸಿದಳು ತನ್ನೊಳವನ (ನೇಮಿಸಂ. ೧೦-೯೨) ; ನಾಟ್ಯರಸದಲಸಿಕೆಯು ಪ್ರೇಕ್ಷಕರ ಕಣ್ಣು ಕಿವಿಗಳ ಮೂಲಕ ಹೃದಯದಲ್ಲಿ ನಾಟಿಸಲಾಗುವುದು (ಪ್ರಬಂಧ. ೨೫). ೪. ಊರು ; ಆಧಾರ ಕೊಡು : ಮಡದಿಯ ಪೀನ ಪಯೋಧರಭಾರಕೆ ನಡು ಮುಱಿದಪುದೆಂದಜನು ನಡುಗೆ ನಾಟಿಸಿ ಸಟ್ಟ ಕಂಭವೆನಲು ಬಾಸೆ ಕಡುಚೆಲುವಾಗೊಪ್ಪುತಿಹವು (ಅಂಜನ. ೫-೨೫೩) ; ಅವರುಗಳ ಪೊಡೆಯೊಳಗೊಂದಕಂಟೊಟ ನಾಟಿಸಿ ಬಂದ ಪಡೆಯನಿಕ್ಕಿದ ರಣಬಲಿಯ (ಮೋಹತ. ೩೫-೧೩). ೫. "ಸೃಷ್ಟಿಸು" (ತೊರರಾ. ಕೋಶ) : ನಾಟಿಸುವ ಜಗದವನನಣುವಿಗೆ ಪಾಟಮಾಡದ ಸುಪ್ರಸಿದ್ಧನ ಘಾಟ ರಣಸುಖ ವಲ್ಲೆನುತಲೊದಱಿದವು ಕಹಳೆಗಳು (ತೊರರಾ. ೬-೪೭-೩೫). ೬. (ಆಲಂ) ನಿರೂಪಿಸು ; ಹೇಳು : ಬೇಟಿಯ ನೆವದಿಂದರಸಿನ ಕೂಟದ ನಾಯಕರ್ ಬಂದುಮಿಾ ತಮನಂ ನಿರ್ದಾಟಿಸಿ ಕೊಂದರೆನುತ್ತಂ ನಾಟಿಸು ನೀನಿವನ ಪೆಂಡಿರೊಳ್ ಮಕ್ಕಳೊಳಂ (ನನ್ನಚಾ. ೨-೧೨೩) ; ರತಿಯ ಪ್ರಸಂಗವ ನಾಟಿಸಿದನು ಕಿವಿಯೊಳಗೆ (ಮೋಹತ. ೯-೪೩). ೭. ಚೆನ್ನಾಗಿ ಸೇರಿಕೊಳ್ಳು ; ಅಂಟಿಕೊಳ್ಳು ; ಗಂಟುಬೀಳು : ಕೂಟದಲಿ ಕೋಪ ಕೊನರಿಸುತ ಶಂಖಿನಿಯು ನಾಟಿಸದೆ ಬಿಡಳು (ಸರ್ವಜ್ಞ. ೦೬೯೩) : ನೋಟಕ್ಕೆ ಬಲು ಚೆಂದ ಕೂಟಕ್ಕೆ ಕಡುನರಕ ನಾಟಿಸಿ[ಸ]ಲು ಪ್ರಾಣಧನ ಹಾನಿ ಸೂಳೆಯೇಱಾಟವೇ ಬೇಡ(ಸರ್ವಜ್ಞ. ೦೯೫೫). [ ನಾಂಟು + – ಇಸು$_3$ ]

**ನಾಂಟು, ನಾಟು$_1$** (ಕ್ರಿ). ೧. (ಮುಳ್ಳು, ಬಾಣ ಮೊದಲಾದುವು) ಒಳಹೊಗು ; ಒಳಕ್ಕೆ ಚುಚ್ಚು : "ನಾಂಟು–ಅಂತರ್ಭೇದೇ (ನಾಟಿಕೊಳ್ಳು)" (ಶಮದಾ) ; ಕಪೋಲಕಂಟಕನಿಕಾಯಾಗ್ರಂಗಳಂ ಕೂಡೆ ನಾಂಟಿದುದೋ ಮೇಣ್ ಸುಭಗತ್ವಮೆಂಬ ಗುಣದಿಂ ಪೊಲ್ದತ್ತೊ ಮೇಣೆಂಬಿನಂ ಪದಪಿಂ ನಟ್ಟರೆ ದಿಟ್ಟಿಯುಂ ತೆಗೆದೆನೆಂತೆಂತಾಸುಮುದ್ವೇಗದಿಂ (ಕಾದಂಪೂ. ೭೭೩) ; ಜವನಾಳಂತಪ್ಪ ಕಣೆ ರೋಮರೋಮಂದಪ್ಪದೆ ನಾಂಟಿದುವು (ಪಂಪಾಮಾ. ೦೩-೭೧) ; ನಾಂಟಿದುವರಿಭಟರಂಗಮಂ . . . ಶರಂಗಳ್ (ಜಗವಿ. ೮-೫೩): ಕಂಟಕಂಗಳ್ ನಾಂಟಿ ಬಿದ್ದು ಕಾಲೊಡೆದು ಬಾಯ್ ಗಂಟಲ್ಗಳೊಣಗಿ ಗತಿಗೆಟ್ಟು (ಡಬಪು. ೨೧-೨೧) : ಸಲೆ ಪಜ್ಜೆಯನಿಡೆ ನಾಂಟುವ ಮೊಮುಳ್ಳಿನಿಂದೊಳುಗಾಡೆಸೆದುದೇನೆಂಬೆ (ಕಂಸವಿ. ೧೮-೪೭). ೨. ತಗುಲು ; ಸಂಪರ್ಕ ಹೊಂದು; ಸೇರು : ಕೂಡು ; ಅಂಟು : ಬೆಂಗೆ ನೀರ ಧಾರೆಗಳಂಟ್ ನಾಂಟಲೀಂಟಿದುದು ನೇಹದೆ . . . ಚಾತಕಂ (೧೧ಕ. ೯-೪೮) ; ಪಾಪಂಗಳಾಟಂ ನಾಂ[ಪಾಠಾಂ. ನಾ]ಟವನ್ನಾಯದ ಕಳೆಗೆ ತಕ್ಕವು . . . ಮುಕ್ತಿಯ ಮೂಲವೆನಿಸುವವು ಕಾಶಿ ಹಂಪೆಗಳು (ಹದಶಾ. ೮-೫೯) ; ಗುರು ಕುಚಂಗಳಂ ನೋಳ್ಪ ಕಾಮುಕನಿಕರದ ದಿಟ್ಟಿ ನಾಂಟದ ತೆಱದ ಮಱಿವಾಡ ದಂದದಿಂ (ಸೌಂದಪು. ೭-೨೮). ೩. (ಗಿಡ ಮೊದಲಾದುವನ್ನು) ಭೂಮಿ

ಯಲ್ಲಿ ನೆಡು.–ಊರು.–ಹುಚ್ಚು : ಬಗೆ ಮುಟ್ಟದೆಡೆಯೊಳ್ ತಳ್ತ ಮರನಂ ಹೇಮಂತದೊಳ್ ಕಿಟ್ಟು ನಾಂಟುಗೆ (ಲೋಕೋಪ ೬-೧೭) ; ಪಾಂಥರಿಂಟೆ ಏಕಸತ್ತ್ರಪ್ಪಾತುರರ್ ಚಿತ್ರಭೂತಲದೊಳ್ ನಾಂಟಿದ ಬೇಂಟವೇಂ [ ವೆಂ ] ಬಗೆಗೆ ನೀರ್ವೊಯ್ವಂತೆ ಭೃಂಗಾರಶೀತಲತೋಯಂಗಳನಾಂತು ಪಾಣಿತಳದೊಳ್ ಪೊಯ್ವರ್ ಪ್ರಪಾಕಾಂತೆಯರ್ (ಲೀಲಾವ. ೬-೧೨೯). ೪. ಮೊಳೆ ; ಮೊಳಕೆಯಾಗು : ಬಿತ್ತಿದಾಗಳಲ್ಲಿಗಪ್ಪನಿತೆ ಮಟಿ³ ಕೊಂಡು ಕಸಟಾಗಿ ನಾಂಟ ಬೆಳದೆಟಗಿರ್ದಡಾಗಳ್ (ಬಂಹರಿ. ೯-೬೩ ವ).

ನಾಟು$_1$ : ೧. ನಾಟುವ ನನೆಗಣೆ ಚಿತ್ತವನಾಟವಿಟಂಬಿಸಿ ನೆನಹದಿಂ ಪೊಸವೇಟಂ ಕೋಟಿ ತೆಱನಾಗೆ (ಲೀಲಾವ. ೯-೦೩೧) ; ಉದ್ಭಟೇಂದ್ರನಿಟ್ಟ ಶೂಲವೈದೆ ಮುಂ ಕೊಂಡು ನಾಟಿ ವಕ್ಷಮಂ (ಉದ್ಭಟ. ೪-೧೦೮) ; ನೋಟದಲಿ ಮದನಾಸ್ತ್ರವೆದೆಯಲಿ ನಾಟಿದವು (ಕೊರರಾ. ೧-೧೪-೨೪) : ಹೊಂಗಳಸ ಚಂಡವುತ್ತರದಕ್ಷಿಣವೀಧಿಗೊಟ್ಟು ಬ್ರಹ್ಮಾಂಡವ ತುಡುಕಿ ನಾಟಿದುವು (ಮೋಹತ. ೨೦-೨೯) ; ಕೊರುಗುರು ನಾಟದೊಲ್ಪಿಡಿ ಕುಚಂಗಳ (ಪಂಪಾರಾ. ೧-೩-೪೧) ; ರಣರಂಗದ ಮತ್ತೊಂದು ಕಡೆ ಭೀಮನು ಖಡ್ಗ ನಾಟ ಬಿದ್ದಿದ್ದಾನೆ (ಸಂಸಕ. ೧೦೦). ೩. ಪುಣ್ಯಾರ್ತ್ಥ ಕಲ್ನಾಟಿ ಬಿಟ್ಟ ದತ್ತಿ (ಎಕ. XIV, ಮೈಸೂರು. ೧೨೭-೧೦ ; ೨೦೦) : ನಾಟಿರ್ದ ಪಸುರ್ಗಿಡು ಪುಷ್ಪಲತೆಯು ವೃಕ್ಷವಾಟಿಯೊಳ್ ಕುಸುಮಸೌರಭಕೆ ಊಟಿವರಿವ ತುಂಬಿಗಳ ದೊಂಬಿ . . . ಒಪ್ಪಿದುವು (ಮೋಹತ. ೫-೨೫) ; ನೀರ ಕಡೆಗೆ ನಾಟಿದ ಮರ ಚಿಗುರದೆ ಬಿಟ್ಟೀತೆ ? (ಗಾದೆ). ೫. (ಮನಸ್ಸಿಗೆ) ಹತ್ತು ; ಹಿಡಿ ; ತಟ್ಟು : ಬಗೆಯೊಳ್ ನಾಟುವಿನಮುಮುರಿ ಸಂಸ್ಕೃತಿನಾಟಕಮುಮನೆನಗೆ ನೆಱೆ³ ಯ ತೋಱಿದಳೀಗಳ್ (ಆದಿಪು. ೯-೪೫) ; ಭಯಂ ನಾಟೆ ಚಿತ್ತದೊಳ್ ದೂತರ್ಕಳಂದಾ ಕೃತಾಂತನೊಡನಿಂತೆಂದರು (ಜಬಪು. ೫೧-೨೪) ; ಈ ವಿಚಾರಗಳು ಶಂಕರಭಟ್ಟರ ಮನಸ್ಸಿಗೆ ನಾಟದವು (ಗಂಗಾಸಾ. ೩೦) ; ಅವಕಾಶವುಂಟಾದಾಗ . . . ಅವುಗಳ ಗುಣದೋಷಗಳನ್ನೂ ನಾಟುವಂತೆ ಬೋಧಿಸಬೇಕು (ಸಾಹಿಜೀ. ೭೮). ೬. ತೋರು ; ಉಂಟಾಗು : ಬೇಟಕ್ಕೆ ತವದ ಕೂಟಂ ಕೂಟಕ್ಕೆ ತನೂಜನಾ ತನೂಜನೊಳು ಮುದ್ದಾಟಂ ಫಲಮದೆ ತಮ್ಮೊಳ್ ನಾಟದು ಗಡ ಪೆಱವು ಸುಖದಾಗಳೊಳೇನೋ (ಚಂದ್ರಪು. ೩-೪೩) ; ಕಿಡಿನಾ[ಪಾಠಾಂ. ದಾ]ಟದವು ಕಂಗಳಲಿ ಕಾಳಿಕರೋಟಿ ಮಾಲಾಧರನವೊಲು ಮುಳಿದೆದ್ದನಸುರೇಂದ್ರ (ಕೊರರಾ. ೬-೦೭-೭). ೭. ಒಗ್ಗು ; ಹೊಂದಿಕೆಯಾಗು : ಈ ಔಷಧಿ ಅವರ ಮೈಗೆ ನಾಟುವುದಿಲ್ಲ (ರೂಢಿ). ೮. (ಆಲಂ) ಶಕ್ತವಾಗು ; ಸಮರ್ಥವಾಗು : ಫಣಿಪತಿಗೆ ನಾಲಗೆ ನಾಟದೆಣಿಸಲು ಗಣನೆಯಿಲ್ಲದ ರಾಮಸೈನಿಕವ (ತೊರರಾ. ೪-೭-೨೫).

[ ದೇ.8 ತಮಿ. ಮಲ. ನಾಟ್ಟು : ತುಳು. ತೆಲು. ನಾಟು ]

ನಾಂಟುಗೊಳ್ (ಕ್ರಿ). ಬೇರೂರು ; ನಾಟಿಕೊಳ್ಳು ; ನೆಲಸು ; ಸ್ಥಿರವಾಗು : ಸಿರಿ [ಟಿ³ಾಪ್ಪು]ಗೊಂಡುದು ನಯಂ ನೆಲೆಗೊಂಡು ನನ್ನಿ ನಾಂಟುಗೊಂಡುದು (ಸೌಇಇ XV, ೨೦೭-೦೪ ; 1205). [ ನಾಂಟು + ಕೊಳ್$_1$ ]

ನಾಂಟ್ಯ (ನಾ). ನಾಟ್ಯ ; ನರ್ತನ : ನಂದಿಕೇಶ್ವರ ಭೃಂಗಿ ನಾಂಟ್ಯ ನಮ್ಮ ಲಿಂಗದ ಮುಂದೆ (ಬಸವ. ೫೬೩) ; ಬಂದ ಬಹುರೂಪಿ ನಿಂದ ಕೈಯೊಳು ಸಂದ ಪುರಾತನರು ಕೇಳಿ ಕಂದರ್ಪನ ಕೊಂದು ನಿಂದು ನಾಂಟ್ಯವನಾಡಿ ದಂದುಂದಿನ ಬಹುರೂಪನಾಹೋ (ಶಿವಗೀ. ೧೭೯-೮೮೩) : ನಾಂಟ್ಯ[ಪಾಠಾಂ. ನಾಟ್ಯ]ವಾಡುವ ಭೃಂಗಿಪನ ಕಂಡು ಪರಶಿವಂ ನಸುನಗುತಿರೆ (ಪ್ರಭುಪು. ೩-೬೯) : ತಾಂಡವ ನಾಂಟ್ಯ ನೃತ್ಯ ಲಾಸ್ಯ ಗುಂಡಲಿ ಪಿಕ್ಕಣ ಲಚ್ಚಣ ಅಪರಿಪಾತ್ರ ಸುಪಾತ್ರ ಸರ್ವತೋಭದ್ರಯೆಂಬ ದಶಪಾತ್ರಂಗಳ ತೋಱಿ³ (ಭೈರಪು. ೧-೭೦ ವ). [ <ಸಂ. ನಾಟ್ಯ ]

ನಾಂಡರಸ 'ನಾಡರಸು' ನೋ.

ನಾಂಡು 'ನಾಡು' ನೋ.

ನಾಂಡೆಱೆ³ಯ 'ನಾಡೆಱೆ³ಯ' ನೋ.

ನಾಂತ (ಗು). ೧. ನಕಾರವು ಕೊನೆಯಲ್ಲಿರುವ: ನಾಂತಾವ್ಯಯಪದಕ್ಕಮನುಕೃತಿಪದಕಂ (ಶಮದ. ೧೯೩). (ನಾ). ೨. ನಕಾರವು ಕೊನೆಯಲ್ಲಿರುವ ಪದ : ನೆಗಟ್ದಿರ್ದ ರೇಫ ಟಟ ನಾಂತ ಗಾಂತ ಸಾಂತತೋತ್ವದಿದಿರ ವತ್ವಂ ಪತ್ವಂ (ಶಮದ. ೨೩೨). [ ನ + ಅಂತ$_2$ ]

ನಾಂದ 'ನಾನ್$_1$' ಪರಾ.

ನಾಂದಿ$_1$ 'ನಾಂದು$_1$' ಪರಾ.

ನಾಂದಿ$_2$ (ನಾ). ೧. ವಿವಾಹ ಮೊದಲಾದ ಶುಭಕಾರ್ಯಗಳ ಅಂಗವಾಗಿ ಅವುಗಳ ಪ್ರಾರಂಭದಲ್ಲಿ ಪಿತೃದೇವತೆಗಳ ಪ್ರೀತ್ಯರ್ಥವಾಗಿ ಮಾಡುವ ಒಂದು ಸಾಂಪ್ರದಾಯಿಕ ವಿಧಿ : ನಾಂದಿಗೆ ಕೂಡಿದ ಮಂದಿ ಪ್ರಸ್ತಕ್ಕೆ ಕೂಡೀತೇ ? (ಗಾದೆ) : ಕಟ್ಟಿದ ಲಗ್ನದಲ್ಲಿ ಧಾರೆಯಾಗಬೇಕು. ನಾಂದಿ, ನವಗ್ರಹ ಎಲ್ಲ ಬೇಗ ಆಗಿಬಿಡಬೇಕು ಗುರುಗಳೇ (ರೂಢಿ). ೨. [ಕಾವ್ಯವಿ] ನಾಟಕ, ಕಾವ್ಯ ಮೊದಲಾದುವುಗಳ ಪ್ರಾರಂಭದಲ್ಲಿ ಬರುವ ಮಂಗಳ ಪದ್ಯ; "ನಾಂದಿ ದೇವತಾಸ್ತೋತ್ರರೂಪವಾಗಿಯೂ ರಾಜನ ಪ್ರಜೆಮುಂತಾದವರಿಗೆ ಆಶೀರ್ವಾದರೂಪವಾಗಿಯೂ ಇರತಕ್ಕ ವಚನ" (ಕೈಬಿಡಿ. ೨೧೨); P ಕಾವ್ಯಮೀಮಾಂಸೆಯಲ್ಲಿ ಈ ಬಗೆಗೆ ಅನೇಕ ಚರ್ಚೆಗಳು ನಡೆದಿವೆ. ನಾಂದೀಶ್ಲೋಕದ ಕಥಾಂಶ, ಪದನಿಯಮ ಇತ್ಯಾದಿಗಳಲ್ಲಿ ಭಿನ್ನಾಭಿಪ್ರಾಯವುಂಟು. ನಾಂದಿಯಲ್ಲಿ ಆಶೀರ್ವಚನ, ನಮಸ್ಕಾರ ಮತ್ತು ವಸ್ತುನಿರ್ದೇಶವೆಂಬ ಮೂರು ವಿಧಗಳಿವೆ : ನಾಂದಿಯಿನನಂತರಂ . . . ಬಲ್ಲಾಳದೇವನನ್ವಯಕಥನಂ (ಯಶೋಚ. ೧-೬); ತಾಳಮಾರ್ಗಗಳನ್ನನುಸರಿಸಿ ವಿಧಿಸಲ್ಪಟ್ಟ ನಾಂದಿಯನ್ನು ಕೂಡ ಸಂಸ್ಕೃತ ನಾಟಕಕರ್ತರು ಒಂದು ವೃತ್ತವಾಗಿ ಬದಲಾಯಿಸಿಕೊಂಡರು (ಸಾಹಿಜೀ. ೧೮). ೩. ಸಂತೋಷ; ಆನಂದ; ಸಂತೃಪ್ತಿ. ೪. (ಆಲಂ) (ಶುಭಕಾರ್ಯದ) ಆರಂಭ; ಮೊದಲು; ಪ್ರಾರಂಭ: ವಿಜಯಪ್ರಸ್ಥಾನನಾಂದೀನಿನದಾನಂದಿತ ದಿಕ್ಪಾಲಚಕ್ರನುಂ . . . ಮೇದಿನೀಚಕ್ರನುಂ (ಆದಿಪು. ೧೪-೯೧ ವ) ; ಭರತವಾಕ್ಯಮಾ ಐಹಿಕದ ನಾಟಕಕೆ ತಾನಾದೊಡಂ ಮೃತ್ಯು ತಾಂ ನಾಂದಿಯೈಸಲೆ ಪೇಳ್ ಅಲೌಕಿಕಕೆ ? (ಶ್ರೀರಾಮಾ. ೧೧೯-೨೦೬): ಜತೀಂದ್ರನ ಬಲಿದಾನವೇ ಭಾರತದ ಸ್ವಾತಂತ್ರ್ಯಘೋಷಣೆಗೆ ನಾಂದಿಯಾಯಿತು (ಅಶ್ವರ್ಥ. ೦೩೧) ; ಅನಾಗರಿಕ ದಾಸ್ಯಪದ್ಧತಿಯ ಅವನತಿಗೆ ಅದು ನಾಂದಿಯಾಗಿತ್ತು (ಪುನರು. ೨೬೨). [ ಸಂ. ನಾಂದೀ ]

ನಾಂದಿಸು, ನಾದಿಸು$_1$ (ಕ್ರಿ). ನೆನೆಸು ; ಒದ್ದೆಮಾಡು ; ತೋಯಿಸು : ಪ್ರೇಮಪೀಯೂಷದಿಂ ಪಿರಿದುಂ ನಾಂದಿಸುವಂತೆ ಮಾಣ[ದೊಲವಿಂದಾದೇವಿ] ಪೊಯ್ದಳ್ ಮಹೀವರಶೋಭಾಂಗದ ಮೇಲೆ ಲೀಲೆಯೊದವಿಂ ಕರ್ಪೂರಪೂರಾಂಬುವಂ (ಕುಸುಮಾ. ೫-೦೪೬). ನಾದಿಸು$_1$ : ಎಲೆ ಮರುಳೆ ನಿನ್ನೊಡಲ ಸೀಳಿಯೆ ತಿಳಿರಸಂತದಲಿ ತಾಯ ತುಱುಬನು ನಾದಿಸುವೆನೆಂದ (ಕುಮಾದ್ರೋ. ೫-೪೪). [ ನಾಂದು$_1$ + – ಇಸು$_3$ ]

ನಾಂದೀಕರ (ನಾ). ಮಂಗಳಪದ್ಯಗಳನ್ನು ಹಾಡುವವನು ; ಮಂಗಳಪಾಠಕ : "ನಾಂದೀವಾದೀ, ನಾಂದೀಕರಃ – ೨ ಆಶೀರ್ವಾದದಿಂದ ಕೂಡಿದ ದೇವತಾದಿಗಳ ಸ್ತೋತ್ರವನ್ನು ಮಾಡುವ ಪಾಠಕರು" (ಸಿದ್ಧಾಂತಿ. ೨೮೮).

[ ಸಂ. ]

ನಾಂದೀದೇವತೆ (ನಾ). ನಾಂದಿ ಎಂಬ ಶುಭಕಾರ್ಯದ ಪ್ರಾರಂಭದಲ್ಲಿ ಉದ್ದಿಷ್ಟರಾದ ಪಿತೃದೇವತೆಗಳ ವರ್ಗ; P ಪ್ರಪಿತಾಮಹಿ, ಪಿತಾಮಹಿ, ಮಾತೃ-ಪ್ರಪಿತಾಮಹ, ಪಿತಾಮಹ, ಪಿತೃ-ಮತ್ತು ಸಪತ್ನೀಕರಾದ ಮಾತಾಮಹವರ್ಗ–ಇವರೆಲ್ಲ ಈ ವರ್ಗಕ್ಕೆ ಸೇರುತ್ತಾರೆ : ನಾಂದೀದೇವತೆಗಳು ಮೊದಲು ತೃಪ್ತರಾದರೆ ಮುಂದಿನ ಕರ್ಮಕ್ಕೆ ಮಾರ್ಗವಾಗುತ್ತದೆ (ರೂಢಿ). [ ಸಂ. ನಾಂದೀದೇವತಾ ]

**ನಾಂದೀಪದ** (ನಾ). ಮಂಗಳಗೀತ ; ಗ್ರಂಥಾರಂಭದಲ್ಲಿ ಬರುವ ಮಂಗಳ : ರಸಮುಂ ಭಾವಮನರ್ಥಮುಂ ರಚನೆಯುಂ ಕಾವ್ಯಜ್ಞರಾರಯ್ದು ಭಾವಿಸಿ ನಾಂದೀಪದ ನಾಯಕಾಭ್ಯುದಯಪರ್ಯಂತಂಬರಂ ಕೂಡೆ ಶೋಧಿಸಿ ನೋಟ್ಕೀ ರಘುವಂಶರಾಮಕೃತಿಯೊಳ್ ಪತ್ತೆಂಟು ಪದ್ಯಂಗಳಂ (ಪಂರಾಮಾ. ೧-೩೩) ; ನಾಂದೀಪದವ ಪಾಡಿದನು ನಂಬಿ ಶಂಭುವಿನಿದಿರೊಳು (ಸಾಂದಪು. ೫-೨೬). [ ಸಂ. ]

**ನಾಂದೀಪದ್ಯ** (ನಾ). = ನಾಂದೀಪದ : ನಾಟಕದ ಪ್ರಾರಂಭದಲ್ಲಿ ನಾಂದೀ ಪದ್ಯವನ್ನು ಹಾಡಿದರು (ರೂಢಿ). [ ಸಂ. ]

**ನಾಂದೀಮುಖ** (ನಾ). ೧. ವಿವಾಹವೇ ಮೊದಲಾದ ಶುಭಕಾರ್ಯಕ್ಕೆ ಮೊದಲು ಮಾಡುವ ನಾಂದೀಕರ್ಮದಲ್ಲಿ ಆವಾಹಿಸಲ್ಪಡುವ ಪಿತೃಗಳ ವರ್ಗ ; ನಾಂದೀಶ್ರಾದ್ಧದಲ್ಲಿ ಉದ್ದಿಷ್ಟರಾದ ಪಿತೃಗಳು. ೨. = ನಾಂದೀಶ್ರಾದ್ಧ : ನಾಂದೀಮುಖಮಂ ನಿರ್ವರ್ತಿಸಿ ಶುಭಲಕ್ಷಣಲಕ್ಷಿತನುಂ ಸನ್ನಾಹಕರ್ಮನಿರ್ಮಿತನುಂ . . . ಭದ್ರಮನನುಮಪ್ಪ ವಿಜಯಗಜಮುಮಂ . . . ಅರ್ಚಿಸಿ (ಪಂಪಭಾ. ೧೦-೪೬ ವ) ಆಕೆಗೀ ಜನಕಥಾನಾಂದೀಮುಖಂ ಮುಖ್ಯಮಂಗಳಮರ್ಹತ್ಪತಿ ಮಂಗಳಂ . . . ಧರ್ಮಂ ಮಹಾಮಂಗಳಂ (ಅರ್ಧನೇ. ೧-೨೧) ; ಗೋವಿಂದ ನಾಂದೀಮುಖವನು ವಿರಚಿಸಿ ವಿಪ್ರರಿಂದ ತನುಜೆಯ ಶೃಂಗರಿಸುವುದೆಂದು ಕೆಳದಿ ಜನಕ ವೇಳಲು (ಜೀವಸಾಂ. ೧೬-೩೧). [ ಸಂ. ]

**ನಾಂದೀವಾದಿ** (ನಾ). = ನಾಂದೀಕರ : “ನಾಂದೀವಾದೀ. ನಾಂದೀಕರಃ – ೨ ಆಶೀರ್ವಾದದಿಂದ ಕೂಡಿದ ದೇವತಾದಿಗಳ ಸ್ತೋತ್ರವನ್ನು ಮಾಡುವ ಪಾಠಕರು” (ಸಿದ್ಧಾಂತಿ. ೨೮೮). [ ಸಂ. ನಾಂದೀವಾದಿನ್ ]

**ನಾಂದೀವಿಧಿ** (ನಾ). ೧. = ನಾಂದಿ$_2$. ೨. [ಕಾವ್ಯಮಿಾ] ಅಭಿನಯಕ್ಕೆ ಪೂರ್ವಭಾವಿಯಾಗಿ ಮಾಡುವ ಮಂಗಳಾಚರಣೆಗೆ ಸಂಬಂಧಪಟ್ಟ ಕಾರ್ಯಕಲಾಪ : ಶುದ್ಧಚಿತ್ರಮೆಂಬ ಪೂರ್ವರಂಗಪ್ರಸಂಗದೊಳ್ ಜರ್ಜರಪೂಜಾಮಂಗಳ ಪದೋಚ್ಚಾರಣಪುಷ್ಪಾಂಜಲಿ ವಿಕ್ಷೇಪಣಾದಿ ನಾಂದೀವಿಧಿಯಂ ನಿರ್ವರ್ತಿಸಿ (ಆದಿಪು. ೭-೧೧೯ ವ). [ ಸಂ. ]

**ನಾಂದೀಶ್ರಾದ್ಧ** (ನಾ). ಮಂಗಳಕಾರ್ಯಗಳಿಗೆ ಪೂರ್ವಭಾವಿಯಾಗಿ ನೆರವೇರಿಸುವ ಪಿತೃಕ್ರಿಯೆ : ಆಮೇಲೆ ನಾಂದೀಶ್ರಾದ್ಧವನ್ನು ಮಾಡಿ ಯಾವತ್ತು ಜಾತಕರ್ಮವಿಧಿಯನ್ನು ಮುಗಿಸಿದರು (ತುಳಸೀ. ೫೬). [ಸಂ.]

**ನಾಂದೀಸ್ಥಾಪನೆ** (ನಾ). ನಾಂದೀಕರ್ಮದಲ್ಲಿ ಮಾಡುವ ಪಿತೃದೇವತೆಗಳ ಆವಾಹನೆ : ಮುಂಜಿವಿಯ ನಾಂದೀಸ್ಥಾಪನೆಯ ಕಾಲಕ್ಕೆ ಟಳಕರಿಂದ ಮಾರುದ್ದದ ನಾಲ್ಕು ಪತ್ರಗಳು ಬಂದು ಸೇರಿದವು (ಸ್ಮೃತಿಚಿ. ೨೨೫).

[ ಸಂ. ನಾಂದೀಸ್ಥಾಪನಾ ]

**ನಾಂದು$_1$, ನಾದು$_2$** (ಕ್ರಿ). ನಾಂದಿ$_1$ (ಭೂತಸ್ನ್ಯ). ೧. ಒದ್ದೆಮಾಡು ; ತೋಯಿಸು ; ನೆನೆಸು : ಅತಿವಿಶದವಿಶಾಲೋರುಕ್ಷತದಿಂದೊಜೆದನಿತು ಜಡೆಯುಮಂ ನಾಂದಿ ಮಸಣಕ್ಷತದೊಡನಟ್ಟಿ ಜಿಸಿದುದು . . . ಗಂಧಂ (ಪಂಪಭಾ. ೧-೧೧೫) : ಪೊರೆದ ಪುಡಿಯನೊಡನೊಡನೆ ಬೆಮರ ಬಿಂದುಗಳ್ ನಾಂದೆ(ವರ್ಧಪು.೯-೬೦ ವ) ; ವಹ್ನಿಸಖ ನಾನೆಂಬೊಂದಹಂಕಾರಮಂ ತಳೆದಾ ಮಾರುತನಂ ಕರಂ ಪಿಡಿದು ತನ್ನೆಕ್ಕಿಲ್ಗಳಿಂ ನಾಂದಿ ಸಂಚಳನಂ ಮಾಡಿ ತದಾಪ್ಯನಿರ್ಮ ಮುಟಿದೇಂ ಪರ್ಬಿತ್ತೊ ಹೃಮಾಗಮಂ (ರಾಜಶೇ. ೯-೭). ೨. ಒದ್ದೆಯಾಗಂ ; ತೋಯಂ ; ನೆನೆ : ಬಿಸಿಲಿಂ ಕಂದದ ಬೆಂಕಿಯಿಂ ಸುಡದ ನೀರಿಂ ನಾಂದದುಗ್ರಾಸಿ ಭೇದಿಸಲುಂ ಬಾರದ ಚಿನ್ಮಯಂ (ರತ್ನಾಶ. ೮). ೩. ಕರಗು ; ದ್ರವರೂಪ ತಾಳು ; ನೀರಾಗು: “ನಾಂದು–ದ್ರವೀಕರಣೇ” (ಶಮದಾ) ; ನಿತ್ಯಬಿಂದುಗಳ್–ನಾಂದು, ಕಡುಂಬು (ಶಮದ. ೩೬ ಪ್ರಯೋ). ೪. (ಆಲಂ) ಆರ್ದ್ರಗೊಳಿಸು ; ಮೃದುಗೊಳಿಸು : ಅರಸನ ಕಣ್ಣುಗಳಿಂದ ಚಿಮ್ಮಿದ ಅಶ್ರುಗಳು ವೀರಣ್ಣನ ಎದೆಯನ್ನು ನಾಂದಿದುವು (ಹಾಕುತ್. ೧೦೧). ನಾದು$_2$ : ೧. ಇನಸಂದನನು . . . ಸರಳಮಂಚವ ಹೊದ್ದಿ ಭೀಷ್ಮನ ಚರಣಕಮಲವ ಒಡಿದು ನೊಸಲಿನೊಳೊರಸಿಕೊಂಡನು ನಾದಿದನು ಕಂಬನಿಯೊಳಂಘ್ರಿಗಳ (ಕುಮಾರವ್ಯಾ. ೧-೨೧) ; ಕಡಲಿಡುವ ನಯನಾಮೃತಾನಂದಾಶ್ರುಪೂರದಲಿ ಅಡಿಗಳನು ನಾದಿದನು (ನಿಜಾಗ. ೬-೧೫-೬); ರುಧಿರದಿಂ ನಾದಿದಂ ಧರೆಯನುಸಿರ್ಗಾಳಿಯಿಂದಂ ಪಾಜಿಲೂದಿದಂ ರಣದೊಳ್ಪಿಣದ ರಾಶಿ ಮಾಡಿದಂ ಪರಬಲದೊಳಾ ಭೀಮನು (ಜೈಮಿಭಾ ೭-೪೭). ೩. ತೊಡೆ ; ಪೂಸು ; ಬಳಿ ; ಲೇಪಿಸು : ಚಂದನಸೌರಭ ದೇಹಿಯ ಪದನಾರವಿಂದಕೆ ಪನ್ನೀರ ನಾದಿ (ಮೋಹತ. ೯-೩೦).

[ < ನಾನ್$_1$ ]

**ನಾಂದು$_2$** ‘ನಾನ್$_1$’ ಪರಾ.

**ನಾಂದೂರ್** (ನಾ). ಒಂದು ಊರಿನ ಹೆಸರು : ಖಣ್ಡಸ್ಫುಟಿತ ನವಕರ್ಮ್ಮದೇವಾರ್ಚ್ಚನಾಸತ್ರ ವೃತ್ತಿಗೆ ಸೀರೆನಾಡ ನಾನ್ದೂರನಿತ್ತಂ (ಎಕ. XII, ಶಿರಾ. ೩೮-೩೦ ; 878). [ ? +ಊರ್ ]

**ನಾಂಬ$_1$** (ನಾ). ಆಲಸ್ಯಸ್ವಭಾವದವನು ; ಸೋಮಾರಿ ; ಅಲಸ : “ಸೋಂಬನೆಂದುಂ ನಾಂಬನೆಂದುಂ ಅಲಸುಗೆಕಾಜಂ” (ಶಶಸಾ. ೧೮-೩೬೦) ; “ನಾಂಬಂ ಸೋಂಬನುಮೆನಲ್ಕಮಲಸುಕೆಗಾಜಂ” (ಕವಿಕಂ. ೦೫೫) ; “ನಾಂಬನೆನೆ ಮೈಗಳ್ಳ” (ಕಶಶ. ೫೩) : ಕೆಲಸಮನೇನುಮನೊಡರಿಸದಲಸತೆಯುಂ ಬಯಸಿ ಬಾಟ್ಟ ನಾಂಬರ್ . . . ವಿಗರ್ಹಣಮನಾಲಿಪರ್ ಪ್ರಿಯಸಖರಿಂ (ನೀತಿಮುಂ. II, ೩೨೭). [ ನಾಂಬು + – ಅ$_6$ ]

**ನಾಂಬ$_2$** ‘ನಾನ್$_1$’ ಪರಾ.

**ನಾಂಬು** (ಕ್ರಿ). ಸೋಮಾರಿಯಾಗು ; ಜಡನಾಗು ; ಅಲಸನಾಗು : “ನಾಂಬು– ಆಲಸ್ಯೇ” (ಶಮಧಾ) ; ಇರುಳ್ ಕ್ರಿಯಾಮಮುದರ ಮೊದಲಂ ಕಳೆ ಯೋಗದೊಳ್ ಮತ್ತಂ ಮಯ್ದಣುವಾರಲ್ಕೆ ಮಲಂಗಾದೊಡೆ ನಾಂಬದಿರ್ (ಸಾನಂದ. ೧೪-೩೨) : “ನಿದ್ರಿಸು” (ಸಾನಂದ. ಕೋಶ) : ಕುಡು ನೀಂ ನಾಂಬದೆ ಹೇ ವಿಧಾತ್ರ (ಸಂಸಪ. ೧೬-೯).

[ ದೇ.೫ ತಮಿ. ನಾಮ್ಪು = ತಳ್ಳಿಗಾಗು ]

**ನಾಕ** (ನಾ). ೧. ದೇವತೆಗಳು ವಾಸಿಸುವ ಲೋಕ; ಸ್ವರ್ಗ; P ಪುಣ್ಯವಂತರು ಸತ್ತ ಮೇಲೆ ಪಡೆಯುವರೆಂದು ನಂಬಲಾದ ಊರ್ಧ್ವಲೋಕ : “ನಾಕಂ ತ್ರಿವಿಷ್ಟಪಂ ದಿವಮೆಂದಿಂತಿದು ತಾನಮರ್ತ್ಯಭವನಂ” (ವಸ್ತುಕೋ. ೭-೩೦) : ನಾಕದಿನಿಳಿತಂದುದೊ ಫಣಿಲೋಕದಿನೊಗೆತಂದುದೊ ವಸುಂಧರೆಗಾಗೀ ಲೋಕ ಬಣ್ಣಿಸೆ ತಾರಕ ಶ್ರೀಕಣ್ಠ × × × ಮನ್ ಎಸೆವಿನಂ ಮಾಡಿಸಿದಂ (ಎಕ. VIII, ಸೊರಬ. ೨೮೭-೪೭ ; 1168) ; ನಾಕಮುಂ ನಗುವ ನಗರಂಗಳಪ್ಪೋಜೆಯಿಂ ಎಮೆಯಿಕ್ಕಲಿಂಬಿಲ್ಲದಿರ್ಪ ಶಿವಭವನದಿಂ (ತಿರುರ. ದೇ. ೨-೪) ; ಯಶೋಧರಂ ಸುಖದಿಂದಿರ್ಪ ನಾಕದೊಳೆಂದೊಲ್ದಪರ್ (ಯಶೋಚ. ೩-೫೨) ; ತಂದೆಯೆಂದುದೆ ವೇದಸಮ್ಮತವೆಂದು ರಣದಲಿ ಕಾದಿ ಮಡಿದನು ಇಂದ್ರಜಿತು ನಾಕವನು ಹೊಕ್ಕನು ಸಕಲದಳ ಸಹಿತ (ತೊರಿರಾ. ೩೬ ಸೂಚನೆ) ; ಕಮಲದಂದದಿ ಶ್ರೀನಿಳಯ ನಾಕದವೊಲು ಸುಮನಸಮಾಲಾಭರಿತ ಕುಮುದದವ ತಳೆದಿಹುದು ನಿರುತಿಯ ದೆಸೆಯೊಲು (ಜೀವಂಸಾಂ. ೯–೮೧) ; ನಾಕ ನರಕಂಗಳಂ ಏಕವೆನಿಪುವು ನಿನಗೆ (ಮಂಕುಕ. ೩೪೦) ; ಲೋಕ ಹಾಳಾದರೆ ನಾಕ ಹಾಳಾದೀತೆ ? (ಗಾದೆ). ೨. ಬಾನು ; ಆಕಾಶ. ೩. ಭೂಮಿ : “ನಭದಲ್ಲಿ ಅನಿಮಿಷಾಲಯದಲ್ಲಿ ಧರೆಯಲ್ಲಿ ನಾಕವೆಂದೆನಿಸುವುದು” (ಮಂಗರಾ.೦೩೯-೭). ೪. ವಾಯುಮಂಡಲ ; ವಾತಾವರಣ : (ಕ). ೫. [ಛಂದ] ಮೂರು ಲಘುಗಳಿಂದ ಕೂಡಿರುವ ಒಂದು ಅಕ್ಷರಗಣ; ನಗಣ (U U U): ಮೂಱು ಲಘುವಿಂ ನಾಕಂ (ಛಂದೋಂಬು. ೧-೩೮).

[ ಸಂ. ]

**ನಾಕಚಾಪು** ‘ನ್ಯಾಪ್‌ಜಾಕ್’ ನೋ.

**ನಾಕಚಿಕುರ** (ನಾ). ಆಕಾಶವೇ ತಲೆಗೂದಲಾಗಿರುವವನು ; ವ್ಯೋಮಕೇಶ ; ಶಿವ : ಶ್ರೀಗುರು ಶಂಕರ ಶುಭಕರ ನಾಗಾಲಂಕಾರ ನಾಕಚಿಕುರ ಮಹೇಶಂ . . . ಇರ್ಕೆಮ್ಮ ಚಿತ್ತನಾಕದೊಳನಿಶಂ (ಧರ್ಮ್ಮಾರ. ೪-೧).
[ ನಾಕ + ಚಿಕುರ ]

**ನಾಕಚ್ಯುತ** (ನಾ). ಸ್ವರ್ಗಲೋಕದಿಂದ ಹೊರಕ್ಕೆ ಬಂದವನು ; ಸ್ವರ್ಗಲೋಕದ ವಾಸ ಮುಗಿದ ಮೇಲೆ ಭೂಮಿಯಲ್ಲಿ ಹುಟ್ಟಿದವನು : ನಾಕಚ್ಯುತಂ ಶ್ರೀಕಂಠನಾಗಿ ತದಚ್ಯುತೇಂದ್ರದರ್ಶನಜನಿತಜಾತಿಸ್ಮರಂ (ಶಂರಾಮಾ. ೧೦-೧೧೬ ವ). [ ನಾಕ + ಚ್ಯುತ ]

**ನಾಕಜ** (ನಾ) ಸ್ವರ್ಗಲೋಕದಲ್ಲಿ ಹುಟ್ಟಿದವನು ; ದೇವತೆ : ಸಂದಯದ ಮನದ ನಾಕಜಸಂದೋಹದ ಬಗೆಯಸಘಹರಂ ಕಳೆಯಲ್ (ಶಾಂತಿಪು. ೧೦-೪೩) ; ನಾಕಜರಜನಿರ್ಕೆಲಂ ಬಿಡಿದವೇಂ ನಡೆಗೊಂಡರೊ ಮೇಘಮಾರ್ಗದೊಳ್ (ಜಗವಿ. ೧-೪೧). [ ಸಂ. ]

**ನಾಕಜನಾಥ** (ನಾ). ದೇವತೆಗಳ ಒಡೆಯ ; ಇಂದ್ರ: ಸ್ಫಟಿಕಕಳಶಮಂ ತೀವಿ ದಿವ್ಯಾಂಬುವಿಂ ನಾಕಜನಾಥಂ ಮಜ್ಜನಕ್ಕೆತ್ತಿದ ತೆಱದೆ ಸುಧಾಸೂತಿ ಕಣ್ಗೆಡ್ಡ ಮಾದಂ (ಆದಿಪು. ೧೨-೮). [ ನಾಕಜ + ನಾಥ ]

**ನಾಕಜಮಂತ್ರಿ** (ನಾ). ದೇವತೆಗಳ ಮಂತ್ರಿ ; ಬೃಹಸ್ಪತಿ ; ಗುರು : ನಾಕಜಮಂತ್ರಿ ಪ್ರಾಟೋದಯಂ ನೆಗೞ್ವಿನಂ ತನ್ನುಚ್ಚದೊಳ್ ಪುಟ್ಟಿದಳ್ (ಅಜಿಪು. ೧೨-೫೨). [ ನಾಕಜ + ಮಂತ್ರಿ ]

**ನಾಕಜಾಪಗೆ** (ನಾ). ದೇವಲೋಕದಲ್ಲಿ ಹುಟ್ಟಿದ ನದಿ ; ಗಂಗಾನದಿ : ಹಿಮವತ್ಕುತ್ಕೀಲದಿಂ ನಾಕಜಾಪಗೆಯುಂ ತಾಟಿನಮಾಳ್ಕಂ (ಅಟ್ಟಮು. ೮-೧).
[ ಸಂ. ನಾಕಜಾಪಗಾ ]

**ನಾಕಡಿ** 'ನಾಲ್ಕಡಿ' ನೋ.

**ನಾಕತರಂಗಿಣಿ** (ನಾ). = ನಾಕಜಾಪಗೆ : ನಾಕತರಂಗಿಣೀಪ್ರವಾಹದೊಳ್ . . . ಪೊಳೆಯುತಿರ್ಪುದು ಚಂಡಮರೀಚಿಮಂಡಲಂ (ಜಗವಿ. ೪-೬೧).
[ ನಾಕ + ತರಂಗಿಣಿ ]

**ನಾಕನಾಯಕ** (ನಾ). ಸ್ವರ್ಗಲೋಕದ ಅಧಿಪತಿ ; ಇಂದ್ರ : ಆ ಜಂಬೂದ್ವೀಪದ ನಟ್ಟನಡುವೆ . . . ಅನೇಕ ನಾಕನಾಯಕಲೋಕಪಾಲಲೀಲಾಭವನಾಧ್ಯಾಸಿತಮುಂ (ಆದಿಪು. ೧-೪೯ ವ) ; ನಾಕನಾಯಕಂ ತ್ರಿಲೋಕಗುರು ಸವಿತ್ರಿಗೆ ಸೀಯನಪ್ಪ ಗೇಯದಿಂ ಪೊಟ್ಟುಗಳೆಯಲ್ ನಿಯಮಿಸಿದಂ (ಶಾಂತಿಪು. ೯-೧೬೮ ವ). [ ನಾಕ + ನಾಯಕ ]

**ನಾಕನಾರಿ** (ನಾ). ಒಂದು ಬಗೆಯ ಗಿಡ ; ಸಹದೇವಿ : "ನಾಕನಾರಿ [ಪಾಠಾಂ. ನಾಕರಿ]ಯೆನೆ ಸಹದೇವಿಯಕ್ಕು" (ಮಂಗರಾ. ೩೮-೨೫). [ ? ]

**ನಾಕನಿತಂಬಿನಿ** (ನಾ). ಸ್ವರ್ಗಲೋಕದ ಮಹಿಳೆ; ದೇವತಾಸ್ತ್ರೀ; ಅಮರಿ: ಝೊಂಬಿಸಲಿ ಕೌರವರು ನಾಕನಿತಂಬಿನಿಯರಳಕವನು (ಕುವ್ಯಾಗ. ೧೧-೫೦).
[ ನಾಕ + ನಿತಂಬಿನಿ ]

**ನಾಕನಿವಾಸಿ** (ಗು). ಸ್ವರ್ಗಲೋಕದಲ್ಲಿ ವಾಸಿಸುವ : ಆ ಸುರಾರಿಪ್ರಮುಖ ಯಕ್ಷರಿಗಾಸೆ ಕರ್ಣನ ಮೇಲೆ ನಾಕನಿವಾಸಿನಿರ್ಜರನಿಕರವಾದುದು ನರನ ಕೈವಾರ (ಕುವ್ಯಾಕ. ೨೨-೪). [ ಸಂ. ನಾಕನಿವಾಸಿನ್ ]

**ನಾಕನಿಳಯ** (ನಾ). ಸ್ವರ್ಗವೇ ಮನೆಯಾಗಿರುವವನು ; ಸ್ವರ್ಗಲೋಕದಲ್ಲಿ ವಾಸಿಸುವವನು ; ದೇವತೆ : ನಾಕನಿಳಯರಿಗರಿದು ನಿನಗೆ ವಿವೇಕವೆಳ್ಳನಿತಿಲ್ಲ ತೆಗೆತೆಗೆ ಸಾಕು ವಾಘೆಯ ಮರಳಿ ಒಡಿ ತೇಜಿಗಳ ಶಿರುಹೆಂದ (ಕುವ್ಯಾವಿ. ೬-೧೦) : ಏಕೆ ಸಹಜವ ಬಿಸುಟು ತಾಳಿದೆ ಸೂತರಾಕಾರವನು ಕೊಲ್ಲನು ನಾಕನಿಳಯರ ಪಕ್ಷಪಾತವನುಳಿದು ಮುಟಿಯೊಗಲು (ನಿಭಾಗ. ೩-೮-೪೧). [ ನಾಕ + ನಿಳಯ (= ನಿಲಯ) ]

**ನಾಕಪತಿ** (ನಾ). ಸ್ವರ್ಗಲೋಕದ ಒಡೆಯ ; ಸ್ವರ್ಗದ ಅಧಿಪತಿ ; ಇಂದ್ರ: ಅಪರಾಜಿತೆ . . . ವೈಜಯಂತೆಯೆಂಬಿವರಂ ನಾಕಪತಿ ನಿಯೋಜಿಸಿದಂ ವಿಷ್ಟಪತ್ರಯಾಧೀಶಜನನಿಗಿಸುವೆಸಗೆಯ್ಯಲ್ (ಶಾಂತಿಪು. ೯-೧೬೫) ; ಎಂತು ನಾಕಪತಿಗಂ ಪೌಲೋಮಿಗಂ ಪುಟ್ಟಿದೊಂ ವರಸೌಂದರ್ಯ್ಯಜಯಂತನಂತೆ . . . ಪುಟ್ಟಿದೊಂ ಸ್ಥಿರವೀ ಪಟ್ಟಣಸಾಮಿ ವಿಶ್ವವಿನುತಂ ಶ್ರೀಮಲ್ಲಿದೇವಾಹ್ವಂ (ಎಕ. II(R), ೪೫೬-೪೧ : 1195) ; ಲೋಕಹಿತಮಪ್ಪ ಕಥೆಯೆನುತ ನಂದೀಶ್ವರ ಏಕಪಾದದ ಮೂರ್ತಿಯಾದ ಶಿವನಂದವಂ ನಾಕನಿಳಯರ್ ಮೆಚ್ಚಿ ಪೇಳಿದಂ ಬ್ರಹ್ಮಜಗೆ ಹರನ ಕಥನಾಮೃತವನು (ಲಶಿಚಂ. ೨೫-೯). [ ನಾಕ + ಪತಿ$_2$ ]

**ನಾಕಪ್ರಭವ** (ಗು). ೧. ಸ್ವರ್ಗಲೋಕದಲ್ಲಿ ಹುಟ್ಟಿದ,–ಉತ್ಪನ್ನವಾದ : ನಾಕಪ್ರಭವೋದ್ಯನ್ಮಾಲೆಯಂ ಭೂಪತಿಯನೊಸೆದೊಜಿಲ್ದರ್ಚಿಸಿರ್ದಂ ಸುರೇಂದ್ರಂ (ಶಾಂತಿಪು. ೯-೯೩). (ನಾ). ೨. ಸ್ವರ್ಗಲೋಕದಲ್ಲಿ ಹುಟ್ಟಿದವನಂ. [ ನಾಕ + ಪ್ರಭವ ]

**ನಾಕಬಲಿ** (ನಾ). ವಿವಾಹದ ಅಂಗವಾಗಿ ಮಾಡುವ ಒಂದು ವಿಧಿ ; ನಾಗೋಲಿ. [ ನಾಕ + ಬಳಿ$_2$ ]

**ನಾಕಬೋವ** (ನಾ). ಒಬ್ಬಾತನ ಹೆಸರು : ಕಂಚಗಾಡ ನಾಕಬೋವಂಗೆ ಕೊಟ್ಟ ಉಂಬಳಿ ಕಂಬ ೪೦ ಕೆಯಿ (ಕಇ. IV, ೧೬-೧ ; ?). [ ? ]

**ನಾಕಭೂರುಹ** (ನಾ). ೧. ಸ್ವರ್ಗದಲ್ಲಿರುವ ಮರ ; ಕಲ್ಪವೃಕ್ಷ. ೨. (ಅಲಂ) ಉದಾರಿ ; ದಾನಿ : ಅಂಬುಜಪ್ರಿಯಕುಲಲಲಾಮನು ನಂಬಿದವಂಗೆ ನಾಕಭೂರುಹ (ಕಾಶಿರಾ. ೨೫ ಸೂಚನೆ).
[ ನಾಕ + ಭೂರುಹ ]

**ನಾಕಯ್ಯ** (ನಾ). ಒಬ್ಬಾತನ ಹೆಸರು : ಸೇನಬೋವ ನಾಕಯ್ಯಂ ಬರೆದೋಂ (ಎಕ. VIII, ಸೊರಬ. ೪೭೪-೨೭ ; 954) : ಪಡುವ ಬಸದಿಯ ಕೆಯ್ಯ[ಂ] ನಾಕಯ್ಯನ ಕೆಯಿ (ಇಆ. XXVIII, ೩೯-೨೯ ; 1077).
[ <ನಾಕಿ + ಅಯ್ಯ$_1$ ]

**ನಾಕರ** 'ನಾಂಗರು' ನೋ.

**ನಾಕರಕುಂಟೆ** (ನಾ). (ಉಕ) ಒಂದು ಬಗೆಯ ವ್ಯವಸಾಯದ ಉಪಕರಣ : (ಕ).
[ ನಾಕರ (<ನಾಂಗರು) + ಕುಂಟೆ$_1$./ಮರಾ.ನಾಂಗರಖುಂಟಾ ]

**ನಾಕರಿಪು** (ನಾ). ದೈತ್ಯ ; ರಾಕ್ಷಸ : ಭೀಕರಾಂಗವನಾಂತು ನಭದಲಿ ನಾಕರಿಪು ಕೊಂಡೊಯ್ಯುತಿರೆ . . . ಕೃಪಾಕರನು ದೈತ್ಯಾಪಹರಣಕೆ ಮಾಡಿದನು ಮನವ (ನಿಭಾಗ. ೧೦-೬-೧೧). [ ನಾಕ + ರಿಪು ]

**ನಾಕಲೋಕ** (ನಾ). ಸ್ವರ್ಗಲೋಕ : ತನಗೆ ತಾನೆ ಪೊಣ್ಮುವ ಭಯಮುಮಂ ಭೋಂಕೆನೆ ಕಂಡು ನಾಕಲೋಕಚ್ಯುತಿಯನಾಗಳಱಿದು ಮನದೊಳಳ್ಕಿ (ಆದಿಪು. ೩-೩ ವ) ; ದಿಗಂತಪರ್ಯಂತಮಾ ನಾಕಲೋಕಮೆಲ್ಲಂ ಕಿಟ್ಟಿಟ್ಟುಬರೆ (ಶಾಂತಿಪು. ೧೦-೨೧ ವ) ; ನಾಕಲೋಕಸುಖಮಂ ಕೈಕೊಂಡಳೊ . . . ಎನುತ್ತೆ ಪದಪಿಂದಾನಾಕೆಯಂ ನೋಡಿದಂ (ಕಾದಂಪೂ. ೮೦೪) ; ಆ ಮಹಾರ್ಣವಂ . . . ನಾಕಲೋಕದಂತೆ ಅನಿಮಿಷಪ್ರಕೀರ್ಣಕಮುಂ (ಜಗವಿ. ೧-೪೪ ವ). [ ನಾಕ + ಲೋಕ ]

**ನಾಕಲೋಕೇಶ** (ನಾ). ಸ್ವರ್ಗಲೋಕದ ದೊರೆ,–ರಾಜ : ಇಂದ್ರ : ನಾಕಲೋಕೇಶನೆನಿಸಿದ ಗಂಡು ಮನೋಭವನೆನಿಸಿದ ಸೊಬಗು ರೇಚಭೂಪಾಲಕನ (ಮದತಿ. ೧-೨೯). [ ನಾಕಲೋಕ + ಈಶ ]

**ನಾಕವಿಭವ** (ನಾ). ಸ್ವರ್ಗಲೋಕದ ಸಂಪತ್ತು : ದೇವರ್ ಪೊಯ್ಯದೋರಂತೆ ಪೊಣ್ಮುವ ಭೇರೀನಿನಾದಕ್ಕೆ ನಾಕವಿಭವಶ್ರೀ ವಿಸ್ಮಯಂಬಟ್ಟು (ಮಲ್ಲಿಪು. ೧೨-೧೪). [ ನಾಕ + ವಿಭವ ]

**ನಾಕಸದನ** (ನಾ). ಸ್ವರ್ಗವಾಸಿ ; ದೇವತೆ : "ಸುಪರ್ವ ನಾಕಸದನರ್ ನಿಳಿಂಪ ವಿಬುಧರು ಸುಮನಸರು ಲೇಖರೆನಲು ವಿಬುಧರ್ಗೆ ನಾಮಂ" (ಮಂಗರಾ. ೩-೮). [ ನಾಕ + ಸದನ ]

**ನಾಕಸದ್ಮ** (ನಾ). = ನಾಕಸದನ : ಕರಳಲುದ್ಯುಕ್ತರಾದರ್ ಸಭೂಭಾರ ವಿಷಾದರ್ ದೈತ್ಯಪೀಡಾಕುಪಿತನಿಜಮನಃಪದ್ಮರಾ ನಾಕಸದ್ಮರ್ (ಜಗವಿ ೧-೩೫). [ ನಾಕ + ಸದ್ಮ ]

**ನಾಕಸುಖ** (ನಾ). ಸ್ವರ್ಗಲೋಕದ ಸುಖ; ಸ್ವರ್ಗಸೌಖ್ಯ : ನಾಕಸುಖ ಶೇಷಮಂ ನಾ ಕೌ ಕ ರ್ ಬಂದದಱೊಳನುಭವಿಪ್ಪುದಱಿಂದೇಕಾಕೃತಿ ಕುರುಜಾಂಗಲಮಂ ನಾಕಮುಮದು ಕಿಱುಕುಳಂಗೆ ಬಣ್ಣಿಸಲರಿದೇ (ಶಾಂತಿಪು. ೯-೧೩೭). [ ನಾಕ + ಸುಖ ]

**ನಾಕಸ್ತ್ರೀ** (ನಾ). ಸ್ವರ್ಗಲೋಕದ ಮಹಿಳೆ; ಅಪ್ಸರೆ; ರಂಭೆ, ಊರ್ವಶಿ ಮೊದಲಾದವರು : ನುಡಿಯಿಸಿದತ್ತಾ ನಾಕಸ್ತ್ರೀಯ ಗೇಯಮಾಸ್ಥಾಯಿಕೆಯೊಳ್ (ಆದಿಪು. ೭-೧೭). [ ನಾಕ + ಸ್ತ್ರೀ ]

**ನಾಕಾಘದೂರ** (ನಾ). ಭೂಲೋಕದ ಪಾಪವನ್ನು ನಾಶಮಾಡುವವನಂ; ಲೋಕಪಾಪನಾಶಕ : ನಾಕಾಘದೂರ ಷಡ್ಲಿಂಗಾವರಣ ಸಚ್ಚಿದಾಕಾರ ವೇದಾಗಮಾದಿಬಹುಶಾಸ್ತ್ರಜ್ಞ (ಏಕೋಪು. ೧-೦).

[ ನಾಕ + ಅಘ + ದೂರ ]

**ನಾಕಾಣೆ** 'ನಾಲ್ಕಾಣೆ' ನೋ.

**ನಾಕಾಧಿನಾಥ** (ನಾ). = ನಾಕಲೋಕೇಶ : ಶ್ರೀಮನ್ನಾಕಾಧಿನಾಥಾನತ ಮಕುಟಮಣಿದ್ಯೋತಿತಾಂಘ್ರಿದ್ವಯಂ ... ಕುಡುಗೆಮಗಮೃತಾವಾಸಮಂ ವೀರನಾಥಂ (ಸುಕುಮಾ. ೧-೧). [ ನಾಕ + ಅಧಿನಾಥ ]

**ನಾಕಾಧಿಪ** (ನಾ). = ನಾಕಲೋಕೇಶ : ಆ ನಾಕಾಧಿಪನ ಸಿರಿಯ ಜಱಿದು ದಂಡವರ ವಾಹಿನಿ ಸಕಲಜನಮೋಹಿನಿ (ಭಾವಚಿಂ. ೮-೧೫). [ನಾಕ+ಅಧಿಪ]

**ನಾಕಾನೀಕ** (ನಾ). ದೇವತೆಗಳ ಸೈನ್ಯ; ಅಮರರ ಸೇನೆ : ನಿಜವಾಹನವಿಹೀನ ವಿಸ್ಮಯಸ್ಮೇರವದನಸರಸಿರುಹದ್ವಾತ್ರಿಂಶನ್ನಾಕಾನೀಕಮುಂ ಕರಮೊಪ್ಪೆ ... ಜಿನಚಂದ್ರನಘೌಘಶೇಷದೈನ್ಯದನಾದಂ (ಶಾಂತಿಪು. ೧೨-೧೯ ವ).

[ ನಾಕ + ಅನೀಕ ]

**ನಾಕಾನೋಕಹ** (ನಾ). ದೇವಲೋಕದ ಮರ; ಕಲ್ಪವೃಕ್ಷ ಮೊದಲಾದವು : ನಾಕಾನೋಕಹಸುಮನಶ್ರೀಕಂಠಾಭರಣಮಾಗೆ (ಪಂಠಾಮಾ. ೦೦-೧೧೫) ; ಅದು ಮುಕ್ತಿಪುರಕ್ಕೆ ಗೋಪುರಮದು ನಾಕಾನೋಕಹಕ್ಕೆ ಫಳಮಂಜರಿ (ಚಂದ್ರಪು. ೧೧-೩೯). [ ನಾಕ + ಅನೋ ...ೋಡಿಸಲುವ

**ನಾಕಾಪಗಾಜೂಟ** (ನಾ). ಜಟೆಯಲ್ಲಿ ಗಂಗಾನದಿಯನ್ನುಳ್ಳವನ ...ತದ ಮೇಲೆ ಧರ; ಶಿವ : ನಾಕಾಪಗಾಜೂಟನಾಜ್ಞೆಯಿಂ ಬಂದಸಿವ ಲೋಕ ...ುವ ಸ್ಥಳ : ಕಡು (ದುರುಪು. ೩-೨೮). [ ಸಂ. ] ನಾಗಂದಿಗೆಯ

**ನಾಕಾಪಗಾಧರ** (ನಾ). ಗಂಗಾನದಿಯನ್ನು ತಲೆಯಲ್ಲಿ ಧರಿಸಿ ...ಗಂದಿಗ ಮೇಲಕ ಗಂಗಾಧರ; ಶಿವ : ಹೃದಯಾಬ್ಜದೊಳಗೆ ನೆಲಸಿರ್ಪನೆನೆ ನಾ ...ನಾಗಂದಿಗೆಯಿಂದ ತೋರ್ಪುದು (ದುರುಪು. ೨-೨೪). [ ಸಂ. ] ತೂಗುಹಾಕಿದ್ದ

**ನಾಕಾರಿಸು** (ಕಿ). ನಿರಾಕರಿಸು ; ಸಾಧ್ಯವಿಲ್ಲವೆಂದಂ ಹೇ ...ಾಗಂದಿಯ ಮೇಲೆ; ಪರವಾನೇ ಕೊಡುವುದನ್ನು ನಾಕಾರಿಸಿದ್ದರೆ . . . ಅವನಿಗೆ ಅ ...ವಂದಿ : ೧. ಹುಳಿತ ಮಾಡಬಹುದು (ಕಥಾಗ. ೧೮ ಪರಿ). ...ವೆ (ಮೋಜೀವ. ೮).

[ ನಾಕಾರ್ (P ←ಮರಾ. ನಾಕಾರಣೇ) + – ...ಿ (ಗಂಗಾಮ. ೧೮೫) ;

**ನಾಕಾವಾಸ** (ನಾ). ಸ್ವರ್ಗದಲ್ಲಿ ವಾಸಿಸುವವನು ; ...ೀಲಿಟ್ಟುಬಿಡು (ಊಧ). ವಾಸರಿಭಂ ಬಲಾಹಕಕುಜಂ ವೃಂದಾರಕಾಖ್ಯಂ (ನಾನಾರ ...ೈಯನ್ನೆತ್ತಿ ಪಡಸಾಲೆಯ

[ ನಾಕ + ಆವಾಸ ] ...ಾಬೂಸ ಕೈಯಲ್ಲಿರಿಸಿದಳು

**ನಾಕಿ** (ನಾ). ಸ್ವರ್ಗದಲ್ಲಿರುವವನು ; ದೇವತೆ ...ಸು, ಬ್ರಶ್ ಮತ್ತು ಇತರ ಇಂದ್ರಾದ್ಯರ್ ಪರಮಾಕೃತಿದುರ್ಲಕ್ಷ್ಯವೆಂದೆನ ... ಮೇಲುಗಡೆಯಲ್ಲಿ ಒಂದು ನರ್ಚಿಪರ್ (ಜಗವಿ. ೩-೦೦೭) ; ನಾಕಿಗಳ ...) ಇರಬೇಕು (ಅದಾಸಾ. ೧೩). ಕಾಕುಮಾತ ಕೇಳಬಹುದೆ (ತ್ರಿಪುಸಾಂ. ೩೯ ...ಲ್ಲುಪುಡಿಯ ಡಬ್ಬವನ್ನು ತೆಗೆದು ಲೋಕಪಾಲರು ತುಷ್ಟಿವಡೆದರು (ಕಾ ... [ < ಸಂ. ನಾಗದಂತಕ ]

**ನಾಕಿಗ** (ನಾ). = ನಾಕಿ ... ನಾಕಿಗರ ಜೀವನಾಧಾರಂ (ಕಬಪು. ೩೦-೧೧). [ ನಾಕಿ + ...ಗ ]

**ನಾಕಿಗಣ** (ನಾ). ದೇವತೆಗಳ ಗುಂಪು, -ಸಮೂಹ : ... ದೋಷಾಕರನೆನಿಸಿದಂ . . . ನಾಕಿಗಣಂ ಸರ್ವಸ್ವ... ಭಂಗಕ್ಕೆ ಪಕ್ವಾದನೆಂದಾತ್ಮಗತಾವರ್ಗಾಗ್ನಿಚ್ಛಲಂಜಿ... ತೋರ್ಕುಂ ಸಮುದ್ರಂ (ಕಬಕಂ. ೧-೩೨). [ ನಾಕಿ + ಗಣ ]

**ನಾಕಿತಿ** (ನಾ). ಹೆಣ್ಣುದೇವತೆ : ದೇವಿ : ನಾಗರಿಗೆ ಮದ್ದ ಹೇಳಬಂದ ಅಯ್ಯಗಳು ನಾಕಿತಿಯ ನಟಣೆಯಲ್ಲಿ ಸಿಲುಕಿದರು (ಸಿದ್ಧೇವ. ೧೯೨-೫೮೪).

[ ನಾಕ + – ಇತಿ$_1$ (< – ಇತ್ತಿ) ]

**ನಾಕಿನಾಯಕ** (ನಾ).=ನಾಕಪತಿ : ಸಕಳೋರ್ವೀಶ್ವರ ನಾಕಿನಾಯಕ ಚಮೂಪರ್ಯುಷ್ಟಿಪಾತ್ರಂ (ಶಾಂತಿಪು. ೮-೧೨೩). [ ನಾಕಿ + ನಾಯಕ ]

**ನಾಕಿನಿಕರ** (ನಾ). ದೇವತೆಗಳ ಗುಂಪು, -ಸಮೂಹ: ಓಲಗಸಾಲೆಯೊಳವೇಕ ನಾಕಿನಿಕರಪರಿವೃತನಾಗಿರ್ಪಲ್ಲಿ (ಚಂದ್ರಪು. ೪-೭೪ ವ). [ ನಾಕಿ + ನಿಕರ$_1$ ]

**ನಾಕಿನಿಕಾಯ** (ನಾ). = ನಾಕಿನಿಕರ : ಅಂತು ಗಗನತಲದಿ ನವನೀತ ಲಕ್ಯವ ತರಿಸಿ ವಿವಿಧಮಣಿನಿಕೇತನಾಗ್ರಾವಲಗ್ನಕೇತುಮಾಲಾವಿಲಸಿತಸಾಕೇತಮಂ ಬಳಸಿ ನಾಕಿ[ಪಾಠಾಂ. ದೇವ]ನಿಕಾಯಮಿರೆ (ಆದಿಪು.೭-೪೩ ವ) : ... ನಾನಾ ಮೋನಗೊಂಡಿನಿಸಿರ್ದಧಿಪತಿಗೆ ನಿಚ್ಚಂ [ಮೆಚ್ಚಂ] ಪಡೆದು ...+ ಕನ್ನಿಕೆ ] ಕಾಯ ಮಾಮಗಲದಹೋರಾತ್ರಮೋಲಗಿ... ಪಡೆಮೆಚ್ಚೆಗಂಡನ ಗಂಡ

[ ನಾಕಿ + ನಿ... ಕನ್ನೆ ಮದನಲತೆಯೆಂಬ ನಾಗಕನ್ನೆ

**ನಾಕಿನಿಳಯ** (ನಾ). ದೇವತೆಗಳ ವಾ...ಕಕ್ಕೊಡಗೊಂಡು ಪೋಗಲ್ (ಪಂಪಭಾ. ಅನೂನಾಪ್ಸರೋಗಣಪ್ರಣೂತಮ ... ]

೩-೩೨ ವ). [ ನಾಕಿ + ನಿಳ... : ಮಧ್ಯಮಪಾಂಡವ ಅರ್ಜುನ ಉಲೂಪಿ,

**ನಾಕಿಯಚಟ್ಟಿಯ್ಯ** (ನಾ...ಕನ್ಯೆಯರ ಕೈಹಿಡಿದ ಕಥೆ ಪ್ರಸಿದ್ಧವಾಗಿಯೇ ಇವೆ ನಾಕಿಯ-ಚಟ್ಟಿಯ... [ ನಾಗ + ಕನ್ಯೆ ]

ಸೊರಬ. ೭೦ ... (ನಾ). ೧. = ನಾಗ ೨೧. ೨. [ಕಾಮಶಾ] ಸಂಭೋಗದಲ್ಲಿ

**ನಾಕಿವರ** ...ಮ ಬಂಧ : ಆ ಕಾರಣಮಂ ಪುರುಷನ ಪುರುಷನ ತಿಪದಿಂ ಪೊರದೆ ಯೆರಡು ತೊಡೆಗಳನಿಕ್ಕಿದರೆ ನಾಗಕರಣ (ಕಾಮಶಾ. ೬-೧೩೬).

[ ನಾಗ + ಕರಣ ]

**ನಾಗಕುಂಡಲ** (ನಾ). ೧. ಸರ್ಪದ ಕರ್ಣಾಭರಣ; ಹಾವಿನ ಕುಂಡಲ : ನಾಗಕುಂಡಲಂ ಪೊನ್ನೋಲೆಯಸವ ಕಱು ರನ್ನದಾಳಿ (ಹಪಕಾ. ೧-೬) : ಬಲಗಿವಿಯಲ್ಲಿ ನಾಗಕುಂಡಲ ಎಡಗಿವಿಯಲ್ಲಿ ಮಕರಕುಂಡಲವೂ ಇವೆ (ಹೊಯ್ಸಳಾ. ೯೭). ೨. ಸರ್ಪವೇ ಕುಂಡಲವಾಗಿರುವವನು ; ಶಿವ : ನಾಗಕುಂಡಲನಱಿದವೆಂಬರು ನಾಗದೇವತೆಗಳಾದರು ನಾಗಾಯಿ (ಸಿದ್ಧವ. ೪. ೪೨೩-೧೩೬೧) ; ನಾಗಯಜ್ಞೋಪವೀತಂ ನಾಗಕುಂಡಲಂ ನಾಗಕಟಕಂ . . . ನಾಗವಿಷಧರನೊಪ್ಪುತಿರ್ದಂ (ಲಕಿಚಂ.೨೭-೩೯) : ನಾಗಕುಂಡಲ ನಾಗದನುಜ ಚರ್ಮಾಂಬರನೆ ನಾಗನರಲೋಕಕಧಿಕನೆ ರಕ್ಷಿಸುವುದೆಂದು ನುತಿಸೆ (ಪ್ರಾಭಲಾ. ೨-೪೧). [ ನಾಗ + ಕುಂಡಲ ]

**ನಾಗಕುಷ್ಠ** (ನಾ). ಒಂದು ಬಗೆಯ ಕುಷ್ಠರೋಗ : ಹಾವಿನ ಮೈಮೇಲೆ ಚುಕ್ಕೆಗಳು ಇರುವಂತೆ ಮೈಮೇಲೆ ಚುಕ್ಕೆಗಳುಂಟಾಗುವ ಕುಷ್ಠರೋಗ : (ಕಿ). [ ನಾಗ + ಕುಷ್ಠ ]

**ನಾಗಕೆ** (ನಾ). = ನಾಗ ೭ : ಅವುಗಳ್ಗನ್ನು ಕರ್ಮಾದಿಗಳವೆಂತುದೆನ್ನಲಿಕೆ ನಾಗಕೆಯು ಉದ್ಗಾರಾದಿ ಗುಣವಹುವು (ಗಗತಾ. ೯-೭೩). [ಸಂ. ನಾಗಕ]

**ನಾಗಕೇಶರ** (ನಾ). = ನಾಗಕೇಸರಿ ೧ : ಮುಂಬಯಿ ೨೧ ಮಣದ ಖಂಡಗದ ಮೇಲೆ ಕಿಮ್ಮತ್ತು ಆಗತಕ್ಕ ಜೀನಸಗಳು. ೧. ಬುಕ್ಕಿಟ್ಟು (ಅಬಿರ) : ೨. ಅಂಬೆಹಳದಿ (ಗಂಟು ಅರಶಿಣ) . . . ೧೩ ನಾಗಕೇಶರ ಕಂದು ೧೪ ಪತಂಗ, ಮಲಬಾರಿ (ಮುಂಬಮಾ. ೧೩೦). [ ಸಂ. ]

**ನಾಕಬಂದಿ** (ನಾ). ಮಾರ್ಗವನ್ನು ಜನಸಂಚಾರಕ್ಕೆ ಅವಕಾಶವಿಲ್ಲದಂತೆ ಮಾಡುವುದು; ರಸ್ತೆಗಳಲ್ಲಿ ಸಂಚಾರವನ್ನು ನಿಷೇಧಿಸುವುದು: ಎರಡು ತಾಲೂಕುಗಳಲ್ಲಿ ನಾಕಬಂದಿ ಮಾಡಲಾಯಿತು (ಕರವೀ. ೧೨೨). [ ←ಮರಾ. ನಾಕೇಬಂದೀ ]

**ನಾಕೇಂದ್ರ** (ನಾ). ದೇವಲೋಕದ ದೊರೆ; ದೇವೇಂದ್ರ: ಪುಟ್ಟಿತ್ತಾ ನಾಕೇಂದ್ರಂಗೆ ನಿರ್ವ್ಯಾಕುಲಮುಮಳಭವಪ್ರತ್ಯಯಜ್ಞಾನಮಾಗಳ್ (ಸುಕುಮಾ. ೯-೨೩). [ ನಾಕ + ಇಂದ್ರ ]

**ನಾಕೇಶ₁** (ನಾ). =ನಾಕೇಂದ್ರ: ಲೋಕಾಪವಾದಕ್ಕೆ ಅಂಜಿ ನಡೆವುದು ವಿವೇಕ ಕೇಳಿಟ್ಟರಿಕೆ ನಾಕೇಶನಾದರೂ ಬಿಡದಪವಾದ ಪರಾಕು ಕೇಳಿಟ್ಟರಿಕೆ (ನೀತಿಚಿಂ. XI, ೦೯). [ ನಾಕ + ಈಶ ]

**ನಾಕೇಶ₂** (ನಾ). ಕೂದಲು ಇಲ್ಲದವನು; ಲುಂಚನ ಮಾಡಿಕೊಂಡವನು; ಸವಣ: ನಾಕೇಶನಾಗಲೊಡನೊಡನಾ ಕೇಶಮುನಾಂತ ಶೋಣಮಣಿಪಟಳಕಮಾಲೋಕನದ ತಣಿವನಿತ್ತುದು (ಪುಷ್ಪಪು. ೧೩-೧೧೧). [ ಸಂ. (ನಾ + ಕೇಶ) ]

**ನಾಕೌಕ** (ನಾ).=ನಾಕನಿಳಯ: ನಾಕಸುಖಶೇಷಮುಂ ನಾಕೌಕರ್ ನಾಕಪ...ಂದದಚಿಸಾಳನುಭವಿಪ್ಪುದಱಿಂದ (ಶಾಂತಿಪು. ೯-೧೩೭). ನಾಕಜಪ... [ ನಾಕ + ಓಕ₁ ] (ಅಜಿಪು. ೧೨-೫೨). ... ನೋ.

**ನಾಕಜಾಪಗೆ** (ನಾ). ದೇವಲೋಕಕ್ಕೆ ಸಂಬಂಧಪಟ್ಟ: ನಾಕ್ಷತ್ರ (Sidereal) ಹಿಮವತ್ಕುಕ್ಕಿಲದಿಂ ನಾಕಜಾಪಗೆಯ ಪಂಚಾಂಗವನ್ನು ತಿದ್ದಿದರು (ಶಿಲ್ಪನಾ. [ ಸಂ. ನಾ... ಸಂವತ್ಸರವೇ ಸೌರ ಚಾಂದ್ರ ಬಾರ್ಹಸ್ಪತ್ಯ

**ನಾಕಡಿ** 'ನಾಲ್ಕಡಿ' ನೋ. 'ಬನಾಗಿರ್ಪುದು (ವಿವೇಕ. ೩೪೨):

**ನಾಕತರಂಗಿಣಿ** (ನಾ). = ನಾಕಜಾಪಗೆ: ನಾಕಾರ, ಬಾರ್ಹಸ್ಪತ್ಯ, ಸೌರ, . . . ಪೊಳೆಯುತಿರ್ಪುದು ಚಂಡಮರೀಚಿಮಂಡಲಂದು ಬಗೆಯಾಗಿ ಗಣಿಸುವ [ ನಾಕ + ತರಂಗಿಣಿ ] (ಶಸಾರ. ೫-೪೦ ಟೀಕು).

**ನಾಕನಾಯಕ** (ನಾ). ಸ್ವರ್ಗಲೋಕದ ಅಧಿಪತಿ; ಇಂದ್ರ: ದ್ವೀಪದ ನಟ್ಟನಡುವೆ . . . ಅನೇಕ ನಾಕನಾಯಕಲೋಕಪಾಲನಾಸ, ಭವನಾಧ್ಯಾಸಿತಮುಂ (ಆದಿಪು. ೧-೪೯ ವ); ನಾಕನಾಯಕಂ ತ್ರಿಲೋಕಗುರು ಸವಿತ್ರಿಗೆ ಸೀಯನಪ್ಪ ಗೇಯದಿಂ ಪೊಟ್ಟುಗಳೆಯಲ್ ನಿಯಮಿಸಿದಂ (ಶಾಂತಿಪು. ೯-೧೭೮ ವ). [ ನಾಕ + ನಾಯಕ ]

**ನಾಕನಾರಿ** (ನಾ). ಒಂದು ಬಗೆಯ ಗಿಡ; ಸಹದೇವಿ: "ನಾಕನಾರಿ [ಪಾಠಾಂ. ನಾಕರಿ]ಯೆನೆ ಸಹದೇವಿಯುಕ್ಕು" (ಮಂಗರಾ. ೩೮-೨೩). [ ? ]

**ನಾಕನಿತಂಬಿನಿ** (ನಾ). ಸ್ವರ್ಗಲೋಕದ ಮಹಿಳೆ; ದೇವತಾಸ್ತ್ರೀ; ಅಮರಿ: ಝೊಂಬಿಸಲಿ ಕೌರವರು ನಾಕನಿತಂಬಿನಿಯರಳಕವನು (ಕುವ್ಯಾಗ. ೧೧-೫೦). [ ನಾಕ + ನಿತಂಬಿನಿ ]

**ನಾಕನಿವಾಸಿ** (ಗು). ಸ್ವರ್ಗಲೋಕದಲ್ಲಿ ವಾಸಿಸುವ: ಆ ಸುರಾರಿಪ್ರಮುಖ ಯಕ್ಷರಿಗಾಸೆ ಕರ್ಣನ ಮೇಲೆ ನಾಕನಿವಾಸಿನಿರ್ಜರನಿಕರವಾದುದು ನರನ ಕೈವಾರ (ಕುವ್ಯಾಕ. ೨೨-೪). [ ಸಂ. ನಾಕನಿವಾಸಿನ್ ]

**ನಾಕನಿಳಯ** (ನಾ). ಸ್ವರ್ಗವೇ ಮನೆಯಾಗಿರುವವನು; ಸ್ವರ್ಗಲೋಕದಲ್ಲಿ ವಾಸಿಸುವವನು; ದೇವತೆ: ನಾಕನಿಳಯರಿಗರಿದು ನಿನಗೆ ವಿವೇಕವೆಳ್ಳನಿತಿಲ್ಲ ತೆಗೆತೆಗೆ ನಾಕು ವಾಘೆಯ ಮರಳಿ ಓಡಿ ತೇಜಿಗಳ ಶಿರುಹೆಂದ (ಕುವ್ಯಾವಿ. ೬-೧೧): ಏಕೆ ಸಹಜವ ಬಿಸುಟು ತಾಳಿದೆ ಸೂತರಾಕಾರವನು ಕೊಲ್ಲನು ನಾಕನಿಳಯರ ಪಕ್ಷಪಾತವನುಳಿದು ಮಚಿಯೊಗಲು (ನಿಭಾಗ. ೩-೮-೪೦). [ ನಾಕ + ನಿಳಯ (= ನಿಲಯ) ]

**ನಾಕಪತಿ** (ನಾ). ಸ್ವರ್ಗಲೋಕದ ಒಡೆಯ; ಸ್ವರ್ಗದ ಅಧಿಪತಿ; ಇಂದ್ರ: ಅಪರಾಜಿತೆ . . . ವೈಜಯಂತೆಯೆಂಬಿವರಂ ನಾಕಪತಿ ನಿಯೋಜಿಸಿದಂ

(ಪುರಾಣೋಕ್ತವಾದ) ಒಂದು ದೇವಸಂತತಿ; ಮನುಷ್ಯನ ಮುಖವೂ ಸರ್ಪದ ದೇಹವೂ ಇರುವ ಪಾತಾಳನಿವಾಸಿಯಾದ (ಅರ್ಧ ದೇವತಾಸ್ವರೂಪದ) ಜೀವ: ದೇವ ನಾಗ ನರ ಸುರ ಸೇವ್ಯ . . . ರಕ್ಷಿಪುದೆನ್ನ (ಪ್ರಾರಾ. ೨೦-೦). 'ಅಷ್ಟನಾಗ', 'ಅಷ್ಟಫಣಿ' ಪರಾ. ೪. ಆನೆ; ಗಜ: "ಆನೆಯಲ್ಲಿಯುಂ ನಾಗಮೆಂಬುದು" (ಹಲಾಯು. ೧೩೨-೧೧): ಮನಮಱಿದು ನಗೆಯೊಳಾ ನೃಪತನಯೆಯು ರಥಮಂ ನೃಪಾಂತರಕ್ಕುಯ್ವುದೋ ಪೇಱ್ ಎನೆ ನೊಂದು ನಿಷಾದಿಗೆ ಮುಳಿದನಂಗ ನೃಪಯಾನನಾಗಮಂ ವಧು ಪೋಲ್ತಳ್ (ಶಾಂತಿಪು. ೫-೧೫೯); ನಾಗಮೆ ನಾಗದಂತಿರೆ ಪಡಲ್ವಡೆ . . . ನಡುಗಿತ್ತು ಚಂಚಲಾಂಭೋಗತಚಂದ್ರಮಂಡಲದಪೋಲ್ ಜಿತಶತ್ರುಗೆ ಶತ್ರುಮಂಡಲಂ (ಅಜಿಪು. ೨-೪೮). 'ನಾಗಮುಖ' ಪರಾ. ೫. ಮೋಡ; ಮೇಘ: ನಾಗಮೆ ನಾಗದಂತಿರೆ ಪಡಲ್ವಡೆ . . . ನಡುಗಿತ್ತು ಚಂಚಲಾಂಭೋಗತಚಂದ್ರಮಂಡಲದ ಪೋಲ್ ಜಿತಶತ್ರುಗೆ ಶತ್ರುಮಂಡಲಂ (ಅಜಿಪು. ೨-೪೮). 'ನಾಗಭೂಷಣ' ಪರಾ. ೬. ಮುಖಂಡ; ಮೊದಲಿಗ; ಪ್ರಧಾನ; ಸಚಿವ: "ನಾಗಂ ಪ್ರಧಾನಭೂತಂ" (ವಸ್ತುಕೋ. ೧೩೦-೮೩). ೭. ಶರೀರದಲ್ಲಿರುವ ಉಪವಾಯುಗಳಲ್ಲಿ ಒಂದು; ತೇಗು, ವಾಂತಿ, ಉದ್ಗಾರಗಳನ್ನು ಉಂಟುಮಾಡುವ ವಾಯು: "ದೇಹಮು ತಾಳ್ದಿಹುದು ನಾಗಮುಕ್ಕಂ" (ಮಂಗರಾ. ೧೫-೦೨): ಉದ್ಗಾರವೆಂಬ ಕ್ರಿಯೆಯಂ ಮಾಡುವದ್ದರಿಂದ ಆ ಅಂತರವಾಯು ನಾಗಸಂಜ್ಞೆಯನ್ನೂ . . . ಪಡೆದುಕೊಂಡಿರುವುದು (ಮುಮುಕ್ಷು. ೩). ೮. ಒಂದು ಲೋಹ; ಸೀಸ: "ಅನುಗೊಳಿಸೆ ನಾಗವಾ ಸೀಸಪತ್ರಂ ಸೀಸಮೆನಿಕು" (ಮಂಗರಾ. ೩೦-೫); "ಫಣಿಯೊಳು ಸೀಸದೊಳು ಸಚಿವನೊಳು ಗಜದೊಳು ಸಲೆ ನಾಗಮುಕ್ಕು" (ಮಂಗರಾ. ೧೯೮-೪೦). ೯. ಒಂದು ಬಗೆಯ ಸುವಾಸನೆಯ ಹೂಬಿಡುವ ಮರ; ಸುರಗಿ; ಸುರಹೊನ್ನೆ: "ನಾಗಂ ಪ್ರಧಾನಭೂತಂ ನಾಗಂ ಭೂರುಹವಿಶೇಷಮುಂ ಕುಂಜರಮುಂ" (ವಸ್ತುಕೋ. ೧೩೦-೮೩); "ನಾಗಮೆನೆ ಸುರಗಿಯೆನಿಸಿಕ್ಕು" (ಮಂಗರಾ. ೩೮-೨೪); "ನಾಗಃ – ವತ್ಸನಾಭಿ, ಆನೆ, ಸರ್ಪ, ನಾಗದಂತಿ, ಸುರಹೊನ್ನೆ, ಮುಗ್ಗಾರ" (ಔಷಧಿ. ೮೫). ೧೦. ಒಂದು ಬಗೆಯ ಹೂ ನಾಕಬಿಡುವ ಮರ; ನಾಗಸಂಪಿಗೆ; ನಾಗಕೇಸರ: "ನಾಗಂ ಗಜಕೇಸರಂ" ಕೊಂಸು ಕೋ. ೩೪-೭); ಪಟ್ಟೋಪವಾಸದಿಂ ಪುಷ್ಪಕೋದ್ಯಾನದೊಳ್ ಮನೋಹವೃಕ್ಷದಡಿಯೊಳ್ . . . ಕೇವಲಜ್ಞಾನ ಮಹಾಕಲ್ಯಾಣ ಮಹಾ ನಾಕಲೊ...ಜೆಯನೆಯ್ದಿ (ಪಾವುಂಪು. ೧೨೮); ಕೇದಗೆ ಸಂಪಗೆ ನಾಗಂ ಹಾದರಿ ಭೋಂದಿರ್ಗುಂತೆ ಸುರಯಿ ವಕುಳ ಲವಂಗಂ (ಎಕ. VIII, ಸಾಗರ. ೧೦೯-೫೦; (ಆದಿಪು.); ಕುರವಕ [ಚಂಪ]ಕಾರ್ಜು[ನ] ತಮಾಳ ಕುಚಂದನ ಚಂದ ನಾಗ ಬರೆ (ಖಿರ ಪನಸಾಮ್ರ ನಿಂಬ ಕುಟಜಾದಿ ಮಹಾಕುಜಸಂಕುಳಂಗಳಿಂ (ಬಂಹರಿ. ಎನುತ್ತೆ ೧೧. ಬೆಂಕಿ; ಅಗ್ನಿ. ೧೨. ಕತ್ತಲೆ; ತಮಸ್ಸು. ೧೩. ನೀರು; ಮಹಾ...: "ಸಿಂಧೂರಕುಜಾಹಿ ಮುಖ್ಯ ತಮ ಸೀಸ ಜಲಾನಲ ನಾಗವಾಚಕಂ" (ಜಗವಿ. ೧- ೨೭). ೧೪. ಶಂಖ: "ಮತ್ತಗಜಂ ಮರ ಸರ್ಪಂ ಕತ್ತಲೆಯುದಕಾಗ್ನಿ ನಾಕಲೋಕೇಶ...ಮುಖ್ಯಂ ಶಂಖಂ ಬಿತ್ತರವಾಗಿಹ ಪೆಸರೊಂಭತ್ತುಂ ನಾಗಾಭಿ ನಾಕಲೋಕೇಶಮುಂ ಜಗದೊಳ್" (ನಾನಾಕಂ. ೭). ೧೫. ಒಂದು ಜಾತಿಯ ಭೂಪಾಲಕನ ಸಾರ್ಕ್ಮಿಸಾನು. ೧೬. ಕ್ರೂರಿ; ದುಷ್ಟ. ೧೭. ದೀಪ ನಾಕವಿಭವ (ನಾ)ವನ್ನು ತೂಗುಹಾಕಲು ಬಡಿದಿರುವ ಕೊಕ್ಕೆ. ದೋರಂತೆ ಫಣಹಾವಿನ ವಿಗ್ರಹ,-ಪ್ರತಿಮೆ: ಈ ರಾಜನ ಮಗಳು (ಮಲ್ಲಿಪು. ೧೨-೧೪). ೨. ಕೆರೆಯನ್ನೂ ಒಂದು ವಿಹಾರವನ್ನೂ ದಾನಮಾಡಿ ನಾಕಸದನ (ನಾ). ಸ್ವರ್ಗಂದಿದೆ (ಕರ್ಣಾ. ೩). 'ನಾಗಪ್ರತಿಷ್ಠೆ' ಪರಾ. ವಿಬುಧರು ಸುಮನಸರು ಸರು: ಶ್ರೀ ಅಪ್ಪಿಆಚಾರಿಯರ ಮಗನಾಗನ್ ೩-೮). [ ನಾಕ + ಸದನ ] (ಒ. ೩೭-೫; 750): ಮಾಧವಯ್ಯಂ ಬರೆದಂ

ನಾಗಂ ಬೆಸೆಗೆಯ್ದಂ (ಎಕ. VIII, ಸೊರಬ. ೫೩೦-೧೩ ; ೧೧೯). ೨೧. ಭಾರತದ ನಾಗಾಲ್ಯಾಂಡ್ ಮತ್ತು ಅಸ್ಸಾಂ ಪ್ರಾಂತಗಳಲ್ಲಿ ನೆಲೆಸಿರುವ ಒಂದು ಜನಾಂಗ : ಇಷ್ಟೆಲ್ಲ ನಾಗರಿಕತೆಯುಳ್ಳ ಜನರ ಎಡೆಯಲ್ಲಿರುವ ನೀಲಗಿರಿಯ ತೋಡರೂ, ಅಸ್ಸಾಮಿನ 'ನಾಗ'ರೂ . . . ಹೊಸಸಂಸ್ಕೃತಿಗಳಿಗೆ ಸಿಗದವರು (ಬಾಲಪ್ರ. I. ೪೯೯). ೨೧.=ನಾಗವ : ಕರಣವೇಕಾದಶಗಳಲಿ ಚರಕರಣ ಶಕುನಿ ಚತುಷ್ಕ ವಣಿಜೆಯು ನಾಗ ಕಿಂಸ್ತುಘ್ನ (ಗಗತಾ. ೪-೭೦). 'ನಾಗವ' ಪರಾ. ೨೨. [ಛಂದ] ಒಂದು ಅರ್ಧಸಮವೃತ್ತ : ನಾಗ – ಒಂದು ಮೂರನೆಯ ಪಾದಗಳಲ್ಲಿ ಒಂದು ತಗಣವೂ ಒಂದೊಂದು ಗುರು ಲಘುಗಳೂ, ಎರಡು ನಾಲ್ಕನೆಯ ಪಾದಗಳಲ್ಲಿ ಒಂದು ತಗಣವೂ ಒಂದು ಗುರುವೂ ಇರುವುವು (ಕೈಬಿಡಿ. ೮೯). ೨೩. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : "ಕರಿ ನಾಗ ವಸುವೆಂಟು" (ಮಂಗರಾ. ೧೦೪-೮) ; ಯುಗ ಋತು ಗಜ ನಾಗಾಂಬರ ಮೃಗಧರವಗ ಪಟ್ಕಮೆನಿಪ ವೃತ್ತದ ಲೆಕ್ಕಂ ಸೊಗಯಿಸಿ ತೋರ್ಕುಂ ಗಣಿಯಿಪುದಗಣಿತ ಗುಣನಿಲಯ ನಾಗವರ್ಮನ ಮತದಿಂ (ಛಂದೋಂಬು. ೨-೨೦೧). ೨೪. [ಗಣಿತ] ಏಳು ಎಂಬ ಸಂಖ್ಯೆಯ ಸಂಕೇತ : "ನಾಗ ಶೈಲ ಸಪ್ತಂ" (ಛಾಸ್ಕರ.೪೪-೫).

ನಾಗನ ಹುಲ್ಲು = ಒಂದು ಬಗೆಯ ಹುಲ್ಲು ; ಶತ್ತೆಹುಲ್ಲು ; ದೇವ ನಾಳ : "ದೇವನಾಳಂ ಪಿರಿದಾಗಿರ್ಪ ಭೂಮಿ–ನಡ್ವತ್, ನಡ್ವಲ, ಒಪ್ಪಿಲೆ, ನಾಗನ ಹುಲ್ಲಂ[ಪಾಠಾಂ. ಟ್ಟಂ]ದೂ ಎಂಬರು" (ನಾಚಿರಾ. ೬). ನಾಗಪ್ಪ = ನಾಗರಹಾವು : ನಾಗಪ್ಪಗ್ಹಾಲ ಎರಿಯೋಣ (ಜನಗೀ. ೩) ; ನಾಗಪ್ಪನಿಗೆ ತನಿ ಎರೀತೀನಿ ಅಂತ ಹರಕೆ ಕಟ್ಟಕೊ (ರೂಢಿ). [ ಸಂ. ]

ನಾಗಂಡುಗ 'ನಾಲ್ಗಂಡುಗ' ನೋ.

ನಾಗಂದ (ನಾ). ಒಬ್ಬಾತನ ಹೆಸರು : ಶ್ರೀಗೋವಿನ್ದರ ವಲ್ಲಹನ್ಪೃಥಿವೀ ರಾಜ್ಯಂಗೆಯೆ ಮೆಡ ನಾಗನ್ದನ್ × × × ನಾಡಾಳೆ (ಎಕ. VIII, ಸೊರಬ. ೫೪೩-೧ ; ಸು. 800). [ ? ]

ನಾಗಂದಿ 'ನಾಗಂದಿಗೆ' ನೋ.

ನಾಗಂದಿಗೆ, ನಾಗಂದಿ, ನಾಗವಂದಿ, ನಾಗವಂದಿಗೆ, ನಾಗೊಂದಿ, ನಾಗೊಂದಿಗೆ (ನಾ). ೧. ಮನೆಗಳಲ್ಲಿ ಸಾಮಾನುಗಳನ್ನು ಇಡಲು ಅನುಕೂಲವಾಗುವಂತೆ ಗೋಡೆಗಳಿಗೆ ಎತ್ತರದಲ್ಲಿ ಜೋಡಿಸಿರುವ ಮರದ ಹಲಗೆ ; ಬಡು. ೨. ಬಾಗಿಲುವಾಡದ ಮೇಲೆ ಅಥವಾ ಕಂಬದ ಸುತ್ತ ಇರುವ, ಸಾಮಾನಿಡುವ ಸ್ಥಳ : ಜಾನಕಿಯು ವಸೂಲುಮಾಡಿ ತಂದ ರೂಪಾಯಿಗಳನ್ನು ನಾಗಂದಿಗೆಯ ಮೇಲೆ ಇರಿಸಿ ಸ್ನಾನಕ್ಕೆ ಹೋಗಿದ್ದಳು (ಸಂಕ. ೩) ; ನಾಗಂದಿಗೆ ಮೇಲಕೆ ಫೇಣಿಯನಿರಿಸಿ ಮರತೇ ಬಂದಿಹೆನು (ನಡದಾ. I, ೪೧೦) ; ನಾಗಂದಿಗೆಯಿಂದ ನಾಗಂದಿಗೆಗೆ ಅಡ್ಡಲಾಗಿ ಹಾಕಿದ್ದ ಬಿದಿರ ಗಳುವಿಗೆ ತೂಗುಹಾಕಿದ್ದ (ಮಲಮ. ೩೩೮). ನಾಗಂದಿ : ೨. ಕುಡುಗೋಲುಗಳು ನಾಗಂದಿಯ ಮೇಲೆ ; ಜಂಗು ತಿನ್ನುತ್ತ ಬಿದ್ದಿದ್ದವು (ಚೀನಬಾ. ೩೩೮). ನಾಗವಂದಿ : ೧. ಹುಳಿತ ನಾಗವಂದಿಗಳೂ ಗೂಟಗಳೂ ಬೇಕಾದಷ್ಟಿವೆ (ಮೋಜೀವ. ೮). ನಾಗವಂದಿಗೆ : ೧. "ನಿರ್ವ್ಯೂಹ . . . ನಾಗವಂದಿಗೆ" (ಗಂಗಾಮ. ೧೮೫) ; ಈ ಪುಸ್ತಕಗಳನ್ನು ಕಟ್ಟಿ ನಾಗವಂದಿಗೆಯ ಮೇಲಿಟ್ಟುಬಿಡು (ರೂಢಿ). ನಾಗೊಂದಿ: ೨. ಗೋದಾವರಿ ಮಾತನಾಡಲಿಲ್ಲ. ಕೈಯನ್ನೆತ್ತಿ ಪಡಸಾಲೆಯ ನಾಗೊಂದಿಯಲ್ಲಿಯ ಒಂದು ಕಾಗದವನ್ನು ಎತ್ತಿ ಬಾಬೂನ ಕೈಯಲ್ಲಿರಿಸಿದಳು (ರಕ್ತಧ್ವ. ೨೭೩). ನಾಗೊಂದಿಗೆ : ೧. ಸಾಬೂನು, ಬ್ರಶ್ ಮತ್ತು ಇತರ ತೊಳೆಯುವ ಸಾಧನಗಳನ್ನಿರಿಸಲು ಸಿಂಕಿನ ಮೇಲುಗಡೆಯಲ್ಲಿ ಒಂದು ಕಪಾಟು ಅಥವಾ ನಾಗೊಂದಿಗೆ (Shelf) ಇರಬೇಕು (ಅಡುಸ್ವಾ. ೧೩). ಪಕ್ಕದ ನಾಗೊಂದಿಗೆಯ ಮೇಲಿದ್ದ ಹಲ್ಲುಪುಡಿಯ ಡಬ್ಬವನ್ನು ತೆಗೆದು ಆಕೆಯ ಕೈಗಿತ್ತ (ವಾತ್ಸಲ್ಯ. ೧೭). [ < ಸಂ. ನಾಗದಂತಕ ]

ನಾಗಕಂಕಣ (ನಾ). ಹಾವುಗಳ ಕೈ[illegible] : ಸರ್ಪಗಳನ್ನು ಕಡಗದಂತೆ ಕೈಗೆ ಸುತ್ತಿಕೊಂಡಿರುವವನು ; ಶಿವ : ನಾಗಕಂಕಣಗೆ ಯತಿವರ ಮರುಳಾರ್ಯಂಗೆ ರಾಗದಿಂದೊಮ್ಮೆ ಶರಣೆಂಬೆ (ಅಕ್ಕತ್ರಿ. ೧) ; ನಾಗಾಂಕನ ಅಜೀದು ತಾನಾಗದೆ ನಾಗಕಂಕಣನಾದ ನಾಗಾಯಿ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ (ಸಿದ್ಧವ. ೪೨೨-೧೩೭೧) ; ಗಿರಿಜೆ ತಪವಟ್ಟು ಮೆಚ್ಚಿಸಿ ರಜತಾದ್ರಿಯಲಿ ನಾಗಕಂಕಣನಿಂ ಪಡೆದಳನುರಾಗದಿಂದೀ ರಾಂಭನವನು (ಬಸವು. ೧೩-೩೫) ; ದಕ್ಷನಂ ಕೊಲಲೆಂದು ನಾಗಕಂಕಣನೆನ್ನನಟ್ಟಿದು (ವೀರಭ್ರಪು. ೩-೪-೩೫) ; ನಾಗಕಂಕಣ ಕರಯ ಗದಿಂದೆ ಪಿಡಿದೆತ್ತಿ ಪೂಗೋಲ ನರ್ಧಾಂಗಿಗಾಗ ರಾಗದಿ ವಸ್ತ್ರಭೂಷಣವಿತ್ತು (ಮೋಹತ. ೮-೪೫).

[ ನಾಗ + ಕಂಕಣ ]

ನಾಗಕಟಕ (ನಾ) = ನಾಗಕಂಕಣ : ನಾಗಕಟಕಂಗಿತ್ತು ವಿಷಮಂ ರ೦ ದಿಂ ನೀವುಂಡು ಸಾಯದಡಾ ಪ್ರಸಾದವನು ನೀವು ಕೈಕೊಂಡನುಭವಿಸುತಿರ ನಾವು ಬೇಡವು (ಬಸವು. ೫೮-೪೭) ; ನಾಗಯಜ್ಞೋಪವೀತಂ ನಾಗಕುಂಡಲಂ ನಾಗಕಟಕಂ . . . ನಾಗವಿಷಧರನೊಪ್ಪುತಿರ್ದಂ (ಲಶಿಚಂ. ೨೭-೨೯).

[ ನಾಗ + ಕಟಕ್ಕ ]

ನಾಗಕನ್ನಿಕೆ (ನಾ).=ನಾಗಕನ್ನೆ : ನಾಗಕನ್ನಿಕೆಯರು ನಾಥನ ಬೇಡಲು ನಾನಾ ವಿಧದಿ ಸ್ತುತಿಮಾಡಲು (ಪುರಂದ. ೨-೧೦೩-೩). [ ನಾಗ + ಕನ್ನಿಕೆ ]

ನಾಗಕನ್ನೆ (ನಾ). ನಾಗಲೋಕದ ಹೆಣ್ಣು : ಪಡೆಮೆಚ್ಚೆಗಂಡನ ಗಂಡ ಗಾಡಿಯಂ ಕಂಡು ಫಣೀಂದ್ರನ ಕನ್ನೆ ಮದನಲತೆಯೆಂಬ ನಾಗಕನ್ನೆ ಕಣ್ಬೇಟಂಗೊಂಡು ತನ್ನ ಲೋಕಕ್ಕೊಡಗೊಂಡು ಪೋಗಲ್ (ಪಂಪಭಾ. ೪-೧೫ ವ). [ ನಾಗ + ಕನ್ನೆ₁ ]

ನಾಗಕನ್ಯೆ (ನಾ). = ನಾಗಕನ್ನೆ : ಮಧ್ಯಮಪಾಂಡವ ಅರ್ಜುನ ಉಲೂಪಿ, ಚಿತ್ರಾಂಗದೆ ಎಂಬ ನಾಗಕನ್ಯೆಯರ ಕೈಹಿಡಿದ ಕಥೆ ಪ್ರಸಿದ್ಧವಾಗಿಯೇ ಇವೆ (ಛಾಹಬ್ಯ. ೧೧೦). [ ನಾಗ + ಕನ್ಯೆ ]

ನಾಗಕರಣ (ನಾ). ೧. = ನಾಗ ೨೧. ೨. [ಕಾಮಶಾ] ಸಂಭೋಗದಲ್ಲಿ ಒಂದು ಬಂಧ : ಆ ಕಾಂಚಣಮಂ ಪುರುಷನ ಪುರುಷನ ತಿಸದಿಂ ಪೂರದ ಯೆರಡು ತೊಡೆಗಳನಿಕ್ಕಿದರೆ ನಾಗಕರಣ (ಕಾಮಶಾ. ೬-೧೩೬).

[ ನಾಗ + ಕರಣ ]

ನಾಗಕುಂಡಲ (ನಾ). ೧. ಸರ್ಪದ ಕರ್ಣಾಭರಣ ; ಹಾವಿನ ಕುಂಡಲ : ನಾಗಕುಂಡಲಂ ಪೊನ್ನೋಲೆಯೆಸೆವ ಕಜೀ ರನ್ನದಾಳಿ (ಹಹಕಾ. ೦-೬) : ಬಲಗಿವಿಯಲ್ಲಿ ನಾಗಕುಂಡಲ ಎಡಗಿವಿಯಲ್ಲಿ ಮಕರಕುಂಡಲವೂ ಇವೆ (ಹೊಯ್ಸಳಶಾ. ೯೭). ೨. ಸರ್ಪವೇ ಕುಂಡಲವಾಗಿರುವವನು ; ಶಿವ : ನಾಗಕುಂಡಲನಟೆದೆವೆಂಬರು ನಾಗದೇವತೆಗಳಾದರು ನಾಗಾಯಿ (ಸಿದ್ಧವ. ೫. ೪೨೨-೧೩೭೧) ; ನಾಗಯಜ್ಞೋಪವೀತಂ ನಾಗಕುಂಡಲಂ ನಾಗಕಟಕಂ . . . ನಾಗವಿಷಧರನೊಪ್ಪುತಿರ್ದಂ (ಲಶಿಚಂ.೨೭-೨೯) ; ನಾಗಕುಂಡಲ ನಾಗದನುಜ ಚರ್ಮಾಂಬರನೆ ನಾಗನರಲೋಕಕಧಿಕನೆ ರಕ್ಷಿಸುವುದೆಂದು ನುತಿಸೆ (ಪ್ರಾಂಧ. ೨-೪೧). [ ನಾಗ + ಕುಂಡಲ ]

ನಾಗಕುಷ್ಠ (ನಾ). ಒಂದು ಬಗೆಯ ಕುಷ್ಠರೋಗ : ಹಾವಿನ ಮೈಮೇಲೆ ಚುಕ್ಕೆಗಳು ಇರುವಂತೆ ಮೈಮೇಲೆ ಚುಕ್ಕೆಗಳುಂಟಾಗುವ ಕುಷ್ಠ ರೋಗ : (೬). [ ನಾಗ + ಕುಷ್ಠ ]

ನಾಗಕೆ (ನಾ). = ನಾಗ ೭ : ಅವುಗಳ್ಗನ್ನು ಕರ್ಮಾದಿಗಳವೆಂತೆಂದೆನ್ನಲಿಕೆ ನಾಗಕೆಯು ಉದ್ಗಾರಾದಿ ಗುಣವಹುವು (ಗಗತಾ. ೯-೭೩). [ಸಂ. ನಾಗಕ]

ನಾಗಕೇಶರ (ನಾ). = ನಾಗಕೇಸರಿ ೧ : ಮುಂಬಯಿ ೨೧ ಮಣದ ಖಂಡಗದ ಮೇಲೆ ಕಿಮ್ಮತ್ತು ಆಗತಕ್ಕ ಜೀನಸಗಳು. ೧. ಬುಕ್ಕಿಟ್ಟು (ಅಬೀರ) ; ೨. ಅಂಬೆಹಳದಿ (ಗಂಟು ಅರಶಿಣ) . . . ೧೩ ನಾಗಕೇಶರ ಕಂದು ; ೧೪ ಪತಂಗ, ಮಲಬಾರಿ (ಮುಂಬವ್ಯಾ. ೧೨೦). [ ಸಂ. ]

ಸಾಧಾರಣ ವ್ಯಕ್ತಿ; ಅರಿಕೇಸರಿ ತೆಂಕನಾಡಂ ನಾಡಾಡಿಯಲ್ಲದೆ ಮೆಚ್ಚುತ್ತಂ (ಪಂಪಭಾ. ೪-೩೧ ವ); ಪುರುಹೂತನಜಿದಯೋಧ್ಯಾಪುರವಮಂ ನಾಡಾಡಿಯಲ್ಲದಂತಿರೆ ಪಡೆದಂ (ಪಂರಾವಿ. ೧-೯೯); ನಾಡಾಡಿಗಳಿಗೆ ನಾಡಾಡಿಗಳನು ಸರಿಮಾಡಬಹುದು ಕೂಡಬಹುದು (ಭರತ. ೯-೯೧): ಆಕೆ ನಾಡಾಡಿಯಲ್ಲ (ನವಮೋ. ೯-೧೩). ೩. ಸ್ವಲ್ಪವೂ ಗಣನೆಗೆ ಬಾರದ ವ್ಯಕ್ತಿ; ಅಲ್ಪ; ಕ್ಷುದ್ರ: ನಾಡಾಡಿಗಳ ಒಡಿದು ಫಲವೇನೆಂದು ಕೂಡಿದ ತನ್ನೊಡೆಯನೊಳು (ಅಂಜಚ. ೪-೯೧): ಪುಣ್ಯವುಳ್ಳ ಮಗನಂ ಪೋಗಾಡಿವ ಪ್ರಹೃದಯರಾಗಿ ಬದುಕಿರ್ದಪರ್ ನೋಡಿರೆಯೆಂಬ ನಾಡಾಡಿಯ ಮಾತ ಕೇಳುತಂ (ಪುಣ್ಯಾಸ್ರ. ೧೨-೨೬ ವ); ನಾಡಾಡಿಗಳ ನಾಟಕದ ಘಣಿಯಲ್ಲಾರು ನೀನೆಂದ (ಕುವ್ಯಾಅ. ೧೩-೪೧): ಎನ್ನ ನಾಡಾಡಿಯಂತೆ ನೋಡಿದವನು (ಹಾಂಚಜ. ೬೩-೨೦). ೪. ದೇಶದಿಂದ ದೇಶಕ್ಕೆ ಹೋಗಿ ಬರುವವನು; ದೇಶಸಂಚಾರಿ; ಯಾತ್ರಿಕ. ೫. ಹಳ್ಳಿಗಾಡಿನಲ್ಲಿ ವಾಸಿಸುವವನು; ಹಳ್ಳಿಗ; ಗ್ರಾಮೀಣ: (ಕ). (ಗು). ೬. ಸಾಮಾನ್ಯ ಗುಣವುಳ್ಳ; ಸಾಧಾರಣವಾದ: ಅಳುತ್ತಳುತಲಂಜಿದಪೊಲಾನನಕೊರಸಿ ಕೈವೆರಳ ಮಱಿಯಲಿ ಜನನಿಯನು ನೋಡುತ್ತಲಾ ನಾಡಾಡಿ ಶಿಶುವಂತೆ ತನು ನಡುಗೆ ಕಾಡಿಗೆ ಸಹಿತ ಕಂಬನಿ ಮುಚೇಂದು ಕಳಂಕವಾಗಲು ಮುನಿಗಳನು ನಗಿಸಿದನು ನರಶಿಶುತನದ ನಟನೆಯಲಿ (ನಿಭಾಗ. ೧೦-೯-೩೬); ನಾಡಾಡಿ ದ್ವಿಜರಿಂಗೆ ವಿತ್ತವ ಮತ್ತವಂ ಬೇಡಿದಂತಿತ್ತು ಬೀಳ್ಕೊಟ್ಟು (ಮೋಹತ. ೨೨-೫೨); ಇರ್ವರುಂ ಬೇದಬಿಜ್ಜೆಗಂಗೆ ಸರಿಮಿಗಿಲೆನಿಪರ್ . . . ನಾಡಾಡಿ ಕಿತ್ತಡಿಗಳಲ್ಲು (ಅದ್ಭುತ. ೧೧-೧೬); ಆ ನಾಡಾಡಿ ಬೀದಿ ಬಾಲಕ ನೆಮ್ಮ ನಾಡಿಗೆ ದೊರೆಯಪ್ಪನೆಂದು ? (ಚಂದ್ರಸ. ೧೩-೧೬). ೭. ದೇಶದಿಂದ ದೇಶಕ್ಕೆ ಹೋಗಿ ಬರುವ; ದೇಶಸಂಚಾರಿಯಾದ: ಚೀಣಾವು ಬೌದ್ಧಮತವನ್ನು ಅದೇ ನಾಡಾಡಿ ಜನಗಳ ಮೂಲಕ ಕ್ರಿ.ಪೂ. ಒಂದನೆಯ ಶತಮಾನದ ಅಂತ್ಯದಲ್ಲಿ ಪಡೆಯಿತು (ತತ್ವಶಾ. ೬೨೭).

ನಾಡಾಡಿ ದೈವ = ಸಾಮಾನ್ಯ ದೇವತೆ; ಕ್ಷುದ್ರದೇವತೆ: ನಾಡಾಡಿ ದೈವವನೋತಡೆ ಕೇಡಲ್ಲದೆ ಸುಖವಿಲ್ಲವಮ್ಮ (ಶಿವಗೀ. ೧೬೧-೮೦೧); ನಾಡಾಡಿ ದೈವವೇ ನೀನು ದೇವರ್ಗೆಲ್ಲ ಚೂಡಾಮಣಿ (ಸೌಂದಪು. ೧೪-೩೦); ನಾಡಾಡಿ ದೈವಗಳ ಚಿನ್ನಬೆಳ್ಳಿಗಳಿಂದ ಮಾಡಿಕೊಂಡದಱ ಪೂಜೆಯನು ಮಾಡಿ ಕಾಡ ಕಳ್ಳರು ಬಂದು ಅವುಗಳನು ಕೊಂಡೊಯ್ಯೆ ಮಾಡಿಕೊಂಡಿರ್ದುದಕೆ ಬಾಯ ಬಡಕೊಳ್ಳುವೆಯೊ (ಪುರಂದ. ೧-೪೪-೩). ನಾಡಾಡಿ ನರ=ಸಾಮಾನ್ಯ ಮನುಷ್ಯ; ಅನಾಮಧೇಯ: ಇವ ನಾಡಾಡಿ ನರನಲ್ಲ ನಾರಿ ಚಿತ್ತೈಸು (ಕಂನವಿ. ೯-೧೩೦). ನಾಡಾಡಿಯುವ = ಸಾಮಾನ್ಯಮನುಷ್ಯ: ಓಡು ಮಾಡಿದಳೆನ್ನ ನೀ ನಾಡಾಡಿಯುವನೆಂದೇ ವಿಭಾಡಿಸಿ (ನಿಭಾಗ. ೭-೯-೨೪).

[ ನಾಡು + – ಆಡಿ$_1$ ]

**ನಾಡಾಡಿಕೆ** (ನಾ). ೧. ಸಾಮಾನ್ಯವಾಗಿರುವಿಕೆ; ಸಾಧಾರಣವಾಗಿರುವಿಕೆ: ಹನುಮನ ಮೊಗದ ಮೋಡಿಯ ಧೂರ್ತವಚನದ ಬಗೆಯ ಭಂಗಿಯನಾ ಪ್ರಹಸ್ತ ವಿವೇಕದಿಂದಱಿದು ವಿಗಡಭಟನಿವ ಕುಟಿಲಶಾಖಾಮೃಗವಿವನು ನಾಡಾಡಿಕೆಯ ವನಮೃಗದ ಪರಿಯಲ್ಲಿವನ ನುಡಿಸಿದು ನೋಡಬೇಕೆಂದ (ತೊರವೆ. ೫-೭-೨೩). ೨. ಒಂದು ದೇಶದಲ್ಲಿ ಹಿಂದಿನಿಂದ ಬಂದ ವ್ಯವಹಾರ,–ರೂಢಿ,–ಸಂಪ್ರದಾಯ: ಅವರು ಚಿಕ್ಕಂದಿನಲ್ಲಿ ಬಹಳ ಕ್ಷೀಣವಾಗಿದ್ದು . . . ಹಿರಿಯರು ಕೈಕೊಂಡ ಒಂದು ನಾಡಾಡಿಕೆಯ ವಿಧಿಯಿಂದಾಗಿ ಹೀಗೆ ಹೆಸರಿಡುವುದಕ್ಕೆ ಕಾರಣವಾಯಿತೆಂದು ತಿಳಿಯಿತು (ಕನ್ನನು. ೧-೩೪೨). [ ನಾಡು + ಆಡು$_1$ + – ಇಕೆ ]

**ನಾಡಾಡಿಗ** (ನಾ). ೧. = ನಾಡಾಡಿ ೧: ಈ ಶ್ರೀರತ್ನಸಿಂಹಾಸನವನ್ನು ನಾಡಾಡಿಗ ಹಂಗುಳಿಯೆಂದೆಣ್ಣಿ, ಉದಾಸೀನಭಾವಕ್ಕೆಡೆಗೊಟ್ಟು, ಕಯ್ನೀಂಕುವಪ್ಪು ಅನಾಚಾರಕ್ಕೆ ಎರ್ದೆಮಾಡಿ ಉರವಣಿಸಿದರೆ . . . ದಣ್ಣಸದಿರವು (ಚಟ್ಟಅ. ೧೧೬-೧೮). ೨. = ನಾಡಾಡಿ ೩: ಚಿತ್ರವುಂ ಚೆನ್ನಾಗಿ ಬಂಧಿಸಿ ಬಳಿಕ್ಕ ದೇವೋತ್ತಂಸನಂಗವುಂ ನೆಱೆ ಕಡಿಸಿತಿಲ್ಲವೇ ಚಿತ್ರಭವನುಳಿದ ನಾಡಾಡಿಗರನೇನ ಮಾಡುವನೆಂದು ಕಂಡರಾರು (ಸಮ್ಯಕೌ. ೫-೨೪): ವಿಗಡನಹನರ್ಜುನನು ನಾಡಾಡಿಗರ ಬಗೆಯನು ಸಾಕು ನಗಿಸದಿರು (ಕೋಗಯು. ೧೭-೮೧). [ ನಾಡಾಡಿ + – ಗ$_2$ ]

**ನಾಡಾಡಿಗಟ್** (ಕ್ರಿ). ನಾಡಾಡಿತನವನ್ನು ಬಿಡು; ಸಾಮಾನ್ಯತೆಯನ್ನು ಬಿಡು; ಲೋಕೋತ್ತರವಾಗು: ನಾಡಾಡಿಗಟ್ದ ರೂಪುಂ ಗಾಡಿಯು ಮೆಸೆದೊಪ್ಪೆ (ಅಜಿಪು. ೫-೨೨). [ ನಾಡಾಡಿ + ಕಟ್$_1$ ]

**ನಾಡಾಡು** (ಗು). ಅಲ್ಪವಾದ; ಕ್ಷುದ್ರವಾದ: ಯಾ ಗಜವು ಸಾಮಾನ್ಯವಾದ ನಾಡಾಡು ಗಜವಲ್ಲ (ಸೌಗಂಧಿ. ೫೩೦-೧೮). [ <ನಾಡಾಡಿ ]

**ನಾಡಿ$_1$** (ನಾ). ೧. ಸಸ್ಯಗಳ ಟೊಳ್ಳಾದ ಕಾಂಡ. ೨. ತಾವರೆಯ ದಂಟು,–ನಾಳ. ೩. ಶರೀರದಲ್ಲಿ ರಕ್ತಚಲನೆಗಾಗಿ ಇರುವ ಕೊಳವೆಯಾಕಾರದ ರಚನೆ; ರಕ್ತವಾಹಿನಿ; ಧಮನಿ: "ನಾಡೀ, ಧಮನೀ, ಸಿರಾ ಸಾಮಾನ್ಯವಾಗಿ ನರಗಳ ಹೆಸರು" (ಸಿದ್ಧಾಂತಿ. ೧೬೩); ನಾಡಿಯೊಳಂ ಕೆಱಗೊತ್ತಿ ಸೋಂಕೆ ಮಧ್ಯದೊಳೆಸಗುತ್ತುಮಿರ್ಪೊಡೆ ಶುಭಾವಹಂ (ಲೋಕೋಪ. ೧೦-೭): ಎನಿತು ನಾಡಿಗಳವಕೆ ಸ್ಥಾನಗಳೆನಿತು (ಗಗತಾ. ೯-೫). ೪. ಕೈಯ ಮಣಿಕಟ್ಟು, ಎದೆ, ಕಪೋಲ ಮೊದಲಾದೆಡೆಗಳಲ್ಲಿ ಕಂಡುಬರುವ, ಬೆರಳಿಗೆ ತೋರುವ ಲಯಬದ್ಧವಾದ ರಕ್ತಚಲನೆಯ ಮಿಡಿತ,–ಸ್ಪಂದನ: ನಾ ಮೂಱು ನಾಡಿಯ ಬಲ್ಲೆ (ಸರ್ವವ. ೨೦-೮); ಬಿಸಿಯುಂ ಸಂಹನನದಿ ಮೇಗುಸುರಂ ನಾಸಿಕದಿ ನಾಡಿಗಳನಾಗಳ್ಪಣಿಸುತಂ ಗಳೊಳಂ ನಖದೊಳ್ ನಸುಗೆಂಪಂ ನೋಡಿ ಕಾಣದಳವಳಿದಳಲಿಂ (ನನ್ನಚಾ. ೬-೧೫೪): ಪುರುಷರ ಬಲದ ಕೈಯ ಹೆಬ್ಬೆರಳ ಮೂಲದಲ್ಲಿ . . . ಹಿಡಿದು ನಾಡಿಯನ್ನು ನಿದಾನಿಸಬೇಕು (ಸಕವೈ. ೧೦): ರಕ್ತದ ಪ್ರಮಾಣ ಕಡಿಮೆಯಾಗಿ, ನಾಡಿಯಲ್ಲಿ (pulse) ರಕ್ತದ ಒತ್ತಡ ಕಡಿಮೆಯಾಗುತ್ತದೆ (ಕಲರೋ. ೧೭). ೫. (ಯಾವುದಾದರೂ) ನೀಳವಾದ ಕೊಳವೆ; ನಾಳ. ೬. ಒಂದು ಬಗೆಯ ಕೊಳವೆಯಂತೆ ಉದ್ದವಾದ ವ್ರಣ; ನಾಳಿವ್ರಣ; ಭಗಂದರ. ೭. ಒಂದು ದಿನದ ಅರುವತ್ತನೆಯ ಒಂದು ಭಾಗ; ಒಂದು ಗಳಿಗೆ; ಅರ್ಧ ಮುಹೂರ್ತ; ಇಪ್ಪತ್ತುನಾಲ್ಕು ನಿಮಿಷ: ನಾಡಿಯಱುವತ್ತಕ್ಕೆ ಒಂದು ತಿಥಿಯಕ್ಕು (ಮಂಗರಾ. ೨೦-೯): "ನಾಳಿಯೆನೆ ನಾಡಿಯೆನೆ ಗಳಿಗೆಯೆಂದಕ್ಕು" (ಕಶರ. ೫೪); ಅನುರಾಧ ನಕ್ಷತ್ರದೊಡನೆ ಚಂದ್ರನ ಸಂಬಂಧ ೧೧ ನಾಡಿ ೪೧ ವಿನಾಡಿಗಳಲ್ಲಿ . . . ಬೆಳೆಯುತ್ತದೆ (ಅಕಾಶ. ೯೦). ೮. ಒಂದು ಬಗೆಯ ಬಾಗಿದ ಹುಲ್ಲು. ೯. ಸಂಚು; ಮೋಸ. ೧೦. [ಯೋಗ] ಶರೀರದಲ್ಲಿ ವಾಯು ಸಂಚಾರವಾಗುವ ನಾಳ; ☞ ನಾಡಿಗಳ ಸಂಖ್ಯೆಗಳನ್ನು ಒಂದೊಂದು ಗ್ರಂಥದಲ್ಲಿ ಒಂದೊಂದು ಬಗೆಯಾಗಿ ಹೇಳಿದ್ದಾರೆ. ಶಾತಕೋಪನಿಷತ್ತಿನಲ್ಲಿ ನೂರೊಂದು ನಾಡಿಗಳಿವೆಯೆಂದೂ ಅವಕ್ಕೆಲ್ಲ ಹೃದಯವು ಮೂಲಸ್ಥಾನವೆಂದೂ ಹೇಳಿದೆ. 'ನಾಡೀಪ್ರಕಾಶ'ವೆಂಬ ಗ್ರಂಥದಲ್ಲಿ ನಾಡಿಗಳು ಮೂರೂವರೆಕೋಟಿಗಳಿವೆಯೆಂದು ಹೇಳಿದ್ದು, ಅವುಗಳಲ್ಲಿ ಹದಿನಾರು ನಾಡಿಗಳನ್ನು ಪ್ರಧಾನವಾಗಿ ಗಣನೆಮಾಡಿದೆ. ಅವುಗಳು ಯಾವುವೆಂದರೆ–೧. ಇಡಾ. ೨. ಪಿಂಗಲಾ. ೩. ಸುಷುಮ್ನಾ. ೪. ಗಾಂಧಾರೀ. ೫. ಹಸ್ತಿಜಿಹ್ವಾ. ೬. ಪೂಷಾ. ೭. ವಸುಪಶಾ. ೮. ಅಲಂಬುಷಾ. ೯. ಕುಹೂ. ೧೦. ಶಂಖಿನೀ. ೧೧. ತಾಲಜಿಹ್ವಾ. ೧೨. ಇಭಜಿಹ್ವಾ. ೧೩. ವಿಜಯಾ. ೧೪. ಕಾಮದಾ. ೧೫. ಅಮೃತಾ. ೧೬. ಬಹುಲಾ ಎಂಬುವು. ೧೧. (ಆಲಂ) ಪರಿಸ್ಥಿತಿ; ಆಗುಹೋಗು: ನೋಡಿ ಬಂದೊರೆ ರಣಸ್ಥಿತಿಯ ನಾಡಿಯಂ (ಶ್ರೀರಾಮಾ. ೬೫೦-೨೨೯).

ನಾಡಿ ಆಡು = ನಾಡಿ ಸ್ಪಂದಿಸು, -ಮಿಡಿ : ನಾಡಿ ಆಡದವ ಓದಿ ಬಂದಾನೇ ? (ಗಾದೆ). ನಾಡಿ ನಿಲ್ಲು = ನಾಡಿ ಮಿಡಿಯುವುದು ನಿಂತು ಹೋಗು : ನಾಡಿ ನಿಂತ ಮೇಲೆ ಕಾಡ ಪಾಲು (ಗಾದೆ). ನಾಡಿ ನೋಡು = ನಾಡಿಯ ಮಿಡಿತವನ್ನು ಪರೀಕ್ಷಿಸು: ನಾಡಿ ನೋಡದೆ ಮದ್ದು ಕೊಟ್ಟರೆ ಕಾಡುರೋಗ ಬರುವುದು (ಗಾದೆ). ನಾಡಿ ಮಿಡಿ = ನಾಡಿಯು ಸ್ಪಂದಿಸು : ಆಯಾಸದಿಂದ ಅವನಿಗೆ ಜೋರಾಗಿ ನಾಡಿ ಮಿಡಿಯುತ್ತಿದೆ (ರೂಢಿ). ನಾಡಿ ಮಿಡಿತ = ನಾಡಿಯ ಸ್ಪಂದನ: ಅವರಿಗೆ ಉದ್ವೇಗದಿಂದ ನಾಡಿ ಮಿಡಿತ ಏರಿದೆ (ರೂಢಿ). ನಾಡೀ ಹುಣ್ಣು = ನಾಡೀವ್ರಣ : ನಾಡೀಷು ಚ = ನಾಡೀ ಹುಣ್ಣುಗಳೊಳು (ವಿವ್ಯವಿ. ೧೬೩). [ ಸಂ. ]

**ನಾಡಿ$_2$** (ನಾ). ಒಂದು ಬಗೆಯ ವಾದ್ಯ : ವೇದಗಳ ಕಾಲದಲ್ಲಿ ಉಪಯೋಗದಲ್ಲಿದ್ದ ಬಕುರ, ನಾಡಿ, ತುರುವ . . ಮೊದಲಾದ ವಾದ್ಯಗಳ ರೂಪ ರಚನೆಗಳನ್ನೂ . . . ಶಿಲ್ಪಕಲಾಭಿತ್ತಿಗಳಿಂದ ನಾವು ಗ್ರಹಿಸಬಹುದು (ಸಂಗೀದಂ. ೧೯೫). [ ? ]

**ನಾಡಿಂಧಮ** (ನಾ). ಊದುಗೊಳವೆಯ ಮೂಲಕ ಊದುವವನು ; ಅಕ್ಕಸಾಲೆ : "ನಾಡಿಂಧಮಃ, ಸ್ವರ್ಣಕಾರಃ, ಕಲಾದಃ, ರುಕ್ಮಕಾರಕಃ-೪ ಅಗಸಾಲಿಗನ ಪೆಸರು" (ಸಿದ್ಧಾಂಶಿ. ೩೦೦). [ ಸಂ. ]

**ನಾಡಿಕೆ** (ನಾ). ೧. ಒಂದು ಘಳಿಗೆ ; ಇಪ್ಪತ್ತುನಾಲ್ಕು ನಿಮಿಷಗಳ ಕಾಲ : "ನಾಡಿಕೆಗೆ ನಾಟಿಗೆಯೆನಿಪ್ಪುದು" (ಸಂಜೀವ. ೩೩) ; ಸಮಯಾವಳಿ ಕೋಟ್ಯುಚ್ಛ್ವಾಸಸ್ತೋಕನಿಮೇಷನಾಡಿಕಾಮುಹೂರ್ತ . . .ಗಣನಾನುಕ್ರಮದಿಂದಂ ಪೆರ್ಚಿದೆಣಿಕೆಯೊಳ್ (ಆದಿಪು. ೬-೪೮ ವ). ೨. ಜಾಗಟೆ, ಗಂಟೆ ಮೊದಲಾದುವು. ೩. [ಕಾಮಶಾ] ಒಂದು ನಾಡಿಯ ಹೆಸರು : ಒಂದು ನಾಡಿ ಅದು . . . ಕಾಮಾಂದೋಳಿಕೆಯೆಂಬುವದು ಮತ್ತೊಂದು ಚಿರಕಾಲಂ ಮುಟ್ಟಿಸಿದೊಡಂ ನಾಡಿಕೆಯುಂ ಮುಖಂ ಬಿರಿದು ಕಾಮಜಲಂ ಸ್ರವಿಸುವದು (ಕಾಮಶಾ. ೬-೧೧೯). [ ಸಂ. ನಾಡಿಕಾ ]

**ನಾಡಿಗ** (ನಾ). ೧. ಒಂದು ದೇಶದಲ್ಲಿ ಹುಟ್ಟಿ ಬೆಳೆದು ವಾಸಮಾಡಿಕೊಂಡಿರುವವನು; ಒಂದು ದೇಶದ ಪ್ರಜೆ: ಮೃಗರಿಪುವಂ ಮೃಗಾವತಿಯ ನಂದನನೊರ್ವನೆ ನಿಂದು ಕೊಂದು ನಾಡಿಗರ ಮನಕ್ಕೆ ಮಿಕ್ಕ ಪರಿತೋಷಮನಿತ್ತು (ವರ್ಧಪು. ೩-೪೬) ; ನಾಡಿಗರೊಳೆಲ್ಲರುಂ ಭೋಗಿಗಳ್ ಕುಟಿಲಗಾಮಿಗಳಲ್ತು (ರಾಮಾಶ್ವ. ೭-೨೩) ; ನಮ್ಮ ನಾಡಿಗರು ತಮ್ಮ ತಮ್ಮ ಜಾತಿ, ಧರ್ಮ, ಮತಗಳ ಅನುಷ್ಠಾನದಿಂದ ಮೋಕ್ಷಸಂಪಾದನಕಾರ್ಯದಲ್ಲಿ ಆಸಕ್ತರಾಗಿದ್ದಾಗ (ಯುಕ್ತಪ್ರ. ೩೧). ೨. ಗ್ರಾಮಾಧಿಕಾರಿ : ನಾಡಿಗ ಯುಕಪನು ಅಡಬಿದ್ದು ವೇಡಿಕೊಂಡಾಗ (ಎಕ.VII, ಶಿವಮೊ. ೧೦೭-೨೬; 1576?); ಶಾನುಬೋಗರು ನಾಡಿಗರು ಹನ್ನರಡು ಮಂದಿ ಆಯಗಾರು (ಎಕ. XI, ಮೊಳಕಾ. ೨೫-೬೩ ; 1665) : ಪಟೇಲನ ಕೆಲಸಕ್ಕಾಗಲಿ ಶ್ಯಾನುಭೋಗ ನಾಡಿಗ ಕರಣೀಕನ ಕೆಲಸಕ್ಕಾಗಲಿ : . . ವಹಿಸುವುದು ಅವಶ್ಯಕವಾಗಿ ಕಂಡು ಬರುವದಿಲ್ಲವು (ಗ್ರಾಮಾಕ. ೫). [ ನಾಡು + -ಇಗ ]

**ನಾಡಿಗತನ** (ನಾ). ನಾಡಿಗನ ಅಧಿಕಾರ ; ಗ್ರಾಮಾಧಿಕಾರ : ವಂಶಪಾರಂಪರ್ಯವಾಗಿ ನಮ್ಮ ಪರಗಣೆಯಲ್ಲಿ ಪ್ರತಿಗ್ರಾಮದಲ್ಲಿ ಭೂಮಿ, ಮನೆ, ಕಣ, ನಾಡಿಗತನ . . . ಇಷ್ಟನ್ನೂ ಮಾಡಿಕೊಡಬೇಕೆಂದು ಕೇಳಿದನು (ಕಥವಿ. II, ೩೦೫). [ ನಾಡಿಗ + -ತನ ]

**ನಾಡಿಗವರ್ಯ** (ನಾ). ಗ್ರಾಮಾಧಿಕಾರಿಗಳಲ್ಲಿ ಶ್ರೇಷ್ಠನಾದವನು : ನೀವು ಕುಳಿತುಕೊಳ್ಳಬೇಕು ನಾಡಿಗವರ್ಯ . . . ನಿಮ್ಮನ್ನು ಅವಜ್ಞೆ ಮಾಡುವುದು ಆಊರ ಎಲ್ಲ ನಾಡಿಗರನ್ನೂ ಅವಜ್ಞೆಗೈದಂತೆ (ಸವತಿ. ೧೬೩). [ ನಾಡಿಗ + ವರ್ಯ ]

**ನಾಡಿಗಿತ್ತಿ** (ನಾ). ೧. ಒಂದು ದೇಶದ ಸಾಮಾನ್ಯ ಸ್ತ್ರೀ. ೨. ಗ್ರಾಮಾಧಿಕಾರಿಯ ಹೆಂಡತಿ : (೬). [ ನಾಡಿಗ + -ಇತ್ತಿ ]

**ನಾಡಿದು** 'ನಾಳಿದು' ನೋ.

**ನಾಡಿದ್ದು** 'ನಾಳಿದು' ನೋ.

**ನಾಡಿಪರೀಕ್ಷೆ** (ನಾ). ರೋಗವನ್ನು ಕಂಡುಹಿಡಿಯುವುದಕ್ಕಾಗಿ ನಾಡಿಯನ್ನು ಹಿಡಿದು ಮಿಡಿತವನ್ನು ತಿಳಿದುಕೊಳ್ಳುವಿಕೆ : ನಾಡಿಪರೀಕ್ಷೆ ಆ ನಾಡಿಯನ್ನು ಪರೀಕ್ಷಿಸುವ ಪ್ರಕಾರವೆಂತೆಂದೊಡೆ (ಸಕವ್ಯ. ೦೭) [ ನಾಡಿ$_1$ + ಪರೀಕ್ಷೆ ]

**ನಾಡಿಮೂಲ**(ನಾ). ರಕ್ತಧಮನಿಯು ಪ್ರಾರಂಭವಾಗುವ ಸ್ಥಳ; ನಾಡಿಯ ನೆಲೆ : ಮೊಲೆ ಬದಿ ತಿಗ ಬೆನ್ನು ತಲೆಯೊಳುದಿಸಿ ತೋರ್ಪ ಸಲೆ ನಾಡಿಮೂಲವ ತಿಳಿದು ಗೆಲವಿತ್ತು ಸುಸಿಲಿಂಪುಗಲಿಸಿ ಕಾಣೆವರು ಪೂವಿಲುಗಾಜನಾಗಮಾರ್ಥವನು (ಭೃರಸೂ. ೨೯೭). [ ನಾಡಿ$_1$ + ಮೂಲ ]

**ನಾಡೀಕೂಟ** (ನಾ). [ಜ್ಯೋತಿ] ವಿವಾಹಕ್ಕೆ ಮೊದಲು ವಧೂವರರ ಜಾತಕದ ಆಧಾರದ ಮೇಲೆ ನೋಡುವ ಹನ್ನೆರಡು ಕೂಟಗಳಲ್ಲಿ ಒಂದು : ನಾಡೀಕೂಟವೇ ಕೂಡದಿದ್ದರೆ ಮದುವೆಯ ಮಾತು ಮುಂದುವರಿಸುವುದು ಬೇಡ (ರೂಢಿ). ☞ ನಕ್ಷತ್ರಗಳನ್ನು ಮೂರು ವರ್ಗಗಳಾಗಿ ವಿಂಗಡಿಸಿದೆ. ವಧೂವರರ ನಕ್ಷತ್ರಗಳು ಒಂದೇ ವರ್ಗಕ್ಕೆ ಸೇರದೆ ಹೋದರೆ ನಾಡೀಕೂಟವಿದೆ ಎಂದು ತಿಳಿಯಬೇಕು. 'ದ್ವಾದಶ ಕೂಟ' ಪರಾ. [ ಸಂ. ]

**ನಾಡೀಚಕ್ರ** (ನಾ). ದೇಹದಲ್ಲಿರುವ ಎಲ್ಲ ನಾಡಿಗಳ ಸಮೂಹ: ಗಗನ ತುರ್ಯಾರೂಢ ಮಗನಿಗೆ ಮಿಗಿಲು ಪೇಳಿಯೆ ಬೋಧಿಸಿದನಾ ನಿಗಮ ಸಮ್ಮತಿಯಿಂದೆ ನಾಡೀಚಕ್ರ ವಿವರಣೆಯ (ಗಗತಾ. ೯ ಸೂಚನೆ). [ ಸಂ. ]

**ನಾಡೀಪರೀಕ್ಷೆ** (ನಾ). ನಾಡಿಯ ಮಿಡಿತವನ್ನು ಕಂಡುಹಿಡಿಯುವಿಕೆ : ನಾಡೀಪರೀಕ್ಷೆ ಆತು ಬಲ್ಲನೇ ? (ಗಾದೆ). [ ಸಂ. ನಾಡೀಪರೀಕ್ಷಾ ]

**ನಾಡೀಯಂತ್ರ** (ನಾ). ಗಳಿಗೆಯನ್ನು ಕಂಡುಹಿಡಿಯುವ ಸಾಧನ; ಸಮಯವನ್ನು ಕಂಡುಹಿಡಿಯುವ ಉಪಕರಣ : ಅವರು ಉಪಯೋಗಿಸುತ್ತಿದ್ದ ಉಪಕರಣಗಳು ಇವು. (೧) ನಾಡೀಯಂತ್ರ (Sun-dial). (೨) ಗೋಳಯಂತ್ರ (Sphere) (ಶಿಲ್ಪನಾ. ೧೦೩). [ ಸಂ. ]

**ನಾಡೀವ್ರಣ** (ನಾ). ಗುದದ್ವಾರದಲ್ಲುಂಟಾಗುವ ಒಂದು ಬಗೆಯ ಹುಣ್ಣು ; ಭಗಂದರ ; ನಾರುಹುಣ್ಣು : ಹಾವುಮೆಕ್ಕೆಬೇರು ನೀರಲ್ಲಿ ಅರೆದು ಪೂಸೆ ನಾಡೀವ್ರಣ ಮೊದಲಾದುವು ಮಾಣ್ಗುಂ (ವಿವ್ಯವಿ. ೦೦೫). 'ನಾಳಿವ್ರಣ' ಪರಾ. [ ಸಂ. ]

**ನಾಡೀಶೋಧನ** (ನಾ). [ಯೋಗ] ನಾಡಿಯ ಪರಿಶುದ್ಧಿ, -ಸ್ವಚ್ಛತೆ : ಸಾಧಕನು ಈ ಕ್ರಮವನ್ನು ಅನುಸರಿಸಿದರೆ ಉತ್ತಮಾಧಿಕಾರಿಯಾಗಿದ್ದ ಪಕ್ಷದಲ್ಲಿ ಮೂರುತಿಂಗಳಿಗೆ ಪ್ರಾಣಾಯಾಮಸಿದ್ಧಿಯಾಗಿ ನಾಡೀಶೋಧನವಾಗುತ್ತದೆ (ಭಾರದ. ೧೬೩). [ ಸಂ. ]

**ನಾಡು, ನಾಂಡು** (ನಾ). ೧. (ಕಾಡಲ್ಲದ) ಜನವಸತಿಯುಳ್ಳ ಪ್ರದೇಶ, -ಭೂಭಾಗ: "ನೀವೃತ್, ಜನಪದಃ, ದೇಶಃ, ಉಪವರ್ತನಂ-ಈ ೪ ನಾಡು" (ಹಲಾಯು. ೪೭-೧೨೯) ; "ಎಸೆವ ನೀವೃಜ್ಜನಪದಂ ದೇಶಮನೆ ನಾಡ ಪೆಸರಕ್ಕು" (ಮಂಗರಾ. ೫೭-೩) ; ನಾಡ ಕಾಡ ಬೆಳಸಿಂಬೆಳಸಾ ವಿಷಯಾಂತರಾಳದೊಳ್ (ಪಂಪಭಾ. ೧-೫೪) : ನಾಡುಗಳರಸನಿದೆಂಬೊಂದಾಡಂಬರದಿಂದೆ ಸತ್ತಿಗೆತ್ತಿದುವೆನೆ ಕಣ್ಗಾಡುಂಬೊಲನಾದುವು ಬೆಳ್ಗಾಡಿನೊಳಲರ್ದೆಸೆವ ಬಯಲ ಬೆಳ್ದಾವರೆಗಳ್ (ಚಂದ್ರಪ. ೧-೮೮) ; ಮುನ್ನಿರ್ದ ಕಾಡೆಲ್ಲಮೆಸೆವ [illegible]ಗರಕ್ಕೆ ಮನದೊಳ್ಕುಜಬನಾಂತು (ಚ್ಯಮಿಭಾ. ೨೯-೩೨). ೨. ದೇಶ; [illegible] : ರಾಷ್ಟ್ರ : ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್ ಭಾವಿಸಿದ [illegible] ವರ್ಷಂಬರೆಗಮಿಾ ನಾಡ [illegible]

(ವಡ್ಡಾ. ೮೮-೯) : ಆ ನಾಡೊಳಗ್ರಹಾರಂ ಭೂನಾರೀಕುಚತಟಾಗ್ರಹಾರಂ ವಿಪುಳಶ್ರೀನಿಲಯಮೆನಿಸಿ (ಪಂಚತಂ. ೮-೧೫) : ನಾಡುಂ ನಂಟರ್ಕಳುಂ ನಮ್ಮಯ ಪರಿಜನಮುಂ ನಾಮುಮಿಾ ಬುದ್ಧಿ ನಿಮ್ಮೊಳ್ ಕೂಡಲ್ ಸೈತಿರ್ಪ ಸೈಪಿನ್ನೊಡರಿಸದು (ಮಹಾನೇ. ೧೧-೮೩) : ನಾಡಾಡಿಯಂತೆಯೇ ಮಾಡಿಬಿಟ್ಟರು ಇವಗೆ ನಾಡೆಲ್ಲ ಹುಡುಕಿದರು ಈಡಾರ ಕಾಣೆ (ಪುರಂದ. ೧-೨೦೫-೬) : ಚೆನ್ನಾಗಿ ಒಣಗಿದ ಮೇಲೆ . . . ದೂರದೂರದ ನಾಡುಗಳಿಗೆ ಮಾರಾಟದ ಸಲುವಾಗಿ ಕಳುಹುತ್ತಾರೆ (ಮುಂಬಯಿ. ೪-೫೫): ಬಡವಗೆ ನಾಡ ಮಾತ್ಯಾಕೆ ? (ಗಾದೆ). ೩. ಗ್ರಾಮಾಂತರ ಪ್ರದೇಶ; ಹಳ್ಳಿಗಾಡು. ೪. ಭೂಮಿ ; ನೆಲ : ನಗಿಸಿದರು ನಾಡನು, ಕಡಿದು ಕಗ್ಗಾಡನು (ಕನ್ನಡಾ. viii ಪ್ರಸ್ತಾವನೆ). ೫. ಆಡಳಿತ ಸೌಕರ್ಯಕ್ಕಾಗಿ ಮಾಡಿರುವ ದೇಶದ ವಿಭಾಗ : ನಂದಾವಿ[ಳ]ನಾಡುಳ್ ವ್ಯಗೆ:ಶನಾಗೇನ್ದ್ರಾಭೀಳಭ್ರ್ಯಟಹರ ಪ್ಪೊರ್ (ಮೈಆರಿ. ೧೯೩೭, ೦೬-೩ ; ಸು. 450) : ಇನ್ದ್ರಾಪಾಯ್ಕುಂ ನಾಡಾ ನಾಳುತ್ತಿರೆ ಪುರಿಗೆಱೆನಾಡ ಸರಟವುರದಾಯ್ದುದಿಪ್ಪುರುಮಿಟ್ಟು ನಾಡಯಿಸೆ (ಎಇ. XXI, ೪೫-೪ ; 883) ; ಚೇರ ಮತ್ತು ಪಾಂಡಿಯ ರಾಜ್ಯಗಳು ನಾಡು ಎಂದರೆ ಪ್ರಾಂತ್ಯವಾಗಿ. . .ವಿಭಾಗಿಸಲ್ಪಟ್ಟದ್ದುವು(ದಥಾಇ. ೧೦೬) : ನಾಡಿನೊಡೆಯ ಭರಮಹೆಗ್ಗಡೆ ರಾಜ್ಯದ ಮಹಾದಣಾಯಕನಿಗಾಗಿ ಸರ್ವ ಸಿದ್ಧತೆಗಳನ್ನೂ ಮಾಡಿದ್ದನು (ಸಪತಿ. ೬೫). ೬. ಒಂದು ದೇಶದ ಆಡಳಿತ; ಸರ್ಕಾರ : ಆಹಾರ ವ್ಯವಸ್ಥೆ ಮುಂತಾದವುಗಳಿಗೆ ನಾಡು ಎಷ್ಟು ವ್ಯಯ ಮಾಡಿದರೂ ವ್ಯರ್ಥವಲ್ಲ(ಶಿಕ್ಷದ. ೩೮೨). ೭. ಸಾಮಾನ್ಯಜನ: ನಾಡ ಹಿಡಿದಾಡುವ ಕೇಡಿಗದೈವವ ಬಗೆಯದಿರಮ್ಮ (ಶಿವಗೀ. ೧೬೦-೮೦೦) : ನಾಡ ಹಂತಿಯುಲಳುಕುವರ್ಜನನೆ (ಕುಮ್ಯಾಕ. ೪-೨೨); ನಾಲಿಗೆ ಒಳ್ಳೇದಾದರೆ ನಾಡೆಲ್ಲ ಒಳ್ಳೇದು (ಗಾದೆ). **ನಾಂಡು** : ೫. ವೆಂಗೀನಾಣ್ಡುವಿಷಯ ನಿವಾಸಿನೋ ರಾಷ್ಟ್ರ(ಷ್ಟ್ರ) ಕು(ಕೂ)ಟಪ್ರಮುಖಾನ್ (ಇಆ. XIII, ೨೪೯-೨೦ ; ?). ೭. ನಾಂಡು ಬರದು ನಟ್ಟ ಸಿಲಾಸಾಸನ (ತಾಶಇಇ. IX_11, ೯೦೮-೪೦ : 1364).

**ನಾಡುನಾಡು**(ದ್ವಿರುಕ್ತಿ) : ತಿಳಿವಡೆದು ಸುಕುಮಾರವೈವಾಹಮಂ ಬೀಱೆ ನಾಡುನಾಡೊಳಗಲ್ಲಮಿಾಯುತ್ಸವಂ ನೋಡೆ (ನಂಬಿರ. ೫-೯). **ನಾಡ ಕಥೆ** = ಒಂದು ದೇಶದಲ್ಲಿ ಪ್ರಚಲಿತವಾದ ಕಥೆ ; ಇತಿಹಾಸದ ಆಧಾರವಿಲ್ಲ ದಿದ್ದರೂ ಜನರು ಹಿಂದಿನಿಂದಲೂ ಹೇಳುತ್ತಾ ಬಂದಿರುವ ಕಥೆ; ಜಾನಪದ ಕಥೆ : ಇಂಥ ಅಲ್ಪ ಸ್ವಲ್ಪ ಸಾಮಗ್ರಿಯಿಂದ ಅಷ್ಟೇನೂ ಪರಿಣಾಮಕಾರಿಯಲ್ಲದ ನಾಡ ಕಥೆಯಿಂದ ಈಸ್ಕಿಲಸ್ ಏನು ಮಾಡಲು ಸಾಧ್ಯ ? (ಬದ್ಧಪ್ರ. vi ೬೬೩೪). **ನಾಡ ಕಬು** = ಒಂದು ಬಗೆಯ ತೆರಿಗೆ (?) : ಎಲಗೂಡಿ ನಾಡ ಕಬು ಕಲವೆ ಕುಮರಿ ಕೋಹು ಮಕ್ಕಿ ಹಕ್ಕಲು ಬಾಲದೆರೆ (ಮೈಆರಿ. ೧೬೩೪, ೫೮-೨೦ ; 1434). **ನಾಡಕರಣ, ನಾಡಕರಣಿ, ನಾಡಕರ್ಣ, ನಾಡಕರ್ಣಿ, ನಾಡ್ಕರ್ಣಿ** = ೧. ಮುಖಂಡ ; ಮುಂದಾಳು : ದೇಶವಿಚಾರಿಗಳುಂ ನಾಡಕರಣಂಗಳುಂ (ದೊಂಕಣಾ. ೧೯೨೯, ನವಿಲುಗುಂದ ೨೦೧-೫೫ ; 1167) ; (ಲೋಕಸ. ೪೪); ದೇಶಕುಲಕರ್ಣಿ ನಾಡಕರ್ಣಿ ಬಾಳಪ್ಪನ ಭಕ್ತಿ (ಇಎ. ೧೯೫೦, ಹಾನಗಲ್, ೧೨೬-೭ : 1735). ೨. ಒಂದು ಮನೆತನದ ಹೆಸರು ; ಕುಲನಾಮ : ಕರಣಿ (ನಾಡ ಕರಣಿ), ಶ್ಯಾನುಭಾಗ . . . ಮೇಲಿತ್ತ ಹೆಸರುಗಳನ್ನು ಜಾತಿಗೆ . . . ಗೌರವಕ್ಕೆ ಸಂಬಂಧಿಸಿದವುಗಳೆಂದು ಮೂರು ವಿಭಾಗಗಳಾಗಿ ವಿಂಗಡಿಸಬಹುದು (ಹುಳುನಾ. ೧೮೪) : ನಾಡ್ಕರ್ಣಿ ರಾಮರಾಯರ ಹಿರಿಯ ಮಗಳು ಸುಮಿತ್ರೆಗೆ ನಾಳೆ ಮದುವೆ (ಮೂರುದಾ. ೨೧೫). **ನಾಡ ಕಾಲುವೆ** = ಜನರಿಗೆ ಉಪಯೋಗವಾಗದ ಕಾಲುವೆ,– ನಾಲೆ: ಮೂಢರಂದದೊಳೂರ ಗುದ್ದಲಿಯನ್ನು ಕೊಂಡು ನಾಡ ಕಾಲುವೆಯ ತಿದ್ದುವರೆ (ದೋಹತ. ೬-೮). **ನಾಡ ಕುದುರೆ, ನಾಡ ಗುದುರೆ** = ನಾಡಿನಲ್ಲಿ ಹುಟ್ಟಿದ ಕುದುರೆ ; ದೇಶೀಯಾಶ್ವ ; ನಾಟಿ ಕುದುರೆ : ಹೊಲೆಯ ಕುದುರೆ ಬಿಡಿಲೆಯ ಕುದುರೆ ನಾಡ ಕುದುರೆಗೆ ಪ್ರತಿ ಗದ್ಯಾಣಂ ಒಂದಕ್ಕಂ ಬೇಳೆ (ಎಕ. V, ಬೇಲೂರು. ೭೫-೧೧೧ : 1382) : ಜಾತಿತುರಂಗಮಾವಳಿವ ಹೊಳೆಗಳೆಮ್ಮ ನೀತಿನಿಪುಣ ನರಪತಿಯ ಮಾತಿನೋಳಹವೆನೆ ನಾಡಗುದುರೆ ಯಾಳ್ವ ಭೂತಳಾಧಿಪರವರ್ಗಣೆಯೆ (ಕುಮಾಸಾಂ. ೧೦-೧೯). **ನಾಡ ಜೋಡಿ** = ನಾಡಿಗೇ ತಿಳಿದ ಕೆಡುಕ ; ಮಹಾದುರುಳ ; ಎಲ್ಲರಿಗೂ ತಿಳಿದಂಥ ದುಷ್ಟ : ನಾಡ ಜೋಡಿಗಳು ವ್ಯಾಸನ ವಚನ ನಂಬದೆ ಮೂಢಗರ್ವರು ಗುರುವೆನಿಪ (ವ್ಯಕುಂಪ. ೧-೬೦). **ನಾಡ ಗಾದೆ** = ದೇಶದಲ್ಲಿ ಪ್ರಚಲಿತ ವಾದ ಗಾದೆ; ನಾಣ್ಣುಡಿ : ವಸುಧೆಯೊಳು ಪೊಡಮಡಲು ದೇಗುಲಂ ಬಿರ್ದ ನುಡಿ ಪಸರಿಸುವ ನಾಡ ಗಾದೆಯ ತೆಱದಿ ನಿಮ್ಮ ಸೇವಿಸ ಬಂದ ನಮಗಾಯ್ತು ನರಕವು (ಸಿದ್ಧರಾ. ೧-೨೭). **ನಾಡಗಾರ** = ದೇಶದ ಪ್ರಜೆ : ಬಳ್ಳಿ ನೀ ನಾಡಗಾರರಿಗೆ ನೆರವಾಗಿ (ಹಳ್ಳಿಯು. ೭೧). **ನಾಡ ಗಾವುಂಡ** = ನಾಡಿನ ಒಡೆಯ,–ಪ್ರಭು : ಇದಾಗವಱೆ ಗಲ್ಪಸೆಗುತ್ತನಾಡ ಗಾವುಣ್ಡನು ಎತ್ತಿಕೊಳ್ಳ (ಮೈಆರಿ. ೧೯೪೬, ೩೦ ; 1067). **ನಾಡ ಗಾವುಂಡಿ** = ಒಬ್ಬಾಕೆಯ ಹೆಸರು : ಚಿನ್ದಗಾವುಣ್ಡರ ಮಗ ನಾಡಗಾವುಣ್ಡ ಗಾವುಣ್ಡಗೆಯ್ವುನ್ದು (ಎಕ. X, ಮಾಲೂರು. ೯೪-೮ ; ಸು. 950). **ನಾಡ ಗೀತೆ** = ೧. ನಾಡಿನ ಹಿರಿಮೆಯನ್ನು ಸಾರುವ ಹಾಡು, – ಪದ : ಅಂದಿನ ಕಾರ್ಯಕ್ರಮವು ‘ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು’ ಎಂಬ ನಾಡ ಗೀತೆಯೊಂದಿಗೆ ಆರಂಭವಾಯಿತು (ರೂಢಿ). ೨. ದೇಶಭಕ್ತಿಗೀತೆ : ‘ಜನಗಣಮನ’ ಎಂಬ ನಾಡಗೀತೆಯ ನಂತರ ಅಂದಿನ ಸಭೆ ಮುಕ್ತಾಯವಾಯಿತು (ರೂಢಿ). **ನಾಡ ಗುಡಿ** = ರಾಷ್ಟ್ರಧ್ವಜ : ನಮ್ಮ ನಾಡ ಗುಡಿಯ ನೋಡ ನೋಡಿರಣ್ಣ ಹೇಗಿದೆ ! (ಕಪಪು. ೨-೩೭). **ನಾಡ ಚಲ್ಲವತ್ತ** = ಸುಳ್ಳುಗಾರನಾದ ವಂಚಕ; ನಂಬಿಸಿ ಮೋಸಮಾಡುವವನು : ಕಿಮ್ಮಗೆ ನಾಡ ಚಲ್ಲವತ್ತರ ನುಡಿಗೊಳ್ಳ ದಿರ್ (ಪಂಪಭಾ. ೯-೪೨). **ನಾಡ ಜಂಬುಕ** = ತುಚ್ಛ ವ್ಯಕ್ತಿ ; ದಡ್ಡ ; ಕೀಳು ಮನುಷ್ಯ : ಕಣ್ಣೀರವನನ್ನರಿಯಲಾರದ ನಾಡ ಜಂಬುಕ (ಚಟ್ಟಆ. ೧೯೫-೨೨). **ನಾಡ ಜನ** = ಸಾಮಾನ್ಯ ಜನ : ಹರಿಭಕ್ತರನ್ನು ಕುರಿತು ಕನಕ ದಾಸರು ನಾಡ ಜನರುಗಳಂತೆ ನಡೆಯರು, ನುಡಿಯರು . . ಎಂದಿದ್ದಾರೆ (ಭಾರದ. ೪೦೨). **ನಾಡ ಜೂದು** = ೧. ತುಚ್ಛವಾದ ಜೂಜು, – ಪಗಡೆ ಯಾಟ. ೨. ಮೋಸದ ಜೂಜು : ಇದು ಲಾಕ್ಷಾಗೇಹದಾಹಕ್ಕಿದು ವಿಷಮುವಿಷಾನ್ನಕ್ಕಿದಾ ನಾಡ ಜೂದಿಂಗೆ . . . ಎಂದೋವದೆ ಪೊಯ್ದಂ (ಗದಾಯು. ೮-೧೯). **ನಾಡದವಿಗೋಡಗ** = ಸಾಮಾನ್ಯವಾದ ಕಾಡುಕಪಿ : ಕಡಲ ಮಧ್ಯದ ಖಳನೊಡನೆ ಕೈಹೊಡೆದುದಲ್ಲಿಗೆ ತೆತ್ತಿಗರು ನಾಡದವಿಗೋಡಗ ವಾಳು ಕುದುರೆಗಳಸುರವಿಗ್ರಹಕೆ (ಕುಮ್ಯಾಆ. ೨೨-೫೧). **ನಾಡ ತಂದೆ** = ದೇಶಕ್ಕೆ ತಂದೆಯಂತೆ ಇರುವವನು ; ರಾಷ್ಟ್ರಪಿತ : ಹರಿಜನರ ಬಳಗ ಉಳಿದವರ ಒಳಗೆ ಬಳಸಿದೆಯೊ ನಾಡ ತಂದೆ (ಸೂರ್ಯಪಾ. ೧೪-೩). **ನಾಡ ತಕ್ಕ** = ದೇಶಭಾಗದ ಮುಖಂಡ ; ಸುತ್ತುಮುತ್ತಿನ ಪ್ರದೇಶದ ಜನಕ್ಕೆ ಮುಖಂಡ : ನಾಡ ತಕ್ಕ ಸುಬ್ಬಯ್ಯ ಮೋಲಿಗೆ ಕುಲದ ಅಭಿಮಾನ ಹೆಚ್ಚು (ಹುಲಿಹಾ. ೭೮). **ನಾಡ ತಕ್ಕಾಮೆ** = ನಾಡಿನ ಮುಖಂಡ ಪದವಿ,–ಅಧಿ ಕಾರ : ಹಾಲೇರಿವಂಶದ ಅರಸರ ಆಡಳಿತ ಪ್ರಾರಂಭವಾಗುವ ಮುನ್ನ ರೂಢಿಯಲ್ಲಿದ್ದ ನಾಡ ತಕ್ಕಾಮೆ ಮತ್ತು ಗ್ರಾಮ ತಕ್ಕಾಮೆಗಳನ್ನು ಊರ್ಜಿ ತಕ್ಕೆ ತಂದರು (ಹುಲಿಹಾ. ೮೪). **ನಾಡ ತೊತ್ತು** = ದೇಶದ ಸೇವಕ ಸರ್ವರ ಕರುಣದ ಶಿಶು ನಾನು, ನಾಡ ತೊತ್ತು (ಕಬಸಾ. ೧೪೬). **ನಾಡ ದೇವಿ** = ೧. ನಾಡಿನ ಅಧಿದೇವತೆ. ೨. ಕನ್ನಡ ಭಾಷೆಯ ಅಭಿಮಾನಿ ದೇವತೆ ; ಭುವನೇಶ್ವರಿ : ಮುಂಜಾನೆ ನಾಡ ದೇವಿಯ ಮೆರವಣಿಗೆಯು ವೈಭವದಿಂದ ನಡೆಯುವುದು (ಕಪಪು. ೫-೧೨). **ನಾಡ ದೈವ** = ಕ್ಷುದ್ರದೇವತೆ: ದೆಸೆಗೆಟ್ಟು ನಾಡ ದೈವಂಗಳಿಗೆ ಹಲುಬಿದಡೆ ನೊಸಲ ಬರಹವ ತೊಡೆದು ತಿದ್ದಲಳವೆ (ಕನಕ. ೫೪-೩). **ನಾಡ ಧಡ್ಡಿ** = ಏನೂ ತಿಳಿಯದ ಮೂಢ ;

ಮಹಾಮೂರ್ಖಹೆಂಗಸಂ : ಕಣ್ಣೀರು ಸುರಿಸಲಿಕ್ಕೆ ಈಗೇನು ಆಗೇದ ಧಡ್ಡಿ – ನಾಡ ಧಡ್ಡಿ (ದಾಸಕೃ. ೦೦೩). **ನಾಡ ನರಿ** = ಬಡನರಿ; ಹೇಡಿ ನರಿ : ರಿಪುವಾಹಿನಿಯುನಿಱಿಯದೆ ನಾಡ ನರಿಯವೊಲೆನಗೆ ನೀ ಪಲುಗಿರಿಯೆ ಬಿಡುವೆನೆ (ಕುವ್ಯಾವಿ. ೬-೧೯). **ನಾಡ ನಾಲಗೆ** = (?) : ಪಟ್ಟಣಸಾಮಿ ಮಹ ದೇವಸೆಟ್ಟಿ ನಾಡ ನಾಲಗೆ ಬಮ್ಮಿಸೆಟ್ಟಿಯೊಳಗಾದ ಸಮಸ್ತ ನಖರಂಗಳುಂ ಸಂತೆಯ ಆಯುಮಂ ಸಲಿಸುವರು (ಎಕ. XII, ತಿಪಟೂ. ೪೮-೩೦ ; 1214). **ನಾಡ ನಾಲಗೆಗಳೆಯ** = ಸಾಮಾನ್ಯವಾಗಿ ಮಾತಿನಲ್ಲಿ ಮಾತ್ರ ಸ್ನೇಹಿತ ನಾಗಿರುವವನು ; ಕೆಲಸಕ್ಕೆ ಹಿಂದೆಗೆಯುವವನು : ಸವಿಮಾತುಗಳ ನಿನ ಗಾಡುವವರಿಂಗೆ ಚಿತ್ತಗೊಡದಿರು ಹಿಸುಣ ಹೊಗಿಸದಿರು ನಾಡ ನಾಲಗೆಗಳೆಯ ರೆಂಬುದ ಮಾಡದಿರು (ಕುವ್ಯಾಉ. ೯-೧೮). **ನಾಡ ನುಡಿ** = ೧. ಗಾದೆ ; ಲೋಕೋಕ್ತಿ ; ನಾಣ್ಣುಡಿ : ಹಾವ ಹಡದಾಡಿ ಹೋಗಾಡಿದಂ ಕಡೆಗೆಂಬ ನಾಡ ನುಡಿಯಂತೆ (ಸೋಮಚ. ೧-೭೭). ೨. ಕೀಳುಮಾತಂ : ಪೊಂದುವ ಸಂಧಿಯ ನುಡಿಗಳನಾಡದೆ ಸಲ್ಲದ ನಿಲ್ಲದ ನಾಡ ನುಡಿಗಳನೆಮ್ಮವರ್ ನೋವಂ ತಿಱೆ ನುಡುವಾತುಗಳಂ ಗಱಿಪುವಯ್! (ರಾಮಾಶ್ವ. ೧೪೨-೨೯). **ನಾಡ ಪದ** = ನಾಡಿನಲ್ಲಿ ಪ್ರಚಲಿತವಾಗಿರುವ ಹಾಡು,–ಗೀತೆ ; ಜನಪದಗೀತೆ : ವಾಲ್ಮೀಕಿಯ ಕಾಲಕ್ಕೆ ರಾಮಾಯಣದ ಕಥೆಯು ದೇಶದಲ್ಲೆಲ್ಲ ನಾಡ ಪದಗಳ ರೂಪದಲ್ಲಿ ಹಬ್ಬಿ ಹರಡಿರಬೇಕೆಂದು ಪಾಶ್ಚಾತ್ಯವಿದ್ವಾಂಸರು ಊಹಿಸುತ್ತಾರೆ (ಭಾರದ. ೮೬). **ನಾಡ ಪಾಲ** = ನಾಡಿನ ಪ್ರಭು,–ಮುಖಂಡ: ಬೆಳ್ಳರೆಶೀಮೆ ಹೊಸೂರ ನಾಡ ಪಾಲ ಮೂಡಲ ದ್ಯೆಲ ಗ್ರಾಮದಲ್ಲೂ . . . ಭೂಮಿ ಯಂನ್ನು ಮೂಲಕ್ಕೆ ಮಾಡಿಕೊಂಡು (ಮೈಆರಿ. ೧೯೩೪, ೯-೩ ; 1690). **ನಾಡ ಪೆರ್ಗಡೆ, ನಾಡ ಹೆಗ್ಗಡೆ** = ನಾಡ ಪಾಲ : ತೊಳಕಲೆಯ ಸಿರಿಯಮ ಸೆಟ್ಟಿಯುಂ ನಾಡ ಪೆರ್ಗಡೆ ಹಮ್ಮಸೆಟ್ಟಿ [ ಯುಂ ] (ಎಇ. XIX, ೩೭-೧೫ : 1144) ; ನಾಡ ಹೆಗ್ಗಡೆ ತಡವಾಡದೆ ಕುದುರೆಯನ್ನೇರಿ ಹೋದನು (ಸವತಿ. ೫೭). **ನಾಡ ಪ್ರಭು** = ನಾಡ ಪಾಲ : ನಾಡ ಪ್ರಭುಗಳ ಸನ್ನಿಧಾನದಲು . . . ಧಾರಾಪೂರ್ವ್ವಕಂ ಮಾಡಿ ಬಿಟ್ಟರು (ಎಕ. VII, ಶಿವಮೊ. ೯೭-೪೮ ; 1113) : ನಾಡ ಪ್ರಭುಗಳು ಸ್ಥಾನಮಾನ್ಯವೊಳಗಾದ ಸಮಸ್ತಪ್ರಜೆಗಳ ಪುರಸ್ಸರದಿಂದವೂ . . . ಸಾಕಲ್ಯೇನ ಹಸ್ತಸ್ಥವಾಗಿ ಕೊಟ್ಟು (ಎಕ. XI, ಚಿತ್ರದು. ೧೨-೧೭ ; 1286). **ನಾಡ ಬಾವುಟ** = ನಾಡ ಗುಡಿ : ಸ್ವಾತಂತ್ರ್ಯ ದಿನದಂದು ಸರ್ಕಾರಿ ಕಟ್ಟಡಗಳ ಮೇಲೆ ನಾಡ ಬಾವುಟವನ್ನು ಏರಿಸುತ್ತಾರೆ (ರೂಢಿ). **ನಾಡ ಬೇಂಟೆ** = ಸುತ್ತುಮುತ್ತಿನ ಗ್ರಾಮಸ್ಥರು ಒಟ್ಟುಗೂಡಿ ಆಡುವ ಬೇಟೆ : ಕಾಡ ಕಟ್ಟಳೆ ನಾಡ ಬೇಂಟೆಯಂ ಕೊರಲೊಂಕೆ (ಕಾಲೂರ. ೪೯-೭೨). **ನಾಡ ಮದ್ದು** = ಸ್ವದೇಶೀ ಔಷಧಿ ; ಜನರು ತಮ್ಮ ಅನುಭವ ದಿಂದ ಪ್ರಯೋಗಿಸುವ ಔಷಧ; ನಾಟಿ ಮದ್ದು : ನಾಡ ಮದ್ದಂ ತಿಂದು ಕುತ್ತ ಕಡದಿರಬಹುದೆ (ಹಚಕಾ. ೧೧-೨೪). **ನಾಡ ಮಾತು** = ೧. ದೇಶದ ವೃತ್ತಾಂತ ; ರಾಜಕೀಯಕ್ಕೆ ಸಂಬಂಧಪಟ್ಟ ಮಾತು : ನಾಡ ಮಾತುಗಳೇತಕೋ ಸಂಗೀತವ ಪಾಡುವ ಸಮಯವೇನೊ ಗಾಡಿಗಾಱ ಶ್ರೀಪುರಂದರವಿಠಲನ ಪಾಡಿ ಪಂಥಗಳೊಡಗೂಡುವ ಸಮಯಕ್ಕೆ (ಪುರಂದ. ೩-೫೨-೩) ; ಆಡಿಗಟ್ಟಣವೇಕೆ ಬೋಡಂಗೆ ಕಬ್ಬೇಕೆ ಕೋಡಗನ ಕೈಗೆ ಬಳೆ ಯೇಕೆ ಬಡವಂಗೆ ನಾಡ ಮಾತೇಕೆ (ಸರ್ವಜ್ಞ. ೧೩೭೪). ೨. ಗಾದೆ ; ನಾಣ್ಣುಡಿ : (ಕಿ). ೩. ಜನಸಾಮಾನ್ಯರ ಮಾತು ; ಯೋಚನೆ ಮಾಡದೆ ಆಡುವ ಮಾತು ; ಅಪಲಾಪ : ನಾಡ ಮಾತು ಬೇಡ ಸೆಜಗೊಡ್ಡಿ ಬೇಡು ಕೂಡಲ ಸಂಗನ ಶರಣರ (ಬಸವ. ೨೭೮) ; ನಾಡ ಮಾತೇನೊಲಿದೊಡಂ ಕೊಂಡಾಡು ಮೇಣಲ್ಲದಡೆ ಲಘುವಂ ಮಾಡಿ ನುಡಿಯದಿರು (ಬಸಪು. ೪೪-೫೬); ಮತ್ತೆ ಮಾಣದೆ ನಾಡ ಮಾತನು ಕಲಿತು ನಪ್ಪೊಡನಾಡುತಿಹರೆ (ಪ್ರಭುಲೀ. ೧೩-೧೨) ; ನಾಡ ಮಾತು ಬೇಡ ನಾಲಿಗೆ ನಿನ್ನ ಬೇಡಿಕೊಂಬೆನು ಕಂಡ್ಯ ನಾಲಿಗೆ (ಪುರಂದ. ೫-೪೮ ಪಲ್ಲವಿ) ; ಕೇಡು ಬರಲದಕಂಜೆನಂಜೆಮು ನಾಡ ಮಾತು ಗಳೇಕೆ (ನಿಘಾಗ. ೬-೭ ೨೮) : ಬಹುಜನದ ಮುಂದೆ ಸೂಳೆವಳ್ಳಾಡ [illegible] ಗಳಹುವವಳ್ . . . ಸಿಲ್ಕಳೇ ಶಿಕ್ಷಿಸದೊಡೆ (ಕೃಮಂಥ. ೫-೫೭) ; [illegible] (ರಾಮಾಶ್ವ. ೦೭೪-೧೭). **ನಾಡ ಮಾನಸ** = ಸಾಮಾನ್ಯ[illegible] ಪರಿಕಿಸೆ ನಾಡಮಾನಸರದೇಂ ನೆರೆ ಪೋಲ್ವರೆ ಜಕ್ಕಸೆಟ್ಟಿಯ (ಕಇ. IV, ೦೦-೩೯ ; 1121). **ನಾಡ ಮುಖಿ** = ದೇಶದ ಮುಖಂಡ. – ಮುಖ್ಯಸ್ಥ : ತಳಗೆಯ ನಾಡಾಳುವ ನಾಡ ಮುಖಿಗಳು ರಣಪಟುವಗವುಡನ ಮಗ ದಾಳ ಗವುಡ (ಎಕ. XIV, ತಿರುಮ. ೭೮-೩೦ ; 1277). **ನಾಡವರ್, ನಾಡವರು** = ೧. ದೇಶದ ಜನರು ; ಪ್ರಜೆಗಳು : ಪದನಱಿದು ನುಡಿಯಲುಂ ನುಡಿದು ದನಱಿದಾರಯಲುಮಾರ್ಪರಾ ನಾಡವರ್ಗಳ್ (ಕವಿರಾ. ೧-೩೮) ; ಮುನ್ನಿನ ದಿವಸಂ ನಾಡವರೆಲ್ಲಂ ಪೂಜಿಸಿ ಪೋದ ಟಿಟ್ಟನೆತ್ತುಮಂ ಬಂಡಿಯುಮಂ ತಂದು ತೋಱೆ (ಧರ್ಮಾಮೃ. ೨-೧೯೧). ೨. ಸಾಮಾನ್ಯಜನ ; ಜನ ಸಾಮಾನ್ಯ : ಮೇರೆಯಂ ತಪ್ಪುವ ಮಾನಿಸರಂ ಕಂಡೊಡೆ ಪಂಚಮಹಾ ಪಾತಕರೆಂದು ಬೈವ ನಾಡವರ ಬೈಗುಳ್ಗಳಿಂದಮುಂ (ಧರ್ಮಾಮೃ. ೯-೬೮) : ನಾಡವರು ಅವರಿಗೆ ನರಿಬೇಟೆಗಾರರಾದಪ್ಪ ಎಂದು ಗೌರವಸಂಬೋಧನೆ ಯನ್ನು ಬಳಸುತ್ತಿದ್ದರು (ಹುಲಿಪಾ. ೦೭). ೩. ನಾಡಿನ ಮುಖಂಡರು : ಮುಂದೆ ನಾಡವರು ಆ ಹೆಂಡೆ ಮುಂದಕೆ ಸಹಾ ಹೋಗುವಾಗ (ಎಕ. VII, ಶಿವಮೊ. ೦೦೭-೨೫ ; 1576 ?). ೪. (ಕರಾ) ಒಂದು ಜನಾಂಗದ ಹೆಸರು: ಕರಾವಳಿ ಪ್ರದೇಶದಲ್ಲಿ ವಾಸಿಸುವ ಜನರಲ್ಲಿ ನಾಡವರು, ಹಾಲಕ್ಕಿ ಒಕ್ಕಲರು . . . ಒಕ್ಕಲತನದಿಂದ ಜೀವಿಸುವವರು (ಕರವೀ. ೬) ; ನಾಡವರು ದಕ್ಷಿಣ ಕನ್ನಡ ಜಿಲ್ಲೆಯ ಉತ್ತರ ಭಾಗದಲ್ಲಿದ್ದು ಕನ್ನಡ ಮಾತನಾಡುವ ವರು (ತುಳುನಾ. ೫೧). **ನಾಡ ವಾರ್ತೆ** = ನಾಡಿನ ಮಾತು ; ಲೋಕಾಭಿ ರಾಮಪಾದ ಮಾತು ; ಲೌಕಿಕವಾದ ಮಾತು : ರೂಢಿಯೊಳಗೆ ನಮ್ಮ ಪುರಂದರವಿಠಲನ್ನ ಪಾಡಿ ಪೊಗಳದೆ ನಾಡ ವಾರ್ತೆಯಾಡುವರು (ಜಗದಾ. ೦೧೧). **ನಾಡವೊಪ್ಪ** = ನಾಡಿನ ಪರವಾಗಿ ಹಾಕುವ, ಒಬ್ಬ ಅಧಿಕೃತ ವ್ಯಕ್ತಿಯ ಸಹಿ,–ಹಸ್ತಾಂಕನ : ಸ್ವರುಚಿಯಿಂದ ಧಾರಾಪೂರ್ವ್ವಕವಾಗಿ ಬಿಟ್ಟ ಧರ್ಮ್ಮ ನಾಡವೊಪ್ಪ ಶ್ರೀಭೀಮನಾಥ ಮಲಪರೊಳು ಗಂಡ (ಎಕ. VII, ಶಿವಮೊ. ೦೯-೦೮ ; 1309). **ನಾಡ ಸೇನಬೋವ** = ನಾಡಿನ ಶಾನು ಭೋಗ ; ನಾಡಕರಣಿ : ನಾಡ ಸೇನಬೋವ ಬಾಚಣ್ಣ (ಎಕ. XI, ಚಿತ್ರದು. ೧೨-೩೪ ; 1286). **ನಾಡ ಸ್ವಾಮಿ** = ನಾಡ ಪಾಲ : ನಾಡ ಸ್ವಾಮಿ ಶಂಕರೈಯ್ಯನು ಸೇನಬೋವ ಶಂಕರೈಯ್ಯನು (ಎಕ. VII, ಶಿಕಾರಿ. ೯೪-೧೫ ; 1094) : **ನಾಡ ಹಬ್ಬ** = ಏಕೀಕರಣದ ದೃಷ್ಟಿಯಿಂದ ಪ್ರಾರಂಭಿಸಿದ ದಸರಾ ಮೊದಲಾದ ಹಬ್ಬ : ತಾವು ಮಾಡಿಕೊಂಡ ನಾಡ ಹಬ್ಬದ ಯೋಜನೆಯನ್ನು ಅವರಿಗೆ ತಿಳಿಸಲು ಆತುರಗೊಂಡಿದ್ದರು (ಕಪವು. ೫-೧೨): ಅವರ ಭೆಟ್ಟಿಯ ಎರಡನೆಯ ಪ್ರಸಂಗವು ಕೂಡಿ ಬಂದುದು ಎಂದರೆ . . . ನಾಡ ಹಬ್ಬದ ಕಾಲಕ್ಕೆ (ಪ್ರಬಂಧ. ೯೪) : ಅದು ಅಲ್ಲಿ ನಾಡ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸಲಾಯಿತು (ಆಲೋಲೀ. ೦೬೧). **ನಾಡ ಹಲವರು, ನಾಡಿನ ಹಲವರು** = ದೇಶದ ಮುಖಂಡರು ; ದೇಶದ ಪಂಚಾಯಿತಿಯ ವರು: ಶ್ರೀಮಂತು × × × ನಾಡ ಹಲವರು ಸ್ವಾಮಿತನವನು ಸೋಮೋಜಿ ಸೆಟ್ಟಿಯ ಮಕ್ಕಳು ಮಂಗಟಸೆಟ್ಟಿಗೆ . . . ಕೊಟ್ಟ ಸರ್ವಮಾನ್ಯ ದೊಳ ವಿ ೧ ಗದ್ದೆ (ಮೈಆರಿ. ೧೯೨೫, ೧೦೦-೨ ; ?) : (ರೂಢಿ). **ನಾಡ ಹಾಡು** = ನಾಡಗೀತೆ ೧ : ಕಾರ್ಯಕ್ರಮದ ಮೊದಲಿನಲ್ಲಿ ನಾಡ ಹಾಡು ಹಾಡುವುದು ವಾಡಿಕೆ (ರೂಢಿ). ೨.=ನಾಡಗೀತೆ ೨ : ನಾಡ ಹಾಡು ಹೇಳುವಾಗ ಎದ್ದು ನಿಲ್ಲಬೇಕು ಎಂದು ಮಕ್ಕಳಿಗೆ ಹೇಳಿಕೊಡಬೇಕು (ರೂಢಿ). **ನಾಡ ಹಾದಿ** = ಹಳ್ಳಿಯಿಂದ ಹಳ್ಳಿಗೆ ತಿರುಗಾಡಲು ಮಾಡಿಕೊಂಡಿರುವ ಕಾಲುದಾರಿ: ಹಳ್ಳಿಗಾಡಿನ ದಾರಿ : ನರ್ತನ ಮಾಡುವ ಕಾಲು ನಾಡ ಹಾದಿಯನ್ನು

ಮೆಟ್ಟೀತೆ! (ಶಾಂತಲಾ. ೧೨೨). ನಾಡ ಹಾನೆ = ಒಂದು ಅಳತೆ : ಶಾಸನಗಳಲ್ಲಿ ಬರುವ ನಾಣ್ಯಗಳೂ ಅಳತೆಗಳೂ:– ಗದ್ಯಾಣ (ಗದ್ಯಾಣ) . . . ಹಾನೆ, ನಾಡ ಹಾನೆ, ಕಂಚಿನ ಹಾನೆ (ತುಳುನಾ. ೨೭೧). ನಾಡ ಹುಚ್ಚ = ಏನೇನೂ ತಿಳಿಯದವನು ; ಬಹಳ ದಡ್ಡ : ಹಾಗ ಕೇಳೋ ಹುಚ್ಚಾ, ನಾಡ ಹುಚ್ಚಾ (ಹನ್ನೊಂದ. ೧೭). ನಾಡ ಹೆಣ್ಣು = ಹಳ್ಳಿಯ ಹೆಂಗಸು : ಕಾವ ಕಿಳಬಗೆಯಿರ್ಪ ನಾಡ ಪೆಣ್ಣಲ್ಲಿ (ಕಾಲಚರ. ೨೭-೧೫). ನಾಡಾಳ್ವೋನ್= ದೇಶವನ್ನು ಆಳುವವನು ; ನಾಡ ಪ್ರಭು : ಇದಾ ನಾಡಾಳ್ವೋನಾನುಂ ಊರಾಳ್ವೋನಾನುಂ ಊರಾ ಒಕ್ಕಲನುಂ ಅಲಿದೋರ್ ಪಂಚಮಹಾಪಾತಕ ... ಅಕ್ಕುಂ (ಎಕ. VI, ಚಿಕ್ಕಮ. ೯೨-೬; ಸು. 750 ?). ನಾಡುಗಳ್=ನಾಡಿನ ಅಧಿಕಾರ ನಡೆಸುವ ಮಹಾಜನರು: ಶ್ರೀಮಾಣಿಕೇಶ್ವರದೇವರ ಶ್ರೀಕಾರ್ಯ ನಡೆವಂತಾಗಿ ನಾಡುಗಳ್ ಕೊಟ್ಟ ಆಯದಾಯವಾವುದೆಂದಡೆ (ಮುಂಬರಾ. X, ೨೪೯-೬೩ ; 1219). ನಾಡು ಬೀಡು = ದೇಶ ಮತ್ತು ವಾಸಸ್ಥಳ ; ಅಖಂಡ ದೇಶ : ಸಂಪ್ರೀತಿಯುನು ಸುಜನರಲಿ ನಿರ್ಮಳನೀತಿಯುನು ಪರಿವಾರಪುರಜನ ನಾಡುಬೀಡಿನಲಿ . . . ಅಖಿಳಜ್ಞಾತಿಗಳಲೆಚ್ಚರಿಕೆಯೊಳಗಿಹುದು (ಕುವ್ಯಾಸ. ೧೦-೧೯) : ನಾಡುಬೀಡೆನಗಾಯ್ತು ವಶ ಖಿಯುಖೋಡಿಯಿಲ್ಲದೆ ಶಕ್ರಪದದಲಿ ಜಾಡಿಸುವೆನದನೇನ ಹೇಳುವೆನೆನುತ ಬಿಸುಸುಯ್ದ (ಕುವ್ಯಾಅ. ೧೩-೬೪) : ಎಲ್ಲೆಗೆಳದಬ್ಧಿಯೆನಲ್ ಪಡೆಯೇಂ ಕಡುಂಗಿತೋ ನಡೆದುದು ನಾಡುಬೀಡು ಗುಡಿಗೋಹುರಗಳ್ ಪುಡಿಯೇಳೆ ಭೋರೆನಲ್ (ಚಿಕವಿ. ೨-೧೦೫). ನಾಡುಬೀಡುಗ = ದೇಶದಲ್ಲಿ ವಾಸಮಾಡುವವನು; ದೇಶದ ಸಾಮಾನ್ಯ ಪ್ರಜೆ ; ನಾಡುಗ : ಕಾಣ್ಕೆ ಕೊಂಡು ಭಕ್ತಿಭರದಿಂ ಪುಗುವ ನಾಡುಬೀಡುಗರುಂ (ಚಿಕವಂ. ೧೨೧-೧೭).

[ ದೇ.॥ ತಮಿ. ಮಲ. ನಾಟು; ತುಳು. ನಾಡ್, ಸಾಡು: ತೆಲು. ನಾಡು; ಗೊಂಡಿ. ನಾರ್; ಕುಇ. ನಾಟೊ ]

**ನಾಡುಅಕ್ರೋಟು** (ನಾ). ಒಂದು ಬಗೆಯ ಮರ : ನಾಡುಅಕ್ರೋಟು, ಅಲ್ಯೂರೈಟಸ್ ಗಿಡ (ಮೃಜಿಗಿ. ೪-೬೮).

[ ನಾಡು + ಅಕ್ರೋಟು (< ಅಕ್ರೋಡ) ]

**ನಾಡುಗ, ನಾಡಗ** (ನಾ). ೧. ಸಾಮಾನ್ಯ ಮನುಷ್ಯ ; ಸಾಧಾರಣ ವ್ಯಕ್ತಿ : ಆಡಿಸ ಹಿಂಡಾನೆಯ ಹಿಡಿವಂತಾ ರೂಢಿವಡೆದ ಬಲಯುತನಂ ನಾಡುಗರೆಯ್ದಿ ಹಿಡಿಯೆ (ಪ್ರಭಂಜ. ೨-೧೫೦) ; ಎಂದನಾ ಫಣಿಭೂಷಣನು ಶೂಲವೇಲನೇ ಲೋಕರಕ್ಷಣದಕ್ಷ ಲಕ್ಷ್ಮಿಯಾಧಿಪತಿಯುಳಿದ ನಾಡುಗರ ಪಾಡೇನು ಕೇಳ್ಕಂದನ (ಸಮ್ಯಕಾ. ೪-೩೧). ೨. ನಾಡನ್ನಾಳುವವನು ; ದೊರೆ : ನಾಡುಗರಿಗೆ ಸೇನೆದೋಟು ಗಲ್ದನು ಯುದ್ಧ ಮಾಡುಪಂವಗಿದಿರುಂಟೆ (ಭರತ. ೪೯-೧೩೭). ೩. ದಡ್ಡ ; ಮೂಢ; ಅಜ್ಞ : ನಾಡುಗರೊಳು ವರ್ತಿಸದಿರು (ಯೋಗಾಂವಿ. ೫-೫). ನಾಡಗ : ೩. ಕೇಳು ನಾಡಗರೊಲಿದು ಗಾಜಿನ ಮಾಲೆಯನು ಕೊಳ್ವಂತೆ (ಸ್ವರೂಪಾ. ೨-೧೭). [ ನಾಡು + –ಗ$_2$ ]

**ನಾಡುಗವುಡ, ನಾಡಂಗೌಡ** (ನಾ). ಗ್ರಾಮದ ವ್ಯವಹಾರಗಳಲ್ಲಿ ತೀರ್ಪು ನೀಡುವ ಮುಖಂಡ; ಹಳ್ಳಿಯ ಮುಖ್ಯಸ್ಥ ; ಪಟೇಲ : (೬). ನಾಡುಗೌಡ : ನಾಡುಗೌಡನ ಪಂಚಾಯ್ತಿಯಲ್ಲಿ ಫಿರ್ಯಾದಿ ಅಪರಾಧಿಗಳಿಬ್ಬರೂ ತಮ್ಮ ತಮ್ಮ ಪರವಾಗಿ ವಾದಿಸುವವರನ್ನು ನೇಮಿಸಿಕೊಳ್ಳುವ ಅಧಿಕಾರವಿತ್ತು (ಹುಬ್ಬಹ. ೧೭) : ಪಟೇಲನಿಗೆ–ಪಟೇಲ, ಗೌಡ, ನಾಡುಗೌಡ ಎಜಮಾನ, ರಡ್ಡಿ, ಪೆದ್ದಕಾಪು, ಮಾನ್ಯಕರಣಂ, ಮಣಿಗಾರ ಅಥವಾ ಅಡಿಗಾರ, ನಾಯಿಡು ವಗೈರೆ ಹೆಸರುಗಳುಂಟು (ಗ್ರಾಮಾಕ. ೧).

[ ನಾಡು +ಗವುಡ$_1$ (< ಗಾವುಂಡ) ]

**ನಾಡುಗಾಣೆ** (ನಾ). ಒಂದು ಊರಿನ ಹೆಸರು : ಸೂಲಿಗೋರುಮ್ ನಾಡುಗಾಣೆಮ್ ಪೃಥುತರ ಮಿಡಿಗೇ ಸೂಳಿಕೈಲೇಂದ್ರ ದುಗ್ಗೇನನ್ನಾಮ್ (ಮೈಅರಿ. ೧೯೨೧, ೧೦-೬೭ ; 967). [ ? ]

**ನಾಡುಗಾದೆ** (ನಾ). ಒಂದು ದೇಶದಲ್ಲಿ ಪ್ರಚಲಿತವಾಗಿರುವ ಮಾತು ; ಲೋಕೋಕ್ತಿ ; ನಾಣ್ಣುಡಿ : (ಚತುನಿ. ೬. I, ೭೫).

[ ನಾಡು + ಗಾದೆ ]

**ನಾಡುಗೌಡ** 'ನಾಡುಗವುಡ' ನೋ.

**ನಾಡುತಟ್ಟು** (ನಾ). ಸಾಮಾನ್ಯವಾದ ಕುದುರೆ ; ಗಿಡ್ಡಕುದುರೆ : ಅವನು ತನ್ನ ಹೊಲದ ಹತ್ತಿರ ಮೇದುಕೊಂಡಿದ್ದ ನಾಡುತಟ್ಟಾದ ಒಂದು ಕುದುರೆಯನ್ನು ಹಿಡಿದುಕೊಂಡು ಬಂದು . . . ಕಾಣಿಕೆಯಾಗಿ ಒಪ್ಪಿಸಿದನು (ನಗಗ. ೫೦). [ ನಾಡು + ತಟ್ಟು$_6$ ]

**ನಾಡುನುಡಿ** (ನಾ). ಜನಸಾಮಾನ್ಯರಲ್ಲಿ ಬಳಕೆಯಲ್ಲಿರುವ ಮಾತು : ಆಳ್ವಾರರ ಹಾಡುಗಳು ನಾಡುನುಡಿಯಲ್ಲಿದ್ದುದರಿಂದ ಇವು ಜನಸಾಮಾನ್ಯರಲ್ಲಿ ಹರಡುವುದಕ್ಕೆ ಅವಕಾಶವಾಯಿತು (ಭಾರದ. ೩೯೯).

[ ನಾಡು + ನುಡಿ$_2$ ]

**ನಾಡುನೇಗಿಲು** (ನಾ). ಹಳ್ಳಿಗರು ಉಪಯೋಗಿಸುತ್ತಿದ್ದ ನೇಗಿಲು : ಈಗ ಸಾಮಾನ್ಯವಾಗಿ ಉಪಯೋಗದಲ್ಲಿರುವ ನಾಡುನೇಗಿಲು ಎಷ್ಟೋ ಶತಮಾನಗಳಿಂದ ಬಳಕೆಯಲ್ಲಿದೆ (ವ್ಯವಮ. ೮).

[ ನಾಡು + ನೇಗಿಲು (<ನೇಗಿಲ್) ]

**ನಾಡುಪ್ಪು** (ನಾ). ಸಾಮಾನ್ಯವಾದ ಉಪ್ಪು,–ಲವಣ : ಸಾವಿರಪಾಲಿಗೆ ಸಾಧಾರಣವಾಗಿ ಇರುವ ೩೪–೩೫ ಪಾಲು ಉಪ್ಪಿನಲ್ಲಿ ಕಲ್ಲುಪ್ಪು ಅಥವಾ ನಾಡುಪ್ಪು (ಸೋಡಿಯಂ ಕ್ಲೋರೈಡ್) ೨೭ ಭಾಗದಷ್ಟಿದೆ (ಭೂವಿವ. ೮೬).

[ ನಾಡು + ಉಪ್ಪು$_1$ ]

**ನಾಡುಬಾದಾಮಿ** (ನಾ). ಒಂದು ಬಗೆಯ ಮರ : (ಮೃಜಿಗಿ. ೬೪-೧೫೦೨).

[ ನಾಡು + ಬಾದಾಮಿ ]

**ನಾಡುಮಿಂಡ** (ನಾ). ದುರಾಚಾರಿಯಾದ ವಿಟ ; ದುಷ್ಟವಿಟ ; ಅನೀತಿವಂತ : ತೊಂಡಿಲ ಮುಡಿದುಕೊಂಡು ತಮ್ಮ ತಮ್ಮ ಗಂಡರ ಹಿಂದುಗೊಂಡು ನಾಡುಮಿಂಡರ ನೋಡುತ್ತಲಿ ಇಂದು ನಮ್ಮ ಹುಲಿ ಹೋಯಿತ್ತು (ಬಸಹ. ೬೦-೧೬೭). [ ನಾಡು + ಮಿಂಡ$_1$ ]

**ನಾಡುವಟ್ಟ** (ನಾ). ಒಂದು ಬಗೆಯ ತೆರಿಗೆ : ನಾಡೊಳಗಳ ಹಲವ × × × ಇಂತಹ × × ನಾಡುವಟ್ಟವಾಗಿ ನಾಲು (ಎಕ. XIV, ಮುಂಡ್ಯ. ೧೩೭-೨೦ ; 1278). [ ನಾಡು + ವಟ್ಟ$_2$ ]

**ನಾಡುವಡೆ** (ಕ್ರಿ). ನಾಡನ್ನು ಹೊಂದು ; ನಾಡಿನ ಒಡೆತನವನ್ನು ಪಡೆ : ಸಿರಿವಂತನ ಕಯ್ಯುಂ ಪಿಡಿದ ಬಡವೆಯಂತೆ ನಾಡುವಡೆದ ಪಸಾಯಿತನಂತೆ (ಧರ್ಮಾಮೃ. ೫-೧೨೫). [ ನಾಡು + ಪಡೆ$_1$ ]

**ನಾಡುವಿಡಿ** (ಕ್ರಿ). (ಆಕ್ರಮಣದಿಂದ) ದೇಶವನ್ನು ಸ್ವಾಧೀನಕ್ಕೆ ತೆಗೆದುಕೊಳ್ಳು,–ವಶದಲ್ಲಿಟ್ಟುಕೊಳ್ಳು : ನಾಡುವಿಡಿಯದರಸುಗೆಯ್ವೆನೆಂಬಂತೆ ಘೃತಮಿಲ್ಲದೂರನೂಡುವೆನೆಂಬಂತೆ ಮದವಣಿಗನಿಲ್ಲದೆ ದಿಬ್ಬಣಂಬೋಪೆನೆಂಬಂತೆ (ಧರ್ಮಾಮೃ. ೪-೫೦). [ ನಾಡು + ಪಿಡಿ$_1$ ]

**ನಾಡುಶಾನಭೋಗ** (ನಾ). ಹಲವಾರು ಹಳ್ಳಿಗಳ ಶಾನುಭೋಗ,–ಕರಣಿಕ : (೬). [ ನಾಡು + ಶಾನಭೋಗ (<ಸೇನಬೋವ) ]

**ನಾಡೂರ್** (ನಾ). ನಾಡಿನಲ್ಲಿರುವ ಊರು,–ಗ್ರಾಮ : ಮುಂಚದ ಪಿಂಚದ ಬಳೆದು ಏರಿಂಚಿಯ ಕೆಯ್ಪಡಿವೊಲಾದುವಾ ನಾಡೂರ್ಗಳ್ (ಪಂಪಭಾ. ೮-೫೧) : ಚೆಲ್ವಿಂಗಾವಾಸಮೆನಿಪ್ಪವೊಪ್ಪುವಾ ನಾಡೂರ್ಗಳ್ (ಮಲ್ಲಿಪು. ೨-೨೭) ; ಕಾಣಿಕೆಯುಂ ತಂನಾಳ್ವ ನಾಡೂರ್ಗ್ಗಳೊಳು . . . ಕೊಟ್ಟರ್ (ಎಕ. VII, ಶಿಮೊ. ೪-೯೨ ; 1122). [ ನಾಡು + ಊರ್ ]

**ನಾಡೆ** (ಅ). ಹೆಚ್ಚಾಗಿ ; ಚೆನ್ನಾಗಿ ; ಬಹಳವಾಗಿ ; ವಿಶೇಷವಾಗಿ ; ಅತಿಶಯವಾಗಿ : "ನಾಡೆಯೆಡೆಯಾವಗಂ ನೆಟ್ ನೀಡುಂ . . . ಇವಮ್ಯಯದೊಳಧಿಕಾರ್ಥಂ" (ಕವಮ. ೩೦೪) : ಸದಭಿಸ್ತುತಮಪ್ಪೊಂಕಾಂದದ

ನಡುವಣ ನಾಡೆ ನಾಡೆ ಕನ್ನಡದ ತಿರುಳ್ (ಕವಿರಾ. ೧-೩೭) : ವಿಶ್ವಸೇನ ಮಹಾರಾಜನ ಮಹಾಸಾಮಂತರ್ಕಳುಂ ಪರಿವಾರಮುಮೆಲ್ಲಂ ಕುದುರೆ ವಡಿವಜ್ಜೆಯುಂ ನೋಡಿ ನಾಡೆಗೆಟ್ಟುಪೋಗಿ (ವಡ್ಡಾರಾ. ೫೩-೨೫) : ಮಾಡುವ ಕಿಡಿಸುವ ಗಸಣಿಗೆ ನಾಡೆಯುಮದು ಪೊಱಗು (ಆದಿಪು. ೧-೪೫) ; ಚಿಂತಿಪ ಪಾರ್ವನ ಶೋಕದೊಂದು ಪೊಂಪುೞಿಯನೆ ನೋಡಿ ನಾಡೆ ಕರುಣಂ ತನಗಾಗಿರೆ (ಪಂಪಭಾ. ೩-೨೫) ; ಕರುವಾಡಂ ನಾಡೆ ಚೆಲ್ವಂ ತಳೆದುದು ಪಲವುಂ ಬಳ್ಳಿಮಾಡಂಗಳಿಂದೆ (ಕಾದಂಪೂ. ೪೮೭) : ನಾಡೆ ಸೊಗಯಿಪ್ಪ ಕಯ್ಯಿಂ . . . ಸುರದಂತಿಯಂತೆ ನಿಂದತ್ತಾಗಳ್ (ನೇಮಿಪು. ೧೧-೫೩) ; ಬೇಡು ವರವನು ಮಗನೆ ನುಡಿನುಡಿ ನಾಡೆ ಮೆಚ್ಚಿದೆನೆಂಬ ಹರಿಯನು ನೋಡಿ ನಕ್ಕನು (ನಿಭಾಗ. ೭-೮-೪೭) ; ಇಂತು ಭೂಜಾತೆ ಗರ್ಭಿಣಿಯಾದ ಳಾಗೆ, ನಾಡೆ ನಾಡೆ ಸಂತಸಗಡಲೊಳೋಲಾಡುತಿರ್ದುದು (ರಾಮಾಶ್ವ. ೨೧-೦೭).

**ನಾಡೆಯುಂ** = ನಾಡೆ : ಕೌರವರ್ಗಿದು ನಾಡೆಯುಂ ತಿಣುಕನಾಗಿಸದೇಂ ಗಳ ಸಯ್ಪು ಪೋಕುಮೇ (ಪಂಪಭಾ. ೨-೮೭) ; ಇರುಳೆಲ್ಲಂ ಜಾಗರಮಿರ್ದು ನೇಸಱ್ ಮೂಡೆ ನಾಡೆಯುಂ ಪೊೞ್ತಿರ್ದು ಎಂತುಂ ಬರವಂ ಕಾಣದೆ (ಪಂಚತಂ. ೨೩೦-೧೯) : ಬಾನೆಡೆ ನಾಡೆಯುಂ ಪೊಡವಿಯಂತಿರೆ (ಕಬ್ಬಿಕಾ. ೨೫೧). ‘ನಡ್ಕೆ’ ಪರಾ. [ ? ತಮಿಳಿನಲ್ಲಿ ‘ನಾಡಂ’ ಎಂಬುದಕ್ಕೆ ‘ಪರೀಕ್ಷಿಸು, ಆಲೋಚಿಸು, ಹುಡುಕು’ ಎಂಬರ್ಥವಿದೆ ]

**ನಾಡೆಯು** (ನಾ). (?) : ಆವಿನಹಳಿಯ ಬಲಿನಾಡವೆರಡುನಾಡನೂ ಕೂಡೆ ಕೊಂಡು ಅಂಕೆಯನಾಯಕನ ನಾಡೆಯನ ತೋಳಲೊಳಗೆ ಕೊಂಡುದುನಾ ದೇವಿ ತಂಮರಸ (ಎಕ. VIII, ಸಾಗರ. ೭೦-೨೨ ; 1276 ?). [ ? ]

**ನಾಡೆಱೆಯ, ನಾಂಡೆಱೆಯ** (ನಾ). ನಾಡಿನ ಒಡೆಯ : ನಾಡೆಱೆಯಂ ಭರತಂ ಬೆಸಸಿದ ತೆಱನಂ ಕೇಳ್ (ಪಂರಾಮಾ. ೭-೪೯) ; ಎಱಗಿಸಿ ತನ್ನ ಚಾರು ಚರಣಾಂಬುರುಹದ್ವಿತಯಕ್ಕೆ ವಿಕ್ಕ ನಾಡೆಱೆಯರನೆಲ್ಲರಂ (ವರ್ಧಪು. ೧-೧೦೪); ನಾಡೆಱೆಯನ ಕೆಲದೊಳ್ ತೀಡಿದತ್ತು ತೆಂಬೆಲರಾಗಳ್ (ಕಬ್ಬಿಕಾ. ೮೭) : ಬೇಡುವರನು ಮನ್ನಿಪ ಬಿಡುಗಣ್ಣರ ನಾಡೆಱೆಯನ ಮಗನಂತೆ ಗಾಡಿವಡೆದ ರೂಪಿನ ಗರುವನ ನೀ ನೋಡು ಕಳಿಂಗನನಬಲೆ (ಜೀವಂಸಾಂ. ೧೦-೮೪) : ಭುವನೇಶನೆಂಬೊರ್ವಂ ನಾಡೆಱೆಯರ . . . ಅರಸುಗೆಯ್ಯುತಿರ್ದಂ (ಅದ್ಭುತ. ೨೨-೦೭). **ನಾಂಡೆಱೆಯ** : ಸ್ವಸ್ತಿಶ್ರೀ ನಾಣ್ಡೆಱೆಯರಾ ಎರ್ಮೆಕೊಳ್ವಲ್ಲಿ ಸತ್ತೊನ್ ಕಾಸೂರನ್ (ಎಕ. X (8), ಚಿಂತಾಮ. ೩೪-೧ : 8ನೆಯ ಶತ).
[ ನಾಡು + ಎಱೆಯ ]

**ನಾಡೊಡೆಯ** (ನಾ). ೧. = ನಾಡೆಱೆಯ : ಜನಪತಿಗೆ ನೀಡಲೆರಡುಮಂನೀಸಿ ಕೊಂಡಾ ನಾಡೊಡೆಯನುರಿವುರಿಯೊಳಗೆ ಪತ್ರಂಗಳಂ ಹಾಯ್ಕಿ (ಬಸಪು. ೫೦-೩೬) : ಮಾಡಿತಿಲ್ಲಪರಾಧವನು ಹರಿ ಕ್ರೋಡ ಖಡ್ಗಿ ಕುರಂಗಿಗಳಿರೆಲೆ ನಾಡೊಡೆಯ ರಾಮಂಗೆ ಹೇಳುವುದೆಂದಳಾ ಸೀತೆ (ತೊರರಾ. ೩-೧೧-೭) ; ಬಿಡುವರಲ್ಲ ಕುಮಾರಿಯನು ನಾಡೊಡೆಯರೆಂಬಾ ದೂತನಾ ಬಿಱುನುಡಿಗೆ ಕದಡದೆ (ಸಾಳ್ವಭಾ. ೧೮-೬೩) ; ನಾಡೊಡೆಯನಂಗನೆಯ ಕಾಣದೆ ಬಳಲುತ (ಅನಂರಾ. ೩-೬-೮) ; ಧರಣಿಸುತೆಯಂ ಕಂಡು ನಾಡೊಡೆಯನೆಡೆಗೆ ಪೋದಪೆಂ (ವೆಂಕಾರಾ. ೫-೫-೬) ; ನಿನ್ನ ನಾಡೊಡೆಯ ನೀನ್ : ವೈರಿಯನು ತೊರೆಯ್ಕೆ (ಕೋಗಿರಿ. ೪೮-೩). ೨. ದೇಶವಿಭಾಗದ ಅಧಿಕಾರಿ ; ಪ್ರಾಂತಾಧಿಕಾರಿ : ಕನ್ನರದೇವನ ನಾಡೊಡೆಯಪ್ಪರಿಣತ[ರಾ]ರ್ಕ್ಯನ್ನ್ಕ[ಕ್ಕೆ] (ಸಾಇಇ. XI-1, ೪೫೮-೧೪ ; 980). [ ನಾಡು + ಒಡೆಯ$_1$ ]

**ನಾಡೊವಜ, ನಾಡೋಜ** (ನಾ). ದೇಶದ ಗುರು ; ನಾಡಿನ ಜನರ ಮನ್ನಣೆಗೆ ಪಾತ್ರನಾದವನು ; ಲೋಕಮಾನ್ಯ : ಪುರಾಣಕವಿಯುಂ ಧರೆಗಾಗಿರೆಯುಣ್ಮೆ ಪೊಣ್ಮುವೀ ದೇಸಿಗಳಂತೆ ನಾಡೊವಜನಾದನೊ ಪೇೞ್ ಕವಿತಾಗುಣಾರ್ಣವಂ (ಪಂಪಭಾ. ೧೪-೬೨). **ನಾಡೋಜ** : ರಾಜ್ಯಚಿಹ್ನಂ ಗಳ್ವೆರಸಿಂತು ನಡೆತಂದು ರಾಜ್ಯಲಕ್ಷ್ಮಿ ಬಳೆದ ಸಂತೋಷದಂತವಿಪ್ಪ ಪತ್ತಿದರ್ ಸಹಜಮನೋಜನಂ ನಾಡೋಜನಂ (ಪಂಪಭಾ. ೧೩-೧೦೮) : ‘ಸಕಳಾವನೀತಳಜನ’ವನ್ನು ಮೆಚ್ಚಿಸುವ ‘ನಾಡೋಜ’ ನವನು (ನಾಡೋಜ ೩೩೭) : ನಾಡೋಜನ ಮುಂದೆ ನಾನು ತಪ್ಪಾಡೇನೆ ? (ದಾನಚಿಂ. ೭೩).
[ ನಾಡು + ಒವಜ ( <ಒವರ್ಘು) ]

**ನಾಡೊಳ್ಪು** (ನಾ). ದೇಶದ ಹಿತ-ಮೇಲ್ಮೆ ; ಪ್ರಜೆಗಳ ಕ್ಷೇಮ : (ಪೂರ್ವಕಾಲದಲ್ಲಿ) ಪ್ರಜಾಕ್ಷೇಮ; ಲೋಕಹಿತ; ನಾಡೊಳ್ಪು (Common-Wealth. ಇಂಕನಿ). [ ನಾಡು + ಒಳ್ಪು ]

**ನಾಡೋಜ** ‘ನಾಡೊವಜ’ ನೋ.

**ನಾಡೋರ** (ನಾ). (ಉಕ)ಉಪ್ಪುಮಾಡುವ ಕಸಬನ್ನು ಅವಲಂಬಿಸಿರುವ ಒಂದು ಜನಾಂಗ : ಉಪ್ಪುಮಾಡುವ ನಾಡೋರರು ಮುಂತಾದ ಜಾತಿ ಯವರು . . . ಎಕರೆಗೆ ಸುಮಾರು ೩ ರೂಪಾಯಿಯಂತೆ ತೆರಿಗೆಯನ್ನು ಕೊಡುತ್ತಾರೆ (ಕಭಾಗ. ೫೮೨). [ ? ]

**ನಾಡ್ಕರ್ಣಿ** ‘ನಾಡು’ ಪರಾ.

**ನಾಣ್$_1$, ನಾಣು** (ನಾ). ೧. (ಹೆಂಗಸಿಗೆ ಗಂಡಸಿನ ಎದುರಿನಲ್ಲಿ ಒದಗುವ) ನಾಚಿಕೆ; ಸಿಗ್ಗು; ಲಜ್ಜೆ : “ಲಜ್ಜೆ ನಾಣ್” (ಕರ್ಣಾನಿ. ೬೨) ; ಲಲಿತಾಂಗಿಯ ಶಂಕೆಯುಂ ಭಯಂ ಬೆರಸಿದ ನಾಣುಮಂ ಕ್ರಮದೆ ಪಿಂಗಿಸು ಬೇಸಱದಿರ್ ಗುಣಾರ್ಣವಾ (ಪಂಪಭಾ. ೩-೭೭); ಚುಂಬಿಸುವಾಗಳ್ ಶಬ್ದವಿಲ್ಲ ವ್ರಣ ಸಖಿ ಮುಖದಂತಕ್ಷತಂ ನಾಣ್ಗೆ ಪಕ್ಕಾಗಿಸದು . . . ಸಂಕಲ್ಪಸಮಾಯೋಗಂ ವಿಯೋಗಾಕುಲ ಕುಲಲಲನಾಜೀವನಾಧಾರಮಲ್ತೇ (ಕಾದಂಉ. ೩೧೯) ; ಜಡ ಜಾಂಬಕೆ ಮಂಡಿಸಿದಳ್ ನಡೆತಂದೆಡದಲ್ಲಿ ನಮ್ರಮುಖಿ ನಾಣಿಂದಂ (ಉದ್ಭಟ. ೮-೧೦೦); ನಾಣಂ ಪಿಂಗಿಸಿ ಮುಗ್ಧೆಗೆ ಜಾಣಂ ಕೈಗೊಳಿಸುವಂತೆ (ಶಮುದ. ೭೯ ಪ್ರಯೋ); ನುಣ್ಮಡಿ ಬಿಣ್ಪುದುದು ಮೆಲ್ಲೆರ್ದೆಯೊಳ್ ನಾಣ್ಮೊಳೆತುದು (ಜಮುಕಾ.೩-೨೫). ೨. ಅವಮಾನ ; ಸಂಕೋಚ. ‘ನಾಣ್ಗೆಯ್’ ಪರಾ. ೩. ಸ್ತ್ರೀಪುರುಷರ ಗುಹ್ಯೇಂದ್ರಿಯ : “ಗುಹ್ಯಂ=ಸ್ತ್ರೀ ಪುರುಷರ ನಾಣ್” (ಶಾಶಕ್ಕ. ೬೭) ; ಎಡೆವಿಡದ ದೆಯ್ವಧರ್ಮದೊಳಿಡದಘಮಂ ತಮ್ಮ ಮಾತ ದೊಳಂ ಕಂಡುಮುದಂ ಕಡೆಗಣಿಸುವರಂತದೆ ದಲ್ಕಡೆಗಣಿಸರೆ ತಮ್ಮ ತಾಯ ನಾಣಂ ಕಂಡರ್ (ಸಮುಪ. ೮-೨೨೭) ; ನಾಣ ಮಱೆಯ ನೂಲು ಸಡಿಲೆ ನಾಚುವರು ನೋಡಾ ಗಂಡು ಹೆಣ್ಣೆಂಬ ಜಾತಿ (ಮಹಾದೇ. ಬ. ೭೪-೧೮೪) ; ಜುಗುಪ್ಸೆಯಾಂತ ನಾಣಡಿಗಡಿಗೆಲ್ಲರುಂ ಪೊರಳ್ವ ಮುಸ್ಸಿಗೆವಾಸುಗುಱ್ಱಿಪ್ಪ ಯಾದ ಮೆಯ್ ಬಿಡದಿರದಂತು ಸೂಳೆಯರ ಸಂಗಮನೊಲ್ವರೊ ಖೂಳ ಮಾನವರ್ (ಕಾವ್ಯಸಾ. ೧೦೦೪). **ನಾಣು** : ೧. “ನಾಣು, ನಾಚಿಕೆ, ಸಿಗ್ಗು, ಏವ(ಹೇವ), ಎಗ್ಗು” (ಕಂನುಡು. ೮೭) ; ನಾಣೆಂಬುದು ನಾರಿಯರಿಗಾಭರಣವು (ಕುರಾಸಾಂ. ೩೭-೦೭); ಜಾಣೆ ಮಗುವನೆತ್ತಿಕೊಂಡು ನಾಣ ಮರೆತು ಓಡಿಬಂದು (ಚೆಲುಪು. ೧೪-೧೨) : ಹೊಸನಾಣು ಹೊಸಮುನಿಸು ಹೊಸವಾಗೆ ಸತಿಯು . . . ಹೊಸದೊಂದು ರತಿಯು (ಗರಿ. ೩೮-೭). ‘ನಾಣುಗೆಡು’ ಪರಾ. ೨. ಗಲ್ಲ ಪಲ್ಲು ಬಂಧುರದಧರ ನಾಣು ನಖ ವಸುರುತೆಳು ಪಾರು ಕಂಗಳು . . . ಮೆರೆದವು (ನವಮೋ. ೨೨-೩೩).

**ನಾಣ ದಾಣ** = ಯೋನಿ; ಭಗ : “ವಚ್ಚೀ – ನಾಣ ದಾಣು” (ಶಾಶಕ್ಕ. ೨೫೮). **ನಾಣ ನುಡಿ** = ಅವಮಾನಕರವಾದ ಮಾತು: ಈಗಳೋ ಇಂತಪ್ಪ ನಿಲ್ಲಮೆಂದೇ ಆದೆನ್ ! ಪುಡಿಯೊಳಗೆ ಪುಡಿಯ ಪುಡಿಯಾದೆನ್ – ನಾಣ ನುಡಿಯಾದೆನ್ (ಅಶ್ವಶಾ. ೧೭-೩೭೮). **ನಾಣನೊಗು** = ನಾಚಿಕೆಯನ್ನು ಬಿಡು : ನಾಣನೊಕ್ಕು ಗತಭೀತಿಯನಪ್ಪುವ . . . ಆಸಿಯಳದೇಂ ಮನಂ ಬಿಡಿದಳೋ ಚದುರಿಂ ಸುದತೀಮನೋಜನ (ರಸರ. ೧-೩೫). **ನಾಣ ಪೆಟ್ಟು** = ಲಜ್ಜಾಸ್ಪದವಾಗಿರುವಿಕೆ : ಪೇಸುಗೆಗೆಟ್ಟೀ ನಾಣ ಪೆಟ್ಟಪ್ಪೞಿಜಗಳವೊಳೇ ನಮ್ಮ ತರ್ಕ್ಯಾಮರ್ಯಯುಂಟೇ (ರಾಂತಿಪು. ೭-೮೭) : ಅಱೆತಮುಳ್ಳರ್

ಕಲ್ಲೊಳ್ ಕಡೆದರ್ಚಾವರೇಣುಚಿತಮೆ ಮೃಡಾನಿಯುಂ ಕರಮೆ ನಾಣ ಪುತ್ರಿನ ರೂಪಂ (ಸಮುಪ. ೧೦-೬೪) ; ದುರ್ಗಂಧಕ್ಕೆರಲಾಜಿದೆ ಲೆಂಕರ್ ದಂಡಂ ಗೊಂಡರಂತೆ ತುಳಿಸುತ್ತುಂ ಪೊಱಪಿಂಗೆ . . . ಬಾಣಸಿಗರಿದೇನ್ನಾಣ ಪುತ್ರೇಂದು ಪೋಗೆ (ಧರ್ಮಾಮೃ. ೪-೧೫೯) ; ಕೇಣಾಕಲಜನಪದೇಕಿಗ ಕಾಪ್ಯ ನಾಣ ಪುತ್ತ ನಗೆಯುಂ ನೀಂ ಬಗೆಯ್ಯ (ಶಾಬ್ದ್ಯಾವ. ೪೮೪). ನಾಣಿನ ಪಲಯ = ನಾಚಿಕೆಯ ಭಾಗ; ಯೋನಿ : ತಪು ಕಿಲಕ್ಕ ಒಸರಿಸಿದ್ದ ಕಂಬಳಿಯನ್ನು ಅವಳಿಗೆ ಸರಿಯಾಗಿ ಹೊದಿಸಿ, ಇಣುಕುವಂತಿದ್ದ ನಾಣಿನ ಪಲಯವನ್ನು ಮುಚ್ಚಿದನು (ಮಲೆಮ. ೬೮೨). ನಾಣೊಕ್ಕ = ನಾಚಿಕೆಗೇಡಿ ; ಲಜ್ಜಾಹೀನ ; ನಾಚಿಕೆ ಬಿಟ್ಟವನಂ: ವಿಕಳರುಂ ನಾಣೊಕ್ಕರುಂ ಮಿಕ್ಕರುಂ ಪಡೆದಾ ದೋಷನಿವಾರಣಕ್ಕೆ (ಎಕ. VI, ಕಲೀಕ. ೪೫-೬೨ : 1190).

[ ದೇ.॥ ತಮಿ. ನಾಣ್, ನಾಣ; ಮಲ. ನಾಣ; ತುಳು. ನಾಣ್, ನಾಣ, ನಾಣು = ಬೆತ್ತಲೆ; ಕೊಡ. ನಾಣ; ತೆಲು. ನಾನ ]

**ನಾಣ್₂** 'ನಾಟ್' ನೋ.

**ನಾಣ₁** (ನಾ). ಸ್ನಾನ. 'ನಾಣಗೆ' ಪರಾ.

[ <ಪ್ರಾ. ಣ್ಹಾಣ. / ಸಂ. ಸ್ನಾನ ]

**ನಾಣ₂** (ನಾ). ತಿಳಿವಳಿಕೆ ; ಜ್ಞಾನ ; ಬುದ್ಧಿ : ಏನು ಬರುವದೂ ದೇವ, ನಾಣ ನಮಗೇಟಲ್ಲ ಹಾನಿ ತಟ್ಟುವದು ಹೇಳಿನಗೆ ನಾಡೊಳಗೆ ಏನು ಶಾಂತಿ ಯನು ಮಾಡಿಸಲಿ (ಕನ್ನಜಾ. ೨) ; ಬಾಣ ಬಿಡು ಅಣ್ಣನ ನಾಣ ನಾನ್ಹೇಳಾಲೆ ರಾಗಿಯು ಕಾಳಟು ಕಸಂಲ್ಲ ಸಮ್ಮವರು ಈಡ್ಯಾಡಿ ಬಾಣ ಬಿಡತಾರ (ಲೋಕಗೀ. ೭೭). [ <ಪ್ರಾ. ಣಾಣ. / ಸಂ. ಜ್ಞಾನ ]

**ನಾಣಕ** (ನಾ). ೧. ಮುದ್ರೆ; ಅಚ್ಚು : "ನಾಣಕ = ಪಲವು ಬಣ್ಣದಚ್ಚುಗಳುಂ . . . ವ್ಯಾವಹಾರಿಕ ನಾಣಕವಂಗಳೋಹವಾನ್ . . . ಕೋಶಗುಣಾಃ" (ನೀತಿವಾ. ೫೭-೨). ೨. ನಾಣ್ಯ. 'ನಾಣಕಪ್ರಚಾರ' ಪರಾ. [ ಸಂ. ]

**ನಾಣಕಪ್ರಚಾರ** (ನಾ). ನಾಣ್ಯವನ್ನು ಚಲಾವಣೆಗೆ ಕೊಡುವುದು : ಇಂದಿನ ಶ್ರೀನೃಸಿಂಹಜಯಂತಿಯ ಶ್ರೀಮನ್ಮಹಾರಾಜರ ವರ್ಷವರ್ಧಂತ್ಯುತ್ಸವದ ಶ್ರೀನಾಣಕಪ್ರಚಾರದ ಸಮಾರಂಭದ ಈ ಮುಮ್ಮಡಿಪಬ್ಬದ ದಿವಸ (ಸಂಸಕ. ೦೨೨). [ ನಾಣಕ + ಪ್ರಚಾರ ]

**ನಾಣಯ, ನಾಣೆಯ, ನಾಣೆಯ, ನಾಣ್ಯ** (ನಾ). ೧. ಚಲಾವಣೆಗಾಗಿ ಆಡಳಿತದ ಮುದ್ರೆಯೊತ್ತಿ ತಯಾರಿಸಿದ ಚಿನ್ನ, ಬೆಳ್ಳಿ ಮೊದಲಾದ ಲೋಹದ ಬಿಲ್ಲೆ ; ಕಾಸು, ರೂಪಾಯಿ ಮೊದಲಾದುವು ; ಹಣ : ಅಱುವತ್ತು ಬಿಂದಿಗೆಯೊಳು ನಾಣಯ[ಪಾಠಾಂ. ನಾಣ್ಯ]ವನು ಕಂಬುಹಿನ ಭಂಗಾರಗಳನು . . . ಮಗಗೆ ಕಳುಹಿದನು (ಕುಠಾಸಾಂ. ೪೨-೩೪) ; ಬೊಕ್ಕಸ ಭಂಡಾರದಿಕ್ಕಲಲ್ಲಿ ಚೊಕ್ಕನಾಣಯ ವಸ್ತುಗಳನು ಚೆಕ್ಕನೆ ಒಡಿದಿರ್ದರಲಸು ಮುಟ್ಟಿದೊಡಾಗ ದೊಕ್ಕನೆ ಕೊಡಲೆಂದಾಗ (ಅಜುಚ. ೨-೩೪). ೨. ಅರ್ಥವತ್ತಾದ ನುಡಿ : ವೈದಿಕಬೌದ್ಧರಿಂದಾಗಿ ಸಂಸ್ಕೃತ ಪಾಲಿಗಳ ನಾಣಯುಗಳು ಕನ್ನಡದಲ್ಲಿ ಬಳಕೆಗೆ ಬರತೊಡಗಿರಬೇಕು (ಕನ್ನಇ. ೦೩೮). ನಾಣೆಯ : ೧. "ಉಳಿಯಂಭಿಮಾನ ನಾಣೆಯುಗಳೆಂಬಿವು ಟಂಕದುನಿಕ್ಕು" (ವಾನಾಹ. ೧೩೦) : ಪರಿಪೂರಜನಗಳುತ್ತಮನಾಣ[ಪಾಠಾಂ. ಣೆ]ಯುವ ನೀಡಿದರು ದರುಶನ ಕವನಿಜೇಶ್ವರನ (ಕೃಶಲಾ. ೬-೫೫-೧೯). ೩. ಶ್ರೇಷ್ಠವಾದಂದು ; ಬೆಲೆಯುಳ್ಳುದು ; ಸೊಗಸಾದುದು : ನಾಣೆಯದ ಪಟ್ಟೆ ಹಚಡ ೧೦ ಪಟ್ಟೆ ಸೀರೆ ೧೧ (ಸೌಇಇ. IX-11, ೫೪೭-೩ : 1532). ನಾಣೆಯ : ೧. ಬಳಿಯ ನಾಣೆಯುಮಂ ಬಳಿಯಾಪ್ತವರ್ಗಮಂ . . . ಪಡುಂದವಳೋಕಿಸುತ್ತೆ . . . ನಡೆತಂದನೀಶ್ವರಂ (೧೦ಕ. ೦೦-೯೯) : ತೆಗೆಸಿದನು ಬಳಿಕಿನಕುಲದ ಪೀಳಿಗೆಯು ನೃಪರಾರ್ಜಿಸಿದ ನಾನಾಯುಗಯುಗಂಗಳ ನಾಣೆಯುಂಗಳನಖಿಳವಸ್ತುಗಳ (ಕೃಶಲಾ. ೦-೭-೪) : ತನ್ನಯುದು ನಾಣೆಯುವೆಂದು ಜಗವಱಿಯೆ (ಐಭಾಗ. ೧೦-೫೫-೨೫) ; ಚಪ್ಪನ್ನದೇಶದ ನಾಣೆಯಂಗಳ ನೋಟ ತಪ್ಪದ ಚಪಲ ಸೆಟ್ಟಿಗಳು ಒಪ್ಪವಡೆದು ಕುಳಿತಿರ್ದರು (ಮೋಹತ. ೩-೨೭) ; ಬಿಡಲುಪಟ್ಟ ಬೇಂಟೆಯುನುಳ್ಳ ಪುರುಷನು ಪಂಚರಂಗದ ವಸ್ತ್ರ ನಾಣೆಯ ಶಿಲೆ ಲೆಪ್ಪ ಕಾಷ್ಟ ಮೊದಲಾದವರಲ್ಲಿ ಸ್ಥಾಪಿಸಲ್ಪಟ್ಟ ಜೀವಂಗಳ ಭೇದ ಮೊದಲಾದವನು ಮಾಡಲಾಗದು (ಸಾಗಾಧ. ೩೪). ೩. ಬಂಧುಗಳಾನಂದದಿಯೊಂದೀತ ಮಾಯಣಸೆಟ್ಟಿ ಎಂದು ಕರೆಯಲಾ ಪೆಸರೀ ಧರೆಯೊಳು ಸಂದುದು ನಾಣೆಯವಾಗಿ (ತ್ರಿಪುಸಾಂ. ೨೪-೨೭೮). ನಾಣ್ಯ : ೧. ಬಾಹಿರವ ಕಳೆದು ಎಡೆನಾಣ್ಯವನುಳಿದು ಹಲವು ನಾಣ್ಯವ ಕಳೆದು ಸಲುವ ನಾಣ್ಯವ ಹಿಡಿದು ನೋಡುವೆನಯ್ಯ (ಅದಪ. ೨೭-೭೭) ; ಹೀಗೆ ವಿಶಾಲ ವ್ಯಾಪಾರ ನಡೆಯುತ್ತಿದ್ದರೂ ನಾಣ್ಯಗಳೇ ಕಂಡುಬಂದಿಲ್ಲ (ಭಾರದ. ೧೫) ; ಸಹನಿಯು ೧೯೪೩ರಲ್ಲಿ ಪ್ರಾಚೀನ ಭಾರತದಲ್ಲಿ ನಾಣ್ಯಗಳನ್ನು ಎಸಗುವ ಒಂದು ಪದ್ಧತಿಯನ್ನು ಬೆಳಕಿಗೆ ತಂದು ಅದಕ್ಕೆ ಒಂದು ಪದಕವನ್ನು ಪಡೆದಿದ್ದನು (ಸಸ್ಯಕ. ೧೨೦). ೪. ಘನತೆ ; ಗೌರವ : ಇಂಥ ಅಂಗಡಿಯ ನಾಣ್ಯವನ್ನು ಕೆಡಿಸಿ ನಾನು ಬದುಕಿರಲೆ ? (ಅಮೂಟ. ೮). ೫. ಸತ್ಯ; ಪ್ರಾಮಾಣಿಕತೆ : (ಕಿ). ೬. ನಯ; ಮೃದುತ್ವ: ಮಾನಿತಮೂದ ವಸ್ತ್ರದ ನಾಣ್ಯವಣಬದನೇವೆಂದು ಬಣ್ಣಿಸಬಹುದು (ಅಸಂಪ. ೧-೧೫೪) : ಪೂರ್ಣಗುಣಸಂಪನ್ನೆ ಬಾರೆಂದು ನಾಣ್ಯದಿಂ ಗೊಲ್ಲ ಕರೆದನು (ಗೋಪಾಡು. ೮-೩೭). ೭. ನವಿರಾದ ಬಟ್ಟೆ ; ಬೆಲೆ ಬಾಳುವ ವಸ್ತ್ರ : ತೊತ್ತು ಲಕ್ಷಣವಿರಲು ನಾಣ್ಯವನುಡಿಸಿ ನವರತ್ನಾಭರಣಂಗಳ ತೊಡಿಸಿ (ಪನ್ನವ. ಕ. ೧೬೮-೩೭೭).

[ ದೇ.॥ ತಮಿ. ನಾಣಯ, ನಾಣೆಯ; ಮಲ. ನಾಣಯ; ತುಳು. ನಾಣ್ಯೊ ; ತೆಲು. ನಾಣೆ, ನಾಣ್ಯ. / ಪ್ರಾ. ಣಾಣಕ. / ಸಂ. ನಾಣಕ./ ಮರಾ. ನಾಣೇ; ಗುಜ. ನಾಣುಂ; ಸಿಂಧಿ. ನಾಣು ]

**ನಾಣಲ್** 'ನಾನಲ್' ನೋ.

**ನಾಣಲು** 'ನಾನಲ್' ನೋ.

**ನಾಣಳ್ಕು** (ನಾ). ನಾಚಿಕೆಯಿಂದ ಉಂಟಾದ ಭಯ ; ಲಜ್ಜೆಯಿಂದುಂಟಾದ ಹೆದರಿಕೆ : ಮಜ್ಜನಂಬುಗದಾರೋಗಿಸಲೊಲ್ಲದಿರ್ಪಿರವಿದೇಂ ನಾಣಳ್ಕಿದೇಂ (ಪಂಪಭಾ. ೪-೬೩). [ ನಾಣ್₁ + ಅಳ್ಕು₂ ]

**ನಾಣಟು** (ಕ್ರಿ). ನಾಚಿಕೆಯಿಲ್ಲದಂತಾಗು; ಲಜ್ಜೆಯನ್ನು ಕಳೆದುಕೊಳ್ಳು : ಬಟಲದೆ ಪುಷ್ಪಬಾಣಹತಿಯಿಂ ಪುಳಕಂಗಳನಾನದುಣ್ಮೆ ನಾಣಟುಯುದೆ ಜಾಣನಿಕ್ಕದೆ ಬೆಮರ್ತಱುತಾಱದೆ ತೀರ್ದು ತಾನೆ ಮೆಯ್ಯುಟಿದೆ ಕಡುಗಿ ಮುಕ್ತಿಯೊಡಗೂಡಿದ ಪೆಂಪಿನ ಸೌಖ್ಯದಿಂಪು ಪೋಪ್ಪಟುಯೆನಿಸಿರ್ದ ಸಿದ್ಧರಮಗೀಗೆ ವಿಶುದ್ಧರಭೀಷ್ಟಸಿದ್ಧಿಯಂ (ಲೀಲಾವ. ೧-೪) ; ಕಾಣದ ಜನಂ ಬೈದು ನಾಣಟುದು ಬಿಸುಸುಯ್ದು (ಜಗವಿ. ೦೭-೧೦೮ ರಗಳೆ) ; ಬಂದಳೊರ್ವಳ್ ನಡೆ ನೋಡಿದಳಾಗಳಂತೆ ನಾಣಟುವಿನೆಗಂ (ಕಾವ್ಯಸಾ. ೩೩೫) ; ನಾಣಟುಯಲ್ ಮನಂ ಬೆಱಗಿನಿಂ ಮರವಟ್ಟಿರೆ (ದಶಕು. ೬-೧೯೯).

[ ನಾಣ್₁ + ಅಟು₁ ]

**ನಾಣಿ** (ನಾ). ತಿಳಿವಳಿಕೆಯುಳ್ಳವನು ; ಜ್ಞಾನಿ : ದುಡುಕು ಮಾಡುವರೆ ಬಸವೇಶ ನಾಣಿಗಳು ಹುಡುಕುವರೆ ಕದನ ಜಗದೊಳಗೆ (ಕನ್ನಜಾ. ೨೫೯).

[ <ಪ್ರಾ. ಣಾಣಿ. / ಸಂ. ಜ್ಞಾನಿನ್ ]

**ನಾಣಿಗೆ** (ನಾ). (ಕರಾ) ಸ್ನಾನ ಮಾಡುವ ಮನೆ; ಬಚ್ಚಲುಮನೆ ; ಸ್ನಾನಗೃಹ : ಶಾಂತಾ ಹಾಗೂ ಅವಳ ನೆರೆಮನೆಯ ಆನಂದಿ ನಾಣಿಗೆಯ ಹಂಡೆಗೆ ನೀರು ತುಂಬಲೆಂದು ಹಿತ್ತಿಲದ ಬಾವಿಗೆ ಬಂದಿದ್ದರು (ಮೂರುದಾ. ೧೭೬) : ನಾಣಿಗೆಯಲ್ಲಿ ನೀರು ಕಾದಿದೆ. ಮಿಂದು ಊಟಮಾಡಿ ಹೋಗಿರಿ (ರೂಢಿ).

ನಾಣಿಗೆ ಮನೆ = ಬಚ್ಚಲುಮನೆ : ಯಾರೇ ಅವನು-ನಾಣಿಗೆಮನೆಯಲ್ಲಿ ಹಾಗೆ ಕಾರಿಕೊಳ್ಳುವವನು ? (ಮೂರುದಾ. ೧೮೩). [ ನಾಣ₁ + -ಇಗೆ₀ ]

**ನಾಣೆಯ** 'ನಾಣಯ' ನೋ.

**ನಾಣಿಲ್** (ನಾ). ಒಂದು ಬಗೆಯ ಮರ; ಆಲಿವ್ ಜಾತಿಗೆ ಸೇರಿದ ವೃಕ್ಷ: ಪಂಚಾದುಂಬರ ಜಂಬ್ವಾಮ್ರ ಗುಡಪುಷ್ಪಸಮನ್ವಿತಕಷಾಯದ್ರವ್ಯ ಕುಂಭಾಸ್ಯ ಪಂಬೂನೇರಿಲ ಆಮ್ರಮಾವು ಗುಡಪುಷ್ಪ ನಾಣಿಲ ಹೂವು (ಪ್ರಶಟೀ. ೪೦-೧): ವಾಣಿರಾಯನೆಂಬವನು 'ನಾಣಿಲ್' ಮರದಡಿಯಲ್ಲಿ ವಾಸಿಸುತ್ತಿದ್ದಿರಬಹುದು (ತುಳುನಾ. ೧೫೪). [←ತುಳು. ನಾಣಿಲ್]

**ನಾಣಿಲಿ** (ನಾ). ೧. ನಾಚಿಕೆಯಿಲ್ಲದ ವ್ಯಕ್ತಿ; ಲಜ್ಜೆಗೇಡಿ: "ನಾಣಿಲಿಯೆಂದು ಲಜ್ಜಾಹೀನಂ" (ಕಶಸಾ. ೧೮-೬೬೨); ನಾಣಿಲಿ ಪಾಣ್ಬಂ ಪಂದೆ . . . ನಿತ್ಯರೋಗಾಕುಳನೆಂಬೀ ನಾಮ ನಾಮಾವಳಿಗೆ ನಿಳಯನಕ್ಕುಂ ವ್ರತವ್ರಾತಹೀನಂ (ವಡ್ಡಾ.ರಾ. ೦೦-೪೦); ನಿಂಗೆ ನಾಣಿಲಿಯೆನಿಸಿಪ ವಧು ನಗೆಗೆಡೆಯಕ್ಕುಂ ಸಮಸ್ತಜಗತೀತಳದೊಳ್ (ಶಾವ್ಯಾ.ವ. ೨೫೭); ನಾಣಿಲಿ ನಿಟ್ಟುರಂ ಸಿತಗನಾಟವಿಟಂ ತುದಿಗೋಡ ಪಾಱು ನಿನ್ನಾಣ ಗಡಾಗಡುಂ ನಿನಗೆ ಕೂರದರೊಳ್ ಬೆರಸಿರ್ಪನಾತಂ (ಲೀಲಾವ. ೨-೧೩೩); ತಲೆಗೆ ಪದರಕ್ಷೆಯುಂ ನಾಣಿಲಿ ಕಟ್ಟಿಸಿಕೊಂಡ ತೆಱದ ಲೋಕವಿರುದ್ಧಂ ದಲದೆನಿಸಿ ಪಡೆದ ಕೀರ್ತಿಗೆ ನೆಲೆಯಾದಂ ಪಾಪಕರ್ಮಕರ್ಮಂ ಕಮಠಂ (ಪಾರ್ಶ್ವಪು. ೩-೬೪); ನಾಣಿಲಿಯೊಳ್ ನಿಷ್ಠುರನೊಳ್ . . . ಸದ್ಗುಣಹೀನನೊಳ್ ನೆರೆವ ಕೂಟಂ ನಂಜಿನೂಟಂ (ರಾಜಶೇ. ೧೧-೦೫೧): ನಾಣಿಲಿಗಳ ತಲೆವಣ ಮಾಣ್ಮಾಣಲವೋ (ಚಿಕವಿ. ೬-೨೭೭). (ಗು). ೨. ನಾಚಿಕೆಯಿಲ್ಲದ; ಲಜ್ಜೆಯಿಲ್ಲದ: ಈ ನಾಣಿಲಿ ಪಾರ್ವನನೆಟ್ಟಿದು ಕಳೆಯಿಂ (ಪಂಪಭಾ. ೨-೪೮ ಪ): ಮುಳಿದು ಪಿಡಿದೆಟ್ಟಿದು ನಿನ್ನಾಣ್ಮನಪ್ಪ ನಾಣಿಲಿ ಸವಣನನೊಡಗೊಂಡು ಬಾ ಪೋಗು (ಸುಕುಮಾ. ೫-೭ ವ). 'ನಾಣಿಲಿಮಾನಸ', 'ನಾಣಿಲಿವೆಣ್' ಪರಾ. [ನಾಣ್$_1$ + – ಇಲಿ$_3$]

**ನಾಣಿಲಿಗ** (ನಾ). =ನಾಣಿಲಿ ೧: ಮಹೀಪತಿಗಂ ದ್ವಿಜವಂಶಜಂಗಮೇತಜ ಕೆಳೆಯಿಂತು ನಾಣಿಲಿಗರಪ್ಪರೆ ಮಾನಸರ್ (ಪಂಪಭಾ. ೨-೪೮).
[ನಾಣಿಲಿ + – ಗ$_2$]

**ನಾಣಿಲಿಗತನ** (ನಾ). ನಾಚಿಗೆಗೇಡಿತನ; ಲಜ್ಜಾಹೀನತೆ: ಒಳ್ಳನದಿ ನೀ ಒಡಿದ ಪಂಜು ನಿನ್ನ ನಾಣಿಲಿಗತನವನೆ ಸಾರುತಿಹುದೋ ಮರುಳೆ! (ಕಗದ್ಯ. ೭೫). [ನಾಣಿಲಿಗ + – ತನ]

**ನಾಣಿಲಿತನ** (ನಾ). =ನಾಣಿಲಿಗತನ: ತಾಂಗಿಗಟಲ್ವ ನಾಣಿಲಿತನಂ ಬೆಂಡೇಟ್ಟ ಕಣ್ (ಚಂದ್ರಪು. ೮-೬೮); ಪಡೆವೊಡಿಂತಪ್ಪನಂ ಕೂಸನುಱಿ ಪಡೆಯದೊಡೆ ಪೊಡವಿಯೊಳ್ನಾಣಿಲಿತನಕ್ಕೆ ಪಕ್ಕಾಗರೇ (ಅರಾಜ. ೨-೫೭); ಸುಡು ನಾಣಿಲಿತನವಿದೆನುತೆ ಮಾನನಿಧಾನಂ ಮನದನ್ನೆಯೊಳು ಮಾಣದೆ ಮಾಱುತ್ತರವಿತ್ತಂ (ಉದ್ಭಟೀ. ೩-೭೨); ಆಗಳಿಂತು ವಿಚಾರಿಸಿ ಸಂಬುಗೆವೆತ್ತು ನಾಣಿಲಿತನಂ ಮಿಕ್ಕು (ವೃಷವಿ. ೦೨-೭೦ ವ). [ನಾಣಿಲಿ + – ತನ]

**ನಾಣಿಲಿಮಾನಸ** (ನಾ). ನಾಚಿಕೆಯಿಲ್ಲದ ಮನುಷ್ಯ: ನಾಣಿಲಿಮಾ[ಪಾಠಾಂ. ಮಾ]ನಸಂ, ಪಲ್ಲಿಲಿಮಾಯಂ (ಭಾಷಾಭೂ. ೬-೧೫೧ ಉದಾ).
[ನಾಣಿಲಿ + ಮಾನಸ$_1$]

**ನಾಣಿಲಿವೆಣ್** (ನಾ). ನಾಚಿಕೆಯಿಲ್ಲದ ಹೆಂಗಸು: ಕೂರಿಲಿ, ಕುಡುಗೋಲ್, ಬೆಳಗಿಲಿಗಣ್, ನಾಣಿಲಿವೆಣ್ (ಶಮದ. ೧೮೭ ಪ್ರಯೋ).
[ನಾಣಿಲಿ + ಪೆಣ್]

**ನಾಣಿಸು** (ಕ್ರಿ). ನಾಚುವಂತೆ ಮಾಡು; ನಾಚಿಸು: ಆತನ ದಾದಿ ವಿನಯ ಮತಿಯೆಂಬೊಳ್ . . . ನೋಡಿದ ಜನಕ್ಕೆ ಭಯಮುಂ ಪಡೆವೊಳ್ ನಾಣಿಸೆ [ಪಾಠಾಂ. ನಾಣ್ಚೆ, ನಾಣ್ಸೆ] ಪಡುಪೊಳ್ (ವಡ್ಡಾ.ರಾ. ೧೦೭-೨೩): ತಮವಟಿಯದರ ನಾಣಿಸಿಯೆನ್ನ ಮೊಮ್ಮಗೆ ತಕ್ಕ ಸತಿ ಕಟ್ಟಾಣರತ್ನವ ತಂದೆ ಜೀಯ (ಮೋಹತ. ೪೨-೫೫). [ನಾಣ್$_1$ + – ಇಸು$_3$]

**ನಾಣು** 'ನಾಣ್$^1$' ನೋ.

**ನಾಣುಗೆಡಿಸು** 'ನಾಣ್ಗೆಡಿಸು' ನೋ.

**ನಾಣುಗೆಡು** 'ನಾಣ್ಗೆಡು' ನೋ.

**ನಾಣುಗೇಡಿಗ** (ನಾ). ಲಜ್ಜೆಗೇಡಿ; ನಾಚಿಕೆಗೆಟ್ಟವನು: ನಾಣುಗೇಡಿಗರಸುರರುಱಿ ಕಟ್ಟಾಣೆ ನೀನವಡೊಳಗೆ (ಕೂರಾ. ೬-೨೨-೨೬).
[ನಾಣು (<ನಾಣ್$_1$) + ಕೇಡಿಗ]

**ನಾಣುದಾಣ** 'ನಾಣ್ದಾಣ' ನೋ.

**ನಾಣುನಚಿ** (ನಾ). ಅಪಮಾನಕ್ಕೆ ಅಂಜುವವನು: ಭಂಡಬವಸೀ ಬಿಳಸು ಲೋಕದ ಭಂಡರಿಗೆ ಗುರು ನಾಣುನಚಿಕರ ಚಂಡಿಯುಮವರ ಬೂಲವೇ ಸಾಕಿನ್ನು ಬೆಳೆಯದಿರು (ಕೂರಾ. ೫-೮-೨೬).
[ನಾಣು (<ನಾಣ್$_1$) + ನಚಿ]

**ನಾಣುನುಡಿ$_1$** (ಕ್ರಿ). ನಾಚಿಕೆಯನ್ನುಂಟು ಮಾಡುವಂತೆ ಮಾತನಾಡು; ಲಜ್ಜಾಹೀನವಾದ ಮಾತನಾಡು: ನಾಣುನುಡಿದು ಹಗೆಗೆಡೆಯಾದೆನೆಂಬುದ ಕಾಣದೆ (ಅಂಜಕ. ೭-೮೦). [ನಾಣು (<ನಾಣ್$_1$) + ನುಡಿ$_1$]

**ನಾಣುನುಡಿ$_2$** (ನಾ). ನಾಚಿಕೆಯನ್ನುಂಟುಮಾಡುವ ಮಾತು; ಲಜ್ಜಾರಹಿತವಾದ ಮಾತು: ಅಕ್ಕೆಯ ನೆರೆಹಗೆ ನಾಣುನುಡಿಯಿಲ್ಲದಿಹುದ (ಬಸವ. ೮೨೫). [ನಾಣು (<ನಾಣ್$_1$) + ನುಡಿ$_2$]

**ನಾಣೆಡೆ** (ನಾ). ನಾಚಿಕೆಯನ್ನುಂಟುಮಾಡುವ ಸ್ಥಳ; ಗುಹ್ಯಾಂಗ: ಕಲೆ ರೋಮದಂಚು ನಾಣೆಡೆ ಕುಚಮಧ್ಯಮುಂ . . . ಮಹಾಹಿ ಕೊಂಡೊಡೆ ಗರುಡಂಗಮೆತ್ತ(ಳ್ತ)ಲರಿದೆಂದೊಡೆ ವೇಟುಟಿದರ್ಗೆ ಸಾಧ್ಯಮೇ (ಐಮದ. ೩-೪೨); ಸರಸದಿಂ ನಾಣೆಡೆಗೆಯೆರಡೊಂದೆನಿಸಲಪ್ಪ (ಜಸವ. ೦೦-೬೦); ನಾಣೆಡೆ ದ್ರವಿಸುತಿದ್ದುದು ಮಱ ಕಗೆಯ ತಾನೊಱಗಿ ದಳವಳು (ಧರಕ. ೪೦-೬೦); ಸವಿಲಲ್ಲಿನುಡಿಗೆ ಲವಲವಿಪ ಕಾಲಗೆ ಕೂಟಕೆ ಕಾತರಿಸಿ ಬಿಡುವಿಡದೆ ಕಲೊಸರ್ವ ನಾಣೆಡೆ . . . ಎಸೆಯಲೆಸೆದರ್ ಶಿವನ ಬೆಂಕೊಂಡು ಸುರಸತಿಯರು (ಚಬಪು. ೧೯-೬೨): ಉಟ್ಟುದು ಸಡಿದು ಮದನಜಲ ನೆಱಿ ಪೊಱಮಡ್ಬುದು ನಾಣೆಡೆಯಿಂದ (ಕಂಷವಿ. ೯-೧೯೬).
[ನಾಣ್$_1$ + ಎಡೆ$_3$]

**ನಾಣೆಯ** 'ನಾಣಯ' ನೋ.

**ನಾಣೆಟಿಕ** (ನಾ). ಲಜ್ಜಾಭಾರ; ನಾಚಿಕೆಯ ಆಧಿಕ್ಯ: ಅಂತಕೀಂದ್ರಿಯ ಸೌಖ್ಯಪರಮಕೋಟಿಯನೆಯ್ದಿ ನಾಣೆಟಿಕದಿಂದಿನಿತುಬೇಗಂ ಕಲೆಯಂ ಬಾಗಿರಲ್ (ಕಾದಂಪೂ. ೮೬೫). [ನಾಣ್$_1$ + ಎಟಿಕ$_1$]

**ನಾಣೊಡೆಯ** (ನಾ). ವಿಂಡ; ಜಾರ; ವಿಟ; ರಸಿಕ: ಪದನಱಿದೀವ ನಿತ್ಯ ಮ ಱ ವ ೦ ಕಡುಬಿಚ್ಚಡಮೆಂಬುದಿ[ಲ್ಲದಿ]ಲ್ಲದನಭಿಮಾನಿ ನಾಣೊಡೆಯನಿಂಬಱಿವಂ ಸುಭಗಂ ಪ್ರಿಯಂಮದಂ (ಪರ್ಣಮಾ. ೮-೯೫): ಕೇಣವಿಂ ನಾಣೊಡೆಯನವೆಡೆಯೊಳ್ ನಿರ್ಧನಂ ಮಾಳ್ಪರ್ (ಲೀಲಾವ. ೨-೯೭). [ನಾಣ್$_1$ + ಒಡೆಯ$_1$]

**ನಾಣ್ಗರೆ** (ಕ್ರಿ). ನಾಚಿಕೆಯನ್ನು ಪಡೆ; ಲಜ್ಜೆಹೊಂದು; ನಾಚಿಕೆಯನ್ನು ತೋರಿಸು: ಕಾಯ್ವ ಬಯ್ವ ನಾಣ್ಗರೆವರವಿಂಬುಕೆಯ್ಯುಪೊಳಪೊಯ್ಯು ವನೇಕವಿಚಿತ್ರಚೇಷ್ಟೆಗಳ್ (ಪುಷ್ಪಪು. ೨-೨೭). [ನಾಣ್$_1$ + ಕರೆ$_1$]

**ನಾಣ್ಗಾದೆ** 'ನಾಚ್ಗಾದೆ' ನೋ.

**ನಾಣ್ಗಾಪು** (ನಾ). ಅಪಮಾನವಾಗದಂತೆ ನೋಡಿಕೊಳ್ಳುವುದು; ಮಾನರಕ್ಷಣೆ: ತನ್ನ ನಾಣ್ಗಾಪನೆ ಬಗೆದಕನುಹುಕಾಬಿತಶರೀರನುಮಾಗಿ ಶಂತನು ಕರಂಗರ್ದೆಗಿಡೆ (ಪಂಪಭಾ. ೦-೭೧ ವ). [ನಾಣ್$_1$ + ಕಾಪು]

**ನಾಣ್ಗೆಡಿಸು** 'ನಾಣ್ಗೆಡಿಸು' ನೋ.

**ನಾಣ್ಗೆಡು** 'ನಾಣ್ಗೆಡು' ನೋ.

**ನಾಣ್ಗುಂದು** (ಕ್ರಿ). ನಾಚಿಕೆಯಿಂದ ಕುಗ್ಗು: ನುಡಿದುಂ ಮಯ್ಸಿರಿಗಟ್ಟಿ ವಿಂತು ನೆಲದೊಳ್ ನಾಣ್ಗುಂದಿ ನಿಂದಿರ್ಪರ್ (ಕಬ್ಬಿಗಾ. ೦೬೨).
[ನಾಣ್$_1$ + ಕುಂದು$_1$]

**ನಾಣ್ಗೆಡಿಕ** (ನಾ). ಅವಮಾನ ಮಾಡುವವನು ; ನಿಂದಕ : ದುರ್ನೀತರಂ ನಾಣ್ಗೆಡಿಕರಂ ಸುಜನಾಹಿತರನಾಚಾರದೂರರನು . . . ವ್ಯಾಕುಳರನತಿ ಕೃಪೆವೆತ್ತು ಕಾಯ್ದಾಯ್ (ಬಸಪು. ೪೮-೭೦). [ ನಾಣ್$_1$ + ಕೆಡಿಕ ]

**ನಾಣ್ಗೆಡಿಸು, ನಾಣುಗೆಡಿಸು, ನಾಣ್ಗೆಡಿಸು** (ಕ್ರಿ). ೧. ನಾಚಿಕೆಯನ್ನುಂಟು ಮಾಡು ; ಲಜ್ಜೆ ತರು : ಏ ಸೊಬಗನೋ ರೂಪಮಾತ್ರದಿಂ ರಂಭಾದಿ ಭಾಸುರಸ್ತ್ರೀಯರಂ ನಾಣ್ಗೆಡಿಪನಿವನೆಂದು ಪುರಜನಂ ಬೆಱಗಾದುದು (ಚಬಪು. ೧೯-೭೫). ೨. ಅವಮಾನಗೊಳಿಸು ; ಅಪಮಾನವನ್ನುಂಟು ಮಾಡು : ಆನನಾಂಬುಜಂ ತಣ್ಗದಿರಂಗೆ ಸೋಲಮನೊಡರ್ಚೆ ವಿಭೂಷಣ ಕಾಂತಿ ಭಾನುವಂ ನಾಣ್ಗೆಡಿಪಂತೆ ಪರ್ಬಿರೆ . . . ಬಂದನಮಾತ್ಯನಂದನಂ (ರಾಜಶೇ. ೧೩-೬೧). **ನಾಣುಗೆಡಿಸು :** ೨. ಬಲ್ಲಿದನೆಂಬವನ ಕೆಡಿಸಿತ್ತು ವಿಧಿ . . . ದೇವೇಂದ್ರನ ಮೆಯ್ಯ ನಾಣುಗೆಡಿಸಿತ್ತು (ಬಸಹ. ೩೭-೯೫) ; ತಪ್ಪಣೆಗಳು ನಾನಾವಿಧದಲತಿ ನಾಣುಗೆಡಿಸಲು ಹರಿಯು ನರರೊಳು ಕಾಣುತಲಿ ಲಕ್ಷ್ಮೀರಮಣನಾಜ್ಞೆಯಂಲ್ಲಿ ವರ್ತಿಸುತ (ನಿಥಾಗ. ೧೧-೧೩-೨೨). **ನಾಣ್ಗೆಡಿಸು:** ೧. ಕುಡಿದೊಡೆ ಸೊರ್ಕಿಸದವು ನಾಣ್ಗೆಡಿಸದವು ಮನಕ್ಕಲಂಪನೀವುವು . . . ಮಧುಗಳನೆಡೆಯುಡುಗದೆ ಕುಡುಗುಮುಚಿತಮದ್ಯಾಂಗಕುಜಂ (ಆದಿಪು. ೫-೩೨); ಕುವರನ ರೂಪೊಳ್ವೆಣ್ಗಳನೀಕ್ಷಣಮಾತ್ರದೆ ನಾಣ್ಗೆಡಿಸಿದುದಾದಮೆಂಸೆವ ಪೊಸಜವ್ವನದೊಳ್ (ಚಂದ್ರಪು. ೪-೮) : ನೃಪನ ಮನಮಾರ್ದಿಸುತುಂ ನಾಣ್ಗೆಡಿಸಿ ಪಿಡಿದನಂಗಜಚೋರಂ (ವರ್ಧಪು. ೬-೮).

[ ನಾಣ್$_1$ + ಕೆಡಿಸು$_1$ ]

**ನಾಣ್ಗೆಡು, ನಾಣುಗೆಡು, ನಾಣ್ಗೆಡು** (ಕ್ರಿ). ೧. ನಾಚಿಕೆಯನ್ನು ಬಿಡು ; ಲಜ್ಜೆಯಿಲ್ಲದಿರು : ಕೀಚಕಂ ಕಾಮದೇವಂ ಮಾಡಿದ ಯಾಚಕನಂತೆ ಕರಮೆ ನಾಣ್ಗೆಟ್ಟು ಮನಂಗಾಪಱದಳಿಪಿ ನೋಡಿ ತನ್ನ ಮನದೊಳಿಂತೆಂದು ಬಗೆದಂ (ಪಂಪಭಾ. ೮-೫೯ ವ) : ತಾನಿತರ ಕನ್ಯಕೆಯಂತೆ ನಾಣ್ಗೆಟ್ಟು (ಕಾದಂಪೂ. ೮೭೪) ; ಮನ್ಮಥನ ಪಟ್ಟದಾನೆಯೊಲೆಸೆವ ನಳಿನವದನೆಯು ಕಂಡು ನಾಣ್ಗೆಟ್ಟನಾ ಪ್ರಮುಖ ನನೆಯುಂಬನುಪಟಳದಲಿ (ಸನಕು. ೧೦-೨೩) ; ಕಣ್ಗೆಟ್ಟ ದಿಗ್ಪಾಲಪಾಲರಂ ಭೀತಿಯಿಂ ನಾಣ್ಗೆಟ್ಟ ಸರ್ವ ಗಂಧರ್ವರು ಪಱದೆಯ್ದಿ (ಚಬಪು. ೩೧-೨೯). ೨. ಅಭಿಮಾನ ಕಳೆದುಕೊಳ್ಳು ; ಅವಮಾನಕ್ಕೊಳಗಾಗು : ಇಲ್ಲದಿರೆ, ಎಂತಕ್ಕುಮ್ ಈ ಪೊಲ್ಲಗೆಯ್ಮೆ ? ಎಲ್ಲರುಂ ಕೂಗುವೀ ನಾಣ್ಗೆಟ್ಟ ಗೆಯ್ಮೆ ? (ಅಶ್ವಶಾ. ೮-೧೫೫). **ನಾಣುಗೆಡು :** ೨. ಕಾಯದ ಕರದಲ್ಲಿ ಲಿಂಗವ ಪಿಡಿದು ಬಾಯಾಱಿ ಭವಗೆಟ್ಟು ನಾಣುಗೆಟ್ಟು ನಾನಾರೆಂಬುದನಱಿಯದೆ (ಮೋಳಿಪವ. ೨೪-೯೫) ; ಲಜ್ಜೆಗೆಟ್ಟಾದರೂ ಲಿಂಗವನೊಲಿಸುವೆ ನಾಣುಗೆಟ್ಟಾದರೂ ಲಿಂಗವನೊಲಿಸುವೆ (ಬಸವ. ೪೯೮) ; ಈರ್ವರು ಮುನಿಗಳು . . . ನಾಣುಗೆಡುತ ಬಂದರೇಣಾಕ್ಷಿಯೆಡೆಗವಸರದಿ (ಅಮುಸಾಂ. ೬-೯೫). **ನಾಣ್ಗೆಡು :** ೧. ನಾಣ್ಗೆಡುವಿನಮಿಾ ತೆಱದಿಂದೆನ್ನಂ ವಿಡಂಬಿಸಲ್ಮೊಡರಿಕುಮೆ (ಕಾದಂಉ. ೮೦). ೨. ಆವಂ ಗಡ ವಾರುಣಿಯಂ ಸೇವಿಸಿ ನಾಣ್ಗೆಡದಂ (ಪಂರಾಮಾ. ೧೧-೧೭೯). [ ನಾಣ್$_1$ + ಕೆಡು$_1$ ]

**ನಾಣ್ಗೆಯ್** (ಕ್ರಿ). ಅಪಮಾನಪಡಿಸು ; ಅಗೌರವವನ್ನುಂಟುಮಾಡು : ಪೂಟದೆಯ ದೇಹಮುನ್ ನಾಯ್ಗಳ್ಗೆ ಪರ್ದುಗಳ್ಗೆರೆಯಾಗಿ, ನೋಟಕ್ಕೆ ಬಲ್ ಘೋರವಾಗಿ, ನಾಣ್ಗೆಯ್ದು ತಾಮ್ ಬಿಸುಡುಗೆ (ಅಂಶಿಗೂ. ೧೦-೧೮೯) ; ಅಪರಾಧದಿನ್ ಸ್ನೂಸ್ ನಿನ್ನನೀ ಬಗೆಯಲ್ಲಿ ನಾಣ್ಗೆಯ್ದು . . . ಗೋಟಿಡಿಸುತಿರ್ಪನ್ ? (ಬದ್ಧಪ್ರ. ೧೨-೨೩೭). [ ನಾಣ್$_1$ + ಕೆಯ್$_1$ ]

**ನಾಣ್ಗೇಡಿ** (ಗು). ನಾಚಿಕೆಯಿಲ್ಲದ : ಲಜ್ಜೆಯಿಂಲ್ಲದ : ನೀನು ಬಹಳ ನಾಣ್ಗೇಡಿ ಪೆಣ್ಣಾದೆ ಎಂದಳು (ಕೋಹಿನೂ. ೧೦೮) ; ಸೂರಣ, ನೀನು ಬಹಳ ನಾಣ್ಗೇಡಿ ಬ್ರಾಹ್ಮಣನಾದೆ (ಸುಗುಗಂ. ೬೩-೭).

[ ನಾಣ್$_1$ + ಕೇಡಿ$_1$ ]

**ನಾಣ್ಗೇಡು** (ನಾ). ಅವಮಾನ : ಸ್ನೂಸ್ಗೆ ಕೀಟ್ಟಬಟ್ಟ ನಾಣ್ಗೇಡು ನೋಟ ಮಾದನ್ (ಬದ್ಧಪ್ರ. ೦೪-೨೮೫). [ ನಾಣ್$_1$ + ಕೇಡು ]

**ನಾಣ್ಗೊಳ್** (ಕ್ರಿ). ನಾಚಿಕೊಳ್ಳು ; ಸಿಗ್ಗಾಗು : ನೀವಿ ಜಾಱದೆ ಸುಸಿಲ್ ಗೈವಲ್ಲಿ ನಾಣ್ಗೊಂಡೊಡಾತ್ಪುಳಕಂ ಮೂಡದೆ (ರಾಜಶೇ. ೧೧-೧೫೪).

[ ನಾಣ್$_1$ + ಕೊಳ್$_1$ ]

**ನಾಣ್ಚಿಕೆ, ನಾಂಚಿಕೆ, ನಾಚಿಕೆ, ನಾಚಿಗೆ** (ನಾ). ೧. ಲಜ್ಜೆ ; ಸಿಗ್ಗು : ರಾಗದಿನಗಸುತೆಯೊಳ್ಸಂಭೋಗಿಸುತಿಪ್ಪಲ್ಲಿಗಗ್ನಿ ಬರೆ ನಾಣ್ಚಿಕೆಯಿಂದಾ ಗಿರಿಜೆ ಪೋಗಿ (ಸಮಪ. ೮-೫೪) : ತಲೆವಾಗಿ ನಾಣ್ಚುತಿಪ್ಪಳುಕುತಿದ್ದವರ ನಾಣ್ಚಿಕೆ ಭಯವನೊಯ್ಯನೆ ಕಳೆದನು ಮುಟ್ಟ ನುಣ್ಚರದೋಜಿ ಮಾತಾಡಿ (ಭರಚ. ೩೧-೧೦೩). ೨. ಅವಮಾನ : ಪೊಯ್ವಳ್ಳಿಗಳ ಪೊತ್ತ ನಾಣ್ಚಿಕೆಯು ಸರ್ವ ದಿಕ್ಪಾಲರೋಟಂಗಾಣುತಜನಾಗ್ರಹಂದಾಳ್ದನಾ ಕ್ಷಣದೊಳು (ಚಬಪು. ೪೯-೨೪). **ನಾಂಚಿಕೆ :** ೨. ಪರಿಕಿಸುವೊಡೆಮಂಗಮುರವೆಸರಿನ ಕರಕರೆಯು ನಾಂಚಿಕೆಯುಪೊಳಗಿದು ಶರಣ ನೀವಱಿಯುದುದೆಯೆಮ್ಮಯ ನಿತ್ಯತೆಯು ಹದನು (ಸಾನಂಚ. ೭-೨೫). **ನಾಚಿಕೆ :** ೧. ನುಡಿವೊಡೆ ನಾಚಿಕೆ ಗಡ ನಿನ ಗುಡಿನೂಲ್ ಬಗಿವಿನೆಗವಿಾ ವಳಿತ್ರಯಮಿಾಗಳ್ ಕಿಡುತಿರ್ಪುದು (ಕಾದಂಪೂ. ೪೦೫) : ಮೊಲೆದುದಿ ಮೃದಿಲ ಮಱೆಯೊಳಿರುವುದೆಂದು ಸಲೆ ನಾಚಿಕೆಯುಸು ತೊಱೆದು (ಕಂನವಿ. ೬-೧೮೪). ೨. ಬೈತು ಬಿತ್ತನೊಲವಿಂ ಬೆಳೆಗೆಯ್ವಾವುದುಮಂ ಸತ್ಪಾತ್ರಕ್ಕೀವುದುಮಂ ದಾನಮೆಂಬ ನಾಚಿ[ಪಾಠಾಂ. ಣ್ಚಿ]ಕೆಯುಂಟೇ (ಅರ್ಧನೇ. ೪-೪೮) ; ನುಸುಳಿದರು ನಾಚಿಕೆಯಲಾತನ ವಿಶಿಖ ಜಲದಲಿ ತೊಳೆದರತಿರಥರಸಮಸಂಗರವಾಯ್ತು (ಕುಮ್ವಾದ್ರೋ. ೬-೪). **ನಾಚಿಗೆ :** ೧. ಮಾತೀಗು ಆಚಿಗೆ ವಿಸಾರಿದ್ದ ನಾಚಿಗೆ ಮುಸುಕ್ಯಾವ ಹೂವಿಗೆ (ಗಂಗಾತ. ೩೨-೧೬) ; ಅಪೂರ್ವನಿಗೆ ತುಂಬ ನಾಚಿಗೆಯಾಯಿತು (ಭಾರತಿ. ೦೦).

**ನಾಚಿಕೆಯ ಗೊತ್ತು** = ನಾಣ್ದಾಣ : ಬಡವಲ್ಲದುಬ್ಬಲ್ಲದೊಡಲು ಕಿಱುದೊಡೆಯುಯೆಡೆವಿಡದ ರೋಮದ ನಾಚಿಕೆಯ ಗೊತ್ತಿನ . . . ಅತಿ ಚದುರಿನವಳೆ ಶಂಖಿಣಿಯೆನಿಪಳು (ಜನವ. ೨-೦೪).

[ ನಾಣ್ಚು$_1$ + – ಇಕೆ. / ತುಳು. ನಾಚಿಕೆ, ನಾಚಿಗೆ ]

**ನಾಣ್ಚಿಸು, ನಾಚಿಸು** (ಕ್ರಿ). ೧. ನಾಚುವಂತೆ ಮಾಡು ; ಲಜ್ಜೆಯನ್ನುಂಟು ಮಾಡು : ನಿಜಾಕಾರಮಂ ತೋಱಿ ನಾಣ್ಚಿಸಿ ಶಾಂತಿದಾಂತಿಯನುಮಂ ಬೋಧಿಸಿ (ಪದ್ಮರಾ. ೨-೨೩) : ಎಂದವಳಂ ನಾಣ್ಚಿಸಿದಂ (ರಾಜಶೇ. ೧೧-೧೬೦ವ) : ಕಾಂಚನಸುಕಾಶ್ಮೀರಕರ್ಣಿಕಾರಪ್ರಭೆಯ ನಾಣ್ಚಿಸುವ ತತ್ಪುರಮುಖದೊತ್ತಿನೊಳ್ದೀರಕಾಂಚನಾದ್ರಿಯ ಪೋಲ್ವ ತನುಕಾಂತಿ (ಚತುಪು. ೧-೨-೯೧). ೨. ಅವಮಾನಮಾಡು. **ನಾಚಿಸು :** ೧. ಮಲ್ಲೆಯಂ ಸರವಿದೆ ಕೊಳ್ಳೆಂದು ಬೆಳಗೊಡು ನಿಲ್ಲದವನ ನಾಚಿಸಿದಳು (ಕಂನವಿ. ೬-೮೪). ೨. ಓಡಿ ನಾಚಿಸುವವರು ನಿಲಿ ರಣಖೇಡರೀಗಳೆ ಮರಳಿ (ಕುಮ್ವಾಕ. ೮-೩೦) ; ನಿಮ್ಮ ಶಿಕ್ಷಣ ಶಿಕ್ಷಕರನ್ನೂ ನಾಚಿಸುತ್ತದೆ (ರಂಗರೋ. ೮೭).

[ ನಾಣ್ಚು$_1$ + – ಇಸು$_3$ ]

**ನಾಣ್ಚು$_1$, ನಾಂಚು, ನಾಚು$_1$** (ಕ್ರಿ). ೧. ನಾಚಿಕೆಪಡು ; ಲಜ್ಜೆಯನ್ನು ಹೊಂದು ; ಸಿಗ್ಗಾಗು : "ನಾಣ್ಚು–ಲಜ್ಜಾಯಾಂ" (ಶಮಧಾ) : ನೀಂ ಬಾ ಪೋಪಮೆಂದಂಗೆ ಮೆಲ್ಲಗೆ ತತ್ಕನ್ಯಕೆ ನಾಣ್ಚಿ ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ ಎಂಬುದುಂ (ಪಂಪಭಾ. ೧-೭೦) ; ಆನಕ್ಕ ನಾಣ್ಚುವೆಂ ಪಿಡಿ ನೀನೆ ನೃಪಂಗಿಕ್ಕು ತಂಬುಲಮಂ (ಕಾದಂಉ. ೫೫) ; ಗಾಡಿಯಿಂದವಳು ನಾಣ್ಚಿರಲು ಬಿನ್ನಹವನು ಮಾಡಿದಳಾ ಚಿತ್ರಲೇಖೆ (ಮೋಹತ. ೨೫-೩) : ಒಡೆಯ ನಿನ್ನೊತ್ತಿನೊಳಿರಲು ನಾಣ್ಚುವಳು (ಭರಚ. ೬-೨೩); ಅಲಸದೆ ನಾಣ್ಚದಂಜದೆ ಯಳುಕದೆ ಪೇಳು (ಹದಿಬ. ೧-೨೯). ೨. ಅವಮಾನ ಹೊಂದು ; ಅವಮರ್ಯಾದೆಗೊಳಗಾಗು : ಪಾದರಿಗನಂತೆ ಪಲರ ಮುಂದೆ ನಾಣ್ಚದೆ ಲೋಭಿಯಪ್ಪರಸಿನಂತವಿಚಾರಿಯಾಗದೆ (ಧರ್ಮಾಮೃ. ೪-೪೬). **ನಾಂಚು :**

೧. ಮಹಾದೇವಿಸೆಟ್ಟಿಯವರು ನಾಂಚಿ ತಲೆವಾಗಿರ್ದುದನಱಿದು (ಬಸರ. ೦೨-೫೬); ಕರ ನಾಂಚಿ ಶರನಿಧಿಯು ಮುಳುಗಿದನೊಯ್ಯಂಬ ತತ್ಪರಿಯೊಳಂ ಚಂದ್ರ ಪಶ್ಚಿಮಗಿರಿಯ ಮರೆಗೊಳಲು (ನವಮೋ. ೧೪-೨೫). ನಾಚು$_1$ : ೧. ಆಂ ಮಾಡುವ ರುದ್ಧದೊಳ್ ಕಿಱಿದು ನಾಚುಗುಮೋ ವಧು (ಕಾದಂಬ. ೬೮೩). ೨. ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯ (ಮಹಾದೇ.ಬ.೪೫-೦೦೬); ನಚ್ಚಿದಾಳಿನ ಬಿನ್ನಹಕೆ ಹರಿ ಮೆಚ್ಚಿ ಮನದಲಿ ನಾಚಿ ಚಕ್ರವ ಮುಚ್ಚಿದನು (ಕುವ್ಯಾಭೀ. ೬-೪೬) : ನುಡಿಗೆ ನಾಚಿದನರಸ ಹಂಸದ ನಡವಳಿಗೆ ಮೆಚ್ಚಿದನು (ನಳಚ.೨-೨೦); ನನಗೆ ಬೇಕಾದದ್ದು ಬಿಡುಗಡೆ; ಅದನ್ನು ಕೋರುವುದಕ್ಕೆ ನಾಚುತ್ತೇನೆ (ಧರ್ಮಸಾ. ೮೩). [ ನಾಣ್$_1$ + –ಚು$_1$ ]

**ನಾಣ್ಚು$_2$** (ನಾ). = ನಾಣ್ಚಿಕೆ ೧ : ಅರಳಿಯಲಿ ರಸವಿಲ್ಲ ಕರುಳಿಗೆ ನಾಣ್ಚಿಲ್ಲ ಮರುಳನಿಗಾರು ಇದಿರಿಲ್ಲ ಸೂಳೆಯಲಿ ಸರಲವೆ ಇಲ್ಲ (ಸರ್ವಜ್ಞ. ೧೮೭೬).

[ <ನಾಣ್ಚು$_1$ ]

**ನಾಣ್ನುಡಿ** 'ನಾಟ್ನುಡಿ' ನೋ.

**ನಾಣ್ದಂಡ** (ನಾ). ಪುರುಷನ ಗುಹ್ಯಾಂಗ ; ಶಿಶ್ನ : ಬಾಳೆಯೊಳು ಬಾಳೆ ನಾಣ್ದಾಣದೊಳು ನಾಣ್ದಂಡ . . . ಮತ್ತೆ ನಾಳಿಕಾವ್ಯೆರಿಶಕಲದೊಳು ಶಕಲಗಳಮರ್ದು ಸ್ತ್ರೀಪುರುಷರಿರೆ ಕಂಡರು (ಪ್ರಭುಪು. ೪-೧೨೯).

[ ನಾಣ್$_1$ + ದಂಡ ]

**ನಾಣ್ದಳೆ** (ಕ್ರಿ). ನಾಚಿಕೆಯನ್ನು ಹೊಂದು ; ನಾಚು : ಸಂಕ್ರಂದನಂ ಸದ್ಗುಣೋಜ್ವಳಸತ್ಕೇಂದ್ರನರೇಂದ್ರರುಂದ್ರಯಶಮಂ ಗಂಧರ್ವರಿಂ ಕೇಳ್ದು ನಾಣ್ದಳೆದು (ರಾಜಶೇ. ೩-೪). [ ನಾಣ್$_1$ + ತಳೆ$_1$ ]

**ನಾಣ್ದಾಣ, ನಾಣುದಾಣ** (ನಾ). = ನಾಣ್$_1$ ೩: "ಭಗದೊಳ್ ನಾಣ್ದಾಣ ಮೆಂದುಂಟು" (ಕರ್ಣಾನಿ. ೮೮) ; ಮೊಱೆಯಂ ಮಿಾಱುವ ಮಾತು ಕೆಂದೆಸವ ನಾಣ್ದಾಣಂ (ಚಂದ್ರಪು. ೮-೬೮); ಪಳ್ಕೆಯೊಳಿಕ್ಕಸರಂ ಪೊಂಗುತ್ತಿರೆ ನಾಣ್ದಾಣಂ ಸೂಳ್ವಡದಿಂಗೂಟಂ ಗಡಿಗೆಟ್ಟರಲ್ (ಉದ್ಭದೇ. ೪-೨೮); ಲಜ್ಜಿಸುವ ತಿಣ್ಣಮಂ ಬಿಡಿಸಿ ನಾಣ್ದಾಣಮಂ ತಡವಿ (ಚಬಪು. ೦೦-೫೯). ನಾಣುದಾಣ : ಪದನಾದ ನಾಣುದಾಣಕೆ ಲಿಂಗಯೋಗವ ಪದುಳಿಸುವಾಗ ಸ್ವರ್ಗವನು ಮಿದಿಯದೆ ಗೇಣು ಚೋಟೆನೆ ತೋಱುತಿದ್ದುದು (ಭರಚ. ೪೧-೬೨).

[ ನಾಣ್$_1$ + ತಾಣ ]

**ನಾಣ್ದುಡುಕು** (ಕ್ರಿ). ಗುಹ್ಯೇಂದ್ರಿಯವನ್ನು ಹಿಡಿದುಕೊಳ್ಳು; ಶಿಶ್ನವನ್ನು ಹಿಡಿ: ಚೆಲ್ಲದೊಳಾಕೆ ನಾಣ್ದುಡುಕಿ ನುಣ್ಗೊರಲಿಂ ದನಿ ಪೊಣ್ಮೆ ಚುಂಬಿಸುತ್ತಲ್ಲ ಸುಖಕ್ಕೆ ಸೀಮೆಯನಲಂಗಜಕೇಳಿಯನುಂಟುಮಾಡಿದಳ್ (ದಶಕು. ೮-೫೨).

[ ನಾಣ್$_1$ + ತುಡುಕು$_1$(<ತೊಡಂಕು$_1$) ]

**ನಾಣ್ನುಡಿ** 'ನಾಟ್ನುಡಿ' ನೋ.

**ನಾಣ್ಪು** (ನಾ). = ನಾಣ್ಚಿಕೆ ೧ : ಈಕೆಯ ಸಲ್ವ ಜಾಣ್ನುಡಿಗಳಿಂಬಿನಿವಿಲ್ಲನ ಪೆಂಪಲಂಪು ಮೇಣೀಕೆಯ ನೋಟದೊಳ್ಪು ಮುನಿಜಾಲಮನಕ್ಕೆ ಬೆಗಟ್ಪು ನಾಣ್ಪು ತಾನೀಕೆಯ ಸುಯ್ಯ ಗಾಳಿ ಮಲಯಾನಿಲನೊಳ್ ಸಲೆ ಜೋಳಿವಾಳ (ಉದ್ಭಟ. ೮-೪೪). [ ನಾಣ್$_1$ + –ಪು$_2$ ]

**ನಾಣ್ಪೋಗು** (ನಾ). (ಪ್ರಾಣಿಗಳ) ಸಂಭೋಗ : ಮೂಱು ಕೊಂಬುಮ ನಾಱು ನಾಣ್ಪೋಗುಮನೆರಟ್ಬಜ್ಜೆಯುಮಂ . . . ಬಲ್ಲನಾಗಿ (ಪಂಪಭಾ. ೫-೪೩ ವ). [ ನಾಣ್$_1$ + ಪೋಗು$_2$ ]

**ನಾಣ್ಬಟ್ಟೆ** 'ನಾಟ್ಬಟ್ಟೆ' ನೋ.

**ನಾಣ್ಬಟ್ಟೆವೆಣ್** (ನಾ). ನಾಡಿನ ರಸ್ತೆಯಲ್ಲಿ ತಿರುಗಾಡುವ ಹೆಂಗಸು ; ನಾಡ ದಾರಿಯಲ್ಲಿ ಓಡಾಡುವ ಹೆಣ್ಣು : ಪತ್ತನ ದ್ರೋಣಾಮುಖಂ ಗಳ್ಗೆ ಮೂಣದೆ ನಡೆವ ನಾಣ್ಬಟ್ಟೆವೆಣ್ಣ ಕಣ್ಣಪೂರವನಲಂಕರಿಸಿದ ಪಾನೀಯ ಕಾಯಮಾನನಿಕಾಯಾಭ್ಯಂತರಾಳದಲ್ಲಿ ಪಱಿಪಡೆ ಸೇದೆ (ಅನಂಪು. ೧-೮೨ ವ).

[ ನಾಣ್ಬಟ್ಟೆ (<ನಾಟ್ಬಟ್ಟೆ) + ಪೆಣ್ ]

**ನಾಣ್ಬದ** (ನಾ). ಕಾಮಜಲ; ಯೋನಿದ್ರವ : ಊರುಯುಗಂಗಳಿಂದಿೞಿವ ನಾಣ್ಬದನಂ ನಿಜಱಿಯಿಂದಮೊತ್ತುತಂ ಜಾರೆಯರೆಯ್ದುತಿರ್ದರ್ (ಕುಸುಮಾ. ೪-೩೫) ; ನೀವಿ ಸಸುಬೀಟ್ಟರೆ ನಾಣ್ಬದನಂಗಜಾಕದಿಂದಿಬಿತರೆ ಘರ್ಮ ವಾಃಕಣಗಣಾ ನೆಗೆಯುತ್ತಿರೆ ನೋಡುತಿರ್ದಳಾಕುಳಿತೆಯಿನೊರ್ವೆ ಚಂದ್ರ ಮುಖಿ ಮೆಯ್ಮಱೆದಾ ನರನಾಥಪುತ್ರನಂ (ಶಾಂತೀಶ. ೩-೩೦).

[ ನಾಣ್$_1$ + ಪದ$_1$ ]

**ನಾಣ್ಬಿಡು** (ಕ್ರಿ). ನಾಚಿಕೆಯನ್ನು ಬಿಡು,–ತ್ಯಜಿಸು: ಮೊಗಂಗುಡೆ ಪಡೆದು ಚುಂಬಿಸಿ ಭಯಂಗೆಯೆ ಬಲ್ವಣಸಂ ಪೊದಟ್ಟು ನಾಣ್ಬಿಡೆ ನೆರೆದೂಢೆಯಂ ಪ್ರಥಮಸಂಗಮದೊಳ್ ಕುವರಂ ಮರುಳ್ಚಿದಂ (ಚಂದ್ರಪು. ೬-೮೨) : ತೋಳ್ಗಳಿಂ ಬಿಗಿದು ತಳ್ಕಿಸಿ ನಾಣ್ಬಿಡೆ ಜಾಣ್ಮೆದೋಱು . . . ತನ್ನಳ ಮನಮಂ ಮರಳ್ಚಿದನದೇಂ ರತಿಕೋವಿದನೋ ಕುಮಾರಕಂ (ರಾಜಶೇ. ೮-೮೫). [ ನಾಣ್$_1$ + ಬಿಡು$_1$ ]

**ನಾಣ್ಬೆದರು** (ಕ್ರಿ). ಲಜ್ಜೆಯಿಂದ ಬೆದರು: ಭರದಿ ಮಸೆತುದು. ಮಹೇಂದ್ರ ಶಿಖರಂಗಳುಂ ನಾಣ್ಬೆದರಿ ಗೋಣ್ಬಳ್ಗೆ ಪೋಲ್ (ಶ್ರೀರಾಮಾ. ೫೮೬-೬೬).

[ ನಾಣ್$_1$ + ಬೆದರು$_1$ (<ಬೆದಱು$_1$) ]

**ನಾಣ್ಬೆರಸು** 'ನಾಣ್ವೆರಸು' ನೋ.

**ನಾಣ್ಬೆಳ್ಪೇರು** (ಕ್ರಿ). ನಾಚಿಕೆಯಿಂದ ಬಿಳಿಚಿಕೊಳ್ಳು: ಮೇಘಸಂಧಿಗಳಿಂದೆ, ಮುಸುಕತ್ತಿ, ನಸುನಾಣ್ಚಿ, ಮೊಗಕೆ ನಾಣ್ಬೆಳ್ಪೇರಿದಪರಿಚಿತಳಂತೆವೋಲ್ ಇಣಿಕಿತು ಗತೋಷ್ಣಾತಪಂ (ಶ್ರೀರಾಮಾ. ೩೪೫-೧೫೦).

[ ನಾಣ್$_1$ + ಬೆಳ್ಪು + ಏರು$_1$ (<ಏಱ್$_1$) ]

**ನಾಣ್ಮಸಗು** (ಕ್ರಿ). ಅವಮಾನ ಹೆಚ್ಚಾಗು: (ನಾಣ್ಮಸಗಿ. ಅವನತವಕ್ತ್ರನಾಗಿ) (ಮಂತ್ರಶ. ೩೯-೨). [ ನಾಣ್$_1$ + ಮಸಗು$_1$ ]

**ನಾಣ್ಮಾತು** 'ನಾಳ್ಮಾತು' ನೋ.

**ನಾಣ್ಮೇಸಲು** (ನಾ). ನಾಚಿಕೆಯಲ್ಲಿ ತೋರುವ ಪವಿತ್ರತೆ; ಪರಿಶುದ್ಧತೆ ಯುಳ್ಳ ನಾಚಿಕೆ : ನಾಣ್ಮೇಸಲಳಿಯದವಯವದ ಭೇದಮಂ ಮಱೆದು ಜಾಣ್ಮೆಗಳ ಬಂಧಂಗಳೊಳ್ಪಳಸಿ . . . ಲಲ್ಲೆಗೈದೊಲವನಾಣ್ಮಂಗೆ ಕಾಣಿಸಿ ದಳವಳ್ (ಜೈಮಿಭಾ. ೧೧-೨೨). [ ನಾಣ್$_1$ + ಮೀಸಲು (<ಮೀಸಲ್) ]

**ನಾಣ್ಮುಚ್ಚು** (ಕ್ರಿ). ಮಾನವನ್ನು ರಕ್ಷಿಸು: ಉಡೆ ನಾಣ್ಮುಚ್ಚದ ನಾಗವಟ್ಟಣಿಗೆ (ಮಲ್ಲಕಾ. ೮-೩೧೯). [ ನಾಣ್$_1$ + ಮುಚ್ಚು$_1$ ]

**ನಾಣ್ಮೆ** (ನಾ). ನಾಚಿಕೆ; ಲಜ್ಜೆ : ಆದೊಡದನಾಡುತಿರ್ಪಾಗಳೇ ನಾಣ್ಮೆ ಯೊತ್ತಿ ಬರ್ಪುದು ಎನಗೆ (ಬದ್ಧಪ್ರ. ೩೪-೭೨೬) ; ಆಳವನ್ ಜ್ಞಾನಿಯಾಗಿ ದೊರ್ಡಂ, ತಾನ್ ಕಲ್ಪುದದು ನಾಣ್ಮೆಯಲ್ಲಂ (ಅಂತಿಗೂ. ೩೨-೬೫೮).

[ ನಾಣ್$_1$ + –ಮೆ$_1$./ತಮಿ. ನಾಣ್ಮೈ ]

**ನಾಣ್ಮೊಗ** (ನಾ). ನಾಚಿಕೆಯನ್ನು ತೋರ್ಪಡಿಸುವ ಮುಖ : ಬಲವಂತ ರೆಲ್ಲ ನಳಿಕೆಯ ಕೀರನಂತೆ ಅವರು ದಿಕ್ಕಾಗಲಱಿಯರು ನಾಣ್ಮೊಗದವ್ವವರ ಒಪ್ಪವಿಟ್ಟುಕೊಳ್ಳ (ಮೋಹಮಾ. ೬೭-೩೬೯). [ ನಾಣ್$_1$ + ಮೊಗ ]

**ನಾಣ್ಯ** 'ನಾಣಯಂ' ನೋ.

**ನಾಣ್ಯಗಾರ** (ನಾ). ಗಣ್ಯ ; ಗೌರವಸ್ಥ ; ಮಾನ್ಯ : (ಕ).

[ ನಾಣ್ಯ (<ನಾಣಯ) + –ಕಾರ$_1$ (<–ಕಾಱ) ]

**ನಾಣ್ಯಪದ್ಧತಿ** (ನಾ). ನಾಣ್ಯಗಳನ್ನು ಚಲಾವಣೆ ಮಾಡುವ ವ್ಯವಸ್ಥೆ,–ನಿಯಮ : ಈ ಹದ ಬಹುಕಾಲದವರೆಗೆ ನಿಲ್ಲುವಂತೆಯೂ ಸಮಧಾತು ವಾಗಿರುವಂತೆಯೂ ಏರ್ಪಡಿಸಬೇಕು–ಎಂಬುದೇ ಎಲ್ಲ ನಾಣ್ಯಪದ್ಧತಿಗಳ ಗುರಿ (ಹಣಪ್ರ. ೨೯). [ ನಾಣ್ಯ (<ನಾಣಯ) + ಪದ್ಧತಿ ]

**ನಾಣ್ಯಪರೀಕ್ಷೆ** (ನಾ). ನಾಣ್ಯಗಳ ಗುಣಾವಗುಣಗಳ ಪರಿಶೀಲನೆ: ಅವನು ನಾಣ್ಯಪರೀಕ್ಷೆಯಲ್ಲಿ ಖದೀಮ (ರೂಢಿ).

[ ನಾಣ್ಯ (<ನಾಣಯ) + ಪರೀಕ್ಷೆ ]

